**ಗಾರುಗಾರು** (ನಾ). ಒಂದು ಅನುಕರಣಧ್ವನಿ: ತಾರೆಗಳ ರೂಪಳಿ ವೃತಿರ್ದವು ಗಾರುಗಾರೆನುತಿರಲು ಖಗಗಳು (ಕರಿಕ. ೧೩೦-೫).

**ಗಾರುಗೆಡು** ‘ಗಾಱುಂಗೆಡು’ ನೋ.

**ಗಾರುಗೊಳಿಸು** (ಕ್ರಿ). ಕಷ್ಟಪಡಿಸು; ಸಂಕಟಗೊಳಿಸು: ನಾರಿಯುಳ ನಾನೋಪಚಾರದಿಂ ಕರತಂದು ಗಾರುಗೊಳಿಸಲು ದೋಷಿ ದುರ್ಗತಿಯು ಭಾಸಂ (ವಚನೋ. ೯-೦೮); ವಿಚಿತ್ರ ವಿಮುಖತೆಯೇಕೆ ತೋರುತಿರುವೆ, ಭಕ್ತರನು ಇಂತೇಕೆ ಗಾರುಗೊಳಿಸುತಿಹೆ! (ವಿಶೀಗೀ. ೯೬-೧೩).

[ ಗಾರಂ (<ಗಾಱು) + ಕೊಳ್$_{1}$ + - ಇಸು$_{3}$ ]

**ಗಾರುಗೊಳ್ಳು** (ಕ್ರಿ). ಹಿಂಸೆಪಡು; ಸಂಕಟಗೊಳ್ಳು; ಪರಿತಪಿಸು: ಅಗಲಿಕೆಯ ನೋವಿನಿಂದ ಮನಸ್ಸು ಗಾರುಗೊಂಡಿತ್ತು (ಅಲಹೂ. ೬೮). ‘ಗಾರುಗೊಳಿಸು’ ಪರಾ.

[ ಗಾರು (<ಗಾಱು) + ಕೊಳ್ಳು$_{1}$ (<ಕೊಳ್$_{1}$) ]

**ಗಾರುಡ** (ನಾ). ೧. ಗರುಡನಿಗೆ ಸಂಬಂಧಿಸಿದುದು, — ಸೇರಿದುದು. ೨. ಗರುಡಮಂತ್ರ; ಹಾವುಗಳನ್ನು ವಶಪಡಿಸಿಕೊಳ್ಳುವ ಮಂತ್ರ, — ವಿದ್ಯೆ: ಸೌಂದರಿಮಹಾದೇವಿ ನುಡಿದ ನುಡಿಗಳಂ ಕೋಟಿಹಾವು ಗಾರುಡಮಂ ಕೇಳದಂತೆ ಕೇಳದಿರೆ ಬೇಸತ್ತು (ಧರ್ಮಾಮೃ. ೨-೧೦೨): ವೇದರೊಳಲ್ಲದೆ ವಂಶಚ್ಛೇದಂ ಗಾರುಡದೊಳಲ್ಲದಹಿತತ್ತ್ವಂ . . . ಇಲ್ಲಾ ನಾಡೊಳ್ (ಕಾವ್ಯಸಾ. ೯೯). ೩. ಗರುಡಮಂತ್ರವನ್ನು ಬಲ್ಲವನು; ಹಾವಾಡಿಗ: ಹಾವು ಸಾಯದು ಕೋಲು ಮುಱಿಯದು ಹಾವು ಹೋಹ ಪರಿ ಇನ್ನೆಂತಯ್ಯಾ ಅದು ಗಾರುಡಂಗಲ್ಲದೆ ಗಾವಿಲಗಂಜದು (ಮೋಳಿಮಾ. ೧೦೯-೪೩೩). ೪. ಕಣ್ಕಟ್ಟು; ಯಕ್ಷಿಣೀವಿದ್ಯೆ; ಇಂದ್ರಜಾಲ: ಹೋರಬೇಡಿದಱೊಡನೆ ಶಸ್ತ್ರದ ಗಾರುಡವು ಗರ್ವಿಸದು (ತೊರರಾ. ೫-೬-೪೪); ಅನಂತಕಾಲ ಎನ್ನ ಒಡಲ ಮಱಿಯೊಳಗೆ ಅಡಗಿರ್ದು ಎನಗೆ ಕಾಣಿಸದೆ ಇದ್ದುದು ಇದೇನು ನಿಮ್ಮ ಗಾರುಡವಯ್ಯ (ಅಖಂಡೇ. ೯-೫): ಇನ್ನು ಪಲ ತರನಾದ ಗಾರುಡವನ್ನು ತೋರಿಸಿ . . . ಹಣನೆದ್ದು ನಡೆವುದ ತೋರಿದನು ಬಸವ (ಬಿಜ್ಜ.ಪು. ೫೯-೪೪). ೫. ಯಕ್ಷಿಣಿಗಾರ; ಐಂದ್ರಜಾಲಿಕ: ಆತನೊಂದಿನದೋಲಗದೊಳನುಮಾತ ಸಮಯದಿ ಬಂದ ಗಾರುಡನೋರ್ವನೆದುರಿನಲಿ (ಬಿಜ್ಜ.ಪು. ೪೦-೧೪). ೬.=ಗಾರುಡಮಣಿ: ಪರಿಪೂರ್ಣೋಜ್ವಲ ಚಂದ್ರಬಿಂಬರುಚಿಯಿಂ ಚಂದ್ರಪ್ರಭಾ.ಪುಷ್ಪದಂತರೆನಲ್ ಗಾರುಡ ನೀಲ ಶೋಣಮಣಿ ಹೇಮಚ್ಛಾಯೆಯಿಂದಿರ್ಪ ತೀರ್ಥರೆನಲ್ (ಆದಿಪು. ೧೬-೫). ೭.=ಗಾರುಡಪುರಾಣ: ವಿಷ್ಣು, ಭಾಗವತ, ನಾರದ, ಗಾರುಡ ಈ ನಾಲ್ಕು ಪುರಾಣಗಳು ವೈಷ್ಣವಗಳು (ಭಾರದ. ೧೩೬). [ ಸಂ. ]

**ಗಾರುಡಕ** (ನಾ). ವಂಚನೆ; ಮೋಸ; ಕಪಟ: ಜಾತಿಯಿಲ್ಲದ ಬಣಗು ಜನ ರಣಕಾತು ನಿಲುವರೆ ಗಾರುಡಕದಲಿ (ಬಿಜ್ಜ.ಪು. ೬೦-೫೧). [ ಸಂ. ]

**ಗಾರುಡಕರ್ಮ** (ನಾ). ಗರುಡಮಂತ್ರವನ್ನು ಪ್ರಯೋಗಿಸಿ ಹಾವುಗಳನ್ನು ಹಿಡಿಯುವುದು; ಸರ್ಪಗಳನ್ನು ವಶಪಡಿಸಿಕೊಳ್ಳುವ ಕೆಲಸ,- ಮಂತ್ರಮುಗ್ಧವನ್ನಾಗಿ ಮಾಡುವುದು: ಪನ್ನಗಂಗಳು ಮೇಲೆ ಗಾರುಡಕರ್ಮದಿಂದಂ ನುಡಿಯಲಱಿಯದಡೆ (ಬಸಪು. ೪೬-೨೯).

[ ಗಾರುಡ + ಕರ್ಮ ]

**ಗಾರುಡಗೊಡು** (ಕ್ರಿ). ಮಾಯೆಯನ್ನುಂಟುಮಾಡು; ಕಣ್ಣುಕಟ್ಟು ವಿದ್ಯೆಯನ್ನು ತೋರಿಸು: ಕಟ್ಟೆನೆನುತಲಿ ಬಸವ ಗಾರುಡಗೊಟ್ಟು ಬಹುರೂಪಾದ (ಬಿಜ್ಜ.ಪು. ೧೦೪-೬೦). [ ಗಾರುಡ + ಕೊಡು$_{1}$ ]

**ಗಾರುಡತನ** (ನಾ). ಇಂದ್ರಜಾಲ; ಯಕ್ಷಿಣೀವಿದ್ಯೆ; ಮಾಯಾವಿತನ: “ಮಾಯೆ=ಇಂದ್ರಜಾಲ, ಗಾರುಡತನ, ಸುಳ್ಳು” (ಗಂಗಾಮು. ೨೫೫).

[ ಗಾರುಡ + - ತನ ]

**ಗಾರುಡಪುರಾಣ** (ನಾ). ಹದಿನೆಂಟು ಪುರಾಣಗಳಲ್ಲಿ ಒಂದು ಗರುಡಪುರಾಣ: ಬ್ರಹ್ಮಪುರಾಣ . . . ಗಾರುಡಪುರಾಣ ಬ್ರಹ್ಮಾಂಡ; ಪುರಾಣ (ವಿವೇಕ. ೬). [ ಗಾರುಡ + ಪುರಾಣ ]

**ಗಾರುಡಮಂತ್ರ** (ನಾ). ಹಾವನ್ನು ವಶಪಡಿಸಿಕೊಳ್ಳುವ ಹಾಗೂ ಅದರ ವಿಷವನ್ನು ಪರಿಹರಿಸುವ ಮಂತ್ರ: ಗಾರುಡಮಂತ್ರೌಷಧಿಗಳ ಕಾರಣದಿಂ ಬಂದುದಲ್ತು ಮಜ್ಜೀವಂ (ದಶಕು. ೯-೧೧೫); ಗಾರುಡಮಂತ್ರಸಿದ್ಧನುದಾತ್ತನೊಬ್ಬನು ಬಂದಕಟಕಟೆನುತ್ತ ಮಱುಗುತ ಸರ್ಪದಷ್ಟದ ಭಾವಮಂ ನೋಡಿ (ಬಸಪು. ೪೬-೨೪).

[ ಗಾರುಡ + ಮಂತ್ರ ]

**ಗಾರುಡಮಣಿ** (ನಾ). ೧. ಒಂದು ಬಗೆಯ ವಿಷಾಪಹಾರಕ ರತ್ನ. ೨. ಪಚ್ಚೆ; ಮರಕತ: ಘನದೂರ್ವಾಸಕ್ತಿಯುಂ ಗಾರುಡಮಣಿರುಚಿಯೊಳ್ ದಾವವಿಭ್ರಾಂತಿಯುಂ ಕಾಂಚನಭಿತ್ತಿವ್ರಾತದೊಳ್ (ಚಂದ್ರಪು. ೧-೧೪೬); ಗಾರುಡಮಣಿರಚಿತ ಚತುರ್ದ್ವಾರಂ . . . ಸೊಗಯಿಸುಗುಂ (ಪಾರ್ಶ್ವಪು. ೧೩-೬೪). [ ಗಾರುಡ + ಮಣಿ$_{3}$ ]

**ಗಾರುಡರಕ್ಷೆ** (ನಾ). ಗರುಡಮಣಿಯಿಂದ ಒದಗುವಂಥ ರಕ್ಷಣೆ; ಬಲವಾದ ರಕ್ಷೆ: ಅಭಯ ಗಾರುಡರಕ್ಷೆ ಇಲ್ಲಿ; ಮಲ್ಲಿಗೆ ಜಾಜಿ ಸಂಪಗೆಯ ಕಂಪೂಗೆವ ಮೋಹಬೇಲಿ (ನಡಬಂ. ೪೧).

[ ಗಾರುಡ + ರಕ್ಷೆ ]

**ಗಾರುಡವಾದಿ** (ನಾ).=ಗಾರುಡಿಗ: ಗಾರುಡವಾದಿ ತಾಂತ್ರಿಕರು ತಪನಿವೃತ್ತ್ಯಾದಿಗಳ ತತ್ತ್ವಂಗಳಲಿ ತಾವಿರುತಿಹರು (ಗಗಶಾ. ೮-೬೬).

[ ಸಂ. ಗಾರುಡವಾದಿನ್ ]

**ಗಾರುಡವಿದ್ಯ** (ನಾ).=ಗಾರುಡಿ ೨: ಚಂಪ ಜಾತಿಯ ತೋರಿಯಲ್ಲೆಲ್ಲಿರುವದಾಗಾ ಶಿವಗೆ ದೋಷಂಬರಿಗೆ ದೋಷೇಂ ತೋರೆ ಗಾರುಡವಿದ್ಯದಿಂ ಬಸವ (ಬಿಜ್ಜ.ಪು. ೫೯-೪೩). [ ಗಾರುಡ + ವಿದ್ಯ ]

**ಗಾರುಡಶಿಲೀಮುಖ** (ನಾ). ಗರುಡಾಸ್ತ್ರ: ಬೀಭತ್ಸು ತುಡುಕಿದಂ ಮುಳಿದವಂ ಗರಳವಿಶಿಖವನುಗಿದನಾ ನರಂ ಗಾರುಡಶಿಲೀಮುಖವನು (ಜೈಮಿಭಾ. ೧೩-೧೫). [ ಗಾರುಡ + ಶಿಲೀಮುಖ ]

**ಗಾರುಡಿ** (ನಾ). ೧. ಗರುಡಸಂಬಂಧವಾದ ವಿದ್ಯೆ; ಸರ್ಪವಶೀಕರಣ ವಿದ್ಯೆ. ೨ ಯಕ್ಷಿಣೀವಿದ್ಯೆ; ಇಂದ್ರಜಾಲ: ಸೌಂದರ್ಯದ ಮಾಯೆಯನ್ನು ಎಂದರೆ ಅದರ ಗಾರುಡಿಯನ್ನು . . . ವೇದದ ಋಷಿ ಗುರುತಿಸಿ ಹಾಡಿರುವುದನ್ನು ಗಮನಿಸಬಹುದು (ಸೌಂದಸ. ೯೫): ಯಾವ ಗಾರುಡಿಯಿಂದಲೊ . . . ಭಟ್ಟರ ನಿಜವಾದ ಇಂಗಿತ ಕಂಡುಕೊಂಡಳು (ಹೊಸಕ್ಕಿ. ೫೮): ನುಡಿಯ ಗಾರುಡಿಯಲ್ಲಿ . . . ಯಾವದೋ ಒಂದು ಸೆಳೆತವಿದೆ (ಕಲೀಫ. 1 ಮೊದಲಮಾತು). [ ಸಂ. ಗಾರುಡೀ ]

**ಗಾರುಡಿಕ** (ನಾ).=ಗಾರುಡಿಗ ೨. [ ಸಂ. ]

**ಗಾರುಡಿಗ** (ನಾ). ೧. ಗಾರುಡವಿದ್ಯೆಯನ್ನು ಬಲ್ಲವನು; ಹಾವು ಹಿಡಿಯುವ ವಿದ್ಯೆಯನ್ನು ಕಲಿತಿರುವವನು. ೨. ಹಾವು ಕಚ್ಚಿದರೆ ಗುಣಪಡಿಸುವವನು; ವಿಷವೈದ್ಯ: “ವಿಷವೈದ್ಯೋ ಜಾಂಗುಲಿಕಃ ಈ ೨ ಗಾರುಡಿಗನ ಹೆಸರು” (ನಾಚಿರಾ. ೯೯): ಗರುಡನಾಭಿಯೆಂಬ ಗಾರುಡಿಗಂ ತತ್ಕನ್ಯಕೆಯಾಯುಷ್ಯಂ ಬರ್ಪಂತೆ ಬಂದು (ಸುಕುಮಾ. ೬-೮ ವ): ನಾಗಮತಮಂತ್ರದಿಂದಾನಾಗಳ್ ವಿಷಮಂ ನಿರಂತರಂ ಸ್ತೋಭಿಸಿ ನಾನಾಗಾರುಡಿಗರ್ಗಸದಳಮಾಗಲ್ ಮಾಟ್ಪೆಂ (ದಶಕು. ೯-೯೩); ಒಡಲೆಂಬ ಹುತ್ತಕ್ಕೆ ನಂಡಿವ ನಾಲಿಗೆ ಸರ್ಪ ಕಡುರೋಷಮೆಂಬ ವಿಷವೇಱಿ ಸಮಂತೆ ಗಾರುಡಿಗನಂತಕ್ಕು (ಸರ್ವಜ್ಞ. ೫೦೪). ೩. ಯಕ್ಷಿಣಿಗಾರ; ಐಂದ್ರಜಾಲಿಕ: ಮುಂದಿನ ಆಟ ಗಾರುಡಿಗರದು (ಕಾರಮು. ೦೨೦).

[ ಗಾರುಡ + - ಇಗ ]

**ಗಾರುಡಿಗತನ** (ನಾ).=ಗಾರುಡಿ ೧: ಪಣದಾಸೆಗೆ ಈ ಹಸುವನಾಡಿಸಿ ಬೇಡಿಸಿ ಕೂಡಿಸುವ ಗಾರುಡಿಗತನವಂ ಕಂಡೊರೆದ ಜೋಗಿಯೆ ಜಾಣಂ (ರಾಮಾಶ್ವ. ೧೨೫-೬). [ ಗಾರುಡಿಗ + – ತನ ]

**ಗಾರುಡಿಗಿತ್ತಿ** (ನಾ). ಗಾರುಡವಿದ್ಯೆಯನ್ನು ಬಲ್ಲವಳು ; ಮಂತ್ರವಾದಿನಿ : " ಯಕ್ಷಿಣೀ–ಗಾರುಡಿಗಿತ್ತಿ " (ಕಾಶಕ್ಕ. ೨೭೨). [ ಗಾರುಡಿಗ + – ಇತ್ತಿ ]

**ಗಾರುಡಿಸು** (ಕ್ರಿ). ೧. ಹಾವಿನ ವಿಷ ಇಳಿಯುವಂತೆ ಮಂತ್ರಹಾಕು : ನಭವಂ ವಿಷಂ ಮುಟ್ಟಿತೆಂದು ಗಾರುಡಿಪಂತೆ (ರುದ್ರ. ದೇ. ೨೦೮-೪). ೨. ಮಂಕು ಕವಿಸು ; ವಶಪಡಿಸಿಕೊಳ್ಳು : ನುಡಿಯನಡಗಿಸು ಕೋಕಿಲನ ಗಾರುಡಿಸು ವಿಷಯವಿಷಾಹಿಯನು (ಕೂರರಾ. ೩-೪-೧೮). ೩. ಬುದ್ಧಿ ಹೇಳು ; ಒಳ್ಳೆಯ ಮಾತನಾಡು : ಬಳಿಕವರು ಭೀಮನ ಕರೆದು ಗಾರುಡಿಸಿ ಕೇಳುವನು ಹೈಯೆಂದು (ಕುಮ್ಮಾಅ. ೬-೫). [ ಗಾರುಡ + – ಇಸು$_3$ ]

**ಗಾರುಡೌಷಧ** (ನಾ). ಗಾರುಡಿಗನ ಔಷಧಿ ; ಸರ್ವವಿಷಹರವಾದ ಮೂಲಿಕೆ : ಗಾರುಡೌಷಧ ಮಂತ್ರತಂತ್ರಕ್ಕೆ ಪರಮಮೃತ್ಯುವದುಳಿಯೆ ತದ್ವಿಷ ಪರಿಹರಿಸುವುದು (ಬಸಪು. ೪೬-೨೬). [ ಗಾರುಡ + ಔಷಧ ]

**ಗಾರುಧ್ವನಿ** (ನಾ). (ಕೂಗಿಕೂಗಿ) ಒಣಗಿಹೋದ ಕಂಠದಿಂದ ಹೊರಡುವ ಕ್ಷೀಣರವ : ಮಗುವಿನ ಗಾರುಧ್ವನಿ ಮುಟ್ಟಿದುದು ಸುಬ್ಬುವಿನ ಕಿವಿಗೆ (ಅವಶಂ. ೨೨೦). [ ಗಾರು (< ಗಾಜು) + ಧ್ವನಿ ]

**ಗಾರುಬೊಕ್ಕೆ** (ನಾ). ಉಷ್ಣಾಧಿಕ್ಯದಿಂದ ಮೈಮೇಲೆ ಏಳುವ ಗುಳ್ಳೆ ; ಸೆಕೆಗುಳ್ಳೆ : ಮೈಮೇಲೆಲ್ಲಾ ಗಾರುಬೊಕ್ಕೆ ಎದ್ದಿದೆ (ರೂಢಿ). [ ಗಾರು (< ಗಾಜು) + ಬೊಕ್ಕೆ$_1$ ]

**ಗಾರುಹಪತ್ಯ** (ನಾ). = ಗಾರ್ಹಪತ್ಯ : ಅರುಹಂತಂ, ಗಾರುಹಪತ್ಯಂ (ಭಾಷಾಭೂ. ೧೦೪ ಉದಾ) : ಆಹವನೀಯ ಗಾರುಹಪತ್ಯ ದಕ್ಷಿಣವಾಯು ಸಖರಾದರು ತ್ರಿವೇಣುಕವಾ ರಥಾಗ್ರದಲಿ (ಕುಮ್ಮಾಕ. ೭-೪). [ < ಸಂ. ಗಾರ್ಹಪತ್ಯ ]

**ಗಾರುಹಸ್ತ** (ನಾ). ಸಂಸಾರಿ ; ಗೃಹಸ್ಥ : ಗಾರುಹಸ್ತರೆನಿಸಿ ಶರಣರ್ಗರ್ಥವನ್ನೀಯದವರ ಕಾಲು ಕಯ್ಯನಗಚಿ ತೋರಣದೊಳು ಕಟ್ಟಿ ಸೀಳಿ ನರರ ನಾಜುಸುವರು (ಶಾನಂಡ. ೬-೦೪೭ ರಗಳೆ). [ < ಸಂ. ಗೃಹಸ್ಥ ]

**ಗಾರುಹಸ್ತ್ಯ** (ನಾ). ಗೃಹಸ್ಥಧರ್ಮ ; ಗೃಹಸ್ಥಾಶ್ರಮ : ಬಂಧುರದ ಧನವನು ಗಾರುಹಸ್ತ್ಯದ ಪರಮಧರ್ಮವನಾವ ಬಯಸುವನು (ಕುಮ್ಮಾಉ. ೩-೩೪). [ < ಸಂ. ಗಾರ್ಹಸ್ಥ್ಯ ]

**ಗಾರೆ$_1$** (ನಾ). ಸುಣ್ಣ ಹಾಗೂ ಮರಳನ್ನು ಕಲಸಿ ಅರೆದು ತಯಾರಿಸಿ ಕಟ್ಟಡಗಳಿಗೆ ಉಪಯೋಗಿಸುವ ಮಿಶ್ರಣ ; ಗಚ್ಚು : ಗಾರೆಯನು ಹಾಕಿಸಿ ಚೆಂದಾಗಿ ಕಟಿಸಿ ಜೀರ್ಣೋದ್ಧಾರವ ಮಾಡಿದ (ಸೌಇಇ. IX–ii, ೫೨೨-೧೬ ; 1527) : ಗಾರೆಗೊದವಿಸಿದ ಹೊಸಸುಣ್ಣವೆಂತೆನಲು ಕೇಳ್ವ ರಾಯ ಶಂಭುಗರ್ಪಿಸಿದ ಪಾಲುಂಬೋನದೊರೆಗೆ (ವೀಕ್ರಪು. ೮-೪-೫೦) : ಗೋಪುರದ ಭಾರವನು ಗಾರೆಯ ರೂಪುದೋಜುದ ಪ್ರತಿಮೆಯಂದದಿ ಈ ಪರಿಯ ಸಂಸಾರಭಾರವನಾರು ತಾಳುವರು (ಹರಿಸಾ. ೮೨) : ಇಟ್ಟಿಗೆ ಗಾರೆ ತೇಗ ತಾರ್ಸಿ ಸಜ್ಜೆ ಸಿಮೆಂಟು ಇತ್ಯಾದಿಗಳನ್ನು ಕುರಿತ ಪಾಂಡಿತ್ಯ ನನಗಿಲ್ಲ (ಹೆಗೂಂ. ೨). ' ವಜ್ರಗಾರೆ ' ಪರಾ.

**ಗಾರೆಯ ಚಕ್ರ**=ಗಚ್ಚು ಅರೆಯುವ ಗಾಲಿ : ಗಾರೆಯ ಚಕ್ರದಂತೆ ಉರುಳಿಕೊಂಡು ಭೂಮಿಯು ಸೂರ್ಯಪ್ರದಕ್ಷಿಣೆ ಮಾಡುತ್ತಿದ್ದಿದ್ದರೆ . . ಆಗುತ್ತಿದ್ದುವು (ನಕ್ಷತ್ರ. ೯೫).

[ ದೇಶ್ಯ ತಮಿ. ಕಾರೈ ; ತುಳು. ಗಾರೆ ; ತೆಲು. ಗಾರ ]

**ಗಾರೆ$_2$** (ನಾ). ಒಂದು ಬಗೆಯ ಗಿಡ ; ಇಂಗುಳದ ಗಿಡ ; " ಇಂಗುದೀ, ತಾಪಸತರುಃ - ೨ ಗಾರೇಗಿಡ ; ಇಂಗಳದ ಗಿಡ " (ಸಿದ್ಧಾಂತಿ. ೧೦೭). [ ದೇಶ್ಯ. ತೆಲು. ಗಾರ ]

**ಗಾರೆಕಲ್ಲು** (ನಾ). ಗಾರೆಯನ್ನು ನುಣುಪುಮಾಡಲು ಉಪಯೋಗಿಸುವ ಕಲ್ಲು : ನುಣುಪಾದ ಗಾರೆಕಲ್ಲು (ರೂಢಿ). [ ಗಾರೆ$_1$ + ಕಲ್ಲು (< ಕಲ್$_3$) ]

**ಗಾರೆಕೆಲಸ** (ನಾ). ಗಾರೆಯನ್ನು ಮಾಡುವುದು ; ಗಾರೆಯನ್ನು ಬಳಿಯುವುದು : ಮನೆಗೆ ಗಾರೆಕೆಲಸ ಮಾಡಿಸಬೇಕಾಗಿದೆ (ರೂಢಿ).

**ಗಾರೆಕೆಲಸದವ**=ಗಾರೆಕೆಲಸಮಾಡುವವನು : ಬಡಗಿಯರು ಕಾಮಾಟಿಯರು ಗಾರೆಕೆಲಸದವರು (ಸೌಗಂಧಿ. ೧೩೫-೧೬). [ ಗಾರೆ$_1$ + ಕೆಲಸ ]

**ಗಾರೆಗಾರ** (ನಾ). ಗಚ್ಚುಕೆಲಸ ಮಾಡುವವನು : ಒಳ್ಳೆಯ ಗಾರೆಗಾರರಿಲ್ಲದೆ ಮನೆಯ ಕೆಲಸ ಅಪೂರ್ಣವಾಗಿದೆ (ರೂಢಿ). [ ಗಾರೆ$_1$ + – ಕಾರ$_1$ (< – ಕಾಜ) ]

**ಗಾರೆಮಣೆ** (ನಾ). ಗಾರೆಯನ್ನು ಗೋಡೆಗೆ ಬಳಿಯಲು ಉಪಯೋಗಿಸುವ ಚೌಕವಾಗಿರುವ, ಹಿಡಿಯುಳ್ಳ ಮಣೆ ; ಚೆಕ್ಕೆ : "ಗಾರೆಕೆಲಸದವನ, ಹಿಡಿಯುರುವ ಚೌಕಹಲಗೆ : ಗಾರೆಮಣೆ " (Hawk. ಇಂಕನ್ನಿ). [ ಗಾರೆ$_1$ + ಮಣೆ ]

**ಗಾರ್ದಪ** (ನಾ).=ಗಾರ್ದಭ : ಅದನುಪೇಕ್ಷೆಗೆಯ್ದಿಪ್ಪ ಪ್ರಭುವುಂ ಪ್ರಜೆಗಳುಂ ಮೂಲಿಗನುಂ ಸ್ವಾನ ಗಾರ್ದ್ದಪ ಚಾಂಡಳರು . . . ಪಾತಕಕ್ಕೆ ಸಲ್ವರು (ಸೌಇಇ. XX, ೫೦-೩೬ ; 1077). [ P ಇದು 'ಗಾರ್ದಭ'ದ ಅಪಲಿಖಿತ ]

**ಗಾರ್ದಭ** (ನಾ). ಕತ್ತೆ ; ರಾಸಭ : ಶುನಕ ಗಾ[ಪಾಠಾಂ. ಗ]ರ್ದಭ ಕೀರ ದರ್ದುರ ಗ ವನಚರೋಷ್ಟ್ರ ಕುರಂಗ (ಬಸಪು. ೫೬-೭೩) ; ಕೃಶಾನುವಿನ ಗಾರ್ದಭನ ವೃಷಭನ ಶಿಂಶುಮಾರಕನ . . . ಗುಣವಾ ನರೇಂದ್ರನೋಳರಲು ಬೇಹುದು ಭೂಪ ಕೇಳೆಂದ (ಕುಮ್ಮಾಉ. ೩-೦೦೪). [ ಸಂ. ]

**ಗಾರ್ಹಪತ್ಯ** (ನಾ). ಯಜ್ಞಯಾಗಗಳಿಗೆ ಸಂಬಂಧಪಟ್ಟ ಅಗ್ನಿತ್ರಯದಲ್ಲಿ ಒಂದು : ಶರೀರ ಸಂಸ್ಕಾರಾದಿ ಗಾರ್ಹಪತ್ಯ ದಕ್ಷಿಣಾಗ್ನ್ಯಾಹವನೀಯವೆಂಬ ಪೆಸರಂ ಪಡೆದಗ್ನಿತ್ರಯಗಳೊಳ್ (ಆದಿಪು. ೦೫-೧೬ ವ) : ಆ ವೇದಿಯ ಯಥೋಚಿತಸ್ಥಾನಂಗಳೊಳ್ ಸುಕೃತವನಿತಾಪತ್ಯವೆನಿಪ ಗಾರ್ಹಪತ್ಯಮುಮಂ . . . ತೋಱೆ (ಜಗವಿ. ೦೬-೭ ವ) : ಬಳಿಕ ಗಾರ್ಹಪತ್ಯವು ಪೃಥಿವಿ, ಅಗ್ನಿ, ಅನ್ನ, ಆದಿತ್ಯ–ಇವು ನನ್ನ ತನುಗಳು, ಆದಿತ್ಯನಲ್ಲಿರುವ ಈ ಪುರುಷನೇ ನಾನು (ಬೃಹ್ಯಭಾ. ೨೪೭ ಅಡಿಟಿ). [ ಸಂ. ]

**ಗಾರ್ಹಸ್ಥ್ಯ** (ನಾ). ಗೃಹಸ್ಥನಾಗಿರುವಿಕೆ ; ವಿವಾಹಾನಂತರ ಸಂಸಾರಿಯಾಗಿ ಮನೆಯಲ್ಲಿ ವಾಸಮಾಡುವಿಕೆ ; ಗೃಹಸ್ಥಾಶ್ರಮ ; ಎಲ್ಲವೂ ಯೌವನದ ಗಾರ್ಹಸ್ಥ್ಯದ ಚಟುವಟಿಕೆಯಲ್ಲಿ ಸುಖಮುಕ್ತಾಯವಾಗುತ್ತದೆ (ಮನೋನಂ. ೨೩೫) : ಅವನು ಗಾರ್ಹಸ್ಥ್ಯದಿಂದ ಸಂನ್ಯಾಸಕ್ಕೆ ನಡೆದರೆ ಅರ್ಹನಾಗುವವನು (ಬುದ್ಧಪ. ೮೪). [ ಸಂ. ]

**ಗಾರ್ಹಿಡಕ್ಕೆ** (ನಾ). [ ಸಂಗೀತ ] ಒಂದು ಬಗೆಯ ತಾಳ : ಗಾರ್ಹಿಡಕ್ಕೆ ಎಡಡಕ್ಕೆ . . . ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೮). [ ? ]

**ಗಾಲ** (ನಾ). ೧. ಹರಿಯುವುದು ; ಪ್ರವಹಿಸುವುದು. ೨. ಸೋರುವುದು ; ತೊಟ್ಟಿಕ್ಕುವುದು. ೩. ಸೋಸುವುದು. 'ವಸ್ತ್ರಗಾಲ' ಪರಾ. [ ಸಂ. ]

**ಗಾಲವ** (ನಾ). ೧. ಒಂದು ಬಗೆಯ ಗಿಡ ; ಲೋಧ್ರ : " ಗಾಲವಃ . . . ಮಾರ್ಜನಃ –೬ ಲೋಧ್ರಗಿಡದ ಹೆಸರು " (ಸಿದ್ಧಾಂತಿ. ೧೦೪). ೨. ಒಬ್ಬ ಋಷಿಯ ಹೆಸರು : ವಾಮದೇವಾತ್ರಿ ಗಾಲವ ಗುರುವಸಿಷ್ಠ ವಿಶ್ವಾಮಿತ್ರರಂ ಕರೆಸಿ (ಪ್ರಮಿಭಾ. ೨೦-೩). [ ಸಂ. ]

**ಗಾಲಿ, ಘಾಲಿ** (ನಾ). ಬಂಡಿ ಮೊದಲಾದ ವಾಹನಗಳ ಚಲನೆಗೆ ಮುಖ್ಯ ಸಾಧನವಾದ ಭಾಗ; ಚಕ್ರ; ರಥಾಂಗ: "ಚಕ್ರಂ, ರಥಾಂಗಂ–ಈ ೨ ಗಾಲಿ" (ಹಲಾಯು. ೭೩-೨೯೩): "ಗಾಲಿ ಚಕ್ರಂ ರಥಾಂಗಮೆನಿಕ್ಕು" (ಮಂಗರಾ. ೮೪-೨೪) : ವಿಶ್ವಕರ್ಮನಱುದಿಂಗಳೊಳ್ ರಥದೊಂದು ಗಾಲಿಯಂ ಸಮೆಯಿಸಿ ತಂದು ತೋಱಿದೊಡೆ (ವಡ್ಡಾರಾ. ೧೪೭-೧೦): ಬಲವಂತಂ ಮಾರುತಿ ಗಡ ಮಹಾರಥಂ ಮಾರುತಿಯುಂ ತದ್ರಥದ ಗಾಲಿಗಳ್ ದೊಡ್ಡಿದುವೇ (ಗದಾಯು. ೩-೩೫); ಒಂದೆ ಗಾಲಿಯೊಳ್ ರಥಮಂ ನಡೆಯಿಸುವೆನೆಂಬ ಸೀರಿಲ್ಲದೆ ಕೂಟನಡುವೆನೆಂಬ . . . ವೆರ್ಗಾವಿಲಸಂ ಪೋಲ್ಕುಂ (ಧರ್ಮಾಮೃ. ೫-೧೧೭); ಶಿಥಿಲವಾದುವು ಗಾಲಿಗಳು ಬಳಿ ರಥಿಕರೀತನ ಬಿಟ್ಟು ಹಾಯ್ದರು (ಕುಮಾವ್ಯಾ.ಕ. ೩-೨೩). **ಘಾಲಿ**: "ಚಕ್ರಂ, ರಥಾಂಗಂ–ಈ ೨ ಘಾಲಿ" (ನಾಚಿರಾ. ೧೩೪).

**ಗಾಲಿಯಂಗದವಕ್ಕಿ** = ಗಾಲಿವಕ್ಕಿ: ಬಲು ಸ್ಥೂಲ ಕುಚಯುಗಗಳಿಗೆ ಸುಂದರಗಾಲಿಯಂಗದವಕ್ಕಿಗಳು ನಿಜವಾಗಿ ಪೋಲುವವು (ರಘುವಂ. ೦೯೩-೭೩). [ ದೇಶ್ಯ ತಮಿ. ಕಾಲಿ; ತುಳು. ಗಾಲಿ ]

**ಗಾಲಿಕುರ್ಚಿ** (ನಾ). ಗಾಲಿಗಳನ್ನು ಜೋಡಿಸಿರುವ, ನೂಕಲು ಅನುಕೂಲವಾದ ಕುರ್ಚಿ: ರೋಗಿಗಳನ್ನು ಇಲ್ಲಿಂದಲ್ಲಿಗೆ ಕರೆದುಕೊಂಡು ಹೋಗುವುದಕ್ಕಾಗಿ ಉಪಯೋಗಿಸುವ ಗಾಲಿಗಳುಳ್ಳ ಕುರ್ಚಿ; ಗಾಲಿಕುರ್ಚಿ (Bath–chair. ಇಂಕಸಿ). [ ಗಾಲಿ + ಕುರ್ಚಿ ]

**ಗಾಲಿಪಲ್** (ನಾ). ಗಾಲಿಯ ಹಲ್ಲು; ಅರೆ; ಚಕ್ರಾರ: ದಿನದಿನಕೆ ಬದಲಿಸುವ ಭಾಗ್ಯನಿವಹಮದು ಗಾಲಿಪಲ್ಗಳೋಳಿವೊಲಿರ್ಕುಂ (ಸ್ವಪ್ನವಾ. ೩). [ ಗಾಲಿ + ಪಲ್ ]

**ಗಾಲಿವಂಟ** (ನಾ). ಕಿವಿಯ ಒಂದು ಆಭರಣ; ಗಾಲಿಯ ಆಕಾರದ ಒಂಟಿ: ಕಿವಿಯಲ್ಲಿ ಗಾಲಿವಂಟ, ವಂಟಗಳ ಭಾರದಿಂದಾಗಿ ತೂತುಗಳು ಇಳಿಬಿದ್ದಿವೆ (ಪ್ರಕಾಶ. ೮). [ ಗಾಲಿ + ವಂಟ ]

**ಗಾಲಿವಕ್ಕಿ** (ನಾ). ಜಕ್ಕವಕ್ಕಿ; ಚಕ್ರವಾಕ; ರಥಾಂಗ: "ಜಕ್ಕವಕ್ಕಿಯೆ ಗಾಲಿವಕ್ಕಿಯೆನಲ್ಕೆ" (ಕರ್ಣಾನಿ. ೭೨); ಅಱಕೆವಟ್ಟುಳ್ಳುರಲೆ ನೀಳನೈದಲ್ ಮಱುಗಿ ಹೆಱಸಾರೆ ಗಾಲಿವಕ್ಕಿಗಳ್ (ಉದ್ಭಟದೇ. ೪-೧೦). [ ಗಾಲಿ + ಪಕ್ಕಿ$_1$ ]

**ಗಾಲೀಚ, ಗಾಲೀಚೆ** (ನಾ). (ಉಕ) ಚಿತ್ರರಂಜಿತವಾದ ಜಮಖಾನ: ಮೇಲೆ ಸುರಿದ ಸಾಂದ್ರಕಿರಣಗಳು . . . ರೇಸಿಮೆಯ ಪಟದ ಮೇಲೆ ಇರಾಣದ ಗಾಲೀಚಗಳನ್ನು ನಿರ್ಮಿಸುತ್ತಿದ್ದವು (ರಕ್ತಾಕ್ಷಿ. ೨೭೮). **ಗಾಲೀಚೆ**: ತೋಟದಲ್ಲಿ ಸಪಾಟನೆಲದ ಮೇಲೆ ಯಾವತ್ತು ಕಡೆಗೆ ಹಚ್ಚ ಹಸರು ಗಾಲೀಚೆಗಳನ್ನು ಪಸರಿಸಿ . . . ಕಾಲದಾರಿಗಳನ್ನು ಮಾಡಿದ್ದರು (ಅಶ್ರೀಮು. ೪೮).

[ ←ಫಾರ. ಗಾಲೀಚಹ್; ಹಿಂ. ಗಲೀಚಾ; ಮರಾ. ಗಾಲಿಚಾ ]

**ಗಾಲೀಚೆ** 'ಗಾಲೀಚ' ನೋ.

**ಗಾಲು** 'ಗಾಳು' ನೋ.

**ಗಾಲುಮೇಲು** 'ಗಾಳುಮೇಳು' ನೋ.

**ಗಾಲ್ಮೇಲು** 'ಗಾಳುಮೇಳು' ನೋ.

**ಗಾವ** 'ಗಾಮ' ನೋ.

**ಗಾವಕಾರ** (ನಾ). ಗೌಡ; ಗ್ರಾಮಾಧಿಕಾರಿ. 'ಗಾವಕಾರಿಕೆ' ಪರಾ. [ ಗಾವ (<ಗಾಮ) + –ಕಾರ$_1$ (<–ಕಾಱ) ]

**ಗಾವಕಾರಿಕೆ** (ನಾ). ಗ್ರಾಮದ ಯಜಮಾನಿಕೆ; ಗೌಡಿಕೆ; ಪಟೇಲಿಕೆ: ವಿಶ್ವಾಮಿತ್ರ ಗೋತ್ರದವಂಗೆ ಸರ್ವಕಿಲಸದಲು ಸ್ವತಂತ್ರನಾಗಿ ಗಾವಕಾರಿಕೆ ಬಿಜೋರ ಮರ್ಯಾದೆಗಳನು . . . ಗ್ರಾಮಾನುಮತದಿಂದಾ ರಾಜರು ಕೊಟ್ಟರು (ಎಕ. XXVII, ೨೮-೮೩; 1256?). [ ಗಾವಕಾರ + –ಇಕೆ ]

**ಗಾವಕೋಸು** (ನಾ). ಗ್ರಾಮದ ಮೂಲೆ; ಊರಿನ ಒಂದು ಕೋಚು: ಗೊಬ್ಬರದ ನಿಮಿತ್ತವಾಗಿ ಊರ ಹೊರಗೆ ಗಾವಕೋಸಿನಲ್ಲಿ ಒಂದು ದೊಡ್ಡತಗ್ಗನ್ನು ತೆಗೆದು (ಕೃಷಿಪ್ರ. ೪೩).

[ ಗಾವ (<ಗಾಮ) + ಕೋಸು$_2$ ]

**ಗಾವಗ** (ನಾ). ಒಬ್ಬಾತನ ಹೆಸರು: ಗಾವಗ ಅರಸ ಬೆಳ್ಗಿಱಿಯಂ ದಯೆಗೆಯ್ದು ಆಳುತ್ತಮಿಟ್ಟ (ಎಕ. XII, ತಿಪಟೂ. ೧೦೩-೦೨; 972). [ ? ]

**ಗಾವಗಾನೆ** 'ಗಾಮಗಾನೆ' ನೋ.

**ಗಾವಟ** 'ಗಾವಟಿ' ನೋ.

**ಗಾವಟಿ, ಗಾಂವಟಿ, ಗಾಂವಠೀ, ಗಾವಟ, ಗಾವಠಿ** (ಗು). ೧. (ಉಕ) ಹಳ್ಳಿಗೆ ಸಂಬಂಧಿಸಿದ; ದೇಶೀಯವಾದ; ನಾಟಿ; ಗ್ರಾಮೀಣ: ಎಲ್ಲಿಯೋ ಗಾವಟಿ ಶಾಲೆಯಲ್ಲಿ ನಾಲ್ಕು ಅಕ್ಷರ ಕಲಿತು ಸಭಾದಲ್ಲಿ ಕೇಳಿದ ಮಾತುಗಳನ್ನು ನನ್ನ ಮುಂದೆ ಹೇಳಿ ಹೆದರಿಸಬೇಕೆಂದು ಮಾಡುತ್ತೀಯಾ? (ಜೀವರ. ೫೫); ಅವರು ಯಾವುದೋ ಗಾವಟಿ ಔಷಧದ ಪ್ರಯೋಗ ಮಾಡಿಕೊಳ್ಳುವರು (ರೂಢಿ). ೨. ಸರಕಾರಕ್ಕೆ ಸಂಬಂಧವಿಲ್ಲದ; ಖಾಸಗಿ. (ನಾ). ೩. ಕಾಡುಸ್ಥಿತಿಯುಳ್ಳದು; ಉತ್ತಮವಲ್ಲದುದು. **ಗಾಂವಟಿ**: ೧. ಅದು ಅರ್ಧಕ್ಕರ್ಧ ಎಣ್ಣೆ ಬೆರೆಸಿದ ನಾತಕೊಡುವ ಗಾಂವಟಿ ತುಪ್ಪವಾಗಿತ್ತು (ಜಾರುದಾ. ೩೧೩). ೩. ಮುಂಬಯಿಯಲ್ಲಿ ತಯಾರಾಗುವ ಕಲ್ಲುಸಕ್ಕರೆ, ಚುಮುಚುಮಿಸಕ್ಕರೆ ಗಾಂವಟಿ (ಮುಂಬವ್ಯಾ. ೩೫ ಪ್ರಸ್ತಾವನೆ). **ಗಾಂವಠೀ**: ೧. 'ಗಾಂವಠೀವಕೀಲ' ಪರಾ. **ಗಾವಟ**: ೧. "ಇಲ್ಲಿಯೇ ತಯಾರಾದ" (ಜಾನಕೋ. ೪೭). **ಗಾವಠಿ**: ೨. ಕುಂಭಕರ್ಣನ ತಂದೆ, ಮಕ್ಕಳಿಬ್ಬರನ್ನೂ ಅಪರಾತ್ರಿಯಲ್ಲಿ ಎಬ್ಬಿಸಿ ಬಹುಶಃ ಒಂದು ಗಾವಠಿ ಪಾಠಶಾಲೆಗೇ ಅಟ್ಟುತ್ತಿರಬೇಕು (ಗಾಳಿಪ. ೦೬೩); ಒಬ್ಬ ಅಯ್ಯನವರು ಗಾವಠೀ ಸಾಲೆಯನ್ನು ಹಾಕಿದ್ದರು (ಮೇದಿಮ. ೭). [ ←ಮರಾ. ಗಾಂವಟೀ ]

**ಗಾವಟಿ, ಗಾವಡೆ** (ನಾ). ಒಂದು ಬಗೆಯ ಮರ; ಸಾರಸವೃಕ್ಷ: "ಸಾರಸಮೆನಲ್ಕೆ ಗಾವಟಿ" (ಮಂಗರಾ. ೪೨-೪೦); ಗಾವಟಿ ಬೆಲ್ಲವತ್ತ ವರೆಮಾದಲವಂಬಟಿ ಚೆಳ್ಳ ಚಿಲ್ಲಕಾಯ್ ಮಾವಿನಕಾಯ್ಗಳ್ (ನಳಚಂ. ೪೭೨); ಬೆಲ್ಲವತ್ತ ಕಪಿತ್ಥ ಚಿಕ್ಕಣ ಚಿಲ್ಲ ಗುಗ್ಗುಳ ಗೇರು ಗಾವಟಿ . . . ಇಲ್ಲಿ ನೋಡಿವೆ (ತೊರರಾ. ೩-೧-೨೯); ಅಲ್ಲಂ ಮೆಣಸೇಲಕ್ಕಿಯ ನೆಲ್ಲಿಯ ಗಾವಟಿಯುಂ ಭಾಗ್ಯಹೀನರಿಗುಂಟೇ (ನೀತಿಸಾ. ೭೪೭). **ಗಾವಡೆ**: "ಮಹಾಮುನಿಃ– ಗಾವಡೆ, ತುಂಬುರು" (ಓಷಧಿ. ೦೦೭). [ ? ]

**ಗಾವಠಾಣ** 'ಗಾಂವಠಾಣ' ನೋ.

**ಗಾವಠಿ** 'ಗಾವಟಿ' ನೋ.

**ಗಾವಡಿವಾಡ, ಗಾವರಿವಾಡ** (ನಾ). ಒಂದು ಊರಿನ ಹೆಸರು: ಗಾವಡಿವಾಡದ ಮಹಾಜನ (ಅ)ಐವ[ದಿ]ನ್ನ × [ಕಾ]ಲಂ ಕಟ್ಟಿ ತುಪ್ಪದ [ ತೆ ] ಱಿಯ . . . ದಾನಗೊಟ್ಟ (ಸೌಇಇ. XI – 1, ೦೩-೦೦; 869). **ಗಾವರಿವಾಡ**: ಇಟ್ಟಗೆ ಗಾವರಿವಾಡಮೆಂಬ ಬಾಡಂಗಳನ್ (ಎಇ. XV, ೩೪೦-೦೮; 1071). [ ಗಾವಡ? + ಬಾಡ$_1$ ]

**ಗಾವಡೆ** 'ಗಾವಟಿ' ನೋ.

**ಗಾವಣ$_1$** (ನಾ). ನೆಲೆ; ಆಶ್ರಯಸ್ಥಾನ; ಕಾವಣ; ಮಂಟಪ: ಅಂಬುಜ ಸೌರಭಂ ತನಗೆ ಗಾವಣ ಜೀವಣಮತ್ಯಪೂರ್ವಮಾಸ್ಯಾಂಬುಜ ಗಂಧ ಮೆಂದೆಱಗಿ ಬಗ್ಗಿಸೆ (ಶಾಂತಿಪು. ೮-೮೭); ವನಮಿಂದು ಶೂನ್ಯಮೆಳಮಂಡಿರ ಗಾವಣ [ ಪಾಠಾಂ. ಗೋವರ ]ಮಿಂದು ಶೂನ್ಯಂ (ಅರ್ಧನೇ. ೫-೩೨).

[ <ಕಾವಣ ]

**ಗಾವಣ$_2$** (ನಾ). ಹಳ್ಳಿಯವನು; ಗ್ರಾಮೀಣ ಪ್ರದೇಶದವನು (?): ಗದಮುಂಡೆ ೪ ಬಯಿದೂರ ಗಾವಣರ ಬಟಯ ಬ್ಯೆಂದೂಱ (ಸೌಇಇ. ೧೯೩೦, ಮಂಗಳೂ. ೫೩೪-೨೩; 1278). [ <ಸಂ. ಗ್ರಾಮೀಣ ? ]

**ಗಾವಣಿಗ**(ನಾ).೧. ಹಳ್ಳಿಗ : ಗ್ರಾಮೀಣ: "ಸಾದಂ ವೃಷಲನಟ್ ಕುಂಟಡಿಗನ ವದ್ಯಂ ಗಾವಣಿಗನಂತ್ಯನಟಿಯ ಗಂಗಡಿಕಾಜನಕ್ರಮನಭೀರನೆಂದೆನೆ ಮಹಾ ಶೂದ್ರನಕ್ಕುಂ " (ಮಂಗರಾ. ೧೧೦-೬). ೨. ಒಂದು ವಂಶದ ಹೆಸರು : ಕಾಯ್ವರ ಗಣ್ಡಂ ಅಡಿತುರಗತಟ್ಟಸಂಘಟ್ಟಂ ಬಿರುದ ಗಾವಣಿಗ ಶರಭ ಭೇರುಣ್ಡಂ (ಸೌಇಇ. XI-1, ೬೮-೮೧ ; 1045) ; ಅರಿಬಿರುದ ಗಾವಣಿಗ ದಿಶಾಪಟ್ಟ . . . ಬಿರುದ ಗಾವಣಿಗ ಸೂಲೆಕಾರ (ಸೌಇಇ. XI-11, ೧೬೬-೬೯ ; 1125) ; ಗಾವಣಿಗರ ಬಳಿಯ ರಾಜಗುರು ಜಕ್ಕಂಣನಾಯಕ (ಕಇ. I, ೩೫-೬ ; 1398). [ ಗಾವಣ$_{2}$ + – ಇಗ ]

**ಗಾವದ** ‘ ಗಾವುದ ’ ನೋ.

**ಗಾವದಿ, ಗಾವುದಿ** (ಗು). ೧. ಹೆಡ್ಡತನದಿಂದ ಕೂಡಿದ ; ದಡ್ಡತನದ : ಸಾವಂ ತಿಳಿಯದೆ ಬಟ್‌ದೆ ಗಾವದಿ ಕೆಲಸಕ್ಕೆ ಯೋಗ್ಯನಾದಂ ಭಕ್ತಂ (ಹಮ್ಮಿರ. ೬-೪೯). (ನಾ). ೨. ದಡ್ಡ ; ಮೂಢ ; ಮೂರ್ಖ : ಮುನ್ನ ಭವಿನಿಳಯದೊಳು ತಲೆಮಟ್ಟು ದುಡಿದ ಗಾವದಿಯ್ಯೆಸೆ ಭೂಪಾಲ ನಲ್ಲೆಂದನು (ಹದಕಾ. ೧೧-೩೩). **ಗಾವುದಿ** : ೨. ಗಾವುದಿಯಾದನೊ ಗಂಭೀರದವನೊ ಸಾವಹುಟ್ಟುಗಳ ಗೆದ್ದವನೊ (ಬಿಜ್ಜರಾ. ೪-೨೩).

[ ←ಪಾರ. ಹಿಂ. ಮರಾ. ಗಾವದೀ ]

**ಗಾವದಿಗ** (ನಾ). **ಗಾವದಿ ೨** : ಬಲು ಸುಳ್ಳು ಕೂಲಿಕಾಜನು ಗಾವದಿಗನೆಂದು ಹಲವು ಬಗೆಯಲಾಡುತಿಹರು (ಅಮುಸಾಂ. ೫-೬೩).

[ ಗಾವದಿ + – ಗ$_{2}$ ]

**ಗಾವದಿತನ** (ನಾ). ಮಂಕಂತನ ; ದಡ್ಡತನ (ಸ್ಯಾಂಡರ್).

[ ಗಾವದಿ + – ತನ ]

**ಗಾವನ್ನ** (ನಾ). ೧. ಬಲಿಗಾಗಿ ಹಾಕುವ ಅನ್ನ. ೨. ಕರಗದ ಉತ್ಸವ ಕಾಲದಲ್ಲಿ ಮಾಡುವ ಒಂದು ಸಾಂಪ್ರದಾಯಿಕವಾದ ವಿಧಿ ; ದೇವತೆಗಳಿಗೆ ನಾಲ್ಕು ದಿಕ್ಕುಗಳಲ್ಲೂ ಅರಿಸಿನದ ಅನ್ನದಿಂದ ಬಲಿಹಾಕುವ ಕರ್ಮ : (ಎಸಮ್ಯ. IX, ೧೦). [ ಗಾವು + ಅನ್ನ$_{3}$ ]

**ಗಾವಯ್ಯ** (ನಾ). ಒಬ್ಬಾತನ ಹೆಸರು : ಆ ಕಲ್ಲಂ ಬರೆದ ಗಾವಯ್ಯನ ಸೇನಬೋವ ಕಾಮಯ್ಯ (ಎಕ. XII, ತಿಪಟೂ. ೧೦೩-೧೯ ; ೨72).

[ ಗಾವ (<ಗಾವು) + ಅಯ್ಯ$_{1}$ ]

**ಗಾವರ** (ನಾ). ೧. ಗದ್ದಲ ; ಗಲಾಟೆ ; ಅಬ್ಬರ : “ ಗಾವರ ಸರದನಿ ಸಪ್ಪಳುಲಿಯುಂ ಗಾವಳಿ ಮಿಗೆಯುಬ್ಬರಮುಂ ಧ್ವನಿ ” (ಕವಿಕಂ. ೦೦೬) ; ಪರಮಮಂಗಳಪಾಠಕರ ಗಾವರದ ಘನಸಂಭ್ರಮದಲ್ಯೆತಹ ಪರಮಶಿವನನು ರಾಜಪುತ್ರರು ಕಂಡರಿದಿರಿನಲಿ (ನಿಭಾಗ. ೪-೧೬-೩). ೨. ಗುಂಜಾರವ ; ಝೇಂಕಾರ : ತಣ್ಪಡಿದೆಲರೂದೆ ಗಾವರದ ಮೆಲ್ಲುಲಿ ತುಂಬಿಯ ಗಾವರಂಗಳಂ ಗೆಡೆಗೊಳೆ (ಪಂಪಭಾ. ೪-೧೧೦) ; ನುಣ್ದನಿಯ ಸುವ್ವಿಯ . ಗಾವರದೊಳ್ ಕೊಡರ್ಚಿದೋಪನಿಗೆ ಪುಳಿಂದಿ ಪಾಡಿದಳ್ (ಲೀಲಾವ. ೮-೩೦) ; ತಾವರೆವೂಗಳೊಳ್ ಪಲವು ತುಂಬಿಯ ಗಾವರಮುಣ್ಮೆ (ನಳಚಂ. ೦೩೬). ‘ ಗಾವಳಿ ’ ಪರ್ಯಾ. [ ? ]

**ಗಾವರಂಬೊರೆ** (ಕ್ರಿ). ಗಾವರದಿಂದ ಕೂಡು ; ಝೇಂಕರಿಸು : ಪೆಣ್ದುಂಬಿಯ ಗಾವರಂಬೊರೆದು ಪೊಣ್ಮುತಿರ್ದ ಪುಷ್ಪಾಸ್ತ್ರಚಾಪಲತಾಜ್ಯಾರವದಂತೆ (ಕಾದಂಪೂ. ೬೫೨). [ ಗಾವರ + ಪೊರೆ$_{2}$ ]

**ಗಾವರದುಂಬಿ** (ನಾ). ಝೇಂಕರಿಸುವ ದುಂಬಿ ; ಮೊರೆಯುತ್ತಿರುವ ಭ್ರಮರ : ಕವಿವ ಗಾವರದುಂಬಿಯನಾದ ಗಾವರಂ ತೆಕ್ಕನೆ ತೀವಿ ಕೂಡೆ ಬಗೆಗೊಂಡುದು ಕೂಡೆ ಬನಂ ಬಸಂತದೊಳ್ (ಸೂಕ್ತಿಸು. ೧೧-೧೦).

[ ಗಾವರ + ತುಂಬಿ$_{1}$ ]

**ಗಾವರಸ** (ನಾ). [ ಸಂಗೀತ ] ಆಲಾಪನೆಯ ಸ್ವಾರಸ್ಯ : ಪೂರ್ವಪದಂ ತದ್ಭವಮಾದುದರ್ಕೆ – ಗ್ರಾಮರಸ – ಗಾವರಸ (ಶಮದ. ೨೮೯ ಪ್ರಯೋ) ; ಗಾವರಸಂ, ಗ್ರಾಮರಸಃ. ಗ್ರಾಮೋನಾಮ ಸರಿಗಮಾದಿ ಸ್ವರಸಮೂಹಃ (ಶಬ್ದಾನು ೨೯೬ ವ್ಯಾಖ್ಯಾ).

[ <ಸಂ. ಗ್ರಾಮರಸ ]

**ಗಾವರಿವಾಡ** ‘ ಗಾವಡಿವಾಡ ’ ನೋ.

**ಗಾವರಿಸು**(ಕ್ರಿ). ೧. ಗದ್ದಲಮಾಡು ; ಸದ್ದುಮಾಡು ; ಆರ್ಭಟಿಸು : (ಕೆ). ೨. ಝೇಂಕಾರಮಾಡು ; ಧ್ವನಿಮಾಡು : ಒಳ್ಪನಾಳ್ದ ಪೆರ್ಗ್ಗೆಟಿ ಗಳಿನೊಂದಿ ಗಾವರಿಸುತಿರ್ಪ್ಪ ಮದಾಳಿಯಿಂ (ಎಇ. XIII, ೩೩೧-೨೬ ; 929) ; ಅರಗಿಳಿಯಾಗಿ ಮಂಗಳಮನೋದುವ ತುಂಬಿಯ ಬಂಬಲಾಗಿ ಗಾವರಿಸುವ (ಪುಷ್ಪಪು. ೧೨-೬೧) ; ಆಸ್ಯಾಬ್ಜಗಂಧಕ್ಕೆ ಮಂಡಳಿಗೊಂಡಾಟಿಏಿಂಡು ಗಾವರಿಸದಂತೋರಂತೆ ಜಾಣ್ಮಕ್ಕು ಪುಂಶ್ಚಳಿಯರ್ . . . ನಿಶಾಂತಾಂತಂಗಳಂ ಪೊರ್ದಿದರ್ (ರಾಜಶೇ. ೧೦-೨೪) ; ತೀಟದ ಕಂಪೆತ್ತಲತ್ತಲ್ ಮೋಹರಿಸಿ ಗಾವರಿಸಿ ತಂಡತಂಡದಿಂ ತೇಂಕುತ್ತೆತಂದು (ರಾಮಾಶ್ವ. ೫೪-೩).

[ ಗಾವರ + – ಇಸು$_{3}$ ]

**ಗಾವಸಿಂಗ** (ನಾ). ಗ್ರಾಮಸಿಂಹ ; ನಾಯಿ : ತುಂಗಗಜಂಗಳ್ಗಳ್ಕಿ ಮೃಗಂಗಳನಾಯ್ದುಟಿಸಿ ತಿಂಬುದಪ್ಪೊಡೆ ಪೆಟತೇಂ ಸಿಂಗಮದಲ್ಲದು ಪೋಗಾ ಸಿಂಗಂ ತಾಂ ಗಾವಸಿಂಗಮೆಂದುದು ನಿನ್ನಂ (ಪಂಚತಂ. ೯೦-೮).

[ ಗಾವ (<ಗಾವು) + ಸಿಂಗ$_{1}$ ]

**ಗಾವಳ** ‘ ಕಾವಳ ’ ನೋ.

**ಗಾವಳಿ, ಗಾವುಳಿ** (ನಾ). ೧. ಸದ್ದು ; ಗದ್ದಲ ; ಅಬ್ಬರ : “ ಗಾವರ ಸರದನಿ ಸಪ್ಪಳುಲಿಯುಂ ಗಾವಳಿ ಮಿಗೆ ಅಬ್ಬರಮುಂ ಧ್ವನಿ ” (ಕವಿಕಂ. ೧೧೬) ; ಭ್ರಮೆಯಾಯ್ತು ವಿದುರಂಗೆಂಬ ಗಾವಳಿಯ ಕೂಡೆ ಕುಣಿದನು (ಕುವ್ಯಾಉ. ೮-೧೧) ; ಗಾವಳಿಯನೆಬ್ಬಿಸದೆ ಬಿಡೆನು (ಅಂದಿಕಾ. ೩೬-೭). ೨. ದೊಂಬಿ ; ರಂಪ ; ಹಾವಳಿ : ಬಂದ ಗಾವಳಿಗೆ ಹೆದಟ್ ರಂಜಣೆಗೆಯೊಳಡಗಲು (ಹದಕಾ. ೦೦-೪೩) ; ದಿನಪನಿದಿರಲಿ ತಮದ ಗಾ[ಪಾಠಾಂ. ಹಾ]ವಳಿಯೋ (ನಳಚ. ೯-೮) ; ಕೊಲೆ ಪಾದರಂ ಪುಸಿ ನುಸುಳು ವೈರಮಟ್ಟುಳಿ ತೋಹು ಬೆದಟು ಬೆಜ್ಜರ ಕಪ್ಪ ನಿಷ್ಠುರಂ ಗಜಬು ಗಾವಳಿ ವಿವಾದ (ಜೈಮಿಭಾ. ೨-೫). ೩. ಗುಂಪು ; ಸಮೂಹ : ಪುದಿದ ಕುರುಳ್ . . . ಪೂತ ಕಿಂಕಿರಾತದೊಳೆಟಗುತ್ತುಮಿರ್ಪಳಿಯ ಗಾವಳಿಯಂದದಿನೊಪ್ಪಿ ತೋಟುಗುಂ (ಶಾಂತಿಪು. ೧೧-೧೧೯) ; ಕರೆದಂ ತಂದರು ಕವಿದ ಗಾವಳಿಯ ಗಜಬಜದ ಮೊಟೆಕಾಟರಂ (ಸಿದ್ಧರಾ. ೮-೬) ; ಸಂದಣಿಸಿ ಕುರುಭೂಮಿಯಲಿ ತಾ ಮಂದಿ ಬಿಟ್ಟುದು ನಾಡ ಗಾವಳಿ ಬಂದುದಲ್ಲಿಗೆ (ಕುವ್ಯಾಭೀ. ೧-೩) ; ಆಜಿರಂಗದೊಳು . . . ಗಾವಳಿಯನು ಬಂದು ಪೊಗುವ ರಾಹುತರ್ (ಕುರಾಸಾಂ. ೧೦-೬೩). ೪. ಕಷ್ಟ ; ತೊಂದರೆ ; ಹಿಂಸೆ : ದೇವರವರ ಮನಸಿನ ಚಿಂತೆಯ ಬಲು ಗಾವಳಿಯನು ಮಿಗೆ ಪಟ್‌ದು ತೀವಿದ ಮುದವ ನಿಮಗೆ ಬೇಟದಿದ್ದೊಡೆ ನಾವಿದ್ದು ಫಲವೇನು (ಕಂಸವಿ. ೧೯-೦೦) ; ಕರುಣಾಸಮುದ್ರ ನೀನೆಮ್ಮ ಮುಖವಾಗು ದೇವಾಸುರರ ಬಿನ್ನಪದ ಗಾವಳಿಯನೊಂದು ಕ್ಷಣಂ ಸೈರಿಸು (ಭಕ್ತಸ. II, ೬-೩) ; ಗಾವಳಿಯ ಪರಿಹರಿಸು ಜಯಿಸೀ ಭೂವರರನುರೆ ಸಪ್ತವಾರದಲ್ಲಿ ವಸುಧೆಯನು (ಅಧ್ಯಾರಾ. ೧-೮-೧೨). ೫. ರೀವಿ ; ಗತ್ತು : ಆ ವನದೊಳ್ತಂಬೆಲರೆಡೆಯಾಟದ ಗಾವಳಿ ಪೆಣ್ದುಂಬಿಗಳ ಗಾವರ (ಕುರಾಸಾಂ. ೩-೨೮) ; ಮುತ್ತಿನ ದಗಲೆ ವಜ್ರದ ಜೋಡು ಸಿರದಲಿ ಬಿತ್ತರವಹ ಸೀಸಕದ ಪುಸ್ತಂಗ ತೊಡರಾ ಗಾವಳಿಯಿಂದ ಭೂಪೋತ್ತಮ ನಡೆದನುಬ್ಬಿನಲಿ (ಕಂಸವಿ. ೧೫-೧೨) ; ಬೇಟೆವನಾರ್ಪು ಬೇಟೆವನ ಗಾವಳಿ . . . ಎಲ್ಲರಂ ಮಿಾಟದ ಕೂರ್ಚನಪ್ರತಿಮವೀರನಿವಂ ಚಿಕದೇವಭೂವರಂ (ಚಿಕವಿ. ೫-೮೦). **ಗಾವುಳಿ** : ೩. ಬಳಸಿ ತನ್ನೊಡನೊಯ್ಯನೊಯ್ಯನೆ ಬರ್ಪ ದೇವರದೊಂದು ಗಾವುಳಿಯನಿನ್ನಿರಿವೆಂದು . . . ಧಾತ್ರಿಗೆ ವರ್ಪ ಗಂಗೆವೊಲೊಪ್ಪಿದಂ ಮುನಿಪುಂಗವಂ (ಪಂಪಭಾ. ೩-೬).

**ಗಾವಳಿಮಾಡು** = ಗಲಾಟೆಯನ್ನು ಎಬ್ಬಿಸು ; ಗಲಭೆಮಾಡು : ಈ ಊರಿನವರೆಲ್ಲಾ ಬುದ್ಧಿಯವರನ್ನ ಇಲ್ಲಿಂದ ಬಿಡಿಸಿಕೊಳ್ಳಬೇಕು–ಎನ್ನುತ ಗಾವಳಿಮಾಡುತ್ತ ಇದ್ದಾರೆ, ಮಾಸ್ವಾಮಿ (ವಿಗಿಡ. ೬೩-೦೫). [ <ಸಂ. ಕಾಹಲ ]

**ಗಾವಳಿಗ** (ನಾ). ೧. ಗಲಾಟೆಮಾಡುವವನು ; ಗದ್ದಲಮಾಡುವವನು ; ಗಲಭೆಕಾರ : ನೀನೀ ಪರಿಯ ಗಾವಳಿಗಂಗೆ ಕೂರ್ತಡೆ [ಪಾಠಾಂ. ಕೌತುಕಗಳನು ಮಾಡಲು, ಕೌಳಿಕವನುಜಗೋತಡೆ] ಮರುಳುಗುಟ್ಟಿದ ಮಾಣ್ಬರೇ ಹೇಳೆಂದಳಾ ಸಕಳೆ (ಪ್ರಭುಲೀ. ೫-೬೫) ; ಕಲುಮರನ ತುಂಬುವೆನು ಹಿಂದಣ ಗಲಬೆಗಲಹದ ಗಾವಳಿಗ[ಪಾಠಾಂ. ಯ]ರೊಳು ಜುಳುಕಿನಾಹವದವನೆ ತಾನೆಂದುಬ್ಬಣವ ಜಡಿದ (ಕೊರರಾ. ೭-೩೫-೯). ೨. ನಾಡಾಡಿ ; ಸಾಮಾನ್ಯನಾದವನು : ದೇವರುಪಿ ನೀನೆಂದು ತಾಳಿದೆನು ಮತ್ತೊಬ್ಬ ಗಾವಳಿಗ ಯತಿಯಾಗಲವನ . . . ದಿಗ್ಬಲಿಯ ಚಲ್ಲಿಸುವೆನು (ನವಮೋ. ೨೭-೬೮). [ ಗಾವಳಿ + –ಗ$_2$ ]

**ಗಾವಳಿವಡೆ** (ಕ್ರಿ). ಗುಂಪುಗೂಡು ; ಸಮೂಹವಾಗು : ಸೊರ್ಕಿರುವರಗಿಳಿಗಾವಳಿವಡೆದು ಕಾಗೆಗಳೆಱಗುವ ಬೇವಿನ ಪಣ್ಗಾಸೆವೆತ್ತೆಱಗುವುದೇ (ಗೀತಗೋ. ೬೭-೫). [ ಗಾವಳಿ + ಪಡೆ$_1$ ]

**ಗಾವಳಿಸು** (ಕ್ರಿ). ಗುಂಪುಗೂಡು : ಉದ್ಧ್ರುಮರಮುದ್ಧ್ರುಮರಂಗಳ ಗಾವರಕ್ಕೆ ಗಾ[ ಪಾಠಾಂ. ಚಾ, ಜಾ, ಬಾ ]ವಳಿಸಿ ಭಡಾಳದೊಳ್ ಮೊರೆವುವು (ಅನುಕೃ. ೧–೭೭ ; ಸೂಕ್ತಿಸು. ೪–೪೪ ನೋ) ; ತೊಲಗಿಂ ಗಾವಳಿಸಿ ಗಲಭೆಗೆಯ್ವೊಡೆ ರಾವಲ್ತು (ಅಪ್ರತಿ. ೧೨೭–೨೨). [ ಗಾವಳಿ + –ಸು$_1$ ]

**ಗಾವಿತಿ** (ನಾ). ಗೌಡಿತಿ : ಕಾಳಬ್ಬೆ ಗಾವಿತಿಗೆ ಗುಜ್ಜಣಂ ಪುಟ್ಟಿ ತಂದೆಗೆ ವದಿಮ್ಮರ್ಡಿಯಾಗಿ ಪೆರ್ಮ್ಮಾಡಿ ಗಾವುಣ್ಡನೆಂಬ ಪೆಸರಂ ಪಡೆದು (ಎಕ. VII, ಶಿವಮೊ. ೧೧-೩೨ ; 1085 ?).

[ P ಇದು 'ಗೌಡಿತಿ' ಎಂಬುದರ ಅಪಲಿಖಿತ ]

**ಗಾವಿಲ, ಗಾವಿಳ** (ನಾ). ೧. ಹಳ್ಳಿಯವನು ; ಗ್ರಾಮಪ್ರದೇಶದವನು : ಗ್ರಾಮಿಣ–ಗಾವಿಲ (ಕಮದ. ೨೮೦ (೩) ಪ್ರಯೋ). ೨. ಹಳ್ಳಿಯ ಅಧಿಕಾರಿ ; ಗ್ರಾಮಾಧಿಕಾರಿ ; ಪಟೇಲ ; ಗ್ರಾಮಣಿ : "ಗಾವಿಲನೆಂದು ಗ್ರಾಮಣಿ " (ಶಬ್ದಕೈ. ೫೭) ; "ಗಾಂಪ ಗ್ರಾಮಾಧಿಪತಿಗಳೊಳು ಗಾವಿಲ ಶಬ್ದ " (ಶಬ್ದಮಂ. ೦೦೪). ೩. ತಿಳಿವಳಿಕೆಯಿಲ್ಲದವನು ; ಹೆಡ್ಡ ; ದಡ್ಡ ; ಅನಾಗರಿಕ : "ಎಗ್ಗನೆನೆ ಗಾವಿಲಂ" (ಚಕುನಿ. ೮೨) ; "ಗಾಂಪ ಗಾವಿಲ ಮೇಣೆಗ್ಗಂ ಹೆಡ್ಡನಕ್ಕು" (ಕವಿಕಂ. ೦೬೩) ; ತಲೆಸೂಡಿ ಮುನ್ನೆ ಕಜ್ಜದ ಫಲಮಂ ಬೆಸಗೊಂಡುವೆ[ೞ]ವನಲ್ಲಿಂ ಬಟಿಯಂ ತಲೆಯಂ ಕಿರಿಯಿಱಿ ದಿವಸಮನಲಸದೆ ಬೆಸಗೊಳ್ವನಂತು ಗಾವಿಲನಕ್ಕುಂ (ಕವಿರಾ. ೩-೦೪೪) ; ಬೇವಿನಾರವೆಯುನಿಟ್ಟು ಮಾವಿನವಣ್ಣನಟಿಸುವ ಗಾವಿಲನುಮಂ (ಧರ್ಮಾಮೃ. ೬–೧೬೮) ; ಪೆಣ್ಣುವೆಣ್ಣಂದೇತಕೆ ಬೀಳುಗಳೆವರು ಕಣ್ಣುಕಾಣದ ಗಾವಿಲರು (ಹರಿಬ. ೫–೭) ; ಗಾವಿಲನ ಧನವು ಘನವಾಗಿ ಬಯ್ಚಿಟ್ಟ ರಾವಿಲೇ ಪೋಕು (ಸರ್ವಜ್ಞ. ೬೮೪). **ಗಾವಿಳ** : ೧. ಬಡವರಿಗೂ ಬಲ್ಲಿದರಿಗೂ ಹುಡುಗರಿಗೂ ಹೆಂಗಸರಿಗೂ ಗಾವಿಳನಿಗೂ ಗಂಡಸಿಗೂ . . . ಸಕಲರಿಗೂ ಸಮವಾದ ಸ್ವಾತಂತ್ರ್ಯ (ಹರಿಜ. ೬೫).

[ <ಪ್ರಾ. ಗಾವಿಲ್ಲ./ಸಂ. ಗ್ರಾಮಿಣ ]

**ಗಾವಿಲತನ** (ನಾ). ದಡ್ಡತನ ; ಹೆಡ್ಡತನ : ಗಾವಿಲತನದಿಂ ಪೊಕ್ಕೊಡೆ ಸಾವಪ್ಪುದು ಪುಸಿಯೆ ಬರ್ದುಕಿದಂ ಪುಣ್ಯದಿಂ (ಧರ್ಮಾಮೃ. ೬–೫೦) ; ವನಜಸಂಭವ ತನ್ನ ಗಾವಿಲತನವ ನೋಡದೆ ನೀವು ನಿಮ್ಮಯ ಘನತೆಯನು ಮಾಱಿದೀಗ ಕೊಡುವುದು (ಉಪ್ರಾ.ಆ. ೭೦೩. ಪರಿ. ೩೩೯) ; ವರಶುಭವಿಲ್ಲದ ವಧುಗಳ ಗರುವಿಕೆಯಂ ಪೇಳ್ವರೇಕೆ ಗಾವಿಲತನದಿಂ (ಚಮ್ಮೊರ. ೨–೩೮). [ ಗಾವಿಲ + –ತನ ]

**ಗಾವಿಲತ್ವ** (ನಾ). = ಗಾವಿಲತನ : ದೇವ ಯಿದು ದಲು ಕಾರಣಂ ನಿನಗಾವ ತೆಱದೊಳಗಂಜುವೆಂ ಮುಂ ಗಾವಿಲತ್ವದೊಳೆಂದು ಪಡೆದಾ ಲಾಘವದ ಸಾಲ್ಗುಂ (ಸಾನಂಚ. ೭-೬೩). [ < ಸಂ. ಗ್ರಾಮಿಣತ್ವ ]

**ಗಾವಿಲನುಡಿ** (ನಾ). ದಡ್ಡತನದ ಮಾತು ; ಮೂಢತನದ ನುಡಿ : ದೈವ ಪೆಂದವನಾಶಕ್ತ್ಯತವೇದು ಸ್ವಯಂಭುವೆಂಬಾ ಗಾವಿಲನುಡಿಯಿಂ (ಶಬ್ದಮ ೧೧-೦೯೩). [ ಗಾವಿಲ + ನುಡಿ$_2$ ]

**ಗಾವಿಲಿ** (ನಾ). ಗಾವಿಲತನವನ್ನು ಹೊಂದಿರುವವಳು ; ದಡ್ಡಳಾದ ಹೆಂಗಸು ; ಹೆಡ್ಡೆ : ಕಂತು ಬಿಲ್ದೆಗೆಯೆ ಬಟೀಕ್ಕೆ ಕೈದೆಗೆವ ಗಾವಿಲಿ [ಪಾಠಾಂ. ಳಿ ]ಗೇವುದೋ ಬೇಟದಟ್ಟಿಗಂ (ಲೀಲಾವ. ೧೪-೩೭). [ ಗಾವಿಲ + –ಇ$_2$ ]

**ಗಾವಿಲಿಕೆ** (ನಾ). = ಗಾವಿಲತನ : ಪೆಱರ ವಿಭವಕ್ಕೆ ಬಯಸುವ ಮಱುಗುವ ಗಾವಿಲಿಕೆಯೇಕೆ (ಅಜಪು. ೧೧-೪೨) ; ಹೋಮಮಂ ಮಾಡುವ ಬ್ರಾಹ್ಮಣಂ ನೊಣವು ಬೆನ್ನನೂಱಿದೊಡೆ ಸೈರಿಸಲಾಱದೆ ಬೆನ್ನಂ ಪೊಯ್ದುಕೊಳ್ವುದುಂ ಕಲದೂಳಿರ್ದವರೆಲ್ಲಂ ಕೊಡನ ತುಪ್ಪದೊಳ್ ಕೈಯನದ್ದಿಕೊಂಡು ತಮ್ಮ ಬೆನ್ನೆಳಂ ಪೊಯ್ದುಕೊಂಡರೆಂಬ ಗಾವಿಲಿಕೆಯಂ ಮಾಡಿ (ಧರ್ಮಾಮೃ. ೧೧-೫೨). [ ಗಾವಿಲ + –ಇಕೆ ]

**ಗಾವಿಳೆ** (ನಾ). = ಗಾವಿಲಿ : ಕಂತು ಬಿಲ್ದೆಗೆಯೆ ಬಟೀಕ್ಕೆ ಕೈದೆಗೆವ ಗಾವಿಳ [ ಪಾಠಾಂ. ಲಿ ] ಗೇವುದೋ ಬೇಟದಟ್ಟಿಗಂ (ಲೀಲಾವ. ೧೪-೩೭). [ ಗಾವಿಲ + –ಎ$_2$ ]

**ಗಾವಿಳ** 'ಗಾವಿಲ' ನೋ.

**ಗಾವು** (ನಾ). ಗ್ರಾಮದೇವತೆ ಮೊದಲಾದ ದೇವರುಗಳ ಮುಂದೆ ಪೂಜಾರಿಯು ಬಲಿಗಾಗಿ ಕುರಿಯನ್ನು ಹಲ್ಲಿನಿಂದ ಕಚ್ಚಿ ಕೊಲ್ಲುವುದು. 'ಗಾವುಗುಱಿ', 'ಗಾವುಮರಿ' ಪರಾ.

**ಗಾವಿನಮರಿ**=ಗ್ರಾಮದೇವತೆಯ ಮುಂದೆ ಪೂಜಾರಿ ಹಲ್ಲಿನಿಂದ ಕಚ್ಚಿ ಕೊಲ್ಲುವ ಕುರಿ : ಗಾವಿನಮರಿ ಅರಚಿಕೊಳ್ಳುವುದನ್ನು ಕೇಳಲಾಗುವುದಿಲ್ಲ (ರೂಢಿ). **ಗಾವುಕಟ್ಟು** = ಗ್ರಾಮದೇವತೆ ಮೊದಲಾದ ಕ್ಷುದ್ರಶಕ್ತಿಗಳಿಗಾಗಿ ಬಾಯಿಯಲ್ಲಿ ಕಚ್ಚಿ ಕುರಿಯನ್ನು ಬಲಿಕೊಡು : ಇವನು ಕಗ್ಗಲಿಯಮ್ಮನ ಪೂಜಾರಿ. ಊರ ದೊಡ್ಡ ಹಬ್ಬದಲ್ಲಿ ಇವನು ಗಾವು ಕಟ್ಟುತ್ತಾನೆ (ನನ್ನೂರು. ೧೧) ; ಶಕ್ತಿದೇವತೆಗಳ ಆರಾಧನೆಯಲ್ಲಿ ಆವೇಶಗೊಂಡ ಪೂಜಾರಿ ಕುರಿಯ ಕುತ್ತಿಗೆಯನ್ನು ಕಚ್ಚಿ ರಕ್ತಹೀರುವುದು. ಇದೀ ಆಚರಣೆಗೆ 'ಗಾವುಕಟ್ಟುವುದು' ಎನ್ನುತ್ತಾರೆ (ನನ್ನೂರು. ಟಿಪ್ಪಣಿ). **ಗಾವುಸಿಗಿ** = ಗಾವಿನ ಮರಿಯನ್ನು ಹಲ್ಲಿನಿಂದ ಕಚ್ಚಿ ಸಿಗಿ. –ಸೀಳು: ಗಾವುಸಿಗಿದಾದ ಮೇಲೆ ಎಲ್ಲರೂ ದೇವರನ್ನು ಹೊರಡಿಸಿಕೊಂಡು ಊರಿಗೆ ಬಂದು ಗುಡಿದುಂಬಿಸುತ್ತಾರೆ (ನನ್ನೂರು. ೬೫).

[ ದೇಶ್ಯ ತಮಿ. ಕಾವು; ತೆಲು. ಗಾವು ]

**ಗಾವುಂಡ** 'ಗಾಮುಂಡ' ನೋ.

**ಗಾವುಂಡಪಂತ** (ನಾ). ಗೌಡನ ಅಧಿಕಾರ,—ಪದವಿ : ಶ್ರೀಕಲಿಬಿಟ್ಟರಸರ ಬೆಸದೊಳತೀತನಾದೊಡಾತನ ಗಾವುಣ್ಡಗರಸನ್ರ್ನಾಟ್ಟುಗ್ಗಾವುಣ್ಡಪಂತಮನಿತ್ತೊಡೆ ಜಕ್ಕಿಯಬ್ಬೆ ನಾಟ್ಟುಗ್ಗಾವುಣ್ಡುಗೆಯ್ಯುತ್ತಿರೆ (ಎಕ. VII, ಶಿಕಾರಿ. ೨೦೯-೧೧ ; 918). [ ಗಾವುಂಡ (<ಗಾಮುಂಡ) + ಪಂತ$_2$ ]

**ಗಾವುಂಡವಸದಿ** (ನಾ). ಒಂದು ಬಸದಿಯ ಹೆಸರು : ವಾಯುವ್ಯದ ಗೋಂಟಿಸಲ್ ಸೋಭನೇಶ್ವರದ ಗಾವುಣ್ಡವಸದಿಯ [ಕೆಯ್ಯ ಮೇ]ರೆಯುಂ (ಸೌಇಇ. XX, ೫೫-೫೩ ; 1082).

[ ಗಾವುಂಡ (<ಗಾಮುಂಡ) + ಬಸದಿ ]

**ಗಾವುಂಡವೃತ್ತಿ** (ನಾ). ೧. ಗೌಡಿಕೆಯ ವೃತ್ತಿ, –ಕೆಲಸ : ಕೀಳೂರು ಅಱುಯೂರು . . . ಹೆನ್ನವುರದ ಗಾವುಣ್ಡವೃತ್ತಿಯುಮಂ . . . ಇತ್ತು

(ಎಕ. VII, ಶಿವಮೊ. ೦೦-೩೦ ; 1065 ?). ೨. ಗೌಡನಿಗೆ ಬಿಟ್ಟಿರುವ ವೃತ್ತಿ,-ಉಂಬಳಿ; ಗ್ರಾಮಾಧಿಕಾರ ನಿರ್ವಹಣೆಗಾಗಿ ಬಿಟ್ಟಿರುವ ಜಮೀನು. [ಗಾವುಂಡ (<ಗಾಮುಂಡ) + ವೃತ್ತಿ₂]

**ಗಾವುಂಡಸುಂಕ** (ನಾ). ತೆರಿಗೆಯಲ್ಲಿ ಗ್ರಾಮಾಧಿಪತಿಯ ಪಾಲು: ಸಿರಿಯಮ್ಮಗಾವುಣ್ಡಂ ಭೋಗೇಶ್ವರ ದೇವರ್ಗ್ಗೆ ತೋಂಟದಲಾದ ಗಾವುಣ್ಡ ಸುಂಕವುಂ ಬಿಟ್ಟಂ (ಎಕ. XI, ಚಿತ್ರದು. ೬೮-೩೩ ; 1060) ; ಗಾವುಂಡನಿಗೂ . . . ತೆರಿಗೆಯ ಒಂದು ಭಾಗವನ್ನು 'ಗಾವುಂಡಸುಂಕ' ವೆಂದು ಬಿಟ್ಟು ಕೊಡುತ್ತಿದ್ದರು (ಕಶಾಅ. ४೪೯). [ಗಾವುಂಡ (<ಗಾಮುಂಡ)+ಸುಂಕ]

**ಗಾವುಂಡಸ್ವಾಮಿ** 'ಗಾಮುಂಡಸಾಮಿ' ನೋ.

**ಗಾವುಂಡಿ,** ಗವುಂಡಿ, ಗವುಡಿ₁, ಗೌಂಡಿ₁, ಗೌಡಿ₁, ಗೌವುಂಡಿ (ನಾ). ೧. ಗಾವುಂಡನ ಹೆಂಡತಿ; ಗ್ರಾಮಾಧಿಕಾರಿಯ ಪತ್ನಿ; ಗೌಡಿತಿ: ಆವೂರ ಗಾವುಂಡಂ ಜಿನಪಾದಿಕನೆಂಬೊನಾತನ ಗಾವುಂಡಿ ಜಿನಮತಿಯೆಂಬೊಳ್ (ವಡ್ಡಾರಾ. ೦೧೦-೨೪) ; ಆತನ ಗಾವುಣ್ಡಗರಸನ್ನಾರ್ಟ್ಗೌವುಣ್ಡಿ ಪಂತಮನಿ ಕ್ಕೊಡೆ (ಎಕ. VII, ಶಿಕಾರಿ. ೨೦೯-೧೦ ; 918) ; ಅವರ ಶ್ರಾವಕಿ ಚನ್ದಿಯಬ್ಬೆ ಗಾವುಣ್ಡಿ (ಎಕ. IX, ಕೊಡಗು. ೩೦-೧೦ ; ಸು. 1050 ?) ; ಕಾಮ ವೃಕ್ಷಿಯೆಂಬ ಗಾವುಂಡಂಗಂ ಇಷ್ಪದಾನಿಯೆಂಬ ಗಾವುಂಡಿಗಂ ಅಕೃತಪುಣ್ಯ ನೆಂಬ ಮಗಂ ಪುಟ್ಟಲೊಡಂ(ಜೀವಸಂ. ೨೦೦-೩೯ ವ). **ಗವುಂಡಿ:** ೧. ನಜಿಬ್ಬೆ ಗವುಣ್ಡಿಯ ಮಗ ಅಮ್ಮಣ್ಣ ಗವುಣ್ಡ ತನ್ನೂರಟಿವ ಕಣ್ಣು (ಎಕ. VIII, ಸೊರಬ. ೨೩೪-೯ ; 939). **ಗವುಡಿ₁:** ೧. ಸೋಮನಹಳ್ಳಿಯ ಮಾಯಿಂದೆಯ ಬಮ್ಮಗಾವುಣ್ಡಗಂ ಮಾದಿಗವುಡಿಗಂ ಪುಟ್ಟಿದ ಗೋತ್ರ ಪವಿತ್ರ ಸಾಮನ್ತ ಬೀಳಿಯನಾಯಕ (ಎಕ. VI, ಕಡೂರು. ೦೦೪-೬೨ ; 1141 ?) ; ಸೋವಗೌವುಂಡಂಗಂ ನಾಗವ್ವೆಗವುಡಿಗಂ ಪುಟ್ಟಿದ ಪುತ್ರರು (ಎಕ. VI,ಕಡೂರು. ೩೦-೪೦ ; 1170). ೨. ಊಳಿಗದವಳು; ಸೇವಕಿ; ತೊತ್ತು; ದಾಸಿ: ಅವನು ಅವಳ ಕೂಡ ೧೮ ವರ್ಷ ಸಂಸಾರ ಮಾಡಿದ ಮೇಲೆ, ಅವಳ ಗವುಡಿಯರಲ್ಲಿ ಒಬ್ಬಳಾದ ಆನ್-ಬುಲೀನಳೆಂಬವಳಿಗೆ ಮನ ಸೋತನು (ಇಂಗ್ಲಂಡ. ೦೦೩) ; ಗವುಡಿ ಹಾಡಿಗೆ ತವುಡೇ ತ್ಯಾಗ (ಗಾದೆ). **ಗೌಂಡಿ₁:** ೧. ಕೇತಗವುಣ್ಡಗಂ ಎಚಿಕಲುವೆಗೌಣ್ಡಿಗಂ ಸುಪುತ್ರಃ ಕುಲದೀಪಕಂ ಪುಟ್ಟಿ (ಎಕ. VI, ತರೀಕೆ.೫೬-೨೩ ; 1097 ?) ; ದೇಕಬ್ಬೆ ಗೌಣ್ಡಿಯುಂ ಕೊಸಿಗವಳ್ಳಿಯ (ದೊಂಕಶಾ. ೧೯೪೦, ಸಿರಸಿ. ೬೨-೧೨ ; ?). **ಗೌಡಿ₁:** ೧. ಬೊಂಮ್ಮಗೌಡಂಗಂ ಮಸಣಗೌಡಿಗಂ ಪುಟ್ಟಿದ ಸು[ಪು]ತ್ರರು (ಎಕ. XII, ಚಿಕ್ಕನಾ. ೦೩-೨೯ ; 1181). ೨. ನನ್ನಂತ ಗೌಡಿಯರು ನಿನ್ನ ಪಾದಪದ್ಮಸಮೀಪದೊಳ್ ಬಿದ್ದಿರುವರು (ಸೌಗಂಧಿ. ४೪೬-೫) ; ದುಶ್ಶಾಸನನು ಕುರುಳನ್ನು ಹಿಡಿದು ಸಭಾಮಧ್ಯಕ್ಕೆ ಎಳೆದುಕೊಂಡು ಬಂದು ಗೌಡಿಯಂತೆ ಎಣಿಸಿ ಅಪಮಾನಪಡಿಸಲು (ಕೃವಾಉ. ೦೩೬) ; ಈ ಮಾತು ಗೌಡಿಯಿಂದ ಗೌಡಿಗೆ ಹೋಗಿ ಆ ಗೌಡಿಯಿಂದ ರಾಣಿಗೆ ಮುಟ್ಟಿ (ಸಣ್ಣಕ. VIII, ೫೩) ; ಉಪಚಾರಕ್ಕೂ ಕೆಲಸಕ್ಕೂ ಇಬ್ಬರು ಗೌಡಿಯರು ಬಂದರು (ಪೀಟೀಮೂ. ೧೮). **ಗೌವುಂಡಿ:** ೧. ಮಾಚಗೌವುಣ್ಡನಾತನ ಮನೋವಲ್ಲಭೆ ಮಾಚಗೌವುಣ್ಡಿಯ ಮಗಂ ಕಾಳಗಾವುಣ್ಡ (ಎಕ. V, ಬೇಲೂರು. ೨೦೨-೫ ; 1138). [ಗಾವುಂಡ (<ಗಾಮುಂಡ) + -ಇ₂]

**ಗಾವುಂಡಿಕೆ,** ಗಲುಡಿಕೆ, ಗವುಂಡಿಕೆ, ಗವುಡಿಕೆ, ಗಾವುಂಡಿಗೆ, ಗೌಡಿಕೆ, ಗೌವುಂಡಿಕೆ (ನಾ). ಗಾವುಂಡನ ಕೆಲಸ; ಗ್ರಾಮಾಧಿಪತ್ಯ: ರಾಜಧಾನಿ ಯಣ್ನಿಗೆಜೆಯ × × × ರಿಯ ಗಾವುಣ್ಡಿಕೆ × × × ಡೆಯುರೆನಿಸಿ (ದೊಂಕಶಾ. ೧೯೨೯, ನವಲಗುಂದ. ೨೦೬-೩೯ ; 1172). **ಗಲುಡಿಕೆ:** ಹಾನಗಲ ಲಿಂಗೇಗಲುಡರಿಗೆ ಹಾ × × × ಟ್ಟ ಗಲುಡಿಕೆ (ಎಕ. IX, ಕೊಡಗು. ೬೩-೬ ; ?). **ಗವುಂಡಿಕೆ:** ಹಲವುಕಾಲಂ ಗವುಂಡಿಕೆಯಂ ಮಾಡುತ್ತಿರ್ದಪವರ (ದೊಂಕಶಾ. ೧೯೪೦, ಸಿರಸಿ. ೬೨-೧೩ ; ?). **ಗವುಡಿಕೆ:** ಆ ಬಲ್ಲಿಗವುಡ ಕಾಮಗವುಡ ಬೊಂಮ್ಮಗವುಡಂಗಳ ಗವುಡಿಕೆಯ ಪ್ರಸಿದ್ಧ ಸೀಮಾಸಮನ್ವಿತವಹ ಎಸಗೂರ ಕ್ಷೇತ್ರ (ಎಕ. XI, ಚಿತ್ರದು. ३೨-४೦ ; 1286). **ಗಾವುಂಡಿಗೆ:** 'ಗಾವುಂಡಿಗೆನಿಲ್' ಪರಾ. **ಗೌಡಿಕೆ:** ಚಂದಿಮಯ್ಯಂ ಕುರಂಳಿಯ ತಂಮ ಗೌಡಿಕೆಯಂ ಕಲಿಯರ ಮಲ್ಲಿಸೆಟ್ಟಿ ಮಾಜಂ ಕೊಂಡು (ಎಕ. VII, ಶಿವಮೊ. ೬೪-೯೬ ; 1112 ?) ; ಶ್ರೀ ಕೇಶವದೇವರಿಗೆ ಗರ್ದ್ದೆ ಮತ್ತರು ಒಂದು ಗೌಡಿಕೆಯನುಳಿಹಿ (ಎಕ. VII, ಶಿಕಾರಿ. ೧೨೩-೭೫ ; 1169) ; ಮಂಚವಿರನ ಗೌಡಿಕೆಯಲು ಮಂಡಳಿಕಬಾರಿಗೆ ಕೊಟ್ಟ ಕೊಡಂಗೆ (ಮೈಆರಿ. ೧೯೨೯ , ४೦-೨೪ ; 1191) ; ಯಾತರ ಗೌಡಿಕೆ ಇದು ಮುಟ್ಟಾಳ ಗೌಡಿಕೆ (ಸಣ್ಣಕ. VI, ೬೨). **ಗೌವುಂಡಿಕೆ:** ತಂಮಪ್ಪ ಗೌಂಡರಿಗೆ ಗೌವುಂಡಿಕೆಯ ದಂಡಿಗೆ ಉಂಬಳಿ ಸರ್ವಮಾನ್ಯವಾಗಿ ಕೊಟ್ಟೆವು (ಎಕ. X, ಶಿಡ್ಲಘ. ೧೫-೧೬ ; 1528).

[ಗಾವುಂಡ (<ಗಾಮುಂಡ) + -ಇಕೆ]

**ಗಾವುಂಡಿಗೆ** 'ಗಾವುಂಡಿಕೆ' ನೋ.

**ಗಾವುಂಡಿಗೆನಿಲ್** (ಕ್ರಿ). ಗೌಡನ ವೃತ್ತಿಯನ್ನು ವಹಿಸಿಕೊಳ್ಳು; **ಗೌಡಿಕೆ**ಯನ್ನು ಹೊಂದು: ಆತನಿಂ ಬಳಿಕ ಗಾವುಣ್ಡಿಗೆನಿನ್ದನಾಹವಶೌಣ್ಡಂ ತೊಣ್ಡಂ (ಸೌಇಇ. XI-1, ४೫-೧೬ ; '80).

[ಗಾವುಂಡಿಗೆ (<ಗಾವುಂಡಿಕೆ) + ನಿಲ್]

**ಗಾವುಂಡಿತಿ,** ಗವುಡಿತಿ, ಗೌಡಿತಿ (ನಾ).=ಗಾವುಂಡಿ: ದೇವಿಲನೆಂಬ ಗಾವುಂಡಂಗಂ ಸುದತಿಯೆಂಬ ಗಾವುಂಡಿತಿಗಂ ಧನಶ್ರೀಯೆಂಬ ಮಗಳಾಗಿ ನೀನಾಡು ವೆಡೆಯೊಳ್ (ದಾವುಂಪು. ೨೬-೧೫). **ಗವುಡಿತಿ:** (೬). **ಗೌಡಿತಿ:** ಗೌಡಿತಿಯು ಒಳಗಿಂದ ಬಂದವಳೆ (ಹುಟ್ಟಿಹ. ೦೩೯).

[ಗಾವುಂಡ (< ಗಾಮುಂಡ) + -ಇತಿ₁ (< -ಇತ್ತಿ)]

**ಗಾವುಂಡು₁** 'ಗಾಮುಂಡ' ನೋ.

**ಗಾವುಂಡು₂** 'ಗಾಮುಂಡು₂' ನೋ.

**ಗಾವುಂಡುಗೆಯ್** 'ಗಾಮುಂಡಂಗೆಯ್' ನೋ.

**ಗಾವುಂಡುತನ** (ನಾ).=ಗಾವುಂಡಿಕೆ: ಕರಿವಿಡಿ ಪಿರೂರಲು ಗಾವುಂಡು ತನಂಗೆಯ್ಯುತ್ತಮಿರೆ (ಎಕ. XII, ತಿಪಟೂ. ೮೧-೭ ; 1114).

[ಗಾವುಂಡು₂ (<ಗಾಮುಂಡು₂) + -ತನ]

**ಗಾವುಗುರಿ** 'ಗಾವುಗುಜಿ' ನೋ.

**ಗಾವುಗುಜಿ,** ಗಾವುಗುರಿ (ನಾ). ಗ್ರಾಮದೇವತೆಯ ಬಲಿಗಾಗಿ ಮೀಸಲಾಗಿರುವ ಕುರಿ; ಗಾವುಕಟ್ಟಲು ಸಿದ್ಧವಾದ ಕುರಿ: ಪಿಡಿವರು ದಿಗ್ಗಜಗಳ ಗಾವ[ವು]ಗುಜಿಯಾಗೆ (ಮೋಹತ. ३೨-೪). **ಗಾವುಗುರಿ:** ವೈರಿಯನ್ನು ಕಂಡುಹಿಡಿದು ಅರೆದರೆದು ಕುಡಿದು ಬಿಡುತ್ತೇನೆ, ಗಾವುಗುರಿ ಹಾಯುತ್ತೇನೆ . . . ಅನಂತರ ಈ ಘಟಕ್ಕೇನಾದರೇನಂತೆ (ಕುಂಗಫ..೫೫).

[ಗಾವು + ಕುಜಿ₂]

**ಗಾವುದ,** ಗಾವುದು (ನಾ). ದೂರವನ್ನು ಅಳೆಯುವ ಒಂದು ಅಳತೆ; ಎರಡು ಹರಿದಾರಿ; ಸಂಮಾರು ಆರುಮೈಲಿ: ಮುನ್ದೆ ನಿನ್ದು ಕೂಟಾ ತೊಜಿದು ಮೂವತ್ತು ಗಾವುದ ××× ದೇವಸದೊಳೆಯ್ದಿ (ಸೌಇಇ. XI-1, ೦೧-೧೬ ; 865); ದೇಶದೇಶದ ಪತ್ತೆಂಟು ಗಾವುದದ ಮಾಹೇಶ್ವರರ್ ಕರುಣಿಸಿ ಬಂದು ಮುಂದೆ ನೆರೆದಿರೆ (ಬಸರ. ೬-४೦) ; ಆ ಸ್ಥಳದ ನಾಲ್ಕೈದು ಗಾವುದದಳತೆಯೊಳಗಾರುಮಂ ಪೊರ್ದಲೀಯದ (ಪದ್ಮರಾ. ३-೦೬) ; ವರ ಸುವರ್ಣಸುರತ್ನ ಸರ್ವಾಭರಣಭವನಂಗಳಿಗೆ ಗಾವುದವೆರಡಜಲಿ ಹವಣಿಸಿ ದನಪಿಳಾಂಬರ ಸುವಸ್ತುಗಳ (ತೊರರಾ. ೦-೬-೫) ; ಸಲೆ ಮೂಜು ಗಾವುದ ಪರಿಯಂತ ರಿಪುಗಳ ಬಲವ ಮುಜಿದು ಬೆನ್ನಟ್ಟಿ (ಕಂಪವಿ. ೦೬-೫೯). **ಗಾವುದು:** ನರರಥಂ ತೂಳ್ದಾ ಕುರುಕ್ಷೇತ್ರದಿಂ ಪಡುವಣ್ಗಾವುದು ಪೋಗೆ ಪೋಗಡಿಸುಮೆಂ (ಪಂಪಭಾ. ೦೦-೨೫). [<ಸಂ. ಗವ್ಯೂತ]

**ಗಾವುದಳವಿ** (ನಾ). ಒಂದು ಗಾವುದದ ಅಳತೆ; ಗಾವುದ ಪ್ರಮಾಣ; ಸುಮಾರು ಆರುಮೈಲಿ: ಕಡುಕೋಪದಿಂದೆ ಪೊಜಿಮುಟ್ಟು ದಡದಡಿ ಸುತಂ ಗಾವುದಳವಿಯು ಬಟ್ಟೆಯಿಂದೂರ್ಗೆ ನಡೆತಂದು (ಬಸರ. ೧೧-೩೯).

[ ಗಾವುದ + ಅಳವಿ ]

**ಗಾವುದಿ** ‘ ಗಾವದಿ ’ ನೋ.

**ಗಾವುದು** ‘ ಗಾವುದ ’ ನೋ.

**ಗಾವುಮರಿ** (ನಾ). ಗ್ರಾಮದೇವತೆಯ ಬಲಿಗಾಗಿ ಮೀಸಲಾಗಿರುವ ಕುರಿಮರಿ: ಗಾವಿಗೆ ಅರ್ಪಿಸುವ ಮರಿಯನ್ನು ‘ ಗಾವುಮರಿ ’ ಎನ್ನುತ್ತಾರೆ (ನನ್ನೂರು. ೬೫೬). [ ಗಾವು + ಮರಿ (<ಮಱಿ) ]

**ಗಾವುಳಿ** ‘ ಗಾವಳಿ ’ ನೋ.

**ಗಾವೆ** ‘ ಗಾವು ’ ನೋ.

**ಗಾಸಡಿ, ಗಾಸಿಡಿ** (ನಾ). ಗಂಟು; ಮೂಟೆ; ಗದಡಿ: ಗಾಸಡಿಯ (ಗಂಟುಗಳ)ಮೇಲೆ ಧಾರಣೆ ಇರತಕ್ಕ ಜೀನಸುಗಳು (ಮುಂಬವ್ಯಾ. ೧೩೪). ಗಾಸಿಡಿ: ತಂಬಾಕು ಗಾಸಿಡಿಯಲ್ಲಿ ಮುಂಬಯಿ ೧೪ ಮಣ ತಂಬಾಕ ಇರುತ್ತದೆ (ಮುಂಬವ್ಯಾ. ೧೩೪).

[ ←ಮರಾ. ಗಾಂಸಡೀ ]

**ಗಾಸಿ$_1$, ಘಾಸಿ$_1$** (ನಾ). ತೊಂದರೆ; ಹಿಂಸೆ; ಆಯಾಸ: ಸೋನೆಗಳ ಜಿನುಂಗಿಗಂ ಬಿಱುಗಾಳಿಯ ಗಾಸಿಗಂ . . . ಕೋಡದೆ (ಗಿರಿಕ. ೯-೩೮ ವ); ಮಳೆಯುಂ ಚಳಿಯುಂ ಗಾಸಿ ಗಾಳಿ ನಿಲಿಸವೆಮ್ಮನು (ವಿಜೀಗೀ. ೮೩-೩); ಲಲಿತೆಯು ವಿಕಟಪರಿಸ್ಥಿತಿಯಲ್ಲಿ ಸಿಕ್ಕಿ ಗಾಸಿಯಾಗುತ್ತಿದ್ದಳು (ಪರಿಣೀ. ೧೬); ಈ ಮೊನೆಯ ತಿವಿತದಿಂದ ಶಂಭುರಾಯರು ಗಾಸಿಯಾದರು (ಅನ್ನ. ೪೧). ಘಾಸಿ$_1$: ಅಂತು ಬಟ್ಟೆವಯಣದಾಯಾಸದಿಂ ಘಾಸಿಯಾಗಿಯುಂ (ಪಾರ್ಶ್ವಪು. ೯-೨೮ ವ); ಇಂದಿಂದಿರಂಗಳ ಘಾಸಿಯಿಂ ಸ್ಯಂದಮಾನ ಮಕರಂದ ಬಿಂದು ಸಂದೋಹದ ತಂದಲಂ ಸುರಿವುದಱಿಂ (ದಾಧಪು. ೧-೧೧೯ ವ); ಅಹಿತನ ಘಾಸಿಯಿಂದನಿಲಜನನುಗಿದನು ಬಗಿದು ರಿಪುಶರವ (ಕುವ್ಯಾಕ. ೨೦-೨೩).

**ಗಾಸಿಮಾಡು, ಘಾಸಿಮಾಡು** = ತೊಂದರೆಗೊಳಿಸು; ಹಿಂಸಿಸು; ಕ್ಲೇಶಕ್ಕೆ ಗುರಿಮಾಡು; ಆಯಾಸಪಡಿಸು: ಕುಲವಳಿಯೆ ದೇಶವ ಗಾಸಿ ಮಾಡುವುದ್ಯಸೆ (ಸಂಭಪ. ೦೩-೩೯); ಗಾಸಿಮಾಡುವನು ಮಕ್ಕಳನೇನು ಕಿಡಿಕನೊ ಕೂಸಾಟದೊಳು ಕೇಶವನು (ನೇಮಿಸಂ. ೦೩-೧೦೦); ಬಡಕಲಾಗಿ ಸೊರಗಿಹೋದ ಗೋಪಿಯ ದೇಹ ಆಕೆಯನ್ನು ಗಾಸಿಮಾಡಿತು (ಈಪಕೊ. ೦೦೯); ಘಾಸಿಮಾಡುವ ದೇಹ ಹೇಸಿಕೆಗೆ ನಾನಾಜಿ$^3$ (ದೀಕ್ಷಾಬೋ.೮೩-೧೩); ವೈರಿಬಲವನು ಘಾಸಿಮಾಡಿದರೊಗ್ಗಿನಲಿ ಹಮ್ಮೀರ ರಾವುತರು (ಕುವ್ಯಾಭೀ. ೪-೬೨). **ಗಾಸಿಯಾಗು, ಘಾಸಿಯಾಗು**=ತೊಂದರೆಗೊಳ್ಳು; ಕಷ್ಟಪಡು; ಆಯಾಸಪಡು; ಬಳಲು: ಕಿಡಿ ಸೂಸಿ ಸುಯ್ದು ಗಾಸಿಯಾಗಿ ಮದೆಗೆಡೆದು ಮದವಳಿದಿರ್ಪ ಮಾತಂಗವ್ರಾತದಿಂ(ಗಿರಿಕ.೯-೨೬ವ); ಭೂಸುರರು ಚೋರರುಗಳಿಂದವೆ ಗಾಸಿಯಾಗಿ (ಕುವ್ಯಾಸ. ಓರಿಇ. ೧೩-೧೪೧); ಈಸು ದಿನಮೆನ್ನೊಡನೆ ಕಾಳೆಗದೊಳಿದಿರಾಗಿ ಗಾಸಿಯಾಗದ ದೈತ್ಯರಿಲ್ಲ (ಜಬಪು. ೨೩-೧೪); ಆಸೆಯಿಂದ ಘಾಸಿಯಾಗಲೇಕಯ್ಯಾ (ಅವಹಂ. ೧೦೬-೪೮೪); ಅಭಿಮನ್ಯುವೀ ದುಶ್ಶಾಸನನ ಮಗನಿಂದ ರಣದಲಿ ಘಾಸಿಯಾದನು (ಕುವ್ಯಾದ್ರೊ. ೮-೩೦); ಅನುಜರು ಘಾಸಿಯಾದರು ಹಿಂದೆ ಭೀಷ್ಮಾದಿಗಳ ಬವರದಲಿ (ಕುವ್ಯಾಶ. ೧-೬೨). **ಗಾಸಿವೀಸಿ** = ಗಾಸಿ$_1$; ನೀಲವ್ವನ ಒಡಲು ಕುದಿದೆದ್ದಿತು; ಮನಸ್ಸು ‘ ಗಾಸಿವೀಸಿ ’ ಯಾಯಿತು (ಬರಹಾ. ೧೧೪); ಇಬ್ಬರ ಕೈಯಲ್ಲಿ ಸಿಕ್ಕು ಗಾಸಿವೀಸಿಯಾದಂತೆ (ಸಾಹಿತ್ಯಾಂ. ೪೬).

[ ದೇ॥ ತಮಿ. ಕಾಚಿ; ತುಳು. ತೆಲು. ಗಾಸಿ ]

**ಗಾಸಿ$_2$, ಗಾಸೆ$_1$** (ನಾ). ೧. ಕುದುರೆಯ ಜೀನಿನ ಮೇಲೆ ಅಲಂಕಾರಕ್ಕಾಗಿ ಹಾಕುವ ವಸ್ತ್ರ: (ಕ). ಗಾಸೆ$_1$: ೨. ತೆಳುವಾದ ಹೊದಿಕೆ: ರೇಶಿಮೆಯ ಮೆತ್ತಗಾದ ಗಾಸೆಗಳನ್ನು ಹಾಸಿ (ಮುಂಜುಕ. ೦೮೮).

[ ← ಅರ. ಗಾಶಿಯಾ; ಹಿಂ. ಗಾಸಿಯಾ; ಮರಾ. ಗಾಶಾ ]

**ಗಾಸಿಗೆಯರ್, ಗಾಸಿಗೈ** (ಕ್ರಿ). ತೊಂದರೆಯನ್ನುಂಟುಮಾಡು; ಹಿಂಸಿಸು: ಲೇಸುಲೇಸೈ ಕೃಷ್ಣ ನಮ್ಮನು ಗಾಸಿಗೆಯ್ಯುತೆ ಪೋಗುವರೆ (ಅಕ್ರೂಕ. ೯-೬೮); ಮೊಗದೊಳ್ ಮೊಗವಿಟ್ಟು ಮುದ್ದಿಪ ನೆವದಿಂ ಗಾಸಿಗೆಯ್ದುಂ (ಚಿಕವಂ. ೬೯-೧೬). **ಗಾಸಿಗೈ**: ಕಟ್ಟಾಸುರದ ಬೇಸಗೆಯೊಳೋಸರಿಸದ ಗಾಸಿಗೈದನೆನುತೆಯ? (ರಾಮಾಶ್ವ. ೧-೯).

[ ಗಾಸಿ$_1$ + ಕೆಯ್$_1$ ]

**ಗಾಸಿಗೈ** ‘ಗಾಸಿಗೆಯರ್’ ನೋ.

**ಗಾಸಿಗೊಳಿಸು, ಘಾಸಿಗೊಳಿಸು** (ಕ್ರಿ). ತೊಂದರೆಯನ್ನುಂಟುಮಾಡು; ಕ್ಲೇಶಪಡಿಸು; ನೋವನ್ನುಂಟುಮಾಡು: ಆ ಹಾವುಗಳು ನನಗೆ ಅಪ್ರಿಯರೆನಿಸಿದವರನ್ನೆಲ್ಲಾ ಕಡಿದು ಗಾಸಿಗೊಳಿಸಿದುವು (ಹಾಜುತ್ತ. ೦೦೦); ಸುಮ್ಮನೆ ಮನಸ್ಸನ್ನು ಗಾಸಿಗೊಳಿಸಬೇಡಿ (ಕೀಪೋದ. ೩). **ಘಾಸಿಗೊಳಿಸು**: ಯೌವನದ ಗಾಂಭೀರ್ಯ ಘಾಸಿಗೊಳಿಸದೇ ಇದ್ದ ಮುಗ್ಧಸೌಂದರ್ಯ (ಬಕಾಂಗಿ. ೮). [ ಗಾಸಿ$_1$ + ಕೊಳ್$_1$ + – ಇಸು$_2$ ]

**ಗಾಸಿಗೊಳ್ಳು** (ಕ್ರಿ). ತೊಂದರೆಪಡು; ಕ್ಲೇಶಪಡು: ಮನಸ್ಸು ಗಾಸಿಗೊಂಡಿದೆ (ನನ್ನಕೊ. ೬೩). ‘ ಗಾಸಿಗೊಳಿಸು ’ ಪರಾ.

[ ಗಾಸಿ$_1$ + ಕೊಳ್ಳು (<ಕೊಳ್$_1$) ]

**ಗಾಸಿಡಿ** ‘ ಗಾಸಡಿ ’ ನೋ.

**ಗಾಸಿವಡೆ** (ಕ್ರಿ). ಬಳಲು; ದಣಿ; ಆಯಾಸಗೊಳ್ಳು: ಲೇಸಿನ ವಿಟರ ವಯುವದಲಿ ಮೋದದೆ ಚೌಶೀತಿ ಬಂಧದ ಕೂಡಿ ಗಾಸಿವಡೆದು ಚಂದ್ರಶಾಲೆಯೊಳ್ ತಂಗಾಳಿ ಬೀಸಿದೊಡೆದೆಯನೊಡ್ಡುವರು (ಮೋಹತ. ೦೮-೪೯); ಗಾಸಿವಡೆದ ಮೂಸೆಯಂತೆ ಎಂತು ಬಾಳ್ವೆನಕಟ! (ಕವಿಕಾ. ೮೪-೦೦).

[ ಗಾಸಿ$_1$ + ಪಡೆ$_1$ ]

**ಗಾಸೆ$_1$** ‘ ಗಾಸಿ$_2$ ’ ನೋ.

**ಗಾಸೆ$_2$** ‘ ಕಾಸೆ$_1$ ’ ನೋ.

**ಗಾಹ** (ನಾ). ೧. ಮುಳುಗುವಿಕೆ; ಜಳಕ; ಸ್ನಾನ. ೨. ಅಡಗಿಕೊಳ್ಳುವುದು. ‘ ಅವಗಾಹ ’ ಪರಾ. ೩. ಆಳ. [ ಸಂ. ]

**ಗಾಹನ** (ನಾ).=ಗಹನ೭: ಮೋಹಮೋಹ ಬಿಡದೆ ಆಹಾರ ಇಂದ್ರಿಯಂಗಳ ಗಾಹನದೊಳಗೆ ಬಿದ್ದು ಆಹಸ್ಸು ಕಳೆವೇನೊ (ಮೋಕ್ಷದೀ. ೬೩-೨). [ ಸಂ. ]

**ಗಾಹಿ** (ನಾ). ಮೋಸಗಾರ; ಕಪಟಿ: ಗಾಹಿ ಕೌಶಿಕನ ಕೃತ್ರಿಮುಸರ್ಪದಷ್ಟದಿಂ ನಿದ್ರೆ ತಿಳಿದೇಳುವಂತೆ (ಹಡಕಾ. ೧೪-೯). [ ಗಾಹು$_3$+ – ಇ$_3$ ]

**ಗಾಹಿಲ** (ನಾ). ಇಲ್ಲದಾಗುವಿಕೆ; ಮರೆಯಾಗುವಿಕೆ; ನಾಶವಾಗುವಿಕೆ.

**ಗಾಹಿಲಾಗು**=ಇಲ್ಲವಾಗು; ಮರೆಯಾಗು: ಬಾಹುಮುರಿದಂತಸುರನಾಯಕಗಾಹವದ ರಣಶೂರ ಕೈಬಿಟ್ಟೈದೆ ಗುರುಬಲವೇ ಗಾಹಿಲಾದಂತೂರೆ ಪ್ಯಾಗಂದಾಹಗೊಳುವಾಗ ಪರದಿಗ್ವಧು ಮೋಹಕ್ಕೈದಿದ ಬಿಟ್ಟು ಪದ್ಮಿನಿ ಪದ್ಮಬಾಂಧವನೂ (ಜಿರಾಮಾ. ೨೩೮-೨). [←ಮರಾ. ಗಾಹಾಳ್ ]

**ಗಾಹಿಲಂಬಡು** (ಕ್ರಿ). ಕಷ್ಟಪಡು; ತೊಂದರೆಯನ್ನನುಭವಿಸು (?): ದೇಹದೊಳಗಿರಲಾತ್ಮಧರ್ಮದ ನೇಹದಿಂ ಸ್ವರ್ಗಾದಿ ಭೋಗವನಾಹನಲದನ್ಯಾಯ ನಡತೆಯೊಳೊಕ್ಕು ನರಕವನು ಗಾಹಿಲಂಬಡುತಿಹನು (ಬಿಜ್ಞಪು. ೮೩-೪೨). [ ಗಾಹಿಲ? + ಪಡು$_1$ ]

**ಗಾಹಿಸು$_1$** (ಕ್ರಿ). ೧. ಹರಡು; ವ್ಯಾಪಿಸು: ಸೀರೆಯೊಟ್ಟಲು ಗಗನವನು ಗಾಹಿಸಿತು (ಕುವ್ಯಾಸ. ೧೩-೨); ಗಾಹಿಸಿತು ನಿನ್ನಾಜ್ಞೆ ಜಗದಲಿ ಮುಂ. . . ಗೆಟ್ಟಿನಲ (ನಿಭಾಗ. ೧-೧೨-೨೬). ೨. ಮುಳುಗು: ಮೋಹ ಸರ್ಪಸ್ವಗಳ ರಾಗಾಬ್ಧಿಯೊಳ್ ಬ್ರಹ್ಮ ಗಾಹಿಸದರೊಳಗೆ ನೀಂ ಮುಂಕುತಿಮ್ಮ (ಮಂಕುಕ ೯೬೨). [ ಗಾಹು$_1$ + – ಇಸು$_3$ ]

**ಗಾಹಿಸು$_{2}$** (ಕ್ರಿ). ಮೋಸಮಾಡು; ವಂಚಿಸು: ಆಹಾಹ ಹಸನಾಯ್ತು ಕೊಡಿರೇಕೆ ಪಾತ್ರೆಯುಂ ಗಾಹಿಸಿಯೆ [ ಪಾಠಾಂ. ಓಹೋಹೊ, ಗಹಗಹಿಸಿ ] ಇಂತು ಕೊಂಡವರುಂಟೆ ಪಾತ್ರೆಯುಂ (ಶಿರುರ. ದೀ. ೧೩-೮).

[ ಗಾಹು$_{3}$ + – ಇಸು$_{3}$ ]

**ಗಾಹು$_{1}$** (ನಾ). ೧. ಆಳ; ಅತಿಶಯಂತೆ; ಆಧಿಕ್ಯ: ಹೇಳ್ವೆ ಪಾರ್ಥ ಮೋನದೊಳಿರದಿರೆನ್ನಾಣೆನಲು ಬೆಜಗಿನ ಗರದ ಗಾಹಿನಲದ್ದು ಮೋನ ದೊಳಿದ್ದನಾ ಪಾರ್ಥ (ಕುವ್ಯಾ.ಕ. ೧೭-೭). ೨. (ಆಳವಾದ) ತಿಳಿವು; ಅರಿವು. ‘ಗಾಹುಗೊಳ್’ ಪರಾ. [<ಸಂ. ಗಾಹ]

**ಗಾಹು$_{2}$** (ನಾ). ಹಿಡಿತ; ಪ್ರಭಾವ; ಕೈವಾಡ: ಹೂತೆಗಳಃ ಹೊಯ್ದಾಡವೇ ನಿರ್ವಾಹಸೂತ್ರದ ಕುಣಿಕೆಗಾಱನ ಗಾಹಿನಲಿ (ಕುವ್ಯಾ.ಸ. ೯-೯). [<ಪ್ರಾ. ಗಾಹ./ಸಂ. ಗ್ರಾಹ]

**ಗಾಹು$_{3}$** (ನಾ). ೧. ಮೋಸ; ಮಾಯೆ; ವಂಚನೆ; ಠಕ್ಕು: “ಕಪಟಂಗಳ ಗನ್ನಗಾಹುಗಳ್” (ಕರ್ಣನಿ. ೨೭); “ಗಾಹೆನೆ ಕಪಟಕ್ಕೆ ನಾಮಂ” (ಭಾರನಿ. ೩೧); ಲೋಲಶ್ಮಶ್ರುಮುಖಂ ತೆಱಂಬೊಳೆವಿನಂ ಗಾಹಿಂಗೆ ಬೀಟ್ವನ್ನಮಾಭೀಳಾಲೋಕದೆ ಸಾರ್ದು (ಸೂಕ್ತಿಸು. ೩-೩೧); ಗಾಹುಕೊಳ್ಳದ ಭೀಮಪಾರ್ಥರ ಸಾಹಸವನೆಣಿಸುತ (ಕುವ್ಯಾದ್ರೋ. ೧-೧೨); ಮೋಹದಲಿ ಮಾಯಾಪ್ರಪಂಚಿನ ದೇಹಸಿದ್ಧಿಯು ಪಡೆದೆನೆಂಬೀ ಗಾಹಿನಿಂದಲಿ ವಜ್ರಪಿಂಡ ಶರೀರ ಫಲಿಸಿದೊಡೆ (ಪ್ರಭುಲಿ. ೧೯-೩೦). ೨. ಗುರಿ; ಉದ್ದೇಶ: ಪೆರ್ದೊಡೆಯುಂ ಕಡಿಖಂಡವಪ್ಪಿನಂ ತುಡುಕುವ ಗಾಹು ತಪ್ಪಿದೊಡೆ ಬೆಂಬಿಡದೆಯ್ದುವ . . . ನಾಯ್ಗಳಂ ಪಿಡಿದು (ಸಳದಂ. ೬೮); ಗಾಹು ಬೇಱುಹುದೀ ಜಗದ ವೈಗಾಹಿಗೋಸುಗ ಜನ್ಮವೆಂಬಿವು ಚೋಹವ್ಯಸಲ್ಲದೆ ವಿಚಾರಿಸೆ ಮಗನೆ ನಿನಗೆಂದ (ತೊರರಾ. ೧-೯-೩೭). [ ? ]

**ಗಾಹುಕಂಡಿ** (ನಾ). ಮೋಸದಿಂದ ನುಸುಳಿಹೋಗುವ ಕಂಡಿ; ಕಳ್ಳಗಂಡಿ; ತಪ್ಪಿಸಿಕೊಳ್ಳುವ ಮಾರ್ಗ: ಈ ಮಾಯೆಯು ಗಾಹುಕಂಡಿಯೊಳು ನುಸುಳುವ ಮಾಯಾವಾದಿಗಳಂತಲ್ಲ ನೋಡಾ (ಆದವ. ೧೯೭). [ ಗಾಹು$_{3}$ + ಕಂಡಿ$_{1}$ ]

**ಗಾಹುಕಾಱ** (ನಾ). (ಆಳವನ್ನು) ತಿಳಿದವನು; ಜ್ಞಾನಿ: ಮೋಹವಿಲ್ಲದೆ ಸಕಲಜೀವಸ್ನೇಹವುಳ್ಳ ವೀರಶೈವದ ಗಾಹುಕಾಱರು ಪರಮಸುಖಿಗಳು ಗಿರಿಜೆ ಕೇಳೆಂದ (ಪ್ರಭುಲಿ. ೨೫-೧೩). [ ಗಾಹು$_{1}$ + – ಕಾಱ ]

**ಗಾಹುಗತಕ, ಗಾಹುಗದುಕು** (ನಾ). ೧. ಮೋಸಗಾರಿಕೆ; ಕಪಟ; ಮೋಸ: ಲಲಿತ ಮಾಯೆಯು ಗಾಹುಗತಕದ ಬಳೆಯುನಳವಡಿಸುವುದು . . . ಎಂದು ಸಾಱಿದರಬ್ಧಿಘೋಷದಲಿ (ಜೀವಂಧ. ೭-೪೭); ಗಾಹುಗತಕದಲೆಮ್ಮ ಶಿಷ್ಯಂಗೀ ಹದನ ವಿರಚಿಸಿದ ನಿನ್ನದು ಮೋಹದವರೇ ಗೆಲಲಿಯೆಂದನು ಹರಿಗೆ ಬಲರಾಮ (ಕುವ್ಯಾ.ಗ. ೬-೪). ೨. ಭ್ರಮೆ; ಭ್ರಾಂತಿ: ದೇಹವೇ ದೀವಿಗೆಯು ಕಂಬವದಾ ಹಣತೆಯೀ ಬಾಹ್ಯಕರಣಗಳೂಹಿಸಲು ಪ್ರಾಣಾದಿವಾಯುವೆ ತೈಲದಂತದಕೆ ಗಾಹುಗತಕದ ಸೂಕ್ಷ್ಮತನುವೇ ಮೂಹುರಿಯದಹ ವರ್ತಿಯಲ್ಲಿಯು ದೇಹಿಯೀ ಚಿದ್ದೀಪವದು ನೀನೆಂದು ನಿಶ್ಚಯಿಸು (ಅಮೃತ. ೩-೭೭). **ಗಾಹುಗದುಕು**: ೧. ಗಾಹುಗದುಕ [ ಪಾಠಾಂ. ದಕ, ದುಕು ] ನುಳಿದೇಱಿದರಶ್ವಾರೋಹಕರಾ ಸಮಯದಲಿ (ಕುರಾಸಾಂ. ೧೨-೮೮). ‘ಗನ್ನಗತಕ’ ಪರಾ.

[ ಗಾಹು$_{3}$ + ಗತಕ$_{1}$ ]

**ಗಾಹುಗದುಕು** ‘ಗಾಹುಗತಕ’ ನೋ.

**ಗಾಹುಗಳ್ಳ** (ನಾ). ವಂಚಿಸುವುದರಲ್ಲಿ ಕದೀಮನಾದ ಕಳ್ಳ; ಪಕ್ಕಾ ಚೋರ: ಇಂತೀ ಗಾಹುಗಳ್ಳರಂತೆ ಮಾತಿನಲ್ಲಿ ಬ್ರಹ್ಮವ ನಡಿದು ಸರ್ವಸಂಸಾರದಲ್ಲಿ ಏಳುತ್ತ, ಮುಳುಗುತ್ತ . . . ಸುಖಿಗಳೆಂತಪ್ಪರೋ (ಕವಿಚ. I, ೨೩೩ ಕೀಲಾರದ ಭೀಮಣ್ಣನ ವಚನ). [ ಗಾಹು$_{3}$ + ಕಳ್ಳ$_{1}$ ]

**ಗಾಹುಗಾತಿ** (ನಾ). ಮೋಸಗಾತಿ; ವಂಚಕಿ: ಬರೆ ಲಗ್ನಂ ಚರ ಸೂನೆಗೇಹದ ಕುಜತ್ರಿಂಶಾಂಶದೊಳ್ ರೋಹಿಣೀವರನಲ್ಲಿರ್ದೊಡೆ ಗಾಹುಗಾತಿ (ಜಾತಕತಿ. ೨೨-೫). [ ಗಾಹು$_{3}$ + – ಗಾತಿ$_{6}$ ]

**ಗಾಹುಗೊಳ್** (ಕ್ರಿ). ಆಳವನ್ನು ತಿಳಿ, — ಕಾಣು, — ಅರಿತುಕೊಳ್ಳು: ಆಹ ಶಿವಶಿವ ಬಹಳಜನ್ಮವ್ಯೂಹಚಿಂತಿತಯೋಗನಿಷ್ಠರು ಗಾಹುಗೊಳ್ಳದ ಗುರುವ ದೈವವನಕಟ ನಿಂದಿಸುತ (ನಿಭಾಗ. ೭-೧-೧೧).

[ ಗಾಹು$_{1}$ + ಕೊಳ್$_{1}$ ]

**ಗಾಹುರ** (ನಾ). ಆತುರ; ವೇಗ; ರಭಸ: ಬೇಹರಮನೆಸಗಿಕೊಳುತಂ ಗಾಹುರದಿಂ ದಾರಿವಿಡಿದು ಬರ್ಪವಸರದೊಳ್ (ಹಾಲಾಸ್ಯ. ೧-೪-೨೫).

[ ಕಾಹುರ$_{1}$ (< ಕಾವರ$_{2}$) ]

**ಗಾಹೆ** (ನಾ). ಶ್ಲೋಕ; ಹಾಡು: ತಮ್ಮಯ್ಯಂ ಪೇಟ್ದ ಗಾಹೆಯುಂ ಕಟ್ಟುಪಂಜರದ ನಡುವಣ ನಾಗವೇದಿಕೆಯೊಳ್ ವಿನೋದದಿಂ ಬರೆದಿಟ್ಟಂ (ಪಂಚತಂ. ೧೯೪-೨೦); ಲೇಖಮಂ ಪಾವುಡಮುನಭಿಜ್ಞನ ಗಾಹೆಯಂತಿರ ಲೋದಿಸದೆಯುಂ ಶೋಧಿಸದೆಯುಂ (ಅನಂಪು. ೦೩-೯೫ ವ); ಗಾಥಾ–ಗಾಹೆ (ಶಮದ. ೨೫೭ ಪ್ರಯೋ); ಆ ಹರಿಯು ವರಮಹಿಮೆಯು . . . ಗಾಹೆ ವೇದಗಳಱಿಯುವೈ (ಸಂಭಪ. ೪-೩೧); ಈ ಕಾರಣಗಳಿಂದ ನಾನು ಹೀಗೆ ಮಾಡಿದೆ ಎಂದು, ಅದನ್ನು ಸ್ಪಷ್ಟಪಡಿಸಲು ಈ ಗಾಹೆಗಳನ್ನು ಹೇಳಿತು (ಬುದ್ಧಪ. ೧೫). ‘ಗಾದೆ’ ಪರಾ. [ <ಪ್ರಾ. ಗಾಹಾ./ಸಂ. ಗಾಥಾ ]

**ಗಾಳ, ಗಾಣ$_{2}$** (ನಾ). ೧. (ಮೀನು ಹಿಡಿಯುವ) ಕೊಕ್ಕೆ, — ಕೊಂಡಿ: ಖೇಚರಕನ್ನೆಯರ್ಕಳ ಕಣ್ಗಳೆಂಬ ಮೀಂಗಳ್ ಕುಮಾರನ ರೂಪೆಂಬ ಗಾಳದಿಂ ತೆಗೆಯೆಪಟ್ಟು (ವಡ್ಡಾರಾ. ೫೭-೧೧); ಗಡಿಯುರ ಸಿಂಗಂ ತೊಡದರ್ದ್ದರ ಗಾಳಂ (ಸೌಇಇ. XI-II, ೧೩೩-೩೮ ; 1037); ಸೂಳೆಯರ್ ಗಾಳದ ಮೀನಂತಳವಱಿಯೆ (ಧರ್ಮಾಮೃ. ೨-೬೯); ಗಾಳದಲ್ಲಿರುವ ಮಾಂಸವನ್ನು ಭಕ್ಷಿಸುವುದಕ್ಕೆ ಹೋದ ಮತ್ಸ್ಯದೋಪಾದಿಯಲ್ಲಿ (ಕೃಬಾಸ. ೧೩೦); ಒಕ್ಕಲಿಗರು ಗಾಳದ ಗಣೆಗಳನ್ನು ತೆಗೆದುಕೊಂಡು ಬಂದು ಹೆಂಗಸರ ಕಡವಿನಲ್ಲಿ ಕೂರುತ್ತಾರೆ (ಚಸ್ತಕ. ೧೨). ೨. (ಆಲಂ) ಕುತಂತ್ರ; ಹೂಟ: ಅವನು ಆಕೆಯ ಗಾಳದಲ್ಲಿ ಸಿಕ್ಕಿಬಿದ್ದ (ರೂಢಿ). **ಗಾಣ$_{2}$**: ೧. ದನುಜರೆರಗಳ ಹಾಯ್ಕಿ ಗಾಣದಲನಿಮಿಷರನೀಡಾಡಿ ಕೊಂಡರು ದುರ್ಗವನು ಸುರರ (ಕುವ್ಯಾ.ಕ. ೭-೧೧); ಎಳೆದು ತರಿಸೆನೆ ತನ್ನ ಬಾಲವ ಕಳುಹಿ ಗಾಣ[ ಪಾಠಾಂ. ಳ ]ದ ಬಲೆಗೆ ಸಿಲುಕಿದ ಮೀನಿನಂದದಲಿ (ತೊರರಾ. ೪-೪-೪೫); ಖಳರ ಗಂಟಲ ಗಾಣನೋ ಜಗದೊಳಗೆ ಪ್ರವೀಣನೋ (ಪುರಂದ. ೧-೨೦೩-೧).

[ ದೇ ೩ ತುಳು. ಗಾಳ, ಗಾಳೋ; ತೆಲು. ಗಾಲ, ಗಾಲಾ; ಪರ್ಜಿ. ಗೇಲ./ಪ್ರಾ. ಗಲಅ ]

**ಗಾಳಕ** (ನಾ). ಪ್ರೌಢ; ವ್ಯವಹಾರಚತುರ: ಸಾತ್ವಿಕನಾದ ಧರ್ಮರಾಯನು, ಸಿಟ್ಟಿನ ಸ್ವಭಾವದ ಭೀಮಸೇನನನ್ನೂ–ತೇಜಸ್ವಿಯಾದ ಅರ್ಜುನನನ್ನೂ–ಗಾಳಕರಲ್ಲದ ನಕುಲ ಸಹದೇವರನ್ನೂ ಸಮದೃಷ್ಟಿಯಿಂದ ನೋಡಿ (ಕುಟುಂಬ. ೪೯). [ ←ತೆಲು. ಗಾಳಕು ]

**ಗಾಳಗಟ್ಟಿಗೆ** (ನಾ). ಮೀನಂ ಹಿಡಿಯುವ ಗಾಳದ ಕಡ್ಡಿ, — ಕೋಲು: ಇಟ್ಟಣಿಸಿದ ಮೀನನಿಳಿಗೆ ಸೆಳೆವ ಗಾಳಗಟ್ಟಿಗೆಗಳೊ ದೇವತೆಗಳ ಮುಟ್ಟಿತಿವಿವ ಸಬಳಗಳೊಯೆಂದೆನಲಲ್ಲಿ ನೆಟ್ಟ ದೆಂಕಣೆಗಳೆಸೆದವು (ಕುರಾಸಾಂ. ೧೭-೧೪). [ ಗಾಳ + ಕಟ್ಟಿಗೆ$_{1}$ ]

**ಗಾಳಗಾರ** (ನಾ). ಗಾಳದಿಂದ ಮೀನನ್ನು ಹಿಡಿಯುವವನು; ಬೆಸ್ತ: ಗಾಳಗಾರನಾ ಕೊಂಡಿಯೆರೆಯಂ ತಿಂದ ದಾಳೆಮೀನಂ . . . ಸೋಲಿಸುವ ಮಾಳ್ಕೆಯಿಂದ (ಶ್ರೀರಾಮಾ. ೪೦೪-೨೯೩).

[ ಗಾಳ + – ಗಾರ ( < – ಕಾಱ ) ]

**ಗಾಳನ** (ನಾ). ಸೋಸುವುದು ; ಶೋಧನ. 'ಗಾಳಿಸು' ಪರಾ.
[ ಸಂ. ಗಾಲನ ]

**ಗಾಳಬ್ಬೆ** (ನಾ). ಒಬ್ಬಾಕೆಯ ಹೆಸರು : ಗಜ್ಜವೆಡಜ್ಜ ಶ್ರೀಮತ್ ರಾಚಿಯರಸರ ಅರಸಿ ಗಾಳಬ್ಬೆಯರ್ ದೇಗುಲವು ಮಾಡಿಸಿ (ಎಕ. V, ಹೊಳೆನ. ೧೪-೧೩ ; ಸು. 960).
[ ಗಾಳ ?+ ಅಬ್ಬೆ$_1$ ]

**ಗಾಳಹಾಕು, ಗಾಣಹಾಕು** (ಕ್ರಿ). ೧. ಮೀನು ಹಿಡಿಯಲು ಗಾಳವನ್ನು ನೀರಿಗೆ ಬಿಡು : ಅವನು ಮೀನು ಹಿಡಿಯಲು ಗಾಳ ಹಾಕಿದ್ದಾನೆ (ರೂಢಿ). ೨. (ಅಲಂ) ಆಸೆ ತೋರಿಸು ; ಮರುಳುಗೊಳಿಸು : ಇಂಥ ಸಮಕಾಲೀನ ಶಬ್ದಗಳನ್ನು ಬಳಸಿ, ಜನರ ಮೆಚ್ಚಿಕೆಗೆ ಗಾಳಹಾಕತೊಡಗಿದರು (ಯುಕ್ಷಬ. ೧೩೭). **ಗಾಣಹಾಕು :** ೨. ಇದೊಂದು ಆಷಾಡಭೂತಿ, ಹಳ್ಳಿಯವರಿಗೆ ಏನೋ ಗಾಣಹಾಕುವುದಕ್ಕೆ ಬಂದಿದೆ (ಸುವಸಂ. ೧).
[ ಗಾಳ + ಹಾಕು (<ಪಾಯ್ಕು$_1$) ]

**ಗಾಳಿ$_1$, ಘಾಳಿ** (ನಾ). ೧. ಎಲರು ; ವಾಯು ; ಮಾರುತ : "ಗಾಳಿಯೆ ವಾತದೊಳ್" (ಕರ್ಣನಿ. ೩೫) ; "ಗಾಳಿಯೆನೆ ಮಾತರಿಶ್ವಂ" (ಕಶರ. ೩೨) ; ಪಾಯ್ವ ಶೀಕರದೊಳೆ ನಾಂದು ಸೇಡುಗೊಳುತಂ ಸುಟಿದೂದುವ ಗಾಳಿ ಬರ್ಪ ದೇವರ ವರಕಾಂತೆಯರ್ಕಳ ಪರಿಶ್ರಮಮಂ ಕಳೆದತ್ತು (ಕಾವ್ಯಸಾ. ೬೮ ಕೂದ್ರಕ) ; ಗಾಳಿಯೆತ್ತಲು ಘಾಡಿಸುವ ಪೇಘಾಳಿಯೆತ್ತಲು (ಕುವ್ಯಾಕ. ೧೦-೨೩) ; ಗರುಡನ ಗಱಿಯ ಗಾಳಿಗೆ ಫಣೆಗಳ ಮೊತ್ತ ಮುರಿಗೆಡೆದೋಡುವಂದದಲಿ (ಕಂನವಿ. ೧೫-೧೦೪) ; ಸ್ವಚ್ಛವಾದ ಗಾಳಿ ಬರಲಿಕ್ಕೆ ಮಾರ್ಗವಿರಬೇಕು (ಮುಂಬಯಿ. ೪-೨೫). ೨. ದೆವ್ವ ; ಪಿಶಾಚಿ : ಪೊಡೆದುದು ಗರವತಿಕೋಪದೆ ಪಿಡಿದುದು ಪುಲಿ ಗಾಳಿ ಸೋಂಕಿದತ್ತು (ಕಾದಂಪೂ. ೫೬೩) ; ಮಾನಿನಿ ಒಬ್ಬ ಸಂನ್ಯಾಸಿಯ ಕಂಡು ಧೇನಿಸಿ ಕೂಸೆಂದತ್ತ ಬರಲು ಏನು ಗಾಳಿ ಅವರಿಗೆ ಸೋಕಿತೆ ಎಂದು ಪುರಂದರ ವಿಠಲ ತನ್ನೊಳು ನಗುತಿದ್ದನು (ಪುರಂದ. ೧-೧೧೧-೯) : 'ಆಚಾರ್ರು ಗಾಳಿಯಾಗಿದ್ದಾರೆ !' ಎಂದು ಜನರಾಡಿಕೊಳ್ಳಲಾರಂಭಿಸಿದರು (ನನ್ನೂರು. ೧೯೬). ೩. ವಾಸನೆ ; ಸುಳಿವು : ನಾಯಿಗಳಿಗೆ ಯಾವುದೋ ಪ್ರಾಣಿಯ ಗಾಳಿ ಸಿಕ್ಕಿದೆಯೆಂದು ಎಲ್ಲರಿಗೂ ಗೊತ್ತಾಯಿತು (ಕಾನೂರು. ೧೪೦). 'ಗಾಳಿಹಿಡಿ' ಪರಾ. ೪. (ಅಲಂ) ವ್ಯಗ್ರವಾದುದು : ಪ್ರತಿಭಾನ ಮನಸ್ಸು ಗಾಳಿಯಾಗಿತ್ತು (ಮೂಲಕಿ. ೧೪೩). ೫. (ಅಲಂ) ಪ್ರಭಾವ ; ವರ್ಚಸ್ಸು : ನಿನಗೆ ಅವರ ಗಾಳಿ ಚೆನ್ನಾಗಿ ಬೀಸಿದೆ (ರೂಢಿ). **ಘಾಳಿ :** ೧. ಮದದಾನೆ ಕಂಭಮಂ ಮುಱಿದು ಘಾಳಿಯಂತೆ ವೇಗಿಯುಂ ಕಲಿಯಂತೆ ನಿಶ್ಶಂಕನುಂ . . . ಆಗಿರ್ಪುದಂ ಕಂಡು (ಧರ್ಮಾಮೃ. ೧೩-೫೫ ಅಡಿಟಿ) ; ಘಾಳಿಯೊಳು ನಿಂದು ಧೂಳಿಯ ಹೊಯ್ಯುತಿದೆ (ಅದವ. ೧೫-೩೨) ; ಘಾ[ಪಾಠಾಂ. ಗಾ]ಳಿ ಬಂದ ಕೈಯಲ್ಲಿ ತೂಱಿಕೊಳ್ಳಿರೊ (ಪುರಂದ. ೨-೨೧ ಪಲ್ಲವಿ) ; ನಿಂದು ಕಣ್ಮುಚ್ಚಿ ಘಾಳಿಯ ಬೀಸುತೇ (ನವಮೋ. ೬-೭).

**ಗಾಳಿಗೆ ತೂರು** = ಉದಾಸೀನ ಮಾಡು ; ಕಡೆಗಣಿಸು ; ಎಸೆದುಬಿಡು : ತಮ್ಮ ಭಾವನೆಯಾದರೋ ಸುಲಭವಾಗಿ ಗಾಳಿಗೆ ತೂರಿಬಿಡತಕ್ಕುದಾಗಿಲ್ಲ (ಚನ್ನಪೀ. ೦೪೯). **ಗಾಳಿಬಂದಲ್ಲಿ ಕೊಡೆ ಹಿಡಿ**=ಸಮಯಕ್ಕೆ ತಕ್ಕಂತೆ ವರ್ತಿಸು ; ಸಂದರ್ಭೋಚಿತವಾಗಿ ವ್ಯವಹರಿಸು : ಅಂತೂ ಗಾಳಿಬಂದಲ್ಲಿ ಕೊಡೆಹಿಡಿಯುವ ಜಾತಿಯವಳು (ಶೀಮೋದ. ೩೫). **ಗಾಳಿಬಂದಾಗ ತೂರಿಕೊ**= ಅವಕಾಶವೊದಗಿದಾಗ ಕಾರ್ಯಸಾಧನೆ ಮಾಡಿಕೊಳ್ಳು : ಈ ಬೆರಳಿನಲ್ಲಿ ಒಂದು ಉಂಗುರ ಇಲ್ಲದಿರುವುದು ಮಾತ್ರ ದೊಡ್ಡ ಕೊರತೆಯೇ ಸರಿ ಎಂದು ಹೇಳಿ ಗಾಳಿಬಂದಾಗಲೇ ತೂರಿಕೊಂಡಳು (ಕೊನಷ್ಟ. ೮೩) ; ಗಾಳಿಬಂದಾಗ ತೂರಿಕೊ (ಗಾದೆ). **ಗಾಳಿಯಸೊಡರು**=ನಶ್ವರವಾದುದು : ಸಂಸಾರವೆಂಬುದೊಂದು ಗಾಳಿಯಸೊಡರು ಸಿರಿಯೆಂಬುದೊಂದು ಸಂತೆಯ ಮಂದಿ ಕಂಡಯ್ಯಾ (ಬಸವ. ೧೬೪). [ ದೇಶ್ಯ ತಮಿ. ಕಾಲಿ ; ತುಲು. ಗಾಲಿ, ಗಾಳಿ ; ತೆಲು. ಕೊಲಾ. ಗಾಲಿ ; ನಾಯ್ಕಿ. ಘಾಳಿ ]

**ಗಾಳಿ$_2$** (ನಾ). ನಿಂದೆ; ಬೈಗುಳು. 'ಗಾಳಿವಾತು$_2$' ಪರಾ. [<ಸಂ. ಗಾಲಿ]

**ಗಾಳಿಕೂಳ** 'ಗಾಳಿಗೂಳ' ನೋ.

**ಗಾಳಿಕೊಡೆ** (ನಾ). ವೈಮಾನಿಕರು ವಿಮಾನದಿಂದ ಭೂಮಿಗೆ ಧುಮುಕಬೇಕಾದ ಸಂದರ್ಭದಲ್ಲಿ ಉಪಯೋಗಿಸುವ ಕೊಡೆ ; ಧುಮುಕುಕೊಡೆ ; ಪ್ಯಾರಾಚೂಟು : ಧುಮುಕಿದರೂ ಪ್ರಾಣಕ್ಕೆ ಹಾನಿಯಾಗದಂತೆ ಕೈಯಲ್ಲಿ ಹಿಡಿದುಕೊಳ್ಳಲು 'ಪೆರಾಚ್ಯೂಟ್'ಗಳೆಂಬ ಗಾಳಿಕೊಡೆಗಳನ್ನು ಉಪಯೋಗಿಸುತ್ತಾರೆ (ವಿಜ್ಞಾವಿ. ೭೯) ; ಆಗಾಗ ಆಕಾಶದಿಂದ ಬೆಳಕಿನ ಗಾಳಿಕೊಡೆ (Parachute)ಗಳನ್ನು ಹಾರಿಸಿ ಅವು ವೈರಿಪಾಳೆಯಗಳನ್ನು ಬೆಳಗುವಂತೆ ಮಾಡುವರು (ಬಾಲಪ್ರ. I, ೫೮೮).
[ ಗಾಳಿ$_1$ + ಕೊಡೆ$_2$ ]

**ಗಾಳಿಕೋವಿ** (ನಾ). "ಗಾಳಿಯ ಬಲದಿಂದ ಹೊಡೆಯುವ ತುಪಾಕಿ ; ಗಾಳಿಕೋವಿ ; ಗಾಳಿಬಂದೂಕು" (Air-gun. ಇಂಕನಿ).
[ ಗಾಳಿ$_1$ + ಕೋವಿ$_1$ ]

**ಗಾಳಿಕೋಳಿ** (ನಾ). ಗಾಳಿ ಬೀಸುವ ದಿಕ್ಕನ್ನು ತೋರಿಸುವುದಕ್ಕಾಗಿ ಎತ್ತರವಾದ ಕಟ್ಟಡಗಳ ಮೇಲೆ ನಿಲ್ಲಿಸಿದ ಸಾಧನ ; ವಾಯುದಿಕ್ಸೂಚಿ : ನೆಲದ ಮಟ್ಟದಲ್ಲಿ ಗಾಳಿಯು ಯಾವ ಕಡೆಗೆ ಬೀಸುತ್ತದೆ ಎಂಬುದನ್ನು ಎತ್ತರದಲ್ಲಿ ಹಾರುವ ವೈಮಾನಿಕನಿಗೆ ತಿಳಿಸುವುದಕ್ಕೆ ಕತ್ತಲಲ್ಲಿ ಮಿನುಗುವ ಗಾಳಿಕೋಳಿ (Weather-cock)ಗಳನ್ನು ಇರಿಸುವರು (ಬಾಲಪ್ರ. II, ೮೮೩). [ ಗಾಳಿ$_1$ + ಕೋಳಿ$_1$ (<ಕೋೞಿ$_1$) ]

**ಗಾಳಿಗ** (ನಾ). ೧. ಗಾಳಿಯಲ್ಲಿ ಸಂಚರಿಸುವಂಥದು ; ದೆವ್ವ, ಭೂತ, ಪಿಶಾಚಿ ಮುಂತಾದುವು: ಗಾಳಿಗರುಂ ನೆಲಮುಕ್ಕ ಜಕ್ಕಿಯುಂ ಬೊಮ್ಮನುನೆಂದು ಜೀವವಧೆಗೈದರೆ ಕುತ್ತದ ದುಃಖದಿಂದ ಸಾಸಿರ್ಮಡಿ ದುಃಖಮಂ ಪಡೆವ ನಾರಕ ದುಃಖಮನ್ನೆಯ್ದದಿರ್ಪರೇ (ಶಾಸ್ತ್ರಟೀ. ೨೪-೩). ೨. ಒಬ್ಬಾತನ ಹೆಸರು : ಓಲೆಯ ಚನ್ದಿಗನುಂ ಗಾಳಿಗನುಂ ಮೊದಲಾಗೆ ಅಯ್ನೂರ್ಬರುಂ ತುಪ್ಪವನುಱಿದೋರ್ (ಸೌಇಇ. XI-1, ೧೨-೧೪ ; 967).
[ ಗಾಳಿ$_1$ + -ಗ$_2$ ]

**ಗಾಳಿಗಂಟು** (ನಾ). ೧. (ಅಲಂ) ಗಾಳಿಯನ್ನು ಬಂಧನಮಾಡುವಂತೆ ಅಸಾಧ್ಯವಾದುದನ್ನು ಮಾಡುವ ಪ್ರಯತ್ನ ; ಅತಿಯಾದ ಸಾಹಸ ; ಅಸಾಧಾರಣ ಕಾರ್ಯ : ಏನೇನೊ ಗಾಳಿಗಂಟು ಮಾಡಿ ನೀರೆರೆದು ಈ ತೋಟ ಬೆಳೆಸಿದ್ದೇನೆ (ಮುಗಮೂ. ೬೦). ೨. (ಅಲಂ) ಮೋಸ ; ವಂಚನೆ : ಗಾಳಿಗಂಟು ಮಾತುಗಳಿಂದ ನಂಟರಂತೆ ತೋರುವ ಕುಂಟರಂ (ಸೌಗಂಧಿ. ೦೩೪-೪). [ ಗಾಳಿ$_1$ + ಗಂಟು ]

**ಗಾಳಿಗಿರಣಿ** (ನಾ). ಗಾಳಿಯ ಸಹಾಯದಿಂದ ನಡೆಯುವ ಯಂತ್ರ : ಭೂಮಿ ಇಲ್ಲವೆ ಸಮುದ್ರದ ಮಗ್ಗುಲಲ್ಲಿ ಸದಾ ಬೀಸುತ್ತಿರುವ ಗಾಳಿಗಳಿಂದ 'ಗಾಳಿಗಿರಣಿ' (Wind-mill)ಗಳನ್ನು ಮಾಡುತ್ತಾರೆ (ಬಾಲಪ್ರ. I, ೦೦೮) ; ಅಲ್ಲಲ್ಲಿ . . . ಗಾಳಿಗಿರಣಿಗಳಿವೆ (ಅಪೂಪ. ೧೯೦).
[ ಗಾಳಿ$_1$ + ಗಿರಣಿ$_1$ ]

**ಗಾಳಿಗುದುರಾಂಕ** (ನಾ). ಜಿಂಕೆಯನ್ನು ಗುರುತಾಗಿ ಉಳ್ಳವನು ; ಚಂದ್ರ ; ಮೃಗಾಂಕ : ಸುಚರಿತ್ರ ನಿಟಿಲನೇತ್ರಾ ಗಾಳಿಗುದುರಾಂಕನೆ [ನ]ರವೌಳಿ (ನವಮೋ. ೨೩-೧). P ಇದು ಅಶುದ್ಧ ಶಬ್ದ.
[ ಗಾಳಿಗುದುರೆ + ಅಂಕ$_2$ ]

**ಗಾಳಿಗುದುರೆ** (ನಾ). ವಾಯುದೇವನಿಗೆ ವಾಹನವಾದುದು ; ಜಿಂಕೆ ; ಮೃಗ. 'ಗಾಳಿಗುದುರಾಂಕ' ಪರಾ.
[ ಗಾಳಿ$_1$ + ಕುದುರೆ ]

**ಗಾಳಿಗುದ್ದು** (ಕ್ರಿ). ೧. ಗಾಳಿಯನ್ನು ಗುದ್ದು,-ತಿವಿ: ತಲೆಯ ಮೇಲೆ ಎಲ್ಲಿಂದೂ ಬಂತೂ ಈ ನಾದ ಗಾಳಿಗುದ್ದಿ. ಗೆಳೆಯ, ನೀವು ವ್ಯಗರೆದಿರೆಂದು, ಛೀ ! ನಂಬಬರದ ಸುದ್ದಿ (ಹೃದಸ. ೬೩-೪). ೨. (ಆಲಂ) ಉಪಯೋಗವಿಲ್ಲದ ಕೆಲಸವನ್ನು ಮಾಡು; ನಿರರ್ಥಕವಾದ ಕೃತ್ಯದಲ್ಲಿ ತೊಡಗು: ಇದೇನಾಟ, ಗಾಳಿಗುದ್ದಿ ವ್ಯಸನೋಯಿಸಿಕೊಳ್ಳುವುದು (ಕಸಬು. ೬೨); ಈಗಾಗಲೇ ಸರಕಾರದಿಂದ ರದ್ದುಮಾಡುವ ನೋಟೀಸು ಮುನಸೀಪಾಲಿಟಿಯ ಕೈಸೇರಿಹೋಗಿದೆ. ಇಂಥದರಲ್ಲಿ ಗಾಳಿಗುದ್ದುವದರಲ್ಲಿ ಯಾವ ಪುರುಷಾರ್ಥವೂ ಇಲ್ಲ (ಅಪಸಾ. ೨೩೨); ಗಾಳಿಗುದ್ದಿ ವ್ಯಸನೋಯಿಸಿಕೊಂಡಂತೆ (ಗಾದೆ). [ ಗಾಳಿ$_{1}$ + ಗುದ್ದು$_{1}$ (<ಗುರ್ದು$_{1}$) ]

**ಗಾಳಿಗೂಳ, ಗಾಳಿಕೂಳ** (ನಾ). ೧. ಗಾಳಿಯನ್ನೇ ಆಹಾರವಾಗಿ ಉಳ್ಳ ಪ್ರಾಣಿ; ಎಲರುಣಿಗ; ಹಾವು; ಸರ್ಪ: ಒಂದು ರಾತ್ರಿಯಲಿ ಬೋಧಿಸಿದಳಾ ಖದ್ರು ಗಾಳಿಗೂಳರ್ಗೆ ಸಾಸಿರಫಣೆಗಳೊಪ್ಪದಿರೆ ಶಪಿಸಿದಳ್ (ರುಕ್ಮಾಂಗ. ೧೬-೪); ಗಾಳಿಗೂಳನ ಶತ್ರುವಾಳುವನ ಸನ್ಮಿತ್ರ (ನವಮೋ. ೨೩-೧). ೨. (ಆಲಂ) ಹಾವಿನಂತಿರುವವನು; ಕುಟಿಲ; ವಕ್ರ: ಪೇಳೆ ವೃದ್ಧರ ನುಡಿಯ ಕೇಳ್ವನಲ್ಲಂ ನಿನಗೆ ಗಾಳಿಗೂಳರ ಮಾತು ಸೊಗಸು (ಚೀರಮ. ೨-೧). **ಗಾಳಿಕೂಳ**: ೧. ಗಾಳಿಕೂಳನ ಪಗೆಯ ಪನಯ್ಯನಣುಗನನಾಳಿದನಣುಗನಾತ್ಮಜನ (ಅಮುಸಾಂ. ೬-೧೧೪).

**ಗಾಳಿಗೂಳನ ಹಗೆ**=ಹಾವಿನ ಶತ್ರು; ಗರುಡ, ನವಿಲು ಮೊದಲಾದುವು: ಗಾಳಿಗೂಳನ ಹಗೆಗೊಳಗಾದ ಶಿಬಿರವ ಕೇಳಿ ನಂದೀಶನ್ನೆತರಲು . . . ಹೀಯಾಳಿಸಿ ಬಿಟ್ಟುದಾ ನವಿಲ (ಮೋಹತ. ೩೮-೩೦).

[ ಗಾಳಿ$_{1}$ + ಕೂಳ್ (<ಕೂಟುಳ್$_{1}$) + – ಅ$_{7}$ ]

**ಗಾಳಿಗೂಳ್ಗೊಳ್** (ಕ್ರಿ). ಗಾಳಿಯನ್ನೇ ಆಹಾರವಾಗಿ ತೆಗೆದುಕೊಳ್ಳು; ನಿರಾಹಾರವಾಗಿರು: ಪಲಗಾಲಂ ಗಾಳಿಗೂಳ್ಗೊಂಡಲಸದೆ . . . ಒಂದು ಕಾಲೊಳ್ ಸಲೆ ನಿಂದು (ವೀರಶ. ೧೩೦).

[ ಗಾಳಿ$_{1}$ + ಕೂಳ್ (<ಕೂಟುಳ್$_{1}$) + ಕೊಳ್$_{1}$ ]

**ಗಾಳಿಗೊಳ್** (ಕ್ರಿ). ದೆವ್ವ ಮೆಟ್ಟಿದಂತೆ ಆವೇಶಗೊಳ್ಳು; ಪರವಶವಾಗು: ಪಂದಿಯ ಬಟೆಯಂ ತಗುಳ್ದೊಡದು ಗಾಳಿಗೊಂಡೊಂದು ದೆಸೆಗೆವರಿದು (ವರ್ಧ್ಮಾರಾ. ೧೬೨-೧೬); ಗಾರ್ದಭಿಯೆಂಬ ದೇವತೆ ಕತ್ತೆಯ ರೂಪಾಗಿ ಗಾಳಿಗೊಂಡಂತೆ ಮಸಗಿ . . . ಪರಿತರೆ (ಬಂಹರಿ. ೬-೧೮ ವ): ಚೆಲ್ವನಪ್ಪ ವಾಜಿಯ ರೂಪನಳವಡಿಸಿ ಗಾ [ ಶಾಠಾಂ. ನಾ ]ಳಿಗೊಂಡು ಮುಂದಿಯಂ ತುಳಿವುತ್ತಂ ಬಂದು ಪುರಮಂ ಪುಗೆ (ಪುಣ್ಯಾಸ್ರ. ೫-೬೧ ವ).

[ ಗಾಳಿ$_{1}$ + ಕೊಳ್$_{1}$ ]

**ಗಾಳಿಗೋಪುರ, ಘಾಳಿಗೋಪುರ** (ನಾ). ಗಾಳಿಯಂತೆ ಆಕಾರವಿಲ್ಲದ ವಸ್ತುವಿನಿಂದ ಕಟ್ಟುವ ಗೋಪುರ; ಕೈಗೂಡದ ಮನೋರಥ; ಈಡೇರದ ಆಸೆ: ಅದು ದಿಟದನಿರ್ಪುದೋ ಮೇಣ್ ಬರಿಯ ಆಸೆ ಬೀಸಿದ ಗಾಳಿಗೋಪುರವೊ ಎಂಬೊಂದು ಶಂಕೆಯುಯ್ಯಲೆಯಲ್ಲಿ ತೂನೆದಪ್ಪುದಯ್ ಶ್ರದ್ಧೆ (ಶ್ರೀರಾಮಾ. ೪೪೬-೪೦): ನನ್ನ ಸಂಕಲ್ಪ ಗಾಳಿಗೋಪುರವಾದಂತಿದೆ (ಹರಿಕೋ. ೬೦); ಗಾಳಿಗೋಪುರ ಕಟ್ಟುವಂತೆ ರಾಜ್ಯರಚನೆಯಲ್ಲಿ ಕೇವಲ ಮಾತಿನಿಂದ ಏನೂ ನಡೆಯುವುದಿಲ್ಲ (ಪ್ರಕಾಪ. ೮೮); ಆದರೆ ವಾಸ್ತವತೆಯ ಅರಿವು ಬಂದಾಗ ತನ್ನ ಕೆಲಸವೆಲ್ಲವೂ ಬರೀ ಗಾಳಿಗೋಪುರವೆಂದು ಅವಳು ನಿಟ್ಟುಸಿರು ಬಿಡುವಳು (ದೂರಸ. ೨೯೦). **ಘಾಳಿಗೋಪುರ**: ಘಾಳಿಗೋಪುರದ ಮುಂದೆ ಧಾಳಿಯಾಡುವಂತೆ ಸುತ್ತ ಧೂಳುಗಳನೆಬ್ಬಿಸಿ (ವಾದಿಕೀ. ೪೦-೨). [ ಗಾಳಿ$_{1}$ + ಗೋಪುರ ]

**ಗಾಳಿಚೆಂಡು** (ನಾ). ಗಾಳಿಯಲ್ಲಿ ಹಾರುವಂತೆ ರಚಿಸಿರುವ ಚೆಂಡಿನಾಕಾರದ ಹಾರುವ ಸಾಧನ; ಬಲೂನು: ದೊಡ್ಡದೊಂದು ಚೀಲದಲ್ಲಿ, ಬಿಸಿಗಾಳಿಯನ್ನು ತುಂಬಿಸಿ ಅದು ಗಾಳಿಯಲ್ಲಿ ಏರುವಂತೆ ಮಾಡಿ ಅದಕ್ಕೆ ತೂಗಿದ ಒಂದು ಬುಟ್ಟಿಯಲ್ಲಿ ತಾವು ಕುಳಿತು ಆಕಾಶವನ್ನು ಏರಿದರು. 'ಗಾಳಿಚೆಂಡು' (Baloon) ಎಂದು ಇದಕ್ಕೆ ಹೆಸರು (ಬಾಲಪ್ರ. II, ೧೧೨೬).

[ ಗಾಳಿ$_{1}$ + ಚೆಂಡು (<ಸೆಂಡು) ]

**ಗಾಳಿತುಂಬಿಸು** (ಕ್ರಿ). ೧. ಗಾಳಿ ತುಂಬುವಂತೆ ಮಾಡು. ಸೈಕಲ್ ಚಕ್ರಕ್ಕೆ ಗಾಳಿ ತುಂಬಿಸು (ರೂಢಿ). ೨. (ಆಲಂ) ಪ್ರೇರಿಸು; ಹುರಿದುಂಬಿಸು; ಪ್ರೋತ್ಸಾಹಿಸು: ಕೆಲಸದವಳ ಮೂಲಕ ಬೀಬಿಯನ್ನು ಚೆನ್ನಾಗಿ ಗಾಳಿ ತುಂಬಿಸಿಬಿಟ್ಟಿದ್ದೇನೆ (ಪ್ರೇಮೂರ್ತಿ. ೨೩).

[ ಗಾಳಿ$_{1}$ + ತುಂಬಿಸು ]

**ಗಾಳಿತೇರು** 'ಗಾಳಿದೇರ್' ನೋ.

**ಗಾಳಿದೇರ್, ಗಾಳಿತೇರು** (ನಾ). ವಾಯುಮಂಡಲದಲ್ಲಿ ಚಲಿಸುವ ತೇರು,—ರಥ; ವಿಮಾನ: ಗಾಳಿದೇರೊಳ್ ಬೆಂಗದಿರನಂತೊಪ್ಪೆ ವೈದಿಕನೊರ್ವನೆಯ್ತರುತಿರಲ್ (ಅದ್ಭುತ. ೨೪-೧); ದೂರವೊಯ್ದು ಮರೆಯಾದುದಾ ಬಣ್ಣಬಣ್ಣದ ಗಾಳಿದೇರ್ (ಶ್ರೀರಾಮಾ. ೨೦೬-೧೮೬). **ಗಾಳಿತೇರು**: ಪ್ರೀತಿಯು ಮೊದಲು ಗಾಳಿತೇರಿನಲ್ಲಿಯೂ ಆಮೇಲೆ ಎತ್ತಿನ ಗಾಡಿಯಲ್ಲಿಯೂ ಕೊನೆಗೆ ಹೊರೆಹೊತ್ತೂ, ಓಡುವುದೆನ್ನುವಂತೆ ದೊಡ್ಡನು ಅವಸರದಲ್ಲಿಯೇ ಹೊರಟನು (ಕಾಲೂರ. ೪ ಕಥಾಸಾರ).

[ ಗಾಳಿ$_{1}$ + ತೇರ್$_{2}$ ]

**ಗಾಳಿಪಟ** (ನಾ). ಕಾಗದ, ಕಡ್ಡಿ, ದಾರಗಳಿಂದ ಮಾಡಿ ಗಾಳಿಯಲ್ಲಿ ಹಾರಿಸುವ ಆಟದ ಪಟ; ಪತಂಗ: ಪಸುರ್ವಟ್ಟೆಯ ತೂಳಗುವ ಗಾಳಿಪಟಕೆ ಕಟ್ಟಿದ ರಜ್ಜುವಿದೋ ಎಂಬಂತೆ (ಜಯಕಾ. ೧-೪೧); ಪಟಗಾಜನುಜಿ ಸೂತ್ರವಿಡಿದಿದ್ದರಾ ಗಾಳಿಪಟ ಗಗನದೊಳಾಡುವಂತೆ (ಭರಜ. ೨-೪೩).

**ಗಾಳಿಪಟದ ಹಬ್ಬ**=ಆಷಾಢಮಾಸದ ಮೊದಲ ಏಕಾದಶಿಯ ದಿನ ಗಾಳಿಪಟಗಳನ್ನು ಆಡಿಸಿ ಆಚರಿಸುವ ಹಬ್ಬ: ಈ ಸಲ ನಾನು ಗಾಳಿಪಟದ ಹಬ್ಬಕ್ಕೆ ಒಳ್ಳೆಯ ಪತಂಗವನ್ನು ಕಟ್ಟಿದ್ದೇನೆ (ರೂಢಿ).

[ ಗಾಳಿ$_{1}$ + ಪಟ$_{3}$ ]

**ಗಾಳಿಪಟಂಬಿಡು** (ಕ್ರಿ). ಗಾಳಿಪಟವನ್ನು ಬಿಡು,—ಹಾರಿಸು: ಕಡೆಗಣ್ಣಳ ರಂಬಿ . . . ಎನಸುಂ ಸೊಗಯಿಸಿದುದು ನರರೂಪದ ಮಿನುಗುವ ಗಾಳಿಪಟಂಬಿಟ್ಟಂಗಜನನುರಾಗದಿ ಪಿಡಿಯುಲ್ಬಣದೊಪ್ಪುವ ರಜ್ಜುವಿದೆಂಬಂತೆ (ಜಯಕಾ. ೪-೩೮). [ ಗಾಳಿಪಟ + ಬಿಡು$_{1}$ ]

**ಗಾಳಿಪೂಜೆ** (ನಾ). ೧. ಶಕ್ತಿದೇವತೆಯ ಪೂಜೆ; ಪ್ರಾಣಬಲಿಯನ್ನು ಕೊಡುವ ಮಾರಿ ಪೂಜೆ,—ಕಾಳೀಪೂಜೆ: (ಕಿ). ೨. ದೆವ್ವಗಳಿಗೆ ಪೂಜೆಮಾಡುವುದು: (ಕಿ). [ ಗಾಳಿ$_{1}$ + ಪೂಜೆ$_{3}$ ]

**ಗಾಳಿಬಂದೂಕು** (ನಾ). ಗಾಳಿಯ ಒತ್ತಡದಿಂದ ಶಬ್ದಮಾಡುವ, ಗುಂಡಿಲ್ಲದ ಬಂದೂಕು,—ಕೋವಿ: ಹೆದರಬ್ಯಾಡ, ಸಣ್ಣಕಾಕಾ, ಇದು ಗಾಳಿಬಂದೂಕು (ನಿರಾಪ. ೬೧). 'ಗಾಳಿಕೋವಿ' ಪರಾ.

[ ಗಾಳಿ$_{1}$ + ಬಂದೂಕು ]

**ಗಾಳಿಬಡಿ** (ಕ್ರಿ). ೧. ದೆವ್ವ, ಪಿಶಾಚಿ ಮೊದಲಾದ ದುಷ್ಟಶಕ್ತಿಗಳು ಮೆಟ್ಟಿಕೊಳ್ಳು; ದೆವ್ವಹಿಡಿ: ಎದುರು ಮನೆಯ ಹುಡುಗಿಗೆ ಗಾಳಿ ಬಡಿದಿದೆ (ರೂಢಿ). ೨. (ಆಲಂ) ಆಪತ್ತು ಒದಗು: ನನ್ನ ವಿಷಯಕ್ಕೆ ಬಿಂದೂನ ಭಯ ಮುರಿದಿತು ಎನ್ನುವಷ್ಟರಲ್ಲಿ ಅವಳಿಗೆ ಮತ್ತೊಂದು ಗಾಳಿಬಡಿದುಕೊಂಡಿತು (ಇಪ್ಪಕ. ೪೩೫).

[ ಗಾಳಿ$_{1}$ + ಬಡಿ$_{1}$ ]

**ಗಾಳಿಬಯಲು** (ನಾ). ಆವರಣವಿಲ್ಲದ ಬಯಲು; ಬಟ್ಟಬಯಲು: ಗಾಳಿಬಯಲಿನ ಬೀದಿ ಹೆಜ್ಜೆಮೂಡದ ಹಾದಿಯಲ್ಲಿ ಕುರುಹನು ಕಾಂಬ ಕಣ್ಣುಬರಲಿ (ಗರಿ. ೮೬-೧೦). [ ಗಾಳಿ$_{1}$ + ಬಯಲು (<ಬಯಲ್) ]

**ಗಾಳಿಬಾಳೆ** (ನಾ). ಒಂದು ಬಗೆಯ ಬಾಳೆ; ಕಪ್ಪುರಬಾಳೆ; ಪಾಟ ಬಾಳೆ: ತಾಮ್ರದ ಹರಿವಾಣದಲ್ಲಿ ಎರಡು ಹಣತೆ ಗಾಳಿಬಾಳೆ ಹಣ್ಣುಗಳನ್ನಿರಿಸಿದ (ಚಿಗುಕ. ೯೬). [ ಗಾಳಿ$_3$ + ಬಾಳೆ$_1$ (<ಬಾಟಿ) ]

**ಗಾಳಿಬಿಡಿಸು** (ಕ್ರಿ). ೧. ಪಿಶಾಚಿಯನ್ನು ಬಿಡಿಸು: ಯಾರೋ ಒಬ್ಬ ಮಂತ್ರವಾದಿ ಬಂದು ಆಕೆಗೆ ಗಾಳಿಬಿಡಿಸಿದ (ರೂಢಿ). ೨. (ಆಲಂ) ಶಿಕ್ಷಿಸು; ಬುದ್ಧಿಕಲಿಸು: ಆ ಕಳ್ಳನಿಗೆ ಚೆನ್ನಾಗಿ ಗಾಳಿಬಿಡಿಸಿದರು (ರೂಢಿ). [ ಗಾಳಿ$_1$ + ಬಿಡಿಸು ]

**ಗಾಳಿಬುಡ್ಡೆ** 'ಗಾಳಿಬುರುಡೆ' ನೋ.

**ಗಾಳಿಬುರುಡೆ, ಗಾಳಿಬುಡ್ಡೆ** (ನಾ). ೧. ಗಾಳಿಯನ್ನು ತುಂಬುವ ಬುರುಡೆ. ೨. (ಆಲಂ) ಸತ್ವಹೀನವಾದುದು: ಅವನದು ಸ್ಥೂಲ ದೇಹ, ಆದರೆ ಬರೀ ಗಾಳಿಬುರುಡೆ (ರೂಢಿ). **ಗಾಳಿಬುಡ್ಡೆ:** ೧. ವಿಭುವೊಬ್ಬನೀ ಗಾಳಿಬುಡ್ಡೆಗಳನೂದುವವನು ಹಬೆಗುಳ್ಳಿಯೋ ಸೃಷ್ಟಿ (ಮಂಕುಕ. ೮೫). [ ಗಾಳಿ$_1$ + ಬುರುಡೆ ]

**ಗಾಳಿಮಂಟಪ, ಘಾಳಿಮಂಟಪ** (ನಾ). ೧. ನಾಲ್ಕು ಕಡೆಯೂ ಗಾಳಿ ಬೀಸುವಂತೆ ತೆರೆದಿರುವ ಮಂಟಪ: (೬). **ಘಾಳಿಮಂಟಪ:** ೨. ದೇವಸ್ಥಾನದ ಒಂದುಭಾಗ: ಮಹಾಲಕ್ಷ್ಮೀದೇವಿ ಅಂಮನವರಿಗೆ ತಾವೂ ಮಾಡಿಸಿದಂಥಾ ಶೇವೆ . . . ತೆಂಕಣಗೋಪುರ ಆ ಬಾಗಿಲ ವಾಡಗಳು ಅಡಿಗೆಮನೆ ಆ ಮುಂದಣ ಚಪ್ಪರ ಪೋಲಗದ ಘಾಳಿಮಂಟಪ (ಸೌಇಇ. IX-II, ೫೮೫-೧೪ ; 1588). [ ಗಾಳಿ$_1$ + ಮಂಟಪ ]

**ಗಾಳಿಮಳೆ** (ನಾ). ಗಾಳಿಯಿಂದ ಕೂಡಿದ ಮಳೆ; ರಭಸದ ಮಳೆ: ಗಾಳಿಮಳೆ, ಹನಿಹನಿಮಳೆ, ಜಡಿಮಳೆ, ಜರಾವರ್ತಿಮಳೆಯೂ ಸುರಿಯತೊಡಗಿತು (ಬಾಳಗಿ. ೬೬). [ ಗಾಳಿ$_1$ + ಮಳೆ (<ಮಟಿ) ]

**ಗಾಳಿಮಾತು** 'ಗಾಳಿವಾತು$_1$' ನೋ.

**ಗಾಳಿಮೆಟ್ಟು** (ಕ್ರಿ). = ಗಾಳಿಹಿಡಿ ೧: ಹಾಳುಬಾವಿಯ ಬಳಿಗೆ ಹೋದಾಗ ಅವಳಿಗೆ ಗಾಳಿಮೆಟ್ಟಿಕೊಂಡಿತಂತೆ (ರೂಢಿ). [ ಗಾಳಿ$_1$ + ಮೆಟ್ಟು$_1$ ]

**ಗಾಳಿಯಂತ್ರ** (ನಾ). =ಗಾಳಿಗಿರಣಿ: ಆಮೇಲೆ ಈ ಊರಿನಲ್ಲಿ ಮೊದಲಾಗಿ ನಾನು ಗಾಳಿಯಂತ್ರ(Wind mill)ವನ್ನು ಕಂಡೆ (ಪ್ರವಾಸಿ. ೧೨೬). [ ಗಾಳಿ$_1$ + ಯಂತ್ರ ]

**ಗಾಳಿಯಮ್ಮ** (ನಾ). ಒಂದು ಬಗೆಯ ದನದ ರೋಗ; ದನಗಳ ಕಾಲು ಮತ್ತು ಬಾಯಿಗೆ ಬರುವ ಬೇನೆ: (ಎಸಮ್ಮ. XV, ೩೯). [ ಗಾಳಿ$_1$ + ಅಮ್ಮ$_2$ ]

**ಗಾಳಿಯಿಕ್ಕು** (ಕ್ರಿ). ಗಾಳಿಯನ್ನು ಬೀಸು,—ಹಾಕು: ಬಿಜ್ಜಣಿಗೆಗೊಂಡು, ಮಹಾರಾಜನಿಗೆ ಮೆಲ್ಲಗೆ ಗಾಳಿಯಿಕ್ಕಲಾರಂಭಿಸುವಳು (ಚಿತ್ರಸ. ೧೬-೧೭). [ ಗಾಳಿ$_1$ + ಇಕ್ಕು ]

**ಗಾಳಿವಟ್ಟೆ, ಘಾಳಿವಟ್ಟೆ** (ನಾ). ಗಾಳಿ ಸಂಚರಿಸುವ ಹಾದಿ; ವಾಯುಮಾರ್ಗ; ಆಕಾಶ: "ಆಗಸ . . . ಗಾಳಿವಟ್ಟೆಯೆನಲ್ಕಂದಾಗಲಾಕಾಶವೆಸರದು" (ಕವಿಕಂ. ೪೬); ಭಾಸ್ಕರಂ ಬಟಿಕ ಗಾಳಿವಟ್ಟೆಯಿನಿಳಿದು ಕಡಲ ನೀರ್ವುಗಿ ತಾರೆಗಳ್ ತೋರ್ದುವಂಬರದೊಳು (ಶ್ರೀರಾಮ. ೫ ೩೦). **ಘಾಳಿವಟ್ಟೆ:** "ಮಿಾಂಬಟ್ಟೆಯೆನೆ ಘಾ[ಪಾಠಾಂ. ಗಾ]ಳಿವಟ್ಟೆ" (ಕಬ್ಬಿಗೈ. ೧೧) [ ಗಾಳಿ$_1$ + ಬಟ್ಟೆ$_1$ ]

**ಗಾಳಿವಟ್ಟೆಗ** (ನಾ). ಆಕಾಶದಲ್ಲಿ ಸಂಚರಿಸುವವನು; ದೇವತೆ; ಖಚರ: "ಅಮರ್ದುಣಿಸುಗಳ್ . . . ಗಾಳಿವಟ್ಟೆಗರ್, ಅಚ್ಚರರ್, (ಬೋಳೆಯರ್)–ಈ ೯ ದೇವರ್ಕಳ ಪೆಸರ್" (ಕಶಸಾ. ೨-೧೯); "ಕನಸಿಲ್ಲದ ರೆಮೆಯಿಕ್ಕದರನುನಯದಿಂ ಗಾಳಿವಟ್ಟೆಗರುಮಚ್ಚರರೆಂದೆನುತುಂ . . . ದೇವವ್ರಾತಕಮರ್ದ ನಾಮಮಿವಕ್ಕುಂ" (ಕವಿಕಂ. ೩೨); ಎಳೆಡಿಭೂವರ ರೇಳಡಿಪೇಚರರ್ ಗಾ[ಪಾಠಾಂ. ಘಾ]ಳಿವಟ್ಟೆಗ ಸುರರಸುರಜಾಲಮಲ್ಲಿಂದ ಸುರೇಂದ್ರರೊಯ್ದರು ನಾಥ ಕೇಳೀವನದ ಮಂಟಪಕೆ (ವರ್ಧಕ. ೧೧-೫೧.) [ ಗಾಳಿವಟ್ಟೆ + –ಗ$_2$ ]

**ಗಾಳಿವಟ್ಟೆದಲೆಯ** (ನಾ). ಆಕಾಶವೇ ತಲೆಯಾಗುಳ್ಳವನು; ವ್ಯೋಮಕೇಶ; ಶಿವ: ಗಾರುಡಧ್ವಜನತಾ ಗಾಳಿವಟ್ಟೆದಲೆಯಾ . . . ವಿರಾಗಾ ಸರಾಗಾ ಜಯ (ಉದ್ಭದೇ. ೬-೨೭). [ ಗಾಳಿವಟ್ಟೆ + ತಲೆ$_1$ + –ಅ$_7$ ]

**ಗಾಳಿವರು** (ಕ್ರಿ). ಗಾಳಿಯಂತೆ ಬರು; ವೇಗವಾಗಿ ಬರು: ಸರ್ವಸ್ವವನ್ನೂ ಕೊಳ್ಳೆಯಿಂದ ಕೊಂಡು ನಿರ್ಮೂಲ ಮಾಡಿಬಿಡಲು ಇಲ್ಲಿಗೆ ಗಾಳಿವರುತ್ತಿರುವನು (ಮಂತ್ರಕ. ೬೩-೨೦). [ ಗಾಳಿ$_1$ + ಬರು$_1$ (<ಬರ್$_1$) ]

**ಗಾಳಿವರ್ತಮಾನ** (ನಾ). "(ನಿಜವೆಂದು ತಿಳಿಯದ) ಕೇಳಿಕೆಯ ಮಾತು; ಗಾಳಿವರ್ತಮಾನ; ಬೀದಿಸುದ್ದಿ" (Hear.say. ಇಂಕನಿ); ಬೇರೆ ಮದುವೆಮಾಡಿಸುವುದಕ್ಕೆ ಪ್ರಯತ್ನಿಸುತ್ತಿದಾಳೆ ಎಂಬುದಾಗಿ ಗಾಳಿವರ್ತಮಾನ ಕೇಳುತ್ತ ಬಂತು (ಮಹಾಗ. ೬೨). [ ಗಾಳಿ$_1$ + ವರ್ತಮಾನ ]

**ಗಾಳಿವಾತು$_1$, ಗಾಳಿಮಾತು** (ನಾ). ಗಾಳಿಯಲ್ಲಿ ಹರಡುವ ವರ್ತಮಾನ; ಸುಳ್ಳುಸುದ್ದಿ: ಜಾಣರ್ ಭಾವಿಸಿ ಬಗೆದು ನೋಡೆ ನೆಲೆಗೊಟ್ಟುಸಿರೆಂಬುದೆ ಗಾಳಿವಾತದಂ ನಂಬುವುದೇ (ಧರ್ಮನಾ. ೫-೮೯); ಗಾಳಿವಾತಲ್ಲವ ಮಟೆಯೆಂದು ತಾಂ ಮುನ್ನ ಕೇಳಿದಂತೊರೆದನೆಲ್ಲವನು (ಧರಚ. ೫೭-೯೪). **ಗಾಳಿಮಾತು:** ಸುಮ್ಮನೆ ಗಾಳಿಮಾತು ನಂಬಿಕೊಂಡು ಮಾತನಾಡಬಾರದು (ರೂಢಿ). [ ಗಾಳಿ$_1$ + ಮಾತು$_1$ ]

**ಗಾಳಿವಾತು$_2$** (ನಾ). ನಿಂದೆ; ಬಯ್ಗುಳು: "ಗಾಳಿವಾತು = ಬೈಗುಳ್" (ಶಮದ. ಪರಿ. ೨); "ತಿಟ್ಟೆಂದೊಡಂ ಗಾಳಿವಾತೆಂದೊಡಂ ಬೈಗುಳಕ್ಕುಂ" (ಶಬ್ದಮಂ. ೩೪); "ಗಾಳಿವಾತೆಂದು ತಿಟ್ಟೆಂದು ಬೈಗುಳ್" (ಕಬ್ಬಿಗೈ. ೮೯). [ ಗಾಳಿ$_2$ + ಮಾತು$_1$ ]

**ಗಾಳಿವಾರ** (ನಾ). (ಉಕ) ಗಾಳಿಪಟ: ಬಾಲಾಗಸಿಯಿಲ್ಲದೆ ಗಾಳಿವಾರವು ಇರುವ ಬಗೆ ಹೇಗೆ (ಚಿತ್ರಹೊ. ೧೬). [ ಗಾಳಿ$_1$ + ವಾರ ? ]

**ಗಾಳಿವಿಡಿ** (ಕ್ರಿ). ೧. "ದೆವ್ವಹಿಡಿ" (ಪ್ರಭಶ) ೨. "ವಾಸನೆ ಹಿಡಿ" (ಪ್ರಭಶ); ಗಾಳಿವಿಡಿದಳ್ಕಂಗೊಂಡು . . . ಹಿಂದೆ ಮರಲ್ದಿಕ್ಕಲಂ (ಹಡಕಾ. ೬-೧೧). [ ಗಾಳಿ$_1$ + ಹಿಡಿ$_1$ ]

**ಗಾಳಿವೆಜಗು** (ನಾ). ಗಾಳಿ ಬೀಸುವ ಸ್ಥಳ: ಅಂತು ಮಡಿಪಿ ಶರೀರಸಮೇತಂ ನಿರಾದಾನ ವಿಧಾನದಿಂ ಗಾಳಿವೆಜಗಿನೊಳೆರ್ದಮಳದೀಪಿಕೆಯಂತಿರ್ದರುಮೊಡನದೃಶ್ಯರಾಗಿ ಬಂದು (ಶಾಂತಿಪು. ೬-೮೧ ವ); ಆ ಗಾಳಿವೆಜ[ಪಾಠಾಂ. ಸ]ಗಿನಿಂದಮೆ ಪೋಗಿ ಪರಿಶ್ರಮವಶಾತುರಂ ವಸುದೇವಂ ನಾಗೇಂದ್ರನಂತೆ ಮದಲೀಲಾಗಮನಂ ಕಂಡನೊಂದು ಕಮಳಾಕರಮಂ (ಅರ್ಧನೇ. ೫-೯೪); ಕಿಱಿದು ಬೇಗಮಾ ಗಾಳಿವೆಜಗಿನೊಳೆ ರಥಮಂ ನಿಲಿಸಿ ವಿಸ್ಮಯಂಬಡುತ್ತ (ಪುಷ್ಪಪು. ೫-೧೦೪ ವ). [ ಗಾಳಿ$_1$ + ವೆಜಗು ? ]

**ಗಾಳಿವೇಗ** (ನಾ). ಗಾಳಿಯ ವೇಗ; ವಾಯುವೇಗ: ಗಾಳಿವೇಗದೊಳೆಯ್ದಿ ಕೈಲಾಸಗಿರಿಯ ನಿರಾಲಸ್ಯದಿಂದೇಱಿ . . . ಭೂಲಲನೇಶ ಪೊರ್ದಿದನು (ಧರಚ. ೪೪-೬೩). [ ಗಾಳಿ$_1$ + ವೇಗ]

**ಗಾಳಿಶಂಕೆ** (ನಾ). ದೆವ್ವದ ಭೀತಿ; ಪಿಶಾಚಿಯ ಕಾಟ; ಭೂತಭಯ: (೬). [ ಗಾಳಿ$_1$ + ಶಂಕೆ ]

**ಗಾಳಿಸಮಾಚಾರ** (ನಾ).=ಗಾಳಿವರ್ತಮಾನ: "ವದಂತಿ, ಗಾಳಿಸಮಾಚಾರ, ಬೀದಿಸುದ್ದಿ" (Cry. ಇಂಕನಿ). [ ಗಾಳಿ$_1$ + ಸಮಾಚಾರ ]

**ಗಾಳಿಸವಾರಿ** (ನಾ). ಗಾಳಿಯಲ್ಲಿ ಸಂಚಾರಮಾಡುವುದು; ಬಯಲು ತಿರುಗಾಟ; ಶುದ್ಧವಾದ ಗಾಳಿಬೀಸುವ ಕಡೆ ತಿರುಗಾಡುವುದು: ನೀನು ಕುದುರೆಯ ಮೇಲೆ ಗಾಳಿಸವಾರಿ ಹೊರಟರೆ ನಾನೂ ನಿನ್ನ ಪಕ್ಕದಲ್ಲಿ

(ಪೆರಾಯು. ೨೮-೦೬) ; "ತಾಮ್ರಧಾತುಃ – ಗೈರಿಕ" (ಓಷಧಿ. ೬೬) : ಒಡಗೂಡಿ ಹೇಮ ಗೈ[ಪಾಠಾಂ. ಸೈ]ರಿಕ ಗುಡ ಸೈಂಧವ ಸರ್ಜಸಿಕ್ಥಕಂಗಳ ನಿಂಬಾಗಡುಗೆ ತಿಳತೈಳದಿಂದಂ ಕಿಡಿಸುಗುಮದು ಬಿಡದೆ ತೊಡೆದೊಡಧರ ವ್ರಣಮಂ (ಲೋಕೋಪ. ೯-೮೨). ೩. ಕೆಂಪುಬಣ್ಣ ; ಕಾವಿಬಣ್ಣ. 'ಗೈರಿಕಪರಾಗ', 'ಗೈರಿಕವಸನ' ಪರಾ. ೪. ಚಿನ್ನ; ಸುವರ್ಣ: "ಗೈರಿಕಂ ಕರ್ಬುರಂ . . . ಸ್ವರ್ಣಮೆನೆ ಹೊನ್ನಿಂಗೆ ನಾಮಮಕ್ಕುಂ" (ಮಂಗರಾ. ೩೦-೪) : ಗೈರಿಕದಿ ಮುಕ್ತಾಫಲದಿ ಸಮೆದ ಕಲಶಂಗಳೊರಣಿಪ ಪ್ರಾಸಾದ ಸೌಧ ಹರ್ಮ್ಯಂಗಳಿಂದೆಸೆದುದಾ ದ್ವಾರಾವತಿ (ಭಕ್ತಾಧ. ೨-೩). [ಸಂ.]

**ಗೈರಿಕಪರಾಗ** (ನಾ). ಕೆಂಪುಬಣ್ಣದ ಧೂಳು; ಕೆಂಧೂಳು : ಕಾಡಾನೆಗಳ ಕೋಡವೊನೆಯಿನಿಡಿಱುವ ಗಿರಿಯ ದರಿಯ ಗೈರಿಕಪರಾಗಮಂ ಸಂಧ್ಯಾರಾಗಮಿಷದಿನಾಗಸಕ್ಕೆ ಪಸರಿಸಿಯುಂ (ಚಂದ್ರಪ್ರ. ೮-೪ ವ).
[ಗೈರಿಕ + ಪರಾಗ]

**ಗೈರಿಕರುಚಿ** (ನಾ). ಕೆಂಪು ಬಣ್ಣದ ಪ್ರಕಾಶ,–ಕಾಂತಿ : ಗೈರಿಕರುಚಿಯಂತೆ ಮೆಱೆಗುವಮಾಯೆಡೆ ಸೊಬಗಿಂ (ಪಶ್ವಪಂ. ೮೨). [ಗೈರಿಕ + ರುಚಿ]

**ಗೈರಿಕವಸನ** (ನಾ). ಕಾವಿ ವಸ್ತ್ರ; ಕಾಷಾಯವಸ್ತ್ರ. 'ಗೈರಿಕವಸನಧಾರಿ' ಪರಾ. [ಗೈರಿಕ + ವಸನ]

**ಗೈರಿಕವಸನಧಾರಿ** (ನಾ). ಕಾವಿವಸ್ತ್ರವನ್ನು ಧರಿಸಿದವನು : ಗೈರಿಕವಸನಧಾರಿಗಳಾಗಿ ಪರಿವ್ರಾಜಕರಾಗಿ ಅಲೆಯತೊಡಗಿದರು (ಭಾರದ. ೩೨೧).
[ಸಂ. ಗೈರಿಕವಸನಧಾರಿನ್]

**ಗೈರಿಕೆ** (ನಾ).=ಗೈರಿಕ ೩ : ಎಡಗಾಲಿಂದೆತ್ತಿ ಗೈರಿಕೆ ಧೂಳನು ಒಡನೆ ಕರತಳದೊಳು ತಾವಾಂತು ತೊಡೆದುಕೊಳ್ಳುತ (ಜ್ಞಾನದ. ೩೫-೧೧೬).
[ಸಂ. ಗೈರಿಕ]

**ಗೈರು, ಗೈರ್** (ನಾ). ೧. ಇಲ್ಲದಿರುವುದು. 'ಗೈರುಹಾಜರು' ಪರಾ. ೨. ತಪ್ಪು ; ಅಪರಾಧ ; ಅಯೋಗ್ಯವಾದುದು : ಈ ಪ್ರಕಾರ ಪತ್ರ ಬರಿಯುವ ಪದ್ಧತಿಯು ಬಹಳೇ ಗೈರೆಂದು ನಮಗೆ ತೋರುತ್ತದೆ (ಮುಂಬಪ್ರಾ. ೮೮). **ಗೈರ್** : 'ಗೈರ್‌ವಿಲೆ', 'ಗೈರ್‌ಹಾಜರ್' ಪರಾ.
[←ಅರ. ಹಿಂ. ಮರಾ. ಗೈರ್]

**ಗೈರುಮಾಮೂಲು** (ನಾ). ಬಳಕೆಯಲ್ಲಿಲ್ಲದುದು ; ರೂಢಿಗೆ ವಿರುದ್ಧವಾದುದು : ತೊರೆಯರು . . . ಕುದುರೆ ಸವಾರಿಯ ಮೆರವಣಿಗೆ ಹೋಗುವುದು ಗೈರುಮಾಮೂಲು (ಕಲಿಸ. ೨೦೬).
[ಗೈರು + ಮಾಮೂಲು]

**ಗೈರುವಾಜಬಿ, ಗೈರವಾಜಬಿ** (ಗು). ಅಯೋಗ್ಯವಾದ ; ಅನುಚಿತವಾದ; ಅನ್ಯಾಯದ: (೬). **ಗೈರವಾಜಬಿ**: ಯಾವತ್ತು ಗೈರವಾಜಬೀ ಲೆಕ್ಕಾಚಾರ ಸಾಕ್ಷಿ ರುಜು ಮೊಕಾಬಿಲೆಯಿಂದ ಕೂಲಂಕಷದರಿಯಾಫ್ತು ಮಾಡಿ (ಮಹಾಪಂ. II, ೫೯). [<ಗೈರು + ವಾಜಬಿ]

**ಗೈರುವಿಲೆ, ಗೈರ್‌ವಿಲೆ** (ನಾ). ಕಳೆದುಹೋಗುವಿಕೆ ; ತಪ್ಪಿಸಿಕೊಂಡು ಹೋಗುವುದು : ಇಟ್ಟ ಸಾಮಾನುಗಳು ಗೈರುವಿಲೆಯಾದರೆ ಮೇಲ್ವಿಚಾರಕರೇ ಜವಾಬ್ದಾರರು (ಪ್ರಪಾ೩. II, ೦೬೦) ; ಯುದ್ಧಕ್ಕೆ ಹೋದ ಲಕ್ಷಾಂತರಸೈನಿಕರ ಪೈಕಿ, ಸಾವಿರಾರು ಜನ ಗೈರುವಿಲೆ ಆಗಿಬಿಟ್ಟದ್ದಾರೆ (ವೀರಯೋ. ೯೮). **ಗೈರ್‌ವಿಲೆ**: ನನ್ನ ದುರದೃಷ್ಟದಿಂದ ಅದು ಗೈರ್‌ವಿಲೆಯಾಗಿ ಹೋಗಬಹುದು (ವಿನೋದ. ೯): ನನ್ನ ಅದೃಷ್ಟದಿಂದ ಅದು ಗೈರ್‌ವಿಲೆಯಾಗಿ ಹೋಗಬಾರದಷ್ಟೆ (ಹಂಚಿನ. ೨೦). [←ಮರಾ. ಗೈರ್‌ವಿಲ್ಹೇ]

**ಗೈರುಹಾಜರಿ, ಗೈರ್‌ಹಾಜರಿ** (ನಾ) ಹಾಜರಾಗದಿರುವಿಕೆ: ಅನುಪಸ್ಥಿತಿ : ರಾಜನು ತನ್ನ ಗೈರುಹಾಜರಿಯಲ್ಲಿ ಒಬ್ಬ ನ್ಯಾಯಾಧೀಶನನ್ನು ನೇಮಿಸಬಹುದಾಗಿತ್ತು (ಭಾರದ. ೫೬) : ತನ್ನ ಗೈರುಹಾಜರಿಯಲ್ಲಾಗುವ ಅವ್ಯವಸ್ಥೆಯನ್ನು ಸರಿಪಡಿಸಿ ಮನೆ ಸೇರೋಣ (ವಾತ್ಸಲ್ಯ. ೩೬). **ಗೈರ್‌ಹಾಜರಿ**: ಗೊತ್ತಾದ ಸ್ಥಳದಲ್ಲಿಲ್ಲದಿರುವುದು ; 'ಗೈರ್‌ಹಾಜರಿ' (Absence: ಇಂಕನಿ).
[ಗೈರು + ಹಾಜರಿ]

**ಗೈರುಹಾಜರು, ಗೈರ್‌ಹಾಜರ್** (ನಾ). ಹಾಜರಾಗದವನು ; ಅನುಪಸ್ಥಿತನು : ನಿನ್ನೆಯ ದಿವಸ ಗೈರುಹಾಜರಾಗಿದ್ದ ತಬಲಾ ಕಿಟ್ಟಯ್ಯ (ಬದುಕ್ಕೆ.೧೪); ಒಮ್ಮೊಮ್ಮೆ ಇಡೀ ವಾರವೇ ನಾವು ಗೈರುಹಾಜರಾಗುತ್ತಿದ್ದೆವು (ಕಲಿಕ. ೨೨). **ಗೈರ್‌ಹಾಜರ್** : ಈ ನೌಕರರುಗಳು ಗ್ರಾಮದಿಂದ ಗೈರ್‌ಹಾಜರಾಗಬೇಕಾದರೆ . . . ಡೆಪ್ಯೂಟಿ ಅಮಲ್ದಾರರ ಹುಕುಂ ವಿನಹ ಗೈರ್‌ಹಾಜರಾಗತಕ್ಕದ್ದಲ್ಲವು (ಗ್ರಾಮೂಕ. ೪). [ಗೈರು + ಹಾಜರು]

**ಗೈರೇಯ** (ಗು). ೧. ಗಿರಿಯಲ್ಲಿ ಹುಟ್ಟಿದ. (ನಾ). ೨. ಗೈರಿಕ ; ಕಾವಿಕಲ್ಲು : "ಗೈರೇಯಂ, ಅರ್ಘ್ಯಂ, ಗಿರಿಜಂ, ಅಶ್ಮಜಂ, ಶಿಲಾಜಿತು–ಈ ಶಿಶಿಲಾಜಿತ್ತು" (ಸಿದ್ಧಾಂತಿ. ೨೬೨). [ಸಂ.]

**ಗೈಲು** (ನಾ). (?) : ತೈಲತಪ್ಪೋದಕದಲಿ ಮಿಂದರಿರ್ವರು ಶೈಲಾತ್ಮಜೆಯ ಕಾಂತನಿಗೆ ಗೈಲ ಪೂಜೆಯ ಮಾಡಿ ಮಹದುಪಚಾರವ ಕೈಲಾಗಿ ನಿಂದೊಡರ್ಚಿದರು (ಮೋಹಕ. ೩೧-೩). [?]

**ಗೈಸು** (ಕ್ರಿ). ಮಾಡಿಸು ; ನೆರವೇರಿಸಂ : ಸಕಲಲೋಕಗಳ ನಾಯಕ ಇವಗೆ ಹೇಯ ಲೌಕಿಕಮಾರ್ಗವನೆ ಬಿಡಿಸಿ ನಿತ್ಯದಲ್ಲಿ ಪ್ರಕಟವನೆ ಗೈಸು ಸದ್ಧರ್ಮಕರ್ಮಗಳ (ಜಗದಾ. ೫೨). [< ಕೆಯ್ಸು]

**ಗೊಂಕರು** 'ಗೊಂಕುಳು' ನೋ.

**ಗೊಂಕರುಕಪ್ಪೆ** 'ಗೊಂಕಳುಕಪ್ಪೆ' ನೋ.

**ಗೊಂಕಳಕಟ್ಟಿ** 'ಗೊಂಕುಳುಗಟ್ಟಿ' ನೋ.

**ಗೊಂಕಳು** 'ಗೊಂಕುಳು' ನೋ.

**ಗೊಂಕಳುಕಪ್ಪೆ, ಗೊಂಕರುಕಪ್ಪೆ, ಗೋಂಕುರುಕಪ್ಪೆ** (ನಾ). (ಕರ್ಕಶವಾಗಿ ಅರಚುವ ದೊಡ್ಡ ಗಾತ್ರದ ಒರಟುಚರ್ಮದ) ಒಂದು ಬಗೆಯ ಕಪ್ಪೆ; ಮಹಾಮಂಡೂಕ: ಗೊಂಕಳುಕಪ್ಪೆ ದ[ವ]ಸುಂಬು ತತ್ಕ್ರಮದಿಂದಮ ದೀಪ್ತದಿನ್ನಾಗದೊಳ್ ದನಿಗೆಯ್ಕೆ ಮನಸಿದ್ಧಿಯನಾಗಳೆ ಉಂಟುಮಾಡುಗುಂ (ಲೋಕೋಪ. ೦೨-೦೬). **ಗೊಂಕರುಕಪ್ಪೆ** : ಮುಂಗಾರು ಮಳೆಯ ರಾತ್ರಿಗಳಲ್ಲಿ ಗೊಂಕರುಕಪ್ಪೆಗಳ ಕಿರಿಚಾಟ ಬಹಳ (ರೂ೦). **ಗೋಂಕುರುಕಪ್ಪೆ** : ಅದು ಗಂಡುಹುಲಿ. ಕೆಳಗೆ ನದಿಯ ನೀರಲ್ಲಿ ಕಪ್ಪೆ ಗೋಂಕುರುಕಪ್ಪೆ ದೊಡ್ಡ ಮೀನುಗಳೇನಾದರೂ ಕಾಣಿಸುತ್ತವೋ ಎಂದು ಹಸಿವೆಯಿಂದ ಹುಡುಕಾಡುತ್ತಿತ್ತು (ಶರಾಪ. ೫೬).
[ಗೊಂಕಳು (< ಗೊಂಕುಳು) + ಕಪ್ಪೆ$_1$]

**ಗೊಂಕುಳಿಡು** (ಕ್ರಿ). ಕರ್ಕಶವಾದ ದೊಡ್ಡದನಿಯನ್ನು ಮಾಡಂ ; ಅರುಚು : ಬೆಳರ್ಗಂಪಂ ಕಿವಿ ಬೀಱೆ ಸಂಘಟಿಸುತಂ ಬಾಯ್ಬಿಟ್ಟು ಕಣ್ಣೀರ ಬೊಬ್ಬುಳಿಯಂತುರ್ವರೆಯುರ್ವೆ ಗೊಂಕು [ಪಾಠಾಂ. ತ] ಳಿದು ತುಂಮಿಳ್ಳಿರ್ದ ಬಾಲಂ ಮಿಯತ್ತ್ರಳ ಸಮ್ಮಾರ್ಜನಿಯಂತೆ ಸಂಚರಿಸೆ ಕೋಪಾಟೋಪದಿಂ ತೊತ್ತಬಿಂದುಬಿಯಲ್ಕಟ್ಟರೆ ರಾಸಭಾಕೃತಿಯು ನಾಗಳ್ ರೌದ್ರಮಂ ಬೀಱುತುಂ (ಮಹಾನೀ. ೬-೯) : (ಪದ್ಯಸಾ. II, ೧೬೯ ನೋಡಿ).
[ಗೊಂಕುಳು + ಇಡು$_1$]

**ಗೊಂಕುಳು, ಗೊಂಕರು, ಗೊಂಕಳು, ಗೋಂಕರು** (ನಾ). ೧. ಕರ್ಕಶವಾದದನಿ ; ದೊಡ್ಡಧ್ವನಿ. 'ಗೊಂಕುಳುಗಟ್ಟಿ' ಪರಾ. **ಗೊಂಕರು** : (ಗು). ೨. ದೊಡ್ಡ ಗಾತ್ರದ. 'ಗೊಂಕರುಕಪ್ಪೆ' ಪರಾ. **ಗೊಂಕಳು**: ೨. 'ಗೊಂಕಳುಕಪ್ಪೆ' ಪರಾ. **ಗೋಂಕುರು**: ೨. 'ಗೋಂಕುರುಕಪ್ಪೆ' ಪರಾ. [ದೇ.೫ ತುಳು. ಗೋಂಕುರು, ಗೋಂಕ್ರು]

**ಗೊಂಕುಳುಗಟ್ಟಿ, ಗೊಂಕಳಕಟ್ಟಿ** (ನಾ). ಕರ್ಕಶವಾಗಿ ಅರಚುವ ಕತ್ತೆ: ಆ ರಥದೊಳೊಡಂಬಡೆ ಪೂಡಿದ ನಾಲ್ಕುಳು ಗೊಂಕುಳುಗಟ್ಟಿಯುಂ (ಶಂಪಭಾ. ೦೨-೬ ವ). **ಗೊಂಕಳಕಟ್ಟಿ** : ಅಂತಾ ಸಿಂಹಂ ಮಱುಗುತ್ತಂ

ಬಟ್ಟು ಗೊಂಕಜಕಟ್ಟಿಯುಂ ಬಯಸಿ ಬಾಯೊಡೆಬೆತು (ಪಂಪಭಾ. ೨೮೨-೦೯).

[ ಗೊಂಕುಜು + ಕಟ್ಟಿ ]

**ಗೊಂಕೆ, ಕಂಕೆ, ಗೋಕೆ** (ನಾ). ೧. ಕೊರಳು ; ಗೋಣು ; ಕುತ್ತಿಗೆ: "ಗೊಂಕೆ=ಗೋಣ್" (ಕಮುದ. ಪರಿ ೨) ; "ಗೊಂಕೆ ಗೋಣೊಳಂ" (ಕರ್ಣಾನಿ. ೨೦); ಕಡುಮುಳಿದದಟ ಗೊಂಕೆಯುಂ [ಪಾಠಾಂ. ಗೋಣಂ] ಮುಟ್ಟಿದೊಡೆ (ವರ್ಧ್ಮಾ. ೦೦೯-೦): ಪಂಕಜಾಕ್ಷನಮುಂಕಿ ಗೊಂಕೆಯುಂ ನುಲಿದ ಕಾಗೆಯ ಕನ್ನೆತ್ತರನುಂಡ ನೆಲನೆಲ್ಲಂಕೆಮ್ಮಣ್ಣ ನೆಲನಾಗಿ ಪಾಸಿಸಿ ದೊಡೆ (ಅರ್ಧನೇ. ೮-೨೨ ವ) ; ಪುರಾಣನಾರಕರ್ಕಂಡು ಪರಿತಂದು ಒಡಿದು ಕೊಂಡು ಗೊಂಕೆಯುಂ ನುಲಿದು (ರತ್ನಕ. ೨-೪ ವ) ; ಅವನ ಗೊಂಕೆ ಮುರಿ ದಿಡುತ್ತೇನೆ (ದ್ರೂರುದಾ. ೮೪). **ಕುಂಕೆ** : ೨. ಕತ್ತಿನ ಹಿಂಭಾಗ ; ಹೆಕ್ಕತ್ತು; ಹೆಡಕು : (ಕ). ೩. ಹೆಗಲು : (ಕ). **ಗೋಕೆ** : ೧. "ಗೋಣ್, ಕತ್ತು" (ಶ್ರೀಪ್ರ). [ ? ]

**ಗೊಂಗಟೆ** 'ಗೊಂಗಡಿ' ನೋ.

**ಗೊಂಗಡಿ, ಗೊಂಗಟೆ, ಗೊಂಗೊಟೆ** (ನಾ). ೧. ಕಂಬಳಿ : ಕಂಗಾಣಿಸದ ಪಾರಿಯ ವಟ್ಟ ಕರ್ವಣ್ಣ ಗೊಂಗಡಿ ಮುಸುಕಿಟ್ಟುಕೊಂಡು ಅಂಗಡಿ ಸೊಡರ್ಗಟ್ಟ ದೇಗುಲದೆಡೆಯ ದುಸ್ಸಂಗದಂಪತಿಗಳೊಳ್ಪಿದರು (ಮೋಹತ. ೦೮-೨೩) : ಆತನನ್ನು ಒಳಕೋಣೆಯ ಒಂದು ಚಾಪೆಯ ಮೇಲೆ ಹಾಸಿದ ಗೊಂಗಡಿಯ ಮೇಲೆ ಮಲಗಿಸಿದಳು (ನಿಷ್ಕಾಮ. ೬೫) : ಅಂಗಡಿ ಮಾರಿ ಗೊಂಗಡಿ ಹೊದ್ದ (ಗಾದೆ). ೨. ಕಂಬಳಿ ಮೊದಲಾದಂವುಗಳಿಂದ ಮಾಡಿದ, ತಲೆ, ಬೆನ್ನುಗಳನ್ನು ಮುಚ್ಚುವಂತೆ (ಮಳೆಗಾಲದಲ್ಲಿ)ಧರಿಸಿಕೊಳ್ಳುವ ಗೊಪ್ಪೆ : ಕೊಡೆ ಮೇಣಗವುಡ ಗೊಂಗಡಿ ಬಹುರಮ್ಯವಡೆದಿರ್ದ ಸಕಲಾತಿದಳೆದು . . . ಎಡೆಯಾಡುತಿರ್ದರೂರುಗರು (ಮೋಹತ. ೪-೪೦) ; ದೃಷ್ಟಿ ಹೊಡೆದೀತೆಂದು ಬೆನ್ನುಭುಜಗಳನ್ನು ಮುಚ್ಚಿಕೊಂಡಿರುವ ಅಪ್ಪಟ ಉಣ್ಣೆಯ ಸಣ್ಣ ಗೊಂಗಡಿ (ಸುವಸು. ೫೨). ೩. ಚೆನ್ನಾಗಿರುವ ಮತ್ತು ಉದ್ದವಾಗಿರುವ ಹಣಸೆಹಣ್ಣು : (ಕ). **ಗೊಂಗಟೆ** : ೧. ಪುರಹರನು ತಾ ಮತ್ತೊಂದು ರೂಪನು ಧರಿಸಿದನು ಬಳಿಕ ಹರಕುಗೊಂಗಟೆ ಪಾದ ರಕ್ಷೆಯು ತೆಬದ ಹಲ್ಲಿನ ದೊಡ್ಡನಡುವಿನ ಭರದ ಗವದಿತನಾದ ಕೈಮೂಗು ಮೊಡಸು ದೇಹದಲಿ (ರೇವಕಾ. ೦-೦೬). ೨. ಬೇಗನೆ ತಾರೆ ಗೊಂಗಟೆ ಗೊರಗೆ ಕೋಲ್ತೊಗೆ ಹುಡಿಯಡಿಕೆಯಲೆಯಾ (ಅರ್ಜುನವಿ. ೩೦-೩೩). **ಗೊಂಗೊಟೆ**$_1$ : ೧. ಅಂಬಲಿಯನಿಕ್ಕಿದನು ಕೈ ತೊಳೆಯುಂದೊಡೆ ಗೊಂಗೊಟೆಯುಲೊರಸಿದಾ ಬೆಂಬಳಿಯ ಸೀಮೆಯನು ತೋಱಿದನಾತ ರೇವಣಗೆ (ರೇವಕಾ. ೧-೨೨).

[ ←ತೆಲು. ಗೊಂಗಡಿ, ಗೊಂಗಳಿ. / ಮರಾ. ಘೊಂಗಡ್, ಘೊಂಗಡೀ, ಘೊಂಗಡೇ ]

**ಗೊಂಗು** (ನಾ). ಒಂದು ಸ್ಥಳದ ಹೆಸರು: ಗುವಳಾಲಂ ಗೊಬ್ಬುಂ ವಾಣರಸ ಆಳೆ (ಎಕ. X, ಮುಳಬಾ. ೨೬೫-೦ : ಸು. 860). [ <ಕೊಂಗು$_1$ ]

**ಗೊಂಗೆ** (ನಾ). ಒಂದು ಬಗೆಯ ಪಕ್ಷಿ : (ಕ). [ ? ]

**ಗೊಂಗೊಟೆ** 'ಗೊಂಗಡಿ' ನೋ.

**ಗೊಂಚಲ್, ಗೊಂಚಲು** (ನಾ). ೧. ಕುಚ್ಚು ; ಗುಚ್ಛ ; ಮಂಜರಿ : "ಭೃಶಸಂಭೃತ ನವಮಂಜರಿ ಗೊಂಚಲ್" (ವಸ್ತುಕೋ. ೩೦-೮) : ಬಳಸಿದ ಚೆಂಬೊನ್ನ ಮಾಂಗಾಯ ಗೊಂಚಲ್ಗಳ . . . ನಡುವೆ (ಆದಿಪು. ೮-೦೫ ವ) : ಇನಿವಣ್ಗೊಂಚಲಂ ಕಂಡರಗಿಳಿಯಂತೆ (ಉದ್ಭಟ. ೦೦-೧೦೬ ವ). ೨. ಹೂವಿನ ಗುಚ್ಛ: "ತೊಡಂಬೆ, ತೊಡಬೆ . . . ಗೊಂಚಲ್, ಗುಚ್ಛಂ—ಈ ೬ ಪುಷ್ಪಮಂಜರಿ" (ಕರಸಾ. ೦೦-೧೯೬). ೩. ಸಮೂಹ ; ರಾಶಿ : ಮಿಂಚಿನ ಗೊಂಚಲೆನೆ ಸಂಚಳಿಸಿ ಪೊಳೆವ ರತ್ನಾಭರಣಂಗಳ ಪೊಳೆಪಂ ಕಂಡು (ಸುಕುಮಾ. ೬-೦೮ ವ) : ಕಂಡೆಡೆಗಳ ಗೊಂಚಲ್ಗಳಿಂ ದೇಸಿವಡೆದುಟ್ಟ ವ್ಯಾಘ್ರ ಚರ್ಮಾಂಚಲದೊಳ್ಪೆದೆ ಸಾರೂಪ್ಯದವರು . . . ಎಸೆದಿರ್ದರು (ಚಿಲಪು. ೨-೨೫). 'ಗೊಂಚಲಿಸು' ಪರಾ. **ಗೊಂಚಲು** : ೧. "ಗುಚ್ಛಕಃ, ಸ್ತಬಕಃ—ಈ ೨ ಗೊಂಚಲು" (ನಾಚಿರಾ. ೦೦೬) ; "ಗೊಂಚಲುಗಳಾ ವಲ್ಲರಿಯು ಮಂಜರಿಗಳಕ್ಕುಂ" (ಮಂಗರಾ. ೩೨-೪) : ತಳಿರ ನನೆಯುಲರ ಕಾಯ ತನಿವಣ್ಣು . . . ಗೊಂಚಲುಗಳುಮಂ (ಕಾದಂಬ. ೫೨೬): ಮುತ್ತುರತ್ನಗಳ ಗೊಂಚಲು . . . ಓಲಗಶಾಲೆಯ ಸುತ್ತಲೊಪ್ಪಿದುವು (ಕಂಸವಿ. ೮-೦೦) : ಮೇಜಿನ ಮೇಲೆ ನೀಲಿ ದ್ರಾಕ್ಷಿಹಣ್ಣಿನ ಗೊಂಚಲು ಇಡಲ್ಪಟ್ಟಿತ್ತು (ಮಹಾತ್ಯಾ. ೦೬). ೩. ನಕ್ಷತ್ರಗಳ ನಡುವೆಯೂ ಇರುವ ಗೊಂಚಲನ್ನು ಉದಾಹರಣೆಗಾಗಿ ತೆಗೆದುಕೊಳ್ಳೋಣ (ಜ್ಯೋತಿರ್ವಿ. ೬೪).

[ ದೇ.೫ ತುಳು. ಗೊಂಚಲ್ ]

**ಗೊಂಚಲಿಸು** (ಕ್ರಿ). ಗೊಂಚಲಾಗು ; ಒಟ್ಟಾಗು ; ಸಂದಣಿಸು : ಅಲರ್ವಲಗೊರ್ಗೊಂಚಲಂತಲುಗೆ ಮಿಂಚು ಒಕಂ ನಲಿವಂತೆ . . . ಗೊಂಚಲಿಸಿ [ಪಾಠಾಂ. ಗೊಂಚಲಿಸಿದಣ್ಣಿ ಸಿ, ಗೊಂದಣಿಸಿ] ಕೆಂದಳಿರೊಳ್ಗಳಿವಿಂಡು ಪಾಯ್ವುದಂ ಸಲಿಸೆ ಸುರೇಂದ್ರಚಾಪಲಕೆ ಬಂದುದು ಕಾರೆಳಮಾವಿನಂದದಿಂ (ಅರ್ಧನೇ. ೬-೪೨) : ಕಂಚಗಾಱರ ಹಸರದಿಂ ಕುಡಿವಿಂಚುಗಳು ಬಳೆಗಾಜ ವಸರದೆ ಗೊಂಚಲಿವ ಕರಿಮುಗಿಲುಗಳು (ಜೈಭಾ. ೨-೧೪).

[ ಗೊಂಚಲ್ + – ಇಸು$_3$ ]

**ಗೊಂಚಲು** 'ಗೊಂಚಲ್' ನೋ.

**ಗೊಂಚಲುಗುಂಡು** (ನಾ). ಗುಂಪುಗುಂಪಾಗಿ ಒಮ್ಮೆಲೆ ಸಿಡಿಯುವ ಗುಂಡು : "ಹಲವು ಸಣ್ಣಸಣ್ಣ ಗುಂಡುಗಳನ್ನು ಚೀಲ, ಮೊ. ಗಳಲ್ಲಿ ಒಟ್ಟಿಗೆ ಇಟ್ಟು ಫಿರಂಗಿಗೆ ಹಾಕಿ ಹೊಡೆಯುವುದರಿಂದ ಸುತ್ತಲೂ ಸಿಡಿಯುವ ಗೊಂಚಲುಗುಂಡು" (Grapeshot. ಇಂಕನಿ).

[ ಗೊಂಚಲು (<ಗೊಂಚಲ್) + ಗುಂಡು ]

**ಗೊಂಚಲುದೀಪ** (ನಾ). ದೀಪಗಳ ಗೊಂಚಲು ; ಒತ್ತೊತ್ತಾಗಿ ಅಳವಡಿಸಿದ ಅನೇಕ ದೀಪಗಳ ಸಮೂಹ : ಅನೇಕ ದೀಪಗಳುಳ್ಳ ಕವಲೊಡೆದ ತೂಗುದೀಪಾಧಾರ: ಗೊಂಚಲುದೀಪ (Chandelier. ಇಂಕನಿ).

[ ಗೊಂಚಲು (<ಗೊಂಚಲ್) + ದೀಪ$_2$ ]

**ಗೊಂಚಲ್ಮಿಂಚು** (ನಾ). ಕುಚ್ಚುಕುಚ್ಚಾಗಿರುವ ಮಿಂಚು ; ಮಿಂಚುಗಳ ಗೊಂಚಲು,–ಸಮೂಹ : ಅಂತೇಳ್ತಪಾರ್ಗಗಳ್ ಕಲಿಗಳ್ ಕರತಳದಿನೊಱೆ ಗಳೆದು ಕುರುಳ್ಚುವ ಕೈದುಗಳ ಬಳ್ವೆಳಗಿಂ ಗೊಂಚಲ್ಮಿಂಚುಗಳ್ಸಂ ಚಳಿಸಿದಂತೆಯುಂ (ರಾಜಶೇ. ೧೩-೬೬ ವ).

[ ಗೊಂಚಲ್ + ಮಿಂಚು$_3$ ]

**ಗೊಂಚಿ, ಗೊಂಚು, ಗೊಂಚೆ, ಗೊಚ್ಚೆ** (ನಾ). ೧. ಗೊಂಚಲು ; ಗುಚ್ಛ : "ಗೊಂಚಿ=ಗೊಂಚಲು" (ಅನಕೋ. ೫೦). ೨. ಗುಂಪು ; ಸಮೂಹ ; ರಾಶಿ ; "ಬಂಬಲ್ . . . ಗೊಂಚಿ . . . ಗೊಂದಣ (ಉಂದಲ್)–ಈ ೪೦ ಸಮೂಹಂ" (ಕರಸಾ. ೦೦-೨೨೨) : ಸೊಗಸ ಸೈಗಱೆವ ಪಾರಕರ ಗೊಂಚಿಗಳಿಂದೆ (ಚೀರಮ. ೧೦-೫೧): ತವ ನುಡಿಗೆ ಕಿವಿಗುಡೆ ಪುಡಿವಡೆದುದೆಲು ಗೊಂಚಿಯೆಮ್ಮೊಡಲ (ಸಂಚಾರಂ. ೧೬೬). **ಗೊಂಚು** : ೧. ಉರವಣಿಸಿ ಕೃತವರ್ಮನಂಬಿನ ಸರಳ ಸುರಿವುತ ಕಣಕಿ ಕೈಕೊಂಡರಿ ಭಟಾಗ್ರಣಿ ಮೆಚ್ಚಲೆಚ್ಚನು ಗೊಂಚಿನಂಬಿನಲಿ (ಕುಮಾರವ್ಯಾ. ೬೦ಇ. ಪರಿ ೨೯೨) : ಹಿತ್ತಲೊಳಗೆ ಮುತ್ತಿನ ಗಿಡ ತೋಱಿಸಿದ ಪಟಪಟಗೆ ಎಂಟುಎಂಟು ಗೊಂಚುಗೊಂಚು ಜೋಲುತಿರಲು ಕಡಿದುಕಡಿದು ರಾಶಿಹಾಕಿದ (ಪುರಂದ ೩-೦೦೬-೩). ೨. ವಿದ್ಯನಿಪುಣಗೊರ್ಗೊಂಚಿನಲಿ ಬೆಳಗರಿಯದಾಹವಗ್ಗೆಯಲು (ಜೈಭಾ. ೨೫೪-೫೨). **ಗೊಂಚೆ** : ೧. ಪೊಸಬನದೇಟ್ಗೆ ಕಾಮರ್ಗಿಲ ಪರ್ಬುಗೆ . . . ಮಿಂಚು ಚಂಪಕ ಪ್ರಸರದ ಗೊಂಚೆ (ಉದ್ಭಟ. ೯-೩೦) **ಗೊಚ್ಚೆ** : ೨. "ತಂಡಂ . . . ಗೊಚ್ಚೆವೊಟ್ಟಲ್ ಪಂಡಿತರಿಂ ಗಡಣವಂಗಡಂ

ಕಿಕ್ಕಿಂದಂ" (ಕವಿಕಾ. ೦೦೬).

[ < ಪ್ರಾ. ಗೊಂಜೀ, ಗೋಛಿಯ./ತುಳು. ಗೊಂಚಿ ]

**ಗೊಂಚಿಗಾರ, ಗೊಂಚುಗಾರ** (ನಾ). ಊರಿನ ಮುಖಂಡ,-ಮುಖ್ಯಸ್ಥ : ಊರ ಸಾಹುಕಾರ ಶಿವಪ್ಪಣ್ಣನವರು, ಮರದಯ್ಯನವರು, ಗೊಂಚಿಗಾರರು . . . ಎಲ್ಲರ ಎತ್ತುಗಳೂ ಕಾರುಹುಣ್ಣಿಮೆಯಲ್ಲಿ ಮೆರವಣಿಗೆ ಹೊರಡುತ್ತವೆ (ನದೀಪ. ೨೬). **ಗೊಂಚುಗಾರ:** ನಮುಗ ಜ್ವಾಳ, ನಮಣ ಕೊಡಿಸು ಗೊಂಚುಗಾರ (ಮಲೆ. ೧೨). [ ಗೊಂಚಿ + – ಕಾರ₁ ( < – ಕಾಱ) ]

**ಗೊಂಚು** 'ಗೊಂಚಿ' ನೋ.

**ಗೊಂಚುಗಾರ** 'ಗೊಂಚಿಗಾರ' ನೋ.

**ಗೊಂಚಿ** 'ಗೊಂಚಿ' ನೋ.

**ಗೊಂಜಿ** (ನಾ). ಒಂದು ಬಗೆಯ ಮರ : ಗೌಜಲ್‌ಮರ . . . ಗೊಂಜಿ . . . ಹಣ್ಣುಮತ್ತಿ (ದ್ವಾದಿ. ೧೮-೩೦೯). [ದೇ.॥ ತೆಲು. ಗೊಂಜಿ ]

**ಗೊಂಜು** 'ಗಂಜು₁' ನೋ.

**ಗೊಂಟಿಕೆ, ಗೆಂಟಗೆ, ಗೆಂಟಿಗೆ, ಗೆಂಟುಗೆ, ಗೌಂಟಿಕೆ, ಗೌಂಟಿಗೆ, ಗೌಟಿಕೆ** (ನಾ). (ಚೊಚ್ಚಲು ಬಸಿರಿಗೆ ಕಟ್ಟುವ) ರಕ್ಷೆ,-ತಾಯಿತ : ಅಂತು ಗರ್ಭ ಚಿಹ್ನಂ ಪ್ರಕಟಿಸಿ ವಿರಾಜಿಸುತ್ತಿರೆ ಸಪ್ತಮಾಸಕ್ಕೆ ಗೊಂಟಿಕೆ[ಪಾಠಾಂ. ಕಂಠಿಕೆ, ಗೌಂಟಿಕೆ]ಯಂ ಕಟ್ಟಿಸಿ ನವಮಾಸಂ ತೀವಿ ಬೆಸಲೆಯಪ್ಪುದುಂ (ಧರ್ಮಪ. ೧-೬೨ ವ). **ಗೆಂಟಗೆ:** ಕ್ಷಿತಿಪನ ಕಾಂತೆಗಂ ಸಚಿವಮಾನಿನಿ ಬಂದು . . . ಅಖಂಡಿಂಗಳೊಳ್ಕೆಹೋರ್ಜಿತಮುದಮುಣ್ಮೆ ಗೆಂಟಗೆಯನೊಪ್ಪಿರೆ ಮಾಡಿಸಿ ಪೋದಳರ್ಥಿಯಿಂ (ತ್ರಿಪುವಿ. ೧೬-೧೪೪). **ಗೆಂಟಿಗೆ:** 'ಗೆಂಟಿಗೆಗಟ್ಟು' ಪರಾ. **ಗೆಂಟುಗೆ:** ತನುಭವಲಾಭ ದೌಹದ ನಿಮಿತ್ತದ ಸಂಗತಿ ತಕ್ಕ ನೋಂಪಿ ಮುಂಗನಸು ಬಯಕೆ ಗೆಂಟುಗೆ[ಪಾಠಾಂ. ಗೌಂಟಿಗೆ]ದ್ವಗುತ್ತವ ಕಾರಣ ಗರ್ಭಚಿಹ್ನಂ (ಸೂಕ್ತಿಸು. ೭-೧). **ಗೌಂಟಿಕೆ:** ಮೇಲಿನ 'ಧರ್ಮಪ' ಪ್ರಯೋಗದ ಪಾಠಾಂತರವನ್ನು ನೋಡಿ. **ಗೌಂಟಿಗೆ:** ಮೇಲಿನ 'ಸೂಕ್ತಿಸು' ಪ್ರಯೋಗದ ಪಾಠಾಂತರವನ್ನು ನೋಡಿ. **ಗೌಟಿಕೆ:** 'ಗೌಟಿಕೆಗಟ್ಟು' ಪರಾ. [ ? ]

**ಗೊಂಟು, ಗೊಂಡಂ₁, ಗೊಟ್ಟು₃, ಗೋಂಟು, ಗೋಟು₁** (ನಾ). ೧. ದಿಕ್ಕು ; ದಿಶೆ : "ಗೊಂಟು, ದೆಸೆ–ಈ ೨ ದಿಕ್ಕು" (ಕಕಸಾ. ೯-೪೦) ; "ಗೊಂಟುಂ ದೆಸೆಯುಂ ಕನ್ನಡದ ದಿಕ್ಕುವೆಸರಹುದು" (ಕವಿಕಾ. ೩೯) ; ಹರ ಕುಳ್ಳಿರ್ದ ಗೊಂಟ[ಪಾಠಾಂ. ಕೊಪ್ಪ]ಗೊಂದುಜಿ ಸತ್ತದಲಿ ಮೆಱೆಯ ಲೊಂದು . . . ಇಂತು ಹದಿನೇಳು ಯೋಗಲಿಂಗಂಗಳಂ ನಿರ್ಮಿಸಿದನು (ಸಿದ್ಧರಾ. ೩-೪೪) ; ಪೊಡವ ಬೀರರ ಜಂಕೆಗೆ ಗೊಂಟನಾನೆಗಳ್ ಕೋಡುವಿನಂ (ಕಲ್ಯಾಣಾ. ೨೦೫) ; ಎಸೆವ ಕರ್ಬಿನ ತೋಂಟದ ಗೊಂಟನೊಳ್ (ರಾಮಾಶ್ವ. ೦೦೦-೨೦). ೨. ಮಂಟಿಲೆ ; ಕೋನ ; ಸಂದಿ : ಪೃಥ್ವಿಯ ಹಸುಂಬೆಯಾಗೆ ಅಷ್ಟಲೋಕ ಪಾಲಕರೇ ಗೊಂಟಾಗೆ ವಾಸುಗಿಯೇ ಬಳಸಾಗೆ (ಎಕ. VII, ಶಿಕಾರಿ. ೧೧೮-೩೦ : 1056) ; ದ್ರವ್ಯವ ಬಡ್ಡಿಯ ವ್ಯವಹಾರಕ್ಕೆ ಕೊಟ್ಟು ಮನೆಯ ಗೊಂಟನಲ್ಲಿ ಹೊಯ್ದುಕೊಂಡಿದ್ದನಾದರೆ ಅದು ಎನ್ನರ್ಥವಲ್ಲ ಅನರ್ಥವೆಂಬೆ (ಬಸಹ. ೩೯-೪೦) ; ಭಿಕ್ಷುವಂ ಪೊರ್ದಿ ಯಕ್ಷಂ ಮರುಳಾದಂ ವಿಕ್ಕವರ್ಗೊಂಟಿನೊಳೆ ಮುದುಡಿದರ್ (ಅನಂಪು. ೧-೦೧೨) ; ವಾದಿಗಂ . . . ತನ್ನ ಗೊಂಟಿನಲ್ಲಿ ಮನೆಯೊಳದಂ ಗಿರ್ವನ್ನೆಗಂ (ಪುಣ್ಯಾಸ್ರ. ೭-೪೪ ವ) ; ಆ ಮನೆಯಾ ಗೊಂಟನೊಳವಳ ಕದಹಿ (ಪ್ರಭುಲಿಂಲೀ. ೩-೦೦೬). **ಗೊಂಡು₁:** ೨. ಎಲ್ಲರಂ ತಣಪಿ ಕಲಬಲನುಮಂ ನೋಡುತುಂ ಅಲ್ಲಿ ಗೊಂಡಿ[ಪಾಠಾಂ. ಗೊಂಟಿ, ಗೋಂಟಿ]ನೊಳಿರ್ದ ಭಕ್ತನಂ ತಾಣುತುಂ (ಅನೀರ. ಹ. ೬೫-೨೫). **ಗೊಟ್ಟು₃:** ೨. ಅವನ ಅರ್ಜಿ ಗೊಟ್ಟಕ್ಕೆ ಬಿದ್ದಿದೆ (ಲೂ). **ಗೋಂಟು:** ೧. "ದೆಸೆ ಗೋಂ[ಪಾಠಾಂ. ಗೊಂ]ಟಿನಲ್ ದಿಕ್ಕುಕ್ಕು" (ಕಲ್ಯಾಕ್ಕ. ೧೫). ೨. "ಅಣಿಃ, ಅಶ್ರಿಃ, ಕೋಟಿಃ, ಅಶ್ರಃ, ಕೋಣಃ–ಈ ೫ ಗೋಂ[ಪಾಠಾಂ. ಗೋ]ಟು" (ಹಲಾಯು. ೦೨೦-೪೨) ; ನಾಲ್ಕುಂ ಗೋಂಟಿಂಗಂ ಲಿಂಗಮುಂ ತಪೋಧನರುಂ ಕವಿಲೆಯುಂ ಬೆರಸು ಮಾಡಿ ನಿಱಿಸಿದ ಕಿನ್ನರಿಗಲ್ಲ ಗುಡ್ಡೆ ನಾಲ್ಕು (ಸೌಇಇ. XI-ll, ೦೦೯-೩೪ ; 948) ; ಬಸದಿಯ ನೈರಿತ್ಯದ ಗೋಂಟಿನ್ನಂ (ಸೌಇಇ. XI-l, ೭೮-೩೨ ; 1045) ; ಶಿವಾಲಯದೊಳಯಿಕೆಯ್ಯಿಂದು ಅಲ್ಲಿ ಸಂಭ್ರಮಿವ ಶರಣರನೀಕ್ಷಿಸುತ್ತೊಂದು ಗೋಂಟಿನೊಳು ಕುಳ್ಳಿರ್ದು (ಅನೀರ. ದೇ. ೮೭-೯) ; ತಳಾಱಂ ಮನೆಯೊಳಗಂ ಪೊಕ್ಕು ಗೋಂಟಿನೊಳಿರ್ದವನಂ ತೆಗೆದುಕೊಂಡು ಪೋಗಿ (ಪುಣ್ಯಾಸ್ರ. ೭-೪೪ ವ). **ಗೋಟು₁ :** ೧. ಊರಡೆ ದಡದ ಬಡಗಣ ಮೂಡ್ಲ ಗೋಟನಲ್ಲಿ ಬ್ರಹ್ಮದೇವ ಪಟ್ಟವರ್ಧನರು ಕೊಟ್ಟ ತಂಕವಾಗಿಲ ಕುರುಕೆಯೊಂದು (ಸೌಇಇ. IX-l, ೩೩೩-೫೨ : 1216) ; ನಿನ್ನ ಪುಣ್ಯದ ತೋಟವನು ತಱಿದೊಟ್ಟಿ ನಿಮ್ಮೈವರನು ಯಮಪುರದ ಗೋಟಿನಲ್ಲಿ ಗುಱಿಮಾಡುವೆನು (ಕುಮಾವ್ಯಾ.ಗ. ೩-೦೩). ೨. "ಅಶ್ರಶ್ರಿಯೆನೆ ಗೋಟು" (ಮಂಗರಾ. ೦೩೦-೨೦) : ಮೊಱಿನ ಗೋಟಿಗೆ ಬರ್ಪ ಕಿಱುಕುಳ ದೈವಕ್ಕೆ ಕುಱಿಯನಿಕ್ಕಿಹೆವೆಂದು ಸಲಿನಲಿದಾಡುವರು (ಬಸವ. ೫೬೦) : ಸಿರಿ ಉರಿ ಮಾದೇವಿ ಮೊಱಿದ ಗೋಟಿಗೊರಗಾಯಿತ್ತು (ಧರ್ಮಮ್ಮ. ೪೦) ; ಮಾಯಾಮೋಹವೆಂಬ ಹಾಳುಗೇರಿಯ ಗೋಟನಲ್ಲಿ ಬಿದ್ದು ಸೂಕರನಂತಿಪ್ಪವರನೆಂತು ಭಕ್ತರೆಂಬೆ (ಸಿದ್ಧೇವ. ೬೨-೦೦೭) ; ಕುಟಿಲವೇಷದ ಗಿರಿಕಂ ಗೋಟಿನೊಳಿರಲ್ಕೆ ಕಂಡಂ ಧಕ್ಕಂ (ತ್ರಿಪುವಿ. ೯-೪೭). ೩. ಅಂಚು; ದಡಿ: ಒಟ್ಟ ಜರದ ಗೋಟು ಕಟ್ಟಿದ ಅಂಗಿ ಹಾಕಿದ ಸಾಹೇಬ-ಮುಂದ ಬಂದು (ಪತಾರ. ೦೦೨).

**ಗೊಂಟುಗೊಂಟು** (ದ್ವಿರುಕ್ತಿ): ನಿವಿರ್ದೇಱ ಏಱುವ ಪತಾಕೆ ವಿರಾಜಿಪ-ಗೊಂಟು ಗೊಂಟಿನೊಳ್ ಬಳಸಿದ ಕೊತ್ತಳಂ (೧೧ಕ. ೨-೭೯) : ಶಕ್ರಾಪ್ತರೆಲ್ಲಂ ಕೊರಗುತ್ತುಂ ಗೊಂಟುಗೊಂಟಂ ಪುಗುತಿರೆ (ಕುಸುಮಾ. ೮-೦೪೫).

[ ದೇ.॥ ತುಳು. ಕೋಂಟು ; ನಾಯ್ಕ್ರಿ. ಕೋಂಟ./ಹಿಂ. ಮರಾ. ಗೋಟ್ ]

**ಗೊಂಟುಗೊಳ್** (ಕ್ರಿ). ೧. ಮೂಲೆಯನ್ನು ಸೇರು: ದಿನದೊಳ್ ಮೂಡಿದನಾಯ್ತು ಭಾನುವಿನ ತೇಜಂ ಗೊಂಟುಗೊಂಡಿಯ್ದಿದಂತೆನಸುಂ ವಹ್ನಿಯ ತೇಜಮೊಟ್ಟದವಿಯೊಳ್ ಮುಟ್ಟಿತ್ತು (ಕುಸುಮಾ. ೩-೬). ೨. ಅಂಚನ್ನು ಹೊಂದು ; (ಅಲಂಕಾರದ) ದಡಿಯನ್ನು ಹೊಂದು : ಅವಂ ಪೊಱಗುಮಾಡಿ ರುಗ್ಮಿ ಕುಳಿತ್ತೈಳಮಂ ಗೆಲ್ದು ರುಗ್ಮಿ ವಿಸ್ಫುರಿತಮಪ್ಪ ಕೋಂಟಿ ಸಲೆ ಗೊಂಟುಗೊಂಡಿರ್ದುದೆಂಬ ವರ್ಣನೆಗೆ ತಕ್ಕುದೇ ದಲೆ[ನಲಂ] ತದಂ ಸುತ್ತಿ ದುಗ್ಧವಾರ್ಧಿಗೆಣೆಯಾದಗಟಿ ಸೊಗಯಿಸಿರ್ಕು ಮಟ್ಟಾಂಬುವಿಂ (ಶಾಂತಿಪು. ೯-೦೪೫). [ ಗೊಂಟು + ಕೊಳ್₁ ]

**ಗೊಂಟುಗೊಳಿಸು** (ಕ್ರಿ). ಮೂಲೆಗೆ ಸೇರಿಸು : ತಲೆ ವಿಕ್ಕಿಯ್ದು ತಗುಳ್ದು ಗೊಂಟುಗೊಳಿಸುತ್ತುಗ್ರಾಂಧ್ಯಮಂ ಕೈರವಾವಳಿಯೊಳ್ ಪೊಕ್ಕು ವಿಕಾಸಲಕ್ಷ್ಮಿಗೆಡೆಮಾಡುತ್ತ . . . ತಗ್ಗದಿರ್ಗಳತ್ತಂ ಪರ್ಬಿದತ್ತುರ್ವಿಯೊಳ್ (ಕುಸುಮಾ. ೪-೪೮). [ ಗೊಂಟುಗೊಳ್ + – ಇಸು₁ ]

**ಗೊಂಟುವೊಗು** (ಕ್ರಿ). ಮೂಲೆಸೇರು ; ಮೂಲೆಪಾಲಾಗು ; ಮೂಲೆಗುಂಪಾಗು : ಪೆಸರ್ವೆತ್ತ ಹಸ್ತಿನಾಪುರಕಸವಂ ಕಾಮಾಗಿ ನಾಣ್ಣ ಸುರಪುರಿ ಪೋಯ್ದಾಗಸದತ್ತಲ್ ಫಣ[ಪತಿ]ಪುರಿ ರಸೆಗಿಳಿದುದು ಗೊಂಟುವೊಕ್ಕುದಳಕಾನಗರಂ (ಶಾಂತೀಶ್ವ. ೦೩-೦೭೨). [ ಗೊಂಟು + ಪೊಗು ]

**ಗೊಂಡ₁** 'ಗಾಮುಂಡ' ನೋ.

**ಗೊಂಡ₂** 'ಗೋಂಡ' ನೋ.

**ಗೊಂಡ₃** (ನಾ). [ಸಂಗೀತ] ಹಾಡುವುದರಲ್ಲಿ ಒಂದು ವಿಶಿಷ್ಟವಾದ ರೀತಿ,-ಕ್ರಮ : ಗತಿ ಸಂಗತಿವಡೆಯ ಗಮಕಂ ಗಾರವಂಬಡೆಯ ಗಹಗಹಿಕೆ ಗೊಂಡಂ ಗೊಂಡಿ ಚಡಂ ಬಾಹಟಂ ಲಾಲಂಗಿ . . . ಬೆಡಂಗುವಡೆಯ ಪಾಡುತ್ತಿರೆಯುಂ (ಶಾಂತೀಶ್ವ. ೦೬-೬೭ ವ). [ ? ]

**ಗೊಂಡರಸ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಗೊಣ್ಡರಸರ್ ಪ್ರಿಥಿವೀರಾಜ್ಯಂಗೆಯೆ (ಎಕ. VII, ಶಿಕಾರಿ. ೪೩ (b)-೫೨ : ಸು. 890 ?). [ <ಗೋವಿಂದರಸ ? ]

**ಗೊಂಡಲು** (ನಾ). ಒಂದು ಬಗೆಯ ಭೂಮಿ: ಕಲಿದೇವನಿಗೆ ಬಿಟ್ಟ ಧರ್ಮ್ಮವೂರಿಂ ಪಡುವಲು × ಸಿ ಹುಣಸೆಯ ಕೆಯಿ ಮತ್ತರು ೨ . . . [ಗೌ]ಡಗಟೆಯ ಕೆಳಗಣ ಗೊಂಡಲು ಎರಡು ಸಹಿತ (ಸೌಇಇ. XX, ೨೨೦-೩೮ : 1283). [ ? ]

**ಗೊಂಡವನ** (ನಾ).=ಗೊಂಡಾರಣ್ಯ ೨: ಕಡಲ ಮೇರೆದ್ದಿತ್ತು ಕೂರ್ಮದಂತೀ ನೆಲವು ಗೊಂಡವನ ಪ್ರಾಚೀನ ಭೂವಿಭಾಗ (ಅರಳು. ೩೦೬-೭). [ ಗೊಂಡ$_2$ (<ಗೋಂಡ) + ವನ ]

**ಗೊಂಡಾರಣ್ಯ** (ನಾ). ೧. ವಿಂಧ್ಯಾದ್ರಿಯ ಬಳಿಯಿರುವ ಅರಣ್ಯ. ೨. ದಟ್ಟವಾದ ಅರಣ್ಯ: ಗೊಂಡಾರಣ್ಯಪ್ರಾಂತ್ಯದಲ್ಲಿ ಒಬ್ಬ ಬ್ರಾಹ್ಮಣನಿದ್ದನು (ಸೀತಚಿಂ. XI, ೧೮): ಹದಿನಾಲ್ಕು ವರ್ಷಗಳ ತನ್ನ ವನವಾಸದ ಅವಧಿಯಲ್ಲಿ ರಾಮನು ಕೆಲಕಾಲ ಪಂಚವಟಿಯ ಗೊಂಡಾರಣ್ಯದಲ್ಲಿ ವಾಸಮಾಡಿದನು (ರೂಢಿ). [ ಗೊಂಡ2 (<ಗೋಂಡ) + ಅರಣ್ಯ ]

**ಗೊಂಡಾಳೆ** (ನಾ). (ಉಕ) ಅಕ್ಕಿಯಲ್ಲಿ ಹುಳುವಿನಿಂದ ಉಂಟಾಗುವ ಜಡೆ,-ಗಂಟು: ಸಂಡಾಗಿ ಮಾಡ್ಯಾಳ ಗೊಂಡಾಳೆಂತಾ ಚೆಂಡಾಲವ್ವ ಬೀಗುತಿ (ರೋಕಗೀ. ೫೦). [ ←ಮರಾ. ಗುಂಡಾಳೆ ]

**ಗೊಂಡಾಳೆಗಟ್ಟು** (ಕ್ರಿ). ಅಕ್ಕಿಯಲ್ಲಿ ಹುಳುವಿನಿಂದ ಜಡೆಗಟ್ಟು,-ಗಂಟುಕಟ್ಟು: ಅಕ್ಕಿ ಗೊಂಡಾಳೆಗಟ್ಟಿದೆ (ರೂಢಿ). [ ಗೊಂಡಾಳೆ + ಕಟ್ಟು$_1$ ]

**ಗೊಂಡಿ$_1$** (ನಾ). [ಸಂಗೀತ] ಹಾಡುವುದರಲ್ಲಿ ಒಂದು ಕ್ರಮ, - ರೀತಿ: ಗತಿ ಸಂಗತಿವಡೆಯೆ ಗಮಕಂ ಗಾರವಂಬಡೆಯೆ ಗಹಿಗಹಿಕೆ ಗೊಂಡಂ ಗೊಂಡಿ ಜಡಂ ಬಾಹಟಂ ಲಾಲಂಗಿ . . . ಬೆಡಂಗುವಡೆಯೆ ಪಾಡುತ್ತಿರೆಯುಂ (ಶಾಂತೀಶ್ವ. ೧೬-೭೭ ವ). [ ? ]

**ಗೊಂಡಿ$_2$** 'ಕೊಂಡೆ$_4$' ನೋ.

**ಗೊಂಡು$_1$** 'ಗೊಂಟಂ' ನೋ.

**ಗೊಂಡು$_2$** 'ಕೊಂಡೆ$_4$' ನೋ.

**ಗೊಂಡೆ** 'ಕೊಂಡೆ$_4$' ನೋ.

**ಗೊಂಡೆಕುಚ್ಚು** (ನಾ). ಗೊಂಚಲಾಗಿರುವ ಕುಚ್ಚು: ನೆಕ್ಲುದೋವ್ ಬಾಗಿಲು ದಾಟಿದ ಕೂಡಲೇ ಗೊಂಡೆಕುಚ್ಚಿನಂಥ ಕಂಠಾಭರಣ ಧರಿಸಿದ್ದ ಹುಡುಗಿಯೊಬ್ಬಳು ಅವನಿಗೆ ಅಡ್ಡವಾದಳು (ಪುನರು. ೨೭೫): ಎತ್ತುಗಳಿಗೆ ಗೊಂಡೆಕುಚ್ಚು ಹಾಕಿದ್ದಾರೆ (ರೂಢಿ). [ಗೊಂಡೆ (<ಕೊಂಡೆ$_4$)+ಕುಚ್ಚು$_4$]

**ಗೊಂಡೆಚೌರಿ** (ನಾ). ತುದಿಯಲ್ಲಿ ಗೊಂಡೆಯಿಂದ ಕೂಡಿದ ಚವರಿ: ಹೆಂಡತಿ ನೋಡಿ ಹಲ್ಲನೆ ತೆರವೆ ಆಕೆ ಗೊಂಡೆಚೌರಿಯ ನೋಡಿ ಬೆರವೇ ಕಂಡಕಂಡಾ ವಿಷಯಕ್ಕೆ ಮನಜರಿವೆ (ಚಿದಾವ. ೩೦-೨). [ ಗೊಂಡೆ (<ಕೊಂಡೆ$_4$) + ಚೌರಿ$_1$ (<ಚವರಿ) ]

**ಗೊಂಡೆಜವರಹುಲ್ಲು** (ನಾ). ಒಂದು ಬಗೆಯ ಹುಲ್ಲು: (ಮೃಶಿಗಿ. ೨೦-೩೭೦). [ ಗೊಂಡೆಜವರ$_0$ + ಹುಲ್ಲು (<ಪುಲ್) ]

**ಗೊಂಡೆಯ** (ನಾ). ೧. ಗೊಂಚಲು; ಕುಚ್ಚು: ಕೆಲದ ಚವರದ ಗೊಂಡೆಯ ದೊಳೆಸೆವ ಜವ್ವನದ ಶಬರಿಯರು . . . ಹುಲ್ಲೆಗಳನೆಸುತಿರ್ದರು (ಹರಿಕಾ. ೫-೪೭): ಕಾವನ ಪೂವಿನ ಗೊಂಡೆಯುಗಳನೊರ್ವ ಭಾವಕಿ ವಂಚಿಸಿ ತಂದು ಪೂವಿನಂಗಡಿಯೊಳಿರಿಸಿ ಮಾಜುವೊಲು ಪೊಸಸೇವಂತಿಯರಲ ಮಾಜುವಳು (ಅಂಜಕ. ೩-೭೯): ಕಿಜುವುಲಿಯುಗುರ್ಗಳ್ ಗೊಂಡೆಯದುಡಿ ವಾರಂ ಭೂಮಂಡಲಪತಿಯಾತ್ಮಜಂಗೆ ರಂಜಿಸುತಿರ್ಕುಂ (ರಕಳು. ೨-೭೩): ಕಠಾರಿಯ ಹೊಳೆವ ಗೊಂಡೆಯ ಮೆಜಿಯೆ ಗುಡಂದವನು ಕೈಕೊಂಡ (ಶುಪ್ಪಾವಿ. ೬-೪೯). ೨. ಒಂದು ಬಗೆಯ ದುಂಡಗಿರುವ ಗುಚ್ಛದಂತಹ ಆಭರಣ: ನಿಜಿವಿಡಿದುಟ್ಟ ದೂಪಟದ ಸೀರೆಯ ಮೇಲೆ ಮೆಜೆದುದು ಹೊಪ್ಪ ಗೊಂಡೆಯವು (ಭರತ. ೪೦-೫೯). ೩. ರಾಶಿ; ಸಮೂಹ: (೬). [ <ಕೊಂಡೆ$_4$ ]

**ಗೊಂಡೆಹುಳು** (ನಾ). " ಸಣ್ಣ ಸಸ್ಯಗಳನ್ನು ಹಾಳುಮಾಡುವ, ಚಿಪ್ಪಿಲ್ಲದ ಒಂದು ಬಗೆಯ ಬಸವನ ಹುಳು " (Slug. ಇಂಕನಿ). [ ಗೊಂಡೆ$_0$ + ಹುಳು2 (<ಪುೞು$_1$) ]

**ಗೊಂಡೆಹೂ** (ನಾ). ದುಂಡಾದ ಒಂದು ಬಗೆಯ ಗುಚ್ಛದಂತಹ ಕೆಂಪು ಹೂವು: ಚಂಡುಹೂ, ತುಂಬಿಹೂ, ಗೊಂಡೆಹೂ . . . ಇವುಗಳ ಸಂತೆ ನೆರೆಯುತು (ಶಾಸಮೂ. ೯೦). [ ಗೊಂಡೆ (<ಕೊಂಡೆ$_4$) + ಹೂ$_2$ (<ಪೂ$_1$) ]

**ಗೊಂತು** 'ಗೊತ್ತು' ನೋ.

**ಗೊಂತುಕಂಬ**(ನಾ). ದನಗಳ ಹಕ್ಕೆಯಲ್ಲಿ ದನಗಳನ್ನು ಕಟ್ಟಲು ಗೊಂತಿಗೆ ಅಳವಡಿಸಿರುವ ಕಂಬ: ಗೊಂತಿನಲ್ಲಿ ದನಕಟ್ಟಲು ಹಾಕಿರುವ (ಜೋಡಿ) ನಿಲುಗಂಬ: ಗೊಂತುಕಂಬ (Stanchion. ಇಂಕನಿ). [ ಗೊಂತು (<ಗೊತ್ತು) + ಕಂಬ$_1$ ]

**ಗೊಂತುಗಾರ** 'ಗೊತ್ತುಗಾರ' ನೋ.

**ಗೊಂತುಗೊಳ್** (ಕ್ರಿ). ಸ್ಥಳಮಾಡಿಕೊಳ್ಳು; ನೆಲೆಗೊಳ್ಳು; ನೆಲಸು: ಇಂತೂರೆದ ಸದ್ಬೋಧೆ ಮನದೊಳು ಗೊಂತುಗೊಂಡುದು (ಶಂಕದಾ. ೪-೨). [ ಗೊಂತು (<ಗೊತ್ತು) + ಕೊಳ್$_1$ ]

**ಗೊಂತುಮಾಡು** 'ಗೊತ್ತುಮಾಡು' ನೋ.

**ಗೊಂದಣ** 'ಗೊಂದಳ' ನೋ.

**ಗೊಂದಣಂಗುಣಿ** (ಕ್ರಿ). ಸಾಮೂಹಿಕ ನೃತ್ಯವನ್ನು ಮಾಡು; ಮೇಳ ನೃತ್ಯವಾಡು: ಅಳವಿಗಜಿದುತ್ಸವದೆ ಗೊಂದಣಂಗುಣಿವ ಗಣಿಕೆಯರ ಪದಪ್ರಚಾರಕ್ಕೆ ಬೆರ್ಚಿ (ಚಂದ್ರಪ್ರ. ೧೨-೩೫ ವ). [ ಗೊಂದಣ (<ಗೊಂದಳ) + ಕುಣಿ$_1$ ]

**ಗೊಂದಣಂಗೂಡು** (ಕ್ರಿ). ಗುಂಪುಗೂಡು; ಸಮೂಹವಾಗು: ಬಾವುಲಿಯ ಬಲ್ಲಾಳ್ಗಳ ಮುಂದೆತ್ತಿದ ಪರಿಪರಿಯ ಪತಾಕಾವಳಿಯ ಸೂಳಜಿದು ಮುಸಗಿ ದುವ್ವಾಳಿಸುವ ಗೋವಳಗಟ್ಟಿಗೆಯ ಗೊಂದಣಂಗೂಡಿ ಗಗನಂ ಕವಿದಂತೆ . . . ಭೂಚಕ್ರಮುಂ ತೆಕ್ಕನೆ ತೀವಿದ ಪದಾತಿಬಲದೊಳಂ (೧೦ಕ. ೭-೫೫ ವ). [ ಗೊಂದಣ (<ಗೊಂದಳ) + ಕೂಡು$_1$ ]

**ಗೊಂದಣಂಗೊಳ್, ಗೊಂದಣಗೊಳ್, ಗೊಂದಣೆಗೊಳ್, ಗೊಂದಲಗೊಳ್ಳು** (ಕ್ರಿ). ೧.=ಗೊಂದಣಂಗೂಡು: ಒಂದೆಡೆಯೊಳು ಗೊಂದಣಂಗೊಂಡು ಜನಗಳು ಕೇಳುವಂತೆ ಮನಸಂದೂರ್ವನೊಂದು ಕಥೆಯಂ ಪೇಳ್ಪುದನು ಕೇಳಿ (ಸಮ್ಯಕ್ತ್ವ. ೨-೪೬). **ಗೊಂದಣಗೊಳ್:** ೨. ತಬ್ಬಿಬ್ಬಾಗು; ಗಲಿಬಿಲಿಗೊಳ್ಳು: ಎಂಬತ್ತುನಾಲ್ಕುಲಕ್ಷಯೋನಿಮುಖ ಜೀವಿಗಳಿಗೆ ಎಂಬತ್ತುನಾಲ್ಕುಲಕ್ಷಾರಾಧನೆ ಒಂದೊಂದಜಾರಾಧನೆಯ ನೊಂದೊಂದಜಿಯದೆ ಗೊಂದಣಗೊಂಡು . . . ಲಯವಾದುದೆಲ್ಲ (ಅದಮ. ೨೮೯-೧೬೦೦). **ಗೊಂದಣೆಗೊಳ್:** ೧. ಮಲ್ಲಿಗೆಯ ಮಕರಂದದೊಡವೆರೆದ ಪರಾಗಮೆಂಬ ಪೊಸಕೆಸರ್ವತ್ತೆ ಕರ್ಚಿ ಕಳೆಯಲೆಂದು ಸಂದಣಿಸಿ ಗೊಂದಣೆ[ಪಾ ಅ ೦. ಣ]ಗೊಂಡೈದುತರವಿಂಪಾಕರದರವಿಂದಬೃಂದಮಕರಂದರಸದೊಳ್ಮುಳುಂಗಿ (ರಾಜಶೇ. ೨-೭೬ವ). **ಗೊಂದಲಗೊಳ್ಳು:** ೨. ಆ ಗೋಡೆಯ ಮರೆಯಲ್ಲಿ ನಮ್ಮ ತಯಾರಿ ಮಾಡಿಕೊಂಡು, ಏರಿಹೋಗಿ ದಾರಿಗಾಣದ ಗೊಂದಲಗೊಂಡ ವೈರಿಯುನ್ನು ಗೆಲ್ಲುವದು (ಅಪಿನಾ. ೧೧೯) : ಮನಸ್ಸೆಲ್ಲಾ ಗೊಂದಲಗೊಂಡಿತ್ತು (ಕುಕುಕು. ೧೧೦). [ ಗೊಂದಣ (<ಗೊಂದಳ) + ಕೊಳ್$_1$ ]

**ಗೊಂದಣಂಮಾಡು** (ಕ್ರಿ). ಸಾಮೂಹಿಕ ನರ್ತನವನ್ನು ಮಾಡು; ಮೇಳ ನರ್ತನವನ್ನು ಮಾಡು: ಅಂತು ದೇವೇಂದ್ರಕರಸರೋಜಾಕರದೊಳ್ ಸಮುತ್ಫುಲ್ಲಮುಖಪದ್ಮಂಗಳಿಂ ಪದ್ಮಿನಿಗಳೆನಿಸಿ ಸುರೇಂದ್ರತ್ತಾರಹಾರ ಮುಕ್ತಾಫಳ ಪ್ರತಿಬಿಂಬಿತ ತನುಗಳಿಂ ವಿದ್ಯಾದೇವತೆಗಳೆನಿಸಿ ದಿವಿಜಸೌಂದರಿಯರ್ ಗೊಂದಣಂಮಾಡುವಲ್ಲಿ (ಆದಿಪು. ೭-೨೨ ವ).

[ ಗೊಂದಣ (<ಗೊಂದಳ) + ಮಾಡು$_1$ ]

**ಗೊಂದಣಗೊಳ್** 'ಗೊಂದಣಂಗೊಳ್' ನೋ.

**ಗೊಂದಣದುಂಬಿ** (ನಾ). ಗುಂಪುಗುಂಪಾಗಿರುವ ದುಂಬಿ; ಹಿಂಡು ಹಿಂಡಾಗಿರುವ ದುಂಬಿ: ಎಕ್ಕಲದುಂಬಿಯಿಂ ಜವಳಿದುಂಬಿಯಿನಟ್ಟುವ ಮಾಲೆದುಂಬಿಯಿಂದಿಕ್ಕುವ ಕುಂಭದಂತೆಸೆವ ಗೊಂದಣದುಂಬಿಯಿನಾವ ಮೆಯ್ಯೊಳಂ ಮೊಕ್ಕಳಮೆಂಬಿನಂ ಕವಿವ ಗಾವರದುಂಬಿಯಿನಾದ ಗಾವರಂ ತೆಕ್ಕನೆ ತೀವಿ ಕೂಡೆ ಬಗೆಗೊಂಡುದು ಕೂಡೆ ಬನಂ ಬಸಂತದೊಳ್(ಸೂಕ್ತಿಸು. ೬೦-೧೦); ಗೊಂದಣ [ಪಾಠಾಂ. ಳ]ದುಂಬಿ ತುಳಿಯದ ಬಂಧೂಕಂ ಹಚ್ಚದ ಹಬ್ಬ ಗಿಗ ತುಂಡಿಸದಾಲದ ವಣ್ಣೆಳವೆಯನುಳಿಯದ ಚೆಂದಳಿರೆನೆಯಿನಿದುಟ ಸೊಗಯಿಸಿತಾ ನೃಪಸುತೆಗೆ (ಜಯಕಾ. ೩-೪೧).

[ ಗೊಂದಣ (<ಗೊಂದಳ) + ತುಂಬಿ$_1$ ]

**ಗೊಂದಣನುಡಿ** (ನಾ). ಹಲವುಮಾತು; ಬಹಳಮಾತು: ಬಂದರು ಜಯ ಜಯಯೆನುತಾಗ ದಿಕ್ಕುದಿಕ್ಕಿಂದ ನರೋರಗಸುರರು ಗೊಂದಣನುಡಿಯೇನು ಗಂಧಕುಟಿಗಳು ಚೆಲ್ವಿಂದೆರಡಾದುವಿರ್ವರಿಗೆ (ಭರತ. ೮೦-೯೮).

[ ಗೊಂದಣ (<ಗೊಂದಳ) + ನುಡಿ$_2$ ]

**ಗೊಂದಣನೃತ್ಯ** (ನಾ). ಸಾಮೂಹಿಕ ನೃತ್ಯ; ಮೇಳನೃತ್ಯ: ಬಾಳು ಗೊಂದಣನೃತ್ಯ ಉಸಿರುಸಿರು ಕೃತಕೃತ್ಯ ಕನ್ನಡದ ಮಗು ಮಾಣ ಮಾತ್ರ ಭೃತ್ಯ (ಅರಳು. ೩೦೮-೧೯). [ ಗೊಂದಣ (<ಗೊಂದಳ) + ನೃತ್ಯ ]

**ಗೊಂದಣವೆಕ್ಕಣ** 'ಗೊಂದಳವೆಕ್ಕಣ' ನೋ.

**ಗೊಂದಣಬೆಳಗು** (ನಾ). ಕಾಂತಿಯ ಸಮೂಹ: ಅಂತು ಕಿಟ್ಟಿ ಬಾಳ್ಗಳ ಗೊಂದಣಬೆಳಗುಗಳ ಬಳಗಂಗಳೊಳಗಸವಳಯಮೆಲ್ಲಂ ಕುವಳಯಿತಮಾಗಿ ಬಂದು ತಾಗುವುದುಂ (ಶಾಂತಿಪು. ೯-೨೭ ವ).

[ ಗೊಂದಣ (<ಗೊಂದಳ) + ಬೆಳಗು$_2$ ]

**ಗೊಂದಣವೆಕ್ಕಣ** 'ಗೊಂದಳವೆಕ್ಕಣ' ನೋ.

**ಗೊಂದಣಾಸ್ಥಾನ** (ನಾ). ಗೊಂದಣನೃತ್ಯವು ನಡೆಯುವ ಆಸ್ಥಾನದಲ್ಲಿ ರಂಪವನಂ: ಚೇರಮನೃಪಂ ಬಹಳ ಗೊಂದಣಾ [ಪಾಠಾಂ. ಣ] ಸ್ಥಾನನಾಗಿ ಸೌಂದರಪೆರುಮಾಳೆಯನೋಲೈಸುತ್ತುಮಿರೆಯಿರೆ (ನಂಬಿರ. ೧೮-೧೧೩); ಸರಸ ಗಾಯಕ ಭಾವ ಚಿತ್ರಕ ಪುಣ್ಯ ಪಾಟ[ರ]ಕ ನವ್ಯನರ್ತನ ನರ್ತಕಿಪ್ರಯುತಂ ಬಹಳ ಗೊಂದಣಾಸ್ಥಾನನಾಗಿ ಕೆಂಪಡರ್ದ ಕಂಗಳಿಂ . . . ಪೆರ್ಮಾಡಿ ರಾಯನುಂ ಜೊಮ್ಮಣ್ಣನಂ ಕರೆಯಲು (ಜೊಮ್ಮರ. ೧೧೧-೨೦).

[ ಗೊಂದಣ (<ಗೊಂದಳ) + ಆಸ್ಥಾನ ]

**ಗೊಂದಣಿ** 'ಗೊಂದಳ' ನೋ.

**ಗೊಂದಣಿಗೊಳ್** 'ಗೊಂದಣಂಗೊಳ್' ನೋ.

**ಗೊಂದಣಿಸು** 'ಗೊಂದಳಿಸು' ನೋ.

**ಗೊಂದಲ** 'ಗೊಂದಳ' ನೋ.

**ಗೊಂದಲಗೆಡವು** 'ಗೊಂದಲಗೆಡಹು' ನೋ.

**ಗೊಂದಲಗೆಡಹು, ಗೊಂದಲಗೆಡವು** (ಕ್ರಿ). ಗೊಂದಲದಲ್ಲಿ ಬೀಳಿಸು; ಪೇಚಿನಲ್ಲಿ ಸಿಕ್ಕಿಸು; ಪೇಚಾಡಿಸು: ಎಂದಿಗೂ ಅತಿ ಶಾಂತಚಿತ್ತನಾಗಿ ಪ್ರವಾಸದ ಸಿದ್ಧತೆಯನ್ನು ಮಾಡುವ ತನಗೆ ಹೀಗೇಕೆ ಒಂದೊಂದೇ ವಿಚಾರ . . . ಬಂದು ಗೊಂದಲಗೆಡಹುತ್ತಿದೆ? (ಹೊಸಕ್ಷಿ. ೧೬೬). ಗೊಂದಲಗೆಡವು: ಪರಜಾತಿಯ ಹುಡುಗನೊಡನೆ ತಮ್ಮ ಮಗಳು ಲಗ್ನವಾಗಲು ಹೊರಟಿರುವ ಸಂಗತಿಯು ಬಲವಾಗಿ ನೋಯಿಸಿತು . . . ಗೊಂದಲಗೆಡವಿತು (ಅಭೋಳಿ. ೧೧೦).

[ ಗೊಂದಲ (<ಗೊಂದಳ) + ಕೆಡಹು (<ಕೆಡವು) ]

**ಗೊಂದಲಗೆಡಿಸು** (ಕ್ರಿ).=ಗೊಂದಲಗೆಡಹು: ಸಾವಿರ ಘಟನೆಗಳು, ಸಾವಿರ ಮುಖಗಳು . . . ಅಸಂಬದ್ಧವಾಗಿ ನೆರೆದು ಅವಳನ್ನು ಗೊಂದಲಗೆಡಿಸಿಬಿಡುತ್ತಿದ್ದವು (ಹೊಸಕ್ಷಿ. ೨೦೨).

[ ಗೊಂದಲಗೆಡು + -ಇಸು$_3$ ]

**ಗೊಂದಲಗೆಡು** (ಕ್ರಿ) ತಬ್ಬಿಬ್ಬಾಗಂ; ಗಲಿಬಿಲಿ ಹೊಂದು: ಈ ಸಾರಿಯ ಪಯಣದ ಸಿದ್ಧತೆಯಲ್ಲಿ ಅವನು ಸಾಕಷ್ಟು ಗೊಂದಲಗೆಡುತ್ತಾನೆ (ಹೊಸಕ್ಷಿ. ೨೮೯); ನಿದ್ದೆಯಿಂದ ಎಚ್ಚೆತ್ತ ಕಣ್ಣು ಈ ನೋಟದಿಂದ ಗೊಂದಲಗೆಡುವುದು ಸ್ವಾಭಾವಿಕ (ಗ್ರಾಮಾಯ. ೧). [ ಗೊಂದಲ (<ಗೊಂದಳ) + ಕೆಡು$_1$ ]

**ಗೊಂದಲಗೊಳ್ಳು** 'ಗೊಂದಣಗೊಳ್' ನೋ.

**ಗೊಂದಲಬಡಕ** (ನಾ). ಗಲಿಬಿಲಿಗೊಂಡವನು: ಸಮಾನಕರ್ತವ್ಯಗಳ ಕರೆ ಒಮ್ಮೆಲೆ ಕೇಳಬರಲು ಧರ್ಮಸಂಕಟದಲ್ಲಿ ಸಿಲುಕಿದ ಎಂಥ ಗಟ್ಟಿಗರೂ ಒಂದು ಕ್ಷಣವಾದರೂ ಗೊಂದಲಬಡಕರೂ ಎಬಡರೂ ಆಗುತ್ತಾರೆ (ಕಸಾರ. ೨೫೭). [ ಗೊಂದಲ (<ಗೊಂದಳ) + ಬಡಕ (<ಬಡಿಕ) ]

**ಗೊಂದಲವೇಳು** (ಕ್ರಿ). ಗಲಿಬಿಲಿಯುಂಟಾಗು; ಗಲಭೆಯಾಗು: ಕೂಡಲೇ ಆ ಸೈನ್ಯದಲ್ಲಿ ಗೊಂದಲವೆದ್ದಿತು (ಮಡಸ. ೮೫).

[ ಗೊಂದಲ (<ಗೊಂದಳ) + ಏಳು$_1$ (<ಏಟ್$_1$) ]

**ಗೊಂದಲಹಾಕು** (ಕ್ರಿ). ೧. ಗಲಾಟೆಮಾಡು; ಗಲಭೆ ಎಬ್ಬಿಸು: ತಾವು ಹೆದರಬೇಡಿರಿ, ನಾವೇನು ಗೊಂದಲಹಾಕುವುದಿಲ್ಲ (ಕುರಿಹಿಂ. ೧೧). ೨. ಗೊಂದಲ ಸಮಾರಂಭದಲ್ಲಿ ಅಂಬಾಭವಾನಿಯ ನಾಮ ಸಂಕೀರ್ತನೆಯನ್ನು ಮಾಡು: ಅಲ್ಲಿ ಗೊಂದಲಿಗರು 'ಜಗದಂಬೆ' 'ಅಂಬಾಭವಾನೀ' ಎಂದು 'ಗೊಂದಲ' ಹಾಕುತ್ತಿದ್ದರು (ಸಿವಭಾ. ೧೨).

[ ಗೊಂದಲ (<ಗೊಂದಳ) + ಹಾಕು (<ಪಾಯ್ಸು$_1$) ]

**ಗೊಂದಲಹಾಡು** (ನಾ). ಗೊಂದಲಿಗರು ಹಾಡುವ ಹಾಡು; ಜಾತ್ರೆ ಮುಂತಾದ ಕಡೆಗಳಲ್ಲಿ ಪೌರಾಣಿಕ ಕಥೆಗಳನ್ನೊಳಗೊಂಡ, ಅಂಬಾಭವಾನಿಯನ್ನು ಸ್ತುತಿಸುವ ಹಾಡು: ಕರ್ನಾಟಕದಲ್ಲಿ ಗೊಂದಲಹಾಡುಗಳನ್ನು ಹಾಡುವ ಗೊಂದಲಿಗರು ಈ ತರದ ಜನರನ್ನು ಹೋಲಬಹುದು (ಕನ್ನಲಾ. V ಪ್ರಸ್ತಾವನೆ).

[ ಗೊಂದಲ (<ಗೊಂದಳ) + ಹಾಡು$_1$ (<ಪಾಡ್ಕು$_2$) ]

**ಗೊಂದಲಿಗ** (ನಾ). ಗೊಂದಲಸಮಾರಂಭದಲ್ಲಿ ಅಂಬಾಭವಾನಿಯ ನಾಮ ಸಂಕೀರ್ತನೆಯನ್ನು ಹೇಳುವವನು: ಅಲ್ಲಿ ಗೊಂದಲಿಗರು 'ಜಗದಂಬೆ' 'ಅಂಬಾಭವಾನೀ' ಎಂದು 'ಗೊಂದಲ' ಹಾಕುತ್ತಿದ್ದರು (ಸಿವಭಾ. ೧೨); ನಮ್ಮಲ್ಲಿ ವಿಶೇಷ ಸಮಾರಂಭಗಳಲ್ಲಿ 'ಹರಕೆಯ ಗೊಂದಲ'ಗಳನ್ನುಹಾಕಿಸುವ ರೂಢಿಯುಂಟು. ಈ ಗೊಂದಲಿಗರೂ ಕೀರ್ತನಕಾರರೇ (ಕಥಕ. ೩); ಗೊಂದಲಿಗರು.–ಇವರೂ ಮಹಾರಾಷ್ಟ್ರರೇ . . . ಸಂಬಾಳ, ಚೌಡಕಿಗಳನ್ನು ಬಾರಿಸುತ್ತ ಭವಾನಿಯ ಹಾಡುಗಳನ್ನು ಹಾಡುತ್ತ ಭಿಕ್ಷೆಬೇಡುವರು (ಕಭಾಗ. ೨೧೦); ಹಾವಾಡಿಗರು, ಗೊಂದಲಿಗರು, ಡೊಂಬರು . . . ಎಲ್ಲರೂ ಸಂದಣಿಸಿ ಒಂದಾಗಿ ಇರುವವರ ತಾಳ್ಮೆಯ ಪರೀಕ್ಷೆಯನು ಮಾಡುವರೋ? (ಅರಳು. ೩೫೯-೦೧); ಗೊಂದಲಿಗರು ಮನೆಯ ಮುಂದೆ ನಿಂತು ಹಾಡಹತ್ತಿದ್ದಾರೆ (ಮುಂಜುಕ. ೮): ದೋಗಿ–ಗೊಂದಲಿಗರ ಕಥೆ ದಾಸರ ಆಟ, ಕಿಳ್ಳಿಕೇತರ ಆಟ, ರಾಧಾನ ಆಟ ಇವೇ ಜನರಿಗೆ ಪ್ರೀತಿಯ ಮನೋರಂಜಕ ಸಾಧನಗಳಾಗಿದ್ದುವು (ಅನಜೀ. ೩೦).

[ ಗೊಂದಲ (<ಗೊಂದಳ) + -ಇಗ ]

**ಗೊಂದಲಿಸು** 'ಗೊಂದಳಿಸು' ನೋ.

**ಗೊಂದವಾಡಿ** (ನಾ). ಒಂದು ಸ್ಥಳದ ಹೆಸರು ; P ಈಗಿನ ರಾಯದುರ್ಗ ತಾಲ್ಲೂಕಿನ ಗೋವಿಂದವಾಡಿ : ಗೊಂದವಾಡಿಯ ಪೂಜವೀಡಿನಲ್ ಸುಖದಿಂ ರಾಜ್ಯಂಗೆಯ್ಯುತ್ತಿರೆ (ಎಇ. IV, ೨೦೩-೭ : 1072).

[ ಗೊಂದ್$_0$ + ವಾಡಿ$_1$ (<ಪಾಡಿ$_1$) ]

**ಗೊಂದಳ, ಗೊಂದಣ, ಗೊಂದಣೆ, ಗೊಂದಲ, ಗೋಂಧಳ** (ನಾ). ೧. ಗುಂಪು; ಹಿಂಡು; ಮೊತ್ತ : ಬೆಳಗುವ ಕೈದೀವಿಗೆಗಳ ಬೆಳಗುಂ ತರತರದಿನೊಗೆವ ತಾರಗೆಗಳ ಗೊಂದಳಮುಂ (ಆದಿಪು. ೧೨-೩) : ಅನ್ನೀ ಸಾಲೆಯು ಕಂಬದ ಗೊಂದಳಮಂ ನಿಜಿಸುವನ್ನು ಕಂಬದ ರೂಪಿಂ ಪಿನ್ನದಿನನ್ನಿಜಿಸುವವೋಲೊನ್ದೆರಡಂ ತಾನೆ ಪಿಡಿದು ನಿಜಿಸಿದನಾತಂ (ಎಇ. IV, ೬೪-೧೪ : 946): ಇಂದ್ರಸ್ತ್ರೀಯರಾನಂದದಿಂ ಗೊಂದಳದ ಕುಣಿದು ಲೀಲಾನೃತ್ಯದಿಂ (ಆಜಿಪು. ೫-೪೩) : ಗೊಂದಳದಿಂದೆ ನರ್ತಿಸುವ ಶೇಷಜನಂಗಳ ಭಂಗಿ ಲೀಲೆಯಿಂ ಮುಂದಿಡೆ ಭಕ್ತಿಬೋಧಿತಮನಂ ಜಿನರಾಜನ ಮುಂದೆ ತಾನುಮಾನಂದದ ನರ್ತನಕ್ಕೆ ಬಗೆದಂದು ಪುರಂದರನಂದು . . . ನಾಟಕಪೇಟಕಮಂ ನಿಮಿರ್ಚಿದಂ (ವರ್ಧಪು. ೧೪-೫೭) : ಪೆರ್ವುಲಿಯ ಪಿಂಡಿನಂತೆಯುಂ ಕಾಡೆಮ್ಮೆಪೋರಿಯ ಹಾರಿಯಂತೆಯುಂ ಪಂದಿಯ ಗೊಂದಳದಂತೆಯುಂ (ಪುಷ್ಪಪು. ೩-೧೨೭ ವ) : ಅರಮನೆಗೆ ಪೋಪ ನೃಪರಂದಳದ ಗೊಂದಳ [ಪಾಠಾಂ. ಣ]ದ . . . ಪಾಳೆಯಂ ಕಣ್ಗೆಸೆದುದು (ಜಲಪು. ೪೨-೧೫). ೨. ಗಲಿಬಿಲಿ; ಸಿಕ್ಕು ; ಗೋಜು : ಅಂತಿಂತೆಂಬುದಕ್ಕೆ ಉಭಯದ ಗೊಂದಳದವನಲ್ಲ (ಮನುಗುಂ. ೭): ಹೆಚ್ಚಿದ ಪಟಹ ಪಣಹ ಮೃದಂಗ ಡಿಂಡಿಮದ ಉಲಿಯ ತೇಜಿಯ ಹೇಷಿತದ ವೆಗ್ಗಳೆಯ ಕರಿಗಳ ಬೃಂಹಿತದ ಗೊಂದಳದ ಕಳಗಬರ್ಣಿಯನ್ನು ಕೌರವಸೈನ್ಯಶರಧಿಯಲಿ (ಕುಮಾವ್ಯಾ. ೯-೨೭). ೩. (ಉಕ) ಒಂದು ಬಗೆಯ ಧಾರ್ಮಿಕವಿಧಿ ; P ಮದುವೆಯ ನಂತರ ಅಂಬಾಭವಾನಿಯನ್ನು ಕುರಿತು ನಡೆಸುವ ನರ್ತನ, ಸಾಮೂಹಿಕ ಭಜನೆ, ಪೂಜೆ ಮೊದಲಾದ ಸಮಾರಂಭ; (ಗೊಂದಲ ಸಮಾರಂಭದಲ್ಲಿ) ಗೊಂದಲಿಗರು ಹೇಳುವ ದೇವಿಯ ನಾಮಸಂಕೀರ್ತನೆ. 'ಗೊಂದಲಪೂಜೆ' ಪರಾ. ೪. ಸಾಮೂಹಿಕ ನೃತ್ಯ ; ಮೇಳನೃತ್ಯ : ಹೀಗೆ ಗೊಂದಳ ಎಂದರೆ ಮಂಡಲನೃತ್ಯವೆಂದು ಸ್ಪಷ್ಟವಾಗಿತಿಳಿವುದರಿಂದ Chorus ಎಂಬುದಕ್ಕೆಗೊಂದಳದವರು ಎನ್ನುವುದೇ ನನಗೆ ನೇರೆನಿಸಿತು (ಹಿಪ್ಪರ. VI ಮುನ್ನುಡಿ). **ಗೊಂದಣ:** ೧. "ಗೊಂದಣ ಮೆನೆ ನಿಕರಕ್ಕೆ ನಾಮಂ" (ಶಕುನಿ. ೪೭) : ಕೆಂದಳಿರ ಗೊಂದಣದಿಂ ಸಹಕಾರ ಭೂರುಹಾವಳಿ ಕಡು ರಮ್ಯಮಾಗೆ . . . ಬಂದನೊಜಲ್ಪು ವಸಂತವಲ್ಲಭಂ (ಧರ್ಮಾಮೃ. ೧೧-೧೧೨) : ಗಿಳಿಗಳ ಪಿಂಡು ತುಂಬಿಗಳ ಗೊಂದಣಮುಂಚೆ ಗಳೊಡ್ಡರಲ್ಲರಲ್ಗಳ ರಜದುರ್ವು ಬಂದೆಳಸಿ ಸಂದಣಿಸುತ್ತಿರೆ (ಚಂದ್ರಪು. ೧೧-೪೬); ಗೊಂದಣದ ದಿವಿಜರರ್ಚಿಪರಲ್ಲಿ ಶೂಲಿಯಂ (ಲಕಿಜಂ. ೨೭-೬೯): ಶಬಳೋಣನ ವೊಗ್ಗರವಿದೆ ಹುಲ್ಲೆಗಳ ಒಗ್ಗಿದೆ ಪಂದಿಯ ಗೊಂದಣವಿದ ಯೆಂದು ಮುಗ್ಗಿ ಕವಿದರು ಶಬರರು (ಕುರಾಸಾಂ. ೨೭-೭೦): ನಿನ್ನಂಗದಲ್ಲಿ ಗುರು ಕೊಟ್ಟ ಲಿಂಗವೆಂಬುದೊಂದು ಕುಜುಹು ಇರುತಿರಲಿಕೆ ಆ ನಿಜಲಿಂಗದ ಸಂಗವನರಿಯದೆ ಸಂದಿಗೊಂದಿಯಲ್ಲಿ ಹೊಕ್ಕಿಹೆನೆಂಬ ಗೊಂದಣವೇತಕ್ಕೆ (ಮರೀವ. ೨೭೩-೧೩). ೪. ಕಿನ್ನರಿಯ ಗೊಂದಣದಿಂಚರಂ (ರೇವಣ. ೩೦-೪೫): ಮರ ಕಿತ್ತಿವೆ ಬುಡ-ತಳ ಹಾದಿ ಉದುಗೆ ಝಳಝಳ ಕಡಲು ಕುಣಿಯೆ ಗೊಂದಣ ತೆರೆ-ಮುರಿ-ನೊರೆ ಥಂಥಣ (ಹೃದಸ. ೩೭-೧೦) : ಗೊಂದಣದಲ್ಲಿ ನಾನಿಕ್ಕಿದ ಹೆಜ್ಜೆ . . . ಅದಕ್ಕೊಂದು ಸಾಮಾನ್ಯತೆಯಿದೆ (ಸಾಹಿವಿ. ೪ ಮುನ್ನುಡಿ). 'ಗೊಂದಣಮಾಡು' ಪರಾ. **ಗೊಂದಣೆ:** "ಬಂಬಲ್, ತುಱುಗಲ್ . . . ಗೊಂದಣೆ(ಉಂಡಲ್) – ಈ ೪೦ ಸಮೂಹಂ" (ಶಶಸಾ. ೧೧-೨೨೨) : "ಗೊಂದಣೆಯೆನಲ್ ಗೊಂಚೆಯನೆ ಸಲ್ಲುಗು ಸಮೂಹದೊಳ್" (ಶಶಾ. ೩೪) : ಈಶನಂ ಪೂಜೆಗೆಯ್ದು ಮಣಿವ ಜಲಕನ್ಯಕಾ ಜಲಪುರುಷರ ಗೊಂದಣೆಯುಂ . . . ರಂಜಿಸೆ (ವೃಷವಿ. ೧೦-೪೨ ವ). **ಗೊಂದಲ :** ೩. ಬೊಂಗಳುಡನ ಮಗ ಕಲ್ಲಪ್ಪನ ಕೂಡಿಜಾದು × × × ಹೆಂಡಿರ ಕುಲಕೆ × × ಗೊಂದಲಮಾಡಿಕೊಂಡಲ್ಲಿ (ಮೈಆರಿ. ೧೯೭೫, ೮೨-೧೦ : 15ನೆಯ ೫೫) : ಗೊಂದಲದೊಳು ನೊಂದು ಬೇನೆಯನುಂಡನು ಬಂಧನದೊಳು ಬಳಲಿಹೆನು (ಇಂಚಾಪ. ೧೦೦-೯೯): ಅಂದು ಮುಂಬಯಿ ನಿಲ್ದಾಣದಲ್ಲಿ ಗೊಂದಲವೇ ಗೊಂದಲ (ಪ್ರದಸ. ೭೩). 'ಗೊಂದಲಹಾಕು' ಪರಾ. ೫. "ಒಂದು ವಿನೋದಾವಳಿ ಆಟ ; ಗೊಂದಲಿಗರಾಟ" (ಜಾನಕೋ. ೫೦). **ಗೋಂಧಳ:** ೩. ಜನರಿಗೆ ಉಪದೇಶವನ್ನು ಮಾಡುವುದಾದರೆ 'ಗೋಂಧಳ ಕೀರ್ತನ'ದಂತಹ ವಸ್ತುಗಳೇ ಇಲ್ಲ. ವರ್ತಮಾನ ಪತ್ರಗಳು ಇವುಗಳ ಮುಂದೆ ಏನು ಮಾಡಲಾಪವು (ಸಿವಛಾ. ೧೩).

**ಗೊಂದಲದಲ್ಲಿ ಬೀಳು** = ತೊಡಕಿನಲ್ಲಿ ಸಿಕ್ಕಿಕೊಳ್ಳು ; ಗಲಿಬಿಲಿಗೊಳಗಾಗು : ಈ ಪ್ರಶ್ನೆಯ ತಲೆಬುಡ ಗೊತ್ತಾಗದೆ ಗೊಂದಲದಲ್ಲಿ ಬಿದ್ದ ಪೋನಪ್ಪನಾಯ್ಕರು . . . ಕೇಳಿದರು (ಮೂರುದಾ. ೨೮೦). **ಗೊಂದಲದವ**= ಅಂಬಾಭವಾನಿಯ ಪ್ರೀತಿಗಾಗಿ ಗೊಂದಲವೆಂಬ ಧಾರ್ಮಿಕ ವಿಧಿಯನ್ನು ನಡೆಸುವವನು: ಗೊಂದಲದವರು ಬಂದು ಚೌಟಗಿ ಬಾರಿಸಿಕೊಂಡು 'ಜೀಜೀ' ಅಂತ ಹೇಳ್ತಾರಲ್ಲ, ಕೇಳಿದೀಯೇನು? (ಚಲುಮು. ೮೩). **ಗೊಂದಳಚತುರ್ಮುಖ** = ಸಭೆಗಳಲ್ಲಿ ಮುಖ್ಯನಾದವನು ; ಒಂದು ಬಿರುದು : ಶೌಚಾಂಜನೇಯಂ ಗೊನ್ದಳಚತುರ್ಮ್ಮುಖಂ ಸಮರಮುಖ ಷಣ್ಮುಖಂ . . . ಅರಸುಗೆಯ್ಯುತ್ತಮಿರೆ (ಎಇ. XVI, ೮೪-೦೨ : 1067).

[ ?./ತುಳು. ಗೋಂದಳ, ಗೋಂದೋಳು ; ತೆಲು. ಕೊಂದಲ./ ಮರಾ. ಗೋಂದಳಾ, ಗೊಂಧಳ./ಪ್ರಾ. ಗುಂದಲ ಗೋಂದಲ ]

**ಗೊಂದಳಪೂಜೆ** (ನಾ). ತುಳುನಾಡಿನ ವಿಶೇಷವಾಗಿ ಮರಾಟಿಗರೆಂಬ ಜನಾಂಗದಲ್ಲಿ ಪ್ರಚಾರದಲ್ಲಿರುವ ಒಂದು ಬಗೆಯ ದುರ್ಗಾರಾಧನೆ ; ಒಳಮನೆಯಲ್ಲಿ ದೇವಿಯ ವಿಗ್ರಹವನ್ನಿಟ್ಟು ಅಲಂಕರಿಸಿ, ಹೊರ ಅಂಗಳದಲ್ಲಿ ಉರಿಯುತ್ತಿರುವ ದೀಪದ ಸುತ್ತಲು ಕೈಯಲ್ಲಿ ದೀವಟಿಗೆಯನ್ನು ಹಿಡಿದುಕೊಂಡು ದೇವಿಯ ಸ್ತೋತ್ರಗಳನ್ನು ಹಾಡುತ್ತ ಕುಣಿಯುತ್ತ ಭಕ್ತರು ಆಚರಿಸುವ ಒಂದು ವಿಶಿಷ್ಟರೀತಿಯ ದುರ್ಗಾಪೂಜೆ : ನಮ್ಮ ತುಳುನಾಡಿನಲ್ಲಿ ಹರಕೆಗಾಗಿಯೂ ಬಳಕೆಗಾಗಿಯೂ ಗೊಂದಳಪೂಜೆ ಎಂದು ಮಾಡಿಸುವುದುಂಟು (ಹಿಪ್ಪರ. VI ಮುನ್ನುಡಿ).

[ ಗೊಂದಳ + ಪೂಜೆ$_2$ ]

**ಗೊಂದಳಪೆಕ್ಕಣ, ಗೊಂದಣಪೆಕ್ಕಣ, ಗೊಂದಣವೆಕ್ಕಣ** (ನಾ). ಗುಂಪಾಗಿ ಮಾಡುವ ನೃತ್ಯ ಮೊದಲಾದ ಪ್ರದರ್ಶನ : ದೇಸಿವಿಲಾಸಮಂ ಪಡೆಯೆ ಗೊಂದಳಪೆಕ್ಕಣಮಾಗಳಾ ನೃಪಾವಾಸದೊಳಾಡಿದತ್ತು (ಪಂರಾಮಾ. ೩-೧೦೭). **ಗೊಂದಣಪೆಕ್ಕಣ:** ಗೊಂದಣಪೆಕ್ಕಣ ಕುಣಿವರು; ಗುಡಿಕಟ್ಟುವರು (ಸಾಹಿಸಂ. ೩೭). **ಗೊಂದಣವೆಕ್ಕಣ :** ವಿವಿಧಲಯಂಗಳಿಂ ಕುಣಿವ ಗೊಂದಣ [ಪಾಠಾಂ. ಳ] ವೆಕ್ಕಣಮಾಗಳಂತೆ ಕಟ್ಟುವ ಗುಡಿ ಪೊಯ್ವ ಬದ್ದವಣಂ . . . ಮೆಱೆದುವುತ್ಸವಮಂ ಜಿನಜನ್ಮಗೇಹದೊಳ್ (ಮಲ್ಲಿಪು. ೧೨-೪): ಓಲಗ ಸಾಲೆಯ ಸಂಗೀತ ಸದನರಂಗದೊಳಚ್ಚರಸಿಯರ ಗೊಂದಣ ವೆಕ್ಕಣಮ ತಕ್ಕನೆ ತೀವೆ (ಅನಂಪು. ೫-೫ ವ) : ಗೊಂದಣವೆಕ್ಕಣದಮರೀವೃಂದಂಗಳ ಬಳಿಯ ನಿಡಿಯ ಕಣ್ಗಳ ಬೆಳ್ಪಿಂ ಕೆಂದಳದ ಕೆಂಪುಮಾಂತುವು ಚಂದನ ಸಿಂಧೂರರಸದ ಪೊಸ ಕಾಪ್ಪುರಮುಂ (ಪುಷ್ಪಪು. ೦೨-೪೩).

[ ಗೊಂದಳ + ಪೆಕ್ಕಣ ]

**ಗೊಂದಳಿಸು, ಗೊಂದಣಿಸು, ಗೊಂದಲಿಸು** (ಕ್ರಿ). ೧. ಗುಂಪುಗೂಡು : ಒಟ್ಟಾಗು ; ದಟ್ಟೈಸು : ಅಂತು ದೇವರ್ ದೇವನೋಲಗಮಾದ ತಂತವಮ್ಯಾದರದಿಂ ಮಾಲೆಗಟ್ಟಿ ದುಗ್ಧವಾರಿಪೂರಿತ ಕನಕಕಲಶಂಗಳಂ ತಂದು

ಗೊಂದಳಿ [ಪಾಠಾಂ. ಡೆ] ಸಿ ಸಂದಣಿಸಿ ನೀಡಿದಾಗಳ್ (ಆದಿಪು. ೭-೮೪ ವ); ತೊಳಪ ದಂತಮರೀಚಿಸಂತತಿ ಪರ್ವಿ ಬಳ್ವಳ ನೀಳ್ದು ಗೊಂದಳಿಸಿ . . . ಸಭಾಂತರಾಳಮನೆಲ್ಲಮಂ ಬೆಳಗೆ ಭೂವಳಯಾಧಿಪಂ ನುಡಿಗುಂ (ಕಾವ್ಯಾವ. ೮೭೯); ಬಾಳಕಂ ನಿಮ್ಮೊಳಾರ ಕಯ್ಗೆ ನೆಗೆದು ನಗುತ್ತುಂ ಬಂದನವಳ್ಗೆ ಕುಡುವನೆಂಬುದುಮರಸಿಯರೆಲ್ಲಮೆಮಗೆತಮಗೆಂದು ಗೊಂದಳಿಸಿ ಕರಕಿಸಲಯಂಗಳನಡಸಿ ನೀಡುವುದುಂ (ಅರ್ಧನೇ. ೪-೯೬ ವ); ತರಂತರದಿಂದನಿಸಿತ್ತು ಕಣ್ಗೆ ಗೊಂದಳಿಸಿ ಬರುತ್ತುಮಿರ್ಪ ಖಚರೀಜನವಾಳಿ ನಭೋಂತರಾಳದೊಳ್ (ವರ್ಧಪು. ೫-೨೭). ೨. ಬಹಳವಾಗು; ಹೆಚ್ಚಾಗು; ಅತಿಶಯವಾಗಂ: ಪಸರಿಸಿ ಪರ್ಬ್ಬಿ ಗೊಂದಳಿಸಿ ನಿಂದ ತಮಸ್ತಮಮಂ ತೆರಳ್ಚಿ ಬಂದೊಸೆದಿನನೇಱುವಂತುದಯವರ್ಬ್ಬತವಂ (ಎಕ. VII, ಶಿಕಾರಿ. ೦೨೫-೦೪; 1019). ಗೊಂದಣಿಸು: ೧. ಅತಿರಥ ಸಮರಥ ಮಹಾರಥಾರ್ಧರಥರೊಂದೆವಿಂದೆಯಲ್ಲದೊಂದೊಂದೊರ್ವರೊಳ್ ಸಂಧಿಸಿ ಗೊಂದಣಿಸಿ ನಿಂದಾಗಳ್ (ಪಂಪಭಾ. ೧೦-೧೪೭ ವ); ತಮ್ಮನಿಬರೊಂದಾಗಿ ಗೊಂದಣಿಸಿ ನಿಂದ ಪಾಂಡುನಂದನರುಮಂ . . . ಕಂಡು (ಗದಾಯು. ೭-೩೬ ವ); ಮುಂದಣ ಸಾಮಂತರಾಜಪುತ್ರೋತ್ಕರದಿಂ ಗೊಂದಣಿಸಿ ಪರ್ವಿ ರಣದೊಳ್ ನಿಂದಿರ್ಪವನೇಣವಾಹನಂ ಪವಮಾನಂ (ಗಿರಿಶ. ೬-೬೨); ಗೊಂದಣಿಸಿ ನಡೆವ ಮದಕರಿಗಳಿಂ ಹರಿಗಳಿಂ . . . ಪಡೆ ಪಡಪಾದುದು (ಚಲಪು. ೪೮-೨೩). ೨. "ಗೊಂದಣಿಸು–ಸಮೂಹೇ, ಬಾಹುಲ್ಯೇಚ" (ಶಮದಾ). ೩. ಗದ್ದಲವೆಬ್ಬಿಸು; "ಗಲಾಟೆಮಾಡು" (ಪ್ರಥಮ್ರ). ಗೊಂದಲಿಸು: ೪. ಕಕ್ಕಾಬಿಕ್ಕಿಯಾಗು; ಗಲಿಬಿಲಿಗೊಳ್ಳು: 'ಪ್ರವಾಸ' ಎಂದರೆ ಎಂದೂ ಗೊಂದಲಿಸದ ತಾನು ಇಂದು ಇಷ್ಟೇಕೆ ಗೊಂದಲಿಸುತ್ತಿದ್ದೇನೆ (ಹೊಸಕ್ಷಿ. ೧೬೬); ನಿರ್ಮಲೆಯ ಈ ಅನಪೇಕ್ಷಿತ ಸಿಟ್ಟಿನ ಅರ್ಥವಾಗದೇ ಗೊಂದಲಿಸಿದ ವಾಸುದೇವನಿಂದ ಕ್ಷಣಕಾಲ ಮಾತೇ ಹೊರಡಲಿಲ್ಲ (ಮೂರುದಾ. ೨೯೦). [ಗೊಂದಳ + – ಇಸು$_3$]

**ಗೊಂದಿ, ಗೊಂದು, ಗೊಂದೆ$_2$** (ನಾ). ಇಡಕು; ಪಂಜಾಲೆ; ಸಂದು: ಸಿದ್ಧರಾಮಾ ಎಂದು . . . ಅಬ್ಬಿಯೊಳು ಬೆಳಗೆಯ್ಯ ಸಂದಿಯೊಳು ಗೊಂದಿಯೊಳು ಗಬ್ಬರಿಸಿ ತಮತಮಗೆ ಚೀಱ ಕರೆದರು (ಸಿದ್ಧರಾ. ೨-೪೮); ಗೊಂದಿಯೊಳಿಹ ಜನಬಿಂಬಕೆ ಮಂದರದಂದದೆ ಜನಭವನವನೂ ರುಂದ್ರತರದೆ ಸವೆಸಿದ ವಾದಿವಿದ್ಯಾನಂದಯೋಗಿಗೆ ನಮಿಸುವೆನೂ (ಅಂಜಿತ.೧-೫೦); ಪುರದ ಬಾಹ್ಯದಲೊಂದು ದೇವಾಲಯದ ಮಧ್ಯದ ಗೊಂದಿಯಲಿ ತಾ ದ್ರುಪದನೊಱಗಿರೆ (ಸಂಭಪ. ೦೭-೭೯); ದುರ್ಜನರ ಮಂದಿಯುಂ ದೆಸೆದೆಸೆಯ ಗೊಂದಿಯಂ ಪೊಗಿಸಿ ಬಲು ಬಂದಿಯಂ ಮಾಡಿ ಜಯಪೊಂದಿರ್ದ . . . ನಂದಿಯುಂ ಬಲಗೊಂಬೆನು (ಚೀರಮು. ೦-೭). ಗೊಂದು: ಗಿರಿಯ ಸಂದುಗುಹೆಯ ಗೊಂದುಗಳೊಳಗೆ ಅರಸಿಯಿಂದುಮುಖಿಯನಂದುಗಾಣದೆ . . . ಮರುಗುವಾಗ (ಹನುಮ. ೦೦೭); ಸಂದಿನೊಳ್ ಪುಡುಕುತುಂ, ಗೊಂದಿನೊಳ್ ನೋಡುತುಂ (ರಾಮಾಶ್ವ. ೦೦೦-೮). ಗೊಂದೆ$_2$: ಬಂದು ಮಾಮರದಡಿಗಳೊಳು ತಮಾಳದ ಗೊಂ [ಪಾಠಾಂ. ಮಂ] ದೆಗಳೊಳಗಣಿಸಿದಳು (ಕುಂದಾಸಾಂ. ೩೩-೪೭). [ದೇ.॥ ತಮಿ. ಕೊನ್ರು; ತೆಲು. ಗೊಂದಿ.]

**ಗೊಂದು** 'ಗೊಂದಿ' ನೋ.

**ಗೊಂದೆ$_1$** (ನಾ). ೧. ಎತ್ತು; ಬಸವ; ವೃಷಭ; ನಂದಿ: "ಗೊಂದೆಯ ವೃಷಭಂ" (ಕವಿಕಂ. ೨೩); "ಗೊಂದೆಯೆನೆ ಶಂಭುವಾಹನಮಕ್ಕು" (ಕಕರ. ೩೩); ಪೆಟವರದೊಂದು ಗೊಂದೆ [ಪಾಠಾಂ. ಗೋಡೆ] ಮೊದಲಾಗೆ ಪಶುತ್ವನಿಬದ್ಧ ರೂಪಮಂ ತಳೆದ ದುರಾತ್ಮರಿಂದು ಪೆಸರ್ಗೊಂಡವರ್ಗೋಲಗ ವೀಯದೆಂದೊಡೆ (ಸಮಪ. ೧೦-೧೮೮); ಆ ಬಸವಂ ಪಾಯ್ದೊಡೆ ಕೆಸಱೊಳ್ ಬಸವಳಿದಿರ್ದೊಂದು ಗೊಂದೆ ಪೊಂದಿತ್ತಾಗಳ್ (ಚಂದ್ರಪು. ೨-೨೯). ೨. ದನ; ಕಾಲ್ನಡೆ; ಪಶು: ಗೊಂದೆಗಳಂ ಕಾಯದ ಗೋವಿಂದಂ ಕಂಡುಗೊರಲನಲ್ಲದ ಮಾದೇವಂ . . . ಎಂಬಂದದಿನತಿ ವಿಭ್ರಾಜಿಸಿದಂ ರಾಜಪ್ರಭುರಾಜಸುತಂ (ಜಯಶಾ. ೨-೬೮); ಹಿಂಡಿಂದೊಡೆದೋಡಿ ಪೋಪ ಗೊಂದೆಯನೊಂದ ಕಂಡು (ಕುರಾಸಾಂ. ೩೦-೯೦); ಅಂಕಕೈದಿದವರು ಗೊಂದೆಗಳ ಕಾಯ್ವರೋ ಮೇಣಾಸು ನಿಮಗೆ ತಕ್ಕುದ್ಧಿಯುಸುರುವ ಸೀಕ್ಷಕರ್ತ ಫಡಫಡೆಯೆಂದು ಕಿಡ್ಡಿದಂ ಶಶಿಜಾಲ ಬಿರುಮಳೆಯನವನೀಶ ಕೋಮಲ ಲತಾಂಗಗಳಿಗೆ (ಜೈಮಿ. ೮-೨೪).

[ದೇ.॥ ತುಳು. ಗಂದ; ತೆಲು. ಗೋದ; ಕೊಲಾ. ಕೊಂದಾ. ಕೋಂದ; ಪರ್ಜಿ. ಕೋಂದ; ಗದಬ. ಕೋಂದೆ, ಕೋಂದೇ; ಗೊಂಡಿ. ಕೋಂಡಾ, ಕೋಂದ]

**ಗೊಂದೆ$_2$** 'ಗೊಂದಿ' ನೋ.

**ಗೊಂದೆಗೊರವ** (ನಾ). ಎತ್ತಿನ ಗೊರವ; ವೃಷಭವಾಹನನಾದ ಈಶ್ವರ: ಗೊಂದೆಗೊರವನ ಸೆಣಸಿ ಗೆಲಿದೆನೆಂಬಹಂಕಾರದಿಂದ ಯುನ್ನಿದಿರಿನಲಿ ನಿಂದು ಕಾದುವರ ನಿನ್ನಿಂದಲಪ್ಪುದೆ (ನವಮೋ. ೩೨-೬).

[ಗೊಂದೆ$_1$ + ಗೊರವ]

**ಗೊಂದೆಬೊಂದಿ** (ನಾ). ೧. ಎತ್ತಿನ ದೇಹ. ೨. (ಅಲಂ) ಪಶುವಿನಂತಹವನು: ತನ್ನಱವಂ ಮಾಱುಗೊಟ್ಟು ಪಸುವಾಟ್ಟ ಗೊಂದೆಬೊಂದಿಗೆ . . . ಬೆಸಲಾದ ಮಡದಿಯಂ ಬಡಿವ ಮಾನಸರಕ್ಕಸಂಗೆ ಕಣ್ಗೆ ಕಾಣಲಪ್ಪರದೊಂದು ವ್ಯಮವತ್ತು ನಿಂದಿರ್ಕುಂ (ರಾಮಾಶ್ವ. ೭೪-೦).

[ಗೊಂದೆ$_1$ + ಬೊಂದಿ]

**ಗೊಂದೆವಳವಿಗ** 'ಗೊಂದೆವಟವಿಗೆಯ' ನೋ.

**ಗೊಂದೆವಳವಿಗೆ** 'ಗೊಂದೆವಟವಿಗೆ' ನೋ.

**ಗೊಂದೆವಳವಿಗೆಯ** 'ಗೊಂದೆವಟವಿಗೆಯಂ' ನೋ.

**ಗೊಂದೆವಟಯಿಗೆ** 'ಗೊಂದೆವಟವಿಗೆ' ನೋ.

**ಗೊಂದೆವಟಯಿಗೆಯ** 'ಗೊಂದೆವಟವಿಗೆಯಂ' ನೋ.

**ಗೊಂದೆವಟವಿಗೆ, ಗೊಂದೆವಳವಿಗೆ, ಗೊಂದೆವಟಯಿಂಗೆ** (ನಾ). ಎತ್ತಿನ ಗುರುತುಳ್ಳ ಬಾವುಟ; ವೃಷಭಧ್ವಜ. 'ಗೊಂದೆವಟವಿಗೆಯು' ಪರಾ. ಗೊಂದೆವಳವಿಗೆ: ಗೊಂದೆವಳವಿಗೆಯವನು ಹೆಕ್ಕಳದಿಂದ ಚಿನ್ನದ ತಟ್ಟೆಯೊಳು ವೀಟಕೆಯ ತರಿಸಿತ್ತು (ಅರ್ಜಾವಿ. ೭-೬). 'ಗೊಂದೆವಳವಿಗೆಯ' ಪರಾ. ಗೊಂದೆವಟಯಿಗೆ: 'ಗೊಂದೆವಟಯಿಂಗೆಯು' ಪರಾ.

[ಗೊಂದೆ$_1$ + ಪಟವಿಗೆ]

**ಗೊಂದೆವಟವಿಗೆಯ, ಗೊಂದೆವಳವಿಗ, ಗೊಂದೆವಳವಿಗೆಯಂ, ಗೊಂದೆವಟಯಿಂಗೆಯ** (ನಾ). ಎತ್ತಿನ ಗಂರುತಿನ ಬಾವುಟವುಳ್ಳವನು; ವೃಷಭಧ್ವಜ; ಶಿವ: "ಎಳೆದೇರ . . . ಗೊಂದೆವಟವಿಗೆಯನೆಣ್ಕಯ್ಯುವಂ . . . ಗಂದರಗಿವಿಯನೀಸರಂ ದೇಸಿಗಂ" (ಶಬ್ದಮಂ. ೩). ಗೊಂದೆವಳವಿಗ: ಅಮರ್ದನುಂಬರಿಂ ತುಳಿಲ್ಗೊಂಬ ಗೊಂದೆವಳವಿಗ ಗೊರವನೇ . . . ಪೊರೆಗೆಮ್ಮನು (ನವಮೋ. ೩೨-೧). ಗೊಂದೆವಳವಿಗೆಯ: "ಅಂಬಿಕಾಪತಿ ಗೊಂದೆವಳವಿಗೆಯ ಗೊರವನುಂ" (ಕಕರ. ೩೩). ಗೊಂದೆವಟಯಿಗೆಯ: "ಎಣ್ಮಯ್ಯಂ, ಗೊಂದೆವಟಯಿಗೆಯಂ . . . ಐವೊಗಂ–ಈ ೩೩ ಈಶ್ವರಂಗೆ ಪೆಸರ್" (ಕಕಸಾ. ೧-೧); "ಗೊಂದೆವಟಯಿಗೆಯ ದೇಸಿಗನೆಂದುಂ ಪೆಣ್ಕೊಡೆಯ ಕಿರ್ಚುಗಣ್ಣನೆನುತ್ತುಂ . . . ಪೇಟ್ವರ್ ಸ್ಮರಹರಂಗೆ ನಾಮವಿದೆನುತುಂ" (ಕವಿಕಂ. ೧೭). [ಗೊಂದೆವಟವಿಗೆ + – ಅ$_7$]

**ಗೊಂಬಚ್ಚೆ** (ನಾ). ಒಬ್ಬಾಕೆಯ ಹೆಸರು: ಪೊಲೆಯಮ್ಮನ ಪಣ್ಣತಿ ಗೊಮ್ಮಬ್ಬೆ (ಎಕ. VIII, ಸೊರಬ. ೭೦-೦೫: 938). [ಗೊಂಬೆ$_1$+ಅಬ್ಬೆ$_1$]

**ಗೊಂಬುಕ್ಕಿ** (ನಾ). ಒಂದೂ ಸ್ಥಳದ ಹೆಸರು: ನೆಲ್ಲಿವರ ಕಾಳಕನ್ನ ಕಲಿ ಕಜ್ಜರಾನಿಱದೋಡಿಸಿ ಗಣ್ಣಿನಾಡಕ್ಕಲಿದೊಱಗಳುಂ ಗೊಂಬುಕ್ಕಿ ಅರಸರುಂ ಪಡೆದುದು (ಎಕ. X ಮಾಲೂರು. ೯೬-೨: ಹು. 750). [?]

**ಗೊಂಬೆ$_1$** (ನಾ). ೧. ಬೊಂಬೆ; ಪ್ರತಿಮೆ; ಪುತ್ಥಳಿ : ಗೊಂಬೆಯುವು ತಾವೇತಕ್ಕಿಲ್ಲವು ಅಪ್ರಯೋಜಕವು ಗೊಂಬೆಯುಹ ದೇವರನೆ ಮಾರಿಯು ತಂಬಿಗೆಯ ತಪ್ಪಲೆಯ ಕೊಂಡರೆ ಪುಂಬದಕೆ ಕುಡಿವದಕೆ ಬಾಹದು (ಜ್ಞಾಸಿಂ. ೩೮-೦೪); ಏನು ಬೇಡ, ಗೊಂಬೆ, ತಿಂಡಿ, ಮುದ್ದು ಬೇಡ (ರಾಮಾನ. ೮೭); ಕಣ್ಣಿನಾಗಿನ ಗೊಂಬೀ ಹಾಂಗ ಎದ್ಯಾಗ ನಟ್ಟಾಂವಾ (ಸಖೀಗೀ. ೯೨-೨೨); ಗೊಂಬೆ ಮಾತನಾಡದು, ರಂಬೆ ಕಾಣಸಿಕ್ಕಳು (ಗಾದೆ). 'ಬೊಂಬೆ' ಪರಾ. ೨. ಕಣ್ಣಿನ ಗುಡ್ಡೆ : (ಕ). [ ದೇ.೩ ತುಳು. ಗೊಂಬೆ ]

**ಗೊಂಬೆ$_2$** (ನಾ). ಗುಂಪು; ಸಮೂಹ : "ಜಂಗುಳಿ . . . ಗೊಂಬೆ . . . ಜಾಳಿಗೆಯುಂಮೆನೆ ಶ್ರೇಣಿಕಾಖ್ಯಂ" (ಕಬ್ಬಿಕ್ಕ. ೦೭) : "ಗೊಂದಣ ತೆರಳ್ಕೆ . . . ಗೊಂಬೆ ಜಂಗುಳಿ . . . ತೊಂಬೆಯೆನೆ ಶ್ರೇಣಿಕಾಖ್ಯಂ" (ಅಭಿಮಂ. ೩೩). [ ಇದು 'ದೊಂಬೆ' ಎಂಬುದರ ಅಪಲಿಖಿತವಿರಬಹುದು. ]

**ಗೊಂಬೆಮದುವೆ** (ನಾ). ಮಕ್ಕಳು ವಿನೋದಕ್ಕಾಗಿ ಬೊಂಬೆಗಳಿಗೆ ಮಾಡುವ ಮದುವೆ ಮತ್ತು ಅಂತಹ ಮದುವೆಯ ಆಟ : ಗೊಂಬೆ ಮದುವೆಯನೊಮ್ಮೆ ಮಾಡಿ, ಚೆನ್ನೆಯೆಕ್ಕಡಿಯೊಮ್ಮೆ ಹೂಡಿ, ಆಡಿಸುವೆ ಪಲವಾಟವಾಡಿ-ಕಣ್ಣುಮುಚ್ಚೆಕೆಯಲ್ಲದೆ (ಗೀವಿಂ. ೬೧-೧೩).

[ ಗೊಂಬೆ$_1$ + ಮದುವೆ ]

**ಗೊಂಬೆಯಾಟ** (ನಾ). ೧. ಆಟಗಾರರು ದಾರಗಳ ಮೂಲಕ ಬೊಂಬೆಗಳನ್ನು ಕುಣಿಸಿ ತೋರಿಸುವ ಆಟ; ಸೂತ್ರದ ಬೊಂಬೆಯಾಟ : ಜನನಮರಣಗಳ ಸೂತ್ರದಲ್ಲಿ ನಡೆಸಿರುವ ಗೊಂಬೆಯಾಟ (ಮುಕ್ತಕಂ. ೨೪-೦೬); ಕೆಲವು ವಿಗ್ರಹಗಳ ಕೈ ಕತ್ತು ಕಾಲುಗಳ ಸ್ಥಳದಲ್ಲಿ ರಂಧ್ರ ಮಾಡಿರುವದರಿಂದ ಬಹುಶಃ ಸೂತ್ರದ ಗೊಂಬೆಯಾಟವೂ ಪ್ರಚಾರದಲ್ಲಿದ್ದಿತು (ಬಾರದ. ೦೩). ೨. ಬೊಂಬೆಗಳನ್ನು ಇಟ್ಟುಕೊಂಡು ಮಕ್ಕಳು ಆಡುವ ಆಟ; ಬೊಂಬೆಆಟ : ಮಕ್ಕಳು ಗೊಂಬೆಯಾಟ ಆಡುತ್ತಿವೆ (ರೂಢಿ). [ ಗೊಂಬೆ$_1$ + ಆಟ ]

**ಗೊಂಬೆರಂಭ** (ನಾ). ತೊಗಲುಬೊಂಬೆಯನ್ನು ಕುಣಿಸುವವನು; ಕಿಳ್ಳಿಕೇತ : ಗೊಂಬೇರಂಭರಾದ ರಾಮು, ಸಂಜೀವ, ಗೋವಿಂದ-ಇವರು ಬಂದರಂತೂ ಗೌಡರಿಗೆ ಸಂತೋಷವೋ ಸಂತೋಷ (ನನ್ನೂರು. ೦೧೯).

[ <ಗೊಂಬೆರಾಮ ]

**ಗೊಂಬೆರಾಮ** (ನಾ). = ಗೊಂಬೆರಂಭ : "ಗೊಂಬೆರಂಭರು : ತೊಗಲು ಗೊಂಬೆಯನ್ನು ಕುಣಿಸುವವರು . . . ಗೊಂಬೇರಾಮರು ಎಂದೂ ಇವರನ್ನು ಕರೆಯುತ್ತಾರೆ" (ನನ್ನೂರು. ಟಿಪ್ಪಣಿ).

[ ಗೊಂಬೆ$_1$ + ರಾಮ ]

**ಗೊಂಬೆಹಚ್ಚಡ** (ನಾ). ಬಣ್ಣದ ಚಿತ್ರಗಳಿಂದ ಕೂಡಿದ ಹಚ್ಚಡ; ವರ್ಣಚಿತ್ರಗಳನ್ನೊಳಗೊಂಡ ಹೊದ್ದುಕೊಳ್ಳುವ ಬಟ್ಟೆ : ತಂಗೀ ಮನೇಗ್ಹೋಗಿ ತಂಗಾದೆ ಹೋಗುತವನೆ ತಂಗೀಸಿ ಕೊಡು ಮಳೆದೇವ ಅಣ್ಣಯ್ಯ ಗೊಂಬೆಹಚ್ಚಡವು ಗೊರೆಯಾದೂ ಅಂಬೂ ಕೊಡುವವನೆ ಗೊಂಬೆ ಹಚ್ಚಡದವನೆ ರಂಭೆ ತೊಡೆಮೇಲೆ ಮಲಗಿರುವ ಮಳೆದೇವ ಅಂಬಾರದಿಂದ ಕರುಣೀಸು (ಹಳ್ಳಿಯ. ೪೦). [ ಗೊಂಬೆ$_1$ + ಹಚ್ಚಡ (<ವಚ್ಚಡ) ]

**ಗೊಂಯಿ** (ನಾ). ಒಂದು ಅನುಕರಣ ಶಬ್ದ : ಸೊಳ್ಳೆಗಳ ಗೊಂಯಿ ಶಬ್ದದಿಂದ ರಾತ್ರ ನಿದ್ದೆಯೇ ಇಲ್ಲ (ರೂಢಿ). 'ಗುಂಯಿ' ಪರಾ.

**ಗೊಗಲ್** (ನಾ). ಒಂದು ಬಗೆಯ ಔಷಧಿಸಸ್ಯ : ಉಡಿಮರ . . . ಗೊಗಲ್, ಹೆಣ್ಣುಗೊಡ್ಡ (ವೃಕ್ಷಿಗಿ. ೩೭-೦೦೩೦). [ ? ]

**ಗೊಗ್ಗ** (ನಾ). ೧. ಮೈಲಾರಲಿಂಗನ ಭಕ್ತ : (ಕ). ೨. ಮಕ್ಕಳನ್ನು ಹೆದರಿಸಲು ಕರೆಯುವ ಒಂದು ಕಾಲ್ಪನಿಕ ಭೂತ; ಗುಮ್ಮ : ಗೊಗ್ಗನನ್ನು ಕರೆಯುವೆನೆಂದು ಮಗುವನ್ನು ಹೆದರಿಸಿ ಮಲಗಿಸಿದಳು (ರೂಢಿ). [ <ಗೊರವ ? ]

**ಗೊಗ್ಗಯ್ಯ** (ನಾ). ೧. ಮೈಲಾರಲಿಂಗನ ಭಕ್ತ : (ಕ). ೨. = ಗೊಗ್ಗ೨ : ಗೊಗ್ಗಯ್ಯನನ್ನು ಕರೆಯುತ್ತೇನೆ ಎಂದು ಮಕ್ಕಳಿಗೆ ಹೆದರಿಸುವಾರದ? (ರೂಢಿ). [ ಗೊಗ್ಗ + ಅಯ್ಯ$_1$ ]

**ಗೊಗ್ಗರ, ಗೊಗ್ಗರು** (ನಾ). ಗಂಟಲು ಒಡೆದು ಧ್ವನಿಯಲ್ಲಿ ಉಂಟಾಗುವ ಒಂದು ಬಗೆಯ ವಿಕಾರ; ಒಡಕುಧ್ವನಿ : ವನಮಾಲಿ ಗೊಗ್ಗರದ ಏರುಧ್ವನಿ ತೆಗೆದು ಕೇಳಿದನು (ಇಕ್ಕೇಳ. ೪೨೪); ಹದಿನಾಲ್ಕು ವರ್ಷದ ಬಾಲಕನ ಮುಖ ಕೊಂಚ ವಿಕಾರ ಹೊಂದಿದಂತೆ ಧ್ವನಿಯೂ ಗೊಗ್ಗರವಾಗುವುದು (ಸುಕುಮು. ೦೦). **ಗೊಗ್ಗರು** : 'ಗೊಗ್ಗರುಧ್ವನಿ' ಪರಾ.

[ <ಗೊಂಕುಟು ? ]

**ಗೊಗ್ಗರು** 'ಗೊಗ್ಗರ' ನೋ.

**ಗೊಗ್ಗರುಧ್ವನಿ** (ನಾ). ಒರಟಾದ ಧ್ವನಿ; ಕರ್ಕಶವಾದ ಸ್ವರ : ಗೊಂಟರು ಕಪ್ಪೆಗಳ ಗೊಟರಿನಂತಹ ಗಡಸು ಗೊಗ್ಗರುಧ್ವನಿ ಕೇಳಿ . . . ಭಯವಾಯಿತು (ಪ್ರಕ್ಕ. ೨೦) : ಗೊಗ್ಗರುಧ್ವನಿಯಲ್ಲಿಯೇ ಅವನು ಮತ್ತೆ ಮಾತನಾಡಿದನು (ಬಂಗಾಹ. ೭೬). [ ಗೊಗ್ಗರು (<ಗೊಗ್ಗರ) + ಧ್ವನಿ ]

**ಗೊಗ್ಗಿ** (ನಾ). ಒಬ್ಬಾತನ ಹೆಸರು : ಜಗಭಕ್ಷಣ ಚಕ್ರವರ್ತ್ತಿ ಗೊಗ್ಗಿಯ ಸಾವನ್ತ ××ರ (ಎಕ. II, ೦೫೨-೨ ; ಸು. 950) : ಆತಂಗೆ ಚಿಕ್ಕಿಯಣ್ಣಂ ಮಾತ[ಗೆ]ಸತ್ಪುತ್ರನಾ ಸುಪುತ್ರಂಗೆ ಸುತಂ ನೂತಗುಣಂ ಗೊಗ್ಗಿ (ಎಕ. XI, ಚಿತ್ರದು. ೭೪-೦೦ ; 968). [ ? ]

**ಗೊಗ್ಗಿಯಪುರ** (ನಾ). ಒಂದು ಊರಿನ ಹೆಸರು : ಗೊಗ್ಗಿಯಪುರದ ಬಾಳಬನು (ಎಕ. XI, ಚಿತ್ರದು. ೩೦-೨೨ ; 968).

[ ಗೊಗ್ಗಿ ? + ಪುರ$_3$ ]

**ಗೊಗ್ಗಿಯಮ್ಮ** (ನಾ). ಒಬ್ಬಾತನ ಹೆಸರು : ಬರುದರ ಗಾಳಮುಚ್ಚನಿಯ ಭೂಜಂಗಂ ಶ್ರೀಮತ್ ಗೊಗ್ಗಿಯಮ್ಮ (ಎಕ. XI, ಹೊಳಲ್ಕೆ. ೩೩-೯ : 965).

[ ಗೊಗ್ಗಿ + ಅಮ್ಮ$_1$ ]

**ಗೊಚ್ಚ** 'ಗೊಂಚಿ' ನೋ.

**ಗೊಚ್ಚು** 'ಕೊಚ್ಚು$_4$' ನೋ.

**ಗೊಚ್ಚೆ** 'ಕೊಚ್ಚೆ' ನೋ.

**ಗೊಜಗು$_1$** (ಕ್ರಿ). ಅಸ್ಪಷ್ಟವಾಗಿ ಮಾತನಾಡು; ಮೆಲ್ಲಗೆ ಹೇಳು : ಒಂದಿನಂ ಮುಚ್ಚಂಜೆ ಹಸಿಮಣ್ಣಿನುಂಡೆ ಗುದ್ದುಪೂರು ಪೊದ್ದನನು ಸಂತೆಯಲಿ ಕಂಡೆ, ನಾಲಗೆಯ ಸಾಲದುಲಿಯಿಂ ಗೊಜಗಿತಿಂತು ಮೆಲ್ಲನೆಲ ತಟ್ಟಣ್ಣ ! ನನ್ನೊಳೀ ಮಿಂಡೇ ? (ಗೀವಿಂ. ೦೨೦-೨೭). [ ? ]

**ಗೊಜಗು$_2$** (ನಾ). ಅಸ್ಪಷ್ಟವಾಗಿ ಮಾತನಾಡುವಿಕೆ; ಮೆಲ್ಲಗೆ ಹೇಳುವಿಕೆ: (ಕ). [ <ಗೊಜಗು$_1$ ]

**ಗೊಜಗುಟ್ಟು** (ಕ್ರಿ). = ಗೊಜಗು$_1$ : ಗೊಜಗುಟ್ಟುತ್ತಿದ್ದು ಬದ್ದಿಳಿಗ ಪೂಜೆಯಪ್ಪ ಕದುನುಜುಗು ಮನದಜ್ಞಾನಿ ಜನರಲ್ಲ ಪಿರಿಯರೆ (ಮದೀಪು ೩೦-೨೩) ; ಗದ್ಗದಃ ಗೊಜಗುಟ್ಟುವುದಾಗಿ (ವಾಹಟೀ. ೨-೩-೪೦ ಪ).

[ ಗೊಜಗು$_2$ + ಕುಟ್ಟು$_1$ ]

**ಗೊಜಡು** (ನಾ). ೧. ಹುರುಳಿಲ್ಲದ ಮಾತು : ಮಿಕ್ಕನ ವೇದಾಗಮಂಗಳು ಜಡ್ಡು ಗೊಜಡೆಂದು ಅವ ಬಿಟ್ಟು (ಶಿಂಗಲೀ. ೪೦೯). ೨. ಹುರುಳಿಲ್ಲದ ಮಾತನ್ನಾಡುವ ವ್ಯಕ್ತಿ: ದಾತುಗಾಣಿಸಿ ಕೊಳದ ಮುಜಡುಗಳ್ಗೊಜಡುಗಳ್ ಮಾತುಮಾತಿಂಗೆ ಬಾಯಿಬಡಿಕೆಯರ್ (ಪತಿಂ. ೨-೩೯). [ ? ]

**ಗೊಜರಗಳೆ** (ನಾ). = ಗಜರಗಳೆ : ಅವನ ಗೊಜರಗಳೆ ಯಾವಾಗಲೂ ಇದ್ದದ್ದೇ (ರೂಢಿ). 'ಕಜರಗಳೆ' ಪರಾ. [ ಗೊಜ ? + ರಗಳೆ ]

**ಗೊಜಬಿಜಿ** (ನಾ). ಗೊಂದಲ; ಸಿಕ್ಕು; ಗೋಜು : ಏಳೇಳ್ನ ನಲವತ್ತೊಂಭತ್ತು . . . ಅಲ್ಲಿಯವರೆಗೆ ನೆನಪಿತ್ತು ; ಅಲ್ಲಿಂದ ಮುಂದಕ್ಕೆ ಎಲ್ಲಾ ಗೊಜಬಿಜಿಯಾಗಿತ್ತು (ಹಾರಿಮು. ೦೦). [ <ಗಜಬಿಜಿ ]

**ಗೊಜ್ಜ** (ನಾ). ಹಿರಿಯಂ ; ಪೂರ್ವಜ (?) : ಕೊಳಗವಂತ್ರ ಸೇ[ವೆ]ಸೊಟಗೆ ಹೇಬುಂಗೆ ಸೂಬಿ೯ಲ ಗೊಜ್ಜ ಗೌತಳಿಗಳು ಬಿಟ್ಟ ಆಯ ಚೈತ್ರಕ್ಕೆ ಏಸ ಪವಿತ್ರಕ್ಕೆ ಏಸ ಅಂತು ವರುಶಕ್ಕೆ ಪೊರ್ಕಲಿಂಗೆ ಬೇಳೆ (ಸೌಇಇ. IX-1, ೩೦೭-೪೫ : 1223). [ ? ]

**ಗೊಜ್ಜಗೆ, ಗುಜ್ಜಗೆ$_1$, ಗುಜ್ಜಿಗೆ, ಗೊಜ್ಜಿಗೆ, ಗೊಜ್ಜುಗೆ** (ನಾ). ೧. ಒಂದು ಬಗೆಯ ಸುವಾಸನೆಯ ಹೂವು ; ಮಲ್ಲಿಗೆ: ಅಳಿಗಳ ಬಳಗಂ ಜಗದ ಮನದೊಡನೆ ಸೇವಂತಿಗೆಗಂ ಗೊಜ್ಜಗೆಗಮಲ್ಲದೇನೆಱಗುಗುಮೇ (ಆದಿಪು. ೧೧-೧೨೫) ; ಸಜ್ಜುಕವೆನಿಸಿದ ಗೊಜ್ಜ[ಪಾಠಾಂ. ಜ್ಜು]ಗೆಯರಲ ಮಿಶ್ರದಿನು ಪಾಶ್ರಯಂಬಡೆದ ಹೇಮತಾಮರಸದ ಮೊಗ್ಗೆಯ ತೋಳ್ಗಟ್ಟುಗಳುಮಂ (ಜಗವಿ. ೬-೧೬ ವ) : ಗಗನದೊಳಚ್ಚರಿಯೆನೆ ನೆಗೆದೊಗೆದುದು ಕೆಂಧೂಳಿ ಖಚರಿಯ ಸೋರ್ಮುಡಿಯಿಂದುಗುವಿರವಂತಿಯ ಸಂಪಗೆಯ ಗೊಜ್ಜಗೆಯ ಸುರಯಿಯರಲ ರಜದುರ್ವಿನದಿಂ (ವರ್ಧಪು. ೫-೨೬): ದವನದ ಭುವನಿಕೆಗಳಿಂ ಗೊಜ್ಜಗೆಯ ಗುಡಿಗಳಿಂ . . . ತಂಬಿನ ತಾಯ್ವನೆಯುಮೆನಿಪ ಲತಾ ಮಂಟಪಮಂ ಕಂಡು (ಶಾಂತೀಶ್ವ. ೧೦-೧೧೬ ವ) : ಗೊಜ್ಜಗೆ ಬೀಱುಗುಮೆ ಕಂಪನಲರದ ಮುನ್ನಂ (ನೀತಿಮಂ. I. ೩೯). ೨. "ಇರುವಂತಿಗೆ" (ಶಂಪಥಾ. ಕೋಶ) : ಅಗರುವ ಮೆಚ್ಚು . . . ಪೂತ ಗೊಜ್ಜಗೆಗಳ ಸಿಂದು ರಂಗಳೊಳಗೋಗರಗಂಪನೆ ಬೀಱುತಿರ್ಪ . . . ಸಂಪಗೆಯೊಳಗ್ಗಲಿಸಿತ್ತು ಬಸಂತ ಮಾಸದೊಳ್ (ಶಂಪಥಾ. ೫-೦೦). **ಗುಜ್ಜಗೆ$_1$** : ೩. ಸೇವಂತಿಗೆ : "ಗು[ಪಾಠಾಂ. ಗೊ] ಜ್ಜಗೆಯೆನಲ್ ಸೇವಂತಿಗೆಯ ನಾಮಮಕ್ಕು" (ಕಬ್ಬಿಗ. ೨೧). **ಗುಜ್ಜಿಗೆ**: ೩. "ಗುಜ್ಜಗೆಯೆನೆ ಸಂದೇಹವಿಲ್ಲ ಸೇವಂತಿಗೆಯ ನಾಮವು" (ಕಬ್ಬಮಂ. ೨೬). **ಗೊಜ್ಜಿಗೆ**: ೧. ದವನದ ಪಸುರ್ದನೆಯ ಗೊಜ್ಜಿಗೆಯ ಜಾದಿಯ (ರಾಮಾಶ್ವ. ೪೩-೮). ೨. ಮುಡಿಗೆ ಪೊಸ ಮಲ್ಲಿಗೆಯಂ ಗೊಜ್ಜಿಗೆ ಯುಮನೇಱಿಸಿ ಸಲೆ ಬಿಜ್ಜೋದರಿ ದಿವ್ಯಸತಿಯನಾರಾಧಿಸಿದಳ್ (ಲೀಲಾವ. ೧೦-೯). **ಗೊಜ್ಜುಗೆ**: ೧. ಪುಷ್ಪೋತ್ಕರದೊಳ್ ಗೊಜ್ಜುಗೆಯ ಕಂಪನವು ತಳೆದಿರ್ಕುಂ (ರೂಕೋಶ. ೭-೪೪) : ಧರಣಿಪನ ಕೀರ್ತಿವಧು ವಿಸ್ಫುರಿತ ನಭಃಕಬರಿಯಲ್ಲಿ ಗೊಜ್ಜು [ಪಾಠಾಂ. ಜ್ಜ]ಗೆಯ ಸರೋತ್ಕರವಾಂತವೊಲೆ ಸಿತಾಭ್ರಂ ನೆರೆದಿರೆ (ರಾಜಶೇ. ೯-೬). ℙ ಈ ಹೂವನ್ನು ಕೆಲವರು ಇರುವಂತಿಗೆಯೆಂದು, ಕೆಲವರು ಸೇವಂತಿಗೆಯೆಂದು ಭ್ರಮಿಸಿರುವರು. [ ದೇ.॥ ತಮಿ. ಕೊಟುಜ್ಗಿರಿ ; ತೆಲು. ಗುಜರಿ ]

**ಗೊಜ್ಜಲ** (ನಾ). ಒಂದು ಬಗೆಯ ಮರ : ಗೊಜ್ಜಲ (ಮೊಯಿ).– ಮಧ್ಯಮ ಆಕಾರದ್ದು. ಇಮಾರತಿಗೆ ಬರುತ್ತದೆ (ಕಭಾಗ. ೩೯). [ ? ]

**ಗೊಜ್ಜಲು** (ನಾ). ಕೆಸರು ; ಕೊಚ್ಚೆ : ರುಧಿರ ಭಾವಿಯು ಮಜ್ಜ ಹಂಸೆಯು ಅಧಿಕ ವೀರ್ಯವು ಜೊಂಡು ಗೊಜ್ಜಲು ಅದುವೆ ಮೇದಸು ಮಾಂಸ ವೆಂಬುದು (ಜ್ಞಾನಸಿಂ. ೨೮-೨).

[ ಗೊಜ್ಜೆ$_1$ (<ಕೊಚ್ಚೆ) + – ಅಲು (< – ಅಲ್$_8$) ]

**ಗೊಜ್ಜಿಕಬ್ಬೆ** (ನಾ). ಒಬ್ಬಾಕೆಯ ಹೆಸರು : ತನ್ನಿಷ್ಟದೈವಂ ಜಿನೇಶ್ವರ ನಾತ್ಮಾಂಬಿಕೆ ಗೊಜ್ಜಿಕಬ್ಬೆ ಜನಕಂ ಗಂಗಾನ್ವಯ ಶ್ರೀವಧೂವರನಪ್ಪಗ್ಗಳ ದೇವನ್ (ಸೌಇಇ. XI-1, ೧೧೧-೧೪; 1071). ℙ ಇದಂ 'ಗೋವಿಂದವ್ವೆ'ಯಂ ಗ್ರಾಮ್ಯರೂಪವಿರಬಹುದು. [ ಗೊಜ್ಜಿಕ$_0$ + ಅಬ್ಬೆ$_1$ ]

**ಗೊಜ್ಜಿಗದೇವ** (ನಾ). ಒಬ್ಬಾತನ ಹೆಸರು ; (ಗೋವಿಂದದೇವನೆಂದು ಪ್ರಖ್ಯಾತನಾದ) ರಾಷ್ಟ್ರಕೂಟವಂಶದ ಒಬ್ಬ ದೊರೆ : ಗೊಜ್ಜಿಗದೇವಂ ನೆಗಟ್ದಂ (ಎಇ. XIII ೩೨೯-೩ ; 929). [ <ಗೋವಿಂದ + ದೇವ ]

**ಗೊಜ್ಜಿಗೆ** 'ಗೊಜ್ಜಗೆ' ನೋ.

**ಗೊಜ್ಜು$_1$** (ಕ್ರಿ). (ಉಕ) ಚಿಮಯಿಕಿಸು ; ಎರಚು ; ಸುರಿ ; ಹೊಯ್ಯು : ವಾರೀಗಿ ಗೆಳತೇರಂ ನೀರ ಮೇಲಾಡುತಲಿ ಮಾರಿಮಾರಿಗೆ ನೀರ ಗೊಜ್ಜುವರ (ಲೋಕಗೀ. ೧೯೧) : ಇದಿರು–ಮಳೆ ರಭಸವಾಗಿ ಮುಖದಲ್ಲಿ ಕಣ್ಣಲ್ಲಿ ಗೊಜ್ಜುತ್ತಿದೆ (ಹೊಸಕ್ಕ. ೨೧೦) : ತಾಯಿ ಲಗುಬಗೆಯಿಂದ ನೀರು ತಂದು ಅವನ ಮುಖಕ್ಕೆ ನೀರು ಗೊಜ್ಜ ಹತ್ತಿದಳು (ಇಪ್ಪಕ. ೩೨೩) : ಶಾನುಭೋಗರು ಉಗ್ರವಾಗಿ ಅವಾಚ್ಯಶಬ್ದಗಳಿಂದ ಹೆಂಡತಿಯನ್ನು ಬಯ್ಯುತ್ತ ಸುಡುವ ಸಾರಿನ ಬೋಗೋಣಿಯನ್ನೇ ಹೆಂಡತಿಗೆ ಗೊಜ್ಜಿಬಿಟ್ಟರು (ರಂಗಲೋ. ೪೨).

[ <ಕೊಚ್ಚು$_2$? ]

**ಗೊಜ್ಜು$_2$** (ನಾ). ೧. ಅನ್ನಕ್ಕೆ ಕಲಸಿಕೊಳ್ಳಲು ಮಾಡಿದ ಒಂದು ಬಗೆಯ ಮೇಲೋಗರ : ಗೊಜ್ಜುಮಜ್ಜಿಗೆ ಪಳದ್ಯ ಸಜ್ಜಾದ ವಸ್ತು ಮೂಜಗನ್ಮಾತೆಯು ಮುದದಿ ಬಡಿಸಿದಳು (ಕುಚೇಲೋ. ೧೧೭); ಗೊಜ್ಜು ತಿನ್ನುವ ದೃಷ್ಟಿಯಿಂದ ನಾವು ಮಾವಿನಕಾಯನ್ನು ನೋಡಿದೆವಾದರೆ ಅದನ್ನು ಸಮಗ್ರಭಾವದಿಂದ ನೋಡೆವು (ನಿಬಂಧ. I ೧೩೫) : ಈ ಗೊಜ್ಜು, ಈ ಸಾರುಗಳನ್ನು ನಾನು ಉಣದೆ ಬಹು ದಿನಗಳಾದುವು (ಜಾಡುಕ. ೭೧). ೨. ನೀರು ಸೇರಿಸಿ ಕಲ್ಕದಂತೆ ಮಾಡಿದ ಯಾವುದಾದರೂ ವಸ್ತು : ನಮ್ಮಲ್ಲಿನ ಒಂದು ಕಾರ್ಖಾನೆಯು ಬಿದಿರಿನ ಗೊಜ್ಜನ್ನು (Pulp) ಕಾಗದ ತಯಾರಿಯಲ್ಲಿ ಉಪಯೋಗಿಸುತ್ತಿದೆ (ಬಾಲಪ್ರ. II, ೮೨೩). ೩. ಆಮ್ಲತೆ ; ಹುಳಿ : ಆಕಾಶ ಮುಟ್ಟುವಂತೆ ಬೆಳೆದಿದ್ದ ಗೊಜ್ಜಿನ ಮಾವಿನ ಮರದ ಹತ್ತಿರ (ಮರಮ. ೪೫೪).

[ ದೇ.॥ ತಮಿ. ಕೊಚ್ಚು ; ತುಳು. ಗೊಜ್ಜಿ, ಗೊಜ್ಜು ]

**ಗೊಜ್ಜುಗೆ** 'ಗೊಜ್ಜಗೆ' ನೋ.

**ಗೊಜ್ಜೆ$_1$** 'ಕೊಚ್ಚೆ' ನೋ.

**ಗೊಜ್ಜೆ$_2$** 'ಗುಜ್ಜೆ$_1$' ನೋ.

**ಗೊಜ್ಜೆ$_3$** (ನಾ). ಒಂದು ಬಗೆಯ ಸುವಾಸನೆಯ ಹೂವು : ತಣ್ಗಂಪಿಂ ದೊಪ್ಪುವುದದಱಿಂದಲರೊಳಗೆ ಗೊಜ್ಜೆ [ಪಾಠಾಂ. ಜ್ಜ]ಗೊಜ್ಜಗೆಯ ವಲಂ (ಆದಿಪು. ೧೦-೦೨೬) : ಗೊಜ್ಜೆಯ ಸಂಕಡಿಗಳಿಂ ಪನ್ನೀರ ನೀರ್ದಳಿಪದಿಂ . . . ತಣ್ಪನ ತಾಣಮುಮೆನಿಸಿರ್ಪ ಲತಾಮಂಟಪಮಂ ಪೊಕ್ಕು (ಕುಸುಮಾ. ೧೨-೧೫೬ ವ). 'ಗೊಜ್ಜಗೆ' ಪರಾ.

[ ? ]

**ಗೊಜ್ಜೆಗೆದಾಱ** (ನಾ). (?) : ಆವಣೂರದಮ್ಮಯನ ಭೂಮಿ ಅಯ್ದು ಹಣವಿನ ಬಳದೊಳಗೆ ಗೊಜ್ಜೆಗೆದಾಱ ಒನ್ದು ಹಣವಿನ ಕೆಯ್ಯ ಆವಣೂರ ದೇವಗ್ಗೆ ಬಿಟ್ಟ ನಾಲ್ಕು ಹಣವಿನ ಕೆಯ್ಯ . . . ಸೇವೆ (ಎಕ. VI, ಚಿಕ್ಕಮ. ೬೨-೩೪ ; 1058 ? ). [ ? ]

**ಗೊಟಕ್** (ನಾ). ಒಂದು ಅನುಕರಣ ಶಬ್ದ.

**ಗೊಟಕ್ ಅನ್ನು, ಗೊಟಕ್ ಎನ್ನು** = ಸಾಯು ; ಮರಣಹೊಂದು : ನನಗೂ ಬಾಣಂತಿಕ್ಷಯ ಬಂದು, ನಾನು ಗೊಟಕ್ ಅಂದರೆ ನೋಡಿದವರು ಏನನ್ನುತ್ತಾರೆ ಹೇಳಿ (ತಾಯಿಕ. ೪೦) : ಈಕೆ ಯಾವಾಗ ಗೊಟಕ್ ಅಂತಾಳೋ (ಮಡ್ಡಿಹ. ೧) : ನಾನೇನಾದರೂ ಗೊಟಕ್ ಎನ್ನುವುದಾದರೆ ಆ ಭೂಮಿಯ ಹಕ್ಕು ನಿನ್ನ ಮಕ್ಕಳಿಗೆ ಲಭಿಸುತ್ತದೆ (ಪುನರು. ೪೬೨).

**ಗೊಟಗುಣಿ** 'ಗೊಟ್ಟುಗುಟಿ' ನೋ.

**ಗೊಟಗೊಟ**(ನಾ). ಒಂದು ಅನುಕರಣ ಶಬ್ದ : ಬಹಳ ಬಾಯಾರಿದ ಅವನು ಒಂದು ತಂಬಿಗೆ ನೀರನ್ನೆಲ್ಲಾ ಗೊಟಗೊಟಯೆಂದು ಕುಡಿದುಬಿಟ್ಟ (ರೂಢಿ).

**ಗೊಟರ್, ಗೊಟರು$_1$** (ನಾ). ಒಂದು ಅನುಕರಣ ಶಬ್ದ. 'ಗೊಟರ್ಗುಡು' ಪರಾ. **ಗೊಟರು$_1$** : 'ಗೊಟರಂಕಪ್ಪೆ' ಪರಾ.

**ಗೊಟರುಹಾಕು**=(ಕಪ್ಪೆ ಮುಂತಾದಂವುಗಳು) ಗೊಟರ್ ಗೊಟರ್ ಎಂದು ಶಬ್ದಮಾಡು ; ವಟಗುಟ್ಟು : ಗೊಟರುಹಾಕುವ ಗೊಟರು –ಕಪ್ಪೆಗಳ ಶ್ವಾಸಕೋಶ ಎಂಥದಿರಬೇಕೆಂದು ಯೋಚಿಸುತ್ತ ನಿದ್ದೆಬಾರದೆ ರಾಜಣ್ಣ ಎದ್ದು ಕೂತ (ಪ್ರಕೃ. ೧).

**ಗೊಟರು$_1$** 'ಗೊಟರ್' ನೋ.

**ಗೊಟರು₂, ಗೊಟರೆ** (ನಾ). ಕೊರಕಲು ; ತೂತು ; ರಂಧ್ರ ; ಪೊಟರೆ : ನಾನು ಹೋಗುತ್ತಿದ್ದ ಸ್ಥಳ ಕಲ್ಲುಗೊಟರು. ನನ್ನ ಕುದುರೆಯ ಮುಂಗಾಲು ಗೊಟರಿನಲ್ಲಿ ಸಿಕ್ಕಿಕೊಂಡಿತು (ಪ್ರವಾಇ. II, ೮೬). **ಗೊಟರೆ :** ಆ ಚೆಂಡು ಯಾವುದೋ ಗೊಟರೆಯಲ್ಲಿ ಹೋಗಿ ಬಿದ್ದಿದೆ (ಊಂ).

[ < ಸಂ. ಕೋಟರ ]

**ಗೊಟರುಕಪ್ಪೆ** (ನಾ). ಗೊಟರು ಗೊಟರು ಎಂದು ಕಿರುಚುವ ಕಪ್ಪೆ ; ಗೊಂಕುರುಕಪ್ಪೆ : ಗೊಟರುಹಾಕುವ ಗೊಟರು-ಕಪ್ಪೆಗಳ ಶ್ವಾಸಕೋಶ ಎಂಥದಿರಬೇಕೆಂದು ಯೋಚಿಸುತ್ತ ನಿದ್ದೆಬಾರದೆ ರಾಜಣ್ಣ ಎದ್ದು ಕೂತ (ಪ್ರಕೃ. ೦). [ ಗೊಟರು₁ ( < ಗೊಟರ್) + ಕಪ್ಪೆ₁ ]

**ಗೊಟರೆ** 'ಗೊಟರು₂' ನೋ.

**ಗೊಟರ್ಗುಡು** (ಕ್ರಿ). (ಕಪ್ಪೆ ಮುಂತಾದುವುಗಳು) ಗೊಟರುಗೊಟರು ಎಂದು ಶಬ್ದಮಾಡು ; ವಟಗುಟ್ಟು : ನಸುಕಿನ ಹಕ್ಕಿಯ ಚಿಲಿಪಿಲಿಯಲ್ಲ ಗೊಟರ್ಗುಡುತಿವೆ ಕಪ್ಪೆ (ಜೀಪಲ. ೧೧೭-೬).

[ ಗೊಟರ್ + ಕುಡು₁ ( < ಕೊಡು₁) ]

**ಗೊಟಾಯಿಸು** 'ಕೊಟಾಯಿಸು' ನೋ.

**ಗೊಟಾಳೆ** 'ಘೋಟಾಳೆ' ನೋ.

**ಗೊಟ್ಟ₁** 'ಕೊಟ್ಟ₁' ನೋ.

**ಗೊಟ್ಟ₂** 'ಕೊಟ್ಟೆ₁' ನೋ.

**ಗೊಟ್ಟ₃** 'ಗೊಂಟು' ನೋ.

**ಗೊಟ್ಟ₄** 'ಗೊಡ್ಡು₁' ನೋ.

**ಗೊಟ್ಟ₅** 'ಕೊಟ್ಟ₆' ನೋ.

**ಗೊಟ್ಟ₆** 'ಕೊಟ್ಟ₇' ನೋ.

**ಗೊಟ್ಟ₇** (ನಾ). ಒಂದು ಬಗೆಯ ಔಷಧಿಗಿಡ : "ತನುಚ್ಛಾಯಾ-ಗೊಟ್ಟ, ಜಾಲಿ" (ಒಷಧಿ. ೬೫) : ಪಾರ್ವಾಲಿ, ಕೊಡಚ, ಗೊಟ್ಟ (ವ್ಯಕಗಿ. ೭೯-೦೬೬). [ ? ]

**ಗೊಟ್ಟಂಗುಡಿ** (ಕ್ರಿ). (ಗೊಟ್ಟದಲ್ಲಿ ಹಾಕಿದಂತೆ) ಬಲವಂತದಿಂದ ಕುಡಿ; ಅತಿಯಾಗಿ ಕಂಡಿ (?) : ಪುಡಿಯೊಳ್ಪೊರಳ್ಚಿಯುಂ ಮೆಯ್ಯಡಗಂ ತಿಱಿತಿಱಿದು ತಿಂದು ಗೊಟ್ಟಂ [ಪಾಠಾಂ. ಲ್ಲಂ] ಗುಡಿದುಂ ನೆತ್ತರನೆಂತುಂ ಓಡಿಂಬರಿವು ತಣಿದನಿಲ್ಲ ದುಶ್ಶಾಸನನಂ (ಗದಾಯು. ೫-೩).

[ ಗೊಟ್ಟ₁ ( < ಕೊಟ್ಟ₁) + ಕುಡಿ₁ ]

**ಗೊಟ್ಟಂಗುಡಿಯಿಸು** (ಕ್ರಿ). ಗೊಟ್ಟದ ಮೂಲಕ ಕುಡಿಸು ; ಬಲವಂತವಾಗಿ ಬಾಯಿಗೆ ಹೊಯ್ಯು : ಕರವೆ ಕರಗಿಸಿದ ಕಾಳಾಯಸರಸಮ ನೊಟ್ಟಯಿಸಿ ಗೊಟ್ಟಂಗುಡಿಯಿಸುತ್ತೆ (ಅಜಿಪು. ೧೧-೧೦ ವ).

[ ಗೊಟ್ಟ₁ ( < ಕೊಟ್ಟ₁) + ಕುಡಿಯಿಸು ]

**ಗೊಟ್ಟಂಗೊಳ್** (ಕ್ರಿ). (ನೀರು ತುಂಬಿದ) ಮರದ ಪಾತ್ರೆಯನ್ನು ತೆಗೆದುಕೊಳ್ಳು : ಅಂತು ತೇಗಿ ಗೊಟ್ಟಂಗೊಂಡು ಕೈದೊಳೆದು ಗೃಹೀತ ತಾಂಬೂಲನಾಗಿ ಸಂತೋಷಂಬಟ್ಟು (ದಶಕು. ೧೨-೧೩೧ ವ).

[ ಗೊಟ್ಟ₁ ( < ಕೊಟ್ಟ₁) + ಕೊಳ್₁ ]

**ಗೊಟ್ಟಂಗೊಱೆ** (ಕ್ರಿ). (ಗೊಟ್ಟದ ಒಳಗಿನ ರಂಧ್ರದಂತೆ) ದೊಡ್ಡ ರಂಧ್ರವಾಗುವ ಹಾಗೆ ಟೊಳ್ಳುಮಾಡು : ಸೀಳ್ವ ಪೋಟ್ಟ ಪರವುವ ಗೊಟ್ಟಂಗೊಱೆವ . . . ಪೆಱವುಮುಗುರ್ವಪ್ಪ ಚಿತ್ರವಿಧ ವಧೆಯಿಂದಂ (ಶಾಂತಿಪು. ೭-೯೦) : ಪಲ್ಗಳಂ ನುರ್ಗುಗುಟ್ಟುವುದುಂ ಕೈಗಳಂ ಗೊಟ್ಟಂಗೊಱೆವುದುಂ (ಸುಕುಮಾ. ೧೧-೪೭ ವ). [ ಗೊಟ್ಟ₁ ( < ಕೊಟ್ಟ₁) + ಕೊಱೆ₁ ]

**ಗೊಟ್ಟಕೆರೆ** (ನಾ). ನೀರು ಪೂರ್ತಿಯಾಗಿ ಬತ್ತಿಹೋಗಿರುವ ಕೆರೆ : ಕಟ್ಟವರಿಗೂ ಅಳಿದವರಿಗೂ ಗೊಟ್ಟಕೆರೆ ತವರುಮನೆ (ಗಾದ).

[ ಗೊಟ್ಟ₄ ( < ಗೊಡ್ಡು₁) + ಕೆರೆ₂ ( < ಕೆಱೆ) ]

**ಗೊಟ್ಟಕ್ಕಿ** 'ಗೊಟ್ಟಚಟ್ಟಿ' ನೋ.

**ಗೊಟ್ಟಗುಣಿ₁** 'ಗೊಟ್ಟುಗುಂಬಿ' ನೋ.

**ಗೊಟ್ಟಗುಣಿ₂** (ನಾ). (ಉಕ) ನೀರು ಪೂರ್ತಿಯಾಗಿ ಒಣಗಿದ ಕುಳಿ,-ಹೊಂಡ. [ ಗೊಟ್ಟ₄ ( < ಗೊಡ್ಡು₁) + ಕುಣಿ₂ ( < ಕುೞಿ₂) ]

**ಗೊಟ್ಟಚಟ್ಟಿ, ಗೊಟ್ಟಕ್ಕಿ, ಗೊಟ್ಟಚೆಟ್ಟಿ** (ನಾ). ಒಂದು ಬಗೆಯ ಗಿಡ ; ನೆಲಬೇವು : "ಗೌರಿ ಗೊಟ್ಟಚಟ್ಟಿ [ಪಾಠಾಂ. ಕ್ಕಿ, ಚೆಟ್ಟಿ] ಪನ್ನಂಗಿಯೆನೆ ನೆಲಬೇವು" : (ಮಂಗರಾ. ೪೯-೪೫). **ಗೊಟ್ಟಕ್ಕಿ :** ಲೊಕ್ಕಿ ಗೊಟ್ಟಕ್ಕಿ ದಿಂಡಂ ಚಿರಬಿಲ್ವಂ ಬ್ರಹ್ಮವೃಕ್ಷಂ ಕಱಿಕೆ ತಱಿಯದಿಂದೊಪ್ಪುತಿರ್ದತ್ತರಣ್ಯಂ (ಗಿರಿಕ. ೧-೬೨) ತುಂಬುರ ಬನ್ನಿ ಗೊಟ್ಟಕ್ಕಿ ದಿಂಡ (ರುಕ್ಮಾಂಗ. ೯-೩೬). **ಗೊಟ್ಟಚೆಟ್ಟಿ :** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ.

[ ? ]

**ಗೊಟ್ಟಚೆಟ್ಟಿ** 'ಗೊಟ್ಟಚಟ್ಟಿ' ನೋ.

**ಗೊಟ್ಟವಾಡಿ** (ನಾ). ಒಂದು ಸ್ಥಳದ ಹೆಸರು ; ೲನಂಜನಗೂಡು ತಾಲ್ಲೂಕಿನ ಈಗಿನ ಗಟ್ಟವಾಡಿ: ಗೊಟ್ಟವಾಡಿಯ ಕಲಿಭಯರ ಹೊಯ್ಸಳಗಾವುಣ್ಡ (ಎಕ. III, ನಂಜನ. ೯೯-೫ : 898).

[ ಗೊಟ್ಟ₀ + ವಾಡಿ₁ ( < ಪಾಡಿ₁) ]

**ಗೊಟ್ಟಾಟ** 'ಗೊಡ್ಡಾಟ' ನೋ.

**ಗೊಟ್ಟಿ₁, ಗೋಷ್ಠಿ** (ನಾ). ೧. ಜೊತೆ ; ಒಡನಾಟ ; ಸಾಹಚರ್ಯ : "ಸಂಗತಿಯೊಳಕ್ಕು ಕವಿಜನಪುಂಗವರಿಂ ಗೊಟ್ಟಿ ಗೋಷ್ಠಿಯೆನುತುಂ ಬುವಿಯೊಳ್" (ಕವಿಕಂ. ೨೨೪) : ಕೆಳೆಯುಂ ಗುಱಿಯುಂ ಗೊಟ್ಟಿಯುಮಳವಿಗೆ ಪಿರಿದಾಗೆ ತನಗೆ ದುರ್ಯೋಧನನೊಳ್ (ಪಂಪಭಾ. ೨-೫೮) ; ಬಸನಿಗಳ ಗೊಟ್ಟಿ ತನಗಾಗಿಸೆ ಸಂತಸದೊದವನುತ್ತಮರ ಗೊಟ್ಟಿ ಕರಂ ಕಸರಿಸಿರ್ದಿರ್ದಯನೇಂ ಸೊಗಯಿಸುಗುಮೆ ಚೋರಂಗೆ ಚಂದ್ರಿಕಾವಿಸ್ತಾರಂ (ವರ್ಧಪು. ೨-೩೫). ೨. ಕೂಟ; ರತಿಕ್ರೀಡೆ: ಒರ್ವಳ ಮೊಗದ ನುಣ್ಪಂಗಂ ಕಣ್ಣ ಬೆಳ್ಪಂಗ ಮೊತ್ತಯಿಟ್ಟು ಗೊಟ್ಟಿಗಿರಲ್ಪೋಗಿ ಪರಿತಂದು (ಲೀಲಾವ. ೨-೧೦೭ ವ). ೩. ಗುಂಪು; ಸಮೂಹ; ಸಭೆ: ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯ ಲಂಪಿನಿಂಪುಗಳ್ಗಾಗರವಾದ ಮಾನಸರೆ ಮಾನಸರ್ (ಪಂಪಭಾ. ೪-೨೯) : ಚಟ್ಟಱಿದು ಘಟಮನರ್ಚಿಸಿ ನೆಟ್ಟನೆ ಪೊಸಪೂಗಳಿಂದಮನಿತುಂ ಮಧುವಿಂ ಬೊಟ್ಟಿಟ್ಟು ಮದ್ಯಪಾನದ ಗೊಟ್ಟಿ[ಪಾಠಾಂ. ಗೋಷ್ಠಿ]ಗೆ ಚಷಕಮನೆ ಕೊಂಡು ಕಾಂತೆಯರೆಸೆದರ್ (ಕುಸುಮಾ. ೧೧-೧೫೮): ಹುರುಡಿನ ಮನೆ ಪೋರಟೆಯ ನಿಕೇತನ ಗರುವರ ಗೊಟ್ಟಿ ಗಾವಿಲರ ನೆರವಿಯಿಲ್ಲದ ಗಣಿಕೆಯರಾವಾಸ ಗಳ್ನಿರುಪಮವೆನಲೊಪ್ಪುತಿಹವು (ಅಂಜನ. ೩-೯೩). ೪. ಮಾತುಕತೆ ; ಸರಸಸಲ್ಲಾಪ ; ಹರಟೆ: ಅನ್ನೆಗಂ ಕಾಷ್ಠಕೂಟನೆಂಬ ಬೆಸದವಂ ಪುಳ್ಳಿಯ ಪೊಱೆಯುಂ ಪೊತ್ತು ಪೊಬಲ್ಗೆ ವರ್ಪೊನಂ ಕಂಡಾತನೊಡನೆ ಗೊಟ್ಟಿಯೊಳ್ ಬಂದು (ವಡ್ಡಾರಾ. ೭೬-೨೪) : ಕಣ್ಣಱಿದು ಗೊಟ್ಟಿಗೆಯ್ದೆ ಗೊಟ್ಟಿಗಂ ಬಗೆಯಱಿದು ನಗುವ ನಗೆಗಂ . . . ಮನಂಬೆಚ್ಚು ಪತ್ತೆಪೊಯ್ದಂತಾಗಿರೆ (ಶಾಂತಿಪು. ೩-೫೯ ವ) : ನಾನಾರತ್ನದಿನೊಪ್ಪುಗುಂಪಾನಾಡಕ್ಕರದ ಗೊಟ್ಟಿಯಿಂ ಪಂಡಿತರಿಂ (ಮೊಂಕಶಾ. ೧೯೪೪. ಬಂಕಾಪುರ. ೨೧-೧೫ : 1069). **ಗೋಷ್ಠಿ :** ೫. (ಕರಾ) ಉಸಾಬರಿ ; ಗೊಡವೆ : ನಮಗೆ ಅವರ ಗೋಷ್ಠಿಯೇ ಬೇಡ (ರೂಂ). ೬. ಸಾರ್ವಜನಿಕ ಕೆಲಸಗಳಿಗಾಗಿ ಕೊಟ್ಟ ದತ್ತಿ, ದಾನಗಳ ವಿನಿಯೋಗವನ್ನು ನೋಡಿಕೊಳ್ಳುವ ವ್ಯಕ್ತಿ ; ಧರ್ಮದರ್ಶಿ : ನಾಗದೇವನೀ ಧರ್ಮದೊಳ್ ಗೋಷ್ಠಿ ಆದೋನ್ (ಎಇ. VII, ೨೦೦-೨೨ : 865).

ಗೊಟ್ಟಿಗೆವರ್=ಗೋಷ್ಠಿಗೆ ಬರು ; ಜತೆಗಾಗಿ ಬರು : ಒಂದೆಡೆಯೊಳ್ ನಾಲ್ವರಯ್ವರ್ ಗಾಟಿಗ್ದೊಟ್ಟಿರಿರ್ದಲ್ಲಿಗೊರ್ವನೆಗ್ಗಂ ಗೊಟ್ಟಿಗೆ ವಂದು ಕಣ್ಣೆಱಿಯದೆ ಸೋಂಕೆಯುಂ (ಪಂಪಭಾ. ೪-೯೩ ವ). [ < ಸಂ. ಗೋಷ್ಠೀ ]

**ಗೊಟ್ಟಿ$_{2}$** 'ಕೊಟ್ಟಿ$_{7}$' ನೋ.

**ಗೊಟ್ಟಿಗಾಣ** (ನಾ). ೧. ಮೇಳಸಂಗೀತ; ಗೋಷ್ಠಿಗಾನ: ಲತಾಗೃಹಮಿಲ್ಲದ ಗೊಟ್ಟಿಗಾಣಮಿ[ಪಾಠಾಂ. ರಿ]ಲ್ಲದ ಕಡೆವಟ್ಟ ಸೂಳೆವನೆಯಿಲ್ಲದವಿಲ್ಲವು ಸೂಳೆಗೇರಿಯೊಳ್ (ಮಲ್ಲಿಪು. ೨-೩೬): (ಸೂಕ್ತಿಸು. ೪-೧೬೩ ನೋ). ೨. ಗೋಷ್ಠಿಗಾನದಲ್ಲಿ ಭಾಗವಹಿಸುವವನು : ಗೊಟ್ಟಿಗಾಣರಂತಿರೆ ಮಱಿ ದುಂಬಿ ಮೇಳದವರಂತಿರೆ ಸಾರಿಕೆ ರಾಜಗೇಹದಂತಿರೆ ಕೊಳನಲ್ಲಿ ತಾಮರಸರಂತಿರೆ ತಾಮರಸಂಗಳೊಪ್ಪುಗುಂ (ಪಂಪಭಾ. ೩-೩೮).

[ ಗೊಟ್ಟಿ$_{2}$ + ಗಾಣ$_{3}$ ]

**ಗೊಟ್ಟಿಗಾಳೆಗ** (ನಾ). ಗುಂಪುಗಾಳಗ; ತುಮುಲಯುದ್ಧ : ಪೂಣ್ದನಿತನಂತರಂ ಪೊಳ್ತೇರೆ, ಪೊಳ್ತರೆಯ ಕದಿರುಗಳಿಟ್ಟಣಿಸಿದ್ಯಕಿಲಿಗೆ ಗೊಟ್ಟಿಗಾಳೆಗವಾಗಿ, ಸೋಲ್ತ ಮಂಜಿನ ಸೇನೆ (ಶ್ರೀರಾಮಾ. ೨೦೦-೧೬೩).

[ ಗೊಟ್ಟಿ$_{1}$ + ಕಾಳೆಗ ]

**ಗೊಟ್ಟಿಗಾಱ** (ನಾ). ಗೋಷ್ಠಿಗೆ ಸಂಬಂಧಿಸಿದವನು; ಸಂಗೀತ, ನಾಟ್ಯ ಮುಂತಾದ ವಿನೋದ ಗೋಷ್ಠಿಗಳನ್ನು ಏರ್ಪಡಿಸುವವನು ಅಥವಾ ಅದರಲ್ಲಿ ಭಾಗವಹಿಸುವವನು : ಗರುವರ ಗೊಟ್ಟಿಗಾಱ [ಪಾಠಾಂ. ಣ]ರ ನೆಗೞ್ತೆಯ ಮಿಂಡರ . . . ಆಗರಮೆನೆ ಪೆಂಪು ಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇರಿಗಳ್ (ಅಭ್ಯಕಾ. ೪೨).

[ ಗೊಟ್ಟಿ$_{1}$ + -ಗಾಱ (<-ಕಾಱ) ]

**ಗೊಟ್ಟಿಗೆ$_{1}$** (ನಾ). ೧. ಸಭೆ; ಗೋಷ್ಠಿ : ಆಮುವೊಂದುದಿವಸಮಾತನಂ ಪರಸಲ್ ಪೋಗಿ ಗೊಟ್ಟಿಗೆಯೊಳ್ ಕುಳ್ಳಿರೆ ಗೊಟ್ಟಿಗೇಯಮಾಗೆ (ಶಾಂತಿಪು. ೨-೨೦ ವ). ೨. ಒಂದು ಬಗೆಯ ಆಟ : ಉಯ್ಯಾಲೆ ಜೋಜೋ ಅಳವಾಳ ಗೊಟ್ಟಿಗೆ ಅಟ್ಟಿಗೆ ಮುಟ್ಟಿಗೆ (ವಿಶ್ವಾಸು. ೧೯-೩).

[ <ಸಂ. ಗೋಷ್ಠಿಕ ]

**ಗೊಟ್ಟಿಗೆ$_{2}$** 'ಗೋಟಿಗೆ' ನೋ.

**ಗೊಟ್ಟಿಗೆಯ್** (ಕ್ರಿ). ೧. ಸಭೆ ಸೇರು; ಗೋಷ್ಠಿ ನಡಸು. ೨. ಸರಸಸಲ್ಲಾಪವನ್ನು ಮಾಡು : ಕಣ್ಣಱಿದು ಗೊಟ್ಟಿಗೆಯ್ವ ಗೊಟ್ಟಿಗಂ . . . ಮನಂಬೆಚ್ಚು ಪತ್ತೆ ಪೊಯ್ದಂತಾಗಿರೆ (ಶಾಂತಿಪು. ೩-೫೯ ವ): ಅಂತಾತನಂ ಮೇಳಸುತ್ತಮಂಗಡಿಗಳೊಳಮರಮನೆಗಳೊಳಮೂಟಪಾಟದೆಡೆಗಳೊಳಂ ಪರಿಚಯದಿಂ ಶೃಂಗಾರಕಥಾರಸದೊಳಂ ಗೊಟ್ಟಿ [ಪಾಠಾಂ. ಗೋಷ್ಠಿ] ಗೆಯ್ಯುತ್ತಿರೆ (ಬಂಹರಿ. ೩-೩೧ ವ). [ ಗೊಟ್ಟಿ$_{1}$ + ಕೆಯ್$_{1}$ ]

**ಗೊಟ್ಟಿಗೇಯ** (ನಾ). ಮೇಳಗಾನ; ಸಮೂಹಗಾನ : ಆಮುವೊಂದು ದಿವಸಮಾತನಂ ಪರಸಲ್ ಪೋಗಿ ಗೊಟ್ಟಿಗೆಯೊಳ್ ಕುಳ್ಳಿರೆ ಗೊಟ್ಟಿಗೇಯಮಾಗೆ (ಶಾಂತಿಪು. ೨-೨೦ ವ). [ ಗೊಟ್ಟಿ$_{1}$ + ಗೇಯ ]

**ಗೊಟ್ಟಿರ್** (ಕ್ರಿ). ಗೋಷ್ಠಿಯಲ್ಲಿರು; ಜತೆಯಲ್ಲಿರು; ಸಹವಾಸಮಾಡು: ನೆರೆದೆಮ್ಮೊಳಿಂತು ಸದ್ಭಾವದೆ ಗೊಟ್ಟಿರಲ್ ಬಯಸಿ ಬಂದಯದೀಗಳ್ ದೊಳ್ಳಿತಾಯ್ತು (ಪಂಪಭಾ. ೪-೯೬). [ ಗೊಟ್ಟಿ$_{1}$ + ಇರ್$_{1}$ ]

**ಗೊಟ್ಟು$_{1}$** 'ಗೊಡ್ಡು$_{1}$' ನೋ.

**ಗೊಟ್ಟು$_{2}$** 'ಕೊಟ್ಟೆ$_{1}$' ನೋ.

**ಗೊಟ್ಟುಕಾಲ** (ನಾ). ಮಳೆಯಿಲ್ಲದಿರುವ ಕಾಲ; ಅನಾವೃಷ್ಟಿ; ಬರಗಾಲ: (ಆ). [ ಗೊಟ್ಟು$_{1}$ (<ಗೊಡ್ಡು$_{1}$) + ಕಾಲ ]

**ಗೊಟ್ಟುಗಟ್ಟು** (ಕ್ರಿ). ಒಣಗಿಹೋಗು; ಮುರುಟಿಹೋಗು; ವ್ಯರ್ಥವಾಗು : ಮದನನ ಕೆಯ್ದುಕೆಯ್ದು ಕರಶಾಪೆ ಮುರುಂಟಿದುದೆಯ್ದೆ ಗೊಟ್ಟುಗಟ್ಟಿದುದು ಸರಲ್ಗೆ ಬೀಗಿ ನನೆದೋಱುವ ಪೂಗುಡಿ . . . ರಾಮಚಂದ್ರಮುನಿನಾಥನ ಶಾಂತಿರಸಾತಿರೇಕದಿಂ (ಅನಂಪು. ೧-೨೪).

[ ಗೊಟ್ಟು$_{1}$ (<ಗೊಡ್ಡು$_{1}$) + ಕಟ್ಟು$_{1}$ ]

**ಗೊಟ್ಟುಗುಳಿ** 'ಗೊಟ್ಟುಗುೞಿ' ನೋ.

**ಗೊಟ್ಟುಗುೞಿ, ಗೊಟಗುಣಿ, ಗೊಟ್ಟಿಗುಣಿ$_{1}$, ಗೊಟ್ಟುಗುಳಿ** (ನಾ). ಒಂದು ಬಗೆಯ ಆಟ; ಅಟ್ಟುಗುಳಿ ಆಟ : ಚದುರಂಗದ ನೆತ್ತದ ಗೌರವದ ಗೊಟ್ಟುಗುೞಿಯುಂ ಮುಟ್ಟಂ ಮನೆಯೊಳ್ ಪದೆದಿಂಸುಗೆ ತಾನುಂ ಕಲ್ತುದು ಗಣಿಕೆಗಮದನೆ ಕಲಿಪುದತಿನಯದಿಂದಂ (ಮದಪ. ೦೦-೩೦): ಅಟ್ಟುಗೂಟು ಗೊಟ್ಟುಗುೞಿ ಮೊದಲಾಗೆಸಪೊಟ್ಟುಗಳೆಯ ನೊಡಗೂಡಿ ಪುಟ್ಟಿದಂದು ಮೊದಲಾಗಿ ಮಾಡುವ ಸಖಿ ನಿಟ್ಟಿಸಿ ನುಡಿದಳಿಂತೆಂದು (ಅಂಜಪ. ೩-೦೪೬). **ಗೊಟಗುಣಿ** : ಹಗಲೆಲ್ಲ ಬೀದಿಯು ಮುದುಕಿಯರೊಡನೆ ಚವಂಗ, ಗೊಟಗುಣಿ ಆಡುವುದೇ ಅಜ್ಜಿಯ ಕೆಲಸ (ನದೀಪ. ೬೯). **ಗೊಟ್ಟಿಗುಣಿ$_{1}$** : ಹುಡುಗಾಟ ಗೊಟ್ಟಿಗುಣಿ ಕುರಿಕಳ್ಳ . . . ಬಲುಮರಿ ಒಂದೊಂದು ಬಾಲಾಟದಲ್ಲಿ ನಲಿದು (ವಿಶ್ವಾಸು. ೧೯-೩). **ಗೊಟ್ಟುಗುಳಿ**: ಏಣಾಕ್ಷಿಯೊರ್ವಳಾಡುವ ಗೊಟ್ಟುಗುಳಿಯು ಕಟ್ಟಾಣಿಮುತ್ತುಗಳೊಪ್ಪಿದುವು (ಚಂಪ್ರಸಾಂ. ೧೮-೯೯). 'ಅಟ್ಟುಗುಳಿ' ಪರಾ.

[ ಗೊಟ್ಟು$_{2}$ (<ಕೊ$_{1}$) + ಕುೞಿ$_{2}$ ]

**ಗೊಟ್ಟುವಳ್ಳ** (ನಾ). ಒಣಗಿಹೋದ ಗುಂಡಿ,-ಹಳ್ಳ : ಅಂತವಳಣುಗನಂ . . . ಮಡಿಪಿ ಕಾಲ್ವಿಡಿದು ಸರಸರನೆಳೆದಾರುಮಱಿಯದಂತೊಂದು ಗೊಟ್ಟುವಳ್ಳದೊ[ಪಾಠಾಂ. ಗೊಂಟನೊ, ಗೋಂಟುವಳ್ಳದೊ]ಳಿಕ್ಕಿ ಪುಲ್ಲಂ ಕವಿಸುತಾಗ್ನೇಯಸ್ನಾನಮೆಸಗಿ (ವೃಷವಿ. ೦೪-೮೦ ವ).

[ ಗೊಟ್ಟು$_{1}$ (<ಗೊಡ್ಡು$_{1}$) + ಪಳ್ಳ ]

**ಗೊಟ್ಟೆ$_{1}$** 'ಕೊಟ್ಟೆ$_{1}$' ನೋ.

**ಗೊಟ್ಟೆ$_{2}$** 'ಗೊಡ್ಡು$_{1}$' ನೋ.

**ಗೊಟ್ಟೆ$_{3}$** (ನಾ). (?) : ಜಗಭಗದ ಊರ್ಧ್ವದಲ್ಲಿ ಮೋಹನದ ಗೊಟ್ಟೆ ಹುಟ್ಟಿತ್ತು, ಗೊಟ್ಟೆಯ ಪೂರ್ವದಲ್ಲಿ ಕಮಲವರಳಿತ್ತು ಕಮಲಹೃತ್ಕಮದಲ್ಲಿ ಬಿಂದುವ ವ್ಯಂಜನದಿಂದ ಗುರುಲಿಂಗರೂಪಾಗಿ ಪುಲ್ಲಿಂಗ ಚರಿಸಿತ್ತು (ದಾಸೋಸಂ. ೩೩). 'ಕೊಟ್ಟೆ$_{1}$' ಪರಾ. [ ? ]

**ಗೊಟ್ಟೆಗಡಿ** (ನಾ). ಒಂದು ಗ್ರಾಮದ ಹೆಸರು: ಪಶ್ಚಿಮತಃ ಮುಕ್ಕೊಡಲ್ ನಾಮಗ್ರಾಮಃ ಉತ್ತರತಃ ಗೊಟ್ಟೆಗಡಿ ನಾಮಗ್ರಾಮಃ (ಮೈಅರಿ. ೧೯೩೩, ೪೦-೬೦: 961): ಗೊಟ್ಟೆಗಡಿಯ ಭದ್ರಯ್ಯನ ಕಾಲ ಕನ್ನಯ್ಯ ಕಟ್ಟಿದ (ಎಕ. VIII, ಸೊರಬ. ೪೪-೧೦ ; 971). [ ಗೊಟ್ಟೆ$_{0}$ + ಗಡಿ$_{1}$ ]

**ಗೊಟ್ಟೆಗೆಱೆಪಳ್ಳ** (ನಾ). ಒಂದು ಹಳ್ಳದ ಹೆಸರು : ದಕ್ಷಿಣತಃ ಪರದಗೆಱೆ ಪಳ್ಳಂ . . . ಉತ್ತರತೋ ಗೊಟ್ಟೆಗೆಱೆಪಳ್ಳಂ (ಮೈಅರಿ. ೧೯೪೪, ೦೩-೪೦ : 725). [ ಗೊಟ್ಟೆಗೆಱೆ$_{0}$ + ಪಳ್ಳ ]

**ಗೊಟ್ಟೆಯಣ್ಣಗಾವುಂಡ** (ನಾ). ಒಬ್ಬಾತನ ಹೆಸರು: ಗೊಟ್ಟೆಯಣ್ಣಗಾವುಣ್ಡನೂರಳಿವಿನೊಳು ಕಾದಿ ಸತ್ತು ಸ್ವರ್ಗಸ್ತನಾದ (ಎಕ. IX, ಚನ್ನಪ. ೧೩೯-೪ ; ಸು. 904 ?).

[ ಗೊಟ್ಟೆಯಣ್ಣ$_{0}$ + ಗಾವುಂಡ (<ಗಾಮುಂಡ) ]

**ಗೊಟ್ಟೆವಡ್ಡಿ** (ನಾ). ಒಂದು ಸ್ಥಳದ ಹೆಸರು: ಗೊಟ್ಟೆವಡ್ಡಿಯ ಗೋವುಣ್ಡುಗಳಂ ಸೆಲಾಂಭ್ಯಯರುಂ ಆನೆಯುರು ಕೂಡಿ ಗೊವುಣ್ಡುಂಗೆಯ್ದುವದರ್ಕ್ಕೆ (ಎಕ. III, ನಂಜನ. ೧೯೯-೬ ; ?). [ ? ]

**ಗೊಟ್ಟೆಱೆಯ** (ನಾ). ತುರುಹಟ್ಟಿಯ ಯಜಮಾನ (?) : ಗೊಟ್ಟೆಱೆಯರಮ್ಬಲಕೆ ಕೊಟ್ಟುದು ಆಯುಷ್ಯಮ್ಬು ಕಟನಿ (ಮೈಅರಿ. ೧೯೨೬, ೧೦೦-೮ : ೨ನೆಯ ಶತ). [ ಗೊಟ್ಟ$_{6}$ (<ಕೊಟ್ಟ$_{7}$) + ಎಱೆಯ ]

**ಗೊಡಗು, ಗೊಡಂಗು** (ನಾ). ೧. (ಬಾವಿಯ ಅಥವಾ ಹಗೇವಿನ ಒಳಗೆ ಆಗಿರುವ) ಡೊಗರು : (ಆ). ೨. ಗುಂಡಿಯಲ್ಲಿ ನಿಂತಿರುವ ನೀರು; ಬಗ್ಗಡ : ದನಕ್ಕೇಕೆ ತಿಳಿನೀರು ಎಂದು ರಾಡಿನೀರನ್ನೂ ಗೊಡಗನ್ನೂ ಕುಡಿಸಬಾರದು (ಗೋಗ್ರಾಸ. ೩೦). **ಗೊಡುಗು** : (ಆ). [ ? ]

**ಗೊಡಚಿ$_{1}$** 'ಕೊಡಂಚಿ' ನೋ.

**ಚಕ್ಕುಮೊಕ್ಕು**(ನಾ). ಒಂದು ಅನುಕರಣ ಶಬ್ದ : [illegible]ದ ಶವಸಂಘಾತಂಗಳಂ [illegible] ಬೇಯ ತಿಂಬಂದಂ ತನ್ನ ಮನಸ್ಸಗುವಿನಸುವಿನಂ [illegible] ನೋಡಿದಂ (ಪಂಪಭಾ. ೧೩-೭೧).

**ಚಕ್ಕುಲ** 'ಚಕ್ಕಳ$_2$' ನೋ.

**ಚಕ್ಕುಲಗುಲಿ** 'ಚಕ್ಕಲಗುಳಿ' ನೋ.

**ಚಕ್ಕುಲಿ, ಚಕ್ಕಲಿ, ಚೆಕ್ಕುಲಿ** (ನಾ). ಅಕ್ಕಿ, ಕಡಲೆ ಮತ್ತು ಉದ್ದಿನ ಹಿಟ್ಟಿಗೆ ಉಪ್ಪು, ಕಾರ ಮುಂತಾದುವುಗಳನ್ನು ಬೆರೆಸಿ ಕರಿದು ಮಾಡುವ ಒಂದು ಬಗೆಯ ಚಕ್ರಾಕಾರವಾದ ತಿಂಡಿ: ಶಷ್ಕುಲಿ – ಚಕ್ಕುಲಿ (ಶಮದ. ೨೬೩ ಪ್ರಯೋ); ನಾಡೆ ರುಚಿವೆರಸಿದ ಲಡ್ಡುಗೆ ಚಕ್ಕುಲಿ ಗಾರಿಗೆ ಪೂರಿಗೆ ಮೊದಲಾಗಿರ್ದ ಪಲವು ಭಕ್ಷ್ಯಮಂ . . . ಮೆಲ್ಲು (ಧರ್ಮಾಮೃ. ೧-೧೪೭): ತಜಗು ಚಕ್ಕುಲಿ ಹೂಸಣಂಬ ಹೂರಿಗೆಗಳಂ . . . ತೆಜಹಿಲ್ಲೆಸಸಿ ಗಡಣಿಸುತ್ತ (ಸಿದ್ಧರಾ. ೮-೮೫): ನವಗ್ರಹ ಹೋಮಕ್ಕೆ ಸಲಗೆವೊಂದು ಘಳಪಳಿಗೆಯು ಚಕ್ಕುಲಿಗೆ ಕೊಳಗ ಹನ್ನೊಂದು (ಎಕ. III, ತಿರುಮ. ೯೭-೫೩ : 1276). **ಚಕ್ಕಲಿ :** ಬುರುಬುರಿ ಚಕ್ಕಲಿ ಗಿಲಿಗಿಂಚಿ ಮಾಡಿದರು (ಸಿದ್ಧಪು. ೧೭-೩೫). **ಚೆಕ್ಕುಲಿ :** ಚೆ[ಪಾಠಾಂ. ಚ]ಕ್ಕುಲಿ, ದೆಕ್ಕಾಳಂ (ಶಬ್ದಾನು. ೬೭ ವ್ಯಾಖ್ಯಾ). [ <ಸಂ. ಶಷ್ಕುಲೀ, ಶಸ್ಕುಲೀ ]

**ಚಕ್ಕುಹುಂಡಿ** (ನಾ). ಬ್ಯಾಂಕಿನಲ್ಲಿ ಠೇವಣಿದಾರನು ತನ್ನ ಹೆಸರಿಗಿರುವ ಹಣದಲ್ಲಿ ಇಂತಿಷ್ಟನ್ನು ಇಂಥವರಿಗೆ ಕೊಡಬೇಕೆಂದು ಬರೆದು ಕೊಡುವ ಅಧಿಕಾರಯುಕ್ತವಾದ ಪತ್ರ: ನಗದುಪಣದ ಜೊತೆಯಲ್ಲಾಗಲಿ ಅಥವಾ ಕ್ರಾಸ್ ಆರ್ಡರ್ ಎಂಬ ಚಕ್ಕುಹುಂಡಿಗಳ ಮೂಲಕವಾಗಿಯಾಗಲೀ ಪಾವತಿ ಮಾಡುವಂತೆ ಇಂಡಾರ್ಸ್ ಪಟಾ ಬರೆದು ಗ್ರಾಮಂಗಳಿಗೆ ರವಾನಿಸಲ್ಪಡುವುದು (ಗ್ರಾಮಾಕ. ೬).

[ ಚಕ್ಕು$_4$ (<ಚೆಕ್ಕು$_3$) + ಹುಂಡಿ$_2$ ]

**ಚಕ್ಕುಳಿ** (ಕ್ರಿ). ಚಕ್ಕೆ ಅಥವಾ ಪದರ ಕಳಚು : ಕಲುಕುಟಿಗ ಮುಟ್ಟೆ ಚಕ್ಕುಳಿವಲ್ಲಿ [ಪಾಠಾಂ. ಚಕ್ಕೆಳುವಾಗ] ಪ್ರಾಣಲಿಂಗ ಭಿನ್ನವಾಯಿತ್ತೆ . . . ಪೂಜಾಲಿಂಗ ಭಿನ್ನವಾಯಿತ್ತಲ್ಲದೆ (ಚನ್ನವ. ಕ. ೨೦೭-೪೪೪).

[ ಚಕ್ಕೆ (<ಸೆಕ್ಕೆ$_1$) + ಉಳಿ$_1$ (<ಉಚಿ$_1$) ]

**ಚಕ್ಕುಳಿಗುಳಿ** 'ಚಕ್ಕಲಗುಳಿ' ನೋ.

**ಚಕ್ಕೆ** 'ಸೆಕ್ಕೆ$_1$' ನೋ.

**ಚಕ್ಕೆಗಲ್ಲು** (ನಾ). ತೆಳ್ಳಗೆ ಚಕ್ಕೆಯಂತಿರುವ ಕಲ್ಲು : (ಕ).

[ ಚಕ್ಕೆ (<ಸೆಕ್ಕೆ$_1$) + ಕಲ್ಲು (<ಕಲ್$_3$) ]

**ಚಕ್ಕೊತ್ತ** 'ಚಕ್ಕವತ್ತಿ' ನೋ.

**ಚಕ್ಕೊತ್ತಿ** 'ಚಕ್ಕವತ್ತಿ' ನೋ.

**ಚಕ್ಕೊತ್ತಿಸೊಪ್ಪು** 'ಚಕ್ಕೋತಸೊಪ್ಪು' ನೋ.

**ಚಕ್ಕೋಟಿ** 'ಚಕ್ಕವತ್ತಿ' ನೋ.

**ಚಕ್ಕೋತ$_1$** 'ಚಕ್ಕವತ್ತಿ' ನೋ.

**ಚಕ್ಕೋತ$_2$, ಚಕೋತ$_2$** (ನಾ). ಈಳೆ ಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಹಣ್ಣು : ಕಿತ್ತಳೆ ಕಿಜುಕಿತ್ತಳೆ ಚಕ್ಕೋತ ಮಾದಳ [illegible] . ಸಾರ್ವರ್ತುಕವಾದ ಫಲಂಗಳಂಳ್ಳ ತರುನಿಕರಂಗಳುಂ (ವಿವೇಕ. [illegible] ಹಣ್ಣು ರಸಬಾಳೆ ದಾಳಿಂಬೆ [illegible] " (ಅಪಲ್ಕ. ೪೮-೧೬); ಈ ಚಕ್ಕೋತದ ತೊಳೆ ಬಿಡಿಸಿ [illegible]ಗೆ ಹಾಕ್ಕೋತಾ ನಿಂತಿರು (ಬಿನಾರಿ. ೧). **ಚಕೋತ$_2$ :** ಚಕೋತದ [illegible]

[ [illegible], ಚಕೋತ್ರ, [illegible] ]

**ಚಕ್ಕೋತಸೊಪ್ಪು, ಚಕ್ಕೊತ್ತಿಸೊಪ್ಪು** (ನಾ). ಒಂದು ಬಗೆಯ ತರಕಾರಿ ಸೊಪ್ಪು; ಚಕ್ರವರ್ತ : (ಮೈಜಿಗಿ. ೧೦-೧೭೫). **ಚಕ್ಕೊತ್ತಿಸೊಪ್ಪು :** ಚಕ್ಕೊತ್ತಿಸೊಪ್ಪು, ಮೆಂತ್ಯದ ಸೊಪ್ಪುಗಳನ್ನು ಸಸಿಗಳಲ್ಲೇ ಕಿತ್ತು ಅಡಿಗೆ ಮಾಡಿದರೆ ಮೇಲು (ತರಚಿ. ೧೭). [ಚಕ್ಕೋತ$_1$ (<ಚಕ್ಕವತ್ತಿ)+ಸೊಪ್ಪು$_3$]

**ಚಕ್ಬಂದಿ** 'ಚಕಬಂದಿ' ನೋ.

**ಚಕ್ಯಾರ** (ನಾ). ದೇವಾಲಯದ ನರ್ತಕಿ; ದೇವದಾಸಿ: ತಮಿಳುನಾಡು ಆಂಧ್ರಗಳ ದೇವದಾಸಿಯರು, ಕೇರಳದ ಚಕ್ಯಾರರು ಈ ವರ್ಗಕ್ಕೆ ಸೇರಿದವರು (ಭಾರದ. ೫೫೧). [ ? ]

**ಚಕ್ರ$_1$** (ನಾ). ೧. ಗಾಲಿ : "ಚಕ್ರಂ, ರಥಾಂಗಂ– ಈ ೨ ಗಾಲಿ" (ಹಲಾಯು. ೭೩-೨೯೩); ಭೀಕರ ರಥಚಕ್ರಮಂ ಪಿಡಿದು ನುಂಗಿದಳೊರ್ಮೆಯೆ ಧಾತ್ರಿ ಕೋಪದಿಂ (ಪಂಪಭಾ. ೧೨-೨೦೬) : ಅರಿಸ್ತ್ರೀನಾಚಕ್ರ ಚಕ್ರಂ ಪೊರಳೆ . . . ವೈರಿರಕ್ತಾಂಬುವನೆ ನಿಜಯಶೋವಲ್ಲಿಗೆತ್ತುತ್ತವಿಪ್ಪಂ (ಎಕ. V, ಹಾಸನ. ೧೩೦-೧೧ ; 1147 ?) ; ಸಾರಥಿ ಹೇಳವನು ಒಂದೆಯೆ ಚಕ್ರವು ಹಯವೇಳು ಕಡಿವಾಣ ಹಾವು (ಇಂದಾಪ. ೨೨೧-೯೨). ೨. ಕುಂಬಾರನ ತಿಗುರಿ : "ಚಕ್ರಮೆನೆ ತಿಗುರಿ" (ಮಂಗರಾ. ೧೧೩-೮) : ಕುಡಿಕೆಗೆ ಬೇಕಪ್ಪ ಕೋಲು ಕೈಚಳಕವು ಚಕ್ರವು ಬೆಂಕಿಯು ಕಾವು (ಇಂದ್ರಾಪ. ೧೪೫-೧೧). ೩. ವರ್ತುಳ ; ಮಂಡಲ ; ಸುತ್ತು : ಅವರೆಲ್ಲರೂ ಒಂದು ಚಕ್ರದಲ್ಲಿ ನಮ್ಮಿಬ್ಬರನ್ನು ನಡುವೆ ಮಾಡಿ ಕುಣಿದು ತಮ್ಮ ತಮ್ಮ ಜೊತೆಗಾರರೊಡನೆ ಸೇರುವರು (ಮೋದಿಮು. ೧೧೩). ೪. ಒಂದು ಬಗೆಯ ವರ್ತುಲಾಕಾರದ ಆಯುಧ; ಚಕ್ರಾಯುಧ : "ಪಾಜುಂಬಳೆ ಚಕ್ರಂ" (ಚತುನಿ. ೭೮). ೫. ವಿಷ್ಣುವಿನ ಕೈಯಲ್ಲಿರುವ ಆಯುಧ; ಸುದರ್ಶನ : "ಚಕ್ರಂ ಸುದರ್ಶನಮೆನಿಕ್ಕು" (ಮಂಗರಾ. ೬-೨೦) ; ಪಿಡಿಯೆಂ ಚಕ್ರಮನೆಂಬ ಚಕ್ರಿಯುನಿಳಾಚಕ್ರಂ ಭಯಂಗೊಳ್ವಿನಂ ಪಿಡಿಯಿಪ್ಪಂ ಕರಚಕ್ರಮಂ (ಪಂಪಭಾ. ೧೦-೨೫) : ಮುರಾರಾತಿ ಹಸ್ತಾಗ್ರದೊಳ್ ಸಂಗತಿವೆತ್ತಿರ್ದತ್ತು ಚಕ್ರಂ (ಜಗವಿ. ೭-೭೧). 'ಚಕ್ರವರ್ತನ'ಪರಾ. ೬. ಭೂಮಿ. 'ಚಕ್ರನಾಥ'ಪರಾ. ೭. ದೇಶ; ರಾಜ್ಯ; ಈ ಪ್ರಸಂಗವನ್ನು "ಧರ್ಮಚಕ್ರಪ್ರವರ್ತನ" ಎಂದು ಕರೆದಿದ್ದಾರೆ. ಇಲ್ಲಿ 'ಚಕ್ರ' ಎಂದರೆ 'ರಾಜ್ಯ' (ಭಾರದ. ೧೯೭). ೮. ಗುಂಪು ; ಮಂಡಲಿ; ಸಮೂಹ : ಬೆದಱ ಪುಗೆ ದಿಶಾಚಕ್ರಮಂ ವೈರಿಚಕ್ರಂ (ಜಗವಿ. ೭-೭೧); ೯. ಪಡೆ; ಸೇನೆ; ಸೈನ್ಯ: "ಪೃತನಾ . . . ಚಕ್ರಂ, ಚಮೂಃ, ವರೂಥಿನೀ, ಅನೀಕಿನೀ, ಅನೀಕಂ–ಈ ೧೦ ಪಡೆ" (ಹಲಾಯು. ೭೫-೩೦೩); ಇದಱೊಳ್ ಶ್ವೇತಾತಪತ್ರಸ್ಥಗಿತ ದಶದಿಶಾಮಂಡಲಂ ರಾಜಚಕ್ರಂ ಪುದಿದಬ್ಬಾಡಿತ್ತು (ಪಂಪಭಾ. ೧೨-೧೫೭). ೧೦. ಸೈನ್ಯವ್ಯೂಹದಲ್ಲಿ ಒಂದು ಪ್ರಕಾರ. 'ಚಕ್ರವ್ಯೂಹ' ಪರಾ. ೧೧. ಸುಳಿ; ತಿರುವು. ೧೨. ದಿಗಂತ; ಕ್ಷಿತಿಜ ; ಆಕಾರ. ೧೩. ಒಂದು ಬಗೆಯ ಪಕ್ಷಿ; ಚಕ್ರವಾಕ : "ಕೋಕಂ ರಥಾಂಗಂ ಪೂಣಾರ್ಪಕ್ಕಿ ಚಕ್ರಂ" (ವಸ್ತುಕೋ. ೪೨-೧೭) : ಪದ್ಮವದನಂ ಕಳ್ವಾಂಘ್ರಿ ಚಕ್ರಸ್ತನಂ . . . ಒಪ್ಪೆ ಕಂನೆಗೆಱೆಯುಂ ಚಟ್ಟಂ ಧನಂಗೊಟ್ಟು ಕಟ್ಟಿಸಿ (ಎಕ. V, ಬೇಲೂರು. ೧೯೩-೧೧೭ ; 1161) ; "ಬಿಷ್ಪದೊಳು ಕ್ರೂರಾಸ್ತ್ರದೊಳು ಗಾಳಿ ತಿಗುರಿಯೊಳು ಸೇನೆಯೊಳು ಕೋಕದೊಳು ಚಕ್ರಮಕ್ಕುಂ" (ಮಂಗರಾ. ೧೬೧-೫೨). ೧೪. ಬಳೆ : "ಗಾಲಿಯೊಳುಂ ಚಕ್ರದೊಳುಂ ಕುಲಾಲನೊಳು ಚಕ್ರಜ[ಬಿ]ಪ್ಪೆ ನಭವೃತ್ತದೊಳುಂ ಮೇಲೆ ರಥಾಂಗದಿ ಬಲೆಯೊಳು ಲಾಲಿಸಲೊಂಭತ್ತು ಚಕ್ರಶಬ್ದಂ" (ನಾನಾಕಂ. ೩೨); "ರಥಾಂಗ ಕುಲಾಲ ಚಕ್ರವ್ಯೂಹಾಗಸ ಖಡ್ಗ ವೃತ್ತ ಬಲೆ ಗಾಲಿಗಳೆಂತಿವು [illegible] " (ನಾನಾರ. ೫೦). ೧೫. ಒಂದು ನಾಣ್ಯದ ಹೆಸರು ; [illegible] : ಚಕ್ರಕ್ಕೆ ಮೊರಂಟಿಯಾದರೆ ಆರು, ಬೈಗೆಯಾದರೆ ನಾಲ್ಕು (ಹೊಸಕ್ಕಿ. ೯೯). ೧೬. [ಯೋಗ] ಶರೀರದೊಳಗಿನ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ ಎಂಬ

ಆರು ಕೇಂದ್ರಗಳು. 'ಷಟ್ಚಕ್ರ' ಪರಾ. ೧೭. [ಜ್ಯೋತಿ] ಯೋಗಗಳಲ್ಲಿ ಒಂದು : ಉದಯಾದ್ಯೇಕ ಗೃಹಾಂತರಿತದೊಳೇೞುಂ ನಿಂದೊಡದುವೆ ಚಕ್ರಂ (ಜಾತಕ. ೧೭-೪). ೧೮. [ಕಾವ್ಯವಿ.] ಚಿತ್ರಕಾವ್ಯ ರಚನೆಯಲ್ಲಿ ಒಂದು ಭೇದ : ಶ್ರೀಮದರ್ಧಭ್ರಮಂ ಚಕ್ರನಾಮಂ ಮುರಜಬಂಧಕಂ (ಕವಿರಾ. ೨-೧೧೦) : ಶರಶೂಲಚಾಪಚಕ್ರಾಸಿರೂಪವಿಭರಥ ತುರಂಗ ಪದಗತಪಾಠಂ ಮುರಜಂ ಗೋಮೂತ್ರಿಕೆ (ಕಾವ್ಯಾವ. ೫೭೯). ೧೯. [ನಾಟ್ಯ] ಸಂಯುತಹಸ್ತಗಳ ಇಪ್ಪತ್ತುನಾಲ್ಕು ಪ್ರಕಾರಗಳಲ್ಲಿ ಒಂದು : ೧. ಅಂಜಲಿ . . . ೧೨. ಶಂಖ. ೧೩. ಚಕ್ರ (ಅಭಿನ. ೪೮). ೨೦. [ಜೈನ] ಪಾರಿವ್ರಾಜಕಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರ ಪದಗಳಲ್ಲಿ ಒಂದು : ಚಕ್ರಮೆಂಬುದು ಧರ್ಮಚಕ್ರಧರನಪ್ಪ ಜಿನಪತಿಯನಾರಾಧಿಸಿ . . . ದಿವ್ಯಚಕ್ರಮುಂ ಪರಮಾತ್ಮಚಕ್ರಮುಂ ಪಡೆಯಲಕ್ಕುಂ (ಚಾವುಂಪು. ೨೯೯). ೨೧. (ಆಲಂ) ಸೊನ್ನೆ ; ಇಲ್ಲದಂತಾಗುವಿಕೆ : ಎಳೆಂಟು ಮನೆಯವರು ಕೂಲಿನಾಲಿ ಮಾಡಿ ಕಾಲ ಕಳೀತಿದ್ದರು. ಬಿಟ್ಟಿಯ ದಾಳಿಯಿಂದ ಅದಕ್ಕೂ ಚಕ್ರ ಬರುತ್ತಿತ್ತು (ಪ್ರೇಮಾಶ್ರ. ೨೬೬); ಘಟಿಂಗರು ನನ್ನ ನೌಕರಿಗೆ ಚಕ್ರ ತರುತ್ತಾರೆಂಬುದು ನನಗೆ ಗೊತ್ತಿದೆ (ಎಡಹ. ೬೯).

**ಚಕ್ರಹಾಕು** = ಇಲ್ಲವಾಗಿಸು: ಉಳಿದ ದವಸಕ್ಕೆ ಚಕ್ರಹಾಕುತಾ ಕಂಡರೆ ಸುಂಕ, ಕಾಣದಿದ್ದರೆ ಬಿಂಕ ಎಂದು ಮೆರೆಯತಕ್ಕ ರೈತರು ಅನೇಕರಿದಾರೆ (ಅದೂಟ. ೧೮). [ ಸಂ. ]

**ಚಕ್ರ₂** (ನಾ). ಪಟೇಲ, ಶಾನುಭೋಗರ ಕೈಕೆಳಗೆ ಕೆಲಸಮಾಡುವ ಸೇವಕ; ನೀರುಗಂಟಿ : ನೀರುಗಂಟಿ . . . ಇವನಿಗೆ ಕೆಲವು ಕಡೆ ಚಕ್ರನೆಂದು ಹೆಸರುಂಟು (ಗ್ರಾಮಾಕ. ೧) : ಆಯಾ ಗ್ರಾಮದ ತೋಟಿ, ತಳವಾರ, ಚಕ್ರ ಮೊದಲಾದವರನ್ನು ಕರೆದುಕೊಂಡು ಹೋಗಬೇಕು (ಅದೂಟ. ೫). [ <ಚಾಕರ ? ]

**ಚಕ್ರ₃** (ನಾ). ಒಂದು ಬಗೆಯ ಮೀನು : ಕೂಡಿಲು ಚಕ್ರ ಗೆಂಡೆ . . . ಗಿಜಿಲುಗಳೆಂಬ ಪೊಳೆವಳಿಯ ಮೀನ್ಗಳಂ ತವಿಸುತಿಪ ಬೇಡರಂ ನೋಡಿದು ಭೂಪಾಲನು (ಹದಶಾ. ೫-೪೬). [ ? ]

**ಚಕ್ರಂಗೊಳ್** (ಕ್ರಿ). ಚಕ್ರಾಯುಧವನ್ನು ಕೈಗೆತ್ತಿಕೊಳ್ಳು : ದಾನವರಿಪು ಚಕ್ರಂಗೊಳೆ ಕೌರವಾರಿ ಗದೆಗೊಳೆ ಪೊಣರ್ಕೆಗಾಪಂ ನಿಲ್ವಂ (ಕಮದ. ೧೬೬ ಪ್ರಯೋ). [ ಚಕ್ರ₁ + ಕೊಳ್₁ ]

**ಚಕ್ರಕಾಣಿಕೆ** (ನಾ). ಒಂದು ಬಗೆಯ ತೆರಿಗೆ : ಚಕ್ರಕಾಣಿಕೆ ಕಡಾಯ ಸರ್ವಬಾಧ ಪರಿಹಾರವಾಗಿ ಬಿ[ಟ್ಟಿ]ವೆಂದು ಪರದತ್ತವ ಮಾಡಿ (ಸೌಇಇ. XX, ೨೫೯-೧೪; 1547). [ ಚಕ್ರ₁ + ಕಾಣಿಕೆ (<ಕಾಣ್ಕೆ) ]

**ಚಕ್ರಕಾರಕ** (ನಾ). ೧. ಒಂದು ಬಗೆಯ ಪರಿಮಳದ್ರವ್ಯ. ೨. "ಹುಲಿ ಯುಗುರಂ ಗಿಡ" (ಅಮರ. ಟೀಕ). [ ಸಂ. ]

**ಚಕ್ರಗತಿ** (ನಾ). ವರ್ತುಲಾಕಾರವಾದ ಚಲನೆ; ಸುತ್ತುಹಾಕುವಿಕೆ: ಕಥೆಯ ಬೆಳವಣಿಗೆ . . . ವರ್ತಮಾನದಿಂದ ಹಳೆಯ ನೆನಪಿಗೆ, ಹಳೆಯ ನೆನಪಿನಿಂದ ಮತ್ತೆ ವರ್ತಮಾನಕ್ಕೆ ಹೀಗೆ ಚಕ್ರಗತಿಯಲ್ಲಿ ಸುತ್ತುತ್ತದೆ (ಹೊಸಕ್ಷಿ. ೨೯೪). [ ಚಕ್ರ₁ + ಗತಿ ]

**ಚಕ್ರಗಾಲು** (ನಾ). ಖಡ್ಗಯುದ್ಧದಲ್ಲಿ ಒಂದು ಭಂಗಿ: ಪಾದಗಳಿಂದ ಯೆಡೆಯಲ್ಲಿ ಚಕ್ರಾಕಾರದಿಂದ ಪ್ರತ್ಯೇಕವಾಗಿ ತಾಡನವು ಅಪುದು ಉಂಟು ಅದು ಚಕ್ರಗಾಲು (ಖಡ್ಗಟೀ. ೪-೩೦) ; ಸಮಪಾದದಿಂದ ಕುಳಿತುಕೊಂಡು ಯೇಳುವಾಗ ಎಡದ ಪಾದದ ಪಾರ್ಶ್ವಲು ಬಲದ ಅಂಗೈಯೊಡನೆ ಕೂಡಿಸುವದು ವಿಪರ್ಯಾಸದಿಂದ ಕೂಡಿಸುವುದಾದರೆ ಅದು ಚಕ್ರಗಾಲುಯೆಂಬುದು (ಖಡ್ಗಟೀ. ೪-೫೭). [ ಚಕ್ರ₁ + ಕಾಲು₁ (<ಕಾಲ್₁) ]

**ಚಕ್ರಗುತ್ತಿ, ಸಕ್ಕರೆಗುಂತ್ತಿ, ಸಕ್ಕರೆಗುತ್ತು** (ನಾ). ಬಾಯಿ ಕಟ್ಟಿರುವ ಮೂಟೆಯನ್ನು ಚುಚ್ಚಿ ಧಾನ್ಯಗಳನು (ಪರೀಕ್ಷಾರ್ಥವಾಗಿ) ಹೊರತೆಗೆಯುವ ಸಾಧನ : ಚಕ್ರಗುತ್ತಿಯಿಂದ ಧಾನ್ಯವನ್ನು ತೆ (ರಾಘ) ಸಕ್ಕರೆಗುತ್ತಿ: ಸಕ್ಕರೆಗುತ್ತಿಯಿಂದ ಚೀಲದ ಧಾನ್ಯವನ್ನು ಪರೀಕ್ಷಿಸು (ರಾಘ) ಸಕ್ಕರೆಗುತ್ತು : ಕಾಳು ಮೂಟೆಗೆ ಹಾಕುವ ಸಕ್ಕರೆಗುತ್ತನ್ನು ತಂದಾತ್ತ ಮೈಯಲಿ ಎಲ್ಲಿ ತಿವಿದರೂ ಒಂದು ಮಾತಿಲ್ಲ ಬಗ್ಗೆ ಸ್ಥೆ (ಹಾಡ್ಸುಹು. ೩೩). [ ? ]

**ಚಕ್ರಗೋಷ್ಠಿ** (ನಾ). ಬೇರೆಬೇರೆ ದೇಶದ ರಾಜ್ಯಭಾರಿಗಳು ಅಥವಾ ಮುಖಂಡರು ಒಂದೆಡೆ ಸೇರಿ ನಡೆಯಿಸುವ ಚರ್ಚೆ; ದುಂಡುಮೇಜಿನ ಪರಿಷತ್ತು : ಚಕ್ರಗೋಷ್ಠಿಗಳು, ರಾಯಭಾರಿ ಸಭೆಗಳು . . . ಫಲಕಾರಿಯಾಗಲಿಲ್ಲ (ಭಾರದ. ೩೬೪) : ೧೯೩೦-೩೨ರ ಚಕ್ರಗೋಷ್ಠಿ ಬ್ರಿಟಿಷರು ಹೂಡಿದ ಒಂದು ಕಪಟನಾಟಕವೆನ್ನಬಹುದು (ಎದ್ದುಸಾ. ೧೧). [ ಚಕ್ರ₁ + ಗೋಷ್ಠಿ ]

**ಚಕ್ರತೀರ್ಥ** (ನಾ). ಸುಳಿಗಳಿರುವ ತೀರ್ಥ; ಆವರ್ತಗಳಿಂದ ಕೂಡಿದ ಜಲಾಶಯ : ಬಗೆಬಗೆಯ ಬಯಕೆಗಳ ಚಕ್ರತೀರ್ಥವಾದ ಈ ಸಂಸಾರದಲ್ಲಿ ಸಿಲುಕಿದ ನಮ್ಮ ಸ್ಥಿತಿಯೂ ಹಾಗೆಯೇ ಆಗಿದೆ (ಜಿತಂಬಾ. ೩೩). [ ಚಕ್ರ₁ + ತೀರ್ಥ ]

**ಚಕ್ರದಂಡ** (ನಾ). ತಿರುಗಿಸುತ್ತಿರುವ ದೊಣ್ಣೆ.-ಕೋಲು (?): ಕುಜು ವಿಡಿದು ಕಂಡಿಪೆನೆಂದಡೆ ಪುಣ್ಯವ ಮಾಡಬೇಕೆಂಬರು ಅಜಿದು ಕಂಡಿಪೆನೆಂದಡೆ ಕಾಯದ ಕರಣಂಗಳ ಬಿಡಬೇಕೆಂಬರು ಕೆಟ್ಟೆನಯ್ಯಾ ಚಕ್ರದಂಡದಲ್ಲಿ ಸಿಕ್ಕಿದ ಮರ್ಕಟನಂತೆ (ಮೋಳಿಮಾ. ೨೫-೧೦೨). [ ಚಕ್ರ₁ + ದಂಡ ]

**ಚಕ್ರದೃಶ್ಯ** (ನಾ). "ಪ್ರಕೃತಿದೃಶ್ಯ, ಮೊ.ಗಳ ಚಿತ್ರವು ವಿಸ್ತಾರವಾದ ಒಂದು ವರ್ತುಲನಾಳಿಯಾಕಾರದ ಅಂತಃಪ್ರದೇಶದಲ್ಲಿ ಅಳವಡಿಸಿರುವುದನ್ನು ಪ್ರೇಕ್ಷಕನು ಒಳಗಡೆ ಮಧ್ಯದಲ್ಲಿ ನಿಂತು ನೋಡುವ ದೃಶ್ಯ" (Cyclorama. ಇಂಕನಿ). [ ಚಕ್ರ₁ + ದೃಶ್ಯ ]

**ಚಕ್ರಧರ** (ನಾ). ೧. ಚಕ್ರವನ್ನು ಧರಿಸಿದವನು ; ವಿಷ್ಣು : ಚಕ್ರಧರನಾಂತ ಧರಣೀಚಕ್ರದ ಪಿರಿದಪ್ಪ ಭರಮಂನಾರಾಂಪರೊ (ಬಂಪರಿ. ೧೪-೧೧) ; ತಡವರಿಸದೆಲೆ ಚಕ್ರಧರ . . . ಪೂಜಿಮುಟ್ಟು ಬಾರಾ (ಬಸವು. ೫೩-೬೩) ; ಸರ್ವೇಶ್ವರಂ . . . ಚಕ್ರಮಂ ಹರಿಗೆ ಕರುಣಿಸಲಾಗಿ ಚಕ್ರಧರನೆಂಬ ಪೆಸರು ಸಂದುದು (ವೀಶ್ವಪು. ೨-೧೩-೬) ; ನಕ್ರಹರನು ಬಂದ ಚಕ್ರಧರನು ಬಂದ (ಪುರಂದ. ೧-೪೮-೪). ೨. ಸಾಮ್ರಾಟ ; ಚಕ್ರವರ್ತಿ : ಚಕ್ರಧರನಧರಕಿಸಲಯದ ಮೇಲೆ ದಂತಕಾಂತಿ ಲತಾಂತಪ್ರಭೆಗಳ್ ಪಸರಿಸೆ (ಆದಿಪು. ೪-೨೭ ವ): ದಾರಿದ್ರ್ಯದ ಮಾತಿಲ್ಲೆಲ್ಲಿಯುಂ ಬಾಚಿಗಿಗಮುಳಿಳ ಧರಾಚಕ್ರದೊಳ್ ತಾನೆ ನಿಪ್ಪಗ್ಗದ ಮಾತಂ ಮಾಡಿದಂ ಚಕ್ರಧರಂ (ಚಂದ್ರಪು. ೬-೧೦೩). ೩. ಚಕ್ರವಾಕ ; ರಥಾಂಗ : "ಚಕ್ರವಾಕಃ, ಚಕ್ರಧರಃ-ಈ ಯೆರಡುಂ ಚಕ್ರವಾಕ ಪಕ್ಷಿ" (ಒಪಧಿ. ೫೫). ೪. ಆದಿಶೇಷ. 'ಚಕ್ರಧರತಲ್ಪ' ಪರಾ. [ಸಂ.]

**ಚಕ್ರಧರತಲ್ಪ** (ನಾ). ವಿಷ್ಣುವಿಗೆ ಹಾಸಿಗೆಯಾದುದು ; ಆದಿಶೇಷ : ಚಕ್ರಧರತಲ್ಪರಾಜ ವಿರಾಜಿತಾಭರಣ . . . ನಾಗನೀರ ಕಿರೀಟದ್ದನು (ವ್ಯಾಡರಾ. ೮-೧). [ ಚಕ್ರಧರ + ತಲ್ಪ ]

**ಚಕ್ರಧರತ್ವ** (ನಾ). ಚಕ್ರವನ್ನು ಧರಿಸಿರುವಿಕೆ: ಚಕ್ರಧರತ್ವಮುಂದು ಸಫಲಂ . . . ಆ ವಿಕ್ರಮು ಸಾಲ್ವನಂ ತವಿಸಿದಂದು (ಜಗವಿ. ೧-೭೩). [ ಸಂ. ]

**ಚಕ್ರಧಾರಿ** (ನಾ).೧. ಚಕ್ರವನ್ನು ಹಿಡಿದವನು; ವಿಷ್ಣು. ೨. ಸುಳಿ ಅಥವಾ ಆವರ್ತ ಉಳ್ಳದು. ೧, ೨ : ವಿಷ ಚಕ್ರಧಾರಿ ಪೆಂಪಿನ ಭುಜಗೇಂದ್ರ ಮಾಪತಿಗಳಂತೆ . . . ಸರಸಿ ರಾಜಿಕುಮುನ್ನತ ನಿಪರ್ಗಳಾಕರಂ (ಹಮ್ಮೀರ ೪-೧೯). [ ಸಂ. [illegible] ]

**ಚಕ್ರಧಾರೆ** (ನಾ). ಚಕ್ರದ ಅಂಚು ; ಗಾಲಿಯ ಸುತ್ತು : "[illegible] ಧಾರಾ, ಪ್ರಧೀಃ, ನೇಮಿಃ – ಈ ೩ ಸುತ್ತಿವಟ್ಟಿಗೆ" (ಹಲಾಯು. [illegible]). [ ಚಕ್ರ₁ + ಧಾರೆ ]

**ಚಕ್ರನಾಥ** (ನಾ). ಭೂಮಂಡಲದ ಒಡೆಯ ; ಚಕ್ರವರ್ತಿ : ಮೆಱೆದಂ ಧಾತ್ರಿಯೊಳಂ ಚಕ್ರನಾಥಂ (ಆದಿಪು. ೧೬-೨). [ ಚಕ್ರ$_1$ + ನಾಥ ]

**ಚಕ್ರನಾಭಿ** (ನಾ). ಬಂಡಿ ಅಥವಾ ರಥದ ಗಾಲಿಯ ನಡುವಿನ ಗಡ್ಡೆ ; ಗುಂಭ : "ಅಚ್ಚನ್ನೂ ಅರೆಕಾಲುಗಳನ್ನೂ ಹಿಡಿದುಕೊಂಡಿರುವ ಚಕ್ರದ ಮಧ್ಯಭಾಗ : ಗುಂಬ ; ಚಕ್ರನಾಭಿ " (Nave ಇಂಕನಿ). [ಚಕ್ರ$_1$+ನಾಭಿ]

**ಚಕ್ರನೇಮಿ** (ನಾ).=ಚಕ್ರಧಾರೆ ೧ : ಚಟುಳಿತ ಚಕ್ರನೇಮಿ ಪರಿವರ್ತನ ಘಟ್ಟನಘಾತ ನಿರ್ಘರ ಸ್ಫುಟಿತ ಧರಾತಳಂ ವಿಜಯನುಗ್ರರಥಂ ಪರಿದತ್ತು ದಲ್ . . . ಸಂಗರರಂಗಭೂಮಿಯೊಳ್ (ಪಂಪಭಾ. ೧೧-೧೪೭) ; ಚಕ್ರನೇಮಿ ವೃತ್ತಿಯ ಈ ಜಗತ್ತು ಇದ್ದಹಾಗೆ ಇರತಕ್ಕದ್ದಲ್ಲ – ಸದಾ ಭ್ರಮಣಶೀಲ (ಎಮುಕ. III, ಮುನ್ನುಡಿ). [ ಚಕ್ರ$_1$ + ನೇಮಿ ]

**ಚಕ್ರಪಕ್ಷಿ** (ನಾ). ಚಕ್ರವಾಕ ; ರಥಾಂಗ: " ಚಕ್ರಪಕ್ಷಿ – ಚಕ್ಕವಕ್ಕಿ" (ಶಮದ. ೨೬೧ ಪ್ರಯೋ). [ ಚಕ್ರ$_1$ + ಪಕ್ಷಿ ]

**ಚಕ್ರಪರಿವರ್ತನ** (ನಾ). [ಜೈನ] ದ್ರವ್ಯಕ್ಷೇತ್ರ, ಕಾಲ, ಭವ, ಭಾವ ಪರಿವರ್ತನೆಗಳಿಗೆ ಮತ್ತೆಮತ್ತೆ ಈಡಾಗುವಿಕೆ; ಮತ್ತೆಮತ್ತೆ ಹುಟ್ಟುವಿಕೆ : ಮುನ್ನಮೆ ಕೈಕೊಂಡ ದ್ರವ್ಯಕ್ಷೇತ್ರಕಾಲಭವಭಾವಂಗಳೊಳ್ ಮಱೆದಪ್ಪೊಡಂ ಪರಿವರ್ತಿಸದೆ ಬೇಱೆವೇಱೆ ಪರಿವಡಿದಪ್ಪದೆ ಪುಟ್ಟುವುದು ಚಕ್ರಪರಿವರ್ತನವೆಂಬುದು (ಸುಕುಮಾ. ೬-೬ ವ).[ಚಕ್ರ$_1$ + ಪರಿವರ್ತನ ]

**ಚಕ್ರಪಾಣಿ** (ನಾ). ಕೈಯಲ್ಲಿ ಚಕ್ರವನ್ನು ಹಿಡಿದಿರುವವನು ; ವಿಷ್ಣು. [ ಚಕ್ರ$_1$ + ಪಾಣಿ$_2$ ]

**ಚಕ್ರಪೂಜೆ** (ನಾ). [ಜೈನ] ಚಕ್ರರತ್ನದ ಪೂಜೆ.– ಆರಾಧನೆ : ಬೞಿಯಂ ಚಕ್ರಪೂಜೆಯಂ ಮಾಡಿ (ಶಾಂತಿಪು. ೪-೬೩.ವ). [ ಚಕ್ರ$_1$ + ಪೂಜೆ$_2$ ]

**ಚಕ್ರಬಂಧ** (ನಾ). ೧. ಒಂದು ಬಗೆಯ ಸ್ಪರ್ಧೆ ; ಅನೇಕ ಮನೆಗಳಿರುವ ಒಂದು ಆಕೃತಿಯ ಒಂದೊಂದು ಖಾನೆಯಲ್ಲಿಯೂ ಒಂದೊಂದು ಅಕ್ಷರವನ್ನು ಸೇರಿಸಿ ನಿರ್ದಿಷ್ಟವಾದ ಅರ್ಥ ಬರುವಂತೆ ಶಬ್ದಗಳನ್ನು ರಚಿಸುವಿಕೆ ; ಪದರಂಗ : ಚಕ್ರಬಂಧದ ಒಗಟ, ರಾಶಿಭವಿಷ್ಯ . . . ಬಂಧಿತರ ಕೈಬಿಸಿಯಾಟ (ಅರಳು. ೪೨೩-೨೨); ಚಕ್ರಬಂಧಸ್ಪರ್ಧೆಗೆ ಪ್ರವೇಶಿಸಿ ಹಣ ಸಂಪಾದಿಸಿದರಾಯ್ತು (ನಿಶಉ. ೦೨೯). ೨. [ಕಾವ್ಯಮೀ] ಒಂದು ಬಗೆಯ ಚಿತ್ರಕಾವ್ಯ ; ಚಕ್ರದ ಆಕೃತಿಯಲ್ಲಿ ಪದ್ಯವನ್ನು ರಚಿಸುವಿಕೆ : 'ಚಕ್ರಬಂಧ', 'ಮುರಜಬಂಧ' ಮುಂತಾದ ಚಿತ್ರಬಂಧಗಳು (ರತ್ನಾಲೋ. ೭೭ ಅಡಿಟಿ). ೩. [ಸಂಗೀತ] ವೀಣೆಯನ್ನು ನುಡಿಸುವ ಒಂದು ರೀತಿ: ವೆಂಕಟರಮಣದಾಸರು, ಚಕ್ರಬಂಧವನ್ನು ನುಡಿಸುತ್ತಿರುವಾಗ ಅವರ ಬೆರಳುಗಳು . . . ಆಡುವುದನ್ನು ನೋಡುವುದೇ ಒಂದು ಸೊಗಸಾದ ದೃಶ್ಯ (ಸಂಗೀತ. ೬೯). [ ಚಕ್ರ$_1$ + ಬಂಧ ]

**ಚಕ್ರಬಡ್ಡಿ** (ನಾ). ಬಡ್ಡಿಯ ಮೇಲೆ ಬಡ್ಡಿ : ಸರಳಬಡ್ಡಿ, ಚಕ್ರಬಡ್ಡಿಗಳನ್ನು ತೆರುವುದರಲ್ಲೇ ಅವರ ಹಣ ಬಿದ್ದುಹೋಗಿತ್ತು (ಹೇಮಕೂ. ೩೪); ಅವನು ಮೋಹನನಿಗೆ ಕೊಟ್ಟಿದ್ದ ಕಿರುಕುಳಗಳನ್ನು ಅಂದು ಅವನಿಗೆ ಪವಿತ್ರಪುರದ ಜನರು ಚಕ್ರಬಡ್ಡಿ ಸಮೇತ ಹಿಂತಿರುಗಿ ಕೊಟ್ಟಿದ್ದರು (ಪಂಜಪಂ. ೨೨೮) ; ಚಕ್ರಬಡ್ಡಿ, ಚಾಲ್ತಿಬಡ್ಡಿಗೆಂದು ಕೊಟ್ಟು ಕೊಟ್ಟು . . . "ಪ್ರಾಂಸರಿ ನೋಟು " ಬರೆಯಿಸಿಕೊಳ್ಳುತ್ತಿದ್ದರು (ಮೂಠಾನ. ೧೮೩).
[ ಚಕ್ರ$_1$ + ಬಡ್ಡಿ$_2$ ]

**ಚಕ್ರಬಾಣ** (ನಾ). ಚಕ್ರಾಕಾರವಾಗಿ ಸುತ್ತುವ ಒಂದು ಬಗೆಯ ಸುಡುಮದ್ದು : " ಚಕ್ರಬಾಣ; ಸುತ್ತುವ ಚಕ್ರದಿಂದ ಹಾರಿಸುವ ಆಕಾಶಬಾಣ" (Girandole. ಇಂಕನಿ). [ ಚಕ್ರ$_1$ + ಬಾಣ$_2$ ]

**ಚಕ್ರಬಿಂಬ** (ನಾ).=ಚಕ್ರವ್ಯೂಹ ೧ : ಚಕ್ರಬಿಂಬದಿ ಘನಪರಾಕ್ರಮಿಯಾದ . . ಅಭಿಮನ್ಯುವನು ರಣದಿ . . . ಕೊಂದರೈ (ತಿಮ್ಮಸ್ತ್ರೀ. ೧-೫೭). [ ಚಕ್ರ$_1$ + ಬಿಂಬ ]

**ಚಕ್ರಭೃತ್ಕುಲ** (ನಾ). ಚಕ್ರವರ್ತಿಕುಲ,–ವಂಶ: ಜಗಜ್ಜನಮತಿಮುಗ್ಧಬಾಳ ನರಪಾಳಕವಾದುದು ಚಕ್ರಭೃತ್ಕುಲಂ (ಆದಿಪು. ೪-೮೨).
[ ಸಂ. (ಚಕ್ರಭೃತ್ + ಕುಲ) ]

**ಚಕ್ರಭೃತ್ತು** (ನಾ). ೧. ಚಕ್ರವನ್ನು ಹಿಡಿದಿರುವವನು : ವಿಷ್ಣು : "ಚಕ್ರಭೃದ್ಗೋವಿಂದಂ ಹರಿ ಶೌರಿ . . . ಸುಪರ್ಣಧ್ವಜಂ" (ವಸ್ತುಕೋ. ೪-೨೨). ೨. ಭೂಮಂಡಲವನ್ನು ಆಳುವವನು ; ಚಕ್ರವರ್ತಿ. 'ಚಕ್ರಭೃತ್ಕುಲ' ಪರಾ. [ ಸಂ. ಚಕ್ರಭೃತ್ ]

**ಚಕ್ರಭೃತ್ತ್ವ** (ನಾ). ೧. ಚಕ್ರವನ್ನು ಧರಿಸಿರುವಿಕೆ. ೨. ಚಕ್ರವಾಕಪಕ್ಷಿಯನ್ನು ಪೋಷಿಸುವಿಕೆ. ೩. ಭೂಮಂಡಲವನ್ನು ಪಾಲಿಸುವಿಕೆ. ೨, ೩: ಏನಗಂ ಭೂಪತಿಗಂ ಸಮಾನಮೆ ಕರವ್ಯಾಪ್ತ್ಯಾಖಿಲಾಶತ್ವಮಾತ್ಮನು ರಕ್ತಪ್ರಕೃತಿತ್ವಮಭ್ಯುದಯವತ್ತ್ವಂ ಚಕ್ರಭೃತ್ತ್ವಂ ದಲೆಂದಿನಂ . . . ಅಪರಪಾರಾವಾರಮಂ ಪೊರ್ದಿದಂ (ಚಂದ್ರಪ್ರ. ೮-೨). [ ಸಂ. ]

**ಚಕ್ರಮಂಡಲ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು ; ಚಕ್ರದಂತೆ ತಿರುಗುತ್ತ ಮಾಡುವ ನೃತ್ಯ: ಸ್ಥಿತವೆಂಬ ಚಾರಿಯಂ ಪದಗತಿಯಿಂದಂ ಮಾಡಿ ಡೋಲಹಸ್ತಮುವಾಗಲ್ ಸತಿ ಕೀಲ್ ಚಕ್ರದಪೊಲ್ ಮೇಣತಿಶಯದಿಂ ತಿರುಗೆ ಚಕ್ರಮಂಡಲಕರಣಂ (ಲಾಸ್ಯರಂ. ೪-೧೧೨).
[ ಚಕ್ರ$_1$ + ಮಂಡಲ ]

**ಚಕ್ರಮಂಡಿಗಾಲು** (ನಾ). ಖಡ್ಗಯುದ್ಧದಲ್ಲಿ ಒಂದು ಭಂಗಿ : ಮೊದಲ ಪ್ರಕಾರದಿಂದ ಯಿದ್ಧವನಾಗಿ ಮೊಳಕಾಲ್ಗಳ ಹೊರಕಡೆಯ ಪಾರ್ಶ್ವಪ್ರದೇಶದ ಭೂಮಿಯ ಮುಟ್ಟುವದೂ ಬೀಳುವ ಹಾಗೆ ಆವದುಂಟೊ ಅದು ಚಕ್ರಮಂಡಿಗಾಲುಯೆಂಬುದು (ಖಡ್ಗಲೀ. ೪-೬೩).
[ ಚಕ್ರ$_1$ + ಮಂಡಿ$_1$ + ಕಾಲು$_1$ (<ಕಾಲ್$_1$) ]

**ಚಕ್ರಮಟ್ಟ** (ನಾ). ಚಕ್ರಸದೃಶ ; ವರ್ತುಲಾಕಾರ (?) : ಪದ್ಮಾಸನ :- ಇದರಲ್ಲಿ ಪ್ರತಿಮೆಯು ಚಕ್ರಮಟ್ಟವಾಗಿ ಕುಳಿತಿರುವಂತೆ ಕೆತ್ತಲ್ಪಟ್ಟಿರುತ್ತದೆ (ಧಾರದ. ೩೦೩). [ ಚಕ್ರ$_1$ + ಮಟ್ಟ$_1$ ]

**ಚಕ್ರಮರ್ದ** (ನಾ). ಒಂದು ಬಗೆಯ ಗಿಡ ; ಜಗಚೆ : " ಕರವಸಂ ಚಕ್ರಮರ್ದಂ ಜಗಚೆಯಕ್ಕುಂ " (ಮುಂಗರಾ. ೩೯-೨೭). [ ಸಂ. ]

**ಚಕ್ರಮರ್ದಕ** (ನಾ). =ಚಕ್ರಮರ್ದ. [ ಸಂ. ]

**ಚಕ್ರಮರ್ದನ** (ನಾ).=ಚಕ್ರಮರ್ದ: "ಏಡಗಜಃ, ಪ್ರಪುನಾಟಃ, ದದ್ರುಘ್ನಃ, ಚಕ್ರಮರ್ದನಃ–ಈ ೪ ತಗ(ಚೆ)ಟೆ" (ಹಲಾಯು. ೦೦೦-೪೬೩). [ ಸಂ. ]

**ಚಕ್ರಮಾರುತ** (ನಾ). ಸುಂಟರಗಾಳಿ ; ಆವರ್ತಮಾರುತ : ಸಮುದ್ರದಲ್ಲಿ ಚಕ್ರ(ಆವರ್ತ)ಮಾರುತ (Cyclones)ಗಳಿಗೆ ಹೆದರುವಂತೆಯೇ ಮರಳು ಕಾಡುಗಳಲ್ಲಿ ಧೂಳಿಮಾರುತ(Dust storms)ಗಳಿಗೆ ಬಹಳ ಹೆದರಬೇಕು (ಭೂವಿವ. ೨೫೯). [ ಚಕ್ರ$_1$ + ಮಾರುತ ]

**ಚಕ್ರಮಿಥುನ** (ನಾ).ಚಕ್ರವಾಕ ದಂಪತಿ : ನೆನೆಯಿಸಿದತ್ತಾ ಮಿಥುನಂ ದಿನಮುಖಮಂ ಕಂಡ ಚಕ್ರಮಿಥುನಾಕೃತಿಯಂ (ಮಲ್ಲಿಪು. ೧೩-೨೦).
[ ಚಕ್ರ$_1$ + ಮಿಥುನ ]

**ಚಕ್ರಮುದ್ರೆ** (ನಾ). ೧. ಮಂತ್ರಶಾಸ್ತ್ರದಲ್ಲಿ ಹೇಳಿರುವ ಚಕ್ರದ ಆಕೃತಿಯುಳ್ಳ ಮುದ್ರೆ; ವಿಶೇಷವಾಗಿ ಮಾಧ್ವರು ಇಟ್ಟುಕೊಳ್ಳುವ ಮುದ್ರೆಗಳಲ್ಲಿ ಒಂದು : ಚಕ್ರಮುದ್ರೆಯಲ್ಲಿ ಹುಂಕಾರನಾಮದಿಂದಲೂ . . . ಇರುವನು (ಹಸಾರ. ೮-೨೮ ತಾತ್ಪರ್ಯ). ೨. ಮಂತ್ರಶಾಸ್ತ್ರಪ್ರಸಿದ್ಧವಾದ ಒಂದು ಬಗೆಯ ಹಸ್ತಮುದ್ರೆ : ಚಕ್ರಮುದ್ರೆ . . . ಸಂಹಾರಮುದ್ರೆಯೆಂಬಾದಿಯಾಗಿ ಸಕಲಮುದ್ರೋಪಮುದ್ರಾಬಂಧಲಕ್ಷಣಗಳಂ ಗುರುಮುಖದಿಂದಱಿತು (ವಿವೇಕ. ೧೦೩). 'ಶಂಖಮುದ್ರೆ' ಪರಾ.
[ ಚಕ್ರ$_1$ + ಮುದ್ರೆ ]

**ಚಕ್ರಯಾನ** (ನಾ). ಗಾಲಿಗಳುಳ್ಳ ವಾಹನ. [ ಚಕ್ರ$_1$ + ಯಾನ ]

**ಚಕ್ರಯುಗ** (ನಾ).=ಚಕ್ರಮಿಥುನ: "ತರು ಖರ್ಜೂರ ವನಾಶ್ವ ಚಕ್ರಯುಗ ಭೇಕಂ ಶ್ರೇಷ್ಠಮುಂ ಕೋಕಮಕ್ಕು" (ನಾನಾರ. ೧೨೯).
[ ಚಕ್ರ$_1$ + ಯುಗ ]

**ಚಕ್ರಯೋಗ** (ನಾ). [ಜ್ಯೋತಿ] ಆಕೃತಿಯೋಗಗಳಲ್ಲಿ ಒಂದು ; ಜನನ ಲಗ್ನದಿಂದ ಪ್ರಾರಂಭಿಸಿ ಒಂದು ಬಿಟ್ಟು ಒಂದು (ಏಕಾಂತರ) ರಾಶಿಗಳಲ್ಲಿ ಏಳುಗ್ರಹಗಳು ಇರುವುದು : ೧, ೩, ೫, ೭, ೯, ೧೧ ಈ ಆರು ಸ್ಥಾನಗಳಲ್ಲಿ ಏಳುಗ್ರಹಗಳೂ ಇದ್ದರೆ ಚಕ್ರಯೋಗ (ಜಾತತ. ೧೬-೮ ಅಡಿಟಿ).
[ ಚಕ್ರ$_1$ + ಯೋಗ ]

**ಚಕ್ರರಕ್ಷಕ** (ನಾ). ಸೇನೆಯ ರಕ್ಷಕ: ಅವನ ಹಿಂದೆ ಅವನ ಚಕ್ರರಕ್ಷಕರಾದ ಯುಧಾಮನ್ಯು ಉತ್ತಮೌಜರೂ ನುಗ್ಗಿದರು (ವಚಭಾ. ೩೮೭).
[ ಚಕ್ರ$_1$ + ರಕ್ಷಕ ]

**ಚಕ್ರರತ್ನ** (ನಾ). [ಜೈನ] ಚಕ್ರವರ್ತಿಯಾಗುವವನ ಆಯುಧಾಗಾರದಲ್ಲಿ ಹುಟ್ಟುವ ಚಕ್ರಾಯುಧ: ಈ ರಾಜ್ಯಾಶ್ರಮಮುಮನಿಯ ಆಯುಧಾಗಾರದೊಳ್ ಚಕ್ರರತ್ನಂ ಪುಟ್ಟಿತ್ತು (ಆದಿಪು. ೬-೩೮ ವ). [ ಚಕ್ರ$_1$ + ರತ್ನ ]

**ಚಕ್ರಲಾಭ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು ; ಚಕ್ರರತ್ನವು ದೊರೆಯುವುದು: ಚಕ್ರಲಾಭ ದಿಗ್ವಿಜಯ ಚಕ್ರಾಭಿಷೇಕ . . . ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫ ವ) ; ೧೪ ರತ್ನಗಳಿಗೂ ೯ ನಿಧಿಗಳಿಗೂ ಒಡೆಯನಾಗಿ ಸಕಲರಿಂ ಅಭಿಷಿಕ್ತನಾಗಿ ಅಧಿರಾಜನೆಂಬ ಹೆಸರಂ ಪಡೆಯುವುದೇ ಚಕ್ರಲಾಭವೆಂಬ ೪೪ನೆ ಕರ್ಮವು (ಪುರುಜ. ೨೧೩). [ ಚಕ್ರ$_1$ + ಲಾಭ ]

**ಚಕ್ರಲಿಪಿ** (ನಾ). ಒಂದು ಬಗೆಯ ಲಿಪಿ: ಬಿಂದುಲಿಪಿ, ಚಕ್ರಲಿಪಿ, ಲೇಖಲಿಪಿಯಾ ಅಗಣಿತ ಲಿಪಿಗಳನೋದಲರಿಯದ ಬಿಜ್ಜಳರಾಯನ ಸಭೆಯೊಳ್ ಕಳಕಳಗೊಳುತಿದ್ದರು ವಿದ್ವಾಂಸರುಗಳೆಲ್ಲ (ಭಾಸ್ಕರ. ೭೭-೫).
[ ಚಕ್ರ$_1$ + ಲಿಪಿ ]

**ಚಕ್ರಲೆ** (ನಾ). ಒಂದು ಬಗೆಯ ಸುವಾಸನೆಯ ಹುಲ್ಲು : "ಚೂಡಾಲಾ, ಚಕ್ರಲಾ, ಉಚ್ಚಟಾ – ೩ ಒಂದು ಗಡ್ಡೆವಳಗೆ ಅನೇಕ ಮೋತೆಗಳುಳ್ಳ ಗಂಟುಮುಸ್ತಗಳು" (ಸಿದ್ಧಾಂತಿ. ೧೫೧). [ ಸಂ. ಚಕ್ರಲಾ ]

**ಚಕ್ರವರಿಸೆ** (ನಾ). ೧. ಖಡ್ಗಯುದ್ಧದಲ್ಲಿ ಒಂದು ಬಗೆಯ ವರಸೆ: "ಒಂದು ತೆರದ ಕತ್ತಿಯ ವರಿಸೆ; ಚಕ್ರವರಿಸೆ" (Counter. ಇಂಕನಿ). ೨. ಅಂಗಸಾಧನೆಯಲ್ಲಿ ಒಂದು ಪ್ರಕಾರ: "(ಅಂಗಸಾಧನೆಯಲ್ಲಿ) ಚಕ್ರವರಿಸೆ" (Circle. ಇಂಕನಿ). [ ಚಕ್ರ$_1$ + ವರಿಸೆ ]

**ಚಕ್ರವರ್ತ** (ನಾ). ಒಂದು ಬಗೆಯ ಸೊಪ್ಪು : ಹುರುಳಿ, ಚಕ್ರವರ್ತದ ಸೊಪ್ಪು . . . ಅಂತ್ರವೃದ್ಧಿಗಳಿಗೆ ಪಥ್ಯ (ವೈದ್ಯಸಾ. I, ೬೩೦) : ಚಕ್ರವರ್ತದ ಸೊಪ್ಪು, ಚಲಿಕೀರೆ ಸೊಪ್ಪು ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳು (ಸಕವೈ. ೧೦೩). [ <ಸಂ. ಚಕ್ರವರ್ತಿನ್ ? ]

**ಚಕ್ರವರ್ತನ** (ನಾ). ೧. ತಿಗುರಿಯ ಮೂಲಕ ಮಾಡುವ ಜೀವನ ; ಕುಂಬಾರನ ವೃತ್ತಿ. ೨. ಸುದರ್ಶನಚಕ್ರವನ್ನು ಹೊಂದಿರುವವನು ; ವಿಷ್ಣು. ೩. ಭೂಮಂಡಲವನ್ನು ಆಳುವವನು; ಅರಸ. ೪. ಉತ್ತಮನಾದವನು ; ಪೂಜ್ಯನಾದವನು : "ಉತ್ತಮ ಕೃಷ್ಣಂ ನೃಪ ಕುಲಾಲ ಕ್ರಮದೊಳ್ ನಾಲ್ಕುಮ ಚಕ್ರವರ್ತನಮೆನಿಕುಂ" (ನಾನಾರ್ಕಂ. ೧೫೭).
[ ಚಕ್ರ$_1$ + ವರ್ತನ ]

**ಚಕ್ರವರ್ತಿ** (ನಾ). ೧. ಕುಂಬಾರ ; ಕುಲಾಲ. ೨. ವಿಷ್ಣು ; ಕೃಷ್ಣ. ೩. ಭೂಮಂಡಲವನ್ನು ಆಳುವವನು ; ಸಾಮ್ರಾಟ ; ಸಾರ್ವಭೌಮ : "ಭುವನೈಕವಲ್ಲಭಂ ಚಕ್ರವರ್ತಿ" (ವಸ್ತುಕೋ. ೫೯-೪೭) : "ಚಕ್ರವರ್ತೀ, ಸಾರ್ವಭೌಮಃ – ಈ ೨ ಚಕ್ರವರ್ತಿ" (ಹಲಾಯು. ೭೦-೩೭೪) : ನಿಯಮದೊಳಿರ್ದ ಭರತೇಶ್ವರ ಚಕ್ರವರ್ತಿಯಿರವನಱಿದು (ಆದಿಪು. ೧೩-೧೧ ವ) : [illegible]ರ್ ಚಕ್ರವರ್ತಿಗಳೂ ಅವನು ಗೊತ್ತು (ಮಲಿನಾ. ೬೪). ೪. ಸಮಾಜದಲ್ಲಿ ಮಾನ್ಯನಾದ ವ್ಯಕ್ತಿ ; ಪೂಜ್ಯವ್ಯಕ್ತಿ. ೫. = [illegible] ಪರಮಶಿವನಿಗೆ ಉತ್ತಮವ್ರೀಹಿಯ ಅಕ್ಕಿಯನ್ನು [illegible] ಪರಮಶಿವನಿಗೆ ಸಮರ್ಪಿಸುತ್ತಿದ್ದರು (ಪುಉವಿ. ೯೪). ೬. [ಜ್ಯೋತಿ] [illegible] ಯೋಗಗಳಲ್ಲಿ ಒಂದು [illegible] (ಹಿಂದಸಾ. ೩೮೬) : "[illegible] ವಾಸ್ತುಕದೊಳವನೀಶನೊಳು ಕುಂಭಕಾರನೊಳು ಚಕ್ರವರ್ತಿಯೆನಿಕ್ಕು" (ಮಂಗರಾ. ೧೫೧-೫೨) : "ಕುಲಾಲಾವನೀಶಂ ಮಾನ್ಯಂ ನಾರಾಯಣಂ ವಾಸ್ತುಕಮಿವಿನಿತು ಚಕ್ರವರ್ತ್ಯಾಭಿಧಾನಂ" (ನಾನಾರ. ೧೪೭).
[ ಸಂ. ಚಕ್ರವರ್ತಿನ್ ]

**ಚಕ್ರವರ್ತಿತ್ವ** (ನಾ). ಚಕ್ರವರ್ತಿಯಾಗಿರುವಿಕೆ; ಸಾಮ್ರಾಟನಾಗಿರುವಿಕೆ: ನಿಜಸಕಳಚಕ್ರವರ್ತಿತ್ವಕ್ಕಂಪಡಿಯಿಡುವಂತೆ ನಿರಂತರಮಡಿಯಿಟ್ಟಂ (ಆದಿಪು. ೮-೪೧). [ ಸಂ. ]

**ಚಕ್ರವರ್ತಿನಿ** (ನಾ). ೧. ಚಕ್ರವರ್ತಿಯ ಹೆಂಡತಿ ; ಪಟ್ಟದ ರಾಣಿ. ೨. ಸಾಮ್ರಾಜ್ಯದ ಒಡತಿ ; ಸಾಮ್ರಾಜ್ಞಿ : ಈ ಚಕ್ರವರ್ತಿನಿಯವರು ಒಳ್ಳೆ ಪ್ರೀತಿವಂತರೂ ಪರೋಪಕಾರಿಗಳೂ ಇದ್ದಾರೆ (ಮುಂಬಯಿ. ೪-೩). ೩. ಸುವಾಸನೆಯುಳ್ಳ ಒಂದು ಬಗೆಯ ಗಿಡ; ಕೋರಿಂದೆ; "ಸಾರಣೆಗಿಡ, ಮುಳ್ಳಗೆಸೆ" (ಅಮರ. ಟೀಕ) : "ಜನೀ, ಜತೂಕಾ, ಜನನೀ, ಜತುಕೃತ್, ಚಕ್ರವರ್ತಿನೀ, ಸಂಸ್ಪರ್ಶಾ – ೬ ಕೋರಿಂದೇ ಗಿಡದ ಪೆಸರು, ಚಕ್ರವರ್ತೀ ಸೊಪ್ಪು" (ಸಿದ್ಧಾಂತಿ. ೧೨೯). [ ಸಂ. ಚಕ್ರವರ್ತಿನೀ ]

**ಚಕ್ರವಲೆ** (ನಾ). ಗುಂಡಗಿರುವ ಒಂದು ಬಗೆಯ ಬಲೆ : ಹೊಸದಿಕ್ಕಣ್ಣವಲೆ ಚಕ್ರವಲೆ ಮಿಗೆ ಮುಕ್ಕಣ್ಣವಲೆ ಪೇರ್ವಲೆಯು ಪೊಱೆಗಳು ವಿಂಧಕನ ಕೂಡೆ (ಸ್ವಾಳಭಾ. ೫-೧೮). [ ಚಕ್ರ$_1$ + ಬಲೆ$_1$ ]

**ಚಕ್ರವಲ್ಲಭ** (ನಾ). ಸಾಮ್ರಾಟ; ಚಕ್ರವರ್ತಿ: ಚಕ್ರವಲ್ಲಭನಾಸ್ಥಾನಮಂಟಪದೊಳ್ ದೂರಾವನತಮಣಿಮಕುಟನಾಗಿ ಕಂಡು (ಆದಿಪು. ೧೩-೪೦ ವ).
[ ಚಕ್ರ$_1$ + ವಲ್ಲಭ ]

**ಚಕ್ರವಾಕ** (ನಾ). ೧. ಒಂದು ಬಗೆಯ ಪಕ್ಷಿ ; ಬಿಸಿಲುಹಕ್ಕಿ ; ಜಕ್ಕವಕ್ಕಿ: "ಚಕ್ರಮಾ ಕೋಕಂ ರಥಾಂಗಮೆನೆ ಚಕ್ರವಾಕಂ" (ಮಂಗರಾ. ೫೦-೩). "ಎಣಿಸಲ್ ಬಿಸಿಲ್ವಕ್ಕಿ ಚಕ್ರವಾಕಮೆನಿಕ್ಕುಂ" (ಕವಿಕಂ. ೬೫) ; ಚೆಲ್ವುವೆತ್ತುದುದಯಮಂ[ಮಂ]ದು ಪದ್ಮಿನೀಚಕ್ರವಾಳ ಚಕ್ರವಾಕಚಕ್ರ ಚಕ್ರವರ್ತಿಯಾ (ಆದಿಪು. ೧೩-೫೫) ; ನದಿಯೊಳಗೆ ಚಕ್ರವಾಕಗಳು ಈಜುತ್ತಿರುವಂತೆಯೂ ಕಾಣಿಸಿತು (ಶ್ರೀಕಾಂತ. II, ೪). ೨. ಒಂದು ಬಗೆಯ ಕುದುರೆ : ಬಾಲಮುಮುಂಗೋಪಾಂಗಂ ಕಾಲುಂ ಕರಿದಕ್ಕೆ ಪೀತರುಚಿ [illegible] ತುರಗಂ (ಅಶ್ವಶಾ. ೨-೨೫). ೩. [ಸಂಗೀತ] ಒಂದು ರಾಗದ ಹೆಸರು : ಚಕ್ರವಾಕ ೧೬ನೇ ಮೇಳಕರ್ತರಾಗ . . . ಭಕ್ತಿಕರುಣಾರಸ [illegible] (ಸಂಗೀತಂ. ೧೫೬); ಮಹಾ ವೈದ್ಯನಾಥ ಅಯ್ಯರ್ [illegible] [ ಸಂ ]

**ಚಕ್ರವಾಕಧ್ವಜ** (ನಾ). [illegible]
[illegible]

**ಚಕ್ರವಾಡ** (ನಾ). ೧. [illegible] ಮಂಡಲಾಕೃತಿ. ೨. ದಿಗಂತ: [illegible] ೩. ಸಮೂಹ ; ರಾಶಿ. ೪. = ಚಕ್ರವಾಡಿಕೆ. [ ಸಂ. ]

**ಚಕ್ರವಾಡಿಕೆ** (ನಾ). ಭೂಮಿಯ ಸುತ್ತಲೂ ಇರುವುದೆಂದು ಭಾವಿಸಲಾದ ಪರ್ವತಶ್ರೇಣಿ: ಮತ್ತಮಾ ಚಕ್ರವಾಡಿಕೆಯ ಕೆಳಗಣ ತಪ್ಪಲುಗಳಲ್ಲಿ ಸಿದ್ಧರುಗಳು ಮೊದಲಾದವರುಗಳು ಇರುತ್ತಿಹರು (ದಶಬೋ. ೫೮-೨).
[ ಸಂ. ಚಕ್ರವಾಡಿಕಾ ]

**ಚಕ್ರವಾತ** (ನಾ). = ಚಕ್ರಮಾರುತ : ಚಕ್ರವಾತ, ಸುಳಿಗಾಳಿ (Cyclone. ಪಾರಿನಿ. ೨೬). [ ಚಕ್ರ$_1$ + ವಾತ ]

**ಚಕ್ರವಾಲ, ಚಕ್ರವಾಳ** (ನಾ). ೧. ವರ್ತುಳ; ಮಂಡಲಾಕೃತಿ. ೨. ದಿಗಂತ : ಕತ್ತಲಿಸಿತೊಡನೆ ಮುಂದಣ ಚಕ್ರವಾಲಂ (ಗೀವಿಂ. ೪೯-೪). ೩. ಸಮೂಹ ; ಗುಂಪು: ರಾಘವಂ ಪೋಗೆ ಕಣ್ಗಂ ಬಗೆಗಮಿಟ್ಟೆಯಾದತ್ತಾ ಸಭಾಚಕ್ರವಾಲಂ (ಪಂರಾಮಾ. ೬-೧೫೬). ೪.=ಚಕ್ರವಾಡಿಕೆ. **ಚಕ್ರವಾಳ :** ೧. ಭಾಸ್ಕರನು ಚಕ್ರವಾಳ (Cyclic Method) ವಿಧಾನದಿಂದ ಪೂರ್ತಿಗೊಳಿಸಿದನು (ಗಣಿಡ. ೩೦೫). ೩. ಚೆಲ್ವುವೆತ್ತುದುದಯ ಮಂ[ ಮಂ ]ದು ಪದ್ಮಿನೀ ಚಕ್ರವಾಳ ಚಕ್ರವಾಕಚಕ್ರಚಕ್ರವರ್ತಿಯಾ (ಆದಿಪು.೧೨-೫೫). ೪. ಮ[ಹಾಕ್ಷೀ] ರಾಬ್ಧಿ ಡಿಂಡೀರಪಾಂಡುರಮಾಕ್ರಾಂತಸಿ (ಸು) ಶೈಲ ಸಾಗರ ಧರಾಶಾಚಕ್ರವಾಳಾಂಬರಂ ಪರಮಶ್ರೀವಿಜಯಪ್ರಭೂತಿಜ ಯಶ[ಂ] . . . ನೆಲೆಗೊಳ್ಗ ಚಂದ್ರತಾರಂಬರಂ (ಕವಿರಾ. ೩-೨೩೬) ; ನೂರು ಚಕ್ರವಾಳವಲ್ಲ ಸಾವಿರ ಚಕ್ರವಾಳಗಳ ಆಚೆ ನಿಂತಿರಲಿ . . . ಕೇಳಿದವರು 'ಗುರು ನನ್ನನ್ನೇ ನೋಡುತ್ತಿದ್ದಾರೆ, ನನಗೇ ಬೋಧಿಸುತ್ತಿದ್ದಾರೆ' ಎನ್ನುತ್ತಾರೆ (ಹತ್ತುಮು. ೪೩). [ ಸಂ. ]

**ಚಕ್ರವಾಳ** 'ಚಕ್ರವಾಲ' ನೋ.

**ಚಕ್ರವಾಳಗದ್ಯ** (ನಾ). ಗದ್ಯದಲ್ಲಿ ಬರುವ ಪದಪುಂಜಗಳ ಒಂದು ಪ್ರಕಾರ : ಮುಕ್ತಪದಗ್ರಹಣ ಚಕ್ರವಾಳಗದ್ಯಂ (ಜಗವಿ.೧೨-೫೬ ವ).
[ ಚಕ್ರವಾಳ (=ಚಕ್ರವಾಲ) + ಗದ್ಯ ]

**ಚಕ್ರವೀೞ್** (ಕ್ರಿ). ಉರುಳಿ ಬೀಳು; ಹೊರಳು : ಕರಚಕ್ರಂಗಳೊರ್ವರೊರ್ವರನಿಡಲ್ಕಾಳೆರ್ದು ಘೋೞಾಯ್ಲರಂಬರಮಿಂಬಂ ಕುಡದೆಂಬಿನಂ ಪರಿದು ಚಕ್ರಂ ಕೊಂಡವಾ ಭೋಗವುಂ ತುರಗಾರೂಢರುಮಾ ತುರಂಗಮುಮುಮಂದೋರೊಂದೞೊಳ್ ಚಕ್ರವಿಟ್ಟರೆ ಯುದ್ಧಾಂಗದ ಮಧ್ಯದೊಳ್ ಮರುಳ ತಂಡಂ ತಮ್ಮೊಳೊಂದಾರ್ವಿನಂ (ಮಹಾನೀ. ೧೨-೩೬). [ ಚಕ್ರ$_1$ + ಬೀೞ್$_1$ ]

**ಚಕ್ರವೃದ್ಧಿ** (ನಾ). = ಚಕ್ರಬಡ್ಡಿ. [ ಚಕ್ರ$_1$ + ವೃದ್ಧಿ ]

**ಚಕ್ರವ್ಯೂಹ** (ನಾ). ೧. (ಚಕ್ರಾಕಾರವಾಗಿದ್ದು, ಭೇದಿಸುವುದಕ್ಕೆ ತೊಡಕುತೊಡಕಾಗಿರುವ) ಒಂದು ಬಗೆಯ ಸೈನ್ಯವ್ಯೂಹ : ಅಂತೊಡ್ಡಿದ ಚಕ್ರವ್ಯೂಹದ ನಡುವೆಡೆಯುೞಿದು (ಪಂಪಭಾ. ೧೧-೮೬ ವ) ; ಗುರು ಪಣ್ಣಿದ ಚಕ್ರವ್ಯೂಹರಚನೆ ಪೆಱಗಿರಿದು ಪುಗಲ್ (ಗದಾಯು. ೪-೫೪) : ಚಕ್ರವ್ಯೂಹವನು ನಲವಿಂದ ಬಲಿದನು ನಿಲಿಸಿದನು ಕಾಂಭೋಜಭೂಪತಿಯ (ಕುವ್ಯಾದ್ರೋ. ೯-೧೯). ೨. (ಆಲಂ) ಇಕ್ಕಟ್ಟಿನ ಪರಿಸ್ಥಿತಿ : ಈ ಚಕ್ರವ್ಯೂಹದಿಂದ ಪಾರಾಗಿ ಹೋಗಲು ಯಾವ ಕಡೆಗೂ ದಾರಿಯೇ ಇಲ್ಲ (ಇಪ್ಪಕ. ೩೨೯) ; ಈ ಚಕ್ರವ್ಯೂಹದಿಂದ ಪಾರಾಗುವ ದಾರಿ ನನಗೆ ಗೊತ್ತಿಲ್ಲ (ಹೊಸಕ್ಷಿ. ೨೦೬) ; ತಾನು ಆ ಘಟನಾಪರಂಪರೆಯ ಚಕ್ರವ್ಯೂಹದಲ್ಲಿ ಸಿಕ್ಕಿಕೊಂಡಂತೆ ಅವನು ಭಾವಿಸಿದ್ದನು (ಪುನರು. ೮೮). [ ಚಕ್ರ$_1$ + ವ್ಯೂಹ ]

**ಚಕ್ರಶಕ್ತಿ** (ನಾ). ಕುದುರೆಯ ಶರೀರದಲ್ಲಿ ಜಂಘೆಯಂ ಮೇಲುಗಡೆ ಇರುವ ಒಂದು ಭಾಗ : ಸ್ಫುರೆಯಿಂ ಮೇಲ್ ಚಕ್ರ(ಚಂದ್ರ)ಶಕ್ತಿ ಬೆರಸಿರ್ಕು (ಅಶ್ವಶಾ. ೯-೫೩) ; ಓರಂತೆ ಚಕ್ರಶಕ್ತಿಯು ಸಾರಣ ಕೆಬಗೆಸೆವ ಜಂಘೆಯೆಂಬಭಿಧಾನಂ (ಅಶ್ವಶಾ. ೯-೫೪). [ ? ]

**ಚಕ್ರಶ್ಲೋಕ** (ನಾ).=ಚಕ್ರಬಂಧ ೨ : ಸಂತಂ ಬಾೞ್ವುದು ಮಾಱದಾ ನರಪ [illegible]ಲಕ್ಷ್ಮೀಮದಾಂಧಂ ತನ್ನಿಶ್ಚಯ ಮೆಚ್ಚಿ ನೀಂ ಪರಗುಣಾದಾಯರ್ಾಭಿಮಾನಂಗಳಿಂ ಪಿಂತಂ ನೋಡದೆ ಪಾೞಿಗೆಟ್ಟಬೞಿಪಿನಿಂ ಬಾೞ್ವಂತೆ ಬಾೞ್ವಯ್ಯನಾ ಸಂತಂ ತಾಂ ಪಸತಂದನಟ್ಟಿ ಪೆಱುಗುಂ ದಾನಂಗಳಂ ಭೂಪನಾ ॥ ಚಕ್ರಶ್ಲೋಕ ॥ (ಕವಿರಾ. ೨-೧೪೦). [ ಚಕ್ರ$_1$ + ಶ್ಲೋಕ ]

**ಚಕ್ರಸಂಭವ** (ನಾ). [ಜ್ಯೋತಿ] ಚಕ್ರಯೋಗದಲ್ಲಿ ಹುಟ್ಟಿದವನಂ : ವಸುಧಾಪತಿ ವಿನತಂ ಚಕ್ರಸಂಭವಂ (ಜಾತತಿ. ೧೩-೧೪).
[ ಚಕ್ರ$_1$ + ಸಂಭವ ]

**ಚಕ್ರಸಹಾಯ** (ನಾ). ೧. ಸುದರ್ಶನಚಕ್ರವನ್ನು ಆಯುಧವನ್ನಾಗಿ ಹೊಂದಿರುವವನು ; ವಿಷ್ಣು. ೨. ಚಕ್ರವಾಕಪಕ್ಷಿಗಳ ಮಿತ್ರ ; ಸೂರ್ಯ. ೧. ೨ : ಮುಸಕಂಗುಂದೆ ನಿಶಾಟಕೋಟಿ . . . ಪೀತಾಂಬರೋಲ್ಲಸಿತಂ ಚಕ್ರಸಹಾಯನಾಕ್ರಮಿಸಿದಂ ಭೂಚಕ್ರಮಂ ಪಾದದಿಂ (ಪುಷ್ಪಪು. ೮-೨೩). [ ಚಕ್ರ$_1$ + ಸಹಾಯ ]

**ಚಕ್ರಾಂಕ** (ನಾ). ೧. ರಥದ ಗಾಲಿಗಳ ಗುರುತು. 'ಚಕ್ರಾಂಕವ್ಯಂಜಿತ' ಪರಾ. ೨. ಚಕ್ರದ ಅಂಕಿತವುಳ್ಳವನು: ಅಖಿಲಧರಿತ್ರೀಚಕ್ರಾವನನಿಪುಣಾನತಶಕ್ರಾದಿಮದಿವಿಜನೆನ್ನಗಿಮಾ ಚಕ್ರಾಂಕಂ (ವಸ್ತುವಂ. ೧೦-೬೬). ೩.=ಚಕ್ರವಾಕ ೧ : ಕೋಡಿ ಹಿಮದಿಂ ಚಕ್ರಾಂಕಮಳ್ಕಿರ್ದುವು (ಪುಷ್ಪಪು. ೬-೪೦).
[ ಚಕ್ರ$_1$ + ಅಂಕ$_2$ ]

**ಚಕ್ರಾಂಕಣ** (ನಾ). ಚಕ್ರದ ಆಕಾರದಲ್ಲಿ ಮುದ್ರೆ ಹಾಕುವಿಕೆ: (ಶಿ).
[ <ಸಂ. ಚಕ್ರಾಂಕನ ]

**ಚಕ್ರಾಂಕನ** (ನಾ). ಚಕ್ರದ ಮುದ್ರೆಯನ್ನು ಕಾಯಿಸಿ ದೇಹದಲ್ಲಿ ಮುದ್ರೆಯೊತ್ತುವಿಕೆ; P ಇದಂ ವೈಷ್ಣವ ಮತಸ್ಥರಲ್ಲಿ ಒಂದಂ ಸಂಪ್ರದಾಯಂ: ಅನೇಕರು ಚಕ್ರಾಂಕನ ಮಾಡಿಸಿಕೊಂಡು ವೈಷ್ಣವರಾಗಿ (ಕಛವಿ. I, ೧೩).
[ ಚಕ್ರ$_1$ + ಅಂಕನ ]

**ಚಕ್ರಾಂಕಯುಗ** (ನಾ). =ಚಕ್ರಮಿಥುನ: ಬೆಚ್ಚಿದವು ಚಕ್ರಾಂಕಯುಗ (ಕುವ್ಯಾವಿ. ೨-೫೧). [ ಚಕ್ರಾಂಕ + ಯುಗ ]

**ಚಕ್ರಾಂಕವ್ಯಂಜಿತ** (ಗು). ೧. ರಥದ ಗಾಲಿಗಳ ಗುರುತುಗಳಿಂದ ವಿಶೇಷವಾಗಿ ಶೋಭಿಸುವ. ೨. ಚಕ್ರವಾಕಪಕ್ಷಿಗಳಿಂದ ಸೂಚಿತವಾದ. ೧, ೨: ಕಂಜವನದಂತೆ ಲಕ್ಷ್ಮೀರಂಜಿತಮುಂ ಚಿತ್ರಪತ್ರಮುಂ ಚಕ್ರಾಂಕವ್ಯಂಜಿತಮುಮಪ್ಪ ಬೀಡಂ ಮಂಜಿಱವಂತಿರುಳೊಳಿಱದನಶ್ವತ್ಥಾಮಂ (ಗದಾಯು. ೯-೩೨). [ ಚಕ್ರಾಂಕ + ವ್ಯಂಜಿತ ]

**ಚಕ್ರಾಂಗ** (ನಾ). ೧. ಚಕ್ರವಾಕಪಕ್ಷಿ. ೨. ಹಂಸಪಕ್ಷಿ: ಹಂಸಃ, ಶ್ವೇತಚ್ಛದಃ, ಚಕ್ರಾಂಗಃ, ಮಾನಸೌಕಾಃ (ಕಸಃ)–ಈ ೪ ಹಂಸಂ" (ಹಲಾಯು. ೪೨-೯೮): ಚಕ್ರಾಂಗವಾಹನಾನನವಾಜಿಶಾಲಹರ ಶುಕ್ರಶಿಷ್ಯಾಧಿಪ ಶಿರೋಮಾಲ (ಪ್ರಾಥರಾ. ೮-೧). [ ಚಕ್ರ$_1$ + ಅಂಗ$_2$ ]

**ಚಕ್ರಾಂಗಿ** (ನಾ). ೧. ಹೆಣ್ಣು ಹಂಸಪಕ್ಷಿ ; ಹಂಸಿ. ೨. ಒಂದು ಬಗೆಯ ಮೂಲಿಕೆ; ಕಟುಕರೋಹಿಣಿ: ಘೞಿಲನೆ ಚಕ್ರಾಂಗಿ [ಪಾಠಾಂ. ಕಿ]ಯುಮಂ ಕೞಿಯಿಂದರೆದೀಂಟೆ ಕಿಡುಗುಮಾಖುಗಳ ವಿಷಂ (ಖಮದ. ೧೨-೨೧).
[ ಸಂ. ಚಕ್ರಾಂಗೀ (ಚಕ್ರ + ಅಂಗ + –) ]

**ಚಕ್ರಾಂಶು** (ನಾ). ಚಕ್ರಾಯುಧದ ಕಿರಣ,–ಕಾಂತಿ: ಸಮುದಿತಾರ್ಕಾಕಾರ ಚಕ್ರಾಂಶುವಿಂ . . . ಚೆಲ್ವಾದನಬ್ಜೋದರಂ (ಜಗವಿ. ೧-೪೯).
[ ಚಕ್ರ$_1$ + ಅಂಶು ]

**ಚಕ್ರಾಚಕ್ರಿ** (ನಾ). ಚಕ್ರಗಳನ್ನು ಪರಸ್ಪರ ಪ್ರಯೋಗಿಸಿ ಮಾಡುವ ಯುದ್ಧ: ಚಕ್ರಾಚಕ್ರಿಯುಂ ಖಟ್ವಾಖಟ್ವಿಯುಮಾಗೆಯುಂ ಪೆಣೆದಿರುವ ಪದದೊಳ್ (ಶಾಂತಿಪು. ೬-೮೨ ವ). [ ಸಂ. ]

**ಚಕ್ರಾಟ** (ನಾ). ೧. ಮಾಂತ್ರಿಕ: ಗಾರುಡಿಗ. ೨. ಖಳ; ನೀಚ. [ ಸಂ. ]

**ಚಕ್ರಾಣಿಕೆ** (ನಾ). ಒಂದು ಬಗೆಯ ಗಿಡ : ಚಕ್ರಾಣಿಕೆ, ನೀರುವಾಟೆ (ಪ್ಯಾಜಿಗ. ೮-೧೩೦). [ ? ]

**ಚಕ್ರಾತ್ಮಕ** (ನಾ). ಚಕ್ರಾಕಾರವಾದುದು; ಚಕ್ರದಂತಿರುವುದು: ಜಗತ್ಪ್ರವಾಹದಲ್ಲಿ ಸೃಷ್ಟಿಸ್ಥಿತಿಲಯಾದಿಗಳು ಚಕ್ರಾತ್ಮಕವಾಗಿರುವಂತೆ ಮಾನವನ ಇತಿಹಾಸದಲ್ಲಿ ಸಂಸ್ಕೃತಿಗಳ ಆಯುಸ್ಸೂ ಚಕ್ರಾತ್ಮಕ- ಮತ್ತು ಪರಿಮಿತ (ಮುಕ್ತಾರ. ೯೭ ಪೀಠಿಕೆ). [ಸಂ.]

**ಚಕ್ರಾಧಾರ** (ನಾ). ಭೂಮಿಗೆ ಆಧಾರವಾಗಿರುವವನು; ಕೂರ್ಮ; ವಿಷ್ಣು: ಕ್ಷೀರವಾರುಧಿಶಯನ . . . ಚಕ್ರಾಧಾರ ಭವದೂರ (ಹರಿಸಾ. ೩). [ ಚಕ್ರ$_1$ + ಆಧಾರ ]

**ಚಕ್ರಾಧಿನಾಥ** (ನಾ).=ಚಕ್ರನಾಥ: ಚಕ್ರಾಧಿನಾಥಂಗೆ ಜಯಪ್ರಾರಂಭಗಳ್ಗೆ ಸ್ಫಟಿಕಕಳಶಮಂ ತೀವಿ ದಿವ್ಯಾಂಬುವಿಂ ನಾಕಜನಾಥಂ ಮಜ್ಜನಕ್ಕಿತ್ತಿದ ತೆಱದೆ ಸುಧಾಸೂತಿ ಕಣ್ಗೆದ್ದವಾದಂ (ಆದಿಪು. ೧೨-೮). [ ಚಕ್ರ$_1$ + ಅಧಿನಾಥ ]

**ಚಕ್ರಾಧಿಪ** (ನಾ).=ಚಕ್ರನಾಥ: ಮಂತ್ರಪೂರ್ವಕಂ ನೆಗಟ್ಟುದೆಂದು ಚಕ್ರಾಧಿಪಂ ಮನಂಗೊಳೆ ಪೇಟ್ದಂ (ಆದಿಪು. ೦೩-೦೬). [ ಚಕ್ರ$_1$ + ಅಧಿಪ ]

**ಚಕ್ರಾಧಿಪತ್ಯ** (ನಾ). ಚಕ್ರವರ್ತಿಯು ಆಳುವ ರಾಜ್ಯ; ಸಾಮ್ರಾಜ್ಯ: ಭಾರತವು ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಸೇರಿತ್ತು (ರೂಢಿ). [ ಚಕ್ರ$_1$ + ಆಧಿಪತ್ಯ ]

**ಚಕ್ರಾಧೀಶ** (ನಾ). = ಚಕ್ರನಾಥ: ಇಲಾಚಕ್ರವಿಖ್ಯಾತ ಭೂಭೃತ್ಪ್ರಭು ಚಕ್ರಾಧೀಶನೊಳ್ ಮಚ್ಚರಿಪವೊಲೆಸೆದಿರ್ದತ್ತು ರೌಪ್ಯಾಚಲೇಂದ್ರಂ (ಆದಿಪು. ೦೩-೯೬). [ ಚಕ್ರ$_1$ + ಅಧೀಶ ]

**ಚಕ್ರಾಭಿಷೇಕ** (ನಾ.)[ಜೈನ]ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು: ಅಂತು ಚಕ್ರಾಭಿಷೇಕೋತ್ಸವಾನಂತರಂ (ಆದಿಪು. ೦೩-೨ ವ): ಚಕ್ರಲಾಭಮುಂ ಚಕ್ರಾಭಿಷೇಕಮುಂ . . . ಅಪ್ಪಯ್ಯುತ್ತುಮೂಱು ಗರ್ಭಾನ್ವಯಕ್ರಿಯೆಯೊಳು (ಚಾವುಂಪು. ೨೩೦): ಸಕಲರಾಜಾಧಿರಾಜರುಗಳಿಂ ಅಭಿಷೇಕವಂ ಪಡೆದು ಸಕಲರಿಂ ಪೂಜಿತನಾಗಿ ಪುನಃ ಚಕ್ರಪೂಜೆಯಂ ಮಾಡಿ ಸರ್ವರಿಂದಲೂ ವಿಶ್ವಂಜಯ ದಿಶಾಂಜಯ ದಿವ್ಯಮೂರ್ತಿಯೆಂದು ಪೊಗಳಿಸಿ ಕೊಳ್ಳುವುದೇ . . . ಚಕ್ರಾಭಿಷೇಕವೆಂಬ ೪೬ನೆ ಕರ್ಮವು (ಪುರುಚ. ೨೦೩). [ ಚಕ್ರ$_1$ + ಅಭಿಷೇಕ ]

**ಚಕ್ರಾಯುಧ** (ನಾ). ೧. ಒಂದಂ ಬಗೆಯಂ ವರ್ತುಲಾಕಾರವಾದ ಆಯುಧ,–ಅಸ್ತ್ರ; ಸುದರ್ಶನ ಚಕ್ರ. ೨. ಚಕ್ರವನ್ನು ಆಯುಧವಾಗಿ ಉಳ್ಳವನು; ವಿಷ್ಣು: ಎಲೆ ಚಕ್ರಾಯುಧ . . . ನೀನಱುವುಗೆಟ್ಟೀತಂದ್ರಿಯಿಂ ದೊಂದಿ ಸಾಯಲಿದೇಂ ತಕ್ಕುದೆ (ಶಾಂತೀಶ್ವ. ೩-೨೩). ೩. = ಚಕ್ರರತ್ನ: ಆಯುಧಶಾಲೆಯೊಳ್ . . . ಚಕ್ರಾಯುಧವಿಂದು ಬಂದು ನೆಲಸಿರ್ದುದು (ಶಾಂತಿಪು. ೮-೦೩೩). ೪. [ಜೈನ] ದೈವಾಯತ್ತವಾಗಿ ಚಕ್ರವನ್ನು ಪಡೆದವನಂ; ಚಕ್ರವರ್ತಿ: ಚಕ್ರಾಯುಧಂಗೆ ಗುರು ಪೆಱನೊಳನೇ (ಶಾಂತಿಪು. ೧೧-೯೮): ಚಕ್ರಾಯುಧನಂ ಬನ್ನಪಂಗೆಯ್ಯುಲ್ವೇಟ್ಟುದುಂ (ಶಾಂತಿಪು. ೦೦-೦೨೨ ವ). [ ಚಕ್ರ$_1$ + ಆಯುಧ ]

**ಚಕ್ರಾರ** (ನಾ). ಗಾಲಿಯ ಅರೆ; ಚಕ್ರದ ಒಳ ಸುತ್ತಿನ ಅರೆಕೋಲು: ಚಕ್ರಾರಪಂಕ್ತಿಯುರುಳಿದಂತೆ ಇದರ ಕಥೆ (ಬದ್ಧ್ರ. XXVI, ಮುನ್ನುಡಿ). [ ಚಕ್ರ$_1$ + ಅರ$_2$ ]

**ಚಕ್ರಾರಾವ** (ನಾ). ಗಾಲಿಗಳ ಸದ್ದು,–ಶಬ್ದ: ಪೋಪ ಬಾಳುಳ್ಕಂಗಳಂ ಪೋಲೆ ಪಾಯಿಸಲೆಂದಿರ್ದಳವಂ ಪೊದಟ್ದಿಸವ ಚಕ್ರಾರಾವವೋರಂತೆ ಚೋದಿಸಲೆಂದಿರ್ದ ರಥಂ . . . ನೋಟಕ್ಕೇನಗುರ್ವಾದುದೋ (ಆದಿಪು. ೦೪-೦೦೦). [ ಚಕ್ರ$_1$ + ಆರಾವ ]

**ಚಕ್ರಾಹ್ವ** (ನಾ). ಚಕ್ರವಾಕಪಕ್ಷಿ: ಇಂದ್ರಿಯಸುಖಾರ್ಥಿ ಸಂಸಾರಗುಹಾಗಹ್ವರ ದೊಳಗಿರುಳಿನ ಚಕ್ರಾಹ್ವದವೊಲ್ ಮಱುಗದೇಂ ಸುಖಂಬಡೆದಪನೇ (ಆದಿಪು. ೩-೬೮). [ ಸಂ. ]

**ಚಕ್ರಿ** (ನಾ). ೧. ಗಾಲಿಯನ್ನು ಉಳ್ಳದು; ಬಂಡಿ; ರಥ: "ಚಕ್ರಿಯೊಂದೆನಲ್ ಭಂಡಿಯುಕ್ಕು" (ಮಂಗರಾ. ೧೪-೨೩). ೨. ಕುಂಬಾರ; ಕುಲಾಲ: "ಕುಲಾಲಾಖ್ಯಂ ಚಕ್ರಿ ಕುಂಭಕಾರಶವಂ" (ವಸ್ತುಕೋ. ೬೪-೬೪): ಚಕ್ರಿ ಇಕ್ಕಿದ ಕಿಚ್ಚಿನಂತೆ ಅರ್ಕಚಂದ್ರನಂತೆ ಆರಾರ ಚಿತ್ತಕ್ಕೆ ಹೆಚ್ಚು ಕುಂದಿಲ್ಲದೆ ನಿಶ್ಚಿಂತನಾದೆಯಲ್ಲಾ (ಮೋಳಿಮಾ. ೦೩೪-೩೦೮). ೩. ಚಕ್ರಾಯುಧವನ್ನು ಉಳ್ಳವನು; ವಿಷ್ಣು; ಕೃಷ್ಣ: ಪಿಡಿಯೆಂ ಚಕ್ರಮನೆಂಬ ಚಕ್ರಿಯಿಂ . . . ಪಿಡಿಯಿಪ್ಪೆಂ ಕರಚಕ್ರಮಂ (ಪಂಪಭಾ. ೧೦-೨೩); ಪಾಂಡುತನಯರಿಗೆ ಚಕ್ರಿ ತಾ ಬಂದವರ ಸೇವಾಚಕ್ರದೊಳಗಿಹನು (ಕುಮಾ್ರಾಉ. ೩-೦೫೦). ೨, ೩: ಅಜಾಂಡಘಟಮಾಲಾಚಕ್ರಿಯೊಳ್ ಮಗನಂ ಬೇಡಿದನೊಳ್ದನಿಲ್ಲ ಗುರು ವಿದ್ಯಾವಿತ್ತಮಂ ವಿತ್ತಮಂ (ಜಗವಿ. ೭-೦೩). ೪. ಚಕ್ರವರ್ತಿ; ಸಾಮ್ರಾಟ: ಜಗದ ಬಡತನಮನೊರ್ವಿಯೆ ಬಗೆದುತಿರೆ ಕಿಡಿಪ ಚಕ್ರಿ ತನ್ನಿರ್ದಡೆಯೊಳ್ ನೆಗಟ್ದ ಬಡತನಮನದೇಕೆ ಗಡಂ ಸೈರಿಸುವನೆನೆ ಪೊದಟ್ಟುದು ಮಧ್ಯಂ (ಆದಿಪು. ೮-೩೦); ಚಕ್ರಿಯೊಳ್ಪಡೆದು ಶಾಸನವಂ (ಸೌಇಇ. XI-i, ೬೪-೦೩: 1028); ಶ್ರೀಮಚ್ಚಾಳುಕ್ಯಚಕ್ರಿಯ ರಾಜಧಾನಿ ಕಲ್ಯಾಣದೊಳ್ (ಸೌಇಇ. XI-i, ೦೦೩-೦೦: 1070 ?). ೫. ಚಕ್ರವಾಕಪಕ್ಷಿ ಗಳಿಂದ ಕೂಡಿದುದು. ೩, ೫: ಸಿರಿಯರಸನೆಂಬಂತೆ ಚಕ್ರಿಯೆಂದೆನಿಸಿತ್ತು . . . ಪುಂಡರೀಕಂ (ನವಮೋ. ೮-೩೩). ೬. ಕತ್ತೆ; ರಾಸಭ. ೭. ಹಾವು; ಸರ್ಪ: "ಅಹಿ ಚಕ್ರಿ ಕಾಕೋದರಂ . . . ವ್ಯಾಳನೆನಲು ಸರ್ಪಂಗೆ ನಾಮಂ" (ಮಂಗರಾ. ೦೦೮-೦): "ಆ ಹರಿ ನೃಪ ಕುಂಬಾರಂ ಊಹಿಸೆ ಗಿರಿ ಪಾವು ಪಂಚಶಬ್ದಂ ಚಕ್ರೀ" (ನಾನಾಕಂ. ೦೦೬): "ಹರಿ ಭೂಪಾಲಂ ಕುಲಾಲಂ ಫಣಿ ಕರವಿನಿತುಂ ಚಕ್ರಿಶಬ್ದಂ" (ನಾನಾರ. ೮೦). [ ಸಂ. ಚಕ್ರಿನ್ ]

**ಚಕ್ರಿಕ** (ನಾ). ಚಕ್ರವನ್ನು ಧರಿಸಿರುವವನು. [ ಸಂ. ]

**ಚಕ್ರಿಕಾವರ್ತಿ** (ನಾ). ಕೃತ್ರಿಮವಾದ ಉಪಾಯವುಳ್ಳವನು; ಕಪಟ ವ್ಯವಹಾರದವನು: ಚಕ್ರಿ ಚಕ್ರಿಕಾವರ್ತಿಯಪ್ಪುದಱಿಂದಾ ವನಾಂತ ರಾಳಕ್ಕೊರ್ವನೆ ಬಂದು (ಪಂಪಭಾ. ೫-೦೯ ವ). [ ಸಂ. ಚಕ್ರಿಕಾವರ್ತಿನ್ ]

**ಚಕ್ರಿಪದ** (ನಾ). ಚಕ್ರವರ್ತಿಯ ಪದವಿ,–ಸ್ಥಾನ: ಅಡಿಯಿಡು ವಂತಿರಯ್ದನೆಯ ಚಕ್ರಿಪದಕ್ಕೆ ಜನಾರ್ಭಕಂ ತಳರ್ನಡೆ ನಡೆದಂ (ಶಾಂತಿಪು. ೧೦-೮೨). [ ಚಕ್ರಿ + ಪದ$_3$ ]

**ಚಕ್ರಿಯೋಧ** (ನಾ). ಚಕ್ರವರ್ತಿಯ ಸೈನಿಕ: ಚಕ್ರಿಯೋಧರುಂ ವಿಜಯ ಶ್ರಮಮವಿನೇಯಪರರಾಗಿ . . . ವಿಶ್ರಮಿಸಿದರ್ (ಶಾಂತಿಪು. ೧೦-೨೪ ವ). [ ಚಕ್ರಿ + ಯೋಧ ]

**ಚಕ್ರಿಶಾಯಿ** (ನಾ). ಸರ್ಪದ ಮೇಲೆ ಮಲಗಿರುವವನು; ಶೇಷಶಾಯಿ; ವಿಷ್ಣು: ಹಾ ವಿಧಿಯೆ ಹಾ ಚಕ್ರಿಶಾಯಿಯಾ ಪರಿಪರಿಯ ರಕ್ಕಸರ ಭವಣೆಯಂ ಪರಿಹರಿಸಿ ರಕ್ಷಿಸಿದ ಭೀಮ (ಕುಮಾವಿ. ೯): ಚಕ್ರಿಶಾಯಿಯುಪ್ಪ ಚಕ್ರಿಯನು ಗ್ರಹದಿಂ ಸಹಿತಮಾ ಚಕ್ರಮುಂ ಚಕ್ರವರ್ತಿ ಕೈಕೊಂಡು (ಅದ್ಭುತ. ೭-೦೨). [ ಸಂ. ಚಕ್ರಿಶಾಯಿನ್ ]

**ಚಕ್ರಿಸೈನಿಕ** (ನಾ). ಚಕ್ರವರ್ತಿಯ ಸೈನ್ಯ,–ದಂಡು: ಕುಸುಮಿತ ಮಂದಾರ ಚ್ಛಾಯ . . . ಪ್ರಸರಂಗಳೊಳೆಳೆಸಿದ ಚಕ್ರಿಸೈನಿಕಂ ನೀಗಿತಧ್ವಗಮನ ಶ್ರಮಮಂ (ಶಾಂತಿಪು. ೧೦-೬೩). [ ಚಕ್ರಿ + ಸೈನಿಕ ]

**ಚಕ್ರೀವತ್ತು** (ನಾ). ಕತ್ತೆ: "ಖರ ಚಕ್ರೀವದ್ವಾಲೇಯ ರಾಸಭಾಖ್ಯಾತಿ ಗರ್ದಭಂ ತಾನದು ಪೆಸರಂ" (ವಸ್ತುಕೋ. ೮೮-೩೯). [ಸಂ. ಚಕ್ರೀವತ್]

**ಚಕ್ರೇಶ** (ನಾ). ೧. ವಿಷ್ಣು. ೨. ಭೂಮಂಡಲದ ಅಧಿಪತಿ; ಚಕ್ರವರ್ತಿ. ೩. [ಜೈನ] ಚಕ್ರರತ್ನದ ಒಡೆಯ. ೨, ೩: ಚಕ್ರಂ ಪುಟ್ಟಿದೊಡೀಗಳ್ ಚಕ್ರೇಶ್ವರನೆಂಬ ಪೆಸರುಮಾಯ್ತುಕ್ಕವು ತಾಂ ಚಕ್ರೇಶನಾದೊಡಂ ತನ್ನಾ ಕ್ರಮಣವನೆನ್ನೊಳೇಕೆ ಕೆಮ್ಮನೆ ತೋರ್ಪಂ (ಆದಿಪು. ೦೪-೬೯). [ ಚಕ್ರ$_1$ + ಈಶ ]

**ಚಕ್ರೇಶ್ವರ** (ನಾ). ೧.=ಚಕ್ರೇಶ ೨ : ಈ ಮಾಟ್ಕೆಯಿಂ . . . ಭೂಷಣಾಂಗದಳವಂ ಚಕ್ರೇಶ್ವರಂ ತಾಳ್ದಿದಂ (ಆದಿಪು. ೪-೩೫) ; ಚಕ್ರೇಶ್ವರ ಮಂಡಳೇಶ್ವರಂ ಬೆಸಸೆ ನೆಗಬ್ಬ ಕವಿ ಕವಿರತ್ನಂ (ಅಜಿಪು. ೧೨-೪೫). ೨.=ಚಕ್ರೇಶ ೩: ಚಕ್ರಂ ಪುಟ್ಟಿದೊಡೀಗಳ್ ಚಕ್ರೇಶ್ವರನೆಂಬ ಪೆಸರು ಮಾಯ್ದು (ಆದಿಪು. ೧೪-೭೯). [ ಚಕ್ರ$_1$ + ಈಶ್ವರ ]

**ಚಕ್ಲಿ**$_1$ (ನಾ). ಹುಣಿಸೆಜಾತಿಗೆ ಸೇರಿದ ಒಂದು ಬಗೆಯ ಮರ: (ಕ). [ ←ತುಳು. ಚಕ್ಕುಲಿ ]

**ಚಕ್ಲಿ**$_2$ (ನಾ). ಭೂಮಿಯ ಕ್ಷೇತ್ರವನ್ನು ಅಳೆಯುವ ಒಂದು ಪ್ರಮಾಣ: ಚಕ್ಲಿಯೆಂದರೆ ಅರ್ಧಕೂರಿಗಿಗಿಂತ ಹೆಚ್ಚಾಗುವುದಿಲ್ಲ (ಳಭಾಗ. ೩೬೬). [ ←ಮರಾ. ಸಾಖಳೀ? ]

**ಚಕ್ಷಣ** (ನಾ). = ಚಕ್ಕಣ. [ ಸಂ. ]

**ಚಕ್ಷು** (ನಾ). ಕಣ್ಣು ; ನೇತ್ರ : "ಚಕ್ಷು ನೇತ್ರಂ ನಯನಮಂಬಕಂ . . . ಕಣ್ಗಳೆನಿಸಿಕ್ಕು" (ಮಂಗರಾ. ೯೩-೨) : ಇಂದ್ರು ಪಾದದಲ್ಲಿ ಚಂದ್ರು ಮನದಲ್ಲಿ ಚಕ್ಷುವಿನಲ್ಲಿ ಸೂರ್ಯಜನನವು (ಬಸವ. ೫೩೬) ; ಭಗವಂತನು . . . ಮಧ್ಯಮಮಾರ್ಗವನ್ನು ಕಂಡುಕೊಂಡನು; ಇದರಿಂದ ಚಕ್ಷು ಉಂಟಾಯಿತು, ಜ್ಞಾನ ಉಂಟಾಯಿತು (ಭಾರದ. ೦೯೦). [ <ಸಂ. ಚಕ್ಷುಸ್ ]

**ಚಕ್ಷುಃಪ್ರೀತಿ** (ನಾ). ಮೊದಲಸಲ ನೋಡಿದ ಮಾತ್ರದಿಂದಲೇ ಉಂಟಾಗುವ ಪ್ರೀತಿ; ಕಣ್ಬೇಟ. P ಇದು ಚಕ್ಷುಃಪ್ರೀತಿ, ಮನಸ್ಸಂಗ, ಸಂಕಲ್ಪ, ಜಾಗರ, ಕಾರ್ಶ್ಯ, ಅರತಿ, ಲಜ್ಜಾತ್ಯಾಗ, ಮೋಹೋನ್ಮಾದ, ಮೂರ್ಛಾವಸ್ಥೆ, ಮರಣ ಎಂಬ ಹತ್ತುಬಗೆಯ ಮದನಾವಸ್ಥೆಗಳಲ್ಲಿ ಮೊದಲನೆಯದು : ಚಕ್ಷುಃಪ್ರೀತಿಯದಿನಿಯನನೀಕ್ಷಿಪುದು (ರಸರ. ೧-೪೦ ಸೂತ್ರ). [ ಸಂ. (ಚಕ್ಷುಸ್ + ಪ್ರೀತಿ) ]

**ಚಕ್ಷುಃಶ್ರವ** (ನಾ). ಕಣ್ಣುಗಳನ್ನೇ ಕಿವಿಗಳಾಗಿ ಬಳಸಿಕೊಳ್ಳುವ ಪ್ರಾಣಿ; ಸರ್ಪ. [ ಸಂ. (ಚಕ್ಷುಸ್ + ಶ್ರವಸ್) ]

**ಚಕ್ಷುಬಂಧನ** (ನಾ). ಕಣ್ಣು ತೆರೆಯದಂತೆ ಮಾಡುವಿಕೆ ; ಕಣ್ಣುಕಟ್ಟು (?) : ಚಕ್ಷುಬಂಧನಕ್ಕೆ :– ಕೋಳಿಪಿಷ್ಟೆಯ ಜೇನುತುಪ್ಪದಲ್ಲಿ ತಿಲಕವಿಡೆ ಚಕ್ಷುಬಂಧನ (ವಿವೈವಿ. ೨೦೭). [ ಚಕ್ಷು + ಬಂಧನ ]

**ಚಕ್ಷುರಿಂದ್ರಿಯ** (ನಾ). ಕಣ್ಣು; ನೇತ್ರೇಂದ್ರಿಯ: ಶಬ್ದಾದಿಗಳೈದರಲ್ಲಿ ಅಡಗಿರುವ ರೂಪೇತರದ ಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ ಇರುವ ಇಂದ್ರಿಯವು ಚಕ್ಷುರಿಂದ್ರಿಯವೆನಿಸಿಕೊಳ್ಳುವುದು (ತತ್ತ್ವಬು. ೭). [ ಸಂ. (ಚಕ್ಷುಸ್ + ಇಂದ್ರಿಯ) ]

**ಚಕ್ಷುರೋಗ** (ನಾ). ಕಣ್ಣಿನ ರೋಗ; ನೇತ್ರರೋಗ: ಮುಳ್ಳುಮುತ್ತಗದ ರಸದಲ್ಲಿ ಹುಲಿಗಿಲ ಬೀಜವಂ ಅರೆದು ಗುಳಿಗೆಯಂ ಮಾಡಿ ತಚ್ಚಲು ಎಲ್ಲಾ ಚಕ್ಷುರೋಗಂ ಕೆಡುಗುಂ (ವಿವೈವಿ. ೦೩೪). [ ಚಕ್ಷು + ರೋಗ ]

**ಚಕ್ಷುರ್ಗ್ರಾಹ್ಯ** (ಗು). ಕಣ್ಣಿನಿಂದ ಗ್ರಹಿಸತಕ್ಕ ; ನಯನಕ್ಕೆ ಗೋಚರವಾಗತಕ್ಕ : ಪ್ರಾಣಲಿಂಗವು ಸಕಲ ನಿಷ್ಕಲ ಮತ್ತು ಮನೋಗ್ರಾಹ್ಯವು, ಇಷ್ಟಲಿಂಗವು ಸಕಲ ಮತ್ತು ಚಕ್ಷುರ್ಗ್ರಾಹ್ಯವು (ಭಾರದ. ೨೫೩). [ ಸಂ. (ಚಕ್ಷುಸ್ + ಗ್ರಾಹ್ಯ) ]

**ಚಕ್ಷುರ್ದರ್ಶನಿ** (ನಾ). [ಜೈನ] (?) : ದರ್ಶನಾನುವಾದದಿಂ ಚಕ್ಷುರ್ದರ್ಶನಿಗಳ್ಗೆ ಮಿಥ್ಯಾ ದೃಷ್ಟ್ಯಾದಿ ಕ್ಷೀಣಕಷಾಯಾಂತಂಬರಂ ಲೋಕಾಸಂಖ್ಯೇಯಭಾಗಂ (ತತ್ತ್ವಪ್ರ. ೨೭). 'ಅಚಕ್ಷುರ್ದರ್ಶನ' ಪರಾ. [ ಸಂ. ಚಕ್ಷುರ್ದರ್ಶನಿನ್ ]

**ಚಕ್ಷುರ್ವಿಜ್ಞಾನ** (ನಾ). ಕಣ್ಣುಗಳಿಂದ ಪಡೆಯುವ ಜ್ಞಾನ; ನೇತ್ರೇಂದ್ರಿಯದಿಂದ ಗ್ರಾಹ್ಯವಾದ ಅರಿವು : ಪ್ರವೃತ್ತಿವಿಜ್ಞಾನವು– ಚಕ್ಷುರ್ವಿಜ್ಞಾನ, ಶ್ರೋತ್ರವಿಜ್ಞಾನ . . . ಮನೋವಿಜ್ಞಾನ ಎಂದು ಆರು ಪ್ರಕಾರವಾಗಿದೆ (ಹಿಂದಸಾ. ೨೯). [ ಸಂ. (ಚಕ್ಷುಸ್ + ವಿಜ್ಞಾನ) ]

**ಚಕ್ಷುಶ್ರವಣ** (ನಾ).=ಚಕ್ಷುಃಶ್ರವ: ಅತುಳ ಚಕ್ಷುಶ್ರವಣಾಭರಣ ಸುಕ್ಷ್ವೇಡನಗ್ರೀವ ರಕ್ಷಿಸುಗೆ (ನವಮೋ. ೧೭-೧). [ <ಸಂ. ಚಕ್ಷುಶ್ರವಣ ]

**ಚಕ್ಷುಶ್ರವಾಕಲ್ಪ** (ನಾ). ಸರ್ಪವನ್ನೇ ಆಭರಣವಾಗಿ ಉಳ್ಳವನು; ಶಿವ: ಚಕ್ಷುಶ್ರವಾಕಲ್ಪ ದಕ್ಷಮುಖಶಿಕ್ಷ (ಉದ್ಭದೇ. ೩-೫೦). [ <ಸಂ. ಚಕ್ಷುಃಶ್ರವಾಕಲ್ಪ ]

**ಚಕ್ಷುಶ್ರೋತ್ರ** (ನಾ).=ಚಕ್ಷುಃಶ್ರವ : (ಕ). [ <ಸಂ. ಚಕ್ಷುಃಶ್ರೋತ್ರ ]

**ಚಕ್ಷುಶ್ಶ್ರವಾಶ** (ನಾ). ಹಾವನ್ನು ತಿನ್ನುವ ಪ್ರಾಣಿ: ನವಿಲು: "ಚಕ್ಷುಶ್ಶ್ರವಾಶಂ ಕಳಾಪಿ . . . ನವಿಲೆನಿಕ್ಕುಂ" (ಮಂಗರಾ. ೩೦-೨). [ ಸಂ. ]

**ಚಕ್ಷುಶ್ಶ್ರುತಿ** (ನಾ). = ಚಕ್ಷುಃಶ್ರವ : ಚಕ್ಷುಶ್ಶ್ರುತಿಗಳಂತೆ ವಾಯುಭಕ್ಷಕರಾಗಿರ್ದ ಮುಮುಕ್ಷುನಿಕರಮುಮಂ (ಪಂಡಶಂ. ೧೦೯-೦೦). [ ಸಂ. (ಚಕ್ಷುಸ್ + ಶ್ರುತಿ) ]

**ಚಕ್ಷುಷ್ಮಂತ** (ನಾ). ೧. ಕಣ್ಣುಗಳುಳ್ಳವನು ; ದೃಷ್ಟಿಶಕ್ತಿಯುಳ್ಳವನು. ೨. ಮುಂದಾಲೋಚನೆಯುಳ್ಳವನು ; ದೂರದೃಷ್ಟಿಯುಳ್ಳವನು : ಶಾಂತಿಪುಸಾದಗುಣದದಗುಂತಿಗಳಂಮುಗಮಿಳೇಶ್ವರೇಂದುಗಮೊಡಸತ್ವಂತು ಸಮನಿಸಿ ಚಕ್ಷುಷ್ಮಂತರ ಕಣ್ಗಂ ಮನಕ್ಕಮಿತ್ತುದು ಮುದಮಂ (ಶಾಂತಿಪು. ೧೦-೧೩೭). [ ಸಂ. ಚಕ್ಷುಷ್ಮತ್ ]

**ಚಕ್ಷುಷ್ಯ** (ಗು). ೧. ಕಣ್ಣಿಗೆ ಹಿತವಾದ ; ಚೆಲುವಾದ ; ಕಂಗೊಳಿಸುವ : ಆಯುರಾರೋಗ್ಯಾಭಿವೃದ್ಧಿಯಾಗಿ, ಚಕ್ಷುಷ್ಯವಾಗಿ, ಐಶ್ವರ್ಯಪ್ರದವಾಗಿರುವುದು (ಸಕವೈ. ೩೩). (ನಾ). ೨. ಚೆಲುವನಾದವನು ; ದರ್ಶನೀಯನಾದವನು: "ಚಕ್ಷುಷ್ಯಃ, ಸುಭಗಃ–ಈ ೨ ಸೊಬಗಂ" (ಹಲಾಯು. ೬೦-೨೦೨). [ ಸಂ. ]

**ಚಕ್ಷುಷ್ಯೆ** (ನಾ). ಕಣ್ಣಿಗೆ ಲೇಪಿಸುವ ಒಂದು ಬಗೆಯ ಅಂಜನ: "ಚಕ್ಷುಷ್ಯೆ ಕುಲಾಲಿ ಕುಲತ್ಥಿಕೆ ಎಂದು, ಕುಲಥಾಂಜನ, ಕಂಬಳಗಿನ ಬೀಜಮೆಂದೂ, ಎಂಬರು" (ನಾಚಿರಾ. ೮). [ ಸಂ. ಚಕ್ಷುಷ್ಯಾ ]

**ಚಕ್ಷುಸ್ಸು** (ನಾ).=ಚಕ್ಷು : ಚಕ್ಷುಸ್ಸು, ಶ್ರೋತ್ರ, ಘ್ರಾಣ, ರಸನ ಮತ್ತು ತ್ವಕ್ ಎಂಬುವು ಜ್ಞಾನೇಂದ್ರಿಯಗಳು (ಭಾತತ್ತ್ವ. ೭೦). [ಸಂ. ಚಕ್ಷುಸ್]

**ಚಕ್ಷೂರಾಗ** (ನಾ).=ಚಕ್ಷುಃಪ್ರೀತಿ: ಯಾರಿಗಾದರೂ, ಎಲ್ಲಿಯಾದರೂ ಆನಂದಮಯವಾದ ಪ್ರೀತಿಯುಂಟಾದರೆ ಜನರು ಅದಕ್ಕೆ ತಾರಾಮೈತ್ರಿಯೆಂತಲೂ, ಚಕ್ಷೂರಾಗವೆಂತಲೂ, ಅನ್ನುತ್ತಾರೆ; ಅದನ್ನೇ ಬಲ್ಲವರು ಅಬಾಧಿತವಾದಂಥ ಅಕೃತ್ರಿಮಪ್ರಣಯವೆಂದು ತಿಳಿಯುತ್ತಾರೆ (ಉರಾಡ. ೧೩೬). [ ಸಂ. (ಚಕ್ಷುಸ್ + ರಾಗ) ]

**ಚಗಚೆ, ಚಗಚ್ಚೆ, ಚಗತೆ, ಚೊಗಚೆ** (ನಾ). ಒಂದು ಬಗೆಯ ಗಿಡ; ಚಕ್ರಮರ್ದ : "ಕರಪಸಂ ಚಕ್ರಮರ್ದಂ ಚಗಚೆಯಕ್ಕುಂ" (ಮಂಗರಾ. ೩೯-೨೭) : ಚಾರು ಚಗಚೆ ದೊಟ್ಟಲ್ಲೆಂಬೆಗಳ ಸುಸಾರದ ಶಾಖಾಳಿಗಳಂ ಸಲೆ ಸಂಭಾರಂ ಬೊರೆದುಪ್ಪಿನಕಾಯಿಗಳೆಡೆಮಾಡಿದಳು (ಮದೇಪು. ೨೭-೭). ಚಗಚ್ಚೆ : ಅರಗಾಮಳಕಫಳಂ ವೃಕ್ಷ ರಾಜಪತ್ರಂ ಚಗಚ್ಚೆ[ಪಾಠಾಂ. ಚೆ]ಯೆಕ್ಕೆಯಿಮಂ ಕೊಂಡರೆದಿಂಬಾಗಿರೆ ಪೂಸುಗೆ ಶಿರೋವ್ರಣಂ ತರ್ದು ದುಂದುಜೆಂಬಿಷ್ಟ ಕಿಡುಗುಂ (ಲೋಕೋಪ. ೯-೫೦). ಚಗತೆ: "ಗಜಾಖ್ಯಾ–ಚಗತೆ" (ಚಿಷಧಿ.೪೫). ಚೊಗಚೆ: ಮಲ್ಲಿಗೆ ಸೇವಂತಿಗೆ . . . ಚೊಗಚೆ ಎಂಬ ಹೂಗಳೂ (ಮುಂಬಯಿ. ೫-೦೯೬). 'ತಗಚೆ' ಪರಾ. [<ಸಂ. ಚಕ್ರಗಜ]

**ಚಗಚ್ಚೆ** 'ಚಗಚೆ' ನೋ.

**ಚಗತಳಿ** 'ಚಗತಿಳಿ' ನೋ.

**ಚಗತಿ** (ನಾ). ಒಂದು ಬಗೆಯ ಔಷಧಿ ಸಸ್ಯ (?) : ಕಂಪಿನ ಕಣಿಗಿಲು ಬೇರ ಕೊಕ್ಕು, ಕಕ್ಕೇ ಚಿಗುರು ಚಗತಿ ಬೀಜ . . . ಇವಂ ನಿಂಬೇಹುಳಿಯಲ್ಲರೆದು ಲೇಪವಂ ಮಾಡೆ ಮೈಯ ಸರ್ವ ತಿಮಿರ ಮಾಣ್ಗುಂ (ವಿವೈವಿ. ೬೯). 'ಚಗಚೆ' ಪರಾ. [ ? ]

**ಚಗತಿಳಿ, ಚಗತಳಿ, ಚಿಗೆತಳಿ** (ನಾ). ಸಣ್ಣ ಚೂರಂ,-ತುಂಡು: ಹದನಾಗಿ ಕಿಂಡದೊಳು ಬೆಂದ ಬಾಳೆಯಕಾಯು ಪುದಿದ ಸಿಪ್ಪೆಯು ತೆಗೆದು ಕುಯ್ದು ಚಗತಿ[ಪಾಠಾಂ. ಚಿತ್ರ, ಸಗ]ಳಿಗಳುವುನುದಕದೊಳು ತವರಾಜನಂ ಕದಡಿ (ಸೂಪಶಾ. ೪-೭೯). **ಚಗತಳಿ :** ಮತ್ತನುಕ್ಕರಿಸಿಕೊಂಡೀರ ಪಲಸಿನ ಕಾಯ ನೊತ್ತಿ ಒಳಿದದನು ಚಗ [ಪಾಠಾಂ. ಚಿಗೆ]ತಳಿ ಮಾಡಿ (ಸೂಪಶಾ. ೫-೬೯); ಸುಟ್ಟ ಬಾಳೆಯ ಕಾಯ . . . ತಿರುಳ ತೆಗೆದು ಚ[ಗ]ತಳಿಯಾಗಿ ಕೊಯುದು (ಧೀಮಸೂ. ೪೨). **ಚಿಗೆತಳಿ:** ಮೇಲಿನ 'ಸೂಪಶಾ ೫-೬೯' ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಚಗತೆ** 'ಚಗಚೆ' ನೋ.

**ಚಗರೆ** (ನಾ). ಮೇಯುವಿಕೆ (?): ಅರವ ಕತ್ರಿ ಚಗರಗೆ ಬಿಟ್ಟ ಹಾಗೆ (ಗಾದ). 'ಚರೆಯು' ಪರಾ. [ ? ]

**ಚಗಳಿಇರುವೆ** (ನಾ). ಒಂದು ಬಗೆಯ ನಸುಕೆಂಪುಬಣ್ಣದ ಇರುವೆ : ಕೆಂಜಿಗ : ನಸುಗೆಂಪು ಬಣ್ಣದ ದೊಡ್ಡ ದೊಡ್ಡ ಚಗಳಿಇರುವೆಗಳು ಎಲೆಗಳ ಮೇಲೆಯೂ ಕೊಂಬೆಗಳ ಮೇಲೆಯೂ ಹರಿದಾಡುತ್ತಿದ್ದುವು (ಕಾನೂರು. ೨೯೯). 'ಚೌಳಿ$_1$' ಪರಾ. [ಚಗಳಿ$_2$+ಇರುವೆ$_1$(<ಇರುಂಪೆ)]

**ಚಗಳಿಸು** (ಕ್ರಿ). (ಉಕ) (ತುತ್ತನ್ನು) ಅಗಿ; ಚರ್ವಣಮಾಡು : ತುತ್ತನ್ನು ಚೆನ್ನಾಗಿ ಚಗಳಿಸಿ ತಿನ್ನಬೇಕು (ರೂಢಿ).

[ಚಗಳಿ$_2$ (P ←ಮರಾ. ಚಘಳಣೇ) + – ಇಸು$_3$. ]

**ಚಗಳು** 'ಚೆರಳ್' ನೋ.

**ಚಗಿಸು** (ಕ್ರಿ). =ಚಗಳಿಸು (?): ಪಂಚಾಸ್ಯನಾಹವಕೆ ಸಾರಗನ ಸೇನೆ ಪುಲ್ಲಂ ಚಗಿಸಿದಂತೆ ಕೊಳದಾ ದುಷ್ಪನೊಳು ಕಾರ್ಯ ಮುಂಚಿದಳಲಿನೊಳೊರಲುವರು ಶೋಕ ನಿನ್ನಿಂದ ತಣ್ಣಸುವವೆಂಬ ಕಿತರದಿಂ ಚಲಿಸಲಾಗದೇನಾದಡಂ ಸಾಹಸರನಂಚಿನೊಳಗರಸವರಕಾರಣದಿ ಕಾರ್ಯ ಹಸ್ತಂ ಚಗಿಸುತಾತನೆಂ ದೊತ್ತಿ ಪಾದವ ಪಿಡಿದ ಸುಕುಮಾರಿ ಕೇಳೆಂದನು (ಜನಮು. ೨೪-೪೪). 'ಜಗಿ$_1$' ಪರಾ. [ ? ]

**ಚಚು, ಚಾಚೂ** (ನಾ). ೧. ಚ ಮತ್ತು ಚು ಎಂಬ ಅಕ್ಷರಗಳು. ೨. (ಆಲಂ) ಮಾತಿನಲ್ಲಿಯ ಪ್ರತಿಯೊಂದು ಅಕ್ಷರ,-ಪ್ರತಿಯೊಂದು ವಿವರ : ಅವರ ಹಸ್ತಪ್ರತಿಗೆ ಚ–ಚು ತಪ್ಪದಂತೆ ಅಚ್ಚು ಮಾಡಿಸುವುದು ಕಪ್ಪದ ಕೆಲಸ(ಚಟ್ಟಿಆ. ೯ ಆರಿ೪) ; ವಾಲ್ಮೀಕಿಯ ಮಾತುಗಳಲ್ಲಿ ಚ-ಚು ತಪ್ಪದೆ ಎಲ್ಲವೂ ನಿಜವೆಂದು ಸಂಪ್ರದಾಯ ಶರಣರು ಹೇಳುತ್ತಾರೆ (ಭಾರದ. ೧೭). **ಚಾಚೂ :** ೨. ಮಾಡಿದ್ದು ನೋಡಿದ್ದು ಆಡಿದ್ದು ಎಲ್ಲವನ್ನೂ 'ಚಾ ಚೂ' ತಮಗೆ ವರದಿ ಒಪ್ಪಿಸಬೇಕಂಬ ಇಷ್ಟ (ಸುವಸಂ. ೧೨) ; ಅದರ ಚಾಚೂ ಕೂಡ ಅವರು . . . ಯಾರೊಡನೆಯೂ ಹೇಳಿಕೊಳ್ಳದಿರುವುದೂ ಒಂದು ವಿಶೇಷವೇ (ಕಾಬಝೂ. ೨೭) ; ಪ್ರಭುಗಳು ತಮ್ಮ ನುಡಿಯನ್ನು ಚಾಚೂ ವ್ಯತ್ಯಾಸ ಪಡಿಸಲಾರರು (ಕರುಹಾ. ೨೩).

**ಚಚ್ಚ** (ನಾ). ಗರುಡ : ಚಚ್ಚಾ [ಪಾಠಾಂ. ತಾರ್ಕ್ಷ್ಯ] ರವಕೆ ಭುಜಂಗನ ಕೊರಲಂತೆ ಬಾಗಿದಂ (ಆದಿಪು. ೧೨-೧೧೧). [ <ಸಂ. ತಾರ್ಕ್ಷ್ಯ ]

**ಚಚ್ಚಕಾರ** (ನಾ). (ನೃತ್ಯಕ್ಕೆ ಮುಂಚೆ) ಪಾದದಿಂದ ತಾಳ ಹಾಕುವಿಕೆ : "ಆದಲನುಗೆಯ್ವ ಪದಹತಿ ಚಚ್ಚಕಾರವಮಕ್ಕುಂ" (ಮಂಗರಾ. ೨೪-೮).

[ ? ]

**ಚಚ್ಚಗೊಟ್ಟಿ, ಚಚ್ಚಗೋಷ್ಠಿ, ಚಚ್ಚಗೋಷ್ಠಿ** (ನಾ). ಬೈಗಳಿಂದ ಕೂಡಿದ ಮಾತು ; ನಿಂದೆಯ ನುಡಿ : ಆಳಿ ಮೇಳ ಚಚ್ಚಗೊಟ್ಟಿ ಚೌಪಟತನಕಾಗಿ ವ್ರತದಾಳಿಯ ಮಾಡಿಕೊಳ್ಳದೆ ತನುವಿಗೆ ಕಟ್ಟು ಮನಕ್ಕೆ ವ್ರತ ಸರ್ವೇಂದ್ರಿಯ ವಿಸರ್ಜನವಾಗಿ ಮಾಡಿ ಕೊಂಬುದೆ ಸ್ವಯವ್ರತ (ಏಳಿಕೆ. ೪೪೦-೫೫). **ಚಚ್ಚಗೋಷ್ಠಿ:** ಸತ್ಯನಾಗಿದ್ದು ಭಕ್ತರು ಜಂಗಮದಲ್ಲಿ ಚಚ್ಚಗೋಷ್ಠಿಯನಾಡುತ ವಿಟ್ಟೆಯ ಭಂಡರಿಗೆ ಸತ್ಯ ಸದಾಚಾರ ಮುಕ್ತಿಭಾವವೊಂದೂ ಇಲ್ಲ(ಏಳಿಕೆ. ೬). **ಚಚ್ಚಗೋಷ್ಠಿ :** ಚಚ್ಚಗೋಷ್ಠಿಯ ಮಾಡುವ ವಿಟ್ಟೆಯ ಭಂಡರಿಗೊಪ್ಪೆ (ಅಂಬಿವ. ೪೨) ; ಚಚ್ಚಗೋಷ್ಠಿಯಿಂದ ಒಡೆಯತನ ಹುಚ್ಚಾಗಿ ಕೆಟ್ಟಿತ್ತು (ಶಿವಮು. ೭೫). [ < ಪ್ರಾ. ಚಚ್ಚಾರ ]

**ಚಚ್ಚಗೋಷ್ಠಿ** 'ಚಚ್ಚಗೊಟ್ಟಿ' ನೋ.

**ಚಚ್ಚಗೋಷ್ಠಿ** 'ಚಚ್ಚಗೊಟ್ಟಿ' ನೋ.

**ಚಚ್ಚಪುಟ** (ನಾ). [ಸಂಗೀತ] ಒಂದು ತಾಳ ಪ್ರಭೇದ : ವಿತತ ಘನ ಶುಷಿರ ವಾದ್ಯಲಯ ಚಚ್ಚಪುಟ ಚಾಚಪುಟ ಪರಮೇಶ್ವರ ಮುಖಕಮಳವಿನಿರ್ಗತ ಸು[ಶು]ದ್ಧ ಸಾಳಂಗಬ್ರಹ್ಮವೀಣಾದಿ ಗೇಯ (ಕಿಲ್ಯಾಶಾ. ೨೨-೦೪ : 1209) ; ಅಂಬಿಕಾಪತಿ ನೃತ್ಯಕಂ ನಿಲಲುಮಾಮಹೇಶಂಬೊಳೆಸೆವರದು ತಾಳಂಗೊಂಡು ಚಚ್ಚಪುಟವೆಂಬಿನಿಂ . . . ಸವಿ ತುಂಬಿ ತುಳ್ಳಾಡುತಿರೆ ನಂಬಿಯಿದಿರೊಳಗಭವನಿಂಬಿನಿಂ ನೆಟಿ ನಟಿಸಿದಂ (ಚೀರಮ. ೧೦-೩೩) ; ಚಚ್ಚ[ಚ್ಚ]ಪುಟದ ಚಾಚು[ಚ]ಪುಟದ ಸಾಂಬ್ರಾಣಿಯ ಕೆಚ್ಚು ಕೀಲಣಗಳ ನಡೆದು (ಭರತ. ೦೨-೯೩). 'ಚಾಚ ಪುಟ' ಪರಾ. [ಸಂ. ]

**ಚಚ್ಚರ, ಚೆಚ್ಚರ, ಚೆಚ್ಚರು** (ನಾ). ೧. ಬೇಗ ; ಶೀಘ್ರತೆ ; ಜಾಗ್ರತೆ : "ಚಚ್ಚರಮೆನೆ ತುರಿಪವುಪ್ಪುದು" (ಕಕುವಿ. ೨೯) ; "ಚಚ್ಚರನೆ ಚದು ಪದನೆಯನೆ ಬೇಗ" (ಕಶರ. ೩೫) : ಪಟಿಯುಂ ತನಗುಂ ಪೂರ್ವದಿಕ್ಸಿಮೆ ಚಚ್ಚರದಿಂ (ಮದಿಕಿ. ೮-೧೪) ; ನಾವಾತನನು ರಣದೊಳು ಭರದೆ ಗೆಲಿದೀ ಕನ್ನೆಯಂ ಚಚ್ಚರದೆ ಕೊಂಬೆವೆನುತ್ತೆ (ಕುಮುರಾ. ೨-೪೭) : ಚಚ್ಚರದಿಂ ನಿದ್ರಿತ ನರನೆಚ್ಚಱುಕೆಯನೆಯ್ದೆ ಪಡೆದವೊಲ್ (ರಾಧಪು. ೫-೯೦). ೨. ಎಚ್ಚರಿಕೆ ; ಜಾಗರೂಕತೆ : ಅಪರಂಜಿ ಅಂಥ ಚಚ್ಚರದ ಹೆಣ್ಣೇನಲ್ಲ ತಕ್ಕಷ್ಟು ಮೈಮರೆದು ನಡೆವವಳೆ (ನವರಾ. III, ೩೬) ; ಈ ಜಂತುಗಳಿಗೆ ಚಚ್ಚರ ಕಡಮೆ ; ಶ್ರಮಪಟ್ಟು ತಿಂಡಿಯನ್ನು ಸೇರಿಸಿ ತುಂಬಿಕೊಳ್ಳಲಿಲ್ಲ(ಸುಮಹ. ೨೬). **ಚೆಚ್ಚರ :** ೧. ಚೆಚ್ಚರದಿಂ ಬಟಸಂದು ಮುಱುಗಿ ಬರ್ಪನ್ನ ಬಲಂ (ಕಾದಂಪೂ. ೬೨೫) ; ಬಾಲೆಯರಂ ಕೆಲರ್ ಪಿಡಿದು ಚೆಚ್ಚರದಿಂದರರೀಪುಟಂಗಳಂ ಕೀಲಿಸಿ (ಪಂಪಾಮಾ. ೪-೦೦೨) ; ಪರವೆಯರ ವಾರ್ತೆಯಂ ಕೊಂಡು ಚೆಚ್ಚರ [ಪಾಠಾಂ. ಸಂಭ್ರಮ]ದಿಂದೆ ಬರಲ್ (ನಂಬಿರ. ೧೭-೦೦೧) ; ಪಗಲಾಣ್ಮನ ಮೆಯ್ ಬಿಸುಪೇಟ ಮಾಗೆ ಚೆಚ್ಚರದೊಳ ಪಾಟ (ಕಲ್ಯಾ. ೫೩). ೨. ಮುರಿದು ದಂಡೆಯ ನೋಡಿ . . . ಚೆಚ್ಚರದಿ ಲಾಗಿಸಿ ವೈರಿಯುರವ ಗರ್ಜಿಸಿ ಭೈರವಾಂಕ ತಿವಿಯೆ (ಭೈರವೇ. ೯-೦೨೭). **ಚೆಚ್ಚರು :** ೨. ಎನ್ನೊಳಾದನಿತ ವೇಳ್ಪವಡುವುದು ಚೆಚ್ಚರಿಂ (ಮನೋವಿ. ೦-೪೮).

[ ದೇ.॥ ತುಳು. ಚಚ್ಚರ ; ತೆಲು. ಚೆಚ್ಚರ./ಸಂ. ಸತ್ವರ ]

**ಚಚ್ಚರಂ, ಚರ್ಚರಂ, ಚೆಚ್ಚರಂ** (ಅ). ೧. ಬೇಗನೆ ; ಶೀಘ್ರವಾಗಿ ; ಜಾಗ್ರತೆಯಾಗಿ : ಮುರಾರಿಯ ತಂಗೆಯನಪ್ಪುಕೆಯ್ದು ಚೆಚ್ಚರಮೊಳಪೊಯ್ದು (ಪಂಪಭಾ. ೪-೩೪) : ಅವಳ ದೀರ್ಘಾಪಾಂಗದೇಶಕ್ಕೆ ಚಚ್ಚರಮಾಗಳ್ ಪರಿತಂದ ಸೇದೆ [ಯೊದವಲ್] (ಕಾದಂಬ. ೪೩) : ಅತುಳತರ ಗುಪ್ತಕಾರ್ಯಸ್ಥಿತಿಯಾಳೋಚನೆಗಳುಂಟು ನೀಂ ಚಚ್ಚರಮಪ್ರತಿಮಂ ಕಾಮುನನೊಡಗೊಂಡು ತರ್ಪುದು (೧೧೪. ೭-೧೭). **ಚರ್ಚರಂ :** ೨. ಜಾಗರೂಕವಾಗಿ ; ಎಚ್ಚರಿಕೆಯಿಂದ : ವಿಡಿಯುಂ ಕೊಳೆ ಮಣ್ಣಿಂದಂದರಯದವರ್ಚರ್ಚರಮವಜ್ಞೆಯಿಂ ನೋಡದೆ ಮಾಡಿದ ರೂಪಿನಂತೆ ನೇರ್ಪಿಲ್ಲದ ವಿಕಟಾಕೃತಿಯ ಹುಂಡ ಸಂಸ್ಥಾನಗಳುಂ (ಶ್ರಾವಕಾ. ೨೦-೨). **ಚೆಚ್ಚರಂ :** ೧. "ಝಟಿತಿ ಲಘು ಶೀಘ್ರಂ ಸತ್ವರಮಾಶು ಚೆಚ್ಚರಂ" (ವಸ್ತು ಕೊ. ೧೦೩-೦೩) : ಚೆಚ್ಚರಮುಪರಾಂಬುರಾಶಿಗಿಟವಂಕಿಟದಂ ಕಮಳೈಕಬಾಂಧವಂ (ಪಂಪಭಾ. ೧೧-೫೦) ; ಈ ಕಜ್ಜದೊಳ್ ನೀಂ ತೊಡರ್ದು ಮಾರುಳೆ ಬೆಂಡಾಗದಿರ್ ಪೋಗು ನೀಂ ಚೆಚ್ಚರಂ (ಗದಾಯು. ೯-೦೫) ; ತಡೆಯಲೆಡೆಯಿಲ್ಲ ಚೆ(ಚ)ಚ್ಚರವೊಡರ್ಚು ನಿನಗಾರ್ಮವಪ್ಪ ಧರ್ಮವಂ (ಜೀವಸಂ. ೨೭-೫೦). ೨. ಚೆಚ್ಚರಮೆನೆ ಕಲ್ಪಲತಿಕೆಗಚ್ಚರಿಯರ್ ಮೆಲ್ಲನಮೃತರಸಮಂ ಪೊಯ್ಯಂ

ತುಚ್ಛವದಿಂದಾ ಸೌಂದರಿಗೊಚ್ಚೆರೆಗಣ್ಣ ಬಲೆಯರ್ಕಳೆಟಿದರ್ ನೀರಂ (ಉದ್ಭಟ. ೮-೨೨). ೩. ದಿಟವಾಗಿ; ನಿಶ್ಚಯವಾಗಿ: ಚೆಚ್ಚರಮುಪನೀತಳಂ ತನಗೆ ಸಾರ್ದಪೊಲೊರ್ವಳ ದಲುಂಬೆ ಪೊಣ್ಮೆದಂ (ಧರ್ಮಾಮೃ. ೬-೮೧); ಮನಸಿಜನೆಚ್ಚೊಡಾವ ತೆಱನಕ್ಕುಮೊ ಚೆಚ್ಚರಮೆನ್ನ ವೇಟ್ದುದಂ ತನಗಿವನೆಯ್ದೆ ಬಿಸ್ಸವಿಪನಂ ಪಿಡಿದಿರ್ಕುಮೆ ದೇವ ಜೀವಮಂ (ವರ್ಧಮಾ. ೪-೮೦). ೪. "ನಿರ್ನಿಮಿತ್ತವಾಗಿ" (ಕಾದಂಅ. ಅ೩೬); ಪುರುಷಾರ್ಥತ್ರಿತಯಮುಮನವಧರಿಸದೆ ವೈರಾಗ್ಯಮೇಕೆ ಪುಟ್ಟಿದುದೊ ಚೆಚ್ಚರಮೆಂಬುದನಾಂ ಪೋಗಿಯೆ ತಿಳಿವೆಂ (ಕಾದಂಬ. ೪೫೩). [ <ಚಚ್ಚರ ]

ಚಚ್ಚರಂದಳೆ (ಕ್ರಿ). ಎಚ್ಚರಿಕೆ ವಹಿಸು; ಜಾಗರೂಕತೆಯನ್ನು ಹೊಂದು: ನಳಿನಾಕ್ಷಿಯೊರ್ವಳೀಕ್ಷಣರಜ್ಜುವಿಂ ವಿಧುವನೆಳೆತಂಸಿ ಕುಣಿಸಿದವಳೋಯೆನಲ್ ಚಚ್ಚರಂದಳೆದೊಳಗೆ ಮೌಕ್ತಿಕದಚೆಂಡನೊರ್ವಳ್ ಪೊಯ್ಯುತಿರ್ದಳ್ ನಿಲಾಸದಿಂದೆ (ಚಬಪು. ೧೦-೧೬). [ ಚಚ್ಚರ + ತಳೆ$_1$ ]

ಚಚ್ಚರಿ (ನಾ). [ಸಂಗೀತ] ಒಂದು ಬಗೆಯ ತಾಳ: ತ್ರಿವಿಡಿ ಚಚ್ಚರಿ ರೂಪಿಂವೆಯುಟಯೇಕತಾಳವುಂ ವಿವರವಱಿತುಂ ತಾಳಧಾರಿಗಳು ನಿಂದಪ (ಪ್ರಭುಪು. ೨-೬೭). [ <ಪ್ರಾ. ಚಚ್ಚರೀ. / ಸಂ. ಚರ್ಚರೀ ]

ಚಚ್ಚರಿಗ, ಚೆಚ್ಚರಿಗ (ನಾ). ೧. ಆತುರಗಾರ; ದುಡುಕುವವನು: (+). ೨. ದುಡುಕಿ ಮಾತಾಡುವವನು: ಚ [ಪಾಠಾಂ. ಚೆ] ಚ್ಚರಿಗಂ ಪರಿವಾದಿಯುಂ ತುಚ್ಛಳನತ್ಯುಗ್ರಕೋಪಿ ಮೂರ್ಖಿಯಾ ಕೆಸಱೊಳ್ ಕಿಚ್ಚಿಡುವನೆನಿಪ ಖಳನುಂ ಬಿಚ್ಚರಿಗನನಿಕ್ಕುವೊಂದಿ ಜೈನರ ಕೆಲದೊಳ್ (ಸಮುಷ. ೬-೧೦೬). ಚೆಚ್ಚರಿಗ: ೩. ವೇಗವುಳ್ಳವನು: "ಪ್ರಪೂರ್ಣಃ, ತ್ವರಿತಃ, ತೂರ್ಣಃ, ಉತ್ಸುಕಃ, ಪ್ರಸೃತಃ—ಈ ೫ ಚೆಚ್ಚರಿಗಂ" (ಹಲಾಯು. ೫೬-೧೯೦): "ತ್ವರಿತನುತ್ಸುಕನೆನಲು ಪ್ರಸ್ರಿತಂ ತೂರ್ಣನೆಂದರೆ ಚೆ[ಚಿ]ಚ್ಚರಿಗನಕ್ಕು" (ಮಂಗರಾ. ೬೯-೦೨). [ ಚಚ್ಚರ + -ಇಗ ]

ಚಚ್ಚಹುಚ್ಚಗೆ (ಅ). ಅಡ್ಡತಿಡ್ಡವಾಗಿ; ಕ್ರಮತಪ್ಪಿ; ಹುಚ್ಚುಹುಚ್ಚಾಗಿ: ಚಚ್ಚಹುಚ್ಚಗೆ ನಡೆದರು ಭುಜಬಲಿರಾಜ ಮೆಚ್ಚುವನದಾಂಜರವರುಹುಚ್ಚು ನಡೆಗೆ ನೀನು ಮೆಚ್ಚೆಯೆಂದವರೆಲ್ಲ ಬೆಚ್ಚಿ ದೂರದೊಳಿರುತಿಹರು (ಭರತ. ೨೦-೦೨೧). [ ಚಚ್ಚಹುಚ್ಚು + -ಅಗೆ$_3$ ]

ಚಚ್ಚಹುಚ್ಚು (ನಾ). ಹುಚ್ಚುಹುಚ್ಚು; ಅಸಂಬದ್ಧವಾದುದು; ವಿಕೃತಿ: ಚಚ್ಚಹುಚ್ಚಾಗದೆ ಚಂದಚಂದಹೊಲು ಪಳಚ್ಚನೆ ಪಾಡಿದರೊಸೆದು (ಭರತ. ೧೨-೮೩); ಚಚ್ಚಹುಚ್ಚಂಗವನಂದಚಂದವ ಮಾಡಿ ಮೆಚ್ಚಿ ಕೈವಿಡಿದಿಹರುಂಟು ಉಚ್ಚಳಿಸುವ ಚೆಲ್ವನಂಗವ ತಪಸಿಗೆ ವೆಚ್ಚಿಪರಾರಿವರಂತೆ (ಭರತ. ೭೦-೧೧೩). [ ಚಚ್ಚ? + ಹುಚ್ಚು (<ಪುಚ್ಚು) ]

ಚಚ್ಚು$_1$, ಚೆಚ್ಚು$_1$, ಜಜ್ಜು, ಜರ್ಜು, ಜೆಜ್ಜು (ಕ್ರಿ). ೧. ಹೊಡೆ; ಬಡಿ; ಕುಟ್ಟು; ನುರಿಸು: ಡೊಣ್ಣೆಯೊಳು ಚಚ್ಚಿ ಕೆಲವು ಮಿಗಗಳ ಕೊಂದರು (ನೇಮಿಸಂ. ೨-೫೧); ಎತ್ತಿ ಕುತ್ತಿರಿ ಚಚ್ಚು ಕಿವಿಮತ್ತಿ ಹಳಚು (ಜನಮು. ೧೯-೩೫). ಚೆಚ್ಚು$_1$: ಅವಳು ಕೋಪದಿಂದ ಮಗುವನ್ನು ಚೆಚ್ಚಿದಳು (ರೂಢಿ). ಜಜ್ಜು: ೧. ಕೂರ್ಮನೆರ್ದೆಯೊಡೆದು ಬೃಹತೀಫಲವನು ಜಜ್ಜಿದಂತಾದುದೀ ವೃಷಪತಿಯ ಸಮರಜಯ(ಚಬಪು. ೪೪-೨೦); ಗೋಧಿಯನ್ನು ಜಜ್ಜಿ ಕಾಳುಗಳನ್ನಾಗಿಮಾಡಿ ಅಕ್ಕಿಯಂತೆ ಬೇಯಿಸಿ ನಿತ್ಯದ ಊಟಕ್ಕೆ ಉಪಯೋಗಿಸಬಹುದು (ಅಡುಸೌ. ೭೩); ಈ ಹಾರೆಯಿಂದಲೇ ತಲೆ ಜಜ್ಜಿ ಕೊಳ್ಳುತ್ತೇನೆ (ಚಂದ್ರಶಾ. ೨೩). △ಜರ್ಜು: ೨. ನುಗ್ಗಾಗು; ಬೆಗ್ಗು: ಪಾದಪ್ರಹಾರಂಗಳಿಂ ಗುಜರ್ಗೊಂಡಂ ಫಣಿಪನಗ್ಗಿದುವು ದಿಗ್ಗಜಂ ಜರ್ಜಿದುದು ಕಚ್ಛಪಾಂಗಂ (ಚಬಪು. ೨೮-೧೧). ೩. ಉತ್ಸಾಹಗುಂದು; ಕುಗ್ಗು. 'ಜರ್ಜಿಸು' ಪರಾ. ಜೆಜ್ಜು: ೧. ಮುಂಬಲ್ಲು ಬಿದ್ದು ವೀಳೆಯವ ಕಲ್ಲೊಳು ಜೆಜ್ಜಿ ತಿಂಬರಲ್ಲದೆ ಬಿಟ್ಟರಾರು (ಭರತ. ೭೦-೧೧೨). [ ದೇ.೫ ತುಳು. ಜಜ್ಜು; ತೆಲು. ಚಜಿಚು ]

ಚಚ್ಚು$_2$ 'ಚರ್ಚು$_1$' ನೋ.

ಚಚ್ಚುಕ 'ಚುಂಚುಕ' ನೋ.

ಚಚ್ಚುಮಳೆ (ನಾ). ಚಚ್ಚುವ ಮಳೆ; ಭಾರಿಮಳೆ: ರಭಸದ ಮಳೆ: ಮುಂಗಾರಿನ ಚಚ್ಚುಮಳೆಗೆ ಸಿಕ್ಕಬೇಡ (ರೂಢಿ).

[ ಚಚ್ಚು$_1$ + ಮಳೆ (<ಮೞೆ) ]

ಚಚೌಕಮೈಲು (ನಾ). ಚದರ ಮೈಲು; ಚೌರಸ ಮೈಲು: ಸಿಂಹಲ ದ್ವೀಪದ ಕ್ಷೇತ್ರಫಲ ಸುಮಾರು ೨೫ ಸಹಸ್ರ ಚಚೌಕ ಮೈಲು (ಮುಂಬಯಿ. ೯-೨೦೦). [ <ಚೌಕ + ಮೈಲು$_2$ ]

ಚಜ್ಜ 'ಭಜ್ಜ' ನೋ.

ಚಜ್ಜೆ$_1$ 'ಸಜ್ಜೆ$_1$' ನೋ.

ಚಜ್ಜೆ$_2$ 'ಸಜ್ಜೆ$_2$' ನೋ.

ಚಟ್ (ನಾ). ಒಂದು ಅನುಕರಣ ಪದ: ಬಾಣಲೆಯಿಂದ ಕಡಲೆ 'ಚಟ್' ಎಂದು ಸಿಡಿಯಿತು (ರೂಢಿ).

ಚಟ (ನಾ). ಗೀಳು; ತೆವಲು; ತೀವ್ರಾಸಕ್ತಿ: ಯಾವದಾದರೊಂದು ಕೆಟ್ಟಚಟ ಬಿದ್ದ ಬಳಿಕ ಅದು ಬೇಗ ಬಿಡುವುದಿಲ್ಲ (ಮುಂಬಯಿ. ೩-೩); ಮನುಷ್ಯನೆಂದರೆ ಚಟಗಳ ಒಂದು ಮೂರ್ತಿ (ಮುಂಗಾಪು. ೩೫); ಭಾವಾಸೇವ ಹಲವರಿಗೆ ಆಟವೆನಿಸಿದರೆ ಇನ್ನೂ ಕೆಲವರಿಗೆ ಚಟವಾಗಿದೆ (ಹುಡ್ಯುಹು. ೬೫); ಇನ್ನೂ ನಿಮಗೆ ದುಂದು ಖರ್ಚಿನ ಚಟ ಬಿಟ್ಟಿಲ್ಲ (ಮುಹಾಗ. ೩೫೪).

[ ?. / ಹಿಂ. ಚಟ = ಕಳಂಕ, ದೋಷ, ಐಬು ]

ಚಟಕ್$_1$ (ನಾ). ಒಂದು ಅನುಕರಣ ಶಬ್ದ: ಅವನು ಚಟಕ್ಕೆಂದು ಹೊರಟು ಬಿಟ್ಟನು (ರೂಢಿ). 'ಚಟಕ್ಕನೆ' ಪರಾ.

ಚಟಕ$_1$ (ನಾ). ಗುಬ್ಬಿ; ಗುಬ್ಬಚ್ಚಿ: ಚಟಕ ಚಾಟಣಕ ಚಕ್ರವಾಕ ಕರಟಿ ಬಳಾಹಕ ಗೃದ್ಧ್ರ ಪಿಕ ಮರಕುಟಿಕ (ಮುದೇಪು. ೫-೯). [ ಸಂ. ]

ಚಟಕ$_2$ (ನಾ). ದರ್ಭೆಯಿಂದ ಮಾಡಿದ ಕೂರ್ಚ, ಪ್ರತಿಮೆ. 'ಚಟಕ ಶ್ರಾದ್ಧ' ಪರಾ. [ ಸಂ. ]

ಚಟಕಶ್ರಾದ್ಧ (ನಾ) ಬ್ರಾಹ್ಮಣರಿಗೆ ಬದಲಾಗಿ ದರ್ಭೆಯನ್ನು ಇಟ್ಟುಕೊಂಡು ಮಾಡುವ ಶ್ರಾದ್ಧ. [ ಚಟಕ$_2$ + ಶ್ರಾದ್ಧ ]

ಚಟಕಾಯಿಸು (ಕ್ರಿ). ಚಟ್ಟನೆ ಹರಿದು ಹಾಕು, ಕತ್ತರಿಸಿಬಿಡು: (+). [?]

ಚಟಕೆ (ನಾ). ೧. ಹೆಣ್ಣುಗುಬ್ಬಿ, ಗುಬ್ಬಚ್ಚಿ. ೨. ಗುಬ್ಬಿಯ ಹೆಣ್ಣುಮರಿ.

[ ಸಂ. ಚಟಕಾ ]

ಚಟಕ್ಕನೆ (ಅ). ಕೂಡಲೆ; ಒಮ್ಮೆಲೆ; ತಕ್ಷಣ: ಅವಳು ಮಲಗಿಕೊಂಡದ್ದನ್ನು ಕಂಡು . . . ಚಟಕ್ಕನೆ ಎದ್ದುನಿಂತು ಅಕಳಿಸಿದ (ಎಡಹ. ೧೧೬).

[ ಚಟಕ್ + -ಅನೆ$_1$ ]

ಚಟಗಾರ (ನಾ). ತೆವಲು ಉಳ್ಳವನು; ಗೀಳುವುಳ್ಳವನು: ಬೆಳಗಾಗುತ್ತಲೆ ಬಂದು ರಾತ್ರಿಯಾದ ಮೇಲೆ ಹೋಗುವ ಚಹದಂಗಡಿಯ ಚಟಗಾರರಲ್ಲಿ ಅವನು ಒಬ್ಬನೆನ್ನಬಹುದು (ಚೀಸದಾ. ೧೦).

[ ಚಟ + -ಗಾರ (< -ಕಾಱ) ]

ಚಟಗೊಳ್ (ಕ್ರಿ). ತೀವ್ರಾಸಕ್ತಿ ಹೊಂದು; ಗೀಳುಹಿಡಿ: ವಟಪಕ್ವಫಲರುಚಿರಾಧರೆಯಾ ನಿಮ್ಮ ಕಟಲಕುಮಾರ ಚಂದ್ರಮನ ಚಟುಲ ಚಕೋರ ಲೋಚನಪುತ್ರಿಕೆಗಳು ಚಟಗೊಂಬಂತೆ ನೋಡಿದಳು (ನೇಮಿಸಂ. ೧೯-೨೦೯).

[ ಚಟ + ಕೊಳ್$_1$ ]

ಚಟಚಟ (ನಾ). ಒಂದು ಅನುಕರಣ ಶಬ್ದ: ಚಟಚಟ ಹೆಜ್ಜೆಹಾಕು; ಕಣ್ಣೆಳೆಕಿನಲ್ಲೇ ಊರುಸೇರಬೇಕು (ರೂಢಿ).

ಚಟಚಟನೆ (ಅ). ಚಟಚಟ ಎಂಬ ಶಬ್ದದೊಡನೆ: ಹುಲ್ಲು ವಿಪ್ರನ ಕದಪುಕದಪುಗಳಲ್ಲಿ ಚಟಚಟ[ಪಾಠಾಂ. ಚಟಚಟ]ನಪ್ಪಳಿಸಿ ಅವಳಿಲ್ಲಿಗೆಳತಹುದೆಂದು ನುಡಿದನು (ಜೈಮಿನಿ. ೨೦-೪೫). [ ಚಟಚಟ + -ಅನೆ$_1$ ]

**ಚಟಪಟ** (ನಾ). ಒಂದು ಅನುಕರಣ ಪದ. 'ಚಟಪಟಗುಟ್ಟು' ಪರಾ.

**ಚಟಪಟಗುಟ್ಟು** (ಕ್ರಿ). ಚಟಪಟ ಎಂದು ಸದ್ದುಮಾಡು : ಚಟಪಟ ಗುಟ್ಟ ಚಟಾಕಿಯು ಮುಂಗಡೆ ೧೬ ವಿಯ ತೋರುತ ಬರುತಿರಲು (ಸಮಾರೋ. ೧೯೧). [ ಚಟಪಟ + ಕುಟ್ಟು₁ ]

**ಚಟಪಟಕೆ₁** 'ಚಡಪಡಿಕೆ' ನೋ.

**ಚಟಪಟಕೆ₂** 'ಚಟವಟಿಕೆ' ನೋ.

**ಚಟಪಟಿಸು** 'ಚಡಪಡಿಸು' ನೋ.

**ಚಟಮಟಿಸು** (ಕ್ರಿ). ಉದ್ವೇಗಗೊಳ್ಳು; ಉದ್ವಿಗ್ನವಾಗು: ಚಟಮಟಿಸಿ ಕೋಪದಿಂ ಜನನಿಯಂ ದೂರಿದಂ (ಪರಶು. ೩-೨೮) ; ಪಟು ಪರಾಕ್ರಮಿ ಜ್ವಾಲವದನನು ಚಟಮಟಿಸಿ ಕೃತುಭುಜರ . . . ನೆರವಿಯ ನಿಱಿದು (ಅಂಬಿಕಾ. ೧೬-೩೭). [ <ಚಟಪಟ + - ಇಸು₃ ]

**ಚಟಮಾರಿ** (ನಾ). ಚಟಕ್ಕೆ ಅಂಟಿಕೊಂಡಿರುವವನು,-ದಾಸನಾದವನು: ಅವನೊಬ್ಬ ಬೀಡಿಯ ಚಟಮಾರಿ (ರೂಢಿ).

[ ಚಟ + - ಮಾರಿ₂ ]

**ಚಟವಟ, ಚಟುವಟ** (ನಾ). ಲಗುಬಗೆ; ತ್ವರಿತ; ಚಪಲತೆ: ಕುದುರೆಗಳು . . . ಚಟವಟದಿಂದ ಪುನರಪಿ ಎದ್ದು ತಮ್ಮಯ ಸ್ಕಂಧಗಳಿಗಂಟಿರ್ದ ಕುಂಕುಮ ರುಜಾಡಿಸಿದವಾಗ (ಕಥಾವಂ. ೬೩-೭೬). ಚಟುವಟ : ಈ ಬಗು ವಟದ, ಈ ಚಟುವಟದ ಎಲ್ಲ ಮೂರ್ತಿಗಳೂ ಅವನವೇ (ಸವಿತ. ೫೩).

[ <ಚಟಪಟ? ]

**ಚಟವಟಿಕೆ, ಚಟಪಟಕೆ₂, ಚಟುವಟಿಕೆ** (ನಾ). ೧. ಲಗುಬಗೆ; ಬೇಗ; ತ್ವರಿತ; "ಚಪಲತನ" (ಗುಗಾಮು. ೧೨೭). ೨. ಪಟುತ್ವ; ಲವಲವಿಕೆ; ಉತ್ಸಾಹ : ಮಕ್ಕಳ ಚಟವಟಿಕೆ ಮುದುಡಿಹೋಗಿಲ್ಲ (ರೂಢಿ). ೩. ಕೆಲಸ; ಕ್ರಿಯೆ; ಕಾರ್ಯಕಲಾಪ : (೬). ಚಟಪಟಕೆ₂ : (೬). ಚಟುವಟಿಕೆ : ೨. ಬಲವಾಗಿದ್ದರೆ ಮನುಷ್ಯನು ಬಹಳ ಚಟುವಟಿಕೆಯಾಗಿರುತ್ತಾನೆ (ಜೀವಾತ್ಮ. ೦೫೩). ೩. ಉಪಾಧ್ಯಾಯರಲ್ಲಿ ಹೆಚ್ಚು ಚಟುವಟಿಕೆ, ನಿಯಮಗಳ ಪ್ರಕಾರ ನಡೆಯುವುದು . . . ಇವೆಲ್ಲ ಹೆಚ್ಚುತ್ತ ಬಂದುವು (ರಂಗಕ. ೦೦೨) ; ಶಾರದೆ . . . ಅದುತನಕ ನಡೆಸಿದ ಚಟುವಟಿಕೆಗಳ ಸಿಂಹಾವಲೋಕನ ಮಾಡಿ (ವಿದ್ಯಾರಿ. ೨೦). [ ಚಟವಟ + - ಇಕೆ ]

**ಚಟಾಕಿ** (ನಾ). ೧. ಪಟಾಕಿ: ಚಟಪಟಗುಟ್ಟ ಚಟಾಕಿಯು ಮುಂಗಡೆ ೧೬ ವಿಯ ತೋರುತ ಬರುತಿರಲು (ಸಮಾರೋ. ೧೯೧) ; ಹುಡುಗರು ಚಟಾಕಿಗಳನ್ನು ಹಾರಿಸುತ್ತಾರೆ (ರೂಢಿ). ೨. (ಅಲಂ) ಚುಟುಕಾದ ಚುರುಕುಮಾತು : ಇದೊಂದು ಹಾಸ್ಯದ ಚಟಾಕಿ ಎಂಬಂತೆ ನಕ್ಕು: (ನಡಮಾ. I, ೩೦೪) ; ಮುನಿಸ್ವಾಮಿ ನಗೆಯ ಚಟಾಕಿಗಳನ್ನು ಹಾರಿಸಿ ಅವರೆಲ್ಲರನ್ನು ನಗಿಸುವನು (ದೇವಸಾ. ೧೨). [ <ಚಟ್ ]

**ಚಟಾಕು** (ನಾ). ಅಳತೆಯಲ್ಲಿ ಒಂದು ಪ್ರಮಾಣ ; ಸೇರಿನ ಹದಿನಾರನೆಯ ಒಂದು ಭಾಗ : ಎಳ್ಳು ಚಟಾಕಿನಂತೆಯೆ ಜೋಳವನ್ನು ಅಳೆಯಿಸಿಕೊಂಡು ಅವನು ಹೊರಟು ಹೋದ (ಜನಜೀ. ೨) ; ಪೇಟೆಯಲ್ಲಿ ಹತ್ತು ಚಟಾಕಿನಂತೆ ಕೊಂಡು ತರಬೇಕಾಗುತ್ತದೆ (ಪ್ರೇಮಾಕ್ರ. ೪). 'ಚಿಟ್ಟೆ₁' ಪರಾ.

[ ←ಹಿಂ, ಮರಾ. ಛಟಾಕ್ ].

**ಚಟಿ₁** (ನಾ). ಖಡ್ಗಯುದ್ಧದಲ್ಲಿ ಒಂದು ವರಿಸೆ : ಗತಿವಸರವಡ್ಡಾಯು ವಂಕತಿಕೆ . . . ಸಿಂಹಾನೀಕ ಚ[ಪಾಠಾಂ. ಕ]ಟಿಯೆಂಬ ಚತುರ ಠಾಣದ ತರಹರದೊಳು ಫಲಗೆಯ ಮಗ್ಗುಲೊಳು ಖಡ್ಗವಂ ಜಡಿದರು (ಸೋಮಪಟ. ೫-೧೪). [ ? ]

**ಚಟಿ₂** 'ಚಟ್ಟೆ₁' ನೋ.

**ಚಟಿ₃** (ನಾ). (?) : ಪಗಲಿರುಳು ಬಿಡದೊಡರಿರ್ದರ ಚಟಿಯ ಕೊನೆಳ ಸಲ್ಲುಡನೆ ದಾಸಯ್ಯ (ದುರೇಪು. ೭-೪೫). [ ? ]

**ಚಟಿಕಾಶಿರ** (ನಾ). ಹಿಪ್ಪಲಿಯ ಬೇರು : ಗ್ರಂಥಿಕಂ, ಪಿಪ್ಪಲೀಮೂಲಂ, ಚಟಿಕಾಶಿರಃ ೩ ಹಿಪ್ಪಲಿಯ ಬೇರು (ಸಿದ್ಧಾಂತಿ. ೨೬೯).

[ ಸಂ. (ಚಟಿಕಾ + ಶಿರ) ]

**ಚಟಿಕೆ₁** 'ಚಟ್ಟಿಗೆ' ನೋ.

**ಚಟಿಕೆ₂** (ನಾ). ೧. ಹೆಣ್ಣು ಗುಬ್ಬಿ : ಕಟ್ಟದಿರೊಳೊಂದು ಚಟಿಕೆ ನೀಡ ದೊಳಿರ್ದುಂ ಕಿಱುಮಱಿಯಂ . . . ಲಲ್ಲೆಗೆಯ್ವುದಂ (ರಾಮಾಶ್ವ. ೦೮-೦). ೨. ಹಿಪ್ಪಲಿ ಬೇರು ; ಮೋಡಿಯೆಂಬ ಔಷಧಿ ದ್ರವ್ಯ.

[ ಸಂ. ಚಟಿಕಾ ]

**ಚಟಿಗೆ** 'ಚಟ್ಟಿಗೆ' ನೋ.

**ಚಟಿದಾರ** (ನಾ). ಕುಂಬಾರನು (ತಿಗುರಿಯ ಮೇಲಿರುವ) ಮಡಕೆ ಯನ್ನು ಕೊಯ್ಯುವ ದಾರ: ಕನಸಿನ ಛಾಯಂ ಮೃತ್ತಿಕೆಯಾಗಿರೆ ನೆನಹುಂ ಚಟ[ಪಾಠಾಂ. ಟಿ]ದಾರಂಗಳವಾಗಿರೆ (ಕುಂಭಾಱ. ೨೩೨-೬): ಅದರಿಂದ ತಿರುಗಿಸಿ ಮಾಡಿದ ಮಡಕೆಗಳನ್ನು ನೆನಹೆಂಬ ಚಟಿದಾರಗಳಿಂದ ಕೊಯ್ದು ಕರಣ ಗಳಿಂದ ತಿದ್ದಿ ಬಡಿದು (ಶರಚ. ೧೦). [ ಚಟಿ₂ (<ಚಟ್ಟಿ₁) + ದಾರ₁ ]

**ಚಟು** (ನಾ). ೧. ಪ್ರಿಯವಾದ ಮಾತು ; ಹಿತವಾದ ನುಡಿ: "ಚಟು (೬), ಚಾಟು (೬)-ಪ್ರಿಯವಚನಂ" (ಹಲಾಯು. ೨೪-೧೪೪) ; "ಪ್ರಿಯವಪ್ಪ ನುಡಿ ಚಟು ಚಾಟುವಕ್ಕು" (ಮಂಗರಾ. ೨೬-೨). ೨. ಹೊಟ್ಟೆ. [ ಸಂ. ]

**ಚಟುಕು** (ನಾ). ಒಂದು ಅನುಕರಣ ಶಬ್ದ : ಆ ಸತಿಯುನಂತೊಪ್ಪೆ ಹೊಡೆ ಯಲು ಚಟುಕು ಚಟುಕೆನಲು (ಬಸಪು. ೫೨-೧೬).

**ಚಟುಪಡಿಕೆ** 'ಚಡಪಡಿಕೆ' ನೋ.

**ಚಟುಲ, ಚಟುಳ** (ಗು). ೧. ಚಲಿಸುವ ಸ್ವಭಾವವುಳ್ಳ; ಚಂಚಲ : ಚಟುಲಮರುಲಾನಿಲೋದ್ಧತ ಪಟುಕೃತಕ ಧೂಳಿ ಪಡೆದುದು . . . ವಿಳಾಸಮಂ ಪ್ರಯಾಣಾಂತರದೊಳ್ (ಶಾಂತಿಪು. ೦೦-೧೭) ; ಮುದ್ಗರಕುಂತ ಚಟುಲ ತೋಮರ ಗದಾಚಕ್ರ . . . ಮೊದಲಾದಾಯುಧಂಗಳಾಂತು (ಶೋರಾಸು. ೬೨-೬೦). 'ಚಟುಲನಯನ' ಪರಾ. ೨. ವೇಗದಿಂದ ಕೂಡಿದ; ತ್ವರಿತವಾದ: ಮಕುಟ ಸಂಘಟಿತ ಚಕ್ರ ಚಟುಲಗತಿ ನಿಯುದ್ದಾ ಯುಧಪಾತರುಧಿರ ಕರ್ದಮಸಮ್ಮರ್ದಿತಮುಂ (ಗದಾಯು. ४-೩೭) ; ಭಾಳತಟಪಟು ಚಟುಲದಹನ ವಿಶಾಲ ನಯನಂ (ಬಸಪು. ೫೦-೮೨). ೩. ಸುಂದರವಾದ ; ಚೆಲುವಾದ ; ಚೊಕ್ಕವಾದ : ಚಟುಲಸ್ವರೂಪ ನೊಪ್ಪಿದನಜನ ತನುವೆರಳ್ ಸೀಳಾಗೆ (ಚಬಪು. ೧೭-೫). (ನಾ). ೪. ವೇಗ; ತ್ವರಿತ ; ಜಾಗ್ರತೆ ; ಚಟುಲದಿ ವಿನಿಯೋಗವಿದಕೆ ವೇಳುವ ಲಕ್ಷ್ಮಂ (ಶತ್ರ್ಯಾನಿ. ೦೪೫). ಚಟುಳ : ೧. ಧನಂಜಯರಥ ಚಟುಳ ಚಕ್ರನೇಮಿ ಧಾರಾಪರಿವೃತ (ಪಂಪಭಾ. ೦೬-೫೦ ವ). ೨. ಕೆಂಧೂಳುಪ್ಪರಿಸಿದುದು ಚಟುಳ ಚಾತುರ್ಬಲದ ಪದಹತಿಗೆ (ಕುಮ್ಮಾರ. ३-೨೮) ; ಕೊಂಡು ಹೋಗಾ ವಿಬುಧ ರಿಪು ವೇತಂಡ ಪಂಚಾನನನಾಹವ ಚಂಡ ಚಟುಳಪರಾಕ್ರಮನ ಮಾಯಾ ತ್ರಿವಿಕ್ರಮನ (ತೊರರಾ. ೧-೯-೩). ೩. ಚಟುಳ ಮಣಿ ಕಿಂಕಿಣೀ ಪರಿಘಟಿತ ನಿಜಾಯೋಗಮಾಗಳಿಸೆದುದು (ಧರ್ಮನಾ. ४-೦೬). [ ಸಂ. ]

**ಚಟುಲಗಾತ್ರಿ** (ನಾ). ಚುರುಕಾದವಳು : ಸುಂದರಿ ಒಳ್ಳೆಯ ಚಟುಲ ಗಾತ್ರಿ (ಮುಹಾಗ. ೦೩೭).

[ ಚಟುಲ + - ಗಾತ್ರ₁ (<-ಗಾತ್ರ) + - ಇ₁ (< - ಇತ್ರಿ) ]

**ಚಟುಲತೆ, ಚಟುಳತೆ** (ನಾ). ೧. ವೇಗ ; ಚಪಲತೆ ; ಲಗುಬಗೆ : ಏನುಂ ತಪ್ಪಿಲ್ಲದಾನೀಗಳೆ ಚಟುಲತೆಯಿಂ ನಿಷ್ಪನ್ನಪೂರ್ವಂದೇನಾನುಂ ಸೂರು ಗ್ಗೀಲ ನಂದಿಸಿದೊಡೆ (ಸುಕುಮಾ. ೭-೨೦). ಚಟುಳತೆ : ೨. ಸೊಗಸು : ಚೆಲುವು; ಸೌಂದರ್ಯ : ಗಗನಾಭೋಗಮೆಲ್ಲಂ ಕರಂ ಚಿತ್ತಾದತ್ತೆಂ ಬಂದಮೇಂ ಬಂದುದೊ ಚಟುಳತೆಯಿಂ ದೇವದೇವೀನಿಕಾಯಂ (ಸುಕುಮಾ. ೮-೬೪). [ ಸಂ. ಚಟುಲತಾ ]

**ಚಟುಲನಯನ** (ನಾ). ಚಂಚಲವಾದ ಕಣ್ಣು; ಚಪಲ ದೃಷ್ಟಿ: ಚಟುಲನಯನದ ಕುಟಿಲಕುಂತಳೆ ತಮ್ಮಾಳ್ದಂಗೀ ವಿವರಮನಬ್‌ಕೆಗೆಯ್ವುದುಂ (ರಾಮಾಶ್ವ. ೧೩೪-೧೪). [ಚಟುಲ + ನಯನ]

**ಚಟುಲಲೋಚನೆ** (ನಾ). ಚಂಚಲವಾದ ಕಣ್ಣುಗಳುಳ್ಳವಳು; ಚಂಚಲಾಕ್ಷಿ: ಚಟುಲಲೋಚನೆಯಂತೆ ಕುಟಿಲಕುಂತಳೆಯಂತೆ ವಿಟ ಹೆಣ್ಣನಂತೆ ಹಗಲಲ್ಲಿ ಇರುಳು ಸಂಗಟಿಸ ಕಾಯಂತೆ (ಸರ್ವಜ್ಞ. ೨೦೭೩).
[ಸಂ. ಚಟುಲಲೋಚನಾ (ಚಟುಲ + ಲೋಚನ + -)]

**ಚಟುವಟ** 'ಚಟವಟ' ನೋ.

**ಚಟುವಟಿಕೆ** 'ಚಟವಟಿಕೆ' ನೋ.

**ಚಟುಹುಟುಗಾರ್ತಿ** (ನಾ). ಚಟುವಟಿಕೆಯುಳ್ಳವಳು; ಉತ್ಸಾಹಗಾರ್ತಿ: ಕುಟಿಲಕುಂತಳೆಯಳ ಚಟುಹುಟುಗಾರ್ತಿಯು ನಟನೆಯು ನಡೆಯು ನಾಯಕಿಯು . . . ಪೊಂದುವುದೆಂದೊ (ಕತಸಾಂ. ೨೪-೩೦).
[ಚಟುಹುಟು? + -ಕಾರ + - ತಿ$_1$ (< - ಇತ್ತಿ)]

**ಚಟುಳ** 'ಚಟುಲ' ನೋ.

**ಚಟುಳತೆ** 'ಚಟುಲತೆ' ನೋ.

**ಚಟುಳಿತ** (ಗು). ೧. ವೇಗವಾಗಿ ಚಲಿಸುತ್ತಿರುವ: ಚಟುಳಿತ ಚಕ್ರನೇಮಿ ಪರಿವರ್ತನ ಘಟ್ಟನ ಘಾತ . . . ವಿಜಯನುಗ್ರ ರಥಂ ಪರಿದತ್ತು (ಪಂಪಭಾ. ೧೧-೧೪೬). (ನಾ). ೨. ನಡುಗುವಿಕೆ; ಕಂಪನ; ಸ್ಪಂದನ: ಪೊಟ್ಟಗೊಡೆದತ್ತು, ರಟತ್ಪಟು ಪಟಹ ಶಂಖ ಭೇರಿಯ ಚಟುಳಿತದಿಂದಟಳೆಪಟಳವುಂಬರ ಪಟಳಂ (ಪಂಪಭಾ. ೧೧-೬೭). [ಸಂ. ಚಟುಲಿತ]

**ಚಟೂಕ್ತಿ** (ನಾ). ಪ್ರಿಯ ವಚನ; ಸಂತೋಷ ಪಡಿಸುವ ನುಡಿ; ಸ್ತುತಿಯ ಮಾತು: ವಿನೋದದಿಂ ಮುಳಿದನಾಂ ನೀನಂಜಲೇಕೆಂದು ಕೋಮಲೆಯಂ ಕೋಟಿ ಚಟೂಕ್ತಿಯಿಂದೊಸೆಯಿಸುತ್ತಿರ್ದಂ (ಚಂದ್ರಕು. ೮-೫೩).
[ಚಟು + ಉಕ್ತಿ]

**ಚಟೂರಿಸು** (ಕ್ರಿ). ಮುಖಸ್ತುತಿ ಮಾಡಿ ಮೋಸಗೊಳಿಸು: ಲಕ್ಷ್ಮೀ ವಿಡಂಬಂ ವಿಡಂಬಿಸದಂತಾಗಿರೆ ಮಾನ್ಯರೆಲ್ಲ ತೆಱದಿಂದಂ ಪೊಕ್ಕು ನಿನ್ನಂ ಚಟೂರಿಸದಂತಾಗಿರೆ ಕಾಮಿನೀತತಿ ವಿಲಾಸಾಪಾಂಗದಿಂದುಂ ಪ್ರತಾರಿಸದಂತಾಗಿರಲಾತ್ಮವಂತನೆನಿಸೆಂದುಂ (ಕಾದಂಪೂ. ೫೭೪).
[< ಚಟು + - ಇಸು$_3$]

**ಚಟೆಕಾರ** 'ಚಟ್ಟೆಗಾರ' ನೋ.

**ಚಟ್ಟ$_1$, ಚಟ್ಟು$_1$, ಚಟ್ಟೆ$_2$, ಚೆಟ್ಟು$_1$** (ನಾ). ೧. ಸಮತಲವಾಗಿರುವುದು; ಮಟ್ಟವಾದುದು; ಚಪ್ಪಟೆ: (ಶ). ೨. ಗಾಡಿ, ಮಂಚ, ಕುರ್ಚಿ, ಚಿತ್ರಪಟ ಮೊದಲಾದುವುಗಳ ಚೌಕಟ್ಟು ಅಥವಾ ಅದರ ಭಾಗ: 'ಗಾಡಿಚಟ್ಟ' ಪರಾ. ೩. ಹೆಣವನ್ನು ಸಾಗಿಸಲು ಉಪಯೋಗಿಸುವ ಬಿದಿರಿನ ಚೌಕಟ್ಟು; ಸಿದಿಗೆ: ಅಮ್ಮನವರು ಪಟ್ಟಕ್ಕೆ ಬಂದಾಗ ಅಯ್ಯನವರು ಚಟ್ಟಕ್ಕೆ (ಗಾದೆ). ೪. ಕಟ್ಟಳೆ; ನಿಯಮ; ವಿಧಿ: (ಶ). ೫. ಅಚ್ಚುಕಟ್ಟು; ಸೊಗಸು; ಅಣಿ: (ಶ). **ಚಟ್ಟು$_1$**: ೬. (ಪಲ್ಲಕ್ಕಿಯ) ಮೇಲೆ ಹೊದಿಸುವ ಬಟ್ಟೆ,- ಮೇಲ್ಕಟ್ಟು,- ಹೊದಿಕೆ: (ಶ). 'ಗುಬ್ಬಿ ಚಟ್ಟು' ಪರಾ. ೭. ಬೀಜ ಬಲಿಯದ ಕಾಯಿ; ಎಳೆಯ ಕಾಯಿ; ಹೀಚು: ಅವರೇಕಾಯಿ ಚಟ್ಟು (ರೂಢಿ). ೮. ಗಡುಸುತನ; ಗಟ್ಟಿಯಾಗಿರುವಿಕೆ: (ಶ). ೯. ಬೀಜ ತೆಗೆದು ಒಣಗಿಸಿಟ್ಟ ಕಾಯಿ: ನೆಲ್ಲಿಚಟ್ಟು (ರೂಢಿ). **ಚಟ್ಟೆ$_2$**: ೧. ಪಾರ್ಶ್ವಾಸ್ಥಿಗಳು ದೇಹದ ಮುಂದುಗಡೆಯ ಎದೆಯ ಚಿಪ್ಪು ಎಂಬ ಚಟ್ಟೆಯಂಥ ಎಲುಬಿಗೆ ಸಂಧಿಸಲ್ಪಟ್ಟಿವೆ (ಪ್ರಾಣಿಶಾ. ೩). **ಚೆಟ್ಟು$_1$**: ೭. ಈ ಮರದ ಹುಣಿಸೇಹಣ್ಣು ಬಹಳ ರುಚಿ. ಚೆಟ್ಟಾಗಿರಲಿ, ದೋರೆಗಾಯಾಗಿರಲಿ ಅಥವಾ ಹಣ್ಣೇ ಆಗಲಿ (ನನ್ನೂರು.೧೯೯). ೯. ತಿನ್ನಲು ಮಾಡಿಟ್ಟ ಹಲಸಿನ ಹಣ್ಣಿನ ಚೆಟ್ಟುಕೊಡುತ್ತಾಳೆ (ಎಱುಳೆ. ೩೨).

**ಚಟ್ಟದ ತೋಳು, ಚಟ್ಟಿನ ತೋಳು** = ಗಾಡಿಯ ಚೌಕಟ್ಟಿಗೆ ಎರಡೂ ಮಗ್ಗುಲಲ್ಲಿ ಸಾಲಾಗಿ ನಿಲ್ಲಿಸಿದ ಕಡ್ಡಿ,-ಕೋಲು; ಗುಜ್ಜುಗೋಲು; ಕಳಗ: (ಶ).
[ದೇ.॥ ತಮಿ. ಮಲ. ಚಟ್ಟ; ತುಳು. ಚಟ್ಟ, ಚಟ್ಟೆ; ತೆಲು. ಚಟ್ಟ]

**ಚಟ್ಟ$_2$** 'ಚರಟ' ನೋ.

**ಚಟ್ಟ$_3$, ಚಟ್ಟಿ$_2$** (ನಾ). ನಿಪುಣ; ಶ್ರೇಷ್ಠ. 'ಮಾಣಿಕಚಟ್ಟ' ಪರಾ. **ಚೆಟ್ಟಿ$_2$**: (ಶ). [< ಸಂ. ಶ್ರೇಷ್ಠ]

**ಚಟ್ಟ$_4$, ಚಟ್ಟು$_3$** (ನಾ). ಶಿಷ್ಯ; ಗಂಡ್ಡ: ಸಭಾವಳಯದೊಳೆನ್ನನೇಳಿಸಿದ ನಿನ್ನನನಾಕುಳಮನ್ನ ಚಟ್ಟರಿಂ ತಳವೆಳಗಾಗಿ ಕಟ್ಟಿಸದೆ ಮಾಣ್ದೊಡೆ ಕೆಮ್ಮ [ನೆ] ವಿಷಸಪೊತ್ತನೇ (ಪಂಪಭಾ. ೨-೩೦); ಶ್ರೀ ಪಟಿಕೆಟ ಮಾರುಗಬಲರ ಚಟ್ಟ ಸುಬಟಣ್ಣರ ಸುಲ (ಎಳ. II, ೬೦-೩; ಸು. 1100); ಕಂಸಂ ವಸುದೇವಂಗೆ ಚಟ್ಟನಾಗಿ . . . ಧನುರ್ವಿದ್ಯೆಯುಂ ಸಾಧಿಸುತ್ತುಮಿರ್ದಂ (ಅರ್ಧನೇ. ೬-೫೧ ವ); ಕಂಸಂ ನಾಂ ಬಿಲ್ಗಲ್ತೆಯ ಚಟ್ಟನೆನ್ನೋಜನನುವರದೊಳ್ ಕುಸಿದಿರಲಾಗದೆಂದು ರಥಮಂ ಬೇಡಿಕೊಂಡು ಸಮರಸನ್ನದ್ಧನಾಗಿ (ಬಂಹರಿ. ೫-೨೮ ವ). **ಚಟ್ಟು$_3$**: ತಾನುಂ ತನ್ನ ಚಟ್ಟುಗಳುಮಾಸೆಯನರಮನೆಗೆ ತಂದರಸಂಗೊಪ್ಪಿಸಿ (ಧರ್ಮಾಮೃ. ೧೨-೧೩೪).
[< ಪ್ರಾ. ಚಟ್ಟ / ಸಂ. ಛಾತ್ರ]

**ಚಟ್ಟ$_5$** (ನಾ). ಒಬ್ಬಾತನ ಹೆಸರು: ಬನವಸೆಯ ಚಟ್ಟನಾಗರಕಣ್ಣಕ್ಕೆ ಮುನಿದು ಪರಿಯನಟ್ಟಿದಡೆ (ಎಕ. VIII, ಸೊರಬ. ೨೪೪-೭: 999); ಮನ್ನೆಯ ಚಟ್ಟಂ ಬಟ್ಟಂ ಮನ್ನೆಯುಮಂ (ಇಳ. XVIII, ೨೬೪-೪೦; 1022). [?]

**ಚಟ್ಟಕಟ್ಟು** (ಕ್ರಿ). ಹೆಣ ಸಾಗಿಸುವುದಕ್ಕಾಗಿ ಬಿದಿರಿನ ಚೌಕಟ್ಟನ್ನು ಕಟ್ಟು; ಸಿದಿಗೆಯನ್ನು ರಚಿಸು: ಸತ್ತಮೇಲೆ ಹೆಣ ಸಾಗಿಸುವುದಕ್ಕೆ ಆ ದೇಶದವರು ನಮ್ಮ ಹಾಗೆ ಚಟ್ಟಕಟ್ಟುವುದಿಲ್ಲ (ಪಂಚಾಮೃ. ೬೭); ಅವನು ಸತ್ತೇ ಹೋಗಲಿ ಅವನ ಚಟ್ಟಕಟ್ಟಲಿ (ಜಾನಗೀ. ೦೦೫). ಲೋ! ಕಾವುಣ್ಣನ್ನ ಚಟ್ಟ ಕಟ್ಟ್ಯೋಣ್ರೊ (ಚಯ್ಮು. ೨೬); ಮಟ್ಟುಮೀರಿ ಉಂಡರೆ ಚಟ್ಟಕಟ್ಟುವರೇ (ಗಾದೆ). [ಚಟ್ಟ$_1$ + ಕಟ್ಟು$_1$]

**ಚಟ್ಟಗೆಯಿ** (ನಾ). ಶಿಷ್ಯರಿಗಾಗಿ ಕೊಟ್ಟ ಭೂಮಿ: ಭಳಾರಿಗೆ ಮತ್ತ ೬ ಭಟ್ಟಗೆಯಿ ಚಟ್ಟಗೆಯಿ ಮತ್ತ ೬ (ಸೌಇಇ. IX-i, ೬೪-೭; 981); "ಚಟ್ಟಗೆಯಿ" ಎಂದರೂ ಚಟ್ಟವೃತ್ತಿಯೆಂದೇ ಅರ್ಥ (ಕಶಾಅ. ೨೨೯).
[ಚಟ್ಟ$_4$ + ಕೆಯಿ (< ಕೆಯ್$_4$)]

**ಚಟ್ಟಣೆ, ಚಟ್ಣಿ, ಚಟ್ನಿ** (ನಾ). ಒಂದು ಬಗೆಯ ವ್ಯಂಜನ: ನಂಜಿಕೊಳ್ಳುವುದಕ್ಕಾಗಿ ರುಬ್ಬಿ ಅಥವಾ ಕುಟ್ಟಿಮಾಡಿದ ಖಾರವಾದ ಪದಾರ್ಥ,- ಹಿಂಡಿ: ನಾನು . . . ಚಟ್ಟಣಿ ರುಬ್ಬಿ ಕೊಡಬೇಕು (ಗಾಳಿಪ. ೦೭೩). **ಚಟ್ಣಿ**: ಚಟ್ಣಿ ಕೋಸಂಬರಿ ಕಾಯಿರಸಗಳನ್ನು ಮಾಡುವುದರಲ್ಲಿ ನಮ್ಮ ದೇಶದವರ ಕೌಶಲ್ಯವು ವರ್ಣಿಸತಕ್ಕಂಥಾದ್ದಿರುತ್ತದೆ (ಮುಂಬಯಿ. ೫-೦೭೬); ಚಪಾತಿಗೆ ಅತ್ಯುತ್ತಮ ಕೊಬ್ಬರಿಯ ಚಟ್ಣಿಯನ್ನು ತಯಾರಿಸಿ ಇಟ್ಟಿದ್ದಳು (ಗಂಮಾಯಿ.೦೫). **ಚಟ್ನಿ**: ನಮ್ಮ ಮನೆಯಲ್ಲಿ ಇಡ್ಲಿ ಚಟ್ನಿ ಅಲ್ಲದೆ ಉಪ್ಪಿಟ್ಟೂ ಮಾಡುತ್ತಾರೆ (ಕಪಪು. ೩-೬); ನಂಜುವುದಕ್ಕೆ ಹುಚ್ಚೆಳ್ಳಿನ ಚಟ್ನಿ ಬಟ್ಟು ಇನ್ನೊಂದನ್ನು ಕಾಣ (ಬಾನಚಿಂ. ೮೫); ಕುಶೀರ, ನುಗ್ಗಿ, ತುಳಸಿ . . . ಮುಂತಾದವುಗಳ ಚಟ್ನಿಯು ಗ್ರಾಹಕ (ಅಷ್ಟಾಂಗ. ೦೪೧-೦೦೫ ಟೀಕೆ).

**ಚಟ್ಣಿಮಾಡು; ಚಟ್ನಿಮಾಡು** = ೧. ಚಟ್ಟಣಿ ತಯಾರಿಸು: ರೊಟ್ಟಿಗೆ ನಂಜಿಕೊಳ್ಳಲೆಂದು ಚಟ್ಣಿ ಮಾಡಿದ್ದರು (ರೂಢಿ). ೨. (ಆಲಂ) ನುಗ್ಗು ಮಾಡು; ಅರೆದಂ ಪೀಡಿಸು: ಸಂಸಾರದೊಳಗೆ ವಿಧಿ ರುಬ್ಬುಗುಂಡಾಗಿ ಚಟ್ಣಿಮಾಡಿದನೆನ್ನ ತಿರುವಿ (ಇಂಚಾಪ. ೫೯-೦೪).
[← ಮರಾ. ಚಟಣೀ, ಚಟನೀ; ಹಿಂ. ಚಟನೀ; ಸಿಂಧಿ. ಚಟಣೀ]

**ಚಟ್ಟಣಿ** (ನಾ). ಪಾತ್ರೆಗಳ ಮುಚ್ಚಳ; ಝಾಕಣಿ (ಉಕ) : "ಆಹಾರ ಪದಾರ್ಥಗಳನ್ನು ಬಿಸಿಯಾಗಿಟ್ಟಿರಲು ಉಪಯೋಗಿಸುವ ಲೋಹ, ಮೊ.ಗಳ ಮುಚ್ಚಳ; ಚಟ್ಟಣಿ" (Dish-Cover. ಇಂಕನ). [ <ಸಂ. ಛಾದನ ? ]

**ಚಟ್ಟನೆ** (ಅ). = ಚಟಕ್ಕನೆ: "ಫಕ್ಕನೆ, ಭೊಂಕನೆ . . . ಚಟ್ಟನೆ, ಚಕ್ಕನೆ, ಗವ್ವನೆ, ಗಕ್ಕನೆ, ಬುದಿಂಗನೆ, ವುಸುಕನೆ" (ಕಂನುಹು. ೮೮); ಗಣಪತಿಯು . . . ಅದರ ಮೇಲೆ ಚಟ್ಟನೆ ಹಾರಿ ಕೂತುಕೊಂಡು ಮನೆಗೆ ಹೋದನು (ಮುಂಬಯು. ೪-೮೦); ಶ್ರೀ ಕೃಷ್ಣನು ಹೇಳಿದ ಯೋಗವು . . . ಸಂಸಾರದ ಕಟ್ಟನ್ನು ಚಟ್ಟನೆ ಕಳೆಚಬಲ್ಲದು (ಗೀತಾಸಂ. ೩). [ ಚಟ್ + – ಅನೆ$_1$ ]

**ಚಟ್ಟಬ್ಬೆ** (ನಾ). ಒಬ್ಬಾಕೆಯ ಹೆಸರು : ಪುತ್ರಿ ಗುಣಾನ್ವಿತೆ ಚಟ್ಟಬ್ಬರಸಿಗೆ ದೊರೆಯಾದರ್ಾನಧರ್ಮ್ಮಶೀಳೋನ್ನತಿಯೊಳ್ (ಮ್ಯಆರಿ. ೧೯೩೦, ೬೪-೬೬; 1053 ?). [ ಚಟ್ಟ$_5$ + ಅಬ್ಬೆ$_1$ ]

**ಚಟ್ಟಯದೇವ** 'ಚಟ್ಟಯ್ಯದೇವ' ನೋ.

**ಚಟ್ಟಯ್ಯ** (ನಾ). ಒಬ್ಬಾತನ ಹೆಸರು: ಬಿಯಳಯ್ಯ ಮಗ ಚಟ್ಟಯ್ಯನಳಿಯ ಕನ್ನಯ್ಯ (ಎಕ. VIII, ಸೊರಬ. ೪೩೩-೬ ; 972) ; ಹೊನ್ನಯ್ಯನ ಮಗ ಚಟ್ಟಯ್ಯಂ ಕಲ್ಲಂ ನಿಱಿಸಿದ (ಎಕ. VIII, ಸೊರಬ. ೬೪-೧೩ ; 1032). [ ಚಟ್ಟ$_5$ + ಅಯ್ಯ$_1$ ]

**ಚಟ್ಟಯ್ಯದೇವ, ಚಟ್ಟಯಂದೇವ** (ನಾ). = ಚಟ್ಟಯ್ಯ : ಚಟ್ಟಯ್ಯದೇವನ ಪರಿ ಬನ್ದು ಊರನಿಱಿದಲ್ಲಿ (ಎಕ. VIII, ಸೊರಬ. ೧೬-೪ ; 1015). ಚಟ್ಟಯದೇವ : ತದಾತ್ಮಜಂ ಚಟ್ಟಯದೇವನಿಂ (ಇಆ. X, ೨೩೦-೦೩ : 1108). [ ಚಟ್ಟಯ್ಯ + ದೇವ ]

**ಚಟ್ಟವೃತ್ತಿ** (ನಾ). ಶಿಷ್ಯರ ಅಥವಾ ವಿದ್ಯಾರ್ಥಿಗಳ ಉಪಭೋಗಕ್ಕಾಗಿ ಬಿಟ್ಟ ಭೂಮಿ : ದೇವರ ಅಂಗಭೋಗಕಂ ದೇ[ಗು]ಲಕಂ ಮಾಟಕ್ಕಂ ಚಟ್ಟವೃತ್ತಿ ಬಾಲಶಿಕ್ಷೆಯನಿತುಮಂ ನಡೆಯಿಸುವನ್ತಾಗಿ (ಸೌಇಇ. XI–ii, ೦೭೧-೮೮ : 1121). ] ಚಟ್ಟ$_4$ + ವೃತ್ತಿ ]

**ಚಟ್ಟಸಮಯ** (ನಾ). ಶಿಷ್ಯರ ಸಮೂಹ,–ಗುಂಪು : ಇಪ್ಪಜನಕ್ಕೆ ಚಟ್ಟ ಸಮಯಕ್ಕೆ ಮಹಾಜನಭೋಜನಕ್ಕೆ ಯುತ್ತಿ(ತ್ತ)ಪ್ಪ . . . ಚರಾಚರೋರ್ವ್ವಿಯೊಳು (ಎಇ. XVIII, ೧೬೪-೯ ; 1044). [ ಚಟ್ಟ$_4$ + ಸಮಯ ]

**ಚಟ್ಟಳಿಕು** (ಕ್ರಿ). (?) : ಹಿಮಗಿರಿಗಳನೆಂಬಿ ಗುಂಡವ ಮಾಡಿದ ಕ್ರಮದಪ್ಪ ಮೂರ್ತಿಯ ಚಟ್ಟಳಿಕಿ ವಿಮಲ ಶಕ್ತಿಯ ಹಾಸು ದಟ್ಟನೆ ಮಾಡಿ (ದೇವಾಂಪು. ೩-೯೯). [ ? ]

**ಚಟ್ಟಳೆ$_1$** 'ಚಡ್ಡಣೆ' ನೋ.

**ಚಟ್ಟಳೆ$_2$** (ನಾ). ಮಣ್ಣಿನ ಪಾತ್ರೆ : ಚಟ್ಟಳೆಯಲ್ಲಿ ಬಟ್ಟ ಸೊರೆಯೊಳ್ ಪೊಸಗಾಜಿನ ಜಾಱು ಪಾತ್ರೆಯೊಳ್ ಬಟ್ಟಲೊಳಿಂದುಕಾಂತಮಯ ಭಾಜನದೊಳ್ಪರಲಾವೆಯೋಡಿನೊಳ್ . . . ತಿಳಿಗಳ್ಳನದಂ ನೆಱೆ ತುಂಬಿ ತಂದು ಮುಂದಿಟ್ಟುದು ಮಾಱದಗ್ರಜರನುಕ್ರಮಮಂ ಶಬರೀ ಸಮೂಹಕಂ (ಬಾಭಪು. ೧೦-೧೩೦). ಚಟ್ಟಳೆಯಲ್ಲಿ ತೀವಿದ ಸುರಾರಸಮಂ ಕುಡಿಯುತ್ತು ಮಿಂದರ್ನೇರ್ಪಟ್ಟನಿಯಳ್ಗೆ ನೀಡಿ (ಬಾಭಪು. ೧೦-೧೩೩). [ <ಚಟ್ಟಿ$_1$ ? ]

**ಚಟ್ಟಿ$_1$, ಚಟಿ$_2$, ಚಿಟ್ಟಿ$_1$, ಸಟ್ಟಿ** (ನಾ). ೧. (ಮಣ್ಣಿನಿಂದ ಮಾಡಿದ) ಅಗಲವಾದ ಪಾತ್ರೆ. ೨. ಮಡಕೆ: "ಭಾಂಡದೊಳು ಸಂಕಿಯೊಳ್ ಚಟ್ಟಿ" (ಕಬ್ಬಮಂ. ೯೦) : ಬಟ್ಟವೆಂಗಳು ಕೆಲಬರು ಸುಳಿದರು ಹೊನ್ನ ಚಟ್ಟಿ ಸಟ್ಟುಗಗಳನಾಂತು (ಭರತ. ೪-೭೧) ; ಸುಲಲಿತವೆನಿಪ್ಪ ಚಟ್ಟಿಯ ಮೊಸರನಿಳಿಪಿಕೊಂಡು (ಸಿದ್ಧೇಪು. ೩-೧೮); ಇವುಗಳೆಲ್ಲವನ್ನೂ ಬೇರೊಂದು ಚಟ್ಟಿಯಲ್ಲಿ ಹಸುವಿನ ಬೆಣ್ಣೆ ಸಹಿತ ಒಗ್ಗರಿಸಿ . . . ಕೊಡಲು ದಾಹಜ್ವರ ಬಿಡುವುದು (ಸಕವೈ. ೮೩) ; ಹುಟ್ಟು ಮೊದಲೀಗರುಹಲೀ ನರಚಟ್ಟಿ ದಿವ್ಯಶರೀರವಾದುದು ನಿಮ್ಮ ಕೃಪೆಯಿಂದ (ಅಂದೇಕಾ. ೪೭-೩) : ಅಟ್ಟು ಉಂಡೇನೆಂದು ಚಟ್ಟೀಕುಡಿಕೆ ತಂದೆ (ಜಗೀಶ. ೦೭). **ಚಟಿ$_2$** : ೨. 'ಚಟಿದಾರ' ಪರಾ. **ಚಿಟ್ಟಿ$_1$** : ೨. ಚಿಟ್ಟಿ ಮಡಕೆಗಳೊಳಗೆ ಭಿನ್ನಪರಿಮಳಂಗಳಂ ಕಟ್ಟಿಕೊಂಡು (ಸೂಶಶಾ. ೯-೪); ಚಿ[ಪಾಠಾಂ. ಚ]ಟ್ಟಿಯೊಳು ತುಪ್ಪವೆಱೆದಿಂಗಿಕ್ಕಿ ಪೊಗ್ಗರಣೆಗೊಟ್ಟು (ಸೂಶಶಾ. ೪-೩೬) . **ಸಟ್ಟಿ** : ೨. 'ಕೈಸಟ್ಟಿ' ಪರಾ. [ ದೇ.೩ ತಮಿ. ಮಲ. ತುಳು. ತೆಲು. ಚಟ್ಟಿ ]

**ಚಟ್ಟಿ$_2$** (ನಾ). (ಕರಾ) ಅಕ್ಕಿ, ಉದ್ದು ಇತ್ಯಾದಿ ಧಾನ್ಯಗಳನ್ನು ಸೇರಿಸಿ ಒರಟಾಗಿ ಪುಡಿಮಾಡಿ ಕಲಸಿ ಕಾವಲಿಯ ಮೇಲೆ ತಟ್ಟಿ ಬೇಯಿಸಿದ ಒಂದು ಬಗೆಯ ತಿಂಡಿ,–ರೊಟ್ಟಿ: ರುಚಿಯಾದದ್ದಕ್ಕೆ ಏನೋ, ಎರಡು ಇಂಥಾ ಚಟ್ಟಿ ತಿಂದರೂ, ಹೊಟ್ಟೆಯ ತುದಿಗೂ ಮುಟ್ಟಿದ ಹಾಗೆ ಕಾಣುವುದಿಲ್ಲ (ಮರಮ. ೬೨). [ <ಚಟ್ಟಿ$_1$ ]

**ಚಟ್ಟಿ$_3$** 'ತಟ್ಟಿ$_1$' ನೋ.

**ಚಟ್ಟಿ$_4$** 'ಛಟ್ಟಿ' ನೋ.

**ಚಟ್ಟಿ$_5$** 'ಸೆಟ್ಟಿ' ನೋ.

**ಚಟ್ಟಿಗ** (ನಾ). ಒಬ್ಬಾತನ ಹೆಸರು: ಕಟ್ಟಾನೆಮಲ್ಲನಂ ಕಡುಗಟ್ಟಿಗನುತ್ತಿಗನು ನೊಲಿವನಂ ಚಟ್ಟಿಗನಂ ತಟ್ಟುಟಿಱಿದು (ಎಕ. XV, ಅರಸಿ. ೨೩೭-೧೪; 971); ತುಱುಗಳೊ[ಳ್ಪ]ಬ[ರ್ಬ್ಬ]ದ್ದುದಂ ಕೇಟಲಾಗದು . . . ಚಟ್ಟಿಗನ ಸಿರಿಗನ (ಸೌಇಇ. XI-I, ೩೨-೩ ; ?). [ ಚಟ್ಟಿ$_5$ + – ಇಗ ]

**ಚಟ್ಟಿಗೆ, ಚಟಿಕೆ$_1$, ಚಟಿಗೆ** (ನಾ). =ಚಟ್ಟಿ$_1$ ೨ : ಬೈಚಿಟ್ಟ ಬೆಣ್ಣೆಯ ಚಟ್ಟಿಗೆಗಳ ತೆಗೆದಷ್ಟನು ಸವಿದನು (ಪ್ರಸಭಾ. ೦೬-೨೪). **ಚಟಿಕೆ$_1$** : ವರ ಚಿಂತಾಮಣಿಯಿರುತಿರೆ ಗಾಜಿನ ಚಟಿಕೆಯ ಹಿಡಿದಂತೆ (ಪುಸಾರ. ೧೧೪-೬). **ಚಟಿಗೆ** : ತುಪ್ಪದ ಚಟಿಗೆಯನ್ನು ನೆಲುವಿಗೇರಿಸು (ರೂಢಿ). [ <ಚಟ್ಟಿ$_1$ ]

**ಚಟ್ಟಿಮ** (ನಾ). ಒಬ್ಬಾತನ ಹೆಸರು: ನಾಗಚನ್ದ್ರಭಟ್ಟ ಪುತ್ರಾಯ ಚಟ್ಟಿಮ ಭಟ್ಟಾಯಂ . . . ರಾಜಾದಿತ್ಯೇನ ಗ್ರಾಮದ್ವಯಂ ದತ್ತಂ (ಮ್ಯಆರಿ. ೦೯೩೩, ೪೦-೩೪ ; 951). [ ಚಟ್ಟಿ$_5$ (<ಸೆಟ್ಟಿ) + ಅಮ (<ಅಮ್ಮ$_1$) ]

**ಚಟ್ಟಿಸು** (ಕ್ರಿ). ತಲೆ ಬಗ್ಗಿಸು,–ತಗ್ಗಿಸು ; ಹಲುಗಿರಿದು ಹುಬ್ಬೇಱಿಸುತ ಹಣುಗುತ್ತ ಹೆದಱುತ ತಲೆಯ ಚಟ್ಟಿಸುತ (ತೊರರಾ. ೩-೭-೪೩). [ ಚಟ್ಟು ? + – ಇಸು$_3$ ]

**ಚಟ್ಟಿಱಿ, ಚಿಟ್ಟಿರಿ, ಚಿಟ್ಟಿಱಿ, ಚೆಟ್ಟಿಱಿ** (ಕ್ರಿ). ೧. (ಸುಗಂಧ ಮೊದಲಾದುದನ್ನು) ಲೇಪಿಸು,–ಬಳಿ,–ಹಚ್ಚು : (ಕ). ೨. = ಚಟ್ಟುಬಡಿ: "ಸ್ಥಾಸಕಂ, ಹಸ್ತಬಿಂಬಂ – ಈ ೨ ಚಟ್ಟಿಱಿವುದು" (ಚರಾಯು. ೮೯-೩೮೬) ; ಚಟ್ಟಿಱಿದ ಗೋಡೆಗಳ ರಕುತದ ಹೇಸಿಕೆಯನು . . . ನೆರಹಿದಂ ನಿಳಯದೊಳಗೆ (ಪದಕಾ. ೧೦-೩೦); ಚಟ್ಟಿಱಿದು ಘಟಮನರ್ಚಿಸಿ ಸೆಟ್ಟನೆ ಪೊಸ ಪೂಗಳಿಂದಂ (ಕುಸುಮಾ. ೧೧-೦೩೮); ಬಾಗಿಲರ್ಚಿಸಿ ಚಿಗುರಿಕ್ಕಿ ಚಟ್ಟಿಱಿದು (ಪಸಾರ. ೯೩೩); ದಿಗ್ಭಿತ್ತಿಯೊಳ್ಕೂಡಿ ಚಟ್ಟಿಱಿದಂತಿರ್ದ್ದಪುದ ಪ್ರತರ್ಕ್ಕರ ತೇಜಂ ದೇವರಾಜೇಂದ್ರನಾ (ಸೌಇಇ. IV, ೨೭೭-೨೮ ; ಸು. 1880) ; ನೃಪನೊಡಹುಟ್ಟಿದನ ಹೊಯ್ದರುಣಜಲದಲಿ ಚಟ್ಟಿಱಿದು (ಕುವ್ಯಾಕ. ೨೦-೨) ; ಚಟ್ಟಿಱಿದು ಚಪ್ಪರಿದು ನುಂಗುವ ಭೂತಕೋಟಿಗಳನಟ್ಟಿ (ತೊರರಾ. ೬-೭-೧೨). **ಚಿಟ್ಟಿರಿ** : ೨. ದರಹಾಸಂ ಜೊನ್ನಮಂ ಚಿಟ್ಟಿರಿದು ಕರೆಯೆ ತದ್ವ್ಯಾಪನಂ ನೋಡಲಾಗಳ್ (ಚಂದ್ರಛ್ಛಾ. ೧೩-೪). **ಚಿಟ್ಟಿಱಿ**: ೨, ಅಸ್ರಾಂಬುವಿಂ ಚಿ[ಪಾಠಾಂ. ಚಿ]ಟ್ಟಿಱಿದು ಕರುಳಿನಿಂ ತೋರಣಂಗಟ್ಟಿ (ಜಗವಿ. ೬-೦೦). **ಚೆಟ್ಟಿಱಿ**: ಮೇಲಿನ 'ಜಗವಿ' ಪ್ರಯೋಗದ ಪಾಠಾಂತರವನ್ನು ನೋಡಿ. [ ಚಟ್ಟು$_5$ + ಇಱಿ$_1$ ]

**ಚಟ್ಟು$_1$** 'ಚಟ್ಟಿ$_1$' ನೋ.

**ಚಟ್ಟು$_2$, ಚಿಟ್ಟು$_2$** (ನಾ). ೧. ಅಶುದ್ಧತೆ; ಕೊಳೆ; ಹೊಲಸು. 'ಮುಟ್ಟು ಚಟ್ಟು' ಪರಾ. ೨. ನಾಶ ; ಕೆಡುಕು ; ಹಾಳು : ಅವನನ್ನು ಚಟ್ಟು ಮಾಡಿದರು (ರೂಢಿ). **ಚಿಟ್ಟು$_2$** : (ಕ). [ ದೇ.೩ ತಮಿ. ಚಟ್ಟು : ತುಳು. ಚಟ್ಟ್ : ತೆಲು. ಚೆಡು=ಕೆಡು ]

**ಚಟ್ಟು$_3$** 'ಚಟ್ಟು$_4$' ನೋ.

**ಚಟ್ಟು$_4$** (ನಾ). ಸಣ್ಣಕಲ್ಲು ತುಂಬಿದ ಭೂಮಿ; ಕಲ್ಲು ಭೂಮಿ: ಈ ಚಟ್ಟಿನಲ್ಲಿ ಏನು ಬೆಳೆ ಬಂದೀತು (ರೂಢಿ). [←ತೆಲು. ಚಟ್ಟು]

**ಚಟ್ಟು$_5$, ಚೆಟ್ಟು$_3$** (ನಾ). ೧. ಗೋಡೆಗೆ ಕೈಯಿಂದ ಒತ್ತುವ ಬಣ್ಣದ ಗುರುತು. 'ಚಟ್ಟುಬಡಿ' ಪರಾ. ೨. ಪ್ರಥಮ ಋತುಮತಿಯಾದವಳು ಗೋಡೆಗೆ ಒತ್ತುವ ಅರಿಸಿನದಿಂದ ಅಂಕಿತವಾದ ಹಸ್ತದ ಗುರುತು. ೩. ಪರಿಮಳ ದ್ರವ್ಯದ ಲೇಪನ; ಸುಗಂಧದ ಲೇಪ: "ಚರ್ಚಾ, ಚರ್ಚಿಕ್ಯಂ, ಸ್ಥಾಸಕಂ—ಈ ೩ ಗಂಧವನಿಟ್ಟು ತೊಳೆವುದರ ಪೆಸರು. ಚಟ್ಟೆಂದು ಎಂಬರು" (ನಾಚಿರಾ. ೧೨೪). ೪. ನಕಲು. 'ಚಟ್ಟುಹೊಡೆ' ಪರಾ. **ಚೆಟ್ಟು$_3$**: ೧. ಕೋಣವೊಂದು ಸ್ಥಾಪಿತವಾಗಿತ್ತು. ಅದರ ಶರೀರದ ಮೇಲೆಲ್ಲಾ ಭಕ್ತಜನರ ಕೈಯ ಕೆಂಪು ಚೆಟ್ಟುಗಳು ಕಾಣುತ್ತಿದ್ದವು (ಬಾಡಿಅ. ೪೭). ೨. ಚೆಟ್ಟು ಬಡಿಸುವಶಾಸ್ತ್ರ, ಇನ್ನೂ ಏನೇನೋ ಶಾಸ್ತ್ರಗಳು ಆದುವು (ಚಿಲುಮ. ೩೦೯). ೩. ಪುಣುಗಿನ ಚೆಟ್ಟು ಹರಿಣ ಗೋರೋಚನ ಕೃಷ್ಣಾಜಿನಪುಲಿಚರ್ಮ ನರಿಗೊಂಬುಗಳನಿತ್ತರೊಲಿದು (ಮೋಹತ. ೧೪-೭೩).

[ದೇ.॥ ತಮಿ. ಚಟಙ್ಕು = ಹುಡುಗಿಯು ಪ್ರಥಮ ಋತುಮತಿಯಾದಾಗ ಮಾಡುವ ಸಮಾರಂಭ]

**ಚಟ್ಟು$_6$** (ನಾ). ಜಟ್ಟಿ ಕಾಳಗದಲ್ಲಿ ಒಂದು ವರಸೆ: ಎಸೆವ ಮುಹಗ್ಗಳಂ ಠಡಕಿ ಕಕ್ಷವಡಂ . . . ಪಾಸಗೆವನ್ನಿಮುಟ್ಟಿ ಚಟ್ಟು ಸಿರಣವಟ್ಟಿ ಬಾಹುದಣೆ ಖಮ್ಮರಿ ಕತ್ತರಿ . . . ಚೆಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (ಚಂದ್ರಪು. ೫-೭೨). [ದೇ.॥ ತಮಿ. ಚಟಙ್ಕು]

**ಚಟ್ಟುಕ** (ನಾ). ಸುಗಂಧ ದ್ರವ್ಯಗಳನ್ನು ಸಿದ್ಧಗೊಳಿಸುವವನಂ,-ಲೇಪಿಸುವವನು; ಘಟ್ಟಿವಳ: ತಟ್ಟುಕಂ ಚಟ್ಟುಕಂ ತಟ್ಟು ಚಟ್ಟು ಶಬ್ದೌ ಶ್ರೀಖಂಡ ಕುಂಕುಮಾದಿ ಗಂಧದ್ರವ್ಯ ಕರ್ದಮ ಕೃತ ಸ್ಥಾಸಕ ವಚನೌ ತತ್ಕುರ್ವನ್ (ಶಬ್ದಾನು. ೪೪೦ ವ್ಯಾಖ್ಯಾ.). [ಚಟ್ಟು$_5$ + -ಕ$_3$]

**ಚಟ್ಟುಗ** (ನಾ). ಒಬ್ಬಾತನ ಹೆಸರು: ಬಂಟುಗ ಮದಭಂಜನಂ ಜಯಾಂಗನಾ ಮನೋರಞ್ಜನಂ ಚಟ್ಟುಗ ಮದೇಭ ಪಞ್ಚಾನನಂ (ಎಕ. VIII, ಸಾಗರ. ೧೦೯-೪; 1042). [<ಚಟ್ಟು$_5$]

**ಚಟ್ಟುಬಡಿ** (ಕ್ರಿ). ಮಡಕೆ, ಗೋಡೆ, ಬಾಗಿಲು ಮುಂತಾದುವುಗಳ ಮೇಲೆ, ಕೈಯಿಂದ ಬಣ್ಣವನ್ನು ಒತ್ತು; ಗುರುತು ಮಾಡು: ಬಾಗಿಲು, ಗೋಡೆಗಳ ಮೇಲೆ ಚಟ್ಟು ಬಡಿದಿದ್ದರು (ರೂಢಿ): ಚಟ್ಟು ಬಡಿದಿದ್ದ ಮಡಕೆಗಳನ್ನು ಸಾಲಾಗಿ ಇಟ್ಟು ಪೂಜಿಸಿದ್ದರು (ರೂಢಿ).

[ಚಟ್ಟು$_5$ + ಬಡಿ$_1$]

**ಚಟ್ಟುಹೊಡೆ** (ಕ್ರಿ). ೧. ಗೋಡೆಗೆ ಕೈಯಿಂದ ಬಣ್ಣವನ್ನು ಒತ್ತು: ಹಂಗೆ ಮನೆಗೆ ಪುಣ್ಯಾಹಕ್ಕೆ ಮೊದಲು ಚಟ್ಟುಹೊಡೆ (ರೂಢಿ). ೨. ನಕಲು ಮಾಡು; ಕಾಪಿಹೊಡೆ: ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಪುಸ್ತಕದಲ್ಲಿದ್ದುದನ್ನೇ ಚಟ್ಟು ಹೊಡೆದಿದ್ದರು (ರೂಢಿ). ೩. (ಕರಾ). ಮತ್ತೊಬ್ಬರು ಹೇಳಿದ್ದನ್ನೇ ಹೇಳು: ಏನೂ ಕೆಲಸವಿಲ್ಲ, ಸುಮ್ಮನೆ ಚಟ್ಟುಹೊಡೆಯುತ್ತಾನೆ (ರೂಢಿ). [ಚಟ್ಟು$_5$ + ಹೊಡೆ$_1$ (<ಪೊಡೆ$_1$)]

**ಚಟ್ಟಿ$_1$, ಚೊಟ್ಟಿ$_1$** (ನಾ). ೧. (ಯೂರೋಪಿನವರ ಮಾದರಿಯ) ಉಡುಗೆ ತೊಡುಗೆ. 'ಚಟ್ಟಿಗಾರ' ಪರಾ. ೨. ಮೈಮೇಲೆ ಬೆಳ್ಳಗೆ ಸ್ವಲ್ಪ ಉಬ್ಬಿದ ಮಚ್ಚೆಗಳೇಳುವ ಒಂದು ಬಗೆಯ ಗುಹ್ಯರೋಗ; ಪರಂಗಿ ರೋಗ: (ಕ). **ಚೊಟ್ಟಿ$_1$**.

**ಚೊಟ್ಟಿಯುವ**=ಯೂರೋಪಿನವರ ಮಾದರಿಯ ವೇಷಧರಿಸಿದವನು; ಚಟ್ಟಿಕಾರ: ಬಾಗಿಲಿಗೆ ಬೀಗ ಹಾಕಿಸಿ ಬಿಟ್ಟರು ಮುನಿಸಾಮಪ್ಪನವರು ಚೊಟ್ಟಿಯುವನಿಗೆ ಹೇಳಿ (ಬೆಂಗೂರಿ. ೧೩೦).

[ದೇ.॥ ತಮಿ. ಚಟ್ಟೈ; ಮಲ. ತುಳು. ತೆಲು. ಚಟ್ಟ]

**ಚಟ್ಟಿ$_2$** 'ಚಟ್ಟಿ$_1$' ನೋ.

**ಚಟ್ಟಿ$_3$** 'ತಟ್ಟಿ$_1$' ನೋ.

**ಚಟ್ಟಿಕಾರ** 'ಚಟ್ಟಿಗಾರ' ನೋ.

**ಚಟ್ಟಿಗಾರ, ಚಟಿಕಾರ, ಚಟ್ಟಿಕಾರ** (ನಾ). ೧. ಯೂರೋಪಿನವರ ವೇಷವನ್ನು ಧರಿಸಿದವನು: (ಕ). ೨. ಯೂರೋಪಿನ ಹಾಗು ಏಷ್ಯಜನರ ಸಂಕರ ಜಾತಿಯವನು; ಆಂಗ್ಲೋ ಇಂಡಿಯನ್: ಬ್ರೌನ್ ಎಂಬ ಚಟ್ಟೀಗಾರನು ಆ ದಿವಸ ಗಾಡಿ ಹೊಡೆಯುತಾ ಇದ್ದನು (ಮೂಮುರಾ. ೧೭). **ಚಟಿಕಾರ**: ೨. ಚಟಿಕಾರರು ಚೌಕಿ ಮಾಡುತ, ನಡೆದರೂ ಹೇಳದೆ ಗುಡದಾಗ (ಕನ್ನಜಾ. ೮೮). **ಚಟ್ಟಿಕಾರ**: (ಕ).

[ಚಟ್ಟಿ$_1$ + -ಕಾರ$_1$ (<-ಕಾಱ). / ತಮಿ. ಚಟ್ಟೈಕ್ಕಾರನ್: ಮಲ. ಚಟ್ಟಕ್ಕಾರನ್; ತುಳು. ಚಟ್ಟಿಗಾರ; ತೆಲು. ಚಟ್ಟಕಾರ]

**ಚಟ್ಟೋಜ** (ನಾ). ಒಬ್ಬಾತನ ಹೆಸರು: ಅಜ್ಜುನೋಜನ ಮಗಂ ಚಟ್ಟೋಜ ಕಲ್ಲಂ ಮಾಡಿಸಿದ (ಎಕ. VIII, ಸೊರಬ. ೦೭-೦೦; 1016); ಗೊಯ್ಡಸೆಟ್ಟಿಯ ಬೆಸವಗಂ ಅಕ್ಕಶಾಲೆ ಚಟ್ಟೋಜನ ತಮ್ಮಂ (ಎಕ. VII, ಶಿವಮೊ. ೪೩-೩೯; 1172 ?). [ಚಟ್ಟು$_5$ + ಓಜ$_1$ (<ಒವಝ)]

**ಚಟ್ಟಗ್ರಾಮ** (ನಾ). ಒಂದು ಊರಿನ ಹೆಸರು: ಪಾವಕದಿಶಿ ಶಮಾ ಯಿ ಕೃಷ್ಣಪಾಷಾಣಂ ಚ[ಟ್ಟಗ್ರಾ]ಮತಃ ಕೃಷ್ಣಪಾಷಣಂ (ಸೌಇಇ. XX, ೪-೧೩; 688). [ಚಟ್ಟ? + ಗ್ರಾಮ]

**ಚಟ್ನಿ** 'ಚಟ್ಟಣಿ' ನೋ.

**ಚಟ್ನಿಪುಡಿ** (ನಾ). ಕಡಲೆಬೇಳೆ, ಉದ್ದಿನಬೇಳೆ, ಕೊಬ್ಬರಿ, ಮೆಣಸಿನಕಾಯಿ ಮೊದಲಾದುವನ್ನು ಹಾಕಿ ಮಾಡಿದ ನಂಜಿಕೆಯ ಪದಾರ್ಥ: ಚಟ್ನಿಪುಡಿ ಮುಗಿದು ಹೋಗಿದೆ (ರೂಢಿ). 'ಪುಡಿಚಟ್ನಿ' ಪರಾ.

[ಚಟ್ನಿ (<ಚಟ್ಟಣಿ) + ಪುಡಿ]

**ಚಟ್ನೆ** 'ಚಟ್ಟಣಿ' ನೋ.

**ಚಡ್‌ಸಾಲ್** 'ಭಡಸಾಲ್' ನೋ.

**ಚಡ** (ನಾ). ೧. ಬೇಗ (?): ಬಂದವನೆತ್ತಿ ವಿಕ್ರಮದಿನೀಟ್ಕುಳಿಗೊಂಡವನಂತೆ ಕೂಪ ನಿನ್ನಿಂದೆಮಗೊಳ್ಳೆಯಂ ಬಿಡುವೆ ವೇಟ್ ತನಗಿಕ್ಕಿದ ಕೋಂಟೆ ತಾಂ ಚಡಂ ಬಂದು ನಿಜೇಶನಾತಕೊಱೆಯಂ ತಿಱಿವಂ ಗಟಪಲ್ಕೆ ಬೇಡ ಪೋಗೆಂದುಬಿದೊತ್ತಿ ಚಪ್ಪರಿಸೆ ಪೋದನವಂ ಪಗೆಸಾರಿ ಕೋಪದಿಂ (ಪುಷ್ಪಪು. ೭-೭೭). ೨. [ಸಂಗೀತ] ರಾಗದಲ್ಲಿ ಒಂದು ಗತ್ತು (?): ಗಹಗಹಿಕೆಗೊಂಡಂ ಗೊಂಡಿ ಚಡಂ ಬಾಹಟಂ ಲಾಲಂಗಿ ತನ್ನೆವಣೆ ನಿಸ್ಸರಣೆ ರಂಗರಕ್ತಿ ಬೇಗ ವಣಿತು ತರಹರಂ ಸುರಿಪೊಟ್ಟಜೆ . . . ಬೆದಂಗುವಡೆಯು ಪಾಡುತ್ತಿರೆಯುಂ (ಶಾಂತೀಶ್ವ. ೧೭-೭೭ ವ). [?]

**ಚಡತ** (ನಾ). ಮನೆಯ ಮುಂದಿನ ಜಗಲಿ; ಕಟ್ಟೆ: ಅವರೆಲ್ಲ ಮನೆಯ ಮುಂದಿನ ಚಡತದಲ್ಲಿ ಕುಳಿತಿದ್ದರು (ರೂಢಿ). [?]

**ಚಡತಿ** (ನಾ). ಅಸೂಯೆ; ಹೊಟ್ಟೆಕಿಚ್ಚು; ಕರುಬು: (ಕ). [?]

**ಚಡಪಡ** (ನಾ). ೧. ಅಸಮಾಧಾನ; ಕಳವಳ. 'ಚಡಪಡಿಕೆ' ಪರಾ. ೨. ಆತುರ; ಅವಸರ; ಗಡಿಬಿಡಿ. 'ಚಡಪಡಿಸು' ಪರಾ. [?]

**ಚಡಪಡನೆ, ಚಡಪುಡನೆ, ಚಡುಂಪಡನೆ, ಚಡುಪುಡನೆ, ಚಡುಹುಡನೆ** (ಅ). ಲಗುಬಗೆಯಿಂದ; ಬೇಗನೆ; ತ್ವರಿತವಾಗಿ: "ಚಚ್ಚರಂ . . . ಚಡಪಡನೆ ಭೋರೆನೆ . . . ಶೀಘ್ರಾರ್ಥ" (ಕಬ್ಬಮಂ. ೬೨). **ಚಡಪುಡನೆ**: "ಚಟ್ಟನೆ" (ಕಾನಕೋ. ೩೪) **ಚಡುಹುಡನೆ**: "ಭೋಂಕನೆ ಚಡು[ಪಾಕಾಂ. ಡ]ಪಡನೆ ಚಚ್ಚರಂಗಳ್ . . . ತುರಿಹಮುಂ" (ಕರ್ನಾಕೈ. ೪೯). **ಚಡುಪುಡನೆ**: ಭೋಂಕಲ್ ಚಡುಪುಡನೆ ಗಿಜ್ಜಿ ತಿಜ್ಜನೆಯುಂ . . . ಒದವುಗ್ಗುಂ ಶೀಘ್ರಾರ್ಥಂ (ಕಮುದ. ೩೦೫). **ಚಡುಹುಡನೆ**: ಚಡುಹುಡನುಂಡು . . . ನಡೆದರ್ (ಸೂಕ್ತಿಸು. ೧೮-೩೫). 'ಸಡುಹುಡನೆ' ಪರಾ. [ಚಡಪಡ + -ಅನೆ$_1$]

**ಚಡಪಡಿಕೆ, ಚಟಪಟಿಕೆ₁, ಚಟುಪಡಿಕೆ** (ನಾ). =ಚಡಪಡ೧ : ಒಳಗಿನ ಚಡಪಡಿಕೆಯನ್ನು ಆಡಿ ತೋರಿಸುವಂತಿಲ್ಲ (ವ್ಯನಿ. ೫೯) ; ಸಾವಿತ್ರಿಯ ಚಡಪಡಿಕೆ ಕಣ್ಣೀರ ಕೋಡಿಯಾಗಿ ಹರಿಯ ತೊಡಗಿತು (ಬಿಶಾ. ೨೪೩) ; ಒಂದು ಒಂದೂವರೆ ತಾಸು ಕುಳಿತರೂ ಯಾರೂ ಬರಲಿಲ್ಲ ಅವನಿಗೆ ಚಡಪಡಿಕೆಯಾಗಹತ್ತಿತು (ಕೃತಕ್ಕ. ೧೬೪) : ಯಶೋದೆಗೆ ತಡವಾದಂತೆ ಚಡಪಡಿಕೆ ಹೆಚ್ಚಾಯಿತು (ವಾತ್ಸಲ್ಯ. ೨೫೮). **ಚಟಪಟಿಕೆ₁ :** (ಅ). **ಚಟುಪಡಿಕೆ :** ಅನಂತನ . . . ಈ ವ್ಯರ್ಥ ಚಟುಪಡಿಕೆಯನ್ನು ಕಂಡು ಕಮಾಂಡರರೇ ಹೇಳಿದರು (ಸಮುಶಾ. ೧೦೪). [ ಚಡಪಡ + – ಇಕೆ ]

**ಚಡಪಡಿಸು, ಚಟಪಟಿಸು** (ಕ್ರಿ). ೧. ಕಳವಳಗೊಳ್ಳು; ವ್ಯಥೆಪಡು : ಕರುಗಳು ಕಣ್ಣುಮರೆಯಾದ ಕೂಡಲೆ ದನಗಳು ಚಡಪಡಿಸುತ್ತವೆ (ಮುಂಬಯಿ. ೫-೭೩) ; ೨. ಅವಸರಪಡು ; ಆತುರಪಡು : ಯಾವಾಗ ಅವರನ್ನು ನೋಡಿಯೇನೆಂದು ಆತ ಚಡಪಡಿಸುತ್ತಿದ್ದ (ಕೃವಾಇ. II, ೧೯೬) ನನಗೂ ಅವರಂತೆ ಕುಣಿದಾಡಬೇಕು ಎಂದು ಕೈಕಾಲುಗಳು ಚಡಪಡಿಸುತ್ತಲೇ ಇದ್ದುವು (ಶಾರಮು. ೧೨೦). ೩. ಒದ್ದಾಡು ; ಹೊರಳಾಡು : ಒಬ್ಬನು ಆ ಚಡಪಡಿಸುವ ಆತನ ಎರಡೂ ಕೈಗಳನ್ನು ಬಲವಾಗಿ ಹಿಡಿದುಕೊಂಡನು (ವೀರಬಂ, ೫೦) ; ಕಾಯ್ದ ಹಂಚಿನ ಮೇಲೆ ಹುರಿಯಲು ಹಾಕಿದ ಅರಳಿನ ಜೋಳದ ಕಾಳಿನಂತೆ ಚಡಪಡಿಸಿದನು (ಚಂದುಟ. ೨೦) ; ನಿಮ್ಮ ಕುದುರೆ ನೆಮ್ಮದಿಯಿಲ್ಲದೆ ಚಡಪಡಿಸುತ್ತಿತ್ತು (ಶಾರಮ. ೮೪). **ಚಟಪಟಿಸು :** ೩. ಅಶಾಂತಿಯಿಂದ ಅವಳು ಚಟಪಟಿಸುತ್ತಿದ್ದಳು (ವಂಶವೃ. ೧೮೯). [ ಚಡಪಡ + – ಇಸು₃ ]

**ಚಡಪುಡನೆ** ‘ಚಡಪಡನೆ’ ನೋ.

**ಚಡರ** (ನಾ). ಕವಚ : “ಸನ್ನಾಹಂ, ಕವಚಂ, ಚಡರಃ . . . ಜಾ(ಳ)ಳಕಾ- ಈ ೧೦ ಕವಚಂ” (ಹಲಾಯು. ೬೬-೩೦೫) [ ಸಂ ]

**ಚಡಲೆ** (ನಾ). ಒಂದು ಬಗೆಯ ಮರ : ಅರಿಸಿನ, ಬೂರುಗ, ಚಡಲೆ, ನಾರವಳ್ಳಿ, ನೀರವಳ (ನಮ್ಮನು. ೨೩೬). [ ? ]

**ಚಡಾಯ, ಚಧಾಯಿ, ಛಡಾಯ** (ನಾ). ೧. (ಪದವಿಯಲ್ಲಿ) ಉನ್ನತಿ ; ಬಡತಿ : ರಾಜಪುತ್ರರ್ಗೆ ಪಸಾಯುವಂ ಕೊಡಿಸುತ್ತಂ ವೀರಭಟರ್ಗೆ ಚಡಾಯವಂ ಮಾಡಿಸುತಂ (ಬಸರ. ೬-೩೪). ೨. ಅತಿಶಯ ; ಆಧಿಕ್ಯ : ರಾಯರಥಿಕರು ಚಟುಳ ಭರಣ ಚ[ಪಾಠಾಂ. ಛ]ಡಾಯ ಮಾನಿತರಿಳಿದುದಾ ಖಳರಾಯ ದುರ್ಗವ (ತೊರರಾ. ೬-೦೮-೪). **ಚಧಾಯಿ** ೩. ಮೇಲೇರಿ ಹೋಗುವುದು ; ದಾಳಿ : ನಿಂ ಚಧಾಯಿ ಮಾಡುವ ನೀತಿ ಅಸಲ್ ನಿರ್ಭೀತಿ ಹೇಳಿಕೇಳಿ (ಅರಳು. ೩೯೬-೦೦). **ಛಡಾಯ :** ಮೇಲಿನ ‘ತೊರರಾ’ ಪ್ರಯೋಗದ ಪಾಠಾಂತರವನ್ನು ನೋಡಿ.

[ ←ಹಿಂ. ಮರಾ. ಚಢಾಈ ]

**ಚಡಾಯತಿಕೆ** (ನಾ). (ಕಂದರೆಯನ್ನು) ಏರುವ ಕ್ರಮ,–ಆರೋಹಣ ವಿಧಿ (?) : ವಾಮರಾಜ ಪ್ರಿಯ ತನೂಜಾತ ರೂಪುರೇಖೆ ಥಾಪನೆ ಬಯ್ಸಕೆ ತೊಡೆಮಡ ಕಯ್ದನಿಯೆಂಬ ಚಡಾಯತಿಕೆಗಾಯತಿಕೆವಡೆದಾರೂಢ ವಿದ್ಯಾ ವಿಳಾಸ (ಸೌಇಇ. IX-1, ೩೪೩-೩೦ : 1226). [ ? ]

**ಚಡಾಯಿಸು, ಛಡಾಯಿಸು, ಛಡಾಯ್ಸು** (ಕ್ರಿ). ೧. ಏರು; ಹೆಚ್ಚಾಗು; ಚಡಾಳಿಸು : (ಅ). ೨. ಎತ್ತರಿಸು ; ಹೆಚ್ಚಿಸು ; ಹೆಚ್ಚು ಮಾಡು : (ಅ). ೩. (ಹೊಡೆತ, ಏಟು ಮೊದಲಾದುವನ್ನು) ಕೊಡು; ಹಾಗಿಸು: (ಅ). ೪. ಚಬಕದಿಂದ ಅಥವಾ ಬೆತ್ತದಿಂದ ಥಳಿಸು: (ಅ). **ಛಡಾಯಿಸು:** ೨. ಜಮಾಬಂದಿಗೆ ಜಾಸ್ತಿ ಛಡಾಯಿಸಿ ತನ್ನ ಕೈಕಾಗಜಕ್ಕೆ ಕೂಡಿ ಬರಬೇಕೆಂಬದಾಗಿ (ಮಹಾವಂ. II, ೭೧). **ಛಡಾಯ್ಸು:** ೩. ಆಗ ಅಡ್ಡೇ ಇದ್ದ ಮಾತ್ನೆಲ್ಲಾ ಈಗ ಒಂದಕ್ಕೆರಡಾಗಿ ಛಡಾಯ್ಸಿದೀನ್ನೂ (ದುರಂಪಾ. ೬೩).

[ ಚಡಾಯ + – ಇಸು₃ ]

**ಚಡಾವು, ಛಡಾವು** (ನಾ). ೧. ಏರಿಕೆ ; ಉನ್ನತಿ ; ಬಡತಿ : (ಅ). ೨. ಏರುನೆಲ; ದಿಣ್ಣೆ: ಚಡಾವಿನಲ್ಲಿ ಮುಂದಕ್ಕೆ ಹೋಗದೆ ನಿಂತುಬಿಡುತ್ತಿದ್ದಿತು (ಬೈಸರ್. ೦೨೧). ೩. ಒಂದು ಬಗೆಯ ಮೆಟ್ಟು : ಕೆಲವರು ತುರುಕರ ಸಂಪ್ರದಾಯದ ಚಡಾವುಗಳನ್ನು ಉಪಯೋಗಿಸುತ್ತಿದ್ದರು (ಹುಬ್ಬಹ. ೮); ಕಾಲೊಳಗಿನ ಹರಿದು ಹೋದ ‘ಚಡಾವ’ನ್ನು ನೆಲಕ್ಕೆ ಅಪ್ಪಳಿಸಿದನು (ಸಕುಮಂ. ೪೪); ಕೆಂಪು ಬಣ್ಣದ ಸೊಗಸಾದ ‘ಕಿರಿಕಿರಿ’ ಚಡಾವು (ಬಾಳಹೊ. ೨). **ಛಡಾವು:** ೩. ನಾನು ಜುಬ್ಬ ತೊಟ್ಟು ಪೈಜಾಮು ಹಾಕಿ ಕಾಲಿಗೆ ಪಂಜಾಬಿ ಮಾದರಿಯ ಛಡಾವನ್ನು ಮೆಟ್ಟಿದ್ದೆ (ಛದುಗ್ಗೈಲು ೧೧೫).

[ ←ಹಿಂ. ಚಢಾವ್, ಚಢೌವಾ ; ಮರಾ. ಚಢಾಊ, ಚಢಾವ್ ]

**ಚಡಾಳ, ಚಢಾಳ, ಛಡಾಳ** (ನಾ). ಹೆಚ್ಚಳ ; ಅತಿಶಯ ; ಆಧಿಕ್ಯ : ಧ್ರುಮರಮುದ್ರ್ರಮರಂಗಳ ಗಾವರಕ್ಕೆ ಜಾವಳಿಸಿ ಚಡಾಳದೊಳ್ಮೊರೆವುವು (ಅನಂಪು. ೧-೬೬) ; ಸಿರಿಯ ಚಡಾ[ಪಾಠಾಂ. ಢಾ]ಳದಲಿ ತಂದಬಿಳ ವಸ್ತುವ ನಾಲಯದೊಳೊಟ್ಟಿಸಿದನು (ಕುವ್ಯಾಸ. ೫-೩೦) ;ಹೇಳು ಹೇಳಭಿಮಾನಭಂಗ ಚ[ಪಾಠಾಂ. ಛ]ಡಾಳವಾರಿಂದಾದುದು (ತೊರರಾ. ೩-೫-೪) ; ತೋಳ ಮೂಲಗಳೊಡೆವಂತೆ ಬೆವರ್ಗೊಳೆಯ ಚಡಾಳದಿ ಮೆಚೆವ ಹೆಣ್ಣುಗಳು (ಮೋಹತ. ೧೪-೬೦) ; ಗಂಧರ್ವ ವಿದ್ಯಾಚಾರ್ಯ ನೃಪಸುತರೂ ಮೇಳೈಸಿ ವೀಣೆಯನು ಕಲಿವ ಚಡಾಳವೇನು (ಸಾಳ್ವಭಾ. ೧೭-೧) ; ನಾಲಗೆದೆಱೆದವ ನುಡಿವೊಂದು ನುಡಿಯ ಚಡಾಳವನೇನ ಬಣ್ಣಿಪೆನು (ಭರತ. ೫೭-೨೪). **ಚಢಾಳ :** ಬಲ್ ಚದುರ ಚಾವಡಿ ಚಢಾಳದೊಳ್ ಚೇಟದ ಥಾಟ ಸಿಂಗರದ ರಂಗಭೂಮಿ (ಪದ್ಯರಾ. ೮-೮೬). **ಛಡಾಳ :** ಮುನಿವ್ರಜ . . . ಕಡು ಶೋಕರಸದ ಛಡಾಳವನು ನಿಲಿಸಿದರು (ಕುವ್ಯಾಆ. ೫-೨೧) ; ಬಿಸಿಲ ಛಡಾಳದಿ ಬೆಂದರ್ಗೆ ಮಡುನೀರು ಸಸಿನೆಳಲಿದಿರ್ವಂದಂತೆ (ಮೋಹತ. ೨೬-೧೭).

[ <ಪ್ರಾ. ಛಡಾಲ ]

**ಚಡಾಳತೆ, ಛಡಾಳತೆ** (ನಾ). ಹೆಚ್ಚಳ ; ಆಧಿಕ್ಯ : ಚತುರಂಗದ ಚ[ಪಾಠಾಂ. ಛ]ಡಾಳತೆಯಿಂದ ಚೂರಿಸುವಸ್ತ್ರ ಶಸ್ತ್ರದಲಿ ಹೊದೆಸಿಕೊಂಡುದು ಕಪಿಬಲವನು (ತೊರರಾ. ೬-೧೭-೩೦). **ಛಡಾಳತೆ :** ನಿಮ್ಮಾತನುಗಿದೆಬ್ಬಿಸಿದ ಹುಲಿಯೋ ನೊಂದ ಹಂದಿಯೊ ಹಸಿದ ಭುಜಗನೋ ಕಾದ ಕಟ್ಟುಕ್ಕಿನ ಛಡಾಳತೆ[ಪಾಠಾಂ. ಳಿಕೆ]ಯೊ (ಕುವ್ಯಾಆ. ೬ ೬). [ ಚಡಾಳ + – ತೆ₃ ]

**ಚಡಾಳಧ್ವನಿ** (ನಾ). ಅಧಿಕವಾದ ಧ್ವನಿ ; ಅತಿಶಯವಾದ ಧ್ವನಿ : ಅದ ರಘುಕ್ಷಿತಿಪಾಲಕನ ಚಾಪದ ಚಡಾಳಧ್ವನಿ[ಪಾಠಾಂ. ಧ್ವಾನ]ಯ ಚಿತ್ರೈಸಿದಿರ ಮುಂದಿದೆ ಸಮರಭೈರವನುಗ್ರಸಿಂಹರವ (ತೊರರಾ. ೩-೬-೩೩).

[ ಚಡಾಲ + ಧ್ವನಿ ]

**ಚಡಾಳಿಕೆ, ಛಡಾಳಿಕೆ** (ನಾ). ೧. ಉಗ್ರತೆ ; ರಭಸ : ಬಲು ಬಿಸಿಲೊಂದು ಚಡಾಳಿಕೆ ಜಗವ ಭಂಗಿಸಿತು (ಮೋಹತ. ೧೯-೪೭) ; ಇವರ ಬಲುಹು ಮತ್ತಿವರಟ್ಟುಳಿ ಮೇಣವರ ಚಡಾಳಿಕೆ ಇವರ ಕಿಟುಕು (ಛಕ್ಸ. IV, ೦೪). **ಛಡಾಳಿಕೆ :** ೨. ಅತಿಶಯ ; ಆಧಿಕ್ಯ : ನಾಟ್ಗೆ ಬಸಂತನ ಕಾಪು ಕಾಮದೇವನ ರತಿಯಾಜ್ಞೆ ಚಂದ್ರನ ಛಡಾಳಿಕೆ[ಪಾಠಾಂ. ತಳಾರಿಕೆ] ತಂಬೆಲರೊಂದು ಬೆಂಬಲಂ (ಅನಂಪು. ೧-೮೬). (ಸೂಕ್ತಿಸು. ೪-೨೯ ನೋ).

[ ಚಡಾಳ + – ಇಕೆ ]

**ಚಡಾಳಿಸು, ಚಡಾಳೈಸು, ಚಢಾಳಿಸು, ಚೌಡಾಳಿಸು, ಛಡಾಳಿಸು** (ನಾ). ೧. ಅಧಿಕವಾಗು ; ಮೇಲಾಗು ; ಆಧಿಕ್ಯವನ್ನು ಪಡೆ : ತೋಳು ಸಾವಿರವಮರಪತಿ ತೆಱುವಾಳಿನೊಕ್ಕಲು . . . ಶೂಲಿ ಬಾಗಿಲ ಕಾಯ್ದ ನೀನು ಚಡಾಳಿಸಿದ ಸಿರಿ ಯಾರಿಗೆ (ಕುವ್ಯಾಸ. ೯-೬೨) ; ಮೇಲಣಾವಧಗಾಂಬು ಕುದಿವುತಿರ್ದುದು ಶಿಖಿ ಚಡಾಳಿಸಲ್ (ಜಬಪು. ೩೦-೬). ೨. ಚಾತುರ್ಯದಿಂದ ಜೋಡಿಸು ; ಸೊಗಸಾಗಿ ಅಳವಡಿಸು : ಜಂತ್ರವೀಣೆಯ ತಂತ್ರಿಗಳನು ಚಡಾಳಿಸಿ ಕಂತುವಿನಂಕಮಾಲೆಯನು . . . ಬಾಜಿಪ ಕಾಂತೆ ಕಣ್ಗೆ

ಸೆದಳು (ಅಂಜನ. ೩-೦೩೨) ; ಪಸುರಂಗಿಯುನು ತೊಟ್ಟನು ಚಡಾಳಿಸಿ ಪದ ದೊಳೆಶ್ಯದವ (ಉಪ್ಪಾಳ. ೦೩-೦೯) : ಪೊನ್ನ ದಂಡಿಗೆಯ ಚಡಾಳಿಸಿ ಬಿಗಿದನು (ತ್ರಿಭುತಿ. ೬-೨೬). ೩. ತುಂಬು; ವ್ಯಾಪಿಸು ; ಹಬ್ಬು: ಬಲುಗಾಳಿಗದ ಭಾರಣೆಯು ಬಲುಹು ಚ[ಪಾಠಾಂ. ಧ]ಡಾಳಿಸುತಲಿರ್ದುದು ಚತುರ್ದಶ ಭುವನವೀಧಿಗಳ (ತೊರದಾ. ೬-೦೮-೦೦) ; ಅವನ ಕೀರ್ತಿ ಚಡಾಳಿಸಿತು ತ್ರೈಜಗವನು (ನಳಚ. ೯-೦). ೪. ಪ್ರಜ್ವಲಿಸು; ಥಳಥಳಿಸು : ಬಾಲ ಸೂರ್ಯನವೋಲ್ . . . ತೇಜದ ವಿಕಾರ ಚಡಾಳಿಸಿತು (ಉಪ್ಪಾದ್ರೌ. ೦೮-೩೦) ; ದುಕೂಲ ಮಣಿಭೂಷಣವ ಧರಿಸಿ ಚಡಾಳಿಸುವ ಕಾಂತಿಯುಲಿ ಸಿಂಹಾಸನದಿ ಕುಳ್ಳಿರ್ದ (ನಳಚ. ೯-೦). ೫. ಉರವಣಿಸು; ರಭಸಗೊಳ್ಳು: ಗುರು ಚಡಾಳಿಸಿ ಹೊಕ್ಕನೊವಿಲ್ಮಂಗುರವಣಿಸಿದನು ಬಾಹ್ಲಿಕನು (ಉಪ್ಪಾವಿ. ೮-೭೯) ; ಹೊಗೆ ಚಡಾಳಿಸಿ ಹಬ್ಬಿತಂಬರವ (ಶೌಶಿದಾ. ೨೨-೩೩) ; ತೋಳೆ ರಡನು ಕಟ್ಟಿ ಜಯರಾಜನಿತ್ತ ಚಡಾಳಿಸಿ ಕರುತ್ತಿದ್ದನತ್ತ (ಭರತ. ೩೪-೯೬). ಚಡಾಳೈಸು: ೨. ಕರದ ದಲ್ವದೆಯುಂ ಚಡಾಳೈಸುತಾಗ ಶತಮಾಯನಿಂದ್ರನ ಸರಿಸದೊಳ್ ನಿಂದು (ಚಬಸು. ೪೯-೨೦). ಚಥಾಳಿಸು : ೧. ಕೀಲಿಸಿದ ಹೃದ್ಬೀಜಬಿಂದು ಚಥಾಳಿಸಿದ ಶೀತಾಂಶುವಾಗಲು (ಪ್ರಭುಲೀ. ೨-೧೦) : ವಿಷರಸದ ಬೊಬ್ಬೆಗೆ ಚವಳತೆ ಚಥಾಳಿಸಿತು (ತುರಂಗ. ೬೯-೪೦). ೫. ಕಣೆಗಳಿಂ ಚಥಾಳಿಸಿ ಭಟರ ಕಣೆಗಳಿಂ ಮನ್ನಿಸಿದನು (ತುರಂಗ. ೬೪-೪). ಚೌಡಾಳಿಸು : ೫. ಚೌಡಾಳಿಸಿಯ್ಯೆಯಂಟರೊಳಗೆ ಕಾಯನು ಕೊಂದು ಅವುಕ ಚಿತ್ರಿಯೊಳು ಜೋಡತ್ತಿ . . . ಹಳದಿ ಜೋಡ ಬವರಕ್ಕೆ ನಿಲಿಸಿ ಯಾಡಿದರು (ಸೌಂದರಾ. ೪-೪೦). ಧಡಾಳಿಸು : ೧. ಮನಂ ಸೋಲ್ತು ಕಾಂತನಂ ಕಾತರದೆ ಡಾವರಿದೀಕ್ಷಿಸೆ ಧಡಾಳಿಸಿದ ರಾಗದಿಂ (ಪದ್ಮರಾ. ೮-೯೪): ನಾಲಗೆಯು ನೆಣಗೊಬ್ಬು ವಿಕ್ಕು ಧಡಾಳಿಸಿದರೇನಹುದು (ಉಪ್ಪಾಶ. ೧೬-೦೬) : ಉರಿ ಧಡಾಳಿಸಿತೊಡನೆ ಧೂಮವು ಪುರವ ಮುಚ್ಚಿದುದು (ಅಂಬಿಕಾ. ೪೪-೩೩). ೪. ಥಾಳದ ದೆಂಬಟವಿಡಿದು ಧಡಾಳಿಸೆ ದೃಗ್ರುಚಿ (ಉದ್ಭಟ. ೦೧-೧೬) : ವಿತ್ರ ಕುಳಿತಳು ಕಾಂತಿ ಧಡಾಳಿಪ ಮಣಿಮಂಚ ದೆಡೆಯು ಆಳಿಯರ್ . . . ಪ್ರಕ್ಷಾಲಿಸಿದರು ಪದಯುಗವ (ಮೋಹತ.೨೬-೩೩). ೫. ಕೈದುಕಾರರ ಗುರು ಧಡಾಳಿಸಿ ಮೈದಗೆದು ನಿರ್ಜರರ ನಗರಿಗೆ ಹಾಯ್ದನು (ಉಪ್ಪಾದ್ರೌ. ೦-೩) : ಮತ್ತೆ ಖಳರು ಧಡಾಳಿಸುತ ಮೇಲೇಟದರು ಘನತರದ ಕೋಪದಲಿ (ಚಿದಂಡ. ೬-೦೩) ; ಈ ದೇಹ ಸುಖದನುಭವ ಧಡಾಳಿಸಿ ಮರಳಿ ನಿನ್ನೆಡೆಗೆಳೆದು ತಹುದು (ಅಕ್ರೂರ. ೪-೬೩). ೬. ವಿರೋಧಿಸು ; ಎದುರುಬೀಳು : ಕೇಳಿಯೊಳಿನಿಯಂಗೆ ಸುಖವನೆಯ್ದಿಸದೆ ಧಡಾಳಿಸಿದವಳ ವೇರುರವ ಬಾಳಿನೊಳ್ ಸಿಗಿವಂತೆ . . ಸೀಳಿದಳೊಂದು ದೆಳ್ಳೆಲೆಯು (ಮೋಹತ. ೦೬-೩೩).

[ ಚಡಾಳ + – ಇಸು₃ ]

ಚಡಾಳ್ಯಸು 'ಚಡಾಳಿಸು' ನೋ.

ಚಡಿ₁ (ನಾ). ಸಣ್ಣಮಾರ್ಗ, ಕಿರುದಾರಿ: ಈಶಾನ್ಯ ಚಡಿಯ ದಾರಿಯುನ್ನೀ ವಳಯ ಸೀಮೆಯುಂ (ಎಕ. V, ಹಾಸನ. ೬೦-೪೨; 1218): ದಾಂಡೇಜ ಯಂಥ ದೊಡ್ಡ ಪ್ರವಾಹವು ನಾಲ್ಕು ಕಡೆಗಳಲ್ಲಿ ಮುರಿದು ಈ ಧೂಮಿಯ ಚಡಿಯಲ್ಲಿ ಧುಮುಕುವ ನೋಟವು ಅತಿ ಮನೋಹರವಾಗಿದೆ (ದಾಂಪ್ರ. I, ೩೦೬). [ < ಪ್ರಾ. ಢೇಂಢೀ ]

ಚಡಿ₂ 'ಧಡಿ' ನೋ.

ಚಡಿ₃ (ನಾ). ಮರಗೆಲಸದಲ್ಲಿ ಎರಡು ಮರದ ತುಂಡುಗಳನ್ನು ಕೂಡಿ ಸುವ ಸ್ಥಳದಲ್ಲಿ ಮಾಡುವ ಪಡ ಅಥವಾ ಕೂರು ; ಕೂಲು : (ಶ).

[ ? ]

ಚಡಿಕೆ, ಚಳಕ₁, ಚಳಕಿ₁, ಧಡಕಿ, ಧಡಿಕೆ (ನಾ) ಜಟ್ಟಿಕಾಳಗದಲ್ಲಿ ಒಂದು ವರಸೆ : ಡೊಕ್ಕರಂ ಚಡಿಕೆ ತುಳಿಪಿ ಪೊಟ್ಟ ಮುದುಹಂ ಮುಹಡಂ ದಣು ವಟ್ಟೆ ವಟ್ಟೆಸಂ (ಅಸಂಪು. ೨-೨೬) : ಒಡೆಮುರಿವಪಟ್ಟೆಸಕೆ ಚಾಡುವ ಚಡಿಕೆ [ಪಾಠಾಂ. ಝುಡಿತೆ]ಗೊದಗುವ ಭಟರು ಹೆಣಗಿದರು (ಉಪ್ಪಾಸ. ೨-೯೬). ಚಳಕ₁ : ತವದ ನಿಜಕೋಪದಿಂ ಚಳಕವಿನ್ನಣಂಗೊಂಡು ತಕ್ಕಿನೊಳ್ . . . ದೊಕ್ಕರಿಸಿ ಕೊಂದನಾ ಮುಷ್ಟಿಕನಂ (ಜಗವಿ. ೬ ೩೮) ; ಕೇಣವಿಲ್ಲದ ಚಾರಿ ಚಳಕ ಚಾಳೆಯು ಚದುರ್ ಪಾಣಲಾಘವ ಪಂಥ ಪಾಡುಗಳೆನಲುದು (ಕೃಮಿಥಾ. ೨೨-೬) ; ಪರಿವಿಡಿಯೊಳ್ ಚಳಕಂ ಮೆಯ್ಸರಿಯೆಟ್ಟುದು ಕಾಣ ದೊಳ್ಪು ಪೆಣಗುವ ಸೈಪುಂ ದೊರೆಕೊಂಡ ಕುವರನಿರವಂ ನಿರವಿಸಿದರ್ ಗರುಡಿಯೊಜರವನೀಪತಿಯೊಳ್ (ಚಕವಿ. ೪-೦೩೩). ಚಳಕಿ₁ : ಚಳಕಿ ಚಳವಾಗೆ ಪಾರಂ ಸೆಳೆವೆಳೆವಂ ಪಟ್ಟಸಂಡಿ ಪುಟಪಟ್ಟರೆ . . . ಕೊಜಗಿದು ಚಾಣೂರಂ (ಅರ್ಧನೇ. ೮-೧೦೮). ಧಡಕಿ: ಎಸೆವ ಮುಹಗ್ಗಳಂ ಧ[ಪಾಠಾಂ. ಠ] ದಕಿ ಕಕ್ಷವಡಂ ಮುಹಡಂ . . . ಬಾಹುದಣೆ ಖಮ್ಮರಿ ಕತ್ತರಿ ಮೋಡವಂಕುಶಂ ಸಸಿಕುವೆನಿಪ್ಪ ಚಿಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (ದಂದ್ರಪು. ೫-೭೮). ಧಡಿಕೆ : ಚೊಕ್ಕೆಯದಾಸೆಗೆ ಪೊಕ್ಕಮಲ್ಲನನಿಕ್ಕಿ ಮೆಟ್ಟಿ ವಜ್ರದ ಬಳ್ಳಿಯಂತೆ ಧಡಿಕೆಯೊಳ್ ಬಿಗಿದು ಚಾಳಿಸಿ ನೂಂಕುವ ನೂಂಕೆ ಪೋಗದೆ ನಿಂದ ಸೆಳೆಹನಂ ಸೆಳೆದು ಕೆಡಪಿ (ಗಿರಿಕ. ೨-೧೦೫ ಬ).

[ ದೇ.೫ ತೆಲು. ಚಡಿಕಿ, ಚಲಿಕಿ, ಧಡಿಕಿ ]

ಚಡಿತ₁, ಧಡತ, ಧಡಿತ₂ (ನಾ). ಮರದ ಸಾಮಾನುಗಳು ಬಿಗಿಯಾಗಿ ಹೊಂದಿಕೊಂಡಿರುವಿಕೆ ; ಹೊಂದಾಣಿಕೆ : ಗಾಜನ್ನು ಪಠದ ಚೌಕಟ್ಟಿನ ಚಡಿತಕ್ಕೆ ಸರಿಯಾಗಿ ಕೂಡಿಸಿ ಆಮೇಲೆ ಪಠವನ್ನು ಜೋಡಿಸಬೇಕು (ರೂಢಿ). ಧಡತ : ಬಾಗಿಲಿನ ಧಡತ ಸರಿಯಾಗಿಲ್ಲ (ರೂಢಿ). ಧಡಿತ₂ : ಮೇಜದ ಖಾನೆ ಯಾಕೋ ಧಡಿತಕ್ಕೆ ಸರಿಹೊಂದುವುದಿಲ್ಲ (ರೂಢಿ). [ <ಚಡಿ₃ ]

ಚಡಿತ₂ (ನಾ). ೧. ಅಧಿಕವಾದ ಬೆಲೆ ; ಐನು ಬೆಲೆ : ಮಾರುಕಟ್ಟೆಯಲ್ಲಿ ಅದಕೆ ೨೫೦ ರೂ ಚಡಿತಕ್ಕೆ ಹೋಗಿತ್ತು (ರೂಢಿ). (ಗು). ೨. ಹೆಚ್ಚಾದ: ಪೊಡವಿಯೊಳು ಇದು ಮೊದಲು ಚಡು[ಡಿ]ತಚಾಡಿಯನಾಡೆ ಬುಡ ಮುಟ್ಟ ನಾಲಿಗೆಯ ಕೆಡಹಿ ಕೊಯ್ಸುವೆನು (ಕರರೀ. ೩೫೩-೫).

[ ←ಮರಾ. ಚಢತಾ ]

ಚಡಿತ್ತ, ಧಡಿತ₁ (ನಾ). ಒಂದು ಬಗೆಯ ಸುಂಕ,–ತೆರಿಗೆ (?) ಭೂದಾನ ದರ್ಮದ ತಾಂಮ್ರ ಶಾಸನ . . . ೧ ಉಭಯಂ ಗ ೩೫॥೧ ಮೆಣಸಿನ ಚಡಿತ್ತ ದಿಂದಲೂ ಗ ೮೨॥ ಉಭಯಂ ಗ ೩೫॥೩ (ಎಕ. VIII, ತೀರ್ಥಹ. ೫೮-೦೫ : 1630): ಮೆಣಸಿನ ಚಡಿತ್ತಗರ ೨॥ ಉಭಯಂ ೧೫೬೧ (ದ್ಯುಆರಿ. ೦೯೩೩, ೨೮-೨೬ : 1630). ಧಡಿತ₁ : ವಕಲ ಬಿರಾಡದಿಂದ ಗ ೧೦ ಭತ್ತ ಮೆಣಸಿನ ಧಡಿತ ಗ ೪ ಭತ್ತ ಸುಂಕದಿಂದ ಗ ೯ (ಎಕ. VIII, ತೀರ್ಥಹ. ೦೦೬-೦೯ ; 1702). [ ? ]

ಚಡಿಫೌಜು 'ಚಡೆಪವುಜು' ನೋ.

ಚಡಿಬಾಣ (ನಾ). ಒಂದು ಬಗೆಯ ಬಾಣ : ಬಾಣಕಾರರು ರಾಮಬಾಣ ಕುಮಾರಬಾಣ, ಚಡಿಬಾಣವೆಂಬ ನಾಲ್ಕಾರು ದಿನಸಿನ ಬಾಣಗಳನ್ನು ಎತ್ತು ಗಳ ಮೇಲೆ ಹೇರಿಸಿಕೊಂಡು ಬಂದರು (ಬಳ್ಳರು. ೧೪). [ಚಡಿ? + ಬಾಣ₁]

ಚಡಿಮರಿ (ನಾ). [ವೀಶೈ] "ಸಮಾಜದ ಕಾರ್ಯಕ್ರಮ ಏರ್ಪಡಿಸುವ ವ್ಯವಸ್ಥಾಪಕನು, ಮಠಪತಿ" (ಕರಸಾ. ೨೪-೬).

[ ಚಡಿ? + ಮರಿ (<ಮಣಿ) ]

ಚಡಿಯೇಟು (ನಾ). ಬೆತ್ತದ ಏಟು,–ಹೊಡೆತ: ನಾನೊಮ್ಮೆ ಹಳ್ಳಿಯಲ್ಲಿ ರೈತನೊಬ್ಬನಿಗೆ ಚಡಿಯೇಟು ಬಾರಿಸುತ್ತಿದ್ದುದನ್ನು ನೋಡಿದೆ (ಪುನರು. ೨೦೯). [ ಚಡಿ₂ (<ಧಡಿ) + ಏಟು₁ ]

ಚಡುಹಡನೆ 'ಚಡಪಡನೆ' ನೋ.

ಚಡುಪುಡನೆ 'ಚಡಪಡನೆ' ನೋ.

ಚಡುಹುಡನೆ 'ಚಡಪಡನೆ' ನೋ.

**ಚಡಪವುಜು, ಚಡಿಫೌಜು** (ನಾ). ಲಷ್ಕರೀಸಾಮಗ್ರಿಗಳ ಆಡಂಬರ ವಿಲ್ಲದೆ ಹೊರಟ ಸೈನ್ಯ; ಚಿಕ್ಕಪುಟ್ಟ ಆಯುಧಗಳನ್ನು ಮಾತ್ರ ತೆಗೆದುಕೊಂಡು ಯುದ್ಧಕ್ಕೆ ಹೊರಟಿರುವ ಸೈನ್ಯ: (೬). **ಚಡಿಫೌಜು:** ಜನರಲ್ ಫ್ಲಾಯಿಡ್ ಸಾಹೇಬರವರು ಚಡಿಫೌಜು ತೆಗೆದುಕೊಂಡು ಬಂದು ಇದ್ದಾರೆ (ತಾಡೇಂದ್ರ. ೯೩). [←ಮರಾ. ಸಡೀಫೌಜ್ ]

**ಚಡೆಸವಾರಿ** (ನಾ). ಪರಿವಾರವಿಲ್ಲದೆ ಹೊರಟ ಸವಾರಿ ; ಏಕಾಕಿಯಾಗಿ ಹೊರಟಿರುವುದು: ಏನು ನಸುಕಿನಲ್ಲಿಯೇ ಚಡೆಸವಾರಿ ಹೊರಟಿ? (ಲೋಕ).

[ ←ಹಿಂ. ಛಡೀಸವಾರೀ ; ಮರಾ. ಸಡೇಸ್ವಾರೀ ]

**ಚಡ್ಡಣ** ‘ಚಡ್ಡಣೆ’ ನೋ.

**ಚಡ್ಡಣಿಸು** (ಕ್ರಿ). ವಿಶಾಲವಾಗಿ ಕಟ್ಟು; ವಿಸ್ತಾರವಾಗಿ ಕಟ್ಟು: ಒಡ್ಡಿದರು ದಡಿವಲೆ ಬಿಡಿವಲೆ ಕಡ್ಡಿವಲೆ ಕುಣಿವಲೆಯುನಗಲಕೆ ಚಡ್ಡಣಿ[ಪಾಠಾಂ. ವಿ]ಸಿದರು ಬೀಸುವಲೆ ಬೆಳ್ಳಾರವಲೆಗಳಲಿ ಅಡ್ಡವಿಸಿ ಸೋಹಿದರು (ತೊರರಾ. ೩-೩-೦೨).

[ ಚಡ್ಡಣ (<ಚಡ್ಡಣೆ) + – ಇಸು$_2$ ]

**ಚಡ್ಡಣೆ, ಚಟ್ಟಳೆ$_1$, ಚಡ್ಡಣ** (ನಾ). ಅತಿಶಯ ; ಆಧಿಕ್ಯ : ಉಪಹಾಸದ ನುಡಿಯ ವ್ಯಭುಲ್ಲಣೆಯ ರೋಮಾಂಚನದ ಚಡ್ಡಣೆಯ . . . ಚೌಪಟಮಲ್ಲ ನಿದ್ದನು ರಿಪುಬಲವ ಲೆಕ್ಕಿಸದೆ ಕಲಿದ್ರೋಣ (ಕುವ್ಯಾದ್ರೋ. ೦೭-೩೩): ದಂಡೆ ಯೊಳಗೆದ ಕಾಳೋರಗನವೊಲು ಚಡ್ಡಣೆಯ ಚಪಳಕ್ರೋಧಶಿಖಿ ಮೋಹಿದುದು ಮೋರೆಯಲಿ (ಕುವ್ಯಾಶ. ೨೦-೯). **ಚಟ್ಟಳೆ$_1$:** ಚಟ್ಟಳೆಯ ಚತುರಾಸ್ಯನಿವರೊಡಹುಟ್ಟಿದರ ಸಮುದೋಳಿ ಗಡ ಜಗಜಟ್ಟಿಗಳು ಕಾವಿವರೆನುತ ಕಲೆದೂಗಿದನು ಮಗಧ (ಕುವ್ಯಾಸ. ೨-೮೩). **ಚಡ್ಡಣ:** ಕೋಳಾಹಲ ವನಮಧ್ಯದಲಿ . . . ಸಿಡಿಲಿನ ಚೀತ್ಕೆಯಚಡ್ಡಣದ ರವ ರಾಘವನ ಕಿವಿಗಳಿಗೆ(ತೊರರಾ. ೩-೦೨-೦೪).[ <ಪ್ರಾ. ಚಡಣ./ಹಿಂ. ಮರಾ. ಚಢನಾ ]

**ಚಡ್ಡಿ$_1$, ಚೆಡ್ಡಿ** (ನಾ). ೧. ಅರೆ ಚಲ್ಲಣ: ಚಣ್ಣ ; ನಿಕ್ಕರು : ಚಡ್ಡಿಗಳ ತೊಟ್ಟು (ಸೌಗಂಧಿ. ೩೦-೪) ; ಚಡ್ಡಿಯ ಜೋಬಿನ ತುಂಬ ರೂಪಾಯಿಗಳು (ಬಳಜೀ. ೦೦೩) ; ಉಂಡು ಏಳುವಾಗ ಒಂದು ಲಾಡನ್ನು ಅವನು ತನ್ನ ಚಡ್ಡಿಯ ಕಿಸೆಗೆ ತುರುಕಿಕೊಂಡನು (ತಿಳಿಥ. ೬೨). ೨. ಗುಹ್ಯಭಾಗಗಳನ್ನು ಮಾತ್ರ ಮುಚ್ಚತಕ್ಕ ಬಿಗಿಯಾದ ಕಾಸೆ; ಕಾಚ; “ಸುತ್ತು ಲಂಗೋಟ” (ಜಾನಕೋ. ೩೪) : ಹಿಂದು ಹುಡುಗರ ಸಂಗಡ ಚಡ್ಡಿಯನ್ನು ಹಾಕಿಕೊಂಡು ಈಜಲಿಕ್ಕೆಂದು ಹೋಗುತ್ತಿದ್ದಳು (ಶಿಂಶಂ. ೨೭). **ಚೆಡ್ಡಿ:** ೧. ಲಂಗ ಚೆಡ್ಡಿ ಹೊಲಿದು ತರುವೆ (ಕಪತು. ೨-೩೮) ; ಅಗಸನಿಂದ ಬಂದ ಚೆಡ್ಡಿ ಪರಟಿನ ಅಲಂಕಾರ (ಮೂಗ್ನರ.೨೪) ; ಪಂಚೆಯನ್ನು ಬಿಚ್ಚಿ ಕಳಚುವಂತೆ ಚೆಡ್ಡಿಯನ್ನು ಕಳಚಲಾದೀತೆ (ರಂಗಳ. ೨೮). [ ← ತೆಲು. ಚೆಡ್ಡಿ ]

**ಚಡ್ಡಿ$_2$** ‘ಸಡ್ಡೆ$_2$’ ನೋ.

**ಚಡ್ಡಿಸು** (ಕ್ರಿ). ಸಿದ್ಧವಾಗು ; ಸಿದ್ಧಗೊಳ್ಳು : ಒಡ್ಡಿದ ಸಾರಿಯುಂ ಕಿವಿವ ಕಯ್ಯೊಡನಿಕ್ಕುವ . . . ಕಿದ್ದಿ ಕೊಳ್ಳೆನಲ್ ಚಡ್ಡಿಸಿ ನಿಲ್ವ ನೂತನ ದುರೋದರಕೇಳಿ ಪಳಾಳವಲ್ಲವೇ (ನಳಚಂ. ೬೩೭). [ ? ]

**ಚಡ್ಡೆ** ‘ಸಡ್ಡೆ$_1$’ ನೋ.

**ಚಡ್ಡೆಗೊಳ್** ‘ಸಡ್ಡೆಗೊಳು’ ನೋ.

**ಚಢ, ಛಡ** (ನಾ). ಏರಿಕೆ ; ಮೇಲಕ್ಕೆ ಹತ್ತುವುದು. ‘ಚಢಸವಾಲು’ ಪರಾ. **ಛಡ:** ‘ಛಡಸವಾಲು’ ಪರಾ. [<ಪ್ರಾ. ಚಡ, ಚಢ ]

**ಚಢಸವಾಲು, ಛಡಸವಾಲು** (ನಾ). ಹರಾಜಿನಲ್ಲಿ ಏರಾಟದ ಬೇಡಿಕೆ ; ಹರಾಜಿನಲ್ಲಿ ಹೆಚ್ಚಿನ ಬೆಲೆಗೆ ಸವಾಲು ಹಾಕುವುದು : ಚಢಸವಾಲಿಗೆ ನೀವೆಲ್ಲ ಏರಿರಬೇಕೆಂದು ದೇವರ ಕಡೆಯಿಂದ ನಾನು ಆಶೀರ್ವಾದ ಮಾಡುತ್ತೇನೆ (ಗಂಗಾಳ. ೦೩೪). **ಛಡಸವಾಲು:** ರೈತರುಗಳ ಜಮೀನನ್ನು ತಮ್ಮವರ ಕಡೆಯಿಂದ ಛಡಸವಾಲು ಮಾಡಿಸಿ ಕೊಂಡುಕೊಳ್ಳುವುದು(ಕಂನ. ೨೩೩). [ ಚಢ + ಸವಾಲು ]

**ಚಢಾಯಿ** ‘ ಚಡಾಯಿ ’ ನೋ.

**ಚಢಾಳ** ‘ಚಡಾಳ’ ನೋ.

**ಚಢಾಳಿಸು** ‘ಚಡಾಳಿಸು’ ನೋ.

**ಚಣ$_1$** (ನಾ). ಕ್ಷಣ ; ಸ್ವಲ್ಪಹೊತ್ತು : “ ಕ್ಷಣಂ ಚಣ” (ಶಬ್ದಮಂ. ೧೯). “ಕ್ಷಣಕ್ಕೆ ಬಂದವುದು ಚಣವೆಂದು” (ಕಶಠ. ೩೬) ; ಶಿವನು ಭವನುಂ ದೈವವಂ ತ್ಯಜಿಸುವನು ಚಣಮಾತ್ರದೊಳೆಲವೊ ಕೇಳಾ (ಬಸಪು. ೩೦-೩೩) ; ಚಣದೆ ಕಾನ್ಯದುತ್ತಮಪ್ಪಳಿಸಿದನು ಸಹಭವನ (ರಾಮಾಸಂ. ೪-೧-೬೬) ; ಮಾವನ ಸ್ಥಿತಿಗತಿಯ ಬಗ್ಗೆ ಚಣವೂ ಯೋಚಿಸಿದವನಲ್ಲ (ಪದ್ಮಸ. ೨೦೭) ; ಸಾಧ್ವಿಯು ನಿಂದಳು ಚಣ ಮೈಮರೆಯುತಲಿ (ಳವಿಸೋ. ೩೭-೧೪).

**ಚಣಚಣ** (ದ್ವಿರುಕ್ತಿ): ಚಣಚಣವು ಹೊಸ ಹಸಿವು ಅದಾಗಿ ಇದಕಾಗಿ ಮತ್ತೊಂದಕಾಗಿ (ಮಂಕುಳ. ೨೦೮) ; ಗೆಣೆಯನಾಡಿದ ಆಟ ಮನದಾಗ ಊರಿ ನಿಂತ್ಹಾಂಗ ಆ ಹುಡುಗಿ ಚಣಚಣಕ ನೆನಸಿ ಅಳತಾಳೊ (ಕನ್ನಜಾ. ೦೦೮). [ <ಸಂ. ಕ್ಷಣ ]

**ಚಣ$_2$** (ನಾ). ಸಮರ್ಥ. ‘ಅಕ್ಷರಚಣ’ ಪರಾ. [ ಸಂ. ]

**ಚಣಂಗ** ‘ಚಣಗೆ’ ನೋ.

**ಚಣಂಗಿ** ‘ಚಣಗೆ’ ನೋ.

**ಚಣಕ$_1$** (ನಾ). ಅರ್ಧತೊಡೆಯವರೆಗೆ ಮಾತ್ರ ಇರುವ ಚಲ್ಲಣ ; ಅರ್ಧೋರುಕ ; ಚಡ್ಡಿ : “ ಚಣಕಂ = ಚಲ್ಲಣಂ (ಅರ್ಧೋರುಕಂ) ” (ಕಮುದ. ೫೭. ೨). “ ಚಲ್ಲಣದಲ್ಲಿ ಮಾತು ಚಣಕಂ ” (ಕಜಾಗನಿ. ೨೭) ; ಶ್ರೀದ್ವಾರವೊಂದಕ್ಕೇ ತನ್ನ ಚಣಕವನ್ನು ಕಟ್ಟಿಸಿದ್ದನಂತೆ (ವಿಗಡ. ೪೩-೭).

[<ಸಂ. ಚಂಡಾತಕ ]

**ಚಣಕ$_2$** (ನಾ). ಒಂದು ಬಗೆಯ ದ್ವಿದಳ ಧಾನ್ಯ ; ಕಡಲೆ ; “ಕಾಂ ಹರಿಮಂಥಂ ಚಣಕಾಖ್ಯಂ” (ಪಶುಕೋ. ೯೪-೦೭); ಅಂತು ಕೊಂಡ ಪದವಟಿಗಳೊಳ್ . . . ಚಣಕ ಕುಸುಂಭ ಕಾರ್ಪಾಸ ಸರ್ಷಪ ಜೀರಕ ಧಾನ್ಯಕಾದಿ ವಿವಿಧ ಧಾನ್ಯಭೇದಂಗಳುಂ (ಆದಿಪು. ೬-೬೨ ವ) ; ಕಣಿಕವುಂ . . . ವಿದಿದಾವಿಪದಾಕೃತಿಯಾಗಿ ಕೂಡಿಕೊಂಡೂಣಗಿಸಿದಂ ಬಟಿಕ್ಕೆ ಚಣಕೋದಕದಿಂ ತೆಗಪಿ (ಲೋಕೋಪ. ೮-೦೩); ಚಣಕಮುದ್ಗಮಾಷ ಗೋಧೂಮ ಶಾಲಿಯೆಲ್ಲ ಧಾನ್ಯಗಳ ಸಂಪತ್ತಿ (ಶಾಂತೀಶ. ೬-೦೩). [ ಸಂ. ]

**ಚಣಕಡಿಕ** (ನಾ). ಒಂದು ಕ್ಷಣದಲ್ಲಿ ಕತ್ತರಿಸಬಲ್ಲವನು, – ಕಡಿಯುವುದರಲ್ಲಿ ನಿಪುಣನಾದವನು : ಚಣಕಡಿಕನ ಕಡುಗಮದೊರ್ಚಣಕೊಂಡ್ಯ ದಾರುಕೋಟಿ ಸಬಮಂ ಕೆಡೆವೊಲ್ (ಪರಶಂ. ೯೧). [ಚಣ$_1$ + ಕಡಿಕ$_2$ ]

**ಚಣಕಾಲ** (ನಾ). ಒಂದು ಕ್ಷಣದಷ್ಟು ಸಮಯ ; ಸ್ವಲ್ಪಹೊತ್ತು : ಚಣಕಾಲ ಮೈ ನಡುಗುತ್ತಿತ್ತು (ಮುರುಳು. ೪೩) ; ಅಬ್ಬರಬ್ಬೆ ಚಣಕಾಲ ಚಿಂತಾಕ್ರಾಂತಳಾದಳು (ದಾನಚಿಂ. ೩೮) [ ಚಣ$_1$ + ಕಾಲ ]

**ಚಣಕಿ** (ನಾ). ಚೌಡಿಕೆಯಂತಹ ಒಂದು ವಾದ್ಯ ; ತಂಣತುಣಿ : ಚಣಕಿ ನುಡಿಸುತ್ತಾ ಜೋಗಿ ಹಾಡತೊಡಗುವನು (ಲೋಕ). [←ಮರಾ. ಚಾಣಕೀ]

**ಚಣಕು** (ಕ್ರಿ). = ಚಲಂಕು ೨: ನೆರೆದು ಬಹ ಬಲವರಾಕ್ರಮಗಳನು ಕಲಕಿ ಚಣಕಿದನದೇನು ಸಾಹಿಸಿಕನೆಂದಾರು ಬಣ್ಣಿಸಲಕ್ಕುಮೋ (ಬಂಗಾರಾ. ೬-೦೩-೪). [ <ಚಲಂಕು ]

**ಚಣಕೆ** (ನಾ). ೧. ಹೋಳುಮಾಡುವ ಸಾಧನ (?): ಉದರ ಸೀಳುವೃತ್ತರಿ ಸಂಭ್ರ ಹಸ್ತ ಕತ್ತರಿಸು ಹೋಳಿಸಗು ಶಿರವರಿದನದಗಿದಗೆಂದು ಹೆಣಗಿದರ್ ಚಣಕೆಯಂತೆ (ಜನಮು. ೨೯-೩೭); ಸೇನೆ ಸಹಿತಭ್ರರಾಜೇಂದ್ರರಂ ಚಣಕೆಗಳ್ ಲೂನಿಸುತ ಮಾನಿಸದೆ ಲೀನಿಸುತಲಂಗಮರಿದೂನಿಸುತ . . . ಕರುಳ್ಗಟ್ಟಿ ಚಲಿವಿಲಿನೆ ಪರಿದು (ಜನಮು. ೩೦-೪೩). ೨. ಚೂರು ; ಚಕ್ಕೆ (?) : ಕಣೆಯಾ ಕಣ್ಣಾನಕೆಣೆಯಗೊಡದಿಹ ವಿಣಾಗು ವಿಂಚಿನ ಚಣಕೆಗಳೊ ಸಂದಣಿಯ ಮಾನ್ಗಳೊ (ಜರಾಮಾ. ೨೩೦-೪೬). [ ? ]

ಚಣಗ 'ಚಣಗೆ' ನೋ.

ಚಣಗಿ 'ಚಣಗೆ' ನೋ.

ಚಣಗೆ, ಚಣಾಗ, ಚಣಂಗಿ, ಚಣಗ, ಚಣಗಿ, ಚಣೆಗಿ, ಚನ್ನಂಗಿ₂, ಚಾಣಂಗಿ (ನಾ). ಕಡಲೆ : "ಮಾಂಗಲ್ಯಕಃ,ಮಸೂರಃ – ಈ ೨ ಚಣಗೆ" (ಹಲಾಯು. ೯೩-೪೨೭). **ಚಣಂಗ :** "ಜಲಧಂಗಂ ವಿರಹಂ ಕಮಂಡಲು ಚಣಾಗಂ ಕೋರಕಾವಲ್ಲಿಯುತ್ಕಲಿಕಾಖ್ಯಂ" (ನಾನಾರ. ೦೦೩). **ಚಣಂಗಿ :** "ಚಣಂಗಿ ಖಂಡಿಕಮೆನಲು ಕಡಲೆ" (ಮುಕಗಂ. ೦೦೦-೪). **ಚಣಗ:** ಅರಸಿನ ಜೀರಿಗೆ ಸಿದ್ಧಾರ್ಥ ಮೆಂಥೆಯು ಕರಿಯು ಹೆಸರು ಎಳ್ಳು ಚಣಗ ಹರಿಮಂಥ ತೊಗರಿ ಕಲ್ಲುಪ್ಪು ಲವಂಗವು (ಜ್ಞಾ ಪ ಜ. ೩೭-೦೦೨). **ಚಣಗಿ :** ಅದಿಮಾರ್ಗತ್ರಯಂ ಪೂವಿನೆಸಳುಂ ಚಣಗಿಯುಂ ಜವೆಯ ಸುಳಿಯುಂ ಯಥಾಕ್ರಮದಿನಾಕಾರಂಗಳುಂ ಚಕ್ಷುರಿಂದ್ರಿಯಕ್ಕೆ (ತಸೂವ್ಯ. ೪೦) : ಗೋದುವ ಚಣಗಿ ಹೆಸರುದ್ದುಗಳನಡಕಿದರು (ಪ್ರಭುಲಿ. ೨೭-೩೭) : ಹೇಮನಗದ ಬಣ್ಣದೊಳೆಸೆವ ತೊಗರಿ ಶೋಭನ ಶೋಯ ಬಗೆವೆತ್ತ ಚಣಗಿ ಬೆಳೆಯು ಪರಿಪಿನಂ . . . ಕಲಸುತುಂಬುದು (ಲಿಂಗಪು. ೮-೨೭). **ಚಣೆಗಿ :** ವಟಾಣೆ ಧಾನ್ಯವೆಂದರೆ ಚಣೆಗಿ ಲಿಂಕಿ ಬಟ್ಟಗಡಲೆ ಕರಿಹೆಸರು ಮೊದಲಾದವುಗಳನ್ನು ಕೂಡಿಸಿ ಬಿತ್ತಬೇಕು (ಕೃಷಿಪ್ರ. ೮೦). **ಚನ್ನಂಗಿ₂:** ಬಟ್ಟಗಡ್ಲೆ ಚನ್ನಂಗಿ ತೊಗರಿ ಅವರಿ ಮುಂಡಿ ಸಾಸಿವೆ ಈ ಧಾನ್ಯಗಳಲ್ಲಿ ತಮಗೆ ಬೇಕಾದವುಗಳನ್ನು ಅಕ್ಕಡಿಯಿಂದ ಬಿತ್ತುತ್ತಾರೆ (ಮುಂಬಯಿ. ೫-೨೦೦): ದೋಳ, ಬಟಗಡ್ಲೆ, ಚನ್ನಂಗಿ, ಅವರಿ ಸ್ವಲ್ಪಸ್ವಲ್ಪ ಬೆಳೆಯುತ್ತವೆ (ಧಾರಜಿ. ೯). ಉದ್ದು, ಚನ್ನಂಗಿ . . . ಸರೆ–ಇವೆಲ್ಲಾ ರಾಜಸ ಆಹಾರದಲ್ಲಿ ಬರುವವು (ಬ್ರಹ್ಮಜೀ. ೦೩೨). **ಚಾಣಂಗಿ :** ಚಾಣಾಂಗಿ ಬೇಳೆಯ ಹಾಗೆ ಸರ್ವಾಂಗಗಳಲ್ಲಿಯೂ ಸ್ಫೋಟಕಗಳುಂಟಾಗಿಹವು (ವೈದ್ಯಶಾ. I, ೩೭೯).
[ <ಸಂ. ಚಣಕ ]

**ಚಣಪುಟ** (ನಾ). ಸ್ತನಾಗ್ರ ; ಚೂಚುಕ (?) : ಪೊಣರ್ವಕ್ಕಿ ಬಸಿರಕೊಳ ದಿಂದಣೆಯುರಮುಯ್ತಂದು ರಂಜಿಪುವೆಂಬಾ ಅಣಕಮನಾಂತುದು ಸತಿಯರ ಚಣಪುಟ ನೀರಂಧ್ರ ಬಂಧುರ ಸ್ತನಯುಗಳಂ (ಚಂದ್ರಪ್ರ. ೦೪-೨೩). [ ? ]

**ಚಣಯಿಗೆ** (ನಾ).=ಚಣಗೆ (?): ದ್ರವ್ಯೇಂದ್ರಿಯಂ ನಿವೃತ್ತಿಯುಮುಪಕರಣ ಮುಮೆಂದಿತ್ತೆಱನೆಂತೆನೆ ಚಕ್ಷುವಿಂಗೆ ಚಣಯಿಗೆಯಾಕಾರಂ ಶ್ರೋತ್ರಕ್ಕೆ ಯವೆಯವೆಯ ಸುಳಿಯಾಕಾರಂ (ಷಸಾರ. ೧೮೭-೦). [ ? ]

**ಚಣಾರ್ಧ** (ನಾ). ಅರ್ಧಕ್ಷಣ ; ಕ್ಷಣಾರ್ಧ ; ಸ್ವಲ್ಪಕಾಲ: ಹಿರಿಯ ಅಧಿಕಾರಿಗಳನ್ನು ಒಲಿಸಿಕೊಳ್ಳುವುದರಲ್ಲಿ ಭರಮ ಹೆಗ್ಗಡೆ ತನ್ನ ಆತ್ಮಗೌರವ ವನ್ನೂ ಮರೆಯಬಲ್ಲವನು,ಎಂಬುದು ಅವನಿಗೆ ಚಣಾರ್ಧದಲ್ಲಿ ಹೊಳೆಯಿತು (ಸಪತಿ. ೩೮). [ <ಸಂ. ಕ್ಷಣಾರ್ಧ ]

**ಚಣೆಗಿ** 'ಚಣಗೆ' ನೋ.

**ಚಣೆನ** (ನಾ). (ಕರಾ). ಅಳಿಲು ; ಇಣಚಿ.
[ ←ತುಳು. ಚಣಿಲ್, ಚನಿಲ್ ]

**ಚಣ್ಣ** 'ಚಲ್ಲಣ' ನೋ.

**ಚತು** (ನಾ). ಒಂದು ಸಂಖ್ಯೆ ; ನಾಲ್ಕು : "ಚೌ ಚತು ಸಮುದ್ರ . . . ಜಳರಾಶಿಯೆಂದು ನಾಲ್ಕಱ ನಾಮಂ" (ಪ್ರಪಂಚ. ೯-೪) ; ವೇದ ಚತು ವೇದಾಂಗ ಷಡುವಿಧ (ಗಗಶಾ. ೩-೦೦). [ <ಸಂ. ಚತುರ್ ]

**ಚತುಃಕಷಾಯ** 'ಚತುಷ್ಕಷಾಯ' ನೋ.

**ಚತುಃಕಷಾಯಿ** (ನಾ). [ಜೈನ] ಕ್ರೋಧ, ಮಾನ, ಮಾಯೆ, ಲೋಭ ಎಂಬ ನಾಲ್ಕು ಬಗೆಯ ಕಷಾಯಗಳನ್ನುಳ್ಳವನು : ಕಷಾಯಾನು ವಾದದಿಂ ಚತುಃಕಷಾಯಿಗಳ್ಗಂ ಅಕಷಾಯಿಗಳ್ಗಂ ಸಾಮಾನ್ಯೋಕ್ತಸ್ಪರ್ಶನಂ (ಕತ್ತ್ವಪ್ರ. ೭೯). [ ಸಂ. ಚತುಃಕಷಾಯಿನ್ ]

**ಚತುಃಪದಿ** 'ಚತುಷ್ಪದಿ' ನೋ.

**ಚತುರ₁** (ನಾ). ಒಂದಂ ಸಂಖ್ಯೆ; ನಾಲ್ಕು: ದಿವ್, ಸ್ರುಜ್, ಚತುರ್ . . . ಇವು ಮೊದಲಾದ ವ್ಯಂಜನಾಂತಕ್ಕೆ ದಿವ, ಸ್ರುಜ, ಚತುರ ಎಂಬಂತತ್ವಮಾ ದೊಡಂ (ಶಬ್ದಮ: ೮೭ ಪ್ರಯೋ). [ ಸಂ. ಚತುರ್ ]

**ಚತುರ₂** (ಗು). ೧. ಜಾಣತನವುಳ್ಳ ; ಕುಶಲ : ಸಹಜಕವಿ ಚತುರಕವಿ ನಿಃಸಹಾಯ ಕವಿ(ಸುಕುಮಾ. ೦-೫೨): ಭಾರತೀಪತಿ ಚತುರ ಮರಿವಿತೋದಾರ ಗಂಭೀರ ಭಾಷಿತಂಗಳಿಂ ಬಿನ್ನಪಂಗೆಯ್ಯೆ (ಆಗವಿ. ೬-೭೭ ಬಿ)ನ್ ಬಿಲ್ಲೆ ಗಳನ್ನೂ ಗುಂಡುಗಳನ್ನೂ ಚತುರ ರೀತಿಯಲ್ಲಿ ಜೋಡಿಸುವುದು (ಶಿಕ್ಷದ. ೮೪). ೨. ಚಟುವಟಿಕೆಯುಳ್ಳ ; ಲಗುಬಗೆಯ. (ನಾ). ೩. ದಕ್ಷ ನಾದವನು; ಬಲ್ಲವನು; ಜಾಣ: "ಚತುರಃ . . . ಶಿಕ್ಷಿತಃ, ಪ್ರವೀಣಃ– ಈ ೧೧ ಬಲ್ಲವಂ" (ಹಲಾಯು. ೫೫-೦೮೦): "ಚದುರಂ ಚತುರಂ" (ಕವಿಶಿ. ೨೫೭): ಚತುರರರ್ದೆಯಿಂದವಿಟರ್ಯಳ್ . . . ತನ್ನೀ ಕೃತಿಕಾಂತೆ (ಲೀಲಾವ. ೦-೮೦) ; ಚತುರಂ ನೀಬಿನುದಾರನುಜ್ಜ್ವಲಯಶಂ (ಅನಂತಪು. ೧-೫೦). ೪. [ನಾಟ್ಯ]ನೂರೆಂಟು ಕರಣಗಳಲ್ಲಿ ಒಂದು ; ಎಡಗೈಯನ್ನು ಅಲ ಪಲ್ಲವ ಹಸ್ತದಲ್ಲೂ ಬಲಗೈಯನ್ನು ಚತುರ ಹಸ್ತದಲ್ಲೂ ಎದೆಯ ಹತ್ತಿರ ಹಿಡಿದು ಒಂದು ಕಾಲಿನಿಂದ ಉದ್ಘಟ್ಟಿತ ಮಾಡುವುದು : ಎಡಗಯ್ಯಲಪಲ್ಲವ[ಮು]ಂ ಪಡೆದರ್ದೆಯಲ್ಲಿರ್ದು ಬಲದ ಕೈ ಚತುರಾಖ್ಯಮ ನೊಡರ್ಚುತಲ್ಲುದ್ಘಟ್ಟಮದೊಡವೆರ್ಚಿರೆ ಪಾದವೊಂದು ಕರಣಂ ಚತುರಂ (ಲಾಸ್ಯರಂ. ೪-೯೪). ೫. [ನಾಟ್ಯ] ಒಂದು ಬಗೆಯ ಹಸ್ತಮುದ್ರೆ; ಅಸಂಯುತ ಹಸ್ತಗಳಲ್ಲಿ ಒಂದು : ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತ ಹಸ್ತಗಳು ಯಾವುವೆಂದರೆ – ೧. ಪತಾಕ . . . ೧೭. ಚತುರ . . . ೨೪. ತಾಮ್ರಚೂಡ (ಅಭಿನ. ೪೮). [ ಸಂ. ]

**ಚತುರಂಗ** (ನಾ). ೧. ನಾಲ್ಕು ಅಂಗಗಳನ್ನುಳ್ಳದು: ಆ ಧ್ಯಾನಯೋಗಂ . . . ಧ್ಯಾನಂಧ್ಯೇಯಂ ಧ್ಯಾತೃಫಲವೆಂದು ಚತುರಂಗಮಕ್ಕುಂ (ಅಜಿತಪು. ೮-೨೮ ಪ). ೨. ನಾಲ್ಕು ಅಂಗಗಳನ್ನುಳ್ಳ ಸೈನ್ಯ; ಆನೆ, ಕುದುರೆ, ರಥ, ಕಾಲಾಳು ಎಂಬ ನಾಲ್ಕು ಬಗೆಯ ಸೈನ್ಯದಿಂದ ಕೂಡಿದುದು : ಚತುರಂಗಂ ಚತುರಂಗ ಸೈನ್ಯದೊಳಡು[ರ್ತ]ಂ]ತಿಟ್ಟನೆಯ್ತಂದು ತಾಗಿ (ಪಂಪಭಾ. ೧೧-೭) : ಚತುರಂಗಕ್ಕೆಡರಿಲ್ಲ ರಾಯ ನಿನಗೇನು ಮಾಡುವ ರಾಜಕಾರ್ಯವೆಂದು (ಜೈಮಿಭಾ. ೨-೫೪). 'ಚತುರಂಗಬಲ' ಪರಾ. ೩. ಚದುರಂಗದ ಆಟ: ಚತುರಂಗ . . . ಕಂತುಕ ದ್ಯೂತಾದಿ ಖೇಲನಗಳಿಂ (ವಿವೇಕ. ೨೦೪). [ ಸಂ. ( ಚತುರ್ + ಅಂಗ) ]

**ಚತುರಂಗದಂಡಾಸನ** (ನಾ). [ಯೋಗ] ಯೋಗಾಸನಗಳಲ್ಲಿ ಒಂದು : ಮುಖ್ಯವಾದ ಕೆಲವು ಆಸನಗಳು ೧. ಉತ್ತಾನಾಸನ. ೨. ಚತುರಂಗ ದಂಡಾಸನ (ಭಾರದ. ೧೭೭). [ ಚತುರಂಗ + ದಂಡ + ಸನ ]

**ಚತುರಂಗಬಲ** (ನಾ). ಆನೆ, ಕುದುರೆ, ರಥ ಮತ್ತು ಕಾಲಾಳು ಎಂಬ ನಾಲ್ಕು ಅಂಗಳನ್ನುಳ್ಳ ಸೈನ್ಯ : ಚತುರಂಗಬಲ ಸಮನ್ವಿತರ್ . . . ಅವನತರಾದರ್ ಚಕ್ರಿಗಳ್ಗೆ (ಆದಿಪು. ೦೨-೩೫): ಬೆಂಗೊಟ್ಟುದು ದಶಮುಖ ಚತುರಂಗಬಲಂ (ಪಂಪರಾಮಾ. ೦೦-೨೦೭). [ ಚತುರಂಗ + ಬಲ ]

**ಚತುರಂಗುಲ, ಚತುರಂಗುಳ** (ನಾ). ೧. ನಾಲ್ಕು ಅಂಗುಲ: ಚತುರಂಗುಲ ಪ್ರಮಾಣೋಧ್ವೃತ ಋದ್ಧಿ ಪ್ರಾಪ್ತರ್ . . . ಕುಂದಾಚಾರ್ಯರ್ (ಸುಕುಮಾ. ೦-೦೫): ಚತುರಂಗುಲ ಚಾರಣ ಋದ್ಧಿ ತಮಗೆ ಸಮನಿಸಿದುದು (ಪಂಪರಾಮಾ. ೦-೦೨). **ಚತುರಂಗುಳ:** ೨. ಒಂದು ಬಗೆಯ ಸಸ್ಯ ; ಕಕ್ಕೆ ಗಿಡ: "ಶಮ್ಯಾಕಃ, ಚತುರಂಗುಳಃ . . . ೮ ಕಕ್ಕೇಗಿಡದ ಹೆಸರುಗಳು" (ಸಿದ್ಧಾಂತಿ. ೧೦೩): ಸರ್ವಾಂಗೀಣ ಸಾಂದ್ರ ಹರಿದ್ರ ವಿಲೇಪನ ವಿಲಿಪ್ತ ಹರಿ ತಾಲಿ ಪಂಕಪಿಂಗಲ ಶಿಲಾಸ್ತಂಭ ವಿಭ್ರಮ ನಿತಂಬ ಶಿಖರ ತರಂಗಿತ ಚತುರಂಗುಳಾಗ್ರ:ಪಲ್ಲವ ನಿವಸನಂ (ಆದಿಪು. ೦೩-೪೫ ಪ).
[ ಸಂ. (ಚತುರ್ + ಅಂಗುಲ) ]

**ಚತುರಂಗುಳ** 'ಚತುರಂಗುಲ' ನೋ.

**ಚತುರಂತ** (ಗು). ೧. ನಾಲ್ಕು ಎಲ್ಲೆಗಳನ್ನುಳ್ಳ; ನಾಲ್ಕುದಿಕ್ಕಿನ ಸಮುದ್ರಗಳೇ ಮೇರೆಯಾದ: ಇಂತು ಚತುರಂತ ಧಾತ್ರೀಕಾಂತೆಯ ನಳವಡಿಸಿ (ಎಕ. VII, ಶಿಕಾ೦. ೧೩೬-೫: 1068). (ನಾ). ೨. ಪಲ್ಲಕ್ಕಿ; ಅಂದಣ. 'ಚತುರಂತಯಾನ' ಪರಾ. [ಸಂ (ಚತುರ್ + ಅಂತ)]

**ಚತುರಂತಕ್ಷಿತಿ** (ನಾ). ನಾಲ್ಕು ಎಲ್ಲೆಗಳನ್ನುಳ್ಳ ಭೂಮಿ; ನಾಲ್ಕು ಸಮುದ್ರದವರೆಗೆ ಹಬ್ಬಿರುವ ಭೂಮಿ: ಚತುರಂತಕ್ಷಿತಿ ಗರ್ಭಸ್ಥಿತನದು ಗಡಿಮಂದು ಮುದ್ರಿಪಂತಾಯ್ತು ಯಶಸ್ವತಿಯ ಪದನ್ಯಾಸಂ (ಆದಿಪು. ೮-೩೨): ಚತುರಂತಕ್ಷಿತಿಕಾಂತೆ ಕೇಳ್ ಜಲಧಿ ಕೇಳ್ ಸಪ್ತಾರ್ಚಿ ಕೇಳ್ . . . ಪಗೆವನಂ ಕೊಂದೆನ್ನ ಕೋಪಾಗ್ನಿಗಾಹುತಿಯಂ ಮಾಟ್ಪೆಂ (ಗದಾಯು. ೬-೨೩): ಚತುರಂತಕ್ಷಿತಿಭಾರವಂ ತಳೆಯಲಾಂ ಸಾರ್ದಿದರ್ೂಡಂ (ಚಂದ್ರಪು. ೯-೦೩). [ಚತುರಂತ + ಕ್ಷಿತಿ]

**ಚತುರಂತಯಾನ** (ನಾ). ಪಲ್ಲಕ್ಕಿ: ಅಂದಣ: ಕನ್ನೆಯಂ ನೆರೆಯೆ ಕೈಗೆಯ್ಸಲ್ವೇಟ್ಟು ಮನುಷ್ಯವಾಹ್ಯಮಪ್ಪ ಚತುರಂತಯಾನವನೇಱಿಸಿ (ಶಾಂತಿಪು. ೯-೯೦ ವ): ಕೇಳು ನೃಪ ಚತುರಂತಯಾನದ ಮೇಲೆ ಕುಳ್ಳಿದ್ದು ಭಯ ಚಾಮರ ಢಾಳಿಸಲು ಶಶಿಯಂತೆ ಧವಳಚ್ಛತ್ರ ಥಳಥಳಿಸೆ (ತಿಮ್ಮ.ಅ. ೯-೯೪). [ಚತುರಂತ + ಯಾನ]

**ಚತುರಕಳ್ಳಿ** 'ಚದರಗಳ್ಳಿ' ನೋ.

**ಚತುರಚೂಡಾಮಣಿ** (ನಾ). ಬುದ್ಧಿವಂತರಲ್ಲಿ ಶ್ರೇಷ್ಠನಾದವನು; ಶ್ರೇಷ್ಠಜ್ಞಾನಿ: ಮಣಿಕೂಟಮೆಂಬ ಶೈಲಾಗ್ರಣಿ ಕಣ್ದೈಲವಾಯ್ತು ಚತುರಚೂಡಾಮಣಿಯ (ಚಂದ್ರಪು. ೦೮-೩೦). [ಚತುರ+ಚೂಡಾಮಣಿ]

**ಚತುರಣ** (ಗು). ಚೌಕಾಕಾರವಾದ: ಸಂಕಯನ ಹಳಿಯನು ಮಾಕಲ ಹಾಯಕನ ಮಗ ಚಿಮೆಯ ನಾಯಕಂಗೆ ಚತುರಣ ಸೀಮೆಯೊಳಗಾಗಿ ಕೊಟ ಪೂಜೆಗೊಡಗಿಯ ಕ್ರಮವೆಂತೆಂದಡೆ (ಎಕ. XVI, ತುಮಕೂ. ೮೫-೦೪; 7). [<ಸಂ. ಚತುರ್ಣ]

**ಚತುರತನ** (ನಾ). ಚಾತುರ್ಯ; ಕುಶಲತೆ; ಬುದ್ಧಿವಂತಿಕೆ: ಚತುರತನದಲಿ ನುಡಿದ ನುಡಿಗಳ ಸತಿಗೆ ಮರುಳಾದವನು (ಕಾಶಿಖಾ. ೧೯-೭). [ಚತುರ + – ತನ]

**ಚತುರತರ** (ಗು). ಬಹಳ ಚಾತುರ್ಯವುಳ್ಳ: ಸಭಾಸದರೆಲ್ಲರ್ ಮೆಚ್ಚೆ ಚತುರತರ ಚತುರ್ವಿಧ ನರ್ತನಮಂ ಬಿತ್ತರಿಪ ರಂಭಾದಿ ದಿವ್ಯನರ್ತಕಿಯರಿಂ (ಕಬಕ. ೦-೭೯ ವ). [ಸಂ.]

**ಚತುರತೆ** (ನಾ). = ಚತುರತನ: ಜಗತ್ಕಾಂತ ವಚಶ್ಚತುರತೆಯೆಂದಿಂತಿವು ಭಾವಿಸುವೊಡಗ್ಗಳಂಗೆ ನಿಸರ್ಗಂ (ಚಂದ್ರಪು. ೧-೩೪): ಚತುರತೆಯಂ ಕೀರ್ತಿಸುವೊಡಮತಿ ಶ್ರುತಾವಧಿ ವಿಬೋಧವೊಡವುಟ್ಟಿದವು (ಪಾರ್ಶ್ವಪು. ೦೫-೮): ಪರಿಮಿತಾಕ್ಷರತತಿಯೊಳಪರಿಮಿತಾರ್ಥ ರಚನೆಯಲಿ ವಿರಚಿಸುವುದದು ಕವಿಯ ಚತುರತೆ (ಬಸಪು. ೦-೩೨): ನುತ ಸೊಬಗು . . . ಸೌಭಾಗ್ಯದ ಸುಲಕ್ಷಣದಲಿ ಸುಶೀಲದಲಿ ಚತುರತೆಯೊಳನುನಯದಿ ಲೋಕದ ಸತಿಯರನು ಗೆಲಿದುದು (ಜೀವಂಧ. ೨-೩೪). [ಸಂ. ಚತುರತಾ]

**ಚತುರತ್ವ** (ನಾ).=ಚತುರತನ: ಚಾರಿತ್ರ್ಯವಿಲ್ಲದ ಚಾರುತ್ವವೇತಕೆ ಬರಿಯ ಚತುರತ್ವವೆ ಸಾಕೆ (ಇಂದಾಪ. ೧೭೮-೭೯). [ಸಂ.]

**ಚತುರಧಿಪತಿ** (ನಾ). ೧. ನಾಲ್ಕು ವಿಭಾಗಗಳ ಅಥವಾ ಜಿಲ್ಲೆಗಳ ಒಡೆಯ,–ಅಧಿಕಾರಿ. ೨. ಚತುರಂಗ ಸೇನೆಯ ಅಧಿಪತಿ. [ಸಂ. (ಚತುರ್ + ಅಧಿಪತಿ)]

**ಚತುರಭಾವ** (ನಾ). ಚಾತುರ್ಯ; ನೈಪುಣ್ಯ: ಕುಟಿಲ ನೀಳ ಕುಂತಳ ಕಳಾಪೆಯರ ಚತುರಭಾವಕ್ಕೆ ತಾಮುಂ ಸೋಲ್ತು (ಶಾಂತಿಪು. ೮-೩೦ ವ). [ಚತುರ₂ + ಭಾವ₂]

**ಚತುರವೃತ್ತಿ** (ನಾ). ಜಾಣತನ; ಚಾತುರ್ಯ: ರತಿವನಿತೆಗೆ ವಿಧವತೆಯುಂ ಶ್ರುತದೇವಿಗೆ ಚತುರವೃತ್ತಿಯುಂ ಮಾಟ್ಪ ತಪಶ್ರುತಮೆರಡುಂ ನಿರುಪಮಮಿಾ ಕ್ಷಿತಿಯೊಳ್ ಶ್ರುತಕೀರ್ತಿದೇವ ಭಟ್ಟಾರಕರ (ಚಂದ್ರಪು. ೦-೩೮). [ಚತುರ₂ + ವೃತ್ತಿ]

**ಚತುರಶೀತಿ** (ನಾ). ಎಂಬತ್ತುನಾಲ್ಕು: ಅಂಭೋದನಿನಾದಂ ಭದ್ರಮನಂ ಮನೋಜವಂ ಲಕ್ಷಪ್ರಮಿತಂ (ಆದಿಪು. ೦೦-೨೯): ಚತುರಶೀತಿ ಸಹಸ್ರ ಯೋಜನೋತ್ಸೇಧದೊಳ್ ಕಾಳೋದಕ ಸಮುದ್ರಮಿರ್ದುದು (ಅಜಿಪು. ೦೦-೦೩ ವ). [ಸಂ. (ಚತುರ್ + ಅಶೀತಿ)]

**ಚತುರಶ್ರ** (ಗು). ೧. ನಾಲ್ಕು ಮೂಲೆಗಳುಳ್ಳ; ನಾಲ್ಕು ಕೋಣಗಳುಳ್ಳ; ಚೌಕೋನಾಕಾರದ. ೨. ಕ್ರಮಬದ್ಧವಾದ; ಅಚ್ಚುಕಟ್ಟಾದ. ೩. ಒಪ್ಪುವಂತಹ; ಹಿತವಾದ. (ನಾ). ೪. ಚೌಕವಾದುದು; ಚೌಕಾಕಾರವಾದುದಂ: ಪಂಚರತ್ನ ಹಿರಣ್ಮಯಂ ಚತುರಶ್ರಂ ಮೂಱುಂ ಯೋಜನದಳವಿಯ ಸಭಾಮಂಟಪಮಂ . . . ತಂದು ಮುಂದಿಟ್ಟು (ಪಂಪಭಾ. ೬-೨ವ): ಶಶಿಹಾಸನಭವನರಸಿಯ ಮುಂದೆ ಚತುರಶ್ರದೊಳ್ಕುಂಡಮಂ ತಗಸಿ (ಕ್ಷಮಿಭಾ. ೩೦-೬೬). ೫. ಮೇರೆ; ಎಲ್ಲೆ; ಸೀಮೆ: ವಿಚಿತ್ರವಾದ ಬುದ್ಧಿಗೆ ಸುಖದುಃಖಗಳ ಚತುರಶ್ರವನ್ನು ತಿಳಿಯಲು ಸಾಮರ್ಥ್ಯವಿರುವುದರಿಂದ (ಕಾಂಪೂದ. ೯೭) ೬. [ಸಂಗೀತ] ಒಂದು ಬಗೆಯ ತಾಳ: ಚಂಚತ್ಪುಟ . . . ಚತುರಶ್ರ . . . ಜಯಾಳಮೆಂಬಿವು ಮೊದಲಾದ ನೂಱೆಂಟುತಾಳಂಗಳುಂ (ವಿವೇಕ. ೨೩೮): (೧) ತ್ರಿಶ್ರ (೨) ಚತುರಶ್ರ . . . (೫) ಸಂಕೀರ್ಣ ಈ ಐದು ಜಾತಿಗಳೂ ಲಘುವಿಗೆ ಮಾತ್ರ ಸಲ್ಲುತ್ತವೆ (ಸಂಗೀಚಂ. ೫೭). [ಸಂ. (ಚತುರ್ + ಅಶ್ರ)]

**ಚತುರಸ, ಚದುರಸ** (ನಾ). ಚೌಕೋನ: ಚತು[ಪಾಠಾಂ. ದು]ರಸದೊಳಗಣ ನಿಲವ ಕಾಣಬೇಕು (ಅಪಚಂ. ೦೨೯-೫೦೭). ಚದುರಸ: ವಿರೂಪಾಕ್ಷದೇವರ ಕೆಯಿಂ ಮೂಡಲಾ ಗಡಿಂಬದಿಂ ಕಿನ್ನೆಲ ಚದುರಸ ಮತ್ತ ೧ (ಸೌಇಇ. IX-1, ೨೫೩-೯೨: 1149): ಎಂಟರಳತೆ ಹದಿನಾಱು ಚದುರಸವ ಮೂವತ್ತೆರಡಱ ಮಧ್ಯದಲ್ಲಿ ಹಸ್ತ ಕಂಬಿಯನಿಕ್ಕಿ ಮೂಱಱಲ್ಲಿ ಭಾಗಸಲಾಗಿ ಎರಡು ಒಳಗು ನಿಂದಿತ್ತು (ಸರ್ವಪ. ೦೦೯-೭೦೭): ಬೆಲ್ಲಕ್ಕೆ ಚದುರಸ [ಪಾಠಾಂ. ಚದುರರಸ] ವಲ್ಲದೆ ಸಿಹಿಗೆ ಚದುರಸ[ಪಾಠಾಂ. ಚದುರರಸ]ಉಂಟೆ (ಅಂಬಿವ. ೩೯೦-೯೯). [<ಸಂ. ಚತುರಸ್ರ]

**ಚತುರಸ್ರ** (ಗು). ೧. ನಾಲ್ಕು ಮೂಲೆಗಳುಳ್ಳ; ನಾಲ್ಕು ಕೋಣಗಳುಳ್ಳ; ಚೌಕೋನಾಕಾರದ: ಚತುರಸ್ರಾಷ್ಟಾಸ್ರವೃತ್ತೋದರ ಕುಮುದ ಕಪೋತಾಂಸಕಂಠಗಳಾಲಂಬಿತ ಘಂಟಾಚಾಮರೋಜ್ಜೃಂಭಿತಮಣಿಫಳಕಂಗಳ್ (ಅಸಂಪು. ೦೦-೨೮). ೨. ಕ್ರಮಬದ್ಧವಾದ; ಅಚ್ಚುಕಟ್ಟಾದ. (ನಾ). ೩. ನಾಲ್ಕು ಮೂಲೆಗಳನ್ನು ಉಳ್ಳುದು; ಚೌಕೋನ; ಚೌಕ: ಚತುರಸ್ರಾಶ್ವತ್ಥದಳಪ್ರತಿಮರುಚಿಸ್ಥಗಿತಮಣಿವರಾಂಗಂ ಶುಭಂ (ಲೋಕೋಪ. ೦೦-೫೩): ಬಳಿಕ ದೇವಿಯ ಮುಂದೆ ಚತುರಸ್ರದಲ್ಲಿ ಅವನು ಕುಂಡವನ್ನು ತೆಗೆಸಿದ (ಬಿದುಕ. ೦೮೩): ಶಿವಲಿಂಗ ಲಕ್ಷಣವನ್ನು . . . ಆಯಾಯ ಲಿಂಗಗಳಿಗೆ ಆಧಾರವಾಗಿರುವ ಚತುರಸ್ರ, ಅಷ್ಟಾಸ್ರ, ವೃತ್ತಪೀಠಗಳಿಂದ ತಿಳಿಯಬಹುದಾಗಿದೆ (ಭಾರವ. ೭೯). ೪. [ಜ್ಯೋತಿ] ಲಗ್ನದಿಂದ ನಾಲ್ಕನೆಯ ಹಾಗು ಎಂಟನೆಯ ರಾಶಿಗಳು: ವ್ಯವಹರಿಪ ಸಂಜ್ಞೆ ಚತುರಸ್ರವದೆಂದಪ್ಪುವು ಚತುರ್ಥಗೃಹಕೆ (ಜಾತತಿ. ೦-೩೪). ೫. [ನಾಟ್ಯ] ಇಪ್ಪತ್ತುಮೂರು ದೇಶೀಯ ಸ್ಥಾನಕಗಳಲ್ಲಿ ಒಂದು: ಪಾದಗಳಿಗೆ ಒಂದೂವರೆ ಗೇಣು ಅಂತರವಿರುವಂತೆ ನಂದ್ಯಾವರ್ತ ಸ್ಥಾನಕಗಳಲ್ಲಿ ನಿಂತುಕೊಳ್ಳುವುದು: ಉರು ನಂದ್ಯಾವರ್ತದೆ ಸಂದಿರು ತೊಗ್ಗೇಣರೆಯನುಳಿದು ನಿಲೆ ಚತುರಸ್ರಂ (ಭಾಸ್ವರಂ. ೭-೩೯). ೬. ಒಂದು ಬಗೆಯ ಹಸ್ತಮುದ್ರೆ: ಮೂವತ್ತು ನೃತ್ತ ಹಸ್ತಗಳಲ್ಲಿ

ಒಂದು: ಒದವಿದ ಕಟಕಾಮುಖವೆುರಡರ್ದಿಗಿದಿರಾಗೆಂಟು ಬೆರಲ ತೆಱಂ ನಿಂದಿರ್ದವೆ ಭುಜಕೆ ಸಮದಿನಿರೆ ಕೇಳ್ ಚದುರೇ ಚತುರಸ್ರಹಸ್ತಮೆಂದನಿಸಿರ್ಕುಂ (ರಾತ್ನರಂ. ೨-೪೩); ಈ ಕೆಳಗೆ ಹೇಳಿರುವ ಹಸ್ತಗಳು ನೃತ್ತಹಸ್ತಗಳು ೧. ಚತುರಸ್ರ ೨. ಉದ್ವೃತ್ತ . . . ೩೦. ವಲಿತ (ಅಭಿನ್ಯ. ೯೯). [ ಸಂ. (ಚತುರ್ + ಅಸ್ರ) ]

**ಚತುರಸ್ರಂಬೆಡು** (ಕ್ರಿ). ನಾಲ್ಕು ಮೂಲೆಗಳನ್ನು ಪಡೆ ; ಚೌಕವಾಗು : ಚತುರಸ್ರಂಬೆತ್ತ ವೇತ್ರಾಸನವೊಲದುಮಿರ್ಕುಂ (ಹಂಶೀಕ್ಕ. ೦-೬೬). [ ಚತುರಸ್ರ + ಪೆಡು₁ ]

**ಚತುರಾಂತರ** (ನಾ). ಚೌಕದ ಮಧ್ಯಭಾಗ : ಆರ್ದ್ರಮೃತ್ತಿಕಾವಿರಚಿತಮಪ್ಪ ಚತುರಾಂತರದೊಳ್ ಮುತ್ತಿನ ಚೌಕದ ನಡುವಣ . . . ದುಗುಲದ ಪಸೆಯೊಳ್ (ಪಂಪಭಾ. ೬-೭೪ ವ); "ಹಸೆಯ ಜಗುಲಿ" (ಪಂಪದೀ. ೦೨೯). [ ಸಂ. (ಚತುರ್ + ಅಂತರ) ]

**ಚತುರಾಕ್ಷ** (ನಾ). ಜಾಣತನವೇ ಕಣ್ಣಾಗಿರುವವನು ; ಕುರುಡ ; ಭಾನುವಿನ ಭಾರಣೆಯ ಪೋಲುತ್ತಿಹ ನಮುಖ ಚತುರಾಕ್ಷ [ಪಾಠಾಂ. ಚತುರಾಂಧ] ಭೂಪನ ಸೂನು ಹೊಕ್ಕನು ರಂಗವನು ಭೀಷ್ಮಾದಿಗಳಿಗೆಱಗಿ (ಕುಭಾ೯ಆ. ೬-೩೬). [ ಸಂ. (ಚತುರ + ಅಕ್ಷಿ + -) ]

**ಚತುರಾಘಾಟ** (ನಾ). ನಾಲ್ಕು ಎಲ್ಲೆ,-ಗಡಿ,-ಮೇರೆ : ಸರ್ವಬಾಧಾಪರಿಹಾರವಾಗಿ ಬಿಟ್ಟ ಮತ್ತನ್ನೂಱಯ್ವತ್ತರಡ ಚತುರಾಘಾಟದ ಸೀಮೆಯಾವುದೆಂದಡೆ (ಸೌಇಇ. XX, ೦೮-೩೭: ೯೮೦) : ರಾಮನಾಥದೇವರ ಭೂಮಿಯಿಂ ಪಡುವಲು ಚತುರಾಘಾಟ ಲಿಂಗಮುದ್ರೆಯ ಕಲ್ಲಿನ ಸೀಮೆಯಿಂದೊಳಗೆ (ಕಇ. IV, ೦-೦೦೦ : 1204). [ ಸಂ. (ಚತುರ್ + ಆಘಾಟ) ]

**ಚತುರಾತ್ಮ** (ನಾ). ೧. ಸಂಕರ್ಷಣ, ಅನಿರುದ್ಧ, ಪ್ರದ್ಯುಮ್ನ, ವಾಸುದೇವ ಎಂಬ ನಾಲ್ಕು ರೂಪಗಳನ್ನುಳ್ಳವನು. ೨. ಚುರುಕುಬುದ್ಧಿಯುಳ್ಳವನು ; ಕೌಶಲವನ್ನುಳ್ಳವನು ; ಜಾಣ. ೧, ೨ : ಹಂಯೆಂಬಂತೆಯೆ ಕೃಷ್ಣನದಾವನೊ ಚತುರಾತ್ಮನು ಸಲೆ ನಿಷ್ಕ್ರಿಯನು (ರ್ಭನ್ನಾಲೋ. ೯೬). [ ಸಂ. ಚತುರಾತ್ಮನ್ (ಚತುರ್ + ಆತ್ಮನ್ : ಚತುರ + ಆತ್ಮನ್) ]

**ಚತುರಾನನ** (ನಾ). ೧. ನಾಲ್ಕು ಮುಖಗಳನ್ನುಳ್ಳವನು ; ಬ್ರಹ್ಮ : ಚತುರಾನನನಂ ಬಡಿಸಿದರತಿಶಯತಾರ್ಥಮನೆ ತೋಱುವದಿಂ (ಪುಷ್ಪಪು. ೦-೩೭) : ಘನರಜೋಗುಣದಲ್ಲಿ ಚತುರಾನನ ತಮೋಗುಣದಲ್ಲಿ ಶಂಕರನೆನಿಸಿ ಸತ್ವಗುಣಾನುಗತಿಯಲಿ ವಿಷ್ಣುವೆಂದೆನಿಸಿ (ಕುಭಾ೯ಸ. ೯-೩). ೨. ಚಾತುರ್ಯದಿಂದ ಕೂಡಿದ ಬಾಯಿ ಉಳ್ಳವನು; ಮಾತಿನಲ್ಲಿ ನಿಪುಣ : ಆ ಸರಸತಿಯುಂ ಚತುರಾನನಪರಿಚಿತೆಯೆನಿಸಿಪನದೇಂ ಸಮರ್ಥನೊ ಪದ್ಮಂ (ಪುಷ್ಪಪು. ೩-೨): ಅಬ್ಜಭವನಂತೆ ಚತುರಾನನಂ . . . ಎಂದು ಧರ್ಮಜನ ಧರೆ ಪೊಗಳುತಿರೆ (ಕೃಮಿಭಾ. ೨-೦೩) . ೩. ಒಬ್ಬ ಕನ್ನಡ ನಿಘಂಟುಕಾರನ ಹೆಸರು; ಚತುರಾಸ್ಯ ಬೊಮ್ಮರಸ: ಕವಿ ಚತುರಾನನನೆಂದೆನಿಸುವ ನಾಮದ . . . ಅಚ್ಚಗನ್ನಡ ವಿವರಣೆ ಚೆಲ್ವಾಗೆ ರಚಿಸಿದಂ ಚತುರಾಸ್ಯಂ (ಚತುನಿ. ೩). [ ಸಂ. (ಚತುರ್+ಆನನ; ಚತುರ+ಆನನ) ]

**ಚತುರಾಶಿಗಿಡ**(ನಾ). ಒಂದು ಬಗೆಯ ಸಸ್ಯ : ಕಾಡು ಸಬ್ಬಸಿಗೆ, ಚತುರಾಶಿಗಿಡ (ವ್ಯುತಿಗಿ. ೩೮-೭೩೩). 'ಚೇತರಾಶಿ' ಪರಾ. [ ಚತುರಾಶಿ₂ + ಗಿಡ (<ಗಿಡು) ]

**ಚತುರಾಶ್ರಮ** (ನಾ). ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸವೆಂಬ ನಾಲ್ಕು ಬಗೆಯ ಆಶ್ರಮಗಳು : ಚಾತುರ್ವರ್ಣ್ಯದ ಕರ್ತವ್ಯಗಳು, ಚತುರಾಶ್ರಮದ ಕರ್ತವ್ಯಗಳು . . . ಉಕ್ತವಾಗಿವೆ (ಭಾರರ. ೬೩). [ ಸಂ. (ಚತುರ್ + ಆಶ್ರಮ) ]

**ಚತುರಾಶ್ರಯ** (ನಾ). ನಾಲ್ಕು ಮೇರೆ,-ಎಲ್ಲೆ : ಶ್ರೀಮನು ಮಹಾಮಹಿಮ ಕಪಿಲಸಿದ್ಧಮಲ್ಲೇಶ್ವರ ದೇವರ ಕ್ಷೇತ್ರದ ಚತುರಾಶ್ರಯದ ನಾಲ್ಕುಂ ದೆಸೆಯ ವಳೆಯದೊಳಗೆ (ಎಇ. XXIII, ೦೯೩-೪೮ : 1266). [ ಸಂ. (ಚತುರ್ + ಆಶ್ರಯ) ]

**ಚತುರಾಸೀತಿ** (ನಾ).=ಚತುರಶೀತಿ: ಪೆರ್ಮಟ್ಟಿ ಪಱಿಘೋಷಣಂ ಚತುರಾಸೀತಿ ನಗರಾಧಿಷ್ಠಿತಂ (ಸೌಇಇ. XX, ೪೧-೮ : 1068). [ <ಸಂ. ಚತುರಶೀತಿ ]

**ಚತುರಾಸ್ಯ** (ನಾ). ೧. ನಾಲ್ಕು ಮುಖಗಳನ್ನುಳ್ಳವನು ; ಬ್ರಹ್ಮ : ಚತುರಾಸ್ಯಂಗಂ ನೆಗಟ್ಟಿಹಪಱಿಗಮುಳಂಬಂ (ಜನಾರಿ. ೭-೭) : ಚತುರಾಸ್ಯೇಂದ್ರಾದಿ ದೇವರ್ ನಡೆದು ಜಲಧಿತಲ್ಪಂಗೆ ದೈತ್ಯೇಂದ್ರರುದ್ವೃತ್ತತೆಯಂ ಪೇೞ್ದಲ್ಕೆ (ಜಗಪಿ. ೨-೪೪). ೨. ಸುಂದರವಾದ ಮುಖವುಳ್ಳವನು. ೩. ಜಾಣ್ಮೆಯ ಮಾತನ್ನಾಡುವವನು ; ವಾಕ್ಚತುರ. ೧, ೨, ೩ : ಈ ಮಹಾ ಪುರುಷಂ . . . ಚತುರಾಸ್ಯನಾಗಿಯುಂ ಹಿರಣ್ಯಗರ್ಭನಲ್ತು (ಜಗಪಿ. ೮-೦೦ ವ). ೨, ೩ : ಆ ಜನೇಶ್ವರಂ . . . ಚತುರಾಸ್ಯನುಮಚ್ಯುಯನುಮುಕ್ತಿಸ್ಪಂದವ್ಯಪೇತನುಂ . . . ಗಗನಗಮನಮಾಗಿ (ಸುಕುಮಾ. ೮-೬೯ ವ): ಚತುರಾಸ್ಯನತುಳ ಮತಿಯಿಂ . . . ನೆಗಟ್ದಂ ಚತುರ್ಗುಣಂ ಸಕಳ ರಾಜನೀತಿಯೊಳ್ (ಪಾರ್ಶ್ವಪು. ೭-೯೮). ೪. =ಚತುರಾನನ ೩ : ಅಚ್ಚಗನ್ನಡ ವಿವರಣೆ ಚೆಲ್ವಾಗೆ ರಚಿಸಿದಂ ಚತುರಾಸ್ಯಂ (ಚತುನಿ. ೩). [ ಸಂ. (ಚತುರ್ + ಆಸ್ಯ; ಚತುರ + ಆಸ್ಯ) ]

**ಚತುರಾಸ್ಯತೆ** (ನಾ). [ಜೈನ] ಕೇವಲಜ್ಞಾನಿಯಾದವನಿಗೆ ಉಂಟಾಗುವ ಹತ್ತು ಅತಿಶಯಗಳಲ್ಲಿ ಒಂದು ; ಒಮ್ಮೆಲೆ ನಾಲ್ಕು ಕಡೆಯೂ ನೋಡುವ ಶಕ್ತಿ : ಚತುರ ಚತುರಾಸ್ಯತೆ . . . ಗತಚ್ಛಾಯತೆಯ ಪೀರ್ಕೃದತಿಶಯವು ಜನನ (ಸಾಳ್ವಭಾ. ೬೦-೬೪). [ ಸಂ. ಚತುರಾಸ್ಯತಾ ]

**ಚತುರಾಸ್ಯತ್ವ** (ನಾ).=ಚತುರಾಸ್ಯತೆ : ಚತುರಾಸ್ಯತ್ವಮಭುಕ್ತಿಭಾವಮನಿಮೇಷತ್ವಂ . . . ಅಚ್ಛಾಯತೆಯೆಂಬ ಪತ್ತತಿಶಯಂ ತೀರ್ಥೇಶನೊಳ್ ಶೋಭಿಕುಂ (ಚಂದ್ರಪು. ೦೩-೦೦೩). [ ಸಂ. ]

**ಚತುರಾಸ್ಯಪ್ರಿಯೆ** (ನಾ). ಸರಸ್ವತಿ : ಪುಸ್ತಕಹಸ್ತಾನ್ವಿತೆ ಪುಣ್ಯಕಥೆಯನೊರ್ವಳೆ ಚತುರಾಸ್ಯಪ್ರಿಯೆ ಸುರಾಗದಿಂ ವಾಚಿಸಿದಳ್ (ಪುಷ್ಪಪು. ೯-೮೭). [ ಚತುರಾಸ್ಯ + ಪ್ರಿಯೆ ]

**ಚತುರಿಂದ್ರಿಯ** (ನಾ). ೧. ನಾಲ್ಕು ಬಗೆಯ ಇಂದ್ರಿಯಗಳು ; ಕಣ್ಣು, ಮೂಗು, ನಾಲಗೆ ಮತ್ತು ಚರ್ಮ. ೨. (ಕಿವಿಯನ್ನುಳಿದು) ನಾಲ್ಕು ಇಂದ್ರಿಯಗಳನ್ನು ಮಾತ್ರ ಹೊಂದಿರುವ ಜೀವಿ : ಸ್ಪರ್ಶನ ರಸನ ಘ್ರಾಣ ಚಕ್ಷುರಿಂದ್ರಿಯ ಸಮನ್ವಿತಂಗಳಪ್ಪ ಮಧುಕರಾದಿ ಚತುರಿಂದ್ರಿಯಂಗಳ್ (ಆದಿಪು. ೦೦-೬೦ವ): ದಂಶಮಶಕ ಮಕ್ಷಿಕಾ ಭ್ರಮರ ಪತಂಗಾದಿ ಚತುರಿಂದ್ರಿಯಂಗಳ್ ಸ್ಪರ್ಶನ ರಸನ ಘ್ರಾಣ ಚಕ್ಷುರಿಂದ್ರಿಯ ಪರಿಚ್ಛಿತ್ತ್ಯಪೇತಂಗಳಪ್ಪುವು (ತತ್ತ್ವಪ್ರ. ೯೮). [ ಸಂ. (ಚತುರ್ + ಇಂದ್ರಿಯ) ]

**ಚತುರಿಕೆ₁** (ನಾ). ಚಾತುರ್ಯ ; ಚದುರು ; ನೈಪುಣ್ಯ : ತತವಿತತಘನಸುಸಿರ ವಾದ್ಯದ ಚತುರಿಕೆಗೆ . . . ನಲಿದು ನರ್ತಿಪುದು (ಸಾಳ್ವಭಾ. ೬೦-೩೦): ಅಥವನಂ ಜಱಿವ ಚತುರಿಕೆಯ ಮಾತುಗಳನು ಸೊಲ್ಲುಸೊಲ್ಲೆಂದು ಮೂದಲಿಸುತುಂ (ಚಲಪು. ೩೩-೨೨). [ ಚತುರ₁ + - ಇಕೆ ]

**ಚತುರಿಕೆ₂** (ನಾ). ೧. ಚತುರೆಯಾದವಳು ; ಜಾಣೆ. ೨. [ಕಾವ್ಯಮೀ] ನಾಯಿಕೆಯ ನಾಲ್ಕು ಬಗೆಯ ಪರಿಚಾರಿಕೆಯರಲ್ಲಿ ಒಬ್ಬಳು : ಇತ್ತ ಚತುರ ಚತುರಿಕೆಯರಪ್ಪ ಪರಿಚಾರಕಿಯರುಂ . . . ಮಂಗಳವಸದನಂ ಗೊಳಿಸಲವಸರಂಬಡೆದು (ಪುಷ್ಪಪು. ೮-೫೩ ವ) : ಅಭಿಸಾರಿಕೆ, ಚತುರಿಕೆ, ಸಹಸಂಚಾರಿಕೆ, ದೂತಿಕೆಯರೆಂಬ ಚತುರ್ವಿಧ ಸಖಿಯರುಂ (ವಿವೇಳ. ೨೨೯). [ ಸಂ. ಚತುರಿಕಾ ]

**ಚತುರುಪಧಾವಿಶುದ್ಧ** (ಗು). ೧. ಧರ್ಮ, ಅರ್ಥ, ಕಾಮ, ಭಯ ಈ ನಾಲ್ಕು ವಿಷಯಗಳಲ್ಲಿ ಮಾಡಿದ ಪರೀಕ್ಷೆಗಳಿಂದ ಪರಿಶುದ್ಧನೆಂದು ನಿರ್ಣಯಿಸಲ್ಪಟ್ಟ: ಚತುರುಪಧಾವಿಶುದ್ಧಮತಿಚಿತ್ರಭವ ಪ್ರತಿರೂಪ ಸುಂದರಾಕೃತಿ . . . ಕಸವಯ್ಯನಾಯಕನೋಳಿಯ್ದು ಜಗನ್ನುತಿವೆತ್ತು ಕೋಟಿಗುಂ (ಎಕ. XI, ದಾವಣ. ೪೨-೪೩ : ಸು. 1162): "ರಾಜಭಕ್ತಿ, ಅಸ್ವಾರ್ಥಪರತೆ,ಜಿತೇಂದ್ರಿಯತ್ವ,ಧೈರ್ಯ-ಈ ಗುಣಗಳಲ್ಲಿ ಪರೀಕ್ಷಿತವಾಗಿ ಶುದ್ಧವಾಗಿರುವ" (ಕಾಪಮಂ. ೬೮೦ ಟಿಪ್ಪಣಿ). (ನಾ). ೨. ಮೇಲಿನ ಪರೀಕ್ಷೆಗಳಿಂದ ಶುದ್ಧನೆಂದು ನಿರ್ಣಯಿಸಲ್ಪಟ್ಟವನು : ಚತುರುಪಧಾವಿಶುದ್ಧನುಂ ಬುದ್ಧಿವೃದ್ಧನುಂ . . . ಭದ್ರಮೂರ್ತಿಯುಮಪ್ಪ ವಸುಭಾಗಭಟ್ಟನಿಂತೆಂದಂ (ಪಂಚತಂ. ೧೬-೧೩): ಚತುರುಪಧಾವಿಶುದ್ಧನನವದ್ಯಚರಿತಂ . . . ನೃಪನೇಂ ವಿವೇಕಿಯೋ (ಪುಷ್ಪಪು. ೩-೬೩): ಚತುರುಪಧಾವಿಶುದ್ಧನಧಿಕಾರಿ ಕಳಾವಿದಂ (ಸೂಕ್ತಿಸು. ೧೬-೫೪).

[ಸಂ. (ಚತುರ್ + ಉಪಧಾ + ವಿಶುದ್ಧ)]

**ಚತುರುಪಧಾಶುದ್ಧಿ** (ನಾ). ಧರ್ಮ, ಅರ್ಥ, ಕಾಮ, ಭಯಂಗಳೆಂಬ ನಾಲ್ಕು ಬಗೆಯ ಗುಣಗಳಲ್ಲಿ ಪರೀಕ್ಷಿತನಾಗಿ ಶುದ್ಧಿಹೊಂದುವಿಕೆ : ವಿದಿತಂ ಪಂಚಾಂಗಮಂತ್ರಸ್ಥಿತಿ ಚತುರುಪಧಾಶುದ್ಧಿ ಸಿದ್ಧಿತ್ರಯಾಸಂಪದಮಾ ಷಾಡ್ಗುಣ್ಯವೃತ್ತಂ (ಚಂದ್ರಪು. ೯-೧೧೬).

[ಸಂ. (ಚತುರ್ + ಉಪಧಾ + ಶುದ್ಧಿ)]

**ಚತುರುಪಾಯ** (ನಾ). (ಕಾರ್ಯಸಾಧನೆಗೆ ಪ್ರಯೋಗಿಸಲಾಗುವ) ನಾಲ್ಕು ಬಗೆಯ ಉಪಾಯಗಳು; ಸಾಮ, ದಾನ, ಭೇದ, ದಂಡ: ವಿದಿತಂ . . . ಚತುರ ಚತುರುಪಾಯಪ್ರಯೋಗಂ (ಚಂದ್ರಪು. ೯-೧೧೬).

[ಸಂ. (ಚತುರ್ + ಉಪಾಯ)]

**ಚತುರೋಕ್ತಿ** (ನಾ). ಚಾತುರ್ಯದ ಮಾತು; ಚಮತ್ಕಾರಪೂರ್ಣವಾದ ಮಾತು : ಸ್ತುತಿಗೆಯ್ವಂ . . . ಚತುರೋಕ್ತಿ ಪ್ರಚುರಾರ್ಥ ಕಾವ್ಯಜನಿತೋರ್ವೀಹರ್ಷನಂ ಹರ್ಷನಂ (ಜಗವಿ. ೧-೮): ನಾಗರಿಕನುಕ್ತಿಗೆ ಚತುರೋಕ್ತಿ ಚತುರ್ಮುಖಂ ಮೆಚ್ಚುತ್ತುಂ ಪೋಗೆ (ಚಂದ್ರಪು. ೮-೬೨ ವ).

[ಚತುರ₂ + ಉಕ್ತಿ]

**ಚತುರೋಪಾಯ** (ನಾ). ೧. = ಚತುರುಪಾಯ: "ಕೊಟ್ಟು ಕೊಳ್ವುದು ದಾನಮೆನಿಸಿಕ್ಕು ವೈರಮಂ ಪುಟ್ಟಿಸಲು ಭೇದಮೆನಿಸಿಕ್ಕು ಶಿಕ್ಷಿಸಲೊಡಂಬಟ್ಟೊಡದು ದಂಡಮೆನಿಸಿಕ್ಕು ಸ್ವೈರಣೆ ಸಾಮಮಕ್ಕು ತಾವಿಂತಿವೆಯ್ದೆ ಮುಟ್ಟೆ ಚತುರೋಪಾಯಮಕ್ಕುಂ" (ಮಂಗರಾ. ೬೯-೩): ಉಗ್ರ ಪಂಚಾನನಂ ಗೆಲ್ವ ಚತುರೋಪಾಯಮಂ ಬಿಟ್ಟು ತಾನಳ್ಕಿ ಬಳ್ಕಿ ಕಡುದೈನ್ಯದಿಂದೀಗ ಮುಗ್ಧಾಂಗಮಂ ತಳೆದಿರ್ಪುದು ಏನಿದಚ್ಚರಿಯೆಂದು (ಕೃಮಿಥಾ. ೬-೨೮). ೨. ನಾಲ್ಕು ಬಗೆಯ ಉಪಾಯಗಳನ್ನು ಬಲ್ಲವನು : ಸುರಪುರನಿಲಯ ಚೆನ್ನಿಗರಾಯ ಚತುರೋಪಾಯ ರಕ್ಷಿಸು ನಮ್ಮನನವರತ (ಹರಿಸಾ. ೧). [<ಸಂ. ಚತುರುಪಾಯ]

**ಚತುರ್ಗತಿ** (ನಾ). ೧. ನಾಲ್ಕುಗತಿ ; ನಾಲ್ಕು ಅವಸ್ಥೆ. ೨. [ಜೈನ] ದೇವ, ಮನುಷ್ಯ, ತಿರ್ಯಕ್, ನಾರಕ ಎಂಬ ನಾಲ್ಕು ವಿಧವಾದ ಜನ್ಮಗಳಂ: ತಪಃಪೋತದಿನಣ್ಣ ನೀಂ ತಡಿಯನೆಯ್ದಂತಲ್ಲದಿಂತೀ ಚತುರ್ಗತಿ ಸಂಸಾರ ಪಯೋಧಿಯಂ ಪೊಣಮಡಲ್ ಮತ್ತಿಲ್ಲ ನೀನಾರ್ತಪಯ್ (ಆದಿಪು. ೩-೫೬): ಇನ್ನೆವರಂ ಚತುರ್ಗತಿಗಳೊಳ್ತಿರಿತಂದು ಜವಂಗೆ ವೇಡಿಯಾದಂ (ಮಲ್ಲಿಪು. ೧೩-೯೨). [ಸಂ. (ಚತುರ್ + ಗತಿ)]

**ಚತುರ್ಗುಣ** (ನಾ). ೧. ನಾಲ್ಕುಮಡಿ,-ಪಟ್ಟು. 'ದ್ವಿಗುಣ' ಪರಾ. ೨. [ದ್ವೈತ] ಸತ್, ಚಿತ್, ಆನಂದ, ಆತ್ಮ ಎಂಬ ಭಗವಂತನ ನಾಲ್ಕು ಗುಣಗಳಂ. 'ಚತುರ್ಗುಣೋಪಾಸಕ' ಪರಾ.

[ಸಂ. (ಚತುರ್ + ಗುಣ)]

**ಚತುರ್ಗುಣಿತ** (ಗು). ನಾಲ್ಕರಿಂದ ಗುಣಿಸಿದ ; ನಾಲ್ಮಡಿಯಾದ : ಆ ಸಂಕಟಸಮಯದಲ್ಲೂ ಅವನು ದ್ವಿಗುಣಿತ ಚತುರ್ಗುಣಿತ ಬಲಿಷ್ಠನಾದನು (ಅಂದಿ. ೧೧೫). [ಸಂ. (ಚತುರ್ + ಗುಣಿತ)]

**ಚತುರ್ಗುಣೋಪಾಸಕ** (ನಾ). [ದ್ವೈತ] ಭಗವಂತನ ನಾಲ್ಕು ಗುಣಗಳನ್ನು ಉಪಾಸನೆ ಮಾಡುವವನು : ಮನುಷ್ಯೋತ್ತಮರು ಚತುರ್ಗುಣೋಪಾಸಕರು (ಹಿಂದಸಾ. ೨೯೦).

[ಚತುರ್ಗುಣ + ಉಪಾಸಕ]

**ಚತುರ್ಗ್ರಾಮ** (ನಾ). ನಾಲ್ಕು ಹಳ್ಳಿಗಳು ; ಚೌಗಾವೆ.

[ಸಂ. (ಚತುರ್ + ಗ್ರಾಮ)]

**ಚತುರ್ಜಾತಕ** (ನಾ). [ವೈದ್ಯ] ದಾಲ್ಚಿನ್ನಿ, ಏಲಕ್ಕಿ, ನಾಗಕೇಸರಿ, ಜಾಪತ್ರೆ ಎಂಬ ನಾಲ್ಕು ಔಷಧಿದ್ರವ್ಯಗಳು : ೨ ಹಲಹಿಪ್ಪಲಿ. ತವಕ್ಷೀರ ೪ ಹಲ, ಚತುರ್ಜಾತಕ ೧ ಹಲ ಜೇನುತುಪ್ಪ ೬ ಹಲ ಸಹ ಹಾಕಿ ಕಲಸಿ ಸೇವಿಸಲು ಕ್ಷಯವ್ಯಾಧಿ . . . ಗುಣಮಕ್ಕು (ಸಕವೈ. ೨೫೮). [ಸಂ.]

**ಚತುರ್ಜ್ಞಾನ** (ನಾ). [ಜೈನ] ಮತಿ, ಶ್ರುತ, ಅವಧಿ ಮತ್ತು ಮನಃ ಪರ್ಯಾಯಂಗಳೆಂಬ ನಾಲ್ಕು ಬಗೆಯ ಜ್ಞಾನಗಳು : ಅಂತೊಗೆದ ಚತುರ್ಜ್ಞಾನದೊಳವಗಮಿಸಿದಂ ಜ್ಞಾನರೂಪನಾದಿಬ್ರಹ್ಮಂ (ಆದಿಪು. ೯-೮೮); ದೇದೀಪ್ಯಮಾನ ಪ್ರಭಾಭಾಸುರಗಾತ್ರಂ ಚತುರ್ಜ್ಞಾನನೇತ್ರರಂ . . . ಕಂಡು (ಸುಕುಮಾ. ೮-೪೮ ವ). [ಸಂ. (ಚತುರ್ + ಜ್ಞಾನ)]

**ಚತುರ್ನಿಕಾಯ** (ನಾ). [ಜೈನ] ಭವನವಾಸಿ, ವ್ಯಂತರ, ಜ್ಯೋತಿಷ್ಕ ಮತ್ತು ಕಲ್ಪವಾಸಿಗಳೆಂಬ ನಾಲ್ಕು ಪ್ರಕಾರದ ದೇವತೆಗಳ ಸಮೂಹ : ಅಮರಪತಿ ಚತುರ್ನಿಕಾಯಾಮರೇಂದ್ರಪರಿವೃತಂ ಬಂದು (ಮಲ್ಲಿಪು. ೧೩-೧೬೫). [<ಸಂ. ಚತುರ್ನಿಕಾಯ]

**ಚತುರ್ಥ** (ಗು). ೧. ನಾಲ್ಕನೆಯ. 'ಚತುರ್ಥಾಂಶ' ಪರಾ. (ನಾ). ೨. ನಾಲ್ಕನೆಯ ವರ್ಣಕ್ಕೆ ಸೇರಿದವನು ; ಶೂದ್ರ : ಈ ಕೆಟಿಗೆ ಸಂಸ್ಕಾರ ಜಲಶುದ್ಧಿ ದೊರಕದು ಚತುರ್ಥನಿದನಗೆದಾತಂ (ಸಿದ್ಧರಾ. ೯-೬೨).

[ಸಂ.]

**ಚತುರ್ಥಧ್ಯಾನ** (ನಾ). [ಜೈನ] ಆರ್ತ, ರೌದ್ರ, ಧರ್ಮ ಮತ್ತು ಶುಕ್ಲ ಎಂಬ ನಾಲ್ಕು ಬಗೆಯ ಧ್ಯಾನಗಳಲ್ಲಿ ಕೊನೆಯದು ; ಶುಕ್ಲಧ್ಯಾನ : ಧ್ಯಾನಾನಳದಗ್ಧ ಶೇಷಾಶೇಷ ಕರ್ಮೇಂಧನನುಮಾಗಿ (ಆದಿಪು. ೧೬-೭೪ ವ).

[ಚತುರ್ಥ + ಧ್ಯಾನ]

**ಚತುರ್ಥಸ್ನಾನ** (ನಾ). ಮುಟ್ಟಾದವಳು ನಾಲ್ಕನೆಯ ದಿನ ಮಾಡುವ ಸ್ನಾನ : ಮರುದೇವಿ ಮಹಾದೇವಿ ಚತುರ್ಥಸ್ನಾನದೊಳ್ ಕಲ್ಪದ್ರುಮ ದುಕೂಲವಸನೆಯುಂ . . . ಆಗಿ (ಆದಿಪು. ೭-೨೬ ವ): ದೇವಕಿದೇವಿ ಪುಷ್ಪವತಿಯಾಗಿ ಚತುರ್ಥಸ್ನಾನಾನಂತರಂ ಮಂಗಳ ಪ್ರಸಾಧನ ಮನಪ್ಪಕೆಯ್ದು (ಜಗವಿ. ೨-೫೯). 'ನಾಲ್ನೀರ್' ಪರಾ.

[ಚತುರ್ಥ + ಸ್ನಾನ]

**ಚತುರ್ಥಾಂಶ** (ನಾ). ನಾಲ್ಕನೆಯ ಒಂದು ಭಾಗ ; ಕಾಲುಭಾಗ : ನಕ್ಷತ್ರ ತಾರಾಗಣಕ್ಕೆಯುತ್ಕೃಷ್ಟದಿಂ ಪಲ್ಯೋಪಮ ಚತುರ್ಥಾಂಶಂ ಜಘನ್ಯದಿಂ ಪಲ್ಯೋಪಮಾಷ್ಟಮ ಭಾಗಮಕ್ಕುಂ (ಸುಕುಮಾ. ೧೦-೫೯ ವ).

[ಚತುರ್ಥ + ಅಂಶ]

**ಚತುರ್ಥಿ** (ನಾ). ೧. ಚಾಂದ್ರಮಾನ ಮಾಸದ ಒಂದು ಪಕ್ಷದಲ್ಲಿ ನಾಲ್ಕನೆಯ ತಿಥಿ ; ಚೌತಿ : ಷಷ್ಟಿ ಅಷ್ಟಮಿ ನವಮಿ ಪಾಡ್ಯ ಚತುರ್ಥಿ ಪೌರ್ಣಮಿ ಅಮಾವಾಸ್ಯೆ ಈಸು ತಿಥಿಗಳು ಅಶುಭ (ಗಗಶಾ. ೯-೬೭). ೨. [ವ್ಯಾಕ] ನಾಮ ವಿಭಕ್ತಿಗಳಲ್ಲಿ ನಾಲ್ಕನೆಯದು : ನಿನಗೆ ಯೆನಗೆ ತನಗೆಯೆಂಬೀ ನುಡಿ ಚತುರ್ಥಿಯೊಳ್ (ಕಾವ್ಯಾವ. ೧೫೨): ನುತಸಂಪ್ರದಾನ ರೂಢಂ ಚತುರ್ಥಿ (ಶಮದ. ೧೨೯). [ಸಂ. ಚತುರ್ಥೀ]

**ಚತುರ್ದಂಡಿ** (ನಾ). [ಸಂಗೀತ] ನಾಲ್ಕು ಬಗೆಯ ಸಂಗೀತ ರಚನೆಗಳು : ಗೀತ, ಆಲಾಪ, ಠಾಯ ಮತ್ತು ಪ್ರಬಂಧ ಎಂದು ನಾಲ್ಕು ವಿಧ ರಚನೆಗಳನ್ನು ತಿಳಿಸಿ ಇವನ್ನು 'ಚತುರ್ದಂಡಿ' ಎಂದು ವೆಂಕಟಮಖಿ ಕರೆದಿದ್ದಾನೆ (ಸಂಗೀಡಂ. ೭೦). [ಸಂ. ಚತುರ್ದಂಡೀ]

**ಚತುರ್ದಂತ** (ನಾ). ೧. ನಾಲ್ಕು ಹಲ್ಲು : ಗಳ್ದನಂಗರುಚಿಯಿಂದ್ಯೈರಾವಣಮುಂ ಕುಮಾರಚೂಡಾಮಣಿ ಲಾಲಾಜಲದೊಳಂ ಚತುರ್ದಂತದೊಳಂ (ಶಂಚಾಮಾ. ೩-೧೩೦). ೨. ನಾಲ್ಕು ಕೋರೆಗಳನ್ನುಳ್ಳುದು ; ಐರಾವತ : ಲಲಿತಾಂಗುಲಿ ಭಾಸುರಭದ್ರ ಲಕ್ಷಣಾಲಂಕೃತಂ ಚತುರ್ದಂತಂ (ಆಜಿಪು. ೬-೩೭). [ಸಂ. (ಚತುರ್ + ದಂತ)]

**ಚತುರ್ದಶ** (ಗು). ೧. ಹದಿನಾಲ್ಕನೆಯ. (ನಾ). ೨. ಹದಿನಾಲ್ಕು : ವೃಷಭಾದ್ರಿಗಳಿಂದಂ ಚತುರ್ದಶ ಮಹಾವಾಹನಗಳಿಂದಮೆಸೆದು (ಆದಿಪು. ೦-೪೮ ವ). [ಸಂ. ಚತುರ್ದಶನ್ (ಚತುರ್ + ದಶನ್)]

**ಚತುರ್ದಶಧರೆ** (ನಾ). = ಚತುರ್ದಶಲೋಕ : ಜೀವಾಂತರಾತ್ಮ ಪರಮಾತ್ಮ ಚೇತನರೂಪ ಪಾವನ ಚತುರ್ದಶಧರಾಜನಾಧೀಶ (ವೀರ್ಯಪು. ೪-೯-೨). [ಚತುರ್ದಶ + ಧರೆ]

**ಚತುರ್ದಶಪದಿ** (ನಾ). [ಛಂದ] ಹದಿನಾಲ್ಕು ಚರಣಗಳನ್ನುಳ್ಳ ಒಂದು ಬಗೆಯ ಪದ್ಯ ; ಸುನೀತ ; ಇಂಗ್ಲಿಷಿನ ಸಾನೆಟ್‌ರೂಪದ ಪದ್ಯ : ಈವರೆಗೆ ಕೆಲಕೆಲವು ಪ್ರಣಯಗೀತಗಳನ್ನೂ ಚತುರ್ದಶಪದಿಗಳನ್ನೂ . . . ರಚಿಸಿಲ್ಲವುದರಿಂದ (ಹಕ್ಕಿ. ಗ್ರ- ಮುನ್ನುಡಿ) [ಸಂ. ಚತುರ್ದಶಪದೀ]

**ಚತುರ್ದಶಪೂರ್ವ** (ನಾ). [ಜೈನ] ಶ್ರುತಾಂಗಗಳ ವಿವರಣೆಗಳನ್ನು ಕೊಡುವ - ಉತ್ಪಾದ, ಅಗ್ರಾಯಣೀಯ, ವೀರ್ಯಪ್ರವಾದ, ಅಸ್ತಿನಾಸ್ತಿಪ್ರವಾದ, ಜ್ಞಾನಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ, ಕರ್ಮಪ್ರವಾದ, ಪ್ರತ್ಯಾಖ್ಯಾನ, ವಿದ್ಯಾನುವಾದ, ಕಲ್ಯಾಣ, ಪ್ರಾಣಾವಾಯ, ಕ್ರಿಯಾವಿಶಾಲ, ಲೋಕಬಿಂದುಸಾರ ಎಂಬ ಹದಿನಾಲ್ಕು ಪೂರ್ವಗ್ರಂಥಗಳು : ಗುರುವಿನನುಮತದಿಂ ದ್ವಾದಶಾಂಗ ಚತುರ್ದಶಪೂರ್ವಂಗಳಂ ಕಲ್ತು (ಆದಿಪು. ೦೪-೦೩೯ ವ) : ದ್ವಾದಶಾಂಗ ಚತುರ್ದಶಪೂರ್ವಮಂ . . . ಕಲ್ತು (ಶಾಂತಿಪು. ೯-೦೦೩ ವ). [ಚತುರ್ದಶ + ಪೂರ್ವ]

**ಚತುರ್ದಶಭುವನ** (ನಾ). = ಚತುರ್ದಶಲೋಕ : ಈ ಚತುರ್ದಶಭುವನಮಂ ಬೆಲೆಯನಿಪ ಕೃತಿಯನವನಿಪಕೃತಿಯುಂ (ಅರ್ಜುನೀ. ೦-೪೭) : ಇಕ್ಷ್ವಾಕು ವಂಶದೊಳಗಣ ಚತುರ್ದಶ ಭುವನಪತಿಗಳೊಳಗಿಂದುತನಕಾವನುಯಿ ಹುಸಿ ಹೊದ್ದದವರಿಲ್ಲ (ಹರಿಶ್ಚ. ೨-೭) : ಏಕಾಂತರಾಮನನಂತತೇಜೋಮಹಿಮೆಯುದು ಲೋಕಾಂತವಾಯಿತ್ತೀ ಚತುರ್ದಶಭುವನಮಧ್ಯದಲಿ (ರಾಕಪು. ೩೨-೪೩) : ಈ ಕಾಳಗ ಚತುರ್ದಶಭುವನಜನ ಸಂಕ್ಷೋಭವಾಯ್ತೆಂದ (ಕುಮಾರ. ೨೨-೧೦) [ಚತುರ್ದಶ + ಭುವನ]

**ಚತುರ್ದಶಮನು** (ನಾ). ೧. ಸ್ವಾಯಂಭುವ, ಸ್ವಾರೋಚಿತ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ ಮತ್ತು ಇಂದ್ರಸಾವರ್ಣಿ ಎಂಬ ಹದಿನಾಲ್ಕು ಜನ ಮನುಗಳು. ೨. [ಜೈನ] ಪ್ರತಿಶ್ರುತಿ, ಸನ್ಮತಿ, ಕ್ಷೇಮಂಕರ, ಕ್ಷೇಮಂಧರ, ಸೀಮಂಕರ, ಸೀಮಂಧರ, ವಿಮಲವಾಹನ, ಚಕ್ಷುಷ್ಮಂತ, ಯಶಸ್ವಿ, ಅಭಿಚಂದ್ರ, ಚಂದ್ರಾಭ, ಮರುದ್ದೇವ, ಪ್ರಸೇನಜಿತು, ನಾಭಿರಾಜ ಎಂಬ ಹದಿನಾಲ್ಕು ಮನುಗಳು : ಅಜ್ಞಾನತ್ರಯರಹಿತರ್ . . . ಅಧಿಕಪ್ರಜ್ಞರ್ ಪುಟ್ಟುವರೀ ನೆಲನಾಡಜ್ಞಾಮುದ್ರಿತಮನರ್ ಚತುರ್ದಶ ಮನುಗಳ್ (ಶಂಚಾಮಾ. ೦-೭೯). 'ಕುಲಂಕರ' ಪರಾ. [ಚತುರ್ದಶ + ಮನು]

**ಚತುರ್ದಶಮಾರ್ಗಣೆ** (ನಾ). [ಜೈನ] ಜೀವಸಮಾಸದಲ್ಲಿ ಉಂಟಾಗುವ ವಿವಿಧ ರೂಪಗಳನ್ನು ವಿವರಿಸುವ ಹದಿನಾಲ್ಕು ವಿಭಾಗ : ಗತಿ, ಇಂದ್ರಿಯ, ಕಾಯ, ಯೋಗ, ವೇದ, ಕಷಾಯ, ಜ್ಞಾನ, ಸಂಯಮ, ದರ್ಶನ, ಲೇಶ್ಯಾ, ಭವ್ಯ, ಸಮ್ಯಕ್ತ್ವ, ಸಂಜ್ಞಾ, ಆಹಾರ ಎಂಬ ಹದಿನಾಲ್ಕು ಮಾರ್ಗಣಗಳು : ಗತೀಂದ್ರಿಯ ಕಾಯ ಯೋಗ ವೇದ ಕಷಾಯ ಜ್ಞಾನ ಸಂಯಮ ದರ್ಶನ ಲೇಶ್ಯಾ ಭವ್ಯ ಸಮ್ಯಕ್ [ಕ್ತ್ವ] ಸಂಜ್ಞಾಹಾರಗಳೆಂಬ ಚತುರ್ದಶ ಮಾರ್ಗಣೆಗಳೊಳಂ . . . ಸುಟುವ ಜೀವಂಗಳೆಲ್ಲಂ ಸಂಸಾರಿ ಜೀವಂಗಳೆಂಬುವಕ್ಕು (ಜೀದಸಂ. ೩-೭ ವ). [ಚತುರ್ದಶ + ಮಾರ್ಗಣೆ]

**ಚತುರ್ದಶರತ್ನ** (ನಾ). (ಸಮುದ್ರ ಮಥನದಿಂದ ಹುಟ್ಟಿದ) ಲಕ್ಷ್ಮಿ, ಕೌಸ್ತುಭ, ಪಾರಿಜಾತಕ, ಸುರೆ, ಧನ್ವಂತರಿ, ಚಂದ್ರ, ಕಾಮಧೇನು, ಐರಾವತ, ರಂಭೆ ಮೊದಲಾದ ಅಪ್ಸರೆಯರು, ಉಚ್ಚೈಶ್ರವಸ್ಸು, ವಿಷ, ಶಂಖ, ಅಮೃತ, ಹರಿಧನುಸ್ಸು ಎಂಬ ಹದಿನಾಲ್ಕು ರತ್ನಗಳು. ೨. [ಜೈನ] ಗೃಹಪತಿ, ಸೇನಾಪತಿ, ಶಿಲ್ಪಿ, ಪುರೋಹಿತ, ಸ್ತ್ರೀ, ಆನೆ, ಕುದುರೆ, ಚಕ್ರ, ಖಡ್ಗ, ಛತ್ರ, ದಂಡ, ಮಣಿ, ಚರ್ಮ, ಕಾಕಿಣಿ ಎಂಬ, ಚಕ್ರವರ್ತಿಗೆ ದೊರೆಯುವ ಏಳು ಜೀವ ರತ್ನಗಳು ಮತ್ತು ಏಳು ಅಜೀವ ರತ್ನಗಳು. 'ಅಜೀವರತ್ನ', 'ಜೀವರತ್ನ' ಪರಾ. [ಚತುರ್ದಶ + ರತ್ನ]

**ಚತುರ್ದಶಲೋಕ** (ನಾ). ಹದಿನಾಲ್ಕು ಲೋಕಗಳು : ಭೂ, ಭುವ, ಸುವ, ಮಹ, ಜನ, ತಪ, ಸತ್ಯ ಎಂಬ ಏಳು ಮೇಲಿನಲೋಕಗಳು ಮತ್ತು ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಲವೆಂಬ ಏಳು ಕೆಳಲೋಕಗಳು : ಚತುರ್ದಶಲೋಕಮನೆಯ್ದೆ ಗರ್ಭದೊಳ್ ಧರಿಯಿಸಿದಚ್ಯುತಂ ಬಳೆಯೆ ತನ್ನುದರಾಂತರದೆಡೆಯೊಳ್ (ಜಗನ್ನಾ. ೨-೯೮). ಪುಟ್ಟಿರ್ದನೀಗಳ್ ಚತುರ್ದಶಲೋಕಪ್ರಭು (ಜಗನ್ನಾ. ೩-೦೯). [ಚತುರ್ದಶ + ಲೋಕ]

**ಚತುರ್ದಶವಿದ್ಯ** (ನಾ). ೧. ನಾಲ್ಕು ವೇದ, ಆರು ವೇದಾಂಗ ಮತ್ತು ಮೀಮಾಂಸೆ, ನ್ಯಾಯ, ಧರ್ಮಶಾಸ್ತ್ರ, ಪುರಾಣ ಎಂಬ ಹದಿನಾಲ್ಕು ವಿದ್ಯೆಗಳು : ವೇದ ಚತುರ್ವೇದಾಂಗ ಷಡುವಿಧವಾದ ಸ್ಮೃತಿ ಪೌರಾಣದ್ವಯ ವಿಸ್ತಾರದ ಘನ ಮೀಮಾಂಸೆ ನ್ಯಾಯಾದ್ವಯ ವಿನಿತು ಬೆರಸಿ . . . ಚತುರ್ದಶವಿದ್ಯದೊಳಗೆಯು ಸಾತಿಶಯ ಮೀಮಾಂಸೆ ವಿಂಶತಿ ರೀತಿಯಾಗಿತುದು (ಗಗಸಾ. ೩-೦೦). ೨. [ಜೈನ] ತಂತ್ರ, ಸಾಮುದ್ರಿಕ, ಸ್ವಪ್ನ, ಜ್ಯೋತಿಷ್ಯ, ಯೋಗ, ಶಿಲ್ಪ, ಕೋಶ, ಅಶ್ವ, ಕೃಷಿ, ನಾಟ್ಯ, ವಾಸ್ತು, ರಸಾಯನ, ಧನುಷ್ಯ ಮತ್ತು ಬ್ರಹ್ಮ ಎಂಬ ಹದಿನಾಲ್ಕು ವಿದ್ಯೆಗಳು. [ಚತುರ್ದಶ + ವಿದ್ಯ]

**ಚತುರ್ದಶಿ** (ನಾ). ಚಾಂದ್ರಮಾನ ಮಾಸದ ಒಂದೊಂದು ಪಕ್ಷದ ಹದಿನಾಲ್ಕನೆಯ ತಿಥಿ : ಮಾಘ ಬ ಚತುರ್ದಶಿಯಲ್ಲು ಜಿನರಾತ್ರಿ ಮಹೋತ್ಸವಕ್ಕೆ (ಎಕ. XI, ಹೊಳಲ್ಕೆ. ೦-೨೦ : 1164) : ಆ ಪಕ್ಷಂಗಳೊಳಗೆ ಈಶ್ವರನಧಿದೇವತೆಯಾದ ಚತುರ್ದಶಿ (ವಿವೇಕ. ೩೨೦). [ಸಂ. ಚತುರ್ದಶೀ]

**ಚತುರ್ದಿಕ್ಕು** (ನಾ). ನಾಲ್ಕು ದಿಕ್ಕುಗಳು ; ಪೂರ್ವ, ಪಶ್ಚಿಮ, ಉತ್ತರ ಮತ್ತು ದಕ್ಷಿಣ : ಅಳೆದ ಭೂಮಿಯ ಚತುರ್ದಿಕ್ಕಿನ ಮೂಲೆಗಳಲ್ಲಿಯೂ ಗುರುತು ಮಾಡುವಿಕೆ (ಭೂಮಿಅ. ೦೪). [<ಸಂ. ಚತುರ್ದಿಶ್]

**ಚತುರ್ನಿಕಾಯ** (ನಾ). = ಚತುರ್ಣಿಕಾಯ : ಕೇವಲಿಪೂಜೆಗೆ ಬಂದತ್ತು ಚತುರ್ನಿಕಾಯ ದೇವನಿಕಾಯಂ (ಶಂಚಾಮಾ. ೮-೩೦) : ಚತುರ್ನಿಕಾಯಾಃ - ಭವನವಾಸಿ ವ್ಯಂತರ ಜ್ಯೋತಿಷ್ಕ ವೈಮಾನಿಕಭೇದದಿಂ ಚತುಃಸಂಘಾತಮನುಳ್ಳರಪ್ಪರ್ (ತತ್ತ್ವಸೂ. ೦೭೯). [ಸಂ. (ಚತುರ್ + ನಿಕಾಯ)]

**ಚತುರ್ನಿಕಾಯಾಮರ** (ನಾ).=ಚತುರ್ನಿಕಾಯ: ಅಂತು ಚತುರ್ನಿಕಾಯಾಮರಜನಂಬೆರಸು . . . ಪೋದಂ (ಆಪು. ೫-೬೦ ವ) : ಈ ಗತಿಚತುಷ್ಟಯದೊಳುತ್ಕೃಷ್ಟಮೆನಿಸಿದ ಚತುರ್ನಿಕಾಯಾಮರರೊಳ್ (ಮಲ್ಲಿಪು. ೧೩-೧೧೧). [ ಚತುರ್ನಿಕಾಯ + ಅಮರ೩ ]

**ಚತುರ್ನೃಪವಿದ್ಯೆ** (ನಾ). ಅರಸನು ಕಲಿತುಕೊಳ್ಳಬೇಕಾದ ನಾಲ್ಕು ವಿದ್ಯೆಗಳು ; ಸಾಮ, ದಾನ, ಭೇದ, ದಂಡಗಳೆಂಬ ಉಪಾಯಗಳು: ತ್ರಿವಿಧಶಕ್ತಿಪ್ರಯುಕ್ತನುಂ ಚತುರ್ನೃಪವಿದ್ಯಾವಿಶಾರದನುಂ (ಚಂದ್ರ ಪು. ೬-೩೫ ವ). [ ಸಂ. ಚತುರ್ನೃಪವಿದ್ಯಾ (ಚತುರ್ + ನೃಪ + ವಿದ್ಯಾ) ]

**ಚತುರ್ಬಲ** (ನಾ). ಆನೆ, ಕುದುರೆ, ರಥ, ಮತ್ತು ಕಾಲಾಳು ಎಂಬ ನಾಲ್ಕು ಬಗೆಯ ಸೈನ್ಯ; ಚತುರ್ಬಲಮಂ ನೆರಪುತ್ತುಂ . . . ಚಂಪಾಪುರಮಂ ಪರಿಯುಟ್ಟು ಮುತ್ತಿದಂ (ಪುಷ್ಪಪು. ೩-೦೨೬) ; ನೆಗಹಿ ಬೀಸುವ ಚೌರಿಗಳ ಸನ್ನೆಗೆ ಚತುರ್ಬಲವೆಲ್ಲ ದ್ರೋಣನ ದ್ಯಗುಪಥಕೆ ತೋಱಿದರಂತಂತಮ್ಮಾಳು ಕುದುರೆಗಳ (ಕುಮಾ,ದ್ರೋ. ೯-೧೬): ಚತುರ್ಬಲ ನಿಜನಾಮ ಶಿಕ್ಷೆ ವರಚೇತನ ಸೂಚನೆಯಿಂತು ಸಂಜ್ಞೆಯುಕ್ಕು (ನಾನಾರ. ೧೧೧).
[ ಸಂ (ಚತುರ್ + ಬಲ) ]

**ಚತುರ್ಭಕ್ತಿ** (ನಾ).[ಜೈನ]ನಾಲ್ಕು ಬಗೆಯ ಭಕ್ತಿ: ಅರ್ಹದ್ಭಕ್ತ್ಯಾಚಾರ್ಯಭಕ್ತಿ ಬಹುಶ್ರುತಭಕ್ತಿ ಶ್ರುತಭಕ್ತಿಯೆಂಬ ಚತುರ್ಭಕ್ತಿಯುಂ (ಚಂದ್ರಪು. ೧೦-೨೨ ವ). [ ಸಂ. (ಚತುರ್ + ಭಕ್ತಿ) ]

**ಚತುರ್ಭದ್ರ** (ನಾ). ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳು [ ಸಂ. (ಚತುರ್ + ಭದ್ರ) ]

**ಚತುರ್ಭಾವ** (ನಾ). ನಾಲ್ಕು ವಸ್ತುಗಳು : ಆ ತ್ರಿವಿಧ ಏಕವಾಗಿ ಅಪ್ಪುತತ್ತ್ವವ ಕೂಡಲಿಕ್ಕೆ ಆ ಚತುರ್ಭಾವ ಏಕವಾಗಿ ಪೃಥ್ವಿತತ್ತ್ವವ ಕೂಡಲಾಗಿ ಉತ್ಪತ್ತಿ ಎಲ್ಲಿ ಅಡಗಿತ್ತು (ಮೋಳಿಮಾ. ೬-೨೫). [ಸಂ. (ಚತುರ್+ಭಾವ)]

**ಚತುರ್ಭುಜ** (ನಾ). ೧. ನಾಲ್ಕು ತೋಳುಗಳು. ೨. ನಾಲ್ಕು ತೋಳುಗಳುಳ್ಳವನು : ವರಶು ಫಲಾಕ್ಷಸೂತ್ರ ವರದೋಚಿತಚಿಹ್ನ ಚತುರ್ಭುಜಂ ಮನೋಹರ ವೃಷಲಾಂಛನಂ (ಆದಿಪು. ೧-೮). ೩. ಹರಿ; ವಿಷ್ಣು: ಪುಣ್ಯೋದಯದಿಂ ಚತುರ್ಭುಜನೆ ಪುಟ್ಟಿದಪಂ (ಜಗವಿ.೨-೮೪); ರತಿಕಾಂತ ಹರಭಕ್ತನೀ ತೆಱದಿ ನುಡಿಯಲವ ಚತುರ್ಭುಜನ ಸತಿಯು ಕಾರುಣ್ಯ ನಿನಗಿಲ್ಲ ಎಂದತಿ ಕೋಪದಿಂ ತಿರುಗಿ ತನ್ನ ಗೃಹಕಂ ಪೋಗೆ (ಪ್ರಾಥಶಾ. ೦೫-೨೪). ೪. (ಆಲಂ) ಮದುವೆಯಾದವನು ; ವಿವಾಹಿತ : ಒಂದು ದೊಡ್ಡ ನವಕರಿಯನ್ನು ಹಿಡಿದು ಬೇಗನೆ ಚತುರ್ಭುಜನಾಗು ಎಂದು ಆಶೀರ್ವದಿಸಿದರು (ಜಮುಂತ. ೨೨೮). [ ಸಂ. (ಚತುರ್ + ಭುಜ) ]

**ಚತುರ್ಮಡಿ** (ನಾ). ನಾಲ್ಕು ಮಡಿ ; ನಾಲ್ಕರಷ್ಟು : ಇದರ ಚತುರ್ಮಡಿ ಮೊಸರ ನೀರನ್ನು ಬಿಟ್ಟು ಪಾಕ ಮಾಡುವಾಗ ಹಾಕುವ ಕಲ್ಕದ್ರವ್ಯ (ಸಕವ್ಯ. ೦೦೫). [ ಸಂ. ಚತುರ್ + ಮಡಿ೩ ]

**ಚತುರ್ಮುಖ** (ನಾ). ೧. ನಾಲ್ಕು ಮುಖಗಳನ್ನುಳ್ಳವನು ; ಬ್ರಹ್ಮ ; ಇರ್ದಂ ಜಗತ್ಪತಿಯೊಡ್ಡೋಲಗದೊಳ್ ಚತುರ್ಮುಖಂ . . . ವಾಣೀಪಥೂಟೀಸಖಂ (ಜಗವಿ. ೦-೨೬) : ಚತುರ ಚತುರ್ಮುಖನೆಲ್ಲಾ ಶ್ರುತಿಗಳ ನೊಲವಿಂದ ಕಲ್ತು (ಗಿರಿಕ. ೧-೯). ೨. [ಜೈನ] ಮಹಾಸಾಮಂತರುಂ ಮಾಡುವ ಜಿನಪೂಜೆ ; ಸರ್ವತೋಭದ್ರ ಪೂಜೆ : ಮಹಾಮಂಡಳಿಕ ಪ್ರಮುಖಮುಕುಟಬದ್ಧರ್ ಮಾಟ್ಟ ಚತುರ್ಮುಖಮುಂ (ಆದಿಪು. ೦೫-೦೩ ವ). [ <ಸಂ. (ಚತುರ್ + ಮುಖ) ]

**ಚತುರ್ಮುಖತಂತ್ರ** (ನಾ). ಬಿಂಬಾಗಮದ ಹದಿನೈದು ಭೇದಗಳಲ್ಲಿ ಒಂದು: ಚತುರ್ಮುಖತಂತ್ರ ಮಲಯತಂತ್ರ . . . ಮಹಾಸಾರಮೆಂದು ಬಿಂಬಾಗಮದ ಹದಿನೈದು ಭೇದಂಗಳು (ವಿವೇಕ. ೬೧).
[ ಚತುರ್ಮುಖ + ತಂತ್ರ ]

**ಚತುರ್ಯುಗ** (ನಾ). ಕೃತ, ತ್ರೇತಾ, ದ್ವಾಪರ ಮತ್ತು ಕಲಿ ಎಂಬ ನಾಲ್ಕು ಯುಗಗಳು : ಧರೆಯೊಳು ಚತುರ್ಯುಗಂಗಳು ಮರಳಿ ಮರಳಿ ಸಾವಿರ ಬಾರಿ ಬಂದಡಜಗೊಂದು ದಿನ (ಜಜಾ. ೨-೨೫).
[ ಸಂ. (ಚತುರ್ + ಯುಗ) ]

**ಚತುರ್ವಕ್ತ್ರ** (ನಾ).=ಚತುರ್ಮುಖ೧ (೧). [ ಸಂ.(ಚತುರ್ + ವಕ್ತ್ರ) ]

**ಚತುರ್ವರ್ಗ** (ನಾ). ಧರ್ಮ, ಅರ್ಥ,ಕಾಮ ಮತ್ತು ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳು : ಸಮನಿಪ ಧರ್ಮಕ್ಕವಿರುದ್ಧಮರ್ಥಮರ್ಥಕ್ಕೆ ಕಾಮಮವಿರುದ್ಧಮನುಕ್ರಮದೊಳ್ ಕಾಮಕ್ಕಂ ಕಡೆಮೋಕ್ಷಮವಿರುದ್ಧಮೆನೆ ಚತುರ್ವರ್ಗಫಲಂ (ಅಜಪು. ೨-೪೬).
[ ಸಂ. (ಚತುರ್ + ವರ್ಗ) ]

**ಚತುರ್ವರ್ಣ** (ನಾ). ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳು : ಭರತಚಕ್ರವರ್ತಿಯು ಔದ್ಯೋಗಿಕದೃಷ್ಟಿಯಿಂದ ಜನತೆಯನ್ನು ಚತುರ್ವರ್ಣಗಳಾಗಿ ವಿಂಗಡಿಸಿದನು (ಭಾರದ. ೦೬೨).
[ ಸಂ. (ಚತುರ್ + ವರ್ಣ) ]

**ಚತುರ್ವಲ** (ನಾ). =ಚತುರ್ಬಲ : ನೆರೆದು ಚತುರ್ವಲಂಬೆರಸು ಬಂದುಜದೊಡ್ಡಿದ ಗಂಡರಾರುಮೆನ್ನಱಿಯದ ಗಂಡರೇ (ಶಂಶಭಾ. ೦೧-೮೯).
[ <ಸಂ. ಚತುರ್ಬಲ ]

**ಚತುರ್ವಲಯ, ಚತುರ್ವಳಯ** (ನಾ). (?): ಉತ್ತರೋತ್ತರ ಚತುರ್ವಲಯ[ಪಾಠಾಂ. ಚತುರ್ವಳಯ, ಚೈತ್ರವಳಯ]ಕಾನಿದ್ದಲ್ಲಿ ಚಂದ್ರಸೂರ್ಯತಾರಾಮಂಡಲ ತಾನಿದ್ದಲ್ಲಿ (ಅವದಂ. ೮೨-೩೬೦). **ಚತುರ್ವಳಯ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[ ಸಂ. (ಚತುರ್ + ವಲಯ) ]

**ಚತುರ್ವಳಯ** 'ಚತುರ್ವಲಯ' ನೋ.

**ಚತುರ್ವಿಂಶತಿ** (ನಾ). ಇಪ್ಪತ್ತುನಾಲ್ಕು: ಚತುರ್ವಿಂಶತ್ಯರ್ಹತ್ಪ್ರತಿಮಾವಿರಾಜಮಾನ ಹೇಮದಾಮ ವಿಲಂಬಿತ ಘಂಟಾ ಸಮನ್ವಿತ ವಂದನಮಾಲೆಗಳೊಳಂ (ಆದಿಪು. ೦೬-೩೬ ವ): ಜೈನ ಪುರಾಣಗಳಲ್ಲಿ . . . ಚತುರ್ವಿಂಶತಿ ಕಾಮದೇವರೂ, ಏಕಾದಶರುದ್ರರೂ ನಿರ್ದೇಶಿಸಲ್ಪಟ್ಟಿರುವರು (ಸಾಹಿಸ. ೦೬೩). [ ಸಂ. ]

**ಚತುರ್ವಿಧ** (ಗು). ೧. ನಾಲ್ಕು ಬಗೆಯ : ನಾಲ್ಕು ರೀತಿಯ: ವನಮಾಲಾಮಹಾದೇವಿ ಪುತ್ರಕಾಮ್ಯದಿಂದಮೌಷಧಾನ್ನದಾನಾದಿ ಚತುರ್ವಿಧ ಧರ್ಮತತ್ಪರೆಯಾಗಿ (ಪುಷ್ಪಪು. ೩-೧೨೮ ವ). (ನಾ). ೨. ನಾಲ್ಕು ರೀತಿ: ನಾಲ್ಕು ಬಗೆ : ಚತುರ್ವಿಧಮಪ್ಪ ದತ್ತಿಯುಂ . . . ಆರ್ಯಷಟ್ಕರ್ಮಂಗಳಂ ನಿಮಗಿವು ಕುಲಾಚಾರಂಗಳೆಂದಱಿಯೆ ಪೇಟ್ದು ಕೈಕೊಳಿಸಿ (ಆದಿಪು. ೦೫-೦೩ ವ). [ ಸಂ. (ಚತುರ್ + ವಿಧ) ]

**ಚತುರ್ವಿಧಜೀವ** (ನಾ). ಸ್ವೇದಜ, ಅಂಡಜ. ಉದ್ಭಿಜ ಮತ್ತು ಜರಾಯುಜ ಎಂಬ ನಾಲ್ಕು ಬಗೆಯ ಜೀವಗಳು. [ಚತುರ್ವಿಧ+ಜೀವ]

**ಚತುರ್ವಿಧಪದ** (ನಾ). ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಹಾಗು ಸಾಯುಜ್ಯ ಎಂಬ ನಾಲ್ಕು ಬಗೆಯ ಮೋಕ್ಷಗಳು : ನಿಮ್ಮ ಶರಣರ ಚರಣದ ಭಕ್ತಿಯೇ ಎನಗೆ ಸಾಲೋಕ್ಯಪದವಯ್ಯ . . . ಇಂತೀ ಚತುರ್ವಿಧ ಪದಂಗಳಲ್ಲದೆ ಅನ್ಯವ ನಾನಱಿಯೆನಯ್ಯ (ಉರಿಪ. ೯೮-೮೦).
[ ಚತುರ್ವಿಧ + ಪದ೨ ]

**ಚತುರ್ವಿಧಪದವಿ** (ನಾ).=ಚತುರ್ವಿಧಪದ : ಚತುರ್ವಿಧಪದವಿಯ ಹಾರ ಅರಿಷಡ್ವರ್ಗಕ್ಕಳುಕ . . . ನಮ್ಮ ಬಸವಣ್ಣನು (ಮಹಾದೇ. ಬ. ೮೪-೨೦೮)
[ ಚತುರ್ವಿಧ + ಪದವಿ ]

**ಚತುರ್ವಿಧವಾದ್ಯ** (ನಾ). ತತ, ಅವನದ್ಧ, ಘನ ಮತ್ತು ಸುಷಿರ ಎಂಬ ನಾಲ್ಕು ಬಗೆಯ ವಾದ್ಯಗಳು. [ ಚತುರ್ವಿಧ + ವಾದ್ಯ ]

**ಚತುರ್ವಿಧಸಂಘ** (ನಾ). [ಜೈನ]ನಾಲ್ಕು ಬಗೆಯ ಶಿಷ್ಯರ ಸಂಘ: ಮಹಾವೀರನ ಶಿಷ್ಯಸಂಘಕ್ಕೆ 'ಚತುರ್ವಿಧಸಂಘ' ವೆಂದು ಹೆಸರು : ಶ್ರಮಣರು, ಶ್ರಮಣಿಯರು, ಶ್ರಾವಕರು, ಶ್ರಾವಕಿಯರು (ತೀರ್ಥಕ. ೦೦೮). [ ಚತುರ್ವಿಧ + ಸಂಘ ]

**ಚತುರ್ವಿಧಾಮರ** (ನಾ). = ಚತುರ್ಣಿಕಾಯ : ನಿರುತಂ ಭಾವನರುಂ ವನಾವಸಥರುಂ ಜ್ಯೋತಿಷ್ಕರುಂ ಕಲ್ಪವಾಸರುಮಪ್ಪಗಿರ್ದ ಚತುರ್ವಿಧಾಮರರುದಾರರ್ (ಪುಣ್ಯಪು. ೧೦-೧೩). [ ಚತುರ್ವಿಧ + ಅಮರ[3] ]

**ಚತುರ್ವಿಧಾರಾಧನೆ** (ನಾ). [ಜೈನ] ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್‌ಚಾರಿತ್ರ ಮತ್ತು ಸಮ್ಯಕ್ ತಪಸ್ಸು ಎಂಬ ನಾಲ್ಕು ಬಗೆಯ ಆರಾಧನೆಗಳು: ಸಮ್ಯಗ್ದರ್ಶನ ಜ್ಞಾನಚಾರಿತ್ರತಪಸಾಂ ಸ್ವೀಕರಣಮಾರಾಧನಾನಾಮುಮೆಂಬ ಚತುರ್ವಿಧಾರಾಧನೆಗಳನಾರಾಧಿಸಿ (ಸುಕುಮಾ. ೧೨-೪೦ ವ) : ಆನೆ ಸಜ್ಜೆಯ ಬಸದಿಯೊಳ್ ಚತುರ್ವ್ವಿಧಾರಾಧ [ನೆ] [ಯ] ನಾರಾಧಿಸಿ (ಸೌಇಇ. XX, ೫೨-೩೬ ; 1077). [ ಚತುರ್ವಿಧ + ಆರಾಧನೆ ]

**ಚತುರ್ವಿಧಾಹಾರ** (ನಾ). ೧. ಅನ್ನ, ಪಾನ, ಖಾದ್ಯ ಮತ್ತು ಲೇಹ್ಯ ಎಂಬ ನಾಲ್ಕು ಬಗೆಯ ಆಹಾರಗಳು. ೨. [ಜೈನ] ಲೇಪ್ಯಾಹಾರ, ಓಜಾಹಾರ, ಕಬಳಾಹಾರ ಮತ್ತು ಮಾನಸಾಹಾರ ಎಂಬ ನಾಲ್ಕು ಬಗೆಯ ಆಹಾರಗಳು : ರಾಗದ್ವೇಷವಿಲ್ಲದೆಯುಂ ಕೀರ್ತಿಕಾಮನಲ್ಲದೆಯುಂ ಚತುರ್ವಿಧಾಹಾರ ನಿವೃತ್ತಿಗೆಯ್ದು (ಮಲ್ಲಿಪು. ೧೦-೨೧). [ ಚತುರ್ವಿಧ + ಆಹಾರ ]

**ಚತುರ್ವೇದ** (ನಾ). ಋಕ್ಕು, ಯಜುಸ್ಸು, ಸಾಮ ಮತ್ತು ಅಥರ್ವಣ ಎಂಬ ನಾಲ್ಕು ವೇದಗಳು : ಸಂಖ್ಯಾವಾಚಿ ಸಮಾಸಕ್ಕೆ—ಏಕಾಂಗ . . . ತ್ರಿಲೋಕ, ಚತುರ್ವೇದ, ಪಂಚಭೂತ (ಶಮದ. ೮೨ ಪ್ರಯೋ) : ಸದಾಶಿವ ಮುಖದಲಾ ಚತುರ್ವೇದವುದಿಸಿದವು (ಗಗಕಾ. ೩-೪). [ ಸಂ. (ಚತುರ್ + ವೇದ) ]

**ಚತುರ್ವೇದಪಾಠ** (ನಾ). ನಾಲ್ಕು ವೇದಗಳ ಪಠನ : ಚತುರ್ವೇದಪಾಠ ತೀವ್ರವಾದರೇನು ಲಿಂಗಾರ್ಚನೆ ಹೀನನಾದರೆ ಶಿವಶಿವಾ ಬ್ರಾಹ್ಮಣನೆಂಬೆನೆ (ಬಸವ. ೫೮೮). [ ಚತುರ್ವೇದ + ಪಾಠ ]

**ಚತುರ್ವೇದಪಾರಂಗತ** (ನಾ). = ಚತುರ್ವೇದಪಾರಗ : ಅತಿಶಯದ ಚತುರ್ವೇದಪಾರಂಗತನತುಳ ಶಿವಧರ್ಮಮಾರ್ಗಾಯುತ ಪವಿತ್ರಚರಿತ್ರನು (ಬಸಪು. ೪೬-೨). [ ಚತುರ್ವೇದ + ಪಾರಂಗತ ]

**ಚತುರ್ವೇದಪಾರಗ** (ನಾ). ನಾಲ್ಕು ವೇದಗಳನ್ನು ಚೆನ್ನಾಗಿ ತಿಳಿದವನು: ಚತುರ್ವೇದಪಾರಗರ ಮನೆಯ ಮುಂದಣ ಚತುಶ್ಶಾಲೆಯೊಳ್ ಬೀಡಂ ಬಿಟ್ಟು (ಪಂಪಭಾ. ೩-೨೨ ವ) : ಸಾಸಿರ ಕವಿಲೆಯನಲಂಕಾರಸಹಿತಂ ಚತುರ್ವೇದಪಾರಗರಪ್ಪ ಸಾಸಿರ್ವ್ವರು ಬ್ರಾಹ್ಮಣರ್ಗ್ಗಂ ದಾನಂಗೊಟ್ಟ ಫಳಮಕ್ಕು (ಸೌಇಇ. XX, ೪೬-೪೩; 1072). [ ಚತುರ್ವೇದ + ಪಾರಗ ]

**ಚತುರ್ವೇದಿ** (ನಾ). ಚತುರ್ವೇದಗಳನ್ನು ಬಲ್ಲವನು : ನಿಮ್ಮ ವೇದಶಾಸ್ತ್ರಂಗಳು ಮೂರುತಿಗೊಂಡಲ್ಲಿ ಚತುರ್ವೇದಿಗಳಿಗೊಮ್ಮೆ ಅಕ್ಕಿತ್ತ ಅಯ್ಯಾ (ಬಸವ. ೫೮೫) : ಆಗಳುಂ ನಿಮ್ಮೊಲಿವ ನೋಟದಿ ಮೂಗನುಂ ಚತುರ್ವೇದಿಯಾಗನೆ ಈಗ ನಿಮ್ಮ ಕೃಪಾವಲೋಕದಿ ಹುಟ್ಟುಗುರುಡಂಗೆ ಆಗಲೆಬರವೆ ದೃಷ್ಟಿಗಳು (ಬಸಪು. ೪೭-೬೫). 'ತ್ರಿವೇದಿ' ಪರಾ. [ಸಂ. ಚತುರ್ವೇದಿನ್]

**ಚತುರ್ಹಾಯಣ** (ನಾ). ನಾಲ್ಕು ವರ್ಷದ ಕಡಸು ; ಮಣಕ .
[ ಸಂ. ಚತುರ್ಹಾಯಣೀ ]

**ಚತುಶ್ಶಾಲೆ** (ನಾ). ನಾಲ್ಕುಕಡೆಗೂ ಕೈಸಾಲೆ ಕಟ್ಟಿರುವ ಅಂಗಳ; ಚೌಕಿಗೆ: ಚತುರ್ವೇದಪಾರಗರ ಮನೆಯ ಮುಂದಣ ಚತುಶ್ಶಾಲೆಯೊಳ್ ಬೀಡಂ ಬಿಟ್ಟು (ಪಂಪಭಾ. ೩-೨೨ ವ).
[ ಸಂ. ಚತುಶ್ಶಾಲ (ಚತುರ್ + ಶಾಲಾ + –) ]

**ಚತುಷ್ಕ** (ನಾ). ೧. ನಾಲ್ಕು ; ನಾಲ್ಕರ ಗುಂಪು, – ಸಮುದಾಯ : ಶುದ್ಧಾಕ್ಷರಂಗಳುಮಂ ಯೋಗವಾಹಚತುಷ್ಕಮುಮಂ ಸಂಯೋಗಾಕ್ಷರಂಗಳುಮಂ ಬ್ರಹ್ಮಿಗೆ ದಕ್ಷಿಣಹಸ್ತದೊಳುಪದೇಶಂಗೆಯ್ದು (ಆದಿಪು. ೮-೫೯ ವ): ಪೃಥ್ವ್ಯಪ್ತೇಜೋವಾಯುರೂಪ ಧಾತುಚತುಷ್ಕವಿರಹಿತನೆ ನಾಂ (ಶಶ್ರ್ಯಪ್ರ. ೩೭೭). ೨. ಚೌಕ; ಅಂಗಳ: ಆಗಳಾ ಪುರದ್ವಾರಚತುಷ್ಕದೊಳ್ ಯದುಬಲಂ ತಳರ್ದತ್ತು (ಜಗವಿ. ೭-೪೭). [ ಸಂ. ]

**ಚತುಷ್ಕಗೋಪುರ** (ನಾ). ೧. ನಾಲ್ಕು ಗೋಪುರ. ೨. ನಾಲ್ಕು ಗೋಪುರಗಳನ್ನುಳ್ಳುದು : ವಿಭೂತಿಯನಾಂತುದಿಂತು ಕೌಶಂಬಿಪುರಂ ಜಿತಾಮರಪುರಂ ಕಮನೀಯ ಚತುಷ್ಕಗೋಪುರಂ (ಸುಕುಮಾ. ೧-೭೯).
[ ಚತುಷ್ಕ + ಗೋಪುರ ]

**ಚತುಷ್ಕಷಾಯ, ಚತುಃಕಷಾಯ** (ನಾ). [ಜೈನ]ಕ್ರೋಧ, ಮಾನ, ಮಾಯಾ ಮತ್ತು ಲೋಭ ಎಂಬ ನಾಲ್ಕು ಬಗೆಯ ಕಷಾಯಗಳು : ಜನಪತಿಮತರಚಿತವಿವಿದರ್ಥಸಲಿಲ ಧೌತಮತಿಯುಂ . . . ಚತುಷ್ಕಷಾಯಮಥನನುಂ (ಚಾವುಂಪು. ೫-೨೦). **ಚತುಃಕಷಾಯ:** ಚತುಃಕಷಾಯ [ಪಾಠಾಂ. ಚತುಷ್ಕ,ಚತುಷ್ಕಷಾಯ] ಘಾತಿತಾಶೇಷಾನುಭಾಗಾಶ್ವಕರ್ಣಕರಣಪೂರ್ವಸ್ಪರ್ಧಕಾಭಿಘಾತದಿನಂತಮುಹೂರ್ತಕಾಲದಿಂ ಕಿಡಿಸಿ (ಆದಿಪು. ೦೦-೧೪ ವ): ಚತುಃಕ[ಪಾಠಾಂ. ಷ್ಕ]ಷಾಯ ದರ್ಪದಳನನುಂ (ಅಜಪು. ೩-೧ವ).
[ ಸಂ. ( ಚತುರ್ + ಕಷಾಯ) ]

**ಚತುಷ್ಕಾಲ** (ನಾ). [ಸಂಗೀತ] ನಾಲ್ಕು ಕಾಲದ ಲಯ : ಅವರ ಪ್ರತಿದಿನದ ಸಾಧನದಲ್ಲಿ ಎಲ್ಲ ಸ್ಥಾಯಿಗಳಲ್ಲಿಯೂ ಚತುಷ್ಕಾಲದಲ್ಲಿ ಅಭ್ಯಾಸ . . . ತಾನಗಳ ಅಭ್ಯಾಸ ಇವು ಕೂಡಿದ್ದುವು (ಸಂಗೀತ. ೬೫).
[ ಸಂ. (ಚತುರ್ + ಕಾಲ) ]

**ಚತುಷ್ಕೋಣ** (ನಾ). ೧. ನಾಲ್ಕು ಮೂಲೆ : ವೇದಿಕೆಯೊಳ್ ರಂಜಿಸಿದುವೆಳನೇಸಱಂ ಸೆನೆಯಿಸುವ ಚತುಷ್ಕೋಣ ಕೋಣಮಣಿಕಲಶಂಗಳ್ (ಶಂರಾಮಾ. ೫-೧೨೭). ೨. ನಾಲ್ಕು ಮೂಲೆಗಳನ್ನುಳ್ಳ ಆಕೃತಿ ; ಚೌಕೋನ: ಹೀಗೆ ಶಂಕುವಿನ ಸಹಾಯದಿಂದ ಕಂಡುಹಿಡಿಯುವ ತ್ರಿಕೋಣ ಚತುಷ್ಕೋಣಗಳಿಗೆ "ವಸಲೆ"ಯೆಂದು ಹೇಳುವುದೂ ಉಂಟು (ಭೂಮಿಅ. ೩).
[ ಸಂ. (ಚತುರ್ + ಕೋಣ) ]

**ಚತುಷ್ಟಯ** (ಗು). ೧. ನಾಲ್ಕು ವಸ್ತು ಅಥವಾ ವಿಭಾಗಗಳನ್ನುಳ್ಳ. ೨. ನಾಲ್ಮಡಿಯಾದ ; ನಾಲ್ಕುಪಟ್ಟು ಇರುವ. (ನಾ). ೩. ನಾಲ್ಕರ ಸಮುದಾಯ,–ಗುಂಪು: ಮನ ಬುದ್ಧಿ ಚಿತ್ತ ಅಹಂಕಾರವೆಂಬ ಚತುಷ್ಟಯವ ಕಂಡು (ಪ್ರಭುಲಿಮಾ. ೧೫೦-೫೭೦); ಸಾಕು ಪಾರ್ಥನ ಬಿನ್ನಹವ ಕಡೆನೂಕದಿರು ನೆಳಲಿಂಗೆ ಬೇಜ಼ಾ ವಿವೇಕ ಚೇಷ್ಟೆಗಳೇ ಸಹೋದರರೀ ಚತುಷ್ಟಯಕೆ . . . ಬೇಜ಼ಾ ಕಾರ್ಯವ್ಯಾಕುಳತೆ ಬೇಡೆಂದು ಮುರರಿಪು ತಿರುಹಿದನು ನೃಪನ (ಕುವ್ಯಾಕ. ೧೭-೫೩). [ ಸಂ. ]

**ಚತುಷ್ಪಥ** (ನಾ). ನಾಲ್ಕು ಹಾದಿಗಳು ಕೂಡುವ ಸ್ಥಳ ; ಚೌವಟ : ಚೌಕ : ಪೂವನೆತ್ತುವ ಪುಷ್ಪಲಾವಿಕಾ ಚತುಷ್ಪಥದೊಳ್ (ಶಾಂತಿಪು. ೮-೭೨ ವ) : ಚತುಷ್ಪಥದಲ್ಲಿ ರತ್ನರಾಶಿಯಂತೆ ಮನುಷ್ಯಜನ್ಮಂ ಪಡೆಯಲರಿದು (ಶಶ್ರ್ಯಪ್ರ. ೩೩೨). [ ಸಂ. ]

**ಚತುಷ್ಪದ** (ನಾ). ನಾಲ್ಕು ಕಾಲುಗಳನ್ನುಳ್ಳುದು ; ಚತುಷ್ಪಾದಿ : ಪಕ್ಷಿ ಚತುಷ್ಪದ ಸರೀಸೃಪಾದಿ ತಿರ್ಯಗ್ಜಾತಿಗಳುಂ (ಆದಿಪು. ೧೭-೪೦ ವ).
[ ಸಂ. ]

**ಚತುಷ್ಪದಿ, ಚತುಃಪದಿ** (ನಾ). [ಛಂದ] ನಾಲ್ಕು ಪಾದಗಳನ್ನುಳ್ಳ ಒಂದು ಪದ್ಯಜಾತಿ; ಚೌಪದಿ: ಅಂತುಂ ಯತಿಯುಂ ಪೇಟ್ಗಾಪರ್ವಂತಾದ್ಯದೊಳಲಸವಾರ್ಯೆಯೊಳ್ ಕಂದದೊಳಂ ಸಂತಂ ದ್ವಿತೀಯ ಪಾದಗತಾಂತದೊಳಕ್ಕದು ಚತುಷ್ಪದೀಪದವಿಗಳೊಳ್ (ಕವಿರಾ. ೧-೭೭) : ತ್ರಿಪದಿ.

ಚತುಷ್ಪದಿ, ಷಟ್ಪದಿ, ಅಷ್ಟಪದಿ . . . ಆದಿಜಾತಿಗಳ್ [ಉಂ] ಉಂಟು (ಛಂದೋಬು. ೬. ೧-೬೭). **ಚತುಃಪದಿ :** ಉಲ್ಲಸಿತ ಜಾತಿಯಾದ ಚತುಃಪದಿ [ಪಾಠಾಂ. ಚತುಷ್ಪದಿ]ವೃಂದದೊಳ್ ಪಾಡೆ (ಅನಂಪು. ೬-೭೦ ವ).
[ ಸಂ. ಚತುಷ್ಪದೀ ]

**ಚತುಷ್ಪಾಠಿ₁** (ನಾ). ನಾಲ್ಕು ವೇದಗಳನ್ನು ಮತ್ತು ನಾಲ್ಕು ದರ್ಶನಗಳನ್ನು ಕಲಿಸುವ ಪಾಠಶಾಲೆ : ತರ್ಕ ವಾಚಸ್ಪತಿಗಳ ಚತುಷ್ಪಾಠಿಯ ಅಭಿಮುಖವಾಗಿ . . . ಪ್ರಯಾಣ ಹೊರಟರು (ನಿಬಂಧ. I, ೯೭) ; ಈ ಶಿಕ್ಷಣದ ವಿಶೇಷ ಅನುಶೀಲನೆ ಟೋಲ್‍ಗಳಲ್ಲಿಯೂ ಚತುಷ್ಪಾಠಿಗಳಲ್ಲಿಯೂ ನಡೆಯುತ್ತಿತ್ತು (ನಿಬಂಧ. I, ೩೦೭) ; ಚತುಷ್ಪಾಠೀ–ಬಂಗಾಳದಲ್ಲಿದ್ದ ವೇದ ಪಾಠಶಾಲೆಗಳು ನಾಲ್ಕು ದರ್ಶನಗಳನ್ನು ಕಲಿಸುತ್ತಿದ್ದ ಶಾಲೆಗಳು (ನಿಬಂಧ. I, ೩೦೭ ಅಡಿಟಿ). [ ಸಂ. ಚತುಷ್ಪಾಠೀ ]

**ಚತುಷ್ಪಾಠಿ₂** (ನಾ). ನಾಲ್ಕು ವೇದಗಳನ್ನು ಕಲಿತವನು; ಚತುರ್ವೇದಿ. 'ಘನಪಾಠಿ' ಪರಾ. [ ಸಂ. ಚತುಷ್ಪಾಠಿನ್ ]

**ಚತುಷ್ಪಾದ** (ನಾ). = ಚತುಷ್ಪದ : ಧರ್ಮ, ಸತ್ಯ, ದಯಾ, ದಾನವೆಂಬ ೪ ಪಾದಗಳುಳ್ಳ ಧರ್ಮವನ್ನು ಸ್ಥಾಪಿಸುತ್ತಾ, ಮಾಡಿಸುತ್ತಾ, ಚತುಷ್ಪಾದ ನಾಯಕನಾಗಿಯೂ . . . ಇದ್ದು ಸರ್ವಲೋಕಗಳಲ್ಲಿ ವಿಹಾರವಮಾಡುತ್ತಿರುವನು (ಹಸಾರ. ೬-೭ ತಾತ್ಪರ್ಯ). [ ಸಂ. (ಚತುರ್ + ಪಾದ) ]

**ಚತುಷ್ಪಾದಿ** (ನಾ). = ಚತುಷ್ಪದ : ನಾನಾ ಭೇದ ಸತ್ವವ್ರಜದೊಳಿದು ಚತುಷ್ಪಾದಿ ತದ್ಭೇದದೊಳ್ ತಾನಿದು ಶುಂಡಾಳಂ (ಸುಕುಮಾ. ೩-೭).
[ ಸಂ. ಚತುಷ್ಪಾದಿನ್ ]

**ಚತುಷ್ಷಷ್ಟಿ** (ನಾ). ಒಂದು ಸಂಖ್ಯೆ ; ಅರುವತ್ತುನಾಲ್ಕು : ಚತುಷ್ಷಷ್ಟಿ ಚಮರರುಹದ ಪೊದಟ್ದ ಪೊಳೆಪು ದೆಸೆಗೆಸೆದಿರ್ಕುಂ (ಆದಿಪು. ೧೦-೯೦).
[ ಸಂ. (ಚತುರ್ + ಷಷ್ಟಿ) ]

**ಚತುಷ್ಷಷ್ಟಿಕಲೆ** (ನಾ). = ಚೌಷಷ್ಟಿಕಲೆ : ನೋಂತು ಚತುಷ್ಷಷ್ಟಿಕಲೆಗಳು ಪೆಣ್ಬರಿಜಾಂತು ಸೇರಿದುವೊ ಎಂಬಂತೆ (ಹರಿಬ. ೧-೧೮).
[ ಚತುಷ್ಷಷ್ಟಿ + ಕಲೆ₃ ]

**ಚತುಸ್ಸಂಜ್ವಲನ** (ನಾ). [ಜೈನ] ಕ್ರೋಧ, ಮಾನ, ಮಾಯಾ, ಮತ್ತು ಲೋಭ ಎಂಬ ನಾಲ್ಕು ಕಷಾಯಂಗಳನ್ನುಳ್ಳ ಸ್ಥಿತಿ (?) : ತನ್ನ ಪರಿಣಾಮವಿಶೇಷದಿಂ ಚತುಸ್ಸಂಜ್ವಲನ ನವನೋಕಷಾಯಂಗಳೆಂಬ ಪದಿಮೂಱುಂ ಪ್ರಕೃತಿಗಳನಂತರಕರಣಂ ಮಾಡಿ (ಆದಿಪು. ೧೦-೦೪ ವ).
[ ಸಂ. (ಚತುರ್ + ಸಂಜ್ವಲನ) ]

**ಚತುಸ್ಸಮಯ** (ನಾ). ಮಾಹೇಶ್ವರ, ವೈಷ್ಣವ, ಬೌದ್ಧ ಮತ್ತು ಜೈನ ಎಂಬ ನಾಲ್ಕು ಮತಗಳು . 'ಚತುಸ್ಸಮಯಸಮುದ್ಧರಣ' ಪರಾ.
[ ಸಂ. (ಚತುರ್ + ಸಮಯ) ]

**ಚತುಸ್ಸಮಯಸಮುದ್ಧರಣ** (ನಾ). ನಾಲ್ಕು ಮತಗಳನ್ನೂ ಕಾಪಾಡುವವನು : ಶರಣಾಗತ ವಜ್ರಪಂಜ[ರರುಂ ಚ]ತುಸ್ಸಮಯಸಮುದ್ಧರಣರುಂ (ಸೌಇಇ. V, ೮೪೯-೩೦: 1044): ಚತುಸ್ಸಮಯಸಮುದ್ಧರಣರೆನಿಪ್ಪ ಮಳಯರಶ್ರೀಗೆ ನೋಂತರ್ (ಕೊಲ್ಹಾಶಾ. ೦೫-೯೦ : 1186).
[ ಚತುಸ್ಸಮಯ + ಸಮುದ್ಧರಣ ]

**ಚತುಸ್ಸಮಯಾಶ್ರಯ** (ನಾ). ನಾಲ್ಕು ಮತಗಳಿಗೂ ಆಶ್ರಯ ಕೊಡುವವನು : ಚತುಸ್ಸಮಯಾಶ್ರಯ (ಹೈಆರಿ. ೦೯೩೭, ೨೯-೦೪ : 872) ; ಧರ್ಮ್ಮಸಾರಥಿ ಚತುಸ್ಸಮಯಾಶ್ರಯಸಕಳಭುವನವಿಖ್ಯಾತಕೀರ್ತ್ತಿ (ಕಇಇ. ೦೫-೦೦-೦೫ : ಸು. 932). [ ಸಂ. (ಚತುಸ್ಸಮಯ + ಆಶ್ರಯ) ]

**ಚತುಸ್ಸಾಗರ** (ನಾ). ನಾಲ್ಕು ದಿಕ್ಕಿನ ಮಹಾಸಮುದ್ರಗಳಂ : ಬಲದಿಂ ಚತುಸ್ಸಾಗರದ ವೇಳೆಯ ಧರಾಮಂಡಲಂಗಳಂ . . . ಆಳಿಯಂಥಾಸುರಂ (ಜಿಲಪು. ೪೭-೦೨). [ ಸಂ. (ಚತುರ್ + ಸಾಗರ) ]

**ಚತುಸ್ಸಾರ** (ನಾ). [ವೀರಶೈ] (?) : ನವಸಾರ ಅಷ್ಟಸಾರ ದಶಸಾರ ಪಂಚಸಾರ ಚತುಸ್ಸಾರಯೇಕಸಾರಯೆಂತಿವನೆಶಿಗಳಿದ ಮಹಾಮಹಿಮನ ಸಿಲವು ಲಿಂಗದಲ್ಲಿ ಸಂಪೂರ್ಣ (ಪದಗೋ. ೦೩-೦೭೩). [ ಸಂ. (ಚತುರ್ + ಸಾರ) ]

**ಚತುಸ್ಸೀಮೆ** (ನಾ). ನಾಲ್ಕು ದಿಕ್ಕಿನ ಮೇರೆ: ಆ ಗ್ರಾಮದ ಚತುಸ್ಸೀಮೆಯ ವಿವರ (ಮೈಆರಿ. ೦೯೪೭, ೦೮-೯ ; 1488).
[ ಸಂ. ಚತುಸ್ಸೀಮಾ (ಚತುರ್ + ಸೀಮಾ) ]

**ಚತೂರಸ** (ನಾ). ಕಟು, ತಿಕ್ತ, ಆಮ್ಲ ಮತ್ತು ಕಷಾಯ ಎಂಬ ನಾಲ್ಕು ರಸಗಳು : (೩). [ ಸಂ. (ಚತುರ್ + ರಸ) ]

**ಚತ್ರಣ** (ನಾ). ಎತ್ತು ಹೂಡಿ ಬಾವಿಯಿಂದ ನೀರೆತ್ತುವ ಸಾಧನ : ಕಪಿಲೆ : " ಕಪಿಲೆ ಚತ್ರಣಂ " (ಶವಿಶಂ. ೨೭೦). [ ? ]

**ಚತ್ರರಿ** 'ಛತ್ರಿ₂' ನೋ.

**ಚತ್ರರಿಕೆ** 'ಚತ್ರರಿಗೆ' ನೋ.

**ಚತ್ರರಿಗೆ,** ಚತ್ರರಿಕೆ, ಛತ್ರರಿಗೆ (ನಾ). ಕೊಡೆ ; ಛತ್ರಿ : ಬೆಂಗದಿರನ ಕಿರಣ ಬೀಳದಿರಲೆಂದು ನೆಳಲಿನ ಚತ್ರರಿಗೆ ಹಿಡಿದ ಐರಾವತ (ಬಂಕನ. ೫೦-೦೨) : ನನ್ನ ಬೆನ್ನ ಮೇಲೆ ಒಂದೆರಡು ಬೆತ್ತದ-ಚತ್ರರಿಗೆಯ ಬೆತ್ತದ ಏಟುಗಳು ಬಿದ್ದಾಗ ತಿಳಿಯಿತು (ಶ್ರೀಕಾಂತ. I, ೩) : ಈ ಹುಡುಗಿ ಹೊತ್ತು ಬಂದ ಹಾಗೆ ಚತ್ರರಿಗೆ ಹಿಡಿಯುವವಳಲ್ಲ (ಅರಗಿ. ೨೩೯). **ಚತ್ರರಿಕೆ :** ಶೇಷನು ತನ್ನ ಸಾವಿರ ಹೆಡೆಗಳನ್ನು ಪಸರಿಸಿ ಕೃಷ್ಣನ ಮೇಲೆ ಚತ್ರರಿಕೆ ಹಿಡಿದನು (ಭಾದ್ಮುಕ. ೩೦೦) : ಬರಿಗಾಲಿನಿಂದ ನಡೆಯುವ ತಲೆಯ ಮೇಲೆ ಚತ್ರರಿಕೆ ಇಲ್ಲದಿರುವ ರಾಮು (ತುಳಸಿ. ೦೭೭). **ಛತ್ರರಿಗೆ :** ತಾಳೆ . . . ಎಲೆಗಳನ್ನು ಮನೆಗೆ ಹೊಚ್ಚುವರು ; ಅವುಗಳಿಂದ ಛತ್ರರಿಗೆಗಳಾಗುತ್ತವೆ (ಕಭಾಗ. ೪೦).
[ <ಸಂ. ಛತ್ರಿಕಾ ]

**ಚತ್ರಾಣ** (ನಾ) [ಕಾವ್ಯವಿ] ಕಂದ ಪದ್ಯಗಳು ಹೆಚ್ಚಾಗಿದ್ದು ಕೆಲವು ವೃತ್ತಗಳು, ಚೌಪದಿ, ಅಕ್ಕರ, ಗೀತಿಕೆ ಮತ್ತು ತ್ರಿಪದಿಗಳನ್ನು ಒಳಗೊಂಡ ಒಂದು ಬಗೆಯ ಪ್ರಾಚೀನ ಕಾವ್ಯಪ್ರಭೇದ : " ಚತ್ರಾಣಂ ಕೃತಿಭೇದಂ " (ಶಬ್ದಾನಿ. ೬೫) : " ಕಬ್ಬವೆಸರ್ ಚತ್ರಾಣವೆನಿಪ್ಪುದು " (ಛಂದೋ. ೦೦೦) : ನುಡಿಗೆಲ್ಲಂ ಸಲ್ಲದ ಕನ್ನಡದೊಳ್ ಚತ್ರಾಣಮುಂ ಬೆದಂಡೆಯುಮೆಂದೀಗಡಿನ ನೆಗಟ್ಟಿಯ ಕಬ್ಬದೊಳೊಡಂಬಡಂ ಮಾಡಿದರ್ ಪುರಾತನ ಕವಿಗಳ್ (ಕವಿರಾ. ೧-೩೨) : ಕಂದಂಗಳ್ ಪಲವಾಗಿರೆ ಸುಂದರ ವೃತ್ತಂಗಳಕ್ಕರಂ ಚವುಪದಿ ಮತ್ತಂ ದಲ್ ಗೀತಿಕೆ ತಿವದಿಗಳಂದಂಬೆತ್ತಿಸಯೆ ವೇಟ್ಟೊಡದು ಚತ್ರಾಣಂ (ಕವಿರಾ. ೧-೩೫) : 'ಚತ್ರಾಣ'ವು ದೇಸಿಗಬ್ಬವೇ ಆದರೂ . . . ಶ್ರವ್ಯವೇ ಹೊರತು ದೃಶ್ಯಕ್ಕೊಪ್ಪುವುದಲ್ಲ (ಪಾರ್ಶಿಸು. ೩೮). 'ಚಿತ್ರಾಯತನ' ಪರಾ. [ ? ]

**ಚತ್ರಾರು** (ನಾ). ಛತ್ರ ; ಸತ್ರ (?) : ಸಮರ್ಪಿಸಿ ಕೊಟ್ಟ ಧರ್ಮಸದನ ಚತ್ರಾರು ಉಂಬವೆಂತೆಂದರೆ ಕೋಲಾರುಸೀಮೆಯೊಳಗಣ ಕೊತನೂರು ಪಟ್ಟಡೆ ಸ್ಥಳದ ಕೆಂದಟ್ಟು ಗ್ರಾಮ ೧ (ಎಕ. X(8), ಕೋಲಾರ. ೩೦೯-೦೦ : ಸು. 17ನೆಯ ಶತ). [ ? ]

**ಚತ್ತು** 'ಛತ್ತು' ನೋ.

**ಚತ್ರ₁,** ಛತ್ರ₁(ನಾ). ಧರ್ಮಕ್ಕಾಗಿ ಉಚಿತವಾದ ವಸತಿ ಹಾಗು ಊಟಗಳನ್ನು ಒದಗಿಸುವ ಸ್ಥಳ ; ಧರ್ಮಾಲಯ ; ಧರ್ಮಸತ್ರ: ಬಾಡಿಗೆಯ ಮನೆಗೆ ತಿವಿದುಕೊಳ್ಳ ಚತ್ರದ ಕೊಟ್ಗಿ ಮೆಯ್ಯಾಂಪ ನಡುಮನೆಯೊಳ್ ಬಾವಿಯನಗಟ್ವ . . . ಕಟ್ಟಿಗ್ಗರಂತೆ (ಧರ್ಮಾಮೃ. ೯-೦೩೨) ; ಗೊಗ್ಗರಸಗೆ ಚತ್ರಕೆ ಅರಕೆರೆಯಲು ಬಟ್ಟ ಗಟ್ಟಿ ಕಮ್ಮ ೨೫ (ಎಕ. VII, ಶಿಮೊ. ೨೩-೧೧ : 1116). **ಛತ್ರ₁ :** ಛತ್ರದ ಗೃಹಂ ಪ್ರತಿಶ್ರಯಮಕ್ಕು (ಮಂಗರಾ. ೫೦-೯) ; ಉಭಯಂ ನಾಲ್ವತಮೂರೊನ್ನನು ನಂಮ ಛತ್ರದ ಧರ್ಮವ ನಡಸುವರಿಗೆ ತೆತ್ತು (ಎಕ. VII, ಶಿಮೊ. ೭೦-೫೨ : 1431): ವಿನಾಯಕ

ದೇವರ ಸನ್ನಿಧಿಯಲಿ ದಿನಂಪ್ರತಿ ಆರು ಮನ್ನಿ ಬ್ರಾಂಹ್ನರಿಗೆ ಛತ್ರವನೂ ಇಕಿಸಿ (ಎಕ. X, ಮುಳುಬಾ. ೨೫೯-೨೩: 1442): ಯಿಪ್ಪನೂ . . . ಛತ್ರಕೆ ಸಲವಾಗಿ ಜನಾರ್ದನದೇವರ ಸನ್ನಿಧಿಯಲಿ ಧಾರೆಯನೆಱೆದು ಬಿಟ್ಟೆವಾಗಿ (ಎಕ. XIV, ಶ್ರೀರಂಗ, ೧೯೮-೨೦ : 1598).

[ <ಸಂ. ಸತ್ರ ]

**ಚತ್ರ₂** (ನಾ). = ಚತ್ತರಿಗೆ : ಪೊಳೆವ ಮುತ್ತಿನ ಚತ್ರದ ನೆಳಲೊಳು ಬರುವಿಳೆಯಾಣ್ಮನಾರಬ್ಬನೇತ್ರ (ಕಂಸವಿ. ೨೫-೨೭). [ <ಸಂ. ಛತ್ರ ]

**ಚತ್ರಕೀಯ** (ನಾ). (?) : ಯತಿಯೊಳ್ ಗೋಪ್ಯಚೈ ತನ್ಯೊಳ್ ನೆಲಸಿ ನೆಗಟ್ಟುನಂ ಮಾರ್ಗದೊಳ್ ಚತ್ರಕೀಯಂ[ಪಾಠಾಂ. ಚಕ್ರಿಚಕ್ರಿ]ಕೃತಕೂಬಾ ಡಂಬರಂ ರಂಜಿಸುವಿನಮೆಸೆಗುಂ (ಅಜಿಪು. ೫-೦೨). [ ? ]

**ಚತ್ರಿ₂** 'ಛತ್ರಿ₂' ನೋ.

**ಚತ್ಸ** (ನಾ). ಚ ಎಂಬ ಅಕ್ಷರ : ಇರೆ ಯಲರಹಿತ ವ್ಯಂಜನ ಪರಮಾಗಿ ಸಕಾರಮಲ್ಲಿ ಬಹುಳಂ ಚತ್ಸಂ (ಶಮದ. ೬೮). [ ಸಂ. ]

**ಚತ್ವರ** (ನಾ). ೧. ಚೌಕೋನಾಕಾರದ ಅಂಗಳ : "ಅಂಗಣದಲ್ಲಿಯುಂ ಚತ್ವರಮೆಂಬುದು" (ಹಲಾಯು. ೦೬೬-೩೦); "ಗೃಹಾಂಗಣಮನುಡಿಯುತ್ತ ಚತ್ವರಮೆಂಬುದು" (ಮಂಗರಾ. ೧೧೦-೧೭). ೨. ಯಜ್ಞಕ್ಕಾಗಿ, ಸಮ ತಟ್ಟಾಗಿ ಸಿದ್ಧಗೊಳಿಸಿದ ಭೂಭಾಗ. ೩. ಹಲವು ದಾರಿಗಳು ಕೂಡುವ ಸ್ಥಳ : ಸೂಳೆಗೇರಿಗಳೊಳಂ ಚತ್ವರಂಗಳೊಳಂ ಧರ್ಮದ ಚಾವಡಿಗಳೊಳಂ . . . ತಮ್ಮ ಚಾರರಂ ನೆಲೆಗೊಳಿಸಿ (ಧಾರಿಣಾಂ. ೮೩೫-೭೦). [ ಸಂ. ]

**ಚದರ, ಚದರು₂, ಚದುರು₃** (ನಾ). ಚಚ್ಚೌಕ ; ಚೌರಸ : ಕೋಟಿ ಸುತ್ತಳತೆ ೩ ಚದರ ಮೈಲಿ (ದಿಲ್ಲಿಪ. ೩೪): ಏಷ್ಯಾಖಂಡವು ಸುಮಾರು ೧ ಕೋಟಿ ೬೦ ಲಕ್ಷ ಚದರ ಮೈಲುಗಳುಳ್ಳದ್ದಾಗಿಯೂ . . . ಇದೆ (ಭೂಗೋಳ. ೨೦). **ಚದರು₃** : (೬). **ಚದುರು₃** : 'ಚದುರುಬಿಲ್ಲೆ' ಪರಾ. [ <ಚತುರ₁ ? ]

**ಚದರಗಳ್ಳಿ, ಚತುರಕಳ್ಳಿ** (ನಾ). ಒಂದು ಬಗೆಯ ಕಳ್ಳಿ : ಬೊಂತೆಗಳ್ಳಿ, ಚದರಗಳ್ಳಿ (ಮೈಔಗಿ. ೩೫-೬೯೦). **ಚತುರಕಳ್ಳಿ** : (೬). [ ಚದರ₀+ಕಳ್ಳಿ₂ ]

**ಚದರಡಿ** (ನಾ). ಚೌರಸ ಅಡಿ ; ಒಂದು ಅಡಿ ಉದ್ದ ಹಾಗು ಒಂದು ಅಡಿ ಅಗಲವಾಗಿರುವುದು : ಗಾಳಿಗೆ ಆದರ ಮೈಯನ್ನು ಒಡ್ಡುವಾಗ ಒಂದು ಚದರಡಿ (೧೪೪ ಚದರ ಇಂಚು) ಸ್ಥಳವು ಸಿಗುವುದು (ಬಾಲಪ್ರ. I, ೪೦). [ ಚದರ + ಅಡಿ₁ ]

**ಚದರಾಸಿಸೊಪ್ಪು** (ನಾ). ಒಂದು ಬಗೆಯ ಸೊಪ್ಪು : (ಮೈಔಗಿ. ೫೪-೦೦೯೦). 'ಚೇತರಾಶಿ' ಪರಾ. [ ಚದರಾಸಿ? + ಸೊಪ್ಪು₃ ]

**ಚದರಿಸು** 'ಕೆದಱಿಸು' ನೋ.

**ಚದರು₁** 'ಕೆದಱ್₁' ನೋ.

**ಚದರು₂** 'ಚದರ' ನೋ.

**ಚದಲು** 'ಕೆದಱ್₁' ನೋ.

**ಚದಱು** 'ಕೆದಱ್₁' ನೋ.

**ಚದಿ** (ನಾ). ೧. ಮೊಂಡುತನ ; ಹಟ ; ಚಂಡಿತನ. 'ಚದಿಹಿಡಿ' ಪರಾ. ೨. ಮೋಸ ; ದ್ರೋಹ : ಆವಾಗ್ಯೆ ಅಪ್ಪಾಜೈಯನು ಈ ಗುಂಡು ಇಟ್ಟಾಡಿ ಚದಿಮಾಡಿದ ಪೂರ್ವೋತ್ತರ ಅರಿಕೆಮಾಡುವ ಬಗ್ಯೆ (ರಾಜೇಂದ್ರ. ೧೧೮) : "ನಾನು ಎಂದಿಗೂ ಚದಿಮಾಡುವುದಿಲ್ಲ" ಚೆಂಗುಮಣಿ ಪ್ರಭುಗಳ . . ಪಾದ ಹಿಡಿದು ಪ್ರಮಾಣ ಮಾಡಿದ (ಹುಲಿಹಾ. ೧೨).

[ ←ತುಳು. ಕೊಡ. ಚದಿ ]

**ಚದಿಹಿಡಿ** (ಕ್ರಿ). ಚಂಡಿತನಮಾಡು ; ಮೊಂಡು ಹಿಡಿ ; ಹಟಮಾಡು : ಮಗು ಯಾಕೋ ಚದಿಹಿಡಿದಿದೆ (ರೂಢಿ). 'ಚಂಡಿಹಿಡಿ' ಪರಾ.

[ ಚದಿ + ಹಿಡಿ₁ (<ಪಿಡಿ₁) ]

**ಚದುಂಪಿಸು** 'ಚದುಪಿಸು' ನೋ.

**ಚದುಕ** (ನಾ). ನಾಲ್ಕು ಕಂಬಗಳ ಆಧಾರವುಳ್ಳ ಮಂಟಪ : ಮುದದೆಸೆದಿರ್ಪ ಬದ್ದವಣಮುದ್ದವಣಂ ರಿಚಿ ಪಾಟವಾಟವೆತ್ತಿದ ಗುಡಿ ತೋರಣಂ ಸಸಿ ಮೊಸರ್ ಪಸೆ ಸೇಸೆ ವಿಳಾಸಿನೀಜನಂ ಚದುಕವಿವೊಡ್ಡುಗಟ್ಟಿ . . . ಕಟ್ಟಿದನಪರಾಜಿತಂಗೆ ಪರಮೋತ್ಸವದಿಂ ಯುವರಾಜಪಟ್ಟಮಂ (ಅರ್ಧನೇ. ೨-೩೯). [ <ಸಂ. ಚತುಷ್ಕ ]

**ಚದುಂಕು** 'ಸದಕಂ₁' ನೋ.

**ಚದುಪಿಸು, ಚದುಂಪಿಸು** (ಕ್ರಿ). ಮೋಸಮಾಡು ; ವಂಚನೆಮಾಡು ; ಮರುಳುಮಾಡು ; ನಂಬಿಸು : ಹೃದಯದ ಕಪಟವ ಕಾಣಿಸಿ ಕೊಳ್ಳದೆ ಮೃದುವಾಕ್ಯದಿಂದ ಸಜ್ಜನರಾ ಚದುಪಿಸಿ ಜೀವವ ಕೊಂಬ ಕೂಳರದೊಂದು ಚದುರು ಗೆಲುವರಳವಲ್ಲ (ಚಂಪ್ರಸಾಂ. ೧-೪೭) : ಇದಕೆ ನಾವೊಪ್ಪಿದೆ ವಾದರಪ್ಪಾಜಿಯ ಮೃದುಪಾದಪದ್ಮಂಗಳಾಣೆ ಚದುಪಿಸಿ ನಮ್ಮನು ಮಿಾಱಿವರಿಂತು ಮಾಡಿದರದಕೇನಾಯ್ತು ಕೇಳು (ಭರತ. ೫೬-೭೩). **ಚದುಂಪಿಸು** : ನಾಂ ಪಡೆಗೂಡಿ ಪೋಗುವೆನೆಂದು ಮಂತ್ರಿ ಚದುಂಪಿಸಿ ಬೀಳ್ಕೊಂಡನೊಡನೆ (ಭರತ. ೫೬-೨೦). [ ಚದುವು + - ಇಸು₃ ]

**ಚದುಪು** (ನಾ). ೧. ಚದುರು; ಚಾತುರ್ಯ ; ಚಮತ್ಕೃತಿ : ನಿರ್ಭಯಂ ಯುತನಾಗಿ ಕಾಳಗದ ಚದುಪನು ನಿರೀಕ್ಷಿಸನುತಾತನಂ ಸೈತಿಟ್ಟು (ಪರಶು. ೨೮-೦೫); ಬವರದೊಳು ರಥವ ಚದುಪಿಂದೆನ್ನ ಬಲವರಿದು ರಥವ ಹರಿಸು (ತುರಂಗ. ೩೬-೪೬) ; ಭೀಷ್ಮ ಚದುಪಿಂದ ಬಾಣಾಂಬುಧಿಯೊಳದ್ದಿದನು ಮಾರ್ಗವನು ಮಾರ್ಗಣಕೆ ಯಮುನಗರಿಗೆ (ತುರಂಗ. ೪೭-೦೩). ೨. ವಂಚನೆ; ಕಪಟ; ಮೋಸ: ಈ ಮನಂ ಚದುಪು ಚಾಳಿಯವೆ ಮೆಯ್ಯಾಗಿರ್ಪುದು (ಮನೋವಿ. ೪-೨); ಗನ್ನಗದುಕು ಬಱಿಯ ಬೋಸರಣೆ ಚದುಪು ಬೆಳಕ್ಕೆ ಡಾಳಕತನ (ಚಂಪ್ರಸಾಂ. ೧೮-೮೫) : ನಾಭೀಕರ್ನಕಾರವ ಚದುಪಿನಿಂದವ ಮತ್ತೆ ಸಂಧಿಸಿ ಗದೆಯೊಳಪ್ಪಳಿಸಾ ರಥಾಂಗವ ನಡೆಯೆ ಮಾಯಾವಿ (ಅಂಬಿಕಾ. ೩೮-೪೬). [ <ಚದುರ್ + - ಪು₂./ತುಳು. ಚದುಪು ]

**ಚದುರ್, ಚದುರು₂, ಚೆದುರು₂** (ನಾ). ೧. ಜಾಣತನ; ಚಾತುರ್ಯ; ಕೌಶಲ : ಬುದ್ಧಿವಂತಿಕೆ : "ಚದುರೆನೆ ಚಾತುರ್ಯಮಪ್ಪುದು" (ಚತುನಿ. ೪೪); ಏಳಿ ರತ್ನವ್ರಾತಮಂತಃಪುರಂ . . . ಎಮ್ಮನೀಡಾಡಿ ಸಲ್ಗುಂ ನಿಧನಕ್ಕಂತಪ್ಪುವಂ ಮುಂ ಬಿಸುಡುವುದೆ ಚದುರ್ (ಆದಿಪು. ೪-೭೮) ; ಜಸಮಂ ಧರ್ಮಮುಮನುಪಾರ್ಜಿಸುವೊಡೆ ಚದುರದುವೆ ನಿಟ್ಟೆ ನಿಮಗೆ (ಅಜಿಪು. ೨-೭೮) : ಚದುರಿಂ ನಾಂಟಿ ವಿವೇಕದಿಂ ನ(ದೆ)ಪಪಿ . . . ಸಂಪದದಿಂದು ಫಲಮಾಯ್ತು ಸರ್ವಜನಕಂ ಶ್ರೀಶಿಪ್ಪಕಲ್ಪದ್ರುಮಂ (ಲೋಕೋಪ. ೦೨-೬೫) ; ಚಲ್ಲವಾಡುತ್ತೆ ಚದುರೊದವೆ ಬಣ್ಣಿಸುತೆ (ಪದ್ಮರಾ. ೭-೩೦). ೨. ಮೋಸದ ಮಾತು; ಸುಳ್ಳು ನುಡಿ. 'ಚದುಪು' ಪರಾ. **ಚದುರು₂** : ೧. ಚದುರುಮಾರ್ತೀವ ಪೆಂಪುಂ ನುಡಿಯ ಬಲ್ಮೆಯುಂ (ಪಂಚತಂ. ೨೨-೧೪) ; ವಿಲಾಸದ ತಾಣಂ ಚದುರಿಂಗೆ ತಾ[ಯ್ಗು]ಱು ವಿನೋದ ಕ್ಕಾದಿ (ಸುಕುಮಾ. ೧-೬೮) ; ಚದುರುಂ ಮಿಕ್ಕಿರ್ದ ತಕ್ಕುಂ ನೆಲಸಿದ ಸೊಬಗುಂ . . . ಕೈವಿಗೆ ನೆಲನನಿತಂ ಗೆಲ್ದು (ಕಬ್ಬಿಗಾ. ೦೦೯) ; ಅತಿ ಚದುರಿನಿಂ ವಾಮಲೋಚನೆ ಪೇಳುತಿರೆ (ಬಸವು. ೧೨-೩೨) ; ಹೃದಯವನಿದಿರಿಗೆ ಕಾಣಿಸದಿರಬೇಕು ಹದಿರು ಚದುರುಗಳು ಬೇಕು (ಕುರಾಸಾಂ. ೨೪-೨೦); ಮೆಚ್ಚಿದನಭವನವನ ಚದುರಿಂಗೆ (ಚಬಪು. ೨೦-೦೩). ೩. ಚಮತ್ಕಾರದ ಮಾತು ; ವಕ್ರೋಕ್ತಿ : ಹದುರಿನ ನೆಲ ಚದುರಿನ ಚಾರಚಾವಡಿ ಮುದದ ಮಂದಿರ . . . ಎನಿಪ ಸೂಳೆಗೇರಿಯು (ಅಂಜಪ. ೩-೯೦): ಚದುರಂ ನುಡಿದ ನಾಲಗೆಯ ಮೊಟ್ಟಮೊದಲಿಗೆ ಕೊಯ್ದು (ಬಸವು. ೪೫-೨೯) ; ವಿರಹ ಮೋಹನ ಲಲ್ಲೆ ಚಲ್ಲವು ಹದುರು ಚದುರುಗಳು (ಸಾಳ್ವಭಾ. ೧೭-೨೬); ಪದಿರು ಚದುರಿನಾಗರ ರೌಳಿಯ ಪೇಟೆಯೊದವಿದ ಮೋಹನಶಾಲೆ

(ಕಂಸವಿ. ೩-೮೭) ಚೆದುರು$_2$: ೧. ಗಂಡನನ್ನೂ ಕೂಡಿಕೊಂಡು ಬಂದು ಬಾಳ್ವೆ ಮಾಡುವ ಚೆದುರು ನಿನಗಲ್ಲದೆ ಇನ್ನಾರಿಗೆ ? (ಷಟ್ಪ. ೮). ೩. ಅಳ್ಕಬಪ್ಪುಗೆ ಚೆಲ್ಲಂ ಚೆದುರೋಜೆ ಚಾಟುತನಮುಂದು . . . ಎಲ್ಲಮುವರ್ಗೇಂ ಮೈಸಂದು ಮಚ್ಚಿದುರ್ದಮೋ (ರಾಜಶೇ. ೧೦-೮೩).

[ ದೇ. ॥ ತಮಿ. ಚತುರ್ ; ತುಳು. ಚದುರ ; ತೆಲು. ಚದುರು. ]

ಚದುರ (ಗು). ೧. ಜಾಣತನದಿಂದ ಕೂಡಿದ ; ಜಾಣ್ಮೆಯ. 'ಚದುರ ಗೊಟ್ಟಿ' ಪರಾ. ೨. ಸೊಗಸಾದ ; ಮನೋಹರವಾದ. 'ಚದುರ ವಚ್ಚ', 'ಚದುರವನ' ಪರಾ. (ನಾ). ೩. ಜಾಣ ; ಬುದ್ಧಿವಂತ ; ಕುಶಲ : "ಚದುರಂ ಚತುರಂ" (ಕವಿಕಾ. ೩೫೭) ; ಆ ನಾಡವರ್ಗಳ್ ಚದುರರ್ ನಿಜದಿಂ ಕುಱಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್ (ಕವಿರಾ. ೧-೩೮) ; ಏಂ ಚದುರಂ ಗಳ ಬದ್ದ ದ ಲ್ಲ ಟ ಂ (ಪಂಪಭಾ. ೩-೮೨); ಓದುಗಳಂ ಬಲ್ಲ ಚದುರರೇನಾನುಮೊಂದನಲ್ಲಾತೆಜದಿಂ ಮಾಟ್ಪರ್ (ಪಂಚತಂ. ೭೩-೧) ; ಭುವನದಲಿ ಬಾಹಿರರಾವು ನೀವತಿ ಚದುರ ರಾದಿರಲಾ (ಕುಮ್ಯಾಳೆ. ೯-೧೭) ; ಚದುರರ ತಲೆವಣಿ ತದ್ಭವ ಮೋಕ್ಷ ಸಂಪದನ ಬಣ್ಣಿಸಲೆನ್ನ ಹವಣೆ (ಭರತ. ೧-೨೦). [<ಸಂ. ಚತುರ ]

ಚದುರಂಗ$_1$ (ನಾ). ೧. ರಾಜ, ಮಂತ್ರಿ, ಆನೆ, ಕುದುರೆ, ಒಂಟೆ, ಕಾಲಾಳುಗಳೆಂಬ ಕಾಯಿಗಳನ್ನು ಇಟ್ಟುಕೊಂಡು ಅರುವತ್ತುನಾಲ್ಕು ಮನೆಗಳ ಪಟದಲ್ಲಿ ಆಡುವ ಒಂದು ಬಗೆಯ ಆಟ : ನೆಲನೊಡ್ಡಿನಿಂದ ಚತುರಂಗಮುಮೊರ್ಮೊದಲೆ ನಡುಗಿದುದು ಕೂಡಿದ ಚದುರಂಗದ ಮಣೆಯನಲ್ಲಿದಂತಪ್ಪನೆಗಂ (ಪಂಪಭಾ. ೧೧-೭೧) ; ಚದುರಂಗದ ನೆತ್ತದ ಗೌರವದ ಗೊಟ್ಟುಗುಬಿಯುಂ ಮುಟ್ಟಂ ಮನೆಯೊಳ್ ಪಡೆದಿರಿಸುಗೆ ತಾನುಂ ಕಲ್ಪುದು ಗಣಿಕೆಗಮದನೆ ಕಲಿಪುದತಿನಯದಿಂದಂ (ಮುದಶಿ. ೧೧-೩೦) ; ಸರಿಸದ ಮೇಲೆ ಹಿಡಿಯ ಹೋದಡೆ ಚದುರಂಗದ ಮೇಲೆ ಮಸಿಯ ಕೋಱಿದ (ಬಸವ. ೭೨೪) ; ಆಡುವ ಪಗಡೆ ಲೆತ್ತ ಚದುರಂಗಂಗಳಂ ಬಿಸುಟ್ಟೋಡುತಿಹ . . . ಅಖಿಳ ಸ್ತ್ರೀಯರು (ಚಬಪು. ೧೯-೨೮). ೨. [ಸಂಗೀತ]ರಾಗದ ಒಂದು ಬಂಧ (?) : ನಿಬದ್ಧ ಗಾಯನದಲ್ಲಿ (೧) ಬರೇ ರಾಗಲಯ ಪ್ರಧಾನವಾದ ಪ್ರೌಢಬಂಧಗಳೂ (ಧ್ರುವ, ಪದ, ವರ್ಣ, ಗೀತ, ಸ್ವರಜತಿ, ತಿಲ್ಲಾನ, ತ್ರಿವಟ್, ಚದುರಂಗ, ಪಲ್ಲವಿ ಇತ್ಯಾದಿ) . . . ಕೃತಿಗಳೂ ಸೇರುತ್ತವೆ (ಭಾರತ. ೫೪೨). [<ಸಂ. ಚತುರಂಗ ]

ಚದುರಂಗ$_2$ (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು: ಬೀದಿಯ ಬದಿ ಬದಿಗೆ ಚದುರಂಗವುದುರ್ಯಾವು (ಹೂಹಾದಿ. ೪೯-೧). [?]

ಚದುರಂಗಕಾಱ (ನಾ). ಚದುರಂಗದಾಟವನ್ನು ಆಡುವವನು : ಚದುರಂಗಕಾಱರ . . . ಬೀಣೆಗಾಱರಾಗರಮನೆ ಪೆಂಪು ಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇರಿಗಳ್ (ಕಬ್ಬಿಗರ. ೪೩). [ ಚದುರಂಗ$_1$ + – ಕಾಱ ]

ಚದುರಂಧರ (ನಾ). (?): ಅದಱಿಂ ಭೃತ್ಯರ್ ನಾಲ್ವರ್ ಚದುರಂಧರರಲ್ಲಿ ವುಸಿಯನಿನಿಸೊಲ್ಲದನುಂ ಸದಮಳ ನಿರ್ಮಳನುಮಂತೆ . . . ವಿನಯಾಸ್ಪದನುಂ (ಮುದಶಿ. ೧೦-೩೫). [ ? ]

ಚದುರಗೊಟ್ಟಿ (ನಾ). ಜಾಣ್ಮೆಯ ಮಾತು; ಚತುರ ಸಲ್ಲಾಪ. 'ಚದುರಗೊಟ್ಟಿಗ' ಪರಾ. [ ಚದುರ + ಗೊಟ್ಟಿ$_1$ ]

ಚದುರಗೊಟ್ಟಿಗ (ನಾ). ಚತುರನಾದ ಮಾತುಗಾರ : ವಿಲಾಸದ ಕಣಿಯೆಲ್ಲಿದಂ ಚದುರಗೊಟ್ಟಿಗ[ಪಾಠಾಂ. ಪುಟ್ಟಿದ]ನೆಲ್ಲಿದಂ (ಆದಿಪು. ೩-೧೫) ; (ರಸರ. ೧-೮೮ ನೋ). [ ಚದುರಗೊಟ್ಟಿ + – ಗ$_2$ ]

ಚದುರತನ (ನಾ). ಜಾಣ್ಮೆ ; ಚತುರತೆ; ಚಾತುರ್ಯ: ಶನಕ್ಕೆ–ಕಲಿತನಂ, ಚದುರತನಂ, ಅಳ್ತನಂ (ಶಮದ. ೨೦೦ ಪ್ರಯೋ). [ ಚದುರ + – ತನ ]

ಚದುರತೆ (ನಾ). = ಚದುರತನ: ಆ ಹೆಣ್ಣು ನಡಿಸಿದ ಕಡು ಚದುರತೆಯನೇವೇಳ್ವೆ (ಕಂಸವಿ. ೬-೧೭೫). [<ಸಂ. ಚತುರತಾ ]

ಚದುರಭಟ (ನಾ). ಚತುರನಾದ ಭಟ, –ಸೈನಿಕ : ಲಲಿತ ಚಿತ್ರದ ಚದುರ ಭಟರವ್ವಳಿಸಿ ಹೊಯ್ದಾಡಿದರು (ಕುಮ್ಯಾದ್ರೋ. ೧೪-೮). [ಚದುರ + ಭಟ]

ಚದುರವಚ್ಚ (ನಾ). ಸೊಗಸಾದ ಆಭರಣ; ಮನೋಹರವಾದ ಒಡವೆ : ಚದುರವಚ್ಚದಿ ಕಲಿತ ಮುರಜಾನುಮೋದಕರ ತರುಣಿಯರ ಕಂಡನಾಗ (ಪಂಚಾರಾ. ೫-೪-೧೦). [ ಚದುರ + ವಚ್ಚ$_3$ ]

ಚದುರವನ (ನಾ). ಮನೋಹರವಾದ ಉದ್ಯಾನ ; ಸೊಗಸಾದ ವನ : ವಿಪಣಿಯನಂಗನ ಚದುರವನದೊಲೆಸೆದತ್ತು (ಪರಶ. ೧-೧೦೨).

[ ಚದುರ + ವನ ]

ಚದುರಸ 'ಚತುರಸ' ನೋ.

ಚದುರಸಿಕೆ 'ಚದುರಸಿಗೆ' ನೋ.

ಚದುರಸಿಗೆ, ಚದುರಸಿಕೆ (ನಾ). ಚಚ್ಚೌಕವಾದ ವಸ್ತ್ರ ; ನಾಲ್ಕು ಮೂಲೆಯಿರುವ ಮೇಲಂಹೊದಿಕೆಯ ಬಟ್ಟೆ; ಚೌಕ : ಕುದುರೆಯಿಂದಿಳಿದು ಪಲ್ಲಣಮಂ ಚದುರಸಿಗೆಯುಮಂ ಕೀಲುಮಂ ಕಳೆದು (ವಡ್ಡಾರಾ.೧೬೨-೨೦). ಚದುರಸಿಕೆ: ಗೊಲ್ಲನು ನದಿಯ ಸ್ನಾನವ ಮಾಡಿಕೊಂಡು ಮುದನ ತಿಲಕವ ಫಣೆಯೊಳಿಟ್ಟು ಚದುರಸಿಕೆಯನು ಹಾಕಿದ (ಗೋಪಾಡು. ೨೪).

[ <ಸಂ. ಚತುರಶ್ರಕ ]

ಚದುರಾಂಗರನಯ್ಯ (ನಾ). ಒಬ್ಬಾತನ ಹೆಸರು : ಇದಾರ್ಕ್ಕೆ ಸಾಕ್ಷಿ ಚದುರಾಂಗರನಯ್ಯ ಮಾರಸಿಙ್ಗನಾಯ್ಗ ಈಸರಯ್ಯ ಜಯಸಿ × × ಙ್ಗ (ಮೈಎಂ. ೧೯೪೨, ೪೭-೨೬ ; ಸು. ೮೨೦). [ ? ]

ಚದುರಿಕೆ (ನಾ). = ಚದುರತನ: ಮುರುಳೆ ಮುರುಳ್ತನದಿಂದುರ್ವರೇಶನಾಸ್ಥಾನ ರಂಗದೊಳ್ ನೀಂ ಪಿತ್ತಜ್ವರಮಾದರಂತೆ ಗಟಪುವ ಸಿರಿಸಿಲ್ಲದೆ ನುಡಿವ ಬಡತನಂ ಚದುರಿಕೆಯೇ (ಧರ್ಮಾಮೃ. ೯-೧೦೮) [ ಚದುರ್ + – ಇಕೆ ]

ಚದುರಿಗ (ನಾ). ಜಾಣ ; ಬುದ್ಧಿವಂತ : ಕುಡುವುದು ಕುಡದೊಡಂ ನಡೆಯುದು ಪಿರಿದೀಯದೊಡ ಸೊಡರ್ಗುಡಿಗೆಣ್ಣೆಯೆಱೆವಂತೆ ಬೆಲೆವೆಣ್ಗೆ ಕುಡುವುದು ಹದಕೆ ಚದುರಿಗಂ (ಅನಂಪು. ೮-೨೬).

[ ಚದುರ್ + – ಇಗ ]

ಚದುರಿಗತನ (ನಾ). = ಚದುರತನ: ಧರಣೀಪತಿಯನುಪಚರಿಸಿದನು ಚದುರಿಗತನದಿ ಧೃತರಾಷ್ಟ್ರ (ಕುಮ್ಯಾಸ. ೧೭-೪೩). [ ಚದುರಿಗ + – ತನ ]

ಚದುರಿಸು$_1$ (ಕ್ರಿ). ೧. ಜಾಣತನದಿಂದ ಮುಚ್ಚು, – ಮರೆಮಾಡು : ರಕ್ಕಸ ರಕ್ಕಿಪ ತೆಱನನು ಚದುರೆ ಚದುರಿಸದೆ ನೀನುಸುರಾ (ಉರಿವ. ೨೯-೧೧); ಇದನೊರ್ವ ತಸ್ಕರಂ ತದ್ಗುಣಾಂಬೋಧಿಯಂ ಚ[ಪಾಠಾಂ. ಚೆ]ದುರಿಸಿ ಬಳಿಕ್ಕ ಕಳ್ದೀಱೆ (ಸಮ್ಯಕ್ತ್ವ. ೧೦-೬೭). ೨. ಸೊಗಸುಗೊಳಿಸು ; ಕೌಶಲವನ್ನು ತೋರು : ಎದೆಯಲ್ಲಿ ಕೊರಳಲ್ಲಿ ಶ್ರೀಗಂಧರೇಖೆಯ ಚದುರಿಸಿ ತಿದ್ದಿತಿಲ್ಲಾಗ (ಭರತ. ೦೭-೧೫). [ ಚದುರ್ + – ಇಸು$_3$ ]

ಚದುರಿಸು$_2$ 'ಕೆದಱಿಸು' ನೋ.

ಚದುರು$_1$ 'ಕೆದಱ್$_1$' ನೋ.

ಚದುರು$_2$ 'ಚದುರ್' ನೋ.

ಚದುರು$_3$ 'ಚದರ' ನೋ.

ಚದುರುಗೆಡಿಸು (ಕ್ರಿ). ಬುದ್ಧಿಗೆಡಿಸು ; ಮಂಕುಗೊಳಿಸು ; ಮೋಸಗೊಳಿಸು : ಮಾಯೆಯ ಚಲುವಿನಂತಿರೆ ಚದುರುಗೆ[ಪಾಠಾಂ. ಕೆ]ಡಿಸಿತು ತಿಳಿಯಲರಿದೆನಿಸಿ (ಕುಮ್ಯಾಆ. ೨೩-೧೭).

[ ಚದುರುಗೆಡು (<ಚದುರ್ಗಿಡು) + – ಇಸು$_3$ ]

ಚದುರುಗೆಡು 'ಚದುರ್ಗಿಡು' ನೋ.

ಚದುರುನುಡಿ (ನಾ). ಚಾತುರ್ಯದ ಮಾತು ; ಜಾಣ್ನುಡಿ : ಕನ್ನಡ ಸಾಹಿತ್ಯದ ಐಶ್ವರ್ಯ ಅದರ ಚದುರುನುಡಿಗಳಲ್ಲಿ ಅಡಗಿದೆ (ಚಾಪ್ಪಕು. ೯೨)

[ ಚದುರು$_2$ (<ಚದುರ್) + ನುಡಿ$_2$ ]

**ಚದುರುಬಿಲ್ಲೆ** (ನಾ). ಚಚ್ಚೌಕವಾದ, ನೆಲಕ್ಕೆ ಹಾಕುವ ಬಿಲ್ಲೆ,-ಹೆಂಚು: ಚದುರುಬಿಲ್ಲೆಯ ನೆಲವು ಬಹುಬೇಗ ಕೊಳೆಯಾಗಿಬಿಡುತ್ತದೆ (ಗೃಹವಿ. ೦೭೨). [ಚದುರು₃ (<ಚದರ) + ಬಿಲ್ಲೆ ]

**ಚದುರುವಾತು** (ನಾ).=ಚದುರುನುಡಿ : ಮುದವೆತ್ತು ಕಮಲದಳಾಯತಾಕ್ಷಗೆ ಹಲಾಯುಧ ಪೇಳ್ದ ಚದುರುವಾತಿನಲಿ (ಮೋಹತ. ೦೪-೩). [ಚದುರು₂ (<ಚದುರ್) + ಮಾತು₁ ]

**ಚದುರೆ** (ನಾ). ಜಾಣೆ; ಕುಶಲೆ; ಚತುರೆ: ಶಕ್ಕನ ರಕ್ಷಿಪ ತೆಱನನು ಚದುರೆ ಚದುರಿಸದೆ ನೀನುಸಿರಾ (ಉರಿವ. ೨೯-೦೦): ತಾನವಂ ಚದುರಂ, ತಾನವಳ್ ಚದುರೆ (ಶಮದ. ೦೪೩ ಪ್ರಯೋ): ಚದುರೆಯ ಚಟುಲ ಚಕೋರಾಕ್ಷಿಗಳೊಳಗೊದವಿದ ಮೂವಣ್ಣದ ರುಚಿಯವಳೆಱೆವುದಕದೊಳೊಡವೆರೆದುಲು (ಜಯುಕಾ. ೦-೯೨); ನುಣ್ಗೊರಲು ಬೆರಲೊಂದಾದುದೆನೆ ಬಾಜಿಸಿದಳಾ ಚದುರೆ(ಸಾಳ್ವಭಾ. ೧೮-೭): ಕುದುರೆಯ ಚದುರೆಯ ಹದಿರೆರಡು ಒಂದಯ್ಯ (ಸರ್ವಜ್ಞ. ೧೭೬೭). [ಚದುರ + -ಎ₂ ]

**ಚದುರೆವೆಣ್** (ನಾ). ಜಾಣೆಯಾದ ಹೆಂಗುಸು ; ಚತುರೆಯಾದ ಸ್ತ್ರೀ: ವದನಕ್ಕೆ ಮುಸಿಸುಣ್ಣವ ಬರೆಯಿಸಿಕೊಂಡ ಚದುರೆವೆಣ್ಣಲ್ಲವೆ ನೀನು (ಕಂನವಿ. ೭-೦೮೬). [ಚದುರೆ + ಪೆಣ್ ]

**ಚದುರೇರು** (ಕ್ರಿ). ಜಾಣ್ಮೆ ಹೆಚ್ಚಾಗು ; ಚಾತುರ್ಯ ಹೆಚ್ಚಾಗು : ಹಿಂದಿನ ಸವಿಗೊರಳು ಕುದುರಿದ ಕೋಗಿಲೆಯದು ಚದುರೇರಿ ಹಾಡತೊಡಗಿದುದು (ನಾಡೂಜ. ೧೬೫). [ಚದುರ್ + ಏರು₁ (<ಏಱ್₁) ]

**ಚದುರೋಕ್ತಿ** (ನಾ).=ಚತುರೋಕ್ತಿ : ಹಸುಣರ ಜಾಳಿಗರ ಚದುರೋಕ್ತಿ ನಮಗೇಕೆಂದಳವರೊಡನೆ (ತೊರರಾ. ೨-೦-೨೭). [<ಸಂ. ಚತುರೋಕ್ತಿ ]

**ಚದುರ್ಗಿಡು, ಚದುರಂಗೆಡು** (ಕ್ರಿ). ಬುದ್ಧಿ ಮಂಕಾಗು ; ಚಾತುರ್ಯ ಕೆಡು : ಕುದುಗುಳಿ ರಕ್ಕಸರ್ ಬಿಸುಗೆಗಳ್ವೆರಸುಗ್ರಮಹಾಗಜಂಗಳಂ ಚದುರ್ಗಿಡೆ [ಪಾಠಾಂ. ಗಜಂಗಳಂ ಚೆಲುಂಗಿಡೆ ಬಿಡೆ] ನುಂಗಿ ಬಿಕ್ಕಿ ಕುಡಿದರ್ ಬಿಸುನೆತ್ತರ ಕಾಪ್ಪುರಂಗಳಂ (ಪಂಪಭಾ. ೧೨-೮); ಮದುವೆಯ ದಿವಸದಂದು ಬರವೇಟ್ಟುದು ನೀನೆಂದೆನ್ನನಂದು ನೀಂ ಚದುರ್ಗಿಡೆ ನುಡಿದೊಡಾಂ ನುಡಿದನ್ನಿಗೆ ವಂದೆಂ (ಸುಕುಮಾ. ೭-೨೨). **ಚದುರುಗೆಡು**: ಇದನು ನೀನನು ಭವಿಸಲೊಲ್ಲದ ಚದುರುಗೆಡು[ಪಾಠಾಂ. ಡೆ]ವರೆ (ತೊರರಾ. ೫-೩-೩೭). [ಚದುರ್ + ಕಿಡು (<ಕೆಡು₁) ]

**ಚದ್ದರು** 'ಚಾದರ' ನೋ.

**ಚನ** (ನಾ). ಕಡಲೆ : ಕಡಲೆ, ಚನ (ಮೃಷಿಗಿ. ೨೦-೩೮೨). [←ಹಿಂ. ಚನಾ. / ಸಂ. ಚಣಕ ]

**ಚನಕು** (ಕ್ರಿ). ರೇಗಿಸು ; ಪೀಡಿಸು ; ಕೆರಳಿಸು : ಚೇಷ್ಟೆಗಳಲಖಿಳ ದೇವಾಸುರರನು ಚನಕಿ ನಾನಾಪರಿಯ ಕುಣಿಸಿ ಕೂಗಿಸಿ ಕೊಡಹಿ ಕಿನಿಸು ಭ್ರಾಂತಿ ವಿಕಾರಿ ಎನಿಸುತಂ (ವಂಕಾರಾ. ೨-೩೫-೨೫): ನಿದ್ರೆಯುಂದಿರ್ಪ ನೀ ದೈತ್ಯಪತಿಯುವನ ಚನಕಿದರೆ ಕಲ್ಪಾಂತರುದ್ರನಂದದಲುಸುರಪಡೆಯ ನುಂಗದೆ ಮಾಣನು (ವಂಕಾರಾ. ೬-೨೫-೦೫). [←ತೆಲು. ಚೆನಕು, ಚೆಣುಕು ]

**ಚನಪೌಸ** (ನಾ). ಒಬ್ಬಾತನ ಹೆಸರು : ಶ್ರೀ ಚನಪೌಸ (ಎಕ. II, ೪೫೦: ಸು. 1000). [ ? ]

**ಚನ್ನ₁** 'ಚೆನ್ನ' ನೋ.

**ಚನ್ನ₂** (ಗು). ಮುಚ್ಚಲ್ಪಟ್ಟ ; ಆಚ್ಛಾದಿಸಿದ : ಛನ್ನ, ಚನ್ನ (ಶಬ್ದಾನು. ೧೪೨ ಪ್ರಯೋ). [<ಸಂ. ಛನ್ನ ]

**ಚನ್ನಂಗ** 'ಚೆನ್ನಂಗಿ' ನೋ.

**ಚನ್ನಂಗಿ₁** 'ಚೆನ್ನಂಗಿ' ನೋ.

**ಚನ್ನಂಗಿ₂** 'ಚಣಗ' ನೋ.

**ಚನ್ನಂಗಿನರಿ** (ನಾ). ಒಂದು ಬಗೆಯ ನರಿ : ಸೀಳುನಾಯಿ, ಕೆಂಪುನರಿ, ಚನ್ನಂಗಿನರಿ (ನಮ್ಮನು. ೨೩೯). [ಚನ್ನಂಗಿ₀ + ನರಿ ]

**ಚನ್ನಂಗಿಬಿದಿರು** 'ಚೆನ್ನಂಗಿಬಿದಿರು' ನೋ.

**ಚನ್ನಂಗಿಬೇಳೆ** (ನಾ). ಒಂದು ಬಗೆಯ ತೊಗರಿ ಬೇಳೆ : ಚನ್ನಂಗಿ ಬೇಳೆ ತುಂಬ ಬೇಗ ಬೇಯುತ್ತದೆ (ರೂಢಿ). [ಚನ್ನಂಗಿ₂ (<ಚಣಗ) + ಬೇಳೆ ]

**ಚನ್ನಂಗಿಮರ** (ನಾ). ಒಂದು ಬಗೆಯ ಮರ : (ಮೃಷಿಗಿ. ೪೯-೯೭೫). [ಚನ್ನಂಗಿ₁ (<ಚೆನ್ನಂಗಿ) + ಮರ₁ ]

**ಚನ್ನಕಳನಿ** (ನಾ). ಕೆಂಪು ಭೂಮಿ; ಕೆಬ್ಬೆ(?): ವೆಲ್ಲ ಸಮ್ಮಂಗೆ ಕೊಟ್ಟೋದು ಕಂಡುಗದಯ್ಯುಳ ಕಳನಿಯುಂ ಚನ್ನಕಳನಿವೆಲೆತೋಟ್ಟಪಟ್ಟು . . . ಮೇಲೆ ಎಣ್ಣಣ್ಣುಗಂ (ಎಕ. X, ಮುಳಬಾ. ೮೦-೭ ; 767). [ಚನ್ನ₁ (<ಚೆನ್ನ) + ಕಳನಿ (<ಕಟನಿ) ]

**ಚನ್ನಡಿ** 'ಚೆನ್ನಡಿ' ನೋ.

**ಚನ್ನತು** 'ಚೆನ್ನಿತ್ತು' ನೋ.

**ಚನ್ನಪೈಯ** (ನಾ). ಒಬ್ಬಾತನ ಹೆಸರು : ಶ್ರೀಮತ್(ಮಚ್)ಚ್ಚ(ಚ್ಚ)ನ್ನಪೈಯ ಭಟ್ಟಾಯ (ಇಇ. XII, ೨೬೭-೫೦ ; 972). [ಚನ್ನ₁ (<ಚೆನ್ನ) + ಅಪ (<ಅಪ್ಪ₁) + ಅಯ₁ (<ಅಯ್ಯ₁) ]

**ಚನ್ನಭಕ್ತಿ** 'ಚೆನ್ನಭಕ್ತಿ' ನೋ.

**ಚನ್ನಯ್ಯ** (ನಾ). ಒಬ್ಬಾತನ ಹೆಸರು: ಶ್ರೀಮಂ ಬಲದೇವನುಂ ಗೋವಣ್ಣಯ್ಯ[ನುಂ] [ಚೆ]ನ್ನಯ್ಯ × × ತದಿಬ್ಬು (ಸೌಇಇ. XI-1, ೦೩-೮ ; 869). [ಚನ್ನ₁ (<ಚೆನ್ನ) + ಅಯ್ಯ₁ ]

**ಚನ್ನರಸಿ** (ನಾ). ಚೆಲುವೆಯಾದ ಅರಸಿ ; ಸುಂದರಳಾದ ರಾಣಿ : ನನ್ನ ಚನ್ನರಸಿ ಗೌರಿ ಸತ್ತಿಲ್ಲ (ತುಂಗಭ. ೫೭). [ಚನ್ನ₁ (<ಚೆನ್ನ) + ಅರಸಿ ]

**ಚನ್ನಿ** 'ಚೆನ್ನಿ' ನೋ.

**ಚನ್ನಿಗ** 'ಚೆನ್ನಿಗ' ನೋ.

**ಚನ್ನಿಗತನ** 'ಚೆನ್ನಿಗತನ' ನೋ.

**ಚನ್ನಿಗರಾಯ** 'ಚೆನ್ನಿಗರಾಯ' ನೋ.

**ಚನ್ನು** 'ಚೆನ್ನು' ನೋ.

**ಚನ್ನೆ** 'ಚೆನ್ನೆ₁' ನೋ.

**ಚನ್ನೆಗ್ಗಿಲು** 'ಚೆನ್ನೆಗ್ಗಿಲು' ನೋ.

**ಚನ್ನೆಮಣೆ** 'ಚೆನ್ನೆಮಣೆ' ನೋ.

**ಚನ್ನೆಯ್ದಿಲ್** 'ಚೆನ್ನೆಯ್ದಿಲ್' ನೋ.

**ಚನ್ನೈದಿಲು** 'ಚೆನ್ನೆಯ್ದಿಲ್' ನೋ.

**ಚಪ** (ನಾ). ಬಿದಿರು ; ವೇಣು : "ತ್ವಚಿಸಾರಃ, ಚಪಃ, ವಂಶಃ, ವೇಣುಃ, ತ್ವಕ್ಸಾರಃ, ಮಸ್ಕರಃ-ಈ ೬ ಬಿದಿರ್" (ಹಲಾಯು. ೩೪-೫೦) : "ವಂಶಂ ಚಪಂ ಮಸ್ಕರಂ ವೇಣು ತ್ವಕ್ಸಾರಮೆನಲುಂ ಬೆಳ್ಳ ಬಿದಿರಕ್ಕು" (ಮಂಗರಾ. ೩೮-೨೩). [ಸಂ. ]

**ಚಪಕ್** (ನಾ). ಒಂದು ಅನುಕರಣ ಶಬ್ದ : ಸಣ್ಣಸಣ್ಣ ತೆರೆಗಳು 'ಚಪಕ್ ಚಪಕ್' ಯೆಂದೆನ್ನುತ್ತ . . . ಬಂದಪ್ಪಳಿಸುತ್ತಿದ್ದವು (ಪ್ರತಿಬಿಂ. ೩೦). 

**ಚಪಕಾರಕ** (ನಾ). ಬಿದಿರಿನ ಕೆಲಸಮಾಡುವವನು ; ಮೇದ : "ವಂಶಚ್ಛೇದಿ ಚಪಕಾರಕಂ ಮೇದಂ" (ಮಂಗರಾ. ೦೦೦-೨). [ಸಂ. ]

**ಚಪಗಾಲು** 'ಚಪ್ಪಂಗಾಲು' ನೋ.

**ಚಪಗೊಡಲಿ** 'ಚಪ್ಪಗೊಡಲಿ' ನೋ.

**ಚಪಡಿ** (ನಾ). (ಕರಾ) ೧. ಇಂದ್ರಜಾಲ. ೨. (ಆಲು) ಕುಯುಕ್ತಿ : ಮೋಸ : ಏನೆಲ್ಲ ಚಪಡಿಮಾಡಿ ಶ್ರೀಪಾದಂಗಳವರ ಮನಸ್ಸೇ ತಿರುಗಿಸಿಬಿಟ್ಟರೋ (ವಾಗ್ಮೀವಿ. ೩೬). [←ತುಳು. ಚಪ್ಪುಡಿ ]

**ಚಪರಾಶಿ** 'ಚಪರಾಸಿ' ನೋ.

**ಚಪರಾಸಿ,** ಚಪರಾಶಿ, ಚಪ್ರಾಸಿ, ಛಪ್ರಾಸಿ (ನಾ). ಬಿಲ್ಲೆ ಧರಿಸಿದ ಊಳಿಗದವನು ; ಕಚೇರಿಯ ಸಿಪಾಯಿ : ಚಪರಾಸಿ ದಾದೂ ಅತ್ತ ಇತ್ತ ಅಲೆದಾಡಿ ಒಳಗೆ ಬಂದು ಹೇಳಿದ (ಜೀವರಂ. ೧೩) : ಬೆಲ್ಲನ್ನು ಬಾರಿಸಿ ಒಮ್ಮೆಲೇ ಚಪರಾಸಿಯನ್ನು ಕೂಗಿದರು (ಕನಸಿ. ೧೨೪). **ಚಪರಾಶಿ :** ಚಪರಾಶಿಯೂ ಒಳಗೆ ಮ್ಯಾನೇಜರರಿಲ್ಲದ ಸಂಧಿ ಸಾಧಿಸಿ . . . ತನ್ನ ಪ್ರೇಮಪಾತ್ರದ ಕಡೆಗೆ ಹೋಗಿದ್ದ (ಮೋಜೀವ. ೭೨). **ಚಪ್ರಾಸಿ :** ಕಾರ ಕೂನ, ಗೇಟ್‌ಮನ್, ಚಪ್ರಾಸಿ,– ವ್ಯಂಜನ ವರ್ಗೀಕರಣ ! (ಚಿಂತನ. ೩೦-೧೩) ; ಚಪ್ರಾಸಿಯನ್ನು ಕರೆದು ಅಪ್ಪಣೆಕೊಟ್ಟರು (ಇಪ್ಪತ. ೮೯). **ಛಪ್ರಾಸಿ :** ಅಂವಾ ಮಾಮಲೇದಾರ. ನಾನು ಛಪ್ರಾಸಿ (ಜೀವರಂ. ೩) ; ಏ ಛಪ್ರಾಸಿ . . . ನಿನ್ನೆ ಪಾರ್ಸಲ್ ಬಂದದಲ್ಲಾ ಅದನ್ನ ತಗೊಂಡು ಬಾ (ಫಲಸಂ. ೭೦). [←ಹಿಂ. ಚಪರಾಸೀ; ಮರಾ. ಚಪರಾಸೀ, ಚಪರಾಶೀ]

**ಚಪಲ,** ಚಪಳ$_2$ (ಗು). ೧. ಅತ್ತಿತ್ತ ಚಲಿಸುವ; ಅಸ್ಥಿರವಾದ ; ಚಂಚಲ : ಚಪಲ ಚಕೋರಲೋಚನೆಯ ವಾರ್ತೆಗೆ ಚಿತ್ತಮನೊಲ್ದು ಮಾಡಿ(ಉದ್ಭಟ. ೭-೨). 'ಚಪಲಚಿತ್ತ' ಪರಾ. ೨. ವೇಗಶಾಲಿಯಾದ ; ಚಟುವಟಿಕೆಯುಳ್ಳ; ಚುರುಕಾದ: ಕುಳಿಂದಕನೆಂಬ ಬೇಡದೊರೆ . . . ಚಪಲ ಹಯವನ್ನೇರಿ ಬಿಲ್ಲು ಹಿಡಿದು ಅತಿವೇಗದಿಂದ ಬೆಂಬತ್ತಿದ (ಬಿದುರಿ. ೧೫೮). ೩. ದುಡುಕಿನ ಸ್ವಭಾವದ ; ಹಿಂದೆ ಮುಂದೆ ನೋಡದೆ ಮುನ್ನುಗ್ಗುವ ; ವಿವೇಕವಿಲದೆ ತಪ್ಪುಮಾಡುವ. ೪. ಕ್ಷಣಿಕವಾದ ; ಆ ಕ್ಷಣದ. ೫. ತಲ್ಲಣಗೊಂಡ ; ತಳಮಳ ಹೊಂದಿದ. (ನಾ). ೬. ಚಂಚಲತೆ ; ಅಸ್ಥಿರತೆ. ೭. ವೇಗ ; ಶೀಘ್ರತೆ. ೮. ಪಾದರಸ ; ಪಾರದ : "ಪಾರದಂ ಚಪಲಮನೆ ರಸಮೆನಿಕ್ಕುಂ" (ಮಂಗರಾ. ೯೭-೧೫). ೯. ತೀವ್ರವಾದ ಆಸೆ; ವಿಶೇಷಾಸಕ್ತಿ: ಯಾವ ಕರ್ಮಶೇಷ ನನ್ನಲ್ಲಿಂತಹ ಚಪಲವನ್ನು ಪ್ರೇರೇಪಿಸುತ್ತಿದೆ? (ಬಿತಂಬಾ. ೨೨): ಓಡುವ ಕುದುರೆಯನ್ನು ಕಂಡಾಗ ನಾನೂ ಸವಾರಿ ಮಾಡಬೇಕೆಂಬ ಚಪಲ ಮನಸ್ಸಿಗೆ (ಹುಡುಹು. ೧೭) : ನೀವೂ ಕೂಡ ಶೀರ ಅಜ್ಜರ ಹಾಗೆ ಚಪಲ ಪಡುತ್ತೀರಲ್ಲ (ಮೂಂಗಲ್. ೩೫). ೧೦. ಚಂಚಲ ಸ್ವಭಾವದವನು; ಚಪಲಚಿತ್ತ: ಚಪಲಂ ಪೇಳದ ಪಂದೆ ಬೆರ್ಚದಿದಿರೊಳ್ ಮಾತಾಡೆ (ಶಂರಾಮೂ. ೧೨-೭೪). ೧೧. ವೇಗಶಾಲಿಯಾದವನು; ಚುರುಕಾದವನು: ಚಪಲನಾದ ನಾಯಕನು ಚಾತುರ್ಯದಿಂದ ಖಡ್ಗಕ್ಕೆ ತನ್ನ ಢಾಲನ್ನೊಡ್ಡಿ ಹೊಡೆತವನ್ನು ತಪ್ಪಿಸಿಕೊಂಡನು (ಕುಮುದಿ. ೧೭). ೧೨. ಒಂದು ಬಗೆಯ ಸಸ್ಯ : "ಪರ್ಪಣಃ – ಪಾಪ, ಚಪಲ, ಗೇರು" (ಒಷಧಿ. ೯೦). ೧೩. ವಾಯು. 'ಚಪಲವೇಗಿ' ಪರಾ. **ಚಪಳ$_2$ :** ೧. ಚಪಳ ಕಪಿ ವನಮುದಾನೇಕಪಕ್ಕೆ ಪಕ್ಕಾಗೆ ಪೊಕ್ಕು (ಶಾಂತಿಪು. ೨-೧೧೧) : ಚಪಳ ವಿಶಾಳಲೋಚನೆ ಜಯಾಂಗನೆ ಧಾರೆಯೊಳಿರ್ದು ನೋಡಿ ಮನ್ನಿಪಳ್ (ಅನಂಪು. ೨-೭). ೬. "ಲೋಲಂ, ಚಪಳಂ . . . ಸಂಚಳಂ– ಈ ೧೦ ಸಂಚಳಂ" (ಹಲಾಯು. ೧೧೫-೧೦). ೭. "ದ್ರಾಕ್, ಚಪಳಂ, ಲಘು . . . ಝಟಿತಿ–ಈ ೧೬ ಶೀಘ್ರಂ" (ಹಲಾಯು. ೧೧೬-೧೨). ೧೦. ಬಂಚಿಸಿ ತನ್ನನುಜೆಯ ಧನಮಂ ಚಪಳಂ ಕೊಂಡು ಪುಸಿದು ಕಳವಳಿಸಿ ಖಳಂ ಪಂಚತ್ವಮನೈದಿ . . . ಈಗಳಲ್ತೆ ವಾನರನಾದಂ (ಆದಿಪು. ೫-೧೮): ತಪಸ್ವಿಗಳುಮೆಯ್ದೆ ಮನಮಂ ತಗೆಯಲ್ಪಡೆಯರೆನೆ ಚಪಳರಕ್ಕಟ ಪಡೆದಪರೆ (ಅಜಿಪು. ೨-೯೦) ; ಚಪಳನಿವಂ ಕಡುಗಟಿಪಂ ವಿಪರೀತಮನೆನ್ನ ಮುಂದೆ ನುಡಿದಪಂ (ಧರ್ಮಾಮೃ. ೭-೧೪): ಇಂತಪ್ಪ ಚಪಳರೆಮ್ಮೂರೊಳಗೆ ಮಱಿದಿಲ್ಲ (ನಂಬಿರ. ೭-೨೬). [ಸಂ.]

**ಚಪಲಚಿತ್ತ** (ನಾ). ಚಂಚಲವಾದ ಮನಸ್ಸುಳ್ಳವನು ; ಅಸ್ಥಿರಬುದ್ಧಿಯವನು: ನಮ್ಮ ಈ ಭೌತವಿಜ್ಞಾನಿಯೆನಿಸಿಕೊಳ್ಳಬೇಕೆಂಬ ಚಪಲಚಿತ್ತರಿಗೆ ತಮ್ಮನ್ನು ಹುಡುಕಿಕೊಳ್ಳುವ ಆಶೆಯೂ ಇಲ್ಲ (ಜೀವಾತ್ಮ. ೧೧೬).
[ ಚಪಲ + ಚಿತ್ತ ]

**ಚಪಲತನ,** ಚಪಳತನ (ನಾ). ೧. ಅತ್ತಿತ್ತ ಚಲಿಸುವಿಕೆ ; ಚಂಚಲತೆ : ಅಸ್ಥಿರತೆ: (ಕ). **ಚಪಳತನ:** ೨. ಅವಿವೇಕ; ದುಡುಕುತನ: ಆನಪ್ಪೊಡೆ ದೇವತೆಯೆಂ ನೀನಱಿಯದೆ ಕೂರ್ವ ಚಪಳತನದಿಂದೆನ್ನಂ ಮಾನಿಸಿಯೆಂಗೆತ್ತು ನುಡಿದೈ (ಧರ್ಮಾಮೃ. ೩-೧೧೨). [ ಚಪಲ + –ತನ ]

**ಚಪಲತಾಸಂಗ** (ನಾ). ೧. ಎಳೆಯ ಬಿದಿರಿನ ಸಂಬಂಧ. ೨. ಚಂಚಲತೆಯ ಸಂಪರ್ಕ. ೧, ೨ : ಚಪಲತಾಸಂಗಂ ವಿಪತ್ಪಕ್ಷಮದ್ರಿಗಳೊಳ್ . . . ಒಪ್ಪುಗುಮುರ್ವೀಶರೊಳೊಪ್ಪದು (ಪುಷ್ಪಪು. ೫-೫೬).
[ ಸಂ. (ಚಪ + ಲತಾ + ಸಂಗ; ಚಪಲತಾ + ಸಂಗ) ]

**ಚಪಲತೆ,** ಚಪಳತೆ (ನಾ). ೧=ಚಪಲತನ ೧: ಕಪಿಗೆ ಚಪಲ [ಪಾಶಾಂ. ೪]ತೆ ಸಹಜಂ (ಗದಾಯು. ೩-೪೦). ೨. ಹೊಂದಿಕೆ ಇಲ್ಲದಿರುವಿಕೆ; ಅಸಂಬದ್ಧತೆ. ೩. ಕಳವಳ; ಉದ್ವೇಗ. ೪. ಚುರುಕುತನ; ತೀವ್ರತೆ. ೫.[ಕಾವ್ಯವಿ] ಸಂಚಾರಿಭಾವಗಳಲ್ಲಿ ಒಂದು; ಮನಸ್ಸಿನ ಅಸ್ಥಿರತೆ,– ವ್ಯಗ್ರತೆ: ಮತಿ ನಿರ್ವೇದ . . . ಚಪಲತಾಲಸ್ಯ . . . ಮೃತಿಗಳಿವಿಂತೆಯ್ದೆ ಸಂಚಾರಿ ಭಾವಂ (ಕಾವ್ಯಾವ. ೭೯೫): ಮತಿ ಲಜ್ಜೆ . . . ಚಪಲತೆ . . . ಅಪಸ್ಮಾರಗಳೆಂಬ ಮೂವತ್ತುಮೂಱು ಸಂಚಾರೀಭಾವಂಗಳಿಂ (ವಿವೇಕ. ೨೨೬). **ಚಪಳತೆ :** ೧. ಸವಿೂಪದೊಳಂ ಚಪಳತೆಯೊಳಂ ಪದನೆರಡು ಸೂಟುಚ್ಚರಿಪುದು (ಶಮದ. ೧೯೫ ವೃತ್ತಿ) ; ಆವ ಸಾಧನದಿಂದ ಚಪಳತೆ ಭಾವ ಸಂಶಯವಳಿದು ಮುಚ್ಚಿರುವೀ ವಿಷಯಸುಖದೆಳಲನೆಂತೊೀಕರಿಸಿ ಬಿಸುಡುವುದು (ಗಗಶಾ. ೧೩-೯). [ ಸಂ. ಚಪಲತಾ ]

**ಚಪಲತ್ವ** (ನಾ).=ಚಪಲತನ ೧ : ಚಪಲತ್ವಂ ಪರಿದೆಯ್ದೆ ತನ್ಮರಕೆ ಬಂದು (ದಿವ್ಯದ. ೧೨-೧೧). [ ಸಂ. ]

**ಚಪಲವೇಗಿ** (ನಾ). [ಜೈನ] ಒಂದು ವಿದ್ಯೆಯ ಹೆಸರು ; ವಾಯುವಿನಂತೆ ವೇಗವಾಗಿರುವ ಸಾಮರ್ಥ್ಯ : ಮನೋವೇಗಿ ಚಂಡವೇಗಿ ಚಪಲವೇಗಿ . . . ಎಂಬಿವು ಮೊದಲಾಗಿ ಕುಲವಿದ್ಯೆ ಜಾತಿವಿದ್ಯೆಗಳೊಳ್ ಸಂಪನ್ನನಾಗಿರ್ದು (ಚಾವುಂಪು. ೨೧೧). [ <ಸಂ. ಚಪಲವೇಗಿನೀ ]

**ಚಪಲಾಕ್ಷಿ,** ಚಪಳಾಕ್ಷಿ (ನಾ). ೧. ಚಂಚಲವಾದ ಕಣ್ಣುಗಳನ್ನುಳ್ಳವಳು : ಚಂಚಲಾಕ್ಷಿ. ೨. ಮಿಂಚನ್ನೇ ಕಣ್ಣಾಗಿ ಉಳ್ಳವಳು. ೧, ೨: ಚಪಲಾಕ್ಷಿ ಘನಾಗಮಲಕ್ಷ್ಮಿ ಕಂಡು ಹರ್ಷದಿನುಗುತಿರ್ಪ ಕಣ್ಬನಿಯ ಸೋನೆವೊಲಾದುವು ಭೂರಿವೃಷ್ಟಿಗಳ್ (ಜಗವಿ. ೪-೩೦). **ಚಪಳಾಕ್ಷಿ:** ೧. ಮಱಿ ಬಂದು ನೀಂ ಬನಕ್ಕಂ ಚಪಳಾಕ್ಷಿ ನಿನ್ನ ನಡೆಯಂ ನುಡಿಯಂ ಮುಡಿಯಂ ವಿನೋದದಿ (ಚಂದ್ರಪು. ೭-೭೬).
[ ಸಂ. ಚಪಲಾಕ್ಷೀ (ಚಪಲ + ಅಕ್ಷಿ + –) (ಚಪಲಾ + ಅಕ್ಷಿ + –) ]

**ಚಪಲಾವೇಗ** (ನಾ). ಮಿಂಚಿನ ವೇಗ : ಚಪಲವೇಗಂ ನೆಗೆದಂ ಗಗನಕ್ಕೆ ವಿಜಿತಚಪಲಾವೇಗಂ (ಶಂರಾಮೂ. ೪-೧೧೩).
[ ಸಂ. (ಚಪಲಾ + ವೇಗ) ]

**ಚಪಲೆ,** ಚಪಳೆ (ನಾ). ೧. ಚಪಲ ಸ್ವಭಾವದಳು; ಚಂಚಲೆ: ಅತಿಮನದ ಚಪಲೆ [ಪಾಶಾಂ. ೪]ಯರು ಮೋಹಿಸಿತರಸನಿದಿರಿನಲಿ (ಕಿರಾರಾ. ೧-೫-೨೮). ೨. ಮಿಂಚು; ವಿದ್ಯುತ್ತು: "ಶಂಪಾ, ಚಪಲಾ, ಕ್ಷಣಿಕಾ . . . ಐರಾವತೀ (ಚ ವಿಜ್ಞೇಯಾ ಈ ೧೧ ಮಿಂಚು" (ಹಲಾಯು. ೧೦-೬೦) ; "ಚಪಲೆ ಚಂಚಲೆಯೆನಲು ಮಿಂಚೆನಿಕ್ಕುಂ" (ಮಂಗರಾ. ೧೩-೪). ೩. ಹಿಪ್ಪಲಿ. **ಚಪಳೆ:** ೧. ಲಕ್ಷ್ಮೀಕಾಂತ ಕರಂ ಚಪಳೆ ಸೊಡರ ಕುಡಿಯಂ ಪೋಲ್ವಳ್ (ಕಾದಂಪೂ. ೫೫೧) ; ನಿಷ್ಠುರ ಚಪಳೆಯರು ದುರ್ವ್ಯಸನಿಯರು ಜನಮೋಹ ಪಾಶೆಯರು (ಬಸವಪು. ೪೦-೫೪). [ ಸಂ. ಚಪಲಾ ]

**ಚಪಳ$_1$** 'ಚಪ್ಪಳ$_2$' ನೋ.

**ಚಪಳ$_2$** 'ಚಪಲ' ನೋ.

**ಚಪಳತನ** 'ಚಪಲತನ' ನೋ.

**ಚಪಳತೆ** 'ಚಪಲತೆ' ನೋ.

**ಚಪಳಾಕ್ಷಿ** 'ಚಪಲಾಕ್ಷಿ' ನೋ.

**ಚಪಳಿಕೆ** (ನಾ). = ಚಪಲತನ ೧ : "ಚಾಪಲ್ಯಂ = ಚಪಳಿಕೆಯಂ" (ನೀತಿಶಾ. ೨೩-೫೨); ಕಪಿ ಚಾವಟೆಯ ಚಪಳಿಕೆ ನಮ್ಮೊಡನೆ ವಿಸ್ಮಯವೆ (ತೊರರಾ. ೬-೨೨-೧೪). [ ಚಪಳ$_2$ (=ಚಪಲ) + - ಇಕೆ ]

**ಚಪಳಿಗ** (ನಾ). ಚಪಲನಾದವನು; ಚಂಚಲಚಿತ್ತ: ಅತಿ ಚಪಳಿಗ ಜಂಗಮ ಸಂಸಾರಿಯಾದ ಭಕ್ತ ನಿಃಸಂಸಾರಿಯಾದ ವೈರಾಗ್ಯ ಸಂಸಾರನಿಷ್ಠ ಒಂದಾದಡೆ ತೆಜಹಿಲ್ಲ ಕೂಡಲ ಚನ್ನಸಂಗಯ್ಯ ನಿಮ್ಮಲ್ಲಿ (ಚನ್ನವ. ಕೆ. ೩೩೯-೭೦೨).

[ ಚಪಳ$_2$ (=ಚಪಲ) + - ಇಗ ]

**ಚಪಳೆ** 'ಚಪಲೆ' ನೋ.

**ಚಪಾಡಿಸು** (ಕ್ರಿ). (ತಿನ್ನುವಾಗ) ಬಾಯಿ ಚಪ್ಪರಿಸು; ಚಪಚಪ ಸದ್ದು ಮಾಡು : (ಸ). 'ಚಪ್ಪರಿಸು' ಪರಾ. [ ಚಪ$_2$ + ಆಡಿಸು ]

**ಚಪಾತಿ** (ನಾ). ಲಟ್ಟಣಿಗೆಯಿಂದ ಲಟ್ಟಿಸಿ ಮಾಡಿದ ಗೋಧಿಯ ರೊಟ್ಟಿ; ಬಿಳಿಹೋಳಿಗೆ (ಉಕ) : ಮರುದಿನದಿಂದ ಮನೆಯಲ್ಲೇ ಚಪಾತಿ ಮಾಡಲಿಕ್ಕೆ ಸುರುವಾಯಿತು (ವ್ಯನಿ. ೨೦೭): ಚಪಾತಿ ಅಭ್ಯಾಸ ಮಾಡು ಯಶೋದಾ, ದೇಹಕ್ಕೆ ಒಳ್ಳೆಯದು (ವಾತ್ಸಲ್ಯ. ೪೭).

[ ←ಹಿಂ. ಮರಾ. ಚಪಾತೀ./ಪ್ರಾ. ಛಪ್ಪತ್ತಿಆ ]

**ಚಪೇಟ** (ನಾ). ಬೆರಳುಗಳನ್ನು ಬಿಚ್ಚಿ ಹಿಡಿದ ಅಂಗೈ; ಬಿಚ್ಚಿದ ಕೈ : ಘಾತಿಸಿ ಚಪೇಟ ಚರಣಾಘಾತದೊಳ್ (ಆದಿಪು. ೫-೦೭); ಭೀಮಸೇನನ ಚಲಗತಿಯ ಚಾತುರ ಚಪೇಟ ಪದಪ್ರಹಾರದಲಿ (ಕುಮಾ.ಗ. ४-೨೩); ಚಾತುರಂಗವನುರುಚಪೇಟನಿಘಾತದಲಿ ನಿರ್ಮೈಸಿ (ತೊರರಾ. ೬-೩೯-೨೦).

[ ಸಂ. ]

**ಚಪೇಟಕ** (ನಾ).=ಚಪೇಟ : ಇಟ್ಟಣಿಸಿ ನಗುತವಳು . . . ಮುನಿಪನ ತೊಟ್ಟುಳಿಕೆಯಲಿ ಚಾಚಿದಳು ಚಾಪಳ ಚಪೇಟಕವ[ಪಾಠಾಂ.ದ ಚೇಷ್ಟೆಯಲಿ] (ತೊರರಾ. ೧-೦೦-೦೨) : ಅರಿಯ ಕೊರಳಿಗೆ ಚಾಚು ಚಪಳ ಚಪೇಟಕವ ಚೂರಿಸುವ ಖಂಡೆಯವ (ತೊರರಾ. ೬-೪೫-೩೭). [ ಸಂ. ]

**ಚಪೋಡು** 'ಚಪ್ಪೋಡು' ನೋ.

**ಚಪ್ಪಂಗಾಲು, ಚಪಗಾಲು** (ನಾ).=ಚಕ್ಕಳಬಕ್ಕಳ: ತಾಯಿಯೂ ಮಗಳೂ . . . ಚಪ್ಪಂಗಾಲು ಹಾಕಿಕೊಂಡು ಕುಳಿತರು (ಮಲೆನಾ. ೦೩೯). **ಚಪಗಾಲು:** ಒಳಗೊಬ್ಬ . . . ಚಪಗಾಲು ಹಾಕಿಕೊಂಡು ಕುಳಿತಿರುವುದು ಮಸಮಸಕಾಗಿ ಕಾಣಿಸುತ್ತಿತ್ತು (ಪೂರ್ವರಂ. ४).

[ ←ತಮಿ. ಚಪ್ಪಣಮ್ಮಾಲ್ ]

**ಚಪ್ಪಕೊಡಲಿ** 'ಚಪ್ಪಗೊಡಲಿ' ನೋ.

**ಚಪ್ಪಗೆ** 'ಸಪ್ಪಗೆ' ನೋ.

**ಚಪ್ಪಗೊಡಲಿ, ಚಪಗೊಡಲಿ, ಚಪ್ಪಕೊಡಲಿ, ಚಿಪ್ಪಗೊಡಲಿ** (ನಾ). ಚಪ್ಪಟೆಯಾದ ಕೊಡಲಿ ; ತೆಳ್ಳಗಿರುವ ಅಲಗನ್ನುಳ್ಳ ಅರ್ಧಚಂದ್ರಾಕೃತಿಯ ಕೊಡಲಿ ; ಗಂಡುಗೊಡಲಿ : ದರ್ಪವುಳ್ಳ ಮಹಾಮಾಯಿ ಅರಣ್ಯಕ್ಕೆ ಚಪ್ಪಗೊಡಲಿಯಾಗಿ ಇರುತಿಪ್ಪುದೀ ಚರಣ (ವಿಸ್ತ್ರಾಸು. ೭೯-४); ಕಣೆಗಳಂ ಭಾರ್ಗವನ ಚಪ್ಪಗೊಡಲಿಯನರಿಯವೇಳ್ಕೆಂದು ತುಳ್ಕುತಂ (ಪರಬು. ೨೦-೦೦). **ಚಪಗೊಡಲಿ :** ನನ್ನ ಕೈಗೆ ಒಳ್ಳೆಯ ಹದನವಾದ ಚಪಗೊಡಲಿಯನ್ನು ಕೊಟ್ಟು . . . ಟೊಂಕಕ್ಕೆ ಹಗ್ಗ ಕಟ್ಟಿದರು (ಮೇದಿಮ. ೦೩). **ಚಪ್ಪಕೊಡಲಿ:** ಪರಶುರಾಮ (ತನ್ನ ಚಪ್ಪಕೊಡಲಿಯ ಕಡೆಗೆ ನೋಡುತ್ತ) (ತುಳಸಿ. ೮೩). **ಚಿಪ್ಪಗೊಡಲಿ :** ಮೃಡನಾತ್ಮಸಂಭವ ಬಿಲ್ಲ ಬಿಸುಟು ಚಿಪ್ಪಗೊಡಲಿಯ ಕೊಂಡಾರ್ಭಟಿಸಿ ಹೊಡೆದರೆ ಬಲರಾಮನ ಕೆಯ್ಯ ಕಾರ್ಮುಕ ಕಡೆದುದು ತುಂಡಾಗಿ ನೆಲಕೆ (ಮೋಹತ. ೩೦-೫೭).

[ <ಚಪ್ಪೆ$_1$ + ಕೊಡಲಿ ]

**ಚಪ್ಪಗೋಡು** 'ಚಪ್ಪೋಡಂ' ನೋ.

**ಚಪ್ಪಟ** 'ಚಪ್ಪಟೆ' ನೋ.

**ಚಪ್ಪಟಕಲ್ಲು** 'ಚಪ್ಪಡಿಕಲ್ಲಂ' ನೋ.

**ಚಪ್ಪಟೆ,ಚಪ್ಪಟ,ಚಪ್ಪಟ್ಟೆ, ಚಪ್ಪಡಿ,ಚಪ್ಪಡೆ** (ನಾ).೧. ಸಮತಲವಾಗಿರುವುದು ; ಅಗಲವಾಗಿ ತಗ್ಗು ತಿಟ್ಟುಗಳಿಲ್ಲದೆ ಮಟ್ಟವಾಗಿರುವುದು ; ಸಪಾಟಾಗಿರುವುದು: ಎತ್ತ ಮೆಟ್ಟಿತ್ತ ಚಪ್ಪಟೆಯೆಂದು ನಗುತಂ ಹೋಗಿ (ಶಾಂತಿಪು. ೮-೬४ ವ): ಕುಬ್ಜೆಯುಪ್ಪ ನೆತ್ತಿಯಿಂ ಬಡವನನೂನ ದುಃಖಪರನಪ್ಪನೆ ಚಪ್ಪಟೆಯುಪ್ಪ ಮಂಡೆಯಿಂ (ಲೋಕೋಪ. ೧೦-೨೪); ಮೆಟ್ಟಿತ್ತಲತ್ತ ಚಪ್ಪಟೆಯೆಂಬಂತಿರಲಾಂ ಬೇಟ್ಟನಿತರ್ಥಂ ದೊರೆಕೊಂಡವುದು (ಧರ್ಮಾಮೃ. ೧-೧೩೦) : ಒತ್ತಿ ಪಿಡಿವನುಗುರಿಡುವನು ಬಲಿದಪ್ಪಿ ಚಪ್ಪಟೆ ಮಾಳ್ಪ (ಭರತ. ४೦-೦೫೦) ; ಚಿತ್ರವಿದು ಜಗದೊಳೆತ್ತ ಮೆಟ್ಟಿತ್ತ ಚಪ್ಪಟೆಯೆಂಬ ನಾಣ್ನುಡಿಯನಭಿನಯಿಸುವಂತಾದುದು (ಬಿಐಪು. ೩೭-೬४): ಎತ್ತು ಮೆಟ್ಟಿತ್ತು ಚಪ್ಪಟೆಯಾಯ್ತೆಂಬಿನಂ (ಶಬ್ದಾನು. ೫೧ ಪ್ರಯೋ) : ಚೀಣದೇಶದಲ್ಲಿ ಚಪ್ಪಟೆಯಾದ ಮೂಗಿಗೆ ಆದರವಿದೆ (ಕಮಕ. ೬೫). **ಚಪ್ಪಟ :** ೧. ಲೋಕದ ಸಕಲಜನರ ಬುಡದಲ್ಲಿ ಸಿಕ್ಕು ಚಪ್ಪಟೆಯಾಗಿ ಹೋದ ಹರಲಾಲನಿಗೇ ಗೊತ್ತಿರಲಿಲ್ಲ, ತನ್ನ ಮನೋಲೋಕದಲ್ಲಿ ಇಷ್ಟೊಂದು ಸ್ನೇಹರಸವಿತ್ತೆಂಬದು (ಇಪ್ಪಕ. ೩೦೩). (ಗು). ೨. ಸಮತಲವಾದ; ಸಪಾಟಾದ . 'ಚಪ್ಪಟಕಲ್ಲು' ಪರಾ. **ಚಪ್ಪಟ್ಟೆ:** ೧. ಪೂರ್ವಸಮುದ್ರತೀರವು ಸಾಧಾರಣವಾಗಿ ಚಪ್ಪಟ್ಟೆಯಾಗಿದೆ (ಭೂಗೋಳ. ೭೮). **ಚಪ್ಪಡಿ :** ३. ಮಟ್ಟವಾಗಿರುವ ಅಗಲವಾದ ಕಲ್ಲಂ ; ಹಾಸುಗಲ್ಲಂ : ಪರಮಬಿಂದುಸ್ಥಲಂ ಕಲೆ ಪಂಚ ಚಪ್ಪಡಿಗಳ್ . . . ಚತುರ್ವಾಕು ತೊಲೆಗಳುಂ (ಏಕೋತ್ತರ. ४-೨೭) ; ಪತ್ತಿ ಹೋಗಲು ಚಪ್ಪಡಿಯ ಮೆಟ್ಟಲು ಮಾಡಿದ್ದರು (ಪ್ರವಾಇ. II, ೨೦೦). ४. ಫಲಕ ; ಹಲಗೆ : ಗಾಜಿನ ಚಪ್ಪಡಿಯ ಮೂಲಕ ರಶ್ಮಿಗಳು ಭಂಗ ಹೊಂದಿ ಹೊರಗೆ ಬಂದರೆ . . . ಮಿಥ್ಯಾಪ್ರತಿಬಿಂಬವೆಂದು ಹಿಂದೆ ತಿಳಿದಿದ್ದೇವೆ (ಭೌತವಿ. ೨೦೭). **ಚಪ್ಪಡೆ :** ೧. 'ಚಪ್ಪಡೆಮೆಟು' ಪರಾ.

**ಚಪ್ಪಡಿಎಳೆ**=೧. ಚಪ್ಪಡಿಯನ್ನು ಹಾಕು ; ಹಾಸುಗಲ್ಲನ್ನು ಎಳೆ. ೨. (ಆಲಂ) ಹಾಳುಮಾಡು ; ನಾಶಮಾಡು : ಮಕ್ಕಳುಮರೀ ತಲೆ ಮೇಲೆ ಚಪ್ಪಡಿ ಎಳೆಯೋಕೆ ? (ಚಂದಕೋ. ೬೦). **ಚಪ್ಪಡಿಹಾಕು**=ಚಪ್ಪಡಿ ಎಳೆ ೨. : ಒಳ್ಳೆಯ ಕೆಲಸಕ್ಕೆ ಚಪ್ಪಡಿ ಹಾಕಿದರು (ರೂಢಿ). **ಚಪ್ಪಡಿಹಾಸು**=ಚಪ್ಪಡಿಎಳೆ ೨. : ಕೊನೆಗೂ ಅವನ ಮೇಲೆ ಚಪ್ಪಡಿ ಹಾಸಿದರು (ರೂಢಿ).

[ ದೇ.॥ ತಮಿ. ಚಪ್ಪಟ್ಟೈ, ಚಪ್ಪಡಿ ; ಮಲ. ಚಪ್ಪಡ ; ತುಳು. ಚಪ್ಪಟೆ : ತೆಲು. ಚಪ್ಪಿಡಿ. / ಮರಾ. ಚಪಟಾ, ಚಾಪಟ್, ಸಪಾಟ್. / ಸಂ. ಚರ್ಪಟ ]

**ಚಪ್ಪಟೆಕಳ್ಳಿ** (ನಾ). ಒಂದು ಬಗೆಯ ಕಳ್ಳಿ; ಪಾಪಾಸುಕಳ್ಳಿ: ಪಾಪಾಸುಕಳ್ಳಿ, ಶಿವರಾಮಕಳ್ಳಿ, ಚಪ್ಪಟೆಕಳ್ಳಿ (ವೃಜಿಗಿ. ೫೮-೦೧೬೦).

[ ಚಪ್ಪಟೆ + ಕಳ್ಳಿ$_2$ ]

**ಚಪ್ಪಟೆಮೂಗು, ಚಪ್ಪಟ್ಟೆಮೂಗಂ** (ನಾ). ಚಪ್ಪಟೆಯಾದ ಮೂಗು ; ತಟ್ಟೆಯಾದ ಮೂಗಂ: "ಖುರಣಸ್, ಖುರಣಸ-ಚಪ್ಪಟೆಮೂಗಿನವನು" (ನಾಚಿರಾ. ६). **ಚಪ್ಪಟ್ಟೆಮೂಗು :** "ಖುರಣಾಃ, ಖುರಣಸಃ-೨ ಗಂಟು ಮೂಗಿನವನು ಚಪ್ಪಟ್ಟೆಮೂಗಿನವನು " (ಸಿದ್ಧಾಂತಿ. ೦೫೭).

[ ಚಪ್ಪಟೆ + ಮೂಗು$_1$ ]

**ಚಪ್ಪಟೆಹಂಬು** (ನಾ). ಒಂದು ಬಗೆಯ ಬಳ್ಳಿ : (ವೃಜಿಗಿ. ೫೫-೦೦೦೫).

[ ಚಪ್ಪಟೆ + ಹಂಬು ]

**ಚಪ್ಪಟ್ಟೆ** 'ಚಪ್ಪಟೆ' ನೋ.

**ಚಪ್ಪಟ್ಟೆಮೂಗು** 'ಚಪ್ಪಟೆಮೂಗು' ನೋ.

**ಚಪ್ಪಡಿ** 'ಚಪ್ಪಟೆ' ನೋ.

**ಚಪ್ಪಡಿಕಲ್ಲು, ಚಪ್ಪಟಿಕಲ್ಲು** (ನಾ).=ಚಪ್ಪಡಿ ೧: ಅಡಿಯಲ್ಲಿ ಒಂದು ಚಪ್ಪಡಿ ಕಲ್ಲು ಸಿಕ್ಕಿತು (ಹುಟ್ಟಿಹ. ೭೨). **ಚಪ್ಪಟಿಕಲ್ಲು**: ಕಂಬಗಳ ಮೇಲೆ ಬರುವ ಚಪ್ಪಟಿಕಲ್ಲುಗಳನ್ನು ರೇಖಾಚಿತ್ರ ಬರುವಂತೆ ಹರಡಿರುವರು (ಹೊಯ್ಸಳವಾ. ೧೮). [ಚಪ್ಪಡಿ (<ಚಪ್ಪಟಿ) + ಕಲ್ಲು (<ಕರ್ಲ್$_3$) ]

**ಚಪ್ಪಡಿಸು** 'ಚಪ್ಪರಿಸು' ನೋ.

**ಚಪ್ಪಡೆ** 'ಚಪ್ಪಟೆ' ನೋ.

**ಚಪ್ಪಡೆವೆಱು** (ಕ್ರಿ). ಚಪ್ಪಟೆಯಾಗು ; ಸಮತಟ್ಟಾಗು : ಕೊತ್ತಿಗಣ್ಣಳ ಕೋತಿಮುಸುಡಿನ ಚಪ್ಪಡೆವೆತ್ತು ನಡವ ಹೆಜ್ಜೆಯಿಂದ . . . ಭೂತವ ನಡೆತಪ್ಪಂತೆ ಮನೆಗೆ ಬರಲು (ನೇಮಿಸಂ. ೬-೧೦೫). [ಚಪ್ಪಡೆ (<ಚಪ್ಪಟೆ) + ವೆಱು$_1$ ]

**ಚಪ್ಪನ್ನ** 'ಛಪ್ಪನ್ನ' ನೋ.

**ಚಪ್ಪನ್ನಕೋಟಿ** (ನಾ). ಐವತ್ತಾರು ಕೋಟಿ: ಚಪ್ಪನ್ನಕೋಟಿ ಯಾದವರು ಹತ್ತಿದರು (ಮೋಹತ. ೩೭-೩೮) : ಚಪ್ಪನ್ನಕೋಟಿ ಯಾದವರಂ ತಮ್ಮಮ್ಮನ ಯೊಳೊಪ್ಪಿ (ತುರಂಗ. ೮೦-೨೦). [ಚಪ್ಪನ್ನ (<ಛಪ್ಪನ್ನ) + ಕೋಟಿ$_1$]

**ಚಪ್ಪನ್ನದೇಶ** 'ಛಪ್ಪನ್ನದೇಶ' ನೋ.

**ಚಪ್ಪನ್ನಭಾಷೆ** 'ಛಪ್ಪನ್ನಭಾಷೆ' ನೋ.

**ಚಪ್ಪನ್ನೈವತ್ತಾರು** 'ಛಪ್ಪನ್ನೈವತ್ತಾರು' ನೋ.

**ಚಪ್ಪಯ್ಯ** (ನಾ). ಒಬ್ಬಾತನ ಹೆಸರು : ಕೊಟಿಯಮ್ಮನ ಅಳಿಯಂ ಚಪ್ಪಯ್ಯನ ಮಗಂ ವುನ್ನಿ ಗೋಸಾಸಿ ಕೆಱೆಯಂ ಮ್ಮಾಡಿಸಿ (ಎಕ. VIII, ಸಾಗರ. ೦೦೦-೨: 986 ?). [ಚಪ್ಪ$_0$ + ಅಯ್ಯ$_1$ ]

**ಚಪ್ಪರ** (ನಾ). ೧. ಚಾವಣಿ ; ಮೇಲ್ಕಟ್ಟು ; ವಿತಾನ : ಕವರೆಂಬುದು ಚಪ್ಪರದೊಳ್ (ಕಬ್ಬಿಗಕಾ. ೨೩): ಚಪ್ಪರಮಂ ಬೆಳ್ವಟ್ಟೆಗಳಿಂ ಪರುರವಿಸಿದರು (ಚಿಕವಿ. ೪-೨೭) : ಕನಕದ ಕಂಭಗಳು ಘನ ಚಪ್ಪರಗಳು (ಜುನಕ. ೦೩) ; ಹಂಚಿನ ಚಪ್ಪರದ ತೂತುಗಳೊಳಗಿಂದೆಲ್ಲ ಸೂರ್ಯನ ಬೆಳಕು ನೇರವಾಗಿ ಸುರಿಯುತ್ತಿತ್ತು (ನಿರಾಳ. ೫೫). ೨. ಬಳ್ಳಿ ಮೊದಲಾದುವು ಹಬ್ಬುವುದಕ್ಕೆ ಆಶ್ರಯವಾಗಿ ಎತ್ತಿಕಟ್ಟಿದ ಚೌಕಟ್ಟು ; ಕಾವಣ : "ಕಾವಣ ಪಂದರವುಮೆನಲ್ಕಾವಗ ಚಪ್ಪರಮೆನಿಕ್ಕು" (ಕವಿಕಂ. ೦೭೭) : ಮಧುರ ದ್ರಾಕ್ಷೆಯ ಚಪ್ಪರಂಗಳಿಂ (ಉದ್ಭಟ. ೯-೨೫); ದ್ರಾಕ್ಷಿಯ ಚಪ್ಪರ (ಸೌಗಂಧಿ. ೩೭-೦೨) : ಪಡುವಲಕಾಯಿ ಬಳ್ಳಿಗೆ ಚಪ್ಪರವೇ ಒಳ್ಳೆಯದು (ಅಡುಸೌ. ೦೨೯) ; ೩. ಶುಭಕಾರ್ಯಗಳಿಗಾಗಿ ಹಸುರುವಾಣಿಯಿಂದ ನಿರ್ಮಿಸಿದ ಹಂದರ : ಚಪ್ಪರಂಗಳ ಚೆಲ್ವುಮಂ ಮಂಟಪಂಗಳ ವಿಳಾಸಮುಮಂ . . . ನೋಡುತ್ತುಂ (ಧರ್ಮಾಮೃ. ೯-೦೭೦) : ಪವಳದ ಚಪ್ಪರವಿಕ್ಕಿ ನಮ್ಮವರೆನ್ನ ಮದುವೆಯ ಮಾಡಿದರು (ಮಹಾದೇ. ಬ. ೭-೬): ಮದುವೆಯ ಚಪ್ಪರದ ಮುಂದಿಳಿಹಿದಂತಿರ್ದಂ (ನಂಬಿರ. ೬-೨೨) : ಮದುವೆಗೆ ಲಗ್ನವನ್ನೂ ಇಟ್ಟರು; ಚಪ್ಪರ ತೋರಣ ಮಾಡಿಸಿದರು (ಈಕಥ. ೬೦). ೪. ಗುಡಿಸಲು ; ಜೋಪಡಿ : ಅಂಬಿಗನು ಸಮೀಪದಲ್ಲಿ ಇದ್ದ ಸಂಗನ ಚಪ್ಪರಕ್ಕೆ ನಡೆದನು (ಇಂದುಮು. ೪೫); ಚಪ್ಪರಕ್ಕೆ ಗತಿಯಿಲ್ಲದವ ಉಪ್ಪರಿಗೆ ಅಪೇಕ್ಷಿಸಿದ (ಗಾದೆ). ೫. ಅಂಗಳ ; ಪ್ರಾಂಗಣ : "ಪ್ರಾಂಗಣ ಪಂದರಂಗಳಿವು ಚಪ್ಪರಮೆಂದೆನಿಕುಂ" (ನಾನಾರ. ೧೪೪).

**ಚಪ್ಪರಕಾಣಿಕೆ**=(ಮದುವೆಯ) ಚಪ್ಪರದ ಮೇಲೆ ಹಾಕುವ ತೆರಿಗೆ : ಯಿವಿರ್‍ರಿಗೆ ಚಪರಕಾಣಿಕೆಯಿಲ್ಲ ಮರ್‍ರಿಕಾಣಿಕೆಯಿಲ್ಲ ಡೊಂಬಕಾಣಿಕೆಯಿಲ (ಎಕ. XVI, ಗುಬ್ಬಿ. ೬೯-೩೨ : ?). **ಚಪ್ಪರಗಾಲಮಂಚ** = ಚಪ್ಪರಮಂಚ : (೬). **ಚಪ್ಪರದ ಹಣ**=ಚಪ್ಪರಕಾಣಿಕೆ: 'ಚಪ್ಪರದ ಹಣ' ವೆಂದು ಕರೆಯುವ ಅದನ್ನು ಊರಿನ ದೇವಸ್ಥಾನಕ್ಕೆ ಬಿಟ್ಟುಕೊಡುತ್ತಾರೆ (ಕರಾಅ. ೪೦೮ ಅಡಿಟಿ).

[ದೇ.II ತಮಿ. ಮಲ. ತೆಲು. ಚಪ್ಪರ; ತುಳು. ಚಪ್ಪರ, ಚಪ್ಪರೊ. / ಹಿಂ. ಛಪ್ಪರ್; ಮರಾ. ಛಪ್ಪರ, ಛಪರ್ ]

**ಚಪ್ಪರಣೆ** (ನಾ). ೧. (ತಿನ್ನುವಾಗ) ತುಟಿಗಳಿಂದ ಮಾಡುವ ಚಪ್ ಎಂಬ ಶಬ್ದ ; ಆಸ್ವಾದನೆ ; ಸಶಬ್ದವಾಗಿ ಸವಿಯುವಿಕೆ : ಚುಂಬನ ಮಪ್ಪು ಚಪ್ಪರಣೆ ಬೇಡುವ ಬಕ್ಕುಡಿ ಕಾಯ್ದು ಕೂಡುವಪ್ಪಂಬರಿಯುಂಬಿವಾಗೆ ಸಲೆ ತನ್ನವು (ಅರ್ಧನೇ. ೫-೭೦): ಆತಂ . . . ಕೇರಿಯೊಳಾದೊಡು ನೆರೆಯೆಂಬುದಂ ಚಪ್ಪರಣೆಯೊಳಾದೊಡಂ ಪಣ್ಣೆಂಬುದಂ ಸ್ಮರಿಸಂ (ಕಬ್ಬಿಗಕಾ. ೦೪೮). ೨. ಹೂಡಿದ ಕುದುರೆ, ಎತ್ತು ಮೊದಲಾದುವನ್ನು ವೇಗಗೊಳಿಸಲು ಅಥವಾ ನಿಲ್ಲಿಸಲು ಸಾರಥಿಗಳು ಮಾಡುವ ಶಬ್ದ ; ತಟ್ಟುವಿಕೆ : ಸೂತರ ಚಪ್ಪರಣೆಗಳ ವಿಜಾಜಿ ಮಾರದಲಿ ಬೊಪ್ಪರಿಸಿ ಹೊಯ್ದಾಡಿದವು . . . ತೇಜಿಗಳು (ಕುಮಾವ್ಯಾಕ. ೨೨-೦೭) ; ಹೇರ್ಗಳಂ ಬಿಸುಟ ಹೋರಿಗಳ ಚಪ್ಪರಣೆಯಿಂ ನಿಲಿಸಿ ಮೂಗುನೇಣೆಮುತೆ (ಚಬಪು. ೪೭-೪೬) : ರಾವುತರ . . . ಚಪ್ಪರಣೆಯೊಳ್ ಕಿಳರ್ವ ಹಯದ (ರಾಮಾಶ್ವ. ೫೦-೫). ೩. ಹಕ್ಕಿಗಳ ಚಿಲಿಪಿಲಿ ಧ್ವನಿ : "ಬೆಜ್ಜೆ=ಚಪ್ಪರಣೆ" (ಶಮದ. ಪರಿ. ೨) ; "ಬಗ್ಗು ಬಿಪ್ಪಂಡವೆನೆ ಚಪ್ಪರಣೆಯು" (ಕಬ್ಬಿಕೈ. ೭೭) : "ಗಿಳಿವಾತು ಬೆಜ್ಜೆ ಜಡಿಪಂ ಬಗ್ಗು ಬಿಪ್ಪಂಡವೆಂದೆಂಬಿವು ಚಪ್ಪರಣೆಯೆನಿಕು" (ಶಬ್ದಮಂ. ೩೦) : ಕಳಕುಹಂಗಳ ಬಗ್ಗಣೆ ಗಿಳಿಗಳ ಚಪ್ಪರಣೆಯುಳಿಗಳೆಂಚರಮೆಸೆಗುಂ (ಶಬಶಂ. ೨-೪೫). ೪. ಹುರಿದುಂಬಿಸುವಿಕೆ ; ಪ್ರೋತ್ಸಾಹ : ಪುರುದು ಜಾಣುಮ ಚಳಬಳಿಕೆ ಚಪ್ಪರಣೆ ವಂಚನೆ ನೇಹವೆಂಬೀ ಪರಿಯ ಮಾಯಾ ವಂಯುದ ಮಹಿಳಾಜನ ವಿರಾಜಿಸಿತು (ತೊರಣ. ೧-೫-೬೨). ೫. ಗದರಿಸುವಿಕೆ ; ಜಂಕಣೆ : "ಬಿಪ್ಪಂಡ . . . ಚಪ್ಪರಣೆಯುಮೆನ್ನೆ ರಘುಂಕಣೆಯು ತಾನಕ್ಕುಂ" (ಕವಿಕಂ. ೦೨೩) ; ಅಂದಿನ ದರ್ಪಮನಂದಿ ನೊಂದು ಚಪ್ಪರಣೆಯುನಿಂದು ತೋಱು ಖಳ ದುಷ್ಪ (ಶೃಂಗಾರ. ೦-೫೦). [ಚಪ್ಪರಿ (<ಚಪ್ಪರಿ) + – ಅಣ್ಕೆ ]

**ಚಪ್ಪರದವರೆ** (ನಾ). ಚಪ್ಪರದ ಮೇಲೆ ಹಬ್ಬಿ ಬೆಳೆಯುವ ಒಂದು ಬಗೆಯ ಅವರೆ: ಪಲಸು ತಡುಗಣೆ ಬಾಳೆ ಚಪ್ಪರದವರೆ ಚಂಚೆಗಳ . . . ಸವಿಯೊಪ್ಪರಣೆ ಘಮಘಮಿಸಲಿಕೆ ಬಡಿಸಿದರು (ಅನಂತಾ. ೬-೨೫-೩೯). [ಚಪ್ಪರ + ಅವರೆ$_1$ ]

**ಚಪ್ಪರದ್ರಾಕ್ಷೆ** (ನಾ). ಚಪ್ಪರ ಹಾಕಿ ಬೆಳೆಸಿದ ದ್ರಾಕ್ಷೆ : "ಮೃದ್ವೀಕಾ, ಗೋಸ್ತನೀ, ದ್ರಾಕ್ಷಾ, ಸ್ವಾದ್ವೀ, ಮಧುರಸಾ – ಈ ದ್ರಾಕ್ಷೆ ಹೆಸರುಗಳು . . . ಚಪ್ಪರದ್ರಾಕ್ಷೆಗೂ ಹೆಸರುಗಳು" (ಸಿದ್ಧಾಂತಿ. ೦೨೦). [ಚಪ್ಪರ + ದ್ರಾಕ್ಷೆ ]

**ಚಪ್ಪರಬದನೆ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹಣ್ಣು ; ಟೊಮ್ಯಾಟೊ ; ತಕ್ಕಾಳಿ : ಗೂದೆಹಣ್ಣು, ಚಪ್ಪರಬದನೆ, ಟೊಮಾಟೋ, ತಕ್ಕಾಳಿ (ಮೃಜಿಗಿ. ೫೦-೦೦೩೦) ; ಅಯ್ಯನ ಚಪ್ಪರಬದನೆಯನ್ನು ಕರಿಯನ ಹಸು ಮೇದಿದ್ದಿತು (ಗರುಡಾ. ೧೦೨). [ಚಪ್ಪರ + ಬದನೆ$_1$ (<ಬದಣೆ) ]

**ಚಪ್ಪರಮಂಚ** (ನಾ). ಮೇಲ್ಕಟ್ಟು ಅಥವಾ ಸೊಳ್ಳೆಪರದೆ ಕಟ್ಟಲು ಅನುಕೂಲವಾಗುವಂತೆ ರಚಿಸಿದ ಚೌಕಟ್ಟುಳ್ಳ ಮಂಚ ; ಮೇಲು ಚಪ್ಪರವುಳ್ಳ ಮಂಚ : ಚಪ್ಪರಮಂಚದ ಮೇಲೆನ್ನನೊಲಿದು ನೀನಪ್ಪಿಕೊಂಡಿರೊ ಬೆಚ್ಚಂತೆ (ಕುರಾತಾಂ. ೨೭-೬೫) : ಪುಷ್ಪಶರತಿಯ ವಸಂತ ಕೇಳಿಯ ಚಿತ್ರವಿಪ್ಪುದ ನೋಡಿ ಸಂತಸದಿ ಚಪ್ಪರಮಂಚದ ಮೇಲಿ ಕುಂಕುಮದಲರ್ಸುಪ್ಪತ್ತಿಗೆಯಲಿ ಮಂಡಿಸಿದ (ಮೋಹತ. ೨೨-೦೨) : ಚಪ್ಪರಮಂಚ ಗುಜ್ಜರಿಗಾಲಮಂಚ ಮೇಲುಪ್ಪರಮಂಚ . . . ಸೆಳೆಮಂಚ ಪೊಪ್ಪವಾಂತೆಸೆದುವಲ್ಲಲ್ಲಿ (ಭರತ. ೦೫-೨೭).

**ಚಪ್ಪರಮಂಚದಾಟ** = ಒಂದು ಬಗೆಯ ನರ್ತನ : ಚಪ್ಪರಮಂಚದಾಟ ಎಂಬುದು ಈ ಸ್ತ್ರೀಪಾತ್ರದ ನರ್ತನಗಳೊಳಗೊಂದು (ಪಾರ್ತಿಸು. ೩೩). [ಚಪ್ಪರ + ಮಂಚ ]

**ಚಪ್ಪರಿ** 'ಚಪ್ಪರಿ' ನೋ.

**ಚಪ್ಪರಿಕೆ** (ನಾ). ೧. ಚಪ್ಪರಿಸುವುದು ; ತಟ್ಟುವುದು ; ಚಪ್ಪರಣೆ : ಆದರ ಬೆನ್ನಿಗೊಂದು 'ಶಹಬಾಸಗಿರಿ'ಯ ಚಪ್ಪರಿಕೆಯನ್ನು ಕೊಟ್ಟು ಹೋಗುತ್ತಿದ್ದರು (ಗಂಗಾವ. ೧೮೪). ೨. ಹೊಗಳಿಕೆ ; ಶ್ಲಾಘನೆ : ಶಶಿಬಿಂಬದ ಪಂಗವೇಕೆ ಚ[ಪಾಠಾಂ. ಪ]ಪ್ಪರಿಕೆಯೊಳಪ್ಪುದೇಂ ತನಗೆ ಪೇೞ್ ಮಧುವಿಂ ಪುರುಳುಂಟೆ (ಲೀಲಾವ. ೧೧-೬೩).

[ ಚಪ್ಪರಿ (< ಚಪ್ಪರಿ) + - ಕೆ ]

**ಚಪ್ಪರಿಸು**, ಚಪ್ಪಡಿಸು, ಚಪ್ಪಳಿಸು$_1$, ಛಪ್ಪರಿಸು, ತಪ್ಪಡಿಸು (ಕ್ರಿ). ೧. ತಿನ್ನುವಾಗ ನಾಲಗೆಯಿಂದ ಅಥವಾ ತುಟಿಗಳಿಂದ ಚಪ್ಪೆಂದು ಸದ್ದು ಮಾಡು ; ಚೀಪು ; ಸವಿ : ದುಷ್ಟ ಚಮೂರ ಚಪ್ಪರಿಸಿದುದೊ ಕೆಡೆದನೊ ಹಳ್ಳಕೊಳ್ಳದಲಿ (ತೊರರಾ. ೨-೫-೨೦) : ಚದುರನಧರಸುಧೆಯಿಂಟ ಚಪ್ಪರಿಪಾ ವಿಧವೆನಗೆಂದಿಗಾಗುವುದೊ (ಕಂಸವಿ. ೯-೦೨೦) ; ಪಲ್ಯವನ್ನು ಚಪ್ಪರಿಸುತ್ತಿದ್ದ ಹಾಗೆ ಹರಟೆಯೂ ಸಾಗುತ್ತಿತ್ತು (ನಾಪೋಲೀ ೦೪೫) : ನಾಲಿಗೆ ಚಪ್ಪರಿಸುವ ಅಳವಿನಲ್ಲಿ ಬರುವುದಷ್ಟೇ ಪುರಸೊತ್ತು (ದೀಪಹ. II, ೧೯೫). ೨. ಧ್ವನಿಮಾಡು ; ಕೂಗು : ಅಳ್ಕಂ ಬಳ್ಕಂ ಚಳವಳಿಸಂ ಚಪ್ಪರಿಸಂ ತಳವಳಿಸಂ (ಅಜಿಪು. ೫-೯೦) : ಕಡು ಕೊಬ್ಬಿ ಚಪ್ಪರಿವ ರಾಜಶುಕಾಳಿಯನಾಮ್ರವೊಪ್ಪುಗುಂ (ಗಿರಿಕ. ೨-೩೩) ; ಕುಪ್ಪಳಿಸಿದೊಡಂ ಬೀಟದೆ ಚಪ್ಪರಿಸುತೆಚ್ಚರೆಕ್ಕೆಯಿಂ ಬಿಲ್ಲಾಳ್ಗಳ್ (ಕಬ್ಬಿಗಕಾ. ೨೬೯) : ಅಬ್ಬರಣೆಯಲಿ ಚಪ್ಪರಿಸಿ ನೆಗಹಿದರು ಬಲು[ಪಾಠಾಂ. ಚಪ್ಪರಣೆಯಲಿ ಮುಸುಕಿದರು] ಮುಷ್ಟಿಗಳ ನೆಗಹಿನಲಿ (ತೊರರಾ. ೬-೭-೨೬). ೩. ಚಪ್ಪೆಂದು ಸದ್ದಾಗುವಂತೆ ತಟ್ಟು,-ಬಡಿ,-ಅಪ್ಪಳಿಸು : ಉಪ್ಪಿಲ್ಲಣೆಂಗು ಸಾಸವೆ ತಪ್ಪಿಲ್ಲದ ಮೆಣಸು ಸುಂಟಿ ಪೊಸಸುಣ್ಣಮಿವಂ ಚಪ್ಪರಿಸಿ ಬಡಿದು ಮೆಯ್ಯಂ ಸೊಪ್ಪಾಗಿರೆ ಮೋದಿ ಪೂಸುವರ್ ನಿರ್ದಯೆಯಿಂ (ಧರ್ಮಾಮ್ಮ. ೩-೭೦) : ಸೊಳ್ಳೆಯ ಹುಳುಗಳ ಕಾಟದಿಂದ ಅವನು ಮೈಯನ್ನೆಲ್ಲ ಚಪಚಪನೇ ಚಪ್ಪರಿಸಿಕೊಳ್ಳಹತ್ತಿದನು (ಇಪ್ಪಳ. ೩೩೭). ೪. (ಪ್ರೋತ್ಸಾಹಿಸುವಂತೆ) ಮೈದಡಹು ; ನೇವರಿಸು : ಕರಂ ರಯ್ಯಮನೆ ಪಾಡುತಿರ್ದಳನೊಯ್ಯನೆ ಕಡೆಗಣ್ಣೊಳಡರೆ ಚಪ್ಪರಿಸುತ್ತುಂ (ಕಾವ್ಯಾವ. ೩೦೯) : ಕರುಣದಲಿ ಚಪ್ಪರಿಸಿದನು ಕಂಧರವ (ಕುವ್ಯಾದ್ರೋ. ೧೧-೩೫) : ಅರಿಗಂಡಭೈರವ ಚುಬುಕಿಱಿದು ಚಪ್ಪರಿಸಿದನು ಭುಜವ (ತೊರರಾ. ೪-೦೨-೨೯) : ವಿಹಗಾಧೀಶ ತದ್ಭುಜವ ಚಪ್ಪರಿಸಿ . . . ಬೊಬ್ಬಿಱಿದ (ಪೋಹತ. ೩೮-೩೪) ; ತುರಂಗಂಗಳಂ ಚಪ್ಪರಿಸಲು . . . ಕಾರ ಮಿಂಚಿನ ತೆಱದೊಳುರವಣಿಸಿದುವು (ಕ್ರಿಮಿಭಾ. ೨೫-೪೫). ೫. ಗದರಿಸು ; ಬೆದರಿಸು : ಇರು ಮಟ್ಟಮೆಂದು ತಱಂ ಚಪ್ಪರಿಸಿದೊಡಾನಿರೆನೆ ಮುಚ್ಚುಮುಱಿಯೇಕೆಯೊ (ಅರ್ಧನೇ. ೫-೯) : ಪಾಮರೀಯುವತಿಯರಾರ್ದು ಚಪ್ಪರಿಸೆ ಕೋಗಿಲೆಯಾಂಚರಮೆಂದು ಬೆರ್ಚಿ ಪಾಱವು ಗಿಳಿವಿಂಡು (ಅನಂಪು. ೧-೮೨) : "ಆದನ್ನೆಲ್ಲಾ ಹೇಳಬಾರದು" ರಾಮಿ ಚಪ್ಪರಿಸಿದ (ಕಿತ್ತ.ಬ. ೫೦). ೬. ಕಡೆಗಣಿಸು ; ಅಲಕ್ಷಿಸು ; ಪ್ರತಿಭಟಿಸು : ಕಪ್ಪಮಿಯದುದ ಚಪ್ಪರಿಸುವ ಮಂಡಲಿಕರುಮಂ (ಆದಿಪು. ೪-೮೨ ವ). ೭. ಹೀಯಾಳಿಸು ; ಹಂಗಿಸು ; ಮೂದಲಿಸು : ನಳಿತೋಳ ಪಿಂಡುಗಂಕಣದ ಸರಂ ಮೊರೆವಳಿಗಳ ಸರಮುಂ ಚಪ್ಪರಿಸುವಿನಂ ಚೆನ್ನೆ ಪೊನ್ನೆಯ ರಲಂ ಕೊಯ್ದುಳ್ (ಆದಿಪು. ೧೧-೦೦೨) : ಅಪ್ಪಲೆ ನೀಂ ಪರವೆಣ್ಗಳನಪ್ಪುವುದನೆ ಬಯಸುತಿರ್ಪೆಯಪ್ಪೆಂದು ಕರಂ ಚಪ್ಪರಿಸಿ ಸಾರಕರ್ ತಂದಪ್ಪಿಸುವರ್ ಕಾಯ್ದ ಲೋಹಮಯ ಪುತ್ರಿಕೆಯಂ (ಸುಕುಮಾ. ೧೧-೪೩) ; ಚಪ್ಪರಿಸುವ ಮೂದಲಿಸುವ ಹೂಂಕರಿಸುವ ಬಗ್ಗಿಸುವ ಕಳಕಳಂ ಬಳೆವಿನೆಗಂ (ವರ್ಧಪು. ೮-೪೬) : ಕೊರಳ ರಕ್ಷಿಸಿಕೊಳ್ಳೆನುತ ಚಪ್ಪರಿಸಿ ದ್ರುಪದ ವಿರಾಟರೆಚ್ಚರು (ಕುವ್ಯಾದ್ರೋ. ೨-೫೪). ೮. ಆಕ್ರಮಿಸು ; ಆವರಿಸು : ಮದಾಕೃತಿಯಂ ಪಾಸಿಸಿ ಮುಪ್ಪು ಚಪ್ಪರಿಸೆಯುಂ (ಆದಿಪು. ೦-೮೦) : ಚಪ್ಪರಿಸಿ ಬಂದು ನಿನ್ನಂ ಮುಪ್ಪಡಸಿದುದೆಣಲೊಳ್ ಅಡಸಲಿರ್ದಂ ಜವಂ (ಅಜಿಪು. ೨-೯೭) ; ಮುಪ್ಪು ಚಪ್ಪರಿಸೆ ಪರಾಧೀನನೆನಿಸುವೆನೆ (ಪಾರ್ಶ್ವಪು. ೦-೦೩೦) : ಉಪ್ಪರಿಸಿತ್ತು ಸೂರ್ಯನ ರಥಂಬರಮುಪ್ಪದಿಶಾ ವಿಭಾಗವುಂ ಚಪ್ಪರಿಸಿತ್ತು . . . ಭೇರಿಯ ಭೂರಿಗಭೀರನಿಸ್ವನಂ(ಸೂಕ್ತಿಸು. ೦೮-೬) ; ಚಪ್ಪರಿಸಲರಿದೀ ನಿಶಾಟನ ನಿಪ್ಪಸರದಿಂ ಪಾಂಡವರಿಗಣ ದಪ್ಪಿತೆಂದರೆ ಸಾವುವೇ ಹಿತವು (ಸಾಳ್ವಭಾ. ೩೦-೨೭). **ಚಪ್ಪಡಿಸು** : ೪. ಅವಳ ದೇಹವು ನನ್ನ ದೇಹಕ್ಕೆ ಜೋಗುಳ ಹಾಡಿ ಚಪ್ಪಡಿಸಿ ಉಯ್ಯಾಲೆಯಾಡಿಸಿ ಮಲಗಿಸಿತು (ಮುಕ್ತಿ. ೩೪). **ಚಪ್ಪಳಿಸು$_1$** : ೩. ಲಲನೆಯಂಜುಲಿ ಸಲಿಲದಿಂ ಚಪ್ಪಳಿಸುತಂ ಬೆನ್ನೊಳು ಶಿರಸಿನೊಳು ಜಲವನೊತ್ತುವಳಾತ್ಮಜೆಗೆ (ಬಸಪು. ೦೫-೯). **ಛಪ್ಪರಿಸು** : ೫. ಮಹಾಪಾತಕನು ಬಾಗಿಲಿಂಗೆ ಬಾರದಿರೆಂದು ಛಪ್ಪರಿಸಿ ಜಱೆದು ವೃಷಭನಂ ರಘಕಿಸುತ್ತೆ ನಿಲಿಸಿ (ಸಿಂಗಿರಾ. ೪-೩೮). **ತಪ್ಪಡಿಸು** : ೪. ತಲೆದಡವಿ ತಪ್ಪಡಿಸಿ ಬಾಲ ಸಿದ್ಧರಾಮ ಕಾಲಭೈರವನು ತೋರುವನು . . . ಬಂಗಾರ ಸಿರಿಗಿರಿಯ (ಸಿದ್ಧಪು. ೬-೭) : ಅದನ್ನು ತೊಡೆಯ ಮೇಲೆ ಹಾಕಿಕೊಂಡು ತಪ್ಪಡಿಸಿದಳು (ಗ್ರಾಮಾಯ. ೫೭೭).

[ ಚಪ್ಪರಿ (<ಚಪ್ಪರಿ) + - ಸು$_1$./ತೆಲು. ಚಪ್ಪರಿಂಚು, ಚಪ್ಪರಿಂಚು ]

**ಚಪ್ಪಲರ್**, ಚಪ್ಪಲರು (ಕ್ರಿ). ೧. ಚಪ್ಪಟೆಯಾಗು ; ತಟ್ಟೆಯಾಗು ; ಗುಜ್ಜುಗೊಳ್ಳು : ಎಸಟಿಸಟ್ಟಪ್ಪದೆ ಮೊಗಮಿಱಿದು ಕಾರ್ದು ಚಪ್ಪಲರ್ವಿನೆಗಂ ಸಿಪ್ಪಿಟ್ಟು ಕರದುಕೊಂಡುವು ಸಪ್ಪದಮುಪ್ಪಳದಿನೊಱೆವ ನಱುವಂಡುಗಳಂ (ಲೀಲಾವ. ೯-೮೬) ; ನಸು ಜೋಲ್ದುಡೆ ಕೊಂಕಿದೋಲೆ ಚಪ್ಪಲರ್ದ ಘನಸ್ತನಂ (ಸೂಕ್ತಿಸು. ೯-೬೦) ; ಚಪ್ಪಲರ್ವಿನಂ ಮೊಲೆ ತೆಕ್ಕಗೆ ಸಾರ್ದು (ಮನ್ಮವಿ. ೩-೦೩). ೨. ಸಂಪೂರ್ಣವಾಗಿ ಅರಳು : ಚಪ್ಪಲರ್ದ ಕೊಸವುಗಳು ಕರಮೊಪ್ಪಿದವು ಮನೋಜರಾಜ ರಾಜ್ಯೋದಯದೊಳ್ (ವರ್ಧಮಾ. ೧೧-೩೮). **ಚಪ್ಪಲರು** : ೧. ಸಡಿಲಿದ ತಕ್ಕೆ ಚಪ್ಪಲರಿದ ಮೊಗ ನಸುಮಿಡುವಳ್ಳೆ ಬೆಂಡೆದ್ದ ಕಣ್ಣು . . . ಬೆಳ್ಪಡರ್ದ ಬಾಯ್ದೆಱೆ ಚೆಲ್ವ ಬೀಱೆ (ನಾಗಕು. ೬-೬೦)  [ <ಚಪ್ಪ$_1$ + ಅಲರ್$_1$ ]

**ಚಪ್ಪಲರು** 'ಚಪ್ಪಲರ್' ನೋ.

**ಚಪ್ಪಲಿ**, ಚಪ್ಪಲು, ಚೆಪ್ಪಲಿ (ನಾ). ಕಾಲಿನಲ್ಲಿ ಹಾಕಿಕೊಳ್ಳುವ ತೆಳ್ಳಗಿರುವ ಚರ್ಮದ ಮೆಟ್ಟು ; ಪಾದರಕ್ಷೆ : ಹೊಸ ಚಪ್ಪಲಿಯನ್ನು ಕೊಂಡವನು ಹಳೆಯದನ್ನೆಸೆದು ಬಿಡುವಂತೆ ಶ್ಯಾಮ್ ನನ್ನನ್ನು ದೂರಕ್ಕೆ ಎಸೆದಿದ್ದ (ಅಲಹೂ. ೧೫೭) ; ಭಾರತೀಯರು ಹಾಕಿಕೊಳ್ಳುವ ಚಪ್ಪಲಿಗಳು (ಅಗಸ್ಟ್. ೪೦) ; ಚಮ್ಮಾಡ ಸುಲಿದು, ಚಪ್ಪಲಿಗೆ ಉಂಗುರ ಹೊಲಿಸಿಬಿಡು ತ್ರೇಸೆಯೇ (ನತದಾ. I, ೫೦೬). **ಚಪ್ಪಲು** : ಚಪ್ಪಲು, ನೈಟ್‌ಗೌನು ಈಚೆ ತೆಗೆದು, ಬಾತ್‌ರೂಮನ್ನು ಪ್ರವೇಶಿಸಿದ (ಅಳಸಿ. ೦೬) : ನೀಲೀಬಣ್ಣದ ಪ್ಲಾಸ್ಟಿಕ್ ಚಪ್ಪಲು . . . ಎಷ್ಟು ಮಾಟವಾಗಿ ಕಾಣುತ್ತವೆ ಕಂಡೆಯಾ ? (ಚಿಂದುಟಿ. ೬೦). **ಚೆಪ್ಪಲಿ** : ಚೆಪ್ಪಲಿ. ಇದು ಕನ್ನಡದಲ್ಲಿ ಕೆರಹು. ತಮಿಳಿನಲ್ಲಿ ಶೆರಪ್ಪು. ತೆಲುಗಿನಲ್ಲಿ ಇದರ ಬಹುವಚನ ಚೆಪ್ಪುಲ್. ಚೆಪ್ಪುಲ್ ಬಹುವಚನ ಎಂದು ಕಾಣದ ಜನ ಇದನ್ನು ಕನ್ನಡಕ್ಕೆ ಚೆಪ್ಪಲಿ ಎಂದು ಮಾಡಿ ತಂದು ಕೊಂಡಿದೇವೆ (ನಮ್ಮನು. ೧೧೫).

[ ←ಹಿಂ. ಚಪ್ಪಲ್ ; ಮರಾ. ಚಪ್ಪಲ್, ಚಪಲ್, ಚಪಳೀ ]

**ಚಪ್ಪಲಿಚೆಂಡು** (ನಾ). ಒಂದು ಬಗೆಯ ಸಸ್ಯ : (ಚ).  [ ? ]

**ಚಪ್ಪಲು** 'ಚಪ್ಪಲಿ' ನೋ.

**ಚಪ್ಪಳ$_1$** 'ಚಪ್ಪಳೆ' ನೋ.

**ಚಪ್ಪಳ$_2$**, ಚಪಳ$_1$ (ನಾ). ತೊಡೆಯ ಹೊರಭಾಗ : ಹೊಡೆವರ ನಡುಬೆನ್ನು ಮುಂಡ ಚಪ್ಪಳೆಗಳ ಒಡಗೂಡಿ ಕರುಳ ಗುಂಡಿಗೆಯ ಬಿದದ ಚೆಲ್ಲಿತು ರಕ್ತ(ಹರಿಸಾಂ. ೩-೬೪). **ಚಪಳ$_1$** : ಕುದುರೆ . . . ಕಂದ ಮುಖ ತಲೆಯ ಕೂದಲು ಸತ್ವವಾಗಿ ಚಪಳವೂ ಎದೆಯೂ ಉಬ್ಬಿ ದೊಡ್ಡಿತ್ತಾಗಿ ಇರಲು (ಅಶ್ವವೈ. ೫-೨೨ ಟೀಕೆ).  [ <ಚಪ್ಪ$_1$ ]

**ಚಪ್ಪಳಿಕ್ಕು** 'ಚಪ್ಪಳೆಯಿಕ್ಕು' ನೋ.

**ಚಪ್ಪಳಿಗೊಳ್** (ಕ್ರಿ). ಚಪ್ಪಾಳೆ ತಟ್ಟು; ಸಪ್ಪಳಮಾಡು: ಪುಷ್ಪಕದೊಳಗೆ ಕುಳ್ಳಿರಿಸಿ ಚಪ್ಪಳಿಗೊಳಲೊಯ್ದು ಹಾಕುವುವು ದೊಡ್ಡ ಕಪ್ಪಟವಾದ ಕೊಳದಲಿ (ಬಿಜ್ಜರಾ. ೨-೬೩). [ <ಚಪ್ಪಳೆ + ಕೊಳ್$_1$ ]

**ಚಪ್ಪಳಿಸು$_1$** (ಕ್ರಿ).=ಚಪ್ಪಳೆಯಿಕ್ಕು : ಆ ಕೂಸು . . . ನಗುಗುಂ ಕೈ ಚಪ್ಪಳಿಸುಗುಂ ಹಲವನುಲಿಗುಂ (ಶಾಂಚ. ೧೩೨-೨೦) : ಚಪ್ಪಳಿಸಿ ಕೈಗಳಂ ಕುರುನೃಪತಿ ಕಟ್ಟನಕಟ (ತುರಂಗ. ೭೦-೬೬). [ ಚಪ್ಪಳೆ + – ಇಸು$_3$ ]

**ಚಪ್ಪಳಿಸು$_2$** 'ಚಪ್ಪರಿಸು' ನೋ.

**ಚಪ್ಪಳೆ, ಚಪ್ಪಳ$_1$, ಚಪ್ಪಾಳೆ$_1$, ಚೆಪ್ಪಾಳೆ, ಛಪ್ಪಳೆ, ತಪಾಳೆ, ತಪ್ಪಣಿ$_2$, ತಪ್ಪಣೆ, ತಪ್ಪಳೆ, ತಪ್ಪಾಳೆ** (ನಾ). ಎರಡೂ ಅಂಗೈಗಳನ್ನು ಒಂದಕ್ಕೊಂದು ತಾಟಿಸಿ ಮಾಡುವ ಶಬ್ದ; ಕೈಪರೆ ; ಕರತಾಡನ : "ತಾಳಃ . . . ಕಾಲದಿಂದ ಗೀತಕ್ಕೆ ಕಟ್ಟಳೆಯ ಮಾಡುವ ಚಪ್ಪಳೆಯ ಪೆಸರು" (ನಾಚಿರಾ. ೯೬). **ಚಪ್ಪಳ$_1$** : ಕರಗಳೆರಡಂ ಕೂಡಿ ಚಪ್ಪಳಮನಿಕ್ಕುತಂ (ಸಿದ್ಧಕಾ. ೪-೨೦). **ಚಪ್ಪಾಳೆ$_1$**: ಚಪ್ಪಾಳೆಗಳ ರವ ಕೊಂಬು ಕೊಳಲು ಹೊನ್ನತಪ್ಪಟೆಗಳ ದನಿಯಿಂದ . . . ತೇರು ಬಂದೊಪ್ಪಿತು (ಕಂನವಿ. ೨೫-೧೦೦); ಚಪ್ಪಾಳೆಗಳಂ ಹುಯ್ಯುತ (ಸೌಗಂಧಿ. ೨೯೬-೮): ಅವಳ ಮಾತಿಗೆ ಅಲ್ಲಲ್ಲಿ ಚಪ್ಪಾಳೆಗಳು . . . ಕೇಳಿಬರುತ್ತಿದ್ದವು (ಅಪನಾ. ೧೩೪). **ಚೆಪ್ಪಾಳೆ** : ಕಿರುದನಿಯ ನಗು ಚೆಪ್ಪಾಳೆ ಮುತ್ತುಗಳು ಪಿಸುಮಾತು ಹಾಡು (ಮರನಾ. ೧೯೬). **ಛಪ್ಪಳೆ**: 'ಛಪ್ಪಳೆಯಿಡು' ಪರಾ. **ತಪಾಳೆ** : 'ಕೈತಪಾಳೆ' ಪರಾ. **ತಪ್ಪಣಿ$_2$** : 'ಕೈದಪ್ಪಣಿ' ಪರಾ. **ತಪ್ಪಣೆ** : 'ತಪ್ಪಣೆಗುಟ್ಟು' ಪರಾ. **ತಪ್ಪಳೆ**: ಮೆಲ್ನುಡಿ ಮುದ್ದುಗೆಯ್ತವಿಂ ಪೊದವಿದ ನುಣ್ನೊದಟ್ನುಡಿ ಮುದಂ ಮಿಗೆ ತಪ್ಪಳೆಗಾಡುವಾಯತಂ (ದಶಕು. ೫-೬೨). 'ತಪ್ಪಳೆಗಂಟ್ಟು' ಪರಾ. **ತಪ್ಪಾಳೆ** : ಪುಟ್ಟಕೈಯಲಿ ತಪ್ಪಾಳೆಯನಿಕ್ಕುವಳು ತಪ್ಪು ದಟ್ಟಡಿಯಿಟ್ಟು ನಡೆವಳು (ಕವಿಚ. II, ೪೮೫ ಪದ್ಮಿನೀಕಲ್ಯಾಣ).

**ಚಪ್ಪಾಳೆ ತಟ್ಟು**=ಕರತಾಡನ ಮಾಡು : ಚಪ್ಪಾಳೆ ತಟ್ಟಿ ನಾ ಪಾಡುವೆ (ಪುರಂದ. ೧-೮೨-೧) : ಜನ ಯಾವುದಕ್ಕೆ ಚಪ್ಪಾಳೆ ತಟ್ಟುವುದೊ ಅವನ್ನೇ ಪ್ರಯೋಗದಲ್ಲಿ ಸೇರಿಸಿಬಿಡುವುದು (ಭಾರದ. ೫೭೪). **ಚಪ್ಪಾಳೆ ಬಾರಿಸು**=ಚಪ್ಪಾಳೆತಟ್ಟು : ಆತ ಚಪ್ಪಾಳೆ ಬಾರಿಸುತ್ತಾ ಹೇಳಿದ (ಆಶ್ರಮ. ೮೭). **ಚಪ್ಪಾಳೆಹಾಕು**=ಚಪ್ಪಾಳೆ ತಟ್ಟು : ಸುತ್ತಣ ಜನ ಪ್ರಶಂಸಾಪೂರ್ವಕವಾಗಿ ಚಪ್ಪಾಳೆಹಾಕುತ್ತಿರುವಂತೆಯೂ ಕನಸು ಕಟ್ಟಬಹುದು (ಶಿಕ್ಷದ. ೬೫೦).

[ ದೇ.॥ ತಮಿ. ಚಪ್ಪಾಣಿ ; ತುಳು. ಚಪ್ಪಳಿ ; ತೆಲು. ಚಪ್ಪಟ್ಲು ]

**ಚಪ್ಪಳೆಗುಟ್ಟು, ತಪ್ಪಣೆಗುಟ್ಟು, ತಪ್ಪಳೆಗುಟ್ಟು** (ಕ್ರಿ).=ಚಪ್ಪಳೆಯಿಕ್ಕು: ತೂಗಿ ತೊನೆದು ಕೈ ಚಪ್ಪಳೆಗುಟ್ಟುತೆ (ಭೃಂಗೀಶ. ಪ. ೪೬೩-೦೩) : ಧಿಟ್ಟ ಚಂಚರು ಬಂದು ಚಪ್ಪಳೆಗುಟ್ಟಿ ಯೇಡಿಸಿ ಕಾಡಿದಲ್ಲದೆ ಬಿಟ್ಟು ಹೋಗರು ನಿನ್ನನೆನ್ನಯ ಪಳ್ಳಿಗೈತಂದು (ಬಸವು. ೦೮-೦೫). **ತಪ್ಪಣೆಗುಟ್ಟು** : ಮದಿರಾರಸದ ಮದವೇಱೆ . . . ತೊದಟ್ನುಡಿಯಿಂದಂ ಕರದು ಬಯ್ವುತ್ತುಮುಟ್ಟುದಂ ಬಿಟ್ಟು ತಪ್ಪಣೆಗುಟ್ಟುತುಂ ಕುಣಿದು (ದಾಧಪು. ೧೦-೧೩೯ ವ). **ತಪ್ಪಳೆಗುಟ್ಟು** : ತಪ್ಪಳೆಗುಟ್ಟುತ ತಾರೆಲೆವಾಡುತ ಒಪ್ಪ ಗೋವಳರ ಮಧ್ಯದೊಳು ಒಪ್ಪದಿನಾ ಬಲಕೇಶರೀವರ್ರಿರು ಬರ್ಪ ಪಟ್ಟಣದ ದಾರಿಯೊಳು (ನೇಮಿಸಂ. ೧೬-೦೦೩).

[ ಚಪ್ಪಳೆ + ಕುಟ್ಟು$_1$ ]

**ಚಪ್ಪಳೆಗೊಳಿಸು** (ಕ್ರಿ). ಕೈಯಿಂದ ತಟ್ಟು; ಚಪ್ಪರಿಸಂ; ಸದ್ದುಹೊಡೆ : ನಿಪ್ಪಸರದೆ ತೋಳ ಮೊದಲ ಚಪ್ಪಳೆಗೊಳಿಸಿ ದಂಡೆಯ ಹೂಡಿ ನಿಂದಿರು ಪೊಪ್ಪವನೇನ ಬಣ್ಣಿಪೆನು (ಮೋಹಕ. ೦೨-೮೪).

[ ಚಪ್ಪಳೆ + ಕೊಳ್$_1$ + – ಇಸು$_3$ ]

**ಚಪ್ಪಳೆಯಿಕ್ಕು, ಚಪ್ಪಳಿಕ್ಕು, ಚಪ್ಪಾಳೆಯಿಕ್ಕು, ತಪ್ಪಳಿಕ್ಕು** (ಕ್ರಿ). ಚಪ್ಪಾಳೆ ತಟ್ಟು ; ಕೈಪರೆಗುಟ್ಟು; ಕರತಾಡನಮಾಡು: ಚಪ್ಪಳೆಯಿಕ್ಕಿ ನಲಿದು ಕೊಂಡಾಡಿ . . . ಡಾಕಿನಿತಂಡವೆಸೆದುವಾ ರಣದೆ (ಕಂನವಿ. ೧೫-೬೨); ನೋಡಿ ಚಪ್ಪಳೆಯಿಕ್ಕಿ . . . ಕೇಕೆ ಹಾಕಿದೆ ಮಗುವು (ಹೂಪಾದಿ. ೧೬-೩). **ಚಪ್ಪಳಿಕ್ಕು**: ಓತು ಕುಣಿಪರು ಚಪ್ಪಳಿಕ್ಕಿ (ಬಸವು. ೪-೮) ; ನುಡಿವ ನಾಲಿಗೆಯ ಪಿಡಿದು ಬಿಡದೆ ಥಣಥಣರೆಂದು ಬಡಿದು ಚಪ್ಪಳಿಕ್ಕುತ್ತ (ಪುರಂದ. ೦-೫೩-೧) ; ಸರ್ಪರು ಮುತ್ತಿ ಕದುಬಿ . . . ಚಪ್ಪಳಿಕ್ಕುತ ನಗುತಿರೆ (ನವಮೋ. ೧೦-೫೨). **ಚಪ್ಪಾಳೆಯಿಕ್ಕು** : ನಿರ್ದಯ ಅವಿವೇಕತನದ ಪತನಕ್ಕೆ ಚಪ್ಪಾಳೆಯಿಕ್ಕುವನು (ಪ್ರಬಂಧ. ೩೦). **ತಪ್ಪಳಿಕ್ಕು** : ಕಾಲನಾಡಿಸ್ಯೆ ಕುಮಾರ ಎಂದು ಕಾಂತೆಯರ್ ಮುಂದೆ ನಿಂದು ತಪ್ಪಳಿಕ್ಕಿಯಾಡಿಸಲ್ ವಿಲಾಸದಿಂ . . . ಆಡಿದಂ ಕುಮಾರಕಂ (ದಶಕು. ೨-೭೪).

[ ಚಪ್ಪಳೆ + ಇಕ್ಕು ]

**ಚಪ್ಪಟಿ, ಚಾಪಳಿ** (ನಾ). ೧. ಚಪ್ಪಟೆಯಾದುದು : "ಚಪ್ಪ[ಪಾಠಾಂ.ಕ್ಕ]ಟಿಯೆಂದುಪೊತ್ತಿ ಚಪ್ಪಟೆಯಾದುದು"(ಶಮದ. ಮ. ೩೩ ವೃತ್ತಿ);-"ಚಪ್ಪಟಿ [ಪಾಠಾಂ. ಕಚ್ಚಟಿ]ಯೆನಲ್ಕೆ ಚಪ್ಪಟೆ" (ಸಂಜೀವ. ೫): ಚಪ್ಪಟಿ, ಪುಚ್ಚಟಿ (ಶಬ್ದಾನು. ೦೪೦ ವ್ಯಾಖ್ಯಾ). **ಚಾಪಳಿ**: (ಗು). ೨. (ಕರಾ) ಸಮತಲವಾದ; ಸಪಾಟಾದ; ಹೆಚ್ಚು ಉಬ್ಬಿಲ್ಲದಿರುವ: ಚಾಪಳಿ ಗೊರಟುಳ್ಳ ಮಾವಿನ ಹಣ್ಣು ಹೆಚ್ಚು ಚೆನ್ನಾಗಿರುತ್ತದೆ (ರೂಢಿ).

[ ?. / ತಮಿ. ಚಪ್ಪಳಿ=ಚಪ್ಪಟೆಯಾಗು ]

**ಚಪ್ಪಾಣಿಮುತ್ತು** (ನಾ). ಶ್ರೇಷ್ಠವಾದ ಮುತ್ತು: ಚಪ್ಪಾಣಿಮುತ್ತು ಬಾಯಿ ಬಿಚ್ಚಿಹೋಗುವಾಗ ದುಃಖ ಬೇಡ (ಪುರಂದ. ೩-೬೭-೫).

[ <ಚಿಪ್ಪು$_1$ + ಆಣಿಮುತ್ತು ]

**ಚಪ್ಪಾಳೆ** 'ಚಪ್ಪಳೆ' ನೋ.

**ಚಪ್ಪಾಳೆಯಿಕ್ಕು** 'ಚಪ್ಪಳೆಯಿಕ್ಕು' ನೋ.

**ಚಪ್ಪಿರಿ, ಚಪ್ಪರಿ, ಚೆಪ್ಪರಿ** (ಕ್ರಿ). ೧. ಆಸ್ವಾದಿಸು; ನಾಲಗೆ, ತುಟಿಗಳಿಂದ ಸವಿಮಾಡಿಕೊಂಡು ತಿನ್ನು ; ಹೀರು ; ಚಪ್ಪರಿಸು : ಚನ್ನಯ್ಯನುಂಡು ಮಿಕ್ಕುದ ಚಪ್ಪಿರಿದು ಸವಿದ (ಚನ್ನವ.ಕ. ೩೭೦-೭೭೦); ಕಡುವುಳಿಗಳ್ಳನೊಂದು ಕಿಳಿವಟ್ಟಲನಿಟ್ಟೆಱೆಯಲ್ಕೆ . . . ಕುಡಿದು ಚಪ್ಪಿರಿದು (ದಶಕು. ೮-೨೧೪) : ಮೊಗದೊಳು ಮೊಗವಿಟ್ಟು ಚೆಂದುಟಿ ರಸವ ಸವಿದು ಚಪ್ಪಿರಿದ (ಕಂನವಿ. ೦೦-೪೦). ೨. (ಆಲಂ) ಅನುಭವಿಸಂ : ಸೌಖ್ಯಮಂ ಚಪ್ಪಿರಿದು (ಸ್ವರೂಪಾ. ೩-೨೬). **ಚಪ್ಪರಿ** : ೧. ಕೆಳಗೆ ನಿಂದು ಚಪ್ಪರಿದಡೆ ತೊಟ್ಟು ಬಿಟ್ಟತ್ತೇ ಹಣ್ಣು (ಮೋಳಿಮಾ. ೩೦-೧೨೪) : ಚಪ್ಪರಿದೀಂಟಿ ನೂತ್ನ ಕಣಿಕೋದ್ಭವ ಸಾರಮಂ (ಉದ್ಭಟ. ೩-೨೦) ; ಮರುಳುಗಳು ಬಾಯ ಬಿಡುತ ಮುಕ್ಕುಳಿಸಿ ಚಪ್ಪರಿದು ದಣಿವಂದದಿಂ (ವೀಶೈಪು. ೨-೭-೪೬) : ರಸ ರಸಾಯನವ ಚಪ್ಪರಿದು (ಮೋಹತ. ೩-೫೭). ೩. ಮೆಲುಕು ಹಾಕು: ಅದನ್ನೇ ಮತ್ತೆ ಮತ್ತೆ ಮಾತಾಡಿ ಅದನ್ನು ಚಪ್ಪರಿಯೋ ನಮ್ಮ ನಡತೆ ಸರೀನೆ ? (ನಿಂದನೆ. ೦೬೪). **ಚೆಪ್ಪರಿ**: ೧. ಈಶ್ವರಂ ತೆರೆಯ ಮಱೆಯೊಳ್ ಮುನ್ನಿನಂದದಿ ಚೆಪ್ಪರಿವುತಾರೋಗಿಸದಿರಲು (ಚಬಪು. ೫೫-೧೨).

[ ಚಪ್ಪು + ಇರಿ$_1$ ]

**ಚಪ್ಪು, ಜಬ್ಬು$_1$** (ಕ್ರಿ). ೧. ಅಗಿದು ತಿನ್ನು ; ಅರೆದು ತಿನ್ನು ; ಮೆಲುಕಾಡಿಸು. 'ಚಪ್ಪಿರಿ' ಪರಾ. **ಜಬ್ಬು$_1$** : ೨. ಚೀಪು; ಸೀಪು: ಮಗು ದೊಡ್ಡದಾದರೂ ಮೊಲೆ ಜಬ್ಬುತ್ತಲೇ ಇದೆ (ರೂಢಿ).

[ದೇ.॥ ತಮಿ. ಮಲ. ತೆಲು. ಚಪ್ಪು; ಮಲ್ತೊ. ಚೊಪ್ಯೆ ]

**ಚಪ್ಪೆ$_1$, ಚೆಪ್ಪೆ, ಛಪ್ಪೆ** (ನಾ). ೧. ಚಪ್ಪಟೆಯಾದುದು ; ತಟ್ಟೆಯಾದುದು. 'ಚಪ್ಪಲರ್' ಪರಾ. ೨. ತೊಡೆಯ ಹೊರಭಾಗ: ಆ ಆಕಳ ಮುಂಗಾಲಿನ ಚಪ್ಪೆಗೆ . . . ಮೆಲ್ಲನೆ ತಿವಿಯಿತು (ಮುಂಬಯಿ. ೫-೯೧) : ಚಪ್ಪೆ

ಗಳೆರಡೂ ಬಂಡಿಯ ಗಾಲಿಯಂತಾಗಿದ್ದುವು (ಬೆಳುಮ. ೧೭೭) : ಅದರ ಚಪ್ಪೆ ಎಲುವಿನ ಮಗ್ಗುಲಲ್ಲಿ . . . ಅದರ ಹೆಸರು ಬರೆದನು (ಬಂಗಾಹೆ. ೪೩). ಚೆಪ್ಪೆ: ೧. 'ಚೆಪ್ಪವಡೆ' ಪರಾ. ೨. 'ಚೆಪ್ಪೆಜಾಡ್ಯ' ಪರಾ. ಛಪ್ಪೆ: ೨. ಟೊಂಕದ ಎರಡೂ ಮಗ್ಗುಲಿಗೆ ದೊಡ್ಡವೆರಡು ಛಪ್ಪೆಯ ಎಲುವು ಗಳಿವೆ (ಮುಂಬಯಿ. ೬-೩೦೨).

[ ದೇ.॥ ತಮಿ. ಚಪ್ಪೈ; ಮಲ. ಚಪ್ಪು; ತೆಲು. ಚಪ್ಪಿ ]

**ಚಪ್ಪೆ$_2$** 'ಸಪ್ಪೆ' ನೋ.

**ಚಪ್ಪೆ$_3$** 'ಛಾಪು' ನೋ.

**ಚಪ್ಪೆ$_4$** (ನಾ). ಒಂದು ಬಗೆಯ ಸಸ್ಯ : ಚಪ್ಪೆಸೊಪ್ಪಿನ ರಸವನೂ ಎಣ್ಣೆಯನೂ ಕೂಡಿ ಮಸ್ತಕಕ್ಕೆ ಒತ್ತಿಸಲು ಪಕ್ಷಿಗ್ರಹ ಹರವಹುದು. ಚಪ್ಪೆಯ ಬೀಜವ ತೇದು ಪಾನ ಲೇಪನಗಳ ಮಾಡಿಸಲು ಪಕ್ಷಿಗ್ರಹ ಹರವಹುದು (ವೈದ್ಯಸಾ. II, ೧೪). [ ? ]

**ಚಪ್ಪೆಗಲ್ಲು** (ನಾ). ಚಪ್ಪಟೆಯಾದ ಕಲ್ಲು ; ಚಪ್ಪಡಿಗಲ್ಲು; ಹಾಸುಗಲ್ಲು: ಒಂದಗುಳು ಚಪ್ಪೆಗಲ್ಲಿನಂದ ಒಂದಗುಳು ಅಡ್ಡಗಲ್ಲಿನಂದ ಒಂದಗುಳು ಊರ್ಧ್ವಗಲ್ಲಾಗಿ ನಿಂದಿಹುದಾಗಿ (ಮೋಳಮೂ. ೨೨೫-೭೭೮).

[ ಚಪ್ಪೆ$_1$ + ಕಲ್ಲು (<ಕಲ್$_3$) ]

**ಚಪ್ಪೆಜಾಡ್ಯ, ಚೆಪ್ಪೆಜಾಡ್ಯ** (ನಾ).=ಚಪ್ಪೆರೋಗ : (ಎಸಮ್ಮ. XV, ೩೦). **ಚೆಪ್ಪೆಜಾಡ್ಯ :** ಕೆಲವು ಕಾಲಗಳಲ್ಲಿ ದನಕರುಗಳಿಗೆ ದೊಡ್ಡಜಾಡ್ಯ, ಚೆಪ್ಪೆ ಜಾಡ್ಯ ನರಡಿ . . . ವ್ಯಾಪಿಸಿರುವುದುಂಟು (ಗ್ರಾಪೂಕ. ೦೦೫).

[ ಚಪ್ಪೆ$_1$ + ಜಾಡ್ಯ ]

**ಚಪ್ಪೆರೋಗ** (ನಾ). ದನಗಳಿಗೆ ಭೇದಿ ವಿಪರೀತವಾಗುತ್ತ ಜಂಘಾಬಲ ಉಡುಗಿ ಹೋಗುವ ಒಂದು ಬಗೆಯ ರೋಗ : ಚಪ್ಪೇರೋಗದ ಉಚ್ಚಾಟ ಹೆಚ್ಚಿದಾಗ ಊರು ಮಧ್ಯದಲ್ಲಿರುವ ಗೋಗಲ್ಲು ಪೂಜೆ ಮಾಡುವ ವಾಡಿಕೆ (ಹುಬ್ಬುಹ. ೭೦) ; ಇದು ಚಪ್ಪೆರೋಗ . . . ಎಂಬ ರೋಗವನ್ನುಂಟುಮಾಡುತ್ತದೆ (ಪಶಜೀ. ೪೧). [ ಚಪ್ಪೆ$_1$ + ರೋಗ ]

**ಚಪ್ಪೋಡು, ಚಪೋಡು, ಚಪ್ಪಗೋಡು, ಚೆಪ್ಪೋಡಂ** (ನಾ). ೧. ತಾಮ್ರಶಾಸನ; ಲಿಖಿತವಾದ ಅಧಿಕಾರಪತ್ರ: ಸಾತಿಶಯ ಪದ್ಮಂಗಳೇ ವಜ್ರಮಯದ ವಿಖ್ಯಾತವೆಂದೆನಿಪ ಚಪ್ಪೋಡಾಗಿರುತಿರ್ದವು (ವೀಶೈಪು. ೮-೦೭-೪೫) ; ಚಪ್ಪೋಡ ತಿಳಿದಜುಹಿದಾತಗಂ ಸೇನಾಧಿಪಟ್ಟಗಟ್ಟುತ್ತ . . . ನನ್ನರ್ಧಸಿಂಹಾಸನಾರೂಢನಂ ಮಾಳ್ಪೆಂ (ಪ್ರಭುಪು. ೭-೦೭). ೨. ಸೊಮ್ಮು; ಸ್ವತ್ತು; ಆಸ್ತಿ : ವಿಜ್ಞಾನವು ಯಾವೊಂದು ದೇಶದ ಚಪ್ಪೋಡೂ ಅಲ್ಲ (ವಿಕಾಸ. ೫೦). **ಚಪೋಡು :** ೧. ಯಾ ಚಪೋಡ ಬರದಾತ ನಾಗೇನಹಳಿ ಚಕ್ರಪ್ಪನ ಪೌತ್ರರಾದ . . . ಹುಚಣ್ಣನ ಕೈಯ ಬರಹ (ಎಕ. XII, ತುರುಕೂ. ೪೫-೯೪ ; 1679). **ಚಪ್ಪಗೋಡು :** ೧. ಮೇಲು ಕೋಟೆ ಚಪ್ಪಗೋಡು ಇಲ್ಲದೆ ಬರಿಯ ಕಾಗದದಲ್ಲಿ ಈಚೆಗೆ ಅನಾಮಧೇಯ ಗುರುಗಳಿಂದ ಅಧಿಕಾರವನ್ನು ಪಡೆದವರು ಬರಿಯ ಬುಡ್ಡ ದಾಸಯ್ಯಗಳು (ಗರುದಾ. ೦೭೬). **ಚೆಪ್ಪೋಡು:** ೨. ಈ ಭೂಮಿ ಯಾವೊಬ್ಬನ ಚೆಪ್ಪೋಡಲ್ಲ; ಅದು ದೇವರದು (ಪುನರು. ೩೦೫) ; ಬುದ್ಧಿಶಕ್ತಿ ಯಾವೊಂದು ಜನಾಂಗದ . . . ಚೆಪ್ಪೋಡಲ್ಲ, ಸ್ವಂತ ಆಸ್ತಿಯಲ್ಲ (ಶ್ರೀಪ್ರಪ್ರ. VIII, ಮುನ್ನುಡಿ). P ಇದು 'ತಾಮ್ರಪತ್ರ' ಎಂಬ ಸಂಸ್ಕೃತ ಶಬ್ದದ ಅನುವಾದವಿರಬಹುದು. [ ದೇ.॥ ತಮಿ. ಮಲ. ಚೆಪ್ಪೇಟು ]

**ಚಪ್ರಾಸಿ** 'ಚಪರಾಸಿ' ನೋ.

**ಚಬಕ** 'ಚಬುಕು' ನೋ.

**ಚಬಕಾರ** 'ಚಬುಕಾರ' ನೋ.

**ಚಬಿಕು** 'ಚಬುಕು' ನೋ.

**ಚಬುಕ** 'ಚಬುಕು' ನೋ.

**ಚಬುಕಂಗೆಯ್** (ಕ್ರಿ). ಚಾಟಿಯಿಂದ ತಿವಿದು ವೇಗಗೊಳಿಸು,–ಚುರುಕುಗೊಳಿಸು : ಪತ್ತಿರ್ದ ಕುದಿರೆಯುಂ ಚಬುಕಂಗೆಯ್ಯೆ (ಚಂದ್ರಪ್ರ. ೭-೦೦೯).

[ ಚಬುಕ (<ಚಬುಕು) + ಕೆಯ್$_1$ ]

**ಚಬುಕಾಯಿಸು** (ಕ್ರಿ). =ಚಬುಕಂಗೆಯ್ : ಬಾಲಕಿಯು ತನ್ನ ಕುದುರೆಯನ್ನು ಹಿಮ್ಮಡಿಯಿಂದ ಚಬುಕಾಯಿಸುತ್ತಾ . . . ಮುಂದೆ ಓಡಿಸಿಕೊಂಡು ಹೊರಟುಹೋದಳು (ಝಾರಾಣಿ. ೧೩).

[ <ಚಬುಕು + – ಇಸು$_3$ ]

**ಚಬುಕಾರ, ಚಬಕಾರ, ಸಬಕಾರ** (ನಾ). ಸೋಪು ; ಸಾಬೂನು ; ಸಬ್ಬು: "ಚಬಕಾರ, ಚಬುಕಾರ–ಸಬಕಾರ" (ಗಂಗಾಮ. ೦೨೮). **ಚಬಕಾರ:** ಮೇಲಿನ ಪ್ರಯೋಗವನ್ನು ನೋಡಿ. **ಸಬಕಾರ :** ಆ ಕೊಳೆಗೆ ನಾಲ್ಕು ಬಿಲ್ಲೆಯ ಸಬಕಾರ ಸಾಕಾಗಿದ್ದಿತು (ಜಯಂತ ೩೪೩) : ಸಬಕಾರದ ನೊರೆಯನ್ನು ಮುಖದ ತುಂಬ ಮೆತ್ತುತ್ತಾರೆ (ದೇಕನ್ನ. ೬೯) ; ತಲೆಗೆ ಸಬಕಾರ ಹಚ್ಚುವದರಿಂದ ಕೂದಲುಗಳು ಬಿರುಸಾಗಿ ಬೆಳ್ಳಗಾಗುವವು (ಬ್ರಹ್ಮಜೀ. ೦೨೦). [ದೇ.॥ ತಮಿ. ಚವುಕ್ಕಾರ: ಮಲ. ಚವುಕ್ಕಾಯ್; ತುಳು. ಚಬಕಾರ, ಚಬುಕಾರ, ಸೌಕಾರ; ತೆಲು. ಚವುಕಾರ, ಚೌಕಾರ ]

**ಚಬುಕು, ಚಬಕ, ಚಬಿಕು, ಚಬುಕ, ಚಾಬೂಕು, ಚುಬುಕು$_2$, ಸಬಕ** (ನಾ). ೧. ಚಾವಟಿ; ಚಾಟಿ; ಚಡಿ: ಚಟುಲ ಹಯಗಳ ಚಬುಕನಿಕ್ಕಲು ಪುಟನೆಗೆದು , . . ತುಳಿದುವು ದಿವವನಾಕ್ಷಣಕೆ (ಕಾಶಿರಾ. ೦೯-೦೧); ಬಲೆ ಪಟ ಹನುಮನ ಬಾಲ ಚಬುಕು ಕೊಳ್ಳಿ ತೊಲಗದ ಕಂಭ ಮುಂದುಲಿವ ತಲೆ ಕಳಸದ ಬರಿದಿನ ಹರಿಗೆಯ ಮಂದಿ ಕಲಹಕ್ಕೆ ಪೊಱಮಟ್ಟರು (ಕುರಾಸಾಂ. ೦೦-೩೩); ಖಂಡದ ಹಿಡಿಗಲ್ಲು ನರದ ಚಬುಕುಗಳ ಗಂಡುಭೂತಗಳೆದ್ದವಾಗ (ಹರಿಸಾಂ. ೫೪-೫೭) ೨. (ಆಲಂ) ಚುರುಕಂ ; ಚಪಲತೆ : ಸುಬ್ಬು ಎಳೆ ನಾಗರಹಾವಿನಂತೆ ಚಬುಕಾಗಿ . . . ಕಿರುಗುತ್ತಿದ್ದ (ಭೀಮುಕಾ.೮೨). **ಚಬಕ:** ೧. ಸಾರಥಿಯು ಪುನಃ ಕುದುರೆಗಳನ್ನು ಚಬಕದಿಂದ ಹೊಡೆಯುವನು (ಮುಂಬಯಿ. ೬-೨೯) ; ಒಂದು ದಿನ ಪೋಲೀಸರ ಚಬಕ ಬಿದ್ದು ನನ್ನ ಮೇಲೆ ಬಾಸಾಳವೆದ್ದಿತು(ಗಾಳಿಪ. ೧೨೯); ಕುದುರೆಗೊಂದು ಚಬಕದೇಟನ್ನು ಕೊಟ್ಟು ಹೇಳಿದ (ಶಾಪ. ೮೩). **ಚಬಿಕು:** ೧. ಆ ರಾಯನು . . . ತನ್ನ ಚಬಿಕಿನ ಪೆಟ್ಟಿನಿಂದ ಆತನನ್ನು ಬಹಳವಾಗಿ ನೋಯಿಸಲು (ಕೃಪಾಅ. ೩೨೩). **ಚಬುಕ:** ೧. ಚಬುಕ ಚಾಟಿ ಚಮ್ಮಟಿಕೆಯಿಂದಚ್ಚಟಚ್ಚ ಬಡಿದು . . . ಭಂಗಬಡಿಸೆಂದು ನಿರವಿಸಿದನು (ಚಬಪು.೫೭-೪೨). **ಚಾಬೂಕು :** ೧. ಕಾಕಾನಿಂದ ಚಾಬೂಕ ಏಟು ತಿಂದ (ದೀಪಹ. II, ೧೯೮); ಬಡ ಟಾಂಗಾದವನ ಟೊಪ್ಪಿಗೆ ಎಲ್ಲಿಗೆ ಹೋಯಿತೊ, ಚಾಬೂಕು ಯಾರ ಕೈ ಸೇರಿತೊ! (ಶ್ರೀಕಾಂತ. III, ೬೪). **ಚುಬುಕು$_2$:** ೧. ಸ್ಯರಿಸದೆ ಆರ್ವವರ ಚುಬುಕಿನ ಎಮ್ಮೆಬಾರಿನ ಪರಮಸೇವೆಗೆ ನಿನ್ನನ್ನು . . . ಎಳೆದೊಯ್ಯುತ್ತಿದೆ (ಜೆಟ್ಟಿಅ. ೨೦-೦). **ಸಬಕ:** ೧. ಚರ್ಮದ ಜೀನೂ ಮತ್ತು ಬಟ್ಟೆಯ ಸಬಕವೂ ಅವೆ (ಬೆಂಗಾಳ್ಮ. ೨೭).

ಚಬುಕುಮಾಡು, ಚಬಕುಮಾಡು =(ಕುದುರೆಯನ್ನು) ಚಬುಕಿನಿಂದ ಹೊಡೆದು ಚುರುಕುಗೊಳಿಸು : ಛಾಯಾಗುಪ್ತನು ರಥಾಶ್ವಮಂ ಚಬುಕುಮಾಡಿ (ಸೌಗಂಧಿ. ೨೯೭-೧) ; ರಾಕ್ಷಸನು–ಅಶ್ವಮಂ ಚಬುಕು ಮಾಡುತ್ತಾ ಬರುತ್ತಿದ್ದನು (ಮುದ್ರಾಮಂ. ೧೫೦); ರಥಾಶ್ವಗಳ ಶರೀರಗಳಂ ಸವರಿ ಚಬಕುಮಾಡಿ . . . ರಥವನ್ನು ನಡೆಸು (ಕೃಪಾವಿ. ೯೭).

[ ←ಪಾರ. ಹಿಂ. ಚಾಬುಕ್; ಮರಾ. ಚಾಬೂಕ್ ]

**ಚಬ್ಬಣವಾವಿ** (ನಾ). ಒಂದು ಊರಿನ ಹೆಸರು : ತೆಂಕಲು ಚಬ್ಬಣವಾವಿಯ ಸೀಮೆ (ಕಇ. II, ೧೦-೨೩ : 1092) : ಚಬ್ಬಣವಾವಿಯ ಮಲ್ಲೇಶ್ವರದೇವರಿಗೆ ಸಿನ್ನಿಬೇಡದಲು ಬಿಟ್ಟ ಭೂಮಿ (ಕಇ. II, ೦೬-೦೫; 1122) [ ? ]

**ಚಬ್ಬಯ್ಯ** (ನಾ). ಒಬ್ಬಾತನ ಹೆಸರು : ಅವರಣ್ಣಂ ಚಬ್ಬಯ್ಯಂ ಕಲ್ಲಂ ನಿಱಿಸಿದಂ (ಎಕ. VIII, ಸೊರಬ. ೩೮೬-೭ ; 1004). [ಚಬ್ಬ$_0$+ಅಯ್ಯ$_1$]

**ಚಬ್ಬಿಜೋಯಿ** (ನಾ). ಒಂದು ಪ್ರದೇಶದ ಹೆಸರು : ರಾಜಾದಿತ್ಯರಸರ್ ಕೋಸವಳಂ ಸವಲಪ್ಪೇಯ ಭಾಗಮುಮಂ ಚಬ್ಬಿಜೋಯಿ ಯಪ್ಪ ತ್ತೊಂದು ಸಾಸಿರಮುಮಂ . . . ಪ್ರತಿಪಾಳಿಸುತ್ತುಂ (ಕಇಷ. ೨೨-೭-೨೮: 1083). [ ? ]

**ಚಬ್ಬಿಸೆಟ್ಟಿ** (ನಾ). ಒಬ್ಬಾತನ ಹೆಸರು: ಬಸವಸೆಟ್ಟಿಯ ಮಗಂ ಚಬ್ಬಿಸೆಟ್ಟಿ (ಎಕ. IX, ದೊಡ್ಡಬ. ೯-೮ : 918). [ ಚಬ್ಬಿ$_0$ + ಸೆಟ್ಟಿ ]

**ಚಬ್ಬೆ** ‘ಸಬ್ಬೆ’ ನೋ.

**ಚಮ** (ನಾ). ಯಜ್ಞದಲ್ಲಿ ಸೋಮರಸವನ್ನು ಕುಡಿಯುವುದಕ್ಕಾಗಿ ಬಳಸುವ ಪಾತ್ರೆ,– ಪಾನಪಾತ್ರೆ : ದಶಚಮದಿ ಹದಿನಾಲ್ಕುಗೃಹಗಳು ಮುಸಲ ಶಮ್ಯವುಲೂಖಲಂಗಳು . . . ಅಗ್ನೀಧ್ರುರಾ ದ್ವಾದಶಕರೂಪ್ಪಿದರು (ಕೌಶಿರಾ. ೧-೫೯). P ಯಾಗದಲ್ಲಿ ೧. ಹೋತೃವಿಗೆ ‘ ಮಂಡಲ,’ ೨. ಬ್ರಹ್ಮನಿಗೆ ‘ಚತುರಸ್ರಕ’, ೩. ಉದ್ಗಾತೃವಿಗೆ ‘ ತ್ರ್ಯಸ್ರಿ’, ೪. ಯಜಮಾನನಿಗೆ ‘ಪೃಥು’, ೫. ಪ್ರಶಾಸ್ತೃವಿಗೆ ‘ಅವತಷ್ಟ’, ೬. ಬ್ರಹ್ಮ ಶಂಸಿಗೆ ‘ಉತ್ತೋಷ್ಟ’, ೭. ಪೋತೃವಿಗೆ ‘ವಿಶಾಖ’, ೮. ನೇಷ್ಟೃವಿಗೆ ‘ದ್ವಿಗೃಹೀತಕ’, ೯. ಅಚ್ಛಾವಾಕನಿಗೆ ‘ರಾಸ್ನಾವ’, ೧೦. ಅಗ್ನೀಧ್ರನಿಗೆ ‘ಮಯೂಖಿಕ’ ಎಂಬ ಹತ್ತುಬಗೆಯ ಚಮಗಳು ಬೇರೆ ಬೇರೆ ಋತ್ವಿಜರಿಗೆ ವಿಧಾಯಕವಾಗಿವೆ. [ <ಸಂ. ಚಮಸ ]

**ಚಮಕ$_1$** (ನಾ). ಒಂದು ಅನುಕರಣ ಪದ : ದುಮುದುಮು ತತ್ತೊಂ ತತ್ತೊಂಗೆನುತಂ ಚಮಕಂ ತಕನಕ ತಕ ಎಂದೆನುತಂ (ಶುಂಗಳ. ೨).

**ಚಮಕ$_2$** (ನಾ). ಒಂದು ವೇದಸೂಕ್ತದ ಹೆಸರು : ಚಮಕದಿಂದ ಖಿ ಲಾ ಧಿ ಪ ತ್ಯ ವ ನಮಕದಿಂದಖಿಲಾತ್ಮಭಾವವಮರಮನುಜಭುಜಂಗ ಮುಖದೊಳ್ಪಿತ್ತರಿಸುತಿರಲು (ವಿವೇಥ. ೧೨-೯೯). [ ಸಂ. ]

**ಚಮಕಾಯಿಸು** (ಕ್ರಿ). ೧. ಕೋರೈಸು; ಕುಕ್ಕು : ಅದನ್ನು ನೋಡಿದಂತೆಲ್ಲ ಕಣ್ಣು ಚಮಕಾಯಿಸಿ ಹೋಯಿತು (ಎಲೆ. ೫೯). ೨. = ಚಮಕಿಸು ೩ : ನನ್ನ ಕುದುರೆಯನ್ನು ಚಮಕಾಯಿಸುವುದರೊಳಗೆ ಭೀಮರಾಜನು ಮಾಯ ವಾಗಿ ಹೋಗಿದ್ದನು (ಶ್ರೀರಾಹು. ೨೦೬); ನಾಯಕನು . . . ಕುದುರೆಯನ್ನು ಚಮಕಾಯಿಸಿದನು (ಮಲ್ಲಿ. ೩೭). ೩. ನಡುಗಿಸು ; ಬೆದರಿಸು ; (ಕಿ).

[ ಚಮಕಾ$_0$ (← P ಹಿಂ. ಚಮಕಾನಾ) + – ಇಸು$_3$.]

**ಚಮಕಿ** (ನಾ). ೧. ಬೇಗಡೆ; ಗುನ್ನಾಂಪಟ್ಟೆ. ೨. ಹೊಳೆಯುವ ವಸ್ತು,– ಪುಡಿ; ಕಿವಿಗಳೆರಡರಲ್ಲೂ ಮಿರುಗುವ ಚಮಕಿಯ ಕಾಗದದ ಓಲೆ (ಅಲಹೂ. ೯); ನಾವು ಚಮಕಿಯ ಅಂಗಿಯನ್ನು ತೊಟ್ಟು (ಅಲಿಮ. ೨೨): ಚಮಕಿಯ ಕುಂಕುಮದ ಬಾಸಿಂಗ . . . ಮೆರಗು ಕೊಡುತ್ತಿತ್ತು (ಅಲಹೂ. ೮೪). ೩. ಖಡ್ಗಯುದ್ಧದಲ್ಲಿ ಒಂದು ವರಸೆ ; ಮಿಂಚಿನ ವೇಗದ ಹೊಡೆತ: ಯಿಬ್ಬರು ಸಾಧಕರ ಕೈಗಳಲ್ಲಿ ಯಿದ್ದಂಥಾ ಬಂಡಿಕೋಲ್ಗಳ ವಳಗೆ ವಂದು ಬಂಡಿಕೋಲಿನ ಕೂಡಿ ಯಿದಿರಾಗಿ ಯಿದ್ದ ವೈರಿಯ ವಕ್ಷಸ್ಥಳದಲ್ಲಿ ದೃಢ ವಾಗಿ ಯಿದ್ದಂಥಾ ಏಟು ಯಾವದು ಅದು ಚಮಕಿಯೆಂದು ತಿಳಿಯಲ್ಪಡು ವುದು (ಐದ್ಕಟೀ. ೫-೫೯). [ ←ಹಿಂ. ಮರಾ. ಚಮಕೀ ]

**ಚಮಕಿತ** (ಗು). ೧. ಚಕಿತ; ವಿಸ್ಮಯಗೊಂಡ; ಬೆರಗಾದ. (ನಾ). ೨. ವಿಸ್ಮಿತನಾದವನು: ಒಡನೇ ಅವರು ಮಾಯವಾದದ್ದನ್ನು ಕಂಡ ಬ್ರಾಹ್ಮಣ ರೆಲ್ಲರೂ ಚಮಕಿತರಾದರು (ಶುರಾವಿ. ೧೦೪) ; ಭೂಪತಿಯು ಚಮಕಿತನಾಗಿ ನಿಂತು ಚಾರುನ ಮುಖದ ಕಡೆಗೆ ನೋಡುತ್ತಾ ನಿಂತುಕೊಂಡನು (ಇಪ್ಪಕ. ೨೯೪); ದರವಾನನು ತೂಕಡಿಸುತ್ತ ತೂಕಡಿಸುತ್ತ ಹಠಾತ್ತಾಗಿ ಒಂದು ಸಲ ಚಮಕಿತನಾಗಿ ಎಚ್ಚರಗೊಂಡರೆ (ನಿಬಂಧ. II, ೩೭೭).

[<ಸಂ. ಚಮತ್ಕೃತ ]

**ಚಮಕಿಬಟ್ಟು** (ನಾ). “ ಉಡುಪು, ವೊ. ಗಳಿಗೆ ಸೇರಿಸಿ ಹೊಲಿಯುವ ನಾಣ್ಯದಾಕಾರದ, ಬೆಳ್ಳಿ, ವೊ. ಗಳ ಅಲಂಕಾರದ ಬಟ್ಟು” (Sequin. ಇಂಕನಿ). [ ಚಮಕಿ + ಬಟ್ಟು$_1$ (<ಬಟ್ಟ$_1$) ]

**ಚಮಕಿಸು** (ಕ್ರಿ). ೧. ಲಕಲಕಿಸು; ಥಳಥಳಿಸು: ಕೆಂಪು ಜರಿತ ಜರಿಯ ದಡಿ ಹೆಚ್ಚು ಝಗಝಗಿಸಿ ಚಮಕಿಸುತ್ತದೆ (ಚಂದುಟ. ೬೦); ನಗುವಾಗ್ಗೆ ಆಕೆಯ ತುಟಿಗಳೆರಡೂ ತೆರೆದು ಚಮಕಿಸಿದವು (ಚಂದುಟ. ೮೮). ೨. ಜಳಪಿಸು ; ಹೊಳೆಯಿಸು : (ಕಿ). ೩. ಚಾಟಿಯಿಂದ ಬಡಿದು ಚುರುಕುಗೊಳಿಸು: ಕುದುರೆಗಳನ್ನು ಚಮಕಿಸುತ್ತಿದ್ದಾರೆ (ಆರ್ಯಕ. ೦೨೪).

[ ಚಮಕು + – ಇಸು$_3$ ]

**ಚಮಕು** (ನಾ). ೧. ಥಳಕು ; ಥಳಥಳಿಸುವಿಕೆ : ಚಿತ್ತದ ಎಚ್ಚರವು ಅವರಿಗೆ ಸೊನ್ನೆ ; ಅವರಿಗೆ ಚಮಕು ಬೇಕು (ನಿಬಂಧ. II, ೨೦೮). ೨. ಹೊಳಪು : ಚನ್ನಬಸವಾಂಕನ ಬರವಣಿಗೆಯಲ್ಲಿ ಚದುರಿಣೆ ಚಮಕಿಲ್ಲ (ಕಸಾದ. ೩೩೦). ೩. ಚುರುಕು ; ಚೂಟಿ : ಹವಾದೊಳಗ ಹಾರಾಡಿದರ ಚಮಕ ಹತ್ತಲಿಕ್ಕೆ ಬೇಕು. ಚಮಕ ಇಲ್ದ ಗಾಳಿ ಎಲ್ಲೈತಿ (ರಕ್ತಧ್ವ. ೩೨೭).

[←ಹಿಂ. ಮರಾ. ಚಮಕ್ ]

**ಚಮಗಾರ, ಸಮಗಾರ, ಸಮ್ಮಕಾರ, ಸಮ್ಮಗಾಱ** (ನಾ). ಚರ್ಮದ ಕೆಲಸ ಮಾಡುವವನು ; ಮೋಚಿ : ಹಾದಿಯಲ್ಲಿ ಹೋಗುವ ಚಮಗಾರ ನನ್ನು ಮುಟ್ಟಿ ಹಾಗೇ ಮನೆ ಒಳಕ್ಕೆ ಹೊಕ್ಕು ಈತ ತಾಯಿಯನ್ನು ಮುಟ್ಟುವನು (ಗೌರಾಂಗ. ೧೧) ; ಚೆಂದವಾದ ಚಪ್ಪಲಿಗಳನ್ನು ಮಾಡಿ . . . ಕೊಳ್ಳಲು ಒತ್ತಾಯ ಮಾಡುವ ಚಮಗಾರನನ್ನು ನೀವು ನೋಡಿರಬಹುದು (ಮಾವಾದ. ೦೦೮). **ಸಮಗಾರ :** “ ಸಮಗಾರ–ಚರ್ಮಕಾರ ” (ಗಂಗಾಮ. ೩೨೦) ; ಚರ್ಮದ ಮೇಲೆ ಆಸಕ್ತನಾಗುವವನು ಸಮಗಾರನೇ ಸರಿ ಎಂದು ಅಷ್ಟಾವಕ್ರ ಮಹರ್ಷಿಗಳನ್ನುವರು (ಬ್ರಹ್ಮಜೀ. ೧೯೦): ಹಲವು ಸಮಗಾರರು ಕೂಡಿ ತೊಗಲೆಲ್ಲಾ ಹದ ಕಡಿಸಿದರು (ಗಾದೆ). **ಸಮ್ಮಕಾರ:** ಬ್ರಹ್ಮವನರಿದಲ್ಲಿ ಬ್ರಾಹ್ಮಣ ಸರ್ವ ಜೀವ ಹತಕರ್ಮಕ್ಕೊಳಗಾದಲ್ಲಿ ಸಮ್ಮಕಾರ (ಕಡ್ಡುಮು. ೧೧). **ಸಮ್ಮಗಾಱ:** “ಚರ್ಮಕಾರ” (ನಾಚಿರಾ. ೩); “ಚರ್ಮಕೃತ್ಯಂ ಪಾದು ಕಾಕಾರನೆಂದೆನಲು ಸಮ್ಮಗಾಱಂ” (ಮಂಗರಾ. ೦೦೨-೬); ಶ್ರೀಮಹಾ ಚಾತುರ್ವ್ವಿದ್ಯ ಸಮುದಯಮಿರ್ಚ್ಛಾಸಿರ್ವ್ವರುಂ ಈ ಊರ ಸಮ್ಮಗಾಱರಾ ಕವಜ್ಜಿಯಾನ್ವಿಟ್ಟಾರ್ (ಕಇ. I, ೪-೩; ಸು. ೧೧ನೆಯ ಶತ); ಚಕಾರಕ್ಕೆ ಸಕಾರಂ– ಕ್ರಕಚ–ಕರಗಸ; ಚರ್ಮಕಾರ–ಸಮ್ಮಗಾಱ (ಶಮದ. ೨೬೩ ಪ್ರಯೋ) ; ಹುಸಿ ವೊಳೆತುವಂತ್ಯಜೆಯುಲಾ ಹುಸಿಯೊಸೆದುದುಂಕುರ ಸ ಮ್ಮ ಗಾ ಱ ನ ಲಿ (ಕೌಶಿರಾ. ೧೦-೩೦) ; ದೂಸಿಗರ ಪೂವಡಿಗರ ಸಮ್ಮಗಾಱರ . . . ನಾಡಿಗ ರೊಂದು ಜಂಗುಳಿ (ರಾಮಾಶ್ವ. ೬೮-೧೪). P. ಸಂಸ್ಕೃತದ ‘ಚರ್ಮಕಾರ’ ಎಂಬ ಪದದಿಂದ ‘ಚಮ್ಮಗಾರ’ ಎನ್ನುವುದು ಸ್ವಾಭಾವಿಕವಾದ ತದ್ಭವ. ‘ಚಮಗಾರ’ ಎನ್ನುವುದು ಅದರ ಮುಂದಿನ ರೂಪ. ಸಕಾರದಿಂದ ಮೊದಲಾಗುವ ಮತ್ತು ಶಕಟರೇಫದಿಂದ ಕೊನೆ ಗಾಣುವ ‘ಸಮ್ಮಗಾಱ’ವು ಕವಿಗಳು ಪ್ರಾಚೀನವೆಂದು ರೂಪಿಸಿ ಕೊಂಡ ಸ್ವರೂಪಗಳಿರಬಹುದು. [<ಸಂ. ಚರ್ಮಕಾರ ]

**ಚಮಚ, ಚಮಚೆ** (ನಾ). ಚಿಕ್ಕ ಸವುಟಿನಾಕಾರದ ಸಾಧನ : ಖಾರ ವನ್ನಾದರೂ ತಿನ್ನೋಣವೆಂದರೆ ಅದೂ ಅಷ್ಟೆ ಉಳಿದಿದೆ–ಒಂದು ಚಮಚ, ಎರಡು ಚಮಚ (ಅಗಸ್ತ್ಯ. ೬) ; ಚಾಕು ಚಮಚಗಳ ಉಪಯೋಗ ಗೊತ್ತೇ ಇಲ್ಲ (ಪ್ರವಾಇ. II, ೧೮೧). **ಚಮಚೆ :** ತಮ್ಮನ ತಟ್ಟೆಗೆ ಒಂದು ಚಮಚೆ ತುಪ್ಪ ಹೆಚ್ಚು ಬಿತ್ತು (ಚಂದುಟ. ೧೧) ; ಚಮಚೆಯಿಂದ ಹಾಲನ್ನು ಕುಡಿಸು ತ್ತಿದ್ದೆ (ಜನಜೀ. ೦೦೩) ; ನನಗೆ ನಿನ್ನ ಚುನಾವಣೆ ಗೀತೆಯನ್ನು ಚಮಚೆ ಯಿಂದ ಕುಡಿಸು (ಹನ್ನೊಂದ. ೩೫).

[←ಪಾರ. ಚಮ್ಚ, ಚುಮ್ಚ : ಹಿಂ. ಮರಾ. ಚಮಚಾ./ಸಂ. ಚಮಸ ]

**ಚಮುಚಿ** ‘ಚಮುಚ’ ನೋ.

**ಚಮುಟ₁** (ನಾ). ಹೆಚ್ಚು ಬೆವರುವ ಒಂದು ಬಗೆಯ ರೋಗ (?) : ಈ ಗುಳಿಗೆಯುಂ ಗರುಗದ ರಸದಲ್ಲಿ ಕೊಡಲು ಚಮುಟ ಮಾಣ್ಗುಂ (ವಿವೈವಿ. ೩೫) [←ತೆಲು. ಚೆಮಟ, ಚೆಮ್ಮಟ]

**ಚಮುಟ₂** ‘ಚಮಡ’ ನೋ.

**ಚಮಡ, ಚಮುಟ₂, ಚಮ್ಮಡ** (ನಾ). ತೊಗಲು; ಚರ್ಮ: ಅದರ ಚಮಡ ಸುಲೀದ ಬಿಡ್ತಾರ್ದು (ಕಾನೂರು. ೨೭೭); ಕಂಭಕ್ಕೆ ಕಟ್ಟಿ ಚಮಡ ಸುಲೀತೇನೆ (ಆಗಸ್ಟ್. ೯೨) ; ಅವಳಿಗೆ ಈ ದಿನ ಚಮಡ ಸುಲೀದಿದ್ದರೆ ಸನ್ನ ಹೆಸರು ಬೇರೆ ಕರೀಬೇಕು (ಮಗಮಾ. ೩೬). **ಚಮುಟ₂** : ಲೇ, ಸುಳ್ಳ ಹೇಳಿದರ ಒಬ್ಬೊಬ್ಬರ ಚಮುಟಾ ಬೆಳಗೇನು (ಗ್ರಾಮಾಯ. ೫೭). **ಚಮ್ಮಡ** : ಚಮ್ಮಡ ಸುಲಿದು, ಚಪ್ಪಲಿಗೆ ಉಂಗುರ ಹೊಲಿಸಿಬಿಡುತ್ತೇನೆಯೇ (ನಡಾ. I, ೫೦೬). [←ಹಿಂ. ಚಮಡಾ, ಚಮಡೀ; ಮರಾ. ಚಮಡೀ ]

**ಚಮುತು** (ನಾ). ಚಮತ್ಕಾರ; ಚಾತುರ್ಯ: ಈ ಹೊಸ ಸರ್ವಜ್ಞ . . . ಯಾವ ಸ್ಟಂಟ (ಚಮುತು)ಮಾಡಲಿರುವನೆಂಬುದು ಅವರಿಗೆ ಗೋಚರಿಸಲಿಲ್ಲ (ಕನಕ. ೨೫). [<ಸಂ. ಚಮತ್ ?]

**ಚಮುತುಕಾರತ್ವ** (ನಾ). = ಚಮತ್ಕಾರ ೨: ಚಮುತುಕಾರತ್ವದಿಂ ಬಾಡಬಂ ನಲಿವಂತೆ ಸುಮತಿ ತತ್ಪರಶುವಂ ಬೀಸಿದಲ್ ಸಾರಥಿಯ ಕಂಠಮಂ ಕಡಿದೊಯ್ದುದು (ಪರಶು. ೩೦-೩೬). [<ಸಂ. ಚಮತ್ಕಾರತ್ವ]

**ಚಮುತುಕೃತಿ** (ನಾ). = ಚಮತ್ಕಾರ ೨ : ಅಮರಪುರಪಾಲನದ ಲೀಲಾ ಚಮುತುಕೃತಿಗಿನ್ನೇನನೆಂಬೆನು (ನಿಭಾಗ. ೮-೨೦-೦೬). [<ಸಂ. ಚಮತ್ಕೃತಿ]

**ಚಮತ್ಕರಿಸು** (ಕ್ರಿ). ೧. ಸೋಜಿಗವನ್ನು ಉಂಟುಮಾಡು ; ಆಶ್ಚರ್ಯಗೊಳಿಸು : ಸುಖಂ ಸುಳಿದಾಡೆ ಲೀಲೆ ಮೋಹರಿಸೆ ಗಳಂ ಚಮತ್ಕರಿಸೆ ಗದ್ಗದಮಾಂತಿರೆ (ಗಿರಿಕ. ೩-೨೮) : ತಳಹತ್ತಂ ದಣುವಟ್ಟ . . . ಬಾಹುತಳಂ ಚಮತ್ಕರಿಸೆ ನಾನಾಕೌಶಲಂದೋಱಿದರ್ (ಶಬಶಂ. ೪-೬೫). ೨. ಅತಿಶಯಿಸು : ಚೆಲ್ವಂ ಚಮತ್ಕರಿಸುವಂತೆ ಸಾಹಿತ್ಯಮಂ ಸಯ್ತುಡುವಂತೆ ಪ್ರಾಣಮಂ ಪರಿರಕ್ಷಿಪಂತೆ . . . ಪಾರ್ವತಿಯಂ ಸಲಹುತ್ತುಮಿರೆಯಿರೆ (ಗಿರಿಕ. ೩-೦೧೯ ವ). [ಚಮತ್ಕರಣ₀ + – ಇಸು₁]

**ಚಮತ್ಕಾರ** (ನಾ). ೧. ಸೋಜಿಗ ; ಆಶ್ಚರ್ಯ ; ವಿಸ್ಮಯ. ೨. ಚಾತುರ್ಯ ; ಕೌಶಲ : ನಯಾನೀಕ ಪ್ರಯುಕ್ತ ಮಹಾಮಂತ್ರ ನಿಚಯ ಚಮತ್ಕಾರಮತಿವಿವೇಕ ಬುದ್ಧ್ಯಾಜೀವಿ (ಎಇ. XIII, ೩೩೦-೨೦ ; 929) ; ವರಪ್ರಸಾದಮ್ಮೂಲು[ರಾ]ಯಾಸ್ಥಾನ ಚಮತ್ಕಾರಬಗೆಕಾಟಿ (ಬೊಂಕೆಶಾ. ೧೯೩೭, ಸಿಂದಗಿ. ೦೦-೮ ; 979) ; ಬಲಾತ್ಕಾರವಿದ್ದರೂ ಚಮತ್ಕಾರವಿರಬೇಕು (ಗಾದೆ). ೩. ಶೀಘ್ರತೆ ; ತ್ವರಿತತೆ ; ಬೇಗ : (ಕ). ೪. [ಕಾವ್ಯಮಿಾ] ಆನಂದ : ಆಹ್ಲಾದವಿಶೇಷಕ್ಕೆ “ಚಮತ್ಕಾರ”ವೆಂಬ ಹೆಸರೂ ಉಂಟು (ಭಾರಮಿಾ. ೧೫೫). [ಸಂ.]

**ಚಮತ್ಕಾರಿ** (ಗು). ೧. ಸೋಜಿಗವನ್ನುಂಟುಮಾಡುವ ; ಆಶ್ಚರ್ಯಕರವಾದ. ೨. ಅಸಾಧಾರಣವಾದ ; ಅಸಾಮಾನ್ಯವಾದ. (ನಾ). ೩. ಚತುರನಾದ ವ್ಯಕ್ತಿ ; ಚಮತ್ಕಾರ ಮಾಡುವವನು : (ಕ). [ಸಂ. ಚಮತ್ಕಾರಿನ್]

**ಚಮತ್ಕಾರಿತ** (ಗು). ಚಕಿತಗೊಳಿಸಿದ ; ವಿಸ್ಮಯವನ್ನುಂಟುಮಾಡಿದ ; ಆಶ್ಚರ್ಯಗೊಳಿಸಿದ : ನಿಖಿಳಜಗದಾಶ್ಚರ್ಯ ಶೌರ್ಯರಸ ಬಹುಲ ಬಾಲಕ್ರೀಡಾ ಚಮತ್ಕಾರಿತ ವೀರಚಕ್ರನುಂ (ಆದಿಪು. ೮-೪೩ ವ). [ಸಂ.]

**ಚಮತ್ಕೃತ** (ಗು). ೧. ಚಕಿತ; ವಿಸ್ಮಿತ. (ನಾ). ೨. ವಿಸ್ಮಿತನಾದವನು; ವಿಸ್ಮಯಗೊಂಡವನು : ಅವನಂ ಚಮತ್ಕೃತನಾಗಿ ಅಲ್ಲಿಯೇ ನಿಂತನು (ಕಪಾಕುಂ. ೨೩). [ಸಂ.]

**ಚಮತ್ಕೃತಿ** (ನಾ). ೧. ಸೋಜಿಗ ; ಆಶ್ಚರ್ಯ : ಮಿಂಚುವ ವಿಭೂಷಣಕಿಮುಸುಕಿಟ್ಟು ಸುಳಿವರ್ಗೆ ಪೊಂಚುವ ಚಮತ್ಕೃತಿಯುನಳವಡಿಸಿ (ಜೈಮಿಭಾ. ೨೬-೧೦). ೨. ಕೌಶಲ ; ಚಾತುರ್ಯ : ಸತ್ಕೃತಿ . . . ಚಮತ್ಕೃತಿಯಂ ಪಡೆದು ಸೊಬಗುವಡೆದತ್ತೀಗಳ್ (ಕಾದಂಪೂ. ೫) ; ಈ ಕೃತಿ ಪುಣ್ಯಾಕೃತಿ ತಾಂ ಚಮತ್ಕೃತಿವಿಲಾಸಾವಾಸಂ(ಸುಕುಮಾ. ೧-೪೫); ಶ್ಯಾಮಕಂಧರನೀವನೀ ಕೃತಿಗತಿಚಮತ್ಕೃತಿಯು (ಬಸಪು. ೧-೫). ೩. ಆಹ್ಲಾದ ; ಆನಂದ : ಮತ್ಕೃತಿ ಚಮತ್ಕೃತಿಯಂ ಧರೆಗುಂಟುಮಾಡುಗುಂ (ಜಗವಿ. ೧-೧೫). [ಸಂ.]

**ಚಮನ್, ಚಮಾನು, ಚಮಾಲು** (ನಾ). ಹೂದೋಟ; ಪುಷ್ಪೋದ್ಯಾನ: ಕೈದಿ ಕಛೇರಿ ಮುಂದಿನ ಸಣ್ಣ ಚಮನ್‌ನಲ್ಲಿ ಬಹಳ ದಕ್ಷತೆಯಿಂದ ಹೂಗಿಡಗಳ ಪಾತಿ ಕಟ್ಟಿ . . . ಕೆಲಸ ಮಾಡುತ್ತಿದ್ದ (ಕೆಲನೆ. ೪೦೯) ; ಮನೆಯ ಮುಂದೆ ಚಮನ್, ರೋಜಾ, ಡೇರಾ, ನಂದಿಬಟ್ಟಲು ಗಿಡಗಳ ಮಧ್ಯೆ ಪನ್ನೇರಿಳೆ ಹಣ್ಣಿನ ಮರ (ಹೊಸಕ್ಕಿ. ೦೨೩). **ಚಮಾನು** : ದಕ್ಷಿಣಾಮೂರ್ತಿ ದೇವಸ್ಥಾನಕ್ಕೆ ಚಮಾನು ಗುರಿಕಾರ ಕಪನ್ನೈಯ ಹಿತ್ತಾಳೆ ಚೌಕಟ್ಟು ಗುಬ್ಬೀಕದ ಸಹ ಮಾಡಿಸಿ ಒಪ್ಪಿಸಿದ ನಿಲುವಿನ ಸೇವಾರ್ಥ (ಎಕ. XIV, ಚಾಮುರಾ. ೨೩೭-೦ ; ?). **ಚಮಾಲು** : ಚಮಾಲನ್ನಂತು ನೋಡುವುದಕ್ಕೇ ಆಗದು, ಚೆನ್ನಾಗಿ ಹುಲ್ಲು ಕೂಡ ಬೆಳೆದಿಲ್ಲ (ಕಿಂಕಥ. ೧೯೪). [←ಪಾರ. ಹಿಂ. ಮರಾ. ಚಮನ್]

**ಚಮರ** (ನಾ). ೧. ಉದ್ದವಾದ ಕೂದಲು ಮತ್ತು ಗೊಂಡೆಬಾಲವುಳ್ಳ ಒಂದು ಬಗೆಯ ಮೃಗ. ೨. ಚಮರಮೃಗದ ಬಾಲದ ಕೂದಲಿಂದ ತಯಾರಿಸಿದ ಕುಂಚ,–ಚಾಮರ : “ಚಾಮರ ಚಮರಮುದಕ್ಕುಂ” (ಕವಿಕಂ.೨೬೭) : ಇಕ್ಕೆಲದ ಚಮರ ಸೀಗುರಿಯಿಂದೆ ಮೆಱೆವುತುಂ (ನಂಬಿರ. ೩-೬೩) : ಕರಗ ಕಾಳಾಂಜಿ ಬಡಪ ಗಿಂಡಿ ಚಮರವ ಧರಿಸಿದೂಳಿಗದವರು (ಕಂನವಿ. ೧೨-೩೭). [ಸಂ.]

**ಚಮರಗಾರ್ತಿ** (ನಾ). ಚಾಮರ ಬೀಸುವವಳು ; ಚಾಮರ ಬೀಸುವ ಊಳಿಗದವಳು: ಕಸ್ತೂರಿ ಹಿಂಗದ ಚಮರಗಾರ್ತಿಯರು ಹೊಂಗದಳಿಯ ಕೋಮಲಪತ್ರವೀಜನದಂಗನೆ ಮೆಱೆದಳೊತ್ತಿನಲಿ (ಮೋಹತ. ೫-೩೯). [ಚಮರ + – ಕಾಱ + – ತಿ₁ (< – ಇತ್ತಿ)]

**ಚಮರಜ** (ನಾ). (ಚಮರೀಮೃಗದ ಕೂದಲಿನಿಂದ ಮಾಡಿದ) ಚಾಮರ: ಒರ್ವಳ್ ಕೊಡೆವಿಡಿವುದು ಮತ್ತೊರ್ವಳ್ ಚಮರಜಮ [ಪಾಠಾಂ. ಚಾಮರವ] ನಿಕ್ಕುತಿರ್ಪುದು (ಗದಾಯು. ೯-೩೦) : ಚಮರಜಮನಿಕ್ಕೆ ಖಚರ ಪ್ರಮದಾಜನಂ (ಪಂರಾಮಾ. ೦೪-೧೨೮). [ಸಂ.]

**ಚಮರಧಾರಿಗ** (ನಾ). ಚಾಮರದ ಆಳು : ಹಡಪ ಬಾಹಿಯ ಚಮರಧಾರಿಗರ ದೊರೆಗಳುಳಿದರು ಬೆದಱಿ ರಥದಲಿ (ಕುವ್ಯಾಗ. ೧-೦೪). [ಚಮರಧಾರ₀ + – ಇಗ]

**ಚಮರರುಹ** (ನಾ).=ಚಮರಜ : ತಚ್ಚಮರರುಹ ಮಹಾಶೋಭೆ ಕೈಗಣ್ಮೆ (ಪಂಪಭಾ. ೪-೦೪) : ಚಮರರುಹದ್ವಯಂ ಬೆಳಪ ಬೆಳ್ಗೊಡೆ ಪೂಮಟೆ ಭಾಪ್ರತಾನಮತ್ತಮುಮಣಿಪೀಠಮಿಂದ್ರಸಭೆಯೆಂಬಿವು ಫಾತಿ ಚತುಷ್ಕಘಾತದಿಂ ಸಮನಿಸೆ (ಶಾಂತಿಪು. ೪-೬೩) : ಚಮರರುಹಾಗ್ರಮಂ ಪಿಡಿದು (ಕಾದಂಬ. ೯೮) : ಇಕ್ಕುವ ಚಮರರುಹಂ ತನ್ನ ಕಣ್ಗೆ ಮಱೆಯಾದಪುದು (ಅಜಿಪು. ೫-೫೪) : ದೇಸೆವೆತ್ತುವು ಕಮಳಭವಂಗಿಕ್ಕುವಮಳ ಚಮರರುಹಂಗಳ್ (ಜಗವಿ. ೧-೩೮). [ಸಂ.]

**ಚಮರಾಲವಟ್ಟ** (ನಾ). ಚಮರಮೃಗದ ಕೂದಲಿನಿಂದ ಮಾಡಿದ ಬೀಸಣಿಗೆ; ಚಾಮರ: ಆಳಿಯರ್ ಬೀಸುವ ಚಮರಾಲವಟ್ಟ ತಣ್ಗಾಳಿಯಿಂದವಳೊಡಲ್ಗಿಚ್ಚು . . . ಭಡಾಳಿಸಿತು (ಮೋಹತ. ೨೬-೬೨). [ಚಮರ + ಆಲವಟ್ಟ]

**ಚಮರಿ** (ನಾ). ೧. ಹೆಣ್ಣು ಚಮರಮೃಗ : "ಆ ರೋಮಿ ಗೋಕರ್ಣ ಮೆನಲು ಚ[ಪಾಠಾಂ. ಲ್ಚ]ಮರಿಯ ಮೃಗ[ಪಾಠಾಂ. ಚಮರಿಮೃಗ]ಮದು" (ಮಂಗರಾ. ೪೯-೧೧) : ಮುಸುಗಳಿವು ಕತ್ತುರಿಯ ಮೃಗವಿವು ಚಮರಿಯಿವು . . . ಗಜಗಮನೆ ನೋಡು (ತೊರರಾ. ೩-೧-೩೧) ; ಉಡುಗುತ್ತಲ್ಲಿರ್ಪುದುದ್ಯಚ್ಚಮರಿ ರಜಮನಾ ತಾಣದೊಳ್ ಹಸ್ತಿ ಕೈನೀರಿಡುತಂ ಸಮ್ಮಾರ್ಜನಂಗೈವುದು (ರಾಜಶೇ. ೧-೦೨೬). ೨. ಚಮರಮೃಗದ ಬಾಲದ ಕೂದಲು: ಆನೆಗಳ ದಂತಂಗಳುಂ ಮುತ್ತುಗಳುಂ ಪುಲಿಯ ತೊವಲ್ಗಳುಮಂ ಚಮರಿಗಳುಮಂ ಕೊಂಡು ಬಂದು (ವಡ್ಡಾರಾ. ೦೬೩-೦೫) ; ಚಮರಿಯುನೆಯ್ದೆ ಕರ್ಬುನದ ಮುಟ್ಟುಗಳಂ ಪಿಡಿದಿರ್ದು ಮಾಜು ನೀಂ (ಅಟ್ಟಮ. ೬-೨೨). ೩. ಚೌರಿ; ಚಾಮರ: ಢಾಳಿಸುವ ಹಲವು ಚಮರಿಗಳ ಮಧ್ಯದೊಳೋಲಗಂಗೊಟ್ಟು ಕುಳ್ಳಿರ್ದ (ಹದಶಾ. ೧೦-೩೭): ನನೆದವು ಬಾಹುರಕೆ ಪಕ್ಕರಿಕೆ ಹಲ್ಲಣ ಜೋಡು ಸೀಸಕ ಛತ್ರ ಚಮರಿಗಳು (ಕುಮಾರ್ರದ್ರೋ. ೩-೪೦). ೪. ಒಂದು ಬಗೆಯ ಮೀನು : "ಚಮರೀ–ಚಮರೀಮೃಗ, ಮೀನಭೇದ" (ಒಷಧಿ. ೫೪). [ ಸಂ. ಚಮರೀ ]

**ಚಮರಿಕ** (ನಾ). ಒಂದು ಬಗೆಯ ಮರ; ಕೋವಿದಾರವೃಕ್ಷ. [ ಸಂ. ]

**ಚಮರಿಮೃಗ** (ನಾ).=ಚಮರೀಮೃಗ : "ಆ ರೋಮಿ ಗೋಕರ್ಣಮೆನಲು ಚಮರಿ ಮೃಗ[ಪಾಠಾಂ. ಚಮರಿಯಮೃಗ ]ಮದು" (ಮಂಗರಾ. ೪೯-೧೧). [ ಚಮರಿ + ಮೃಗ ]

**ಚಮರೀಜ** (ನಾ). = ಚಮರಜ : ನಾನಾಚಮರೀಜಮಾಯು ಸಭೆಯಂ ತಳ್ಪೊಯ್ಯಲಿರ್ದಾ ಜಗತ್ಪತಿಯೊಡ್ಡೋಲಗದೊಳ್ (ಜಗವಿ. ೧-೨೬). [ಸಂ.]

**ಚಮರೀಜಕಾಂತೆ** (ನಾ). ಚಾಮರ ಬೀಸುವ ದಾಸಿ: ಚಮರೀಜಕಾಂತೆಯರ್ ಸಿತಚಮರದ ವಿಕ್ಷೇಪದಿಂದಮೆಸೆದರ್ (ಕಾದಂಪೂ. ೪೭೩). [ ಚಮರೀಜ + ಕಾಂತೆ ]

**ಚಮರೀಮೃಗ** (ನಾ). = ಚಮರಿ ೧ : ಚಮರೀಮೃಗಶಿಶು ತಂದು ದುನಮಗಿದು ಸಾಫಲ್ಯಮಾಯ್ತು (ಕುಸುಮಾ. ೭-೮೬) ; ಬಳಿಕಲ್ಲಿ ಕಸ್ತೂರಿಮೃಗ ಚಮರೀಮೃಗ . . . ಪವಿತ್ರಮೃಗ ಜಾತಿಗಳುಂ (ವಿವೇಕ. ೨೧೨) ; ಉರಿಗಣ್ಣ ಚಮರೀಮೃಗಂ ಹೇರಣಲು ಚಿತ್ರಕ (ರುಕ್ಮಾಂಗ. ೧೧-೪). [ಸಂ.]

**ಚಮರೀರುಹ** (ನಾ).=ಚಮರಜ: ಮಿಳಿರ್ವನ್ನಂ ಚಮರೀರುಹಂ ಮಿಱುಗುವನ್ನಂ ಪಾಂಡರಚ್ಛತ್ರಮಂಡಳಂ (ಜಗವಿ. ೪-೯೯) ; ಜಿನಾಂಬಿಕೆಗಿಕ್ಕಿದರಮರಿಯರಮರೆ ಧವಳಚಮರೀರುಹಮಂ (ಪುಷ್ಪಪು. ೯-೬೪). [ ಸಂ.]

**ಚಮಸ** (ನಾ). ೧. ಯಾಗಾದಿಗಳಲ್ಲಿ ಸೋಮರಸವನ್ನು ಕುಡಿಯುವುದಕ್ಕಾಗಿ ಬಳಸುವ ಪಾತ್ರೆ,– ಪಾನಪಾತ್ರೆ: ಚಮಸ ದರ್ವೀ ಆಜ್ಯಸ್ಥಾಲೀ . . . ಪ್ರಮುಖಪಾತ್ರವಿಶೇಷಂಗಳು (ವಿವೇಕ. ೦೩೫) ; ವಿಹರಿಸುವ ದರ್ಭಾಸ್ತರಣದ ಚಮಸಾದಿಗಳ ಬಹುಸಾಧನಂಗಳಿಂ (ಜೈಮಿಭಾ. ೩೩-೩೮) : ಸೋಮಲತೆಗಳನ್ನು ಕೊಂಡು ತಂದು ಚಮಸಗಳೆಂಬ ಪಾತ್ರೆಗಳಲ್ಲಿ ಸೋಮರಸವನ್ನು ಗ್ರಹಿಸಿ (ಶಿವದ. ೨೦೨-೧೪). 'ಚಮು' ಪರಾ. ೨. ಚಮಚ; ಸಣ್ಣ ಆಕಾರದ ಸವುಟು : ಪಾಯಸದ ಸವಿಯನಱಿಗುಮೆ ಚಮಸಂ (ನೀತಿಮಂ. I, ೩೦೪). ೩. ಅಕ್ಕಿಹಿಟ್ಟು, ಗೋಧಿಹಿಟ್ಟು ಮೊದಲಾದುವುಗಳಿಂದ ಮಾಡುವ ಒಂದು ಬಗೆಯ ಸಿಹಿತಿಂಡಿ,–ಮಿಠಾಯಿ. [ಸಂ.]

**ಚಮಸಿ** (ನಾ). = ಚಮಸ ೧ : "ಚಮಸಿ–ಸೋಮಪಾನಪಾತ್ರ" (ಸಿದ್ಧಾಂತಿ. ೩೮೬). [ ಸಂ. ಚಮಸೀ ]

**ಚಮಾನು** 'ಚಮನ್' ನೋ.

**ಚಮಾಲು** 'ಚಮನ್' ನೋ.

**ಚಮು** (ನಾ). ೧. ಪಡೆ; ಸೈನ್ಯ : "ಪೃತನಾನೀಕ ಧ್ವಜಿನೀ ಪತಾಕಿನೀ ಸೇನೆ ಬಳ ಚಮೂ ಚಕ್ರಾಖ್ಯಂ" (ವಸ್ತುಕೋ. ೮೩-೭); "ಪೃತನಾ, ಸೇನಾ . . . ಚಮೂಃ, ವರೂಥಿನೀ, ಅನೀಕಿನೀ, ಅನೀಕಂ–ಈ ೧೦ ಪಡೆ" (ಹಲಾಯು. ೭೫-೩೦೩). ೨. ೭೨೯ ಆನೆ, ೭೨೯ ರಥ, ೨೧೮೭ ಕುದುರೆ, ೩೬೪೫ ಕಾಲಾಳು–ಇವುಗಳನ್ನುಳ್ಳ ಒಂದು ಸೈನ್ಯದಳ: "ಪೃತನೆಯವು ಮುಂದೆ ಮೂಱಾಗೆ ಚಮು" (ಮಂಗರಾ. ೮೬-೩೦). [ ಸಂ. ಚಮೂ ]

**ಚಮೂನಾಥ** (ನಾ). ಪಡೆವಳ; ದಂಡಾಧಿಪತಿ; ಸೇನಾನಿ : ಚಮೂನಾಥ ಚಕ್ರಾಧಿನಾಥಂಗೆ ಜಯಪ್ರಾರಂಭಗಚ್ಛಸ್ಫಟಿಕಕಳಶಮಂ ತೀವಿ (ಆದಿಪು. ೦೨-೮) ; ಗಂಗರಾಜ ಚಮೂನಾಥನ ಜನನಿ (ಎಕ. II, ೦೦೮-೨೩ ; 1120). [ ಸಂ. (ಚಮೂ + ನಾಥ) ]

**ಚಮೂಪ** (ನಾ). = ಚಮೂನಾಥ : ಅರಮನೆಯೊಳೊಡನೆಯ ಚಮೂಪರೊಡಗೂಡಿ ಮಜ್ಜನ ಭೋಜನಂ ಮಾಡಿ ಪವಡಿಸಲು (ಹಜಾ. ೯-೫೩೩). [ ಸಂ. ]

**ಚಮೂಪತಿ** (ನಾ).=ಚಮೂನಾಥ : "ಚಮೂಪತಿಯನೀಕಸ್ಥನೆನೆ ದಂಡನಾಥನಕ್ಕು" (ಮಂಗರಾ. ೮೦-೮) : ಸಿಂಧುರಾರಾತಿಯಂ . . . ಚಮೂಪತಿ ಕಂಡಂ (ಆದಿಪು. ೦೬-೪೫) ; ಜನಪತಿ ಮೆಚ್ಚಿ ತನ್ನಯ ಚಮೂಪತಿ ಮಾಡಿದಂ (ಅಜಿಪು. ೧-೪೩). [ ಸಂ. (ಚಮೂ + ಪತಿ) ]

**ಚಮೂರ** (ನಾ). ಹುಲಿ ; ವ್ಯಾಘ್ರ : "ವ್ಯಾಘ್ರಂ ತರಕ್ಷು ಮೃಗರಿಪು. ಚಮೂರವೆನೆ ಶಾರ್ದೂಲಂ" (ವಸ್ತುಕೋ. ೪೦-೧) : "ಚಮೂರವೆನೆ ಹುಲಿ" (ಮಂಗರಾ. ೪೭-೭) ; ಹರಿಣ ಚಮೂರಂಗಳ್ ಶಾಂತರೂಪದಿಂದಿರ್ದುವಜಿತನಾಥನ ಕೆಲದೊಳ್ (ಅಜಿಪು. ೭-೬) ; ತೊಟ್ಟನೆ ಬೀೞ್ ಮೇಲೆ ಪುಲಿದೋಲ್ ನಿಜದೀವದ ಪುಲ್ಲೆ ಬೆರ್ಚಿ ಧೀಂಕಿಟ್ಟು ಚಮೂರವೆಂದು ಬಿಱುತೋಡೆ (ಪುಷ್ಪಪು. ೫-೦೦೦). [ ? ]

**ಚಮೂರು** (ನಾ). ಒಂದು ಬಗೆಯ ಜಿಂಕೆ ; "ಶ್ರೇಷ್ಠವಾದ ಚರ್ಮವುಳ್ಳ ಜಿಂಕೆಯ ಭೇದಗಳು" (ಅಮರ. ೮೯೫). [ ಸಂ. ]

**ಚಮೂವಲ್ಲಭ** (ನಾ).=ಚಮೂನಾಥ: ವಾಜಿಗಳಂ ವಿಳಾಸಿನಿಯರಂ ತನ್ನಂ ಚಮೂವಲ್ಲಭಾಭರಣಂ ಶ್ರೀಪತಿ (ಸೌಇಇ. XX, ೭೪-೯ ; 1112). [ ಸಂ. (ಚಮೂ + ವಲ್ಲಭ) ]

**ಚಮ್ಮ, ಚೆಮ್ಮ, ಸಮು$_1$, ಸಮ್ಮ$_2$** (ನಾ). ಚರ್ಮ ; ತೊಗಲು : ತನುವೆಂಬ ಮನೆಗೆ ಅಸ್ಥಿಂಗಳು ಚಮ್ಮ[ಪಾಠಾಂ. ವರ್ಮ]ದ ಹಂಜರ ನರದ ಭೀಮುಗಟ್ಟು (ಆದವ. ೧೫-೩೩) : ಮೆಱೆದಿದಿರಾಗಿ ತಾಗಿದ ಗಜಾಸುರನಂ ಪಿಡಿದೆತ್ತಿ ಚಮ್ಮಮಂ ಸೞಸೞ್ಸೞನೆ ಸೀಳ್ದು ಬಿದಿರ್ಚಿಯಾಡುತ (ಎಕ. XVI, ಚಿಕ್ಕನಾ. ೭೦-೨೩ : 1235). ಚೆಮ್ಮ : 'ಚೆಮ್ಮಾವುಗೆ' ಪರಾ. ಸಮು$_1$: "ಸಮ್ಮ (ಸಮು, ಚಮ್ಮ)–ಚರ್ಮ(ನ್)=ತೊಗಲು" (ತದ್ಭಕೋ. ೪೩). 'ಸಮುಗಾರ' ಪರಾ. ಸಮ್ಮ$_2$: "ನೆೞ್ ತೋಲ್ ತೊವಲುಂ ಸಮ್ಮಮಡಿರದಕ್ಕುಂ ಚರ್ಮ" (ಕವಿಕಂ. ೮೫) ; "ಸಮ್ಮವೆನೆ ಚರ್ಮ" (ಕಶರ. ೧೦೩) : ನುಣ್ಪುವಟ್ಟು ತೋೞ್ ಬಿಗಿದುಟ್ಟ ಪುಲಿದೊವಲೊಳಂ ತಕ್ಕಿನಿಂ ಮಿಕ್ಕು ಪೋದರ್ಾನೆರಕ್ಕಸನ ಸ[ ಪಾಠಾ. ಚ ]ಮ್ಮದ ಮೇಲ್ವೊದಿಕೆಯೊಳಂ ಚೆಲ್ವನಾಂತು (ಕಬ್ಬಿಕಾ. ೧೬೭) ; ಕಣ್ಣಪ್ಪನಡಿಗೆರ್ಪು ಭರದಿನೊರಸಲ್ಸಮವೆಡೆದು ಪೋದುದು (ಅರಾಚ. ೩-೨೮); ಮೆಯ್ಯ ಸಮ್ಮಂ ಸುಗಿದು (ಭಾವಚಂ. ೫-೭) : ನಸುನಗುತ್ತೆರಳೆಯಂ ತಾಳ್ದು ಪುಲಿಯಂ ಸೀಳ್ದು ಪೊಸಸಮ್ಮವುಟ್ಟು ಫಣಿಗಳ ತೊಟ್ಟು ಕೈದುಗಳನೆಸಕದಿಂ ಧರಿಸಿ (ಚಬಪು. ೨೦-೩೦) : ಶಿರಮಾಲೆಯಾಭರಣ ನಿರ್ಮಲ ದುಕೂಲಂ ಸಮ್ಮದಂಬರಂ ಕುಂಕುಮದ ತಿಲಕ ಪಣೆಗಣ್ ವಿರಾಜಿಸುವರ್ಧನಾರೀಶ ಸಿದ್ಧನಂಜೇಶ ಸಲಹಾ (ಗುರುಚಾ. ೧೧-೧) ; ಪೊಂಬುಲಿ ಸಮ್ಮಮಾನದಲೆಮುತ್ತು ಮೊಲಂಗಳ ಬಿಕ್ಕು . . . ಪೀಲಿಯೆಂಬಿವಂ ತುಂಬಿದ ಕಂಬಿಯುಂ ತಳೆದವೇಂ ತಳರ್ದತ್ತೊ ಪುಳಿಂದಸಂಕುಳಂ (ರಾಜಶೇ. ೫-೧೧೪); ಮೆತ್ತನೆಯಾದ ಸಮ್ಮದೆ ಮನೋಹರ ಮೆಂದೆನಿರ್ಪಿದ ಶೆಳ್ವಸಿರ್ ಬತ್ತರವಾಗಲ್ (ಜಾಲಾಸ್ಯ. ೧-೦೩-೨೬). 'ಸಮ್ಮಪಾವುಗೆ' ಪರಾ. [ <ಸಂ. ಚರ್ಮನ್ ]

**ಚಮ್ಮಖಿಳ್ಳ** (ನಾ). ಚರ್ಮದ ಮೇಲಿನ ಕಲೆ,– ಕೆಂಪುಚುಕ್ಕೆ : ತಲೆಗಾತ್ರ ಸ್ಫುರಣಂ ನರವುಲಿ ಕಾರೆಳ್ಕಟ್ಟಿ ಚ(ಂ)ಮ್ಮಖಿಳ್ಳೆಂದಿನಿತುಂ ಬಲದೊಳ್ ಪುರುಷಂಗೆಡದೊಳ್ ಲಲನೆಗೆ ಸಮನಿಸಿದೊಡಿಷ್ಟಫಲಮಂ ಕುಡುಗುಂ (ಲೋಕೋಪ. ೧೦-೬೪). [ಚಮ್ಮ + ಖಿಳ್ಳ$_0$ (← ಪ್ರಾ. ಖಿಲ್ಲ = ಗುಳ್ಳೆ)]

**ಚಮ್ಮಟ** (ನಾ). ಚರ್ಮದ ಹೊದಿಕೆಯುಳ್ಳ ಗುರಾಣಿ,– ಖೇಟಕ : ಬಹುಭಾರಣದ ಚಮ್ಮಟದ ಖಡುಗದ ಪಾರಗದ ಪರಿಣತರು ಹೆಣಗಿದರು (ಕುಮಾರರಾ. ೧೪-೫). [ <ಸಂ. ಚರ್ಮಪಟ ]

**ಚಮ್ಮಟಿಕೆ$_1$, ಚಮ್ಮಟಿಗೆ$_1$, ಚಮ್ಮಟ್ಟಿಗೆ$_1$, ಚಮ್ಮಡಿಕೆ**(ನಾ). ಕಮ್ಮಾರನು ಬಳಸುವ ದೊಡ್ಡಸುತ್ತಿಗೆ : ಮಾಯೆಗಲುಗದ ಧೈರ್ಯವೆಂಬಡೆಯ ಮೇಲಿರಿಸಿ ನಿತ್ಯವೆಂದೆಂಬ ಚಮ್ಮಟಿಕೆ[ಪಾಠಾಂ. ಗೆ]ಯಿಂ ಪೊಡೆವುತಂ(ಇಆರ. ದೀ. ೨೦೬-೨೧). **ಚಮ್ಮಟಿಗೆ$_1$ :** ಕಾಯ್ದ ಮೊಳೆಯ ಚಮ್ಮಟಿಗೆಗಳಿಂದೆ ಅಡಸಿ ಪೊಯ್ಯೆ (ಸಾನಂದ. ೬-೧೦ ರಗಳೆ) : ಅಸ್ತ್ರಗಳನು ಮುಱಿಯದೆ ಚಮ್ಮಟಿಗೆಯೊಳು ಕೊಱಯದೆ ಗರಗಸವಿಡಿದು ಕೈಕಾಲ್ಗಳ ಬಱದೇಕೆ ಕೊಂದೆನೊ ರಣದಿ (ವರ್ಧಚ. ೮-೧೨); ಕಲ್ಲುಗಳಿದ್ದರೆ . . . ಚಾನಗಳಿಂದಾಗಲಿ ಚಮ್ಮಟಿಗೆಯಂಥ ದೊಡ್ಡ ಸುತ್ತಿಗೆಯಿಂದಾಗಲಿ ಒಡೆದು ತಂದು ಹೊಲದ ಮೇರೆಗೆ ಹಾಕಬೇಕು (ಕೃಷಿಪ್ರ. ೪೧). **ಚಮ್ಮಟ್ಟಿಗೆ$_1$ :** (೬). **ಚಮ್ಮಡಿಕೆ :** ಚಮ್ಮಡಿಕ ಮೊದಲಾದುವಱಂ ಬಡಿವ (ಶಾಸ್ತ್ರಬೀ. ೬೦-೨).

[ ದೇ.॥ ತಮಿ. ಚಮ್ಮಟ್ಟಿ; ತುಳು. ಚಮಟಿಗೆ; ತೆಲು. ಸಮ್ಮೆಟ ]

**ಚಮ್ಮಟಿಕೆ$_2$** ‘ಚಮ್ಮವಟ್ಟಿಗೆ’ ನೋ.

**ಚಮ್ಮಟಿಗೆ$_1$** ‘ಚಮ್ಮಟಿಕೆ$_1$’ ನೋ.

**ಚಮ್ಮಟಿಗೆ$_2$** ‘ಚಮ್ಮವಟ್ಟಿಗೆ’ ನೋ.

**ಚಮ್ಮಟ್ಟಿಗೆ$_1$** ‘ಚಮ್ಮಟಿಕೆ$_1$’ ನೋ.

**ಚಮ್ಮಟ್ಟಿಗೆ$_2$** ‘ಚಮ್ಮವಟ್ಟಿಗೆ’ ನೋ.

**ಚಮ್ಮಡ** ‘ಚವುಡ’ ನೋ.

**ಚಮ್ಮಡಿಕೆ** ‘ಚಮ್ಮಟಿಕೆ$_1$’ ನೋ.

**ಚಮ್ಮಡೆಗದ್ದೆ** (ನಾ). ಕೆಂಪುಮಣ್ಣಿನ ಗದ್ದೆ (?): ಕೇರಿದ ಚಂಮಡೆಗದ್ದೆ ತೆವರ ಯುಸಗಮೆಳೆ (ಎಕ. III, ತಿರುಮ. ೬೩-೫೦೩ : 1744).

[ಚಮ್ಮಡ$_0$ + ಗದ್ದೆ (<ಗಟ್ಟೆ) ]

**ಚಮ್ಮಣಿವಟ್ಟು** ‘ಚೆಮ್ಮಣಿವಟ್ಟು’ ನೋ.

**ಚಮ್ಮರ** ‘ಚಮ್ಮಾರ’ ನೋ,

**ಚಮ್ಮರಿಗೆ** (ನಾ). ಚಾಟಿ ; ಬಾರುಕೋಲು ; ಕೋರಡೆ: ಅಱುವತ್ತಾಱು ಮಂಡಳಿಕರ ಬೆಂನ ಚಂಮರಿಗೆ ಹೊಳೆಕಲ್ಲ ಬೆಣೆಯನಾಯ್ಕನ ಮಗ ಕಂಬೆಯ ನಾಯ್ಕ (ಎಕ. XVI, ತಿಪಟೂ. ೧೬೦-೧೧ : 1277).

[ <ಚಮ್ಮಟಿಗೆ? ]

**ಚಮ್ಮವಟ್ಟಿಗೆ, ಚಮ್ಮಟಿಕೆ$_2$, ಚಮ್ಮಟಿಗೆ$_2$, ಚಮ್ಮಟ್ಟಿಗೆ$_2$, ಸಮಟಿಗೆ, ಸಮ್ಮಟಿಗೆ** (ನಾ). ಬಾರುಕೋಲು ; ಚಾವಟಿ : ತತ್ತುರಂಗವನು ತೆಗೆದಂಗಣಕೆ ಹಲ್ಲಣಿಸಿ ಹತ್ತಿ ಪೊಯ್ದಾ ಚಮ್ಮವಟ್ಟಿಗೆಯ ಹುಯ್ಲಿಗೆ ಕಱುತ್ತು ನಭಕುಪ್ಪರಿಸೆ ಜಗುಳ್ದಧೋಗತಿಗೆ ಬೀಳ್ವಂದದಿಂ ಬಿಳ್ದನವನು (ಸಮ್ಯಕೌ. ೧೧-೬೦). **ಚಮ್ಮಟಿಕೆ$_2$ :** ಬಿರುದರ ಬೆನ್ನ ಚಮ್ಮಟಿಕೆ ಗಂಡರ ದಾವಣಿ ವೀರಘಂಟೆಯುಪ್ಪರಗುಡಿ ಬಿಲ್ಲ ಜೇವಣಕೆ ಕಣ್ಣಲೆ ಕಾಸದೆಯುಂಬ ಡೊಂಬಿನಾಳ್ ಧುರಧರೆಯೊಳ್ ಸಹಸ್ರಮಿದಿರಾದಡಮಂತಕನೆಮ್ಮ ಪೋರಿಯಂತಿರೆ ಕಡೆಪೊಯ್ಯಸಲ್ಲದಡೆ ಮಾಡುವೆನಗ್ನಿಮುಖಪ್ರವೇಶಮಂ (ಮಹಾನೇ. ೧೧-೧೩೬) : ಚಮ್ಮಟಿಕೆಯಂ ಪಿಡಿದು ರಥವನು ತಿರುಗಿಸುತ ಬಂದು (ರಾಮದಿ. ೫೯): ಎತ್ತಿ ಚಮ್ಮಟಿಕೆಯನ್ನು ಚಪ್ಪರಿಸುತ್ತ ವಾಜಿಗಳನ್ನು ಗರಗರಸುತ್ತ (ಮುದ್ರಾಮಂ. ೫-೩೦). ಚಮ್ಮಟಿಗೆ$_2$ : “ ಚರ್ಮದಂಡಃ, ಕಶಾ – ಈ ೨ ಚಮ್ಮಟಿಗೆ ” (ಹಲಾಯು. ೬೩-೨೮೮) : “ ಕಶೆ ಚರ್ಮದಂಡಮೆನೆ ಚಮ್ಮಟಿಗೆಯೆನಿಸಿಕ್ಕು ” (ಮಂಗರಾ. ೮೧-೧೩) : ಅನ್ನೆಗಂ ನಕುಳನುಮಂಕವಣಿಯುಂ ಬಾಳುಂ ಬಾರುಂ ಚಮ್ಮಟಿಗೆಯುಮನೊರ್ವ ಕೀಲಾಳಿಂ ಪಿಡಿಯಿಸಿಕೊಂಡು ಬಂದು (ಪಂಪಭಾ. ೮-೫೪ ವ); ಬಟಲ್ವೊಡಲೊಳ್ ಚಮ್ಮಟಿಗೆಗುತ್ತುಗಳುಮಂ . . . ಮೆಯ್ಯೊಳ್ತೊಡಲ್ವೊರಜೆಗಳ ಕಟ್ಟಂ ಪುಟ್ಟಿದ ಬೇನೆಯುಮನೆಂತು ಸೈರಿಸಿದೆ (ಶಾದಂಅ. ೬೩೦); ಕಟಿ ಚಮ್ಮಟಿಗೆ ಮುಟ್ಟಿದವೊಲ್ ನಸುಬೆರ್ಚಿ (ಕಾವ್ಯಾವ. ೮೨೩) : ವೀರಘಂಟೆಯ ಹೊನ್ನ ಗುಬ್ಬಿಯ ರನ್ನವಟ್ಟೆಯ ಬೆನ್ನ ಚಮ್ಮಟಿಗೆಯ ಬಿಳಿಯ ಚವರದ . . . ತಟ್ಟನೊಟ್ಟಜೆಯ ಕಟ್ಟುಬ್ಬಟೆಯ ಬಿರುದಿನ ಹರಿಗೆಕಾಱರ ಪರಿವೀಥಿಯೊಳಂ (ಗಿರಿಕ. ೬-೫೫ ವ) : ಮಡದತಾಂಕಿ ಚಮ್ಮಟಿಗೆಯಂ ತೆಗೆದೊತ್ತಿದ ಮುನ್ನಮಾ ಹಯಂ ಮಿಡಿದವೊಲಾರ್ಪಿನಿಂ ನೆಗೆದು ಪಶ್ಚಿಮದಿಕ್ಕಿಗೆ ಪಾಯ್ದು (ಪುಣ್ಯಾಸ್ರ. ೦೦-೩೦) : ತುರಗವನು ಬೋಳಯಿಸಿ ವಾಘೆಯ ತಿರುಹಿ ಚಮ್ಮಟಿಗೆಯಲಿ ತೇಜಿಯ ಬರಿಯ ಬೆದಱಿಸಿ ಕೃಷ್ಣ ಪಾರ್ಥನ ರಥವ ಲುಳಿವಡೆದ (ಕುಮಾಭೀ. ೩-೨); ಎಸೆವ ಮಿಳಿ ಸರ್ಪಮುಪನಿಷದಾಳಿ ಹಯ ರಜ್ಜು ಮಿಸುಪ ಚಮ್ಮಟಿಗೆಯೋಂಕಾರಂ (ಚಬಪು. ೪೮-೪೨) : ಈ ಚಮ್ಮಟಿಗೆ ಸುಲಿದು, ಬೆನ್ ಪಸುರ್ಗಟ್ಟಿ (ಅಶ್ವತ್ಥಾ. ೬-೯೫) ; ತನ್ನ ಕೋಣೆಯಲ್ಲಿ ಕುಳಿತು ತನ್ನ ಕಲ್ಪನಾವಿಲಾಸಕ್ಕೆ ಚಮ್ಮಟಿಗೆಯನ್ನು ಬೀಸಿ ಎತ್ತೆತ್ತೋ ಹರಿಬಿಡುವನು (ಜಯಂತ. ೬೯). **ಚಮ್ಮಟ್ಟಿಗೆ$_2$ :** “ ಚರ್ಮಪಟ್ಟಿಕಾ–ಚಮ್ಮಟ್ಟಿಗೆ, ಸಮಟಿಗೆಯೆನಲುಮಕ್ಕುಂ”(ಶಮದ. ೨೯೪ ಪ್ರಯೋ): “ಚಮ್ಮಟಿಗೆ – ಚಮ್ಮಟ್ಟಿಗೆ ” (ಶಬ್ದಾನು. ೩೭೮ ಪ್ರಯೋ). **ಸಮಟಿಗೆ :** “ಚರ್ಮಪಟ್ಟಿಕಾ–ಚಮ್ಮಟ್ಟಿಗೆ, ಸಮಟಿಗೆಯೆನಲುಮಕ್ಕುಂ” (ಶಮದ. ೨೯೪ ಪ್ರಯೋ) : “ ಸಮಟಿಗೆ, ಚಮ್ಮಟಿಗೆ–ಚರ್ಮಪಟ್ಟಿಕಾ ” (ತದ್ಭಕೋ. ೪೩). **ಸಮ್ಮಟಿಗೆ :** ರಾಹುವ ಕೇತುವ ಬಲಿದಿಕ್ಕುಳಿನಿಂ ತೆಗೆದಂಧಾಸುರ ನೆರ್ದೆಗಲ್ಲೊಳ್ ವಜ್ರದ ಸಮ್ಮಟಿಗೆಯ ನಿಗುಚಿ ಕುಳಿಕನ ವಿಷದಿಂ ನೀರೂಡಿಸಿ (ವೀರೇಚ. ೨-೯). [ <ಸಂ. ಚರ್ಮಪಟ್ಟಿಕಾ ]

**ಚಮ್ಮಾವುಗೆ, ಚಮ್ಮಾವುಗೆ, ಚೆಮ್ಮಾವುಗೆ, ಸಮ್ಮಾವುಗೆ, ಸಮ್ಮಾವುಗೆ** (ನಾ). ಚರ್ಮದ ಪಾದುಕೆ,– ಪಾದರಕ್ಷೆ: ಸೊಸೆವಿರ್ಗೆಲ್ಲಂ ಸಲೆ ಚಮ್ಮ [ಪಾಠಾಂ. ರ್ಮ]ಮಾವುಗೆಯನಾ ಲಲನೆ ಮಹೋತ್ಸಾಹದಿಂದೆ ಮಾಡಿಸಿ ಕೊಟ್ಟಳ್ (ಸುಕುಮಾ. ೧೦-೧೨೦). **ಚಮ್ಮಾವುಗೆ :** ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯಾ ಅಯ್ಯಾ ನಿಮ್ಮ ಶರಣರ ಪಾದಕ್ಕೆ ಚಮ್ಮಾವುಗೆಯ ಮಾಡಯ್ಯಾ (ಬಸವ. ೩೬೧) : ಮೂವತ್ತಿರ್ವರ್ ಸೊಸೆವಿರ್ಗಂ ಚಮ್ಮಾವುಗೆಯಂ ಮಾಡಿಸಿ ಕೊಟ್ಟಳ್ (ಜೀವಸಂ. ೦೦೮-೩೭ವ); ಆತನಾ ಕಂಬಳಮಂ ಕಂಡು ಕರ್ಕಶಮದನೊಲ್ಲೆನೆಂದು ಮರಳಿ ಕಳಿಪಲಾ ಯಶೋಭದ್ರೆ ಮೂವತ್ತಿರ್ವರ್ ಸೊಸೆಯರ್ಗೆ ಚಂಪಾ[ ಮ್ಮಾ ]ವುಗೆಗಳಂ ಮಾಡಿಸೆ (ಪುಣ್ಯಾಸ್ರ. ೬-೩೨) : ಪಲ್ಲಕ್ಕಿಯಿಂದಿಳಿದು ಚಮ್ಮಾವುಗೆ ಮೆಟ್ಟಿ (ಧರದ. ೪೬-೧೨) : ಹರಳಯ್ಯ ಬಸವೇಶಂಗೆ ಪ್ರೀತಿಯಿಂ ನಮಿಸಿ ಚಮ್ಮಾವುಗೆಯ ಮುಂದಿಟ್ಟು ಮೆಟ್ಟೆನ್ನ ಗುರುವೆ ಎನಲು (ಪ್ರಭುಪು. ೯-೧೦೦) : ಶಿವಕವೀಶ್ವರರ ಪ್ರಸಾದವಂ ಸವಿವೆ ಮೇಣವರ ಚಮ್ಮಾವುಗೆಯ ಮುಡಿದು ಮುಕ್ತ್ಯಂಗನೆಯ ತವಕದಿಂ ನೆರೆವೆನು (ಏಕೋಪು. ೩-೫). **ಚೆಮ್ಮಾವುಗೆ:** ಒಪ್ಪವನಿಕ್ಕಿದ ಎಪ್ಪತ್ತುಗೊಂಡೆಯ ಸರ್ಪನ ಹೆಡೆಗೈಯುತಲಿ ಚೆಮ್ಮಾವುಗೆಯ ಸುಪ್ಪಾಣಿಯಿಂದ ಸಯವಿಟ್ಟ (ಶರದ. ೨೯೯) : ಈ ಚೆಮ್ಮಾವುಗೆಗಳನ್ನಾದರೂ ಸ್ವೀಕರಿಸಿ ನನ್ನ ಕುಲಕೋಟಿಯನ್ನೆಲ್ಲ ಉದ್ಧರಿಸುವ ಕೃಪೆಮಾಡಿರಿ! (ಶರಚ. ೩೦೧). **ಸಮ್ಮಾವುಗೆ:** ಸೊಸೆವಿರ್ಗೆಲ್ಲಂ ಸುಸಮಾನಚಿತ್ತದಿಂದಿಂದು ಸಮ್ಮಾವುಗೆಯನಲ್ತೆ ಮಾಡಿಸಿಕೊಟ್ಟಳ್ (ಸುಕುಮಾ. ೧೦-೧೨೦) : ದೇವರ ಸಮ್ಮಾವುಗೆಗಳಂ ಪಿಡಿದೆಂಬುದ ನಿಂಬುಕೆಯ್ವ ಸದ್ಭಾವಮೆ ಸಾಲ್ಗುಂ (ಪಂಚಾಮಾ. ೬-೭೮) : ಬೀವಮಾರುತ ರುಗ್ಮಿಣನ ಪುರಕೆ ಪೋದ ಕಾವನ ಕೈಸೆಱ ತಂದು ಭೂವರ ಕೇಳ್ನಿನ್ನ

ಪದಪದ್ಮಕೆ ಸಮ್ಮಾವಾವುಗೆಗಳನಿಕ್ಕಿಸುವೆವು (ನೇಮಿಸಂ. ೨೬-೧೧೬). ಸಮ್ಮಾವುಗೆ: ಮೆರೆವ ಸಮ್ಮಾವುಗೆಯ ಮುಖದಿಂ ತೆಗೆದುಟ್ಟ ಹಸದುಕೂಲದ ಮುಂಜೆರಂಗಿನಿಂ (ಪದ್ಮಣ. ೩-೯೨): ಲಳಿತ ದಾಮೋದರಂ ವರಸೋಮಯಾಜಿಗಳ್ಪಳೆಯ ಸಮ್ಮಾವುಗೆಯ ಮಾಧವಂ (ಅರಾಚ. ೭-೧೬): ಜಿನಮುನಿಗಳೊಡನೆ ವಾದಿಸಿಯವರು ಸೋಲ್ತು ಪದವಿನತರಾಗಲ್ಕೆ ಸಮ್ಮಾವುಗೆಯ ಸೇವೆಯಂ ಕೊಟ್ಟವರ ರಕ್ಷಿಸಿದನು (ವೀರ್ಶೈಪು. ೪-೯-೦೬): ಚನ್ನಗಂಬಿಯ ಪಟ್ಟೆ ಪಚ್ಚಡಂಗಳನೊಲಿದು ಚನ್ನಾಗಿ ವಲ್ಲಿವಾಟವ ಪೊದೆದು ಯಡಕೆರದಿ ಪೊನ್ನೂರ ಕಠಾರಿಯುಮನಾಂತು ವರಹಸ್ತದೊಳಕುಟ್ಟಮಂ ಪಿಡಿದು ನಡಿಯೇಯನ್ನುಜರಿಸರಿವಿನದ ಸಮ್ಮಾವುಗೆಯ ಮೆಟ್ಟ (ನವಲೋ. ೦೭-೫೭). [ಚಮ್ಮ + ಪಾವುಗೆ. / ಸಂ. ಚರ್ಮಪಾದುಕಾ]

ಚಮ್ಮಳಗೆ 'ಚಮ್ಮಾಳಿಗೆ' ನೋ.

ಚಮ್ಮಳಿ (ನಾ). ನವಗ್ರಹಗಳಲ್ಲಿ ಒಂದಂ; ಕೇತು: "ಚ[ಪಾಠಾಂ. ಚಿ]ಮ್ಮಳಿಯೆಂದು ಕೇತು" (ಕಶಸಾ. ೩-೩೨): "ಉಚಿ ಚಮ್ಮಳಿ ಕೇತುರಾಹು ಬಾಂಬಾವಕ್ಕಂ" (ಕವಿಕಂ. ೪೨). 'ಚಾಟಿ' ಪರಾ. [?]

ಚಮ್ಮಳಿಕೆ (ನಾ). = ಚಮ್ಮಳಿ "ಚಮ್ಮಳಿಕೆಯೆನೆ ಕೇತು" (ಕಶರ. ೫೩). [<ಚಮ್ಮಳಿ]

ಚಮ್ಮಾರ, ಚಂಬಾರ್, ಚಂಬಾರ, ಚಮ್ಮರ (ನಾ). ಚರ್ಮದ ಕೆಲಸ ಮಾಡುವವನು; ಚಮಗಾರ; ಸಮಗಾರ: "ಚಮ್ಮಾರ – ಚರ್ಮಕಾರ" (ಶಬ್ದಕೋ. ೦೨). ಚಂಬಾರ್: (ಕೃಸಗೆ. II, ೩೪೩); (ಪ್ರಗೆಜಿ. IV, ೭೬೭). ಚಂಬಾರ: (ಎಸಮ್ಯ. XVII, ೨). ಚಮ್ಮರ: ಚಮ್ಮರನ ಕಣ್ಣು ಮಚ್ಚೇರಿದುದು, ಕಿವಿ ಕೇಳದಾದುದು (ಕಗರ್ರ. ೭೯). [<ಸಂ. ಚರ್ಮಕಾರ]

ಚಮ್ಮಾರುಲಿ (ನಾ) ಚರ್ಮದ ಮೆಟ್ಟು (?): ಮೆಟ್ಟಿದ ಚಮ್ಮಾರುಲಿಯ ಪೆಟಿನೊಸಲೊಳಗಿಟ್ಟ ಕಸ್ತುರಿಯು ತಿಲಕದ ಮುಟ್ಟ ಪಿಡಿದ ಕೈಸಾಣೆಯ ಕೊನಬುಗಳಟ್ಟಣಿಸಿಹರು ಬೀದಿಯಲಿ (ಕಂನವಿ. ೩-೧೯೩). [?]

ಚಮ್ಮಾವುಗೆ 'ಚಮ್ಮವಾವುಗೆ' ನೋ.

ಚಮ್ಮಾಳ (ನಾ). ಒಂದು ಬಗೆಯ ಚರ್ಮವಾದ್ಯ: ಚಮ್ಮಾಳ ಬಾರಿಸುವವರು ಬಂದರು (ಋಂ೦). [←ಖುರಾ. ಸಂಬಲ್]

ಚಮ್ಮಾಳಿಗೆ, ಚಮ್ಮಳಗೆ, ಚಮ್ಮೋಳಗೆ, ಚಿಮ್ಮಣಿಗೆ (ನಾ). ಚರ್ಮದ ಪಾದುಕೆ: ನಂಬಿಯಣ್ಣಂ ಪರಮಲೀಲೆಯೊಳುದ್ಧ ಚಮ್ಮಾಳಿ[ಪಾಠಾಂ. ವು]ಗೆಗಳಂ ಮೆಟ್ಟಿ (ಬಸಪು. ೨೬-೦೪); ಹಳ್ಳಯನೆಂಬೊ ಮಾದಿಗ ತನ್ನ ಸತಿಗೂಡಿ ಒಳ್ಳೆ ರೌಪಾದ ಚಮ್ಮಾಳಿಗೆಯ (ಬಿಜ್ಜರಾ. ೭-೧೧). ಚಮ್ಮಳಗೆ: ಚಮ್ಮಳಗಿ[ಗೆ]ಯ ಮೆಟ್ಟಿ ವಾರೆದುರುಬಾ ಕಟ್ಟಿ (ವಿಸಾಸು. ೦೩-೩). ಚಮ್ಮೋಳಗೆ: ಚಮ್ಮೋಳಗೆಯ ಮೆಟ್ಟಿದವಗುಂಟೇ ಕಂಟಕಗಳ ಭಯ (ಜಗದಾ. ೨೦೪). ಚಿಮ್ಮಣಿಗೆ: ಸರ್ವರು ಮೆಟ್ಟುವ ಕಾಲೊಳು ಚಿಮ್ಮಣಿಗೆ (ಕನ್ನಡ. ೮೧); ಮೆಟ್ಟಿದಾನ ಚಿಮ್ಮಣಿಗೆ ಉಟ್ಟಿದಾನ ಧೋತರ (ಲೋಕಗೀ. ೦೩೭). [ಚಮ್ಮ + ?]

ಚಮ್ಮೋಳಗೆ 'ಚಮ್ಮಾಳಿಗೆ' ನೋ.

ಚಯ್$_1$ (ನಾ). ಒಂದು ಅನುಕರಣ ಪದ: ಚಯ್ ಚಯ್ಯೆಂಬಾಗಳ್ ಮೆಯ್ ಮೆಯ್ ಚಲದಿಂ ಪುಟ್ಟ ಪೊಣರ್ದ ತಳ್ರಿಬೆವು[ರ್ಕಿಂ] (ಪಂಪಭಾ. ೦೩-೩೪).

ಚಯ್$_2$, ಚಯ್ಯ, ಚೆಯ್$_1$, ಚೈ (ನಾ). ಚೆಲ್ಲಾಟ; ವಿನೋದ. 'ಚಯ್ಯಾಡು' ಪರಾ. ಚಯ್ಯ: "ಚಯ್ಯವು[ಪಾಠಾಂ. ಚೆಯ್ಯಾಟ, ಚೆಯ್ಯಾಟ]ಮೆನಲ್ ಚೆಲ್ಲಾಟಮಕ್ಕುಂ" (ಕಬ್ಬಿಕೈ. ೨೦); ಚ[ಪಾಠಾಂ. ಬ]ಯ್ಯವಾಡುಮದೇಡಿಪುದು (ರಾಮವಿ. ೦೬-೮೬). ಚೆಯ್$_1$: 'ಚೆಯ್ಯಾಟ' ಪರಾ. ಚೈ: 'ಚೈಗುಡು' ಪರಾ. [?]

ಚಯಂ (ನಾ). ೧. ಗುಂಪು; ಮೊತ್ತ; ರಾಶಿ; ಸಮೂಹ: ದಿಗಂಬರತಟಂಬರಂ ಬಳಸೆ ಕೀರ್ತಿವಲ್ಲೀಚಯಂ (ಆದಿಪು. ೩-೫೭): ಸ್ಮರಕಾಂತಾರತ ಘರ್ಮಬಿಂದುಚಯಮೋ (ಕಾದಂಪೂ. ೭೮೧); ಇಂದ್ರಿಯಚಯವ ಗೆಲುವದೆ ತನ್ನ ಗೆದ್ದುದದು (ನೀಗಟ್ಕು. ೦೨೯). ೨. ಮಣ್ಣಿನ ದಿಣ್ಣೆ: ೩. ಕೋಟೆಯ ಸುತ್ತುಗೋಡೆ; ಪ್ರಾಕಾರ. [ಸಂ.]

ಚಯನ (ನಾ). ಕೂಡಿಹಾಕುವಿಕೆ; ಒಟ್ಟುಗೂಡಿಸುವಿಕೆ; ಶೇಖರಿಸುವಿಕೆ; ರಾಶಿಮಾಡುವಿಕೆ: ಚಯನಂ ಮುಗಿಯೆ ಬಲವಂದುಮಡವಂದುವಾಚಿತೆಯಂ (ಶ್ರೀರಾಮಾ. ೧೨೦-೨೨೯). 'ಸಂಚಯನ' ಪರಾ. [ಸಂ.]

ಚಯಿತ್ರ (ನಾ). = ಚೈತ್ರ ೨: ಚಯಿತ್ರ ಸು ೧೦ ಬ್ರಿ ದಂದು (ಎಕ. XI, ಚತ್ರದು. ೦೨-೦೪; 1286). [<ಸಂ. ಚೈತ್ರ]

ಚಯಿತ್ರಪೈಯಿತ್ರ (ನಾ). = ಚೈತ್ರಪವಿತ್ರ: ಶ್ರೀಗಾರುಮೇಶ್ವರದೇವರಂಗಭೋಗಕ್ಕಂ ನಿಕ್ಯನೈವೇದ್ಯಕ್ಕಂ ಖಂಡಸ್ಫುಟಿತ ಜೀರ್ಣೋದ್ಧಾರಕಂ ಚಯಿತ್ರಪೈಯಿತ್ರಕ್ಕಂ . . . ಬಿಟ ಗರ್ದೆ (ಸೌಇಇ. XX, ೭೬-೫೭; 1118). [< ಚೈತ್ರಪವಿತ್ರ]

ಚಯ್ಯ 'ಚಯ್$_2$' ನೋ.

ಚಯ್ಯಾಟ, ಚೆಯ್ಯಾಟ (ನಾ). ಚೆಲ್ಲಾಟ; ವಿನೋದ; ಚೇಷ್ಟೆ: "ಚಯ್ಯಾಟ[ಪಾಠಾಂ. ಚೆಯ್ಯವು]ಮೆನಲ್ ಚಲ್ಲಾಟಮಕ್ಕುಂ" (ಕಬ್ಬಿಕೈ. ೨೦). ಚೆಯ್ಯಾಟ: ಕುಚೇಷ್ಟಿತದ ಚೆಯ್ಯಾಟದ ಮುಗುಳ್ನಗೆ ವೆತ್ತು (ಮುಂಕೃಶ. ೮೮-೯). [ಚಯ್$_2$ + ಆಟ]

ಚಯ್ಯಾಡಂಬರ (ನಾ). ಕಾಂತಿ; ಶೋಭೆ: ಇಂದ್ರವಜ್ಕೈ ಚಯ್ಯಾಡಂಬರ ಮೆಂಚಂತಿರಲೊಪ್ಪಂಬಡೆದಾತನಿರೆ ×× ಎಚಿಯಂಗನೃಪಂ (ಮ್ಯಆರಿ. ೦೯೨೮, ೯-೧೧; 1133). [?]

ಚಯ್ಯಾಡು, ಚೆಯ್ಯಾಡು (ಕ್ರಿ). ಚಲ್ಲಾಟವಾಡು; ವಿನೋದಮಾಡು: ಕೆಯ್ಯೊಕಲೆತ್ತಿಯಾನೀ ಮೆಯ್ಯಾರ್ವಿನಮುಪ್ಪಿಕೊಂದು ಪಣೆಯಿಂ ಪಣೆಯಾದೊಯ್ಯನಣೆದಣೆದು ತಣಿಯದೆ ಚಯ್ಯಾಡುವ ತಸಯನೆನಗದೆಂದಾದಪನೋ (ಧರ್ಮನಾ. ೩-೦೨೦). ಚೆಯ್ಯಾಡು: ದೂರದಿಂದೆ ಪರಿತಂದಪ್ಪಪ್ಪೆನುತ್ತಪ್ಪುವೊಯ್ಯಗೆ ಚೆಯ್ಯಾಡುವ ಮೋಲುದಂ ಮುಸುಕಿದುತ್ತೋಯೆಂಬ . . . ಕಂದನೊಳ್ ನಲಿವ ಪೆಣ್ಣೀಂ ನೋಂಪಿಯೋ ನೋಂತಳೋ (ಜಗವಿ. ೨-೬೭). 'ಚೈಗುಡು' ಪರಾ. [ಚಯ್$_2$ + ಆಡು$_1$]

ಚಯ್ಯಾಳಿ (ನಾ). (ಸಂತೋಷದ ಸಮಯದಲ್ಲಿ)ವಾದ್ಯವನ್ನು ನುಡಿಸುವ ಒಂದಂ ಗತ್ತು (?): ಹೊಟ್ಟೀ ಬಸಪ್ಪನು ಉತ್ಸಾಹದಿಂದ 'ಚಯ್ಯಾಳಿ'ಯ ಗತ್ತನ್ನು ಹಿಡಿಯುತೊಡಗಿದನು (ಹಬ್ಬಿಬ. ೩೮). [?]

ಚರ (ಗು). ೧. ಚಲಿಸುವ; ಗತಿಯುಳ್ಳ; ನಡೆಯುವ. ೨. ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ: ವಾರಸುದಾರರು ಜವಾನುಗಳನ್ನು ತೆಗೆದುಕೊಳ್ಳಲು ನಿರಾಕರಿಸಿದಾಗ ಓಡಿಹೋದವನ ಚರ ಆಸ್ತಿ ನಮಗೆ ಸೇರುತ್ತದೆ (ಪ್ರವಾಇ. II, ೪೭೮). (ನಾ). ೩. ಚಲಿಸುವವನು; ನಡೆಯುವವನು: ಪರನಪರಂ ಭವನಭವಂ ಚರನಚರಂ . . . ಎನಿಪ ಗಣಿತ ವಿರುದ್ಧಗುಣ ನಿನ್ನ ನಿಜವದೇಂ ಕೇವಳವೋ (ಜಗವಿ. ೩-೯೭). ೪. ಚಲಿಸುವ ವಸ್ತು; ಪ್ರಾಣಿ: ಪುರಗಗನಜಲವನಚರಂಗಳು ಚರಗಳೆವು (ಅಮ್ಮತ. ೪-೧೪). 'ಚರಾಚರ' 'ಜಲಚರ' ಪರಾ. ೫. ಗೂಢಚಾರ; ಬೇಹುಗಾರ: "ಅಪಸರ್ಪಃ ಚರಃ ಚಾರಃ—ಈ ಮೂರು ಅರಸಾಳು" (ಹಲಾಯು. ೭೦-೨೮೧): ಅವಧರಿಪುದೆಂದು ಚರನಿಂತೆಂದಂ (ಪಂಪಾಮಾ. ೪-೩೭): ವಿಜಯಲಕ್ಷ್ಮಿಯು ಸೆಜಿಗ ಹಿಡಿದನು ದ್ರೋಣನೆಂದರು ಚರರು ಭೂಪತಿಗೆ (ಕುಮಾದ್ರೋ. ೦೮-೮). ೬. [ವೀಶೈ] ಜಂಗಮ: ಜಂಗಮವೆನಿಸಿಕೊಳ್ಳವೆ ಚರಾದಿಗಳು (ಅವಚಂ. ೨೫೮-೧೧೭೩); ನಟವರ ಕಪಮುಕವ ಮಾಡಿ ದೊರೆದರ್ಪದಿಂ ಚರಕೆ ಭಕ್ತಿಯುಂ ನಡೆಸುತಿರಲು (ಪ್ರಾರಂ. ೨-೩);

ಚರವು ಗೋಕ್ಷೀರವಂ ಬೇಡೆ ಕೊಟ್ಟಿಗೆಯತ್ತ ಬಜಡುಗವಿಲೆಯ ಕರೆದು ಸಲಿಸಿದುಂ (ರಾಖಚ. ೮-೩೯). ೭. [ವಿಜ್ಞಾ] ವಿದ್ಯುದ್ವಾಹಿಯಾದ ಕಣ: ವಿದ್ಯುತ್ತನ್ನು ಹೊತ್ತ ಅಣುಭಾಗಗಳಿಗೆ ಚರಗಳೆಂದು (Ions) ಹೆಸರು (ಭೌತವಿ. ೩೪೬). [ಸಂ. ]

**ಚರಂಡಿ** (ನಾ). ಕೊಳಚೆನೀರು ಹರಿದಂ ಹೋಗಲು ಮಾಡಿದ ಮೋರಿ; ಗಟಾರ : ನಮ್ಮ ನಗರಗಳ ಚರಂಡಿಗಳಲ್ಲೂ ಸಿಗದು ಇಂಥ ದುರ್ಗಂಧ ! (ಮೂನಸ. ೭೮) : ಅಡುಗೆಮನೆಯ ಕೊಳಚೆನೀರನ್ನು ನಲ್ಲಿಗಳ ಅಥವಾ ಚರಂಡಿಗಳ ಮೂಲಕ ದೂರ ಒಯ್ಯಬೇಕು (ಅಯಸೌ. ೯೦) : ಅವಳು ಆ ಪತ್ರವನ್ನು ಚರಚರನೆ ಹರಿದು ಚರಂಡಿಗೆ ಹಾಕಿ . . . ನಡೆದುಬಿಟ್ಟಳು (ರಂಗರೂ. ೦೭೪) : ಅಲೆಕ್ಸಿ ಗುಂಡಿ ತೋಡಿ, ಚರಂಡಿ ಹೊಡೆದು ತನ್ನ ಕೆಲಸವನ್ನು ಮುಗಿಸಿದನು (ಯೋಧಪು. ೦೭).

[ ?. / ಪಾರ. ಚರಾಂಡಿ = ಗಲ್ಲಿ ]

**ಚರಂಡಿತನ** (ನಾ). ಕೊಳೆಮಾಡುವಿಕೆ; ಹೊಲಸುತನ: ಚಿಂಡಿಕೆಯ ತೆಗೆದ ಚಿಂಡಿನೊಳಿಂದು ಮಾಡಿದ ಚರಂಡಿತನವನು ತೊಳೆವ ಚಂಡಿಕೆಯ ಚೆಂಗಾಲ! (ನವ್ಯಧ್ಯ. ೦೨-೩). [ ಚರಂಡಿ + – ತನ ]

**ಚರಂತ** 'ಚರಂತಿ' ನೋ.

**ಚರಂತಿ, ಚರಂತ** (ಗು). ೧. ಚಲಿಸುವ : ತುಟಿಗೆ ತುಟಿಯಿಡುವ ರತಿಕಾಮರ ಜೋಡಿ! ಚರಂತಿ ತ್ರಿಶಂಕು ಸ್ವರ್ಗದ ಹೊಸ ಮೋಡಿ! (ಚಂತನ. ೬೦-೩). (ನಾ). ೨. [ವೀಶೈ] ಬ್ರಹ್ಮಚರ್ಯವ್ರತವನ್ನು ಕೈಕೊಂಡ ಜಂಗಮ : ಚೆನ್ನರಾಜದೇವರು ಮಠವ ಕಟ್ಟಿಸಿ ಚರಂತಿಗಳ ದಾಸೋಹಕ್ಕೆ ಬಿಟ್ಟ ಗದ್ದೆ (ದ್ರು.ಅರಿ. ೦೯೨೮, ೩೩-೩ : ?) : ಯಿಾ ಮಠದ ಚರಂತಿ ಹಿರೇರು (ಎಕ. VII, ಶಿವಮೊ. ೦೦೭-೩ ; ? ). **ಚರಂತ** : ೨. ಚರಂತರ ಮಠದಲ್ಲಿ ಈ ದಿನ ಪುರಾಣ ಪ್ರವಚನವಿದೆ (ರೂಢಿ). [ <ಸಂ. ಚರತ್ ]

**ಚರಕ₁** (ನಾ). ೧. ಅಲೆದಾಡುವವನು. ೨. ಯಾತ್ರಿಕನಾದ ವಿದ್ಯಾರ್ಥಿ. ೩. ಬೇಹುಗಾರ ; ಗೂಢಚಾರ. ೪. ಪ್ರಸಿದ್ಧ ವೈದ್ಯಶಾಸ್ತ್ರಜ್ಞನಾದ ಒಬ್ಬ ಋಷಿಯ ಹೆಸರು. ೫. ಚರಕಋಷಿಯಿಂದ ರಚಿತವಾದ ವೈದ್ಯಗ್ರಂಥ ; ಚರಕಸಂಹಿತೆ. [ ಸಂ. ]

**ಚರಕ₂** (ನಾ). ೧. ನೂಲುವ ರಾಟೆ: ಅವಳು ಚರಕ ತೆಗೆದುಕೊಂಡು ದಾರ ತೆಗೆಯುವುದಕ್ಕೆ ಕುಳಿತುಕೊಂಡಳು (ದೇಪಾಂಕ. ೩೭) ; ಕೈಗಳಿಂದ ಅಥವಾ ತಕಲಿ, ಚರಕಗಳಂಥ ಸಣ್ಣ ಉಪಕರಣಗಳಿಂದ ಎಳೆಗಳನ್ನು ತೆಗೆಯುತ್ತಿದ್ದರು (ಗೃಹವಿ. ೬೨). ೨. ಅರೆಯುವ ಯಂತ್ರ ; ಗಾಣ : ಬಂಡವಾಳಗಾರನು . . . ಇಡೀ ರೈತವರ್ಗವನ್ನು ಸರಕಾರೀ ಕರ-ಕಂದಾಯಗಳ ಚರಕದಲ್ಲಿ ಹಾಕಿ ತೆಗೆದು ನಿಪ್ಪುಡುಸಪ್ಪೆಯಾಗಿ ಮಾಡುತ್ತಾನೆ (ಮೂಪಾದ. ೦೯೭). ೩. ಚಕ್ರ; ಗಾಲಿ : ದರುಮದ ಚರಕಂ ನನ್ನಿಯ ಪೊರ್ಕುಳುಮಂರಿವು ಸಮಾಧಿ ಧೃತಿಯುಮಿರೆ ನೇಮಿ (ಸೌನಂದ. ೩-೧೦). [ ←ಮರಾ. ಚರಕ್; ಪಾರ. ಚರ್ಖ್; ಹಿಂ. ಚರ್ಖ್, ಚರ್ಖಾ / ಸಂ. ಚಕ್ರ ]

**ಚರಕಿ, ಚರಿಕಿ** (ನಾ). ೧. ಲೋಹ, ದಂತ ಮೊದಲಾದುವುಗಳನ್ನು ತಕ್ಕ ಆಕಾರದಲ್ಲಿ ಕಡೆಯುವುದಕ್ಕಾಗಿ ಸಿದ್ಧಪಡಿಸಿದ ಯಂತ್ರ ; ಕಡೆತದ ಯಂತ್ರ; ಲೇತ್‌ಯಂತ್ರ: ಚರಕಿಯ ಭಾಗಗಳನ್ನು ತಕ್ಕಂತೆ ಅಳವಡಿಸುವುದಕ್ಕಾಗಿ . . . ಗಾಡಿಯುಳ್ಳ ಚರಕಿ ಯಂತ್ರದ ತಳಚೌಕಟ್ಟು (Lathe-bed. ತಾಂಕವಿ). ಚರಿಕಿ: ೨. ಕುಂಬಾರನ ತಿಗುರಿ : (ಕ). ೩. ಬೀಸುವ ಕಲ್ಲು : (ಕ). [ ←ಮರಾ. ಚರಕೀ, ಚರಖೀ ; ಪಾರ. ಚರ್ಖಾ ; ಹಿಂ. ಚರ್ಖೀ ]

**ಚರಗ** 'ಚರುಗ' ನೋ.

**ಚರಚಕ್ರವರ್ತಿ** (ನಾ). ಜಂಗಮರಲ್ಲಿ ಶ್ರೇಷ್ಠನಾದವನು: ಮಲೆಯ ವೀರೇಶ ಸಿದ್ಧರಾಮಸ್ವಾಮಿಯಾ ಕರಕಮಲ ಸಂಭೂತ ಚರಚಕ್ರವರ್ತಿ (ವೀಶೈಪು. ೦-೦-೬). [ ಚರ + ಚಕ್ರವರ್ತಿ ]

**ಚರಚರ** (ನಾ). ಒಂದು ಅನುಕರಣ ಶಬ್ದ. 'ಚರಚರನೆ' ಪರಾ.

**ಚರಚರನೆ** (ಅ). ಚರಚರ ಎಂಬ ಶಬ್ದದೊಂದಿಗೆ: ಕಲುಷದೈತ್ಯರನೆಲ್ಲ ಚರಚರನೆ ಸೀಳಿ (ಹಾದಿಕೀ. ೨೮-೦) ; ಆ ಪತ್ರವನ್ನು ಚರಚರನೆ ಹರಿದು ಚರಂಡಿಗೆ ಹಾಕಿ . . . ನಡೆದುಬಿಟ್ಟಳು (ರಂಗರೂ. ೦೭೪) .

[ ಚರಚರ + – ಅನೆ₁ ]

**ಚರಜಂದಗಿ, ಚರಜಂದಿಗಿ, ಚರಜಂದಿಗೆ** (ನಾ). ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ ಆಸ್ತಿ ; ಚರಆಸ್ತಿ : ಮನೆಗಳನ್ನು ಜಪ್ತಿಮಾಡಿ ಹಿಂಡುವ ಎಮ್ಮೆಯನ್ನು (ಕರಸಹಿತ) ಇತರ ಚರಜಂದಗಿಯನ್ನು ಜಪ್ತಿ ಮಾಡಿದರು (ಕರವೀ. ೯೩). **ಚರಜಂದಿಗಿ**: ಚರಜಂದಿಗಿ ವಿಷಯವಾದ ಹಕ್ಕು ಅಥವಾ ಅಂಥಾ ಜಂದಗಿಯ ಮೌಲ್ಯವನ್ನು ಕುರಿತ ದಾವೆ (ನ್ಯಾಮೂಳ. ೨೦). **ಚರಜಂದಿಗೆ** : "ಚರಜಂದಿಗೆ, ಜಂಗಮದ್ರವ್ಯ" (Chattels. ಪಾರಿಖಿ. ೦೪).

[ ಚರ + ಜಂದಗಿ ]

**ಚರಜಂದಿಗಿ** 'ಚರಜಂದಗಿ' ನೋ.

**ಚರಜಂದಿಗೆ** 'ಚರಜಂದಗಿ' ನೋ.

**ಚರಟ, ಚಟ್ಟ₂, ಚೆಟ್ಟ₁** (ನಾ). ೧. ದ್ರವವಸ್ತುಗಳ ತಳದಲ್ಲಿ ನಿಂತ ಗಟ್ಟಿಯಾದ ವಸ್ತು ; ಗಷ್ಟು ; ಗಸಿ: ಸಬಕಾರದ ಚರಟವನ್ನು ಕೂಡಿಸಿ ಮಾಡಿದ ಕಾಜಿನಿಂದ ಆಗುತ್ತವೆ (ಮುಂಬಯಿ. ೪-೨೨೨) ; ಬರೀ ಸಾರಿನ ಚರಟ ಇದೆ (ರೂಢಿ). ೨. ನಿಸ್ಸಾರವಾದ ವಸ್ತು ; ಸಾರ ತೆಗೆದ ವಸ್ತು : ಕಾಫಿಯ ಚರಟವನ್ನು ಪಾತ್ರೆ ತೊಳೆಯುವುದಕ್ಕೆ ಬಳಸಬಹುದು (ರೂಢಿ). ೩. ಶರೀರದ ಹೊರಪದರ; ಚರ್ಮ; ತೊಗಲು. **ಚಟ್ಟ₂**: (ಕ). **ಚೆಟ್ಟ₁**: ೨. 'ಚೆಟ್ಟಬೆಳಗಂ' ಪರಾ.

**ಚಟ್ಟಾಎತ್ತು** = ಚರ್ಮವನ್ನು ಸುಲಿ ; ಹಿಂಸೆಮಾಡಂ : ಕಟ್ಟಿಗಿಟ್ಟ ಹಡದೀ ನಿನ್ನ ಚಟ್ಟಾಎತ್ತೀನ (ಕನ್ನಜಾ. ೬೦). ಚರಟಾನೇ ಬೆಳಗು, ಚಟ್ಟಾನ ಬೆಳಗು=ಚಟ್ಟಾಎತ್ತು: ಸುಳ್ಳು ಬದ್ದೀ ಅಂದ್ರ ನಿನ್ನ ಚರಟಾನೇ ಬೆಳಗೇನು (ತಿಹುಗು. ೬೬) : ನಿನ್ನ ಚರಟಾನೇ ಬೆಳಗೇನು (ಮಿಂಚಹು. ೦೦೭) : ಇವನು ಚಟ್ಟಾನ ಬೆಳಗತಾನ (ದೀಪಹ. II, ೫೭).

[ ದೇ.೩ ತುಳು. ಚಟ್; ತೆಲು. ಚಟ್ಟ ]

**ಚರಣ** (ನಾ). ೧. ನಡೆ; ಸಂಚಾರ. ೨. ನಡೆವಳಿಕೆ; ಆಚರಣೆ; ವ್ಯವಹಾರ. 'ತಪಶ್ಚರಣ' ಪರಾ. ೩. ಅಡಿ; ಪಾದ: "ಅಂಘ್ರಿಃ, ಚರಣಃ, ಪಾದಃ-ಈ ೩ ಕಾಲ್" (ಚರಾಯು. ೮೪-೩೩೬) : ಚ[ಪಾಠಾಂ. ಕ]ರಣದ ಚಾರಿಯ ಚಲ್ಲಿಯ ಪರಿಕ್ರಮಕ್ರಮದ ಭಂಗಿಗಳ್ ನೆಗಟ್ಟೆಡೆಯೊಳ್ (ಅಂಪು. ೯-೩೯) ; ಚರಣದ ಕಾಂಚಿಯುಂ ಗುರುನಿತಂಬದ ಪರ್ವುಗೆಯಿಂದೆ ಮಧ್ಯಮಂ . . . ವಿರಹವಿಹ್ವಲೆಯಾಗಿ ಲತಾಂಗಿ ತಾಳ್ದುವಳ್ (ಕಾದಂಪ. ೩೩೩) : ಕೂಡಲಸಂಗಮದೇವಾ ನಿಮ್ಮ ಚರಣಕಮಲದಲಾನು ತುಂಬಿ (ಬಸವ. ೯೯೨) : ಎಂತುಮವರ ಚರಣಂ ಶರಣಂ (ಜಗವಿ. ೦-೩೪); ತಿರುನೀಲಕಂಠರ ಚರಣಮಂ ಪಿಡಿದು (ತಿರುರ. ದೇ. ೩-೦೬) ; ಹಿಂದೆ ಚರಣದಲೊದೆದನೊಬ್ಬನ (ಕೌಶಿಕಾ. ೨೬-೩೦). ೪. [ಛಂದ] ಪದ್ಯದ ಪಾದ,–ಪಂಕ್ತಿ: ಕವಿತೆಯಲ್ಲಿ ಎರಡು, ಮೂರು . . . ಭಾಗಗಳನ್ನು ಮಾಡಿ, ಒಂದೊಂದಕ್ಕೆ ಅಡಿ, ಚರಣ, ಪಾದ, ಪದ ಮುಂತಾದ ಹೆಸರುಗಳನ್ನಿಟ್ಟಿದ್ದಾರೆ (ಛಂದಸ್ಸಾ. ೦೪). ೫. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : "ಕ್ರಮ ಚರಣಂ ಪದಯುಗಳಂ ಸಮ ಉಭಯಂ ಬಾಹು ಕಿವಿಗಳೆರಡಜ ನಾಮಂ" (ವ್ಯವಹಾ. ೯-೨). ೬. [ಜೈನ] ನಾಲ್ಕು ಅನುಯೋಗಗಳಲ್ಲಿ ಮೂರನೆಯದು ; ಮುನಿಗಳ ಹಾಗು ಶ್ರಾವಕರ ಆಚರಣೆಯನ್ನು ವಿವರಿಸುವ ಶಾಸ್ತ್ರಭಾಗ: ಪ್ರಥಮ, ಕರಣ, ಚರಣ, ದ್ರವ್ಯ ಎಂಬ ನಾಲ್ಕು ಅನುಯೋಗಗಳನ್ನು ಜೈನರ ಚತುರ್ವೇದಗಳೆಂದು ಕರೆಯಬಹುದು (ಭಾರದ. ೦೬೯). 'ಚರಣಾನುಯೋಗ' ಪರಾ. [ ಸಂ. ]

**ಚರಣಗ್ರಂಥ** (ನಾ). [ಜೈನ] ಚರಣಾನುಯೋಗವನ್ನು ವಿವರಿಸುವ ಗ್ರಂಥ : ಆಚಾರವಾರಾಧನೆ ಮೊದಲಾಗೊಡೆಯ ಚರ[ಪಾಠಾಂ. ಶ್ರವ]ಣ ಗ್ರಂಥಂಗಳುಮಂ . . . ಕಲ್ತೊಡಲ್ಲದೆ (ವಡ್ಡಾ.ರಾ. ೬-೭).

[ ಚರಣ + ಗ್ರಂಥ ]

**ಚರಣಚೌಪಟ** (ನಾ). ಶ್ರೇಷ್ಠ ಕಾಲಾಳು ; ಪರಾಕ್ರಮಿಯಾದ ಪದಾತಿ: ನೆರಹಿದನು ಹದಿನಾಱುಸಾವಿರ ಕರಿಘಟೆಯನು . . . ಚರಣಚೌಪಟರೈದು ಲಕ್ಷವ (ಕುವ್ಯಾ.ಆ. ೨೨-೩). [ ಚರಣ + ಚೌಪಟ (< ಚೌಪಟ್ಟ) ]

**ಚರಣತಲ, ಚರಣತಳ** (ನಾ). ೧. ಕಾಲಿನ ತಳಭಾಗ ; ಅಂಗಾಲು : "ಚರಣತಲ [ಪಾಠಾಂ. ಳ] ಮೆಂದೊಡಂಗಾಲೆನಿಕುಂ" (ಮಂಗರಾ ೨೮-೧೮). **ಚರಣತಳ:** ೧. ಚರಣತಳಪ್ರಘಾತದೆ ಪದಾತಿಗಳಂ ನಖರಪ್ರಹಾರದಿಂ ತುರಗದಟಂಗಳಂ . . . ನುಗ್ಗುಮಾಡಿ (ಚಂದ್ರಪ್ರ. ೧೧-೯೬). ೨. ಕಾಲು; ಪಾದ : ಚರಣತಳಕ್ಕೆ ಬೀೞ್ವ ಮಣಿಕಾಂಚಿಯನೆತ್ತದೆ ಚುಚುರ್ಗತಿರ್ಪ ನೂಪುರಮನೆ ಸೈತು ಸಾರ್ಚದೆ . . . ಬಂದು ಸಂಭ್ರಮದಿನೀಕ್ಷಿಸು ತಿರ್ದಳೀಶಕಂತುಮಂ (ಕುಸುಮಾ. ೮-೧೧) ; ನಂಬಿಯಣ್ಣಂ ಪೂರ್ವಮಂ ನೆನೆದು ಪರಿತಂದು ಚರಣತಳದೊಳು ಬೀಳುತುಂ (ನಂಬಿರ. ೭-೧೨೮).

[ ಚರಣ + ತಲ$_2$ ]

**ಚರಣತಳ** 'ಚರಣತಲ' ನೋ.

**ಚರಣದೊಡರು** (ನಾ). ಕಾಲಿನ ಆಭರಣ ; ಅಂದಿಗೆ : ಬೆರಳತ್ತು ನಡ ಗಲಿಸೆ ಚರಣದೊಡರುಲಿಯ ಘಕ್ಕಾರದಿಂ ನಡೆವುತ್ತ (ನವಮೋ. ೧೩-೩೩).

[ಚರಣ + ತೊಡರು$_2$(<ತೊಡರ್$_2$) ]

**ಚರಣನ್ಯಾಸ** (ನಾ).=ಚರಣವಿನ್ಯಾಸ ೧ : ಚರಣನ್ಯಾಸೋಚಿತಮೇದುರ ಕಾಂಚನಕಮಳಸಪ್ತಕಂ ಕರಮೆಸೆಗುಂ (ಚಂದ್ರಪ್ರ. ೧೬-೩೬) ; ಚರಣನ್ಯಾಸ ದೋಳಾಂಪರಂಬುಜಮನೇಟಂ ದೇವದೇವಂಗೆ ದೇವರಿಳಾಮಂಡಳಮಂ ಮಹಾನಿಲಕುಮಾರರ್ . . . ಪರಿಸ್ಫುರಿತಾದರ್ಶಮಿದೆಂಬಿನಂ ಬೆಳಗು ವರ್ತಂತಮ್ಮ ಸದ್ಭಕ್ತಿಯಿಂ (ಅನಂತಪು. ೧೪-೩೩). [ ಚರಣ + ನ್ಯಾಸ ]

**ಚರಣಪೆಂಡೆಯ** (ನಾ). ಕಾಲಿಗೆ ತೊಡುವ ಒಂದು ಬಗೆಯ ಆಭರಣ: ತಮ್ಮ ನಾಟ್ಯಕ್ಕೆ . . . ನವರತ್ನದ ಬಿರುದಿನ ದಿವ್ಯ ಚರಣಪೆಂಡೆಯವನಿಕ್ಕಿ ದರು (ಕಂಸವಿ. ೨೪-೨೬) : ಆಗಿನ ಅವರ ಆಭರಣಗಳೆಂದರೆ . . . ಕಿರು ಪಿಲ್ಲಿ, ಚರಣಪೆಂಡೆಯ, ಪಾಯುವಟ್ಟ (ಕಪಾಟಿ. ೧೭೨).

[ ಚರಣ + ಪೆಂಡೆಯ(<ಪೆಂಡ) ]

**ಚರಣಭಜಕ** (ನಾ). ಪಾದಸೇವಕ ; ಭಕ್ತ : ಚರಣಭಜಕಕುಟುಂಬನೆಂಬೀ ಬಿರುದ ಪಾಲಿಸಿ . . . ಕೊಡುವುದೆಮಗೆ ಮಹಾಪ್ರಸಾದವನು (ಕುವ್ಯಾ.ಸ. ೧೧-೩೮). [ ಚರಣ + ಭಜಕ ]

**ಚರಣವಲ್ಮೀಕ** (ನಾ). ಹುತ್ತಗಾಲು ರೋಗ : "ಚರಣವ[ಪಾಠಾಂ. ವಾ] ಲ್ಮೀಕಮೆನೆ ಹುತ್ತುಗಾಲಕ್ಕು" (ಮಂಗರಾ. ೧೦೩-೨). [ಚರಣ+ವಲ್ಮೀಕ]

**ಚರಣವಿಡಿ** (ಕ್ರಿ). ಪಾದಗಳನ್ನು ಹಿಡಿ : ಕರವ ಪಿಡಿಯೆ ಸಾರ್ಸಾರೆಂದು ಜಱೆದೊಡೆ ಚರಣವಿಡಿದು ದುಃಖಿಸುತ (ಕಂಸವಿ. ೬-೧೬೭).

[ ಚರಣ + ಪಿಡಿ$_1$ ]

**ಚರಣವಿನ್ಯಾಸ** (ನಾ). ೧. ಪಾದಗಳನ್ನು ಇಡುವಿಕೆ ; ಹೆಜ್ಜೆಯಿಡುವಿಕೆ. ೨. [ಛಂದ] ಪದ್ಯದ ಪಾದಗಳ ರಚನೆ. ೧, ೨ : ಚರಣವಿನ್ಯಾಸದೊಳ ಪ್ರಗಲ್ಭನು ತಾನು . . . ಕುಕವಿಯು ಬಾಲಕನಿವನು (ಇಂಪಾಸ. ೧೭೩-೩೩).

[ ಚರಣ + ವಿನ್ಯಾಸ ]

**ಚರಣಸಂಘಟ್ಟ** (ನಾ). ಪಾದಗಳ ಹೊಡೆತ,–ತುಳಿತ : ತನ್ನ ನಿಷ್ಠುರ ಚರಣಸಂಘಟ್ಟದೊಳ್ ಪಡಲ್ವಟ್ಟ ವೀರಭಟರ ಮುಕುಟಂಗಳೊಳ್ ತಲೆಗರೆ ದಿರ್ದನೆ ಗೆತ್ತು ಸೋದಿಸಿ ನೋಡಿಯುಂ . . . ಕಾಣದೆ(ಗದಾಯು. ೬-೨೮ ವ).

[ ಚರಣ + ಸಂಘಟ್ಟ ]

**ಚರಣಹತಿ** (ನಾ). ೧.= ಚರಣಸಂಘಟ್ಟ : ಚಾತುರಂಗದ ಚರಣಹತಿ ನಿರ್ಧೂತ ಧೂಳೀಮಯಾವಖಿಳದಿಗುಜಾತವೆನೆ ಥಟ್ಟಣೆಯಲೇಱಿತು ಪಾಂಡುಸುತಸೇನೆ (ಕುವ್ಯಾ.ದ್ರೋ. ೧೮-೨೩). ೨. ಹೆಜ್ಜೆಯ ಗುರುತು : ಇದುವೆ ಮೊಲ ಪೋದ ಪೆಜ್ಜೆಯು ಹರಿಣ ಚರಣಹತಿ . . . ಬಗ್ಗದಡಿ ಹೆಗ್ಗುರುತು (ನವಮೋ. ೧೬-೧೯). [ ಚರಣ + ಹತಿ ]

**ಚರಣಹೇತಿ**(ನಾ). ಕಾಲುಗಳನ್ನೇ ಆಯುಧವನ್ನಾಗಿ ಉಳ್ಳುದು; ಹುಂಜ; ಕುಕ್ಕುಟ : "ಕೃಕವಾಕು ತಾಮ್ರಚೂಡಾಭಿಖ್ಯಂ ತಾಂ ಚರಣಹೇತಿ ಕುಕ್ಕುಟಂ" (ವಸ್ತುಕೋ. ೪೩-೧೮). [ ಚರಣ + ಹೇತಿ ]

**ಚರಣಾನುಯೋಗ** (ನಾ). [ಜೈನ] ಸದಾಚಾರವನ್ನು ನಿರೂಪಿಸುವ ಶಾಸ್ತ್ರಭಾಗ : ಚರಣಾನುಯೋಗಮೆಂಬುದು ಕಷಾಯೇಂದ್ರಿಯೋಪಸರ್ಗ ಪರೀಷಹ ವಿಜಯಿಗಳಪ್ಪ ಚಾರಿತ್ರಮಾನಿಗಳ ಸದಾಚಾರ ಪ್ರಕಾಶನಂ ಗೆಯ್ವುದು (ಚಾವುಂಪು. ೩೯೪-೫); ಪ್ರಥಮ ಕರಣ ಚರಣಾನುಯೋಗಂಗಳಂ ನಿರವಶೇಷಂ ಕಲ್ತೊಡಲ್ಲದೆ ದೋಯಿಸಮಂ ಕಲಲ್ಪಾರದು (ಸುಕುಮಾ. ೩-೩೩ ವ). [ ಚರಣ + ಅನುಯೋಗ ]

**ಚರಣಾಭರಣ** (ನಾ). ಕಾಲಿಗೆ ತೊಡುವ ಆಭರಣ: ಸಾಲದೇ ನಿಮಗಿನ್ನು ಕೌರವರೋಲಗದ ಫಲವಾಯ್ತಲಾ ವನಮಾಲೆ ಕೊರಳಿಂಗಲ್ಲ ಚರಣಾ ಭರಣವಾಯಿತಲೆ (ಕುವ್ಯಾ.ಸ. ೧೬-೬೦). [ ಚರಣ + ಆಭರಣ ]

**ಚರಣಾಯುಧ** (ನಾ).=ಚರಣಹೇತಿ : "ಕೃಕವಾಕುಃ, ತಾಮ್ರಚೂಡಃ, ಕುಕ್ಕುಟಃ, ಚರಣಾಯುಧಃ–ಈ ೪ ಕೋಟಿ" (ಹಲಾಯು. ४೧-೯೪) ; ಕರಮೆಸೆಯೆ ಸಮೆದು ಬಂದುದು ಚರಣಾಯುಧಮದಟ ಚಿತ್ರಪರಿಶೋಭೆಗೆ ಬೆಂತರನೊಂದಾಶ್ರೈಸಿರ್ದುದು (ಯಶೋಚ. ೩-೨೪) : ಬಲಿದ ಚರಣಾ ಯುಧದವೊಲು ಪರರಳವನೀಕ್ಷಿಸಿ ಕಪಿಯವೊಲು ವೈವಳಿಯ ಹತ್ತಿದ ರಂದು ಕಡಿತಲೆಗಾಱರುಭಯದಲಿ (ಕುವ್ಯಾ.ಭೀ. ४-೩೩) : ಪಾರಾವತಂ ಪರಪುಟ್ಟಂ ಚರಣಾಯುಧಂ ಶಕುನಿ . . . ರತ್ನಖಗಮಿರ್ಕುಂ ತದ್ವನಾ ಗೌಘದೊಳ್ (ರಾಜಶೇ. ೩-೩೯). [ಚರಣ + ಆಯುಧ]

**ಚರಣೆ** (ನಾ). ಕುದುರೆ, ದನ ಮುಂತಾದುವುಗಳಿಗೆ ಮೇವನ್ನು ಹಾಕಲು ಮಾಡಿದ ಮರದ ಚೌಕಟ್ಟು ; ಗೋದಲೆ ; ಚಂಡಿಗೆ : ಕುದುರೆಯ ಮಂದುರಮಂ ಮಾರಿ ಪುಗುವಂತೆ ಪೊಕ್ಕು ಚರಣೆಯ ಪುಲ್ಲೊಳ್ ಪೊರಳ ಲೊಡಂ (ಪಂಚತಂ. ೧೭೯-೧೧); ತುರಗದುರದುದ್ದ ಮಾಟ್ಟುದು ಚರಣೆಯ ನಡಚೋಳಗು ಹಸ್ತವಿಸ್ತಾರಂ ಮತ್ತೆರಡುಂ ಕೆಲದೊಳ್ ಮುಂಡಿಗೆ (ಅಶ್ವಶಾ. ೭-೮) ; ಕೊಂದೆಳದು ಹಾಯ್ಕುದಶ್ವ ರಣೆಯೊಳಗೆ (ಪಾಸೋಪು. ४-೬೩) : ಮರದ ಪೆಟ್ಟಿಗೆ, ಭತ್ತದ ತೊಂಬೆ, ಹುಲ್ಲಿನ ಚರಣೆ ಒಂದನ್ನೂ ಬಿಡಬೇಡ (ನಿಶಲಾ. ೨೬೮).

[ ತುಳು. ಚರಣೆ = ಹುಲ್ಲುಗಾವಲು, ಗೋಮಾಳ./ಹಿಂ. ಚರನೀ ]

**ಚರಣೋಪಾಂತ** (ನಾ). ಕಾಲಿನ ಬಳಿ,–ಹತ್ತಿರ; ಪಾದದ ಸಮೀಪ: ಅನಂತವೀರ್ಯಕೇವಲಿಗಳ ಚರಣೋಪಾಂತದೊಳ್ ಕೈಕೊಂಡ ಪರಾಂಗನಾ ವಿರತಿವ್ರತದ ಭಂಗಮಂ ಬಗೆಯದೆ (ಪಂರಾಮಾ. ९-೧೦೩ ವ).

[ ಚರಣ + ಉಪಾಂತ ]

**ಚರಪಡಿ** (ನಾ). ಒಂದಂ ಸ್ಥಳದ ಹೆಸರು (?) : ಅನ್ತ ಬನ್ದು ಕೊಟ್ಟರೆ ಪಳ್ಳದ ಅಲಕಿಱುಕೆಯ ಕಗ್ಗಲ್ಲೊಳ್ಚಿಯ ಪೂಣಾಶ ಪಡಿಯ ಘೋರಪಡಿಯ ಬಳಿಪೂಣಾಶೆಯ ಚರಪಡಿಯ ತುಟ್ಟಿಲೊಟ್ಟಿಯ ಇಶನ್ಯದಿಶಿ ಒಳಗೆಱೆಯ ಬರಡಗೆಱೆ (ಎಕ. XVI, ತಿಪಟೂ. ೧೪೧-೭೨ : ಸು. ೯೦೦). [ ? ]

**ಚರಪಾಠ** (ನಾ). "ನಿರ್ದಿಷ್ಟ ಸ್ವರೂಪವಿಲ್ಲದ, ಅಸಂಗತವಾದ, ಅವ್ಯವಸ್ಥಿತವಾದ, ಸ್ಥಿರಸ್ವರೂಪವಿಲ್ಲದ ಪಾಠಕ್ಕೆ ಅನ್ವಯ ವಾಗುವಂಥದು. ಅಂಥ ಪಾಠವನ್ನು ಚರಪಾಠ(fluid text) ಎಂದೂ ಕರೆಯುತ್ತಾರೆ" (ಭಾರಪ. ೧೧೬). [ ಚರ + ಪಾಠ ]

**ಚರಪು** 'ಸಜಪು' ನೋ.

**ಚರಬಂಡವಲ** (ನಾ). ೧. ದನಕರಂ ಮೊದಲಾದ ಚರ ಆಸ್ತಿ : (ಕ). ೨. ವ್ಯಾಪಾರದಲ್ಲಿ ತೊಡಗಿಸಿದ ಬಂಡವಾಳ: (ಮುಂಬಯಿ. ಕಿ. ೫-೧೦೦). 'ಚಲಬಂಡವಾಳ' ಪರಾ. [ ಚರ + ಬಂಡವಲ ]

**ಚರಬಿ** 'ಚರ್ಬಿ' ನೋ.

**ಚರಮ** (ಗು). ೧. ಕಡೆಯ ;ಕೊನೆಯ; ಅಂತಿಮವಾದ: ಚರಮಾವಸ್ಥಿತ ವೀತರಾಗಹೃದಯಚ್ಛದ್ಮಸ್ಥ . . . ತವಿಸಿದುಂ ಪಂಚಾಂತರಾಯಂಗಳಂ (ಅನಂಪು. ೯-೦೦೯) : ಆಂತರಿಕವಾದ ಕವಿಯ 'ಧ್ಯಾನಾತ್ಮಕ ಅಥವಾ ಭಾವಾತ್ಮಕ ಜೀವನವು ಸ್ವಾಭಿವ್ಯಕ್ತಿಯನ್ನೇ ತನ್ನ ಚರಮ ಗುರಿಯನ್ನಾಗಿ ಮಾಡಿಕೊಂಡು ಅದಕ್ಕಾಗಿ ಮಾತ್ರ ಕಾವ್ಯರೂಪವನ್ನು ತಳೆಯುತ್ತದ (ಭಾವಗೀ. ೪). ೨. ತೀರ ಕೆಳವಂಟ್ಟದ; ಅತ್ಯಂತ ಕೀಳಾದ. ೩. ಪಶ್ಚಿಮ ದಿಕ್ಕಿನ; ಪಾಶ್ಚಾತ್ಯವಾದ: ಲೋಕಯಾತ್ರೆಗೈದು ಮನೆಯಿಂ ಪುಗುತರ್ಪಿನಿಯಂಗೆ ಚರಮದಿಕ್ಕಾಂತೆ ರನ್ನವಟ್ಟಲೊಳ್ ಪಿಂಗದತ್ತಿದಾರತಿಯ ಕಂಬೆಳಗೆನೆ ಸಂಧ್ಯಾರಾಗಮೆತ್ತಂ ಪರಿಯೆ (ರಾಮಾಶ್ವ. ೨೨-೬). (ನಾ). ೪. ಕೊನೆಯಲ್ಲಿರುವುದು ; ಅಂತ್ಯದಲ್ಲಿರುವುದು : ಪರಪದ ಪೂರ್ವಂ ದ್ವಿತ್ವಾಕ್ಷರಮಾಗಿರೆ ಪೂರ್ವಪದದ ಚರಮಂ ಹ್ರಸ್ವಾಕ್ಷರಮಾಗೆ ಸಂಧಿದೋಷಂ (ಶಮದ. ೫೯). ೫. ಅಂತ್ಯ ; ಕೊನೆ: ಚರಮದೊಳಯ್ದುಂ ಜ್ಞಾನಾವರಣಮುಮಂ . . . ಪರಿಹರಿಸಿದನಯ್ದುಮಂತರಾಯಗಳುಮಂ (ಮಲ್ಲಿಪು. ೧೯-೯೧). ೬. ತರುವಾಯಂ ; ಬಳಿಕ : "ಪಶ್ಚಾತ್. ಚರಮಂ – ಈ ೨ ಬಳಿಕಂ" (ಹಲಾಯು. ೧೧೬-೨೨); "ಚರಮಮೆನೆ ಪಶ್ಚಾದೆನಲು ಬಳಿಕವಕ್ಕು" (ಮಂಗರಾ. ೦೨೯-೧೨): ಅಘಾತಿಗಳ ಚರಮದೊಳು ವಿಘ್ನಂ ಪರಿಸಲ್ಪಟ್ಟುದು (ಗೊಮ್ಮಸಾ. ೨-೪). [ ಸಂ. ]

**ಚರಮಕಲ್ಯಾಣ** (ನಾ). [ಜೈನ] ಜಿನನ ಪಂಚಕಲ್ಯಾಣಗಳಲ್ಲಿ ಕೊನೆಯ ಕಲ್ಯಾಣ ; ಪರಿನಿರ್ವಾಣಕಲ್ಯಾಣ : ಪರಮನ ಚರಮಕಲ್ಯಾಣಂ ಪರಿಪೂರ್ಣವಾಗೆ (ಶಾಂತಿಪು. ೧೨-೩೭ ವ). [ ಚರಮ + ಕಲ್ಯಾಣ ]

**ಚರಮಗೀತ** (ನಾ). ಸತ್ತುಹೋದವರಿಗಾಗಿ ದುಃಖಿಸಿ ಅವರ ಗುಣಗಾನ ಮಾಡುವ ಹಾಡು : ತಳಿರಿಗೊಂದು ಚರಮಗೀತ ಹಾಡಲೆಂದು ಬಯಸಿ, ಇಂತು ನುಡಿದೆ ನಾನು (ಮಾಂದಳಿ. ೩೭-೦೩). [ ಚರಮ + ಗೀತ ]

**ಚರಮಗೀತೆ** (ನಾ). = ಚರಮಗೀತ : "ಅಳುಹಾಡು . . . ವಿಲಾಪಗೀತೆ; ಚರಮಗೀತೆ" (Elegy. ಇಂಕಲಿ). [ ಚರಮ + ಗೀತೆ ]

**ಚರಮತನು** (ನಾ). ೧. ಕೊನೆಯ ದೇಹ; ಕೊನೆಯ ಜನ್ಮ. ೨. [ಜೈನ] ಕೊನೆಯ ಜನ್ಮದವನು; ಮೋಕ್ಷಗಾಮಿ : ಅಮೂರ್ತರ್ ಚರಮತನು ಸಮಾಕಾರರ್ (ಆದಿಪು. ೧-೨) : ಪರಮಶ್ರೀವಲ್ಲಭಂಗೀ ಚರಮತನುಗಿದೇ ಬಾಬ್ತಿ (ಶಂರಾಮಾ. ೬-೦೨೫). [ ಚರಮ + ತನು ]

**ಚರಮದೇಹ** (ನಾ).=ಚರಮತನು ೧ : ಚರಮದೇಹ ಕಶಾತ್ಮಜರಿಂದಮಾ ಮಹೋತ್ಸಲಮುಖಿಯಿಂದಮಾ ಸತಿ . . . ಪಡೆದಳ್ . . . ಮೈಮೆಯಂ (ಆದಿಪು. ೮-೪೫) ; ಚರಮದೇಹಮಂ ತಾಳ್ದಿ (ರಾಘುಂಪು. ೩೨-೦೫).
[ ಚರಮ + ದೇಹ ]

**ಚರಮದೇಹಧರ** (ನಾ). [ಜೈನ] ಕೊನೆಯ ಸಲ ದೇಹವನ್ನು ಧರಿಸಿದವನಂ ; ಇನ್ನು ಮುಂದೆ ಜನ್ಮವಿಲ್ಲದವನು ; ಮೋಕ್ಷಗಾಮಿ : ನೀಂ ಚರಮದೇಹಧರನ್ನೆ (ಅಜಿಪು. ೬-೬೨). [ ಸಂ. ]

**ಚರಮದೇಹಧಾರಿ** (ನಾ).=ಚರಮದೇಹಧರ: ಇವರಿರ್ವರರಸುಗಳಪ್ಪೊಡೆ ಚರಮದೇಹಧಾರಿಗಳ್ (ಆದಿಪು. ೧೪-೧೦೦ ವ). [ಸಂ. ಚರಮದೇಹಧಾರಿನ್]

**ಚರಮದೈಹಿಕ** (ಗು). ೧. ಚರಮದೇಹಕ್ಕೆ ಸಂಬಂಧಪಟ್ಟ. (ನಾ). ೨.= ಚರಮದೇಹಧರ : ನೀ ಚರಮದೈಹಿಕನಪ ಧರೆಯೊಳೀ ನಿನ್ನಂತೆ ಪುಣ್ಯಾತ್ಮರುಗಳಾರ್ಪೆ (ಗಣಿಶಾ. ೦೭-೪೭). [ ಸಂ. ]

**ಚರಮಧ್ಯಾನ** (ನಾ). [ಜೈನ] ಆರ್ತ, ರೌದ್ರ, ಧರ್ಮ ಮತ್ತು ಶುಕ್ಲ ಎಂಬ ನಾಲ್ಕು ಧ್ಯಾನಗಳಲ್ಲಿ ಕೊನೆಯಂದು; ಮೋಕ್ಷಸಾಧನವಾದ ಧ್ಯಾನ : ಪರಮಜಿನಪತಿಯ ಚರಮಧ್ಯಾನದಂತೆಯುಂ . . . ಮುನ್ನೀರೆ ಮೇರೆದಪ್ಪದಂತಪ್ಪುದುಂ (ಮಲ್ಲಿಪು. ೧೨-೦೫೨). [ ಚರಮ + ಧ್ಯಾನ ]

**ಚರಮವಾಕ್ಯ** (ನಾ). ೧. ಕೊನೆಯ ಮಾತು : ಸಾಯುವಾಗ ಆತನಾಡಿದ ಚರಮವಾಕ್ಯ ಎಲ್ಲರ ಕಣ್ಣಲ್ಲೂ ನೀರು ತರಿಸಿತು (ರೂಢಿ). ೨. ಸತ್ತವರ ಸ್ಮಾರಕವಾಗಿ ಅವರ ಸಮಾಧಿಯ ಮೇಲೆ ಬರೆದ ವಾಕ್ಯ : ಕೆಲವು ಹೊಸ ಗೋರಿಗಳು ಕಂಡುಬಂದವು. ಅವುಗಳ ಮೇಲೆ ಚರಮವಾಕ್ಯ ಗಳಿದ್ದುವು (ನಿಶಿಉ. ೦೯೨). [ ಚರಮ + ವಾಕ್ಯ ]

**ಚರಮಶರೀರ** (ನಾ). ೧.=ಚರಮತನು ೧ : ಚರಮಶರೀರಮಂ ಪಡುವ ಕೆಯ್ದುಗೆಳಲ್ಲ (ಮಲ್ಲಿಪು. ೦೪-೪೬). ೨.=ಚರಮತನು ೨: ಚರಮಶರೀರಂ ಸಗರಂ ಚರಮಶರೀರರ್ ನಿಜಾಗ್ರಜಾತರ್ ನೀನುಂ ಚರಮಶರೀರಂ (ಅಜಿಪು. ೦೦-೩೫). [ ಚರಮ + ಶರೀರ ]

**ಚರಮಶ್ಲೋಕ** (ನಾ). = ಚರಮಗೀತ : ನಿನ್ನ ಸಾಹಸಕಾರ್ಯಗಳನ್ನು ಪ್ರಶಂಸಿಸುವ ಚರಮಶ್ಲೋಕಗಳಲ್ಲಿ ಪ್ರತಾಪಕುಮಾರಿಯ ಹೆಸರೂ ಸೇರಿಕೊಳ್ಳಲಿ (ಆರ್ಯಕ. ೯೮). [ ಚರಮ + ಶ್ಲೋಕ ]

**ಚರಮಸಮಯ** (ನಾ). ೧. ಆಯುಸ್ಸಿನ ಕಡೆಗಾಲ ; ಅಂತ್ಯಸಮಯ ; ಮರಣಪೂರ್ವಕಾಲ : ಸ್ವಕೀಯ ಚರಮಸಮಯದೊಳ್ . . . ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ (ಆದಿಪು. ೦೬-೯೯ ವ): ಚರಮಸಮಯದೊಳೆ ಬೋಧಾವರಣಮನಯ್ದುಂತರಾಯಂ . . . ತೂಳ್ದಿ ತಾಳ್ದಿದಂ ಗುಣಗಣಮಂ (ವರ್ಧಪು. ೦೫-೬೮). ೨. ಕೊನೆಯ ಅವಕಾಶ : ಸಿಂಹಾಸನಾರೋಹಣಕ್ಕಿದುವೆ ಚರಮಸಮಯಮೆಂದಱಿವುವಂತೆ (ಶಂರಾಮಾ. ೦೪-೦೨೫ ವ). [ ಚರಮ + ಸಮಯ ]

**ಚರಮಸ್ವರ** (ನಾ). ಶಬ್ದದ ಕೊನೆಯ ಸ್ವರ : ಚರಮಸ್ವರಕ್ಕೆ ಚರಮಾಕ್ಷರಕಕ್ಕಂ ಲೋಪಂ (ಶಮದ. ೨೦೯). [ ಚರಮ + ಸ್ವರ ]

**ಚರಮಾಂಗ** (ನಾ). ೧.=ಚರಮತನು ೧ : ಕೊರಗದೆ ಕರಗದೆ ಪರಮನ ಚರಮಾಂಗಂ ದೀಪ್ರದೀಪಮೆನಿತೊದವಿದೊಡಂ (ಪುಷ್ಪಪು. ೦೯-೨೮). ೨.=ಚರಮದೇಹಧರ: ಪುರುಪರಮೇಶ್ವರಪುತ್ರಂ ಚರಮಾಂಗಂ ಚಕ್ರವರ್ತಿಯೆಂದೊಡೆ ಪೇೞಲ್ ದೊರೆ ಪೆಱರಾರ್ ಭರತನೊಳ್ (ಆದಿಪು. ೧೨-೦೦೯) : ಈ ದಶರಥಾಗ್ರತನೂಭವನೇಕವಾಕ್ಯನಾಶಾಕರಿಕರ್ಣಟಾಮರಯಶು ಚರಮಾಂಗನನಂತವೀರ್ಯಂ (ಶಂರಾಮಾ. ೫-೬೨).
[ ಚರಮ + ಅಂಗ ]

**ಚರಮಾಕ್ಷರ** (ನಾ). ಶಬ್ದದ ಕೊನೆಯ ಅಕ್ಷರ; ಅಂತ್ಯಾಕ್ಷರ : ಚರಮಸ್ವರಕ್ಕೆ ಚರಮಾಕ್ಷರಕಕ್ಕಂ ಲೋಪಂ (ಶಮದ. ೨೦೯). [ ಚರಮ + ಅಕ್ಷರ ]

**ಚರಮಾದರ್ಶ** (ನಾ). ಕೊನೆಯ ಧ್ಯೇಯ ; ಪರಮಾದರ್ಶ : ಅದು ಚರಮಾದರ್ಶವಲ್ಲದಿದ್ದರೂ ನಮ್ಮ ಪೂರ್ವಿಕರ ಆದರ್ಶ (ಕಿಪ್ರಕ್ಕ. ೦೨೭).
[ ಚರಮ + ಆದರ್ಶ ]

**ಚರಮೂರ್ತಿ** (ನಾ).=ಚರಂತ ೨: ಚರಮೂರ್ತಿಯಾನೆ ನಿನ್ನಂ ಕರೆಯುತ್ತಿರೆ ಕೇಳದಂತೆ ತಳರ್ದಪೆ (ವೃಷವಿ. ೨೭-೨೩) ; ವಿವಾಹ ಮಾಡಿಕೊಳ್ಳದೆ ಚರಮೂರ್ತಿಯಾಗಿ ಅಲೆಯುತ್ತಿದ್ದ (ಗಿರಿನ. ೩೫): ಶ್ರೀಶರೀಫರು ಹುಟ್ಟು ಕಡಿವೆ ಚರಮೂರ್ತಿಗಳಾಗಿದ್ದರು (ಶರೀಫ. ೬೯ ಕವಿಕಾವ್ಯಪರಿಚಯ).
[ ಚರ + ಮೂರ್ತಿ ]

**ಚರಯಿಸು** 'ಚರಿಸು' ನೋ.

**ಚರರೂಪು** (ನಾ). ಜಂಗಮನ ರೂಪು: ಹರನು ಚರರೂಪಿಂದೆ ಹರಿಯೆಂದು ನುಡಿವೇಳ್ಕರದ ಹುಟ್ಟಿಂದ ತಿವಿದೀಶನೊಲಿಸಿದ ಗುರುವೆ ಸತ್ಯಕ್ಕ ಶರಣಾಗು (ಶರ್ನಾಕ. ೦೬೨). [ ಚರ + ರೂಪು ]

**ಚರಲಿಂಗ** (ನಾ). [ವೀಶೈ] ಜಂಗಮರೂಪವಾದ ಲಿಂಗ; ಜಂಗಮ: ಭಾವುರೇ ಚರಲಿಂಗಜೀವಕಳಾವ ಚರಲಿಂಗೈಕಜೀವನ (ಬಸಪು. ೩೬-೨೪): ಸರ್ವಕರಣಂಗಳಂ ಚರಲಿಂಗ ಮುಖವ ಮಾಡಿ ಆತ್ಮವಿದ್ಯಾಲಿಂಗದಲ್ಲಿ ಮನ ಸಂದು (ಶೂನಸ. ೨೮); ಶಿವನು ಚರಲಿಂಗವಾಗಿ ಬಂದು, ಚೂತಫಲವಂ ಬೇಡಲು, ಪವಾಡದಿಂದ ಚೂತಫಲವಂ ಮಾಡಿ ಇತ್ತು (ಧ್ರರಸೂ. ೯). [ಚರ + ಲಿಂಗ]

**ಚರಲೋಕ** (ನಾ). ಸ್ಥಿರವಲ್ಲದ ಲೋಕ; ಮರ್ತ್ಯಲೋಕ: ಚರಲೋಕ ಸ್ಥಿರವೆಂದು ವರರೆಲ್ಲ ನೆರನಂಬಿ, ತಿರುತಿರುಗಿ ತಿರೆಯೊಡನೆ ಕೆಡುತಿಹರಲಾ! (ಕಎಪು. ೨೬-೩). [ಚರ + ಲೋಕ]

**ಚರವಿಗೆ** 'ಚರಿಗೆ₁' ನೋ.

**ಚರಸಹ** (ನಾ). ಒಂದು ಬಗೆಯ ಕುದುರೆ; ಪಳಗಿಸಿದ ಕುದುರೆ (?): ಈ ಐದು ಕ್ರಿಯೆಗಳನು ತಿಳಿದು ತಿದ್ದಿದ ಕುದುರೆ ಚರಸಹನೆನಿಸಿಕೊಂಬುವುದು (ಅಶ್ವಶಾ. ೨೫-೧೦). [?]

**ಚರಸೇವೆ** (ನಾ). ಜಂಗಮಸೇವೆ: ಶ್ರದ್ಧೆ ಸನ್ಮಾರ್ಗ ಭಕ್ತಿ ಇಲ್ಲದಲ್ಲಿ ಗುರು ಭಕ್ತಿ ಶಿವಲಿಂಗಪೂಜೆ ಚರಸೇವೆ ತ್ರಿವಿಧವೂ ಇತ್ತರೆ ಉಳಿಯಿತ್ತು (ಮದೀಪ. ೨೬೪-೧೭); ಕೊಡೆಯದಿರಿ ಶಿವಪೂಜೆಯ ಅಡೆಯದು ಮರೆಯದಿರಿ ಚರ ಸೇವೆಯ (ಸರ್ವಜ್ಞ ೩೪-೦೬೯). [ಚರ + ಸೇವೆ₁]

**ಚರಸೋಪಾನ**(ನಾ). "ಪ್ರಯಾಣಿಕರನ್ನು ಮೇಲಕ್ಕೆ ಹತ್ತಿಸುವುದಕ್ಕಾಗಲಿ ಕೆಳಕ್ಕಿಳಿಸುವುದಕ್ಕಾಗಲಿ ಉಪಯೋಗಿಸುವ ಚರಸೋಪಾನ; ತಿರುಗು ಮೆಟ್ಟಿಲು" (Escalator. ಇಂಕನಿ). [ಚರ + ಸೋಪಾನ]

**ಚರಸ್ವತ್ತು** (ನಾ). = ಚರಜಿಂದಗಿ: ನಮ್ಮ ಸ್ಥಿರ ಹಾಗು ಚರಸ್ವತ್ತುಗಳೆಲ್ಲ ಇವರದೇ ಅಲ್ಲವೆ? (ದಾನಚಿಂ. ೧೧೫). [ಚರ + ಸ್ವತ್ತು]

**ಚರಾಕು** (ನಾ). ಹುಲ್ಲುಗಾವಲು. [←ಹಿಂ. ಚರಾಗಾಹ್]

**ಚರಾಚರ** (ಗು). ೧. ಚಲಿಸುವ ಮತ್ತು ಚಲಿಸಲಾರದ; ಸ್ಥಾವರವಾದ ಹಾಗು ಜಂಗಮವಾದ: ಪರಮಾಗಮಮೂರ್ತಿ ಚರಾಚರ ಲೋಕಾ ಲೋಕ ಸಂಪ್ರದಾಯಿನಿ . . . ಸರಸ್ವತೀದೇವಿ ವರದೆಯಕ್ಕೆಮಗೆಂದುಂ (ಕಾವ್ಯಾವ. ೨); ಜಗದೊಳುಳ್ಳ ಚರಾಚರ ಪ್ರಾಣಿಗಳವೆಲ್ಲಿರ್ದಡೆಯೊಳಗುಂಗಳ ತಗಹು ಬಿಟ್ಟವು (ಬಸಪು. ೨೦-೫೩). (ನಾ). ೨. ಸ್ಥಾವರ ಹಾಗು ಜಂಗಮ ವಸ್ತುಗಳು: ಧರೆ ಗಗನವಡಸಿ ಕಾದುವಡೆಡೆಯಲಿಹ ಚರಾಚರ ವೆಲ್ಲಿ ಹೋಗಲಿ (ಹಡಳಾ. ೨-೨೩). ೩. ಸ್ಥಾವರ ಹಾಗು ಜಂಗಮ ವಸ್ತು ಗಳಿಂದ ಕೂಡಿದ ಜಗತ್ತು: ಈ ಚರಾಚರ ವಿಚಾರ ವ್ಯಾಪ್ತಿ ನಿಮ್ಮಡಿಗ ಗೋಚರವೆ ಶಿವಶಿವಾ (ಕೃಮಿಥಾ. ೨-೫೫); ಅವನೊಳಡಗುವುದಖಿಳ ಚರಾ ಚರವಾ ವಿಷ್ಣುಗಾನೆರಗುವೆನು (ಹರಿಲ. ೮-೦). [ಚರ + ಅಚರ]

**ಚರಾದಾಯ** (ನಾ). ೧. ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ ವಸ್ತು, ಪ್ರಾಣಿ ಮೊದಲಾದುವುಗಳಿಂದ ಬರುವ ಆದಾಯ: ಕೋಟ ತುಡಿಕೆ ಕಳಕೋಠಾರ ಸುಂಕ ಚರಾದಾಯ (ಮೈಆರಿ. ೧೯೪೬, ೦೮-೦೯; 1488); ಚರಾದಾಯ ಸ್ಥಿರಾದಾಯ (ಮೈಆರಿ. ೧೯೩೦, ೯೩-೩೦; 1604); ಗ್ರಾಮಾ ದಾಯ ಚರಾದಾಯ ಹೊರಾದಾಯ ಇವು ಮೊದಲಾದ ಆ ಸಕಲ ಸ್ವಾಮ್ಯ ವನೂ . . . ಅನುಭವಿಸಿಕೊಂಡು ಬಹರು (ಎಕ. XIV, ಮೈಸೂರು. ೧೦೩-೪೦೪; 1674). 'ಸ್ಥಿರಾದಾಯ' ಪರಾ. ೨. ವಾರಸುದಾರ ರಿಲ್ಲದ ದನಕರುಗಳ ಮಾರಾಟದಿಂದ ಸರ್ಕಾರಕ್ಕೆ ಬರುವ ಆದಾಯ: ಈ ವೃತ್ತಿಗೆ ಸಲ್ಲುವ . . . ಹುಲ್ಲುಹಣ ಚರಾದಾಯ ಹೊರಾದಾಯ ಶೀಗೇಮಡಿ ಪತಂಗ (ಹುಟ್ಟುಹ. ೩). ೩. ಸಂಬಳವಲ್ಲದೆ ಮೇಲೆ ಬರುವ ಲಂಚ, ರುಷುವತ್ತು ಮೊದಲಾದ ಆದಾಯ: (ಕ). [ಚರ + ಆದಾಯ]

**ಚರಾಯ** 'ಚರಾಯಿ' ನೋ.

**ಚರಾಯಿ**, ಚರಾಯ (ನಾ). ೧. ಹುಲ್ಲುಗಾವಲು; ಹುಲ್ಲಿನ ಬಯಲು: (ಕ). ೨. ಹುಲ್ಲುಗಾವಲಿನಲ್ಲಿ ದನಕರುಗಳನ್ನು ಮೇಯಿಸುವಿಕೆ: ಲಷ್ಕರಿನಲ್ಲು ಇದ್ದಂಥಾ ಭಾಗರಾದ ಎತ್ತುಗಳನ್ನು ಮಹಾರಾಜರವರು ತಮ್ಮ ವಶಕ್ಕೆ ತೆಗೆದುಕೊಂಡು, ಹುಲ್ಲು ನೀರು ಇದ್ದಲ್ಲಿಗೆ ಚರಾಯಿಗೆ ಕೂಡಿಸಿ ದರು (ರಾಜೇಂದ್ರ. ೦೪೬). ಚರಾಯ: ೧. ಚಿತ್ರದುರ್ಗದ ದನಗಳು ಬೂದಿ ಹಾಳ್ ಚರಾಯದಲ್ಲಿ ಮೆಯ್ಯುವವು (ಚಿತ್ರಕಾ. ೭೫). [←ಮರಾ. ಚರಾಯಿ; ಹಿಂ. ಚರಾಈ, ಚರಹೀ]

**ಚರಾರ್ಚನೆ** (ನಾ). ಚರಸೇವೆ; ಜಂಗಮಾರ್ಚನೆ: ಗಳಗಳನೆ ಬಳೆದು ಧನವುಂ ಗಳಿಸಿ ಚರಾರ್ಚನೆಯನೆಸಗಿ ಹರಕ್ಕವೆವಡೆದು (ರಾಜಶೇ. ೧೩-೧೧೯). [ಚರ + ಅರ್ಚನೆ]

**ಚರಾವು** (ನಾ). ಹುಲ್ಲುಗಾವಲು: ಚರಾವಿನ ನೆಲದ ವಿಸ್ತಾರರಕ್ಕೂ, ಉಳುಮೆಗೆ ಬಳಸಿಕೊಳ್ಳುವ ನೆಲದ ವಿಸ್ತಾರರಕ್ಕೂ, ಅಜಗಜಾಂತರ ವ್ಯತ್ಯಾಸವಿದೆ (ಐಶಿಸಂ. ೪೬). [←ಹಿಂ. ಚರಾಊ]

**ಚರಾಸ್ತಿ** (ನಾ). =ಚರಜಿಂದಗಿ: (Personal-estate. ಶಬ್ದನಿ. ೩೫). [ಚರ + ಆಸ್ತಿ]

**ಚರಿ₁** (ಕ್ರಿ). (?): ಮೊರೆಹೊಕ್ಕರ ಕಾವ ಮಾರಾಂತರ ಕೊಲುವ ಕಸ್ತೂರಿ ಕೋಳಾಹಲ ಚರಿದು ಚಲ್ವರ ಗಂಡ ಹರತಿಯುಮ್ಮಡಿರಂಗಪ್ಪನಾಯಕ ಅಯ್ಯನವರ (ಎಕ. XII, ಶಿರಾ. ೦೪-೫; 1612). [?]

**ಚರಿ₂** 'ಸಜ್ಜೆ₂' ನೋ.

**ಚರಿ₃** (ನಾ). ಸಖಿ; ಸೇವಕಿ: ರಾಕ್ಷಸಿ ನಾಸವೀಕ್ಷಿಸು ಹಾ ಚರಿಯರ ವ್ಯೈಸಳುತಲೇನೆನಲು (ಚಿರಾಮಾ. ೨೪೮-೦). [ಸಂ. ಚರೀ]

**ಚರಿ₄** (ನಾ). ಕೈಯಿಂದ ಹೊಸೆದು ಮಾಡಿದ ನಾರಿನ ಅಥವಾ ಸೆಣಬಿನ ಹುರಿ: ಬೇನೆಯ ಮನುಷ್ಯನು ಮರಣೋನ್ಮುಖನಾದನೆಂದರೆ ಅವನ ಬಾಯಲ್ಲಿ ಸಕ್ಕರೆ ಕೂಡಿಸಿದ ನೀರು ಹಾಕಿ, ಕಾಲುಗಳನ್ನು ಚಾಚಿ ಅಂಗುಷ್ಠ ಗಳನ್ನು ಚರಿಯಿಂದ ಬಿಗಿಯುವರು (ಕದಾಗಿ. ೨೨೯). [←ಮರಾ. ಚರೀ]

**ಚರಿಕಿ** 'ಚರಕಿ' ನೋ.

**ಚರಿಗೆ₁**, ಚರವಿಗೆ, ಚರುವಿಗೆ, ಚವರಿಗೆ, ಚೆರಿಗೆ, ಚೌರಿಗೆ₁ (ನಾ). ಚೆಂಬು, ತಂಬಿಗೆ, ಬಿಂದಿಗೆ, ತಪ್ಪಲೆ ಮೊದಲಾದ ಲೋಹದ ಪಾತ್ರೆ: ಧರ್ಮ ವತ್ತಿ ಚರಿಗೆಯಲ್ಲಿ ನೀರು ತಂದು ಕೊಟ್ಟರು (ಸಚಿದಾ. II, ೦೦೫೮); ಒಲೆಯ ಮೇಲೆ ತಕಪಕಿಸುತ್ತಿದ್ದ ಅನ್ನದ ಹಿತ್ತಾಳೆ ಚರಿಗೆಯನ್ನು ಒಲೆಯ ಪಕ್ಕದಲ್ಲಿ ಟ್ಟಿದ್ದ ತಾಮ್ರದ ಬಾಗುಮರಿಗೆಗೆ ಎತ್ತಿ ಇಳಿಸಿ . . . ಅನ್ನ ಬಸಿಯಲು ಅಣಿ ಯಾಗುತ್ತಿದ್ದಳು (ಮಳೆಮ. ೩೦೦); ಪಾಕಶಾಲೆಯ ರೂಪರೇಖೆ ತಕ್ಕಮಟ್ಟಿಗೆ ಪ್ರದರ್ಶಿತವಾಗಿತ್ತು. ಬಾಗುಮರಿಗೆ . . . ಮೊಸರುಗಡಿಗೆ, ಮಜ್ಜಿಗೆ ಚರಿಗೆ . . . ನೊಣಗಳು ಇತ್ಯಾದಿ (ಕಾಮರು. ೫೦). ಚರವಿಗೆ: ಚರವಿಗೆ ಯಲ್ಲಿ ನೀರನ್ನು ಯಾವಾಗಲೂ ತುಂಬಿಟ್ಟಿರಬೇಕು (ರೂಢಿ). ಚರುವಿಗೆ: ಮಲ್ಲಿಕಾರ್ಜುನನ ಬಾಣಸಕೊಂದು ಚರುವಿ[ಪಾಠಾಂ. ಚಾಂ]ಗೆಯೊ ಸಟ್ಟುಗವೂ (ಸಿದ್ಧರಾ. ೯-೩); ಇವನ್ನೆಲ್ಲಾ ಕೂಡಿ ತಾಮ್ರದ ಚರುವಿಗೆಯಲ್ಲಿ . . . ಅಟ್ಟು (ಸಕಪ್ಪ. ೧೭೯); ಕೊಡವಾನ ಚರುವಿಗೆ ಗಿಂಡಿ (ಸಿದ್ಧಕಾ. ೦೩-೪೨). ಚವರಿಗೆ: ಒಂದು ಚವರಿಗೆ ನೀರು ತರೋ ಅಪ್ಪರಲ್ಲೇ ಸುಸ್ತಾಗಿ ಬುಟ್ಟು (ವಾರ್ತಮ. ೦೩೦); ಒಂದು ಚವರಿಗೇಲಿ ತಗೊಂಡು ಬಯ್ಯ ಬಾರದೇನಪ್ಪ? (ಅವಕಂ. ೭೭). ಚೆರಿಗೆ: ಚೆರಿಗೆ ಪಾತ್ರೆಗಳು ಬರಿದಾಗುವವು (ನಾಟಿಕೆ. ೫೦). ಚೌರಿಗೆ₁: ಅತ್ತಿಯ ಮನೆ ಬಂದೊ ಮುತ್ತಿನ ಚೌರಿಗೆ ಬಂದೊ ಹಡೆದಮ್ಮ ನೀರ ಹದಮಾಡಿ (ಹೇಳ್ತಾ. ೫೫); ಚೌರಿಗೆ ತೆಗೆದು ಕೊಂಡು ತಾನೇ ನೀರಿಗೂ ಹೋಗುತ್ತಿದ್ದಳು(ಸರ್ವಮಂ. ೯); ಅಮ್ಮಯ್ಯನು ಚೌರಿಗೆಯನ್ನು ತೆಗೆದುಕೊಂಡು ಭಾವಿಯ ಹತ್ತಿರಕ್ಕೆ ಹೊರಟರು . . . ಅವನು ಐದಾರು ಚೌರಿಗೆ ಸೇದಿಕೊಟ್ಟ (ಚಂಗಾಳ. ೦೦).

ಚರಿಗೆಕಾಯು = ಹೊಟ್ಟೆ ಹಸಿ : ನೈವೇದ್ಯದ ಅಕ್ಕಿ ಎಸರುನೀರನ್ನು ಸೇರುವ ಮೊದಲೇ, ಐತಾಳರಿಗೆ ಚರಿಗೆಕಾಯುತ್ತದೆ (ಮುಂಮ. ೧೧). ಚರಿಗೆ ತೆಗೆದುಕೊಂಡು ಹೋಗು=ಮಲವಿಸರ್ಜನೆಗೆ ಹೋಗು: ಶಿವಪುತ್ರ ಬಾಗಿಲಿಗೆ ಬರುವುದಕ್ಕೂ, ಬಸವ್ವ 'ಚರಿಗೆ ತೆಗೆದುಕೊಂಡು' ಹೋದವಳು ಹಿಂದಿರುಗುವುದಕ್ಕೂ ಸರಿಹೋಯಿತು (ಬರಹಾ. ೯೯).

[ ದೇ. ಃ ತುಳು. ಚರಿಗೆ, ಚೆರಿಗೆ; ತೆಲು. ಚೆರವ. / ಹಿಂ. ಚರವಾ : ಮರಾ. ಚರವೀ. / ಸಂ. ಸರಕ ]

**ಚರಿಗೆ$_2$** 'ಚರಿಯೆ' ನೋ.

**ಚರಿಗೆಗುಡು** 'ಚರಿಗೆಗೊಡು' ನೋ.

**ಚರಿಗೆಗೊಡು**, ಚರಿಗೆಗುಡು (ಕ್ರಿ). [ಜೈನ] ಭಿಕ್ಷೆಗೆ ಹೊರಡು; ಚರಿಗೆಗೆ ಬರು : ಮುನಿಪತಿ ಚರಿಗೆಗೊಟ್ಟನರಣ್ಯದಿಂದಾ ರಾಜವೀಧಿಯೊಳು (ಸಾಳ್ವಭಾ. ೩-೩). **ಚರಿಗೆಗುಡು:** ಕಿಸುಕುಳರೂಪಿಂ ಕೃತಕರ್ಷಿಯಾಗಿ . . . ಚರಿಗೆಗುಡುವುದುಂ [ಪಾಠಾಂ. ವರ್ಪುದುಂ] (ಧರ್ಮಾಮೃ. ೪-೭೭) ; ಆ ನಗರಕ್ಕರಣ್ಯದಿಂ ಚರಿಗೆಗೊಟ್ಟನಂಗಜಮಲ್ಲಂ (ಅರ್ಧನೇ. ೧-೮೦); ಅರಮನೆ ವಾಗಿಲೊಳ್ ಚರಿಗೆಗೊಟ್ಟವರಂ ನಿಲಿಸಲ್ಕೆ ಪೋಪ ಭೂವರನೊಡವೋಗಿ (ಪುಷ್ಪಪು. ೩-೯೮). [ ಚರಿಗೆ$_2$ (<ಚರಿಯೆ) + ಕೊಡು$_1$ ]

**ಚರಿಗೆದೋಱು** (ಕ್ರಿ). ಭಿಕ್ಷೆಯನ್ನು ಸ್ವೀಕರಿಸಂ ; ಭೋಜನಮಾಡು : ಕಿತ್ರ್ಯಯ್ಯಂಗಳನೆಮ್ಮಿಲ್ಲಿಗೊಡಗೊಂಡು ಬಂದು ಚರಿಗೆದೋಱ್ ನೀಮುಂ ಬಿಜಯಂಗೆಯ್ಯಿಮನೆ (ವಡ್ಡಾರಾ. ೮೦-೧೫).

[ ಚರಿಗೆ$_2$ (<ಚರಿಯೆ) + ತೋಱು ]

**ಚರಿಗೆನಿಲಿಸು** (ಕ್ರಿ). ಚರಿಗೆಗಾಗಿ ಬಂದ ಮುನಿಗಳನ್ನು ಊಟಕ್ಕಾಗಿ ನಿಲ್ಲಿಸಿಕೊಳ್ಳು : ಅರಸಿ ತಾ ಮಲಧಾರಿದೇವರ ಚರಿಗೆನಿಲಿಸಲೆ ಬಂದಿಸಿರೆ ನಿನ್ನರಸನಾಗಲಿಯುಳ್ಳೊಡಾತ್ಮಜನಾಗಲಿರೆ ಮಗಳೇ ಚರಿಗೆನಿಲಿಸಲೆ ನಿಲ್ವೆವೆನುತವೆ ಪರಸಿ ಬಿಜಯಂಗೈಯೆ (ಸಾಳ್ವಭಾ. ೩-೧೮).

[ ಚರಿಗೆ$_2$ (<ಚರಿಯೆ) + ನಿಲಿಸು ]

**ಚರಿಗೆವರ್** (ಕ್ರಿ). ಆಹಾರದ ಭಿಕ್ಷೆಗೆ ಬರು; ಪಾರಣೆಗೆ ಬರು: ಇಂದೆಮ್ಮ ಮನೆಗೆ ಚರಿಗೆವರಲ್ವೇಟ್ಟುಮೆಂದು ನುಡಿದೊಡೆ (ವಡ್ಡಾರಾ. ೮೦-೨೬): ಮುನಿವರರೆಂತೀ ಗಿರಿಗೆ ಚರಿಗೆವರ್ಪರ್ (ಆದಿಪು. ೫-೭) ; ಕಿಸುಕುಳರೂಪಿಂ ಕೃತಕರ್ಷಿಯಾಗಿ . . . ಚರಿಗೆವರ್ಪುದುಂ [ಪಾಠಾಂ. ಗುಡುವುದುಂ] (ಧರ್ಮಾಮೃ. ೪-೭೭). [ ಚರಿಗೆ$_2$ (<ಚರಿಯೆ) + ಬರ್$_1$ ]

**ಚರಿಗೆವುಗಿಸು** 'ಚರಿಗೆಪೊಗಿಸು' ನೋ.

**ಚರಿಗೆವುಗು** 'ಚರಿಗೆಪೊಗಂ' ನೋ.

**ಚರಿಗೆಪೊಗಿಸು**, ಚರಿಗೆವುಗಿಸು (ಕ್ರಿ). ಆಹಾರದ ಭಿಕ್ಷೆಗೆಂದು ಮನೆಮನೆಗೆ ಕಳುಹಿಸು: ಋಷಿಸಮುದಾಯುವೆಲ್ಲಮಂ ಚರಿಗೆಪೊ[ಪಾಠಾಂ. ವು]ಗಿಸುತ್ತುಂ (ವಡ್ಡಾರಾ. ೮೫-೧೧). **ಚರಿಗೆವುಗಿಸು :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚರಿಗೆ$_2$ (<ಚರಿಯೆ) + ಪೊಗಿಸು ]

**ಚರಿಗೆಪೊಗು**, ಚರಿಗೆವುಗು (ಕ್ರಿ). ಆಹಾರದ ಭಿಕ್ಷೆಗಾಗಿ ಮನೆಯೊಳಗೆ ಪ್ರವೇಶಿಸು,– ಬರು : ನಿರ್ಮಳಚರಿತಂ ಚರಿಗೆಪೊಕ್ಕನರಸನ ಬೀಡಂ (ಆದಿಪು. ೫-೧೧). 'ಚರಿಗೆಪೊಗಿಸು' ಪರಾ. **ಚರಿಗೆವುಗು :** ಕಿಱುಮನೆ ಪೆರ್ಮನೆಯೆನ್ನದುಣಲ್ಕೆರ್ಕ್ಕ ಮನೆಗಳಂ ಚರಿಗೆವುಗುತ್ತುಂ ಬರ್ಪೊರ್ (ವಡ್ಡಾರಾ. ೭೮-೬) ; ಸಾಕೇತನಗರಕ್ಕೆ ಪ್ರೀತಿಂಕರಮಭುನಿ ಚರಿಗೆವುಗೆ (ಚಾವುಂಪು. II, ೩೮-೨೯). [ ಚರಿಗೆ$_2$ (<ಚರಿಯೆ) + ಪೊಗು ]

**ಚರಿಗೆಪೋಗು** (ಕ್ರಿ). ಭಿಕ್ಷೆಗಾಗಿ ಹೋಗು : ನೀಮಾ ನಗರಕ್ಕಾಗಿ ಚರಿಗೆ ಪೋಗುತ್ತುಂ (ಸುಕುಮಾ. ೫-೨) : ಅತಿಕ್ಷಪಿತಕಾಯರಾಲೋಕನಗರಕ್ಕೆ ಚರಿಗೆಪೋ[ಪಾಠಾಂ. ಚರಿಗೆಗೆ ಪೋ, ಚರಿಗೆಗೆ ಪೋ]ದೊಡೆ (ಶಂರಾಮಾ. ೧೫-೯೯ ಪ). [ ಚರಿಗೆ$_2$ (<ಚರಿಯೆ) + ಪೋಗು$_1$ ]

**ಚರಿಚಲಿ** 'ಚೆಂಚಲಿ' ನೋ.

**ಚರಿಜಲಿ** 'ಚೆಂಚಲಿ' ನೋ.

**ಚರಿತ** (ಗುಂ). ೧. ಮಾಡಿದ; ನೆರವೇರಿಸಿದ; ಸಾಧಿಸಿದ. 'ಚರಿತಾರ್ಥ' ಪರಾ. (ನಾ). ೨. ಗಮನ ; ಗತಿ ; ನಡಗೆ. ೩. ನಡೆದುದು ; ಆಗಿ ಹೋದಂದು. ೪. ಜೀವನಕಥೆ; ಚರಿತ್ರೆ; ಇತಿಹಾಸ : ತ್ರಿಷಷ್ಟಿಶಲಾಕಾಪುರುಷರ್ಕಳ ಚರಿತಂಗಳುಮನಾಚಾರಮಾರಾಧನೆ ಮೊದಲಾಗೊಡೆಯಂ ಕರಣಗ್ರಂಥಂಗಳುಮಂ . . . ಕಲ್ತೊಡಲ್ಲದೆ ಪೇಟಲಾಗದು (ವಡ್ಡಾರಾ. ೬-೬) ; ಕವಿರತ್ನನಿನನ್ವಿತಮಾದುದು ಸಗರಚಕ್ರವರ್ತಿಯ ಚರಿತಂ (ಅಜಿತಪು. ೧೨-೨೭). ೫. ನಡೆವಳಿಕೆ ; ಆಚಾರ ; ಶೀಲ : "ಚರಿತಂ ರೀತಿ ಚಾರಿತ್ರಮನೆ ಶೀಲಮನೆ ಚರಿತ್ರಮೆನಲ್ಕೆಯಾಚಾರಕಕ್ಕು ನಾಮಂ" (ಮಂಗರಾ. ೭೪-೩) : ಆ ಯವ್ವನದೊಳವರ ಚರಿತಂ ಕರಂ ಪೊಸತು (ತಿರುರ. ದೀ.೪-೩). ೬. ವಿಧಿ ; ಕ್ರಮ : ಹರುಷದಿಂದಾ ಕ್ರಿಯಲಾ ಅಮೃತಲಿಂಗಮಂ ಚರಿತದಿ ಪ್ರತಿಷ್ಠಿಸಿ ಮಹಾಪೂಜೆಯಂ ಮಾಡಿ (ಸಿದ್ಧರಾ. ೬-೫೭). ೭. ಅದ್ಭುತಕಾರ್ಯ ; ಸಾಹಸಕೃತ್ಯ. ೮. (ಆಲಂ) ಆಡಳಿತ; ಆಳ್ವಿಕೆ: ತಿರಿಕನನು ಕರತಂದು ಧರಣಿಯ ಚರಿತದೊಳಗಿರಿಸಿದರೆ ಮರ್ಕಟ ಕರೆಯ ಸೇವಿಸಿದಂತೆ ಕುಣಿವರೆ ಭಗಿನಿಭಗಧಾಗ್ರಾಧರವ ಕಿಂದಿರ ಲಾರದಲೆ ಇದಗರೆದೆಯಾಕೆಯ ನೋಡಿ ನೃಪನನುಸರಿಸಿ ಇಹನೆಂದಂತರಂಗದಿ ತಿಳಿವುದೆನೆ ಮಂತ್ರಿ (ಬಿಜ್ಜಪು. ೬೨-೫೪). [ ಸಂ. ]

**ಚರಿತಂ** (ಅ). ಬೇಗನೆ ; ತ್ವರಿತವಾಗಿ : ವಕ್ರಂಟು ದೇಸೆ ವಿಳಾಸದೊಳ್ ತೊಡರೆ ಚರಿತಂ ಬಂದರ್ ಕಣ್ಗೊಟ್ಟಿರಲ್ ವರಭೋಗಿಯರ್ (ಪಂಪಭಾ. ೯-೧೦೨). [ <ತ್ವರಿತ ? ]

**ಚರಿತಪುರಾಣ** (ನಾ). ಮಹಾಪುರುಷರ ಚರಿತ್ರೆಯನ್ನೊಳಗೊಂಡ ಪುರಾಣ : ಚರಿತಪುರಾಣದೊಳೊಂದಕೆ ಬರೆದರ್ ಬರೆದಿಕ್ಕಿದತ್ರಿರ್ಷಷ್ಟಿ ಸಲಾಕಾಪುರುಷಪುರಾಣಮಂ (ಚಾವುಂಪು. ೪-೨೦) : ಚರಿತಪುರಾಣ ಮನಱಿಯದೆ ತುರಿಪದಿನಧ್ಯಾತ್ಮಿಯಾಗಿ ನೆಗಟ್ಪನ ತಪಮುಂ . . . ಪಂದೆಯ ಬಿಡುದುಂ ಸುಖಮಾಗಲಾಱಮೆಂದುಂ ಕಡೆಯೊಳ್ (ಧರ್ಮಾಮೃ. ೬-೯೯). [ಚರಿತ + ಪುರಾಣ ]

**ಚರಿತಾರ್ಥ** (ಗುಂ). ೧. ಗುರಿಯನ್ನು ಸಾಧಿಸಿದ ; ಇಷ್ಟಸಿದ್ಧಿಯನ್ನು ಮಾಡಿಕೊಂಡ (ನಾ). ೨. ಕಾರ್ಯಸಿದ್ಧಿ; ಇಷ್ಟಸಿದ್ಧಿ; ಉದ್ದಿಷ್ಟ ಪ್ರಾಪ್ತಿ : ನನ್ನೊಳಗು ಹೊರಗು ನಾ ಗುಡಿಬಳಸಿನೊಳಗಲೆದ ಚರಿತಾರ್ಥ ಪಡೆಗೊಂಡಿತೀ ಕಬ್ಬದೊಳಗೆ (ಮುರಮ. ೫೦-೪). ೩. ಇಷ್ಟಸಿದ್ಧಿಯನ್ನು ಪಡೆದವನು ; ಕೃತಾರ್ಥ ; ಧನ್ಯ : ಪರಮಾಯು ಮೂಱುದಿವಸಂ ಚರಿತಂ ಚರಿತಾರ್ಥನಾ[ಗುನೀ]ನೆಂಬಪೊಲ್ (ಸುಕುಮಾ. ೧೧-೮೩) ; ಬಿನ್ನಪಮಂ ಬಗೆಗೊಳ್ವುದು ಚರಿತಾರ್ಥನಾಗೆ ಮಾಡುವುದೆನ್ನಂ (ಶಂರಾಮಾ. ೯-೧೩೬) ; ಏಂ ಚರಿತಾರ್ಥನೊ ಸಾರ್ವಭೌಮರೊಳ್ ಯಮತನಯಂ (ಜಗಪಿ. ೧೭-೫); ನಿಮ್ಮ ಕಾರುಣ್ಯೋದಯದಿಂ ಯಮುಗಾಯ್ತ್ರಿಲಾ ಚರಿತಾರ್ಥರಾವೆಂದ (ಕುಮಾರಿ. ೧೧-೨೮). ೪. ಬದುಕು; ಹೊಟ್ಟೆಪಾಡು: ವಸುಮತಿ ಈ ಹೊಲಗಳಲ್ಲಿ ತನ್ನ ದವರು ಹರಿಸಿ ಚರಿತಾರ್ಥವನ್ನು ಚೊಕ್ಕಟವಾಗಿ ಸಾಗಿಸುತ್ತಿದ್ದಳು (ಮುಕ್ತಮು. ೬) ; ಅವಳ ತಂದೆ . . . ಬಂದುದರಲ್ಲಿಯೇ ಚರಿತಾರ್ಥ ಸಾಗಿಸುತ್ತಿದ್ದ (ಅಕ್ರಮ. ೪೭) ; ಅವರಿಗೆ ಬರುತ್ತಿದ್ದ ಸಂಭಾವನೆಯೂ, ಹೊಲಗದ್ದೆಗಳಿಂದ ಬರುವ ಉತ್ಪನ್ನಗಳೂ ಸೇರಿ ಅವರ ಚರಿತಾರ್ಥ ನಡೆಯುತ್ತಿತ್ತು (ರಾಜ್ಯೋದ. ೫).

[ ಚರಿತ + ಅರ್ಥ ]

**ಚರಿತಾರ್ಥತ್ವ** (ನಾ). ಕೃತಕೃತ್ಯತೆ ; ಕೃತಾರ್ಥತೆ : ಇದುವೆ ಪರ ತತ್ತ್ವಾನುಭವಸುಖವಿದುವೆ ಚರಿತಾರ್ಥತ್ವಮಂದಿರವಿದುವೆ ತುದಿಪದವೆಂದು ನಿನ್ನಿಂದವೆ ವಿದಿತವಹುದು (ಬಸವಪು. ೨-೩೬). [ ಸಂ. ]

**ಚರಿತೆ** (ನಾ). ೧. ಚಾರಿತ್ರ್ಯ; ಶೀಲ; ಸ್ವಭಾವ: ವಿತರಣ ಧೈರ್ಯ ವಿದ್ಯಾ ಗೌರವಂಗಳಲಿ ಸುರಮಹೀಜನರಾಜ ರುದ್ರರ ಚರಿತೆಗಳಿಗಿಮ್ಮಡಿಯೆನಿಸಿ ಸತ್ಪುರುಷನಿಲ್ಲಿಗೆ ಸಲಹ ಬಂದನು (ಬಸಪು. ೩-೬೪). ೨. ಕಥೆ ; ಜೀವನ ಚರಿತ್ರೆ : ಮುನ್ನಿನ ವೃದ್ಧಭಕ್ತರ ಚರಿತೆಗಳನೊರೆದುದ್ಧರಿಸಿ ಜಗದೇವನಂ ಸಲಹಿದನು ಬಸವೇಶ (ಬಸಪು. ೬೦ ಸೂಚನೆ) ; ವಿಘ್ನೇಶ್ವರನು . . . ಸರಸ್ವತಿಯುಗೀ ಕೃತಿಗೆ ನೆಲೆ ಬಾರದಿರರದೇಕೆಂದೊಡೆ ಮಹಾಶಿವಶರಣ ಶಂಕರದಾಸಿಮಯ್ಯನ ಚರಿತೆಯಾದುದರಿಂದೆ (ಶಂಕದಾ. ೦-೧೧).
[ಸಂ. ಚರಿತ ]

**ಚರಿತ್ರ** (ನಾ). ೧. ನಡೆ ; ನಡೆವಳಿ ; ಆಚಾರ : “ಚರಿತ್ರಂ, ಚರಿತಂ, ಶೀಲಂ, ಚಾರಿತ್ರಂ—ಈ ೪ ಆಚಾರಂ” (ಹಲಾಯು. ೬೬-೨೪೨) ; ಕಾಗು ನಿರೋಧದ ಆಗುಹೋಗನರಿಯದ ಶರಣನ ಚರಿತ್ರವ ನೋಡಿ ನೋಡಿ ಬೆರಗಾದೆನಯ್ಯಾ (ಬಸವ. ೯೦೨). ೨. ಇತಿಹಾಸ; ಜೀವನ ಕಥೆ; ನಡೆದು ಹೋದ ಸಾಹಸಾದಿಗಳ ನಿರೂಪಣೆ. ‘ಚರಿತ್ರಗಾರ’ ಪರಾ. ೩. ಆಚರಣೆ ; ಅನುಷ್ಠಾನ. ೪. ಕೆಲಸ; ಕರ್ತವ್ಯ. ೫. ಸಾಹಸಕಾರ್ಯ ; ಅದ್ಭುತ ಕೃತ್ಯ. ೬. ಸ್ವಭಾವ; ಮನೋಧರ್ಮ. [ಸಂ. ]

**ಚರಿತ್ರಕಾರ** (ನಾ). ಇತಿಹಾಸವನ್ನು ಬರೆಯುವವನು; ಇತಿಹಾಸಕಾರ: ಚರಿತ್ರಕಾರರು . . . ಹೇಳಿರುವ ಕೆಲವು ಅಂಶಗಳನ್ನು ನನಗೆ ಸರಿಯೆಂದು ತೋರಿದ ರೀತಿಯಲ್ಲಿ ಹೊಂದಿಸಿಕೊಂಡಿದ್ದೇನೆ (ಸವತಿ. IV ಪ್ರಸ್ತಾವನೆ),
[ ಚರಿತ್ರ + –ಕಾರ$_1$ (<–ಕಾರ) ]

**ಚರಿತ್ರವಂತ** (ನಾ). ಶೀಲವನ್ನು ಕಾಯ್ದುಕೊಂಡವನು ; ಶೀಲವಂತ; ಚಾರಿತ್ರವುಳ್ಳವನು : ವಿವಾಹಪೂರ್ವದಲ್ಲಿ ಅವರು ಚರಿತ್ರವಂತರಾಗಿ ಉಳಿಯಲಿಕ್ಕೇ ಬೇಕು (ಬ್ರಹ್ಮಚೀ. ೪). [ ಚರಿತ್ರ + – ವಂತ ]

**ಚರಿತ್ರವತಿ** (ನಾ). ಒಳ್ಳೆಯ ಶೀಲವುಳ್ಳವಳು ; ಪತಿವ್ರತೆ : “ಕುಲವಧು ಸಾಧ್ವಿ ಪತಿವ್ರತೆ ಕುಲಪಾಳಿಕೆ ಸತಿ ಚರಿತ್ರವತಿಯುಕ್ಕುಂ” (ಚತುರ್ಕೋ. ೩೨-೪); ಆತನ ಪಿರಿಯರಸಿ ಗುಣಾನ್ವಿತೆ ಪತಿವ್ರತೆ ಚರಿತ್ರವತಿ ವಿಶದ ಗುಣಖ್ಯಾತವತಿ . . . ಚಂಡಿಕಬ್ಬೆಯೆನೆ ಪೊಗಳ[ದ]ರಾರ್ (ಸೌಇಇ. XX. ೪೬-೧೬ ; 1076). [ಸಂ. ಚರಿತ್ರವತೀ ]

**ಚರಿತ್ರವಳ್ಳಿ** (ನಾ). ಒಂದು ಊರಿನ ಹೆಸರು : ಶ್ರೀಮತ್ಕನ್ನಯ್ಯ ಚರಿತ್ರವಳ್ಳಿಯುಮಂ ಪೆಬ್ಬಾಗಿಳುಮಂ ಬದಿರುವಳ್ಳಿಯುಂ × × × (ಎಕ. XI, ಚಿತ್ರದು. ೪೯-೮೦ ; 967). [ ಚರಿತ್ರ + ಪಳ್ಳಿ$_1$ ]

**ಚರಿತ್ರೆ** (ನಾ).=ಚರಿತ್ರ ೨: ಇಂದಿನ ಬಾಳು ನಾಳೆಗೆ ಚರಿತ್ರೆ (ಸಾಹಿಚೀ. ೩೩).
[ ಸಂ. ಚರಿತ್ರ ]

**ಚರಿಯ** ‘ಚರಿಯೆ’ ನೋ.

**ಚರಿಯಿಸು** ‘ಚರಿಸು’ ನೋ.

**ಚರಿಯೆ, ಚರಿಗೆ$_2$, ಚರಿಯ, ಚರುವೆ. ಚರೆಯ** (ನಾ). ೧. ಆಚರಣೆ ; ಚರ್ಯೆ: ನಿತ್ಯ ಪುನೀತ ಶೀಲ ಬ್ರತ ಚರಿಯೆಯಂ [ಪಾಠಾಂ. ಶೀಲವ್ರಾತ ಚರಿಯಂ] ಸಿಕ್ಕುಗೊಳಿಸಿದೆಯೊ (ಬಸಪು. ೪೬-೦೨). **ಚರಿಗೆ$_2$**: ೨. [ಜೈನ] ಮುನಿಗಳು ಆಹಾರಕ್ಕಾಗಿ ಮಾಡುವ ಸಂಚಾರ ; ಭಿಕ್ಷಾಟನೆ : ವಿಂದುಂಡೀಗಳೆ ಬಿಜಯಂಗೆಯ್ಯೆಂದಿರೆ ಕುಳಾದ್ರಿಧೈರ್ಯಂಗೆ ಚರಿಗೆ ಮಾಣ್ದತ್ತಿನಿಸುಂ (ಆದಿಪು. ೯-೦೨೯); ಮುನಿಗಳ್ ಚರಿಗೆಗೆ ಬರುತಿರೆ (ಶಂಚಶಂ. ೧೯೦-೨೦) ; ಮುನಿಗಳ ಚರಿಗೆಯ ಕಾಲವನರಿದರಮನೆಯ ಬಾಗಿಲಿಗೆ ನಡೆದನು (ಭರತ. ೩-೨). ೩. ಊಟ ; ಔತಣ : ತಡೆದನವನೆಲ್ಲರಂ ತನ್ನ ನಿಳಯದ ಚರಿಗೆಗೆ (ಸೋಮಚ. ೨-೯೨). **ಚರಿಯ** : ೧. ಚರಿಸಲಾಗದವರ ಚರಿಯನ್ನು ನಿರತೆಗೇಳಲಾಗದವರ ಸರಿಯೊಳಾವ ಭುಕ್ತಿ ಭೋಗಮಾಡಲಾಗದು (ಶಿವಗೀ. ೪೩೮); ಎರಡು ವಿಂಶತಿ ವರುಷಕೆ ಈ ಪರಿಯ ಚರಿಯ ಮಾಡಿದ ಪರಮಹರುಷದಿ (ಜಗದಾ. ೦೩೪). ೪. ನಡೆವಳಿಕೆ: ಜಾರೆಯರು ತಲೆವಾಗಿಲ ನಿಕ್ಕಿ ನೋಡುವ ಚರಿಯುಗಳ ಕಂಡು (ರಂಜಾರು. ೩-೬-೧). **ಚರುವೆ**: ೩. ಆದಯ್ಯನರಸಿ ಪದ್ಮಾವತಿಯುಮಿರದೆ ಜಂಗಮಕೆಂದು ಮಾಡಿದನ್ನವ ಜಿನರ ಚರುವೆಗೆಂದೊಯ್ಯಲು (ಚಬಪು. ೩೬-೩೬). **ಚರೆಯ** : ೫. ಮೇಯುವುದು : ಮಂದಮತಿಯು ಮುಂದೆ ತಲೆಯು ಚುಂಚು ಪಿಡಿದು ಚರೆಯಕ್ಕೆ ಬಿಟ್ಟ ಗೂಂಟನೆಟ್ಟದು ತಪ್ಪಂತೆ ತಂದು (ಅರ್ಥನೀ. ೬-೬೬ ಪ).

**ಚರಿಗೆಮಾಡು**=ಊಟಮಾಡು ; ಆರೋಗಿಸು: ಆನುಂ ಭಕ್ತಿಯಿಂದಂ ದಿವ್ಯಾಹಾರವಂ ಮಗುಳ್ಚಿಮಗುಳ್ಚಿ ಬಡ್ಡಿಸಿ ಚರಿಗೆಮಾಡಿ [ಪಾಠಾಂ. ಯುಂಡು] (ವಡ್ಡಾರಾ. ೮೯-೨೬). [<ಸಂ. ಚರ್ಯಾ ]

**ಚರಿಷ್ಣು** (ಗು). ೧. ತಿರುಗಾಡುವ. ೨. ಅಸ್ಥಿರವಾದ. [ ಸಂ. ]

**ಚರಿಸು, ಚರಯಿಸು, ಚರಿಯಿಸು** (ಕ್ರಿ). ೧. ನಡೆ; ಚಲಿಸು; ಸಂಚರಿಸು: ಹಂಸನಂತೆ ರಮಣೀಯ ನೂಪುರನಿನಾದಾನಂದಿತ ಮಾನಸಸರೋವರದೊಳ್ ಚರಿಸಿಯುಂ(ಕಾದಂಪೂ. ೩೨೪); ಮಹಾಶರಣರ್ಗೆ ಗುರುವೆನಿಸಿ ಸಕಲ ದೇಶಂಗಳಂ ಚರಿಸಿದಂ (ಚಬಪು. ೦-೦೪) ; ಆಗಸದೊಳು ಚರಿಸುವ ಸುರಸತಿಯರ ಸೋಗೆಮುಡಿಗೆ ಪೂಜ್ಯವಾಗಿ . . . ಪೂಗವೃಕ್ಷಗಳೊಪ್ಪುತಿಹುವು (ಕಂಪವಿ. ೨-೪೦). ೨. ಅಲುಗು; ಅಲ್ಲಾಡು: ಬೆದರಿ ಭೂಕಂಪದಲ್ಲಿ ಕುಲಗಿರಿಯುದಿರುವಂತಿರೆ ಚರಿಸಿ . . . ಕಲಿಕರ್ಣ ಮೈಮರೆಯೆ (ಕುಮಾರದ್ರೋ. ೩-೨೯). ೩. ಆಚರಿಸು ; ನಡೆದುಕೊಳ್ಳು ; ಅನುಷ್ಠಾನಮಾಡು : ತಂತವಮ್ಮಾಪ್ತರ್ ಚರಿಸುವ ಪೋಡೆಯೊಳೇಕೆಯೊ ಚರಿಯಿಸರನ್ಯರ್ (ಧರ್ಮಾಮೃ. ೬-೪೨) ; ಪರಬ್ರಹ್ಮನು ಹರಂ ಚ[ಪಾಠಾಂ. ಧ]ರಿಸುವರು ಬ್ರಹ್ಮಣ್ಯವಂ(ಬಸಪು. ೩೩-೪೦);ಮುನೀಂದ್ರಂ ಚರಿಪಂ ಸತಿವೆರಸು ತಪವನೀ ಪರ್ವತದೊಳ್ (ಪಾಳ್ಕುಂತ. ೧೦೦-೧೬೨). ೪. ಇರು ; ವ್ಯವಹರಿಸು ; ವರ್ತಿಸು : ನಾನಾಭೋಜ್ಯಕ್ಕೆ ಪಕ್ಕಾಗುತೆ ಚರಿಸಿದೆನಿನ್ನಾಳಿನಿನ್ನಾಳಿ ನಯ್ಯೋ (ರಕ್ಷಾಶ. ೪) ; ಈ ಪ್ರಕಾರದಿ ಚರಿಸುತಿರೆ ಸಾತ್ವಿಕ ಸುಭಕ್ತಿ ಸ್ಥಿರಮನಸ್ಕನು (ಬಸಪು. ೪೬-೪) ; ಸಿರಿ ಸರಸ್ವತಿ ಚಂಡಿ ದುರ್ಗಿಯರೆಂಬ ನಾಮದಲಿ ಚರಿಸುತಿಹ ನಿನ್ನೇಕಮೂರ್ತಿಯ ಪರಿಯನರಿವವರಾರು (ಕುಮಾಲ. ೬-೦೦೪). **ಚರಯಿಸು** : ೧. “ಚರಯಿಸು (ಚರಿಯಿಸು) ಭ್ರಮಣೇ” (ಕಮಧಾ) ; ಚರಿಸಿದಂ, ಚರಯಿಸಿದಂ (ಕಮದ.೬೪ ಪ್ರಯೋ) : ಕನಸಿನೊಳ್ ಚರಯಿಪಂಟೊಲ್ ಪೋಗುತಿರ್ದನ್ (ಸಂಸಪ. ೩೨-೦೮೮). **ಚರಿಯಿಸು**: ೧. ಚರಿಯಿಪ ವನದೇವತೆಯರ ಚರಣಾಲಕ್ತಕದೆ ಪೊರೆದು ವೆನಿಪುವು . . . ಬೆಂದಳಿರ್ದುಱುಗಲ್(ಕಾದಂಪೂ. ೯೬); ಚರಿಯಿಸಿ ನಿಚ್ಚವಚ್ಚವನದೊಳ್ (ಜಗವಿ.೦೬-೦೨೮); ಕೇಳು ನೀನೆಲೆ ಪಾರ್ಥ . . . ರವಿರಥ ಕಾಲಚಕ್ರವನ್ನೆಯ್ದಿ ಗಗನಾಂಗಣದಿ ಚರಿಯಿಪುದ (ಕುಮಾಅ. ೬-೩೨). ೨. ಸ್ಥಿರನಾಗಿ ಗುಣದೊಳೆಸಗುವ ನರನುಂ ವೈರಾಗ್ಯಮುಳ್ಳನುಂ . . . ಉರ್ವರೆ ಚರಿಯಿಸುವೊಡಮುಱಿವರಲ್ಲರುತ್ತಮಗುಣಮಂ (ಧರ್ಮಾಮೃ. ೩-೦೩೨). ೩. ಪಿರಿದಪ್ಪಾದರದಿಂದಂ ಪುರಾಣಮಂ ಕೇಳ್ವರಲ್ಲದಾ ತೆಱದಿಂದಂ ಚರಿಯಿಸುವರಲ್ಲರನ್ಯರ್ (ಸಮುಪ. ೬-೨೪) : ಗುರುವಚನಮನುಲ್ಲಂಘಿಸಿ ಚರಿಯಿಸಲಣಮಾಗದು(ಧರ್ಮಾಮೃ. ೩-೦೩೦). ೪. ಜನನಾಥಂ ಕಾಮಾಸಕ್ತನಾಗಿ ಮದದಂತಿಯಂತೆ ಚರಿಯಿಸಿ (ಶಂಚಶಂ. ೧೩-೨೦); ಎರಡನೆಯ ಸುಷಮಕಾಲದ ಪೊರೆಯೊಳ್ ಮೂಱನೆಯ ಸುಷಮದುಷ್ಷಮಕಾಲಂ ಚರಿಯಿಸುಗುಂ (ಶಂಚಪಪ. ೦-೩೬); ನೆಲೆಗೆ ಪೋಗಿ ಮಕ್ಕಳೊಳಂ ಪೆಂಡಿರೊಳ್ ಮೊಡಗೂಡಿ ಸುಖದಿಂ ಚರಿಯಿಸುವಂ ಮೆಚ್ಚಿದಂದದಿಂ ಭೋಗಿಸುವಂ (ಧರ್ಮಾಮೃ. ೦-೦೩೦).

**ಚರಿಸಾಡು, ಚರಿಸಿಯಾಡು**=ಅಲೆದಾಡು; ಸುತ್ತಾಡು: ನಡೆದಡೆ ಹೆಜ್ಜೆಯಿಲ್ಲ ಸುಳಿದಡೆ ನೆಳಲಿಲ್ಲದೆ ಬಯಲ ಬೆಳಗೆ ಸ್ವರೂಪವಾಗಿ ಚರಿಸಾಡುತ್ತ ತನ್ನನರ್ಚಿಸುವ ಭಕ್ತರ ನೋಡುತ್ತ ಬಪ್ಪಲ್ಲಿ (ಪದಗೋ. ೯೬) ; ನಿರಾಶಾಭರಿತನಾಗಿ ಚರಿಸಾಡುತ್ತಲು (ಶೂನ್ಯಸಂ. ೨೬೩-೦೦). [ಚರಣ + – ಇಸು$_1$]

**ಚರು₁** (ನಾ). (ಕೂ) ಒಂದು ಬಗೆಯ ಸಣ್ಣ ವಿಾನು
[ ←ತುಳು. ಚರು ]

**ಚರು₂** (ನಾ). ೧. ಹೋಮಕ್ಕಾಗಿ ಸಿದ್ಧಪಡಿಸಿದ ಅನ್ನ ; ಹವಿಸ್ಸು: "ಹವ್ಯಂ, ಪಾಕಃ, ಚರುಃ, ಸಾನ್ನಾಯ್ಯಂ, ಹವಿಃ—ಈ ೫ ಚರು" (ಹಲಾಯು. ೬೯-೨೬೨); ಜಲಗಂಧಾಕ್ಷತೆ ಪುಷ್ಪಾವಳಿ ಚರು ದೀಪಪ್ರದೀಪ ಧೂಪ ಫಲಂಗಳ್ . . . ತಳತಳ ತೊಳಗಿದುವು (ಆದಿಪು. ೭-೧೦೩); ಚಾರುಚರುನಿಚಯದಿಂ ಘನಸಾರಾಗರು ಧೂಮಾಳೀಚಯಿಂ . . . , ಜಿನೇಂದ್ರನನಾರಾಧಿಸಿದಂ ನರೇಂದ್ರ ಚೂಡಾರತ್ನಂ (ಶಾಂ. ಮಾ. ,೬೨-೩); ಲಕ್ಷ್ಮಿಗೆಯುಂ ಬೆಸಕಂಗೆ ಹೆಂಡಮುಂ ಮಾರಿಗೆ ಛೊವ್ಮ್ಯಯುಂಗೆ ಚರುವಂ ಪದೆದೆತ್ತುವಂ (ಸ್ಥೂ. ೬-೮೪); ಕೊಟ್ಟನು ಚರುವವಾದಲಾ ದೈತ್ಯ ಬಾಂಡೋದರಿಗೆ ತಲೆದೋಹದ (ಕೌಶಿರಾ. ೩೦-೨೩). ೨. ಹವಿಸ್ಸಿನ ಪಾತ್ರೆ: "ಉಖಾ, ಸ್ಥಾಲೀ, ಚರುಃ, ಕುಂಭೀ, ಪಿಠರಂ, ಕುಂಡಂ—ಈ ೬ ಮಡಕೆ" (ಹಲಾಯು. ೩೨-೬೩೯); ಕೈಯಲ್ಲಿ ಚರುವನ್ನು ಹಿಡಿದುಕೊಂಡು ಅಗ್ನಿನಾರಾಯಣನು ಪ್ರಕಟನಾದನು (ಕುಲಶ. ೩೪). ೩. ಬಲಿ: ಇದೇನು ಭೂತದ ಚರುವನ್ನು ಮಾಡುತ್ತೀರಾ? (ಮಠಮು. ೩೯); ಈರವ್ವನು ಚರು, ಓಕಳಿ . . ಮುಂತಾದ ಸಲಕರಣೆಗಳನ್ನು ಸಜ್ಜುಗೊಳಿಸಿ-ಭಟ್ಟರ ಅಡುಗೆಗೆ ಬೇಕಾದ ಲವಾಜಮೆಗಳನ್ನು ಸಿದ್ಧಗೊಳಿಸಿದರು (ಶಂಕಶಂ. ೯೦). ೪. (ಆಲಂ) ಆಹಾರ ; ಊಟ : ಒಂದು ಚರುವನ್ನು ರಾತ್ರಿ ಅವರಲ್ಲಿಯೇ ತೆಗೆಯುವ (ಮುಗಿಯು. ೦೮೩). [ ಸಂ. ]

**ಚರುಕ** (ನಾ). ೧. ಹವಿಸ್ಸು ; ನೈವೇದ್ಯ : ಅನೇಕ ಭಕ್ಷ್ಯೋಪದಂಶ ರಸಪ್ರಚುರ ಚಾರುಚರುಕಂ[ಪಾಠಾಂ. ಚರು]ಗಳಿಂದಂ (ಆದಿಪು. ೨-೩೨ ವ) ; ಲಲಿತೇಷ್ಟಲಿಂಗ ಪ್ರಸಾದವೇ ಚರುಕಮದನೊಲಿದು ತಾನುಪಭೋಗಿಸುವುದು(ರಾಘಶ. ೦೨-೧೬). ೨. ಹವಿಸ್ಸಿನ ಪಾತ್ರೆ. ೩. ಪಾಕ ಪಾತ್ರೆ: ವರವನಿತ್ತನು ನಿನಗೆ ಹೇಮದ ಚರುಕವಿದೆ ವಿವಿಧಾನ್ನ ಪಾನೋತ್ಕರದ ತವನಿಧಿ (ಕುವ್ಯಾಅ. ೧-೯). [ ಸಂ. ]

**ಚರುಕಲು** (ನಾ). ಅಗಲ ಬಾಯಿಯ ಪಾತ್ರೆ: ಹೆಚ್ಚಾಗಿ ಉಳಿದ ಅನ್ನವನ್ನು ಚರುಕಲಿನಲ್ಲಿ ಹಾಕಿ ಮುಚ್ಚಿಡಬೇಕು (ಮೂ). [ <ಸಂ. ಚರುಕ ? ]

**ಚರುಗ, ಚರಗ, ಚರಗು; ಚೆರಗ, ಸರುಗ, ಸರುಗು** (ನಾ). ೧. ಹೊಲ, ಗದ್ದೆಗಳಲ್ಲಿ ಪೈರು ಬೆಳೆದಾಗ ರೈತರು ಭೂಮಿತಾಯಿಗೆ ನೈವೇದ್ಯವೆಂದು ಕ್ಷೇತ್ರದ ತುಂಬ ಚೆಲ್ಲುವ ಕಡುಬು ಮುಂತಾದ ಭಕ್ಷ್ಯ : "ಚರುಗ = ಹೊಲದೊಳಗೆ ಚೆಲ್ಲುವ ಆಹುತಿಯ ಅನ್ನ" (ಗಂಗಾಮ್ನ. ೦೪೯). ೨. ದೇವತೆಯ ಪ್ರೀತ್ಯರ್ಥವಾಗಿ ಹೊಲದಲ್ಲಿ ಮತ್ತು ಊರಿನ ಸುತ್ತ ಚೆಲ್ಲುವ ಕೋಣದ ರಕ್ತ ಮತ್ತು ಮಾಂಸದ ಬಲಿ : (ಕ). **ಚರಗ** : ೧. ಊರ ಒಕ್ಕಲಿಗರ ಚರಗದ ಬುಟ್ಟಿಗಳೆಲ್ಲ ಹೊರಬಿದ್ದವು. ತಮ್ಮ ದೇವರಿಗೂ ಚರಗ ಸಲ್ಲಬೇಕೆಂದು ಹೆಂಡತಿ ಸೂಚಿಸಿದಳು (ಗರಶಾ. ೬೩) ; ಚರಗವನ್ನು ಚೆಲ್ಲಿದಂತೆ ಚೆದರಿ ಹೋಗಿರಬಹುದು (ಕಬಸಾ. ೩೨). **ಚರುಗು** : ೧. ಬಂದಿ ಕೀವಿದ ಚರುಗು [ಪಾಠಾಂ. ಕೂಟು, ಚರುಗಳ್]ವೆರಸು ತನ್ನ ಮಗನಪ್ಪ ಮುಂದರಕೌಶಿಕನಂ ಕುಭುಂಗಾಹಾರ ನಿಮಿತ್ತಮಟ್ಟಿದೊಡೆ (ಚಾವುಂಪು. II, ೩೯-೩೩) ; ಜನಪದಯುಗಳಕ್ಕಿತ್ತಿ ನೈವೇದ್ಯಮುಂ ಜಾತ್ರೆಗೆ ಬಂದರ್ಮಾತ್ರೆ ಕೋರ್ವರ್ ಚ[ಪಾಠಾಂ. ಪ]ರುಗಂ. (ಸಮುಚ. ೨-೩೯). **ಚೆರಗ** : ೧. ಹೊಲಕೆ ಒಕ್ಕಲಿಗ ಚೆರಗೊಗೆದು (ಕರಪ. ೦೬) ; ಜೋಕುಮಾರನ ಅಳಕ ಅಂಬಲಿಯೇ ಒಕ್ಕಲಿಗನು ತನ್ನ ಬೆಳಸಿಗೆ ಒಗೆಯುವ ಮೊದಲನೆಯ ಚೆರಗ (ಜನಗೀ. ೦೭ ಮೊದಲವಾತು). **ಸರುಗ** : ೧. ಮತ್ತಂ ಶುಚಿರ್ಭೂತರಾಗಿ ಚಕ್ಕುಲಿಯಂತೆ ಪಿಟ್ಟನಿಂ ಬಟ್ಟಿತುವಾಗಿ ಬರೆದಮಾ ಮೇಲೆ ಸರುಗದ ಮುದ್ದೆಗಳನಿಟ್ಟು (ಪಸಾರ. ೪೬೩) ; ಪಾಪವ್ವ 'ಸರುಗ' ಮಾಡಿಕೊಂಡು ಬಂದು ಎತ್ತುಗಳ ಪ್ರದಕ್ಷಿಣೆಮಾಡಿ 'ಸರುಗ' ಚೆಲ್ಲಿದಳು (ನಾಟಿಪ. ೬೬). **ಸರುಗು** : ೧. ಆದರದಿಂದನರ್ಘ್ಯಮಣಿವಿಷ್ಟರದೊಳ್ ಕುಳ್ಳಿರ್ದು ಸರುಗಮುಣ್ಣದೆ ಕಂಡುದದಟಿಂ (ಆದಿಪು. ೧೩-೩೯) ; ಗಂಧ ಮಾಲ್ಯಾದಿಗಳನರ್ಚಿಸಿದೊ ಸಿಂಹಾಸನವನೇಱೆ ನಾಯ್ ಸರುಗನುಣೆ ಕಂಡುದದಱಿಂ (ಚಾವುಂಪು. ೭೩-೨೩) ; ಗಂಧಧೂಪದೀಪಕ್ಕಂ ಸರುಗಿಗ[ಂ] . . . ಕುಡುವ ಭೂಮಿ (ಎಕ. XVII, ೧೨೨-೭ ; 1047) ; ಪರಕೆಯನೀಯದೆ ಮಾಸಲ ಸರುಗಂ ಮುಂದಿಡದೆ ತಡೆಯದೂಡದೆ ಪಲರುಂ ಬೆರಸರ್ಚನೆ ಮಾಡದೆ ಮಾಣ್ದಡೆ ಪೀಡೆಗಳೇಕೆ ಮಾಣ್ಬುವೆಂದು ಜಡಾತ್ಮರ್ (ಪಸಾರ. ೪೬೩).

**ಚರಗಚಲ್ಲು, ಸರುಗಚೆಲ್ಲು** = ಭೂಮಿತಾಯಿಗೆ ನೈವೇದ್ಯಕ್ಕೆಂದು ಸಿದ್ಧಪಡಿಸಿದ ಚರುಗವನ್ನು ಚಲ್ಲು : ನಾಡಿನ ಒಕ್ಕಲು ಜನ ಶೀಗಿಹುಣ್ಣಿಮೆಯ ದಿನ ಹೊಲದಲ್ಲಿ 'ಚರಗ' ಚಲ್ಲಲು ಹೋಗುತ್ತಾರಪ್ಪೆ ? (ಶರೀಕ. ೬೬) ; ಕಲ್ಲಪ್ಪ ಯಾಸಿಪೂಜೆಯನ್ನು ಮಾಡಿದ. ಕಣದ ಸುತ್ತೆಲ್ಲ 'ಸರುಗ' ಚೆಲ್ಲಿದ (ದಿವಾಂ. ೩). **ಚರಗ ತೂರಾಡು** = ಯಥೇಚ್ಛವಾಗಿ ಚಲ್ಲು ; ಹಾಳುಮಾಡು ; ಪೋಲುಮಾಡು : ತನ್ನ ಹರೆಯದ ರೂಪಿನ ಚರಗ ತೂರಾಡ ಬಾರದೆಂದು ಬಸವಂತಿ ಜಕ್ಕಿಸುತ್ತಿದ್ದಳು (ದೀಪಜ. II. ೦೪೦)
[ <ಸಂ. ಚರುಕ ]

**ಚರುಗು** 'ಚರುಗ' ನೋ.

**ಚರುಪು** 'ಸಿಟಿಪು' ನೋ.

**ಚರುವಿಗೆ** 'ಚರಿಗೆ₁' ನೋ.

**ಚರುವೆ** 'ಚರಿಯೆ' ನೋ.

**ಚರೆ, ಚೆರೆ** (ನಾ). ಬಂದೂಕಿನಿಂದ ಹಾರಿಸುವ ಚಿಕ್ಕ ಸೀಸದ ಗುಂಡು ; ಸಿಡಿಮದ್ದು : ಕೋವಿಯನ್ನು ಕೆಳಗೂ ಮೇಲೂ ಅಲ್ಲಾಡಿಸುತ್ತ ಸಾಗಿದಾಗ ಎಲ್ಲಿಯೋ ಚರೆಯೆಲ್ಲ ನೆಲಕ್ಕುರುಳಿ ಹೋಗಿದ್ದುವು (ಕಾನೂರು. ೩೦). **ಚೆರೆ** : ಸಿಡಿಮದ್ದು ಚೆರೆ ಬಿದ್ದು ಜಗ್ಗದೆಯ ನುಗ್ಗಿದರು (ಇಂಗೀಕ. ೨೨-೧) ; ಜೇಬಿನಿಂದ ಚೆರೆಯನ್ನು ತೆಗೆದು ಅಂಗೈಯ ಮೇಲೆ ಅದರ ಪ್ರಮಾಣ ನಿರ್ಣಯ ಮಾಡುತ್ತಿದ್ದಾಗ ಕೋಳಿ . . . ಓಡತೊಡಗಿತು (ಕಾನೂರು. ೪೬)
[ ←ಹಿಂ. ಮರಾ. ಛರಾ ]

**ಚರೆಗುಂಡಿನಗಿಡ** (ನಾ). ಒಂದು ಬಗೆಯ ಸಸ್ಯ : ಕ್ಯಾನ್ನಾಗಿಡ, ಚರಗುಂಡಿನ ಗಿಡ, ಸರ್ವಜಯ, ಹೂದಿಂಗಣ (ವೃಭಿಗಿ. ೦೭-೨೯೯).
[ ? + ಗಿಡ (<ಗಿಡು) ]

**ಚರೆಯು** 'ಚರಿಯೆ' ನೋ.

**ಚರ್ಕಣ** (ನಾ). ಹೆಂಡ ಕುಡಿಯುವುದರಿಂದುಂಟಾದ ಮದ (?) : ಪಾನಂ ಗೋಟಿಕೆಯದಾವಾನಂ ಕುಂಡಾಪ್ರಪಾನಂ ಕಳ್ಗುಡಿಹ ಕಡುಸೊರ್ಕು ಚರ್ಕಣಂ ತಾನದು ಮೆಸರೊಳದುಂ (ವಜ್ರಕೋ. ೯೩-೬). [ ? ]

**ಚರ್ಚನೆ** (ನಾ). ಗಂಧ ಮೊದಲಾದುವುಗಳನ್ನು ಮೈಗೆ ಲೇಪಿಸುವುದು ; ಅನುಲೇಪನ. 'ಚರ್ಚನೆಗೈ' ಪರಾ.
[ ಸಂ. ಚರ್ಚನ ]

**ಚರ್ಚನೆಗೈ** (ಕ್ರಿ). ಬಳಿ ; ಲೇಪಿಸು : ಮಿಱುಗುವ ಕುಂಕುಮ ಗಂಧವ ಮುನಿಗಳ ಚರಣಕ್ಕೆ ಚರ್ಚನೆಗೈದು (ಜ್ಞಾನಚ. ೨೭-೦೭).
[ ಚರ್ಚನೆ + ಗೈ (<ಕೆಯ್₁) ]

**ಚರ್ಚರಂ** 'ಚಚ್ಚರಂ' ನೋ.

**ಚರ್ಚರಿ** (ನಾ). ೧. ಉಲ್ಲಾಸದ ಆಟ ; ವಿನೋದ ; ಚಲ್ಲಾಟ. ೨. ಸಂತೋಷದ ಕೂಗು ; ಹರ್ಷೋದ್ಗಾರ. ೩. ಒಂದು ಬಗೆಯ ಹಾಡು ; ನೃತ್ಯಗೀತ : ಸಂಗೀತದಿಂಚರಮನನುಸರಿಸಿ ಪೌರಜನಂಗಳ ಚರ್ಚರಿಯ ನಿನದಂ ಮೆರ್ಚಿಸಿದ (ಮಿತ್ರಗೋ. ೭) ; ಗರಿಯ ವಿಕ್ಕಿರನೊ ಕಿನ್ನರನೊ ಬಗೆವೆದೆಯ ಮಾಧುರಿಯನರುಹೆಮಗೆಂದುಮಾಲಿಸಿಲ್ಲ ಸುರೆಯ ಚರ್ಚರಿಂದಲಕ್ಕರೆಯ ಸಂಸ್ಕೃತಿ ಏದಿ ಸುರದಿಂತು ದಿವ್ಯ ಹರ್ಷಾವೇಶವಂ (೧೧ವಿಂ. ೭-೭೬೬). [ ಸಂ. ಚರ್ಚರೀ ]

**ಚರ್ಚಾಕೂಟ** (ನಾ). ಚರ್ಚೆ ನಡೆಯುವ ಸಭೆ : ಆಯ್ದುಕೊಂಡ ಒಂದು ಹೇಳಿಕೆಯಲ್ಲಿ ಪೂರ್ವಪಕ್ಷ ಉತ್ತರಪಕ್ಷಗಳಾಗಿ ಅಥವಾ ಪರ-ವಿರುದ್ಧ ಪಕ್ಷಗಳಾಗಿ ವಾದಮಾಡುವ ಸಭೆ: ಉಪಾಧ್ಯಾಯ–ವಿದ್ಯಾರ್ಥಿ ಸಹಕಾರ ಬೋಧನಕ್ರಮ – ಇದು ಚರ್ಚಾಕೂಟದ ಬೋಧನಕ್ರಮದಂತಿದ್ದು . . . ಯೂರೋಪು ಮುಂತಾದೆಡೆ ಪ್ರಚಾರಕ್ಕೆ ಬಂತು (ಶಿಕ್ಷದ. ೨೯೦); ಚರ್ಚಾಕೂಟಕ್ಕಾಗಿ ಗ್ರಂಥಾಲಯದ ಕಟ್ಟಡದಲ್ಲಿ ಪ್ರತ್ಯೇಕ ಕೋಣೆಗಳಿರಬೇಕು (ಗ್ರಂಥಾಂ. ೬). [ ಸಂ. (ಚರ್ಚಾ + ಕೂಟ) ]

**ಚರ್ಚಾತೀತ** (ಗು). ವಾದಕ್ಕೆ ನಿಲುಕದ,–ಮೀರಿದ ; ವಾದಾತೀತವಾದ : "ಚರ್ಚಾಸ್ಪದವಲ್ಲದ; ಚರ್ಚಾತೀತ" (Beyond dispute. ಪತ್ರಿವಿ. ೩೨). [ ಸಂ. (ಚರ್ಚಾ + ಅತೀತ) ]

**ಚರ್ಚಾಮಂದಿರ** (ನಾ). ಚರ್ಚೆ ನಡೆಸುವ ಮಂದಿರ : ನ್ಯಾಯದರ್ಶಿಗಳು ಗುಂಪುಗುಂಪಾಗಿ ಹೊರಟು ಚರ್ಚಾಮಂದಿರದಲ್ಲಿ ಸೇರಿದರು (ಪುನರು. ೩೬). [ ಸಂ. (ಚರ್ಚಾ + ಮಂದಿರ) ]

**ಚರ್ಚಾಸ್ಪದ** (ಗು). ಚರ್ಚೆಗೆ ಅವಕಾಶವಿರುವ ; ಚರ್ಚೆ ವಾದಬೇಕಾದ ; ವಾದವಿವಾದಗಳಿಗೆ ಈಡಾಗಿರುವ : ಇದೇ ಸಂದರ್ಭದಲ್ಲಿ ಚರ್ಚಾಸ್ಪದವಾದ ೨ನೆಯ ಸೂತ್ರವು ಹೊಸ ಪ್ರತಿಯಲ್ಲಿ ಬಂದಿದೆ (ಕಮಪಾಂ. ೫೧). [ ಸಂ. (ಚರ್ಚಾ + ಆಸ್ಪದ) ]

**ಚರ್ಚೆ** (ನಾ). ೧. ಚರ್ಚೆ ; ವಾಕ್ಕಲಹ : ಜೂಜಾಟಕೆ ಸೂಳೆಬೂಟಕೆ ರುಣದ ಸಂವಾದ ಮಗುಳ್ದಿರ್ಗಳ ಚರ್ಚೆ ರಾಜವೀಥಿಯೊಳಿರ್ದಾಡುವ ಸಂದಣಿ ಮಾಜದು ನಿತ್ಯಕೃತ್ಯದಲಿ (ಮೋದಕ. ೨೦-೨೬). ೨. ವಿಚಾರಣೆ : ಪರಿಶೋಧನೆ. [ ಸಂ. ]

**ಚರ್ಚೆಕೆ** (ನಾ). ಗಂಧಾದಿಗಳನ್ನು ಬಳಿಯುವಿಕೆ ; ಅನುಲೇಪನ : ನವ ಪಿಷ್ಟ ಚರ್ಚಾಕಸ್ತ್ರಮುಪಾತ್ತ ದರ್ಭರಚನಂ . . . ಪೂರ್ಣ ಕಲಶಂ ತಳೆದತ್ತು ತುಳಂ ವಿಲಾಸವಂ (ಚಂದ್ರಪು. ೬-೫೩). [ ಸಂ. ಚರ್ಚಿಕಾ ]

**ಚರ್ಚಿತ** (ಗು). ೧. ಬಳಿದ; ಸವರಿದ; ಲೇಪಿಸಿದ: ನಾಕಲೋಕಾಯದ ಚರ್ಚಾಚರ್ಚಿತ ಸುರಭಿ ನಮೇರು . . . ಸಮುತ್ತುಂಗ ಮಣಿಪೀಠಪ್ರತಿಮಮಪ್ಪ ಸೌಧರ್ಮೇಂದ್ರನುತ್ಸಂಗದೊಳ್ ತೀರ್ಥಕರಕುಮಾರಂ ಬರೆ (ಶಾಂತಿಪು. ೧೦-೧೩ ವ); ಘನಸಾರಸುರಭಿ ಮಳಯರುಹ ಚರ್ಚಿತಮುಂ . . . ಸ್ವಸ್ತಿಕಪ್ರಶಸ್ತ ಮಣಿದರ್ಪಣಾ ಸಮರ್ಪಿತಮುಮಪ್ಪ ಕಳಧೌತ ಮಂಗಳ ಕಳಶಮಂ ಬಳಸಿ (ಮಲ್ಲಿಪು. ೯-೦೦೦); ಮಂಜುಳ ಕಾದ್ರ ಕುಂಕುಮಚರ್ಚಿತಾಂಗದಿಂ ಚೆಲ್ವಿಂದೆ ಸಂಗಡಿಸಿದ ಅಂಜಲಿಗಳಿಂ ಮೆರೆವ ದಂಪತಿಗಳಭಿನಮಿಸೆ (ಕೃಮಿಥಾ. ೩೦-೩೨). ೨. ಚರ್ಚಿಸಿದ; ವಿಚಾರಿಸಿದ ; ವಿಮರ್ಶೆಮಾಡಿದ. ೩. ಇಚ್ಛಿಸಿದ ; ಬಯಸಿದ. [ ಸಂ. ]

**ಚರ್ಚಿಸು** (ಕ್ರಿ). ೧. ವಾದ ಮಾಡು ; ವಿವಾದ ಮಾಡು : ದೇವಾಕ್ಷರ ನವ್ಯದಾಗಮಮನೋವದೆ ಮೆಚ್ಚಿ ಚರ್ಚಿಸದಿರ್ಪುದೊಯ್ಯನೆ ಪಾಪದೊಳ್ (ಧರ್ಮಾಮೃ. ೫-೧೦೦). ೨. ಪರಿಶೀಲಿಸು ; ವಿಚಾರಿಸು ; ಯೋಚಿಸು : ಕೇಳಿಮಿದಿಂತುಟೆಂದು ಚರ್ಚಿಸಿ ನಾಡಿಮಂತು ಬೇಟ ಪಡಿತಾವುದು ಕೇಳಿಕೆಯುಂ ವಿಟತ್ವಮುಂ (ಶಾಂತಿಪು. ೮-೯೧); ಸುಬುಕಿ . . . ಅವರ ಬಗೆಯ ನೆಱಿದುಪಾಯಮನಾಗಳೆ ಚರ್ಚಿಸಿ (ಸುಕುಮಾ. ೬-೧೫ ವ); ಕವಿಗಳ್ ಚರ್ಚಿಸಿ ಕಳ್ಪ್ಯರ್ ವಿಷಮಂ ಬೆರೆಯಿಸಿಕೊಂಡು ಬಂದರ್ (ಧರ್ಮಾಮೃ. ೨-೨೦೦); ಸಾಧಕಬಾಧಕಗಳನ್ನು ಮುಂದಿಟ್ಟು ಸ್ಪಷ್ಟವಾಗಿ ಚರ್ಚಿಸಿದರು (ಹಿಂತಿರು. ೩೫). [ ಚರ್ಚೆ + – ಇಸು$_3$ ]

**ಚರ್ಚು$_1$, ಚಚ್ಚು$_2$, ಚೆಚ್ಚು$_2$** (ಕ್ರಿ). (ಕಂಕುಳಲ್ಲಿ) ಎತ್ತಿಕೊಳ್ಳು: "ಚರ್ಚು –ಶಿಶುಸಂಧಾರಣೇ" (ಶಮದಾ. ನ); ಚರ್ಚಲ್ ಶಶಿಶಿಶುವಂ ಕಟಿಗರ್ಚಲ್ ಘನಘಟೆಯನುರ್ಚಲಮರದ್ರುಮಮಂ . . . ಒಡರ್ಚಿದುವೆನೆ ನೀಳ್ದುವಿದಬಿ ಶಿಖರಕರಂಗಳ್ (ಕಾವ್ಯಾವ. ೫೫೬). **ಚಚ್ಚು$_2$**: ಮಗುವನ್ನು ಬಗಲಿಗೆ ಚಚ್ಚಿಕೊಂಡು (ಮರಮು. ೨೬); ಅವನನ್ನು ಬಗಲಲ್ಲಿ ಚಚ್ಚಿಕೊಂಡೇ ಅಚ್ಚುತನ ವಿರಾಮ ಕಳೆಯುತ್ತದೆ (ಮುಗಿಯು. ೩೪೦). **ಚೆಚ್ಚು$_2$**: ತುಂಬಿದ್ದ ಕೊಡವನ್ನು ಹಗ್ಗದ ಕೊಂಡಿಯಿಂದ ಬಿಡಿಸಿ, ಸೊಂಟಕ್ಕೆ ಚೆಚ್ಚಿ ಬಚ್ಚಲ ಮನೆಯತ್ತ ನಡದೇಬಿಟ್ಟಳು (ಮೂರುದಾ. ೦೯೬). [ ? ]

**ಚರ್ಚು$_2$** (ನಾ). ಕ್ರೈಸ್ತರ ಪ್ರಾರ್ಥನಾಮಂದಿರ : ಚರ್ಚಿನ ಗೋಪುರದಿಂದ ಬರುವ ಗಂಟೆಯ ಸದ್ದು (ಮರಿನಾ. ೧). [ ←ಇಂ. Church ]

**ಚರ್ಚೆ** (ನಾ). ೧. ಸುಗಂಧದ್ರವ್ಯಗಳ ಅನುಲೇಪನ : "ಸಮಾಲಂಭನಂ, ಚರ್ಚಾ, ಮಾರ್ಜನಾ—ಈ ೩ ಚರ್ಚೆ" (ಹಲಾಯು. ೮೯-೩೦೬); ತರಳಿಕೆ ತಂದ ಚಂದನದ ಚರ್ಚೆಗಳಿಂ . . . ಮೂರ್ಛೆಯಿಂದೆಚ್ಚೆತ್ತು (ಕಾದಂಪೂ. ೮೮೪); ಮೃಗಮದ ಘುಸೃಣ ಚಂದನ ಚರ್ಚೆಯೊಳಿಂ (ಜಗವಿ. ೪-೮೦ ವ). ೨. ಚಿಂತನೆ : ಮನಸ್ಸಿನಲ್ಲಿ ಮತ್ತೆ ಮತ್ತೆ ಆಲೋಚಿಸುವುದು ; ಪರ್ಯಾಲೋಚನೆ : "ಚಿಂತೆಯುಲ್ಲಿಯುಂ ಚರ್ಚಾ ಎಂಬುದು" (ಹಲಾಯು. ೦೩೨-೮); ಕವಿಕಾವ್ಯದ ವಿಷಯವಾಗಿ ಕೆಲವು ಮಾತುಗಳನ್ನು ಚರ್ಚೆಗೆ ಎತ್ತಿಕೊಂಡಿರುವರು (ಸಾಹಿಸ. ೦೦೪). ೩. ದುರ್ಗೆ; ಚಾಮುಂಡಿ; ಭೈರವಿ: "ಚಾಮುಂಡಿ ಕರ್ಣಮೋಟಿ ಮಹಾ ಮಾಯಾಮೂರ್ತಿ ಚರ್ಚೆಯುಂ ಭೈರವಿಯಾ ನಾಮವಿಮಕ್ಯಂ" (ಪಶುಕೋ. ೪-೦೯); "ಚಾಮುಂಡಿ ಚರ್ಚೆ ಭೈರವಿಯೆನಲು ವನದೇವಿ" (ಮಂಗರಾ. ೫-೦೪). ೪. ಕಾರಣ ಸಹಿತವಾಗಿ ವಿಮರ್ಶಿಸುವುದು; ತರ್ಕ. ೫. ವಾಗ್ವಾದ; ವಿವಾದ. ೬. ಉತ್ಸವ ; ಸಂತೋಷ ; ಉಲ್ಲಾಸ : "ಮುದಮುಮಲು ಚರ್ಚೆ" (ಮಂಗರಾ. ೯೬-೦೬). ೭. ರತಿಕ್ರೀಡೆ; ಮೈಥುನ. ೮. ಮಾತು; ಉಕ್ತಿ. ೯. ವ್ರತ. ೧೦. ಪ್ರತಿಮೆ. ೧೧. ನೀರುಗುಳ್ಳೆ ; ಬುದ್ಬುದ. "ಸ್ನೇಹಂ ಯುಕ್ತಿ ಪ್ರತಿಮೋತ್ಸಾಹಂ ವ್ರತ ಚಿಂತೆ ಚಂಡಿಕಾದೇವಿಯುರುಂ ದೇಹಕ್ಕನುಲೇಪನಕಂ ಮೋಹದಿ ಪುಟ್ಟುವದು ನವಮ ಚರ್ಚಾಶಬ್ದಂ" (ನಾನಾಕೋ. ೦೦೩); "ರತಿಯೊಳ್ ಚಿಂತೆಯೊಳ್ . . . ವ್ರತದೊಳ್ ಲೇಪನಬುದ್ಬುದೋತ್ಸವಗಳೊಳ್ ಚರ್ಚಾಭಿಧಾನಂ" (ನಾನಾರ. ೬೪). [ ಸಂ. ಚರ್ಚಾ ]

**ಚರ್ಚೆಗೈ** (ಕ್ರಿ). ೧. ಬಳಿ; ಸವರು. ೨. ನೇವರಿಸು: ಪೊಚ್ಚ ಪೊಸ ಸುರಚಾಪದಂತೆಸೆವ ವಾಲಧಿಯ ಚರ್ಚೆಗೈವುತಮಾಣದು ಕೊರಳ ಕೊಂಕಿಸಿ ಮರುತನಚ್ಚರಿಯ ಕುವರ . . . ಉಲ್ಲಾಸದಿಂದೆಸೆದನು (ವೆಂಕಾರಾ. ೫-೧-೦೫). ೩. ಚರ್ಚೆಮಾಡು; ಚರ್ಚಿಸು; ವಾದಿಸು. [ಚರ್ಚೆ+ಗೈ (<ಕೆಯ್$_1$)]

**ಚರ್ದಿ** (ನಾ). ಕಾರಿಕೊಳ್ಳುವಿಕೆ; ಓಕರಿಕೆ; ವಾಂತಿ; ವಮನ. 'ಚರ್ದಿಸು' ಪರಾ. [ <ಸಂ. ಛರ್ದಿ ]

**ಚರ್ದಿಸು** (ಕ್ರಿ). ಓಕರಿಸು ; ಕಾರಿಕೊಳ್ಳು ; ವಾಂತಿಮಾಡು : ಕುಡೆ ವಿಧಿಪೂರ್ವಕಂ ಸುರಸಮಪ್ಪುದನ್ನಮನುಂಡು ತೃಪ್ತಿಯಂ ಪಡೆದು ಬಟ್ಟಕ್ಕೆ ಚರ್ದಿಸಿದೊಡಂತದನಾ ಸತಿ ತನ್ನ ಕೈಗಳಿಂದುಡುಗಿ (ಮಹಾನೀ. ೬-೦೩೪). 'ಛರ್ದಿಸು' ಪರಾ. [ ಚರ್ದಿ + – ಸು$_1$ ]

**ಚರ್ಪಟಿಸು** (ಕ್ರಿ). ೧. ಶಂಕರಾಚಾರ್ಯರ ಚರ್ಪಟಮಂಜರಿ ಸ್ತೋತ್ರವನ್ನು ಹೇಳು. ೨. ಹೀಯಾಳಿಸು; ಬಡಬಡಿಸು. ೧, ೨: ಜೀವದ ಚಿತ್ತು, ಜಗತ್ತಿನ ಸತ್ತು, ತಿಳಿದಾನಂದದ ಸಂವಿತ್ತು. ಚರ್ಪಟಿಸಲಿ ಅದ್ವೈತದ ವಾದ ಜಾಣ ಬೊಮ್ಮ ಮೌನದೊಳಿತ್ತು (ಅರಳು. ೨೫೮-೩). [ ಚರ್ಪಟ$_0$ + – ಇಸು$_3$ ]

**ಚರ್ಬಿ, ಚರಬಿ** (ನಾ). ಕೊಬ್ಬು : ನೆಣ ; ಮಜ್ಜೆ : ಚರ್ಬಿ ಇಲ್ಲದ ನನ್ನ ಮಗ ಇವನು (ಅಮಾಕಾ. ೨೨೨). **ಚರಬಿ**: ಅಲ್ಲಿ ಸ್ವಲ್ಪ ಚರಬಿ ಇಟ್ಟಿದ್ದೆ. ತಂದುಕೊಡು ಕತ್ತಿಗೆ ಹಚ್ಚಬೇಕು (ಮರಿನಾ ೯೪); ಚರಬಿ ಮಿಶ್ರಿತ ಇಂಗ್ರೇಜೀ ಬಿಸ್ಕೇಟುಗಳನ್ನು ತಿಂದು ನಿಮ್ಮ ಸ್ವಾಸ್ಥ್ಯವನ್ನು ಕಳೆದುಕೊಳ್ಳಬೇಡಿರಿ (ಕುರಿಹಿಂ. ೦೩೩) : [ ←ಪಾರ. ಚರ್ಬೀ: ಹಿಂ. ಮರಾ. ಚರಬೀ ]

**ಚರ್ಮ** (ನಾ). ೧. ತೊಗಲು ; ತ್ವಕ್ಕು ; ಅಜಿನ : "ಕೋಲ್ ತೊವಲುಂ ಸಮ್ಮುಮದಿರದಕ್ಕುಂ ಚರ್ಮ" (ಶಬ್ದಮ. ೮೫). ೨. ಗುರಾಣಿ; ಢಾಲು: "ಖೇಟಕಂ, ಫಳಕಂ, ಚರ್ಮ, ಆವರಣಂ–ಈ ೪ ಹರಿಗೆ" (ಹಲಾಯು. ೭೩-೩೦೩). [ ಸಂ. ಚರ್ಮನ್ ]

**ಚರ್ಮಕಶೆ** (ನಾ). ಸೀಗೆಮರ ಮತ್ತು ಅದರ ಕಾಯಿ [ <ಸಂ. ಚರ್ಮಕಷಾ ]

**ಚರ್ಮಕಾರ** (ನಾ). ಮೆಟ್ಟು ಹೊಲಿಯುವವನು; ಚಮ್ಮಾರ; ಸಮಗಾರ: "ಡೋಹಾರಃ– ಚರ್ಮಕಾರಂ" (ಕಾಕಶ್ಯ. ೬೬) ; ಹೊಲೆಯನೊಮ್ಮೆಯು ಪಾಡಲಿಕೆಯರವಿಂದನಾಭನ ನಾಮಮಾತ್ರದಲಿ ರೂಢಿಸಿಯೆನುತ ಚರ್ಮಕಾರರ ಗೂಡಿನಲಿ ಜನಿಸುವನು (ಕುಮಾ,ಭ. ೬೦೩. ಶಾ. ೩೪೩). [ ಸಂ. ]

**ಚರ್ಮಕೃತ್ತು** (ನಾ).=ಚರ್ಮಕಾರ : "ಚರ್ಮಕೃತ್, ಪಾದುಕಾಕಾರಃ– ಈ ೨ ಸಮ್ಮಗಾರಂ" (ಹಲಾಯು. ೯೮-೪೪೨). [ ಸಂ. ಚರ್ಮಕೃತ್ ]

**ಚರ್ಮಗತ** (ಗು). ಚರ್ಮಕ್ಕೆ ಸೇರಿದ; ಚರ್ಮಕ್ಕೆ ಸಂಬಂಧಿಸಿದ: ಅನ್ನಗತ ಪ್ರಾಣ. ಚರ್ಮಗತ ದೃಷ್ಟಿ (ಗಾದ). [ ಚರ್ಮ + ಗತ$_2$ ]

**ಚರ್ಮಘರ್ಘರ** (ನಾ). ಎಣ್ಣೆ ಮೊದಲಾದುವನ್ನು ಹಾಕಲು ಮಾಡಿದ ಚರ್ಮದ ಬುದ್ದಲಿ,–ಬುಂಡಿ : "ಚರ್ಮಘರ್ಘರ[ಪಾಠಾಂ. ಗರ್ಬಟ, ಗರ್ಬರ]ಮೆನಲು ಬುದ್ದಳಿಗೆ ನಾಮಮಕ್ಕುಂ" (ಮಂಗರಾ. ೬೩-೨೭). [ ಚರ್ಮ + ಘರ್ಘರ$_2$ (<ಗರ್ಘರ$_1$) ]

**ಚರ್ಮಚಕ್ಷು** (ನಾ). ಪ್ರಾಕೃತಿಕವಾದ ಕಣ್ಣು ; ಭೌತಿಕ ದೃಷ್ಟಿ; ಹೊರಗಣ್ಣು : ಈ ಚರ್ಮಚಕ್ಷುಗಳಿಂ ಕಾಣ್ಬ ಪದಾರ್ಥಮಿಲ್ಲೆನುತೆ (ಜಗವಿ. ೦-೬೩) ; ಚರ್ಮಚಕ್ಷುಗಳಂತೆ ಅಂತಃಚಕ್ಷುಗಳೂ ಉಪಯೋಗಕ್ಕೆ ಬಾರದ ಧೃತರಾಷ್ಟ್ರನಂಥ ವರ್ಗವನ್ನು ಅಪವಾದವೆಂದು ಬಿಟ್ಟು ಬಿಟ್ಟರೂ (ಪ್ರಬಂಧ. ४೭). [ ಚರ್ಮ + ಚಕ್ಷು ]

**ಚರ್ಮಣ** (ನಾ). ವಾಗ್ಮಿ ; ಅವಧಾನಿ ; ಅನೇಕರ ಪ್ರಶ್ನೆಗಳಿಗೆ ಏಕಕಾಲದಲ್ಲಿ ಕೂಡಲೆ ಉತ್ತರ ಹೇಳಬಲ್ಲವನು : "ಮೇಳೈಸಿ ನಾನಾರವಕ್ಕೆ ಪ್ರತಿಗೈವವಂ ಚರ್ಮಣಂ ವಾಗ್ಮಿಯುಕ್ಕುಂ" (ಮಂಗರಾ. ೦೦೬-೧೭). [ ? ]

**ಚರ್ಮದಂಡ** (ನಾ). ಚರ್ಮದಿಂದ ಮಾಡಿದ ಚಾಟಿ ; ಕಶಾದಂಡ ; ಬಾರುಕೋಲು; ಚಮ್ಮಟಿಗೆ: "ಚರ್ಮದಂಡಃ, ಕಶಾ–ಈ ಚಮ್ಮಟಿಗೆ" (ಹಲಾಯು. ೭೩-೨೮೮) ; "ಕಸೆ ಚರ್ಮದಂಡಮೆನೆ ಚಮ್ಮಟಿಗೆಯೆನಿಸಿಕ್ಕು" (ಮಂಗರಾ. ೮೦-೧೩). [ ಚರ್ಮ + ದಂಡ ]

**ಚರ್ಮಪಟ್ಟಿಕೆ** (ನಾ). ೧. ಚರ್ಮದ ಬಾರು. ೨. ಪಗಡೆ ಮೊದಲಾದುವನ್ನು ಆಡಲು ಬಳಸುವ ಚರ್ಮದ ಹಾಸು ; ಪಟ್ಟ. [ ಚರ್ಮ + ಪಟ್ಟಿಕೆ ]

**ಚರ್ಮಪಾದುಕ** (ನಾ). ತೊಗಲಿನ ಹಾವುಗೆ ; ಚರ್ಮದಿಂದ ಮಾಡಿದ ಮೆಟ್ಟು ; ಪಾದರಕ್ಷೆ : "ಚರ್ಮಪಾದುಕಮುಪಾನತಿಯೆನಲ್ ಕೆರವು" (ಮಂಗರಾ. ೩೦-೦೮). [ ಸಂ. ಚರ್ಮಪಾದುಕಾ ]

**ಚರ್ಮಪಾದುಕೆ** (ನಾ).=ಚರ್ಮಪಾದುಕ. [ ಚರ್ಮ + ಪಾದುಕೆ ]

**ಚರ್ಮಪಾಶ** (ನಾ). ಚರ್ಮದಿಂದ ಮಾಡಿದ ಹಗ್ಗ,–ಮಿಣಿ : "ಮಿಣು ಚರ್ಮಪಾಶಂ" (ಮಂಗರಾ. ೮೪-೨೫). [ ಚರ್ಮ + ಪಾಶ ]

**ಚರ್ಮಪ್ರಭೇದಿಕೆ** (ನಾ). ಚಮ್ಮಾರನು ಉಪಯೋಗಿಸುವ ಚೂರಿ,–ಉಳಿ : "ಚರ್ಮ ಕತ್ತರಿಸುವ ಸಾಧನ" (ಅಮರ. ೬೬೪). [ ಸಂ. ಚರ್ಮಪ್ರಭೇದಿಕಾ ]

**ಚರ್ಮಪ್ರಸೇವಿಕೆ** (ನಾ). ತಿದಿ : "ಚರ್ಮಪ್ರಸೇವಿಕೆ = ತೊಗಲ ತಿದಿ" (ಗಂಗಾಮ. ೦೨೯). [ ಸಂ. ಚರ್ಮಪ್ರಸೇವಿಕಾ ]

**ಚರ್ಮಯಷ್ಟಿ** (ನಾ).=ಚರ್ಮದಂಡ : "ಕಶಾಹ್ವಯುಂ ಚರ್ಮಯಷ್ಟಿ" (ವಸ್ತುಕೋ. ೮೬-೨೫). [ ಚರ್ಮ + ಯಷ್ಟಿ ]

**ಚರ್ಮಯಷ್ಟಿಕೆ** (ನಾ).=ಚರ್ಮದಂಡ. [ ಚರ್ಮ + ಯಷ್ಟಿಕೆ ]

**ಚರ್ಮರತ್ನ** (ನಾ). [ಜೈನ] ಚಕ್ರವರ್ತಿಯಾಗುವವನಿಗೆ ತಾನಾಗಿ ದೊರಕುವ ಏಳು ಅಜೀವರತ್ನಗಳಲ್ಲಿ ಒಂದು ; ನೀರಿನ ಮೇಲೆ ತೇಲಿ ಹೋಗಲು ಉಪಯೋಗಿಸುವ ಚರ್ಮದ ಸಾಧನ. ಇದರ ಪ್ರಭಾವದಿಂದ ಚಕ್ರವರ್ತಿಯು ಅಗಾಧ ಜಲದುರ್ಗಗಳನ್ನು ಆಕ್ರಮಿಸಬಲ್ಲನು. ಮಳೆ ಬಂದಾಗ ಮೇಲೆ ಛತ್ರರತ್ನವನ್ನು ಹಿಡಿದು, ಚರ್ಮರತ್ನದ ಮೇಲೆ ಅಪಾರ ಸೈನ್ಯದೊಡನೆ ನಿಶ್ಚಿಂತನಾಗಿ ನಿಂತುಕೊಳ್ಳಬಹುದು : ಅಗಾಧಜಲದುರ್ಗಸಮುತ್ತರಣನಿರತಸಕಲಶಿಬಿರಸಂಧಾರಣಶಕ್ತಿಯುಕ್ತಮಪ್ಪ ವಜ್ರಮಯಮೆಂಬ ಚರ್ಮರತ್ನಮುಂ (ಆದಿಪು. ೦೦-೩ ವ) ; ನೆಲನೆಲ್ಲಮನವರೇಕಾರ್ಣವಂ ಮಾಡಿದೊಡಡಿಯೊಳ್ ಪಾಸಿದ ಚರ್ಮರತ್ನಮುಂ ಮೇಲೆ ಪಿಡಿದ ಛತ್ರರತ್ನಮುಂ ಕಾಯೆ(ಅಜಿತಪು. ೯-೭೪ ವ); ಗಗನತಳದಂತೆ ಪೆರ್ಮೆಯುಂ ತಳೆದ ವಜ್ರಮಯಮೆಂಬ ಚರ್ಮರತ್ನಮುಂ (ಚಂದ್ರಪು. ೬-೦೦೦ ವ). [ ಚರ್ಮ + ರತ್ನ ]

**ಚರ್ಮವಾದ್ಯ** (ನಾ). ತೊಗಲಿನಿಂದ ಮಾಡಿದ ಹರೆ, ಮೃದಂಗ, ತಬಲ ಮುಂತಾದ ವಾದ್ಯ : ಇಲ್ಲಿ ಚಂಡೆ . . . ಎಂಬ ಒಂದು ಚರ್ಮವಾದ್ಯವನ್ನು ಉಪಯೋಗಿಸುತ್ತಾರೆ (ಯಕ್ಷಗಾ. ೦೭). [ ಚರ್ಮ + ವಾದ್ಯ ]

**ಚರ್ಮವಾವುಗೆ, ಚರ್ಮಾವುಗೆ** (ನಾ).=ಚರ್ಮಪಾದುಕ: ಸೊಸೆಯರ್ಗೆಲ್ಲಂ ಸಲೆ ಚರ್ಮ [ಪಾಠಾಂ. ಮ್ಮ] ಪಾವುಗೆಯುನಾ ಲಲನೆ ಮಹೋತ್ಸಾಹದಿಂದ ಮಾಡಿಸಿ ಕೊಟ್ಟಳ್ (ಸುಕುಮಾ. ೧೦-೦೨೦). **ಚರ್ಮಾವುಗೆ**: ಜನಪವೋಲಗದ ಚಾವಡಿಗೆಯ್ದೆ ಕೇಳ್ದನಾ ಚರ್ಮಾವುಗಾರವೆಂದು (ಗುರುಚ. ೦೩-೫೫). [ ಚರ್ಮ + ಪಾವುಗೆ ]

**ಚರ್ಮಶಾಸ್ತ್ರ** (ನಾ). "ಚರ್ಮ ಮತ್ತು ಚರ್ಮರೋಗ ವಿಷಯಕವಾದ ಶಾಸ್ತ್ರ ; ಚರ್ಮಶಾಸ್ತ್ರ" (Dermatology. ಇಂಕಿನಿ). [ ಚರ್ಮ + ಶಾಸ್ತ್ರ ]

**ಚರ್ಮಸೇವನ** (ನಾ). ತಿದಿ : "ಧೃತಿ ಚರ್ಮಸೇಚ[ವ]ನಮೆನಲ್ಕೆ ತಿದಿಯಕ್ಕು" (ಮಂಗರಾ. ೦೩೩-೩೦). [ ಸಂ. (ಚರ್ಮ + ಸೇವನ) ]

**ಚರ್ಮಾಂಬರ** (ನಾ). ತೊಗಲಿನ ಬಟ್ಟೆ, – ವಸ್ತ್ರ, – ಉಡುಗೆ : ಹರಿಣ ಶಾರ್ದೂಲಾದಿ ಚರ್ಮಾಂಬರವೆ ಸಮಕಟ್ಟೆಮಗೆ ರತ್ನಾಭರಣವೇ ರುದ್ರಾಕ್ಷಿಯೆಂದಳು ನಗುತ ತರಳಾಕ್ಷಿ (ಕುಮಾ,ಭ. ೨೦-೭). [ ಚರ್ಮ + ಅಂಬರ ]

**ಚರ್ಮಾಕ್ಷಿ** (ನಾ). = ಚರ್ಮಚಕ್ಷು : ಹರನನೀ ಚರ್ಮಾಕ್ಷಿಯಲಿ ಗೋಚರಿಸಬೇಡಿದುದಂಬು ಮರ್ತ್ಯದೊಳಿರವು ಮಝು ಭಾಪೆನ್ನ ಪುಣ್ಯವೆನುತ್ತ ಬಿಸುಸುಯ್ದು (ಕುಮಾ,ಭ. ೭-೨). [ ಚರ್ಮ + ಅಕ್ಷಿ ]

**ಚರ್ಮಾಯತನವಕ್ಕಿ** (ನಾ). ಬಾವಲಿ ; ಕಣ್ಣುಕಪ್ಪಡಿ : ಜಠನದಪ್ಪದ ಕೊನೆವಿಡಿದು ನೇಲುವ ಚರ್ಮಾಯತನವಕ್ಕಿಯು ಕಂಡು ನಗುಕೆ (ದೋಹಕ. ೨೪-೬೨). [ ಚರ್ಮ + ಆಯತನ + ವಕ್ಕಿ$_1$ ]

**ಚರ್ಮಾವುಗೆ** 'ಚರ್ಮವಾವುಗೆ' ನೋ.

**ಚರ್ಮಿ** (ಗು). ೧. ಗುರಾಣಿಯನ್ನು ಹಿಡಿದಂಕೊಂಡ. (ನಾ). ೨. ಹರಿಗೆ; ಗುರಾಣಿ : "ಫಳಕಂ ಖೇಟಕಂ ಚರ್ಮಿ ಹರಿಗೆಯುಕ್ಕುಂ" (ಮಂಗರಾ. ೮೬-೩೦). ೩. ಗುರಾಣಿಯನ್ನು ಹಿಡಿದುಕೊಂಡವನು ; ಯೋಧ : "ಚರ್ಮಿ, ಫಲಕಪಾಣಿ–ಕಡಿತಲೆಗಾಱ" (ಪಾಕರಾ. ೬). ೪. "ಭುಜಪತ್ರೆಗಿಡ" (ಅಮರ. ೬೬೪). [ ಸಂ. ಚರ್ಮಿನ್ ]

**ಚರ್ಮೇಂದ್ರಿಯ** (ನಾ). ೧. ಪಂಚೇಂದ್ರಿಯಗಳಲ್ಲಿ ಒಂದಾದ ಚರ್ಮ ; ಸ್ಪರ್ಶೇಂದ್ರಿಯ. ೨. ಭೌತಿಕಜಗತ್ತಿಗೆ ಸೀಮಿತವಾದ ಇಂದ್ರಿಯ ; ಚರ್ಮೇಂದ್ರಿಯಗಳಿಗೆ ಗೋಚರಿಸುವ ಮಹಾಭೌತಿಕ ಸೃಷ್ಟಿ; ಶಬ್ದಗಳಿಂದ ಸೂಚಿತವಾಗುವ ಸಾಹಿತ್ಯ ಸೃಷ್ಟಿ; ಮನಸ್ಸಿಗೇ ಹೊಳೆಯುವ ಕಲ್ಪನಾಸೃಷ್ಟಿ (ಸಾಹಿವಿ. ೦೪೨). [ ಚರ್ಮ + ಇಂದ್ರಿಯ ]

**ಚರ್ಯೆ** (ನಾ). ೧. ನಡತೆ; ನಡೆವಳಿ: ನಾವು ಅವರ ವಿಷಯದಲ್ಲಿ ತೋರಿಸಿದ ಚರ್ಯೆವು ಅಷ್ಟು ಶ್ಲಾಘ್ಯತರವಾದ್ದೆಂದು ಕಾಣುವುದಿಲ್ಲ (ಕಣಕಮಾ. ೩೦). ೨. ಆಚರಣೆ ; ಅನುಷ್ಠಾನ : ಶೈವಾಗಮಗಳೆಲ್ಲವೂ ಜ್ಞಾನ, ಯೋಗ, ಕ್ರಿಯಾ, ಚರ್ಯೆ ಎಂಬ ನಾಲ್ಕು ವಿಷಯಗಳನ್ನು ವಿವರಿಸತಕ್ಕವುಗಳಾಗಿವೆ (ಧಾರದ. ೨೦೦). [ ಸಂ. ಚರ್ಯಾ ]

**ಚರ್ಯಾಧಿಕಾರ** (ನಾ). ೧. ಅನುಷ್ಠಾನದ ಯೋಗ್ಯತೆ. ೨. ಅನುಷ್ಠಾನ ಮಾಡಿ ಸಿದ್ಧಹಸ್ತನಾದವನು : ಆರ್ಯಾಶತಕವಂ . . . ಚರ್ಯಾಧಿಕಾರನತ್ಯಾಶ್ಚರ್ಯಮರವಾಣಿಯಿಂದಮೊಸಗಿದನೊಲವಿಂ (ಶಾಕುಂತ. ೬-೦೦). [ ಸಂ. (ಚರ್ಯಾ + ಅಧಿಕಾರ) ]

**ಚರ್ಯಾಪಾದ** (ನಾ). [ವೀಶೈ] ಆಚಾರ ಸಂಪ್ರದಾಯ ಹಾಗೂ ವ್ರತಗಳನ್ನು ತಿಳಿಸುವ ಆಗಮಭಾಗ : ಚರ್ಯಾಪಾದವು ಆಚಾರಸಂಪ್ರದಾಯಗಳನ್ನೂ ವ್ರತನಿಯಮಗಳನ್ನೂ ಹೇಳುತ್ತದೆ (ಧಾರದ. ೨೦೦).

[ ಸಂ. (ಚರ್ಯಾ + ಪಾದ) ]

**ಚರ್ಯಾಮಾರ್ಗ** (ನಾ). ೧. [ಶೈವ] ಚರ್ಯಾಮಾರ್ಗ, ಕ್ರಿಯಾಮಾರ್ಗ, ಯೋಗಮಾರ್ಗ ಮತ್ತು ಜ್ಞಾನಮಾರ್ಗ ಎಂಬ ಮೋಕ್ಷ ಸಾಧನೆಯ ನಾಲ್ಕು ಮಾರ್ಗಗಳಲ್ಲಿ ಒಂದು : ಚರ್ಯಾಮಾರ್ಗ ಅಥವಾ ದಾಸ ಮಾರ್ಗದಲ್ಲಿ ಸಾಧಕನು ದೇವಸ್ಥಾನಗಳಲ್ಲಿ ಶಿವಾರ್ಚನೆಗೆ ಸಲಕರಣೆಗಳನ್ನೊದಗಿಸಿ . . . ಶಿವಭಕ್ತರ ಸೇವೆ ಮಾಡಿಕೊಂಡು . . . ಸಾಲೋಕ್ಯ ಪದವಿಯನ್ನು ಹೊಂದುವನು (ಧಾರದ. ೨೦೭). ೨. [ಜೈನ] ಚರಿಗೆಗಾಗಿ ಹೋಗುವ ಉದ್ದೇಶ : ಚಂಪಾನಗರಕ್ಕೆ ಚರ್ಯಾಮಾರ್ಗದಿಂ ಬರುತ್ತಂ (ಸುಕುಮಾ. ೪-೩೩ ವ). [ ಸಂ. (ಚರ್ಯಾ + ಮಾರ್ಗ) ]

**ಚರ್ಯೆ** (ನಾ). ೧. ನಡೆ ; ನಡತೆ ; ವರ್ತನೆ : ಗುರು ಆಕೆಯ ಚರ್ಯೆಗೆ ವಶನಾಗಿ, ಆಕೆಗೆ ಧರ್ಮವನ್ನು ಉಪದೇಶ ಮಾಡಿದನು (ಜಕ್ಕು.ಖ. ೦೮) ; ಹೆಂಡತಿಯಾದವಳಿಗೆ ಗಂಡನ ಚರ್ಯೆಯಲ್ಲಿ ಮರುಅಭಿಪ್ರಾಯವನ್ನು ಸೂಚಿಸುವ ಅಧಿಕಾರವಿದೆಯೇ? (ಕಾವೇರಿ. ೦೯೩). ೨. ಅಭಿವ್ಯಕ್ತಿ. 'ಮುಖಚರ್ಯೆ', ಪರಾ. ೩. [ಜೈನ] ಅಹಿಂಸೆಯ ಪ್ರತಿಜ್ಞೆ,-ಆಚರಣೆ: ಚರ್ಯೆಯೆಂಬುದು ದೇವಕಾರ್ಥಮುಂ ಮಂತ್ರಸಿದ್ಧ್ಯರ್ಥಮುಂ ಮೋಷಣಾರ್ಥಮುಂ ಆಹಾರಾರ್ಥಮುಂ ಭೋಗಾರ್ಥಮುಮಾಗೆ ಜೈನನಪ್ಪಾತಂ ಹಿಂಸೆಗೆಯ್ಯನಲ್ಲಂ (ಚಾವುಂಪು. ೨೪೬). [ ಸಂ. ಚರ್ಯಾ ]

**ಚರ್ವಣ** (ನಾ). ೧. ಅಗಿದು ತಿನ್ನುವುದು ; ನುರಿಸುವುದು : ಸಮ್ಮಾರ್ಜಿತೋಜ್ಜ್ವಲದಶನನಿಚಯತಾಂಬೂಲಚರ್ವಣಭರಿತಕಪೋಲರುಂ ಗೋನಿಯೋಗ ದಂಡಧರರುಮಾಗಿ(ಆಗವ. ೯-೦೦ ವ). ೨. ಮನಸ್ಸಿನಲ್ಲಿ ಮೆಲುಕು ಹಾಕುವಿಕೆ; ಪುನಶ್ಚಿಂತನೆ: ಅನುಭವದ ಚರ್ವಣರೂಪದ ಪುನರನುಭವವೇ ಕಲಾಸೃಷ್ಟಿಗೆ ಕಾರಣವಾದ ಅನುಭವ (ಸೌಂದಸ. ೦೪). [ ಸಂ. ]

**ಚರ್ವಣೆ** (ನಾ). = ಚರ್ವಣ ೨ : ಅವುಗಳ ಚರ್ವಣೆಯಿಂದ ಆಸ್ವಾದ್ಯವಾದುದೇ ಅಲೌಕಿಕ ಕರುಣರಸ (ಧ್ವನ್ಯಾಲೋ. ೦೯ ಅವ).

[ ಸಂ. ಚರ್ವಣ ]

**ಚರ್ವಿ** (ನಾ). (?) : ಉದಿಪುದು ಮಮಾಹವೆಂಬುರು ಭ್ರಾಂತಿ ದುರ್ಮಾರ್ಗ ಪದವಿಯಂ ಪಿಡಿದ ಚರ್ವಿಯು ಜನಿಸಿ ವೈಕೃನ್ಯ ವಿಧಿಯೆನಿಪ ಕೃಷ್ಣ ಜಿಹ್ವೆಯು ಮನೋಭ್ರಮೆಯಿಂದ ಭಾವಿಸುತಮವಿಸುತಿಹುದು (ಬಂಕಾರಾ. ೩-೨೦-೬೦). [ ? ]

**ಚರ್ವಿತ** (ಗು). ೧. ಅಗಿದು ನುರಿಸಿದ. ೨. ತಿಂದ ; ಉಂಡ ; ರುಚಿ ನೋಡಿದ. 'ಚರ್ವಿತಚರ್ವಣ' ಪರಾ. [ ಸಂ. ]

**ಚರ್ವಿತಚರ್ವಣ** (ನಾ). . ತಿಂದುದನ್ನೇ ಮತ್ತೆ ತಿನ್ನುವುದು ; ಅಗಿದುದನ್ನೇ ಮರಳಿ ಅಗಿಯುವುದು. ೨. (ಅಲಂ) ಮಾಡಿದುದನ್ನೇ ಮಾಡುವಿಕೆ ; ವ್ಯರ್ಥವಾದ ಪುನರುಕ್ತಿ ; ತೌಡು ಕುಟ್ಟುವುದು : ನಿಚ್ಚ ಮಿಾ ಓಪ್ಪಪೇಷಣಮಿಾ ಚರ್ವಿತಚರ್ವಣಂ ಸುಖಮಿಂದೇಂ ನಿನ್ನಂ ಮರುಳ್ಮಾಡಿತೋ (ಅಜಿಪು. ೩-೬೪) ; ಭವಜಲರಾಶಿಯೊಳ್ ಮುಳುಗಲಟ್ಟಿಯು ಚರ್ವಿತಚರ್ವಣಕ್ಕೆ (ಆಚಪು. ೦೦-೩). [ಚರ್ವಿತ + ಚರ್ವಣ]

**ಚರ್ವಿಸು** (ಕ್ರಿ). ತಿನ್ನು; ಸೇವಿಸು: ಕೈಬಾಯಿಗಳ ತೊಳೆದು ತಾಂಬೂಲವಂ ಚರ್ವಿಸಿ (ನವಮೋ. ೦೦-೭೨). [ ಚರ್ವಣ + – ಇಸು$_2$ ]

**ಚರ್ವೆ** 'ಜರ್ವೆ$_1$' ನೋ.

**ಚಲ್$_1$** 'ಸಲ್$_1$' ನೋ.

**ಚಲ್$_2$** 'ಚಲ್ಲು$_1$' ನೋ.

**ಚಲ$_1$, ಚಳ$_1$, ಛಲ$_1$** (ನಾ). ೧. ಪಟ್ಟುಹಿಡಿಯುವುದು; ಹಿಡಿದುದನ್ನು ಬಿಡದೆ ನಡೆಸುವ ದೃಢಚಿತ್ತತೆ ; ಸ್ಥಿರಸಂಕಲ್ಪ ; ಮನೋನಿಶ್ಚಯ : ಕಂದರ್ಪಂ ಚಲದೆನ್ನೊಳ್ಪಿಂದಂ (ಕವಿರಾ.೨-೮೨). ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ (ಪಂಪಭಾ. ೦೪-೬೪) : ಕಿಡದ ಜಸಕ್ಕೆ ತಾನೆ ಗುಜಿಯಾದ ಚಲಂ . . . ಆರ್ದ್ದ ಚಲಂ ಚಲದಂಕರಾಜನ(ಎಕ. II, ೦೩೩-೨೦ ; 982); ಚಲದಿಂ ಯದುಬಲವಾಂತಿಸೆ ಸಲೆ ಶರತತಿ ಖಚರರಮಘನಂಗಳನಾಗಳ್ಗೆಲೆ . . . ನಭಶ್ಚರಸ್ಯೆನ್ಯಂ (ನೇಮಿಪು. ೭-೮೯). ೨. ಮೊಂಡುತನ; ಹಟಮಾರಿತನ: ಚಲದಿಂ ಕೃಷ್ಣೆಯ ಕೇಶಮಂ ಪಿಡಿದ ನಿನ್ನಿಂದಾದ ಬಲ್ ನಿನ್ನುರಸ್ಥಲಮಂ ಪೋಬದೆ ಪೋಪುದಲ್ತು (ಪಂಪಭಾ. ೦೨-೦೯೬). ೩. ಹಿಡಿತ ; ಬಿಗಿ : ಶ್ಲೇಷ್ಮದ ಚಲ ಕತ್ತರಿಸಿ ಬೀಳುವುದು (ಸಕಲ. ೨೨೩). ಚಳ$_1$: ೧. ಪುಗೆ ನೃಪಸಂಕುಳಂ ಮನಸಿಜಗ್ರಹವಾಗ್ರಹದಿಂದೆ ಪತ್ತಲಂದೊಗೆಯೆ ವಿಕಾರಚೇಷ್ಟೆ ಚಳವಂ ನುಡಿದು (ನೇಮಿಪು. ೯-೮೯). ಛಲ$_1$ : ೧. ಛಲ ಬೇಕು ಶರಣಂಗೆ ಪರಧನವನೊಲ್ಲೆನೆಂಬ (ಬಸವ. ೩೭೩) ; ಛಲದಿಂ ಪೋರಿದರೆಲ್ಲರಂ ಗೆಲಿದು ಬಂದಾ ಪೆಣ್ಣ ಕೊಂಡೋಡಿದಂ (ಸೋಮೇಶ. ೪೪): ಎಲವೆಲವೊ ಕಲಿಯಾಗು ಮಾರುತಿ ಗೆಲಿದನೆಂದಿರಬೇಡ . . . ಛಲವದುಳ್ಳಡೆ ಸಾಕು (ಕುಮಾರವ್ಯಾಸ. ೦೩-೩೨). 'ಛಲವಿಡಿ' ಪರಾ. ೪. ಹಟಗಾರ; ದೃಢಸಂಕಲ್ಪವುಳ್ಳವನು : ಮೂಜಗದೊಳ್ ಮೆಱೆವ ಮಾನವದೇವಂ ಗೆಲಿದಂ ಅಸ(ಶ)ನ ಬೆಸನವ ಛಲರಧಿಕಂ ಹಾಲ ಬಸವಿದೇವಮುನೀಸಂ (ಎಕ. XXI, ೧೩-೩೪ : 1260).

**ಚಲಚಲ** (ದ್ವಿರುಕ್ತಿ) : ಚಲಚಲದಾಂತು ಕಾದುವ ಸುಯೋಧನ ಸಾಧನದೊಡ್ಡುಗಳ್ (ಪಂಪಭಾ. ೦೦-೩೩). **ಚಲಕೆ ನಲ್ಲಾತಂ**=ದೃಢಸಂಕಲ್ಪದಲ್ಲಿ ಆಸಕ್ತಿಯುಳ್ಳವನು ; ಒಂದು ಬಿರುದು : ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕಂ ಚಲಕೆ ನಲ್ಲಾತಂ ಶ್ರೀಮತ್ಕನ್ನರದೇವನ ರಾಜ್ಯಮುತ್ತರೋತ್ತರಾಭಿವೃದ್ಧಿಗೆ ಸಲುತ್ತಮಿರೆ (ಸೌಇಇ. IX-I, ೩೩-೨ : 966) ; ಚಲಕೆ ನಲ್ಲಾತಂ ಶ್ರೀಮತ್ಕನ್ನರದೇವಂ (ಎಕ. IV, ೩೩೨-೨ ; 976). **ಚಲಕೆ ಮೊದಲಿಗಂ**=ದೃಢಸಂಕಲ್ಪವನ್ನು ಪಾಲಿಸುವವರಲ್ಲಿ ಮೊದಲಿಗನಾದವನು ; ಒಂದು ಬಿರುದು : ಅಸಹಿವಿದೂರನಾಳ್ದಾನಿ ವೀರಂ ಚಾಳುಕ್ಯಾರ್ಜುನಂ ಚಲಕೆ ಮೊದಲಿಗಮರಟ್ಟಗುಣ್ಣಾನಕಳಂಕ ಮಹೇಶ್ವರಂ (ಎಕ. XIV, ಮೈಸೂರು. ೦೨೭-೪; ಹಾ. 900). **ಚಲಕ್ಕೆಬಲ್ಲಹಂ**=ದೃಢನಿಶ್ಚಯಕ್ಕೆ ತಕ್ಕ ಪರಾಕ್ರಮ ಉಳ್ಳವನಂ ; ಒಂದು ಬಿರುದಂ : ಉದಾರ ಮಹೇಶ್ವರಂ ಚಲಕ್ಕೆ ಬ[ಲ್ಗ]ಣ್ಡಂ ಶೌರ್ಯ್ಯಮಾತ್ತರ್ಣ್ಡಂ (ಸೌಇಇ. XI-I, ೦೦೩-೭ : 1074). **ಚಲದಂಕ, ಛಲದಂಕ**=ಹಟವುಳ್ಳ ವೀರ ; ದೃಢನಿಶ್ಚಯವುಳ್ಳವನು ; ಒಂದು ಬಿರುದು : ಚಲದಂಕ ಕಂಠೀರವ ನರಸೇಂದ್ರ ಭೂತಳವ ಪಾಲಿಸುತಿರಕಿಯಲಿ (ಕಂಸಾ. ೮-೨) : ಗುಟಲಗಾಳಗತ್ತರಿ ಗರಗಸದ ಬಿರುದಾಳಿಗಳ ಛಲದಂಕ ರಾವುತರೊತ್ತಿ ನೂಕಿದರು (ಕುಮಾರವ್ಯಾ. ೪-೩೬) : ಬಲಗೊಂಡೆನಧಿಕ ಪ್ರವೀಣನ ಬಾಣನ ಕಲೆಗಳಾಸಾರ ಮಯೂರನ ಸುಲಲಿತ ವಾಕ್ಯಭೂಷಣ ಕಾಳಿದಾಸನ ಛಲದಂಕನ ರಾಘವಾಂಕನ (ತ್ರಿಯು. ೨-೦೩). **ಚಲದಂಕಕಾಜ**=ಚಲದಂಕ:

ಪರಸೈನ್ಯಧ್ವಂ ಪೆಱಂಗೆಡೆಗುಡದಟ್ಟಿ ಕೊಲ್ವ ಚಲವುಳ್ಳ ಚಲಂ ಚಲದಂಕಕಾಱನ (ಎಕ. II, ೦೩೩-೩೩ : 982). ಚಲದಂಕಮಲ್ಲ, ಛಲದಂಕಮಲ್ಲ= ೧. ದೃಢಚಿತ್ತದಿಂದ ಕಾದಾಡುವ ವೀರ ; ಒಂದು ಬಿರುದು : ಚಲದಂಕಮಲ್ಲನಾದ ಕಂಠೀರವನರಸರಾಜನು . . . ಪರಾಕ್ರಮದಿಂದ ಕಾದಿದನು (ಕವೀರ. ೦೨೯) ; ಚಲದಂಕಮಲ್ಲನೂ ಅಭಿಮಾನಧನನೂ ಎನಿಸಿದ ಸುಯೋಧನನು ಚಿಂತಾಕ್ರಾಂತನಾದನು (ಧಾಮಚ. ೪೦). ೨. ಹಟಗಾರ : 'ಛಲದಂಕಮಲ್ಲರೂ. ಮಾನಧನರೂ' ಆಗಿ ವರ್ತಿಸುತ್ತಾರೆ (ಶಿಕ್ಷದ. ೦೦೩): ಚಲದಂಕರಾಮ=ರಾಮನಂತೆ ಸ್ಥಿರಸಂಕಲ್ಪದಿಂದ ಹೋರಾಡುವವನು; ಒಂದು ಬಿರುದು : ನರಸಂಕಭೀಮಂ ಚಲದಂಕರಾಮಂ ಗಣ್ಡರ ಗಣ್ಡಂ (ಸೌಇಇ. XX, ೧೮-೯ : 980) ; ಸನಿವಾರಸಿದ್ಧಿ ಗಿರಿದುರ್ಗಮಲ್ಲ ಚಲದಂಕರಾಮ (ಕಇಳ. ೭೪-೦೨-೦೪ : 1170) ; ಸೇಡಿಂಬದ ವಿಪ್ರರೊಂದಳವನೇ ವೊಗಳ್ವೆಂ ಚಲದಂಕರಾಮರ (ಕಇಳ. ೯೭-೯-೩೨ ; ೧೭ನೆಯ ಶತ). ಚಲದ ವಿನಾಯಕ=ನಿರ್ಧಾರಕ್ಕೆ ಬರುವ ಅಡ್ಡಿಗಳನ್ನು ನಾಶಪಡಿಸತಕ್ಕವನು ; ಒಂದು ಬಿರುದು : ಪುರುಷಕಾರದ ಕಾಯ್ಪರು ಪೆಂಪಿನಾಗರಂ ಚಲದ ವಿನಾಯಕಂ ನೆಗಳ್ದ ಜಕ್ಕಣಂ (ಕಇ. I೪, ೦೦-೩೩: 1121). ಚಲದುತ್ತರಂಗ= ಸ್ಥಿರಸಂಕಲ್ಪದಲ್ಲಿ ಮಿಗಿಲಾದವನು ; ಒಂದು ಬಿರುದು : ಏವೊಗಟ್ಟ ನೆವ್ವಱಿಯೆಂ ಚಲದುತ್ತರಂಗನಂ (ಎಕ. II, ೫೯-೮೭: 974). ನನ್ನಿಗಿರಿನಾಥಂ ಚಲದುತ್ತರಂಗ ಜಗದೇಕವೀರ ನೊಳಂಬಕುಲಾಂತಕದೇವ (ಎಕ. VI, ೨೫೯-೨ ; 976). ಛಲದಾಳು=ಹಟಸ್ವಭಾವದವನು; ಚಲಗಾರ: ಕಲಿಯ ಕಾಲ ತೊಡರು ಛಲದಾಳಿಗ[ಪಾಠಾಂ. ಕಲಿತನಕ್ಕೆ]ಲ್ಲದೆ ಇಕ್ಕಬಾರದು (ಬಸವ. ೬೬೩).

**ಚಲ$_2$, ಚಳ$_2$**(ಗು). ೧. ಅಲುಗುವ; ನಡುಗುವ; ಚಂಚಲವಾದ; ಅಸ್ಥಿರವಾದ. ೨. ಚಲಿಸುವ ; ನಡೆಯುವ : ಸಾಗುವ . ಚಲ[ಪಾಠಾಂ. ೪]ಕಲಹಂಸಸಾರಸರಥಾಂಗಮದಾಲಿನಿನಾದಕೈರವೋತ್ಪಲಶತಪತ್ರ . . . ಗಂಧಬಂಧುರಂ ಲಲಿತನ್ನವಾಂಗನಾಲಕಚಯಂಗಳನಾಡಿಪುದಾಯ್ತು (ಆದಿಪು. ೪-೯೩). ೩. ಕದಡಿದ; ಕ್ಷುಬ್ಧವಾದ; ಉದ್ರಿಕ್ತವಾದ. (ನಾ). ೪. ಚಂಚಲನಾದವನು: ಗಾಳಿಗೊಡ್ಡಿದ ದೀಪಾಂಕುರದಂತೆ ತನ್ನ ನಿಯ್ಯುವಂ ಕಾಮಂ ಚಲಂ ಮಾಡಿದು (ಕಾದಂಪೂ. ೭೩೩). ೫. ಕ್ಷೋಭೆ ; ಉದ್ವೇಗ. ೬. ಗಾಳಿ; ವಾಯು. 'ಚಲಗತಿ' ಪರಾ. ೭. ವೇಗಶಾಲಿ. ೬, ೭: ಘನಕು ಘನನ ಚಲಕು ಚಲನ ನೋಡನ್ನಿನನ (ಹಂಸದ. ೬೬-೨೨). **ಚಳ$_2$**: ೧. ಚಳಚಮರರುಹಸಮಾಜಾನಿಳನಿಂದೊಗೆದಸೆವ ಚಾರು ಕರ್ಪೂರರಜೋಾಳಿಯಿಂ . . . ಗೆಲೆವಂದುದೋಲಗಂ (ಶಾಂತೀಶ್ವ. ೨-೮೪). ೮. ಚಂಚಲವಾದುದು: ಚಳವಂಭೋಬಿಂದು ಮುಕ್ತಾಫಲಮೆನಿಸುವವೊಲ್ ಶುಕ್ತಿಕಾಸಂಗದಿಂ (ಮಲ್ಲಿಪು. ೩-೦೯).

ಚಳವಾಗು=ತಡವರಿಸು ; ಕ್ರಮತಪ್ಪು : ಅರಗೀಗಳ್ ನಿರ್ವಾಳ(ಲ)ಮುನಿಸೋ(ರೋ)ದುವೋದಂ ಚಳವಾದೆಡೆಯುೞಿದು ಪೇದ್ವ(ಳ್ವ)ಪಿರುಳುಂ ಪಗಲುಂ (ಎಇ. XVI, ೩-೦೦ ; 980). [ ಸಂ. ]

**ಚಲಂಕು, ಚಲಂಗಂ, ಚಲಕು, ಚಲಗಂ, ಚಲುಂಕು, ಚಲುಕು, ಚೆಲಂಕಂ, ಚೆಲಂಗು, ಜಲಕು** (ಕ್ರಿ). ೧. ಎರಚು ; ಚಿಮುಕಿಸು ; ಚಲ್ಲು: "ಚಲಕು, ಚಲಂಕು–ಕರವಿಮೋಚನೇ (ಕೈಯಿಂದ ಬಿಡುಸಿಕೊಳ್ಳು)" (ಶಮದಾ). **ಚಲಂಗು**: ೧. "ಚ[ಪಾಠಾಂ. ಚೆ]ಲಂಗು–ಕರಮುಕ್ತೌ (ಕೈಯಿಂದ ಬಿಡು)" (ಶಮದಾ). **ಚಲಕು**: ೧. 'ಚಲಂಕು' ಉಲ್ಲೇಖಕ್ಕೆ ಕೊಟ್ಟಿರುವ 'ಶಮದಾ' ಪ್ರಯೋಗವನ್ನು ನೋಡಿ. ೨. ಬಿಸಾಡು; ಒಗೆ; ಬಿಸುಡು: (೬). ೩. ಕಲಕು: ಅಱಿಲ್ಗಳನುೞಿ ತಱಿದೊಲವಿಂ ತಱುಂಬುತೆಯ್ತಂಬತ್ತು ಗರದಿನೆಕ್ಕಸರಂಗೆಯ್ದೊದಿಲ್ದು ತಳೆವುತ್ತ ನೆಱೆ. ಬಾಂದೊಱೆಯಂ ಚಲುಕುತ್ತ ತಳರ್ದರಭವಗಣಂಗಳ್ (ವೀರಪು. ೦೦-೬೦). **ಚಲಗು**: ೨. "ಚ[ಪಾಠಾಂ. ಬ]ಲಗೆ [ಪಾಠಾಂ. ಕೆ]ನೆ ಬಿಸುಡೆಂಬರ್ಥಂ" (ರಸ್ನಕೋ. ೪). **ಚಲುಂಕು** : ೧. "ಚಲುಕು, ಚಲುಂಕು–ಇಲೋತ್ಸರ್ಜನೇ (ದ್ರವವನ್ನು ಚೆಲ್ಲು)" (ಶಮದಾ) : ನಿತ್ಯಬಿಂದುಗೆ–ಬೆಡಂಗು . . ? . . ಚಲುಂಕಿದಂ. ವಲುಂಬಿದಂ (ಶಮದ. ೩೬.ಪ್ರಯೋ) ; ಶೀತಳಾಂಬುವಂ ಮಾನಿನಿ ಪಾಣಿಪಲ್ಲವದಿನೆಲ್ಲರ ಮೇಲೆ ಚಲುಂಕಿಯಾಡಿದಳ್ (ವಳದಂ. ೦೩೩). **ಚಲುಕು** : ೧. 'ಚಲ್ಲುಕಾಡು' ಪರಾ. **ಚೆಲಂಕು**: ೧. "ಚೆ [ಪಾಠಾಂ. ಚ] ಲಂಕೊದು ಕರವಿಮೋಚನಂ" (ಶಬಸಾ. ೨೮-೫೯೯) . ೨. "ಚೆ(ಬೆ)ಲಂಕಿದಂ=ಈಡಾಡಿದಂ" (ಶಮದ. ಪಂ. ೩). **ಚೆಲಂಗು** : ೧. 'ಚಲಂಗು' ಉಲ್ಲೇಖಕ್ಕೆ ಕೊಟ್ಟಿರುವ 'ಶಮದಾ' ಪ್ರಯೋಗವನ್ನು ನೋಡಿ. **ಜಲಕು**: ೧. "ಜಲಕೆಂದು ಕರವಿಮೋಚನ" (ಶವಿಕಂ. ೨೩೯). 'ಕಲಂಕಂ', 'ಚಲ್ಲು$_1$' ಪರಾ. [ ? ]

**ಚಲಂಗು** 'ಚಲಂಕು' ನೋ.

**ಚಲಂಬಿಡಿ, ಚಲವಿಡಿ, ಛಲವಿಡಿ** (ಕ್ರಿ) ಹಟಹಿಡಿ ; ದೃಢನಿಶ್ಚಯವನ್ನು ತೊಡು : ಕೆಲರ್ ನೆತ್ತರೊಳ್ ಮಿಂದು ತಮಗೆ ದೋಷಮಿಲ್ಲೆಂದದರ್ಕೆ ದಿವ್ಯಂಬಿಡವಂತೆ ವೆಂಬಿಸಲ್ ಚಲಂಬಿಡಿದು ನಿಂದಾತರ್ (ಶಾಂತಿಪು. ೯-೩೦ ವ); ಸ್ಮೂಸೆಂದುಂ ಬಾಂಬರನ್ ಅಳರ್ದಿರ್ಕೆಂದು ಚಲಂಬಿಡಿದು ತಱಿಸಂದರರೆಬರ್ (ಬದ್ಧಪ್ರ. ೦೨-೨೪೬). **ಚಲವಿಡಿ** : ಚಲವಿಡಿದೀಗಳಿಂತುಟು ನೆಲುಂಬಿಡಿದಿರ್ಪುದು (ಚಕವಿ. ೫-೯೩); ಸತ್ಯಕೀರ್ತಿಯು . . . ಚಲವಿಡಿದನು (ಕವಿಶ. ೬). **ಛಲವಿಡಿ** : ಛಲವಿಡಿದೊಂದನೆಳಸಿ ಬಾರಿವರಿಯದೆ ನೆಲೆವಿಡಿದೊಂದಱೊಳಿರದೆ (ಹದಿಬ. ೩-೩೭). [ ಚಲ$_1$ + ಬಿಡಿ$_1$ ]

**ಚಲಕು** 'ಚಲಂಕಂ' ನೋ.

**ಚಲಗತಿ, ಚಳಗತಿ** (ನಾ). ವೇಗವಾದ ಗತಿ ; ವಾಯುವೇಗ : ನೂಱಾನೆಯಲಿ ನಿನ್ನವನಳವಿಗೊಟ್ಟನು ಭೀಮಸೇನನ ಚಲಗತಿಯು ಬಾಹುರ ಚಪೇಟ ಪದಪ್ರಹಾರದಲಿ (ಕುವ್ಯಾಗ. ೯-೨೩). **ಚಳಗತಿ** : ಚಳಗತಿಯ ವಾಜಿಗಳು ಕೊಂಡೊಯ್ದುಳುಹಿದವು ತಮಸೆಯಲಿ (ತೊರರಾ. ೨-೯-೮). [ಚಲ$_2$+ಗತಿ]

**ಚಲಗಾರ, ಛಲಗಾರ** (ನಾ). ಹಟಗಾರ; ಚಲವುಳ್ಳವನು (೬). **ಛಲಗಾರ**. 'ಛಲಗಾರ್ತಿ' ಪರಾ. [ ಚಲ$_1$ + -ಗಾರ (< -ಕಾಱ) ]

**ಚಲಗು** 'ಚಲಂಕು' ನೋ.

**ಚಲಚಲಿಸು** (ಕ್ರಿ) . ಚಂಚಲವಾಗು; ಗಾಬರಿಹೊಂದು: ಅವಳ ಕಣ್ಣುಗಳು ಚಲಚಲಿಸುತ್ತಿದ್ದುವು (ಧ್ರುರಾಚ. ೪೬೩). [ <ಚಲ$_2$ + -ಇಸು$_2$ ]

**ಚಲಚಿತ್ತ, ಚಳಚಿತ್ತ** (ನಾ). ೧. ಚಂಚಲವಾದ ಮನಸ್ಸು. ೨. ಚಂಚಲವಾದ ಮನಸ್ಸುಳ್ಳವನು : ಅಸ್ಥಿರಬುದ್ಧಿಯವನು : ಮತ್ತನತಿಶ್ರಾಂತನು ಪ್ರಮದೋನ್ಮತ್ತನತಿಕುಪಿತಾನನನು ಚಲಚಿತ್ತನತಿಕಾಮುಕನು . . . ಇಂತೀ ಹತ್ತುಜನವಾವಾಗ ಧರ್ಮದ ತತ್ತ್ವವನರಿಗಳನೆಱಿಯರ್ಕೈ (ಕುವ್ಯಾಉ. ೩-೬೬); ನೆತ್ತಿಮುಸುಕಿನ ಕೈಯ ಗಲ್ಲದ ಕುತ್ತದಲೆ ನೆಟ್ಟಾಲಿಗಳ ಚಲಚಿತ್ತರಿದ್ದುದು ಸಕಲನಾಯಕವಾಡಿ ದುಗುಡದಲಿ (ಕುವ್ಯಾದ್ರೋ. ೯-೬). **ಚಳಚಿತ್ತ** : ೨. ಚಳಚಿತ್ತರ್ಗೆ ಬಿಂಕದ ಕದಂ ಸತ್ಯಹೀನರ್ಗೆ ಸೋಂಕದ ಕದಂ (ನಂಬಿರ. ೦೭-೭೩) : ಚಳಚಿತ್ತಂ ಜಾಡ್ಯವೃತ್ತಂ ಚಪಳಮತಿಮದಾಂಧಂ (ಶಬಶಂ: ೫-೦೮). [ ಚಲ$_2$ + ಚಿತ್ತ ]

**ಚಲಚಿತ್ರ** (ನಾ). ಚಲನಚಿತ್ರ; ಸಿನೇಮ: ಇಂದಿಗೂ ನಮ್ಮ ಚಲಚಿತ್ರಗಳಲ್ಲಿ ಹತ್ತು ಹದಿನೈದಕ್ಕೆ ಕಡಿಮೆ ಹಾಡುಗಳಿಲ್ಲದಿದ್ದಲ್ಲಿ ಅವು ಯಶಸ್ವಿಯಾಗಲು ಸಾಧ್ಯವೇ ಇಲ್ಲ (ಭಾರದ. ೩೩೩). [ ಚಲ$_2$ + ಚಿತ್ರ ]

**ಚಲತನ** (ನಾ). ಚಂಡಿತನ ; ಮೊಂಡುತನ ; ಹಟಮಾರಿತನ : ಎಲಗೆ ನಿನ್ನೊಡನೆ ನಾನೇಂ ಹರಿಯ ಹೋರುವೆಂ ಚಲ[ಪಾಠಾಂ. ಛಲ]ತನಕಲಸಿದೆನಾಂ (ಜೈಮಿಭಾ. ೦೦-೩೦). [ ಚಲ$_1$ + -ತನ ]

**ಚಲತ್ವ** (ನಾ). ೧. ಚಂಚಲತೆ ; ಅಸ್ಥಿರತೆ. ೨. ನಡುಗುವಿಕೆ ; ಕಂಪನ. [ ಸಂ. ]

**ಚಲದಲ, ಚಳದಳ, ಚಳದಳ** (ನಾ). ಅಲುಗಾಡುತ್ತಲೆ ಇರುವ ಎಲೆಗಳನ್ನುಳ್ಳುದು ; ಅ ರ ಳಿ ಮ ರ; ಅಶ್ವತ್ಥ. **ಚಲದಳ**: "ಚಲದಳವಶ್ವತ್ಥಂ" (ಪಮ್ರ್ರ್ಶಬ್ದ. ೩೩-೪). **ಚಳದಳ**: "ಚಳದಳಂ ಒಪ್ಪೆಲುಬೋಧಿಯಶ್ವತ್ಥಮೆನಲರಳಿದುಕ್ಕುಂ" (ಮಂಗರಾ. ೩೪-೧೧). [ ಚಲ$_2$ + ದಲ ]

**ಚಲದಳ** 'ಚಲದಲ' ನೋ.

**ಚಲದಿ** 'ಶಲದಿ$_1$' ನೋ.

**ಚಲನ, ಚಳನ** (ನಾ). ೧. ಸರಿದಾಡುವಿಕೆ ; ಸಂಚಾರ ; ಗಮನ ; ಗತಿ: ನಡೆ. ೨. ಅಲುಗಾಟ ; ನಡುಕ ; ಕಂಪನ. ೩. ಅಡಿ ; ಚರಣ ; ಪಾದ : ಕೇಳೀವನಸ್ಥಾನದೊಳ್ ಚಲನನ್ಯಾಸವಿಲಾಸಮಂ ಮೆಚ್ಚಿದು (ಕಲಾಮೂ. ೪-೯೦). ೪. ಗಾಳಿ ; ವಾಯು. 'ಚಲನಭವ' ಪರಾ. ೫. [ನಾಟ್ಯ] ಕಣ್ಣಿನ ಒಂಬತ್ತು ಭಾವವಿನ್ಯಾಸಗಳಲ್ಲಿ ಒಂದು : ಭ್ರಮಣ . . . ಚಲನ . . . ಪ್ರಾಕೃತ ಈ ಒಂಬತ್ತು [ಸ್ವನಿಷ್ಟ] ಅಲಿಯ ಭೇದಂಗಳ್ (ರಾಸ್ಕರಂ. ೩-೫೪ ವ). **ಚಳನ**: ೩. ಅದನಾಳ್ವನೆವನತಾರಾತಿನೃಪಮಣಿಮಯಕಿರೀಟಪ್ರಭಾಲೀಢಚಳನನಳಿನಯುಗ್ಮಂ (ಸು ಕು ಮಾ. ೧-೭೯ ವ) : ಶ್ರುತಕೀವಳಿಗಳ ಚಳನಂ ನೆಮಗೆಚಳಸುಖಮನೀಗನವರತಂ (ಶಂದ್ರಪು. ೦-೦೩) : ಚಳನನಿತಂಬಬಿಂಬಕುಚಕರ್ಣಕಪೋಲಲಲಾಟದೇಶದೊಳ್ ಕೊಳಗಿ (ಪುಷ್ಪಪು. ೮-೦೦೦). [ ಸಂ. ]

**ಚಲನಕ** (ನಾ). ಅರ್ಧದವರೆಗೆ ತೊಡೆ ಮುಚ್ಚುವ ಹುಗಸರ ಒಳ ಉಡುಪು ; ಅರ್ಧೋರುಕ ; ಚಂಡಾತಕ. [ ಸಂ. ]

**ಚಲನಚಿತ್ರ** (ನಾ). =ಚಲಚಿತ್ರ: ಚಲನಚಿತ್ರದ ಪಟವು ಸುರುಳಿ ಬಿಚ್ಚಿದ ಹಾಗೆ (ಇಂಚಾಪ. ೩೦-೪೦). [ ಚಲನ + ಚಿತ್ರ ]

**ಚಲನಭವ** (ನಾ). ವಾಯುವಿನ ಮಗ ; ಭೀಮಸೇನ: ದುಶ್ಶಾಸ ಚಲನಭವನಂ ಕೆಣಕುತ (ತುರಂಗ. ೭೨-೬). [ ಚಲನ + ಭವ ]

**ಚಲನವಲನ** (ನಾ). ೧. ಸಂಚಾರ ; ಗತಿ : ಭೂಮಿಯ ಚಲನವಲನಗಳು ನಿಂತುಹೋದುವು (ಶಾಂತರಾ. ೨೬೮). ೨. ಹೋಗುವಿಕೆ, ಬರುವಿಕೆ, ಮಾತಾಡುವಿಕೆ ಮುಂತಾದ ಕ್ರಿಯೆಗಳು ; ಚಟುವಟಿಕೆ ; ಸುಧಾಕರನು ಗುಪ್ತಚಾರನಾಗಿ ಮಾರುವೇಷದಿಂದ ನಮ್ಮ ಚಲನವಲನಗಳನ್ನು ಪತ್ತೆ ಹಚ್ಚಲು ಈಗಾಗಲೇ ತಿರುಗಾಡುತ್ತಿರುವನು (ದೇಶಭು. ೯೪) ; ಅವರ ಚಲನವಲನಗಳಲ್ಲಿ ವ್ಯತ್ಯಾಸವೇನಾದರೂ ಇತ್ತೇ? (ಜೀವಾತ್ಮ. ೨೫೦). [ ಚಲನ + ವಲನ ]

**ಚಲನಶಕ್ತಿ** (ನಾ). ೧. ಚಲಿಸುವ ಶಕ್ತಿ ; ಸಂಚರಿಸುವ ಸಾಮರ್ಥ್ಯ : ವಾಯುವಿನಲ್ಲಿ ಚಲನಶಕ್ತಿಯೂ, ಆಕಾಶದಲ್ಲಿ ವ್ಯಾಪನಶಕ್ತಿಯೂ ಸ್ವಾಭಾವಿಕವಾಗಿ ನೆಲಸಿರುವುದನ್ನು . . . ಕಾಣಬಹುದಾಗಿದೆ (ಶಕ್ತಿವಿ. ೩೦). ೨. ಚಲನೆಯಲ್ಲಿರುವ ಶಕ್ತಿ; ಕಾರ್ಯಮಾಡುತ್ತ ಇರುವ ಶಕ್ತಿ: "ಚಾಲನಶೀಲಶಕ್ತಿ, ಚಲನಶಕ್ತಿ" (Energy, Kinetic. ಪಾರಿವಿ. ೩೭). ೩. [ವಿಜ್ಞಾ] "ಒಂದು ಕಾಯವನ್ನು ಚಲನಗೊಳಿಸುವ, ಅಳೆಯಲಾಗುವ, ಒಂದು ಪ್ರಭಾವ ; ಬಲ. (ಹಿಂದೆ) ಚಲನಶಕ್ತಿ." (Force. ಇಂಕನಿ). [ ಚಲನ + ಶಕ್ತಿ ]

**ಚಲನಸಂಭವ** (ನಾ). ೧. ವಾಯುವಿನ ಮಗ; ಆಂಜನೇಯ; ಮಾರುತಿ: ಆ ಚಲನಸಂಭವನಿದ್ದೆಯಿಂದಚ್ಚರಿಸಿ ಘರ್ಜಿಸಿದ (ಕೌಶಿರಾ. ೨೯-೨೪). ೨. ಭೀಮಸೇನ : ಚಲನಸಂಭವನೊರ್ವ ಕಾನಾಳ ಮೇಲಿದಿರಾದನೆಂಬುದಿದು ಮಿಥ್ಯ (ತುರಂಗ. ೬೪-೦೩). [ ಚಲನ + ಸಂಭವ ]

**ಚಲನಸಖ** (ನಾ). ವಾಯುವಿನ ಮಿತ್ರ; ಅಗ್ನಿ: ಚಲನಸಖ ಸಾಕ್ಷಿಕದಲಾಕುಂಡಲೆ ಕುಶೇಶಯಲೋಚನೆಯನಿತ್ತಳು ಕುಬೇರವ್ರಭಗೆ (ನಿಭಾಗ. ೯-೦೬-೩೮). [ ಚಲನ + ಸಖ ]

**ಚಲನಸುತ** (ನಾ). = ಚಲನಭವ ೨: ಕೊಳುಗುಳದ ಜಯಲಕ್ಷ್ಮಿಗಾಯಿತು ಚಲನಸುತನಲಿ ಮದುವೆ (ಕುಮಾ.ಳ. ೧೯-೮೭). [ ಚಲನ + ಸುತ ]

**ಚಲನಾಂಗ** (ನಾ). ಚಲನಕ್ಕೆ ಸಾಧನವಾದ ಅಂಗ,-ಅವಯವ : ಹೀಗೆ ಚಲನಾಂಗಗಳೆಲ್ಲ ಎದೆಗೆ ಸೇರಿವೆ (ಕೀಟಬ. ೦೮). [ ಚಲನ + ಅಂಗ$_1$ ]

**ಚಲನಿ** (ನಾ). = ಚಲನಕ. [ ಸಂ. ಚಲನೀ ]

**ಚಲನೆ** (ನಾ). =ಚಲನ ೨ : ಈ ಪರಿವರ್ತನೆ ಸುಲಭವಾಗಿ ಕಣ್ಣಿಗೆ ಕಾಣಿಸುವುದಿಲ್ಲ. ಗಡಿಯಾರದಲ್ಲಿ ಗಂಟೆಯ ಮುಳ್ಳಿನ ಚಲನೆಯಂತೆ (ಪ್ರಾವಿವಿ. ೩೨೪). [ ಸಂ. ಚಲನ ]

**ಚಲನೆಗೈ** (ಕ್ರಿ). ಚಲಿಸುವಂತೆ ಮಾಡು ; ಚಂಚಲಗೊಳಿಸು: ನಿನ್ನ ಪತಿ ತಪೋನ್ನಿಷ್ಠೆಯಿಂದಾನಿರಲು ತತ್ತಪೋ [ ಪವ ] ಚಲನೆಗೈಯಲು ಕೋಪದಿಂ ನೋಡೆ ದಹನವಾದಾ (ಪವಮೋ. ೭-೪೩). [ಚಲನೆ + ಗೈ (<ಕೆಯ್$_1$)]

**ಚಲಪತ್ರ** (ನಾ). = ಚಲದಲ : ಪಲಸು ನೇರಿಲು ಚೂತ ಪಿಚುಮಂದ ನ್ಯಗ್ರೋಧ ಚಲಪತ್ರ ಬಿಲ್ವಾಮಲಕ . . . ಸಾಲುಮರಗಳೊಳ್ಪುದುವು (ಪೋಹತ. ೨-೫೪). [ ಚಲ$_2$ + ಪತ್ರ ]

**ಚಲಪದ** (ನಾ). ಹಟದ ಸ್ಥಿತಿ ; ಮೊಂಡುತನದ ರೀತಿ : ನೀತಿಮಾರ್ಗದಿ ತಿಳುಹಿ ಪಾರ್ಥನ ಗಮನ ಕಳುಹೆನೆ ಚಲಪದದಿ ಕೊಡೆನೆನಲು ಮರಳಿ ಸುಭದ್ರೆ ಗಮಿಸಿದಳು (ಕೋಗಯು. ೧೫ ಸಂಧಿ). [ ಚಲ$_1$ + ಪದ$_3$ ]

**ಚಲಪಿಲ್ಲಿ** (ನಾ). ಒಂದು ಬಗೆಯ ಪಿಲ್ಲಿ : ಕಾಲ್ಪಿಲ್ಲಿ ಚಲಪಿಲ್ಲಿ ಕೈ ಬಳೆಯ ದನಿಯಲ್ಲಿ . . . ಬಾ (ಬಣ್ಣರೆ. ೧೨ ೦೭). [ ಚಲ$_2$ + ಪಿಲ್ಲಿ$_1$ ]

**ಚಲಪ್ರತಿಮೆ** (ನಾ). ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ ಪ್ರತಿಮೆ ; ಉತ್ಸವಮೂರ್ತಿ : "ಚಲ" ಪ್ರತಿಮೆಗಳು . . . ಒಂದೆಡೆಯಿಂದ ಮತ್ತೊಂದೆಡೆಗೆ ಸಾಗಿಸಬಹುದು (ಭಾರದ. ೫೦೨). [ ಚಲ$_2$ + ಪ್ರತಿಮೆ ]

**ಚಲಬಂಡವಾಳ** (ನಾ). ಸ್ಥಿರವಾಗಿರದ ಬಂಡವಾಳ ; ಚಲನೆಯಲ್ಲಿರುವ ಬಂಡವಾಳ : 'ಚಲಬಂಡವಾಳ' ಎಂದರೆ ಶ್ರಮಶಕ್ತಿಯ ಮೇಲೆ ಕೂಲಿ–ಸಂಬಳಗಳ ರೂಪದಲ್ಲಿ ವೆಚ್ಚಮಾಡಿದ ಬಂಡವಾಳ (ಮಾವಾದ. ೦೨೨). 'ಚರಬಂಡವಲ' ಪರಾ. [ ಚಲ$_2$ + ಬಂಡವಾಳ (<ಬಂಡವಲ) ]

**ಚಲಬ್ಬೆ** (ನಾ). ಒಬ್ಬಾಕೆಯ ಹೆಸರು : ಸ್ವಸ್ತಿಶ್ರೀ (ಶ್ರೀ)ಬಿಜ್ಜೇಸ್ವರದ ಸೂಳೆ ಚಲಬ್ಬೆ (ಇಆ. ೩, ೦೭೦-೮. 7ನೆಯ ಶತ). [ ? + ಅಬ್ಬೆ$_1$ ]

**ಚಲಮಲ** (ನಾ). ೧. ಹೊಳಪು ; ಚಕಚಕ; ಮಿನುಗುಟ್ಟುವಿಕೆ : ಚಕಚಕ ಚಂಚಲ ಮಿಂಚಿನ ಗೊಂಚಲು ಚಕಮಕಿ ಚಲಮಲ (ಗಂ. ೦೨೩-೦೨). ೨. ಚಂಚಲತೆ ; ಕಂಪನ. 'ಚಲಮಲಿಸು' ಪರಾ. [ ? ]

**ಚಲಮಲಿಸು** (ಕ್ರಿ). ನಡುಗು ; ಚಡಪಡಿಸು : ನಾನು ಹೆದರಿದ ಮೊಲ ಚಲಮಲಿಸುವ ಹಾಗೆ ಮಾಡಿ ಉದ್ಗರಿಸಿದೆನು (ಇಪ್ಪಳ. ೦೮೪). [ ಚಲಮಲ + – ಇಸು$_3$ ]

**ಚಲಮಜು** (ಕ್ರಿ). ಚಲವನ್ನು ತಿಳಿ; ದೃಢನಿಶ್ಚಯವನ್ನು ಅರಿತುಕೊಳ್ಳು: ಬಲ್ಪಡೆ ಸು(ಶೂ)ದ್ರಕನೆ . . . ಮುತ್ತಿ ಆನೆಯಿಂ ಕದಿವೊಂಗಂ ಚಲಮಜುವೊಂಗಂ ಅಟ್ಟಿವೊಂಗಂ ಕುಡಲ್ವೊಂಗಂ ಒಬ್ಬನೋ ಆಚಾರ್ಯನ್ (ಎಇ. XXIV, ೯೩-೮ ; 896). [ ಚಲ$_1$ + ಅಜು ]

**ಚಲಮೂರ್ತಿ** (ನಾ). = ಚಲಪ್ರತಿಮೆ: ಚಲಮೂರ್ತಿಗಾಗಿ ಅರ್ಧಮಂಡಪವನ್ನು ಸೇರಿಸಲಾಯಿತು (ಹೊಯ್ಸವಾ. ೧೫). [ ಚಲ$_2$ + ಮೂರ್ತಿ ]

**ಚಲಮೆ** 'ಚಲುಮೆ$_1$' ನೋ.

**ಚಲವಾದಿ$_1$, ಛಲವಾದಿ** (ನಾ). ಚಲವನ್ನು ಹಿಡಿದವನು ; ದೃಢಸಂಕಲ್ಪವುಳ್ಳವನು ; ಛಲಿ : ಕಡುಚಾಗಿ, ಚಲವಾದಿ (ಶಮದ. ೧೭೫ ಪ್ರಯೋ) : ಚಲವಾದಿಯು ಸಂಗಡ ಹಟವಾದಿ ಸೇರಿದ ಹಾಗೆ (ಗಾದೆ). **ಛಲವಾದಿ**: ಛಳಿಗಂಡಪೊಲು ಮೂರ್ಛೆಗೈಸಿ ಪಧಿಸಿದತಿ ಛಲವಾದಿ ಧಂದವಿದೆನ್ನ (ಶಶಸಾಂ. ೭೯-೪೯). [ ಚಲವಾದ$_0$ + – ಇ$_3$ ]

**ಚಲವಾದಿ$_2$** (ನಾ). ಮಾದಿಗರಲ್ಲಿ ಒಂದು ಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು; ಕುಳವಾಡಿ: ಸುಂಕ ತಳವಾರ ಆನುವು ಮಗವೆ ಚಲವಾದಿ ಸಂಗಡಿ ಪಂತಗಾರರಿಗೂ ಇದೇ ಭಾಷೆ (ಶಾಶಿ.IX-ii, ೫೩೨-೨೦; 1530) : ಜೊತೆಗೆ ನಾಲ್ಕು ಜನ ಚಲವಾದಿಗಳು ಒಬ್ಬರಾದ ಮೇಲೆ ಒಬ್ಬರು ತಮ್ಮ ಕೊಂಬುಗಳನ್ನು ಊದಿದರು (ಚಳರಾ. ೩೪೩).

[ ದೇ.೫ ತಮಿ. ಚಲವಾತಿ ; ತೆಲು. ಚಲವಾದಿ ]

**ಚಲವಾದಿಘಂಟೆ** (ನಾ). ಚಲವಾದಿಯು ಹೆಗಲ ಮೇಲೆ ಹೊತ್ತುಕೊಂಡು ಬಾರಿಸುತ್ತಾ ಹೋಗುವ ಗಂಟೆ : ಮಾಯಾಮರತಾವು, ಪಂಚನಿಶಾನಿ, ಡವಣೆ, ಅರಲಿವಸ್ತ್ರ, ಚಲವಾದಿಘಂಟೆ (ಗುರುದ. ೦೦). [ಚಲವಾದಿ$_2$+ಘಂಟೆ]

**ಚಲವಿಡಿ** 'ಚಲಂಬಿಡಿ' ನೋ.

**ಚಲವಿತ್ತ** (ನಾ). ೧. ಅಸ್ಥಿರವಾದ ಸಂಪತ್ತು. ೨. ಸಂಪತ್ತು ಸ್ಥಿರವಾಗಿಲ್ಲದವನು : ಚಲವಿ[ಪಾಠಾಂ. ಚಿ]ತ್ತಂ ಬಲಹೀನದಾನು ಚಪಲಂ . . . ಮೇಷಜಂ (ಜಾತಕಿ. ೦೭-೦). [ ಚಲ$_2$ + ವಿತ್ತ ]

**ಚಲವೀಣೆ** (ನಾ). ಒಂದು ಬಗೆಯ ವೀಣೆ : ಧ್ರುವವೀಣೆ, ಚಲವೀಣೆ . . . ಇವುಗಳನ್ನೆಲ್ಲಾ ವಿವರಿಸಿದ್ದಾನೆ (ಭಾರದ. ೫೩೮). [ಚಲ?+ವೀಣೆ]

**ಚಲವು** 'ಶಲವು' ನೋ.

**ಚಲಾಂಡ** (ನಾ). ಒಂದು ಬಗೆಯ ಪಕ್ಷಿ ; ಟಿಟ್ಟಿಭ : "ಟೀವಂ ಚಲಾಂಡ ಮೆನಿಸಿರ್ಕ್ಕು" (ಮಂಗರಾ. ೫೨-೦೧). [ ? ]

**ಚಲಾಕಿ** 'ಚಾಲಾಕಿ' ನೋ.

**ಚಲಾಕು** 'ಚಾಲಾಕು' ನೋ.

**ಚಲಾಯಿಸು, ಚಲಾಯ್ಸು** (ಕ್ರಿ). ೧. ನಡೆಸು; ಬಳಸು; ಉಪಯೋಗಿಸು: ಕಾನೂನು ಮೀರಿಗೆ ತಮಗೆ ಅಧಿಕಾರವಿಲ್ಲದಿದ್ದರೂ ಅಧಿಕಾರವನ್ನು ಚಲಾಯಿಸಿದ್ದಾರೆ (ಗ್ರಾಮೂಕ.೯೩) : ಎಂಥ ನಿರಂಕುಶನಾದ ರಾಜನಾದರೂ ಅವನು ತನ್ನ ಗುಣಕ್ಕನುಸಾರವಾಗಿ ತನ್ನ ಸ್ವಾಮಿತ್ವವನ್ನು ಚಲಾಯಿಸುವನು (ರಾಜ್ಯಾಂಗ. ೫೦) : ಯಾವಯಾವದೋ ಸಿನಿಮಾ ಹಾಡುಗಳನ್ನು ಅವರು ಚಲಾಯಿಸುತ್ತಿದ್ದರು (ಮೂಕಾನ. ೦೨೫). ೨. ಚಲಿಸುವಂತೆ ಮಾಡು; ತಿರುಗಿಸು: ಈಗ ಮೊದಲಿಗಿಂತ ಹೆಚ್ಚಿಗೆ ಚರಖಾ ಚಲಾಯಿಸುತ್ತಲೂ ಇದ್ದೇನೆ (ಕಂಳ. ೭೦). **ಚಲಾಯ್ಸು** : ೧. ವುಡಾನ್ನು ಯಂಬ ಹೆಸರಿನ ವಂಟಿ ಕುದುರೆ ಚಲಾಯ್ಸಿ ಅವರನ್ನ ಹೊಡೆಯುತ್ತಿದ್ದಲ್ಲಿ (ಹೃದರ. ೩೦). [ಚಲಾಯ್$_6$ (P ←ಹಿಂ. ಚಲಾನಾ) + – ಇಸು$_3$ ]

**ಚಲಾಯ್ಸು** 'ಚಲಾಯಿಸು' ನೋ.

**ಚಲಾವಣೆ** (ನಾ). ೧. ನಡೆಸುವಿಕೆ; ಬಳಕೆ;(ನಾಣ್ಯಗಳಂತೆ)ವಿನಿಮಯದ ವ್ಯವಹಾರದಲ್ಲಿರುವಿಕೆ; ಪಹಿವಾಟು : ಚಲಾವಣೆ, ಟಂಕನ ಮತ್ತು ವಿಧಿಮಾನ್ಯ (ಭಾಧಾನ. ೨೮೦): ಈಗ ಚಿನ್ನ ಯಾವ ರೀತಿ ನಿರ್ದಿಷ್ಟ ಚಲಾವಣೆ ಮೌಲ್ಯ ಹೊಂದಿದೆಯೋ ಹಾಗೆ ತಂಬಾಕು ನಾಣ್ಯವಾಗಿದ್ದಿತು (ಕಸಬು. ೫೬) : ಪದಗಳು ಜನಮನದ ಟಂಕಸಾಲೆಯಲ್ಲಿ . . . ಚಲಾವಣೆಗೆ ಬರುವ ನಾಣ್ಯಗಳಿದ್ದಂತೆ (ಶಾಂದಸ. ೯೨). ೨. ಸಾಗಾಟ ; ಸಾಗಾಣಿಕೆ: ಒಂದೆರಡು ಪರ್ಮಿಟು ಮಾಡಿಸಿ ವ್ಯಾಲು ಚಲಾವಣೆ ಮಾಡದಿದ್ದರೆ ನಮ್ಮ ರಥ ಸಾಗಲಾರದು (ಜೀಕಧು. ೬೯). [ ← ಚಲಿಸುವಂತೆ ಮಾಡು, ಹಿಂ. ಚಲಾವನಾ=ಮರಾ. ಚಲನೀ= ಚಲಾವಣೆಯಲ್ಲಿರುವ ]

**ಚಲಿ$_1$** 'ಚಿಲ್ಲ$_1$' ನೋ.

**ಚಲಿ$_2$, ಛಲಿ** (ನಾ). ಛಲವುಳ್ಳವನು; ದೃಢಸಂಕಲ್ಪವುಳ್ಳವನು: ಅಮುಮ ದಂಡಾಧಿಪ ಕಿರೀಟಪದನೊಪ್ಪಿದಂ ಅಮುಮ ಚಲಿ [ಪಾಠಾಂ. ಛವಿ]ನಾಯಕರ ದೇವನಿಂತೊಪ್ಪಿದಂ (ಬಸರ. ೯-೨೦೦). **ಛಲಿ**: ಭಕ್ತಿಯ ಬಲೆಯು ವಿರಕ್ತಿಯ ಛಲಿಯ ಸನ್ಮುಕ್ತಿಯ ನೆಲೆಯಘಾರ್ಣವಕೆ ಭೃತ್ರ . . . ಗೌರನ ನವ್ಯ ಕಾವ್ಯ (ಬೋಳಿಷು ೫-೨). [ ಚಲ$_1$ + – ಇ$_3$ ]

**ಚಲಿ$_3$** (ನಾ). ಒಂದು ಬಗೆಯ ಮರ; ಚಿನ್ನಂಗಿ: "ಚಿನ್ನಂಗಿ ಚಲಿಯುಕ್ಕು" (ಮಂಗರಾ. ೩೭-೦೦). [ ? ]

**ಚಲಿಂದಲ** 'ಚಲಿವಿಂದರ' ನೋ.

**ಚಲಿಕಿಸು** (ಕ್ರಿ) .ಕತ್ತರಿಸು; ತುಂಡರಿಸು: ಈಗ ಚಲಿಕಿಸಿ ಶಿರವನು ಕ್ರೂರದಿ ಕೊಂದಾನೆ (ಹಮುಕ. ೦೮೦) : ಸತಿಶಿರಮಂ ಚಲಿಕಿಸು ಖಡ್ಗದಿಂ ತಡೆಯದೆ (ಹಮುಕ. ೨೦೦). [ ? + – ಇಸು$_3$ ]

**ಚಲಿಕ್ಯ** 'ಚಳುಕ್ಯ' ನೋ.

**ಚಲಿತ, ಚಳಿತ$_2$** (ಗು). ೧.ಹೆಜ್ಜೆಯಿಟ್ಟ ; ಹೊರಟುಹೋದ ; ಮುಂದೆ ಹೋದ. ೨. ಕದಲಿಸಿದ ; ಕದಡಿದ ; ಸುಚಲಗೊಳಿಸಿದ. ೩. ನಡುಗಿಸುವ ; ಕಂಪಿಸುವ. ೪. ಅಲುಗಾಡುವ ; ಚಲಿಸುವ : ಚಲಿತ ಭ್ರೂಚಾಪದಂಡಂ ನಿಶಿತಕರಜಹೇತಿಕ್ಷತಂ (೦೯ ರಾಪ. ೦೩-೩೦). (ನಾ). ೫. ಚಂಚಲವಾದುದು ; ಚಪಲವಾದುದು : ಪದ್ಮಪತ್ರದ ಜಲ ಬಿಂದುವಿನಂತೆ ಚಲಿತಮಾದುದು ಚಿತ್ತಂ (ಶಂರಾಮೂ. ೯-೭೬). **ಚಳಿತ$_2$** : ೧. ಪ್ರಥಮಚಳಿತದಕ್ಷಿಣಚರಣನಾಗಿ ನಿಜನಿವಾಸದಿಂ ಪೊಱಮಟ್ಟು (ಶಂಪಧಾ. ೯-೦೨ ಪ). [ ಸಂ. ]

**ಚಲಿಮಿಲಿಸು** (ಕ್ರಿ). ಹಾತೊರೆ ; ಆತುರಪಡು ; ಉತ್ಕಂಠವಾಗು : ಚಲಿಮಿಲಿಸುತಿವ ಧಾತು ಪಂಚಭೂತಾಹುತಿಗೆ ಛಲ ಬ್ಯಾಡ ವ್ರತಕೆ (ಜಿಪಮು. ೯೭-೦೯). 'ಚಲಮಲಿಸು' ಪರಾ. [ ? + – ಇಸು$_3$ ]

**ಚಲಿಯಿಸು** 'ಚಲಿಸು' ನೋ.

**ಚಲಿವಿಂದರ, ಚಲಿಂದಲ**(ನಾ). ಪ್ರಯಾಣಿಕರ ಉಪಯೋಗಕ್ಕಾಗಿ ರಸ್ತೆಗಳ ಪಕ್ಕಗಳಲ್ಲಿ ನಿರ್ಮಿಸಿದ ನೀರಿನ ಆಶ್ರಯ ; ಅರವಟ್ಟಿಗೆ : (+). **ಚಲಿಂದಲ** : (ಎಸಮ್ಮ. XV, ೯೩).

'[ ←ತೆಲು. ಚಲಿವಿಂದಲ, ಚಲಿಪಂದಿಲಿ, ಚಲಿವಂದ್ರಿ, ಚಲಿವೆಂದ, ಚಲಿವೇಂದರ, ಚಲಿವೇಂದಲ, ಚಲಿವೇಂದ್ರ ]

**ಚಲಿಸು, ಚಲಿಯಿಸು, ಚಳಯಿಸು, ಚಳಿಯಿಸು, ಚಳಿಸು$_2$** (ಕ್ರಿ). ೧. ನಡೆ ; ನಡೆದಾಡು ; ಓಡಾಡು : ಮಹಾಪ್ರಧಾನರ ನಡುವೆ ಚಲಿಸುವ ಚಾತುರಂಗದ ಸುಳಿಯ ಸಂದಣಿಯ (ಕುಮಾ.ಕ. ೮-೨೦) ; ತಂಡತಂಡದ ಕೃಷ್ಣನಗರಿಯೊಳ್ ಚಲಿಸುವ ಮಂಡಳಿಕರ ಕಾಲ ಕಡಗ ಪೆಂಡೆಯ ತಾಟಾಡಿ ಸಿಡಿದ ರತ್ನಗಳ ಕೈದಂಡೆಯೊಳ್ ಸಿಕ್ಕಿ ಬಾಚುವರು (ಮೋಹಕ. ೩-೬೦): ಅಲ್ಲಿನ ವಿದ್ವಾಂಸರು ಚಲಿಸುವ ಪುಸ್ತಕಭಂಡಾರಗಳು (ಚೀಂಗಾಳ. ೪). ೨. ಅಲುಗಾಡು ; ಹೊಯ್ದಾಡು : ಅತ್ತಿತ್ತ ಚಲಿಸದಚಲಂ ನಡೆದು ಬರುತಿರ್ದ (ಬಸರ. ೩-೩೭); ಉದ್ದಂಡ ಪದಹತಿಗಳೆ ಚಲಿಸಿ ದಿಗುಮಂಡಲಂ ಕಿವುಡಾಗೆ ಬಹುವಾದ್ಯಧ್ವನಿಗಳಿಂದ (ಬಸಪು. ೫-೦೯) : ಅರೆಮುಗಿದ ಲೋಚನದ ಸಂಪುಟವರೆ ಚಲಿಸುವ ಚಂಚುಪುಟದುಪ್ಪರಿಸಿದಂಘ್ರಿಯ . . . ಸುರಿವ ನೆತ್ತರ ಪಕಿಯ ಸುತ್ತಲು ತಿರುಗಿ ಚೀಱುವ ವಿಹಗಸತಿಯನು ಕಂಡನಾ ಮುನಿಪ (ಕೊರರಾ. ೦-೨-೦೯). ೩. ಕದಡು ; ಕ್ಷೋಭೆಗೊಳ್ಳು; ದೃಢತೆಯಿಲ್ಲವಾಗು ; ಧವಳಚಾಮರಂ ಕಯ್ಗಳೊಳ್ ಮನಂ ಚಲಿಸೆ ಮಾಸಿ ಕಾಱಿದ ಕುರುಳ್ಗಳುಂ ತನ್ನ ಬಿನ್ನನಿರ್ದ ಮೊಗದಿಂ ತವಿಲ್ದಿರೆ ವಿಲಾಸಮುಂ ಮುಂದೆ ಕಂಡನಲ್ಲಿ ಕಮಳಾಕ್ಷಿಯಂ ವೃಷಭಲಕ್ಷಣಂ ಲಕ್ಷ್ಮಿಯಂ (ಗದಾಯು. ೯-೩). ೪. ಅಪಮಾರ್ಗಕ್ಕೆ ಹೋಗು ; ಹಾದಿತಪ್ಪು : (+). ೫. ಚಲ್ಲಾಟವಾಡು: (+). **ಚಲಿಯಿಸು** : ೨. ಚಲಿಯಿಸಿದಪುದಸಿತೋತ್ಪಲದಳವೆಲರಲೆಪಂಗಳಿಂದಿದೆಂಬಿನೆಗಂ ಕೆತ್ತಲೊಡರ್ಚಿದತ್ತು ಬಲಗಣ್ಣಲರ್ (ಕಾದಂಪೂ. ೩೯೦) : ಬಿಡನೀಶಾ ನಿಮ್ಮ ಪಾದಾಬ್ಜಮಂ . . . ಬಲ್ಪಿಡಿದಂ ಮತ್ತತ್ತವಿತ್ತಂ ಚಲಿಯಿಸದೆ (ರಕ್ಷಾಕ. ೯೮). ೬. ಕದಲಿಸು ; ಉದ್ರೇಕಿಸು ; ಕ್ಷೋಭೆಗೊಳಿಸು : ಮುನಿಗೆ ಪಲವುಪಸರ್ಗಮಂ ಮಾಡುತ್ತಮಂತುಂ ಚಲಿಯಿಸಲಾಱದೆ ನಾಣ್ಚಿ ಮೆಯ್ಗರೆದು

ಪೋದಂ (ಚಾವುಂಪು. ೪೪) : ಹರನ ಚಿತ್ರಮಂ ಚಲಿಯಿಸಿ ಕಡುತವಮಂ ಕಿಡಿಸೆಂದು ಪೇಳೆ (ಗಿರಿಕ. ೨ ಕಥಾಗರ್ಭ). ಚಳಯಿಸು: ೬. ಸಡಿಲಿಸು; ಅಳ್ಳಕಮಾಡು: ಕಳೆದುದು ವಕ್ರಭಂಗದ ಬೆಡಂಗುಗಳಂ ಕುಟಿಲಾಲಕಂಗಳಂ ಚಳಯಿಸಿದತ್ತು ಕಣ್ಗೆಸೆವ ರಾಗಮನೆಯ್ದಿಸಿ ಕೇಶಹಸ್ತಮಂ ಚಳಯಿಸಿದತ್ತು ಮೆಯ್ಗೆ ಪುಳಕೋದಯಮಂ ಪಡೆದತ್ತು ತಲ್ಲತಾಲಳಿತೆಯರ್ಗಿತ್ತುದಿಂತು ಜಲಕೇಳಿ ಮನೋಭವಕೇಳಿ ಲೀಲೆಯಂ (ಆದಿಪು. ೧೦-೧೪೯). ಚಳಿಯಿಸು : ೧. ಮಿಳಿ ಪೆಗಲೊಳ್ ಕೈಯೊಳ್ ಸಂಬಳಿಗೋಲ್ . . . ಜರ್ಜರರವದಿಂ ಪೊಟಲ ಜನಂಗಳ ಕಿವಿಯೊಳ್ ಚಳಿಯಿಸುತುಂ ಬಂದು ನೋಟ್ಪ ಬಹಳಾಗ್ರಮಂ (ಮಹಾನೇ. ೮-೨೩). ೨. ಅನಿಲಾಹತಿಯಿಂ ಚಳಿಯಿಕುಮನೋಕಹಾನೀಕಮದ್ರಿ ಚಳಿಯಿಕುಮೆ (ಅಜಿಪು. ೧೦-೪೮) : ಅಳರೆಲೆಗಳಲುಗೆ ಮಾಂಗಾಯ್ ಚಳಿಯಿಸೆ (ಪುಷ್ಪಪು. ೧೨-೬೬). ೩. ಕಾಮಮಂ . . . ಸಂಚಳಿಸದ ಶಂಕರನ ಮನಂ ಚಳಿಯಿಪುದಂ ಸಾರ್ದು ಪಾರ್ದು ತಗೆನೆಟಿದಿರ್ದಂ (ಗಿರಿಕ. ೮-೪೪). ೪. ಕೆಲಬರ್ಮನುಜರ್ ಚಳಿಯಿಸುತ್ತಿರೆ ಮುಗುಬ್ದರಂ ಧರ್ಮದೊಳೆ ನಿಱಿಪುದುಂ (ಜಾಸ್ಮತಿ. ೯೪-೦). ೬. ಅಚಳಿತಧೈರ್ಯನ ಮನಮಂ ಚಳಿಯಿಸಲಾಱದಚ್ಚರಸೆಯರಚ್ಚಗಂಗೊಂಡಂತಾಗೆಯುಂ (ಪಂಪಭಾ. ೬-೯೪ ವ). ೮. ಸೋಲಿಸು ; ಹಿಮ್ಮೆಟ್ಟಿಸು : ಈತನ ಶೌರ್ಯಮುಮಿಾ ಮಹೋಗ್ರಸಂಗ್ರಾಮದೊಳೆನ್ನುಮಂ ಚಳಿಯಿಸಲ್ ಬಗೆದವ್ವುದು (ಪಂಪಭಾ. ೦೨-೮೪) : ಸುಚತುರಕವಿರವಿಗಳಖಿಳಚೇತೋಗಗನವ್ರಚುರತಮಸ್ತಿಮಿರಮನಳಟ ಚಳಿಯಿಸಲ್ ನೆರೆಗುಮುಜಿದವರ್ ನೆರೆದವರೇ (ವರ್ಧಪು. ೦-೦೯). ೯. ಅಲುಗುಂವಂತೆ ಮಾಡು; ಕಂಪಿಸುವಂತೆ ಮಾಡು; ಚಂಚಲವಾಗುವಂತೆ ಮಾಡು : ಎಱಿಸಿದ ಬಲ್ಲಂತೆ ಶರೀರಮಂ ಚಳಿಯಿಸದೆ ಪಾರ್ಶ್ವದೊಳ್ ಪಟ್ಟಿರ್ಪುದುಂ (ಧರ್ಮಾಮೃ. ೦೨-೦೮). ಚಳಿಸು$_2$ : ೨. ಚಳಿಸಿದ ರಸದಿಂಬುಣ್ಗಳ ನಿಲಿಸದಿರದು (ಲೋಕೋಪ. ೯-೦೬೯): ಫಳರಸವೆ ಮದಧಾರೆ ಚಳಿವ ತಳಿರ್ಗೊಂಚಲುಜ್ಜ್ವಳ ಕರ್ಣಂ (ಪದ್ಮರಾ. ೮-೩೦).

ಚಲಚಲಿಸು (ದ್ವಿರುಕ್ತಿ) : ಮಹಾವಾದ್ಯರವ ಚಲಚಲಿಸುತಿಹು ದೆತ್ತೆತ್ತಲು (ಜಿಪಭಾ. ೩೦-೯). ಚಲಿಸದ ತನ = ನಿಶ್ಚಲತೆ ; ದೃಢತೆ : ಅನುದಿನವಲಸದೆ ಚಲಿಸದತನದಿಂದ ಜೀವಂಗೆ ಕರಣೀಯ (ಪರಬೋ. ೩-೦೭-೬) [ ಚಲನ + – ಇಸು$_3$ ]

ಚಲುಂಕು 'ಚಲಂಕು' ನೋ.

ಚಲುಕಾಡು(ಕ್ರಿ). ಚೆಲ್ಲಾಡು ; ಎರಚಾಡು : ಪಾಡುತದಱೊಳು ಕೃಷ್ಣನನು ಚಲು[ಪಾಠಾಂ. ತುಳು]ಕಾಡುತುದಕವನೊಬ್ಬರೊಬ್ಬರ ನೋಡಿ ನಗುತಬಲೆಯರು ವಿಹರಿಸುತಿರೆ (ನಿಭಾಗ. ೦೦-೦೯-೪೩).

[ ಚಲುಕು (<ಚಲಂಕು) + ಆಡು$_1$ ]

ಚಲುಕು 'ಚಲಂಕು' ನೋ.

ಚಲುಮೆ 'ಚೆಲುಮೆ$_1$' ನೋ.

ಚಲುವ 'ಚೆಲ್ವ' ನೋ.

ಚಲುವತನ 'ಚೆಲ್ವತನ' ನೋ.

ಚಲುವತಿ (ನಾ). ೧. ಚೆಲುವೆ; ಸುಂದರಿ: (ಕ). ೨. ರತಿದೇವಿ: (ಚತುನಿ. ಕ. I, ೯೦). [ ಚಲುವ (<ಚೆಲ್ವ) + – ತಿ$_1$ (<– ಇತ್ತಿ) ]

ಚಲುವನೆ 'ಚೆಲ್ವನೆ' ನೋ.

ಚಲುವರಾಯ 'ಚೆಲ್ವರಾಯ' ನೋ.

ಚಲುವಳಿ 'ಚೆಲುವಳಿ' ನೋ.

ಚಲುವಾನ್ 'ಚೆಲುವಾನ್' ನೋ.

ಚಲುವಿಕೆ 'ಚೆಲ್ವಿಕೆ' ನೋ.

ಚಲುವು 'ಚೆಲ್ವು$_1$' ನೋ.

ಚಲುವೆ$_1$ 'ಚೆಲ್ವೆ' ನೋ.

ಚಲುವೆ$_2$ (ನಾ). ಒಂದು ಬಗೆಯ ಹಕ್ಕಿ : ಹರಡೆ ಚಲುವಿಲಿಗನು ಚ[ಪಾಠಾಂ. ಚಿ]ಲುವೆ ಗಿಜುಗಿರಳೆ ಕಮ್ಮಾರನಸಗ ಕೊಟ್ಟುಳಿ ಪೊಱಸು ಪೊಡೆಗಳೆಂಬ ಪಕ್ಕಿಗಳವಱೊಳೊಪ್ಪಿದವು (ಸಾಳ್ವಭಾ. ೩-೨೦). [ ? ]

ಚಲುವೆ$_3$, ಚೆಲವೆ, ಚೆಲುವೆ$_2$ (ನಾ). ಬಟ್ಟೆಗಳನ್ನು ಮಡಿ ಮಾಡುವಿಕೆ.–ತೊಳೆದು ಹಸನುಗೊಳಿಸುವಿಕೆ.–ಶುಚಿಮಾಡುವಿಕೆ : ಗಡುಸಾದ ನೀರು (Hard water) ಚಲುವೆಗೆ ಯೋಗ್ಯವಲ್ಲ (ಗೃಪವಿ. ೮೬). ಚೆಲವೆ: ಚಲವೆ (ಮಡಿ) ಮಾಡಿರದ ಮೃದುವಾದ ಒಂದು ಚೀನಾ ರೇಷ್ಮೆ (ಬಟ್ಟೆ) (Pongee. ಇಂಕಿನಿ). ಚೆಲುವೆ$_2$ : ಓದುತ್ತ ಓದುತ್ತ ಅವರ ಮುಖ ಚೆಲುವೆಯ ಅರಿವೆಯುಂತಾಯ್ತು (ಮರಳಿ. ೦೬೯): ತೊಟ್ಟುಕೊಂಡ ಮೇಲೆ ಬಹಳ ಬೆಳ್ಳಗೆ ಚಲುವೆಮಾಡಿ ಗಂಜಿಹಾಕಿ ಮಾರುತ್ತಾರೆ (ಪ್ರಜಾಇ. II, ೨೮೪). [ ದೇ.॥ ತಮಿ. ಚಲವೈ ; ತುಳು. ಚಲುವ ]

ಚಲುವೆಱು 'ಚೆಲ್ವುವೆಱು' ನೋ.

ಚಲೆ (ನಾ). ೧. ನಿಂತಲ್ಲಿ ನಿಲ್ಲದವಳು ; ಚಂಚಲಸ್ವಭಾವದವಳು ; ಅಸ್ಥಿರೆ. ೨. ಹಾದರಗಿತ್ತಿ ; ವ್ಯಭಿಚಾರಿಣಿ : "ಸ್ವೈರಿಣಿ ವಿರ್ದಾಣಿಯನೀತೆ ಚಲೆ ಕುಲಟೆಯುಭಿಸಾರಿ ಪಾಂಸುಲೆ ಬಂಧಕಿಯೆನಲ್ಕೆ ಹಾದರದ ನಾರಿಯೆನಿಸಿಕ್ಕು" (ಮಂಗರಾ. ೯೦-೪) [ ಸಂ. ಚಲಾ ]

ಚಲ್ಲ$_1$, ಚಲ್ಲು$_3$, ಚಲ್ಲೆ$_3$, ಚೆಲ್ಲ$_1$, ಚೆಲ್ಲು$_2$ (ನಾ). ೧. ಸರಸ ; ವಿನೋದ; ವಿಲಾಸ ; ಒಯ್ಯಾರ : ಫುಲ್ಲಶರನುಮಂ ಚಲ್ಲದೊಳ್ ಪದವಡಿಸಲುಂ (ಶಾಂತಿಪು. ೮-೭೨ ವ) : ಚಲ್ಲಂ ಚಳಿಯಂಗುಡುತ್ತುಮಿರೆ (ಅರ್ಧನೇ. ೨-೯೩) ; ಪೆಣ್ಣಾನೆಯೊಂದು ಚಲ್ಲದೊಳು ತೆಗೆದೊಡೆರಳ್ಪೆಣ್ಣಾನೆ ಬರ್ಪ ತೆಱದೊಳು (ಭರತ. ೪೦-೮೩) ; ವಲ್ಲಮಱಿಯು ಚಲ್ಲದ ಸೊರ್ಕನಿಟ್ಟೆಕಿಯ್ದು ಬೀರದ ಜೋದರ ದಟವುಟದಿಂ (ಧಮೂತ್ಕ. ೯೪-೦೮). ೨. ನಗು : "ಚಲ್ಲ [ಪಾಠಾಂ. ಲ್ಲೆ] ನಗೆ" (ಶಬ್ದಮಂ. ೬೭). ಚಲ್ಲು$_3$: ೧. 'ಚಲ್ಲಂಬಡಿ' ಪರಾ. (ಗು). ೩. ಗಾಂಭೀರ್ಯವಿಲ್ಲದಿರುವ ; ಹಗುರಸ್ವಭಾವದ ; ಕುಚೇಷ್ಟೆಯ ಸ್ವಭಾವದ: ಸ್ವಲ್ಪ ಚಲ್ಲುಸ್ವಭಾವದ ಮನುಷ್ಯ (ಚಿತ್ರಕೂ. ೦೦೪). ಚಲ್ಲೆ$_3$ : ೧. 'ಚಲ್ಲನೋಟ' ಪರಾ. ಚೆಲ್ಲ$_1$ : ೧. "ಚೆಲ್ಲಮನೆ ಸರಸಮುಕ್ಕುಂ" (ಚತುನಿ. ೦೪೩): ಚೆಲ್ಲಂ ಬೇಂಟದ ತೋಟದೊಳ್ ತೊಡರೆ (ಕಾವ್ಯಸಾ. ೩೩೦ ಶೂದ್ರಕ) : ಅಱಿಪಿನ ಲಲ್ಲೆಯ ಚೆಲ್ಲದ ಪುರುಡಿನ ಮುಳಿಸಿನ ನೆವದ ಪಡೆಮಾತುಗಳಂ ನುಡಿದುಂ (ಪಂಪಭಾ. ೬-೯೪ ವ); ಅಲ್ಲದ ಚೇಳಿನ ಚೆಲ್ಲಕ್ಕೆ ಹೋಗಿ ಇವರೆಲ್ಲರೂ ನಾಣುಗೆಟ್ಟರಲ್ಲಾ (ಸರ್ವವ. ೯೨-೩೦೬) : ಅಲರ್ಗಣ್ ಚೆಲ್ಲಮಂ ಸೂಸೆ (ಜಗವಿ. ೦೪-೦೦೪). ೨. "ಹಸನಂ ಚೆಲ್ಲಂ" (ಚತುನಿ. ೬೭). ಚೆಲ್ಲು$_2$ : ೧. ಕಂತು ಪಡೆದಗ್ಗದ ಮೋಹನಶಕ್ತಿಸಂಕುಳಂ ಗಡಮೆನೆ ಚೆಲ್ಲಿನೇಟ್ಗಿನಡೆ ನೋಟ್ಪರ ಕಣ್ಗಳನೆಯ್ದೆ ಮಂಚಲಂಬಡಿವ ವಿಳಾಸಿನೀನಿವಹಂ (ಶಾಂತೀಶ್ವ. ೧೦-೬೭). ೩. ಆ ಎದುರು ಮನೆ ಚೆಲ್ಲು ಹುಡಿಗಿ ರಾಜ ಇವಾಳಲ್ಲ (ನಡೆದಾ. I, ೩೦೬). ೪. ಕುಚೇಷ್ಟೆಯ ಸ್ವಭಾವದ ವ್ಯಕ್ತಿ: ಮನಸ್ಸಿಗೆ ತೋರಿದುದನ್ನು ಬಾಯಲ್ಲಿ ಆಡಿ ತೋರಿಸಿ ಎಲ್ಲರಿಂದಲೂ 'ಚೆಲ್ಲು' ಎನಿಸಿಕೊಳ್ಳುತ್ತಾಳೆ (ಕಂಕಣ ೩೪). [ ?./ತೆಲು. ಚರಲು, ಚಿರಲು = ಉತ್ಸಾಹಗೊಳ್ಳು./ ಸಂ. ಚಲ್ = ವಿನೋದವಮಾಡು. ]

ಚಲ್ಲ$_2$ 'ಸಳ್ಳ' ನೋ.

ಚಲ್ಲಂಬೆರಸು, ಚೆಲ್ಲಂಬೆರಸು (ಅ). ಸರಸದಿಂದ ಕೂಡಿ ; "ಚಲ್ಲಾಟದೊಡನೆ" (ಪಂಪದೀ. ೨೬೭): ಕಡೆಗಣ್ಣ ಚ[ಪಾಠಾಂ. ಚೆ]ಲ್ಲಂಬೆರಸು ಸೂಸುವ ವಾಸವಸ್ತ್ರೀಯರ ಮುಖಾಬ್ಜಾಸವ ಸಂಬಂಧಿಗಳಪ್ಪ ಶೇಷಾಕ್ಷತಂಗಳಂ . . . ಸೇಸೆಗೊಳುತ್ತುಂ (ಪಂಪಭಾ. ೮-೨೭ ವ) : "ಪ್ರಸಾರದಿಂದ ಕೂಡಿ" (ಪಂಪನಿ). ಚೆಲ್ಲಂಬೆರಸು : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚಲ್ಲ$_1$ + ಬೆರಸು$_3$ ]

**ಚಲ್ಲಂಬೇಱು** (ಕ್ರಿ). ವಿಲಾಸವನ್ನು ಹೆಚ್ಚಿಸು: ಚಲ್ಲಂಬೇಱಿದ ನೋಟದೊಳ್ಪು ನಯದಿಂ ನಾಣ್ದಾಣದೊಪ್ಪಂಗಳಂ ಬಲ್ಲಂದಂದದ ತೋಱು ವೋಜೆ . . ಒರ್ವಳಂಗಜರಸಂ ಕೈಗಣ್ಮೆ ಬಂದಿರ್ದಳಂ ನೋಡದಂತೆ ನೋಡಿ (ಬಂಹಱ. ೩-೫೦). [ ಚಲ್ಲ$_1$ + ಪೇಱು$_1$ ]

**ಚಲ್ಲಕಾತಿ** 'ಚಲ್ಲಗಾರ್ತಿ' ನೋ.

**ಚಲ್ಲಕಾರ್ತಿ** 'ಚಲ್ಲಗಾರ್ತಿ' ನೋ.

**ಚಲ್ಲಗಣ್, ಚೆಲ್ಲಗಣ್** (ನಾ). ಸರಸವನ್ನು ಬೀರುವ ಕಣ್ಣು; ಚೆಲುವಾದ ಕಣ್ಣು: ಸೊಗಯಿಪ ಚಲ್ಲಗಣ್ (ಎಕ. VI, ಕಠೀಕ. ೪೫-೩೪; 1196); ಚಲ್ಲಗಣ್ಗಡೆಯು ಕುಡಿವೆಳಗೆಂಬು ರುಳ್ಗಣ್ಣಿಯಲ್ಲಿ ಪಥಿಕಮನೋ ಮೃಗವನೆಯ್ದೆ ಬೀಱಿ ತಂದಿಲ್ಲಿ ತಡೆವರ್ (ಪದ್ಮರಾ. ೮-೯); ಚಲ್ಲ[ಪಾಠಾಂ. ಚೆಲ್ಲೆ]ಗಂಗಳ ಚದುರೆ (ಸಾಳ್ವಭಾ. ೨೯-೬). **ಚೆಲ್ಲಗಣ್**: ನಗೆಗಣ್ ಮಱುವುಲ್ಲೆಯ ಚೆಲ್ಲಗಣ್ಗಳಿಂ ನೂರ್ಮಡಿ ಚೆಲ್ವನಾನೆ (ಕಬ್ಬಿಕಾ. ೩೩೦); ನಗೆಗಣ್ಣ ಮುಗುಳ್ನಗೆ ಚೆಲ್ಲಗಣ್ಣ ಚಾಪಳಂ (ಪುಷ್ಪಪು. ೫-೨೪); ಮಣಿಹಾರಂ ವಿಟವೇತ್ರವಾಗುರಮೆನಲ್ ಸಾರ್ದಿರ್ಪನಂ ಚೆಲ್ಲಗಣ್ ಗಣಕಾವಲ್ಲಿಥ ಸಂಕುಲಕ್ಕೆ ಮಥಿಸಲ್ ಸಾಕೆಂಬಿನಂ (ದಕಳು. ೧೦-೫೮).

[ ಚಲ್ಲ$_1$ + ಕಣ್ ]

**ಚಲ್ಲಗಾಯ್** 'ಚೆಳ್ಳೆಗಾಯ್' ನೋ.

**ಚಲ್ಲಗಾರ್ತಿ, ಚಲ್ಲಕಾತಿ, ಚಲ್ಲಕಾರ್ತಿ, ಚಲ್ಲೆಗಾರ್ತಿ, ಚೆಲ್ಲಕಾತಿ, ಚೆಲ್ಲಗಾತಿ, ಚೆಲ್ಲಗಾರ್ತಿ, ಚೆಲ್ಲೆಗಾತಿ** (ನಾ). ವಿಲಾಸವತಿ; ಸರಸವತಿ; ರಸಿಕಳಾದ ಸ್ತ್ರೀ: "ಸರಸವತಿ ಚಲ್ಲಗಾರ್ತಿ" (ಕವಿಕಂ. ೧೬೪); ಎಡೆಯಾಡುವ ಚಲ್ಲಗಾರ್ತಿಯರ ಹುಲ್ಲೆಗಣ್ಗಳ ಕಾಂತಿಕೌಮುದಿಗಳಿಂ (ಅನಂಪು. ೦-೧೦೫ ವ); ಒರ್ವಳ್ಚಲ್ಲ [ಪಾಠಾಂ. ಲಲ್ಲೆ]ಗಾರ್ತಿ ದೂದವಿಯೊಡನೆ ನಗೆ ಮಿನುಗೆ ಮೊಗಮಂ ನೋಡಿ (ರಾಜಶೇ. ೦೦-೦೪೮ ವ). **ಚಲ್ಲಕಾತಿ**: ಮುಂಗುರುಳುಗಳ ಶಿರ್ದುತ ಮೆಲ್ಲನಡಿಯಿಟ್ಟಳು ಚಲ್ಲಕಾತಿ (ದಂಪ್ರಸಾಂ. ೯-೦೫೮). **ಚಲ್ಲಕಾರ್ತಿ**: ಚಲ್ಲಕಾರ್ತಿಯರ್ ಚಲ್ಲದಿಂ ನಿವಾಳಿಸಿ ನಾಣಂ ಬಱಿದೀಡಾಡಿಯುಂ (ಅರ್ಧನೇ. ೫-೨ ವ). **ಚಲ್ಲೆಗಾರ್ತಿ**: "ಚಲ್ಲೆಗಾರ್ತಿಯೆನೆ ಸರಸವತಿ" (ಕಶರ. ೩೫). **ಚೆಲ್ಲಕಾತಿ**: ತನ್ನ ಸೇವೆಯ ಚೆಲ್ಲಕಾತಿಯರ ಮೇಳದೊಳು (ಭರದ. ೫೫-೬೯). **ಚೆಲ್ಲಗಾತಿ**: ಚದುರೆಯೆ ಚೆಲ್ಲಗಾತಿಯೆ (ಗೀತಗೋ. ೫೫-೦೦). **ಚೆಲ್ಲಗಾರ್ತಿ**: "ಚೆಲ್ಲಗಾರ್ತಿಯೆಂದು ಸರಸವತಿ" (ಕರಸಾ. ೦೯-೩೭೭). ಕಣ್ಬೆಲ್ಲದೊಳೆ ಗೆಲ್ವಳಿನ್ನಿವಳಲ್ಲದೆ ಜಗದೊಳಗೆ ಚೆಲ್ಲಗಾರ್ತಿಯರೊಳರೇ (ಲೀಲಾವ. ೨-೮೬); ಅವರೊಳೊರ್ವಳ್ ಜಕ್ಕಜವ್ವನದ ಚೆಲ್ಲಗಾರ್ತಿ (ರಾಮಾಕ್ಷ. ೫೦-೧೫). **ಚೆಲ್ಲೆಗಾತಿ**: ಮಲ್ಲದೆಯ ವರಿಗೆ ಬಾಹುಬಲಿಯ ಕೃತಿ ಚೆಲ್ಲೆಗಾತಿಯ ಲಲ್ಲೆವಾತು (ನಾಗಕು. ೦-೭೩).

[ ಚಲ್ಲ$_1$ + -ಕಾಱ + -ತಿ$_1$ (< -ಇತ್ತಿ) ]

**ಚಲ್ಲಣ, ಚಣ್ಣ, ಚಲ್ಲಾಣ, ಚೆಲ್ಲಣ, ಚೊಣ್ಣ, ಚೊಲ್ಲಣ** (ನಾ). ೧. ಮೊಣಕಾಲವರೆಗೆ ಬರುವ ಉಡುಪು;-ಚಡ್ಡಿ; ಅರ್ಧೋರುಕ: "ಚಂಡಾತಕಮೆಂಬುದು ಚಲ್ಲಣಂ" (ಹರಾಯು. ೯೦-೩೯೩); "ಚಣಕಂ–ಚಲ್ಲಣಂ (ಅರ್ಧೋರುಕಂ)" (ಕಮುದ. ಪರಿ. ೨); ಆಗಳಂಗರಾಜ . . . ಇಂಬಾಗಿ ಚಲ್ಲಣಮನುಟ್ಟು (ಪಂಪಭಾ. ೧೨-೦೦೮ ವ); ಉಟ್ಟ ಚಲ್ಲಣ ಕೈಯ ಪಟ್ಟೆಯಪಿಡಿದು ಗರುಡಿಯ ಕಟ್ಟ ಶ್ರವವ ಮಾಡುವಂತೆ ತನ್ನ ತಪ್ಪಿಸಿಕೊಂಡರೆ ಶಿವ ಮೆಚ್ಚುವನೆ (ಬಸವ. ೬೭೮); ಮುಂಜೆಱಗುಗಳ ಚಂದ್ರಿಕೆ ಪಟದ ಚಲ್ಲಣದ . . ವನಿತೆಯರು ಬಳಸಿದರು (ಕೊರರಾ. ೦-೦೬-೫೨); ಪಟ್ಟಾವಳಿ ಚಲ್ಲಣವ ತೊಟ್ಟು ಪೆರ್ದೊಡೆಗೆ (ಮೋಹತ. ೦೨-೪೫). ೨. ಷರಾಯಿ; ಇಜಾರ: ಬೆರೆಬಾಳುವ ಪರಟು ಹಾಕಿ ಉಲನ್ ಚಲ್ಲಣವನ್ನು ಧರಿಸಿದ್ದ (ವಂಶವೃ. ೩೩೬). **ಚಣ್ಣ**: ೨. ಅವರ ಅಂಗಿ . . . ಬಣ್ಣಬಣ್ಣದ ಚಣ್ಣ ನೋಡಿದರೇ ಹೇಳಿಬಿಡಬಹುದು (ಹುಂಗಿಳ. ೩); ಹಾಕಿ ಚಣ್ಣ ಹಾಕಿಕೊಂಡು ಕಚೇರಿಗೆ ಹಾಜರಾಗಿ ಸಿಪಾಯರಿಂದ ನಗಿಸಿಕೊಳ್ಳುವದು ತಪ್ಪುತ್ತಿತ್ತಲ್ಲ (ಗಂಪಱಯ. ೮೨೦); ಚಣ್ಣ ಪೈರಣು ಹಾಕಿದ್ದರೆ ಬರುತ್ತಿತ್ತು (ಕುರಿಹಿಂ. ೦೨೯); ಪಿಸ್ತೂಲು ತೆಗೆದುಕೊಂಡು ಚಣ್ಣದ ಕಿಸೆಯಲ್ಲಿಟ್ಟೆ (ಮೀದಿಮ. ೬೯). **ಚಲ್ಲಾಣ**: ೧. ಉಲಿವ ಪೊಕ್ಕುಳ ಘಂಟೆ ಚಲ್ಲಾಣದುರ ಗೆಜ್ಜೆ (ನವಮೋ. ೧೨-೬೮). **ಚೆಲ್ಲಣ**: ೧. ಸಲ್ಲಲಿತಮಾದ ಚೆಲ್ಲಣದ ಚಿತ್ರಿಸಿದ ಪತಾಕಾಂಚಲದಂತೆ ಪಲ್ಲವದ ಶೋಭೆಯುಂ ಪಳಚ್ಚನೆ ಮೆಱೆವ ಬಾಲಗಚ್ಚೆಯಿಂ (ಶಾಂತೀಶ್ವ. ೭-೯೩ ವ); ಉಲಿವ ಗೆಜ್ಜೆಯ ಚೆಲ್ಲಣದ ಹೊಂಬೆಳೆದ ಹರಿಗೆಯ ಹೊಳೆವ ಕಡಿತಲೆಗಳ ವಿಲಾಸದೊಳಂದು ಹೊಕ್ಕುದು ಕುಳುವಪಡೆ (ಕುಮಾರಭೀ. ೪-೩೩); ಚೆಲ್ಲಣ ಕಾಸೆ ಕುಪ್ಪಸ ಮೊಲೆಕಟ್ಟುಗಳ್ (ಮೋಹತ. ೨೪-೪). **ಚೊಣ್ಣ**: ೨. ನನ್ನ ಬಿಳಿಚೊಣ್ಣದ ಸಂಗಡಿಗರೊಡನೆ ಆಡುತ್ತಿದ್ದೆ (ಗೀಪ. ೨); ಚೊಣ್ಣದ ಕಿಸೆಯಲ್ಲಿ ಹುರಿಗಡಲೆ ಇದ್ದುವು (ಜಯಂತ. ೨೦). **ಚೊಲ್ಲಣ**: (೬).

[ ದೇ.೫ ತಮಿ. ಮಲ. ಚಲ್ಲಡ; ತುಳು. ಚಲ್ಲಣೆ; ತೆಲು. ಚಲ್ಲಡ; ಚಲ್ಲಾಡ. / ಸಂ. ಚಲನಕ, ಚಂಡಾತಕ ].

**ಚಲ್ಲಣಂದೆಗೆ** (ಕ್ರಿ). ೧. ಚಡ್ಡಿಯನ್ನು ಕಳಚಿಸು. ೨. (ಆಲಂ)ಅವಮಾನ ಮಾಡು; ಭಂಗಿಸು: ನಿಚ್ಚಟದ ರಾವುತರಂ ಚಲ್ಲಣಂದೆಗೆದುಂ ಮುಂಗುಡಿಯ ರಾವುತರಂ ಭಂಗಿಸಿ ತಿವಿದು (ಮಳಿರಹ. ೨೨೭-೧೫). [ ಚಲ್ಲಣ + ತೆಗೆ$_1$ ]

**ಚಲ್ಲಣಗಟ್ಟು** (ಕ್ರಿ). ಚಡ್ಡಿಯನ್ನು ಧರಿಸು; ಚಣ್ಣವನ್ನು ತೊಟ್ಟುಕೊಳ್ಳು: ಸಾಸಿರದಂಟನೆಯ ದಳದಲ್ಲಿ ಖೇಚರಿ ಚಲ್ಲಣಗಟ್ಟಿ ವಾಸುಗಿಯ ಫಣಾಮಣಿಯು ಪ್ರಜ್ವಲಿಸುವುದ ಕಂಡೆ (ಅವದಂ. ೬೦-೨೬೦). [ಚಲ್ಲಣ + ಕಟ್ಟು$_1$]

**ಚಲ್ಲಧ್ವಜ** (ನಾ). ಯಾವಾಗಲೂ ಸೋಲದ ವ್ಯಕ್ತಿ; ಒಂದು ಬಿರುದು (?): ಮಾಸಾಮಱನ ಚಲ್ಲಧ್ವಜ ರಣದುತ್ತರಂಗನೆನ್ನುತ್ತವೊಳ್ಪಿದಂ (ಎಕ. VIII, ಸೊರಬ. ೮೮-೨ : 912). [Pಇದು 'ಚಲಧ್ವಜ' ಎಂಬುದರ ಅಪಲಿಖಿತವಿರಬಹುದು]

**ಚಲ್ಲಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚಲ್ಲವಂತ** 'ಚಲ್ಲವತ್ತ' ನೋ.

**ಚಲ್ಲವತ್ತ, ಚಲ್ಲವಂತ, ಚಲ್ಲವರ್ತ, ಚಲ್ಲವೊತ್ತ, ಚೆಲ್ಲವತ್ತ, ಚೆಲ್ಲವೊತ್ತ** (ನಾ). ಸವಿಮಾತುಗಳಿಂದ ಮರುಳುಮಾಡಿ ದ್ರೋಹ ಬಗೆಯುವವನು; ಠಕ್ಕ; ವಂಚಕ: "ನಂಬಿಸಿ ತಿಂಬುವನಂ ಬುಧರೆಂಬರ್ ಬೊಂದುಕನು ಚಲ್ಲವತ್ತನುಮೆಂದುಂ" (ಕವಿಕಂ. ೦೫೫); ಕೆಮ್ಮಗೆ ನಾಡೆ ಚಲ್ಲವ[ಪಾಠಾಂ. ವು]ತ್ತರ ನುಡಿಗೊಳ್ಳದಿರ್ (ಪಂಪಭಾ. ೯-೪೨); ನಂಬುಗೆ ಚಲ್ಲವತ್ತರೊಳ್ . . . ಉಂಟುಮಾಡದೆ ಕೇಡಂ (ನೀತಿರುಂ. I, ೦೦೫). **ಚಲ್ಲವಂತ**: "ಚಲ್ಲವಂತ[ಪಾಠಾಂ. ವತ್ತ]ನುಮೆನಲ್ ನಂಬಿಸಿಯೆ ತಿಂಬಾತನಕ್ಕು" (ಶಬ್ದಮಂ. ४೭). **ಚಲ್ಲವರ್ತ**: "ಬೊಂದುಕಂ ಚಲ್ಲವರ್ತ[ಪಾಠಾಂ. ವತ್ತ, ವೊತ್ತ]ನೆನೆ ನಂಬಿಸಿಯೆ ತಿಂಬವನ ಪೆಸರಕ್ಕು" (ಕಬ್ಬಿಕೈಪಿ. ೫೫). **ಚಲ್ಲವೊತ್ತ**: "ಚಲ್ಲವೊತ್ತರ್ = ನಂಬಿಸಿ ತಿಂಬವರ್" (ಕಮುದ. ಪರಿ. ೨); ಎಲ್ಲಿಯಾನುಂ ಬಂದ ಚಲ್ಲವೊತ್ತನ ಚೆಲ್ಲವಾತುಗಳಂ ಕೈಕೊಂಡು ರಾಜ್ಯಮಂ ಕಿಡಿಸಲ್ಬಗೆದೆಯಪ್ಪೊಡದನುಪೇಕ್ಷಿಸಲ್ಬಾರದು (ಪಂಚತಂ. ೦೨೫-೯). **ಚೆಲ್ಲವತ್ತ**: "ಬೊಂದುಕನೆಂದುಂ, ಚೆಲ್ಲವತ್ತನೆಂದುಂ ನಂಬಿಸಿ ತಿಂಬವನ" (ಕರಸಾ. ೦೭-೩೩೮); ಬೇಳ್ಪ ತಿರಿಕುಳಿಯಲ್ಲದರ ಚೆಲ್ಲವತ್ತನೆಂ (ಸಂಸಪ. ೨೪-೦೧). **ಚೆಲ್ಲವೊತ್ತ**: ಮೇಲಿನ 'ಕಬ್ಬಿಕೈ' ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಚಲ್ಲವರ್ತ** 'ಚಲ್ಲವತ್ತ' ನೋ.

**ಚಲ್ಲವಾಡು, ಚಲ್ಲಾಡು$_2$, ಚೆಲ್ಲವಾಡು, ಚೆಲ್ಲಾಡು$_2$** (ಕ್ರಿ). ವಿನೋದ ಮಾಡು; ಸರಸವಾಡು: ಚಲ್ಲವಾಡಿ ಪೂವೆತ್ತುವ ಮಾಲೆಗಾರ್ತಿಯರ ಸಂದರಿಕೇಸರಿ ನಿಂದು ನೋಡಿದಂ (ಪಂಪಭಾ. ४-೮೦); ಬೆಣ್ಣೆಯ ಚೆನಕಂಗೆ

ಕೆಂಡದುಂಡಲಿಗೆಯು ಮಾಡಿ ಚಲ್ಲವಾಡಿದರೆ ಹಲ್ಲು ಹೋಹುದು (ಬಸವ. ೬೬೧ ೮); ಹೋಹ ಮಾರಿಯು ಚಲ್ಲವಾಡುವರು (ಎಕ. VIII, ಸೊರಬ. ೨೬೮-೫೫: ಕ್ರಿ. 1215). **ಚಲ್ಲಾಡು$_2$:** ನಲ್ಲನೆರ್ದೆಯಂ ಸಾರ್ದಲ್ಲಿ ಚಲ್ಲಾಡಿ (ಚಕವಿ. ೧-೫). **ಚೆಲ್ಲವಾಡು:** ನೇವುರದ ನುಣ್ಚರಕ್ಕೆ ಮರಳ್ವ ಮರಾಳಬಾಳಕಂಗಳ ಮೊಗದೊಳ್ ಮುಗುಳ್ನಗೆವಾಲಂ ಚೆಲ್ಲಿ ಚೆಲ್ಲವಾಡುತ್ತುಂ (ಅರ್ಧನೇ. ೦-೯೨ ವ); ಬಾಲ್ಲವಿಸಿದನು ಕೋಪಶಿಖಿಯಲಿ ಚೆಲ್ಲವಾಡುತ ಕೊರಳು ಕೈಗಳ ಬಿಗಿದ ಬಾಲದಲಿ (ಶಾಶಿರಾ. ೨೧-೪೮); ಒಲ್ಲದವಳೊಡನಾಡಿ ಚೆಲ್ಲವಾಡುವನೆಗ್ಗ (ಸರ್ವಜ್ಞ. ೧೬೦೬). **ಚೆಲ್ಲಾಡು$_2$:** ಮಳೆ ಸುಗ್ಗಿಗಳ ತಡೆದು ಮೆಲ್ಗಿಲ್ಲ ಕುಳಿರ ಕೆರೆ ಚೆಲ್ಲಾಡುತಿರಲು (ಶಾಲೂರ. ೬೦-೧೨೮). [ ಚಲ್ಲ$_1$ + ಆಡು$_1$ ]

**ಚಲ್ಲವೊತ್ತ** 'ಚಲ್ಲವತ್ತ' ನೋ.

**ಚಲ್ಲಾಟ$_1$, ಚೆಲ್ಲಾಟ$_1$** (ನಾ). ಚಲ್ಲಾಪಿಲ್ಲಿಯಾಗಿ ಚಲ್ಲುವುದು,–ಎಸೆಯುವುದು ; ತೂರಾಡುವುದು : (೬). **ಚೆಲ್ಲಾಟ$_1$** : (೬).

[ ಚಲ್ಲು$_1$ + ಆಟ ]

**ಚಲ್ಲಾಟ$_2$, ಚೆಲ್ಲಾಟ$_2$**(ನಾ). ೧. ವಿನೋದ ; ಸರಸ ; ಲೀಲೆ ; ವಿಲಾಸ : ಭಾವದಲ್ಲಿ ನನ್ನ ಕೂಡಣ ಚಲ್ಲಾಟದಿಂದ ಸಂಚರಿಸುತ್ತ ತಾನೇ ಜಂಗಮನಾದನಯ್ಯಾ (ವಚಶಾ. II, ೦೫೨); ಅತಿವಿಳಾಸಮನೆಸಗುತ್ತಸದಿರ್ವೆಳವಣ್ಗಳ ಚಲ್ಲಾಟಮಂ ನೋಡುತ್ತ (ಉದ್ಭಟ. ೩-೩೨ ವ). ೨. ಗಾಂಭೀರ್ಯವಿಲ್ಲದಿರುವಿಕೆ : ಅವಳ ಚಲ್ಲಾಟದ ನಡವಳಿಕೆ ಗೌರವಕ್ಕೆ ಧಕ್ಕೆ ತರುತ್ತದೆ (ರೂಢಿ). **ಚೆಲ್ಲಾಟ$_2$:** ೧. ಚೆಲ್ಲಾಟಂ ಕಲಹಂ ರತಿ ಸಲ್ಲೀಲೆ (ಮನ್ಮವಿ. ೫-೩೫); ಆಳಿಗಳವ್ವುಗೆ ಸಿಂಗವಣಿಗಳ ಚೆಲ್ಲಾಟ (ಕಂನವಿ. ೦೦-೪೪); ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣಸಂಕಟ (ಗಾದೆ). ೨. ನಲ್ಲ ಕಂಡರೆ ಚೆಲ್ಲಾಟವಾಡುವ ಚೆಲುವೆಯು ಗತಿಯೇನು? (ಬೋಳಮಾ. ೦೩೦ ಪ್ರಸ್ತಾವನೆ).

[ ಚಲ್ಲ$_1$ + ಆಟ. / ತೆಲು. ಚೆಲ್ಲಾಟ ]

**ಚಲ್ಲಾಟಂಬೆಱು** (ಕ್ರಿ). ಸರಸವಾಡು; ಸಂತೋಷಿಸು; ವಿನೋದಪಡು: ಚಲ್ಲಾಟಂಬೆತ್ತು ಕಾಂತಾಮಣಿಯುಗುರಿಸಿದಳ್ ತೈಲಮಂ ಬಾಲೆಗಾಗಳ್ (ಉದ್ಭಟ. ೮-೧೫). [ ಚಲ್ಲಾಟ$_2$ + ಪೆಱು$_1$ ]

**ಚಲ್ಲಾಡು$_1$, ಚೆಲ್ಲಾಡು$_1$** (ಕ್ರಿ). ೧. ತೂರಾಡು ; ಈಡಾಡು ; ಒಗೆದಾಡು : ಫುಲ್ಲನಾಭನ ಪ್ರಾಣವಲ್ಲಭೆಯು ನೆಱೆ ಸಿರಿಯು ಚ[ಪಾಠಾಂ. ಚೆ]ಲ್ಲಾಡುತುಱೆ ಮೆಱೆದ ಕಲ್ಯಾಣಪುರದ ಸುತ್ತೆಲ್ಲ (ಗುರುಚ. ೦-೨೦). **ಚೆಲ್ಲಾಡು$_1$:** ೧. ಬಿಂದಚ್ಚಲರ ಧೂಳಿಗಳ ಚೆಲ್ಲಾಡಿ (ಬ್ರಮಿಥಾ. ೩-೨೪); ಹಿಗ್ಗಿರ್ದ ಕಂಗಳಿಗೆ ಚೆಲ್ವಿಕೆಯ ಚೆಲ್ಲಾಡಿ (ಶಾಲೂರ. ೦೦೮-೨೪೬). ೨. ಅತಿಶಯವಾಗಿ ಬಿದ್ದಿರು ; ಯಥೇಷ್ಟವಾಗಿ ಇರು ; ಇಟ್ಟಾಡು : ಹೊರಗಡೆ ತ್ರಯೋದಶಿ ಚಂದ್ರನ ಬೆಳಕು ಚೆಲ್ಲಾಡುತ್ತಿತ್ತು (ಚಂಗಾಳ್ಯ. ೫೦೫): ಎರಡಾಣೆ ನಾಕಾಣೆಗೆ ಸೇರಕ್ಕಿ ಬಿದ್ದು ಚೆಲ್ಲಾಡೋದು (ನನ್ನೂರು. ೩೧೬). [ ಚಲ್ಲು$_1$ + ಆಡು$_1$ ]

**ಚಲ್ಲಾಡು$_2$** 'ಚಲ್ಲವಾಡು' ನೋ.

**ಚಲ್ಲಾಣ** 'ಚಲ್ಲಣ' ನೋ.

**ಚಲ್ಲಾನೆ** (ನಾ). ಒಂದು ಬಗೆಯ ಮರ: ವಲೀವರ, ಚಲ್ಲಾನೆ . . . ಗೂಗ (ಮೃಜಗಿ. ೩೦-೬೦೬). [ ? ]

**ಚಲ್ಲಾಪಿಲ್ಲಿ, ಚಲ್ಲಪಿಲ್ಲಿ, ಚಲ್ಲಿಪಿಲ್ಲಿ, ಚೆಲ್ಲಪಿಲ್ಲಿ, ಚೆಲ್ಲಾಪಿಲ್ಲಿ, ಚೆಲ್ಲಿಪಿಲ್ಲಿ**(ನಾ). ಅತ್ತಿತ್ತ ಚೆದರಿದ ಸ್ಥಿತಿ; ಅವ್ಯವಸ್ಥೆಯ ರೀತಿ; ಅಸ್ತವ್ಯಸ್ತತೆ : ಅವರ ಫೌಜಿಗೆ ಬಹಳ ಪೆಟ್ಟಾಗಿ . . . ಕಡೆಗೆ ಇದಿರಿಗೆ ನಿಲ್ಲಲಾರದೆ ಚಲ್ಲಾಪಿಲ್ಲಿ ಆದ್ದರಿಂದ (ರಾಜೇಂದ್ರ. ೪೩); ಉದ್ದಿನ ಮೂಟೆಯು ಉರುಳಿ ಹೋದರೆ ಅದರೊಳಗಿರುವ ಕಾಳುಗಳು ಚಲ್ಲಿ ಚಲ್ಲಾಪಿಲ್ಲಿಯಾಗಿ ಹೋಗುವಂತೆ (ಹುಚ್ಚುಹ. ೧೨೮); ಮನಸು ಚದರಿ ಚಲ್ಲಾಪಿಲ್ಲಿಯಾಯಿತು (ಹೂಬಿಸಿ. ೧೨). **ಚಲ್ಲಪಿಲ್ಲಿ:** ಗಲ್ಲೆಯೊಡೆಯ ಕಿವಿದನು ಗಡೆಯುವರನು ಚಲ್ಲಪಿಲ್ಲಿಯು ಮಾಡಿದನು (ಕುರಾಸಾಂ. ೦೩-೨೦). **ಚಲ್ಲಿಪಿಲ್ಲಿ:** ಬಲದಲ್ಲಿ ಕಲಫೌಜು ನಿತ್ರಾಣಸಲಾಬಿದೆ ಚ[ಪಾಠಾಂ. ಚೆ]ಲ್ಲಿಪಿಲ್ಲಿಯಾದುದು (ಸಮ್ಮಕಾ. ೮-೫೦). **ಚೆಲ್ಲಪಿಲ್ಲಿ:** ರಾಣ್ಯವನೆಲ್ಲವ ಹೊಕ್ಕುಱುದಿಱುದು ಚೆಲ್ಲ[ಪಾಠಾಂ. ಚಲ್ಲಿ]ಪಿಲ್ಲಿಯು ಮಾಡಿ (ಕುರಾಸಾಂ. ೫-೪೫). **ಚೆಲ್ಲಾಪಿಲ್ಲಿ:** ಸಾಮಾನುಗಳೆಲ್ಲ ಅತ್ತಿತ್ತ ಚೆಲ್ಲಾಪಿಲ್ಲಿಯಾಗಿದ್ದವು (ಕೊಶಕಾ. ೬೦); ಪಾಂಡ್ಯ ಸೈನ್ಯಗಳು ಚೆಲ್ಲಾಪಿಲ್ಲಿಯಾಗಿ ಓಡುತ್ತಿದ್ದವು (ಶ್ರೀರಾಯ. ೩೧೯); ಕೈಯಲ್ಲಿದ್ದ ಬಟ್ಟಲು ಕೆಳ ಉರುಳಿ ಇದ್ದ ದೋಸೆ ಎಲ್ಲಾ ಚೆಲ್ಲಾಪಿಲ್ಲಿಯಾಗಿ ಕೆಳಬಿತ್ತು (ಪದ್ಮಸ. ೫೫). **ಚೆಲ್ಲಿಪಿಲ್ಲಿ:** ದೇವತೆಗಳು . . . ಕಲ್ಲುತಾಗಿದ ನೆಲ್ಲಿಯಂತೆ ಚೆಲ್ಲಿಪಿಲ್ಲಿಯಾಗುವಂ ತೋಡಿದುವಲ್ಲಿ ನಿಲ್ಲದೆ (ನೇಮಿಸಂ. ೨೫-೫೫).

[ <ಚಲ್ಲು$_1$. / ತುಳು. ಚೆಲ್ಲಾಪಿಲ್ಲಿ ]

**ಚಲ್ಲಿ$_1$, ಜಲ್ಲಿ$_1$** (ನಾ). ೧. ಚೂರು ; ತುಣುಕು ; ತುಂಡು ; ಹೋಳು : ಒಗುವಿಂಗೆ ಬೇಳೆಗೆಯ್ದು ಮುಟಸಂ ತಳಿದಲ್ಲದ ಚಲ್ಲಿಯಂ ಪವಣ್ಪುಗೆ ಕಲಸಿರ್ದ ತಣ್ಗಲಸುಗೂಟನಿಳಾಪತಿಗಿತ್ತನಟ್ಟಿಯಿಂ (ಲೀಲಾವ. ೫-೬೦); ಚೆಳಿಯದಂಗೋಪಾಂಗವಂ ಚಲ್ಲಿ ಮಾಡಿದೊಡಂ ತಳ್ತೊಳಗಿರ್ದೊಡಂ ಕಡೆಗದೆಂದುಂ . . . ದೇಹದಿನಾತ್ಮಂ ಪೆಱನೆಂಬ ಬುದ್ಧಿ ನಿನಗೀಗಳ್ ಸಾರ್ದುದು (ಧರ್ಮನಾ. ೫-೦೦೯); ಕಾಡೆ ಕವಟೆಕಾಯ ತಂದು ಚಲ್ಲಿಯ ಮಾಡಿ ಕೂಡೆ ವರಳೊಳಗಿಡುವುದು (ಸಾಳ್ವಸಾಂ.೯). **ಜಲ್ಲಿ$_1$:** ೨. ರಸ್ತೆಯನ್ನು ಭದ್ರಪಡಿಸಲು ಹಾಗು ಸಿಮೆಂಟ್ ಕಾಂಕ್ರೀಟ್ ತಯಾರಿಸಲು ಹಾಕುವ ಕಲ್ಲಿನ ಚೂರು,–ತುಂಡು: ಬದುಕಿನ ನಡುಕಟ್ಟನಲ್ಲಿ ಕಟ್ಟೆ ವ್ಯೆಯ ಕಲ್ಲಜಲ್ಲಿ(ಗರಿ. ೯೪-೫); ರಸ್ತೆಗೆ ಜಲ್ಲಿ ಎಂದರೆ ಏನೆಂಬುದು ತಿಳಿದೇ ಇರಲಿಲ್ಲ (ರಂಗಳ. ೨೩). ೩. (ಆಲಂ) ಸುಳ್ಳು ; ಸತ್ವವಿಲ್ಲದ ವಿಚಾರ: ದುರಗಿ ಆಡಿದ ನುಡಿಯು ಬೇಡನ್ನರಲ್ಲಿ; ಕಾಳಿ ಹೇಳುವ ಮಾತಿನಲಿ ಇಲ್ಲ ಜಲ್ಲಿ (ಜನಪ. IV, ೨೬-೧೨).

[ ದೇ.ಶ ತಮಿ. ಮಲ. ಚಲ್ಲಿ ; ತುಳು. ಚಲ್ಲಿ. ಜಲ್ಲಿ ; ತೆಲು. ಜಲ್ಲಿ ]

**ಚಲ್ಲಿ$_2$, ಛಲ್ಲಿ$_1$** (ನಾ). ೧. [ನಾಟ್ಯ] ನೃತ್ಯದ ಒಂದು ಗತಿ,– ಪಾದವಿನ್ಯಾಸ : ರಸಭಾವಾಭಿನಯಂಗಳ್ ಪೊಸವೆ ಪೊಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ ಪೊಸವೆ ಕರಣಂಗಳುಂ ನಿಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ (ಆದಿಪು. ೯-೨೫); ಚರಣದ ಚಾರಿಯು ಚಲ್ಲಿಯು ಪರಿಕ್ರಮ ಕ್ರಮದ ಭಂಗಿಗಳ್ ನೆಗಟ್ಟಿಡೆಯೊಳ್ (ಆದಿಪು. ೯-೩೯). **ಛಲ್ಲಿ$_1$:** ೨. [ಸಂಗೀತ] ಮೃದಂಗ ಬಾರಿಸುವ ಒಂದು ಮಟ್ಟು,–ಗತ್ತು : ವಾದ್ಯವಿದ್ಯಾಧರನಪ್ಪ ವಿದ್ಯಾಧರಮಾರ್ದಂಗಿಕಂ ಮೃದಂಗಸಂಗತೋತ್ಸಂಗವಾಗಿ . . . ಬೊಲ್ದಾವಣೆ ಬೊಲ್ದಾವಣೆ ಛಲ್ಲಿ ಪಾಡು ಪದಂ . . . ಡೋಕೆಯೆಂಬ ದೇಸೆಯ ಶಬ್ದಂಗಳೆಸೆಯೆ ಬಾಜಿಸುತ್ತಿರೆಯುಂ (ಶಾಂತೀಶ್ವ. ೧೩-೬೬ ವ).

ಛಲ್ಲಿಮಾಡು=ನರ್ತನಮಾಡು ; ನಾಟ್ಯವಾಡು : ವರ್ಗ ದ್ವಿತೀಯಾಕ್ಷರಂಗಳ್ಗೆ–ವಪ್ಪಾಣಂ . . . ಛಲ್ಲಿಮಾಡಿದಂ (ಛಲ್ಲು ಮಾಡಿದು) (ಕಮದ. ೧೫ ಪ್ರಯೋ). [<ಪ್ರಾ. ಚಲ್ಲಿ=ನೃತ್ಯದಲ್ಲಿಯ ಗೀತೆ. / ತಮಿ. ಚಲ್ಲಿ= ಒಂದು ಬಗೆಯ ವಾದ್ಯ ]

**ಚಲ್ಲಿ$_3$, ಚಲ್ಲೆ$_2$, ಚೆಲ್ಲಿ** (ನಾ). ಕನ್ನಡಿ : ದರ್ಪಣ : "ಕನ್ನಡಿಗೆ ಕೈಪಿಡಿ ಚಲ್ಲಿ [ಪಾಠಾಂ. ಲ್ಲೆ]ಯೆಂದು" (ಕಲ್ಯಮಂ. ೬೫); ಬಲ್ಲವನೆಲ್ಲರಿಗೆ ಲಲ್ಲೆಯ ನುಡಿವನೆ ಬಲ್ಲವನಿರವು ಚಲ್ಲಿಯ ರೂಹಿನಂತೆ ಯಿದ ಬಲ್ಲವರಾರೊ(ಪದಗೋ. ೪೮-೧೦೫). **ಚಲ್ಲೆ$_2$:** "ಚಲ್ಲೆಯೆನೆ ದರ್ಪಣಂ ನೇರಾದುದು" (ಕಕರ. ೩೪). **ಚೆಲ್ಲಿ:** ಒಲವಿಂದೀಪೊಡೆ ಗೋವಂಗಲಗೆ ಕೊಟಲ್ ಕೋಡ ಕಾಳೆ ಕೋಲುಡದೋಲ್ ಕಂಬಲ ಕಲ್ಲಿ ಚೆಲ್ಲಿ ಪೀಲಿಯ ತಲೆಸುತ್ತಲ್ಲದೆ ಮಹಾಗ್ರಪೂಜೆವಿರುದ್ಧಂ (ಜಗವಿ. ೧೬-೨೨). [ ? ]

**ಚಲ್ಲಿಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚಲ್ಲಿಸು₁, ಚೆಲ್ಲಿಸಂ₁** (ಕ್ರಿ). ೧. ಎರಚುವಂತೆ ಮಾಡು ; ಚೆಲ್ಲುವಂತೆ ಮಾಡು : ಪಾವುಗಳಂ ಕರ್ಚಿಸುತ್ತಂ ಪಲ್ಲಿಯಿಂದಂ ಬೆದಱಿಸುತ್ತಂ ಕಿಚ್ಚಂ ಚಲ್ಲಿಸುತಂ (ಧರ್ಮಪ. ೧-೭೬ ವ) ; ಅಲ್ಲಿ ಉರಿದಿದ್ದ ಒಂದು ಕೆಂಡವನ್ನು ತರಿಸಿ ಅದಕ್ಕೆ ಅಮೃತದ ನೀರನ್ನು ಚಲ್ಲಿಸಿದನು (ಪಂಚಾಮೃ. ೪೦). ೨. ಸುರಿಯುವಂತೆ ಮಾಡು ; ಸುರಿಸು : (ಕ). **ಚೆಲ್ಲಿಸು₁** : ೧. ಮಲ್ಲಿಗೆ ಯರಳಂತೆ ಬೆಳ್ಗೊಳು ಬಹುವರ್ಣದಲ್ಲಿ ರಂಜಿಪ ಬಣ್ಣಗೂಳು . . . ಚೆಲ್ಲಿಸಿದಳು ದೆಸೆದೆಸೆಗೆ (ಮೋಹತ. ೩೦-೩೬) ; ಒಂದು ಖಂಡಿಗ ರಾಗಿಯನ್ನು ಚೆಲ್ಲಿಸಿದೆ (ಹಂಗಾಳ್. ೪೨೦). ೨. ಅಲಿನೀರ್ಗಳಂ ಚೆಲ್ಲಿಸಿಕೊಳುತ್ತೆ (ನಂಬಿರ. ೧೨-೦೦೭). [ಚಲ್ಲು₁ + – ಇಸು₃]

**ಚಲ್ಲಿಸು₂, ಚಳ್ಳಿಸು, ಚೆಲ್ಲಿಸು₂** (ಕ್ರಿ). ಚೂರುಮಾಡು ; ತುಂಡುಮಾಡು ; ಕತ್ತರಿಸು : ತಾಳಿಸಿದ ಬದನೆಯ ಕಾಯ ಚ[ಪಾಠಾಂ. ಚೆ]ಲ್ಲಿಸಿದ ನೀರುಳ್ಳಿ ಶುಂಠಿ ಸಹಿತಿಕ್ಕುವುದು (ಸೂಪಶಾ. ೪-೨೯). **ಚಳ್ಳಿಸು**: ನೀರುಳ್ಳಿಯ ಗಡ್ಡೆಯಂ . . . ಚಳ್ಳಿಸಿ ಜಾಜಿಯಂ ಕಲಸಿ ಮೆಲ್ಲದ ಮಾನವನೇನ ಬಲ್ಲನೋ (ನೀತಿಸಾ. ೭೪೭). **ಚೆಲ್ಲಿಸು₂** : ಚೆಲ್ಲಿಸಿದ ನೀರುಳ್ಳಿ ನಿಂಬೆಹುಳಿ ಮೆಣಸು ಹಸಿಯಲ್ಲ ಸಕ್ಕರೆ ಹುಳಿಯ ಬೆರಸಿ ಪಾಕಂ ಮಾಡಿ (ಸೂಪಶಾ. ೭-೧೭).

[ಚಲ್ಲಿ₁ + – ಇಸು₃]

**ಚಲ್ಲು₁, ಚಲ್₁, ಚೆಲ್ಲು₁** (ಕ್ರಿ). ೧. ಹರಡು; ಪಸರಿಸು : ಕ್ರೂರಾಕಾರ ಮನೆಯ್ದೆ ತಾಳ್ದಿ ತಮಮಂ ಚ[ಪಾಠಾಂ. ಚೆ]ಲ್ಲುತ್ತುಮಿರ್ದಲ್ಲಿಯುಂ . . . ರಾಹು ಬಂದು (ಬಾರಪು. ೩-೦೬) ; ಬೆಳುದಿಂಗಳು ಹಾಲು ಚಲ್ಲಿದ ಹಾಗಿದ್ದ (ಲೂಪ). ೨. ಚದರಿಹೋಗು; ದಿಕ್ಕಾಪಾಲಾಗು: ಸಮಸ್ತಜನಮನಕ್ಕನು ರಾಗಮಾಗಲಲ್ಲಿಗೆ ಚಲ್ಲಿದಲ್ಲಾ ಬ್ರಾಹ್ಮಣೋತ್ತಮರು ಬಂದು ಕೊಡಲ್ (ಉದ್ಭಟ. ೪-೦೦೨ ವ) ; ಮುಂದೆ ಹೆಣದಿನಿಹಿಗಳೆ ಖಗಮೃಗ ವೃಂದ ಚ[ಪಾಠಾಂ. ಚೆ]ಲ್ಲಿತು ಭೂತಪೂತನಿವೃಂದ ಕೆದಱಿತು (ಕುಮಾ.ಗ. ೦೨-೪); ಚ[ಪಾಠಾಂ. ಚೆ]ಲ್ಲಿತಾಕ್ಷಣ ನೆರೆದ ಸೇನಾವಲ್ಲಭರು (ತೊರರಾ. ೪-೪-೩೦). ೩. ಸಿಂಪಿಸು ; ಚಿಮುಕಿಸಂ ; ತಳಿ : ಬದ್ಧ ಜಲವಂ ಚಲ್ಲಿ ಚಲ್ಲಿ ತದುದ್ಧರಾಗ್ನಿಯನಂತು ಕೆಡಿಸಿ (ಬಸಪು. ೩-೫) . ೪. ಬಿಸುಡು ; ಎಸೆ : ಒಡೆದ ಹುಳಿಮಜ್ಜಿಗೆಯ ತಿಳಿಯುಮಂ ಚ[ಪಾಠಾಂ. ಚೆ]ಲ್ಲಿ ಪಾವಡೆಯಲ್ಲಿ ಹಿಂಡಿ (ಸೂಪಶಾ. ೨-೦೬) :ಆ ವಿಳಾಸದ ಕಾರ್ಡನ್ನು ಅಲ್ಲಿಯೇ ಚಲ್ಲಿ . . . ಓಡಹತ್ತಿದನು(ಜೀವಪ್ರ. ೨೩). ೫. ಧಾರಾಳವಾಗಿ ಖರ್ಚುಮಾಡು, –ವ್ಯಯಮಾಡು : ಗಳಿಸಿ ತಂದೆಮಗರ್ಥವೀವುದನುಳಿದು ಭಂಡಾರವನೆ ವಿಂಡಗರ್ಗಳಸಿ ಚ[ಪಾಠಾಂ. ಚೆ]ಲ್ಲುವುದುಚಿತವೇ ಯೆಂದಾಗ್ರಹಿಸಿ ನುಡಿದು (ಬಸಪು. ೦೦-೬). ೬. ಕೆಡಹು ; ಬೀಳಿಸು : ಆರು ಕೊಂಡರು ಹೇಳು ನಡೆವುತ ದಾರಿಯಲಿ ಕೆಡಹಿದೆಯೊ ವ್ಯೋಮಚಱದಲ್ಲಿ ಚ[ಪಾಠಾಂ. ಚೆ]ಲ್ಲಿದೆಯೊ (ಬಸಪು. ೧೪-೨೬) ; ಭಾವನಂಟ ಬಂದಾಗ್ಲೂ ಹಾಲು ಚಲ್ಲೋದು ಬಿಡಲಿಲ್ಲ (ಗಾದ). ೭. ಇಡು ; ಹಾಕು ; ಇರಿಸು : ಕುಡಿಯುವ ನೀರೊಳಗೆ ಮೊದಲೇ ಒಂದು ಶೀತೋಷ್ಣಮಾಪಕ ಯಂತ್ರವನ್ನು ಚಲ್ಲಿಟ್ಟಿರಬೇಕು (ಮುಂಬಯಿ. ೩-೧೨೨). ೮. ಎರಚು ; ತೂರು : ಕಾಲಮೃತ್ಯುವಿನ ಎರಡು ಕಣ್ಣಲಿ ಚಲ್ಲಿ ಮಣ್ಣಂ (ಬಸಪು. ೪೭-೧); ಗದ್ದೆಗಳಿಗೆ ಬೀಜವನ್ನು ಚಲ್ಲಿದ ಮೇಲೆ ಮರುದಿವಸದವರೆಗೂ ನೀರನ್ನು ಬಂದುವಮಾಡಬೇಕು (ಕೃಷಿಪ್ರ. ೫೭). **ಚಲ್₁** : ೬. ನೀರ್ಗುಡಿವ ಸೌಹೃದಯರ್ಕಳಕ್ಷಿಗುರಿ ಕೋಪುಲೆಯರಕ್ಷಿಗಳ್ ಚದುರಿನಿಂದಂಜುಳಿಗಳಲ್ಲೆಸೆಯೆ ಚಲ್ದಪರ್ಮಿಣ್ಣಗಳೆಂದುಚ್ಚರಿಸುತೆ (ಶಬಪು. ೪-೨೦). **ಚೆಲ್ಲು₁** : ೧. ಚೆಲ್ಲುತುಮಾಸ್ಯದಿಂ ಮಿಗೆ ಮುಗುಳ್ನಗೆಯಂ (ಕುಸುಮಾ. ೫-೦೩೮) ; ಕಾಂತೆಯರ್ ಬರೆ ಕಟಾಕ್ಷವಂ ಚೆಲ್ಲುತುಂ (ನಂಬಿರ. ೧೦-೪); ಬಿಲ್ಲನೊದಱಿಸಿ ವೈರಿಭಟಂಗೆ ಚೆಲ್ಲಿದನು ಭೀತಿಯನು (ಕುಮಾ.ದ್ರೂ. ೦೮-೩) ; ಮಲ್ಲಿಗೆಯರಳ್ಗೂಡಿ ಪಾಲ್ಬೆಳದಂದದಿ ಚೆಲ್ಲಿತು ಬೆಳುದಿಂಗಳೆಳೆಗೆ (ಮೋಹತ. ೦೮-೦೦೨) ; ಆ ದಿನ ಮಳೆಯಿಲ್ಲದ ಸ್ವಚ್ಛ ಬಿಸಿಲು ಚೆಲ್ಲಿದ ದಿನ (೧೧ಬಾ. ೦). ೨. ಘುಳುಘುಳಿಸಿ ಬರ್ಪ ಮತ್ತಗಜಮಂ ಭೋಂಕನೆ ಕಂಡು . . . ಮಕ್ಕಳೆಲ್ಲಂ ಚೆ[ಪಾಠಾಂ. ಚ]ಲ್ಲಿ ಪೋಗೆ (ನಂಬಿರ. ೨-೨೬) ; ಅಂಬರದ ಸುರರ ವಿಮಾನತತಿ ಚೆಲ್ಲಿದವು ದೆಸೆದೆಸೆಗೆ (ತೊರರಾ. ೪-೪-೦೭) ; ವಿಸ್ಮಯಂಬಡೆದು ಚೆಲ್ಲಿದ ಕರಣಂಗಳಂ ಮೆಲ್ಲನೆ ಸಂತೈಸಿಕೊಂಡು (ರಾಜಶೇ. ೭-೭೧ ವ). ೩. ಮರಾಳಬಾಳಕಂಗಳ ಮೊಗದೊಳ್ ಮುಗುಳ್ನಗೆವಾಲಂ ಚೆಲ್ಲಿ ಚೆಲ್ಲ ವಾಡುತ್ತುಂ (ಅರ್ಧನೇ. ೧-೯೨ ವ) ; ಮರುಗದ ಮಡಿಯೊಳ್ ಕತ್ತುರಿಯಂ ಚೆಲ್ಲು (ನಂಬಿರ. ೧೪-೩೮). ೪. ನಿನ್ನ ಕೈಯೊಳಗಿನ ಕೋಲು ಇತ್ತ ಕಡೆಗೆ ಚೆಲ್ಲು (ಮುಂಬಯಿ. ೩-೦೧೯). ೫. ಸಕಲಭಂಡಾರವನು ಭೂಸುರನಿಕರದಲಿ ಚೆಲ್ಲಿದನು (ಕುಮಾ.ಆ. ೪-೨೨). ೬. ತೆಗೆದೀಂಟಿ ಜಲವಂ ಬಿಡೆ ತಪ್ಪಿ ಲ್ ತೀವಿಕೊಂಡು ಚೆಲ್ಲುವ ಪದದೊಳ್ (೧೦ಕ. ೦-೦೨೦) ; ಮಸಗೆ ಮೊಗೆದನು ಹೊಗುವ ಸೇನಾಪ್ರಸರವನು ಕುಡಿತೆಯಲಿ ಚೆಲ್ಲಿದನಸಮಬಲನಡಹಾಯ್ದು ಕೊಂಡನು ನೆಲನನಳವಿಯಲಿ (ಕುಮಾ.ಕ. ೧೨-೨೩). ೮. ಚೆಲ್ಲಿದರು ಒಬ್ಬರೊಬ್ಬರಿಗೆ ಜೀರಿಗೆವೆರಸು ಚೆಲ್ಲವಂ (ಸಿದ್ಧರಾ. ೮-೮೮) ; ಮಲ್ಲಿಗೆ ದಾಸಣ ಹೂವ ಸಂಪಗೆಯುಂತೆ ಚೆಲ್ಲಿತು ಬಣ್ಣಗೂಳುಗಳ (ಮೋಹತ. ೦೫-೩೬) ; ಮಂಕುಬೂದಿಯನ್ನು ಚೆಲ್ಲಿದಳು (ಹಾಡುಕ. ೯೫). ೯. ವರ್ಷಿಸು ; ಸುರಿ ಕುಳ್ಳಿ ರ್ದ ರ ಮುಖದೊಳಂ ಕಣ್ಗೊಳಂ ಮಯ್ಯೊಳಂ ತುಷ್ಪಂ ಚೆಲ್ಲ (ನಂಬಿರ. ೬-೪೨) ; ಚೆಲ್ಲಿದವು ಸಹದೇವ ಶಿರದಲಿ ಮಲ್ಲಿಗೆಯ ಮೊಗ್ಗೆಗಳ ಮಳೆ (ಕುಮಾ.ಸ. ೯-೬೫). ೧೦. (ಬಾಣ ಮೊದಲಾದುವನ್ನು) ಪ್ರಯೋಗಿಸಂ,– ಬಿಡು : ಚೆಲ್ಲಿದರು ಕೂರಂಬುಗಳನೆಡದಲ್ಲಿ ಬಲದಲಿ ಹಿಂದೆ ಮುಂದೆಸೆ ಝಲ್ಲರಿಯ ಶರಜಾಳ ಝೊಂಪಿಸಿತಬುಜಸಖಸುತನ (ಕುಮಾ.ಕ. ೨೦-೩೫). ೧೧. ಬೀಸು; ಆಡಿಸು : ಚಾಮರ ಛತ್ರ ಕುಂಚ ಸಿತ ಚೌರಿಯ ಚಮತ್ಕಾರದಿಂ ಚೆಲ್ಲುವಾ ಮಡದಿಯರು ಯಿಕ್ಕೆಲದಿ ನಿಂದು (ನವಮೋ. ೦೦-೦೭). ೧೨. ಚಾಚು ; ನೀಡು : ಅವಯವಂಗಳನಲ್ಲಿ ಚೆಲ್ಲಿದಳು ಥಲದಿಂದ (ಕಾಶಿರ. ಹ. ೫೭-೩೦) ; ಆಕಾಶದ ಸುತ್ತೆಲ್ಲ ನೋಡಿ ಕೈಮುಗಿದು, ಚೆಲ್ಲಿದ ಗೋಣಿನಿಂದ ದಿಕ್ಕುಗಳನ್ನೆಲ್ಲ ಕೇಳುವಂತೆ ಮಾಡಿದನು (ಪಾವಕ. ೩) : ಬೆಂಚಿನ ಕೆಳಗೆ ಕೈಕಾಲು ಚೆಲ್ಲಿದ (ಕುಂಹಿಂ. ೦೨೨). ೧೩. ಕಳೆ ; ನೀಗಂ : ಕಲ್ಲೆಗೆಡೆದವು ಕರಿಗಳಸುಗಳ ಚೆಲ್ಲಿದವು ತೇಜಿಗಳು (ಕುಮಾ.ಭೀ. ೭-೨).

**ಚಲ್ಲಬಡಿ, ಚಲ್ಲವಡಿ, ಚೆಲ್ಲಬಡಿ** = ಚದರಿಹೋಗುವಂತೆ ಹೊಡೆ ; ಚಲ್ಲಾಪಿಲ್ಲಿಯಾಗುವಂತೆ ಬಡಿ : ಅಲ್ಲಿ ಬಂದ ಮೃಗವಂ ಚ[ಪಾಠಾಂ. ಚೆ]ಲ್ಲಬಡಿವುತಂ (ಕನ್ನ.ರ. ಹ. ೩೫-೨೦) ; ಅಲ್ಲಿ ನೆರೆದಾ ಕ್ಷತ್ರುವರ್ಗವ ಚಲ್ಲಬಡಿದು (ಕುಮಾ.ಆ. ೨-೩೩) ; ಚಲ್ಲಬಡಿವೆ ತನ್ನ ಸೇನೆಯು ಕರೆಯೊ ನಮ್ಮಲ್ಲ ವ್ಯಂತರಿಗರನು (ಭರತ. ೨೪-೪೬) ; ಕಾಪಿನವರನು ಚಲ್ಲಬಡಿದು (ರಾಮಾಸಂ. ೬-೬-೪೧) ; ಮಾವು ಬನದೊಳಗೆ ವ್ಯಗರದವಾ ತುಂಬಿಗಳು ಚಲ್ಲವಡಿದಂತೆ ದೆಸೆದೆಸೆಗೆ ಪಾಱ . . . ಬರುತಿರ್ದಳಂತಾ ಭವಾನಿ (ವೀಕೃಪು. ೨-೪-೨೦) ; ಸುರಬಲಂಗಳಂ ಚಲ್ಲವಡಿದಣ್ಣನಂ ತೋಱತೋಱನುತ್ತೆ (ಚಬಪು. ೩೦-೪೭) ; ಸುಶರ್ಮನವದಿರ ಚೆಲ್ಲಬಡಿದನು ದಳದ ನಾಯಕರೆಲ್ಲರಿಗೆ ಸವಿದೋಱದನು ಬಲುಗದೆಯ ಹೊಯ್ಲುಗಳ (ಕುಮಾ.ಕ. ೦೫-೩೪) ; ಮುಱಮುರಿಯುವನೆಲುಗಳ ಚೆ[ಪಾಠಾಂ. ಚ]ಲ್ಲಬಡಿ ಪೋದೆನುತ ಕಂಗಳು ದಳ್ಳುರಿಯನುಗುಳಲ್ಕೆ (ನಿಭಾಗ. ೫-೧೧-೭) ; ಉಜುಬುವ ರಥಾರೂಢರಂ ದೆಸೆದೆಸೆಗೆ ಚೆಲ್ಲಬಡಿದು . . . ಮತ್ತವನ ಚಾಪಮಂ ಕೋಪದಿಂ ಖಂಡಿಸಿದನು (ಚಬಪು. ೩೯-೨೦) ; ವೈರಿಗಳನು ಚೆಲ್ಲಬಡಿದು ದೆಸೆಗಟ್ಟಿ ನಿಲ್ಲದೈತಂದು ಸತ್ಯಾಗಾಲದ ಪಾಳ್ಯವೆಲ್ಲವ ಸೂಱೆಯಾಡಿದನು (ಕಂನವಿ. ೩-೫೬). **ಚಲ್ಲವಂ, ಚಲ್ಲುವಂ, ಚಳ್ಳವಂ, ಚೆಲ್ಲವಂ, ಚೆಲ್ಲುವಂ** = ಹರಡು ; ಚದರಂ ; ವಿಸ್ತಾರವಾಗಿ ವ್ಯಾಪಿಸಂ ; ಚಲ್ಲಾಪಿಲ್ಲಿಯಾಗು : ನೆಲ್ಲಿಯಕಾಯ್ಗಳ ಹೆಗ್ಗದಿಗೆ

ಯೊಳಿಡೆ ಚೆಲ್ಲವರಿದು ಬೀಳುವಂತೆ ಬಲ್ಲಿದ ಜಾನರು ಬಿಗಿದು ಬಿಟ್ಟಾಕ್ಷಣ ಹಲ್ಲ ಕಿರಿದರಗಳೊಳಗೆ (ಶಂಸವಿ. ೧೪-೬೯) : ನೆಗೆವ ಮೃಗೇಂದ್ರಗಳಿಂ ಚೆಲ್ಲವರಿದ ಪುಲ್ಲೆಗಳಿಂ ಸಮ್ಮರ್ದಂಬಡೆವ ಪೊಮ್ಮಳಿಗಳಿಂ (ರಾಜಶೇ. ೧-೧೩೫ ವ); ಪುಲಿ ಬರವ ಕಾಣುತೆ ಹರಿಣಚಯ ಚೆಲ್ಲವರಿದಂತೆ ತರುಣಿಯರು ಬಿರದೆ ಮುರಿದೋಡುತ್ತೆ . . . ಇರಲು (ನವಮೋ. ೦೦-೬೩) ; ನಾಡೆಲ್ಲ ಹಸಿರು ಬೆಳೆಗಳಿಂದ ತುಂಬಿ ಎಲ್ಲೆಲ್ಲಿಯೂ ಚೆಲುವು ಚೆಲ್ಲವರಿದಿತ್ತು (ಜೀವರಂ. ೫೦) ; ಚೆಲ್ಲುವರಿದ ಹೊಳಲಿನ ತುದಿ ಎಷ್ಟು ಮನೋಹರ (ಚಂದುಟ. ೬೦) ; ಅಲ್ಲಿ ಸಿಡಿಲುಗಳೆಱಗಿದಂದದಿ ಬಲ್ಲಿದರ ಹರಿಗೆಗಳು ಮೊಳಗಲು ಚೆ[ಪಾಠಾಂ. ಚೆ]ಲ್ಲವಂದಿಱಿದಾಡಿದುದು ಯಾದವರ ಪರಿವಾರ (ಸಾಳ್ವಭಾ. ೧೯-೦೩) ; ತಲ್ಲಿಗರ್ ಬಲ್ಲಿಂ ಕಂಡ ಕಾಗೆಯಂತೆ ಚೆಲ್ಲವರಿಯೆ (ಧರ್ಮಾಮೃ. ೨-೬೯) ; ಪುಲ್ಲಶರನ ಮಾರ್ಬಲ ಬನದೊಳು ಪೊಕ್ಕು ಚೆಲ್ಲವರಿದು ಓಡಿಸಲು ಪಲ್ಲವಿಸಲು ಸದನದೊಳಿರ್ದ ರಿಸಿಗಳು ಗಲ್ಲಕೆ ಕರವ ಸಾರ್ಚಿದರು (ಮೋಹತ. ೬-೦೦) ; ದಿಕ್ಕುದಿಕ್ಕಿಗೆ ಚೆಲ್ಲವರಿದುದು ಪಾಯ್ದಳ (ನಾಗಕು. ೧೪-೬೬) ; ನೆಱೆ ಚೆಲ್ಲುವರಿದು ಸೂಸುವ ಕಣ್ಮಪಣೆಯೆನಿಸಿ ಮೆಱೆದರಲ್ಲಿಯ ವಾರನಾರಿಯರು (ಭಿಕ್ಷಾಟ. ೨-೮) ; ಕೈಗೆ ಸಿಕ್ಕಿದ ಗ್ರಂಥಗಳನ್ನು ತೆಗೆದುಕೊಂಡು ದಿಕ್ಕುದಿಕ್ಕಿಗೆ ಮತಾನುಯಾಯಿಗಳು ಚೆಲ್ಲುವರಿದಾಗ ಎಷ್ಟೋ ನಾಶವಾದುವು (ಕೂನ್ನಕು. ೧೬, ಹಿನ್ನರಿ). ಚೆಲ್ಲವೊಯ್ = ಚದರುವಂತೆ ಹೊಡೆ: ಪೊದಱುಗಟ್ಟುವ ಕದಲೆಗದಿರನುರದಿನುರವಣಿಸಿ ನೆತ್ತಿಯಿಂ ಪೊತ್ತು ನೆಗೆದು ಚಂಚುವಿಂ ಚೆಲ್ಲವೊಯ್ದು ನಖದಿಂ ನಲಿಗೆದಱೆ (ಅನಂಪು. ೬-೮೦ ವ). ಚೆಲ್ಲಿಕೊಡು = ಬಿಟ್ಟುಬಿಡಂ ; ಬಿಸುಡಂ : ಮನವೇಲ ಹುಡುಗೆಯನ್ನು ತನ್ನ ಅಪ್ಪುಗೆಯಿಂದ ಚೆಲ್ಲಿಕೊಟ್ಟು . . . ಅಲ್ಲಿಂದ ಜಾರಿಕೊಂಡ (ಅಮೋಲೀ. ೦೪) ; ಆವೇಶ ಬಂದವಳಂತೆ ಹೊದಿಕೆಯನ್ನು ಚೆಲ್ಲಿಕೊಟ್ಟು ಹಾಸಿಗೆಯಲ್ಲಿ ಎದ್ದು ಕುಳಿತಳು (ಮೂರುದಾ. ೨೬೬). ಚೆಲ್ಲಿಕೊಳ್ = ಎರಚಿಕೊಳ್ಳು ; ಸುರಿದುಕೊಳ್ಳು : ತುಱುಗಿದ ಕಾಯಿಪಣ್ಗಳ ಸಾಲವೃಕ್ಷವ ಮುಱಿದು ದೂಳಿಯ ಚೆಲ್ಲಿಕೊಳುತ . . . ಬಂದುದು ಬಿಱುಗಾಳಿ ಮದಗಜದಂತೆ (ಮೋಹತ. ೪-೩೬) ; ಕೇತಕಿಯರಳ ಧೂಳ್ಗಳ ಚೆಲ್ಲಿಕೊಳುತಳಿವ್ರಾತಕಲರ ಮಧುಮದದ ಪ್ರೀತಿಯಿಂದೀಯುತನಿಲದಂತಿ ವನದೊಳಗಾತುರದಲಿ ಚರಿಸಿದುದು (ಶಂಸವಿ. ೯-೯).

[ ದೇ.$_2$ ತಮಿ. ತುಳು. ಚಲ್ಲು ; ಕೊಡ. ಚೆಲ್ಲ್ : ತೆಲು. ಚಲ್ಲು ]

ಚಲ್ಲು$_2$ 'ಸೆಳ್ಳು$_1$' ನೋ.

ಚಲ್ಲು$_3$ 'ಚಲ್ಲ$_1$' ನೋ.

ಚಲ್ಲುಚಾಲು (ನಾ). ಗಾಂಭೀರ್ಯವಿಲ್ಲದ ನಡವಳಿಕೆ ; ಕೆಟ್ಟಚಾಳಿ ; ಹೀನವಾದ ನಡತೆ: ಸತ್ತ ಹೆಣದ ಹೆಬ್ಬೆಟ್ಟನ ಗುರ್ತನ್ನು ಹಾಕಿ ಮಗನಿಗೆ ಆಸ್ತಿಯನ್ನು ತಪ್ಪಿಸಿ ಚಲ್ಲುಚಾಲಿನ ಬಡಾಗಿಗೆ ಸ್ವತ್ತು ಸೇರುವಂತೆ ಮಾಡಬಾರದು (ಹುಟ್ಟಿಹ. ೧೫೬).

[ ಚಲ್ಲು$_3$ (<ಚಲ್ಲ$_1$) + ಚಾಲು ]

ಚಲ್ಲುತನ, ಚೆಲ್ಲುತನ (ನಾ). ಗಾಂಭೀರ್ಯವಿಲ್ಲದಿರುವಿಕೆ ; ಲಲ್ಲೆಗಾರಿಕೆ ; ಲಘುಮನೋಭಾವ: (ಕ). ಚೆಲ್ಲುತನ: ಇವೆಲ್ಲಾ ದೇವಸ್ಥಾನದ ಆವರಣದಲ್ಲಿವೆ ಅಂತ ಮೊದಲೇ ಒಂದು ಪೂಜ್ಯಭಾವನೆಯ ಪಕ್ಷಪಾತ ಮನಸ್ಸಿನಲ್ಲಿ ಚೆನ್ನಾಗಿ ಬೇರೂರಿರುವದರಿಂದ, ನೋಡುವ ಕಣ್ಣಿಗೆ ಅದರಲ್ಲೇನೂ ಚೆಲ್ಲುತನ ಕಂಡುಬರುವುದಿಲ್ಲ (ಶಿಲ್ಪಶಾ. ೬): ಹಿಂದಿನ ಚೆಲ್ಲುತನವೆಲ್ಲ ಈಗ ಅಡಗಿದೆ (ಹುಂಹಾ. ೨೬೬).

[ ಚಲ್ಲು$_3$ (<ಚಲ್ಲ$_1$) + – ತನ ]

ಚಲ್ಲುಬಡಿ (ಕ್ರಿ). ಲಲ್ಲೆಯಾಡಂ; ವಿಲಾಸಮಾಡಂ: ಆ ಉಡುಗಿ ಕಂಡಕಂಡ ಗಂಡಸರ ತಾವ ಚಲ್ಲುಬಡೀತೈತೆ. ಇದೇನು ಚಂದವಾ ? (ಶಂಕಿಮ. ೬೦).

[ ಚಲ್ಲು$_3$ (<ಚಲ್ಲ$_1$) + ಬಡಿ$_1$ ]

ಚಲ್ಲುವಡು (ಕ್ರಿ). ವ್ಯಾಪಿಸು ; ಆಕ್ರಮಿಸು: ಎಲ್ಲ ನಾಡುಗಳ . . . ಚಲ್ಲುವಡುತ ಗಡಿಸಱಿಗೆ ಪರಿದು (ಚಳಸ. ೧೯). [ <ಚಲ್ಲು$_1$ ? ]

ಚಲ್ಲೆ$_1$ 'ಚೆಲ್ಲೆ' ನೋ.

ಚಲ್ಲೆ$_2$ 'ಚಲ್ಲಿ$_3$' ನೋ.

ಚಲ್ಲೆ$_3$ 'ಚಲ್ಲ$_1$' ನೋ.

ಚಲ್ಲೆಗಣ್ 'ಚೆಲ್ಲೆಗಣ್' ನೋ.

ಚಲ್ಲೆಗಾರ್ತಿ 'ಚಲ್ಲಗಾರ್ತಿ' ನೋ.

ಚಲ್ಲೆನೋಟ, ಚೆಲ್ಲೆನೋಟ (ನಾ). ಸರಸವಾದ ನೋಟ ; ಸೊಬಗಿನ ನೋಟ : ವಿಲಾಸದ ದೃಷ್ಟಿ : ಚಲ್ಲೆನೋಟದಿ ರಂಗಕೇಳಿಯನೆಸಗೆಂಬ ವಲ್ಲಭೆಯೆಂದು ವಂದಪಳೊ (ಚಕಸಾಂ. ೨೩-೧೨). ಚೆಲ್ಲೆನೋಟ : ಮೆಲ್ಲಾತುದೋಱುತೊಯ್ಯನೆ ಚೆಲ್ವಿನೊಳಂ ಚೆಲ್ಲೆನೋಟಮಂ ಚೆಲ್ಲುವೆನೋ (ಚಳವಿ. ೬-೨೧೩). [ ಚಲ್ಲೆ$_3$ (<ಚಲ್ಲ$_1$) + ನೋಟ ]

ಚಲ್ಲೆಹ 'ಸಲ್ಲೆಹ' ನೋ.

ಚಲ್ವ 'ಚೆಲ್ವ' ನೋ.

ಚಲ್ವಿಕೆ 'ಚೆಲ್ವಿಕೆ' ನೋ.

ಚಲ್ವು 'ಚೆಲ್ವು$_1$' ನೋ.

ಚಲ್ವೆ 'ಚೆಲ್ವೆ' ನೋ.

ಚವ$_1$ 'ಚೆವು' ನೋ.

ಚವ$_2$, ಚವ್ವ$_3$, ಚೌ$_2$ (ನಾ). (ಉಕ) ೧. ರುಚಿ ; ಸೊಗಸು : ನಾಲಗೆಗೆ ಚವ ಇಲ್ಲ. ಏನೂ ಬೇಡ (ರೂಂ). ಚವ್ವ$_3$ : 'ಚವ್ವಗೆಡು' ಪರಾ. ಚೌ$_2$: ೨. ಚೆನ್ನಾಗಿರುವುದಂ; ಉತ್ತಮಸ್ಥಿತಿ; ಸುಖ; ಚೈವಿ (ಉಕ): ಎಲ್ಲರಿಗಿಂತ ಚೌ ಇರೋದು ನಂದು. ಆಳಿದ್ದಾವ ರಾಜಾ ಆಗೇನಿ (ಪ್ರೇಮಕ್ರಿ. ೨೬೬). ೩. (ಆಲಂ) ಮಾತಿನಲ್ಲಿ ಗೌರವ,-ಘನತೆ (?): ಏ ಚೌ ಅದ ಏನ ಬಾಯಾಗ ? ಒಳಗ ಹೊರಗ ಯಾರ್ಯಾರ ಕೇಳ್ಯಾರಂಬೂ ಅಂಜಿಕೀ ಅಳಕಾ ಏನೂ ಇಲ್ಲೇನು ನಿನಗ? (ದೀಪು. ೫೦).

[ ←ಮರಾ. ಚವ್ ]

ಚವಂಗ (ನಾ). ಒಂದು ಬಗೆಯ ಆಟ ; ಚೌಕಾಬಾರದ ಆಟ; ಚಕ್ಕದ ಆಟ (ಉಕ) : ಹಗಲೆಲ್ಲ ಬೀದಿಯ ಮುದುಕಿಯರೊಡನೆ ಚವಂಗ, ಗೊಟಗುಣಿ ಆಡುವುದೇ ಅಜ್ಜಿಯ ಕೆಲಸ (ನದೀಪ. ೬೯). [ ? ]

ಚವಕ 'ಚೌಕ$_2$' ನೋ.

ಚವಕಿ 'ಚೌಕಿ' ನೋ.

ಚವಚವನೆ (ಅ). ಮೆಲ್ಲಮೆಲ್ಲನೆ (?) : ಶಿವಸಿದ್ಧಿಯನು ನೀವು ನಿಮ್ಮೊಳಿ ಕಂಡನುಭವಿಸಿದೊಡಹುದೆ ದೇವಿಯರೆ ನವಗಿಷ್ಟು ಬುದ್ಧಿಗಲಿಸಿಯೆಂದು ಗಲ್ಲವ ಚವಚವನಲುಗಿ ಕೇಳುವನು (ಭರತ. ೪೩-೫೯).

[ ಚವಚವ$_0$ + – ಅನೆ$_1$ ]

ಚವಟ 'ಚೌಟ' ನೋ.

ಚವಡಿ 'ಚಾವುಂಡಿ' ನೋ.

ಚವಡಿಕಿ (ನಾ). ಒಂದು ಕ್ಷುದ್ರದೇವತೆಯ ಹೆಸರು: ಎಲ್ಲಾಯಿಯ ಕನಾತಿ ಬನದ ಶಂಕರಿ . . . ಕಲ್ಲದ ಚವಡಿಕಿ ಮಾರಿಮಸಣೆ (ವಿಸಾಸು. ೫೮-೨). [ <ಸಂ. ಚಾಮುಂಡಿಕಾ ]

ಚವಡಿಕೆ, ಚೌಟಗಿ, ಚೌಡಕಿ, ಚೌಡಿಕೆ (ನಾ). ಒಂದು ಬಗೆಯ ಚರ್ಮವಾದ್ಯ ; ಒಂದು ಕಡೆಗೆ ಚರ್ಮದ ಆವರಣವಿದ್ದು, ಉದ್ದವಾದ ಹಿಡಿಕೆಯೂ, ಚರ್ಮದ ನಡುವಿನಿಂದ ಒಂದು ತೆಳ್ಳಗಿನ ಹುರಿಯೂ ಜೋಡಿಸಲ್ಪಟ್ಟಿರುವ ವಾದ್ಯ : (ಕ). ಚೌಟಗಿ : ಗೊಂದಲವವರು ಬಂದು ಚೌಟಗಿ ಬಾರಿಸಿಕೊಂಡು 'ಜೇಜೇ' ಅಂತ ಹೇಳ್ತಾರಲ್ಲ, ಕೇಳಿದಿಯೇನು ? (ಬೆಳುದು. ೮೩). ಚೌಡಕಿ : ಗೊಂದಲಿಗರು . . . ಇಬ್ಬರು

ಮೂವರು ಕೂಡಿ, ಸಂಬಾಳ, ಚೌಡಕಿಗಳನ್ನು ಬಾರಿಸುತ್ತಾ, ಭವಾನಿಯ ಹಾಡುಗಳನ್ನು ಹಾಡುತ್ತಾ, ಭಿಕ್ಷೆ ಬೇಡುವರು (ಕಥಾಗ. ೨೦೦) : ಚೌಡಕಿಯ ನಾದ, ಸುತಿಯ ಸೂರು, ತಾಳ ಹೆಜ್ಜೆಗಳ ಗತ್ತಿನ ಕಡಿತ (ಪೆಟ್ಟು) . . . ಇಂಪಾಗಿ ಇನ್ನಷ್ಟು ಕೇಳಬೇಕೆಂದೆನಿಸುವುದು (ಕನ್ನಜಾ. ೧೩). **ಚೌಡಿಕೆ:** "ಚವಡಿಕೆ (ಚೌಡಿಕೆ)—ಸುತಿ" (ಜಾನಕೋ. ೫೫).

[ ←ಮರಾ. ಚವಂಡಕೇ, ಚೌಂಡಕೀ, ಚೌಂಡಕೇ ]

**ಚವತಿ** 'ಚೌತಿ' ನೋ.

**ಚವತಿಚಂದ್ರ** 'ಚೌತಿಚಂದ್ರ' ನೋ.

**ಚವರ, ಚಉರ, ಚವಲ$_{1}$, ಚವುರ$_{1}$, ಚವುಲ, ಚೌರ$_{2}$** (ನಾ). ೧. ಚಮರ; ಚಾಮರ: "ಚವರಂ ಚಾಮರಮಂತದು" (ಚಶುನಿ. ೯೬) : ಮಂಗಳಾರತಿಯಿತ್ತು ಚವರ ಸೀಗುರಿಯಿಕ್ಕಿ (ಬಸರ. ೩-೮೧) ; ನೆರೆದಲರ ಚವರಮಂ ಬಿತ್ತರದಿಂ ಬೀಸುತ್ತುಮಿರ್ದರ್ (ಕಬ್ಬಿಕಾ. ೦೩೮) ; ಪಿಡಿದೆರಳ್ ಸತ್ತಿಗೆಗಳೆರಡೆರಳ್ ಚವರಗಳ (ಚಬಪು. ೪೭-೩೭) ; ಚವರದ ಕುಂಚದಾರತಿಯ . . . ಬೋನವಮಂ ಸವಿವಡಿಯೂಡುವಾಳಿಯರುಮಂ ಪದೆದಿತ್ತಳವಳ್ ವಿಳಾಸದಿಂ (ರಾಚರೀ. ೯-೩೯). **ಚಉರ:** ೧. ಧಾರೆಯುಱದು ಕೊಟ ಹೞ ಚಂನ ಮಾಡಲಾಗಿ ಚಉರ ಮರಿಯಾದಿಯುಲು (ಎಕ. X(೬), ಕೋಲಾರ. ೦೪೮-೧೭ ; 1632). **ಚವಲ$_{1}$:** ೧. ಜನಿತ ವಿದ್ಯಾದೇವತೆಯರಾ ವನಿತೆಗಾಳಿಯರಾಗಿ ಬೆಳ್ಳಿಲೆಯನು ಗಳಿಸಿ ಕೊಡೆವಿಡಿದು ಥಾಳಿಸಿದರು ಚವಲಗಳನು (ಸಾಳ್ವಭಾ. ೩೦-೨೭) ; ಕರಿಯುವ್ವಾಗೆ ಧೂರೆಗಾಳು ಬೀಸ್ಯಾರು ಚವಲಾವ (ಹುಟ್ಯಹ. ೪೫). ೨. ಚಾಮರ ಬೀಸುವ ಊಳಿಗ: ಅಕ್ಕಸಾಲೆಯ ಕಾಳಯ್ಯ ಕಾಲಾಳು ಚವಲದ ಚಿಕ್ಕ (ನಾಗಳು. ೦೬-೨೬). **ಚವುರ$_{1}$:** ೧. ನನ ತಮ್ಮ ಎತ್ತರಿಸಿ ಬೀಸೋ ಚವುರವ (ಗರತಿ. ೪೧). **ಚವುಲ:** ೧. ಹಾಸಮ್ಯೊಜ್ಜುರದ ಹಲಗೆಯ ತುಳಸಮ್ಮ ಬೀಸಮ್ಮ ದೆಳ್ಳಿ ಚವುಲವ (ನಾಪದ. ೧೪). **ಚೌರ$_{2}$:** ೧. "ಚೌರಮೆನೆ ತಾಂ ಬರ್ಕುಂ ಚಾಮರಕೆ" (ಕಶರ. ೩೭) ; ಚೌರ ಬೀಸುತ್ತಿದ್ದವು ಚೌರ (ಅಮನಿ. ೫).

ಚವರ ಬೀಸು=೧. ಚಾಮರದಿಂದ ಗಾಳಿ ಹಾಕು. ೨. (ಅಲಂ) ಪೊರಕೆಯಿಂದ ಹೊಡೆ : ಇನ್ನೂ ನಿಮಗೆಷ್ಟು ಚವರಾ ಬೀಸಲೀ ಎಂದು ಕಸ ಉಡುಗುತ್ತ ಕಸಬರಿಗೆ ಸುಮ್ಮನೆ ಮೇಲೆ ಮಾಡಿದೆ (ಹುಡ್ಯಾಟ. ೫).

[ <ಸಂ. ಚಾಮರ ]

**ಚವರಂಗ** 'ಚೌರಂಗ' ನೋ.

**ಚವರಬೊಂಬಾಳ, ಚವಲಬೊಂಬಾಳ, ಚೌರಬೊಂಬಾಳ** (ನಾ). ರಾಜಯೋಗ್ಯವಾದ ಚಾಮರದ ಅಲಂಕಾರವುಳ್ಳ ಒಂದು ವಿಶೇಷ ರೀತಿಯ ಅಂದಣ,—ಪಾಲಕಿ: ಚವರಬೊಂಬಾಳ ಪಟ್ಟದ ರಾಜಗಲ್ಲದೆ ಯುವರಾಜ ಗುಂಟಿ ಲೋಕದೊಳು (ಭರಚ. ೮೦-೨೭). **ಚವಲಬೊಂಬಾಳ:** ಭವರೋಗಹರ . . . ಲಲಿತ ಚವಲಬೊಂಬಾಳವನೇಱ ಮೆಲ್ಲಡಿಯಿಟ್ಟು ವಿವರವನೇನ ಬಣ್ಣಿಪೆನು (ಮೋಹತ. ೪೨-೨೨) ; ಚವಲಬೊಂಬಾಳವನಿಳಿದ ಮಾಧವನು (ಮೋಹತ. ೪೨-೩೭). **ಚೌರಬೊಂಬಾಳ:** ಒಪ್ಪುವ ಚೌರಬೊಂಬಾಳವಡರ್ದು ದಿಗ್ವಿಜಯಕ್ಕೆ ಪೊಱಮಟ್ಟ (ರಾಶಚ. ೧೯-೫೭).

[ ಚವರ + ಬೊಂಬಾಳ ]

**ಚವರಿ, ಚವಲಿ$_{1}$, ಚವುರಿ, ಚವುಲಿ, ಚೌರಿ$_{1}$, ಚೌಲಿ$_{1}$** (ನಾ). ೧. ಚಮರೀಮೃಗದ ಕೂದಲು : ತನ್ನ ಬೆನ್ನೊಳ್ ಪರೆದೊಪ್ಪಿರ್ ಕೇಶಪಾಶಂ ಕಱಯ ಚವರಿಯುಂ ಕಟ್ಟಿದಂತೆ (ಜಗವಿ. ೧೭-೧೩೩) ; ಬಾಲದ ಮೇಲಿನ ಕೂದಲು ಚವರಿಯಂತೆ ಒಪ್ಪುವವು (ಮುಂಬಯು. ೩-೫೫). ೨.=ಚವರ ೧ : ಬಿರುದಿನ ಬಳಿಯ ಚವರಿಯು ಬೀಸಿ ಮಲೆತರ ತಲೆಯ ಕೊಲದೊಳೆತ್ತಿ (ಕುಮ್ಮಾವಿ. ಒರಿಇ. ೭-೩೦) ; ಚವರಿ ಸೀಗುರಿ ಮುಂದೆ ಜುಪತಿಯರ್ ಕುವರರು (ಭ್ರರವೇ. ೨-೬೧) ; ಮಹಾರಾಜರವರು ತಮ್ಮ ಭುಜಬಲದಿಂದ ಸಂಪಾದಿಸಿದ . . . ಸೂರೇಪಾನ, ಚವರಿ, ಪಟಪಾವಡೆ ಮುಂತಾದ ಬಿರುದುಗಳನ್ನು ಹಿಡಿದಿದ್ದರು (ಚಾಮವಂ. ೩೬); ತಂಗಾಳೀಯಾ ಕೈಯೊಳಗಿರಿಸೀ ಎಸಳೀನಾ ಚವರಿ (ಗಾ. ೨-೪). ೩. ಹೆಂಗಸರು ಕೇಶಶೃಂಗಾರಕ್ಕೆಂದು ಜೋಡಿಸಿಕೊಳ್ಳುವ ಕೂದಲ ಕಂಚ್ಟು ; ಗಂಗಾಮಣ (ಉಕ) ಅವಳ ಜಡೆ ಚಿಕ್ಕದಾದುದರಿಂದ ಚವರಿ ಸೇರಿಸಿಕೊಂಡು ಜಡೆ ಹೆಣೆದುಕೊಳ್ಳುತ್ತಾಳೆ (ರೂಢಿ). **ಚವಲಿ$_{1}$:** ೨. ಕಂದಾಟರದ ಕಾಗಕೆ ಕಳಿಹಿದಲಿ ಪರಬಳಸಿಂಗದ ಮೇಲೆ ಬಿಳಿಯ ಚವಲಿಯ ಕಟ್ಟಿ (ಎಕ. VIII, ಸಾಗರ. ೦೦೪-೬ : 1329 ?). ೩. ವನಿತಾ ಚೊಲ್ಲಹಕಂ ಚವಲಿಯಹುದೆ ಚೂಡಾರತ್ನಾ (ನೀತಿಸಾ. ೪೮೯). ೪. ತಲೆಯಲ್ಲಿ ಧರಿಸುವ ಒಂದು ಆಭರಣ : ಅಲರು ಚವಲಿ ಬೈತಲೆವಣಿ ಮುತ್ತಿನ ಬಲೆಯಿಲ್ಲ ಬಂದರೊಪ್ಪದೊಳು (ಭರಚ. ೦೬-೨೫) ; ಬೆನಕ ನಿಮ್ಮವ್ವಾಗೆ ಬೆಳ್ಳೀಯ ಶಿವದಾರ ಕುಣಿಕಾಲು ಚವಲೀ ಕೊನೆ ಮುಡಿಯೋ (ಹುಟ್ಯಹ. ೩೦); ಹಬ್ಬಿಗೆಲ್ಲಿ ಮರೆತೆ ಹವಳಾವ ಜಾಣಾನ ಮಗ್ಗುಲಲ್ಲಿ ಮರೆತೆ ಚವಲಿಯ (ಜ್ಯಸರ್ವ. ೦೩೧). **ಚವುರಿ:** ೧. ಸುಮನಃ-ಹುವ್ವು, ವಾಲ-ಚವುರಿಯ (ಬಾಹಟೀ. ೨-೬-೩೫ ವ). ೨. ಕೋಳುಗಳ ನೀಡಿ ಚವುರಿಗಳ ಬೀಸುವ ಹೆಣ್ಣುಗಳ ನಡುವೆ (ವಚಕಾ. ೫೦) ; ಸತ್ತಿಗೆ ಸೀಗುರಿ ಸೂರೆಪಾನ ಕುಂಚ ಚವುರಿ ಬೀಸಣಿಗೆ . . . ಕಣ್ಣೀರವಾದಿ ಬಿರುದುಗಳು ಮುಂತಾದುವನ್ನು ಹಿಡಿದು ಊಳಿಗಗುಡುತ್ತ (ಚಟ್ಯಅ. ೩೦-೮). ೩. ಎಡಗಯ್ಯೊಳ್ ಕೊಟ್ಟರ್ಥದಂತೆ ತಳಿಗೆಯ ಕೂಟನಂತೆ ಮುಡಿದ ಚವುರಿಯಂತೆ ನೆಲಹಿನ ಮೊಸರಂತೆ (ಧರ್ಮಾಮೃ. ೮-೦೪೩ ಅವಿಟ). ೫. ಚಿತ್ರದುರ್ಗದ ಪಾಳೆಯಗಾರರ ಕಾಲದಲ್ಲಿ ಬಳಕೆಯಲ್ಲಿದ್ದ ಒಂದು ನಾಣ್ಯ: ದುರ್ಗವು ಕೈವಶವಾದ ಮೇಲೆ . . . ಸಿಕ್ಕದ ನಾಣ್ಯಗಳ ವಿವರ: ೬,೪೦೦,೦೦೦ —ಬೆಳ್ಳೀನಾಣ್ಯ . . . ೧,೦೦೦,೦೦೦ —ಚವುರಿ (ಚಿತ್ರಪಾ. ೦೦೩). **ಚವುಲಿ:** ೪. ಅಕೆ ಚವುಲಿ, ಬೈತಲೆಮಣಿ ಮುಂತಾದ ಆಭರಣಗಳನ್ನು ಧರಿಸಿದ್ದಾಳೆ (ರೂಢಿ). **ಚೌರಿ$_{1}$:** ೨. ಅಳವಡಿಸಿಕ್ಕಿದಾ ಬಳಿಯ ಚೌರಿಗಳುಜ್ವಲಕಾಂತಿ ನೀಳ್ದುಗೊಂದಳಿಸಿರೆ (ಕುಶುಮಾ. ೮-೬೫) : ನೆಗಹಿ ಬೀಸುವ ಚೌರಿಗಳ ಸನ್ನೆಗೆ ಚತುರ್ಬಲವೆಲ್ಲ ದ್ರೋಣನ ದೃಗುಪಥಕೆ ಕೋಱದರು (ಕುವ್ಯಾದ್ರೋ. ೯-೦೭). ೩. ಬಾಲ ಮಾಣಿಕವನುಡು ಸಾದ ಕಿವಿಯಲಿ ಕೂಡು ಕಾಲ ಪೆಂಡೆಯವ ಮುಡಿ ಚೌರಿಯುಂ ಕಾಲ್ಗಟ್ಟು (ಹಚಕಾ. ೪-೪೯) : ಅಂಗನೆ ಚೌರಿ ಕಾಲಿಗೆ ಕಟ್ಟಿ ಮುಂಗೈಗೆ ತಾಳಿಯ ಬಿಗಿದು . . . ರಂಗನ ಸ್ಮರಿಸುತ ಹೊಱಗೆ ಹೊಱಟಳು (ಪುರಂದ. ೦-೦೧೧-೫). ೪. ಹೆರಳಿಂಗೆ ರನ್ನ ಕೆತ್ತಿಸಿದ ರಾಗಟೆ ಚೌರಿ ಗೊಂಡೆ ಮುತ್ತಿನ ಕುಚ್ಚುಗಳು (ಶ್ರೀಳ್ಯಪಾ. ೧೦). ೬. (ಮಂಟಪ ಮುಂತಾದುವುಗಳ) ಅಲಂಕಾರಕ್ಕಾಗಿ ಕಟ್ಟುವ ಕುಚ್ಚು : ಕಟ್ಟಿದ ಚೌರಿಗಳ್ ಗಗನಮಂ ಮಿಗೆ ಚುಂಬಿಪ ಕೂವಕಂಭಂ (ಚಚಳು. ೦೨-೫೪) : ಆಯಿದನು . . . ಕುಣಿವ ಗಂಟೆಯ ಹೊಳೆವ ಹೊಂಗಱಯ ಬಾಯಿಧಾರೆಯ ತೈಲಲೇಪನದಾಯತದ ಚೌರಿಗಳ ರಿಪುಭಟನಾಯುಷದ ಕಡೆವಗಲಭುಕ್ತಿಯ ಶಕ್ತಿಯನು ನೃಪತಿ (ಕುವ್ಯಾಶ. ೩-೬೫) ; ಬಿಳಿಯ ಚೌರಿಯ ಮೇಲುಗಟ್ಟಿನ ಹೊಳಹು ಮಿಗೆ ರಚಿಸಿದರು ಸತಿಯ ವಿವಾಹಮಂಟಪವ (ನಳಚ. ೩-೬). **ಚೌಲಿ$_{1}$:** ೩. ಜೌಲಿ, ಟೀಪು, ಪಿನ್ನು ಮೊದಲಾದುವು ಹೆಂಗಸರ ಕೇಶಾಲಂಕಾರ ಸಾಮಗ್ರಿಗಳು (ರೂಢಿ). [ <ಸಂ. ಚಮರೀ ]

**ಚವರಿಕೊಟ್ಟು, ಚೌರಿಕೊಟ್ಟು** (ನಾ). ಒಂದು ಬಗೆಯ ಚವರಿ ಸೇರಿರುವ ತಲೆಯ ಆಭರಣ; ಚಿನ್ನದ ಕೊಪ್ಪಿನಲ್ಲಿ ಸೇರಿಸಿ ಕಟ್ಟಿರುವ ಚಮರೀಮೃಗದ ಕೂದಲಿಂದ ಮಾಡಿದ ಗೊಂಡೆ ; ಚವಲಿತುಂಬು : (ಕ). **ಚೌರಿಕೊಟ್ಟು:** ರೇಗಟೆ, ಕೇದಿಗೆ, ಚೌರಿಕೊಟ್ಟು, ಜಡೆಬಂಗಾರ, ಗೊಂಡ್ಯ . . . ಡಾಬು ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲೆಮಂ. ೩೮). [ ಚವರಿ + ಕೊಟ್ಟು$_{2}$ ]

**ಚವರಿಕೊಪ್ಪು** (ನಾ). = ಚವರಿಕೊಟ್ಟು : (ಕ): [ ಚವರಿ + ಕೊಪ್ಪು$_{8}$ ]

**ಚವರಿಗೆ** 'ಚರಿಗೆ$_1$' ನೋ.

**ಚವರಿಬಿಜ್ಜಣ** (ನಾ). ಚವರಿಯಿಂದ ಮಾಡಿದ ಬೀಸಣಿಗೆ: ಚವರಿ ಬಿಜ್ಜಣವಿಡಿದ ಬಾಗಿರ್ದ ಮಯಕುವರಿ, ಹೆದರುತಂಜುತೆ ಮೆಲ್ಲನೆಯ ಮಾತು ತೆಗೆದಳು (ಶ್ರೀರಾಮಾ. ೬೫೦-೨೫೩). [ ಚವರಿ + ಬಿಜ್ಜಣ ]

**ಚವರಿಮಿಗ** (ನಾ). =ಚಮರೀಮೃಗ: ಮಜಿಯಾನೆಗಳ್ ಕಲಂಕಿದ ದಡೆಯಂ ತುದಿವಾಲದಿಂ ಬಟಿವ ಚವರಿಮಿಗಂಗಳಿಂ (ರಾಮಾಶ್ವ. ೪೩-೨೩).

[ ಚವರಿ + ಮಿಗ ]

**ಚವರೀಮೃಗ** (ನಾ). =ಚಮರೀಮೃಗ: "ಸೃಮರಃ–ದೊಡ್ಡ ಚವ[ಪಾಠಾಂ. ಮ]ರೀಮೃಗ" (ಸಿದ್ಧಾಂತಿ. ೧೭೬). [ <ಸಂ. ಚಮರೀಮೃಗ ]

**ಚವರೆ** (ನಾ). (?) : ದೇವಿಯರ ಚವರೆಯಲು × × × ಕಲುಕುಳ (ಸೌತಿಇ. ೧೯೭೨. ಉಡುಪಿ. ೩೪೨-೩೦ ; ?). [ ? ]

**ಚವರ್ಗ** (ನಾ).[ವ್ಯಾಕ] ಚ, ಛ, ಜ, ಝ, ಞ ಎಂಬ ಐದು ಅಕ್ಷರಗಳ ಗುಂಪು : ಚಟವರ್ಗಂ=ಚವರ್ಗ ಟವರ್ಗಂಗಳ್ (ಶಮದ. ೬೩ ಟೀಕ); ವರ್ಗಗಳಿಗೆ ಕ್ರಮವಾಗಿ ಕವರ್ಗ, ಚವರ್ಗ, ಟವರ್ಗ, ತವರ್ಗ, ಪವರ್ಗ ಎಂದು ಆಯಾ ವರ್ಗದ ಮೊದಲನೆಯ ವ್ಯಂಜನದ ಹೆಸರನ್ನು ಇಟ್ಟಿದ್ದಾರೆ (ಮುಧ್ಯಮ. ೧೩). [ ಚ + ವರ್ಗ ]

**ಚವಲ$_1$** 'ಚವರ' ನೋ.

**ಚವಲ$_2$** (ನಾ). ಹುಟ್ಟುಕೂದಲನ್ನು ತೆಗೆಸುವುದು; ಮುಡಿ ತೆಗೆಸುವುದು; ಚೌಲಕರ್ಮ; ಜಾವಳ ಇಳಿಸುವಿಕೆ (ಉಕ): ಹುಟ್ಟಿದಾಗ ಹಾಡುವ ಹಾಡುಗಳಿವೆ; ಚವಲದ ಹಾಡುಗಳಿವೆ (ಜಾನಗೀ. ೧೭); ಮದುವೆ, ಮುಂಜಿ, ಚವಲ . . . ಮತೀಯ ಪ್ರೇರಣೆಗಳನ್ನು ಬಿಂಬಿಸುವ ಸಾವಿರಾರು ಹಾಡುಗಳಿವೆ (ಸುವರ್ಣ. ೧೨೩). [ <ಸಂ. ಚೌಲ ]

**ಚವಲ$_3$, ಚವಲಿ$_2$, ಚೌಲ$_2$, ಚೌಲಿ$_2$** (ನಾ). ಎರಡಾಣೆ ಬೆಲೆಯ ಬೆಳ್ಳಿಯ ಒಂದು ಚಿಕ್ಕ ನಾಣ್ಯ : ಒಂದು ಚವಲ ದಕ್ಷಿಣೆ ಕೊಡಬೇಕು (ಕರುಕ. ೪೭); ಅವರದು–ಚವಲದಲ್ಲಿಯ ಡೌಲು ! (ಸುಕ್ರುಮು. ೧೫); ಒಂದು ಚವಲ 'ಇನಾಂ' ಎಂದು ತಮ್ಮ ಒಕ್ಕಲುಗಳಿಗೆ ಕೊಡುತ್ತಿದ್ದರು (ಶರಾವ. ೧೬೦). **ಚವಲಿ$_2$**: ಗೌಡ ಬೇಡಬೇಡವೆಂದರೂ ಎರಡಾಣೆಯ ಚವಲಿಯೊಂದನ್ನು ಅವನ ಕೈಯಲ್ಲಿ ತುರುಕಿದರು (ಮುಕ್ಕಿರುದಾ. ೪): 'ಚವಲಿ ಯಲ್ಲಿಯ ಡವಲು' ಎಂಬಂತೆ ವಿಶೇಷ ಆಭರಣಗಳಿಲ್ಲದಿದ್ದರೂ (ಮುಂಗಾರು. ೨೯). **ಚೌಲ$_2$** : ನೀರು ತುಂಬಿದ ಪಂಚಪಾತ್ರೆಯೊಳಗೆ ಒಂದು ಚೌಲವನ್ನು ಚಲ್ಲಿ . . . ವಕ್ರರೇಷೆಯಿಂದ ನೋಡಿರಿ : ಅದು ಪಾವಲಿಯಷ್ಟು ದೊಡ್ಡದಾಗಿ ಕಾಣಿಸುತ್ತದೆ (ಮುಂಬಯಿ. ೩-೯೩). **ಚೌಲಿ$_2$** : ಗಡಿಯಾಳಗಳು ತೀರ ಸಣ್ಣವೆಂದರೆ ಚೌಲಿಯಷ್ಟು ಇರುತ್ತವೆ (ಮುಂಬಯಿ. ೩-೮೬).

[ ←ಮರಾ. ಚವಲ್, ಚವಲೀ. / ತಮಿ. ಚವಲ : ತುಳು. ಚವಲೊ ; ತೆಲು. ಚವಲ ]

**ಚವಲಂಬ** (ನಾ). ಕಣ್ಣಿವೆ ; ರೆಪ್ಪೆ: "ಚವಲಂಬಮೆಂದು ಕಣ್ಣಿವೆ" (ಕವಿಶಂ. ೧೮೩); ಪೊಂಗಜಿಯು ಕವಲಂಬಂ ಚವಲಂಬವಾಡದ ಮುನ್ನಮೋಡುವಿನಂ ಪೋಗೆಚ್ಚಂ (ರಾಮಾಶ್ವ. ೧೯೫-೩) ; ಚವಲಂಬವನವಲಂಬಿಸಿ ನಗೆಯುಂ ಕಣ್ಣಗೊನೆಗಿದೆ (ಅರಳು. ೪೯೩-೧). [ ? ]

**ಚವಲಚೊಂಬಾಳ** 'ಚವರಬೊಂಬಾಳ' ನೋ.

**ಚವಲಿ$_1$** 'ಚವರಿ' ನೋ.

**ಚವಲಿ$_2$** ಚವಲ$_3$' ನೋ.

**ಚವಲಿತುಂಬು** (ನಾ). ತಲೆಯಲ್ಲಿ ಧರಿಸುವ ಒಂದು ಆಭರಣ : ಆಕೆ ಚವಲಿತುಂಬು ಹಾಕಿಕೊಂಡಿದ್ದಾಳೆ (ರೂಢಿ).

[ ಚವಲಿ$_1$(<ಚವರಿ) + ತುಂಬು$_2$ ]

**ಚವಳಿ, ಚವಳೆ, ಜವಳಿ$_4$** (ನಾ). ಒಂದು ಬಗೆಯ ತರಕಾರಿ ; ಗೋರಿಕಾಯಿ: ಹೀರೆ ಸೌತೆ ಕೂಷ್ಮಾಂಡಳಿಗೂಗುರಿ ಕಾರಸೆಗಡಲೆ ಚವಳಿ ಬಿಂಬುಬಿಜುಸೀಜದ ಮಡಿವಾಗಲ ಹಾಗಲ . . . ಶಾಖಾಳಿಗಳಿಂ ಸಲೆ ಸಂಭಾರಂ ಬೊರೆದುಪ್ಪಿನಕಾಯಿಗಳನೆಡೆವಡಿದಿಳೆದೆಳಿದದೆ (ಮುದೀಪು. ೨೮-೭); ಚವಳಿ, ಬದನೆ, ಅವರೆ, ಸವತಿ, ಕೋತಂಬರಿ, ಸಾಸಿವೆ, ಮುಂತಾದ ತೋಟಗಳಲ್ಲಿ ಬೆಳೆಯುವ ಪಲ್ಲೆಕಾಯಿಗಳು (ಕಥಾಗ. ೪೫೭) ; ಗೋವಿನ ಜೋಳದೊಡನೆ ಚವಳಿಯನ್ನು ತುಸು ಕೂಡಿಸಿದರೆ, ಬಾಳಿಕಬಹಳ ಒಳ್ಳೆಯದಾಗುವದು (ಗೋಗ್ರಾಸ. ೭೦). **ಚವಳೆ** : ಚವಳೆ ಹೀರಿ ಹಾಗಲು . . . ಎಂಬ ಕಾಯಿ ಎಲೆ ಪಲ್ಲೆಗಳು (ಮುಂಬಯಿ. ೩-೧೯೩). **ಜವಳಿ$_4$**. 'ಜವಳಿಕಾಯಿ' ಪರಾ.

[ ← ಮರಾ. ಚವಳೀ, ಚಂವಳೀ ]

**ಚವಳಿಕಾಯಿ, ಜವಳಿಕಾಯಿ** (ನಾ). ಗೋರಿಕಾಯಿ: ಅವ್ವ ಝುರಡಿಯೊಳಗೆ ಹಾಕಿಟ್ಟ ಚವಳಿಕಾಯಿ ಆರಿಸುತ್ತ . . . ಕೂತಿದ್ದಳು (ಬ್ರನಿ. ೨೬೦). **ಜವಳಿಕಾಯಿ** : ಕಡೂರಿನಿಂದ ಉತ್ತರಕ್ಕೆ ಗೋರಿಕಾಯಿಯನ್ನು 'ಜವಳೀಕಾಯಿ' ಎನ್ನುತ್ತಾರೆ (ಸುವರ್ಣ. ೨೬೦).

[ ಚವಳಿ + ಕಾಯಿ$_4$(<ಕಾಯ್$_4$) ]

**ಚವಳೆ** 'ಚವಳಿ' ನೋ.

**ಚವಿ** (ನಾ). ಹೊಳಪು ; ಕಾಂತಿ : "ಕಳೆಗದಿರು ಮಿನುಗು . . . ಬೆಳಗುಂ ಚವಿಯುಂ ತಿಳಿವೆಸರ್ ಕಾಂತಿಗೆ" (ಕಬ್ಬಮಂ. ೦೩): ನುಡಿಯ ಪಲ್ಲಳಿ ಚ[ಪಾಠಾಂ. ಛ]ವಿಯುಂ ತುಟಿದಳಿರ ಕೆಂಪುಮೇಂ ಕಿದಜಿದುದೋ (ಅರ್ಧನೇ. ೦-೯೩) ; ಮಿಸುನಿ ರತುನದ ಚವಿ[ಪಾಠಾಂ. ರತ್ನಪ್ರಭೆ]ಗಳಲ್ಲಿ ರಂಜಿಸುವ ಮಂಟಪದೊಳಗೆ . . . ಅವನೀಶನಿದ್ದನು ಸಿಂಹಪೀಠದಲಿ (ನಳಚ. ೪-೨೩).

[ <ಸಂ. ಛವಿ ]

**ಚವಿಕೆ** (ನಾ). ಮೆಣಸಿನ ಜಾತಿಗೆ ಸೇರಿದ ಒಂದು ಔಷಧಿ ಸಸ್ಯ : (ಕ).

[ ←ಮರಾ. ಚವಕ್ ]

**ಚವಿಸು** (ಕ್ರಿ). ತಳತಳಿಸು; ಮಿರುಗು; ಪ್ರಕಾಶಿಸು; ಹೊಳೆ.

**ಚವಿಚವಿಸು, ಚವಚವಿಸು** (ದ್ವಿರುಕ್ತಿ) : ಹರಳೋಲೆ ಮಕರಿಕಾಪತ್ರ ಮೂಗುತಿ ಸಣ್ಣಗೆಜೆಯ ತಿಲಕ ಚವಿಚವಿಸೆ (ಭರತ. ೪೦-೫೩) ; ನೀನೀಗ ಧವಳಪಟ್ಟೆಯ ನೂಂಕಿ ಮೊಗದೋಜೆ ಮೋಹನ ಚವಚವಿಸಿದುದೆಂದರವರು (ಭರತ. ೦೯-೧೩೬). [ ಚವಿ + -ಇಸು$_3$ ]

**ಚವು$_1$** 'ಚೌ$_1$' ನೋ.

**ಚವು$_2$** 'ಚೆವು' ನೋ.

**ಚವುಂಡನಾಯಕ** (ನಾ). ಒಬ್ಬಾತನ ಹೆಸರು : ಲೋಕವಿದ್ಯಾಧರನ ವಾಳೆಯಜಿಪ್ಪ ಚವುಣ್ಣನಾಯಕ ಅವಂಗೆ ಕೊಟ್ಟ ಮಣ್ಣ ಬಸದಿಗೆ (ಎಕ. VI, ಕಡೂರು. ೮-೦೦ ; ಶ. ೯೯೦). [ <ಚಾವುಂಡ + ನಾಯಕ ]

**ಚವುಕ** 'ಚೌಕ$_2$' ನೋ.

**ಚವುಕಛತ್ರಿ** (ನಾ). ಚಚ್ಚೌಕವಾದ ಕೊಡೆ,-ಛತ್ರಿ: ಮುತ್ತಿನ ಚವುಕಛತ್ರಿ ಪಲ್ಲವದ ಪಲ್ಲರಿಗಳೆತ್ತಿದವು (ಸಿಂಗಿರಾ. ೭-೪೩). 'ಚವುಕಸತ್ತಿಗೆ' ಪರಾ.

[ ಚವುಕ (<ಚೌಕ$_2$) + ಛತ್ರಿ$_2$ ]

**ಚವುಕವಳಿ** (ನಾ). ಒಂದು ಬಗೆಯ ಸೀರೆ : ಭುವನಕೋಶದ ಸೀರೆ ಶುಭ್ರಪಟ್ಟಾವಳಿ ನವರಂಗವು ಕರ್ಪವಡ ಚವುಕವಳಿಯು ಸಿಂಹಳಾಂತಕ ಕರಿಯು ಅವುಗಿದೇವನ ಮನೆಯೊಳಗೆ (ಅಮುಸಾಂ. ೪-೨೩).

[ ಚವುಕ (<ಚೌಕ$_2$) + ವಳಿ$_5$ (<ಪಟ್ಟಿ$_7$) ]

**ಚವುಕಸತ್ತಿಗೆ** 'ಚೌಕಸತ್ತಿಗೆ' ನೋ.

**ಚವುಕಳಿ** 'ಚೌಕಳಿ' ನೋ.

**ಚವುಕಿ** 'ಚೌಕಿ' ನೋ.

**ಚವುಕಿಗೆ** 'ಚೌಕಿಗೆ' ನೋ.

**ಚವುಕು** 'ಚೌಕ₃' ನೋ.

**ಚವುಕುಳಿ** 'ಚೌಕಳಿ' ನೋ.

**ಚವುಗಾವೆ** 'ಚೌಗಾವೆ' ನೋ.

**ಚವುಟು** (ನಾ). (?) : ಪಟ್ಟಸೇಗಾಣ (ವಾಣಿ) × × × ಮಾನಿ ಚವುಟುಂ ಪ್ರತಿಗ್ರಹೇ ಮಾಲಾಕಾರಿಂಮ ಪುಂಪಸೂತ್ರತ್ರಯುಂ ಚ ದತ್ತವಾನ್ (ಕಇಳ. ೭೦-೪೬-೬೨ : 1104). [ ? ]

**ಚವುಡಂಗಿ, ಚೌಡಂಗಿ, ತವುಡಂಗಿ, ತೌಡಂಗಿ** (ನಾ). ಒಂದು ಬಗೆಯ ಸಸ್ಯ : ಮೂತ್ರರಕ್ಷೆಕ್ಕೆ:–ಚತುರ್ಭಾಗ ಚವುಡಂಗಿರಸ ಆವಿನ ನೊರೆಪಾಲು ಕುಡಿಸುವುದು (ವಿದ್ಯವಿ. ೧೨೪). **ಚೌಡಂಗಿ :** ಚೌಡಂಗಿ ಸೊಪ್ಪಿನ ರಸ, ನೆಲಗುಳ್ಳದ ರಸ ಹೆಗ್ಗುಳ್ಳದ ರಸ (ಸಕಲವೈ. ೫೦. ೪೪೪). **ತವುಡಂಗಿ:** "ತವು [ಪಾಠಾಂ. ತೌ]ಡಂಗಿ ಅಜಗಂಧಿಯುಕ್ಕು" (ಮಂಗರಾ. ೪೦-೬೨). **ತೌಡಂಗಿ :** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಚವುಡಿ** 'ಚಾವುಂಡಿ' ನೋ.

**ಚವುತಿ** 'ಚೌತಿ' ನೋ.

**ಚವುಥಾಯ** 'ಚೌಥಾಯಿ' ನೋ.

**ಚವುದಂತ** 'ಚೌದಂತ' ನೋ.

**ಚವುದರಿ** 'ಚೌಧುರಿ' ನೋ.

**ಚವುದಳ** 'ಚೌದಳ' ನೋ.

**ಚವುಪಟಮಲ್ಲ** 'ಚೌಪಟಮಲ್ಲ' ನೋ.

**ಚವುಪದಿ** 'ಚೌಪದಿ' ನೋ.

**ಚವುಪರ್ಣ** (ನಾ). ಗರುಡ : [ಸಿ]ರಿಯೊಳು ಕಾಣ್ಬಾನಂ ಜಲದೊಳಂಬುಜ ದಾಶರಥಂಗೆ ರಾಘವಂ ಕಲಿ ಚವುಪರ್ಣನಾ ವಿನತೆಗಂತನುರಾಗದೆ ಪುಟ್ಟಿ ಕೀರ್ತಿಯಿಂ ನಿಲಿಸುವ ಪಾಂಗಿನಿಂ (ಕಇ. IV, ೨೨-೧೬ : 1024). [ <ಸಂ. ಸುಪರ್ಣ ]

**ಚವುಬಾರ** 'ಚೌಬಾರ' ನೋ.

**ಚವುರ₁** 'ಚವರ' ನೋ.

**ಚವುರ₂** 'ಚೌರ₁' ನೋ.

**ಚವುರಸ** 'ಚೌರಸ' ನೋ.

**ಚವುರಾಶಿ** 'ಚೌರಾಸಿ' ನೋ.

**ಚವುರಿ** 'ಚವರಿ' ನೋ.

**ಚವುರಿಸು** (ಕ್ರಿ). ಚಾಮರ ಬೀಸು; ಚಾಮರಸೇವೆ ಮಾಡು: ಎಸಳೆಸಳಿನ ಸಿರಸಲ ಚವುರಿಸುವದು ವೈಯನ್ನ ಬೀಸಲು ವೈನವಿರೇರಿದ ಸೇರಿಳ ನವಕನ್ನೆ (ಮುಕ್ತಕಂ. ೪೪-೨). [ ಚವುರ (<ಚವರ) + –ಇಸು₃ ]

**ಚವುರಿಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಮೈಪಿಗ. ೦೪-೨೬೪). [ ಚವುರಿ₁ + ಹುಲ್ಲು (<ಪುಲ್) ]

**ಚವುಲ** 'ಚವರ' ನೋ.

**ಚವುಲಿ** 'ಚವರಿ' ನೋ.

**ಚವುವಟ್ಟೆ, ಚವ್ವಟ್ಟೆ** (ನಾ). ೧. ನಾಲ್ಕು ಹಾದಿಗಳ . ೨. ನಾಲ್ಕು ಹಾದಿ ಕೂಡುವ ಸ್ಥಳ ; ಚೌಪಟ ; ಚೌಕ : ಜೂದಿನ ಕಟ್ಟೆ ವೈಲಿಗೆ ಸಂತೆಯುಂಗಡಿ ಬೀದಿ ಚವುವಟ್ಟೆ [ಪಾಠಾಂ. ಚವ್ವಟ್ಟೆ, ಚಾವ್ವಟ್ಟೆ]ಗಳೊಳಗೆ ಬಾದುರನವರ ಕಾಣದೆ (ಕುಧಾಸಾಂ. ೦೮-೦೨೦). **ಚವ್ವಟ್ಟೆ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚವು₁ (<ಚೌ₁) + ಬಟ್ಟೆ₃ ]

**ಚವುಷಷ್ಟಿ** 'ಚೌಷಷ್ಟಿ' ನೋ.

**ಚವುಸರ** 'ಚೌಸರ' ನೋ.

**ಚವುಳಪ್ರಪ್ತ** (ನಾ). ಸವುಳಂಭೂಮಿ ; ಚೌಳುನೆಲ (?) ಗೋಪಣ್ಣ ದೇವಣ್ಣಂಗಳ ಕಯಿಲು ಕೊಂಡ ಚವುಳಪ್ರಪ್ತದ ಕಂಬ ೩ ಕಂ ಸಿಧಾಯ ಬೆ ೩ (ಎಕ. XI, ಹೊಳಲ್ಕೆ. ೦೩೬-೬೩ ; 1307). [ ಚವುಳು (<ಸವುಳು₁) + ಪ್ರಪ್ತ ? ]

**ಚವುಳಿ** 'ಚೌಳಿ₁' ನೋ.

**ಚವುಳು** 'ಸವುಳು₁' ನೋ.

**ಚವುಳುಪ್ಪು** 'ಸವುಳಂಪ್ಪು' ನೋ.

**ಚವುಳುಭೂಮಿ** 'ಸವುಳುಭೂಮಿ' ನೋ.

**ಚವುಳುಮಣ್ಣು** 'ಸವುಳುಮಣ್ಣು' ನೋ.

**ಚವೆ** 'ಚವ್ವೆ' ನೋ.

**ಚವ್ಯ** (ನಾ). = ಚವ್ವೆ : "ಕೃಕವಾಕು ಮಸ್ತಕಂ ನೇತ್ರಿಯೆನೆ ಚವ್ಯವಕ್ಕು [ಪಾಠಾಂ. ಚವ್ವಮುಕ್ಕು, ಚವ್ವೆಯುಕ್ಕು]" (ಮಂಗರಾ. ೪೨-೬೮) : "ಚಕ್ರಿಕಾ – ಚವ್ಯ" (ಒಷಧಿ. ೫೩) : ತ್ರಿಕಟುಕಮುಂ . . . ಜೀರಕ ಚವ್ಯ ಲವಣ ಸಂವರ್ಚಕಮುಮ್ಮುತಂ ಶ್ಲೇಷ್ಮವಾತಶೂಲಾಪಹರಂ (ಅಶ್ವಶಾ. ೦೦-೦೦). [ ಸಂ. ]

**ಚವ್ವ₁** 'ಚವ್ವೆ' ನೋ.

**ಚವ್ವ₂** 'ಚೌ₁' ನೋ.

**ಚವ್ವ₃** 'ಚವ₂' ನೋ.

**ಚವ್ವಂಗುಲ** 'ಚೌವಂಗುಲ' ನೋ.

**ಚವ್ವಗೆಡು** (ಕ್ರಿ). ಹದಗೆಡು ; ರೀತಿಗೆಡು : ಕಾಲು ಬಿದ್ದರು ಇವಗ ಕರುಣ ಹುಟ್ಟುವದಿಲ್ಲ ನೀತಿ ನಡಾವಳಿಯಿಂದ ಚವ್ವಗೆಟ್ಟನೆ, ಮತಿಗೆಟ್ಟನೆ (ಮದ್ಯಾಹ. ೮೩). [ ಚವ್ವ₃ ( <ಚವ₂ ) + ಕೆಡು₁ ]

**ಚವ್ವಟ** 'ಚೌವಟ್ಟ' ನೋ.

**ಚವ್ವಟ್ಟೆ** 'ಚವುವಟ್ಟೆ' ನೋ.

**ಚವ್ವಲಿಸು** 'ಜವ್ವರಿಸು' ನೋ.

**ಚವ್ವಾಳಿ** (ನಾ). (ಉಕ) ಉದ್ದವಾದ ನಾಲ್ಕು ಸೀಳುಗಳನ್ನು ಜೋಡಿಸಿ ಹೊಲಿದ ಚೌಕಾಕಾರದ ಬಟ್ಟೆ ; ಹಾಸುವ ಜಮುಖಾನದಂತಹ ಬಟ್ಟೆ : ಆ ಹೊರಸಿನ ಮೇಲೆ ಏನೋ ಒಂದು ಚವ್ವಾಳಿಯ ಹಾಗೆ ಒಗೆದದ್ದು (ಕನ್ನಡಿ. ೦೦೨) ; ಒಬ್ಬಳು ಚವ್ವಾಳಿಯ ಒಂದು ಚುಂಗು ಕೈಯಲ್ಲಿ ಹಿಡಿದುಕೊಂಡು . . . ಧೂಳೆಬ್ಬಿಸಿದ್ದರ (ಸ್ವಪ್ನಶಿಲೆ. ೨೩೪). [ ← ಮರಾ. ಚವಾಳ, ಚವಾಳೀ ]

**ಚವ್ವಿ** (ನಾ). ಒಂದು ಅನುಕರಣ ಶಬ್ದ ; ಮಕ್ಕಳನ್ನು ಮಲಗಿಸುವಾಗ ಮೆಲ್ಲಗೆ ತಟ್ಟುವುದಕ್ಕೆ ಹೇಳುವ ಮಾತು : ಆ ಚಳಿಗಾಳಿಗೆ ಶಿವು . . . ಕುಸಗುಡಹತ್ತಿದ. ಪಾರ್ವತಿ ಅವನ ಮಗ್ಗುಲಲ್ಲಿಯೇ ಮಲಗಿ ಚವ್ವಿಬಡಿಯಹತ್ತಿದಳು (ನಡುಗೋ. ೩೮).

**ಚವ್ವೀಶ** 'ಚೌವೀಸ' ನೋ.

**ಚವ್ವೆ, ಚವೆ, ಚವ್ವ₁** (ನಾ). ಒಂದು ಬಗೆಯ ಸಸ್ಯ : "ಕೃಕವಾಕು ಮಸ್ತಕಂ ನೇತ್ರಿಯೆನೆ ಚವ್ವೆಯುಕ್ಕು [ಪಾಠಾಂ. ಚವ್ಯವಕ್ಕು, ಚವ್ವಮುಕ್ಕು]" (ಮಂಗರಾ. ೪೨-೬೮). **ಚವೆ :** ತಾಳೀಸಪತ್ರ ದು ಕ್ಕ ೩ ತೂಕ, ಮೆಣಸು ದುಡ್ಡು ೩ ತೂಕ, ಚವೆ ದು ೩ ತೂಕ . . . ಇಷ್ಟನ್ನೂ ಇಡಿದು ಚೂರ್ಣವಂ ಮಾಡಿ (ವಿದ್ಯವಿ. ೩೨). **ಚವ್ವ₁ :** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. [ <ಸಂ. ಚವ್ಯಾ ]

**ಚಷಕ** (ನಾ). ಮದ್ಯವನ್ನು ಕುಡಿಯುವ ಬಟ್ಟಲು ; ಪಾನಪಾತ್ರ : "ಮಧುಪಾತ್ರಂ ಚಷಕಂ" (ವಸ್ತುಕೋ. ೪೯-೨೬) : "ಗರ್ಗರೀ, ಅನುತರ್ಷ, ಚಷಕ, ಸರಕ–ಈ ೪ ಕಿಲಿವಟ್ಟಲ್" (ಹಲಾಯು. ೫೪-೦೬೨) ; ಇರೆ ನವ ಪದ್ಮರಾಗ ಚಷಕಂ ನಿಜಹಸ್ತತಳಾಗ್ರದೊಳ್ (ಜಗವಿ. ೦೬-೦೦೫). [ ಸಂ. ]

**ಚಷಕಭಾಂಡ** (ನಾ). ಮದ್ಯದ ಪಾತ್ರೆ : ಕಡುಮುಳಿದವನರ್ೞಂಕೆ ಚಷಕ ಭಾಂಡದ ಮೇಲೆ ಪೊಡೆಗೆಡೆಯುತೆ (ಆರಾದ. ೬-೧೩). [ ಚಷಕ + ಭಾಂಡ ]

**ಚಷಾಲ** (ನಾ). ಯಜ್ಞಶಾಲೆಯಲ್ಲಿ ಯೂಪಸ್ತಂಭದ ತುದಿಗೆ ಸೇರಿಸಿದ ಮರದ ಬಳೆ: ಯೂಪಮಂತೇಕವಿಂಶತಿಗಳುತ್ಕೃಷ್ಟ ತ್ರಿವೃತ್ಸೂತ್ರಭೂಷಿತ ಚಷಾಲದಿಂ ಮೆಱೆದುವಾ ಮಂಟಪದೊಳು (ಜೈಮಿಭಾ. ೩೩-೩೭). [ ಸಂ. ]

**ಚಷ್ಮ**(ನಾ). ಅಪಹರಿಸುವುದು ; ಲಪಟಾಯಿಸುವುದು : ಹೊರಡುವವರು . . . ಹೆಣ್ಣಿನವರಲ್ಲಿ ಯಥೇಷ್ಟವಾಗಿ ಪಾತ್ರೆ-ಪಳಗಗಳನ್ನು 'ಚಷ್ಮ' ಹೊಡೆದಿದ್ದರು (ಮನೆಪಿ. ೨೫) : ಹಗಲು ಹೂ ಮಾಡುವುದು, ರಾತ್ರಿ ಹೂವಿನ ಕಾಲು ತಲೆ ಕಡಿದು 'ಚಷ್ಮ' ಮಾಡುವುದು (ದೀಪಹ. I, ೭) : ಅಪ್ಪನ ಪಾಕೀಟನೊಳಗಿಂದ ಐದುರೂಪಾಯಿಯ ನೋಟನ್ನು ಚಷ್ಮಮಾಡಿ . . . ಒಂದು ಮಟ್ಟವನ್ನು ಮುಟ್ಟಿದ್ದನು (ಗಂಪಾಯಿ. ೫೪).
[ ←ಹಿಂ. ಚಸನಾ ; ಮರಾ. ಚಸಣೇ=ಮೋಸ]

**ಚಷ್ಮ** (ನಾ). ಕನ್ನಡಕ ; ಉಪನೇತ್ರ ; ಚಾಳೀಸು (ಉಕ) : ದಶದಿಶ ನಿಶೆಯು, ಜಗವೆಲ್ಲಾ ನಿಶೆಯು ನಿಶನಿರಂತರ ಚಷ್ಮ (ಚಂಕನ. ೭೫-೯).
[ ←ಪಾರ. ಚಷ್ಮಾ; ಹಿಂ. ಚಶ್ಮಾ; ಮರಾ. ಚಷ್ಮಾ, ಚಶ್ಮಾ, ಚಸ್ಮಾ ]

**ಚಸಕ** (ನಾ).=ಚಷಕ: "ಚಸಕ-ಶಾಕಗಳ ಪಾತ್ರೆ" (ಅಕಾನಿ. ೧೦-೧೭).
[ <ಸಂ. ಚಷಕ ]

**ಚಹ, ಚಹಾ, ಚಾ₂** (ನಾ). ಟೀಸೊಪ್ಪು ಮತ್ತು ಅದರಿಂದ ಮಾಡಿದ ಪಾನೀಯಂ : ಚಹದ ಗಿಡದ ಮೂಲಸ್ಥಾನವು ಚೀನ (ಸಸ್ಯಶಾ. ೦೩೪) ; ಚಹಕ್ಕೆ ರೊಕ್ಕ ನೀನು ಕೊಟ್ಟುಬಿಡು (ಚಂದುಬ. ೫೭) ; ಎರಡು ಕಪ್ಪು ಚಹ ಮಾಡಲಿಕ್ಕೆ ಹೇಳು (ಆಜೋಲೀ. ೦೪೯). **ಚಹಾ :** ಚಹಾತೊಪ್ಪಲದ ಬೀಜವು ಸಣ್ಣದಾಗಿ ಕಸಕಸಿಯಂತೆ ಇರುತ್ತದೆ (ಕೃಷಿಪ್ರ. ೨೦೦) ; ಚಹಾ ಆಗಲಿ, ಬಿಸಿ ಇರುವಾಗಲೆ . . . ತೆಗೆದುಕೊಳ್ಳಿ (ಒಂಟಿದ. ೧೭೧); ಗೋಪಾಲ ಎರಡು ಚಹಾ ತಗೊಂಡು ಬಾ (ದಿನ್ನುಹಿಂ. ೧೦). **ಚಾ₂ :** ಒಂದೊಂದು ಕಪ್ಪು 'ಚಾ'ನಾದರೂ ಕುಡಿಯೋಣ (ಚಂದುಬ. ೫೭) ; ಇಬ್ಬರು ಚಾ ಕುಡೀಲಿಕ್ಕೆ ಹೋಗಿದ್ದರು (ರಕ್ತಧ್ವ. ೨೦).
[ ←ಚೀನಿ. ಚಾ. / ಪೋರ್ಚು.ಚಾ. / ಹಿಂ. ಚಾ, ಚಾಯ್ ; ಮರಾ. ಚಹಾ ]

**ಚಹಡ, ಚಹಡಿ, ಚಹಡೆ, ಚಾಡ₁, ಚಾಡಿ, ಚಾಹಡ, ಛಾಡ, ಛಾಡಿ** (ನಾ). ೧. ಇನ್ನೊಬ್ಬರನ್ನು ಕುರಿತು ದೋಷಾರೋಪಣೆ ಮಾಡಿ ಹೇಳುವುದು ; ಕೊಂಡೆಯ ; ಪಿಸುಣ : ಪೈಶೂನ್ಯವೆಂಬುದು ಪರರ ಕೆಡಿಪೆನೆಂಬಾಸುರ ಚಹಡ ಕೊಂಡೆಯವು (ದ್ವಾದಶಾ. ೨೯-೬೬೦). ೨. ಚಾಡಿ ಹೇಳುವವನು ; ಚಾಡಿಕೋರ; ಹಿಸುಣ: "ದುಸ್ಥಿತಿಪ್ರೇರಕಂ ಚಹಡಂ" (ಮಂಗರಾ. ೭೨-೨೩); ವೀರೇಶ ನೀಂ ಸೌಂದರ್ಯದೂಪಾಟಮಂ ತೊಳೆದು ಪೊದಿಸು ನಾರದ ಸ್ನೇಹ ಚಹಡನಾಗು (ಪ್ರಭುಪು. ೬-೬೦). 'ಚಹಡತನ' ಪರಾ. **ಚಹಡಿ:** ೧. ನಾರದನು ಚಹಡಿಯ ಹೇಳಿ ಹಲವಂಗದಲಿ ಬಳಿಕಾ ಘಾಳಿಯನು ಕಳುಹಿದನು ಕೋಪಾಗ್ನಿಯನು ಪೊತ್ತಿಕ್ಕಿ (ತಿಮ್ಮರಾಂ. ೫-೦೦೭) : ಖೂಳ ನಾರದ ಬಂದು ಬಾಣನೊಳ್ ಚಹಡಿಯ ಹೇಳಲುಜ್ಜುಗ ವೆತ್ತನಂತೆ (ಮೋಹಕ. ೩೩-೪೦) : ಮಂಚಣ್ಣ ಚಹಡಿಯಂ ವಿಸ್ತಾರದಿಂ ಪೇಳೆ (ಚಬಪು. ೭ ಸೂಚನೆ). **ಚಹಡೆ:** ೧. ದುರ್ಜನರ ಚಹಡೆಯ ಮಾತುಗಳ ಕೇಳ್ದು (ಚಬಪು. ೮-೯). **ಚಾಡ₁ :** ೧. ನಾರದಂ . . . ಚಾಡವ ಪೇಳೆ (ಗುರುರಾ. ೮-೭೨) ; ಆಡದಿರು ಪುಸಿ ನಿಂದ್ಯ ನಿಷ್ಠುರ ಚಾಡಮಂ (ಶಂಕರಾ. ೦೬-೪೮). **ಚಾಡಿ :** ೧. "ಪಿಸುಣ ಕೊಂಡೆಯ ಚಾಡಿಯನೆ ಕುತ್ಸಿತಕ್ಕೆ ಪೆಸರೆಸೆಗು" (ಕಬ್ಬಸುಂ. ೭೩) ; ಚಾಡಿಗಳ್ ಹೇಳುವುದಿಲ್ಲಿ ನುಡಿದಾಡುವ ನಾಲಿಗೆ ಕೀಳುವರಲ್ಲಿ (ಪುರಂದ. ೨-೩೯-೩) : ಅರಮಾರ್ರೆಮಾಡಿ ಚಾಡಿಯ ಹೇಳಿದರು (ಎಕ. XI, ಚೆಳ್ಳಕೆ. ೯-೬. 1651) ; ಅವರು ಪ್ರೀತಿಯಿಂದ, ಬಿಡದೆ ಹೋದರೆ ದೋಷವನ್ನು ಕಲ್ಪಿಸಿ, ಚಾಡಿಯನ್ನು ಹೇಳಬೇಕು (ಕೃಪಾಅ.೩೬೦). ೩. ಸೂಚನೆ.'ಚಾಡಿಯೋಲೆ' ಪರಾ. **ಚಾಹಡ:** ೧. ಮಹ ರಸಿಕತನದೊಳು ಚಾಹಡವ ಪೇಳೆ ದೇವದಾನವರು ಕನಲ್ದುರುಳುತಿಹರು (ಪ್ರಭುಪು.೭-೩೭). **ಛಾಡ:** ೧. ಛಾಡವ ಪೇಳಿ ಉತ್ತಮರನ್ನ ಬಳಲಿಸಿ ನಾಡೊಳು ಸ್ವಾಮಿದ್ರೋಹ ದ್ರೋಹತನದಲ್ಲಿ ಆಡಬಾರದ ಮಾತುಗಳೆಲ್ಲ ಸರ್ವದಾ ಜೋಡಿಸಿನುಡಿವುತ್ತ (ವಿಸಾಸು. ೮೪-೬). **ಛಾಡಿ:** ೧. ಛಾ[ಪಾಠಾಂ. ಚಾ]ಡಿ ಹೇಳಲುಬೇಡ ನಾಲಿಗೆ ನಿನ್ನ ಬೇಡಿಕೊಂಬುವೆನು ನಾಲಿಗೆ (ಪುರಂದ. ೧-೧೮೩-೨) : ಬೇಡಿರಿ ಬೇಡಿರಿ ಹೀಗೆ ಛಾಡಿ ಹೇಳುವುದನ್ನು ಯಾರು ಕಲಿಸಿದರು (ಜನನಾ.೦೦೫). [ ?. / ತಮಿ. ತುಳು. ತೆಲು. ಚಾಡಿ./ಮರಾ. ಚಹಾಡ್, ಚಹಾಡೀ, ಚಾಡೀ ]

**ಚಹಡತನ, ಚಾಡತನ**(ನಾ). ಚಾಡಿಹೇಳುವ ಸ್ವಭಾವ: ಚಾಡಿಕೋರತನ: ಚಹಡತನಗಳನಱಿಯ ಏಗುವೆ ನೀನು ಹಸುಳೆಯಲಾ (ಕೌಶಿರಾ. ೧೮ ೩೮). **ಚಾಡತನ:** (೬). [ ಚಹಡ + – ತನ ]

**ಚಹಡಿ** 'ಚಹಡ' ನೋ.

**ಚಹಡೆ** 'ಚಹಡ' ನೋ.

**ಚಹರೆ, ಚೇರೆ, ಚೇಹರಾ** (ನಾ). ಕೃತಿ ; ಆಮುದ್ರೆ ; ಲಕ್ಷಣ : ಅವನಿಗೆ ಸಾಮಾನ್ಯ ನಡವಳಿಕೆಯಲ್ಲೂ ನಾಟಕದ ಚಹರೆ ರೀತಿ ಬಂದುಬಿಟ್ಟಿತ್ತು (ಅಲಹೂ. ೧೭) ; ಈ ಬಂದೂಕಿನ ಚಹರೆಯೂ . . . ನಿನ್ನ ಬಂದೂಕಿನ ಚಹರೆಯೂ ಒಂದೇ ಆಗಿದೆ (ಪಂಜಪಂ. ೨೨೦). 'ಮುಖಚಹರೆ' ಪರಾ. **ಚೇರೆ :** ಆರು ತಿಂಗಳ ಕೂಸು, ಚೇರೆ ಬದಲಾಯಿಸಿತು (ಕನ್ನಶಾ. ೦೮೯). **ಚೇಹರಾ :** ನಮಗೆ ಮೊದಲು ಚೇಹರಾ ಮಾತ್ರ ತೋರಿಸಬೇಕು (ರಕ್ತಧ್ವ. ೩೦೮). [ ←ಪಾರ. ಚಿಹ್ರಾ; ಹಿಂ. ಚೆಹರಾ; ಮರಾ. ಚಹರಾ, ಚೇಹರಾ, ಚೇಹೇರಾ ]

**ಚಹರೆಪಟ್ಟಿ** (ನಾ). ಆಕಾರ, ಲಕ್ಷಣ, ಮುಖಮುದ್ರೆ ಮೊದಲಾದುವುಗಳ ವಿವರ,-ತಪಶೀಲು : ಸಾಹಿತಿಯ ಚಹರೆಪಟ್ಟಿಯನ್ನು ಬರೆಯ ಹೊರಟವನು ಅವನ ಬಡತನವನ್ನು ಮೊದಲು ಕಾಣಿಸದೆ ವಿಧಿಯಿಲ್ಲ (ಅಳಿದು. ೧೧೪). [ ಚಹರೆ + ಪಟ್ಟಿ₂ ]

**ಚಹಾ** 'ಚಹ' ನೋ.

**ಚಹಾಪಾಣಿ** (ನಾ). ಚಹ, ತಿಂಡಿ, ನೀರು ಮೊದಲಾದುವುಗಳನ್ನು ತೆಗೆದುಕೊಳ್ಳುವುದು ; ಚಹ ಹಾಗೂ ಫಲಾಹಾರ : ಅವನು ಚಾಚಿದ ಬಲ್ಲಿನಲ್ಲಿ ಈ ಚಹಾಪಾಣಿಯ ವೆಚ್ಚವೂ ಸೇರಿತ್ತು (ದೀಕನ್ಯ. ೧೧೪).
[ ←ಮರಾ. ಚಹಾಪಾಣೀ ]

**ಚಹಾಪಾನ** (ನಾ). ಚಹವನ್ನು ಕುಡಿಯುವುದು : ಚಹಾಪಾನ ನಮ್ಮ ನೀರಡಿಕೆಯನ್ನು ಹಿಂಗಿಸಿದುದಲ್ಲದೆ ನಮ್ಮ ಮನಸ್ಸುಗಳಿಗೂ ನವಚೇತನ ನೀಡಿತು (ಕಾಲಯೂ. ೦). [ ಚಹಾ (<ಚಹ) + ಪಾನ ]

**ಚಳ₁** 'ಚಲ₁' ನೋ.

**ಚಳ₂** 'ಚಲ₂' ನೋ.

**ಚಳ₃** (ನಾ). ಬೆಲ್ಲ: ಮಲಯರುಹಂ ನುಗ್ಗಿಯ ಬೇರ್ ಜಲಮಂಬುದಮುಣಲಿ ಮಾಂಸಿ ಚಳಮೇಲೆಯಿವಂ ತಳವುದು (ಲೋಕೋಪ. ೭-೪೩). [ ? ]

**ಚಳಂಕಿ** (ನಾ). ಒಂದು ಔಷಧಿ ದ್ರವ್ಯ : ಹಲಸಂದೆ ಔಡಲ ಚಳಂಕಿ ಇವು ಕ್ರಿಮಿದೋಷಹರ (ಅಶ್ವಟೀ. ೯೧-೨). [ ? ]

**ಚಳಕ₁** 'ಚಡಿಕೆ' ನೋ.

**ಚಳಕ₂** (ನಾ). ೧. ವೇಗ; ಚಪಲತೆ ; ಶೀಘ್ರತೆ: "ಚಳಕಮೆನಲ್ ವಹಿಲಮೆಂದು ತಿಳಿಗೆ ವಿದಗ್ಧರ್" (ಛಾರನಿ. ೦೧): ಕಲಕಿದನು ಬಲಜಲಧಿಯನು ಬಲು ಚಳಕದಲಿ ತೆಗೆದಸುತ (ಸಂಭಪ. ೧೯-೭): ಊರ್ಮಿಳಾವತಿ

ಚಳಕ[ಪಾಠಾಂ. ದಳಯ, ನಿಳಯ]ದಿಂದ್ಯೆತಂದು ಕಂಡನು ಕಪಟರಕ್ಕಸಿಯ (ತೊರರಾ. ೩-೪-೨೬) ; ಚಳಕದೆ ಕಳಸದ ಘಟ್ಟವನಿಳಿದು (ಕೆಳನ್ಯ. ೦೦-೫೪). ೨. ಜಾಣ್ಮೆ; ಚಾತುರ್ಯ; ಕೌಶಲ; ಚಮತ್ಕಾರ: ಆ ಬಿಲ್ಲನಾ ರಥವ ತಳುವದೆ ಕಡಿದು ಭಂಗಿಸಿದನವನ ಕೈಯ ಚಳಕವನೇನ ಬಣ್ಣಿಪೆನು (ನೇಮಿಸಂ. ೦೨-೭೯) ; ಈ ಉಳಿಯಾ ಬಿನ್ನಣಮಾ ಯೊಡಲ್ಮಣಿತವಿಾಯಿಂದಾಳಮಾ ಬೀರವಿಾ ಚಳಕಂ ಶ್ರೀಚಿಕದೇವಸೊಳ್ ಮೆಱೆಗುಂ (ಚಿಕವಿ. ೪-೦೪೮) ; ಬಿರಿಮುಗುಳ ಬಿಡಿಸುತ್ತಲಿರ್ದನು ಕರದ ಚಳಕದಲಿ (ಅಂಬಿಕಾ. ೪-೨೬): ಕೆಲವರು ರಂಗೋಲಿಯ ಕೆಳಗೆ ತೂರುವ ಚಳಕವನ್ನು ತೋರಿಸಿದರು (ನಂಟರು. ೩೦). 'ಚಾಲಾಕು' ಪರಾ. [ ? ]

ಚಳಕಿ$_1$ 'ಚಡಿಕೆ' ನೋ.

ಚಳಕಿ$_2$ (ನಾ). (?) : ಲಕ್ಷ್ಮೀನರಸಿಂಹದೇವರ ಅಮೃತಪಡಿಗೆ ಕೊಟ್ಟ ಗ ೫ ಚಳಕಿಯ ವೃತ್ತಿಯನು (ಎಕ. VI, ಕಡೂರು. ೮೮-೪೬ : 1223 ?). [ ? ]

ಚಳಕಿಗೆ, ಚಳಿಕಿಗೆ (ನಾ). ತೋಳಿಗೆ ಧರಿಸುವ ಒಂದು ಆಭರಣ ; ತೋಳ್ಬಳೆ ; ಬಂದಿ: ದ್ವಿಗುಣಿಸೆ ಚಮರಜಮಂ ಪೊಳೆವುಗುರ್ಗಳ್ ಚಳಕಿಗೆಯ ಪೊಚ್ಚ ಪೊಸಮುತ್ತಿನ ತಟಱ್ರಾಗೆವಂಶುಮಾಳೆ ಮೇಗಣ್ಗೊಗೆಯೆ ಕುಚಾಭೋಗವಿಕ್ಕಿದರ್ ಚಮರಜಮಂ (ಮಲ್ಲಿಪು. ೮-೦೦೩); ದ್ಯುತಿವೀಱುವ ಮುತ್ತಿನ ಚಳಕಿಗೆಯಂ ಯುವತಿಯ ನಳಿತೋಳ್ಗೆ ಕಟ್ಟಿದಳ್ ಮತ್ತೊರ್ವಳ್ (ಜಗವಿ. ೦೦-೧೧೬); ಕಂಕೆಲ್ಲಿಯ ಕಂಕಣಮುಮಂ ಏಚಕಿಳದ ಚಳಕಿಗೆಯುಮಂ . . . ಮನೋಹರಮೆನೆ ಸಮೆದು ತಮತಮಗೆ ಪಸದನಂಗೊಂಡು (ಚಂದ್ರಪು. ೬-೧೧೪ ವ) ; ಕಿಱುಗೆಜ್ಜೆ ಚಳಕಿಗೆ ಜೂಳಯವೆಸೆದವಾ ನಿಜಾಗುರುಳಬಲಾಮಣಿಗೆ (ರಾಮವಿ. ೬-೭೪): ಹಸ್ತಕಡಗ ಚಳಕಿಗೆ ರನ್ನದ ಬಳೆ ಹರಳುಂಗುರಗಳನವುರಿಯುರಿಟ್ಟರವಳ್ಗೆ (ದಂಪ್ರಸಾಂ. ೨೫-೦೩೬). ಚಳಿಕಿಗೆ : ಜೂಳೆಯ ಚಿನ್ನಪೂ ಕಮಲಪೂ ಚಳಿಕಿಗೆ ತಾಳೆಹೂ ಬೆಂಬಚ್ಚಿದಂಡೆ ತೋಳೊಂಕೆ . . . ಬಾಲೆಗಾಭರಣವೊಪ್ಪಿದುವು (ಭರತ. ೪೦-೬೫) : ಗೊಜ್ಜುಗೆಯ ಸಜ್ಜುಕದ ಚಳಿಕಿಗೆಯನಜ್ಜುಗೆಯ ವಜ್ಜ್ರದ ಬಜ್ಜರದ ಬಾವುರಿಯ (ರಾಜಶೇ. ೦೦-೫೬ ರಗಳೆ). 'ಚಳಕೆ' ಪರಾ.

[ ? ]

ಚಳಕು$_1$, ಚಳಂಕು$_1$, ಛಳಕು, ಛಳುಕು (ನಾ). ಒಮ್ಮಿಂದೊಮ್ಮೆಲೆ ನರ ಮಿಡಿದು ಉಂಟಾಗುವ ನೋವು ; "ನರವಾಯು" (ಜಾನಕೋ. ೫೫). ಚಳುಕು$_1$ : ಕೆಲರುರದ ಚಳುಕಿಂ ವಾತಪಿತ್ತಜ್ವರದಿ ಕೆಲಬರು ಮಡಿಯುತಿರ್ದರ್ (ಅರ್ಜವಿ. ೮-೨೧) : ಅಯ್ಯೋ . . . ಮಯ್ಯಲ್ಲೆಲ್ಲ ಚಳಕು (ಹುಂಗಧ. ೨೨). ಛಳಕು: ಆಗಾಗ್ಗೆ ಸೊಂಟದ ಛಳಕು, ಕೈಕಾಲುಗಳ ಹಿಡಿತದಿಂದ ಸಂಕಟಪಡುತ್ತಿದ್ದ ಮುದುಕಿ, ಹಬ್ಬವಾದುದರಿಂದ . . . ಕೆಲಸಮಾಡುತ್ತಿದ್ದುದನ್ನು ಕಂಡು ರತ್ನಮ್ಮನಿಗೆ ಕೊಂಚ ಕನಿಕರವೂ ಆಯಿತು (ಕೀಲುಗೊಂ. ೦) : ತೊಡೆ ಛಳಕು ಒಂದೂ ಇಲ್ಲವೆಂದೂ ಚಿಕ್ಕಪುಟ್ಟಮ್ಮ ಹೇಳಿದ್ದಳು (ಮನೋನಂ. ೦೫೦). ಛಳುಕು : ಮುಂದೆ ಕಂಕುಳು ಸಂದಿಯಲ್ಲಿ ಚಾತುಕೊಂಡಿತು. ತುಂಬಾ ಛಳುಕು ಕಾಣಿಸಿಕೊಂಡಿತು (ಊರುಕೆ. ೩೨) ; ಅವನಿಗೆ ಛಳುಕು ಹೊಡೆದಂತಾಯಿತು (ರಂಗನಾ. ೧೬೫).

ಚಳಕುಹಿಡಿ = ನರಗಳು ಮಿಡಿ ; ಸ್ನಾಯು ಅಲುಗಾಡದಂತಾಗಿ ನೋವಾಗು : ಅವನಿಗೆ ಚಳಕುಹಿಡಿದಂತೆ ಆಗಿತ್ತು (ಕನಕ. ೮೯) : ನನ್ನ ಸೊಂಟ ಚಳಕು ಹಿಡಿದದ್ದು, ಕೈಕಾಲು ತತ್ತರಿಸಿದ್ದ ಅವಲಕ್ಷಣವೇ (ಸ್ವತಿಜ. ೪೫೧). [ ದೇ. ೫ ತಮಿ. ಮಲ. ಚುಳುಕ್ಕು ]

ಚಳಕು$_2$ (ನಾ). (ಹಾಡುವ ಪದ್ಯಗಳ) ಸಮುದಾಯ : ದುಂದುಮಿಯಲ್ಲಿ . . . ಚೌಪದಿಗಳಿರದೆ, ತ್ರಿಪದಿ ಅರ್ಧಚೌಪದಿ ಮೊದಲಾದವುಗಳ ಕೂಡುವಿಕೆಯ 'ಚಳಕು' ಗಳಿರುವುವು (ಕನ್ನಜಾ. ೯೫).

[ ←ಮರಾ. ಚಳಕ್ ]

ಚಳಕೆ, ಚಳಿಕೆ$_1$ (ನಾ). ೧. = ಚಳಕಿಗೆ : ವೈಡೂರ್ಯದ ಹೀರಗಡಗ ಚಳಕೆಗಳ (ಜನರಾ. ೯-೧೪೦). ಚಳಿಕೆ$_1$: ೧ ಪಾಣಿ ಕಂಕಣ ಚಳಿಕೆ ಹಿಂಬಳೆಯು (ಜನಮು. ೦೨-೩೯); ಕರದ ಕಂಕಣ ಚಳಿಕೆ ಹಿಂಬಳೆ ಕೊರಳ ಸರ (ಜಿರಾಮಾ. ೨೫-೪೦). ೨. (ಕರಾ) ಕೈಬಳೆಗಳ ನಡುವಿನ ಹಸ್ತಾಭರಣ.

[ ದೇ. ೫ ತುಳು. ಚಳಕಿ ]

ಚಳಗತಿ 'ಚಲಗತಿ' ನೋ.

ಚಳಚಮತ್ಕೃತಿ (ನಾ). ವೇಗದ ಚಾತುರ್ಯ; ಅದ್ಭುತವಾದ ಚಟುವಟಿಕೆ: ಬಳಿಯ ರಕ್ಕಸರಥಿಕರೆಸುಗೆಯ ಚಳಚಮತ್ಕೃತಿಯಿಂದ ದೂಷಣ ಹಳಚಿದನು (ತೊರರಾ. ೩-೬-೦೪). [ ಚಳ$_2$ (=ಚಲ$_2$) + ಚಮತ್ಕೃತಿ ]

ಚಳಚಳ (ನಾ). ಒಂದು ಅನುಕರಣ ಶಬ್ದ : ಅಪ್ಪವಿಂಗೆ ಇಳಿಜಾರಿನಲ್ಲಿ ಚರಿಸುವಾಗ ಹುಟ್ಟುವ ಬುಳುಬುಳು ಚಳಚಳ ಭೋರ್ಭೋರೆಂಬ ಶಬ್ದ ಉಂಟು (ವಚಶಾ. II, ೩೨).

ಚಳಚಳನೆ (ಅ). ೧. ಥಳಥಳನೆ: ಚಳಚಳನೆ ಮಿಂಚಿತ್ತು ಸಿಡಿಲ ಕೈದೀವಿಗೆವೊಲ್ (ಕಮದ. ೦೯೩ ಪ್ರಯೋ):ಬಳಬಳನುದುರುತಿರ್ದುದು ಕರ್ಮ ಚಿತ್ರಭಿ ಚಳಚಳನೊಳಗೇಱುತಿಹುದು (ಭರತ. ೭೬-೩೪).. ೨. ಬೇಗನೆ; ಲಗುಬಗೆಯಿಂದ ಕೂಡಿ : ಭೋಜನಕೆ ಸಲುವುಪಕರಣವನಲ್ಲಲ್ಲಿಗೆಲ್ಲಕೆ ಚಳಚಳನನುಗೊಳಿಸಿದರು (ಭರತ. ೪-೫೮) ; ಚಳಚಳನೆಯ್ದಿದರಂಗ ಶೃಂಗಾರಾಂಶು ತಳತಳನತ್ತಿತ್ತ ಕೆದಱ (ಭರತ. ೩೮-೩). [ <ಚಲ$_2$ + – ಅನೆ$_1$ ]

ಚಳಚಳಿಸು (ಕ್ರಿ). ಲಕಲಕಿಸು ; ತಳತಳಿಸು ; ಉಜ್ವಲವಾಗು : ಸಿರಿಸೋರ್ವ ಮುಖಪದ್ಮಂ ಚಳಚಳಿಸೆ (ರಾಮಾಶ್ವ. ೬೯-೨೪).

[ <ಚಲ$_2$ + – ಇಸು$_3$ ]

ಚಳಚಿತ್ರ 'ಚಲಚಿತ್ರ' ನೋ.

ಚಳಣ, ಛಲ್ಲಣ (ನಾ). ೧. ಅಡಿ ; ಪಾದ ; ಚರಣ : ನರೇಂದ್ರಂ . . . ಭೀಷ್ಮರ ಚಳಣಯುಗಕ್ಕೆಱಗೆ (ಪಂಪಭಾ. ೦೦-೬೦); ಜಳದೇವತೆ ಕೊಡುವ ತಿಳಿಗೊಳದೊಳಗಿರ್ಪಂತೆ ಶೀಲವತಿ ಸೀತೆ ವಿನಿಶ್ಚಳಮಿರೆ ಮನದೊಳ್ ಜನವತಿ ಚಳಣಂ ದಳ್ಳುರಿಯ ನಡುವೆ ಕೋಡುತ್ತಿರ್ದಳ್ (ಪಂರಾಮಾ. ೦೬-೨೮). ಛಲ್ಲಣ : ೨. ಚಲನೆ ; ಹರಿದಾಟ : ಉದುಕದ ಛಲ್ಲಣಯಿಂದ ಚಂದ್ರ ಕಂಪನೆ ಅನುಭವಿಸುವಂತೆ (ತತ್ತ್ವಚಿಂ. ೩-೦೩). [ <ಸಂ. ಚಲನ ]

ಚಳತುಂಬಿ (ನಾ). ಸುಳಿದಾಡುವ ದುಂಬಿ ; ಚಂಚಲವಾದ ಭ್ರಮರ : ಗೊಂಚಲನಾಗೋತ್ತರ ಚಳತುಂಬಿಗೆ ಗುಣಗುಟ್ಟುವುದೆ ಮಾಯಾ (ಚದಾವ. ೩೬-೦). [ ಚಳ$_2$ ( = ಚಲ$_2$) + ತುಂಬಿ$_1$ ]

ಚಳತುಂಬು, ಚಳತೊಂಬು (ನಾ). ಓಲೆಗೆ ಸೇರಿಸುವ ಜುಮುಂಕಿಯಂತಹ ಅಲ್ಲಾಡುವ ಒಂದು ಆಭರಣ : ಪುಲ್ಲಲೋಚನೆ ಚಳತುಂಬು ಮಿಾನ ಬಾವುಲಿಯ . . . ಕರ್ಣದಲಿಟ್ಟು (ಶ್ರೀಕೃಪಾ. ೦೦) : ನೀಲದ ಬಾವುಲಿ ಚವುಕಳಿ ಚಳತುಂಬು ತೂಬು ತಕ್ಕಡಿ ಇಟ್ಟರು (ಕರ್ನಾಕ. ೩೦೮) ; ಮುಗಿಲಲ್ಲಾಡುವ ಬಾವಿಲಿ ಮಲ್ಲಿಗೆ ಕಿವಿಗೊಪ್ಪು ಓಲೆಕೊಪ್ಪು ಚಳತುಂಬ (ಗರಿ. ೦೦೬-೯) ; ವಾಲೇಗೆ ಚಳತುಂಬ ಮರತೇ ಬಂದ್ಯಾ (ನಾಪದ. ೦೦೮). ಚಳತೊಂಬು : ಎಸೆವ ಕಪೋಲ ಹೊಸ ಕುಂಡಲ ಚಳತೊಂಬುಳ್ಳ ಶ್ರವಣ (ಪುರಂದ. ೦-೦೯೦-೪).

[ ಚಳ$_2$ ( = ಚಲ$_2$) + ತುಂಬು$_4$./ತುಳು. ಚಳತುಂ, ಚಳ್ತುಂಬು ]

ಚಳತೆ (ನಾ). ೧. ಚಂಚಲತೆ ; ಚಪಲತೆ: ತಿಳಿವು ತಿರುಗಿತು ಲಾಸ್ಯಲೀಲೆಯ ಚಳತ ಚಂಡಿಸಿ ಹಿಂಗಿಹೋಯಿತು (ಪ್ರಭುಲಿ. ೭-೩೪). ೨. ಲಗುಬಗೆ ; ತ್ವರೆ : ಹಿಡಿಗುದುರೆಯ ಸಾವಿರವ ಬಿಡದೆ ಚ[ಪಾಠಾಂ. ದಚ್ಚ]ಳತೆ ಮಾಡಿ ತಂದೊಪ್ಪಿಸಿದನಂದು ಕಡುಗಲಿ ರಾಮನಾಥನಿಗೆ (ಕುರಾಸಾಂ. ೪೨-೮೦).

[ ಸಂ. ಚಲತಾ ]

ಚಳತೊಂಬು 'ಚಳತುಂಬು' ನೋ.

**ಚಳದಳ** 'ಚಲದಲ' ನೋ.

**ಚಳನ** 'ಚಲನ' ನೋ.

**ಚಳನತಳ** (ನಾ). ಪಾದತಲ ; ಕಾಲಡಿ : ಚಳನತಳಂಗಳಂ ತೊಳೆದು ಮುಂ ಬಟ್ಟಿಕಟ್ಟುಿಯ ತೀರ್ಥವಾರಿಯಿಂ . . . ಫಳಕುಳದಿಂ ಧರಾಧಿಪತಿ ಪೂಜಿಸಿದಂ (ಚಂದ್ರಪ್ರ. ೦೪-೯) ; ಚಳನತಳದ್ಯುತಿಚ್ಛಲದೆ ಕೆಂಬಿಸಿಲಂ ಕಿಡೆ ಮೆಟ್ಟೆ . . . ಪೊಱಮಟ್ಟಳೊರ್ವಳಭಿಸಾರಿಕೆ ಭೂಚರ ಚಂದ್ರಮೂರ್ತಿವೋಲ್ (ವರ್ಧಪು. ೬-೪೮). [ ಚಳನ (=ಚಲನ) + ತಳ$_2$ (=ತಲ) ]

**ಚಳಪಳ** (ನಾ). ಒಂದು ಅನುಕರಣ ಶಬ್ದ : ನೀರು ಸುರಿಯುವಾಗ ಚಳಪಳ ಸದ್ದು ಕೇಳಿಸುತ್ತಿತ್ತು (ರೂಢಿ).

**ಚಳಪಳನೆ** (ಅ). ಚಳಪಳ ಎಂಬ ಸದ್ದಿನೊಡನೆ : ಚಳಪಳನೆಳ್ದು ಚಿಮ್ಮಿ ಗಗಂಗಳ್ ಪೊರೆಯಲ್ ನೆಗೆದಳ್ದು ಮತ್ತೆಯುಂ ತಳತಳಿಸುತ್ತ . . . ತೋರ್ದುದಾ ವಿಳಸಿತರತ್ನಕೋಶಮನಿಸುತ್ತ ಧರಾತಳದೊಳ್ ನಿರಂತರಂ (ಹಾಲಾಸ್ಯ. ೪-೯-೨೦). [ ಚಳಪಳ + – ಅನೆ$_1$ ]

**ಚಳಬಳಿಕೆ** (ನಾ). ೧. ಲಗುಬಗೆ; ಚಪಲತೆ; ಚಳಕ; ವೇಗ: ಚಳಬಳಿಕೆಗಳ ಚಾರುತುರಗಕುಲವನುವಾಗಿ ನಿಂದವು (ಸೋಮಪ. ೬-೨೮); ಭಾವಿಸುವೊಡಾ ಚಳಬಳಿಕೆಯನು ತಾವೆ ಬಲ್ಲರು ದೇವಭಕ್ತರು (ಪ್ರಭುಲಿಂ. ೨೩-೨೮); ಕುಣಿದ ವಸುರನ ರಥದ ಹಯ ದಿನಮಣಿಯ ದಿವ್ಯವರೂಥವಾಜಿಯ ಹಣಿಗೆ ಹೊಂಚುವ ಖುರದ ಚಳಬಳಿಕೆಯ[ಪಾಠಾಂ. ಪುಟದ ಚಲಗತಿಯ]ಧಡಾಳದಲಿ (ಕೊರಾ. ೬-೨೦-೫೦) ; ಮಂಡಲಭೇದ ಚಳಬಳಿಕೆ ಚದುರೋಜೆವೆರಸಿ ರಣರಂಗದೊಳ್ . . . ಉರವಣಿಸಿದುವು (ಕೃಮಿಥಾ. ೨೫-೪೫). ೨. ಅಬ್ಬರ: ಪರಮವಿದ್ಯೆಯ ನೆರವಿ ನಿಲುಕುವ ಚಳಬಳಿಕೆ ಮೊಳಗುವ ಜಯಾಂತದ ವಾದ್ಯ ರಭಸದಲಿ (ಕೊರಾ. ೬-೦೮-೮) ; ಕೊರಲೊಂದು ಚಳಬಳಿಕೆ [ಪಾಠಾಂ. ಳಿಕೆ]ಯನುಳ್ಳ ವಲಬಣ್ಣದಿರವಾಂತ ಜೋಡ ಮೈಗಿಟ್ಟು (ವರ್ಧಚ. ೧೦-೦೨೬). ೩. ಗಾನದ ಇಂಪು: ಕೊರಳ ಚಳಬಳಿಕೆಯುಲಿಯೊಳ್ [ಪಾಠಾಂ. ಳಿಕೆಯೊಳುಲಿಯ]ವುರುಪನ್ನಿದೆ . . . ಬಸಿಕ ತಪ್ಪುದಂಗನೆ (ಅನವ. ೮-೨೦) : ಧಡ್ಡೆಯಿಲ್ಲದೆ ತನ್ನ ಗಂಧರ್ವಗಾಯಕಮನಡ್ಡವಾಡುವತಲಖಿಳ ಚಳಬಳಿಕೆಯಿಂ ಕೊನರಿ (ಲಿಂಗಪು. ೨೬-೪೬). ೪. ಸೊಗಸು; ಚಾತುರ್ಯ; ಬಿನ್ನಾಣ (?) : ಚಳಬಳಿಕೆಯೊಳು ಚಂದದೊಳು ಬಂಧದೊಳು ನಿರ್ಮಳ ಮೋಹಿಗಳು ನೆರವಾಗ (ಭರಚ. ೩೦-೧೩೦) ; ಹಾವಭಾವದ ಚಳಬಳಿಕೆ ರಂಜಿಸೆ ತನ್ನ ಹಾವಂತೆ ಬಂದೊರ್ವಳೊಲಿದು (ಭರಚ. ೪೭-೩೮). ೫. [ನಾಟ್ಯ] ಒಂದು ನೃತ್ಯಭಂಗಿ : ಥಾಳ ದಿಟ್ಟಾಯಿ ಚಂಡಣೆ ಚಳಬಳಿಕೆ ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೦೬-೭೭ ವ).

[ ಚಳಬಳ$_0$ + – ಇಕೆ ]

**ಚಳಬಳಿಸು** 'ಚಳವಳಿಸು' ನೋ.

**ಚಳಮತಿ** (ನಾ). ಚಂಚಲಬುದ್ಧಿಯುಳ್ಳ ವ್ಯಕ್ತಿ : ಚಳಮತಿಯಾದ ನೀಂ ಜಡಧಿಸಂಭವೆಯಪ್ಪುದಱಿಂ (ಗದಾಯು. ೯-೫) ; ಚಳಮತಿ ಬೆಸನಿ ಸುಖ ಪ್ರಿಯಂ (ಸೂಕ್ತಿಸು. ೦೬-೫೨). [ ಚಳ$_2$ (= ಚಲ$_1$) + ಮತಿ ]

**ಚಳಮಾಲೆ** (ನಾ). ಪೊದರಾಗಿ, ನೇರವಾಗಿ ಬೆಳೆಯುವ ಒಂದು ಬಗೆಯ ಮುಳ್ಳಿನ ಗಿಡ,–ಕಂಟಿ : (೬). [ ? ]

**ಚಳಮಿಳನೆ** (ಅ). ಚಕಚಕನೆ ; ಮಿರಮಿರನೆ: 'ತಾನೆ ಹೂ, ಹಕ್ಕಿ,' ಹೆಣ್ಣು ಕಣ್ಣಿಂದಾಗಿ ನೀಡಿ ಬಾನ್‌ಮಿನಂಗಳಲ್ಲು ಚಳಮಿಳನಾಗಿ ಅಗ ಬಗೆಯ ಮಿಂಚಿತ್ತು ಒಂದೇ ಬಿಂಬ (ಮುಕ್ತಕಂ. ೫೨-೬). [ಚಳಮಿಳ$_0$ + – ಅನೆ$_1$]

**ಚಳಯ$_1$** 'ಚಳೆಯ$_1$' ನೋ.

**ಚಳಯ$_2$, ಚಳೆಯ$_2$, ಚಾಳೆಯ, ಛಳೆಯ$_2$** (ನಾ). ೧. ಲಗುಬಗೆ ; ವೇಗ ; ಶೀಘ್ರತೆ : ಕಟ್ಟಾಯತನಾಗಿ ಚಳಯದಿಂ ಪೊಱಮಟ್ಟಂ (ಅನಂಪು. ೦೦-೫೬) : ಚಳಯದಲಿ ತರಿಸಿದನು ಸಂಭಾರವನು ತವಕದಲಿ (ಶಾಶಿರಾ. ೦-೫೮). ೨. ಚಲನ ; ಗತಿ : ಸುಳುಹಿನ ಸೂಕ್ಷ್ಮದ ತಿಳುಹಿನ ಚಳಯವ ತಾಳ್ದಿದೆಯ ಬಲ್ಲರೆ ಬಲ್ಲರೆಂದೆ (ಬೋಳಮ. ೦೦೩-೪೦೨). **ಚಳೆಯ$_2$**: ೧. ಪಟನೀರಿಂದಂ ಮರ್ದಿಸಿ ಚಳೆಯ[ಪಾಠಾಂ. ವಳಯ]ದೊಳಂ ಪೂಸೆ (ಖಮದ. ೦೦-೬೮) ; ಚಳೆಯದಿಂ ನೂತನವನಿಪನ ತರಲಾಲಯಿಕೆ (ನೀಲಧ್ವ. ೪೦). **ಚಾಳೆಯ**: ೩. ಕುಪ್ಪಳಿಸುತ್ತ ಸಾಗುವ ಒಂದು ರೀತಿಯ ಚಲನ ಕ್ರಮ: "ಚಾ [ಪಾಠಾಂ. ಡಾ] ಳೆಯಂ ಗ[ಪಾಠಾಂ. ದ]ತಿ ಲಂಘನಂ" (ಮಂಗರಾ. ೨೫-೯). ೪. ಕುಸ್ತಿಯಲ್ಲಿ ಅಥವಾ ಕಾಳಗದಲ್ಲಿ ಶತ್ರುವನ್ನು ಹಿಡಿಯಲು ಹೊಂಚು ಹಾಕುತ್ತಾ ವೇಗವಾಗಿ ಸಂಚರಿಸುವ ಕ್ರಮ : ಕಲಾಸ ಚಾಳೆಯ ಮಂಡಿಸೀರಣಾ ಹಜ್ಜೆಯಕ್ಕುಂ (ಮಂಗರಾ. ೮೮-೫೮) ; ಶಕ್ತಿ ಮೊದಲಾದ ಕೈದುಗಳೊಳು ಕೇಣಮಿಲ್ಲದೆ ಚಾರಿ ಚಳಕ ಚಾಳೆಯ ಚದುರ್ವಾಣ ಲಾಘವ ವಂಥ ವಾಡುಗಳನಱಿದು ಬಿನ್ನಾಣದಿಂ ಗಾಯ ಗಾಣಿಸಿದರತಿಬಲರು (ಕೃಮಿಥಾ. ೨೨-೬). ೫. [ಸಂಗೀತ] ಸ್ವರ ವಿನ್ಯಾಸ ಕ್ರಮ : ಗತಿ ಗಮಕ ಗಹಗಹಿಕೆ ತಿರುವು ಚಾಳೆಯ ಕೊಂಕು ಜಕಿ ಡೋಕೆ ಮಾರ್ಗವಣೆ . . . ನುತ ಶುದ್ಧ ಸಾಳಂಗ ಸಂಕೀರ್ಣಮಂ ಯಥೋಚಿತ ತಾರ ಮಧುರಮಂದ್ರಂಗಳಿಂ ಹಾಡಿ ಭೂಪತಿಯ ದುಗುಡವನು ತೊಳೆದರು (ಹದಕಾ. ೬-೬) ; ಗಹಗಹಿಕೆವಡೆದ ವಹಣಿಯ . . . ಮಹ ಚಾಳೆಯದಲ್ಲಿ ಮೂರ್ತಿವಡೆದುದು ರಾಗಂ (ಯುಕೋಚ. ೨-೨೯). ೬. [ನಾಟ್ಯ] ನೃತ್ಯದಲ್ಲಿ ಹೆಜ್ಜೆಯಿಡುವ ಕ್ರಮ: ವಯ ಪಾಡು ನಿಚ್ಚವಣೆ ಚಾಳೆಯಮುಲ್ಲಾಸಂ ತಿರುಂಪು ತಡ ವಿತ್ತ ಡ ಮು ನ್ನ ಯು ನ ವಿ ಶೇ ಷಂ ದಿಟ್ಟಾಯಿಯ ಲುಳಿ ಪುದಿದುಸುರಮಸೆವಿನಂ ನರ್ತಿಸಿದಳ್ (ಧರ್ಮಪ. ೨-೨೬); ಕೋಳ ನೀಡಿದಳು ಮನ್ಮಥನೊಱೆಯಿಂದುರ್ಚಿ ಬಾಳ ನೀಡಿದನೊಯಂಬಂತೆ ಚಾಳೆಯದೊಳು ಹೊಳೆದಳು ರಾಜಸುತರೆದೆ ಹೋಳಾಗುವಂತೆ ಹೊಮ್ಮಿಱಿದು (ಧರಚ. ೦೨-೭೬); ಅತಿ ಸೂರಿಯಲಿ ಚಾಳೆಯವಾಗಿ ತಿರುಹಿದಳು(ಉತ್ತರಾ. ೨೭-೦೮). **ಛಳೆಯ**: ೧.ಛಳೆಯದಲಿ ಬರಹೇಳು ನಿನ್ನೀ ತಲೆಯೊಡೆಯನಹ ವಿಷ್ಣುವನು (ನಿಥಾಗ. ೬-೬-೦೦). [ <ಪ್ರಾ. ಚಲಿಅ. / ಸಂ. ಚಲಿತ ]

**ಚಳಯಂಗುಡು** 'ಚಳೆಯಂಗೊಡು' ನೋ.

**ಚಳಯಂಗೊಡು** 'ಚಳೆಯಂಗೊಡು' ನೋ.

**ಚಳಯಂಬೆಱು** (ಕ್ರಿ). ಜಲಸೇಚನವನ್ನು ಪಡೆ ; ಸಿಂಪಣೆಯನ್ನು ಪಡೆ : ಕ್ಷಿತಿತಳಂ ಸದ್ರಾಗದಿಂದೆಂಬಿನಂ ಘನಕಾಶ್ಮೀರದ ನೀರಿನಿಂದ ಚಳಯಂ ಬೆತ್ತತ್ತಲುಂ . . . ಮಾಡಿತ್ತು ಸಂತೋಷಮಂ (ವರ್ಧಪು. ೦೬-೬೫).

[ ಚಳಯ$_1$ (<ಚಳೆಯ$_1$) + ಪೆಱು$_1$ ]

**ಚಳಯಗೊಡು** 'ಚಳೆಯಂಗೊಡು' ನೋ.

**ಚಳಯಿಸು** 'ಚಲಿಸು' ನೋ.

**ಚಳವಳ, ಚಳವಳಿ, ಚಳುವಳಿ** (ನಾ). ೧. ಚಲನೆ ; ಅಲ್ಲಾಡುವಿಕೆ ; ಜರಗುವಿಕೆ. 'ಚಳವಳಿಸು' ವರಾ.೨. ಚಟುವಟಿಕೆಯಿಂದ ನಡೆಸುವ ಸಾಮಾಜಿಕ ವಿಡಾಯ; ಸಾಮೂಹಿಕ ಕ್ಷೋಭೆ ; ಯಾವುದಾದರೂ ಒಂದು ಪದ್ಧತಿ. ಕ್ರಮ ಅಥವಾ ಕಾನೂನಿನ ವಿಷಯವಾಗಿ ನಡೆಸುವ ಸಾಮೂಹಿಕ ಆಂದೋಲನ: ನನ್ನ ಮಿತ್ರರ ಪ್ರೀತಿಯ ಚಳವಳಕ್ಕಾದರೋ ಇದೇ ಒಂದು ನೆವವಾಯಿತು (ಜೀವನಾ. ೯) ; ರಾಷ್ಟ್ರೀಯ ಚಳವಳದಲ್ಲಿ ಸೇರಿಕೊಂಡು ತ್ಯಾಗಬುದ್ಧಿಯಿಂದ ದೇಶಸೇವೆ ಮಾಡಿದ ವೀರವ್ಯಕ್ತಿ ಅವರು (ಗಾಬವ. ೨೭) : ಬ್ರಿಟಿಷರ ಕಾಲದಲ್ಲಿ ನಾಟ್ಯಕಲೆಯನ್ನೆ ಬಹಿಷ್ಕರಿಸ ಬೇಕೆಂದು ಚಳವಳವೆದ್ದಿತ್ತು (ಭಾರತ. ೫೫೦). **ಚಳವಳಿ** : ೨. ಸ್ವದೇಶಿ ಚಳವಳಿಯ ಸಮಯದಲ್ಲಿ . . . ತಂದೆಯವರು ತಮ್ಮ ನೌಕರಿಯನ್ನೂ ಬಿಡುವ ಪ್ರಸಂಗ ಬಂದಿದ್ದು (ಧಾರಕ. ೨) : ಕರನಿರಾಕರಣೆಯ ಚಳವಳಿಯ ಸಮಯದಲ್ಲಿ . . . ಅಲ್ಲಿ ಇದ್ದೆ (ಬದುಕು. ೦೦). **ಚಳುವಳಿ** : ೨. ಇವರು ಹೂಡಿದ ಚಳುವಳಿ ಯುರೋಪಿನ ಬೌದ್ಧಿಕವಿಕಾಸವನ್ನು ತ್ವರಗೊಳಿಸಿತು

(ಕನ್ನಸಂ. ೨೨); ಸ್ವಾತಂತ್ರ್ಯದ ಚಳುವಳಿ ತೀವ್ರವಾಯಿತು (ಭಾರದ. ೪೨೮); ಕ್ಷಾಮನಿವಾರಣೆಗೆ . . . ತಿಲಕರು ಚಳುವಳಿಯನ್ನೆ ಹೂಡಿದರು (ಸ್ವಾವೀರ. ೫೯): ಚಳುವಳಿ ನಿಂತಿತ್ತು, ಕಾಲೇಜು ತೆರದಿತ್ತು (ಇಂದಾಪ. ೩೯-೮೨).

[ ←ಮರಾ. ಚಳವಳ ]

**ಚಳವಳಿ** 'ಚಳವಳ' ನೋ.

**ಚಳವಳಿಖೋರ** (ನಾ). ಚಳವಳಿ ಮಾಡುವವನು ; ಚಳವಳಿ ಮಾಡುವ ಸ್ವಭಾವದವನು: ಈ ಚಳವಳಿಖೋರ ಮಂದೀ ಮನಸೂ ಬರೇ ಚಂಚಲ (ತಿರುಗು. ೧೨). [ ಚಳವಳಿ + – ಖೋರ(<–ಕೋರ$_3$) ]

**ಚಳವಳಿಸು, ಚಳಬಳಿಸು** (ಕ್ರಿ). ೧. ಅಲುಗಾಡು ; ಅಲ್ಲಾಡು ; ಚಲಿಸು : ಅಳವಳಿಸು ಬೆಬ್ಬಳಿಸಂ ಕಳವಳಿಸಂ ಕನಲನೊನಲನಳ್ಕಂ ಬಳ್ಕಂ ಚಳವಳಿಸಂ ಚಪ್ಪರಿಸಂ ತಳವಳಿಸಂ ಬೇಸಜ್‌ಯ್ದಿ ಬೆಳ್ಮೊಗದಿನಿರಂ (ಅಜಿಪು. ೫-೯೦); ಕೌತುಕವಿದೇನೆಂದು ಚಳವಳಿಸುತಿರಲೆಲ್ಲರು(ಜಿನಮು. ೫೦-೫೯). **ಚಳಬಳಿಸು** : ೨. [ನಾಟ್ಯ] ನೃತ್ಯಭಂಗಿಯನ್ನು ತೋರು: ತಾಳದಲಿ ತರಹರಿಸಿ ಮೆಲ್ಲನೆ ಮೇಳದಲಿ ಮೈನಿಗುರಿ ಕರ ಸಂಚಾಳಿಯಲಿ ಚಳಬಳಿಸಿ ತಿರುಪಿನ ಮಡುಪಿನಲಿ ಮಣಿದು . . . ವಿನುತ ಮರಾಳಗತಿಯಲಿ ಗಮಕಿಸುತಮೊಪ್ಪಿರ್ದಳಾ ಮಾಯೆ (ಪ್ರಭುಲಿಂ. ೪-೫೬). [ ಚಳವಳ + – ಇಸು$_3$ ]

**ಚಳಾಯ** (ನಾ). ಸಾಗಾಣಿಕೆಯ ಸುಂಕ ; ಸ್ಥಳದಿಂದ ಸ್ಥಳಕ್ಕೆ ಸಾಗಿಸುವ ವಸ್ತುಗಳ ಮೇಲೆ ಸಾಗಣೆಗಾಗಿ ಹೇರುವ ಸುಂಕ : ಉಳಿದ ಶೇಷವುಮಂ ಚಳಾಯವುಮಂ ಬಿಟ್ಟು (ಎಕ. VI, ತರೀಕೆ. ೨೦-೨೬ : 1155); ಆರು ವರ್ಷಗಳ ಹಿಂದೆ ದಾಯದರೆ ಎಲ್ಲದರ ಜತೆಗೆ ಚಳಾಯವನ್ನೂ ಘಟಿಕಾಸ್ಥಾನಕ್ಕೆ ಮಾಯೆಕೊಡಲಾಯಿತು (ಸವತಿ. ೨೧). [ ಚಳ$_2$(=ಚಲ$_8$) + ಆಯ$_7$ ]

**ಚಳಿ$_1$, ಸಳಿ$_1$** (ಕ್ರಿ). ಚಳಿತು, ಸಳಿತು (ಭೂತನ್ಯೂ) . ೧. ಪ್ರಭಾವ ಕಡಮೆಯಾಗು ; ಸೆಡೆ ; ಹಿಂದೆಗೆ ; ಕುಗ್ಗು : "ಚಳಿ-ವಿಗತಪ್ರಭಾವೇ (ಶಕ್ತಿಗುಂದು), ಶೀತೇ ಚ " (ಶಮಧಾ): ಕಳ್ದ ಕಸವರಮನೆಲ್ಲಮನೇಗೆಯ್ದುಯೆಂದು ಬೆಸಗೊಂಡೊಡನಿತುಮಿರ್ದುವಯ್ಸಿರಮುಖಸಾಸಿರ ದೀನಾರಮನ್ನ ಸೂಳೆಗೆ ಬಿಯಮಾದುದುಟಿದುವೆಲ್ಲ[ಂ] ವಣ್ಣ[ಂ] ಚಳಿಯದಿರ್ದುದೆಂದೊಡೆ (ವಡ್ಡಾರಾ. ೧೨೫-೨೫) ; ತುಂಗಕುಚದ್ವಯ ಶೈಲದುರ್ಗಮಂ ಚಳಿತ[ಪಾಠಾಂ. ತಳಿದ]ಡರ್ದೇಱದಂಗಜನುಂ (ಗದಾಯು. ೮-೫೯); ಸುನಂದೆಯ ನುಡಿಗೆ ಚಂಡಶಾಸನನೇವೈಸಿ ಮುಳಿಯದೆ ಲಜ್ಜೆಯಿಂ ಚಳಿಯದೆ ಮತ್ತುಮಿಂತೆಂದಂ (ಅನಂಪು. ೧೧-೯೧ವ); ಚಳಿಯ ವಾಹುವಕಾಂಕ್ಷೆ ಯಕ್ಷರಿಂಗೆಲೆಲೆ ನೋಡಾ (ಉತ್ತರಾ. ೬-೫೧) ; ಬವರಿವರಿವ ಚಮ್ಮಟಿಗೆಗೆ ಚಳಿಯದ ಕಡಿಯಾಣಮುಂ ಕೈಗೊಳದ ಬಗೆಯುಂ ಬಗೆದಂತೆ ಕಂಡು (ರಾಜಶೇ. ೬-೧೧ ವ) ; ನಿವಿಷ್ಟಾ ಬಲ್ಮೆಯ ಜಂಕಣಗಂ ಕಣಗಂ ಚಳಿತು (ರಾಮಾಶ್ವ. ೧೨೧-೨೬). ೨. ಬಳಲು ; ಸೋಲು ; ಸೋತುಹೋಗು : ಕೆಯ್ ಚೆಟ್ಟರಿಕೆಯ ಚಲದಿಂ ಕೆಯ್ ಚಳಿವಿನಮಿಱದರೆರಡು ಬಲದೊಳ ಮದಟರ್ (ಶಂಪಭಾ. ೧೩-೫೪): ಖಳಿಲ್ ಖಳಿಲ್ ತೊಪ್ಪು ತೊಪ್ಪು ಭಳಿಲ್ ಭಳಿಲೆಂದು ಕೊಳ್ವ ಬಡಿಗಂ ಚಳಿತು (ಧರ್ಮಾಮೃ. ೬-೮೮); ಬಳಸಿ ತೊಟಲ್ದನ್ನಡಿಗಳ್ ಚಳಿತುವು ಕಣ್ ನಂದಿ ಬಂದವುದು (೦ೀರಾವ. ೧೪-೬೨) ; ಆವ ಪರಿಯೊಳಾದೊಡೆಯು ಚಳಿಯದೆ ಮತ್ತೆ ಶ್ರೀವರನೊಳು ತೊಳಲಿದರೆ ದೇವದೇವನ ಕಾಣಲಹುದು (ಕೃಷ್ಣಗೂ. ೨-೯೯). **ಸಳಿ$_1$** : ೨. ತರಿ ಸಳಿತು ಕೈಮುಱದರಂತೆ ಯಸುವಾಳುಗಳ್ ನಿಲೆ ಕಂಡು (ಸಮ್ಯಕ್ತ್ವ. ೮-೩೮). [ ದೇ.೫ ತಮಿ. ತುಳು. ಚಲಿ ]

**ಚಳಿ$_2$, ಛಳಿ, ಸಳಿ$_2$** (ನಾ). ೧. ಶೀತ ; ಶೈತ್ಯ ; ಥಂಡಿ : "ಚಳಿ–ವಿಗತ ಪ್ರಭಾವೇ(ಶಕ್ತಿಗುಂದು), ಶೀತೇ ಚ" (ಶಮಧಾ): ಚಳಿ ಬಿಸುವು ಬಿಸುವು ಚಳಿಯುನೆ ಬಳೆದುದು ಹಿಮರಾಜತೇಜವಿಾ ಜಗದೆಡೆಯೊಳ್(ಗಿರಿಕ. ೯-೬೪); ಗಿರಿಯ ಶೃಂಗಾಗ್ರದೆ ಚಳಿ ಮಳೆ ಬಿಸಿಲೆನ್ನದುರುತರ ಯೋಗಮಾರ್ಗದಲ್ಲಿ . . . ಯೋಗೀಶ್ವರರಿರುತಿಹರು (ಶಂಸವಿ. ೨-೩೧) ; ಅಲ್ಲಿ ಕೊರಗೆಂಬುದಿಲ್ಲಮ್ಮ, ಅಲ್ಲಿ ಚಳಿ ಭಿದ್ರವಿಲ್ಲಮ್ಮ (ಇಂಗಿತ. ೮೯-೬). ೨. ಹಿಮ ; ಮಂಜು . 'ಚಳಿವೆಟ್ಟು' ಪರಾ. ೩. ಚಳಿಜ್ವರದಲ್ಲಿ ಬರುವ ಮೈನಡುಕ : ಅವನಿಗೆ ಚಳಿ ಬಂದಿತ್ತು (ರೂಢಿ). **ಛಳಿ** : ೧. 'ಛಳಿಗಾಲ' ಪರಾ. ೩. 'ಛಳಿಜ್ವರ' ಪರಾ. **ಸಳಿ$_2$** : ೧. ಬೆಂಕಿಗೆ ಸಳಿ ಬಂದು ಉದಕವ ಕಾಯಲಾಗಿ ಹಿಮ ಹಿಂಗಿ ಜ್ವರ ಬಂದಿತ್ತು (ಸಗದೊ. ೬೬) ; ಏನು ಕಾರಣವಾಗಿ ನೀನಿಂತು ಮೌನದಲ್ಲಿ ಮಂಡಿಸಿರ್ಪೆ . . . ಸಳಿ ಮಳೆ ಘಾಳಿ ಬಿಸಿಲ ಬೇಸೆ ಬಾಯಾಱಿಕೆ ಪಸಿವು ಮುಂತಾದ ವೇದನೆಗಳೊಂದುಂ ಗಣನೆಗೆ ತಾರದ (ಭಾರತ. ೧೪-೬೧). ಪರಿಯುಮಿಾ ಹಿಮಕಂಜ ಕಲಶಾಬ್ಧಿಯಂ ಬಿಟ್ಟು . . . ಉರುವ ಸಳಿ ತೊಲಗದಿರಲೋಡಿಬಂದಾಗಸದ ತರಣಿಮಂಡಲ ಮಧ್ಯದೋಳ್ಮನೆಯ ಮಾಡಿಕೊಂಡಿರುವನೀ ಹೈಮಂತ ಶಕ್ತಿಯಂ ಬಣ್ಣಿಸಲ್ಕಾರಳವೊ ಮೂಜಗದೊಳು (ಅರ್ಕಾವಿ. ೧-೨೯).

[ ದೇ.೫ ತಮಿ. ಮಲ. ಚಳಿ ; ತುಳು. ಚಳಿ, ಚಲಿ, ಸಲಿ ; ತೆಲು. ಚಲಿ ]

**ಚಳಿ$_3$** 'ತಳಿ$_4$' ನೋ.

**ಚಳಿಕ** (ನಾ). ಲವಲವಿಕೆ : "ತವಕ, ಲವಲವಿಕೆ, ಚವಲ, ಅಸವಸ, ಚಳಿಕ" (ಕಂನುಹು. ೮೪). [ ? ]

**ಚಳಿಕಿಗೆ** 'ಚಳಕಿಗೆ' ನೋ.

**ಚಳಿಕೆ$_1$** 'ಚಳಕೆ' ನೋ.

**ಚಳಿಕೆ$_2$** (ನಾ). ಇಬ್ಬನಿ ; ಹಿಮ : ಪರೆದುದು ಚಳಿಕೆ ರವಿಯ ಕರಂಗಳು ಪರಕರಿಸಿದವೆಣ್ದೆಸೆಯ ಹರುಷವಾದುದು ಕೋಕಮಿಥುನ ಕೋಕನದ ಕೊರಗೆ ಚಕೋರ ಕೈರವವು (ಕರ್ಣಕಾ. ೪-೬೨). [ ? ]

**ಚಳಿಕೊಡು** 'ಚಳಿಗೊಡಂ' ನೋ.

**ಚಳಿಕ್ಕ** 'ಚಳಂಕ್ಕ' ನೋ.

**ಚಳಿಗದಿರ್** (ನಾ). ತಂಪಾದ ಕಿರಣ; ಹಿಮಕಿರಣ: ಶಶಿಯ ಚಳಿಗದಿರ್ಗಳ ಕುಳಿರ್ಕಾಂತಿ (ಶ್ರೀರಾಮಾ. ೪೨೦-೬).

[ ಚಳಿ$_2$ + ಕದಿರ್$_2$ ]

**ಚಳಿಗದಿರ, ಸಳಿಗದಿರ** (ನಾ). ತಂಪಾದ ಕಿರಣಗಳುಳ್ಳವನು ; ಚಂದ್ರ : "ಸವಿಗಡಲಣುಗಂ . . . ನೈದಿಲ್ಗೆಳೆಯ ಚಂದ ಚಳಿಗದಿರ ಕತ್ತಲೆವಣಿಯ ಶಶಿಯು ನಾಮಂ" (ಕಬ್ಬಿಕೈ. ೪೩): "ಚಳಿಗದಿರಂ ಕಟ್ಟಲೆವಣಿ ಕುಳಿರ್ವೆಳಗನು . . . ತಣ್ಗದಿರ ಮಂಜುಗ್ಗೈಯಂ ಚಂದಂ" (ಕವಿಕಂ. ೪೩). **ಸಳಿಗದಿರ** : ಸಳಿಗದಿರನ ಕಳಂಕನುದ್ದುವವೊಲು ತಿಲಕವ ತೊಡೆದು (ಜ್ಞಾನಸ. ೯೩-೮೦).

[ ಚಳಿಗದಿರ್ + – ಅ$_7$ ]

**ಚಳಿಗದಿರ್ಗಲ್ಲು** (ನಾ). ಚಂದ್ರಕಾಂತಶಿಲೆ : ಎಕ್ಕಲಂ ಚಳಿಗದಿರ್ಗಲ್ಲಿನೊಳು ದಾಡೆಯಂ ಮಸೆದು ಪದಗೊಳಿಸುವನಿತಕ್ಕೆ (ರಾಘಶ. ೧೬-೬೨).

[ ಚಳಿಗದಿರ್ + ಕಲ್ಲು(<ಕಲ್$_3$) ]

**ಚಳಿಗಾಲ, ಛಳಿಗಾಲ** (ನಾ). ಚಳಿ ಹೆಚ್ಚಾಗಿರುವ ಕಾಲ ; ಮಾಗಿ ; ಹೇಮಂತ ಶಿಶಿರಋತುಗಳ ಸಮಯ : ಹರಿವ ತೊಱೆಗಳ ನಡುವೆ ಧೃತಿಯೋಸರಿಸದುಱೆ ಚಳಿಗಾಲವೆಲ್ಲಂ ನಿರುತದಿಂ ಕೊರಳುದ್ದ ನೀರೊಳು ನಿಂದು (ಬಸಪು. ೨-೧೨) ; ಬಿಸಿಲು ಮಳೆ ಚಳಿಗಾಲವಿವು ಸಂಧಿಸಿದವೇ ರಘುಪತಿಯನೀಯಾಯಸವ ನೋಡಲಿಕಿದ್ದವೇ ಶಿವಶಿವ ಮಹಾದೇವ (ತೊರರಾ. ೩-೨-೬). **ಛಳಿಗಾಲ** : ಛಳಿಗಾಲದಲ್ಲಿ ಅವು ಒಂದೂವರೆ ಅಡಿ ಆಳದವರೆಗೂ ಹೋಗುತ್ತವೆ (ಕೀಟದ. ೩).

[ ಚಳಿ$_2$ + ಕಾಲ ]

**ಚಳಿಗಿರಿ** (ನಾ). ಹಿಮಾಲಯ ಪರ್ವತ; ಹಿಮಾಚಲ: ಒಂದು ದಿನ ಚಳಿಗಿರಿಯ [ಪಾಠಾಂ. ವೆಟ್ಟ] ದೆಸೆಗೆ ಚೆಲ್ಲಲು ನಿತ್ಯದಂತಲ್ಲದತ್ತ ನೀ ಬಿಸುಟ ಪರಿಯ ತಿಳುಹೆನಲ್ಕೆ (ಪ್ರಾರಥಾ. ೪-೧೪). [ ಚಳಿ$_2$ + ಗಿರಿ$_1$ ]

**ಚಳಿಗೊಳ್** (ಕ್ರಿ). ತಣ್ಣಗಾಗು ; ಕಂಗಿಡು ; ತಗ್ಗು : ಕೇಡಿನಲ್ಲಿ ಕಂಗೆಡದ ಒಲವು, ಮುಚ್ಚಿನಲ್ಲಿ ಚಳಿಗೊಳದ ಗೆಲವು (ಇಂಗೀತ. ೮೩-೧೪).
[ಚಳಿ$_1$ + ಕೊಳ್$_1$]

**ಚಳಿಜ್ವರ, ಛಳಿಜ್ವರ** (ನಾ). ಚಳಿಯೊಡನೆ ಬರುವ ಜ್ವರ ; ನಡುಕದೊಂದಿಗೆ ಏರುವ ಜ್ವರ ; ಮಲೇರಿಯಂ : ಇವು ಚಳಿಜ್ವರ ಅಥವಾ ಮಲೇರಿಯಾಜ್ವರವನ್ನುಂಟುಮಾಡುತ್ತವೆ (ಪರಜೀ. ೨೭). **ಛಳಿಜ್ವರ :** ಮಂದಾಗ್ನಿಯಲ್ಲಿ, ಛಳಿಜ್ವರದಲ್ಲಿ [ಪಾಠಾಂ. ಛಳಿಯಲ್ಲಿ] . . . ವಮನ ಕ್ರಿಯೆಯ ಮಾಡಿಸುವುದು (ವೈದ್ಯಸಾ. I, ೩೦) ; ಗರುಗದ ಸೊಪ್ಪಿನಲ್ಲಿ ಒಂದು ಹಾವು ರಸವಂ ಹಿಂಡಿ ಛಳಿಬರುವ ಸಮಯದಲ್ಲಿ ಕೊಡಲು ಛಳಿಜ್ವರಂ ಮಾಣ್ಗುಂ (ಸಕವೈ. ೭೩). [ಚಳಿ$_2$ + ಜ್ವರ]

**ಚಳಿತ$_1$** (ನಾ). ಚಳಿ ; ಶೀತ ; "ಕುಳಿರ್ದುದು" (ಚತುನಿ. ೬. I, ೩೭).
[ಚಳಿ$_2$ + – ತ$_2$]

**ಚಳಿತ$_2$** 'ಚಲಿತ' ನೋ.

**ಚಳಿನಾಡು** (ನಾ). ಚಳಿ ಹೆಚ್ಚಾಗಿರುವ ನಾಡು ; ಶೀತವಲಯದಲ್ಲಿ ಇರುವ ನಾಡು : (ಶ). [ಚಳಿ$_2$ + ನಾಡು]

**ಚಳಿಯ** 'ಚಳಿಯಂ$_1$' ನೋ.

**ಚಳಿಯಿಸು** 'ಚಲಿಸು' ನೋ.

**ಚಳಿಲ್** (ನಾ). ಒಂದು ಅನುಕರಣ ಶಬ್ದ : ಪೊಸ ಪೂವಿನೊಳ್ ಪೊರೆದು ಪೊಣ್ಮಿದ [ಕ]ಂಪು ಮೊಗಂಗಳಂ ಚಳಿಲ್ಲೆನೆ ಕೊಳೆ ಪೊಯ್ಯೆ ತೀಡಿದುದು ತೆಂಕಣಗಾಳಿ ವಸಂತಮಾಸದೊಳ್ (ಪಂಪಭಾ. ೫-೩೪) ; ಉರ್ಕಂಬುಗಳೆಱಗಿ ರೋಮರೋಮಕ್ಕೆ ನೆಳಲ್ ನೆಕ್ಕು ಚಳಿಲ್ ಚಕ್ಕು ದೊಗಲ್ ದೊಕ್ಕೆನೆ ನಾಂಟಿದುವರಾತಿಭಟರವಯವಮಂ (ಜಗವಿ. ೭-೮೦).

**ಚಳಿಲನೆ** (ಅ). ಒಮ್ಮೆಲೆ ; ಕೂಡಲೆ : ಚಳಿಲನೆ, ಕಿಳಿಲನೆ, ಗಳಗಳನೆ, ಕಿಳಕಿಳನೆ (ಶಬ್ದಾನು. ೧೪೦ ವ್ಯಾಖ್ಯಾ). [ಚಳಿಲ್ + – ಅನೆ$_1$]

**ಚಳಿವೆಟ್ಟ** 'ಚಳಿವೆಟ್ಟು' ನೋ.

**ಚಳಿವೆಟ್ಟಣುಗಿ** (ನಾ). ಹಿಮವಂತನ ಮಗಳು; ಪಾರ್ವತಿ: ಚಳಿವೆಟ್ಟಣುಗಿಯಾಣ್ಮನ ಭಕ್ತ ಸಂಗನಾದಳವ ನೋಡಲ್ಕೆ . . . ಸೂರ್ಯನುದಯಂಗೈದನಾ ಸಮಯದಿ (ಬಸ್ವಾರಾ. ೧೩-೨೯).
[ಚಳಿವೆಟ್ಟು + ಅಣುಗಿ (< ಅಣುಂಗಿ)]

**ಚಳಿವೆಟ್ಟಳಿಯ** (ನಾ). ಹಿಮವಂತನ ಅಳಿಯಂ; ಶಿವ: "ಎಲರುಣಿವೆದೆಯಂ ಚಳಿವೆಟ್ಟಳಿಯಂ ಸಸಿದಲೆಯ . . . ಪೇಟ್ವರ್ ಸ್ಮರಹರಂಗೆ ನಾಮವಿದೆನುತುಂ" (ಕವಿಕಂ. ೦೫). [ಚಳಿವೆಟ್ಟು + ಅಳಿಯ]

**ಚಳಿವೆಟ್ಟಾಣ್ಮ** (ನಾ). ಹಿಮಗಿರಿಯ ಒಡೆಯ ; ಹಿಮವಂತ ; ಚಳಿವೆಟ್ಟಾಣ್ಮನ ಪುತ್ರಿ ಸುರ್ಕೆ ಚಳಿಯಿಂ (ರಾಜಶೇ. ೯-೧೭).
[ಚಳಿವೆಟ್ಟು + ಅಣ್ಮ (< ಆಳ್ಮ)]

**ಚಳಿವೆಟ್ಟು, ಚಳಿವೆಟ್ಟ, ಛಳಿವೆಟ್ಟು** (ನಾ). ಹಿಮಗಿರಿ ; ಹಿಮಾಚಲ : "ಕುಳಿರ್ವೆಟ್ಟೈಕಿಲ್ವೆಟ್ಟುಂ ಚಳಿವೆಟ್ಟು ಹಿಮಾದ್ರಿ" (ಚತುನಿ. ೦೦) ; ಮನ್ಮಥನ ತಳರ್ರಥವನೇಱಿ ಮುಂದೆ ಪೋಗಲ್ಕಾ ಚಳಿವೆಟ್ಟು ಕಣ್ಗೆ ರಂಜಿಸಿತು (ಮೋಹತ. ೭-೪೫). **ಚಳಿವೆಟ್ಟ :** ಚಳಿವೆಟ್ಟದಳಿಯ ಕೇಳುಳಿದ ಮಾತೇನೀಗ (ಮಲ್ಲಾರಿ. ೭-೪). **ಛಳಿವೆಟ್ಟು :** ಛಳಿವೆಟ್ಟನಿಂದಬ್ಧಿಪರಿಯಂತದವನಿಯು ತದಾಕಾರದಂತೆಸೆವುದು (ನವಮೋ. ೨-೦೮).
**ಚಳಿವೆಟ್ಟುಮಗಳ್** = ಚಳಿವೆಟ್ಟಣುಗಿ: ಚಳಿವೆಟ್ಟುಮಗಳ ನಲ್ಲಂ ಪೇಳ್ದ ಶಾಸ್ತ್ರಂಗಳ್ (ಐಕೋಪು. ೭-೭೮). [ಚಳಿ$_2$ + ಬೆಟ್ಟು$_2$]

**ಚಳಿವೆಱು** (ಕ್ರಿ). ಚಳಿಯನ್ನು ಹೊಂದು ; ಶೀತದಿಂದ ಬಾಧೆಪಡು : ಭೀತಿಯಲಿ ಚಳಿವೆತ್ತು ನಡುಗುವಂದದಿ ಪೇಳ್ದ ರಣದುಮ್ಮಳಿಕೆಯ ಬಹಳ ನಿಷ್ಠುರವ (ಮೋಹತ. ೩೪-೪೩). [ಚಳಿ$_2$ + ಪೆಱು$_1$]

**ಚಳಿಸು$_1$** 'ತಳಿಸು$_1$' ನೋ.

**ಚಳಿಸು$_2$** 'ಚಲಿಸು' ನೋ.

**ಚಳುಕಿ$_1$** 'ಚಳುಕ್ಯ' ನೋ.

**ಚಳುಕಿ$_2$** (ನಾ). ಒಂದು ಬಗೆಯ ವಿಮಾನ: "ಚಳುಕಿಯೆನೆ ಶಿಂಶುಪಮಾರು" (ವಸ್ತುಕೋ. ೨೩-೬). [ ? ]

**ಚಳುಕಿಡು** (ಕ್ರಿ). ನರಗಳ ಮಿಡಿತದಿಂದ ಬೇನೆಯುಂಟಾಗು; ನರಗಳಲ್ಲಿ ಚುಚ್ಚಿದಂತೆ ನೋವುಂಟಾಗು: ನವಮಾಸ ಪೂರೈಸಲಾ ಸತಿಗೆ ಬಿಡದೊಡನೆ ದಿವದಲ್ಲಿ ಕಾಂಚಿ ಕಟ ಮಿಡಿಮಿಡಿದು ಚಳುಕಿಡಲ್ (ಶರಬು. ೩-೪೯). [ಚಳುಕು$_1$ (< ಚಳಕು$_1$) + ಇಡು$_1$]

**ಚಳುಕು$_1$** 'ಚಳಕು$_1$' ನೋ.

**ಚಳುಕು$_2$** (ನಾ). (?) : ಅಳಿರಶರಕೇಳಿಪಂಪಿಂದಲಾಸ್ಯಶ್ರೀಯ ಚಳುಕಿನಿಂ ನೋಳ್ಪರಂತಃಕರಣತುಷ್ಟಿಯಂ ಸುಸೋವನೇವರ್ಣಿಸುವೆನು (ಜನಮು. ೨-೦೨). [ ? ]

**ಚಳುಕ್ಯ, ಚಲಿಕ್ಯ, ಚಳಿಕ್ಯ, ಚಳುಕಿ$_1$, ಚಟಿಕ್ಯ, ಚಾಳೋಕ್ಯ, ಸಳುಕಿ** (ನಾ). = ಚಾಲುಕ್ಯ: ಸತ್ಯಾಶ್ರಯವಸರಸೆದುದಾ ಚಳುಕ್ಯಾನ್ವಯದೊಳ್ (ಕಇಆ. ೨-೨-೨೦ ; 1058). **ಚಲಿಕ್ಯ :** ಚಲಿಕ್ಯೋ ವಲ್ಲಭೇಶ್ವರಃ (ಎಇ. XXVII, ೮-೩: 543). **ಚಳಿಕ್ಯ :** ಸಮಜನಿ ನವಮಸ್ತಸ್ಯ ರಾಜ್ಞಶ್ಚಳಿಕ್ಯ ಕ್ಷ್ಮಾಪ (ಎಕ. VII, ಶಿವಮೊ. ೮೩-೦೪ ; 1587). **ಚಳುಕಿ$_1$ :** ಚಳುಕಿ ವಂಶೋತ್ರಮರಂ (ಎಇ. XVI, ೩೮-೫: 1107). △ **ಚಟಿಕ್ಯ :** ಚಟಿಕ್ಯರನ್ವಯಂ ನೆಗಳೆ ನಗಳ್ತೆಯಂ ತಳೆದು ತಂನಯ ತೇಜದೊಳಾಜೆಯೋಲೆಯಿಂಡಿಗೆ ಸಲೆ ಸಾಧ್ಯವಾದ ನೆಲನಂ ತಳೆದಂ ನೃಪಮೇರುತ್ಯಲಪಂ (ಕಇಆ. ೯೫-೪-೯ ; 12ನೆಯ ಶತ). **ಚಾಳೋಕ್ಯ :** ನನ್ನಿಯಂ ಪೇಳುವೆನರಸ ಕೇಳಿನ್ನು ಚಾಳೋಕ್ಯಾನ್ವಯದವರು ಮುನ್ನ ನಿಕ್ಷೇಪಿಸಿದುದೆಂಬತ್ತೆಂಟು ಕೋಟಿ ಧನ ವಿನ್ನ ಸಿಂಹಾಸನದ ಕೆಳಗಿದೆ (ಬಸಪು. ೫-೫೭). **ಸಳುಕಿ :** ವಿದಿತ ಶ್ರೀ ಸಳುಕಿ ರಾಜ್ಯ[ದೊ]ಳ್ (ಸೌಇಇ. XI-1, ೦೪-೧೫: 872).
[< ಸಂ. ಚಾಲುಕ್ಯ]

**ಚಳುಪು** (ನಾ). = ಚಳಕು$_1$ : (ಶ). [ ? ]

**ಚಳುಮ** (ನಾ). = ಚಳಕು$_1$ : ಯೋನಿಯೋನಿಯಲ್ಲಿ ಭೇದ ಚಳುಮ ರುಜಾ ಇತರ ತೋದ ನೋವು (ಬಾಹಟೀ. ೨-೦-೭೭ ವ). [ ? ]

**ಚಳುವಳಿ** 'ಚಳವಳ' ನೋ.

**ಚಳೆ$_1$** 'ತಳಿ$_4$' ನೋ.

**ಚಳೆ$_2$** 'ಚಿಲ್ಲ$_1$' ನೋ.

**ಚಳೆ$_3$** 'ಸೆಳೆ$_4$' ನೋ.

**ಚಳೆ$_4$** 'ತಟಿ$^3$' ನೋ.

**ಚಳೆ$_5$** (ನಾ). ೧. ಒಂದು ಬಗೆಯ ಬಟ್ಟೆ : ದೇವಾಂಗದ ಚಳೆಯ ಪಟ್ಟಿಯ ಪಟ್ಟಾವಳಿಯೆಕ್ಕಾರೋಹಣದ ಕಕ್ಕರಪಟಯಿಗೆಯ ದುಗುಳದ ಪಾಗುಡಂಗಳಂ . . . ತೊಟ್ಟು (ಮಹಾನೇ. ೯-೪ ವ). ೨. ಚಿಕ್ಕಮಕ್ಕಳನ್ನಾಗಲಿ, ಅಶಕ್ತರನ್ನಾಗಲಿ ಎತ್ತಿಕೊಂಡು ಹೋಗುವುದಕ್ಕಾಗಿ ಬಳಸುವ ಬಟ್ಟೆ; ಜೋಳಿಗೆ : (ಶ).

**ಚಳೆಕೊಡು** 'ಚಳೆಗೊಡು' ನೋ.

**ಚಳೆಗೊಡು, ಚಳೆಕೊಡಂ, ಚಳೆಕೊಡು** (ಕ್ರಿ). ಸಿಂಪಡಿಸು; ಚಿಮುಕಿಸು ; ತಳಿಸು: ಕೇಸರಿಪೀತವ ಪಾಸಿ ಕಸ್ತೂರಿನೀರ ಪೋಸರಿಸದೆ ಚಳೆಗೊಡುವ (ಅನಂದ. ೫-೫೭); ಕಸ್ತೂರಿಯಾ ಜಲದಿಂದೆ ಚಳೆಗೊಟ್ಟು (ನವಮೋ. ೦೦-೭೮): ಸಾರಣೆಯನೇ ಹಾಕಿ ಚಳೆಗೊಟ್ಟು ರಂಗವಲ್ಲಿಯನಿಟ್ಟು (ಮಲ್ಲಚ. ೨-೦೫). **ಚಳೆಕೊಡಂ :** ಅಂಗಳ ಸಾರಿಸಿ ಗಂಧದ ಚಳೆಕೊಟ್ಟು (ಲೋಕಗೀ. ೨೦೫). **ಚಳೆಕೊಡು :** (ಶ). [ಚಳೆ$_1$ (< ತಳಿ$_4$) + ಕೊಡು$_1$]

ಚಳಿಯು$_1$, ಚಳಯು$_1$, ಚಳಿಯು, ಛಳಯು, ಛಳಿಯು$_1$ (ನಾ). (ನೆಲವನ್ನು ಗುಡಿಸಿದ ಬಳಿಕ)ನೀರು ಳಿಯುವುದು,-ಸಿಂಪಿಸುವುದು,-ಚಿಮುಕಿಸುವುದು : "ಚಳಿಯುಮೆನೆ ನೀರ ತಳಿದುದು" (ಛಾರನಿ. ೧೦); "ಚಳಿಯುಮುಮೆನೆ ಸಿಂಪಿಸುವುದಕಕ್ಕುಂ" (ಕವಿಕಂ. ೨೪೬); ಎಳೆದಳಿರ ಪಸೆ ಪನ್ನೀರ ಚಳಿಯ ಮೆಱೆದವಾ ಶೈತ್ಯಶಾಲೆಯೊಳಗೆ (ಹದಕಾ. ೩-೪೫); ಕತ್ತುರಿನೀರ ಚಳಿಯುದೊಳಂ (ಪುಷ್ಪಪು. ೮-೫೦ ವ); ಚಂದ್ರಕಾಂತದ ಜಲದ ಚಳಿಯುಮಂ ಕೊಟ್ಟು (ಸೌಂದಪು. ೮-೨೦); ಚಳಿಯುದಿಂ ಚೆಲ್ಲಿದ ಚಂದನರಸದಿಂದ ಪೊಳಲು ಕಣ್ಗೆಸೆದುದು (ಕುಮಾಸಾಂ. ೪೦-೬೬); ಮೇಗಣೊಂದುದಿರ್ವ ಕ್ರಮ್ಮಲರ್ಸರಿಯ ಪನ್ನೀರ್ಚಳಿಯುದ . . . ಅಗಡೆಯುರ್ವೆಡೆ ಮೆಱೆದುದು (ನಂದಿಪು. ೭-೩). ಚಳಯು$_1$ : "ಜಲಸೇಚನಂ ಚಳಯುಮೆನಿಕುಂ" (ಕರರ. ೧೨೩): ಪುಷ್ಪರಸದ ಚಳಯುಂಗಳಿನೆ ಮೈಸಿರಿಯುನಾಂತ ತದ್ವನದೇವಿ (ಸೌಂದಪು. ೧೮-೩೨); ಪನಿನೀರೊಳೊದವಿದ ಚಳಯುವೊಪ್ಪಿದುದು (ವರ್ಧಪ. ೫-೪೩). ಚಳಿಯು: ಬೀದಿಬೀದಿಯೊಳ್ ಬಡದಿತ್ತ ಪನ್ನೀರ ಚಳಿಯುಮಾಡುವ ಪಾತ್ರದ (ಚಲಪು. ೩೬-೧೭). ಛಳಯು : ಅರಳಿದ ಹೂವುಗಳಲ್ಲಿ ಸುರಿವ ಮಕರಂದದಿಂದ ವನಪ್ರದೇಶವೆನುವ ಬೀದಿಯೊಳ್ ಛಳಯುಮಂ ಕೊಟ್ಟು (ಸೌಗಂಧಿ. ೪೭೨-೦). ಛಳಿಯು$_1$: ಬಾವನ್ನಮುಂ ಕದಡಿ ಸಿಂಪಿಸುವ ಛಳಿಯುದಿಂ (ನಳಚಂ. ೧೯೫); ಹರುಷದಿಂ ಗುಡಿಗಟ್ಟ ವೀಥಿವೀಥಿಯಲಿ ಛಳಿಯುದಿ ರಂಗವಲಿಗಳಿಂದ ವಿರಚಿಸಲು (ಲಕಿಚಂ. ೩೬-೫೧); ಪನ್ನೀರ ಬಾವನ್ನದೆಸೆವ ಛಳಿಯುಂ ಮೃಗಮದೋನ್ನತದ ಸಾರಣೆಯು (ರಾಶಿಚ. ೬-೫). [ ಚಳಿ$_1$ (<ತಳಿ$_4$) + – ಉ$_6$ ]

ಚಳಿಯು$_2$ 'ಚಳಯು$_3$' ನೋ.

ಚಳಿಯು$_3$ 'ತಟ' ನೋ.

ಚಳಿಯುಂಗುಡು 'ಚಳಿಯುಂಗೊಡು' ನೋ.

ಚಳಿಯುಂಗೆಯ್ (ಕ್ರಿ).=ಚಳಿಗೊಡು: ತಂಗೆ ತಲೆವೀದಿಯುಂ ಕೊಡೆಯುದಿರು ಕೂಡೆ ಚಳಿಯುಂಗೆಯ್ದಲಂಕರಿಸು (ಹದಕಾ. ೬-೨೪). [ಚಳಿಯು$_1$ + ಕೆಯ್$_1$]

ಚಳಿಯುಂಗೊಡು, ಚಳಯುಂಗುಡು, ಚಳಯುಂಗೊಡು, ಚಳಯುಗೊಡು, ಚಳಿಯುಂಗುಡು, ಛಳಿಯುಂಗೊಡು(ಕ್ರಿ). = ಚಳಿಗೊಡು : ಚಳಿಯುಂಗೊಡುವವೋಲೆಸೆದುದಾ ಚಟುಕುವನಿ ಸಿದ್ಧಪತಿ ನಲಿಯಲು (ಸಿದ್ಧರಾ. ೩-೩೨); ಕೇರಿಕೇರಿಯೊಳು ಪನ್ನೀರಿನಿಂದರರೆ ಚಳಿ [ಪಾಠಾಂ. ಳ] ಯಂಗೊಟ್ಟು (ಸಿದ್ಧೇಪು. ೧೯-೧೮). ಚಳಯುಂಗುಡು : ಚಲ್ಲಂ ಚಳ[ಪಾಠಾಂ. ಳಿ]ಯುಂಗುಡುತ್ತುಮಿರೆ ರಾಗರಸಾಮೃತದಿಂ (ಅರ್ಧನೇ. ೨-೯೫): ಘುಸೃಣರಸಂಗಳಿಂ . . . ಚಳಯುಂಗುಡುತಿರ್ಪ ಮೌಕ್ತಿಕಪ್ರಸರದೆ ಕೂಡೆ ರಂಗವಲಿಯುಂ ನಲಿದಿಕ್ಕುತುಂ (ವರ್ಧಪು. ೦೩-೭೪). ಚಳಯುಂಗೊಡು : ಅನಿಮಿಷವಧು ಕತ್ತುರಿಗದಡಿನ ಚಳಯುಂಗೊಟ್ಟಳ್ (ಅನಂಪು. ೭-೪೬). ಚಳಯುಗೊಡು: ಚಳಯುಗೊಟ್ಟುದು ಲೇಸು ಕುಸುಮಾಜಿ ಹೊಸರಂಗವಲಿ ಲೇಸು ಕುಸುಮಸಾಂಗಿ (ಭರದ. ೧೦-೯). ಚಳಿಯುಂಗುಡು : ಜೋಳಿಸುವ ಲಾಲಾಜಲಂ ಖುರಹತಿಯುಂ ನೆಗೆವ ದೂಳ್ಗೆ ಚಳಿಯುಂಗುಡೆ (ಗಿರಿಕ. ೭-೫೫ ವ); ಘುಸೃಣರಸಂಗಳಿಂದೆ ಚಳಯುಂಗುಡುವಂತೆ (ಅನಂಪು. ೧೦-೩೫). ಛಳಿಯುಂಗೊಡು : ಪುನಗು ಜವಾದಿ ಜಲದೀಯಲ್ಲ ಪೊರವಳಿಯುಂಗಣದಿ ಛಳಿಯುಂಗೊಟ್ಟು (ನವಮೋ. ೨೧-೧೮). [ ಚಳಿಯು$_1$ + ಕೊಡು$_1$ ]

ಚಳಿಹಾಕು (ಕ್ರಿ). = ಚಳಿಗೊಡು : ಅಂಗಳಕ್ಕೆಲ್ಲ ಚಳಿಹಾಕಿ ರಂಗವಲ್ಲಿ ಇಟ್ಟಿದ್ದಾರೆ (ರೂಢಿ). [ ಚಳಿ$_1$ (<ತಳಿ$_4$) + ಹಾಕು (<ಪಾಯ್ಕು$_1$) ]

ಚಳಿಹೊಡೆ (ಕ್ರಿ).=ಚಳಿಗೊಡು: ಮತ್ತೆ ಕೆಲವರು ಬೀದಿಗಳಿಗೆ ಪನ್ನೀರಿನ ಚಳಿ ಹೊಡೆಯುತ್ತಲಿದ್ದರು (ದೇಜೂನಿ. ೦೫೦).
[ ಚಳಿ$_1$ (<ತಳಿ$_4$) + ಹೊಡೆ$_1$ (<ಪೊಡೆ$_1$) ]

ಚಳ್ಳ 'ಸೆಳ್ಳ' ನೋ.

ಚಳ್ಳಪಿಳ್ಳಿ, ಚಳ್ಳಿಪಿಳ್ಳಿ (ನಾ). ಒಂದು ಬಗೆಯ ಮಕ್ಕಳಾಟ : ಬೆಳ್ಳಿ ಬಂಗಾರಿಟ್ಟುಕೊಂಡು ಒಳ್ಳೆ ವಸ್ತ್ರ ಹೊದ್ದುಕೊಂಡು ಚಳ್ಳಪಿಳ್ಳಿ [ಪಾಠಾಂ. ಅಳ್ಳಂಚೀರ, ಅಳ್ಳಾಚಾರಿ]ಗೊಂಬೆಯಂತೆ ಆಡಿಹೋಯಿತು (ಕನಕ. ೧೧೭-೩). ಚಳ್ಳಿಪಿಳ್ಳಿ : "ಮಕ್ಕಳ ಆಟ" (ಜಾನಕೋ. ೫೫). 'ಚಿಳ್ಳಿಪಿಳ್ಳಿ' ಪರಾ. [ ? ]

ಚಳ್ಳವರೆ (ನಾ). (ಉಕ) ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ; ಹಿತ್ತಲವರೆ ; ಚಪ್ಪರದವರೆ : ಔಡಲಗಿಡಗಳ ಬೊಡ್ಡೆಯಲ್ಲಿ ಚಳ್ಳವರೆಯ ಬೀಜವನ್ನು ಹಾಕಿ ಆ ಬಳ್ಳಿಯನ್ನು ಔಡಲಗಿಡಗಳಿಗೆ ಹಬ್ಬಿಸಬೇಕು (ಕೃಷಿಪ್ರ. ೧೫೫); ನಾನೇನು ನಿಮ್ಮ ತೋಟದಲ್ಲಿ ಬೆಳೆದ ಬದನೆಕಾಯಿಯೇ ಚಳ್ಳವರೆಯೇ (ಇಪ್ಪಕ. ೨೦೫). [ಚಳ್ಳು (<ಸೆಳ್ಳು) + ಅವರೆ$_1$]

ಚಳ್ಳಿಸು 'ಚಲ್ಲಿಸು$_2$' ನೋ.

ಚಳ್ಳು 'ಸೆಳ್ಳು' ನೋ.

ಚಳ್ಳುಗುರ್ 'ಸೆಳ್ಳುಗುರ್' ನೋ.

ಚಳ್ಳುಗುರು 'ಸೆಳ್ಳುಗುರ್' ನೋ.

ಚಳ್ಳೆ 'ಸೆಳ್ಳೆ' ನೋ.

ಚಳ್ಳೆಕೆಂದಾಳ (ನಾ). ಒಂದು ಬಗೆಯ ಮರ : ಚಳ್ಳೆಕೆಂದಾಳ, ಕೆಂಪುಚಳ್ಳೆ (ಮೃಶಿಗಿ. ೨೪-೪೫೫). [ ? ]

ಚಳ್ಳೆಪಿಳ್ಳೆ 'ಚಳ್ಳಪಿಳ್ಳಿ' ನೋ.

ಚಱಪು 'ಸೆಱಪು' ನೋ.

ಚಱಿಂಗಯ್ಯ (ನಾ). ಒಬ್ಬಾತನ ಹೆಸರು : ಮಲ್ಲಿಸೇನಭಟಾರರ ಗುಡ್ಡಂ ಚಱಿಙ್ಗಯ್ಯಂ ತೀರ್ತ್ಥಮಂ ಬನ್ದಿಸಿದಂ (ಎಕ. II, ೪-೦ : ಸು. 900).
[ ? ]

ಚಱಿತ್ತಿ (ನಾ). ಒಬ್ಬಾಕೆಯ ಹೆಸರು : ಮಾರವರ್ಮ್ಮಸ್ವಾಮಿಗೆ ಸುನ್ದರಿ ಚಱಿತ್ತಿಯರಾ ದೇಗುಲಂ ಮಾಡೆಯ್ದುದಾ ವೃತ್ತಿಯುಂ ಸರ್ವ್ವಪರಿಹಾರಂ ವಿಟ್ಟಾರ್ (ಎಕ. VI, ಚಿಕ್ಕಮ. ೯೨-೪ ; ಸು. 750 ?). [ ? ]

△ ಚಟಕ್ಯ 'ಚಳುಕ್ಯ' ನೋ.

ಚಱುವಟು (ನಾ). ಪ್ರತಿಜ್ಞೆ (?) : ಸಾಸಿಗ × × × ಪಱಿಯರೊಡೆಯ × ಬವಡೆಯಮ್ಮಂ ಪರಿತ್ತನ ಕುಮಾರಂ ಚಱುವಟು ಪೊಡದು ನುಡಿದು ಮತ್ತೆನ್ನದಾತನ್ ನುಡಿವಕ್ಕು (ಸೌಇಇ. IX-I, ೨೨-೦೦ : 923). [ ? ]

ಚಾ$_1$ (ನಾ). ೧. ಒಂದು ಅನುಕರಣ ಧ್ವನಿ : ಇದ್ದರೆಲ್ಲರ ಕೂಡಿಕೊಂಡು ಎದ್ದನು ಯುವರಾಜನೆಡೆಗೆ ಚಾ[ಪಾಠಾಂ. ಬಾ] ಹೋಯೆನೆ ಗೆದ್ದನು ಜಗದ ಜಾಣರನು (ಭರದ. ೫೭-೮೫). ೨. ದನಕರುಗಳನ್ನು ಅಥವಾ ಮೇಕೆಗಳನ್ನು ಮುಂದಕ್ಕೆ ಹೋಗುವಂತೆ ಅಟ್ಟುವಾಗ ಬಳಸುವ ಧ್ವನಿ : ಹುಡುಗನು ಚಾ ಎಂದು ಎತ್ತುಗಳನ್ನು ಹೊಡೆದುಕೊಂಡು ಹೋಗುತ್ತಾನೆ (ರೂಢಿ).

ಚಾ$_2$ 'ಚಹ' ನೋ.

ಚಾಂಕಿಮಯ್ಯ (ನಾ). ಒಬ್ಬಾತನ ಹೆಸರು : ಚಾಂಕಿಮಯ್ಯನ ಮಾಡಿಸಿದ ಶ್ರೀಶಾಂತಿನಾಥದೇವರ ತ್ರಿಭುವನತಿಳಕ ಚೈತ್ಯಾಲಯದಲಿರ್ಪ್ಪ ರಿಶಿ(ಷಿ)ಯರ್ (ಇಅ. XIX, ೨೭೩-೩೫ : 1064). [ ಚಾಂಕಿಮ$_0$+ಅಯ್ಯ$_1$ ]

ಚಾಂಗಾಳ್ವ 'ಚಂಗಾಳ್ವ' ನೋ.

ಚಾಂಗು, ಚಾಗು, ಜಾಂಗು, ಜಾಗು$_2$ (ಅ). ಭಲೆ, ಭೇಷ್, ಭಾಪು ಎಂಬರ್ಥದ ಹೊಗಳಿಕೆಯ ಮಾತು,–ಕೊಂಡಾಟದ ನುಡಿ: ಇಂದೆನ್ನ ಮನೆಗೆ ಪ್ರಮಥರು ಬಂದಹರೆಂದು ಗುಡಿತೋರಣವ ಕಟ್ಟಿ . . . ರಂಗವಾಲಿಯನಿಕ್ಕಿ ಉಘೆ ಚಾಂಗು ಭಲಾ ಎಂಬೆ (ಬಸವ. ೩೭೬); ಉಗೆ ಚಾಂಗು ಬಲಯೆಂಬ ನೆಗೆವ ರಭಸಂಗಳೊಳು(ದೀಕ್ಷಾಬೋ. ೦೦೭-೭); ಚಾಂಗು ಬಲಾಯೆನಲು ನಂದಿಧ್ವಜವ್ರಜವು (ಬಸಪು. ೫-೩೯); ಜಯ ಜಯ ಚಾಂಗು ಬೊಲ್ಲೆಂಬ ರಭಸದಿಂ ಕೀರ್ತಿಸುತ್ತ (ವೀಕೃಪು. ೪-೧೨-೪೫); ಪಾದವಟ್ಟಱಿಕೆ

ಪರಾಕು ಚಾಂಗೆಂದು ಮುಂದೋದೆ ಕೈಸನ್ನೆಯೊಳ್ನಿಲಿಸಿ . . . ಪಾಡುವ ನಾದವ ನಿಲಿಸಿಯಿಯ್ದಿದನು (ಭರತ. ೪೯-೯). ಚಾಗು: "ಅರರೆ ಧಣು . . . ಚಾಗು ಸಲೆ ಸುಂವುರೆಯೆನೆ ಕೊಂಡಾಟದ ನುಡಿ" (ಭಾರನಿ. ೪೭); ಮಝು ಪೂತು ಪಾಯುಕು ಗಂಡುಗಲಿಯಹೆ ಚಾಗು ತೊಟ್ಟೆಸು (ಕು ವ್ಯಾ ಛೀ. ೦೦-೦); ಎಲ್ಲರುಂ ಪೂತುರೇ ಸುಭಟ ಚಾಗೆಂದುಲಿಯೆ ಕೋಪದಿಂ ಗುಹನಾರ್ದು ತೆಗೆದೆಚ್ಚನು (ಜೈಮಿ. ೪೩-೦೭); ಚಾಗು ದಣುದಣು ಭಾಪು ಭಳಿರೆ ಬಲ ಬಲರೆ ಕೇಳೀಗ ನಿನ್ನಂ ಪೋಲ್ವರಂ ಕಾಣೆನು (ರುಕ್ಮಾಂಗ. ೦೩-೬೩). ಜಾಂಗು: ಸಭೆಯೊಳುಣ್ಮ ಪೊಣ್ಮತ್ತು ಜಾಂಗು ಬೊಲ್ಲ ಶುಭ ಬೊಲ್ಲ ಮಾಂಗಳಿಕ ಬೊಲ್ಲಮೆಂಬೀ ರವಂ (ಜಗವಿ. ೦೦-೭೨) ; ಕರಿಗಮನೆಯರು ತಂದರ್ರು ರತ್ನ ಮಯ ಹೊನ್ನ ಹರಿವಾಣ ದುಂಬಿಪಾರತಿಯ ತಿರುಹಿ ನಿವಾಳಿಸಿ ಜಾಂಗು ಬೊಲ್ಲೆಂದೆಂದು ಸಿರಿವೆತ್ತು ನಿಂದರಿಕ್ಕೆಲದಲಿ (ಮೋಹತ. ೨೨-೦೩). ಜಾಗ್ಗು: "ಅರರೇ ಭಾವುರೆ . . . ಜಾಗುಮ್ಮಾ ಧಣು ಧಿರುರೇ ಪುರೆಯೆನೆ ಕೊಂಡಾಟಂ" (ಚತುನಿ. ೫೫); ಜಾಗು ಧಣು ಧಣು ಪೂತು ಕಾರ್ಮುಖ ಯೋಗಸಿದ್ದನೆ (ಕುವ್ಯಾಆ. ೦೫-೩೯); ಸೊಲ್ಲಿಸಿದರು ಜಾಗು ಬೊಲ್ಲು ತುಬ್ಬುವ ಕಂಬಲ್ಲ ತಳಿಗೆ ಗಾರ್ತಿಯರು (ಮೋಹತ. ೦೫-೩೭).

ಚಾಗುಚಾಗು, ಜಾಗುಜಾಗು (ದ್ವಿರುಕ್ತಿ): ತಾನೊಹಿಸಿಕೊಳೆ ಸದರ ಗಂಡನೆ ಚಾಗುಚಾ[ಪಾಠಾಂ. ಜಾಗುಜಾ]ಗೆನುತೆ (ಮದೀಪು. ೩-೫೫); ಸುಭಟ ರಹುದೋ ಜಾಗುಜಾಗೆನುತೊಲೆದನಾ ದ್ರೋಣ (ಕುವ್ಯಾದ್ರೋ. ೨-೮೧); ಜಾಗುಜಾಗೆಂದಸುರ ಪಾತಿಯೊಳುಬ್ಬಿ ಘರ್ಜಿಸಿದ (ಅಂಬಿಕಾ. ೦೫-೨)

[ ←ತೆಲು. ಚಾಂಗು. / ಮರಾ. ಚಾಂಗ ]

ಚಾಂಗೇರಿ (ನಾ). ಒಂದು ಬಗೆಯ ಸೊಪ್ಪು; ಹುಲ್ಲುಹುಳಿಗನ ಸೊಪ್ಪು; ಪುಲ್ಲಂಪುರುಚಿ : (ಕ). [ ಸಂ. ಚಾಂಗೇರೀ ]

ಚಾಂಚಲ್ಯ (ನಾ). ಚಂಚಲತೆ ; ಅಸ್ಥಿರತೆ : ಕುದುರೆಗಳೆರಡೂ ಚಾಂಚಲ್ಯ ತೋರಿದವು (ಇಪ್ರಕ. ೩೨೦). 'ಚಿತ್ತಚಾಂಚಲ್ಯ' ಪರಾ. [ ಸಂ. ]

ಚಾಂಡಾಲ, ಚಾಂಡ್ಡಾಳ (ನಾ). ಚಂಡಾಲ ; ಹೀನ : ಕರ್ಮಾಧಿಗತ ಚಾಂಡಾಲರಿವದಿರ ಮಾತುಗಳನೆಲೆ ನಂಬದಿರು ಭೂಪ (ಬಸವು. ೩೭-೩೧) : ಏಕಗೋತ್ರದ ಪುರುಷಸತಿಯರಜ್ಞಾನದಿಂದಾ ನೆರೆದಲ್ಲಿ ಪುಟ್ಟಿದಂ ಚಾಂಡಾಲನೈ (ಪೀಶ್ರೃಪು. ೭-೨-೨೦). ಚಾಂಡಾಳ : ಇದನಳಿದಾತಂಗಕ್ಷಯ ನರಕಂ ನಿಜವಂಶಕ್ಷಯಮಾತಂ ಧರಿತ್ರಿಯೊಳು ಚಾಣ್ಡಾಳ (ಸೌಇಇ. XX,೦೦೭-೫೦: 1188). [ಸಂ.]

ಚಾಂಡಾಲಗಿತ್ತಿ (ನಾ). ಹೊಲತಿ ; ಪಂಚಮಸ್ತ್ರೀ : ಕೀಳು ವರ್ಗದ ಹೆಂಗಸು : ಕಂಡಕಂಡವರ ಹಿಂದೆ ಹರಿವ ಚಾಂಡಾಲಗಿತ್ತಿಯಂತೆ (ಗಣಭಾ. ೨೮೯-೧). [ ಚಾಂಡಾಲ + – ಗಿತ್ತಿ ]

ಚಾಂಡಾಲತ್ವ (ನಾ). ಹೊಲೆತನ; ಪಂಚಮ ವರ್ಗಕ್ಕೆ ಸೇರಿರುವಿಕೆ : ಉತ್ತಮದ ರವಿಕುಲದೊಳುದಿಸಿ ಚಾಂಡಾಲತ್ವವೆತ್ತ ಸತಿಯರ್ಗಳಿಸಿ ಘೋರ ನರಕಾಳಿಗನಿಮಿತ್ತ ಹೋಹವನಲ್ಲ (ಹರಿಶ್ಚಾ. ೮-೨೫). [ ಸಂ. ]

ಚಾಂಡಾಲಪತಿ(ನಾ). ಹೊಲೆಯರ ಪ್ರಮುಖ ; ಪಂಚಮರ ಮುಖ್ಯಸ್ಥ : ಚಾಂಡಾಲಪತಿಯ ಮನವರ್ದೆಗೊಂಡು ಮನಃಪದ್ಮ ಮುಕುಳಮಂ ಸವಿವಳಿಯಂ ಕಂಡೊಡೆ ಮುನಿಪಾ ನರರುಂ ಪೆಂಡಿರುದಾರತೆಗದೇಕೆ ಮುನಿವರೋ ದೇವಿ (ಶಾಂತಿಪು. ೯-೧೯೪). [ ಚಾಂಡಾಲ + ಪತಿ$_2$ ]

ಚಾಂಡಾಲಿಕೆ (ನಾ). ಕೀಳುದರ್ಜೆಯ ಒಂದು ಬಗೆಯ ವಾದ್ಯ.

[ ಸಂ. ಚಾಂಡಾಲಿಕಾ ]

ಚಾಂಡಾಳ 'ಚಾಂಡಾಲ' ನೋ.

ಚಾಂಡಾಳಿಸು (ಕ್ರಿ). ಚಂಡಾಲನಂತೆ ವರ್ತಿಸು : ಮದ್ಯಮಂ ಕುಡಿಕುಡಿದು ಮರುತಹತಿಯಿಂದ ಚಾಂಡಾಳಿಸುವ ಚಿತ್ರೆಯರನರಸ ನೋಡುತ ಬಂದನು (ಹರಿಶ್ಚಾ. ಪರಿ. ೪-೫೫). [ ಚಾಂಡಾಳ ( = ಚಾಂಡಾಲ) + – ಇಸು$_3$ ]

ಚಾಂತ (ನಾ). ಚಕಾರವನ್ನು ಕೊನೆಯಲ್ಲಿ ಉಳ್ಳ ಶಬ್ದ : (ಕ).

[ ಚ + ಅಂತ$_2$ ]

ಚಾಂತಿ 'ಸಾಂತಿ' ನೋ.

ಚಾಂದಣ, ಚಾಂದನಿ (ನಾ). ಮೇಲ್ಕಟ್ಟು ; ವಿತಾನ ; ಛತ್ತು: ವಿಧವಿಧದ ಪಾಸಿ ಚಾಂದಣಿಗಳಂ ಕಟ್ಟಿ (ಕೃಪ್ರವಿ. ೨-೯೦): ಹಡಗಿನ ಮೇಲ್ಗಡೆ ಚಾಂದಣ ಯನ್ನು ಕಟ್ಟದ್ದಿತಾದ ಕಾರಣ ಹಡಗಿನೊಳಗಿದ್ದ ಪ್ರಯಾಣಿಕರಿಗೆ ಯಾವುದೂ ಗೊತ್ತಾಗುತ್ತಿರಲಿಲ್ಲ (ಕಪಾಕುಂ. ೩). ಚಾಂದನಿ : (ಕ).

[ ←ಮರಾ. ಚಾಂದಣೀ : ಹಿಂ. ಚಾಂದನೀ ]

ಚಾಂದನಿ 'ಚಾಂದಣ' ನೋ.

ಚಾಂದಸ, ಚಾನಸ, ಛಾನಸ (ಗು). ೧. ಸಂಪ್ರದಾಯನಿಷ್ಠ. (ನಾ). ೨. ವೇದಾಧ್ಯಯನ ಮಾಡಿದವನು; ವೈದಿಕ: ಛ ಕಾರಕ್ಕೆ ಚಕಾರಂ-ಛವಿ-ಚವಿ . . . ಛಾಂದಸ – ಚಾಂದಸ (ಶಮದ. ೨೫೫ ಪ್ರಯೋ). ೩. ಮಂದಮತಿ ; ದಡ್ಡ : ವರರತ್ನಘೋಷನ ಪರಿಯಲ್ಲ ವಿದ್ಯಾಸಾಗರನಾದ ವ್ಯಾಳಿಯಂತಲ್ಲಾ ಪರಮಚಾಂದಸನಾದತು (ಭೃರಸೂ. ೩೨೭). ಚಾನಸ: ೪. ಎಚ್ಚರವಿಲ್ಲದಿರುವಿಕೆ; ಅಜಾಗರೂಕತೆ: ಹುಲಿಯು ದುಷ್ಟಮೃಗ ವೆಂದು ತಿಳಿದಿದ್ದರೂ . . . ಚಾನಸದಿಂದ ಹುಲಿಯ ಬೋನಿಗೆ ಬಿದ್ದಿರುವ ಬಾಗಿಲ ಹಲಗೆಯನ್ನು . . . ಎತ್ತಿದನು (ಕಥಾಮಂ. IV, ೮೮). ಛಾನಸ : ೧. ಸ್ವಲ್ಪ ಛಾನಸ ಸ್ವಭಾವದ ಪದ್ದಕ್ಕನಿಗೆ ದೇವರು ದಿಂಡರ ಕೆಲಸಗಳನ್ನು ಎರಡನೆಯವರು ಮಾಡಿದರೆ ಎಷ್ಟೂ ಒಗ್ಗುತ್ತಿರಲಿಲ್ಲ (ಸಾವಿಕಾ. ೬೬). ೩. ಉರಿದುಪೀ ನಿಮ್ಮಯ ತಪೋಜಪಧ್ಯಾನಂಗಳಿರವದೇಂ ಛಾನಸಮದೊರ್ವ ಮಾಯಾವಿ ನಿಮ್ಮ್ಗರಿಸಿಯುರನೊಲಿಸಿಕೊಂಡೊಯ್ದುಪಂ ಬಿಡಿಸಿಕೊಳಿ ಮೇಳೆಂದೊಡಿಬ್ಬರುಂದು (ಜೈಮಿ. ೨೦-೨೩). 'ಛಾನಸತನ' ಪರಾ.

[ <ಸಂ. ಛಾಂದಸ ]

ಚಾಂದಸಿಕೆ (ನಾ). ತಡಮಾಡುವಿಕೆ; ಆಲಸ್ಯ; ಜಡತೆ: ಚಾಟುಕಾತಿಯರು ಚಾಂದಸಿಕೆಯು ನೂಂಕಿ ಸಘಾಟಿಕೆಯಿಂದ ಪಾಡಿದರು (ಭರತ. ೫-೩೮). 'ಛಾಂದಸಿಕೆ' ಪರಾ.

[ ಚಾಂದಸ + – ಇಕೆ ]

ಚಾಂದ್ರ (ಗು). ೧. ಚಂದ್ರನಿಗೆ ಸಂಬಂಧಿಸಿದ. (ನಾ). ೨. ಮೃಗಶಿರಾ ನಕ್ಷತ್ರ. [ ಸಂ. ]

ಚಾಂದ್ರಜ್ಞಾನಿ (ನಾ). ಚಂದ್ರಮಂಡಲವನ್ನು ಕುರಿತು ವಿಶೇಷ ಜ್ಞಾನ ವುಳ್ಳವನು : ಚಂದ್ರಮಂಡಲದ ವಿಷಯದಲ್ಲಿ ವಿಶೇಷಜ್ಞಾನವುಳ್ಳ ಜ್ಯೋತಿರ್ವಿಜ್ಞಾನಿ ಅಥವಾ ನಾವಿಕ : ಚಾಂದ್ರಜ್ಞಾನಿ (Lunarian. ಇಂಕನಿ).

[ ಸಂ. ಚಾಂದ್ರಜ್ಞಾನಿನ್ ]

ಚಾಂದ್ರಪ್ರಭ (ಗು). [ಜೈನ]ಚಂದ್ರಪ್ರಭನೆಂಬ ತೀರ್ಥಂಕರನಿಗೆ ಸಂಬಂಧಿಸಿದ : ಕಣ್ಗಿಂಬಾದ ಚಾಂದ್ರಪ್ರಭಂ ರೂಪಂ . . . ಎಮ್ಮೊಳ್ ಮಾಳ್ಕೆ ನೈರ್ಮಲ್ಯಮಂ (ಚಂದ್ರಪು. ೦-೦). [ ಸಂ. ]

ಚಾಂದ್ರಮಸ (ಗು). =ಚಾಂದ್ರ. [ ಸಂ. ]

ಚಾಂದ್ರಮಸಾಯನ (ನಾ). ಚಂದ್ರನ ಮಗ; ಬುಧ: "ರೌಹಿಣೇಯಃ, ಬುಧಃ, ಸೌಮ್ಯಃ, ಚಾಂದ್ರಮಸಾಯನಃ – ಈ ೪ ಬುಧನ ಪೆಸರ್" (ಹಲಾಯು. ೯-೪೬). [ ಸಂ. ]

ಚಾಂದ್ರಮಾನ (ನಾ). ಚಂದ್ರನ ಗತಿಯನ್ನು ಅನುಸರಿಸಿ ಕಾಲವನ್ನು ಗಣಿಸುವ ಕ್ರಮ : ಚಂದ್ರನ ಗತಿಯ ಸಂಬಂಧದಿಂದ ಎಣಿಸಲ್ಪಡುವ ಪಕ್ಷ, ಮಾಸ, ವರ್ಷಗಳ ಮಾನವು ಚಾಂದ್ರಮಾನವೆಂದೆನಿಸಿಕೊಳ್ಳುತ್ತದೆ (ಮುಂಬಯಿ. ೬-೭೮); ಚಾಂದ್ರಮಾನದ ಮಧ್ಯಾಹ್ನದಲ್ಲಿ, ಚಂದ್ರನ ಭಾಗ ಸೂರ್ಯಾಭಿಮುಖವಾಗಿರುವುದರಿಂದ ಅದು ಕುದಿಯುವ ನೀರಿನಷ್ಟು ಕಾವುಳ್ಳದ್ದಾಗಿರುತ್ತದೆ (ಅಕಾಶ. ೩೯). [ ಸಂ. ]

**ಚಾಮುಂಡಯ್ಯ** (ನಾ). = ಚಾವುಂಡ : ಚಾ ಮು ಣ್ಡ ಯ್ಯ (ಎಕ. II, ೪೦೩-೦ ; ಸು. 1000) ; ಶ್ರೀಯೂರ ಚಾವುಣ್ಡಯ್ಯನ ಭೂಮಿಯುಲು ಪತ್ತುಕೊಳಗ ಬೆದೆಗದ್ದೆಯುಂ (ಮೈಆರಿ. ೧೯೪೬, ೨೮-೧೨ : 1032). [ ಚಾಮುಂಡ + ಅಯ್ಯ₁ ]

**ಚಾಮುಂಡರಾಜ** (ನಾ). = ಚಾವುಂಡ : ಶ್ರೀ ಚಾ ಮು ಣ್ಡ ರಾ ಜ ಂ ಮಾಡಿಸಿದಂ (ಎಕ. II, ೧೭೩-೦ ; ಸು. 983). [ಚಾಮುಂಡ + ರಾಜ ]

**ಚಾಮುಂಡಿ** (ನಾ). ೧. ಸಪ್ತಮಾತೃಕೆಯರಲ್ಲಿ ಒಬ್ಬಳು ; ಶಕ್ತಿದೇವತೆ. ೨. ದುರ್ಗೆ ; ಪಾರ್ವತಿ : ಬ್ರಾಹ್ಮಿ ಮಾಹೇಶ್ವರಿ . . . ಚಾಮುಂಡಿ ಯೆಂಬವರೇ ಕ್ರಮದಿಂದಾ-ಪಡ್ಜಾದಿ ಸ್ವರಾಧಿದೇವತೆಗಳು (ವಿವೇಕ. ೨೩೦); ಲೋಕಮಾತೆ . . . ಚಾಮುಂಡಿಯೆಂಬವಳು ಜನವನ ಕುಲದೇವತೆ (ಕಂನವಿ. ೦೦-೭೩) : ಚಂಡಿ ಚಾಮುಂಡಿ ಪೇಳ್ ಬೇರಾದುದೇನು (ಗು. ೩೭-೯).

**ಚಾಮುಂಡಿಯ ಬೆಟ್ಟ**, **ಚಾಮುಂಡಿಬೆಟ್ಟ** = ಮೈಸೂರ ಬಳಿಯಿರುವ ಒಂದು ಬೆಟ್ಟ; ಚಾಮುಂಡಿ ದೇವತೆ ನೆಲಸಿರುವ ಬೆಟ್ಟ: ಚಾಮುಂಡಿಯ ಬೆಟ್ಟಕ್ಕೆದಿದ ತುಱುಗಳ ಸ್ತೋಮದ ಮೇಲೆ ಬಿದ್ದಿಱಿದು (ಕಂನವಿ. ೦೩-೬೨) ; ಯಾತ್ರಿಕರು ಬೆಳಗ್ಗೆ ಚಾಮುಂಡಿಬೆಟ್ಟಕ್ಕೆ ಹೊರಟರು (ಬೂಧಿ). [<ಸಂ. ಚಾಮುಂಡಾ ]

**ಚಾಮೂರ** (ಗು). ಜಿಂಕೆಗೆ ಸಂಬಂಧಿಸಿದ: ಹರಿ ಹರಿಣನಾಗೆ ಸಲೆ ಕೊಂದು ಸೀಳ್ದ ಚಾಮೂರಮಾಲೆಯುಮೆನ್ನಗಳ ಕರಕಟಿಗಳೊಳಿವೆ ನೋಡ (ಪದ್ಮರಾ. ೦೦-೨೬). 'ಚಮೂರು' ಪರಾ. [ <ಸಂ. ಚಾಮೂರವ ]

**ಚಾಮೊಂತ** (ನಾ). ಸಾಮಂತ ; ಮಾಂಡಲಿಕ.

**ಚಾಮೊಂತಚೂಡಾಮಣಿ**=ಸಾಮಂತ ಶ್ರೇಷ್ಠ ; ಮಾಂಡಲಿಕ ಶ್ರೇಷ್ಠ ; ಒಂದು ಬಿರುದು : ಕಿಲ್ಲಗಾವುಣ್ಡ ಚಾವೊನ್ತಚೂಡಾಮಣಿ (ಮೈಆರಿ. ೧೯೩೨, ೩೭-೭ : ಸು. 950). [ <ಸಂ. ಸಾಮಂತ ]

**ಚಾಯ**, **ಚಾಯೆ** (ನಾ). ೧. ಬಣ್ಣ ; ವರ್ಣ : ಪದ್ಮರಾಗವದು ತಾನೆ ಜಾತರಂಗಂ ಕುರುವಿಂದಂ ಸೌಗಂಧಿಕಂ ಗದಾಂಗ ನೀಲಯುಗ್ಮನಾಮು ಕವೆಂಬೀ ನಾಲ್ದೆಱನಾಗಿರ್ಕುಮಾ ಚತುರ್ವಿಧಕ್ಕೆ ಬೇಱೆ ಬೇಱೆ ಚಾಯಂಗಳಂ ಪೇಳ್ವಪೆಂ ಕೇಳಿಂ (ಹಾರಾಸ್ಯ. ೨-೧-೭೦ ವ) : ಬಿಳಿ ಚಾಯದ ಉಡುಪಿನೊಡನೆ ಜರದ ರುಮಾಲನ್ನು ಸುತ್ತಿದ ಬೆಳುವಲದ ಕಂಚ (ಚೆಲುವ) ನಿಲ್ಲವೆಂದರೆ ಅತಿಶಯೋಕ್ತಿಯಾಗದು (ಕನ್ನಡಾ. ೦೭೮). ೨. ಹೊಳಪು ; ಕಾಂತಿ : ಆರು ಕಲ್ಲೊಳ್ಳ ಏರಿತಂದನ ಭೀಮ ದಾರಿ ಕಂಕಣದ ಕರವೀರ ಈ ಮನಿಗೆ ಚಾಯವಾದಾವೆಂದು ನಸುನಕ್ಕ (ಲೋಕಗೀ. ೨೦) : ಆಯವಾದವು ಬಂಡಿ ಚಾಯವಾದವು ಕುರುಜು ರಂಗಯ್ನ ತೇರು ಹೊಸತೇರು ಗೊಂಬೆತೇರು ರಾಣಿರಂಗಡಿಗೆ ಹರಿದಾವೊ (ಹಳ್ಳಿಯ. ೨೮) : ಆಯುಳ್ಳ ಅತಿಗಲ್ಲ ಚಾಯುಳ್ಳ ಮತಿಗಲ್ಲ ಸೂರಿದ ಮತಿಯೆಂಬು ಕೆರಸಿಯು ಗೋರಿ ಕಲ್ಲಿಗೆ ನಾರೇರೈವರು ನೆರೆದಾರ (ಲೋಕಗೀ. ೧೮). **ಚಾಯೆ**: ೧. ಈ ನಾಡ ಅರಿಸಿಣ ಚಾಯೆ ಇಲ್ಲವೆಂದು ಗೋವೆ ಮಲೆನಾಡ ಅರಸಿಣ ಅವರಪ್ಪ ಆನೆಯ ಕೊಟ್ಟು ತರಿಸ್ಯಾರಾ (ಲೋಕಗೀ. ೩೦). ೩. ರೀತಿ ; ಮಾರ್ಗ ; ಕ್ರಮ : ರಾಯರ ಮೆಚ್ಚಿದು ನಿಮಗೀ ಚಾಯೆಯ ಪೊಲನಲ್ತು ಕಲ್ತು ವಿಲ್ಲಿದನದಱಿಂ ದಾಯುಂಗಿಡದೀಯೆಡೆಯೊಳ್ ತಾಯಂ ಸಮಿಗಾರ್ತಿಯೊಡನೆ ತರ್ಪುದೆ ದಾಯಂ (ಚಿಕವಿ. ೬-೦೭೭). ೪. ನೆರಳು. [ <ಸಂ. ಛಾಯಾ ]

**ಚಾಯಬೇರು**, **ಚಾಯಿಬೇರು**, **ಛಾಯಾವೇರು** (ನಾ). ಕೆಂಪು ಬಣ್ಣ ಹಾಕಲು ಉಪಯುಂಕ್ತವಾದ ಒಂದಂ ಬಗೆಯಂ ಕೆಂಪು ಬಣ್ಣದ ಬೇರು: ಮಜ್ಜಿಗೆ ಹುಲ್ಲಿನ ಬೇರು (ಚಾಯಬೇರು) ಹಿಟ್ಟುಳಕನ ಬೇರು . . . ಮತ್ತು ಸಕ್ಕರೆ ಇಷ್ಟನ್ನು ಅರೆದು ಕಲಸಿಕೊಡಲು ಆ ತಕ್ಷಣವೇ ಮೂತ್ರ ಬಿಡುವುದು (ಸಕವೈ. ೪೯೪ ಪರಿ). **ಚಾಯಿಬೇರು**: ರಸಾಂಜನ, ಚಾಯಬೇರು ಇವನ್ನರೆದು ಅಕ್ಕಿ ತೊಳೆದ ನೀರಿನೊಡನೆ ಕೊಟ್ಟರೆ ಅ-ರಕ್ತವಾಂತಿ. ಅಜೀರ್ಣದಿಂದಾದ ಉಬ್ಬಸ ಇವು ಹೋಗುವುವು (ಸಕವೈ. ೪೨೩) **ಛಾಯಾವೇರು** : ಚಿರಿವೇರು, ಛಾಯಾವೇರು (ಪ್ರಚಿಗಿ. ೩೮- ೦೦೩೩). [ ದೇ.ತಮಿ. ಮಲ. ಚಾಯವೇರ್ ]

**ಚಾಯವಿಮಾನು** (ನಾ). ಬಣ್ಣದ ವಿಮಾನು ; ರಂಗುರಂಗಿನ ವಿಮಾನು : ಮಾಣಿಕ ಮಯ್ವಣ್ಣದ ಚಾಯವಿಮಾನ ಕಂಡಾಣಿಕಾರಿಕೆ ಜ ಲ ಗಾ ಜ ಕ್ಷೋಣೀಶ್ವರನಾಸ್ಥಾನಕೆ ತಂದು ಕೈಗಾಣಿಕೆ ಕೊಟ್ಟ ರಕ್ಕಸಗೆ (ವೀಚೇಪತ. ೧೦-೩೪). [ ಚಾಯ + ವಿಮಾನು₂(<ವಿಮಾನ್₃) ]

**ಚಾಯಿಬೇರು** 'ಚಾಯಬೇರು' ನೋ.

**ಚಾಯೆ** 'ಚಾಯ' ನೋ.

**ಚಾರ** (ನಾ). ೧. ಚಲಿಸುವಿಕೆ ; ನಡಗೆ ; ಸಂಚಾರ : ಸೂರ್ಯಚಾರಮಂ ನೋಡದಿರ್ ಐದು ಗಗನ ಖಂಡಂಗಳಂ ಅಗ್ಗಳಂ ಸಲ್ವುಂ (ಕತ್ಯ್ರಪ್ರ. ೨೦೪): ಚಾರ ತಪ್ಪಿತೆ ಗ್ರಹಕೆ ವ್ಯಾಧಿ ವ್ಯಾತವಾಯಿತೇ? (ಕಎಪು. ೫೦-೩). ೨. ಗೂಢಚಾರ ; ಬೇಹುಗಾರ. ೩. ದೂತ; ಸೇವಕ : ಮಕುಟವರ್ಧನರಂ ಕಾಣಿಸುತಂ ಬಂದ ಚಾರರಂ ಬೀಳ್ಕೊಡಿಸುತಂ ಸುಖದೊಳಿಪ್ಪಲ್ಲಿ (ಬಸರ. ೬-೩೩) : ಚಾರರಿಗೆ ಸಿರವ ಕತ್ತರಿಸಿ ಚೆಲ್ಲೆಂದು (ಕನ್ನಡಾ. ೨೪೭). ೪. ನಿರ್ವಹಣೆ; ಆಚರಣೆ; ಅಭ್ಯಾಸ; ಸಾಧನೆ: ದೂತ ಕೇಳ್ನಮ್ಮವರು ಶೋಭನ ರೀತಿ–ಚಾರವನೆಲ್ಲ ತೀರಿಸಿ ಆತನೊಳು ಮೈಹೊಂದಿಕೆಯು ಮಾಡಿ ಮಮತೆಯಲ್ಲಿ ಕೂಡಿ (ಶಠೀಳ. ೪೯-೨). ೫. ಬೇಡಿ ; ಸಂಕೋಲೆ. ೬. ಸೆರೆ ; ಬಂಧನ. ೭. ಪ್ರಿಯಾಲವೃಕ್ಷ. ೮. ಕುಹಕಚೇಷ್ಟೆ ; ವಂಚಗಚೇಷ್ಟೆ : (೬). ೯. ದನಗಳಿಗೆ ಆಹಾರವಾಗುವ ಹಸಿರು ಹುಲ್ಲು, ಸೊಪ್ಪು ಮೊದಲಾದುವು ; ಮೇವು : (೬). [ಸಂ.]

**ಚಾರಕ** (ನಾ). ೧. ಗತಿ; ಗಮನ; ಸಂಚಾರ. ೨. ದೂತ; ಪರಿಚಾರಕ: ಕರಸಿ ಚಾರಕರ್ಗೆ ಕೆಲಸಂಗೊಟ್ಟು ಊರೂರ್ಗೆ ಬೇಱೆಬೇಱೆಲ್ಲಿಪ್ಪ ರಾಯಸವಿತ್ತು (ವಂಬಿರ. ೫-೪) : ಆಗ -ಚಾರಕ, ದೂತ, ಹಾಸ್ಯಗಾರ, ಹನುಮನಾಯಕನೆಂಬ ಬಹುಕಾರ್ಯದ ಏ ಕ ಮು ಖಿ ಯಾ ದ ಅಧಿಕ ಪ್ರಸಂಗಿಯು ಬಂದು ಮಾತಿಗೆ ತೊಡಗುತ್ತಾನೆ (ಯಕ್ಷಲ. ೪೪) ; ಮರುದಿನ ಬೆಳಗಾಗುತ್ತಿದ್ದ ಹಾಗೆ ಅರಮನೆಯ ಚಾರಕನು ಒಂದು ನೂರು ಥೊಲ್ಲಗಳನ್ನು ತಂದನು (ದೇಶಾಂಕ. ೭೩). [ ಸಂ. ]

**ಚಾರಕ್ಷೇತ್ರ** (ನಾ). ಸಂಚಾರ ಮಾಡತಕ್ಕ ಸ್ಥಳ : ಇದರಂತೆಯೇ ಚಂದ್ರನ ಚಾರಕ್ಷೇತ್ರ (ಕತ್ಯ್ರಪ್ರ. ೨೦೦). [ ಚಾರ + ಕ್ಷೇತ್ರ ]

**ಚಾರಚಕ್ಷು** (ನಾ). ಚಾರರನ್ನು ಕಣ್ಣಾಗಿ ಉಪಯೋಗಿಸಿಕೊಳ್ಳುವವನು; ಚಾರರ ಮೂಲಕ ತಿಳಿದುಕೊಳ್ಳುವವನು : ಯಜುಕ್ಷಯಾಚಿತಾರ್ಥ ಸುಸಮರ್ಥನಗೋಚರ ಚಿತ್ರನರ್ಥಶಾಸ್ತ್ರೋಚಿತ ಚಾರಚಕ್ಷು ವಿಮಳಾಚರಣಂ ಸಚರಾಚರಸ್ತುತಂ (ಚಂದ್ರಪು. ೬-೦೯): ಸದಾ ಚಾರಚಕ್ಷುರಭಿವ್ಯಕ್ತ ಪರಕ್ಷಿತೀಶಗೃಹ ವೃತ್ತಂ . . . ನಂದನಂ ಪುಟ್ಟಿದಂ (ಪುಣ್ಯಪು. ೦೩-೦೦). [ ಸಂ. ಚಾರಚಕ್ಷುಸ್ (ಚಾರ + ಚಕ್ಷುಸ್) ]

**ಚಾರಚಿಪ್ಪಿ**, **ಚಾರಚಿಬ್ಬಿ** (ನಾ). ಕಕ್ಕಸು ; ಪಾಯಖಾನೆ ; ಶೌಚಕೂಪ: (೬). **ಚಾರಚಿಬ್ಬಿ** : (೬). [ ? ]

**ಚಾರಚಿಬ್ಬಿ** 'ಚಾರಚಿಪ್ಪಿ' ನೋ.

**ಚಾರಟಿ** (ನಾ). (ಕಾಶ್ಮೀರದಲ್ಲಿರುವ) ಒಂದು ಬಗೆಯ ಬೆಟ್ಟದಾವರೆ ; ಸ್ಥಳಪದ್ಮಿನಿ: "ಅವ್ಯಥಾ, ಅತಿಚರಾ, ಪದ್ಮಾ, ಚಾರಟೀ, ಪದ್ಮಚಾರಿಣೀ-ಇ-ಕಾಶ್ಮೀರ ದೇಶದಲ್ಲಿರುವ ಬೆಟ್ಟದಾವರೇ ಹೆಸರು " (ಸಿದ್ಧಾಂತಿ. ೦೨೮). [ ಸಂ. ಚಾರಟೀ ]

**ಚಾರಟ್ಟ** (ನಾ). = ಚಾರಟಿ : "ಚಾರಟ್ಟ–ಸ್ಥಲಪದ್ಮಿನಿ" (ಅಕಾವಿ. ೧೦-೨೩). [ <ಸಂ. ಚಾರಟೀ ]

**ಚಾರಣ** (ನಾ). ೧. ತಿರುಗಾಡುವಿಕೆ; ಸುತ್ತಾಡುವಿಕೆ; ಸಂಚಾರ. ೨. ದ್ವಂದ್ವಯುದ್ಧದಲ್ಲಿ ಒಂದು ವರಸೆ: ಚಂಡಶಾಸನಂ ಚಾರಣದಾಸೆಯಿಂ ಸುಸುಳ್ಪು (ಅನಂಪು. ೧೦-೬೦). ೩. ನಟ್ಟುವಿಗ; ಸಂಚಾರೀ ನಟ: "ಶೈಲಾಲೀ, ಶೈಲೂಷಃ, ಕುಶೀಲವಃ, ಚಾರಣಃ . . . ಈ ೮ ನಟ್ಟುವಿಗಂ" (ಹಲಾಯು. ೯೬-೯೩೮). ೪. ಕತೆಯನ್ನು ಕವಿತೆ ಮಾಡಿ ಹಾಡುವವನು; ಕಥಾಗೀತೆಯನ್ನು ಹಾಡುವವನು: ಹಲವಾರು ಅಜ್ಜ ಅಜ್ಜಿಯರು ಮತ್ತು ಚಾರಣರು ತಮ್ಮ ಕಲ್ಪನೆಗೆ ಬಂದಂತೆ ಕತೆ ಕಟ್ಟಿ . . . ಹಾಡಿರಬೇಕು(ನಂಜುಂಡ. ೩೨). ೫.ಹೊಗಳು ಭಟ್ಟ; ಸ್ತುತಿಪಾಠಕ: ಚಾರಣಗಣಂಗಳೋದುವ ಕಂದ ವೃತ್ತದಿಂ (ಅಜಿಪು. ೪-೭). ೬. ದೇವಗಾಯಕ; ಗಂಧರ್ವ: ಈತನನಂತ ರಿಕ್ಷದೊಳ್ ಕರಗಳನೆತ್ತಿ ರಾಯರಿಸಿಯೆಂದುರೆ ಕೀರ್ತಿಪರಲ್ತೆ ಚಾರಣರ್ (ಜಕುಂತ. ೨೭-೯೯). ೭. ಚಲಿಸುವಂತೆ ಮಾಡುವ ಸಾಧನ: "ಅಂಕುಶ (ನಾ) ಚಾರಣಮುಂ ಯಾತಮೆಂಬುದು" (ಹಲಾಯು. ೩೭-೬೯). ೮. [ಜೈನ] ಯಾವಾಗಲೂ ಸಂಚಾರಶೀಲನಾಗಿ ಅಲ್ಲಲ್ಲಿ ಜನಧರ್ಮೋಪದೇಶ ಮಾಡುವ ಅವಧಿಜ್ಞಾನವುಳ್ಳ, ಗಗನಗಾಮಿಯಾದ ಮುನಿ: ಒಂದು ದಿವಸಂ ಮಣಿಮೌಳಿ ರತಿಚಾರಣರೆಂಬ ಚಾರಣರನವಧಿಜ್ಞಾನಿಗಳಂ ಕಂಡು (ಆದಿಪು. ೨-೦೩ ವ); ಮತ್ತಮೊಳಗಣ ನಾಲ್ಕುಂ ದೆಸೆಯೊಳ್ ಚಾರಣಾಚ್ಯುತೇಂದ್ರಪ್ರಮುಖರಪ್ಪ ಕಲ್ಪಾಮರರುಮಂ (ಚಂದ್ರಪು. ೧೨-೦೦೩ ವ). [ಸಂ]

**ಚಾರಣಋದ್ಧಿ** (ನಾ). [ಜೈನ] ಚಾರಣ ಮುನಿಗಳು ತಪೋಬಲದಿಂದ ಸಾಧಿಸಿಕೊಳ್ಳುವ ಗಗನಸಂಚಾರಶಕ್ತಿ: ಅಂದಿನಭವದೇವನ ತಂದೆ ಯೆನಾಂ ರತಿವರ್ಮನೆನಿಲ್ಲಿ ಶ್ರೀವರ್ಮನೆನಾಗಿ ಸಂಯಮಮಂ ಕೈಕೊಂಡು ಚಾರಣಋದ್ಧಿಯುಮಂ ಪರಮಾವಧಿಯುಮಂ ಪಡೆದೆಂ (ಶಾಂಪು. ೫೯-೭). [ಚಾರಣ + ಋದ್ಧಿ]

**ಚಾರಣಋದ್ಧಿಪಡೆ** (ಕ್ರಿ). ಗಗನಸಂಚಾರಶಕ್ತಿಯನ್ನು ಪಡೆ,—ಹೊಂದು: ಅದುವೆ ನಿರ್ವೇಗನಿಮಿತ್ತಮಾಗೆ ತೊಱೆದು ತಪಂಬಟ್ಟು ಚಾರಣಋದ್ಧಿಪಡೆದು ಪೋಗಲೊಡಂ (ಪಂರಾಮಾ. ೮-೩೭ ವ). [ಚಾರಣಋದ್ಧಿ + ಪಡೆ₁]

**ಚಾರಣಋಷಿ** (ನಾ). [ಜೈನ] ಚಾರಣಋದ್ಧಿಯನ್ನು ಪಡೆದ ಯೋಗಿ: ಧರ್ಮಾಭರಣರೆಂಬ ಚಾರಣಋಷಿಯರ ಸಮಕ್ಷಮದೊಳ್ ದೀಕ್ಷೆಯಂ ಕೊಂಡಂ(ಪಂರಾಮಾ. ೦೬-೯೨ ವ); ಚಾರಣಋಷಿಯರ ರೂಪಂ ಚಾರುಗುಣಂ ನೋಡಿ . . . ಹಸ್ತಾಂಭೋರುಹಮಂ ಮುಗಿದು (ಧರ್ಮಾಮೃ. ೧೧-೩೭). [ಚಾರಣ + ಋಷಿ]

**ಚಾರಣಕವಿ** (ನಾ). ಆಶ್ರಯದಾತನನ್ನು ಕೀರ್ತಿಸಿ, ಹೊಗಳಿ ಕಾವ್ಯ ರಚಿಸುವವನು: ಚಾರಣಕಾವ್ಯ . . . ಅವುಗಳನ್ನು ರಚಿಸುವ ಕವಿಗಳೆ ಚಾರಣಕವಿಗಳು (ಕರ್ನಾಟ. ೧೦೮). [ಚಾರಣ + ಕವಿ₂]

**ಚಾರಣಕ್ರಮ** (ನಾ). (ಅಂಕುಶದಿಂದ ತಿವಿದು ಆನೆ) ಮುಂದಕ್ಕೆ ಚಲಿಸುವಂತೆ ಮಾಡುವ ರೀತಿ; ಚೋದನೆ ಮಾಡುವ ಬಗೆ: ಅಮರಾನೀಕದ ಸುತ್ತು ಪೊಳೆ ದಿನನಾಥಾಮಂದ್ರ ಸಂಧ್ಯಾಭ್ರವಿಭ್ರಮಮಂ ವಾಹನ ದೇವದಂತಿಶಿರದೊಳ್ ಕೂರಂಕುಸಂ ಚಾರಣಕ್ರಮದಿಂದಾದಡುವತ್ತು ನಾಲ್ಕು ಪೊಳೆಪಿಂ ಕಣ್ಗೊಪ್ಪೆ (ಶಾಂತಿಪು. ೪-೦೧೬). [ಚಾರಣ + ಕ್ರಮ]

**ಚಾರಣಗೀತ**(ನಾ). ಚಾರಣರು ಹಾಡುವ ಹಾಡು: ವೀರರಸಪ್ರಧಾನವಾದ ಚಾರಣಗೀತಗಳನ್ನು . . . ಎಷ್ಟೋ ಜನ ಚಾರಣರು ತಾವೇ ರಚಿಸಿಕೊಳ್ಳುತ್ತಿರಬಹುದು (ಕರ್ನಾಜ. ೧೦೮). [ಚಾರಣ + ಗೀತ]

**ಚಾರಣಗುಣ** (ನಾ). = ಚಾರಣಋದ್ಧಿ: ಚಾರಣಗುಣದಿಂದಂ ಸಂಸಾರಾಂಬುಧಿಯಮಪಾರ ಚೈತ್ಯವಂದನೆಗೆಂದಂದೋರಂತೆ ಪೋಗಿ ಗಗನವಿಹಾರದಿನುರ್ವೀವಿಹಾರಮಂ ಮುನಿ ಬಿಸುಟಂ (ಶಾಂತಿಪು. ೯-೦೦೩). [ಚಾರಣ + ಗುಣ]

**ಚಾರಣಯೋಗಿ** (ನಾ). = ಚಾರಣಋಷಿ: ಅನಂತಸಂಜ್ಞನಂ ಚಾರಣಯೋಗಿಯಂ ನೃಪತಿ ಕಂಡಂ (ಚಂದ್ರಪು. ೩-೬೯). [ಚಾರಣ + ಯೋಗಿ]

**ಚಾರಣೆ** (ನಾ). ೧. ಚಂಡಿನ ಆಟದಲ್ಲಿ ಒಂದು ವರಸೆ: ಚಾರಿಸೆ ನಾಲ್ಕು ಪ್ರಕರಣ ಚಾರಣೆ ಮೂನೂಱ ಮೂವತೆನ್ನೆನಿಸಿದವಾ ಚಾರಣೆಗಳನ ಶ್ರಮದಿಂ ಚಾರಿಸುಗುಂ ಕೋಟಿ ತೆಱದಿನೆಱವ ದೆಡೆಂಗಂ (ಎಕ. II, ೦೩೩-೮೫; ೪೩೪). ೨. ಶತ್ರುವಿನ ಸಂಚನ್ನು ನೋಡಿ ಹೊಡೆಯುವುದಕ್ಕಾಗಿ ಯುದ್ಧದಲ್ಲಿ ವಿಚಿತ್ರಗತಿಯಿಂದ ನಡೆವ ಕ್ರಮ: ಚಿತ್ರದ ಚಳಗತಿಯ ಚೌಪಟದ ಚಾರಣೆ[ಪಾಠಾಂ. ಚದ್ವಣೆ]ಗಳ ಭಡಾಳದಲಿ ಹೊಳೆದ ರಾವರ್ತದಲಿ . . . ಭೀಮಕೌರವರು (ಕುವ್ಯಾಗ. ೬-೨೨). ೩. ಆನೆ, ಕುದುರೆ, ಮುಂತಾದ ವಾಹನಗಳನ್ನು ನಡೆಸುವುದು; ಚೋದನೆ.

**ಚಾರಣೆವೆಡಂಗ** = ಆನೆ, ಕುದುರೆಗಳೇ ಮುಂತಾದ ವಾಹನಗಳನ್ನು ನಡೆಸುವುದರಲ್ಲಿ ಚಾತುರ್ಯವುಳ್ಳವನು; ಒಂದು ಬಿರುದು: ಶೌರ್ಯ ದೀಪ ಸೊಗಸುಗದಾಣ್ಮಂ ಚಾರಣೆವೆಡಜ್ಞಂ ವಿಶಿಷ್ಟಜನಮಿತ್ರಂ (ಎಕ. VIII, ಸೊರಬ. ೪೭೪-೧೧; ೯೯೭). [ಸಂ. ಚಾರಣ]

**ಚಾರಪಪ್ಪು** (ನಾ). = ಚಾರಬೀಜ: ಚಾರಪಪ್ಪು = ಸುರುಕಲು ಬೀಜ ಮಧುರ (ಅಪ್ಪಾಂಗ. ೧೯೩-೦೨೨); ಚಾರು[ರ]ಪಪ್ಪು ಆಕಲಕೆರೆ . . . ಚೂರ್ಣವ ಮಾಡಿ (ಸಕವೈ. ೩೯೨). [ಚಾರ + ಪಪ್ಪು./ತೆಲು. ಚಾಱಪಪ್ಪು]

**ಚಾರಪಾಯು, ಚಾರಪಾಯಿ** (ನಾ). (ಉಕ) ನೂಲು ಅಥವಾ ಹುರಿಯ ಹೆಣಿಗೆಯಿಂದಾದ ಮಂಚ; ಹೊರಸು: ಕೆಲವು ಚಂದಿಗಳು ತೂಗ ಬಿದ್ದಿವೆ. ಚಾರಪಾಯ ಒಂದು ತಿರುವಿ ಬಿದ್ದಿದೆ (ಅನ್ನ. ೩೩೪). **ಚಾರಪಾಯಿ**: ನಾಗರಾಜ . . . ತನ್ನ ತಂಬುವಿಗೆ ತೆರಳಿ ಚಾರಪಾಯಿ(ಹೊರಸು) ಯ ಮೇಲೆ ಬಿದ್ದನು (ಅನಸಿ. ೨೪).

[← ಪಾರ. ಮರಾ. ಚಾರ್‌ಪಾಯೀ; ಹಿಂ. ಚಾರ್‌ಪಾಈ]

**ಚಾರಪಾಯಿ** 'ಚಾರಪಾಯು' ನೋ.

**ಚಾರಬೀಜ** (ನಾ). ಪ್ರಿಯಾಳದ ಬೀಜ: "ಪ್ರಿಯಾಳಂ-ಚಾರಬೀಜ" (ಟಿಪಧಿ. ೯೮); ಕಡೆಯಿಲ್ಲದ ಕದಳಿಯ ಫಲ ಚಾರಬೀಜ ಎಂಭತ್ತು ಖಂಡುಗ (ಬಸಪು. ೯೧-೨೬೩). [ಚಾರ + ಬೀಜ]

**ಚಾರರಾಸಿಪಪ್ಪು** (ನಾ). ಒಂದು ಬಗೆಯ ಬೀಜ (?): ಬಹುಮಂಉತ್ರಕ್ಕೆ ಕಾರೆಸೊಪ್ಪು, ಚಾರರಾಸಿಪಪ್ಪು, ಚಕ್ರಮತ್ತದ ಸೊಪ್ಪು . . . ಇವೆಲ್ಲಂ ಪಥ್ಯಂಗಳು (ಸಕವೈ. ೪೦೦). 'ಚಾರಪಪ್ಪು' ಪರಾ. [?]

**ಚಾರಾಖರ್ಚು** (ನಾ). ದನಗಳ ಮೇವಿನ ವೆಚ್ಚ: ಜುರ್ಮಾನೆ ದರದ ವಟ್ಟಿಯನ್ನು ದನಗಳ ಚಾರಾಖರ್ಚಿನ ವಟ್ಟಿಯನ್ನು ಚಿಕಟಾಯಿಸಿರತಕ್ಕದ್ದು (ಗ್ರಾಮಕ. ೦೦೭). [←ಹಿಂ. ಮರಾ. ಚಾರಾಖರ್ಚ್]

**ಚಾರಿ₁** (ನಾ). ೧. ಪಗಡೆಕಾಯಿ; ಲೆತ್ತದ ಕಾಯಿ; ನೆತ್ತದ ಕಾಯಿ: ಒರ್ವರ್ ನೆತ್ತದ ಚಾರಿಯಂ ಕೊಂಡು ಬಂದು . . . ಆಡಿಮೆಂದೊಡನೆ (ಬಂಹರಿ. ೩-೬೦ ವ); ಒಡ್ಡ ಡಸಿದ ಚಾರಿಯೆನೆ ಪೊಯ್ದು (ಅದ್ಭುರ. ೧೧-೧೫); ಕೆಲರುಚಿತದ ಕಥೆವೇಳ್ವ ಕೆಲರು ನೆತ್ತದ ಚಾರಿಯಿಡುವ ಕೆಲರಾಲಿವಟ್ಟಲ ಬೀಸುವ ಕಾಲೊತ್ತಿ ಕೆಲಕೆಲರಸಗಿದರವಗೆ (ವರ್ಧಕ. ೧೦-೩೫); ಅಕ್ಷ ಹೃದಯವೆಂಬ ಹದೆಯನ್ನೂ ಚಾರಿಯೆಂಬ ರಥವನ್ನೂ ಸಂಪಾದಿಸಿಕೊಂಡು ಜೂಜೆಂಬ ಯುದ್ಧದಲ್ಲಿ (ಶೃವಾಸ. ೧೨೪). ೨. ಒಂದು ಬಗೆಯ ಬಣ್ಣ,-ರಂಗು: (ಟಿ). [< ಸಂ. ಶಾರಿ, ಶಾರೀ, ಸಾರಿ, ಸಾರೀ]

**ಚಾರಿ₂** (ನಾ). ೧. ಗತಿ; ಗಮನ; ಚಲನೆ: ಧಾರೆಗಳ ದಳ್ಳುರಿಯ ಖಿಡಿಗಳ ಭಾರಣೆಯ ಬಲು ಝಳದಲಂಪಿನ ಚಾರಿಗಳು ಹೊಱಸೂಸಲು (ನಿಭಾಗ. ೯-೦೪-೪೭); ನೆಲವ ಮುದ್ದಿಡುವ ಚಾರಿಯಲ್ಲಿ ಪದಚಾರಿಯಾಗಿ ಹೊರಟ (ಸೂರ್ಯವಾ. ೦೫-೯). ೨. ನಡವಳಿಕೆ; ವ್ಯವಹಾರ: ಬೇರೆ ಮತವೆಮಗೇನು ಬೊಪ್ಪನ ಚಾರಿ ನಿಮ್ಮದು (ಕುವ್ಯಾಉ. ೮-೬೩). ೩. ಬೇಡಿ;

ಸಂಕೋಲೆ: ವಿಟಜನಕ್ಕೆ ತೊಡರ್ವ ಚಾರಿಯೆನಿಪ ಸೂಳೆಗೇರಿಯಿಂ ವಿದಗ್ಧ ಹೃದಯಹಾರಿಯಿಂ (ಶಂಪಥಾ. ೦-೩೮ ರಗಳೆ). ೪. ಅಗ್ಗದ ಬೆಲೆ; ಸಂಲಭ ಬೆಲೆ : (ಕ). ೫. ಕಾಳಗದ ಒಂದು ವರಸೆ; ಯಂದ್ಧದ ಒಂದು ಬಗೆಯ ತಂತ್ರ ; ಉಪಾಯಂ : ಸುಳಿದರೆಡಬಲ ಚಾರಿಯಲಿ ಚಾಪಳದ ಪಯ ಪಾಡಿನಲಿ (ಕುಮಾ.ಗ. ೬-೨೨) : ಕೇಣವಿಲ್ಲದೆ ಚಾರಿ ಚಳಕ ಚಾಳೆಯ ಚದುರ್ವಾಣಿ ಲಾಘವ ಪಂಥ ಪಾಡುಗಳನಱಿದು (ಕೃಮಿಥಾ. ೨೨-೬). ೬. [ಸಂಗೀತ] ವಾದ್ಯವನ್ನು ನುಡಿಸುವ ಒಂದು ಕ್ರಮಂ,–ಬಗೆ : ಬಹು ಲಯಭೇದದೊಳ್ ಗತಿಭೇದದೊಡಂ ಚಾರಿಭೇದ ದುರ್ವಹಿತ ತಗುಳ್ದ ಳಂಕರಣಭೇದದಮರ್ಕೆ ನಿವಿರ್ಕೆಯಿಂ . . . ಹೃದ್ಯವಾದ್ಯಮಂ ಬಹಳಿಕೆ ವೆತ್ತು ಬಿತ್ತರಿಸಿ ಬಾಜಿಸಿದರ್ (ಪುಷ್ಪಪು. ೦೨-೨೬). ೭. [ನಾಟ್ಯ] ನರ್ತನದಲ್ಲಿ ಒಂದು ರೀತಿ; ನೃತ್ಯದಲ್ಲಿ ಹೆಜ್ಜೆ ಹಾಕುತ್ತಾ ಮುಂದೆ ಸಾಗುವಿಕೆ: “ಸುತ್ತುವಳೆಯಂ ತಿರುವು ಚಾರಿ ಬೈಸಿಕೆ ಪುಟವದೊತ್ತಿ ತೋಱುವ ಹಜ್ಜೆಯೆನಿಕ್ಕು” (ಮಂಗರಾ. ೨೫-೯) ; ಚರಣದ ಚಾರಿಯ ಚಲ್ಲಿಯ ಪರಿಕ್ರಮ ಕ್ರಮದ ಭಂಗಿಗಳ್ ನೆಗಟ್ಟೆಡೆಯೊಳ್ ಸುರವಂದಿಗಳಿಂ ಹೋಹೋಯಿರೆಯೆನಿಸಿ ದುದಾಟವಿಂತು ನೀಲಾಂಜನೆಯ (ಆದಿಪು. ೯-೩೯): ಚಾರಿಮೆಟ್ಟುವ ಭಂಗಿ ದೋರ್ವಲನಂ ಮನಂಗೊಳೆ . . . ಮುರಾರಿ ಕೈಪಱಿಗಾಡಿದಂ (ಜಗಮಿ. ೩-೫೨) ; ನಿಲವಿವು ಗತಿಗಳಿವಾಸನಕುಲವಿವು, ಚಾರಿಗಳಿವೆಂದು ತಾನಭಿನಯಿಸುತ್ತ (ಕುಸುಮಾ. ೭-೬೨). [ಸಂ. ಚಾರೀ ]

**ಚಾರಿಗತಿ** (ನಾ). [ನಾಟ್ಯ] ನರ್ತನದಲ್ಲಿ ಒಂದು ಗತಿ : ಚಾರಿಗತಿಯಲಿ ನಡೆವನೊಡನೊಡನೆ ಹೊಡೆಯುವವನು (ಧಾಕನಾ. ೦೦೬).

[ ಚಾರಿ$_2$ + ಗತಿ ]

**ಚಾರಿಟೆ** (ನಾ). ಒಂದು ಅನುಕರಣ ಶಬ್ದ ; ಪಾರಿವಾಳದ ಕೂಗು : ಪಾರಿವಾಳದ ಪಕ್ಕಿ ಮದನಕ್ಕೆಯೊಳು ತನ್ನ ನಾರಿಗಿದಿರು ನಡೆದಾಡಿ ಗೂರುಳು ಗುಕುಗುಕು ಗುಟುಗುಟು ಗುಱುಗುಱು ಚಾರಿಟೆಯೆಂದುವಲ್ಲಲ್ಲಿ (ಧರಜ. ೦೫-೩೨).

**ಚಾರಿತ್ರ** (ನಾ). ಶೀಲ; ನಡತೆ ; ಆಚಾರ : “ಚರಿತಂ ರೀತಿ ಚಾರಿತ್ರಮೆನೆ . . . ಆಚಾರಕಕ್ಕು ನಾಮಂ” (ಮಂಗರಾ. ೭೪-೩); ತತ್ತ್ವಭೇದನೆ ಚಾರುತರ ಸುಜ್ಞಾನವದರಾಚರಣೆ ಚಾರಿತ್ರ (ಶಕುಥಾ. ೫-೨೦). [ ಸಂ. ]

**ಚಾರಿತ್ರಂಗೆಡು** (ಕ್ರಿ). ನಡತೆಗೆಡು ; ಶೀಲವನ್ನು ಬಿಡಂ : ಚಾರಿತ್ರಂಗೆಟ್ಟರನಾಟ್ಯಡಿಗಳೆವಂತೆ ಚಾರಿತ್ರಮುಳ್ಳರನೇಕಾಟ್ಯಡಿಗಳೆಯರ್ (ಧರ್ಮಾಮ್ರು. ೭-೪೩). [ ಚಾರಿತ್ರ + ಕೆಡು$_1$ ]

**ಚಾರಿತ್ರಕ** (ನಾ). ಶೀಲ ; ಗುಣ : ಹೃದಯಕ್ಲೇಶವನು ಬಿಡು ತೊಡಸು ಚಾರಿತ್ರಕದ ಭೂಷಣವ (ತಿದ್ದುಸ್ಮೃ. ೨-೬೭). [ ಸಂ. ]

**ಚಾರಿತ್ರಮೋಹ** (ನಾ). = ಚಾರಿತ್ರಮೋಹನೀಯ : ಇರ್ತಱನಪ್ಪ ವೇದನೀಯಮುಮಂ ದರ್ಶನಮೋಹದೊಳಂ ಚಾರಿತ್ರಮೋಹದೊಳಂ ಯಥಾಕ್ರಮದಿಂ . . . ಸ್ತ್ರೀಪುನ್ನಪುಂಸವೇದಮೆನಿಸಿಯುಂ (ಸು ಕು ಮೂ. ೩-೩೯ ವ). [ ಚಾರಿತ್ರ + ಮೋಹ ]

**ಚಾರಿತ್ರಮೋಹನೀಯ** (ನಾ). [ಜೈನ] ಮೋಹನೀಯ ಕರ್ಮಗಳಲ್ಲಿ ಒಂದು ; ಆಚಾರವನ್ನು ದೂಷಿಸುವ ಒಂದು ಕರ್ಮವಿಧ : ದರ್ಶನ ಮೋಹನೀಯಂ ಚಾರಿತ್ರಮೋಹನೀಯಮೆಂದಿರ್ತೆಱನಕ್ಕುಂ (ಶಾಂತಿಪು. ೧೨-೦೧ ವ). [ ಚಾರಿತ್ರ + ಮೋಹನೀಯ ]

**ಚಾರಿತ್ರವಂತ** (ನಾ). ಸದಾಚಾರಶೀಲ. ‘ಚಾರಿತ್ರವಂತಿಕೆ’ ಪರಾ.

[ ಚಾರಿತ್ರ + – ವಂತ ]

**ಚಾರಿತ್ರವಂತಿಕೆ** (ನಾ). ಒಳ್ಳೆಯ ಶೀಲವನ್ನು ಪಡೆದಿರುವಿಕೆ; ಸದಾಚಾರ ಶೀಲತೆ : ಇದ್ದ ಬಿದ್ದವರಲ್ಲಿ ಚಾರಿತ್ರವಂತಿಕೆಯಿಲ್ಲ (ಸರ್ವಜ್ಞ. ೩೩).

[ ಚಾರಿತ್ರವಂತ + – ಇಕೆ ]

**ಚಾರಿತ್ರಾರಾಧನೆ** (ನಾ). [ಜೈನ] ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್ಚಾರಿತ್ರ ಎಂಬ ರತ್ನತ್ರಯಂದಲ್ಲಿ ಮೂರನೆಯದು ; ಒಳ್ಳೆಯ ಚಾರಿತ್ರವನ್ನು ಅನುಸರಿಸುವಿಕೆ : ಪಾಪಕ್ರಿಯೆಯಿಂ ನಿವೃತ್ತಿಮಾಡಿ ಶುಭ ಪರಿಣಾಮಮುಮಂ ತನ್ನೊಳ್ ನಿಱಿಸುವುದು ಚಾರಿತ್ರಾರಾಧನೆ (ಜೀವಸಂ. ೩-೮ ವ). [ ಚಾರಿತ್ರ + ಆರಾಧನೆ ]

**ಚಾರಿತ್ರಿಕ** (ಗು). ಚರಿತ್ರೆಗೆ ಸಂಬಂಧಿಸಿದ; ಐತಿಹಾಸಿಕವಾದ: ಚಾರಿತ್ರಿಕಾಧಾರಗಳೇನೂ ಇಲ್ಲವಾದರೂ ಹಾಗೆ ಇದ್ದಿತ್ತು ಎಂಬುದನ್ನು ಊಹಿಸುವುದು ಕಷ್ಟವೇನೂ ಅಲ್ಲ (ಸಪತಿ. v. ಪ್ರಸ್ತಾವನೆ). [ ಸಂ. ]

**ಚಾರಿತ್ರ್ಯ** (ನಾ). = ಚಾರಿತ್ರ : ಚಾರಿತ್ರ್ಯವಿಲ್ಲದ ಚಾರುತ್ವವೇತಕೆ ಬರಿಯ ಚತುರುತ್ವವೆ ಸಾಕೆ (ಇಂದಾಶ. ೧೭೮-೭೯). [ ಸಂ. ]

**ಚಾರಿವರಿ$_1$** (ಕ್ರಿ). ೧. ಸಂಚನ್ನು ನೋಡಿ ನುಗ್ಗು : ಯುಕ್ತಿಯಿಂದ ಮುಂದೆ ಸರಿ; ಯುಕ್ತಿಯಿಂದ ಮುಂದೆ ಸಾಗು: ನೃಪನೊಡಹುಟ್ಟಿದನ ಹೊಯ್ದುರುಣಜಲದಲಿ ಚಟ್ಟಿಱಿದು ರಿಪು ಚಾರಿವರಿದನು ಕಳನ ಚೌಕದಲಿ (ಕುಮಾ.ಶ. ೨೦-೨) : ಹಱಿದು ತೇಜಿಯ ಥಟ್ಟನುಬರಕುಱುಬಿ ರಕ್ಕಸ ಭಟರ ಬೀದಿಯ ತೆಱಹ ತಪ್ಪಿಸಿ ಚಾರಿವರಿದೊಡಹೊಕ್ಕರಗಲದಲಿ (ತೊರವೆ. ೬-೦೦-೦೫) : ಅರಿಯುರೆನಿಪ ರಾಯರ ಫೌಜಿನೊಳು ಚಾರಿವರಿದಾಡಿದನಾ ಸುಭಟ (ನೇಮಿಸಂ. ೧೨-೮೦) : ರಸಿಕಜನದಕ್ಷಿಗಳಂ ಚಾರಿವರಿದಾಡಿಸಿದಳೆಚ್ಚರಿ ತದಂಗಮನನಂಗನಿರೆ ಪಿಂಗಡೆಯೊಳ್ (ರಾಜಶೇ. ೧೨-೮೯). ೨. ಸುತ್ತುವರಿ ; ಆವರಿಸು; ಆಕ್ರಮಿಸಂ: ದನುಜನಾಯಕರಾಳಿಗೊಂಡರು ಚಾರಿವರಿದರು ಸಿಂಗಣೀಕರನು (ಕಾಶಿರಾ. ೧೭-೪೫): ಅಕ್ಕತುಳ ವೀರರ್ಕಳಂ ಚಾರಿವರಿದೆಂಟುದಿಕ್ಕಿನೊಳ್ (ರುಕ್ಮಾಂಗ. ೦೩-೫೪) : ಘೋರತರ ದಂಡಮಂ ಒಡಿದಿರ್ದು ಕರ್ಬುರ ಶರೀರದಿಂ ಭೀಕರಾಕ್ಷಿಗಳಿಂದಳಂತಕಂ ಚಾರಿವರಿವನು ಜನರಂ (ತುರಂಗ. ೮೬-೪). [ ಚಾರಿ$_2$ + ವರಿ$_2$ ]

**ಚಾರಿವರಿ$_2$** ‘ಚಾಲುವರಿ’ ನೋ.

**ಚಾರಿವರಿ$_3$** (ನಾ). ಸಂಚನ್ನು ನೋಡಿ ನುಗ್ಗುವಿಕೆ. ‘ಚಾರಿವರಿವರಿ’ ಪರಾ. [ < ಚಾರಿವರಿ$_1$ ]

**ಚಾರಿವರಿಯಿಸು, ಚಾರಿವರಿಸು** (ಕ್ರಿ). ಯುಕ್ತಿಯಿಂದ ನಡೆಸಂ : ತಾರಕನ ಸುತರುಳಿದ ಧೊರೆಗಳೊಳು ತೇರ್ಗಳಂ ಚಾರಿವರಿಯಿಸಿ ಕಾದುತಿರೆ (ವೀರ್ಯಪು. ೨-೦೧-೧೮). **ಚಾರಿವರಿಸು** : ಒಬ್ಬೊಬ್ಬರೆಯ್ತಂದು ಸಸಿನೆ ಸರಳಿನ ಮಳೆಯ ಕರೆಯಲು ನಸುನಗುತ ಕಡಿದಲ್ಲವನು ಮಗುಳೆಸೆದು ರಣದಲಿ ಚಾರಿವರಿಸಿದನಮಿತ ಸಾಹಸದಿ (ಕೋಗಯು. ೨೫-೨೬).

[ ಚಾರಿವರಿ$_1$ + – ಇಸು$_3$ ]

**ಚಾರಿವರಿವರಿ** (ಕ್ರಿ). = ಚಾರಿವರಿ$_1$ : ಅನಿತು ಚಾತುರ್ಬಲವನಾಗಳೊರ್ವನೆ ಚಾರಿವರಿವರಿದು . . . ಕೊಲ್ವುದುಂ ಕಂಡು (ಜೈಮಿಥಾ. ೮-೨೯).

[ ಚಾರಿವರಿ$_3$ + ವರಿ$_2$ ]

**ಚಾರಿವರಿಸು** ‘ಚಾರಿವರಿಯಿಸಂ’ ನೋ.

**ಚಾರಿಸು** (ಕ್ರಿ). ೧. ಅರೆ ; ರುಬ್ಬು ; ಮರ್ದಿಸಂ : ಅಸುವೆಯ ಕಲ್ಗಳಂ ತೊಳೆದು ಚಂದನಮಂ ಪನಿನೀರ್ಗಳಿಂದೆ ಚಾ [ಪಾಠಾಂ. ಸಾ]ರಿಸಿ (೧ರಿಕ. ೨-೮೯). ೨. ಉಜ್ಜು ಅಥವಾ ಅರೆದಂ ಮಿಶ್ರಮಾಡಂ ; ಕೂಡಿಸು : ಏರಂಡತೈಲದೊಳ್ ಸುರವಾರುಣಿಯಂ ಕಲಸಿ ತಾಮ್ರಪಾತ್ರೆಯೊಳಧಿಕಂ ಚಾ[ಪಾಠಾಂ. ಬಾ]ರಿಸಿ ಪೂಸುತಿರೆ (ಲೋಕೋಪ. ೯-೧೪೦); ನೀರೊಳಗರೆವುದು ಸೌತೆಯ ಬೇರಂ ಬೀಜಮುಮನಲ್ಲಿ ಬೆಲ್ಲಮನಿನಿತಂ ಚಾರಿಸಿ ಕುಡುವುದು (ಅಶ್ವಶಾ. ೧೧-೨೬) : ಹೆತ್ತ ತುಪ್ಪವ ತೆಗೆದು ಚಾರಿಸಿದ ನಿಂಬೆಹುಳಿಯೊಗ್ಗೆ ಸುಣ್ಣವ ಕದಡಿ (ಸೂಪಶಾ. ೨-೦೯). ೩. ಚಾತುರ್ಯದಿಂದ ನಡೆಸಂ ; ಜಾಣತನದಿಂದ ನೆರವೇರಿಸು : ಚಾ[ಪಾಠಾಂ. ಬಾ] ರಿಸಿ ಬಾಣಾಗಮುಮುಮಂ ಕಾರಂಗೆಯ್ದಂತೆ ಕಾಲದಂತಕನನೆ ಪೋಲ್ತು . . . ಪೊಯ್ದು ಕೊಂದರ್

ವಲರುಂ (ಶಂಶಭಾ. ೧೦-೮೩); "ಕತ್ತಿಗಳನ್ನು ಝಳಪಿಸಿ" (ಪಹದೀ. ೩೩೮): ಇನ್ನದಱ ಪೊಜಗಗ್ಗಳಿಕೆಯೆನಿಪತಿವಿಷಮ ಮನದಱಿವಿಷಮದುಷ್ಕರಮೆಂಬ ಮಷ್ಕರಮುಂ ಎಳೆಯೊಳೊರ್ವನೆ ಚಾರಿಸಲ್ ಬಲ್ಲಂ (ಎಕ. II, ೧೩೩-೮೩; ೫೮೨). [ಚಾರಣ + – ಇಸು₃]

**ಚಾರು** (ಗು). ೧. ಚೆಲುವಾದ; ಸುಂದರವಾದ; ಆಹ್ಲಾದಕರವಾದ: ಚಾರು ರೂಪಧಾಸಕ ಸತಿಯೇ (ಭಂಡೋಬು. ೬. ೦-೨೬): ಸುಳಿವುದಲ್ಲಿ ಚಾರು ಸಮೀರಂ (ಜಗವಿ. ೨-೨೫); ಚಾರು ಕಂಗಳ ಮುಚ್ಚಿ ಮೆಱೆದಿವ ನಾರಿಕೇಳಗಳು (ಜೀವಂತ. ೧೬-೧೧). ೨. ಉತ್ತಮವಾದ; ಶ್ರೇಷ್ಠವಾದ: 'ಚಾರುಚರಿತ್ರ' ಪರಾ. [ಸಂ.]

**ಚಾರುಕಲ್ಯಾಣ** (ನಾ). [ಸಂಗೀತ] ತಾಳ ಪ್ರಭೇದಗಳಲ್ಲಿ ಒಂದು; ಬಳಿಕ ಧ್ರುವ . . . ಏಕಮೆಂಬ ಸಪ್ತತಾಳ ಭೇದಂಗಳಂ ಅವುಗಳೊಳು ಚಂಚತ್ಪುಟ . . . ಚಾರುಕಲ್ಯಾಣ . . . ಜಯಾಳವೆಂಬಿವು ಮೊದಲಾದ ನೂಱೆಱು ತಾಳಂಗಳುಂ (ವಿವೇಕ. ೨೩೮). [ಚಾರು + ಕಲ್ಯಾಣ]

**ಚಾರುಕೇಶಿ** (ನಾ). [ಸಂಗೀತ] ಒಂದು ರಾಗದ ಹೆಸರು: ಚಾರುಕೇಶಿ– ಜನಕರಾಗ ಶಿಣೇ ಬಾಣಚಕ್ರದ ಎರಡನೇ ರಾಗ ಮೇಳಸಂಖ್ಯೆ ೨೬ . . . ಈ ರಾಗದ ಪೂರ್ವಾಂಗ ಶಂಕರಾಭರಣ, ಉತ್ತರಾಂಗ ತೋಡಿ (ಸಂಗೀಡಂ. ೦೬೪). [ಸಂ. ಚಾರುಕೇಶೀ]

**ಚಾರುಗಣ್ಣು** (ನಾ). ಹಿತಕರವಾದ ದೃಷ್ಟಿ: ಚಾರುಗಣ್ಣಿನಿಂದ ಮಾಳೂನನ್ನು ನೋಡಿ, ಮುಂಗೈ ತಗುಲಿಸಿ ಕಿವಿದನಿಯಲ್ಲಿ ಕೇಳಿದನು (ಪವನ. ೦೩). [ಚಾರು + ಕಣ್ಣು (<ಕಣ್)]

**ಚಾರುಗಾತ್ರ** (ನಾ). ೧. ಚೆಲುವಾದ ದೇಹ: ಚಾರುಗಾತ್ರದ ಸುಪ್ರಸನ್ನ ಮುಖಾರವಿಂದದ . . . ಸಾರ ಸೌಭಾಗ್ಯದಲಿ ಬಲದೈತ್ಯಾರಿಗಳು ರಂಜಿಸಿದರಾ ಜನನಿವಹಮಧ್ಯದಲಿ (ನಿಭಾಗ. ೦೦-೦೬-೩೦). ೨. ಚೆಲುವಾದ ದೇಹವುಳ್ಳವನು: ಘನವಿರಾಟ್ಚಾರುಗಾತ್ರ ಕೃತವಿಷ್ಣು ಕಮಳಜ ತುರಾಷಾಟ್ಚಕಿತ ಚಂಚಲಿತ ತಾಂಡವಾಡಂಬರ ದಿಗಂಬರಾಂಬರ ಕುಂತಲ (ಉದ್ಭದೀ. ೬-೩೨). [ಚಾರು + ಗಾತ್ರ]

**ಚಾರುಚರಿತ್ರ** (ನಾ). ೧. ಒಳ್ಳೆಯ ನಡತೆ; ಸದಾಚಾರ: ಒಡಲುಂ ಚಾರುಚರಿತ್ರದೊಳ್ ಧನಮುನಿಷ್ಟಾಪೂರ್ತದೊಳ್ ಸತ್ಯಮುಂ ನುಡಿಯೊಳ್ . . . ತಾಳ್ದಿದಂ (ಲೋಕೋಪ. ೧-೦೮ ಪೀಠಿಕೆ): ಚಾರುಚರಿತ್ರ ತೀರ್ಥಜಲದಿಂದಘಕರ್ದಮಮಂ ಕಲಿಲ್ಚಿ (ಶಂರಾಮಾ. ೦-೦೪). ೨. ಒಳ್ಳೆಯ ನಡತೆಯುಳ್ಳವನು; ಸದಾಚಾರಿ: ಚಾರುಚರಿತ್ರನಪ್ಪುದು ಗುಣಾನ್ವಿತನಪ್ಪುದು (ಧರ್ಮಾಮೃ. ೩-೪೦). [ಚಾರು + ಚರಿತ್ರ]

**ಚಾರುಚೋಪಿ** (ನಾ). ಚೂರು ಚೂರು (?): ಸ್ವರ್ಗ ನಿರ್ಗವೆಂಬಥಾನು ಚಾರುಚೋಪಿ ಮಾಡಿದೇನು ಅಗ್ಗ ಮಾಡಿದೇನು ನಾಲ್ಕು ಪದಗಳೆಂಬವಾ ನುಗ್ಗು ಮಾಡಿ ಕಳೆದೆ ನಾನು ದಶಾವಾಯುವೆಂಬರಾ (ಚಿದಾವ. ೧೪೪-೦೩). [?]

**ಚಾರುತರ** (ಗು). ೧. ಹೆಚ್ಚು ಚೆಲುವಾದ; ಹೆಚ್ಚು ಸುಂದರವಾದ: ಚಾರುತರಾಪ್ಸರಸ್ತ್ರೀವಂದ್ಯೆಯಹ ರಂಭೆ (ಬಸಪು. ೪೦-೩): ಪೊಗಳೆ ಕಿಸರ್ಮಲ್ಲಿಗೆಯೆನಲ್ಪುವರೆಗೆ ಚಾರುತರಮಪ್ಪ ನಾಮಮಕ್ಕುಂ (ಕವಿಶ್ರೀಕೃ. ೧೨); ಜನರಲ್ಲ ಚಾರುತರ ಬೋಧೆಯ ನೀಡುವರು (ಸಿದ್ಧಪು. ೮೦-೮). ೨. ಉತ್ತಮವಾದ; ಶ್ರೇಷ್ಠವಾದ: ಚಾರುತರ ಯುಷ್ಮ ವಿದ್ಯಾಪಾರಗರ ರವಷಗಳಿಂ . . . ನೆಗಬ್ದುದಾಸುಕಿಥಿಾಮಂ (ಶಂಪಭಾ. ೬-೩೪). (ನಾ). ೩. ಉತ್ತಮವಾದ ರೀತಿ: ಚಾರುತರದಲಿಕ್ಕೇರಿಯವರ ಬಲ ವಾರಿಧಿ ಮುತ್ತಿ ಮುಂದಲಿಸಿ (ಕಂನವಿ. ೦೪-೪೦). [ಸಂ.]

**ಚಾರುತ್ವ** (ನಾ). ಮನೋಹರತೆ; ಸುಂದರತೆ: ನಿಶಾಂತಸ್ಪಾರ ಚಾರುತ್ವಮಾಗಿಯುಂ ಅನಿಶಾಂತ ಸ್ಪಾರ ಚಾರುತ್ವಮುಂ . . . ಎನಿಸಿ (ಚಂದ್ರಪು. ೧೦-೦೬ ವ); ತತ್ಪಂಕಜಾಕರ ಚಾರುತ್ವಕೆ ಮೆಚ್ಚಿ ತೂಗೆ ಶಿರವಂ (ರಾಜಶೇ. ೨-೬೩): ಚಾರಿತ್ರ್ಯವಿಲ್ಲದ ಚಾರುತ್ವವೇತಕೆ ಬರಿಯ ಚತುರತ್ವವೆ ಸಾಕೆ (ಕಂಚಾಪ. ೦೬೮-೬೮); ರಚನೆಯಿಂದಲೂ ಪ್ರಸಾದದಿಂದಲೂ ಚಾರುತ್ವದಿಂದಲೂ ತುಂಬಿಕೊಂಡಿರುವ ಶಬ್ದಗಳನ್ನೇ ಕಾವ್ಯದಲ್ಲಿ ಸೇರಿಸಬೇಕು (ಭಾರಮಿ. ೬೬). [ಸಂ.]

**ಚಾರುರೂಪ** (ನಾ). ಮನೋಹರವಾದ ರೂಪು; ರಮಣೀಯವಾದ ಆಕೃತಿ: ಈ ಚಾರುರೂಪ ಲಲಿತ ವನೇಚರಿಯರನೀ ಕುರೂಪರೊಳ್ ಕೂಡಿ (ಪುಷ್ಪಕೃ. ೩-೪೦). [ಚಾರು+ ರೂಪ]

**ಚಾರುರೂಪಿಣಿ** (ನಾ). ಸುಂದರವಾದ ರೂಪವುಳ್ಳವಳು; ಸುಂದರಿ: ಇಂದೆನಿತು ಚಾರುರೂಪಿಣಿಯಾಗಿ ತೋರುತಿಹೆ ನೀನೆನಗೆ (ಶ್ರೀರಾಮಾ. ೬೪-೨೦೭). [ಸಂ. ಚಾರುರೂಪಿಣೀ]

**ಚಾರುವೃತ್ತ** (ನಾ). ೧. ಮನೋಹರವಾದ ವರ್ತುಲಾಕಾರವುಳ್ಳದು. ೨. ಮನೋಹರವಾದ ನಡತೆಯುಳ್ಳವನು. ೧, ೨: ಮಂಜುಮಹಿಮಾಸ್ಪದಂ ಚಾರುವೃತ್ತಂ ಕಲಾಪುಂಜಂ . . . ರಾಜನೆನ್ನ ಪೋಲಾದೊಡಂ (ಕ್ಷಮಿಭಾ. ೨೮-೬೨). [ಚಾರು + ವೃತ್ತ]

**ಚಾರುಹಾಸ** (ನಾ). ಮೋಹಕವಾದ ನಗು; ಮನೋಹರವಾದ ನಗು: ಚಾರುಹಾಸನಿವಾಸನಾಡಿದನಾಡಿದಂ ಸುಭಗಂ (ಜಗವಿ. ೩-೫೩). [ಚಾರು + ಹಾಸ]

**ಚಾರುಹಾಸಿನಿ** (ನಾ). ಮೋಹಕವಾದ ನಗೆಯುಳ್ಳವಳು: ಒಡಂಬಟ್ಟು ಚಾರುಹಾಸಿನಿ ನಿಜನಿವಾಸಕ್ಕೆ ಪೋದಳ್. (ಗದಾಯು. ೨-೦೦ ವ). [ಸಂ. ಚಾರುಹಾಸಿನೀ]

**ಚಾಳೆ** (ನಾ). (ಕಥಾ) ಹಲಸಿನ ತೊಳೆ ತೆಗೆದು ಉಳಿದ ಭಾಗ; ಸೋಲೆ; ಸೆಡೆ. [?]

**ಚಾರ್ಕಲ** (ನಾ). ನಕ್ಷತ್ರ; ಚುಕ್ಕೆ; ತಾರೆ: ತಂಗೀಯು ಕರೆಯೆಂದ್ರ ಸಂಜೆಯಾಯಿತೆಂದ ಬಂಗಾರದ ಕೊರಳ ಮಡದೀಯು ಕರೆಯೆಂದ್ರ ಚಾರ್ಕಲದ ಬೆಳಕು ಹಗಲೆಂದ (ಹಳ್ಳಿಯು. ೦೬೩): ಚಾರ್ಕಲಕ್ಕೆ ಎಂದಾದರೂ ಚಂದ್ರಮನ ಸೊಬಗು ಬಂದೀತೆ? (ರೂಪ). [?]

**ಚಾರ್ಖಾನೆ** (ನಾ). ಚಚ್ಚೌಕವಾದ ಮನೆ; ಚಚ್ಚೌಕ; ಪೊಪ್ಪಳಿ: (೬). **ಚಾರ್ಖಾನೆಸೀರೆ** = ಚಚ್ಚೌಕವಾದ ಮನೆಗಳಿಂದ ಕೂಡಿದ ಸೀರೆ; ಚೌಕಡಿಸೀರೆ: (೬). [←ಪಾರ. ಹಿಂ. ಚಾರ್‌ಖಾನಾ; ಮರಾ. ಚಾರಖಣೀ]

**ಚಾರ್ಚಿಕ್ಯ** (ನಾ). ೧. ಗಂಧ ಮೊದಲಾದ ಸುಗಂಧದ್ರವ್ಯಗಳನ್ನು ಶರೀರಕ್ಕೆ ಲೇಪಿಸುವುದು; ಸುಗಂಧದ್ರವ್ಯಗಳನ್ನು ಮೈಗೆ ಲೇಪಿಸಿಕೊಳ್ಳುವಿಕೆ. ೨. ಅಂಗರಾಗದ ಹಿಟ್ಟು–ಹುಡಿ; ಬುಕ್ಕಿಹಿಟ್ಟು: "ಚರ್ಚಾ, ಚಾರ್ಚಿಕ್ಯಂ, ಸ್ಥಾಸಕಃ – ೩ ಕುಂಕುಮ ಮುಂತಾದ ಅಂಗರಾಗದ ಹಿಟ್ಟಿಗೆ ಹೆಸರು, ಮೈಮಿಂಚುವುದಿ, ಮೈಗುಜ್ಜುವ ಗಂಧವುದಿ, ಉದ್ವರ್ತನಚೂರ್ಣ, ಬುಕ್ಕಿಹಿಟ್ಟು" (ಸಿದ್ಧಾಂತ. ೦೬೮). [ಸಂ.]

**ಚಾರ್ಜು, ಛಾರ್ಜು** (ನಾ). ೧. ಪ್ರಯಾಣದ ವೆಚ್ಚ, – ಖರ್ಚು; ಪ್ರವಾಸದ ಟಿಕೆಟ್ಟು ಮೊದಲಾದುವುಗಳ ಬೆಲೆ: ಹೋಗಿ ಬರುವ ಚಾರ್ಜು ಕೊಟ್ಟೇ ಕಳುಹಿದ್ದೆ (ಹುಚ್ಚುಹು. ೫೫). ೨. ಹೊಣೆ; ಅಧಿಕಾರ; ವಶ: ಯಾವುದಾದರೂ ಒಂದು ಕೋರ್ಟಿನ ಚಾರ್ಜಿಗೆ ನೇಮಿಸತಕ್ಕದ್ದು (ಗ್ರಾಮಾಕ. ೦೦): ಕಿಟ್ಟಿ ಹೊಸ ದಪ್ತರಿನ ಚಾರ್ಜು ತೆಗೆದುಕೊಂಡಿರಲಿಲ್ಲ (ಗಂಪಾಯ. ೨೨); ಚಾವಡಿಯ "ಛಾರ್ಜು" ಒಲೆಕಾರನ ಕಡೆಗೆ ಇರುವುದು (ಗಾಳಿಗ. ೩). **ಛಾರ್ಜು**: ೧. ಮೈಸೂರಿಗೆ ಹನ್ನೆರಡಾಣೆ ಛಾರ್ಜು (ವನ್ನಕ. ೨೬). [←ಇಂ. Charge].

**ಚಾರ್ಮಣ** (ಗು). ೧. ಚರ್ಮದ ಆವರಣವುಳ್ಳ. (ನಾ). ೨. ಚರ್ಮಗಳ ರಾಶಿ; ತೊಗಲಿನ ಸಮೂಹ. ೩. ಗುರಾಣಿಗಳ ಸಮೂಹ. [ಸಂ.]

**ಚಾರ್ವಕ** (ನಾ). = ಚಾರ್ವಾಕ ೧ : ವಾಗ್ಬಲದ ಪೊಡವೃ್ರ್ವ ವೇಡ ಗಡ ಚಾರ್ವ್ರಕ ಚಾರ್ವ್ರಕ ನಿಮ್ಮ ದರ್ಪ್ರಮಂ ಸಲಿಪನೆ ಗೋಪನನ್ನಿ ಮುನಿಪುಂಗವನೆಂಬ ಮದಾನ್ಧ ಸಿನ್ಧುರಂ (ಎಕ: II, ೬೯-೪೦ ; ಸು. 1100). [ <ಸಂ. ಚಾರ್ವಾಕ ]

**ಚಾರ್ವರಿ** 'ಚಾಲಂವರಿ' ನೋ.

**ಚಾರ್ವಾಕ** (ನಾ). ೧. ನಿರೀಶ್ವರವಾದಿ ; ದೇವರ ಅಸ್ತಿತ್ವದಲ್ಲಿ ನಂಬಿಕೆಯಿಲ್ಲದವನಂ ; ನಾಸ್ತಿಕ : "ಲೋಕಾಯತಿಕಃ, ಚಾರ್ವಾಕಃ – ಈ ೨ ಚಾರ್ವಾಕನು" (ನಾಚಿಠಾ. ೦೨೬): ಎಲೆ ಚಾರ್ವಾಕ ನಿನಗಿದು ಕೇಳುಪೊಡೆ ಪವಣಲ್ಲ (ಬಸಪು. ೪೯-೨೩): ಸಂಪನ್ನ ತನುವೇ ಆತ್ಮನೆಂಬರು ಕೆಲರು ವಾದಿಗಳು ಕೆಲಕೆಲರು ಚಾರ್ವಾಕರು (ಅಮೃತ. ೩-೫೭). ೨. ಆರು ನಾಸ್ತಿಕ ದರ್ಶನಗಳಲ್ಲಿ ಒಂದು : ಈ ಮೂಲ ತತ್ತ್ವಾನ್ವೇಷಣ ರೂಪದಲ್ಲಿ ಚಾರ್ವಾಕ, ವೈಭಾಷಿಕ . . . ಆರು ನಾಸ್ತಿಕದರ್ಶನಗಳೂ . . . ಆವಿರ್ಭವಿಸಿರುತ್ತವೆ (ಭಾರದ. ೨೨೯). [ ಸಂ. ]

**ಚಾರ್ವಾಕತೆ** (ನಾ). ನಾಸ್ತಿಕತೆ ; ನಿರೀಶ್ವರವಾದ : ಈ ಚಾರ್ವಾಕತೆಯೆ ಒಂದು ಕ್ಷಣ ಅವನಿಗೆ ಮೋಜಾಗಿ ಕಂಡಿತ್ತು (ಸಮುಜೀ. ೬೮೩) [ ಸಂ. ಚಾರ್ವಾಕತಾ ]

**ಚಾರ್ವಾಕದರ್ಶನ** (ನಾ). ನಿರೀಶ್ವರವಾದವನ್ನು ಪ್ರತಿಪಾದಿಸುವ ದರ್ಶನ; ನಾಸ್ತಿಕತ್ವವನ್ನು ತಿಳಿಸುವ ಶಾಸ್ತ್ರ : ದರ್ಶನಗಳಿಗೆಲ್ಲ ಮೊದಲನೆಯದಾಗಿಯೂ, ಸರ್ವದರ್ಶನ ಪ್ರತಿಕಕ್ಷಿಯಾಗಿಯೂ ಇರುವ ದರ್ಶನವು ಚಾರ್ವಾಕದರ್ಶನವು (ಹಿಂದಸಾ. ೮೦). [ ಚಾರ್ವಾಕ + ದರ್ಶನ ]

**ಚಾರ್ವಾಕಮತ** (ನಾ). = ಚಾರ್ವಾಕದರ್ಶನ : ಕೃತಕದ್ವಿಜಂ ಚಾರ್ವಾಕಮತಾವಲಂಬಿಯಾಗಿ . . . ಮಹೀಪಾಲನೊಳ್ ಸಹಸ್ರಜಿಹ್ವನಪ್ಪ ನಾಗರಾಜನನೆ ಪೋಲ್ತು ನುಡಿಯೆ (ಶಾಂತಿಪು. ೮-೧೨೬ ವ) [ ಚಾರ್ವಾಕ + ಮತ ]

**ಚಾರ್ವಾಕವಾದ** (ನಾ). ನಿರೀಶ್ವರವಾದ: ನಾಸ್ತಿಕವಾದ: ಅವನ ವಿಚಾರವಾದವೆಲ್ಲ ವಾದಸರಣಿಯೆಲ್ಲ ಚಾರ್ವಾಕವಾದ, ಚಾರ್ವಾಕವಾದಸರಣಿ (ಭಾರದ. ೦೦೨). [ ಚಾರ್ವಾಕ + ವಾದ ]

**ಚಾಲ್** 'ಚಾಲು' ನೋ.

**ಚಾಲ** (ನಾ). ಒಂದು ಬಗೆಯ ಮರ : ಕಗ್ಗಲಿ ಚಾಲ ಮೂಲ ಕವಳಂ (ಯಾದವ. ೪-೫೨). [ ? ]

**ಚಾಲಕ, ಚಾಳಕ**$_1$ (ನಾ). ೧. ನಡೆಯಿಸುವವನು; ನಿರ್ವಾಹಕ; ವ್ಯವಸ್ಥಾಪಕ : ಬ್ಯಾಂಕು ಸ್ಥಾಪನೆಯಾಗುವಾಗ . . . ಚಾಲಕರು 'ಬ್ಯಾಂಕ್ ರಿಜಿಷ್ಟರ್' ಮಾಡಿದ ಬಗ್ಗೆ ಪತ್ರಿಕೆಯನ್ನು ಹೊರಡಿಸುವರು (ಬ್ಯಾಂಕಕ್ಕೈ. ೧೦); ಈ ಉದ್ಯಮದ ಚಾಲಕರೆಂದರೆ ಸ್ವಯಂ ಶ್ಯಾಮಲಾಲರು (ಕಾರಿಹಿಂ. ೧೪೮). ೨. ಸಾರಥಿ ; ಬಂಡಿ ಹೊಡೆಯುವವನು : ಜ್ಞಾನಾಂಬೆಯನ್ನು ಬಂಡಿಯಲ್ಲಿ ಕೂರಿಸಿ ಚಾಲಕನನ್ನು ಪನ್ನಂಪಳ್ಳಿಯ ಕಡೆ ಬಿಡಲು ಹೇಳಿದ (ಪ್ರತಾಪ. ೩೦). ೩. ಮದಿಸಿದ ಆನೆ. ೪. ಚಲನಶಕ್ತಿಯನ್ನು ನೀಡುವ ಯಂತ್ರ : ಈ ವಿಧಿಯನ್ನನುಸರಿಸಿ ವಿದ್ಯುತ್ಪ್ರವಾಹದಿಂದ ತಿರುಗುವ ಚಾಲಕಗಳನ್ನು (Motors) ಕಟ್ಟಿರುತ್ತಾರೆ (ಭಾತವಿ. ೩೩೭). **ಚಾಳಕ**$_1$ : ೧. ಚಾಳಕನಿಲ್ಲದೂರು . . . ಸೊಬಗಿಲ್ಲದ ನಾರಿಯರೊಪ್ಪರಿರ್ವರೇ (ನೀತಿಸಾ. ೦೫೬): [ ಸಂ. ]

**ಚಾಲತಿ, ಚಾಲ್ತಿ** (ಗು). ೧. ವ್ಯವಹಾರದಲ್ಲಿರುವ ; ಚಲಾವಣೆಯಲ್ಲಿರುವ ; ಬಳಕೆಯಲ್ಲಿರುವ : ಅಲ್ಲಿಯ ಪ್ರಮುಖ ವ್ಯಾಪಾರಿಯು ಆ ಯಾವತ್ತು ಕಾಳನ್ನು . . . ಚಾಲತಿ ಬೆಲೆಗೆ ಸಾಟಿ ಮಾಡುತ್ತಾನೆ (ದಾಲಶ್ರ. II, ೮೯೩); ಅದು ಸಾಧಾರಣ ಚಾಲತಿ ಶ್ರೇಣಿಯ ಆದರ್ಶ (ನಿಬಂಧ. II, ೧೮). (ನಾ). ೨. ಜನಬಳಕೆ; ವ್ಯವಹಾರ: ಬೆಂಕಿಪೆ . ಬಂದ ಮೇಲೆ ಚಕಮುಕಿ ಬೆಂಕಿ ಚಾಲತಿಯಲ್ಲಿಲ್ಲ (ಕೂ೧). ೩. ವಾದ್ಯಗಳ ವಾದನದ ರೀತಿಗಳಲ್ಲಿ ಒಂದು : ಮೇಳದವರು ಅದಕ್ಕೆ ಪೆಟ್ಟು ಮೊದಲು 'ಮುಕ್ತಾಯ' ಕೊಟ್ಟು ಚಾಲತಿಯನ್ನು ಬಾರಿಸಿ ಮುಗಿಸುವರು (ಜಟ್ಕದೊ. ೧೩). **ಚಾಲ್ತಿ**: ೨. ಕೆಂಪು ಔಷಧಿ ಸವರಿದ ಕಡ್ಡಿಗಳೇ ಆಗ ಚಾಲ್ತಿ (ಕಂಗಪಿ. ೦೦೨) ; ಕತ್ತಿ ಏರುವ, ಕೊಂಡ ಹಾಯುವ . . . ಸಂಪ್ರದಾಯ ಈ ಶತಮಾನದಲ್ಲಿಯೂ ಎಲ್ಲ ಕಡೆಯೂ ಚಾಲ್ತಿಯಲ್ಲಿದೆ (ನಂಜುಂಡ. ೧೩೪) : ರಂಜಣದಲ್ಲಿಯ . . . ನಾಣ್ಯ ಚಾಲ್ತಿಯಿಲ್ಲದೆ ಹಸರುಗಟ್ಟಿದ್ದವಂತೆ (ಗೀಜುಗ. ೩). [ ←ಮರಾ. ಚಾಲತೀ ]

**ಚಾಲತಿಠೇವಣಿ** (ನಾ). = ಚಾಲತಿಠೇವು : ಅವನು ಸಿರಿವಂತನಾದ್ದರಿಂದ ಚಾಲತಿಠೇವಣಿಯಲ್ಲಿಯೇ ಬಹಳ ಹಣ ಇಟ್ಟಿದ್ದಾನೆ (ರೂ೧). [ ಚಾಲತಿ + ಠೇವಣಿ ]

**ಚಾಲತಿಠೇವು** (ನಾ). (ದಿನನಿತ್ಯದ ವ್ಯವಹಾರಕ್ಕೆ ಬಳಸುವುದಕ್ಕಾಗಿ) ಬ್ಯಾಂಕು ಮೊದಲಾದುವುಗಳಲ್ಲಿ ಇಟ್ಟ ಹಣ: ಕರೆಂಟ್ ಡಿಪಾಸಿಟ್ಟು: ಬಳಕೆಯ ಇಡುಗಂಟ(ಚಾಲತಿಠೇವಿ)ನಲ್ಲಿಟ್ಟರೆ . . . ಈ ಖಾತೆಯ ಉಪಯೋಗವನ್ನು ಹೆಚ್ಚಾಗಿ ಮಾಡಿಕೊಳ್ಳುವರು (ಬ್ಯಾಂಕಕ್ಕೈ. ೧೭). [ ಚಾಲತಿ + ಠೇವು ]

**ಚಾಲತಿದಪ್ತರ** (ನಾ). ದಿನನಿತ್ಯದ ವ್ಯವಹಾರಕ್ಕೆ ಸಂಬಂಧಪಟ್ಟ ಲೆಕ್ಕಪತ್ರ,–ದಾಖಲೆ : (ಕ). [ ಚಾಲತಿ + ದಪ್ತರ ]

**ಚಾಲತಿಭಂಡವಲ** (ನಾ). ವ್ಯವಹಾರದಲ್ಲಿ ತೊಡಗಿಸುವ ಬಂಡವಾಳ : ಚಲಾವಣೆಯಲ್ಲಿರುವ ಹಣ : ಇದಕ್ಕೆಲ್ಲ ಬೇಕಾಗುವ ಚಾಲತಿಭಂಡವಲ (Working Capital)ವೂ ಬಹಳವಾಗಿದೆ (ದಾಲಶ್ರ. I, ೪೭೪). [ ಚಾಲತಿ + ಭಂಡವಲ (<ಬಂಡವಲ) ]

**ಚಾಲತಿಮಾಲು** (ನಾ). ಸದ್ಯ ಬಳಕೆಯಲ್ಲಿರುವ ಸರಕು : ಅವನಿರುವ ಅಂಗಡಿಯಲ್ಲಿ ಚಾಲತಿಮಾಲಿನ ದಾಸ್ತಾನೇ ಹತ್ತು ಲಕ್ಷ ರೂಪಾಯಿಗಳಷ್ಟಿರಬಹುದಂತೆ (ಜಾರುದಾ. ೬೬). [ ಚಾಲತಿ + ಮಾಲು$_4$ ]

**ಚಾಲತಿಸಾಲು, ಚಾಲ್ತಿಸಾಲು** (ನಾ). ನಡೆಯುತ್ತಿರುವ ವರ್ಷ : ಕಂದಾಯದ ಬಾಕಿಗೋಸ್ಕರ ರೈತರು ಪಾವತಿ ಮಾಡುವ ಹಣವನ್ನು ಮತ್ತು ಚಾಲತಿಸಾಲಿಗೆ ಕೊಟ್ಟ ಹಣವನ್ನು ಲೆಕ್ಕದಲ್ಲಿ ದಾಖಲ್ಮಾಡಿ . . . ದಸ್ಕತ್ತು ಮಾಡಬೇಕು (ಗ್ರಾಮೂಳ. ೭೦). **ಚಾಲ್ತಿಸಾಲು** : 'ಚಾಲ್ತಿಸಾಲಿ'ನ ಬಾಕಿಯನ್ನು ಗುದಸ್ತಬಾಕಿಯನ್ನೂ ಬೇರೆ ಬೇರೆ ಹಾಕಿ . . . ತಲೆ ಕೆಡಿಸುತ್ತಿದ್ದರು (ನನ್ನೂರು. ೧೫೩). [ ಚಾಲತಿ + ಸಾಲು$_3$ (<ಸಾಲ್$_3$) ]

**ಚಾಲನ** (ನಾ). ೧. ನಡೆಸುವಿಕೆ ; ಚಲಿಸುವಂತೆ ಮಾಡುವಿಕೆ : "ಚಾಲನ. ಪ್ರೇರಣ" (Actuation. ತಂಕನಿ). ೨. ಜರಡಿ ಮೂಲಕ ಸೋಸುವಿಕೆ. ೩. ಅಲ್ಲಾಡಿಸುವಿಕೆ. 'ಲಾಂಗೂಲಚಾಲನ' ಪರಾ. ೪. ಸಡಿಲಗೊಳಿಸುವಿಕೆ. [ ಸಂ. ]

**ಚಾಲನಿ, ಚಾಳನಿ** (ನಾ). ಸಾರಣಿಗೆ ; ಒಂದರಿ : ಜರಡಿ : "ಚಾಲ[ಜಾಠಾಂ. ೪]ನಿ ರಂಧ್ರ ಸಾರಣಿಗೆ" (ಮಂಗರಾ. ೬೨-೨೧). **ಚಾಳನಿ** : "ಚಾಳನಿಯೆನೆ ಶಾರಣಿಕಂ" (ವಸ್ತುಕೋ. ೪೯-೨೭). [ ಸಂ. ಚಾಲನೀ ]

**ಚಾಲನೆ** (ನಾ). ಚಲನಶಕ್ತಿ ; ಪ್ರೇರಣೆ : ಅವರಿಗೆ ನಾವು ಚಾಲನೆ ಕೊಟ್ಟರೆ ಅವರಿಗೆ ಸರಿಯಾದ ದಾರಿ ಸಿಗಬಹುದು (ಆಸನಾ. ೧೭೫) : ಒಂದು ದೃಷ್ಟಿಯಿಂದ ಈ ಎಲ್ಲ ಚಾಲನೆ ಶೇಖರಿಸುವುದು ನರಹರಿ ಕುಸುಮಾರ ಪರಿಸರದಲ್ಲಿ (ಸಮುಜೀ. ೧೭, ಟಿಪ್ಪಣಿ) : ಇದಕ್ಕೆ ಹೆಚ್ಚಿನ ಚಾಲನೆಯನ್ನು ಕೊಡಬೇಕೆಂದು ಅವಳು ಅವನ ಹರಟೆಯ ಕೊನೆಗೆ ಹೇಳುತ್ತಿದ್ದಳು (ರಂಗರೋ. ೩೪) [ ಸಂ. ಚಾಲನ ]

**ಚಾಲವರಿ** 'ಚಾಲುವರಿ' ನೋ.

**ಚಾಲಾಕಿ, ಚಲಾಕಿ** (ನಾ). ಚುರುಕುತನ; ಬುದ್ಧಿವಂತಿಕೆ: ಅಹಹಹಾ ನಿನ್ನ ಚಾಲಾಕೀನೇ (ರಂಗಪ. ೩೩೩). **ಚಲಾಕಿ:** ಅಂಗಡಿಗಳ ವೈವಿಧ್ಯ, ವ್ಯಾಪಾರದ ಚಲಾಕಿ, ಜನರ ಮಾತುಕತೆ ಅವನ ಪ್ರಬಂಧದಲ್ಲಿ ಮರುಧ್ವನಿಸುತ್ತವೆ (ಸ್ವಪ್ನಹೂ. ೦೦೦); ತಮ್ಮ ಮಾತಿನ ಚಲಾಕಿ ತೋರಿಸಿ, ತನಗೂ ವೇದಾಂತ ಸಾಕಷ್ಟು ತಿಳಿದಿದೆ ಅನ್ನುವುದೇನು ? (ಆಳಿನಿ. ೪೩).
[ ←ಪಾರ. ಚಾಲಾಕೀ; ಮರಾ. ಚಲಾಕೀ, ಚಲಾಖೀ ]

**ಚಾಲಾಕು, ಚಲಾಕು, ಚಾಲೂಕು, ಚಾಲೋಕು** (ನಾ). ೧. ಚುರುಕು; ಚಾತುರ್ಯ; ಜಾಣತನ; ಚಾಕಚಕ್ಯತೆ : ವ್ಯಾಪಾರ ಮಾಡಲು ತುಂಬ ಚಾಲಾಕು ಬೇಕು (ಉಪ). ೨. ಚತುರನಾದ ವ್ಯಕ್ತಿ ; ಬುದ್ಧಿವಂತಿಕೆಯುಳ್ಳ ವ್ಯಕ್ತಿ: ನೀವು ಮಾತಿನಲ್ಲಿ ತುಂಬಾ ಚಾಲಾಕಿದ್ದೀರಿ(ಬದುಕು. ೦೩೩); ಅವನ್ನ ಹಿಡೀಬೇಕಾದರೆ ನಿಮಗಿಂತ ಚಾಲಾಕಾದವರು ಬರಬೇಕು (ಶಕಾರ. ೩೩): ಹುಡುಗಿ ಒಳ್ಳೇ ಚಾಲಾಕಾಗಿ ಭಾಗೀರಥಿಗೆ ಕಂಡಳು (ಧಾರಧಿ. ೦೬). **ಚಲಾಕು:** ೨. ಪಾರಜದಂತೆ ಚಲಾಕಾದ ಸಾಹೇಬರೂ ಕೂಡ, ಅಕಾಲ ಜಡತ್ವವನ್ನು ಪಡೆದಂತಾಗಿತ್ತು (ದೀಪಹ. II, ೩೭೪). **ಚಾಲೂಕು :** ೧. ಸ್ವರಸೃಷ್ಟಿಯಲ್ಲಿ ಅವರಿಗೆ ಅಪಾರವಾದ ಚಾಲೂಕಿತ್ತು (ಸಂಗೀತ. ೨೬). **ಚಾಲೋಕು :** ೨. ಈಗಿನ ಕಾಲದ ಹುಡುಗಿಯರಂತೆ ಆಗಿನ ಕಾಲದವರು ಚಾಲೋಕೂ ಅಲ್ಲ (ಅಣಮಿ. ೬೦).
[ ←ಪಾರ. ಚಾಲಾಕ್; ಮರಾ. ಚಲಾಕ್, ಚಲಾಖ್ ]

**ಚಾಲಿ**$_1$ (ನಾ). [ನಾಟ್ಯ] ನೃತ್ಯದಲ್ಲಿ ಒಂದು ಭಂಗಿ : ಅನುವಿನಿಂ ಚೌಷಷ್ಟಿ ಹಸ್ತ ಮುಪ್ಪತ್ತೆರಡು ಮಿಸುಪ ದೃಷ್ಟಿಗಳು ನಾಲ್ವತ್ತು ಮಂಡಲ ವಿನೂತನದ ಪನ್ನೆರಡು ಪ್ರಪಾಡು ಬಿರಿದೆನಿಸುವೈವತ್ತೊಂದು ಚಾಲಿಯಿಂದೆ . . . ನರ್ತನಂಗೆಯ್ಯುತಿರೆ (ಪಾಪೋಪು. ೦-೪೮). [ <ಸಂ. ಚಾರೀ ]

**ಚಾಲಿ**$_2$ (ನಾ). (?) : ಬನದಾಗ ಬಿತ್ತ್ಯಾದು ಬನದಾಗ ಬೆಳೆಯೂದು . . . ಬನದಾಗ ಚಾಲೀ ಎರಗೂವ ಬಿದುರೀನ ಬುಟ್ಟಿ ಭೂಮಾಕ ಬರಬೇಕ (ಮಲ್ಲಿಗೆ. ೬೦). [ ? ]

**ಚಾಲಿತ** (ಗು). ೧. ಚಲಿಸುವಂತೆ ಮಾಡಿದ; ನಡೆಸಿದ. ೨. ಅಲುಗಿಸಿದ; ಬೀಸಿದ : ವಿಭವರಮೆಯ ಕಟಾಕ್ಷವೆಂಬಂತೆ ಭಾವಿನೀಚಾಲಿತ ಚಾರು ಚಾಮರಂ ಮುಂಬಿನೊಳಿಂಬುವಡೆಯೆ ಬಳಜಳಧಿಯೊಳ್ನೆಗೆದ ತರಂಗದಂತೆ ಸೂಸುವ ಸೀಗುರಿ ದೇಸಿವಡೆಯೆ (ರಾಜಶೇ. ೦೩-೭೦ ವ). [ ಸಂ. ]

**ಚಾಲಿಸು, ಚಾಳವಿಸು, ಚಾಳಿಸು**$_2$**, ಚಾಳೈಸು**$_1$ (ಕ್ರಿ). ೧. ಚಲಿಸುವಂತೆ ಮಾಡು ; ನಡೆಯಿಸು : ಮೂಲೆ ಮೂಲೆಯಲಿ ವಿದ್ಯುಲ್ಲಹರಿಯೊಂದು ಧೂಲಿಕಣ ಭೂಗೋಳ ರವಿಚಂದ್ರತಾರೆಗಳ ಚಾಲಿಪುದು ಬಿಡು ಕೊಡದೆ (ಮಂಕುತಿ. ೪೩). ೨. ಅಲ್ಲಾಡಿಸು; ಅಲುಗಿಸು: ಚಾಲಿಪ ಬಾಲವಾಗುರ್ವಿಪಾನನಂ . . . ಅರಲ್ದ ಮೊಗೆಸೆಯೆ ತರಕ್ಷುದಂಸಕಶಸಂವೃತವಿದುರ್ಗದು (ರಾಜಶೇ. ೩-೯೩). ೩. ಪಸರಿಸು ; ವಿಸ್ತರಿಸು ; ಹಬ್ಬು : ಏಳು ಪಾತಾಳ ಅಪ್ಪಬಗಲಕೆ ಚಾಲಿಸಿಹುದೆಂಬತ್ತೆಯೆರಡೇ ಕೋಟಿ ಪರಿಯಂತ ಕೇಳು ಕಾಭೂವಳಯ . . . ಚಾಲಿಸಿಹುದದಕರಸಯೆರಡೇ ಲಕ್ಷ ಲವಣಾಂಬು (ಸಂಭಪ. ೧೧-೭). **ಚಾಳವಿಸು:** ೪. ಹೆಚ್ಚುವಂತೆ ಮಾಡು ; ಅಧಿಕಗೊಳಿಸು : ಮೇಲೆ ಮೇಲಭಿಲಾಷೆ ಧೈರ್ಯವ ಚಾಳವಿಸೆ ಪರಿತೋಷಪೂರಣದೇಳುಮುಳುಗಾಯ್ತುತ್ತರಕೆ ನಸು ಬಾಗಿದಳು ಶಿರವ (ಕುಮಾ.ಅ. ೭-೦೦೩). ೫. ಚಲಿಸು; ನಡೆ; ಮುಂನುಗ್ಗು : ಚಾಳವಿಸಿದುದು ವಿಷಯ ಸೌಖ್ಯದ ಮೇಲೆ ಮನ (ನಿಭಾಗ. ೩-೩-೫). **ಚಾಳಿಸು**$_2$ : ೧. "ಚಾಳಿಸು–ಚಾಪಲ್ಯೇ" (ಶಮದ). ೨. ಕೈಲ ಸುಂಕುಳವುಂ ಚಾಳಿಪ ಮಲ್ಲ ಜಟ್ಟಿಗಳಿಂ (ಕುಸುಮಾ. ೩-೮೭). ೫. ಚಾಳಿಸಬೇಡ ವಿಗ್ರಹಕೆ ವಿಕಳ ಬಲನಿವನು (ಕುಮಾ.ಕ. ೧೩-೫). ೬. ನಿವಾರಿಸು ; ಹೋಗಲಾಡಿಸು : ಪಾಲುಂನೇಟಿಲ ಪಣ್ಗಳನಾಲೋಚಿಸದಧಿಕವಾಗಿ ಕೊಂಡತಿವಿಷವುಂ ಚಾಳಿ[ಪಾಠಾಂ. ಲಿ]ಸುಗುಂ ನೆಲ್ಲಿಯಕಾಯ್ (ಖಮದ. ೨-೮೦). ೭. ಹಾಳು ಮಾಡು ; ಕಳೆ: ಬಂದೆ ರತಿಗೊಡದೆ ಈ ಪೊತ್ತ ಚಾಳಿಸಿದೆ (ಪ್ರಾಕಾ. ೯-೩೦). ೮. ಸುಳ್ಳು ಹೇಳಿ ನಂಬಿಸು ; ಠಕ್ಕಿಸು : ಅದಕಲ್ಲ ನೋಡೊಂದು ನೋಂಪಿಯೆಂದೆಮ್ಮನೊಪ್ಪದಿ ಚಾಳಿಸುವುದೊಂದು ಬಗೆಯ (ಭರಪ. ೬-೨೦). ೯. ಬಿಡು ; ತ್ಯಜಿಸು ; ದೂರಮಾಡು (?): ಬೇಡ ಚಾಳಿಸುವನಾನಾಡ ಚಾಳಿಸುವನ ಕೂಡೆ ಜಾಣ್ಮೆಯ ತೋರುವಂತೆ ನೋಡಣ್ಣ ನಿನ್ನ ತಮ್ಮಂದಿರಾಟವನೆಂದ (ಭರಪ. ೪೫-೯೮) ; ಮೇಲಾದೊಡವೆಯ ಸೆಳೆಕೊಂಡಾತನ ಚಾಳಿಸಿ ಬಿಡು ನೀ ಮಗಳೆ (ಕಂನವಿ. ೬-೦೫೬) ; ಬಾಲಕಂ ತೊದಲಿಸುತೆ ನುಡಿದರಾಮೋದಮಂ ತಾಳದುರೆ ತಮುತಮಗೆ ತಾತಮಾತೆಯರದಂ ಚಾಳಿಸುತೆ ಜರೆದಪರೆ (ಪರಶು. ೦-೨೧). **ಚಾಳೈಸು**$_1$ : ೫. ತರುಗಳೊಳಡಗುತ್ತ ಕಡೆಗಣ್ಣಿನಲಿ ನೋಡುತ್ತ ತರಳೆ ಚಾಳೈಸಿದಳು (ನಿಭಾಗ. ೮-೦೦-೦೯). ೮. ಬಲ್ಲವೈ ನೀನಿಷ್ಟು ಜಾಣನೆಂಬುದ ಮಾತಿನಲ್ಲಿ ನಮ್ಮನು ಚಾಳೈಸದಿರು (ಭರಪ. ೪೮-೩೩). [ ಚಾಲನ + – ಇಸು$_3$ ]

**ಚಾಲು, ಚಾಲ್, ಚಾಲೂ, ಚಾಳಿ**$_2$**, ಚಾಳು**$_2$ (ನಾ). ೧. ಚಲಿಸುವಿಕೆ ; ಚಲನೆ : (ಕ). ೨. ಆರಂಭ ; ತೊಡಗುವಿಕೆ : ಈ ಬಲವು ಕಾರನ್ನು ಹೊಸದಾಗಿ 'ಚಾಲು' ಮಾಡುವಾಗಲೋ (Starting) ಗುಡ್ಡದ ರಸ್ತೆಯಲ್ಲಿ ಹತ್ತುವಾಗ ಕಾರು ಕಡಿಮೆಯ ವೇಗದಲ್ಲಿ ಹೋಗುವಾಗಲೋ ಬೇಕಾಗುತ್ತದೆ (ಶಿಲ್ಪನಾ. ೨೦೪). ೩. ನಡವಳಿಕೆ ; ವರ್ತನೆ ; ಸ್ವಭಾವ : ಈಗಲಾದರೂ ತಮ್ಮ ಚಾಲು ಬಿಡದೆ, ಮತ್ತೂ ಈ ಮೇಲೆ ಸರಕಾರದ ನಿಶಾನಿ ತಂದು, ನಮ್ಮ ಜನದ ಮೇಲೆ ಚಿಕ್ಕವುಟ್ಟ ಮಾತನಾಡಿದರು (ರಾಜೇಂದ್ರ. ೦೦೩). ೪. ಸಂಪ್ರದಾಯ ; ಪದ್ಧತಿ : ಗೌಡರು ಅಳಿಯತನಕ್ಕೆ ಅತ್ತೆಮನೆಗೆ ಹೋಗುತ್ತಿದ್ದಾಗಲೂ ಎರಡು ಮೂರು ದಿನಗಳು ಇದ್ದು ಬರುವುದೇ 'ಚಾಲಾ' ಗಿತ್ತು (ನನ್ನೂರು. ೦೨೭). ೫. ಚಲಾವಣೆ ; ಬಳಕೆ ; ಚಾಲ್ತಿ : ಕಟುವಿಲ್ಲದ ಎಮ್ಮೆಗೆ ಕೊಟ್ಟರು ಮೂಜುಹೊನ್ನುಗಳ ಎರಡು ಸವಕಲು ಒಂದು ಚಾಲ[ಪಾಠಾಂ. ಸಲ್ಲಲೆ]ಇಲ್ಲ (ಪುರಂದ. ೩-೨೭-೪). ೬. ಕಂದುರೆಯ ಹೆಜ್ಜೆ,–ನಡೆ : (ಕ). ೭. [ಸಂಗೀತ] ಹಾಡಿನ ಧಾಟಿ : ಇಂಗ್ಲಿಷ್ ಪದ್ಯಗಳನ್ನು ಹಿಂದುಸ್ತಾನಿ ಚಾಲುಗಳಲ್ಲಿಯೂ ಆಲಾಪ ಮಾಡಿ ಆ ನಂತರ ಭಾರತೀಯ ಗೀತೆಗಳನ್ನು . . . ರಾಗ ಎಳೆಯುವನು (ಗಾಳಿಪ. ೪೪); ಆಮೇಲೆ ಶಂಕರಾಭರಣ ರಾಗ ಏಕತಾಳದ 'ಚಾಲು' ಕುಣಿತವನ್ನೂ ಕುಣಿದ (ನನ್ನೂರು. ೩೦೮). **ಚಾಲ್ :** ೩. ಹಾಗೆ ಬಂದಂತಾವರ ಚಾಲ್ ಚಲನ್ ವಗ್ಯೆರೆ ನಡತೆಗಳನ್ನು ಇನ್ನೂ ಅವರ ಸಮ್ಮಂಧವಾಗಿ ತಿಳಿಯತಕ್ಕ ಸಂಗತಿಗಳನ್ನೆಲ್ಲಾ ವಿಚಾರಿಸಿ ತಿಳಿದುಕೊಂಡು . . . ರಿಪೋರ್ಟ್ ಮಾಡತಕ್ಕದ್ದು (ಗ್ರಾಮಾಕ. ೪೭). **ಚಾಲೂ :** ೫. ಆಹಾರಧಾನ್ಯಗಳ ರೇಶನ್ನು ಚಾಲೂ ಆಗಿ . . . ಸಾಗಿಸಲ್ಪಡುತ್ತಿತ್ತು (ಪಾನಕ. ೬೧). **ಚಾಳಿ**$_2$ : ೩. ಕೀಳುಜಾತಿಯ ಮನೆಯಲುಂಬುದು ಮೇಲೆ ತಂದೆಯ ತಲೆಯನರಿವುದು ಚಾಳಿಯೇ ಭಕ್ತರಿಗೆ ಭಕ್ತರ ಭಕ್ತಿ ಏತಬಿದು (ಬಸವು. ೨೮-೩೨); ಭಾವಶುದ್ಧಿಯಲೈವರನು ಸಂಭಾವಿಸುವೆನವರವರ ಚಿತ್ತದ ಭಾವವಱಿದುಪಚರಿಸುವೆನು ಚತುರತೆಯ ಚಾಳಿಯಲಿ (ಕುಮಾ.ಅ. ೧೫-೨೩) ; ಹೊತ್ತ ಚೋಹಕೆ ಚಾಳಿ[ಪಾಠಾಂ. ಜೋಹದಜಾಳಿ]ಲೇಸಾಯಿತ್ತು(ಕೂರರಾ ೪-೪-೪೦). ೮. ಚಟ; ಅಭ್ಯಾಸ; ಗೀಳು : ಆಳುತೇಳುತ ಬೆರಳು ಚಾಳಿ ಮಿಡುಕುವ ಬಾಯಿ ಮೇಳದೊಳು ತೊಡಕ ಬಿಡದವನ ಜವವದುವೆ ಹಾಳುಮನೆಯಂತೆ (ಸರ್ವಜ್ಞ. ೦೭೩) : ದೇವಲೋಕದವರಿಗೂ ಅಂಥ ಚಾಳಿ ತಪ್ಪಿದ್ದಲ್ಲ (ಕಲ್ಲೇಶಾ. ೦೮೭) : ಯಾವ ಮನೆಹಾಳು ನನಮಗ ಕಲಿಸಿದನೋ ಈ ಚಾಳೀನ (ಬೆಂಗಬ. ೬): ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ (ಗಾದ). ೯. ಬಗೆ ; ರೀತಿ : ತಾಳಮೇಳದ ಗತಿಯ ಗಮಕದ ಕೀಲಣೆಯ ಕಾಲಾಟ ವಿಘಟಿಸಿ ಚಾಳಿಯಲಿ ತಬ್ಬಿಬ್ಬುವೋಗುತ

ಲಿರ್ದಳಾ ಮಾಯೆ (ಪ್ರಭುಲೀ. ೭-೨೬): ವನರುಹಾಕ್ಷನ ಧ್ಯಾನದಲಿ ಕೇಳಿನಕುಲೇಶ್ವರ ಸತಿಯರೀತನನನುವಜಾತು ಹೊದ್ದಿದರು ಹರಿಮೇಖಲೆಯ ಚಾ[ಪಾಠಾಂ. ಧಾ]ಳಿಯಲಿ (ತೊರಿರಾ. ೧-೫-೪೭). ೧೦. ಮಲ್ಲಯುದ್ಧದ ಒಂದು ವರಸೆ: ಭಾಳನೇತ್ರನ ವರದ ಗರುಡಿಯ ಚಾ[ಪಾಠಾಂ. ಜಾ]ಳಿಯನಿತುಂಟನಿತನಿವರಲಿ ಮೇಳವಿಸಿದನು (ತೊರಿರಾ. ೧-೦೨-೧): ಸೂಳುದೆಗದದ್ರಿಯುಲಿ ತರುಶಾಖಾಳಿಯಲಿ ಮುಪ್ಪಿಯಲಿ ಳಾಗಿನ ಚಾಳಿಯಲಿ ಮಂಡಿಯಲಿ ಕಾದಿದರು (ಅನಂರಾ. ೪-೧-೪೫). ಚಾಳು$_{2}$: ಲ. ತಾಳದ ಶ್ಯಾವದ ಲೋಲಭಕ್ತರಿಗೀವ ಚಾಳಿಹುದೀತಗೆ ಪಾಲಿಸಲೆಂತು (ಅಂಬಕ. ೧-೧೧೧).

ಚಾಳಿ ಬಿಡು=ಸ್ನೇಹ ಬಿಡು ; ಸಂಗ ಬಿಡು: ಇಷ್ಟು ಸಣ್ಣ ಮಾತಿಗಾಗಿ ಅಣ್ಣ ತಂಗಿಯರಲ್ಲಿ ವೈಮನಸ್ಸು ಹುಟ್ಟಿತು ; ಮೊದ ಮೊದಲು ಹುಡುಗರಂತೆ ಚಾಳಿ ಬಿಟ್ಟರು (ಭೂವಿಶಾ. ४೦). [ ←ಹಿಂ. ಮರಾ. ಚಾಲೂ ]

**ಚಾಲುಕ್ಯ, ಚಾಳುಕ್ಯ** (ನಾ). ಕರ್ನಾಟಕದ ಒಂದು ಪ್ರಾಚೀನ ರಾಜವಂಶದ ಹೆಸರು: ಚಾಲುಕ್ಯರ ಶಿಲ್ಪದಲ್ಲಿ ನಾಗರ ಮತ್ತು ದ್ರಾವಿಡ ರೀತಿಗಳ ಮಿಳಿತವಿರುವುದರಿಂದ ಅದನ್ನೇ ವೇಸರವೆಂದು ಹೇಳಬಹುದು(ಭಾರದ.೪೯೨). ಚಾಳುಕ್ಯ : ಕಾದಿಯೋಡಿದೊಡೆಟ್ಟಿದನಟ್ಟಿ ಮುಟ್ಟಿ ಪಿಡಿದಂ ಚಾಳುಕ್ಯ ಚಕ್ರೇಶ್ವರಂ(ಕಾವ್ಯಾವ. ೭೭); ಕದಂಬರು . . . ಚಾಳುಕ್ಯರು, ಹೊಯ್ಸಳರು– ಇವರ ಪ್ರೋತ್ಸಾಹದಿಂದ ಜೈನಧರ್ಮ ಹನ್ನೆರಡನೇ ಶತಮಾನದವರೆಗೆ ಬೆಳೆದು ಬೆಳಗಿತು (ಕಜಾಅ. ೭೯): ಚಾಳುಕ್ಯರ ಶಿಲ್ಪವನ್ನನುಸರಿಸಿಯೇ ಪಲ್ಲವರು ದೇವಾಲಯಗಳನ್ನು ನಿರ್ಮಿಸಿದರು (ಹೊಯ್ಸವಾ. ೩).

ಚಾಳುಕ್ಯಕಂಠೀರವ = ಚಾಳುಕ್ಯ ಪಂಚಾನನ ; ಕಾಂತೆಯ ಮುಂದೆ ಪೂಣ್ದು ನುಡಿದಂ ಚಾಳುಕ್ಯ ಕಂಠೀರವಂ (ಗದಾಯು. ೧-೭೪). ಚಾಳುಕ್ಯ ಚಕ್ರವರ್ತಿ = ಒಂದು ಬಿರುದು: ಚಾಳುಕ್ಯ ಚಕ್ರವರ್ತಿ ಶ್ರೀಸಾಹಸಭೀಮವಿಜಯದೊಳ್ ಭೀಮಸೇನಪ್ರತಿಜ್ಞಾವರ್ಣನಂ (ಗದಾಯು. ೧-೭೪ವ). ಚಾಳುಕ್ಯ ನಾರಾಯಣ = ಚಾಳುಕ್ಯರಲ್ಲಿ ನಾರಾಯಣ ನಂತಿರುವವನು ; ಒಂದಂ ಬಿರುದಂ : ಶಂಕರ ಕಲ್ಪದ್ರುಮನೀಗಭೀಪ್ಸ ಫಲಮಂ ಚಾಳುಕ್ಯ ನಾರಾಯಣಂ (ಗದಾಯು. ೧-೨). ಚಾಳುಕ್ಯಪಂಚಾನನ = ಚಾಳುಕ್ಯರಲ್ಲಿ ಸಿಂಹದಂತಿರುವವನಂ ; ಒಂದು ಬಿರುದು: ಚಾಳುಕ್ಯ ಪಞ್ಚಾನನಂ ಶ್ರೀಮತ್ ಪಙ್ಚಲದೇವರ್ (ಎಇ. VI, ೨೫೯-೪ : 976). ಚಾಳುಕ್ಯ ಮಾರ್ತಂಡ = ಚಾಳುಕ್ಯರಲ್ಲಿ ಸೂರ್ಯನಂತಿರುವವನಂ ; ಒಂದು ಬಿರುದು : ಮಾಟ್ಕೆ ಮಂಗಲಮುಚ್ಚಂಡಕರಂ ಮಹೀವಲಯದೊಳ್ ಚಾಳುಕ್ಯಮಾರ್ತಂಡನಾ (ಗದಾಯು. ೧-೪). ಚಾಳುಕ್ಯಾಭರಣ = ಚಾಳುಕ್ಯರಿಗೆ ಆಭರಣದಂತಿರುವವನು ; ಒಂದು ಬಿರುದಂ : ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ (ಸೌಇಇ. XX, ४೬-४ ; 1072).

[ ಸಂ. ]

**ಚಾಲುಗೇಣಿ**(ನಾ). ವರ್ಷಕೊಮ್ಮೆ ಕೊಡುವ ಗೇಣಿ,–ಗುಂತ್ತಿಗೆ : ಮಳೆ ಬಿದ್ದೊಡನೆ ಅವರು ಕೆಲಸಕ್ಕೆ ಬರುವುದನ್ನು ನಿಲ್ಲಿಸಿದರು, ಅವರದೂ ತಪ್ಪಲ್ಲ ಏಕೆಂದರೆ ಅವರೂ ಹಂಗಿನ ಚಾಲುಗೇಣಿ ಒಕ್ಕಲುಗಳೇ (ಚಾಳಿ. ೩೬).

[ ಚಾಲು + ಗೇಣಿ (<ಕೇಣ್ಣ$_{3}$) ]

**ಚಾಲುವರಿ, ಚಾರಿವರ್ಿ, ಚಾರ್ವರಿ, ಚಾಲವರಿ, ಚಾಲುವರೆ, ಚಾಲ್ವರಿ** (ಕ್ರಿ).ಬೇಡು; ಅಂಗಲಾಚು; ಬಹಳವಾಗಿ ಬೇಡಿಕೊಳ್ಳು; ಗೋಗರೆ: ಚಾಲುವರಿದು ನಾನು ಅವರನ್ನು ಇಲ್ಲಿಗೆ ಕರೆಸಿಕೊಂಡಿದ್ದೇನೆ (ಹುಚ್ಚಾಟ. ೧೧) ; ಕಾಕಾ ಊಟ ಮಾಡಿಕೊಂಡು ಹೋಗಿರೆಂದು ಚಾಲುವರಿದ (ವ್ಯನಿ. ೨೬೯). ಚಾರಿವರ್ಿ : ಥಲವಿಡಿದೊಂದನೆಳಸಿ ಚಾರಿವರಿಯುದ ನೆಲೆವಿಡಿದೊಂದಚೀೂಳಿರದ ನೆಚೀನಿಂದ ನೀರ ತೆಪ್ಪದವೊಲು (ಹದಿಬ. ೩-೩೭). ಚಾರ್ವರಿ : ಚಂದಿರನ ಕಾಣುತಲೆ ಚಾರ್ವರಿಯೆ ಚಿತ್ತಾ (ಚಾವದಿ. ४೦). ಚಾಲವರಿ : [illegible] ಚಾಲೆಯುರೆಲ್ಲರಿಗೆ (ವಿದಾಕ್ಯ. ೧೫೫-೨) : ಆವ ಕಾವ ಗೋವ ಚಾಲವರಿದು ಕೂಗಿ ಶುದ್ಧ ಲಾವಕರಟ್ಟುಳಿ ಬಿಡಿಸು (ಮೋಕ್ಷದೀ. ೩೮-೫). ಚಾಲುವರೆ : ಬೇಕಾದಷ್ಟು ಚಾಲುವರೆದು ಹೇಳತಿದ್ದೆ (ನಮ್ಮಬ. ೦೨) ; ವೇಲೂರ ಮುತ್ತಿಗೆಯನ್ನೆಬ್ಬಿಸಬೇಕೆಂತಲೂ ಚಾಲುವರೆದುದರಿಂದ ಕೂಟ್‌ನು ಆ ಮಾತಿಗೆ ಒಡಂಬಟ್ಟು (ದರಿಸಂ. ೦೫೪). ಚಾಲ್ವರಿ : ಹಲವು ದೈವರಿಗೆ ಕೇವಲ ಚಾಲ್ವರಿದರೆ ಹಲಬುವುದಲ್ಲದೆ ಬಳಲಿಕೆ ಪೋಗೋದೇನಯ್ಯ (ಮೋಕ್ಷದೀ. ೩೨-೨) ; ಕೈಲಿ ಬೆಣ್ಣೆಯಿದ್ದವನು ತುಪ್ಪಕೆ ಚಾಲ್ವರಿವುದುಂಟೆ (ಕುಡೀಲೋ. ೧೮). 'ಅಲ್ವರಿ' ಪರಾ. [ ? ]

**ಚಾಲುವರೆ** 'ಚಾಲುವರಿ' ನೋ.

**ಚಾಲೂ** 'ಚಾಲು' ನೋ.

**ಚಾಲೂಕು** 'ಚಾಲಾಕು' ನೋ.

**ಚಾಲೋಕು** 'ಚಾಲಾಕು' ನೋ.

**ಚಾಲ್ತಿ** 'ಚಾಲತಿ' ನೋ.

**ಚಾಲ್ತಿಸಾಲು** 'ಚಾಲತಿಸಾಲು' ನೋ.

**ಚಾಲ್ವರಿ** 'ಚಾಲುವರಿ' ನೋ.

**ಚಾವಂಡಯ್ಯ** (ನಾ). ಒಬ್ಬಾತನ ಹೆಸರು : ಚಾವಣ್ಡಯ್ಯಂಗೆ ಇವರ್ಪೇಟಿ ನಾಡುಸಾಸನಂಗೊಟ್ಟ (ಎಕ. IX, ಹೊಸಕೋ. ೧೧೧-೭ : 997).

[ <ಚಾವುಂಡ + ಅಯ್ಯ$_{1}$ ]

**ಚಾವಕ** (ನಾ). [ಗಣಿತ] ಒಂಭತ್ತು ಎಂಬ ಸಂಖ್ಯೆಯ ಸಂಕೇತ : ನವ . . . ಚಾವಕ, ಕೌಶವ ? . . . ನಾಟ್ಯಾಂಗ, ಇಂತಿನಿತುಂ ೯ಕ್ಕೆ ಪೆಸರು (ವ್ಯವಹಾ. ೧೧). P 'ನವಕ' ಇರಬಹುದೆ ?

**ಚಾವಗಾವುಂಡ** (ನಾ). ಒಬ್ಬ ವ್ಯಕ್ತಿಯ ಹೆಸರು : ಲಕಗಾವುಣ್ಡಂ ಭವಗಾವುಣ್ಡ ಚಾವಗಾವುಣ್ಡ ಭಸಗಾವುಣ್ಡ (ಎಕ. IV, ಹೆಗ್ಗಡ. ೦೦೪-೯ : 1087).

[ <ಚಾವ + ಗಾವುಂಡ (<ಗಾಮುಂಡ) ]

**ಚಾವಟಿ** 'ಚಾಟಿ$_{1}$' ನೋ.

**ಚಾವಟೆಯ** 'ಚಾಪಟಿಯ' ನೋ.

**ಚಾವಡಿ, ಚಾವಡೆ, ಚಾವುಡಿ, ಥಾವಡಿ** (ನಾ). ೧. ಆಸ್ಥಾನ ; ಸಭಾಮಂದಿರ ; ಓಲಗಶಾಲೆ : ಮುತ್ತಿನೊಳೆಸೆವ ಚಾವಡಿಯೊಳು ಕುಳ್ಳಿರ್ದು . . . ನುಡಿದನು (ಅಂಜನ. ೭-೧೩೭) ; ಮರುಳು ತಂಡಗಳಾಪ್ರಸ್ಯೆನ್ಯವು ನಿರುತ ಚಾವಡಿ ರುದ್ರಭೂಮಿಯು (ಕೌಶಿರಾ. ೨-೨೨) ; ಭಿತ್ತಿಯೊಳ್ ಪೂಜಿಮುಟ್ಟು ಚಾವಡಿ ಮದನಕೈಯತ್ತಿದ. ಪದೆವುದಂಡೆಗಳು . . . ರಂಜಿಸಿತು (ಮೋಹಕ. ೨೨-೭). ೨. ಹಳ್ಳಿಯಲ್ಲಿಯ ಪಂಚಾಯಿತಿ ಸಭೆ ಸೇರುವ ಸ್ಥಳ ; ಹಳ್ಳಿಯ ಕಚೇರಿ ; ಗ್ರಾಮಕಚೇರಿ : ಈತನು ಗ್ರಾಮದ ಚಾವಡಿಯಲ್ಲಿ ಬಂದ ವ್ಯವಹಾರಗಳನ್ನು ಇತ್ಯರ್ಥ ಪಡಿಸುತ್ತಿರುವಾಗ . . . ಸೈನ್ಯಸಮೇತನಾಗಿ ಬಂದು (ಸಂಸಕ. ೧೧೭) ; ಊರು ಎನಿಸಿಕೊಳ್ಳುವುದಕ್ಕೆ ಒಂದು ' ಚಾವಡಿ ' ಇರಬೇಡವೆ ? (ಗ್ರಾಗು. ೧) ; ಚಾವಡಿಯಲ್ಲಿ ಕುಳಿತು ನಡೆಸುವ ತಾಳಮದ್ದಳೆಯ ಸಂಪ್ರದಾಯ (ಹುಕ್ಕಬ. ೧೬). ೩. ಮನೆಯ ಮುಂದಿನ ಜಗುಲಿ,–ಕಟ್ಟೆ. ೪. ಆಶ್ರಯಸ್ಥಾನ : "ಹಕ್ಕಿ ಗವಿ . . . ಚಾವಡಿ ಪೊಟಲ್ ಬೀಡುವಾಗರವೆಂದೊಡಾಶ್ರಯಕ ನಾಮಮುಕ್ಕುಂ " (ಕಬ್ಬಿಕ್ಯ. ೬೩) ; " ಚಾವಡಿಯು ಮೇರೆಯಾಗರ ವಸದಂ " (ಕವಿಕಂ. ೦೫೩). ೫. ಕೊತವಾಲನ ಕಚೇರಿ ; ಪೋಲೀಸ ಚೌಕಿ : ಚೆನ್ನಪಟ್ಟಣದ ಚಾವಡಿಗೆ ಸಲುವ ಕಿಜುಗವರ ಸ್ಥಳದ ಸುಳ್ಳೆರಿಯ ಕಾಲುವೇ ಹಿರಿಯಕ ಮನೆಯ ಮಣಪ್ರಮಾಣಿನಲ್ಲಿ ಕುಳಬಲಿ ಸಾಂಮ್ಯ ಸಹ (ಎಕ. IX (8), ದನ್ನಪ. ೨೯೯-೮ : 1387) ; ಕಳ್ಳನನ್ನು ಹಿಡಿದು . . . ಕಟ್ಟಿ ಚಾವಡಿಗೆ ತೆಕ್ಕೊಂಡು ಹೋಗಿ ಲಾಲಕಂಭಕ್ಕೆ ಬಿಗಿದರು (ಕಥಾಮಂ. IV, ೨೭)

**ಚಾವಡೆ :** ೨. ಮುಳುವಾಯ - ಚಾವಡೆಯ ಮಂನೆಯ ಶ್ರೀಮನ್ಮಹಾನಾಯಜ್ಯಾಚಾರ್ಯರ . . . ಮಕ್ಕಳು (ಎಕ. X, ಚಿಂತಾಮ. ೩೯-೩ ; 1407?). **ಚಾವುಡಿ :** ೫. ಮೇಷಲಗ್ನ ಉದಯದಲಿ ಘಳಿಗೆ ೬ ಯಲೂ ಬೇಲೂರು ಚಾವುಡಿಗೆ ಸಲುವ ಎಲಹಕ್ಕ ನಾಡ ಶಿವನಸಮುದ್ರ ಸೀಮೆ ವೊಳಗಣ . . . ಸರ್ವ್ವಮಾನ್ಯದ ಅಗ್ರಹಾರದಲೂ (ಎಕ. IX, ನೆಂಮಂ. ೩೦-೩ ; 1583). **ಛಾವಡಿ :** ೩. ಮಾತನಾಡುತ್ತ ನಮ್ಮ ಛಾವಡಿಯವರೆಗೂ ಅವನನ್ನ ಕರೆದುಕೊಂಡು ಹೋದೆ (ತುಬಮಿ. ೪೪).

[ ←ಹಿಂ. ಮರಾ. ಚಾವಡೀ ]

**ಚಾವಡಿಕಾರ** (ನಾ). ಪಂಚಾಯತಿಯ ಸದಸ್ಯ ; ಪಂಚ (ಉಕ) : ಶಿವಾಚಾರದ ನಂಜಪ್ಪಯೆಂಬ ಚಾವಡಿಕಾರ ಬಂದು (ರಾಜೇಂದ್ರ. ೧೪೧).

[ ಚಾವಡಿ + – ಕಾರ$_1$ (< – ಕಾಜ) ]

**ಚಾವಡಿಮನೆ** (ನಾ). ಚಾವಡಿಯ ಮನೆ; ಸಭಾಮಂದಿರ; ಓಲಗಶಾಲೆ: ದಿನಪನುದಯಾಚಲದ ಚಾವಡಿಮನೆಗೆ ಬರೆ ಬಲವರಡು ಗಳಗರ್ಜನದಿ ಬಂದೊಡ್ಡಿದವು ಕಳನೊಳು ಖತಿಯ ಪಡಪಿನಲಿ (ಕುವ್ಯಾಭೀ. ೬-೮)

[ ಚಾವಡಿ + ಮನೆ ]

**ಚಾವಡಿವಳಿತ** (ನಾ). ಆಸ್ಥಾನದ ಅಧಿಕಾರ ; ಸೀಮೆಯ ಆಡಳಿತ : ಈ ನಮ್ಮ ಅವಸ್ಥೆಯ ಗುಟ್ಟನ್ನು ಭೇದಿಸಿಕೊಳ್ಳಬಲ್ಲ ಗೂಢಚಾರ ಪ್ರಣಿಧಿಗಳು ಮೈಸೂರ ಮಹಾಸ್ವಾಮಿಯವರ ಚಾವಡಿವಳಿತದಲ್ಲಿಲ್ಲದಿಲ್ಲವೆಂಬ ನಿಶ್ಚಯವೂ ನಮ್ಮನ್ನು ಕದಡಿರಲಿಲ್ಲ (ಚಬ್ಯಅ. ೬೫-೧೯).

[ ಚಾವಡಿ + ವಳಿತ (=ವಲಿತ) ]

**ಚಾವಡೆ** ‘ಚಾವಡಿ’ ನೋ.

**ಚಾವಣಿ** ‘ಛಾವಣಿ’ ನೋ.

**ಚಾವಣಿಗೆಗೊಳು** (ಕ್ರಿ): ಆಶ್ರಯಕೊಡು (?) : ತಲೆಗಾಯಿದುತ್ತಮರನೂ ಚಾವಣಿಗೆಗೊಳುತಲ್ಲಿಗಲ್ಲಿಗುರೆ. ಕನಕಮಣಿ ಕೇವಲುತ್ಕ್ಯಷ್ಟದಿಂ (ಪರಬು. ೧೦.೦೫). [ ಚಾವಣಿಗೆ ? + ಕೊಳು (<ಕೊಳ್$_1$) ]

**ಚಾವಬ್ಬೆ** (ನಾ). ಒಬ್ಬಾಕೆಯ ಹೆಸರು: ಚಾವಬ್ಬೆಯ ಮಗಂ ಪೋಚನಕಲ್ಲ (ವ್ಯಅರಿ. ೧೯೪೨, ೨-೬ : 973 ?) [ < ಚಾವು + ಅಬ್ಬೆ$_1$ ]

**ಚಾವಯ್ಯ** (ನಾ). ಒಬ್ಬಾತನ ಹೆಸರು : ಕನ್ನಬ್ಬರಸಿಯ ತಮ್ಮ ಚಾವಯ್ಯನುಂ ದಮ್ಮಡಯ್ಯನುಂ ನಾಗವರ್ಮನುಂ ಬಂದಿಲ್ಲಿ ದೇವರಂ ಬಂದಿಸಿದರ್ (ಎಕ. II, ೪೬೬-೧ : ಸು. 1000).

[ < ಚಾವು + ಅಯ್ಯ$_1$ ]

**ಚಾವಲ, ಚಾವಳ, ಜಾವಳ$_1$** (ನಾ). ಚಾಪಲ್ಯ; ಚಪಲತನ; ದುಡುಕುವ ಸ್ವಭಾವ. ‘ಚಾವಲಿಸು’ ಪರಾ. **ಚಾವಳ :** ಪತ್ಸಕ್ಕೆ ಪತ್ಸಂ – ಕಪಿಲಾ – ಕವಿಲೆ . . . ಚಾವಳ – ಜಾವಳ (ಶಮದ. ೨೩೮ ಪ್ರಯೋ). **ಜಾವಳ$_1$ :** “ಜಾವಳಮೆನಲ್ಕೆ ಚಾವಲಮದು ತಾಂ” (ಕವಿಕಂ. ೨೦೦).

[ < ಸಂ. ಚಾಪಲ ]

**ಚಾವಲಿಸು, ಚಾವಳಿಸು, ಜಾವಳಿಸು** (ಕ್ರಿ). ೧. ಚಪಲತೆಯನ್ನುಂಟುಮಾಡು ; ದುಡುಕುವಂತೆ ಮಾಡು : ಕುಲಮದಪೊಂದು . . . ರಾಜ್ಯಮದಪೊಂದಿನಿತುಂ ಮದಮೆಯ್ದೆ ಕೂಡೆ ಚಾ[ಪಾಠಾಂ. ಜಾ]ವಲಿಸೆ ಮದೋದ್ಧತರ್ಕಳಿರಲಾರದೆ ಪೇಟ್ ಬೆಸನಾವುದೆಂದು . . . ಕದರ್ಥಿಸಿದರ್ ಸಹಸ್ರನಂದನರ್ (ಅಜಿಪು. ೧೦-೧೦). **ಚಾವಳಿಸು :** ೨. ಅಲ್ಲಗಳೆ ; ಜರೆದು ಮಾತನಾಡು ; ಹೀಯಾಳಿಸು : ಇಳೆಯಂ ತಾಳ್ದಿದ . . . ಘೂಮಧ್ವಜಂ ರಘುಳಮಂ ಮೇಲೆ ಕಡಂಗಿ ಪೊಯ್ದು ಮಿಳಿಕೆಯ್ದೇನಾನುಮಂ ಕೀಟ್ ಚಾ[ಪಾಠಾಂ. ಜಾ]ವಳಿಪಂತಾದುದು ಜೀರ್ಣಪರ್ಣಪರಾಪ ಪ್ರಧ್ವಾನದಿಂ ಮಾರುತಂ (ಪಂರಾಮಾ. ೬-೦೦೨). ೩. ಧ್ವನಿಮಾಡು ; ತೊಂಡುಗೆಡೆ : ಕಾಮನ ಡಾಮರದಮಲ್ಲಿ ಕೋಕಿಲೋತ್ಕರರವಮಲ್ಲಿ ಚಾವಳಿಪ ರಾಜಶುಕವ್ರಜಮಲ್ಲಿ . . . ಸಾರದಿರಾ ಮರನಂ ವಸಂತದೊಳ್ (ಕಾವ್ಯಾವ. ೩೬೬) ; ಅರಗಿಳಿವಿಂಡು ಬಂಡಳಿಪ ಸಾರಿಕೆ ಚಾವಳಿಪನ್ನದಾಳಿ ಗಾವರಿಸುವ ಸೋಗೆ (ಪುಷ್ಪಪು. ೦೪-೨೩). **ಜಾವಳಿಸು :** ೨. ಉದ್ಭ್ರಮರ ಮುದ್ಭ್ರಮರಂಗಳ ಗಾವರಕ್ಕೆ ಜಾ[ಪಾಠಾಂ. ಚಾ, ಬಾ]ವಳಿಸಿ ಚಡಾಳದೊಳ್ಮೊರೆವುವು (ಅನಂಪು. ೧-೬೬). [ ಚಾವಲ + – ಇಸು$_3$ ]

**ಚಾವಳ** ‘ಚಾವಲ’ ನೋ.

**ಚಾವಳಿಸು** ‘ಚಾವಲಿಸು’ ನೋ.

**ಚಾವಿ** (ನಾ). ಬೀಗದ ಕೈ; ಕೀಲಿ ಕೈ: ಒಳಗಣ ಹೊರಗಣ ಬಧ್ಯುಗಳಿಗೆ ಎಷ್ಟು ಚಾವಿ – ಬೀಗದ ಕಯ್ಗಳು ? (ಮಂತ್ರಶ. ೫೩-೨೩) : ಚಾವೀನ ತಗೊಂಬಾಂತ ಹೇಳಿದ್ರು (ದೇಶಪು. ೯೩).

[ ←ಹಿಂ. ಚಾಬೀ ; ಮರಾ. ಚಾವೀ. ]

**ಚಾವುಂಡ** (ನಾ). ಒಬ್ಬಾತನ ಹೆಸರು : ನೆಗಟ್ದ ಮಾಬಳಯ್ಯಂಗನೇಕ ಗುಣರತ್ನರಾಶಿ ಮನುಮುನಿಚರಿತಂ ವಿನಯವಿಭೂಷಣನೊಳ್ಪಿಂಗಿನೆಯಂ ಮೊದಲೆನಿಸಿ ಪುಟ್ಟಿದೊಂ ಚಾವುಣ್ಡಂ (ಎಕ. III, ತಿರುಮ. ೬೯-೦೫ : ಸು. 980). [ < ಚಾಮುಂಡ ]

**ಚಾವುಂಡಿ, ಚವಡಿ, ಚವುಡಿ, ಚೌಡಿ** (ನಾ). = ಚಾಮುಂಡಿ : ಮಕಾರಕ್ಕೆ ವಕಾರಂ – ಅಮರೀ – ಅವರಿ . . . ಚಾಮುಂಡೀ – ಚಾವುಂಡಿ (ಶಮದ. ೨೩೩ ಪ್ರಯೋ). **ಚವಡಿ :** ಬಲವ್ಪದಂನಾಯಕರ ಪ್ರಧಾನ ಕಳವತಿಪ ಚವಡಿಯಕ್ಕನವರು (ಎಕ. X, ಕೋಲಾರ. ೩೨-೯ ; 1346). **ಚವುಡಿ :** ಅವನು ಚವುಡಿಯನ್ನು ಪೂಜಿಸುತ್ತಿದ್ದಾನೆ (ರೂಢಿ). **ಚೌಡಿ:** ಬೆಟ್ಟದ ಚೌಡಿಗೆ ಗಡಿಯ ಭೈರವನಿಗೆ ಕೊಟ್ಟೆವು ನರಬಲಿಯೆನುತ (ಕಂನವಿ. ೩-೬೦).

[ < ಚಾಮುಂಡಿ ]

**ಚಾವುಡಿ** ‘ಚಾವಡಿ’ ನೋ.

**ಚಾಷ** (ನಾ). ಒಂದು ಬಗೆಯ ನೀಲಿಬಣ್ಣದ ಪಕ್ಷಿ ; ಶಕುನದ ಪಕ್ಷಿ ; “ಚಾಷಃ, ಕಿಕೀದಿವಿಃ – ೨ ಹಂಗನಪಕ್ಕೀ ಹೆಸರು. ಶಕುನದ ಹಕ್ಕಿ, ಆಂಧ್ರದಲ್ಲಿ ಪಾಲಪಕ್ಷಿ” (ಸಿದ್ಧಾಂತಿ. ೧೩೮) : ತರದಿಂ ಚಾಷ[ಪಾಠಾಂ. ಪ] ಮಯೂರ ತಾರ ತಿಳಿಗೋಕ್ಷೀರಾಬ್ಧ ನೀರೋಪಮಂ ದೊರೆಕೊಳ್ಗುಂ ಶಶಿ ಭಾನುಗಳ್ಗೆ (ಶೋಕಶೋಷ. ೪-೨೯) ; ಚಾಷ ಭಾಸ ಹಂಸ ಬಕ . . . ಸುಪರ್ಣಾದಿ ಪಕ್ಷಿ ಸಮೂಹಗಳಂ (ಧಾರಶಾಂ. ೩೬-೨೬೪). [ ಸಂ. ]

**ಚಾಷಗತಿ** (ನಾ). [ನಾಟ್ಯ] ನರ್ತನದಲ್ಲಿ ಒಂದು ಬಗೆಯ ಪಾದಚಲನೆ ; “ಬಲಗಾಲನ್ನು ಒಂದು ಗೇಣಂ ಮುಂದಿರಿಸಿ ಪುನಃ ಅದೇ ಕಾಲನ್ನು ಜಾಗ್ರತೆ ಎಡದು ಗೇಣು ಹಿಂದಕ್ಕಿರಿಸಿ ನೆಗೆದಂ ಸ್ವಭಾವವಾಗಿ ನಿಂತುಕೊಂಡು ಹೆದರಿಕೆಯಿಂದ ಕೂಡಿರುವಂತೆ ಹಿಂದಕ್ಕೂ ಮುಂದಕ್ಕೂ ಅನೇಕಾವರ್ತಿ ಚಲಿಸುವುದು” (ನಾಸ್ಯರಂ. ೩೧೬ ಗದ್ಯಾನುವಾದ) : ಮಿಸುಗುವ ಸಮಪಾದಂ ರಂಜಿಸುತ್ತಿರ್ಪ ಸ್ಥಿತಾವರ್ತ ಶಕಟಾಸ್ಯಂಗಳ್ ಪಸರಿಪ ವಿಚ್ಯವೆಯಧ್ಯರ್ಧ ಸಮಂತಾ ಚಾಷಗತಿಯುಮಂಬುಜಗಾಧೀ (ನಾಸ್ಯರಂ. ೬-೨). [ ಚಾಷ + ಗತಿ ]

**ಚಾಸರಾಳ್** (ನಾ). ಒಂದು ಊರಿನ ಹೆಸರಂ (?) : ಶ್ರೀ ಚಾಸರಾಳ್ ಪೊನ್ನಾಕವಳಿಗೆ ಕಾಳಮ್ಮನ್ ಮಾನ್ದಳಿ ಬೀರಿಯದುಳ್ಳೆ ಬಲಮೆಮ್ಬರಸರ ಕಾಳೆಗದುಳ್ಳೆ ಎಟಾದು ಸತ್ತನ್ (ಎಕ. XVI, ತುಮಕೂ. ೦೦೦-೦ ; 780).

[ ? ]

**ಚಾಹಡ** ‘ಚಹಡ’ ನೋ.

**ಚಾಹಿಯ** (ನಾ). ಛತ್ರಿ ಹಿಡಿಯುವವನು (?) : ಸಿಡಿದು ಕರ್ಣನ ತಲೆ ಧರಿತ್ರಿಗೆ ಕೆಡೆಯೆ . . . ಹಡಪಿಗರು ಚಾಮರದ ಚಾಹಿಯರೊಡನೆ ನೆಲ ಕುರುಳಿದರು (ಕುವ್ಯಾಕ. ೦-೮). [ < ಪ್ರಾ. ಛಾಹಿ, ಛಾಹಿಯಾ = ನೆರಳು ]

**ಚಾಹುಲ್ಲು** (ನಾ). ಶುಂಠೀಹುಲ್ಲು; “ಭೂತೃಣಾ” (ಶಂಬಶ.). [ ? ]

**ಚಾಳ, ಚಾಳು$_1$** (ನಾ).(ಉಕ) ಒಂದೇ ಬಗೆಯ ಮನೆಗಳ ಸಾಲು; ಹಲವು ಮನೆಗಳನ್ನೊಳಗೊಂಡ ವಠಾರ: ಗಿರಣಿಯ ಕೂಲಿಕಾರರು ವಾಸಿಸುವ 'ಚಾಳ'ದಂಥ ಓಣಿ (ಮೋಹಲ. ೪೩೯): ದೊಡ್ಡ ದೊಡ್ಡ ಚಾಳಗಳನ್ನು ಕಟ್ಟಿಸುವವರು . . . ಗಿರಣಿಯ ಮಾಲಕರು ನಿಮ್ಮ ಕಣ್ಣ ಕಕ್ಷೆಯಲ್ಲಿ ಬರದಿರುವದು ವಿಚಿತ್ರವಾಗಿದೆ (ಮತ್ಕಮ. ೨೨೧). **ಚಾಳು$_1$**: ಆ ಚಾಳುಗಳನ್ನು ನೋಡಿ ಪಾರಿವಾಳಗಳನ್ನಿಡುವುದಕ್ಕೆ ಮಾಡಿದ ಪೆಟ್ಟಿಗೆಯು ನೆನಪಾಯಿತು ಶಾಮಣ್ಣನಿಗೆ (ಮೂರಾಬ. ೯೬): ನಮ್ಮ ಚಾಳಿನ ಬಾಡಿಗೆ ಎಷ್ಟು ವಸೂಲಾಯಿತು (ಹರಿಲ. ೮): ಮಳೆಗಾಲದಲ್ಲಿ ಚಾಳಿನಲ್ಲಿರುವವರ ಬವಣೆ ಹೇಳತೀರದು (ಸಾವಿಉ. ೧). [←ಮರಾ. ಚಾಳ್./ಸಂ. ಶಾಲಾ]

**ಚಾಳಂಕಿ** 'ಚಾಳಾಂಕಿ' ನೋ.

**ಚಾಳಕ$_1$** 'ಚಾಲಕ' ನೋ.

**ಚಾಳಕ$_2$, ಚಾಳ್ಕ** (ಗು). ೧. ತುಂಟತನದ; ಧೂರ್ತತೆಯುಳ್ಳ; ಕುಟಿಲವಾದ :(ಕ).(ನಾ). ೨. ತಂತ್ರಿ; ಉಪಾಯಗಾರ; ಧೂರ್ತ; "ಹಂಚಿಕೆಯುಳ್ಳವ, ಕಿಡಿಗೇಡಿ" (ಜಾನಕೋ. ೫೬): ಸರಡುಪತ್ರದ ಲಾಳು ಗೊಂಬಗಡ ನಮ್ಮನೀ ನರೆದಲೆಯ ಚಾಳಕನೆನುತ ಕೋಪಿಸಿದ ಸೌಂದರಕುವರನಾ ವಿಪ್ರನ (ಸೌಂದಪು. ೫-೯): ಚಾಳಕನ ನಗೆನುಡಿಯು ಮಾಳಿಗೆಯು ಮುಟ್ದಂತೆ ಬಾಳು ಉಳ್ಳವರ ಬಿಉ ನುಡಿಯು ಬೀಳ್ವನೆಯು ಏಳಿಗಾದಂತೆ (ಸರ್ವಜ್ಞ. ೧೩೪೯). **ಚಾಳ್ಕ**: 'ಚಾಳ್ಕತನ' ಪರಾ.

[ ←ಹಿಂ. ಚಾಲಕ್ ]

**ಚಾಳಣಿ** (ನಾ). = ಚಾಲನಿ : ಆ ಡಬ್ಬ ತಳದ ತಗಡಿನೊಳಗ ಎಷ್ಟು ಚಾಳಣ ಆಗಬಹುದಂತ ಅನ್ನಿಸತದ ನಿನಗ ? (ತೃಪಾಡ. ೪೨). [ <ಸಂ. ಚಾಲನೀ ]

**ಚಾಳನಿ** 'ಚಾಲನಿ' ನೋ.

**ಚಾಳಯಿಸು** 'ಚಾಳಿಸು$_1$' ನೋ.

**ಚಾಳವಿಸು** 'ಚಾಲಿಸು' ನೋ.

**ಚಾಳಾಂಕಿ, ಚಾಣಕಿ, ಚಾಣಕ್ಕಿ, ಚಾಣಾಂಕಿ, ಚಾಳಂಕಿ, ಜಾಣಾಂಕಿ** (ನಾ). ಒಂದು ಬಗೆಯ ಪಕ್ಷಿ; ಮೈನಾಹಕ್ಕಿ; ಸಾರಿಕೆ: ಜಯುವಿಲ್ಲನ ಮುಂದೆ ಪೊಸರನನು ಪೊಗಳ್ವರು ಖೂಳರೆಂದು ಸಂತೋಷದಿ ಚಾಳಾಂಕಿ [ಪಾಠಾಂ. ಚಾಣಾಂಕಿ, ಜಾಣಾಂಕಿ, ಜಾಣ್ಕಕ್ಕಿ]ಯುಲಿದವು (ಶೂಬಸೋ. ೩-೦೬): ಹಂಸೆಗಳಿಗಲಸಗಮನಂಗಳಂ ತೋಱುತಂ ಚಾಳಾಂಕಿಗಳಿಗೆ ನೀತಿಯನುಸಿರುತೆ . . . ಚೆಲೆವೆಣ್ಗಳೆಸೆದಿರ್ದರು (ಚಬಪು. ೧೦-೪೦). **ಚಾಣಕಿ**: ಕಳಹಂಸೆ ನಲಿಯಲೊಪ್ಪದೆ ಸೋಗೆ ಕುಣಿಯೆ . . . ಗಿಳಿವಿಂಡುಗಳ ಮಾತು ಸೊಗಸೆ ಚಾಣಕಿಯೋದೆ (ಲಶಿಚಂ. ೧೪-೩೩). **ಚಾಣಕ್ಕಿ**: ಶುಕಸಾರಿಕಾಭ್ಯಾಂ = ಗಿಳಿಯುಂ, ಚಾಣಕ್ಕಿಯುಮೆಂಬಿವಱಿಂ (ನೀತಿವಾ. ೯-೩೩): ಬಿಂಬಿಯ ಬನದೊಳು ಹೊಂಬುಳ್ಳ ಚಾಣಕ್ಕಿಗಳಿರಾ ರಂಬಿ ಗಿರಿಜಮ್ಮನರಸಗ ಸೋ ಇಂದು ಧರಗ ತುಂಬಿದಾರೂತಿ ಬೆಳಗಿರೆ (ರೋಕಗೀ. ೦೪). **ಚಾಣಾಂಕಿ**: ಮಿಾನ್ಸುಲಿಗ ಮರಕುಟಕ ಚಾಣಾಂಕಿ (ರುಕ್ಮಾಂಗ. ೦೦-೫). **ಚಾಳಂಕಿ**: ಕೋಕಿಳಂಗಳ ರವದ ಕಹಳೆ ಚಾಳಂಕಿ ಪಾಠಕರ ಕಳಕಳದಿಂದೆ ಪೊಱಮಟ್ಟನು (ಚಬಪು. ೩೫-೬): ಪಾರಿವಾಳದ ಪಕ್ಷಿ ಮಱಿಹುಲ್ಲೆ ಚಾಳಂಕಿಗಳಾ ಸರಸಗೋಷ್ಟಿಗೆ ಸಲೆ ಹೇಮಪಂಜರದೊಳಿರಿಸಿ (ಜನರಾ. ೬-೫೮). **ಜಾಣಾಂಕಿ**: ಅರಗಿಳಿ ಪಠಿಸಲರ್ಥೈಸುವ ಜಾಣಾಂಕಿ . . . ನರ್ತಿಪ ನವಿಲು (ಶ್ರೀಪಾಂ. ೧-೨೪).

[ ? ]

**ಚಾಳಿ$_1$** 'ಚಾಟಿ'' ನೋ.

**ಚಾಳಿ$_2$** 'ಚಾಲು' ನೋ.

**ಚಾಳಿತನ** (ನಾ). ದುರಭ್ಯಾಸ; ಕೆಟ್ಟನಡತೆ : ಕಡಿಮೆ ಹೆಂಡಿರು, ಹದಿನಾರು ಸಾವಿರ ಮಂದಿ ಬಿಡು ನಿನ್ನ ಚಾಳಿತನವೆಂದ (ಕರ್ಣಾಕ. ೨೮೬).

[ ಚಾಳಿ$_2$ (<ಚಾಲು) + – ತನ ]

**ಚಾಳಿಸು$_1$, ಚಾಳಯಿಸು, ಚಾಳೈಸು$_2$** (ಕ್ರಿ). ೧. ಜರಡಿ ಹಿಡಿ; ಶೋಧಿಸು: ಹಳೆಯ ಗಂಟು ಗದಡಿಗಳನ್ನೆಲ್ಲಾ ಚಾಳಿಸಿ ಅದನ್ನು ಹುಡುಕಾಡಿಕೊಂಡನು (ಬೆಳಗು. ೨೫); ಡಬ್ಬಿಯೊಳಗಿನ ಹಿಟ್ಟನ್ನು ಪರಾತಕ್ಕೆ ಚಾಳಿಸಿದನು (ರಕ್ತರ್ಶ್ರ. ೨೨೧). ೨. ಸೋಲಿಸು; ಹಿಮ್ಮೆಟ್ಟಿಸು; ಓಡಿಸು: "ಚಾ [ಪಾಠಾಂ. ಜಾ]ಳಿಸಿತೆಂದು ಸೋಲಿಪುದು" (ಕದ್ಯಕ. ೬೨): ವಿಜಯದ ಗುಡಿವಿಡಿಸಿ ಅರಿನೃಪರಂ ಭೇದಿಸಿ ಪಾಂಚಾಳರಂ ಚಾಳಿ[ಪಾಠಾಂ. ಚಾರಿ, ಬಾರಿ]ಸಿ ಗಾಂಧರ್ವರಂ ವಿರಥರ್ ಮಾಡಿ (ಶಂಪಥಾ. ೬-೨೯ ವ): ಮಲ್ಲಶ್ರುಮಪೆ ಪೊಣರ್ದುರ್ಗೋಪಾಲರಂ ಚಾ [ಪಾಠಾಂ. ಜಾ]ಳಿಸುತ್ತುಂ (ಜಗವಿ. ೪-೩೮). ೩. ಹೀಯಾಳಿಸು; ತಿರಸ್ಕರಿಸು: ಒರೊರ್ವರಂ ದೂಕ್ಕರಿಸುತ್ತೋರೊರ್ವರಂ ಚಾಳಿಸುವ ಪದದೊಳ್(ಜಗವಿ. ೬-೬೪); ಚೊರ್ಕೆಯಾದಾಸೆಗೆ ಪೊರ್ಕ ಮಲ್ಲನನಿಕ್ಕಿ ಮೆಟ್ಟಿ ವಜ್ರದ ಬಳ್ಳಿಯಂತೆ ಭಡಿಕೆಯೊಳ್ ಬಿಗಿದು ಚಾಳಿಸಿ ನೂಂಕುವ (೧ರಿಳ. ೨-೧೦೫ವ). ೪. ಪೀಡಿಸು; ಕಾಡು: ಎಂದು ತನ್ನಱಿಪನದರೆ ಚಾಳಿಸಿ ನುಡಿದು ಪೋಗುತ್ತುಂ (ಅನಂಪು. ೧೧-೯೫ ವ): ತೆಗೆದತ್ತ ಬಾರದಿರೆ ಸಿದ್ಧನಂ ಚಾಳಿಸಲ್ಬಗೆದು (ಪಾಸೋಪು. ೧೦-೭೪): ಅಱಿವುಗೇಡಿಂ ನಾಡೆ ನಿಮ್ಮವರಂ ಚಾಳಿಸಿದೆವು (ರಾಮಾಶ್ವ. ೧೨೨-೪). ೫. [ಸಂಗೀತ] ರಾಗಾಲಾಪನೆಮಾಡು,–ಹಾಡು : ಸುಖಸುಧಾಸದೊಳ್ ಪರಿಷಜ್ಜನಂಗಳಂ ಮುಳುಗಿಸಿದತ್ತು ಚಾಳಿಸಿದ ರಾಗಮೆ ನಟ್ಟನ ಮಂಜುಘೋಷೆಯಾ (ಅನಂಪು.೪-೮೮). **ಚಾಳಯಿಸು**: ೨. ಚಾಳಯಿಸಿ ಕೊಂಡುಳಿದವಿನ್ನಾ ಚಾಳಿ ಸಾಕೆಮಗೆಂದು ಭೂಪರು ಚಾಳಿಸಿದೊಡ ಬಲೆಯರು ನಗುತಿರೆ ನಾಚಿ ತವಕದಲಿ (ಜೀವಂಧ. ೦೫-೨೬). **ಚಾಳೈಸು$_2$**: ೬. ತಾತ್ಸಾರಮಾಡು; ಬೇಸರಪಡು: ಪೇಳಲ್ದಾರ ಜಹ್ನೆಗಸಾಧ್ಯ ರತ್ನದ ಮೇಳವಿದಲ್ಲಿ ಸಿದ್ಧಿಸಿತೋ ಚಾಳೈಸದೆ ಕೆತ್ತಿದನಾರೊ ಕಲಸಿಯೆಂದಾಳೋಚಿಸಿದಳು (ಮೋಹತ. ೨೬-೨೯). [ <ಜಾಲಿಸು ]

**ಚಾಳಿಸು$_2$** 'ಚಾಲಿಸು' ನೋ.

**ಚಾಳಿಸು$_3$** 'ಚಾಳೀಸು' ನೋ.

**ಚಾಳೀಸ** 'ಚಾಳೀಸು' ನೋ.

**ಚಾಳೀಸಪತ್ರ** 'ತಾಳೀಸಪತ್ರ' ನೋ.

**ಚಾಳೀಸು, ಚಾಳಿಸು$_3$, ಚಾಳೀಸ, ಚಾಳೇಸ** (ನಾ). ೧. ನಲವತ್ತು. ೨. ಸುಮಾರು ನಲವತ್ತರ ವಯಸ್ಸಿಗೆ ಉಂಟಾಗುವ ದೃಷ್ಟಿಮಾಂದ್ಯ; ದೂರದ ವಸ್ತುಗಳು ಮಾತ್ರ ಕಣ್ಣಿಗೆ ಸ್ಫುಟವಾಗಿ ಕಾಣುವ ಕಣ್ಣಿನ ಕುಂದು: ವಯೋನುಗುಣವಾಗಿ ಮನುಷ್ಯನಿಗೆ ಚಾಳೀಸು (Long Sight) ಬಂದಮೇಲೆ . . . ಓದುವುದನ್ನು ಕಡ್ಡಾಯವಾಗಿ ನಿಲ್ಲಿಸಬೇಕಾಗಿತ್ತು (ಶಿಲ್ಪನಾ. ೧೫೨). ೩. ಕನ್ನಡಕ; ಉಪನೇತ್ರ; ಸುಲೋಚನ: ಚಾಳೀಸು ಹಾಕಿ ಚಿರೂಟು ಸೇದುವ ಅಕಬರಬಾದಶಹನೂ . . . ಔರಂಗಜೇಬನೂ ಇತಿಹಾಸಕ್ಕೊಂದು ಹೊಸ ಮುಖವನ್ನು ತಂದು ಕೊಟ್ಟರು (ಗುಳಿಪ. ೭೦): ಸರಿಯಾಗಿ ಕಾಣೋದಿಲ್ಲಾ ಅಂತಾನೆ 'ಚಾಳೀಸು' ಹಾಕೇನಿ (ಚಂದುಟ. ೯೨): ಜೋಶಿಯವರು ಪುನಃ ಚಾಳೀಸನ್ನು ಮೂಗಿಗೇರಿಸಿದರು (ದೀದನಾ. ೧೩೪). **ಚಾಳಿಸು$_3$**: (ಕ). **ಚಾಳೀಸ**: ೨. ನಿನ್ನ ಕಣ್ಣಿಗೆ ಚಾಳೀಸ ಹುಟ್ಟಿ (ತಸರಾ. ೪-೨೬): ಏನೋ ಸಹಜವಾಗಿ ವಯೋಧರ್ಮದಿಂದುಟಾಗಿರುವ ದೃಷ್ಟಿಮಾಂದ್ಯವೆಂದೋ ಇಲ್ಲವೇ ಚಾಳೀಸವೆಂದೋ ಕರೆಗಣಿಸುವುದುಂಟು (ನಿಮ್ಮದ್ಯ. ೮೩). ೩. ಚಾಳೀಸ–ತಂತಿಯ ಬದಲು ತಂತುವನ್ನು ಕಟ್ಟಿಕೊಂಡಿದ್ದ ಚಾಳೀಸವನ್ನು ಮೂಗಿನ ಮೇಲಿಟ್ಟುಕೊಂಡು ದಾರವನ್ನು ಕಿವಿಗೆ ಸುತ್ತಿದ್ದಾರೆ (ಸುವಸಂ. ೭೮). **ಚಾಳೇಸ**: ೨. ಕಣ್ಣುಗಳಲ್ಲಿ ನೀರು ಸುರಿಯುಲು ಕಣ್ಣು ಚಾಳೇಸವಾಗಿ ವಿಕಾರವಾಗಿರಲು (ಅಕ್ಕಟಿ.೩೮-೧೧).

[ ←ಮರಾ. ಚಾಳೀಸ, ಚಾಳಿಸೀ; ಹಿಂ. ಚಾಲೀಸ್ /ಪ್ರಾ. ಚತ್ತಾಲೀಸ್./ಸಂ. ಚತ್ವಾರಿಂಶತ್ ]

**ಚಾಳು$_1$** 'ಚಾಳ' ನೋ.

**ಚಾಳು$_2$** 'ಚಾಲು' ನೋ.

**ಚಾಳುಕ್ಯ** 'ಚಾಲುಕ್ಯ' ನೋ.

**ಚಾಳುವ** 'ಸಾಳುವ' ನೋ.

**ಚಾಳೆಯ** 'ಚಳಯ$_2$' ನೋ.

**ಚಾಳೀಸ** 'ಚಾಳೀಸು' ನೋ.

**ಚಾಳೈಸು$_1$** 'ಚಾಲಿಸು' ನೋ.

**ಚಾಳೈಸು$_2$** 'ಚಾಳಿಸು$_1$' ನೋ.

**ಚಾಳೋಕ್ಯ** 'ಚಳುಕ್ಯ' ನೋ.

**ಚಾಳ್ಕ** 'ಚಾಳಕ$_2$' ನೋ.

**ಚಾಳ್ಕತನ** (ನಾ). ಧೂರ್ತತನ ; ಉಪಾಯಗಾರಿಕೆ : ಆರನೆಯ ಸೂಳೆನೊಳ್ ಚಾಳ್ಕತನದಿಂ ಕಳಿಂಗನಂ ಚೀನಹಮ್ಮೀರರಂ ಕೊಂದು (ಪರಕು. ೩೭-೧೮) : ಬೀಳ್ಕೊಟ್ಟರಾವು ಪೋಪೆವೆಂದವಿಳ ಬಾಡಬರ್ ಚಾಳ್ಕತನ ದೀನತೆಯೊಳಭಿನವಿಸಲ್ (ಪರಕು. ೪೧-೨೦).

[ ಚಾಳ್ಕ (<ಚಾಳಕ$_1$) + – ತನ ]

**ಚಾಟ್, ಚಾಳಿ$_1$** (ನಾ). ನವಗ್ರಹಗಳಲ್ಲಿ ಒಂದು ; ರಾಹು : "ಚಾಟ್= ರಾಹು" (ಕಮುದ. ಪರಿ. ೧) : "ಚಾಟ[ಪಾಠಾಂ. ಜಾಳ]ಲರ್ವಟ್ಟೆವಾವನೆ ರಾಹು" (ಕಲ್ಯಮಂ. ೧೮); "ಚಾಟನಲ್ ಚಾವೆ[ಪಾಠಾಂ. ಚಾಪ]ನಿಪ್ಪುದು" (ಸಂಜೀವ. ೫). **ಚಾಳಿ$_1$** : ಅಕಟವನ ನೊಸಲಲ್ಲಿ ತಿಂಗಳಂ ಬರೆಪೋಗಿ ಚಾಳಿಯುಂ ಗೀಚಿದೆಯೊ (ಹಲ್ಯರ. ೩೩-೦೪೨).

[ ದೇ.೫ ಮಲ. ಚಾಟ್=ಕೆಟ್ಟಗಳಿಗೆ ; ಕೆಟ್ಟಕಕುನ ]

**–ಚಿ** (ಪ್ರ). ಒಂದು ತದ್ಧಿತ ಪ್ರತ್ಯಯ. 'ಕುಡಿಚಿ' ಪರಾ.

**ಚಿಂಕಿಲು** (ನಾ). ಸಣ್ಣಕೀಲು (?) : ವಜ್ರದ ಫಾಲಿಗೆ ವಜ್ರದ ಚಿಂಕಿಲು ವಜ್ರದ ನೊಗ ಹೊವಿಂಗಳು ವಜ್ರದಾಯುಧನ ವಾಹನದಂತೆ ವಾಜಿಯು ಪ್ರಜ್ವಲ ಸಾಲದಿದುರದ (ದೇವಾಂಪು. ೩-೦೭೯). [ ? ]

**ಚಿಂಕು** (ನಾ). ಒಂದು ಬಗೆಯ ಆಭರಣ : ವೀರಮುದ್ರಿಕೆ ಪಂಚಸರ ಗೌಳಸರ ಮುಕ್ತಾಹಾರ ಹೊಂಬಂದಿ ಚಿಂತಾಕು ತೋರವಾಗುಡಿ ಹೊನ್ನ ಕುಸುಮ ಚಿಂಕು ಕರ್ಣಪೂರ ಕೊರಲ ಕಂಠಿಕೆಗಳ (ಶಾಂತೀಶ. ೩-೭೦).

[ ? ]

**ಚಿಂಗಯ್ಯ** (ನಾ). ಒಬ್ಬಾತನ ಹೆಸರು : ಚಿಂಗಯ್ಯನ ಚಾವಟ್ಟೆಯ ಮಗಂ ಪೋಚಣಕಲ್ಲ (ಪ್ಯಆರಿ. ೧೯೪೨, ೨-೭ ; 973 ?). [ ಚಿಂಗ$_0$ + ಅಯ್ಯ$_1$ ]

**ಚಿಂಚ$_1$** (ಕಾ). ಮೈಮೇಲೆ ಚುಕ್ಕೆಗಳಿರುವ ಎತ್ತು : ಕೆಲವ ಕೇಸಿಗ ನಿಚ್ಚ ಹಂಡ ಹಾರುವ ಚಿಂಚ ಮಲೆವ ಪುಲ್ಲೋರಿ . . . ಕಬ್ಬಸಿಗಳೊಳಗಾದ ಪಲವು ಪರಿಯೆತ್ತು ತೊಂಬತ್ತಾರು ಲಕ್ಷ ಮೇಳೈಸಿ ಪಿಡಿದುವು ಗೆಲ್ಲಕೆ (ಸಿಂಗಿರಾ. ೩೮-೭): ಚಿಂಚವೆರಡೆತ್ತಾಗಿ ಸಂಚಿನ ಸೊಸೆಯಾಗಿ ಮಿಂಚಾಗಿ ಬರುವ ಮಗನಾದರಾ ಮನೆಗೆ ಲಂಚ ತಪ್ಪುವುದೆ (ಸರ್ವಜ್ಞ. ೦೭೫೪).

**ಚಿಂಚ$_2$** (ನಾ). ಹುಣಿಸೆಮರ : ಬದರಿಯ ಫಲಮಂ ಮೇಣ್ ಚಿಂಚದ ಬಿಗುರಿಂ ಕೂಡಿ ಪುದಿದ ಸಜ್ಜಿಗೆಯಿಂ ಮಾಡಿದ ಸೇವಗೆಯಂ (ಲೋಕೋಪ. ೮-೧೩): ಕನಕಮಂದುಕ ಮಾತ್ಸ್ಯ ಕಮಠ ಕಲ್ಪೇಂದು ಚಂದನ ಚಿಂಚ ಮಧು ಶೃಂಗ ಕಡವ ಪೂರುಷ ಶೇಷವೃಕ್ಷಂಗಳು (ಮದೇಪು. ೩೦-೧೫).

[ ದೇ.೫ ತಮಿ. ಚಿನ್ನ ; ತೆಲು. ಚಿಂತ ; ಕೊಲಾ. ಸಿಂತಾ ; ನಾಯ್ಕಿ. ಶಿತ್ತ ; ಗೊಂಡಿ. ಸಿತ್ತಾ./ಸಂ. ಚಿಂಚಾ ]

**ಚಿಂಚಕ** (ನಾ). ಒಂದು ಬಗೆಯ ಮರ : "ಲವಣಕಿಂಶುಕಃ–ಕಂಗುಂಗೆ, ಚಿಂಚಕ" (ಒಷಧಿ. ೧೪೨). [ ? ]

**ಚಿಂಚಗ** (ನಾ). ಒಂದು ಬಗೆಯ ಗಿಡ ; ಕೆಂಪು ಗೋರಂಟೆ : "ಕಿಂಕಿರಾತಃ –ಪೊಂಗೋರಟೆ, ಚಿಂಚಗ" (ಒಷಧಿ. ೬೩). [ ? ]

**ಚಿಂಚಪಟ್ಟೆ** (ನಾ). ಒಂದು ಬಗೆಯ ಕೊರಳಿನ ಆಭರಣ ; ಹುಣಿಸೆ ಎಲೆ ಆಕಾರದ ಪದಕಗಳುಳ್ಳ ಸರ : ನೇತ್ರಾವಳಿಯ ಸೀರೆ ಮಿತ್ರಿ ಗಂಗವ್ವ ಉಟ್ಟು ನಕ್ಷತ್ರಮಾಲೆ ಚಿಂಚಪಟ್ಟೆ ಮುಂಗಟೊಟ್ಟು ಕರ್ತುವಿನ ಕಾರ್ಯಕ್ಕೆ ತೊಡಗಿದಳು (ಸಿದ್ಧಪು. ೧೯-೯೮). [←ಮರಾ. ಚಿಂಚಪಟೀ, ಚಿಂಚಪೇಟೀ]

**ಚಿಂಚಿಲ** (ನಾ). ಒಂದು ಊರಿನ ಹೆಸರು; P ಈಗಿನ ಗದಗ ತಾಲೂಕಿನ ಚಿಂಚಲಿ : ಚಿಂಚಿಲದಯ್ವತ್ತ್ರಚುವರುಂ ಮಹಾಜನದ ಕಾಲಂ ಕಚ್ಚಿ ಕೊಟ್ಟು (ಸೌಇಇ. XI-1, ೦೫-೨ ; 871) : ಚಿಂಚಿಲಗ್ರಾಮಸ್ಯ (ಎಇ. IV, ೨೦೭-೨೪ ; 982); ಅದಱಿಂ ಮೂಡಣ ಚಿಂಚಿಲ ಅಕ್ಕಸಾಲೆಯ ಕೆಯಿಂ ಮೂಡಲು ಮತ್ತರು ೧ (ಸೌಇಇ. XX, ೨೨೧-೩೯ ; 1283). [ ? ].

**ಚಿಂಚು** (ನಾ). ಒಂದು ಬಗೆಯ ಸಸ್ಯ (?) : "ಚಿರುಂಡಿ ಚಿಂಚು" (ಅಕಾನಿ. ೦೦-೨೭). [ ? ]

**ಚಿಂಚಿ** (ನಾ). ಮೈಮೇಲೆ ಚುಕ್ಕೆಯನ್ನು ಉಳ್ಳ ಹಸು : ಭೃಂಗೆ ಚಿಂಚಿ ಪಿಂಗೆ ಹಂಡೆ ಶೃಂಗಿ ಕೃಷ್ಣೆ ರಂಗು ಮುತ್ತ ಪಿಂಗಳೆ ಹೇಮಾಂಗಿಯೆಂದು ರಂಗ ಕರೆದನು (ಪ್ರಸಭಾ. ೩೧-೬). [ಚಿಂಚ$_1$ + – ಇ$_2$]

**ಚಿಂಚಿಗ** (ನಾ). ಒಂದು ಬಗೆಯ ಗಿಡ : ಚಿಂಚಿಗದ ಸೊಪ್ಪನು ಎಳ್ಳೆಣ್ಣೆಯಲ್ಲಿ ಎಳವದನಾಗಿ ಹುರಿದು ಪಣಗಿಸಿ ಪುಡಿಮಾಡಿ (ಸಕಪ್ರ. ೧೯೪).

[ ? ]

**ಚಿಂಡೆ** (ನಾ). ಒಂದು ಬಗೆಯ ಸಸ್ಯ : ಚಿಂಡೇ, ಹೊಂಡೇಮರ (ಮ್ಯಶಿಗ. ೨೦-೩೫೮). [ ? ]

**ಚಿಂತಕ** (ನಾ). ಯೋಚಿಸುವವನು ; ಯಾವುದಾದರೂ ವಿಷಯವನ್ನು ಚಿಂತಿಸುವವನು : "ಧ್ಯಾತಾ, ಧ್ಯಾಃ, ಧ್ಯಾಯುಕಃ–ಈ ೩ ಚಿಂತಕಂ" (ಶಾಕಕ್ಯ. ೭೩). 'ಹಿತಚಿಂತಕ' ಪರಾ. [ ಸಂ. ]

**ಚಿಂತಕುಂಟೆ** (ನಾ). ಒಂದು ಊರಿನ ಹೆಸರು: ಚಿರುಪಿಯು ಚಿನ್ನಕುಂಟೆಯ ಚಿಟಾಯುಪೊಟಲು ಪುಳುವಟ್ಟು ನಾಲ್ಕೂರುಮಿಟ್ಟು ನಡೆದ ಕಲ್ಲಿಗೊಡಂಗೆಯೊಡ್ಡಿನ ಕೆಟಗೆ (ಸೌಇಇ. IX-1, ೨೭-೦೦; 950).

[ ಚಿಂತ$_0$ + ಕುಂಟೆ$_3$ ]

**ಚಿಂತನ** (ನಾ). ೧. ಯೋಚನೆ ; ಆಲೋಚನೆ : ಗುರುತತ್ತ್ವಚಿಂತನವದು ಗುರುಧ್ಯಾನ (ಬಸಪು. ೩೯-೨೯) : ವಿಷಯಗಳ ಚಿಂತನದಿಂದ ಮನುಷ್ಯನಿಗೆ ಅವುಗಳಲ್ಲಿ ಆಸಕ್ತಿ ಹುಟ್ಟುತ್ತದೆ (ಧರ್ಮಶಾ. ೦೩೨). ೨. ಧ್ಯಾನ : ಭವದಂಘ್ರಿ ಚಿಂತನಮೆ ಕೇಳ್ ಕೈವಲ್ಯಲಕ್ಷ್ಮೀಸುಖೋತ್ಸವಮಂ ಸಾರ್ಚುವ ದೂತಿ (ಕಬಕಂ. ೫-೩೨). [ ಸಂ. ]

**ಚಿಂತನಪರ** (ಗು). ಚಿಂತನದಲ್ಲಿ ಆಸಕ್ತವಾದ ; ಯೋಚನೆಯನ್ನು ಅವಲಂಬಿಸಿದ : ಒಂದೊಂದು ಶಬ್ದವೂ ಸ್ಫೂರ್ತಿಯ ಒಂದೊಂದು ಕುಡಿಯಾಗುತ್ತದೆ . . . ವಿಚಾರಿತ ರಮಣೀಯ ಇಲ್ಲವೆ ಚಿಂತನಪರ ಶೈಲಿಯಾಗುತ್ತದೆ (ನವ್ಯಕಾ. ೩೫). [ ಸಂ. ]

**ಚಿಂತನಶೀಲ** (ಗು). = ಚಿಂತನಪರ: ಅವರು ತುಂಬ ಚಿಂತನಶೀಲ ಕವಿಗಳು (ರೂಢಿ). [ ಸಂ. ]

**ಚಿಂತನಾಂಶ** (ನಾ). ೧. ಯೋಚಿಸಲು ಯೋಗ್ಯವಾದ ಭಾಗ. ೨. ಯೋಚನೆಯ ಅಂಶ ; ಯೋಚನಾಭಾಗ : ನನ್ನ ಈಗಿನ 'ದರ್ಶನ'ಕ್ಕೆ ಒಪ್ಪುವ ಭಾವಾಂಶ ಚಿಂತನಾಂಶ ಕಲ್ಪನಾಂಶ ರೂಪಾಂಶಗಳಲ್ಲಿ ಎರಕ ಹೊಯ್ದು ಅದನ್ನೊಂದು ಹೊಸಕೃತಿಯಾಗಿಯೆ ಮಾಡಿದ್ದೇನೆ (ಕಂದ್ರಸ. IV, ಮುನ್ನುಡಿ). [ ಚಿಂತನ + ಅಂಶ ]

**ಚಿಂತನೀಯ** (ಗು). ೧. ಆಲೋಚಿಸತಕ್ಕ; ಯೋಚಿಸಬೇಕಾದ ; ಯೋಚನೆಗೆ ಯೋಗ್ಯವಾದ. (ನಾ). ೨. ಯೋಚಿಸತಕ್ಕುದು : ಯೋಚನೆಗೆ ಯೋಗ್ಯವಾದುದು : ಈ ವಿವರಣೆ ಚಿಂತನೀಯವಾಗಿದೆ (ದ್ರಾವಿವಿ. ೧೨೬). [ ಸಂ. ]

**ಚಿಂತನೆ** (ನಾ). ೧. = ಚಿಂತನ ೧ : ಅಕ್ಷರ . . . ಚಿಂತನೆ . . . ಇವೆಲ್ಲವ ಕಲಿತಡೇನೋ ಚೌಷಷ್ಟಿ ವಿದ್ಯಾಕಳಾವಿದನೆನಿಸಿಕೊಂಬನಲ್ಲದೆ ಲಿಂಗವಂತನೆನಿಸಿಕೊಂಬುದಿಲ್ಲ (ಮಡಿವಾ. ೪೩-೬೧): ಈ ಎರಡು ಅನುಭವಗಳ ತಾರತಮ್ಯದ ಚಿಂತನೆಯನ್ನು ಪದ್ಯರೂಪದಲ್ಲಿರಿಸಿದ್ದಾರೆ (ಸೌಂದಸ. ೩೨೫); ತಾವು ಹೇಳಿದ ಸಂಗತಿಯನ್ನೆಲ್ಲ ಇನ್ನೊಮ್ಮೆ ಚಿಂತನೆ ಮಾಡುತ್ತೇವೆ (ಮುಂಬಯಿ. ೪-೯೩). ೨. ಧ್ಯಾನಿಸುವುದು : ಎಚಗಿ ನೋಡುವುದೊಂದಬಲಿ ಎರಡಬಲಿ ಚಿಂತನೆ . . . ಮೋಹ್ ಹತ್ತಬಲಿ ಮರಣ ಇವು ದಶಾವಸ್ಥೆಗಳೆನಲು (ಬಸವು. ೩೫-೩೨) : ಮನೆಯಲ್ಲಿ ಕೂತುಕೊಂಡು ಇದೇ ರೋಗದ ಚಿಂತನೆ ಮಾಡಿದರೆ ಒಳ್ಳೆಯದಲ್ಲ ಎಂದು ಕೆಲಸಕ್ಕೂ ಕಳುಹಿಸುತ್ತಿದ್ದೆ (ಮನೋನಂ. ೮೨). [ ಸಂ. ಚಿಂತನಾ ]

**ಚಿಂತನೆಗೊಳು** (ಕ್ರಿ). ಆಲೋಚನೆಗೆ ಒಳಗಾಗು ; ಯೋಚನಾಪರನಾಗು ; ಚಿಂತೆಮಾಡು : ಜನದೀಕ್ಷೆಗೆಳಸಿ ತಂದೆಗೆ ಪೇಳಲಂಜಿ ಚಿಂತನೆಗೊಳುತೆಯ್ತಂದರಾಗ (ಭರತ. ೪೫-೩೯). [ಚಿಂತನೆ+ಕೊಳು(<ಕೊಳ್$_1$)]

**ಚಿಂತಾಕ** ‘ಚಿಂತಾಕು’ ನೋ.

**ಚಿಂತಾಕು, ಚಿಂತಾಕ** (ನಾ). ೧. ಕೊರಳಲ್ಲಿ ಧರಿಸುವ ಒಂದು ಬಗೆಯ ಆಭರಣ ; ಅಡ್ಡಿಕೆ ; ಹುಣಿಸೆಯ ಎಲೆಯ ಆಕಾರದ ರತ್ನಗಳನ್ನು ಕೆತ್ತಿರುವ ಆಭರಣ : ಕಾಂತನ ಮುಖಕೆ ಕಾಂತಿಯನೀವುದೊಂದು ಸುಕಾಂತ ಚಿಂತಾಕನಂಗನೆಗೆ ಕಾಂತೆಯರೊಲಿದು ಕಟ್ಟಲು (ಅಂಜಕ. ೮-೫೯): ಮೂಕುತಿ ಮುತ್ತಿನ ಸರ ಕರ್ಣಪತ್ರ ಚಿಂತಾಕು ನೇವಳ ಉಳಿ ಪದಕ (ಭರತ. ೩೧-೪೩) : ವಜ್ರದ ಚಿನ್ನದ ಚಿಂತಾಕು (ಸಿದ್ಧಪು. ೧೯-೬೨) : ಚಿಂತಾಕು ಇಟಗೊಂಡು ಚಿಪ್ಪಾಡಿ ಬಳಿಮಾಕಿ ಚಿಂತಿಲ್ಲ ಏನ ನಿನಗಪ್ಪ ನಿಮರಾಯ ಅಲ್ಲೊಬ್ಬ ಕೂಡ ನಗುತಿದ್ದ (ಕನ್ನಜಾ. ೫೮). ೨. ಒಡ್ಯಾಣ; ನಡುಪಟ್ಟಿ ; ಡಾಬು : ತೂಕದ ಮೊಲೆಗಳ ಬಡನಡು ತಾಳದೆಂದಾ ಕಾಂತೆ ಚಿನ್ನದ ಕಟ್ಟಾ ಜೋಕೆಗೈದಳೊಯೆನೆ ನವರತ್ನಮಯದ ಚಿಂತಾಕು ತೋಱಿತು ನಡುವಿನೊಳು (ಭರತ. ೪೦-೫೬) ; ಪದಕ ಕೊರಲ ಪಂಚಸರ ನಾನಾರತ್ನ ಪುದಿದ ನಡುವಿನ ಚಿಂತಾಕು . . . ಸುದತಿಯೊಳೊಂದಿ ಮೆಱೆದುವು (ರಾಮವಿ. ೬-೬೨). **ಚಿಂತಾಕ** : ೧. ಕಾಂತಾಕಚಭಾರದಿಂದೆ ನುಣ್ಗೊರಲು ಮುಂದೆಂತಹುದೆಂದು ಸಂದೆಗದೆ ಸಂತತ ಬಣ್ಣಗಲ್ಲುಗಳ ಕೇವಣಿಸಿರ್ದ ಚಿಂತಾಕ ಬಲುಹನಿಕ್ಕಿದರು (ಬೊಂಹತ. ೨೩-೩೮) : ಪರದೈವ ಹರಿಯೆಂಬೊ ಮುತ್ತಿನ ಮೂಗುತಿಯು ತರಣಿ ಭಾಸನೆಂಬೊ ಮುತ್ತಿನ ಚಿಂತಾಕ (ವಿಶಾಸು. ೫೪-೫) ; ಸರ ಮುತ್ತು ಚಿಂತಾಕ ಸರಿಗೆ ತಾಯಿತ ಮುತ್ತು ಮೆರೆವ ಯೇಕಾವಳಿಯು (ಶ್ರೀಕೃಪಾ. ೧೨) ; ನನಗೊಂದು ಚಿಂತಾಕವು ಬೇಕಾಗಿರುವುದರಿಂದ ನಮ್ಮ ತಂದೆಯು . . . ಪೇಟೆಗೆ ಹೋಗಿದ್ದಾನೆ (ತೋಳಮು. ೬೯).

[ ದೇ.॥ ತಮಿ. ಚಿನ್ನಾಕ್ಕು ; ತೆಲು. ಚಿಂತಾಕು./ಮರಾ. ಚಿತಾಂಕ್, ಚಿತಾಕ್ ]

**ಚಿಂತಾಕುಲ, ಚಿಂತಾಕುಳ** (ಗು). ೧. ಯೋಚನೆಯಿಂದ ಕಲಕಿದ; ವ್ಯಸನದಿಂದ ಕೂಡಿದ ; ಚಿಂತೆಯಿಂದ ವ್ಯಗ್ರವಾದ. **ಚಿಂತಾಕುಳ** : (ನಾ). ೨. ಚಿಂತೆಗೆ ಒಳಗಾದವನು ; ಚಿಂತಾಕ್ರಾಂತ : ಫಲುಗುಣನ ಪರಮವಿವೇಕವನು ಪತಿಕರಿಸಿ ನೆಱೆ ಚಿಂತಾಕುಳನ ಮಾಡಿದನು ಕೌರವರಾಯನನು ಭೀಷ್ಮ (ಕುವ್ಯಾಭೀ. ೧೦-೨೮).

[ ಸಂ. (ಚಿಂತಾ + ಆಕುಲ) ]

**ಚಿಂತಾಕುಲತೆ, ಚಿಂತಾಕುಳತೆ** (ನಾ). ಚಿಂತೆಯಿಂದ ವ್ಯಗ್ರವಾಗಿರುವಿಕೆ,– ಪೀಡಿಸಲ್ಪಟ್ಟಿರುವಿಕೆ. **ಚಿಂತಾಕುಳತೆ** : ಒಳಗೊಳಗಲ್ಲು ಚಿಂತಾಕುಳತೆಯನೊಳಕೊಂಡು ಬೇಡನಿವನೆನ್ನಿಂದಗ್ಗಳಿಸಿದನೆ (ಕಬಕಂ. ೪-೯೨).

[ ಸಂ. ಚಿಂತಾಕುಲತಾ (ಚಿಂತಾ + ಆಕುಲತಾ) ]

**ಚಿಂತಾಕುಲಿತ** (ನಾ). ಚಿಂತೆಯಿಂದ ವ್ಯಗ್ರನಾದವನು ; ಚಿಂತಾಕ್ರಾಂತನಾದವನು : ಚಿಂತಾಕುಲಿತನನಾಱಿಸುವಂತಿರೆ . . . ಪರ್ಣಕುಟೀರಾಂತರಮಂ ಪೊಕ್ಕು (ಕಾದಂಬ. ೬೦೦). [ ಸಂ. (ಚಿಂತಾ + ಆಕುಲಿತ) ]

**ಚಿಂತಾಕುಳ** ‘ ಚಿಂತಾಕುಲ ’ ನೋ.

**ಚಿಂತಾಕುಳತೆ** ‘ ಚಿಂತಾಕುಲತೆ ’ ನೋ.

**ಚಿಂತಾಕ್ರಾಂತ** (ಗು). ೧. ಚಿಂತೆಗೊಳಗಾದ ; ಚಿಂತೆಯಿಂದ ತುಂಬಿದ. (ನಾ). ೨. ಚಿಂತೆಯಿಂದ ಕೂಡಿದವನು ; ವ್ಯಥೆಗೆ ಒಳಗಾದವನು : ಆ ಪಾರ್ವಂಗೆ ಮಕ್ಕಳಿಲ್ಲದಿರೆ ಪೆಂಡಿತಿಯುಂ ತಾನುಂ ನಿಚ್ಚನಿಚ್ಚಲುಂ ಚಿಂತಾಕ್ರಾಂತರಾಗಿರ್ಪರ್ (ಜೀವಸಂ. ೩೬-೨೨ ವ) ; ಲಕ್ಷ್ಮಣ . . . ಮೂರ್ಬಿರಿಗೊಡೆಯ ನೀನೆನುತೊಬಲಿ ಪೊಡವಿಗೆ ಕೆಡೆದು ಹೊರಳಲು ರಾಮ ಚಿಂತಾಕ್ರಾಂತನಾಗಿರ್ದ (ತೊರೆರಾ. ೪೩-೩೬). [ಸಂ. (ಚಿಂತಾ + ಆಕ್ರಾಂತ)]

**ಚಿಂತಾಕ್ರಾಂತೆ** (ನಾ). ಚಿಂತೆಯಿಂದ ಕೂಡಿದವಳು : ತನಗೆರಡಿಲ್ಲದೋಪನ ವಿಯೋಗದೊಳ್ ಚಿಂತಾಕ್ರಾಂತೆಯಾಗಿರ್ದ ಕೆಳದಿಗಿಂತೆಂದಳ್ (ಶಾಂತಿಪು. ೮-೧೦೬) ; ಕಾಂತೆ ತಾಂ ಸುತರಿಲ್ಲದಿರ್ದಡನಂತ ಚಿಂತಾಕ್ರಾಂತೆಯಾಗುತೆ ತೂಂತು ನೋಂಪಿಗಳಂ ಪಲವನುಱೆ ನೋಂತು ಬೇಸತ್ತು (ಬಸವು. ೨-೪೮).

[ ಸಂ. ಚಿಂತಾಕ್ರಾಂತಾ (ಚಿಂತಾ + ಆಕ್ರಾಂತಾ) ]

**ಚಿಂತಾಪರ** (ಗು). ೧. ಯೋಚನೆಯಲ್ಲಿ ಆಸಕ್ತವಾದ : ಚಿಂತನೆಯಲ್ಲಿ ಮುಳುಗಿದ. ೨. ಧ್ಯಾನದಲ್ಲಿ ತೊಡಗಿರುವ ; ಧ್ಯಾನಮಗ್ನವಾದ. (ನಾ). ೩. ಚಿಂತನೆಯಲ್ಲಿ ಮುಳುಗಿದ ವ್ಯಕ್ತಿ ; ಆಲೋಚನಾಶೀಲ : ವಿಜ್ಞಾನಿಗಳು ಸಾಮಾನ್ಯವಾಗಿ ಚಿಂತಾಪರರಾಗಿಯೇ ಇರುತ್ತಾರೆ (ರೂಢಿ).

[ ಸಂ. (ಚಿಂತಾ + ಪರ) ]

**ಚಿಂತಾಪರವಶತೆ** (ನಾ). ಚಿಂತೆಯಿಂದ ಮೈಮರೆಯುವಿಕೆ : ಚಿಂತಾಪರವಶತೆಯಿನಿನಿಸಂ ತಡೆದಿದಿರೇಬದಾತ್ಮಪರ್ಯಂಕದೊಳಾ ಕಾಂತಂ ಕುಳ್ಳಿರೆ (ಪುಷ್ಪಪು. ೩-೬೬). [ ಸಂ. ಚಿಂತಾಪರವಶತಾ(ಚಿಂತಾ + ಪರವಶತಾ) ]

**ಚಿಂತಾಭರ** (ನಾ). ಯೋಚನೆಯ ಹೊರೆ ; ಚಿಂತೆಯ ಆಧಿಕ್ಯ : ಆಕ್ರಾಂತಚಿಂತಾಭರಸ್ತಿಮಿತ ಗಾತ್ರಿಯುಂ . . . ಆಗಿರ್ಬನೆಗಂ (ಚಂದ್ರಪು. ೩-೫೦ ವ). [ ಸಂ. (ಚಿಂತಾ + ಭರ) ]

**ಚಿಂತಾಮಗ್ನ** (ಗು). ೧. ಚಿಂತೆಯಲ್ಲಿ ಮುಳುಗಿದ. (ನಾ). ೨. ಚಿಂತೆಯಲ್ಲಿಯೇ ಮುಳಂಗಿರುವವನು: ಮುಕುಂದರಾಯರು . . . ಹುಬ್ಬುಗಂಟಿಕ್ಕಿ ಚಿಂತಾಮಗ್ನರಾಗಿದ್ದಾರೆ (ವೀರಯೋ. ೨). [ಸಂ. (ಚಿಂತಾ + ಮಗ್ನ)]

**ಚಿಂತಾಮಣಿ** (ನಾ). ೧. ಸ್ವರ್ಗಲೋಕದ ಒಂದು ದಿವ್ಯರತ್ನ ; ಬೇಡಿದುದನ್ನು ಕೊಡಬಲ್ಲುದೆಂದು ನಂಬಲಾದ ದೇವಲೋಕದ ರತ್ನ : ಆದರ್ಕೆ ಮುನ್ನ ಚಿಂತಾಮಣಿ ಕಾಮಧೇನು ಸುರಭೂರುಹಮೆಂಬಿವನೇಕೆ ಮಾಡಿದಂ ತಾಮರಸೋದ್ಭವಂ (ಅಜಿಪು. ೧-೬೨); ಚಿಂತಾಮಣಿ ಬಂದಂತಿರೆ . . . ಒಸಗೆಯಾಯ್ತು ರಮಣೆಯೊಳ್ (ಪುಷ್ಪಪು. ೧೩-೧೨೨) : ತರುಗಳೊಳು ಕಲ್ಪಾವನೀಜಂ . . . ರತ್ನನಿಕರದೊಳಗೆ ಚಿಂತಾಮಣಿಯು (ಬಸವು. ೫-೬೯) ; ಚಿಂತಾಮಣಿಗೆ ಕೈದುಡುಕಿ ಹರಳಾತೆಕ್ಕೆಯಿದೆಂಬ ಪಾಟಿಗೆ ಪರಮಗುರು ನಾನಾದನೈ (ಕುವ್ಯಾಭೀ. ೩-೬೯) ; ರಸದ ಬಾವಿಯು ಮನೆಮನೆಗಳಲಿ ಮಿಸುಪ ಚಿಂತಾಮಣಿಗಳಿರುತಿರೆ ಎಸೆವ ಪರುಷದ ಕಣಗಳಗ್ಗದ ವೀಥಿವೀಥಿಯಲಿ (ತೊರೆರಾ. ೩೯-೬). ೨. (ಆಲಂ) ತುಂಬ ಬೆಲೆಯುಳ್ಳ ವ್ಯಕ್ತಿ ; ಶ್ರೇಷ್ಠವ್ಯಕ್ತಿ : ಸೋಬಾನಕ ನೀ ನಡಿಯೆ ಸೊಬಗಿನ ಚಿಂತಾಮಣಿಯೆ (ಜೋಳಗೀ. ೧೧). ‘ ದಾನಚಿಂತಾಮಣಿ ’ ಪರಾ. ೩. [ಸಂಗೀತ] ಒಂದು ರಾಗದ ಹೆಸರು : ಚಿಂತಾಮಣಿ, ಕಲ್ಗಡ . . . ಮುಂತಾದ ಕಷ್ಟ ರಾಗಗಳಲ್ಲಿ ಕೃತಿರಚನೆ ಮಾಡಿ ಶಾಸ್ತ್ರಿಗಳು ಆ ರಾಗಗಳ ಸ್ಪಷ್ಟ ಪರಿಚಯ ಮಾಡಿ ಮಾರ್ಗದರ್ಶಕರಾಗಿದ್ದಾರೆ (ಸಂಗೀದಂ. ೨೯೪).

[ ಸಂ. ]

**ಚಿಂತಾಯಕ** (ನಾ). ಭಕ್ತರ ಕ್ಷೇಮವನ್ನು ಕುರಿತು ಯಾವಾಗಲೂ ಚಿಂತಿಸುತ್ತಿರುವವನು; ವಿಪತ್ತನ್ನು ನಿವಾರಣೆ ಮಾಡತಕ್ಕವನು: ಸಂತಸದಿ ಗುರುವಿನಡಿಗಂತಾಗ ಮ್ಮೆಯಿಕ್ಕಿ ಚಿಂತಾಯಕನೆ ಮತ್ತದೆಂತೆಂದನೆ (ಮನೋವಿ. ೨-೪೦); ತಾಯನಗಲಿದ ಶಿಶುವಿನಂದದಿ ಬಾಯಬಿಡು ವಂತಾಯ್ತಲೇ ಚಿಂತಾಯಕನೆ ಬಿಡಬೇಡ ರಕ್ಷಿಸು (ಹರಿಸಾ. ೯೪); ಇಂತಿವಷ್ಟಾದಶದೋಷಾ ಚಿಂತಾಯಕಗಿಲ್ಲವವರಿಂದ ಸುಖವೆ ನಿರಂತರ ನಿಜದೊಳೊಪ್ಪಿಹುದು (ಭರತ. ೬೬-೧೧೬); ಮುದದಿ ಚಿಂತಾಯಕಂ 'ಅವರ ಚಿತ್ತ ಶುದ್ಧಿಯ ನೋಳ್ಪೆನೆಂದು ನಟಿಸಿದ ಸತ್ಯನೌ (ಪ್ರಭುಪು. ೫-೧೫೭): ಚಿಂತೆಯನುಳಿದಾತನವನು ಚಿಂತಾರತ್ನ ಚಿಂತಾಯಕ ರಂಗಧಾಮ (ಶತಸಾಂ. ೫೮-೯೭). [ಸಂ.]

**ಚಿಂತಾರತ** (ನಾ). ಮನಸ್ಸಿನಲ್ಲಿಯೇ ಒಡಗೂಡುವಿಕೆ: "ಸಂಕಲ್ಪ ಸಮಾಗಮ" (ಕಾದಂಉ. ಅ೩೭): ಕರ್ಣಪೂರೋತ್ಪಲದಿಂ ಚಿಂತಾರತಕ್ಕಾಟಿಸಿ. ಮಣಿಮಯದೀಪಂಗಳಂ ನಂದೆ ಪೊಯ್ವಳ್ (ಕಾದಂಉ. ೩೩೯).
[ಸಂ. (ಚಿಂತಾ + ರತ)]

**ಚಿಂತಾರತಿ** (ನಾ). ಯೋಚನೆಯಲ್ಲಿ ಆಸಕ್ತಿ: ಇವರಿರವಿನ ಚಿಂತಾರತಿ ನಿವಗೇಕೀ ಕ್ಷುಧೆಯನೀ ಪಥಶ್ರಮಮುಮಂ ತೀರ್ಚುವ ಬಗೆಯಂ ಬೇಗಂ ಮಾಡುವುದು (ಗಿರಿಕ. ೯-೯೩). [ಸಂ. (ಚಿಂತಾ + ರತಿ)]

**ಚಿಂತಾರತ್ನ** (ನಾ).=ಚಿಂತಾಮಣಿ ೧: ರತ್ನಂಗಳ ನಡುವಣ ಚಿಂತಾರತ್ನದಂತೆ . . . ಗಿರಿರಾಜತನೂಜೆ ವಿರಾಜಿಸುತಿರ್ದು (ಗಿರಿಕ. ೪-೪೩ ವ): ಬಸವನೆಂಬ ವಿನೂತ್ನ ಚಿಂತಾರತ್ನವಿರುತಿರಲು (ಬಸಪು. ೬೦-೮೪).
[ಸಂ. (ಚಿಂತಾ + ರತ್ನ)]

**ಚಿಂತಾಲು** (ನಾ). ಒಂದು ಬಗೆಯ ಭಾರಮಾಪಕ; ತೂಕದ ಪರಡಿಗಳಿಲ್ಲದ, ಬರಿ ಕೊಂಡಿಗಳಿಗೆ ಭಾರವನ್ನು ಅಳವಡಿಸಿ ತೂಕ ಮಾಡುವ ಒಂದು ಸಾಧನ. ೨. ದೊಡ್ಡ ತಕ್ಕಡಿ: ಗೋಣಿಯ ಚೀಲದಂತೆ ಚಿಂತಾಲಿನಲ್ಲಿಟ್ಟು ತೂಗುವುದಕ್ಕಾಗುವುದಿಲ್ಲ (ನಿಬಂಧ. II, ೨೦೫); ಆದಕ್ಕೆ ಶಿಬಿಯು ಒಪ್ಪಿ ಚಿಂತಾಲನ್ನು ತರಿಸಿ (ವಡಛಾ. ೧೪೯). ೩. "ಬಂಗಾರ-ಬೆಳ್ಳಿಗಳನ್ನು ತೂಗುವ ಸಣ್ಣ ತಕ್ಕಡಿ, ತರಾಜು" (ಕಸೂ ಕೋ. ೩೪೩); ತುಲಾ–ತ್ರಾಸು, ಚಿಂತಾಲು, ತಕ್ಕಡಿ, ತೂಗುಕೋಲು (ಸಿದ್ಧಾಂತಿ. ೨೫೭).
[?]

**ಚಿಂತಾಲೋಲ** (ಗು). ೧. ಯೋಚನೆಯಿಂದ ಕೂಡಿದ ಮನಸ್ಸುಳ್ಳ; ಆಲೋಚನಾ ಪರವಾದ. (ನಾ). ೨. ಚಿಂತೆಯಲ್ಲಿ ಮುಳುಗಿದವನು: ಸೈಂಧವನು ಚಿಂತಾಲೋಲನಿರ್ದನು ಮರಣಜೀವನಜಾತಸಂಶಯನು (ಕುವ್ಯಾದ್ರೋ. ೮-೬೮). [ಸಂ. (ಚಿಂತಾ + ಲೋಲ)]

**ಚಿಂತಿ** (ನಾ). ಒಂದು ಬಗೆಯ ಆಭರಣ; ಚಿಂತಾಕು: ಎಡೆನರೆ ಬವರಿ ಮುತ್ತಿನ ಚಿಂತಿ ಕುಲ್ಲಾವಿ ಬೆಡಗುಗಾಣಿಸುತಿರಲೆಯ್ದು (ನಾಗಕು. ೨೯-೫).
[<ಚಿಂತಾಕು./ತಮಿ. ಚಿನ್ತಿ]

**ಚಿಂತಿತ** (ಗು). ೧. ಯೋಚಿಸಿದ; ಆಲೋಚಿಸಿದ. ೨. ಸ್ಮರಿಸಿದ; ಎಣಿಸಿದ; ನೆನೆದ. (ನಾ). ೩. ಯೋಚನೆ. ೪. ಬಯಕೆ; ಇಷ್ಟಾರ್ಥ: ಇಂತೆಂದು ನುತಿಸಲಿಂದ್ರಂ ಸಂತಸದಿಂ ಶಂಭುವೆಂದನೆಲೆ ಸುರನಾಥನೆ ಚಿಂತಿತಮನೀವೆನೀಗಳೆ ನೀಂ ತಳ್ವದೆ ಬೇಡೆನಲ್ಕೆ ಕೈಮುಗಿದೆಂದಂ (ಹಾರಾಸ್ವ. ೦-೨-೯೭). ೫. [ಸಂಗೀತ]ಸ್ವರದೋಷಗಳಲ್ಲಿ ಒಂದು: ಕಂಪಿತ ಚಿಂತಿತ . . . ಕಾಲಹೀನವೆಂಬ ಹದಿನೈದು ಸ್ವರದೂಷಣಂಗಳಂ ತೊಱೆದು (ವಿವೇಕ. ೨೩೬). [ಸಂ.]

**ಚಿಂತಿಸು** (ಕ್ರಿ). ೧. ಯೋಚಿಸು; ಆಲೋಚಿಸು; ಭಾವಿಸು: ಮಾರ್ಗಗದಿತ ದೋಷಂಗಳುಮಂ ಚಿಂತಿಸಿ (ಕವಿರಾ. ೧-೪೭): ಧುರದೊಳ್ ಮೂಱುಂ [illegible] ನೆರೆದಿರೆಯುಂ ಕುಡುವ ಪೊ[ಟ್ರ]ಱೊಳ್ ಮೇರುವೆ ಮುಂದಿರೆಯುಂ ಬೀರದ ಬಿಯದಂತರಕ್ಕೆ ಕಿಱಿದೆಂದು ಚಿಂತಿಪಂ ಪ್ರಿಯಗಳ್ಳಂ (ಪಂಪಭಾ. ೧-೪೮); ಮತಿಯಂ ಬಿಪ್ಪಂಡಿಪಳ್ ಲಕ್ಷಣಮನೆಣೆಸಳೌದಾರ್ಯಮಂ ಚಿಂತಿಸಳ್ (ಕಾದಂಪೂ. ೫೪೮); ಚಿಂತಿಸಿದೊಡಲ್ಲದೀಯದು ಚಿಂತಾಮಣಿ (ಸಮುಪ. ೩೯೪-೮ ಅನುಬಂಧ. I): ಅಳಿಯನಳಿವನು ಹೇಳಬಾರದು ತಿಳಿಯಲಿದನಿನ್ನೆನುತ ಚಿಂತಿಸಿ ನಳಿನಲೋಚನ ಬರುತ ಕಂಡನು (ಕುವ್ಯಾದ್ರೋ. ೮-೩); ಮುಂದೊರ್ವ ಖಳನುಯ್ವನೆಂದು ಚಿಂತಿಸಿ ಭಾನುಸಂದನು ಪಡುಗಡಲೊಳಗೆ (ಮೋಹತ. ೪-೭೨). ೨. ಆತಂಕಪಡು; ಕಳವಳಿಸು; ವ್ಯಥೆಗೊಳ್ಳು: ಮಾವಂ ಚರಿತಾರ್ಥಂ ನೀನಣಂ ಚಿಂತಿಸದಿರು ನಮಗಿನ್ನುಂಟೆ ಶೋಕಾವಕಾಶಂ (ಆದಿಪು. ೪-೮೯): ಅಂತವನಿಪನಿಕರಂ ಕೈಯಾಂತವನಿಪನಿಕರಮೊಂದುಕೋಟಿಗೆ ಮಿಗಿಲೆಂಬಂತಾದೊಡಮೊಳಸೋಜಿದೆ ಚಿಂತಿಸದಾಂತಿಱುಗುಮಿಾಗುಮಿಱಿವಬೆಡಂಗಂ (ಗದಾಯು.೦-೧೫); ತಾ ಮುನ್ನ ಕರ್ಣನ ಶರಹತಿಯಲೇಕಳಿದುದಿಲ್ಲಾ ಎನುತ ಚಿಂತಿಸಿದ (ಕುವ್ಯಾಕ. ೧೨-೮). ೩. ಮನನಮಾಡು; ಆರಯ್ಯು; ಬಗೆದು ನೋಡು: ಮಾಣದೆ ಚಿಂತಿಸದೋದುಂ ಪಲವಂ ಭಾವಿಸುತಿರ್ಪನ ತಪಮುಮೊಪ್ಪಲಾರ್ಕುಮೆ ಕಡೆಯೊಳ್ (ಧರ್ಮಾಮೃ. ೨-೮೨). ೪. ಧ್ಯಾನಮಾಡು: ಚಿಂತಿಪುದು ಜನೇಶ್ವರನಂ ಸಂತತಮುತ್ಸವದೆ (ಸಮುಪ. ೧-೧೧೧). [ಚಿಂತನ + – ಇಸು$_3$]

**ಚಿಂತೂರ್** (ನಾ). ಒಂದು ಊರಿನ ಹೆಸರು. 'ಚಿಂತೂರ್‌ಬೋಯ' ಪರಾ. [? + ಊರ್]

**ಚಿಂತೂರ್‌ಬೋಯ** (ನಾ). ಒಬ್ಬಾತನ ಹೆಸರು: ಚಿಂತೂರ್ ಬೋಯಸ್ಯ ಭಾರದ್ವಾಜಸಗೋತ್ರ (ಇಅ. VII, ೧೮೭-೨೪ ; 668).
[ಚಿಂತೂರ್ + ಬೋಯ]

**ಚಿಂತೆ** (ನಾ). ೧. ದುಃಖದಿಂದ ಕೂಡಿದ ಯೋಚನೆ; ದುಮ್ಮಾನ: "ಬೇವಸಮೆ ಚಿಂತೆ" (ಚತುನಿ. ೨೦): "ಚಿಂತೆ ತಾನೆಯುಬ್ಬೆಗಮಕ್ಕುಂ" (ಕಬ್ಬಿಗ. ೭೧): ಚಿಂತೆಯಿದೇನೋ ಸಂತತಿಗೆ (ಪಂಪಭಾ. ೧-೧೧೮); ಪೇೞ್ ನಿನಗಿನಿತೊಂದು ಚಿತ್ತದ ನಿಮಿತ್ತದ ಚಿಂತೆ (ಪುಷ್ಪಪು. ೩-೭೧); ಚಿಂತೆ ಏತಕೋ ಬಯಲ ಭ್ರಾಂತಿ ಏತಕೋ (ಪುರಂದ. ೧-೬೮-೧): ಆ ಚಿಂತೆಯೇ ವ್ಯಾಧಿ (ರಕ್ತಾಕ್ಷಿ. ೭೪). ೨. ಯೋಚನೆ; ಆಲೋಚನೆ: ಪರರ ಚಿಂತೆ ನಮಗೇಕಯ್ಯ ನಮ್ಮ ಚಿಂತೆ ನಮಗೆ ಸಾಲದೆ (ಬಸವ. ೫೧೮): ಮಚ್ಚೇತದೊಳುಣ್ಮಿ ಪೊಣ್ಮುವ ತನೂಭವ ಲಾಭದ ಚಿಂತೆ ಪೋಸುನಿರ್ಣೀತಮಿದೆಂದದದೇಂ ನುಡಿದನೋ ಬಗೆಯಂ ನವಭಾವಕೋವಿದಂ (ಪುಷ್ಪಪು. ೩-೭೨). ೩. ಧ್ಯಾನ: ಅವರು ಯಾವಾಗಲೂ ದೇವರ ಚಿಂತೆಯಲ್ಲಿಯೇ ಕಾಲಕಳೆಯುತ್ತಾರೆ (ರೂಢಿ). ೪. ಅಡ್ಡಿ; ಆಂತಕ: ಎಷ್ಟು ಕಠಿಣವಾದರೂ ಚಿಂತೆಯಿಲ್ಲ (ದ್ರಾವಿವಿ. ೬೩). ೫. [ಕಾವ್ಯಮೀ]ಸಂಚಾರೀಭಾವಗಳಲ್ಲಿ ಒಂದು; ಅನುಭೂತವಸ್ತುವನ್ನು ಎಡೆಬಿಡದೆ ಧ್ಯಾನಿಸುವುದು: ಮತಿ ನಿರ್ವೇದ . . . ಚಿಂತೋಗ್ರತೇರ್ಷ್ಯಾಧೃತಿ . . . ಇವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೭೯೫): ಮತಿ ಲಜ್ಜೆ . . . ಚಿಂತೆ . . . ಅಪಸ್ಮಾರಗಳೆಂಬ ಮೂವತ್ತು ಮೂಱು ಸಂಚಾರೀಭಾವಂಗಳಿಂ ಪರಿವರ್ಧಿಸಿ (ವಿವೇಕ. ೨೨೭). ೬. ಹತ್ತು ಕಾಮಾವಸ್ಥೆಗಳಲ್ಲಿ ಒಂದು: ಅಭಿಲಾಷೆ ಚಿಂತೆ . . . ಮರಣವೆಂಬ ದಶಾವಸ್ಥಾವಿಚಾರಪರರಿಂದು ಪಾಶ್ರಿತರಾಗಿ (ವಿವೇಕ. ೨೩೦). [ಸಂ. ಚಿಂತಾ]

**ಚಿಂತೆಗೆಯ್** (ಕ್ರಿ). ೧. ತಲ್ಲಣಿಸು; ಉಮ್ಮಳಿಸು; ಕಳವಳಿಸು: ಇನ್ನಿದಕೆ ಚಿಂತೆಗೆಯ್ವೊಡೆ ಪನ್ನತಿಕೆಗೆ ಬನ್ನವಲ್ತೆ (ರಾಜಶೇ. ೧೩-೯೭). ೨. ಯೋಚನೆ ಮಾಡು: ಆಲೋಚಿಸು: ಒಂದು ದಿವಸಂ ಸುಕವಿಯಂತಪೂರ್ವಾರ್ಥ ಲಬ್ಧಿಗೆ ಚಿಂತೆಗೆಯ್ದು ತನ್ನೊಳಿಂತೆಂದು ಬಗೆದಂ (ಪಂಚತಂ. ೨೨-೧೦).
[ಚಿಂತೆ + ಕೆಯ್$_1$]

**ಚಿಂತೆಗೊಳ್ಳು** (ಕ್ರಿ). ವ್ಯಥೆಪಡು ; ಕಳವಳಪಡು ; ಉಮ್ಮಳಿಸು : (೬).
[ ಚಿಂತೆ + ಕೊಳ್ಳು$_1$ (<ಕೊಳ್$_1$) ]

**ಚಿಂತೆದಾಳ್** (ಕ್ರಿ).=ಚಿಂತೆಗೊಳ್ಳು : ಪೇಳು ವೈಶಂಪಾಯ ಮುನಿರಾಯ ಧರ್ಮಸುತನಾಳೋಚನೆಯನೇಕೆ ಮಾಳ್ಪ ರೋಮಶನಂದು ಪೇಳಿದ ರಹಸ್ಯ ಮನ್ನಾರೊಡನೆಯುಸುರನರ್ಜುನ ಬಂದಮೇಲೆ ಚಿಂತೆದಾಳಬೇಡೆಂದು (ಲಕ್ಷ್ಮ.ಭಾ. ೩-೩೨-೩). [ ಚಿಂತೆ + ತಾಳ್$_1$ ]

**ಚಿಂತೆವಡು** (ಕ್ರಿ).=ಚಿಂತೆಗೊಳ್ಳು: ಇಂತು ಹನ್ನೆರಡು ಸಾವಿರ ಮೂಕೊಟಿ ಯರು ಮುಂತಾಗ ವಿಜಯಾಪುರಕೆ ಚಿಂತೆವಡುತಲೈದಿ (ಕಂನವಿ. ೧೩-೬೩).
[ ಚಿಂತೆ + ಪಡು$_1$ ]

**ಚಿಂತೆವಿಡಿ** (ಕ್ರಿ).=ಚಿಂತೆಗೊಳ್ಳು : ಮಕ್ಕಳ ಹರುಷಗಾಣದೆ ಚಿಂತೆವಿಡಿದರೆ ಹಲವು ವರ್ಷಗಳು (ಕುವ್ಯಾ.ಆ. ೬೧೫. ಪರಿ. ೩೦೨). [ ಚಿಂತೆ + ಪಿಡಿ$_1$ ]

**ಚಿಂತೆವೆಱು** (ಕ್ರಿ).=ಚಿಂತೆಗೊಳ್ಳು : ಇಂತಿರುತಿರಲ್ಕೆ ಕೌಂಡಿನ್ಯನೆಂಬೊರ್ವ ಮುನಿಪಂ ತನ್ನ ಮನೆಗೆ ಬರಲಾತನಂ ಸತ್ಕರಿಸಿ ಚಿಂತೆವೆತ್ತಿರಲವನಿದೇ ನೆಂದು ಬೆಸಗೊಂಡೊಡೆ (ಜೈಮಿಭಾ. ೧೦-೨೫). [ ಚಿಂತೆ + ಪೆಱು$_1$ ]

**ಚಿಂತ್ಯ** (ಗು). ೧. ಯೋಚಿಸತಕ್ಕ ; ಪರಿಶೀಲಿಸಲು ಯೋಗ್ಯವಾದ ; ಆಲೋಚಿಸತಕ್ಕ : "ಚಿಂತ್ಯ(ತರ್ಕ)" (Conceivable. ಪಾಠಿನಿ. ೧೯) ೨. ಯೋಚಿಸಲು ಸಾಧ್ಯವಾದ. 'ಅಚಿಂತ್ಯ' ಪರಾ. [ ಸಂ. ]

**ಚಿಂತ್ಯಾಗಮ** (ನಾ). ಆಗಮಗಳಲ್ಲಿ ಒಂದು ಬಗೆ : ಮತ್ತಮಾ ಸಿದ್ಧಾಂತ ಭೇದಂಗಳಾವಾವವೆಂದೊಡೆ ಕಾಮಿಕಾಗಮ ಯೋಗಜಾಗಮ ಚಿಂತ್ಯಾಗಮ . . . ಇಪ್ಪತ್ತೆಂಟು ದಿವ್ಯಾಗಮಗಳಕ್ಕುಂ (ವಿವೇಕ. ೬೮). [ ಸಂ. ]

**ಚಿಂದ** (ನಾ). ನಪುಂಸಕ ; ಖೊಜ್ಜ : ಅದಱೊಳ್ ಪುಟ್ಟಿದ ಗಂಡರೆಲ್ಲ ಮತಿವೀರರ್ ಪೆಂಡಿರೆಲ್ಲಂ ವಿಲಾಸದ ಸೌಭಾಗ್ಯದ ಸೀಮೆಗಳ್ . . . ಮೂಕರುಂ ಚದುರರ್ ಚಿಂದ[ಪಾಠಾಂ. ಲೆಂಕ]ರುಮಾಯಕಾಜಿರಧಮ ವ್ಯಾಪಾರಿಗಳ್ ಧಾರ್ಮಿಕರ್ (ಕಾವ್ಯಸಾ. ೧೯೮) ; (ಅನಂಪು. ೧೧ ೧೨ ನೋ).
[ <ಪ್ರಾ. ಚಿಂಧ ]

**ಚಿಂದಗಾವುಂಡ** (ನಾ). ಒಬ್ಬಾತನ ಹೆಸರು : ಚಿನ್ದಗಾವುಣ್ಡರ ಮಗ ನಾಡ ಗಾವುಣ್ಡ ಗಾವುಣ್ಡಗೆಯ್ವನ್ನ (ಎಕ. X, ಮಾಲೂರು. ೯೪-೮ ; ಕ್ರಿ. 950).
[ ಚಿಂದ$_2$ + ಗಾವುಂಡ(<ಗಾಮುಂಡ) ]

**ಚಿಂದರಿ** (ನಾ).=ಚಿಂದಿ ೨ : ಉಟ್ಟ ಮಲ್ಲಗಂಟಿನ ತೊಡರ್ಚಿದುಡೆಗಂಟೆಯ ಕಿರ್ಗಟ್ಟಿನ ಸುರಗಿಯ ಕಟ್ಟಿದ ಚಿಂದರಿಯ [ಪಾಠಾಂ. ಚಿಂದಿಯ] ತೊಟ್ಟ ಕಂಚುಳಿಕೆಯ ಹಿಡಿದ ಬಿಲ್ಲ ಬಲಗೈಯ ಸರಳ ಬೆನ್ನ ಬತ್ತಳಿಕೆಯ . . . ಸಿಂಗರಂಬೆರಸಿ (ಗಿರಿಕ. ೬-೫೫ ವ).
[ ?. ; ತೆಲು. ಚಿಂದರ, ಚಿಂದಟ. / ಮರಾ. ಚಿಂದರ್, ಚಿಂದರೀ ]

**ಚಿಂದರುಬಾವಲಿ** (ನಾ). ಒಂದು ಬಗೆಯ ಕರ್ಣಾಭರಣ : ಕಂದೆತ್ತು ಕೈಯಾಗ ಕೆಂಪಂಗಿ ಮೈಯಾಗ ಚಿಂದರುಬಾವಲಿ ಕಿವಿಯಾಗ ಇಟ್ಕೊಂಡು ತಂಗಿಯುರ ಕರೆಯ ಬರುತಿದ್ದ (ಹಳ್ಳಿಹಾ. ೬೨) ; ಚಿಂದರುಬಾವಲಿ ಕಿವಿಯಲ್ಲಿ ಇಕ್ಕೊಂಡು ಅಣ್ಣಾ ಬಂದಾ ತಂಗೀ ಕರೆಯೋಕೆ (ಜಗೀತ. ೨೯).
[ <ಚಂದ್ರಬಾವುಲಿ ]

**ಚಿಂದಾಟಿ** (ನಾ). ಚಿಂದಿಚಿಂದಿಯಾದುದು ; ಹರಕಲು ಬಟ್ಟೆ : ಎರಡನೆಯ ಖಲೀಫನಾದ ಉಮರನು ಭರತಖಂಡದ ನೂಲಿನ ಬಟ್ಟೆಯ ನಿಲುವಂಗಿ ಯನ್ನು ತೊಟ್ಟಿದ್ದನೆಂತಲೂ ಆದಕ್ಕೆ ೧೨ ತೂತುಗಳು ಬಿದ್ದು ಅದು ಹರಿದು ಚಿಂದಾಟಿಯಾಗಿದ್ದಿತೆಂತಲೂ ಉಲ್ಲೇಖವಿದೆ (ಪಾದಿಶಾ. ೨೧).
[ ←ಮರಾ ಚಿಂಧೋಟೀ ]

**ಚಿಂದಿ** (ನಾ). ೧. ಹರಕು ಬಟ್ಟೆ ; ತುಂಡು ಬಟ್ಟೆ : ಒಂದು ಪಟ್ಟಾವಳಿಯ ಚಿಂದಿಯೊಳೊಂದೆಸೆಯೊಳೀಶ್ವರನೊಡನೆ ಬಲುಹೊಂದಿ ಸಂಧಿಸಿ (ಬಸಪು. ೨೭-೧೩) : ಪೀತಾಂಬರಗಳ ಹೊದೆಯುವರಲ್ಲಿ, ಕೌಪೀನಕೆ ಚಿಂದಿಯು ಸಿಗದಿಲ್ಲಿ (ಪಾಂಡಜ. ೬೭-೨೦). ೨. ತಲೆಗೆ ಕಟ್ಟಿಕೊಳ್ಳುವ ಚಿಕ್ಕ ವಸ್ತ್ರ: ತೋರದ ದೇಹ ಕುಂಡಲವೆದೆ ನರೆಗಡ್ಡ ಸೇರಿದ ಚಿಂದಿ ಕುಲ್ಲಾಯಿ (ಭರತ. ೦೩-೯) : ವೈಯಾರದ ಬಿರುದಿನ ಚಿಂದಿಗಳ ಚೆಲ್ವರಾಯ ರಾವುತರೈದಿದರು (ಕಂನವಿ. ೨೩-೮೫) : ವಾರೆದುರುಬಿನ ಚಿಂದಿ ವಾರಣದ ಶಿಖಿಯಲ್ಲಿ (ಕೊಟ್ಟೂ. ೧೫-೫೦) : ಇಟ್ಟ ಮುತ್ತಿನ ಚೌಕಳಿ ಚಿಂದಿ ಹರಿನಾಮ ತೊಟ್ಟ ಭೂಷಣ ರತ್ನಾಭರಣ (ಸೌಂದರ್ಯ. ೯-೬೫) : ಚಿಂದಿಯೊಳಪೊಕ್ಕು ಬ್ರಹ್ಮಸ್ಥಾನ ಗೊರೆದು(ಜನಮು. ೨೭-೧೧). ೩. ಸೊಂಟಪಟ್ಟಿ ; ನಡುಕಟ್ಟು : ಕಟ್ಟಿದ ಚಿಂದಿಯುಂ ಸುರಿಗೆಯುಂ ಪೆಗಲೇಱಿದ ಮಕ್ಕಳುಂ (ಸೂಕ್ತಿಸು. ೧೮-೩೩).

ಚಿಂದಿಉಡಾಯಿಸು = ಸ್ವಲ್ಪವೂ ಉಳಿಯದಂತೆ ಕೊಳ್ಳೆಹೊಡೆ.– ಲಪಟಾಯಿಸು : ಅಂತೂ ಇಂಥ ಅತಿರಥ ಮಹಾರಥರ ಸಂಘಟನೆಯಲ್ಲಿ ಕಳವು ಮಾಲು ಚಿಂದಿ ಉಡಾಯಿಸಿ ಹೋಗುವುದರಲ್ಲಿ ಸಂದೇಹವಿಲ್ಲ (ಕಲನ. ೧೦೮). ಚಿಂದಿಯಾಗು = ಚೂರು ಚೂರಾಗು : ಉಟ್ಟಿದ್ದ ಧೋತ್ರ, ತೊಟ್ಟಿದ್ದ ವಸ್ತ್ರಗಳು ಮುಳ್ಳುಪೊದೆಗಳಿಗೆ ಸಿಕ್ಕಿ ಹರಿದು ಚಿಂದಿಯಾಗಿವೆ (ಶಾಂತಲಾ. ೩೩೭). [ ?./ ಹಿಂ. ಚಿಂದೀ ; ಮರಾ. ಚಿಂಧೀ./ಪ್ರಾ. ಛಿಂದಾವಿಯ=ಹರಿದ ; ಕತ್ತರಿಸಿದ ]

**ಚಿಂದಿಬಟ್ಟೆ** (ನಾ). ತುಂಡುಬಟ್ಟೆ : ಮೊದಲಿದ್ದ ಚಿಂದಿಬಟ್ಟೆಯೂ ಈಗ ಮಾಯವಾಗಿದ್ದಿತು (ಬಾಡಿಆ. ೧೦೯). [ ಚಿಂದಿ$_1$ + ಬಟ್ಟೆ$_2$ ]

**ಚಿಂದು** (ನಾ). ೧. [ನಾಟ್ಯ] ನೃತ್ಯದಲ್ಲಿ ಒಂದು ಬಗೆ ; ಅಭಿನಯದಲ್ಲಿ ಒಂದಂ ರೀತಿ : ಮಾತಂಗಿ ಶಬರಿ ಯೋಗಿಣಿ ಮುಂತಾದ ಆಟಮನಾಡಿ ನಾನಾದೇಶ ವೇಷ ಭಾಷೆಗಳನಳವಡಿಸಿ ಚಿಂದು ಜಕ್ಕಡಿ . . . ಮೊದಲಾದ ಆಟಗಳಿಂ (ವಿರೂಪಾ. ೯೦) : ಕೋಲಚಾರಿಯ ಕೊಳ ವನ ಚಿಂದು ಮೊದಲಾದ ಲೀಲೆಯನೆಲ್ಲವ ತೋಱಿ (ಭರತ. ೧೨-೯೩) : ಚಿಂದು ಜಕ್ಕಡಿ ಕೋಲಚಾರಿಗಳ್ (ಚಬಪು. ೨-೨೯). ೨. [ಸಂಗೀತ] ಸಂಗೀತದ ಸ್ಥಾಯಿ ಗಳಲ್ಲಿ ಒಂದು ಬಗೆ : ಜಕ್ಕಡಿ ಚಿಂದು ಮೊದಲಾದ ಠಾಯವು . . . ಮೆಱೆಯೆ (ರೇವಣ. ೩೦-೩೮) : ಗೀತಕ್ರಮದಿ ಸಂಕೀರ್ಣವೆತ್ತು ರತಿ ಜೋಡಣೆಗೆ ಚಿಂದು ಜಕ್ಕಡಿ ಗೀತ ಕಂಪನವ ಸೂಡೆ ಸರಸಾಲಾಪದಿ (ರಂಗಪು. ೨೭-೦೬). [ ದೇ.॥ ತಮಿ. ಚಿನ್ದು ; ತೆಲು. ಚಿಂದು ]

**ಚಿಂಪಯ್ಯ** (ನಾ). ಒಬ್ಬಾತನ ಹೆಸರು . ಕೊವರಪೆಯ ಚಿಂಪಯ್ಯನುಂ ಲೋಕಯ್ಯನುಂ ಕೊಟ್ಟಾರದ ಮಾರ ಪುಲಿಯುಂ (ಎಕ. XII, ಶಿರಾ. ೨೮-೫೧ : 943). [ ? + ಅಯ್ಯ$_1$ ]

**ಚಿಂಪಾಂಜಿ** (ನಾ). (ಮನುಷ್ಯನನ್ನು ಹೋಲುವ) ಒಂದು ವಾನರ ಜಾತಿ : ಮಂಗನ ಮರಿಗೆ ಇನ್ನೂ ಹೆಚ್ಚು ಕಾಲ ಶಿಕ್ಷಣ ಅಗತ್ಯ. ಚಿಂಪಾಂಜಿ ಎಂಬ ಮಾನವ ಮಂಗದ ಮರಿಗಳು ಇನ್ನೂ ಹೆಚ್ಚುಕಾಲ ತೆಗೆದುಕೊಳ್ಳುತ್ತವೆ (ಶಿಕ್ಷದ. ೮೭). [ ←ಇಂ. Chimpanzee ]

**ಚಿಂಪಿ** 'ಸಿಪ್ಪ' ನೋ.

**ಚಿಂಪಿಗ** 'ಸಿಪ್ಪಿಗ' ನೋ.

**ಚಿಂಪೆ** 'ಸಿಪ್ಪ' ನೋ.

**ಚೀ** (ನಾ). ಜುಗುಪ್ಸೆ, ತಿರಸ್ಕಾರ ಮುಂತಾದುವುಗಳನ್ನು ಸೂಚಿಸುವ ಒಂದು ಅನುಕರಣ ಶಬ್ದ ; ಧಿಕ್ಕರಿಸುವ ಶಬ್ದ : ಆ ಸುದತಿಯ ರೂಪಿನಿಂ ಪೆಱತನೆಂದೊಡೆ ಚೀ ಕರಮೆಗ್ಗನಾಗೆನೇ (ಆದಿಪು. ೨-೭೪) ; ಚೀ ಜಪವೆಣಿಸುವ ನೆವದಿಂದಂ ನೃಪ ತದ್ಗುಣಗಣಮನೀಗಳೆಣಿಸುತ್ತಿರ್ಪ (ಕಾದಂಪೂ. ೯೫೭) : ಸಾರಮಸಾರಮಿದೆಂದು ವಿಚಾರಿಸಿ ಕೈಕೊಂಡು ಕಿಡಿಸ ಲಾರ್ಪುದೆ ಚೀ ನಿಷ್ಕಾರಣಂ (ಧರ್ಮಾಮೃ. ೩-೨೦೦).

**ಚೀಗೈ** (ಕ್ರಿ). ತಿರಸ್ಕರಿಸು; ಧಿಕ್ಕರಿಸು: ಮನಮೋಕೊ ಕಳವಳಂಗೊಳುತಿರ್ಪ ದಾಶೆಯಂ ಚೀಗೈದು (ಶ್ರೀರಾಮಾ. ೮೩೨-೨೯೩).
[ ಚೀ + ಗೈ (<ಕೆಯ್$_1$) ]

**ಚಿಕಟಾಯಿಸು, ಚಿಗಟಾಯಿಸು** (ಕ್ರಿ). ಅಂಟಿಸು; ಲಗತ್ತಿಸು: ನೋಟೀಸಿನ ನಕಲಿನ ಮೇಲೆ ಷರಾ ಬರೆದು ಬಾಕಿದಾರನು ವಾಸಮಾಡುವ ವಾಸಸ್ಥಾನ ದಲ್ಲಿಯಾಗಲಿ ಜಪ್ತಿ ಸೊತ್ತುಗಳನ್ನು ಇಟ್ಟಿರುವ ಸ್ಥಳದಲ್ಲಿಯಾಗಲಿ ಚಿಕ ಟಾಯಿಸತಕ್ಕದ್ದು (ಗ್ರಾಮಾಕ. ೭೩). **ಚಿಗಟಾಯಿಸು** : ನಕಲನ್ನು ಆತನ ವಾಸದ ಮನೆಗೆ ಚಿಗಟಾಯಿಸಿ ಅಸಲಿಗೆ ಹಾಜರಿದ್ದವರ ರುಜು ಪಡೆಯ ಲಾಯಿತು (ಪಂಚಪಂ. ೪೭).

[ ಚಿಕಟ$_0$ (P ←ಮರಾ. ಚಿಕಟಣೇ) + – ಇಸು$_3$. ]

**ಚಿಕಣ** (ನಾ). (ಕರಾ). ಒಂದು ಬಗೆಯ ವಿಮಾನು. [ ? ]

**ಚಿಕಣಿ** (ಗು). ೧. ಗಟ್ಟಿಯಾದ: (ಕ). ೨. ಸಾರವತ್ತಾದ: (ಕ). ೩. ದಪ್ಪ ನಾದ : (ಕ). ೪. ಜಿಡ್ಡಿನ : (ಕ). [ ?./ಸಂ. ಚಿಕ್ಕಣ./ಹಿಂ. ಚಿಕನಾ ]

**ಚಿಕಣ್ಣ** (ನಾ). ಒಬ್ಬಾತನ ಹೆಸರು : ಮೂವತ್ತಱುವರುಮರಸುಂ ಚಿಕ (ಂ)ಣ್ಣಜಿ೩್ಗ ಪದಿ × × × ಗೊಟ್ಟರ್ (ಸೌಇಇ. XI-1, ೧೦-೩೦ : 864).

[ < ಚಿಕ್ಕ$_1$ + ಅಣ್ಣ$_1$ ]

**ಚಿಕಪ** 'ಚಿಕ್ಕಪ್ಪ' ನೋ.

**ಚಿಕರ** 'ಸಿಕರ' ನೋ.

**ಚಿಕರಿ** (ನಾ). ಬೆಟ್ಟ : ಶತ್ವಕ್ಕೆ ಚತ್ವಂ—ನಿಶ್ಚಲ–ನಿಚ್ಚಲ . . . ಶಿಖರಿ–ಚಿಕರಿ (ಶಮದ. ೨೬೩ ಪ್ರಯೋ). [ < ಸಂ. ಶಿಖರಿನ್ ]

**ಚಿಕಸಂಭು** (ನಾ). ಒಬ್ಬಾತನ ಹೆಸರು : ಕುರುವರನ ಮಗ ಚಿಕಸಂಭುವ ನಯ್ದ ನೀಱ ಎಡೆನಾ(ಣ್ಡ)ಬ್ಬತ್ತು ಆಳುತ್ತಿರೆ (ಎಕ. VIII, ಸೊರಬ. ೫೭೦-೬ ; 951). [ <ಚಿಕ್ಕ$_1$ + ಸಂಭು$_0$(<ಸಂಬು) ]

**ಚಿಕಿಚ್ಚೆ** (ನಾ).=ಚಿಕಿತ್ಸೆ : ದ್ವಿತ್ವದ ಛತ್ವಕ್ಕೆ ದಡ್ಡಕ್ಕರದ ಚಕಾರಂ—ಇಚ್ಛೆ–ಇಚ್ಚೆ ; ಮಚ್ಛರ – ಮಚ್ಚರ ; ಚಿಕಿಚ್ಛೆ – ಚಿಕಿಚ್ಚೆ (ಶಮದ. ೬. ೨೫೭ ಪ್ರಯೋ)... [<ಸಂ. ಚಿಕಿತ್ಸಾ ]

**ಚಿಕಿತ್ಸಕ** (ನಾ). ೧. ಚಿಕಿತ್ಸೆ ಮಾಡುವವನು; ವೈದ್ಯ: " ಆಯುರ್ವೇದೀ, ಭಿಷಕ್, ವೈದ್ಯಃ, ದೋಷಜ್ಞಃ, ಚಿಕಿತ್ಸಕಃ – ಈ ೫ ವೈದ್ಯಂ " (ಹಲಾಯು. ೧೦೦-೪೫೮) : ಮನಶ್ಶಾಸ್ತ್ರವೇತ್ತರೂ, ಚಿಕಿತ್ಸಕರೂ ಆದ ಅವರ ಕಣ್ಣು ಗಳಲ್ಲಿ ನೀರು ಕಟ್ಟಿತ್ತು (ಹೊಸಕ. ೧). ೨. (ಆಲಂ) ಆಳವಾಗಿ ಪರಿಶೀಲಿಸುವವನು,–ವಿಮರ್ಶಿಸುವವನು : ಚಿಕಿತ್ಸಕ ಓದುಗರು ಸಂಶಯ ತಳೆದಾರೆಂದೆನಿಸುವುದು (ಸುತ್ತುಮು. ೧). [ ಸಂ. ]

**ಚಿಕಿತ್ಸಕಬುದ್ಧಿ** (ನಾ). ವಿಮರ್ಶಕ ಬುದ್ಧಿ ; ಪರೀಕ್ಷಕ ಬುದ್ಧಿ : ರಂಗನಲ್ಲಿ ಸಾಕಷ್ಟು ಚಿಕಿತ್ಸಕ ಬುದ್ಧಿಯೂ ಇತ್ತು (ರಂಗರೋ. ೩೪). [ಚಿಕಿತ್ಸಕ+ಬುದ್ಧಿ]

**ಚಿಕಿತ್ಸಾಂಗ** (ನಾ). ಚಿಕಿತ್ಸೆಗೆ ಸಂಬಂಧಪಟ್ಟುದು : ವೈದ್ಯ, ಔಷಧ, ರೋಗಸ್ಥ, ಪರಿಚಾರಕ ಈ ನಾಲ್ಕೂ ಚಿಕಿತ್ಸಾಂಗವೆನಿಸಿಕೊಂಬುವುವು (ಸಕವೈ. ೨೩). [ ಸಂ. (ಚಿಕಿತ್ಸಾ + ಅಂಗ) ]

**ಚಿಕಿತ್ಸಾಕ್ರಮ** (ನಾ). ವೈದ್ಯೋಪಚಾರದಲ್ಲಿ ಅನುಸರಿಸುವ ರೀತಿ : ರೋಗವಿಧಾನದಲ್ಲಿಯಾಗಲಿ ಚಿಕಿತ್ಸಾಕ್ರಮದಲ್ಲಿಯಾಗಲಿ ಇರುವ ಭಿನ್ನಾಭಿ ಪ್ರಾಯಗಳನ್ನು . . . ಬರೆದು ಸೂಚಿಸಿದ್ದಾನೆ (ಸಕವೈ. IX, ಪ್ರಸ್ತಾವನೆ).

[ ಸಂ. (ಚಿಕಿತ್ಸಾ + ಕ್ರಮ) ]

**ಚಿಕಿತ್ಸಾಲಯ** (ನಾ). ರೋಗಿಗೆ ಪರೀಕ್ಷೆ ಮತ್ತು ಉಪಚಾರ ಮಾಡುವ ಸ್ಥಳ ; ಆಸ್ಪತ್ರೆ : ಚಿಕಿತ್ಸಾಲಯದಲ್ಲಿ ಮೇರಿ ಗುಟ್ಟಾಗಿ ಡಾಕ್ಟರರಿಂದ ದೇಹಪರೀಕ್ಷೆ ಮಾಡಿಸಿದಳು (ಕಾವೇರಿ. ೧೬೫): ರಾತ್ರಿಯಾಗಿ ಚಿಕಿತ್ಸಾಲಯದ ಪಟಾಂಗಣದಲ್ಲಿ ಎರಡು ಗಂಟೆ ಬಾರಿಸಿತು (ಹೇಮಂತ. ೫೦೫).

[ ಸಂ. (ಚಿಕಿತ್ಸಾ + ಆಲಯ) ]

**ಚಿಕಿತ್ಸಿತ** (ಗು). ರೋಗದ ಪರೀಕ್ಷೆ ಮತ್ತು ಔಷಧೋಪಚಾರಗಳಿಂದ ಕೂಡಿದ : ಚಿಕಿತ್ಸಿತಾಗೂಢಪ್ರೌಢಮಪ್ಪ ಗದಾಂಗಮುಮಂ . . . ತ್ರಿದಶವರ್ಗಕ್ಕುಪದೇಶಂಗೆಯ್ಯುತ್ತುಂ (ಶಾಂತಿಪು. ೧೮-೯೦ ವ). [ ಸಂ. ]

**ಚಿಕಿತ್ಸೆ** (ನಾ). ರೋಗವನ್ನು ಗುಣಪಡಿಸುವ ಕಾರ್ಯ ; ರೋಗ ನಿವಾರಣೋಪಾಯ; ವೈದ್ಯೋಪಚಾರ: " ಉಪಚರ್ಯಾ, ಚಿಕಿತ್ಸಾ – ಈ ೨ ವೈದ್ಯಂ ಮಾಡುಹ " (ಹಲಾಯು. ೧೦೦-೪೫೮) : ಉದಾರವಹ್ನಿಯ ವಿವಿಧ ಪೀಡಾಕಾರಕುಂಟೆ ಚಿಕಿತ್ಸೆಯೆಂದನು ಮುನಿ ನೃಪಾಲಂಗೆ (ಕುವ್ಯಾಅ. ೦೬-೧೩) : ಚಿಕಿತ್ಸೆಯ ಮಾಡುವ ವೈದ್ಯನಿಗೆ . . . ಚಿಕಿತ್ಸಾವಿಷಯವು ನಿಷ್ಫಲವಲ್ಲವೆಂದು ಪೂರ್ವಾಚಾರ್ಯರು ಹೇಳುವರು (ಸಕವೈ. ೧೩) ; ಆಂಗ್ಲೇಯ ವೈದ್ಯರು ಕೂಡ ಚಿಕಿತ್ಸೆ ನಡೆಸಿದರು (ಪ್ರಕಾಪ. ೧೭).

[ ಸಂ. ಚಿಕಿತ್ಸಾ ]

**ಚಿಕೀರ್ಷೆ** (ನಾ). ೧. ಕೆಲಸ ಮಾಡುವ ಬಯಕೆ : ನಿಯಮದಿಂ ಶುಭ ರೂಪವಿಗುರ್ವಣೇಚ್ಛೆಯಿಂ ಅಶುಭಾಕಾರಂಗಳಂ ದುಃಖ ಪ್ರತೀಕಾರ ಚಿಕೀರ್ಷೆಯಿಂ ಅತಿದುಸ್ಸಹ ದುಃಖ ಹೇತುಗಳನೆ ವಿಗುರ್ವಿಸುವರ್ (ತತ್ತ್ವ ಪ್ರ. ೧೨೨) : ನೆಟ್ಟನಾ ಜ್ಞಾನವಸ್ತುವಿನೊಳು ಚಿಕೀರ್ಷೆ ನೆಱೆಹುಟ್ಟದಾಗಿಯು (ವೀಶೈಪು. ೫-೧೨-೨೭) ; ಚಿಕೀರ್ಷೆಯಾವೇಗದ ವಹ್ನಿಫಣಿ ಲೇಲಿಹ್ಯಮಾನ ಜಿಹ್ವೆಗಳಂತೆ (ಶ್ರೀರಾಮಾ. ೧೩-೩೩೦). ೨. ಉದ್ದೇಶ ; ಮನೋರಥ : ಅನಂತನು ಪದುಮನಾಭಪ್ರಿಯ ಚಿಕೀರ್ಷೆಯಲುದಿಸಿದಪನು (ನಿಭಾಗ. ೧೦-೧-೩೫). [ ಸಂ. ಚಿಕೀರ್ಷಾ ]

**ಚಿಕುರ** (ಗು). ೧. ಯಾವುದಕ್ಕೂ ಹಿಂದೆಗೆಯದೆ ಇನ್ನೊಬ್ಬರಿಗೆ ತೊಂದರೆಯನ್ನುಂಟುಮಾಡುವ. ೨. ಹಿಂದೆ ಮುಂದೆ ಆಲೋಚಿಸದೆ ಕೆಲಸ ಮಾಡುವ ; ದುಡುಕಿನ ಸ್ವಭಾವದ. ೩. ಚಂಚಲವಾದ; ಅಸ್ಥಿರ ವಾದ. (ನಾ). ೪. ತಲೆಯ ಕೂದಲು : " ಕೇಶಃ, ಶಿರಸಿಜಃ . . . ಚಿಕುರಃ, ಶಿರೋರುಹಃ, ವಾಳಃ – ಈ ೭ ತಲೆಯ ನವಿರ್ " (ಹಲಾಯು. ೮೭-೩೭೬) ; ಚಿಕುರ ಚಾರು ಮೃದುಕುಂತಳ ಕಳಾಪಮಳಕೇಶಂ (ಗದಾಯು. ೮-೫೭) ; ಮಧುಪವ್ಯೂಹನಿಭಕುಟಿಳಚಿಕುರಮನೋಹರೆ ಮನಸಿಜನ ಕಣೆಗೆ ದೊಣೆಯೆನೆ ನೆಗಟ್ದಳ್ (ಸುಕುಮಾ. ೧-೭೯) ; ಕಮಲವನದೊಳೆಱಗಿದ ಪರಮೆದುಱುಗಲೆಂಬಂತಲ್ಲಿ ಚಿಕುರನಿಕರಮೆಸೆಯೆ (ರಾಜಶೇ. ೧-೧೩೫ ವ) : ಚೆಲ್ಲಿದಾ ಚಿಕುರರಾಶಿಯೆ ಕತ್ತಲೆಯ ಮೊತ್ತಮೆಂಬಂತೆವೋಲ್ (ಶ್ರೀರಾಮಾ. ೬೭-೩೭೦). [ ಸಂ. ]

**ಚಿಕೆಯ** (ನಾ). ಒಬ್ಬಾತನ ಹೆಸರು : ಶ್ರೀ ಕನ್ನರದೇವಂ ಪೃಥಿವೀ ರಾಜ್ಯಂಗೆಯೆ ಚಿಕೆಯನ್ನಾಡನಾಳೆ (ಎಕ. VIII, ಸೊರಬ. ೭೦-೨ ; 938).

[ <ಚಿಕ್ಕಯ್ಯ ]

**ಚಿಕೋರಿ** (ನಾ). ಒಂದುಬಗೆಯ ಗಿಡ; P ಇದರ ಬೇರಿನ ಪುಡಿಯನ್ನು ಕಾಫಿಪುಡಿಗೆ ಬೆರೆಸುತ್ತಾರೆ : (ಬೇರಿಗಾಗಿ ಬೆಳಸುವ, ನೀಲಿಹೂವು ಬಿಡುವ) ಒಂದು ಜಾತಿಯ ಗಿಡ ; ಇದರ ಬೇರಿನ ಪುಡಿ : 'ಚಿಕೋರಿ' (Chicory. ಇಂಕನಿ) ; ತನ್ನ ಮುಂದಿದ್ದ ವ್ಯವಹಾರದ ಬಗ್ಗೆ ಚಿಂತಿಸುತ್ತ . . . ಚಿಕೋರಿ ದಟ್ಟವಾಗಿ ಬೆಳೆದಿದ್ದ ಟೆನಿಸ್‌ಮೈದಾನದಲ್ಲಿ . . . ಅಡ್ಡಾಡಿದನು (ಪುನರು. ೨೬೫). [ ← ಇಂ. Chicory ]

**ಚಿಕ್ಕ$_1$** (ನಾ). ೧. ಎಳೆಯತನ ; ಎಳೆಯ ವಯಸ್ಸು : ಮಕ್ಕಳ ಮದುವೆಯ ಚಿಕ್ಕಲ್ಲಿ ಮಾಡಿದಡೆ . . . ಇಪ್ಪವ ಮಱೆಯಬೇಕು (ಮೋಳಿಗೆ ಮಾ. ೮೦-೩೧೯). ೨. ಒಬ್ಬಾತನ ಹೆಸರು : ಆತನ ಮಗ ಚಿಕ್ಕ ಕಲ್ಲ ನಿಱಿಸಿದೊ (ಎಕ. VIII, ಸೊರಬ. ೨೦೨-೬; 955). (ಗು). ೩. ಸಣ್ಣ ; ಕಿರಿಯ : ಮದದಾನೆಯುಮಂ ಮಾಣಿಕಮುಮನೊತ್ತೆವಿಡಿಸಲಟ್ಟುವ ಚಿಕ್ಕ ಪೋರ್ಕುಳಿ ಬೊಜಂಗರುಮಂ . . . ಮೆಱೆದು (ಪಂಪಭಾ. ೪-೮೭ ವ); ದೇವಾ ನೀನೆನಗೆ ಚಿಕ್ಕ ತಮ್ಮ (ಬಸವ. ೯೦೪) : ಕೈಯಲ್ಲಿ ಚಿಕ್ಕ ಕೊಡಲಿ (ಆರ್ಯಕ. ೧೧). ೪. ಕೀಳಾದ ; ಕ್ಷುಲ್ಲಕವಾದ. 'ಚಿಕ್ಕನಂಡಿ' ಪರಾ.

ಚಿಕ್ಕಚಿಕ್ಕ (ದ್ವಿರುಕ್ತಿ): ಪಾದಾಃ, ಪ್ರತ್ಯಂತ ಪರ್ವತಾಃ– ೨ ದೊಡ್ಡ ಬೆಟ್ಟಗಳ ಬಳಿಯಲ್ಲಿ ಸುತ್ತುಮುತ್ತಲೂ ಸಮೀಪವಾಗಿರುವ ಚಿಕ್ಕಚಿಕ್ಕ

ಕಲ್ಲು ಗುಡ್ಡೆಗಳು (ಸಿದ್ಧಾಂತಿ. ೯೫). **ಚಿಕ್ಕದು** = ಸಣ್ಣದು : ಚೇಳ್ ಚಿಕ್ಕದೆಂದಳ್ಕಱಿಂ ತೆಗೆಯಲ್ ಕಚ್ಚದೆ (ಸೋಮೇಶ. ೪೧) ; ಅಕ್ಕ ನಿನ್ನ ಮಾತ ಕೇಳಿ ಚಿಕ್ಕದೊಂದು ಗಿಳಿಯು ಸಾಕಿದೆ (ಪುರಂದ. ೧-೦೦೨-೧). **ಚಿಕ್ಕವ, ಚಿಕ್ಕವನು** = ಸಣ್ಣ ವಯಸ್ಸಿನವನು ; ಸಣ್ಣವನು : ಚಿಕ್ಕವನಂ ಬೇಂಟೆಗೆ ಬಲಿಯಿಕ್ಕುವನೋ (ದಶಕು. ೨-೧೩೮) ; ಧುರವ ಹೊಗತಕ್ಕವನೆ ಚಿಕ್ಕವ ನಿಱಿಯಲಾಪನೆ (ಕುವ್ಯಾದಪ್ರೀ. ೨-೧೭) : ಚಿಕ್ಕವನೇ ಇವನು ನಮ್ಮ ಕೈಗೆ ಸಿಕ್ಕದೆ ಓಡುವನು (ಪುರಂದ. ೧-೬೦ ಪಲ್ಲವಿ). **ಚಿಕ್ಕವಳು, ಚಿಕ್ಕಳು** = ಸಣ್ಣ ವಯಸ್ಸಿನವಳು ; ಸಣ್ಣವಳು : ಚಿಕ್ಕವಳಿದ್ದಾಗಲೇ ಆಕೆ ಅನಾಥಳಾದಳು (ರೂಢಿ): ಚಿಕ್ಕಳ ನುಡಿಗೇಳು ಮತ್ತುಂಬವೆಂದಳು ತಕ್ಕಳೂರ್ವಳಿಗೊರ್ವಳಲ್ಲಿ (ಭರವ. ೪-೩೦): **ಚಿಕ್ಕವು** (ಬಹುವ): ಮಕ್ಕಳು ತುಂಬಾ ಚಿಕ್ಕವು (ರೂಢಿ). **ಚಿಕ್ಕಾತ** = ಚಿಕ್ಕವ: ಚಿಕ್ಕಾತನಾದೊಡಂ ಬುದ್ಧಿವಂತನಲ್ಲಿ ಕಾರ್ಯಮಂ ಕೇಳ್ವುದು (ಪಂಚತಂ. ೦೦೦-೪). [ ದೇ.॥ ತಮಿ. ತುಳು. ಚಿಕ್ಕ; ತೆಲು. ಚಿಕಿ./ ಪ್ರಾ. ಚಿಕ್ಕ = ಅಲ್ಪವಾದ, ಸ್ವಲ್ಪ ]

**ಚಿಕ್ಕ$_2$** ‘ಸಿಕ್ಕ$_1$’ ನೋ.

**ಚಿಕ್ಕ$_3$** (ಗು). ಚಪ್ಪಟೆಯಾದ ಮೂಗುಳ್ಳ. [ ಸಂ. ]

**ಚಿಕ್ಕಎಲಚಿ** (ನಾ). ಎಲಚಿಯಲ್ಲಿ ಒಂದು ಬಗೆ ; ಸಣ್ಣ ಎಲಚಿ ಗಿಡ : “ನಿಷ್ಕುಟೀ-ಚಿಕ್ಕಎಲಚಿ” (ಒಷಧಿ. ೮೭). [ ಚಿಕ್ಕ$_1$ + ಎಲಚಿ ]

**ಚಿಕ್ಕಂದು$_1$** (ನಾ). ಎಳೆಯ ವಯಸ್ಸು; ಎಳವೆ; ಬಾಲ್ಯ: ಮೆಚ್ಚಿಸಲೆಂದು ಮೆಯ್ದೆ ಜಗಮಂ ಚಿಕ್ಕಂದು ತೊಟ್ಟಾಂ ಪರೀಕ್ಷಿಸಿ (ಕಾದಂಉ. ೫೦೮) : ಚಿಕ್ಕಂದಿನ ಬಾಳುವೆ ನಿಮ್ಮ ಆಣೆಯಯ್ಯ (ಬಸವ. ೫೦೪) : ಚಿಕ್ಕಂದಿನಲ್ಲಿ ಹುಡುಗರ ಬುದ್ಧಿ ಬಹಳ ಕೋಮಲವಾಗಿರುವುದು (ಮುಂಬಯಿ. ೪-೩೪). [ ಚಿಕ್ಕ$_1$ + ಅಂದು$_2$ ]

**ಚಿಕ್ಕಂದು$_2$**(ಅ). ಬಾಲ್ಯಕಾಲದಲ್ಲಿ ; ಎಳವೆಯಲ್ಲಿ: ಇವನು ತಮ್ಮಯ್ಯನನು ನೆಱೆ ಪರಿಭವಿಸನೇ ಚಿಕ್ಕಂದು (ಕುವ್ಯಾದಪ್ರೀ. ೧೯-೨೩). [ ಚಿಕ್ಕ$_1$ + ಅಂದು$_3$ ]

**ಚಿಕ್ಕಕಲ್ಲುರಿ** (ನಾ). ಒಂದು ಬಗೆಯ ಮೂಲಿಕೆ : “ಬ್ರಹ್ಮಸೋಮಾ – ಚಿಕ್ಕಕಲ್ಲುರಿ ; ನೀರಗಿಚ್ಚು” (ಒಷಧಿ. ೮೧). [ ಚಿಕ್ಕ$_1$ + ಕಲ್ಲುರಿ$_0$ ]

**ಚಿಕ್ಕಕಾಗೆದೊಂಡೆ** (ನಾ). ಒಂದು ಬಗೆಯ ಮೂಲಿಕೆ : “ಧ್ವಾಕ್ಷಾಂಗೀ– ಚಿಕ್ಕಕಾಗೆದೊಂಡೆ” (ಒಷಧಿ. ೮೧). [ ಚಿಕ್ಕ$_1$ + ಕಾಗೆದೊಂಡೆ ]

**ಚಿಕ್ಕಕಾಡತ್ತಿ** (ನಾ). ಒಂದು ಬಗೆಯ ಹತ್ತಿಗಿಡ : ಚಿಕ್ಕಕಾಡತ್ತಿ, ಬೆಟ್ಟರಳಿ (ಮೈಜಿಗ. ೩೭-೬೨೫). [ ಚಿಕ್ಕ$_1$ + ಕಾಡತ್ತಿ ]

**ಚಿಕ್ಕಕ್ಕ** (ನಾ). ಕಿರಿಯ ಅಕ್ಕ : ನಮ್ಮ ಚಿಕ್ಕಕ್ಕನನ್ನು ಕಂಡರೆ ಎಲ್ಲರಿಗೂ ಪ್ರೀತಿ (ರೂಢಿ). [ ಚಿಕ್ಕ$_1$ + ಅಕ್ಕ$_1$ ]

**ಚಿಕ್ಕಗುಂಜಿ** (ನಾ). ಸಣ್ಣ ಗುಲಗಂಜಿ : “ಕಾಕನುಂದಿಕಾ – ಚಿಕ್ಕಗುಂಜ” (ಒಷಧಿ. ೩೨). [ ಚಿಕ್ಕ$_1$ + ಗುಂಜಿ ]

**ಚಿಕ್ಕಚಿರಾಯತ** (ನಾ). ಒಂದು ಬಗೆಯ ಮೂಲಿಕೆ : (ಮೈಜಿಗ. ೩೪-೬೫೧). [ ಚಿಕ್ಕ$_1$ + ಚಿರಾಯತ ( < ಕಿರಿಯಾತು) ]

**ಚಿಕ್ಕಟ$_1$** ‘ಚಿಕ್ಕುಟ’ ನೋ.

**ಚಿಕ್ಕಟ$_2$** (ನಾ). (?) : ಮುಕ್ಕುಳಿಸಿ ಪುಕ್ಕುಳಿಸೆ ಕಕ್ಕಸದಿ ಚಿಕ್ಕಟದಿ ದಿಕ್ಕನ ಮರಿಕ್ಕಿ (ಜನಮು. ೨೯-೭) ; ಸಿಕ್ಕಿಸಂತರದಲ್ಲಿ ಶಾರ್ವರಿ ಚಿಕ್ಕಟದಿ ಮುಸುಕಿಕ್ಕಿ ದಹಿತರ ಸೊಕ್ಕ ಹಾರಿಸುತಿರುವ ರಘುಜರ ಮೌಲಿ ರವಿಯಾಗೇ (ಜಿರಾಮಾ. ೨೭೭-೨೭). [ ? ]

**ಚಿಕ್ಕಟು** ‘ಚಿಕ್ಕುಟ’ ನೋ.

**ಚಿಕ್ಕಟ್ಟು** (ನಾ). ಒಂದು ಬಗೆಯ ಔಷಧಿ ಸಸ್ಯ : “ಧೂರ್ತಃ – ಉಮ್ಮತ್ತ, ಖಚೋರ, ಚಿಕ್ಕಟ್ಟು” (ಒಷಧಿ. ೮೨). [ ? ]

**ಚಿಕ್ಕಡು** ‘ಚಿಕ್ಕುಟ’ ನೋ.

**ಚಿಕ್ಕಣ** (ಗು). ೧. ಮೃದುವಾದ ; ನಯವಾದ. (ನಾ). ೨. ಮೃದು ಗೊಳಿಸುವಿಕೆ : “ಮಾರ್ದವಕರಣ, ಚಿಕ್ಕಣ” (Demulcent. ಪಾಠಿನಿ. ೨೮). ೩. ಮೃದುಗೊಂಡುದು ; ಮೆತ್ತಗಾಗಿರುವುದು : ಕಿವುಚಿಟ್ಟದನೆಂದು ಚಿಕ್ಕಣವಾಗಿ ಮಾಡಿದು (ಕಮುದ. ನ. ೩೩ ವೃತ್ತಿ). ೪. ಸ್ನಿಗ್ಧವಾಗಿರುವಂತೆ ಬೇಯಿಸಿದ ಅಡಿಗೆ : “ಚಿಕ್ಕಣಂ, ಮಸೃಣಂ, ಸ್ನಿಗ್ಧಂ – ೩ ಪೆಟ್ಟದಂಥಾದ್ದಕ್ಕೂ ನಯವಾದದ್ದಕ್ಕೂ ಮೆತ್ತಗಿರುವ ಹಾಗೆ ಅಟ್ಟಲ್ಪಟ ಅಡಿಗೆಗೂ . . . ಪೆಸರುಗಳು” (ಸಿದ್ಧಾಂತಿ. ೨೪೭). ೫. ಅಡಕೆ : ಇನಿನುಡಿ ನುಡಿಯುವಾ ಇಂಬಾದ ಕಣ್ಣುಗಳುಳ್ಳ ಚಿಕ್ಕಣದ ಬಣ್ಣದ ಒಕ್ಕಲಿಗರ ಚಿಕ್ಕಹುಡುಗ (ಕೋಹಿನೂ. ೫೪). ೬. ಅಡಕೆಯ ಮರ. [ ಸಂ. ]

**ಚಿಕ್ಕಣಗೆಸಱ್** (ನಾ). ಅಡಕೆಯಿಂದ ತಯಾರಿಸಿದ ಕಲ್ಕ : ಕಾಸದ ಚಿಕ್ಕಣ [ಪಾಠಾಂ. ಣಿ]ಗೆಸಱೊಳ್ ಸಾಸಿವೆ(ಸವಿ) ಕಲ್ಲುಪ್ಪು ಕಣಿಕ ಮುದಿರ್ಗನ ಪುಡಿಯುಂ ಬೇಸಱದೆ ಕೂಡಿ ಕುದಿರೆಗೆ ಪೂಸುಗೆ (ಅಶ್ವಶಾ. ೧೪-೩೦). ‘ಚಿಕ್ಕಣಿಗೆಸಱ್’ ಪಠಾ. [ ಚಿಕ್ಕಣ + ಕೆಸಱ್ ]

**ಚಿಕ್ಕಣಪಾಕ** (ನಾ). ಸ್ನಿಗ್ಧವಾದ ಪಾಕ : ಮಂಜಿಷ್ಠ, ನೀಲಾಂಜನ ತಾವರೆಗೆಣಸು ಇವಿಷ್ಟನು ಪ್ರತ್ಯೇಕ ಎರಡು ವರಹ ತೂಕಗಳನು ಸೂಕ್ಷ್ಮವಾಗಿ ಚೂರ್ಣಿಸಿ ಹಾಕಿ ಕಾಸಿ ಚಿಕ್ಕಣಪಾಕದಲ್ಲಿ ಇಳುಹಿ (ವೈದ್ಯಸಾ. II, ೧೩೫) ; ವಾಸಾಘೃತ – ಆಡುಸೋಗೆ, ಅಮರದವಳ್ಳಿ . . . ಶುಂಠಿ ಇವುಗಳನ್ನು ಅರೆದು ಅರ್ಧ ಪಾವು ತುಪ್ಪ ಸೇರಿಸಿ ಚಿಕ್ಕಣಪಾಕದಲ್ಲಿ ತೆಗೆದು ಶೋಧಿಸಿಕೊಂಡು (ಸಕವೈ. ೦೦೫). [ ಚಿಕ್ಕಣ + ಪಾಕ ]

**ಚಿಕ್ಕಣಿ$_1$** (ನಾ). ಒಂದು ಬಗೆಯ ಅಡಕೆ : ಕರ್ಪೂರಭರಿತ ಚಿಕ್ಕಣಿ ನಾಗವಳ್ಳಿಯ ಭರದ ಹೊಂಬಟ್ಟಲಲಿ ಹೊಯ್ಸಣದವರು ಕೊಡುತಿರಲು (ಶೌರಿರಾ. ೨-೭೯).

**ಚಿಕ್ಕಣಿಅಡಿಕೆ** ಚಿಕ್ಕಣಿಜಾತಿಯ ಅಡಕೆ : ಚಿಕ್ಕಣಿ ಅಡಿಕೆ ಕೇದಿಗೆ ಕಾಚು ಕೂಡಿದ ಎಲಕ್ಕಿ (ಪುರಂದ. ೩-೮೪-೨). **ಚಿಕ್ಕಣಿಕ್ರಮುಕ** = ಚಿಕ್ಕಣಿ ಅಡಿಕೆ : ಸ್ವೇತಪರ್ಣ ಪನಾ ಚಿಕ್ಕಣಿಕ್ರಮುಕ ಕರ್ಪೂರದಾ ತಿಳಿ ಸುಚೂರ್ಣಮಂ ತಂದೀಯಲವನು ಚರ್ವಣಗೈದು (ನವಮೋ. ೦೬-೮). [ <ಸಂ. ಚಿಕ್ಕಣ]

**ಚಿಕ್ಕಣಿ$_2$** (ನಾ). ಒಂದು ಬಗೆಯ ಹುಲ್ಲು : ಚಿಕ್ಕಣಿ, ಸಿಂಪಿಗನ ಹುಲ್ಲು . . ಏನೇನೋ ಜಾತಿಯ ಎಲ್ಲವೂ ಮಣ್ಣಿನ ರಚನೆಯಲ್ಲಿಯೆ ಇದ್ದಹಾಗೆ ತೋರುತ್ತದೆ (ಗಾಳಿಪ. ೦೦೪). [ <ಚಿಕ್ಕಣಿಕೆ ]

**ಚಿಕ್ಕಣಿಕೆ** (ನಾ). ಒಂದು ಬಗೆಯ ಹುಲ್ಲು : “ಚಿಕ್ಕಣಿಕೆ [ಪಾಠಾಂ. ಬಾಡಿ] ಬಾದಿಯಾತ್ತು” (ಮಂಗರಾ. ೩೩-೮) : ಪೊಸ ಚಿಕ್ಕಣಿಕೆಯ ಪುಲ್ಲಂ ಪೊಸ ಬೆಳ್ಳುಳ್ಳಿಯ ರಸಂಗಳಂ ತಳದಿಂದಂ ಪೊಸದು (ಕಲ್ಯಾಕಾ. ೩-೪೭) ; ಕಿಱುಮಾಲೆ ನೂಲೆ ಕಿಸುಕುಂ ನೆಱೆದೀ ಚಿಕ್ಕಣಿಕೆ ಮೂನಿನಿ ಕಸಕೆ ಕಲ್ಬೂರ್ (ಸೂಕ್ತಿಸು. ೩-೨೯) : ಚಿಕ್ಕಣಿಕೆಯ ರಸಮಂ ಮೂತ್ರಕ್ಕಂ ಸರಿಯಾಗಿ ಬೆರಸಿ ನಸ್ಯಂಗೆಯ್ಯಲ್(ಖಮದ. ೦೦-೭೫). [ ? ]

**ಚಿಕ್ಕಣಿಕೆಸಱ್** ‘ಚಿಕ್ಕಣಗೆಸಱ್’ ನೋ.

**ಚಿಕ್ಕಣಿಕ್ಕೆ** (ನಾ). ಕ್ಷುಲ್ಲಕ ವ್ಯಕ್ತಿ ; ನೀಚ ವ್ಯಕ್ತಿ (?) : ತೆರಳ್ದ ಮೊಗಂ ಸರಿ ಮತ್ತ ಮಾಣಳೀ ಬಟ್ಟೆಯ ಚಿಕ್ಕಣಿಕ್ಕೆ ಪೊಸ ಬರ್ಬರ ಸೂಳೆಯರಾಳಿಗೊಂಬುದಂ (ಸೂಕ್ತಿಸು. ೮-೩೮೪). [ ? ]

**ಚಿಕ್ಕಣಿಗೆಸಱ್, ಚಿಕ್ಕಣಿಕೆಸಱ್** (ನಾ).=ಚಿಕ್ಕಣಗೆಸಱ್ : ಇರ{ಭ}ದೊಟ್ಟೆಯ ತುರಗದ ಗಾರ್ಘವದ ಪುರೀಷಂಗಳೊಡನೆ ಚಿಕ್ಕಣಿಗೆರಸಂ {ಸಱಂ} ಕ್ಷುಭಯಿಸಿ ಮೃಪದಮನಱಿದಱಿದುಂ ಲಿಪ್ತಗೈವು (ಅಶ್ವವೈ. ೦೦-೧೧): “ಸಣ್ಣ ಕೆಸರು” (ಅಶ್ವವೈ. ಟೀಕು). **ಚಿಕ್ಕಣಿಕೆಸಱ್** : ಕಾಸಿದ ಚಿಕ್ಕಣಿಕೆಸಱೊಳ್ ಸಾಸಿವೆ ಕಲ್ಲುಪ್ಪು ಕಣಿಕಮುದಿರ್ಗನ ಪುಡಿಯುಂ ಬೇಸಱದೆ ಬಾಹಿನೆಡೆಯೊಳ್ ಪೂಸುವುದು (ಅಶ್ವಶಾ. ೦೦-೭೦). ‘ಚಿಕ್ಕಣಗೆಸಱ್’ ಪಠಾ. [ ಚಿಕ್ಕಣಿ$_1$ + ಕೆಸಱ್ ]

**ಚಿಕ್ಕಣ್ಣ** (ನಾ). ಕಿರಿಯ ಅಣ್ಣ : ನಮ್ಮ ದೊಡ್ಡಣ್ಣನಿಗಿಂತಲೂ ಚಿಕ್ಕಣ್ಣ ಹೆಚ್ಚು ಬುದ್ಧಿವಂತನಾದ್ದರಿಂದ ನಮ್ಮ ತಾಯಿಗೆ ಅವನ ಮೇಲೆ ಬಹಳ ಪ್ರೀತಿ (ರಜೀ). [ ಚಿಕ್ಕ$_1$ + ಅಣ್ಣ$_1$ ]

**ಚಿಕ್ಕತಂದೆ** (ನಾ) =ಚಿಕ್ಕಪ್ಪ : (ಕ) [ ಚಿಕ್ಕ$_1$ + ತಂದೆ ]

**ಚಿಕ್ಕತನ** (ನಾ). ೧. ಬಾಲ್ಯ ; ಎಳೆಯ ವಯಸ್ಸು : ಚಿಕ್ಕತನ ತಮಗಿದನು ಕಾಣಲು ಮಕ್ಕಳಿಗೆ ಕಾಣೇಕೆ (ಕುಮಾ.ಭ. ಒಡ್ಡ. ೩೬-೭೧). ೨. ಸಣ್ಣತನ ; ಕ್ಷುಲ್ಲಕತನ : ತಮ್ಮ ಚಿಕ್ಕತನಕ್ಕಾಗಿ ತಾವೇ ನಾಚಿಕೊಳ್ಳುವಂತಾಗುತ್ತದೆ (ರಜೀ). [ ಚಿಕ್ಕ$_1$ + – ತನ ]

**ಚಿಕ್ಕತಮ್ಮ** (ನಾ). ಕೊನೆಯ ತಮ್ಮ : ಕೂಡಲ ಸಂಗಮದೇವಾ ನೀನೆನಗೆ ಚಿಕ್ಕತಮ್ಮ (ಬಸವ. ೯೦೪); ನನ್ನ ತಮ್ಮಂದಿರೆಲ್ಲಾ ಊರಿನಲ್ಲಿ ನಮ್ಮ ತಂದೆ ತಾಯಿಯ ಬಳಿ ಇದ್ದಾರೆ, ಚಿಕ್ಕತಮ್ಮನೊಬ್ಬ ಮಾತ್ರ ನನ್ನ ಬಳಿ ಇದ್ದಾನೆ (ರಜೀ). [ ಚಿಕ್ಕ$_1$ + ತಮ್ಮ ]

**ಚಿಕ್ಕತಾಯಿ** (ನಾ). ೧.=ಚಿಕ್ಕಮ್ಮ: (ಕ).
[ ಚಿಕ್ಕ$_1$ + ತಾಯಿ (<ತಾಯ್) ]

**ಚಿಕ್ಕತಾರ** (ನಾ). ಒಂದು ಬಗೆಯ ನಾಣ್ಯ (?) : ತಲ್ಲಿಗರು ಎಳ್ಳ ಮಾಱ ಕೊಂಡವಗು ಹೊಂಗೆ ಕಟ್ಟದಲಗಿನ ಚಿಕ್ಕತಾರವ ತೆಱುವರು ಬೆಳಿಯ ತಾರದರ್ಧ್ದವ ಎಣ್ಣೆಯನು ಗಾಣಕ್ಕೆ ಸಿಟ್ಟಲು ಅರ್ಧ್ದಸೊಲ್ಲಿಗೆಯನು ಆಡಿತಕ್ಕೆ ಎಱೆವರು (ಸೌಇಇ. IX-1, ೩೩೭-೨೬ : 1219).
[ ಚಿಕ್ಕ$_1$ + ತಾರ$_1$ ]

**ಚಿಕ್ಕತೂಬರ** (ನಾ). ಒಂದು ಬಗೆಯ ಮರ: "ಕಾಕಾಂಡಃ–ಚಿಕ್ಕತೂಬರ, ಹೆಬ್ಬೇವು, ಹೆಮ್ಮರ " (ಒಷಧಿ. ೨೯).
[ ಚಿಕ್ಕ$_1$ + ತೂಬರ$_1$ (<ತುಂಬುರು$_1$) ]

**ಚಿಕ್ಕತೊಗರಿ** (ನಾ). ಒಂದು ಬಗೆಯ ತೊಗರಿ: ಚಿಕ್ಕತೊಗರಿ, ವಿಷತೊಗರಿ, ಕೇಸರಿಬೇಳೆ (ವೃಜಿಗಿ. ೪೯-೯೮೦). [ ಚಿಕ್ಕ$_1$ + ತೊಗರಿ$_1$ (<ತೊವರಿ) ]

**ಚಿಕ್ಕನರುವಲು** (ನಾ). ಒಂದು ಬಗೆಯ ಔಷಧಿ ಗಿಡ ; ಅಗ್ನಿಮಂಥ : " ತೇಜೋವೃಕ್ಷಃ–ಚಿಕ್ಕನರುವಲು " (ಒಷಧಿ. ೭೨).
[ ಚಿಕ್ಕ$_1$ + ನರುವಲು (<ನಱುವಲ್) ]

**ಚಿಕ್ಕನುಗಹುಲ್ಲು** (ನಾ). ಒಂದು ಬಗೆಯ ಹುಲ್ಲು : (ವೃಜಿಗಿ. ೬-೧೧೧).
[ ಚಿಕ್ಕ$_1$ + ನುಗ ? + ಹುಲ್ಲು(<ಪುಲ್) ]

**ಚಿಕ್ಕನುಡಿ** (ನಾ). ಕೀಳುಮಾತು ; ಸಣ್ಣಮಾತು ; ಕ್ಷುದ್ರವಾದ ನುಡಿ : ಅಕ್ಕ ಕೇಳೌ ಚಿಕ್ಕನುಡಿಗಳು ತಕ್ಕುವೇ ಹಿರಿಯರ್ಗೆ (ಸಂಭವ. ೨೦-೧೧೧).
[ ಚಿಕ್ಕ$_1$ + ನುಡಿ$_2$ ]

**ಚಿಕ್ಕನೆಕ್ಕಿಸೊಪ್ಪು** (ನಾ). ಒಂದು ಬಗೆಯ ಸೊಪ್ಪು : ಚಿಕ್ಕನೆಕ್ಕಿ ಸೊಪ್ಪು, ಲಕ್ಕಿ (ವೃಜಿಗಿ. ೪೮-೯೩೭). [ ಚಿಕ್ಕ$_1$ + ನೆಕ್ಕಿ + ಸೊಪ್ಪು$_3$ ]

**ಚಿಕ್ಕನೆಲದಾಳು** (ನಾ). ಒಂದು ಬಗೆಯ ಔಷಧಿ ಗಿಡ : " ಪುತ್ರಜನನೀ – ಚಿಕ್ಕನೆಲದಾಳು ; ಕಾಳಿಯಸೊಪ್ಪು " (ಒಷಧಿ. ೧೧೧)..
[ ಚಿಕ್ಕ$_1$ + ನೆಲದಾಳು (<ನೆಲದಾೞ್) ]

**ಚಿಕ್ಕನೇರಳೆ** 'ಚಿಕ್ಕನೇಱಿಲ್' ನೋ.

**ಚಿಕ್ಕನೇರಿಲು** 'ಚಿಕ್ಕನೇಱಿಲ್' ನೋ.

**ಚಿಕ್ಕನೇಱಿಲ್, ಚಿಕ್ಕನೇರಳೆ, ಚಿಕ್ಕನೇರಿಲು** (ನಾ). ಒಂದು ಬಗೆಯ ನೇರಿಳೆ : " ವೈರಸೀ – ಚಿಕ್ಕನೇಱಿಲ್ " (ಒಷಧಿ. ೧೫೭). **ಚಿಕ್ಕನೇರಳೆ :** (ವೃಜಿಗಿ. ೬೩-೧೪೯೩). **ಚಿಕ್ಕನೇರಿಲು :** ಚಿಕ್ಕನೇರಿಲು ಜಂಬುನೇರಿಲು ಗಳರುಚಾಳ (ರುಕ್ಮಾಂಗ. ೧೦-೩). [ ಚಿಕ್ಕ$_1$ + ನೇಱಿಲ್ ]

**ಚಿಕ್ಕಪ್ಪ, ಚಿಕಪ, ಚಿಗಪ್ಪ** (ನಾ). ೧. ತಂದೆಯ ತಮ್ಮ ; ಕಕ್ಕ : ಅಪ್ಪನ ಅಪ್ಪ ಅನ್ನದವ ಚಿಕ್ಕಪ್ಪನ ಅಪ್ಪಾ ಅಂದಾನೇ (ಗಾದೆ). ೨. ಚಿಕ್ಕಮ್ಮನ ಗಂಡ; ತಾಯಿಯ ತಂಗಿಯ ಗಂಡ: ತಂದೆಯ ತಮ್ಮನಷ್ಟೇ ಚಿಕ್ಕಪ್ಪನಲ್ಲ, ಚಿಕ್ಕಮ್ಮನ ಗಂಡನೂ ಚಿಕ್ಕಪ್ಪನೇ (ರಜೀ). **ಚಿಕಪ:** ೧. ಯಿಮಂಡಿರ ಚಿಕಪ ಉಡಖಾನ ಮಗ ಆಬೂಖಾನನು (ಎಕ. VII, ಶಿವಮೊ. ೨೯-೧೯; 1712) ; **ಚಿಗಪ್ಪ :** ೧. ಚಿಗಪ್ಪ ಚಿಗವ್ವ ಅವಾರಲ್ಲಾ (ಮಣ್ಣು.ಹ. ೧೬೧); ಉಂಡುಟ್ಟು ಸುಖದಿಂದಿದ್ದು ವಕೀಲಿ ಮಾಡುತ್ತ ಕಾಲ ಕಳೆಯಬೇಕೆಂದು ಆತನ ಚಿಗಪ್ಪನ ಇಚ್ಛೆ (ಜ್ಯೋತಿರ್ಮ. ೧೬). [ ಚಿಕ್ಕ$_1$ + ಅಪ್ಪ$_1$ ]

**ಚಿಕ್ಕಪ್ರಾಯ** (ನಾ). ಎಳೆಯ ವಯಸ್ಸು ; ಚಿಕ್ಕವಯಸ್ಸು : "ಕನಿಷ್ಠಃ, ಅತಿಯುವಾ – ಬಹಳ ಚಿಕ್ಕಪ್ರಾಯದ ಹುಡುಗ, ಅಲ್ಪಃ – ಚಿಕ್ಕವನು ೨ ರ್ಕ್ಯಾ. ಹೆಸರು" (ಸಿದ್ಧಾಂಶಿ. ೩೩೦). [ ಚಿಕ್ಕ$_1$ + ಪ್ರಾಯ ]

**ಚಿಕ್ಕಬಳ್ಳಿ** (ನಾ). ಒಂದು ಬಗೆಯ ಔಷಧಿ ಗಿಡ : " ಲಘುಪೂರ್ವಕಃ – ಚಿಕ್ಕಬಳ್ಳಿ " (ಒಷಧಿ. ೧೪೨). [ ಚಿಕ್ಕ$_1$ + ಬಳ್ಳಿ ]

**ಚಿಕ್ಕಬಿಟ್ಟುವ** (ನಾ). (?) : ಮೂಡಣ ಹೆಗ್ಗಡ್ಡೆ ಅದಱ ಮೇಗಣ ಕೊಡಂಗೆ ಎರಡಱಲ್ಲಿಯೂ ಮೂಡೆ ೨ ಬಂಣಟಿಮೂಡೆ ೨ ಮುಂದಿನ ಮಾಡುವ ಬಳುಮೂಡೆ ೧ ಚಿಕ್ಕ ಬಿಟ್ಟುವ ಕೊಡಂಗೆ ಮೂಡೆ ೧ (ಎಇ. XXVII, ೨೮-೩೦ : 1256). [ ? ]

**ಚಿಕ್ಕಬ್ಬೆ** (ನಾ). ೧.=ಚಿಕ್ಕಮ್ಮ : ನನ್ನ ಚಿಕ್ಕಬ್ಬೆಗೆ ನನ್ನನ್ನು ಕಂಡರೆ ಬಹಳ ಪ್ರೀತಿ (ರಜೀ). ೨. ಒಬ್ಬಾಕೆಯ ಹೆಸರು: ತನ್ನರಸಿ ಚಿಕ್ಕಬ್ಬೆಗೆ ಬಡಗಣ ಕೆಱೆಯ ಬಡಗಣ ಬದರಿಯ ಪಿನ್ನಣ ಕೆಱೆಯಬಿಟ್ಟ ದೇವರ್ಗೆ (ಎಕ. VII, ಶಿವಮೊ. ೯೭-೧೯ : ಸು. 915). [ ಚಿಕ್ಕ$_1$ + ಅಬ್ಬೆ$_1$ ]

**ಚಿಕ್ಕಬ್ರಹ್ಮಿ** (ನಾ). ಒಂದು ಬಗೆಯ ಔಷಧಿ ಗಿಡ : " ಲಘುಬ್ರಹ್ಮಿ–ಚಿಕ್ಕ ಬ್ರಹ್ಮಿ " (ಒಷಧಿ. ೧೪೨). [ ಚಿಕ್ಕ$_1$ + ಬ್ರಹ್ಮಿ ]

**ಚಿಕ್ಕಮರುಳು** (ನಾ). ಒಂದು ಬಗೆಯ ಔಷಧಿ ಗಿಡ : ಚಿಕ್ಕಮರುಳು, ಮೈಕಬೇರು ಗಂಡರಿಸಿನದಲ್ಲಿ ನಿಂಬೆಕಾಯಷ್ಟು ಕುಡಿಯೆ ಬಾಣಂತಿ ರೋಗ ಬಸುರಿಳಿವದು ಪ್ರಾಣ್ಯಂ (ವಿಷ್ಣ್ವಿ. ೬೧). [ ? ]

**ಚಿಕ್ಕಮಾತು** (ನಾ).=ಚಿಕ್ಕನುಡಿ : ಚಿಕ್ಕಮಾತುಗಳನ್ನಾಡಿ ನೋಯಿಸುವುದೇ ಅವರ ಸ್ವಭಾವ (ರಜೀ). [ ಚಿಕ್ಕ$_1$ + ಮಾತು$_1$ ]

**ಚಿಕ್ಕಮಾರಯ್ಯ** (ನಾ). ಒಬ್ಬಾತನ ಹೆಸರು : ಕಿಟ್ಟಪಳ್ಳಿ . . . ತುಱು ಗೊಳೊಳ ಚಿ[ಕ್ಕ]ಮಾರಯ್ಯ ಸತ್ತ (ಎಕ. IX ಕಾನಕಾ. ೮೮-೩ : ಸು. 870).
[ ಚಿಕ್ಕ$_1$ + ಮಾರಯ್ಯ ]

**ಚಿಕ್ಕಮ್ಮ** (ನಾ). ೧. ತಾಯಿಯ ತಂಗಿ : ಹರುಷದಿಂಗಿಲಾ ಚೈದ್ಯಪುರ ದಲಿ ವರಜನನಿ ಚಿಕ್ಕಮ್ಮನಲ್ಲಿಹಳೆಂದನು (ನಳಚ. ೭-೩೩). ೨. ಚಿಕ್ಕಪ್ಪನ ಹೆಂಡತಿ ; ಕಕ್ಕಿ : ಆ ನೃಪನ ಚಿಕ್ಕಮ್ಮ ಪಡೆದಳು (ಸಾಳ್ವಭಾ. ೧-೨೭); ಇವರೂ ಸಹ ನಮ್ಮ ಚಿಕ್ಕಮ್ಮನೇ, ಅಂದರೆ ತಾಯಿಯ ತಂಗಿಯಲ್ಲ, ನಮ್ಮ ಚಿಕ್ಕಪ್ಪನ ಹೆಂಡತಿ (ರಜೀ). ೩. ಮಲತಾಯಿ : ಚಿಕ್ಕಮ್ಮ ಕೇಳು ಹಿಂದಣ ಜನ್ಮದೊಳು ನಾನು ಮಕ್ಕಳಂ ಬಯಸಿ ದೈವದಮುಂದೆ ನೋಂಪಿಯಂ ಚೊಕ್ಕಟದಿ ಮಾಡಿತಿಲ್ಲದಱಿಂದವಿಾ ನನ್ನ ಬಸಿಱು ಪಾಳ್ಪಸಿರಾದುದು (ಸಮ್ಮಿಕಾ. ೫-೧೫). [ ಚಿಕ್ಕ$_1$ + ಅಮ್ಮ$_2$ ]

**ಚಿಕ್ಕಯ್ಯ** (ನಾ).=ಚಿಕ್ಕಪ್ಪ ೧ : ಅಯ್ಯನಯ್ಯನು ಚೆನ್ನಯಂ ಚಿಕ್ಕಯ್ಯ ಕಕ್ಕಯ್ಯನು ತೆಲುಗು ಬೊಮ್ಮಯ್ಯನಯ್ಯನು ನಿಂಬಿ ತಾಯ್ ಚೇರಮನ ಮಗ ನಾನು (ಬಸಪು. ೩-೮೨) ; ಯಾರ ಬಲದಿಂದ ಬಂದುದೀ ಮಹಾಕಪಿ ಸಂತೆ ಮುಳಿದುಚಿಕ್ಕಯ್ಯನೈದಿ ಸೇರಿದಂ ಮಾನುಷರ (ವೆಂಕಾರಾ. ೬-೧೮-೨೪).
[ ಚಿಕ್ಕ$_1$ + ಅಯ್ಯ$_1$ ]

**ಚಿಕ್ಕವಯಸ್ಸು** (ನಾ).=ಚಿಕ್ಕಪ್ರಾಯ: ಚಿಕ್ಕವಯಸ್ಸಿಗೇ ನಾನು ನನ್ನ ತಾಯಿ ಯನ್ನು ಕಳೆದುಕೊಂಡಿದ್ದೆ (ರಜೀ). [ ಚಿಕ್ಕ$_1$ + ವಯಸ್ಸು ]

**ಚಿಕ್ಕಪೂಸಿ** (ನಾ). ಪುನರ್ವಸು ಮಳೆ : (ಎಸಮ್ಮ. XV, ೩೦).
[ ಚಿಕ್ಕ$_1$ + ಪೂಸಿ$_0$ ( < ಪುಸ್ಯ) ]

**ಚಿಕ್ಕವ್ವ** 'ಚಿಕ್ಕವ್ವೆ' ನೋ.

ಚಿಕ್ಕವ್ವೆ, ಚಿಕ್ಕವ್ವ, ಚಿಗವ್ವ (ನಾ) =ಚಿಕ್ಕಮ್ಮ: ಚಿಕ್ಕವ್ವೆಯು ಮೇಲೆ ಸಿಟ್ಟು ಹುಟ್ಟಿತು (ಮುನಿಮಾ. ೩). ಚಿಕ್ಕವ್ವ: ಮಕ್ಕಳು ಚಿಕ್ಕವ್ವ ಎನ್ನುತ್ತಾ (ಮುನಿಮಾ. ೯೪). ಚಿಗವ್ವ: ನಿನಗ್ಯಾಕ ಆದರ ಚಿಂತಿ ಚಿಗವ್ವಾ? (ಗ್ರಾವಾಜು. ೨೮); ನಾನು ನಾಳೆ ಮುಂಜಾನೇ ನಮ್ಮ ಚಿಗವ್ವನ ಮನೆಗೆ ಹೊರಟೆನು (ಮುಂಬಯಿ. ೧-೩೮). [ ಚಿಕ್ಕ$_1$ + ಅವ್ವೆ ]

ಚಿಕ್ಕಸ (ನಾ). ಜವೆಗೋಧಿಯ ಹಿಟ್ಟು; ಯವ ಚೂರ್ಣ. [ ಸಂ. ]

ಚಿಕ್ಕಸಾಡಿಹುಲ್ಲು (ನಾ). ಒಂದು ಬಗೆಯ ಹುಲ್ಲು: ಚಿಕ್ಕಸಾಡಿಹುಲ್ಲು, ಕರಿಕೊಡಹುಲ್ಲು, ನಾಲೆಹುಲ್ಲು (ವೃಜಿಗಿ. ೬೯-೧೪೦೮). [ ಚಿಕ್ಕ$_1$ + ಸಾಡಿ$_1$ + ಹುಲ್ಲು (<ಪುಲ್) ]

ಚಿಕ್ಕಸಿವನ್ನಿ (ನಾ). ಒಂದು ಬಗೆಯ ಔಷಧಿ ಗಿಡ: "ಲಘುಕಾಶ್ಮರ್ಯ – ಚಿಕ್ಕಸಿವನ್ನಿ" (ಓಷಧಿ. ೧೪೨). [ ಚಿಕ್ಕ$_1$ + ಸಿವನ್ನಿ ]

ಚಿಕ್ಕಸುರಟಿಗಿಡ(ನಾ). ಒಂದು ಬಗೆಯ ಗಿಡ: ಚಿಕ್ಕಸುರಟಿಗಿಡ, ಗರುಡಫಲ (ವೃಜಿಗಿ. ೪೩-೮೮೦). [ ಚಿಕ್ಕ$_1$ + ಸುರಟ$_0$ + ಗಿಡ (<ಗಿಡು) ]

ಚಿಕ್ಕಹಣ (ನಾ). ಎರಡು ಆಣೆಗಳ ಬೆಲೆಯ ಒಂದು ಬೆಳ್ಳಿ ನಾಣ್ಯ: (ಶ). [ ಚಿಕ್ಕ$_1$ + ಹಣ ]

ಚಿಕ್ಕಹೀರೆ (ನಾ). ಒಂದು ಬಗೆಯ ಹೀರೆ: "ಮಾರಣೀ – ಚಿಕ್ಕಹೀರೆ" (ಓಷಧಿ. ೧೨೪). [ ಚಿಕ್ಕ$_1$ + ಹೀರೆ$_1$ (<ಪೀರೆ) ]

ಚಿಕ್ಕಹೊಂಬಳಿ (ನಾ). ಒಂದು ಬಗೆಯ ತೆರಿಗೆ: ಶಾನುಭೋಗರ ವರ್ತನೆಯಿಂದ ಗ ೨ ಅಂಗ್ರುಮಕ್ಕ ನಾಡೋಪಾದಿಯಲ್ಲಿ ಬಾಹ ಉಂಬಳಿಯ ಚಿಕ್ಕಹೊಂಬಳಿ ಹೊಮಾರು ಕ್ರಯ ಕಡಾಯ ಭಟ್ಟ ಕೊಟ್ಟ (ವ್ಯಾಲಿ. ೧೯೩೪. ೨೭-೩೦: 1430). [ ? ]

ಚಿಕ್ಕಹೊರಲಿಗ (ನಾ). ಒಂದು ಬಗೆಯ ಮೂಲಿಕೆ (?): ಹೊರಲಿಗ, ಚಿಕ್ಕಹೊರಲಿಗನಸಮೂಲ ಭಂಗಿಯ ಪುಡಿ . . . ಇಷ್ಟನ್ನೂ ಕೂಡಿ ಅರೆದು (ವಿವ್ಯವಿ. ೨೧೫). [ ಚಿಕ್ಕ$_1$ + ಹೊರಲಿಗ ? ]

ಚಿಕ್ಕಾಟ 'ಚಿಕ್ಕುಟ' ನೋ.

ಚಿಕ್ಕಾಡಿ 'ಚಿಕ್ಕುಟ' ನೋ.

ಚಿಕ್ಕಾಡು 'ಚಿಕ್ಕುಟ' ನೋ.

ಚಿಕ್ಕಾಣೆ (ನಾ). (ಆಕಾರದಲ್ಲಿ ಚಿಕ್ಕದಾದ) ಒಂದು ಬೆಳ್ಳಿಯ ನಾಣ್ಯ: (ಶ). [ ಚಿಕ್ಕ$_1$ + ಆಣೆ$_5$ ]

ಚಿಕ್ಕಾಸು (ನಾ). ಸಣ್ಣಕಾಸು; ತೀರ ಚಿಕ್ಕನಾಣ್ಯ: ಒಂದುಚಿಕ್ಕಾಸು ಕೂಡ ಬಡ್ಡಿ ಸಹ ಕೊಟ್ಟಿಲ್ಲ (ಕುರುಕ್ಷಾ. ೪೩); ಮಾಸ್ತರು ಎಂದರೆ ಚಿಕ್ಕಾಸು ಸಾಲ ಕೊಡುವರಿಲ್ಲ (ಕಾವೇರಿ. ೧೧೦); ದುಂದುವೆಚ್ಚ ಮಾಡಿ, ಒಂದು ಚಿಕ್ಕಾಸೂ ಅವನ ಬಳಿ ಉಳಿದಿಲ್ಲ (ರೂಢಿ). [ ಚಿಕ್ಕ$_1$ + ಕಾಸು$_2$ ]

ಚಿಕ್ಕಿ 'ಚುಕ್ಕಿ$_1$' ನೋ.

ಚಿಕ್ಕಿಹಾವು (ನಾ). ಮೈಮೇಲೆ ಬಣ್ಣದ ಬೊಟ್ಟುಗಳಿರುವ ಹಾವು; ಸುಂಟಿಗನೆಂಬ ಒಂದು ಬಗೆಯ ವಿಷಸರ್ಪ: (ಶ). [ ಚಿಕ್ಕಿ (<ಚುಕ್ಕಿ$_1$) + ಹಾವು (<ಪಾವು$_1$) ]

ಚಿಕ್ಕೀಚಲು (ನಾ). ಒಂದು ಬಗೆಯ ಈಚಲು ಮರ; ಕಿರೀಚಲು: "ಪರುಃ – ಗಿಣ್ಣು, ಚಿಕ್ಕೀಚಲು" (ಓಷಧಿ. ೯೦). [ ಚಿಕ್ಕ$_1$ + ಈಚಲು$_1$ (<ಈಂಚಿಲ್) ]

ಚಿಕ್ಕೀರೆ (ನಾ). ಒಂದು ಬಗೆಯ ಕೀರೆಸೊಪ್ಪು: (ವೃಜಿಗಿ. ೭-೯೪). [ ಚಿಕ್ಕ$_1$ + ಕೀರೆ ]

ಚಿಕ್ಕು$_1$ 'ಸಿಕ್ಕು$_1$' ನೋ.

ಚಿಕ್ಕು$_2$ (ನಾ). (ಉಕ) ಒಂದು ಬಗೆಯ ಗಿಡ ಮತ್ತು ಅದರ ಹಣ್ಣು; ಸಪೋಟಾ: ಚಿಕ್ಕುಹಣ್ಣು ತಿನ್ನಲು ಬಲುರುಚಿ (ರೂಢಿ). [ ←ಮರಾ. ಚಿಕೂ, ಚಿಕ್ಕೂ ]

ಚಿಕ್ಕು$_3$ (ನಾ). ಒಂದು ಕ್ಷುದ್ರದೇವತೆಯ ಹೆಸರು: ಗಾಡಿಗ ದಿಂಬು ಗಂಗೆ ಚಿಕ್ಕು ಮುಟ್ಟಿಗೆ ಹುರಿಬುತ್ತಿಯ ಬೇಡಿ ಕುಡಾಡಿದ ಕೂಳಂಬಲಿಯ ನಾಯ್ಗುಡು ಕುಡುಕುವ ಹೇಸಿ ದೈವಂಗಳ ಬೇಡಿ ಬೇಡಿ ನಿರರ್ಥ ಕೆಡಬೇಡ (ಬಸವ. ೫೫೭). [ ? ]

ಚಿಕ್ಕುಟ, ಚಿಕ್ಕಟ$_1$, ಚಿಕ್ಕಟು. ಚಿಕ್ಕಡು, ಚಿಕ್ಕಾಟ, ಚಿಕ್ಕಾಡಿ, ಚಿಕ್ಕಾಡು, ಚಿಕ್ಕುಟು, ಚಿಕ್ಕುಡು, ಚಿಗಟ, ಚಿಗಟೆ (ನಾ). ಸೊಳ್ಳೆಯಂತಹ ಸಣ್ಣ ರೆಕ್ಕೆಹುಳು: ದಂಸೇಹಿಯ = ಚಿಕ್ಕುಟಗಳಿಂದಂ (ವರ್ಧಾ.ರಾ. ೧೨೨-೪); ಯುಗಯುಗವ ಬಲ್ಲೆನೆಂಬವರು ನಿಚ್ಚಕ್ಕೆ ನಿಚ್ಚ ಜಪ್ಪ ಚಿಕ್ಕುಟ [ಪಾಠಾಂ. ಚಿಕ್ಕಟ, ಚಿಕ್ಕುಟ] ಸಾವನರಿಯರು (ಅವಹಂ. ೧೧೬-೩೦೦); ಪೆರ್ವಾಗಿಲಂ ತಾಗೆ ಒಂದು ಬೀಯುಗವಿಕ್ಕಿ ಚಿಕ್ಕುಟಂ [ಪಾಠಾಂ. ಚಿಕ್ಕಟುಂ, ಚಿಕ್ಕಡುಂ] ನುಸುಳಲ್ಪರದಂತಾಗಿ ಬಿಗಿಯೆ (ಅರ್ಥಸೀ. ೭-೪೪ ವ); ಹೇನು ಕೂರೆ ಚಿಕ್ಕುಟ ತಗುಣೆಗಳಿವು ಹೀರುವರೆಣಿಪವು ರಕ್ತವ (ಭಕ್ತಿಸ. II. ೦೨-೧). ಚಿಕ್ಕಟ$_1$: "ಯೂಕಾ ಮಕ್ಷಿಕಾದಯಃ = ಕೂರೆ, ತಗುಣೆ, ಚಿಕ್ಕಟ ಮೊದಲಾದವು" (ಶಾಹಟೀ. ೩-೫-೨೭ ವ); ಚಿಕ್ಕಟವು ಮೈಯ ಕಡಿವಂತೆ (ಸರ್ವಜ್ಞ. ೧೧೪೭). ಚಿಕ್ಕಟದ ಕಾಲುಗಳು ೦.೦೫ ಅಂಗುಲ ಉದ್ದ–ಅಡ್ಡಲಾಗಿ ೧೩ ಅಂಗುಲ ಎತ್ತರ ೭.೭೫ ಅಂಗು ಲಹಾರಬಲ್ಲವು (ಕೀಟಜ. ೩). ಚಿಕ್ಕಟು: ಎಕ್ಕತೂಳದ ಭಟತತಿಯ ಚಿಕ್ಕಟು ತಿಗುಣೆಯ ತಿಕ್ಕುವಂದದಿ ನೆಲಕಿಕ್ಕಿದನರಿಗಳಗೆಯೊಳು (ನೇಮಿಸಂ. ೨೯-೩೧). ಚಿಕ್ಕಡು: ಗುಡವಮಾಕ್ಷಿಕ ಮಳಯಜ . . . ಎಂಬಿವ ನಿಂಬಾಗೊಡಗೂಡಿ ಧೂಪಿಸುಗೆ ಚಿಕ್ಕಡು ನೊರಜುಂ ತಗುಣೆ ಬಾಪಲೆಂಬಿವು ಕಿಡುಗುಂ (ಲೋಕೋಪ. ೭-೩೯); ದಂಶಮಶಕ–ಚಿಕ್ಕಡು ನೊರಜು (ಕಸೂಪ್ಪ. ೨೯೭); ಕೊಂಡೆಯನಂತೆ ಪತ್ತುವ ಚಿಕ್ಕಡಿನಿಂ ಕಡುಘಾತಕನಂತೆ ನೋಯಿಸುವ ಪೆನೊರ್ಣಗಳಿಂ . . . ಬಿಂಬಿಮ್ಮೆಂಬ ಪೇರವಿಯುಂ ನೋಡಿ(ಧರ್ಮಾಮೃ. ೩-೫೩); ದಂಶಮಶಕ–ಚಿಕ್ಕಡು ಗುಂಗುಟುಂ (ತತ್ತ್ವಪ್ರ. ೩೩೩). ಚಿಕ್ಕಾಟ: ಇಲ್ಲಿಗೆ ಬಂದರೆ ಅವರನ್ನು ತಗುಣೆ ಚಿಕ್ಕಾಟಗಳಂತೆ ಕಾಲಿನಿಂದ ತುಳಿದು ನಾಶಮಾಡುತ್ತೇನೆ (ಮುಂದಾಕಿ. ೧೫೪). ಚಿಕ್ಕಾಡಿ: ಚಿಕ್ಕಾಡಿ ತಗುಣೆಯೂ ರಕ್ಕಸರು ಜಾರೆಯರು ಒಕ್ಕಲಿಕ್ಕುವರು ಇರುಳೆಲ್ಲ ಬೆಳಗಾಗಿ ಸುಕ್ಕಿದಂತಿಹರು (ಸರ್ವಜ್ಞ. ೧೮೫೫). ಚಿಕ್ಕಾಡು: ಆನೆ ನೀರೊಡಗೂಡಿ ತಾನಾಡುತಿರಲೊಂದು ಮೌನದ ಚಿಕ್ಕಾಡು ನುಂಗೆ ಕಂಡು ಮಾನಿನಿ ನಲಿದಾಡುತ (ಮಿಶ್ರಸೂ. ೬೮); ಆನೆಯನೆತ್ತುವಂಗಾಡು ಚಿಕ್ಕಾಡೆಂಬಂತೆ ಗೋವರ್ಧನಾಚಲಮನೆತ್ತಿ (ಅರ್ಥಸೀ. ೭-೮೩ ವ); ಚಿಕ್ಕಿಲಿಯೂ ಗೂಬೆಯೂ ಚಿಕ್ಕಾಡು ತಗುಣೆಯೂ ರಕ್ಕಸ ಕಳ್ಳಜಾರರುಟಿ ಕತ್ತಲೆಯ ಮಕ್ಕಳು (ಸರ್ವಜ್ಞ. ೧೧೯೧); ಇಲಿ ಮತ್ತು ಚಿಕ್ಕಾಡುಗಳ ಮೂಲಕ ಪ್ಲೇಗು ಬರುತ್ತದೆ (ಆಡುಸಾ. ೪೮). ಚಿಕ್ಕುಟು: ಮುನ್ನಿನ ಭವದೊಳ್ ಪರಿಪಡೆ ಚಿಕ್ಕುಟುವುಂ ಗುಂಗುರುವುಂ ನೆಱೆ ಸೋವುತಿರ್ದ ಭಕ್ತಿಯ ಭರದಿಂ (ಬಂಧರಿ. ೭-೭೫). ಚಿಕ್ಕುಡು: ತುಂಬಿ ಪತಂಗ ನೊಣ ಜೇನನೊಣ ಚಿಕ್ಕುಡು . . . ಮೊದಲಾದುವಕ್ಕೆ ಸ್ಪರ್ಶನ ರಸನ ಘ್ರಾಣಮುಮಕ್ಕು (ಶಾಸ್ತ್ರಟೀ. ೧೧೭-೬). ಚಿಗಟ: ಇವುಗಳಲ್ಲಿ ಇಲಿಗಳ ಮೇಲೆ ಜೀವಿಸುವ ಚಿಗಟಗಳು ಪ್ಲೇಗ್ ರೋಗವನ್ನು ತರುವುವು (ಗೃಹವಿ. ೧೮೭); ಕಣಜದ ಶೈತ್ಯದಿಂದ ಚಿಗಟಗಳು ಮೇಲಕ್ಕೆ ಹಾರಿ ಬಂದು ಆಳಿನ ಮೊಗಕ್ಕೆ ಮುತ್ತಿದವು (ದಿಸ್ತ್ರೀ. ೧೦೮); ಚಿಗಟನ ಕಣ್ಣೊಳಗೆ ಆನೆಪೋಗಿ ಕುಂತರೂ ನಾವು ಆಶ್ಚರ್ಯಪಡಬೇಕಾಗಿಲ್ಲ (ಕರಿಕಂ. ೭); ಅಡವಿಗೆ ಹೋದರೂ ಚಿಗಟದ ಕಾಟ ತಪ್ಪದು (ಗಾದೆ). ಚಿಗಟೆ: -ತತ್ತತ್ಪ್ರಕೃತಿ ವಿಶೇಷಂಗಳಿಂ . . . ಮ್ರುತ್ಕ್ಸಃ – ಚಿಗಟೆಯಾಗಿ (ಶಾಹಟೀ. ೧೧-೧೩ ವ).

ಚಿಕ್ಕುಟು 'ಚಿಕ್ಕುಟ' ನೋ.

ಚಿಕ್ಕುಡಿಪ್ಪೆ (ನಾ). ಒಂದು ಬಗೆಯ ಗಿಡ: (ವೃಜಿಗಿ. ೪೧-೮೦೨). [ ? ]

ಚಿಕ್ಕುಡು 'ಚಿಕ್ಕುಟ' ನೋ.

**[illegible] ([illegible])**. ಸಣ್ಣವ್ಯಕ್ತಿ ; ಕೀಳು ದರ್ಜೆಯುವನು : ವೇದವ ಕಲಿತು [illegible] . ಪರತತ್ವವ ನೋಡಿ ಕಂಡಿಹೆವೆಂದು ಹೇಳುತಿಪ್ಪ [illegible]ರೆಲ್ಲರು ಇಕ್ಕುವ ದಾತಾರನ ಬಾಗಿಲವ ಕಾಯ್ದು ಚಿಕ್ಕುಳರಾದರು [illegible] ([illegible]).
[ ಚಿಕ್ಕ$_1$ + ಕುಳ$_5$ (= ಕುಲ) ]

**ಚಿಕ್ಕ್ಯಾಳಿ** (ನಾ). (?) : ಹುತ್ತದ ಮೇಗಣ ಕಾಗೆ ನೆತ್ತಾಲ್ಲ ಕಾರೋದ ಕಂಡೆ ಕಿತ್ಯಾಳಿ ಕಂಡೇ ಗುರುತೀಗೆ ಅತ್ಯಮ್ಮ ಚಿಕ್ಕ್ಯಾಳಿರಾಗೀಲಿ ಇರ್ವೇಳುತ್ತಿದ್ದೋ (ಹುಟ್ಟುಹ. ೭೨). [ ? ]

**ಚಿಕ್ಕೂಳಿಗ** (ನಾ). ಸಣ್ಣಪುಟ್ಟ ಕೆಲಸ ; ಕಿರುಕುಳ ಸೇವೆ : ಓಲಗ ದಬಲೆಯರನು ಬೀಳ್ಕೊಟ್ಟು ಚಿಕ್ಕೂಳಿಗದವರೊಡಗೂಡಿ ಲೀಲೆಯಿಂ ನರಸಿಂಹನಂತ್ಯದಿದ (ಕಂನವಿ. ೧೧-೧೨೫); ತೂಗದಿರಿಯೆಂದು ಚಿಕ್ಕೂಳಿಗ ದವರ ಸಂಜ್ಞೆಯಾಗಿ ನಿಂದಿರಿಸಿ ಅಪ್ಪಣೆವಿಡಿದು (ಕೃಷ್ಣವಿ. ೩-೪೬).
[ ಚಿಕ್ಕ$_1$ + ಊಳಿಗ (<ಊಳಿಗ) ]

**ಚಿಕ್ಕೆ$_1$** 'ಚುಕ್ಕೆ$_1$' ನೋ.

**ಚಿಕ್ಕೆ$_2$** (ನಾ). ೧. ಚಪ್ಪಟೆಯಾದ ಮೂಗುಳ್ಳ ಹೆಂಗಸು. ೨. ಇಲಿ. ೩. ಆಡಕೆ : (೬). [ ಸಂ. ಚಿಕ್ಕಾ ]

**ಚಿಕ್ಕೆಬೊಟ್ಟು** (ನಾ). ಚುಕ್ಕೆಯ ಆಕಾರದಲ್ಲಿರುವ ಬೊಟ್ಟು; ಹಣೆಗೆ ಇಡುವ ದುಂಡನೆಯ ಸಾದಿನ ಗುರುತು : (೬).
[ ಚಿಕ್ಕೆ$_1$ (<ಚುಕ್ಕೆ$_1$) + ಬೊಟ್ಟು$_2$ (<ಬಟ್ಟು$_1$) ]

**ಚಿಕ್ಕೆರಲೆ** (ನಾ). ಮರಿಹುಲ್ಲೆ ; ಜಿಂಕೆಯ ಮರಿ : ಕಿಱುವಳಿರಂ ಗೆಲ್ವಧರದ ಚಿಕ್ಕೆರಲೆಯ ಸೋಲಿಪ ನಗೆಗಣ್ಣ (ಜಯುಕಾ. ೩-೨೨).
[ ಚಿಕ್ಕ$_1$ + ಎರಲೆ ]

**ಚಿಕ್ಕೇಲ** (ನಾ). ಒಂದು ಬಗೆಯ ಔಷಧಿ ಗಿಡ : "ಆರೇಣು, ಚಿಕ್ಕೇಲ, ಕಡಲೆ" (ಓಷಧಿ. ೩). [ ? ]

**ಚಿಕ್ಕೇಲಕ್ಕಿ** (ನಾ). ಸಣ್ಣ ಏಲಕ್ಕಿ : "ರಾಷ್ಪ್ರವೃದ್ಧಿಕರೀ-ಚಿಕ್ಕೇಲಕ್ಕಿ" (ಓಷಧಿ. ೧೩೯). [ ಚಿಕ್ಕ$_1$ + ಏಲಕ್ಕಿ ]

**ಚಿಕ್ಕೊತ್ತೆ** (ನಾ). ಸ್ವಲ್ಪಹೊತ್ತಿನ ಸಹವಾಸಕ್ಕಾಗಿ ಮಾತ್ರ ಸೂಳೆಯರಿಗೆ ಕೊಡುವ ಒತ್ತೆಯ ಹಣ; ಹಗಲು ಹೊತ್ತಿನಲ್ಲಿ ಕೊಡುವ ಒತ್ತೆಹಣ; ಹಗಲೊತ್ತೆ : ಮತ್ತೆ ಬೊಜಂಗರಿಲ್ಲ ಪೊಱಗೊಟ್ಟತವೇಂ ನಿನಗುಂಟು ತೋಳ ಚಿಕ್ಕೊತ್ತೆಗೆ ಪೊಕ್ಕಿಯಿಂತು ಶುನಿಯಂತಿರೆ ನಿಲ್ವರೆ ಸೂಳೆಕೇರಿಯೋ ಒತ್ತೆಗೆ ನಾಣ್ಚಿಯುಂ ಪೊಱಮಡಾಂ ಮೊಱೆಯಿಟ್ಟಪೆನೆಂದು ಸುತ್ತಿದಳ್ ಮುತ್ತಿದಳಟ್ಟೆ ಚೌಕಿಗೆಯನೊರ್ಬಳೆ ಮಾರಿಯ ಮೂರಿಯಂದದಿಂ (ಲೀಲಾವ. ೨-೧೨೨) ; ಬಾಗಿಲೊಳ್ಪೂಜಗರೀಗಳ್ಬಂದು ನಿಂದಿರ್ದಪರ್ ಕರೆ ನಿಮ್ಮಕ್ಕನನಕ್ಕುವಕ್ಕು ಹೊಸತೀ ಚಿಕ್ಕೊ[ಪಾಠಾಂ. ತ್ಕೊ]ತ್ತೆಯುಂ ಕೊಟ್ಟು ನೋಡಿರೆ (ಶಾಂತೀಶ್ವ. ೧೦-೭೯); ಹರಿಸದಿನಿತ್ತ ಹಗಲ ಚಿಕ್ಕೊತ್ತೆಯ ನಿರುಳೊತ್ತೆಯು ಹಣಮೆನುತವೆ ಬಗೆದು (ಜಯುಕಾ. ೧೪-೫೨).
[ ಚಿಕ್ಕ$_1$ + ಒತ್ತೆ$_1$ ]

**ಚಿಕ್ಲೀತಾಸೊಪ್ಪು** (ನಾ). ಒಂದು ಬಗೆಯ ಸೊಪ್ಪು: ಚಿಕ್ಲೀತಾಸೊಪ್ಪು. ನೀರುಪುಳ್ಳಂಪುರಚಿಪಲೆ ಗಿಡ (ವೈಜಿಗ. ೨೫-೧೦೫೩). [ ?+ ಸೊಪ್ಪು$_3$ ]

**ಚಿಗಟ** 'ಚಿಕ್ಕುಟ' ನೋ.

**ಚಿಗಟಾಯಿಸು** 'ಚಿಕಟಾಯಿಸು' ನೋ.

**ಚಿಗಟೆ** '[illegible]' ನೋ.

**ಚಿಗಣೆ** 'ಚಿಗುಳಿ' ನೋ.

**ಚಿಗಪ್ಪ** 'ಚಿಕ್ಕ[illegible]' ನೋ.

**ಚಿಗರಿ$_1$** 'ಚಿಗರೆ$_1$' ನೋ.

**ಚಿಗರಿ$_2$** '[illegible]ಗರೆ$_2$' ನೋ.

**ಚಿಗರಿಗಣ್**, **ಚಿಗರಿಗಣ್ಣು** (ನಾ). ಜಿಂಕೆಯ ಕಣ್ಣುಗಳಂತಿರುವ ಕಣ್ಣು. ಚಿಗರಿಗಂಗಳ ಚೆಲುವಿ ಚೆದರಿ ನಿಂತಾಳೆ (ಸಜೀಗೀ. ೧೦೦-೧). **ಚಿಗರಿಗಣ್ಣು** : ನೆಕ್ಲುದೋವ್ ಒಳಗೆ ಪ್ರವೇಶಿಸಿದಾಗ ಆ ಚಿಗರಿಗಣ್ಣುಗಳು ಕ್ಷಣಕಾಲ ಮಾತ್ರ ತಾಯಿಯಿಂದ ಸರಿದು ಅವನ ಕಣ್ಣುಗಳನ್ನು ಸಂಧಿಸಿದುವು (ಪುನರು. ೨೩೮). [ ಚಿಗರಿ$_1$ (< ಚಿಗರೆ$_1$) + ಕಣ್ ]

**ಚಿಗರಿಗಣ್ಣು** 'ಚಿಗರಿಗಣ್' ನೋ.

**ಚಿಗರೆ$_1$**, **ಚಿಗರಿ$_1$** (ನಾ). ಜಿಂಕೆ ; ಹುಲ್ಲೆ : ಹಕ್ಕಿ ಗಾನ ಮಾಡುತಿವೆ ಭೃಂಗ ದಿಕ್ಕಿಗೋಡುತಿವೆ ಇದನು ನಿಂತು ನೋಡುತಿವೆ ಚಿಗರೆ ಸಾಲ್ಗಳು (ಪಯಣ. ೫೧-೮) ; ಅವಳೊಂದು ಹೆಣ್ಣು ಚಿಗರೆ ಯಾರ ಕೈಗೆ ಬದ್ದಿತೋ (ಹೊಸದಿ. ೪೮); 'ದೀರ್ಘಾಪಾಂಗ' ವೆಂಬ ಚಿಗರೆ ಆಕೆಯ ಮುದ್ದುಕಂದ (ಧರ್ಮಸಾ. ೬೮). ತಾರಾಪದನು ಚಿಗರೆಯ ಮರಿಯ ಹಾಗೆ ಬಂಧನಭೀರು (ಇಪ್ಪತ್ತ. ೧೬೧). **ಚಿಗರಿ$_1$** : ಚಿಗರಿ ಮೊಲ ಜೇನ್ನುಣಿಸೆವಣ್ಣಂ (ಮಹಾವಿ. ೭-೩೨) ; ಚಿಗರಿಯಂತೆ ಜಿಗಿದು ಒಳಗೆ ಓಡಿಹೋದ (ಪ್ರೇಮುತ. ೯೬) : ಚಂದಪ್ಪ ಮೂಡ್ಯಾನ ಚಿಗರೀಯನೇರ್ಯಾನೋ(ಗಾಳಿಗು. ೦೬) ; ನಮ್ಮ ಚಿಗರಿಯನ್ನು ಬಿಟ್ಟು ಅದನ್ನು ಹಿಡಿಯಲಿಕ್ಕೆ ಓಡೋಣ (ಮುಂಬಯಿ. ೧-೨೭).

**ಚಿಗರೆ$_2$**, **ಚಿಗರಿ$_2$** (ನಾ). ಒಂದು ಬಗೆಯ ಗಿಡ ; ಸುಜ್ಜಲು ; ᑭ ಇದರ ಸೊಪ್ಪನ್ನು ಒಣಗಿಸಿ ಪುಡಿಮಾಡಿ ಸೀಗೆಪುಡಿಯೊಂದಿಗೆ ಉಪಯೋಗಿ ಸುತ್ತಾರೆ : ಚಿಗರೆಯ ಪುಡಿಗೂ ಈಗ ಬೆಲೆ ಹೆಚ್ಚಾಗಿದೆ (ಬೂಧಿ). **ಚಿಗರಿ$_2$** : ಸುಜ್ಜಲು, ಚುಚ್ಚಲು, ಚಿಗರಿ, ಬೀಳ್ಕಂಬಿ, ತಂಗಿ (ವೈಜಿಗ. ೪-೬೨).

**ಚಿಗವ್ವ** 'ಚಿಕ್ಕವ್ವ' ನೋ.

**ಚಿಗಳಿ** 'ಚಿಗುಳಿ' ನೋ.

**ಚಿಗಿ$_1$**, **ಜಿಗಿ$_1$** (ಕ್ರಿ). ೧. (ಬೆರಳುಗಳಿಂದ) ಚಿಮ್ಮಿಸು ; ಮಿಡಿ : "ಚಿಗಿ- ಅಂಗುಲಿ ವಿಸರ್ಜನೇ(ಬೆರಳಿನಿಂದ ಚಿಮ್ಮು)"(ಶಮಧಾ);ಚಿಗಿದಂಬು ಕಡಿದುದು ಕರ್ಣನಂದನನ (ಕುವ್ಯಾಕ. ೨೦-೩೫) ; ಅಂಡೆಯ ನೆಗಹಿ ಕುಂಕುಮರಸ ದುಂಬಿ ಕೈಯಂಡೆಯ ಕೊಳವೆಯ ಚಿಗಿದು ಮುಂಡೆಯ ನಿಡುಜಡೆವಿಡಿದು ಹೊಯ್ದಾಡಿದರು (ಪೋಹತ. ೧೪-೬೫). ೨. ನೆಗೆ ; ಕುಪ್ಪಳಿಸು ; ಹಾರು ; ಚಿಮ್ಮು : ಗಗನಕೆ ಚಿಗಿದು ಮಾರುತಿಯುಗ್ಗಬಾಣವ ತೆಗೆದೆಸಲಸುರಾಧಿಪನು (ಅಂಜಿದ. ೧೪-೨೦೪) ; ಸೆಳೆದು ಹಿರಿಯುಬ್ಬಣವನವನಿಪ ಕಲಕೆ ಚಿಗಿದನು (ಕುವ್ಯಾಕ. ೪-೩೭) ; ತುರಗದ ಮೊಗಂ ಮೊಗರಂಬುಮಾಗ ಗಗನಕೆ ಚಿಗಿಯೆ (ಚಿಬಪು. ೩೨-೭) ; ನೇಜೆಯದಿಱೆತಕೆ ಚಿಗಿದು ಕುದುರೆಯಿಂದ ಮಾಜದೆ ಬೀಳ್ವ ರಾವುತರ . . . ಯಮರಾಜನಾಲಯಕಟ್ಟಿದರು (ಕಂನವಿ. ೩-೬೯) ; ತೆಗೆವಾ ಜಟಾಯುವಿನ ಪ್ರಾಣಗಳನಾಕ್ಷಣದಿ ಚಿ[ಪಾಠಾಂ. ಜಿ]ಗಿಯೆ ಸದನಕೆ (ವೆಂಕಾರಾ. ೧-೩-೨೦). **ಜಿಗಿ$_1$** : ೨. ಅತ್ತಳ್ ಬಸಿಱಿಂ ಪೊಸೆದಳ್ ಜಿಗಿದಳ್ (ಅರ್ಧನೇ. ೭-೩೫) ; ಜಿಗಿವ ರಕುತದ ಗದೆಯ ಬಿಱುಪೊಯ್ಲುಗಳೊಳಗೆ ಕಿಡಿ ಮಸಗಿ (ಕುವ್ಯಾದ್ರೋ. ೩-೩೫) ; ಧರಣಿ ಜಿಗಿದುದು ಗಜಂಗಳ್ ಕುಗ್ಗಿದುವು (ಚಿಬಪು. ೨೭-೧೧) ; ತಿಂಮ ಸಿದಿಗೆಯಿಂದ ಜಿಗಿದು ಹಾರಿ ಮನೆಗೇ ಓಡಿದ (ತಿಂಮತ. ೧೯).

ಚಿಗಿದಾಡು = ಕುಣಿದಾಡು: ನಲಿದಾಡು: ಕಂಜನಾಭನ ಕಂಡು ಪರವಶ ದಲಿ ಹಾಹಾ ರಂಜಿಸುತಲಿ ಎರಗಿ ಚಿಗಿದಾಡಿದ ಚರಣ(ವಿದಾಕ್ಕ. ೨೭-೨): ದಿಕ್ಕು ಗಳ ಮರೆದು ಧಿಗಿಧಿಗಿಯೆಂದು ಚಿಗಿದಾಡೆ (ವಿದಾಕ್ಕ. ೧೨೭-೪). ಚಿಗಿದೇಳು= ಚಿಮ್ಮಿ ಮೇಲಕ್ಕೆ ಬರು : ಅದ್ದ ರಥ ಹರಿಯುರವಣೆಗೆ ಚಿಗಿದೆದ್ದ ಸಮ ಪಾಯ್ದುಭಯ ಘಟ (ಕುವ್ಯಾಕ. ೭-೨೨).

**ಚಿಗಿ$_2$** (ಕ್ರಿ). ಚಿಗಿತು (ಭೂತನ್ಯೂ). ೧. ಚಿಗುರು ; ಮೊಳಕೆಯಾಗು : ಮೊಳೆದೋರು : ಪಲ್ಲವಿಸು : ಏತದ ಗಣೆ ಚಿಗಿತು ಕಾತು ಫಲ ವಾದಂದು(ಸರ್ವಜ್ಞ. ೦೬-೭೦); ಈ ಕುಡಿಯು ಚಿಗಿಯುವುದಿನ್ನು ಕರುಣಾಳು, ನನ್ನೊಡೆಯ (ಬಿಪಾಸಿ. ೪೦-೭) ; ಒಂದೊಂದು ದೇಶ ಮೋಹಪಾಶವನ್ನು

ಬಿಗಿಯಿತು ಅದಕು ಪೃದಯು ಚಿಗಿಯಿಹು (ಪಯುರ. ೫-೮) : ಕಲ್ಪವೃಕ್ಷದ ಅಗಿಯೋ, ಚಿಗಿಯೋ (ಗಂ. ೪೮-೪). ೨. (ಆಲಂ) ಚೈತನ್ಯಹೊಂದು : ಚೇತರಿಸಿಕೊಳ್ಳು : ಶ್ರೀಕಂಠಶಾಸ್ತ್ರಿಗಳು ಮತ್ತೆ ಚಿಗಿತರು(ಗಂಗಾಸಾ. ೧೧೧).

[ <ಚಿಗುರ್$_{1}$. / ಕುರುಖ್. ಚಿಗಾ. ಚಿಗೀ ]

**ಚಿಗಿಲ್** 'ಜಿಗಿಲ್$_{1}$' ನೋ.

**ಚಿಗಿಹಲ್ಲೆ** (ನಾ). (?) : ಸುರಪನಿಡುವ ಚಿಗಿಹಲ್ಲೆಯು ಮೋಹನ ಶರಮಂ ಬೆಳಗುವ ಸಿಕಿನಿವಳಿಯು ರತಿವರನಾ ಮೋಹನವಂಚಕ ವಿತತಿಯುನಬಿಸಿ ಹಿಡಿದು ತರಲು (ಜಯುಕಾ. ೧೪-೧೧). [ ? ]

**ಚಿಗುಟು** 'ಚಿವುಂಟು' ನೋ.

**ಚಿಗುರ್$_{1}$** ಚಿಗುರು$_{1}$ (ಕ್ರಿ). ಚಿಗುತು, ಚಿಗುರ್ತು (ಭೂತನ್ಯೂ). ೧. ಅಂಕುರಿಸು ; ಪಲ್ಲವಿಸು ; ಮೊಳಕೆಯಾಗು : "ಚಿಗುರ್-ಪಲ್ಲವೋತ್ಪತ್ತೌ" (ಶಮದಾ) : "ಚಿಗುರಾದುದಕೆ ಚಿಗುರ್ತುದಕ್ಕುಂ" (ಶಶರ. ೩೬): "ಪರ್ಣತೀತಿ ಚಿಗುರ್ದಪುದೆಂಬುದು" (ಕಾಶಕ್ಯ. ೩೬): ನೀರಸ ತರು ಚಿಗುರ್ವವು (ತೊರಲ. ೧-೫-೬೦). ಚಿಗುರು$_{1}$ : ೧. ಪಾಗಿಯೊಳ್ಬೇಸಗೆಯೊಳುಂ ಚಿಗುರಿದೆಳವುಲ್ ಮೃಗಂಗಳ್ಗೆ ಬೀಯದು (ಚ್ಯಮಿಘಾ. ೧೫-೧೮) : ಗಿಡ ಹಬ್ಬುವುದು ; ಚಿಗುರುವುದು (ಸಾಹಿಜೀ. ೮೧). ೨. ಉಂಟಾಗು ; ತಲೆದೋರು : ಹಗೆತನವು ನಿನಗೇನು ಕಾರಣ ಚಿಗುರಿದುದು (ತೊರಲ. ೪-೨-೨೩). ೩. ಉತ್ಸಾಹಗೊಳ್ಳು: ರಸುದೆಗೆವ ದನಿ ನಿಮಿರೆ ನಾಲ್ಕು ಚಿಗುರುತ್ತಿರೆ ಸವಿದುದೊಂದು ಗಿಳಿ ತನಿವಣ್ಣಂ (ಗಿರಿಕ. ೨-೩೯). ೪. ಚೈತನ್ಯಹೊಂದು ; ಪ್ರವರ್ಧಮಾನಕ್ಕೆ ಬರು : ಹಿಂದೆ ವ್ಯಾಪಾರದಲ್ಲಿ ನಷ್ಟ ಹೊಂದಿ ಕುಗ್ಗಿದ್ದರೂ ಈತ ಈಚೆಗೆ ಚಿಗುರಿಕೊಂಡಿದ್ದಾನೆ (ರೂಢಿ).

ಚಿಚ್ಚಿಗುರು (ದ್ವಿರುಕ್ತಿ) : ದೇವನ ಕರುಣೆಯು ಕರುಳಿನ ತಿರುಳೊಂದು ಚಿಚ್ಚಿಗುರುತಿರುವಂತೆ ಪ್ರತಿದಿನವು (ಸಖೀಗೀ. ೩೩-೬೪೨).

[ ದೇ.೫ ತಮಿ. ಇಮಿಲ್ ; ತುಳು. ಇಗುರು, ಚಿಗುರು, ತಿಗುರು, ಸಿಗುರು ; ತೆಲು. ಇಗುರು, ಚಿಗುರು, ಚಿವುರು = ತಳಿರು, ಕುಡಿ ]

**ಚಿಗುರ್$_{2}$**, ಚಿಗುರು$_{2}$ (ನಾ). ತಳಿರು ; ಕುಡಿ ; ಪಲ್ಲವ : ಮರಂಗಳ ಚಿಗುರ್ಗಳಿಂದೊಗೆದಲರಿಂ (ಕಾದಂಪೂ. ೧೧೬) ; ಚಿಗುರಿಂ ಪೂವಿಂ ಕಾಯಿಂ ಸೊಗಯಿಪ ಮಾವಿಂಗೆ ಪುಣಸೆಗೆಟಿಗಲ್ವೇಡಾ (ಸಮಪ. ೯-೫೬) ; ಚಿಗುರೆಂದುಂ ಮೆಲೆ ಬೇವು ಸ್ವಾದುವಹುದೇ (ಸೋಮೇಶ. ೪೧). ಚಿಗುರು$_{2}$ : ಚಿಗು [ಪಾಠಾಂ. ಗ] ರು ತಳಿರು ಪತ್ರ ಮೊದಲಾದಪಚಿಲ್ಲಿಯು ಗಂಧವನಜೀವುದು ಆಚಾರಲಿಂಗದಲ್ಲಿಯು ಶಿವಲಿಂಗ (ಅದವ. ೫-೧೨) ; ಚಿಗುರನಿರದೊದವಿಸುತ . . . ಬಂದೆಸೆದುದು ನವಚೈತ್ರಂ (ಜಯುಕಾ. ೧೧-೧) ; ಕೆಲರು ಚಿಗುರಿನ ತೊಡವ ಧರಿಸಿದರು (ನಳಚ. ೧-೪೦) : ಸವಿಯು ಬಾ . . . ಸೀ ಹುಳಿಯು ಚಿಗುರನ್ನು (ನವ್ಯಧ್ಯ. ೨-೯).

ಚಿಚ್ಚಿಗುರು (ದ್ವಿರುಕ್ತಿ) : ಮೊಳಕೆಯಲಿ ತುಂಬಿ ಚಿಚ್ಚಿಗುರಿನಲ್ಲಿ ತುಂಬಿ (ಗಂಗಾತ. ೧೦೮-೧೧). ಚಿಗುರಾಗು = ಚಿಗುರು ; ಮೊಳಕೆದೋರು : "ಚಿಗುರಾದುದೆಲೆ ಚಿಗುರ್ತುದಕಕ್ಕು ಪೆಸರು" (ಶಬ್ದಕ್ಕ. ೨೨): "ಚಿಗುರ್ತುದೆನೆ ಚಿಗುರಾದುದು (ಶಬ್ದಮಂ. ೨೨). [ < ಚಿಗುರ್$_{1}$ ]

**ಚಿಗುರಾಸೆ** (ನಾ). ಮುಂದೆ ಕಾರ್ಯರೂಪಕ್ಕೆ ಬರುತ್ತದೆಂಬ ಆಸೆ ; ಆಶಾಂಕುರ : ತುತ್ರುನ ಹೆಂಡತಿ ಸಂಕ್ರಿ ಇವರಾದರೂ ಜೊತೆಯಾದಾರು ಎನ್ನುವ ಚಿಗುರಾಸೆಯಿಂದ 'ಓಯ್' ಎಂದು ಕೂ ಹಾಕಿದ್ದಕ್ಕೆ (ಹೊಸಕ್ಷಿ. ೪೯). [ ಚಿಗುರ್$_{2}$ + ಆಸೆ$_{1}$ ]

**ಚಿಗುರಿಕ್ಕು** (ಕ್ರಿ). ಚಿಗುರಂಗಳಿಂದ (ಮನೆಯನ್ನು) ಅಲಂಕರಿಸು ; ಪಸಿರು ತೋರಣವನ್ನು ಕಟ್ಟು : ಪೊಸತಿಲ ಮೇಲನೊಕ್ಕಿಟಿದು ವಿಾಸಲ ತುಯ್ಯಲನಟ್ಟು ಬಾಗಿಲರ್ಚಿಸಿ ಚಿಗುರಿಕ್ಕಿ ಚಟ್ಟಟಿಾದು (ಪಸಾರ. ೪೬೫).

[ ಚಿಗುರ್$_{2}$ + ಇಕ್ಕು ]

**ಚಿಗುರಿಡು** (ಕ್ರಿ). ೧. = ಚಿಗುರಿಕ್ಕು. ೨. [illegible] ಪಡೆ : ಚಿಗುರಿಡೆ ದೇಗುಲಂಗಳಗರಂ [illegible]

[ ಚಿಗುರ್$_{2}$ + ಇಡು$_{1}$ ]

**ಚಿಗುರಿಸು** (ಕ್ರಿ). ೧. ಮೊಳೆಯುವಂತೆ ಮಾಡು; ಚಿಗುರುವಂತೆಮಾಡು: ಮಿಂಡೆದ್ದ ಹೆಣ್ಣಾಳುಪವನಕೆ ನಡೆತಂದು . . . ಕಂಡ ಕಂಡವನಿಜಾತಂಗಳಂ ಚಿಗುರಿಸಿದರು (ಚ್ಯಮಿಘಾ. ೩೦-೫) ; ಸುಗಿವ ಮಳೆ ಪಳಿಯುಗೆಯೊಳಡಗಿರ್ದ ಬೀಗರ್ಗಳಂ ಚಿಗುರಿಸಿತು ತಾಯ್ನೆಲದ ಪಸುರುಡುಗೆಯೊಡಲು (ಕಾಲಕಾರ. ೪೫-೬೩). ೨. (ಆಲಂ) ಸಂತೋಷಪಡಿಸು ; ಉತ್ಸಾಹಗೊಳಿಸು ; ನಲಿಯಿಸು: ಈ ಗಿರಿಜೆಯು ನಿಜರಾಗು ಶಂಕರನ ಚಿತ್ತವುಂ ಚಿಗುರಿಸದೇ (ಗಿರಿಕ. ೪-೫೬); ಚಿತ್ರಮೋಹಿನಿ ಕೂಡೆ ಬಂದು ನಿಂದಳು ಮರುು ಚಿತ್ತವೆಲ್ಲವ ಚಿಗುರಿಸುತ (ಭರತ. ೧೨-೭೨) : ಕೇಳ್ದರ ಚಿತ್ತಮುಂ ಚಿಗುರಿಸುಂ ಚಿಕದೇವನ ಜಾಣದೆಂತುಟೋ (ಚಿಕವಿ. ೪-೧೦೫). [ ಚಿಗುರ್$_{2}$ + – ಇಸು$_{3}$ ]

**ಚಿಗುರು$_{1}$** 'ಚಿಗುರ್$_{1}$' ನೋ.

**ಚಿಗುರು$_{2}$** 'ಚಿಗುರ್$_{2}$' ನೋ.

**ಚಿಗುರುದೋಱು** (ಕ್ರಿ). ಎಳೆಯ ಮೊಳಕೆ ಕಾಣಿಸಿಕೊಳ್ಳು; ಮೊಳಕೆಯೊಡೆ : ತೆಗೆದು ದಾರಿಗೆ ಹೆಜ್ಜೆಹೆಜ್ಜೆಗೆ ಚಿಗುರುದೋಱಿದ ತಳಿರ ಪಱಿವಱಿದು (ತೊರಲ. ೨-೪-೧೯).

[ ಚಿಗುರು$_{2}$ (<ಚಿಗುರ್$_{2}$) + ತೋಱು ]

**ಚಿಗುರುಪ್ರಾಯ** (ನಾ). ಎಳೆಯ ವಯಸ್ಸು: ಮಲ್ಲಿಗೆಯಂದದಿ ಚಿಗುರು-ಪ್ರಾಯದ ಮನಮಲರುತಿದೆ (ಸಖೀಗೀ. ೨೦-೩೨೮).

[ ಚಿಗುರು$_{2}$ (<ಚಿಗುರ್$_{2}$) + ಪ್ರಾಯ ]

**ಚಿಗುರುಬೋಣ** (ನಾ). ಕೋಮಲೆ ; ಎಳೆಯ ಪ್ರಾಯದ ಹುಡುಗಿ : ಚಿಗುರುಯಲೆಗಳ ತಂದು ಹಾಸಿಗೆಯನ್ನು ಮಾಡಿ ಚಿಗುರುಬೋಣಯು ಮಲಗೆ ಚಿಗುರುಪೊಗೆಯಾಯ್ತು (ಯುನಳ. ೬೫) ; ಪಲ್ಲವಪಾಣಿಯು ಚೆಲ್ವ ಚಿಗುರುಬೋಣಯು ಮಲ್ಲಿಗೆಹೂವಿನ ಚೆಂಡ ಗಂಧಮುಡಿಯೊಳದ್ದಿ ಬಸವಗಿಟ್ಟು (ಶರಂ. ೧೩೯-೩).

[ ಚಿಗುರು$_{2}$ (<ಚಿಗುರ್$_{2}$) + ಬೋಣ$_{2}$. / ತೆಲು. ಇಗುರುಬೋಡಿ, ಇಗುರುಬೋಣಿ, ಚಿಗುರುಬೋಡಿ, ಚಿಗುರುಬೋಣ ]

**ಚಿಗುರುಮಿಾಸೆ** (ನಾ). ಹೊಸಹರಯದ ಗುರುತಾಗಿ ಆದೇ ತಾನೆ ಮೂಡುತ್ತಿರುವ ಮಿಾಸೆ : ಅಯ್ಯೋ ಚಿಗುರುಮಿಾಸೆ ಸರ್ದಾರ ಕೈಕಾಲು ಸೋಲ್ತಾವೊ (ದಿನಾರಿ. ೧). 'ತುಪ್ಪುಳುಮಿಾಸೆ' ಪರಾ.

[ ಚಿಗುರು$_{2}$ (<ಚಿಗುರ್$_{2}$) + ಮಿಾಸೆ ]

**ಚಿಗುರೆತ್ತು** (ಕ್ರಿ). ಮೊಳಕೆದೋರು: ಆಲದ ಎಲೆ ಸೀಳಿ ಅರಳಿಲೆ ಚಿಗುರೆತ್ತಿ ಬಂದಂತೆ (ವಿಪಾಮಂ. ೧೩೧). [ ಚಿಗುರು$_{2}$ (<ಚಿಗುರ್$_{2}$) + ಎತ್ತು$_{1}$ ]

**ಚಿಗುರೆಲೆ** (ನಾ). ೧. ಚಿಗುರಾಗಿರುವ ಎಲೆ ; ಎಳೆಯ ಎಲೆ ; ಎಳತಾದ ಎಲೆ : ಚಿಗುರೆಲೆಗಳಿಂ ಕೂಡಿರುವ ಕುಡಿಲು. ಮರದ ಸು (ಸಿದ್ಧಾಂತಿ. ೧೦೦) : ಹಣ್ಣೆಲೆ ಉದುರುವಾಗ ಚಿಗುರೆಲೆ ನಗುವುದು (ಗಾದ). ೨. ತಾಂಬೂಲಕ್ಕೆ ಉಪಯೋಗಿಸುವ ಎಳೆಯ ವೀಳೆಯದೆಲೆ : ಹಣ್ಣುಕಾಯಿ ಎರಡೂವೆ ಮೊದಲಾಗಬೇಕು ಕಳಲಡಿಕೆ ಚಿಗುರೆಲೆ ಮೊದಲಾಗಬೇಕು (ಹುಬ್ಬಪ. ೪೬).

[ ಚಿಗುರು$_{2}$ (<ಚಿಗುರ್$_{2}$) + ಎಲೆ$_{1}$ ]

**ಚಿಗುರೊಡೆ** (ಕ್ರಿ). ೧. ಚಿಗುರು ಮೂಡು : ಬಳ್ಳಿ ಚಿಗುರೊಡೆದಿದೆ (ರೂಢಿ). ೨. ಕಾಣಿಸಿಕೊಳ್ಳು; ತಲೆದೋರು ; ಅವಿರ್ಘವಿ… ತನ್ನ ಕಾಲ ಮೇಲೆ ತಾನೇ ನಿಲ್ಲಬೇಕಾಯಿತು. ಈ ವಿಚಾರ ಚಿಗುರೊಡೆ ಕಾರ್ಯೋನ್ಮುಖವಾಗತೊಡಗಿತು (ಜಯಂತ. ೩೪೩).

[ಚಿಗುರು$_{2}$ (<ಚಿಗುರ್$_{2}$) + ಒಡೆ$_{1}$ ]

**ಚಿಗುಳಿ, ಚಿಗಣಿ, ಚಿಗಳಿ, ಜಿವುಳಿ** (ನಾ). ಎಳ್ಳು, ಬೆಲ್ಲಹಾಕಿ ಕುಟ್ಟಿ ಮಾಡಿದ ಉಂಡೆ : ಪೂಜಿಸಿ ಎಣ್ಣೆಯಲ್ಲಿ ಅಭಿಷೇಕವಮಂ ಮಾಡುವುದು ಚಿಗುಳಿ ತಂಬಿಟ್ಟನಲ್ಲಿ ಪೂಜಿಸುವುದು (ದಾಉಚ. ೧೩೩-೭) : ಚಿಗುಳಿ ಚಕ್ಕುಲಿ ಹಾಲವುಗೆ ಮಂಡಗೆ . . . ತಂದುಕೊಡುವರು (ಬಸವು. ೦೪-೧೫) ; ಚಿಗುಳಿ ಲಡ್ಡುಗೆ ಸಕ್ಕರೆವೇಣಿಯೊಳವು ಮನ್ಮಂದಿರದೊಳ್ನೀಂ ಬಯಸಿ ಪೋಗಿ ತಂದಪೆನೀಗಳ್ (ವೃಷವಿ. ೯-೭೮). **ಚಿಗಣಿ :** ಚಿಗಣಿಯು ನೆನೆಅಕ್ಕಿ ನೆನೆಗಡಲೆ ಎಲ್ಲವನು ತರ್ಕೊಂಡು (ನಾಪದ. ೧೬೫). **ಚಿಗಳಿ :** ಚಿಗಳಿ ತಂಬಿಟ್ಟುಗಳನ್ನೂ, ಕಡಬುಗಳನ್ನೂ . . . ತಂದುಕೊಡಲು (ಕೃವಾಅ. ೩೦೪) : ಇನ್ನು ಮೇಲೆ ನಿಮ್ಮನ್ನ ಮರೆತರೂ ಚಿಗಳೀನ ಮರೆಯೊಲ್ಲ ! (ನಮ್ಮಕೈ. ೧೨) ; ಚಿಗಳಿ, ತಂಬಿಟ್ಟು, ಹೆಸರುಂಡಿ, ಚಕ್ಕುಲಿ ತಯಾರಿಸಿದರು (ಕಪವು. ೩-೮೭). **ಜಿವುಳಿ :** 'ಜಿವುಳಿದುಟು' ಪರಾ.

ಚಿಗಳಿಬೊಂಬೆ = ೧. ಚಿಗುಳಿಯಂತೆ ಕಪ್ಪಾಗಿರುವ ಬೊಂಬೆ. ೨. (ಅಲಂ) ಕಪ್ಪುಬಣ್ಣದ ವ್ಯಕ್ತಿ : ಎಲ್ಲಿ ಬೇಕಾದರೂ ನೋಡಿ " ಚಿಗಳಿ " ಬೊಂಬೆಗಳು (ಬಿಸ್ತಕ. ೫).

[ ದೇ.೩ ತೆಲು. ಚಿವ್ಮಿರಿ, ಚಿವ್ಮಿಲಿ ]

**ಚಿಗುಳಿದುಳಿ** 'ಚಿಗುಳಿದುಟು' ನೋ.

**ಚಿಗುಳಿದುಟು, ಚಿಗುಳಿದುಳಿ, ಜಿವುಳಿದುಟು** (ಕ್ರಿ). ಚಿಗಂಳಿಯಾಗುವಂತೆ ತುಳಿ ; ಗಿಜಿಗಿಜಿಯಾಗುವಂತೆ ತುಳಿ ; ಜಜ್ಜಿಹೋಗುವಂತೆ ತುಳಿ : ರಾಸಭಂ ಬಂದುಮಾ ವಾಸವಸೈನ್ಯಮಂ ಕರ್ಚಿಯುಮೊದೆದು ಚಿಗುಳಿ ದುಟಿದುಂ ಪಡಲ್ವಡಿಸುತ್ತುಮಿರೆ (ಜಗವಿ. ೪-೩೯ ವ). **ಚಿಗುಳಿದುಳಿ:** ಅಟ್ಟ ಕಪಿಗಳ ಚಿಗುಳಿದುಳಿದನು ಸೇನೆ ಪೆದೆಗೆಡಲು (ತೊರಿರಾ. ೨೫-೨೧) ; ಹಗೆಯ ಬಲದಲಿ ಹರಿದು ಸುಭಟರ ಚಿಗುಳಿದುಳಿದುದು ತರೆಗಳನು ಮುಗಿಲಗಲದಲಿ ಹರಹಿದುದು ದಿಕ್ಕರಿ (ಕುವ್ಯಾದ್ರೋ. ೩-೧೩) : ನಿಮಿಷಮಾತ್ರದೊಳ್ ಮುತ್ತಿದ ಭಟರ್ಗಳಂ ಮುರಿದು ಶತಪತ್ರಗಳಂ ಚಿಗುಳಿದು[ಪಾಠಾಂ. ಳಿಂಬಂತೆ ತು]ಳಿದು (ಜಬವು. ೨೮-೨೪) : ಅಸಂಖ್ಯಾತ ವಾಜಿ ಕರಿಘಟೆ ಪಾಯ್ದಳವನ್ನು. ಚಿಗುಳಿದುಳಿಯುತ್ತಾನೆ (ನಂಜುಂಡ. ೭೮). **ಜಿವುಳಿದುಟು :** ಸುಪ್ರತೀಕ[೦] ಕೆಯ್ಯ ಕಾಲ ಕೋಡೇಱನೊಳ್ ಬಲಮನೆಲ್ಲಂ ಜವನೆ ಜಿವುಳಿದುಟುವಂತೆ ತೊಟ್ಟುಟಿದುಟಿದು (ಶಾಂಪಥಾ. ೧೧-೭೨ ವ). [ ಚಿಗುಳಿ + ತುಟು₁ ]

**ಚಿಗುಳಿದುಟಿಸು** (ಕ್ರಿ). ಜಜ್ಜಿಹೋಗುವಂತೆ ತುಳಿಸು : ತುರಗಖುರಪುಟ ದೊಳರಿಗಳ ಶಿರಂಗಳಂ ಚಿಗುಳಿದುಟಿಸಿ (ದಶಕು. ೭-೫೨).

[ ಚಿಗುಳಿದುಟು + – ಇಸು₃ ]

**ಚಿಗ್ಲೂಣ** (ನಾ). ಸಡಿಲವಾಗುವುದು; ಅಳ್ಳಕವಾಗಂವುದು : " ಶ್ಲಥತಾ = ಚಿಗ್ಲೂಣವು " (ದಾಪಟೀ. ೨-೨-೭೭ ವ). [ ? ]

**ಚಿಚ್ಚಕ್ಷು** (ನಾ). ಮನಸ್ಸಿನ ಕಣ್ಣು; ಅಂತರ್ದೃಷ್ಟಿ ; ಜ್ಞಾನದೃಷ್ಟಿ: ಅಖಂಡಜ್ಯೋತಿಯಂ ಶುದ್ಧಭಾಸುರ ಚಿಚ್ಚಕ್ಷುವೊಳೀಕ್ಷಿಸುತ್ತ ಯಮಿವೃಂದಂ ತಾಳ್ದುಮಾನಂದಮಂ (ಶಬಶಂ. ೨-೭೦).

[ ಸಂ. ಚಿಚ್ಚಕ್ಷುಸ್ (ಚಿತ್ + ಚಕ್ಷುಸ್) ]

**ಚಿಚ್ಛಕುದಿಬೋಯ** (ನಾ). ಒಬ್ಬಾತನ ಹೆಸರು: ಚಿಚ್ಛಕುದಿಬೋಯಸ್ಯ . . . ಶಮ್ಮಣ (ಇಆ. VII, ೧೮೮-೫೭; 668). [ <ಚಿಚ್ಛಕ್ತಿ + ಬೋಯ]

**ಚಿಚ್ಛಕ್ತಿ** (ನಾ). ಚೈತನ್ಯ; ಆತ್ಮಶಕ್ತಿ: ಶಾಂತ್ಯತೀತೋತ್ತರಕಲೆಯೆಂಬ ಹೆಸರಿನ ಚಿಚ್ಛಕ್ತಿಯೂ . . . ಕ್ರಿಯಾಶಕ್ತಿಯೂ ಎಂದು ಆರು ವಿಧವಾದ ಶಕ್ತಿಗಳಿರುವುವು (ಶಿವಾಸೂ. ೪೦-೨೬ ಟೀಕೆ); [illegible] ನಾಗಳಿನಿ, ಧೂಮಜ್ವಾಲೆಗಳವೊಲ್ ಜನಿಸಿ ಮಾಯಾಶಕ್ತಿ ಚಿಚ್ಛಕ್ತಿಗಳೆನಿಸಿಹವು (ಅಮ್ಮತ. ೫-೪೦); ದಿವ್ಯಚಿಚ್ಛಕ್ತಿಯಿಂ ತಿರುಗುತಿಹ ಸೃಷ್ಟಿಚಕ್ರಂಗಳ್ ಕಣಾ (ಶ್ರೀರಾಮಾ. ೮೭೧-೯೨) ; ಇದರ ಬಹಿಷ್ಕರಣಕ್ಕೆ ಒದಗಿ ಬರುವ ಚಿಚ್ಛಕ್ತಿ ಪ್ರತಿಭೆ (ಕಾವ್ಯಕು. ೧೪). [ ಸಂ. (ಚಿತ್ + ಶಕ್ತಿ) ]

**ಚಿಚ್ಛಾಸಕ** (ನಾ). ಜ್ಞಾನವನ್ನು ನಿಯಂತ್ರಿಸುವವನು : ನಾನೆಂಬ ಮೂಟು ಸುಶ್ಲೋಕಾರ್ಥದಂದವೆಂತೆನಲಾಗಿ ಬಿತ್ತರಿಪೆನೆಂದನಾ ದೇಶಿಕಂ ಚಿಚ್ಛಾಸಕಂ (ವೀಶೈಪು. ೫-೮-೨೪). [ ಸಂ. (ಚಿತ್ + ಶಾಸಕ) ]

**ಚಿಟ್** (ನಾ). ಒಂದು ಅನುಕರಣ ಶಬ್ದ. 'ಚಿಟ್ಟನೆ', 'ಚಿಟ್ಟಿಕ್ಕು₁' ಪರಾ.

**ಚಿಟ₁** (ನಾ). ಒಂದು ಅನುಕರಣ ಶಬ್ದ. 'ಚಿಟಗುಟ್ಟು' ಪರಾ.

ಚಿಟಚಿಟ (ದ್ವಿರುಕ್ತಿ) : ಸಾಸಿವೆ ಚಿಟಚಿಟ ಎಂದು ಸಿಡಿಯಿತು (ರೂಢಿ).

**ಚಿಟ₂** 'ಚಿಟ್ಟು₁' ನೋ.

**ಚಿಟಕಿ₁** 'ಚಿಟುಂಕು' ನೋ.

**ಚಿಟಕಿ₂** 'ಚಿಟಿಕೆ₂' ನೋ.

**ಚಿಟಕಿಸು** (ಕ್ರಿ). ಸನ್ನೆಗೋಲಿನಿಂದ ಯಾವುದಾದರೊಂದು ವಸ್ತುವನ್ನು ಮುಂದಕ್ಕೆ ನೂಕಂ : (ಕ). [ ? + – ಇಸು3 ]

**ಚಿಟಕಿಹೊಡೆ** 'ಚಿಟಿಕೆಹೊಡೆ' ನೋ.

**ಚಿಟಕು** 'ಚಿಟುಂಕು' ನೋ.

**ಚಿಟಕುದೆಗೆ**(ಕ್ರಿ) .=ಚಿಟುಕುಗಳೆ: ಕರವನೊತ್ತುತ ಬೆರಳ್ಗಳ ಚಿಟಕುದೆಗೆವುತಂ ಉಸಿರ್ದಳತಿಕುಶಲದಿಂದಂ (ಪ್ರಭುಪು. ೫-೭೦).

[ ಚಿಟಕು (<ಚಿಟುಂಕು) + ತೆಗೆ₁ ]

**ಚಿಟಕುಮುಳ್ಳು** 'ಚಿಟುಕುಮುಳ್ಳು' ನೋ.

**ಚಿಟಕೊಳಗು, ಚಿಟಿಕೊಳಗು, ಚಿಟಿಗೊಳಗು** (ನಾ). ದನಕರುಗಳ ಕಾಲು ಗೊರಸುಗಳ ಹರಡಿನಲ್ಲಿ ಅಂಟಿಕೊಂಡು ಸಣ್ಣಗೆ ತೋರಿಬರುವ ಪುಟ್ಟ ಬೆರಳಿನಾಕಾರದ ಗೊರಸು : (ಕ). **ಚಿಟಿಕೊಳಗು :** (ಕ). **ಚಿಟಿಗೊಳಗು :** ಇವುಗಳ ಹಿಂದೆ ಚಿಟ್ಟಡಿಕೆಯು ಹಾಗೆ ಇವೇನು ? ಇವು ಚಿಟಿಗೊಳಗು (ಮುಂಬಯಿ. ೧-೩೩). 'ಕಿಱುಗೊಳಗು' ಪರಾ.

[ ಚಿಟ₂(<ಚಿಟ್ಟು₁) + ಕೊಳಗು ]

**ಚಿಟಗ** (ನಾ). ಗುಬ್ಬಿಯ ಜಾತಿಗೆ ಸೇರಿದ ಕೆಂಪುಬಣ್ಣದ ಹಕ್ಕಿ : (ಕ).

[ ? ]

**ಚಿಟಗಾಣಿ, ಚಿಟಗಾಳಿ** (ನಾ). ಚಿಕ್ಕವಳು ಯುವತಿ: ಈ ಚಿಟಗಾಣಿ ನಮ್ಮ ಸೊಸಿ ಕಾಣಸ್ತಾಳ ! (ದಾಂಡಾಯ. ೧೪). **ಚಿಟಗಾಳಿ:** ಆಡಲಾರಿನೇ ಗೌರಿ, ಪಾಡಲಾರಿನೇ ಗೌರಿ, ಚಿನ್ನದ ಚಿಟಗಾಳೀ ಗೌರಿ (ಕನ್ನಜಾ. ೧೬೮).

[ <ಚಿಟುಂಕು ]

**ಚಿಟಗಾಳಿ** 'ಚಿಟಗಾಣಿ' ನೋ.

**ಚಿಟಗುಟ್ಟು** (ಕ್ರಿ). ೧. ಚಿಟಚಿಟ ಎಂದು ಶಬ್ದಮಾಡು : ಕಿಡಿಗಳು ಚಿಟ ಗುಟ್ಟುತ್ತಾ ಹಾರುತ್ತಿವೆ (ರೂಢಿ). ೨. (ಮನಸ್ಸಿನ ವೇದನೆಯಿಂದ ನರ ಮೊದಲಾದುವು) ಮಿಡಿ ; ತುಡಿ : ವಿಜಯನ ಮೈ ಚಿಟಗುಟ್ಟಿ ಹೋಯಿತು (ಕಲಾಜ್ಯೋ. ೭೮). [ ಚಿಟ₁ + ಕುಟ್ಟು₁ ]

**ಚಿಟಗುಬ್ಬಿ** 'ಚಿಟ್ಟಗುಬ್ಬಿ' ನೋ.

**ಚಿಟಣವೀಸ, ಚಿಟಣೀಸ, ಚಿಟನೀಸ, ಚಿಟ್ನೀಸ** (ನಾ). (ಅರಸನ) ಪತ್ರಗಳನ್ನೂ ಪತ್ರಗಳಿಗೆ ಉತ್ತರಗಳನ್ನೂ ಬರೆಯುವ ಅಧಿಕಾರಿ ; ಕಾರ್ಯದರ್ಶಿ ; ಕಾರಭಾರಿ : ಗೋವಳಕೊಂಡದ ಸುಲ್ತಾನನ ಚಿಟಣವೀಸನಾದ ರಾಮಚಂದ್ರಪಂಡಿತನು ಬರೆದಿರುವ ಪತ್ರವನ್ನು ನೀನು ಓದಿದಿಯೇನು ? (ಶಿರಂಗ. ೧೨೪). **ಚಿಟಣೀಸ:** ಮಹಾತ್ಮಾಜಿಯವರ ಏಕನಿಷ್ಠ ಚಿಟಣೀಸ ಶ್ರೀಮಹಾದೇವಭಾಯಿ ದೇಸಾಯಿ (ಕಾಂಗ್ರೆಸ. ೪೪). **ಚಿಟನೀಸ:** ಚಿಟನೀಸ ಗಿರಿಯಪ್ಪನಂ ಕಳುಹಲ್ (ಕಳನ್ನ. ೮-೪೩) : ನಾನು ಚಿಟನೀಸರಿಗೆ ಹೇಳಿದೆನು (ಹೇಮಂತ. ೨೭೭). **ಚಿಟ್ನೀಸ :** ಬಾಳಾಸಾಹೇಬನು ಚಿಟ್ನೀಸನ ಕೈ ಬೆಚ್ಚಗೆ ಮಾಡುವುದೇ ತಡ . . . ಅಪ್ಪಣೆ ಕೊಟ್ಟುಬಿಟ್ಟ (ಪ್ರಣಸ. ೩೬). [ ←ಹಿಂ. ಚಿಟನವೀಸ್ ; ಮರಾ. ಚಿಟಣೀಸ್, ಚಿಟನವೀಸ್, ಚಿಟನೀಸ್ ]

**ಚಿಟಣೀಸ** 'ಚಿಟಣವೀಸ' ನೋ.

**ಚಿಟನೀಸ** 'ಚಿಟಣವೀಸ' ನೋ.

**ಚಿಟಪಾಗು** (ನಾ). ಪುಟ್ಟರುಮಾಲು ; ಸಣ್ಣಪೇಟ. ವಡ್ಡರ ಯಿಾರನ ಬೋಯಿಗೆ ಕಡಗ ಸ ೧ ಸರವಣಿ ಸ ೧ ಚಿಟಪಾಗು ೧ ಪವುಳ್ಳಿ ಅಚ್ಚಡ ೧ ಸಹ ಯಿನಾಮು ಕೊಟ್ಟು (ಎಕ. XI, ಹಿರಿಯೂ. ೩೬-೧೪ ; 1533 ?). [ ಚಿಟ್$_2$ (<ಚಿಟ್ಟು$_1$) + ಪಾಗು$_2$ ]

**ಚಿಟಬರಿಸು** (ಕ್ರಿ). ಹಿಡಿಸಲಾರದೆ ಒದ್ದಾಡು ; ಕಕ್ಕಸಬಡು : ನಾನು ತುರುಕಿದ ಅರ್ಥವನ್ನು ತಾಳಲಾರದೆ ಕೊನೆಯ ಸಾಲು ಚಿಟಬರಿಸುತ್ತಲಿದೆ (ದೀಕನ್ನ. ೧೦೦). [ ? ]

**ಚಿಟಯ್ಯ** (ನಾ). ಒಬ್ಬಾತನ ಹೆಸರು ಅವರ ಪುತ್ರರಣ್ಣಯ್ಯನುಂ ಚಿಟಯ್ಯನುಂ (ಎಕ. VII, ಶಿಕಾರಿ. ೨೮೬-೧೦ ; ಸು. 900 ?). [ಚಿಟ್$_2$ (<ಚಿಟ್ಟು$_1$) + ಅಯ್ಯ$_1$ ]

**ಚಿಟಿಕಿ** 'ಚಿಟುಂಕು' ನೋ.

**ಚಿಟಿಕಿಡು** 'ಚಿಟುಂಕಿಡಂ' ನೋ.

**ಚಿಟಿಕಿವಾಲೆ** (ನಾ). ಒಂದು ಬಗೆಯ ಔಷಧಿಗಿಡ : "ವಯಸ್ಯಃ – ಚಿಟಿಕಿವಾಲೆ" (ಓಷಧಿ. ೯೧). [ ? ]

**ಚಿಟಿಕಿಸು** 'ಚಿಟುಂಕಿಸು' ನೋ.

**ಚಿಟಿಕಿಹಾಕು** 'ಚಿಟಿಕೆಹಾಕು' ನೋ.

**ಚಿಟಿಕಿಜಿ** (ಕ್ರಿ). ಚಿಟಿಕೆಯನ್ನು ಹಾಕು: ಅನ್ನವನೆ ತೋಜಿ ಚಿಟಿ ಯ ಬಾಲವ ಬೀಸಿ ಕುನ್ನಿ ಸುಳಿದಾಡಿ ಕಾಲ್ಗೆಜಗುವ ತೆಜಿದಿ (ಪುರಂದ. ೬೪-೪). [ ಚಿಟಿಕು (<ಚಿಟುಂಕು) + ಇಜಿ$_1$ ]

**ಚಿಟಿಕು** 'ಚಿಟುಂಕು' ನೋ.

**ಚಿಟಿಕೆ$_1$** 'ಚಿಟುಂಕು' ನೋ.

**ಚಿಟಿಕೆ$_2$** ಚಿಟಕ್ಕಿ, ಚಿಟುಕೆ (ನಾ). ಒಂದು ಬಗೆಯ ಸಣ್ಣ ಮೂಲಿಕೆ : "ಅಮೃತಶಿಖಾ-ಚಿಟಿಕೆ ; ಹಾಲೆ" (ಓಷಧಿ. ೮); ಗ್ರಹಣೀ ಗಜಕೇಸರಿ ಲೇಪ್ಯ . . . ಕಳ್ಳಂಗಡಲೆಬೇರಿನ ತೊಕ್ಕು, ಚಿಟಿಕಬೇರು, ತುರುಚನಬೇರು . . . ಇವನೆಲ್ಲ ಖಂಡುಗ ನೀರಿನಲ್ಲಿ ಹಾಕಿ ಕಷಾಯವ ಕಾಸಿ (ಸಕವ್ಯ. ೩೩೯). **ಚಿಟಕ್ಕಿ:** "ಶೋಫ – ಚಿಟಕಿ, ಹಾಲೆ" (ಓಷಧಿ. ೧೭೨) ; ಬೆಕ್ಕಿನಬುಡ್ಡೆಗಿಡ . . . ಚಿಟಕಿಹಂಬು, ಮಿಂಚುಬಳ್ಳಿ, ಕನಕಾಯ (ಮೃಜಿಗ. ೧೦೭-೩೦೮). **ಚಿಟುಕೆ:** "ಅರ್ಕಪುಷ್ಪಿ – ಚಿಟುಕೆ ; ಹಾಲೆ ; ಓಟ್ಟುಳಿಕೆ" (ಓಷಧಿ. ೬). [ ? ]

**ಚಿಟಿಕೆ$_3$** (ನಾ). ಊತ ; ಬಾವು. 'ಗಂಟಲುಚಿಟಿಕೆ' ಪರಾ. [ ? ]

**ಚಿಟಿಕೆಗುಂಡಿ** (ನಾ). =ಚಿಟಿಕೆಗುಬ್ಬಿ: ಅಂಗಿಗೆ ಚಿಟಿಕೆಗುಂಡಿ ಹಾಕಿಸಿದೆ (ರೂಢಿ). [ ಚಿಟಿಕೆ$_1$ (<ಚಿಟುಂಕು) + ಗುಂಡಿ$_2$ ]

**ಚಿಟಿಕೆಗುಬ್ಬಿ** (ನಾ). (ಕುಪ್ಪುಸ, ಅಂಗಿ ಮೊದಲಾದಂವುಗಳಲ್ಲಿ) ಒತ್ತಿ ಹಾಕಿಕೊಳ್ಳುವ ಸಣ್ಣ ಆಕಾರದ ಗುಂಡಿ: ಸೆರಗನ್ನು ಕೈಯ ಮೇಲೆ ಹಾಕಿಕೊಂಡು ಕುಪ್ಪಸದ 'ಚಿಟಿಕೆ – ಗುಬ್ಬಿ'ಯನ್ನು ಒತ್ತಿ ಹಾಕಿಕೊಂಡಳು (ಹೊಸಕ್ಷಿ. ೪೭). [ ಚಿಟಿಕೆ$_1$ (<ಚಿಟುಂಕು) + ಗುಬ್ಬಿ$_1$ ]

**ಚಿಟಿಕೆತಾಳ** (ನಾ). ಕೀರ್ತನಕಾರರು ಬಳಸುವ ಮರದ ಅಥವಾ ದಂತದ ತಾಳ : (ಕ). [ ಚಿಟಿಕೆ$_1$ (<ಚಿಟುಂಕು) + ತಾಳ$_1$ (=ತಾಲ) ]

**ಚಿಟಿಕೆಹಾಕು, ಚಿಟಿಕಿಹಾಕು, ಚುಟಿಕೆಹಾಕು** (ಕ್ರಿ). ೧. = ಚಿಟಿಕೆಹೊಡೆ: ಅನೇಕ ಬಾರಿ ಚಿಟಿಕೆಹಾಕಿ ಏನು ಅನುಷ್ಠಾನಮಾಡಿದಳೋ ! (ಚಾಣ. ೧೧೦) ; ಭಾಗೀರಥಮ್ಮ ಮಗುವಿನ ಮುಂದೆ ನಿಂತು ಚಿಟಿಕೆಹಾಕುವಳು (ವಂಶವೃ. ೪೭). ೨. (ಶೀತ, ವಾತ ಮುಂತಾದುವನ್ನು ಗುಣಪಡಿಸಲು) ಬಳೆಯ ಚೂರನ್ನು ಕಾಯಿಸಿ ಬರೆಹಾಕು: ಮಗುವಿಗೆ ಸೆಳವು ಬಂದಿದೆ, ಚಿಟಿಕೆ ಹಾಕು (ರೂಢಿ). **ಚಿಟಿಕಿಹಾಕು:** ೧. ಮೊದಲುಮೊದಲು ನಾನು ಜೋರಾಗಿ ಚಿಟಿಕಿಹಾಕಬೇಕಾಗುತ್ತಿ [illegible] ೨. ಲೋಹದಿಂದ ಸುಡುವುದು ಅಥವಾ [illegible] ಚಿಕಿತ್ಸಾವಿಧಾನ (ಪ್ರವಾಇ. I, ೩೦೮). [ ಚಿಟಿಕೆ$_1$ [illegible] ]

**ಚಿಟಿಕೆಹೊಡೆ, ಚಿಟಿಕಿಹೊಡೆ** (ಕ್ರಿ). ಕೈಯ [illegible] ಬೆರಳನ್ನು ಸೇರಿಸಿ ಸದ್ದು [illegible] ಹೊಡೆದು, [illegible] **ಚಿಟಿಕಿಹೊಡೆ:** [illegible] ಹೊರಟ (ರೂಢಿ). [ ಚಿಟಿಕೆ$_1$ [illegible] ]

**ಚಿಟಿಕೊಳಗು** 'ಚಿಟಿಕೊಳಗು' ನೋ.

**ಚಿಟಿಗೊಳಗು** 'ಚಿಟಿಕೊಳಗು' ನೋ.

**ಚಿಟಿಚಿಟಿ** (ನಾ). ಒಂದು ಅನುಕರಣ ಶಬ್ದ : ಉಸಿಹಾರ್ಕಿ ಕಣ್ಣು ಮುಚ್ಚಿಲ್ಲ ಯೋಗಿಯು ಕೂಸಾಗಿ ಚಿಟಿಚಿಟಿ ಚೀರಿಲ್ಲ (ಸಿದ್ಧಪು. ೬-೨೦). ೨. ಮನಸ್ಸಿಗೆ ಆಗುವ ಕಿರಿಕಿರಿ: ನಾನು ಸುಮ್ಮನೆ ಮುಪ್ಪಾಗುತ್ತಾ ಇದೀನಿ. ಆಗ ಈಗ ಮನಸ್ಸಿನ ಚಿಟಿಚಿಟಿಗೂ ಇದೇ ಕಾರಣ ಇರಬೇಕು (ರಂಗನಾ. ೯೯). **ಚಿಟಿಚಿಟಿಯಾಗು** = ಒಡೆದುಹೋಗು : ಕಿರುಗತ್ತಿಯನ್ನು ಬೆನ್ನ ಮೇಲಿನ 'ಬೆವರುಸಲೆ'ಯ ಮೇಲೆ ಯಥೇಚ್ಛ ಆಡಿಸಿ ಅದು ಚಿಟಿಚಿಟಿಯಾದಾಗ "ಅಯ್ಯಬ್ಬ" ಎಂದು ತೃಪ್ತಿಯ ನಿಟ್ಟುಸಿರು ಬಿಟ್ಟಳು (ಹೊಸಕ್ಷ. ೪೮). **ಚಿಟಿಚಿಟಿಯೆನ್ನು** = ಕಿರಿಕಿರಿಯಾಗು: ತಲೆ ಚಿಟಿಚಿಟಿ ಯೆನ್ನುತ್ತಿದೆ (ರೂಢಿ).

**ಚಿಟಿಚಿಟಿಸು** (ಕ್ರಿ). ಚಿಟಿಚಿಟಿ ಎಂದು ಶಬ್ದಮಾಡು : ಸುಡುಗಿಚ್ಚು ಚಿಟಿಚಿಟಿಸುತ (ಕಾಲೂರ. ೧೮೪-೪೧೭). [ ಚಿಟಿಚಿಟಿ + – ಇಸು$_3$ ]

**ಚಿಟಿಚಿಣಿರ್** (ನಾ). ಒಂದು ಅನುಕರಣ ಶಬ್ದ: ಏನೆಂಬೆನಾ ಹೋಮವ ಬೇಳುವೆಡೆಯೊಳು ಸಾನುರಾಗದೆ ಲಾಜೆಯನು ಘೂನುತೆವನೆ ಬೇಳುತಿರೆ ಚಿಟಿಚಿಣಿರೆಂಬ ಧ್ವಾನವೆಸೆದುದು (ಅಂಜಿಚ. ೫-೨೨೭).

**ಚಿಟಿಲ್** (ನಾ). ಒಂದು ಅನುಕರಣ ಶಬ್ದ. **ಚಿಟಿಲ್ಚಿಟಿಲ್** (ದ್ವಿರುಕ್ತಿ) : ಸೋಗೆಯ ಹಂಸೆಯಾನೆ ವೃಷದಂದದ ಸಿಂಗದ ಪಾಂಗಿನಿಂ ಬೆಡಂಗಾಗಿ ಚಿಟಿಲ್ಚಿಟಿಲ್ಗರೆಯಲೊಂದದ ಮಂದಗತಿಕ್ರಮಂ ಮಹಾಭೋಗಿ[ಯೆನಿಪ್ಪು]ಂ (ಲೋಕೋಪ. ೧೧-೩೮) : ಪೆರ್ಗಲ್ಲಿಂದ ದಪುತ್ತುಂ ಕರ್ಗಲ್ಲಂ ನೆರಪಿ ತಂದು ಬರಿಯೆಲ್ವೆಲ್ಲಂ ನುರ್ಗಾಗಿ ಚಿಟಿಲ್ಚಿಟಿಲೆನೆ ಕುರ್ಗುತ್ತುಂ (ಧರ್ಮಾಮೃ. ೬-೧೯೦).

**ಚಿಟು$_1$** (ನಾ). ಒಂದು ಅನುಕರಣ ಶಬ್ದ. 'ಚಿಟುಗುಟ್ಟು' ಪರಾ.

**ಚಿಟು$_2$** 'ಚಿಟ್ಟು$_1$' ನೋ.

**ಚಿಟುಂಕಿಸು, ಚಿಟಿಕಿಸು, ಚಿಟುಕಿಸು** (ಕ್ರಿ). ೧. ಹೆಬ್ಬೆರಳು ಮತ್ತು ಮಧ್ಯದ ಬೆರಳುಗಳನ್ನು ಸೇರಿಸಿ ಶಬ್ದಮಾಡು ; ಚಿಟಿಕೆಹಾಕು: (ಕ). ೨. ಬೆರಳುಗಳನ್ನು ಮೆತ್ತಗೆ ಅದುಮಿ ಗಿಣ್ಣುಗಳ ಬಳಿ ಸದ್ದಾಗುವಂತೆ ಮುರಿ ; ನೆಟಿಗೆ ತೆಗೆ : ಕರಾಂಗುಲಿಯುಂ ಚಿಟುಂ[ಪಾಠಾಂ. ಟುಂ]ಕಿಸಿ . . . ಗಲ್ಲಮಂ ಪಿಡಿದಲುಂಗಿ (ರಾಜಶೇ. ೮-೮೨ ವ); ಕರಪಲ್ಲವಮನೆ ಇತ್ತು ತ ಬೆರಲಂ ಚಿಟುಂಕಿಸುತೆ (ಕುಮಾಪು. ೫-೩೯೭). **ಚಿಟಿಕಿಸು :** [illegible] ಬಡಕಜುವ ಬಾ ಬಾ ಎಂದು ಚಿಟಿಕಿಸಿ ಕರೆದು ಗುರುಸು [illegible] ತಾಗಿದನು (ಕುವ್ಯಾಕ. ೩-೧೭). **ಚಿಟುಕಿಸು :** ೧. [illegible] ಮದವಣಿಗಂ ಬಂದೀ ಜನದ ಬಗೆಗೆ ಬೆಜಗಂ [illegible] ಚಿಟುಕಿಸಲಾಗಳ್ (ದಶಕು. ೬-೧೪೭) ; ಕರೆಯಲ್ [illegible] ವನಕೇಸರಿಯು ಚಿಟುಕಿಸಿ ಕರೆಯೆ [illegible] ೧-೪೧) ; ಬೆರಳು ಚಿಟುಕಿಸಿ ಕರೆವ [illegible] (ನಿಥಾಗ. ೧೦-೭೮-೫೦). [ [illegible] ]

**ಚಿಟುಂಕು, ಚಿಟಕಿ$_1$, ಚಿಟಕು, ಚಿಟಿಕಿ, ಚಿಟಿಕು, ಚಿಟಿಕೆ$_1$, ಚಿಟುಂಕೆ, ಚಿಟುಕು$_1$, ಚುಟಕಿ, ಚುಟಕು, ಚುಟಕೆ, ಚುಟಿಕೆ, ಚುಟಿಗೆ, ಚುಟುಕ$_1$, ಚುಟುಕಿ, ಚುಟುಕು** (ನಾ). ೧. ಕೈಯ ಹೆಬ್ಬೆರಳು ಮತ್ತು ಮಧ್ಯದ ಬೆರಳುಗಳನ್ನು ಸೇರಿಸಿ ಮಾಡುವ ಶಬ್ದ : ವೇದಪಿತಾಮಹನೆಂಬ ಪೆಸರಿನಂಗುಲಿಯ ಚಿಟುಂಕನಿಟ್ಟು ಕರೆದು (ವೃಷವಿ. ೩೮-೫೦ ವ). **ಚಿಟಕಿ$_1$:** ೧. 'ಚಿಟಕಿಹೊಡೆ' ಪರಾ. ೨. ಹೆಬ್ಬೆರಳು ಮತ್ತು ತೋರು ಬೆರಳುಗಳನ್ನು ಸೇರಿಸಿ ಹಿಡಿಯಬಹುದಾದಷ್ಟು ; ಸ್ವಲ್ಪಮಾತ್ರ : ಅಲ್ಲಿ ಕುಳಿತವರು ಒಂದು ಚಿಟಕಿ ನಶ್ಯ ಹಾಕಿಕೊಳ್ಳಬೇಕಾದರೂ ಹೊರಗೆ ಎದ್ದು ಹೋಗುತ್ತಿದ್ದರು (ಹುಚ್ಚುಹ. ೧೪). **ಚಿಟಕು :** ೩. ನಲವತ್ತು ಸುತ್ತು ನೂಲಿನ ಕುಚ್ಚು : (ಕ). ೪. ಒಂದು ಬಗೆಯ ಚಿಕ್ಕ ಹೋಳಿಗೆ : "ಚಿಟಕು-ಹೋಳಿಗೆ" (ಜಾನಕೋ. ೫೬). **ಚಿಟಿಕಿ :** ೧. 'ಚಿಟಿಕಿಹಾಕು' ಪರಾ. ೨. ಒಂದು ಕಪ್ಪು ಬೇಯಿಸಿದ ತರಕಾರಿಗಳು : ೧ ಚಿಟಿಕಿ ಅರಸಿನ (ಅಡುಸಾ. ೧೦೬). **ಚಿಟಿಕು :** ೧. 'ಚಿಟಿಕಿಡು' ಪರಾ. **ಚಿಟಿಕೆ$_1$ :** ೧. 'ಚಿಟಿಕೆಹಾಕು', 'ಚಿಟಿಕೆಹೊಡೆ' ಪರಾ. ೨. ರಾಯರು ಒಂದು ಚಿಟಿಕೆ ನಶ್ಯವನ್ನು ಜ್ಞಾನವಶಕ್ಕಾಗಿ ಮಂತ್ರಿಸಿ ಮೂಗಿಗೆ ಹಾಕಿಕೊಂಡು (ರಾಯಕ. ೩೦) : ನವಸಾರ ಪುಡಿಯನ್ನೂ ಸುಣ್ಣದ ಭರಣಿಯೊಂದನ್ನೂ ತೆಗೆದುಕೊಂಡು, ಎರಡನ್ನೂ ಎರಡೆರಡು ಚಿಟಿಕೆ ಅಂಗೈಯಲ್ಲಿ ಹಾಕಿಕೊಂಡು (ಶಾಂತಲಾ. ೬೪). ೫. ಚಿಕ್ಕದು ; ಸಣ್ಣದು : "ಚಿಟಿಕೆ" ಯಲ್ಲಿ ಮಾಡಿಬಿಡು (ನಮ್ಮನು. ೯೪). 'ಚಿಟಿಕೆಗುಬ್ಬಿ' ಪರಾ. ೬. (ಶೀತ, ವಾತ ಮುಂತಾದವುಗಳನ್ನು ಗುಣಪಡಿಸಲು) ಬಳೆಯ ಚೂರು, ಚರ್ಮದ ತುಣುಕು ಮುಂತಾದುವನ್ನು ಕಾಯಿಸಿ ನೆತ್ತಿ, ಹಣೆ ಮುಂತಾದ ಕಡೆ ಬರೆಯೆಳೆಯುವಿಕೆ : ಮಗುವಿಕೆ ಸಂದಾಗಿದೆ, ಚಿಟಿಕೆ ಹಾಕಿಸಬೇಕು (ರೂಢಿ). ೭. ಮರ ಅಥವಾ ದಂತದಿಂದ ಮಾಡಿದ ತಾಳಹಾಕುವ ಒಂದು ಸಾಧನ : ದಾಸರು ಚಿಟಿಕೆಗಳಲ್ಲಿ ತಾಳಹಾಕುತ್ತಾ ಹಾಡುತ್ತಿದ್ದರು (ರೂಢಿ). **ಚಿಟುಂಕೆ:** ೧. 'ಕೈಚಿಟುಂಕೆ' ಪರಾ. **ಚಿಟುಕು$_1$:** ೧. ಗುರುವಿನೊಳಗಪಹಾಸ್ಯ ಪ್ರತ್ಯುತ್ತರಂಗಳಂ ಬೆರಳಂ ಚಿಟುಕಂ . . . ಮಾಡಲಾಗದು (ದೀಕ್ಷಾಬೋ. ೩೦-೨೦). ೫. ಕಾಲಪಶವೀ ಜಗದ್ವ್ಯವಹಾರವೆಲ್ಲವುನ್ಮಿಷ ನಿಮಿಷದ್ವದೆ ಚಿಟುಕು (ವೀಕೃಪು. ೪-೫-೪೭). 'ಚಿಟುಕುವನಿ' ಪರಾ. ೮. ಬೆರಳುಗಳನ್ನು ಮೆಂತ್ರಗೆ ಅದುಮಿ ಗಿಣ್ಣುಗಳ ಬಳಿ ಸದ್ದಾಗುವಂತೆ ಮುರಿಯುವುದು ; ನೆಟಿಕೆ : ಮಲ್ಲನೆ ಬೆರಳ್ಗಳ ಚಿಟುಕನೊತ್ತುತವೆ . . . ಸಂತೈಸಿದನು (ಅಂಜದ. ೮-೯೬). ಬೆರಳ ಚಿಟುಕ ತೆಗೆವನು (ಶರಣ. ೩೦-೧೦೯). 'ಚಿಟುಕಂಮುರಿ' ಪರಾ. **ಚುಟಕಿ :** ೭. ನಾಮದೇವ . . . ಚುಟಕಿಯಿಂದ ತಾಳಹಾಕುತ್ತ ಕುಣಿಯುತ್ತ ಇದ್ದುಬಿಡುತ್ತಿದ್ದನು (ಭಾರದ. ೨೯೩). **ಚುಟಕು :** ೫. "ಸ್ವಲ್ಪ,ಸಣ್ಣ" (ಜಾನಕೋ. ೫೭). **ಚುಟಕೆ :** ೬. ಇನ್ನೂ ಅವರಿಗೆ ಚುಟಕೆ ಬಿದ್ದಿಲ್ಲ. ಬಿದ್ದ ಮೇಲೆ ಇಂಥ ಉಸಾಬರಿ ಬಿಡೋದು (ಊರುಕ. ೯೫). **ಚುಟಿಕೆ:** ೬. 'ಚುಟಿಕೆಹಾಕು' ಪರಾ. **ಚುಟಿಗೆ:** ೫. ಎಲ್ಲ ಕೆಲಸವೂ ಚುಟಿಗೆಯಲ್ಲಿ ಮುಗಿಯಿತು (ರೂಢಿ). **ಚುಟುಕ$_1$ :** ೫. ವೈಶ್ವಾನರನ ಆವರ್ತನೃತ್ಯರಂಗದಲ್ಲಿ ಸಣ್ಣ ಚುಟುಕ (ಅರಳು. ೧೯೫ ೨) ; ಅವನಿಗೆ ಒಂದೆರಡು ಚುಟುಕ ವೈದ್ಯಗಳನ್ನು ಹೇಳಿಕೊಡುತ್ತ . . . ಪಂಡಿತನನ್ನಾಗಿ ಮಾಡಬೇಕೆಂದಿದ್ದರು (ಶಾಂತಲಾ. ೨೪೩). **ಚುಟುಕಿ :** ೫. ಸೂಜಿಕಾಯಕದ ಕುಶಲಕರ್ಮವು ಚುಚ್ಚುಮದ್ದಿನಂತೆ ಚುಟುಕಿಯ ಕೆಲಸವಲ್ಲ (ನಲಮು. VII ನಾಲ್ಕುಮಾತು). **ಚುಟುಕು :** ೫. ಚುಟುಕಾಗಿಯೇ ಉತ್ತರ ಹೇಳಿ ಹೊರಟುಹೋದ ರಾಮಕೃಷ್ಣ (ತ್ಯಾಗಮ. ೪೬) ; ಈ ಆಟಗಳು ಚುಟುಕು ಪಲ್ಲವಿಗಳ ತಾಣದೊಂದಿಗೆ ಇರುವ ಮೂಲಕ ಆಡುವ ಮಕ್ಕಳಿಗೆ ದಣಿವೇ ಆಗಿಸದು (ಕನ್ನಡಾ. ೪೦)

ಚಿಟಿಕೆಚಪ್ಪರ = (ಆಲಂ) ಕಡಮೊವೆಚ್ಚ : ಚಿಟಿಕೆ ಚಪ್ಪರ ಆರು ಕಾಲ ಬೇಟಿ (ಗಾದೆ) ; ಅವನು ಮಗಳ ಮದುವೆಯನ್ನು ಚಿಟಿಕೆಚಪ್ಪರದಲ್ಲಿ ಮುಗಿಸಿದ (ರೂಢಿ).

[ ದೇ.॥ ತಮಿ. ಚಿಟಿಕ್ಕೈ, ಚಿಟ್ಟಿಕ್ಕೈ, ಚುಟುಕ್ಕು ; ತುಳು. ಚಿಟಿಕಿ ; ಚಿಟ್ಕ್ ; ತೆಲು. ಚಿಟಿಕ, ಚಿಟುಕು./ಮರಾ. ಚುಟಕೀ./ಸಂ. ಛೀಟಿಕಾ ]

**ಚಿಟುಂಕೆ** 'ಚಿಟುಂಕು' ನೋ.

**ಚಿಟುಕಿಕ್ಕು** (ಕ್ರಿ). ಬೆರಳುಗಳಿಂದ ಶಬ್ದಮಾಡು ; ಚಿಟಿಕೆಹಾಕು : ಇಂತುಚ್ಚುಚ್ಚಿರೇಯೆಂದೆನುತ ಚಿಟುಕಿಕ್ಕುತವೆ ತನ್ನರಮನೆಯ ಒತ್ತಿಲ ಬಾಗಿಲಲಿ ಲಿಂಗಪ್ರಸಾದವನು ಜನನಿ ತಂದವನಿಯಲಿ ಸುರಿಯಲು (ಬಸಪು. ೬೦-೨೦). [ ಚಿಟುಕು$_1$(<ಚಿಟುಂಕು) + ಇಕ್ಕು ]

**ಚಿಟುಕಿಡು, ಚಿಟಿಕಿಡು** (ಕ್ರಿ). = ಚಿಟಿಕೆಹಾಕು ೧ : ತೊದಳ್ನುಡಿ ನುಡಿದಂ ತಳರ್ನಡೆಗಳಂ ನಡೆದಂ ಚಿಟುಕಿಟ್ಟೊಡಾಡಿದಂ (ಅನಂಪು. ೬-೬) ; ಅದುಭುತ ಸ್ವಾಂತನ್ನಿಗುಟಿ ಚಿಟುಕಿಡುತ ಬೆರಳಂ ನಾಸಿಕದೊಳಿಟ್ಟು (ಬಸಪು. ೩೦-೧೬). **ಚಿಟಿಕಿಡು :** ಚಿಟಕಿಟ್ಟು ವ್ಯದಡಹ ಹಾಸಗಳ ಕಳಚುತ್ತ (ವಂಕಾರಾ. ೩-೬-೪೧). [ ಚಿಟುಕು$_1$ (<ಚಿಟುಂಕು) + ಇಡು$_1$ ]

**ಚಿಟುಕಿಸು** 'ಚಿಟುಂಕಿಸು' ನೋ.

**ಚಿಟುಕೀ** (ಕ್ರಿ). ಬೆರಳುಗಳನ್ನು ಮೆತ್ತಗೆ ಅದುಮಿ ಗಿಣ್ಣುಗಳ ಬಳಿ ಸದ್ದಾಗುವಂತೆ ಮಡಿಸಂ ; ನೆಟಿಗೆ ತೆಗೆ : ನುಣ್ಪೊಡೆಗಳಂ ಒಡಿದೌಂಕಿ ಬೆರಲ್ಗಳಂ ಕ್ರಮಕ್ರಮದೊಳ್ ಕೋದು ತಳ್ತು ಚಿಟುಕಿತ್ತು . . . ರಸದಂ ಬುಲಮಂ ಸವಿಮಾಡಿ ನೀಡಿ ಮಲ್ಪಮರಿ ಬಟಲ್ದತನ್ನಿನಿಯಳಂ ನೃಪ ನಾಜಿಸಿದಂ ರತಾಂತದೊಳ್ (ಸೂಕ್ತಿಸು. ೧೪-೭೫). [ ಚಿಟುಕು$_1$(<ಚಿಟುಂಕು) + ಈ$_2$ ]

**ಚಿಟುಕು$_1$** 'ಚಿಟುಂಕು' ನೋ.

**ಚಿಟುಕು$_2$** (ನಾ). ಪ್ರಣಯಕೋಪ; ಶೃಂಗಾರಚೇಷ್ಟೆ: "ಚಿಟುಕು ಬಿಂಬಮಕ್ಕುಂ" (ಮಂಗರಾ. ೯೭-೧೬). P 'ಬಿಂಬ' ಎಂಬುದು 'ಬಿಬ್ಬೋಕ' ಎಂಬುದರ ಸವಕಳಿರೂಪವಿರಬಹುದು. [ ದೇ.॥ ತೆಲು. ಚಿಟ್ಟಕ ]

**ಚಿಟುಕು$_3$** (ನಾ). (ಕುದುರೆಯ) ಕಿವಿಗಳ ಹೊರಭಾಗ : "ಕಿವಿಗಳ ಹೊಱಗನು ಚಿಟುಕೆಂಬುದು" (ಅಶ್ವವೈ. ೮-೨೪ ಟೀಕೆ). [ ? ]

**ಚಿಟುಕುಗಳೆ** (ಕ್ರಿ). ಬೆರಳುಗಳನ್ನು ಸದ್ದಾಗುವಂತೆ ಮಡಿಸಂ ; ನೆಟಿಗೆ ತೆಗೆ : ಬೆನ್ನ ನಸು ಮುರಿಯುತ್ತ ಕರತಲಾಂಗುಳಿಗಳಂ ಜನ್ನಮರ್ದು ಚಿಟುಕುಗಳೆಯುತ್ತ (ಅರಾದ. ೧೧-೮೦) : ಮುಂಗುರುಳನೆ ತಿದ್ದಿ ಮುದ್ದಿಸಿ ಬಯಲನಾಲಂಗಿಸಿಯವಳಂಗುಳಿಗಳ ಹಾಂಗೆ ಮೃಣಾಳವ ಚಿಟುಕುಗಳೆವ ಕರಣಂಗಳಿಗುಜ್ಜುಗಿಸುವನು (ಮದೀಪು. ೨೦-೩೪). [ ಚಿಟುಕು$_1$(<ಚಿಟುಂಕು) + ಕಳೆ$_1$ ]

**ಚಿಟುಕುಮುರಿ** (ಕ್ರಿ). ೧. ನೆಟಿಗೆ ಮುರಿ. ೨. (ಆಲಂ) ಕೆಟ್ಟದ್ದನ್ನು ಬಯಸು : ಅಮಲನ ಹೆಸರಿನಲ್ಲಿ ಚಿಟುಕುಮುರಿಯಲು ಚುಚ್ಚುಮಾತಾಡಲು ಬಿಡುತ್ತಿರಲಿಲ್ಲ (ಇಪ್ಪಕ. ೨೪೩) ; ಹೊಟ್ಟೆಕಿಚ್ಚಿನ ಹೆಂಗಸರು ಚಿಟುಕು ಮುರಿದರು (ವಾಗ್ವೈವಿ. ೧೧೮). [ ಚಿಟುಕು$_1$(<ಚಿಟುಂಕು) + ಮುರಿ$_1$ ]

**ಚಿಟುಕುಮುಳ್ಳು, ಚಿಟಕುಮುಳ್ಳು, ಚಿಟುಗುಮುಳ್ಳು** (ನಾ). ಕಾಲಿನಲ್ಲಿ ಚುಚ್ಚಿಕೊಂಡು ಹೊರತೆಗೆಯಲು ಕಷ್ಟವಾಗುತ್ತಿರುವ ಮುಳ್ಳು,- ಹೊರಬರದೆ ನೋವುಂಟುಮಾಡುತ್ತಿರುವ ಮುಳ್ಳು : ನನ್ನ ನಿಮ್ಮ ಮನದಲ್ಲಿ ಅಥವಾ ಯಾವ ಮನದಲ್ಲಿಯೇ ಆಗಲಿ ಚಿಟುಕುಮುಳ್ಳು ಆಡಿಸುತ್ತ ಬಂದಿದೆ (ವಕಸಂ. LXXII, ೩೬೨೪). **ಚಿಟಕುಮುಳ್ಳು :** ಚಿಟಕು ಮುಳ್ಳಿನಂತೆ ಅವನು ಮನಸ್ಸಿಗೆ ನೋವುಂಟುಮಾಡುತ್ತಲೇ ಇದ್ದ (ರೂಢಿ). **ಚಿಟುಗುಮುಳ್ಳು :** ಕಾಲಿನಲ್ಲಿರುವ ಚಿಟುಗುಮುಳ್ಳು ಬಹಳ ಯಾತನೆಯನ್ನುಂಟು ಮಾಡುತ್ತಿದೆ (ರೂಢಿ).

**ಚಿಟುಕುಮುಳ್ಳಾಗು** = ನೋವುಂಟುಮಾಡು ; ವ್ಯಥೆಪಡಿಸು : ಆದರ ಕಿರುಕುಳ ಬಹಳ ಜನಕ್ಕೆ ಚಿಟುಕುಮುಳ್ಳಾಗಿ . . . ಇರುತ್ತದೆ (ದೀಪಹ. II, ೩೬೪). **ಚಿಟುಕುಮುಳ್ಳಾಟ**=ಒಳಗೊಳಗೇ ಉಂಟಾಗುವ ನೋವು,- ಯಾತನೆ : ಸೂಟಿಯನ್ನು ಮುಗಿಸಿ ಊರನ್ನು ಬಿಡುವ ತನಕವೂ ಚಿಟುಕುಮುಳ್ಳಾಟವಾಗಿತ್ತು (ದೀಪಹ. II, ೧೬೭) ; ನೀಲಕಂಠನ ಸಂಗಡ ವನಮಾಲಿಲಾಲನ ಚಿಟುಕುಮುಳ್ಳಾಟ, ಛಲನೆ ಬಹಳ ದಿನಗಳಿಂದಲೂ ನಡದೇ ಇತ್ತು (ಇಪ್ಪಕ. ४೦೧). **ಚಿಟುಕುಮುಳ್ಳಾಡಿಸು, ಚಿಟಕುಮುಳ್ಳಾಡಿಸು, ಚಿಟುಗುಮುಳ್ಳಾಡಿಸು** = ಒಳಗೊಳಗೇ ಚುಚ್ಚಿ ವ್ಯಥೆಪಡಿಸು : ಕಾವೇರಿ ಮದುವೆ ಆಗದೆ ಇದ್ದಾಗ ಶೇಷಣ್ಣ ಆಕೆಯನ್ನು ಚಿಟುಕುಮುಳ್ಳಾಡಿಸುತ್ತಿದ್ದ ನಂತೆ (ವ್ಯನಿ. ೦೬೭) : ಸರ್ವರ ಕಣ್ಣಿಗೂ ಬೀಳುವಂತೆ ನಾವು ಪ್ರದರ್ಶಿಸು ತ್ತಿದ್ದೇವಲ್ಲ ಎಂಬ ಆತ್ಮಪ್ರಜ್ಞೆ ನಮ್ಮ ಒಳಗೆ ಚಿಟಕುಮುಳ್ಳಾಡಿಸುತ್ತದೆ (ಗಾಳಿಪ. ೭೮); ಇದು ಅವಳ ಮನಸ್ಸಿನಲ್ಲಿ ಚಿಟುಗುಮುಳ್ಳಾಡಿಸಿದಂತೆ ಮಾಡುತ್ತಿತ್ತು (ಇಪ್ಪಕ. ೭४).

[ ಚಿಟುಕು$_1$ (<ಚಿಟುಂಕು) + ಮುಳ್ಳು(<ಮುಳ್$_2$) ]

**ಚಿಟುಕುವನಿ** (ನಾ). ತೊಟ್ಟಿಕ್ಕುವ ಹನಿ ; ತುಂತುರುಹನಿ ;, ಸೋನೆ: ಮದನಮದಮರ್ದನನ ಬರವಿಂಗೆ . . . ಚಳೆಯಂಗೊಡುವವೋಲೆಸೆದುದಾ ಚಿಟುಕುವನಿ ಸಿದ್ಧಪತಿ ನಲಿಯಲು (ಸಿದ್ಧರಾ. ೩-೩೨).

[ ಚಿಟುಕು$_1$(<ಚಿಟುಂಕು) + ಪನಿ$_2$ ]

**ಚಿಟುಕುವಾರೆ**(ನಾ). ಒಂದು ಬಗೆಯ ಔಷಧಿ ಗಿಡ: "ಜಲರಾಮಃ-ಚಿಟುಕು ವಾರೆ" (ಒಷಧಿ. ೬೦). [ ? ]

**ಚಿಟುಕೆ** 'ಚಿಟಿಕ್ಕೆ$_2$' ನೋ.

**ಚಿಟುಕೆನ್** (ಕ್ರಿ). ನೆಟಿಗೆ ಬರು : ಸೌಷ್ಟವದಿಂದಂ ಚಿಟುಕೆನ್ನದಿರ್ಪ ಮೊಟ ಕೆಯ್ ವೃತ್ತತ್ವದಿಂದೊಂದಿ ತೋಱುವ ಮುಂಗೆಯ್ ಕಡುದೊಡ್ಡಿತಪ್ಪ ತಳವೊಳ್ಪಿಂದೊಂದಿ ನೇರ್ಪಟ್ಟು ತೋಱುವ ದೀರ್ಘಾಂಗುಲಿ ಕೆಂಪುವೆತ್ತೆಸೆ ವುಗುರ್ ಮಾಟ್ಕುಂ ಮಹೈಶ್ವರ್ಯಮಂ (ಲೋಕೋಪ. ೧೧-೧೧).

[ ಚಿಟುಕು$_1$ (<ಚಿಟುಂಕು) + ಎನ್$_1$ ]

**ಚಿಟುಕೊತ್ತು** (ಕ್ರಿ). = ಚಿಟಂಕುಗಳೆ : ಎಳವೆರಲ್ಗಳ ಚಿಟುಕೊತ್ತಿ ಕೈ ದೊಡಿಸುವ ಬಳೆಗಾಱರಿರ್ದಾರಿಕ್ಕೆಲದಿ (ಮೋಹತ. ೩-೨೩).

[ ಚಿಟುಕು$_1$ (<ಚಿಟುಂಕು) + ಒತ್ತು$_1$ ]

**ಚಿಟುಗುಟ್ಟು** (ಕ್ರಿ). ೧. ಚಿಟ್‌ಚಿಟ್ ಎಂದು ಶಬ್ದಮಾಡು : ಕೆಂಡದ ಮೇಲೆ ಉಪ್ಪು ಬಿದ್ದು ಚಿಟುಗುಟ್ಟುತ್ತಾ ಇದೆ (ರೂಢಿ). ೨. (ಅಲಂ) ಸಿಡಿಮಿಡಿಗೊಳ್ಳು : ಕಂಗೆಟ್ಟವುದ ಕಚ್ಚಿ ತೂಬರದ ಕೊಳ್ಳಿಯೊಲು ಚಿಟು ಗುಟ್ಟುತಂ (ಪಕಿಂ. ೧೩-೨೩). [ ಚಿಟು$_1$ + ಕುಟ್ಟು$_1$ ]

**ಚಿಟುಗುಮುಳ್ಳು** 'ಚಿಟುಕುಮುಳ್ಳು' ನೋ.

**ಚಿಟುಚಟಕ** (ನಾ). ಸಣ್ಣಗುಬ್ಬಚ್ಚಿ ; ಚಿಟಗುಬ್ಬಿ : ಹಸುಬಂ ಚಿಟುಚಟಕ ಕಬ್ಬಕ್ಕಿ ಹೆಬ್ಬಕ್ಕಿಗಳ ನೋಡಿದವು (ಮದೀಪು. ೫-೯).

[ ಚಿಟು$_2$ (<ಚಿಟ್ಟು$_1$) + ಚಟಕ$_1$ ]

**ಚಿಟುಬಾಳೆ** 'ಚಿಟ್ಟುಬಾಳೆ' ನೋ.

**ಚಿಟುವಿಟಿ** (ನಾ). ಅಸಂಬದ್ಧವಾದುದು : ಲಂಡ ಕೇಳ್ನನ್ನ ಚಿಟುವಿಟಿ ಬಿನುಗುಮಾದವು . . . ಅತರ್ಕ್ಯನನೆಯ್ದಲಾರ್ಪುದೇ (ವೀರಕ್ಕಪು. ४-೬-೨೩).

[ ? ]

**ಚಿಟ್ಟ$_1$** 'ಚಿಟ್ಟು$_1$' ನೋ.

**ಚಿಟ್ಟ$_2$** 'ಚಿಟ್ಟೆ' ನೋ.

**ಚಿಟ್ಟಗುಬ್ಬಿ, ಚಿಟಗುಬ್ಬಿ**(ನಾ). ಒಂದು ಬಗೆಯ ಸಣ್ಣಗುಬ್ಬಿ: ಚಿಟ್ಟಗುಬ್ಬಿ ಚಿಂವು ಚಿಂವು (ಅರಳು. ೨೬೭-೧). **ಚಿಟಗುಬ್ಬಿ** : "ವರ್ತಿಕೆ – ಚಿಟಗುಬ್ಬಿ" (ಗಂಗಾಮ. ३೮೩). [ ಚಿಟ್ಟ$_1$ (<ಚಿಟ್ಟು$_1$) + ಗುಬ್ಬಿ$_2$ ]

**ಚಿಟ್ಟಚಚ್ಚು** (ನಾ). ೧. ಅಚ್ಚನ್ನು ತಯಾರಿಸುವ ಚಿಕ್ಕಸಾಧನ: ಸಕ್ಕರೆಅಚ್ಚು ಗಳನ್ನು ತಯಾರಿಸಲು ಚಿಟ್ಟಚಚ್ಚನ್ನು ಉಪಯೋಗಿಸುತ್ತಾರೆ(ರೂಢಿ). ೨. ಸಣ್ಣ ಅಚ್ಚು ; ಬೆಲ್ಲ, ಸಕ್ಕರೆ ಮುಂತಾದುವುಗಳ ಎರಕ ಹೊಯ್ದ ಚಿಕ್ಕ ಆಕೃತಿ : ನಾಲ್ಕು ಚಿಟ್ಟಚಚ್ಚು ಬೆಲ್ಲ ಬೇಕಾಗಿದೆ (ರೂಢಿ).

[ ಚಿಟ್ಟು$_1$ + ಅಚ್ಚು$_3$ ]

**ಚಿಟ್ಟಜೇನು, ಚಿಟ್ಟೆಜೇನು** (ನಾ). ಒಂದು ಬಗೆಯ ಜೇನು ; ಕಿರುಜೇನು: ಹೂಗೆಲಸಿ ಚಿಟ್ಟಜೇನಿಳಿಸಿದೀ ಚಿಂಜೇನು (ಪಾರಸಿ. ३೩-೫३೦). **ಚಿಟ್ಟೆಜೇನು** : 'ಚಿಟ್ಟೆಜೇನುತುಪ್ಪ' ಪರಾ.

[ ಚಿಟ್ಟ$_1$ (<ಚಿಟ್ಟು$_1$) + ಜೇನು$_1$ (<ಜೇನ್) ]

**ಚಿಟ್ಟನಬೇರು** (ನಾ). ಒಂದು ಬಗೆಯ ಔಷಧಿ ಗಿಡ: ಅಡಕೆ, ಚಿಟ್ಟನಬೇರು, ಸೊಗದೆಬೇರು . . . ಮೆಣಸು ಇವಂ ಸಮತೂಕ ಕಷಾಯವಿಟ್ಟು ತೆಗೆದು ಕೊಳ್ಳಲು ರಾತ್ರಿಜ್ವರಂ ನಾಶಮಕ್ಕುಂ (ಸಕವ್ಯ. ೧೦೮).

[ ? + ಬೇರು (<ಬೇರ್) ]

**ಚಿಟ್ಟನೆ** (ಅ). ಗಟ್ಟಿಯಾಗಿ : ಜೋರಾಗಿ : ಅವಳು ಚಿಟ್ಟನೆ ಚೀರಿದಳು (ಭಾರತಿ. ३೧). [ ಚಿಟ್ +– ಅನೆ$_1$ ]

**ಚಿಟ್ಟಬಳ** (ನಾ). ಸಣ್ಣಬಳ್ಳ : ಚಿಟ್ಟಬಳಗಳಿಗೆ ಕಟ್ಟುಗಳಲ್ಲದೆ ಚಿಟ್ಟಕ್ಕೆ ಕಟ್ಟ ನಿಕ್ಕುವರೆ (ಶಾಂತೀಶ. ೬-೫३). [ಚಿಟ್ಟ$_1$ (<ಚಿಟ್ಟು$_1$) + ಬಳ$_1$ (<ಬಳ್ಳ)]

**ಚಿಟ್ಟಬಾಸುರ** (ನಾ). ಸಣ್ಣಜಾತಿಯ ಕಬ್ಬು (?) : ಕರಿಯ ಕಬ್ಬು ರಸ ದಾಳಿಯ ಬಿಳಿಗಬ್ಬು ಮೞಿವ ಚಿಟ್ಟಬಾಸುರದ ಪೊಱಿಪೊಱಿಗಟ್ಟಿ ನಿಲ್ಲಿಸಿ ಮಾಱುವುದನಾ ದೊರೆಮಗ ಕಂಡನು (ಜ್ಞಾನಿಶ. ೩೮-೧३४).

[ ಚಿಟ್ಟ$_1$ (<ಚಿಟ್ಟು$_1$) + ? ]

**ಚಿಟ್ಟಬಿಲ್ಲು** (ನಾ). ಸಣ್ಣಬಿಲ್ಲು : ಕಡೆಗೊಂದು ಹಕ್ಕಿ ಹೊಡೆಯುವ ಚಿಟ್ಟ ಬಿಲ್ಲಾದರೂ ಇತ್ತೇ ? (ಮಂಠಮ. ೬೬).

[ ಚಿಟ್ಟ$_1$ (<ಚಿಟ್ಟು$_1$) + ಬಿಲ್ಲು$_1$ (<ಬಿಲ್$_2$) ]

**ಚಿಟ್ಟಮುಟ್ಟಿ, ಚಿಟ್ಟಾಮುಟ್ಟಿ, ಚಿಟ್ಟೆಮುಟ್ಟಿ** (ನಾ). ಒಂದು ಬಗೆಯ ಮೂಲಿಕೆ : ಚಿಟ್ಟಮುಟ್ಟಬೇರು, ಬಿರಾಮುಟ್ಟವೇರು (ಸಕವ್ಯ. ೧೦೭). **ಚಿಟ್ಟಾಮುಟ್ಟಿ** : ದಶಮೂಲ . . . ಕಿಱುಕಳ್ಳಂಗಡಲೆ, ಚಿಟ್ಟಾಮುಟ್ಟಿ, ಇಷ್ಟನೂ ಪ್ರತ್ಯೇಕ ಹತ್ತು ಹಲಗಳ ಚೆನ್ನಾಗಿ ಒಣಗಿಸಿ, ಜಜ್ಜುಗುಟ್ಟಿ (ವೈದ್ಯಸಾ. I, ४೦೫). **ಚಿಟ್ಟೆಮುಟ್ಟಿ** : ಧಾತಕಿಕುಸುಮ, ಎಳೆಚಿಕ್ಕೆ, ನೆಲಗುಳ್ಳ, ಚಿಟ್ಟೆಮುಟ್ಟಿ, ಶುಂಠಿ, ಅರಿಸಿನ ಇವಂ ಕಷಾಯವಿಕ್ಕಿ ಕೊಡಲು ವಾತಜ್ವರಂ ಮಾಣ್ಗುಂ (ಸಕವ್ಯ. ೬೯). [ ← ತೆಲು. ಚಿಟಿಮುಟ ]

**ಚಿಟ್ಟಲು** (ನಾ). ಒಂದು ಬಗೆಯ ಮರ: (ಎಸಮ್ಮ. XVII, ೩೩). [ ? ]

**ಚಿಟ್ಟವುಡಲ, ಚಿಟ್ಟೌಡಲ** (ನಾ). = ಚಿಟ್ಟುಹರಳು : ಕರಿಯ ಚಿಕ್ಕನ ತಲೆಯೊಳಗೆ ಚಿಟ್ಟವುಡಲವ ಬಿತ್ತಿ ಬೆಳೆದು ಆ ಬೀಜವನ್ನು ಬಾಯೊಳಗೆ ಹಾಕಿಕೊಳ್ಳೆ ಆ ಚಿಕ್ಕನಂತಕ್ಕು (ವಿವ್ಯವಿ. ३೦೯). **ಚಿಟ್ಟೌಡಲು**: ವರ ಚಿಟ್ಟೌಡಲ ದೆಣ್ಣೆಯಲಾಗಲಿ ಮೇಣುರುವ ತ್ರಿಫಲೆ ಕಷಾಯದಲಿ (ಸಾಳ್ವಸಾಂ. ೨೦) : ಚಿಟ್ಟೌಡಲದ ಹರಳು ಒಂದು ಹಿಡಿಯನ್ನು ಮೇಲಣ ತೊಟ್ಟ ತೆಗೆದು ಆ ತಿರುಳ ಹುಳಿಮಜ್ಜಿಗೆಯಲ್ಲಿ ಅರೆದು ಕುಡಿಯೆ ಶ್ವಾಸಕಾಸಗಳು ಹುಟ್ಟು ಗೆಡುವುವು (ಸಕವ್ಯ. ३೦೬): **ಚಿಟ್ಟೌಡಲು**: – ಈ ಎಣ್ಣೆಯಂ ಹಾಲಲ್ಲಿ ತೆಗೆದು ಕೊಳ್ಳೆ ವಾತೋದರ ಮಾಣ್ಗುಂ (ವಿವ್ಯವಿ. ४). [ಚಿಟ್ಟು$_1$+ಅವುಡಲ]

**ಚಿಟ್ಟಹಲಗೆ** (ನಾ). ಚಿಕ್ಕತಮ್ಮಟೆ : ಕರಡಿಯ ಮೞಲು ಊದಕ – ಚಿಟ್ಟ ಹಲಗೆಯ ಮೞಲಿನವರು (ಸುಪರ್ಣ. ४೧).

[ ಚಿಟ್ಟ$_1$ (<ಚಿಟ್ಟು$_1$) + ಹಲಗೆ (<ಪಲಗೆ) ]

**ಚಿಟ್ಟಹುಲ್ಲು** (ನಾ). ಸಣ್ಣಜಾತಿಯ ಹುಲ್ಲು : ಚಿಟ್ಟಹುಲ್ಲು – ಇದರಿಂದ ಬಹಳ ಚಾಪೆಗಳನ್ನು ಮಾಡುತ್ತಾರೆ (ಸಿದ್ಧಾಂತಿ. ೧೩೩).

[ ಚಿಟ್ಟ$_1$ (<ಚಿಟ್ಟು$_1$) + ಹುಲ್ಲು (<ಪುಲ್) ]

**ಚಿಟ್ಟಳಿಲ್** (ನಾ). ಸಣ್ಣ ಅಳಿಲು : ಚೀರಿದುದು ಚಿಳಿಚಿಳಿಚಿಳಿಲ್ಲೆಂದು . . . ಚಿಟ್ಟಳಿಲ್ (ಶ್ರೀರಾಮಾ. ೪೯೩-೧೯೯).
[ ಚಿಟ್ಟ$_1$ (<ಚಿಟ್ಟು$_1$) + ಅಳಿಲ್$_0$ (<ಅಣಿಲ್) ]

**ಚಿಟ್ಟಾಡು** (ಕ್ರಿ). ಸ್ವಲ್ಪವಾದರೂ ಅಲ್ಲಾಡು ; ಮಿಸುಕಾಡು : ದ್ರೋಣಾಚಾರ್ಯರ ಭಟ್ಟರೆಲ್ಲಂ ಚಿಟ್ಟದಂತೆ ಚಿಟ್ಟಾಡದಂಜಿ ನಿಲೆ (ಧರ್ಮಾಮೃ. ೧೩-೩೩ ಅಡಿಟಿ). [ ಚಿಟ್ಟು$_1$ + ಆಡು$_1$ ]

**ಚಿಟ್ಟಾನೆ** (ನಾ). ಸಣ್ಣ ಆನೆ; ಆನೆಮರಿ: ಹಳ್ಳಿಗೆ ಬರುವ ಸರ್ಕಸ್ ಎಂಥದಿರಬೇಕು . . . ಮಂಗ್ಯಾ. ನಾಯಿ, ಚಿಟ್ಟಾನೆ, ತಟ್ಟೂ ಕೆಲವು ಇದ್ದವು (ನಿರಾತ. ೭೪). [ ಚಿಟ್ಟು$_1$ + ಆನೆ$_1$ ]

**ಚಿಟ್ಟಾಮುಟ್ಟ** 'ಚಿಟ್ಟಮುಟ್ಟ' ನೋ.

**ಚಿಟ್ಟಿ$_1$** 'ಚಿಟ್ಟು$_1$' ನೋ.

**ಚಿಟ್ಟಿ$_2$, ಚಿಟ್ಟೆ$_1$** (ನಾ). ೧. ಧಾನ್ಯದ ಒಂದು ಅಳತೆ; ನಾಲ್ಕು ಸೊಲಗೆಯ ಅಳತೆ : (೬). ಚಿಟ್ಟೆ$_1$ : ೧. ಮಾಜಿನ್ನು ಚಿಟ್ಟಿ ಪಡಿಗೆ ಸಗಣಿಯ ತುಂಬಿ (ಅಮುಸಾಂ. ೩-೧೨೬). ೨. ಸೇರಿನ ಹತ್ತನೆಯ ಒಂದು ಭಾಗ.
[ ದೇ. ॥ ತಮಿ. ತೆಲು. ಚಿಟ್ಟಿ ]

**ಚಿಟ್ಟಿ$_3$** 'ಚಿಟ್ಟೊ' ನೋ.

**ಚಿಟ್ಟಿಕ್ಕು$_1$** (ಕ್ರಿ). ಚಿಟ್ಟೆಂದು ಚೀರಂ : ಬಲುವಹಿತದಲ್ಲಿ ಅಟ್ಟಹಾಸದಲಿ ಚೀರಿ ಚಿಟ್ಟಿಕ್ಕಿ ಕೂಗಿ (ವಿಶಾಸು. ೭೦-೫). [ ಚಿಟ್ + ಇಕ್ಕು ]

**ಚಿಟ್ಟಿಕ್ಕು$_2$** (ಕ್ರಿ). = ಚಿಟ್ಟುಹಿಡಿ ೧ : ವಾಸುದೇವನ ಪೂಜೆಯೊಮ್ಮೆ ಮಾಡೆಂದರೆ ಬೇಸತ್ತು ತಲೆಯು ಚಿಟ್ಟಿಕ್ಕಿ ಕುಳಿತೆ (ವಿದಾಕ್ಕ. ೫೧-೫).
[ ಚಿಟ್ಟು$_2$ + ಇಕ್ಕು ]

**ಚಿಟ್ಟಿಗ** (ನಾ). ಶಿಷ್ಯ; ಛಾತ್ರ: "ಶಿಷ್ಯಕಃ, ಶಿಷ್ಯಃ, ಈ ೨ ಚಿಟ್ಟಿಗಂ" (ಶಾಕಳ್ಳ. ೨೯೫); ಹಿಡಿದ ಕರಡಿಗೆ ಪುಷ್ಪವನಾಗುವಮಾಡುವ ಜಡೆಯ ಚಿಟ್ಟಿಗರಿರೆ (ಹರಿಸಾಂ. ೧-೮೧) : ಮುದುಕ ಜಂಗಮರು ಚಿಟ್ಟಿಗರೋಡಿದರು ಮುಂದೆ (ಸಿದ್ಧೇಪು. ೧೭-೧೮) : ಓರಂತೆ ಸಂಚರಿಸುತಿರ್ಪ ಚಿಟ್ಟಿಗನಿತ್ತ ಬಾರಸೆಂದಾ ಬಿಲದ್ವಾರದತ್ತಂ ನೋಡುತಿರೆ (ಕೊಟ್ಟೂಬ. ೮-೩೬). [ <ಸಂ. ಶಿಷ್ಯಕ ]

**ಚಿಟ್ಟಿಜೇನು** 'ಚಿಟ್ಟಜೇನು' ನೋ.

**ಚಿಟ್ಟಿಜೇನುತುಪ್ಪ** (ನಾ). ಸಣ್ಣಜೇನಿನ ಗೂಡಿನಲ್ಲಿ ಸಿಗುವ ಜೇನುತುಪ್ಪ: ತವಕ್ಷೀರ ೪ ಪಲ ಸೇರಿಸಿ ಪಾಕದಲ್ಲಿ ಬೆರಸಿ ಚಿಟ್ಟಿಜೇನುತುಪ್ಪ ಸೇ ೨ ಹಾಕಿ ಕಲಸಿ (ಸಕವೈ. ೪೧೨ ಪರಿ.). [ ಚಿಟ್ಟಿಜೇನು (<ಚಿಟ್ಟಜೇನು) + ತುಪ್ಪ ]

**ಚಿಟ್ಟಿರಿ** 'ಚಿಟ್ಟೆಜಿ' ನೋ.

**ಚಿಟ್ಟಿಲಿ** (ನಾ). ಸಣ್ಣ ಇಲಿ ; ಚಿಕ್ಕ ಇಲಿ : "ಗಿರಿಕಾ, ಬಾಲಮೂಷಿಕಾ ಈ ೨ ಚಿಟ್ಟಿಲಿಗಳ ಹೆಸರು" (ಸಿದ್ಧಾಂತಿ. ೧೩೬) ; ಮನೆಯಲ್ಲಿ ಚಿಟ್ಟಿಲಿಗಳ ಉಪದ್ರವವು ಬಹಳವಾಗಿದೆ (ಕುರಿಹಿಂ. ೧೬). [ ಚಿಟ್ಟು$_1$ + ಇಲಿ$_1$ ]

**ಚಿಟ್ಟೆಜಿ** 'ಚಟ್ಟೆಜಿ' ನೋ.

**ಚಿಟ್ಟು$_1$, ಚಿಟಿ$_2$, ಚಿಟು$_2$, ಚಿಟ್ಟ$_1$, ಚಿಟ್ಟಿ$_1$, ಚಿಟ್ಟೆ$_2$, ಚೀಟಂ$_3$** (ಗು). ೧. ಸಣ್ಣದಾದ ; ಚಿಕ್ಕದಾದ. 'ಚಿಟ್ಟಿಲಿ' ಪರಾ. ಚಿಟಿ$_2$ : ೧. 'ಚಿಟಿಕೊಳಗು' ಪರಾ. ಚಿಟು$_2$ : ೧. 'ಚಿಟುಬಾಳೆ' ಪರಾ. ಚಿಟ್ಟ$_1$ : ೧. 'ಚಿಟ್ಟಗುಬ್ಬಿ' ಪರಾ. ಚಿಟ್ಟಿ$_1$ : ೧. 'ಚಿಟ್ಟಿಜೇನು' ಪರಾ. (ನಾ). ೨. ಸಣ್ಣಹಕ್ಕಿ : ಚಿಟ್ಟಿ ಜೂಗ ಪದ್ದೆಂಬಿವಂ (ಹದಶಾ. ೫-೪೩). ಚಿಟ್ಟೆ$_2$: ೧. 'ಚಿಟ್ಟೆಕಥೆ', 'ಚಿಟ್ಟೆಬೆಲ್ಲ' ಪರಾ. ೩. ಪಗಡೆಯ ಸಣ್ಣಕಾಯಿ : ಚಿತ್ರಪಲಿಗೆಯ ಹಾಸಿ ಚಿಟ್ಟೆಯನಿತ್ತರದಿ ಸಾಲೆಗ್ಗೊಳಿಸಿ (ಜನಭಾ. ೩೬-೪೫). ೪. ಪಗಡೆಯ ಸಣ್ಣದಾಳ: ವಿರಾಟ ಧರ್ಮಭೂಪಾಲನಾ ಶಿರಮಂ ಚಿಟ್ಟೆ ಚೊಳಿಟ್ಟಂ (ಸೂಕ್ತಿಮೀಸ. ೭೪). ಚೀಟಂ$_3$: ೫. ಚೂರು; ತುಂಡು; ರಾಯ ನೀನಾರಬುತ್ತಿಗೆ ಚೀಟು ರೊಟ್ಟಿಯ ಕಾಯ ಕೊಯ್ದಾಪೆ ಕೇಳು (ಮೋಹತ. ೧೦-೩೩). [ ದೇ. ॥ ತಮಿ. ಚಿಟ್ಟು; ತುಳು. ಚಿಟ್ಟೆ; ತೆಲು. ಚಿಟ್ಟಿ, ಚಿಟಿ ]

**ಚಿಟ್ಟು$_2$** (ನಾ). ಜುಗುಪ್ಸೆ ; ಬೇಸರ. 'ಚಿಟ್ಟಿಕ್ಕು$_2$', 'ಚಿಟ್ಟುಹಿಡಿ' ಪರಾ. [ <ಚಿಟ್ ]

**ಚಿಟ್ಟುಂಬೆ** (ನಾ). ಒಂದಂ ಬಗೆಯ ಗಿಡ : ಸಾಂಬ್ರಾಣಿಮರ, ಚಿಟ್ಟುಂಬೆ (ಮೃಶಿಗಿ. ೧೩-೨೩೬). [ ? ]

**ಚಿಟ್ಟುಕೋಳಿ** (ನಾ). ಸಣ್ಣ ಆಕಾರದ ಒಂದಂ ಬಗೆಯ ಕಾಡಂಕೋಳಿ : ಸೆಬೆ ಒಡ್ಡಿ ಕಾಡುಕೋಳಿ, ಚಿಟ್ಟುಕೋಳಿ ಹಿಡಿಯುವುದು (ಮಲಮ. ೯೩).
[ ಚಿಟ್ಟು$_1$ + ಕೋಳಿ$_1$ (<ಕೋಟಿ$_1$) ]

**ಚಿಟ್ಟುತಂದ್ರಿ, ಚಿಟ್ಟುತಾಂಡ್ರಿ** (ನಾ). ಒಂದು ಬಗೆಯ ಮರ: ಮರಗಳು : ಹೆಸವ . . . ಚಿಟ್ಟುತಂದ್ರಿ, ಬೇವು (ನಮ್ಮನು. ೨೩೬). ಚಿಟ್ಟುತಾಂಡ್ರಿ : ಚಿಟ್ಟುತಾಂಡ್ರಿಮರ, ಕಾಡುಲವಂಗ, ಕ್ರೂರಮಾವು (ಮೃಶಿಗಿ. ೫೨-೧೦೩೪).
[ ? ]

**ಚಿಟ್ಟುತಾಂಡ್ರಿ** 'ಚಿಟ್ಟುತಂದ್ರಿ' ನೋ.

**ಚಿಟ್ಟುದ್ದು** (ನಾ). ಸಣ್ಣ ಉದ್ದು ; ಉದ್ದಿನ ಕಾಳಿನಲ್ಲಿ ಸಣ್ಣ ಜಾತಿ: (೬).
[ ಚಿಟ್ಟು$_1$ + ಉದ್ದು$_2$(<ಉಟ್ಟು) ]

**ಚಿಟ್ಟುಬಾಳೆ, ಚಿಟುಂಬಾಳೆ** (ನಾ). ಒಂದು ಬಗೆಯ ಬಾಳೆಗಿಡ ಮತ್ತು ಅದರ ಹಣ್ಣು ; ಪುಟ್ಟಬಾಳೆ : ಚಿಟ್ಟುಬಾಳೆಯ ಹಣ್ಣು ಬಹಳ ರುಚಿ (ರೂಢಿ). ಚಿಟುಭಾಳೆ: ಚಿಗುಳಿ ಚಿನ್ನಾಲ್ ಬಚ್ಚೇವ ಚಿಟುಬಾಳೆ ಆಗಲೋಳು ಗರಿ ಕಾಣಿನೆ (ಮಲ್ಲಿಗ. ೨). [ ಚಿಟ್ಟು$_1$ + ಬಾಳೆ$_1$(<ಬಾಟೆ) ]

**ಚಿಟ್ಟುಮುರಿ** (ನಾ). ಒಂದು ಬಗೆಯಂ ಆಟ ; ಮುಟ್ಟಾಟ ; ಜೂಟಾಟ (?) : "ಚಿಟ್ಟುಮುರಿ ಪುಮ್ಮೆಯೊಳಕ್ಕಂ" (ಕವಿಕಂ. ೨೨೬) : ಹಂಸೆ ಹಂಸೆಗಟ್ಟುಂಬರಿವವೊಲು ಪದಪದಂ ಮೆಟಿಯೆ ಚಿಟ್ಟುಮುರಿ[ಪಾಠಾಂ. ಸೆಟ್ಟುಮುರಿ]ಯಾಡುತಿರ್ದರು ಸತಿಯರು (ಹದಶಾ. ೪-೧೦) : ಜಗಜಟ್ಟಿ ಹಾಯಿಕಿಕೊಂಡು ನುಣ್ಣನೆ ಚಿಟ್ಟುಮುರಿಯಾಟದಲಿ ಸದೆದನು ಮತ್ತೆ ಕೌರವರ (ಕುಮ್ಮಾಆ. ೬-೧೪) : ಚಿಟ್ಟವನು ಕೊಡೆವಿಡಿದು ಮರದಿಂದಿಟ್ಟು ಪುಟನೆಗೆದಂಬರದೊಳುಟಿ ಚಿಟ್ಟುಮುರಿ[ಪಾಠಾಂ. ಟ್ಟಮರೆ]ಯಾಡುವ ನಳಾದಿ ಪ್ರಮುಖ ಪಟುಭಟರ (ತೊರರಾ. ೬-೩೫-೪೪). [ ? ]

**ಚಿಟ್ಟುಹರಳು** (ನಾ). ಚಿಕ್ಕಜಾತಿಯಂ ಹರಳು: ಚಿಟ್ಟುಹರಳಿನ ಎಣ್ಣೆ ತುಂಬ ತಂಪು (ರೂಢಿ). 'ಚಿಟ್ಟವುಡಲ' ಪರಾ. [ ಚಿಟ್ಟು$_1$ + ಹರಳು$_2$ ]

**ಚಿಟ್ಟುಹಿಡಿ** (ಕ್ರಿ). ಮನಸ್ಸಿಗೆ ಹಿಂಸೆಯಾಗು; ಬೇಸರವಾಗು ; ಜುಗುಪ್ಸೆಯುಂಟಾಗು : ನನಗೂ ತಲೆ ಚಿಟ್ಟುಹಿಡಿದುಹೋಗಿದೆ (ಮರೀ. ೩೫) : ನಮ್ಮ ಸಂಸ್ಕೃತಕಾವ್ಯಗಳಲ್ಲಿ . . . ತಲೆ ಚಿಟ್ಟುಹಿಡಿಯುವಷ್ಟು ವರ್ಣನೆಗಳೂ ಕಂಡುಬರುತ್ತವೆ (ಭಾರದ. ೪೪೮); ಅವನ ತಲೆ ಚಿಟ್ಟುಹಿಡಿದುಹೋಗಿತ್ತು (ಕತ್ತಬ. ೪೫); ಆ ಮಾತೆಲ್ಲಾ ಕೇಳಿಕೇಳಿ ಕಿವಿ ಚಿಟ್ಟುಹಿಡಿದುಹೋಗಿದೆ (ಚಂದಕೋ. ೧೪). [ ಚಿಟ್ಟು$_2$ + ಹಿಡಿ$_1$(<ಪಿಡಿ$_1$) ]

**ಚಿಟ್ಟುಹಿಡಿಸು** (ಕ್ರಿ). ಬೇಸರವಾಗುವಂತೆ ಮಾಡು: ಜೀರುಂಡೆಗಳ ಕೂಗು ಕಿವಿಗೆ ಚಿಟ್ಟುಹಿಡಿಸುತ್ತಿತ್ತು (ಮಲಮ. ೩) : ಹಾಳುಕೆಲಸ ತಲೆ ಚಿಟ್ಟುಹಿಡಿಸುತ್ತಿದೆ (ರೂಪಸ. ೧೩೧) : ತುಂಬಾ ಚಿಟ್ಟುಹಿಡಿಸಿದರೆ . . . ಪುಟ್ಟಿ ಏಟನ್ನು ಕೊಟ್ಟು ಬರುತ್ತಿದ್ದಳು (ನಾಂಟ್ಯಮ. ೧೧೬). [ಚಿಟ್ಟುಹಿಡಿ+ –ಇಸು$_3$]

**ಚಿಟ್ಟುಳುಕ** (ನಾ). ಒಂದು ಬಗೆಯ ಸಸ್ಯ : ನೆಗ್ಗಿಲು, ಸೂರ್ಯಭಕ್ತ, ಹೊನ್ನಗನ್ನೆ, ಚಿಟ್ಟುಳುಕ ಇದರ ಸೊಪ್ಪುಗಳಲ್ಲಿ ರಸವ ತೆಗೆದು ಜೇನು ತುಪ್ಪದಲ್ಲಿ ಕೊಡಲು . . . ಮೂತ್ರಕೃಚ್ಛ್ರರೋಗ ಸಹ ಪರಿಹಾರಮಕ್ಕು (ಸಕವೈ. ೩೬೭). [ ? ]

**ಚಿಟ್ಟೂಳಿಗ** (ನಾ). ಚಿಕ್ಕಕೆಲಸ ; ಸಣ್ಣಪುಟ್ಟಕೆಲಸ : ಇವರುಗಳು ದೊರೆತನ ಮಾಡುವ ಯೋಗ್ಯತೆಯನ್ನು ಪಡೆದವರಾಗಿ ಕಾಣಲ್ಪಡುತ್ತಾರೆ ; ಚಿಟ್ಟೂಳಿಗ ಮಾಡುವುದಕ್ಕೆ ತಕ್ಕವರಲ್ಲ (ವ್ಯಾಸಜಿ. ೨೨೨).
[ ಚಿಟ್ಟು$_1$ + ಊಳಿಗ (<ಊಟಿಗ) ]

**ಚಿಟ್ಟೆ1** 'ಚಿಟ್ಟೆ2' ನೋ.

**ಚಿಟ್ಟೆ2** 'ಚಿಟ್ಟು1' ನೋ.

**ಚಿಟ್ಟೆ3** 'ತಿಟ್ಟು3' ನೋ.

**ಚಿಟ್ಟೆ4** (ನಾ). [ಸಂಗೀತ] ಹಾಡಿನಲ್ಲಿ ಒಂದು ಶಾಸ್ತ್ರಬದ್ಧವಾದ ಕ್ರಮ. 'ಚಿಟ್ಟೆತಾನ', 'ಚಿಟ್ಟೆಸ್ವರ' ಪರಾ. [ದೇ.॥ ತಮಿ. ಚಿಟ್ಟೈ]

**ಚಿಟ್ಟೆ5** 'ಚಿಟ್ಟ' ನೋ.

**ಚಿಟ್ಟೆ6, ಜಿಟ್ಟೆ1, ಜಿಟ್ಟೆ** (ನಾ). ೧. (ಹೂವಿನಿಂದ ಹೂವಿಗೆ ಹಾರಾಡುವ) ಒಂದು ಬಗೆಯ ರೆಕ್ಕೆಹುಳು ; ಪಾತರಗಿತ್ತಿ : ಮಿಂಚುವ ಚುಕ್ಕಿಯು ರೆಕ್ಕೆಯ ಚಿಟ್ಟೆಯೊ (ಅನಿಕೇ. ೩೦-೬) : ಇನ್ನು ಪಾರದಿರನ್ನ ಬಳಿಯ ಸೊಗ ಗೂಡು; ಚಿಟ್ಟೆ ನೀ ನೆನವೊಳೆನ್ನೆಳವೆಯನಳುಂಬಂ (ಗೀವಿಂ. ೧-೬) : ರೇಷ್ಮೆ ಹುಳುವು . . . ೩ ವಾರ ನಿದ್ರೆಮಾಡಿ ಅದು ಎಚ್ಚತ್ತಾಗ ಚಿಟ್ಟೆಯಾಗಿ ರೂಪಾಂತರ ಹೊಂದುತ್ತದೆ (ಗೃಹವಿ. ೬೬). ೨. ಮಿಡತೆ: ದಿವ್ಯಾಸ್ತ್ರ ಚಯಂಗಳ್ಕೊಳೆ ಗಾಂಧರ್ವಬಲಂಗಳ್ಕೆಡೆದುವು ಮಿಟ್ಟೆಗೊಂಡ ಚಿ[ಪಾಠಾಂ. ಬ, ಬಿ]ಟ್ಟೆಯ ತೆಱದಿಂ (ಪಂಪಭಾ. ೬-೩೮). ಜಿಟ್ಟೆ1: ೨. ಪ್ರತಿವರ್ಷ ತಪ್ಪದೆ ಸಣ್ಣ ಪ್ರಮಾಣದಲ್ಲಿ ಜಿಟ್ಟೆಗಳು ಕಂಡುಬರುತ್ತವೆ (ಕೀಟಬಿ. ೮೪) : ಜಿಟ್ಟೆ ಹುಳಗಳಝೇಂಕಾರ ಮೈಯನ್ನು ಜುಮ್ಮೆನ್ನಿಸುತ್ತದೆ (ಕೃಹಿಅ. ೯). ಜಿಟ್ಟೆ: ೧. ಒಂದು ಜಿಟ್ಟೆಯನ್ನು ಹಿಡಿದು ಒಂದು ಕಡ್ಡಿಯ ಮೇಲೆ ಸಿಕ್ಕ ಹಾಕಿದ (ಕೃವಾಳ. ೦೦೩). ೨. "ಮಿಡಿತೆ, ಮಿಡಿಚಿ-ಜಿಟ್ಟೆ" (ಗಂಗಾಮ. ೨೫೬).

[ ? ]

**ಚಿಟ್ಟೆಕಥೆ** (ನಾ). ಚಿಕ್ಕಕಥೆ: ಉಪಮೆ, ರೂಪಕ, ಚಿಟ್ಟೆಕಥೆ, ತಿಳಿಹಾಸ್ಯ ಅಥವಾ ಪ್ರತಿಮೆ, ಅನ್ಯೋಕ್ತಿ ಒದಗಿ ಬಂದು ಯುಕ್ತಿವಾದಗಳಿಂದ ಗಳಿಸ ಬೇಕಾದ ಸಿದ್ಧಿಯನ್ನು ಸಾಧಿಸುತ್ತದೆ (ನಿಬಂಧ. I, ಮುನ್ನುಡಿ X).

[ ಚಿಟ್ಟೆ2(<ಚಿಟ್ಟು1) + ಕಥೆ ]

**ಚಿಟ್ಟೆತಾನ** (ನಾ). [ಸಂಗೀತ] "ವಿನಾಟುಗಳ ಅಭ್ಯಾಸಕ್ಕಾಗಿಯೇ ರಚಿತ ವಾದ ತಾನಗಳಿಗೆ ಚಿಟ್ಟೆತಾನಗಳೆಂದು ಹೆಸರು" (ಸಂಗೀಪಂ. ೮೯).

[ ಚಿಟ್ಟೆ4 + ತಾನ2 ]

**ಚಿಟ್ಟೆತಾಳ** (ನಾ). = ಚಿಟಕೆತಾಳ : ಯುವತಿಯು ಎಡಗೈಯಲ್ಲಿ ಡಮರುಗ ವನ್ನೂ ಬಲಗೈಯಲ್ಲಿ ಚಿಟ್ಟೆತಾಳವನ್ನೂ ಹಿಡಿದು ನರ್ತಿಸುತ್ತಿರುವಳು (ಹೊಯ್ಸಳವಾ. ೩೩). [ ಚಿಟ್ಟೆ2(<ಚಿಟ್ಟು1) + ತಾಳ1(=ತಾಲ) ]

**ಚಿಟ್ಟೆಬೆಲ್ಲ** (ನಾ). ಸಣ್ಣ ಅಚ್ಚುಬೆಲ್ಲ : ಕರೆದು ಕೈಯಲ್ಲಿ ಚಿಟ್ಟೆಬೆಲ್ಲ ಕೊಟ್ಟು ಚಿಕ್ಕ ಹರಳುಕಲ್ಲುಗಳನ್ನೆ ಆರಿಸಿ ಕೊಟ್ಟು (ಪುರಂದ. ೪-೬೬-೨).

[ ಚಿಟ್ಟೆ2 (<ಚಿಟ್ಟು1) + ಬೆಲ್ಲ ]

**ಚಿಟ್ಟೆಮುಟ್ಟೆ** 'ಚಿಟ್ಟುಮುಟ್ಟೆ' ನೋ.

**ಚಿಟ್ಟೆಸ್ವರ** (ನಾ). [ಸಂಗೀತ] ಅಲಂಕಾರಕ್ಕಾಗಿ ಕೃತಿಗೆ ಸೇರಿಸುವ ಸ್ವರಗಳ ಗುಂಪು ; ಕೃತಿಯನ್ನು ಹಾಡುವಾಗ ಅನುಪಲ್ಲವಿ ಮತ್ತು ಚರಣದ ಕೊನೆಯಲ್ಲಿ ಹಾಡುವ ಸ್ವರಗಳ ಸಮೂಹ: ಪಲ್ಲವಿ, ಅನುಪಲ್ಲವಿ ಚಿಟ್ಟೆಸ್ವರಗಳ ನಂತರ ಪಲ್ಲವಿಗೆ ಸೇರುವುದು ಸಂಪ್ರದಾಯ (ಸಂಗೀಪಂ. ೬೨).

[ ಚಿಟ್ಟೆ4 + ಸ್ವರ ]

**ಚಿಟ್ಟೆಹುಲಿ** (ನಾ). ಸಣ್ಣಜಾತಿಯ ಹುಲಿ: ಚಿಟ್ಟೆಹುಲಿಯಂತೆ ಅದರ ಮೈಮೇಲೆ ಪಟ್ಟೆಮುದ್ರೆ (ಬಾಳಗಿ. ೯೫).

[ ಚಿಟ್ಟೆ2 (<ಚಿಟ್ಟು1) + ಹುಲಿ1 (<ಪುಲಿ1) ]

**ಚಿಟ್ಟೇಱು** (ಕ್ರಿ). ಮನಸ್ಸಿಗೆ ಹಿಂಸೆಯಾಗು ; ಬೇಸರವಾಗು; ಜುಗುಪ್ಸೆ ಯಂುಂಟಾಗು : ಚಿಟ್ಟೇಱಿ ಮೃತ್ಯುಗಱಿವಂತೊಟ್ಟಜೆಯಿಂ ಬಂದು ಹರನ ಸುತನೊಳ್ ಪಳಚಲ್ ತೊಟ್ಟನೆ ಚಕ್ರದಿ ತಲೆ ಪಱಿದಟ್ಟೆಗಳುರ್ವರಗೆ ಕೆಡೆದು ಮಡಿದರ್ ಸವಣರ್ (ತ್ರಿಪುವಿ. ೩೨-೬೫).

[ ಚಿಟ್ಟು2 + ಏಱು1 (<ಏಱ್1) ]

**ಚಿಟ್ಪೊಡಲ** 'ಚಿಟ್ಟಪುಡಲ' ನೋ.

**ಚಿಟ್ಟ, ಚಿಟ್ಟಿ2, ಚಿಟ್ಟೆ3, ಚಿಟ್ಟೆ6** (ನಾ). ದಿನಚರಿಯನ್ನು ಬರೆದಿಡುವ ಚಿಕ್ಕದಾದ ಕರಡುಪುಸ್ತಕ. 'ಕುಳವಾರ್ಚಿಟ್ಟ' ಪರಾ. ಚಿಟ್ಟಿ2: (ಕೃಸಗ. II, ೫೪೬). ಚಿಟ್ಟೆ3 : (ಕ). ಚಿಟ್ಟೆ6 : ಹಣವಸೂಲಿ ತಪಶೀಲ್ ಲೆಖ್ಖವನ್ನು ದಾಖಲ್ಮಾಡಿರುವ ಚಿಟ್ಟೆಯು ಅಧಿಪತಿ ಭದ್ರವಾಗಿಟ್ಟಿರಬೇಕು (ಗ್ರಾಮಾಳ. ೬೮) : ಹಳೆ ದುರ್ಮುಖಿ ಚಿಟ್ಟೆಯನ್ನು ನೋಡಿದರೆ ಈ ವಿಷಯ ತಿಳಿದು ಬರುತ್ತದೆ (ತುಳುನಾ. ೧೦೭). [ ←ಹಿಂ. ಚಿಟ್ಠಾ ]

**ಚಿಟ್ನೀಸ** 'ಚಿಟಣವೀಸ' ನೋ.

**ಚಿಟ್ರೆಹಕ್ಕಿ** (ನಾ). ಒಂದು ಬಗೆಯ ಹಕ್ಕಿ : ಚಿಟ್ರೆಹಕ್ಕಿಯು ಚಿರತೆ . . . ಪರಿವ ಗೀಜಗ ಮೆರೆದವು (ಗೋಹಾಡು. ಪುಟ ೨೪).

[ ಚಿಟ್ರೆ0 + ಹಕ್ಕಿ1 (<ಪಕ್ಕಿ1). / ತುಳು. ಚಿಟ್ರೆಪಕ್ಕಿ ]

**ಚಿಟ್ಲೆ, ಚಿಟ್ಲು** (ನಾ). ಒಂದು ಬಗೆಯ ಕಾಡುಮರ : (ಕ). ಚಿಟ್ಲು : (ಎಸಮ್ಮ. I, ೨೯). [ ←ತಮಿ. ಚಿಟ್ಟಲಿಂಗಿ ]

**ಚಿಟ್ಲು** 'ಚಿಟ್ಲೆ' ನೋ.

**ಚಿಡಾಯಿಸು, ಚುಡಾಯಿಸು** (ಕ್ರಿ). ಕೀಟಲೆ ಮಾಡಿ ರೇಗಿಸು: ಕೆರಳಿಸು : (ಕ). ಚುಡಾಯಿಸು : ಸುಮಿತ್ರೆಗೆ ಗೆಳತಿಯರು ಚುಡಾಯಿಸುವುದು ಕಿವಿಗೆ ಬೀಳಲೇ ಇಲ್ಲ (ವಿದ್ಯಾರ. ೧೮೫) : ಸ್ವಾಮಿಯನ್ನು ಇನ್ನೊಂದಷ್ಟು ಚುಡಾಯಿಸೋಣ (ಸ್ವಾಮಿಸ್ಮೀ. ೦೩೬).

[ ಚಿಡಾಯಿ0 (P ←ಮರಾ. ಚಿಡವಿಣೇ) + -ಇಸು3 ]

**ಚಿಣಗಿ1** (ನಾ). ಒಂದು ಬಗೆಯ ಹೂವು: ಅಣ್ಣಗೇರಿ ಅಮೃತಲಿಂಗ ಗೊಯ್ದನಾ ಚಿಣಗಿ ಬಿಳೇ ಕಣಗಿಲೆಹೂವ (ಕಹಾಗೀ. ೪೦) : ಚಿಟ್ಟ ಚಿಣಗೀ ಹೂವ ದುಂಡಮಲ್ಲಿಗಿಹೂವ (ಮಲ್ಲಿಗ. ೬). [ ? ]

**ಚಿಣಗಿ2** 'ಚಿಣಿಗಿ' ನೋ.

**ಚಿಣಿ** 'ಚಿನ್ನಿ1' ನೋ.

**ಚಿಣಿಕೋಲ್** 'ಚಿಣ್ಣಿಕೋಲು' ನೋ.

**ಚಿಣಿಕೋಲು** 'ಚಿಣ್ಣಿಕೋಲು' ನೋ.

**ಚಿಣಿಗಿ, ಚಿಣಗಿ2** (ನಾ). ಒಂದು ಬಗೆಯ ವಿಷಸರ್ಪ : ಚಿಣಿಗೀಹಾವು ಬಳೆಬಡಕಹಾವು ಹೆಬ್ಬಾವು ಎಂದು ಹಲವು ತರದ ಹಾವುಗಳು ಉಂಟು (ಮುಂಬಯಿ. ೨-೩೩). ಚಿಣಗಿ2: ಬೇರೆ ವಿಷಯುಕ್ತಸರ್ಪಗಳು ಚಿಣಗೀಹಾವು (ಘುರ್ಸಾ), ಮಂಡೋಳ (ಘೋಣಸ)(ಕಥಾಗ. ೬೭). [ ? ]

**ಚಿಣಿದಾಂಡು** 'ಚಿನ್ನಿದಾಂಡು' ನೋ.

**ಚಿಣಿಪಣಿ** 'ಚಿಣಿಫಣಿ' ನೋ.

**ಚಿಣಿಫಣಿ, ಚಿಣಿಪಣಿ** (ನಾ). ೧. ಚಿಣ್ಣ ಮತ್ತು ದಾಂಡು : ಹುಡುಗರು . . . ತಮ್ಮ ಕೊಂಬು, ಕೊಳಲು, ಚಿಣಿಫಣಿ, ಗೋಲುಗಜ್ಜುಗಗಳನ್ನು ತಕ್ಕೊಂಡು . . . ಹಿಂಬಾಲಿಸಿದರು (ಭಾಮೃಕ. ೩೦೩). ೨. ಚಿಣ್ಣ ಮತ್ತು ದಾಂಡುಗಳಿಂದ ಆಡುವ ಆಟ: ಸುಮ್ಮನ ಚಿಣಿಫಣಿ ಆಡೋಣು (ಆಮನಿ. ೨೬) : ಅಪ್ಪಾ, ಕೃಷ್ಣನ ಕೂಡ ನಾನು ಚಿಣಿಫಣೀ ಆಡುತ್ತಿದ್ದೆ (ಮುಂಬಯಿ. ೫-೨೬೮). ಚಿಣಿಪಣಿ : (ಕ). [ ಚಿಣಿ(<ಚಿನ್ನಿ1) + ಫಣಿ2 ]

**ಚಿಣಿಮಿಂಡಿ** (ನಾ). ಒಂದು ಬಗೆಯ ತಿನಿಸು (?) : ಮಡಿಲೊಳಗೆ ಚಿಣಿಮಿಂಡಿ ಬಟ್ಟಲೊಳಡಸಿ ಚಲಿಪಾಲ್ಗಿಂಡಿನೀರನು ಪಿಡಿದು ಬಂದಿನ್ನೋರ್ವ ಸತಿ ಸುತನನ್ನಸ್ಸಸಂಜ್ಞೆಯಲಿ ಯಡೆಗೆ ಕರೆದು (ಜರಾಮಾ. ೪-೨೬).

[ ? ]

**ಚಿಣ್ಣ** 'ಚಿನ್ನ2' ನೋ.

**ಚಿಣ್ಣಂಚಿ** (ನಾ). ಚಿಕ್ಕಹಂಸ ; ಹಂಸದ ಮರಿ : ಚಿಣ್ಣಂಚಿ ನಡೆ ಚಿಕ್ಕಪೆಜ ವಣೆ ಮಱಿಯುಲ್ಲಿಗಣ್ (ಶ್ರೀಪಾಲ. ೩-೩೮).

[ ಚಿಣ್ಣ (<ಚಿನ್ನ2) + ಅಂಚೆ3 ]

**ಚಿಣ್ಣತನ** (ನಾ). ಎಳೆತನ ; ಚಿಕ್ಕಂದು ; ಬಾಲ್ಯ: ಹೆಣ್ಣನಂಗವ ನೋಡಿರೆ ಪುರಾತನರ್ಬಳಿಕ ಚಿಣ್ಣತನದನುವ ನೋಡಿರೆ (ಮದೀಪು. ೩೦-೧೭) : ಕಣ್ಣ ಮುಂದುದಿಸಿಯನ್ನೋದಕಂಗಳ ಗ್ರಹಿಸಿ ಚಿಣ್ಣತನದಿಂ ಮೆರೆದು ಯುವ್ವನತ್ವಂ ದಳೆದು (ಭಕ್ತಸ. IV, ೫-೧). [ ಚಿಣ್ಣ (< ಚಿನ್ನ$_2$) + – ತನ ]

**ಚಿಣ್ಣನೆ** (ಅ). ಬೇಗನೆ; ಕೂಡಲೆ : ಆ ವೇಗಕ್ಕೆ ಬಲೆಯನ್ನು ಎತ್ತಿಹಿಡಿದಿದ್ದ ಮಿಣಿಯು ಚಿಣ್ಣನೆ ಹಾರಿ ಸಮುಗ್ರ ಬಲೆಯು ಹೆಂದಿಯ ಮೇಲೆ ಬಿತ್ತು (ಹುಟ್ಟಿಪ. ೨೦) [ ? + – ಅನೆ$_1$ ]

**ಚಿಣ್ಣವೆೞ್** (ನಾ). ಎಳೆಯ ಚಂದ್ರ; ಬಾಲಚಂದ್ರ: ಅಣ್ಣವಾಲು ಪಾಯಸ ಅಮೃತಾನ್ನವನು . . . ಚಿಣ್ಣವೆೞಿಯ ಸೂಡಿದಭವನ ಶರಣರಿಗುಣ್ಣ ಲಿಕ್ಕುವ ಬಸವೇಶ (ಬಸಪು. ೧-೧೭೦). [ ಚಿಣ್ಣ (< ಚಿನ್ನ$_2$) + ವೆೞ್ ]

**ಚಿಣ್ಣಾಟ** 'ಚಿನ್ನಾಟ' ನೋ.

**ಚಿಣ್ಣಿ** 'ಚಿನ್ನಿ$_1$' ನೋ.

**ಚಿಣ್ಣಿಕೋಲು, ಚಿಣಿಕೋಲ್, ಚಿಣಿಕೋಲು** (ನಾ). ೧. ವಂಕ್ಕಳು ಆಟಕ್ಕೆ ಬಳಸುವ ಮರದ ಸಣ್ಣತುಂಡು ; ಚಿಣ್ಣಿ : ಬಜ್ಜಳನ ಬಲವ ಕಂಡು ಚಿಣ್ಣಿಕೋಲಂತೆ ಚಿಗಿದನು (ಬಜ್ಜರಾ. ೩-೩೩). ೨. ಚಿಣ್ಣಿ ಮತ್ತು ದಾಂಡುಗಳಿಂದ ಆಡುವ ಆಟ: ಚೆಂಡು ಬುಗುರಿ ಚಿಣ್ಣಿ ಕೋಲು ಗಜ್ಜುಗವಾಡುತ (ಪುರಂದ. ೨-೮೨-೧). **ಚಿಣಿಕೋಲ್ :** ೨. ಬಾಲಕರು ನೂಱಾಱು ಮೆಱೆದರು . . . ಚೆಂಡಿನ ಹೊಣಕೆ ಚಿಣ ಕೋಲಾಳುಗೊತ್ತಿನ ದಂಡೆಯನೆ ನಾನಾವಿನೋದದಲಿ (ಕುಮ್ಮಾಆ. ೬-೧); ಚಿಣಿಕೋಲ್ ಚೆಂಡು ಬುಗರಿಯನಾಡುತ (ಪುರಂದ. ೧-೧೩-೨). **ಚಿಣಿಕೋಲು:** ೨. ಚಿಣಿಕೋಲಿನಂಥ ಆಟಗಳನ್ನು . . . ಆಡುವಲ್ಲಿ, ಗೆಲುವಿನ ಗುರುತನ್ನು ನೆನೆದು ಒಗ್ಗಬಲ್ಲ (ಕೃಷ್ಣಕೊ. ೩೮).
[ ಚಿಣ್ಣ (< ಚಿನ್ನಿ$_1$) + ಕೋಲು$_1$ (< ಕೋಲ್$_1$) ]

**ಚಿಣ್ಣಿಗ** (ನಾ). ಬಾಲಕ; ಹುಡುಗ: ಹೆಣ್ಣು ಪ್ರಾಣಕ್ಕೆ ಮುನಿದರೇ ಚಿಣ್ಣಿಗ ಹಾದರಿಗನಾಗಿ ಕಳವಂ ಕಲಿತರೇ ಹೆಣ್ಣು ಧರೆ ಭೂಮಿಯಾ × × × ಹೆಣ್ಣಂ ಬಿಡು ಚಿಣ್ಣ ಬೇಡಾ ಆ ಮೊಣ್ಣುಳದಿರಾ (ಗುಭಜ. ೩-೩೩).
[ ಚಿಣ್ಣ (< ಚಿನ್ನ2) + – ಇಗ ]

**ಚಿಣ್ಣಿದಾಂಡು** 'ಚಿನ್ನಿದಾಂಡು' ನೋ.

**ಚಿಣ್ಣ್ಯೊಸ** (ನಾ). (?): ಕಣ್ಣು ಬಟ್ಟರೆ ಬಿಡೆನೊ ಜಲವನ್ನು ಪೊಕ್ಕರೆ ಬಿಡೆನೊ ಮಣ್ಣು ತೂರಿ ಕಿಡಿಯಾದರೆ ಬಿಡೆನೊ ಸಣ್ಣನಾಗಿ ಹಣ್ಣು ತೊರೆದಿರೆ ಬಿಡೆನೊ ಉಣ್ಣಾದೆ ಚಿಣ್ಣ್ಯೊಸ ತೊರೆದರೆ ಬಿಡೆನೊ (ವೋಕ್ಷದೀ ೩೩-೧). [ ? ]

**ಚಿತ** (ಗು). ೧. ರಾಶಿಮಾಡಿದ ; ಕೂಡಿಹಾಕಿದ ; ಸಂಗ್ರಹಿಸಿದ. ೨. ಮುಚ್ಚಿದ ; ಆವರಿಸಿದ ; ತುಂಬಿದ. [ ಸಂ. ]

**ಚಿತಕ** (ನಾ). ಶವವನ್ನು ಸುಡಲು ಒಟ್ಟಿದ ಕಟ್ಟಿಗೆಯ ರಾಶಿ ; ಚಿತೆ : ಪ್ರಭಾವತಿ ಕಂಠಿಕೆಯನೆತ್ತಿಕೊಂಡುಯ್ದು ಪರೇತವನದೊಳ್ ಯೋಗಸ್ಥರಾಗಿರ್ದ ಹಿರಣ್ಯವರ್ಮಮುನಿವರರಿರ್ವರುಮನೊಂದೆ ಚಿತಕದ ಮೇಗಿಟ್ಟು ಸುಡುವಾಗಳ್ (ಚಾವುಂಪು. ೬೦). [ < ಸಂ. ಚಿತಿಕಾ ]

**ಚಿತಗು** 'ಚಿದಕಂ$_1$' ನೋ.

**ಚಿತಾನಳ** (ನಾ). ಹೆಣವನ್ನು ಸುಡುವ ಬೆಂಕಿ : ಆ ಜಯದ್ರಥನ ಚಿತಾನಳನಿಂದಮೊಗೆದ ಪೊಗೆಗಳ್ ಕೊಳೆ ಸುರಿಪೊಡೆ ಸುರಿವುವನ್ನ ನಯನ ಜಲಂಗಳ್ (ಪಂಪಭಾ. ೧೧-೧೧೪). [ ಸಂ. ಚಿತಾನಲ (ಚಿತಾ + ಅನಲ) ]

**ಚಿತಾಭಸ್ಮ** (ನಾ). ಚಿತೆಯ ಬೂದಿ : ನೆಹರೂ ಅವರ ಚಿತಾಭಸ್ಮವನ್ನು ಅವರ ಅಪೇಕ್ಷೆಯಂತೆ ಭಾರತದಾದ್ಯಂತ ಸಿಂಪಡಿಸಲಾಯಿತು (ರೂಢಿ).
[ ಸಂ. (ಚಿತಾ + ಭಸ್ಮ) ]

**ಚಿತಾಯಿಸು** (ಕ್ರಿ). ಹುರಿದುಂಬಿಸು ; ಉತ್ತೇಜಿಸು ; ರೇಗಿಸು ; ಚಿತಾಯಿಸು: ಎತ್ತಿಕಟ್ಟು (Incite. ಇಂಕನಿ). [ ಚಿತಾವಣೆ + –ಇಸು$_3$ ]

**ಚಿತಾರ** (ನಾ). ಬಣ್ಣದ ಸಾಮಾನುಗಳನ್ನು ಮಾಡುವವನು; ಗುಡಿಗಾರ: ಗುಡಿಗಾರರಿಗೆ ಚಿತಾರರೆಂತಲೂ ಅನ್ನುವರು. ಗಾಡದ ಮೇಲೆ ಕಟ್ಟಿಗೆಯ ಸಾಮಾನುಗಳನ್ನು ಮಾಡುವದೇ ಇವರ ಮುಖ್ಯ ಹೋರೆಯು (ಕಧಾಗ. ೧೫೬). [ ←ಮರಾ. ಚಿತಾರ. / ಸಂ. ಚಿತ್ರಕಾರ ]

**ಚಿತಾರಿ** (ಗು). ನಾಜೂಕಾಗಿರುವ: ಹಾಡಿಕೆಯಲ್ಲಿ ಚಿಲ್ಲರೆ ಚಿತಾರಿ ಕೆಲಸಗಳು ಇರಲಿಲ್ಲ, ಕಚ್ಚುಗುಳಿಯಿಡುವ ಅಗ್ಗದ ಸಾಮಾನು ಇರಲಿಲ್ಲ (ಗಾನಕ. ೪೪).
[ < ಚಿತಾರ ? ]

**ಚಿತಾವಣೆ** (ನಾ). ಇತರರನ್ನು ಪ್ರೇರಿಸುವಿಕೆ; ಎತ್ತಿಕಟ್ಟುವಿಕೆ; ಪ್ರಚೋದನೆ : ನರಸಮ್ಮನ 'ಚಿತಾವಣೆ'ಯಿಂದ ವಿಷಕಂಠಯ್ಯ, ಪಾರ್ವತಮ್ಮ ಮದುವೆಯ ಸುದ್ದಿ ಎತ್ತಿದಳು ಎಂದರೆ . . . ಕೋಣೆಯಿಂದ ಮೆಲ್ಲನೆ ಜಾರಿಬಿಡುತ್ತಿದ್ದನು (ಸರ್ವಮಂ. ೧೭೭) : ಆ ಸಿಂಬಾವಿಹೆಗ್ಗಡೆಯ ಚಿತಾವಣೆ ಬೇರೆ ಇದೆ ಅವನಿಗೆ (ಮಲೆಮ. ೫೪೭) : ನಿನ್ನ ತಂದೆಯನ್ನು ತೀರಿಸಿಬಿಡು ಎಂದು ಚಿತಾವಣೆಮಾಡಿದನು (ಹತ್ತುಸು. ೩೭).
[ ←ಹಿಂ. ಚಿತಾವನೀ ]

**ಚಿತಾವಣೆಗಾತಿ** (ನಾ). ಪ್ರೇರೇಪಿಸುವವಳು ; ಹುರಿದುಂಬಿಸುವವಳು : ವರ್ತಕ ಮಾಸ್ಲೋವಳನ್ನು ಬಡುಗಡೆ ಮಾಡಿಸುವ ಕಾತರತೆಯಿಂದ ಬಾಷ್ಕೋವಳೆ ಮುಖ್ಯ ಚಿತಾವಣೆಗಾತಿಯೆಂದು ಒತ್ತಿ ಒತ್ತಿ ಹೇಳಿದನು (ಪುನರು. ೦೦೩). [ ಚಿತಾವಣೆ + – ಕಾತಿ$_5$ ]

**ಚಿತಿ** (ನಾ). ೧. ರಾಶಿ ; ಸಮೂಹ. ೨. ಶೇಖರಿಸುವುದು ; ಸಂಗ್ರಹಿಸುವುದು. ೩. ಬೆಂಕಿಯ ಕುಂಡ : ತುಪ್ಪವನಿಕ್ಕಿದ ಚಿತಿಯಂತೆ ಸ್ಪಟಿಕವ ಸಾರಿದ ಒಱತೆಯಂತೆ (ವೋಕ್ಷಮಾ. ೧೬೦-೫೯೯) : 'ಚಿತಿ' ಎಂದರೆ ಯಜ್ಞವೇದಿಕೆ ಕುಂಡ (ಸಾಂಖ್ಯಕ. ೦೨೦). ೪. ಶವವನ್ನು ಸುಡಲು ಒಟ್ಟಿದ ಕಟ್ಟಿಗೆಯ ರಾಶಿ; ಚಿತೆ: ಮತವು ತನಗಿನ್ನರಸನೊಡನಾ ಚಿತಿಯ ಪುಗುವುದು (ರಾಮಾಸಂ. ೩-೩-೨೦) ; ಮದವಳಿಗೆ ಲಗ್ನವೇದಿಕೆಯಂತೆ, ಚಿತಿಯ ಪೊಗುತ (ಗೀವಿಂ. ೫೭-೦೭). ೫. ಜ್ಞಾನಸ್ವರೂಪ ; ಆತ್ಮಧರ್ಮವಾದ ಜ್ಞಾನ : ಆ ಚೈತನ್ಯವು ಚಿತಿ ಮಾತ್ರ (ಭಾಕಕ್ಕ. ೩೪೦). ೬. [ಗಣಿತ] ಸಾಲಾಗಿರುವ ವಸ್ತುಗಳ ಕ್ರಮವನ್ನು ವ್ಯತ್ಯಾಸಪಡಿಸುವುದು, ಹಾಗೆ ವ್ಯತ್ಯಾಸ ಪಡಿಸಿದ ವಸ್ತುಗಳು ಮತ್ತು ಅವುಗಳಿಗೆ ಸಂಬಂಧಿಸಿದ ಲೆಕ್ಕ : ಲೀಲಾವತಿಯನ್ನು ೧೩ ಅಧ್ಯಾಯಗಳನ್ನಾಗಿ ವಿಭಾಗಿಸಿದ್ದಾರೆ . . . ಚಿತಿ (Stacks), ಕ್ರಕಚ (Saw) . . . ಮುಂತಾದ ವಿಷಯಗಳು ಅದರವಾಗಿವೆ (ಗಡಿಡ. ೨೭೪). [ ಸಂ. ]

**ಚಿತಿಶಕ್ತಿ** (ನಾ). [ತತ್ತ್ವಶಾ] ಜೀವಾತ್ಮ: ಇಂತಹ ಚಿತಿಶಕ್ತಿಗಳೆಂಬ ಜೀವಾತ್ಮರು ಅಸಂಖ್ಯಾತಗಳಾಗಿರುವರು (ಹಿಂದಸಾ. ೩೮). Pಸಾಂಖ್ಯಮತದಂತೆ ಚಿಚ್ಛಕ್ತಿಯೇ ಜೀವಾತ್ಮ. [ ಚಿತಿ + ಶಕ್ತಿ ]

**ಚಿತೆ** (ನಾ). = ಚಿತಿ೪ : "ಚಿತ್ರ ಚಿತೆಯೆನಲು ಸಿದ್ಧಿಗೆಯದೆನಿಕ್ಕುಂ" (ಮಂಗರಾ. ೧೧೮-೭);ಆ ಗಂಧದ ಕೊರಡನ್ನು ತಂದು ಚಿತೆಯ ಮೇಲಿರಿಸಿದರು (ಹಬ್ಬಿಬ. ೪) : ಕ್ಷಿಪ್ರದಲ್ಲಿ ಚಂದನಕಾಷ್ಠದ ಚಿತೆ ರಾಜಪಿತೃಭೂಮಿಯಲ್ಲಿ ಸಿದ್ಧವಾಯಿತು (ಶಾಂತಲಾ. ೧೮೦). [ ಸಂ. ಚಿತಾ ]

**ಚಿತೆವೆಂಕಿ** (ನಾ). ಚಿತೆಯ ಬೆಂಕಿ : ಬೇರೊಂದು ಚಿತೆವೆಂಕಿಯನ್ನು ಹಾದು ಬಂದಿರುವ . . . ಹೆಣ್ಣಿನ ಮೋಹ ಬೇಡ (ಅನುಕ. ೪೩).
[ ಚಿತೆ + ಬೆಂಕಿ (< ಬೆಂಕೆ) ]

**ಚಿತ್ಕಲೆ, ಚಿತ್ಕಳೆ** (ನಾ). ಪರಮಾತ್ಮನ ಚೈತನ್ಯಾಂಶ: ಇದು ಚತುರ್ವೇದಾಗಮಪ್ರಚಯಪೌರಾಣದುದಧಿಯೊಳ್ ಜನಿಸಿದಾ ಚಿತ್ಕಲಾನಿಧಿಯೆನಿಸಿ (ಐಕೋಪು. ೦-೩೭). **ಚಿತ್ಕಳೆ:** ಆ ನೆನಹು ನಿರ್ಧರಿಸಿ ಚಿತ್ತನಿಸಿತ್ತು, ಆ ಚಿತ್ತಿನಿಂದೆ ಚಿತ್‌ನಾದ ಚಿತ್‌ಬಿಂದು ಚಿತ್‌ಕಳೆಗಳೊಗೆದುವು (ಅಜಂಡೀ. ೩-೧).
[ ಸಂ. ಚಿತ್ಕಲಾ (ಚಿತ್ + ಕಲಾ) ]

**ಚಿತ್ಕಳೆ** 'ಚಿತ್ಕಲೆ' ನೋ.

**ಚಿತ್ಕಾಂತ** (ನಾ). ಮನಸ್ಸಿಗೆ ಪ್ರಿಯವಾದವನು ; ಪ್ರಾಣಪ್ರಿಯ ; ಪ್ರಾಣಕಾಂತ: ಚಿತ್ಕಾಂತ ನಿನ್ನ ಯನಿವಚನಾಮೃತವು ಸುರಸ ಮತ್ಕರ್ಣದೊಳು ಪೊಕ್ಕು (ನವಮೋ. ೩-೩). [ ಸಂ. (ಚಿತ್ + ಕಾಂತ) ]

**ಚಿತ್ಕ್ರಿಯೆ** (ನಾ). ಮನಸ್ಸಿನ ಆಲೋಚನೆ,– ಕ್ರಿಯೆ: ಕಲಾವಿದನ ಕ್ರಿಯೆ ಚಿತ್ಕ್ರಿಯೆಯಾದುದರಿಂದ ಭೌತಮಾಧ್ಯಮ ಯಾವ ರೀತಿಯಲ್ಲೂ ಅವನ ಅಭಿವ್ಯಕ್ತಿಗೆ ಅಡ್ಡಿಯಾಗುವುದಿಲ್ಲ . . . ಆದರೆ ಕಲ್ಲು, ಭಾಷೆ, ಬಣ್ಣ ಇತ್ಯಾದಿಗಳು ಕಲಾಮಾಧ್ಯಮವಾಗುವುದು ಕಲಾವಿದನ ಪ್ರತಿಭೆಗೆ ಅಥವಾ ಚಿತ್ಕ್ರಿಯೆಗೆ ಒಳಗಾದಾಗ (ಸೌಂದಸ. ೬೨).

[ ಸಂ. ಚಿತ್ಕ್ರಿಯಾ (ಚಿತ್ + ಕ್ರಿಯಾ) ]

**ಚಿತ್ತ** (ಗು). ೧. ತಿಳಿದ; ಗ್ರಹಿಸಿದ. (ನಾ). ೨. ಮನಸ್ಸು: ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯಾ (ಬಸವ. ೨೯) : ಶಿವನಿಷ್ಠ ಚಿತ್ತದೊಳು ಚೀರ್ವರಿದವರ್ಕಲರು (ತಿರುಕ. ದೀ. ೧೪-೧೬) : ಸೂಱೆವೋಯಿತು ಚಿತ್ತ . . . ಏಱೆ ಪೊಗುವಂಗಜನ ಶರದಲಿ (ಕುವ್ಯಾವಿ. ೨-೦೦). ೩. ಅಪೇಕ್ಷೆ; ಆಶಯ: ಧರ್ಮವನು ಮಾಡಬೇಕೆಂಬ ಚಿತ್ತದಿಂದ ತಿರುಮಲರಸರು (ಎಕ. XX, ೮-೩೩ ; 1666) ; ಚಿತ್ತವಱೆತು ಸೇವೆಯೆಸಗುವ ಸತಿಯರ ವೃತ್ತವ ಬಿತ್ತರಿಸುವೆನು (ಹದಿಬ. ೪-೩). ೪. ಗುರಿ ; ಉದ್ದೇಶ : ಪರಿಕಿಸುವ ನಾಡಿ ನಡುವಿರೆ ಪರೀಕ್ಷೆಯೊಳು ತಿಳಿದ ರಾಸಿಯಿಂತಿದು ಮೊದಲೊಳು ಚಿತ್ತದಿಚ್ಛೆಯೊಳಂತ್ಯದೊಳಿರೆ ತಪ್ಪದು ಫಣಮದು ಚಿತ್ತವಿಳಾಸಂ (ಭಾಸ್ಕರ. ೩೦-೮). [ ಸಂ. ]

**ಚಿತ್ತಂಗುಡು, ಚಿತ್ತಗೊಡು** (ಕ್ರಿ). ಮನಸ್ಸಿಡು ; ಗಮನಿಸು : ಸರ್ವಸ್ವಮುಂ ನಿಮ್ಮಡಿಗಳೊಡವೆ ಅಂ ಕಾಪಿನಾಳೆಂದು ಚಿತ್ತಂಗುಡುತಿರ್ಪಂತೆ (ರಕ್ಷಾಕ. ೫೯). **ಚಿತ್ತಗೊಡು**: ವಿದಿತ ವೈದಿಕ ಲೌಕಿಕಕೆ ಜಗವದುಹದಂತಿರೆ ಚಿತ್ತಗೊಡಬೇಕೆಂದು ಕೈಮುಗಿದ (ಕೂರರಾ. ೬-೫೩-೨೬) : ಮನೋರಮೆ ವಿನಾಯಕನ ಮಾತುಗಳನ್ನೆಲ್ಲ ಚಿತ್ತಗೊಟ್ಟು ಕೇಳುತ್ತಿದ್ದಳು (ಅಂದೆಕ. ೦೬).

[ ಚಿತ್ತ + ಕುಡು₁ (<ಕೊಡು₁) ]

**ಚಿತ್ತಂಗೊಳ್** (ಕ್ರಿ). ಮನಸ್ಸಿಡು ; ಮನಸ್ಸಿಗೆ ತೆಗೆದುಕೊಳ್ಳು : ಕೇಳೀವನ ಪಾದಪಂಗಳಿರ ಚಿತ್ತಂಗೊಂಡು ಬೀೞ್ಕೊಂಡು ರಾಗದೆ ನಿಮ್ಮಂ ಬಲಗೊಂಡು ಪೋಪ ಗುಣಮಂ ಕೊಳ್ಳಿಂ (ಆದಿಪು. ೦೦-೧೩೪).

[ ಚಿತ್ತ + ಕೊಳ್₁ ]

**ಚಿತ್ತಂಗೊಳಿಸು** (ಕ್ರಿ). ಮನಸ್ಸನ್ನು ಒಲಿಸು ; ಮೋಹಗೊಳಿಸು ; ಆಕರ್ಷಿಸು : ಬಳದೊಡಿಸಲೆಂದು ಸುದತಿಯ ಕೆಳೆಯನದೊರ್ವಂ ಕರಕ್ಕೆ ಕೆಯ್ನೀಡೆ ಸುಖೋಜ್ಜ್ವಳೆಯ ಶಶಿಮುಖಿಯ ಚಿತ್ತಂಗೊಳಿಸುವ ಸಖಿ ಬೇಡಬೇಡವೆನುತುಂ ನುಡಿದಳ್ (ಗಿರಿಕ. ೪-೦೩೮) : ಕಡುಚದುರರ ಚಿತ್ತಂಗೊಳಿಸಿದುದಾ ಬನದೊಳು ಸುಳಿವೆಳಗಾಳಿ (ಜಯಕಾ. ೦-೫೦).

[ ಚಿತ್ತಂಗೊಳ್ + – ಇಸು₃ ]

**ಚಿತ್ತಂಬಡೆ** (ಕ್ರಿ). ೧. ಮನಸ್ಸನ್ನು ಹೊಂದು ; ಗಮನವಿಡು : ಭುವನಾಗ್ರದ ಸುಖಸಂಪದಕಿಚ್ಛೈಸುವ ಚಿತ್ತಂಬಡೆದು ವಿರಾಜಿಪ ಮುನಿನಿವಹದ ಪದಪಂಕಜಕೆಱಗುವೆ ನಾಂ (ಜಯಕಾ. ೦-೦೦). ೨. ಮನಸ್ಸನ್ನು ವಶಪಡಿಸಿಕೊಳ್ಳು: ಪುರುಷನ ಚಿತ್ತಂಬಡೆ[ಪಾಠಾಂ. ಬಿಡಿ]ಯಲ್ ಪರಮಶ್ರಾವಕಿಯರಪ್ಪರಿತ್ತಲ್ಲಳೆಯಂ . . . ಪೆಂಡಿರಿಗೀವರ್ ಗೌರಿಗೆಂದು ಸಲೆ ತಾಟಕಿಯರ್ (ಸಮಯ. ೫-೧೦೦). [ ಚಿತ್ತ + ಪಡೆ₁ ]

**ಚಿತ್ತಂಬುಗು** (ಕ್ರಿ). ಮನಸ್ಸನ್ನು ಪ್ರವೇಶಿಸು, – ಒಳಹೊಗು ; ಮನಸ್ಸನ್ನು ಆಕರ್ಷಿಸು : ಚಿತ್ತಂಬೊಕ್ಕಿರ್ದಯಿಂತ್ಯೆ ಹರಿ ಕುಳಿರ್ವ ಕರಸ್ಪರ್ಶದಿಂದಿಂದು ತಾಪಂಚಿತ್ತಂ ಮೈಸೋಂಕಿ ಮಂದಾನಿಳನುರಿದಂ (ಜಗವಿ. ೦೦-೪೦). [ ಚಿತ್ತ + ಪುಗು (<ಪೊಗು) ]

**ಚಿತ್ತಂಬೆಱು** (ಕ್ರಿ). ಮನಸ್ಸನ್ನು ಆಕರ್ಷಿಸು: ಬಸನಂ ಕೈಗಣ್ಮೆ [illegible] ಪಿಡಿದು ಬಲ್ಲಂದದಿಂ ನಲ್ಮೆಯಂ ಪತ್ತಿಸಿ ಚಿತ್ತಂಬೆತ್ತು ಮೆಚ್ಚಂ ಸಲಿಸಿ (ಸಮಯ. ೫-೫೦). [ ಚಿತ್ತ + ಪೆಱು₁ ]

**ಚಿತ್ತಕ್ಲೇಶ** (ನಾ). ಮನಸ್ಸಿನ ಆತಂಕ ; ಮನೋವೇದನೆ : ಲೇಸು ಮಾಡಿದಿರನ್ನ ಚಿತ್ತಕ್ಲೇಶ ಬೀತುದು ನಾನು ಬದುಕಿದೆ (ಕೌಶಿರಾ. ೪೩-೨೯).

[ ಚಿತ್ತ + ಕ್ಲೇಶ ]

**ಚಿತ್ತಕ್ಷೋಭ** (ನಾ). ಮನಸ್ಸಿನ ಗೊಂದಲ ; ಮನಸ್ಸು ಕಲಕಿ ಹೋಗುವಿಕೆ ; ಅಶಾಂತಿ : ಮುನಿಪಂ ಮೂದಲಿಸಿಯುಮಿನ್ನೆನಿತುಂ ಪೊರ್ಕುಳಿರ್ಪನೆಂದು ಚಿತ್ತಕ್ಷೋಭಂ ತನಗಾಗೆ (ಗದಾಯು. ೬-೨೬). [ ಚಿತ್ತ+ಕ್ಷೋಭ ]

**ಚಿತ್ತಕ್ಷೋಭೆ** (ನಾ). = ಚಿತ್ತಕ್ಷೋಭ : ನಾನಾವಿಧವಾದ ಚಿತ್ತಕ್ಷೋಭೆಗೆ ಮೂಲವಾದ ರಾಜಕೀಯಕ್ಷೇತ್ರದಲ್ಲೂ ಇದೇ ಪ್ರಶಾಂತಿಯನ್ನು ಪ್ರಕಾಶಪಡಿಸಿದ ರಾಮ, ಧರ್ಮರಾಜ . . . ಕಾರಣಪುರುಷರು (ಮುಕ್ಕಾರ. ೦೨೪ ಟೀಕೆ). [ ಚಿತ್ತ + ಕ್ಷೋಭೆ ]

**ಚಿತ್ತಗ** (ನಾ). ಚಿರತೆ : ಇದೆ ಬಗ್ಗನನಿಕ್ಕು ! ಮೇಣದೆ ಚಿತ್ತಗನಂ ತುಡು! (ರಾಮಾಶ್ವ. ೮೪-೧೩). [ <ಸಂ. ಚಿತ್ರಕ ]

**ಚಿತ್ತಗೊಡು** 'ಚಿತ್ತಂಗುಡು' ನೋ.

**ಚಿತ್ತಗ್ಲಾನಿ** (ನಾ). ಮನಸ್ಸಿನ ನೋವು ; ಅಸಂತೋಷ ; ಖಿನ್ನತೆ : ನದೀಸುತನೇನನೆಂದನು ತನ್ನ ಚಿತ್ತಗ್ಲಾನಿಯನು ಬಿಸುಟೇನ ನುಡಿದನು (ಕುಮಾರದ್ರೋ. ೦-೩೩) : ಅವರಿಗೆ ತಮ್ಮ ಕುಟಿಲತೆಯ ನೆನಪಾಗಿ ಚಿತ್ತಗ್ಲಾನಿ ಉಂಟಾಗುತ್ತಿತ್ತು (ಪ್ರೇಮಾಶ್ರ. ೪೯). [ ಚಿತ್ತ + ಗ್ಲಾನಿ ]

**ಚಿತ್ತಚಾಂಚಲ್ಯ** (ನಾ). ಮನಸ್ಸಿನ ಅಸ್ಥಿರತೆ : ಪುಂಸವನಸೀಮಂತಮಂ ತಾಂ ಚಾರುಲೋಚನಗೆ ವಿಸ್ತರಿಸಿದಂ ಚಿತ್ತಚಾಂಚಲ್ಯವಿಲ್ಲದೆ (ಜೈಮಿಭಾ. ೦೮-೩೬) : ಈ ಬಗೆಯ ಸಂತೋಷವೂ ಲಜ್ಜೆಯೂ ಆತನಿಗೆ ಇದುವರೆಗಿದ್ದ ಚಿತ್ತಚಾಂಚಲ್ಯವನ್ನು ಹೆಚ್ಚಿಸಿದುದು (ಕವಿಕ. ೪೦). [ ಚಿತ್ತ + ಚಾಂಚಲ್ಯ ]

**ಚಿತ್ತಜ** (ನಾ). ೧. ಮನಸ್ಸಿನಲ್ಲಿ ಹುಟ್ಟಿದವನು ; ಮನ್ಮಥ ; ಕಾಮ. ಚಿತ್ತಜಸನ್ನಿಭಂ ದ್ವಿಜವರಂ (ದಕಕು. ೦೦-೦೦೪). ೨. [ಜೈನ] ಬಾಹುಬಲಿಯ ಹೆಸರುಗಳಲ್ಲಿ ಒಂದು : ಚಿತ್ತಜಂ ಚಿತ್ತಭವಂ . . . ಎನೆ ನೆಗಟ್ದುವು ಬಾಹುಬಲಿಗೆ ಪಲವುಂ ಪೆಸರ್ಗಳ್ (ಆದಿಪು. ೮-೫೩) : [ ಸಂ. ]

**ಚಿತ್ತಜಕೇಳಿ** (ನಾ). ಕಾಮಕೇಳಿ; ಸಂಭೋಗ: ನೆನೆಯದೆ ಪೋದುವಂತವರ್ಗೆ ಚಿತ್ತಜಕೇಳಿಗಳಿಂದೆ ಪೊಟ್ತುಗಳ್ (ಚಂದ್ರಪು. ೬-೮೫).

[ ಚಿತ್ತಜ + ಕೇಳಿ₂ (= ಕೇಲಿ) ]

**ಚಿತ್ತಜನ್ಮ** (ನಾ). = ಚಿತ್ತಜ ೧ : ಕೋಡಿಡೆ ವಾಸುಪೂಜ್ಯಮುನಿಯೊಳ್ ಮರುಳಾದಪೆ ಚಿತ್ತಜನ್ಮ ನೀಂ ನೋಡ ನಿಜಾಪ್ರವರ್ಗದಳವಂ (ಶಂರಾಮಾ. ೦-೨೩). [ ಚಿತ್ತ + ಜನ್ಮ ]

**ಚಿತ್ತಜಾಂತಕ** (ನಾ). ಮನ್ಮಥನನ್ನು ಸಂಹರಿಸಿದವನು ; ಶಿವ ; ಈಶ್ವರ : ನಿತ್ಯನಹ ಚಿತ್ತಜಾಂತಕರೂಪ ಚರಲಿಂಗ ಹಸ್ತದೊಳು ನಿರವಯಲ ನಿಜಸಮಾಧಿ (ಪ್ರಾಭರಾ. ೨-೨೧). [ ಚಿತ್ತಜ + ಅಂತಕ ]

**ಚಿತ್ತಜಾತ** (ನಾ). = ಚಿತ್ತಜ ೧ : ಚಿತ್ತಜಾತನ ತಾತ ಕಾತರವಿಲ್ಲದೈತಂದ (ಕೌಶಿರಾ. ೨-೪೪). [ ಚಿತ್ತ + ಜಾತ ]

**ಚಿತ್ತಜಾರಿ** (ನಾ). ಮನ್ಮಥನ ಶತ್ರು; ಶಿವ; ಈಶ್ವರ : ಚಿತ್ತಜಾರಿಯಖಂಡದೀಪವನೆತ್ತುವಂ (ಬಸಪು. ೯-೩೬) : ಚಿತ್ತಜಾರಿಯ ಗಿರಿಯ ಬಲುಹಿಂ ಕಿತ್ತ ಗರ್ವವನಿಲ್ಲಿ ಮಾಡದೆ ಇತ್ತು ಕಾಂಬುದು ಲೇಸು ಸೀತೆಯನು (ಕೌಶಿರಾ. ೩೮-೦೬). [ ಚಿತ್ತಜ + ಅರಿ₆ ]

**ಚಿತ್ತಜ್ಞಾನ** (ನಾ). ಮನಸ್ಸಿನಲ್ಲಿರುವ ನಿಜದ ಅರಿವು ; ಆತ್ಮಜ್ಞಾನ : ಅನುಭಾವ ಭಕ್ತಿಸಂಬಂಧವಾಗಿಹುದು ಪ್ರಾಣಲಿಂಗಿಸ್ಥಲವೆಂಬುದೀಗ ಚಿತ್ತಜ್ಞಾನವೆಂಬ ಶಬ್ದಕ್ಕರ್ಥ (ಅನು್ಮೂ. ೬೪-೫೧ ಟೀಕು). [ಚಿತ್ತ+ಜ್ಞಾನ]

**ಚಿತ್ತಣಿಸು** ‘ಚಿತ್ತಳಿಸು’ ನೋ.

**ಚಿತ್ತನಾಥ** (ನಾ). ಮನಸ್ಸಿನ ಒಡೆಯ ; ನಲ್ಲ : ಚಿತ್ತನಾಥನೊಳ್ ಬೆರಸುವೆನೆನ್ನದಾಂ ಬೆರಪೆನೆಂಬುದಿದಾಗದು (ಕವಿರಾ. ೨-೧೦೫). [ ಚಿತ್ತ + ನಾಥ ]

**ಚಿತ್ತನಿರೋಧ** (ನಾ). ಮನಸ್ಸಿನ ಹತೋಟಿ,-ನಿಗ್ರಹ : ಮನಮೊಸೆದರಡಿಲ್ಲದೆ ಚಿತ್ತನಿರೋಧಂಗೆಯ್ದು (ಜಿನಾಕ. ೨೭-೨೬) ; ಚಿತ್ತನಿರೋಧಂ ತಪಂ (ಸಮಪ. ೭-೧೮). [ ಚಿತ್ತ + ನಿರೋಧ ]

**ಚಿತ್ತಪಲ್ಲಟ** (ನಾ). ಮನಸ್ಸು ಬದಲಾಗುವಿಕೆ : ಅದಂ ಬಟ್ಟಕಣ್ಣಂ ಸಾವಧಾನವಾಗಿ ಕೇಳ್ವುದರ್ಕೆ ಚಿತ್ತಪಲ್ಲಟವಾಗಿ (ಪಂಚತಂ. ३೦४-೭). [ ಚಿತ್ತ + ಪಲ್ಲಟ ]

**ಚಿತ್ತಪ್ಪಕೆಱೆ** (ನಾ). ಒಂದು ಕೆರೆಯ ಹೆಸರು : ಮಱುಗಱೆಯರ್ ಚಿತ್ತಪ್ಪಕೆಱೆಯುಂ ಕಟ್ಟಿಸಿ ನಾಲ್ಕಳೆವೆಯ ಭಾಗಂ ಬಿತ್ತುವಾಟಂ ಕೆಱೆಗೆ ಕುಡುವುದು (ಎಕ. XI, ಹಿರಿಯೂ. ४४-४ ; ಸು. 890). [ ಚಿತ್ತಪ್ಪ + ಕೆಱೆ ]

**ಚಿತ್ತಪ್ರಿಯ** (ನಾ). ಮನಸ್ಸಿಗೆ ಪ್ರಿಯನಾದವನು ; ಮನೋವಲ್ಲಭ : ಚಿತ್ತಪ್ರಸನೆ ತಚ್ಚಿತ್ತಪ್ರಿಯಂಗೇಂ ಮೆಱೆದಳೊ ಸುರತಕ್ರೀಡೆಯಂ ಪ್ರೌಢಿಯಿಂದಂ (ಕಾವ್ಯಸಾ. ೬४೪). [ ಚಿತ್ತ + ಪ್ರಿಯ ]

**ಚಿತ್ತಭವ** (ನಾ). ೧. = ಚಿತ್ತಜ ೧ : ಕಾಮಿನೀಜನಕೇಳೀವಿಭವಕ್ಕೆ ಚಿತ್ತಭವ ನಿರ್ಪ್ಪನ್ನಿರ್ಪ್ಪಪಂ (ಸೌಇಇ. XX, ೭೪-೨೬ ; 1112). ೨. = ಚಿತ್ತಜ ೨ : ಚಿತ್ತಭವಂ . . . ಅಂಗಜನೆನೆ ನೆಗಟ್ದುವು ಬಾಹುಬಲಿಗೆ ಪಲವುಂ ಪೆಸರ್ಗಳ್ (ಆದಿಪು. ೮-३४). [ ಚಿತ್ತ + ಭವ ]

**ಚಿತ್ತಭ್ರಮಣೆ** (ನಾ). = ಚಿತ್ತಭ್ರಮೆ : ಇದೇನು ಚಿತ್ತಭ್ರಮಣೆಯೋ ಯಿಲ್ಲವೆ ನನಗೆ ಸ್ವಪ್ನಾವಸ್ಥೆಯೋ (ಅರ್ಕಮಾ. ೧೨೯) ; ಶಾಂತಲಾದೇವಿಯ ಕಳೇಬರವನ್ನು ತೆಗೆದುಕೊಂಡು ಹೋಗಿರುವ ಪ್ರಭುಗಳಿಗೆ ಚಿತ್ತಭ್ರಮಣೆಯಾಗಿರಬಹುದು (ಶಾಂತಲಾ. ४४೮). [ ಚಿತ್ತ + ಭ್ರಮಣೆ ]

**ಚಿತ್ತಭ್ರಮೆ** (ನಾ). ಮನಸ್ಸಿನ ಭ್ರಾಂತಿ ; ತಲೆಕೆಡುವುದು ; ಹುಚ್ಚು : ಪಿತ್ತೋದ್ರೇಕಂ ಪುಗುಟುಂ ಚಿತ್ತಭ್ರಮೆಯೆಂಬಿವಕ್ಕುಮಂಗಮ[ದುಂ] ತಾನೆತ್ತಂ ಹಳದಿಯ ವರ್ಣಂಚಿತ್ರಿರ್ಪುದು ಪೈತ್ಯಮೆನಿಪ ಬಾಷ್ಪದ ಭೇದಂ (ಖಮದ. ೦೫-೫); ಪಿತ್ತಭ್ರಮೆಯಿದ್ದವಗೆ ಚಿತ್ತಭ್ರಮೆಯಾಗದೇ ? (ಗಾದೆ). [ ಚಿತ್ತ + ಭ್ರಮೆ ]

**ಚಿತ್ತಭ್ರಾಂತಿ** (ನಾ). = ಚಿತ್ತಭ್ರಮೆ: ಚಿತ್ತಭ್ರಾಂತಿಶ್ರಾಂತಂ ಪೊತ್ತುದುಮಂ ತಡವಿ ನೋಡುತುಂ (ಪಂಚತಂ. ೧४೭-೦೨). [ ಚಿತ್ತ + ಭ್ರಾಂತಿ ]

**ಚಿತ್ತಮುರಕ** (ನಾ). ಒಂದು ಬಗೆಯ ಬಳ್ಳಿ (?) : ಚಿತ್ತಮುರಕನ ಬಳ್ಳಿ ಎತ್ತ ಹಬ್ಬಿದರೇನ ಚಿತ್ತ ಬ್ಯಾರವಳ ಬಗೆ ಬ್ಯಾರೆ (ಗರತಿ. ೦४೨). [ ? ]

**ಚಿತ್ತಮೋಹನ** (ನಾ). ಮನಸ್ಸಿಗೆ ಉಂಟಾಗುವ ಭ್ರಾಂತಿ, - ಭ್ರಮೆ : ಚಿತ್ತಮೋಹನಂ ಭ್ರಮಮುಮಕ್ಕುಂ (ಕಾವ್ಯಾವ. ೭೦೮). [ ಚಿತ್ತ + ಮೋಹನ ]

**ಚಿತ್ತಯಿಸು, ಚಿತ್ತಯ್ಸು, ಚಿತ್ತವಿಸು, ಚಿತ್ತೈಸು** (ಕ್ರಿ). ೧. ಮನಸ್ಸಿಗೆ ತಂದುಕೊಳ್ಳು ; ಲಕ್ಷಿಸು ; ಗಮನಿಸು : ಪಟ್ಟಬದ್ಧನೆ ಚಿತ್ತಯಿಸು (ಬಸಪು. ೫೫-४) ; ದೇವರು ಚಿತ್ತಯಿಸುವುದು ಹೊತ್ತುಗಳೆಯದೆ ಎನ್ನ ಕಳುಹಿ (ಕುಮಾರ್ಯ. ४-४५) : ಉತ್ತರೋತ್ತರ ಜೀಯ ಶಕುನವುಂಟಾದುವ ಚಿತ್ತಯಿಸುವುದು (ಮೋಹತ. ೬-೧೨). ೨. ಮನಸ್ಸನ್ನು ಸೆಳೆ ; ಆಕರ್ಷಿಸು : ಇತ್ತಬದೊಳು ನಿಂದಿಹ ಜೀವರನ್ನದ ಪುತ್ತಳಿಗಳು ಸೊಡರ್ವಿಡಿದು ಮುತ್ತಡಿ[ಡ]ಸಿದ ಮಹದುಪಕರಣಗಳಿಂದೆ ಚಿತ್ತಯಿಸಿದುವಲ್ಲಲ್ಲಿ (ಮೋಹತ. ೨೨-೯). ३. (ಆಲಂ) ದಯಮಾಡು ; ಆಗಮಿಸು ಅಥವಾ ಹೋಗು : ಆದರೂ ನನ್ನ ಪ್ರಾರ್ಥನೆಯನ್ನು ಮನ್ನಿಸಿ ಅವರು ಇಲ್ಲಿವರೆಗೆ ಚಿತ್ತಯಿಸಿದರು (ವೀರಬಂ. ೯४) : ಕಾರ್ಯಕ್ರಮಕ್ಕೆ ಸ್ವಾಮಿಗಳು ಚಿತ್ತಯಿಸಿದರು (ರೂಢಿ). **ಚಿತ್ತಯ್ಸು** : ೧. ತೃತೀಯಜನ್ಮದ ವೃತ್ತಕವೊಂದುಂಟು ನಿನಗದಂ ಪೇಟ್ದಪೆನಾಂ ಚಿತ್ತಯ್ಸಿ [ಪಾಠಾಂ. ಚಿತ್ತೈಸಿ] ಕೇಳ್ (ಚಂದ್ರಪು. ೫-೮೬) : ಪುಟ್ಟುವೊಂದುಜ್ಜುಗದೊಳೆ ಮರಣಾವಸ್ಥೆಯಂ ತಾಳ್ದಿ ಬಂದಾಯಸಮಂ ಚಿತ್ತಯ್ಸಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಶ. ४) : ಜೀಯ ಚಿತ್ತಯ್ಸಾ [ಪಾಠಾಂ. ಚಿತ್ತೈಸಾ]ದೊಡಿನ್ನಖಿಳ ಸಾಮ್ರಾಜ್ಯಮಾಯಿತೆಂಬುತ್ಸವಂ ತನಗಿಲ್ಲ (ಜೈಮಿಭಾ. ೨-೨೦) **ಚಿತ್ತವಿಸು** : ೧. ಇದೆ ಚತುರಂಗಬಲಂ ಬಂದುದು ಮನ್ಮಥಭೂಪ ನೋಡು ಚಿತ್ತವಿಸು (ಗಿರಿಕ. ೭-४६) ; ಭೂತಳಾಧಿಪ ಚಿತ್ತವಿಸು ಖಳ ಕೌತುಕದ ಕಾಳಗದಿ ಗೆಲುವನು (ಕಾಶಿಖ. ४६-೨೦) ; ಉಸುರಲಮ್ಮೆನು ಜೀಯ ಸುರರಾಯಸವ ಚಿತ್ತವಿಸು [ಪಾಠಾ. ಚಿತ್ತೈಸು] (ತೊರರಾ. ೧-೮-೫೯) ; ಚಿತ್ತವಿಸಿ ಮುನಿನಾಥಯೆನಗದ ಬಿತ್ತರಿಸಿ ಪೇಳು (ನಳಚ. ४-೧೧) ; ಸಂಕಲ್ಪವಿದೆಂದು ಸೂಚಿಸಿದರೆ ಸ್ತ್ರೀಸ್ವಭಾವ ಚಾಪಲ್ಯವೆಂದು ಚಿತ್ತವಿಸನೊ(ಸೌಗಂಧಿ. ೨೫೯-೦೯). **ಚಿತ್ತೈಸು** : ೧. ನಿಮ್ಮಡಿ ಚಿತ್ತೈಸಿ ಕೇಳಿಮಾತಂ ಸಂಸಾರ [ಭೀರುವಾಗಿ ಜಿನದೀಕ್ಷೆಯಂ ಬಯಸಿ]ಬಂದಂ (ಧರ್ಮಾಮೃ. ೭-೦೨೬) : ತಂದೆ ಚಿತ್ತೈಸುವುದು ಕಿಂಕರನ ಬಿನ್ನಪಂ (ನಂಬಿರ. ೦-೭೬) ; ಧುರದ ವೃತ್ತಾಂತವನು ಚಿತ್ತೈಸರಸ ತಿಳುಹುವೆನು (ಕುಮಾರ್ಯ. ೦-೫೬) ; ವಾರನಾರಿಯರ ಚಿತ್ತೈಸು ಸತ್ಕುಮಾರಕಂಠೀರವರುಗಳ ಚಿತ್ತವಿಸು (ಮೋಹತ. ೨೦-೫೫) ; ಭೂಭೃನ್ನಾಥ ಚಿತ್ತೈಸೊಳಗೀಕ್ಷಿಸೆ ಶ್ರೀಭೃತನಾತ್ಮ ತೋಱುವನು (ಭರತ. ೨-೭४) : ಚಿತ್ತೈಸು ಮದನಮೋಹಿನಿ . . . ಈ ಪಟ್ಟಣದೊಳ ಗೊರ್ವನುತ್ತಮನಾಯಕನಿಹನು (ಕಂನವಿ. ೯-४೫). ३. ನಿನ್ನ ಬರವನು ನೆನೆದೆನ್ನನು ನಿನ್ನ ಬಳಿಗೆ ಕಳುಹಿದಳು ಜನಪ ಚಿತ್ತೈಸುಪವನಕೆ (ಜೀವಂಸಾಂ. ೦೮-೦೦) ; ಜನನಾಥ ನೋಡ ಚಿತ್ತೈಸಬೇಕೆಂದು ತದ್ವನಪಾಲ ಬಿನ್ನಯಿಸಿದನು (ಮೋಹತ. ४-೫೦) ; ಸಭಾಮಂಟಪಕ್ಕೆ ಚಿತ್ತೈಸಬೇಕು (ಸೌಗಂಧಿ.೦೯೬-४): ನೀವು ಇಲ್ಲಿಂದ ಚಿತ್ತೈಸಿದ ಬಳಿಕ ಇಲ್ಲಿ ನಡೆದ ಅನರ್ಥವಂ ಹೇಳುವದಕ್ಕೆ ಶಕ್ಯವಲ್ಲ (ಮುದ್ರಾಮಂ. ೦೫). ४. ಅನುಗ್ರಹಿಸು ; ದಯಪಾಲಿಸು ; ಕೊಡು : ಆದಡೆಲೆ ರಾಜೇಂದ್ರ ನಿಮ್ಮಯ ಪಾದುಕೆಯ ಚಿತ್ತೈಸಿ ದೇವರ ಪಾದವೆಂದೇ ಕಂಡು ಸೇವೆಯ ಮಾಡಿಕೊಂಡಿಹೆನು (ತೊರರಾ. ೨-೭-४४). ೫. ಕೇಳಿಕೊಳ್ಳು ; ಬೇಡಿಕೊಳ್ಳು ; ಗಮನಕ್ಕೆ ತರು : ಕಾಪಿನ ಹಲರ ಸಹಾಯದಿಂದ ಧರ್ಮಕ್ಕೆ ವೊಂದು ಕ್ಷೇತ್ರವನು ಕೊಡಬೇಕು ಯೆಂದು ಚಿತ್ತೈಸಲಾಗಿ (ಎಇ. XX, ೮-४೫ ; 1556). [ ಚಿತ್ತ + - ಇಸು$_3$ ]

**ಚಿತ್ತಯ್ಸು** ‘ಚಿತ್ತಯಿಸು’ ನೋ.

**ಚಿತ್ತರ, ಚಿತ್ತಾರ$_1$** (ನಾ). ೧. ವಸ್ತ್ರ, ಗೋಡೆ, ಕಾಗದ ಮುಂತಾದುವುಗಳ ಮೇಲೆ ಬರೆದ ಪ್ರತಿಕೃತಿ,-ಆಕೃತಿ ; ಚಿತ್ರ : ಕಡುಚೆಲುವಿನ ಚಿತ್ತರ ಸಲ ಸುಭಗತೆಯ ಪುತ್ಥಳಿ (ಶ್ರೀಪಾಂ. ೨-೭); ಪಗಲೊಳೆಸೆವ ಸುದೀಪ ಕಾಂತಿಯೊ ಹೊಗೆ ಬಡಿದ ಚಿತ್ತರದ ಬೊಂಬೆಯೊ [ಪಾಠಾಂ. ಹೊಗೆಯೊಳೆಸಗಿದ ಚಿತ್ರಪ್ರತಿಮೆಯೊ] ಹೇಳಲೇನವಳ (ನಳಚ. ೭-೨४); ಚಿತ್ತರದ ಬೊಂಬೆಗಳಂತೆ ನಿಂತಿರುವ ರಾಕ್ಷಸರ ಗುಂಪು (ಸೌಗಂಧಿ.४४೮-೦೯); ಅನುಜರಿಂ ಕೂಡಿ ತಂದೆ ಚಿತ್ತರವೊಂದೆ ಕಾಣುವ ಮಂದಿರಕ್ಕೈತಂದು (ರಘುವಂ. ೦೫४-೦೫) ; ನಕ್ಷತ್ರಾರತಿಯಂದದಿ ಹೂಗಳ ಗೊಂಚಲನೆತ್ತಿರುವ ಮಾವಿನ ಮರವಿದು ಮರವೋ, ನಭದಲಿ ಬರೆದರೊ ಚಿತ್ತರವ? (ರಾಮನ. ೦४-೨೦): ನಿತ್ಯದಲಿ ಕೇತಯ್ಯ . . . ಚಿತ್ತರದ ಬುಟ್ಟಿ ಮೊರ ಹೆಣೆದು ಮಾರುವನು (ಕನ್ನಜಾ. ೨೬४). ೨. ಸುಂದರವಾದುದು ; ಸೊಗಸಾದುದು : ಹೆತ್ತಾಯಿ ನಿನ ಕರುಳ, ಮತ್ತಲ್ಲಿ ದೊರೆತಾವ ಚಿತ್ತರ ಬಗೆಯ ಮಕ್ಕಳಿಗೆ (ಕನ್ನಜಾ. ೦೦೫): ಏನು ಎತ್ತರ ಏನು ಬಿತ್ತರ ಏನು ಚಿತ್ತರವೀ ಪುರ

(ಕರುಣಾ. ೨೬-೧) ೩. ಆಶ್ಚರ್ಯ : ಬಾಹುಬಲಿಪಂಡಿತದೇವರ ವಚನ ವಿಲಾಸಂ ಚಿತ್ರ[ಪಾಠಾಂ. ತ್ರಿ]ರಮಂ ಸುರಸಾರ್ಥಲೀಲೆಯಂ ಪೆರ್ಚಿಸುಗುಂ (ಧಾಧಪು. ೧-೩೧) : ಬಿತ್ತುವರ್ ಕವಿಯಲ್ಲಿ ಬೆಳಸುವರದೆಯೊಳು ಚಿ[ಪಾಠಾಂ. ಬಿ]ತ್ರವೇನೊ ಪಿಸುಣವಿದ್ಯ (ಕವಿಚ. II, ೪೫ ; ಸೊಬಸೋ. ೦೩-೨೪ ನೋ).

**ಚಿತ್ರಾರ$_1$** : ೧. ಭಿತ್ತಿ ಇಲ್ಲದೆ ಬರೆಯಬಹುದೆ ಚಿತ್ತಾರವ (ಬಸವ. ೩೯೮) ; ಚಿತ್ತಾರದೊಳ್ಬರದ ಪ್ರತಿಮೆಯಂತಿಹುದ ನೋಡು (ಕುರಂಗ. ೭೮-೧೦) : ಬಾಸ್ಪಟದಿ ಮಸಿಯ ಚಿತ್ತಾರಮಂ ಕಂಡರಿಸಿದರ್(ಶ್ರೀರಾಮಾ. ೨೮೯-೧೦೪). [ <ಸಂ. ಚಿತ್ರ ]

**ಚಿತ್ರರಗಂಬ** (ನಾ). ಚಿತ್ರಗಳನ್ನುಳ್ಳ ಕಂಬ : ಕಂಡರಣೆಯ ಕಂಬ : ಪೊನ್ನ ಪುತ್ರಬಿಯಂತೆ ಚಿತ್ರರಗಂಬಮಂ ನೆವ್ವಿ (ಚಕವಿ. ೪-೪೦). [ ಚಿತ್ರರ + ಕಂಬ$_1$ (<ಕಂಭ) ]

**ಚಿತ್ರರಗೈ** (ಕ್ರಿ). ಚಿತ್ರವನ್ನು ಬರೆ ; ಚಿತ್ರಿಸು : ನರ್ತನ ಕೋಲಾಟ ಹೊನ್ನಂಡೆಗಳನಾಂತು ಪುತ್ರಳಿ ಮದನಕ್ಕೆಯೆಡೆಯ ಚಿತ್ರರಗೈದಿರ್ದ ಬಿನ್ನಾಣಗಳ ನೋಡಿ ಚಿತ್ತೈಸಿದನು ಕೃಷ್ಣ (ಮೋಹತ. ೧೪-೩೦). [ ಚಿತ್ರರ + ಗೈ (<ಕೆಯ್$_1$) ]

**ಚಿತ್ರರಟಿ, ಚಿತ್ರರಟ್ಟೆ** (ನಾ). ಒಂದು ಬಗೆಯ ಗಿಡ : "ರುಚಿ ಚಿತ್ರರಟಿ [ಪಾಠಾಂ. ತೆ] ಸಿಂಹಿಕಾಖ್ಯಂ" (ಮಂಗರಾ. ೩೯-೨೮). **ಚಿತ್ರರಟ್ಟೆ** : ಬೆದಕ ದಿರು ಬೆದಕದಿರು ಬೆದಕಿದಡೆ ಹುರುಳಿಲ್ಲ ಚಿತ್ರರಟ್ಟೆಯಂ ಕಾಯಲ್ಲಿ ಮತ್ತೇನ ನಚಿಸುವಿರಯ್ಯಾ (ಬಸವ. ೨೮). [ ? ]

**ಚಿತ್ರರಟಿಹಳ್ಳಿ** (ನಾ). ಒಂದು ಸ್ಥಳದ ಹೆಸರು : ಪೆರ್ಗಡೆ ನಾಕಿಯ ಚಟ್ಟಯ್ಯಂ ಚಿತ್ರರಟಿಹಳ್ಳಿ ಓಟೂರ್ಗ್ಗೆ ಮೂಲಿಗನ್ (ಎಕ. VIII, ಸೊರಬ. ೭೦-೧೦ ; 938). [ ಚಿತ್ರರಟ್ಟೆ + ಹಳ್ಳಿ (<ಪಳ್ಳಿ$_1$) ]

**ಚಿತ್ರರಟ್ಟೆ** 'ಚಿತ್ರರಟಿ' ನೋ.

**ಚಿತ್ರರಿಗ** (ನಾ). ಚಿತ್ರವನ್ನು ಬರೆಯುವವನು ; ಚಿತ್ರಗಾರ : ತತ್ಕರ್ತೃ ಸಂಬಂಧದೊಳ್ ಚಿತ್ರಿಗನಲ್ಲದನಂ ಚಿತ್ರಮಂ ಬರೆವುದಱಿಂ ಚಿತ್ರರಿಗ ನೆಂಬುದು(ರಶರ. ೧೧೩ ವಿ.). [ ಚಿತ್ರರ + – ಇಗ ]

**ಚಿತ್ತವಂತ** (ನಾ). ಗಮನವಿಟ್ಟು ನೋಡುವವನು ; ಲಕ್ಷಿಸುವವನು ; ಗೂಢಚಾರ : "ಚಿತ್ತವಂತಂ ಪ್ರಣಿಧಿಯಕ್ಕು" (ಮಂಗರಾ. ೭೯-೭). [ ಚಿತ್ತ + –ವಂತ ]

**ಚಿತ್ತವಿಕೃತಿ** (ನಾ). ಮನೋವಿಕಾರ ; ಭ್ರಮೆ ; ಹುಚ್ಚು : ಚಿತ್ತವಿಕೃತಿ ಅಪರಾಧ ಅಥವಾ ದುರ್ವರ್ತನೆ (ಭಾಧಾನ. ೧೯೨). [ ಚಿತ್ತ + ವಿಕೃತಿ ]

**ಚಿತ್ತವಿಕ್ಷೇಪ** (ನಾ). ಮನಸ್ಸನ್ನು ಚದರಿಸುವಿಕೆ ; ಗಲಿಬಿಲಿ : ದೃಷ್ಟಿ ಎಂಬುದು ನಮ್ಮ ಕೆಲಸಕ್ಕೆ ಸಹಾಯಮಾಡುವದಕ್ಕಿಂತ ಹೆಚ್ಚಾಗಿ ಅದು ಎಷ್ಟೋ ಪಟ್ಟು ಚಿತ್ತವಿಕ್ಷೇಪವನ್ನೇ ಉಂಟುಮಾಡುತ್ತದೆ (ಇಪ್ಪಕ. ೨೦೬). [ ಚಿತ್ತ + ವಿಕ್ಷೇಪ ]

**ಚಿತ್ತವಿಡು** (ಕ್ರಿ). ೧. ಮನಸ್ಸಿಡು ; ಗಮನವಿಡು : ಗುರುಂಗಳ ಮಾತನ್ನು ಚಿತ್ತವಿಟ್ಟು ಕೇಳು (ರೂ೭). ೨. ಪ್ರೀತಿಸು : ಅತ್ತಲಾ ದಮಯಂತಿ ನಳನಲಿ ಚಿತ್ತವಿಟ್ಟಳು (ನಳಚ. ೨-೯೯). [ ಚಿತ್ತ + ಇಡು$_1$ ]

**ಚಿತ್ತವಿಭ್ರಮ** (ನಾ). ೧. = ಚಿತ್ತಭ್ರಮೆ : ನನ್ನ ಚಿತ್ತವಿಭ್ರಮ ಭಾವೋ ದ್ರೇಕಕ್ಕೆ ಏರಿತು (ಶಾಂತಲಾ. ೩, ೮೦೪). ೨. ಒಂದು ಬಗೆಯ ಸನ್ನಿಪಾತ ರೋಗ : ಮತ್ತಮಾ ತ್ರಯೋದಶ ಸನ್ನಿಪಾತಮಾವುದೆಂದೊಡೆ :–ಸಂಧಿಗ . . . ಚಿತ್ತವಿಭ್ರಮ (ಕಳವ್ಯ. ೧೫೩೧). [ ಚಿತ್ತ + ವಿಭ್ರಮ ]

**ಚಿತ್ತವಿಮೋಹನ** (ನಾ). ಮನಸ್ಸನ್ನು ಮರುಳುಗೊಳಿಸುವಿಕೆ : ಸಮುಲ್ಲಸತ್ಸ್ವಪವತಾಕೆಯೆನಿಪ್ಪಪೊಲಾಂತಳಾಕೆಯಾ ವಸದನದೊಳ್ ಜಗತ್ರಿತ್ರಯ ಚಿತ್ತವಿಮೋಹನ ಶಕ್ತಿಯೇಟಿಗ್ಗಿಯಂ (ಚಂದ್ರಪು. ೩-೭೭). [ ಚಿತ್ತ + ವಿಮೋಹನ ]

**ಚಿತ್ತವಿಶುದ್ಧಿ** (ನಾ). ಮನಸ್ಸಿನ ಪರಿಶುದ್ಧತೆ : ಮೋಕ್ಷಲಕ್ಷ್ಮಿಯುಂ ಸಾಧಿಸ ಲಬ್ಬುಯುಂ ಬಗೆಯುಮುಳ್ಳೊಡೆ ಚಿತ್ತವಿಶುದ್ಧಿಯಿಂದಮಸಾಧಿಸು ಭವ್ಯ (ಪಾವುಂಪು. ೩-೧೯). [ ಚಿತ್ತ + ವಿಶುದ್ಧಿ ]

**ಚಿತ್ತವಿಸು** 'ಚಿತ್ತಯಿಸು' ನೋ.

**ಚಿತ್ತವಿಹ್ವಲ** (ನಾ). ಮನಸ್ಸಿನಲ್ಲಿ ಭ್ರಮೆಯನ್ನು ಹೊಂದಿದವನು ; ಕಳವಳಗೊಂಡವನು : ಕಂಗಳಿನ ಮಿಂಚಿನ ಹೊಳುಕಿನೆಡೆ ನಡೆಗಟ್ಟು ನಿಂದರು ಚಿತ್ತವಿಹ್ವಲರು (ಉಬ್ಬಾವಿ. ೧-೨೩). [ ಚಿತ್ತ + ವಿಹ್ವಲ ]

**ಚಿತ್ತವೃತ್ತಿ** (ನಾ). ೧. ಮನಸ್ಸಿನ ವ್ಯಾಪಾರ ; ಯೋಚನೆ ; ಭಾವನೆ : ಮನೋಧರ್ಮ : ಭಟ್ಟಾರಕನ ಚಿತ್ತವೃತ್ತಿಯನಾ ಮಹಾತ್ಮನಾಪ ಮಾಟಿಕ್ಕೆಯೊಳಱಿದು (ಆದಿಪು. ೧೧-೭ ವ) : ಮೆಲ್ಲಗೆ ಮುಱಿದೊಂದಿದಂತು ಸಿರದಾಗಿರೆ ಕೂಟದ ಚಿತ್ತವೃತ್ತಿಯಂ ಬಗೆಯಂ (ಶಾಂತಿಪು. ೮-೯೨) ; ಪೋಗ ಲಿರ್ಪತ್ರಿಜನಂದು ಕನ್ನಡಿಸಿದಂ ಸುವಿಧೀಶನ ಚಿತ್ತವೃತ್ತಿಯಂ (ಪುಷ್ಪಪು ೧೩-೩೯) : ಚಿತ್ತವೃತ್ತಿಯನಱಿದು ಹತ್ತೆವಿಡಿದೋಲಯಿಸು (ಸರ್ವಜ್ಞ. ೭೩೧). ೨. ಏಕಾಗ್ರತೆ ; ಮನಸ್ಸನ್ನು ಕೇಂದ್ರೀಕರಿಸುವುದು : ನೃತ್ಯ ಗೀತಂಗಳಿಂದತಿಶೋಭನಮಾಗೆ ಚಿತ್ತವೃತ್ತಿಯಿಂ ಶಿವನಂ ಭಜಿಸಿ (ಹಮ್ಮೀರ. ೨-೩೩ವ). [ ಚಿತ್ತ + ವೃತ್ತಿ$_2$ ]

**ಚಿತ್ತವೇದ್ಯ** (ನಾ). ಮನಸ್ಸಿಗೆ ತಿಳಿಯುವುದು ; ಮನಸ್ಸಿಗೆ ಗೊತ್ತಾಗು ವುದು : ಚಿತ್ತವೇದ್ಯವಾಗದು ಸದ್ಗುರುವಿನ ಕರಣಕ್ಕಲ್ಲದೆ (ಬಸವ. ೮೦೬). [ ಚಿತ್ತ + ವೇದ್ಯ ]

**ಚಿತ್ತವೈಕಲ್ಯ** (ನಾ). ಮನಸ್ಸಿನ ಹದ ಕೆಡುವುದು ; ಬುದ್ಧಿವಿಕಲತೆ ; ಹುಚ್ಚು : ಕೋಪಮೆಂಬುದೆ ಸಕಲಸನ್ಮಾರ್ಗದಾರಣಂ ಚಿತ್ತವೈಕಲ್ಯಕರಣಂ (ಮಂಕಾಶಾ. ೨-೯-೧೭). [ ಚಿತ್ತ + ವೈಕಲ್ಯ ]

**ಚಿತ್ತಶಯ** (ನಾ). ಮನಸ್ಸಿನಲ್ಲಿರುವವನು ; ಮನ್ಮಥ : ಚಿತ್ತಶಯ ನಾಮಮಂ ಪುರುಷೋತ್ತಮಸುತನಾಳ್ದಂ (ಪುಷ್ಪಪು. ೭-೩೦). [ ಸಂ. ]

**ಚಿತ್ತಶುದ್ಧ** (ನಾ).=ಚಿತ್ತಶುದ್ಧಿ : ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದರತ್ತ ಲಕ್ಷ್ಮಿ ತಾನಾಗಿಪ್ಪಳು (ವಚಸಂ. ೨೪೭-೧೪). [ ಚಿತ್ತ + ಶುದ್ಧ ]

**ಚಿತ್ತಶುದ್ಧಿ** (ನಾ). ಮನಸ್ಸಿನ ನಿರ್ಮಲತೆ : ಚಿತ್ತಶುದ್ಧಿಯನ್ನೈದಿದವ ರತ್ತೆತ್ತಲಿರೆ ಭಯವಿಲ್ಲ (ಗಗಹಾ. ೧೪-೪೨) : ಈ ವೇದಾಂತದ ಆಚರಣೆಗೆ ಚಿತ್ತಶುದ್ಧಿ, ಪ್ರಾಮಾಣಿಕತೆ, ಆತ್ಮವಿಶ್ವಾಸ ಇವು ಆವಶ್ಯಕವಾದ ಗುಣಗಳು (ಕಕಿ ವಿ. ೧೦೨). [ ಚಿತ್ತ + ಶುದ್ಧಿ ]

**ಚಿತ್ತಸಂಭವ** (ನಾ).=ಚಿತ್ತಜ ೧. : ಆಗಳುಂ ಸೊಗಯಿಕುಂ ಶೋಭಾವಹಂ ಚಿತ್ತಸಂಭವಲಕ್ಷ್ಮೀನಿಳಯಂ ಸಮಸ್ತಜನಚೇತೋಹಾರಿ ಶಯ್ಯಾಗೃಹಂ (ಪಂಚತಂ. ೧೨೩-೭). [ ಚಿತ್ತ + ಸಂಭವ ]

**ಚಿತ್ತಸಮುನ್ನತಿ** (ನಾ). ೧. ಆತ್ಮಗೌರವ ; ಅಭಿಮಾನ. ೨. ಗರ್ವ : ಅಹಂಕಾರ. [ ಚಿತ್ತ + ಸಮುನ್ನತಿ ]

**ಚಿತ್ತಸ್ಖಲನೆ** (ನಾ).=ಚಿತ್ತಚಾಂಚಲ್ಯ : ತ್ರಿಪುರವನೊಳಪೊಕ್ಕು ವಿಷ್ಣು ದುರ್ಬೋಧಕಂ ಆ ಪತಿವ್ರತೆಯರಂ ಕೋಟಿಕಾಮರ ಗೆಲ್ವ ರೂಪಿನಿಂದೇ ಕಾಂತದಲ್ಲಿ ಚಿತ್ತಸ್ಖಲನೆಗಳ ಮಾಡಿದಂ (ವೀಶೈಪು. ೨-೧೧-೨೯). [ ಚಿತ್ತ + ಸ್ಖಲನೆ ]

**ಚಿತ್ತಸ್ಥೈರ್ಯ** (ನಾ). ಮನಸ್ಸಿನ ಧೈರ್ಯ,–ಬಲ : ಮಕ್ಕಳ ಮುಂದಿನ ಜೀವನದಲ್ಲಿ ಚಿತ್ತಸ್ಥೈರ್ಯ ಇರುವುದಿಲ್ಲ (ಶಿಕ್ಷದ. ೭೪). [ಚಿತ್ತ+ಸ್ಥೈರ್ಯ]

**ಚಿತ್ತಸ್ವಾಸ್ಥ್ಯ** (ನಾ). ಮನಸ್ಸಿನ ಶಾಂತಿ : ನೆಮ್ಮದಿ : ಆ ಪ್ರದೇಶ ಒಡೆಯನಿಗೆ ಚಿತ್ತಸ್ವಾಸ್ಥ್ಯ ತಪ್ಪಿತ್ತು (ಒಡಕ. ೧) : ಕಾವ್ಯನಿರ್ಮಾಣಕ್ಕೆ ಕಾರಣಗಳನ್ನು ಹೇಳುವಾಗ ನಮ್ಮ ಆಲಂಕಾರಿಕರು 'ಚಿತ್ತಸ್ವಾಸ್ಥ್ಯ' ವನ್ನು ಹೇಳುತ್ತಾರೆ (ವಿಮರ್ಶೆ. ೦೭). [ ಚಿತ್ತ + ಸ್ವಾಸ್ಥ್ಯ ]

**ಚಿತ್ರಹತ್ಯ** (ನಾ). ತನ್ನ ಮನಸ್ಸಿಗೆ ತಾನೇ ವಂಚನೆ ಮಾಡಿಕೊಳ್ಳುವುದು; ಆತ್ಮವಂಚನೆ: ಹತ್ತುಸಾವಿರ ಜನರು ಸುತ್ತಲಿದ್ದೊಡಮೇನು ಚಿತ್ರಹತ್ಯಕೆ ಯಾರು ತಡೆಯ ಕಟ್ಟುವರಯ್ಯ ? (ಪಾಂಡಚ. ೪೧-೪). [ಚಿತ್ರ + ಹತ್ಯ]

**ಚಿತ್ರಳಿ** (ನಾ). ಸಣ್ಣಚೂರು ; ಚಿಕ್ಕಚೂರು : ಮತ್ತವೊಂದಕ್ಕೆ ಮಜ್ಜಿಗೆ ಯೊಳಿದು ಕರಿಬೇವು ಕೊತ್ತುಂಬರಿಯಿಕ್ಕಿ ನೀರುಳ್ಳಿ ಶುಂಠಿಗಳ ಚಿತ್ರಳಿಯ [ಪಾಠಾಂ.ಸಿ]ಹಾಕಿಯಂತದ ವಗ್ಗರಣೆ ಮಾಡಿ(ಸೂಪಶಾ. ೩-೩೮). 'ಚಿತ್ರಳಿಸು' ಪರಾ. [?]

**ಚಿತ್ರಳಿಸು, ಚಿತ್ರಣಿಸು** (ಕ್ರಿ). ಸಣ್ಣಸಣ್ಣ ಚೂರಾಗಿ ಮಾಡು: ಚಿಕ್ಕದಾಗಿ ಕತ್ತರಿಸು : ಎಲೆನೀರೊಳಿನಿಸು ಸಕ್ಕರೆಯಿಕ್ಕಿ ನೇಬುಳೆಳೆದಳಿರುಮಂ ಕುಡಿಯುಮಂ ಚಿತ್ರಳಿ[ಪಾಠಾಂ. ಣಿ]ಸಿ ಹಾಕಿ (ಸೂಪಶಾ. ೨-೩೮). **ಚಿತ್ರಣಿಸು**: ಕಿಚುಸೊಜ್ಜಿಗೆಯನು ಬರಬರನಟ್ಟು ಚಿತ್ರಣಿಸಿ ಕತ್ತರಿಸಿದಲ್ಲ ನೀರುಳ್ಳಿ ಸಹಿತಂ ಕಲಸಿ (ಸೂಪಶಾ. ೧-೨೩) [ಚಿತ್ರಳಿ + – ಇಸು₂]

**ಚಿತ್ರಾಕರ್ಷಕ** (ನಾ). ಮನೋಹರವಾದುದು ; ಮನಸ್ಸನ್ನು ಸೆಳೆಯುವಂಥದು : ತಾನೂ ಪ್ರೀತಿಸಿ, ತನ್ನನ್ನೂ ಪ್ರೀತಿಸಿದ ಚಿತ್ತಾಕರ್ಷಕನಾದ ತರುಣವ್ಯಕ್ತಿ (ಪುನರು. ೦೯೩). [ಚಿತ್ತ + ಆಕರ್ಷಕ]

**ಚಿತ್ತಾಗಾರ, ಚಿತ್ತಾರ₂** (ನಾ). ಚಿತ್ರಿಸಿದ ಆಕಾರ, – ಸ್ವರೂಪ : "ಚಿತ್ರಾಕಾರ–ಚಿತ್ತಾಗಾರ" (ಶಮದ. ೨೯೧ ಪ್ರಯೋ). **ಚಿತ್ತಾರ₂**: "ಚಿತ್ರಾಕಾರ–ಚಿತ್ತಾರ" (ಶಮದ. ೨೯೩ ಪ್ರಯೋ). [<ಸಂ. ಚಿತ್ರಾಕಾರ]

**ಚಿತ್ತಾಭೋಗ** (ನಾ). ಸುಖಾದಿ ಇಚ್ಛೆಯಲ್ಲಿ ತತ್ಪರವಾದ ಮನಸ್ಸು: "ಮನಸ್ಕಾರಃ, ಚಿತ್ತಾಭೋಗಃ – ಮನಸ್ಸಿನ ವಿಶಾಲತೆ ಅಂದರೆ ಇಚ್ಛೆಯ ಹೆಸರು" (ಸಿದ್ಧಾಂಕಿ. ೪೨). [ಚಿತ್ತ + ಆಭೋಗ]

**ಚಿತ್ತಾರ₁** 'ಚಿತ್ತರ' ನೋ.

**ಚಿತ್ತಾರ₂** 'ಚಿತ್ತಾಗಾರ' ನೋ.

**ಚಿತ್ತಾರಿ** (ನಾ). ಚಿತ್ರಗಳನ್ನು ಬರೆಯುವವನು; ಚಿತ್ರಕಾರ ; ಚಿತ್ರಶಿಲ್ಪಿ: ಸಾಮಂತಚೂಡಾಮಣಿಯ ಮೆಯ್ಯ ಬಣ್ಣಂ ವಿಧಾತ್ರನೆಂಬ ಚಿತ್ತಾರಿಯ ವರ್ಣಕ್ರಮಂಗೆಯ್ದ ಕದಲೀಗರ್ಭಶ್ಯಾಮಮೆಂಬ ಬಣ್ಣದಂತಾದುದು (ಶಂಪಥಾ. ೨-೩೯ ವ) ; ಚಿತ್ತಾರಿ ಪರ್ಲ್ಲೋಜಂಗೆ ಮತ್ತರು[೧೨] (ಸೌಇಇ. VIII, ೩೭೭-೨೫ ; ?). [ಚಿತ್ತಾರ₁ (<ಚಿತ್ತರ) + – ಇ₃]

**ಚಿತ್ತಾರಿಗ** (ನಾ).=ಚಿತ್ತಾರಿ : ಸುಕೇಶಿನಿಯು ಮಾಡದ ಕೇರ್ಗಳೆಲ್ಲಾ ಯೆಡೆಗಳೊಳಂ ವ್ಯಾಳಂಗಳವ್ಯಾನೆಗಳಂ ತನ್ನ ಚಿತ್ತಾರಿಗರಿಂದಂ ಬರೆಯಿಸಿದು (ವಡ್ಡಾರಾ. ೨೪-೧೨) ; ನಾನಾರೂಪಂ ಬರೆವ ಚಿತ್ತಾರಿಗನಂತೆ ನಾನಾ ಭೇದಮಪ್ಪ ನಾಮಕರ್ಮ (ಪಶಾರ. ೯೪-೦೭).

[ಚಿತ್ತಾರ₁ (<ಚಿತ್ತರ) + – ಇಗ]

**ಚಿತ್ತಾರಿವಿದ್ಯೆ** (ನಾ). ಚಿತ್ರಗಳನ್ನು ಬರೆಯುವವನ ವಿದ್ಯೆ: ಚರಕವಿದ್ಯೆ, ಸಾಮುದ್ರಿಕೆಯ ಲಕ್ಷಣ, ಚಿತ್ತಾರಿವಿದ್ಯೆ . . . ಮೊದಲಾದ ನಾನಾವಿದ್ಯೆಗಳನು . . . ಅರಿತು (ವಪಶಾ. ೮). [ಚಿತ್ತಾರಿ + ವಿದ್ಯೆ]

**ಚಿತ್ತಾವಧಾನ** (ನಾ). ಏಕಚಿತ್ತತೆ ; ದೃಢಗಮನ : ಕೇಳಿರ್ಕೆ ನೆರೆದಖಿಳಜನ ಚಿತ್ತಾವಧಾನದಲಿ (ಕುಮ್ಯಾಸ. ೮-೩೪). [ಚಿತ್ತ + ಅವಧಾನ]

**ಚಿತ್ತಿ** (ನಾ). ಬುದ್ಧಿ ; ಪ್ರಜ್ಞೆ. [ಸಂ.]

**ಚಿತ್ತಿನಿ** (ನಾ). [ಕಾಮಶಾ] ಪದ್ಮಿನಿ, ಚಿತ್ತಿನಿ, ಹಸ್ತಿನಿ, ಶಂಖಿನಿ ಎಂಬ ನಾಲ್ಕು ಬಗೆಯ ಸ್ತ್ರೀಜಾತಿಗಳಲ್ಲಿ ಒಂದು ಮತ್ತು ಆ ಜಾತಿಗೆ ಸೇರಿದ ಹೆಣ್ಣು : ನಿತಂಬಂ ಮನಂಗೊಳಿಕುಂ ಬೆಟ್ಟಿತುವಾಗೆ ಚಿತ್ತಿನಿಗೆ ನಿಂಬಾ ಮೋದಮುಕ್ಕುಂ (ಮದತಿ. ೨-೪) : ನೆರೆದುನಿಂದ ಕೀರಾಳಿಗೆ ಕಾಮಾದ್ಯೈತ ಶಾಸ್ತ್ರಸೂತ್ರಮಂ ಪಾರಪೋದಿವ ಪರಿಜ್ಞಾನದಿಂ ಮೆಚಿಲ ಚಿತ್ತಿನಿಯರಿಂ (ಗಿರಿಕ. ೭-೧೧ ವ): ಮೂಡಲದು ಹಸ್ತಿನಿಗೆ ಬಡಗಲದು ಚಿತ್ತಿನಿಗೆ (ಸರ್ವಜ್ಞ. ೧೭೩೦). [<ಸಂ. ಚಿತ್ರಿಣೀ]

**ಚಿತ್ತು₁** (ನಾ). ೧. ಜ್ಞಾನಸ್ವರೂಪವಾದುದು; ಆತ್ಮ; ಚೈತನ್ಯಸ್ವರೂಪ: ಮುಕ್ತಿಯ ಮುಗುಳಂತೆ ಚಿತ್ತಿನ ಚಿತ್ತಿನಂತೆ ಸತ್ತದ ಸಾರದಂತೆ . . . ಅದ್ವಿತೀಯನೊಪ್ಪುತಿರ್ದಂ (ಚಬಶಂ. ೧-೮೦ ವ): ಜೀವದ ಚಿತ್ತು ಜಗತ್ತಿನ ಸತ್ತು ತಿಳಿದಾನಂದದ ಸಂವಿತ್ತು (ಅರಳು. ೨೫೮-೦). ೨. ಬುದ್ಧಿಶಕ್ತಿ; ಮೇಧಾಶಕ್ತಿ. ೩. ಬುದ್ಧಿಶಕ್ತಿಯುಳ್ಳ ಜೀವ: ಚಿತ್ತುಗಳಲ್ಲದ ಗೋವಿತ್ರಪಾಲ್ಮುತ್ತು ರತ್ನಗಳು ಪವಿತ್ರ ಗಡಾ ಚಿತ್ತು ಮೆಯ್ಯಾದಾತ್ಮವಸ್ತು ಮ್ಯೆಯೊಳಗಿದ್ದರುತ್ತಮನೆಂದರೇಕೆನಿಕೆ (ಭರಕ. ೭೯-೯೬). [<ಸಂ. ಚಿತ್]

**ಚಿತ್ತು₂** (ನಾ). ೧. ಬರೆಯುವಾಗ ಮಸಿಯಿಂದ ಆಗುವ ಕಲೆ: ಗಗನಕೆದುರು ನಿಂತಿದೆ ತರು ಮಸಿಯ ಚಿತ್ತಿನಂದದಿ (ಅನಿಕೇ. ೦೪-೪). ೨. ಬರೆದುದರಲ್ಲಿ ಸರಿಯಿಲ್ಲವೆಂದು ಹೊಡೆದು ಹಾಕಿದ ಭಾಗ, -ಹೊಡೆದು ಹಾಕುವುದಕ್ಕಾಗಿ ಮಾಡಿದ ರೇಖೆ ಮೊದಲಾದುವುಗಳ ಚಿಹ್ನೆ: ಸರಿಯಾಗಿ ಬಂದದ್ದು ಚಿತ್ರ. ಅಲ್ಲದ್ದು ಚಿತ್ತು: ಬರವಣಿಗೆಯಲ್ಲಿ ಹೊಡೆದು ತಿದ್ದಿಯೋ ಮಸಿ ಬಿದ್ದು ಕೆಟ್ಟೋ ಆಗಿರುವ ಭಾಗ (ನಮ್ಮನು. ೦೦೨). ೩. ಕರಡುಪ್ರತಿ : (?).

**ಚಿತ್ತುಮಾಡು₁**=ಕಲೆಯಾಗುವಂತೆ ಬರೆ; ಗೀಚು: ನಾಗೇಂದ್ರ ತಾನು ಬರೆದಿದ್ದನ್ನು ಚೆನ್ನಾಗಿ ಹೊಡೆದುಹಾಕಿ ಚಿತ್ತುಮಾಡಿದ (ಕಂಕಣ. ೧೭೪) : ಗುರುತಿಸಬೇಕಾದ ಅಂಶಗಳನ್ನು ಸಕಾಲದಲ್ಲಿ, ನಿಖರವಾಗಿ ಚಿತ್ತುಮಾಡದ ಗುರುತಿಸಬೇಕು (ಶಿಕ್ಷದ. ೩೭೭). [←ಹಿಂ. ಚಿತ್ರೀ ; ಮರಾ. ಚಿತಡ]

**ಚಿತ್ತು₃** (ನಾ). ೧. ಬೆನ್ನು ಕೆಳಗಾಗಿ ಬೀಳುವಿಕೆ ; ಅಂಗತ್ತನಾಗಿ ಬೀಳುವಿಕೆ ; (ಕುಸ್ತಿಯಲ್ಲಿ) ಸೋಲು : ಮಲ್ಲಾರಿ ಚಿತ್ತಾದ – ಸೋತ. (ಛಮುಕಾ. ೫). ೨. (ಗಂಜೀಫ, ಇಸ್ಪೀಟು ಮುಂತಾದ ಆಟಗಳಲ್ಲಿ) ಮಗುಚಿದ ತನ್ನ ಆಟದ ಎಲೆಗಳನ್ನು ಬೆನ್ನು ಕೆಳಗಾಗಿ ಹಾಕಿ ತೋರಿಸುವುದು : ನೆತ್ತ ಚದುರಂಗ ಪಗಡೆಯು ಚಿತ್ತಾಯಂಬಯ್ಯುದಾಯ ಬಿಡಿಬಿಲ್ ಸೊಗುಳೀಯುತ್ತಮರಾಡರು ಆದಲ್ಪೆತ್ತಲೆಯುಹ ಭಂಗ ಬಪ್ಪನೆಂಬುದು ಪುಸಿಯೆ (ನೀತಿಸಾ. ೮೦೦).

**ಚಿತ್ತುಮಾಡು₂**=೧.ಅಂಗತ್ತನಾಗಿ ಬೀಳಿಸು; ಕುಸ್ತಿಯಲ್ಲಿ ಸೋಲಿಸು: ಭೈರವನು . . . ಸುಲೇಮಾನನನ್ನು 'ಚಿತ್ತು' ಮಾಡಿಬಿಟ್ಟನು (ಬಾಳಹೊ. ೦೦೩). ೨. (ಇಸ್ಪೀಟಾಟದಲ್ಲಿ) ಮಗುಚಿದ ತನ್ನ ಆಟದ ಎಲೆಗಳನ್ನು ಬೆನ್ನು ಕೆಳಗಾಗಿ ಹಾಕಿ ತೋರಿಸು : ಆಟವು ಪೂರೈಸಿದ ನಂತರ ಮಡಿಚಿದ ಪಟ್ಟುಗಳನ್ನೆಲ್ಲ ಅವನು ಚಿತ್ತು ಮಾಡಿ ತೋರಿಸಿದನು (ರೂಢಿ).

[←ಹಿಂ. ಚಿತ್ ; ಮರಾ. ಚಿತ್, ಚೀತ್]

**ಚಿತ್ತು₄** (ನಾ). ಚಿಲ್ಲದ ಮರ ಮತ್ತು ಅದರ ಬೀಜ : ಚಿಲ್ಲದ ಬೀಜ, ಚಿತ್ತು, ಚಲಿಬೀಜ (ಮೃಔಗಿ. ೭೩-೦೪೮೪). [?]

**ಚಿತ್ತೂರ್** (ನಾ). ಒಂದು ಊರಿನ ಹೆಸರು : ಅದೆಯಚೆನಾತ ಚಿತ್ತೂರ ಮೋನಿಗುರವಡಿಗಳ ಶಿಷ್ಯತ್ತಿಯರ್ ನಾಗಮತಿಗನ್ತಿಯರ್ ಮೂಱು ತಿಙ್ಗಳ್ ನೋನ್ತು ಮುಡಿಪ್ಪಿದರ್ (ಎಕ. II, ೨೦-೧ : ಶ. 700).

[? + ಊರ್]

**ಚಿತ್ತೆ** (ನಾ). ೧. ಒಂದು ನಕ್ಷತ್ರದ ಹೆಸರು; ಚಿತ್ರಾನಕ್ಷತ್ರ: ಜಯನಿನದಂ ಸುರದುಂದುಭಿಜಯನಿನದಂ ಪುಷ್ಪವರ್ಷಮೊರ್ಮೆಯೆ ಸಕಲೋರ್ವಿಯ ನೆಯ್ದೆ ಪರ್ವುತಿರೆ ಚಿತ್ತೆಯ ಸರಿಯೆಂತೆಚಿಗಿ ಪೋದುದಮರಸಮಾಜಂ(ಆದಿಪು. ೦೪-೦೪೭): ಚಿತ್ತೆಯ ಮಳೆ ಹೊಯಿದು ಮುತ್ತಾಗಬಲ್ಲುದೇ (ಸರ್ವಜ್ಞ. ೫೭೮) ; ಕುರುಡುಪ್ರೀತಿಯ ಹಾಂಗ ಕುರುಡು ಚಿತ್ತೆಯ ಮಳೆಯೆ (ಸಖೀಗೀ. ೮೫-೨). ೨. ಸೂರ್ಯನು ಚಿತ್ರಾನಕ್ಷತ್ರದಲ್ಲಿ ಸಂಚರಿಸುವಾಗ ಬರುವ ಮಳೆ ; ಸಾಮಾನ್ಯವಾಗಿ ಆಶ್ವಯುಜ ತಿಂಗಳಲ್ಲಿ ಬರುವ ಮಳೆ : ಚಿತ್ತೆ ಮುತ್ತಿನೋಪಾದಿಯಲಿ (ಭಾಸ್ಕರ. ೬೦-೪). 'ಕರಂಡುಂಚಿತ್ತೆ' ಪರಾ.

[<ಸಂ. ಚಿತ್ರಾ]

**ಚಿತ್ತೈಕಾಗ್ರತೆ** (ನಾ). ಮನಸ್ಸಿನ ಏಕಾಗ್ರತೆ : ಮಗಳ ಚಿತ್ತೈಕಾಗ್ರತೆಗೆ ಸಂತೋಷಪಡುತ್ತ ಸತಿಪತಿಯರು . . . ಕುಳಿತರು (ಶಾಂತಲಾ. ೧೪); ಚಿತ್ತೈಕಾಗ್ರತೆಯನ್ನು ಭಂಗಗೊಳಿಸುವಂಥ ಪ್ರಲೋಭನೆಗಳಾವುವೂ ಅಲ್ಲಿಲ್ಲದುದರಿಂದ, ಅವನು ಆ ಜಾಗವನ್ನಾರಿಸಿಕೊಂಡಿದ್ದನು (ಪುನರು. ೩೪). [ ಚಿತ್ತ + ಏಕಾಗ್ರತೆ ]

**ಚಿತ್ತೈಸು** 'ಚಿತ್ತಯಿಸು' ನೋ.

**ಚಿತ್ತೋಡಿ** (ನಾ). ಒಂದು ಬಗೆಯ ಗಿಡ: ಉಡ್ಡಿ, ಪುಡಿಗ, ಗೂಡುಮುರ್ಕಿ, ಚಿತ್ತೋಡಿ, ಉದುರೆ (ಪ್ರಜಿಗಿ. ೩೨-೬೦೦). [ ? ]

**ಚಿತ್ತೋದ್ಭವ** (ನಾ).=ಚಿತ್ತಜ ೧ : ಚಿತ್ತೋದ್ಭವನನೆಸೆಯೆ ತೂರ್ಯತ್ರಿಕಂ ಹಾಸಪುಷ್ಪಾಂಜಳಿಯಿಂ ತತ್ಕಾಂತೆ ದೇಹದ್ಯುತಿ ಜವನಿಕೆಯಿಂ ನಾಟ್ಯರಂಗಂ ಬೊಲಿರ್ಪಲ್ (ಅಜಪು. ೨-೪೦); ಚಿತ್ತೋದ್ಭವನರಮನೆ ನೃಪಸುತರಿಂ ಕವರ್ತೆಪೋದಂತೆ ಬಿನ್ನನಾಯ್ತುದ್ಯಾನಂ (ಶಾಂತಿಪು. ೮-೩೮). [ ಚಿತ್ತ + ಉದ್ಭವ ]

**ಚಿತ್ತೋದ್ವೇಗಕರ** (ಗು). ಮನಸ್ಸಿಗೆ ಕಳವಳವನ್ನುಂಟುಮಾಡುವ : ಆತನಿಗೆ ಚಿತ್ತೋದ್ವೇಗಕರವಾದ ಆವ ಪ್ರಶ್ನೆಯನ್ನೂ ನಾನು ಹಾಕುವುದಿಲ್ಲ (ಬಿನ್ನಪೀ. ೯೭). [ ಸಂ. ]

**ಚಿತ್ಪಿಂಡ** (ನಾ). ಜ್ಞಾನಸ್ವರೂಪಿ ; ಶಿವ : ಜಲಂಧರವಧಾಕಥನವೆನುತ ಚಿತ್ಪಿಂಡಂಗೆ ಹತ್ತನೆಯ ಲೀಲೆಯಿದು . ಮು ಗಿ ಯಿ ತ್ತು . (ವೀ ಕೃ ಪು. ೨-೧೩-೪೩):ವಿಮಳ ವಿಳಸಿತಧವಳಾತುಳಾಖಂಡ ಚಿತ್ಪಿಂಡ ವೃಷಭೇಶ್ವರನಂ ಕಂಡು (ಹಮ್ಮೀರ. ೩-೪ ಪ). [ ಸಂ. (ಚಿತ್ + ಪಿಂಡ) ]

**ಚಿತ್ಪುರುಷ** (ನಾ). ಜ್ಞಾನಸ್ವರೂಪ ; ಪರಮಾತ್ಮ : ಸುರತರು ಸುರಭಿ ಚಿಂತಾಮಣಿ ನೀನೆಂದು ವಿರಚಿಸಲೆಲ್ಲರ ಮೆಚ್ಚು ತರು ಪಶು ಪಾಷಾಣ ಸಾಟಿಯಿಲ್ಲಾತ್ಮ ಚಿತ್ಪುರುಷನೆಂದರೆ ನಿನ್ನ ಮೆಚ್ಚು (ಧರಿದ. ೨-೩೮). [ ಸಂ. (ಚಿತ್ + ಪುರುಷ) ]

**ಚಿತ್ಯೆ** (ನಾ). ೧. ರಾಶಿ ಹಾಕುವುದು. ೨. ಹೆಣವನ್ನು ಸುಡಲು ಏರ್ಪಡಿಸಿರುವ ಸೌದೆಯ ಒಟ್ಟಿಲು; ಚಿತೆ: "ಚಿತ್ರ ಚಿತ್ಯೆ[ಪಾಠಾಂ. ಚಿತೆ, ಜಿತ್ಯೆ] ಯೆನಲು ಸಿದ್ಧಿಗೆಯದೆನಿಕ್ಕುಂ" (ಮಂಗರಾ. ೧೦೮-೭). [ ಸಂ. ಚಿತ್ಯ ]

**ಚಿತ್ರ** (ಗು). ೧. ಎದ್ದು ಕಾಣುವ; ಸ್ಪಷ್ಟ; ಸುವ್ಯಕ್ತ. ೨. ಪ್ರಕಾಶಮಾನವಾದ ; ಕಣ್ಣನ್ನು ಕೋರೈಸುವ ; ಮನೋಹರವಾದ. ೩. ವಿವಿಧ ವರ್ಣಗಳನ್ನುಳ್ಳ; ಶಬಲವಾದ ; ಚುಕ್ಕೆಗಳಿಂದ ಕೂಡಿದ. 'ಚಿತ್ರ ಕಂಬಲ' ಪರಾ. ೪. ಆಶ್ಚರ್ಯಕರವಾದ. 'ಚಿತ್ರಪ್ರಪಂಚ', 'ಚಿತ್ರ ಸಂಪುಟ' ಪರಾ. (ನಾ). ೫. ಚಿತ್ರಲೇಖನದ ಮೂರು ಬಗೆಗಳಲ್ಲಿ ಒಂದು : ಚಿತ್ರ ಚಿತ್ರಾರ್ಧ ಚಿತ್ರಾಭಾಸಮೆಂಬ ಮೂಱುಂ ಪ್ರಕಾರ ಮುಮಂ . . . ಪರಿಭಾವಿಸಿ ನೋಡಿ (ಮಲ್ಲಿಪು. ೩-೪೩). ೬. ಬರೆದ ಆಕೃತಿ ; ತಸವೀರು ; ಚಿತ್ತಾರ': ಕೇರಿಲ್ಲದೆ ಚಿತ್ರಮಂ ಬರೆವೆನೆಂಬ . . . ಪಚ್ಚಪಸಿಯೆಗ್ಗನಂ ಪೋಲ್ಕುಂ (ಧರ್ಮಾಮೃ. ೧-೬೭); ಆ ಪೂಜೆಯು ಆ ಮಾಟವು ಚಿತ್ರದ ರೂಹು ಕಾಣಿರಣ್ಣಾ (ಬಸವ ೧೨೬); ಭಿತ್ತಿಯ ಚಿತ್ರದಲಿ ತತ್ವ ತಾ ನೆರೆದಿಹುದೆ ಚಿತ್ರತತ್ವ ತನ್ನ ನಿಜದೊಳಗೆ ತ್ರೈಜಗದ ತತ್ವ ತಾನೆಂದ (ಸರ್ವಜ್ಞ. ೩೨೬); ಒಂದೆರಡು ಚಿತ್ರಗಳನ್ನೂ ಪುಸ್ತಕದಲ್ಲಿ ಸೇರಿಸಬೇಕು(ಬಾಡಿ.೬,ಕಥಾಮುಖ); ಸೆಮಿಟಿಕ್ ವರ್ಣಮಾಲೆಯ ಎಲ್ಲ ಲಿಪಿಗಳೂ ಮೊದಲಿಗೆ ಚಿತ್ರದ ಸಂಕೇತವನ್ನೇ ಹೊಂದಿದ್ದವು (ದ್ರಾವಿವಿ. ೫೦). ೭. ಆಶ್ಚರ್ಯ ; ಸೋಜಿಗ ; ಅದ್ಭುತ: ನಿನ್ನ ಚರಿತ್ರಂ ಚಿತ್ರಮೆಂದು ಪೊಗೞ್ವುದು ಜಗಂ (ಜಿನಾರಿ. ೩-೩); ಪುತ್ರಮುಖಾಬ್ಜಾ ಲೋಕನ ಮಾತ್ರದೊಳಂ ಪಿತ್ರ ತವಕ್ಕೆ ಪೋಕುಂ ಚಿತ್ರಂ(ಸುಕುಮಾ. ೯-೧೦೦); ತಾನು ಆದಟರಕ್ಕಸನ ಮೇಲಿರದೆ ಸಂಗ್ರಾಮವನೊದವಿಸಿದುದು ಚಿತ್ರವಲ್ತೆ (ತ್ರಿಪುಸಾಂ. ೩-೩೪); ಇಂದು ದುಶ್ಶಾಸನನ ಶೋಣಿತದೊಂದು ಕುಡಿತೆಯಲಾ ಮಹಾಶಿಖಿ ನಂದಿತೇನಿದು ಚಿತ್ರವಲ್ಲಾ ಸೂತ (ಕರ್ಣಾ.ಶ. ೦೯-೯೦). ೮. ಭದ್ರ; ಶುಂಭ. ೯. ಲೋಹ. ೧೦. ಬೊಟ್ಟು : "ತಿಲಕದೊಳು ಚಿತ್ರದೊಳು ಪುಂಡ್ರಮುಕ್ಕು" (ಮಂಗರಾ. ೧೩೨-೫೬). ೧೧. ಒಂದು ಬಗೆಯ ಮೂಲಿಕೆ. ೧೨. ವಾಯು ; ಮಾರುತ. ೧೩. ಚಲನಚಿತ್ರ; ಸಿನಿಮಾ: ಕನ್ನಡದಲ್ಲಿ ಈಚೀಚೆಗೆ ಬಹಳ ಚಿತ್ರಗಳು ತಯಾರಾಗುತ್ತಿವೆ (ರೂಢಿ). ೧೪. = ಚಿತ್ರಕವಿತ್ವ: ವ್ಯಂಗ್ಯಾರ್ಥವೇ ಇಲ್ಲದೆ ಇದ್ದರೆ 'ಚಿತ್ರ' ಅಥವಾ 'ಅಧಮಕಾವ್ಯ'ವಾಗುವುದು (ಕೈಪಿಡಿ. ೧೮೨); ಮಿಕ್ಕುದಲ್ಲವೂ 'ಚಿತ್ರ'ವೆಂದೇ ಮುಂದೆ ಪ್ರತಿಪಾದಿಸಲಾಗುತ್ತದೆ (ಧ್ವನ್ಯಾಲೋ. ೨೭). ೧೫. [ಕಾವ್ಯಮೀ] ಒಂದು ಅರ್ಥಾಲಂಕಾರ : ಚಿತ್ರಾಲಂಕಾರ : ಏನಾನುಮನೊಂದು ಸಂಸ್ಥಾನದಿನನುಕರಿಸುವಂತು ಭಂಗ್ಯಂತರದಿಂ ಪೀನವೊಡಂಬಡೆ ವಿರಚಿಸೆ ನಾನಾ ವಿಚ್ಛಿತ್ತಿ ಚಿತ್ರಮೆನಿಕುಂ ಪೆಸರಿಂ(ಕಾವ್ಯಾವ. ೫೬೮); ಭಾವಿಸಿ ನೋಡೆ ಪ್ರಶ್ನೋತ್ತರ ಪದಂಗಳ್ಗೊಂದೇ ತೀವಿದುತ್ತರವುಸುರೆ ಚಿತ್ರ (ಕುವಲ. ೧೫೦-೦). ೧೬. [ಛಂದ] ತ್ರಿಪದಿಯಲ್ಲಿ ಒಂದು ಬಗೆ : ಭುಜಗವಕ್ತ್ರಗತಿ ಶಿಖಿವ್ರಜಪದಗಣದೊಳಗಜರಸದ ಶರದೊಳ್ಪಱಿವೆಡೆಯೊಳಗಧೋಕ್ಷಜಗಣಮಾದೊಡದು ಚಿತ್ರಂ (ಛಂದೋಂಬು. ೩-೨೪೪); "ಮಾರುತ ಶುಭ ಲೋಹಾದ್ಭುತ ತಾರಕಿ ಮೂಲಿಕೆಯ ಭೇದ ಸಾಧನ ತಿಲಕಂ ಸಾರದೆ ಬಱಿಕೀಯೆಯಿಂಟುಂ ಧಾರುಣಿಯೊಳು ಚಿತ್ರಶಬ್ದಮೆನಿಕುಂ ನಿಜದಿಂ" (ನಾನಾರ್ಥಂ.೩೭).

**ಚಿತ್ರಪೆಡಂಗ** = ಒಂದು ಬಿರುದು. ೭ರಾಷ್ಟ್ರಕೂಟ ಖೊಟ್ಟಿಗದೇವನ ಬಿರುದು : ರಟ್ಟಕನ್ದರ್ಪ್ಪಂ ಚಿತ್ರಪೆಡ(ಡ)ಂಗ[ಂ] ಶ್ರೀಮತ್ ಕೊಟ್ಟಿಗದೇವ[ಂ] (ಇಳ. XII, ೨೫೭-೫ ; 971). [ ಸಂ. ]

**ಚಿತ್ರಂಬರೆ** (ಕ್ರಿ). ಚಿತ್ರವನ್ನು ಬರೆ ; ಚಿತ್ರಿಸು : ದಿನೇಶ್ವರಸುತನ ರೂಪು ಚಿತ್ರಂಬರೆದಂತಿರ್ದಪುದು ಚಿತ್ರಭಿತ್ತಿಯೊಳಿನ್ನಾ (ಗದಾಯು. ೫-೩೪). [ ಚಿತ್ರ + ಬರ್ $_1$ ]

**ಚಿತ್ರಕ** (ನಾ). ೧. ಚಿತ್ರವನ್ನು ಬರೆಯುವವನು : "(ರಂ)ಗಾಜೀವ ಚಿತ್ರಿಯೆನೆ ಚಿತ್ರಕಂ" (ಮಂಗರಾ. ೧೧೧-೨); ಚಿತ್ರಕನುಂ ತಾನು ಮಲ್ಲದೆ ಪೆಟರಜಿಯದಂತು ಕರುವಿಡಿಸಿ (ಶಂರಾಮಾ. ೩-೨೫ ವ); ಪ್ರಕಟಿಸಿದತ್ತು ಪದ್ಮಜನ ಪಕ್ಕದೊಳಿಟ್ಟರದಾತ್ಮಲೀಲೆಯಿಂ ಸುಕವಿಕದಂಬಕಂ . . . ಚಿತ್ರಕವ್ರಜಂ (ಪುಷ್ಪಪು. ೫-೨೦). ೨. ಚಿರತೆ. ೩. ಹುಲಿ. ೪. ಹಣೆಗೆ ಇಡುವ ತಿಲಕ,–ಬೊಟ್ಟು: "ಚಿತ್ರಕಂ ಪುಂಡ್ರಂ ಲಲಾಟಿಯೆನಲು ತಮಾಲ ಪತ್ರಮನೆ ತಿಲಕಮುದು" (ಮಂಗರಾ. ೯೯-೨೦). ೫. ಚಿತ್ರಮೂಲ ಎಂಬ ಗಿಡ ಮತ್ತು ಅದರ ಬೇರು: "ಚಿತ್ರಮೂಲಂ ವ್ಯಾಳವಗ್ನಿ ಚಿತ್ರಕವಕ್ಕು" (ಮಂಗರಾ. ೩೯-೨೬); ಚಿತ್ರಕಮಂ ತನಿವಾಲಿನಲ್ಲಿ ಪೊಯ್ದೊಡೆ ಪೆಱತೇನೊ ಸಂಪಗೆಯ ಗಂಧಮನೀಟ್ಟುಳಿಕೊಳ್ಳುಗುಮಾ ಪೊಸರ್ (ಲೋಕೋಪ. ೮-೪೮). ೬. ಹರಳಿನ ಗಿಡ. ೭. [ಕಾಮಶಾ]ಮಂದನ, ಚಿತ್ರಕ, ದಮನ ಮತ್ತು ಮಾಳವ ಎಂಬ ಪುರುಷರ ನಾಲ್ಕು ಬಗೆಗಳಲ್ಲಿ ಒಂದು : ಘನಕೃಶ ಸೂಕ್ಷ್ಮದೀರ್ಘ ವಿಕೃತಿತ್ವಮನೆಯ್ದದ ಹೇಮಪುತ್ರಿಕಾ ತನು ವಿವಿಧಾಂಬರಾಭರಣ ಭೂಷಣವಾಱಿದ ಕಸ್ತುರಿಗಂಪು ದಿವ್ಯಭೋಜನರುಚಿ ರೋಮ ಸಂಜನಿತ ಜಂಘೆಯನಂಗಮಕೋಕ್ತಿ ಚಿತ್ರನೀಸ್ವನಪರಿರಂಭಮುಖ್ಯ ಬಹು ಭೋಗದ ಚಿತ್ರಕನಾಮಮೊಪ್ಪುಗುಂ (ಮನ್ಮವಿ. ೨-೧೩). [ ಸಂ. ]

**ಚಿತ್ರಕಂಠ** (ನಾ). ೧. ಪಾರಿವಾಳ. ೨. ಚಾಲುಕ್ಯರ ಒಂದನೆಯ ವಿಕ್ರಮಾರ್ಜುನನ ಒಂದು ಕುದುರೆಯ ಹೆಸರು : ಸತ್ಯಾಶ್ರಯ ಶ್ರೀಪೃಥಿವೀವಲ್ಲಭ ಮಹಾರಾ[ಜಾ]ಧಿರಾಜ ಪರಮೇಶ್ವರಸ್ಯ ಪ್ರಿಯತನಯಃ ಚಿತ್ರಕಣ್ಠಾಸ್ಯ ಪ್ರವರತುರಙ್ಗಮೇಣೈಕೇನೈವ ಪ್ರತಿಹತಾನೇಕ ಸಮರಮುಖೇ . . . ನಿಜಭುಜನಿಜಿತವಿಜಿಗೀಷುಃ (ಪ್ರಾಆರಿ. ೦೯೩೯, ೩೦-೦೦ ; 670); (ಸೌಇಇ. XX, ೬-೭ ; 730 ನೋ). [ ಚಿತ್ರ + ಕಂಠ $_1$ ]

**ಚಿತ್ರಕಂಬಲ** (ನಾ). ಪಟ್ಟೆಪಟ್ಟೆಯಾದ ಕಂಬಳಿ ; ನಾನಾವಿಧವಾದ ಬಣ್ಣಗಳಿಂದ ಕೂಡಿದ ಕಂಬಳಿ ; ರತ್ನಗಂಬಳಿ : ಅಸ್ತರಣ=ಆನೆಯ ಮೇಲೆ ಹಾಸುವ ಚಿತ್ರಕಂಬಲ (ನಾಚಿರಾ. ೬). [ ಚಿತ್ರ + ಕಂಬಲ ]

**ಚಿತ್ರಕಂಬಳಿ** (ನಾ). = ಚಿತ್ರಕಂಬಲ : ಪ್ರವೇಣೀ . . : ಕುಥಃ–ಈ ಆನೆಯ ಬೆನ್ನು ಮೇಲೆ ಹಾಸುವ ಆನೆಗೆ ಹೊದಿಸುವ ಚಿತ್ರಕಂಬಳಿಗೂ ಚೀಣಾಂಬರಕ್ಕೂ ಹೆಸರುಗಳು (ಸಿದ್ಧಾಂತಿ. ೨೧೪).
[ ಚಿತ್ರ + ಕಂಬಳಿ ]

**ಚಿತ್ರಕಥೆ** (ನಾ). ೧. ಆಶ್ಚರ್ಯಕರವಾದ ಕಥೆ ; ವಿಚಿತ್ರವಾದ ಕಥೆ : ಸುಮತಿ ಚಿತ್ರಕಥೆಯನಿಂತೆಂದು ಪೇಟಲ್ತಗುಳ್ದರ್ (ಸುಕುಮಾ. ೬-೧೬ ವ). ೨. ಚಿತ್ರಗಳ ಸಹಾಯದಿಂದ ನಿರೂಪಿಸಿರುವ ಕಥೆ : ಪತ್ರಿಕೆಗಳಲ್ಲಿ ಮಕ್ಕಳಿಗಾಗಿ ಚಿತ್ರಕಥೆಗಳನ್ನು ಪ್ರಕಟಿಸುತ್ತಾರೆ (ರೂಢಿ). ೩. ಚಲನಚಿತ್ರಕ್ಕೆ ಅಳವಡಿಸಿದ ಕಥೆ : ಈ ಚಿತ್ರದ ದಿಗ್ದರ್ಶಕರೇ ಚಿತ್ರಕಥೆಯನ್ನೂ ಬರೆದಿದ್ದಾರೆ (ರೂಢಿ). [ ಚಿತ್ರ + ಕಥೆ ]

**ಚಿತ್ರಕರ** (ನಾ). ಚಿತ್ರ ಬರೆಯುವವನಂ ; ಚಿತ್ರಕಾರ : ಸಕಳಾಳಾಪಕಳಾ ಕಳಾಪಕಥಿತ ವ್ಯಾವೃತ್ತಿಯೊಳ್ಕೂಡಿ ಚಿತ್ರಕರಂಬೊಲ್ಪರಭಾಗಭಾವವಿಲಸದ್ವರ್ಣಕ್ರಮಾವೃತ್ತಿಯಂ ಪ್ರಕಟಂ ಮಾಡಿರೆ ಪೇಟ್ದ ಚಿತ್ರಕೃತಿಯಂ ವ್ಯಾವರ್ಣಿಸುತ್ತುಂ (ಕವಿರಾ. ೧-೧೪೯). [ ಸಂ. ]

**ಚಿತ್ರಕರ್ಮ** (ನಾ). ೧. ಚಿತ್ರವನ್ನು ಬರೆಯುವುದುಂ ; ಚಿತ್ರರಚನೆ : ರಸಭಾವಕಂಚುಕಿತ ಚಿತ್ರಕರ್ಮಂಗಳಿಂದದೊರ್ಮೆ . . . ಕಳೆವನಿಂತು ಪೊೞ್ತಂ ನೃಪಂ (ಕಾದಂಪೂ. ೨೦). ೨. ಬರೆದ ಆಕೃತಿ ; ಚಿತ್ರ : ದುರ್ವಹಮಹಮಿಂದ್ರರೇಂ ಸುಖದ ಲೆಪ್ಪಮೊ ಪುಣ್ಯದ ಚಿತ್ರಕರ್ಮಮೋ (ಶಾಂತಿಪು. ೯-೩೪). ೩. ಕೆತ್ತನೆಯ ಕೆಲಸ; ಕುಸುರಿಗೆಲಸ : ಪಚಿಸಿದುವೊ ಚಿತ್ರಕರ್ಮಂಚಿತ್ತ ದೈತ್ಯಕುಲ ದೇವತಾಮೂರ್ತಿಗಳ್ ? (ಶ್ರೀರಾಮಾ. ೪೭೨-೬೨೨); ಸ್ವರ್ಣಕಾರನೆ ಬಲ್ಲನುಳಿದವರರಿಯರು ಚಿನ್ನದ ಚಿತ್ರಕರ್ಮವನು (ಇಂಜಾಕ. ೬೭-೨೫). [ ಸಂ. ಚಿತ್ರಕರ್ಮನ್ ]

**ಚಿತ್ರಕಲೆ** (ನಾ). ಚಿತ್ರವನ್ನು ಬರೆಯುವ ವಿದ್ಯೆ : ಕೆಲವು ಕಡೆಗಳಲ್ಲಂತೂ ಚಿತ್ರಕಲೆಯನ್ನು ಸರ್ವಕಲೆಗಳಿಗೂ ಆಧಾರಭೂತವಾದುದೆಂದು ಹೊಗಳಲಾಗಿದೆ (ಕಚಾಅ. ೪೫೯). [ ಚಿತ್ರ + ಕಲೆ$_3$ ]

**ಚಿತ್ರಕವಿತ್ವ** (ನಾ). [ಕಾವ್ಯಮೀ] ಚಮತ್ಕಾರಪೂರ್ಣವಾದ ಶಬ್ದವೈಚಿತ್ರ್ಯವುಳ್ಳ ಕಾವ್ಯ : ಅಕ್ಷರಗಳನ್ನೂ ಪದಗಳನ್ನೂ ಕುಶಲತೆಯಿಂದ ಆರಿಸಿ ಜೋಡಿಸಿ ಕವಿಗಳು ಉಂಟುಮಾಡುವ ಇತರ ಶಬ್ದವೈಚಿತ್ರ್ಯಕ್ಕೆ ಚಿತ್ರಕವಿತ್ವವೆಂದೂ 'ಬಂಧ' ವೆಂದೂ ಹೆಸರು (ಕೃಬಿಡಿ. ೨೫೪).
[ ಚಿತ್ರ + ಕವಿತ್ವ ]

**ಚಿತ್ರಕಶಕ್ತಿ** (ನಾ). ಚಿತ್ರವನ್ನು ಕಲ್ಪನೆ ಮಾಡಿಕೊಳ್ಳುವ ಶಕ್ತಿ ; ಕಲ್ಪನಾಶಕ್ತಿ : ನನ್ನ ಚಿತ್ರಕಶಕ್ತಿ ಉತ್ಪ್ರೇಕ್ಷೆಯನೇರಿ ಬಣ್ಣಬಣ್ಣದ ಬಣ್ಣನೆಗೆ ಒಲೆದಿತು (ಸಚೀಗೀ. ೨೫-೪೪೩) : ಇಲ್ಲಿನ ವಿಶೇಷತೆ, ಚಿತ್ರಕಶಕ್ತಿ (Fancy) ಯಿಂದ ಪ್ರತಿಮಾನಿರ್ಮಾಣದವರೆಗೆ ಈ ಕಲ್ಪನಾಸೌಂದರ್ಯದಲ್ಲಿ ಮಜಲುಗಳಿವೆ (ಸೌಂದಸ. ೨೯). [ ಚಿತ್ರಕ + ಶಕ್ತಿ ]

**ಚಿತ್ರಕಾಯ** (ನಾ). ೧. ಸುಂದರವಾದ ದೇಹ. ೨. ಹುಲಿ : "ವ್ಯಾಘ್ರಃ . . . ಚಿತ್ರಕಾಯಃ, ಮೃಗಾರಿಃ–ಈ ೭ ಹುಲಿ " (ಹಲಾಯು. ೩೮-೬೩) : ಚಿತ್ರಕಾಯನಂ ತಪ್ಪಿಸಿ ತಂದು ತೋಟಿ ಬಿಡು ಪೋಪ ಮೃಗಾಳಿಗೆ (ಉದ್ಭಟ. ೨-೫೦). ೧, ೨ : ಮತ್ತಮಾ ಮಹಾವನಂ ಯೌವನದಂತೆ ಮದನೋತ್ಕಳಿಕಾಕಮನೀಯಮುಂ ಚಿತ್ರಕಾಯಶೋಭಾಪ್ರಾಯಮುಂ (ಚಂದ್ರಪ್ರ. ೫-೫೨ ವ) : ಮತ್ತಮಾ ಮಂಟಪಂ . . . ಚಿತ್ರಕಾಯಾಶ್ರಿತಮಾಗಿಯುಂ ಮೃಗಮದಸಮೃದ್ಧಿಭಾಜನಮುಂ (ರಾಜಶೇ. ೮-೮ ವ). ೩. ಚಿರತೆ. [ ಚಿತ್ರ + ಕಾಯ ]

**ಚಿತ್ರಕಾಯಾಜಿನ** (ನಾ). ಹುಲಿಯ ಚರ್ಮ,–ತೊಗಲು: ಮುಂದೆ ಚಿತ್ರಕಾಯಾಜಿನದ ಸುಲಿಪಲ್ಲ ಭಸಿತದ ಜಟಾಭರದ ಮುನಿನಾಥನು . . . ಪರಿಕರಂಗಳಂ ಸಪರಟ್ಟುತಿರಲು ಭೂಪತಿ ಕಂಡನು (ಹದಶಾ. ೫-೫೪).
[ ಚಿತ್ರಕಾಯ + ಅಜಿನ ]

**ಚಿತ್ರಕಾರ** (ನಾ). ಚಿತ್ರವನ್ನು ಬರೆಯುವವನು. [ ಸಂ. ]

**ಚಿತ್ರಕಾವ್ಯ** (ನಾ). [ಕಾವ್ಯಮೀ] ವ್ಯಂಗ್ಯಾರ್ಥರಹಿತವಾದ ಕಾವ್ಯರಚನೆ: ರೀತಿಗುಣಾಲಂಕಾರಗಳಿಂದ ಮಾತ್ರ ಕೂಡಿದ ಶಬ್ದಾರ್ಥಗಳು ಒಂದು ಪಕ್ಷ ಕಾವ್ಯವಾದರೂ 'ಚಿತ್ರಕಾವ್ಯ' ವಾಗಬಹುದೇ ಹೊರತು ಉತ್ತಮಕಾವ್ಯವಾಗಲಾರವು (ಕೃಬಿಡಿ. ೧೬೩) ; ವ್ಯಂಗ್ಯಾರ್ಥಶೂನ್ಯವಾದ 'ಚಿತ್ರಕಾವ್ಯ' ವೆಂಬ ಜಾತಿಯನ್ನು ಕುರಿತು ಮಾತಾಡುತ್ತಾ . . . ಎನ್ನುತ್ತಾನೆ (ಭಾರಮೀ. ೬೬). [ ಚಿತ್ರ + ಕಾವ್ಯ ]

**ಚಿತ್ರಕುಟಿ** (ನಾ). ಡೇರೆ; ಗುಡಾರ: "ಚಿತ್ರಕುಟಿ ಗುಣಲಯನಿ ದೂಷ್ಯಮೆನೆ ಗುಡಿಯಕ್ಕು" (ಮಂಗರಾ. ೮೫-೨೬). [ ಚಿತ್ರ + ಕುಟಿ$_2$ ]

**ಚಿತ್ರಕೃತಿ** (ನಾ). ೧. ಚಿತ್ರರಚನೆ ; ಚಿತ್ರ. ೨. ವೈವಿಧ್ಯಪೂರ್ಣವಾದ ಕೃತಿ. ೧,೨: ಚಿತ್ರಕರಂಬೊಲ್ಪರಭಾಗಭಾವವಿಲಸದ್ವರ್ಣಕ್ರಮಾವೃತ್ತಿಯುಂ ಪ್ರಕಟಂಮಾಡಿರೆ ಪೇಟ್ದ ಚಿತ್ರಕೃತಿಯಂ ವ್ಯಾವರ್ಣಿಸುತ್ತುಂ (ಕವಿರಾ. ೧-೧೪೯). [ ಚಿತ್ರ + ಕೃತಿ$_1$ ]

**ಚಿತ್ರಗತಿ** (ನಾ). ಆಶ್ಚರ್ಯಕರವಾದ ಚಲನೆ,–ಗಮನ : ಬರಿಕೈಯ ಲೌಡಿಯ ವಜ್ರಮುಷ್ಟಿಗಳ ನಾಳಿವಿಲುಗಳ ರಾಯಜೋಧರ ಮೇಳವಣೆಗಳ ಚಿತ್ರಗತಿ ಶುಂಡಾಲವನು ನೋಡಿದರು ಗಜಸೇನಾಸಮುದ್ರದಲಿ(ಕುವ್ಯಾಉ. ೧೧-೧೯): ಉರುತೆಟಿದ ಮೂದೆಟಿದ ಕೈದುಕಾಱರು ಸಿಂಗವಱಗಳೆನೆ ಕಡುಕೆಯ್ದು ಹೊಣಿಸಿ ಪಟಾರಿಸುತೆ ಮಾಗತಿ(ನಿ) ಚಿತ್ರಗತಿಯಿಂ (ಸಾಳ್ವಭಾ. ೨೫-೦೪) ; ಪದ್ಯಕಾವ್ಯದ ಶಬ್ದಯೋಜನೆಯಲ್ಲಿ ಧ್ವನಿಯು ಮಾತೊಂದು ಹುದುಗಿ ಬರುವದು, ಚಿತ್ರಗತಿಯು ಮಾತೊಂದು ಸಮರಸವಾಗಿ ಸೇರಿ ಬರುವದು (ಸಾಹಿವಿ. ೮೨). [ ಚಿತ್ರ + ಗತಿ ]

**ಚಿತ್ರಗಾರ** (ನಾ).=ಚಿತ್ರಕಾರ : ನನ್ನ ಚಿತ್ತದೊಳಿರುವ ಚಿತ್ರಗಾರನು ಬರೆದ ಚಿತ್ರಕೆ ಬಹದೆಂದೊ ಜೀವಕಳೆ? (ಸಚೀಗೀ. ೨೮-೫೨೦) ; ಅವನು ನಮ್ಮ ಪತ್ರಿಕೆಯ ಚಿತ್ರಗಾರನಾಗಬಹುದು (ಕಾಲಿಮ. ೪೫) : ಕತ್ತೆ ಚಿತ್ರಗಾರನ ವಿಂಡ (ಗಾದೆ). [ <ಸಂ. ಚಿತ್ರಕಾರ ]

**ಚಿತ್ರಗೀತೆ** (ನಾ). ಚಲನಚಿತ್ರದ ಗೀತೆ ; ಸಿನಿಮಾಹಾಡು : ಆ ಚಿತ್ರಗೀತೆಯ ಬಿಟ್ಟಾವುದಿದ್ದರು ಶ್ರವಣಾರ್ಹವಲ್ಲವೆನ್ನುವರು (ಚಂದ್ರವೀ.೨-೪೬).
[ ಚಿತ್ರ + ಗೀತೆ ]

**ಚಿತ್ರಗುಪ್ತ** (ನಾ). ೧. ಮನುಷ್ಯರು ಮಾಡುವ ಪಾಪಪುಣ್ಯದ ಕರ್ಮಗಳನ್ನು ಬರೆದಿಡುವನೆಂದು ನಂಬಲಾದ ಯಮಲೋಕದ ಗುಮಾಸ್ತ: ಯಮನ ಭಟರು ಕರುಣರಸಮಯರೆ ಮಱವೆಯೆ ಚಿತ್ರಗುಪ್ತರಿಗೆ (ಕೃವಲ್ಯ. ೩೯-೨) ; ನಿನ್ನ ಕೃಪೆ ಎಂದಾಗ'ಬ್ರಿಟಿಷ್'ಪ್ರಭುತ್ವ ಎಂದೇ ಇತ್ತು ಎಂದು ಚಿತ್ರಗುಪ್ತನು ಬರೆದುಕೊಂಡನಂತೆ (ಮುಲ್ಲ. ೫೦). ೨. (ಆಲಂ) ಚಾಡಿಕೋರ ; ಪಿಸುಣ : ಅಧಿಕಾರವಲಯಗಳಲ್ಲಿ ನಡೆಯುವ ಘಟನೆಗಳನ್ನು ಈ ಚಿತ್ರಗುಪ್ತನು ಮೇಲಧಿಕಾರಿಗಳಿಗೆ ವರದಿ ಮಾಡುತ್ತಾನೆ (ರೂಢಿ). [ ಸಂ. ]

**ಚಿತ್ರಗೃಹ** (ನಾ). ಚಿತ್ರಗಳನ್ನು ಬರೆದಿಡುವ ಸ್ಥಳ ; ಚಿತ್ರಶಾಲೆ : ಅದೇ ಮನೆಯ ಚಿತ್ರಗೃಹದಲ್ಲಿ ಅವನನ್ನು ಬಂದಿಯಾಗಿ ಮಾಡಿದ್ದನು (ಬಂಕಿಮ. ೦೮೦). [ ಚಿತ್ರ + ಗೃಹ ]

**ಚಿತ್ರಗೆಲಸ** (ನಾ). ಚಿತ್ರಗಳನ್ನು ಬರೆಯುವ ಕೆಲಸ ; ಕುಸುರಿಗೆಲಸ : ಬರಿಸು ನಾನಾದೇಶದ ಚಿತ್ರಗೆಲಸದವರ ವಿಶ್ವಕರ್ಮ ಸಂತತಿಯ (ಕಂನವಿ. ೨೦-೮). [ ಚಿತ್ರ + ಕೆಲಸ ]

**ಚಿಮಟಿಗೆ** ‘ ಚಿಮ್ಮುಟಿಗೆ ’ ನೋ.
**ಚಿಮಟು** ‘ ಚಿವುಂಟು ’ ನೋ.
**ಚಿಮಟೆ** ‘ ಚಿಮ್ಮುಟ ’ ನೋ.
**ಚಿಮಣಿ** (ನಾ). ೧. ಹೊಗೆ ಹೋಗುವ ನಳಿಕೆ ; ಹೊಗೆಗೂಡು : ಅದುವೆ ಫ್ಯಾಕ್ಟರಿ ಚಿಮಣಿಗಳೆರಡು ಹೊಗೆಯನ್ನು ಉಗುಳುವ ಕೊಳವೆಯ ಜೋಡು (ಕಪು. ೪-೧೧೪); ಕಾರ್ಖಾನೆಯ ಚಿಮಣಿಗಳಂತೆ ಕಂಡಿರಬೇಕು(ಉದಕ. ೩) ; ಸುಟ್ಟು ಕಪ್ಪಾಗಿ ಕಾಣುವ ಚಿಮಣಿಗಳು (ಯೋಧಪು. ೧). ೨. ದೀಪದ ಬುರಡೆ ; ದೀಪಕ್ಕೆ ಹಾಕುವ ಗಾಜಿನ ಬುರುಡೆ ; ದೀಪದ ಪಾವು (ಉಕ) : ದೀಪಕದ (Burner) ಮೇಲೆ ಚಿಮಣಿಯನ್ನು ಹಾಕುವುದೂ ಇದೇ ಉದ್ದೇಶದಿಂದ (ಭೌತವಿ. ೨೯೪). ೩. ಸೀಮೆಯೆಣ್ಣೆಯ ಬುಡ್ಡಿ : ಗೋಡೆಯೊಂದಕ್ಕೆ ನೇತಾಡುತ್ತಿದ್ದ ಚಿಮಣಿಯ ದೀಪದ ಮಂದಪ್ರಕಾಶದಲ್ಲಿ ಅಲ್ಲಿನ ದೃಶ್ಯ ನಿಧಾನವಾಗಿ ಆತನ ಕಣ್ಣುಗಳೆದುರಿಗೆ ಮೂಡಿತು(ಜ್ಞಾರಾಮ. ೦೩೯); ಸೀಮೆಎಣ್ಣೆಯ ಚಿಮಣಿಯ ಬುಡ್ಡಿ ಉರಿಯುತ್ತಿತ್ತು (ರಂಗರೋ. ೦೦೪); ಉರಿಯುವ ಚಿಮಣಿಯನ್ನು ಆರಿಸಲು ಅವಳಿಗೆ ನೆನಪಾಗಿರಲಿಲ್ಲ (ಚಂದ್ರಶಾ. ೧). [ ←ಇಂ. Chimney ]
**ಚಿಮಣಿಎಣ್ಣೆ** (ನಾ). ಕಲ್ಲೆಣ್ಣೆ ; ಸೀಮೆಎಣ್ಣೆ : ಏಕೆ ಮನೆಯಲ್ಲಿ ಚಿಮಣಿ ಎಣ್ಣೆ ಇದ್ದಿಲ್ಲವೇನು ? (ಉರಿಹಿಂ. ೭೩) : ಚಿಮಣಿಎಣ್ಣೆಯ ದೀಪಗಳು ಕಾಣಿಸಿಕೊಂಡುವು (ಮೂರುದಾ. ೧೦೩). P ಈ ಶಬ್ದ ಸೀಮೆಎಣ್ಣೆ ಎಂಬುದರಿಂದಲೂ ಬಂದಿರಬಹುದು. [ ಚಿಮಣಿ + ಎಣ್ಣೆ ]
**ಚಿಮರು** (ನಾ). ಕಣಿಕೆ; ಜೀರುಂಗುಣಿಕೆ: ಒಂದು ಹಗ್ಗವನ್ನು ದೋಣಿಯ ಮುಂದಿನ ಶಿಖರಕ್ಕೆ ಚಿಮರುಹಾಕಿ ಕಟ್ಟಿ (ಚಂಗಾಳ. ೫೦೩). [ ? ]
**ಚಿಮಿಚಿಮಿ** (ನಾ). ಒಂದು ಅನುಕರಣ ಶಬ್ದ : ಹಸಿಪದಾರ್ಥಗಳಂ ಸುಡುವಾಗ ಉಂಟಾಗುವ ಶಬ್ದ : ಮೃಗಶಿಶುಗಳ್ ಕರಿಮುರಿ ಕಣ್ಗೊಗೆದ ಮಾರಂ ಫುರಿಫುರಿಲ್ ಗಜಂ ಚಿಮಿಚಿಮಿಯೆಂದು . . . ಸೀದುವು (ಗಿರಿ. ೯-೫೫) : ಆ ದೆಸೆ ಚಿಮಿಚಿಮಿಯೆನುತುರಿದುದು ಗಗನ ಪಾಜಿದುದು (ವರ್ಧಮ. ೬-೨೮). ‘ ಸಿಮಿಸಿಮಿ ’ ಪರಾ.
**ಚಿಮಿಚಿಮಿಸು**(ಕ್ರಿ). ಚಿಮಿಚಿಮಿ ಎಂಬ ಶಬ್ದಮಾಡು: “ ಚಿಮಿಚಿಮಿಸು- ಶಬ್ದೇ. ಲಾಡನೇ ಚ (ಹೊರಳಾಡು) ” (ಶಮಧಾ) ; ಚಿಮಿಚಿಮಿಸ ಕಾಳಸುವುದುಂ ಇಕ್ಷುಯಂತ್ರಂಗಳಿಂ ಪಿಟ್ಪುದುಂ ಬಿಸಿದ ದಸಿಯೊಳ್ ತೆಗೆವುದುಂ . . . ಮೊದಲಾದ ಪಲವುಂ ತೆಱದ ದಾರುಣೋದಗ್ರನಿಗ್ರಹ ವಿಗ್ರಹಕ್ಕೆ ತಮ್ಮ ವಿಗ್ರಹಂಗಳನೊಡ್ಡಿ (ಕುಕುಮಾ. ೦೧-೪೭ ವ) ; ಚಿಮಿಚಿಮಿಸಿ ಕಾಯ್ದು ಧೂಮಂ ಸಮಿಯ ಹೊಗೆಯನುಗುಳೆ (ಟಿಹಿರ. ಹ. ೨೦೯-೫) : ದಿಗ್ದಾವಾನಲಂ ಪರ್ವೆ ಚಿಮಿಚಿಮಿಸಿ ಸುಡುತಿರ್ದುದಖಿಳ ಜೀವಾದಿಗಳನು (ವೀಕ್ಷ್ಯ. ೩-೧೯-೦೧) : ಪರಿವರುಣಜಲದಿನುಣ್ಮುದ ಕರುಳಿಂ ಚಿಮಿಚಿಮಿಸುತಿರ್ಪ ಕೋಟ್ಕೆದುಟಿಂ ಸಂಗರರಂಗವಮಾವಗಂ ಕೊಕ್ಕರತೆಯನೊಡರಿಸದದಾರ ಕಣ್ಗಂ ಮನಕಂ (ರಸರ. ೭-೧೨೬). ‘ಸಿಮಿಸಿಮಿಸು’ ಪರಾ. [ ಚಿಮಿಚಿಮಿ + – ಇಸು$_3$ ]
**ಚಿಮುಕಿಸು, ಚಿಮುಕಿಸು** (ಕ್ರಿ). (ದ್ರವವನ್ನು) ಎರಚು ; ಸಿಂಪಡಿಸು ; ತಳಿ ; ಸಿಂಪಿಸು : ಸಿಮೆಂಟ್, ಸುಣ್ಣದ ಕಳಿ . . . ಇವನ್ನು ಅದುಮಿದ ಗಾಳಿಯಿಂದ ತುಂತುರು ತುಂತುರಾಗಿ ಚಿಮುಕಿಸುತ್ತಾರೆ (ಶಿಲ್ಪನಾ. ೨೦೦); ಅದರಲ್ಲಿದ್ದ ರಸವನ್ನು ರೋಗಿಯ ತಲೆಯ ಮೇಲೆ ಚಿಮುಕಿದನು (ಮಣಸ. ೧೬) : ಅವರೆಲ್ಲರೂ ಬಾಳೆಎಲೆಗಳನ್ನು ನೀರು ಚಿಮುಕಿಸಿ ತೊಳೆದುಕೊಂಡರು (ಚಂಗಾಳ. ೨೦) : ನಾವು ಕುಳಿತಲ್ಲಿಂದ ಚಂದ್ರನ ಬೆಳ್ಳಿಎಲೆಗಳ ಮೇಲೆ ರೇಕುಗಳನ್ನು ಚಿಮುಕಿಸಿದಂತೆ ಕಾಣುತ್ತಿತ್ತು (ಅಂಡಪ. ೦೧೨). ಚಿಮುಕಿಸು : ಪಣೆಯ ಮೇಲೆ ಚುಮುಕಿದಳು (ದೌಂಕ್. ೪೫).
[ ಚಿಮುಕು + – ಇಸು$_3$ ]

**ಚಿಮುಕು, ಚಿಮುಕು** (ಕ್ರಿ). ಸಿಂಪಡಿಸು ; ತಳಿ. ‘ ಚಿಮುಕಿಸು ’ ಪರಾ. ಚಿಮುಕು : ‘ ಚಿಮುಕಲು ’ ಪರಾ. [ <ಚಿಮ್ಮು$_1$ ]
**ಚಿಮುಟ** ‘ ಚಿಮ್ಮುಟ ’ ನೋ.
**ಚಿಮುಟಾಂಗ** (ನಾ). ಇಕ್ಕುಳದ ಆಕಾರವುಳ್ಳ ಸಾಧನ ; ಪಟಕಾರ : ಶಸ್ತ್ರಚಿಕಿತ್ಸೆಯ ಚಿಮುಟ . . . ಚಿಮುಟದಂಥ ಅಂಗ: ಚಿಮುಟಾಂಗ (Forceps. ಇಂಗ್ಲಿ) ; ಮೂರನೆ ಅಥವಾ ಕೊನೆ ತುಂಡು, ಎರಡನೆ ತುಂಡಿನ ಕೊನೆಯಲ್ಲಿ ಕೀಲುಗೊಂಡು ಒಂದು ಜೊತೆ ಸೂಕ್ಷ್ಮವಾದ ಚಿಮುಟಾಂಗಗಳಾಗಿವೆ (ಕೀಟಜ. ೮೬).
[ ಚಿಮುಟ (<ಚಿಮ್ಮುಟ) + ಅಂಗ$_2$ ]
**ಚಿಮುಟಗೆ** ‘ ಚಿಮ್ಮುಟಗೆ ’ ನೋ.
**ಚಿಮುಟು, ಚಿವುಟು$_1$** (ಕ್ರಿ). (ಕಣ್ಣನ್ನು) ಮಿಟುಕಿಸು. – ಮಿಡಿ : (ಕ). ಚಿವುಟು$_1$ : ‘ ಕಣ್ಚಿವುಟು ’ ಪರಾ.
[ ದೇ.೩ ತಮಿ. ಚಿಮಿಟ್ಟು, ಚಿಮಿಟ್ ; ಮಲ. ಚಿಮಿಟ್ಟು ]
**ಚಿಮೂಕ** (ನಾ). ಒಂದು ಬಗೆಯ ಪಕ್ಷಿ : ಚಿಮೂಕ ದೊಡ್ಡ ಮರಪಕ್ಕಿ (ಅಕಾವಿ. ೧೦=೩೫). [ ? ]
**ಚಿಮ್ಕುಂಡೆ, ಜಿಮ್ಕುಂಡೆ** (ನಾ). ಜೀರುಂಡೆಹುಳು; ಜೀರುದುಂಬಿ : ವನದ ಚಿಮ್ಕುಂಡೆಗಳ ಘೋರಧ್ವನಿಗಳಲಿ ಕಿವಿ ಮೃಗಕುಲದ ಸೊಗಸಿನಲಿ ನಾಟಿದ (ಕುಮ್ಯಾಭ. ೦೩-೫೦). **ಜಿಮ್ಕುಂಡೆ** : “ ರಿಙ್ಗಿಕೆಯನಲ್ ಜಿಮ್ಕುಂಡೆಗಕ್ಕು ನಾಮಂ ” (ಮುಂಗರಾ. ೫೨-೦೦).
[ ದೇ.೩ ತಮಿ. ಮಲ. ಚಿಮಿಳಿ ; ತೆಲು. ಚಿಮಟ, ಚಿಮ್ಮಟ, ಚಿಮ್ಮಟ, ಚಿಮ್ಮಟ ]
**ಚಿಮ್ಮಚನೂರ್** (ನಾ). ಒಂದು ಊರಿನ ಹೆಸರು : ಕಟಿಯಯರಯ್ಯಪ ದೇವನುಂ ಚಿಮ್ಮಚನೂರ ಮಂಹಾರಾಜಯ್ಯನುಂ (ಎಕ. XI; ಚಿತ್ರದು. ೭೩-೨೦:.987). [ ? + ಊರ್ ]
**ಚಿಮ್ಮಟ** ‘ ಚಿಮ್ಮುಟ ’ ನೋ.
**ಚಿಮ್ಮಟ** ‘ ಚಿಮ್ಮುಟ ’ ನೋ.
**ಚಿಮ್ಮಟಗೆ, ಚಿಮಟಗೆ, ಚಿಮುಂಟಗೆ** (ನಾ). ೧.=ಚಿಮ್ಮುಟ ೧: ಚಿಮ್ಮಟಗೆಯಲಿ ಮುಳ್ಳನು ಪೊತ್ತಿ ಅಮರಿಸಿದಂತೆ (ಜ್ಞಾಸಹಿ. ೦೮-೮೩). **ಚಿಮುಟಗೆ:** ೧. ಕರಗಿದ ಬೆಳ್ಳಿಯನ್ನು ಹುಬ್ಬ ಗಟ್ಟಿಗನಾದ ಮನುಷ್ಯನು ಯರಡು ಚಿಮಟಗೆಗಳಿಂದ ಹಿಡಿದು ಯತ್ತಿ, ಮುಣ್ಣಿನ ಹಲಿಗೆಗಳಲ್ಲಿ ಮಾಡಿದ ಕಾವಲಿಗಳಲ್ಲಿ ಸುರುವುವನು (ಕಥಾಗ. ೫೮೨) : ಹಡಪಿಗನು ಕನ್ನಲ್ಲಿರುವ ಚಿಮುಟಗೆಯಿಂದ . . . ಆ ಕಾಳನ್ನು ತೆಗೆದು (ಮದಂಶ. ೩೮). ೨. ಹೆಬ್ಬೆರಳು ಮತ್ತು ತೋರುಬೆರಳಿನಲ್ಲಿ ಹಿಡಿಯುವಷ್ಟು ಪ್ರಮಾಣ : ಒಂದು ಚಿಟಿಕೆ : ಟೊಂಕದಲ್ಲಿಟ್ಟ ನಶುವಿನ ಡಬ್ಬಿಯನ್ನು ತೆಗೆದು ಒಂದು ಚಿಮಟಗೆ ನಸ್ಯವನ್ನೇರಿಸುತ್ತ (ಸಮಾಜ. ೨೬೩): ಒಂದು ಚಿಮಟಗೆ ಮಣ್ಣನ್ನು ತೆಗೆದು ಕೊಂಡು ಬಾಯಲ್ಲಿ ಹಾಕಿಕೊಂಡಳು (ಮಹ್ರಾ. ೧೨೫). **ಚಿಮುಟಗೆ** : ೨. ಚಿಮುಟಗೆಯಷ್ಟು ಇದ್ದಲಿಯ ಪುಡಿಯನ್ನು ಗೇಣುದ್ದ ಹಾಳೆಯ ಚೂರಿನ ಮೇಲೆ ಗಳ್ಳೆದು (ಮುಡಾರ. ೦೦೦).
[ ಚಿಮ್ಮಟ (<ಚಿಮ್ಮುಟ) + – ಇಗೆ$_6$ ]
**ಚಿಮ್ಮಲು** (ನಾ). ಚಿಮ್ಮುವ ಸಾಧನ ; ಪಿಚಕಾರಿ : ಓಕುಳಿಯ ಮಾರತ್ತಿ ಚಿಮ್ಮಲೋಳಟ್ಟು ಜಗಿದು ಕೊಳದೊಳು (ಜನಮಾ. ೪೮-೪೬). ‘ಚಿಮ್ಮುಗೋವಿ’ ಪರಾ. [ ಚಿಮ್ಮು$_1$ + – ಅಲು (< – ಅಲ್$_2$) ]
**ಚಿಮ್ಮಿ$_1$** (ನಾ). ಒಂದು ಬಗೆಯ ಪಳಿದ್ಯ : ಸಕಲ ಸಂಭಾರಂಗಳ ಅಮ್ಮಿ ಕಲ್ಲೊಳಗರೆದು ನುಣುಗುವಂದದಿ ಕಾಸಿ ಕಮ್ಮನೆಯ ತುಪ್ಪದೊಳು ಪೊಡ್ಡಣಿಗೆಯಂ ಕೊಟ್ಟು ಚಿಮ್ಮಿಯೆಂದೆಂಬ ಹೆಸರಂ ಕೊಟ್ಟು ನವ ಪರಿಮಳವನು ಭಾವನೆಗೊಡುವುದು (ಸೂಪಶಾ. ೨-೪೮). [ ? ]

**ಚಿಮ್ಮಿ₂** (ನಾ). ಚರ್ಮ (?): ಚರಣದೊಳಿಸವ ಚಿಮ್ಮಿಯು ಕೆಂಪು ಬಿಗಿದುಟ್ಟ ಮರಕತವಟ್ಟಿ ಮಾಂದಳಿರು ಸಿರದಲಿ ಮೆಟ್ಟಿಯ (ಚೋಹಚ. ೧೯-೩೨).

[ ? ]

**ಚಿಮ್ಮಿಸು** (ಕ್ರಿ). ೧. ಬೆರಳಿನಿಂದ ಮಿಡಿ,–ಮಿಟು. ೨. ಹಾರಿಸು: ನೆಗೆಯಿಸು: ವಾನರರಿಗೋಸುಗ ಗಿರಿಯವೆತ್ತಿ ಚಿಮ್ಮಿಸಿ ನೆಲಕ ನಿಲಿಸಿದೆ ನೀ ಅಸಮ ಹನುಮಂತ (ಪುರಂದ. ೨-೬೫-೩). ೩. ಹೊರ ಹೊಮ್ಮಿಸು; ಸ್ರವಿಸು: ಪಸಿದಟುಕಿರ್ಪ ಬಾಲಕನ ಪಾದಮನಾವಿಸಿ ಗೇಹಕೃತ್ಯಮಂ ಬಸುಟತಿವೇಗದಿಂ ಪರಿದು ಸೋಗಿಲೊಳದ್ದಮಿಟ್ಟು ಚಿಮ್ಮಿಸಿ ಮೊಲೆವಾಲ್ಗಳಂ . . . ಸಾರ್ಚಿ ಮೊಲೆಯೂಡುವ ಸ್ವಪ್ನಮಗೆಂದು ಸಾರ್ವುದೊ (ಸೂಕ್ತಿಸು. ೬-೬). ೪. ಚಿಮುಕಿಸು; ಸಿಂಪಡಿಸು: ಪನ್ನೀರ ವ್ಯೆಗೆ ಚಿಮ್ಮಿಸಿಯಾಲವಟ್ಟವಿಕ್ಕುವರು (ಭರತ. ೧೦-೪೬). ೫. ಝಳಪಿಸು: ಸುರಗಿಕಾಜಿಂ ಸುರಗಿಯಂ ಚಿಮ್ಮುವಂತೆ ನಾಲಗೆಯಂ ಚಿಮ್ಮಿಸುತ್ತಲ್ (ಪುಣ್ಯಾಸ್ರ. ೯-೨೫ ವ): ಜಯಘೋಷದಿಂ ರಾಜತೇಜಯನಡರಿ ಖಂಡೆಯವ ಚಿಮ್ಮಿಸುತ ಕಡುತವಕದಲಿ ಕಂಠೀರವರಾಜೇಂದ್ರ ನಡೆದನು (ಕಂಸವಿ. ೧೫-೦೫). ೬. ಬೀಸು: ಇಕ್ಕೆಲದ ಕೋಕನದವೇತ್ರೆಯರ್ಚಿಮ್ಮಿಸುವ ಚಾರುಚಂಚಲಚಾಮರಂಗಳಿಂದೆ (ಕೃಮಿಥ. ೩೦-೯೯).

[ ಚಿಮ್ಮು₁ + – ಇಸು₂ ]

**ಚಿಮ್ಮು₁** (ಕ್ರಿ). ೧. ಬೆರಳಿನಿಂದ ಮಿಡಿ,–ಮಿಟು: "ಚಿಮ್ಮು–ಅಂಗುಲಿ ವಿಮೋಚನೇ ಶಸ್ತ್ರಕ್ರಿಯಾಯಾಂ ಚ (ಜಳಪಿಸು)" (ಶಮದ). ೨. ನೂಕು: ತಳ್ಳು: ರಣದೊಳ್ ಶಕ್ರನ ತೇರನೇಱಿದ ಮಹಾಶ್ವಲಾಳಿ ಬೆಂಬೀಳ್ವ ಮಾರ್ಗಣದಿಂ ಚಿಮ್ಮಿದ (ಚೋಚು. ೮೧): ತೋಳುಗಳ ಹಿಡಿದೆಳೆಯೆ ಖಳ ಕರವಾಳದಲಿ ಚಿಮ್ಮಿದನು (ಕೊರಟಾ. ೬-೦೦-೫೮). ೩. ಎಸೆ: ಚೆಲ್ಲು; ತೂರು: ಕಡಿದು ಚಿಮ್ಮಿದ ಬೆರಳುಗಳ . . . ಹೊಡೆಮುರಿದಾಲಿಗಳ ತೋಳಿನ ಕಡಿಕುಗಳ ರಣಮುಖ ಭಯಾನಕರಸಕೆ ಗುರಿಯಾಯ್ತು (ಬುದ್ಧಾವೀ. ೮-೦೮): ಕಂಡನಾ ಗಜದ ಮಸ್ತಕ ಸಹ ಕೆದೆದಿರ್ದ ಮುಂಡದ ತಲೆ ಗಗನದಲಿ ಚಂಡಪ್ರತಾಪಿಯ ಜಯವಧು ತಿಱಿಕಲ್ಲ ಕೊಂಡಾಡುವಂತೆ ಚಿಮ್ಮಿದನು (ಪಾಂಡಕ. ೩೪-೯). ೪. ನೆಗೆ; ಹಾರು; ಪುಟಿ: ತರೆವೊಯ್ಲಿನಿಂ ಚಿಮ್ಮುವಂಬುಕಣದಾಲದಿಂ (ಉದ್ಭಟ. ೩-೮೩): ಘಾತ್ಯಕಿ ನಕುಲರೆಡವಂಕದಲಿ ಚೂಣಿಗೆ ಚಿಮ್ಮಿದರು (ಕುಮಾ.ಕ. ೩-೨): ಹಯವಡಿಗಡಿಗೆ ಚಿಮ್ಮಿತು ವಾಯುವೇಗದೊಳು (ಕೆಳದ. ೭-೫); ನೆತ್ತರಾಗಸಕೆ ಚಿಮ್ಮಿತ್ತು ರಣದೊಳೋಕುಳಿಯ ಮಿತ್ತುವಿನ ಜೀರ್ಕೊಳವಿಯಾಗುಳ್ಳ ಕನ್ನೀರಂಬೊಲು (ಕೃಮಿಥ. ೧೯-೦೫). ೫. ಹೊರಹೊಮ್ಮು; ಹೊರಸೂಸು: ಅವನ ಕಣ್ಣುಗಳಲ್ಲಿ ನೀರು ಚಿಮ್ಮಲಾರಂಭಿಸಿತು (ಮುಹಾಗ. ೧೯೯). ೬. ಎರಚು; ಚಿಮುಕಿಸು; ತಳಿ: ನರಪತಿ ಕೊಂಡು ಪೊಕರ್ಪಟವೆಯಂ ದಿಡದೊಯ್ಯನೆ ಕೊರ್ವೆಯಿಂ ಮನೋಹರಿಯರ ಮೇಲೆ ಚಿಮ್ಮೆ (ಧರ್ಮಾಮೃ. ೬೪-೦೫); ಪರಿಮಳದೊಡವುತ ಪನ್ನೀರ ಚಿಮ್ಮುತ . . . ಸೌಂದರಿಯರಿದ್ದರು ಬಳಿಸನೊಳು (ಭರತ. ೪-೧೧೮). ೭. ರಭಸವಾಗಿ ತೂಗು; ಝಳಪಿಸು: "ಚಿಮ್ಮು-ಅಂಗುಲಿ ವಿಮೋಚನೇ, ಶಸ್ತ್ರಕ್ರಿಯಾಯಾಂ ಚ (ಜಳಪಿಸು)" (ಶಮದ): ಕಠಾರಿಗಳನುದ್ದಕ್ಕೆ ಚಿಮ್ಮುತೊತ್ತುವ ಸುರುಹುತ್ತ (ಏಸುಪು. ೬೦-೩೨); ಝಡಿದು ಚಿಮ್ಮುವ ಖಂಡೆಯವ ಕೈದುಡುಕಿ (ಕೊರಟಾ. ೫-೩-೬೦): ಕಡಿದು ಮುಂಗೈಯ ಕೋಪಾಟೋಪದಲಿ ಖಳ ಜಡಿದು ಖಂಡೆಯವ ಚಿಮ್ಮಿದನು (ಕಂಸವಿ. ೦೩-೬೫). ೮. ಬೀಸು: ಚಿಮ್ಮುವ ಚಾಮರದ ಸೂಸುವ ಸೀಗುರಿಯ (ಗಿರಿಕ. ೩-೫೫ ವ); ಚಿಮ್ಮುವ ಚಾಮರಂಗಳನೆಡೆವಿಡದೆ ಪಸರಿಸಿದ ಸೀಗುರಿಗಳೆಡೆಯೊಳ್ (ಉದ್ಭಟ. ೮-೫೨ ವ); ಶಶಿಮುಖಿಯರೆಡಬಲದಿ ಕೈವಾರಿಸುತ ಸಿತಚಾಮರವ ಚಿಮ್ಮಲು (ನಳಚ. ೮-೨೫).

[ ದೇ.? ತೆಲು. ಚಿಮ್ಮು ]

**ಚಿಮ್ಮು₂** (ನಾ). ನೆಗೆತ: ಚಿಮ್ಮುಗಳ ಕಾಣಿಸುವುದು ಸ್ಫುರಿತವೆನಿಸಿಕೊಂಬುದು ಹಾವು ನಡೆದಂತೆ ಡೊಂಕುಡೊಂಕಾಗಿ ಓಡಿಸುವುದು ನಾಗೋಪ್ಪವೆನಿಸಿಕೊಂಬುದು (ಅಶ್ವಶಾ. ೨೫-೬). [ <ಚಿಮ್ಮು₁ ]

**ಚಿಮ್ಮುಗಾಲ** (ನಾ). (ಆಲಂ) ಉತ್ಸಾಹದ ಕಾಲ: ಏಳು, ಎಚ್ಚರವಾಗು, ಉಸಿರು ತುಂಬು–ಈ ಚಿಮ್ಮುಗಾಲದಲ್ಲಿಯೂ ನೀನೇಳದೇ ಹೋದರೆ ಎಂದೆಂದಿಗೂ ಬೀಳು, ಬಿದ್ದಿರು, ಓ ಕನ್ನಡ ಮಗುವೇ ! (ಕನ್ನಸು. I, ೩೬).

[ ಚಿಮ್ಮು₂ + ಕಾಲ ]

**ಚಿಮ್ಮುಗೆ** (ನಾ). ೧. ಚಿಮ್ಮುವಿಕೆ: ಬುಗ್ಗೆ: ಮುಂದಕ್ಕೆ ಅಥವಾ ಮೇಲಕ್ಕೆ ಚಿಮ್ಮಿ ಸೂಸುವ ನೀರು, ಆವಿ, ಅನಿಲ, ಮೊ.ಗಳ ಧಾರೆ: ಬುಗ್ಗೆ: ಚಿಮ್ಮುಗೆ (ಸಂ. ಇಂಕನ). ೨. ಸ್ಫುರಣ: ಮನವ ದೇಹವನಲೆವ ಚಿಮ್ಮುಗೆಗಳೊಂದಾಗಿ ಘನಸಹಜದುಂಗನೆಯ ಕರಳಿಸಿದುವು (ಶಂಗೀಕ. ೪೬-೨೧).

[ ಚಿಮ್ಮು₁ + – ಗೆ ]

**ಚಿಮ್ಮುಗೊಳ್ಳು** (ಕ್ರಿ). ನೆಗೆ; ಹಾರು: ದಿಮ್ಮಿಡುವ ಘಣಘಣಾಯೆಂಬ ಘಂಟೆಯ ರವಕೆ ಚಿ[ಪಾಠಾಂ. ಚಿ]ಮ್ಮುಗೊಳ್ಳುತ್ತಿರುವ ಆ ಹರಿಣದಂತೆ (ಕನಕ. ೮೪-೪). [ ಚಿಮ್ಮು₂ + ಕೊಳು₁ (<ಕೊಳ್₁) ]

**ಚಿಮ್ಮುಗೋವಿ** (ನಾ). ಪಿಚಕಾರಿ; ಜೀರ್ಕೊಳವೆ: ಬಗೆಬಗೆಯ ಚಿತ್ರದ ಚಿಮ್ಮುಗೋವಿಯ ತುಂಬಿದೋಕುಳಿಯ (ಅನಂರಾ. ೭-೧-೫೬).

[ ಚಿಮ್ಮು₁ + ಕೋವಿ₁ ]

**ಚಿಮ್ಮುಟ, ಚಿಮುಟ, ಚಿಮುಟಿ, ಚಿಮಟೆ, ಚಿಮುಂಟ, ಚಿಮ್ಮಟ, ಚಿಮ್ಮಟಿ** (ನಾ). ೧. ಚಿವುಟಿ ಹಿಡಿಯುವ ಇಕ್ಕುಳದಂತಹ ಸಣ್ಣ ಸಾಧನ: ಪಟಕಾರ: ಹಿಡಿಯಿಲ್ಲದ ಶಸ್ತ್ರ ಕೀಲಿಲ್ಲದ ಕತ್ತರಿ ಉಭಯವನೊಡಗೂಡದ ಚಿಮ್ಮುಟ (ಸವಚ. ೧೨೫-೩೪೧); ಕತ್ತಿಯ ಬಸವಣ್ಣ ಕೊಟ್ಟ ಕತ್ತರಿಯ ಚೆನ್ನಬಸವಣ್ಣ ಕೊಟ್ಟ ಕಿತ್ತುಹಾಕುವ ಚಿಮ್ಮುಟವ ಪ್ರಭುರಾಯ ಕೊಟ್ಟ (ಶದಗೊ. ೧೩೬-೬೨); ದಾನವಿಲ್ಲದರ ಕಡಿದಿಟ್ಟು ಚಿಮ್ಮುಟ ಮೊನೆಯೊಳವರ ಖಂಡವನುಗಿದು (ವೀಕ್ಷಿಪು. ೪-೧೯-೪೬). **ಚಿಮುಟ:** ೧. ನಿನ್ನೆ ದಿನ ಕಾದ ಚಿಮುಟಗಳಿಂದ ಅವನ ಹಲ್ಲುಗಳನ್ನೆಲ್ಲ ಕೀಳುವುದರಲ್ಲೇ ಇಡೀ ದಿನವೆಲ್ಲಾ ಕಳೆದೆ (ನಗಹೊ. ೨೨೬). ೨. ಹೆಬ್ಬೆರಳಂ ಮತ್ತು ತೋರಬೆರಳಿನಲ್ಲಿ ಹಿಡಿಯುವಷ್ಟು ಪ್ರಮಾಣ; ಒಂದಂ ಚಿಟಿಕೆ: ಅವನನ್ನು ಅಲ್ಲಿಂದ ಎತ್ತಿ ಹೊರಗೆ ತರೋದು ಅಂದ್ರೆ ಅವರಪ್ಪ ಶಾಮಣ್ಣನವರಿಂದ ಒಂದು ಚಿಮುಟ ನಸ್ಯ ತರುವಷ್ಟು ಕಷ್ಟವಾಯಿತು (ಕುಂಚಿಕೊ. ೮೩). **ಚಿಮಟೆ:** ೧. ಇಕ್ಕುಳ ಇಲ್ಲವೆ ಚಿಮಟೆ (Pincers)ಗಳು ಇಂಥ ಸನ್ನೆಕೋಲುಗಳು (ದಾಂಪ್ರ. I, ೩೩೮). **ಚಿಮಟೆ:** ೨. ನಿಂಗಿಯು . . . ಜರದಾ ತಂಬಾಕಿನ ಚಿಮಟೆಯನ್ನು ಬಾಯಲ್ಲಿಟ್ಟುಕೊಂಡಳು (ರಕ್ತಧ್ವ. ೨೨೫). **ಚಿಮುಟ:** ೧. ಒಂದು ದಬ್ಬಳ, ಒಂದು ಚಿಮುಟ . . . ಇತ್ಯಾದಿ ಸಲಕರಣೆಗಳು ಬೇಕು (ಮುದ್ರಕ. ೨೦); ಕತ್ತರಿ, ಚಿಮುಂಟ – ಇವು ಸನ್ನೆಗಳು (ಶಿಲ್ಪಸಾ. ೧೯೫). **ಚಿಮ್ಮಟ:** ೧. ಅಮ್ಮಮ್ಮ ಕಾರಿರದಿ ಕೊಯ್ದು ಬಿಸುಡುತ್ತಲ್ಲಿ ಚಿಮ್ಮಟಗಳಿಂ ತಿಱಿದು ತಿಱಿದು ಚಿಮ್ಮುತ್ತಲ್ಲಿ (ಹೊಮ್ಮರ. ೧೬೬-೧೮). **ಚಿಮ್ಮಟೆ:** ೧. ನೆಱೆ ಕಾದ ಚಿಮ್ಮಟಗಳಲಿ ಖಂಡವ ತೆಗೆವರು (ನಿಜಾಗ. ೫-೧೧-೨೬).

[ ←ಹಿಂ. ಚಿಮಟಾ, ಚಿಮಟೀ; ಮರಾ. ಚಿಮಟ್, ಚಿಮಟಾ, ಚಿಮೂಟ್. / ತಮಿ. ಚಿಮಿಟ್ಟಾ; ತುಳು. ಚಿಮಟ, ಚಿಮಿಟ, ಚಿಮ್ಮಿ; ತೆಲು. ಚಿಮಟ, ಚಿಮ್ಮಟ ]

**ಚಿಮ್ಮುರಿ** (ನಾ). ೧. ತಲೆಯುಡಿಗೆ; ರುಮಾಲು: ದೊಡ್ಡ ಮುದ್ರೆಯ ಕಳ್ಳರು ತುಱುಬು ಚಿಮ್ಮುರಿಗಳ ಕಟ್ಟಿ ಹಗರಣದ ನಿಜಗುರುಳ ಬಾಲೆಯರ ಮುಂದೆ . . . ಬೀಗಿ ಬೆಱೆಯುತ್ತಿಪ್ಪರು (ಮೋಮೂ. ೧೮೮-೭೦೯); ತುಱುಬು ಚಿಮ್ಮುರಿ ಚಿಂದಿ ಕಾಸೆಯ ಸೆಱಗು (ಪ್ರಭುಲಿ. ೫-೬); ಕತ್ತರಿಸಿದ ಪನ್ನೆಯೊತ್ತಿದ ಕೊನೆಮೀಸೆ ಸುತ್ತಿದ ಚಿಮ್ಮುರಿ (ಕುಮಾರಾಂ. ೪೦-೯೩);

ನೀಳಕುಂತಳದ ವಿಡಾಯ ಚಿಮ್ಮುರಿಯ ಚೆಲ್ವ ತುಱುಂಬಿನ . . . ಖಟ ಸಾರ್ವಭೌಮ (ಹರಿಶ್ಚ. ೬-೨೦). ೨. ಬಿಗಿದ ದಟ್ಟಿ; ವೀರಗಚ್ಚೆ: ಸುತ್ತಿದ ಚಿಮ್ಮುರಿ ತೊಟ್ಟಿದ್ದ ಚಿಮ್ಮುರಿ ಮತ್ತು ಹಿಡಿದ ಕೈಯಲಗು ಮುತ್ತಿನ ಗಂಡೋಗದ ಕುದುರೆಯನೇಱುತ್ತ ಮಂಡಲಪತಿಯು (ಚೀಚಂಸಾಂ. ೮-೩೮): ಮುರಿದುಟ್ಟ ಕಾಸೆ ಚಿಮ್ಮುರಿ ಬಿಟ್ಟ ಜಡೆ (ಭರತ. ೬೩-೦೪). ೩. ಕೈಗಳನ್ನು ಬೆನ್ನ ಹಿಂದೆ ಸೇರಿಸಿ ಬಿಗಿದು ಕಟ್ಟುವುದು; ಹೆಡಮುರಿಗೆ; ಹಿಂಗಟ್ಟು: ಸಾಧುಗಳನಾದರಿಸುವೆನು ಮಾಱಾಂತರನು ಚಿಮ್ಮುರಿಯ ಬಿಗಿಸುವೆನವರಿಯರ ಕಡೆಗಣ್ಣ ಕಣ್ಣುಯುಗಿ (ಕುಮಾ.ಭಾ.೨-೩೦). [ ? + ಮುರಿ₃ ]

**ಚಿರ** (ಗು). ೧. ದೀರ್ಘಕಾಲ ಬಾಳುವ; ಬಹುಕಾಲದ. 'ಚಿರಕಾಲ' ಪರಾ. (ನಾ). ೨. ಬಹುಕಾಲವಿರತಕ್ಕುದು; ಶಾಶ್ವತವಾದುದು: ಚಿರಮರ್ತ್ಯನ್ನಯ ತೇಜಮುಂ(ಅಜಿಪು. ೩-೬೯); ಅರಸೊತ್ತಿಗೆಯ ನಂಬಿ ಬಿರುಸು ಮಾತುಗಳೇಕೆ ಚಿರವೆ ಹೂಡಿಸಿಲು ಕಿರಿಯರಸ ಪರಿಕಿಸಲು (ಜೈಮಿ. ೨೪೩). [ ಸಂ. ]

**ಚಿರಋಣಿ** (ನಾ). ಉಪಕಾರವನ್ನು ಸದಾ ಸ್ಮರಿಸಿಕೊಳ್ಳುತ್ತಿರುವವನು; ಕೃತಜ್ಞ: ನಾನು ಅವರಿಗೆ ಚಿರಋಣಿ (ಚೀಮಾಕ. XI. ಸಂಕಲ್ಪ); ಹಾಸು ತಮ್ಮ ಉಪಕಾರಕ್ಕೆ ಚಿರಋಣಿಯಾಗಿರುತ್ತೇನೆ (ರಾಯಲ. ೩೮); ಅವುಗಳ ಅಪಾರವಾದ ಮಹತ್ವವನ್ನು ತೋರಿಸಿಕೊಟ್ಟಿದ್ದಕ್ಕೆ ಭಾರತೀಯರು ಚಿರಋಣಿ (ಕನ್ನಡ. ೩೬). [ ಸಂ. ಚಿರಋಣಿನ್ ]

**ಚಿರಂ** (ಅ). ಶಾಶ್ವತವಾಗಿ; ಯಾವಾಗಲೂ: ಕಿಸಲ್ಕ್ಕೆಗೆ ಧೃಗು ಸುತನುದಯಮಾಗೆ ನಿಲ್ಕುಂ ಚಿರಮುಂ (ಲೋಕೋಪ. ೩-೨೬). [<ಚಿರ]

**ಚಿರಂಜೀವ** (ನಾ). ೧. ಬಹುಕಾಲ ಬಾಳುವವನು,-ಬದುಕುವವನು. ೨. ಹಿರಿಯರು ಚಿಕ್ಕವರನ್ನು ಕರೆಯುವಾಗ ಬಳಸುವ ಶಬ್ದ: ಚಿರಂಜೀವ, ರಾಜಶ್ರೀ . . . ಮೊದಲಾದ ಶಬ್ದಗಳನ್ನೂ . . . ಪತ್ರ ಸ್ವೀಕರಿಸತಕ್ಕವರ ಹೆಸರಿನ ಹಿಂದೆ ಜೋಡಿಸಿ ಬರೆಯುವ ಸಂಪ್ರದಾಯವುಂಟು (ಮುಂಬಯಿ. ೯-೮೪). ೩. ಮಗ; ಪುತ್ರ: ಇವ ನಿನ್ನ ಚಿರಂಜೀವ ಏನು? (ಅಶಪಾ. ೦೦). [ ಸಂ. ]

**ಚಿರಂಜೀವಿ** (ನಾ). ೧. ಬಹಳ ಕಾಲ ಬದುಕಿರುವವನು. ೨. =ಚಿರಂಜೀವ ೩: ತಮ್ಮ ಚಿರಂಜೀವಿ ಎಂತಹ ಸುಸಂಸ್ಕೃತ ಯುವಕ (ಮಹಾಗ. ೦೮೩). ೩. ಬಹಳ ಕಾಲ ಬದುಕಿರುವವರೆಂದು ಪುರಾಣಪ್ರಸಿದ್ಧರಾದ ಏಳು ಜನರು: ಅಶ್ವತ್ಥಾಮ, ಬಲಿ, ವ್ಯಾಸ, ಪರಶುರಾಮ, ವಿಭೀಷಣ, ಕೃಪಾಚಾರ್ಯ ಮತ್ತು ಆಂಜನೇಯ. ಕೆಲವರು 'ಮಾರ್ಕಂಡೇಯ'ನನ್ನೂ ಇವರ ಜೊತೆ ಸೇರಿಸುತ್ತಾರೆ. ೪. ಕಾಗೆ: ದೊರೆಯೇ ಮಲ್ಲಿಗೆಗಿಕ್ಕೆ ಹಂಸೆಗೆ ಬಕಂ . . . ಚಿರನಿಕಾಯ[ಕ್ಕೆ] ಚಿರಂಜೀವಿಗಳ್ (ಕಶಾ. IV, ೦-೮೯; ೧೨೮೪). [ ಸಂ. ಚಿರಂಜೀವಿನ್ ]

**ಚಿರಂಟಿ** (ನಾ). ೧. ತಂದೆಯ ಮನೆಯಲ್ಲಿಯೇ ಇರುವ ಪ್ರಾಪ್ತವಯಸ್ಕಳಾದ ಹೆಂಗಸು. ೨. ಯುವತಿ: ಪಾಡ ಚಿರಂಟಿಯರ್ (ಚಂದ್ರಪ್ರ. ೮-೬೦). [ ಸಂ. ಚಿರಂಟೀ ]

**ಚಿರಂಟಿಕೆ** (ನಾ). =ಚಿರಂಟಿ ೧: "ಚಿರಂಟಿಕೆ ಸುವಾಸಿನಿಯಪ್ಪವಳುಂ ವಯಸ್ಥೆಯುಂ" (ಶಬ್ದಮಣಿ. ೦೨೮-೬೫). [ ಸಂ. ಚಿರಂಟಿಕಾ ]

**ಚಿರಂತನ** (ಗು). ೧. ಪೂರ್ವದ; ಹಿಂದಿನ ಕಾಲದ; ಪ್ರಾಚೀನವಾದ: ಚಿರಂತನಭವದ ಕಿಲ್ಬಿಷ ಕರ್ಮಪಾಕವ್ರವರ ದುರ್ಯೋಧನನ ಸದ್ಯಮರೆ ಮಾತ್ರದಲಿ ಎವಗೆ ರಚಿಸಿತು ರಾಜ್ಯವಿಧ್ವಂಸವನು (ಕುಮಾ.ಗ. ೦೦-೪೪). ೨. ಸ್ಥಿರವಾದ; ಶಾಶ್ವತವಾದ: ಆತ್ಮದರ್ಶನ, ಜಗದ ಅನುಭವ, ಅನುಭಾವಗಳೇ ಅಕ್ಕನ ಸಾಹಿತ್ಯಕ್ಕೆ ಚಿರಂತನ ವಸ್ತು! (ಕನ್ನಡಿಗ. ೬೬). (ನಾ). ೩. ನಿರಂತರ; ಸತತ: ಚಿರಂತನವೂ ನೂತನವೇ ಆಗುತ್ತಿರುವ ಜೀವನದ ಸ್ವರೂಪ ಎಂಥದು? (ಶಿಕ್ಷಣ. ೦). ೪. ವಯಸ್ಸಾದವನು; ಹಿರಿಯಂ: ಅವರ್ಗಳೊಳಗೆ ಚಿರಂತನನುಂ ಬುದ್ಧಿವಂತನುಮಪ್ಪುದೊಂದು ಕಪೋತಂ ಪಕ್ಷಿಗಣಕ್ಕಿಂತೆಂದುದು (ಪಂಚತಂ. ೨೮೮-೦೯). [ ಸಂ. ]

**ಚಿರಂತಹಿಂಸೆ** (ನಾ). ಒಂದು ಬಗೆಯ ನರಕ: ಯಮಾನುಗನಿಹುದುದ . . . ಚಿರಂತಹಿಂಸೆಗಳೆಂಬೈದು ಮಂತ್ರಿನರಕಂಗಳಂ ಭಯಂಕರಮಾಗಿ ಯಮಮಾಯೆಯೆಂಬರಸುವರಕವಿಹುದು (ವಿವೇಕ. ೦೫೦). [ ? + ಹಿಂಸೆ ]

**ಚಿರಂತನಾಚಾರ್ಯ** (ನಾ). ಹಿಂದಿನ ಕಾಲದ ಆಚಾರ್ಯ,-ವಿದ್ವಾಂಸ: ಮಿಗೆ ಕನ್ನಡಗಬ್ಬಂಗಳೊಳಗುಣಿತಗುಣಗದ್ಯಪದ್ಯಸಮ್ಮಿಶ್ರಿತಮಂ ನಿಗದಿಸು ವರ್ಗದ್ಯಕಥಾಪ್ರಣೀತಿಯಂ ತಚ್ಚಿರಂತನಾಚಾರ್ಯರ್ಕಳ್ (ಕವಿರಾ. ೦-೨೬). [ ಚಿರಂತನ + ಆಚಾರ್ಯ ]

**ಚಿರಕಾಲ** (ನಾ). ಬಹಳ ಕಾಲ; ದೀರ್ಘಕಾಲ: ಚಿರಕಾಲಂ ಬಂಧವದೊಳ್ ದುರುಳಾದಿರ್ದನ ಮರುಳ್ತನಂ ತೀರ್ದಪೊಲೆಯೊಸರಿಸಿರೆ ಮಿಥ್ಯಾತ್ವಂ (ಧರ್ಮಪು. ೦೨-೩); ಅಂಕು ದೀಕ್ಷೆಯಂ ಕೆಯ್ಕೊಂಡು . . . ಚಿರಕಾಲಮಿರ್ದು (ಪುಣ್ಯಪು. ೯-೯ ವ). [ ಚಿರ + ಕಾಲ ]

**ಚಿರಕಾಲಿಕ** (ನಾ). ಬಹಳ ಕಾಲ ಇರುವುದು: ಜನಸಮುದಾಯವು ಒಂದು ರಾಜಕೀಯೋದ್ದೇಶದಿಂದ ಚಿರಕಾಲಿಕವಾಗಿ ಸ್ಥಾಪಿಸಲ್ಪಟ್ಟಿರಬೇಕು (ರಾಜ್ಯಾಂಗ. ೨೬); ಆ ಸತ್ಯ ಚಿರಕಾಲಿಕವಾಗಲಿ ಎಂದು ಶ್ರುತಿಸುವ ಮಾತು ದೇರೆ (ಪಾಶ್ಚಾತ್ಯ. ೨೬೯). [ ಸಂ. ]

**ಚಿರಚ** 'ಚಿರತೆ₁' ನೋ.

**ಚಿರಚು** 'ಚಿರತೆ₁' ನೋ.

**ಚಿರಜೀವಿ** (ನಾ). ೧. ಬಹಳ ಕಾಲ ಬದುಕುವವನು; ದೀರ್ಘಾಯುಸ್ಸುಳ್ಳವನಂ: ಪುತ್ರಾನ್ವಿತಂ ಲಂಬಮುಷ್ಕನವಂ (ತಾಂ) ಚಿರಜೀವಿ ತತ್ಸಮಾತಯಿಂದಂ ಧೈರ್ಯವಂ ತಾಳ್ದುಗುಂ (ರೂಪಣ್ಣ. ೦೦-೫); ಕಡಲ ಕಡೆ. ಸುಧೆಯ ಕುಡಿ; ಹಂಹರರ ಮಾಂ ಚಿರಜೀವಿಯಾಗು! (ಪಾಂಚಜ. ೯೯-೩) ೨. ಕಾಗೆ: "ಅರಿಷ್ಟ . . . ಚಿರಜೀವೀ, ವಾಯಸಃ—ಈ ೧೦ ಕಾಗೆ" (ಚರಾಯು. ೯೦-೯೨). [ ಸಂ. ಚಿರಜೀವಿನ್ ]

**ಚಿರಜೀವಿತೆ** (ನಾ). ಬಹಳಕಾಲ ಬದುಕುವಿಕೆ; ಶಾಶ್ವತವಾಗಿರುವಿಕೆ: ಇನ್ನೇವಸರ್ಗೊಂಡಪುದಣ್ಣ ನರರ ಚಿರಜೀವಿತೆಯಂ (ಚಂದ್ರಪ್ರ. ೨-೩೨). [ಸಂ. ಚಿರಜೀವಿತಾ ]

**ಚಿರಡಿ₁** (ನಾ). ಕಿರಿಗೆ; ಚಿಕ್ಕಸೀರೆ: ಚಿರಡಿ ಚಂದಿ ಕದ್ದನಂತೆ (ಸರಡಾ. II, ೮೦೬). [ ←ಮರಾ. ಚಿರಡೀ ]

**ಚಿರಡಿ₂** (ನಾ). ಕೋಪ; ಸಿಟ್ಟು: ಅವರ್ನ ಚಿರಡಿಗೆ ಕರಸ್ಥಾನ (ಜಾನಪ. II, ೨೦೬).

ಚಿರಡಿಗೇಳು=ಸಿಟ್ಟಿಗೇಳು; ರೇಗು: ಚಿರಡಿಗೆದ್ದು ರಾಗಿನ್ನ ಒಂದೇಟು ಹೊಡೆದ (ಪ್ರಪಿ. ೩೫೩); ಅವರಿಗೆ ಉಂಟಾದ ಕುಂಠಿತತನವನ್ನು ಕಂಡು ಅವರು ಬಹಳ ಚಿರಡಿಗೇಳುವರು (ಸ್ತ್ರೀಶಿ. ೪೨೯). [ ←ಮರಾ. ಚಿರಡೀ ]

**ಚಿರಣೆ** 'ಚೀರಣ' ನೋ.

**ಚಿರಣಿಗೆಲಸ** 'ಚೀರಣಿಗೆಲಸ' ನೋ.

**ಚಿರತೆ₁**, ಚಿರಚ, ಚಿರಚು, ಚಿರ್ಚ, ಚಿರ್ಚು (ನಾ). ಮೈಮೇಲೆ ಚುಕ್ಕೆಗಳಿರುವ ಹುಲಿಜಾತಿಗೆ ಸೇರಿದ ಒಂದು ಬಗೆಯ ಕ್ರೂರಪ್ರಾಣಿ; ಚಿಟ್ಟೆಹುಲಿ: ಹುಲಿಜಾತಿ: ಹುಲಿ, ಹೆಬ್ಬುಲಿ . . . ಚಿರತೆ (ಪಠ್ಯಪು. ೨೩೯). ಚಿರಚ: ಹುಲಿ ಜಾತಿ: ಹುಲಿ, ಹೆಬ್ಬುಲಿ . . . ಚಿರತೆ, ಶಿವಂಗಿ, ಚಿರಚ (ಪಠ್ಯಪು. ೨೩೯). ಚಿರಚು: ಚಿರಚು ಕಾಮುಕಪ್ರಾಣಿಯೆಂದೂ . . . ಹೇಳಿರುವನು (ಪಶುಪ. ೨೯). ಚಿರ್ಚ: (೬). ಚಿರ್ಚು: ಅಡವಿಗಳಲ್ಲಿ ಚಿರ್ಚು . . . ಅಡವಿಯ ಬೆಕ್ಕು ಮುಂತಾದವುಗಳಿರುತ್ತವೆ (ಶಿಲಪ. ೩೯) [ ದೇ.; ತಮಿ. ಚಿಱುತ್ತೈ; ಕೊಡ. ಚಿರತೆ; ತೆಲು. ಚಿಱುತ ]

**ಚಿರತೆ**, (ನಾ). ಶಾಶ್ವತ ಪದವಿ ; ಮೋಕ್ಷ : ನಲವಿಂದ ಚಿರತೆಯು ಬಯಸಿ ಜಿನೇಂದ್ರನ ಚರಣಸೇವೆಯನಂ ಮಾಳ್ಪೆನೆಂದು (ಚಂದ್ರಸಾಂ. ೩೪-೦೨೬). [ ಸಂ. ಚಿರತಾ ]

**ಚಿರನವತೆ** (ನಾ). ಸದಾ ಹೊಸದಾಗಿರುವಿಕೆ: ಒಂದು ಕೊಂಬೆಯು ಬಾಡಲಿ ನ್ನೊಂದು ಚಿಗುರುವುದು ಸಂದಿಹುದು ಚಿರನವತೆಯುತ್ಸವತ್ತ ದಾರಿ (ದುಂಸುಳ. ೨೩೩). [ ಚಿರ + ನವತೆ ]

**ಚಿರನಿದ್ರೆ** (ನಾ). (ಆಲಂ) ಸಾವು: ಆ ರೋಗಿಯುನ್ನು ಚಿರನಿದ್ರೆ ಆವರಿಸಿತು (ರೂ೦). [ ಚಿರ + ನಿದ್ರೆ ]

**ಚಿರನಿಧಿ** (ನಾ). ಶಾಶ್ವತವಾದ ಆಶ್ರಯ ; ಶಾಶ್ವತವಾದ ನೆಲೆ: ವಿವಿಧ ಪಯೋಜದಿ ವ್ಯರ್ಥಾಯಾಸದಿ ಕೊಳಲಿದೆ ತೃಪ್ತಿಯ ಚಿರನಿಧಿಗೆ (ಅಗ್ನಿಹಂ. ೧೧-೩). [ ಚಿರ + ನಿಧಿ ]

**ಚಿರನಿಮಿಷ** (ನಾ). ಬಹಳ ಹೊತ್ತು ಕಣ್ಣು ಮುಚ್ಚಿಕೊಂಡಿರುವುದು : ಇರ್ದುದನಿಮಿಷಜಾತಂ ಚಿರನಿಮಿಷವಾಗೆ ಕಣ್ಗಳ್ಳುವಿನಂ (ಅಜಿ. ೧-೪೭). [ ಚಿರ + ನಿಮಿಷ ]

**ಚಿರನೂತನ** (ನಾ). ಸದಾಕಾಲ ಹೊಸದಾಗಿರುವುದು : ಅವನ ಕಾವ್ಯ ಕನ್ನಡಕ್ಕೆ ಚಿರನೂತನ ಚಿರಂತನ (ಸಾಹಿಸ. ೧೦೯). [ ಚಿರ + ನೂತನ ]

**ಚಿರಪರಿಚಿತ** (ನಾ). ಬಹುಕಾಲದಿಂದಲೂ ತಿಳಿದಿರುವುದು : ಇದು ದಿನದಂಥ, ಚಿರಪರಿಚಿತವಾದ ಹಗಲಲ್ಲ (ದಿಕಂದಾ. ೧) ; ಮತ್ಸ್ಯ, ಕೂರ್ಮ . . . ಕಲ್ಕಿ ಎಂಬ ದಶಾವತಾರಗಳು ಚಿರಪರಿಚಿತವಾಗಿವೆ (ದಾಜಿದ. ೧೯೨). [ ಚಿರ + ಪರಿಚಿತ ]

**ಚಿರಪು** 'ಸೆಬಿಪು' ನೋ.

**ಚಿರಪ್ರಣಯ** (ನಾ). ಬಹುಕಾಲದ ಪ್ರೀತಿ : ಕಡೆಯಲ್ಲಿ ಒಂದು ದಾರಿ ಮುದ್ದಿಸಿ ಚಿರಪ್ರಣಯವಿದ್ದುದರಿಂದ ಮತ್ತೆ ಮರುಗಿದವನಾಗಿ . . . ಅಳಕೊಡಗಿದನು (ಕವಿಕ. ೫೨). [ ಚಿರ + ಪ್ರಣಯ ]

**ಚಿರಬಿಲ್ವ** (ನಾ). ಹುಲಿಗಿಲ ಮರ ; ಹೊಂಗೆಮರ ; ಕರಂಜವೃಕ್ಷ : ಅರನೇಟಿಲ್ ತಾಟಿ' . . . ದಿಂದಂ ಚಿರಬ[ಪಾಠಾಂ. ಬಿ]ಲ್ವಂ ಬೃಹ್ಮವೃಕ್ಷಂ ಕಟುಕ ತಟಿ'ಯುದಿಂದೊಪ್ಪುತಿರ್ದತ್ತರಣ್ಯಂ (೧ರಿ೪. ೦-೬೨). [ ಸಂ. ]

**ಚಿರಮಂಗಲವತಿ** (ನಾ). ಯಾವಾಗಲೂ ಮುತ್ತೈದೆತನವನ್ನುಳ್ಳವಳು : ಚೆನ್ನಮಲ್ಲಿಕಾರ್ಜುನನನ್ನು ಅಮರಪತಿಯನ್ನಾಗಿ ವರಿಸಿದಳು ; ಚಿರಮಂಗಲ ವತಿಯಾದಳು (ಹಾಳಂ. ೩೦). [ ಸಂ. ಚಿರಮಂಗಲವತೀ ]

**ಚಿರಮುತ್ತೈದೆ** (ನಾ). = ಚಿರಮಂಗಲವತಿ : ಆಯುಷ್ಮಂತೆಯಾಗಿ ಐಶ್ವರ್ಯವಂತೆಯಾಗಿ ಚಿರಮುತ್ತೈದೆಯಾಗಿರು (ಡಂಗಾಳ್. ೦೨). [ ಚಿರ + ಮುತ್ತೈದೆ (<ಮುತ್ತೈದ್ದು) ]

**ಚಿರರಾತ್ರ** (ನಾ). ಅಸಂಖ್ಯಾತ ರಾತ್ರಿಗಳು ; ಬಹಳ ಕಾಲ ; ದೀರ್ಘ ಕಾಲ : "ಹಲವಿರುಳಾದೆಡೆ ಗಣರಾತ್ರವೆಂಬುದು ಅಲ್ಲಿಂದಂ ಮೇಲೆ ಚಿರ ರಾತ್ರವೆಂಬುದು" (ಶಬ್ದಾಯು. ೦೮-೦೦೮). [ ಸಂ.(ಚಿರ + ರಾತ್ರಿ + – ) ]

**ಚಿರರಾತ್ರೆ** (ನಾ). = ಚಿರರಾತ್ರ : "ಚಿರರಾತ್ರೆಯೆಂಬುದುಮಸಂಖ್ಯಾತ ದಿರುಳು" (ದುಂಗರಾ. ೨೦-೭). [ ಸಂ. ಚಿರರಾತ್ರ ]

**ಚಿರವಿಚ್ಛೇದ** (ನಾ). ಶಾಶ್ವತವಾದ ಬೇರ್ಪಡೆ.-ಅಗಲಿಕೆ : ಕಪಾಲ ಕುಂಡಲೆಗೂ ಅವಳ ಸ್ವಾಮಿಗೂ ಚಿರವಿಚ್ಛೇದ ಉಂಟುಮಾಡುವುದೊಂದೇ ಉದ್ದೇಶ (ಕಪಾಕುಂ. ೯೨). [ ಚಿರ + ವಿಚ್ಛೇದ ]

**ಚಿರವಿಲ್ವ** (ನಾ). ಚಿರಬಿಲ್ವ: "ಕರಂಜಕಾ" (ಶಂಕಿ). [ ಸಂ. ]

**ಚಿರಶಾಂತಿ** (ನಾ). ಶಾಶ್ವತವಾದ ನೆಮ್ಮದಿ : ವಿಶ್ವವು ಜೀನರಿಂಗವ್ಯುತವು ಅವ್ಯಕ್ತವು ಚಿರಶಾಂತಿ ಸಂನ್ಯಾಸಿಗಳಿಗೆ (ಕಂದಾವ. ೭೩-೭೩); ಮತ್ತೆ ಹಿಂದಿರು ಗಲಾರದ ಆ ದೇವದೇವನ ರಾಜ್ಯದಲ್ಲಿ ಚಿರಶಾಂತಿಯನ್ನರಸುತ್ತಾ ಶರಂ ಧ್ಯಳು (ಕುಟುಕು. ೩೦೨). [ ಚಿರ + ಶಾಂತಿ ]

**ಚಿರಸೂತೆ** (ನಾ). ಬಹುಕಾಲವಾದ ಮೇಲೆ ಕರು ಹಾಕಿದ ಹಸು : "ಚಿರಸೂತಾ, ಬಷ್ಕಯಣೀ – ೨ – ಬಹುಕಾಲಕ್ಕೆ ಈಯುವಾದ ಆಕಳಗಳ ಈಯುದಲಾದರೂ ಬಹುಕಾಲ ಪರಿಗಯಿಲ್ಲದೇ ನಿಂತ ಆಕಳಗಳು, ಬಹುಕಾಲಕ್ಕೆ ೧ ಸಾರಿ ಈಯುವ ಆಕಳಗಳು, ಹಸರುಗಳು, ಇಡಗಂದಿನ ಆಕಳು" (ಸಿದ್ಧಾಂತಿ. ೩೬೩). [ ಸಂ. ಚಿರಸೂತಾ ]

**ಚಿರಸ್ಥಾಯಿ** (ನಾ). ಬಹಳ ಕಾಲ ತಾಳುವ ಸ್ವಭಾವವುಳ್ಳದು ; ದೀರ್ಘಕಾಲ ಉಳಿಯಂವಂತಹುದು ; ದಾಳಿ, ಹುರಿ ಮುಂತಾದ ಸಸ್ಯ ಗಳು ಬಹುಕಾಲ ಬದುಕುವವು, ಇವುಗಳು ಚಿರಸ್ಥಾಯಿ (Perennials) ಪೈರುಗಳು (ಸಸ್ಯಶಾ. ೨೪): ದೇಶಚರಿತ್ರೆಯಲ್ಲಿ ಮಾತೆಯ ಸ್ವಾತಂತ್ರ್ಯಕ್ಕಾಗಿ ಹೋರಾಡಿದನೆಂದು ನಿನ್ನ ಹೆಸರು ಚಿರಸ್ಥಾಯಿಯಾಗಿ ನಿಲ್ಲಲಿ (ಹಿಂಕಿರು. ೨೪). [ ಸಂ. ಚಿರಸ್ಥಾಯಿನ್ ]

**ಚಿರಸ್ಥಾಯಿಸು** (ಕ್ರಿ). ಸದಾಕಾಲದಲ್ಲೂ ನೆಲಸುವಂತೆ ಮಾಡು : ನನ್ನ ಹೆಸರಂ ಜಗದಿ ನಿನ್ನಿಂ ಚಿರಸ್ಥಾಯಿಸುವೆನೆಂಬ ಪಂಥರೇಂ ಮಣ್ಗೂಡಿಸಲೆ? (ಜೆದ್ರ್ರ. ೨೬-೫೪). [ ಚಿರಸ್ಥಾಯಿ + – ಇಸು ]

**ಚಿರಸ್ಮರಣೀಯ** (ನಾ). ಸದಾಕಾಲ ನೆನಸಿಕೊಳ್ಳುವಂತಹುದು : ಗುವ್ವರ ಸೇವೆ ಚಿರಸ್ಮರಣೀಯ (ಮುಳ್ಳೂರ. ೦೦೬ ೬೮೩೯). [ ಚಿರ + ಸ್ಮರಣೀಯ ]

**ಚಿರಾತೀತ** (ಗು). ಬಹಳ ಹಿಂದೆ ಕಳೆದುಹೋದ. [ ಚಿರ + ಅತೀತ ]

**ಚಿರಾಯತ** 'ಕಿರಿಯಾತು' ನೋ.

**ಚಿರಾಯಿ** (ನಾ). ಹೊದಿಸುವ ಬಟ್ಟೆ (?) : ಚಂದ್ರನೋಪಾದಿಯಲ್ಲಿ ಬಿಳುಪಾಗಿ ಮನೋವೇಗವುಳ್ಳ ಮಹಾವೃಷಭಗಳಂ ಕಟ್ಟಿ ಚಿನ್ನದ ಚಿರಾಯಿ ಗಳಿಂದ ಮುಚ್ಚಲ್ಪಟ್ಟಂಥಾದ್ದಾಗಿ (ಕಿಶರ. ೩೮-೪). [ <ಚೀರ್ ]

**ಚಿರಾಯಿತ** 'ಕಿರಿಯಾತು' ನೋ.

**ಚಿರಾಯು** (ನಾ). ೧. ದೀರ್ಘಾಯುಸ್ಸು : ನಿರ್ಮಳತೆ ಚಿರಾಯು ವೈರಿಪುರ ತೊನ್ನತ . . . ವಿಮುಕ್ತಿಯೆಂಬಿವಂ ಪಡೆವಂ (ರಾಜಶೇ. ೩-೦೦೦). ೨. ದೀರ್ಘಾಯುಸ್ಸುಳ್ಳವನು : ಸೂಸದೆ ಸ್ವೇತಮಯ್ದ್ದೆ ಪಕ್ಷವುಮವರ ಪ್ರದೇಶಮುಮಂಗಲ್ದಿರೆ ವಾಜಿ ಚಿರಾಯು ನಿಶ್ಚಯಂ (ರೋಕೋಪಿಕ. ೦೦-೭೩). ೩. ಕಾಗೆ: "ಕಾಕಂ ಚಿರಜೀಯು . . . ಕರಟಮೆನೆ ಕಾಗೆ" (ದುಂಗರಾ. ೫೦-೩). [ ಸಂ. ಚಿರಾಯುಸ್ ]

**ಚಿರಾಯುಷ್ಮತಿ** (ನಾ). ಬಹುಕಾಲ ಬದುಕುವ ಹೆಂಗಸು : ನೀನು ಚಿರಾಯುಷ್ಮತಿಯಾಗಿರು, ನನಗೆ ಪ್ರಾಣದಾನವನ್ನು ಮಾಡಿದೆ (ಕಪಾಕುಂ. ೦೨೦). [ಸಂ. ಚಿರಾಯುಷ್ಮತೀ ]

**ಚಿರಾಯುಷ್ಯ** (ನಾ). ಬಹಳಕಾಲ ಬದುಕುವಿಕೆ ; ದೀರ್ಘಾಯುಷ್ಯ : ಶುಭಮಸ್ತು ಶೋಭನಮಸ್ತು . . . ಚಿರಾಯುಷ್ಯಮಸ್ತು (ಮುದಕಿ. ೦-೨ ೮೦೩). [ ಚಿರ + ಆಯುಷ್ಯ ]

**ಚಿರಾಸಾನಿ** (ನಾ). ಒಂದಂ ಬಗೆಯಂ ಓಮ ; ಖುರಾಸಾನಿ: ಲವಂಗ, ಚಿರಾಸಾನಿ, ಓಮ, ವಾದಕ್ಕಿ, ಚವ್ಯ, ಚಿತ್ರಮೂಲ . . . ಚೂರ್ಣವ ಮಾಡಿ ತೆಗೆದುಕೊಳ್ಳುವುದು (ವಿಶ್ವವಿ. ೪೯). [ <ಖುರಾಸಾನಿ ]

**ಚಿರಿ** (ನಾ). ಒಂದು ಅನುಕರಣ ಶಬ್ದ. 'ಚಿರಿಗುಟ್ಟು'. ಮರಾ.

**ಚಿರಿಗಾವುಂಡ** (ನಾ). ಒಬ್ಬಾತನ ಹೆಸರು : ಬಂನವತ್ತಳೆಯ ಪ[ದ್ರ] [ರ] ಪನುಂ ಅಲ್ಲಿಯ ಹಿರಿಯಕೇರಿಯ ಚಿರಿಗಾವುಂಡನುಂ ತಂಬರಸಾಂಯ ಗಾವುಂಡನುಂ (ಶಾಸನ. XI-1, ೫೦-೨೬ ; 1005) [ ಚಿರಿ + ಗಾವುಂಡ (<ಗಾವುಂಡ) ]

**ಚಿರಿಗುಟ್ಟು** (ಕ್ರಿ). ಚಿರ್ರೆಂದು ಶಬ್ದಮಾಡು : ಕರುಳುಗಳನು ಹಿಸಿಹಿಸಿದು ಅಸ್ಥಿಗಳನು ಭರದಿ ಬಿಸುಟು ರಕ್ತವನು ಚಿರಿಗುಟ್ಟಿ ಹೀರುವ ಪುಂಡರೀಕನ ಕಂಡು (ಜ್ಞಾನಸಿ. ೨೩-೯).

ಚಿರಿಚಿರಿಗುಟ್ಟಿಸು=ಚಿರಿಚಿರಿ ಎಂದು ಕಿರುಚುವ ಹಾಗೆ ಮಾಡು,-ಕೂಗಿ ಕೊಳ್ಳುವಂತೆ ಮಾಡು : ಮರದ ಮಾಂಗಾಯ್ಮುಂಗನನು ಬಲು ಚಿರಿಚಿರಿಗುಟ್ಟಿಸದಿರ ನಾನು (ಶಲಾಂಛು. ೬). [ ಚಿರಿ + ಕುಟ್ಟು$_1$ ]

ಚಿರಿಚು (ಕ್ರಿ). ನಗು : ಉಕ್ಕಿಬರುವ ನಗುವನ್ನು ಅದುಮಿ ನಗು : ಚಿರಿಚು (Titter. ಇಂಶನಿ). [ ದೇ.೩ ತಮಿ. ಮಲ. ಚಿರಿ ]

ಚಿರಿಟು 'ಸುರುಂಟು' ನೋ.

ಚಿರಿವೇರು 'ಚಿಱುವೇರು' ನೋ.

ಚಿರು 'ಚಿಱು' ನೋ.

ಚಿರುಕುಟ (ನಾ). ಚಿಂದಿ ; ಹರುಕು ಬಟ್ಟೆ : ಚಿರುಕುಟ [ಪಾಠಾಂ. ಚಿರಕುಟ] ಮನುಟ್ಟು ಕಯ್ಯೊಳ್ ಕಿರಿದುಣಾತಂ ದೆಸೆಗೆ ನಗುತುಮಾಡುತ್ತಿಪ್ಪಾ ಮರುಳ್ (ಕಮಪ. ೧೨-೩೩).
[ ? ./ಮರಾ. ಚಿರಕುಟ, ಚಿರಕೂಟ, ಚಿರಗುಟ, ಚಿರಗೂಟ, ಚೀರಕುಟ ]

ಚಿರುಗುಳ್ಳ 'ಚಿಱುಗುಳ್ಳ' ನೋ.

ಚಿರುಟು 'ಸುರುಂಟು' ನೋ.

ಚಿರುಪಿ (ನಾ). ಒಂದು ಊರಿನ ಹೆಸರು : ಚಿರುಪಿಯು ಚಿನ್ನಕುಪ್ಪೆಯು ಚಿಱುಯುಪೊಟಲು ವುಳುವಟ್ಟು ನಾಲ್ಕೂರುಮಿಟ್ಟು ನಡೆದ ಕಲ್ಲಿಗೊಡಂಗೆ ಯೊಡ್ಡಿನ ಕಟಿಗೆ (ಸೌಇಇ. IX-1, ೨೬-೧೧ ; 960). [ ? ]

ಚಿರೂಟು 'ಚುರುಟು' ನೋ.

ಚಿರೋಟಿ (ನಾ). ಮೈದಾಹಿಟ್ಟು, ತುಪ್ಪ, ಸಕ್ಕರೆಗಳನ್ನು ಕೂಡಿಸಿ ಕರಿದು ಮಾಡುವ ಒಂದು ಬಗೆಯ ಸಿಹಿ ಭಕ್ಷ್ಯ : ಮೈಸೂರಿನಿಂದಲೇ ತಯಾರು ಮಾಡಿ ತಂದಿದ್ದ ಚಿರೋಟಿಗಳನ್ನೂ ಹುಂಗಾಳನ್ನೂ ಶಾರದಮ್ಮನವರು ಎಲ್ಲರಿಗೂ ಹಂಚಿದರು (ಮೂದಾನ. ೧೨೩).
[ ←ಮರಾ. ಚಿರೋಟೀ, ಚಿರೋಟಾ ]

ಚಿರ್ಚ 'ಚಿರತ್ತೆ$_1$' ನೋ.

ಚಿರ್ಚಿರಿಲ್ (ನಾ). ಒಂದು ಅನುಕರಣ ಶಬ್ದ : ಇಳಾಮಂಡಲಂ ಚಿಱ್ಚಿರಿಲ್ಲೆಂದೊಡೆಗುಂ (ಸೌಇಇ. XI-II, ೧೨೬-೦೪ ; 1030).

ಚಿರ್ಚು 'ಚಿರತ್ತೆ$_1$' ನೋ.

ಚಿರ್ಪುಳಿ (ನಾ). ಒಂದು ಊರಿನ ಹೆಸರು ; P ವಂದನವಲ್ಲಿ ತಾಲ್ಲೂಕಿಗೆ ಸೇರಿರುವ ಈಗಿನ ಚಿಪ್ಪಲಿ ಎಂಬ ಊರು : ಬಾಣರಸ ಇತ್ತ ಕೆಯು ಕಱಯು ನಾಲ್ವತ್ತು ಮಣಸ ಇದಕ್ಕೆ ಉತ್ತರ ಸಾಕ್ಷಿ ಕಣ್ಣಾಗ. x x ಕ ಯಿರು ಚಿಪ್ಪುಳಿ x x x ಸಾಕ್ಷಿ ಪಡೆದರ್ (ಸೌಇಇ. IX-1, ೦-೩ ; ?).
[ ? ]

ಚಿರ್ಭಟ (ನಾ). ಒಂದು ಬಗೆಯ ಸೌತೆ ; ಮೆಕ್ಕೆಗಿಡ ಮತ್ತು ಅದರ ಕಾಯಿ : "ಉರ್ವಾರುಃ, ಚಿರ್ಭಟಃ-ಈ ೨ ಮೆಕ್ಕೆ" (ಹಲಾಯು ೩೩-೩೬).
[ ಸಂ. ]

ಚಿರ್ಯಾತ 'ಕಿರಿಯಾತು' ನೋ.

ಚಿಲಕ 'ಚಿಲುಕ' ನೋ.

ಚಿಲಕಡಿ (ನಾ). ಒಂದು ಬಗೆಯ ಮರ : ಚಿಲಕಧೂಪ, ಚಿಲಕಡಿ. . . . ಧೂಪ (ದ್ರುಶಿಗಿ. ೧೩-೨೩೬). [ ? ]

ಚಿಲಕತ್ತು 'ಚಿಲಖತ್ತು' ನೋ.

ಚಿಲಕಧೂಪ (ನಾ)=ಚಿಲಕಡಿ : ಚಿಲಕಧೂಪ, ಚಿಲಕಡಿ, ಗುಗ್ಗುಳಧೂಪ, ಮಡ್ಡಿಮರ, ಮಾದಿ, ಚಿತ್ರ, ಧೂಪ (ದ್ರುಶಿಗಿ. ೦೩-೨೩೬). [ ? ]

ಚಿಲಕೆ$_1$ 'ಚಿಲಿಕೆ$_1$' ನೋ.

ಚಿಲಕೆ$_2$ 'ಚಿಲಿಕೆ$_2$' ನೋ.

ಚಿಲಕು (ನಾ). (ಉಕ) ಗಂಡಸರಿಗೆ ಉಂಟಾಗುವ ಒಂದು ಬಗೆಯ ಮೂತ್ರರೋಗ : (೬). [ ? ]

ಚಿಲಕುರುಳಿ, ಚಿನಕುರುಳಿ, ಚಿನುಕುರುಳಿ (ನಾ). ೧. ಹುರುಳಿ, ಕಡಲೆ ಮುಂತಾದ ಧಾನ್ಯಗಳನ್ನು ಹುರಿದು ಖಾರ ಹಾಕಿ ಮಾಡಿದ ಒಂದು ಖಾದ್ಯ ವಿಶೇಷ; ಹುರಿಗಾಳು: ಚಿಲಕುರುಳಿ ಮಾರೋಳೆ ತಿಲಕಚಿಟ್ಟೇನ ಕಂಚಲುವೆ (ಹಳ್ಳಿಯ. ೪೩). ಚಿನಕುರುಳಿ : ೧. ನನ್ನ ಸ್ನೇಹಿತ ಊರಿಂದ ತಂದಿದ್ದ ಚಿನಕುರುಳಿ ಬಹಳ ಸೊಗಸಾಗಿತ್ತು (ರೂಢಿ). ೨. ಒಂದು ಬಗೆಯ ಪಟಾಕಿ; ಮದ್ದಿನ ಚಟಾಕಿ: ಪಟಾಕಿ, ಚಿನಕುರುಳಿ, ಹೂಬಾಣ, ಹೂವಿನ ಕುಂಡ (ರಂಡವು. ೬೨-೦). ೩. (ಆಲಂ) ಹಾಸ್ಯ; ಜೋಕು: ಈ ವರ್ಷದ ದೀಪಾವಳಿ ಸಂಚಿಕೆಯಲ್ಲಿ ಚಿನಕುರುಳಿ ಸೊಗಸಾಗಿತ್ತು (ರೂಢಿ). ಚಿನುಕುರುಳಿ : ೧. ಚಿನುಕುರುಳಿ ಬಹಳ ಚೆನ್ನಾಗಿದೆ (ರೂಢಿ).
[ ಚಿಲಕು ? + ಹುರುಳಿ ]

ಚಿಲಕೂಲಿ 'ಚಿಲುಕೂಲಿ' ನೋ.

ಚಿಲಕೆ 'ಚಿಲಿಕೆ$_1$' ನೋ.

ಚಿಲಖತ್ತು, ಚಿಲಕತ್ತು (ನಾ). ಯುದ್ಧದಲ್ಲಿ ಶರೀರ ರಕ್ಷಣೆಗಾಗಿ ಹಾಕಿಕೊಳ್ಳುವ ಕವಚ ; ಉಕ್ಕಿನ ಕವಚ ; ತನುತ್ರಾಣ ; ಸವಂಗ : ಅವನು ಪೋಷಾಕಿನಲ್ಲಿ ಯಾವಾಗಲೂ ಚಿಲಖತ್ತನ್ನು ಪಯೋಗಿಸುತ್ತಿದ್ದನು (ಇಂಗ್ಲೆ. ೦೦೦); ಬೇರೆ ಬೇರೆ ಬಗೆಯ ಹಳೆಯ ಆಯುಧಗಳನ್ನೂ ಚಿಲಖತ್ತುಗಳನ್ನೂ ಸಂಗ್ರಹಿಸಿ ಅಲ್ಲಿಡಲಾಗಿದ್ದಿತು (ರತ್ನಗೋ. ೩). ಚಿಲಕತ್ತು : ಚಿಲಕತ್ತು ಒರೆಗತ್ತಿ ಎತ್ತಿ ದುಂಡಿನ ಮಂದಿ (ರೋಶಗೀ. ೨೦೨); ಉನ್ನೀಸಳು ಗಂಡನ ಚಿಲಕತ್ತು ಕಳೆದು ಉಪಚರಿಸುವಳು (ಮೂರಜ. ೧೬).
[ ←ಮರಾ. ಚಿಲಖತ್, ಚಿಲಕತ್; ಪಾರ. ಚಿಹಿಲ್ಕದ್ ]

ಚಿಲಣ 'ಚೀರಣ' ನೋ.

ಚಿಲಣಗೆಲಸ 'ಚೀರಣಗೆಲಸ' ನೋ.

ಚಿಲವಾನ್ 'ಚಿಲುವಾನ' ನೋ.

ಚಿಲಿ (ಕ್ರಿ). ಹಲ್ಲುಬಿಡು ; ಕಿಸಿ : ಕವೋಗದೆಡೆಯ ಪಲ್ಗಳಂ ಬೆಳ್ಪನೆಯೆ ಚಿಲಿವ ಘೋರಕ ದೆದರಿ (ಶ್ರೀರಾಮಾ. ೧೧೪-೧೨೬). 'ಕಿರಿ$_2$' ಪರಾ. [?]

ಚಿಲಿಕ 'ಚಿಲಿಕೆ$_2$' ನೋ.

ಚಿಲಿಕೀರೆ 'ಚಿಲುಕೀರೆ' ನೋ.

ಚಿಲಿಕೆ$_1$, ಚಿಲಕೆ$_1$, ಚಿಲಕೆ, ಚಿಲುಕೆ, ಚೀಲಿಕೆ (ನಾ). ಒಂದು ಬಗೆಯ ಸೊಪ್ಪು : "ಚಿಲಿಕೆ ಸ್ವಸ್ತಿಕೆಯುಕ್ಕು" (ದುಂಗರಾ. ೪೪-೪೬) ; ನುಗ್ಗೆಯ ಕಾಯಿ ತೊಂಡೆಯ ಕಾಯಿ ಚಿಲಿಕೆಯ . . . ಮೇಲೋಗರವುಣೆಯಗ್ಗದಾರೋಗ್ಯವು ಪಥ್ಯ (ಸಾಳ್ವಸಾಂ. ೬). ಚಿಲಕೆ$_1$ : ಸೊಪ್ಪುಗಳು : ಅಗಸೆ ಬಿಳಿಸೂಲಿ . . . ದಂಟು, ಹರಿವೆ, ಚಿಲಕಿ, ದಗ್ಗಳಿ, ಕಸವೆ (ನಮ್ಮನು. ೨೩೬). ಚಿಲಕೆ : "ಮೃದುಪತ್ರೀ—ಚಕ್ರವರ್ತ್ತ, ಚಿಲಕೆ" (ಟಷಧಿ. ೧೨೧). ಚಿಲುಕೆ : ಮತ್ತೆ ಕೆಲವಕ್ಕೆ ಬದನೆಯ ಬಜ್ಜಿ ಕೆಲವಕ್ಕೆ ಕತ್ತರಿಸಿದಳಕೀರೆ ಚಿಲುಕೆ [ಪಾಠಾಂ. ಚಗತೆ]ನರುವಲು ಚಕ್ರವರ್ತ್ತ ಮೊದಲಾದ ಸೊಪ್ಪಂ ತುಪ್ಪದೊಳಗೆ ಚೆನ್ನಾಗಿ ತಾಳಿಸಿ (ಸೂಪಶಾ. ೪-೨೧). ಚೀಲಿಕೆ : "ಚಿಲ್ಲಿಕಾ—ಚೀಲಿಕೆ" (ಟಷಧಿ. ೩೬). [ ದೇ.೩ ತೆಲು. ಚಿಲುಕ, ಚಿಲ್ಕ./ಸಂ. ಚಿಲ್ಲಿಕಾ ]

ಚಿಲಿಕೆ$_2$, ಚಿಲಕೆ$_2$, ಚಿಲಿಕೆ (ನಾ). ೧. (ಉಕ) ಚಾವಣಿಯನ್ನು ಹಾಕುವಾಗ ಬಿದಿರಿಗೆ ಬದಲಾಗಿ ಹಾಕುವ ಸಣ್ಣ ಗಳು ; ಸಣ್ಣ ಮರದ ಪಟ್ಟಿ ; ರಿಪೀಸು : ಬಡವರಿದ್ದವರು ಜಂತೆಗಳ ಮೇಲೆ ಚಿಲಿಕೆಗಳನ್ನು ಹಾಕಿ ಅವುಗಳ ಮೇಲೆ ಯಾವುದಾದರೂ ಒಂದು ಗಿಡದ ಎಲೆಗಳನ್ನು ಹರವಿ ಮೇಲಮುದ್ದಿಯ ಹಾಕುವರು (ಮುಂಬಯಿ. ೪-೦೧೬). ೨. ಚಟ್ಟಿ : "ಸಿದಿಗೆ" (ಜಾನಪೋ. ೩೬). ಚಿಲಕೆ$_2$: ೧. ಗಂಡಸಮಗ ಗಜಭೀಮ ಹುಟ್ಟಿದರ ಚಿಲಕಿ ಚಿತ್ತರ ನಗತಾವ (ಗರತಿ. ೮೪). ಚಿಲಿಕೆ : ೧. ಬರಿಕೆ ಎಲುಗಳು ಜಂತಿಗಳು ಬೆರಳೆಲುಗಳೇ ಚಿಲಿಕೆ ಇಂತೀ ಗೃಹಕ್ಕೆ ಮಾಂಸದ ಮೇಲುಮುಗ್ಗೆಗಳು ರಕ್ತದ ಸಾರಣೆಗಳ (ವಚನ. I, ೨೫೦-೨೪). [ ? ]

**ಚಲಿಕೆನೆವಾಲು** (ನಾ). ಚೆನ್ನಾಗಿ ಕಾಯಿಸಿ ಕೆನೆಗೂಡಿದ ಹಾಲು : ಇನಿದೊಸರ್ವ ತನಿಪಾವಿನೊಳ್ವಣ್ಣ ರಸದಿ ಚಲಿಕೆನೆವಾಲನೆಱೆದು ಸಿರದಚ್ಚ ವುಡಿಯನ್ನುದುರಿಸಿ(ಕವಿಚ. III, ೨೦೦ ಪ್ರಭಾವತೀ ಪರಿಣಯ). 'ಚಲುಪಾಲು' ಪರಾ. [ <ಚಲು₁ + ಕೆನೆವಾಲು(<ಕೆನೆವಾಲ್) ]

**ಚಲಿಚಿಮ, ಚಳಿಚಿಮ** (ನಾ). ಒಂದು ಬಗೆಯ ಸಣ್ಣ ವಿಮಾನು ; ಜಂಬು ವಿಮಾನಂ : "ನಲವಿಮಾನ ಚಲ[ಲಿ]ಚಿಮ ಎಂದೊಡೆ ಸಿಸಿಲು, ಚಳಿಯ ಮಾನೆಂದು ಎಂಬರು" (ನಾಚರಾ.೬). **ಚಳಿಚಿಮ**: "ನಳವಿಮಾನಃ, ಚಳಿಚಿಮಃ– ಈ ೨ ಕಿಱುವಿಮಾನ್". (ಹಲಾಯು. ೧೦೮-೩೬): "ಚಳಿಚಿಮವೆನಲು ನಳವಿಮಾನ ವೆನೆ ಕಿಱುಮಿನ ಪೆಸರೆನಿಕ್ಕು" (ಮಂಗರಾ. ೧೨೧-೬); ವಿಸ್ಮಿರತ್ರೀನದೊಳಂ ಚಳಚ್ಚಳಿಚಿಮದೊಳಂ . . . ಅತಿಮನೋಹರವಾದ ಯಮುನಾಹ್ರದ ಪರಿಸರಪ್ರದೇಶದೊಳಕ್ರೂರಂ ನಿಜವರೂಥಮಂ ನಿಲಿಸಿ (ಜಗವಿ. ೫-೧೦ ೩ವ); ಪುಟನೆಗೆದು ಮಗುಟುಟುಟಿವ ಚಳಿಚಿಮಾನೀಕದಿಂ (ಉದ್ಭಟ. ೩-೮೪).
[ ಸಂ. ]

**ಚಲಿಪಾಲು** 'ಚಲುಪಾಲ್' ನೋ.

**ಚಲಿಪಿಲಿ** (ನಾ). ಹಕ್ಕಿಗಳು ಗುಂಪಾಗಿ ಮಾಡುವ ಧ್ವನಿಯ ಅನುಕರಣ: "ಪಕ್ಕಿಗಳುಲಿಗಕ್ಕು ನಾಮ ಚಲಿಪಿಲಿಯೆನುತುಂ" (ಕವಿಕಂ. ೬೩): ಚಲಿಪಿಲಿ ಹಾಡಿಗೆ ಗುಬ್ಬಿಯ ಥಕ ಥೋಂ ಧಿಕ್ಕಿಟ್ಟ (ಮಾಂದಳಿ. ೪೫-೧) : ಅಲ್ಲೊಂದು ಇಲ್ಲೊಂದು ಹಕ್ಕಿಗಳ ಚಲಿಪಿಲಿ ಕೂಗು ಅವನ ಕಿವಿಗೆ ಕಚಕುಳಿಯಾಡಿಸಿ ದಂತಾಯಿತು (ಕೇವೂಠ. ೧೦).

**ಚಲಿಪಿಲಿಗುಟ್ಟು** (ಕ್ರಿ). ಚಲಿಪಿಲಿ ಎಂದಂ ಧ್ವನಿಮಾಡು : ಚಲಿಪಿಲಿಗುಟ್ಟ ನುಣ್ದೊದಳ್ಗಳಿಂ ಕಿವಿಗಿಂಪನೊದರ್ಚೆ (ದಕಳು. ೧-೫೭) ; ಹಕ್ಕಿಗಳೆಲ್ಲಾ ಸಂತೋಷದಿಂದ ಚಲಿಪಿಲಿಗುಟ್ಟ ಕೂಗುತ್ತಾ ಹಾರಾಡುತ್ತಿದ್ದವು (ಕಳಹು.೨): ಇತರ ಹಂಸಪಕ್ಷಿಗಳು . . . ಚಲಿಪಿಲಿಗುಟ್ಟುತ್ತಾ ಹಾರಿಹೋದವು (ಹಿಂಕಿರು. ೩೭). [ ಚಲಿಪಿಲಿ + ಕುಟ್ಟು₁ ]

**ಚಲಿಪಿಲಿಗುಡು**(ಕ್ರಿ).(ಆಲಂ) ಹಕ್ಕಿಯ ಚಲಿಪಿಲಿಗುಟ್ಟುವಂತೆ ಸಂತೋಷ ದಿಂದ ಕೂಡಿರು,–ಆನಂದದಿಂದಿರು : ಮನಸ್ಸು ಸಂತೋಷದಿಂದ ಚಲಿಪಿಲಿಗುಡುತ್ತಿದ್ದ ದಿನ (ರಂಗಹ. ೧೨೪).
[ ಚಲಿಪಿಲಿ + ಕುಡು₁(<ಕೊಡು₁) ]

**ಚಲಿಪಿಲಿಹಕ್ಕಿ** (ನಾ). ಒಂದು ಬಗೆಯ ಹಕ್ಕಿ ; ಕೊಟ್ಟು : "ಚಾಷಃ = ಚಲಿಪಿಲಿಹಕ್ಕಿ" (ಕಾಶಕ್ಕ. ೧೫೭). 'ಚಲಿಮಿಲಿಗ' ಪರಾ.
[ ಚಲಿಪಿಲಿ + ಹಕ್ಕಿ₁(<ಪಕ್ಕಿ₁) ]

**ಚಲಿಮಿಲಿ** (ನಾ). ಹಕ್ಕಿಗಳು ಗುಂಪಾಗಿ ಮಾಡುವ ಧ್ವನಿಯ ಅನುಕರಣ: "ಚಲಿಮಿಲಿಯೆಂದು ಪಕ್ಕಿಗಳುಲುಹು" (ಕಲಸಾ. ೩-೧೫) : ಸಮಸ್ತಧಾತ್ರಿ ಯುಮನಾಳಿವೆವೆಂದುಲಿವಂತೆ ಪಕ್ಕಿಗಳ್ ಚಲಿಮಿಲಿಯೆಂಬ ಪೊಟ್ಟಿಱಿಗೊಳೆ ಬಂದುಜದೊಡ್ಡಿದನಂತಕಾತ್ಮಜಂ (ಶಂ ಪ ಭಾ. ೧೧-೩೩) ; ಚಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣರೇ ನೀವು ಕಾಣರೇ (ಮಹಾದೇ. ಬ. ೩೩-೭೩).

**ಚಲಿಮಿಲಿಗ, ಚಲುಮಿಲಿಗ** (ನಾ). ಚಲಿಮಿಲಿ ಎಂದು ಶಬ್ದ ಮಾಡುವ ಒಂದು ಬಗೆಯ ಹಕ್ಕಿ ; ಕೊಟ್ಟು ; ಚಾಷ : ಗೌಜು ಪಾರಿವ ನಿರಿಲೆ ಸಾಳುವ ಚಲಿಮಿಲಿಗ ಚಂಬೋತ . . . ಗರಿಗ ಮೊದಲಾದಖಿಳ ಖಗಕುಲ ಬಿದ್ದುದುರಿಯೊಳಗೆ (ಕುವ್ಯಾಆ. ೨೦-೫೩) ; ವಲಿಯ ಭಾರದ್ವಾಜ ಪಿಕ ಪಿಂಗಲಿ ನಿಶಾಟಧ್ವಾಂಕ್ಷ ಚಾತಕಿ ಚಲಿಮಿಲಿಗ ಜಾಣ್ಯಕ್ಕಿ . . . ಮಡಗೊಳಲಿ ಮುಖ್ಯವಿಹಂಗವಿವೆ ವೈದೇಹಿ ನೋಡೆಂದ (ತೊರರಾ. ೩-೦-೩೩). **ಚಲುಮಿಲಿಗ** : ಹರಡೆ ಚಲುಮಿಲಿಗನು ಚಲುವೆ ಗಿಜುಗಿರಳೆ ಕಮ್ಮರನಸಗ . . . ಪಕ್ಕಿಗಳವಟಿಗೊಳಿಸೊಪ್ಪಿದವು (ಸಾಳ್ವಭಾ. ೫-೭೧).
[ ಚಲಿಮಿಲಿ + – ಗ₂ ]

**ಚಲಿಮಿಲಿಸು** (ಕ್ರಿ). ಚಲಿಮಿಲಿ ಎಂದಂ ಧ್ವನಿಮಾಡು: ಬಳಸಿ ಚಲಿಮಿಲಿಪ ವಿಹಗಂಗಳ ಕಳಕಳದೊಡನೆ ತೊಡರ್ದು . . . ತೀಡಿತ್ತು ಸುಪ್ರಭಾತ ಸಮಿರಾರಂ (ಕುಸುಮಾ. ೪-೭೦) ; ಬಳಸಿ ಚಲಿಮಿಲಿಪ ವಿಹಗಂಗಳ ಕಳಕಳ ದೊಡನೆ ತೋರ್ದು ಸರಸೀಜಳವಂ ಪಳಿಗೊಳಿಸಿ ಕುಮುದ ಮುಖಮಂ ಪೆಳಱಿಸಿ ತೀಡಿತ್ತು ಸುಪ್ರಭಾತ ಸಮೀರಂ (ಶಾಂತೀಶ್ವ. ೧೦-೯೫).
[ ಚಲಿಮಿಲಿ + – ಇಸು₃ ]

**ಚಲಿಮೆ₁** 'ಚಲುಮೆ₁' ನೋ.

**ಚಲಿಮೆ₂** 'ಚಲುಮೆ₂' ನೋ.

**ಚಲಿವಾಲು** 'ಚಲುಪಾಲ್' ನೋ.

**ಚಲು₁** (ಕ್ರಿ). ೧. ಅನ್ನದಂತೆ ಚೆನ್ನಾಗಿ ಬೇಯು. ೨. ಚನ್ನಾಗಿ ಕುದಿ,– ಕಾಯು. 'ಚಲುಪಾಲ್' ಪರಾ. [ ದೇ.॥ ತಮಿ. ಚಲು ]

**ಚಲು₂** (ನಾ). (?) : "ಗೋಧಾಸ್ಸನ್ಯಃ–ಚಲು" (ಒಷಧಿ. ೫೦). [ ? ]

**ಚಲುಕ, ಚಲಕ, ಚಿಲುಕು₁** (ನಾ). ೧. ಕದವನ್ನು ಭದ್ರಪಡಿಸುವುದಕ್ಕಾಗಿ ಉಪಯೋಗಿಸುವ ಕೊಂಡಿ,–ಸರಪಣಿ : ಕದವ ಮುಚ್ಚಿದಳಿದಕೋ ಚಲುಕ ಅಲ್ಲಾಡುತಿದೆ (ಪುರಂದ. ೨-೯೭ ಅನುಪಲ್ಲವಿ). ೨. ಬೇಟೆಯಲ್ಲಿ ಉಪಯೋಗಿಸುವ, ತುದಿಯಲ್ಲಿ ಮುಳ್ಳಿನಂತೆ ಮೊನೆಯಿರುವ ಒಂದು ಉಪಕರಣ; ಈಟಿ; ಬರ್ಜಿ (?) : ತಡಿಕೆ ತಳಿಯು ಅಂಟಿನ ಕಣೆ ಜಾಳುವ ಒಡಿದ ದೀಹವು ವಾಚಿ ಸಿಡಿಯು ಹೊಡೆದೆತ್ತುವ ಮೊಲ ಎಸೆವ ಚಲುಕಗಳು ಬಿಡುಗಣ್ಣ ಬೇಡರೊದಗಿತು (ಹರಿಸಾಂ. ೨-೨). **ಚಲಕ**: ೧. ಅತ್ತೇಮನೇಲಿ ಹೇಗಿರುವ ಮಗಳೇ ಅಂದ್ರೆ ಚಲಕಕ್ಕೆ ಮೊಳಕ್ಕೆ ತಗುಲಿದ ಹಾಗೆ ಅಂದ್ಲು (ಹುಟ್ಟಿಹ. ೧೦೩). **ಚಿಲುಕು₁**: ೨. ಮದನನ ನನೆಯಂಬು ಮುನಿಹೃದಯಮಂ ನಡವೆನುತ್ತ ಚಿಲುಕಿನ ದೊಡ್ಡ ಮೊನೆಯಂಬ ನಾಗಿಸಿದನೋ ಯೆನಲ್ . . . ಹೊಂಗೇದಗೆಗಳೊಪ್ಪಿದುವು ತರುತರಮೊಳ್ಕ (ಚಬಪು. ೪೫-೧೮). [ ದೇ.॥ ತಮಿ. ಮಲ. ಚಿಲುಕ್ಕು ; ತುಳು. ಚಿಲ್ಕ್; ತೆಲು. ಚಿಲಕ, ಚಿಲುಕು, ಚಿಲುಕ ]

**ಚಿಲುಕವರೆ** (ನಾ). ನೀರಿನಲ್ಲಿ ನೆನಸಿ ಸಿಪ್ಪೆ ತೆಗೆದ ಅವರೆಕಾಳು ಮತ್ತು ಅದರಿಂದ ಮಾಡಿದ ಒಂದು ಬಗೆಯ ಮೇಲೋಗರ : ಇಂದು ನಮ್ಮ ಮನೆಯಲ್ಲಿ ಚಿಲುಕವರೆ ಮಾಡಿದ್ದರು (ರೂಢಿ). 'ಚಿದಕವರೆ' ಪರಾ.
[ ಚಿಲುಕು₂ + ಅವರೆ₁ ]

**ಚಿಲುಕಾಯಿ** (ನಾ). ಗಿಳಿ (?) : ಯಾಕತ್ತೆ ನನ್ನ ಗೋಪೀದೇವಿ ಕಂದಯ್ಯ ಗೋಪುರದಲ್ಲಾಡೂ ಚಿಲುಕಾಯಿ ಚಿಂತಾಮಣಿ ಹಸುಳೆ ಬಂದಾಡೊ ತೊಡೆ ಮೇಲೆ (ಹಳ್ಳಿಯ. ೮೯). [ ?./ತೆಲು. ಚಿಲುಕ, ಚಿಲ್ಕ ]

**ಚಿಲುಕಿಸು** (ಕ್ರಿ). ಕಾಳಿನ ಮೇಲಿರುವ ಸಿಪ್ಪೆ ತೆಗೆ, – ಸಿಪ್ಪೆ ಬಿಡಿಸು : ಚಿಲುಕಿಸಿದ ಅವರೆಕಾಳು ಬಹುರುಚಿ (ರೂಢಿ).
[ ಚಿಲುಕು₂ + – ಇಸು₃ ]

**ಚಿಲುಕೀರೆ, ಚಿಲಿಕೀರೆ** (ನಾ). ಒಂದು ಬಗೆಯ ಸೊಪ್ಪು ; "ಶೋಧಿನೀ– ಚಿಲುಕೀರೆ" (ಒಷಧಿ. ೧೭೨) ; ಚಿಲುಕೀರೆ ಸೊಪ್ಪು ಸಿಹಿಪಾಲೆ ಸೊಪ್ಪು ಚಕ್ರವರ್ತಿ ಪುಳಿಂಪುರುಚಿ ಜಾಂಗಲಮಾಂಸ . . . ಯಿಪ್ಪು ಪಥ್ಯ ಕರವಹುದು (ವಿಷಚಿ. ೧೬-೩). **ಚಿಲಿಕೀರೆ** : ಚಿಲಿಕೀರೆಯ ಸೊಪ್ಪಿನ ರಸದಲ್ಲಿ ಒಂದು ಜಾವ ಮರ್ದಿಸಿ ಸಾಸಿವೆ ಪ್ರಮಾಣ ಗುಳಿಗೆಯಂ ಮಾಡಿ ಸಮಜ್ವರಕ್ಕೆ ಜೀರಿಗೆ ಸಕ್ಕರೆಯಲ್ಲಿ ಕೊಡುವುದು. (ವಿಷ್ಣುವಿ. ೩೭); ಚಕ್ರವರ್ತಿದ ಸೊಪ್ಪು, ಚಿಲಿಕೀರೆ ಸೊಪ್ಪು ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳು (ಸಕಷ. ೧೦೨). [ ←ತೆಲು. ಚಿಲುಕಕೂರ ]

**ಚಿಲುಕು₁** 'ಚಲುಕ' ನೋ.

**ಚಿಲುಕು₂** (ನಾ). ಸಿಪ್ಪೆ ; ಪೊರೆ. 'ಚಿಲುಕಿಸು', 'ಚಿದಕು₂' ಪರಾ.
[ ? ]

**ಚಿಲುಕೂಲಿ, ಚಿಲಕೂಲಿ** (ನಾ). ಒಂದು ಬಗೆಯ ಹಕ್ಕಿ : ಪೆರ್ಬಕ್ಕಿ ಹಂಗುರು ಕಾಕಂ ಚಿಲುಕೂಲಿ ರತ್ನಖಗಮಿರ್ಕುಂ ತದ್ವನಾಗೌಘದೊಳ್ (ರಾಜಶೇ. ೫-೩೯) ; ಪಾರಾವತಂ ಪರಪುಟ್ಟಂ ಚಿಲುಕೂಲಿ ಚಾತಕವು ವಿರ್ಕುಂ (ಯಾದವ. ೪-೧೩) ; ಗರುಡಂ ಶರಾರಿ ಚಿಲುಕೂಲಿ ಪಿಕಳಂ ಬಕಂ (ಕುಮಾರ. ೪-೧೯೮). **ಚಿಲಕೂಲಿ :** ಅಂಚೆಯ ಚಂಬೋತನ ಚಿಲಕೂಲಿಯ ಕೊಂಚೆಯ ಗಿಳಿ ಕೋಳರ್ವಕ್ಕಿಯ ಪುರುಳಿಯ (ಪ್ರಭುಲಿಂ. ೪-೦೨ ರಗಳೆ). [?]

**ಚಿಲುಕೆ** 'ಚಿಲಿಕೆ$_1$' ನೋ.

**ಚಿಲುತಲಿ** (ನಾ). ಒಂದು ಬಗೆಯ ಆಯುಧ : ಸಂಣ ಚಂದ್ರಾಯುಧಾ ಚಿಲುತಲಿ ಮೊದಲಾದಾ ಬತ್ತೀಶಾಯುಧಾ (ಎಕ. XVI, ಗುಬ್ಬಿ. ೭೪-೨೩ ; ಕ. 1776). [ ? ]

**ಚಿಲುಪಾಲ್, ಚಿನಿಪಾಲು, ಚಿನಿವಾಲ್, ಚಿನಿವಾಲು, ಚಿಲಿಪಾಲು, ಚಿಲಿವಾಲು, ಚಿಲುಪಾಲು, ಚಿಲುಹಾಲು** (ನಾ). ನೀರು ಇಂಗುವಂತೆ ಚೆನ್ನಾಗಿ ಕಾಯಿಸಿದ ಹಾಲು ; ಕೆನೆಹಾಲು : "ಕಾಯ ಬತ್ತಿದ ಹಾಲು ಚಿಲು[ಪಾಠಾಂ. ಚಿರ]ಪಾಲೆನಿಕ್ಕು" (ಮಂಗರಾ. ೩೪-೨) ; ಸಗ್ಗದಮರ್ದಿನ ಕೊಳಂ ಮೇಲ್ವಾಯ್ದು ಮಿಸುಪ ಚಿಲುಪಾಲ್ಗನಗಳಂ ನೆಱೆದಾರೆಯಿಟ್ಟವೋ (ವೀರಶೈವ. ೩-೯-೩೪). **ಚಿನಿಪಾಲು :** ಇನಿದಾದ ಚಿನಿಪಾಲು ಪೀರ್ವರಸಂಚಿ ಹುಳಿಗಂಗೆಯ ಕುಡಿವುದೇ (ಸರ್ವಜ್ಞ. ೧೯೫-೯೦೦) ; ಕಾಸಿ ಚಿನಿಪಾಲಂ ಕೊಡುವವಳು ನಿಮಗೆ ಕೊಡಗೂಸು (ಬಸವ. ೯-೩೮) : ಸಕ್ಕರೆಯ ಜೇನ ಸವಿಗಿಮ್ಮಿಗಿಲು ಕೆನೆಗಟ್ಟಿ ಪುಕ್ಕುಕ್ಕಿ ಕಾಯ ಚಿನಿಪಾಲ ರುಚಿಗಿಂದಧಿಕ (ಪದಮೊ. ೦-೨) ; ಸಕ್ಕರೆ ಚಿನಿಪಾಲು ತುಪ್ಪವ ಯಿಕ್ಕೊಡನೀರ್ವರು ಸವಿದು (ಕಠಿಣ. ೩೮-೩). **ಚಿನಿವಾಲ್ :** ಚಿನಿವಾಲ್ಗನೆಗೆ ಸದ್ಘೃತಂಗಲಸಿ ದಂದದೊಳೆನ್ನ ಕೃತಿರಸಂ ನಾಡೆ ಸವಿಗೊಳಿಸುವುದು (ಶಂದಿಮಾ. ೦-೩೦). **ಚಿನಿವಾಲು :** "ಲಿಂಗಮೂರ್ತಿ ಇನ್ನೊಬ್ಬರಿಗೆ ಶಿವ ಕಾರುಣ್ಯ" ಎಂಬ ಆ ಚಿನಿವಾಲನ್ನು ಕೊಡಲು ಯತ್ನಿಸುವವನೇ ಹೊರತು ಹುಳಿಯನ್ನು ಕೊಡನು (ಕರ್ನಾಟಕ. ೦೨೦). **ಚಿಲಿಪಾಲು :** ಶಿವಮೃಡನಾಮ ಶಿವಧ್ಯಾನ ವೆಂಬ ಚಿಲಿಪಾಲನಾರೋಗಿಸುವ ವರಹಿತದಿಂದ (ರು ದ್ರ ಭಾ . ೯೨) ; ಚಿಲಿಪಾಲು ಸಕ್ಕರೆಯಾ ಸುಲಿದ ದಾಳೆಯ ಹಣ್ಣು ಕಲಸಿ (ಗುರುಮೊ. ೮೦) : ಚಿಲಿಪಾಲಿನೊಳಗೆ ಶರ್ಕರೆವೆರದು ಪರಿಮಳಂ ಕಲಿತಮೆಂದೆನಿಸುತಿರಲೀಂಟ ನಾಲಗೆದಣಿದು ಸುಲಭದಿಂ ನೆನೆದಪುದೆ ದೇವ (ವಂಶಾರಾ. ೩-೦-೨) ; ಶರ್ಕರೆವೆರಸಿ ಚಿಲಿಪಾಲೀವ ಸಿರಿಯೆನಗಹುದೆಯೆಂದು (ಜಿನಧಾ. ೩೦-೯). **ಚಿಲಿವಾಲು :** ತುಪ್ಪ ಸಕ್ಕರೆ ಚಿಲಿವಾಲ ಸವಿವವೋಲು ಪೊಪ್ಪುಕಥೆಯ ಪೇಳುವೆನು (ರಾಮವಿ. ಅನುಬಂಧ ೩.೨೦-೬). **ಚಿಲುಪಾಲು :** ರಸವೊಸರ್ವ ಮುಪ್ಪಳಮುಂ ಚಿಲುಪಾಲ ತಿರುಳ ಕರಣಿಗಳುಮಂ . . . ಒಂದುಗೂಡಿ (ಸಂಧಿರ. ೦೦-೩೫) ; ಚಿಲುಪಾಲಿನೊಳು ವಿಷಂ ತವರಾಜಸೊಳು ಕೈವ (ಭಾವಚಿಂ. ೯-೩) ; ಗುಟ್ಟುಡರದೆ ಕಾದ ಚಿಲುಪಾಲು ಮಕ್ಷಿಕೋಚ್ಛಿಷ್ಟವಿಲ್ಲದ ಜೇನುತುಪ್ಪ (ರೋಹಕ. ೨೩-೦) : ಚಿಲುಪಾಲು ಕಂಬಾಲು ಕೆನೆವೆರಸಿದ ಪಾಲು (ಕಂಠವಿ. ೮-೯೦). **ಚಿಲುಹಾಲು :** ಬಟ್ಟಹಾಲು, ಚಿಲುಹಾಲು, ಕೆನೆಹಾಲು, ಎಟ್ಟೆಹಾಲು, ತನಿಹಾಲು ಮುಂತಾದ ತರತರದ ಹಾಲು ಗಳನ್ನು ಬಟ್ಟಲು ಬಟ್ಟಲು ತುಂಬಿ ತಂದು ಎಡೆ ಮಾಡಿದಳು(ಮಾಮುಳ್ಳ. ೫೪).

[ ಚಿಲು$_1$ + ಪಾಲ್$_1$ ]

**ಚಿಲುಹಾಲು** 'ಚಿಲುಪಾಲ್' ನೋ.

**ಚಿಲುಮಿಲಿಗ** 'ಚಿಲಿಮಿಲಿಗ' ನೋ.

**ಚಿಲುಮುರಿ** (ನಾ). ಗೋಧಿಯ ಹಿಟ್ಟನಿಂದ ಮಾಡಿ, ತುಪ್ಪದಲ್ಲಿ ಕರಿದ ಒಂದು ಬಗೆಯ ಭಕ್ಷ್ಯ : ನೆಱೆ ಸಣ್ಣ ಗೋದುವೆಯ ಹಿಟ್ಟು ಸಿಹಿವಾಲೊಳಗೆ ನುಱುಗುವಂದದಿ ಕಲಸಿ . . . ತುಪ್ಪದೊಳಗಡು ಚಿಲುಮುರಿಯಾದುದು (ಸೂಪಶಾ. ೦-೩೩). [ ? ]

**ಚಿಲುಮೆ$_1$, ಚಲಮೆ, ಚಲುಮೆ, ಚಿಲಿಮೆ$_1$** (ನಾ). ೧. ನೀರಂ ಉಕ್ಕುವ ಸ್ಥಳ ; ಬುಗ್ಗೆ ; ತಲಪರಿಗೆ ; ಒರತೆ ; ಊಟೆ : ಕಲ್ಲ ಮೊರಡಿಯೊಳಗೆ ಚಿಲುಮೆಯಗ್ಗವಣಿಯುಂಟೆ ಅಯ್ಯಾ (ಅದಯ. ೦೩-೨೮) : ನಿತ್ಯ ಚಿಲುಮೆಯ ತೋಡುವಾತಂಗೆ ಉಚ್ಚೆಯ ಬಚ್ಚಲ ತೋಡಲಾಗದು (ಶಿವಮಂ. ೩೯) ; ಬಱತಿರ್ದ ಚಿಲುಮೆಯ ನೀರನಿತ್ತು ಜಂಗಮಕೆ (ಚಂಶಿ. ೫೭-೬). ೨. ಕಾರಂಜಿ: ಅದರ ಮುಂಭಾಗದಲ್ಲಿ ನೀರಿನ ಚಿಲುಮೆ (Fountain) ಯೊಂದನ್ನು ಇಟ್ಟಿದ್ದರು (ಕರಾಸಾ. ೩೭). **ಚಲಮೆ:** ೧.ಮಳೆಲಿನ ಮಱೆಯ ನೀರ ಬಳಸದೆಸಲೆ ಪೃಥ್ವಿಯಲ್ಲಿ ನೆಲ ಚಲಮೆಯಂ ಕಂಡು (ಬಲೀಶ. ೦೯) : ಕಲ್ಲ ಹಳ್ಳದೊಳುಂಟೆ ಚಲಮೆ ಕಾಣ್ಬುದೆ ಗೂಗೆ ರವಿಯ (ವೀರಶೈವ.೪-೩-೫೨) : ಹರುಷದಿಂದಾ ಮಳಲ ಬಗಿದು ಚಲಮೆಯ ತೆಗೆವರೆಬರು(ಸಿದ್ಧೇಶ್ವ. ೦೯-೮). **ಚಲುಮೆ :** ೧. ಬಹು ಜಲಮಂ ಬಟ್ಟು ಚ[ಪಾಠಾಂ. ಚಿ]ಲುಮೆಯಂ ತೆಗೆದರೆ ಅದು ನೆಲಶುದ್ಧ ಸೌಕರ್ಯವಲ್ಲದೆ ಅವು ಶೀಲವಲ್ಲ (ಮಹಿಮಾ. ೦೮-೨೩) : ಕೂಪಕಾಃ, ವಿದಾರಕಾಃ – ೨ ಚಲುಮೆಗಳಾಗಿ ತೋಡಲ್ಪಟ್ಟ ಮರಳು ಹಳ್ಳ ಮುಂತಾದುವುಗಳು ನೀರೂರಿ ಬರುವ ಹಳ್ಳಗಳು (ಸಿದ್ಧಾಂತಿ. ೭೦). **ಚಿಲಿಮೆ$_1$ :** ೨. ನಗರದ ಕೇಂದ್ರ ಸ್ಥಳಗಳಲ್ಲಿ ನೀರಿನ ಚಿಲಿಮೆಗಳನ್ನು ನಿರ್ಮಿಸಿದ್ದಾರೆ (ರೂಢಿ).

[ ದೇ.೫ ತೆಲು. ಚೆಲಮ ; ತುವಿ. ಸಲ್ಮ ]

**ಚಿಲುಮೆ$_2$, ಚಿಲಿಮೆ$_2$** (ನಾ). ತಂಬಾಕು ಸೇದಲು ಉಪಯೋಗಿಸುವ ಮಣ್ಣಿನ ಕೊಳವೆ,–ನಳಿಕೆ : ಚಿಲುಮೆ ದೊರೆಯುವುದು, ಎಷ್ಟು ಹುಡುಕಿದರೂ ಕಡ್ಡಿಪೆಟ್ಟಿಗೆ ದೊರಯಲೊಲ್ಲದು (ಕಮ್ಮಟ. ೪) ; ಕೈಯಲ್ಲಿ ಚಿಲುಮೆ ಯನ್ನು ಹಿಡಿದುಕೊಂಡು ಲಗುಬಗೆಯಿಂದ ಅವಳ ಬೆನ್ನು ಹತ್ತಿ ಹೋಗುತ್ತ ಅಂದ (ಅಕೋಕ. ೦೦). **ಚಿಲಿಮೆ$_2$ :** ತಂಬಾಕವೇ ಇಲ್ಲ. ಚಿಲಿಮೆಯಲ್ಲಿಂದ ಬರಬೇಕಂ (ಕಬಿಹಿಂ. ೭೦).

[ ←ಪಾರ. ಹಿಂ. ಚಿಲಮ್ ; ಮರಾ. ಚಿಲಮ್, ಚಿಲಿಮಾ, ಚಿಲೀಮ್ ]

**ಚಿಲುವಾಣ, ಚಿಲವಾನ್, ಚಿಲುವಾನು** (ನಾ). ೧. ಪೂರ್ಣವಾದ ಹಣದ ಭಾಗ ; ಚಿಲ್ಲರೆ ಹಣ : ಚಿಲುವಾಣದ ಬಿನುಗುಗಳಿಗೆ ನಾನಾ ಜಾತಿಯ ಪೊಕ್ಕಲುಗಳಿಗೆ ವರುಷ ೧ ಕೆ (ಸಾಇಇ. IX-ii, ೫೦೩-೩; 1526). ೨. ಚಿಲ್ಲರೆ ; ಸಣ್ಣ ; ಅಲ್ಪ : ಅರಮೊದಲಹ ಚಿಲುವಾಣಂ ಬರೆ ಲೆಕ್ಕದ ಕಡೆಯೊಳಗಲ ನೀಳನ ಸಂಖ್ಯೆಕ್ಕಿರದೆ ಪರಸ್ಪರದಿಂದಾ (ವ್ಯವಹಾ. ೮ ಕ್ಷೇತ್ರಗಣಿತ) ; ಯಿವರೆಲ್ಲರಿಗೆ ಸಲುವ ಚಿಲುವಾನ ಕೊಡಗಿಗಳು (ಎಕ. IX, ನೆಲಮಂ. ೮೧-೦೩ : 1545) : ಚಿಕ್ಕಗನಂ ಪಿಡಿದಾರ್ಜಿಸಿದರ್ಥದ ಚಿಲುವಾನ ದೊಳಿನ್ನೇನಹುದು (ಶಶಿ ಸ. IV, ೦೨). **ಚಿಲವಾನ್:** (೧). **ಚಿಲುವಾನು:** ೨. ತಮ್ಮ ರಾಜ್ಯದಲ್ಲಿ ನಿಡುಂಬರೆ ಕಟ್ಟುವ ಕೆಲಸದಲ್ಲಿ ಮುನ್ನೂರು ಚಿಲುವಾನು ಆಳು ಉಂಟಷ್ಟೆ(ರಾಜೇಂದ್ರ. ೭೩).

[ ?./ತಮಿ. ಚಿಲ್ಲುವಾಣ, ಚಿಲ್ಲಾಣ, ಚಿಲ್ವಾಣ ; ಮಲ. ಚಿಲ್ವಾನ ; ತುಳು. ಚಿಲುವಾನ, ಚಿಲ್ವಾನ : ತೆಲು. ಚಿಲುವಾನ, ಚಿಲುವಾಯನ. /ಮರಾ. ಚಿಲವಣಾ, ಚಿಲವನಾ, ಚಿಲವಾನ್, ಚಲವಾಣ್ ]

**ಚಿಲುವಾನಪೈರು** (ನಾ). ಅವರೆ, ಹುರುಳಿ, ಕಡಲೆ, ಕೊತ್ತುಂಬರಿ ಮುಂತಾದ ಚಿಲ್ಲರೆ ಧಾನ್ಯದ ಬೆಳೆ ; ಚಿಲ್ಲರೆ ಪೈರು (?) : ಸೊಪ್ಪಿನ ತೋಟ ಚಿಲುವಾನಪೈರು ಉಪಗ್ರಾಮಗಳ ಹೆಚ್ಚು ಹುಟ್ಟುವಳಿ ಕೆರೆಗಳ ಹೆಚ್ಚು ಹುಟ್ಟುವಳಿ ಮುಂತಾದ ಸಕಲ ಸ್ವಾಮ್ಯಗಳು (ಎಕ. III, ತಿರುಮ, ೩೩-೦೩೭೦ : 1748). [ ಚಿಲುವಾನ + ಪೈರು (<ಪಯಿರ್) ]

**ಚಿಲುವಾನಸುಂಕ** (ನಾ). ಚಿಲ್ಲರೆ ಸುಂಕ ; ಸಣ್ಣ ಪುಟ್ಟ ಬಾಬಿನ ತೆರಿಗೆ : ತಳವಾಱಿಕೆ ಅಳಿವಾಱನ್ಯಾಯಸಭೆಯ ಸಂಪೆಯ ಚಿಲುವಾನಸುಂಕ ಸೋಡಿಗೆ ಇವು ಮೊದಲು (ಎಕ. V, ಹಾಸನ. ೨-೦೮ ; 1563).

[ ಚಿಲುವಾನ + ಸುಂಕ ]

**ಚಲುವಾಸು** 'ಚಲುವಾನ' ನೋ.

**ಚಲುಹಾಲು** 'ಚಲುಪಾಲ್' ನೋ.

**ಚಲ್ಯೈತ** 'ಚೇಲ್ಯೈತ' ನೋ.

**ಚಲ್ಕರಿವೆ** 'ಚಲ್ಕುಹರಿವೆ' ನೋ.

**ಚಲ್ಕುಹರಿವೆ, ಚಲ್ಕರಿವೆ** (ನಾ). ಒಂದು ಬಗೆಯ ಸೊಪ್ಪು : ಕಿರುಕು ಸಾಲೆ : ಹರಿವೆಸೊಪ್ಪು. ಚಲ್ಕುಹರಿವೆಸೊಪ್ಪುಗಳಲ್ಲಿ ಎರಡು ವಿಧಗಳಿವೆ (ಸಸ. ೧೬). **ಚಲ್ಕರಿವೆ:** ಹರಿವೇ ಸೊಪ್ಪು, ದಂಟು ಸೊಪ್ಪು, ಚಲ್ಕರಿವೇ ಸೊಪ್ಪು (ಪ್ರಾಣಿ. ೬-೯೨). [ ಚಲ್ಕು ? + ಹರಿವೆ ]

**ಚಲ್ಲ** (ನಾ). ೧. ಸಣ್ಣವನು ; ಚಿಕ್ಕವನು : ಈ ಚಲ್ಲ ಈಸಲ ಮೊದಲ ಬಹುಮಾನ ಪಡೆದಿದ್ದಾನೆ (ಜಾಪ). ೨. ಕುಳ್ಳಾದ ಎತ್ತು; ಗಿಡ್ಡ ಎತ್ತು: ನೇಗಿಲಿಗೆ ಹೂಡಿರುವ ಚಲ್ಲಗಳು ಒಳ್ಳೆ ಬಲಿಷ್ಠವಾಗಿವೆ (ಜಾಪ). (ಗು). ೩. ಸಣ್ಣದಾದ ; ಚಿಕ್ಕದಾದ : ಈ ಚಲ್ಲಹುಡುಗ ಬಹಳ ಬುದ್ಧಿವಂತ (ಜಾಪ). [ ? ]

**ಚಲ್ಪಾರಿ** 'ಚಲ್ಪೇರಿ' ನೋ.

**ಚಲ್ಪೇರಿ, ಚಲ್ಪಾರಿ, ಚುಲ್ಪಾರಿ** (ನಾ). ಸಣ್ಣವನು; ಚಿಕ್ಕವನು: ನಿಮ್ಮಂಥ ಚಲ್ಪೇರಿಗಳೆಲ್ಲ ರಾಜಕೀಯಕ್ಕೆ ತಲೆಹಾಕದೆ ನಿಮ್ಮಷ್ಟಕ್ಕೆ ನೀವಿರ ಬಾರದೇನೋ (ಸ್ವಾಮಿಸ್ಸ್. ೧೨೪). **ಚಲ್ಪಾರಿ:** ಆ ಚಲ್ಪಾರಿ ಬಹಳ ಚೇಷ್ಟೆ ಮಾಡುತ್ತಾನೆ (ಜಾಪ). **ಚುಲ್ಪಾರಿ :** ಒಬ್ಬ ಚುಲ್ಪಾರಿಯನ್ನು ಎತ್ತಿ ಒಳಕ್ಕೆ ಬಿಡುತ್ತಿದ್ದವು (ಪಂಚ. ೫೨). [ <ಚಲ್ಪ ]

**ಚಲ್ಮಿಷ** (ನಾ). ಮೋಸ ; ವಂಚನೆ : ಅವನೇನೋ ಒಳ್ಳೆಯವನೇ, ಅವನ ಹೆಂಡತಿ ಬಲು ಚಲ್ಮಿಷದವಳು (ಆದೂಟ. ೧೦೨).

[ ←ತೆಲು. ಚಲಿವಿಸ./ಸಂ. ಕಿಲ್ಬಿಷ ]

**ಚಲ್ಲ$_1$, ಚಲಿ$_1$, ಚಳೆ$_2$, ಚಲ್ಲು$_1$** (ನಾ). ಒಂದು ಬಗೆಯ ಗಿಡ ಮತ್ತು ಅದರ ಬೀಜ ; ಕತಕ. ಕದಡಿದ ನೀರನ್ನು ಶುದ್ಧ ಮಾಡಲು ಉಪಯೋಗಿಸುವ ಬೀಜ : ತದಕಿನ ತಾಳ ತೆಂಗಿನ ತಳಂಕಿನ ತುಂಬುರ ಚಲ್ಲ ಬೆಲ್ಲವತ್ತದ ಬೀಯತ್ತಿಯಿಪ್ಪೆಯ ಮರಂಗಳ (ರಾಜಶೇ. ೬-೨೬); ಚಲ್ಲ ಚೆನ್ನಗೆ ತೇಗು ತುಂಬುರವರಗಳಿಂ ನಿಲ್ಲದೆ ಮುಟ್ಟಿದುದಾ ವಿಪಿನ (ಕುಮಾ ಸಾಂ. ೨೬-೫೫) ; ಚಲ್ಲ ನೆಲ್ಲಿಯು ಹೊಂಗೆ ವೇಟಲು . . . ಸೂರ ಮಾರ್ಗವ ತಡೆದಿಹುವು (ಕಂಸವಿ. ೧೮-೩೬). **ಚಲಿ$_1$ :** (ಕ). **ಚಳೆ$_2$ :** ಚಳೆ ಚುಚ್ಚುಲು . . . ಮೊದಲಾದ ಗಗನಮಂ ತುಡುಕುವ ವೃಕ್ಷಂಗಳ್ (ಸೌಗಂಧಿ. ೫೪-೭). **ಚಲ್ಲು$_1$ :** "ಕತಕಂ ಚಲ್ಲು" (ಮಂಗರಾ. ೪೨-೩೯) : ಬೆಲ್ಲವತ್ತ ವರವಾದಲ ವಂಬಟೆ ಚಲ್ಲು ಚಳ್ಳೆಗಾಯ್ [ಪಾಠಾಂ. ಚಳ್ಳ ಚಲ್ಲಕಾಯ್] (ಸೂಕ್ತಿಸು. ೧೦-೮೭) : (ಸಳಹಂ. ೪೬೨ ನೋ) : ಮರಗಳು : ಹಸವ . . . ಚಲ್ಲು, ಹೂವರಸಿ, ಬೆಪ್ಪಾಲೆ, ಹಾಲೆ (ಸರ್ವಜ್ಞ. ೨೬೬).

[ ದೇ.೩ ತಮಿ. ತೆಲು. ಚಲ್ಲ ]

**ಚಲ್ಲ$_2$, ಚಲ್ಲು$_2$** (ನಾ). ರಾಟೆಯಲ್ಲಿ ಕದಿರನ್ನು ಜೋಡಿಸಲು ಇರುವ ಕಿವಿಯಂತಹ ಭಾಗ ; ಕದಿರನ್ನು ಜೋಡಿಸುವ ಮರದ ಅಥವಾ ಚರ್ಮದ ಕಿವಿ: ಚಲ್ಲ ಹಮ್ಮಿಗೆ, ಕಟ್ಟೆ, ಇವೆಲ್ಲವನ್ನು ಮಾಡಿಕೊಡುತ್ತಾನೆ (ಕನ್ನಡು. I, ೩೬೬). **ಚಲ್ಲು$_2$ :** ಮನಿಯಾವ ಕೋಣವ ಕಡಿಸಿ ಚಲ್ಲು ಮಾಡಿಸಿ ಕೊಟ್ಟಾ (ಮಲ್ಲಿಗ. ೯೭).

**ಚಲ್ಲ$_3$** 'ಚುಲ್ಲ$_1$' ನೋ.

**ಚಲ್ಲ$_4$** (ನಾ). ೧. ರೋಗದಿಂದ ನೀರು ಸುರಿಯುತ್ತಿರುವ ಕಣ್ಣುಳ್ಳವನು; ಸೋರುಗಣ್ಣ. ೨. ಗುಂಡುಮುಳುಕನ ಹಕ್ಕಿ ; ಮುಂಡುಮುಳುಕನ ಹಕ್ಕಿ : "ಆಶಾಟೀ, ಶಕುನಿ, ಚಿಲ್ಲಃ – ಈ ೩ ಗುಂಡುಮುಳುಕ (ನಹಕ್ಕಿ)" (ಹಲಾಯು. ೯೨-೯೭): "ಚಿಲ್ಲಮಾತಪವಕ್ಷಿಯೆನೆ ಮುಂಡುಮುಳುಕನಕ್ಕುಂ" (ಮಂಗರಾ ೫೦-೫). [ ಸಂ. ]

**ಚಲ್ಲಗೊಟ್ಟೆ** (ನಾ). =ಚಲ್ಲಬಿತ್ತು: ನೆಲ್ಲಿಯ ಸಟ್ಟು ಬಾಳಮುಕಿಕಾಂಜನಮೊಳ್ಳೆಹ ಮುಸ್ತೆಯಿಪ್ಪ ಕೇಡಿಲ್ಲದ ಚಲ್ಲಗೊಟ್ಟೆ ಪೊಸಬೇರೆಯ ಚಿತ್ರನೋಳಾದ ಬೂದಿಯುಂ ನಿಲ್ಲದೆ ಬಾವಿಯೊಳ್ ಕಲಸಲ್ . . . ಬಾವಿಗಳ ನೀರಮ್ಮ ತೋಷಮುಮಂ (ಲಬ್ಧಸು. ೧೦-೬೩). [ಚಲ್ಲ$_1$+ಗೊಟ್ಟೆ$_1$ (<ಕೊಟ್ಟೆ$_1$)]

**ಚಲ್ಲತನ** (ನಾ). ಕ್ಷುಲ್ಲಕತನ ; ನೀಚತನ : ಚಲ್ಲವೇ ಹೇಳಕಟಯುನ್ನೀ ಚಲ್ಲತನವೆಂದಿಂಗೆ ಮಾಣ್ಬುದು (ಬಸವ. ೪೫-೪೦).

[ ಚಲ್ಲ$_3$ (<ಚುಲ್ಲ$_1$) + – ತನ ]

**ಚಲ್ಲಫಲ** (ನಾ). =ಚಲ್ಲಬಿತ್ತು : ಚ(ಚಿ)[ಪಾಠಾಂ. ಫ]ಲ್ಲಫಲದಿಂದ ನೀರ್ಗದಡಲ್ಲಂ ತಿಲ (ಕಿಡು) ವಂತೆ ತಿಳಿಗುಮುದಯಿಂ ಧರೆಯೊಳ್ (ಜಯನ. ೧೨-೪೬).

[ ಚಲ್ಲ$_1$ + ಫಲ ]

**ಚಲ್ಲಬಿತ್ತು** (ನಾ). ಚಲ್ಲದ ಬೀಜ: "ವಾರಿಪ್ರಸಾದನಃ–ಚಲ್ಲಬಿತ್ತು" (ಗಿಪಂ. ೦೫೨). [ ಚಲ್ಲ$_1$ + ಬಿತ್ತು$_2$ (<ಬಿಟ್ಟು) ]

**ಚಲ್ಲಬೀಜ** (ನಾ). =ಚಲ್ಲಬಿತ್ತು: "ಕಾಂಸ್ಯಂ-ಕಂಚು, ಚಲ್ಲಬೀಜ" (ಟಪಂ. ೨೮).

[ ಚಲ್ಲ$_1$ + ಬೀಜ ]

**ಚಲ್ಲರೆ** (ಗು). ೧. ಸಣ್ಣ ; ಕ್ಷುದ್ರವಾದ ; ಅಲ್ಪವಾದ ; ಸಾಮಾನ್ಯವಾದ : ಎಲ್ಲಾ ದೇವರ ಗಂಡ ಅವ ಚಲ್ಲರೆ ದೈವದ ಮಿಂಡ (ಪುರಂದ. ೦-೬೭-೮); ಇತರೆ ಚಲ್ಲರೆ ಬಾಬುಗಳನ್ನೆಲ್ಲಾ ನಿರ್ವಹಿಸಬೇಕು (ಗ್ರಾಮೂಳ. ೨): "ಚಲ್ಲರೆ ಮಂದಿ" ಎಂದಳು ಇನ್ನೊಬ್ಬಳು (ಪಾಪೋರಿ. ೨೪೬). (ನಾ). ೨. ಒಂದು ಪೂರ್ಣ ನಾಣ್ಯದ ಅಂಶ,-ಭಾಗ ; ಸಣ್ಣ ಪುಟ್ಟ ನಾಣ್ಯ: ಸಮಯಕೆ ದೊರೆಯುವ ರೂಪಾಯಿ ಚಲ್ಲರೆ ಸೂರರ ಚೆಕ್ಕಿಗೆ ಮಿಗಿಲು (ಹಂದ್ರವಿ. ೦೪೯-೯೩) : ಎಂಟಾಣೆಯ ಪಾವಲಿಯೊಂದನ್ನಿತ್ತು ಅವನ ಕೈಗೆ. 'ಚಲ್ಲರೆ ಇಲ್ಲವಲ್ಲೋ' ಎಂದು (ರೂಪಸಂ. ೮).

ಚಲ್ಲರೆಯಂಗಡಿ=ನಿತ್ಯೋಪಯೋಗದ ವಸ್ತುಗಳನ್ನು ಸಣ್ಣ ಪ್ರಮಾಣದಲ್ಲಿ ಮಾರುವ ಅಂಗಡಿ; ಸಣ್ಣ ಅಂಗಡಿ; ಕಿರುಕುಳ ಅಂಗಡಿ(ಉಕ): ನನ್ನ ತಮ್ಮ ಚಲ್ಲರೆಯಂಗಡಿ ಇಟ್ಟಿದ್ದಾನೆ (ಜಾಪ). **ಚಲ್ಲರೆವ್ಯಾಪಾರಿ** = ನಿತ್ಯೋಪಯೋಗಿ ವಸ್ತುಗಳನ್ನು ಸಣ್ಣಪ್ರಮಾಣದಲ್ಲಿ ವ್ಯಾಪಾರ ಮಾಡುವವನು: ನಾನೊಬ್ಬ ಚಲ್ಲರೆ ವ್ಯಾಪಾರಿ (ಪುರುದಾ. ೦೬೪).

[ ?./ತಮಿ. ಚಲ್ಲಱೈ ; ಮಲ. ಚಲ್ಲಱ ; ತುಳು. ಚಲ್ಲರೆ ; ತೆಲು. ಚಲ್ಲರ./ಹಿಂ. ಚಿಲ್ಲರ್ ; ಮರಾ. ಚಿಲ್ಲರ್, ಚಿಲ್ಹಾರ್, ಚಿಲ್ಹೇರ್. / ಪ್ರಾ. ಛಿಲ್ಲರ ]

**ಚಲ್ಲರೆಕರ್ಚು** (ನಾ). (ಲೆಕ್ಕಕ್ಕೆ ಸಿಕ್ಕದ) ಸಣ್ಣಪುಟ್ಟ ವೆಚ್ಚ : ಚಲ್ಲರೆ ಕರ್ಚಿಗಾಗಿ . . . ರೂಪಾಯಿಗಳನ್ನು ಕೊಡಲು ಕಾರ್ಯಕಾರಿಸಮಿತಿಯು ನಿರ್ಧರಿಸಿದೆ (ಹುಕ್ಕುಹು. ೮೭). [ಚಲ್ಲರೆ + ಕರ್ಚು$_4$ ]

**ಚಲ್ಲರೆಕೆಲಸ** (ನಾ). ಮುಖ್ಯವಲ್ಲದ ಕೆಲಸ ; ಸಣ್ಣಪುಟ್ಟ ಕೆಲಸ : ಚಲ್ಲರೆ ಕೆಲಸಕ್ಕೆ ಆಳು ಇಟ್ಟುಕೊಳ್ಳಲಾಗಿದೆ (ಜಾಪ). [ ಚಲ್ಲರೆ + ಕೆಲಸ ]

**ಚಲ್ಲರೆಜನ** (ನಾ). ಸಣ್ಣಪುಟ್ಟ ಜನ ; ಸಾಮಾನ್ಯ ಜನ : ಮಣ್ಣಿನ ಬಟ್ಟಲುಗಳಲ್ಲಿ ಮಿಠಾಯಿ ಕೊಡುತ್ತಾರೆ ಚಲ್ಲರೆಜನಕ್ಕೆ (ಸಾಹೇಬ್. ೩೮೦ ಅಡಿ). [ ಚಲ್ಲರೆ + ಜನ ]

**ಚಲ್ಲರೆಧಾನ್ಯ** (ನಾ). ಮುಖ್ಯವಲ್ಲದ ಕಾಳು ಕಡ್ಡಿ : ಹುರುಳಿ, ಅವರೆ ಮೊದಲಾದ ಧಾನ್ಯಗಳು ; ಅಕ್ಕಡಿಕಾಳು : ವರ್ಷಕ್ಕೆ ಒಂದೆರಡು ಪಲ್ಲ ಚಲ್ಲರೆಧಾನ್ಯವೂ ಬರುವುದುಂಟು (ಜಾಪ). [ ಚಲ್ಲರೆ + ಧಾನ್ಯ ]

**ಚಲ್ಲರೆಮಾತು** (ನಾ). ಅಪ್ರಧಾನವಾದ ಮಾತು: ಸಣ್ಣಪುಟ್ಟ ಮಾತು : ಸುಮ್ಮನೆ ಯಾಕಯ್ಯಾ ಈ ಚಲ್ಲರೆಮಾತನ್ನೆಲ್ಲಾ ಕಟ್ಟಿಕೊಂಡು ಕಾಣ ಯುವುದು (ಜಾಪ). [ ಚಲ್ಲರೆ + ಮಾತು$_1$ ]

**ಚಲ್ಲರೆವೆಚ್ಚ** (ನಾ). = ಚಲ್ಲರೆಕರ್ಚು : "ಚಲ್ಲರೆ ವೆಚ್ಚ: ಸಾದಿಲ್ವಾರು" (Contingency. ಪತ್ರಿವಿ. ೨೪). [ ಚಲ್ಲರೆ + ವೆಚ್ಚ ]

**ಚಿಲ್ಲರೆಸಾಮಾನು**(ನಾ). ಸಣ್ಣಪುಟ್ಟ ಸಾಮಾನು: ಈ ಚಿಲ್ಲರೆ ಸಾಮಾನುಗಳಿಗೆ ಸಂಬಳದಲ್ಲಿ ಅರ್ಧ ಖರ್ಚಾಗುತ್ತದೆ (ರೂಂ). [ ಚಿಲ್ಲರೆ + ಸಾಮಾನು ]

**ಚಿಲ್ಲಹರಿ** (ನಾ). ಜ್ಞಾನಪ್ರವಾಹ,-ಪರಂಪರೆ; ಚಿದ್ಭಾವತರಂಗ: ಪರವಶೀಭಾವದಿಂದರವಿರಿದ ಕಣ್ಗಳಿಂ ಪರಮ ಚಿಲ್ಲಹರಿ ತಲೆಗೇರಿದುನ್ಮತ್ತದಿಂ ಯೋಗೀಂದ್ರರುರೆ ಮೆರೆದರು (ಬಸೋಪು. ೪-೭೫). [ ಸಂ. (ಚಿತ್ + ಲಹರಿ) ]

**ಚಿಲ್ಲಳೆ** 'ಚಿಲ್ಲೆಳೆ' ನೋ.

**ಚಿಲ್ಲಾಣ** (ನಾ). ೧. ಸಣ್ಣಕತ್ತಿ ; ಕಠಾರಿ. ೨. ಬಳುಕುವ ಕತ್ತಿ : (ಕ) 'ಚೀಲಣ' ಪಠಾ. [ ←ತೆಲು. ಚಿಲ್ಲಾಣ, ಚಿಲ್ಲಾಡ ]

**ಚಿಲ್ಲಿಕ** (ನಾ). ಒಂದು ಬಗೆಯ ಸಸ್ಯ : "ಶ್ವಾಸನಃ – ಚಿಲ್ಲಿಕ, ನಾಯ ಚಿಲಿಕ" (ಒಷಧಿ. ೦೬೪). [ <ಚಿಲಿಕ$_1$ ? ]

**ಚಿಲ್ಲು$_1$** 'ಚಿಲ್ಲ$_1$' ನೋ.

**ಚಿಲ್ಲು$_2$** 'ಚಿಲ್ಲ$_2$' ನೋ.

**ಚಿಲ್ಲು$_3$** (ನಾ). ಬಂದೂಕಿನಿಂದ ಹೊಡೆದಾಗ ಹಾರುವ ಗುಂಡು; ಚರೆ: ಕಾಲಿಗೆ ಗುಂಡು ತಾಗಿ ಇಬ್ಬರು ಉರುಳಿದರು. ಒಂದು ಚಿಲ್ಲು ಬಂದು ನನ್ನ ತೊಡೆಯನ್ನು ಕೊರೆಯಿತು (ಧೂಮಪು. ೯೦). [ ? ]

**ಚಿಲ್ಲುಕಭಟಾರ** (ನಾ). ಒಬ್ಬಾತನ ಹೆಸರು : ಉತ್ತರಾಯಣ ಸಂಕ್ರಾನ್ತಿಯೊಳ್ ಕಲ್ಯಾಣಭಟಾರರ ಶಿಷ್ಯರ್ ಚಿಲ್ಲುಕಭಟಾರರ ಕಾಲಂ ಕರ್ಚಿ ಕೊಟ್ಟ ಮರ್ಯಾದೆಯೊಳಗೆ (ಎಕ. XII, ಶಿರಾ. ೩೮-೪೧; 943). [ ಚಿಲ್ಲುಕ$_0$ + ಭಟಾರ ]

**ಚಿಲ್ಲುಗುಂಡು**(ನಾ). ಬಂದೂಕಿನಿಂದ ಸಿಡಿಯುವ ಗುಂಡು; ಸಿಡಿಗುಂಡು: ಎರಡೆರಡು ಚಿಲ್ಲುಗುಂಡು ಗುರಿ ಇಡಿಸಿದಲ್ಲಿ ಚನ್ನವೀರ, ಅಕ್ಕಸಾಲೆ ನರಜು, ಇವರಿಬ್ಬರೂ ಗುರಿಗೆ ಇಟ್ಟದ್ದು ತಗಲಿತು (ರಾಜೇಂದ್ರ. ೦೪೬). [ ಚಿಲ್ಲು$_3$ + ಗುಂಡು ]

**ಚಿಲ್ಲೆ, ಚಿಳ್ಳೆ$_2$** (ನಾ). ನೀಚಳಾದ ಹೆಂಗಸು; ಕೆಟ್ಟ ನಡತೆಯುಳ್ಳವಳು: ಕುಟಿತಮತಿಗಳು ಖುಲ್ಲೆಯರು ಕಳ್ಳೆಯರು ಚಿಲ್ಲೆ[ಪಾಠಾಂ. ಳ್ಳೆ]ಯರು (ಬಸಪು. ೪೦-೫೪). **ಚಿಳ್ಳೆ$_2$**: ಕಳ್ಳೆಯರ್ ಚಿಳ್ಳೆಯರ್ ಶಾಂತರುಂ ಯಿಣಸದಪರಾಘೆಯರ್ (ಚೆಂಲ. ೨-೫೮). [ ಚಿಲ್ಲ$_3$ (< ಚುಲ್ಲ$_1$) + – ಎ$_2$ ]

**ಚಿಲ್ಲೆಳೆ, ಚಿಲ್ಲಳೆ** (ನಾ). ಒಂದು ಬಗೆಯ ಮರ: ಒಕ್ಕಳಮಪ್ಪ ಚಿಲ್ಲೆಳೆಯ [ಪಾಠಾಂ. ಚಿಲ್ಲಳೆಯ, ಚಿಲ್ಲೆಳೆಯ, ಚಿಳ್ಳೆಲೆಯ]ಕಾಯ್ಗಳೊಳಿಕ್ಕಿ ಸುರೇಂದ್ರಶಾಖಿಯುಂ ಚಕ್ಕನೆ ಕೂಡಿರಲ್ (ಖಮದ. ೭-೫೭). **ಚಿಲ್ಲಳೆ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಚಿವ** 'ಸಿವ' ನೋ.

**ಚಿವಟು** 'ಚಿವುಂಟು' ನೋ.

**ಚಿವಡಾ, ಚಿವುಡಾ, ಚುಡುವ, ಚೂಡಾ** (ನಾ). ಹುರಿದು, ಒಗ್ಗರಣೆ ಹಾಕಿದ ಅವಲಕ್ಕಿ; ಖಾರದ ಅವಲಕ್ಕಿ: ಹೊರಗೆ ಒಬ್ಬ 'ಮಹಾರಾಜರು' ಚಹಾದ ತಪ್ಪೇಲಿಯನ್ನೂ, ಚಿವಡಾದ ರಾಶಿಯನ್ನೂ ಇಟ್ಟುಕೊಂಡು ಕುಳಿತು, ಶಿಷ್ಯರಾಗಬಂದ ಉಮೇದುವಾರರಿಗೆ ಅನುಗ್ರಹಿಸುತ್ತಿದ್ದರು (ಪೂರ್ವರಂ. ೩). **ಚಿವುಡಾ**: (ಚಿವುಡಾ) ಖಾರದ ಅವಲಕ್ಕಿ ಇವೆಲ್ಲ ರಾಜಸ ಆಹಾರದಲ್ಲಿ ಬರುವವು (ಬ್ರಹ್ಮಚೀ. ೦೩೩). **ಚುಡುವ**: ಚಹ ಚುಡುವ ಭಕ್ಷಣವು ಗೃಹಸ್ಥನ ಲಕ್ಷಣವು (ಶಿಶ್ರು. ೩೦). **ಚೂಡಾ**: ಚಹಾದ ಜೋಡಿ ಚೂಡಾಧಾಂಗ ಸೀ ನನಗರುದಾಂವಾ (ಸಖೀಗೀ. ೯೨-೧೫) : ಅಲ್ಲಿಯ ಕೆಲಸಗಾರರು ಉಪ್ಪಿಟ್ಟು, ದೋಸೆ, ಸಿರಾ, ಇಡ್ಲಿ, ಚೂಡಾ ಮುಂತಾಗಿ ತಮ್ಮ ನಿತ್ಯದ ನಾಷ್ಟಾವಳಿಯ ವರಣಕ್ಕಾರಂಭಿಸಿರುವರು (ಹುಟ್ಟಿದ. ೮). [ ←ಮರಾ. ಚಿವಡಾ. / ಪ್ರಾ. ಚಿವಿಟ್ಟ, ಚಿಮಿಢ,ಚಿವಿಟ್ಟ, ಚಿವಿಡ./ಸಂ. ಚಿಪಿಟ, ಚಿಪುಟ ]

**ಚಿವರು$_1$** 'ಸಿವುಡು$_1$' ನೋ.

**ಚಿವರು$_2$** 'ಸಿವುಡು$_2$' ನೋ.

**ಚಿವರುಗಾಯ** 'ಚಿವುರುಗಾಯ' ನೋ.

**ಚಿವಲ್ಲಿಕೆ** (ನಾ). ಒಂದು ಬಗೆಯ ವನಸ್ಪತಿ: "ಉಚ್ಚಟ್ಟಿಕಾ–ಚಿವಲ್ಲಿಕೆ ?" (ಒಷಧಿ. ೧೬). [ ? ]

**ಚಿವಾನಿಕಳನಿ** 'ಚಿವಾನಿಕಟನಿ' ನೋ.

**ಚಿವಾನಿಕಟನಿ, ಚಿವಾನಿಕಳನಿ**(ನಾ). ಒಂದು ಗದ್ದೆಯ ಹೆಸರು: ವಾಳ್ಗಟ್ಟು ಚಿವಾನಿಕಟನಿ (ಎಕ. XVI, ತುಮಕೂ. ೯೯-೬ ; ?). **ಚಿವಾನಿಕಳನಿ**: ಇದರ್ಕೆ ಚಿವಾನಿಕಳನಿ ವಾಳ್ಗಟ್ಟುಕೊಟ್ಟೊದು (ಎಕ. XVI, ತುಮಕೂ. ೮೬-೫ ; ?). [ ಚಿವಾನಿ$_0$ + ಕಟನಿ ]

**ಚಿವಿ** (ಕ್ರಿ). ಕೆರೆದುಕೊಳ್ಳು ; ತುರಿಸು : "ಕೆರೆ, ತುರಿಸು, ತಿಕ್ಕು, ಚಿವಿ, ಚಿವುಟು, ಚಿವುರು, ಚಿಗಟು" (ಕಂನುಹು. ೪೩). [ ? ]

**ಚಿವಿಕೆ** (ನಾ). ಒಂದು ಬಗೆಯ ಗಿಡ : "ಗ್ರಂಥಿಲಾದಾರಿಪ" (ಶಂಡಿಕ). [ ? ]

**ಚಿವು** (ನಾ). ಒಂದು ಅನುಕರಣ ಧ್ವನಿ; ಹಕ್ಕಿಗಳ ಚಿಲಿಪಿಲಿ: 'ಚಿವುಗುಂಡು' ಪಠಾ.

**ಚಿವುಚಿವು** (ದ್ವಿರುಕ್ತಿ): ಹೂವಿನ ಗಿಡದ ಸಾಲೊಳಗೆ ಚಿವುಚಿವು ಅನ್ನುತ್ತ . . . ಹಾರಾಡುವ ಹಕ್ಕಿ ನೋಡು (ಮುಂಬಯಿ. ೨-೧೧).

**ಚಿವುಂಟು, ಚಿಗುಂಟು, ಚಿಮುಟು, ಚಿವಟು, ಚಿವುಟು$_2$, ಚಿವುಡು, ಚೂಟು$_1$, ಜಿಗಟು$_1$, ಜಿಗುಟು$_1$** (ಕ್ರಿ). ೧. ಉಗುರುಗಳಿಂದ ಚರ್ಮವನ್ನು ಹಿಂಡು,-ಅದುಮು,-ಒತ್ತು : ಕೂಸಂ ಚಿವುಂಟುವೈ ತೊಟ್ಟಿಲಂ ತೂಗುವೈ (ನಂಬಿರ. ೧೫-೧೪೧). ೨. ಉಗುರಿನಿಂದ ಕತ್ತರಿಸು,-ಕೀಳು : ಕಾಲಕಂಧರ ಬೊಮ್ಮನೇಕಶಿರಸ್ಸನಾ ನಖರಾಗ್ರದಿಂ ಸಾಲೊಳೊಂದನದಂ ಚಿವುಂಟಲಜಂ ತದಾಮೃತನಾದನೇ (ಹಾಂಶಸ್ಕ. ೨-೧೬-೫). **ಚಿಗುಟು**: ಚಿಗುಟುವುದು, ಕಾರಣವಿಲ್ಲದೆ ಕೆಣಕಿ ಜಗಳಕ್ಕೆ ಕರೆಯುವುದು (ಕಳಹು.೧೧). **ಚಿಮುಟು**: ೧. ಅವನ ತೋಳನ್ನು ಗಟ್ಟಿಯಾಗಿ ಚಿಮುಟಿ . . . ಎಂದ (ದೀಪಹಂ. ೧೪೩). **ಚಿವಟು**: ೧. ಚಿವಟುವುದೂ, ಚಿವರುವುದೂ ನಡೆಯಿತು (ಕುರಿಹಿ. ೭೭). **ಚಿವುಟು$_2$**: ೧. ಸವರಣಂ ತಲೆಗಳನರಿದು ವೈಷ್ಣವರ ಘೋಣಾಗ್ರಂಗಳಂ ಮಿಗೆ ಚಿವುಟಿ ಬೌದ್ಧರುಗಳ ಮದೋದ್ಧತಿಯೆಂಬ ಕಾನನನೆ ಸವಟ್ (ಬಸಪು. ೫೨-೧೧); ಶೈಲೆ . . . ಮಮತೆಯಿಂದ ಕೆನ್ನೆಗೆ ಮೆಲ್ಲನೆ ಚಿವುಟಿ, ಅಲ್ಲಿಂದ ಪಾರಾಗಿ ಸ್ನಾನಕ್ಕಾಗಿ ಹೊರಟು ಹೋದಳು (ಕಾದಂಬ. ಯ) : ಅವನ ಹೃದಯದಲ್ಲಿ ಚಿಂತೆಯು ಚಿವುಟಿದಂತಾಗುತ್ತಿದ್ದಿತು (ಪ್ರಣಸ. ೭೧). ೨. ರಾಕ್ಷಸರ ಹುಡುಗರು . . . ಚಿಗುರುಗಳಂ ಚಿವುಟಿ (ಸೌಗಂಧಿ. ೪೧೯-೯): ಕರುಳುವಳ್ಳಿಯ ಕುಡಿಯ ಚಿವುಟಿ ಸೊನೆಗರಸುತಿಹೆ ಇಂಥ ಹಾಲುಳ್ಳ ಹಾಡು (ಅರಲು, ೩೫೯-೧೧). **ಚಿವುಡು**: ೨. "ಚಿವುಡು–ನಖಚ್ಛೇದೇ" (ಶಮಧಾ). **ಚೂಟು$_1$**: ೧. "ನಮ್ಮನ್ನು ಚೂಟಿದರೆ ನಮಗೆ ನೋವಾಗುತ್ತದೆ; ಅದರಂತೆ ಪರರಿಗೆ" ಎಂಬ ಮಾತನ್ನು ನಾವು ಮನಸ್ಸಿನಲ್ಲಿಡಬೇಕು (ಭಾರಸಂ. ೨). **ಜಿಗಟು$_1$**: ೧. ಅಮ್ಮ, ನೋಡಮ್ಮ ಇವಳನ್ನ! ಜಿಗಟತಾಳೆ (ಬೀಜೀ. ೦೬೯). **ಜಿಗುಟು$_1$**: ೧. ಅವನ ತೋಳಿನ ಚರ್ಮ ಎದ್ದು ಬರುವಂತೆ ಜಿಗುಟುತ್ತಿದ್ದರು (ಮಸಕೂ. ೧೩). ೨. ಶೂಲಿ ತಾ ಮಗನ ತಲೆ ಜಿಗುಟಿ ಹರಿಯೇಕೆ ಪಾಲಿಸದೆ ಹೋದ (ಸರ್ವಜ್ಞ. ೨೧೫). [ ದೇ. ॥ ತಮಿ. ಚಿಮಿಣ್ಣು ; ಮಲ. ಚೀಣ್ಣು ]

**ಚಿವುಕಳಿ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ: ಭ್ರಮಣದಲ್ಲಿ ಹಿಮ್ಮಡಿಗಳಿಂದ ಒಂದು ಬಾರಿ ಯರಡು ಪಥಳವ ತಾಡಿಸುವುದು. ಅವುದು ಉಂಟು ಅದು ಬಲ್ಲವರಿಂದ ಚಿವುಕಳಿ ಎಂದು ನುಡಿಯಲ್ಪಡುವುದು (ಖಡ್ಗಟೀ. ೪-೩೦). [ ? ]

**ಚಿವುಕುಲಿ** 'ಚಿನುಕುಲಿ' ನೋ.

**ಚಿವುಗಣ್ಣು** (ನಾ). ೧. ಅರೆಗಣ್ಣು ; ಕಿರುಗಣ್ಣು : ಆವನ ಆ ಚಿವುಗಣ್ಣುಗಳು ಅಗಲದಾದುವು (ಚಿವಠಾ. ೨೩೩). ೨. ಸಣ್ಣದಾಗಿಸಿದ ಕಣ್ಣು : ದೂರದಲ್ಲಿ ಬರುತ್ತಿದ್ದ ಬಸ್ಸನ್ನು ಚಿವುಗಣ್ಣಿನಿಂದ ನೋಡಿದಳು (ಲೂಂ). [ಚಿವು$_0$ + ಕಣ್ಣು (<ಕಣ್)]

**ಚಿವುಗುಡು** (ಕ್ರಿ). ಚಿವುಚಿವು ಎಂದು ಧ್ವನಿಮಾಡು : ಚಿಲಿಪಿಲಿಗುಟ್ಟು : ಕಣ್ಣು ಮುಚ್ಚಿಕೊಳ್ಳುತಾವು ಚಿಕ್ಕ ಚಿವುಗುಡುತಾವ ಹಕ್ಕಿ (ಹಾಡುಪಾ. ೪೧-೨). [ಚಿವು + ಕುಡು$_1$ (<ಕೊಡು$_1$)]

**ಚಿವುಟು$_1$** 'ಚಿವಂಟು' ನೋ.

**ಚಿವುಟು$_2$** 'ಚಿವುಂಟಂ' ನೋ.

**ಚಿವುಡಾ** 'ಚಿವಡಾ' ನೋ.

**ಚಿವುಡಿಕೆ** (ನಾ). ಜಗುಟಿ ಹಾಕುವಿಕೆ ; ಉಗುರಿನಿಂದ ಕತ್ತರಿಸುವಿಕೆ : ಪೊಡಮಡಿಕೆ. ತರೆವಡಿಚಿವುಕೆ. ಡಿಕೆ (ಶಬ್ದಾನು. ೫೭೦ ಪ್ರಯೋ). [ಚಿವುಡು (<ಚಿವುಂಟು) + – ಇಕೆ]

**ಚಿವುಡು** 'ಚಿವುಂಟು' ನೋ.

**ಚಿವುರು$_1$** 'ಸಿವುಱು$_1$' ನೋ.

**ಚಿವುರು$_2$** 'ಸಿವುಱು$_2$' ನೋ.

**ಚಿವುರುಗಾಯ**, ಚಿವರುಗಾಯ (ನಾ). ಉಗುರು ಮುಳ್ಳು ಮೊದಲಾದುವುಗಳಿಂದಾದ ಗಾಯ : ಪರಚುವುದರಿಂದಾದ ಗಾಯ : ಗಲ್ಲದ ಮೇಲೆ ಚಿವುರುಗಾಯದ ಕಲೆಗಳಿದ್ದವು (ನಿರಾಳ. ೭೦). **ಚಿವರುಗಾಯ:** ನನಗೆ ಚಿವರುಗಾಯಗಳಾಗಿದ್ದವು (ಮೇದಿಮ. ೨೦೪) [ಚಿವುರು$_1$ (<ಸಿವುಱು$_1$) + ಗಾಯ]

**ಚಿವ್ವು** 'ಚೀವು' ನೋ.

**ಚಿಹಣ**, **ಚೀಹಣ** (ನಾ). ಮೇಳಗಾತಿ (?) : ಗೀತಗಳೊದುಗ್ಗಡಣೆ ಕೋಕಿಲರವಂ ಕಹಳೆ ಘಳಯಿಡಿದ ವಲಸು ಮದ್ದಳೆ[ಯು] ಮೊರೆವಳಿಕುಲಂ ಬಳಸಿ ತಾರ್‍ಪ ಚಿಹಣ[ಪಾಠಾಂ. ಚಹಣ, ಚಿಂಹಣತೆ, ಶಿಹಣ]ಯರು . . . ನವಿಲು ನರ್ತನಂಗೈವವಂತಾ ವನದೊಳು (ಸೋಮಚ. ೨-೯೦): (ಹದಿಕಾ. ೬-೩೩ ನೋ): "ಹಿಮ್ಮೇಳ" (ಸೋಮಚ. ಕೋಶ). **ಚೀಹಣ:** ಲಲ್ಲೆಗೂಡುವ ಚೀಹಣೆಯ [ಪಾಠಾಂ. ಜೀವಣಿಗೆಯರ] ಸಂಗೀತದ ಸಂದಣಿಯೊಳ್ ಪುಷ್ಪಾಂಜಲಿಯ ಸಮಯದೊಳ್ (ಮಲುರ. ಹ. ೦೬೯-೦೦). [ ? ]

**ಚಿಹ್ನ** (ನಾ). ಗುರುತು ; ಲಕ್ಷಣ ; ಲಾಂಛನ : ಎಸೆದೊಪ್ಪಿರ್ದ ವಿಮಾನವಾಳಿ ಖಚರಾನೀಕಕ್ಕೆ ಚಿಹ್ನಂಗಳ್ (ಶಾಂತಿಪು. ೫-೩೮); ಗುರು ಶಿಷ್ಯ ಸಂಬಂಧವಾದುದಕ್ಕೆ ಇದು ಚಿಹ್ನ (ಬಸವ. ೯೩೮) ; ಮಹೋತ್ಸವಲೋತ್ಪಲನಿಮೇಷೋನ್ಮೇಷ ಚಿಹ್ನಂಗಳಿಂ ಗಡ ಬೆಳ್ದಿಂಗಳಿದೆಂಬುದೇ ಪೊಗಳ್ಪೆನೂರ್ಜಶ್ರೀಯ ಬೆಳ್ದಿಂಗಳಂ (ಜಗವಿ. ೮-೭೪). [ಸಂ.]

**ಚಿಹ್ನೆ** (ನಾ). = ಚಿಹ್ನ : ಇತರರಿಂದ ಅವನನ್ನು ಪ್ರತ್ಯೇಕಿಸುವ ಚಿಹ್ನೆಗಳೂ ಹೌದು (ಚಿನ್ನಳು. ೬೨೩). [ಸಂ. ಚಿಹ್ನ]

**ಚಿಳಕ** (ನಾ). ಸಮೂಹ ; ಮಂಡಲ (?) : ಇಳೆಯಿಂತೀರೇಳು ಲೋಕಂಗಳೊಳವತಿಶಯಂ ಬೆಳ್ಪಿನಿಂ . . . ಕುಳಾದ್ರೀಂದ್ರದಿಂದಂ ಬಳಸಿರ್ದ ಮೇರುವೇಳುಂ ಗ್ರಹದ ಚಿಳಕವೇಳುಂ ಯಶಿಖ್ಯಾತಿಯೇಳುಂ . . . ತಂನೊಳೊಪ್ಪಲು (ಕಶಾ. IV, ೦-೮ ; 1204). [ ? ]

**ಚಿಳಿಚಿಟಿಲ್** (ನಾ). ಒಂದಂ ಅನುಕರಣ ಶಬ್ದ : ಅಗಶಿಖರಂ ಚಿಳಿಚಿಟಿಲನೆ [ಪಾಠಾಂ. ಛಿಳಿಛಿಟಿಲೆನೆ]ಮಿಗೆ ಸಿಡಿದುದು (ರಾಜಶೇ. ೫-೩೬).

**ಚಿಳಿಚಿಮ** 'ಚಿಲಿಚಿಮ' ನೋ.

**ಚಿಳಿಚಿಳಿ** (ನಾ). ಒಂದಂ ಅನುಕರಣ ಶಬ್ದ : ಚಿಳಿಚಿಳಿ [ಪಾಠಾಂ. ಛಿಳಿಛಿಳಿ] ಧ್ವನಿ ಛಟಛಟತ್ಕೃತಿ ಘುಳುಘುಳುಸ್ವನ (ಕೊರರಾ. ೫-೮-೭೩)

**ಚಿಳಿಲ್** (ನಾ). ಒಂದಂ ಅನುಕರಣ ಶಬ್ದ : ಬೀಸುವ ಬಿಱುಗಾಳಿ ಕೊಳ್ಳ ಮಟೆ ಪೊಯ್ಯ ಸಿಡಿಲ್ ಚಿಳಿಲೆಂಬ ಮಿಂಚು (ಪ್ರಾಚ. ೧೯೩ ಪ್ರಯೋ)

**ಚಿಳಿಬರಸು**(ನಾ). ಒಬ್ಬಾತನ ಹೆಸರು(?) : ಸಿಪನದ ರಾಜನ ಮಗನಣುಗನ್ ಚಿಳಿಬರಸು ಮಾಡಿಸಿದೊನ್ (ಕಶಾಇ. IX-1, ೨೨-೦೪ ; ೪೭೨). [ ? + ಅರಸು$_2$ (<ಅರಸ$_1$) ]

**ಚಿಳ್ಕೇಳ್** (ನಾ). ಒಂದು ಅನುಕರಣ ಶಬ್ದ : ಪಂದಳೆಗಳನೆರ್ದೆಯಂ ಮೆಟ್ಟ ಚಿಳ್ಕೇಳೆನಲ್ ಬೆಟ್ಟುಱುವವನ್ನಂ ಕಿಬ್ಬ ಕಿಬ್ಬುಪ್ಪಳಿಸಿ (ಕೃಂಗಾರ. ೧-೭೦).

**ಚಿಳ್ಳ** 'ಚುಲ್ಲ$_1$' ನೋ.

**ಚಿಳ್ಳನೆ**(ಅ). ತಟ್ಟನೆ; ಕೂಡಲೆ: ಉಗುರೊತ್ತಲು ನೀರಿನ ಸೆಲೆ ಚಿಳ್ಳನೆ ಪೆಳ್ಳಲ್ ಚಿಮ್ಮುವ ಸಿರಿನೆಲವೆ (ಹೊಹಾದಿ. ೫೧-೧೧). [ಚಿಳ್ಳು$_0$ + – ಅನೆ$_1$ ]

**ಚಿಳ್ಳು** (ನಾ). ಒಂದು ಬಗೆಯ ಮರ : "ಕೋವಿದಾರಃ – ಕಂಚಿವಾಳ, ಚಿಳ್ಳು, ಹೇರಾಚ ?" (ಒಷಧಿ. ೪೧). [ ? ]

**ಚಿಳ್ಳೆ$_1$** 'ಚಿನ್ನಿ$_1$' ನೋ.

**ಚಿಳ್ಳೆ$_2$** 'ಚಿಲ್ಲೆ' ನೋ.

**ಚಿಳ್ಳೆ$_3$** (ನಾ). ಸಣ್ಣದು; ಪುಟ್ಟದು; ಮರಿ : "ಕರು. ಕುನ್ನಿ. ಮರಿ. ಚಿಳ್ಳೆ, ಚಿಣ್ಣ, ಪಿಳ್ಳೆ, ಕಂದ . . . ಹುಡುಗ" (ಕಂನುಡು. ೯೧). **ಚಿಳ್ಳೆಪಿಳ್ಳೆ = ಚಿಳ್ಳೆ$_3$** : ಎಲ್ಲರ ಮನೇಲೂ ಚಿಳ್ಳೆಪಿಳ್ಳೆಗಳೇ ಇರೋದು (ಬುರ್ಲ. ೯೮). [ ? ]

**ಚಿಳ್ಳೆಕೇತ** (ನಾ). ಕೀಟಲೆಮಾಡುವ ಒಂದು ಬಗೆಯ ಬೆಂತರ,–ಅತಿಮಾನುಷವ್ಯಕ್ತಿ : Robin good fellow ಎಂಬ ಹಿಳ್ಳೆಯಕ್ಷ, ಚಿಳ್ಳೆಕೇತ (Puck. ೫೦೪೨). 'ಕಿಳ್ಳೆಕೇತ' ಪರಾ. [ಚಿಳ್ಳೆ$_3$ + ಕೇತ$_2$ ]

**ಚಿಳ್ಳೆಪಿಳ್ಳೆರಾಯ** 'ಚಿಲ್ವೆಪಿಳ್ಳೆರಾಯ' ನೋ.

**ಚಿಱಿಯವೊಟಲು** (ನಾ). ಒಂದು ಊರಿನ ಹೆಸರು : ಚಿರುಪಿಯು ಚಿನ್ನಕುಣ್ಣೆಯು ಚಿಱಿಯವೊಟಲು ವುಳುವಟ್ಟು ನಾಲ್ಕೂರುಮಿಟ್ಟು ನಡೆದ ಕಲ್ಲಿಗೂಡಂಗೆಯೊಡ್ಡಿನ ಕಟಗೆ (ಕಶಾಇ. IX-1, ೨೬-೧೦ ; ೫೬೦). [ಚಿಱಿ$_0$ + ವೊಟಲು (<ಪೊಟಲ್) ]

**ಚಿಱು**, **ಚಿರು** (ನಾ). ಕಿಱಿದು ಎಂಬುದಕ್ಕೆ ಸಮಾಸದಲ್ಲಿ ಬರುವ ಸಂಕ್ಷಿಪ್ತರೂಪ: ಚಿಱುನನೆ ಚೆಲ್ಲರಲ್ದ ಕಳಿವೂಪಳೆವೂ . . . ಕೀಡೆ ಕರ್ದುಂಕಿದ ಪೂ(ತ್ರಿಪುವಿ. ೪೨-೬). 'ಚಿಱುಗುಳ್ಳ' ಪರಾ. **ಚಿರು** : 'ಚಿರುಗುಳ್ಳ' ಪರಾ. [ <ಕಿಱು$_2$ ]

**ಚಿಱುಗುಳ್ಳ**, **ಚಿರುಗುಳ್ಳ** (ನಾ). ಒಂದು ಬಗೆಯ ಮರ : ಇಪ್ಪವಕುಳಂ ಕರಿಯವೀಳೆ ಚಿಱುಗುಳ್ಳಂ . . . ಮೊದಲಾದುತ್ಕೃಷ್ಟ ತರುಸಂತತಿಗಳಿಂದೆಸೆವುದುಚ್ಚಳಿತ ನಿರ್ಝರ ವಿಪುಂಜತತಿ ರಂಜಿಸುತ ಬಿಂಜಂ (ಉದ್ಭಟ. ೨-೪೨). **ಚಿರುಗುಳ್ಳ** : "ನಿದಿಗ್ಧಿಕಾ. ಸ್ಪೃಶಿ: . . . ರಾಷ್ಟ್ರಿಕಾ–೧೦ ಹೆಗ್ಗುಳ್ಳದ ಹೆಸರುಗಳು ಮುಳ್ಳುಳ್ಳ ಚಿರುಗುಳ್ಳ" (ಸಿದ್ಧಾಂತಿ. ೧೧೬). [ಚಿಱು + ಗುಳ್ಳ ? ]

**ಚಿಱುಬಾಳೆ** (ನಾ). ಒಂದು ಬಗೆಯ ಬಾಳೆ : ನಂದನಾದ್ಯಾರಾಮಂಗಳೊಳು . . . ಚಿಱುಬಾಳೆ . . . ಸಾರ್ವರ್ತುಕವಾದ ಫಲಂಗಳುಳ್ಳ ತರುನಿಕರಂಗಳುಂ (ವಿವೇಕ. ೨೦೦). [ಚಿಱು + ಬಾಳೆ$_1$(<ಬಾಟೆ) ]

**ಚಿಱುವೇರು**, **ಚಿರಿವೇರು** (ನಾ). ಕೆಂಪುಬಣ್ಣವನ್ನು ಒದಗಿಸಿಕೊಡುವ ಒಂದು ಬಗೆಯ ಬೇರು,–ಮೂಲಿಕೆ : ಚಿಱುವೇರಿನ ಬಣ್ಣಂ ಮಿಗೆ ಪಱಿಯಲ್ಕಂಬರವ ಬಿಡದುಮಾ ತೆಱದಿಂದ ಕಾಂ ಕುಱುಗಿರ್ಪ ನೇಹ ವಾತನು ಮಱಿವನ್ನಂ ಬಿಡದು ಮೈದೊಱಿದುಮಾಯಮಪ್ಪ (ಕವಿಜ. ೪-೩೪). **ಚಿರಿವೇರು** : ಚಿರಿವೇರು, ಛಾಯಾವೇರು (ಮೃತ್ಯು. ೫೭-೦೦೫೫) 'ಚಾಯಬೇರು' ಪರಾ. [ ←ತೆಲು. ಚಿಱುವೇರು, ಚಿರುವೇರು ]

**ಚಟಿಯ** (ನಾ). ಒಬ್ಬಾತನ ಹೆಸರು : ಮಾರಾನ್ತ ರಿಪುಬಲದೊಳ್ಬಾಗ × × × ಉದು ಸರ್ಗ್ಗಸ್ತನಾದು ಚಟಿಯಂ (ಎಕ. X, ಮುಳಬಾ. ೮೩-೩; ಸು. 767 ?). [ ? ]

**ಚೀಕಟಿಕೆ** (ನಾ). ಒಂದು ಬಗೆಯ ಗಿಡ : ವಿರೇಚಕ್ಕೆ:–ನುಗ್ಗೆಯ ಸೊಪ್ಪು, ಹರುವೆ ಸೊಪ್ಪು . . . ಚೀಕಟಿಕೆ, ತ್ರಿಫಲೆ ಇವು ಪ್ರತ್ಯೇಕವು ಒಂದೊಂದು ತೂಕ (ವಿದ್ಯಾವಿ. ೦೯೩). [ ? ]

**ಚೀಕರಿ** 'ಸೀಕರಿ' ನೋ.

**ಚೀಕರಿವೋಗು** 'ಸೀಕರಿವೋಗು' ನೋ.

**ಚೀಕಲು** 'ಸೀಕಲು' ನೋ.

**ಚೀಕಾಟು** (ನಾ). ಅಜಿಗಿಜಿಯಾದಂದಂ; ಮುಷ್ಟೆ: ತುಳಿದರು ಕೇರಿದರು ಕೆಡಹಿದರು ಸತ್ವದಿ ಚೀರಿದರು ಚೀಕಾಟು ಮಾ ಡಿ ದ ರ ರ್ಥ ನಿ ಮಿ ಷ ದ ಲಿ (ಕೋಗಯು. ೨೩-೯೮). [ ←ಹಿಂ. ಮರಾ. ಚೀಂಟ್ ]

**ಚೀಕು$_1$** 'ಸೀಕು$_1$' ನೋ.

**ಚೀಕು$_2$** 'ಸೀಕು$_2$' ನೋ.

**ಚೀಕೊಳವೆ** 'ಚೀರ್ಕೊಟವಿ' ನೋ.

**ಚೀಜು, ಚೀಸ್, ಚೀಸು** (ನಾ). [ಸಂಗೀತ] ಹಾಡು : ಸಂಗೀತಕೃತಿ : ನಿನ್ನನ ಚೀಜು ರುಚಿ ಹತ್ತಲಿಲ್ಲೋ ಭರಮಾ (ರಕ್ತರ್. ೩೦೯). **ಚೀಸ್** : ರೋಷನ್ . . . ಹಿತವಾಗಿ ಒಂದು ಚೀಸ್ ಹಾಡಿದಳು (ರೂಪಕ. ೯೯). **ಚೀಸು** : ಮಾರವದಲ್ಲಿ ಒಂದು ಚೀಸು, ಬೇಹಾಗ್, ಶಹನಗಳಲ್ಲಿ ಎರಡು ದೇವರ ನಾಮುಗಳನ್ನು ಹಾಡಿದಳು (ರೂಪಕ. ೨೨೩).

[ ←ಪಾರ. ಹಿಂ. ಮರಾ. ಚೀಜ್ ]

**ಚೀಟಾಡು** (ಕ್ರಿ). ಇಸ್ಪೀಟು ಆಟವನ್ನು ಆಡು ; ಗಂಜೀಫು ಆಡು : ದೇಸರದಿ ಕುಳಿತಿರಲು, ರಾಯರೆ, ಎಕೆ, ತುಸ ಹೊತ್ತು ಚೀಟಾಡಬಾರದೇ ಎನ್ನುವರು (ನವರಾ. IV, ೨೦-೦೦). [ ಚೀಟು$_2$ + ಆಡು$_1$ ]

**ಚೀಟಾಳು** (ನಾ). ಸಣ್ಣ ಆಳು, – ಸೇವಕ : ಆಟಾಳಿಗೊಂದು ಚೀಟಾಳು (ಗಾದೆ). [ ಚೀಟು$_3$(<ಚಿಟ್ಟು$_1$) +ಆಳು$_2$(<ಆಳ್$_2$) ]

**ಚೀಟಿ$_1$, ಚೀಟು$_1$** (ನಾ). ನಾನಾ ಬಣ್ಣಗಳ ಚಿತ್ರದ ನಮೂನೆಯನ್ನೊಳಗೊಂಡ ಹತ್ತಿಯ ಬಟ್ಟೆ ; ಬಣ್ಣದ ಚಿತ್ರಗಳ ಬಟ್ಟೆ: ಜಂಗಮದೇವರ ಜಂಗಿನ ಶಾವು ಲಿಂಗ ಧರಿಸೋ ಕಾವೀ ವಲ್ಲಿ ಜೋಗಿಗಳ್ ಹೊದೆವೋ ಚೀಟೀದಟ್ಟಿ (ನಾಪದ. ೦೯೨) ; ಲಾಂಗ್‌ಕ್ಲಾತ್, ಚೀಟಿ, ವಾಯಿಲ್, ಮಸ್ಲಿನ್, ಮಲ್ ಇವನ್ನು ಸಾದಾ ನೇಯ್ಗೆ ಉಪಯೋಗಿಸಿ ನೇಯುವರು (ಗೃಹವಿ. ೬೩). **ಚೀಟು$_1$** : (ಮುಂಬಯು. ೬. ೩–೨೯೭).

[ ?. / ತಮಿ. ಮಲ. ಚೀಟ್ಟಿ; ತೆಲು. ಚೀಟಿ./ಹಿಂ. ಛೀಂಟ್, ಛೀಟ್ : ಮರಾ. ಚೀಟ್, ಛೀಟ್./ಇಂ. Chints ]

**ಚೀಟಿ$_2$** 'ಚೀಟು$_2$' ನೋ.

**ಚೀಟಿಬಟ್ಟೆ** (ನಾ). = ಚೀಟಿ$_1$ : ಬಣ್ಣ ಬಣ್ಣಗಳ ಚಿತ್ರದ ನಮೂನೆಗಳಿಂದ ಬಣ್ಣ ಕಚ್ಚುವಂತೆ ಧಾಟು ಸಾ., ಗಾಡುಮರಗು ಕೊಟ್ಟು ತಯಾರಿಸಿದ ಹತ್ತಿಯ ದಾರದ ಬಟ್ಟೆ(ಯ) ಚೀಟಬಟ್ಟೆ(ಯ) (Chints. ಇಂಕಿವಿ).

[ ಚೀಟಿ$_1$ + ಬಟ್ಟೆ$_2$ ]

**ಚೀಟು$_1$** 'ಚೀಟಿ$_1$' ನೋ.

**ಚೀಟು$_2$, ಚೀಟಿ$_2$** (ನಾ). ೧. (ಬರೆಹವಿರುವ) ಸಣ್ಣ ಕಾಗದ ; ಪತ್ರ: ಪಂಚಾಕ್ಷರಿಯ ಮಂತ್ರವೇ ಮಹಾಘನವೆಂದು ಸಂಚಿಕೆಯ ಚೀಟನಿಂ ಬರೆದದಂ ತೂಗಿ ಮೆಚ್ಚಿವಂ (ಚಂಪು. ೩೨-೬೭): ಕಂದಾಯದ ಚೀಟು ಬರೆಸಿ . . . ಹರಹರ ರೈತರಿಗೂ ಚೀಟಿಗಳು ಕೊಡುವರು (ಮುಹಾಕಂ. II, ೩೦). ೨. ಆಜ್ಞಾಪತ್ರ ; ಅಪ್ಪಣೆ ಚೀಟಿ : ಕೈಯೊಳಗಣ ಹೊಚ್ಚಿಯ ಬಟ್ಟು ತೋಚು ಕೆಡದಿಹರ ಜಗದೊಡೆಯನ ಚೀಟ ಕೊಳ್ಳಿ, ಬಂಕೇಶ್ವರಲಿಂಗದಾ (ಸುಂಕಬಂ.೨) : ಕಾಲನ ಚೀಟುಗಳು ಕವಿವಂತೆ ಕವಿದವು ಹರಿ ಕರವಾಳ (ನಿಘಾಗ. ೦೦-೩೮-೨೭) : ಗುರಂಸುತಂ ಯಮನವರ ಚೀಟುಗಳ್ ಕವಿವಂತೆ ಕಮಿಸಿದಂ ಕರ್ಣಗಣೆಯ ವೃಂಗಳ ನಾಯಕರಿಗೆ (ಕುರಂಗ. ೩೯-೫). ೩. ಭೀತಿ, ರೋಗ ಮೊದಲಾದ ಉಪದ್ರವಗಳ ಪರಿಹಾರಕ್ಕಾಗಿ ಉಪಯೋಗಿಸುವ ಯಂತ್ರಗಳನ್ನು ಬರೆಯುಂವ ತಾಳೆಗರಿ, ತಗಡಂ ಮೊದಲಾದಂವು:ಯಾ ಮಂತ್ರವಂ ನೂರೆಂಟು ಬಾರಿ ವಿಧಿಯಿಂದ ಜಪವಂ ಮಾಡಿ ಚೀಟನಲ್ಲಿ ಬರೆದು ಉದ್ಯಾನ ಮಧ್ಯದಲ್ಲಿ ಹೂಳಲು ಸಮಸ್ತವಾದ ದುಷ್ಟ ಜಂತುಗಳು ನಾಶವನ್ನೈದುವವು (ಸಾಗಂಧಿ. ೯೨೮-೦೭) : ಭಟ್ಟರು . . . ಮೂರು ಮಕ್ಕಳಿಗೂ ಚೀಟುಗಳನ್ನು ಕಟ್ಟಿ, ಮಂತ್ರೋದಕವನ್ನು ಪ್ರೋಕ್ಷಣೆ ಮಾಡಿದರು (ಪಂಚಪಂ. ೯೦) : ಆಚಾರ್ರು . . . ಚೀಟು ಕಟ್ಟುವ, ದಾಟು ತೆಗೆಯುವ ಅಥವಾ ಅನ್ನ ತೆಗೆದುಹಾಕುವ ನೆವದಲ್ಲಿ ಬುಂಡೇದಾಸನ ಪಡಸಾನೆ ಕಡೆಗೆ ಹೋಗಿ ಬರುತ್ತಿದ್ದರು (ನಸ್ನೂರು. ೦೮೯). ೪. ಅಂಚೆಯ ಚೀಟಿ ; ಸ್ಟಾಂಪು : ಈ ದುಷ್ಟನು . . . ತನ್ನ ಮನೆಯೊಳಗಿನ ವೀರಾಗ್ರಣಿಗಳನ್ನೂ . . . ಅಜ್ಜಿಗಳನ್ನೂ ವಿಲಾಯಿತಿ ಚೀಟುಗಳಂತೆ ಅಗ್ಗವಾಗಿ ಮಾರಿಬಿಟ್ಟನು (ಮೋಹಿನೀ. ೦೩೨). ೫. ದಾಖಲೆಪತ್ರ ; ರಿಕಾರ್ಡ್ : ಶ್ರೀನರಸಿಂಹ ಭಾರತೀವೊಡೆಯರ ದಿವ್ಯನಾಮದಲ್ಲಿ ಮುದ್ರ ಚೀಟು ತಾಂಥ್ರ ಶಾಸನ (ಎಕ. VIII, ತೀರ್ಥಹ. ೦೫೩-೦೦ ; ಸು. 1480) : ಧರಣಿಪತಿಗಳು ತೆರುವ ಕಪ್ಪಕಾಣಿಕೆಯ ಮುಡುವು ಬೊಕ್ಕಸ ಚೀಟು . . . ಬರೆದ ಕೇಳಿದನು (ಕಠಿರ. ೦೩೨-೭). ೬. ಇಸ್ಪೀಟು ; ಗಂಜೀಫು : ಸಂತೆಗೆ ಚೀಟು, ಮುಂಗೈಗೆ ಬಳೆ (ಗಾದೆ). 'ಚೀಟಾಡಂ' ಪರಾ. **ಚೀಟಿ$_2$** : ೧. ಕಡೆಯ ಸಂಬಳಕೆಲ್ಲ ಮುಕುತಿಸಾಧನವನ್ನು ಕೊಡುವಂತೆ ತಿರುಗದ ಚೀಟಿ ಬರಿಸಿಕೊಟ್ಟ (ಪುರಂದ. ೨-೦೫-೯) ; ವೆಸರ ಬರೆದೊಂದು ಚೀಟಿಯೊಳಿರಿಸಿ (ಕೊಟ್ಟೂರು. ೯-೫೯) : ಸಾಯುವಾಗ ಒಂದು ಚೀಟಿ ಬರೆದು ಕೊಟ್ಟಿದ್ದಾನೆ, ಎಂದು ಆ ಚೀಟಿಯನ್ನು ಕೊಟ್ಟನು (ಬಿತ್ತೀಕು. ೨೯) : ರಾಯರ ಚೀಟಿಯು ಬಂದಿತ್ತು (ರಾಯಕ. ೩೭). ೭. ಔಷಧಿಸೀಸೆ ಮೊದಲಾದುವುಗಳ ಮೇಲೆ ಗುರುತಿಸಲು ಅಂಟಿಸುವ ಸಣ್ಣ ಕಾಗದ ; ಗುರುತಿನ ಚೀಟಿ : ಪ್ರತಿಯೊಂದು ಪಾತ್ರೆಯ ಮೇಲೂ ಆ ಪಾತ್ರೆಯಲ್ಲಿರುವ ಸಾಮಾನಿನ ಚೀಟಿ ಅಂಟಿಸಿದರೆ . . . ತೆಗೆದುಕೊಳ್ಳಲು ಸುಲಭವಾಗುವುದು (ಅಡುಸಾ. ೫೨). ೮. ಹಣದ ಕಂತಿನ ರೂಪದಲ್ಲಿ ನಡೆಸುವ ವ್ಯವಹಾರ: ನಮ್ಮ ಕಚೇರಿಯಲ್ಲಿ ಒಂದು ಚೀಟಿ ಆರಂಭಿಸಿದ್ದೇವೆ (ರೂಢಿ). ೯. ಪ್ರಯಾಣದಲ್ಲಿ ಕೊಂಡುಕೊಳ್ಳುವ ಟಿಕೀಟು : ಬಸ್ಸಿನಲ್ಲಿ ಚೀಟಿ ತೆಗೆದುಕೊಳ್ಳದೆ ಪ್ರಯಾಣ ಮಾಡಬಾರದು(ರೂಢಿ). ೧೦. (ಉಕ) ಔಷಧಿಯ ಪುಡಿ, ಮಾತ್ರೆ ಮೊದಲಾದುವನ್ನು ಕಟ್ಟಿದ ಕಾಗದದ ಚಿಕ್ಕ ಪುಡಿಕೆ.

**ಚೀಟಿಬರು**= ೧. ಚೀಟಿಯ ಹಣ ಕೈಸೇರು: ಈ ತಿಂಗಳು ನನಗೆ ಚೀಟಿ ಬಂತು (ರೂಢಿ). ೨. (ಆಲಂ) ಸಾವು ಬರು : ಇನ್ನೇನು ಹುಷಾರಾದರು ಎಂದುಕೊಳ್ಳುವಷ್ಟರಲ್ಲಿಯೇ ಚೀಟಿ ಬಂದು ಬಿಟ್ಟಿತು (ರೂಢಿ).

[ ?./ತಮಿ. ಮಲ. ಚೀಟ್ಟು ; ತುಳು. ಚೀಟ್, ಚೀಟಿ ; ತೆಲು. ಚೀಟಿ./ ಇಂ. Chit]

**ಚೀಟು$_3$** 'ಚಿಟ್ಟು$_1$' ನೋ.

**ಚೀಡೆ** (ನಾ). ಎಣ್ಣೆ ಅಥವಾ ತಂಪ್ಪದಲ್ಲಿ ಕರಿದ ಗೋಲಿಯಾಕಾರದ ಸಿಹಿತಿಂಡಿ : (+).

[ ದೇ.೩ ತಮಿ. ಚೀಟ್ಟೆ ; ಮಲ. ಚೀಡ ; ತೆಲು. ಚೀಡೆ ]

**ಚೀಡೆಹುಳು** (ನಾ). ಸಣ್ಣಹುಳು ; ಕ್ರಿಮಿ : ನಿಜವಾಗಿ ನಮ್ಮ ದೇಹಾತ್ಮಗಳನ್ನು ತಿಂದುಹಾಕಿದ, ತಿನ್ನುತ್ತಿರುವ ಚೀಡೆಹುಳು ಉಪೇಕ್ಷೆ(ಸಾಹಿಚೀ. ೮೫). 'ಕೀಡೆ' ಪರಾ. [ ಚೀಡೆ$_0$ (<ಕೀಡೆ) + ಹುಳು$_2$ (<ಪುಟು$_1$) ]

**ಚೀಣ** (ನಾ). = ಚೀನ$_1$. [ <ಸಂ. ಚೀನ ]

**ಚೀಣಾಂಬರ** (ನಾ). = ಚೀನಾಂಬರ : ಪಟುಪಟಾವಳಿ ಚೀಣ ಚೀಣಾಂಬರ ನ್ಯಾಯ ವ್ಯವಹಾರ ಭರವರಾಗಿಯುಂ (ಎಕ. XVI, ಗುಬ್ಬಿ. ೭೪-೪೭ : ?). [ <ಸಂ. ಚೀಣಾಂಬರ ]

**ಚೀಣಾಕಾಗದ** (ನಾ). (ಹಿಂದೆ) ಚೀನಾದೇಶದಿಂದ ಬರುತ್ತಿದ್ದ ಕಾಗದ ; ಬಿಳಿಕಾಗದ: ಬಿಳಿಯ ಕಾಗದಕ್ಕೆ ಚೀಣಾಕಾಗದವೆಂದು ಹೆಸರು(ಗುಣಸಾ. ೪). [ <ಚೀಣ + ಕಾಗದ ]

**ಚೀಣಿಕಾಯಿ** 'ಚೀನಿಕಾಯಿ' ನೋ.

**ಚೀತ್ಕರಣ** (ನಾ). = ಚೀತ್ಕಾರ ೧. 'ಚೀತ್ಕರಿಸು₁' ಪರಾ. [ ಸಂ. ]

**ಚೀತ್ಕರಣೆ** (ನಾ) =ಚೀತ್ಕಾರ ೨ : ಉರುರಭಸವಳ್ಳಿಜುಯಿ ರಥ ಚೀತ್ಕರಣೆ ರಥಹಯಹೇಷಿತದ ನಿಷ್ಠುರನಿನಾದದರೌಕಿ ಹೊಕ್ಕನು ಶಲ್ಯನಾಹವವ (ಕುಮ್ಮಾಕ. ೩-೨೫). [ ಸಂ. ಚೀತ್ಕರಣ ]

**ಚೀತ್ಕರಿಸು₁** (ಕ್ರಿ). (ಭಯಂ, ದುಃಖ ಮೊದಲಾದಂವುಗಳಿಂದ) ಗಟ್ಟಿಯಾಗಿ ಅರಚು ; ಆರ್ತನಾದ ಮಾಡು ; ಕೂಗು : "ಅಯ್ಯೋ" ಎಂದು ಚೀತ್ಕರಿಸಿದರು (ಕಾವೇರಿ. ೨೦೫). [ ಚೀತ್ಕರಣ + – ಇಸು₁ ]

**ಚೀತ್ಕರಿಸು₂** 'ಸೀತ್ಕರಿಸು' ನೋ.

**ಚೀತ್ಕಾರ** (ನಾ). ೧. ಗಟ್ಟಿಯಾಗಿ ಅರಚುವ ಶಬ್ದ ; ಆರ್ತನಾದ : ಈ ಚೀತ್ಕಾರಗಳಿಂದ ಆ ಮಹಾಧೀರನ ಎದೆಯೂ ಜರ್ಜರಿಸಿತು(ಶಾಂತಲಾ. ೭೩); ಚೀತ್ಕಾರ ಕೇಳಿದಾಗ ಮನೆಯ ಪರಿಸ್ಥಿತಿಯೇ ಬದಲಾಗಿ ಹೋಯ್ತು (ಶಿರ್ವಸ. ೦೮೩). ೨. ರಥವು ಚಲಿಸುವಾಗ ಉಂಟಾಗುವ ಧ್ವನಿ : ರಥಾಂಗ ರಥಚೀತ್ಕಾರಂ ಶಿಲೀಮುಖ ಝೇಂಕಾರಂ . . . ಬಳೆದಾಗಸಮಂ ಮುಸುಂಕೆ (ಗಿರಿಕ. ೮-೮ ಪ) : ಘುಳುಘುಳಿಪ ಚೀತ್ಕಾರ ಕೋಲಾಹಳದ ಸೂತನ ರೇಪೆಯಲಿ ಭಟಕುಲಲಲಾಮನ ತೇರು ಬಂದುದು (ಕುಮ್ಮಾದ್ರೋ. ೪-೩೦). [ ಸಂ. ]

**ಚೀತ್ಕೃತಿ** (ನಾ). = ಚೀತ್ಕಾರ ೧ : ವಿಹಗ ಸಮುತ್ಕರಚೀತ್ಕೃತಿ ತೀವಿ ವಿಪಿನದೊಳ್ಪಿಡದುಗುಂ (ರಾಜಶೇ. ೫-೬೨). ೨. = ಚೀತ್ಕಾರ ೨ : ತುರಗ ಗರ್ಜನೆ ರಥದ ಚೀತ್ಕೃತಿ ವರಧನುಷ್ಟಂಕಾರ (ಕುಮ್ಮಾವಿ. ೩-೩೩) : ಧೂಳಿಯಂ ಮೇಣ್ ಚಕ್ರಚೀತ್ಕೃತಿಯುಮಂ ತವಿಸಿ, ಓಂದೋಡಿದರ್ (ಕ್ರೀರಾಮಪ. ೯೩-೪೨೭). [ ಸಂ. ]

**ಚೀನ₁**(ನಾ). ೧. ಒಂದು ದೇಶದ ಹೆಸರು : ನೀರರುಹವದನೆ ಸುಕುಮಾರೆ ಮಧುರಪ್ರಿಯ ವಿಚಾರವಿದೆಯವಳೆ ಚೀನದ ಮಹಿನಿ (ಜಿನಪ. ೩-೩೮) : ಇಂಥ ಸುದ್ದಿಯನ್ನು ಚೀನದಲ್ಲಿ ದೊರಕಿಸುವುದು ಕಠಿನವಾದ್ದರಿಂದ ಈ ವರದಿ ಬಹಳ ವಿರಳವಾಗಿದೆ (ಚೀನದಾ. ೪೯೫) : ಚೀನಾಕ್ಕೆ ಪಶ್ಚಿಮದಲ್ಲಿ ಮಧ್ಯ ಏಷ್ಯದ ಎತ್ತರವಾದ ಪ್ರಸ್ಥಭೂಮಿಗಳಿವೆ (ಭೂವಿಜ. ೪೦೮). ೨. ಚೀನಾ ದೇಶದಲ್ಲಿ ತಯಾರಾದ ರೇಷ್ಮೆ,–ರೇಷ್ಮೆಯ ಬಟ್ಟೆ : ಸೌಧಾಳಿಯೊಳ್ಗುಡಿಯಾಯ್ತು ಚೀನದ ಸುಯ್ಯಕಾಣದ ಪಟ್ಟೆ (ಶಂಕರಾ. ೦೪-೦೫) : ನಾಳೆ ವಿನೋದದಿಂದೊಡನಿರ್ಪರುಂ ಮುಕ್ತಿನಾಭರಣಂಗಳಂ ನೆಜ್ ತೊಟ್ಟು ಚೀನಮನುಟ್ಟು (ಧರ್ಮಾಮೃ. ೩-೩೭) : ಪಸುರ್ಮಡಿಯ ಬೆಳ್ಪಟ್ಟೆಯ ಚಿನ್ನದಾರ ಹೊಂಬಿಸಿಲ [ ಚೀ ]ನಂ [ಪಾಶಾಂ. ಲಂಜಿನಂ, ಲಚಿಷ್ಮಂ ಲಜೀವಂ.] (ಸಿದ್ಧರಾ. ೮-೫೭). ೩. ಒಂದು ಬಗೆಯ ಜಿಂಕೆ : "ಚೀನ–ಹಕ್ಕೀಟಣ್ಣವಾಗಿ ೩೦ ಅಂಗುಲದುದ್ದವಿರುವ ದುಪ್ಪೀ ಹೆಸರು" (ಸಿದ್ಧಾಂತಿ. ೦೭೭). [ ಸಂ. ]

**ಚೀನ₂** (ನಾ). ಒಂದು ಬಗೆಯ ವಾದ್ಯ : ಯುದ್ಧಸಮಯದಲ್ಲಿ ಬಳಸುತ್ತಿದ್ದ ವಾದ್ಯಗಳೂ ಹಲವಾರು : ಭೇರಿ, ಕೊಂಬು, ಚೀನ, ಢಕ್ಕೆ . . . ಶಂಖವಾಸ, ಇತ್ಯಾದಿ (ಸಂಜುಂಡ. ೦೩೦). [ ? ]

**ಚೀನಕ** (ನಾ). = ಚೀನಿಕರ್ಪೂರ : "ಚೀನಕಃ– ಚೀನಿಕರ್ಪೂರ"(ಒಷಧಿ. ೫೭). [ ಸಂ. ]

**ಚೀನಗರ್ಪೂರ** (ನಾ). ಚೀನಾ ದೇಶದಿಂದ ಬರುವ ಕರ್ಪೂರ : ಪಚ್ಚಕರ್ಪೂರ (?) : "ಕಾ(ಕೃ) ? ತ್ರಿಮಃ – ಅಟ್ಟುಪ್ಪು, ಚೀನಗರ್ಪೂರ, ಕರ್ಕಸ್ಥಲ" (ಒಷಧಿ. ೩೦). 'ಚೀನಿಕರ್ಪೂರ' ಪರಾ. [ ಚೀನ₁ + ಕರ್ಪೂರ (<ಕಪ್ಪೂರ) ]

**ಚೀನಚೇಲ** (ನಾ).=ಚೀನಾಂಬರ: ಪೂಕೆಲವಕ್ಕೆ ಪೌರವನಭೂರುಹವೊಪ್ಪುವ ಮುಳ್ಳಿಗುಚ್ಛಳಕ್ಕೇತನ ಚೀನಚೇಳವರುಣೋವಲಭಿತ್ತಿಗೆ . , . ದೊರೆಯಾಗಿ ತೋಱುದತ್ತು . . . ರಕ್ತಸೇಕದಿಂ (ಚಂದ್ರಪ್ರ. ೬-೫೭). [ ಚೀನ₁ + ಚೇಲ ( = ಚೇಲ₁) ]

**ಚೀನವಸನ** (ನಾ). = ಚೀನಾಂಬರ : ಬರೆ ತೆಗೆದಪ್ಪ ಚೀನವಸನಾಂಚಲಮಂ ನಸು ನೂಂಕಿ (ರಾಜಶೇ. ೪-೬೬) : ಓಂದೆಸೆಗೋಡುವುದು ಬಳಕೆಗೈದದ ಮನವೇನೆಂದವೆನೊ ಪವನನಿದಿರೊಳ್ ತಂದ ಪತಾಕಿಕೆಯು ಚೀನವಸನವಿದೆಂಬೊಲ್ (ಶಾಕುಂತ. ೧೮-೩೪). [ ಚೀನ₁ + ವಸನ ]

**ಚೀನಾಂಬರ** (ನಾ). ಚೀನಾದೇಶದಲ್ಲಿ ತಯಾರು ಮಾಡಿದ ಬಟ್ಟೆ,–ವಸ್ತ್ರ,–ರೇಷ್ಮೆವಸ್ತ್ರ : ರುದ್ರಾಕ್ಷಿಯ ಧರಿಸಿ ಮಿಸುಪ ಚೀನಾಂಬರದುಡಿಗೆಯುನೆಲ್ಲ ತ್ಯಜಿಸುತೆಳಗಾವಿಯನುಟ್ಟು (ಮೋಹಿನಿಪು. ೩-೫) : ಕಳೆದು ತಣ್ಣನ ವಸ್ತ್ರಗಳ ಚೀನಾಂಬರಗಳನುಟ್ಟು ಸತಿಯರೊಪ್ಪಿದರು (ಕಂಜವಿ. ೨೫-೦೩೪) : ಹಾಲ್ನೊರೆಯಂತೆ ಶುಭ್ರವಾದ ಚೀನಾಂಬರಗಳನ್ನುಡಿಸಿ, ಅಷ್ಟೇ ಶುಭ್ರವಾದ ವಕ್ಷವಸ್ತ್ರವನ್ನು ಲಘುವಾಗಿ ಬಿಗಿದರು (ಶಾಂತಲಾ. ೦೦೪). [ ಚೀನ₁ + ಅಂಬರ ]

**ಚೀನಾಂಶುಕ** (ನಾ). = ಚೀನಾಂಬರ : ವಿಚಿತ್ರ ಚೀನಾಂಶುಕರುಚಿರಂಗಳುಂ . . . ಉತ್ಪಳಪೇಟಮುಂ ಪುಗುವಾಗಳ್ (ಆದಿಪು. ೪-೫೮ ವ) : ಚಾರು ಚೀನಾಂಶುಕ ವಿತಾನ ಶೋಭಾ ಸನಾಥದೊಳ್ . . . ಸುಖಸುಪ್ತನಾಗಿ (ಧರ್ಮಾಮೃ.೫-೨೮): ರೇಷ್ಮೆಯನ್ನು ಭಾರತದಲ್ಲಿ 'ಚೀನಾಂಶುಕ' ಎನ್ನುತ್ತಿದ್ದರು (ಶಿಲ್ಪನಾ. ೫೭). [ ಚೀನ₁ + ಅಂಶುಕ ]

**ಚೀನಾಕ** (ನಾ). ತರಕಾರಿಯಾಗಿ ಉಪಯೋಗಿಸುವ ಒಂದು ಬಗೆಯ ಸೊಪ್ಪು : ಚೀನಾಕ (ಸವತೀ ಜಾತಿ) ಚಿರ್ಭಟ ಇವು ಕಫವಾತಕರ (ಅಷ್ಟಾಂಗ. ೦೩೭-೮೦). [ ಸಂ. ]

**ಚೀನಾಬಿಳೀಮರ** (ನಾ). ಒಂದು ಬಗೆಯ ಮರ : ಚೀನಾಬಿಳೀಮರ, ಪುನಾಲಿ, ಹಂದಿಬಳ್ಳಿ (ಮೃಶಿಗಿ. ೫೯-೫೭೪). [ ಚೀನಾ₂ + ಬಿಳಿ + ಮರ₁ ]

**ಚೀನಾರು** (ನಾ). ಒಂದು ಬಗೆಯ ಮರ : ಭವ್ಯ ಚೀನಾರುಗಳು ಚಾಚಿದ ತೋಳು, ಹಾಕುತ ರಿಂಗಣ (ಚಂಡಕನ. ೯೮-೦೫). [ ←ಪಾರ. ಚೀನಾರ್ ; ಹಿಂ. ಚಿನಾರ್ ]

**ಚೀನಾಲಿ** 'ಛಿನಾಲಿ' ನೋ.

**ಚೀನಾಸೋಂಪು** (ನಾ). ಒಂದು ಬಗೆಯ ವನಸ್ಪತಿ : ಮರಾಟಿಮೊಗ್ಗು, ಚೀನಾಸೋಂಪು (ಮೃಶಿಗಿ. ೯೫-೮೯೦). [ ಚೀನಾ₂ + ಸೋಂಪು ]

**ಚೀನಿ** (ನಾ). ೧. ಚೀನಾದೇಶದಿಂದ ಬಂದುದು ; ಚೀನಾದೇಶದಲ್ಲಿ ಉತ್ಪನ್ನವಾದುದು. ೨. ಪಚ್ಚಕರ್ಪೂರ ; ಹಿಮವಾಲುಕ : "ಪ್ರಾಲೇಯಮನಲು ಘನಸಾರಮನೆ ಪಚ್ಚೆ ಹಿಮವಾಳುಕಂ ಚೀನಿ" (ಮಂಗರಾ. ೯೯-೨೨). ೩. ರೇಷ್ಮೆಬಟ್ಟೆ : ಮಂಗಮುಗಿಪರಲ ಮುಡಿದು ಚಂದನಂಬೊರೆದು ಚೀನಿಗಳ ಪೊದೆದು (ಪದ್ಮರಾ. ೮-೨೭) : ಎಳದಳಿರ ಪೊದಕೆಯುಂ ಚೀನಿ ಚೀನಾಂಬರಂಗಳ ಮೇಲುಕಟ್ಟನಿಂ . . . ರಾಜಗೃಹದೊಳೊಪ್ಪಿದುದು ಚಪ್ಪರವತುಳ ವಿಸ್ತರದಲಿ (ಸೌಂದರ. ೪-೨೦) : ಚೀನಿ ದುಕೂಲ ಜಲ್ಲಿ ಕರ್ಣ ವಿ ಕರ್ಣ ಗಳ್ಯಾನು ಮಂಡಲದಂತೆ ಸೆಯಲು (ಶಾಂತೀಶ. ೦-೪೪) ೪. ಒಂದು ಬಗೆಯ ಸಕ್ಕರೆ ; ಬೂರಾಸಕ್ಕರೆ. ೫. ಒಂದು ಬಗೆಯ ಕಬ್ಬು : ಚೀನಿಯ ಕಬ್ಬು ಸಾಮಾನ್ಯವಾಗಿ ತೆಳ್ಳಗಿರುತ್ತದೆ (ಒಂ೦). [ <ಸಂ. ಚೀನೀಯ ]

ಚೀನಿಕರ್ಪೂರ (ನಾ). ಪಚ್ಚಕರ್ಪೂರ; ಹಿಮವಾಲುಕ : ಕರತಿಗೆ ತಗಚಿಯ ಬೀಜ ಬಾವಂಜಿಯ ಬೀಜ . . . ಚೀನಿಕರ್ಪೂರ ಇವೆಲ್ಲವಂ ತಮ್ಮೊಳು ಸರಿಯಾಗಿ ಕೂಂಡು (ವಿವ್ಯವಿ. ೯೨). [ ಚೀನಿ + ಕರ್ಪೂರ ]

ಚೀನಿಕಾಯಿ, ಚೀಣಿಕಾಯಿ (ನಾ). ಸಕ್ಕರೆಗುಂಬಳಕಾಯಿ ; ಸಿಹಿ ಕುಂಬಳಕಾಯಿ: ಚಾವಡಿಯ ಮಾಡಿಗೆ ತಾಗಿರುವ ಅಡ್ಡಕೋಲಿನಲ್ಲಿ ಸೌತೆ, ಕುಂಬಳ, ಚೀನಿಕಾಯಿ ಮೊದಲಾದುವುಗಳು ತೂಗುತ್ತಿದ್ದುವು (ಚಿಗುಬ. ೨೪). ಚೀಣಿಕಾಯಿ : ಚೀಣಿಕಾಯಟ್ಟವಳ್ಳಾರವ್ವ ಚೀಣೀಕಟ್ಟೀ ಪುಟ್ಟವಂಕವ್ವ (ನಾಪದ. ೨೦೩). [ ಚೀನಿ + ಕಾಯಿ$_4$ (<ಕಾಯ್$_4$) ]

ಚೀನಿಕೊಳವೆ (ನಾ). ದುರ್ಬೀನು; ದೂರದರ್ಶಕಯಂತ್ರ: ಸಿದ್ದೇಶ್ವರನ ಗದ್ದಿಗೆ ಮೇಲೆ ಹೋಗಿ, ಚೀನಿಕೊಳವೆ ಹಾಕಿ ನೋಡಿದಲ್ಲಿ, ಒಂದು ತಂಬಾದರೂ ಕಾಣುವುದಿಲ್ಲ (ರಾಜೇಂದ್ರ. ೯೨).
[ ಚೀನಿ ? + ಕೊಳವೆ (<ಕೊಳವಿ) ]

ಚೀನೀಯ (ನಾ). ಚೀನಾದೇಶದಲ್ಲಿ ಹುಟ್ಟಿದವನು ; ಚೀನಾದೇಶದ ಪ್ರಜೆ : ಹಿಂದೂದೇಶದವರಲ್ಲದ ಆಸ್ಯಾಖಂಡದ ವಂಶೀಯರು . . . ಅರಬರು, ಬೆಲುಚಿಯರು, ಚೀನೀಯರು, ಮೊಗಲರು (ತುಳುನಾ. ೧೭೪).
[ ಸಂ. ]

ಚೀನೋತ್ತರೀಯ (ನಾ). ಹೊದೆಯುವ ರೇಷ್ಮೆಯ ವಸ್ತ್ರ,–ಮುಗುಟ : ಮತ್ತಮತಿಸಂಭ್ರಮಸ್ಖಲಿತ ಚಿತ್ರಚೀನೋತ್ತರೀಯಮಂ ಮಾಣಿದು (ಮಲ್ಲಿಪು. ೯–೨೦). [ಚೀನ$_1$ + ಉತ್ತರೀಯ ]

ಚೀಪು$_1$ 'ಸೀಪು$_1$' ನೋ.

ಚೀಪು$_2$, ಚಿಪ್ಪು$_2$, ಚೂಪು$_2$ (ನಾ). ೧. ಬೆಣೆಯಾಗಿ ಉಪಯೋಗಿಸುವ ಕಲ್ಲಿನ ಅಥವಾ ಮರದ ಚೂರು,–ತುಂಡು: (+). (ಗಂ). ೨. ಮೊನಚಾದ ; ಚೂಪಾದ ; ಹರಿತವಾದ. 'ಚೀಪುಗಲ್ಲು' ಪರಾ. ಚಿಪ್ಪು$_2$ : ೧. 'ಚಿಪ್ಪುಕುಂಟೆ' ಪರಾ. ಚೂಪು$_2$ : ೨. ಕೋಡು . . . ಚೂಪಾದ ತುದಿಯುಳ್ಳದ್ದು ಇರುತ್ತದೆ (ಮುಂಬಯಿ. ೪–೪೭); ಹರಿಯ ಕಿರೀಟಡ ಚೂಪು ಕುಡಿ ಎಡವೀಯ (ಮುಕ್ತಕಂ. ೨೦–೭).
[ದೇ.॥ ತಮಿ. ಮಲ. ಚಿಮ್ಪು ; ತುಳು. ಚೀಪು ; ತೆಲು. ಚಿಂಪ ]

ಚೀಪು$_3$ 'ಸೀಪಿ' ನೋ.

ಚೀಪುಗಲ್ಲು (ನಾ). ಮೊನಚಾದ ತೆಳ್ಳನೆಯ ಕಲ್ಲು;ಚೂಪುಗಲ್ಲು: ಇವುಗಳ ಅವಶೇಷಗಳೂ ಅವರು ಬಳಸುತ್ತಿದ್ದ ಚೀಪುಗಲ್ಲುಗಳ ಆಯುಧಗಳೂ ಹಿಂದೂಸ್ಥಾನದ ದಕ್ಷಿಣ ಭಾಗದಲ್ಲಿ ಹೇರಳವಾಗಿ ದೊರೆತಿವೆ (ಹಿಂದೂಇ. ೪).
[ ಚೀಪು$_2$ + ಕಲ್ಲು (<ಕಲ್$_3$) ]

ಚೀಪುತೊಟ್ಟು (ನಾ). ಸಣ್ಣಮಕ್ಕಳಿಗೆ ಚೀಪುವುದಕ್ಕಾಗಿ ಕೊಡುವ ಮೊಲೆಯ ತೊಟ್ಟಿನಾಕಾರದ ಸಾಧನ : ಕೂಸಿಗೆ ಚೀಪುವುದಕ್ಕಾಗಿ ಕೊಡುವ ಕೃತಕ ಮೊಲೆತೊಟ್ಟು ; ಚೀಪುತೊಟ್ಟು (Comforter. ೩೮೬೧).
[ಚೀಪು$_1$ (<ಸೀಪು$_1$) + ತೊಟ್ಟು$_4$ ]

ಚೀಪೆಟ್ಟು (ನಾ).=ಚೀಮಾರಿ: ಯಾವುದೋ ಒಂದು ನೆಪ ಸಿಕ್ಕಿದರೆ ಸಾಕು; ಕೆಲಸವನ್ನು ಬಿಟ್ಟುಬಿಡುವೆ ಎಂದು ಚೀಪೆಟ್ಟು ಹಾಕಿದೆ (ಲಕ್ಷ್ಮೀಪ್ರ. ೪೪).
[ <ಚೀ + ಪೆಟ್ಟು$_2$ ]

ಚೀಮಾರಿ (ನಾ). ಎದುರಿಗೆ ಮಾಡುವ ಅವಮಾನ,–ತೆಗಳಿಕೆ; ತಿರಸ್ಕಾರ: ಅಪ್ಪನ ಹತ್ತಿರ ಹೋಗು, ಚೀಮಾರಿ ಆಗುವುದು (ರೂಢಿ). 'ಛೀಮಾರಿ' ಪರಾ.

ಚೀಮಾರಿಮಾಡು=ಅವಮಾನಿಸು; ಛೀ ಎನ್ನು; ಧಿಕ್ಕರಿಸು : ಅವಳು ಆ ಕ್ಲಬ್ಬಿನ ಶಾಂತ ವಾತಾವರಣದ ಮೇಲೂ ಘಾಳಿಯಿಟ್ಟು ಅಲ್ಲಿದ್ದವರೆಲ್ಲರನ್ನೂ ಚೀಮಾರಿ ಮಾಡಿದಳು (ಜೋಧಪು. ೭೮).
[ <ಚೀ + ಮಾರಿ ? ]

ಚೀಮು (ನಾ). ಇರುವೆ : ಹಗಲಗತ್ತಲೆಯಂತ ಯಿಹ ಕಾಟಿಗರು ಮೇಲಡ್ಡಿ ಚೀಮು ಕೂರದ ಬಗೆಯ ಮುಚ್ಚಿರ್ದಲ್ಲಿ ಬಂತೀ ಕೋಡಗೆಂದೆಲ್ಲಾ (ಜರಾಮಾ. ೨೦೭–೬೨). [ ←ತೆಲು. ಚೀಮು ]

ಚೀರ$_1$ 'ಚೀಲ' ನೋ.

ಚೀರ$_2$(ನಾ).೧. ಮರದ ತೊಗಟೆ. ೨. ನಾರುಬಟ್ಟೆ; ವಲ್ಕಲ; ಭಾರ್ಯಾನುಜನು ಸಹಿತಡವಿಗೆ ನಡೆದನಾ ರಾಮ ಚೀರಾದಿಗಳ ಧರಿಸಿ (ಅರಾಮಾ. ೭–೫೦). ೩. ಹರುಕುಬಟ್ಟೆ ; ಚಿಂದಿ. ೪. ಗೆರೆ ; ರೇಖೆ. ೫. ಬಟ್ಟೆ; ವಸ್ತ್ರ: ಚಿನ್ನಗೆಯಿಕದ ಚೀರಕ್ಕೆ ದೂಸಿಗವಸರಕ್ಕೆ ಹತ್ತಿವಸರಕ್ಕೆ ಪುಣಿಗಾಜಿವಸರಕ್ಕೆ ಗಂಧವಣವಸರಕ್ಕೆ ಗಂಧವಣಿಗರಂಗಡಿಗೆ . . . ಬೇಟಿವೇಟಿ ಖುರಿಸಧಟಿ ಹಿರಿಯರಾಗವೊಂದು (ಎಇ. XIII, ೨೦–೫೨; 1204); ಕೃಷ್ಣನ ಚೀರದಂತ್ಯವ ಪಿಡಿದು ಸದನಕೆ ಕರೆದು ಪದಕೆಜಗೆ (ಅಕ್ರೂರ. ೬–೫೫). ೬. ಒಂದು ಬಗೆಯ ಹಾರ ; ನಾಲ್ಕು ಎಳೆಗಳ ಮುತ್ತಿನ ಹಾರ ; ಗೋಸ್ತನ : ಕರಮೆಸೆವ ಚಿನ್ನಗುಳ್ಳೆಯ ಚೀರದಿಂದೊಪ್ಪೆ (ಬಸರ. ೯–೧೦೦). ೭. [ಬೌದ್ಧ] ಸಂನ್ಯಾಸಿಯ ವಸ್ತ್ರ ; ಕಾವಿಯ ಬಟ್ಟೆ : (+). [ ಸಂ. ]

ಚೀರಗಟ್ಟು (ಕ್ರಿ). ಬಟ್ಟೆಯಿಂದ ಬಿಗಿದು ಕಟ್ಟು : ಚೀರಗಟ್ಟಿದ ಹಡಪ ಹಲ್ಲಣ ಹಿಂದೆ ಹಾರವುಪ್ಪಂದದಿ ಹಾಕಿ ಭೋರನೆ ಬರುತಿರ್ದರು ಬಂಟ ರಾವುತರು (ಶ್ರೀಪಾಲ. ೧೩–೯೩). [ ಚೀರ2 + ಕಟ್ಟು$_1$ ]

ಚೀರಟೆ (ನಾ). ಒಂದು ಬಗೆಯ ಹಕ್ಕಿ : ಚೀರಟೆ ಹಕ್ಕಿಗಳ ಚೀರುದನಿಯ ರಾಲಿ (ಅನಾಥ. ೫). [ ? ]

ಚೀರಣ, ಚಿರಣೆ, ಚಿಲಣ, ಚೀರಣೆ, ಚೀರ್ಣ, ಚೀಲಣ, ಚೀಲಣೆ (ನಾ). ೧. ಲೋಹವನ್ನು ಕತ್ತರಿಸಲು ಬಳಸುವ ಚಿಕ್ಕ ಉಳಿ; ಆಪು; ಚಾಣ: ಹೊನ್ನ ಹೆಣ್ಣು ಮಣ್ಣೆಂಬ ಮೂಜು ಸಂಕಲೆಯ ಕೀಲ ಜ್ಞಾನಚೀರಣದಿಂದ ತಡೆಗಡಿದು (ಘನವ. ೭೩). ೨. ಉಳಿಯಿಂದ ಮಾಡಿರುವ ಕೆತ್ತನೆಯ ಕೆಲಸ: ಚೀರಣದುಡಿದಾರ ಮೇಖಲೆ ಮಂಜೀರ ಹಾರಗಳನ್ನು ಕೊಟ್ಟು ನೊಲಿದು (ಕುರಾಸಾಂ. ೪೮–೩೭) : ಭೂರಿವೆಳಗಿನ ವಜ್ರಪಂಕ್ತಿಯ ಚೀರಣದ ಘೂಲಗಳ ರಭಸದಿ ತೋರುವತಿಸಿಂಗರದ ಚಾಮೀಕರದ ಕಲಶಗಳ (ಅಂಬಿಕಾ. ೯–೫೭). ಚಿರಣೆ: ೧. 'ಚಿರಣೆಗೆಲಸ' ಪರಾ. ಚಿಲಣ: ೧. 'ಚಿಲಣಗೆಲಸ' ಪರಾ. ಚೀರಣೆ: ೧. 'ಚೀರಣೆಗೆಲಸ' ಪರಾ. ಚೀರ್ಣ: ೧. "ವ್ರಶ್ಚನಃ, ಪತ್ರಪರಶುಃ–ಚೀರ್ಣದ ಪೆಸರು ಅಗಸಾಲಿಗನ ಕೊರಮುಟ್ಟು" (ಸಿದ್ಧಾಂಕಿ. ೨೭೦). ಚೀಲಣ : ೧. ಅಲಿಕಲುಗಳ ಕಡಿವಡುಕ್ಕಿನ ಚೀಲಣದ ಹಂಗೇಕೆ (ಕುಮಾರ್ರ್ಯಾ. ೦೦–೬೦). 'ಚೀಲಣಿಸು' ಪರಾ. ಚೀಲಣೆ: ೨. 'ಚೀಲಣೆಗೆಯ್' ಪರಾ. [ ದೇ.॥ ತೆಲು. ಚೀರಣ, ಚೀರ್ಣ ]

ಚೀರಣಗೆಲಸ, ಚಿರಣೆಗೆಲಸ, ಚಿಲಣಗೆಲಸ, ಚೀರಣೆಗೆಲಸ (ನಾ). ಉಳಿಯಿಂದ ಮಾಡಿದ ಕೆತ್ತನೆಯ ಕೆಲಸ : ತಾರೇಶನಂ ನಗುವ ಲೋವೆ ಚೀರಣಗೆಲಸ ಚಾರುವೇದಿಕೆಗಳಿಂದ (ಮರುದ. ೬–೩). ಚಿರಣೆಗೆಲಸ: ಸಣ್ಣ ಚಿರಣೆಗೆಲಸಗಳಿಂದ ಸೊಬಗಾಂತ ಬಣ್ಣದ ಚಾವಡಿಯಿಹುದು (ಗೋಮಟೇ. ೧–೦೫೭). ಚಿಲಣಗೆಲಸ : ಚಿತ್ರದ ಶಾಲೆ ಚಿಲಣಗೆಲಸದ ಪೊಸ ಮುತ್ತಿನ ಚಾವಡಿವಿಡಿದು ನಿತ್ಯದಾನವನೀವ ಮಂಡಪವದಟಿಗಳು ಬಿತ್ತರದಿಂದೊಪ್ಪುತಿಹುದು (ಅಂಜಿಕ. ೩–೩೪). ಚೀರಣೆಗೆಲಸ : ರನ್ನದ ಚೀರಣೆಗೆಲಸದಿಂ ಸೊಬಗಾಂತ ಚಿನ್ನದ ಕಳಸಂದಿಂದೆಸೆವ (ಗೋಮಟೇ. ೫–೩೭).
[ ಚೀರಣ + ಕೆಲಸ ]

ಚೀರಣೆ 'ಚೀರಣ' ನೋ.

ಚೀರಣೆಗೆಲಸ 'ಚೀರಣಗೆಲಸ' ನೋ.

ಚೀರಲ (ನಾ). (ಉಕ) ಬಿರುಕು : ಹೊಲವು ತಗ್ಗು ತೆವರಾಗಿ ಹಳ್ಳನಾಲಿಕೊರಿ ಚೀರಲಗಳು ಇದ್ದರೆ ಅಂಥ ಹೊಲಗಳ ಬೆಳೆಯು ಹೊಲವೆಲ್ಲೆಲ್ಲ ಒಂದೇ ಸಮನಾಗಿ ಬೆಳೆಯುವದಿಲ್ಲ (ಕೃಷಿಪ್ರ. ೩೭). [ ←ಮರಾ. ಚೀರ್ ]

**ಚೀರಳಚಿಂತೆ** (ನಾ). ಒಂದು ಊರಿನ ಹೆಸರು : ಮುಡಣದೆಸೆ ಪೆಣ್ದಲ್ಬಿನ್ರ ಪುಲ್ಬೀಡು ಉದಿಚೀಡು ಚೀರಳಚಿನ್ರ (ಎಕ. XII, ಶಿರಾ. ೩೮–೩೪ : 978). [ ? ]

**ಚೀರಾಟ** 'ಚೀಱಾಟ' ನೋ.

**ಚೀರಿ** (ನಾ). ಜೀರುಂಡೆಹುಳು; ಚಿಮ್ಮುಂಡೆ : "ಝಿಲ್ಲೀಕಾ, ಚೀರೀ-ಈ ೨ ಜಿಮ್ಮುಂಡೆ" (ಹಲಾಯು. ೪೩–೧೦೨) : "ಭೃಂಗಾರೀ, ಚೀರಿಕಾ, ಚೀರೀ, ಝಿಲ್ಲಿಕಾ ಈ ೪ ಜೀಱುಂಡೆ" (ನಾಚಿರಾ. ೧೧೫). [ ಸಂ. ಚೀರೀ ]

**ಚೀರಿಕಾರುತ** (ನಾ). ಜೀರುಂಡೆಗಳ ಧ್ವನಿ,–ಶಬ್ದ : ಬಂದುದು ಬೇಸಗೆ ಗಾಲವುಸ್ರಕಾಸಾರಕಸಾರವುಸ್ರಮಿತವಾರುತನುದ್ಗತ ಚೀರಿಕಾರುತಂ (ಪಂರಾಮಾ. ೭–೮೫). [ ಸಂ. (ಚೀರಿಕಾ + ರುತ) ]

**ಚೀರಿಕೆ** (ನಾ). = ಚೀರಿ : "ಭೃಂಗಾರಿ, ಚೀರಿಕಾ . . . ರೆಕ್ಕೆಗಳುಳ್ಳ ಇರುವೆಗಳ ಹೆಸರುಗಳು, ಚಿಮ್ಮುಂಡೇಹುಳವೆನ್ನುವರು" (ಸಿದ್ಧಾಂತಿ. ೦೪೧). [ ಸಂ. ಚೀರಿಕಾ ]

**ಚೀರಿಡು** (ಕ್ರಿ). ಅರಚು ; ಕಿರಿಚು : ನಿನ್ನ ಸಂಕಲ್ಪಗಳ ಲೆಕ್ಕಿಸದೆ ಚೀರಿಡೆ (ವಿಜಗೀ. ೧೧–೭). 'ಕೀಱಿಡು$_1$' ಪರಾ. [ ಚೀರು$_3$ (<ಕೀಱು$_1$) + ಇಡು$_1$ ]

**ಚೀರಿಲ್ಲಿ** (ನಾ). ಒಂದು ಬಗೆಯ ದೊಡ್ಡ ಮೀನು : ಏನು ಬಾಯ್ಬಡಿಕ ಹೆಣ್ಣೆ ನೀನು, ಚೀರಿಲ್ಲಿ ಚೀಲಿ (ಮಂತ್ರಶ. ೫೬–೭). [ <ಸಂ. ಚೀರಲ್ಲಿ ]

**ಚೀರೀರವ** (ನಾ).=ಚೀರಿಕಾರುತ : ನಿಷ್ಠುರ ಚೀರೀರವ ಮುಖರವರುಷ ಕಾನನಪವಮಾನನ ಸೋಂಕನಾಸೆಗೆಯ್ಯಲ್ ಬಗೆದೈ (ಪಂರಾಮಾ. ೭–೧೦). [ ಸಂ. (ಚೀರೀ + ರವ) ]

**ಚೀರು$_1$** 'ಸಿವುಱು$_1$' ನೋ.

**ಚೀರು$_2$** 'ಸಿವುಱು$_2$' ನೋ.

**ಚೀರು$_3$** 'ಕೀಱು$_1$' ನೋ.

**ಚೀರು$_4$** 'ಚೀಱು$_3$' ನೋ.

**ಚೀರುಮಣ್ಣು** (ನಾ). ಪಾತ್ರ ಮೊದಲಾದುವುಗಳ ಬಾಯನ್ನು ಗಾಳಿ ಹೋಗದಂತೆ ಭದ್ರಪಡಿಸುವ ಜಿಗುಟಾದ ಜೇಡಿಮಣ್ಣು : ಶ್ವೇತಾಭ್ರಕವನ್ನು ಕುಟ್ಟಿ ವಸ್ತ್ರಗಾಳಿತ ಚೂರ್ಣಮಾಡಿ . . . ಸೂರಣಗಡ್ಡೆ ಮಧ್ಯದಲ್ಲಿಟ್ಟು ಚೀರುಮಣ್ಣು ಹಚ್ಚಿ ಪುಟ ಹಾಕಬೇಕು (ಸಕಪ್ರ. ಶಿ. ೫೦೦). [ ಚೀರು$_4$ (<ಚೀಱು$_3$) + ಮಣ್ಣು (<ಮಣ್) ]

**ಚೀರುಲಿ** (ನಾ). ಚೀರುವ ಧ್ವನಿ ; ಕಿರಿಚುವ ಧ್ವನಿ : ಮಸಣದ ದೆವ್ವದ ಚೀರುಲಿ ನಾನು ಸಿಡಿಮದ್ದಿನ ಪೇರುಂಡೆಯು ನಾನು (ಪಾಂಚಜ. ೦೬–೫). [ ಚೀರು$_3$(<ಕೀಱು$_1$) + ಉಲಿ$_2$ ]

**ಚೀರ್ಕೊಳವಿ** 'ಜೀರ್ಕೊಳವಿ' ನೋ.

**ಚೀರ್ಕೊಳವೆ** 'ಜೀರ್ಕೊಳವಿ' ನೋ.

**ಚೀರ್ಕೊಟವೆ** 'ಜೀರ್ಕೊಳವಿ' ನೋ.

**ಚೀರ್ಗರೆ** (ಕ್ರಿ). ಚೀರೆಂದು ಧ್ವನಿಮಾಡು,–ಶಬ್ದಮಾಡು: ಚೀರ್ಗರೆವಿಕ್ಷುಯಂತ್ರ ನಿಕರಂ ಪುಂಡ್ರೇಕ್ಷುಷಂಡಂಗಳೊಳ್ (ಅನಂಪು. ೦–೭೯). 'ಜೀರ್ಗರೆ' ಪರಾ. [ ಚೀಱು$_1$ (<ಕೀಱು$_1$) + ಕರೆ$_1$ ]

**ಚೀರ್ಗಾಳೆ** (ನಾ). ಚೀರೆಂದು ಧ್ವನಿಮಾಡುವ ಒಂದು ಬಗೆಯ ಕಹಳೆ : ಮುರಜ ಢಕ್ಕೆಯು ಮುರುಡೀ ರಭಸಾಗಳಿಂದ ಕರಡೆ ಚೀರ್ಗಾಳೆ ಭೂರ್ಗ ಶಬ್ದಾಗಳಿಂದ (ಹಮದ. ೨೩೯). [ ಚೀರು$_3$ (<ಕೀಱು$_1$) + ಕಾಳೆ (<ಕಹಳೆ) ]

**ಚೀರ್ಗೊಳವೆ** 'ಜೀರ್ಕೊಳವಿ' ನೋ.

**ಚೀರ್ಚಿಟಿಲ್** (ನಾ). ಒಂದು ಅನುಕರಣ ಶಬ್ದ : ಚೀರ್ಚಿಟಿಲೆಂಬ ತಱಗೆಂಡಗಳ ಹೋಮಕುಂಡ (ಭರದ. ೨೦–೦೨೯).

**ಚೀರ್ಣ** 'ಚೀರಣ' ನೋ.

**ಚೀಲ, ಚೀರ$_1$** (ನಾ). ಪದಾರ್ಥಗಳನ್ನು ತುಂಬಲು ಬಟ್ಟೆ, ಗೋಣಿ ಮೊದಲಾದುವುಗಳಿಂದ ಮಾಡಿರುವ ಸಾಧನ; ಕೋಶ: "ಅರ್ತಿಯೆನೆ ಚೀಲವುದು" (ಮಂಗರಾ. ೧೦೫–೧೪) ; ಪರದನ ಚೀಲವುನೊಳಗಿರ್ದು ಮಲ್ಲನೀಕ್ಷಿಸಿ ಚೋರಂ (ಧರ್ಮಾಮೃ. ೧೨–೭೬) ; ಕೂರ್ತು ಕೂಸಿರ್ಪ ಚೀಲಂ ಜರಾಯುವೆನಿಕ್ಕುಂ (ಮಂಗರಾ. ೯೧–೮) ; ನಿರ್ಮದನು ಮತ್ಸ್ಯನ ಪುರಿಗೆ ಯತಿವೇಷದಲಿ ಬಂದನು ಪೊಸ್ನಸಾರಿಯ ಚೀಲ ಕಕ್ಷದಲಿ (ಕುಪ್ರಾವಿ. ೧–೧೭) ; ರಕ್ತ ಕೀವು ತಾಕಿ ಮಾಂಸ ಚೀಲದೊಳಗೆ ಬೆಳೆದೆ ನಾ (ಪುರಂದ. ೧–೧೭೬–೧);ಮಿಱುಪ ಕಕ್ಷದ ಪಟ್ಟೆಯ ಚೀಲ ನೊಸಲೊಳು ಪರಿಮಳ ಗಂಧಾಕ್ಷತೆಯು ಸಿರಿವಂತರಿವರಾರೆ (ಕಂನವಿ. ೨೫–೧೦೨) : ಪುಸ್ತಕಗಳನ್ನು ಚೀಲಕ್ಕೆ ಹಾಕಿಕೊಂಡು ಸ್ಕೂಲಿಗೆ ಹೊರಟ (ಬಾಲಮ. ೩) . ಚೀರ$_1$ : "ಸ್ಯೂತಃ, ಪ್ರಸೇವಹಃ – ಚೀರ" (ನಾಚಿರಾ. ೬) ; ಚೀರದಲಿ ನೆಱೆ ತುಂಬಿ ದಂತಿರ ಪೂರವಿಸಿ ಭುಗಿಲೆನಿಸಿ ಭಸಿತದ ಧಾರೆ ಪೂಱಮದೆ(ಬಸಪು. ೪೪–೧೫); ಜನನಿಯುದರದ ಮಾಂಸಚೀರದಿಂ ಬದ್ಧನಾಗನುಕರಿಪ ಗರ್ಭಜಲದಿಂ ಮುಳುಗಿ (ಲಕಿಚಂ. ೩೯–೩೯); ಮಿಳಿಪೊಱೆಯ ತೊಗಲ ಚೀರವುಂ ತೆಗೆದು ಕಡೆಗಿರಿಸಿ ಸಂಬಳಿಗೋಲ ಸೂರೊಳ್ಸಮಂತಿಟ್ಟು ಪದತಳಂದೊಳೆದು ನಿಳಯಕ್ಕೆ ಕರೆದೊಯ್ದು (ಪಾಸೋಪು. ೭–೨೧). [ ದೇ.೫ ಮಲ. ಚೀಲ, ಶೀಲ ; ಕೊಡ. ಚೀಲೆ ; ತುಳು. ಚೀರವು ]

**ಚೀಲಕೀಲಿ** (ನಾ). ಒಂದು ಬಗೆಯ ಗಿಡ: ಚೀಲಕೀಲಿಯ ಬೇರು ತಿಗುಡೆಯ ಸಮಾಂಶವಾಗಿ ಚೂರ್ಣಿಸಿ ಹಸುವಿನ ತುಪ್ಪದಿಂದಾ ಘಾಯಕ್ಕೆ ತೊಡೆಯಲು ಸರ್ಪವಿಷ ಹರ (ವಿಷಚಿ. ೦೩–೨). [ ? ]

**ಚೀಲಣ** 'ಚೀರಣ' ನೋ.

**ಚೀಲಣಿಸು** (ಕ್ರಿ). ಕೆತ್ತನೆ ಕೆಲಸವನ್ನು ಮಾಡು; ಕಂಡರಿಸು: ಕಾಲಭೈರವ ನೊಂದುಗ್ರಾಕಾರವ ಸೋಲಿಸಿ ಬದಿಯುಕ್ಕಿನಿಂದ ಚೀಲಣಿಸಿದ ಚಿತ್ರವೆಂಬಂತೆ ಭಿಲ್ಲನಾಭೀಳಾಕಾರವೊಪ್ಪಿದುದು (ನೇಮಿಸಂ. ೨–೩೪) ; ಪಜ್ಜಳಿಸುವ ತಿಳುಪಕಿನ ಪರಲಿಂ ಚೀಲಣಿಸಿದ ಚಿತ್ರಮುಮನೆ ಕರಮಸದಂ ಭೂಪತಿ ಪುರಸತಿಯರ ಕಣ್ಗಳ ಕದಿರಿಂದ (ಜಯುಕಾ. ೧೧–೫೬) . [ ಚೀಲಣ (<ಚೀರಣ) + – ಇಸು$_3$ ]

**ಚೀಲಣೆ** 'ಚೀರಣ' ನೋ.

**ಚೀಲಣೆಗೆಯ್** (ಕ್ರಿ).=ಚೀಲಣಿಸು: ಕಡುಗಾಡಿಯಿಂ ಕಡೆದ ನೀಲದ ನೀಱೆ ಕಾರ್ಮುಗಿಲ ನೋಡಿ ಚೀಲಣೆಗೆಯ್ದ ಪುತ್ತಳಿಯ ತೆಱದಿಂ ಪುಳಿಂದಿಯರ್ ಸೊಗಯಿಸಿದರು (ಸಮ್ಯಕೌ. ೧೦–೩೦). [ ಚೀಲಣೆ (< ಚೀರಣ) + ಕೆಯ್$_1$ ]

**ಚೀಲಯ** 'ಚೀಲಾಯಿ' ನೋ.

**ಚೀಲಾಯು, ಚೀಲಯಂ** (ನಾ). ಸಣ್ಣ ಕತ್ತಿ; ಸುರಿಗೆ; ಕಠಾರಿ : "ಚೀಲಾಯುಮೆನಲ್ ಕಿತ್ತಲಗು" (ಛಾರನಿ. ೬) : ವಿಷವ ತೆಗೆದಳು ದ್ರುಪದಸುತೆ ಕೈಮುಸುಕಿನಲಿ ಚೀಲಾಯುವುಗಿದನು ವಸುಮತೀಶ್ವರನು (ಕುಪ್ರಾವ. ೨೫–೩೧) : ರಕ್ಕಸರಾಯ ಚೀಲಾಯದಲಿ ಶಿಖಿಸುತನ ಹೊಟ್ಟೆಯನು ತಿವಿದಿಳೆ ಬಿರಿಯೆ ಬೊಬ್ಬಿಟ್ಟನು (ತೊರರಾ. ೭–೨೨–೧೬). ಚೀಲಯ : ಆತನೀತನ ನಿಲುಕಿ ಹೊಯ್ದನು ದಂಡೆಯಿಂದದ ಕಳಚಿ ಮಾರುತಿ ಹೊಕ್ಕಡವ ಚಿಮ್ಮಿದನು ಚೀಲಯುವ (ಕುಪ್ರಾಆ. ೨೨–೩೩). 'ಚಿಲ್ಲಾಣ' ಪರಾ. [ ? ]

**ಚೀಲಾಯುಧ** (ನಾ). ಚೀಲಾಯು ; ಸಣ್ಣಕತ್ತಿ : ಕುಕ್ಕುಟಗಳ ಕಾಲ್ಗೆ ಚೀಲಾಯುಧವಿಕ್ಕಿ ಸೊಕ್ಕುಮದ್ದಿನ ಗುಟುಕಿತ್ತು ಉಕ್ಕಂದದೆ ಕಾದಿಪರಸು ಮಕ್ಕಳ್ ಮೊತ್ತ ಕಿಕ್ಕಿಱಿದಸೆದುರ್ದತಿಯೊಳು (ಕಂನವಿ. ೭–೧೨). [ <ಚೀಲಾಯು + ಆಯುಧ ]

**ಚೀಲಿ** (ನಾ). ಬೆಕ್ಕು ; ಮಾರ್ಜಾಲ : "ಚೀಲಿಯೆನಲು ಬೆಕ್ಕು" (ಚತುನಿ. ೦೩೦) : ತನಿವಣ್ಣನಿತ್ತು ಭಯವೀವ ರಿಪುವೆಂಬ ಚೀಲಿಯನೆಬ್ಬಟ್ಟ (ಕೃವಂ$_1$. ೪-೮-೨) : ಚೀಲಿಗೆ ಚೆಲ್ಲಾಟ ಇಲಿಗೆ ಪ್ರಾಣಸಂಕಟ (ಗಾದೆ). [←ತೆಲು. ಚೀಲಿ]

**ಚೀಲಿಕೆ** 'ಚಿಲಿಕೆ$_1$' ನೋ.

**ಚೀಲಿತ** (ನಾ). ಮುಚ್ಚುವಿಕೆ ; ಮರೆ : ಸಾಲುವಿಡಿದು ಪುದಿದಿಹ ದೋಷಂಗಳ ಚೀಲಿತವನು ಮಾಡಿ ಗುಣವ ಪಾಲಿಸಿ ಕೃತಿಯ ಕೊಂಡಾಡುವ ಸುಜನರ ಜಾಲವ ನಾ ಸ್ತುತಿಸುವೆನು (ರಾಮವಿ. ೧-೩೮). [ ? ]

**ಚೀಲಿಸು** (ಕ್ರಿ). ೧. ಕತ್ತರಿಸು ; ಕೊನೆಗೊಳಿಸಂ : ಚೀಲಿಪಂ ಸಾರ್ಚ್ಚಿದ ವೈರಿವೀರರ ಚಿರಾಯುವನಾಜಿಯೊಳೀಂ ಪ್ರವೀಣನೋ (ಸೌಇಇ. XX, ೭೬-೩೬ ; 1118). ೨. ತಿರಸ್ಕರಿಸು ; ತ್ಯಜಿಸು : ಚಿಂತಾಮಣಿಯಂ ಚೀಲಿಸಿ ರಕ್ಕೆಯನಾಂತೊಲ್ಪುತಕ್ಕೊಡೆತೊಪ್ಪುವ ನವಸಂತಾನವ ಸವಜಿದೂಲು (ಮದೀಪು. ೨೭-೩೦). [ <ಚೀಲಣಿಸು ]

**ಚೀಲ್ಯೆತ, ಚಿಲ್ಯೆತ, ಜೀಲ್ಯೆತ** (ನಾ). ಒಂದು ಬಗೆಯ ಗಿಡ ; ಕಾಗಿತೊಂಡೆ ಗಿಡ : ಹುಚ್ಚುತೊಂಡೆ ಗಿಡ : "ಚೀ[ಪಾಠಾ. ಜೀ]ಲ್ಯೆತವೆನೆ ಕಾಕಜಂಘೆಯಕ್ಕು" (ಮಂಗರಾ. ೪೦-೩೦) : ಚೀಲ್ಯೆತನ ಬೇರನೊಂದೆ ಕಟಿಯಿಂದೀಂ ಟಲ್ (ಖಮದ. ೧೧-೩೦). **ಚಿಲ್ಯೆತ** : "ಪಾರಾವತಪದೀ-ಚಿಲ್ಯೆತ, ಕಂಗುಂಗೆ" (ಒಷಧಿ. ೯೭). **ಜೀಲ್ಯೆತ** : ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಚೀವರ** (ನಾ). ಸನ್ಯಾಸಿಗಳ ಬಟ್ಟೆ : ಯಾರ ವತ್ತ ಚೀವರವತ್ತಿ ಹಿಡಿವೆ (ವ್ಯಶಾಖಿ. ೭೭-೩೪೭) : ಆಗ ಭಗವಂತನು ಉಡುವು ಹಾಕಿಕೊಂಡು ಪಾತ್ರೆ ಚೀವರಗಳನ್ನು ಕೊಂಡು . . . ಪೂರ್ವದ ಕಡೆ ಮುಖಮಾಡಿ ಕುಳಿತನು (ತೀರ್ಥಕ. ४೧). [ ಸಂ. ]

**ಚೀವು, ಚಿವ್ವು, ಜೀವು** (ಕ್ರಿ). ೧. ಸೀಸದ ಕಡ್ಡಿ ಮೊದಲಾದುವುಗಳನ್ನು ತೆಳುವುಮಾಡು,- ಹೆರೆ : (ಕ). ೨. ರಸವನ್ನು ಹೀರು ; ಸೀಪು : ಹಕ್ಕಿ ಬಳಗ ಕೊಕ್ಕನಿಕ್ಕಿ ಚೀವುತಿರಲು ಕವಣೆ ಬೀಸಿ (ಬಣ್ಣಿ. ೬೨-೧೩). **ಚಿವ್ವು** : (ಕ). **ಜೀವು** : ೧. ಚೀವು ಜೀವು (ಸೀಸದ ಕಡ್ಡಿ ಜೀವಿಕೊಡು) (ನಮ್ಮನು. ೯೧) : ಸೀಸದ ಕಡ್ಡಿಯನ್ನು ಜೀವುವವನು ಚಾಕೆಂದು ಹೇಳಬಹುದೋ ? (ಜೀವಾತ್ಮ. ೬೦).

[ ದೇ. ॥ ತಮಿ. ಮಲ. ಚೀವು ; ತೆಲು. ಚಿವ್ವು ]

**ಚೀಸ್** 'ಚೀಜು' ನೋ.

**ಚೀಸು** 'ಚೀಜು' ನೋ.

**ಚೀಹಾಕು** (ಕ್ರಿ). ಛೀಮಾರಿ ಮಾಡು ; ಧಿಕ್ಕರಿಸು ; ಅವಮಾನಗೊಳಿಸು : (ಕ). [ <ಛೀ + ಹಾಕು (<ಪಾಯ್ಕು$_1$) ]

**ಚೀಳ್** (ನಾ). ಕಿರಿಚುವಿಕೆ ; ಅರಚುವಿಕೆ. 'ಚೀಳಿಡು' ಪರಾ. [ ? ]

**ಚೀಳಿಡು** (ಕ್ರಿ). ಅರಚು ; ಕೂಗು ; ಛೀಳಿಡು : "ಚೀಳಿಡುವುದೆನೆ ಛೀಟಿಡುವು ವಕ್ಕಮರ್ದನಾಮಂ" (ಕಬ್ಬಿಕೈ. ೩೩) : "ಚೀಳಿಡೆನೆ ಛೀಟಿಡುವುದಕ್ಕು" (ಶಬ್ದಮಂ. ೫೦). [ ಚೀಳ್ + ಇಡು$_1$ ]

**ಚೀಱ್** 'ಕೀಱು$_1$' ನೋ.

**ಚೀಱಾಟ, ಚೀರಾಟ** (ನಾ). ಕಿರಿಚಾಟ ; ಕೂಗಾಟ : ಅಹ, ಏನ್ ಚೀಱಾಟಂ ಏನ್ ಕೊಲ್ಪ ಗರ್ವಂ (ಅಕ್ಕಕಾ. ೩-೪೪). **ಚೀರಾಟ** : ಗಂಡಸರ ಕೊಟಡಿಯಲ್ಲಿದ್ದಂತೆಯೆ ಚೀರಾಟ ಕೂಗಾಟಗಳು ಕಿವಿ ಬಿರಿಯುವಂತಿದ್ದುವು (ಪುನರು. ೧೮೮). [ ಚೀಱು$_1$ (<ಕೀಱು$_1$) + ಆಟ ]

**ಚೀಱಿಕೆ** (ನಾ). = ಚೀಱಾಟ : ತೋಱಿತಾ ವನಮಧ್ಯದಲಿ ಮುಗಿಲೇಱಿಕೆಯ ಮುಂಗುಡಿಯ ಸಿಡಿಲಿನ ಚೀಱಿಕೆಯ ಚಡ್ಡಣದ ರವ ರಾಘವನ ಕಿವಿಗಳಿಗೆ (ತೊರರಾ. ೩-೧೨-೧೪). [ ಚೀಱು$_1$ (<ಕೀಱು$_1$) + - ಇಕೆ ]

**ಚೀಱು$_1$** 'ಕೀಱು$_1$' ನೋ.

**ಚೀಱು$_2$** 'ಸೀಱು$_3$' ನೋ.

**ಚೀಱು$_3$, ಚೀರು$_4$** (ನಾ). ಮಣ್ಣಿನ ಲೇಪ : ಪಳುಗಿದ ಮಡಕೆಯೊಳ್ ಸುರಿದು ಬಾಯಿಗೆ ಮುಚ್ಚಳ ಮುಚ್ಚಿ ಚೀಱನು ಮಾಡಿ ಒಲೆಯ ಮೇಲಿಟ್ಟು (ಸಾಳ್ವಸಾಂ. ೧೮). **ಚೀರು$_4$** : 'ಚೀರುಮಣ್ಣು' ಪರಾ.

**ಚೀರುಮಾಡು** = ಕೆಸರು ಮಣ್ಣನ್ನು ಬಳಿದು ಸ್ವಲ್ಪವೂ ತೂತು ಇಲ್ಲದಂತೆ ಮಾಡು,- ಭದ್ರಪಡಿಸು : ಕಪ್ಪೆಚಿಪ್ಪನ್ನು ಹಾಲುಕೊರಟಿಗೆ ರಸದಲ್ಲಿ ಭಾವನೆ ಮಾಡಿ ಶರಾವ ಸಂಪುಟಗಳಲ್ಲಿಟ್ಟು ಚೀರುಮಾಡಿ . . . ಅರೆದು (ಸಕವೈ. ಪರಿ. ४९९). [ ದೇ.॥ ತಮಿ. ಮಲ. ಚೀಱು ]

**ಚೀಱು$_4$** 'ಸಿವುಱು$_2$' ನೋ.

**ಚೀಱೇಟ್** 'ಸಿವುಱೇಟ್' ನೋ.

**-ಚು$_1$** (ಪ್ರ). ಪ್ರೇರಣಾರ್ಥದಲ್ಲಿ ಧಾತುಗಳ ಮೇಲೆ ಹತ್ತುವ ಒಂದು ಪ್ರತ್ಯಯ . 'ಒಡರ್ಚು', 'ತಗುಳ್ಚು', 'ಸಡಿಲ್ಚು' ಪರಾ.

**-ಚು$_2$** (ಪ್ರ). ಒಂದು ಭಾವವಾಚಕ ತದ್ಧಿತಪ್ರತ್ಯಯ. 'ಕೆಂಚು' ಪರಾ.

**ಚುಂಗಚ್ಚೆ** (ನಾ). ಚುಂಗು ಬಿಟ್ಟ ಕಚ್ಚೆ : ಚುಂಗಚ್ಚೆ ಹಾಕಿ ದೋತರ ಉಟ್ಟಿದ್ದಾರೆ (ಕಿಡುಗು. ३೧). [ ಚುಂಗು$_1$ + ಕಚ್ಚೆ ]

**ಚುಂಗಡಿ$_1$** (ನಾ). ೧. ಚಿಲ್ಲರೆ : ಅಂಗಡಿಯಲ್ಲಿ ಚುಂಗಡಿ ಸಿಕ್ಕದೇ ? (ಗಾದೆ). ೨. ಸಾಲದ ಹಣಕ್ಕೆ ಕೊಡುವ ಹೆಚ್ಚಿನ ಹಣ ; ಬಡ್ಡಿ : ನನ್ನ ಅಸಲ ಚುಂಗಡಿ ಸಹವಾಗಿ ಹಣ ಕೊಡು (ಬತ್ತೀಸ. ४೫) ; ನೀವು ಚುಂಗಡಿಗೆ ಚುಂಗಡಿಯನ್ನು ಕಟ್ಟಿ, ಎಲ್ಲರ ಮನೆಯನ್ನು ಹಾಳುಮಾಡಿ . . . ತಿರುಗುತ್ತಿದ್ದೀರಿ (ಮುದ್ರಾಮಂ. ೧೧೭). [ ದೇ.॥ ತಮಿ. ಚುಙ್ಕುಟು ; ತುಳು. ಚುಂಗುಡಿ ; ತೆಲು. ಚುಂಗುಡು. / ಮರಾ. ಚುಂಗಡೀ ]

**ಚುಂಗಡಿ$_2$, ಚಿನಡಿ, ಚುಂಗುಡಿ** (ನಾ). (ಹೊಳೆಯುವ) ಚುಕ್ಕೆಗಳಿಂದ ಕೂಡಿದ ಬಟ್ಟೆ : ಅಂಗಡಿ ಭಾರಿ ಆದ್ದರಿಂದ ಗುಳೋವು, ಗುಂಡಾರು, ಕನಡಿ, ಕಾಂಗಡಿ, ಚುಂಗಡಿ, ಸಿಂಗಡಿಗಳ ಸಿಂಗಾರವೇನು ಕೇಳಬೇಕು! (ದಿನಾರಿ. ೮೯). **ಚಿನಡಿ** : 'ಚಿನಡಿಸೀರೆ' ಪರಾ. **ಚುಂಗುಡಿ** : ಮುಂದಲೆ ಚುಂಗುಡಿ ಸುತ್ತಿದ ಹಚ್ಚಡ ಹೊಂದೊಡವಾಂತ ಕೈ ಸೆಳವೆ (ಧರಿಕ. ೦೨-೫೦).

[ ←ಮರಾ. ಚುನಡೀ ; ಹಿಂ. ಚುನರೀ ]

**ಚುಂಗಡಿಲಾಭ** (ನಾ). (ಅಸಲಿನ ಮೇಲೆ) ಬಡ್ಡಿ ಹಾಕುದವುರಿಂದ ಪಡೆಯುವ ಲಾಭ : "ಕುಸೀದಿಕಃ, ವಾರ್ಧುಷಿಕಃ, ವೃದ್ಧ್ಯಾಜೀವಃ, ವಾರ್ಧುಷಿಃ-ಳಿ ಬಡ್ಡಿ ತಲವಾಸಿ ಮುಂತಾದ ಚುಂಗಡಿಲಾಭದಿಂದ ಬದುಕುವವನ ಹೆಸರು" (ಸಿದ್ಧಾಂತಿ. ೨೩೭). [ ಚುಂಗಡಿ$_1$ + ಲಾಭ ]

**ಚುಂಗಡಿಹಣ** (ನಾ). ೧. ಸಾಲದ ಹಣಕ್ಕೆ ಕೊಡುವ ಬಡ್ಡಿ : (ಕ). ೨. ಚಿಲ್ಲರೆ ಹಣ : (ಕ). [ ಚುಂಗಡಿ$_1$ + ಹಣ ]

**ಚುಂಗಲ** (ನಾ). ಒಂದು ಬಗೆಯ ಆಯುಧ : ಪರಸ ತೋಮರ ಶಕ್ತಿ ಚುಂಗಲ ಪರಿಘ (ಮುಂಬರಾ. IX, ೮೯-? ; ?). [ ? ]

**ಚುಂಗಾಣಿ** (ನಾ). ಜೇಡಿಮಣ್ಣಿನಿಂದ ಮಾಡಿದ, ಚಿಕ್ಕದಾದ ಹೊಗೆಬತ್ತಿಯ ಕೊಳವೆ : (ಉ.ಅಮೆರಿಕದ ಇಂಡಿಯನರು ಶಾಂತಿಸೂಚನೆಯಾಗಿ ಸೇದುವ) ಶಾಂತಿ ಚುಂಗಾಣಿ (Peace pipe. ಇಂಕನಿ).

[ ← ಹಿಂ. ಚೋಂಗಾ./ತಮಿ. ಚುಙ್ಙಾನ್ ; ಮಲ. ಚುಙ್ಙ ; ತುಳು. ಚುಂಗಾಣಿ, ಸುಂಕಾಣಿ ]

**ಚುಂಗು$_1$, ಚೆಂಗು$_3$** (ನಾ). ತುದಿ ; ಕೊನೆ ; ಅಂಚು ; ಸೆರಗು : ಪಟ್ಟವಾಳಿಯನುಟ್ಟು ಬನ್ನಿ ಧಟ್ಟಿ ಚುಂಗ ಬಿಟ್ಟು ಬನ್ನಿ (ಪುರಂದ. ೧-೧೧೭-೭) ; ಚಲ್ಲಣಗೊಟ್ಟು ಕಾಸಿಯನುಟ್ಟು ಸೆಱಗುಗಳಿಲ್ಲವ ಚುಂಗ ಹಾಕಿದನು (ಅಮುಸಾಂ. ೫-೨೦). **ಚೆಂಗು$_3$** : ಕೊರಚಿಯ ಚೆಂಗುಬಿಟ್ಟ ಸೆರಗನ್ನು ಹಿಡಿದೆಳೆದು . . . ಘರ್ಜಿಸಿದನು (ಬಾಗಿನ. ೧೭).

[ ದೇ.॥ ತಮಿ. ಚುಙ್ಕು ; ತೆಲು. ಚುಂಗು ]

**ಚುಂಗು**$_2$ 'ಸುಂಕು$_3$' ನೋ.

**ಚುಂಗು**$_3$ (ನಾ). ೧. ಕೊಳೆತ ಗಂಜಲ ಮೊದಲಾದುವುಗಳಿಂದ ಹುಟ್ಟುವ ದುರ್ವಾಸನೆ: 'ಚುಂಗು'ಯಿದ್ದಲ್ಲಿ ಮುಂಗು (ಹೇಮಂತ. ೧೮೦). 'ಚುಂಗುನಾತ' ಪರಾ. ೨. ಒಂದು ಬಗೆಯ ವಾಸನೆ : ಅವನ ಮೈಯಿಂದ ಏನೋ ಒಂದು ವಿಧವಾದ, ಆದರೆ ಹಿತವಾದ ಚುಂಗು ಹೊರ ಹೊಮ್ಮುತ್ತಿತ್ತು (ಪುನರು. ೬೧). [ ? ]

**ಚುಂಗುಡಿ** 'ಚುಂಗಡ್ಡಿ$_2$' ನೋ.

**ಚುಂಗುನಾತ** (ನಾ). ಗಂಜಲದ ವಾಸನೆ ; ಹೊಲಸು ವಾಸನೆ ; "ದನದ ಗೋತದ ನಾತ; ಉಚ್ಚೆನಾತ" (ಜಾನಕೋ. ೫೭).

[ ಚುಂಗು$_3$ + ನಾತ ]

**ಚುಂಗುರಿಸು** (ಕ್ರಿ). ರೋಮಾಂಚನಗೊಳ್ಳು ; ನವಿರೇಳು : ನಾನೆಂದ ಮಾತಿಗೆ ನಿನಗೆ ಮೈ ಚುಂಗುರಿಸಿತೆಂತು ಕೈ ಕಂಪಿಸಿಹುದೆಂತು (ಚಂದ್ರವೀ. ೧೬೮-೭೦). [ ? + – ಇಸು$_3$ ]

**ಚುಂಗುವಾಸನೆ** (ನಾ). = ಚುಂಗುನಾತ : ಬೆವರಿನ ಚುಂಗುವಾಸನೆಯಿಂದ ವೈದಿಗಳು ಆ ಮುಂಗೋಣೆಯನ್ನು ಹೊಲಸು ಮಾಡಿದರು (ಪುನರು. ೧೩೮).

[ ಚುಂಗು$_3$ + ವಾಸನೆ ]

**ಚುಂಗುಳ** (ನಾ). ಒಂದು ಬಗೆಯ ಹುಳು: ಚುಂಗುಳಂ ತಿನೆ ಮೊಗಂಗೆಟ್ಟು ಸಂಮ್ಲಾನವಾದ ಮಲರಂತಿರ್ದಾಕೆಯಂ ಕಾಣುತೆರ್ದೆಯುರಿದುದಣ್ಣಂಗೆ (ಶ್ರೀರಾಮಾ. ೨೦೪-೧೧೦). [ ? ]

**ಚುಂಚ** 'ಚುಂಚು$_2$' ನೋ.

**ಚುಂಚಲ, ಚುಂಚಲಿ, ಚುಚಲ, ಚುಚಲಿ** (ನಾ). ಒಂದು ಬಗೆಯ ಔಷಧಿ ಸಸ್ಯ : (ಕ). **ಚುಂಚಲಿ:** ಚುಂಚಲಿಗಿಡ, ಕಾಡುಸೆಣಬು (ಮೃಜಿ. ೨೪-೪೪೯). **ಚುಚಲ :** ಚುಚಲ–ಈ ಬೇರಂ ಹಾಲಲ್ಲರೆದು ತೆಗೆದುಕೊಳ್ಳೆ ವಾಂತಿ ಆಗಿ ಪೈತ್ಯ ಹರ (ವಿಷ್ಣುವಿ. ೪). **ಚುಚಲಿ:** ಚುಚಲಿಸೊಪ್ಪಂ ತಂದು ನೀರಲ್ಲಿ ತುಳಿದು ಸೊಲ್ಲಿಗೆ ರಸವಂ ಸೂತಕವಾದಾಗ ಮೂಜು ಸೂತಕದಲ್ಲಿ ಕೊಡಲು ಗುಣ (ವಿಷ್ಣುವಿ. ೧೦೬). [ ? ]

**ಚುಂಚಲಿ** 'ಚುಂಚಲ' ನೋ.

**ಚುಂಚಿ**$_1$ 'ಚುಂಚು$_2$' ನೋ.

**ಚುಂಚಿ**$_2$ (ನಾ). ಒಂದು ಬಗೆಯ ತಾಮ್ರದ ಆಭರಣ (?) : ಕಾಲ ಪಳಂಚಿನುಂಗುರದ ಮುತ್ತಿನ ಹಾರದ . . . ಬಾಲೆಯರೇವರೊಲ್ದೊಲಿಸಿ ಪತ್ತಿಸಿ ಚಿತ್ರಮನಿಂಬುಗೆಯ್ವ ಕೀಸೋಲೆಯ ಕಾಚಿನುಂಗುರದ ಚುಂಚಿಯ ಬಂದಿಯರೆಮ್ಮ ನಲ್ಲೆಯರ್ (ಸೂಕ್ತಿಸು. ೮-೪೦೦). [ ? ]

**ಚುಂಚಿಗೆಯಿ** (ನಾ). ಒಂದು ಬಗೆಯ ಭೂಮಿ : ಕಂಡಿಕೆ ಎರಡು ಸ್ಥಳದ ಕೆಯಿ ಮತ್ತರೆಂಟು ಚುಂಚಿಗೆಯಿ ಮತ್ತರು ನಾಲ್ಕು (ಸೌಇಇ. XI-II, ೦೬೯-೨೫ : 1119). [ ಚುಂಚಿ ? + ಕೆಯಿ (<ಕೆಯ್$_4$) ]

**ಚುಂಚಿಲಿ** (ನಾ). ಮೂತಿ ಉದ್ದವಾಗಿದ್ದು, ಆಕಾರದಲ್ಲಿ ಚಿಕ್ಕದಾಗಿರುವ ಇಲಿ : ಸುಂಡಿಲಿ : ಸೊಂಡಿಲಿ ; ಮೂಗಿಲಿ : (ಕ).

[ ಚುಂಚು$_2$ + ಇಲಿ$_1$ ]

**ಚುಂಚು**$_1$, **ಜುಂಜು**$_1$ (ನಾ). ೧. ಜಂಟ್ಟು ; ಕೂದಲು : ಮಂದಮತಿಯು ಮುಂದೆ ತಲೆಯ ಚುಂಚು ಹಿಡಿದು ಚರಿಯುಕ್ಕಿ ಬಿಟ್ಟು ಗೂಂಟನೆಟಿದು ತಪ್ಪಂತೆ (ಅರ್ಧನೇ. ೬-೬೬ವ). ೨. ಮುಂಗುರುಳು ; ಗುಂಗುರು ; ಸುರುಳಿಗೂದಲು : ಪೊದಟ್ಟಧರಪೊತ್ತದೆಯುಂ ನಿಜಗೊಂಡ ಚುಂಚು ಸೋರ್ಮುಡಿ ಕಡುನುಣ್ಪುವೆತ್ತ ತೊಡೆ . . . ಕರಮೆ ರಂಜಿಸೆ ಬಂದರಿಳೇಶ ಕಾಂತೆಯರ್ (ಶಾಪ್ತಾವ. ೯೩೪); ಚುಂಚು ಚಂಚಲವಾಗಿ ಚುಮ್ಮುಚುಮ್ಮನೆ ತಾಗಿ ಹಿಂಚುಮುಂಚಿನ ಸವಿ ತೂಗಿ ಕಂಚುಮಿಂಚಾಗಿ ರಾಗಿಸಿದರು (ಭರತ. ೧೩-೩೦). **ಜುಂಜು**$_1$**:** ೧. ಕಿಂಜೆಡೆಗಳಿಂದಳವಟ್ಟಿಹ ಕಿರೀಟವಾ ಜುಂಜು ನಡು [illegible] (ಪ್ರಭು. ೮-೬-೬೦). [illegible] ಗೂಡೆಯು ಮಲಿನ ವಸನದ [illegible] ಬಂದೆ: (ಶಾಸ್ತ್ರ. [illegible]) ಕರಾಸಿಯು ನೀಳ್ದ ಕೊಂಬು . . . ಗೆಲೆವಂದುದು ಬೀರಸನಂದು ಮಾಮರಂ (ವೃಷವಿ. ೪-೩೭). ೩. ಗುಂಜುಂಗುಂಜಾದ ಕೂದಲು; ಒರಟುಕೂದಲು; ಕೆದರಿದ ಕೂದಲು. 'ಜುಂಜುಗೇಶ', 'ಜುಂಜುದಲೆ' ಪರಾ. ೪. ನವಿಲು,ಕೋಳಿ ಮುಂತಾದುವುಗಳ ತಲೆಯ ಮೇಲಿನ ಶಿಖೆ:ಕೊಟ್ಟು: ಜುಂಜೆಟ್ಟ ನವಿಲ್ಗಳ್ ಮಿಗೆ ಮಂಜುಳತನುವಿನೊಳಡಂಗಿಸಿದ ತುಂಡವಿನಾ ರಂಜಿಸಿದುವು (ಉದ್ಭಟ. ೪-೩೪) ; ಕೊರ್ಪಿನ ಡೊಂಕಣೆಯಲ್ಲಿ ಜುಂಜಿನಂತಿರೆ ಮಿಳಿರ್ದಾಡುತಿರ್ಪ ಪೊಸಚೌರಿಯ ದಿಟ್ಟಿಗಳುಳ್ಕೆ (ಕಬ್ಬಿಗ. ೨೬೩).

[ < ಪ್ರಾ. ಚುಂಚುಅ=ತಲೆಗೆ ಧರಿಸುವ ಒಂದು ಬಗೆಯ ಆಭರಣ ; ಶಿರೋಭೂಷಣ./ತೆಲು. ಚುಂಚು ]

**ಚುಂಚು**$_2$, **ಚುಂಚ, ಚುಂಚಿ**$_1$, **ಚೂಚು**$_1$ (ನಾ). ೧. ಪಕ್ಷಿಯ ಕೊಕ್ಕು : ನಾನು ನಿಮ್ಮನ್ನು ಒಂದೊಂದಾಗಿ ನನ್ನ ಚುಂಚಿನಲ್ಲಿ ಹಿಡಿದುಕೊಂಡು ಹೋಗಿ . . . ಸರೋವರದಲ್ಲಿ ಬಿಡುವೆನು (ಬುದ್ಧಜಾ. ೩೭); ಗಿಳಿ ಸಿಟ್ಟಿಗೆದ್ದಿತು. ನೀರಜಾನ ಕೈಗೆ ಚುಂಚಿನಿಂದ ಕುಟುಕಿತು (ದಲಿಕು. ೬೪). ೨. ಸೊಂಡೆ ; ಮೂತಿ. 'ಚುಂಚಿಲಿ' ಪರಾ. ೩. ಗೋಡೆಯಿಂದ ಮುಂಚಾಚಿಕೊಂಡಿರುವ ಭಾಗ ; ಸೂರು ; ಒಪ್ಪಾರಿನ ತುದಿ : "ವಲೀಕಂ, ನೀವ್ರಂ, ಪಟಲಪ್ರಾಂತಂ – ೩ ಒಪ್ಪಾರದ ಚೂರು, ಲೋವೆ ಚೂರು,ಮನೆಯ ಚುಂಚು" (ಸಿದ್ಧಾಂತಿ. ೯೧); ಒಳಆಗಳದಲ್ಲಿ ಚುಂಚಿನ ಕೆಳಗೆ ವೇದಿಕೆಯ ಮೇಲೆ ಎರಡು ವೇತ್ರಾಸನಗಳು (ರಾಕ್ಷಮು. ೯). 'ಚುಂಚು ಲೋವೆ' ಪರಾ. **ಚುಂಚ :** (ಕ). **ಚುಂಚಿ**$_1$ **:** ೧. ನೆರೆ ಚುಂಚಿಯೊಳ್ ಕಚ್ಚಿ ಮುನಿಗಳ್ಗಪಾಯಮುಮಂ ಬರದಂತೆ (ಲಕ್ಷ್ಮಭಾ. ೧-೬-೬೫). **ಚೂಚು**$_1$ **:** ೧. ಪಕ್ಷ ಪುಚ್ಛ ಮೈ ಚೂಚು ಚಾಚಿದರು ಬೇರೆ ಪ್ರಾಣಪಕ್ಷಿ (ಹೃದಸ. ೬೬-೩) : ಚೂಚು ಚಾಚಿ ಚಾದಗೆಯು, ಎಡಕೆ ಕೂಗುವುದು ಚೆಂದವಾಗಿ (ಪಾಳುಭದೂ. ೩-೯). [ <ಸಂ. ಚಂಚು ]

**ಚುಂಚು**$_3$ (ಗು). ೧. ಹೆಸರುವಾಸಿಯಾದ ; ಪ್ರಖ್ಯಾತವಾದ. 'ಅಕ್ಷರ ಚುಂಚು' ಪರಾ. ☞ ಇದು ಸಂಸ್ಕೃತದ ಒಂದು ಪ್ರತ್ಯಯ. ಪೂರ್ವ ಪದದೊಡನೆ ಸೇರಿದಾಗ ಮಾತ್ರ ಬರುತ್ತದೆ. (ನಾ). ೨.=ಚುಂಚಿಲಿ.

[ ಸಂ. ]

**ಚುಂಚು**$_4$ (ನಾ). ಒಂದು ಬಗೆಯ ವನಸ್ಪತಿ: "ವೀರ್ಯವತಿ ಚುಂಚಿನಿಕ್ಕುಂ" (ಮಂಗರಾ. ೪೪-೪೭) ; ಚುಂಚಿನೊಳೊದವಿದ ಬೀಜಮುಮನರೆದು ಕುಡುವುದು ಬೇಗಂ (ಐಮುದ. ೨-೧೪). [ ? ]

**ಚುಂಚು**$_5$ (ನಾ). ಕಂದು ಅಥವಾ ಕೆಂಪುಬಣ್ಣ : (ಕ). [ ? ]

**ಚುಂಚುಕಾಲು** (ನಾ). "ಕುದುರೆಯ ಗೊರಸಿನ ಮೇಲ್ಗಡೆಯ ಕೀಲಿನ ಮೇಲ್ಭಾಗದಲ್ಲಿ ಕೂದಲು ಕುಚ್ಚುಕುಚ್ಚಾಗಿ ಬೆಳೆಯುವ ಸ್ಥಳ: ಕುದುರೆಯ ಚುಂಚುಕಾಲು" (Fetlock. ಇಂಕನಿ).

[ ಚುಂಚು$_1$ + ಕಾಲು$_1$ (<ಕಾಲ್$_1$) ]

**ಚುಂಚುದಲೆ, ಜುಂಜುದಲೆ** (ನಾ). ೧. ಕೆದರಿದ ಕೂದಲಿನ ತಲೆ : ಚುಂಚುದಲೆಯ ಲಕ್ಕ . . . ಮುಂಕುತಿಯ ಗಂಗಣ್ಣ (ಕುಲಾಸಾಂ. ೧೯-೯೫). **ಜುಂಜುದಲೆ :** ೧. ಜುಂಜುದಲೆ ಕೆಂಗಣ್ಣ ಗುಂಜಾಭರಣವೆಸೆಯೆ (ಕಣ್ವರ. ದೀ. ೧೩೭-೯) ; ಜುಂಜುದಲೆಗಳ ಪೇರುರದ [illegible] ವಿರಾಜಿತಿಪ ಕೆಂಗಣ್ಣುಗಳ . . . ಧೀರ ಜವದೂತರ್ಜವದಿ [illegible] ೨. [illegible] ತಲೆ : (ಕ). [ ಚುಂಚು$_1$ + ತಲೆ$_1$ ]

**ಚುಂಚುಪತ್ರ** (ನಾ). ಒಂದಂ ಬಗೆಯ ಸಸ್ಯ: "ಚುಂಚುರಃ, ಚುಂಚುಪತ್ರ ಈ ಯೆರಡುಂ ಚಂಚಸೊಪ್ಪು" (ಒಷಧಿ. ೫೭). [ಚುಂಚು$_4$ + ಪತ್ರ]

**ಚುಂಚುಮೀಸೆ, ಜುಂಜುಂಮೀಸೆ** (ನಾ). ೧. ಸುರುಳಿಯಾಗಿ ತಿರುವಿದ ಮೀಸೆ: ಮುರಿದಣ್ಣಕ್ಕಿದ ಗಡ್ಡ ಮೀಸೆ ಮೂಡಿ ಕಟ್ಟಂ ತಳ್ತ ಕೆಂಬಟ್ಟೆ ಕತ್ತುರಿಯಂ ತೂಜುವ ಚುಂಚುಮೀಸೆ (ಅನಂಪು. ೧೦-೭೫); ಈ ಚುಂಚು ಮೀಸೆಯೂ ಪಟ್ಟೋಲ್ಲೆಷ್ಟೀಪದಡಿಯ ನೊಸಲ ಮೇಲೆಯಲ್ಲಿ ತೆರೆಗಳಂತೆ ಸೂಸುವತ್ತಿರುವ ಅಲಕಗಳೂ (ಮಂತ್ರಶ. ೯೨-೧೨). **ಜುಂಜುಮೀಸೆ**: ೨. ಕೆದರಿದ ಮೀಸೆ; ಗುಂಜುಗುಂಜಾಗಿರುವ ಮೀಸೆ: ಭಯಂಕರ ವದನದಿಂದ ಕಂಡದಂತಿರೆ ತೋರ್ಪ ಕಣ್ಗಳಿಂ ಜುಂಜುಮೀಸೆಗಳಿಂದೆ ನಿರುತದಿಂ ಫಲಕ ಖಡ್ಗಗಳಾಂತ ಕರಯುಗಳದಿಂ (ಪಾಸೋಪು. ೩-೬೭). [ಚುಂಚು$_1$ + ಮೀಸೆ]

**ಚುಂಚುರ** (ನಾ). ಒಂದು ಬಗೆಯ ಸಸ್ಯ: "ಚುಂಚುರಃ, ಚುಂಚುಪತ್ರ ಈ ಯೆರಡುಂ ಚಂಚಸೊಪ್ಪು" (ಒಷಧಿ. ೫೭). [?]

**ಚುಂಚುರುಚು** (ನಾ). ಒಂದು ಬಗೆಯ ಸಸ್ಯ (?): ಮರಗಜುಕೆಯ ಬಳ್ಳಿಯ ಪೆರ್ಗುರುಟಗೆಯಂ ಬ್ರಹ್ಮದಂಡೆಯಂ ಕಳವಲ್ ಚುಂಚುರುಚಂ ಗಿಣಮೂಗಿಯ ಚಂಗರ ಹಿತಕರಮೆನಿಪ ಬಂಜೆ ಮಡುವಾಗಲುಮಂ (ಖಮದ. ೧೬-೫೮). [?]

**ಚುಂಚುಲೆ** (ನಾ). ಒಂದಂ ಬಗೆಯ ಆಯುಧ: ಸುರಗಿ ಕರಾಚೂರಿ ಕಡಿತಲೆ . . . ಸಿರಿಮುರಿ ಕಕ್ಕಡೆ ಚುಂಚುಲೆ ರವಿಹಾಸ ಉರಿಯನುಗುಳು ತಿರ್ದುವಲ್ಲಿ (ಭರದ. ೨೦-೧೩೩). [?]

**ಚುಂಚುಲೋವೆ** (ನಾ). ಗೋಡೆ ಮೊದಲಾದುವುಗಳಿಂದ ಮುಂಚಾಚಿ ಕೊಂಡಿರುವ ಭಾಗ: ಪೊಂಬೆಸದುಪ್ಪರಿಗೆಯ ಬಸವಂದವಾದ ಚುಂಚು ಲೋವೆಗಳೊಳಗೆ ಬಳಸಿ ನಲಿದುಲಿವ ಪಾರಿವಂಗಳ ಕೊರಲುಲಿಯೊಳಂ (ಕರ್ನಿಕಾ. ೪೪): ಪಳುಕಿನ ಚುಂಚುಲೋವೆಯೊಳವಲಂಬಿಪ ತೊಳಪ ಮುತ್ತಿನ ಲಂಬಣವನು (ಶ್ರೀಪಾಂ. ೬-೫೨): ಹೊನ್ನ ರನ್ನದ ಚುಂಚು ಲೋವೆಗಳಿಂ ನೆರೆದ ಕಂಬೆಳಗನಿಂಬಿಡುವುನ್ನತದ ಮಾಣಿಕದ ಕಳಸಾಳಿ ವಳಿಗಳಿಂ (ಸಾಳ್ವಭಾ. ೪-೪೦). [ಚುಂಚು$_2$ + ಲೋವೆ]

**ಚುಂಚುಟು** 'ಜುಂಜುಟು' ನೋ.

**ಚುಂಚುಟುದಲೆ** 'ಜುಂಜುಟುದಲೆ' ನೋ.

**ಚುಂಟ** (ನಾ). = ಚುಂಡಿ. [<ಸಂ. ಚುಂಡೀ]

**ಚುಂಡ** (ನಾ). (ಕರಾ) ಸಣ್ಣ ಜುಟ್ಟುಳ್ಳವನು. [?]

**ಚುಂಡಿ** (ನಾ). ಒಂದು ಬಗೆಯ ಸಣ್ಣ ಬಾವಿ: "ಚುರೀ, ಚುಂಡೀ, ಚೂಚುಕಃ– ಈ ೩ ಬಗರಗೆ" (ಹಲಾಯು. ೧೦೩-೬೨): "ಚುರಿ ಚುಂಡಿ ಮಾನಂಗಿ" (ಮಂಗರಾ. ೧೨೫-೦೯). [ಸಂ. ಚುಂಡೀ]

**ಚುಂಡಿಲಿ** 'ಸುಂಡಿಲಿ' ನೋ.

**ಚುಂದಿ** (ನಾ). ಕುಂಟಣಿ; ತಲೆಹಿಡುಕಿ. [ಸಂ. ಚುಂದೀ]

**ಚುಂದು** 'ಸುಂದು$_1$' ನೋ.

**ಚುಂಬಕ** (ನಾ). ೧. ಮುತ್ತಿಡುವವನು; ಚುಂಬಿಸುವವನು: "ನಿಕ್ಷಃ-ಚುಂಬಕಂ" (ಅಕಳ್ಳ. ೫೫). ೨. ವ್ಯಭಿಚಾರಿ; ಕಾಮುಕ. ೩. ಮೋಸಗಾರ; ವಂಚಕ. ೪. ಆಯಸ್ಕಾಂತ: "ಚುಂಬಕಮಯಸ್ಕಾಂತಮಕ್ಕುಂ" (ಮಂಗರಾ. ೩೦-೫); ಆ ಸಮಯದಲಿ ಬಂದನಗ್ಗದ ಭೂಸುರ ಶ್ರೀಕಂಠನೋ ಪದ್ಮಾಸನನ ಪಲ್ಲಟವೂ ಕಮಲಾಂಬಕನ ಚುಂಬಕವೊ (ಕುವ್ಯಾಅ. ೪-೭): ಚುಂಬಕವನು ಸೂಜಿಗಳೆಯ್ದುಂದವಲಂಬಿಸುವಂತೆ ಕಲಿಗಳು . . . ರಾಮನನಾಡಂಬರದಿಂದ ಪೊರ್ದಿದರು (ಕುರಾಸಾಂ. ೯-೧೭); ಪ್ರೀತಿಯೆಂಬ ಚುಂಬಕಾ ಕೂಡಿಸಿತ್ತು ಅಡಿಸಿತ್ತು (ಸಪೀಗೀ. ೯೬-೪). 'ಚುಂಬಕಗಾಳಿ' ಪರಾ. [ಸಂ.]

**ಚುಂಬಕಗಾಳಿ** (ನಾ). ಆಕರ್ಷಿಸುವ ಶಕ್ತಿಯಿಂದ ಕೂಡಿದ ಗಾಳಿ: ಉತ್ತರಧ್ರುವದಿಂ ದಕ್ಷಿಣಧ್ರುವಕೂ ಚುಂಬಕಗಾಳಿಯು ಬೀಸುತಿದೆ (ನಾದಲೀ. ೫೦-೨): ಅದರ ಚುಂಬಕಗಾಳಿಯು ಅವನ ಸುತ್ತಲೂ ಬೀಸುತ್ತಿತ್ತು (ಸಮುಜೀ. ೮೯೪). [ಚುಂಬಕ + ಗಾಳಿ$_1$]

**ಚುಂಬಕತ್ವ** (ನಾ). ಆಕರ್ಷಿಸುವ ಶಕ್ತಿ; ಕಾಂತಶಕ್ತಿ: ರಾಸನು . . . ದಕ್ಷಿಣಧ್ರುವದ ಬಳಿ ಭೂಮಿಯ ಮೇಲಿನ ಚುಂಬಕತ್ವದ ಬಗ್ಗೆ ಪರಿಶೋಧಿಸುವ ಸಲುವಾಗಿ ಹೊರಟಿದ್ದನು (ಸಸ್ಯಕ. ೮): ಅಯಸ್ಕಾಂತದ ನೆರೆಯಲ್ಲಿ ನಿಂತ ಕಬ್ಬಿಣದ ತುಂಡೂ ಚುಂಬಕತ್ವವನ್ನು ಪಡೆಯುವಂತೆ (ಕ್ರಾಂತದರ್ಶಿ. VI, ಮುನ್ನುಡಿ). [ಸಂ.]

**ಚುಂಬನ** (ನಾ). ೧. ಪ್ರೀತಿಗಾಗಿ (ಸಾಮಾನ್ಯವಾಗಿ) ಮತ್ತೊಬ್ಬರ ಕೆನ್ನೆ ಮೊದಲಾದ ಅಂಗಗಳ ಮೇಲೆ ತುಟಿಗಳನ್ನು ತೆರೆದು ಬಳಿಕ ಮುಚ್ಚಿ ಒತ್ತುವುದು; ಅಧರವನ್ನು ಸವಿಯುವುದು; ಬಾಯಂಗ್ಗುಟ; ಮುತ್ತು; ಮುದ್ದು: "ವದನಕೂಟಂ ಮುತ್ತು ಚುಂಬನಮದೋಷ್ಠಪಾನಂ" (ಮಂಗರಾ. ೯೭-೧೬): "ಮೌಕ್ತಿಕದೊಳು ಚುಂಬನದೊಳುಂ ಮುತ್ತೆನಿಕ್ಕುಂ" (ಶಬ್ದಮಂ. ೯೮): ಕಳಾನಿಲಯಂ ಮಾಡಿದನೊಲ್ದು ಚುಂಬನಪರಿಷ್ವಂಗ ಪ್ರಪಂಚಂಗಳಂ (ಜಗವಿ. ೧೦-೧೪೦): ಮೊದಲ ಚುಂಬನದೊಳು ಹಲು ಬಿದ್ದಂತೆ (ಕುವ್ಯಾವಿ. ೬-೮). ೨. ಸ್ಪರ್ಶ: ಚರಣಚುಂಬನಕೆ ಕಲ್ಲೆ ತಾಂ ಬೆಣ್ಣೆಯಾಯ್ತೆನೆ ಕಂಪಿಸಿತು ಬಂಡೆ (ಶ್ರೀರಾಮಾ. ೩೮-೨೬೯). [ಸಂ.]

**ಚುಂಬನಗೊಡು** (ಕ್ರಿ). ಮುತ್ತನ್ನು ಕೊಡಂ; ಮುದ್ದುಕೊಡು: ಚುಂಬನಗೊಟ್ಟು ಚುಂಬಿಸಿ ರಂಗುಮಾಣಿಕದಂಬುಲವಿತ್ತು ಮುದ್ದಿಸಿದ . . . ಮಾನಿನಿಯ (ಮೋಹತ. ೩೩-೪೯). [ಚುಂಬನ + ಕೊಡು$_1$]

**ಚುಂಬಿ** (ಗು). ಮುಟ್ಟುವ; ತಾಗುವ. 'ಗಗನಚುಂಬಿ' ಪರಾ. [ಸಂ. ಚುಂಬಿನ್]

**ಚುಂಬಿತ** (ಗು). ೧. ಮುತ್ತಿಟ್ಟ; ಚುಂಬಿಸಿದ. ೨. ತಾಗಿದ; ಮುಟ್ಟಿದ: ಐದಿದನು ಸೌಮಿತ್ರಿ . . . ವಿರಳವರ್ಣದ್ರುಮದ ಪುಷ್ಪಿತಶರೀರದಾ ಸ್ವರ್ಗ ಚುಂಬಿತ ಸಾಲದುನ್ನತಶಿರದ ಕರದ ಗೋಪುರಕೆ (ಶ್ರೀರಾಮಾ. ೧೫೭-೦೪೭). (ನಾ). ೩. ಮುತ್ತಿಟ್ಟುದು; ಚುಂಬಿಸಿದುದು: ಒಂದು ಶೂನ್ಯ ಅಧರವಾಗೆ ಒಂದು ಶೂನ್ಯ ಓಷ್ಠವಾಗೆ ಪೂರ್ಣವೊಂದೆ ಚುಂಬಿತ (ಅನಿಕೇ. ೦೯-೮). [ಸಂ.]

**ಚುಂಬಿಸು** (ಕ್ರಿ). ೧. = ಚುಂಬನಗೊಡು: ಪೊಸತಲದೊರ್ಗೆಂದು ತಾವರೆಯ ಗೆತ್ತು ಮುಖಾಬ್ಜಮನೊಂದು ತುಂಬಿ ಚುಂಬಿಸೆ ಸಿರಿ ಬೆರ್ಚಿ ಪೆರ್ಚಳಿಸಿ (ಜಂಪಭಾ. ೫-೩೩): ಪ್ರತಿಬಿಂಬವ್ಯಾಜದಿಂ ನಿನ್ನಯ ಕದಪುಗಳಂ ಚುಂಬಿಸುತ್ತಂ (ಕಾದಂಪೂ. ೮೯೭): ನೊಸಲೆಡೆಯನು ಚುಂಬಿಸಿ ತಕ್ಕೈಸುತ ಪರವಶೆಯಾದಳು (ಕಂನವಿ. ೯-೦೭೭). ೨. ಮುಟ್ಟು; ಸ್ಪರ್ಶಿಸು; ತಾಗು: ಅಂಬರಮಂ ಚುಂಬಿಸಿ [ಪಾಠಾಂ. ಅಂಬರ ಚುಂಬಿತಮಾಗಿ] ನಳನಳಿಸಿ ಕೊರ್ಬಿ ಬೆಳೆದ ಪರ್ಬಿದಿರ ತುದಿ (ಗಿರಿಕ. ೧-೦೫೮ ವ); ಅವನ ದೇಹದ ಛಾಯವೆನ್ನಯ ಛಾಯ ಚುಂಬಿಸುತ (ಕುವ್ಯಾಕ. ೮-೪೦): ಮಹಾಬಲಾಚಲವೊಪ್ಪುತಿಹುದು ವ್ಯೋಮಮಂಡಲವ ಚುಂಬಿಸುತ (ಕಂನವಿ. ೨-೩೭). [ಚುಂಬನ + –ಇಸು$_3$]

**ಚುಕತಾ** 'ಚುಕ್ತಾ' ನೋ.

**ಚುಕಾಣಿ** 'ಚುಕ್ಕಾಣಿ' ನೋ.

**ಚುಕಾಯಿಸು** (ಕ್ರಿ). ೧. ಮೇರೆ ಮೀರು; ಮುಂದುವರಿ: ಚುಕಾಯಿಸಿ ಅವಳನ್ನು ಒಡಿದುಕೊಂಡು (ದಾಲಕ. ೧೦೭). ೨. ಮುಂಗಿಸು; ಪೂರೈಸು. ೩. ಸರಿಹೊಂದಿಸು; ಕ್ರಮಂಪಡಿಸು. ೪. ಬೆಲೆಯನ್ನು ನಿಗದಿಗೊಳಿಸು, –ಗೊತ್ತುಪಡಿಸು. ೫. ಸಾಲ ಮುಂತಾದುವನ್ನು ತೀರಿಸು, –ಸಂದಾಯ ಮಾಡಂ: (೬). [ಚುಕಾ$_0$ (P ಹಿಂ. ಚುಕಾನಾ) + –ಇಸು$_3$]

ಚುಕಿ 'ಚೂರು' ನೋ.

**ಚುಕುಳ** (ನಾ). ಒಂದು ಬಗೆಯ ಗಿಡ; ಹಾಲುತೊಟ್ಟಿನ ಗಿಡ: "ಅಕ್ಕಿಹಡೆ ಹೇಮದುಗ್ಧಂ ಚುಕುಳ[ಪಾಠಾಂ. ಕಿಲ]ಮೆಂದೆನಿಕ್ಕುಂ" (ಮಂಗರಾ. ೩೯-೨೬). [ ? ]

**ಚುಕ್ಕಣ** 'ಚುಕ್ಕಾಣಿ' ನೋ.

**ಚುಕ್ಕಮನ** (ನಾ). ಹೀನವಾದ ಮನಸ್ಸು; ಕ್ಷುದ್ರಮನಸ್ಸು: ರೊಕ್ಕದೊಳಗೆ ಲೆಕ್ಕ ಮುಕ್ಕಾಣಿ ಹೋದರೆ ಕಕ್ಕುಲತೆಯ ಬಿಡು ಚುಕ್ಕಮನವೆ (ಪ್ರುರಾರ. ೧೯೮-೬). [ <ಚುಕ್ಕಿ$_1$ + ಮನ$_1$ ]

**ಚುಕ್ಕಾಣಿ, ಚುಕಾಣಿ, ಚುಕ್ಕಣ, ಸುಕಾಣ, ಸುಕಾಣು**(ನಾ).೧. (ಹಡಗು, ವಿಮಾನ ಮುಂತಾದುವುಗಳ) ದಿಕ್ಕನ್ನು ಬದಲಿಸಲು ಸಹಾಯ ಮಾಡುವ, ಮರ ಅಥವಾ ಲೋಹದಿಂದ ಮಾಡಿದ ಒಂದು ಬಗೆಯ ಸಾಧನ: ಅಂಬಿಗರು ಚುಕ್ಕಾಣಿಗಳನ್ನು ತಿರುಗಿಸತೊಡಗಿದರು (ಹಾಯುತ್ರ. ೨೩): ವಿಮಾನಗಳನ್ನು ಎಡ–ಬಲಗಳಿಗೆ ತಿರುಗಿಸಲು ಸಹಾಯಕವಾದ ಈ ಫಲಕಕ್ಕೆ ಚುಕ್ಕಾಣಿಯೆನ್ನುತ್ತಾರೆ (ವಿಜ್ಞಾವಿ. ೬೮); ದಿಕ್ಕಿಲ್ಲದಂತೆ ಹರಿದಾಡುವವಗೆ ಚುಕ್ಕಾಣಿ ಬೇಡ (ಸೂರ್ಯಪಾ. ೩೩-೪). ೨. ಮಾರ್ಗದರ್ಶಿಯ ಸ್ಥಾನ,–ಪದವಿ: ಪುರುಷನ ಜೀವನದ ಚುಕ್ಕಾಣಿಯೇ ಸ್ತ್ರೀಗೆ ಯೋಗ್ಯಸ್ಥಳ (ಅಪನಾ. ೫೧). **ಚುಕಾಣಿ:** (೧). **ಚುಕ್ಕಣ:** ೧. "ಹಡಗಿನ ಮುಂಪಿಂ ಕೋಟಿಪತ್ರಂ . . . ಅದರ ಹಿಂದು ಚುಕ್ಕಣಮೆನಿಕ್ಕುಂ" (ಮಂಗರಾ. ೧೨೧-೫): ಆ ಹಡಗದ ಚುಕ್ಕಣಕ್ಕೆ–ಹಿಂಬದಿಗೆ ನಿಂತು ಈ ದೃಶ್ಯವನ್ನು ನೋಡುತ್ತಿರುವಂತೆ ವಿಷ್ಣೂನಿಗೆನಿಸಿತು (ಸಮಜೀ. ೯೮೬). **ಸುಕಾಣ:** (೧) **ಸುಕಾಣು:** ೧. ಕುದುರೆಗಳನ್ನು ನಡಿಸುವದಕ್ಕೆ ಕಡಿವಾಣವಿದ್ದಂತೆ ಹಡಗುಗಳನ್ನು ನಡಿಸುವದಕ್ಕೆ ಸುಕಾಣು ಇರುತ್ತದೆ (ಮುಂಬಯಿ. ೩-೧೧೩). [<ಪ್ರಾ. ಸುಕ್ಕಾಣಯ./ಅರ. ಹಿಂ. ಸುಕ್ಕಾನ್; ಮರಾ. ಸುಕಾಣ್ ]

**ಚುಕ್ಕಾಣಿಗ** (ನಾ). ಚುಕ್ಕಾಣಿಯನ್ನು ಹಿಡಿದಿರುವವನು: "(ಚುಕ್ಕಾಣಿ) ನಡಸುವವನು; ಚುಕ್ಕಾಣಿಗ; ಕರ್ಣಧಾರ" (Helmsman. ಇಂಕನಿ).

[ ಚುಕ್ಕಾಣಿ + – ಗ$_2$ ]

**ಚುಕ್ಕಾಣಿಚಕ್ರ** (ನಾ). "ಹಡಗಿನ ಕರ್ಣವನ್ನು ತಕ್ಕಂತೆ ತಿರುಗಿಸಲಾಗುವ ಚಕ್ರ; ಚುಕ್ಕಾಣಿಚಕ್ರ" (Helm. ಇಂಕನಿ). [ ಚುಕ್ಕಾಣಿ + ಚಕ್ರ$_1$ ]

**ಚುಕ್ಕಿ$_1$** 'ಚುಕ್ಕೆ$_1$' ನೋ.

**ಚುಕ್ಕಿ$_2$** 'ಚುಕ್ಕೆ$_2$' ನೋ.

**ಚುಕ್ಕಿ$_3$, ಚುಕ್ಕೆ$_3$** (ನಾ). ೧. ಒಂದು ಗ್ರಹದ ಹೆಸರು: ಶುಕ್ರಗ್ರಹ: "ಚುಕ್ಕಿಯೆನೆ ಶುಕ್ರಂ" (ಕಕರ. ೩೬). ೨. ರಾಕ್ಷಸರ ಗುರು; ಶುಕ್ರಾಚಾರ್ಯ: ಬೋಟಿದುರೋಜನ ಜಾಣ್ಮೆ, ಚುಕ್ಕಿಯಜೀವ, ಜವನ ಜರ್ವು, ಜಕ್ಕರರಸನ್ನೆಸಿರಿ ತನ್ನೊಳೊದವೆ ಮನುವಿನ ಮಾರ್ಗದೆ ನಡೆಯುತ . . ಮೆಚಿದಂ(ರಾಮಾಶ್ವ. ೧೧೪-೧೧). 'ಚುಕ್ಕಿಗುವರ' ಪರಾ. **ಚುಕ್ಕೆ$_3$:** ೧. ಮೂಡ ಚುಕ್ಕಿಯು ಮೂಡೆ ಗಾಡದಿಂ ಕುಕ್ಕುಟವು ಜೋಡು ಕೂಡಿಯೆ ತಾವು ಕೂಗುತಿರಲು (ಯನಳ. ೩೪). [ <ಸಂ. ಶುಕ್ರ ]

**ಚುಕ್ಕಿಗುವರ** (ನಾ). ಶುಕ್ರಾಚಾರ್ಯನ ಶಿಷ್ಯ; ರಾಕ್ಷಸ; ಅಸುರ: "ರಕ್ಕಸರ್, ಮರ್ಬಿಗರ್, ಚುಕ್ಕಿಗುವರರ್, ಮೊದಲ ಸಗ್ಗಿಗರ್–ಈ ೪ ರಕ್ಕಸರ ಪೆಸರ್" (ಕಕಸಾ. ೨-೨೨): "ಚುಕ್ಕಿಗುವರರ್ಮಬ್ಬಿಗರ್ . . . ರಕ್ಕಸರಕ್ಕು" (ಕಬ್ಬಿಕ್ಕ. ೧೦): "ಚುಕ್ಕಿಗುವರರು ರಕ್ಕಸರು ಮಬ್ಬಿಗರು ಯೆಸಲ್ಕೆ ಅಸುರಾಭಿಧಾನದೊಳ್ ಸಲೆ ತೋರ್ಪುದು" (ಕಲ್ಪಮುಂ. ೧೦).

[ ಚುಕ್ಕಿ$_3$ + ಕುವರ$_2$ ]

**ಚುಕ್ಕಿತ** (ನಾ). [ನಾಟ್ಯ] ನೃತ್ಯದಲ್ಲಿ ಚೆನ್ನಾಗಿ ಕಾಣುವಂತೆ ಹಲ್ಲನ್ನು ಪ್ರದರ್ಶಿಸುವುದು: ಮಿಗೆ ಕರ್ಚಿದೊಡೆ ಭಿನ್ನಂ ಮುಗುಳ್ದಂ ಚೆನ್ನಾಗಿ ತೆಱೆಯೆ ಚುಕ್ಕಿತಮಕ್ಕುಂ (ರಾಸ್ವರಂ. ೩-೯೦). [ ? ]

**ಚುಕ್ಕಿವಟ್ಟೆ** (ನಾ). ನಕ್ಷತ್ರಗಳು ಸಂಚರಿಸುವ ಮಾರ್ಗ: ಆಕಾಶ: ಮುಗಿಲವೇಷವನಾಂತು ನಿಂದುದಲ್ಲಲ್ಲಿ ಬೃಂದಾರಕರ ಪ್ರಂದಮಾ, ಚಾರಣರ ಚರಣಚಿಹ್ನೆಯಂ ಚುಕ್ಕಿವಟ್ಟೆಯಿಂ (ಶ್ರೀರಾಮಾ. ೪೦೫-೬೧). 'ಅಜ್ಜುಲ್ವಟ್ಟೆ' ಪರಾ. [ ಚುಕ್ಕಿ$_1$(<ಚುಕ್ಕೆ$_1$) + ಬಟ್ಟೆ$_1$ ]

**ಚುಕ್ಕಿಸು** (ಕ್ರಿ). ಸಂಕೋಚಗೊಳ್ಳು (?): [illegible] ಮಱೆಯಿಕ್ಕುವುದೊಂದು ಮಂತಣವುಂಟೆ ಚುಕ್ಕಿಸದಿರು ಸೂಚಿ ಕವಲಾದಂತೆ ನಿನ್ನ ಮನಕ್ಕಾವು ಪೊಜಗೆ ಪೇಳೆಂದಳು (ಸೊಬಗಿ. ೨೫-೫).

[<ಸುಕ್ಕಿಸು ? ]

**ಚುಕ್ಕಿಸೊಪ್ಪು** 'ಚಂಕ್ಕಿಸೊಪ್ಪು' ನೋ.

**ಚುಕ್ಕುತಟ್ಟು** (ಕ್ರಿ). (ಮಕ್ಕಳನ್ನು ಮಲಗಿಸಲು) ಬೆನ್ನಿನ ಮೇಲೆ ಮೃದುವಾಗಿ ಕೈಯಿಂದ ತಟ್ಟು: ತಾಯಿ ಮಗುವನ್ನು ಚುಕ್ಕುತಟ್ಟುತ್ತ ಮಲಗಿಸುವಂತೆ ತಮ್ಮನ ತಲೆಯ ಮೇಲೆ ಕೈಯಿಟ್ಟು ಅಡ್ಡಾದರು (ವ್ಯನಿ. ೩೪೬): ಗೋದಾವರಿ . . . ಕೇಶವನಿಗೆ ಚುಕ್ಕುತಟ್ಟುತ್ತಿದ್ದಳು (ಭಾರತಿ. ೨೪).

[ ಚುಕ್ಕು$_0$ + ತಟ್ಟು$_1$ ]

**ಚುಕ್ಕುಬಡಿ** (ಕ್ರಿ). = ಚುಕ್ಕುತಟ್ಟು: ಎಷ್ಟು ಚುಕ್ಕುಬಡಿದರೂ, ಚಪ್ಪರಿಸಿದರೂ ಸಿಮಾಯಿಗೆ ನಿದ್ದೆಯೇ ಬರಲಿಲ್ಲ (ಗಾರಾಂಗ. ೧೦): ಈ ಕುಮಾರ ಕಂಠೀರವನನ್ನು ಮೆಚ್ಚಿ, ಚುಕ್ಕುಬಡಿದು ಅವನನ್ನು ಮಲಗಿಸಲು ಪ್ರಯತ್ನ ಮಾಡಿದೆ (ಗಾಳಿಪ. ೧೬೧). [ ಚುಕ್ಕು$_0$ + ಬಡಿ$_1$ ]

**ಚುಕ್ಕೆ$_1$, ಚಿಕ್ಕಿ$_1$, ಚಿಕ್ಕೆ$_1$, ಚುಕ್ಕಿ$_1$** (ನಾ). ೧. ನಕ್ಷತ್ರ; ತಾರೆ: ಈ ಚಟಗಳ ಪರಂಪರೆ ಹೇಳುತ್ತ ಹೋಗುವುದೆಂದರೆ ಮುಗಿಲ ಚುಕ್ಕೆಗಳನ್ನು ಎಣಿಸಿದಂತೆಯೇ ಸರಿ (ಗಾಳಿಗು. ೩೦). ೨. ವರ್ತುಲಾಕಾರದ ಸಣ್ಣ ಗುರುತು, –ಚಿಹ್ನೆ; ಬಿಂದು. 'ಚುಕ್ಕೆದುಂಬಿ' ಪರಾ. ೩. (ಆಲಂ) ಕೆಲಸಕ್ಕೆ ಬಾರದವನು; ಅಲ್ಪ; ಹೀನ: ಹೊಕ್ಕರಾಹವದೊಳಗೆ . . . ಚುಕ್ಕೆ[ಪಾಠಾಂ. ಕ್ಕಿ]ಗಳಿತಾ ಎನುತ ಹೊಯ್ದರು (ನಳಚ. ೯-೨೪). **ಚಿಕ್ಕಿ$_1$:** ೧. ಭೂಮಧ್ಯರೇಖೆಯಿಂದ ಬಡಗಕ್ಕೂ, ತೆಂಕಣಕ್ಕೂ ಹೋದಹೋದ ಹಾಗೆ ಗುರುತಿನ ಚಿಕ್ಕಿಗಳು ಕಾಣದ ಹಾಗಾಗಿ ಹೊಸಹೊಸ ಚಿಕ್ಕಿಗಳು ದೃಷ್ಟಿಗೆ ಬೀಳಹತ್ತುತ್ತವೆ (ಮುಂಬಯಿ. ೪-೩೮): ಮುಗಿಲ ಮ್ಯಾಗಿನ ಚಿಕ್ಕಿ, ಹಗಲ ಮೂಡಿದರೇನ (ಕನ್ನಜಾ. ೧೨೮). ೨. ಹುಲಿಯ ಮೋರೆಯ ಮೇಲೆಯೂ ಕುತ್ತಿಗೆಯ ಮೇಲೆಯೂ ಚಿಕ್ಕಿಗಳು ಇರುತ್ತವೆ (ಮುಂಬಯಿ. ೪-೩೬). **ಚಿಕ್ಕೆ$_1$:** ೧. ನೇಸರಿನ ಮುಂದೆ ಚಿಕ್ಕೆಗಳು ಒಪ್ಪುವವೆ? (ಬಿದುರ. ೧೫೦): ಸೂರ್ಯ, ಚಂದ್ರ, ಚಿಕ್ಕೆ ಕೋಟಿ ಕಣ್ಣರಳಿಸಿ ನೋಡಿವೆ (ನಲಮು. ೨೪-೧೧). **ಚುಕ್ಕಿ$_1$:** ೧. ಚುಕ್ಕಿಗಳುದುರಲಡಿಗಡಿಗೆ ವನಚರರ್ ಬೆದರೆ (ಪಂಪಾರಾ. ೬-೩೮-೩೧): ಚುಕ್ಕಿಗಳಿನಡಸಿರ್ದ ನಭವನು (ರಾಮಾಸಂ.೬-೮-೨೧): ಗಾಜಿನಾಚೆ ದಿಗಂತದಲ್ಲಿ ಚುಕ್ಕಿಗಳು ಮಿನುಗುತ್ತಿದ್ದವು (ಮಾರ್ಗದ. ೮೪). ೨. ಬಿಳಿ ಚಾಯೆಯ ನೀಲದುಕೂಲದಲ್ಲಿ ನೆಯ್ದಿರುವ ಜರತಾರಿಯ ಚುಕ್ಕಿಗಳಂತೆ ಅಲ್ಲಿ ಇಲ್ಲಿ ಮ್ಲಾನ ನಕ್ಷತ್ರಗಳು ಮಿನುಗುತ್ತಿದ್ದುವು (ರಾಮಾನ. ೮೦). ೩. ಚುಕ್ಕಿಗಳಲಾ ನಿನ್ನವರು ಕೈಯಿಕ್ಕ ಹೇಳಾ (ಕುವ್ಯಾಕ. ೧೯-೫೦): ಜಲಜಭವಭವಲೋಕಪಾಲಾವಳಿಗಳೀಕ್ಷಣ ಕೊಲಗಿ ಬದುಕುವುದುಳಿದ ಚುಕ್ಕಿಗಳೇನು ಗಣನೆಂದೊದರಿದವು ಕಹಳೆ (ಅಂಬಿಕಾ. ೩೧-೭).

**ಚುಕ್ಕಿಯ ಮಾತು** = (ಆಲಂ) ಕೆಲಸಕ್ಕೆ ಬಾರದ ಮಾತು; ಪೊಳ್ಳು ನುಡಿ: ಮಿಕ್ಕಾ ವಿಷಯದ್ಯದೊಳಂ ಚುಕ್ಕಿಯ ಮಾತೇವುದಣ್ಣ (ಖಮಂದ. ೭-೭೫). **ಚುಕ್ಕೆಯಾಗು** = ಗುರಿಯಾಗು: ಆಕ್ಕಜದ ಮುಖವಿದಱ ಚೂಣಿಗೆ ಚುಕ್ಕೆ[ಪಾಠಾಂ.ಕ್ಕಿ]ಯಾಯಿತು ಮನ ಮಹೀಶನ ಮಕ್ಕಳಾಟಿಕೆಯಾಯ್ತೆನುತ ತೂಗಿದನು ಸಿರಿಮುಡಿಯ (ಕುವ್ಯಾಸ. ೨-೦೪).

[ ದೇ. ೩ ತಮಿ. ಚುಕ್ಕು; ತೆಲು. ಚುಕ್ಕ; ಕೊಲಾ. ಸುಕ್ಕ; ನಾಯ್ಕಿ. ಪರ್ಜಿ. ಚುಕ್ಕ; ಗೊಂಡಿ. ಸುಕ್ಕುಮ್; ಕುಇ. ಸುಕ ]

**ಚುಕ್ಕೆ$_2$, ಚುಕ್ಕಿ$_2$, ಸುಕ್ಕೆ** (ನಾ). ಒಂದು ಬಗೆಯ ಸಸ್ಯ ; ಹುಳಿಯಾದ ಎಲೆಗಳುಳ್ಳ ಸಸ್ಯ : ''ಕಾಡಹುಳಿ ಚಿಕ್ಕೇಸೊಪ್ಪು'' (ಪ್ರ ಧಧ್ವ.). **ಚುಕ್ಕೆ$_2$ :** ಮಳೆಗಾಲದಲ್ಲಿ ಚುಕ್ಕಿ ಪಲ್ಯ ಹೆಚ್ಚಾಗಿ ಬೆಳೆಯುತ್ತದೆ (ರೂಢಿ). **ಸುಕ್ಕೆ:** ಬಸಲೆ, ಬಾಯಿಬಸಲೆ, ಸುಕ್ಕೆ (ನಮ್ಮನು. ೨೩೮). [<ಸಂ. ಚುಕ್ರ]

**ಚುಕ್ಕೆ$_3$** 'ಚುಕ್ಕಿ$_3$' ನೋ.

**ಚುಕ್ಕೆಗಳೆ** (ಕ್ರಿ). (ಆಲಂ) ಅಲ್ಪನೆಂದು ಹೀಯಾಳಿಸು,-ಹೀಗಳೆ : ಯಾಕೆ ಭಯ ನಿಮಗಿನ್ನು . . . ನೀ ಚುಕ್ಕೆಗಳೆಯದಿರು ಸಾಹಸವ ನೋಡೆಮ್ಮ ಪಗೆಯಿದಿರೊಳು (ತುರಂಗ. ೬೪-೨೫). [ ಚುಕ್ಕೆ$_1$ + ಕಳೆ$_1$ ]

**ಚುಕ್ಕೆದುಪ್ಪಿ** (ನಾ). ಒಂದು ಬಗೆಯ ಜಿಂಕೆ ; ಕವಲು ಕವಲಾಗಿರುವ ಕೊಂಬುಗಳೂ ಮೈಮೇಲೆ ಸಣ್ಣಸಣ್ಣ ಚುಕ್ಕೆಗಳೂ ಇರುವ ಜಿಂಕೆ; ಕೃಷ್ಣಸಾರ; ಸಾರಂಗ : "ಪೃಷತಃ – ಚುಕ್ಕೆದುಪ್ಪಿ" (ಸಿದ್ಧಾಂತಿ. ೧೩೬).

[ ಚುಕ್ಕೆ$_1$ + ದುಪ್ಪಿ ]

**ಚುಕ್ಕೆಸೊಪ್ಪು, ಚುಕ್ಕಿಸೊಪ್ಪು, ಸುಕ್ಕೆಸೊಪ್ಪು** (ನಾ). = ಚುಕ್ಕೆ$_2$ : ಚುಕ್ಕೇಸೊಪ್ಪು ಹುಳಿಹುಳಿಯಾಗಿರುವುದು (ತರಜಿ. ೧೬). **ಚುಕ್ಕಿಸೊಪ್ಪು :** ಸುಕ್ಕೆಸೊಪ್ಪು, ಚುಕ್ಕಿಸೊಪ್ಪು (ವ್ಯಜಿಗಿ. ೬೬-೧೩೬೪). **ಸುಕ್ಕೆಸೊಪ್ಪು :** ಮೇಲಿನ 'ಮೈಟಿಗಿ' ಪ್ರಯೋಗವನ್ನು ನೋಡಿ.

[ ಚುಕ್ಕೆ$_2$ + ಸೊಪ್ಪು$_3$ ]

**ಚುಕ್ತ** 'ಚುಕ್ತಾ' ನೋ.

**ಚುಕ್ತಾ, ಚುಕತಾ, ಚುಕ್ತ, ಚುಕ್ತಿ** (ನಾ). (ಹಣವನ್ನು) ಬಾಕಿಯಿಲ್ಲದಂತೆ ತೀರಿಸುವಿಕೆ,-ಮುಗಿಸುವಿಕೆ; ಬೇಬಾಕಿ : ಎಂಕಪ್ಪನೂ ಅಸಲೂ ಬಡ್ಡೀ ಮುಟ್ಟಿಸಿ ಲೆಕ್ಕಾ ಚುಕ್ತಾ ಮಾಡಿಕೊಂಡ (ತಿಥುಗು. ೬೮): ಪೈಗೆ ಪೈ ಕಂದಾಯ ಚುಕ್ತಾ ಮಾಡುತ್ತೇವೆ (ಪ್ರೇಮಾಕ್ರ. ೫). **ಚುಕತಾ:** ಖಾತೇದಾರ ಅಸಾಮಿಯು ಕೂಲಿಯ ಫಾಯದೆಯ ಇಚ್ಛೆಯಿಂದ ಮೊದಲನೇ ಬಾಕಿಯನ್ನು ಚುಕತಾ ಕಳುಹಿಸಿ (ಮುಂಬವ್ಯಾ. ೨೪೬). **ಚುಕ್ತ:** ಇನ್ನು ಎರಡು ದಿನಗಳಲ್ಲಿ ಗೇಣಿ ಚುಕ್ತ ಮಾಡಿ (ಮುಗಿಯು. ೨೪೧) ; ವ್ಯಾಸ ಬಿಲ್ ಚುಕ್ತ ಮಾಡಿ (ನಿರ್ದೇಶ. ೩). **ಚುಕ್ತಿ :** ಆದರ ಚುಕ್ತಿಗೆ ಮಾದಯ್ಯ ಅವನ ಯಾಲಕ್ಕಿಮಲೆಯಲ್ಲಿ ಎರಡು ವರ್ಷ ಆಳುಗಳ ಮೇಲ್ವಿಚಾರಕನಾಗಿ ಬಿಡಾರ ಹೂಡಬೇಕು (ಮಸಕೂ. ೧೧).

[ ←ಹಿಂ. ಮರಾ. ಚುಕತಾ ]

**ಚುಕ್ತಿ** 'ಚುಕ್ತಾ' ನೋ.

**ಚುಕ್ತಿಪಟ್ಟಿ** (ನಾ). ಸಾಲದ ವಿವರಣೆಯನ್ನು ತೋರಿಸಿ, ಉಳಿದ ಬಾಕಿದಾರರ ಹೆಸರುಗಳನ್ನು ತಿಳಿಸುವ ಪಟ್ಟಿ: ಸೊಸೈಟಿಯ ಈ ಸಲದ ಚುಕ್ತಿಪಟ್ಟಿಯಲ್ಲಿ ಅವನ ಹೆಸರಿರಲಿಲ್ಲ (ರೂಢಿ).

[ ಚುಕ್ತಿ (<ಚುಕ್ತಾ) + ಪಟ್ಟಿ$_2$ ]

**ಚುಕ್ರ** (ನಾ). ೧. ಹುಳಿಯಾದ ಮದ್ಯ. ೨. ಹುಣಿಸೆ. ೩.=ಚುಕ್ಕೆ$_2$.

[ ಸಂ. ]

**ಚುಕ್ರಿಕೆ** (ನಾ). ಒಂದು ಬಗೆಯ ಸಸ್ಯ; ಪುಲ್ಲಂಪುರಿಚಿ ; ಹುಳಿಚಿಕ್ಕ : "ಜಾಂಗೇರಿ ಚುಕ್ರಿಕಾಪ್ಯಂ" (ವಸ್ತುಕೋ. ೩೬ ೨೬). [ ಸಂ. ಚುಕ್ರಿಕಾ ]

**ಚುಚಲ** 'ಚುಂಚಲ' ನೋ.

**ಚುಚಲಿ** 'ಚುಂಚಲ' ನೋ.

**ಚುಚುಂದರ** (ನಾ). ದೇಹ ಚಿಕ್ಕದೂ ಉದ್ದವಾದ ಮೂತಿಯೂ ಇರುವ ಒಂದು ಬಗೆಯ ಇಲಿ; ಸುಂಡಿಲಿ; ಮೂಗಿಲಿ: "ಸುಂಡಿಲಿ ಚುಚುಂದರಂ [ಪಾಠಾಂ. ಕುದ್ರುಂದರಂ, ಚುಚ್ಛುಂದರಂ, ಬುಂಚುಂಧರಂ]" (ಮಂಗರಾ. ೪೯-೧೨). [<ಸಂ. ಛುಚ್ಛುಂದರ ]

**ಚುಚುಂದರಿ** (ನಾ). = ಚುಚುಂದರ : ಚುಚುಂದರಿಯಂ ಪಿಡಿದು ಮದ ಗಜೇಂದ್ರಕ್ಕಿದಿರಂ ಬಂದು ನಿಲೆ ತೊಲಗಿ ಪೋಕುಂ (ಲೋಕೋಪ. ೧೦-೫೧).

[ ಸಂ. ಚುಚುಂದರೀ ]

**ಚುಚುಂದ್ರಿ, ಚುಚೇಂದ್ರಿ** (ನಾ). ೧.=ಚುಚುಂದರ : ಹಾವು ಚುಚುಂದ್ರಿಯನ್ನು ನುಂಗಿದಂತೆ ಆಕೆಯ ಸ್ಥಿತಿಯಾಯಿತು (ತುಳಸಿ. ೧೨೫). **ಚುಚೇಂದ್ರಿ:** ೨. ಒಂದು ಬಗೆಯ ಮದ್ದಿನ ಬಾಣ. ೩. (ಆಲಂ) ತೊಂದರೆ ಕೊಡುವ ಮಾತು : ಪೀಡಿಸಬೇಕೆಂದು ಇನ್ನೊಂದು ಚುಚೇಂದ್ರಿ ಬಿಟ್ಟಿ (ಸುತ್ತುಮು. ೯೩). [ <ಸಂ. ಚುಚುಂದರೀ ]

**ಚುಚುಲು** 'ಸುಜ್ಜಲು' ನೋ.

**ಚುಚೇಂದ್ರಿ** 'ಚುಚುಂದ್ರಿ' ನೋ.

**ಚುಚ್ಚಳ**(ಗು).ವ್ಯರ್ಥವಾದ; ತುಚ್ಛ:ಆ ಕಮಲದ ನೆಲೆಯ ಕಾಣಲರಿಯದೆ ತೊಳಲಿ ಬಳಲಿ ಜಗದೊಳಗೆ ನಚ್ಚುಮಚ್ಚಿಗೊಳಗಾಗಿ ಚುಚ್ಚಳ ಪೂಜೆಗೆ ಸಿಲ್ಕಿ . . . ಭವಕೆ ಗುರಿಯಾಗುವ ಮನುಜರ ಕಂಡು ನಾಚಿತ್ತೆನ್ನ ಮನವು (ಲಿಂಗವ. ೪೩-೬). 'ಚುಚ್ಚು$_4$' ಪರಾ. [ ? ]

**ಚುಚ್ಚಿಸು** (ಕ್ರಿ). ತಿವಿಯುವಂತೆ ಮಾಡು; ಇರಿಯಿಸು; ನಾಟಿಸು : ಕಿಚ್ಚನೆ ಕಾಯ್ದು ಕನಲ್ದು ಕೊಳ್ಳಿಯೊಳ್ ಸೋಲೆ ತಗುಳ್ದು ಚುಚ್ಚಿಸು (ಧರ್ಮಾಮೃ. ೯-೧೮೧) : ಸಸನೆ ಇರಲಾರದ ಬಡ್ಡಿ ಗೇರು ಚುಚ್ಚಿಸಿಕೊಂಡಳು (ಗಾದ).

[ ಚುಚ್ಚು$_1$ (<ಚುಚ್ಚುರ್$_1$) + – ಇಸು$_3$ ]

**ಚುಚ್ಚು$_1$** 'ಚುಚ್ಚುರ್$_1$' ನೋ.

**ಚುಚ್ಚು$_2$**. 'ಚುಚ್ಚುರ್$_2$' ನೋ.

**ಚುಚ್ಚು$_3$** (ನಾ). ೧. ಇರಿತ; ತಿವಿತ. 'ಒಳಚುಚ್ಚು' ಪರಾ. ೨. ಬಾಣ (?): ಅಮರ್ಕೆವೆತ್ತ ಪುಲಿದೋಲ ಪಟ್ಟಿಗೆಯುಮೊಟ್ಟಿದ ಚುಚ್ಚುಂ ಕಟ್ಟಿದ ತೊಂಗಲುಂ ಬೆರಸು . . . ಇದಿರ್ಚೆ ನಿಂದ ಬಿಲ್ವಡೆಯ ಪೆಜಿಗೆ ಪಡೆನಾಯಕನಾಗಿ (ವರ್ಧಮಾ. ೪-೪೨ ವ). [ <ಚುಚ್ಚುರ್$_1$ ]

**ಚುಚ್ಚು$_4$** (ನಾ). ಚಿಕ್ಕದು ; ಸಣ್ಣದು : "ಚುಚ್ಚೊಂದು ಗುಚ್ಚೊಂದು ಕಿಱಿದು" (ಶಬ್ದಮಂ. ೬೩). [ <ಪ್ರಾ. ಚುಚ್ಛ./ ಸಂ. ತುಚ್ಛ ]

**ಚುಚ್ಚುಕ** (ನಾ). ಚುಚ್ಚಿಕೊಡುವವನು ; ಕಲಹಕ್ಕೆ ಪ್ರೇರಿಸುವವನು : ಚಾಡಿಕೋರ : ನುಚ್ಚುಗೂಳುಣ ಹೊಲ್ಲ ಚುಚ್ಚುಕರ ನೆರೆ ಹೊಲ್ಲ ಮುಚ್ಚರದಿ ನಡೆವ ಮಗ ಹೊಲ್ಲ (ಸರ್ವಜ್ಞ. ೧೯೦೨).

[ ಚುಚ್ಚು$_1$ (<ಚುಚ್ಚುರ್$_1$) + – ಕ$_3$ ]

**ಚುಚ್ಚುಕಳಿಲೆ** (ನಾ). ಎಳೆಯ ಬಿದಿರ ಕಳಿಲೆಯಲ್ಲಿ ರಂಧ್ರ ಮಾಡಿ ಮಸಾಲೆ ಮತ್ತು ಒಗ್ಗರಣೆಯನ್ನು ತುಂಬಿ ಮಾಡುವ ಒಂದು ಬಗೆಯ ತಿಂಡಿ: ಕಳಿಲೆಯ ಕುಡಿಯನೊತ್ತಿ ಶತಛಿದ್ರವಾಗುವ ತೆಱದಿ ಕದುಕಿಱಿದು . . . ಪೊದ್ದಣಗೆಯಿತ್ತು ನರೆಯಂ ಕೊಟ್ಟು ಪರಿಮಳವ ನಿಕ್ಕಲದು ಚುಚ್ಚುಕ [ಪಾಠಾಂ. ಗ]ಳಿಲೆ (ಸೂಪಶಾ. ೬-೨).

[ ಚುಚ್ಚು$_1$ (<ಚುಚ್ಚುರ್$_1$) + ಕಳಿಲೆ (<ಕಱಿಲೆ) ]

**ಚುಚ್ಚುಕೂದಲು** (ನಾ). ಚುಚ್ಚುವ ಕೂದಲು ; ಒರಟಾದ ಕೂದಲು: ಪತಂಗ ಚಿಟ್ಟೆಗಳ ಮರಿಗಳ ಮೇಲೆ ಚುಚ್ಚುಕೂದಲುಗಳೂ ಇರುತ್ತವೆ (ಕೀಟಬಿ. ೧೨೬). [ಚುಚ್ಚು$_1$ (<ಚುಚ್ಚುರ್$_1$) + ಕೂದಲು (<ಕೊಂದಲ್)]

**ಚುಚ್ಚುಗ** (ನಾ). ಮಗುಚುವ ಕೈ ; ಕುರುಪೆ : ರತ್ನ ಕಿತ್ತಲಿ ತೆಗೆದು ಚುಚ್ಚುಗದಿಂದ ಅಲ್ಲಾಡಿಸಿದಳು (ಬೆಂದಜೀ. ೧೨೩).

[ ಚುಚ್ಚು$_1$ (<ಚುಚ್ಚುರ್$_1$) + – ಗ$_2$ ]

**ಚುಚ್ಚುಗಲೆ** (ನಾ). ಇರಿತದ ಗಾಯದಿಂದುಂಟಾದ ಕಲೆ: ಕುತ್ತದೊಳಾದ ಚುಚ್ಚುಗಲೆಯೇ ಎದೆಗಗ್ಗಳ ಕಪ್ಪು ಕಾಡಿ ಮೇಣ್ ಕುತ್ತಿಸಿಕೊಂಡುವೇ (ಸೂಕ್ತಿಸು. ೮-೪೧೯). [ ಚುಚ್ಚು$_1$ (<ಚುಚ್ಚುರ್$_1$) + ಕಲೆ$_2$ ]

**ಚುಚ್ಚುಗೊಂಡೆಯ** (ನಾ). ಚುಚ್ಚಿಕೊಡುವ ಚಾಡಿ ; ಮನಸ್ಸಿಗೆ ನೋವುಂಟುಮಾಡುವಂಥ ನಿಂದೆ : ಚುಚ್ಚುಗೊಂಡೆಯದದಟಮುನಿ ಜಡೆವಿಟ್ಟ ನರ್ತಿಸೆ ರಾಮ ಕುಬುಬಿಱಿದೆಚ್ಚು ಕಡಿದನು ಶಿರವ ಸರಳಿನಲಾ ಖರಾಸುರನ (ತೊರರಾ. ೩-೬-೫೫). [ಚುಚ್ಚು$_1$ (<ಚುಚ್ಚುರ್$_1$)+ಕೊಂಡೆಯ]

**ಚುಚ್ಚುನುಡಿ** (ನಾ). ಕೇಳುವವರಿಗೆ ನೋವನ್ನುಂಟುಮಾಡುವಂಥ ಮಾತು : ಕಟಕಿ : ಕೊಟ್ಟ ಹಣವನ್ನು ದಕ್ಕಿಸಿಬಿಡಬೇಡಿರಿ ಎಂದು ಮೊದಲಾದ ಚುಚ್ಚುನುಡಿಗಳನ್ನು . . . ಹೇಳಿದ (ಕುರುಕಾ. ೧೫೪).
[ ಚುಚ್ಚು$_1$ (<ಚುಚ್ಚುರ್$_1$) + ನುಡಿ$_2$ ]

**ಚುಚ್ಚುನೋಟ** (ನಾ). ಇರಿಯುವಂತಹ ನೋಟ; ತೀಕ್ಷ್ಣದೃಷ್ಟಿ : ಆನಂದನ ಚುಚ್ಚುನೋಟ ಅವಳ ಹೃದಯದಲ್ಲಿ ಕೋಲಾಹಲವೆಬ್ಬಿಸಿತ್ತು (ಮರಳಿ. ೧೪೬) : ಅಡಿಗೆಮನೆಯಲ್ಲೂ ನಾನಾನ ಚುಚ್ಚುನೋಟವಿದ್ದದ್ದೇ (ಸ್ಮೃತಿಚಿ. ೧೬). [ ಚುಚ್ಚು$_1$ (<ಚುಚ್ಚುರ್$_1$) + ನೋಟ ]

**ಚುಚ್ಚುಮದ್ದು** (ನಾ). ಶರೀರಕ್ಕೆ ಸೂಜಿಯಿಂದ ಚುಚ್ಚಿ ಪಿಚಕಾರಿಯ ಮೂಲಕ ಕೊಡುವ ಔಷಧ; ಸೂಜಿಮದ್ದು; ಇಂಜೆಕ್ಷನ್: ಈಗ ಎಲ್ಲೆಲ್ಲೂ ಚುಚ್ಚುಮದ್ದಿಗೇ ಪ್ರಾಶಸ್ತ್ಯ (ನವನೀ. ೫೪) : ಟಾಮಿಗೆ ಒಂದು ಚುಚ್ಚುಮದ್ದು ಕೊಟ್ಟರು (ಕಪಪು. ೩-೩೭).
[ ಚುಚ್ಚು$_1$ (<ಚುಚ್ಚುರ್$_1$) + ಮದ್ದು$_1$ (<ಮರ್ದು) ]

**ಚುಚ್ಚುಮಾತು** (ನಾ). = ಚುಚ್ಚುನುಡಿ : ದ್ರೋಣನು ದುರ್ಯೋಧನನ ಚುಚ್ಚುಮಾತಿನಿಂದ ನೊಂದು ಕಿಚ್ಚಿನಿಂದ ಕಾದುತ್ತಿದ್ದನು (ವಚಭಾ. ೨೮೯) : ಅವರ ಚುಚ್ಚುಮಾತುಗಳು ಶೂಲದಂತೆ ಇರಿಯುತ್ತಿದ್ದವು (ಶುಂಕುಮ. ೬೬).
[ ಚುಚ್ಚು$_1$(<ಚುಚ್ಚುರ್$_1$) + ಮಾತು$_1$ ]

**ಚುಚ್ಚುರೊಟ್ಟಿ** (ನಾ). ಚುಚ್ಚಿ ರಂಧ್ರ ಮಾಡಿ ಬೇಯಿಸಿದ ಒಂದು ಬಗೆಯ ರೊಟ್ಟಿ : ಕುಟ್ಟ ಕಣಿಕದೊಳು ಸರಿಬೆಣ್ಣೆಯಾಜ್ಯಂಗೊಳೊಂದು ಬಟ್ಟವಾಲನೆಯಿಕ್ಕಿ ಮಿದಿದು ಬಟ್ಟಂ ಮಾಡಿ . . . ಸಲಗೆಯಿಂ ಚುಚ್ಚಿ ತಿಳಿದುಪ್ಪಮಂ ಬಿಟ್ಟು ಸಕ್ಕರೆಯುಮಂ ತಳಿದು ತೆಗೆದೊಡೆ ಚುಚ್ಚು[ಪಾಠಾಂ. ಕರ್ಕುರ್, ಕುಕ್ಕು]ರೊಟ್ಟಿಯೆಂಬೊಳ್ವಸರವಡೆದು (ಸೂಪಶಾ. ೧-೧೦).
[ ಚುಚ್ಚು$_1$ (<ಚುಚ್ಚುರ್$_1$) + ರೊಟ್ಟಿ ]

**ಚುಚ್ಚುಳ** (ನಾ). ೧.=ಚುಚ್ಚುನುಡಿ: ಮದನಕೇಳಿಗೆ ನಮ್ಮ ಗುಟ್ಟುಮಾಡಿ ನಿಶ್ಚೈಸಿ ಸತಿಯರೆಂದಾಳಿ ಚುಚ್ಚುಳ ನುಡಿದು ಎಮ್ಮನು ಒಲ್ಲದಿಹನು (ಹರಿಶಾಂ. ೩೦-೪೯). ೨. ಚುಚ್ಚುಮಾತನಾಡುವವನು : ಚಿಚ್ಚರಿಗಂ ಪರಿವಾರಿಯಂ ಚುಚ್ಚುಳ [ಪಾಠಾಂ. ತುಚ್ಚುಳ]ನತ್ಯುಗ್ರಕೋಪಿ ಮೂರ್ಖಂ ಕಿಸಟ್ಟುರೊಳ್ ಕಿಚ್ಚಿಡುವನೆನಿಪ ಖಳನುಂ (ಸಮುಪ. ೬-೧೦೬). [ ? ]

**ಚುಜ್ಜಲು** 'ಸಂಜ್ಜಲು' ನೋ.

**ಚುಜ್ಜಲುಮರ** (ನಾ). ಒಂದು ಬಗೆಯ ಮರ ; ಸುಜ್ಜಲು : ಚುಜ್ಜಲು ಮರದ ಕೆಳಗೆ ವಾಯುವ್ಯ ಮುಖನೆ ಕ ೧ (ಎಕ. III, ತಿರುಮ. ೬೩-೧೦೨೪: 1748). [ ಚುಜ್ಜಲು (<ಸುಜ್ಜಲು) + ಮರ$_1$ ]

**ಚುಜ್ಜಲು** 'ಸುಜ್ಜಲು' ನೋ.

**ಚುಟಕ, ಚುಟುಕ$_2$** (ನಾ). ಒಂದು ಬಗೆಯ ಪದ್ಯ : ಅಣಕದಿಂದ ಕೂಡಿದ (ಸಾಮಾನ್ಯವಾಗಿ ನಾಲ್ಕುಸಾಲುಗಳಿರುವ) ಸಣ್ಣ ಪದ್ಯ : ಪ್ರಾಸಬದ್ಧವಾದ ಚುಟಕಗಳನ್ನು ಬರೆಯುವಷ್ಟು ಶಕ್ತಿ ಅವನಿಗೆ ಜನ್ಮದತ್ತವಾಗಿದ್ದು (ಬಳಜೀ. ೩೦) : ಅದರ ಕೆಳಗೆ ನಾಲ್ಕುಸಾಲಿನ ಒಂದು ದರಿದ್ರ ಚುಟಕ ಬೇರೆ ಬರೆದಿತ್ತು ! (ಶಾರಿಮ. ೪೬). **ಚುಟುಕ$_2$** : ಚಕಮಕಿಗಳು ಚುಟುಕಗಳು ಇವುಗಳ ಕರ್ತೃಗಳೆಮಗಭಿವಂದ್ಯರು (ಇಂದಾಪ. ೪-೯).
[ ←ಮರಾ. ಚುಟಕಾ ]

**ಚುಟಕಿ** 'ಚಿಟುಂಕು' ನೋ.

**ಚುಟಕು** 'ಚಿಟುಂಕು' ನೋ.

**ಚುಟಕೆ** 'ಚಿಟುಂಕು' ನೋ.

**ಚುಟಿ** 'ಸೂಟಿ$_1$' ನೋ.

**ಚುಟಿಕೆ** 'ಚಿಟುಂಕು' ನೋ.

**ಚುಟಿಕೆಹಾಕು** 'ಚಿಟಿಕೆಹಾಕು' ನೋ.

**ಚುಟಿಗೆ** 'ಚಿಟುಂಕು' ನೋ.

**ಚುಟು** (ನಾ). ಒಂದು ರಾಜವಂಶದ ಹೆಸರು: ' ಹಾರಿತೀಪುತ್ರ ವಿಷ್ಣುಸ್ಕಂದ ಚುಟುಕುಲಾನಂದ ಶಾತಕರ್ಣಿ' ಎಂಬ ಅರಸನು ವೈಜಯಂತಿ(ಬನವಾಸಿ)ಯ ಅರಸನಾಗಿದ್ದು (ತುಳುನಾ. ೨೪) : ಬನವಾಸಿಪ್ರಾಂತದಲ್ಲಿ ಶಾತವಾಹನರ ಶಾಖೆಯೇ ಆದ ಚುಟುಕುಲದವರು . . . ಕ್ರಮೇಣ ಸ್ವತಂತ್ರರಾದರು (ಭಾಇಪ್ರ. ೩೦೪). ಶ್ರೀ ಗೋವಿಂದಪೈಗಳು ಚುಟು ಮತ್ತು ತುಳು ವಿಗೆ ಸಂಬಂಧವಿರಬಹುದೆಂದು ಅನುಮಾನಿಸಿದ್ದಾರೆ. [ ? ]

**ಚುಟುಕ$_1$** 'ಚಿಟುಂಕು' ನೋ.

**ಚುಟುಕ$_2$** 'ಚುಟಕ' ನೋ.

**ಚುಟುಕಿ** 'ಚಿಟುಂಕು' ನೋ.

**ಚುಟುಕು** 'ಚಿಟುಂಕು' ನೋ.

**ಚುಟ್ಟ$_1$** 'ಚುರುಟು' ನೋ.

**ಚುಟ್ಟ$_2$** (ನಾ). ೧. ಚಿಕ್ಕದು; ಸಣ್ಣದು: " ಪುಟ್ಟ, ಚುಟ್ಟ – ಅಲ್ಪೀಭಾವೇ. ಕಿರಿದರೊಳ್ " (ಶಾಕಶ್ಮ. ೨೫೬). ೨. ಸಣ್ಣ ಉಂಡೆ,-ಗುಳಿಗೆ : ಅವರು ಸುಣ್ಣ, ಬೆಣ್ಣೆ ಎಲ್ಲಾ ಹಾಕಿ ,ತಿಕ್ಕಿ, ನಶ್ಯದ 'ಚುಟ್ಟ' (ಚುಟಿಗೆ)ಗಳನ್ನು ಸಿದ್ಧಪಡಿಸಿ . . . ಹೋಗುತ್ತಿದ್ದರು (ಮಲಚಿ. ೬೦). [ <ಪ್ರಾ. ಛುಟ್ಟ ]

**ಚುಟ್ಟಾ** 'ಚುರುಟು' ನೋ.

**ಚುಟ್ಟಿ** (ನಾ). ಒಂದು ಬಗೆಯ ಹಣೆಯ ಆಭರಣ ,-ಮುಂದಲೆಯ ಆಭರಣ : (ಕ). [ ದೇ.೫ ತಮಿ. ಮಲ. ಚುಟ್ಟಿ ]

**ಚುಡಾಯಿಸು** 'ಚಿಡಾಯಿಸು' ನೋ.

**ಚುಡಿತ$_1$** (ನಾ). ನಿಂದೆಯ ಮಾತು ; ದೂಷಣೆ (?) : ಚಾಡಿ ಚುಡಿತಗಳಾಡಿ ಸಲೆ ಪಂಥಗಳನಾಡಿ ಕೆಡುಕ ನೀನಾಗಬೇಡ (ಪುರಂದ. ೫-೨೨-೪).
[ ? ]

**ಚುಡಿತ$_2$** (ಗು). ಹರಿತವಾದ (?) : ಹಿಡಿದು ತರ್ಕಿಸಿಕೊಂಡು ಮುಡುಹಿಲಿ ಚುಡಿತ ನಖರೇಖೆಗಳ ಬರೆದು ಕಡುಘನದಿ ಕ್ರೀಡಿಪುದು ಬಿಂದುವ ವಜ್ರವನು ಮಾಡಿ (ಕಕೋಕ. ೬-೨೦). [ ? ]

**ಚುಡುವ** 'ಚಿವಡಾ' ನೋ.

**ಚುಣಚುಣಿ** 'ಚುನಿಚುನಿ' ನೋ.

**ಚುಣಿ** 'ಚೂಳಿ$_1$' ನೋ.

**ಚುಣುಕು$_1$** 'ಜುಣುಂಗು' ನೋ.

**ಚುಣುಕು$_2$** 'ಚುಳುಕು' ನೋ.

**ಚುಣುಗು** 'ಜುಣುಂಗು' ನೋ.

**ಚುಣ್ಣ** (ನಾ). (ಕರಾ) ಗೆಣಸಿಗೆ ಹುಳು ಬೀಳುವ ಒಂದು ಬಗೆಯ ರೋಗ: ಈ ಬಾರಿ ಗೆಣಸಿನ ಬೆಳೆಗೆ ಚುಣ್ಣ ಹಿಡಿದು ಹಾಳಾಯಿತು (ಲೂಧ).
[ ? ]

**ಚುತಿ** (ನಾ). ಚ್ಯುತಿ; ನಾಶ. 'ಚುತಿಸು' ಪರಾ. [ <ಸಂ. ಚ್ಯುತಿ ]

**ಚುತಿಸು**(ಕ್ರಿ). ಇಲ್ಲವಾಗು; ನಾಶಹೊಂದು: ವೈರಿಸಿದಳಗ್ರಮಹಿಷಿಯೊಳೀಗ ಚುತಿಸಿತಾ ಸಲ್ಲಾಪ (ಜಿನಮು. ೬-೨೭). [ ಚುತಿ + – ಇಸು$_3$ ]

**ಚುತ್ತು** (ಕ್ರಿ). ಬಳಲು ; ಆಯಾಸಪಡು (?) : ಹತ್ತಲಾರೆನು ನಾನು ಯೆತ್ತರದ ಯಾ ಮರವ ತತ್ತರವು ಪುಟ್ಟುಪದು ಚುತ್ತಿ ಕೈಕಾಲು (ಹಮಾಚ. ೧೪೨). [ ? ]

**ಚುದ್ರತನ** (ನಾ). ಚಾಡಿ ಹೇಳುವ ಬುದ್ಧಿ ; ದೂರುವ ಗುಣ : ಚು[ಪಾಠಾಂ. ಕ್ಷು]ದ್ರತನ ಕಳವು ಪರದ್ರೋಹದಿಂದ ಬುದ್ಧಿಯಿಂದಲೆ ಗಳಿಸಿ ಸಿಕ್ಕಿದಂಥರ್ಥವನು ಸದ್ಯದಲ್ಲಾರು ಉಂಬುವರ್ (ಪುರಂದ. ೧-೧೩೨-೩).
[ <ಕ್ಷುದ್ರತನ ]

**ಚುನಮುರಿ** 'ಚುರುಮುರಿ' ನೋ.

**ಚುನಮುರಿಉಂಡೆ** (ನಾ). ಪುರಿ ಮತ್ತು ಬೆಲ್ಲದ ಪಾಕದಿಂದ ಮಾಡಿದ ಉಂಡೆ ; ಪುರಿಯುಂಡೆ : ಚುನಮುರಿಉಂಡೆಗಳನ್ನು ಮಾರುವ. ಹೆಂಗಸು ಅವಳು (ಮುಕ್ತಮು. ೧೫೦). [ ಚುನಮುರಿ (<ಚುರುಮುರಿ) + ಉಂಡೆ ]

**ಚುನಾಯಿ** (ನಾ). ಆಯ್ಕೆ ; ಆರಿಸುವಿಕೆ. 'ಚುನಾಯಿತಾಣ' ಪರಾ.
[ ←ಹಿಂ. ಚುನಾಈ ]

**ಚುನಾಯಿಕೆ** (ನಾ). = ಚುನಾಯಿ : (ಕ). [ ಚುನಾಯಿ + – ಕೆ ]

**ಚುನಾಯಿತ** (ಗುಂ). ಆರಿಸಿದ ; ಆಯ್ಕೆಯಾದ : ನಾಲ್ಕುಬಾರಿ ಕೂಡ ಪ್ರಜಾಪ್ರತಿನಿಧಿಸಭೆಗೆ ಚುನಾಯಿತರಾದವರು (ಅಲಹೂ. ೬೫).
[ <ಚುನಾಯಿಸು ]

**ಚುನಾಯಿತಾಣ** (ನಾ). ಚುನಾವಣೆ ನಡೆಯುವ ಸ್ಥಳ; ಚುನಾವಣೆಯ ಕಟ್ಟೆ : ಪುಂಡರೀಕನು ಒಂದು ಚುನಾಯಿತಾಣದಲ್ಲಿ ಅಧಿಕಾರಿಯಾಗಿದ್ದನು (ಕೊರದಂಡ. ೫೫). [ ಚುನಾಯಿ + ತಾಣ ]

**ಚುನಾಯಿಸು** (ಕ್ರಿ). ಆಯು; ಆರಿಸು: ಕಾರ್ಯಕಾರಿಮಂಡಲಿಗೆ ನಿನ್ನನ್ನೂ ಒಬ್ಬ ಸದಸ್ಯನನ್ನಾಗಿ ಚುನಾಯಿಸಿರುವರೆಂದು ತಿಳಿಯಿತು (ರಾಯಚ. ೪೮) : ನೀವು ಬಟ್ಟೆ ಚುನಾಯಿಸುವುದರಲ್ಲೂ ಜಾಣ್ಮೆ ತೋರಿಸ್ತೀರಲ್ಲ (ಬದುಜ. ೧೨೫). [ ಚುನಾಯಿ + – ಇಸು$_3$ ]

**ಚುನಾವಣೆ** (ನಾ). ಜನರ ಅಭಿಮತಗಳ ಮೂಲಕಒಬ್ಬನನ್ನು ತಮ್ಮ ಪ್ರತಿನಿಧಿಯನ್ನಾಗಿ ಆರಿಸುವುದು: ಚುನಾವಣೆಯ ರಂಗು ಮಾಯವಾದ ಕೂಡಲೆ ಪಕ್ಷಗಳ ಸೊಲ್ಲೂ ಕೂಡ ಕೇಳಿಬರುವುದಿಲ್ಲ (ರಾಜಪ. ೧೧): ಚುನಾವಣೆಯ ತಾರೀಖು ಇನ್ನೂ ಒಂದು ವಾರ (ರಾಯಚ. ೯೦).
[ ಚುನಾಯಿಸು + – ಅಣೆ$_4$ ]

**ಚುನಾವಣೆಗೊಳ್ಳು** (ಕ್ರಿ).ಜನರ ಅಭಿಮತಗಳ ಮೂಲಕ ಆಯ್ಕೆಯಾಗು: ತಾನು ನಾಯಕಸ್ಥಾನಕ್ಕೆ ಚುನಾವಣೆಗೊಂಡ ವಿಷಯವನ್ನು . . . ತಿಳಿಸಿದನು (ಪ್ರನರು. ೪೬). [ ಚುನಾವಣೆ + ಕೊಳ್ಳು$_1$ (< ಕೊಳ್$_1$) ]

**ಚುನಿಚುನಿ, ಚುಣಚುಣ** (ನಾ). ಜ್ಯೋತಿಷ್ಮತಿಬಳ್ಳಿ ; ಅಗ್ನಿಬಳ್ಳಿ : ಜೇನಸಿನ ಹೆಸರು . . . ಚುನಿಚುನಿಬೀಜ ಚುಮುಚುಮಿ ಕಲಸಕ್ಕರಿ (ಮುಂಬವ್ಯಾ. ೧೫೭). ಚುಣಚುಣ : ಸೂರ್ತಿ ಚವಾಳಾ ಮಣದ ಮೇಲೆ ಕಿಮ್ಮತ್ತು ಇರತಕ್ಕ ಜೀನಸಗಳು. ೧, ಅಕ್ಕಲ ಖಾರ . . . ೯೦, ಚುಣಚುಣ ಬೀಜ ; ೯೧, ಚೋಬಚಿನ್ನಿ (ಮುಂಬವ್ಯಾ. ೧೨೫).
[ ←ಹಿಂ. ಚುನ್‌ಚುನೀ ]

**ಚುನ್ನ** (ಗು). ೧. ಹೀನವಾದ; ಅಲ್ಪವಾದ; ಕ್ಷುದ್ರವಾದ: ಮಾರುತಿ ಮುನ್ನ ಶರಧಿಯ ದಾಂಟಿ ಬನವನು ಮುರಿದು ತವಸುತರ ಚುನ್ನವಾಳದ ಲೊರಸಿ ಲಂಕೆಯ ಬನ್ನಬಡಿಸುತಲುರುಹಿ ರಕ್ಕಸಕುನ್ನಿಗಳ ಕೊಲುವಂದು (ಅನಂರಾ. ೬-೭-೬೮). 'ಚುನ್ನಕಥೆ' ಪರಾ. (ನಾ). ೨. ನಿಂದೆ; ತೆಗಳಿಕೆ; ಬಯ್ಗುಳು: "ನಿಂದೆ ಚುನ್ನಂ" (ದಕ್ಷುನಿ. ೬೭); ನಿನ್ನ ಬೋಧದೆಸಕಂ ಚುನ್ನಕ್ಕೆ ಪಕ್ಕಾಗದೇ (ಪುಷ್ಪಪು. ೧೪-೬೬): ಚುನ್ನವಾದೊಡಂ, ಜುಗುಪ್ಸೆ ಯಾದೊಡಂ ಇರ್ದುದನಿರ್ದಂತರಸಂಗೆ ಒಳಬಲಗದೊಳಱಿವುವುದೆ ದೂತರ್ಗೆ ನೀತಿ (ಚಿಕವಂ. ೫-೫); ಚುನ್ನದಿಂ ಕೀರ್ತಿಸಲು ರಯ್ಯಮ ಹೇಳು (ರಂಗಪು. ೧೭-೨೪) ೩. ಅಣಕ ; ಕೊಂಕುನುಡಿ ; ವ್ಯಂಗ್ಯ ; ಉಪಹಾಸ : "ಸೋಲ್ಲುಂಠಃ, ಸೋತ್ಪ್ರಾಸಃ, ಸೋಪಹಾಸಃ-ಈ ಮೂಱು ಚುನ್ನಂ" (ಹಲಾಯು.೨೪-೦೪೮): ನುಡಿದೊಡೆ ಚುನ್ನಮಂ ನುಡಿದಳೆಂದಪೆ(ರಸರ.೪-೧೬೨). ೪. ತಪ್ಪು ; ದೋಷ : ಸುಮ್ಮನಿರ್ದರೆ ಜ್ಞಾನಕ್ಕೆ ಭಂಗ ಉಭಯವನು ಪ್ರತಿಪಾದಿಸದಿರ್ದರೆ ತನ್ನಯ ಭಕ್ತಿಗೆ ಇದಿರೆಡೆಗೆಡುವುದು ಇದು ಚುನ್ನವಲ್ಲ (ಸರ್ವವ. ೧೨೪-೬೪೬) : ಲಾವಣ್ಯವಿರಲೇನು ಚುನ್ನ ಮಯಣನ ಗುಣಂ ನನಗಿಲ್ಲ ನಿನಗಿಲ್ಲ ಪೋಗು (ಪ್ರಭುಪು. ೮-೯೪). ೫. ಅಲ್ಪವಾದುದು; ಕ್ಷುದ್ರವಾದುದು : ನಿನ್ನ ಹಸುಬೆಯು ನೂರು ಛಿನ್ನಭಿನ್ನದ ದ್ವಾರ ನಿನ್ನಂಗಿ ಪಾಗುಗಳು ಚುನ್ನ ಚಿಂದಿಗಳು (ಕರರೀ. ೧೯೪-೮). ೬. ಆಸೆ ; ಅಪೇಕ್ಷೆ : ಷಡುರುಚಿಯುನಱಿವನ್ನಕ್ಕ ಬೇಟದ ಚುನ್ನ ಬಿಡದು (ಮದೇವ. ೨೮೭-೩೮): ಎನ್ನಯ ಸುತ್ತಿದ ಮಾಯೆ ನಿನಗೆ ಅನ್ಯವೆ ಅದು ನಿನ್ನಯ ಚುನ್ನ(ಸುಂಕಬಂ. ೫೪) : ಚುನ್ನದಿ ಕಯ್ಕಲೆ ಘಳಿಗೆಯ ಸೆಳೆದೀಯೆ ತನ್ನಯೆ[ಪಾಠಾಂ. ಯ್ಯ] ಸವಿದುದರ್ಥವನು ಇನ್ನು ಕೊಳ್ಳಬ್ಬಬ್ಬ ನೀನೆಂಬ ಬಾಲನನೆನ್ನ ತೋಳಿಂದು ತಕ್ಕಿಪವೊ (ವರ್ಧಪ. ೪-೨೯). ೭. ಅಲ್ಪನಾದವನು ; ಸಣ್ಣವ್ಯಕ್ತಿ : ಇನ್ನಂ ವಿಷಮಸಮಸ್ಯೆಯನೆನ್ನೊಳ್ ಕುಡಲುಚಿತಮಕ್ಕುಮೋ ಎಂದವನಂ ಚುನ್ನ ಮನಾಗಿಸಿ (ದಿವ್ಯಚ. ೯-೫೩).

ಚುನ್ನಮಾಡು, ಚುನ್ನವಾಡು = ೧. ಅಪಹಾಸ್ಯಮಾಡು ; ಹೀಯಾಳಿಸು ; ಅಣಕವಾಡು : ನಿನ್ನೊಕ್ಕಲ್ತನಮೋನೆನುತುಂ ಚುನ್ನ ಮಾಡಲ್ಕೆ ಮುನಿದವಂ ಕೈವೊಯ್ದಂ (ಮಜಾನೇ. ೧೦-೯೨); ಗಿರಿಸುತೆ ಚುನ್ನ ವಾಡಿ ನಗುತಿರ್ದಪಳೀಶನ ಮುಗ್ಧವೃತ್ತಿಗೆ (ಜಗವಿ. ೧೭-೯೮) : ತನ್ನ ತಾ ಕೊಂಡಾಡುತನ್ಯರ ಚುನ್ನವಾಡುವ (ಅಮ್ಯತ. ೨-೫೫) : ನನ್ನನ್ನು ಹಂಗಿಸಿ ಬಯ್ದು ಚುನ್ನವಾಡಿ ಜರೆದು,ಕೊರಚಾಡಿ . . . ಕೆರಳಿಸುತ್ತಿದ್ದರೆ (ಮಂತ್ರಶ. ೨೬-೧೪). ೨. ನಿಂದಿಸು ; ಬಯ್ಯು : ಆತನಸಗನೆ ಭಾಳನೇತ್ರನ ತನು ಕಣಾ ನೀ ಚುನ್ನವಾಡದಿರು (ಬಸವು. ೨೧-೨೪) : ತನ್ನೊಳಿದ್ದವಗುಣವ ನೋಡದೆ ಚುನ್ನವಾಡುವನು (ಕುವ್ಯಾದ್ರೋ. ೧೯-೨೮): ಮಡಿವಳನೊರ್ವನ ಭದ್ರಮಾಗೆ ದೇವಿಯರೊಳ್ ಕುಂದಿಟ್ಟು ದೇವರಂ ಚುನ್ನವಾಡಿದಂ (ರಾಮಾಶ್ವ. ೪೪-೨೨). ೩. ಚುಚ್ಚುಮಾತನಾಡು ; ಕೊಂಕುನುಡಿ : "ಪರ್ಯನುಯೋಗಃ, ಉಪಾಲಂಭಃ – ಈ ೨ ಚುನ್ನವಾಡಿ ಬೆಸಗೊಳುಹ" (ಹಲಾಯು. ೨೫-೧೫೪): "ಉಪಾಲಂಭವೆನೆ ಚುನ್ನವಾಡಿ ಬೆಸಗೊಂಬುದಕೆ ಪೆಸರ್" (ಮಂಗರಾ. ೨೬-೭) : ಮುನ್ನ ತಂಗಿಯಂ ಚುನ್ನವಾಡಿದಕ್ಕನ ವಕ್ರಮೆಗೆ ಬಟಿಕೆ ಮಗಳಂ ನುಡಿದ ಕುಂಟಣಿಯ ಕೊಂಕು ಸಂಗತಿ ವಡೆದುದು (ಅನಂಪು. ೮-೧೫ ವ). **ಚುನ್ನವಾಡಿಸು** = ಹೀಯಾಳಿಸುವಂತೆ ಮಾಡು ; ಹೀಯಾಳಿಕೆಯಂ ಮಾತುಗಳನ್ನು ಆಡಿಸಂ : ತನ್ನೊಳಿಗದ ತೊತ್ತಿರ ಕೈಯಲೆನ್ನನು ಚುನ್ನವಾಡಿಸಿದ ಕನ್ನೆಯನು ಎನ್ನ ತೊತ್ತಿರ ತೊತ್ತ ಮಾಡದೆ ಬಿಡೆಂ (ಅಂಜಪ. ೫-೧೬೪). [<ಸಂ. ಕ್ಷುಣ್ಣ ? ]

**ಚುನ್ನಂಗೆಯ್, ಚುನ್ನಗೈ** (ಕ್ರಿ). ಹೀಯಾಳಿಸು; ಅವಹೇಳನ ಮಾಡು : ಬಱುಜಱುಚಿನ ಸೊಲ್ಲಂ ಸೊಲ್ವುದು ನಿನಗೇಂ ಮೊಗ್ಗೆಯೆನಲು ಚುನ್ನಂ ಗೆಯ್ವುದನುಳಿದು ಹೂಣಿಸಿ (ಉದ್ಯದೇ. ೪-೬೧). **ಚುನ್ನಗೈ**: ಮಿಂಚಿಡೆಯಲ್ಲಿ ಮಿನುಗೆ ಬರ್ಪ ಕಾಮುರ್ಗಿಲಂ ಚುನ್ನಗೈವ [ಪಾಠಾಂ. ಚುನ್ನಗೆಯ್ವೊಲ್] ಪೊಂಬಳ್ಳಿಯ ಸಂಚವ ನಗುವ ಮೆಡಿರುಗೂಡಿ (ಸೊಬಸೊ. ೧೦-೨೯).
[ ಚುನ್ನ + ಕೆಯ್$_1$ ]

**ಚುನ್ನಕ** (ನಾ). ನಿಂದಿಸುವವನು; ತೆಗಳುವವನು: ನಿನ್ನ ಸಂಪದ ನೋಡ ಲಾಱದೆ ಚಿನ್ನಭಿನ್ನವ ಮಾಡಿ ಕೆಡಿಸುವ ಚುನ್ನಕರ ನುಡಿವಿಡಿಯದಿರ ಪ್ರಸನ್ನ ನಿಧಿಯೆ (ಆದಿಪು. ೧೦-೫). [ ಚುನ್ನ + – ಕ$_3$ ]

**ಚುನ್ನಕಥೆ** (ನಾ). ಹೀನವಾದ ಕತೆ ; ಕ್ಷುದ್ರವಾದ ಕಥೆ : ಕನ್ನೆಯರ ಕೀರ್ತಿಸಿದ ಚುನ್ನಕಥೆವೇಳೆ ಸತ್ಫಲವಪ್ಪುದೇ (ಪ್ರಭುಪು. ೨-೭).
[ ಚುನ್ನ + ಕಥೆ ]

**ಚುನ್ನಗಾರ್ತಿ** (ನಾ). ನಿಂದಿಸುವವಳು : ತೆಗಳುವವಳು : ಈ ಚುನ್ನ ಗಾರ್ತಿಯಂ ಬನ್ನಂಬಡಿಸುವೆನೆಂದೆಣಿಸಿ ಕೆಂಕರಿಸುತ್ತ (ಚಿಕವಿ. ೩-೨೭೫ ವ).
[ ಚುನ್ನ + – ಕಾಱ + – ತಿ$_1$ (< – ಇತ್ತಿ) ]

**ಚುನ್ನಗೈ** 'ಚುನ್ನಂಗೆಯ್' ನೋ.

**ಚುನ್ನನುಡಿ** (ನಾ).ಅಣಕ; ಚುಚ್ಚುಮಾತು; ಉಪಹಾಸ: "ಸೋಲ್ಲುಂಠಮಾ ಸೋಪಹಾಸಂ ಚುನ್ನನುಡಿಯಕ್ಕು" (ಮಂಗರಾ. ೨೬-೫).
[ ಚುನ್ನ + ನುಡಿ$_2$ ]

**ಚುನ್ನಾಟ** (ನಾ). ಅಣಕ ; ಅಪಹಾಸ್ಯ: ಕೃಷ್ಣ ನಿನಗೆ ಚುನ್ನಾಟ ಬೇಡೆಂದ ನಾರದನು (ಪೋಡಶ. ೧೩-೬೦) : ಚುನ್ನಾಟವಾಡಿ ಪುಣ್ಯಪಾಪವ ಹಿಂದು ಮಾಡಿ (ಪ್ರ.ಲಾರ. ೧೯೬-೭). [ ಚುನ್ನ + ಆಟ ]

**ಚುಬುಕ್** (ನಾ). ಒಂದು ಅನುಕರಣ ಶಬ್ದ : ಆ ವ್ಯಾಖ್ಯಾನಮನಂತಾ ನವ್ಯಂ ಚುಬುಕೆಂದವಜ್ಞೆಯಿಂ ದಕ್ಷಿಣಹಸ್ತ ವ್ಯಾಪಾರದೆ ತೋಱಿದಂ . . . ವಟುಕಂ (ವರ್ಧಪು. ೧೬-೯).

**ಚುಬುಕ** (ನಾ). ಬಾಯಿಯ ಕೆಳಗಿರುವ ಮುಖಭಾಗ ; ಗದ್ದ ; ಗಲ್ಲ : ಚುಬುಕಂ ಹೃದಯಂ . . . ಪುರ್ಬುಗಳೆಂಬೆಡೆಯಂ ಮಹಾಹಿ ಕೊಂಡೊಡೆ ಗರುಡಂಗಮುತ್ತಲರಿದು (ರೋಕೋಪ. ೧೦-೪) : ಒಬ್ಬಳು ಮೂಗನ್ನು, ಒಬ್ಬಳು ಚುಬುಕವನ್ನು ವರ್ಣಿಸಿದಳು (ಚಿಕರಾ. ೩೨೯). 'ಚಿಬುಕ' ಪರಾ. [ ಸಂ. ]

**ಚುಬುಕಾಗ್ರ** (ನಾ). ಗದ್ದದ ತುದಿ: ಆ ನೃಪಂ ಕರಸರೋರುಹದಿಂ ಚುಬುಕಾಗ್ರ ಭಾಗಮಂ ಪಿಡಿದು (ಕಾದಂಪೂ. ೪೯೪) : ಚುಬುಕಾಗ್ರಮಂ ನಲವೊದರಿಸೆ ಮುದ್ದಾಡಿಸುತ್ತುಮಿರ್ದರ್ ಸುತನಂ (ಚಂದ್ರಪು. ೬-೯೭) ; ಕೋಮಲಿತ ಚುಬುಕಾಗ್ರ ಲಲಿತಾರುಣಾಧರದ . . . ಸಿರಿಮೊಗವನೆಂತು ನೋಡದೆ ಮಾಣ್ಬೆನು (ಜೈಮಿಭಾ. ೧೯-೨೦). [ ಚುಬುಕ + ಅಗ್ರ$_1$ ]

**ಚುಬುಕಿರಿ** 'ಚುಬುಕಿಱು' ನೋ.

**ಚುಬುಕಿಱು**, ಚುಬುಕಿರಿ (ಕ್ರಿ). ೧. ಗಲ್ಲವನ್ನು ಸವರಿಕೊಳ್ಳು. ೨. (ಆಲಂ) ಅಲಕ್ಷ್ಯವಾಗಿ ಕಾಣು ; ಉದಾಸೀನತೆಯನ್ನು ತೋರು : ಆವ್ ಕೈಕೊಂಡ ಗಮನಕಿದಲ್ಪವೆನುತರಿಗಂಡಭೈರವ ಚುಬುಕಿಱಿದು ಚಪ್ಪರಿಸಿದನು ಭುಜವ (ಕೊರರಾ. ೪-೦೨-೨೯) : ಒತ್ತಿ ಹೊಳಕುವ ಹಾಸ್ಯಗರ್ವದ ಹತ್ತುಗೆಯ ಹವಣಿಸದ ಹಮ್ಮಿನ ಚಿತ್ರದಿನಸುತ ಚುಬುಕಿಱಿವುತಂಗೈಸಿದನು ರಣಕೆ (ಕೊರರಾ. ೬-೧೯-೨೪): ಕೇಳಿ ಚುಬುಕಿಱಿದಾಗಳಿಂದ್ರನು ಬೀಳುಗೆಡಹುವೆನಸುರನೆನುತ ಕಟ್ಟಾಳು ತನವನು ತೋಱುವನು(ಉತ್ತ.ರಾ. ೩೮-೪೩). ಚುಬುಕಿರಿ: ೨. ರಾಕ್ಷಸಮಂಡಲೇಂದ್ರನ ಪುರವ ದಿಟ್ಟಿಸಿ ನಗುತ ಚುಬುಕಿರಿದ (ಅನಂರಾ. ೪-೩-೨೪). [ ಚುಬುಕ + ಇಱು$_1$ ]

**ಚುಬುಕು**$_1$ 'ಚಿಬುಕು' ನೋ.

**ಚುಬುಕು**$_2$ 'ಚಬುಕು' ನೋ.

**ಚುಮ್** (ನಾ). ಒಂದು ಅನುಕರಣ ಶಬ್ದ. 'ಚುಮ್ಮನೆ', 'ಚುಮ್ಮೆನ್' ಪರಾ.

**ಚುಮಚುಮ** (ನಾ). ಗಾಯ ಅಥವಾ ಹುಣ್ಣಿನಿಂದ ಉಂಟಾಗುವ ಉರಿ: ಕಾಲಿಗೆ ಮುಳ್ಳು ಚುಚ್ಚಿದ್ದರಿಂದ ಇನ್ನೂ ಚುಮಚುಮ ಅನ್ನುತ್ತಿದೆ (ರೂಢಿ). [ ? ]

**ಚುಮುಕಿಸು** 'ಚಿಮುಕಿಸು' ನೋ.

**ಚುಮುಚುಮು** (ನಾ). (ನಸುಬೆಳಕನ್ನು ಸೂಚಿಸುವ) ಒಂದು ಅನುಕರಣ ಶಬ್ದ: ಕುಲುಕುಲು ನಗುವ ಚುಮುಚುಮು ನಸುಕಿನೊಲು ನಗೆಮುಗುಳ ನರಳಿಸಿದಳಾ ಧನ್ಯೆ (ಜೀವಲ. ೯-೩) ; ಚುಮುಚುಮು ನಸುಕಿನಿಂದ ಒಂದು ಪ್ರಹರ ಕಳೆಯುವವರೆಗೆ ಏನಾದರೊಂದು ಮನೆಯ ಹೊರಗಿನ ಕಾರ್ಯ ಕ್ರಮವನ್ನು ಏರ್ಪಡಿಸುವುದು ಅಗತ್ಯ (ಗಾಳಿಪ. ೧೬೦) ; ಚುಮುಚುಮು ನಸುಕಿನಲ್ಲೆದ್ದು ಪಸೂನಿಯಲ್ಲಿ ಸ್ನಾನಮಾಡಿ ಸ್ವಾಮಿದರ್ಶನಕ್ಕೆ ಹೊರಟಳು (ಪ್ರೇಮಾರ್ಪ. ೨೩೦).

**ಚುಮುಚುಮುಗುಟ್ಟು** (ಕ್ರಿ). = ಚುರುಗುಟ್ಟು ೧ : ಕಾಲಿನಲ್ಲಿ ಮುರಿದ ಮುಳ್ಳು ಚುಮುಚುಮುಗುಟ್ಟುತ್ತಿದೆ (ರೂಢಿ). [ ಚುಮುಚುಮು + ಕುಟ್ಟು$_1$ ]

**ಚುಮ್ಮ** (ಗು). ದುಃಖಿತ. 'ಚುಮ್ಮಿಸು' ಪರಾ. [ <ಸಂ. ಚುಮ್ರ ]

**ಚುಮ್ಮನೆ** (ಅ). ಚುಂ ಎಂಬ ಸದ್ದಿನೊಂದಿಗೆ : ಒಡೆವ ಸಮಯದೊಳು ಹಾಲೊಳಗೆ ಸುಣ್ಣದ ತಿಳಿಯು ಬಿಡಲು ಚು[ಪಾಠಾಂ. ಜು]ಮ್ಮನೆ ತಿಳಿವುದದು (ಸೂಪಶಾ. ೨-೫). [ ಚುಮ್ + – ಅನೆ$_1$ ]

**ಚುಮ್ಮಿಸು** (ಕ್ರಿ). ನೋಯಿಸು ; ಪೀಡಿಸು: ಅಮ್ಮ ಕೇಳಿ ವಿಪ್ರ ದುಮ್ಮಾನದೊಳಗೆನ್ನ ಚುಮ್ಮಿಸಿದ ವೇತ್ರದೊಳು (ಹಮುಚ. ೧೩೫). [ ಚುಮ್ಮ + – ಇಸು$_3$ ]

**ಚುಮ್ಮುಚುಮ್ಮು** (ನಾ). ಒಂದು ಅನುಕರಣ ಶಬ್ದ : ತರಣಿ ಕಿರಣ ಚುಮ್ಮುಚುಮ್ಮನೆ ಬಿಸುಪನು ಧರಿಸಿತಿರುಳ ಕುಮುದಿನಿಯು (ಚಂಪ್ರಸಾಂ. ೧೫-೦೨) ; ಹೊಸ ಹೊನ್ನ ಮಳೆ ಚುಮ್ಮುಚುಮ್ಮನೆ [ಪಾಠಾಂ. ಜುಮ್ಮುಜುಮ್ಮನೆ] ಕಱೆದು ರಂಜಿಸುತದೆ ರಾಶಿರಾಶಿಯೊಳು (ಭರಚ. ೩-೦೦೯).

**ಚುಮ್ಮುಟು** (ನಾ). ಅಲಕ್ಷ್ಯ ; ತಿರಸ್ಕಾರ : "ಅನಾದರೇ – ಚುಮ್ಮುಟಿನೊಳ್" (ಶಾಶಕ್ಕ. ೩೮). [ ? ]

**ಚುಮ್ಮೆನ್** (ಕ್ರಿ). (ರಭಸದಿಂದ) ಶಬ್ದಮಾಡು ; ಸುಯ್ ಎನ್ನು : ಚಂಚನ್ಮೌರ್ವಿ ಚುಮ್ಮೆಂದುಗುಟ್ಟುವುವೂ ಶರಶ್ರೇಣಿಯಂ ಮಾಣದೆಂಬಂತೆ (ಅರ್ಧನೇ. ೬-೪೦). [ ಚುಮ್ + ಎನ್$_1$ ]

**ಚುಯ್** (ನಾ). ಒಂದು ಅನುಕರಣ ಶಬ್ದ ; ಕಾದ ಪಾತ್ರ ಮೊದಲಾದುವುಗಳ ಮೇಲೆ ನೀರನ್ನು ಚಿಮುಕಿಸಿದಾಗ ಉಂಟಾಗುವ ಸದ್ದು : ಕೊಳನಂ ಪುಗಿಸೆ ಮೆಯ್ಯ ಬೆಂಕಿಯಿಂ ಚುಯ್ಯೆಂದು ನೊರೆಗಟ್ಟಿ ಬಿಸಿಯ ತೆರೆ ತಾಮುರ್ಬುಟ್ಟಿ (೧೧೦೯. ೪-೦೦೯ ವ) ; ಪೂತಳಿರ್ ಬಾಡಿ ಕರಂಗಿ ಚುಯ್ಯೆನುತುಮಿರ್ದುವು (ಕಬ್ಬಿಕಾ. ೩೦೪) ; ಪೊಡಕರಿಸಿದುಗ್ರಶರದುರಿಯು ಬಂಬಲ್ಗಳಿಂ ಕಡಲೇಳಱುದಕ ಚುಯ್ಯೆಂದಿಂಗುತಂ ಕೂಡೆ ಹುಡಿಯಾದವು(ವೀಶೈಪು. ೩-೦೨-೦೨): ಕೊಳದಂಬು ಬತ್ತೆ ಚು[ಪಾಠಾಂ. ಸೀ]ಯ್ಯೆಂದೊಳಗಣ ನಳಿನಾಳಿ ಕರಿಕುವರಿಗುಂ (ರಾಜಶೇ. ೫-೩೮).

ಚುಯಿಚ್ಚುಯಿ (ದ್ವಿರುಕ್ತಿ) : ವೀಜನದೆಲರಿಂದ ಪನಿನೀರ್ಗಳಿಂದೆ ಚುಯಿಚ್ಚು[ಪಾಠಾಂ. ಚ್ಚು ಇಚ್ಚು]ಯೆಂದಿಂಗಿಂವವೂ (ಧೈರವೇ. ೨-೦೧೪).

**ಚುಯ್ಯನೆ** (ಅ). ಚುಯ್ಯೆಂಬ ಸದ್ದಿನಿಂದ ಕೂಡಿ: ಜನಿತ ನಿದಾಘದುಗ್ರತರ ತಾಪದಳುರ್ಕೆಯೊಳಿದ್ದು ಕಾಯ್ದು ಚುಯ್ಯನೆ ಕುದಿಗೊಂಡ ನೀರ ಬಿಸುಪಿಂಗೆನಸುಂ ಮಱುಗುತ್ತೆ (ಶಾಂತೀಶ್ವ. ೧೨-೨೪). [ ಚುಯ್ + – ಅನೆ$_1$ ]

**ಚುರಕ್** (ನಾ). ಬಿಸಿ, ನೋವು ಮುಂತಾದುವುಗಳಿಂದ ಉಂಟಾಗುವ ಚುರುಕನ್ನು ಸೂಚಿಸುವ ಅನುಕರಣ ಶಬ್ದ : ನನ್ನ ಮನಸ್ಸು ಒಳಗೊಳಗೇ ಚುರಕ್ ಎಂದಿತು (ಬರಚಾ. ೧೪೮) : ಅವನ ಮನಸ್ಸಿಗೆ ಕಿರಿಕಿರಿಯಾದದ್ದು ನೋಡಿ ಸುಬ್ಬಕೃಷ್ಣನಿಗೆ ಚುರಕ್ ಎಂದಿತು (ರಾಗಿಚ. ೧೧೩).

**ಚುರಚುರನೆ** (ಅ). ಸಶಬ್ದವಾಗಿ: ಚುರಚುರನುರಿವ ಹೆಜ್ಜೊಡರು ಚೀರ್ಚಟಲೆಂಬ ತಱುಗೆಂಡಗಳ ಹೋಮಕುಂಡ (ಭರಚ. ೨೦-೦೨೯). [ <ಚುರುಚುರು + – ಅನೆ$_1$ ]

**ಚುರಮುರಿ** 'ಚುರುಮುರಿ' ನೋ.

**ಚುರಮುರಿ** 'ಚುರುಮುರಿ' ನೋ.

**ಚುರಿ**$_1$ 'ಚೂರಿ' ನೋ.

**ಚುರಿ**$_2$ (ನಾ). ಸಣ್ಣ ಬಾವಿ ; ಬಗರಗೆ : "ಚುರೀ, ಚುಂಡೀ, ಚೂಚುಕಃ– ಈ ೩ ಬಗರಗೆ" (ದಲಾಯು. ೧೦೩-೩೭) : "ಚುರಿ ಚುಂಡಿ ಮಾನಂಗಿ" (ಮಂಗರಾ. ೧೨೫-೧೯). [ ಸಂ. ಚುರಿ, ಚುರೀ ]

**ಚುರಿತಕ** (ನಾ). ಮೊನಚಾದ ಉಗುರಿನಿಂದಾದ ಗಾಯ ; ನಖಕ್ಷತ : ನಖಕ್ಷತದ ಠಾವುಗಳ ಪೇಳುವೆ ಸುಕುಮಾರ ಕೇಳು ಮೈಯುಲಿ ನವಿವ ಮೆಲ್ಲನೆ ಪೊತ್ತೆ ಚುರಿತಕನೆಂಬರದನೆಲ್ಲಾ (ಕಕ್ಕೋಕ. ೦೦-೦೯). [ <ಸಂ. ಆಚ್ಛುರಿತಕ ]

**ಚೆಂಗೂಲಿ**, ಚಂಗೂಲಿ (ನಾ). ೧. ಕೈಗೂಲಿಮಾಡುವವನು; ದಿನಗೂಲಿಯವನು ; ಆಯಾ ದಿನದ ಕೂಲಿಯನ್ನು ಅಂದೇ ಪಡೆದು ಕೆಲಸ ಮಾಡುವವನು: ಕಾಮಾಟ ಚೆಂಗೂಲಿಗಳು ಸಹಾ ಅವರವರ ಸದ್ದಿವಾಲರ ಸಮೇತ ಸಮಯ ಬಿದ್ದ ಹಾಗೆ ಕೆಲಸ ಮಾಡಲು ಬರುತ್ತಿರಲಿ (ಕೇಟಿಮಾ. ೩). ೨. ಸೂಳೆ ; ವೇಶ್ಯೆ: ಯಾಕೆ ಚೆಂಗೂಲಿ ಆಡಿದ ಹಾಗೆ ಆಡುತ್ತಿರುವೆ ? (ರೂಢಿ). **ಚಂಗೂಲಿ:** ೧. ಗುಮಾಸ್ತೆಯರು . . . ಚಂಗೂಲಿ ಪಹರೆಯವರು ಮುಂತಾದ ಜನಗಳನ್ನೂ . . . ನೇಮಕ ಮಾಡಿಸಿ (ಮಹಾದಂ. I, ೧೨೬) ; ಆಂಗ್ಲೇಯರು ಭಾರತೀಯರನ್ನು ಚಂಗೂಲಿಗಳನ್ನಾಗಿಸಿ . . . ಶ್ರೀಮಂತರಾಗಲಾರಂಭಿಸಿದರು (ಹೊಸಹು. ೬೮).

[ ದೇ.॥ ತಮಿ. ಚೆಯ್‌ಕೂಲಿ: ತೆಲು. ಚೇಕೂಲಿ ]

**ಚೆಂಗೆಂಡ** (ನಾ). ಕೆಂಪಗಿರುವ ಕೆಂಡ ; ನಿಗಿನಿಗಿಯಾದ ಕೆಂಡ : ವಿಷಯವಿಂದ್ರಿಯದೊಡನೆ ತಾಗೆ ಚೆಂಗೆಂಡವನು ಕೆದರಿ ಚೇತವ ಸುಡುತ ಇರವನರುಹುವುದು (ಮಲದೇ. ೨೩-೬). [ ಚೆಂ$_1$ + ಕೆಂಡ ]

**ಚೆಂಗೊಕ್ಕು** (ನಾ). ಕೆಂಪಗಿರುವ ಕೊಕ್ಕು, – ಮೂತಿ: ಕಳವೆಯ ಪೊಂದೆನೆಯಿಂ ಸಂಗಳಿಸಿರೆ ಚೆಂಗೊಕ್ಕು ವಚ್ಚೆಯಂತೆಪೊಲಿರೆ ಮುಯ್ಗಳಿಗಳ ಸಾಲ್ನಭದೊಳ್ಕಡ್ಗೊಳಿಸಿತ್ತಾಗಳ್ಸುರೇಂದ್ರಚಾಪದ ತೆರದಿಂ(ಮಲಾಚ. ೫-೩೦).

[ ಚೆಂ$_1$ + ಕೊಕ್ಕು$_2$ ]

**ಚೆಂಗೊಡೆ** (ನಾ). (?) : ಇಡಿದುದ್ದಂ ಬೆಳೆದೇಟ್ಗೆವೆಟ್ಟದ ಬದಿರ್ಗಾಡೆಲ್ಲಮಂ ಬೇಗೆ ನಿಚ್ಚಟದರ್ವಂತಿರ್ದುದು ಸಂಜೆಗೆಂಪದಟಿ ಬಿತ್ತೊಂದೊಂದರಲ್ ತೋರ್ಪಿನಂ ಪಿಡಿದಂತಿರ್ದುವು ನಟ್ಟ ಬಾಂದೊಜೆ'ಯ ವಿಾನೆಲ್ಲಂ ಕಟುರ್ ತಂದ ಚೆಂಗೊ [ಪಾಠಾಂ. ಜೇನೊ]ಡೆಯಂತಿರ್ದುವು ಪಕ್ಕವೆಟ್ಟದೆಡೆಯೊಳ್ ನೀಹಾರರುಙ್ಮಂಡಲಂ (ಸೂಕ್ತಿಸು. ೯-೧೨).

[ P ಇದು 'ಜೇಂಗೊಡ'ಎಂಬುದರ ಅಪಲಿಖಿತವಿರಬಹುದು ]

**ಚೆಂಗೊರಲ್** (ನಾ). ಕೆಂಪಾದ ಕೊರಳು, – ಕಂತ್ರಿಗೆ : ಚಕಾರಕ್ಕೆ – ಚೆಂಗಣಗಿಲೆ . . . ಚೆಂಗೊರಲ್, ಚೆಂದುಟಿ (ಶಮುದ. ೧೮೨ ಪ್ರಯೋ).

[ ಚೆಂ$_1$ + ಕೊರಲ್ ]

**ಚೆಂಗೋಟು** (ನಾ). ಅಂಕಂಡೊಂಕಾಗಿರುವುದು ; ವಿಶೇಷವಾಗಿ ವಕ್ರವಾಗಿರುವುದು (?) : ಮೊಳಕಾಲಿಕ್ಕುತ್ತೆಜಗುತ ನಿಲುತಂ ಕಾಲುಂ ಕಯ್ಯುಂ ಚೆಂಗೋಟಾ [ಪಾಠಾಂ. ಚೆಂಗೊಂಡಾ]ಗಿರೆ ಮೇಲುಂ ತಳವುಂ ಕೆಲವುಂ ಡೊಂಕಿರೆ ಕುಳ್ಳಿರ್ದೇಳುತ್ತಂ ಬೀಳುತ್ತಂ (ಭ್ರಂಗೀಶ. ಹ. ೪೭೩-೨).

[ ? ]

**ಚೆಂಗೋಲ್** (ನಾ). ಕೆಂಪಾದ ಕೋಲು : ಚಕಾರಕ್ಕೆ – ಚೆಂಗಣಗಿಲೆ . . . ಚೆಂಬೊನ್, ಚೆಂಗೋಲ್ (ಶಮುದ. ೧೮೨ ಪ್ರಯೋ). [ ಚೆಂ$_1$ + ಕೋಲ್$_1$ ]

**ಚೆಂಚ**$_1$, ಚಂಚ, ಚಂಚು$_1$ (ನಾ). ಬೇಡ ; ಬೇಟೆಗಾರ : ಶಬರ : ಧಿಟ್ಟ ಚೆಂ[ಪಾಠಾಂ. ಚಂ] ಚರು ಬಂದು ಚಪ್ಪಳೆಗುಟ್ಟಿಯೇಡಿಸಿ ಕಾಡಿದಲ್ಲದೆ ಬಿಟ್ಟು ಹೋಗರು ನಿನ್ನನು(ಬಸವು. ೦೮-೦೫): ಬಿಲ್ಲುಗಳಗೆ ಶಿರುವಿಡುವ ಚೆಂಚರ್ಕಳಿಪ ಗೂಳೆಯಂ (ರೇವಣ. ೩೭-೧೧): ನರೆತೆರೆಯುರೆತ ಚೆಂಚರಿಂ ಚೆಂಚಿತಿಯುರಿಂ (ರೇವಣ. ೧೧೯-೨೦). **ಚೆಂಚ :** ಹೀನಮಾನವರನೀ ಬೇಡರಂ ಚಂಚರಂ . . . ಏನೆಂದು ಅಯ್ಯಯ್ಯಯೆಂದು ಬಾಯ್ಬಿಟ್ಟೆಂದಡೇನಪ್ಪುದು (ಸಿದ್ಧರಾ.೪-೬೭). **ಚಂಚು**$_1$ : 'ಚಂಚುದೊಡ್ಡಿ' ಪರಾ. [ ದೇ.॥ ತೆಲು. ಚೆಂಚು ]

**ಚೆಂಚ**$_2$ (ನಾ). ಒಂದು ಬಗೆಯ ಸಸ್ಯ : "ಅಸಿಸಿಂಬಿ–ಚೆಂಚ" (ಒಷಧಿ. ೫).

[ ? ]

**ಚೆಂಚಲಿ**, ಚಂಚಲಿ, ಚರಿಚಲಿ, ಚರಿಜಲಿ (ನಾ). ಒಂದು ಬಗೆಯ ಸಸ್ಯ: ಚೆಂಚಲಿಸೊಪ್ಪು (ಮೃಷಿಗಿ. ೩೦-೫೮೩). **ಚಂಚಲಿ :** ಗೊರಜಿ, ಚಂಚಲಿ, ಚರಿಜಲಿ, ತಾಳಿಸಪತ್ರ (ಮೃಷಿಗಿ. ೩೭-೭೩೩). **ಚರಿಚಲಿ :** (+). **ಚರಿಜಲಿ :** ಮೇಲಿನ 'ಮೃಷಿಗಿ' ಪ್ರಯೋಗವನ್ನು ನೋಡಿ.[ದೇ.॥ ತೆಲು.ಚೆಂಚಲಿ]

**ಚೆಂಚಿತಿ**, ಚಂಚಿತಿ (ನಾ). ಬೇಡರ ಹೆಂಗಸು : ಬೇಡಿತಿ : ಶಬರಿ : ಮಟಿ'ವೃಲ್ಲೆಯ ಕಣ್ಮಂಚು ಕೆದಱುವ ನೋಟದ ಚೆಂ[ಪಾಠಾಂ. ಚಂ]ಚಿತಿಯಂ ವಿಪ್ರರಾಜವಧು ಕಂಡು (ಪ್ರಭುಸ್ತ. ೧೨-೩೨) : ನರೆತೆರೆಯುರೆತ ಚೆಂಚರಿಂ ಚೆಂಚಿತಿಯುರಿಂ (ರೇವಣ. ೦೦೯-೨೦). **ಚಂಚಿತಿ :** ಪಗಲುಮಿರುಳುಂ ಚಂ[ಪಾಠಾಂ. ಚೆಂ]ಚಿತಿಯರೊಡನಗಲದೆಡೆಯಾಡುತ್ತ ಬಂದು(ಬಸವು. ೪೪-೬).

[ ಚೆಂಚ$_1$ + –ಇತಿ$_1$ (< – ಇತ್ತಿ) ]

**ಚೆಂಚು** 'ಸಂಚು' ನೋ.

**ಚೆಂಜಂಜೆ** (ನಾ). ಕೆಂಬಣ್ಣದ ಸಂಜೆ : ಕಂಜಂಜೆ. ಚೆಂಜಂಜೆ : ಕೆಂದಳಿರ್. ಚೆಂದಳಿರ್ (ಶಬ್ದಾನು. ೩೪೭ ಪ್ರಯೋ). [ ಚೆಂ$_1$ + ಸಂಜೆ ]

**ಚೆಂಜೇನು** (ನಾ). ಕೆಂಪು ಬಣ್ಣದ ಜೇನುತುಪ್ಪ : ಅಚ್ಚುಹಸು ಕರೆದ ಈ ಇನಿದಾದ ಬೆಳ್‌ಪಾಲು, ಪೂಗೆಲಸಿ ಚಿಟ್ಟಜೇನಿಳಿಸಿದೀ ಚೆಂಜೇನು (ಪಾರಸಿ. ೨೩-೫೨೦): ಬೆಳಕು ಮರಳಿತು, ಹೊಷ ಆರಳಿತು, ಚೆಂಜೇನಾಯಿತು ಬಿಳಿ ಹಾಡು (ಶಿರಾಲ. ೬೧-೩). [ ಚೆಂ$_1$ + ಜೇನು(<ಜೇನ್) ]

**ಚೆಂಟಕಣ್ಣ** (ನಾ). ಒಂದು ಬಗೆಯ ಮರ: ಮರಗಳು; ಹೆಸವ, ಹೆಬ್ಬಲಸು . ಚೆಂಟಕಣ್ಣ, ಚಿಟ್ಟುತಂದ್ರಿ, ಬೇವು, ಹುಚ್ಚುಬೇವು (ನಮ್ಮನು. ೨೩೬).

[ ? ]

**ಚೆಂಡಕನರಿ**, ಚಂಡಕನರಿ (ನಾ). ಒಂದು ಬಗೆಯ ನರಿ ; ಗುಳ್ಳೆನರಿ : (+). **ಚಂಡಕನರಿ :** ಒರ್ವ ರಾಯಭಾರಿಯೊಲಿನ್ನೊರ್ವ ಚಂಡಕನರಿ ಸಾಲು (ಚಂಶನ. ೬೨-೦೯). [ ಚೆಂಡಕ ? + ನರಿ$_1$ ]

**ಚೆಂಡಲರು** (ನಾ). ಒಂದು ಬಗೆಯ ಹೂವು ; **ಚೆಂಡುಹೂವು :** ಸತಿಯರ್ಗೆ . . . ಚೆಂಡಲರಿನ ಪೊಟ್ಟಣ ದಿವ್ಯಚಂದನದುಂಡೆಗಳನು ಕೊಟ್ಟು ನಗುತ(ವೀರಚಕ. ೦೪-೩೯). [ಚೆಂಡು(<ಸೆಂಡು)+ಅಲರು$_2$(<ಅಲರ್$_1$)]

**ಚೆಂಡಾಟ** 'ಸೆಂಡಾಟ' ನೋ.

**ಚೆಂಡಾಟಗಾರ** (ನಾ). ಚೆಂಡಿನಿಂದ ಆಟವಾಡುವವನು : ಚೆಂಡಾಟಗಾರರಲ್ಲಾಗಲೀ ಅಥವಾ ಒಂದು ಜೇನುನೊಣದ ಶರೀರದಲ್ಲಾಗಲೀ–ಜಯ ಮತ್ತು ಪ್ರಗತಿ ಸಾಧ್ಯ (ಕೀಟಜ. ೦೦).

[ ಚೆಂಡಾಟ(<ಸೆಂಡಾಟ) + – ಗಾರ(<– ಕಾಜ) ]

**ಚೆಂಡಾಡು** 'ಸೆಂಡಾಡು' ನೋ.

**ಚೆಂಡಾಲ** (ನಾ). ಒಂದು ಬಗೆಯ ಮರ : ಕಂದಾಳೆ, ಸಗಡೆಕಂದಾಳ, ಚಂಡಾಲ (ಮೃಷಿಗಿ. ೩೮-೧೩೯೫). [ ? ]

**ಚೆಂಡಿ**$_1$ 'ಚೆಂಡೆ$_2$' ನೋ.

**ಚೆಂಡಿ**$_2$ 'ಚಂಡಿ$_1$' ನೋ.

**ಚೆಂಡಿಕಸ** (ನಾ). ಬತ್ತದ ಗದ್ದೆಯಲ್ಲಿ, ಪೈರಿನ ನಡುವೆ ಬೆಳೆಯುವ ಒಂದು ಬಗೆಯ ಕಳೆ,–ಹುಲ್ಲು: (+). [ ಚೆಂಡಿ$_1$(<ಚೆಂಡೆ$_2$) + ಕಸ ]

**ಚೆಂಡಿಕೆ**, ಚಂಡಿಕೆ$_1$(ನಾ). ಜುಟ್ಟು; ಶಿಖೆ: "ಶಿಖಾ, ಕಾಕಪಕ್ಷಃ, ಶಿಖಂಡಿಕಾ-ಈ ೩ ಚೆಂಡಿಕೆ" (ದರಾಯು. ೮೮-೩೭೮) : ಪೊನ್ನ ಪಂಜರಮಂ ಪೊತ್ತಿರದೇಟ್ಟ್ರಂದಂ ಚೆಂ[ಪಾಠಾಂ. ಚಂ] ಡಿಕೆವೆರಸಿದ ಚಂಡಾಲ ಬಾಲಕಂ(ಕಾದಂಪೂ. ೩೭) ; ನಂದಿನಿಯ ಪಾಲಿದೆ ನೀಂ ಕುಡಿಯುಲ್ಕ ನಿನ್ನ ಚೆಂಡಿಕೆ ಬಳೆದಪ್ಪುದು (ಜಗನ್ನಿ. ೩-೫೧); ಚೆಂದದಿಂ ಚೆಂ[ಪಾಠಾಂ. ಚಂ]ಡಿಕೆವಿಡಿದು ಮಾಗಳನುತ್ತರಿಸು ಪಂದದಿಂ (ಮಾನಸ. ಸ. ೩೯-೧೪) ; ಚೆಂ[ಪಾಠಾಂ. ಚಂ]ಡಿಕೆಗಳ ಬಾಲಕರ ಮಂಡಳಿಯನು . . . ಕಂಡಳಾ ಕಮಲದಳಾಕ್ಷಿ (ಕುರಾಪಾಂ. ೭-೫೪). **ಚಂಡಿಕೆ**$_1$: ಕಪ್ಪಗೆ [ಸಲೆ] ಚೆಲ್ವಾಗಿಯೆ ಚಂಡಿಕೆ ಸೆಗೆದೊಡವಾಗವು ಮುಟಿ' (ಅಟ್ಟಮ. ೫-೨) ; ಕೆಂಪದಂಥಪಯೆನ್ನ ಗಂಡ ಕಂಪರೆ ಹಿಡಿದುಕೊಂಡು ಚಂಡಿಕೆಯ ದಂಡಿಸದೆ ಬಿಡ (ಪುರಂದ. ೧-೭೫-೫) : ಅಂದವಾಗಿ ಚಂಡಿಕೆ ಕಟ್ಟಿ ಹಣೆಗೆ ತಿಲಕವನ್ನು ಇಟ್ಟುಕೊಂಡು ದೇವರಿಗೆ ವಂದಿಸುವವನು(ಶರವು. ೫-೩೩).

[ <ಸಂ. ಶಿಖಂಡಿಕಾ ]

**ಚೆಂಡಿಕೆವುಣುಸೆ** (ನಾ). ಒಂದು ಬಗೆಯ ಹುಣಸೆ (?) : ಚಾವಗಾವುಣ್ಡನ ಸೋಭನಗಾವುಣ್ಡನ ಪೊಲದೊಳ್ [ಚೆ]ಣ್ಡಿಕೆ [ವು]ಣುಸೆಯಿಂ ಮೂಡಂ ಮು[ಟ್]ಯಂಗೇರಿ ಸೀಮೆಯಿಂ ಬಡಗಣ ದೆಸೆಯೊಳ್ (ಸೌಇಇ. XX, ೩೮-೩೦ : 1058). [ ಚೆಂಡಿಕೆ$_0$ + ಪುಣುಸೆ(< ಪುಣಸೆ) ]

**ಚೆಂಡಿಗೊಳ್ಳು** 'ಚಂಡಿಗೊಳ್' ನೋ.

**ಚೆಂಡಿಸು**, ಚಂಡಿಸು$_1$ (ಕ್ರಿ). ೧. ತಲೆ ಕತ್ತರಿಸು : ಈ ಕ್ಷಿತಿಮಂಡಲದೊಳು ಉದ್ದಂಡ ದೈತ್ಯರ ಚೆಂಡಿಪ ನರಹರಿಯೆ (ಪುರಂದ. ೧-೧೬೬-೨). **ಚಂಡಿಸು$_1$** : ೨. ಉತ್ಸಾಹಿಸು ; ಪುಟನೆಗೆ : ಕಂಡು ಕನಸಿನೊಳು ರೂಪ ಜಯಂತನ ಪುಂಡರೀಕಾಕ್ಷಿ ಪುಳಕದೆ ಚಂಡಿಸಿ ಮೇಲ್ವಾಯ್ದವನೆಂದೇ ತಬ್ಬಿಕೊಂಡಳು ಬಯಲನೇನೆಂಬೆ (ಕಂವವಿ. ೯-೧೬೬). [ ಚೆಂಡು (< ಸೆಂಡು) + – ಇಸು$_3$ ]

**ಚೆಂಡು** 'ಸೆಂಡು' ನೋ.

**ಚೆಂಡುಕಾರೆ** (ನಾ). ಕಾರೆಗಿಡದಲ್ಲಿ ಒಂದು ಬಗೆ : ಬೆಟ್ಟದ ಕವ್ಮಗಗ್ಗರೆ. ಚೆಂಡುಕಾರೆ (ವೃಶಿಗಿ. ೮೮-೦೬೦೯). [ ಚೆಂಡು (< ಸೆಂಡು) + ಕಾರೆ$_1$ ]

**ಚೆಂಡುಗ** (ನಾ). ಒಂದು ಬಗೆಯ ಮರ : " ಅಕ್ಷಃ–ತಾಡಿಕವಡೆ, ಚೆಂಡುಗ, ದೇವಸಾಸಿವೆ " (ಒಷಧಿ. ೧). [ ? ]

**ಚೆಂಡುಚೇಣಿಹುಲ್ಲು** (ನಾ). ಒಂದು ಬಗೆಯ ಹುಲ್ಲು : (ವೃಶಿಗಿ ೨೬-೫೨೬).
[ ಚೆಂಡು$_0$ + ಚೇಣಿ$_1$ + ಹುಲ್ಲು(< ಪುಲ್) ]

**ಚೆಂಡುಮಲ್ಲಿಗೆ**, ಚಂಡುಮಲ್ಲಿಗೆ (ನಾ). ಒಂದು ಬಗೆಯ ಗುಂಡಾದ ಹೂ : ಸೀಮೆ ಶಾವಂತಿಗೆ, ಚೆಂಡುಮಲ್ಲಿಗೆ (ವೃಶಿಗಿ. ೬೩-೦೫೦೧). **ಚಂಡುಮಲ್ಲಿಗೆ** : (೬). [ ಚೆಂಡು(< ಸೆಂಡು) + ಮಲ್ಲಿಗೆ ]

**ಚೆಂಡುವೂ**, ಚಂಡುಹೂವು, ಚೆಂಡುಹೂ (ನಾ). ಒಂದು ಬಗೆಯ ಹಳದಿ ಹೂ : 'ನೀನೊಂದು ಪೂವಿನ ಚೆಂಡು' ಎನುತೆನ್ನ ಮುದ್ದಾಡು ತಿರ್ದನ್ 'ಚೆಂಡುವೂ !ಚೆಂಡುವೂ !' ಎಂದಟ್ಟಹಾಸಂ ಮೊಳಗಲದ್ಭುತಂ ನಗುತೆ .(ಶ್ರೀರಾಮಾ. ೬೦೪-೧೪೬). **ಚಂಡುಹೂವು** : ಚಂಡು ಹೂವಿನಲ್ಲಿ . . . ಬಹಳ ಪ್ರಕಾರ ಕುಲಗಳುಂಟು (ಕೃಬಿಶ್ರ. ೨೦೦). **ಚೆಂಡುಹೂ** : ಗೌರೀಮುಡಿ, ಚೆಂಡುಹೂಗಳಂಥ ಬಣ್ಣಬಣ್ಣದ ಹೂಗಳಿಗೆ ಬಡತನವೇ ಆ ಏರೆಯಲ್ಲಿ ? (ಬೆಳುಮ. ೧೩). [ ಚೆಂಡು(< ಸೆಂಡು) + ಹೂ$_2$(< ಪೂ$_2$) ]

**ಚೆಂಡುಹೂ** 'ಚೆಂಡುವೂ' ನೋ.

**ಚೆಂಡೆ$_1$**, ಚಂಡೆ$_1$ (ನಾ). ಒಂದು ಬಗೆಯ ಚರ್ಮವಾದ್ಯ : ಚೆಂಡೆಯ ತಾಳಕ್ಕನುಗುಣವಾಗಿ . . . ಕುಣಿವುದನ್ನು ನೋಡುತ್ತಿದ್ದರೆ, ನೋಡು ತ್ತಿದ್ದವರಿಗೆ ಆಡುತ್ತಿರುವ ಕಥೆಯೇ ಮರೆತುಹೋಗುತ್ತಿತ್ತು (ವಿಸದು. ೦೯). **ಚಂಡೆ$_1$** : ಮೇಳದವರ ಚಂಡೆಯ ಧ್ವನಿ ಉಕ್ಕೇರಿ ಹರಡುತ್ತದೆ (ಸಂಸ್ಕಾರ. ೦೪೨). [ದೇ.೩ ತಮಿ. ಚೆಣ್ಟೈ ; ಮಲ. ಚೆಣ್ಡ ; ತುಳು. ಚೆಂಡ]

**ಚೆಂಡೆ$_2$**, ಚೆಂಡಿ$_1$ (ನಾ). ೧. ಒಂದು ಬಗೆಯ ಗಂಧದ್ರವ್ಯ; ಕರಿಕಚೋರ : " ಗಣಹಾಸಕಃ–ಚೆಂಡೆಯೆಂಬ ಗಂಧದ್ರವ್ಯ " (ಒಷಧಿ. ೪೬). **ಚೆಂಡಿ$_1$** : ೨. ಒಂದು ಬಗೆಯ ಸಸ್ಯ : (೬). [ < ಸಂ. ಚಂಡಾ ]

**ಚೆಂತಲಪಲ್ಲಿ** (ನಾ). ಒಂದು ಊರಿನ ಹೆಸರು ; ಈಗಿನ ಬಾಗೇಪಲ್ಲಿ ತಾಲ್ಲೂಕಿನ ಚಿಂತನಪಲ್ಲಿ : ಪಲ್ಲವಮಾರಾಜ ಪ್ರಿಥಿವೀರಾಜ್ಯಂಗೆಯೆ ಚೆನ್ತಲಪಲ್ಲಿನ ಊರೆಕೆ ದೇವಿನಮ್ಮ . . . ಚೆ ನ್ತ ಕ ಪು ಲ್ಲ ನಾ ಚೆ ಕಾ ರ (ಎಕ. X, ಬಾಗೆಪ. ೭೭-೪ ; ಸು.900). [ ಚೆಂತಲ ? + ಪಲ್ಲಿ$_2$(< ಪಳ್ಳಿ$_1$) ]

**ಚೆಂದ$_1$** 'ಚಂದ$_1$' ನೋ.

**ಚೆಂದ$_2$** 'ಚಂದ$_2$' ನೋ.

**ಚೆಂದಂಗೆಡು** 'ಚಂದಗೆಡು' ನೋ.

**ಚೆಂದಂಬಡೆ** (ಕ್ರಿ). ಅಂದವನ್ನು ಪಡೆ ; ಸೊಗಸನ್ನು ಹೊಂದು : ಪಾರ್ವರ ಕೇರಿಯಂತೆ ಚೆಂದಂಬಡೆದ ಮಡದಿನೆಸೆವುಂ ತೇರೆನಿಸಂ (ಕಬ್ಬಿಕಾ. ೫೧).
[ ಚೆಂದ$_1$(< ಚಂದ$_1$) + ಪಡೆ$_1$ ]

**ಚೆಂದಕಾಣಿಸು** 'ಚಂದಕಾಣಿಸು' ನೋ.

**ಚೆಂದಕಾಣು** 'ಚಂದಕಾಣು' ನೋ.

**ಚೆಂದಗಲೆ** (ನಾ). ಚಂದ್ರನ ಕಳೆ ; ಚಂದ್ರಬಿಂಬ : ದೇವರಾದಿತ್ಯನಂ ಪೊಸ ಚೆಂದಗಲೆಯ ಹುಟ್ಟಂಗೆಯ್ದನಂ (ಉದ್ಭದೇ. ೩-೩೦).
[ ಚೆಂದ$_2$(< ಚಂದ$_2$) + ಕಲೆ$_3$ ]

**ಚೆಂದಗೇಡಿ** 'ಚಂದಗೇಡಿ' ನೋ.

**ಚೆಂದಗೇಡಿತನ** 'ಚಂದಗೇಡಿತನ' ನೋ.

**ಚೆಂದಬಾಳು** (ನಾ). ಸೊಗಸಾದ ಬದುಕು,–ಜೀವನ : ಒಂದಿರಿತಕಿಂದೆ ನೀನೆಲ್ಲರದೆಯನ್ . . . ಚೆಂದಬಾಳನ್ ಮೆಚ್ಚುವೆಲ್ಲರೆದೆಯನ್ ! (ಹೂಂಗಳು. ೨೬-೨೦). [ ಚೆಂದ$_1$(< ಚಂದ$_1$) + ಬಾಳು$_2$(< ಬಾೞ್$_2$) ]

**ಚೆಂದಮಿೞ್** (ನಾ). ಶುದ್ಧವಾದ ತಮಿಳುಭಾಷೆ : (೬).
[ ಚೆಂ$_2$ + ತಮಿೞ್./ತಮಿ. ಚೆನ್ತಮಿೞ್ ]

**ಚೆಂದಲ್** (ನಾ). ಒಂದು ಬಗೆಯ ಭತ್ತ,–ನೆಲ್ಲು : ನವಗಂಧೋದ್ಗಮ ಗಂಧಶಾಳಿ ಶುಕಲೀಲಾಳಾಪದಿಂದಾದವೊಪ್ಪುವ ಚೆಂದಲ್ ಸಹಕಾರಪಕ್ವರಸ ಸಾರಾಸಾರ ಪಾನೀಯದಿಂ ಸವಿಶೇಷಂ ಬೆಳೆದೊಟ್ಟಿ ತೋರ್ಪ ಕಳಮಂ (ಸುಕುಮಾ. ೧-೭೪). 'ಕೆಂದಳಗ' ಪರಾ. [ ? ]

**ಚೆಂದಲ** (ನಾ). ಒಂದು ಬಗೆಯ ಮರ: ಮರಗಳು : ಹೆಸವ, ಹೆಬ್ಬಲಸು . . . ಸಾಗಡೆ, ಚೆಂದಲ (ನಮ್ಮನು. ೨೩೬). [ ? ]

**ಚೆಂದವ** 'ಚಂದವು' ನೋ.

**ಚೆಂದವಗಲ್** (ನಾ). ಚಂದ್ರಕಾಂತಶಿಲೆ: ಕಿಸುವೊನ್ನ ಪಂಜರಿಯ ಚೆಂದವಗಲ್ಲ ಕೋಂಟೆಯ ಮೂವಳಸಿನಗೞ್ಂದೊಳಗೆ ಕರ್ವಣಿಯ ನೆಲೆಗಟ್ಟಂ ಪಳಿಕಿನಟ್ಟೆಯ ಭಿತ್ತಿಯಿಂ (ರಾಮಾಶ್ವ. ೫೪-೦೯). 'ಚಂದಗಲ್' ಪರಾ.
[ ಚೆಂದವ (< ಚಂದವು) + ಕಲ್$_3$ ]

**ಚೆಂದವೇರು** (ಕ್ರಿ). ಸೊಗಸು ಹೆಚ್ಚಾಗು ; ಅಂದವೇರು : ಸಾರಣೆ ಕಾರಣೆ ಸುಣ್ಣಬಣ್ಣಗಳಿಂದೆ ಗುಡಿಸಲು ಚೆಂದವೇರುವೊಲು (ಇಂಬಾಪ. ೨೩೩-೫೩). [ ಚೆಂದ$_1$ (< ಚಂದ$_1$) + ಏರು$_1$ (< ಏಱ್) ]

**ಚೆಂದಳ**,ಚಂದಳ (ನಾ).ಕೆಂಪಾಗಿರುವ ಅಂಗೈ: ನುಣ್ಗೂಡನಂ ಮುಗುದೆಯ ರೆರಡುಂ ಚೆಂದಳದಿಂದವೆ ನೆಗಪಿ ಮನೋರಾಗದಿ ರಂಜಿಪ ಸಿರಿದಲೆ ಯೊಳಗೇಱಿಸಲು (ಜಯುಕಾ. ೯-೦೫) : ಚೆಂದಳವ ನೊಸಲೆಡೆಗೆ ತಂದೊಲ ವಿಂದ ನೆಗೆದಪ್ಪಿದಳು ಪರಸುತ ಕಂದದನು ಮೂಜಗದ ಸಿರಿ ಕೈಸಾರ್ದ ತೆಱವಾಗೀ (ಸಾಳ್ವಭಾ. ೩೦-೪೪). **ಚಂದಳ** : ಚೈತ್ರಮಿತ್ರನ ಪಟಯುಗೆಯ ತಳಿರ್ಗಳಂ ಪೞಿವ ಚಂದಳದಿಂದಶೋಕೆಯ ಕೊಸೆದಳಿರನುಣಿಸಿತ್ತು ಪಸುಳೆಗೋಗಿಲೆಗಳಂ ಪೊರೆವ ವೀಣಾನಿನಾದೆಯರಿಂ (ಉದ್ಭಟ. ೧-೭೮ ವ).
[ ಚೆಂ$_1$ + ತಳ$_3$ ( = ತಲ$_2$) ]

**ಚೆಂದಳಿರ್**, ಚಂದಳಿರ್, ಚೆಂದಳಿರು (ನಾ). ಕೆಂಪು ಚಿಗುರು ; ಎಳೆಯ ಚಿಗುರು : 'ಮಧುಮಿ[ದುಱ್] ಸೊಕ್ಕನಾಳ್ದ ಕೀರಳಿಯರ ಕದಪಿನ ಬಣ್ಣಮಪ್ಪ ಚೆಂದಳಿರ್ದುಱುಗಲ್ (ಕಾದಂಪೂ. ೯೬): ಚೆಂದಳಿರ್ ಪೊಸನನೆಗಳುಳ್ಳರಲ್ ಕಸುಗಾಯ್ ಕರಂದೋಱ್ (ಪದ್ಮರಾ. ೮-೪): ಎಳವೆಯನುಳಿಯದ ಚೆಂದಳಿರೆನೆಯುನಿದುಟಿ ಸೊಗಯಿಸಿತು (ಜಯುಕಾ. ೩-೪೧) : ಗಿಡುಗಳೆಲ್ಲಂ ತಳಿರ್ಚೆಂದಳಿರೆಳದಳಿರಲೆ ಬೆಳ್ಳಿಲೆ ಪಸುರೆಲೆ ಪಣ್ಣೆಲೆ ಗಳಿಂ ರಂಜಿಸೆಯುಂ (ರಾಮಾಶ್ವ. ೦೬-೨೫). **ಚಂದಳಿರ್** : ಸೋಮಾರ್ಗಡಿ ಚಂ[ಪಾಕಾಂ ಚೆಂ]ದಳಿರೆಳಲತೆ (ದಕುನಿ. ೦೨೨) **ಚೆಂದಳಿರು** : ಚೆಂದಳಿರು ದಿನದಿನವುಮೊಗೆಯೆ ನೀರೆರೆದು (ಮಂಕುಳ. ೨೫೩): ವೃಕ್ಷಲತೆಗಳೆಲ್ಲ ಹೊಸ ಚೆಂದಳಿರ ಉಡಿಗೆಯಿಂದೊಪ್ಪಿವೆ (ಶಾಂಕಲಾ. ೪೦).
[ ಚೆಂ$_1$ + ತಳಿರ್$_2$ ]

**ಚೆಂದಳಿರು** 'ಚೆಂದಳಿರ್' ನೋ.

**ಚೆಂದಳಿರ್ಗೈ** (ನಾ). ಕೆಂಪು ಚಿಗುರಿನಂತಿರುವ ಕೈ; ಅಂಗೈ: ಚೆಂದಳಿರ್ಗೈಯ ಕುಮಾರಿಯ ರೂಪನದೇನಂ ಬಣ್ಣಿಪೆನು (ಆದಿಪು. ೩-೬೨) ; ಸುದತಿಯರಧಿನಾಯಕಿಯ ಸುಣ್ಣಿಡೊಳ್ಗಳಗ್ರದೊಳು ಚೆಂದಳಿರ್ಗೈಯ್ಗಳೆಸೆದವು (ತ್ರಿಪುರ. ೭೦-೫೩). [ ಚೆಂದಳಿರ್ + ಕೈ$_2$ (<ಕಯ್$_2$) ]

**ಚೆಂದಳಿರ್ದೊಂಗಲ್** (ನಾ). ಕೆಂಪಾದ ಚಿಗುರುಗಳ ಗೊಂಚಲು,–ಗುಂಪು : ಚೆಂದಳಿರ್ದೊಂಗಲಿಂ ವಿಸುಪಶೋಕ ಫಲಾವಳಿ ತೀವಿ ತೋರ್ಪ ಮಾಕಂದಂ . . . ಒಪ್ಪಿರೆ ನಂದನವಲ್ಲಿ ರಂಜಿಕುಂ (ಕಬಕಂ. ೨-೪೧).
[ ಚೆಂದಳಿರ್ + ತೊಂಗಲ್ ]

**ಚೆಂದಳಿರ್ವಾಸು** (ನಾ). ಕೆಂಪು ಚಿಗುರಿನಿಂದ ಮಾಡಿದ ಹಾಸಿಗೆ : ಚೆಂದಳಿರ್ವಾಸಿನೊಳತ್ತಮಿತ್ತ ಚೆಲ್ವಿಂಗೆಡೆಯಾಗಿ ಸೂಸಿದರಲುಂ ನಳಿದುಂಬುಲಮುಂ . . . ದೇವದಂಪತಿಯ ಕೂಟಮನೇಂ ಬಿಸುಣಾಡಲಾರ್ತರ್ಪೊ: (ಕಬಕಂ. ೧-೫೦). [ ಚೆಂದಳಿರ್ + ಪಾಸು$_2$ ]

**ಚೆಂದಾವರೆ** (ನಾ). ಕೆಂಪಾದ ತಾವರೆ ; ಕೆಂದಾವರೆ "ರಕ್ತೋತ್ಪಲಂ–ಚೆಂದಾವರೆ" (ಒಷಧಿ. ೧೩೫) [ ಚೆಂ$_1$ + ತಾವರೆ (<ತಾಮರೆ) ]

**ಚೆಂದಿರ** (ನಾ). ಚಂದ್ರ : ಚೆಂದಿರಗೆಜಗಿ ದೇವಾಂಗದೆಳೆದೆಗೆದು ಮಧುವ ನೂಲವಿಂದೆ ಮನ್ನಿಸಿ (ಪದ್ಮರಾ. ೮-೯೩) ; ಇಂದ್ರಿಯದ ಆಶೆಗಳ ಬಂಧಿಸದೆ ಕೊಂದವನು ಸುಂದರನು ಅಕ್ಕ ಸುಖಿಯಕ್ಕ ಲೋಕಕ್ಕೆ ಚೆಂದಿರನು ಅಕ್ಕ (ಸರ್ವಜ್ಞ. ೫೪೩). [ <ಸಂ. ಚಂದಿರ ]

**ಚೆಂದಿರುಳು** (ನಾ). ಉತ್ತಮವಾದ ತಿರುಳು ; ಚೆನ್ನಾದ ಸಾರ : ಪೆರುಮಾಳನ ಕೆಂದಾವರೆ ಬೆಳಕಿನ ಚೆಂದಿರುಳೇ ಬಾಳಿನ ತಿರುಕೋಡೊಳಗಿನ ಬಲು ಅರಿವಿನ ಅರುಳೇ (ಅರಳು. ೨೨೫-೯).
[ ಚೆಂ$_2$ + ತಿರುಳು (<ತಿರುಳ್) ]

**ಚೆಂದುಗೋಳಿ** (ನಾ). ಒಂದು ಸ್ಥಳದ ಹೆಸರು (?) : ವಿಕ್ರಮಾದಿತ್ಯ ಭಟರಕ × × × ಚೆನ್ದುಗೋಳಿ ವಳಿಯುರಾದಿಲಿ × × ಳಿಗಳ್ಗೆ ಕೊಟ್ಟ ಭೂಮಿ ವಿವರ (ಎಕ. VIII, ಸಾಗರ. ೯೩-೩ ; ಸು. 680 ?). [ ? ]

**ಚೆಂದುಟಿ, ಚಂದುಟಿ** (ನಾ). ಕೆಂಪಗಿರುವ ತುಟಿ ; ಕೆಂದುಟಿ : ಅವಳ ಚೆಂದುಟಿಯುಂ ಪೊಸ ತೊಂಡೆವಣ್ಣದೊಂದಚ್ಚರಿಯಲ್ಲಿ ಪುಟ್ಟಿತೆನುತ (ಉದ್ಭಟ. ೬-೭೪) : ಅವಳು ಚೆಂದುಟಿಗಳಲ್ಲಿ ಬೆಳ್ನಗೆಯನ್ನು ಅರಳಿಸಿ ಆನಂದದ ನಿರ್ಝರಿಯನ್ನು ಹರಿಸಿದಳು (ಎರಡು. ೧೭). **ಚಂದುಟಿ** : ತಳಿರ್ಗೆಯ್ದು ಎಳೆಯಳ ಚ[ಪಾಠಾಂ ಚೆ]ಂದುಟಿದಳಿರಂ ತಳಿರ್ಗೆತ್ತು ಕದರ್ಪಿಕಿದುದು ಕಿಕಂ (ರಾಜಶೇ. ೧೦-೫೪). [ ಚೆಂ$_1$ + ತುಟಿ$_2$ ]

**ಚೆಂದುಡಿಗೆ** (ನಾ). ಕೆಂಪುಬಣ್ಣದ ಬಟ್ಟೆ,–ಉಡಿಗೆ: ಚೆಂಗದಿರನು ಚೆಂಬಿಸಿಲ ಚೆಂದುಡಿಗೆಯನ್ನು ವಿಂಧ್ಯಯ ಗಿರಿಶಿಖರಗಳಿಗೆ ತೊಡಿಸುತ್ತಿದ್ದಾನೆ (ಮುಚಿತ. ೧). [ ಚೆಂ$_1$ + ತುಡಿಗೆ (<ತೊಡುಗೆ) ]

**ಚೆಂದುಳ್ಳಿ** 'ಚಂದೊಳ್ಳಿ' ನೋ.

**ಚೆಂದುಳ್ಳಿ** 'ಚಂದೊಳ್ಳಿ' ನೋ.

**ಚೆಂದೆಂಗಾಯ್** (ನಾ). = ಚೆಂದೆಂಗು : ಎಸೆವ ಚೆಂದೆಂಗಾಯ್ಗಳೊಂದೊಂದ ನೊಡೆಯೊತ್ತಲೊಸರಿ ಸೋರ್ವೆಳನೀರ್ಗಳರ್ಘ್ಯಂಗಳಾಗೆ ರಂಜಿಸುವ ಬನದೇವಿ (ಪ್ರಮಿಳಾ. ೩-೨೭). [ ಚೆಂ$_1$ + ತೆಂಗಾಯ್ ]

**ಚೆಂದೆಂಗು, ಚಂದೆಂಗು** (ನಾ). ಕೆಂಪು ಬಣ್ಣದ ತೆಂಗು ಮತ್ತು ಅದರ ಕಾಯಿ: ಕಾಯ್ಬಿಡುಗಲಂ ಪೇರ್ದ ಚೆಂದೆಂಗು ಕಟ್ಟಲಿಸುತ್ತಿರ್ಪಲವಳ್ಳಿ . . . ಎಸೆಗುಂ (ಆದಿಪು. ೧-೭೭) ; ಭೂಲತಾಂಗಿ ತೆಗೆದಿಕ್ಕಿಟ್ಟ ರಸರತ್ನಪೋಲೆನಿಸಿ ಫಲಿತ ಚೆಂದೆಂಗೆಸೆದುವು (ಹರಿಶ. ೩-೨೮) ; ಒಪ್ಪುವ ಚೆಂದೆಂಗಲ್ಲದೆ ಮಾವಲ್ಲದೆ ಕೌಂಗಲ್ಲದೆ ಗಿಡುಮರಗಳೆಂಬುವಿಲ್ಲಾ ನಾಡೊಳ್ (ಕಬ್ಬಿಗ. ೨೦): ಮೇಘರಾಜನ ಬರವನೆ ಪಾರ್ವ ಚೆಂದೆಂಗುಗಳ ಪಂತಿಗಳ್ (ರಾಮಾಶ್ವ. ೮-೨೨). **ಚಂದೆಂಗು** : (ಕಿ). [ ಚೆಂ$_1$ + ತೆಂಗು$_3$ ]

**ಚೆಂದೊಂಗಲ್** (ನಾ). ಕೆಂಪಾದ ಗೊಂಚಲು ; ಚಿಗುರಿನ ಗೊಂಚಲು : ಅಗ್ನಿ ಸೀಡಿದನಲ್ತೆ ತನ್ನಂಗಳದ ಮರದ ಮಾಂದಳಿರ ಚೆಂದೊಂಗಲಂ ? (ಶ್ರೀರಾಮಾ. ೪೮-೫೫೧). [ ಚೆಂ$_1$ + ತೊಂಗಲ್ ]

**ಚೆಂದೊರಳೆ** (ನಾ). ಕೆಂಪಾದ ಗುಲ್ಮ,–ಪ್ಲೀಹ : ಕರುಳ ಪೂಗೊಂಚಲು ಖಂಡದ ಕಳಿಕೆ ಬಂಧುರದೆಲು ಶಾಖೆಗಳಾಗೆ ಒಗಿದು ಚೆಂದೊರಳೆದಳಿರ ಕಬಂಧದ್ರುಮ ಮೆಱೆದುವು ಖಡ್ಗಚೈತ್ರದಲಿ (ಕಂಸವಿ. ೦೫-೫೧).
[ ಚೆಂ$_1$ + ತೊರಳೆ$_1$ ]

**ಚೆಂದೊಳ್ಳಿ** 'ಚಂದೊಳ್ಳಿ' ನೋ.

**ಚೆಂದ್ರಕಾಳಿ** 'ಚಂದ್ರಕಾಳಿ' ನೋ.

**ಚೆಂಬಕ** 'ಚಂಬಕ' ನೋ.

**ಚೆಂಬಕವಱಿ** 'ಚಂಬಕವಱಿ' ನೋ.

**ಚೆಂಬಟ್ಟೆ** (ನಾ). ಕೆಂಪು ಬಟ್ಟೆ,–ವಸ್ತ್ರ : ಬಾಲೆಯುರದೊಳೊಂದಿದ ಪೊಸ ಬೆಮರ್ವಾರ್ತ್ತು ಬೀಳಲೀದ ಚೆಂಬಟ್ಟೆಯ ನೂಲಂತೆ ಕಂಗೆಸೆದುದು ತೋರವೊಲೆಗಳ ಮೇಲೆ ರಂಜಿಪ ನೀಲ ನಖರೇಪೆ (ತ್ರಿಪುರ. ೦೩-೬೯).
[ ಚೆಂ$_1$ + ಬಟ್ಟೆ$_2$ ]

**ಚೆಂಬಡಿ** (ನಾ). ಒಂದು ಪ್ರದೇಶದ ಹೆಸರು (?) : ಅನ್ತೆ ತೆ[ಂ]ಕ ಅತ್ತಿಯೆಡು ಪಳ್ಳಂ[ಬೆ]× ಗಾಲು ಬೆಮ್ಬಡಿ (ಎಇ. X, ೬೭-೯೪; ೮ನೆಯ ಶತ).
[ ? ]

**ಚೆಂಬಣ್ಣ** (ನಾ). ೧. ಕೆಂಪುಬಣ್ಣ : ಚೆಂಬಣ್ಣ ಮಾಂದಳಿರಸುಗೆ ಪುನ್ನಾಗ ದಾಳಿಂಬ ತ್ರಿಪರ್ಣ ಪುಷ್ಪಗಳು . . . ಬನದಿ ರಂಜಿಸಿತು (ಮೋಹತ. ೪-೪೯): ಬಾಯ್ದೆಱೆಬವಳದ ಚೆಂಬಣ್ಣಮಿಂತು ಬನ್ನಂಬಡಿಕುಂ (ಚಕವಿ. ೬-೬೩). ೨. ಕೆಂಪುಬಣ್ಣದ ವಸ್ತ್ರ,–ಬಟ್ಟೆ : ಕುಂಭಾಂಡ ಮಂತ್ರಿಶೇಖರ ಮುಖ್ಯ ದೈತ್ಯರ್ಗೆ ಚೆಂಬಣ್ಣವನುಡಿಸಿದನು (ಮೋಹತ. ೩೫-೪). [ ಚೆಂ$_1$+ಬಣ್ಣ ]

**ಚೆಂಬಣ್ಣು** (ನಾ). ಕೆಂಪಾದ ಹಣ್ಣು ; ಪಕ್ವವಾದ ಹಣ್ಣು : ಚೆಂಬಣ್ಣುಗಾಯ್ಗಳಂ ತೊಡವಿಟ್ಟು ಹೂವಿಟ್ಟು ಕುಣಿಯುವಳ್ (ಕಾಲೂರ. ೧೨೦-೨೫೧). [ ಚೆಂ$_1$ + ಪಣ್ಣು$_3$ (<ಪಣ್$_3$) ]

**ಚೆಂಬದುಮ** (ನಾ). ಕೆಂಪು ಕಮಲ : ಅದಱ ಮೊದಲ್ ಸುವರ್ಣಘಟಕಂ . . . ಚೆಂಬದು(?)ಮದ ಘಂಟಿಕಾಪಟಕಮಂ ತಳೆದಿಂತೊಗೆದಿರ್ಪುದು (ಶಾಂತೀಶ್ವ. ೧೭-೩೨). [ ಚೆಂ$_1$ + ಪದುಮ (<ಪದುಮ) ]

**ಚೆಂಬರಣ** (ನಾ). ಕೆಂಪು ಭರಣಿ : ಏಂ ಬಱಿದೆ ಪರವುವೈ ಫಲಮಂ ಬರಣಿಯನಿರಿಸು ಕೆಲಕೆ ನೆರವೆಲೆವೇಟಾ ಪೊಂಬರಣಗಳೆರಡರ್ಕಂ ಚೆಂಬರಣಗಮನಿತಱಿಂದೆ ತಣಿದಪೆವೀಗಳ್ (ಚಕವಿ. ೬-೫೦).
[ ಚೆಂ$_1$ + ಬರಣ ]

**ಚೆಂಬರಿಗೆ** (ನಾ). ಚೆನ್ನಾದ ಗುರಾಣಿ : ಕಚಂ ಸಾರಮೆನಿಪ್ಪ ಚೆಂಬರಿಗೆಯಂ ನಳಿತೋಳಸಿಯುಂ ಸಮಂತು ಪೋಲ್ತು ರಮಣೀನಿಕಾಯದಿನನಂಗನ ಸಚ್ಚಿನ ದಿವ್ಯಶಸ್ತ್ರ ಭಂಡಾರದ ಗೇಹಮಂ ನೆಱೆಯೆ ಪೋಲ್ತುದು ಭೂವನಿತೇಶನೋಲಗಂ (ಧರ್ಮಾಮೃ. ೯-೦೪೦). [ ಚೆಂ$_2$ + ಪರಿಗೆ$_3$ ]

**ಚೆಂಬವಳ** (ನಾ). ಕೆಂಪು ಹವಳ : ಕರ್ಮಣಿಸರದೊಳ್ ಚೆಂಬವಳಮಂ ಕೋದಂತಿರೆ . . . ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ (ರಾಮಾಶ್ವ. ೬-೦೫) ; ನಡುವಿನಿಂದ ಜಗ್ಗುತ್ತಿದ್ದ ಚೆಂಬವಳದ ಒರೆಯನ್ನು ನಡುಪಟ್ಟಿಯ ಸಮೇತ ಕಳಚಿ (ಸವತಿ. ೪೮). [ ಚೆಂ$_1$ + ಪವಳ ]

**ಚೆಂಬಳದಿ** (ನಾ). ಕೆಂಪು ಮಿಶ್ರಿತವಾದ ಹಳದಿಯ ಬಣ್ಣ : ಬಿರುಕು ದೋರ್ದೆರ್ಳ್ಕಿದುದು ಪೊನಲ್ ಚೆಂಬಳದಿಯಾ ಮತಂಗನ ಪೆಸರ ಮಡುವಿನೊಳ್ ನೀರು ಓಕುಳಿಯಾಯ್ತು (ಶ್ರೀರಾಮಾ. ೨೮೫-೬). [ ಚೆಂ$_1$+ಪಳದಿ ]

**ಚೆಂಬಾನ್** (ನಾ). ಕೆಂಪಾದ ಆಕಾಶ : ಚೆಂಬಾನ ಕುಂಬಿಡುವ ಬೆಟ್ಟಗಳ ಸಾಲು (ಕಾಲೂರ. ೨೫-೧೨). [ ಚೆಂ$_1$ + ಬಾನ್$_3$ ]

**ಚೆಂಬಾಯ್** (ನಾ). ಕೆಂಪಾಗಿರುವ ಬಾಯಿ: ಆ ಸತಿಗೆಡ್ಡಂಬಡೆದವು ನಗೆಮೊಗವಾಸುರವಡಗಿದ ಚೆಂಬಾಯ್ ನಳುಸುಯ್ ಸೂಸುವ ನಾಸಿಕ (ಉದ್ಭದೇ. ೨-೫೬); ಚೆಂಬಾಯ್ವೆನನೀಂಟುತ್ತುಂ (ಚಕವಿ. ೬-೨೫೩).

[ ಚೆಂ$_1$ + ಬಾಯ್ ]

**ಚೆಂಬಾಯ್ದೆಱೆ**(ನಾ). ೧. ಕೆಂಪನೆಯ ತುಟಿ. ೨. ಕೆಂಬಣ್ಣ ಬಳಿದ ಬಾಗಿಲು. ೧, ೨: ಕಾಣದೆ ಚೆಂಬಾಯ್ದೆಱೆಯುಂ ಮಾಣನ್ನೀ ಮರಿಯು ಮನದ ಬಱುಸಂದೆಯುಮಂ (ಚಕವಿ. ೬-೬೨). [ ಚೆಂ$_1$ + ಬಾಯ್ದೆಱೆ ]

**ಚೆಂಬಾವುಗೆ** (ನಾ). ಕೆಂಪಾದ ಪಾದುಕೆ,-ಹಾವುಗೆ: ಲಲಿತ ಚೆಂಬಾವುಗೆ ಮೆಟ್ಟಿ . . . ಸಲೀಲೆಯಿಂದೆದ್ದಳಾ ಕುವರಿ (ಮೋಹತ. ೨೮-೬).

[ ಚೆಂ$_1$ + ಪಾವುಗೆ ]

**ಚೆಂಬಾವುಡೆ** (ನಾ). ಕೆಂಪು ಬಣ್ಣದ ವಸ್ತ್ರ : ಚೆಂಬಾವುಡೆಯುಡಿವಸನವು ತೋಯ್ದು . . . ಮೆಱೆಯೆ ಪೀತಾಂಬರ ನೋಡಿ ಹಿಗ್ಗಿದನು (ಮೋಹತ. ೧೪-೫೮). [ ಚೆಂ$_1$ + ಪಾವುಡೆ (<ಪಾವುಡ) ]

**ಚೆಂಬಾೞೆ** (ನಾ). ಬಾಳೆಯಲ್ಲಿ ಒಂದು ಬಗೆ; ಕೆಂಪುಬಾಳೆ; ಚಂದ್ರಬಾಳೆ: ಪಣ್ತ ಪೊಂಬಾೞೆಯ ಚೆಂಬಾೞೆಯ ರಂಗಬಾೞೆಯ ತೋಂಟದಿನೊಳಗೊಳಗೆ ಬಾಂಬಟ್ಟೆಗರ್ ಪೊಟಲ ಸೊಬಗಂ ನಿರುಕಿಸಲ್ಕೆಂದು (ರಾಜಾಶ್ಚ. ೦೦೧-೨೯). [ಚೆಂ$_1$ + ಬಾೞೆ ]

**ಚೆಂಬಿಸಿಲ್, ಚೆಂಬಿಸಿಲು** (ನಾ). ಕೆಂಪು ಬಣ್ಣದ ಬಿಸಿಲು : ಕೆಂದಾವರೆ ಚೆಂಬಿಸಿಲಿಂದೊಂದುವ ತೆಱದಿಂದೆ ನಿನ್ನ ಮೃದುಪದಯುಗಮೆಂದಂದಿನ ಪೊಲಲಕ್ತಕ ರಸದಿಂದಂ ಮೇೞೊಂದಿತಿಲ್ಲಿದೇನಿಂದುಮುಖೀ (ಶಾದಂಪೂ. ೩೩೨); ಪೊಸರನ್ನದ ಲೋಲಾಂಶು ಪುರಗೋಪುರಗಳ ಮೇಲೆ ಚೆಂಬಿಸಿಲಂತೆ ಚಂದ್ರಿಕೆಯಂತೆ ತಮಾಲದಂತೆಸೆದವು (ತ್ರಿಭುಶಿ. ೨-೨೫); ಇನಬಿಂಬ ಕಂದಿ ಚೆಂಬಿಸಿಲಿಪ್ಪ ಮಾಸೆ ಮಾರ್ದನಿಗೊಟ್ಟುವೆಂಟುದಿಕ್ಕುಗಳು (ಭರಪ. ೩೦-೦೧೬). **ಚೆಂಬಿಸಿಲು :** ಹೂಬಿಸಿಲು ಹೊಂಬಿಸಿಲು ಚೆಂಬಿಸಿಲು ಚುಂಬಿಸಲು ಎದೆಯನ್ನ ತುಂಬಿಸಲು ಬಿಂಬಿಸುತಿರೆ (ಭಾವಜೀ. ೨೦-೪೦೫). 'ಕೆಂಬಿಸಿಲ್' ಪರಾ. [ ಚೆಂ$_1$ + ಬಿಸಿಲ್ ]

**ಚೆಂಬಿಸಿಲ** (ನಾ). ಕೆಂಪಾದ ಬೆಳಕಿನಿಂದ ಕೂಡಿದವನು ; ಸೂರ್ಯ : ಚೆಂಬಿಸಿಲನಂ ಪಾಲ್ಗಡಲನುರುಮದಗಜಮಂ . . . ಕನಸಿನೊಳು ನಿಟ್ಟಿಸಿದಳಾ ಬೆಳಗಪ್ಪ ಜಾವದೊಳ್ (ಸಾಳ್ವಭಾ. ೩-೩೮). [ ಚೆಂಬಿಸಿಲ್$_1$ + -ಅ$_7$ ]

**ಚೆಂಬಿಸಿಲು** 'ಚೆಂಬಿಸಿಲ್' ನೋ.

**ಚೆಂಬು$_1$, ಚಂಬು, ಚೊಂಬು** (ನಾ). ೧. ತಾಮ್ರ ಮೊದಲಾದ ಲೋಹಗಳಿಂದ ಮಾಡಿದ ಬಾಯಿ ಕಿರಿದಾಗಿರುವ ಗುಂಡನೆಯ ಪಾತ್ರೆ; ತಂಬಿಗೆ : ಸಾದಿನ ಭರಣಿ ಪನ್ನೀರ ಚೆಂಬುಗಳು . . . ತೈಲದ ಕುಪ್ಪಿಗೆಗಳಾ ಗೃಹದೊಳು ಬಡಿಬಡಿಯಾಗಿಹವು (ಅಂಜಚ. ೩-೦೦೬); ಪನ್ನೀರ ಚೆಂಬು ಗಂಧೋದಕ ಹೂಜೆ . . . ತಲೆಗಿಂಬಿನೊಳ್ ತಂದಿರಿಸಿದರು (ಮೋಹತ. ೨೬-೩೫). ೨. ಗೋಪುರದ ಕಲಶ: ಯಿೂ ಹೊಸ ಮಹಾದೇವರ ಚೆಂಬಿನ ಒಡಿಲು ಹೊನ್ನ ಕಳಶಕೆ ಮಾಡಿದ ಧರ್ಮ (ಸೌಇಇ. IX-II, ೪೫೦-೨೨; 1444); ಬೊಮ್ಮಣ ಭಂಡಾರಿಯ ಮೊಂಮುಗಳ ಮಗಳು ಸಂಕಂಮಪೊದಲಿತಿ ಮಹಾದೇವರ ಚೆಂಬಿನ ಕಲಸಕ್ಕೆ ಕೊಟ್ಟ ದೊಡವರಹ (ಸೌಇಇ. IX-II, ೪೬೯-೦೯ ; 1510). ೩. ತಾಮ್ರ : 'ಚೆಂಬು' ಅಂದರೆ ತಾಮ್ರ ಮತ್ತು ತಾಮ್ರದ ಪಾತ್ರೆ (ಸಂಕೋಧ. ೮೮). 'ಚೆಂಬುಕಂಟಿಗ' ಪರಾ. **ಚಂಬು :** ೧. ಹೊನ್ನ ತಂಬಿಗೆ ಗಿಂಡಿ ಪನ್ನೀರ ಚಂಬಿನಲಿ ಪೂರ್ಣ ಜಲವ ಕೊಂಡು (ಕಂವಿ. ೫-೫೫); ಹಸಿರು ಮೇಯುದಿಂದ ತುಂಬಿದ ಕಟ್ಟೆಗೆಯ ಚಂಬನ್ನು ನಮಗೆ ಕೊಟ್ಟು ಕುಡಿಯ ಹೇಳಿದರು (ಮೇದಿಮ. ೦೦೨); ಅಂಬು ಬಿಡಲಿಕ್ಕೆ ತಿಳಿಯದೇ ಇದ್ದರೆ ಚಂಬು ಮುಣುಗಿಸ ತಿಳಿಯದೇ (ಗಾದ). **ಚೊಂಬು :** ೧. ಚಂದ್ರಕಾಂತಶಿಲೆಯ ಚೊಂಬುಗಳ ಬಾಯಿ ಕಟ್ಟಿ (ಸೌಗಂಧಿ. ೨೦೫-೦೦).

ಚೆಂಬಿನವೂಳಿಗ=ನೀರನ್ನು ತಂದು ಕೊಡುವ ಊಳಿಗ : ದೇವರಾಜ ಒಡೆಯರ್ಯ್ಯನವರ ಚವ್ಪಿನ ವೂಳಿಗದ ಚಲುವವ್ವೆಯವರ ಕುಮಾರರಾದ ದೊಡ್ಡದೇವ್ಯಯ್ಯನವರು (ಎಕ. III ಶ್ರೀರಂಗ. ೦೪-೯೬ : 1686).

[ ದೇ.೫ ತಮಿ. ಚೆಮ್ಬು; ಮಲ. ತುಳು. ಚೆಂಬು; ಕೊಡ. ಚೆಂಬೀ; ತೆಲು. ಚೆಂಬು ]

**ಚೆಂಬು$_2$** (ನಾ). ಸೋರೆಯ ಜಾತಿಗೆ ಸೇರಿದ ಒಂದು ಬಗೆಯ ಬಳ್ಳಿ : "ತುಂಬಃ-ಚೆಂಬು, ಸೋರೆ, ತುಂಬೆ" (ಒಷಧಿ. ೬೧). [<ಸಂ. ತುಂಬ ]

**ಚೆಂಬುಕ** 'ಚಂಬಕ' ನೋ.

**ಚೆಂಬುಕುಟಿಗ, ಚಂಬುಕುಟ್ಟಿಗ, ಚಂಬುಕುಟ್ಟಿಗ** (ನಾ). ತಾಮ್ರದ ಕೆಲಸ ಮಾಡುವವನು ; ತಾಮ್ರಕಾರ : "ತಾಮ್ರಕುಟ್ಟಕ" (ನಾಚಿರಾ. ೬). **ಚಂಬುಕುಟ್ಟಿಗ:** "ಶೌಲ್ಬಿಕಃ, ತಾಮ್ರಕುಟ್ಟಕಃ-೨ ಚಂಬುಕುಟ್ಟಿಗನ ಪೆಸರುಗಳು" (ಸಿದ್ಧಾಂತಿ. ೨೬೬). **ಚಂಬುಕುಟ್ಟಿಗ:** ಚಂಬುಕುಟ್ಟಿಗನೊಬ್ಬನ ಲಯಬದ್ಧವಾದ ಸುತ್ತಿಗೆಯ ಏಟನಂತೆ ಕೇಳಿಸುತ್ತದೆ (ಹೋಮದು. ೨).

[ ಚೆಂಬು$_1$ + -ಕುಟಿಗ$_1$ ]

**ಚೆಂಬುಗೆಂಪು** (ನಾ). ತಾಮ್ರದ ಬಣ್ಣ ; ಕೆಂಬಣ್ಣ : ನಿಜಬಿಂಬಂ ಚೆಂಬುಗೆಂಪೇಱೆ . . . ಸಾರ್ದಂ ದಿನನಾಥನಸ್ತಗಿರಿಮಸ್ತಪ್ರಸ್ತರ ಪ್ರಾಂತಮಂ (ಅನಂಪು. ೩-೬೬). [ ಚೆಂಬು$_1$ + ಕೆಂಪು$_1$ ]

**ಚೆಂಬುಡಿ** (ನಾ). ಕೆಂಪುಹುಡಿ,-ದೂಳು : ಭೂರಮೆಯ ಸಸಿಂಧೂರ ಸೀಮಂತ ರೇಖೆಯಂತೆ ಚೆಂಬುಡಿ ತಳ್ತು ಕಂಗೊಳಿಪ ಘಂಟಾಪಥದ ಪರಿಸರದಲ್ಲಿ (ರಾಜಶೇ. ೨-೨೦ ವ). [ ಚೆಂ$_1$ + ಪುಡಿ ]

**ಚೆಂಬುರುಳ್** (ನಾ). ಸೊಗಸಾದ ಅರ್ಥ ; ಪರಮಸತ್ವ : ಹುಟ್ಟೆಂಬ ಹೆದ್ದತನ ಹುರಿಯೆ ಒರಿದೆಂಬ ಚೆಂಬುರುಳ ಕಾಣುವುದೆ ಅಱಿವು (ಕುಪಳ್. ೧-೩೬-೮). [ ಚೆಂ$_2$ + ಪುರುಳ್ ]

**ಚೆಂಬುಳುಕಾಯಿ** (ನಾ). ಒಂದು ಬಗೆಯ ಮರ : ದೇವದಾರಿ, ಗಂಧಗಿರಿ, ಗ್ಯಾದಾರಿ, ಚೆಂಬುಳುಕಾಯಿ (ಮೃಶಿಗಿ. ೩೫-೬೮೩). [ ? ]

**ಚೆಂಬೂ** (ನಾ). ಕೆಂಪು ಬಣ್ಣದ ಹೂ : ಇಳಾತಳದ ತಾರಗೆಯಂತುಪಹಾರಮಾದ ಚೆಂಬೂಗಳಳುಂಬಮಾಗೆ ನಯನೋತ್ಸವಮಾದುದು ತತ್ಪುರೋತ್ಸವಂ (ಚಂದ್ರಪು. ೩-೯೬). [ ಚೆಂ$_1$ + ಪೂ$_2$ ]

**ಚೆಂಬೂತ** 'ಚೆಂಬೋತ' ನೋ.

**ಚೆಂಬೆಣ್ಣೆಗರುಗ** (ನಾ). ಗರುಗದಲ್ಲಿ ಒಂದು ಬಗೆ: "ಬಲಾ, ವಾಟ್ಯಾಲಕಃ ಈ ೨ ಚೆಂಬೆಣ್ಣೆಗರುಗ" (ನಾಚಿರಾ. ೧೦೦). [ ಚೆಂ$_1$ + ಬೆಣ್ಣೆಗರುಗ ]

**ಚೆಂಬೆರಲ್** (ನಾ). ಕೆಂಪನೆಯ ಬೆರಳು : ಸರ್ವಪುರುಷಾರ್ಥಕ್ಕಂ ನಿಧಿಸ್ಥಾನವೆನಿಪ ಪದಮೆಂಬಂತಿರ ಚೆಂಬೆರಲ್ಗುಡಿಗಳಂ ಕೀಲ್ಪಾಡಿ ಸಸ್ನೇಹಹಸ್ತದ ಶೇಷಾದ್ರಿಯ ಮುನ್ನಮುಪ್ಪಡೆಗಳೊಳ್ ಪಾದಾಬ್ಜಮಂ ತೋಱುವ್ವೆ (ಪಸ್ತಮಂ. ೧೨-೮೮). 'ಕೆಂಬೆರಲ್' ಪರಾ. [ ಚೆಂ$_1$ + ಬೆರಲ್ ]

**ಚೆಂಬೆಲರ್** (ನಾ). ದಕ್ಷಿಣದ ಗಾಳಿ; ತೆಂಗಾಳಿ: ವನಲಕ್ಷ್ಮಿಯ ನರ್ತಕಿಯಂತೆ ಚೆಲ್ವನಾಳ್ದುದು ಫಲಭಾರಕುಂಬುಲತೆ ಚೆಂಬೆಲರ್ವೊಯ್ಲಿನ ಲೋಲವೃತ್ತಿಯಿಂ (ಚಂಶೀಕ್ತ. ೦೨-೮೯). [ ? ಇದು 'ತೆಂಬೆಲರ್' ಎಂಬುದರ ಅಪಲಿಖಿತವಿರಬಹುದು. ]

**ಚೆಂಬೆಳಕು** 'ಚೆಂಬೆಳಗು' ನೋ.

**ಚೆಂಬೆಳಗು, ಚೆಂಬೆಳಕು** (ನಾ). ಕೆಂಪುಬಣ್ಣದ ಕಾಂತಿ,-ಪ್ರಭೆ,-ಪ್ರಕಾಶ: ಪಡುಗಡಲ ತಡಿಯ ಯೆಡೆಯೊಳಿಡಿದ ವಿದ್ರುಮಲತೆಯ ಕುಡಿಯ ನಿಡುಚೆಂಬೆಳಗೂ (ಮಂದಿಮಾ. ೧೮-೧೮). **ಚೆಂಬೆಳಕು:** ಅಂಬುಜಸಖಂ ಬಂದನಂಬರದಲಿ ತುಂಬಿದ್ದ ಬಲು ಕತ್ತಲೆಂಬ ಕಂಬಳಿ ಕಳಚಿ, ಚೆಂಬೆಳಕು ಹಾಸಿ ನಿಂದುಪ್ಪವಡಿಸಿ (ಕಎಪು. ೨೬-೪). 'ಕೆಂಬೆಳಗು' ಪರಾ.

[ ಚೆಂ$_1$ + ಬೆಳಗು$_2$ ]

**ಚಿಂಬೊಂಗಟ್ಟು** (ನಾ). ಚಿನ್ನದಿಂದ ಮಾಡಿದ ಕಟ್ಟು,-ಚೌಕಟ್ಟು : ಭಟಶ್ರೇಣಿಯ ಚಿಂಬೊಂಗಟ್ಟು ತಳ್ತಡ್ಡಣದ ಪೊಳೆವು ಕೆಂದೂಳಿಯಿಂದೊಂದಿ ಕೆಂಬಟ್ಟೆಯು ಮೇಲ್ಗಟ್ಟಾದುದು (ಅನಂಪು. ೧೩-೭೪).

[ ಚಿಂಬೊನ್ + ಕಟ್ಟು$_{೭}$ ]

**ಚಿಂಬೊಂಗಳಸ** (ನಾ). ಚಿನ್ನದ ಕಲಶ : ಒಪ್ಪಂಬೆತ್ತ ಚಿಂಬೊಂಗಳಸದೆಳವಿಸಿಲ್ ಸಂತತಂ ವ್ಯೋಮಗಂಗಾಬ್ಜದ ಪೆರ್ಚಂ ಮಾಡೆ (ಜಗವಿ. ೯-೯೫); ಚಿಂಬೊಂಗಳ ಸಜ್ಗಳಂ ಹರಿಹರ ಶ್ರೀಗೇಹಮಂ ಕೂಡೆ ಮಾಡಿಸಿದಂ (ಎಕ. XI, ದಾವಿಣ. ೨೫-೭೨ : 1224). [ ಚಿಂಬೊನ್ + ಕಳಸ$_1$(=ಕಲಸ) ]

**ಚಿಂಬೊಗರ್** (ನಾ). ಕೆಂಪು ಬಣ್ಣದ ಕಾಂತಿ : ಬಂದುಗೆವೂವಿನ ಪರಾಗಮಂ ಕಳಚಿ ಪೊರಳ್ದು ಚಿಂಬೊಗರನಾಂತು . . . ಚರಿಸುವಂ ಮೆಲ್ಲಮೆಲ್ಲನೆ ಮಂದಮಾರುತಂ (ನಂದಿಮೂ. ೩-೨೬) ; ಚಿಂಬೊಗರಿಂ ರಂಗೇರಿಹ ಜಲದಾಬ್ಜಮುಖಿ ತುಸ ತುಟಿತೆರೆದು ಶಿಶುಚಂದ್ರನ ನಗೆ ನಗುವಳು(ಗಣಿಕ. ೩೧-೨). 'ಕೆಂಬೊಗರ್' ಪರಾ. [ ಚಿಂ$_1$ + ಪೊಗರ್ ]

**ಚಿಂಬೊನ್**, ಚಂಬೊನ್, ಚಿಂಬೊನ್ನು (ನಾ). ೧. ಚಿನ್ನ ; ಬಂಗಾರ ; ಅಪರಂಜಿ : "ಸೊನ್ನೆ, ಕಸವರಂ, ಚಿಂಬೊನ್, ಮಿಸುನಿ–ಈ ೪ ಸುವರ್ಣಂ" (ಕಶಸಾ. ೫-೬೧) ; ಚಿಂಬೊನ್ನ ತಳಿಗೆಗಳೊಳ್ ತೆಕ್ಕನೆ ತೀವಿದ ಬಿಡು ಮುತ್ತಿನ ಸೇಸೆಗಳುಂ ಬೆರಸು ಮಹತ್ತರ ದೇವಿಯರ್ ಬಂದು ಪೊಡಮಟ್ಟು (ಆದಿಪು. ೨-೬೭ ವ) ; ಚಿಂಬೊನ್ನ ದೋಣಿಗಳೊಳಮಳಂಕರಿಸಿದ ಪಳುಕಿನ ಪಟ್ಟವಣಿಗಳೊಳಂ (ಕಾದಂಪೂ. ೭೦) ; ಚಿಂಬೊನ್ನ ಘಟಂಗಳಿನ ಮೃತಾಂಬುಧಿಯಂಬುಗಳನಾಂತು (ಪಾರ್ಶ್ವಪು. ೧೪-೮೪). ೨. ತಾಮ್ರ : ನಲ್ ಸಮೆದ ಚಿಂಬೊನ್ನ ಕೊಡಮೊತ್ತಿ ಮೂಟು ತಣಿಯೆಚಿದು ಮುಡಿಗೆಯ್ದಳಾ ಪೆಣಕೆ (ಅಂಶಿಗೂ. ೨೦-೪೧೭). ೩. ಚಿನ್ನದ ನಾಣ್ಯ : ಚಿಂಬೊಂಗಳನೋರಂತಿರೆ ಬೇಡಿಕೊಳ್ವನೆನ್ನಾರ್ಪನಿತಂ (ಧರ್ಮಾಮೃ. ೧-೧೩೭) ; ತುಂಬುರನ ಕಯ್ಯಿಂದ ಹತ್ತೆಂಟು ಸಾವಿರದ ಚಿಂಬೊನ್ನ ಜಾಳಿಗೆಯು ಕುಡಲೆಂದು ತರಿಸೆ (ಸಾಂದಪು. ೧೫-೪೬). **ಚಂಬೊನ್** : ೨. ಚಂಬೊನ್ನ ತಾಳ ಕಿನ್ನರಿಗಳನಾಂತು ನಿತಂಬಿನಿಯರುಗಳಿಯ್ದದರು (ಜೀವಂಸಾಂ. ೧೧-೩೯). **ಚಿಂಬೊನ್ನು** : ೧. "ಚಿಂಬೊನ್ನನಲು ಸುವರ್ಣಂ" (ಕಶರ. ೩೬) ; ನಿನ್ನ ಕೃಪಾರಸದಿಂದ್ಯೆಸೆಯಾನು ಕಬ್ಬಿಣನ್ನು ಚಿಂಬೊನ್ನಾದಂತೆ . . . ಭಾಗ್ಯೋನ್ನತಿಯೊಡಗೂಡಿಹೆನು (ಹದಬ. ೧-೩೫).

[ ಚಿಂ$_1$ + ಪೊನ್./ತಮಿ. ಚೆಮ್ಪೊನ್ ]

**ಚಿಂಬೊನ್ನು** 'ಚಿಂಬೊನ್' ನೋ.

**ಚಿಂಬೊಳೆಪು** (ನಾ).=ಚಿಂಬೊಗರ್ : ಪೊಳೆವ ಪಳಿಕಿನ ಜವಸರಂ ಕುಸುಮಮಾಗೆ ಚಿಂಬೊಳೆಪಾಂತ ಜಡೆಗಳೆಳದಳಿದರ್ಪಂಗಳಾಗೆ . . . ಮುನಿಕುಲಮೊಪ್ಪಿತಾ ಮಹಾಕಾನನದೊಳು(ನಂದಿಮೂ. ೨-೨೪). [ ಚಿಂ$_1$ + ಪೊಳೆಪು ]

**ಚಿಂಬೋತ**, ಚಂಬೋತ, ಚಿಂಬೂತ (ನಾ). ಒಂದು ಬಗೆಯ ಕೆಂಪು ಬಣ್ಣದ ಪಕ್ಷಿ : ಕೆಂಪು ಕಾಗೆ : ಸಂಬಾರಗಾಗೆ : "ಧೂಮ್ರಬ್ಬದುಂ ಚಿಂಬೋತ[ಪಾಠಾಂ. ಕೆಂಬೋತ] ಮೆಂದೆನಿಕ್ಕುಂ" (ಶುಂಗರಾ. ೫೨-೦೦) ; ಅಂಚೆಯು ಚಿಂಬೋತನ ಚಿಲಕೂಲಿಯು ಕೊಂಚೆಯು(ಹಮ್ಮೀರ. ೪-೧೨ ರಗಳೆ) : **ಚಂಬೋತ**: ಸಾಳುವ ಚಿಲಿಮಿಲಿಗ ಚಂ[ಪಾಠಾಂ. ಚಿಂ]ಬೋತ ಮಿನ್ಬುಲಿಗ . . . ಮೊದಲಾದಪಳ ಖಗಕುಲ ಬಿದ್ದುದುರಿಯೊಳಗೆ (ಕುಮಾ೯ಅ. ೨೦-೫೩); ಮರಕುಟಿಗ ಚಂಬೋತ ಶುಕ . . . ಸರಟ ಸಾರ ಸಮೂಹ ಮೇಳಗಳತ್ತಲಿವೆ (ಕೂರರಾ. ೩-೧-೩೨). **ಚಿಂಬೂತ** : ಪಿಕ್ಕುಳಿಕ ಚಿಂಬೂ[ಪಾಠಾಂ. ಬೋ]ತ ಗೀಜಗ . . . ಕೆಂಡವಕ್ಕಿಗಳವಚಿಳೊಪ್ಪಿದುದು (ಸಾಳ್ವಭಾ. ೫-೨೨) ; ಕಾಗೆ ಪಿಕನಂ ಚಿಂಬೂತ ಮಯೂರನಂ . . . ಮೆಚ್ಚದೊಡದೇಂ ಭಂಗಗಳೇ ಧಾತ್ರಿಯೊಳ್ (ನೀತಿಸಾ. ೭೦೨). 'ಕೆಂಬೋತ' ಪರಾ.

[ ದೇ.೫ ತಮಿ. ಮಲ. ಚೆಮ್ಪೋತ್ತು ]

**ಚಿಕ್** 'ಚಿಕ್ಕು$_{೭}$' ನೋ.

**ಚಿಕ್ಕಂದ** 'ಚಕ್ಕಂದ' ನೋ.

**ಚಿಕ್ಕನೆ** (ಅ). ಥಟ್ಟನೆ ; ಬೇಗನೆ ; ಕೂಡಲೆ : "ಭೋಂಕನೆ ಚಿಕ್ಕನೆ . . . ಚೆಚ್ಚರ ಬೆಚ್ಚರಮುಂ ಕೂಡಿರೆ ತವ್ಮೊಳೊದವುಗುಂ ಶೀಘ್ರಾರ್ಥಂ"(ಶಮದ. ೩೦೫); ಉರೋಭಾಗಮುಂ ಪಾದದಿಂ ಪೋಗೊದೆಯುತ್ತುಂ ಕೋಟ್ಕಳಂ ಚಿಕ್ಕನೆ ಕಟಿ (ಜಗವಿ. ೬-೫೫) : ಕೊಳದೊಳು ಕಾಲಂ ತೊಳೆಯುಲ್ಪಗಯಲ್ಲಿರ್ದ ನಕ್ರಂ ಚಿಕ್ಕನೆ ಚರಣಮಂ ಪಿಡಿಯೆ (ಪುಣ್ಯಾಸ್ರ. ೬-೧೪ ವ) : ಕಣ್ಪಟ್ಟು, ಚಿಕ್ಕನೆದ್ದು ಹೊರಟು ಪೋಗುವನು (ಚಟ್ಟಅ. ೨೨-೧೦). **ಚಿಕ್ಕಚಿಕ್ಕನೆ** (ದ್ವಿರುಕ್ತಿ) : ಪಟ್ಟವನು ಚಿಕ್ಕಚಿಕ್ಕನೆ[ಪಾಠಾಂ. ಚಕ್ಕಚಕ್ಕನೆ] ಕಟ್ಟಿಯುವರವರಕ್ಕಚಿನ ಖಾಂಡಕ್ಕವರ ಪೆಸರಿಕ್ಕೆ (ಮದೀಪು. ೫-೬೬).

[ ದೇ.೧ ತಮಿ.ಚಿಕ್ಕನ್ ; ಮಲ. ಚಿಕ್ಕೆನ್ನು. ಚಿಕ್ಕನೇ ; ತುಳು. ಚಕ್ಕ ]

**ಚಿಕ್ಕವತ್ತ** 'ಚಕ್ರವತ್ತಿ' ನೋ.

**ಚಿಕ್ಕಿತ** (ನಾ). ಸ್ಪಷ್ಟ, ನಿರ್ದಿಷ್ಟ : ಚಿಕ್ಕಿತಹ ಮಾರ್ಗದೊಳು ಬಹುಜನ್ಮಕ್ಕೆ ಸಾಧನವಹ ಭವಂಗಳನೊಕ್ಕಲಿಕ್ಕುವ ಭೇದವನು ಕೃಪೆಯಿಂದ ಬೆನ್ನೊಳಗೆ ವಿುಕ್ಕು ಬೆರಸಲ್ಬೇಕೆನುತ ಮೈಯಿಕ್ಕಿ ಬಿನ್ನೈಸಿದರೆ ಶಿಷ್ಯಂಗಕ್ಕಟಿಂ ಬೆಸಸಿದನು ಸದ್ಗುರುನಾಥನುಚಿತದಲಿ (ಸದ್ಗುರು. ೧-೧೩); ಮಾತಿನಲ್ಲಿ ಮತ್ತು ನಡವಳಿಕೆಯಲ್ಲಿ ಚಿಕ್ಕಿತವಾಗಿದ್ದರೆ ಜೀವನದಲ್ಲಿ ಕಷ್ಟಗಳು ಬರುವುದಿಲ್ಲ (ರೂಢಿ). [ <ಖಚಿತ ? ]

**ಚಿಕ್ಕಿಸು** (ಕ್ರಿ). ಹಿಂದಕ್ಕೆ ಅಟ್ಟು : ಹಿಮ್ಮೆಟ್ಟಿಸು : ಆದರಿಂದೆ ಕೈಗಾಯ್ದನಲ್ಲದೊಡೆ ನಿಲಿಸಿ ಬಾಜಿಯಲಿ ಚಿಕ್ಕಿಸದೆ ಬಿಡೆ (ವಂಕಾರಾ. ೬-೧೦-೪೨).

[ ಚಿಕ್ಕು$_0$ + – ಇಸು$_3$ ]

**ಚಿಕ್ಕು$_1$** 'ಸಿಕ್ಕು$_1$' ನೋ.

**ಚಿಕ್ಕು$_{೭}$**, ಚಕ್$_{೭}$, ಚಕ್ಕು$_3$, ಚೆಕ್ (ನಾ). ೧. ಚೌಕುಳಿ ಬಟ್ಟೆ ; ಚೌಕುಳಿ ಆಕೃತಿಯಾಗಿ ನೆಯ್ದ ಅಥವಾ ಅಚ್ಚೊತ್ತಿದ ಬಟ್ಟೆ : ಚೌಕುಳಿಬಟ್ಟೆ, ಪಪ್ಪಳಿಬಟ್ಟೆ: ಚಿಕ್ಕು ಬಟ್ಟೆ (Check. ಇಂಕನಿ). **ಚಕ್$_{೭}$** : ೨. ತಾಳೆ ನೋಡುವುದು ; ಸರಿ ನೋಡುವುದು : ಲೆಕ್ಕ ಚಕ್‌ಮಾಡಿ ಆಮೇಲೆ ಹಣ ಕೊಡು (ರೂಢಿ). **ಚಕ್ಕು$_3$** : ೧. ಚಕ್ಕು ಸೀರೆ ಈಗಿನ ಹೊಸ ಫ್ಯಾಶನ್ನು (ರೂಢಿ). **ಚೆಕ್** : ೨. ಅವರು 'ಚೆಕ್' ಮಾಡಿದ ಬಳಿಕ . . . ರಾತ್ರಿ ಎಂಟರ ವರೆಗೆ ಕೆಲಸ (ನಾಪೂಠಿ. ೮೬). [ ←ಇಂ. Check ]

**ಚಿಕ್ಕು$_3$**, ಚಕ್ಕು$_4$ (ನಾ). ಬ್ಯಾಂಕುಗಳಿಂದ ಹಣ ಪಡೆಯಲು ಕೊಡುವ ಆದೇಶಪತ್ರ ; ದರ್ಶನಿ ಹುಂಡಿ ; ಧನಾದೇಶ : ಆರು ಸಾವಿರದ ಇನ್ನೂರೈವತ್ತು ರೂಪಾಯಿಗಳಿಗೆ ರಂಗಾಚಾರಿಯ ರುಜು ಇದ್ದ ಒಂದು ಚಿಕ್ಕು ಇತ್ತು (ಇಬದು. ೧೩೭) ; ಸಮಯಕ್ಕೆ ದೊರೆಯುವ ರೂಪಾಯಿ ಚಿಲ್ಲರೆ ನೂರರ ಚಿಕ್ಕಿಗೆ ಮಿಗಿಲು (ಚಂದ್ರಮಿ. ೧೪೯-೯೩). **ಚಕ್ಕು$_4$** : ಈಗ ತಾನೇ ನನಗೆ ಒಂದು ಸಾವಿರ ರೂಪಾಯಿಗೆ ಚಕ್ಕು ಬಂದಿದೆ (ರೂಢಿ). 'ಚಕ್ಕು ಹುಂಡಿ' ಪರಾ. [ ←ಇಂ. Cheque ]

**ಚಿಕ್ಕುದಟು**, ಚಕ್ಕುದಟು (ಕ್ರಿ). ಚೂರಾಗುವಂತೆ ಕಡಿ ; ಚಿಕ್ಕೆಯಾಗುವಂತೆ ಕತ್ತರಿಸು : ವೀರರಂ ತಡೆಗಡಿದ ನೆತ್ತರ ಕಡಲ್ಕಟ್ಟೆ ಚಿಕ್ಕುದಟದಂತಾಗೆ ತಳ್ತ ಕೂರಾಳ್ಗಳಂ . . . ಬಗಿದು (ಇಹರ. ದೇ. ೪೨-೫). **ಚಕ್ಕುದಟು** : ಕೂರಸಿಯೆಸಕಕ್ಕೆ ಚಕ್ಕುದಟಿಯಲುಟಿ ಯಾವವನೆಂದೆನುತ್ತ ಗರ್ಜಿಸಿ ಜಡಿವೆಟ್ಟನಾ ಯಮಸೂನು ಕರಾಗ್ರದ ಖಡ್ಗಧೇನುವಂ (ಮಹಾಸೇ. ೭-೧೫). [ ಚಿಕ್ಕು$_1$(<ಸಿಕ್ಕು$_1$) + ತಟು$_1$ ]

**ಚಿಕ್ಕುಲಗುಲಿ** 'ಚಕ್ಕಲಗುಳಿ' ನೋ.

**ಚಿಕ್ಕುಲಿ** 'ಚಕ್ಕುಲಿ' ನೋ.

**ಚಿಕ್ಕೆ** 'ಸಿಕ್ಕು$_1$' ನೋ.

**ಚಿಕ್ಕೆವತ್ತ** 'ಚಕ್ರವತ್ತಿ' ನೋ.

**ಚೆಗಳ್**, ಚಗಳು (ನಾ). ಉತ್ಪನ್ನ ; ಫಸಲು (?) : ಪಗಲಾದಿತ್ಯಂ ಪಾರಂಬುಗುವೊಡೆ ಕರಮೊಳ್ಕಿತಾಗಿ ಜೋಳಂ ಬೆಳೆಗುಂ ನೆಗಬ್ವಂದಿರುಳುಂ ಪೊರ್ಕೊಡೆ ಚೆಗಳಗಣತಮಲ್ಲಿ ಜೋಳನಾಡೆಯೊಂದು ಬಟ್ಟಂ (ಅಟ್ಯರು. ೮-೨೦೪). **ಚಗಳು** : ಆ ಯೆರಡುತೋಟದ ಒಳಗುಳ ಹಲಸು ಮೆಣಸು ಮಾವು ಚೆಳುವೊಟೆಯ ಮೊದಲಾಗಿ ಯೇನು ಉಳಂಥಾ **ಬೆಳೆಯ ಚಗಳ** ನೆಲ್ಲವನು ಆಗು ಮಾಡಿಕೊಂಡು (ಎಕ. VIII, ತೀರ್ಥಹ. ೩೨-೪೬ ; 1418 ?).
[ ? ]

**ಚೆಗಿಟೆ** (ನಾ). ನುಗ್ಗೆಮರ : "ಶೋಭಾಂಜನ" (ಶಂದಿತ).
[ ?./ಮರಾ. ಶೇಗಟ, ಶೇಗವಾ ]

**ಚೆಗತಳಿ** 'ಚಗತಿಳಿ' ನೋ.

**ಚೆಚ್ಚರ** 'ಚಚ್ಚರ' ನೋ.

**ಚೆಚ್ಚರಂ** 'ಚಚ್ಚರಂ' ನೋ.

**ಚೆಚ್ಚರಿಕೆ** (ನಾ). ಚಳಕ; ನೈಪುಣ್ಯ ; ಕೌಶಲ ; ವೇಗ : ಮೆಯ್ ಮೆಯ್ ಚಲದಿಂ ಮುಟ್ಟೆ ಪೊಣರ್ದು ತಳ್ತುಱಿವು[ಕೆ೯೦] ಕೆಯ್ ಚೆಚ್ಚರಿಕೆಯ ಚಲದಿಂ ಕೆಯ್ ಚಳವಿನಮಿಱಿದರೆರಡು ಬಲದೊಳಮುದಟರ್ (ಶಂಶಧಾ. ೧೩-೩೪).
[ ಚೆಚ್ಚರ(<ಚಚ್ಚರ) + – ಇಕೆ ]

**ಚೆಚ್ಚರಿಗ** 'ಚಚ್ಚರಿಗ' ನೋ.

**ಚೆಚ್ಚರಿತ** (ನಾ). ಜಾಗರೂಕನಾದವನು : ಜಾಗ್ರತನಾದವನು : **ಪೊಚ್ಚ ಪೊಸ**ಗಂಪನೀಯುತುಮಚ್ಚಿಗೊಳಿಪ್ಪಮಲಧೂಪಮಂ ಶಾಂತಂಗಂ ಚೆಚ್ಚರಿತ ನರ್ಚಿಸುತ್ತುಂ ಸಚ್ಚಿನ್ಮುದಮಾಂತು ರಂಜಿಸಿದು (ಉದ್ಭಟ. ೦೦-೩೮).
[ <ಚೆಚ್ಚರ ]

**ಚೆಚ್ಚರಿಸು** (ಕ್ರಿ). ಎಚ್ಚರಿಕೆಯಿಂದಿರು ; ಜಾಗ್ರತೆಗೊಳ್ಳು : ಪನ್ನಗರಾಜನ ನೊತ್ತಿ ಕಟ್ಟಿ ಚೆಚ್ಚರಿಸಿ ಕರಾಗ್ರದೊಳ್ ನಿಱಿವನೋ ಒಡಿದೇಱುವನೋ ಸುರೇಭವುಂ (ಧರ್ಮಾಮ್ನು. ೯-೧೮೨). [ಚೆಚ್ಚರ (<ಚಚ್ಚರ) + – ಇಸು$_3$]

**ಚೆಚ್ಚರು** 'ಚಚ್ಚರ' ನೋ.

**ಚೆಚ್ಚು$_1$** 'ಚಚ್ಚು$_1$' ನೋ.

**ಚೆಚ್ಚು$_2$** 'ಚಚರ್ು$_1$' ನೋ.

**ಚೆಜಕರ** (ನಾ). ಒಂದು ಬಗೆಯ ಜೋಳ : ಈ ಜಿಲ್ಲೆಯಲ್ಲಿ ವೊಟ್ಟಗೆ ೧೮ ಪ್ರಕಾರದ ಜೋಳ ಬೆಳೆಯುವದು . . . ಅವುಗಳ ಹೆಸರುಗಳು – ಮೂರ ತಿಂಗಳ ಜೋಳ . . . ಚೆಜಕರ, ಕಾಗಿಜೋಳ (ಕಭಾಗ. ೨೭೦). [ ? ]

**ಚೆಜ್ಜ** 'ಭಜ್ಜ' ನೋ.

**ಚೆಜ್ಜೆ$_1$** 'ಸಜ್ಜೆ$_1$' ನೋ.

**ಚೆಜ್ಜೆ$_2$** 'ಸಜ್ಜೆ$_2$' ನೋ.

**ಚೆಜ್ಜೆ$_3$** (ನಾ). ಒಂದು ಬಗೆಯ ವಾದ್ಯ (?) : ಚೆಜ್ಜೆದನಿ ಕೇಳಿ ಎದ್ದು ಮುಜ್ಜಣ ವಿಭೂದು ರುದ್ರಾಕ್ಷಿ ತೊಟ್ಟು ಮಡಿಯುಟ್ಟು ಸಿದ್ಧರ ಊರಗದ ಶಿವಗುಡಿಗೆ ನೀನು ಹೋಗವ್ವ (ಶರತ. ೨೦). [ ? ]

**ಚೆಟಗೆ** (ನಾ). ಒಂದು ಬಗೆಯ ಆದಾಯ (?) : ಅರಮನೆಗೆ ತೆಱುವ ಸಂಬಳ ಸರತಿ ಕುಡಿಕೆ ಚೆಟಗೆ ಅಧಿಕಾರಿ ಸೇನಬೋವರ ಸಂಬಳ ಎಲ್ಲವನು ಬಿಟ್ಟೆಲೂ (ಎಕ. III, ಮಳವ. ೬೭-೫ ; 1550 ?). [ <ಚಟ್ಟಗೆ ? ]

**ಚೆಟ್ಟು$_1$** 'ಚರಟ' ನೋ.

**ಚೆಟ್ಟು$_2$** 'ಚಟ್ಟು$_3$' ನೋ.

**ಚೆಟ್ಟುಬೆಳಗು** (ಕ್ರಿ). ಚರ್ಮವನ್ನು ಸುಲಿ; ಹಿಂಸೆಮಾಡು : ಅವರು ಚೆಟ್ಟು ಬೆಳಗಿದ್ದರೂ ಅವರು ಬಿಡುವ ಎಚ್ಚರಿಕೆಯ ತುಸಿಗುಂಡಿಗೇ ತಮ್ಮಾಜಿ ಗತಪ್ರಾಣನಾಗುತ್ತಿದ್ದ (ದೀಪಪ. I, ೩೮).
[ ಚೆಟ್ಟು$_1$ (<ಚರಟ) + ಬೆಳಗು$_1$ ]

**ಚೆಟ್ಟು$_2$** 'ಭಟ್ಟ' ನೋ.

**ಚೆಟ್ಟು$_3$** (ನಾ) ಒಂದಂ ಬಗೆಯ ಪಕ್ಷಿ : "ಟಟ್ಟಭಾಃ, ಕ್ಷುದ್ರ ಪಕ್ಷಿಕಾಃ – ಈ ೨ ಚೆಟ್ಟ [ಪಾಠಾಂ. ಚಟ್ಟೆ]" (ಹಲಾಯು. ೪೨-೯೯). [ ? ]

**ಚೆಟ್ಟಗೆ** (ನಾ). ತೊತ್ತು ; ದಾಸಿ : **ಚೆಟ್ಟಗೆಯ** ಮಗ ಮಲ್ಲನಂ ಕರೆದು ನೊಸಲಲ್ಲಿ ಕಟ್ಟುಗ್ರವಾಗಿ ರಾಜಿಪ ಅಗ್ನಿನೇತ್ರವನು . . . **ಕೋಱಿಸಲ್ಕೆ** (ಪ್ರಾಭರಾ. ೧೪-೩೮). [ <ಸಂ. ಚೇಟಿಕಾ ]

**ಚೆಟ್ಟಸು** (ಕ್ರಿ). ಚೇಷ್ಟಿಸು ; ಕೆಲಸ ಮಾಡು: ತ್ರಿಜಗವನೆತ್ತುವ ವೀರ್ಯಂ ನಿಜವಾಗಿಹುದವರ್ಗೆ ಚೆಟ್ಟಸದೆ ತಪ್ಪನಿಹಂ ತ್ರಿಜಗದ ಸುಖಕಥಿಕ ಸುಖಂ ನಿಜವಾಗಿಹುದಂತುಟೆಂತು ನುಡಿಯಲಸಕ್ಕಂ (ತ್ರಿಲೋಕೇಕ. ೧೦೬).
[ <ಚೇಷ್ಟಿಸು ]

**ಚೆಟ್ಟಱ್** 'ಚಟ್ಟಱ್' ನೋ.

**ಚೆಟ್ಟು$_1$** 'ಚಟ್ಟು$_1$' ನೋ.

**ಚೆಟ್ಟು$_2$** 'ಚಟ್ಟು$_2$' ನೋ.

**ಚೆಟ್ಟು$_3$** 'ಚಟ್ಟು$_3$' ನೋ.

**ಚೆಡಿಯಕ್ಕ** (ನಾ). ಒಬ್ಬಾಕೆಯ ಹೆಸರು : ಗೋವಿನ್ದ ಮಾಧವರಸರ್ ಕೂಡಲೂರಾ ಮೂವತ್ತುಮಾಳ ಚೆಡಿಯಕ್ಕಂ ಪೊಯ್ದು ಮುಣ್ಣು ಇರ್ಕ್ಕಣ್ಣುಗಂ (ಎಕ. XII, ಮಧ್ಯಗಿ. ೫೦-೫ ; ಸು. 950 ?).
[ ಚೆಡಿ$_0$ + ಅಕ್ಕ$_1$ ]

**ಚೆಡ್ಡಿ** 'ಚಡ್ಡಿ$_1$' ನೋ.

**ಚೆಣತಿ** (ನಾ). ಹಿಮ್ಮೇಳದ ವ್ಯಕ್ತಿ (?) : ಇನ್ನಾಡುವೆ ಜಂಗಮ ಬಹುರೂಪ . . . ಇಲ್ಲನ್ನೋ ಮದ್ದಳೆಗ ಒಲ್ಲೆ ಎನ್ನೋ ಕಹಳೆಕಾಱ ಬಂದವ ಹರಿದು ನಿಂದು ಹಾಡಿರೋ ಚೆಣತಿಯರಿರಾ (ಸರ್ವವ. ೪೮-೨೫೫) 'ಚೆಹಣೆ' ಪಠಾ.
[ ? ]

**ಚೆಣ್ಣವೂರ್** (ನಾ). ಒಂದು ಊರಿನ ಹೆಸರು : ಅವರಾಳ್ಚೆಣ್ಣವೂರೊಳ ಎಱಮ್ಮನಾಸನ್ದಿ ಅಳೆ (ಎಕ. VI, ಕಡೂರು. ೧೪೫-೪ ; ಸು. 750).
[ ಚೆಣ್ಣ ? + ಊರ್ ]

**ಚೆದರಿಸು** 'ಕೆದಱಿಸು' ನೋ.

**ಚೆದಱು** 'ಕೆದಱ್$_1$' ನೋ.

**ಚೆದುಕ** (ನಾ). ಒಂದು ಬಗೆಯ ಮರ (?) : ಚೆಟ್ಟ ಕಿಬ್ಬಿಯಲ್ಲಿ ಚೆದುಕದ ತಾಳಲ್ಲಿ ಈಶಾನ್ಯ ಮುಖವಾಗಿ ನಟ್ಟ ಕಲ್ಲು ೧ (ಎಕ. XIV, ನಂಜನ. ೨೯೫ ಪುಟ. ೧೫೦-೩೩ ; 1716). [ ? ]

**ಚೆದುರು$_1$** 'ಕೆದಱ್'$_1$ ನೋ.

**ಚೆದುರು$_2$** 'ಚದುರ್' ನೋ.

**ಚೆದುಱಿಸು** 'ಕೆದಱಿಸು' ನೋ.

**ಚೆದುಱು** 'ಕೆದಱ್$_1$' ನೋ.

**ಚೆನ್ನ**, ಚನ್ನ$_1$ (ನಾ). ೧. ಸುಂದರನಾದವನಂ ; ಚೆಲುವನಾದವನು : ಪೊನ್ನುಳ್ಳವನೆ ಕುಲೀನಂ ಚೆನ್ನಂ ಕಲಿ ಸತ್ಯವಾದಿಯೆನಿಸುಗುಂ (ಕಾವ್ಯಾವ. ೮೦); ಚಲದಭಿರಾಮನನ್ಯನ ತವರ್ಮ್ಮನೆ ಚೆನ್ನರ ಚಕ್ರವರ್ತ್ತಿ (ಎಕ. VIII. ಸೊರಬ. ೨೭೬-೪೨ ; ಸು. 1165) ; ಎನ್ನಾನಂದಸುಧಾಬ್ಧಿವರ್ಧನ ಕಳಾ ಸಂಪನ್ನನಂ ಚೆನ್ನನಂ . . . ಕಂಡೆಂ (ಶಂಪಾಶ. ೩೫) : ಚೆಲುವರ ಚೆಲ್ವ ಚೆನ್ನಿಗರ ಚೆನ್ನ ಸುವೀರರ ವೀರ (ಅಪಶ. ೧೨೨). ೨. ಶೂರ; ಪರಾಕ್ರಮಿ: ಚೆನ್ನರನಡಿಗೊತ್ತಿ ಮಂಡಳಿಕರಂ ಬೆಸಕೆಯ್ಸಿ (ಶಂಪಧಾ. ೬-೧೮). 'ಚೆನ್ನ ಪೊಂಗ' ಪಠಾ. ೩. ಒಳ್ಳೆಯದು : ತಾನು ಒಬ್ಬ ತಳವಾರನಾಗಿದ್ದರೆ ಎಷ್ಟು ಚೆನ್ನ (ಧರ್ಮಸಾ. ೬೩). ೪. ಚೆಲುವು; ಸೌಂದರ್ಯ; ಸೊಗಸು: ಬಿಸುಗದಿರರವಿಹಿಮಕಿರಣನಂತೆ ನೋಳ್ಪರ ಕಣ್ಗೆ ಚೆನ್ನಬಸವಂ ಚೆನ್ನಮಂ ತಳೆದನು (ಚಬಪು. ೫-೪೨). ೫. ಅಂದವಾದಂದು ; ಮನೋಹರ

ವಾದಂದು : ಭೃಂಗಕೋಕಿಳ ಕೀರಪ್ರಿಯ ಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೇ (ಆದಿಪು. ೧೧-೯೮). (ಗು). ೬. ಅಂದವಾದ ; ಚೆಲುವಾದ : ಧರಣೀನಾಥನ ಚೆನ್ನ ಹೊನ್ನ ಕರುಮಾಡಂ ಮಾಳ್ಪುದಾಶ್ಚರ್ಯಮಂ (ಶಾಂತಿಪು. ೪-೩೨). 'ಚೆನ್ನಪೂ' ಪರಾ. ಚನ್ನ$_1$: (ಕ). [ ಚೆನ್ನ + – ಅ$_7$ ]

**ಚೆನ್ನಂಗಿ,** ಚನ್ನಂಗ, ಚನ್ನಂಗಿ$_1$, ಚೆನ್ನಗೆ$_1$, ಚೌನಂಗಿ (ನಾ). ಒಂದು ಬಗೆಯ ಮರ: "ಚೆನ್ನಂಗಿ ಚಲಿಯುಕ್ಕಂ" (ಪುಂಗಶಾ. ೩೭-೦೯); ಹಲಸಾಲಂ ತಡಸಾಸು . . . ಚೆನ್ನಂಗಿ ಬೊಬ್ಬುಲಿ (ಪಾರ್ಶ್ವಪು. ೧೨-೫೮); ಕರುವಿಡಿದಿರ್ಪ ಚೆನ್ನಂಗಿಯ ತರು ಡಾಣೆಗೆ (ಕಮುದ. ೬೨ ಪ್ರಯೋ); ಚೆನ್ನಂಗಿ ಬನ್ನಿ ಹೊನ್ನೆಯ ತರುಗಳ್ (ಪಮ್ಮಿ.ರ. ೪-೬೯), ತೇಗ ಚೆನ್ನಂಗಿ ಬನ್ನಿ ಪಾದ್ರಿಯು . . . ಮೊರೆದವರಣ್ಯದಿ (ಗೋಹಾಡು. ೪). **ಚನ್ನಂಗ :** (ಕ). **ಚನ್ನಂಗಿ$_1$ :** ಹೂಲಿ ಮಾಲಿನಿ ಬನ್ನಿ ಹೊನ್ನೆ ಚನ್ನಂಗಿ [ಪಾಠಾಂ. ಸೊಗಡಗಿಲು] (ಸೋಮುಚ. ೩-೨); ಹೊನ್ನೆ ಹೊನ್ನಯ್ಯಗಳ ಮಗನಂ ಮನ್ನಿಸಾ ಚ[ಪಾಠಾಂ. ಚೆ]ನ್ನಂಗಿಯೇ ಆ ಚೆನ್ನಯ್ಯಂಗೊಲಿದಭವನೆಂದಿಗೆ ಚೆನ್ನಮಾಡುವನು (ಬಸಪು. ೪೫-೩೭); ಚನ್ನಂಗಿ (ಬೊಂದಾರ) . . . ಇಮಾರತಿಗೆ ಮೇಲಾದದ್ದು (ಕಥಾಗಿ. ೩೯). **ಚೆನ್ನಗೆ$_1$ :** ಎಲವದ ಬೇಲ ಚೆನ್ನಗೆಯ ಪೊನ್ನೆಯ ಕಮ್ಮರದ (ಲೀಲಾವ. ೬-೨೭). **ಚೌನಂಗಿ:** ಮರಗಳು: ಹೆಸವ, ಹುಬ್ಬುಲಸು . . . ಗೊರವಿ, ಹೆಣ್ಣುಗೊರವಿ, ಚೌನಂಗಿ, ಮಡ್ಡಿ (ನಮ್ಮನು. ೨೩೩). [ ದೇ.॥ ತೆಲು. ಚೆನ್ನಂಗಿ, ಚನಂಗಿ ]

**ಚೆನ್ನಂಗಿಬಿದಿರು,** ಚನ್ನಂಗಿಬಿದಿರು (ನಾ). ಒಂದು ಬಗೆಯ ಬಿದಿರು : ಅಣ್ಣ ತಮ್ಮರು ಕೂಡಿ ನಿನ್ನೆ ಗುಡ್ಡವನೇರಿ ಚೆನ್ನಂಗಿಬಿದಿರ ಕಡಿದಾರ (ಕನ್ನಜಾ. ೦೮). **ಚನ್ನಂಗಿಬಿದಿರು :** ಅಣ್ಣ ತಮ್ಮ ಕೂಡಿ ನಿನ್ನೆ ಗುಡ್ಡಾ ಏರಿ ಚನ್ನಂಗಿಬಿದಿರ ಕಡಿದಾರೊ (ಹಳ್ಳಿಯ. ೩೧).

[ ಚೆನ್ನಂಗಿ$_0$ + ಬಿದಿರು$_2$ (<ಬಿದಿರ್$_2$) ]

**ಚೆನ್ನಕ್ಕಿ** (ನಾ). ಒಳ್ಳೆಯ ಕಣ್ಣು ; ದೋಷರಹಿತವಾದ ಕಣ್ಣು : ನಿನ್ನ ನಯನದೊಳೆನ್ನ ಚೆನ್ನಕ್ಕಿಯುನಮರ್ಚುವೆನು (ಬಸಪು. ೧೮-೭೦).

[ ಚೆನ್ನ + ಅಕ್ಕಿ ]

**ಚೆನ್ನಗಂಡ** (ನಾ). ಸುಂದರನಾದ ವೀರ ; ಚೆಲುವನಾದ ಸಾಹಸಿ : ಮಿದುಟುಣ್ಮ ಪುಷ್ಪಕೃತ ಶೇಖರದಂತಿರೆ ಕೊಂಡು ಪೋದರಚ್ಚರಸಿಯರಣ್ಮ ಸತ್ತ ಭಟರಂ ಕೊನೆವಿಾಸೆಯ ಚೆನ್ನಗಂಡರಂ (ಗದಾಯು. ೪-೨೨).

[ ಚೆನ್ನ + ಗಂಡ$_1$ ]

**ಚೆನ್ನಗೆ$_1$** 'ಚೆನ್ನಂಗಿ' ನೋ.

**ಚೆನ್ನಗೆ$_2$** (ನಾ). (ಕರಾ) ಬಾಯಿಕಟ್ಟಿರುವ ಚೀಲದಲ್ಲಿರುವ ಧಾನ್ಯವನ್ನು ಪರೀಕ್ಷಿಸುವುದಕ್ಕಾಗಿ ಸ್ವಲ್ಪ ಹೊರಗೆ ತೆಗೆದುಕೊಳ್ಳಲು ತುದಿಯಲ್ಲಿ ಚೂಪಾಗಿದ್ದು ಕೊಳವೆಯಂತಿರುವ ಕಬ್ಬಿಣದ ಸಾಧನ ; ಸಕ್ಕರೆ ಗುತ್ತಿ : ಅಕ್ಕಿ ಪರೀಕ್ಷಿಸಲು ಚೆನ್ನಗೆ ಸಾಲದೆ (ರೂ೦). [ ? ]

**ಚೆನ್ನಡಿ,** ಚನ್ನಡಿ (ನಾ). ೧. ಚೆಲುವಾದ ಪಾದ ; ಮನೋಹರವಾದ ಪಾದ : ತಾವರೆಗಳಡಿಯ ಥಳಥಳಿವ ಚೆನ್ನಡಿಗಳಸಿಯುಡಿಯ ಲಲಿತಾಂಗಿಯರ್ (ಚಬಪು. ೩೭-೪೧); ಎನ್ನ ಜನ್ಮಕ್ಕೆ ಸಾಫಲ್ಯಮಾದುದು ನಿನ್ನ ಚೆನ್ನಡಿಯೂಳಿಗದಿಂದ (ಹರಿಬ. ೦-೩೯); ಚೆನ್ನಡಿ ಬಿಡ್ದೊಡೆ ಬಡನಡು (ಚೆಳವಿ. ೩-೯೧). ೨. ಮೇಲಾದ ಪಾದ ; ಶ್ರೇಷ್ಠವಾದ ಪಾದ : ಸನ್ನುತ ಕವಿ ಪಂಪರಾಜನು ಮೊದಲರ ಚೆನ್ನಡಿಗಳಿಗೆಜಿಗುವೆನು (ಅಂಜಚ. ೦-೩೯). ೩. ಚೆನ್ನಾದ ಅಡಿಭಾಗ,– ತಳಭಾಗ : ಗೋಣಿಯ ಪಂದಿಯ ಪೊನ್ನ ಬೀರಸಂಕಲೆಯ ತೊಳಪ್ಪ ಕನ್ನಡಿಯ ಚೆನ್ನಡಿಯದ್ದಣ ಪೆರ್ಡಮಾಗೆ ಮೂಡಲಿಸಿ ಪೊಡರ್ವ ಪರ್ಚಿ ಕಿಲರುರ್ಕುಡಿಗಳ್ ತಜಿಸಂದು ರಾವಿದರ್ (ಕಬ್ಬಿಗಾ. ೨೭೨). **ಚನ್ನಡಿ:** ೨. ಸನ್ನುತ ಚತುರ್ವಿಂಶತಿ ಜಿನರಾಜರ ಚನ್ನಡಿಗಳಿಗೆಜಿಗುವೆನು (ತ್ರಿಪುಸಾಂ. ೦-೬). [ ಚೆನ್ನ + ಅಡಿ$_1$ ]

**ಚೆನ್ನನಾಯಿ** (ನಾ). (ಕರಾ) ಒಂದು ಬಗೆಯ - ಕಾಡುನಾಯಿ : ಹುಲಿಯನ್ನು ಹೆದರಿಸುವ ಒಂದು ಬಗೆಯ ನಾಯಿ.

[ ←ತುಳು. ಚೆನ್ನನಾಯಿ=ತೋಳ ]

**ಚೆನ್ನನೆ** (ಕ್ರಿ). ಅಂದವಾಗಿ, ಮನೋಹರವಾಗಿ : [illegible] ಚೆನ್ನನಪ್ಪ ತಲೆಸೊಕ್ಕಿಂದ [illegible] (ಜಗವಿ. ೬-೦೬ ವ).

ಚೆನ್ನಚೆನ್ನನೆ (ದ್ವಿರುಕ್ತಿ) : ಸನ್ನಿ ತೆಜಪುಗೊಡಿ ಸಾಗಿ ಮೆಲ್ಲಗೆಯೆಂದು ಚೆನ್ನಚೆನ್ನನೆ ಸೊಲ್ಲಿಸಿದರು (ಭರಚ. ೮-೯೫). [ ಚೆನ್ನ + – ಅನೆ$_1$ ]

**ಚೆನ್ನಪೂ** (ನಾ). ಅಂದವಾದ ಹೂವು : [illegible] ಕೊಡದುರ್ ದೇಸಿಯನಾವಗವಿಪ್ಪ ಚೆನ್ನಪೂಗಳನವನೊಯ್ಯ ನೋಸರಿಸುತುಂ (ಪಂಪಭಾ. ೨-೦೭); ತೊಳಗುವ ಚೆನ್ನಪೂಗಳಲರಾವಳಿಯೊಳ್ಮಿಟುಗಲ್ (ಕಾದಂಪೂ. ೭೫೪). [ ಚೆನ್ನ + ಪೂ$_2$ ]

**ಚೆನ್ನಪೊಂಗ** (ನಾ). ೧. ಸುಂದರನಾದ ವೀರ; ಚೆಲುವನಾದ ಪರಾಕ್ರಮಿ: ಕೊಂಡು ಪೋದರಚ್ಚರಸೆಯರಣ್ಮ ಬಿಟ್ಟ ಭಟರಂ ಕೊನೆವಿಾಸೆಯ ಚೆನ್ನಪೊಂಗರಂ (ಕಾವ್ಯಾವ. ೮೩೪); ಕವಿ ಪಂಡಿತರೋದುವ ಕೊಂಕು ಚೆನ್ನಪೊಂಗರ ಕುಡಿಮುಂಜೆಜಂಗು ನಿಡುಬಯ್ತಲೆ ಬಾರ್ತೆಯ (ಅನಂಪು. ೮-೪೯); ವಾಘವಂ . . . ಗಾಡಿಯಿಂ ಬರ್ಪ ಚೆನ್ನಪೊಂಗನಂ ಕೈಗೊಟ್ಟು ಕೂಡಿವಂದೋಲಗದ ಸಾಲೆಯಂ ಪುಗಿಸಿ (ರಾಮಾಶ್ವ. ೫೭-೦೫). ೨. ಉತ್ತಮನಾದ ವೀರ : ಶ್ರೇಷ್ಠನಾದ ಕಲಿ : "ಚೆನ್ನಪೊಂಗಂ–ವೀರಂ" (ಕಮುದ. ಪರಿ. ೨); ಕುರುಬಲದೊಳ್ ಕರಂ ನೆಗಟ್ದ ಬೀರರ ಚೆನ್ನರ ಸಂದ ಚೆನ್ನಪೊಂಗರ ತಲೆ ತಾಟ ಪಣ್ ಕೆದಜಿದಂತೆ ನಿರಂತರವಾಜಿರಂಗದೊಳ್ ಪರೆದಿರೆ (ಪಂಪಭಾ. ೮-೧೦೬). [ ಚೆನ್ನ + ಪೊಂಗ ]

**ಚೆನ್ನಭಕ್ತಿ,** ಚನ್ನಭಕ್ತಿ (ನಾ). ಉತ್ತಮವಾದ ಭಕ್ತಿ : ಅಥವಂ ನಗುತ್ತಾ ನಿಂಬಿಯಕ್ಕನ ಚೆ[ಪಾಠಾಂ. ಚ]ನ್ನಭಕ್ತಿಗೆ ಮೆಚ್ಚಿಯಾರೋಗಿಸಿ ಮುದಂಬೆತ್ತು (ಬಸಪು. ೨೪-೭೫). **ಚನ್ನಭಕ್ತಿ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚೆನ್ನ + ಭಕ್ತಿ ]

**ಚೆನ್ನಭಾಷಿತ** (ನಾ). ಸೊಗಸಾದ ಮಾತು ; ಉತ್ತಮವಾದ ಮಾತು : ಸುಭಾಷಿತ : ವಂಶಾವಳಿಯುಮಂ ನಿಜಾವಳಿಯುಮನೊಳ್ಳಿತ್ತಾಗಿ ಪೇಟ್ದೀ ನಿನ್ನ ಚೆನ್ನಭಾಷಿತಮದೊಳ್ಳಿತ್ತಾದುದು (ಗದಾಯು. ೨-೮ ವ).

[ ಚೆನ್ನ + ಭಾಷಿತ ]

**ಚೆನ್ನಲರ್** (ನಾ). ಅಂದವಾದ ಹೂವು : ಅಮರರು ಚೆನ್ನಲರ್ಮಳೆಯ ಕಱೆದರು (ಭರಚ. ೪೭-೦೦೯). [ ಚೆನ್ನ + ಅಲರ್$_2$ ]

**ಚೆನ್ನಸರ** (ನಾ). ಚೆನ್ನಾಗಿರುವ ಕಂಠಹಾರ ; ಸುಂದರವಾದ ಹಾರ : ಉಳಿದಾರ ಕಂಠಿ ಏಡೆಯ ಪೊಂಗಲು ಹೊನ್ನ ಬಳೆಯುತ್ತುರಿಗೆ ಚೆನ್ನಸರವಾ ಕಳುವು (ಕುಮಾರಾಸಾಂ. ೪೨-೨೩); ಹರಳೋಲೆ ಕಟ್ಟಾಣಿಮುತ್ತಿನ ಪೆಂಟೆಯ ಮಿಜುಗುವ ಚೆನ್ನಸರಗಳು (ಕಂನವಿ. ೯-೭೫). [ ಚೆನ್ನ + ಸರ$_2$ ]

**ಚೆನ್ನಸುಗೆ** (ನಾ). ಸುಂದರವಾದ ಅಶೋಕವೃಕ್ಷ : ಚೆನ್ನಸುಗೆಯ ನೆಬಲಡಿಯ ಸುಣ್ಮಟಲೊಟ್ಟಿಲೊಳ್ ಕೆಂದಳಿರಿಂ ನಲ್ವಾಸುಗೆಯ್ದು (ರಾಮಾಶ್ವ. ೩೧-೨೫). [ ಚೆನ್ನ + ಅಸುಗೆ ]

**ಚೆನ್ನಳಗ** (ನಾ). ಚೆಲುವಾದ ಹವಳದ ಬಣ್ಣದ ಕುದುರೆ : ಜನ್ನ ಜನ್ನಾರ ಚೆನ್ನಳಗ ಚೆಲುವ ಚೀರ ತನ್ನೀಲ ಭೈರ ಕಂಕರಿಗಂ ಸನ್ನುತ ಸಾಂಬ್ರಾಣಿಯನೇಜಿ ನೃಪಕುಲರನ್ನರಿಗಂದು ತೋಜಿದರು (ಅಂಜಚ. ೬-೮೩). [ ಚೆನ್ನ + ಅಳಗ$_1$ ]

**ಚೆನ್ನಾಕಳ್** (ನಾ). ಉತ್ತಮವಾದ ಹಸು; ಒಳ್ಳೆಯ ಜಾತಿಯ ಗೋವು: ಋತ್ವಿಜರೆಲ್ಲರ್ . . . ರನ್ನಮುಂ ಪೊನ್ನ ಪೇಜಂ ಚೆನ್ನಾಕಳುಂ ಪ್ರತಿಗ್ರಹಿಸಿ ತಾಮುನಂ ಪರಸಿ ಬೀಟ್ಕೊಂಡರ್ (ರಾಮಾಶ್ವ. ೦೬೬-೦೩). [ ಚೆನ್ನ + ಆಕಳ್ ]

**ಚೆನ್ನಾಟ** (ನಾ). ಲೀಲೆ : ವಿಲಾಸ : ವಿನೋದ : ಊಟವ ಮಾಡಿದು ವಧುಬಂಧುಗಳು ಚೆನ್ನಾಟದಿ ಕೃಷ್ಣ ಕೈದೊಳೆದು . . . ಕರ್ಪೂರಕೂಟ ವೀಟಕೆಯನು ಸವಿದು (ಮೋಹಹ. ೧೪-೧೬). [ ಚೆನ್ನ + ಆಟ ]

**ಚೆನ್ನಿ, ಚನ್ನಿ** (ನಾ). ಚೆಲುವೆ ; ಸುಂದರಿ : ನಕ್ಕೊಮ್ಮೆ ಪೇಳ ಚೆನ್ನಿ ಆನಗಿ ಇತ್ತಿತ್ತ ಪೋಗೇತಿ ಎತ್ತೆತ್ತ (ಗಂ. ೧೧೧-೫). **ಚನ್ನಿ** : "ಚನ್ನಿ=ಚೆಲ್ವೆ" (ಕಾಶಕ್ಕ. ೩೯) : ಚನ್ನಿಗೆ ನಾರಿಕುಲರನ್ನಿಗೆ ಭಾಗ್ಯಸಂಪನ್ನಿಗೆ ಸಗರಕುಲ ಪಾವನೆಗೆ (ತೀರ್ಥಮ. ೧೮). [ ಚೆನ್ನ + – ಇ₂ ]

**ಚೆನ್ನಿಕೆ** (ನಾ). ಚೆಲುವು ; ಸೌಂದರ್ಯ : ಕಲಿ[ತ]ನದುರ್ಕ್ಕೆ ಜೌವನದ ಚೆನ್ನಿಕೆ ರೂಪಿನೊಳೊಲ್ಪೆ × ಳ್ಪು ಪಾರ್ವ್ವಲೆದವಟರ್ದ್ದ ವೀರ್ಯ್ಯ ವಿರದಾಯುದೊಜ್ಜಿನ್ನು ಮ ನ ಕ್ಕೆ ಸಂಕೆಯನ್ನೊಲಗಿಸಿದಂ (ಕೌಇಇ. XI-I, ೪೧-೩೫: 969). [ ಚೆನ್ನು + – ಇಕೆ ]

**ಚೆನ್ನಿಗ, ಚನ್ನಿಗ** (ನಾ). ೧. ಚೆಲುವನಾದವನು; ಸುಂದರ; ಸ್ಫುರದ್ರೂಪಿ: ತಮ್ಮ ವಿಭೂತಿಯ ತಮ್ಮ ತಮ್ಮ ಚೆಲ್ವುಗಳ ವಿಲಾಸದುರ್ಮೆಗಳೊಳಾವೆಪ ಗಾಗಿವೆವೆಂದು ಬಂದ ಚೆನ್ನಿಗರು ಮನಾಸಕಾಐರು ಮನೊಲ್ಲದ (ಪಂಪಭಾ. ೧-೧೧೬): ಕಡುಗೂರ್ಪ ಮುಡದಿಯು ಮುತ್ತೊಬ್ಬ ಚೆನ್ನಿಗ ಕೊಂಬ (ಬಸವ. ೪೦) ; ಧರಗೆ ರಾಮನೆ ಚೆಲ್ವ ರಾಮನಿಂದಾ ಚಕ್ರಧರನೆ ಚೆನ್ನಿಗ ನೆನಲೆಸದಾ (ಭರಹ. ೫೧-೬೪). ೨. = ಚೆನ್ನಿಗರಾಯ : ನೆಚ್ಚಿ ನಂಬಿದೆನು ಬೇಲೂರ ಚೆನ್ನಿಗನ (ಪುರಂದ.೧-೯೦-೩). **ಚನ್ನಿಗ** : ೧. ಚ[ಪಾಠಾಂ. ಚೆ]ನ್ನಿಗನು ಮಡಿದನು ಶಿವಶಿವಾ ಎನ್ನದೆ (ಬಸವು. ೪೮-೧೧) ; ಬನ್ನಿರೈ ನೀವ್ ಘಟ್ಟ ಬೆಟ್ಟದ ಚನ್ನಿಗರು (ಕೊರರಾ. ೬-೧೪-೨೯). [ ಚೆನ್ನು + – ಇಗ ]

**ಚೆನ್ನಿಗತನ, ಚನ್ನಿಗತನ** (ನಾ). ಚೆಲುವು; ಸೌಂದರ್ಯ: ಗಜ್ಜು ಕಿಟ್ಟಿ ಕೀತ ಬಾವಲ ತೆಜದಿಂ ಬೀಭತ್ಸಮಪ್ಪೊಡಲ್ಗೆ ಕಲರ್ ಬೇಸಜುತುಂ ನೆನೆವರ್ ಮುನ್ನಿನ ಪೆಜರಂಗನೆಯರ್ಗೆ ಮೆಚ್ಚಿವ ಚೆನ್ನಿಗತನಮಂ (ವರ್ಧಪು. ೧೧-೩೯). **ಚನ್ನಿಗತನ** : ಮನಂ ಪೆಜರಂಗನೆಯರ್ಗೆ ಮೆಚ್ಚಿವ ಚನ್ನಿಗತನಮಂ (ಶ್ರಾವಕಾ. ೨೧-೮). [ ಚೆನ್ನಿಗ + – ತನ ]

**ಚೆನ್ನಿಗರಾಯ, ಚನ್ನಿಗರಾಯ** (ನಾ). ವಿಷ್ಣುವಿನ ಒಂದು ಮೂರ್ತಿ ; (ಬೇಲೂರಿನ) ಚನ್ನಕೇಶವ : ಕಂತುಪಿತನು ವೇಲಾಪುರದ ಚೆನ್ನಿಗರಾಯ ಎಂಥಾ ಗಾಡಿಗಾಜನೆ (ಪುರಂದ. ೧-೧೭೦ ಪಲ್ಲವಿ) : ಮದನನ ಹೆತ್ತವನು ವರಪುರದರಸ ಚೆನ್ನಿಗರಾಯ (ನಳಚ. ೩-೪೯) ; ಮಂಗಳಂ ಬೇಲೂರು ಚೆ[ಪಾಠಾಂ. ಚ]ನ್ನಿಗರಾಯ ಕೇಶವಗೆ (ಹರಿಸಾ. ೧೧೧). **ಚನ್ನಿಗರಾಯ** : ಮೇಲಿನ 'ಹರಿಸಾ' ಪ್ರಯೋಗದ ಪಾಠಾಂತರವನ್ನು ನೋಡಿ.

[ ಚೆನ್ನಿಗ + ರಾಯ ]

**ಚೆನ್ನಿತು** 'ಚೆನ್ನಿತ್ತು' ನೋ.

**ಚೆನ್ನಿತ್ತು, ಚನ್ನಿತು, ಚೆನ್ನಿತು** (ಗು). ೧. ಸುಂದರವಾದ ; ರಮಣೀಯ ವಾದ : "ರಯುಃ, ರಯಣಂ, ರಯ್ಯಂ, ರಯಣೀಯಂ, ಈ ೪ ಚೆನ್ನಿತ್ತು" (ಕಾಶಕ್ಕ. ೧೧೦). **ಚನ್ನತು** : ೨. ಒಳ್ಳೆಯ ; ಚೆನ್ನಾದ : ಈ ಸುದಿನ ಚನ್ನತಾಹಪವೀರರೆಂಬುದನ್ನರಿಯನಾ (ತುರಂಗ. ೬೩-೧೧). **ಚೆನ್ನಿತು** : ೩. ದಪ್ಪವಾದ ; ಪುಷ್ಟವಾದ : " ಮೇದಸ್–ನೆಣಂ; ಮೇದುರಂ-ಚೆನ್ನಿತು " (ಕಾಶಕ್ಕ. ೦೭೦). [ <ಚೆನ್ನು ]

**ಚೆನ್ನೀರ್** (ನಾ). ನೆತ್ತರು ; ಕೆನ್ನೀರು ; ರಕ್ತ : ಕರುಳುಗಳೊಕ್ಕು ಕಾಳಿಜ ಹಾಯ್ದು ನಿಡುನರ ಹಜಿದು ಚೆನ್ನೀರ್ಗಳು ಪರಿದು (ಕಂಸವಿ. ೧೪-೮೭). 'ಕೆನ್ನೀರ್₁' ಪರಾ. [ ಚೆಂ₁ + ನೀರ್₁ ]

**ಚೆನ್ನು, ಚನ್ನು** (ನಾ). ೧. ಅಂದ ; ಸೊಗಸು ; ಚೆಲುವು : ಸೂಳೆಯಂತೆ ಚೆನ್ನ ಮೆಜೆಯುದೆ (ಧರ್ಮಾಮೃ. ೫-೯೯) ; ಬಣ್ಣ ರೂಪವಹ ಚೆನ್ನುವ ಪರಿದಲ್ಲಿ ಅದನಲ್ಲಿಯೇ ಮಾಡಬಹುದು (ಮೋಹಮಾ. ೯೫-೩೭೭) : ಎನಗೆ ಪೊನ್ನುಂ ಸೀನೆ ಎನಗೆ ಚೆನ್ನುಂ ಸೀನೆ (ಅರಿ. ಹ. ೧೨೩-೧೪); ಉಚ್ಚಾರಣೆಗೆ ಚೆನ್ನಲ್ಲವೆಂಬುದನ್ನು ಲಕ್ಷಿಸಿಯೇ . . . ಕನ್ನಡಕ್ಕೆ ಸಹಜವೆನಿಸುವಂತೆ ಅನುಸ್ವಾರವನ್ನಾಗಿ ಇಟ್ಟುಕೊಂಡರು (ಸಂಶೋಧ. ೫೦). ೨. ಸರಿ ಯಾಗಿರುವಿಕೆ; ನೇರ್ಪು; ಖಂಜುತೆ : ಚೆನ್ನೇವುದೋ ಸಚ್ಚರಿತಂ ಚೆನ್ನಲ್ಲದ ದೇಹಿಗೆ (ಸಮಹ. ೬-೪೪) ; ಚೆನ್ನಿಂ ನಮಸ್ಕರಿಸಿ (ಪದ್ಮರಾ. ೭-೨೨). **ಚನ್ನು** : ೧. "ಚೆಲುವಿಕೆ" (ಚಾನಕೋ. ೫೫). ೩. ನೆಟ್ಟಗಿರುವುದು: ನೇರವಾಗಿರು ವುದು : ನಾಯ ಬಾಲ ಸಡೆಯಂ ಕಟ್ಟಲ್ಕೆ ಚ[ಪಾಠಾಂ. ಚೆ]ನ್ನವ್ವುದ (ಸೋಮೇಶ. ೪೭).

**ಚನ್ನಹ** = ಅಂದವಾದ ; ಚೆಲುವಾದ : ಚನ್ನಹ ಪಾದವುಂ ಬಿನ್ನಣ ದಿಂದಡರ್ದು (ಹಾಲಾಸ್ಯ. ೧-೦೬-೪೭). **ಚೆನ್ನಾಗಿ, ಚನ್ನಾಗಿ** = ಸೊಗಸಾಗಿ ; ಸಂಪೂರ್ಣವಾಗಿ ; ಹದವಾಗಿ : ಚೆನ್ನಾಗಿ ತಿಳಿದು ಪಾಪಾನುರಾಗವುಂ ಪತ್ತುವಿಟ್ಟು (ಧರ್ಮಾಮೃ. ೨-೯೧) : ಮುನ್ನ ಬೆಸಸಿದ ಸದಾಚಾರಗಳುಂ ಚೆನ್ನಾಗಳವಟ್ಟವು (ದೀಕ್ಷಾಬೋ. ೦೨೬-೮) ; ನಿನ್ನೊಡವುಟ್ಟಿದರಾದ ಯಾದವರಲ್ಲ ಚೆನ್ನಾಗಿರ್ದಪರೀಗ (ಅಂಜಚ. ೧೧-೦೫೫) ; ನಿಮ್ಮ ಊರು ಚೆನ್ನಾಗಿದೆ (ಶಾಯುಕ. ೮೦); ಜನ್ನಿಗೆಯ ಪಾಲಂ ತೆಗೆದು ಚ[ಪಾಠಾಂ. ಚೆ]ನ್ನಾಗಿ ಕಾಸಿದ ನಂತರದೊಳು (ಬಸವು. ೦೪-೫) ; ಚ[ಪಾಠಾಂ. ಚೆ]ನ್ನಾಗಿ ನೀವಸು ನಯದಿ ನೋಡಲು ರೋಗಿಯಾದವನುಂ ನಿರೋಗಿಯೆನಲ್ಕೆ ಬಾಳ್ವನಲಾ (ಬಸವು. ೪೭-೬೫) **ಚೆನ್ನಾಗು**=ಅಂದವಾಗು; ಸೊಗಸಾಗು : ಅಯ್ಯಯ್ಯಾ ಚೆನ್ನಾದುದೆನೆ ಕನ್ನಡಿಗರು ರಯ್ಯಾ ಮಂಚಿದಿಯೆನೆ ತೆಲುಗ (ಭರಹ. ೦-೭) ; ಚೆನ್ನಾದ ಕುಂಕುಮಗಾರಣೆಯಿಂದ ಸಂಪನ್ನತವಿಡಿದುಪಾಸ್ಥಾನ (ಕಂಸವಿ. ೮-೧೧). [ ದೇ.೫ ತೆಲು. ಚೆನ್ನು ]

**ಚೆನ್ನುಗೆಡು** (ಕ್ರಿ). ಅಂದಗೆಡು ; ಹಾಳಾಗು: ಕಣ್ಣಾವಗಾಲದ ಹೊಳೆಯಲ್ಲಿ ಮುಳುಗಿ ಚೆನ್ನುಗೆಟ್ಟರಯ್ಯಾ (ಮೋಳಿಮಾ. ೨೪೪-೭೯೫).

[ ಚೆನ್ನು + ಕೆಡು₁ ]

**ಚೆನ್ನುಡಿ** (ನಾ). ಒಳ್ಳೆಯ ಮಾತು ; ಸೂಕ್ತಿ : ನಿರಹಂಕಾರಕ್ಕೆ ಭಕ್ತಿಯೇ ಶೃಂಗಾರವೆಂಬ ತನ್ನ ಚೆನ್ನುಡಿಯಂತೆ ನಿರಹಂಕಾರದ ಮೂರ್ತಿಯಾಗಿ (ಶರಚ. ೪೧೮). [ ಚೆನ್ನ + ನುಡಿ₂ ]

**ಚೆನ್ನುಡೆ** (ನಾ). ಸೊಗಸಾದ ಉಡುಗೆ : ಚೆನ್ನುಡೆಯ ಹೊಂಬಣ್ಣದ ಬಿಚ್ಚು ಗೂದಲ . . . ಹೆಣ್ಣಾಗು (ಪ್ರಸರು. ೪೪೦). [ ಚೆನ್ನ + ಉಡೆ₂ ]

**ಚೆನ್ನೆ₁, ಚನ್ನೆ** (ನಾ). ಚೆಲುವೆ ; ಸುಂದರಿ : ಚೆನ್ನೆ ಪೊನ್ನೆಯರಲಂ ಕೊಯ್ದುದ್ದ್ (ಆದಿಪು. ೧೧-೧೧೨) ; ಪೆಜರಂ ತನ್ನಂತು ಬಗೆದು ಲೋಗರ ಚೆನ್ನೆಯರಂ ಬಯಸಲಾಗದಜುವುಳ್ಳ ನರಂ (ಸಮಹ. ೫-೬೨) ; ಕಜ್ಜಳದ ಕನ್ನಡಿಯ ಚೆನ್ನೆಯರ್ವರಸು ಇಚ್ಚೆಗಾರ್ತಿ ನಡೆವಾಗಳ್ (ಕಬ್ಬಿಗ. ೩೨೪). **ಚನ್ನೆ** : ಚ[ಪಾಠಾಂ. ಚೆ]ನ್ನೆಯ ಕಣ್ಮಲರೊಳ್ ಕಾಡಿಗೆಯ ನೆಟ್ಟದ ಳ್ ಮತ್ತೊಪ್ಪುವರ್ಳ್ (ಪಂಪಾಮಾ. ೩-೦೫) ; ಪೊಗಳ್ವಂ ಭೂಮಂಡಳಂ ಸಂತತಂ ಒರಿದುಂ ಮಾಳಲದೇವಿಯು ಬಹುಕಳಾಸಂಪನ್ನೆಯುಂ ಚನ್ನೆಯುನ್ (ಶಾಇ. IV, ೧-೩೦: 1206); ವರಪತಿವ್ರತೆ ಚನ್ನೆಯರ ಗರುವೆನಿಸಿ ನಡೆದಳು (ಕುಮಾರಾಮ. ೭೦೩. ೩೩-೨೦). [ ಚೆನ್ನ + – ಎ₃ ]

**ಚೆನ್ನೆ₂** (ನಾ).=ಚೆನ್ನಂಗಿ : ಅರಳೆಯಿಂದಕ್ಕಿಯಿಂ ಕಕ್ಕೆಯಿಂ . . . ಬನ್ನಿಯಿಂ ಚೆನ್ನೆಯಿಂ (ನಂದಿಮಾ. ೦೩-೦೨) ; ಎಲವಂ ಸಂಪಗೆ ಹೊನ್ನೆ ಚೆನ್ನೆ ಕವಳಂ ಕಾರಾಚವಾಚಂ ಪುಲಿಂಗಿಸ್ (ರಾಜಶೇ. ೫-೫೬). [ <ಚೆನ್ನಂಗಿ ]

**ಚೆನ್ನೆ₃** (ನಾ). (ಕರಾ) ಎರಡು ಸಾಲುಗಳಲ್ಲಿ ಏಳೇಳು ಗುಣಿಗಳನ್ನುಳ್ಳ ಮಣೆಯ ಮೇಲೆ ಕವಡೆ ಅಥವಾ ಹುಣಿಸೆಬೀಜಗಳಿಂದ ಆಡುವ ಒಂದು ಬಗೆಯ ಆಟ ; ಅಟ್ಟುಗುಳಿಮಣೆ ಆಟ : ಚೆನ್ನೆಯಾಡದ ಶತಮಾನವೇ ಕಳೆದುಹೋದಂತಿತ್ತು ನನಗೆ (ಕಳೆದು. ೧೨); ಗೊಂಬೆಮದುವೆಯನೊಮ್ಮೆ ಮಾಡಿ. ಚೆನ್ನೆಯೆಕ್ಕಡಿಯೊಮ್ಮೆ ಹೂಡಿ (ಗೀವಿಂ. ೭೦-೦೪).

[ ←ತುಳು. ಚೆನ್ನೆ ]

**ಚೆನ್ನಕಾಯಿ** (ನಾ). ಚೆನ್ನೆ ಆಟದಲ್ಲಿ ಬಳಸುವ ಬೀಜ,-ಕಾಯಿ : ಚೆನ್ನೆ ಕಾಯಿಗಳು ನನ್ನ ಕೈಯಿಂದ ಮೆಲ್ಲಮೆಲ್ಲನೆ ನಡುಗಿ ನಡುಗಿ ಚೆನೆಗುಣಿಗೆ ಬೀಳುತ್ತಿದ್ದುವು (ಪಳಮ. ೧೨). [ ಚೆನ್ನೆ$_3$ + ಕಾಯಿ$_4$ (<ಕಾಯ್$_4$) ]

**ಚೆನ್ನೆಗ್ಗಿಲು**, ಚನ್ನೆಗ್ಗಿಲು (ನಾ). ಕೆಂಪು ನೆಗ್ಗಿಲುಗಿಡ ; ಕೆನ್ನೆಗ್ಗಿಲು : "ಕಪಿಪಿಪ್ಪಲಿ–ಚೆನ್ನೆಗ್ಗಿಲು, ಗಜಗಿಪ್ಪಲಿ" (ಒಷಧಿ. ೨೮) ; ಬೇಕೊಮ್ಮೆ ಬೇರನೂ ಚೆನ್ನೆಗ್ಗಿಲ ಬೇರನೂ ನೀರಲ್ಲಿ ಅರೆದು ಮುಖಕ್ಕೆ ಲೇಪಿಸಲು ಸ್ತ್ರೀಯರುಗಳ ಮುಖದ ಕರಿಬಂಗು ಶಮನವಹುದು (ವೈದ್ಯಸಾ. II, ೦೪೭). **ಚನ್ನೆಗ್ಗಿಲು :** ಕಡವದ ಬೇರು, ಚನ್ನೆಗ್ಗಿಲು, ಹಿಟ್ಟುಳುಕನ ಬೇರು ಇವಂ ಹಸುವಿನ ಹಾಲೊಳರೆದು . . . ಕೊಳ್ಳಲು ಕಲ್ಲುಕಟ್ಟು ಮೂತ್ರಕೃಚ್ಛ್ರ ಸಹ ಮಾಣ್ಗುಂ (ಸಕವೈ. ೩೭೯). [ ಚೆಂ$_1$ + ನೆಗ್ಗಿಲು (<ನೆಗ್ಗಿಲ್) ]

**ಚೆನ್ನೆನಪು** (ನಾ). ಸರಿಯಾದ ನೆನಪು : (ಕ). [ ಚೆನ್ನ + ನೆನಪು ]

**ಚೆನ್ನೆಮಣೆ**, ಚನ್ನೆಮಣೆ (ನಾ). (ಕರಾ) ಚೆನ್ನೆ ಆಟವಾಡುವ ಮಣೆ ; ಅಟ್ಟುಗುಳಿಮಣೆ : ಆ ಚೆನ್ನೆಮಣೆ ಇಲ್ಲಿ ತಾ (ಪಳಮ. ೧೨). **ಚನ್ನೆಮಣೆ:** ಚನ್ನೆಮಣೆಗೆ ಹಾಲುವಾಣದ ಕಾಳು, ಪೆಟ್ಟಿಗೆ ಗಜ ಒದಗಿಸುತ್ತಿದ್ದವರು ರಾಗಜ್ಜ (ಪ್ರಕೃ. ೮೭). [ ಚೆನ್ನೆ$_3$ + ಮಣೆ ]

**ಚೆನ್ನೆಯ್ದಿಲ್**, ಚನ್ನೆಯ್ದಿಲ್, ಚನ್ನೈದಿಲು, ಚೆನ್ನೈದಿಲ್, ಚೆನ್ನೈದಿಲೆ (ನಾ). ಕೆಂಪು ನೈದಿಲೆ ; ರಕ್ತೋತ್ಪಲ : "ಸೌಗಂಧಿಕಂ, ಕಲ್ಹಾರಂ–ಈ ೨ ಚೆನ್ನೆಯ್ದಲ್"(ಹಲಾಯು.೧೧೨-೫೯): ಅಲರ್ದ ಚೆನ್ನೆಯ್ದಿಲ್ಗಳೊಳ್ಗಂಪಿ ನಿಂಪನಲಂಪಿಂ ತೆಗೆದೊಟ್ಟಿಕೊಂಡು . . . ತೀಡಿತ್ತೊಂದು ಮಂದಾನಿಲಂ (ಕಾದಂಪೂ. ೪೨೮). **ಚನ್ನೆಯ್ದಿಲ್ :** "ಅವರೆಂದುಂ ಚಂಗಲವೆಯೆಂದುಂ ಚ[ಪಾಠಾಂ. ಚೆ]ನ್ನೆಯ್ದಿಲ್" (ಕಶಸಾ. ೯-೧೭೭). **ಚನ್ನೈದಿಲು :** ಒಂದು ಹೂ ಮಂದಾರವುತ್ಪಲ ಒಂದು ಚನ್ನೈದಿಲು [ಪಾಠಾಂ. ಚೆನ್ನೆಯ್ದಿಲು] ಬಕುಳ ಪೊಂದೊಂದು ಅರವಿಂದ (ಬಸವು. ೧೯-೬೫).**ಚೆನ್ನೈದಿಲ್ :** ಚೆನ್ನೈದಿಲ ಕಂಪ ನೆಯ್ದಿಲಾರ್ಪುವೆ ಪೂಗಳ್ (ಆದಿಪು. ೧೧-೦೨೩): ಕೆಲರಂಭೋರುಹದಿಂ ಕೆಲರ್ ಸುರಗಿಯಿಂ ಚೆನ್ನೈದಿಲಿಂದಂ ಕೆಲರ್ . . . ಪೂಜಿಸಿ(ಧರ್ಮಾಮೃ. ೫-೨೬೨) : ಚೆನ್ನೈದಿಲಲರ ಮಾಲೆ (ಲೀಪಂ. ೯೮-೪೩). **ಚೆನ್ನೈದಿಲೆ :** "ಚೆನ್ನೈದಿಲೆಯು ಚೆಂಗಲವೆಯುಮದೆನ್ನಲ್ ಸಲೆ ರಕ್ತೋತ್ಪಳಮಕ್ಕುಂ" (ಕವಿಕಂ. ೯೫). 'ಕೆನ್ನೆಯ್ದಿಲೆ' ಪಠಾ. [ ಚೆಂ$_1$ + ನೆಯ್ದಿಲ್ ]

**ಚೆನ್ನೆಯ್ದಿಲ್ಗೊಳ**, ಚೆನ್ನೈದಿಲ್ಗೊಳ (ನಾ). ಕೆಂಪುನೈದಿಲೆಗಳನ್ನುಳ್ಳ ಕೊಳ : ಅಲರ್ದಂಭೋರುಹಷಂಡಮುಳ್ಳಲರ್ದ ಚೆನ್ನೆಯ್ದಿಲ್ಗೊಳಂ(ಆದಿಪು. ೦-೬೭). **ಚೆನ್ನೈದಿಲ್ಗೊಳ :** ಚೆನ್ನೈದಿಲ್ಗೊಳದವೊಲಾಯ್ತು ಸಂಜೆಗೆಂಪಿನಿಂ ಗಗನತಳಂ (ಕಾದಂಪೂ. ೫೦೦). [ ಚೆನ್ನೆಯ್ದಿಲ್ + ಕೊಳ$_2$ ]

**ಚೆನ್ನೇಸಜ್**, ಚೆನ್ನೇಸಜು (ನಾ). ಕೆಂಪು ಬಣ್ಣದ ಸೂರ್ಯ : ಚೆನ್ನೇಸಜ ಬಿಂಬಂ ಬಸುವನುಳಿದು ಭೂವಿಪಾತಳಕಂಬರದಿಂದಿಳಿತರ್ಪಂದದಿಂ (ಜಯುಕಾ. ೩-೬೭). **ಚೆನ್ನೇಸಜು:** ಚೆನ್ನೇಸಜು ಮೂಡಗಡೆ ಬೆಳೆವಂದದಿ ಸನ್ನುತ [ಶಿ]ವೆತ್ತು ಬೆಳೆದನು (ನೇಮಿಸಂ. ೫-೦೧೨). [ ಚೆಂ$_1$ + ನೇಸಜ್ ]

**ಚೆನ್ನೇಸಜು** 'ಚೆನ್ನೇಸಜ್' ನೋ.

**ಚೆನ್ನೈದಿಲ್** 'ಚೆನ್ನೆಯ್ದಿಲ್' ನೋ.

**ಚೆನ್ನೈದಿಲೆ** 'ಚೆನ್ನೆಯ್ದಿಲ್' ನೋ.

**ಚೆನ್ನೈದಿಲ್ಗೊಳ** 'ಚೆನ್ನೆಯ್ದಿಲ್ಗೊಳ' ನೋ.

**ಚೆನ್ನೊಪ್ಪು** (ಕ್ರಿ). ಚೆನ್ನಾಗಿ ಶೋಭಿಸು : ತಿರೆಯುಂ ಮುಟಿಬೆಳೆಗಳಿಂ ಚೆನ್ನೊಪ್ಪಿ ಬಜಗಾಲವುಂ ಕಾಣದಾಯ್ತು (ಅದ್ಭುತ. ೭-೨೦). [ ಚೆನ್ನ + ಒಪ್ಪು$_1$ ]

**ಚೆನ್ನೌಡಲ** (ನಾ). ಒಂದು ಬಗೆಯ ಔಡಲ; ಕೆಂಪು ಹರಳಿನ ಗಿಡ : "ಉತ್ತಾನ(ಪತ)ಪತ್ರ – ಹೇರೌಡಲ, ಚೆನ್ನೌಡಲ" (ಒಷಧಿ. ೧೭). [ ಚೆಂ$_1$ + ಔಡಲ (<ಅವುಡಲ) ]

**ಚೆಪ್ಪಗೊಡಲಿ** 'ಚಪ್ಪಗೊಡಲಿ' ನೋ.

**ಚೆಪ್ಪರಿ** 'ಚಪ್ಪರಿ' ನೋ.

**ಚೆಪ್ಪಲಿ** 'ಚಪ್ಪಲಿ' ನೋ.

**ಚೆಪ್ಪಾಳೆ** 'ಚಪ್ಪಳೆ' ನೋ.

**ಚೆಪ್ಪು** 'ಚೀಪು$_3$' ನೋ.

**ಚೆಪ್ಪೆ** 'ಚಪ್ಪೆ$_1$' ನೋ.

**ಚೆಪ್ಪೆಜಾಡ್ಯ** 'ಚಪ್ಪೆಜಾಡ್ಯ' ನೋ.

**ಚೆಪ್ಪೆವಡೆ** (ಕ್ರಿ). ಚಪ್ಪಟೆಯಾಗು : ಪೊಡವಿಯು ಪೊತ್ತ ಫಣೀಂದ್ರನ ತಲೆ ಚೆಪ್ಪೆವಡೆದುದು (ನೇಮಿಸಂ. ೨೭-೧೦೫). [ ಚೆಪ್ಪೆ (<ಚಪ್ಪೆ$_1$) + ಪಡೆ$_1$ ]

**ಚೆಪ್ಪೋಡು** 'ಚಪ್ಪೋಡು' ನೋ.

**ಚೆಬ್ಬೆ** 'ಸಬ್ಬೆ' ನೋ.

**ಚೆಮ್ಮ** 'ಚಮ್ಮ' ನೋ.

**ಚೆಮ್ಮಣಿ** (ನಾ). ಕೆಂಪು ರತ್ನ : ಮಾಣಿಕ್ಯ ; ಪದ್ಮರಾಗ : ಕಡಲೊಡೆಯನು ನಿಟ್ಟಿಪ ಚೆಮ್ಮಣಿಗಯ್ಯ ಪಿ[ಪಾಠಾಂ. ಚೆನ್ನಮಣಿಗನ್ನ, ಚನ್ನಮಣಿ ಗೈಪಿ]ಡಿಯೆನೆ . . . ಪಗಲಾಣ್ಮನೆಸೆದನು (ಸೂಲಸೋ. ೯-೭). [ ಚೆಂ$_1$ + ಮಣಿ$_3$ ]

**ಚೆಮ್ಮಣಿಗೆ** 'ಚಮ್ಮಾಳಿಗೆ' ನೋ.

**ಚೆಮ್ಮಣಿವಟ್ಟು**, ಚಮ್ಮಣಿವಟ್ಟು (ನಾ). ೧. ಬೈತಲೆಯ ಮಣಿ (?) : ಭಳರೆ ಜಡ ಪಾರಡಂಗುಳಿಯ ನಟ್ಟ ನಡುವಲೆಗಿಟ್ಟ ಚೆಮ್ಮಣಿವಟ್ಟಿ ಮುಟ್ಟದಿರೆನಲು ಬಜ್ಜರವಟ್ಟು ನಿಟ್ಟಿಸುತ್ತಿರಲು ತದ್ವಿಹಗಾಂಗನೆಯು ಮುಗುಳೆ (ಮದೇಪು. ೬-೦೫). **ಚಮ್ಮಣಿವಟ್ಟು :** ೨. ಕುಂಕುಮದ ಬಟ್ಟು; ಕೆಂಪು ತಿಲಕ: ಕಮಳದಳನೇತ್ರ ಕಲಧೌತಗಾತ್ರ ರಮಣಿಯರ ನುಣ್ಣೊಸಲ್ಗ ಮರ್ದ ಚಮ್ಮಣಿವಟ್ಟಿ ಕುಮುಚಿಯೆಂದಿಟ್ಟಸದಿರೆನ್ನನೆಂದ (ಮದೇಪು. ೮-೧೩). [ ಚೆಮ್ಮಣಿ + ಬಟ್ಟು$_1$ (<ಬಟ್ಟ$_1$) ]

**ಚೆಮ್ಮಾವುಗೆ** 'ಚಮ್ಮಾವುಗೆ' ನೋ.

**ಚೆಮ್ಮಾಳಿಗೆ** (ನಾ). ಚಂದವಾದ ಮಾಳಿಗೆ: ಹನ್ನಡಿಕ್ಕಾಸುಮಂಚ ಕುಶಲದ ತಲೆಗಿಂಬು ಚಿಮ್ಮಾಳಿಗೊಳಗೆ ತನೆಯಾದ ರಾಜನವ ನಿಮ್ಮ ರಾಯರು ಬಿಕ್ಕಿ ಬೆಳೆದರು (ನಾಪದ. ೭೫). [ ಚೆಂ$_2$ + ಮಾಳಿಗೆ ]

**ಚೆಮ್ಮೂಗು** (ನಾ). (ಗಿಳಿಯ) ಕೆಂಪಾದ ಮೂಗು,-ಕೊಕ್ಕು : ದಾಳಿಂಬ ದೊಳ್ಪಣ್ಣನೊಡೆದು ಚೆಮ್ಮೂಗಿಟ್ಟು ಪೇಟುಲಳವಡದ ಸಲ್ಲೀಲೆಯೊಳಗಳ ವಟ್ಟು (ಉದ್ಭಟ. ೩-೯೫). [ ಚೆಂ$_1$ + ಮೂಗು$_1$ ]

**ಚೆಮ್ಮೊಗ** (ನಾ). ಕೆಂಪಾದ ಮುಖ : ಎದುತ್ತೇದುತ್ತ ಸೇದೆನೀರಲ್ಲಿ ಮಿಂದ ಚೆಮ್ಮೊಗವನ್ನು ಚೇಲಾಂಚಲದಿಂದ ತೊಡೆದುಕೊಂಡು (ಮುಂತ್ರಶ. ೩೪-೦೫). [ ಚೆಂ$_1$ + ಮೊಗ ]

**ಚೆಯ್$_1$** 'ಚಯ್$_2$' ನೋ.

**ಚೆಯ್$_2$** 'ಸಯ್$_2$' ನೋ. .

**ಚೆಯಿಪಲ್ಲ** (ನಾ). ಒಂದು ಮನೆತನದ ಹೆಸರು (?) : ಸುಸೌಖ್ಯಸಂಗಮಂ ಕೋಮಳಗಾತ್ರ ತಮ್ಮ ಮಲ್ಲಿರಾಯನು ಸ್ವರ್ಗಮನೆಯ್ದೆ ಚೆಯಿಪಲ್ಲದಾಮ ದೇವಂ ಮದಶೋವಿಭ[ತವ್ಯಂ]ಮನೆ ಸಂವರಿಸಿದು(ಕಠ. I, ೩೮-೯; 1408). [ ? ]

**ಚೆಯ್ಗುಡು**, ಚೈಗುಡು (ಕ್ರಿ). ಲಲ್ಲೆಯಾಡು ; ಮುದ್ದಾಡು ; ಪಡೆಯದ ಬರ್ಕಮೋ ಸುತನ ವಕ್ತ್ರಮನೀಕ್ಷಿಪ ಲಲ್ಲೆಗೆಯ್ಯೆ ನಣ್ಪಿಡಿದನುರಾಗದಿಂ ನಗಿಸುವಕ್ಕಜಿಳೊಪ್ಪುವ ನೆತ್ತಿಯೊಡ್ಡಿ ಚೆಯ್ಗು[ಪಾಠಾಂ. ಚೈಗು]ಡುವ . . . ಸೈಪು ಸರೋರುಹಾಕ್ಷಣೆ (ವೃಷಪಿ. ೨-೬೩). **ಚೈಗುಡು :** ಚೈಗುಡುವ ಪೆಣ್ಣಣೆಯು ಸೈಪಿಂಗೆ ತಿಳಿವದೆಣೆಯುಂಟೆ (ಕಿರೀದೇ. ೨-೨೮). [ ಚೆಯ್$_1$ (<ಚಯ್$_2$) + ಕುಡು$_1$ (<ಕೊಡು$_1$) ]

**ಚೆಯ್ಮುಂಡಾಡು**, **ಚೈಮುಂಡಾಡು** (ಕ್ರಿ). ಮುಂದ್ದಾಡು ; ಲಲ್ಲೆಯಾಡು: (೩). **ಚೈಮುಂಡಾಡು**: ತೆಗೆದು ತಕ್ಕೈಸಿ ಬೋಳೈಸಿ ಚೈಮುಂಡಾಡಿ ಒಗು ಮಿಗೆಯ ಸುಖಸುಧಾನಂದದೊಳಗೋಲಾಡಿ (ರೇಣ್ವರೂೀ. ೧೧೪-೭) ; ದಾ ಎನುತ ಚೈಮುಂಡಾಡಿ [ಪಾಠಾಂ. ಕೈಮುದ್ದಾಡಿ] ಮುಂದಲೆ ವಿಡಿದು ಕುಣಿಕುಣಿದಾಡಿ ಸೌಖ್ಯವನೀಯುತಿರ್ದಳು ಮಾಯೆ ಮೋಹಿನಿಗೆ (ಪ್ರಭುಲಿ. ೩-೨೯) ; ಒಸೆದು ಚೈಮುಂಡಾಡುತಾಲಿಂಗಿಸಿದಳನುರಾಗ ಪ್ರಪಂಚದ ಕೊಸಱಿಕೆಯ ಕಳವಳದ ಪ್ಯೆಮುಱಿವೆಯಲಿ ಮಸ್ತಕವ (ತೊರಠಾ. ೬-೧೨-೩೦). [ ಚೆಯ್$_1$ (<ಚಯ್$_2$) + ಮುಂಡಾಡು ]

**ಚೆಯ್ಯಾಕ** (ನಾ). ಒಂದು ಬಗೆಯ ತಾಳವಾದ್ಯ : ಚೆಯ್ಯಾಕಗಳು ಚೆಲ್.. ಚೆಮ್ ಎಂದು ಕುಟ್ಟುತ್ತಿರುವುವು (ಕನ್ನಜಾ. ೧೪). [ ? ]

**ಚೆಯ್ಯಾಟ** 'ಚಯ್ಯಾಟ' ನೋ.

**ಚೆಯ್ಯಾಡು** 'ಚಯ್ಯಾಡು' ನೋ.

**ಚೆರಗ** 'ಚರುಗ' ನೋ.

**ಚೆರಪು** 'ಸೆಱಪು' ನೋ.

**ಚೆರಿಗೆ** 'ಚರಿಗೆ$_1$' ನೋ.

**ಚೆರೆ** 'ಚರೆ' ನೋ.

**ಚೆರೆಮದ್ದು** (ನಾ). ಸಿಡಿಮದ್ದು ; ಚರೆ : ಅದರಲ್ಲಿ ತುಂಬಿಸುವುದು ಮಾತ್ರ ಚೆರೆಮದ್ದು (ಬಲ್ಲಿಹೀ. ೫೮). [ ಚೆರೆ (<ಚರೆ) + ಮದ್ದು$_1$ (<ಮರ್ದು) ]

**ಚೆಲ್**, **ಚೆಲು** (ಗು). ಚೆಲುವಾದ ; ಸುಂದರವಾದ. 'ಚೆಲ್ಗದಿರ್', 'ಚೆಲ್ವಡೆ' ಪರಾ. **ಚೆಲು**: ಹುಣ್ಣಿವೆಯ ಶಶಿಯಂತೆ ಚೆಲು ಚೆಲುವೆಣ್ಣುಗಳು ಸಹ ಬಂದನೆಂದೀಕ್ಷಿಸಿತು ಪುರಜನವು (ಸಾಳ್ವಭಾ. ೧೮-೯೬). 'ಚೆಲು ಕಾಂತಿ' ಪರಾ. [ <ಚೆಲ್ವು$_1$ ]

**ಚೆಲಂಕು** 'ಚಲಂಕಂ' ನೋ.

**ಚೆಲಂಗು** 'ಚಲಂಕು' ನೋ.

**ಚೆಲದಿ** 'ಸೆಲಂದಿ' ನೋ.

**ಚೆಲಪಿಳ್ಳೆರಾಯ** 'ಚೆಲ್ವಪಿಳ್ಳೆರಾಯ' ನೋ.

**ಚೆಲಬಾಗೆ** (ನಾ). ಒಂದು ಬಗೆಯ ಗಿಡ: ಚೆಲಬಾಗೆ. ಚೀಲ, ಎಲೆಸುಜ್ಜಲ ಬಾಗೆ (ವ್ಯಶಿಗಿ. ೪-೬೩). [ ? ]

**ಚೆಲವೆ** 'ಚಲುವೆ$_3$' ನೋ.

**ಚೆಲು** 'ಚೆಲ್' ನೋ.

**ಚೆಲುಕಾಂತಿ** (ನಾ). ಅಂದವಾದ ಕಾಂತಿ,–ಶೋಭೆ: ಕಣ್ಣದಿರಿನ ಚೆಲು ಕಾಂತಿ ಚೆಲ್ಲುವ ಸೆರೆಗಣ್ಣು (ನಿಮ್ಮದ್ಧ. ೫). [ ಚೆಲು (<ಚೆಲ್) + ಕಾಂತಿ ]

**ಚೆಲುಗಬ್ಬ** (ನಾ). ಸುಂದರವಾದ ಕಾವ್ಯ : 'ಕಾಲೂರ ಚೆಲುವೆ' ಒಂದು ಚೆಲುಗಬ್ಬ (ಕಾಲೂರ. ೧೧ ಹರಳ). [ ಚೆಲು (<ಚೆಲ್) + ಕಬ್ಬ$_1$ ]

**ಚೆಲುಬಿಸಿಲು** (ನಾ). ಅಂದವಾದ ಬಿಸಿಲು : ಬಂಗಾರದ ಚೆಲುಬಿಸಿಲ ಕಿರೀಟದ ಶೃಂಗಾರದ ತಲೆ ಎತ್ತುವನು (ಕಎಪು. ೫-೩). [ ಚೆಲು (<ಚೆಲ್) + ಬಿಸಿಲು (<ಬಿಸಿಲ್) ]

**ಚೆಲುವ$_1$** 'ಚೆಲ್ವ' ನೋ.

**ಚೆಲುವ$_2$** (ನಾ). ಒಂದು ಬಗೆಯ ಪಕ್ಷಿ: ಹಲುಬುವ ಗೌಜು ಕರ್ಕಟ ಕಪ್ಪುರಸಟ್ಟೆ ಚೆಲುವ ಬೆಳವ ಕುಕ್ಕುಟಗ (ಮೋಹತ. ೭-೧೭). 'ಸಾಳುವ' ಪರಾ. [ ? ]

**ಚೆಲುವಳಿ**, **ಚಲುವಳಿ** (ಕ್ರಿ). ಅಂದಗೆಡು ; ವಿಕಾರವಾಗು: ಹೊರಟು ಪಾಂಡ್ಯನ ಚೆ [ಪಾಠಾಂ. ಚ]ಲುವಳಿದು ನೆಟೆ ಹೊರಟು ನೆಲೆಗೊಂಡಿದ್ದ ಬೆನ್ನಿನ ಹೊರಟು ಹೋಗಲು ಮಿಥ್ಯೆಯಾಯಿತು (ಬಸಪು. ೫೦-೩೦). **ಚಲುವಳಿ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚೆಲುವು (<ಚೆಲ್ವು$_1$) + ಅಳಿ$_1$ (<ಅೞಿ$_1$) ]

**ಚೆಲುವಾನ್**, **ಚಲುವಾನ್** (ಕ್ರಿ). ಚೆಲುವನ್ನು ಹೊಂದು ; ಅಂದವನ್ನು ಪಡೆ: ಚೆಲುವಾಂತ ರಾಜಮಂದಿರಗಳೆಸೆದಿಹ ಕೇರಿಯಲಿ ಮೆಲ್ಲನೈತಂದು (ವೆಂಕಾರಾ. ೫-೩-೩೫). **ಚಲುವಾನ್** : ಮೋಹನದೆ ಇರ್ಪುದು ಕರ್ಣಾಟಕ ರಾಜ್ಯ ಚಲುವಾಂತುವೊಪ್ಪುವ ಸಕಲ ಸಂಭ್ರಮದೆ (ಕಂನವಿ. ೨-೧೦). [ ಚೆಲುವು (<ಚೆಲ್ವು$_1$) + ಆನ್$_1$ ]

**ಚೆಲುವಿಕೆ** 'ಚೆಲ್ವಿಕೆ' ನೋ.

**ಚೆಲುವು** 'ಚೆಲ್ವು$_1$' ನೋ.

**ಚೆಲುವುತನ** (ನಾ). ಅಂದಗಾರಿಕೆ ; ಸೊಗಸುತನ ; ಚೆಲ್ವಿಕೆ : ಚೆಲುವುತನವಿರ್ದೊಡೇನು ಚೆಲೆವಣ್ಗೆ (ರೇವಂ. ೬೬-೨೫). 'ಚೆಲ್ವತನ' ಪರಾ. [ ಚೆಲುವು (<ಚೆಲ್ವು$_1$) + – ತನ ]

**ಚೆಲುವೆ$_1$** 'ಚೆಲ್ವೆ' ನೋ.

**ಚೆಲುವೆ$_2$** 'ಚಲುವೆ$_3$' ನೋ.

**ಚೆಲುವೆಣ್ಣು** (ನಾ). ಸುಂದರಿ ; ಚೆಲುವೆ : ಅಣ್ಣವಳಿಯದೆ ಬಣ್ಣಗುಂದದ ಹುಣ್ಣಿವೆಯ ಶಶಿಯಂತೆ ಚೆಲು ಚೆಲುವೆಣ್ಣುಗಳು ಸಹ ಬಂದನೆಂದೀಕ್ಷಿಸಿತು ಪುರಜನವು (ಸಾಳ್ವಭಾ. ೧೮-೯೬). [ ಚೆಲು (<ಚೆಲ್) + ಪೆಣ್ಣು (<ಪೆಣ್) ]

**ಚೆಲ್ಗದಿರ್** (ನಾ). ಸುಂದರವಾದ ತೆನೆ : ಉಬ್ಬಿದೊಡಲೇಂ ಪೊಲಂ ಚೆಲ್ಗದಿರ್ ಪಾಲ್ ಪಡೆದು ತುಂಬಿ ಬೆಳೆದಿದೆ (ಕಾಲೂರ. ೪೧-೫೧). [ ಚೆಲ್ + ಕದಿರ್$_1$ ]

**ಚೆಲ್ನಡೆ** (ನಾ). (?): ಸೋರ್ಮುಡಿ ಪದಿರ್ಮುಡಿ ಸೋಗೆಗೆ ಪುರ್ವು ಕೊರ್ವು ಚೆಲ್ನಡೆಗೆ ನಖಂ ಮುಖಂ ಪಕಿಗೆ ತೋಳ್ ಕರವಾಳ್ ಮದನಂಗೆ ಕಾಂತೆಯಾ (ಪುಷ್ಪಪು. ೯-೪೩). [P ಇದು 'ಬೆಲ್ನಡೆ' ಎಂಬುದರ ಅಪ ಲಿಖಿತವಿರಬಹುದು.] [ ಚೆಲ್ + ನಡೆ$_2$ ]

**ಚೆಲ್ಲ$_1$** 'ಚಲ್ಲ$_1$' ನೋ.

**ಚೆಲ್ಲ$_2$** 'ಸೆಳ್ಳ' ನೋ.

**ಚೆಲ್ಲಂಗೆಯ್** (ಕ್ರಿ). ಸರಸವಾಡು ; ವಿನೋದವಮಾಡು : ಕಳವಮಾ ಯೆಸೆದುವಲ್ಲಲ್ಲಿ ಚೆಲ್ಲಂಗೆಯ್ಯುತುಂ ಕಾಯ್ದು ವಲ್ಲವಿಯರಿಂ (ಪದ್ಮರಾ. ೮-೧೪). [ ಚೆಲ್ಲ$_1$ (<ಚಲ್ಲ$_1$) + ಕೆಯ್$_1$ ]

**ಚೆಲ್ಲಂದೋಱು** (ಕ್ರಿ). ವಿನೋದವನ್ನು ತೋರು ; ಸರಸವಾಡು: ಇಲ್ಲಿ ಪಲವುಂ ಚೆಲ್ಲಂದೋಱುವೆಂ ನಿಲ್ಲಿಂ (ಚಿಕವಿ. ೬-೦೩೩ ವ). [ ಚೆಲ್ಲ$_1$ (<ಚಲ್ಲ$_1$) + ತೋಱು ]

**ಚೆಲ್ಲಂಬೀಱು** (ಕ್ರಿ). ವಿಲಾಸವನ್ನು ಬೀರು ; ಒಯ್ಯಾರ ಮಾಡು : ಚೆಲ್ಲಂಬೀಱುವವೊಲಿರ್ದುವವಯವವನಿತುಂ (ಧರ್ಮಾಪ್ತು. ೦೩-೦೦೨). [ ಚೆಲ್ಲ$_1$ (<ಚಲ್ಲ$_1$) + ಬೀಱು ]

**ಚೆಲ್ಲಂಬೆರಸು** 'ಚಲ್ಲಂಬೆರಸು' ನೋ.

**ಚೆಲ್ಲಕಾತಿ** 'ಚಲ್ಲಗಾರ್ತಿ' ನೋ.

**ಚೆಲ್ಲಕೇತನ** (ನಾ). ಒಂದು ಬಿರುದು: ವಿಜಯಲಕ್ಷ್ಮೀನಿವಾಸಿತ ಚೆಲ್ಲಕೇತನ ಶ್ರೀಮತ್ ಬಂಕೆಯರಸ (ಕಇ. I, ೦೫-೫ ; ?). 'ಚಲ್ಲಧ್ವಜ' ಪರಾ. [ ಚೆಲ್ಲ$_0$ + ಕೇತನ ]

**ಚೆಲ್ಲಗಣ್** 'ಚಲ್ಲಗಣ್' ನೋ.

**ಚೆಲ್ಲಗಣ್ಪೊಣರ್** (ನಾ). ವಿಲಾಸವನ್ನು ಬೀರುವ ಕಣ್ಣುಗಳ ಜೊತೆ: ತನ್ನಯ ಚೆಲ್ಲಗಣ್ಪೊಣರ ಲೀಲೆಯನೇಟಿಪ ಬಾಳೆಮೀನ್ಗಳಂ (ಪುಷ್ಪಪು. ೯-೯೯). [ ಚೆಲ್ಲಗಣ್ (<ಚಲ್ಲಗಣ್) + ಪೊಣರ್$_2$ ]

**ಚೆಲ್ಲಗಾತಿ** 'ಚಲ್ಲಗಾರ್ತಿ' ನೋ.

**ಚೆಲ್ಲಗಾರ್ತಿ** 'ಚಲ್ಲಗಾರ್ತಿ' ನೋ.

**ಚೆಲ್ಲಣ** 'ಚಲ್ಲಣ' ನೋ.

**ಚೆಲ್ಲನೆ** (ಅ). ಶೀಘ್ರವಾಗಿ : ಕೂಡಲೆ : ನೆಲ್ಲಿ ಬೆಳುಹೂಲಿಗಳ ಬೇರಿಲ್ಲಣ ಮುಳುಗೊಗ್ಗಿಯಂಬಿನಿತ್ತುಱ ಪುಡಿಯಂ ಚೆಲ್ಲನೆ ಮುಱಿನೊಳೂಡಿದೊಡೆಲ್ಲಾ ಪಾವಿನ ವಿಷಕ್ಕೆ ತವಿಲದೆ ಸಾಲ್ಗುಂ(ಖಮದ. ೭-೩೩). [ಚೆಲ್$_0$ + – ಅನೆ$_1$]

**ಚೆಲ್ಲವಯ್ಯ** (ನಾ). ಒಬ್ಬಾತನ ಹೆಸರು : ಇವರುಭಯ ಸನ್ಮಥದೊಳ್ ಬರದೊಂ ಚೆಲ್ಲವಯ್ಯಂ (ಎಕ. XI, ಹೊಳಲ್ಕೆ. ೩೦–೧೫ : 964).
[ ಚೆಲ್ಲವ$_0$ + ಅಯ್ಯ$_1$ ]

**ಚೆಲ್ಲಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚೆಲ್ಲವತ್ತ** 'ಚಲ್ಲವತ್ತ' ನೋ.

**ಚೆಲ್ಲವಾಡು** 'ಚಲ್ಲವಾಡು' ನೋ.

**ಚೆಲ್ಲವೆರು** (ಕ್ರಿ). ವಿಲಾಸವನ್ನು ಪಡೆ ; ಸರಸದಿಂದ ಕೂಡಿರು : ಚೆಲ್ಲವೆಕ್ಕೋರೆನೋಟಕ್ಕೆಡೆಯಾಗೇಕಾಂತಮುಂ ಪೇಳ್ವವೊಲ್ ಜಿನುಗುತಿರ್ದಪ್ಪ ಕರ್ಣಾಂತದೊಳ್ (ರಾಜಶೇ. ೧೧–೩೪).
[ ಚೆಲ್ಲ$_1$ (<ಚಲ್ಲ$_1$) + ಪೆರು (<ಪೆಱು$_1$) ]

**ಚೆಲ್ಲವೊತ್ತ** 'ಚಲ್ಲವತ್ತ' ನೋ.

**ಚೆಲ್ಲಾಟ$_1$** 'ಚಲ್ಲಾಟ$_1$' ನೋ.

**ಚೆಲ್ಲಾಟ$_2$** 'ಚಲ್ಲಾಟ$_2$' ನೋ.

**ಚೆಲ್ಲಾಡಿಸು** (ಕ್ರಿ). ಚದರಿಸು : ಇರಲಿ ನೋಡುವೆ. ಚೆಂಗಾಳ್ವರನ್ನು ಚೆಲ್ಲಾಡಿಸುತ್ತೇನೆ ಎಂದರು (ಚೆಂಗಾಳ್ವ. ೨೫).
[ ಚೆಲ್ಲಾಡು$_1$ (<ಚಲ್ಲಾಡು$_1$) + – ಇಸು$_3$ ]

**ಚೆಲ್ಲಾಡು$_1$** 'ಚಲ್ಲಾಡು$_1$' ನೋ.

**ಚೆಲ್ಲಾಡು$_2$** 'ಚಲ್ಲವಾಡು' ನೋ.

**ಚೆಲ್ಲಾಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚೆಲ್ಲಿ** 'ಚಲ್ಲಿ$_3$' ನೋ.

**ಚೆಲ್ಲಿಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚೆಲ್ಲಿಸು$_1$** 'ಚಲ್ಲಿಸು$_1$' ನೋ.

**ಚೆಲ್ಲಿಸು$_2$** 'ಚಲ್ಲಿಸು$_2$' ನೋ.

**ಚೆಲ್ಲು$_1$** 'ಚಲ್ಲು$_1$' ನೋ.

**ಚೆಲ್ಲು$_2$** 'ಚಲ್ಲ$_1$' ನೋ.

**ಚೆಲ್ಲುತನ** 'ಚಲ್ಲುತನ' ನೋ.

**ಚೆಲ್ಲುಮಲ್ಲಿ**(ನಾ). ಗಾಂಭೀರ್ಯವಿಲ್ಲದವಳು ; ಚೆಲ್ಲಗಾತಿ : ಈ ಹುಡುಗಿ ಶುದ್ಧ ಚೆಲ್ಲುಮಲ್ಲಿ (ನಂಜನ. ೭೦). [ ಚೆಲ್ಲು$_2$ (<ಚಲ್ಲ$_1$) + ಮಲ್ಲಿ ]

**ಚೆಲ್ಲೆ, ಚಲ್ಲೆ$_1$** (ನಾ). ೧. ಉದ್ದ ; ನೀಳ ; ದೀರ್ಘತೆ: "ಚೆ[ಪಾಠಾಂ. ಚ]ಲ್ಲೆಯನೆ ನಿಡಿದು" (ಶಬ್ದಮಂ. ೩೦). (ಗು). ೨. ಉದ್ದವಾದ ; ದೀರ್ಘವಾದ. 'ಚೆಲ್ಲೆಗಣ್' ಪರಾ. ಚಲ್ಲೆ$_1$: ೧. "ಚಲ್ಲೆಯನೆ ನಿಡಿದು" (ಶಬ್ದಕೌ. ೩೦). 'ಚಲ್ಲೆಗಣ್' ಪರಾ.

**ಚೆಲ್ಲೆಗಣ್, ಚಲ್ಲೆಗಣ್** (ನಾ). ನೀಳವಾದ ಕಣ್ಣು ; ಅಗಲವಾದ ಕಣ್ಣು : ಬಂದರ್ ನಗೆಗಣ್ಗಳ ಚೆಲ್ಲೆಗಣ್ಗಳಲರ್ಗಣ್ಗಳ ವಿಡುಗಣ್ಗಳ ಬೆಡಂಗಿಯರ್ (ಜಗವಿ. ೪–೧೨೪) ; ಮುದದಿಯರ ಚೆಲ್ಲೆಗಣ್ಣೆಳಮಿಂಚಿನಂತಿರಲು (ನಂಬಿರ. ೧೫–೬೭); ನಲ್ಲರೂಪಿಲ್ಲೆಂದಡೀಕ್ಷಿಸು ಚೆಲ್ಲೆಗಂಗಳಿಂ (ಬಸವು. ೪೦–೧೪). ಚಲ್ಲೆಗಣ್ : ಚಲ್ಲೆಗಣ್ಣ ತುಱುಗೆಮೆಯ ವಿಶಾಲಗಂಡಸ್ಥಳದ . . . ವಾರನಾರೀಕದಂಬಂ (ಧರ್ಮಾಮೃ. ೮–೧೯೬) ; ಆತನ ಚಲ್ಲೆಗಣ್ಗಳಾತನ ಬಗೆಗೊಳ್ವ ಪೆರ್ದೊಡೆಗಳ್ (ಜಗವಿ. ೧೧–೧೫) ; ಶ್ರುತಿಯುವತಿ ಸೂಸುವ ಚಲ್ಲೆಗಂಗಳ ಮೊನೆಗೆ ವಿಸಸಲುಗುಡದ ಪ್ರೈಸಿರಿಯ (ಶುಭಾಲಿ. ೪–೪೦).
[ ಚೆಲ್ಲೆ + ಕಣ್ ]

**ಚೆಲ್ಲೆಗಾತಿ** 'ಚಲ್ಲಗಾರ್ತಿ' ನೋ.

**ಚೆಲ್ಲೆನೋಟ** 'ಚಲ್ಲೆನೋಟ' ನೋ.

**ಚೆಲ್ಲೆಯ** 'ಸೆಲ್ಲೆಹ' ನೋ.

**ಚೆಲ್ಲೆಹ** 'ಸೆಲ್ಲೆಹ' ನೋ.

**ಚೆಲ್ಲೆಹೋಗು** (ಕ್ರಿ.) ಚೆಲ್ಲಾಟಕ್ಕೆ ಹೋಗು (?) : ಚನ್ನರಾವಸದಲ್ಲಿ ಕೋಣಪ್ಪಜಟ್ಟಿಯೊಡನೆ ಚೆಲ್ಲೆಹೋಗಿಯಿದ್ದು ರಾತ್ರಿ ಕಾವಲಿದ್ದದ್ದಕ್ಕೆ (ಚಲ್ಯಆ. ೫೭–೦). [ <ಚೆಲ್ಲ$_1$ + ಹೋಗು$_1$ (<ಪೋಗು$_1$) ]

**ಚೆಲ್ವ, ಚಲುವ, ಚಲ್ವ, ಚೆಲುವ$_1$** (ನಾ). ೧. ಅಂದವಾದುದು : ಸುಂದರವಾದುದು; ಚೆನ್ನಾದುದು ; ಉತ್ತಮವಾದುದು : ಮತ್ತಾಪುರಂ ಚೆಲ್ವನಾಪುರಮಿಂಬಾಪುರವೊಳ್ಳಿತಾಪುರಂ (ಅನಂಪು. ೧–೧೨೦). ೨. ಅಂದ; ಚೆಲುವು; ಸೌಂದರ್ಯ: ಮೊದಲ ಪದಂ ನ್ಯೂನಾಕ್ಷರಂ . . . ಇದಱಿಂ ಛಂದೋಭಂಗಂ ಪದನಱಿದದಿನಿಂತು ಸಮಱಿ ಪೇೞ್ದೊಡೆ ಚೆಲ್ವಂ (ಕವಿರಾ. ೦–೯೨). ೩. ಸುಂದರನಾದವನು : ಸ್ಫುರದ್ರೂಪಿ : ಚೆಲ್ವರ್ಕಳಭಿಜನರ್ಕಳ್ಗುಣಿಗಳ್ (ಕವಿರಾ. ೨–೩೬) ; ಪುಷ್ಪಸಂಕುಳದೊಳ್ ನೀನೇ ವಿಳಾಸಿಯೈ ಮಿಡಿಗಳೊಳ್ ನೀಂ ಚೆಲ್ವನೈ (ಆದಿಪು. ೧೧–೯೮) ; ಕರಚೆಲ್ವ[ಪಾಠಾಂ. ಚೆಲುವ] ಶ್ರೀಶೈಲಚನ್ನಮಲ್ಲಿಕಾರ್ಜುನನ ಸಜ್ಜನ ಗಂಡನ ಮಾಡಿಕೊಂಬೆ (ಮಹಾದೇ. ಬ. ೧೪೪–೩೨೮). ೪. ಒಬ್ಬಾತನ ಹೆಸರು : ಇಪ್ಪಬ್ರಿತ್ಯನಪ್ಪ ಪೊರೊಕ್ಕುಪ್ರಿಯ ಚೆಲ್ವ . . . ಚೆಲ್ವ ಸಂಪನ್ನ (ಎಕ. IX, ೨೦–೪ ; ). 800 **ಚಲುವ:** ೧. ನಿಮ್ಮ ಕರುಣವೇ ಕರ ಚಲುವ ಸಕಳೇಶ್ವರಯ್ಯ (ಸಮಾವ. ೫–೧೮) ; ಚ[ಪಾಠಾಂ. ಚೆ]ಲುವವಹ ಮೃದುತರ ಪೆನಿಪ ಪರಿಮಳಪ ಪೊಸಮಿಂಡಂಗಳಂ ಸವಿಗೊಳುತ (ಬಸವು. ೧೮–೩೯). ೩. ಚಲುವ [ಪಾಠಾಂ. ಸುಜನ]ರುಬೞಿಗೆ ರೂಪಿನ ಮದಮುಂ (ಸಮುಪ. ೪–೧೧೮) ; ಸಾವಿಲ್ಲದ ಕೇಡಿಲ್ಲದ ಚ[ಪಾಠಾಂ. ಚೆ]ಲುವಂಗಾನೊಲಿದೆನವ್ವಾ (ಮಹಾದೇ. ಬ. ೧೨೨–೨೮೩). (ಗು). ೫. ಅಂದವಾದ : ಸೊಗಸಾದ : ಉತ್ತಮವಾದ : ಬೇಱೊಂದು ನಾತೊಡೆ ಚಲುವ ಚಂದನದ ಪಡಿಯೆನಿಸದಡೆ (ಬಸವು. ೨೭–೪) ; ಚಲುವ ವಧು ಕೇಳಿಲೆ ದುರಾತ್ಮಕರಳಿವರೇಯೆನ್ನನು (ಕುಮಾವಿ. ಒರಿಣ. ೨–೩೦). **ಚಲ್ವ** : ೧. ಚ[ಪಾಠಾಂ. ಚೆ]ಲ್ವವಹ ಮೃದುವಪ್ಪ ಗಂಧಂ ನಿಲ್ವ . . . ಬಿಲ್ವಪತ್ರೆಯನೆಯ್ದೆ ಕೊಯ್ದು(ಬಸವು. ೪೩–೨೬). ೩. ಚಲ್ವನೇ ಹರನಂ ಮೋಹಿಸಲಾಪ್ಪರ್ಸನೆಂತುವಧಿಕಂ ಶ್ರೀವಿಷ್ಣು ಭೂಪಾಳಕಂ (ಎಕ. V, ಬೇಲೂರು. ೫೮–೪೯: 1117). **ಚೆಲುವ$_1$:** ೧. ಪರಿಣಾಮದೊಳಗೆ ಮನದ ಪರಿಣಾಮವೆ ಚೆಲುವ ಸಂಗದೊಳಗೆ ಶರಣರ ಸಂಗವೆ ಚೆಲುವ (ಅವಮಂ. ೦೧೯–೩೩೮). ೩. ನೀಲೋತ್ಪಲನಿಭಾಂಗದ ಮುದ್ದುವದನದ ಚೆ[ಪಾಠಾಂ. ಚ]ಲುವ ದೇವರ ದೇವನೆಸೆದನು ಬಾಲಕೇಳಿಯಲಿ (ಕೊರರಾ. ೦–೮–೮೦) ; ಚೆಲುವರರಸರ್ಜನಾದ್ರುಪ್ಯವೆರಸಿ ನಿರ್ಮಲಯೋಗಿಪಥಕ್ಕೈದಿದನು (ಭರತ. ೩–೭). ೫. ಪೂಸಿದ ವಿಭೂತಿ ಕಯ್ಯೊಳು ಪಾತ್ರೆಯೇಕ ಜೆಡೆ ಭಾಸುರದ ಪುಲಿದೊವಲು ಲಾಕುಳಂ ಚೆಲುವ ನಡೆ (ತಿರುರ. ದೇ. ೧೧–೧೧).

**ಚೆಲುವಾನೆಗಳ್ಕ**=ಒಳ್ಳೆಯ ಆನೆಗಳನ್ನು ಹಿಡಿಯುವವನು; ಒಂದು ಬಿರುದು : ಕೋಡರೂಪ್ಪುರ್ವರವರೇಶ್ವರಂ ಚೆಲುವಾನೆಗಳ್ಕಂ ವೈರಿ [ಹೃತ್ಸಲ್ಲಂ] (ಕಇಅ. ೧೨೬–೩೭–೯ : 1107).
[ ದೇ.॥ ತಮಿ. ಚೆಲ್ವ ; ತೆಲು. ಚೆಲುವ, ಚೆಲ್ವ ]

**ಚೆಲ್ವಕಾಱ** (ನಾ). ಅಂದಗಾರ ; ಚೆಲುವ ; ಸುಂದರ : ಚೆಲ್ವಕಂಗಳ ಚೆಲ್ವಕಾಱ ನೋಡ ಬಂದೆ ನಿನ್ನ ಬಳಿಸಾರ ಬಂದೆ (ಕನಕ. ೦೨೫ ಪಲ್ಲವಿ).
[ ಚೆಲ್ವ + – ಕಾಱ ]

**ಚೆಲ್ವಡೆ** (ಕ್ರಿ). ೧. = ಚೆಲ್ವುವಡೆ : ತೆಳ್ಪೊಡೆ ಕದು ಚೆಲ್ವಡೆದುದು (ಅನಂಪು. ೭–೫). ೨. ಅಂದವನ್ನುಂಟು ಮಾಡು : ಕರಮು ಚೆಲ್ವಡೆದು ಸಿಂಗರಮಾಡಿ ಪಾಮೋತರಹಸ್ತದೊಳು ಖಡ್ಗಮಿತ್ತು (ಶ್ರೀಪಾಲ. ೮–೩೮).
[ ಚೆಲ್ + ಪಡೆ$_1$ ]

ಭೂಮಿ ; ಪಾಳುಭೂಮಿ : ಜಡ್ಡುಬಿದ್ದಿದ್ದ ಗದ್ದೆಯನ್ನು ಸಾಗು ಮಾಡುವುದು ಗಿರಿಯಪ್ಪಗೌಡರಿಗೆ ಒಂದು ಸಮಸ್ಯೆಯೇ ಆಗಿತ್ತು (ಪಂಜಪಂ. ೧೯); ಹಳ್ಳದ ಆಚೆಯ ದೂರದಲ್ಲಿ ಲಕ್ಕುಂದದ ಗದ್ದೆಕೋಗಿನ ಜಡ್ಡಿನಲ್ಲಿ, ಪದೇ ಪದೇ ಬೀಸುತ್ತಿದ್ದ ದೊಂದಿಗಳೂ, ಲಾಟೀನುಗಳೂ ಕಾಣಿಸಿತು (ಮಲಮ. ೫) : ಬೇಡ ಅಯ್ಯ . . . ಸ್ವಲ್ಪ ಮುಂದೆ ಹೋದರೆ ಒಂದು ಜಡ್ಡಿದೆ. ಕುಳಿತುಕೊಳ್ಳುವುದಕ್ಕೂ ಜಾಗ ಅನುಕೂಲ (ಪದ್ಮಸ. ೧೮೦). ೪. ಗೊಡ್ಡಾದುದು ; ನಿಸ್ಸಾರವಾದುದು : ಈ ಲಿಂಗಲೀಲಾವಿಲಾಸ ಚಾರಿತ್ರವೇ ಶರಣಚಾರಿತ್ರವೆಂದು ಪುರಾತರವಚನಂಗಳಿಂದ ಕಾಣಲಾಯಿ ತಾಗಿ ಮಿಕ್ಕಿನ ವೇದಾಗಮಂಗಳು ಜಡ್ಡು ಗೊಡಡೆಂದು ಅವ ಬಿಟ್ಟು (ಲಿಂಗಲೀ. ೪೧೯). [ <ಪ್ರಾ. ಜಡ್ಡ./ ಸಂ. ಜಾಡ್ಯ ]

**ಜಡ್ಡುಕಟ್ಟು** 'ದಡ್ಡುಗಟ್ಟು' ನೋ.

**ಜಡ್ಡುಗಟ್ಟಿಸು** (ಕ್ರಿ). ಗಡುಸಾಗಿಸು ; ಬಿರುಸುಗೊಳಿಸು ; ಗಟ್ಟಿಯಾಗು ವಂತೆ ಮಾಡು: " ಜಡ್ಡುಗಟ್ಟಿಸು; ಜಡ್ಡುಗಟ್ಟಿಹೋಗು; ಕಲ್ಲಿದೆ ಮಾಡು ; ರೂಢಮೂಲವಾಗು " (Indurate. ಇಂಕನಿ).

[ ಜಡ್ಡುಗಟ್ಟು (<ದಡ್ಡುಗಟ್ಟು) + – ಇಸು$_3$ ]

**ಜಡ್ಡುಗಟ್ಟು** 'ದಡ್ಡುಗಟ್ಟು' ನೋ.

**ಜಡ್ಡುದೇಹ** (ನಾ). ಗಂಟುಗಂಟಾದ ದೇಹ ; ದಡ್ಡುಗಟ್ಟಿದ ಶರೀರ : ಜ[ಪಾಠಾಂ. ಜೆ]ಡ್ಡುದೇಹದ ಗುಜ್ಜುಗೊರಲಿನ ಗಿಡ್ಡುರೂಪಿನ ಹರುಕು ಗಡ್ಡದ ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿ:ದ (ನಳಚ. ೬-೧೪).

[ ಜಡ್ಡು$_2$ (<ದಡ್ಡು) + ದೇಹ ]

**ಜಡ್ಡುಮತಿ, ಜಡ್ಡಮತಿ** (ನಾ). ಮಂದಬುದ್ಧಿಯವನು ; ಚುರುಕಿಯಿಲ್ಲ ದವನು ; ದಡ್ಡ ; ಮಂದಮತಿ : ಜಡ್ಡುಮತಿಗಳು ಪಾರಮಾರ್ಥದ ಛಡ್ಡೆಯನಿತಿಲ್ಲದರು (ಸದ್ಗುರು. ೬-೨೦). **ಜಡ್ಡಮತಿ :** ಖಡ್ಡಿನಿದರೆಂತೆನ್ನ ನಜೀವರು ಜಡ್ಡಮತಿಗಳು (ನಿಘಾಗ. ೧೦-೮-೮). [ ಜಡ್ಡು$_4$ + ಮತಿ$_1$ ]

**ಜಡ್ಡುವಕ್ಕಿ** (ನಾ). ಒಂದು ಬಗೆಯ ಕಾಡುಪಕ್ಷಿ : (ಹ).

[ ಜಡ್ಡು$_3$ (<ಜಿಡ್ಡು$_1$) + ಪಕ್ಕಿ$_1$ ]

**ಜಡ್ಡುಸೀರೆ** (ನಾ). ಒರಟಾದ ಕಡಮೆ ದರ್ಜೆಯ ಸೀರೆ: ಕೊಡುತ್ತಿದ್ದುದು ಜಡ್ಡುಸೀರೆ, ಅದನ್ನು ಹರದು ಮುಚ್ಚುವಂತೆ ಉಟ್ಟುಕೊಂಡರೆ ಗ್ರಹಚಾರ ಬಿಡಿಸುತ್ತಿದ್ದರು (ಮಲಮ. ೩೬). [ ಜಡ್ಡು$_2$ (<ದಡ್ಡು$_1$) + ಸೀರೆ$_2$ ]

**ಜಡ್ತಿ** 'ಝಡತಿ' ನೋ.

**ಜಣ್** (ನಾ). ಒಂದು ಅನುಕರಣ ಧ್ವನಿ : ಗೆಜ್ಜೆ, ಗಂಟೆ, ನಾಣ್ಯ ಮೊದ ಲಾದುವುಗಳ ಧ್ವನಿ.

**ಜಣ್‌ಜಣ್** (ದ್ವಿರುಕ್ತಿ) : ಬೆಳ್ಳಿರೂಪಾಯಿ ಕೆಳಗೆ ಬಿದ್ದೊಡನೆ ಜಣ್ ಜಣ್ ಶಬ್ದ ಬಂತು (ರೂಢಿ).

**ಜಣ** (ನಾ). ಜನ; ಮನುಷ್ಯ ; ವ್ಯಕ್ತಿ : ದುಟ್ಟಜಣಂಗಳಿತ್ತೊಲವು ನಿತ್ಯಮ ನಾಳೆ ಬಸಂತಮುಂಟೆ (ರಾಂಶೀಶ. ೫-೧೦೯). [ <ಪ್ರಾ. ಜಣ./ಸಂ. ಜನ ]

**ಜಣಜಣ** (ನಾ). ಗೆಜ್ಜೆ, ಗಂಟೆ, ನಾಣ್ಯ ಮೊದಲಾದುವುಗಳ ಅನುಕರಣ ಧ್ವನಿ. 'ಜಣಜಣಿಸು' ಪರಾ.

**ಜಣಜಣಿಸು** (ಕ್ರಿ). ಜಣಜಣ ಎಂದು ಶಬ್ದಮಾಡು : (ಹ).

[ ಜಣಜಣ + – ಇಸು$_3$ ]

**ಜಣತ್ಕರಿಸು** (ಕ್ರಿ). ಜಣಜಣ ಎಂದು ಶಬ್ದ ಮಾಡು : ವರರತ್ನ ಕಂಕಣ ಜಣತ್ಕರಿಸೆ (ಸೌಂದಪು. ೧೫-೩೧). [ ಜಣತ್ಕರಣ$_0$ + – ಇಸು$_3$ ]

**ಜಣಬೆ** 'ಜಳಬೆ' ನೋ.

**ಜಣರು** (ನಾ). ಜಣಜಣವೆನ್ನುವ ಕೊರಳ ಗಂಟೆ,–ಗೆಜ್ಜೆ (?) : ಕನ್ನೆಹೆಣ್ಣೆ ನಿನಗೇಕೆ ಕೆನ್ನೆ ಮೇಲಿನ ತುರುಬು ಉತ್ತೆತ್ತಿಗೇಕೆ ಹುರಿಗೆಜ್ಜೆ ಗಾಣಿಗನ ಮೊನ್ನೆತ್ತಿಗೇಕೆ ಜಣರಂಬೆ (ಹಳ್ಳಿಯ. ೧೪೩). [ <ಜಣ್ ]

**ಜಣಿಸು** (ಕ್ರಿ). (?) : ಶಸ್ತ್ರಾಸ್ತ್ರಗಳಲಿ ಮುಂಜೆಗಿಸಂಬರದಿಕ್ಕೆಯಿ ಯದೋಲೊಮ್ಮೆಯಣಾಕುವರ್ ಜಣಿಸುವರ್ ಶರಜಾಲ ಜಾಲಮಂ ಕ್ಷಣಕೆದಾಹುತಿಗೊಳಿಪರ್ (ಜಿನಮು. ೨೬-೨೦). [ ? ]

**ಜತನ** 'ಯತನ' ನೋ.

**ಜತನಗೆಯ್** 'ಯತನಗೈ' ನೋ.

**ಜತನವಪ್ಪು** (ಕ್ರಿ). ಜೋಕೆತಪ್ಪು ;ಎಚ್ಚರತಪ್ಪು ; ಜೋಪಾನವಿಲ್ಲದಿರು: ಸಿತರಾಜಾನ್ನ ಸದ್ವೃತ ತೊಪ್ಪೆಗೂಡಿ ನಿರ್ಮಿತವಾದ ತೋರದುತ್ತುಗಳ ಜತನದಪ್ಪದೆ ಕೈಕೊಂಡರು ಕೃಷ್ಣಾರ್ಪಿತವೆಂದು ಪರಿತೋಷವಡೆದು (ಮೋಹತ. ೬-೫೫). [ ಜತನ (<ಯತನ) + ತಪ್ಪು$_1$ ]

**ಜತನಪೊದ್ದು** (ಕ್ರಿ). ಜೋಪಾನವಾಗಿರು; ರಕ್ಷಣೆಹೊಂದು; ಸುಭದ್ರತೆ ಯನ್ನು ಹೊಂದು : ಒಣಗಿದ ಗಜ್ಜುಗದ ಕಾಯೊಳಗದರ ಬೀಜ ಅನುಸರಿಸಿ ಇದ್ದಂತನಾದಿಯಿಂದ ಗುಣತ್ರಯಾತ್ಮಕವಾದ ಲಿಂಗದೊಳಗೆ ಜತನಪೊದ್ದಿಪ್ಪ ಆ ಸಮ್ಮಂಧದಲ್ಲಿ (ವಿವಾಕ್ಕ. ೪೪-೩).

[ ಜತನ (<ಯತನ) + ಪೊದ್ದು$_2$ (<ಪೊರ್ದು$_1$) ]

**ಜತನವಂತ** (ನಾ). ಪ್ರಯತ್ನಮಾಡುವವನು : "ಯಸ್ತಃ, ಯಸ್ತವಾನ್ . . . ಯುಸಕಃ, ಈ ೫ ಜತನವಂತಂ" (ಕಾಶಕ್ಕ. ೧೯೦).

[ ಜತನ (<ಯತನ) + – ವಂತ ]

**ಜತನಿಗ** (ನಾ). ಪ್ರಯತ್ನಮಾಡುವ ಸ್ವಭಾವದವನು : " ಯೋಪತೇ = ಜತನಂಗೆಯ್ದುವಂ; ಯೋಪಕಃ, ಯೋಪವಮಾಣಃ, ಈ ೨ ಜತನಿಗಂ" (ಕಾಶಕ್ಕ. ೧೩೦). [ ಜತನ (<ಯತನ) + – ಇಗ ]

**ಜತನಿಸು** (ಕ್ರಿ). ಪ್ರಯತ್ನಿಸು; ಉದ್ಯೋಗಿಸು: "ಯಸ್ಕತಿ=ಜತನಿಸಿದಪಂ" (ಕಾಶಕ್ಕ. ೧೯೧). [ ಜತನ (<ಯತನ) + – ಇಸು$_3$ ]

**ಜತಿ$_1$** (ನಾ). ೧. ಯತಿ ; ಮುನಿ ; ಋಷಿ: "ಜತಿ ಜೋಗಿ ತಪಸಿ ರಿಸಿಯೆನೆ ಕಿತ್ತಡಿಯೆಂದೆನಲ್ ಋಷಿಗೆ ಪೆಸರಕ್ಕು" (ಕಬ್ಬಿಕ್ಕೆ. ೩೨) : ಓಲಗದೊಳ್ ಕುಳ್ಳಿರ್ದ ಜತಿಗಳೇನೊಪ್ಪಿದರೋ (ಕಬ್ಬಿಕಾ. ೧೬೨) ; ಯತ್ವಕ್ಕೆ ಜತ್ವಂ– ಯತಿ–ಜತಿ (ಶಮದ. ೨೫೯ ಪ್ರಯೋ) : ಥಳಥಳಪ ನಗೆಮೊಗವೊಪ್ಪುತ್ತಿರೆ ವಿರಾಜಿಸುತಮಿರ್ದಳು ಜತಿಗಳೆರ್ದೆವರಂ ಭೇದಿಸುವ ವಜ್ರಮಯ ಸೂಚಿಯಾ ಪರಿಪೆನಾಚಿ (ಸೌಂದಪು. ೭-೪) ; ಚಲಗಯ್ಯೆಂಬುದು ಜತಿಗಳ್ ವ್ರತವುಂ ಪಿಡಿವಲ್ಲಿ (ಉದ್ಭದೀ. ೨೨-೧೩). ೨. [ಸಂಗೀತ] ವಿಶ್ರಾಮ ಸ್ಥಾನ; ನಿಲುಗಡೆಯ ಸ್ಥಾನ: ಪೆಸರಚ್ಚಿಯುದಮರತೂರ್ಯ ಪಸರಂಗಳ ಜತಿಗೆ ತೊಡರದಿನಿಸಿಪಲದೆ ಬಣ್ಣಸರಂಗೊಂಡಂತಿರೆ (ಆದಿಪು. ೯-೩೧) : ಜತಿಯುಂ ಸೈತೋಜೆಯುಂ ತಾಳ್ದ ಗೋವಳರಾಯುಂ ಕೊಬಲೂದಿದಂ (ಜಗವಿ. ೫-೨) ; ಜಾಣಾಂಗ್ರೆ ಜೋಕೆಯಿಂ ಜತಿ ರೀತಿ ತಾಳ ಪ್ರಮಾಣ ಕಂಪಿತ ಮೂರ್ಛೆ ರಸ ಪಾಡು ಬೆಡಗು . . . ಕೇಳಿಸಿದರವರು (ಪ್ರಮಿಥಾ. ೨೦-೫೬). ೩.=ಜತಿಸ್ವರ: ಗೀತ ಜತಿಗಳ ಮೇಳವಕೆ ಕೆಲರೋತು ಕುಣಿವರು (ಬಸವು. ೪-೮) ; ಎರಡನೆಯ ಆವರ್ತದಲ್ಲಿ ಸುಂದರವಾದ ಜತಿಗಳು ಮಾತ್ರ ಇವೆ(ಸಂಗೀತ. ೧೪); ಪ್ರಚಾರದಲ್ಲಿರುವ ಅಡವುಗಳನ್ನೆಲ್ಲ ಯುಕ್ತರೀತಿಯಲ್ಲಿ ಹೆಣೆದು ಜತಿಗಳನ್ನೋ ಜತಿಸ್ವರಗಳನ್ನೋ . . . ಮಾಡುವರು (ಅಭಾಸ್ಸ. ೩೨). ೪. [ಛಂದ]ಪದ್ಯದ ಪಾದಗಳನ್ನು ಓದುವಾಗ ಉಸಿರು ನಿಲ್ಲಿಸುವ ಸ್ಥಳ ; ಉಸಿರ್ದಾಣ ; ಯತಿ : ಮನಸಿಜನೋಜೆ ಕಣ್ಣಪಾನ ಜಾಣ್ನುಡಿ ಪಂಪನ ರೀತಿ ಚಂದ್ರಭಟ್ಟನ ಜತಿ ಪೊನ್ನಮಯ್ಯನ ಬೆಡಂಗು (ಜಗವಿ. ೧-೧೦). [ <ಸಂ. ಯತಿ ]

**ಜತಿ$_2$** (ನಾ). ಒಂದು ಬಗೆಯ ಔಷಧ ಸಸ್ಯ : "[illegible]" (ಓಷಧಿ. ೧೧೬) ; ಜತಿ, ಹೊದವಮೂಲಂ, ಚಿತ್ರಮೂಲ, ಬಜೆ ಇಪ್ಪು ಪುಡಿ [illegible] . . . ಕೊಳ್ಳಿ, ಅಂಡಜದ ಕಾಟ ಪಯಾಣ್ಗಂ (ವಿಪ್ರವಿ. ೧೯೬).

**ಜತಿಗುಡು** 'ಜತಿಗೊಡು' ನೋ.

**ಜತಿಗೆ** 'ಜೊತ್ತಗೆ' ನೋ.

**ಜತಿಗೊಡು, ಜತಿಗುಡು** (ಕ್ರಿ). [ಸಂಗೀತ] ಹಾಡಿನೊಂದಿಗೆ ಸರಿಗೂಡು; ಶ್ರುತಿಗೆ ಹೊಂದಿಕೆಯಾಗು : ಜತಿಗೊಡೆ ನೂಪುರಧ್ವನಿ . . . ನಡೆ ನೋಡಿದಳಾ ವೃಷೇಂದ್ರನಂ (ವೃಷವಿ. ೫-೯). **ಜತಿಗುಡು** : ಮಂಜು ಮಂಜೀರ ಸಂಜನಿತಧ್ವನಿ ಪದನಖಮಯೂಖಮಾಲಾನರ್ತನಕ್ಕೆ ಜತಿಗುಡೆ ಮಂದಯಾನದಿಂ ನಡೆತಂದು (ರಾಜಶೇ. ೮-೧೮ ವ): ಮರ್ದಳೆಯ ತಾಳದ ಲಯಂ ಜತಿಗುಡೆ (ರಾಮಾಶ್ವ. ೨೩-೧೯). [ ಜತಿ$_1$ + ಕೊಡು$_1$ ]

**ಜತಿಮೆಟ್ಟು** (ಕ್ರಿ). [ನಾಟ್ಯ] ನೃತ್ಯದಲ್ಲಿ ಲಯಕ್ಕನುಸಾರವಾಗಿ ಹೆಜ್ಜೆ ಹಾಕು : ಲತೆ ತೆಂಬಲಗೊರ್ಯ್ಯುನೆ ನರ್ತಿಪಂದದಿಂ ಸೊಗಯಿಸೆ ಗೋಪಿ ಡಕ್ಕೆಯ ಲಯಕ್ಕೆ ಪೆಣ್ ಜತಿಮೆಟ್ಟುತಾಡಿದಳ್ (ಜಗವಿ. ೫-೧೫).

[ ಜತಿ$_1$ + ಮೆಟ್ಟು$_1$ ]

**ಜತಿರಾಯ** (ನಾ). ಮುನಿಶ್ರೇಷ್ಠ ; ಯತಿರಾಜ : ವಾಣದೇವಿಗೆಯೋದಂ ಕಲಿಸುವ ಜತಿರಾಯನೆಸೆದನಲ್ಲಿ (ಜಯಕಾ. ೨-೨೬). [ ಜತಿ$_1$ + ರಾಯ ]

**ಜತಿವಗೆ** (ನಾ). ೧. ಯತಿಗಳ ಶತ್ರುತ್ವ. 'ಜತಿವಗೆಯ' ಪರಾ. ೨. ಯತಿಗಳಿಗೆ ಶತ್ರುವಾದವನು ; ಕಾಮ: " ಕುಡುವಿಲ್ಲ ಜತಿವಗೆ ಓರಿದಿಂ ಗೋಲ್ವಿಲ್ಲ ಕಾವ " (ಕವಿಕಂ. ೨೬). [ ಜತಿ$_1$ + ಪಗೆ$_2$ ]

**ಜತಿವಗೆಯ** (ನಾ).=ಜತಿವಗೆ ೨ : "ಇಂಗೋಲ್ವಿಲ್ಲಂ . . . ಜತಿಪಗೆಯಂ, ಕುಡುವಿಲ್ಲಂ, ಅಯ್ಸರಳಂ, ಗಿಳಿದೇರಂ–ಇವು ೧೩ಕಾಮದೇವಂಗೆ ಪೆಸರ್" (ಕಶಸಾ. ೮೬-೧೩). [ ಜತಿವಗೆ + – ಅ$_7$ ]

**ಜತಿವೆಱು** (ಕ್ರಿ). ೧. [ನಾಟ್ಯ] ನೃತ್ಯದಲ್ಲಿ ಜತಿಯನ್ನು ಹೊಂದು. ೨. [ಛಂದ] ಕಾವ್ಯವಾಚನದಲ್ಲಿ ನಿಲುಗಡೆಯನ್ನು ಹೊಂದು,– ಯತಿಯನ್ನು ಪಡೆ. ೧, ೨ : ಜತಿವೆತ್ತೊಪ್ಪುವ ಮೃದು ಪದಗತಿಯುಂ . . . ತಳ್ತಿರೆ ವಿಳಸತ್ಕೃತಿಯಂ ಪೋಲ್ವಬಳೆ ರಸಿಕರಂ ಮೆಚ್ಚಿಸಿದಳ್ (ರಾಜಶೇ. ೧೨-೧೬). [ ಜತಿ$_1$ + ಪೆಱು$_1$ ]

**ಜತಿಸ್ವರ** (ನಾ). [ನಾಟ್ಯ] ನೃತ್ಯಕ್ಕೆಂದು ನಿರ್ಮಿಸಿದ ಸ್ವರಯೋಜನೆ : ಪದವರ್ಣ ಜತಿಸ್ವರ ಮುಂತಾದ ಹಲವು ಬಾಬುಗಳನ್ನು ಅವರು ರಚಿಸಿದರು (ಭಾರದ. ೫೫೫) ; ಸಂಗೀತದ ಹಿನ್ನೆಲೆಯಲ್ಲಿ ಸಮ್ಮಿಳಿತವಾಗಿ ತಾಳಬದ್ಧವಾದ ಸರಳ ಸ್ವಪ್ಪ ನರ್ತನವೇ ನೃತ್ತವು. ಈಗ ನಾವು ನೋಡುತ್ತಿರುವ ಜತಿ ಸ್ವರಗಳು ನೃತ್ತಕ್ಕೆ ಸೇರಿದುವುಗಳು (ಅಭಾನ್ನ. ೨೬) : ಸಾಹಿತ್ಯರಹಿತವಾದ ಈ ರಚನೆ ಜತಿಸ್ವರ ಎನಿಸಿಕೊಂಡಿದೆ. ಜತಿಸ್ವರಕ್ಕೆ ನೃತ್ತದಲ್ಲಿ ಪ್ರಾಧಾನ್ಯವಿದೆ (ಸಂಗೀದಂ. ೬೧). 'ಸ್ವರಜತಿ' ಪರಾ. [ ಜತಿ$_1$ + ಸ್ವರ ]

**ಜತು$_1$** (ನಾ). ಅರಗು ; ಲಾಕ್ಷ : ಶಿವಸಾನ್ನಿಧ್ಯದಿರವಿನಿಂದಗ್ನಿಯೋಳ್ಜತು ಕ ರ ಗು ವ ಂ ತೆ ಭಾಸುರವಾರಿಯೊಳುಪ್ಪು ತವಿಪಂತೆ (ಅರಾದ. ೧೧-೪೬) : ಶಂಬರವಿಂಬುವೆತ್ತ ಚಮರಂ ಜತು ಪೇರುಡ ಪೀಲಿಯೆಂಬವಂ . . . ತಳೆದದೆಂ ತಳರ್ದತ್ತೊ ಪುಳಿಂದಸಂಕುಳಂ (ರಾಜಶೇ. ೫-೧೦೪). [ ಸಂ. ]

**ಜತು$_2$** (ನಾ). (?): ತೆಂಗಿನ ಮರ ಜತು ಆದ ಹನವಲ್ಲ ಗದ್ದೆಯ (ಸೌಇಎ. ೧೯೩೨, ಉಡುಪಿ. ೩೩೮-೬ : ?). [ ? ]

**ಜತುಕ** (ನಾ). ೧. ಹಿಂಗು; ಇಂಗು: "ಜತುಕ–ಇಂಗು" (ಗಂಗಾಮ. ೧೩೬). ೨. ಅರಗು. ೩. ಬಾವಲಿ ; ಕಣ್ಣುಕಪ್ಪಡಿ : ಒಂದೊಂದೆಡೆಯೊಳೊಗೆವ ದಾವಶಿಖಿಯ ಪೊಗೆಗೆ ಬೆಗಡುಗೊಂಡು ಪೊಟರುಗಳ್ ಬಿಟ್ಟುಪೋದ ಸಟ್ಟ ಗೊಂಬಿನ ಜೇನಪುಟ್ಟಿಯುಂ ಸಾರ್ದು ಪೀರ್ವ ಜತುಕನಿಕರಂಗಳುಂ (ಚಂದ್ರಪು. ೫-೬೫ ವ). [ ಸಂ. ]

**ಜತುಕೃತ್ತು** (ಗು). ೧. ಅರಗನ್ನು ಮಾಡುವ. (ನಾ). ೨. ಅರಗನ್ನುಂಟು ಮಾಡುವ ಒಂದು ಬಗೆಯ ಸುವಾಸನೆಯ ಮರ ; ಅರಗಿನ ಹುಳು ಗೂಡು ಕಟ್ಟಿಕೊಳ್ಳುವ ಒಂದು ಬಗೆಯ ಸುವಾಸನೆಯ ಮರ; ಮುಳ್ಳಗಸೆ. [ ಸಂ. ಜತುಕೃತ್ ]

**ಜತುಕೆ** (ನಾ). ೧. ಅರಗು. ೨. ಮಯಣ; ಮೇಣ ; ಒಂದು ಬಗೆಯ ಗೋಂದು. ೩. ಬಾವಲಿ. ೪. ಒಂದು ಬಗೆಯ ಸುಗಂಧದ್ರವ್ಯ : " ಜತುಕೆ ಪಾಪಟೆಯೆನಿಕ್ಕುಂ " (ಮಂಗರಾ. ೪೨-೩೯).

[ ಸಂ. ಜತುಕ ]

**ಜತುಗೃಹ** (ನಾ). ಅರಗಿನ ಮನೆ ; ಲಾಕ್ಷಾಗೃಹ : ಕನಕನೆಂಬಂ ಬಂದು ಪಾಂಡವರಂ ಕಂಡೇಕಾಂತದೊಳ್ . . . ಜತುಗೃಹ ಕವಾಟಪುಟಸಂಧಿ ಗಳೊಳ್ಸುರಂಗಮಂ ಗಂಗೆಯೊಳ್ಮೂಡುವಂತಾಗೆ ಸಮೆದು ಪೇಟ್ದು ಪೋಪುದುಂ (ಪಂಪಭಾ. ೩-೪ ವ): ಅಂದು ಕುಶಸ್ಥಲಂ ಜತುಗೃಹಜ್ವಲನಕ್ಕೆ . . . ವಾರಣಾವತಂ ಸಂದ ಸಭಾಪ್ರತಾರಣಕೆ ಕಾರಣವೆಂದಱಿಪಲ್ಕೆ ಬೇಡಿದರ್ (ಗದಾಯು. ೩-೨೦). [ ಜತು$_1$ + ಗೃಹ ]

**ಜತುಗೇಹ** (ನಾ). = ಜತುಗೃಹ : ಜತುಗೇಹಾನಲ ಬೀಜಮುಗ್ರವಿಷ ಸಂಜಾತಾಂಕುರಂ (ಗದಾಯು. ೫-೫೬) . ಸ್ಫುರಿಸಿದರೇ ಪಾಂಡುಸುತ ರಂಭೋರುಹಾಕ್ಷಿ ರಜಸ್ವಲೆಯ ಸುಲಿಸೀರೆಯಲಿ ತತ್ಪೂರ್ವಕೃತ ಜತುಗೇಹ ದಾಹದಲಿ (ಕುಪ್ಪಾಗ. ೧೧-೪). [ ಜತು$_1$ + ಗೇಹ ]

**ಜತುಭವನ** (ನಾ). = ಜತುಗೃಹ : ಕೃತಕದ್ಯೂತೋದ್ಯುಕ್ತಂ ಜತುಭವನವ ಚುರ್ಚಿದಾತನುದ್ಧತಗರ್ವಂ (ಧ್ವನ್ಯಾಲೋ.೨೩೧).

[ ಜತು$_1$ + ಭವನ ]

**ಜತುಮುದ್ರೆ** (ನಾ). ೧. ಅರಗಿನ ಮುದ್ರೆ. ೨. (ಅಲಂ) ಮುಚ್ಚಿಡುವಿಕೆ; ರಹಸ್ಯ : ಮನವನೊರೆಯನೆ ನಿನಗೆ, ಮನದನ್ನ ಕೋರ್ದುದಂ ಕೊಡುವೆ ನೆಂದಾಣೆಯಿಟ್ಟಾಡಿದೊಡೆ, ಚುಂಬನದ ಜತುಮುದ್ರೆಯೊತ್ತಿ (ಶ್ರೀರಾಮಾ. ೬೯-೪೦೩). [ ಜತು$_1$ + ಮುದ್ರೆ ]

**ಜತುರಸ** (ನಾ). ಅರಗಿನ ರಸ ; ಅಲತಿಗೆ : ಸುದತಿಯ ಕೇಸಡಿಯುನೂಡಿ ದಳ್ ಜತುರಸದಿಂ (ಜಗವಿ. ೧೦-೧೦೮). [ ಜತು$_1$ + ರಸ ]

**ಜತೂಕೆ** (ನಾ). " ಸಾರಣೆಗಿಡ, ಮುಳ್ಳಗಸೆ " (ಅಮರ. ೮೮೪) : " ಜನೀ, ಜತೂಕಾ, ಜನನೀ, ಜತುಕೃತ್, ಚಕ್ರವರ್ತಿನೀ, ಸಂಸ್ಪರ್ಶಾ–೬ ಕೋರಿಂದೇ ಗಿಡದ ಹೆಸರು ಚಕ್ರವರ್ತೀಸೊಪ್ಪು " (ಸಿದ್ಧಾಂಶಿ. ೦೨೯).

[ ಸಂ. ಜತೂಕಾ ]

**ಜತೆ** 'ಜೊತೆ$_1$' ನೋ.

**ಜತೆಕಟ್ಟು** 'ಜತೆಗಟ್ಟು' ನೋ.

**ಜತೆಗಟ್ಟು, ಜತೆಕಟ್ಟು** (ಕ್ರಿ). ೧. ಜೊತೆಗೂಡಿಸು ; ಒಟ್ಟುಗೂಡಿಸು : ಸತತ ನಿರ್ಮಾಲ್ಯಪುಷ್ಪವನು ಪೊಸಕುಸುಮಕ್ಕೆ ಜತೆಗಟ್ಟುವರೆ (ನವಮೋ. ೨೬-೬೪). **ಜತೆಕಟ್ಟು**: ೨. ಸ್ನೇಹಮಾಡು; ಗೆಳೆತನ ಮಾಡು : ಮಾತು ಬಿಟ್ಟಿದ್ದ ಅವರಿಬ್ಬರೂ ಈಗ ಜತೆಕಟ್ಟಿದರು (ರೂಢಿ). 'ಜತೆಬಿಡು' ಪರಾ.

[ ಜತೆ (<ಜೊತೆ$_1$) + ಕಟ್ಟು$_1$ ]

**ಜತೆಗಾತಿ** 'ಜೊತೆಗಾರ್ತಿ' ನೋ.

**ಜತೆಗಾರ** 'ಜೊತೆಗಾರ' ನೋ.

**ಜತೆಗಾರ್ತಿ** 'ಜೊತೆಗಾರ್ತಿ' ನೋ.

**ಜತೆಗೂಡು** 'ಜೊತೆಗೂಡು' ನೋ.

**ಜತೆಬಿಡು** 'ಜೊತೆಬಿಡು' ನೋ.

**ಜತ್ತ$_1$** 'ಯತನ' ನೋ.

**ಜತ್ತ$_2$** (ನಾ). ಒಬ್ಬಾತನ ಹೆಸರು (?) : ಜತ್ತ ತಳವಾರ ಪೊಗುಣ್ದ ಕಾಳೆ ಗದುಳ ಎಱಿದು ಸತ್ತ (ಎಕ. IX, ನೆಲಮಂ. ೩೪-೩ : ಸು. 750 ?). [ ? ]

**ಜತ್ತ$_3$** (ನಾ).ಬತ್ತ ಮೊದಲಾದ ಧಾನ್ಯಗಳ ಅಳತೆಯ ಒಂದು ಪ್ರಮಾಣ (?) : ಗದ್ದೆಯಿಂ ಭತ್ತ ಮು ೪ ಬ ೧೫ ಕು ಜತ್ತಂ ಬೆಟ್ಟಿನ ಕುಂ ಜತ್ತವನ ಬಾಳಿಕೆಯಿಂದ(ಸೌಇಎ. ೧೯೩೦, ಮಂಗಳೂರು. ೫೨೬-೨೬ : 1375). [ ? ]

**ಜತ್ರುಕ$_1$** 'ಜತ್ರುಕ' ನೋ.

**ಜತ್ತಕ$_2$** (ನಾ). ಮನೋಹರನಾದವನು ; ಚೆಲುವ : ತತ್ತನೆಯಂ ಸಕಳ ಮಹೀಪೋತ್ತಮನನವರತದಾನಿ ವೈರಿನೃಪಾಳೋನ್ಮತ್ತಗಜಸಿಂಹನಬಳಾ ಜತ್ತಕನೆಚಿಯುಜ್ಜ ಪೊಯ್ಸಳಂ ಭೂವಿನುತ (ಎಕ. V, ಅರಸೀ. ೧೦೩-೦೨ ; 1100 ?) ; ಜತ್ತಕರಂ ಸುತ್ತಿಂದೊಳಗುಮಾಟ್ಟಿ ವಾತ್ಸ್ಯಾಯನನಂ ಪೂಜಿ ಪೊರಸು ಮಾಟ್ಟಿ (ಜಗವಿ. ೨-೨೦ ಅಡಿಟಿ): "ಜತ್ತಕನೆಂದು ವೇಶ್ಯಾವರಂ" (ಅಭಿಧಾನ). [ ? ]

**ಜತ್ತಕಿ** (ನಾ). ಮನೋಹರೆ ; ಚೆಲುವೆ : ತನುವಂ ತೆತ್ತಿಸಲ್ಕಮರಕಾಂತಾ ಜತ್ತಕಿಯರುಯ್ಯೆ ದೇಕಂ ನಾಕಕ್ಕೋದಂ (ಎಕ. XII, ಚಿಕ್ಕನಾ. ೧೮-೩೦ ; 1149) ; ಪೊಸಯಿಪ ಬೇಟವಮಂ ಬೆಳಸುವಿಚ್ಚೆಯ ಜತ್ತಕಿ ತಾನೆ ಲೋಕ ದೊಳ್ ಬಸನದ ಬಿತ್ತೆನಿಪ್ಪಳೊಡಗೂಡಿದೊಡಲ್ಲದಲಂಪು ಪೋ ಪುದೇ (ಸೂಕ್ತಿಸು. ೮-೪೦೦). [ ಜತ್ತಕ$_2$ + -ಇ$_2$ ]

**ಜತ್ತಕುಚಿ** 'ಜತ್ತುಕಚಿ' ನೋ.

**ಜತ್ತಕುಚಿಯಾಡು** 'ಜತ್ತುಕುಚಿಯಾಡು' ನೋ.

**ಜತ್ತಕುಚು** 'ಜತ್ತುಕಚು' ನೋ.

**ಜತ್ತಗನ್ನಡಿ** (ನಾ). ಜೋಡಿಗನ್ನಡಿ (?) : ನಿಲುವಗನ್ನಡಿ ಹಿಡಿದು ಮುಕ ನೋಡಿ ಅರಸರು ಜತ್ತಗನ್ನಡಿ ಎದಿರೆದುರು ಹಿಡಿಹಿಡಿದು ಸುತ್ತ ನೋಡಾಡಿ ಬಲು ತಿದ್ದಿ (ಬೋಕಗೀ. ೨೦೦). [Pಇದು 'ಜೊತೆಗನ್ನಡಿ' ಇರಬಹುದು]

**ಜತ್ತನ** 'ಯತನ' ನೋ.

**ಜತ್ತರಟ್ಟ** (ನಾ). ಯುದ್ಧದಲ್ಲಿ ಬಳಸುತ್ತಿದ್ದ ಒಂದು ಬಗೆಯ ಯಂತ್ರ: ರಣರಂಗನೀಚಿನುಂ ಬಿಲ್ಲಂಕಕಾಚಿನುಂ ಆಹವಜತ್ತರಟ್ಟ . . . ಶರಣಾಗತ ವಜ್ರಪಂಜರನುಂ ವೈರಿದಿಕ್ಕುಂಜರನುಂ (ಎಕ. VI, ಕಡೂರು. ೧೪೮-೪೬ ; 1202) ; ತರಿಸಿ ಲೋಹದ ಜತ್ತರಟ್ಟವ [ಪಾಠಾಂ. ಜಂತ್ರರಾಟವ, ಜತ್ತ ಗಂಟವ] ಹರಹಿದರು ಸೂಲಿಗೆಯ ಬಂಡಿಯನಿರಿಸಿವರು (ಕುವ್ಯಾಕ. ೨-೧೧).
[ ? ]

**ಜತ್ತರಟ್ಟ** (ನಾ). [ಛಂದ] ಒಂದು ಬಗೆಯ ವೃತ್ತ : ಆದ್ಯಂತ ಪ್ರಾಸ ಯುಮುಕಮುಂ ಜತ್ತರಟ್ಟಯುಮೆಂಬುದಕ್ಕುಂ (ಛಂದೋ. ೧-೪೩). [ ? ]

**ಜತ್ತವಟ್ಟ** (ನಾ). (?) : ಶಕ್ರನೃತ್ಯದೊಳೊಡಂಬಡೆ ನರ್ತಿಸುವಲ್ಲಿ ಜತ್ತವ [ಪಾಠಾಂ. ಲ]ಟ್ಟದ ಮಣಿಯಂತದೇಂ ಪದುಳಮಾದುದೊ ದಿವ್ಯವಧೂ ಕದಂಬಕಂ (ಆದಿಪು. ೬-೦೨೪). [ ? ]

**ಜತ್ತಾಯುತ, ಜತ್ತಾಯಿತ** (ನಾ). ಅಧಿಕವಾದ ಜೋಕೆ,-ಜೋಪಾನ,-ಎಚ್ಚರಿಕೆ : ಇತ್ತ ನಾವೀ ಶರಣರೊಳಗೆ ಕಲಬರ್ ಸಹಿತೆ ಜತ್ತಾಯುತ ದೊಳಾನೆ ಕುದುರೆ ಕಾಲಾಳುಗಳ ಮೊತ್ತಸಹಿತತಿಜತನವಾಗಿ ನಮ್ಮರ ಮನೆಯನೇ ಕಾದುಕೊಂಡಿರ್ಪವು (ಚಬಪು. ೬೨-೨೨) ; ಮೈಸೂರವರೆತ್ತಿದ ಬಿರುದಿನ ಭಟರು ಕತ್ತಲೆ ಹಗಲಂತಿರುವುದವರಿಗೆ ನೀವು ಜತ್ತಾಯುತದ ತೆರಳಿಂದ (ಕಂಪವಿ. ೧೧-೧೦೮). **ಜತ್ತಾಯಿತ :** ಅಲ್ಲಿ ಮಾಚಿಾಂಕದವನೊಪ್ಪೆ ಸಿಂಗರಿಸಿ ಭರದಿಂದೆ ಜತ್ತಾಯಿ[ಪಾಠಾಂ. ಯು]ತಂ ಮಿಗಲು ತರಹರಿಸಿ ಗಳೆಯೊಡ್ಡೆ ಸರಸರನೆ ನಡುಗಳಕೆ ನಡೆತರಲು (ಜಿಡಾರ. ದೇ. ೧೧೮-೨) ; ದೂರಗತಿ ಚಿತ್ರಗತಿಗಳಂ ತೋಚಿ ಜತ್ತಾಯಿತಂ ಮಿಕ್ಕು ಹಲಗೆಯ ಹಲ್ಲಣಿಯಂ ತೆಚಿದು . . . ನಾಲ್ಕು ತೆಚಿದ ಧಾರೆಯಂ ಮೂಚು ತೆಚಿದ ನಿವಾರಣೆಯಂ ನಾಲ್ಕು ತೆಚಿದ ಪೊಯ್ಲಂ ಬಿತ್ತರಿಸಿ (ತ್ರಿಪುವಿ. ೨೩-೧೯ ವ).
[ ಜತ್ತ$_1$ (<ಯತನ) + ಆಯುತ$_4$ ]

**ಜತ್ತಾಯುತವಡೆ** (ಕ್ರಿ). ಎಚ್ಚರಿಕೆಯಿಂದ (ಪೂರ್ವ) ಸಿದ್ಧತೆಯುನ್ನು ಹೊಂದು,-ಸನ್ನಾಹಗೊಳ್ಳು,-ಸಜ್ಜಾಗು : ಬಾಣಾಸುರ ಬರ್ಪ ಸಮಯಕ್ಕೆ ನವ ಪಂಚಬಾಣ ಹರ್ಮ್ಯವನಡರ್ದೊಡನೆ ಬಾಣನಂದನೆಯ ಕುಸ್ತರಿಸಿ ಬಂದನು ಬಿಲ್ಲು ಬಾಣ ಜತ್ತಾಯುತವಡೆದು (ಮೋಹತ. ೩೫-೦೦).
[ ಜತ್ತಾಯುತ + ಪಡೆ$_1$ ]

**ಜತ್ತಾಯುತವೆಚು** (ಕ್ರಿ). ಅಧಿಕವಾದ ಎಚ್ಚರಿಕೆ ಹೊಂದು; ವಿಶೇಷ ಗಮನ ವಿಡು ; ತುಂಬ ಜೋಪಾನವಾಗಿರು : ಬತ್ತರಿಸಿದ ಸಂಜೆಗೆಂಪು ನುಂಗಿದ ಕರ್ಗತ್ತಲೆಯೊಳು ನಿಶಾಚರನು ಜತ್ತಾಯುತವೆತ್ತು ನಡೆತಂದು ಕಂಡ ದೇಪೋತ್ತಮನಿರ್ದ ಪಟ್ಟಣವ (ಮೋಹತ. ೧೦-೧೯).
[ ಜತ್ತಾಯುತ + ಪೆಚು$_1$ ]

**ಜತ್ತಾಯಿತ** 'ಜತ್ತಾಯುತ' ನೋ.

**ಜತ್ತಿ** (ನಾ). ಜಟ್ಟಿ; ಮಲ್ಲ : ಮಚುವಕ್ಕದ ಜತ್ತಿಭಟರ್ಕಳ ಪಲರುಮಂ ಕೊನ್ದು (ಎಕ. VIII, ಸೊರಬ. ೨೨-೪; ಸು.800). [ <ಜಟ್ಟಿ$_1$ ]

**ಜತ್ತಿಗೆ** 'ಜೊತ್ತಗೆ' ನೋ.

**ಜತ್ತಿಳ** (ನಾ). ಕಾಡಿನಲ್ಲಿ ಬೆಳೆಯುವ ಎಳ್ಳು ; ಕಾಡೆಳ್ಳು: "ಜತ್ತಿಳ ಮೆಂಬುದು ಕಾಡೆಳ್ಳು" (ಹಲಾಯು. ೯೩-೪೨೯). [< ಸಂ. ಜರ್ತಿಲ ]

**ಜತ್ತು** 'ಜೊತ್ತು$_1$' ನೋ.

**ಜತ್ತುಕ, ಜತ್ತಕ$_1$** (ನಾ). ೧. ಮೋಸ ; ಕಪಟ ; ವಂಚನೆ : 'ಜತ್ತುಕ ಮೆನೆ ಕೈತವಂ' (ಜಠುನಿ. ೧೨) : "ಕೈದವಂ ಕೈತ ಜತ್ತುಕಮೆಂದು ಕಪಟಕ್ಕೆ ಐದಿರ್ಪ ನಾಮ" (ಶಬ್ದಮಂ. ೫೩) ; ಜತ್ತುಕದ ಮಾರಣದ ಹೋಮದ್ಧಿ ಹೊತ್ತಿ ದಳ್ಳುರಿ ನಭವನಡರಿತು (ಶಾಶಿರಾ. ೧೯-೩೬) ; ಎತ್ತಣ್ಣು ವರದನಾಥನ ಜತ್ತುಕದಲ್ಲಾಟವೆಂದು ಬಿತ್ತೆಗರಂ ಬಲ್ ಬಿತ್ತರಿಸಿ (ಹಮ್ಮಿರ. ೬-೫) ; ಇಂದಿನೀ ವಿಸಸನದೊಳಾಟಿಯ ಜತ್ತುಕದ ನಿಶಾಟ ನುಬ್ಬಿನ ಬಲವಮಂ ಗೋಣ್ಮುಚಿದು (ರಾಮಾಶ್ವ. ೧೧೧-೦೨). **ಜತ್ತಕ$_1$ :** ೧. "ಜತ್ತಕಮೆಂದು ಕೈತವಂ" (ಕಕಸಾ. ೭೦-೫೨೨) ; ಮೃತ್ಯುಹರ ನಿನ್ನಾಜ್ಞೆ ಪೊತ್ತು ಬೊಮ್ಮಾಳಿಯಂ ತುತ್ತುವೆನಗಘವೇಕೆ ಪೊರ್ದದೆಂದು ಹತ್ತಿತೇ ನಿನಗೆ ಬಿಡು ಜತ್ತಕವಿದೇಕೆಂದು ಮೃತ್ಯು ನಗುತೆಂದುದು (ಸಾನಂಚ. ೨-೨೩) ; ಆಸೆಯ ಪಳ್ಕೆ ಪಳಾಳದ ವಾಸಂ ಜತ್ತಕದ ಜನ್ಮಭೂಮಿ . . . ಎನೆ ಸೂಳೆಗೇರಿ ಕಣ್ಗೆಸೆದಿರ್ಕುಂ (ವೀರವಿ. ೬-೯೬); ಈ ಇವನ ವಿಸ್ಮಪ್ಪ ಕಲ್ಪನೆಯ ಜತ್ತಕವನ್ನು ಭೇದಿಸಿ (ಮಂತ್ರಶ. ೯೩-೧೭). ೨. ವಂಚನೆಯ ಮಾತು : ಈ ದೂದವಿ ಜತ್ತಕಮಂ ನುಡಿದು ಜವಕವಿಲ್ಲದೆ ಕೂಡಿದಳೆಂದು ನುಡಿಯುತ್ತುಂ ಪೋಗೆ(ಅನಂಪು. ೮-೨೯ ವ). ೩. ಕಪಟಿ ; ಮೋಸಗಾರ: ಜತ್ತಕನ ನುಡಿಗೆ ತೆಕ್ಕಿದನೆ ತೆರಳಿದನೆ ತಲೆಗುತ್ತಿದನೆ (ಹರಿಕಾ. ೮-೫೫).
[ ದೇ.೩ ತಮಿ. ಮುಲ. ಚತಿ ; ಕೊಡ. ಚದಿ ; ತೆಲು. ಜತ್ತು ]

**ಜತ್ತುಕಚು, ಜತ್ತಕುಚಿ, ಜತ್ತಕುಚು, ಜತ್ತುಕುಚು** (ನಾ). ಚೇಷ್ಟೆ; ಲೀಲೆ ; ವಿನೋದ : ತತ್ತುತನಕ್ಕೆ ತೆತ್ತುತನಮಂ ಪುಸಿನಲ್ಮೆಗೆ ಮೋದಿ ನಲ್ಮೆಯಂ ಜತ್ತುಕಚುಂಗೆ ಜತ್ತುಕಚಿನಾಸೆಗಮಾಸೆಯನಾದಲಂಪಿನಿಂ . . . ಪೊಣರ್ಚುತ್ತುಂ (ಕಾವ್ಯಸಾ. ೯೮೫ ಶೂದ್ರಕ). **ಜತ್ತಕುಚಿ :** ಕಾದಿದ ಕಾಳೆಗಂ ಜವನ ಜತ್ತಕುಚಿಕ್ಕೆ ಸಮಾನಮಾದುದು (ಅನಂಪು. ೧೧-೭೮). **ಜತ್ತಕುಚು :** ಕೊಲ್ವುದಹಿ ಮುಂ ತಪ್ಪಿತ್ತೆನೆ ಪೊಡೆವುದು ಬಚಿಸಿಡಿ ಲೆತ್ತಿದು ಮಾನವರ್ಗೆ ಜವನ ಜತ್ತಕುಚಿಲ್ತೆ (ಚಂದ್ರಪು. ೯-೦೩) ; ಜವನ ಜತ್ತಕುಚುಮಂ ಪೇಟಿಪ್ಪೊಡೆ (ಅನಂಪು. ೩-೭೦ ವ). **ಜತ್ತುಕುಚು :** 'ಜತ್ತುಕುಚಿಯಾಡು' ಪರಾ. [ ? ]

**ಜತ್ತುಕುಚು** 'ಜತ್ತುಕಚು' ನೋ.

**ಜತ್ತುಕುಚಿಯಾಡು, ಜತ್ತಕುಂಚಿಯಾಡು** (ಕ್ರಿ). ಚೇಷ್ಟೆಮಾಡು ; ವಿನೋದ ಮಾಡು ; ಲೀಲೆಯಾಡು : ಜಡಿವಂ ಜತ್ತು[ಪಾಠಾಂ. ತ್ರ]ಕುಚಿಯಾಡುವಂ ಬಳಸುವಂ ಬೆನ್ನಟ್ಟುವಂ ಮುಟ್ಟುವಂ ಪಿಡಿವಂ ಮಕ್ಕಳನೇಂ ಕರಂ ವಿಕರಿಯೊ ಕೂಸಾಟದೊಳ್ ಕೇಶವಂ(ಅರ್ಧನೇ. ೭-೮೫). **ಜತ್ತಕುಚಿಯಾಡು:** ಜತ್ತಕುಚಿಯೋ [ಕುಚು] ಡಿ ಕಾದೆ ಮದನಂ . . . ತಳರದಿರ್ದುದು[ರಾಜ] ಕುಮಾರನಂಗದೊಳ್ (ವರ್ಧಮಾ. ೧೧-೨೦).
[ ಜತ್ತುಕುಚು (<ಜತ್ತುಕಚು) + ಆಡು$_1$ ]

**ಜತ್ತುಗ** (ನಾ). ಚಂದ್ರ. 'ಜತ್ತುಗದಲೆಯಂ' ಪರಾ. [<ಸಂ. ಜೈವಾತೃಕ]

**ಜತ್ತುಗದಲೆಯ** (ನಾ). ಚಂದ್ರಶೇಖರ; ಶಿವ: "ಎಲುಗೈಯ . . . ಜತ್ತು [ಪಾಠಾಂ. ಜೈತು]ಗದಲೆಯನೆನೆ ಸತ್ಯವೀಂದ್ರರ್ ಸಲೆ ಪೇಳ್ವರ್ ಸ್ಮರಹರಂಗೆ ನಾಮವಿದೆನುತುಂ" (ಕವಿಕಂ. ೧೮). [ಜತ್ತುಗ + ತಲೆ$_1$ + -ಅ$_7$]

**ಜತ್ತುಗೊಳ್ಳು** (ಕ್ರಿ). ಜೊತೆಯಾಗಿರು ; ಕೂಡಿಕೊಂಡಿರು : ಚಿತ್ರಭವ ರತಿದೇವಿಯರು ತಮ್ಮ ವಾಸದಲ್ಲಿ ಜತ್ತುಗೊಂಡಿರಲು (ನವಮೋ. ೩೩-೩೭). [ಜತ್ತು (<ಜೊತ್ತು$_1$) + ಕೊಳ್ಳು$_1$ (<ಕೊಳ್$_1$)]

**ಜತ್ತುವೆ** (ನಾ). ಒಂದು ಬಗೆಯ ಸಸ್ಯ : ಯಕ್ಕೆ. ಜತ್ತುವೆ. ಹಂಬುಕಳ್ಳಿ. ನಂಜಿನ ಕೊರಡು. ಸಮುದ್ರಪಾಲ. ಕಾಟಿ (ನಮ್ಮನು. ೨೩೮). [?]

**ಜತ್ತುಳ$_1$** (ನಾ). ಕಪಟ; ಮೋಸ; ಠಕ್ಕು: ಅತ್ತಲಾ ಸೆರಗಾಳ್ಗಳದನೆಲ್ಲಮಂ ನೋಡಿ ಜತ್ತುಳವಿದೆಂದೊರೆದು ನಗೆ ಹೊಗೆಯೊಳಿಹರು (ಕಾಲೂರ. ೧೭೮-೩೭೪). [<ಜತ್ತುಕ]

**ಜತ್ತುಳ$_2$** (ನಾ). ನೊರೆ : "ಜತ್ತುಳಮೊಂದು ಫೇನಂ" (ಕರಸಾ. ೫೩-೦೪೪) : "ಜತ್ತುಳವೊಂದು ಪೆಸರಕ್ಕು ನೊರೆಗೆ" (ಕಬ್ಬಿಕೈ. ೧೨) : "ಜತ್ತುಳವೆನಲ್ ನೊರೆಯಕ್ಕು" (ಕಬ್ಬಮಂ. ೩೭) : ನಗೆ ಜತ್ತುಳಂ ಜಠರದೊಳ್ ತೊರ್ಪಬ್ಬ ಪಾತಾಂಡಸಂಕುಳಮೋ ಬುದ್ಬುದಮಾಗೆ ವಿಷ್ಣುವೆನೆ ಕಣ್ಗೊಪ್ಪಿತ್ತು ನೀರಾಕರಂ (ಉದ್ಭಟ. ೧-೩೮). [?]

**ಜತ್ತೆ** (ನಾ). ಜೊತೆ (?) : ನೋಡಲಿಬಾರದ ಆಡಲಿಬಾರದ ಈಡೆಂಬುದು ಆದಕ್ಕಿಲ್ಲದುದಾ ಕೂಡದ ಮನ ಬುದ್ಧಿಯ ಯಿಂದ್ರಿಯಗಳ ರುಷಾಡಿಯ ವೆಳಗಿನ ಜತ್ತೆ ಆದಾ (ಚಿದಾಕೋ. ೧೨೧-೩). [?]

**ಜತ್ರು** (ನಾ). ಕೊರಳಿನ ಎಲುಬು : ಸುಭಟನುನ್ನತವಕ್ಷನುದಾರಂ ನೆಟ್ಟನೆ ಸಂಗತಜತ್ರುವಿಂ ವಿಭವದೈಶ್ವರ್ಯಹೀನನೆನಿಕ್ಕುಂ ನೋಟ್ರ್ನೂಪಡಂಗಿದ ಜತ್ರುವಿಂ (ಲೋಕೋಪ. ೧೧-೮) : ಕಂಠದ ಕೆಳಗಂ ಜತ್ರುವೆ ತಾನೆಂಬ ಪೆಸರುಂ (ಅಶ್ವಶಾ. ೯-೩೦): ಶ್ವಾಸದ ಕೊಳವೆಯು ತ್ವಚೆಯಿಂದ ಹುಟ್ಟಿ ಆ ರಂಧ್ರದಿಂದ ಜತ್ರುಗಳವರೆಗೆ ನೆಟ್ಟಗೆ ಕೆಳಗಿಳಿದಿದೆ (ಮುಂಬಯಿ. ೭-೩೦೭). [ಸಂ.]

**ಜತ್ವ** (ನಾ). ಜ ಎಂಬ ವರ್ಣ : ಇರೆಯಲರಹಿತ ವ್ಯಂಜನ ಪರಮಾಗಿ ಸಕಾರವಲ್ಲಿ ಬಹುಳಂ ಚತ್ವಂ ಅರೆವಿಡೆಯೊಳ್ ಜತ್ವಂ ಮೇಣರೆವಿಡೆಯೊಳ್ ಸಂಪ್ಯೆಯಾಗೆ ನಿಯುತಂ ಛತ್ವಂ (ಶಬ್ದ. ೬೮). [ಸಂ.]

**ಜದುಗೂರ್** (ನಾ). ಒಂದು ಊರಿನ ಹೆಸರು : ನಾಯರ್ಖಣ್ಡಮುಂ ಜದುಗೂರಾಳ್ಗೆಯನಾಳುತ್ತು (ಇಅ. XIX, ೦೮೭-೪: 7ನೆಯ ಶತ). [? + ಊರ್]

**ಜನ** (ನಾ). ೧. ವ್ಯಕ್ತಿ; ಮನುಷ್ಯ: ಜನ ನೋಡಿ ಬೇಡಬೇಕು ಜಾಗ ನೋಡಿ ಉಗುಳಬೇಕು (ಗಾದೆ). ೨. ಮನುಷ್ಯರ ಸಮುದಾಯ; ಪ್ರಜೆ : "ಲೋಕಂ ಜನಮುಂ ಜಗಮುಂ" (ವಸ್ತುಕೋ. ೧೨೧-೨೦) : "ಜನಃ, ಲೋಕಃ, ಪ್ರಜಾ–ಈ ೩ ಪ್ರಜೆ" (ಹಲಾಯು. ೪೭-೧೨೯) ; ಪೊಟಲ ಜನಂಗಳೆಲ್ಲಂ ಕೇಳ್ದು (ಪಂಪ.ರಾ. ೮೩-೪) ; ಜನಮಿನಿತದೇಕೆ ಭಯದಿಂ ತನತನಗೋಡುತ್ತುಮಿರ್ಪುದು (ಕುಸುಮಾ. ೧೧-೭) ; ಜನ ಮರುಳೊ. ಜಾತ್ರೆ ಮರುಳೊ (ಗಾದೆ). ೩. ಏಳು ಊರ್ಧ್ವಲೋಕಗಳಲ್ಲಿ ಒಂದು; ಭೂಮಿಯಿಂದ ಮೇಲೆ ಐದನೆಯ ಲೋಕ ; ಮಹರ್ಲೋಕದ ಮೇಲಿನ ಲೋಕ ; ಜನಲೋಕ : "ಬಿತ್ತರದ ಭೂರ್ಭುವಂ ಸ್ವರ್ಮಹಂ ಜನ ತಪಂ ಸತ್ಯಮೆಂದೇಟು ಮೇಲಣ ಲೋಕಮಕ್ಕು" (ಮಂಗರಾ. ೧೦-೩೨). [ಸಂ.]

**ಜನಂಗಮ** (ನಾ). ಹೊಲೆಯ; ಚಾಂಡಾಲ: "ಅಂತಾವಸಾ[ಶಾ]ಯಿ, ಚಂಡಾಳಃ, ನಿಷಾದಃ, ಜನಂಗಮಃ – ಈ ೪ ಪೊಲೆಯಂ" (ಹಲಾಯು. ೯೮-೪೪೪) : "ನಿಷಾದಂ ಜನಂಗಮನು ದುಷ್ಕರ್ಮನೆನೆ ಹೊಲೆಯ" (ಮಂಗರಾ. ೧೧೩-೭). [ಸಂ.]

**ಜನಕ** (ಗು). ೧. ಹುಟ್ಟಿಸುವ; ಉತ್ಪತ್ತಿಮಾಡುವ; ಉಂಟುಮಾಡುವ. (ನಾ). ೨. ಉತ್ಪತ್ತಿಗೆ ಕಾರಣವಾದುದು; ಹುಟ್ಟಿಸುವುದು: "ಜನಿಯಿಸೆ ಮುನ್ನಂ ಜನ್ಯಂ ಜನಕದಿನದು ಪೂರ್ವಮೆಂಬುದಕ್ಕುಂ" (ಕಾವ್ಯಾವ. ೭೪೦). 'ಸಾರಜನಕ', 'ವಿದ್ಯುಜ್ಜನಕ' ಪರಾ. ೩. ತಂದೆ ; ಅಪ್ಪ : "ವಪ್ತಾ, ತಾತಃ, ಜನಕಃ, ಪಿತಾ – ಈ ೪ ತಂದೆ" (ಹಲಾಯು. ೮೩-೩೫೦) : ಜನಕನೆನಾಂ ನಿನಗೆನಗಾ ದನುಜಹರಂ ಜನಕಂ (ಜಗವಿ. ೧-೩೪) : ಜನಕಾದೇಶದೆ ಬಂದನಲ್ಲಿಗೆ ಕುಮಾರಂ (ಪುಷ್ಪಪು. ೪-೮೦). ೪. ವಿದೇಹರಾಜ ; ಸೀತೆಯ ತಂದೆ : ಮುನಿಪತಿಯ ಬಳಿಗೆ ಬಂದರು ಜನಕಭೂಪನ ಬಳಿಯ ಮಣಿಹಾಜರು (ತೊರರಾ. ೦-೧೨-೨) : ರನ್ನ ಸೀತೆಯೆತ್ತಪೋದಳ್ ? ಜನಕಂ ಜನಕಂ ಕರೆದುಯ್ದಿರ್ದನೇಂ (ರಾಮಾಶ್ವ. ೧೭-೧೪). [ಸಂ.]

**ಜನಕರಾಗ** (ನಾ). [ಸಂಗೀತ] ಸಂಪೂರ್ಣರಾಗ ; ಮೇಳಕರ್ತರಾಗ : "ಜನಕರಾಗ – ಸಪ್ತಸ್ವರಗಳು, ಆರೋಹಣ ಅವರೋಹಣ ಕ್ರಮದಲ್ಲಿ, ಕ್ರಮವಾಗಿ ಮೇಳೈಸಿದರೆ ಜನಕ ಅಥವಾ ಮೇಳಕರ್ತರಾಗವಾಗುತ್ತದೆ" (ಸಂಗೀದಂ. ೩೦). [ಜನಕ + ರಾಗ]

**ಜನಕುಕ್ಕಲು** (ನಾ). ಜನರ ನಿಂದೆ,–ಮೂದಲಿಕೆ : ಜನಕುಕ್ಕಲನ್ನು ಕೇಳದೆಯೂ ಬ್ರಾಹ್ಮಣ ಹಾಳಾಗುವನಲ್ಲ! ಎಂಬ ಭಾವನೆಯಿಂದಲೂ ಎಷ್ಟೋ ಜಗಳವಾಡುವರು (ಬಾಗಿನ. ೫೨). [ಜನ + ಕುಕ್ಕಲು$_1$]

**ಜನಕೂಟ** (ನಾ). ಜನ ಸಮುದಾಯ: ಕರ್ಣನು ಅರ್ಜುನನನ್ನು ಯುದ್ಧಕ್ಕೆ ಕರೆದ ಕೂಡಲೆ ಜನಕೂಟ ಕುತೂಹಲಗೊಂಡು ಎರಡು ಕಕ್ಷಿಯಾಗಿ ಒಡೆಯಿತು (ವ್ಯಾಸಪಿ. ೪೯). [ಜನ + ಕೂಟ$_1$]

**ಜನಕೆ** (ನಾ). ತಾಯಿ; ಜನನಿ: ಕ್ಷೀರಾವಾರಿಧಿಕನ್ನಿಕೆ ಮಾರಜನಕೆ ಈರೇಳು ಲೋಕನಾಯಿಕೆ (ವಿದಾಕ್ಯ. ೫೫ ಪಲ್ಲವಿ). [<ಸಂ. ಜನಿಕಾ].

**ಜನಕೋಟಿ** (ನಾ). ಕೋಟ್ಯಂತರ ಜನ ; ಅಸಂಖ್ಯಾತ ಜನ; ಜನಸಮುದಾಯ : ತಮ್ಮ ಸಾತ್ವಿಕಪ್ರಭಾವದಿಂದ ಜನಕೋಟಿಯನ್ನು ದೈವದ ಕಡೆಗೆ ಸೆಳೆಯುತ್ತಿರುವ ಮಂತ್ರಾಲಯದ ಶ್ರೀ ರಾಘವೇಂದ್ರಸ್ವಾಮಿಗಳು (ಭಾರದ. ೨೯೩). [ಜನ + ಕೋಟಿ$_1$].

**ಜನಗಣತಿ** (ನಾ). ಜನರ ಎಣಿಕೆ; ಖಾನೇಷುಮಾರಿ; ಸೆನ್ಸಸ್ಸು: ಕೊನೆಯ ಸಾರಿ ನಡೆದ ಜನಗಣತಿಯು ಮೇರೆಗೆ . . . ಏರ್ಪಡಿಸತಕ್ಕುದು (ಭಾರಾನ. ೪೦); ೧೯೬೧ರ ಜನಗಣತಿಯ ವರದಿಯ ಅನುಸಾರವಾಗಿ ಸುಮಾರು ೧೫೩ ದ್ರಾವಿಡಭಾಷೆ – ಉಪಭಾಷೆಗಳಿವೆ (ದ್ರಾವಿವಿ. ೧ ಹಿನ್ನೆಲೆ). [ಜನ + ಗಣತಿ$_2$]

**ಜನಗಣನೆ** (ನಾ). =ಜನಗಣತಿ: (Census. ಪತ್ರಿನಿ. ೧೪). [ಜನ+ಗಣನೆ]

**ಜನಗಿ$_1$** 'ಜನ್ನಿಗೆ' ನೋ.

**ಜನಗಿ$_2$** (ನಾ). ಒಂದು ಬಗೆಯ ಮರ: ಜನಗಿ–ಮಧ್ಯಮ ವೃಕ್ಷ. ಹಳದೀ ಬಣ್ಣದ ಫಲಗಳಾಗುತ್ತವೆ. ಅರದಾಳದಂಥ ಅಂಟು ಅವುಗಳಿಂದ ಸೋರುತ್ತದೆ (ಕಭಾಗಿ. ೩೯). [?]

**ಜನಜಂಗುಳಿ** (ನಾ). ಜನಸಮೂಹ,–ಸಮುದಾಯ : ಸುದ್ದಿ ಕಿಚ್ಚಿನಂತೆ ಜನಜಂಗುಳಿಯಲ್ಲಿ ಪಸರಿಸಿತು (ಹುಲಿಹಾ. ೧೨೮); ಪ್ರತಿಯೊಂದು ನಿಲ್ದಾಣದಲ್ಲಿಯೂ ಜನಜಂಗುಳಿ ವಿಶೇಷವಾಗಿ ನೆರೆದಿತ್ತು (ಮೂರಾನ. ೫). [ಜನ + ಜಂಗುಳಿ]

**ಜನಜನಿತ** (ಗು). ೧. ಜನರಿಂದ ಉತ್ಪತ್ತಿಯಾದ,–ಲಭಿಸಿದ: ಅವನಿಯಲ್ಲಿ ಜನಜನಿತ ಧನಧಾನ್ಯವನು ಕಳಹಲಗ್ಗೆದು . . . ಒಂದಕೆ ನೂರುಮಡಿಯಾಗಿ ಲವಲವಿಕೆ ಮಿಗಲಿತ್ತು ಸಪ್ತಾಂಗವನು ಸಲಹುತ್ತಿರಲುಬೇಹುದು (ಕುವ್ಯಾಉ. ೩-೧೨೫). ೨. ಜನರಲ್ಲಿ ಹಬ್ಬಿರುವ; ಎಲ್ಲರಿಗೂ ತಿಳಿದಿರುವ; ಪ್ರಸಿದ್ಧವಾದ : ಲೋಕಗುರು ಶಂಖಚಕ್ರಗದಾಕರನತಿಶಯ ಚತುರ್ಭುಜಂ ಜನಜನಿತ ವ್ಯಾಕುಳದೆ ಬಂದಂ (ಪಂಪಭಾ.೯-೩೦). (ನಾ). ೩. ಎಲ್ಲರಿಗೂ

ತಿಳಿದಿರುವ ಸಂಗತಿ; ಪ್ರಸಿದ್ಧವಾದ ವಿಷಯು: ಕೌರವಕುಲಕೆ ಕಣು ಗತಿಮತಿಯೆನಿಸಿ ನೀ ಕರ್ಣನೆಂಬುದು ಸಕಲ ಜನಜನಿತ (ಕುವ್ಯಾಕ. ೧೯-೬೧): ನಿನ್ನವ್ವೆ ತೊತ್ತಲ್ಲವೆಂದೆನಿಸಿ ಜನಜನಿತವಂ ಮಾಡಿಸಿ (ತುರಂಗ. ೪-೪೬): ಅವರ ಚರಿತ್ರೆ . . . ಸುತ್ತಮುತ್ತ ಹಳ್ಳಿಗಳಲ್ಲೆಲ್ಲ ಜನಜನಿತವಾಗಿತ್ತು (ಮರಳಿ. ೭). ೪. ಸಾಮಾನ್ಯವಾದ ಜನ: ಲಿಂಗಧಾರಿಗಳುಳಿದು ಜನಜನಿತಂಗಳಲಿ ಸದ್ಗತಿಯ ಕಾಣ್ಬುತ್ತುಂಗರರಿದೀ ಲೋಕರೊಳಗೆಂದಾಡಿಸಲ್ಲರಲಿ (ಬಿಜ್ಜ.ಪು. ೪೮-೫೦).

ಜನಜನಿತಂಮಾಡು = ಎಲ್ಲರಿಗೂ ತಿಳಿಸು; ಪ್ರಕಟಪಡಿಸು: ಇನಿಯನ ಮೊಗಮಂ ಕಾಣುತ ಮುತ್ತುಗಳನಿವಿಂಪದೊಳ್ ಸಂಜನಿಸುವುದು ಜನ ಜನಿತಂಮಾಡುವ ತೆಜದಿಂ ಕಣ್ಗಳೊಳಶ್ರು ಜನಿಸಲಾಗ (ಜಯುಕಾ. ೨-೪೪).

ಜನಜನಿತವಾಗು = ಜನರಲ್ಲಿ ಹರಡು,-ಪ್ರಚಲಿತವಾಗು: ಅವರನ್ನು ಒಂದೆರಡು ವಾರಗಳಲ್ಲಿ ಬಿಡುಗಡೆ ಮಾಡಬಹುದೆಂಬ ಸುದ್ದಿ ಜನಜನಿತವಾಗಿತ್ತು (ಪುನರು. ೩೩೯). [ ಜನ + ಜನಿತ ]

**ಜನಜಾಗೃತಿ** (ನಾ). ಜನಸಾಮಾನ್ಯರಲ್ಲಿ ಉಂಟಾಗುವ ಎಚ್ಚರ,-ಪ್ರಜ್ಞೆ: ಏಷಿಯಾಭೂಖಂಡವೆಲ್ಲ ಜನಜಾಗೃತಿಯಿಂದ ತಳಮಳಗುಟ್ಟುತ್ತಿತ್ತು (ರಾಜ್ಯಶಾ. ೧೫): ಭಕ್ತಿಪಂಥ ಪ್ರಚಂಡ ಜನಜಾಗೃತಿಯನ್ನುಂಟುಮಾಡಿತು (ಕರ್ನಾಕ. ೭೨): ಜನಜಾಗೃತಿ ಹೆಚ್ಚಿದ ಹಾಗೆಲ್ಲಾ ಲೋಪದೋಷಗಳು ಕ್ರಮೇಣ ಕಡಮೆಯಾಗುತ್ತಾ ಹೋಗುತ್ತವೆ (ಪಂಚಪಂ. ೧೮೫). [ ಜನ + ಜಾಗೃತಿ ]

**ಜನಜಾತ್ರೆ** (ನಾ). ಬಹಳ ಜನ ಒಂದೆಡೆ ಸೇರಿರುವ ಗುಂಪು,-ಜಾತ್ರೆ: ಜನಜಾತ್ರೆಗೆ ಹೋದವನಂತೆ ಕೂಟದಲ್ಲಿ ಗೋಷ್ಠಿ ಹರಿದಲ್ಲಿ ತಮ್ಮ ತಮ್ಮ ಮನೆಯ ಇರವಿನ ಹಾದಿ (ಮೋಳಮೂ. ೬-೨೭); ಜನಜಾತ್ರೆಯಾಗಿ ಕವ್ವರಗೊಂಡು ಆ ನಾಡ ಜನವೆಲ್ಲವು ನೋಡುತಿರೆ (ಶ್ರೀಪಾಂ. ೬-೧೫೦): ಒಂದು ಲೋಕಲ್ ಗಾಡಿ ಬಂದು ಜನಜಾತ್ರೆಯೆಲ್ಲವೂ ಬಯಲಾಯಿತು (ಕಪುಸ.೧). [ ಜನ + ಜಾತ್ರೆ ]

**ಜನಜಾಲ** (ನಾ). ಜನಸಮೂಹ: ಸುರಿವ ಬಸುರಕ್ತದಿಂದಾ ಜನಜಾಲ ವ್ಯದಿತು ದೆಸೆದೆಸೆಗೆ (ಕಂವವಿ. ೧೧-೫೦). [ ಜನ + ಜಾಲ$_2$ ]

**ಜನತಂತ್ರ** (ನಾ). "ಪ್ರಜಾರಾಜ್ಯ; ಪ್ರಜಾಸತ್ತೆ; ಪ್ರಜಾಪ್ರಭುತ್ವ" (Democracy. ಪತ್ರಿನಿ. ೩೦). [ ಜನ + ತಂತ್ರ ]

**ಜನತಾಧಾರ** (ನಾ). ಪ್ರಜೆಗಳಿಗೆ ಆಧಾರವಾದವನು,-ಆಶ್ರಯವಾದವನು; ಒಂದು ಬಿರುದು: ಜನತಾಧಾರನುದಾರನನ್ಯವನಿತಾದೂರಂ (ಎಕ. II, ೬೩-೮ ; 1148). [ ಸಂ. (ಜನತಾ + ಆಧಾರ) ]

**ಜನತಾಧೀಶ** (ನಾ). ಅರಸ; ರಾಜ: ಜನತಾಧೀಶನ ಕಾರ್ಯಮಂ ಬರಿಸಮಂ . . . ಪ್ರಯೋಜನಮಂ ತಾನಱಿದಲ್ಲಿಯುಂ ಬರೆದವಂಗೊಳ್ಪಕ್ಕುಂ (ಸೂಕ್ತಿಸು. ೧೬-೨೫). [ ಸಂ. (ಜನತಾ + ಅಧೀಶ) ]

**ಜನತಾಧೀಶ್ವರ** (ನಾ). = ಜನತಾಧೀಶ: ಜನತಾಧೀಶ್ವರ ಬನ್ನಪಂ (ಕಾದಂಪೂ. ೨೭). [ ಸಂ. (ಜನತಾ + ಅಧೀಶ್ವರ) ]

**ಜನತಾಶಯ** (ನಾ). ಜನರ ಮನಸ್ಸು,-ಚಿತ್ತ: ಮದಮದಿರಾಪ್ರಮತ್ತ ಜನತಾಶಯದಂತೆ ಜಡಾಶಯಂ ಕಲಂಕಿದುದು (ಪಂಪಾಮೂ. ೬-೧೫೩). [ ಸಂ. (ಜನತಾ + ಆಶಯ) ]

**ಜನತೆ** (ನಾ). ಜನಸಮೂಹ; ಜನ; ಮಾನವ ಸಮಾಜ: "ಜನತೆ ಜನಸಮಿತಿ" (ಪಸುಕೋ. ೧೧೩-೩೦): ಪರಮಂಬ್ರಹ್ಮಶರೀರವೃಷ್ಟಿ ಜನತಾಂತರ್ದೃಷ್ಟಿ . . . ಸರ್ವಾಂಗಸುಂದರಿ ವಿದ್ಯಾನಟಿ ನಾಟಕಂ ನಲಿಗೆ ಮತ್ಕಾವ್ಯಸ್ಥಲೀರಂಗದೊಳ್ (ಪಂಪಾಮೂ. ೧-೬): ವಿವೇಕಾನಂದರು ತಮ್ಮ ಪುಟ್ಟದಾದ ಆಶುಭಾಷಣದಿಂದ ಅಮೇರಿಕೆಯ ಜನತೆಯನ್ನು ಗೆದ್ದರು (ಧರ್ಮಸಾ. ೫೦). [ ಸಂ. ಜನತಾ ]

**ಜನದಟ್ಟಣೆ** (ನಾ). ಕಿಕ್ಕಿರಿದ ಜನಸಂದಣಿ: ಜನದಟ್ಟಣೆಯು ವಿಶೇಷವಾಗಿತ್ತು (ಉಂಗಾಡಿ. ೬೬). [ ಜನ + ದಟ್ಟಣೆ ]

**ಜನದ್ರೋಹಿ** (ಗು). ೧. ಜನರಿಗೆ ದ್ರೋಹಮಾಡುವ: ಆ ಜನದ್ರೋಹಿ ವಂಚಕರನ್ನು ವಿಚಾರಣೆಯಿಲ್ಲದೆ ಸೆರೆಮನೆಗೆ ತಳ್ಳಿರಿ (ರೂಪಸಂ. ೨೫). (ನಾ). ೨. ಜನರಿಗೆ ದ್ರೋಹ ಮಾಡುವವನು. [ಜನ + ದ್ರೋಹಿ ]

**ಜನನ** (ಗು). ೧. ಹುಟ್ಟಿಸುವ; ಸೃಷ್ಟಿಸುವ; ಉಂಟುಮಾಡುವ. (ನಾ). ೨. ಹುಟ್ಟಿಸುವುದು; ಉತ್ಪತ್ತಿಮಾಡುವುದು. ೩. ಹುಟ್ಟುವುದು; ಹುಟ್ಟು; ಉತ್ಪತ್ತಿ: "ಜನನಂ ಜನ್ಮಂ ಪ್ರಸವಂ ಜನಿ ಜನುರುತ್ಪತ್ತಿ ಸೂತಿಯೋಕಾರ್ಥವಿಂವಿಂತಿನಿತುಂ" (ಪಸುಕೋ. ೧೬-೩): ಜನನ ಜರಾ ಮೃತಿಗೊಳಗಾಯ್ತಿನಿತು ಜಗು (ಮಲ್ಲಿಪು. ೧೩-೫೫); ಪೃಥ್ವಿಯಿಂದ ಸಕಲ ಜನನವು (ಬಸವ. ೯೫೬); ರಸವೆ ಜನನ ವಿರಸ ಮರಣ ಸಮರಸವೇ ಜೀವನ (ಗರಿ. ೧೧೭-೭): ಜೀವನು ಶರೀರವನ್ನು ಧರಿಸುವುದೇ ಜನನ (ಜೀವಾತ್ಮ. ೧೫೮). ೪. ವಂಶ: "ಸಂತತಿ ವಂಶಂ ಗೋತ್ರ ಸಂತಾನಂ ಜನನಮನ್ವಾಯಂ ಕುಲಂ" (ಪಸುಕೋ. ೫೬-೨೯). ೫. ಜನ್ಮ; ಭವ: ಹಿಂದಣ ಜನನವೇನಾದಡಾಗಲಿ ಇಂದಿನ ಭೋಗವು ಕಯ್ಯ ಮೇಲೆ (ಬಸವ. ೧೬೦). [ ಸಂ. ]

**ಜನನಪತ್ರಿಕೆ** (ನಾ). ಮಗು ಹುಟ್ಟಿದ ಕಾಲದ ಗ್ರಹಗತಿಯನ್ನು ವಿವರಿಸಿ ಬರೆಯುವ ಪತ್ರಿಕೆ; ಜನ್ಮಪತ್ರ; ಜಾತಕ. [ ಜನನ + ಪತ್ರಿಕೆ ]

**ಜನನಬೀಜ** (ನಾ). ಹುಟ್ಟಿನ ಮೂಲ,-ಕಾರಣ: ಜನನವೇ ಲಯಬೀಜ ಮರಣವೆ ಜನನಬೀಜವು ತೋಱಿ ಕೆಡುವೀ ತನುವಿಸಭರಂಜನೆಯ ಸೌಖ್ಯಕೆ ಮಾಱದಿರು ಮನವ (ಕುವ್ಯಾದ್ರೋ. ೬-೧೫). [ ಜನನ + ಬೀಜ ]

**ಜನನಮರಣದೂರ** (ನಾ). ಹುಟ್ಟುಸಾವುಗಳಿಲ್ಲದವನು; ಪರಮಾತ್ಮ: ಜಯ ಜಯ ಜನನಮರಣದೂರ ಜಗದೀಶ (ಕಕಸಾಂ. ೬೨-೮). [ ಜನನ + ಮರಣ + ದೂರ ]

**ಜನನಮರಣವರ್ಜಿತ** (ನಾ). = ಜನನಮರಣ ದೂರ: ಅಮವು ಬಂದಂ ಜನನಮರಣವರ್ಜಿತಂ (ನಂಬಿರ. ೬-೧೧೬). [ ಜನನ + ಮರಣ + ವರ್ಜಿತ ]

**ಜನನರಹಿತ** (ನಾ). ಜನ್ಮವಿಲ್ಲದವನು; ಹುಟ್ಟಿಲ್ಲದವನು; ಪರಮಾತ್ಮ: ಜನನರಹಿತನ ಕರುಣವಿಲ್ಲದ ಮನುಜರಿಗೆ ದೊರಕುವುದೆ ಕಾನಿಂತು (ಬಸಪು. ೧೨-೫೦). [ ಜನನ + ರಹಿತ ]

**ಜನನಸೂತಕ** (ನಾ). ಮಗು ಹುಟ್ಟಿದಾಗ ತಂದೆ, ತಾಯಿ ಮೊದಲಾದವರಿಗೆ ಉಂಟಾಗುವ ಮೈಲಿಗೆ; ಪುರುಡು; ವೃದ್ಧಿ: ಜಾತಿಸೂತಕ ಪ್ರೇತಸೂತಕ ಜನನಸೂತಕ ಉಚ್ಚಿಷ್ಟಸೂತಕ ರಜಸ್ಸೂತಕವೆಂಬ ಪಂಚಸೂತಕಂಗಳ ಕಳೆದು (ಅಖಂಡೇ. ೮೬-೯೦). [ ಜನನ + ಸೂತಕ ]

**ಜನನಸ್ಥಳ** (ನಾ). ಹುಟ್ಟಿದ ಊರು,-ಪ್ರದೇಶ: ಬಾಕ್ . . . ಪಾರಸಿ ಮತವನ್ನು ಕಂಡುಹಿಡಿದ ಜೋರಾಷ್ಟರ್ ಎಂಬವನ ಜನನಸ್ಥಳವೆಂದು ಎಣಿಸೋಣವಾಗಿದೆ (ಭೂಗೋಳ. ೯೯). [ ಜನನ + ಸ್ಥಳ(=ಸ್ಥಲ) ]

**ಜನನಹರ** (ನಾ). (ಮರಳಿ) ಹುಟ್ಟುವುದನ್ನು ತಪ್ಪಿಸುವವನು; ಸಂಸಾರದ ಬಂಧನದಿಂದ ಪಾರಂಮಾಡುವವನು: ಜನನಹರ ಮುನಿ ದೊಡ್ಡೊಡಂ ಪಾಶಿನ ನಡುವೆ ಬಿದ್ದಂದವಾಯಿತ್ತನಗೆ (ಬಸಪು. ೭೩-೬೦). [ ಸಂ. ]

**ಜನನಾಂಗ** (ನಾ). = ಜನನೇಂದ್ರಿಯ: ಕೀಟದ ಬಗೆಗಳನ್ನು ವರ್ಗೀಕರಿಸಲು ಬಾಹ್ಯ ಜನನಾಂಗಗಳು ಗಣನೆಗೆ ಬರುತ್ತವೆ (ಕೀಟಬಿ. ೬೦). [ ಜನನ + ಅಂಗ$_2$ ]

**ಜನನಾಂಧ** (ನಾ). ಹುಟ್ಟಿನಿಂದಲೂ ಕುರುಡನಾದವನು; ಹುಟ್ಟುಗುರುಡ: ಸರಸೀಜಾತಸಖಂ ನಿಜಗ್ರಹಣಕಾಲಂ ಕೂಡೆ ಲಗ್ನಸ್ಥನಾಗಿರೆ ಮರ್ತ್ಯಂ ಜನನಾಂಧನಕ್ಕುಂ (ಜಾತಕ. ೨೦-೧೯). [ ಜನನ + ಅಂಧ ]

**ಜನನಾಥ** (ನಾ). ಜನರ ಒಡೆಯಂ ; ಅರಸ; ರಾಜ: ತೂಗಿ ತಲೆಯುಂ ಜನನಾಥಂ ವಿಸ್ಮಯಸ್ಮಿತಂಬೆರಸು (ಆದಿಪು. ೪-೭೦) ; ವಿಪುಳ ನಗರಾಧಿಪತಿ ಜಯವರ್ಮನೆಂಬೊಂ ಜನನಾಥಂ (ಚಂದ್ರಪು. ೬-೧೧ ವ). [ ಜನ+ನಾಥ ]

**ಜನನಾಥಸ್ಥಾನ** (ನಾ). ಅರಸನಿರುವ ಸ್ಥಳ,– ನಗರ; ರಾಜಧಾನಿ: "ಜನನಾಥಸ್ಥಾನಂ . . . ಶಿಬಿರನಿವೇಶಂ ಪತ್ತನ ನಿಗಮ ನಗರ ಪುಟಭೇದನ ನಗರೀ ಪೂಃ ಸಮಾಹ್ವಯಂ ಪುರಮಕ್ಕುಂ" (ವಸ್ತುಕೋ. ೪೬-೫). [ ಜನನಾಥ + ಸ್ಥಾನ ]

**ಜನನಿ₁** (ಗು). ೧. ಉಂಟುಂಮಾಡುವ ; ಕೊಡುವ. (ನಾ). ೨. ಹೆತ್ತವಳು ; ತಾಯಿ : "ಜನನಿ ಸವಿತ್ರಿ ಮಾತೃ ಸುಪು ತಾಯ್" (ವಸ್ತುಕೋ. ೫೪-೧೬): ಎಲೆ ಮಾಯಾದೇವಿ ಲೋಕತ್ರಯಜನನಿ (ಜಗವಿ. ೨-೫೮) ; ಜನನಿಗೆನಗತ್ತಿಗೆಗೆ ನಿನ್ನಯ ತನುಜರಿಗೆ ಮತವಲ್ಲ ಬಲ್ಲೆನು (ಕೌಶಿರಾ. ೦೪-೨೪)..೩. ಒಂದು ಬಗೆಯ ಸಸ್ಯ ; ಕಳವಿಗೆ : "ಜನನಿ ಕಳವಿ[ಪಾಠಾಂ. ಲ]ಗೆಯೆನಿಕ್ಕುಂ" (ಮಂಗರಾ. ೪೨-೩೯). [ ಸಂ. ]

**ಜನನಿ₂** (ನಾ). = ಜನ್ನಿ : (ಮೈಎರಿ. ೧೯೩೧, ೩೫೯, ೩೬೦; 1398) ; (ಲೋಕಸ. ೫೮, ೬೩). [P ಇದು 'ಜನ್ನಿ'ಯ ಅಪಲಿಖಿತವಿರಬಹುದು].

**ಜನನಿಬಿಡ** (ಗು). ಜನರಿಂದ ಕಿಕ್ಕಿರಿದು ತುಂಬಿದ : ಜನನಿಬಿಡವಾಗಿದ್ದ ಮೂರು ಅಂತಸ್ತುಗಳನ್ನು ದರ್ಪದಿಂದ ಏರಿ ಹೋಗಿ ಜರಾಸಂಧನನ್ನು ಕಂಡರು (ವಚಭಾ. ೭೮). [ ಜನ + ನಿಬಿಡ ]

**ಜನನೀಚರ** (ಗು). [ಜೈನ] ಹಿಂದಿನ ಜನ್ಮದಲ್ಲಿ ತಾಯಿಯಾಗಿದ್ದ : ಎನಗಿ ನಿವಿರಿದು ಸುಖಂ ಮಜ್ಜನನೀಚರದಿವಿಜನಿಂದಮಾಯ್ತೆಂದು ಕೃತಂ ಮನ ದೊಳ್ ಪುದಿದು (ಆದಿಪು. ೩-೫೮). 'ಮಾತೃಚರ' ಪರಾ. [ ಸಂ. ]

**ಜನನೀರಾಗ** (ನಾ). ೧. ತಾಯಿಯಂ ಪ್ರೀತಿ. ೨. ಜನರ ಬೇಸರ,– ಬೇಜಾರು. ೧, ೨ : ಚರಣವಿನ್ಯಾಸದೊಳಪ್ರಗಲ್ಭನು ತಾನು ಜನನೀರಾಗ ಕಾರಣನು . . . ಕುಕವಿಯು ಬಾಲಕನಿವನು (ಇಂದಾಪ. ೧೬೩-೫೫).
[ ಸಂ. (ಜನನೀ + ರಾಗ ; ಜನ + ನೀರಾಗ) ]

**ಜನನುತ** (ಗು). ೧. ಜನರಿಂದ ಸ್ತುತ್ಯವಾದ ; ಪ್ರಸಿದ್ಧವಾದ : ಇದು ಜನನುತ ಶೋಭೆ ಗಡ(ಅಜಿಪು. ೫-೭೦) ; ಜನನುತ ಶಾಂತಿಭೂಪನ ಜಗಜ್ಜನ ವಂದ್ಯನ (ರಾಜಶೇ. ೧-೬೭). (ನಾ). ೨. ಜನರಿಂದ ಸ್ತುತ್ಯನಾದವನು : ನಿನ್ನ ಜನ್ಮದಿಂ ಜನನುತರಾದೆವಾವಮಳವೌಕ್ತಿಕರತ್ನಕೆ ಜನ್ಮಭೂಮಿಯಾ ದನುಪಮ ಶುಕ್ತಿಸಂಪುಟದವೋಲ್(ಪುಷ್ಪಪು. ೧೨-೯೨). [ ಜನ + ನುತ ]

**ಜನನೇಂದ್ರಿಯ** (ನಾ). ಸಂತಾನೋತ್ಪತ್ತಿಗೆ ಕಾರಣವಾಗುವ ಇಂದ್ರಿಯ: ಕೀಟಕಗಳ ಹೊಟ್ಟೆಯ ಹಿಂಭಾಗದ ತುಂಡುಗಳಲ್ಲಿ ಚುಚ್ಚುವ ಮುಳ್ಳಾಗಲಿ ಇಲ್ಲವೆ ಜನನೇಂದ್ರಿಯಗಳ ಕಾರ್ಯಗಳಲ್ಲಿ ನೆರವಾಗುವ ಅಂಗಗಳಾಗಲಿ ಇರುತ್ತವೆ (ಕೀಟಟು. ೫). [ ಜನನ + ಇಂದ್ರಿಯ ]

**ಜನನೋತ್ಸವ** (ನಾ). ಮಗು ಹುಟ್ಟಿದಾಗ ಮಾಡುವ ಉತ್ಸವ ; ಜನ್ಮೋತ್ಸವ : ಕಂದಂಗೆ ರಾಜ್ಯಚಿಹ್ನಮನೊಂದೆರಡುಮನುಟಿಸಿ ಮುಂದಿ ಗೆರೆದರ್ಥಮನಾ ಮಂದಾರಂ ಕಯ್ಯುಂದಮೊಲೆಂದಿತ್ತೆಸಗುವನೋ ನೃಪತಿ ಜನನೋತ್ಸವಮಂ (ಪುಷ್ಪಪು. ೩-೯೦). [ ಜನನ + ಉತ್ಸವ ]

**ಜನಪ** (ನಾ). ದೊರೆ ; ಅರಸ ; ರಾಜ : ಜನಪನ ಕಾದು ರಕ್ಷಿಸುವ ನೀತಿ . . . ಎಂ ಬಿರಿದೊ (ಅನಂಪು. ೧-೮೬) ; ಇನಿತು ವೃತ್ತಾಂತವನಱಿದು ತಜ್ಜನಪನದಱಿಂ ಮುನ್ನ ತನ್ನಾನನದ ಹಾಸ್ಯರಸಂ ಬಱಿತು (ಬಸಪು. ೨೦.೪೬) : ಜನಪ ಮೆಚ್ಚಿದರೀವ ಧನವಾಹನ ವಿಭೂಷಣ ವಸನ ಭೂಮಿಯ ತನುಮನಗಳೆತ್ತಾದರಿಪರುಂಟೇನೊ ಲೋಕದೊಳು(ಹರಿಶ. ೨-೧೭). [ಸಂ.]

**ಜನಪತನ** (ನಾ). ದೊರೆತನ ; ರಾಜಪದವಿ : ವನನಿವಾಸ ಧರಾಧಿಪತ್ಯದ ಜನಪತನದುಡುಗೊಱೆಯಿದೀಗೆಂದೆನುತ . . . ಹರಸಿದಳು (ತೊರರಾ. ೨-೩-೪೫). [ ಜನಪ + –ತನ ]

**ಜನಪತಿ** (ನಾ).=ಜನಪ : ಬುಧಭೌಮರ್ ದ್ವಿತೀಯದೊಳಿರೆ ಜನಪಸೂನು ಜನಪತಿಯಕ್ಕುಂ (ಜಾತತಿ. ೧೨-೨೫) : ತನಯರ್ ಪಲರುಳ್ಳೊಡಮಾ ಜನ ಪತಿ ರಂಜಿಸುವನಾ ಕುಮಾರಕನಿಂ(ಚಂದ್ರಪು. ೨-೨೬) ; ರೂಢಿ ಮಿಗೆ ಬರೆದಾ ಜನಪತಿಗೆ ನೀಡಲೆರಡುಮನೀಸಿಕೊಂಡು (ಬಸಪು. ೫೦-೩೬).
[ ಜನ + ಪತಿ₂ ]

**ಜನಪಥ** (ನಾ). ಜನರು ಓಡಾಡುವ ದಾರಿ,–ಮಾರ್ಗ : ಸಂಸಾರವೆಂಬ ಹೇರಡವಿಯ ಅಂಧಕಾರವೆಂಬ ಜನಪಥದ . . . ಅಹಂ ಮಮತೆಯ ಹೊತ್ತು ನಡೆವ ನರಗುಱಿಗಳಾದ ಜೀವರಿಗೆ ಭವಬಂಧನ ಹಱಿದು ಗುರು ಪಥವಪ್ಪುದು (ಸರ್ವವ. ೧೭೦-೪೦೭). [ ಜನ + ಪಥ ]

**ಜನಪದ** (ನಾ). ೧. ಜನ ; ಜನತೆ ; ಜನಾಂಗ : ಕೇವಲ ಶಾಸನದೃಷ್ಟಿ ಯಿಂದ ಯಾವುದು ರಾಜ್ಯವೋ ಅದೇ ಸಂಸ್ಕೃತಿಯ ದೃಷ್ಟಿಯಿಂದ ಜನ ಪದ ಅಥವಾ ಜನಾಂಗ (ರಾಜ್ಯಶಾ. ೧೦೯). ೨. ದೇಶ ; ರಾಜ್ಯ ; ರಾಷ್ಟ್ರ: "ನಿವೃತ್, ಜನಪದಃ, ದೇಶಃ, ಉಪವರ್ತನಂ–ಈ ೪ ನಾಡು "(ಚರಾಯು. ೪೬-೧೨೪) ; ಕಾವೇರಿಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡ ದೊಳ್ ಭಾವಿಸಿದ ಜನಪದಂ ವಸುಧಾವಳಯ ವಿಲೀನ ವಿಶದ ವಿಷಯ ವಿಶೇಷಂ (ಕವಿರಾ.೧-೩೬) : ಜನಪದಂಗಳನ್ನೆದೆ ಮಾಡಿ ಪುರಂಗಳಂ ಸಮ ಕಟ್ಟಿ (ಆದಿಪು. ೮-೬೫) ; ಧೃತರಾಷ್ಟ್ರ ವಿದುರರ್ಕಳ್ಗೆ ಬೇಱೆವೇಱೆ ವಿಸ್ತರದ ಜನಪದಂಗಳಂ ನಿರೂಪಿಸಿ (ನೇಮಿಪು. ೧೨-೨೯೦) : ತಜ್ಜನಪದದ ಧನವ ಕುಂದಿಸದೆ ನೃಪಮಂತ್ರಿಗಳು ಸಾನಂದದಲಿ ರಕ್ಷಿಸಲು ಬಳಿಕವರಿಂದ ಸಕಲೈಶ್ವರ್ಯವದವಹುದು (ಕುವ್ಯಾಉ. ೩-೨೪). ೩. ಗ್ರಾಮಂಪ್ರದೇಶ. 'ಜನಪದಸಾಹಿತ್ಯ' ಪರಾ. [ ಜನ + ಪದ₂ ]

**ಜನಪದಕಜ್ಜ** (ನಾ). ರಾಜ್ಯದ ಕಾರ್ಯ: ಜನಪದಕಜ್ಜಮಂ ಕಿಡಿಸಿ ಕೊಳ್ವಿದ ನೆಂದೊಡೆ ಕೊಳ್ವನನ್ಯಕಾಮಿನಿ ತನಗೊಲ್ದಳೆಂದೊಡದನಾರಿಸಿಯಾಳ್ದನಿನಪ್ಪ ಪಾಯಮುಂಟೆನೆ ಬೆದಱಿಂ . . . ಇಂತುಟುಪಧಾಪರಿಶುದ್ಧನಮಾತ್ಯ ನಕ್ಕುಮೆ (ಸೂಕ್ತಿಸು. ೧೬-೫೦). [ ಜನಪದ + ಕಜ್ಜ ]

**ಜನಪದಸಾಹಿತ್ಯ** (ನಾ). ಹಳ್ಳಿಗರು ತಾವಾಡುವ ಭಾಷೆಯಲ್ಲಿ ರಚಿಸಿ, ಉಳಿದಂ ಬಂದಿರುವ ಸಾಹಿತ್ಯ: ಸಾಹಿತ್ಯಚರಿತ್ರೆಯಲ್ಲಿ ಜನಪದಸಾಹಿತ್ಯಕ್ಕೆ ಮೇಲಾದ ಸ್ಥಾನವಿದೆ (ಕಸಾಚ. ೧): ಜನಪದಸಾಹಿತ್ಯದ ಬಹುಭಾಗ ತ್ರಿಪದಿಯಲ್ಲಿಯೋ ಸಾಂಗತ್ಯದಲ್ಲಿಯೋ ಇರುತ್ತದೆ (ಇಂದಾಪ. III, ಅರಿಕೆ): ಈಶ್ವರ ಮದನರ ಯುದ್ಧದ ಕಥೆಯ ಮೂಲವು ಎಲ್ಲಿಯೋ ಜನಪದಸಾಹಿತ್ಯ ದಲ್ಲಿ ಅಡಗಿರಬೇಕು (ಸಾಹಿಸ. ೦೩೩). [ ಜನಪದ + ಸಾಹಿತ್ಯ ]

**ಜನಪದಾಧಿಕಾರ** (ನಾ). ರಾಜ್ಯದ ಅಧಿಕಾರ ; ಅರಸೊತ್ತಿಗೆ : ಜನ ಪದಾಧಿಕಾರಂ ದೊರೆಕೊಳ್ಗುಂ ಧನಮುಮಕ್ಕು (ಜಾತತಿ. ೯-೨೯).
[ ಜನಪದ + ಅಧಿಕಾರ ]

**ಜನಪಲ್ಲಯಪೇಱು** (ನಾ). ಒಂದು ಬಗೆಯ ಸುಂಕ(?): ಪನ್ನಾಯದಲುಂ ಪೆರ್ಜುಂಕದಲುಂ ಕೂಡಿ ಸಮುದಾಯದಲುಂ ತಿಂಗಳಿಗೆ ಜನಪಲ್ಲಯಪೇಱಿನ ಸುಂಕಮನಾಚಂದ್ರಾರ್ಕತಾರಂಬರಂ ಬಿಟ್ಟರು(ಕೊಲ್ಲಾಶಾ. ೪-೧೩; 1083).
[ ? ]

**ಜನಪಸೂನು** (ನಾ). ಅರಸನ ಮಗ ; ರಾಜಪುತ್ರ : ಜನಪಸೂನು ಜನ ಪತಿಯಕ್ಕುಂ (ಜಾತತಿ. ೧೨-೨೫). [ ಜನಪ + ಸೂನು ]

**ಜನಪಾಧ್ವರ** (ನಾ). ರಾಜಸೂಯಯಾಗ : ಇವರ ಜನಪಾಧ್ವರವನಡ ಹಾಯ್ದುವನನಾಗಳೆ ದೇವಕೀಸುತ ಸವಱಿದನು (ಕುವ್ಯಾಸ. ೦೩-೭೭).
[ ಜನಪ + ಅಧ್ವರ ]

**ಜನಪಾಲ** (ನಾ). ಜನರನ್ನು ಸಂರಕ್ಷಿಸುವವನಂ ; ದೊರೆ ; ರಾಜ : ಜನ ಪಾಲಂ ಮಿಗೆ ಭೀತಿವಟ್ಟು ನಡೆತಂದು (ವ್ಯಪವಿ. ೧೨-೬೬).
[ ಸಂ. (ಜನ+ ಪಾಲ) ]

**ಜನಪಾಲಾಗ್ರಣಿ** (ನಾ). ಅರಸರಲ್ಲಿ ಶ್ರೇಷ್ಠನಾದವನು : ಜನಪಾಲಾಗ್ರಣಿ ಪಂಚಾಕ್ಷರಮನಮುಮ ಜಪಿಸಿದನಾಗಳ್ (ರಾಜಶೇ. ೦೩-೩೭). [ ಜನಪಾಲ + ಅಗ್ರಣಿ ]

**ಜನಪ್ರಿಯ** (ಗು). ೧. ಜನರಿಗೆ ಪ್ರಿಯವಾದ ; ಎಲ್ಲರಿಗೂ ಬೇಕಾದ. (ನಾ). ೨. ಜನರಿಗೆ ಪ್ರಿಯವಾದಂದು : ವೇಮನನ ಪದ್ಯಶತಕ ಜನಪ್ರಿಯವಾಗಿದೆ (ಭಾರಿದ. ೯೦೩) ; ಜೋಳ: ದಕ್ಷಿಣ ಹಿಂದೂಸ್ಥಾನದಲ್ಲಿ ಅಷ್ಟೊಂದು ಜನಪ್ರಿಯವಾಗಿಲ್ಲ (ಆರುಸ್. ೭೫). [ ಜನ + ಪ್ರಿಯ ]

**ಜನಪ್ರಿಯತೆ** (ನಾ). ಜನರ ಮೆಚ್ಚಿಕೆಗೆ ಪಾತ್ರವಾಗಿರುವಿಕೆ : ಆತನ ಪ್ರತಿಭೆ ಮತ್ತು ಜನಪ್ರಿಯತೆಗಳಿಗೆ ಬೇರೆ ಸಮರ್ಥನೆಯೇ ಅಗತ್ಯವಿಲ್ಲ (ಸಂಗೀತ. ೭) : ವಿದ್ಯಾರ್ಥಿಗಳಂತೆ ಕುಣಿದು ಗಳಿಸುವ ಜನಪ್ರಿಯತೆ ನನಗೆ ಬೇಡ (ರಂಗರೋ. ೫೮). [ ಸಂ. ಜನಪ್ರಿಯತಾ ]

**ಜನಬಲ** (ನಾ). ೧. ಜನರ ಶಕ್ತಿ : "ಕೆಲಸಕ್ಕೆ ಒದಗಬಹುದಾದ, ಆಳುಬಲ, ಜನಶಕ್ತಿ, ಜನಬಲ" (Man-power. ಪಶ್ರಿನಿ. ೫೨). ೨. ಜನರ ಬೆಂಬಲ,-ಸಹಾಯ : ಒಂದು ಮಹತ್ಕಾರ್ಯ ನೆರವೇರಬೇಕಾದರೆ ಜನಬಲ ಧನ ಬಲ ಎರಡೂ ಬೇಕು (ರೂ೦). [ ಜನ + ಬಲ ]

**ಜನಬಳಕೆ** (ನಾ). ಜನರು ಬಳಸುವುದು,-ಉಪಯೋಗಿಸುವುದು : ಜನಬಳಕೆಯಲ್ಲಿಯ ಅಂಕಿಗಳನ್ನು ಉಪಯೋಗಿಸಿ . . . ವರ್ಗೀಕರಿಸಲು ಕ್ಲಿಷ್ಟವೆನಿಸಲಾರದು (ಗ್ರಂಥಾಲ. ೧೮). [ ಜನ + ಬಳಕೆ ]

**ಜನಬಾಹುಳ್ಯ** (ನಾ). ಜನರು ಹೆಚ್ಚಾಗಿರುವುದು ; ಜನಸಂದಣಿ : ಐಶ್ವರ್ಯದಲ್ಲಿಯೂ, ಜನಬಾಹುಳ್ಯದಲ್ಲಿಯೂ ವಿಸ್ತೀರ್ಣದಲ್ಲಿಯೂ ಇಂಡ್ಯದ ಯಾವ ಭಾಗವೂ ಬಂಗಾಳದ ಕೆಳಗಿನ ರಾಜ್ಯಗಳಿಗೆ ಸಮಾನವಾಗಿಲ್ಲ (ಭೂಗೋಳ. ೪೦). [ ಜನ + ಬಾಹುಳ್ಯ ( = ಬಾಹುಲ್ಯ ) ]

**ಜನಭರಿತ** (ನಾ). ಹೆಚ್ಚಾದ ಜನಸಂಖ್ಯೆಯಿಂದ ಕೂಡಿದುದು ; ಜನ ನಿಬಿಡವಾದುದು: ಬೇಹಾರ್‌ದೇಶವು ಇಂಡಿಯಾದಲ್ಲಿ ಅತ್ಯಂತ ಜನಭರಿತ ವಾದುದು (ಭೂಗೋಳ. ೪೯). [ ಜನ + ಭರಿತ ]

**ಜನಮನ** (ನಾ). ಜನತೆಯ ಮನಸ್ಸು : ಹುಟ್ಟುಮೂಕನೆಂದು ದಟ್ಟೀಕು ಜನಮನ (ಸಿದ್ಧಪು. ೪-೫೭) ; ಹರಿಹರನ ಕಾಲಕ್ಕಾಗಲೆ ಈ ಧ್ವನಿಯ ವಿಚಾರದಲ್ಲಿ ಜನಮನದಲ್ಲೂ ಕವಿಕಾವ್ಯಗಳಲ್ಲೂ ಗೊಂದಲ ಗಾಬರಿಗಳು ಪ್ರಾರಂಭವಾಗಿದ್ದುವು (ದ್ರಾವಿವಿ. ೩೨೭). [ ಜನ + ಮನ ]

**ಜನಮನ್ನಣೆ** (ನಾ). ಜನರ ಆದರಣೆ : ಮೇಳವು ಗಳಿಸಿತು ಜನಮನ್ನಣೆ ಯನು (ಶಂಬಾಪ. ೧೧-೪೪). [ ಜನ + ಮನ್ನಣೆ ]

**ಜನಯಿತ್ರಿ** (ನಾ). ಜನನಿ; ತಾಯಿ: "ಜನನೀ, ಜನಯಿತ್ರೀ ಈ ೨ ತಾಯಿ" (ಕಾಶಕ್ಕೆ. ೦೯೯). [ ಸಂ. ಜನಯಿತ್ರೀ ]

**ಜನಯಿಸು**(ಕ್ರಿ).=ಜನಿಸು ೨: ಸಂಸರ್ಗಂ ಜನಯಿಸುಗುಂ ಗುಣದೋಷೋದ್ಭವ ತತ್ತ್ವಮನೆಲ್ಲಿಯುಂ ಮಹೀಮಂಡಳದೊಳ್ (ಶಾಂತಿಪು. ೩-೭೯). [ ಜನನ + – ಇಸು₁ ]

**ಜನರಂಜನ** (ನಾ). ಜನರನ್ನು ಸಂತೋಷಪಡಿಸುವುದು,-ಮೆಚ್ಚಿಸು ವುದು : (೬). [ ಜನ + ರಂಜನ ]

**ಜನರಂಜನಿ** (ಗು). ೧. ಜನರನ್ನು ರಂಜಿಸುವ. (ನಾ). ೨. [ಸಂಗೀತ] ಒಂದು ರಾಗದ ಹೆಸರು : ಜನರಂಜನೀರಾಗದಲ್ಲಿ ಅವರು ರಚಿಸಿರುವ ಸಂಸ್ಕೃತಕೀರ್ತನೆ "ಪಾಹಿಮಾಂ ಶ್ರೀ ರಾಜರಾಜೇಶ್ವರಿ"ಯಲ್ಲಿ ಸೊಗಸಾದ ಚಿಟ್ಟೆಸ್ವರಗಳಿವೆ (ಸಂಗೀತ. ೦೪). [ ಸಂ. ಜನರಂಜನೀ ]

**ಜನರಂಜನಿ** (ನಾ). = ಜನರಂಜನಿ ೨ : ಜನರಂಜನಿ–೨೯ನೇ ಮೇಳಕರ್ತ ಧೀರಶಂಕರಾಭರಣದಲ್ಲಿ ಜನ್ಯ (ಸಂಗೀರಂ. ೧೫೦). [ ಸಂ. ಜನರಂಜನೀ ]

**ಜನರಮಣ** (ನಾ). ಅರಸ ; ರಾಜ : ಜನರಮಣ ಯಾ ವಿಪ್ರರಜಿಯರ ಯೆಂದೆನಲು ಕೇಳ್ದು (ಬಸಪು. ೫೭-೭೩). [ ಜನ + ರಮಣ ]

**ಜನರಲ್** 'ಜನರಲ್ಲು' ನೋ.

**ಜನರಲ್ಲು, ಜನರಲ್, ಜನರಾಲ್** (ನಾ). ಸೇನಾಧಿಪತಿ; ದಂಡನಾಯಕ. ನಾವೀ ವಿಭುವಿನಿದಿರೊಳ್ ಸಾಹಸವ ತೋರ್ಪೆ ಮೆರೆವವರು. ಜನರಲ್ಲು ಕರ್ನಲ್ಲು ಮೊದಲಾದ ಸರಕಾರರೈತಂದರು (ಅರ್ಗವಿ. ೨೪-೫೪). ಜನರಲ್: ಆಹ್ಲಾದದಿಂದ ಜನರಲ್ಸರುಟ ನೋಡಲ್ಕೆ ಪೊರಮಟ್ಟನು (ಅರ್ಗವಿ. ೨೪-೪೭). ಜನರಾಲ್: ಜನರಾಲ್ ಮೆತ್ಯುಸರವರು ಬಂದು (ರಾಜೇಂದ್ರ. ೧೭). [ ←ಇಂ. General ]

**ಜನರಾಗ** (ನಾ). ಪ್ರಜೆಗಳ ಪ್ರೀತಿ: ನೀತಿವಿಡಿದರಸಂಗೆ ಬಹಳ ಪ್ರಾತವದು ಜನರಾಗ ರಾಜವೃತದಿ ಧನ ಧನದಿ ಪರಿಕರ ಪರಿಕರದಿ ಜಯವು (ಕುಪ್ಪಾಸ. ೦-೪೮). [ ಜನ + ರಾಗ ]

**ಜನರಾಲ್** 'ಜನರಲ್ಲು' ನೋ.

**ಜನರೌದ್ರ** (ನಾ). ಜನರಿಗೆ ಭಯಂಕರನಾದವನು : ಶ್ರೀವೀರಭದ್ರನಂ ಕರುಣಾಂಬುರಸಮಯಸಮುದ್ರನಂ ಜನರೌದ್ರನಂ (ವೀಶ್ಶಪು. ೩-೫-೩೨). [ ಜನ + ರೌದ್ರ ]

**ಜನರ್ಲೋಕ** (ನಾ). ಏಳು ಊರ್ಧ್ವಲೋಕಗಳಲ್ಲಿ ಐದನೆಯ ಲೋಕ : ವಕ್ಷದಲ್ಲಿ ಮಹರ್ಲೋಕ ಕಂಠದಲ್ಲಿ ಜನರ್ಲೋಕ (ಅಬಂದೀ. ೧೪೨-೦೨೪). [ ಸಂ. (ಜನರ್ + ಲೋಕ) ]

**ಜನಲೋಕ** (ನಾ). = ಜನರ್ಲೋಕ : (೬). [ ಜನ + ಲೋಕ ]

**ಜನವಡೆ** (ನಾ). ಜನಸಮುದಾಯ : ಈ ಜನವಡೆಯೊಳಾರಾನುವಿಪಾ ಬಿಲ್ಲನೇಜೆಸಲಾರ್ಪೊಡೆ ಬನ್ನಿಮೆಂದು ಸಾಱುವುದುಂ (ಶಂಪಥಾ. ೩-೭೦ ಪ). [ ಜನ + ಪಡೆ₄ ]

**ಜನವರ** (ನಾ). ರಾಜ ; ಅರಸ : ಜನವರನೆ ಕೇಳನ್ಯದೈವದ ಮನೆಗದೇತಕೆ ಬಾರರವರೆಂದೆನಲಹುದೆ (ಬಸಪು. ೫೩-೭೫). [ ಜನ + ವರ₃ ]

**ಜನವಶ್ಯ** (ಗು). ೧. ಜನರನ್ನು ವಶಪಡಿಸಿಕೊಳ್ಳುವ. 'ಜನವಶ್ಯ ಚೂರ್ಣ' ಪರಾ. (ನಾ). ೨. ಕನ್ನಡದಲ್ಲಿ ಕಲ್ಲರಸನಂ ಬರೆದ ಒಂದು ಕಾಮಶಾಸ್ತ್ರಗ್ರಂಥ : ಚತುರಿಂ ನವೀನವದ್ಧತಿಯಿಂ . . . ವಿರಾಜಿಸುಗೆ ರತಿಯುಪೊಲ್ ಜನವಶ್ಯಮಾತಾರಕಂ (ಜನವ. ೦೩-೮೦). [ ಜನ + ವಶ್ಯ ]

**ಜನವಶ್ಯಚೂರ್ಣ** (ನಾ). ಜನರನ್ನು ವಶಪಡಿಸಿಕೊಳ್ಳುವ ಒಂದು ಬಗೆಯ ಚೂರ್ಣ,-ಪುಡಿ : ಕಂತುನಿರ್ಮಿತ ಜನವಶ್ಯಚೂರ್ಣಮೆನೆ ಪಾಂಸುಗಳಂ ಕೆದಱುತ್ತ ವೀಕ್ಷಣಾಮೃತಮಯ ಕಂದಳಂ ಪೊಸತರಲ್ವುದು ಕೇದಗೆ ಮೇಘಕಾಲದೊಳ್ (ಮಲ್ಲಿಪು. ೮-೮೦). [ಜನವಶ್ಯ + ಚೂರ್ಣ₃]

**ಜನವಾಣಿ** (ನಾ). ಜನರು ಆಡುವ ಮಾತು ; ಆಡುನುಡಿ : ಪಂಪನಿಗೆ ಜನಜೀವನದ ಮತ್ತು ಜನವಾಣಿಯ ಪರಿಚಯವು ಎಷ್ಟು ಯಥಾರ್ಥವೂ ಗಾಢವೂ ಆಗಿತ್ತು (ಕಪವಿ. ೬೭). [ ಜನ + ವಾಣಿ₁ ]

**ಜನವಾದ** (ನಾ). ೧. ಜನರಾಡುವ ಮಾತು : ಲೋಕದಲ್ಲಿ ಕೆಲವರು ಸ್ನೇಹಾತಿಶಯದಿಂದಲೂ ಕೆಲವರು ದಾನಾಪೇಕ್ಷೆಯಿಂದಲೂ ಕೆಲವರು ವಿಚಾರಿಸದೆಯೂ ಕಾರ್ಯಸ್ವರೂಪವನ್ನು ಹೇಳುವರು. ಜನವಾದವು ಹೀಗೆ ಬಹುಪ್ರಕಾರವಾಗಿ ಪ್ರವರ್ತಿಸುವುದು (ಕೃಪಾಸ. ೨೩). ೨. ಜನರಲ್ಲಿ ಪ್ರಚಾರವಾದ ಮಾತು ; ವದಂತಿ ; ಗಾಳಿಸುದ್ದಿ ; ಸಮಾಚಾರ : "ಜನವಾದಂ ಕಿಂವದಂತಿ ವಾರ್ತೆಯದಕ್ಕುಂ" (ಪಚು. ಶೋ. ೮೦-೩೨) ; ಜನಮಱಿಯದನ್ನೆಗಂ ಮುನ್ನಂ ನಯಮಱಿದಱಿಪಲಾರ್ಪೊಡದು ಮಂತ್ರಿ ಗುಣಂ ಜನವಾದಂ[ಪಾಠಾಂ. ದಾ]ನೆಗಟೆ ನಗಧ್ವನಿಪೋಲನುಕರಣವಾರ್ತೆ ಮಂತ್ರಿಯು ಗುಣಮೇ (ಕವಿರಾ. ೩-೧೪೩); ವಿಕೃತಕ್ಕೆ ಸಂದ ನಾಗ್ನ್ಯಮುಮ ವಹಿಂಸೆಯೆಂಬ ಜನವಾದಮುಮಲ್ಲದೆ ಪೇಟಿ ಜೀವತತ್ತ್ವಮುಮನಜೀವ ತತ್ತ್ವಮುಮನೆತ್ತಱಿಪರ್ ಜನತತ್ತ್ವತಾಶ್ವಿಕರ್ (ಶಾಂತಿಪು. ೮-೦೩೨). ೩. ಜನಾಪವಾದ ; ಲೋಕನಿಂದೆ. [ ಜನ + ವಾದ₃ ]

**ಜನವಾರ್ತೆ** (ನಾ). ಜನರ ಆಡಿಕೆ ಮಾತು ; ಜನವದಂತಿ. [ ಜನ + ವಾರ್ತೆ ]

**ಜನಶಕ್ತಿ** (ನಾ). = ಜನಬಲ ೧ : (ಕೆಲಸಕ್ಕೆ ಒದಗಬಹುದಾದ) ಆಳುಬಲ, ಜನಶಕ್ತಿ, ಜನಬಲ (Man-power. ಪತ್ರಿನಿ. ೫೨). [ ಜನ + ಶಕ್ತಿ ]

**ಜನಶ್ರುತಿ** (ನಾ). = ಜನವಾರ್ತೆ : "ಕಿಂವದಂತೀ, ಜನಶ್ರುತಿಃ, ಕೌಲೀನಂ, ಲೋಕವಾದಃ–ಈ ೪ ಜನವಾರ್ತೆ" (ಅಲಾಯು. ೨೪-೧೪೬) : ರಾವಣನು ಆರ್ಯದೇವತೆಗಳನ್ನು ಸೋಲಿಸಿದ್ದನೆಂದು ಜನಶ್ರುತಿ (ನಿಬಂಧ. I, ೧೦೪); ಆ ದೇವರ ಹೆಸರಿನಿಂದ ಆ ಊರಿಗೆ ಆ ಹೆಸರು ಉಂಟಾಯಿತೆಂದು ಜನಶ್ರುತಿಯಾಗಿದೆ (ಲಕ್ಷ್ಮೀಪ್ರ. ೧). [ ಜನ + ಶ್ರುತಿ ]

**ಜನಸಂಕೀರ್ಣ** (ಗು). ೧. ಜನರಿಂದ ತುಂಬಿದ. (ನಾ). ೨. ಜನರ ಗುಂಪು: ಪ್ರಾಸಾದದ ಮೇಗಿರ್ದು ಜನಸಂಕೀರ್ಣದ ನಡುವೆ ನಾಲ್ಕು ಪೊಟ್ಟಳೆಗೆಯ ನೀಡಾಡಿದೊಡೆ (ವಡ್ಡಾರಾ. ೦೫-೬). [ ಜನ + ಸಂಕೀರ್ಣ ]

**ಜನಸಂಗ** (ನಾ). ಒಂದು ಬಗೆಯ ಮರ ; ಮೇಷಶೃಂಗಿ : ಜನಸಂಗ (ಖರಸಿಂಗ)–ದೊಡ್ಡಮರ ಕಟ್ಟಿಗೆ ನುಣುಪು ಶೋಭೆಯುಳ್ಳದ್ದು. ಇವಾರತಿಗೂ ಶೋಭೆಯ ಸಾಮಾನುಗಳಿಗೂ ಬರುತ್ತದೆ (ಕಬಾಗಿ. ೩೯). [ ? ]

**ಜನಸಂಧಿ** (ನಾ). ಜನರ ಸಮೂಹ: ಬಂದ ಎದೆ ಬಾವ್ನಂದದಲಿ ಇಳಿತಂದು ಜೋಲುವ ಕರಡಿಗೆಯ ಜನಸಂಧಿಯೊಳಗೆಲ್ಲೂರಕೊಬ್ಬಿಹನವನ ಲೋಚನಕೆ (ರಿಜ್ಞಪು. ೬೮-೨೦). [ ಜನ + ಸಂಧಿ ]

**ಜನಸಂಮರ್ದ** (ನಾ). ಜನರ ಗುಂಪು,–ಸಮೂಹ : ಜನಸಂಮರ್ದೋತ್ಥ ಕೋಲಾಹಳ ಕುಪಿತ ಹಯುಸ್ಕಂಧಮೂಲಸ್ಥಳಾಸ್ಫಾಳನಲೀಲಂ ತಾಂ ಕುಮಾರಂ (ಚಂದ್ರಪು. ೬-೯೬) : ಜನಸಂಮರ್ದವನು ತಡೆಯಲು ಶಾಂತಗೊಳಿಸಲು . . . ನಾಲ್ಕು ಮಾತು ಹೇಳುತ್ತಾರೆ (ಧರ್ಮಸಾ. ೫೦). [ ಜನ + ಸಂಮರ್ದ ]

**ಜನಸಂಮೋಹನ** (ಗು). ಜನರನ್ನು ಮೋಹಗೊಳಿಸುವ,–ಮರುಳುಗೊಳಿಸುವ : ಜನಸಂಮೋಹನವಿದ್ಯೆ ತನ್ನ ಮಧುವಿಂ ಪುಟ್ಟಿತ್ತು (ಮಲ್ಲಿಪು. ೩-೫೧). [ ಜನ + ಸಂಮೋಹನ ]

**ಜನಸಾಂದ್ರತೆ** (ನಾ). ಜನರ ದಟ್ಟಣೆ: ಚೀನ ಮತ್ತು ಅಮೆರಿಕದ ಸಂಯುಕ್ತಸಂಸ್ಥಾನಗಳಲ್ಲಿ ಜನಸಾಂದ್ರತೆ ಬಹಳ ಹೆಚ್ಚು (ಭೂವಿವ. ೦೬೨). [ ಜನ + ಸಾಂದ್ರತೆ ]

**ಜನಸೂಡಿಗ** (ನಾ). ಲೋಕವನ್ನು ಸುಡುವವನು ; ಪ್ರಳಯಂಕಾರಿ ; ರುದ್ರ : ತನಗಿಂದ ಬಲ್ಲಿದರೊಳು ಕಾದಿ ಕೈಸೋತು ಕನಲುವ ದುಕ್ಕ ಮಂಕಿರಲಿ ಜನಸೂಡಿಗನ [ಪಾಠಾಂ. ಗೆಯ] ಸೈರಿಸಬಲ್ಲರಾರೆಂದು ಮನಸಿಜ ನುಡಿದ ಜೀವನೊಳು (ಮೋಹತ. ೫-೪೬). [ ಜನ + ಸೂಡು೨ + – ಇಗ ]

**ಜನಸ್ಥಾನ** (ನಾ). ಪ್ರಾಚೀನ ದಂಡಕಾರಣ್ಯದಲ್ಲಿ ಒಂದು ಭಾಗದ ಹೆಸರು ; ೧ಜನರು ವಾಸಮಾಡುವ ದಂಡಕಾರಣ್ಯಪ್ರದೇಶ: ಬಳಿಕ ಪಾಹಾರವದ ರವಳಿಯಲಾ ಜನಸ್ಥಾನವನು ಹೊಕ್ಕಳು ಸಾರಿದಳು ಸಭೆಯನು ಖರಾಸುರನ (ತೊರವ. ೩-೩-೨) : ಬಲ್ಮೆಯಿಂ ನಾಂ ಕಳುಹಿದೊಡೆ ಜನಸ್ಥಾನದಿಂ ಪೋದೆ ರಾಘವನ ಬಳಿಗೆ (ಕೃಮಿಥಾ. ೦೯-೨೦) : ನರ್ಮದಾ ಗೋದೆಯರ ನಡುವಣ 'ಜನಸ್ಥಾನ'ವು ಮೂಲ 'ದೇಶಿ'ಗೆ ಪೂರ್ಣ ವಿರವಾಗಿತ್ತು (ಕರ್ನಾಟಿ. ೮೬). [ ಜನ + ಸ್ಥಾನ ]

**ಜನಹರಣೆ** (ನಾ). ಜನಾಪವಾದ ; ನಿಂದೆ : ಬಂಜೆಗೆ ಬಂಜೆತನದ ಚಿಂತೆ : ಜನಹರಣೆಯ ಚಿಂತೆ (ಕನ್ನಗಾ. ೧೦೩) : ಗಂಡನು ಸೂಳೆಯ ಸೋಬತಿ (ಸಹವಾಸ) ಮಾಡಿರುವನೆಂದು ಹೆಂಡತಿಯು ಸಂಶಯದಿಂದ ಜನಹರಣೆ ಬರುವುದೆಂದು ಹೇಳಿ (ಕನ್ನಗಾ. ೧೦೨). [ ಜನ + ಹರಣೆ ]

**ಜನಹಿತ** (ನಾ). ಜನರ ಹಿತ; ಲೋಕ ಕಲ್ಯಾಣ: ಜನಹಿತದ ಎಲ್ಲ ಕಾರ್ಯಗಳಿಗೆ ಅವರು ಮುಂದಾಳಾಗಿ ದುಡಿಯುತ್ತಿದ್ದರು (ಕವಪು. ೫-೬೧). [ ಜನ + ಹಿತ ]

**ಜನಾಂಗ** (ನಾ). ೧. ಒಂದು ದೇಶಕ್ಕೆ ಅಥವಾ ಪಂಗಡಕ್ಕೆ ಸೇರಿದ ಜನವರ್ಗ,– ಜನತೆ ; ಬಡಕಟ್ಟು : ಯೆಹೂದ್ಯರು, ಮುಸಲ್ಮಾನರು ಮತ್ತು ಕ್ರೈಸ್ತರು ಇವರ ವಿನಹ ಉಳಿದ ಎಲ್ಲಾ ಜನಾಂಗದವರಲ್ಲೂ ಈ ಸಿದ್ಧಾಂತ ಪ್ರಚಾರದಲ್ಲಿತ್ತು (ಜೀವಾತ್ಮ. ೧೮೪). ೨. ಪೀಳಿಗೆ; ತಲೆಮಾರು: ಹಿಂದಿನಿಂದಲೂ ಬಂದ ಹಲವು ಶಾಸ್ತ್ರಸಾಹಿತ್ಯವನ್ನೂ ಆಚಾರ ವ್ಯವಹಾರಗಳನ್ನೂ ಮಕ್ಕಳಿಗೆ ಕಲಿಸಿ ಆ ಮೂಲಕ ಅವು ಮುಂದಿನ ಜನಾಂಗಕ್ಕೂ ಸಾರೋದ್ಧಾರವಾಗಿ ಬರುವಂತೆ ಮಾಡುವುದೇ ಮೂಲ ಉದ್ದೇಶವಾಗಿತ್ತು (ಶಿಕ್ಷದ. ೩೬) ; ಇಂದಿನ ಮಕ್ಕಳೇ ಮುಂದಿನ ಜನಾಂಗ (ಕ್ರಯೂಕಿ. ೧). [ ಜನ + ಅಂಗ೭ ]

**ಜನಾಂತ** (ನಾ). ೧. ಜನರು ವಾಸಮಾಡದೆ ಇರುವ ಸ್ಥಳ ; ನಿರ್ಜನ ಪ್ರದೇಶ. ೨. ಜನರಿರುವ ಪ್ರದೇಶ,–ಪ್ರಾಂತ್ಯ,–ದೇಶ : ಅರಿಂಜಯ ಜನಾಂತದ ವಿಪುಳ ನಗರಾಧಿಪತಿ ಜಯವರ್ಮನೆಂಬೊಂ ಜನನಾಥಂ(ಚಂದ್ರಪು. ೬-೧೧ ವ): ತಿಂತಿಣಿಗೊಂಡೆಸೆವ್ವವತ್ತಾಜು ಜನಾಂತಂ ನೆಲೆಸಿಹುವು (ಜಯುಕಾ. ೧-೩೫). [ ಸಂ. (ಜನ + ಅಂತ) ]

**ಜನಾಂತಿಕ** (ನಾ). ೧. ಜನರ ಸಮೀಪ. ೨. ಗುಟ್ಟು ; ರಹಸ್ಯ : ಆತನಂ ಜನಾಂತಿಕದೊಳಾ ತಳೋದರಿ . . . ಇನ್ನಿರಲಾಗದೆಂದು ಕಳುಹಿದಳ್ (ಅನಂಪು. ೮-೪೪ ವ). ೩. [ನಾಟ್ಯ] ನಟನಟಿಯರು ಮುಖಕ್ಕೆ ಕೈಯನ್ನು ಅಡ್ಡವಾಗಿಟ್ಟುಕೊಂಡು ಪಕ್ಕದಲ್ಲಿದ್ದವರಿಗೆ ತಿಳಿಯದಂತೆ ಮಾತನಾಡುವುದು; "ಒಬ್ಬರನ್ನು ಮರೆಮಾಡಿಕೊಂಡು ಮತ್ತೊಬ್ಬರೊಡನೆ ಮಾತನಾಡುವುದು" (ಸಂನಾಟ. ೦೫). [ ಜನ + ಅಂತಿಕ ]

**ಜನಾಕೀರ್ಣ** (ನಾ). ಜನರಿಂದ ತುಂಬಿದಂದಂ ; ಜನಸಮೂಹ: ನೋಡೆ ರಹಸ್ಯದೊಳ್ ಬಳಕೆವೆತ್ತೀ ಚಿತ್ರದಭ್ಯಾಸದಿಂ ದಹನಾಕ್ರಾಂತಮೆನಿಪ್ಪ ಮಂದಿರದವೋಲ್ ಕಾಣ್ಬಂ ಜನಾಕೀರ್ಣಮಂ (ಶಾಕುಂತ. ೬೪-೫). [ ಜನ + ಆಕೀರ್ಣ ]

**ಜನಾಚಾರ** (ನಾ). ಜನರಲ್ಲಿ ರೂಢವಾಗಿರುವ ಆಚಾರ,–ಸಂಪ್ರದಾಯ: ಧರ್ಮದ ತಂತು ಬಹುಸೂಕ್ಷ್ಮವಾದದ್ದು . . . ಜನಾಚಾರವನ್ನನುಸರಿಸಿಯೇ ಅದನ್ನು ತಿಳಿಯುವುದಕ್ಕಾಗೋಲ್ಲ (ವಂಶವೃ. ೪೬೬). [ಜನ + ಆಚಾರ]

**ಜನಾಧಿಪ** (ನಾ). ಅರಸ ; ರಾಜ : ಜಿನವಚನರಸಾಯನಮಂ ಜನಾಧಿಪಂ ಶ್ರೋತ್ರಪಾತ್ರದೊಳ್ ತೀವಿ (ಶಾಂತಿಪು. ೯-೭೦). [ ಜನ + ಅಧಿಪ ]

**ಜನಾನ** 'ಜನಾನಾ' ನೋ.

**ಜನಾನಂದನ** (ನಾ). ಜನರಿಗೆ ಆನಂದವನ್ನುಂಟುಮಾಡುವವನು : ಎಮ್ಮಯ್ಯನುವಿಂದಾನುವೊಡವೋಗಿ ಕಂಡು ಜನಾನಂದನರುರ್ವರಾಸ್ಯತಿಲಕರಂ (ಶಾಂತಿಪು. ೬-೩೦) : ತಂದಿರಿಸಿದ ಜೀವರಾಶಿಯುಂ ಬಿಡಿಸಿ ಜನಾನಂದನರಂ ತನ್ನನುಜೆಯ ನಂದನರಂ ಮಾರಿದತ್ತವಿಭು ಲಾಲಿಸಿದಂ (ಯಶೋಧ. ೪-೭೪). [ ಜನ + ಆನಂದನ ]

**ಜನಾನಖಾನೆ, ಜನಾನಾಖಾನೆ, ಝುನಾನಖಾನೆ** (ನಾ). = ಜನಾನಾ : ನೀವು ಶತ್ರುಗಳನ್ನು ಹಣಿದು ಅವರು ಸಾಗಿಸಿಕೊಂಡು ಹೋಗುತ್ತಿರುವ ಜನಾನಖಾನೆಯನ್ನು ಹಿಡಕೊಂಡು ಬರಬೇಕು (ಮಾಧವ. ೩೦೯). **ಜನಾನಾಖಾನೆ :** ಅವರನ್ನು ಕೃಷ್ಣ ತನ್ನ ಜನಾನಾಖಾನೆಗೆ ಸೇರಿಸಿಕೊಳ್ಳುವುದು ಅತ್ಯಂತ ಕ್ರಮಪ್ರಾಪ್ತವಾಗುತ್ತದೆ (ಪ್ರಹಾರ. ೮೯). **ಝುನಾನಖಾನೆ:** ಪರಿಷ್ಕನನ್ನು ಸುಲ್ತಾನನ ಸ್ಥಾನಕ್ಕೇರಿಸಿ ನವಕರರನ್ನೆಲ್ಲ ಅವನ ಝುನಾನಖಾನೆಗೆ ಸೇರಿಸಿಬಿಟ್ಟೆನೆಂದು ನವಕರರ ಪೌರುಷ ನೊಂದುಕೊಳ್ಳದಿರಲಿ (ಗಾಳಿಪ. ೫೯). [ ←ಪಾರ. ಹಿಂ. ಜನಾನಖಾನಾ ]

**ಜನಾನಾ**, ಜನಾನ, ಜನಾನಿ, ಝನಾನಾ (ನಾ). ಅಂತಃಪುರ ; ರಾಣೀವಾಸ : ಮುಸಲ್ಮಾನ ಅಧಿಕಾರಿಗಳಂತೆ ಜನಾನಾ ಸಡಗರವಿರಲಿಲ್ಲ (ಕಥಾ. II, ೨೪೨) : ಲುತ್ಫುಉನ್ನೀಸೆಯನ್ನು ತನ್ನ ಜನಾನಾಕ್ಕೆ ಸೇರಿಸಲು ಹಂಜರಿದಿದ್ದನು (ಕಪಾಕುಂ. ೬೪). **ಜನಾನ**: ಜನಾನಕ್ಕೆ ತೆರಳಿ ನೂರುನ್ನೀಸಾಬೇಗಂ ಸಾಹೇಬನಿಗೆ . . . ತಿಳಿಸು (ಅಶ್ವ. ೨೯). ಬಹಳ ಗಂಡುಗಳು ತಮ್ಮ ಕೊಂಬಿನ ಬಲದಿಂದ ಕೆಲವೊಂದು ಹೆಣ್ಣುಗಳ 'ಜನಾನ'ವನ್ನೇ ಕೂಡಿಸುವುದುಂಟು (ಬಾಲಪ್ರ. III, ೧೬೪೨). **ಜನಾನಿ**: ಜನಾನಿ ಸಂಬಂಧದ ಕೆಲಸಗಳೆನ್ನೆಲ್ಲಾ ಇವರೇ ನೋಡಿಕೊಳ್ಳುತಾ ಇದ್ದರು (ಕುರಾದ. ೪೮) : ಒಳಗೆ ಹೋದರೆ ರಾಣಿವಾಸದವರ ಜನಾನಿ, ಹೊರಗೆ ಬಂದರೆ ಶಿವನ್ನೈಯ್ಯನವರ ಮರದಾನಿ (ಮುಸುಗ. ೪೬). **ಝನಾನಾ**: ರುಸ್ತುಮನು ಝನಾನಾದ ಗೋಡೆಯನ್ನೇರಿ ಬಂದದ್ದೇ ನಿಜವಾಗಿದ್ದರೆ (ಔರಂಗ. ೨೦).

[ ←ಹಿಂ. ಜನಾನಾ; ಪಾರ. ಜನಾನ್ ]

**ಜನಾನಾಖಾನೆ** 'ಜನಾನಖಾನೆ' ನೋ.

**ಜನಾನಿ** 'ಜನಾನಾ' ನೋ.

**ಜನಾನುರಾಗ** (ನಾ). ಜನರ ಪ್ರೀತಿ,–ಮಮತೆ; ಜನಪ್ರಿಯತೆ: ಜನಾನುರಾಗವಿಲ್ಲದ ಪೊಟಲತ್ಕುದಾತ್ರಗುಣವಿಲ್ಲದ ಮಾನವರಿಲ್ಲದೆಲ್ಲಿಯುಂ (ಪುಷ್ಪಕು. ೨-೧೧). [ ಜನ + ಅನುರಾಗ ]

**ಜನಾನುರಾಗಿ** (ನಾ). ಜನರ ಪ್ರೀತಿಯನ್ನು ಹೊಂದಿದವನು; ಜನಪ್ರಿಯನಾದವನು : ರಾಯರು ಬೇಗ ಜನಾನುರಾಗಿಗಳಾಗಿ ದಕ್ಷಶಿಕ್ಷಕರೆನಿಸಿದರು (ಇಂಜಾಪ. ೮-೨೬). [ ಸಂ. ಜನಾನುರಾಗಿನ್ ]

**ಜನಾಪವಾದ** (ನಾ). ಜನರಿಂದ ಬರುವ ಅಪನಿಂದೆ; ಲೋಕಾಪವಾದ: ಜನಾಪವಾದಮುಮಂ ಪೆಜಗಿಕ್ಕಿ ಕುಲೋದ್ಭೂತರುಂ ತತ್ತ್ವವೇದಿಗಳುಂ ಮನೆವಾಟನಾಸವಡಲಾಗದು (ಶಾಂತಿಪು. ೪-೮೨ ವ) : ನಿಜನಾಥಭೀತೆ ಸುಚರಿತ್ರೆ ಗುಣವತಿ ಮಾನಿನಿ ಜನಾಪವಾದವಿರಹಿತೆಯೆನಿಪ ನಾರಿ (ಜೈಮಿಭಾ. ೫-೫೦). [ ಜನ + ಅಪವಾದ ]

**ಜನಾಬ್**, ಜನಾಬು (ನಾ). ೧. ಘನವಂತ; ಸ್ವಾಮಿ; ಮಹಾಶಯ: ದಯಮಾಡಿಸಬೇಕು ಜನಾಬ್ (ಲೂ೦). **ಜನಾಬು**: ೨. ಸನ್ನಿಧಿ; ಸಮಕ್ಷ: ತಮ್ಮ ಜನಾಬಿಗೆ ಕೆಲವು ಸಮಾಚಾರಗಳನ್ನು ತಿಳಿಸಬೇಕೆಂಬುದಾಗಿ ಅರ್ಜಿದಾರನು ಬಹಳ ವಿನಯದಿಂದ ಬೇಡಿಕೊಳ್ಳುವದೇನೆಂದರೆ (ಪಾಮುವಂ. ೨೩೯): ಯಜಮಾನರ ಜನಾಬಿನಲ್ಲಿ ನಾನು ದುರ್ನಿರತನೆಂಬ ಅನ್ಯಾಯವಾಗುವ ಅಪವಾದಕ್ಕೆ ಬೀಳುವ ಸಂಭವ ಒದಗಿರುವದೆಂದು : . . ಬೊಡಾಗಿರುತ್ತೇನೆ (ವಾಗ್ಗೇವಿ. ೦೮೮). [ ←ಅರ. ಪಾರ. ಹಿಂ. ಜನಾಬ್ ]

**ಜನಾಬು** 'ಜನಾಬ್' ನೋ.

**ಜನಾಮಳಪಳಿ** (ನಾ). (?) : × × × ವಿಳದಿತ ಜನಾಮಳಪಳಿ ಕಣ್ಣುಗ ಮುವತ್ತಮೂವಿಸಯುಮನ್ನಿಟ್ಟು ಸರ್ವ್ವ ಪರಿಹಾರಂ ಕೊಟ್ಟಾರ್ (ಎಕ. VI, ಕೊಪ್ಪ. ೪೦-೦೨ : ಸು. 1090). [ ? ]

**ಜನಾರ್ದನ** (ನಾ). ೧. ಜನರನ್ನು ಕೊಲ್ಲುವವನು; ಲಯಕರ್ತ; ರುದ್ರ: "ಜನಾನರ್ದಯತಿ=ಜನರಂ ಕೊಂದಪಂ; ಜನಾರ್ದನಃ = ಕಾಲಾಗ್ನಿರುದ್ರಂ" (ಕಾಶಕ್ಕ. ೨೯೮). ೨. ವಿಷ್ಣು; ಕೃಷ್ಣ: "ಜನಾರ್ದನಂ . . . ಕೇಶವನಚ್ಯುತಂ ಮುರಹರಂ ವೈಕುಂಠನಬ್ಜೋದರಂ" (ವಸ್ತುಕೋ. ೪-೨೦) : ಮುಂದೆ ನಿಂದಿರ್ದ ಜನಾರ್ದನಂಗೆ ಬದ್ಧಾಂಜಲಿಯಾಗಿ (ಜಗವಿ. ೩-೪ ವ): ಜಯ ಜನಾರ್ದನವಂದ್ಯ ಜಯ ಜಲಜಭವಪೂಜ್ಯ (ಹಡಕಾ. ೧೧-೪೦). ೩. [ಜೈನ] ವಾಸುದೇವ (ಲಕ್ಷ್ಮಣ) : ಪುರ್ಬನೇಜಿಸುವ ಮಾಟಕ್ಕೆಯಿನಶ್ರುಮದಿಂ ಪೊಡರ್ಪು ಕೈಮಿಗೆ ರಿಪುಮರ್ದನಂ ಧನುವನೆತ್ತಿದನೇಜಿಸಿದಂ ಜನಾರ್ದನಂ (ಪಂರಾಮಾ. ೫-೦೦೦). ೪. ಜನ್ನಕವಿ: ಕವಿ ಭಾಳಲೋಚನ ಜನಾರ್ದನದೇವ ವಿರಚಿತಮಪ್ಪ (ಅನಂಪು. ೦-೦೨೦ ವ). [ ಸಂ. ]

**ಜನಾವರ** 'ಜಾನುವಾರು' ನೋ.

**ಜನಾಶ್ರಯ** (ನಾ). ಮಂಟಪ; ಚಪ್ಪರ; ಸಭಾಮಂಟಪ: "ಜನಾಶ್ರಯಃ ಮಂಡಪಃ–ಈ ೨ ಸಭಾಮಂಟಪಂ" (ಹಲಾಯು. ೫೦-೦೪೩): "ಮಂಟಪ ಜನಾಶ್ರಯಂ" (ವಸ್ತುಕೋ. ೪೮-೧೯). [ ಜನ + ಆಶ್ರಯ ]

**ಜನಿ₁** (ಕ್ರಿ). ಜನಿಸು; ಒಸರು; ಪ್ರವಹಿಸು; ಸೋರು; ಹನಿ : ಸ್ರ್ಯರೀಣಂ, ಸ್ರುತಂ, ಸ್ನುತಂ–೪ ಸೋರಿಪೋದುದು, ಜನಿದು ಪೋದುದು (ಸಿದ್ಧಾಂತಿ. ೨೯೯) ; ಶ್ಚ್ಯೋತಃ, ಪ್ರಾಘಾರಃ – ೨ ಸೋರಿಪೋಗುವಿಕೆ, ಸೋರುವಿಕೆ, ಜನಿಯುವಿಕೆ (ಸಿದ್ಧಾಂತಿ. ೩೦೮): ಧಾತುಪಾಠದಲ್ಲಿ ಮಾತ್ರವಲ್ಲ ದರ್ಪಣದ ಇತರ ಭಾಗಗಳಲ್ಲಿಯೂ ಇಲ್ಲವೆಂದು ಕಿಟ್ಟೆಲ್‌ರ ನಿಘಂಟಿನಿಂದ ಎಣಿಸಬಹುದಾದ ಕೆಲವು ಸಿದ್ಧಧಾತುಗಳನ್ನು ಕೆಳಗೆ ಕಾಣಿಸಿದ್ದೇನೆ–ಇಣಿಕು . . . ಸೆಂದು, ಜನಿ, ತಲಪು (ಕಸಾಪ. I, ೨೯೦). [ <ಜಿನುಂಗು₁ ]

**ಜನಿ₂** (ನಾ). ೧. ಹುಟ್ಟು; ಉತ್ಪತ್ತಿ; ಜನನ: ಮೂಜಗದ ಜನಿಸ್ಥಿತಿನಾಶಕರ್ಮದ ಹೊಜಿಗೆ ನಿನ್ನಲಿ ತೋರ್ಪ ಗುಣ ಮೂಜಜ ವಿಕಾರದ ಪೊದ್ದದು(ನಿಭಾಗ. ೧೦-೫೦-೨೬):ಜಗದೊಡೆಯನ ಚರಣಾಂಬುಜಯುಗಮಂ ಮರಪೊಕ್ಕರ್ ದಾಂಟಿದಪರ್ ಜನಿಯೆಂಬಗಾಧಸಾಗರಮಂ (ನೀತಿಮಂ. II ೧೦) : ಜನಿ ಮೊದಲಾಗಿರೆ ಮೋಸವನಿನಿಸುಂ ಕಾಣದರ ನುಡಿಯಸತ್ಯಂ ಪರವಂಚನೆ ವಿದ್ಯೆ (ಪಾಕುಂತ. ೭೦-೦೨೫). ೨. ಹೆಂಗಸು; ಸ್ತ್ರೀ. ೩. ಸೊಸೆ: "ಸ್ನುಷಾ, ಜನೀ, ಪುತ್ರವಧೂಃ, ವಧೂಃ – ಈ ೪ ಸೊಸೆ" (ಹಲಾಯು. ೮೩-೩೫). ೪. ಒಂದು ಬಗೆಯ ಸುಗಂಧದ ಸಸ್ಯ ; ಕಳವಿಗೆ : (+).

[ ಸಂ. ಜನಿ, ಜನೀ ]

**ಜನಿಕ** (ನಾ). ಜೀವಾಣುವಿನಲ್ಲಿರುವ ಎರಡು ಅಂಶಗಳಲ್ಲಿ ಒಂದು ; ವಂಶವಾಹಿ: ಗೊತ್ತಾದ ಜಾಗದಷ್ಟು ದೂರದಲ್ಲಿರುವ ಜನಿಕಗಳು(ಜೀನ್ಸ್) ಇರುವ ದಾರದಂಥ ಬಣ್ಣದಂಡಗಳು (ಕ್ರೋಮೊಸೋಮ್ಸ್) ಇದರ ನಬ್ಬೀಜದಲ್ಲಿ ಇರುತ್ತವೆ (ಕವಿಕೋ. I, ೩೦). [ ಸಂ. ಜನಿಕಾ ]

**ಜನಿಗೆ** 'ಜನ್ನಿಗೆ' ನೋ.

**ಜನಿತ** (ಗು). ೧. ಹುಟ್ಟಿದ ; ಉತ್ಪತ್ತಿಯಾದ ; ಸೃಷ್ಟಿಸಿದ : ಜನಿತ ಪುನಸ್ಸ್ವಯಂವರದ ವಾರ್ತೆಯನಾಗಳೆ ಕೇಳ್ದು (ನಳಚಂ. ೬೯೯). (ನಾ). ೨. ಉತ್ಪತ್ತಿ; ಹುಟ್ಟು: ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ (ಬಸವ.೦೫): "ಜನ್ಮಸಂಬಂಧ" (ಬಸವ. ಕೋಶ). ೩. [ನಾಟ್ಯ] ನೃತ್ಯದ ನೂರೆಂಟು ಕರಣಗಳಲ್ಲಿ ಒಂದು: "ತಲಪುಷ್ಪಪುಟ . . . ನೀವೇಶ ಏಲಾಕ್ರೀಡಿತ ಜನಿತ . . . ಗಂಗಾವತರಣ–ಈ ನೂಱೆಂಟು ಕರಣಂಗಳ್" (ಲಾಸ್ಯರಂ. ೪-೬೨ವ). ೪. ನೃತ್ಯದ ಹದಿನಾರು ಭೌಮಚಾರಿಗಳಲ್ಲಿ ಒಂದು : "ಸಮಪಾದ, ಸ್ಥಿತಾವರ್ತ . . . ಜನಿತ ಊರೂದ್ವೃತ್ತ ಈ ಹದಿನಾಱು ಮಾರ್ಗಭೌಮಚಾರಿಗಳು" (ಲಾಸ್ಯರಂ. ೬-೧೭ವ); ಚರಣವೊಂದಗ್ರತಲ ಸಂಚರಮಂ ಮಾಡುತ್ತಮೆರ್ದೆಯೊಳೊಲ್ದಂ ಮುಷ್ಟಿಯ ಕರವಿರಿಸುತನ್ಯಕರ ಪದಮಿರೆ ಶೋಭೆಯಿನೊಪ್ಪಿ ತೋಱೆ ಜನಿತಮೆನಿಕ್ಕುಂ (ಲಾಸ್ಯರಂ. ೬-೩೫).

[ ಸಂ. ]

**ಜನಿತವಿಭಾಗ** (ನಾ). ಉಂಟಾದ ಭಾಗ,–ಪ್ರಭೇದ : ಜನಿತವಿಭಾಗಂಗಳ್ ವಾಙ್ಮನಸಾತೀತಂಗಳಂತು ಮಾರ್ಗೋಕ್ತಿಗಳೊಳ್ ನೆನೆದಱಿಪಲಾರ್ಪರಾರದನನಿಶ್ಚಿತಕ್ರಮ ವಿಶೇಷಗುಣಯುಕ್ತಕ್ರಮಂ (ಕವಿರಾ. ೨-೪೮).

[ ಜನಿತ + ವಿಭಾಗ ]

**ಜನಿಯಿಸು** 'ಜನಿಸು' ನೋ.

**ಜನಿವಾರ** 'ಜನ್ನವಿರ' ನೋ.

**ಜನಿಸಿತು** (ನಾ). ಹುಟ್ಟಿದಂದು ; ಜನಿಸಿದಂದು : ಮಹಿಮಾಕರಂ ಸಿದ್ಧಪತಿಯುಂ ಜನಿಸಿತಕ್ಕೆ ಭೂಲೋಕದ ಸಮಸ್ತ ಜೀವಾಳಿಗವರ್ಗಮುಂ ತೋರ್ಪೆನೆಂದನುಗೆಯ್ದನು (ಸಿದ್ಧರಾ. ೪-೦೬). [ <ಜನಿಸು ]

**ಜನಿಸು, ಜನಿಯಿಸು** (ಕ್ರಿ). ೧. ಹುಟ್ಟು ; ಉದ್ಭವಿಸು : ಕರ್ಣದೊಳಗೆ ಜನಿಸಿದವರುಂಟೆ ಜಗದೊಳಗೆ (ಬಸವ. ೫೮೯) : ಶುಕ್ಲ ಶೋಣಿತದಿಂದ ತನುವಿನ ಜನಿಸಿತ್ತು (ಆದಪ. ೨೭-೮೦) : ಆತನ ಶಾಂತಿಯಿಂದ ಶಶಿ ಚಾರಿತ್ರದಿಂ ಗಂಗೆ . . . ಉದಾರತ್ವದಿಂ ಸುರಕುಜಂ ಜನಿಸದಿರವೆಂದು ಕೊಂಡಾಡುತಿರ್ದಂ (ಹದಶಾ. ೬-೪೩) : ದೇವಕೀಸುತನೇನು ಬಂಡಿಯ ಬೋವಗುಲದಲಿ ಜನಿಸಿದನೆ (ಕುವ್ಯಾ.ಕ. ೫-೩೪) : ಶಿಲಾಯುಗದ ಕೆಲವು ಗುರುತುಗಳ ಬಳಕೆಯಿಂದ ಬ್ರಾಹ್ಮೀಲಿಪಿ ಜನಿಸಿತೆಂದು ಒಬ್ಬಿಬ್ಬರು ತಿಳಿಸಿದ್ದಾರೆ (ದ್ರಾವಿವಿ. ೫೨). ೨. ಹುಟ್ಟಿಸು ; ಉಂಟುಮಾಡು : ತಿನಸು ಗೂಳಿಯು ಬಾಳು ಕನಸಿನಲಿ ಉಂಡಂತೆ ತೊನಸಿ ಮುದಿ ಎತ್ತು ಹರಿ ತಿಂದು ಹುಳಗಳನು ಜನಿಸಿ ಬಿಟ್ಟಂತೆ (ಸರ್ವಜ್ಞ. ೧೮೫೭). **ಜನಿಯಿಸು** : ೧. ಜನಿಯಿಸಿ ದಂದು ತೊಟ್ಟಗಲದಾತನನಿಂತಿರಗಲ್ದ ಪಾಪಕರ್ಮನಂ (ಕಾದಂಉ. ೪೫೨) : ಅಲ್ಲಿ ಜನಿಯಿಸಿ ಬಳಿಕ್ಕಂದು ಬಪ್ಪಂ ದೇವ (ಬಸರ. ೬-೭೩) : ಅನುಕೂಲಪವನನಿಂ ಜೀವನಿಷ್ಟದಿಂ ನಾಭಿಮೂಲದೊಳ್ ಕಹಳೆಯ ಪಾಂಗಿನ ವೋಲ್ ಶಬ್ದದ್ರವ್ಯಂ ಜನಿಯಿಸುಗುಂ (ಶಮದ. ೨) : ವರಸೋಮಪ್ರಭ ರಾಜೇಂದ್ರಂಗಂ ತರುಣಿಗೆ ಸೌಂದರಿಗಂ ಜನಿಯಿಸಿ (ಜಯಕಾ. ೨ ಸೂಚನೆ). ೨. ಜನಕಂಗೆ ಹರ್ಷದೊದವಂ ಜನಿಯಿಸಿ (ಪಂರಾಮಾ. ೪-೩೩) : ನಭೋಂತಕ್ಕೊಗೆದಿರ್ದ ಸುಭಟತತಿ ಖಚರಬಲಭ್ರಾಂತಿಯನಿನಿಸಂ ಜನಿಯಿಸೆ (ಜಗವಿ. ೭-೫೬): ಏನೇನುಣಿಸನುಣಲ್ಕೀಹಾರಂ ಜನಿಯಿಸಿದಮೃತಾನ್ನವನೀವ ಮಣಿಪಾತ್ರೆಯುಮಂ ನೆನೆದು (ಜಯಕಾ. ೩-೭೧). ೩. ಒದಗು; ಉಂಟಾಗು ; ಆಗಂ : ಪುನರುಕ್ತಮೆಂಬುದಕ್ಕಂ ನೆನೆಯದೆ ಪದಾರ್ಥಮದಱಿದೀ ಪೂರ್ವೋದಿತಾರ್ಥ ಪದಪದ್ಧತಿಗೊಂದಿನಿಸುಂ ವಿಶೇಷವಿಲ್ಲದೆ ಜನಿಯಿಸಿದ ದೃಷ್ಟಾಂತಂ (ಕವಿರಾ. ೦-೮೩): ಕೊಲ್ ಪೊಲ್ ಎನೆ ಬಗೆದು ಬಗೆದು ಮನದೊಳ್ ಜನಿಯಿಸುಗುಮವಂಗೆ ಖಳವಿಭಂಗ ಜ್ಞಾನಂ (ಆದಿಪು. ೫-೮೫); ನನಮಯುಗಣಮಿಂತೀ ನಾಲ್ಕುಮೆತ್ತಂ ಜನಿಯಿಸೆ ಯತಿಸಪ್ತಸ್ಥಾನದಿಂದಂ ನಿನಗಱಿಪುವೆನಿಂತೀ ಪಾಂಗಿನೊಳ್ಮಾಲಿನಿ ಬಗೆ ಘಟಂ (ಛಂದೋಂಬು. ೨-೧೩೬): ಇನಿವಿರಿದಟಿಲನ್ಕರೊಳಂ ಜನಿಯಿಸಿತು (ಕಾದಂಉ. ೪೬೫): ಶತ್ರುವಿಂ ಜನಿಸಿದ ಕಟ್ಟಲೆಯೆಂಬುದು ರತ್ನದ ಬೆಳಗಿಂದಂ ಬಿಸಿಲಿಂದಂ ಕಿರ್ಚಿಂದಂ ಕಿಡುವುದಲ್ಲ (ಪಂಚತಂ. ೧೬೯-೧); ಗೀತವುಂ ಮುದಂ ಜನಿಯಿಸೆ ಪಾಡುವಲ್ಲಿ (ಚಂದ್ರಪು. ೨-೭). ೪. ಗೋಚರಿಸಂ ; ಸ್ಫುರಿಸು : ಎನಲೊಡಮಾ ಭವದೊಳ್ ತೊಟ್ಟನಿತುಂ ವೃತ್ತಾಂತಮಂತರಂಗ ದೊಳಾಗಳ್ ಜನಿಯಿಸೆ (ಸುಕುಮಾ. ೭-೫೦). [ ಜನಿ₂ + – ಇಸು₃ ]

**ಜನುಮ, ಜಲ್ಮ** (ನಾ). ೧. ಹುಟ್ಟು ; ಜನ್ಮ : ಪರಮನ ಹಾದಿಯನು ಅಱಿದು ಸುಖಿಯಾಗು ಜನುಮದ ಹಾದಿಗೊಳಬೇಡ (ಸರ್ವಜ್ಞ. ೪೭೭). ೨. ಜೀವನ ; ಬಾಳುವೆ : ನೆರಳಿನಂತಿದೆ ಜನುಮ ನಮಗೆ ಧರೆಯೊಳಗೆ (ಕವಿಪು. ೧೨-೭) : ಚಂದ್ರನ ಬೆಳುದಿಂಗಳಿನ ತಣ್ಪನರಿಯದ ತಾವರೆ ಜನುಮವೆ ವ್ಯರ್ಥ (ಇಂಬಾಪ. ೧೪೯-೩೫). **ಜಲ್ಮ** : 'ಜಲ್ಮಾಂತ' ಪರಾ. [ < ಸಂ. ಜನ್ಮನ್ ]

**ಜನುಸ್ಸು** (ನಾ). ಹುಟ್ಟು ; ಜನ್ಮ : "ಜನನಂ ಜನ್ಮಂ ಪ್ರಸವಂ ಜನಿ ಜನುರುತ್ಪತ್ತಿ ಸೂತಿಯೋಕಾರ್ಥಮಿಂತಿನಿತುಂ" (ಪಸುಕೋ. ೧೮-೩). [ ಸಂ. ಜನುಸ್ ]

**ಜನೆ** 'ತನೆ' ನೋ.

**ಜನೇಶ** (ನಾ). ಅರಸ ; ರಾಜ : ಜನೇಶನಿಂತೇಕೆ ಕಟಿದು ಪೋದನೊ ಪೇೞಿಂ (ಕವಿರಾ. ೨-೩೧). [ ಜನ + ಈಶ ]

**ಜನೇಶ್ವರ** (ನಾ). = ಜನೇಶ : ಜಯವರ್ಮ ಜನೇಶ್ವರನಲ್ಲಿಗೆ . . . ಉದ್ಧವನೆಂಬ ದೂತಮುಖ್ಯನನಟ್ಟಿದೊಡೆ (ಚಂದ್ರಪು. ೬-೧೮ ವ). [ ಜನ + ಈಶ್ವರ ]

**ಜನೋಕ್ತಿ** (ನಾ). ೧. ಜನರು ಆಡುವ ಮಾತು: ಮುನ್ನಮೆಂಬ ಬಟಿಕೆಂಬ ಜನೋಕ್ತಿಯೊಳಾಯ್ತು ಸೂಚಿಕತ್ತಿಗೆ ನೃಪರಾನೆ ದಾರದಪೊಲಾದುವು ರಾಜಕುಮಾರರಾನೆಗಳ್ (ಗದಾಯು. ೧-೧೬) ; ಆತನ ಪೂಣ್ದ ಪೂಣ್ಕೆ ಶಿಲಾತಳಾಕ್ಷರಮೆನಿಸಿರ್ಪ ಜನೋಕ್ತಿಯುಂ ಪುಸಿ ಮಾಟ್ಪನೇ (ಗದಾಯು. ೦-೭೦). ೨. ಗಾದೆ ; ನಾಣ್ಣುಡಿ ; ಲೋಕೋಕ್ತಿ. [ ಜನ + ಉಕ್ತಿ ]

**ಜನೋದಯ** (ನಾ). ೧. ಜನತೆಯ ಏಳಿಗೆ,–ಅಭಿವೃದ್ಧಿ. ೨. [ಛಂದ] ಪ್ರತಿಯೊಂದು ಪಾದದಲ್ಲಿ ನಾಲ್ಕು ಅಕ್ಷರಗಳಿರುವ ಒಂದು ಅಕ್ಷರ ವೃತ್ತದ ಹೆಸರು : ದಿನೇಶ ರುಪ್ರ ನಿಶ್ಚಿತಂ ಜನೋದಯಂ ತನೂದರೀ (ಛಂದೋಂಬು. ೨-೧೨). [ ಜನ + ಉದಯ ]

**ಜನೋಪಕಾರ** (ನಾ). ೧. ಜನಕ್ಕೆ ಮಾಡುವ ಉಪಕಾರ. ೨. ಜನಕ್ಕೆ ಹಿತಕರವಾದುದು ; ಜನರಿಗೆ ಕಲ್ಯಾಣಮಾಡುವಂಥದು : ಲೋಕ ಕಲ್ಯಾಣವಾಗಬೇಕೆಂಬುದು ಈ ಕವಿಯ ಹಿರಿಯ ಉದ್ದೇಶ, ಕಿರಾತಾರ್ಜು ನೀಯ ಜನೋಪಕಾರವಾದ ಕಾವ್ಯ (ಭಾರದ. ೪೫೨). [ಜನ+ಉಪಕಾರ]

**ಜನೋಲೋಕ** (ನಾ). = ಜನಲೋಕ : ಜನೋಲೋಕವೆಂದು ತಿಳಿಯ ಬೇಕು (ಉತ್ತಟೀ. ೪೩-೧೨). [ ಸಂ. (ಜನಸ್ + ಲೋಕ) ]

**ಜನ್ನ₁** (ನಾ). ಯಜ್ಞ ; ಯಾಗ : "ಯಜ್ಞಂ ಜನ್ನಮೆಂದಕ್ಕು" (ಶಬ್ದಕೈ. ೪೭) : ಜನ್ನಮಲ್ಲದೆ ಬನ್ನಮಿಲ್ಲ (ಅಜಿಪು. ೧-೨೭ವ) : ಜನ್ನಕ್ಕೆ ತಂದ ಕನ್ನೆ ಯಾಡು ಶ್ರುತಿಯಿಂದ ಹೊಱಗು (ಬಸವ. ಕ. ೨೪೯-೫೪೨); ಸಾಮವೇದಿಯ ಜನ್ನಕಾವುದ್ದಾಮನಂದಿಯನೇಱಿ ಹೋದ್ಯೆ (ಬಸಪು. ೨೪-೭೪) ; ಜನ್ನಕ್ಕೆ ಕರ್ತನಮರೇಂದ್ರ ವೇದಕ್ಕೆ ಕರ್ತಂ ನಾಲ್ಮೊಗಂ (ಸೌಂದಪು. ೬-೫).

ಜನ್ನವನುಣ್ಬಣ್ಣರ್ = ದೇವತೆಗಳು : ಜನ್ನವನುಣ್ಬಣ್ಣರನಾದ್ರು ಕೊಂದು (ಶಬ್ದಕಾ. ೦೫೮). [ < ಪ್ರಾ. ಜನ್ನ, ಜಣ್ಣ. / ಸಂ. ಯಜ್ಞ ]

**ಜನ್ನ₂** (ನಾ). ೧. ಒಬ್ಬಾತನ ಹೆಸರು : ಶ್ರೀಜನ್ನ ಕಲ್ಲ ನಿಱಿಸಿ ಪನ್ನಿರ್ಚ ಣ್ಡುಗ ಬೆದೆ ಮಣ್ಣೊಟ್ಟಾರ್ (ಮೈಆರಿ. ೧೯೪೪, ೬-೩ ; ಸು. 808) : ಶ್ರೀನೆಕುಣ್ಡರಾ ವಾಜಪೇಯಾಜಿಯಾ ಮಗನ್ ಜನ್ನನೊಟ್ಟದು ಸ್ಥಲೆ ಆಚನ್ದ್ರತಾರಕಂ (ಎಕ. VII, ಶಿಕಾರಿ. ೪೫-೫೯ : ಸು. 890). ೨. ಕನ್ನಡ ಸಾಹಿತ್ಯದಲ್ಲಿ ಪ್ರಸಿದ್ಧನಾದ ಒಬ್ಬ ಕವಿಯ ಹೆಸರು : ಜನ್ನನ ದೇಸಿ ಪಂಪನ ಗುಣಂ ಗುಣನಂದಿಯ ತೊಂಡು (ಸೂಕ್ತಿಸು. ೧-೨೬) : ಮನ್ನಿಸಿ ಸಲಹುಗೆ ಸತ್ಕವಿ ಜನ್ನಂ ಜಾಣೆಸೆಯುಲಿತ್ತು ನುಡಿಗಳನೆನ್ನಂ (ಧರ್ಮನಾ. ೧-೪೦). [ < ಸಂ. ಜನಾರ್ದನ ]

**ಜನ್ನ₃** (ನಾ). ಒಂದು ಬಗೆಯ ಕುದುರೆ ; ಬಿಳುಪಿನಿಂದ ಕೂಡಿದ ಕೆಂಬಣ್ಣದ ಕುದುರೆ: "ಬಿಳಿದುಮಾಗೆರೆವ ಕೆಂಪಿರೆ ಜನ್ನಂ" (ಮಂಗರಾ. ೮೧-೧೪) : ಜನ್ನ ಚೆನ್ನಾರ ಚಿನ್ನಳಗ ಚೆಲುವ ಚೀರ . . . ಸನ್ನುತ ಸಾಂಬ್ರಾಣಿಯನೇಱಿ ನೃಪಕುಲರನ್ನರಿಗಂದು ತೋಱಿದರು (ಅಂಜದ. ೬-೮೩): ಜನ್ನನಂ ನೀಲನನಳಗನಂ ತನ್ನಿ ಕತ್ತಳ ಮೌಹಳಿಗನಂ ತನ್ನಿ . . . ವಾಹಕರಿರಾ ನೀವು (ಬಸಪು. ೫೯-೪೦) ; ಪೊಳವಳಗ ತಿಳಗ ಕೊಂಗ ಸವಳ ಚಂಬೆಯ ನೀಲ ಜನ್ನ ಜಂಬ . . . ಎನಿಪ್ಪಗ್ಗಳಿಕೆಯ ಹಯಮುಂ ತುರಂಗಿಗಳ್ ಕೈಗೆಯ್ದರ್ (ತ್ರಿಪುವಿ. ೨೪-೨೯೪). [ ? ]

**ಜನ್ನ₄** (ನಾ). ಮಾನ್ಯ : ದಾನ ಕೊಟ್ಟ ಭೂಮಿ (?) : ಕುಂದಾಪುರದ ಪುರೋಹಿತ ಅಧಿವಾಸದ ಜಂನಿ ನಾರಾಯಣ ಕಾರಂತರ ಮಗ ಜಂನಿ ನಂದಿಕಾರಂತರ ಮೂಲದ ಜಂನ ಸರ್ವಸ್ವದ ಚತುಸೀಮೆಯ ವಿವರ (ಸೌಇಇ. IX-II, ೪೬೫-೩೭ : 1472) : ಆ ಕುದುರವೊಳಗೆ ಅರ್ಧ ಆರುವಾರ ಮೂಲಾದಿ ಮಯಿಸಾಲ ಜಂನ ಸರ್ವಸ್ವ ಎಲ್ಲವನೂ . . . ಬರಸಿಕೊಟ ಶಾಸನ (ಸೌಇಇ. IX-II, ೪೭೧-೩೮ : 1482) : ಯಿ ಜಂನಕ್ಕೆ ಉಂಟಾದ ಉಡುಗರೆ ಉತ್ತರ ಸೀಮೆ ಸಾಮ್ಯವೇನುಂಟದು ಸಹ ಬಿಡಾರು ವಾರವ ಬಿಟ್ಟು (ಸೌಇಇ. IX-II, ೬೨೦-೨೦ : 1546). 'ಜಮ್ಮ' ಪರಾ. [ ? ]

**ಜನ್ನಂಗೆಯ್**, ಜನ್ನಂಗೈ (ಕ್ರಿ). ಯಜ್ಞಮಾಡು : ಜನ್ನಂಗೆಯ್ವುದು ಶಂಭು ಭಕ್ತತತಿಗಂ ಸಂತೃಪ್ತಿಯಂ ಮಾಳ್ಪುದೌ (ಹಾಲಾಸ್ಯ. ೨-೭-೨೮). **ಜನ್ನಂಗೈ:** ಜನ್ನಂಗೈವ ಜಾಣ್ಗಿಡರ್ ದಕ್ಷನಂ ತುಡುಕಿ . . . ಗೋಣ್ಗೊಗ್ಗರೆದ ವೀರಭದ್ರಂ (ನಂದಿಮಾ. ೧-೮). [ ಜನ್ನ$_1$ + ಕೆಯ್$_1$ ]

**ಜನ್ನಂಗೈ** 'ಜನ್ನಂಗೆಯ್' ನೋ.

**ಜನ್ನಕೊಂಡ** 'ಜನ್ನಗೊಂಡ' ನೋ.

**ಜನ್ನಗುದಿರೆ** 'ಜನ್ನಗುದುರೆ' ನೋ.

**ಜನ್ನಗುದುರೆ**, ಜನ್ನಗುದಿರೆ (ನಾ). ಯಜ್ಞಾಶ್ವ : ಅಗ್ಗಳಿಕೆಯುಸ್ತು ತಲೆಯುಲ್ಲಾಂತು ಜನ್ನಗುದುರೆ ತಿರುಗಲು ಹೊರಟಿತು (ಬಿದುರಿ. ೩೪). **ಜನ್ನಗುದಿರೆ** : ಸುಡುಸುಡು ನಿನ್ನ ಜನ್ನಗುದಿರೆಯುಂ (ರಾಮಾಶ್ವ. ೩೯-೧೭).
[ ಜನ್ನ$_1$ + ಕುದುರೆ ]

**ಜನ್ನಗೂಳ** 'ಜನ್ನಗೂಟ ನೋ.

**ಜನ್ನಗೂಟ**, ಜನ್ನಗೂಳ (ನಾ). ಯಜ್ಞದಲ್ಲಿ ಅರ್ಪಿತವಾಗುವ ಹವಿಸ್ಸನ್ನೇ ಆಹಾರವಾಗಿ ಉಳ್ಳವನು ; ದೇವತೆ : "ಅಮುರ್ದುಣಿಸುಗಳ್, ಕನಸಿಲ್ಲದರ್ . . . ಜನ್ನಗೂಟರ್, ಬಿಜ್ಜೋದರರ್, ಗಾಳಿವಟ್ಟಿಗರ್, ಅಚ್ಚರರ್ (ಬೋಳೆಯರ್) – ೯ ದೇವರ್ಕಳ ಪೆಸರ್" (ಕಶಸಾ. ೨-೧೯). **ಜನ್ನಗೂಳ** : ಜನ್ನಗೂಳರ್ಕಳೆರೆಯಂ ಮಹಾಭೀತಿಯಿಂ ರನ್ನಮಂ ಕೊಟ್ಟು ಸಂತೈಸಿದನೊಯೆನೆ ರತ್ನಶೃಂಗಂಗಳೆಸೆದಿರ್ದವು(ವೆಂಕಾರಾ. ೨-೨೯-೯). [ ಜನ್ನ$_1$ + ಕೂಟ್$_1$ + – ಅ$_7$ ]

**ಜನ್ನಗೊಂಡ**, ಜನ್ನಕೊಂಡ (ನಾ). "ಯಜ್ಞಕುಂಡ" (ಪ್ರಭಣ). **ಜನ್ನಕೊಂಡ** : ಬೇಳ್ವ ಬೇಳಂಬದಿಂ ಜನ್ನಕೊಂಡಂ ಬಳಸಿ . . . ಹವಿಯನರ್ಪಿಸುತಿರ್ದಂ (ಶ್ರೀರಾಮಾ. ೧೨-೩೦೨).
[ ಜನ್ನ$_1$ + ಕೊಂಡ$_2$ ]

**ಜನ್ನಣೆ** (ನಾ). ಯಜ್ಞಶಾಲೆ ; "ಯಾಗಶಾಲೆ" (ಚತುನಿ. ೬. I, ೭೦). 'ಜನ್ನವನೆ' ಪರಾ. [ ? ]

**ಜನ್ನದಾರ** (ನಾ). ಜನಿವಾರ ; ಯಜ್ಞೋಪವೀತ : ಜನ್ನದಾರದ ಪನ್ನಗಭೂಷಣಂ ಪವಿತ್ರದ ಪರಮಾತ್ಮಂ (ಗಿರಿಕ. ೧೦-೭೯ ವ) : ಮೂಜೆಟಿಯ ಜನ್ನದಾರದಾಣಿ (ರಾಮಾಶ್ವ. ೧೧೭-೨೪). [ ಜನ್ನ$_1$ + ದಾರ$_1$ ]

**ಜನ್ನಲು** (ನಾ). ಕಿಟಿಕಿ: "ಕಿಟಕಿ, ಜನ್ನಲು, ವಾತಾಯನ" (Window. ಇಂಕನ).
[ ←ಪೋರ್ಚ್. Janella. / ತಮಿ. ಜನ್ನಲ್ ]

**ಜನ್ನವಗೆಯ** (ನಾ). ೧. ಯಜ್ಞಕ್ಕೆ ಶತ್ರುವಾದವನು; ದಕ್ಷಯಜ್ಞವನ್ನು ಧ್ವಂಸಮಾಡಿದವನು ; ವೀರಭದ್ರ : "ಜನ್ನವಗೆಯಂ, ಎಂಟಡಿವರಿಜಂ, ಬೀರಂ, ಬಿಸುಗಣ್ಣಮಗಂ, ಅರೆವಾನಿಸವಗೆಯಂ – ಈ ೫ ವೀರಭದ್ರಂಗೆ ಪೆಸರ್" (ಕಶಸಾ. ೧-೬): "ಎಂಟಡಿವರಿಜ ಜನ್ನವಗೆಯ ಬಿಸುಗಣ್ಣಣುಗನು ಬೀರನರವಾನಿಸವಗೆಯನೆಂದು ಸಲ್ವುದಾ ವೀರಭದ್ರನ ನಾಮ" (ಶಬ್ದಮಂ. ೫) : ಜನ್ನವಗೆಯಂಗೆ ಸುಗ್ರೀವಂ ಬಿಗುರ್ವರಿಜಂಗಂಗದಂ ನಂದಿಗೆ ನೀಲಂ ಮಸಗಿ ಮಾಜಾಂತರ್ (ರಾಮಾಶ್ವ. ೧೩೨-೧೭). ೨. ಈಶ್ವರ ; ಶಿವ : "ಕಪರ್ದಿ ಜನ್ನವಗೆಯಂ" (ಕರ್ಣಾಸಿ. ೬). [ಜನ್ನ$_1$ + ಪಗೆ$_2$ + – ಅ$_7$]

**ಜನ್ನವನೆ** (ನಾ). ಯಜ್ಞಶಾಲೆ ; ಯಾಗಮಂಟಪ : ಆ ಹರಕೆ ಜನದ ಹೃದಯದಿಂ ಜನ್ನವನೆಯಿಂದೇಳ್ವ ಹೋಮಧೂಮಂಬೋಲೆ ವ್ಯೋಮಾಂತರಕೆ ಪರ್ವಿದತ್ತು (ಶ್ರೀರಾಮಾ. ೦೦-೨೮೮).
[ ಜನ್ನ$_1$ + ಮನೆ ]

**ಜನ್ನವರ** 'ಜನ್ನವಿರ' ನೋ.

**ಜನ್ನವಳ** (ನಾ). ಯಜ್ಞದ ಹವಿಸ್ಸನ್ನು ಬಯಸುವವನು ; ಇಂದ್ರ : "ಪಲಗಣ್ಣನಿಂದಿರಂ ಮುಂಗಿಲ್ದೇರನುಜೆ ಜನ್ನವಳನು ಸಗ್ಗಿಗರಾಣ್ಮನೆನೆ ಸುರವ" (ಕಬ್ಬಿಕೈ. ೧೦೨). [ ಜನ್ನ$_1$ + – ವಳ ( < – ವಾಳ$_1$ ) ]

**ಜನ್ನವಿರ್** (ಕ್ರಿ). [illegible] ಜಳೋದ್ಗಮವರ್ ಮಿಗೆ ಜನ್ನವಿರ್ಪ್ಪರ್ ಭೂವಳಿ[ಯ]ವಿನೂತ ವಿಪ್ರವರರಿಂದೆಸೆದಿರ್ಪ್ಪರ್ದತ್ತು ನೋಪ್ಪರ್ದಂ (ಎಚ. XIII, ೪೪-೩೮ : 1112) (ಶಾಶಮಂ. ೨೦೭ ನೋ). [ ಜನ್ನ$_1$ + ಇರ್$_1$ ]

**ಜನ್ನವಿರ**, ಜನಿವಾರ, ಜನ್ನವರ, ಜನ್ನಿವರ, ಜನ್ನಿವಾರ, ಜನ್ನುರ (ನಾ). ಯಜ್ಞೋಪವೀತ ; ಬ್ರಹ್ಮಸೂತ್ರ : [illegible] ಪೆಗಲೊಳ್ ತೆಗೆದಿಕ್ಕಿ ವೇದದಭ್ಯಾಸವನುಂಟುಮಾಡಿ (ಕಾವ್ಯಸಾ. ೫೩೯ ೭೨೪): [illegible] ಕರವೊಡಂಬಡೆ (ಪಂಪಭಾ. ೬-೮): ಒಳ್ಪುವೆತ್ತ ಜನ್ನವಿರವುದಂಶುಕಂಡಳ [illegible] (ವರ್ಧಪು. ೧೬-೪). **ಜನಿವಾರ:** [illegible] ಜೀನಗಾರನುಯೆಂದೆಂಬೆ (ಚಿದಾವ. ೧೪-೬) : ಎದೆಯ ಮೇಲೆ ಹೊತ್ತ ಉತ್ತರೀಯದ ಸಂದಿನಿಂದ ಜೋಲಾಡುವ ಜನಿವಾರ (ಕಳಹು. ೨) : ಜನಿವಾರದೊಳಗಿನ ಕೃಷ್ಣಾಜಿನ ಆಗಾಗ ಕೊರೆಯುತ್ತಿತ್ತು (ವೃನಿ. ೧೮೩). **ಜನ್ನವರ** : ನೇರಿತನಿಪ್ಪ ಜನ್ನವರದಿಂ ಕರಯುಗ್ಮದೊಳಾಂತ ದರ್ಭೆಯಿಂ ಚಾರು ಶಿಖಾಕಮಂಡಲುಗಳೊಪ್ಪಿರೆ ವಾಮನರೂಪುವೆತ್ತ ಗಂಭೀರ ನುದಾತ್ತನಾ ಬಲಿಯ ಬೇಟ್ಪುದುಂ (ನೇಮಿಪು. ೫-೨೦) : ಗಿಳಿವಿಂಡು ದರ್ಭೆ ಮಲ್ಲಿಗೆ ಜನ್ನವರ ಕಾಸೆ ತಳಿರಾಗೆ ಕುಸುಮಾಕ್ಷತೆಯಿತ್ತು ಅಲರಂಬನ ಪರಸುವ ವಿಪ್ರನಂದದೆ ಚಲುವಾದುದೊಂದು ಚೂತಕುಜಾತ (ತ್ರಿಭುತಿ. ೧೪-೩೮). **ಜನ್ನಿವರ** : ಅವನ ಜನ್ನಿವರಮಂ ಸಾಭಿಜ್ಞಾನದುಂಗುರಮಂ ನಗೆಯೊಳೊತ್ತೆಯೆಂದು ಕೊಂಡು (ಧಾವುಂಪು. ೩೫-೧೫) : ಅಬ್ಜತಂತುವಿನ ಜನ್ನಿವರಂ ಸುರಭೂಜವಲ್ಕವೊಪ್ಪಿರೆ ಪೂಜಿಮಟ್ಟನಾ ಕೊಳದಿನಾಗಳ ದೊರ್ವ ಕುಮಾರತಾಪಸಂ (ಕಾದಂಬ. ೬೦೭): ಓಜೆವೆತ್ತಿರೆ ಬೆಳ್ಪಿಯುತ್ತರಿಂಗೆ ಜನ್ನಿವರಂ ಬೆಡಂಗಳವಟ್ಟು ಬಾಲದಿನೇಶನಂತಿರೆ (ಧರ್ಮಾಮೃ. ೫-೨೦೭) : ಒಡಲೊಳೆಸವುದ್ಧೂಳನ ತ್ರಿಪುಂಡ್ರಗಳೆನೊಪ್ಪಿಡಿ ಜನ್ನಿವರದಿಂದೆ . . . ದೇಸವಡೆದಿಹ ತಪೋಧನರು (ರಾಘಚ. ೦೭-೫೦). **ಜನ್ನಿವಾರ:** "ಜನ್ನಿವಾರಂ ಬ್ರಹ್ಮಸೂತ್ರಮುಪವೀತಮೆನಿಕ್ಕುಂ" (ಮಂಗರಾ. ೭೫-೮) : ಎಬುಸರದ ಜನ್ನಿವಾ[ಪಾಠಾಂ. ವಿ]ರಮುನಿಕ್ಕುವುದುರೋಲಿಂಗಂ (ಧಾವುಂಪು. ೬೨) : ಕರ್ಮಲತೆಯಂತಿರ್ದ ಜನ್ನಿವಾರಮಂ ಕಳೆದು ಬಿಸುಟು (ಬಸರ. ೨-೪೨) : ಕಳೆದು ಮುನಿಪತಿ ಜನ್ನಿವಾರವ ಧರೆಗೆ ಬಿಸುಡುತಲಿ (ಕೌಶಿರಾ. ೩-೦೯). **ಜನ್ನುರ** : ಕತ್ತುರಿಯ ಕಂಪು ಕೈಸುಂಗಿ ಹೊಂನೊಜೆ ಹಟ್ಟಿಗೆ ಸಣ್ಣ ಗಗ್ಗರಂ ಮುತ್ತಿನ ದಂಡೆ ತೋಳಮಣಿ ಬೈತಲೆ ನೆಯ್ದಲೆ ತೂಲ ಜನ್ನುರಂ . . . ಮೆಯಿಮಿಕ್ಕಿರೆ (ಎಕ. V, ಅರಸೀ. ೮೮-೨ : 1184).
[ ಜನ್ನ$_1$ + ?. / ಪ್ರಾ. ಜಣ್ಣೋವಈಯ, ಜಣ್ಣೋವವೀಯ.
/ ಸಂ. ಯಜ್ಞೋಪವೀತ ]

**ಜನ್ನವಿರವಂತ**(ನಾ).ಯಜ್ಞೋಪವೀತವನ್ನು ಧರಿಸಿದವನು;ಬ್ರಾಹ್ಮಣ ಜನ್ನವಿರವಂತಂ ಪಾರ್ವಂ (ಶಬ್ದಾನು. ೪೦೨ ಪ್ರಯೋ).
[ ಜನ್ನವಿರ + – ವಂತ ]

**ಜನ್ನಶಾಲೆ** (ನಾ). ಯಜ್ಞಶಾಲೆ ; ಯಾಗಮಂಟಪ: ಭಸ್ಮಭಾವನೆ ಬೇಡ ನಡವುದು ಜನ್ನಶಾಲೆಗೆ ನೀವು (ನಿಭಾಗ. ೧೦-೨೦-೨೯). [ಜನ್ನ$_1$+ಶಾಲೆ$_3$]

**ಜನ್ನಿ** (ನಾ). ಗ್ರಾಮದ ಮಹಾಜನ ; ಧರ್ಮದರ್ಶಿಗಳ ಸಭೆ : ಶ್ರೀಪಾರಿಸ್ವದೇವರಿಗೆ ನಾಡೆಳುಮಂದಿ ಜಂನಿಗಳು ಇಪ್ಪತನಾಲ್ಕು ಬಳಿಯ ಸಮಸ್ತನಾಡು . . . ಅರ್ತ್ವವ ಕೊಟು (ಕಇ. I, ೫೦-೪ : 1482) : ಧಾರಾಪೂರ್ವಕವಾಗಿ ಬಾಳಿಯೆಂದು ಬರಸಿಕೊಟ್ಟ ಶಿಲಾಶಾಸನ . . . ಹಾಜುನಾಡು ಸಮಸ್ತರ ಪೊಪ ಬಿಲಿತೂರ ಜಂನಿಗಳ ಪೊಪ (ಸೌಇಇ. IX-II, ೪೭೯-೦೫ : 1510) : ಕೋಟ ಅಧಿವಾಸದ ಉ[ರ]ನಾಲ್ವರು ಜಂನಿಗಳು ಪೊಪ್ಪ (ಸೌಇಇ. IX-II,೫೨೦-೩೦ : 1526). [ ? ]

ಗರುಡನಂ ಗಜಜುವಂತೆ ದುಂದುಭಿಗಭೀರ :ಹೇಷಾರವಂಗಳೊಗೆಯೆ (ಪುಷ್ಪಪು. ೨-೯೦ ವ); ಸೂಜಿಗಲ್ಲಿದಿರ ಕಾರ್ಬೊನ್ನಂತೆ ತಿರುಗಿದೆಡೆಗಾ ಜವದೊಳೊಡದಿರುಗಿ (ಚಬಪು. ೨೦-೨೦). ೨. ಶಕ್ತಿ; ಸಾಮರ್ಥ್ಯ; ಸತ್ತ್ವ: ಸವತಿ ನೂಕಿದಳೆನ್ನನಡವಿಗೆ ಜವವುಳಿವುತ್ಕೃತಂದೆನಬಿಸುತ ನಿನ್ನ ಸನ್ನಿಧಿಗೆ (ಸಿಥಾಗ.೪-೭-೪೩). 'ಜವಂಗಿಡಿಸು', 'ಜವಂಗೆಡಂ' ಪರಾ. ೩. ಹೆಚ್ಚಾದ ವೇಗದಿಂದ ಕೂಡಿದವನು: "ಜವನುಂ ತಾಂ ವಾಯುವೇಗಯುತನುಂ ಯುವುನುಂ" (ವಸ್ತುಕೋ. ೧೧೮-೩).

ಜವಂಜವ (ದ್ವಿರುಕ್ತಿ): ಪಜ್ಜಳಿಸುತರಿಲೊಂದು ಬಾನ್ಪಟದೊಳುರಿದುರಿದು . . . ಜವಂಜವದಿಂದೆ ಮರೆಯಾಯ್ತು ಮುಳುಗಿ (ಶ್ರೀರಾಮಾ. ೧೦೩-೮೮). [ಸಂ.]

ಜವಂಗಿಡಿಸು, ಜವಗಿಡಿಸು, ಜವಗೆಡಿಸು (ಕ್ರಿ). ಸತ್ತ್ವವನ್ನು ಕುಗ್ಗಿಸು; ಶಕ್ತಿಗುಂದಿಸು; ಸೋಲಿಸು : ತೆಱಪಱಿದೋಪನಪ್ಪಿದೊಡೆ ಮೆಯ್ಯಱಿ ವಪ್ಪ ಸಡಿಲ್ಪುದಕ್ಕೆ ಮೆಯ್ಯಱಿವ ಪೊದಟ್ಟ ಬಾಯ್ಗುಗೆ ಮೆಯ್ಯಱಿ ವಂತದು ಮೆಲ್ಲನಾಗೆ ಮೆಯ್ಯಱಿವ ಜವಂ ಜವಂಗಿಡಿಸೆ ಮೆಯ್ಯಱಿವಾಸನ ಪಲ್ಲಟಕ್ಕೆ ಮೆಯ್ಯಱಿವೆದ ಸಾವ ಪುಟ್ಟುವೆಡೆಯಾದುದವಲ್ಗೆ ರತಾತಿರೇಕದೊಳ್ (ಲೀಲಾವ. ೧೩-೨೦); ಜವನ ಬಲ್ಪಂ ಜವಂಗಿಡಿಸುವಂ (ಅದ್ಭುತ. ೪೯-೬). ಜವಗಿಡಿಸು: ಅಡಸಿದರು ಚತುರಂಗಬಲವನು ಕಡಿದು ಹರಿಹ ವಿರಾಟನನು ಜವಗಿಡಿಸಿ (ಕುಮಾ.ದ್ರೋ. ೦೭-೩೫); ಅವರ ಲಾವಣ್ಯಾಬ್ಧಿ ವಿಟರ ಕಣ್ಮೀಂಗಳ ಜವಗಿಡಿಸಿದುವು ಗೋಷ್ಪದದಲಿ (ಮೋಹತ. ೨೪-೨೬): ಜವನಂ ಜವಗಿಡಿಸುವ ಕುಳಿಕನಂ ಗುಳಿಗೆಗಟ್ಟುವ ಪೆರ್ಗಳದ ಕಾಳಾಳ್ಗಳ ಪಡೆಯ (ರಾಮಾಶ್ವ. ೯೪-೧೬). ಜವಗೆಡಿಸು: ತೇಜಿಯು ಜವಗಿಡಿಸಿ ತಲೆಯಾರ ತಡೆದರು ತುಡುಕಿದರು ನೊಗನ (ಕುಮಾ.ಶ. ೦೪-೦೪); ಜವಗಿಡಿಸಿ ಸೇನೆಯಂ ಮುತ್ತಿದುವು ಕುತ್ತಿದುವು . . . ಸುಭಟರಂ ಬಾಣಂಗಳು (ಚಬಪು. ೨೫-೧೦); ಕೃತವರ್ಮ ಸಾಂಬಾನುಸಾಲ್ವರಂ ಜವಗೆಡಿಸಿ (ಕೃಮಿಥಾ. ೦೪-೫).

[ಜವ₂ + ಕಿಡಿಸು (<ಕೆಡಿಸು)]

ಜವಂಗಿಡು 'ಜವಂಗೆಡು' ನೋ.

ಜವಂಗುಂದಿಸು (ಕ್ರಿ).=ಜವಂಗಿಡಿಸು: ಜವಂಗಿಡದ ಮುಟ್ಟಿ ಬರ್ಪ ಜವನಂ ಜವಂಗುಂದಿಸಲ್ ಜವಂಗೆ ಜವನಾಗಲಿಂ ಪೆಱರ್ಗೆ ತೀರ್ಗುಮೇ (ಆದಿಪು. ೦೩-೮೮). [ಜವ₂ + ಕುಂದಿಸು]

ಜವಂಗುಂದು, ಜವಗುಂದು (ಕ್ರಿ). ಶಕ್ತಿಗುಂದು; ಸತ್ತ್ವವಳಿ : ಅಮಿತಬಲದೆರಡು ಕಡೆಗಂ ನಿವಿರ್ವ ಜವಂಗುಂದಿ ಪಾಯ್ದು ಕಳವಳಿದು ತುರಂಗವು ಸಮಿತಿಯೊಳಿಯೊಳಂ (ಕಾವ್ಯಸಾ. ೪೭೭ ಶೂದ್ರಕ); ಒಂದು ಗೊಳ್ಳೆರಡುಗೊಳ್ಳೆಂದುರ್ವಿ ಪೊಯ್ವುಂದು ಪೊಯ್ಗೆ ಜವಂಗುಂದಿ ಸಿಡಿಲ್ದು . . . ಬೀಟೆ ದಿಗ್ಗಜವುಂ ಪೋಲ್ವ ಗಜಂಗಳಂ ಪಲವುಮಂಕೊಂದಂ ಮರುನ್ನಂದನಂ (ಕಂಪಭಾ. ೧೮-೦೦೨). ಜವಗುಂದು: ಮಧ್ಯಾಹ್ನದುರಿ ಬಿಸಿಲೊಳಿದ ಬಿರಿಯ ಜವಗುಂದಿ ತಲೆ ಕುಸಿದು ನಡೆಗೆಟ್ಟು ಬಾಯಾಱಿ (ಹರಿಶ. ೧೨-೭); ಎಲ್ಲಿಯುದು ಹೆಬ್ಬಂದಿ ಮುನಿಪಥಯಲ್ಲಿ ಕೂಡಿತೊ ಯೋಗವೆಂದೆದೆ ಝಲ್ಲೆನಲು ಜವಗುಂದಿ ಲಕ್ಷ್ಮಣನೊಲದನವಯುವವ (ತೊರರಾ. ೩-೩-೨೨). [ಜವ₂ + ಕುಂದು₁]

ಜವಂಗೆಡು, ಜವಂಗಿಡು, ಜವಗಿಡು, ಜವಗೆಡು (ಕ್ರಿ). ೧.= ಜವಂಗುಂದು: ಭಯಮನೆಡಗಲಿಸಿ ಬೆಳ್ಪೋಟವೋಡಿ ಜವಂಗೆಟ್ಟು ಕಾಲ್ ಪೆಡಂಗಲಸೆ ಬೀಟುತ್ತುಮೇಟುತ್ತುಮೆಂತಾನುಮೆಯ್ದಿ (ಶಾಂತಿಪು. ೭-೯೦ ವ); ಇನ್ನೆತ್ತಂ ಪೋಪೆಂ ಕುದುರೆಯುಂ ಜವಂಗೆಟ್ಟುದು (ಪಂಪಶಂ. ೦೦೭-೯); ಅಂತು ಪಲವು ಸೂಟ್ ಕಾದಿ ನಾಡೆಯುಂ ಬಟಲ್ದು ಕಡೆಯ ಸೂಟ್‌ನೊಳ್ ಜವಂಗೆಟ್ಟು (ನೇಮಿಪು. ೪-೦೦೭ ವ). ಜವಂಗಿಡು: ೧. ಜವಕಿಗಡದ ಮುಟ್ಟಿ ಬರ್ಪ ಜವನಂ ಜವಂಗಂಂದಿಸಲ್ ಜವಂಗೆ ಜವನಾಗಲಿಂ ಪೆಱರ್ಗೆ ತೀರ್ಗುಮೇ (ಆದಿಪು. ೧೩-೮೮); ಇನ್ನಿವಜ ಪೋರ್ದು ಜವಂಗಿಡದೆ ಪಪ್ಪಿ ಮಾಡಂದವುಮುಂ ಕೇಳ್ (ಶಾಂತಿಪು. ೯-೯೯ ವ). ಜವಗಿಡು: ೧. ಜವಗಿಡದೆನ್ನೊಳು ಕಡಿದಾಡಬಪ್ಪುದೆಂದವಗಡಿಸಿದನಾಭಾಗಿ (ತೊರರಾ. ೩೯-೩). ಜವಗೆಡು: ೧. ರವಿರಶ್ಮಿಗಾಱದೆ ಜವಗೆಡುವ ಹಿಮವನ್ನಗೇಂದ್ರದ ಘನತರವದೆನಿತು (ಬಸಪು. ೦೯-೨೭). ೨. ವೇಗ ಕುಗ್ಗು,-ಮಂದವಾಗು; ತಡವಾಗು: ಪೊಳ್ತಂ ಸನ್ನೆಯುಂ ಜಾತಿಯುಂ ಜವಗೆಡ [ಪಾಠಾಂ. ಜವಂಗೆಡ] ದಱಿವ ಬಿನ್ನಣಂಬಡೆದ ಬೇಡರೊಡವರೆ (ರಾಜಶೇ. ೫-೧೦೪ ವ).

[ಜವ₂ + ಕೆಡು₁]

ಜವಂಜವ (ನಾ). ಹುಟ್ಟುಸಾವುಗಳ ಪರಂಪರೆ; ಸಂಸಾರ: "ಭವ ಸಂಸೃತಿ ಸಂಸರಣಂ ಜವಂಜವಂ ಜನ್ಮವೆಂಬುದದು ಸಂಸಾರಂ" (ವಸ್ತುಕೋ. ೧೯-೧); ಜವನಂ ಜವಂಗುಂದಿಸಲ್ . . . ಪೆಱರ್ಗೆ ತೀರ್ಗುಮೇ ತೀರದಾ ಜವಂ ಜವಜವಾಗಿ ಮುಟ್ಟುಗಿಡುವನ್ನಮಿನ್ನಾ, ಜವಂಜವ ವ್ಯಸನವುಂಜವಂ ಕಿಡಿಪುದಾದಿತೀರ್ಥೇಶ್ವರಾ (ಆದಿಪು. ೧೩-೮೮); ತನ್ನಂ ನಿರ್ವಾಟಿಸಿ ಕಳಿಯೆ ಪೋಗಿ ಸತ್ತು ವಿವಿಧ ಜವಂಜವ ಚಕ್ರಾಕ್ರಮಣದಿಂ ಬಂದು (ಶಾಂತಿಪು. ೭-೪೨ ವ). 'ಅಜವಂಜವ' ಪರಾ. [?]

ಜವಂಬೆಱು (ಕ್ರಿ). ವೇಗಗೊಳ್ಳು; ತ್ವರಿತವಾಗು: ಪೊದಳ್ದ ದೇಶಿ ಮ್ಯವೆತ್ತಿರೆ ತೇನತೇನವೊದಗುತ್ತಿರೆ ತಾನರವಂ ಲಯುಂ ಜವಂಬೆತ್ತಿರೆ ಮೂರ್ಛನಾಪ್ರಸಾರವೊಂದಿರೆ (ವೃಷವಿ. ೧೧-೮). [ಜವ₂ + ಪೆಱು₁]

ಜವಕ (ನಾ). ತಡ; ನಿಧಾನ (?): ಸಾಹಿತ್ಯ ಸಾರೋದಯಂಗೀ ದೂದವಿ ಜತ್ರಕವುಂ ನುಡಿದು ಜವಕವಿಲ್ಲದೆ ಕೂಡಿದಳೆಂದು ನುಡಿಯುತ್ತುಂ ಪೋಗೆ (ಅನಂಪು. ೮-೨೯ ವ). [<ಸಂ. ಯಾಪಕ]

ಜವಕಣೆ (ನಾ). ಒಂದು ಬಗೆಯ ತಂತೀವಾದ್ಯ: (ಎಸಮ್ಮ. XVII, ೩೦).

[?]

ಜವಕಾರ (ನಾ). ಒಂದು ಬಗೆಯ ಉಪ್ಪು; ಯವಕ್ಷಾರ: "ಜವಕಾರ - ಯವಕ್ಷಾರ" (ಕರ್ನಕೋ. ೦೪). [<ಸಂ. ಯವಕ್ಷಾರ]

ಜವಗ (ಗು). ವೇಗವಾಗಿ ಓಡುವ: ಜವಗ ಚತುರೇಕಲಕ ಪ್ರವಿವುಳ ಶೃಂಗಾರಸಾರ ಜಾತ್ಯಶ್ವಂಗಳ್ (ಪಮ್ಮಿರ. ೩-೦೦). [ಸಂ.]

ಜವಗತಿ (ನಾ). ವೇಗವಾದ ನಡಗೆ; ಓಟ: ಮಂದವಕ್ಕಲನ ಕುಕ್ಕುರಿಪ ಲುಳಿಯ ಜಂಘೆಯ ಜವಗತಿಯ . . . ನಾಯ್ತುಡುಕಿದವು ತಡೆದವಿಳ ಮೃಗಕುಲವ (ತೊರರಾ. ೩-೩-೧೪). [ಜವ₂ + ಗತಿ]

ಜವಗಾತಿ (ನಾ). ಬಹಳ ವೇಗವುಳ್ಳವಳು; ವೇಗದಿಂದ ನಡೆಯುವವಳು: ಪವನವೇಗವ ಕೀಳ್ಪಡಿಸಿ ದೂವಾಳಿಪ ಜವಗಾತಿಯು ಬೆನ್ನೊಳಿರ್ದು ಕುವರ ಕಂಗೆಟ್ಟು ತಕ್ಕಿಗೊಂಡವಳ ನುಣ್ಗೊಲೆಯ ಬಲ್ಪಿಡಿದ (ಮೋಹತ. ೩೧-೨೭).

[ಜವ₂ + - ಕಾತಿ₁]

ಜವಗಿಡಿಸು 'ಜವಂಗಿಡಿಸು' ನೋ.

ಜವಗಿಡು 'ಜವಂಗೆಡು' ನೋ.

ಜವಗುಂದು 'ಜವಂಗುಂದು' ನೋ.

ಜವಗೆಡಿಸು 'ಜವಂಗಿಡಿಸು' ನೋ.

ಜವಗೆಡು 'ಜವಂಗೆಡು' ನೋ.

ಜವಚರ (ನಾ). ಓಡುತ್ತ ಹೋಗಿ ಸಮಾಚಾರವನ್ನು ತಿಳಿಸುವ ಸೇವಕ; ಹರಿಕಾರ: ಬಹರಾಗವುನವನರಿದು ಜವಚರರಿಂದ ಶ್ರೀವರ್ಮನಾಗ ಗಿರಿಪುರಕಪ್ಪವುಂಗಲವ ರಚಿಯಿಸಿದ (ಜಿನಮು. ೩-೨೨).

[ಸಂ.]

ಜವಜವ (ನಾ). ೧. ಶಿಥಿಲವಾದುದು; ಶಕ್ತಿಗುಂದಿದುದು. ೨. ಮಂದವಾದುದು. 'ಜವಜವಾಗು' ಪರಾ. [?]

ಜವಜವನೆ (ಅ). ದುರ್ಬಲವಾಗುವಂತೆ; ಕುಗ್ಗುವಂತೆ.

ಜವಜವಜವನೆ (ದ್ವಿರುಕ್ತಿ) : ಜವನಟ್ಟಿ ಕೊಲ್ವ ಕೊಲೆಗಾ ಜವಂಜವ ಸ್ಥಿತಿಗೆ ಮೆಯ್ಯ ನೀರ್ತಗೆವನ್ನಂ ಜವಜವಜವನಂಜಿಸಿದುವು ಜವನಾಳ್ಗಳ ತೆಜದಿನೆನ್ನ ಕನ್ನೆಯ ನರಗಳ್ (ಅಜಿಪು. ೨-೬೯). ಜವಜವನಾಗು = ಜವಜವಾಗು : ಬಟ್ಟೆಯು ಕಿಱುಗಲ್ಲ ಬಡಿಯು ಕೋಟಿಂದಂ ಕಾಲ್ ಕೆಟ್ಟುವು ಜವಜವನಾದುವು ನೆಟ್ಟನೆ ಮೆಯ್ (ಧರ್ಮಾಮೃ. ೬-೮೯).

[ ಜವಜವ + – ಅನೆ$_1$ ]

**ಜವಜವಾಗು** (ಕ್ರಿ). ೧. ದುರ್ಬಲವಾಗು ; ಜರ್ಜರಿತವಾಗು : ಆ ಜವಂ ಜವಜವಾಗಿ ಮುಟ್ಟುಗಿಡುವನ್ನವಿನ್ನಾ ಜವಂಜವವ್ಯಸನಪುಂಜಮಂ ಕಿಡಿಪುದಾದಿ ತೀರ್ಥೇಶ್ವರಾ (ಆದಿಪು. ೧೩-೮೮) ; ಕುರವದಿಂ ಕೂಡೆ ನೆತ್ತರ್ ತೆರಳ್ದಿಣ್ಮುವಿನಂ ಮೆಯ್ಯೆಯಲ್ಲಮಂ ಜರ್ಜರಿಸಿ ಜವಜವಾಗಿರ್ದನಂ ಗುರ್ದಿ (ಸುಕುಮಾ. ೬-೩೫). ೨. ಆಲಸ್ಯವಾಗು ; ಮಾಂದ್ಯವಾಗು : ಬಳುವಳ ಬಳೆಯ ತೆಳುವಸಿರ್ಕೊರ್ಗೀಮಳಾಂಗವುಂ ಜವಜವಾಗೆ ಬೆಳದುದು ಗರ್ಬ್ಬಂ (ಕೊಲ್ಹಾ. ಶಾ. ೧೩-೩೦ ; 1186). [ ಜವಜವ + ಆಗು$_1$ ]

**ಜವಣ** 'ಜೀವಣ' ನೋ.

**ಜವಣೆ** 'ಜೀವಣ್ಣೆ' ನೋ.

**ಜವಣಿಗೆ** (ನಾ). ಉದ್ದವಾದ ಬಿದಿರಿನ ಕೋಲು; ಜಲ್ಲೆ: ಜವಣಿಗೆಯನ್ನು ತೆಗೆದುಕೊಂಡು ಅನುಭವಶಾಲಿಗಳಾದ ಬೆಸ್ತರು ನಡುಗೆರೆಯನ್ನೆಲ್ಲ ಕೆದಕಿದರು (ದೂರಸ. ೨೬೮). [ <ಜವಣೆ ]

**ಜವಣೆ** 'ಜಳವೆ' ನೋ.

**ಜವತುರಂಗ** (ನಾ). ವೇಗವಾಗಿ ಓಡುವ ಕುದುರೆ : ಸಾಸಿರ ಗೋವುಗಳ ಜವತುರಂಗವ ಬ್ಯಾಸರಿಯದೆ ತಂಗಿಗಿತ್ತ (ಕರ್ನಾಕ. ೨೮೨).

[ ಜವ$_2$ + ತುರಂಗ$_1$ ]

**ಜವತೂಣ** (ನಾ). ಯಮನನ್ನು ಹಿಂಸಿಸಿದವನು; ಶಿವ : ಏಣಾಂಚಿತಧರ ಜವ ತೂಣಾ ಶರಣಜನ ಪ್ರಾಣಾ . . . ಜಿತಸೌರಭಬಾಣಾ ರಕ್ಷಿಸು (ಉದ್ಭರೇ. ೪-೩) [ ಜವ$_1$ (<ಜಮ) + ತೂಣ್$_4$ ]

**ಜವತ್ಸವಡಿ** (ನಾ). ಮಲ್ಲಯುದ್ಧದ ಒಂದು ವರಸೆ: ಕಮ್ಮರಿ ಮುಹುಡಂ ಜವತ್ಸವಡಿ ವಾಸಗೆ . . . ಎನಿಪ್ಪ ಜಟ್ಟಿಗರ ಬಿನ್ನಣವೊಪ್ಪೆ ಕಡಂಗಿ ಕಾದಿದರ್ (ತ್ರಿಪುವಿ. ೨೬-೦೮). [ ? ]

**ಜವದಂಡ** 'ಜಮುದಂಡ' ನೋ.

**ಜವದಂಡೆ** 'ಜಮುದಂಡ' ನೋ.

**ಜವದಾಡೆ** 'ಜಮುದಾಡೆ' ನೋ.

**ಜವನ** (ನಾ). ೧. ವೇಗ ; ರಭಸ. ೨. ವೇಗವುಳ್ಳುದು ; ವೇಗಶಾಲಿಯಾದಂದು ; ಚುರುಕಾದುದಂ: ಜವನಮೆನಿಸಿರ್ದ ನಿಜದಕೆ ಜವನನಧಃಕರಿಸೆ ವಿಳಯಜಳಧರಕುಳಭೈರವರವಮನಿಳಿಸೆ (ಪಾರ್ಶ್ವಪು. ೪-೦೦೩). ೩. ವೇಗವಾಗಿ ಓಡಬಲ್ಲವನಂ; ಹರಿಕಾರ: "ಜಂಘಾಳಃ, ಜವನಃ, ವೇಗೀ— ಈ ೩ ಹರಿಕಾರಜಿಂ" (ಹಲಾಯು. ೩೯-೨೦೩). ೪. ವೇಗವುಳ್ಳ ಕುದುರೆ.

[ ಸಂ. ]

**ಜವನಿಕೆ** (ನಾ). ೧. ತೆರೆ ; ಕಾಂಡಪಟ : ಪರದೆ : "ಅಪಟೀ ಪ್ರತಿಸೀರಾ ಕಾಂಡಪಟೀ ತಿರಸ್ಕರಿಣಿಕಾಪ್ಯ ಜವನಿಕೆಯುಕ್ಕುಂ" (ವಸ್ತುಕೋ. ೪೯-೨೩) ; "ಜವನಿಕೆ ಮುಸುಕುಂ" (ಭಾರನಿ. ೦೫) ; ಅನಂಗಜಂಗಮಲತೆಪೊಲ್ ನಿಲ್ವ ಜವನಿಕೆಯು ಮಱಿಯೊಳ್ ಪೊಲ್ವಳವಳ್ ಮುಗಿಲ ಮಱಿಯ ವಿದ್ಯುಲ್ಲತೆಯಂ (ಆದಿಪು. ೯-೨೦) ; ಹರನ ಶಾಂತಿಯ ಜವನಿಕೆಯನೋಸರಿಸುವಂತೆ (ಸೀದಿರ. ದೀ. ೬೬-೧೨); ಮೇಲೆ ಜವನಿಕೆಯಂ ಪಿಡಿದು ಸಮ್ಮೇಳನದೊಳಿರ್ಪ್ಪಂದು (ಬಸವು. ೦೨-೪೪). ೨. ಮರೆ ; ಮುಚ್ಚುಮರೆ: ಜೀಯ ಜವನಿಕೆಯೇಕೆ ನೀವೆಂದೀಯಶೇಷಗುಣಂಗಳಾ ಕಾತ್ಯಾಯನೀಪತಿಗುಂಟು (ತೊರದಾ. ೪-೦೨.೦೦). ೩. (ಅಲಂ) ಮಿಥ್ಯೆ ; ನಟನೆ ; ಮಾಯೆ : ಇದು ಕಣಾ ಜಗದೀಶ್ವರನ ಜನನದ ಜಗದ್ವ್ಯಾಪಾರ ಜವನಿಕೆಯುದಿಸಿ ತೋಱಿದನೆಂಬುದಿದು ಮಿಥ್ಯಾಪ್ರಪಂಚವಲೆ (ತೊರದಾ. ೧-೮-೬೨). ೪. ಕತ್ತಲೆ (?) : ಜವನಿಕೆಯೋಡಲಿರ್ಪ್ಪಲದ ವೀರ ಭಟಾವಳಿ ನೋಡೆ ಖಳ್ಗದಿಂದವೆ ಕಲಿರತ್ನಪಾಳನ ಶಿರೋಂಬುಜಮಂ ಜಯಲಕ್ಷ್ಮಿಗಿತ್ತು ತಜ್ಜವನಿಕೆಗೊಂಡ ಗಂಡಪೆರುಮಾಳೆ ಚಮೂಪತಿಗಿಂತು ಸಾದ್ರುರ್ದಾ ಜವನಿಕೆನಾರಣಾಂಕ ವಿದುರಾಉತರಾಯನುದಗ್ರ ದೋರ್ವ್ವಲಂ (ಎಕ. XI, ಚಿತ್ರದು. ೧೨-೯ ; 1286).

[ < ಪ್ರಾ. ಜವಣಿಆ./ಸಂ. ಯವನಿಕಾ ]

**ಜವನಿಕೆಗಳೆ** (ಕ್ರಿ). ಮುಸುಕನ್ನು ತೆಗೆ ; ತೆರೆಯನ್ನು ಸರಿಸು : ಆ ಜಯಸೇನೆ ರಂಗಂಬೊಕ್ಕನಂಗಶಸ್ತ್ರಾಧಿದೇವತೆಯ ಮುಖವಸ್ತ್ರಂಗಳೆದುವೆನಿಸಿ ಜವನಿಕೆಗಳೆದು . . . ನರ್ತಿಸೆ (ನೇಮಿಪು. ೩-೧೮೦ ವ).

[ ಜವನಿಕೆ + ಕಳೆ$_1$ ]

**ಜವನಿಕೆದೆಗೆ** (ಕ್ರಿ). = ಜವನಿಕೆಗಳೆ : ಮೊಗದ ಜವನಿಕೆದೆಗದು ನೆತ್ತಿಯ ಬಗಿದು (ಕುವ್ಯಾದ್ರೋ. ೩-೦೩) : ಸುರುಚಿರ ಸೂತ್ರಧಾರಕ ತತ್ತ್ವಕಾರವ ವಿರಚಿಸಿ ಜವನಿಕೆದೆಗೆಯೆ . . . ಸುಪ್ರೌಢೆಯರುರು ಪುಷ್ಪಗಳ ಸೂಸಿದರು (ಕಂಸವಿ. ೮-೬೦). [ ಜವನಿಕೆ + ತೆಗೆ$_1$ ]

**ಜವಪುರ** (ನಾ). ಯಮನ ಪಟ್ಟಣ : ಜವಪುರಕೆ ಬಿದ್ದವರಿಗಹುದೈ ಅವಧರಿಸಲಾ ಪಿಂಡಶ್ರಾದ್ಧವು (ಕುವ್ಯಾದ್ರೋ. ೩-೦೩).

[ ಜವ$_1$ (<ಜಮ) + ಪುರ$_3$ ]

**ಜವಪುರಿ** (ನಾ). = ಜವಪುರ : ವಿಂದಾನುವಿಂದರ ಜೀವ ಧುಮ್ಮಿಕ್ಕಿದುದು ಜವಪುರಿಗೆ [ಪಾಠಾಂ. ರಕೆ] (ಕುವ್ಯಾಕ. ೩-೦೦).

[ ಜವ$_1$ (<ಜಮ) + ಪುರಿ$_2$ ]

**ಜವಪ್ರಸರ** (ನಾ). ವೇಗದ ಹೆಚ್ಚಳ : ಪವಮಾನಾತ್ಮಜನಂ ಜವಪ್ರಸರದಿಂ . . . ಮಿಗುವ ಜಾತ್ಯಶ್ವಂಗಳ್ (ಪುಷ್ಪಪು. ೨-೩೮). [ ಜವ$_2$ + ಪ್ರಸರ ]

**ಜವರಕ್ಕೆ** (ನಾ). ಕವಚ; ಚಿಲುಖತ್ತು : " ಕವಚಕಿಂತೊಪ್ಪುವುದು ಜವರಕ್ಕೆ [ಪಾಠಾಂ. ಕಂಚುಕಕಿಂತೊಪ್ಪುವುದು ಚವರಮುಂ] ಅವುತೆಯೆಂಬೀ ಪೆಸರ್ " (ಕಬ್ಬಿಕೈ. ೯೩). [ P 'ಜೀವರಕ್ಕೆ' ಎಂಬುದರ ಅಪಲಿಖಿತ ]

**ಜವರಾಜ** (ನಾ). ಯಮರಾಯ : ಕೋಪಕ್ಕೆ ಯಮರಾಜ ಪಾಪಕ್ಕೆ ಜವರಾಜ ಕೋಪಪಾಪಗಳ ಅಳಿದಂಗೆ ಯಮನು ತಾ ಕೂಪನಾಗಿಹನು (ಸರ್ವಜ್ಞ ೯೬೮). [ ಜವ$_1$ (<ಜಮ) + ರಾಜ ]

**ಜವರಾಯ** (ನಾ). = ಜವರಾಜ : ಮಿಗೆ ದೀರ್ಘಾಯುಮಿರೆ ಮುನಿದು ಕಲಿ ಜವರಾಯಂ ಕೊಲಲಾಱಿಂ (ಹಮ್ಮಿರ. ೮-೨೮) ; ಸಾಯುವನ ಕಣ್ಣಿಗೆ ಸುಳಿದವನೇ ಜವರಾಯ (ಗಾದೆ). [ ಜವ$_1$ (<ಜಮ) + ರಾಯ ]

**ಜವರುಜಂಗಿ** 'ಜಬರುಜಂಗಿ' ನೋ.

**ಜವವಳಿ** (ಕ್ರಿ). ಕಸುವು ಕಡಮೆಯಾಗು ; ಶಕ್ತಿಗುಂದು ; ದುರ್ಬಲವಾಗು : ಜವವಳಿಯಲೆಂತಾದೊಡಂ ಶಿವಶಿವಯೆನುತ ನಡೆಯಂ ನಡೆವೆ ನಾನವನಿಯೊಳಗೆ (ಬಸವು. ೪೪-೦೨) ; ಪವನಸುತನವತರಿಸೆ ಪಾರ್ಥಿವನಿವಹ ನಡುಗಿತು ದೈತ್ಯಗಣವುಱಿ ಜವವಳಿಯೆ (ಸಂಭಶ. ೦೫-೩೬).

[ ಜವ$_2$ + ಅಳಿ$_1$ (<ಅಱಿ$_1$) ]

**ಜವವೇಳು** (ಕ್ರಿ). ಒತ್ತರಿಸಿ ಬರು ; ತೀವ್ರವಾಗಿ ಬರು : ಬಲಿದ ತೂಕಡಿಕೆಗಳ ನಸು ಬೆದಱಿಲಹುಗಳ ಜವವೆದ್ದ ಝೂಮ್ಮಿನ ಬಲೆಗೆ ಸಿಲುಕಿದ ಬಲವನರ್ಜುನದೇವನೀಕ್ಷಿಸಿದ (ಕುವ್ಯಾದ್ರೋ. ೦೬-೪).

[ ಜವ$_2$ + ಏಳು$_1$ (<ಏೞ್$_1$) ]

**ಜವಪೊಳಲ್** (ನಾ). = ಜವಪುರ : ಈ ಸನ್ನಿಪಾತಂ ಮುಟ್ಟಿದ ಪುರುಷನು ಜವಪೊಳಲ್ಗೆಯ್ದುವನೆಂದು ಪೇಳಿಹುದು (ಸಕವೈ. ೦೩೩).

[ ಜವ$_1$ (<ಜಮ) + ಪೊಳಲ್ (<ಪೊಬಲ್) ]

**ಜವಹೀನ** (ನಾ). ವೇಗವಿಲ್ಲದುದು; ವೇಗವಾಗಿ ಓಡಲಾರದಂದು: × × × ಅಧಿಕವಲ್ಪಮಲಮಪ್ಪೊಡಂತು ನೊಸಲಸಿದಾಗುವುದುಮದು ಕಳೆಯಲಾಗದು ಜವಹೀನಂ ವಾಜಿ ನಾಲ್ಕು ಸಂವತ್ಸರಮಂ (ಅಶ್ವಶಾ. ೬-೫).
[ ಜವ$_2$ + ಹೀನ ]

**ಜವಹುರ** (ನಾ).=ಜವಪುರ : ಎರಡು ಪದಂಗಳಿಪಭ್ರಂಶಕ್ಕೆ–ಅಚ್ಚಸ್ಪಟಿಕ–ಅಚ್ಚವಳಿಕು . . . ಯಮಪುರ–ಜವಹುರ (ಶಮದ. ೨೮೯ ಪ್ರಯೋ) : ಆ ಜವಹುರಕೆಯಿಂಬುಮಾಡುವ ನಿಷ್ಠುರಪರಿಗ್ರಹವನ್ನು ನಂಬಿದೆನಾನಿಂದುವರ (ಶ್ರೀಪಾಲ. ೦೪-೪೨) : ಜವಹುರದ ಜಕ್ಕಂದೊಟಲಿಯಂ ಗೆಲೆವರ್ಪ ಕಾಟ್ಕ್ರ್ಯೀಣವಳಗದಿಂದೆಯುಂ (ರಾಮಾಶ್ವ. ೩-೨೫).
[ <ಸಂ. ಯಮಪುರ ]

**ಜವಹುರಿ** (ನಾ).=ಜವಪುರ : ಜವದಿಂದಂ ಜವಹುರಿಗೆ ಗಳಿಪುವವೊಲಾದಪ ಕಾಳಿಕೆ ತೆಂಕದೆಸೆಯ ಮೊಗವಾಗಿಪ್ಪರ್ಗಳು (ಚಾಸಪ. ೮೮).
[ <ಸಂ. ಯಮಪುರೀ ]

**ಜವಳ$_1$** 'ಜಮಳ' ನೋ.

**ಜವಳ$_2$**(ನಾ). ತೂಕದ ಒಂದು ಪ್ರಮಾಣ,–ಅಳತೆ: ಧಾರಾಪೂರ್ವಕವಾಗಿ ಕೊಟ್ಟಾಯಮಂತೆಂದೊಡೆ ಅಡಕೆ ಹೇಱಿಂಗೆ ಅಯ್ವತ್ತು ಜವಳಕ್ಕೆಪ್ಪತ್ತು . . . ಹತ್ತಿ ಮಳವೆಗಯ್ವಲಂ ಭಂಡಿಯ ಕರುಸೆಯ ಮಳವೆಗೆರಡು ಬೀಸಿಗೆ ಜವಳಕ್ಕೆ ಪಲಂ ಪತ್ತು (ಎಇ. XIX, ೩೩-೨೬ : 1130): ಸು(ಶು)ಕ್ರವಾರದ ಸಂತೆಯಂ ಮಾಡಿ ಬಿಟ್ಟಾಯಮಂತೆ[ಂ]ದೊಡೆ ಮಾಱಿದ ಅಡಕೆಯ [ಜವ]ಳಕ್ಕಡಕೆಯಿಪ್ಪತ್ತು . . . ಎತ್ತಿನ ಜವಳಮಂ ಬಿರಿಚಿದಲ್ಲಿಯಡಕೆಯಯ್ವತ್ತು (ಎಇ. XIX, ೩೮-೨೨, : 1144) : ಮೆಳಸಿನ ಹೇಱಿಂಗೆ ಮೆಳಸೊಮ್ಮಾನಂ ಆ ಜವಳಕ್ಕೆ ಅರೆಮಾನಂ (ಎಇ. XIII, ೨೦-೫೫ : 1204) : ಬಿಟ್ಟ ಜವಳಕ್ಕೆ ಹತ್ತಡಕೆ ಅರಸಿನ ಆಲ ಸಕ್ಕರೆ ಬಿಟ್ಟ ಜವಳಕ್ಕೆ ಅಯ್ವಲ ಹತ್ತಿಯ ಮಳವೆಗಯ್ವಲಂ (ಸೌಇಇ. XX, ೨೯೯-೯; 12ನೆಯ ಶತ). [ ? ]

**ಜವಳಂಗೊಳ್, ಜವಳಿಗೊಳ್** (ಕ್ರಿ). ಬೆರೆ ; ಕೂಡಿಕೊಳ್ಳು ; ಸೇರು : ಗರುಗ, ಹುರುಳಿ, ನೀಲಿ, ಈ ಮೂರನ್ನು ಜವಳಂಗೊಳ್ಳೆ ಕಳರಿ ಎಂಟು ಹಲ ನೀರಿಂದ ನೆನೆಯಲಿಡುವುದು (ವಿಶ್ವಿ. ೨೦೮). **ಜವಳಿಗೊಳ್** : ಬಂದರಂದು ಬಲ್ಗೋಕೆವಡೆದು ಸಿಂಗರದಿಂಗಡಲ ತೆರೆಯ ಸಾಲ್ಜವಳಿಗೊಂಡವೊಲ್ (ಉದ್ಭಟ. ೫-೨೬). [ ಜವಳ$_1$ (<ಜಮಳ) + ಕೊಳ್$_1$]

**ಜವಳಂಬು** (ನಾ). ಬಾಣಗಳ ಜೊತೆ ; ಎರಡು ಬಾಣ : ಕಾದುವಲ್ಲದೆ ಕಲಹವಲ್ಲದೀಕ್ಷಣವೆಂದು ಜವಳಂಬನಿಟ್ಟು ಲವನು ಪಾದಕೊಂದನೆಗ್ಗೆದು (ಜನಮು. ೩೯-೪೪). [ಜವಳ$_1$ (<ಜಮಳ) + ಅಂಬು$_2$ ]

**ಜವಳಗೆಯ್** (ನಾ). ಒಂದು ಪ್ರದೇಶದ ಹೆಸರಂ (?) : ಮಣ್ಣಾಳಕಂ ಕಾಟಿಯಣಂ ಜವಳಗೆಯ ಮೂಡಪೊಲದಲು ಬೆಂಕೊಳ್ವನ ಕೋಲಲು ಬಿಟ್ಟ ಕೆಯಿ ಮತ್ತರ್ರೈವತ್ತು (ಎಇ. XXVII, ೭೩-೫೦; 1114). 'ಜವಳಿ$_5$' ಪರಾ. [ ಜವಳ? + ಕೆಯ್$_4$ ]

**ಜವಳಾಗು** (ಕ್ರಿ). ಜೊತೆಯಾಗು ; ಕೂಡು : ಧವಳ ಸರೋಜಾಕ್ಷ ತಾನಲ್ಲದನ್ಯರೊಳ್ ಜವಳಾಗದಂತೆ ವ್ಯಸಿಕದ ಕವಳವ ಕುಡುವಂತೆ ರತ್ನಸಂಬಳಿಗೆ ದಾಳ್ದವಳಿರ್ದಳತಿಸಮ್ಮುದದಿ (ಮೋಹತ. ೪-೬). 'ಜವಳಂಗೊಳ್' ಪರಾ.
[ ಜವಳ$_1$ (<ಜಮಳ) + ಆಗು$_1$ ]

**ಜವಳಿ$_1$, ಜವುಳಿ$_1$, ಜೌಳಿ** (ನಾ). ಬಟ್ಟೆ ; ಅರಿವೆ : ವಸ್ತ್ರ : "ಸೀರೆಗಂ ಜುಗದೊಳಂ ಜವಳಿ" (ಶಬ್ದಮಂ. ೦೦೩) ; ಮಟ್ಟುವಡೆಗಳೊಳೆಲ್ಲಂ ಪಾಸಿ ಕಾರೋಹಣದ ಕಕ್ಕರವಟಿಯಿಗೆಯ ಚಿತ್ರಾವಟಿಯ . . . ಬಣ್ಣದ ಕಣದ ಬಣ್ಣವಣ್ಣಿಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಆದಿಪು. ೪–೩೪ ವ) ; ತುಡುವ ತೊಡಿಗೆಗಳುಂ ಉಡಲ್ಕುಡುವ ಜವಳಿಗಳುಂ . . . ಪೂಜಿಸುವ ಕಣಿಶಂಗಳುಮೆಸೆಯೆ (ಲೀಲಾವ. ೬–೩೮ ವ) : ಮಂಗಳಾರತಿಗಳೆತ್ತಿದರು ನಿವಾಳಿಯ ಮಂಗಳ ಜವಳಿ ಚಲ್ಲಿದವು (ಕುಮಾರಾಮ. ೪೦–೮೦) : ಎತ್ತುವಾರತಿ ನಿವಳಿಪ ಜವಳಿಯ ದಿಂಡು ಮುತ್ತುರತ್ನಗಳ ಕಾಣಿಕೆಯ ಇತ್ತು (ಮೋಹತ. ೨೫–೪೩). **ಜವುಳಿ$_1$** : ಮಂಗಳ ಜವುಳಿ ರಘುಕುಂಬ ಮನುಂಗುರವಾ ಕರ್ಣಶೋಭೆಯಂ ಪ್ರಿಯದಿಂ ಪೈದ್ಯಂಗಿತ್ತು (ಅಶ್ವಶಾ. ೮-೩೦) : ವಿಶೇಷವಾಗಿ ಜವುಳೀವ್ಯಾಪಾರವು ನಡಿಯುತ್ತದೆ (ಭೂಗೋಳ. ೪೪). **ಜೌಳಿ** : ಜನಿಸಿ ಜೌಳಿ ಮುನಾಪ್ರದರಿಂದ (ಎಕ. I, ೦೬-೨೪ ; 1820); ಅಡೋನಿ (ಆದಿವಾನಿ) ಎಂಬ ಊರು ಜೌಳೀವ್ಯಾಪಾರದಿಂದ ಪ್ರಸಿದ್ಧವಾದದ್ದು (ಭೂಗೋಳ. ೮೪).

ಜವಳಿಯ ಮಳಿಗೆ = ಬಟ್ಟೆಯಂ ಅಂಗಡಿ : ನಾನಾವರ್ಣದ ಜವಳಿಯ ಮಳಿಗೆಗಳೆಸೆದುವರ್ತಿಯಲಿ (ಕಂಸವಿ. ೬-೭೦). ಜವಳಿಯರು = ವಸ್ತ್ರದ ವ್ಯಾಪಾರಿಗಳಂ : ಪೊಳೆವ ಹೊಂಬಣ್ಣದ ಹೊದಕೆಯ ಮಾರುವ ಜವಳಿಯರಿರ್ದರೊಂದೆಸೆಯ (ಅಬ್ಬಲೂ. ೩-೭೯).
[ ದೇ.೫ ತಮಿ. ಮಲ. ಚವಳಿ ; ತುಳು. ಜವಳಿ, ಜವುಳಿ, ಜೌಳಿ :
ತೆಲು. ಜವಳಿ ]

**ಜವಳಿ$_2$** 'ಜವುಳು' ನೋ.

**ಜವಳಿ$_3$** 'ಜಮಳ' ನೋ.

**ಜವಳಿ$_4$** 'ಚವಳಿ' ನೋ.

**ಜವಳಿ$_5$** (ನಾ). ಒಂದಂ ಬಗೆಯ ಭೂಮಿ (?) : ಹೊಂನ ಜವಳಿಯಾಗಿ ಹತ್ತು ಕೇರಿ ಕಟ್ಟಳೆಯ × × (ಸೌಇಎ. ೦೯೩೨, ಉಡುಬಿ. ೩೦೩-೦೨; 1397); ಅಣ್ಣಸಟಿಯ ಹಿರಿಯ ಗದ್ದೆಯಿಂದಂ ಪಡುವಲು ತೆಂಕಲು ಹಗ್ಗಡಿತಿಯ ಮೂಲದ ಜವಳಿಯ ತಾಱ ಗಡಿಯಿಂದಂ ಬಡಗಲು (ಸೌಇಇ. IX-II, ೪೨೪-೨೪ : 1401); ಮೂಂನ್ಕ ಹೊಂನ ಜವಳಿಯೆಂದು ಪಾಲಿಸಿದು (ಸೌಇಎ. ೦೯೩೦, ಉಡುಬಿ. ೫೯೫-೦೩ ; ?). [ ? ]

**ಜವಳಿಅಂಗಡಿ** 'ಜವಳಿಯಂಗಡಿ' ನೋ.

**ಜವಳಿಕ** (ನಾ). ಬಟ್ಟೆಯ ವ್ಯಾಪಾರಿ ; "ದೂಸಿಗ" (ಡಕುನಿ. ೬. I, ೮೩).
[ ಜವಳಿ$_1$ + – ಕ$_3$ ]

**ಜವಳಿಕಾಯಿ** 'ಚವಳಿಕಾಯಿ' ನೋ.

**ಜವಳಿಕಾರ** (ನಾ).=ಜವಳಿಕ: (೬). [ಜವಳಿ$_1$ + – ಕಾರ$_1$ (< – ಕಾಱ)]

**ಜವಳಿಗ** (ನಾ). = ಜವಳಿಕ : ಹೊಂಬಣ್ಣದ ಹೊದಕೆಯ ಮಾರುವ ಮಳಿಗೆಯೊಳ್ ಜವಳಿಗರೆಸೆಯೆ[ಪಾಠಾಂ. ಜವಳಿಯರಿರ್ದರೊಂದೆಸೆಯ] (ಅಬ್ಬಲೂ. ೩-೮೯). [ ಜವಳಿ$_1$ + – ಗ$_2$ ]

**ಜವಳಿಗಟ್ಟು** (ನಾ). ಎರಡನ್ನು ಕೂಡಿಸಿ ಕಟ್ಟಿದ ಕಟ್ಟು ; ಜೊತೆಕಟ್ಟು : ಪುರ್ವಂಬ ಜವಳಿಗಟ್ಟಿನ ಕರ್ವಿನ ವಿಲ್ಗಳ್ಗೆ ಬಿಗಿದ ಮಧುಕರಮಾಲಾಮೌರ್ವಿಯೆನೆ . . . ಮೆಱೆದುದವರ ತಳ್ತಿಮೆಂದುಱುಗಲ್ (ಯಶೋಧ. ೨-೨೬). [ ಜವಳಿ$_3$ (<ಜಮಳ) + ಕಟ್ಟು$_2$ ]

**ಜವಳಿಗದ** 'ಜವಳಿಗದವು' ನೋ.

**ಜವಳಿಗದವು, ಜವಳಿಗದ, ಜವಳಿಗದಹಂ** (ನಾ). ಎರಡಂ ಪಡಿ ; ಜೋಡಿ ಕದ : ಒಂದು ಶಿವಲಿಂಗವಂ ತಂದನೆರಡೆಪಯೆಂಬ ಜವಳಿಗದವಿನ ಬೀಯಗದ ಕೈಯ ತರ್ಪಂತಿರೆ (ಸೋಮದ. ೧-೮೮). **ಜವಳಿಗದ**: ಜವನಿಕೆಯ ಸೆಱಗು ಸರಿವಂತೆ ಘಳಿಘಳಿಲೆಂದು ಜವಳಿಗದದೆಗೆಯೆ (ಸೋಮದ. ೫-೩೫) : ಜವಳಿಗದವಂ ದ್ವಾರವಟ್ಟದ ಹವಣಗಾ ಬಾಗಿಲೊಳಮರ್ಚಿಸಿ (ಬಸವು. ೧೬-೯) ; ಎನ್ನಧರ ಜವಳಿಗದ ಎನ್ನ ನಾಸಾಪುಟವು ನನ್ನಿಯಿಂ ಸೌರಭ್ಯರಸಘಟಿತವು (ಸುಷಾರ. ೦೬-೩). **ಜವಳಿಗದಹು** : ಅಲರ್ಗಣ್ಣವೆಯ ಜವಳಿಗದಹುಗಳನುಗಿದೆದ್ದು ನಿಂದು (ಸೌಂದರ. ೦೨-೪೨). 'ಅಮಳ್ಗದ' ಪರಾ.
[ ಜವಳಿ$_3$ (<ಜಮಳ) + ಕದವು$_1$ ]

**ಜವಳಿಗದಹು** 'ಜವಳಿಗದವು' ನೋ.

**ಜವಳಿಗವಾಟ** (ನಾ).=ಜವಳಿಗದವು: ಜವಳಿಗವಾಟದ ಬೀಯಗದ ಬಲು ಲಾಳವಿಂಡಿಗೆಯ ಹುಲಿಮುಖದ ಪರಿಯುಗವ ಸುತ್ತಲು ನಿಲಿಸಿ . . . ರಾಜಾಲಯದ ಬಲ್ಮೆಯ ನೋಡಿ ಬೆಜಗಾದ (ಮ್ರಾಶಾ. ೩-೩೦). [ಜವಳಿ$_3$ (<ಜವಮಳ) + ಕವಾಟ]

**ಜವಳಿಗಹಳೆ, ಜವಳಿಗಾಳೆ** (ನಾ). ಜೋಡಂಕಹಳೆ: ಧವಳಶಂಖಂ ಕರೆವ ಜವಳಿಗಹಳೆಗಳಲ್ಲಿ . . . ನೆರೆದುದು ಚಾತುರಂಗಬಲ (ಇಹರ. ದೇ. ೩೮-೧). **ಜವಳಿಗಾಳೆ:** ಪಟಹದ ಢಕ್ಕೆಯ ಧವಳಶಂಖದ ಜವಳಿಗಾಳೆಯ ತಿತ್ತಿರಿಯ ಕಿನ್ನರಿಯ . . . ಕೋಳಾಹಳಂ ನೆಗಳೆ (ಗಿರಿಶ. ೬-೬೬ ವ). [ಜವಳಿ$_3$ (<ಜವಮಳ) + ಕಹಳೆ]

**ಜವಳಿಗಾಳೆ** 'ಜವಳಿಗಹಳೆ' ನೋ.

**ಜವಳಿಗುಳ** (ನಾ). ಎರಡು ಬಗೆಯ ತೆರಿಗೆ: ಧರ್ಮ್ಮಗುರುಗಳಲ್ಲಿ ಜವಳಿ[ಗು]ಳವಂ ಮನ್ನಣೆ ಪ್ರತಿಪತ್ತಿವೆರಸು ಬ್ರಹ್ಮಪುರಿಗೆ ಕೇರಿಯ[ಕೆ]ಯ್ಯುಮಂ . . . ಪಡೆದು (ಸೌಇಇ. XI-ї. ೬೪-೧೬; 1028). [ಜವಳಿ$_3$ (<ಜವಮಳ) + ಕುಳ$_2$]

**ಜವಳಿಗೊಡೆ** (ನಾ). ಜೋಡು ಕೊಡೆ,-ಛತ್ರಿ: ಲಲನೆಯ ಬಾಸೆಯ ಕರ್ವೇಂ ಗಲೆವಂದುದೊ . . . ಮೊಲೆಯೆಂಬ ಜವಳಿಗೊಡೆಗಳ್ಗಲರಂಬಂ ತಿರ್ದಿ ಪಿಡಿದ ನೀಲದ ಕಾವಂ (ಅನಂಪು. ೧೨-೭೪). 'ಅವಮಳ್ಗೊಡೆ' ಪರಾ. [ಜವಳಿ$_3$ (<ಜವಮಳ) + ಕೊಡೆ$_2$]

**ಜವಳಿಗೊಳ್** 'ಜವಳಂಗೊಳ್' ನೋ.

**ಜವಳಿಗೊಳಿಸು** (ಕ್ರಿ). ಜೊತೆಗೂಡಿಸು; ಸೇರಿಸು: ಸಜ್ಜೆಯ'ಮನೆಯ ಸಿರಿಮಂಚದ ಹಂಸತೂಳತಳ್ಪದೊಳ್ಜವಳಿಗೊಳಿಸಿ ತಾನುಂ ಸಖೀಜನಮುಂ ಜಾಣಂ ಜಾಱಿರ್ (ಮಲುರ. ಹ. ೧೬೯-೨೪); ಅಗಲ್ದೋರ್ವರ್ಗಿದು ಜವಳಿಗೊಳಿಪ ಮಂತ್ರದ ಸದನಂ (ವೀರಪಿ. ೦-೩೪). [ಜವಳಿಗೊಳ್ + - ಇಸು$_3$]

**ಜವಳಿಜಂತ್ರ** (ನಾ). ಜೋಡಿ ಯಂತ್ರ; ಅವಳಿಯಾಗಿರುವ ಯಂತ್ರ: ಸಾನಂದದಿಂದೆ ನೆರೆದವರ್ಗೆನಾಂಕನ. ಜವಳಿಜಂತ್ರಮೆಂಬಿನಮಿನಿಯರ್ (ಉದ್ಭಟ. ೮-೧೧೬); ಸೂಳೋಸರಿಸೆ ಕೆಡಪಿದ ಜವಳಿಜಂತ್ರದ ಬೊಂಬೆಯೆನಲೀರ್ವರು ಮಱಿದರೊಡಲ (ಸಾಳ್ವಭಾ. ೦೮-೩೭). 'ಅವಮಳ್ಜಂತ್ರ' ಪರಾ. [ಜವಳಿ$_3$ (<ಜವಮಳ) + ಜಂತ್ರ]

**ಜವಳಿಜೀವ** (ನಾ). ಒಂದೇ ಬಗೆಯಾದ ಎರಡು ಜೀವ; ಅವಳಿಜೀವ: ಹವಣಿಗೆ ನಿಲ್ಲುವದೇ ಕೊನರಿ ಕೊಬ್ಬಿದ ಸ್ನೇಹದಧಳನು ತೂರೆಯೆಂದರನಗ ಜವಳಿಜೀವಗಳಂತೆ ಸುರತದೊಳಿರ್ದೆಲ್ಲದಿವತಿಯನೆಂತು ಪೊಲಿಸುವ (ಸೌಂದರ್ಯ. ೪-೬೩). [ಜವಳಿ$_3$ (<ಜವಮಳ) + ಜೀವ]

**ಜವಳಿಝುಣಂಬ** (ನಾ). ಒಂದು ಬಗೆಯ ಜೋಡಿ ವಸ್ತ್ರ,-ಗೌರವದ ಉಡಂಗೊರೆ: ಜವಳಿಝುಣಂಬಮಂ ಕೊಡೆಯುನನ್ದಳಮಂ ಚಮರೀರುಹಂಗಳಂ (ಬೊಂಕಣ. ೦೯೩೪, ಹಿರೇಕೆರೂರ್. ೨೦-೨೪; 1121). [ಜವಳಿ$_3$ (<ಜವಮಳ) + ಝುಣಂಬ (<ಜಳಂಬ)]

**ಜವಳಿದಟ್ಟೆ** (ನಾ). ತಟ್ಟೆಗಳ ಜೊತೆ; ಎರಡು ತಬಕ: ಜವಳಿದಟ್ಟೆಗಳು ಗೋಮುಖವು ದೀಪಸ್ತಂಭ ಚವುಪಿಸತ್ತಿಗೆಗಳು (ಕೃಷ್ಣವಿ. ೨-೪೫). [ಜವಳಿ$_3$ (<ಜವಮಳ) + ತಟ್ಟೆ]

**ಜವಳಿದಲೆ** (ನಾ). ಜೋಡಿತಲೆ; ಎರಡುತಲೆ: ಬೇರೊಂದಱನೆರಡಾದ ಲತಿಕೆಯೋ ಮಾರಾನಲನ ಜವಳಿದಲೆಯೋ . . . ಎಂಬಂತೆ (ಜಯುಕಾ. ೨-೯). 'ಜವಳಿದಲೆಗ', 'ಜವಳಿದಲೆವಕ್ಕಿ' ಪರಾ. [ಜವಳಿ$_3$ (<ಜವಮಳ)+ ತಲೆ$_1$]

**ಜವಳಿದಲೆಗ** (ನಾ).=ಜವಳಿದಲೆವಕ್ಕಿ: ಜವಳಿದಲೆಗನಳಲಿಸಿ ಬಂದು ತಾಂ ಗಜದ ಮೆಯ್ಮೆಳಲ ಸಾರ್ದು ಸ್ವೈತಳಿಸುವುವು (ನಂದಿಪು. ೨-೨೫). [ಜವಳಿದಲೆ + - ಗ$_2$]

**ಜವಳಿದಲೆವಕ್ಕಿ** (ನಾ). ಎರಡು ತಲೆಯ ಹಕ್ಕಿ; ಗಂಡಭೇರುಂಡ: ಜವಳಿದಲೆವಕ್ಕಿಗಳಿನೇಳ್ಗಿವೆತ್ತುದು (ರೇವಣ. ೩೬-೭). 'ಅವಮಳ್ದಲೆವಕ್ಕಿ' ಪರಾ. [ಜವಳಿದಲೆ + ಪಕ್ಕಿ$_1$]

**ಜವಳಿದುಂಬಿ** (ನಾ). ತುಂಬಿಗಳ ಜೋಡಿ: ಏಕ್ಕಲದುಂಬಿಯಿಂ ಜವಳಿದುಂಬಿಯಿಂ . . . ಬಗೆಗೊಂಡುದು ಕೂಡೆ ಬನಂ ಬಸಂತದೊಳ್ (ಸುಕುಸು. ೧೧-೧೦). [ಜವಳಿ$_3$ (<ಜವಮಳ) + ತುಂಬಿ$_1$]

**ಜವಳಿದುಮ್ಮಾನ** (ನಾ). ಇಮ್ಮಡಿಯಾದ ದುಃಖ, - ಚಿಂತೆ: ದುರ್ಯೋಧನನ ಜನನಿಯು ಜವಳಿದುಮ್ಮಾನವನು ಬಣ್ಣಿಸಲಱಿಯೆ (ಕುವ್ಯಾಅ. ೭-೪೬). [ಜವಳಿ$_3$ (<ಜವಮಳ) + ದುಮ್ಮಾನ]

**ಜವಳಿದೆಗೆ** (ಕ್ರಿ). ದ್ರುವವಿಲ್ಲದಂತಾಗು; ಒಣಗಿಹೋಗು: ತವಕ ತಗ್ಗಿತು ಭಟರ ತಾಳಿಗೆ ಜವಳಿ[ಪಾಠಾಂ. ದ್ರುವವ]ದೆಗೆದುದು ಮನಕೆ ಭೀತಿಯ ಗವಸಣಿಗೆ ಘಾಡಿಸಿತು ಜಾಳಿಸಿತದಟರ ಪಸರಣ (ಕುವ್ಯಾದ್ರೋ. ೧೫-೩೮). [ಜವಳಿ$_2$ (<ಜವುಳು) + ತೆಗೆ$_1$]

**ಜವಳಿನುಡಿ** (ನಾ.) ೧. ಎರಡು ಮಾತು; ಎರಡು ಶಬ್ದ: ಅವಿರತಂ ಕಲ್ಯಾಣದೊಳಗೆಣಸುವರೆ ಜನನುಂ ಬಸದಿಯೆಂಬೀ ಜವಳಿನುಡಿಯುಲ್ಲೆನಲು ಹುಡಿಹುಡಿಮಾಡಿ . . . ಅತಿಶೌರ್ಯ ಗುಣವರ್ಧನನೆನಿಸಿದ (ಬಸಪು. ೫೨-೪೮). ೨. ಇಬ್ಬಗೆಯಾದ ಮಾತು; ಮೊದಲು ಆಡಿದುದನ್ನು ಅಲ್ಲಗಳೆಯುವ ಎರಡನೆಯ ಮಾತು: ಜವಳಿನುಡಿಗಂಜುವೆನು ಘನ ಚಾಪವನು ಪೂಜಿದವಂಗೆ ಮಗಳನು ಜವದಿ ಕುಡುವಾ ಭಾಷೆ ತನ್ನದು (ರಾಮಾಸಂ. ೧-೪-೨೩). [ಜವಳಿ$_3$ (<ಜವಮಳ) + ನುಡಿ$_2$]

**ಜವಳಿಪಡಿ** 'ಜವಳಿವಡಿ' ನೋ.

**ಜವಳಿಮುದ್ದಳೆ** 'ಜವಳಿವದ್ದಳೆ' ನೋ.

**ಜವಳಿಯಂಗಡಿ,ಜವಳಿಅಂಗಡಿ** (ನಾ).ಬಟ್ಟೆಯಂಗಡಿ: ಚಕಚಕಿಸುತಿರ್ದವಾ ಜವಳಿಯಂಗಡಿಗಳತಿ ಸಿಂಗರಿಸಿ ಸೊಬಗುವೆರಸಿ (ಗುರು ಪಾ. ೦-೩೨). **ಜವಳಿಅಂಗಡಿ:** ಝುಗಝುಗಿಸುವ ಜವಳೀಅಂಗಡಿ ಸಾಲುಗಳಿಂದಲಹ (ಸಾಗಂಧಿ. ೫೦೯-೦೨). [ಜವಳಿ$_1$ + ಅಂಗಡಿ (<ಅಂಗಾಡಿ)]

**ಜವಳಿವಡಿ, ಜವಳಿಪಡಿ** (ನಾ).=ಜವಳಿಗದವು: ಎಳದಂಗಿಸೆಳೆಯೊಳೆಯನವರ್ಕವಡೆಯ ಪೆಣೆದು ಸಂಪಗೆಯ ಮುಗುಳ ನಗೆ[ನೆ]ಗಳಂ ತೆತ್ತಿಸಿ ಬಿತ್ತರಂಬಡೆದ ಜವಳಿವಡಿಗಳೊಳಂ (ಚಂದ್ರಪು. ೭-೯೫ ವ). **ಜವಳಿಪಡಿ:** ಪಚ್ಚೆಯ ಲೋವೆ ಪವಳದ ಪೊಳೆವ ಜವಳಿಪಡಿಯಿಂದ . . . ಇಸೆಗತಿ ಚಲುವಾಗಿಹುವು (ಅಂಜಿಚ. ೩-೦೦೨). [ಜವಳಿ$_3$ (<ಜವಮಳ) + ಪಡಿ$_3$]

**ಜವಳಿವದ್ದಳೆ, ಜವಳಿಮುದ್ದಳೆ** (ನಾ). ಜೋಡಿಮದ್ದಳೆ; ಮದ್ದಳೆಗಳ ಜೊತೆ: ಯಮಳಮರ್ದಳ - ಜವಳಿವದ್ದಳೆ (ಕಮುದ. ೨೯೩ ಪ್ರಯೋ). **ಜವಳಿಮುದ್ದಳೆ:** ಬೀಣೆಯ ಜವಳಿಮುದ್ದಳೆಯ ಕಂಸಾಳೆಯ ಸಂಕಿನ ಕಾಳೆಯದ ಮೇಳದವರ್ (ರಾಮಾಶ್ವ. ೭೮-೦೯). [ಜವಳಿ$_3$ (<ಜವಮಳ) + ಮದ್ದಳೆ (<ಮದ್ದಲೆ)]

**ಜವಳಿವಸರ** (ನಾ).=ಜವಳಿಯಂಗಡಿ: ನಮ್ಮಂತೆ ಧರೆಯೊಳಗೆ ಪೆಣ್ಗಂಡುಗಳ ಲಜ್ಜೆಯಂ ಕಾಯ್ವ ಒರಿಯತನಮೆಲ್ಲಿಯುದೆನಿಪ್ಪ ಪೆರ್ಮೆಯೊಳಲ್ಲಿ ಜವಳಿವಸರಗಳೆಸೆದುವು (ಚಬಪು. ೧೦-೪೫). [ಜವಳಿ$_1$ + ಪಸರ]

**ಜವಳಿವಾತು** (ನಾ). = ಜವಳಿನುಡಿ ೨: ಬಿಡು ಜಾಳುನುಡಿಗಳ ಜವಳಿವಾತನೆನುತ್ತ ನರನೆಚ್ಚ (ಕುವ್ಯಾಕ. ೨೨-೨೪). [ಜವಳಿ$_3$ (<ಜವಮಳ) + ಮಾತು$_1$]

**ಜವಳಿವಿಡಿ** (ಕ್ರಿ). ಜೊತೆಯಾಗಿ ಹಿಡಿ; ಜೋಡಿಸಿ ಹಿಡಿ: ಹರಿ ನಗುತೆರಡು ಕೈಯಲಿ ಜವಳಿವಿಡಿದಿಬ್ಬರನು ವರಕೈಲಾಸಪರ್ವತಕೆ ಅವದಿರನು ತಿರಿಹಿಟ್ಟಡೆ . . . ಬಿದ್ದರು (ನಿಘಾಗ. ೧೦-೫೩-೦೩). [ಜವಳಿ$_3$ (<ಜವಮಳ) + ಪಿಡಿ$_1$]

**ಜವಳಿವೆಟ್ಟು** (ನಾ). ಎರಡು ಬೆಟ್ಟ; ಬೆಟ್ಟಗಳ ಜೋಡಿ: ಜವಳಿವೆಟ್ಟುಗಳ ಮೇಲೆ ಮಳೆಗಱೆವ ಮೇಘಗಳಂತೆ ಕರ್ಣದುರ್ಯೋಧನರ ಮೇಲೆ ಬಾಣದ ಮಳೆಯಂ ಕಱೆವುತ್ತುಂ (ಭಾರಶಾಂ. ೮). [ಜವಳಿ$_{8}$ (<ಜವಳ) + ಬೆಟ್ಟು$_{೭}$]

**ಜವಳಿವೆಱೆ** (ನಾ). ಚಂದ್ರರ ಜೋಡಿ: ಜವಳಿವೆಱೆ ಮನುಜರೂಪದಿ ನವನಿಯೊಳೊಗೆದಂತೆ ಕಾಂತಿ ಮೆಱೆವಪುಂಡರೀಕಂಬಿರ್ವರ್ ಚೆಲ್ವಿಕೆ (ಯಕೋದ. ೧-೬೨): ಪೊಳೆವಮುರ್ದಂ ಕಾಂಚನಯುಗ ಕಳಶಕ್ಕಂ ಜವಳಿ ವೆಱೆಯ ಕಱೆವಂತೆರಡುಂ ಬಿಳಿಯಾನೆ ಮಿಸಿಸೆ . . . ಲಕ್ಷ್ಮಿಯುಂ ಸತಿ ಕಂಡಳ್ (ಅನಂಪು. ೪-೧೧೬). [ಜವಳಿ$_{3}$ (<ಜವಳ) + ವೆಱೆ$_{3}$]

**ಜವಳಿಸು** (ಕ್ರಿ). ಜೊತೆಗೂಡು; ಒಂದೆಡೆ ಸೇರು; ಕೂಡಿಕೊಳ್ಳು: ಎಳಮುತ್ತುಗಳ ಚಂದ್ರಿಕೆ ಜವಳಿಸಿದವೊಂದೊಂದನೌಕಿದವವಿರಳಿತ ಮಣಿ ಕಿರಣವೇಣೀಬಂಧಬಂಧುರದಿ (ಕುವ್ಯಾಸ. ೧೬-೨೭); ಒಸೆದೆರಡುಕಡೆಯಾನೆಗಳು ಜವಳಿಸಿ ಬರಲು ಹರವೀಥಿಯಲಿ ಈಕ್ಷಿಸುವ ಜನಗಳ ಕಣ್ಣ ಪುಣ್ಯದ ಪುಂಜವೆನಿಸಿದರು (ಸಾಳ್ವಭಾ. ೧೬-೦೧). [ಜವಳ$_{1}$ (<ಜವಳ)+ -ಇಸು$_{3}$]

**ಜವಳು** 'ಜವುಳು' ನೋ.

**ಜವಳಿ** 'ಜಳವೆ' ನೋ.

**ಜವಳಿಪಾದ** (ನಾ). ಗಳುವಿನಂತಹ ಕಾಲು; ಉದ್ದವಾಗಿದ್ದು, ತೆಳುವಾಗಿರುವ ಕಾಲು (?): ಆವ ಸ್ತ್ರೀಯು ವಿದ್ರೂಪವು ಬೆಳ್ಳಾಗಿಯಿದ್ದವಳು ಜವಳಿಪಾದವುಳ್ಳವಳು . . . ಪುರುಷಂಗೆ ವೈರಮನೆಯ್ದುವರು (ಸಾಮುಲ. ೬೬-೧೩). [ಜವಳಿ (<ಜಳವೆ) + ಪಾದ]

**ಜವಾಜಿ** 'ಜವಾದಿ' ನೋ.

**ಜವಾಜಿಮಿಗ** 'ಜವಾದಿಮಿಗ' ನೋ.

**ಜವಾದಿ, ಜವಾಜಿ, ಜವ್ವಾಜಿ, ಜವ್ವಾದಿ** (ನಾ). ಒಂದು ಬಗೆಯ ಸಂಗಂಧದ್ರವ್ಯ; ಪುನುಗು: "ಪುಣುಗು ಮಾರ್ಜಾಲಿಯೆನೆ ಜವಾದಿಯೆನಿಕ್ಕು" (ಮಂಗರಾ. ೯೯-೨೨); ಮೃಗಮದದ ಚಂದನದ ಕರ್ಪುರದಗಿಲು ಸಾದು ಜವಾದಿಗಳ ಸಿಂಪುಗಳಿನೆಸೆದುದು ನೋಡೆವಾರವಧೂಟಿಕಾನಿಳಯ (ಬಸಪು. ೧೨-೧೧); ವರ ಜವಾದಿ [ಪಾಠಾಂ. ಜಿ]ಯ ಶೃಂಗಗಳ ಕರ್ಪುರದ ತವಲಾಯಿಗಳ ಸಾದಿನ ಭರಣಿಗಳ ಮೃಗನಾಭಿಗಳನಡಕಿದರು ಬಂಡಿಯಲಿ (ಕುವ್ಯಾಆ. ೧೨-೦೬). **ಜವಾಜಿ**: ಅಗಿಲು ಸಾದು ಜವಾಜಿ [ಪಾಠಾಂ. ದಿ] ಚಂದನ ಮೃಗಮದಂ ಘನಸಾರ ಗಂಧಾದಿಗಳನೆಲ್ಲಂ ತೆಗೆದು ಪನ್ನೀರಿಂದ ಮೇಳಯಿಸಿ (ಬಸಪು. ೪. ೬೩); ಸಾಧು ಜವಾಜಿ ಕತ್ತುರಿ ಗಂಧಲೇಪದಲಿ . . . ಆಹವಕ್ಕನುವಾದನಭಿಮನ್ಯು (ಕುವ್ಯಾದ್ರೋ. ೪-೪೯). **ಜವ್ವಾಜಿ**: ಕಪ್ಪುರಕೆ ಕುರುಡು ಎಂಬುದು ಪೊಪ್ಪುವ ಜವ್ವಾಜಿಗೆ ಮಂಕ ಚಿನ್ನ ಬೆಳ್ಳಿಗೆ ತೂಕಂ (ವ್ಯವಹಾ. ೩-೦೬ ಅನು. ೧); ಶ್ರೀಗಂಧವನ್ನು ಕರಿ ಅಗರುಗಂಧದಿಂದಲೂ, ಜವ್ವಾಜಿ ಕಸ್ತೂರಿ ಮುಂತಾದವುಗಳನ್ನು ಸೇರಿಸಿ ಧರಿಸಿದಲ್ಲಿ ಹೆಚ್ಚು ವಾತಾದಿ ದೋಷಗಳು ಪರಿಹಾರವಾಗುವುವು (ಸಕವ್ಯ.೪೦). **ಜವ್ವಾದಿ**: ಓರಣದ ಬೀದಿಯಲಿ ತಳಿತುವು ತೋರಣಂಗಳು ಹಲವು ಪರಿಯಲಿ ಸಾರಿಸಿತು ಮುಗಿಲುಗಳು ಸಾದು ಜವ್ವಾದಿ ಕೆಸಱಿನಲಿ (ಸಂಭಪ ೨೦-೯೯).

**ಜವಾದಿಕೋಲಾಹಲ, ಜವಾದಿಕೋಳಾಹಳ, ಜಾವಾದಿಕೋಳಾಹಳ** = ಜವಾಜಿಯ ಪರಿಮಳದಂತೆ ಪಸರಿಸಿದ ಕೀರ್ತಿಯುಳ್ಳವನು; ಒಂದು ಬಿರುದು: ನರಲೋಕದಲ್ಲಣಂ . . . ನೃಪತಿಕೋಲಾಹಲಃ; ಜವಾದಿ ಕೋಲಾಹಲಂ (ಶಬ್ದಾನು. ೨೯೩ ವ್ಯಾಖ್ಯಾ.): ಜವಾದಿಕೋಳಾಹಳ ವೇಸಾಳ ಹನುಮ ಅರಸಂಗ ಮೊನೆಗಾಱ ಗೇಣಾಂಕ (ಮ್ಯಆರಿ. ೧೯೪೬, ೨೩-೨; 1495); ಜವಾದಿಕೋಳಾಹಳ! ಘೇಣಾಂಕ ಚಕ್ರೇಶ್ವರ! (ಬಿರುಗಂ. ೨೮-೧೮); ಶ್ರೀವೀರ ಘೇಣಾಂಕಚಕ್ರೇಶ್ವರ ಜಾವಾದಿಕೋಳಾಹಳ ವೇಸಾಳ ಹನುಮ ಗಜ ಬೇಂಟೆಗಾಱ ಬಿರುದುಂ (ಎಕ. XIV, ಎಳಂದೂ. ೦೩-೪; ?).

[←ಹಿಂ. ಮರಾ. ಜವಾದೀ; ಪಾರ. ಜಬಾದ್; ಅರ. ಜಬ್ಬಾದ್]

**ಜವಾದಿಮಿಗ, ಜವಾಜಿಮಿಗ** (ನಾ). ೧. ಪುನುಗಿನ ಬೆಕ್ಕು. ೨. ಕಸ್ತೂರಿ ಮೃಗ: (?). **ಜವಾಜಿಮಿಗ**: (?). [ಜವಾದಿ + ಮಿಗ]

**ಜವಾಧಿಕ** (ಗುಂ). ಹೆಚ್ಚಾದ ವೇಗವುಳ್ಳ; ಬಲು ಚುರುಕಾದ: (?). [ಜವ$_{2}$ + ಅಧಿಕ]

**ಜವಾನ** (ನಾ). ಸೇವಕ; ಆಳು; ಚಪರಾಸಿ: ಬುಡುಬುಡಿಕೆಯವರನ್ನು ... ಸರ್ಕಾರಿ ಜವಾನರೆಂದು ತಿಳಿಯಿತು (ಹಂಗಾಳ್ಮ. ೦೦೦); ತಮ್ಮ ಮನೆಯ ಜವಾನನಿಗೆ ಬಟ್ಟೆಗಳನ್ನು ಒಗೆದು ಇಸ್ತ್ರೀ ಮಾಡಿಕೊಡುವಂತೆ ಹೇಳಿದನು (ಕರಾಸಾ. ೫). [←ಪಾರ. ಹಿಂ. ಮರಾ. ಜವಾನ್]

**ಜವಾನಿ** (ನಾ). ಕೆಲಸದವಳು; ಒಕ್ಕಲಗಿತ್ತಿ: ಕುಸುಮಳ ಮನೆಯ ಜವಾನಿ ಬಂದಳು (ಬಿಕಾಂಗಿ. ೦೦೪). [ಜವಾನ + -ಇ$_{2}$]

**ಜವಾಬ್** 'ಜವಾಬು' ನೋ.

**ಜವಾಬ್‌ಸವಾಲ್, ಜಬಾಬುಸವಾಲು** (ನಾ). ಪ್ರಶ್ನೆ ಕೇಳುವುದು ಮತ್ತು ಉತ್ತರವನ್ನು ಪಡೆಯುವುದು; ಪ್ರಶ್ನೋತ್ತರ; ವಿಚಾರಣೆ: ಈ ಪ್ರಕಾರ ಜವಾಬ್‌ಸವಾಲ್ ಆಗುತ್ತಾ ಇರುವಾಗ್ಗೆ (ರಾಜೇಂದ್ರ. ೧೧). **ಜಬಾಬುಸವಾಲು**: ಜಬಾಬುಸವಾಲು ಮಾಡುವ ನಿಮಿತ್ತಾ ಹೈದರಲ್ಲಿ ಖಾನರು ದಿಂಡಿಗಲ್ಲಿಂದ ಪಟ್ಟಣಕ್ಕೆ ಬಂದರು (ಹೈದರ, ೭೩).

[←ಪಾರ. ಹಿಂ. ಜವಾಬ್‌ಸವಾಲ್; ಮರಾ. ಜವಾಬ್‌ಸವಾಲ್, ಜಬಾಬ್‌ಸವಾಲ್]

**ಜವಾಬದಾರ** 'ಜವಾಬುದಾರ' ನೋ.

**ಜವಾಬದಾರಿ** 'ಜವಾಬುದಾರಿ' ನೋ.

**ಜವಾಬು, ಜಬಾಬು, ಜವಾಬ್** (ನಾ). ೧. ಉತ್ತರ; ಮಾರು ನುಡಿ; ಎದುರುನುಡಿ: ಆ ಮೈಸೂರವರು ಮಾಡಿದ್ದಕ್ಕೆ ಪ್ರತಿಜವಾಬು ಕೊಡುವ ಬಗ್ಗೆ . . . ನಾವು ಹಾಜರು ಇದ್ದೇವೆ (ರಾಜೇಂದ್ರ. ೩); ಮಾತಿಗೆ ಮಾತು ಜೋಡಿಸಿಕೊಂಡು ನನಗೆ ಜವಾಬು ಹೇಳುತ್ತಿದ್ದಳು (ಹಂಗಾಳ್ಮ. ೧೩೮). ೨. ಮೊಕದ್ದಮೆಯ ವಿಚಾರಣೆಯಲ್ಲಿ ಆರೋಪಿ ಅಥವಾ ಸಾಕ್ಷಿದಾರನು ನೀಡುವ ಹೇಳಿಕೆ: ರಾಮಪ್ಪನ ತಾಯಿ ಅಕ್ಕ ಇಬ್ಬರ ಜವಾಬನ್ನೂ ಈಗಲೇ ತೆಗದುಕೊಂಡು ಬಿಡೋಣ (ನಾಪೋರೀ. ೨೦೨). ೩. ಹೊಣೆ; ಜವಾಬ್ದಾರಿ. 'ಜವಾಬುದಾರಿ' ಪರಾ. ೪. ಪತ್ರ; ಕಾಗದ: ಕಾಗದ ಬರೆದು ಹತ್ತುದಿನಗಳಾದರೂ ಜವಾಬು ಬರಲೇ ಇಲ್ಲ (ರೂಢಿ). **ಜಬಾಬು**: ೧. 'ಜಬಾಬುಸವಾಲು' ಪರಾ. **ಜವಾಬ್**: ೧. ಸಿಡಿಲಿಗೆ ಸಿಡಿಲಾಗಿ ಜವಾಬ್ ಕೊಡುವುದು ತಾನೆ (ಕೊನಪ್ಪ. ೧೮).

[←ಅರ. ಪಾರ. ಹಿಂ. ಜವಾಬ್; ಮರಾ. ಜವಾಬ್, ಜಬಾಬ್]

**ಜವಾಬುದಾರ, ಜವಾಬದಾರ, ಜವಾಬ್ದಾರ** (ನಾ). ಜವಾಬುದಾರಿಯುಳ್ಳವನು; ಹೊಣೆಗಾರ: ಮನೆಯ ಖರ್ಚಿಗೆಲ್ಲಾ ಅವನೇ ಜವಾಬುದಾರನಾಗಿದ್ದಾನೆ (ರೂಢಿ). **ಜವಾಬದಾರ**: ಇವನು ಅರಸನಿಗೆ ಜವಾಬದಾರನಾಗಿದ್ದನು (ಹಿಂದುಇ. ೧೫೦); ಅವನ ತರುವಾಯ ವ್ಯವಹರಿಸಿದ ಯಾವತ್ತರು ಹುಂಡಿಯ ಹಣವನ್ನು ಕೊಡಲಿಕ್ಕೆ ಜವಾಬದಾರರಿರುತ್ತಾರೆ (ಮೋಹಿನೀ. ೩೦). **ಜವಾಬ್ದಾರ**: ಇಂತಹ ಗ್ರಾಮಗಳಲ್ಲಿ ಮೊದಲನೆ ಚೀಫ್ ಕರಣೀಕರುಗಳೇ ಹಣ ವಸೂಲಿ ಲೆಖ್ಖಗಳಿಗೆ ಜವಾಬ್ದಾರರಾಗಿರುವರು (ಗ್ರಾಮಾಕ. ೩). [←ಪಾರ. ಹಿಂ. ಮರಾ. ಜವಾಬ್‌ದಾರ್]

**ಜವಾಬುದಾರಿ, ಜವಾಬದಾರಿ, ಜವಾಬ್ದಾರಿ** (ನಾ). ಹೊಣೆ; ಹೊಣೆಗಾರಿಕೆ: ನಿಮ್ಮ ಜವಾಬುದಾರಿಯನ್ನು ತಿಳಿದುಕೊಂಡು ವರ್ತಿಸಿ (ರಂಗರೂ. ೫೮). **ಜವಾಬದಾರಿ**: ನಮ್ಮ ಕಣ್ಣ ಮುಂದ ಇದ್ದ ಮ್ಯಾಲೆ ಜವಾಬದಾರಿ ಹೊತಗೊಳ್ಳಬೇಕಾಗತದ (ವ್ಯನಿ. ೩೦೨). **ಜವಾಬ್ದಾರಿ**: ಮನೆಯವರಿಗೆ ಅನ್ನ-ಪಾನಗಳನ್ನು ತಯಾರಿಸಿಕೊಡುವ ಜವಾಬ್ದಾರಿಯು ಮನೆಯ ಗೃಹಿಣಿಯದು (ಅಡುಸಾ. ೫೬). [←ಮರಾ. ಜವಾಬ್‌ದಾರೀ]

**ಜವಾಬ್ದಾರ** 'ಜವಾಬುದಾರ' ನೋ.

**ಜವಾಬ್ದಾರಿ** 'ಜವಾಬುದಾರಿ' ನೋ.

**ಜವಾಬ್ದಾರಿಕೆ** (ನಾ). = ಜವಾಬುದಾರಿ: ಒಂದೊಂದು ಸಲ ಆ ಜವಾಬ್ದಾರಿಕೆಯು ಬಿಕ್ಕಟ್ಟು ಬಂದಾಗ (ಮುಂಗಾಮು. ೧೦೦) ; ಜವಾಬ್ದಾರಿಕೆ ವ್ಮೈಮೇಲೆ ಹಾಕಿಕೊಂಡುದುದರಿಂದ . . . ನಗಲೂ ನನಗೆ ಸಾಧ್ಯವಿಲ್ಲ (ನಠದಾ. II, ೯೩೦). [ ಜವಾಬ್ದಾರ (< ಜವಾಬುದಾರ) + – ಇಕೆ ]

**ಜವಾಯಿಲ, ಜವಾಯ್ಲ** (ಗು). ಚುರುಕಾದ ; ವೇಗವುಳ್ಳ; ವೇಗಶಾಲಿಯಾದ. 'ಜವಾಯಿಲತನ' ಪರಾ. ಜವಾಯ್ಲ : ಜೋಡಿಸಿದನಂದು ಜವಾಯ್ಲ ಜಾಯಿಲನ (ಕುಪ್ಯಾಆ. ೧೩-೧೯) : ಆಯುಧದ ಮಳೆಗಳಲಿ ನನೆದ ಜವಾಯ್ಲ ತೇಜಿಗಳ . . . ಕರೆಕರೆದು ಬವರಕೆ ಕಳುಹಿಸಿದನು (ಕುಪ್ಯಾದ್ರೂ. ೦೩-೧೬). [ ಜವ$_2$ + – ಆಯಿಲ$_2$ ]

**ಜವಾಯಿಲತನ** (ನಾ). ಚುರುಕುತನ; ಚಟುವಟಿಕೆ; ವೇಗ : ಹಾಜಿದವು ಹಂಸಾವಳಿ ಜವಾಯಿಲತನದಿ ಜಗುಳ್ದವು ಜಕ್ಕವಕ್ಕಿಗಳು (ಕುಪ್ಯಾಗ. ೩-೨).
[ ಜವಾಯಿಲ + – ತನ ]

**ಜವಾಯ್ಲ** 'ಜವಾಯಿಲ' ನೋ.

**ಜವಾರಿ$_1$** (ಗು). ಸ್ವದೇಶದಲ್ಲಿ ಹುಟ್ಟಿ ಬೆಳೆದ ; ದೇಶೀಯಂ ; ನಾಟಿ : ಸಣಬು ಜವಾರಿ ಚಲೋ ಕಾಗದಗಳನ್ನು ಮಾಡುವದಕ್ಕೂ ಗಟ್ಟಿನ ಹದಕ್ಕೂ ಬರುತ್ತದೆ (ಕೃಷಿಪ್ರ. ೮೭)'; ಇಲ್ಲಿಯೇ ಹುಟ್ಟಿ ಬೆಳೆದ ದನಗಳಿಗೆ ಜವಾರಿ ದನಗಳೆನ್ನುವರು (ಜೀವ. ೩೨); ಮುಂದೆ ಬಣ್ಣಬಣ್ಣದ ಸಮವೇಷದಲ್ಲಿದ್ದ ಬ್ಯಾಂಡಿನವರು, ಅವರ ಹಿಂದೆ ಜವಾರಿ ಬಜಂತ್ರಿಯವರು (ಅನ್ನ. ೨೭೦). [ ←ಮರಾ. ಜವಾರೀ, ಜವಾರ್ ]

**ಜವಾರಿ$_2$** 'ಜವಾಹಿರಿ' ನೋ.

**ಜವಾರಿಬಟ್ಟೆ** (ನಾ). ಸ್ವದೇಶಿ ಬಟ್ಟೆ : ಕಲವರು ಉರುಟಾಗಲೀ ತುಟ್ಟಿಯಾಗಲಿ ಜವಾರೀಬಟ್ಟೆಗಳನ್ನೇ ಉಪಯೋಗಿಸುತ್ತಾರೆ (ಮುಂಬಯಿ. ೪-೦೬೦). [ ಜವಾರಿ$_1$ + ಬಟ್ಟೆ$_2$ ]

**ಜವಾರಿಮಂದಿ** (ನಾ). ಗ್ರಾಮೀಣ ಜನ ; ಹಳ್ಳಿಯ ಜನ : ಜವಾರಿ ಮಂದಿಗೆ ಅವೆಲ್ಲ ತಿಳಿಯೋದುಲ್ಲ (ಧನಂಜ. ೩೨). [ಜವಾರಿ$_1$ + ಮಂದಿ$_1$]

**ಜವಾಹಿರ** 'ಜವಾಹಿರಿ' ನೋ.

**ಜವಾಹಿರಿ, ಜವಾರಿ$_2$, ಜವಾಹಿರ, ಜವಾಹಿರಂ, ಜವಾಹೀರ$_1$, ಜವಾಹೀರು** (ನಾ). ೧. ಬೆಲೆಯುಳ್ಳ ಮಣಿ; ರತ್ನ : ಇದ್ದ ನಗದು ಜವಾಹಿರಿ ಸಾಗಿದಷ್ಟು ಹಣದ ಥೈಲಿಗಳ ಕಟ್ಟಿಸಿ (ಹೃದರ. ೧೦೪). ೨. ರತ್ನಖಚಿತವಾದ ಒಡವೆ,-ಆಭರಣ : ಮೈಸೂರಿನ ಅರಮನೆಯ ಕರ್ಮಚಾರಿಗಳು ಜವಾಹಿರಿಗಳೆಲ್ಲವನ್ನೂ ತಂದು ಹಜಾರದಲ್ಲೆಲ್ಲಾ ಅಣಿಮಾಡಿಟ್ಟಿದ್ದರು (ಶ್ರೀರಾಯ. ೨೬೩) ; ಸಂಜೆ ಜವಾಹಿರಿ ಅಂಗಡಿಗೆ ಕರೆದುಕೊಂಡು ಹೋಗುತ್ತಾರೆ (ಹಂಗೂರಿ. ೦೪೯). ಜವಾರಿ$_2$ : (೬). ಜವಾಹಿರ : ೧. ಮುತ್ತು ಹವಳ ಮುಂತಾದ ಜವಾಹಿರ ಮಾಲಿನ ಖರೀದಿಗೆ ಅಡತಿ ಹಾಂಗು ಧರ್ಮಾದಾಯ (ಮುಂಬಪ್ಯಾ. ೩೨. ಪ್ರಸ್ತಾವನೆ). ಜವಾಹಿರು : ೨. ಖಜಾನೆ ಹಣ ಜವಾಹಿರು ದೇವಸ್ಥಾನದ ಪಡವೆಗಳು ಮುಂತಾಗಿ ವಂದು ಹಿಸ್ಸೆ ಸರಿ ಮಾಡಿಕೊಟ್ಟು (ಹೃದರ. ೬೨); ಜವಾಹೀರ$_1$: ೧. ಜವಾಹೀರ (ರತ್ನ, ಹರಳು ಮುಂತಾದವುಗಳು) (ಮುಂಬಪ್ಯಾ. ೦೩೮). ಜವಾಹೀರು: (೬).
[←ಅರ. ಪಾರ. ಜವಾಹಿರ್, ಜೌಹರ್; ಹಿಂ. ಜವಾಹಿರ್, ಜವಾಹರ್ ; ಮರಾ. ಜವಾಹೀರ್, ಜವಾಹರ್]

**ಜವಾಹಿರಿಹಿಡಿ** (ನಾ). (ಕತ್ತಿಯ) ರತ್ನಖಚಿತವಾದ ಹಿಡಿ : ಇದರಲ್ಲಿದ್ದ ಜವಾಹಿರಿಹಿಡಿ ಮತ್ತು ಮಖಮಲ್ ಒರೆ ಸಹಿತವಾದ ಒಂದು ಕತ್ತಿಯು ಹೋಳ್ಕರ್ ಮಹಾರಾಜರದೆಂದು ತಿಳಿಯಬಂತು (ಮಹಾಪಂ. II, ೪೯).
[ ಜವಾಹಿರಿ + ಹಿಡಿ$_2$ (< ಪಿಡಿ$_2$) ]

**ಜವಾಹಿರು** 'ಜವಾಹಿರಿ' ನೋ.

**ಜವಾಹೀರ$_1$** 'ಜವ್ಹಾಹಿರಿ' ನೋ.

**ಜವಾಹೀರ$_2$** (ನಾ). ೧. ರತ್ನಪಡಿ ವ್ಯಾಪಾರಿ: ಪೇಟೆಯಲ್ಲಿ ಗಂಧೀಜನರ, ಜವಾಹೀರರ . . . ಅಂಗಡಿಗಳು ಅಂದವಾಗಿ ಕಾಣುತ್ತವೆ (ಮಂಜುಳ. ೮). ೨. ರತ್ನಪರೀಕ್ಷಕ. [ ←ಪಾರ. ಜೌಹರೀ; ಹಿಂ. ಜವಾಹರೀ, ಜೌಹರೀ ]

**ಜವಾಹೀರು** 'ಜವಾಹಿರಿ' ನೋ.

**ಜವಿ$_1$, ಜವೆ$_1$, ಜವೆ$_1$** (ನಾ). ಕೂದಲಂ; ಕೇಶ : ಒಡಿದ ಗೋವಳಿಗೋಲ ಮಾಲೆಗಳ ಪಾಹೆಯಿಂ ತೊಡರ ಬಾವುಲಿಯೊಳಗೆ ಜವಿ . . . ಎಸೆವುತಿರೆ ಬಂದು ಮಹಮನೆಯ ಗೋವಳಂ (ಬಸರ. ೯-೯೮) ; ತುದಿಯ ಬಾಲದ ಜವಿಯ ಬಿಡದವರಥಟನಿಂದಟ್ಟಿದರು (ಜನಥಾ. ೩೬-೨೨) ; ಅವುಗಳ ಕತ್ತಿನ ಮೇಲಿನ ಕೂದಲು ಕತ್ತರಿಸಿರಲಿಲ್ಲ . . . ಆ ಜವಿಯು ಎಳೆಬಿಸಿಲಿನಲ್ಲಿ ಹೊಳೆಯುತ್ತಿತ್ತು (ಹಂಗಾಳ್ಕ. ೬೨೦). ಜವೆ$_1$ : (೬). ಜವೆ$_1$ : ಈ ಗಾದಿಯೊಳಗೆ ಕುದುರೆಯ ಜವೆಯನ್ನು ತುಂಬಿರುವ ಕಾರಣ (ಮುಂಬಯಿ. ೩-೨೦೬) ; ಜವೆ ಕತ್ತರಿಸುವವರು ನಿನಗೆ ನೆನಪಿದೆಯೆ (ಬಂದ್ಕಶ. ೪೩ ಮಿಲಿಂದ). 'ಜವೆಗೊಂಕು' ಪರಾ. [ ದೇ.೩ ತೆಲು. ಜವ್ವಿ ]

**ಜವಿ$_2$** (ಗು). ೧. ಚುರುಕಾದ; ವೇಗಶಾಲಿಯಾದ; ವೇಗವಾಗಿ ಓಡುವ. (ನಾ). ೨. ವೇಗವುಳ್ಳವನು; ವೇಗವಾಗಿ ಓಡುವವನು: ಅವನಿವಲ್ಲಭನನ್ನ ಮಕ್ಕಳ ಯುವತಿಯರ್ಕಳ ಜಯಿಸಲಜುಯದ ಜವಿಗಳವಗತಮಾನರೈದಿದರಾತ್ಮಗಳ (ಷಡಡ. ೨-೪). ೩. ಕುದುರೆ. ೪. ಒಂಟೆ.
[ ಸಂ. ಜವಿನ್ ]

**ಜವಿವಲೆ** (ನಾ). ಒಂದು ಬಗೆಯ ಬಲೆ : ಜೋಯಿಸರ ಜವಿವಲೆ[ಪಾಠಾಂ. ಜವನಿಕೆ]ಗೆ ಸಿಲುಕಿನೆನುತ್ತ ಹೊಡಿವಂಟ (ಕುಪ್ಯಾಆ. ೨೨-೪) : ಕರಿಯ ಜವಿವಲೆ ಮುಸುಕುವಲೆ ಬಿತ್ತರದ ನೇಣ್ವಲೆ (ಸಾಳ್ವಭಾ. ೩-೦೯).
[ ಜವಿ ? + ಬಲೆ$_1$ ]

**ಜವುಗಿಡು, ಜೌಗಿಡು** (ಕ್ರಿ). ತೇವವಾಗು; ಆರ್ದ್ರವಾಗು: ಇಟ್ಟ ಕತ್ತುರಿಯ ತಿಲಕದ ಕಪೋಲದೊಳು ಜವುಗಿಟ್ಟೊ[ಪಾಠಾಂ. ಚಲುವಿಟ್ಟ]ಸರುವಂ ತೊಟ್ಟುಕೊಂಡ ಪುಣುಗಿನ ಕಂಪನೊಟ್ಟೈಸಿ (ಸೋಮಡ. ೨-೧೬). ಜೌಗಿಡು: " ಜೌಗಿಡು–ಜೌಳಿಸು, ದ್ರವಿಸು, ಜಿನುಗು, ಜವುಳಿಸು " (ಪ್ರಥಾ).
[ ಜವುಗು + ಇಡು$_1$ ]

**ಜವುಗು, ಜೋಗು$_2$, ಜೌಗು** (ನಾ). ೧. ತೇವ ; ಒದ್ದೆ ; ಜಿನುಗು : ಉಚ್ಚೆಯ ಜವುಗಿನ ಬಚ್ಚಲ ತಂಪಿನಲ್ಲಿ ನಿಚ್ಚಕ್ಕೆ ನಿಚ್ಚ ಹೊರಳುವ ಹೀಹಂದಿಯಂತೆ (ಅವಡಂ. ೭೦-೩೦೬); ನೆಲನೆಲ್ಲ ಜವುಗಾಯ್ತು ಮೊದಲು ಮತ್ತು ಟಿ ತೇದು ತೊಳೆದುಹೋದುವು ಬಡ ಬೆಟ್ಟ (ಧರಡ. ೩೪-೬೦) ; ಕೆಳಗಡೆಗೆ ಜವುಗಾಗಿ ನೀರು ಜಿನುಗಿ (ಕಲ್ಯಾಚ. ೭೩). ೨. ಯಾವಾಗಲೂ ನೀರು ಒಸರುವ ಪ್ರದೇಶ; ಜಿನುಗುವ ಭೂಮಿ;ಸದಾ ತೇವವಾಗಿರುವ ನೆಲ: (೬). ಜೋಗು$_2$ : ೧. ಉರ್ವೀತಳಮದು ನೆಟ್ ಜೋಗಿರ್ದು ಮೆಟ್ಟಲ್ಕೆ ಬಲ್ಪೊಂದೆಡೆಯಿಲ್ಲೆಂಬಂತೆ ಪಂಕಂ ಮಸಗೆ ನೆನೆದು (ಕುಸುಮಾ. ೬-೩೩). ಜೌಗು : ೧. ಸರ್ವಾಯುಧ ಪ್ರೋಚ್ಚಳಿತ ಪ್ರದ್ಯೋತದಿಂ ಭೂತಳಮದು ನೆಟ್ ಜೌಗಾಗೆ (ಕುಸುಮಾ. ೦೩-೧೦೩) : ಸುರಿವ ಕರುಳೋಳಿಯಿಂ ಮಡಿದ ತುರಗಾಳಿಯಿಂ ಬಿಡುಮಿದುಳ ಜೌಗಿನಿಂದೆ . . . ರಣಭೂಮಿ ಕಣ್ಗೆಸೆದುದು (ಚಬಪು. ೪೪-೪೦) : ಅಲ್ಲಿ ಜೌಗು ಹೆಚ್ಚು, ಪಾಚಿ ಕಟ್ಟಿದೆ, ಎಚ್ಚರಿಕೆ ! (ಶಾಂತಲಾ. ೨೯೬). 'ಜೌಗೇಟ್' ಪರಾ. [ದೇ.೩ ತೆಲು. ಜವುಕು, ದೌಕು]

**ಜವುಗೇಳ್** 'ಜವುಗೇಟ್' ನೋ.

**ಜವುಗೇಟ್, ಜವುಗೇಳ್, ಜೌಗೇಳು, ಜೌಗೇಟ್** (ಕ್ರಿ). ೧. ಒಸರು; ಜಿನುಗು ; ತೇವವಾಗು. ೨. ಬಗ್ಗಡವಾಗು ; ರಾಡಿಯಾಗು : 'ಜವುಗೇಟಿಸು' ಪರಾ. ಜವುಗೇಳ್ : ೧. ಝುಲ್ಲನೆ ಸೂಸೆ ಪೂಮಳೆ

ಮರಂದರಸಂ ಜವುಗೆಳೆ ತುಂಬಿಗಳ್ ನಿಲ್ಲದೆ ಝಂಕೃತಿಧ್ವನಿಯಾನೀಯೆ (ಹಾರಾಸ್ತ. ೦-೩-೨೯). ೨. ಬೀದಿಬೀದಿಗೂ ತೀವಿ ಕಾಲುವೆಗಟ್ಟಿ ಹರಿಯೆ ಗಜಾವಳಿಯುವದಘಟ್ಟಣದಿ ಜವು[ಪಾಠಾಂ. ಜೌ]ಗೆದ್ದ ಕೆಸರಿಳ್(ಬಸವು. ೦೦-೩). ಜೌಗೇಳು : ೨. ನೆಣವಸೆ ಕರುಳ್ಗಳ್ ಸುತ್ತಲುಂ ತೀವಿ ಜೌಗೆದ್ದಡಿಯಿರ್ಕಲ್ ಬಾರದೆಂಬಂತಿರೆ (ಸಕವ್ಯ. ೩. ಪ್ರಸ್ತಾವನ). ಜೌಗೇಟ್ : ೨. ಬಡಹಂ ಕೈಕೊಂಡುದುರ್ವಿನೀತಳವುದು ನೆಟಿ ಜೌಗೆಟ್ಟು ಮೆಟ್ಟರ್ಕೆ ಬಲ್ಲೊಂದದೆ ಯಿಲ್ಲೆಂಬಂತೆ ಕಂಪಲ್ಮಸಗೆ (ಶಾಂತೀಶ್ವ. ೦೨-೫೭). [ ಜವುಗು + ಏಟ್$_1$ ]

**ಜವುಗೇಟಿಸು, ಜೌಗೇಟಿಸು** (ಕ್ರಿ). ಬಗ್ಗಡಗೊಳಿಸು; ರಾಡಿಯಾಗುವಂತೆ ಮಾಡು: ದೆಸೆಯಂ ಖಡ್ಗಾಂಶುಜಾಲಂ ಬೆಳಗೆ ಧರಣಿಯಂ ದಾನಧಾರಾಂಬು ಜವು[ಪಾಠಾಂ. ಜೌ]ಗೇಟಿಸೆ . . . ಮಾಮಸಕಂಗೊಂಡತ್ತಿ ಬಂದಂ (ಚಂದ್ರಪ್ರ. ೦೦-೫೦). ಜೌಗೇಟಿಸು : ದಂತಿದಾನಪ್ಲವದಿನವನಿಯಂ ಕೂಡೆ ಜೌಗೇಟಿ ಸುತ್ತುಂ ಇಳೆ ಕಂಪನಗೊಳ್ವಿನಂ ಸಂಭ್ರಮದಿ ನಡೆತರುತ್ತಿರ್ಪ ಸೇನೆ (ಶಾಂತೀಶ್ವ. ೦೫-೦೦೮). [ ಜವುಗೇಟ್ + – ಇಸು$_3$ ]

**ಜವುಳಿ$_1$** 'ಜವಳಿ$_1$' ನೋ.

**ಜವುಳಿ$_2$** 'ಜವುಳ' ನೋ.

**ಜವುಳಿಗ** (ನಾ). (?) : ತಳವಾರನು ಸೂಳೆಗಾರ ಜವುಳಿಗ ಭಂಗಿಗ ಕಳುಗುಡಿ ಜೂಜಿಗ (ಕರಿಶ. ೦೦೪-೦೦). [ ? ]

**ಜವುಳು, ಜವಳ್$_2$, ಜವಳು** (ನಾ). ೧. ತೇವ ; ಒದ್ದೆ : ಹೊಳೆಗಳ ದಂಡೆಗಳಲ್ಲಿಯೂ ನೀರಿನ ಜವುಳು ಆಡುವ ಸ್ಥಳಗಳಲ್ಲಿಯೂ ಮೂರು ಜಾತಿಯ ಕಬ್ಬು ಒಳಿತಾಗಿ ಬೆಳೆಯುತ್ತದೆ (ಕಥಾಗ. ೨೭೩). ೨. ತೇವವಾದುದು ; ಒದ್ದೆಯಾದುದು : ಜವುಳ ಅಡವಿಯಲ್ಲಿಯೂ ಕೊಬ್ಬೇರಿ ಬೆಳೆದ ಹುಲ್ಲಿನಲ್ಲಿಯೂ ಅವು ಮೇಯುವುದಿಲ್ಲ (ಮುಂಬಯಿ. ೩-೧೦); ಗುಡ್ಡದ ಓರೆಯಲ್ಲಿ ಜವುಳ ಹಳ್ಳದೊಳಗೆ ಸಾವಿರಾರು ಕಪ್ಪೆಗಳು ಇರುತ್ತಿದ್ದವು (ಕಸಾಪ. I, ೦೩೮). ಜವಳ್$_2$: ೧. 'ಜವಳಿದೆಗೆ' ಪರಾ. ಜವಳು: ೨. ನಿನ್ನ ಸೇವಕರು ಜವಳುಪ್ರದೇಶವೆಂದು ತಿಳಿದು ನಿನ್ನ ತೀರ್ಥೋದಕಗಳಿಗಾಗಿ ತೋಡಿ ಸಿದ್ಧಪಡಿಸಿರುವರು (ಕುಳಸಿ. ೨೦೦) ; ಮಡವುಗಟ್ಟಿ ಮಲೆತು . . . ಒಂದು ಅಸಹ್ಯ ಜವಳುರಾಡಿಯ ವಿಸ್ತಾರವನ್ನೇ ಉಂಟುಮಾಡಿದವು (ವಿಚಾಪಾ. ೦೬); ಜವಳು ಭೂಮಿಗಳಲ್ಲದೆ ಮಾರ್ಗದಲ್ಲಿ ಬೇರೆ ಮನೋಹರವಾದದ್ದು ಏನೂ ಕಾಣಲಿಲ್ಲ (ಮೇರಿಮ. ೦೭೯). [ <ಜವುಗು ]

**ಜವುಳುಗೊಳಿಸು** (ಕ್ರಿ). = ಜವುಗೇಟಿಸು; ಶೀತಹವೆಯಲ್ಲಿ ಭಾರವಾದ ಬಂಡಿಗಳ ಚಕ್ರಗಳು ಅವುಗಳನ್ನು ಉತ್ತು ಜವುಳುಗೊಳಿಸುತ್ತಿದ್ದವು (ಬೆಂಜಸ್. ೨೦೦). [ ಜವುಳು + ಕೊಳ್$_1$ + – ಇಸು$_3$ ]

**ಜವುಳೇಳು** (ಕ್ರಿ). = ಜವುಗೇಟ್ ೨ : ಜವದಿ ಕಾರ್ಮೇಘ ಒಡ್ಡೈಸಿ ಪೆರ್ಮಳೆ ಸುರಿದು ಜವುಳೇ[ಪಾಠಾಂ. ಗೇ]ಳೆ ಮೂರುದಿನ ಬಿಡದಿರಲು ದೂಷಕರು ತವತವಗೆ ಬಂದು ಪದಾಂಬುಜಕ್ಕೆಱಗುತಿರೆ (ಗುರುಚಾ. ೦೦-೩೭).
[ ಜವುಳು + ಏಳು$_1$ (<ಏಟ್$_1$) ]

**ಜವೆ$_1$** 'ಜವಿ$_1$' ನೋ.

**ಜವೆ$_2$** (ನಾ). ೧. ಒಂದು ಬಗೆಯ ಧಾನ್ಯ ; ಯವಧಾನ್ಯ : ಜವೆಗೋಧಿ : "ಯವೆಯೆನಲು ಜವೆ" (ಮಂಗರಾ. ೦೦೦-೩) ; ಜವೆಯ ಜಾಗರದೊಳಂ ಮಲರ್ವಂಡಿನ ಜಗಲಿಯೊಳಂ (ಕಾದಂಬ. ೭೮೩) ; ಜವೆ ಜೋಳಂ ಕೋಟಿ ಮೊದಲಾದುವರ್ಕೆ ಗಣೆವೊಂದು ತೆನೆಗಳೆರಡಾದಂದುಂ . . . ಅಱಿಗೆ ತತ್ಪ್ರತಿಯಟ್ಟಿವಂ (ರೂಕೊಂಪ. ೪-೫೭) ; ಜವೆ ದಿವ್ಯೌಷಧಿ ಪಾರಿಜಾತ ಕುಸುಮಂ ಸಿದ್ಧಾರ್ಥಮಾದ್ರಾರ್ದ್ರಕ್ಷತಂ . . . ಕಸ್ತೂರಿ ಕಾಶ್ಮೀರಮೆಂಬಿವಱಿಂ ತಕ್ಕನೆ ತೀವಿ ಪೊಂಬರಿಯಣಂ ಚೆಲ್ವಾದುವಾ ಸದ್ಮದೊಳ್ (ಜಗವಿ ೦೦-೯೦). ೨. ಒಂದಂ ಯವೆಯ ಕಾಳಿನಷ್ಟು ತೂಕ: ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ ಒಂದು ಜವೆ ಕೊಱತೆಯಾದರೆ ಎನ್ನನದ್ದಿ ನೀನೆದ್ದು ಹೋಗು (ಬಸವ. ೪೪೦). ೩. ಉದ್ದವನ್ನು ಅಳೆಯುವ ಒಂದು ಪ್ರಮಾಣ ; ಅಂಗುಲದ ಎಂಟನೆಯ ಒಂದು ಭಾಗ : "ಕರಿ ಸಾಸಿವೆಯಾಗಲೊಂದು ಜವೆಯೆನಿಸಿರ್ಕುಂ ಕರಿ ಜವೆಯಾಗಲ್ಕಂಗುಲ" (ವ್ಯವಹಾ. ೮-೩೯ ಅನು. ೧).

ಜವೆಯ ಕೆಯ್ = ಯವೆಯನ್ನು ಬೆಳೆಯುವ ಹೊಲ : "ಜವೆಯ ಕೆಯ್ ಯವ್ಯಮೆಂಬುದು" (ಹಲಾಯು. ೨೭-೮).

[ <ಪ್ರಾ. ಜವ./ಸಂ. ಯವ ]

**ಜವೆ$_3$** (ನಾ). (ಮಾಟದ) ಮಂತ್ರ ; "ಮಾಯೆ" (ಪ್ರಕೃಥ) : ಏವೆಯಿಟ್ಟು ಕಣ್ಮುಚ್ಚಿದಂತೆ ಮೂಲೋಕಕೆ ಜವೆಯ ಮೋಜವ ಕಲ್ಪಿಸಿದಳು (ಪ್ರೋಹಕ ೨೯-೮). 'ಜವೆಬೂದಿ' ಪರಾ.

[ <ಪ್ರಾ. ಜವ./ಸಂ. ಜಪ ]

**ಜವೆಗೊಂಕು** (ಕ್ರಿ). (ಆಲಂ) ಕೂದಲು ಕೊಂಕಂ ; ತೊಂದರೆಯಾಗು : ರವಿಸುತನಿಂತು ರಕ್ಷಿಸಿದ ಕಾರಣದೆ ಕೌರವನಂದು ರಾಯಕುವರಿಯ ಜವೆಗೊಂಕದಂತಿರೆ ನೆಱಿಗೊಂಡು ನಾಗಪುರವ ಪೊಕ್ಕನತಿ ಹರುಷದೊಳು (ಕರ್ಣವ್ಯ. ೫-೨೨).

[ ಜವೆ$_1$ (<ಜವಿ$_1$) + ಕೊಂಕು$_1$ ]

**ಜವೆಗೋದಿ, ಜವೆಗೋಧಿ** (ನಾ). ಗೋಧಿಯಲ್ಲಿ ಒಂದು ಬಗೆ; ಯವ: "ಜವೆಗೋದಿ – ಯವಗೋಧೂಮ" (ಕದ್ವಕೋ. ೦೪). ಜವೆಗೋಧಿ ; ಜವೆಗೋಧಿ ಬಗೆಬಗೆಯ ನೆಲ, ಬಗೆಬಗೆ ವಾಯುಗುಣಗಳಿರುವ ಪ್ರದೇಶಗಳಲ್ಲಿ ಬೆಳೆಯುತ್ತದೆ (ಭೂವಿವ. ೦೮೭).

[ ಜವೆ$_2$ + ಗೋದಿ$_1$ (<ಗೋದುವೆ) ]

**ಜವೆಗೋಧಿ** 'ಜವೆಗೋದಿ' ನೋ.

**ಜವೆಬೂದಿ** (ನಾ). ಮಂತ್ರಿಸಿದ ಬೂದಿ ; ಮಂಕುಬೂದಿ: ಅಸುರಮಾಯಾಮಂತ್ರಮಂ ಜಪಿಸಿ ಫಣೆಯೊಳಂ ಭಸಿತಮನು ಧರಿಸಿ ದಿಗ್ಬಂಧನಂಗಳಗೈದು ಶಶಿಯ ಮಂಡಲಕೆ ಕಾವಳಗೈಸಿ ಗ್ರಹಗಣರ ಕಂಗಳಿಗೆ ಜವೆಬೂದಿಯಾ ಸಸಿನೆ ಚೆಲ್ಲುತ ದುರ್ಗಿ ಭೈರವರ ಬಲಗೊಂಡು (ನವಮೋ. ೨೭-೦೩). [ ಜವೆ$_3$ + ಬೂದಿ ]

**ಜವ್ವನ, ಜೌವನ** (ನಾ). ೧. ಹರಯ; ಪ್ರಾಯ; ಯೌವನ; ತಾರುಣ್ಯ: ಕಲಿತನದುರ್ಕು ಜವ್ವನದ ಸೊರ್ಕು ನಿಜೇಶನ ನಚ್ಚು . . . ಕರ್ಣ ನಿನಗುಳ್ಳನಿತೇನೆನಗುಂಟೆ (ಪಂಪಭಾ. ೦೦-೨೩); ಸಿರಿಯೊಂದೊದವಂ ಜವ್ವನ ಭರಮಂ ನಚ್ಚಿರ್ದು ಕೆಡುವರ್ (ಧರ್ಮಾಮೃ. ೩-೨೦೨) ; ಇಂದು ಹುಟ್ಟಿದ ಕೂಸಿಂಗೆ ಇಂದೆ ಜವ್ವನವಾಯಿತ್ತಯ್ಯ (ಬಸವ. ೫೦೭) ; ಏನೆಂಬೆನುತ್ಕಟದ ಜವ್ವನಂ ಬರುತಮಿರೆ (ನಂಬಿರ. ೩-೨); ನೀನು ಮಿಗೆ ಮೇಲಲಱಿಯೆ ಜವ್ವನ ದುಬ್ಬುಗೊಬ್ಬಿನಲಿ (ಕುಮಾವ್ಯಾಥೀ. ೦-೩೭) ; ಸಿರಿಯು ಬಂದರೆ ಲೇಸು ತಿರದ ಜವ್ವನ ಲೇಸು (ಸರ್ವಜ್ಞ. ೦೨೯). ೨. ಮೊಲೆ ; ಸ್ತನ: "ಜವ್ವನಮೆಂದು ಕುಚಂ" (ಕಕಸಾ. ೨೧-೪೩೦); "ಜವ್ವನಮೆನಲ್ಕೆ ಕುಚಮಕ್ಕು" (ಕಬ್ಬಿಗ. ೩೦); ಅಚ್ಚ ಜವ್ವನಮೆಂಬ ದರ್ಪಕಪಟ್ಟಕುಂಜರಕುಂಭಮಂ ಚೆಚ್ಚರಂ ರತಿದೇವಿ ಸರ್ವಲತಾಂತಮಾಲಿಕೆಯಿಂ ಸಮಂತರ್ಚಿಪಂತೆಳವೆಣ್ಣದೊರ್ವಳಮರ್ಚಿ ದಿಳ್ಪಲರನ್ನದೊಳ್ವಚ್ಚಮಂ ನಲಿದಾ ಕುಮಾರಿಯ ಪೀವರ ಸ್ತನಭಾಗದೊಳ್ (ಉದ್ಭಟ. ೮-೩೪) ; ಚುಂಬಿಸೆನ್ನಧರವ ಚುಂಬುಕಾಗ್ರವಿಡಿಯುತ ತುಂಬು ಜವ್ವನಕೆ ಕೈನೀಡಿ ನಂಬಿಸಿ (ಶತಸಾಂ. ೩೨-೭೯). ಜೌವನ : ೧. ಪೋದುದು ಜೌವನಂ ಕ್ರಮದಿನಾದುದು ಮುಪ್ಪು (ಆದಿಪು. ೨-೩೫) ; ಉದಯಿಸಿ ಜೌವನಮಂ ತಳೆದೊದವಿದ ಮುಪ್ಪಿನೊಳೆ ಕಟಿವರಿಲ್ಲಿಂ ಬಟಿಯಂ (ಪಂರಾಮಾ. ೦-೮೪); ಜೌವನದೇಟಿಗೆ ಕಯ್ಗೆ ಕನ್ನಡಿಯೆನಿಸಿತ್ತು (ಕಬ್ಬಿಗಕಾ ೪೭) ; ಜೌವನವಾದುದು ಮತ್ತನುಜೆಗೆ (ಜಿಮುಗಾ. ೩-೭೦)
[ <ಪ್ರಾ. ಜೋವ್ವಣ. / ಸಂ. ಯೌವನ ]

**ಜವ್ವನಂನೆಟಿ, ಜೌವನಂನೆಟಿ** (ಕ್ರಿ). ಯೌವನ ತುಂಬು ; ಪ್ರಾಯಕ್ಕೆ ಬರು : ಎಂತೆಂತೆಟಗ್ಗಿಯ ಜವ್ವನಂನೆಟಿಗುವುಂತಂತೊಪ್ಪೆ ಲಾವಣ್ಯಂ (ಶಾಂತಿಪು. ೯-೧೭) ; ದಿವ್ಯವಸ್ತ್ರಭೂಷಣಮಣಿಮಾಳಿಗಳ್ನೆಟಿದು ತನ್ನೊಡವುಟ್ಟಿರೆ ಬೇಗವೇಗವಾ ಕ್ಷಣದೊಳೆ ಜವ್ವನಂನೆಟಿಯೆ ನೆಟ್ಟನೆ ತೊಟ್ಟನೆ ಬಂದು ಪುಟ್ಟಿದಂ (ಸುಕುಮಾ. ೯-೧೮). **ಜೌವನಂನೆಟಿ :** ಜೌವನಂನೆಟಿದ ಪ್ರಭಾವತಿಯನಾರ್ಗೆ ಕುಡುವಮೆಂದು . . . ಆಳೋಚಿಸಿ (ಪಾರ್ಶ್ವಪು. ೯೦-೨೫). [ ಜವ್ವನ + ನೆಟಿ$_1$ ]

**ಜವ್ವನಂಬಡೆ** (ಕ್ರಿ). ತಾರುಣ್ಯವನ್ನು ಹೊಂದು: ಗೆಲ್ಲಂಪಡೆದ ಪಂದೆಯಂತೆ ಜವ್ವನಂಬಡೆದ ಮುದುಪನಂತೆ (ಧರ್ಮಾಮೃ. ೩-೦೨೫). [ಜವ್ವನ+ಪಡೆ$_1$]

**ಜವ್ವನವೆಟು** (ಕ್ರಿ). = ಜವ್ವನಂಬಡೆ: ತಿಣ್ಣ ಜವ್ವನವೆತ್ತ ಕೆಳದಿ ಕೇಳ್ (ಮೋಹನ. ೩೦-೨೪). [ ಜವ್ವನ + ಪೆಟು$_1$ ]

**ಜವ್ವನಿ** (ನಾ). =ಜವ್ವನೆ: ಕನ್ನೆವೇಟಕ್ಕೆ ತನ್ನಂ ಮಾಱುಗೊಟ್ಟ ಪಾಱುಗೆಯ್ವುದ ಜವ್ವನಿಗಿನಿಯನಿತ್ತ ನಖರದಕ್ಷತಂಗಳನೆ ತೊಡವು ಮಾಡಿ ಮೆಱೆವುದನವ ಳೊಡನಾಡಿ ನೋಡಿ ಕಂಡು (ಚಂದ್ರಪ್ರ. ೮-೫೫ ವ). [ ಜವ್ವನ + -ಇ$_2$ ]

**ಜವ್ವನಿಕೆ** (ನಾ). ಹರಯ ; ತಾರುಣ್ಯ ; ಯೌವನ : ತನ್ನ ಜವ್ವನಿಕೆಯ ಕಾಲದಲ್ಲಿ ಉಳ್ಳವರ ಒಕ್ಕಲಾಗಿದ್ದಳು (ದೀಪಕ. II, ೧೯೩).
[ ಜವ್ವನ + - ಇಕೆ ]

**ಜವ್ವನಿಗ, ಯುವ್ವನಿಗ** (ನಾ). ಹರಯದವನು ; ತರುಣ ; ಯುವಕ : "ದಾರಕಃ, ತರುಣಃ, ಯುವಾ—ಈ ೩ ಜವ್ವನಿಗಂ" (ಹಲಾಯು ೮೩-೩೪೯) ; ಪೆಸರೇನಾರ್ಗೀತನೀ ಜವ್ವನಿಗ ತವಸಿ (ಕಾದಂಪೂ. ೭೭೦) ; ಪಾಂಥರೊಳಗೆ ಬಳಲ್ದು ಬರ್ಪ ಜವ್ವನಿಗನಂ ಕಂಡು (ಗಿರಿಜಾ. ೨-೦೮ ವ). **ಯುವ್ವನಿಗ :** ಇವನಸುರ ಮಧುಗುಡಿಗ ಯುವ್ವನಿಗ ಮದನಗೃಹವ್ಯಾಧಿಗಂ (ನವಮೋ. ೯-೦೭). [ ಜವ್ವನ + - ಇಗ ]

**ಜವ್ವನಿಗಿತಿ** (ನಾ).=ಜವ್ವನೆ: ಆರೂಕಿರಿಯ ಜವ್ವನಿಗಿತಿಯರು ಇಲ್ಲವಾಗಿದೆ (ಬಿಟ್ಟೆಅ. ೧೮೦-೪). [ ಜವ್ವನಿಗ + - ಇತಿ$_1$ (< - ಇತ್ತಿ) ]

**ಜವ್ವನಿಗೆ** (ನಾ).=ಜವ್ವನೆ : ಈ ತೆಱದ ಮೆಱೆವ ಮಿಱುಗಿಗರ ಮುಱುಕವಾ ದೊರೆಯ ಭರದ ಜವ್ವನಿಗೆಯನಿಮ್ಮ ಕೆಯ್ಸಾರಲಿತ್ತಪ್ಪುದೆ (ವರ್ಧಪು. ೯-೪೩ ವ). [ ಜವ್ವನಿಗ + - ಎ$_2$ ]

**ಜವ್ವನೆ, ಜೌವನೆ, ಯುವ್ವನೆ** (ನಾ). ಯುವತಿ ; ತರುಣಿ: " ವಧೂಟೀ, ಚಿರಂಟೀ — ಈ ೨ ಜವ್ವನೆ" (ಹಲಾಯು. ೭೯-೩೩೦); ಜವ್ವನೆ ಗಡಮಾಡಲ್ ಪಾಡಲವಳ್ ಬಲ್ಲಳ್ (ಆದಿಪು. ೫-೪೩) ; ಜವ್ವನೆಯ ಮೊಲೆಯಂತೆ . . . ಕಡೆಯೊಳ್ ಪೇಸುಪಥಮುಮಶೋಭೆಯುಮಾಗದೆ ಪೋಗದು (ಧರ್ಮಾಮೃ. ೭-೦೨೨); ಎನ್ನ ಮನೆಯೊಳ್ ತುಂಬಿದ ಜವ್ವನೆಯನಿರಿಸಲಣ್ಮೆಂ (ದಶಕು. ೧೦-೭೭). **ಜೌವನೆ :** " ಪಡ್ಡಾ—ಜೌವನೆ" (ಕಾರಕ್ಕ. ೨೪). **ಯುವ್ವನೆ :** ಬಾಲಕಿಯರುಂ ಯು[ ಪಾಠಾಂ. ಯೌ ]ವ್ವನೆಯರುಂ . . . ವಯೋಧರ್ಮಂಗಳಂ ತಿಳಿದು (ಬಸವು. ೪೦-೦೮). [ ಜವ್ವನ + - ಎ$_2$ ]

**ಜವ್ವರಿಸು, ಚವ್ವಲಿಸು** (ಕ್ರಿ). ಶೋಭಿಸು ; ವಿಜೃಂಭಿಸು: ಜವ್ವನ ಜವ್ವನ ಕೊಪ್ಪುವಲಂಕಾರ ಜವ್ವರಿಸುವ [ಪಾಠಾಂ. ಚವ್ವಲಿಸುವ] ಹಾವಭಾವ ಕವ್ವರಿಸುವ ಕಾಂತಿರಸದಿಂದ ನೃಪನ ಕಣ್ಣವ್ವಳಿಸುವವೊಲೆಸೆದರು (ಹೇರಂ. ೧೩-೫೫). **ಚವ್ವಲಿಸು :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ?. / ತೆಲು. ಜುವ್ವರಿಂಚು = ವಿಜೃಂಭಿಸು ]

**ಜವ್ವಾಜಿ** 'ಜವಾದಿ' ನೋ.

**ಜವ್ವಾದಿ** 'ಜವಾದಿ' ನೋ.

**ಜಷ್ಟೆ** (ನಾ). ಉದಾಸೀನತೆ; ಆಲಸ್ಯ; ಸೋಮಾರಿತನ: ಜೇಷ್ಠ ಮೂಲ ಹಿಡಿದರೆ ಜಷ್ಟೇ ಮುಟ್ಟಿದ ಹಾಗೆ (ಎಸಬ್ಬ. XV, ೩೨); ಸ್ವಲ್ಪ ತಲೆ ಬಾಚು ಅಂದರೆ ಏನೋ ಜಷ್ಟೆ (ರೂಢಿ). [ <ಸಂ. ಜ್ಯೇಷ್ಠಾ ]

**ಜಸ$_1$, ಝಸ$_1$** (ನಾ). ೧. ಒಳ್ಳೆಯ ಹೆಸರು ; ಯಶಸ್ಸು ; ಕೀರ್ತಿ : "ಜಸಂ ಕೀರ್ತಿಯೆ" (ಕರ್ಣಾನಿ. ೫೨) ; ಕುಸುಮಂಗಳೆಂಬ ಮಾತದು ಪುಸಿ ದಹನಮಯಂಗಳೆಂಬುಗಳ್ಮನಸಿಜನಾ ಜಸವಮಱೆಯೆ ಸುಡುವುದೆ(ವೆ)ರ್ದೆಯಂ (ಕವಿರಾ. ೩-೦೮೪); ಕೇಸವಯ್ಯನವಾರ್ಪ್ಪೊರ್ಗಳರ್ನೆ ಗಟ್ಟಿಗುಪಮಾಗಿ ಜಸಂ ಭುವನಾನ್ತರಾಳದೊಳ್ (ಎಕ. III, ನಂಜನ. ೭೮-೦೮; ಸು. ೯೦೦); ಒಡಲುಂ ಪ್ರಾಣಮುಮೆಂಬಿವು ಕಿಡಲಾದುವು ಜಸಮದೊಂದೆ ಕಿಡದದನಾಂ ಬಲ್ವಿಡಿವಿಡಿದು ನೆಗಟ್ವೆಂ (ಪಂಪಭಾ. ೦೨-೦೮೦) ; ಜಸಮೆ ತನಗೆ ಮಯ್ಸಿರಿಯೆಂಬುದನಱಿವುವಂತೆ ಪೂಸಿದ ಬೂದಿಯೊಳಂ . . . ಚೆಲ್ವನಾಂತು (ಕಬ್ಬಿಗಕಾ. ೧೬೭) ; ಋಷಿವಾಕ್ಯದೊಡನೆ ವಿಜ್ಞಾನ ಕಲೆ ಮೇಳವಿಸೆ ಜಸವು ಜನಜೀವನಕೆ (ಮಂಕುತಿ. ೫೨೨). ೨. ಶೋಭೆ : ವೈಭವ: ಹಸಿವು ವೆಸನ ತೃಷೆಯಾಲಸ್ಯಮೋಹವೆಂಬೆಸಕವುಳ್ಳುದು ನರದೇಹ ಉಸಿರಿದ ಕೃತಿಯೊಳು ಮಱೆದೆಡಹಿರೆ ತಿದ್ದಿ ಜಸವ ಮೆಱೆವುದು ಕೋವಿದರು (ಕಂನವಿ. ೧-೧೫) ; ಮಿಸುನಿಗಂಬದ ಪಟ್ಟಸಾಲೆ ನಾನಾ ಬಗೆಯೆಸೆವ ಮೇಲ್ಕಟ್ಟುಗಳಿಂದ ಜಸವ ಬೀಱುದುವು ನಾಟಕಶಾಲೆಯ ಬಲೆಯರಸೆದಿಹ ಮಣಿಮಯ ಭವನ (ಕಂನವಿ. ೭-೪೩). **ಝಸ$_1$ :** ೧. ಬಿರುದಿನ ಬಿಂಕದಚಪಳ ವಿರೋಧಿಗಳಂ ತಱಿದಿಕ್ಕಿ ದಿಕ್ಕರಿವರಿಯನ್ತ್ರಮುಂ ಝಸಮನಾರ್ಜ್ಜಿಸಿ ವೀರರಸಂ ತುಳ್ಕಾಡಿ ಕಾದಿದಂ (ಶಾಸಂ. XX, ೧೬೯-೧೩ ; 1183).
[ <ಪ್ರಾ. ಜಸ / ಸಂ. ಯಶಸ್ ]

**ಜಸ$_2$, ಝಸ$_2$** (ನಾ). ವಿಮಾನ ; ಝಡಿತಿ – ಜಡಿತಿ; ಝಷ – ಜಸ (ಶಬ್ದಾನು. ೧೯೩ ಪ್ರಯೋ). **ಝಸ$_2$ :** 'ಝಸಕೇತು' ಪರಾ.
[ <ಪ್ರಾ. ಝಸ / ಸಂ. ಝಷ ]

**ಜಸಂದಳೆ** (ಕ್ರಿ). ಕೀರ್ತಿಯನ್ನು ಪಡೆ ; ಯಶಸ್ಸನ್ನು ಹೊಂದು : ಆವ ನರನಾವ ಕೃತ್ಯಕೆಗೆಯ್ಕಲು ಬೀಯದ ಜಸಂದ[ಪಾಠಾಂ. ಬ]ಳೆವುದಿಲ್ಲಿ ನಾರಕದ ಬಿಱುಬೀಯದ ಸುಖಂ ಪರದೊಳೆಂತು ದೊರಕೊಂಬುದೆಂಬೀ ಯವಸ್ಥೆಯನೆನಗೆ ವಿಸ್ತರಿಸಿ ಪೇಳ್ವುದು(ಕ್ರಮಿಥಾ. ೫-೪೮). [ಜಸ$_1$+ತಳೆ$_1$]

**ಜಸಂಬಡೆ, ಜಸವಡೆ, ಝಸಂಬಡೆ** (ಕ್ರಿ). ಹೆಸರುವಾಸಿಯಾಗು ; ಹೆಸರಾಗು ; ಪ್ರಸಿದ್ಧವಾಗು: ನವ್ಯೊವಜರ್ ಜಸಂಬಡೆದ ಭಾರ್ಗವರ್ (ಪಂಪಭಾ. ೦೨-೫೭) ; ತನ್ನೊಡಮೆಯನನವರತ ದಾನದಿಂ ತವಿಸಿ ಜಸಂಬಡೆದಲ್ (ಆದಿಪು. ೧-೦೫೦); ವಾಜಿವಂಶದಪ್ಪಾಡುವಿನಂ ಜಸಂಬಡೆದ ನೆಂಬುದು ಧಾರಿಣಿ ನಾಗರಾಜನ (ನಾಂದೇಡ್. ೨೩-೩೨ ; 1122) ; ಗುಣಂ ಗೊಂಡುಂ, ಜಸಂಬಡೆದುಂ, ಕಳಸವಿಟ್ಟುಂ(ಧರ್ಮಪರೀ. ೧೩೪ ಉದಾ).**ಜಸವಡೆ:** ಮೂಜಗದೊಳೆನಿಸು ಜಸವಡೆದೊಡಂ ಗುಹ್ಯಕಾಸ್ಪದಮೆನಿಪುದಳಕಾಪುರಂ (ಕ್ರಮಿಥಾ. ೩-೦೫) ; ಎಸೆವಾ ಕಾವೇರಿಯ ತಟದೊಳು ಬಹು ಪುಣ್ಯದೆಸಕದ ದಿವ್ಯಸ್ಥಳಗಳು ಜಸವಡೆದಿಹುವು (ಕಂನವಿ. ೨-೨೦); ಸಕಲ ವೇದಾವಳಿಯೊಳು ಜಸವಡೆದ ಪಾವನಚರಿತೆಯ . . . ವಂದಿಪೆನು (ಹರಿಬ. ೮-೨). **ಝಸಂಬಡೆ:** ಶಂಕರನಾರಾಯಣನ ಪೆಸರಿಂ ಕಡುಝಸಂಬಡೆದ ಭೂಸುರರನಿಂ ಕೃತವಿದಧ್ಯಾತ್ಮರಾಮಾಯಣಂ (ಅಧ್ಯಾರಾ. ೧-೨).
[ ಜಸ$_1$ + ಪಡೆ$_1$ ]

**ಜಸಯುತ** (ನಾ). ಕೀರ್ತಿಶಾಲಿಯಾದವನು ; ಯಶೋವಂತ : ಕರಣ ತ್ರಯಂಗಳೊಳ್ ಜಸಯುತನೊಳ್ ಗೃಹೋಪಕರಣಂಗಳೊಳುತ್ತಮ ಕಾರ್ಯದಲ್ಲಿ ವರ್ತಿಸುವುದು ಸಾಧನಾಹ್ವಯ (ನಾನಾರ. ೦೦೫).
[ ಜಸ$_1$ + ಯುತ ]

**ಜಸವಂತ** (ನಾ). ಕೀರ್ತಿಶಾಲಿ ; ಕೀರ್ತಿವಂತ: ವಂತ ಪ್ರತ್ಯಯಕ್ಕೆ — ಸಿರಿವಂತಂ, ಜಯವಂತಂ, ಜಸವಂತಂ (ಶಮದ. ೨೦೭ ಪ್ರಯೋ) ; ಜಸಮುಂಟೀತಂಗೆ, ಜಸವಂತಂ (ಶಬ್ದಾನು. ೪೦೦ ಪ್ರಯೋ).
[ ಜಸ$_1$ + - ವಂತ ]

**ಜಸವಡು** (ಕ್ರಿ). ಅಂದವಾಗು; ಶೋಭಿಸು: ಮಿಸುನಿಯ ಹಡಪ ಚಾಮರ ಕುಂಚ ಕಳಾಂಜಿ. ಪೊಸವಟ್ಟೆಯು ಪಾವಡೆಯು ಜಸವಟ್ಟೊಳಗದವರ ಮೇಳದೊಳಾಗ ವಸುಧೇಶ ಸಾರಿಗೈದಿದನು (ಕಂನವಿ. ೨೨-೮೮).
[ ಜಸ$_1$ + ಪಡು$_1$ ]

**ಜಸವಡೆ** 'ಜಸಂಬಡೆ' ನೋ.

**ಜಸವೆಱು** (ಕ್ರಿ). = ಜಸಂಬಡೆ : ಜಸವೆತ್ತ ಗರುಡಬಾಣದಿ ಕೃಷ್ಣರಾಯ ಖಂಡಿಸಲದು ಬಯಲಾದುದು (ವೀರದತ. ೩೯-೨೮); ಜಸವೆತ್ತು ಪೆರ್ಮೆ ಮಿಗೆ ರಂಜಿಸೆ (ರಾಜಶೇ. ೧-೬೯). [ ಜಸ$_1$ + ಪೆಱು$_1$ ]

**ಜಸೆ** 'ದಸೆ$_1$' ನೋ.

**ಜಸ್ತು** (ನಾ). ತವರ ಮತ್ತು ಸೀಸಗಳಿಂದಾದ ಒಂದು ಬಗೆಯ ಮಿಶ್ರ ಧಾತು : ಎಣ್ಣೆಯ ಪೀಪಾಯಿ ಮತ್ತು ಜಸ್ತಿನ ಡಬ್ಬಿಯಲ್ಲಿಯ ತುಪ್ಪ (ಮುಂಬವ್ಯಾ. ೮೦). [ ←ಮರಾ. ಜಸ್ತ್ ; ಹಿಂ. ಜಸ್ತಾ/ಪ್ರಾ. ಜಸದ. ]

**ಜಹಂಗೀರು** 'ಜಹಾಂಗೀರು' ನೋ.

**ಜಹಗೀರದಾರ** 'ಜಹಗೀರುದಾರ' ನೋ.

**ಜಹಗೀರಿ** 'ಜಹಗೀರು' ನೋ.

**ಜಹಗೀರು, ಜಹಗೀರಿ, ಜಾಗಿರಿ, ಜಾಗೀರ್, ಜಾಗೀರಿ, ಜಾಗೀರು** (ನಾ). ೧. ಮಾನ್ಯವಾಗಿ ದೊರೆತ ಭೂಮಿ, ಗ್ರಾಮ ಮೊದಲಾದುವು: ನಿನಗೆ ಹರದನ ಹಳ್ಳಿಯನ್ನು ಜಹಗೀರು ಕೊಡಿಸುತ್ತೇವೆ (ಹೈದರ. ೩೪) : ಆ ಜಹಗೀರಿನ ವಾರ್ಷಿಕ ವರಮಾನವು ಒಳಗ್ಗೆ ಸಾವಿರಗಳಷ್ಟು ಇದ್ದಿತು (ಘೂರಾತ. ೫). **ಜಹಗೀರಿ:** ೧.ಕೊಡಗರ ಭೂಮಿ ಮನೆಯನ್ನು ಆ ಮುಸಲ್ ಮಾನರಿಗೆ ಜಹಗೀರಿ ಆಗಿ ಕೊಟ್ಟು (ರಾಜೇಂದ್ರ. ೦೬). (ಗು). **೨.** ಜಹಗೀರಿಗೆ ಸಂಬಂಧಿಸಿದ: ಶೀಮೆಯೇನಾದರೂ ಜಹಗೀರಿ ಇನಾಮಾಗಿ ಬೇಕೆಂಬ ಅಪೇಕ್ಷೆಯೂ ಇಲ್ಲಾ (ರಾಜೇಂದ್ರ. ೧೦೫). **ಜಾಗಿರಿ :** ೧. ಒಂದು ಜಾಗಿರಿನಲ್ಲಿಯ ಜಾಗಿರದಾರರು ತಮ್ಮ ಹಳ್ಳಿಯ ಜನರ ಮೇಲೆ ನಡೆಸುವ ಕ್ರೂರವಾದ ಒತ್ತಾಳಿಕೆ (ಸಾಸಮೂ. ೬೮). **ಜಾಗೀರ್ :** ೧. (ಕೃಸಗಿ. II, ೫೫೦). **ಜಾಗೀರಿ :** ೧. ಅಖಂಡ ಜಾಗರದ ಜಾಗೀರಿ ಸನದನ್ನು ಪಡೆದವರಂತೆ (ದೀಪಹ. II, ೨೨೯). **ಜಾಗೀರು :** ೧. 'ಜಾಗೀರುದಾರ' ಪರಾ.
[ ←ಮರಾ. ಜಹಾಗೀರ್, ಜಾಹಾಗೀರ್ ; ಪಾರ. ಹಿಂ. ಜಾಗೀರ್, ಜಾಗೀರಿ ]

**ಜಹಗೀರುದಾರ, ಜಹಗೀರದಾರ, ಜಹಾಗೀರದಾರ, ಜಾಗೀರದಾರ, ಜಾಗೀರುದಾರ, ಜಾಗೀರ್ದಾರ್** (ನಾ). ಜಹಗೀರನ್ನು ಪಡೆದವನು; ಜೋಡಿದಾರ: ದೊಡ್ಡದೊಡ್ಡ ಜಹಗೀರುದಾರರು ತಮ್ಮತಮ್ಮೊಳಗೆ ಯುದ್ಧಮಾಡಿಕೊಳ್ಳುತ್ತಿದ್ದರು (ಯೋಧಪು. ೦). **ಜಹಗೀರದಾರ :** ಸಾವಿರಾರು ಜಹಗೀರದಾರರು ತಾಲೂಕುದಾರರು . . . ದುರ್ದೆಶೆಗೀಡಾಗಿದ್ದರು (ಪ್ರಬಂಧ. ೫೪). **ಜಹಾಗೀರದಾರ :** ಆ ಜಹಾಗೀರದಾರರ ಮನೆಯ ವಿಷಯವಾಗಿ ನೀನು ವಿಚಾರಿಸುತ್ತಿಯಷ್ಟೇ ? (ಮೋಹಿನೀ. ೩). **ಜಾಗೀರದಾರ :** ಅಗರ್ಭಶ್ರೀಮಂತರು . . . ಜಾಗೀರದಾರರು !! (ಇತಿಶ್ರೀ. ೬). **ಜಾಗೀರುದಾರ:** (೩). **ಜಾಗೀರ್ದಾರ್:** (ಕೃಸಗಿ. II, ೫೫೦).
[ ←ಮರಾ. ಜಹಾಗಿರದಾರ್, ಜಾಗೀರ್ದಾರ್ ; ಪಾರ. ಹಿಂ. ಜಾಗೀರ್ದಾರ್ ]

**ಜಹಜು, ಜಾಜು$_2$** (ನಾ). ಹಡಗು : ಫರಾಶೀಸರ ದೊಡ್ಡ ಜಹಜು ಹದಿಮೂರು ಇಂಗ್ರೇಜಿಯವರ ಜಹಜು ಹದಿಮೂರು (ರಾಜೇಂದ್ರ. ೬೦) : ಸಮುದ್ರದಲ್ಲಿ ಒಂದು ಪ್ರಚಂಡವಾರುತ ಪ್ರಾರಂಭವಾಗಿ ಅನೇಕ ಜಹಜುಗಳು ಕಷ್ಟಕ್ಕೆ ಒಳಗಾದವು (ಇಬದು. ೯೧). **ಜಾಜು$_2$ :** ಅವರು ಇಳಿದು ಜಾಜು ಹತ್ತಿ ಹೋದರು (ರಾಜೇಂದ್ರ. ೧೬).
[ ←ಅರ. ಹಿಂ. ಮರಾ. ಜಹಾಜ್ ]

**ಜಹದಜಹಲ್ಲಕ್ಷಣ** (ನಾ). [ಕಾವ್ಯಮೀ] ಮೂರು ಬಗೆಯ ಲಕ್ಷಣಾವೃತ್ತಿಯ ಒಂದು ಪ್ರಕಾರ ; ವಾಚ್ಯಾರ್ಥದಲ್ಲಿ ಒಂದು ಅಂಶವನ್ನು ಬಿಟ್ಟು ಒಂದು ಅಂಶವನ್ನು ಬಿಡದಿರುವುದು: ಸೋಯಂಶಬ್ದಂಗಳಿಂದ ದೇವದತ್ತ ಗತವಾದ ಐಕ್ಯಮಂ ಲಕ್ಷಿ. ... ಪರಸ್ಪರಾಭೇದ ತಾದಾತ್ಮ್ಯಂ ಘಟಿಸುವಂತೆ ಬೋಧಿಪುದೇ ಜಹದಜಹಲ್ಲಕ್ಷಣ (ವಿವೇಕ. ೪೬); ವಾಚ್ಯಾರ್ಥದಲ್ಲಿ ಏಕದೇಶವ ಬಿಟ್ಟು ಏಕದೇಶದಲ್ಲಿ ಪ್ರವರ್ತಿಸುವದು ಜಹದಜಹಲ್ಲಕ್ಷಣವೆಂತಾ ಹೇಳಲ್ಪಡುವದು (ಈಶ್ವಸ್ವ. ೨೦-೮).
[ ಸಂ. ಜಹದಜಹಲ್ಲಕ್ಷಣಾ (ಜಹತ್ + ಅಜಹತ್ + ಲಕ್ಷಣಾ) ]

**ಜಹದಜಹಲ್ಲಕ್ಷಣಾವೃತ್ತಿ** (ನಾ). = ಜಹದಜಹಲ್ಲಕ್ಷಣ : ಲಕ್ಷಣಾವೃತ್ತಿಯಿಂದ ಬೋಧಿತವಾಗುವ ಅರ್ಥವು ಶಕ್ಯಾರ್ಥದ ಏಕದೇಶವಾಗಿರುವ ಕಲ್ಪದಲ್ಲಿ ಆ ಲಕ್ಷಣಾವೃತ್ತಿಯು ಜಹದಜಹಲ್ಲಕ್ಷಣಾವೃತ್ತಿ ಎನ್ನಿಸುವುದು (ಛಾಪತ್ರ್ಯ. ೬೦೧). [ ಸಂ.(ಜಹತ್ + ಅಜಹತ್ + ಲಕ್ಷಣಾವೃತ್ತಿ) ]

**ಜಹದಜಹಲ್ಲಕ್ಷಣೆ** (ನಾ).=ಜಹದಜಹಲ್ಲಕ್ಷಣ: ಜಹದಜಹಲ್ಲಕ್ಷಣೆಯೆಂದರೆ, ಪದಗಳ ಸಹಜವಾದ ಅರ್ಥದಲ್ಲಿ ಒಂದಂಶವನ್ನು ಬಿಟ್ಟು ಒಂದುಂಶವನ್ನು ಬಿಡದಿರುವುದು (ಹಿಂದಸಾ. ೨೦೬).
[ ಸಂ. ಜಹದಜಹಲ್ಲಕ್ಷಣಾ (ಜಹತ್ + ಅಜಹತ್ + ಲಕ್ಷಣಾ) ]

**ಜಹಪನಾ** 'ಜಹಾಪನಾ' ನೋ.

**ಜಹರ್** 'ಜೋಹರ್$_2$' ನೋ.

**ಜಹಲ್ಲಕ್ಷಣೆ** (ನಾ). [ಕಾವ್ಯಮೀ] ಲಕ್ಷಣಾವೃತ್ತಿಯ ಒಂದು ಪ್ರಕಾರ; ವಾಚ್ಯಾರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಹೇಳುವುದು : "ಕೇರಿಯೆಲ್ಲ ಕಣ್ಣೀರು ಸುರಿಸಿತು" . . . "ಕೇರಿ" ಎಂಬುದರಲ್ಲಿ ವಾಚ್ಯಾರ್ಥವು ಪೂರ್ತಿಯಾಗಿ ತಿರಸ್ಕೃತವಾಗುತ್ತದೆ ; ಅದಕ್ಕೆ ಸಂಬಂಧಪಟ್ಟದ್ದರೂ ಅದನ್ನೊಳಕೊಳ್ಳದೆ ಬೇರೆಯಾಗಿರುವ "ಜನರು" ಎಂಬ ಅರ್ಥವು ಲಕ್ಷಿತವಾಗುತ್ತದೆ. (ಜನರು ಕಣ್ಣೀರು ಸುರಿಸಿದರೇ ಹೊರತು, ಕೇರಿ ಕಣ್ಣೀರು ಸುರಿಸಲಿಲ್ಲ.) ಈ ಬಗೆಯ ಲಕ್ಷಣೆಗೆ "ಜಹಲ್ಲಕ್ಷಣಾ" ಎಂದು ಹೆಸರು (ಭಾರಮೀ. ೨೫೨). [ ಸಂ. ಜಹಲ್ಲಕ್ಷಣಾ (ಜಹತ್ + ಲಕ್ಷಣಾ) ]

**ಜಹಾಂಗೀರು, ಜಹಂಗೀರು, ಜಾಂಗೀರು** (ನಾ). ಉದ್ದಿನ ಹಿಟ್ಟಿನಿಂದ ಸುತ್ತುಸುತ್ತಾಗಿ ಮಾಡಿ, ಸಕ್ಕರೆಯ ಪಾಕದಲ್ಲಿ ನೆನೆಸಿದ ಒಂದು ಬಗೆಯ ಸಿಹಿಖಾದ್ಯ : ನನಗೆ ಜಹಾಂಗೀರು ಕೊಡಿಸು (ರೂಢಿ). **ಜಹಂಗೀರು:** ನೀವು ಮಾಡಿರುವ ಜಹಂಗೀರು ತುಂಬ ಚೆನ್ನಾಗಿದೆ (ರೂಢಿ). **ಜಾಂಗೀರು:** ಜಿಲೇಬಿ . . . ಜಾಂಗೀರು, ಹೋಳಿಗೆ (ರೂಪಸಂ.೧೬).
[ ←ಪಾರ. ಹಿಂ. ಜಹಾಂಗೀರೀ = ಒಂದು ಬಗೆಯ ಹಸ್ತಾಭರಣ ]

**ಜಹಾಗೀರದಾರ** 'ಜಹಗೀರುದಾರ' ನೋ.

**ಜಹಾದ್** (ನಾ). ಧರ್ಮಯುದ್ಧ : ನಿನ್ನ ಭಿಕ್ಷಾಪಾತ್ರವನ್ನು ಎತ್ತಿ ಹಿಡಿದು ಜಹಾದ್ ಜಹಾದ್ ಎಂದು ಕೂಗುತ್ತ ಉತ್ತರಾಭಿಮುಖವಾಗಿ ಹೋಗಬೇಕಾಗಿದೆ (ಕೈಲಾಕ. ೬೮). [ ←ಪಾರ. ಜಹಾದ್, ಜಿಹಾದ್ ]

**ಜಹಾಪನಾ, ಜಹಪನಾ** (ನಾ). ಚಕ್ರವರ್ತಿ, ಮಹಾಪ್ರಭು ಎಂಬಂತೆ ಸಾರ್ವಭೌಮರನ್ನು ಸಂಬೋಧಿಸುವಾಗ ಬಳಸುವ ಶಬ್ದ : ಜಹಾಪನಾ! [ಮಹಾಸ್ವಾಮಿ!] ಈ ದಾಸಿಯು ಶುಭಸಮಾಚಾರವನ್ನು ತಂದು ಹೇಳಿದಳು (ಕಪಾಕುಂ. ೬೯) ; ಹಾಗಲ್ಲ ಜಹಾಪನಾ, ಗುಲಾಮಿನ ಕಾಲಿಲ್ಲ ತೀರಬೇಕೂ ಬೇಡವೂ (ಗಾಳಿಪ. ೧೨೦). **ಜಹಪನಾ :** ಜಹಪನಾ — ಇಂಗ್ರೇಜಿ ಪಿಶಾಚಿಗಳು ಪಹರ್‌ಗುಂಜನ್ನು ಲೂಟಿಗೊಳ್ಳುತ್ತಿದ್ದಾರೆ (ಅನ್ನಾವ. ೨೦). [ ←ಪಾರ. ಹಿಂ. ಜಹಾಂಪನಾಹ್ ]

**ಜಹ್ನುಜಾಂಬು** (ನಾ). ಗಂಗಾನದಿಯ ನೀರು ; ಪವಿತ್ರವಾದ ನೀರು: ಜಹ್ನುಜಾಂಬುಗಳಿಂದಂ ತುಂಬಿ ಸಹಸ್ರ ಕುಂಭದಭಿಷೇಕಮಂ ಗೈವೆ (ರಾಜಶೇ. ೩-೨೮). [ ಸಂ. (ಜಹ್ನುಜಾ + ಅಂಬು) ]

**ಜಹ್ನುಜಾತೆ** (ನಾ). ಜಹ್ನುಮುನಿಯ ಮಗಳು; ಜಾಹ್ನವಿ; ಗಂಗಾ ನದಿ: ಜಹ್ನುಜಾತೆಯನುತ್ತರಿಸಿ, ನಾವೆಯಿಂದಿಳಿದು (ಶ್ರೀ ರಾ ಮಾ. ೧೨೭-೫೦). [ ಸಂ. ಜಹ್ನುಜಾತಾ (ಜಹ್ನು + ಜಾತಾ) ]

**ಜಹ್ನುಜೆ** (ನಾ).=ಜಹ್ನುಜಾತೆ. 'ಜಹ್ನುಜಾಂಬು' ಪರಾ. [ ಸಂ. ಜಹ್ನುಜಾ ]

**ಜಹ್ನುಸುತೆ** (ನಾ). = ಜಹ್ನುಜಾತೆ: ತೋಮುದ ಕಿಚ್ಚು ತುಡುಕದ ಮುನ್ನ ತಗೆದನು ಬಿಚ್ಚುಜಡೆಗಳ ಜಹ್ನುಸುತೆಯಲಿ ನಾದಿದನ ಭಟನ (ಕುವ್ಯಾ.ಗ. ೯-೨೩). [ ಸಂ. ಜಹ್ನುಸುತಾ (ಜಹ್ನು + ಸುತಾ) ]

**ಜಳ**$_1$ 'ಜಲ$_1$' ನೋ.

**ಜಳ**$_2$ 'ಜಲ$_2$' ನೋ.

**ಜಳಂಬ, ಝಣಂಬ, ಝಳಂಬ** (ನಾ). ೧. ಮೇಲ್ಮುಸುಕು; ಹೊದಿಕೆ; ತೆರೆ: "ಮೇಲುಮುಸುಕಿಗೆ ಜಳಂಬಮುದು" (ಶಬ್ದಮಂ. ೬೦): "ಮುಸುಕೆ ಜಳಂಬಂ" (ಕವಿಕಂ. ೧೬೪). ೨. ಬೀಸಣಿಗೆ. 'ಜಳಂಬಾಯ್ತ' ಪರಾ. **ಝಣಂಬ:** ೧. ಇಂದ್ರಜಾಲಿಗರ ಪಾಪೆಗಳುಂ ಸೀರೆಗಳುಂ ಝಣಂಬಮಂ ಕೊಂಡೊಂದು ಪ್ರತಿಮುಖಮುಂ ಕೊಂಡು ತನ್ನ ಮುಖದೊಳಿಟ್ಟು ಪುಲಿಯ ಝಣಂಬಮುಮಂ ತೊಟ್ಟು (ವಡ್ಡಾ.ರಾ. ೧೯-೧೨); ಜವಳಿ ಝಣಂಬಮಂ ಕೊಡೆಯನನ್ನಳಮಂ (ಬೊಂಕಶಾ. ೧೯೩೪, ಹಿರೇಕೆರೂರ್. ೨೦-೨೪ ; ?). **ಝಳಂಬ:** ೧. "ಝಳಂಬಮೆಂದು ಮೇಲ್ಮುಸುಕು" (ಕರಸಾ. ೨೦-೩೯೮); ಚಿತ್ರದಣ್ಣಂ ಪಳಿಯೆಸೆವ ಝಳಂಬಂ ಗಜೇನ್ದ್ರಂ ತುರಂಗಂ (ಎಕ. XIII, ೩೩೦-೧೩ : ೧೨೮); ಬಣ್ಣದ ಸೀರೆ ಮೇಘ ವಣ್ಣಗೆಯು ಝಳಂಬಮೆಂಬಿವಳವಟ್ಟಿರೆ . . . ನಡೆತಂದನಂದು ನವ ಯೌವನನೊರ್ವನಪೂರ್ವ ಚಿತ್ರಿಕಂ (ಮಲ್ಲಿಪು. ೫-೨೯); ಪಟಿಯ ಝಳಂಬ ಮುಜ್ಜಳಿಪ ಮುದ್ರಿಕೆ ಬಣ್ಣದ ಸೀರೆ . . . ತನ್ನೊಳೊಳ್ಪಳವಡೆ ಬಂದಂ (ಲೀಲಾವ. ೯-೫೫); ಕಡಲುಡಿಗೆಗೊಂಡ ಪೊಡವಿವೆಣ್ಗಂಬರಾಂಬುಜನೇತ್ರ ನಿತ್ತ ಪೀತಾಂಬರದ ಝಳಂಬಮೆಂಬ ಬೆಡಗನವರ್ಚಿಯುಂ (ರಾಜಶೇ. ೧೨-೩೯ ವ): (ತನ್ನ ಕಯ್ಯುದರ ಝಳಂಬವನ್ನು ಸುಲಿಯುತ್ತ ಎಯ್ದಿ ಹೋಗಿ) (ಬಿಲ್ಹಅ. ೧೯೧೧-೦೪). ೨. 'ಝಳಂಬಾಯ್ತ' ಪರಾ. [ ?./ಮರಾ. ಝಳಂಬ ]

**ಜಳಂಬಾಯ್ತ, ಝಳಂಬಾಯುತ, ಝಳಂಬಾಯ್ತ** (ನಾ). ಬೀಸಣಿಗೆ ಬೀಸುವವನು; ಚಾಮರಿಗ: "ಬಿಜ್ಜಣಿಗೆಯುವನೇ ಜಳಂಬಾಯ್ತನಕ್ಕುಂ" (ಶಬ್ದಮಂ. ೪೬): "ಜಳಂಬಾಯ್ತ ಬಿಜ್ಜಣಿಗೆವಿಡಿವಾತಂ" (ಕವಿಕಂ. ೧೬೦): ಅರಮನೆಯೊಳಿರಿಸುವುದು ರಾಯ ಕೇಳ್ಕುಲಪರಂಪರೆಯಿಂದೆ ಬಂದ ವಿಶ್ವಸನೀಯರಪ್ಪ ಪಡಿಯುರರಂ ಜಳಂಬಾಯ್ತರಂ ಬೆಜ್ಜರಂ ಸಜ್ಜೆವಳರಂ (ಶೀಪಶಾ. ೨-೩೨). **ಝಳಂಬಾಯುತ:** ಪಡಿಯುಜಿರೆಕ್ಕಟಿಗರ ಲೆಕ್ಕಿಗರೆಸೆವ ಝಳಂಬಾಯುತರ . . . ಮಾಸ್ವಾರರ ಸಂದಣಿ ಸಲೆ ಸೊಗಯಿಸಿತು (ಜಯುಕಾ. ೧೨-೧೯). **ಝಳಂಬಾಯ್ತ:** "ಝಳಂಬಾಯ್ತನೆಂದು ಬಿಜ್ಜಣಿಗೆ ವಿಡಿವಾತಂ" (ಕರಸಾ. ೧೭-೩೪೨): ಅಬ್ಧಿಯೆ ಘೂರ್ಣಿಸುವಂತಾಯ್ತರಮನೆ ಯೊಳಗೆ ಪುಗುವ ಪೊಱಮಡುವ ಝಳಂಬಾಯ್ತರ ಸೂಟಾಯ್ತರ ಕಲ್ಲಾಯ್ತರಡಂಗಾಯ್ತರಚ್ಚುಕಾಯ್ತರ ರಭಸಂ (ಶಮುದ. ೧೯೮ ಪ್ರಯೋ): ತಿಂತಿಣಿಸಿ ತುಟಿಲ್ಗೆಯ್ವ . . . ಪಡೆವಳರಂ ಘೋಟಾಯ್ತರಂ ಝಳಂಬಾಯ್ತರಂ ಪಸಾಯ್ತರಂ ಪ್ರೇಮದಿಂದವರವರುತರವಱಿತು ಮಧುರೋಕ್ತಿಗಳಿಂ ಸಂತಸವಡಿಸುತ್ತ (ಚಿಕಪಂ. ೭೪-೯). [ ಜಳಂಬ + – ಆಯ್ತ ]

**ಜಳಕ, ಜಲಕ, ಝಳಕ**$_1$ (ನಾ). ಮೈತೊಳೆಯುವುದು: ಮಿಾಹ; ಸ್ನಾನ: ಜಳಕವನೇ ಮಾಡಿ ಯೋಗ ಕಂಪನಿಕ್ಕಿ ಹೋದಿಹೆನಯ್ಯ (ಸಿದ್ಧವ. ೪೧ ೨೨೦): ಬೆಡಗಡರೆ ಪಾಕಪ್ರಯುತ್ನದ ಕಡೆಯೊಳಾ ಜಂಗಮದ ಜಳಕಕೆ ಒಡಿದು (ಬಸಪು. ೨೪-೬೦): ಖಿಳಕುಲೋತ್ತಮನ ಬಾಣಾರುಣಾಂಬುವಿನಿಂದೆ ಜಳಕ ವಾದುದು ಕುಮಾರನಿಗೆ (ಮೋಹತ. ೩೪-೧೮): ಅವರನ್ನು ಜಳಕದ ಮನೆಗೆ ಕರೆದುಕೊಂಡು ಹೋಗ್ತೀಯಾ (ತುಂಗಭ. ೧೧). **ಜಲಕ:** ಪನ್ನೀರಿನಿಂ ಜಲಕವಂ ಮಾಡಿ (ಸೌಗಂಧಿ. ೧೬೬-೪). **ಝಳಕ**$_1$**:** ಝಳಕಂ ಝಳಪಿಸಿದಂ ಜೊಂಗುಳಿ ಬೊಂಬುಳಿಯಾಳಮಾಳಮಂತೆ ತಮಾಳಂ . . . ಜಟ ಸಂದೇಹಂ (ಶಮುದ. ೨೩): ನಿದ್ರೆ ಪಿಂಗಿ ಎಬ್ಬಿ ಝಳಕ ದೇವತಾರ್ಚನೆ . . . ಜಪತಪ ಸಮಾಧಿಯಂ ನಿರ್ವರ್ತಿಸಿ (ಧರ್ಮಪ. ೬-೧೨೦ ವ): ಝ[ಪಾಠಾಂ. ಜ] ಳಕವನುಲೇಪನ ವಿಭೂಷಣ ವಿಳಸದಮೃತಾಹಾರ ಮೊದಲಹ ಹಲವು ಸೇವೆಗೆ ಯೋಜಿಸಲು ನೆರೆತಂದುದೋರಂತೆ (ಸಾ ಳ್ ಭಾ. ೩೨-೧೫): ಝಳಕಕ್ಕೆಂದು ಇವರು ಬಚ್ಚಲ ಮನೆಗೆ ಹೋದಾಗ (ಮೂರುದಾ. ೮೩). [ ದೇ.॥ ತಮಿ. ಚಲಕ, ಚಲಕ್ಕ ; ತೆಲು. ಜಲಕ, ಜಲ್ಕ ]

**ಜಳಕಂ** (ಅ). ಬೇಗನೆ; ಕೂಡಲೆ: "ಜಳಕಂ ಸುಶೀಘ್ರದಲ್ಲಿ" (ಕರ್ಣಾನಿ.೯೦). 'ಜಳಕನೆ' ಪರಾ. [ ? ]

**ಜಳಕಂಗೈ** (ಕ್ರಿ). ಸ್ನಾನ ಮಾಡು: ಜಳಕಂಗೆಯ್ದುಂಡುಟ್ಟುಂ ಬಳಿಕಂ ಕದನಕ್ಕೆ ಖಡ್ಗಫಲಕಂಗಳನಾವಿಳಮತಿಸಿದ್ಧಂ ಪಿಡಿದುಂ ಗಳಿಲನೆ ನಡೆತಂದಂ (ಹಾಲಾಸ್ಯ. ೨-೧೧-೨೩): ಸರಯೂತೀರಮಂ ಸಾರ್ದು ಜಳಕಂಗೈದು (ರಾಮಾಶ್ವ. ೨೭-೪). [ ಜಳಕ + ಕೈ$_1$ (<ಕೆಯ್$_1$) ]

**ಜಳಕಂಬೊಗಿಸು** (ಕ್ರಿ). ಸ್ನಾನಮಾಡಿಸು; ಮಿಾಯಿಸಂ: ಸುರಲತೆಗೆ ಸುರನಾರಿಯರ್ ಸುರಭಿಪಯಮಂ ಸುರಿವಂತೆ ಸುರಭಿಸಲಿಲದಿಂ ಜಳಕಂ ಬೊಗಿಸಿ (ವೃಷವಿ. ೫-೧೫ ವ). [ ಜಳಕಂಬೊಗು + – ಇಸು$_3$ ]

**ಜಳಕಂಬೊಗು, ಝಳಕಂಬೊಗು** (ಕ್ರಿ). ಮಿಾಯು; ಸ್ನಾನ ಮಾಡು: ಚೇರಮಮಹೇಶ್ವರಂ ಜಳಕಂಬೊಗಲ್ಕೆ ತೈಲಾಭ್ಯಂಗನಂ ಮಾಡಿಕೊಳುತಿರ್ದ ಕಾಲದೊಳು (ಚೇರಮ. ೧೧-೩೦); ಪರಿಮಳೋದಕದಿಂ ಜಳಕಂಬೊಕ್ಕು ವಣಂಬಮನುಟ್ಟು (ವೃಷವಿ. ೯-೭೦ ವ). **ಝಳಕಂಬೊಗು:** ಝಳಕಂ ಬೊಕ್ಕಂ (=ಮಜ್ಜನವಿಡಿದಂ) (ಶಮುದ. ನ. ೩೫ ಅಡಿಟಿ). [ ಜಳಕ + ಪೊಗು ]

**ಜಳಕನೆ** 'ಜಲಕ್ಕನೆ' ನೋ.

**ಜಳಕಾಕ** 'ಜಲಕಾಕ' ನೋ.

**ಜಳಕಿಸು** (ಕ್ರಿ). ಹಿಮ್ಮೆಟ್ಟಿಸು: ಧುರದೊಳರಿಭೂಭುಜರನಂಜಿಸುವ ನಡುಗಿಸುವ ಕೊರಗಿಸುವ ಕೋಡಿಸುವ ಬಳುಕಿಸುವ ಜಳಕಿಸುವ [ಪಾಠಾಂ. ಬಾಡಿಸುವ ಬಳುಕಿಸುವ] ಬಿರುದಂಕಮಲ್ಲ ನೀ ನಡುಗಲೇತಕ್ಕೆ (ಹದಶಾ. ೭-೫೪). [ಜಳಕು + – ಇಸು$_3$ ]

**ಜಳಕು, ಜಳುಕಂ** (ಕ್ರಿ). ೧. "ಬಳುಕಂ; ಕಂಪಿಸು" (ಲೋಕಗೀ. ಕೋಶ): ಕೆಂಪೀಲಿ ಚೆಲುವೀರ ಪಂಚಸರ ಕೊಪ್ಪೂರ ಒಂಕಿ ಭಾರಕ ಜಳಕೂರ (ಲೋಕಗೀ. ೧೨). ೨. ಹಿಂಜರಿ; ಹಿಂದೆಗೆ; ಹಿಮ್ಮೆಟ್ಟು: 'ಜಳಕಿಸು' ಪರಾ: **ಜಳುಕು:** ೩. ಎಸೆ; ಬಿಸುಡಂ: ಅಳುಕಾದೆ ಬಳುಕಾದೆ ಕಳುಕಾದೆ ಮನದೊಳು ಅಳಿನೀಲಕುಂತಳೆವುರಿಯೋಳ್ ಜಳುಕಾದೆ ತಳುಕಾದೆ ವಳಕೇಸಿ ಬೆದರಾದೆ ದಳನೇತ್ರೆ ಹರುಷಾದಿ ಪೊರಟು (ಹಮುದ. ೬೦): ಭರದಿ ಕೊಡಗಳ ಜಳುಕಿ ಧರೆಯಲಿ ಕರೆದು ಬಸವನ ಎಲ್ಲ ಬಿಸುಡುಲಿ ಧರೆಗೆ ಬೀಳದೆ ಒಡೆಯದಿರ್ದಡೆ ನೋಡು ಪರಿಕಿಸುತ (ಶರಲೀ. ೨೩೩-೩). 'ಜಳಿಕ' ಪರಾ. [ ? ]

**ಜಳಕೇಳಿ** 'ಜಲಕೇಳಿ' ನೋ.

**ಜಳಕೇಳಿಗೈ** (ಕ್ರಿ). ನೀರಾಟವಾಡು: ಜಳಕೇಳಿಗೈವ ಪನ್ನಗವಿಳಾಸಿನೀಜನಂ (ವೃಷವಿ. ೪-೬೦). [ ಜಳಕೇಳಿ (=ಜಲಕೇಳಿ) + ಕೈ$_1$ (<ಕೆಯ್$_1$) ]

**ಜಳಕ್ಕನೆ** 'ಜಲಕ್ಕನೆ' ನೋ.

**ಜಳಕ್ರೀಡೆ** 'ಜಲಕ್ರೀಡೆ' ನೋ.

**ಜಳಖಾತಿಕೆ** 'ಜಲಖಾತಿಕೆ' ನೋ.

**ಜಳಗುಡಿ** (ನಾ). ಒಂದು ಬಗೆಯ ಧಾರಾಗೃಹ; ಕಾರಂಜಿಮನೆ: ಬಾಣಸಿನ ಗುಣಸೆಯು ಮಜ್ಜನದ ದೇಹಾರದ ಜಿಂಚೆಯು ಕೊಂಚೆಯುದ ಕೂರವದ ಕೊಟ್ಟಗೆಯು ಗುಡಿಯು ಜಳಗುಡಿಯು ಗೊಲ್ಲಣಗೆಯು ಮಂಡ ವಿಗೆಯು ವಿಳಾಸನಿವಾಸಂಗಳಿಂದಂ (ಶಾಂತಿಪು. ೧೦-೧೪೭ ವ).

[ ಜಳ$_2$ (=ಜಲ$_2$) + ಗುಡಿ$_3$ ]

**ಜಳಚರ** 'ಜಲಚರ' ನೋ.

**ಜಳಜ** 'ಜಲಜ' ನೋ.

**ಜಳಜಂತ್ರ** 'ಜಲಜಂತ್ರ' ನೋ.

**ಜಳಜದಳ** 'ಜಲಜದಲ' ನೋ.

**ಜಳಜದಳಾಕ್ಷಿ** (ನಾ). ಕಮಲದ ಎಸಳಿನಂತೆ ಕಣ್ಣುಳ್ಳವಳು: ಜಳಜ ದಳಾಕ್ಷಿಯ ಕಣ್ಮಲರಂದಂ ಪೊಱಜಳಮೀಂಗಳ ಪೊಣರ್ಗಳ ಚಂದಂ (ಸುಕುಮಾ. ೫-೫೧).

[ ಸಂ. ಜಲಜದಲಾಕ್ಷೀ (ಜಲಜದಲ + ಅಕ್ಷಿ + –) ]

**ಜಳಜಭವ** 'ಜಲಜಭವ' ನೋ.

**ಜಳಜಭವಾಂಡ** (ನಾ). ಬ್ರಹ್ಮಾಂಡ: ಜಳಜಭವಾಂಡಂ ಜಂಬೂಫಳರಸದಿಂ ತೀವಿತೆಂಬಿನಂ ಜಗಮಂ . . . ಪರ್ವಿದುದು ಸಾಂದ್ರಸಂಧ್ಯಾರಾಗಂ (ಕಾದಂಪೂ. ೯೬೮). [ ಜಳಜಭವ ( = ಜಲಜಭವ) + ಅಂಡ$_2$ ]

**ಜಳಜಸಂಭವ** 'ಜಲಜಸಂಭವ' ನೋ.

**ಜಳಜಸಂಭವಗಣ** (ನಾ). [ಛಂದ] ಅಂಶಗಣಗಳಲ್ಲಿ ಒಂದು; ಬ್ರಹ್ಮಗಣ: ಜಳಜಸಂಭವಗಣಮಕ್ಕೆ ಮೊದಲೊಳೆ . . . ನಡುವಣಕ್ಕರಕೆ ಸಖೀ (ಛಂದೋಂಬು. ೫-೩೪೪). [ ಜಳಜಸಂಭವ ( = ಜಲಜಸಂಭವ) + ಗಣ ]

**ಜಳಜಸಖ** (ನಾ). ಕಮಲದ ಗೆಳೆಯ; ಸೂರ್ಯ: ಜಳಜಸಖನನಿಲ ಸಖನೆಂದಿಳೆಯೊಳ್ ರಸವೆಸರನಾನದಿರ್ದೊಡೆ ಸೂರ್ಯಾನಳರೋವೋ ಸಂತಮಿರ್ಪರೆ ಘಳಿಲನೆ ನಿಂದುರಿದು ಹೋಗರೇ ಬೇಸಗೆಯೊಳ್ (ಗಿರಿಕ. ೯-೨೬); ತರುಗಳಲ್ಲಿ ಹಯಖುರಹತಿಯಿಂದಳುರ್ದೆಳ್ದ ಧೂಳಿ ಪರಿಣತ ಜಳಜಸಖಾಭಂ ಪತಂಗತತಿವೊಲ್ ಬೀಳ್ಗುಂ (ಶಾಕುಂತ. ೧೬-೩೨).

[ ಜಳಜ ( = ಜಲಜ) + ಸಖ ]

**ಜಳಜಳಿಸು** 'ಜಲಜಲಿಸು' ನೋ.

**ಜಳಜಾತ** 'ಜಲಜಾತ' ನೋ.

**ಜಳಜಾತಸಖ** 'ಜಲಜಾತಸಖ' ನೋ.

**ಜಳಜನಿ** 'ಜಲಜನಿ' ನೋ.

**ಜಳದ** 'ಜಲದ' ನೋ.

**ಜಳದವೃಂದ** (ನಾ). ಮೋಡಗಳ ಸಮೂಹ: ಪೊಳೆವ ಮಿಂಚುಗಳಂತಿರ ಕೇತುಗಳ್ ಜಳದವೃಂದದವೋಲಿರೆ ಹಸ್ತಿಗಳ್ (ಕವಿರಾ. ೧-೧೪೩).

[ ಜಳದ ( = ಜಲದ) + ವೃಂದ ]

**ಜಳದಾಗಮ** 'ಜಲದಾಗಮ' ನೋ.

**ಜಳದಾಧ್ವ** 'ಜಲದಾಧ್ವ' ನೋ.

**ಜಳದಾನ** 'ಜಲದಾನ' ನೋ.

**ಜಳದಾನಕ್ರಿಯೆ** 'ಜಲದಾನಕ್ರಿಯೆ' ನೋ.

**ಜಳದುರ್ಗ** 'ಜಲದುರ್ಗ' ನೋ.

**ಜಳದೆ** (ನಾ). ನೀರಿನಿಂದ ನೆನೆಸಿದ ಬೀಸಣಿಗೆ; "ಬಾಳದ ಬೇರಿನ ಬೀಸಣಿಕೆ" (ಆದಿಪು. ಕೋಶ): ಕುಳಿರ್ವ ತಿಳಿನೀರನುಡುಗದೆ ತಳಿ ತಳಿರಂ ಪಾಸು ಜಳದೆಯಿಂ ಬೀಸೆಂದುಮ್ಮಳಿಸಿ ಕಳವಳಿಸಿ ವಿರಹಾಕುಳನವೊಲಾ ಖಚರನಿಂತು ತಳವೆಳಗಾದಂ (ಆದಿಪು. ೨-೧೪).

[ <ಪ್ರಾ. ಜಲದ್ದಾ. / ಸಂ. ಜಲಾದ್ರಾ ]

**ಜಳದೇವತೆ** 'ಜಲದೇವತೆ' ನೋ.

**ಜಳದೌಘ** (ನಾ). = ಜಳದವೃಂದ: ಜಳದೌಘಶ್ಯಾಮಧೂಮಪ್ರತತಿ ಚಳ ತಟಿಜ್ಜ್ವಾಳಿಕಾಲೋಲ ಕೀಲಾವಳಿ (ಚಂದ್ರಪು. ೪-೩೯).

[ ಜಳದ ( = ಜಲದ) + ಓಘ ]

**ಜಳಧರ** 'ಜಲಧರ' ನೋ.

**ಜಳಧರಪಥ** 'ಜಲಧರಪಥ' ನೋ.

**ಜಳಧರಮಾರ್ಗ** 'ಜಲಧರಮಾರ್ಗ' ನೋ.

**ಜಳಧಾರೆ** 'ಜಲಧಾರೆ' ನೋ.

**ಜಳಧಿ** 'ಜಲಧಿ' ನೋ.

**ಜಳನಿಧಾನ** (ನಾ). ನೀರಿಗೆ ಆಶ್ರಯವಾದುದು; ಕಡಲು; ಸಮುದ್ರ: ವಿನಯಾದಿತ್ಯಾಭಿಧಾನನತ್ಯರ್ಣನಿಧಾನಂ ವಿನತಜನಜಳನಿಧಾನಂ ಜನಿಯಿಸಿದಂ ಶತ್ರುಘಾತಶರಸಂಧಾನಂ (ಎಕ. V, ಬೇಲೂರು. ೧೯೩-೯ : 1161).

[ ಜಳ$_2$ ( = ಜಲ$_2$) + ನಿಧಾನ ]

**ಜಳನಿಧಿ** 'ಜಲನಿಧಿ' ನೋ.

**ಜಳನೀಳಿಕೆ** 'ಜಲನೀಲಿಕೆ' ನೋ.

**ಜಳಪಕ್ಷಿ** 'ಜಲಪಕ್ಷಿ' ನೋ.

**ಜಳಪದ್ಧತಿ** 'ಜಲಪದ್ಧತಿ' ನೋ.

**ಜಳಪಾನ** (ನಾ). ನೀರು ಕುಡಿಯುವುದು: ಜಳಪಾನಚ್ಛಳದಿಂ ಪ್ರಪಾ ಪ್ರಣಯಿನೀಶೃಂಗಾರಲೀಲಾಸುಧಾಜಳಮಂ ಕಣ್ಗಳಿನೀಂಟಿ . . . ಭಾವರತ ಕೇಳೀಸೌಖ್ಯ ಪೀಯೂಷಸಂಕುಳಮಂ ಚಿತ್ತದಿನೀಂಟಿ ತದ್ವಿಷಯ ದಧ್ವನ್ಯರ್ ಮನಂಬೆರ್ಚುವರ್ (ಚಂದ್ರಪು. ೧-೯೯).

[ ಜಳ$_2$ ( = ಜಲ$_2$) + ಪಾನ ]

**ಜಳಪಿಸು** 'ಝುಳಂಪಿಸು' ನೋ.

**ಜಳಪು** 'ಜಳುಪು' ನೋ.

**ಜಳಪ್ಪ** 'ಝುಳಪ್ಪ' ನೋ.

**ಜಳಪ್ರತ್ಯಯ** 'ಜಲಪ್ರತ್ಯಯ' ನೋ.

**ಜಳಪ್ರಸರ** 'ಜಲಪ್ರಸರ' ನೋ.

**ಜಳಪ್ಲವ** (ನಾ). ನೀರಿನ ಪೂರ,–ಪ್ರವಾಹ: ಜಳಪ್ಲವದೊಳ್ ನಸು ದೇಂಕು ದೇಕೆ (ವರ್ಧಮಾ. ೮-೯೧): ಅವಳಸಿಯ ಬಾಸೆಯೆಂಬೀ ನವಯೌವನ ವನದ ಲತೆಯ ಲಾವಣ್ಯ ಜಳಪ್ಲವಮನೊಳಕೊಳ್ಳುದೆಂದಾಳವಾಳಮೆನೆ ನಿಮ್ನನಾಭಿಮಂಡಲಮೆಸೆಗುಂ (ಮಲ್ಲಿಪು. ೩-೬೨).

[ ಜಳ$_2$ ( = ಜಲ$_2$) + ಪ್ಲವ ]

**ಜಳಬುದ್ಬುದ** 'ಜಲಬುದ್ಬುದ' ನೋ.

**ಜಳಮಂತ್ರ** 'ಜಲಮಂತ್ರ' ನೋ.

**ಜಳಮನುಷ್ಯ** (ನಾ). ಜಲಪುರುಷ; ನೀರುಮನುಷ್ಯ: ಮನುಜ ಜಳ ಮನುಷ್ಯಂ ಮಹಾ ಕೂರ್ಮ ಕೂರ್ಮಂ ವಿಶದಂ ತತ್ಕೀರ್ತಿ ದುಗ್ಧಾಂಬುಧಿ ಗಗನಘನಶ್ರೀಶನಂ ತಾಳ್ದು ತೋರ್ಕುಂ (ರಾಜಶೇ. ೫-೩).

[ ಜಳ$_2$ (=ಜಲ$_2$) + ಮನುಷ್ಯ ]

**ಜಳಮಲ್ಲಿಕೆ** (ನಾ). ಒಂದು ಬಗೆಯ ಗಿಡ: "ಖರಚ್ಛದಾ–ಜ (ಚ?)ಳ ಮಲ್ಲಿಕೆ" (ಔಷಧಿ. ೪೩). [ ಸಂ. ಜಲಮಲ್ಲಿಕಾ (ಜಲ + ಮಲ್ಲಿಕಾ) ]

**ಜಳಯಂತ್ರ** 'ಜಲಯಂತ್ರ' ನೋ.

**ಜಳಯಾತ್ರೆ** 'ಜಲಯಾತ್ರೆ' ನೋ.

**ಜಳಯುದ್ಧ** 'ಜಲಯುದ್ಧ' ನೋ.

**ಜಳರಂಕು** 'ಜಲರಂಕು' ನೋ.

**ಜಳರಾಶಿ** 'ಜಲರಾಶಿ' ನೋ.

**ಜಳರುಹ** 'ಜಲರುಹ' ನೋ.

**ಜಾರು$_2$** 'ಜಾಜು$_2$' ನೋ.

**ಜಾರು$_3$** (ನಾ). ಕಣ್ಣಿನ ಕೊಳೆ ; ಪಿಚ್ಚು ; ಪಿಸುರು : ಕಿವಿಯಲ್ಲಿ ಗುಗ್ಗೆ ಕಣ್ಣಿನಲ್ಲಿ ಜಾರು ಮೂಗಿನಲ್ಲಿ ಸುರಿವ ಸಿಬುಳು ಸಿಂಬಳ (ಸಿದ್ಧೇವ. ೫೦-೧೪೩) ; ಒಂದು ದಿವಸ ಬಿಸಿಲೊಳು ಪೋಗಿ . . . ಮಿಗೆ ಮಲಮೂತ್ರಲಾ ಕಣ್ಣಿಂದ ಸುರಿವ ಜಾರಿನಿಂದ (ನೇಮಿಸಂ. ೭-೧೦೩). [ ? ]

**ಜಾರುಕವಾಟ** (ನಾ). "ಅಡ್ಡಲಾಗಿ ಸರಿದು ಕಂಡಿಯನ್ನು ಮುಚ್ಚುವ ಅಥವಾ ತೆರೆಯುವ ಕವಾಟ" (Slide-valve. ಇಂಕನಿ) : ಉಗಿಯನ್ನು ಕೋಶದೊಳಕ್ಕೆ ಪ್ರವೇಶಿಸಲು ಬಿಡುವ ದ್ವಾರಗಳನ್ನು ಮುಚ್ಚಿ ತೆರೆಯುವ ಕೆಲಸ ಜಾರುಕವಾಟದ್ದಾಗಿರುತ್ತದೆ (ವಿಜ್ಞಾವಿ. ೪೮).

[ ಜಾರು$_1$ (<ಜಾಋು$_1$) + ಕವಾಟ ]

**ಜಾರುಗಣ್ಣು** (ನಾ). ಪಿಸುರು ತುಂಬಿರುವ ಕಣ್ಣು ; ಕೊಳೆಯಿಂದ ಕೂಡಿರುವ ಕಣ್ಣು ; ಪಿಚ್ಚುಗಣ್ಣು : ಕರಕಷ್ಟ ಜಾರುಗಣ್ಣಂ ಜಲಜದಳ ವೆಂಬರೆಲೆ ಗುರುವೆ ಕವಿಗಿವಿಗಳು (ಷಡಲ. ೩-೫೪) ; ಕಾವುಗಣ್ಣು, ಉಷ್ಣ ಗಣ್ಣು, ನೀರುಗಣ್ಣು, ಜಾರುಗಣ್ಣು, ಸಂಜೆಗಣ್ಣು (ಬುಕಸ. ೩೩೮).

[ ಜಾರು$_3$ + ಕಣ್ಣು (<ಕಣ್) ]

**ಜಾರುಗಲ್ಲು** 'ಜಾಋುಂಗಲ್' ನೋ.

**ಜಾರುಗಾಡಿ** (ನಾ). ಹಿಮಾವೃತವಾದ ಸ್ಥಳಗಳಲ್ಲಿ ಜಾರಿಕೊಂಡು ಹೋಗುವ, ಚಕ್ರವಿಲ್ಲದ ಬಂಡಿ ; ಜಾರುಬಂಡಿ : ಹಳ್ಳಿಯೊಂದಕ್ಕೆ ಹೋಗುವ ಸಲುವಾಗಿ ಜಾರುಗಾಡಿಯೊಂದನ್ನು ಬಾಡಿಗೆಗೆ ತೆಗೆದುಕೊಂಡು ದಾರಿ ಅವನು ತಿಳಿಸಿದನು (ಪುನರು. ೫೧೮).

[ ಜಾರು$_1$ (<ಜಾಋು$_1$) + ಗಾಡಿ$_3$ ]

**ಜಾರುಗುಂಡಿ** (ನಾ). ಒಂದು ಬಗೆಯ ಮಕ್ಕಳಾಟ; ಇಳಂಕಲ ಮೇಲೆ ತೆವಳುತ್ತಾ ಜಾರುವ ಆಟ : ಕರೆಯ ಒಡ್ಡಿನ ಮೇಲೆ ಕುಳಿತು ಜಾರುಗುಂಡಿ ಆಡುವರು (ಅಲ್ಪವಿ. ೧೦೩) ; ಜಾರುಗುಂಡಿ ಆಡುವ ಮಕ್ಕಳಂತೆ ನುಸುಳಿಕೊಂಡು ಕೆಳಗೆ ಹೋದಂತೆ ಸೊಗಸು ಹೆಚ್ಚು (ಗಾಳಿಪ. ೫೮).

[ ಜಾರು$_1$ (<ಜಾಋು$_1$) + ಕುಂಡಿ$_1$ (<ಕುಂಡೆ$_1$) ]

**ಜಾರುಗುಪ್ಪೆ** (ನಾ). ೧. ಮಕ್ಕಳ ಆಟಕ್ಕಾಗಿ ಕಟ್ಟಿರುವ ಜಾರುಬಂಡೆ : ಪುಷ್ಪಶರನ ಕಾಂತೆ ನಲಿದಾಡುವ ಜಾರುಗುಪ್ಪೆಯಂದದಲಿ ರಂಜಿಸುತ ಒಪ್ಪುವ ಪೊಱವಾಱ ನೀಱನ ಕರ ಬಿಗಿಯಪ್ಪಿಕೊಂಬೆನು (ಕಂನವಿ. ೯-೧೦೮) ; ಕಾಮನ ಬಿಲ್ಲಿನ ಜಾರುಗುಪ್ಪೆಯೊಳು ಜಾರುತ ಬಂದಳು ಮುಗಿಲಿಂದ (ಅಹಲ್ಯ. ೪-೧೧). ೨. ಜಾರುಬಂಡೆಯ ಆಟ : ಜಾರುಗುಪ್ಪೆ ಆಡುವುದು, ಓಡುವುದು—ಇವೇ ಮುಂತಾದವುಗಳನ್ನು ಮಾಡಲು ಪ್ರೋತ್ಸಾಹಿಸಬೇಕು (ಶಿಕ್ಷದ. ೧೦೮). [ ಜಾರು$_1$ (<ಜಾಋು$_1$) + ಕುಪ್ಪೆ$_1$ ]

**ಜಾರುಗೊರಡು** (ನಾ). "ಭಾರವಸ್ತುಗಳನ್ನು ಸಾಗಿಸಲು ಉಪಯೋಗಿಸುವ ಉರುಳೆ" (Runner. ಇಂಕನಿ).

[ ಜಾರು$_1$ (<ಜಾಋು$_1$) + ಕೊರಡು$_1$ (<ಕೊಱಡು) ]

**ಜಾರುದಾರಿ** (ನಾ). ಹೆಜ್ಜೆಯ ಹಿಡಿತ ತಪ್ಪಿಸುವ ಹಾದಿ : ಮೊದಲೆ ಮಳೆಗಾಲ, ಬೆಟ್ಟದ ಜಾರುದಾರಿಯಲ್ಲಿ ಹೋಗುವುದು ಕಷ್ಟ (ರೂಢಿ). ೨. (ಅಲಂ) ಅಪಾಯಗಳನ್ನುಳ್ಳ ವ್ಯವಹಾರ ಮಾರ್ಗ : ಆದರೆ ಈ ದಾರಿ ಜಾರುದಾರಿ ಎಂಬ ಎಚ್ಚರು ಮಾತ್ರ ಬೇಕು (ಕವನಿ. ೨೯).

[ ಜಾರು$_1$ (<ಜಾಋು$_1$) + ದಾರಿ ]

**ಜಾರುನಡಿಗೆ** (ನಾ). ಕುದುರೆಯ ಒಂದು ಬಗೆಯ ನಡಿಗೆ,–ಗತಿ : "ಬಿಗುನಡೆ, ಜಾರುನಡಿಗೆ, ನಿಡುನಡಿಕೆ, ವಲ್ಗಿತಂ, ಪ್ಲುತಂ ಈ ನಡಿಕೆಗಳೈದೂ ಅಶ್ವಧಾರೆಗಳು" (ಸಿದ್ಧಾಂತಿ. ೨೦೫).

[ ಜಾರು$_1$ (<ಜಾಋು$_1$) + ನಡಿಗೆ$_1$ (<ನಡಗ) ]

**ಜಾರುಬಂಡಿ** (ನಾ). = ಜಾರುಗಾಡಿ : ಜಾರುಬಂಡಿಗಳ ಪಂಕ್ತಿ . . . ಗಿಡ್ಡನೆಯ ಫರ್‌ಮರಗಳ ನಡುವೆ ಬಿರುಬಿರನೆ ಉರುಳುತ್ತಿದೆ (ಪುನರು. ೩೩೧).

[ ಜಾರು$_1$ (<ಜಾಋು$_1$) + ಬಂಡಿ ]

**ಜಾರುಬಂಡೆ** (ನಾ). = ಜಾರುಗುಪ್ಪೆ ೧ : ಜಾರು ಬಂಡೆಯ ಮೇಲೆ ಕುಳಿತು ಜಾರಿದೆ (ನೆಲಮು. ೬೪-೩). [ ಜಾರು$_1$ (<ಜಾಋು$_1$) + ಬಂಡೆ ]

**ಜಾರುಮೆಟ್ಟು** (ನಾ). ಹಿಮದ ಮೇಲೆ ಜಾರಿಕೊಂಡು ಹೋಗುವಾಗ ಹಾಕಿಕೊಳ್ಳುವ ಪಾದರಕ್ಷೆ : ನೀರ್ಗಲ್ಲ ಮೇಲೆ ಜಾರುಮೆಟ್ಟುಗಳಿಲ್ಲದೆ ಓಡಿ ಬಂದು ಎರಡೂ ಕಾಲುಗಳ ಮೇಲೆ ಜಾರಿಕೊಂಡು ಹೋಗು (Slide. ಇಂಕನಿ). [ ಜಾರು$_1$ (<ಜಾಋು$_1$) + ಮೆಟ್ಟು$_2$ ]

**ಜಾರುಹೊಡೆತ** (ನಾ). ೧. ಜಾರಿ ಬೀಳುವ ಏಟು. ೨. "(ಕ್ರಿಕೆಟ್) ಓರೆಯಾಗಿ ತಗಲುವಂತೆ ದಾಂಡನ್ನು ಒಲಿಸಿ ಹೊಡೆದ ಹೊಡೆತ" (Glance. ಇಂಕನಿ). [ ಜಾರು$_1$ (<ಜಾಋು$_1$) + ಹೊಡೆತ (<ಪೊಡೆತ) ]

**ಜಾರೂಲ** (ನಾ). ಒಂದು ಬಗೆಯ ಮರ : ಜಾರೂಲ, ಮುತ್ತುಗ, ಗಜನಿಂಬೆಗಳಲ್ಲಿ ಸ್ಪರ್ಧೆ ನಡೆಯುತ್ತಿದೆ (ನಿಬಂಧ. II, ೧೬೫). [ ? ]

**ಜಾರೆ$_1$** (ನಾ). = ಜಾರವನಿತೆ : "ಪುಂಶ್ಚಲೀ . . . ಸ್ವೈರಿಣೀ, ಪಾಂಸುಲಾ, ಜಾರಾ-ಈ ೯ ಜಾರೆಯ ಪೆಸರು" (ನಾಚಿರಾ. ೧೧೭) ; ಬೆದೆಗಾತಿಯು ಪಾಣ್ಬೆಯೆನಲು ಜಾರೆಯರಕ್ಕುಂ" (ಕವಿಕಂ. ೧೬೮) ; ಜಾರೆಯ ಮಗನಂ ಗಡಿಭು ನಾಯಕನಂ ನಂಬಿಸಿ ಕೊಲ್ವವನಂ (ಧರ್ಮಾಮೃ. ೫-೧೩೫) ; ನಲಿವ ಜಾರೆಯರೊಸರ್ವ ಪಳುಕು ಮೂಡುವ ತಾರೆ . . . ಸಂಜೆಯೊಳೆಸೆದುವು (ಹಜಕಾ. ೩-೭೫) ; ಸೊಗಸು ಬೇಱೊಬ್ಬರಲಿ ನೇಹದ ತಗಹು ಬೇಱೊಬ್ಬರಲಿ ಸತಿಯರ ವಿಗಡತನವಿದು ಸಹಜ ಜಯವಧು ಜಾರೆ ನೋಡೆಂದ (ಕುವ್ಯಾಕ. ೨೪-೨೧). [ ಸಂ. ಜಾರಾ ]

**ಜಾರೆ$_2$** 'ರ್ಝಾರಿ' ನೋ.

**ಜಾರೇಟು** (ನಾ). ೧. = ಜಾರುಹೊಡೆತ. ೨. "ವೇಗವಾದ ಮತ್ತು ಓರೆಯಾದ ಚಲನೆ. ಹೊಡೆತ, ಓರೆಹೊಡೆತ" (Glance. ಇಂಕನಿ).

[ ಜಾರು$_2$ (<ಜಾಜು$_2$) + ಏಟು$_2$ ]

**ಜಾರ್ಜೆಟ್** (ನಾ). ನಯವಾದ ರೇಷ್ಮೆಯ ತೆಳುಬಟ್ಟೆ : ಸ್ಯಾಟೀನ್, ಜಾರ್ಜೆಟ್‌ಗಳನ್ನು ಈ ನೇಯ್ಗೆಯನ್ನುಪಯೋಗಿಸಿ ತಯಾರು ಮಾಡುವರು (ಗೃಹವಿ. ೭೪) : ನಿಮ್ಮಣ್ಣಯ್ಯ ನಿನಗೆ ಒಂದು ಮೈಸೂರು ಜಾರ್ಜೆಟ್ ಸೀರೇನೂ ಉಡುಗೊರೆಯಾಗಿ ಕಳುಹಿಸಿದ್ದಾನೆ (ನಿಕಲು. ೭).

[ ←ಇಂ. Georgette ]

**ಜಾರಪ್ರಮರ** (ನಾ). ಒಂದು ಬಗೆಯ ಮರ : (ಮೈಜಿಗಿ. ೩೫-೬೮೬).

[ ? + ಮರ$_1$ ]

**ಜಾಲ$_1$, ಜಾಳ$_2$** (ನಾ). ೧. ಮೃಗಪಕ್ಷಿಗಳನ್ನು ಹಿಡಿಯಲು ಉಪಯೋಗಿಸುವ ನೂಲು ಅಥವಾ ಹುರಿಯಿಂದ ಮಾಡಿದ ಸಣ್ಣ ಸಣ್ಣ ಕಂಡಿಗಳುಳ್ಳ ಒಂದು ಬಗೆಯ ಸಾಧನ; ಬಲೆ : ಒಂದು ದಿವಸಮಾ ಮೀನ ನೊರ್ವ ಜಾಲಗಾಱಂ ಜಾಲದೊಳ್ಪಿಡಿದು (ಪಂಪಭಾ. ೧-೬೮ ವ) : ಮುತ್ತ ಸಿಂಗಕ್ಕೆ ತನ್ನ ಕೇಸರಮೆ ಜಾಲವಾಗಿ ಪರಿಣಮಿಸೆ (ರಾಮಾಶ್ವ. ೪೨-೩೫) ; ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲಾ (ನಾದಲೀ. ೮೪-೯). ೨. ಹೆಣೆದು ಮಾಡಿರುವ ಸರಪಳಿಯ ಕವಚ,–ಅಂಗಿ ; ಚಿಲಖಿತ್ತು. ೩. ಕಿಂಡಿ ; ಕಿಟಕಿ ; ಜಾಲಂದ್ರ ; ಗವಾಕ್ಷ. ೪. ಕಪಟ ; ಮೋಸ ; ಸುಳ್ಳು ; ಕಣ್ಕಟ್ಟು : ಬಾಲೆಯರ ಜಾಲಕೊಳಬೀಳದಾ ಜ್ಞಾನಿ ಶೂಲಿಯಂತಕ್ಕು (ಸರ್ವಜ್ಞ. ೪೦೦) : ಎಷ್ಟೋ ಸದ್ಗುಣಿಗಳು ಅವರ ಜಾಲದಲ್ಲಿ ಸಿಲುಕಿ ತಮ್ಮ ಶೀಲವನ್ನು ಮಾರಿಕೊಂಡಿರುವರು (ಸ್ತ್ರೀಲಮಿ. ೩೦೯). ೫. ಗರ್ವ ; ಕೊಬ್ಬು ; ಹಮ್ಮು ; ಅಹಂಕಾರ. ೬. ಮೊತ್ತ ; ರಾಶಿ ; ಗುಂಪು : ದರಹಾಸಾಮೃತವಾರಿ ಮಜ್ಜನಜಲಂ ದೇಹಪ್ರಭಾ

ಜಾಲವುಂಬರಶೋಭಾವಹಂ (ಅಜಿಪು. ೨-೪೨): ಕರೆಕರೆ ಸಮಸ್ತ ಬೇಂಟೆಯ ಶಬರಜಾಲವುಂ (ಹದಕಾ. ೫-೧) ; ಗಾನವ ಮಾಡೆ ಅರಸನತಿ ಮೆಚ್ಚಿ ವನಿತಾ ಜಾಲದೊಳು ಕಾಣೆನೆನುತಂ (ಪ್ರಾಕಲಾ. ೧೦-೧೩). ೭. ಒಂದು ಬಗೆಯ ಮರ; ಕದಂಬವೃಕ್ಷ: ಆಲಂ ಜಾಲ[ಪಾಠಾಂ. ತಿ.ಲಿ]ಬೇಲಂ ಬಿಳಿಲರಳಿಯೆರು ಕಕ್ಕೆ ಹೂರಂ ಬೆಳಲ್ (ಗಿರಿಕ. ೧-೭೨) ; ನರುಗಾಪು ನೆಳಲಾಂತ ಜಾಲ ದಿಂದಾಲದಿಂದೆ (ರಾಘವ. ೧೮-೫೪) : ಅತ್ತಿಯಾಲವು ಜಾಲ ಪಾಲೆ ತಾಳೆ ಬಾಳೆ . . . ಮುಂತಾದ ಫಲವೃಕ್ಷಗಳು (ಸೌಗಂಪ. ೨೩೪). ೮. ಹಂಚಿಕೆ ; ಉಪಾಯಂ : ಇದೇ ಸಮಯವೆಂದು ನಾನು ಒಂದು ಹೊಸ ಜಾಲವನ್ನು ಪಸರಿಸಿದ್ದೇನೆ (ಪ್ರಕಾಶ. ೫೧). ೯. (ಜಾಲರಿಯಂತೆ) ಓತ ಪ್ರೋತವಾಗಿರುವುದಂ ; ಹಾಸುಹೊಕ್ಕಾಗಿ ಕೂಡಿರುವುದು : ಸತ್ಯವಿ ಗಳಲ್ಲಿ ರುಷಿಗಳಲ್ಲಿ ಪಾತಿವ್ರತಾಂಗನೆಯರಲಿ ವಿಷ್ಣು ಜಾಲನಾಗಿರ್ದು (ಲಕ್ಷ್ಮಿಭಾ. ೫-೨-೩೫). ೧೦. ಗೋವುಗಳ ಗುಂಪು. ೧೧. ಮುಚ್ಚಳ ; ಪಟಲ. ೧೨. ಹೂವಿನ ಮೊಗ್ಗು. ೧೩. ಒಡವೆ ; ಆಭರಣ. ೧೪. ಇಂದ್ರಿಯ. ೧೫. ಆಕಾಶ : "ಆಕಾಶಂ ಬಲೆ ಪಟಲಂ ಪೋಕಂ ಶೃಂಗಾರ ಗೋವುಸಭೆಯೊಳಕ್ಕುಂ ತಾಕಿರೆ ಜಾಲಾಹ್ವಯ ಸಲೆ" (ನಾನಾಕಂ. ೭೬): "ಇಂದ್ರಿಯದೊಳಾಗಸದೊಳ್ಬಲೆಯೊಳ್ ಸಮೂಹದೊಳ್ ಸಿಂಗರ ಗೋನಿಕಾಯ ಪಟಲಂಗಳೊಳಂತವು ಜಾಲವಾಚಕಂ"(ನಾನಾರ. ೩೫): ೧೬. ಒಂದು ಬಗೆಯ ಕಣ್ಣಿನ ರೋಗ. 'ಜಾಲಪಟಲ' ಪರಾ. ಜಾಳ$_1$: ೧. ಪಾಸಿದ ನಿರ್ಮಳ ಜಾಳಮೆಂದು ಪಾಲ್ದನೆಗಳ ದೆಸೆಗಂ ಸಾರವಂಜ ಕೆಲವರಗಿಳಿಗಳ್ (ಪುಷ್ಪಪು. ೨-೧೮): ಅರ್ಧೇಂದು ಸಮ್ಮೇಳಕ್ಕೆ ಬರುವ ತಾರಕೆಯ ಜಾಳವೆಂಬಂತೆ (ಮೋಹತ. ೨೩-೩೧). ೨. ಮೇಲೆ ಮುಟ್ಟಿ ಪೊಕ್ಕವನ ದೃಢದಲಿ ಜಾಳ ಬಗೆಯಲಿ ನಂಬಿ ಮುಟ್ಟಿಪೊಗು ಪಾಲಿಸುವ ತಿರುವೇಂಕಟೇಶನ ಚಕ್ರದುರುಬೆಯನು (ಕೋಗಯು. ೭-೨೩). ೬. ಇಬ್ಬಂಕಿ ನಿಟ್ಟಿಯುಂ ಲುಳಿತಾಳಕ ಜಾಳಮುಂ ಕೊಡಂಕಗೆ ತೆಗೆದು (ಕಾದಂಪೂ. ೭೧)

[ ಸಂ. ]

ಜಾಲ$_2$ 'ಜಲ$_3$' ನೋ.

**ಜಾಲಂದರ**, ಜಾಳಂದರ, ಜಾಳಾಂದರ, ಜಾಳಾಂದ್ರ, ಜಾಳಾಂಧರ (ನಾ). ೧. ಬಲೆಯಂತೆ ಕಿಂಡಿಗಳನ್ನು ಉಳ್ಳ ರಚನೆ ; ಕಿಂಡಿಗಳ ಚೌಕಟ್ಟು: ಮುತ್ತಿನ ಮಲಕಿನ ಜಾಲಂದರದ ಗವಾಕ್ಷದೊಳ್ ಮೆಲ್ಲಮೆಲ್ಲನೆ ನೋಡುತ್ತ (ಸೌಗಂಧಿ. ೩೩೯-೭) : ಕಿಟಕಿಯ ಜಾಲಂದರಗಳ ಮೂಲಕ ಕಾಣುತ್ತಿದ್ದ ಪ್ರದೇಶಗಳಲ್ಲಿ ದೃಷ್ಟಿಯಿಟ್ಟು ಸ್ವಲ್ಪಕಾಲ ತನ್ನಲ್ಲೇ ಲೋಚನೆ ಮಾಡುತ್ತಾ ಕುಳಿತಿದ್ದಳು (ಭಾರವೀ. ೩೦). **ಜಾಳಂದರ**: ೧. ಜಾಳಂದರದ ಬಾಗಿಲುಗಳಿಂದ ಬರುವ ಕೆಂಪಿನ ರತ್ನದ ಬೆಳಕಿಗೆ ಬಿಸಿಲೆಂದು ಕೈಮುಟ್ಟಿಯ ಮಾಡಿಕೊಳುತಲಿದ್ದ (ವಚಕಾ. ೫೧). ೨. ಕಿಟಕಿ ; ಗವಾಕ್ಷ : ಕಾಳಮೇಘ ಮಂದಿರದ ಜಾಳಂದರದ ಮನೆಯಲ್ಲಿ ಪೊಬ್ಬ ಸೂಳೆಯ ಬಾಗಿಲಲ್ಲಿ (ಕಲ್ಯಾಣಾಂ. ೧೦೮-೧೬). **ಜಾಳಾಂದರ**: ೨. ಬೆಮರನಾಱಿಸುವ ಕತದಿಂದ ಬಂದು ಜಾಳಾಂದರದ ಪೊಱಗೆ ತನುಲತೆಯನ್ನೆದೆ ತೆಂಗಾಳಿಗೊಡ್ಡುವ ಕೋಮಲಾಂಗಿಯರನು (ಹದಕಾ. ೪-೩೯ ಪರಿ) ; ಕರುಮಾಡದಿ ಖಂಡರಿಸಿದ ಜಾಳಾಂದರದೊಳು ರಾಜಾಂಗನೆಯರು ತರಹರಿಸದೆ ಬಂದು ನೋಡಿದರಂದು (ಕುರಾಸಾಂ. ೪೦-೭೩). ೩. ತೂತಂತೂತಾಗುವುದು : ವೀರದಧಿ ಮುಖನುರವನೊಂದಂಬಿಂದ ಜಾಳಾಂದರವ ಮಾಡಿದನು (ಕೌಶಿರಾ. ೩೨-೩೬). **ಜಾಳಾಂದ್ರ**: ೨. "ಜಾಳಾಂದ್ರ (ಜಾಳಂದ್ರ)– ಜಾಲಂಧರ=ತೂತುಗಳುಳ್ಳ ಕಿಟಕಿ; ಕಿಂಡಿ" (ತದ್ಭಕೋ. ೫೧): ಬಳಸಿಕೊಂಡಿಹ ರತ್ನ ಜಾಳಾಂದ್ರ ಭಿತ್ತಿಯೊಳಳವಟ್ಟು ಮೋಹವ ಬೀರ್ವ ವಿಲಸಿತ ಪ್ರತಿಮೆಗಳಿಂದಾಗ ಸೌಂದರ್ಯನಿಳಯ ರಾಜಿಸಿದುದು (ಕಂನವಿ. ೭-೪೦) : ಇಂಪುಗರೆವ ಇಂದುವಿನ ಕಿರಣ ಜಾಳಾಂದ್ರದಿಂದ ಸುರಿಯೆ (ಮೇಘದೂ. ೨೫). ೪. ಒಂದು ದೇಶದ ಹೆಸರು ; ತ್ರಿಗರ್ತ : ಜಾಳಾಂದ್ರ ದೇಶದ ಅರಸು ಅನಿಯನೇಱಿ (ಸರ್ವವ. ೨೦೫-೯೩೦). **ಜಾಳಾಂಧರ**: ೨. ಸುಪುತ್ರ ಮಾಕಯ್ಯನು ಮಾಡಿಸಿದ ದೇವರ ಓರ ಜಾಳಾಂಧರ, ದಾರವಂದ (ಎಕ. XII, ಚಿಕ್ಕನಾ. ೨೫-೬ :1312)

[ <ಸಂ. ಜಾಲಂಧರ ]

**ಜಾಲಂದ್ರ**, ಜಾಳಂದ್ರ (ನಾ). = ಜಾಲಂಧ್ರ : ಸುರಿವ ಕಂಬನಿಗಳಿಂ ಚಾಪುಕ ಮುಱುಗುತಿರಲಂದು ಮುಱಿಯ ಜಾಲಂದ್ರದಲಿ ಕಂಡಳು ತರುಣಿ (ನಳದ. ೮-೪೯) : ಈ ದೇವಾಲಯದ ಜಾಲಂದ್ರಕ್ಕೆ ಸೇರಿರುವ ಗೋಡೆಯ ಮೇಲೆ ವಿಷ್ಣುವರ್ಧನನ ದರ್ಬಾರನ್ನು ಕೆತ್ತಿದೆ (ಭಾರರ. ೫೦೪). ಇವುಗಳ ಮೇಲೆ ದೊಡ್ಡ ವಿಗ್ರಹಗಳೂ ಜಾಲಂದ್ರಗಳೂ ಇವೆ (ಹೊಯ್ಸವಾ. ೧೬). ಜಾಳಂದ್ರ. 'ಜಾಳಂದ್ರಗೆಯ್' ಪರಾ. [<ಸಂ. ಜಾಲಂಧ್ರ]

**ಜಾಲಂಧರ**, ಜಾಳಂಧರ (ನಾ). ೧.=ಜಾಲಂಧ್ರ. ೨. ಒಂದು ದೇಶದ ಹೆಸರು ; ಭರತಖಂಡದ ವಾಯುವ್ಯ ಪ್ರಾಂತ ; ತ್ರಿಗರ್ತದೇಶ. ೩. ತ್ರಿಗರ್ತದೇಶಕ್ಕೆ ಸಂಬಂಧಿಸಿದುದು. ೪. [ಯೋಗ] ಒಂದು ಬಗೆಯ ಬಂಧ. 'ಜಾಲಂಧರಬಂಧ' ಪರಾ. **ಜಾಳಂಧರ**: ೩. ಕಾಂಬೋಜ ಜಾಳಂಧರಂ ತುರಗಂ ಮೂಡಣ ಕೊಂಗ ಕೋಶಲ ಪರಾಳಂ ಬರ್ಬರಂ (ಅಶ್ವಶಾ. ೬-೭೭). [ ಸಂ. ]

**ಜಾಲಂಧರಬಂಧ** (ನಾ). [ಯೋಗ] ಹಠಯೋಗದ ಒಂದು ಬಂಧ: ಕಂಠಸ್ಥಾನದ ಬಂಧಗಳ ಸಂಕೋಚವನೆಸಗಿ ತನ್ನ ಚುಬುಕವನಿಳುಹಿ ಹೃದಯ ತಾಣದೊಳಗಿಟ್ಟು ಚಲಿಸದಿರಲು ಜಾಲಂಧರಬಂಧ (ಶ್ರೀವಲ್ಯ. ೫-೧೫-೩) : ಆದರೆ ಪೂರಕವಾದ ನಂತರ ಜಾಲಂಧರಬಂಧವನ್ನೂ ಮಾಡಬೇಕು (ಭಾರದ. ೧೬೧). [ ಜಾಲಂಧರ + ಬಂಧ ]

**ಜಾಲಂಧ್ರ** (ನಾ). ಬಲೆಯಂತೆ ಕಂಡಿಗಳನ್ನು ಒಳಗೊಂಡಿರುವ ಕಿಟಕಿ,– ಗವಾಕ್ಷ : "ಜಾಲಂಧ್ರಂ ಬೆಳಕಿಂಡಿ" (ಕಾಶಕ್ಕ. ೧೪೬) : ನೋಡುತಿರ್ದರು ಪುರಜನರು ನೆಲೆಮಾಡದುಪ್ಪರಿಗೆಯಲಿ ಮಿಗೆ ಕರುಮಾಡದೆಡೆಯಲಿ ಸೌಧಗಳ ಜಾಲಂಧ್ರಶಿಖರದಲಿ (ನಳದ. ೯-೭೧) . [ ಸಂ. ]

**ಜಾಲಕ**, ಜಾಳಕ (ನಾ). ೧. ಬಲೆ ; ಹೆಣಿಕೆ : ಬಿಸಿಲೆಲ್ಲಂ ಬಿಸನಾಳಜಾಲಕದಿನಾಗಳ್ಕೂಡೆ ಪೀರ್ತಂದುದು (ಕಾದಂಉ. ೧೦೩) : ಕುರುಡು ನಂಬುಗೆಯ ಕುರುಡುವಿಚಾರದ ಜಾಲಕಗಳ ನೀಗಿ (ಚಿಂತನ. ೫೭-೧). ೨. ಕಿಟಕಿ ; ಗವಾಕ್ಷ; ಕಂಡಿ : ಕನಕಹರ್ಮ್ಯಂಗಳೆಡೆಯೊಳಾ ಲೋಕಿಪರು ಕೆಲರು ಜಾಲಕದೆಡೆಗಳೊಳು ಕೆಲರು (ಭಾವಚಂ. ೮-೧೫). ೩. ಜೇಡನ ಬಲೆ. ೪. ಮೊಗ್ಗು. ೫. ಗುಂಪು; ಸಮೂಹ: ವಿಚಕಿಲ ನಲಿನೀಜಾಲಕಂ ಜಾಲಕಂ (ಅನಂಪು. ೮-೨೮). **ಜಾಳಕ**: ೫. ಅಹಿತೋದ್ಯದ್ಬಳ ಜಾಳಕಂ ಕದನದೊಳ್ ಮಾಱಾನ್ತು ತಾಗಲ್ ಮಹಾಮಹಿಮಂ ಸೂಲಿಗೆಗೊಣ್ಡು (ಎಇ. XX, ೧೨-೧೧ : 1167) ; ಅರ್ಚಿಸಿದಂ ಭೂಪಾಳಂ ನಿರ್ಭರಭಕ್ತಿಯ ಜಾಳಕಮೆನೆ ಮೆಯ್ಕೊಳೊಗೆದ ರೋಮಾಂಚಂಗಳ್ (ಮಲ್ಲಿಪು. ೮-೫). ೨, ೫: ಎಸೆಯಲ್ ಜಾಳಕ ಜಾಳಕಂ ದೃಢಕವಾಟಂ ದ್ವಾರಶಾಖಾಳಿ ಬಾಣಸು . . . ಮಾಡಿಸಿದನೀ ಬಲ್ಲಾಳ ಭೂಪಾಳಕಂ (ಎಕ . V, ಬೇಲೂರು. ೭೨-೨೭೭ ; 1185). ೬. ಒಂದು ಬಗೆಯ ಶಿರೋಭೂಷಣ. ೭. ಮೋಸ ; ಮುಚನೆ ; ಮಾಯಾವಿತನ. ೨, ೫, ೬, ೭ : ಜಾಳಕದರ್ಶನ ವಧುಗಳ ಜಾಳಕಮಂ ನೋಡಿ ನಡೆಯೆ ಮುಂದೊಂದೆಡೆಯೊಳ್ ಜಾಳಕ ಜನದೊಳ್ಬೆಣ್ಗಳ ಜಾಳಕಮಂ ನೋಡಿನೋಡಿ ನಡೆದಂ ಭೂಪಂ (ಹಮ್ಮೀರ. ೨-೯೧). ೮. ಅಂಕುರ : ಅನ್ಯೋನ್ಯ ಪ್ರೀತಿ ಬೀಜದಿಂ ಜನಿಸಿದ ನಿರ್ಭರಸ್ವೇದಸಲಿಲಸೇಚನದಿಂ ನಯಂಬಡೆದ ಪುಳಕಜಾಳದಿಂ ಜಾಳಕಮನಪ್ಪುಕೆಯ್ದು (ಜಗವಿ. ೨-೫೨ ವ). ೯. ಬಲೆಯಲ್ಲಿ ಸಿಕ್ಕಿಕೊಂಡವನು: ಅಲ್ಲಿ ರವಿ ನಿತ್ಯದೊಳ್ ಜಾಲಕನು ಗಿಡಮರಗಳೆಲ್ಲ ಮಂಜಿನ ಮೊತ್ತಗಳು (ಕುರಂಗ. ೯೫-೨). [ ಸಂ. ]

**ಜಾಲಕಾಱ** 'ಜಾಲಗಾಱ' ನೋ.

**ಜಾಲಗಟ್ಟ** (ನಾ). ಒಂದು ಪ್ರದೇಶದ ಹೆಸರು: ಆಗ್ನೇಯಕ್ಕೆ ಕಲ್ಲಪುಂಜಿಗೆ ತೆಂಕಲು ಲಿಂಗದ ಕಲ್ಲು ನೈರುತ್ಯಕ್ಕೆ ಕಲ್ಲಗುತ್ತಿ ಪಡುವ ಜಾಲಗಟ್ಟದ ಕೆಱೆಯೇ ಶೀಮೆ (ಕಇ. I, ೧೭-೪೩; 1055). [ ಜಾಲ$_0$ + ಗಟ್ಟ$_1$ ]

**ಜಾಲಗಾತಿ** 'ಜಾಲಗಾರ್ತಿ' ನೋ.

**ಜಾಲಗಾರ$_1$** 'ಜಲಗಾರ$_2$' ನೋ.

**ಜಾಲಗಾರ$_2$** 'ಜಾಲಗಾಱ' ನೋ.

**ಜಾಲಗಾರನಹಕ್ಕಿ** (ನಾ). ಒಂದು ಬಗೆಯ ಹಕ್ಕಿ; ಬಿಳಿಯ ಬಣ್ಣದ ಎದೆರೋಮವುಳ್ಳ ಮಿಾಂಗುಲಿಗಹಕ್ಕಿ; ಮಿಾಂಚುಳ್ಳಿ: (ಕ). [ ಜಾಲಗಾರ$_2$ (<ಜಾಲಗಾಱ) + ಹಕ್ಕಿ$_1$ (<ಪಕ್ಕಿ$_1$) ]

**ಜಾಲಗಾರ್ತಿ,** ಜಾಲಗಾತಿ (ನಾ). ೧. ಬೆಸ್ತರ ಜಾತಿಯ ಹೆಂಗಸು; ಅಂಬಿಗಿತ್ತಿ; ಮಿಾನುಗಾರ್ತಿ: ಒಗೆದಂ ವ್ಯಾಸಂ ಗಡ ಜಡೆಗಳ್ವೆರಸು ಜಾಲಗಾರ್ತಿ[ಪಾಠಾಂ. ಱಿತಿ]ಯ ಬಸಿಱೊಳ್ (ಸಮಪ. ೧೦-೧೫೦): ಸಮಾಸ ಲಕ್ಷಣಕ್ಕೆ – ಜಾಲಗಾರ್ತಿ, ಬಳೆಗಾರ್ತಿ (ಶಮದ. ೨೦೯ ಪ್ರಯೋ). **ಜಾಲಗಾತಿ:** ೨. ಮಾಟಗಾತಿ; ಮಾಯ, ಮಂತ್ರ ಮಾಡುವ ಹೆಂಗಸು: (ಕ). [ ಜಾಲಗಾಱ + –ತಿ$_1$ (<–ಇತ್ತಿ) ]

**ಜಾಲಗಾಱ,** ಜಲಗರ$_2$, ಜಲಗಾರ$_1$, ಜಲಗಾಱ, ಜಾಲಕಾಱ, ಜಾಲಗಾರ$_2$, ಜಾಲರ (ನಾ). ೧. ಮಿಾನು ಹಿಡಿಯುವ ವೃತ್ತಿಯನ್ನು ಅವಲಂಬಿಸಿರುವವನು; ಬೆಸ್ತ; ಅಂಬಿಗ: "ಕೈವರ್ತಃ, ದಾಶಃ, ಧೀವರಃ ಈ ಮೂರು ಜಾಲಗಾಱನ ಪೆಸರು" (ನಾಚಿರಾ. ೧೦೦): ಆ ಮಿಾನನೊರ್ವಂ ಜಾಲಗಾಱಂ ಜಾಲದೊಳ್ ಪಿಡಿದು (ಪಂಪಭಾ. ೧-೬೮ ವ): ಅಲ್ಲಿಗೊಂದು ದಿವಸಂ ಜಾಲಗಾಱರ್ ಬಂದು . . . ಜಾಲಮಂ ಬೀಸಿ ಮತ್ಸ್ಯಂಗಳಂ ಪಿಡಿವ ಪೆಂದು (ಪಂಚತಂ. ೧೫೮-೧೯); ಮುಂದೊಪ್ಪುತಿಹ ಮಲ್ಲ ಜಾಲಗಾಱರ ಗೃಹ ಚೆಂದದಿಂದೊಪ್ಪಿದುವಾಗ (ಕಂನವಿ. ೬-೫೪). **ಜಲಗರ$_2$:** ೧. ಝಷ ನುಂಗಲದನು ಜಲಗರನು ತಂದಿತ್ತಡೆ (ನವಮೋ. ೧೩-೩೦); P ಇದಂ ಛಂದಸ್ಸಿಗಾಗಿ ಬಳಸಿಕೊಂಡ ರೂಪವಿರಬಹುದು. **ಜಲಗಾರ$_1$:** ಜಲಗಾರರರು ಮಿಾನು ಹಿಡಿಯುತ್ತಿದ್ದರು (ದಾಲತ್. ೩೬೦). **ಜಲಗಾಱ:** ೧. ಮಾಣಿಕ ಮಯ್ವಣ್ಣದ ಛಾಯಮಿಾನ ಕಂಡಾಣಿಕಾಱಿಕೆ ಜಲಗಾಱ ಕ್ಷೋಣೀಶ್ವರನಾಸ್ಥಾನಕೆ ತಂದು ಕೈಗಾಣಿಕೆ ಕೊಟ್ಟ ರಕ್ಕಸಗೆ (ಮೋಹತ. ೧೧-೩೪): ಮರನಾವೆಯಲಿ ಜನ ದಾಟಿಪ ಜಲಗಾಱರಿರವ ನಾನೇನ ಬಣ್ಣಿಸುವೆ (ಕಂನವಿ. ೫-೫೯). **ಜಾಲಕಾಱ:** ೧. ಕೈವರ್ತಕನ ಮನೆಗೆ ಬಂದಂ ಬೇಗಂ ತುಹಿನಗಿರಿನಂದನಾಪತಿ . . . ಜಾಲಕಾಱನಾಗುತಂ (ಹಾಲಾಸ್ಯ. ೪-೯-೪೪). **ಜಾಲಗಾರ$_2$:** ೧. ಮಲ್ಲರು, ಜಾಲಗಾರರು ಮೊದಲಾದ ಜಾತಿಯವರೂ ಅಲ್ಲಿ ವಾಸಿಸುತ್ತಿದ್ದರು (ಕರ್ನಾಜ. ೧೫೭). ೨. ಮೋಸಗಾರ; ವಂಚಕ; ಧೂರ್ತ: ನೂಲೆಳೆಯಿಂದ ಕೊರಳನೆ ಕೊಯ್ಯುವ ಜಾಲಗಾರ ಬೇಡ (ಚಿಂತನ. ೫೬-೯); ಕಕ್ಕಿ, ನೀನು ಊರಿಗೆ ಹೋಗದಿದ್ದರೆ ನಾನು ಆ ನನ್ನ ಜಾಲಗಾರ ಅಣ್ಣನ ಸಂಗಡ ಹೊರಟು ಬಿಡುವೆ (ಇಪ್ಪತ. ೨೧೮). **ಜಾಲರ:** ೧. ವ್ಯಾಧನಂತೆ ಜಾಲರನಂತೆ ಹೇಮಚೋರನಂತೆ (ಸರ್ವಪ. ೧೦೯-೫೮೩). [ ಜಾಲ$_1$ + –ಕಾಱ ]

**ಜಾಲತನ** (ನಾ). ಮೋಸ; ವಂಚನೆ; ಕಪಟ: ಅವಳಾ ಜಾಲತನವಾ ನೋಡುವೆನೂ ಜಾಹ್ನವೀಜನಕಾ (ಶ್ರೀಕೃಪಾ. ೧೦೯). [ ಜಾಲ$_1$ + –ತನ ]

**ಜಾಲತೋರು** (ಕ್ರಿ). ಜಾಲವನ್ನು ತೋರಿಸು; ಮಾಯೆಯನ್ನು ತೋರಿಸು (?): ಜಾಲ ನಾನೆಲೆ ನೆಲಜಲದ: ಸಲೆ ಲೀಲೆಯಾಡುವ ಗಗನದಿ ಜಾಲ ತೋರುವೆ; ಅಡಗಿ ಸಾರುವೆ; ಕಾಲವೆಂಬುದನರಿಯೆನೈ (ಕಎಪ. ೩೦-೧೩). [ ಜಾಲ$_1$ + ತೋರು (<ತೋಱು) ]

**ಜಾಲದುಪ್ಪ** (ನಾ). ಒಂದು ವಿಧವಾದ ಔಷಧೋಪಯೋಗಿ ದ್ರವ್ಯ: ಕೆಲವು ಜಿನಸಗಳ ಹೆಸರು:– ಲೋಭಾನ ಕಾಚು . . . ಬೇರೋಜಾ (ಜಾಲದುಪ್ಪ), ಪತ್ರಿ (ಮುಂಬವ್ಯಾ. ೧೦೦). [ ? ]

**ಜಾಲಪಟಲ** (ನಾ). ಕಣ್ಣಿನಲ್ಲಿರುವ ಒಂದು ಬಗೆಯ ಪೊರೆ: ನಮ್ಮ ಕಣ್ಣಿನ ಹಿಂಭಾಗದಲ್ಲಿ ರೆಟಿನಾ ಅಥವಾ ಜಾಲಪಟಲವೆಂಬ ನರಗಳಿಂದಾದ ಪೊರೆಯಿದೆ (ಭೌತವಿ. ೧೫೩). [ ಜಾಲ$_1$ + ಪಟಲ$_2$ ]

**ಜಾಲಪಾದ** (ನಾ). ೧. ಈಜಲು ಅನುಕೂಲವಾಗಿ ಬೆರಳುಗಳ ನಡುವೆ ತೆಳುವಾದ ಪೊರೆಯು ಅಂಟಿಕೊಂಡಿರುವ ಕಾಲು: ಬಾತುಕೋಳಿಯಂತೆಯ ಜಾಲಪಾದಗಳಿವೆ (ಒಂದೇರಾ. ೧೭): ಅದರ ಹಿಂಗಾಲುಗಳಲ್ಲಿ ಜಾಲಪಾದವಿದ್ದರೂ ಮುಂಗಾಲಿನ ಉಗುರುಗಳು ಬೇರೆಯಾಗಿ ಕಾಣಿಸುತ್ತಿದ್ದುವು (ಬಾಲಪ್ರ. III, ೧೩೪೬). ೨. ಹಂಸಪಕ್ಷಿ. ೩. ಬಾತುಕೋಳಿ. [ ಜಾಲ$_1$ + ಪಾದ ]

**ಜಾಲಪಾದಿ** (ನಾ). "ಜಾಲಪಾದವುಳ್ಳ (ಪಕ್ಷಿ)" (Palmiped. ಇಂಕನಿ). [ ಸಂ. ಜಾಲಪಾದಿನ್ ]

**ಜಾಲಮಂಗಲ** (ನಾ). ಒಂದು ಊರಿನ ಹೆಸರು: ಇಡಿಗೂರ್ವ್ವಿಷಯ ಮಧ್ಯವರ್ತಿನ ಜಾಲಮಂಗಲಂ ನಾಮಧೇಯ ಗ್ರಾಮಂ (ಇಆ. XII, ೧೧೬-೭; 813). [ ಜಾಲ$_0$ + ಮಂಗಲ ]

**ಜಾಲರ** 'ಜಾಲಗಾಱ' ನೋ.

**ಜಾಲರಿ** 'ಝಾಲರಿ' ನೋ.

**ಜಾಲರಿತಾಳ** (ನಾ). ಒಂದು ಬಗೆಯ ಕಂಚಿನ ತಾಳ: ಹೋಲಿಯ ರಾತ್ರಿ ಹಿಂದುಸ್ಥಾನಿ ದರವಾನರ ಜಾಲರಿತಾಳದಂತೆ, ಗಾಳಿಯ ಲಯವು ಕ್ರಮವಾಗಿ ದ್ರುತಕ್ಕೆ ಏರುತ್ತ ಬಂತು (ನಿಬಂಧ. II, ೧೮೨). [ ಜಾಲರಿ (<ಝಾಲರಿ) + ತಾಳ$_1$ (= ತಾಲ) ]

**ಜಾಲರಿಬಟ್ಟೆ** (ನಾ). ಜಾಲರಿಯಂತೆ ರಂಧ್ರಗಳನ್ನು ಒಳಗೊಂಡಿರುವ ಬಟ್ಟೆ: (ಟೋಪಿ, ಮುಖಪರದೆ ಮೊದಲಾದುವುಗಳಿಗೆ ಉಪಯೋಗಿಸುವ) ಒಂದು ಬಗೆಯ ಹತ್ತಿಯ ಜಾಲರಿಬಟ್ಟೆ (Leno. ಇಂಕನಿ). [ ಜಾಲರಿ (<ಝಾಲರಿ) + ಬಟ್ಟೆ$_2$ ]

**ಜಾಲರಿಸೌಟು** (ನಾ). ಎಣ್ಣೆ ತುಪ್ಪಗಳಲ್ಲಿ ಕರಿಯಲು ಉಪಯೋಗಿಸುವ ರಂಧ್ರಗಳನ್ನು ಹೊಂದಿರುವ ಸೌಟು: "ಕೆನೆ ಮೊದಲಾದುವುಗಳನ್ನು ಬಾಚಿ ತೆಗೆಯುವ ಸೌಟು; ಗೋರುಸೌಟು, ಜಾಲರಿಸೌಟು" (Skimmer. ಇಂಕನಿ): ಅಕ್ರೂರನು ಹುರಿದ ಬೋಂಡಾಗಳನ್ನು ಜಾಲರಿಸೌಟಿನಲ್ಲಿ ಎತ್ತಿ ಎತ್ತಿ ಹಾಕುತ್ತಾ ಇರುವಾಗ (ಸಾಹೇಬ್. ೪) [ ಜಾಲರಿ (<ಝಾಲರಿ) + ಸೌಟು (<ಸವುಟು) ]

**ಜಾಲವಾತಾಯನ** (ನಾ). ತಂತಿಯ ಬಲೆಯುಳ್ಳ ಕಿಡಿಕೆ,–ಗವಾಕ್ಷ; ಜಾಳಂದರವಿರುವ ಕಿಡಿಕೆ. [ ಜಾಲ$_1$ + ವಾತಾಯನ ]

**ಜಾಲಾಂತರ** (ಗು). "ಕಿಟಕಿಯಿದ್ದಂತೆ ಸಣ್ಣ ಸಣ್ಣ ರಂಧ್ರಗಳಿರುವ; ಕಣ್ಣು ಕಣ್ಣಾದ" (Fenestrate. ಇಂಕನಿ). [ ಜಾಲ$_1$ + ಅಂತರ ]

**ಜಾಲಾಡು** (ಕ್ರಿ). ೧. ಒಂದರಿಯಲ್ಲಿ ಶೋಧಿಸು; ಜರಡಿಹಿಡಿ: ಬಾನ ಜಾಲಾಡುತ್ತ, ತಾರೆಗಳನಳೆವರಿವು (ಮಳದೇ. ೪೮-೩). ೨. ಕೊಳೆ ಹೋಗುವಂತೆ ನೀರಿನಲ್ಲಿ ಚೆನ್ನಾಗಿ ಅಲ್ಲಾಡಿಸು; ಅಲುಬು: ಗಡ್ಡ ತೊಳೆಯುವುದಕ್ಕೆ ಇಲ್ಲಿ ನೀರಿಲ್ಲ. ಅಲ್ಲೇ ಹೋಗಿ ನದಿಯ ಪ್ರವಾಹದಲ್ಲಿ ಜಾಲಾಡಿಕೊಳ್ಳಿ (ಗರುಡಾ. ೫೩). ೩. ಪರೀಕ್ಷಿಸು; ಒರೆಹಚ್ಚು: ಅವನ ಯೋಗ್ಯತೆಯನ್ನು ತಮಗೆ ತೃಪ್ತಿಯಾಗುವಷ್ಟು ಮಟ್ಟಿಗೆ ಜಾಲಾಡಿದರು (ರಾಗಿಣಿ. ೧೨೦). ೪. ತಪ್ಪನ್ನು ತೋರಿಸಿ ಮೂದಲಿಸು; ತರಾಟೆಗೆ ತೆಗೆದುಕೊಳ್ಳು: ಆಕೆ ಜನ್ಮ ಜಾಲಾಡಿ ಬಿಡ್ತೇನೆ (ಚಂದಶೋ. ೧೨೭). 'ಜಾಲಿಸು' ಪರಾ. [ ಜಾಲ$_1$ + ಆಡು$_1$ ]

**ಜಾಲಾದ** (ನಾ). ಒಂದು ಬಗೆಯ ವನಸ್ಪತಿ: ಜಾಲಾರಿ, ಜಾಲಾದ (ವೃಜಿಗಿ. ೭೦-೧೪೨೭). [ ? ]

**ಜಾಲಾರಿ** (ನಾ). =ಜಾಲಾದ : ಜಾಲಾರಿ, ಜಾಲಾದ (ವೃಜಿಗಿ. ೭೦-೧೪೨೭): ವರ ಪಾರಿಜಾತ ಬಂಧೂಕ ತಾವರೆಯು ಚಂದ ಜಾಲಾರಿ ಇಂದ್ರವಾಣಿಯು ಬಿಲ್ವ (ಹಮಚ. ೭೮). [ ? ]

**ಜಾಲಿ₁** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಮರ; ಬೊಬ್ಬುಳಿ ಮರ; ಗೊಬ್ಬಳಿಮರ: ಜಾಲಿ ಜೇನೊಡವಿಪ್ಪೆ ಪಿಪ್ಪಲ ಮಾಲೆಯವ ನೋಡಬಲೆ (ತೊರರಾ. ೩-೦-೨೮); ಜಾಲಿಯ ಮರದಂತೆ ಧರೆಯೊಳು ದುರ್ಜನರು (ಪುರಂದ. ೦-೦೧೭-೦); ಆಲಕ್ಕೆ ಹೂವಿಲ್ಲ ಸಾಲಕ್ಕೆ ಕೊನೆಯಿಲ್ಲ ಜಾಲಿಯ ಮರವು ನೆರಳಲ್ಲ ಹೆಣ್ಣಿಗೆ ತಾಯಿಯ ಮನೆಯು ಸ್ಥಿರವಲ್ಲ (ಜಗೀತ. ೮೮): ಜಾಲಿ ಬಿತ್ತಲು ಕಾಲಿಗೆ ಮೂಲ (ಗಾದೆ).

[ ದೇ. ॥ ತಮಿ. ಚಾಲಿ ; ತುಳು. ಜಾಲಿ ]

**ಜಾಲಿ₂** (ನಾ). ಪಡವಲ ಬಳ್ಳಿ: "ಜ್ಯೋತ್ಸ್ನೀ, ಪಟೋಲಿಕಾ, ಜಾಲೀ- ೩ ಪಡವಲದ ಗಿಡದ ಹೆಸರು" (ಸಿದ್ಧಾಂತಿ. ೧೨೨). [ ಸಂ. ಜಾಲೀ ]

**ಜಾಲಿ₃** (ನಾ). ೧. ಮೋಸಗಾರ; ಮಾಯಾವಿ; ವಂಚಕ: ಹಿಸುಣರ ಜಾಲಿಗಳ[ಪಾಠಾಂ. ಚಾಳಿಗಳ, ಜಾಳಿಗರ]ಚದುರೋಕ್ತಿ ನಮಗೇಕೆ (ತೊರರಾ. ೨-೦-೨೭). ೨. ಬೆಸ್ತರವನು; ಮೀನು ಹಿಡಿಯುವವನು; ಬಲೆಗಾರ: "ಜಾಲಿ–ಬಲೆಗಾರನಲ್ಲಿಯೂ . . . ಸೂತಾಖ್ಯ–ಸೂತ ಎಂದಾಗುವುದು" (ನಾನಾರ. ೩೩ ಟೀಕು). [ ಸಂ. ಜಾಲಿನ್ ]

**ಜಾಲಿಕ₁, ಜಾಳಿಕ₁** (ನಾ). ೧. ಬಲೆ: "ಜಾಲಿಕಂ ವಾಗುರಂ ಬೆಳ್ಮರವೆನಿಸಿಕ್ಕು" (ಮಂಗರಾ. ೧೦೨-೫). **ಜಾಳಿಕ₂**: ೨. ಕವಚ; ಚಿಲಖತ್ತು: "ಜಾಳಿಕಂ ಮಾಳಿ ವರ್ಮಂ ಕವಚಂ" (ಮಂಗರಾ. ೮೭-೩೦).

[ ಸಂ. ಜಾಲಿಕಾ ]

**ಜಾಲಿಕ₂, ಜಾಳಿಕ₂** (ನಾ). ೧. ಬಲೆಗಾರ; ಬೆಸ್ತ: "ಜಾಲಿಕಂ ಧೀವರಂ ಕೈವರ್ತನೆಂದೆನಲು ಜಾಲಗಾಜಿಂ" (ಮಂಗರಾ. ೧೧೧-೩). ೨. ಜೇಡ; ಜೇಡರ ಹುಳು. ೩. ಮಂತ್ರವಾದಿ; ಜಾದೂಗಾರ; ಮಾಯಾವಿ; ಐಂದ್ರಜಾಲಿಕ: "ಜಾಲಿಕನೆನೆ ಕಾಪಟಿಕಂ" (ವಸ್ತುಕೋ. ೬೪-೭೭): "ಜಾಲಿಕಃ, ಕೌಸ್ತಿಕಃ, ಧೂರ್ತಃ, ವ್ಯಂಸಕಃ, ಮಾಯಾವೀ, ಮಾಯಿಕಃ, ಮಾಯೀ–ಈ ೧೧ ಮಾಯಾವಿ" (ಹಲಾಯು. ೫೮-೧೪೪); ಗಗನತರಂಗಿಣೀ ವಿಭವಮಂ ಸುರಕಾಂತೆಯುಮಂ ನಿರೀಕ್ಷಿಸಿಲ್ಲಿಗೆ ತರಲಾರ್ಪನೆನ್ನಧಿಕ ವಿದ್ಯೆಯಿನೆಂದೊಜಿಲ್ದು ಜಾಲಿಕಂ (ದಶಕು. ೬-೧೩೩). ೪. ಒಂದು ಜಿಲ್ಲೆಯ ಅಥವಾ ಪ್ರಾಂತ್ಯದ ಅಧಿಪತಿ. **ಜಾಳಿಕ₁**: ೧. "ಧೀವರ ಜಾಳಿಕದಾಶನಾಮು ಮೀಂಗುಲಿಗಂ" (ವಸ್ತುಕೋ. ೭೭-೮೪). [ಸಂ.]

**ಜಾಲಿಗ** (ನಾ). =ಜೇಡರ ಹುಳು. 'ಜಾಲಿಗಕೀಟಕ' ಪರಾ.

[ <ಸಂ. ಜಾಲಿಕ ]

**ಜಾಲಿಗಕೀಟಕ** (ನಾ). ಜೇಡರ ಹುಳು: ಬಾಲಂ ಬೀಸದು ಸಂತಾಪಾಲಸನಾಗಿರ್ಕುಮಿಕ್ಕುಗುಂ ಮೆಯ್ಕುಂ ಕಣ್ಣಾಲಿಗಳಂ ಬಿಟ್ಟಿರ್ಕುಂ ಜಾಲಿಗಕೀಟಕ ಮನೆಡಸಿ ಮೆಲ್ದ ತುರಂಗಂ (ಅಶ್ವಶಾ. ೧೧-೩೦). [ ಜಾಲಿಗ + ಕೀಟಕ₂ ]

**ಜಾಲಿಗುಜುವ** (ನಾ). ಜಾಲಿಮರದಿಂದ ಕೂಡಿದ ದ್ವೀಪ: ಒಂದು ದಿನ ಕೆರೆಯ ನಡುವಣ ಜಾಲಿಗುಜುವಕ್ಕೆ ಬಂದು ಪದ್ಮಾಸನದಿ ಕುಳ್ಳಿತ್ತು ಶಿವಯೋಗದಿಂದಿರಲು (ರಾಘಚ. ೧೫-೨೮). [ ಜಾಲಿ₁ + ಕುಜುವ₁ ]

**ಜಾಲಿಗೆ** (ನಾ). ಕೋವಿಯನ್ನು ಹಾರಿಸುವಾಗ ಹತ್ತಿಸಲು ಉಪಯೋಗಿಸುವ ಬತ್ತಿ: ಮಾವಿನ ಚಿಗುರೆಂಬ ಜಾಲಿಗೆಯ ಬತ್ತಿಯಂ ಪತ್ತಿಸಿ (ಸೌಗಂಧಿ. ೧೭೭-೧೩); ಈರಣ್ಣ . . . ಜಾಲೀಗೆ ಬತ್ತೀ ಬಲಗೈಲಿ ಹಿಡ್ಕೊಂಡು ಒಬ್ಬಾನೆ ಹೊಡೆದಾನೋ ದೊರೆಮಗಾ (ಹುಟ್ಟಿಹ. ೪೪). 'ಜಾವುಗೆ' ಪರಾ. [ ? ]

**ಜಾಲಿಜಪ್ಪಟೆ** (ನಾ). ಒಂದು ಬಗೆಯ ಮರ: ಆಂಡ್ರಿಕೆ ಹುಲ್ಲು, ಕಡಗೋಲು ಗಿಡ, ಮುಳ್ಳುಮುತ್ತ, ಜಾಲಿಜಪ್ಪಟೆ–ಇಂಥ ನೂರಾರು ಕಾಡು ಜಾತಿಯ ಹುಲ್ಲು ಹೊದರು ಗಿಡಮರ ಬಳ್ಳಿ (ಜೀಉಮ. ೫೩). [ಜಾಲಿ₁ + ಜಪ್ಪಟೆ]

**ಜಾಲಿನಿ, ಜಾಳಿನಿ** (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಕಾಯಿ; ಹೀರೆ: "ಪೀರೆ ಜಾಲಿನಿ" (ವಸ್ತುಕೋ. ೩೭-೨೦). ಜಾಳಿನಿ: "ಹೀರೆ ಪ್ರಿಯಂಗಿ ಫಲಿನಿ ಜಾಳಿನಿಯುಕ್ಕು" (ಮಂಗರಾ. ೪೪-೪೪). [ ಸಂ. ಜಾಲಿನೀ ]

**ಜಾಲಿಬಂಕೆ** (ನಾ). ಒಂದು ಬಗೆಯ ಮರ: ಜಾಲಿಬಂಕೆ, ಇಟಿಕಾಕುಸ್ತ (ವೃಜಿಗಿ. ೬೫-೧೩೧೭). [ ? ]

**ಜಾಲಿಮ, ಜಾಲೀಮ, ಜಾಲೀಮು**(ಗು). ೧. ಉಗ್ರವಾದ; ದಾರುಣವಾದ; ತೀಕ್ಷ್ಣವಾದ: ಅದರ ಆ ಜಾಲಿಮ ವಿಷದಿಂದ ಅವನ ಹಲ್ಲುಗಳು ಕೂಡ ಗಿಟಕಿರಿದಿದ್ದವಾದ್ದರಿಂದ ಆ ಔಷಧವು ಅವನ ಹೊಟ್ಟೆಯಲ್ಲಿ ಹೋಗಲಿಲ್ಲ (ಅಂಬಿಕೆ. ೧೭೦). ಜಾಲೀಮ: ೧. ಮಕ್ಕಾದ ಕಡೆಗೆ ಮುಖಮಾಡಿ, ನಮಾಜು ಬೀಳುವಾಗಲೇ ಜಾಲೀಮ ಪಣವನ್ನು ಪುಕಾರಿಸಿದರು (ದೀಪಹ. II, ೪೦). ಜಾಲೀಮು:(ನಾ). ೨. ಉಗ್ರವಾದುದು; ದಾರುಣವಾದುದು: ಕೊಟ್ಟ ಮದ್ದು ತುಸು ಜಾಲೀಮು ಮಾತ್ರ ಇತ್ತೆಂದು ಅದರ ಪರಿಣಾಮದಿಂದ ಅವನು ಕಂಡುಕೊಂಡನು (ಬಾಬಲ. ೮೪). [←ಅರ. ಮರಾ. ಜಾಲೀಮ್ ]

**ಜಾಲಿಸು, ಜಾಳವಿಸು₁, ಜಾಳಿಸು₂, ಜಾಳೈಸು** (ಕ್ರಿ). ೧. (ಅಕ್ಕಿ ಮೊದಲಾದವುಗಳಲ್ಲಿ ಕಸಕಡ್ಡಿ ಹೋಗುವಂತೆ) ನೀರಿನಲ್ಲಿ ತೊಳೆ: ಮಿದಿದಕ್ಕಿಗಳ ಮಾಡಿ ತೂಗಿ ಜಾಲಿಸಿ (ಗೋಮಟೀ. ೪-೭೭). ೨. ಕಲಕು; ಅಲ್ಲಾಡಿಸು; ಕ್ಷೋಭೆಗೊಳಿಸು: ಜಗಾ ಜಾಲಿಸುವ ಬಡ್ಡಿ ಮಗು ತೂಗಲಾರಳೊ (ಗಾದೆ). ೩. ಶೋಧಿಸು; ಪರಿಶುದ್ಧಿಗೊಳಿಸು: ಜಾಲಿಸಬೇಕೂ ಜಾಲಸಾಗರನಾಗಿ ಪಾಪಜಾಲಂಗಳ ಕಸ ಪೋಗುವಂತೆ (ವಿದಾಕ್ಷ. ೧೫೨-೦); ಅದರಲ್ಲಿ ಮನಸ್ಸನ್ನು ಜಾಲಿಸಿ ತೊಳೆದು (ಪಂಯಾತ್ರಿ. ೬೯). ಜಾಳವಿಸು₁: ೪. ಮೋಸ ಮಾಡು; ವಂಚಿಸು. 'ಜಾಳವಣೆ' ಪರಾ. ಜಾಳಿಸು₂: ೧. ಕಲ್ಮಷವೆಂಬ ತೌಡಂ ಹಾಜಿಸಿ ಸಮತೆಯೆಂಬ ಸಲಿಲದಲ್ಲಿ ಜಾಳಿಸಿ (ಅವತಂ. ೯೭೭-೧೨೭೦): ಜಾಲಗಾರನು ಉಸುಕು ಜಾಳಿಸುವ ಹಾಗೆ (ಉಯ್ಯಾಲೆ.೧೧-೯). ೫.ಕೊಡವು; ಒದರು: ಆರ್ದ್ರಮುಂ ಜಾಳಿಸಿ ಜಾಲಮಂ ಬಿಸಿಲೊಳಿಕ್ಕುವ . . . ಶಬರರ್ಕಳಿನಿಂತೆಸೆದತ್ತು ಪೆಕ್ಕಣಂ (ಶಾಂತೀಶ್ವ. ೩-೭೪). ೬. ಸೋಲಿಸು; ಜಳ್ಳುಮಾಡು: "ಜಾಳಿಪುದೆಂದು ಸೋಲಿಪುದು" (ಕಶಸಾ. ೩೦-೬೫೪); "ಜಾಳಿಪುದೆನೆ ಸೋಲಿಪುದು" (ಕವಿಕಂ. ೨೪೪): ಜಾಳಿಸಿದನಾ ಕಾಶಿರಾಜನ ಧಾಳಿಯಲಿ (ಕುವ್ಯಾಸ. ೪-೫); ನಿಮ್ಮ ಬಲ ಜಾಳಿಸಲ್ಕೀರ ವೃಷಸೇನ ಬೊಬ್ಬಿರಿದು . . . ನುಡಿದನು (ತುರಂಗ. ೭೭-೧). ೭. ಒಂದರಿಯಾಡು; ಜರಡಿಹಿಡಿ: ಹಾಲಿನ ಹುಡಿಯನ್ನು ನಯವಾಗಿ ಅರೆದು ಸರಿಗೆಯ ಜರಡಿಯಲ್ಲಿ ಎರಡು ಮೂರು ಸಲ ಜಾಳಿಸಬೇಕು (ಆಚುಸಾ. ೧೧೧). ಜಾಳೈಸು: ೮. ತಗ್ಗಿಸು; ಅಧೀನದಲ್ಲಿಡು: ಗಾಳಿ ಬೆಂಬಲವಾಗಲುರಿಯ ಭಡಾಳವನು ಜಾಳೈಸಬಹುದೆ (ಕುವ್ಯಾಆ. ೩೪-೧೫). [ಜಾಲ₁+ –ಇಸು₃]

**ಜಾಲೀಮ** 'ಜಾಲಿಮ' ನೋ.

**ಜಾಲೀಮು** 'ಜಾಲಿಮ' ನೋ.

**ಜಾಲೆ₁, ಜಾಳ₂, ಜಾಳೆ** (ನಾ). ಬೆಂಕಿ; ಉರಿ; ಜ್ವಾಲೆ: "ಜಾಲೆಯುರಿಯೆನಲ್ ಜ್ವಾಲೆಯೊಳು ಸಲೆ ವರ್ತಿಸುಗು" (ಶಬ್ದಮಂ. ೧೨): ಜಾಲೆಯಿಂ ಮರ ಕೆಡುಗು ಮೋಳೆಯಿಂ ಕೆಜಿ ಕೆಡುಗು ಆಳು ಇಲ್ಲದನ ಹೊಲ ಕೆಡುಗು (ಸರ್ವಜ್ಞ. ೧೯೫೩); ಶೂಲದ ಪೆಣನುಂ . . . ಜಾಲೆಯು ಬಿಸಿಗು ಬೆರ್ಚುತೆ (ಹಾಲಾಸ್ಯ. ೧-೭-೨೩); ಕೂರಂಬಿನ ನನೆಯೊಂದು ಕುತ್ತಿಸಳ ಜಾಲೆಗ ಸೀಕರಿವೋಗದೇಂ ಮಾಣ್ಗುಂ (ರಾಮಾಶ್ವ. ೫೭-೧೪). ಜಾಳ₂. 'ಜಾಳವಿಸು' ಪರಾ. ಜಾಳೆ: ವತ್ತಲೋಪಕ್ಕೆ–ಜ್ವಾಲಾ–ಚಾಳೆ (ಶಮದ. ೨೮೦ ಪ್ರಯೋ).

[ <ಪ್ರಾ. ಜಾಲಾ / ಸಂ. ಜ್ವಾಲಾ ]

**ಜಾಲೆ$_2$** (ನಾ). ಮಾಟಗಾತಿ ; ಥಳಕುಬೆಳಕಿನಿಂದ ಜನರನ್ನು ವಶಪಡಿಸಿಕೊಳ್ಳುವವಳು ; ಧೂರ್ತೆ : ನುಡಿಗಳಿಂ ನಡೆಗಳಿಂ ಜಾಲೆಯರ ಕೊನಬುಗಾಱಿಕೆ ಸುಳುಹು ತಾಪಸರಿಗಂ ಪ್ರಾಣಗುಂದಿರ್ದುವ (ತುರಂಗ. ೮೦-೪೦).

[ ಜಾಲ$_1$ + – ಎ$_2$ ]

**ಜಾಲೆ$_3$** (ನಾ). = ಜಾಲ$_1$. 'ಜಾಲೆಗಾಱ' ಪರಾ. [ ಸಂ. ಜಾಲ ]

**ಜಾಲೆ$_4$** (ನಾ). ೧. ಒಂದು ಬಣ್ಣ : ಒಂದು ಪೂರ್ವಕ್ಕೆ ಹೊಂಟರೆ, ಮತ್ತೊಂದು ಉತ್ತರಕ್ಕೆ, ಇನ್ನೊಂದು ಮರಳಿ ಮನೆಗೆ ಓಡುವ ಜಾಲೆಯ ಜಾನುವಾರುಗಳು (ದಂಬನಾ., ೧೮). ೨. ಒಂದು ಬಗೆಯ ಬಣ್ಣದ ಹಸು : ಬಟ್ಟಗಡಸು ಕೆಂದ ಹುರಿಗಕಾರಿಯು ಬೆಳ್ಳ ನೆಟ್ಟಕೊಂಬಿನ ಕಾರಿ ಜಾಲೆ ದಿಟ್ಟಿಸಿ ನೋಡುವ ಪಸುಗಳು ಎಸೆದುವು ಪಟ್ಟೆಯ ಸೀರೆಯಂದದಲಿ (ಮೂದೇಸಾಂ. ೧-೪೧). 'ಜಾಲೆಯಾಡು' ಪರಾ. ೩. ಒಂದು ಬಗೆಯ ವನಸ್ಪತಿ ; ಶೂಲಿಕೆ : "ಶೂಲಿಕೆಯೆನಲ್ ಜಾಲೆ" (ಮಂಗರಾ. ೪೩-೩೭). ೪. (?) : ಅಲ್ಲದ ನೆಲನು ಬೆಳವುದಕೆ ಹುಲ್ಲಲ್ಲದೆ ಜಾಲೆಯುಂಟೇ ? (ವೋಲೆಮಾ. ೧೭೩-೬೫೧). [ ? ]

**ಜಾಲೆಗಾಱ** (ನಾ).=ಜಾಲಗಾಱ : ಎಂಗೆ ಬಸನದಿಂದೆ ಕೊಲೆಕೊಂದು ಗಡಂ ಸಗ್ಗಕ್ಕೆ ಪಾಪಿ ಸಲುವಡೆ ಮತ್ತೀ . . . ಸೊನೆಗಾಱನುಂ ಜಾಲೆ[ಪಾಠಾಂ. ಲ]ಗಾಱನುಂ ಮಾಣ್ದಪರೆ (ಸಮುಪ. ೧೪-೮೭); ಜಾಲೆಗಾಱನ ಕಾಲು ಮುಳ್ಳುತಾಗಿ ನೊಂದಿತ್ತೆಂಬಂತೆ . . . ಠಕ್ಕನ ಪೂಜೆಗೆ ಮೆಚ್ಚುವನೆ ನಮ್ಮ ಗುಹೇಶ್ವರನು (ಅವಚಂ. ೨೯-೧೩೩): ಮಾಲಿಕ ವ್ಯವಹಾರ ಕಮ್ಮಡಿವಾಳ . . . ತಳವಾಱ ಜಾಲೆಗಾಱ ಕಳಾಕುಶಲ ತಾಂಬೂಲಿಕರ . . . ಆಳಬೇಹುದು ಚದುರ ಕುಶಲರಿಗೆಂದು ವಿಟ ನುಡಿದ (ಜೀವಂಧ. ೧೭-೮೭).

[ ಜಾಲೆ$_3$ + – ಕಾಱ ]

**ಜಾಲೆಯಾಡು** (ನಾ). ಒಂದು ಬಗೆಯ ಆಡು : ತನ್ನ ಕಟ್ಟಿದ ಗೇಣಂ ಪರದನಂ ಜಾಲೆಯಾಡಂ ಕೊಲ್ವಂತೆ ಪೊರಟ್ಟಿ ಕೊಂದು (ಧರ್ಮಾಮೃ. ೧೩-೮೦) : ಏಳನೆಯ ಭವದೊಳುಕ್ಕದೇಶದಲ್ಲಿ ಜಾಲೆಯಾಡಾಗಿ ಜನಿಸಿರ್ದ (ಪುಣ್ಯಾಸ್ರ. ೫-೩೯ ವ). [ ಜಾಲೆ$_4$ + ಆಡು$_3$ ]

**ಜಾಲ್ಮ** (ಗು). ೧. ಕ್ರೂರವಾದ ; ದಯಾಹೀನ. ೨. ಪಾಮರವಾದ ; ನೀಚವಾದ ; ತುಚ್ಛವಾದ. (ನಾ). ೩. ನೀಚನಾದವನು ; ದುಷ್ಟನಾದವನು: ಎಲೆ ಜಾಲ್ಮ ಎತ್ತ ಪೋದಪೆ (ಬಾಲಭಾ. ೯-೪೬). ೪. ವಿಚಾರ ಮಾಡದೆ ಕಾರ್ಯಮಾಡುವವನು ; ಹಿಂದು ಮುಂದು ನೋಡದೆ ಕೆಲಸ ಮಾಡುವವನು; ದುಡುಕುಗಾರ. ೫. ತಿಳಿಯದವನು; ದಡ್ಡ; ಮೂಢ : "ವೃಥೇಯಃ, ಬಾಲಿಶಃ, ಬಾಲಃ, ಜಡಃ, ಜಾಲ್ಮಃ . . . ಮಾತೃಶಾಸಿತಃ–ಈ ೧೧ ಅಱಿಯದವಂ" (ಹಲಾಯು. ೫೭-೧೮೧); ಜಡನೊ ಜಾಲ್ಮನೊ ವ್ಯರ್ಥಜನ್ಮನೊ ಕಡುಮರುಳೊ ಕಾಕನೊ ವಲಂ ಬಾಯ್ಬಡಿಕನೊ (ಪ್ರಹ್ಲಾದ. ೭-೨೩). [ ಸಂ. ]

**ಜಾಲ್ಮಜಲ್ಪ** (ನಾ). ದಡ್ಡತನದ ಮಾತು; ಅವಿವೇಕದ ಮಾತು: ಇಂತಹ ಜಾಲ್ಮಜಲ್ಪಗಳನ್ನು ಶ್ರೀಮನ್ಮಹಾರಾಜಾಸ್ಥಾನದಲ್ಲಿ ನೀವು ಪುನಃ ಕೇಳಿಸದಿರಬೇಕು (ಮಂತ್ರಶ. ೧೧-೧೮)

[ ಜಾಲ್ಮ + ಜಲ್ಪ ]

**ಜಾಲ್ಮತೆ** (ನಾ). ಕ್ರೂರತೆ ; ಕ್ರೌರ್ಯ ; ಹಿಂಸೆ : ಜಾಲ್ಮತೆಗೆ ಜಾಲ್ಮತೆಯ ನೊಡ್ಡಿ ಸೆಣಸುವ ರೂಢ ರಾಜನೀತಿಯನೊಡೆದನೀ ಸಾಹಸಿ (ಅಮೃತಂ. ೫೪-೩). [ ಸಂ. ಜಾಲ್ಮತಾ ]

**ಜಾಲ್ವರಿ** (ಕ್ರಿ). ಗುಂಪು ಚೆದರಿಸು (?) : ಪಳ್ಳಿಪುರಗಳ ಪೊಕ್ಕು ಕೊಳ್ಳೆಯಾಡಲ್ಕೆ ಬಲ್ಲಿದನು ಅವ ತನ್ನ ಬಲವೆಲ್ಲಗೂಡಿ ತಾಗಿ ಚೂಣಿಯ ಬಲವ ತಟ್ಟಿ ಜಾಲ್ವರಿದು ನೂಕಿ ಬಹುಜನರುಗಳ ಮುಕ್ಕಿರಿಯಲಿಕ್ಕಿದನು (ಕರಿಕ. ೧೭-೫). [ <ಜಾಲ$_1$ + ಪರಿ$_2$ ]

**ಜಾವ$_1$, ಜಾವಂ$_1$, ಜಾವು, ಝಾಮು, ಝಾವ** (ನಾ). ದಿವಸದ ಎಂಟನೆಯ ಒಂದು ಭಾಗದಷ್ಟು ಕಾಲ ; ಏಳೂವರೆ ಗಳಿಗೆ ; ಒಂದಂ ಪ್ರಹರ ; ಮೂರುಗಂಟೆಗಳಷ್ಟು ಕಾಲ : "ಪ್ರಹರಃ, ಯಾಮಃ–ಈ ೨ ಜಾವಂ" (ಹಲಾಯು. ೧೮-೧೦೬) : "ಪ್ರಹರಮೆನಲು ಯಾಮಮೆನೆ ಜಾವಂ" (ಮಂಗರಾ. ೩೦-೬) : ಬೆಳಗಪ್ಪ ಜಾವದಯ್ಕಿಲ್ ಕೊಳೆ ಶೀತಕ್ಕಾಱದಳ್ಕಿ (ಕಾವ್ಯಸಾ. ೬೯೪ ಶೂದ್ರಕ): ಅಂತಾಯಿರುಳ ನಾಲ್ಕು ಜಾವಮುಂ . . . ಕೆಂದಿಸೊಳೆ ಬೆಳಗಾಗೆ (ಪಂಪಭಾ. ೩-೮೩ ವ) : ಇರುಳ್ ನಾಲ್ಕುಂ ಜಾವಮುಂ ಮೌಹೂರ್ತಿಕನಂತೆ ಪೊತ್ತಿನಳವಿಯುಂ ನೋಡುತ್ತುಂ (ಧರ್ಮಾಮೃ. ೧-೧೬೦) : ಒಂದರೆಗಳಿಗೆಯನೊಂದು ಬರಿಸದಂತೊಂದು ಜಾವವ ಯುಗದಂತೆ . . . ಎಣಿಪಳು (ಹರಿಬ. ೭-೩೭): ಚೇಳಿಗೆ ಪಾರುಪತ್ಯ ಕೊಟ್ಟರೆ ಜಾವಕ್ಕೊಂದು ಸರ್ತಿ ಮುಟ್ಟಿಸಿತು (ಗಾದೆ). ೨. ಜಾವಜಾವದಲ್ಲೂ ಮಾಡುವ ನಗರ ಮೊದಲಾದುವುಗಳ ಕಾಪಲು; ಪಹರೆ; ಗಸ್ತು: ಬಲಿದು ಕಾಲ್ಗಾಪಿನಣಿವೆರಸು ನಿಂದ ಜಾವದ ಮದಗಜಂಗಳುಮಂ (ವರ್ಧಪು. ೯-೫೭ ವ). ೩. ಕಾವಲಿನ ಎಡೆ,–ಸ್ಥಾನ ; ಪಹರೆಯವರು ಕಾವಲಿಗಾಗಿ ಇರುವ ನೆಲೆ ; ಕಾವಲುಗಾರರ ಠಾಣೆ: ಅಲ್ಲಲ್ಲಿ ಜಾವ ಮುಕ್ಕಡ(ಗ)ರವಟಿಗೆ ತಳವ(ಱಿಕೆ)ಯ(ಮ)ಕ್ಕಕ್ಕಯೊಳಂ ರಾಜಾಂತರಮಂ ನಿರವಿಸೆಯುಂ (ಪುಷ್ಪಪು. ೭-೬೯ ವ) : ಹೃದಯಪ್ರಿಯರಂತೊಱಗಿದ ಪದದೊಳ್ ಗರಟಿಗೆಯ ಜಾವದುಕ್ಕಡದುಲಿ ಮಬ್ಬಿದ ಪೊತ್ತು (ಯಶೋಧ. ೩-೩೭). **ಜಾಮು$_1$** : ೧. ಆ ಪುಲಿಯ ಕೊಲ್ವೆನೆನ್ದು ಪ್ರತಿಜ್ಞೆ ಕಡಿದು ಜಾಮದಿನ್ದೊಳಗೆ ಕೊನ್ದಂ (ಎಕ. X, ಮುಳಬಾ. ೧೬೩-೪ : 950) : ಬುಧವಾರ ಮೂರನೆಯ ಜಾಮದಲು ಕಾದಿ (ಎಕ. VIII, ಸೊರಬ.೧೬೭-೯: 1454) ; ರಾತ್ರಿ ಮೊದಲನೆಯ ಜಾಮದ ಗಂಟೆ ಆಗತಾನೆ ಹೊಡೆದಿತ್ತು (ಕೃಷ್ಣಭೂ. ೪೯). **ಜಾವು** : ೧. ಕಲ್ಲುಮಂಟಪದ ನೆರಳಿನಲ್ಲಿ ಮಲಗಿದಿರಿ ಒಂದು ಜಾವು (ಹ್ಯದಸ. ೭೫-೭). **ಝಾಮು**: ೧. ಬೆಳಗಿನ ಝಾಮುಕ್ಕೆ ಬಂದು ಮಲಗಿದೆನಲ್ಲ (ದೇವೀಚಾ. ೪೧). **ಝಾವ** : ೧. ಘಳಿಗೆಯೆಂಟಾಗಲೊಂದು ಝಾವವಹುದು (ವಿವೇಕ. ೩೩೦) : ಎಂಟು ಝಾವಗಳಲ್ಲಿ ಒಮ್ಮೆ ಹರಿಯ ಕೊಂಡಾಡೊ (ವಿದಾಕ್ಯ. ೯೫-೬) : ಒಂದು ಝಾವ ರಾತ್ರಿ ಇದ್ದದ್ದು ಅವಳಿಗೆ ತಿಳಿಯಲಿಲ್ಲ (ಅನಾಥ. ೩೮೮).

**ಜಾವದವರ್, ಜಾವದವರು** = ಕಾವಲಿನವರು ; ರಕ್ಷಕರು : ಅಯಾಮಿಕಸ್ಯ=ಜಾವದವರಿಲ್ಲದೊಂಗೆ (ನೀತಿವಾ. ೧೩-೭):ಕರೆದು ತಂದಮೃತಾನ್ನ ಪೂಡುವರಿರುಳು ಪಗಲದಗಲದೆಯು ಜಾವದವರು ಮಹಾ ಸುವಿಧಾನದಿಂ ಬಿಡರಂಗರಕ್ಷಕರು (ಸಾಳ್ವಭಾ. ೩೩-೧೧೫). **ಜಾವದಾನೆ** = ಕಾವಲಿನ ಕೆಲಸಕ್ಕಾಗಿ ಉಪಯೋಗಿಸಿಕೊಳ್ಳುವ ಆನೆ : ರಾಜಾಂಗಣದ ಬಯಲ ಬಾಳ್ಗಂಬಂಗಳೊಳ್ ಸೆಱೆಗೆಯ್ದಿರ್ದ ಜಾವದಾನೆಗಳ ಮೇಲೆಡೆಗೆಡದು (ಚಂದ್ರಪು. ೮-೪೩ ವ). **ಜಾವಮಿರ್** = ಕಾವಲಿರು : ನಿದ್ರಾಭರ ಪರವಶರಾಗಿರೆ ಭೀಮಂ ಜಾವಮಿರ್ದುವ (ಪಂಪಭಾ. ೩-೧೦ ವ). **ಜಾವಮಿರಿಸು** = ಕಾವಲಿಗೆ ಇರಿಸು ; ರಕ್ಷಣೆ ಏರ್ಪಡಿಸು : ಸಾಹಸಭಟರಪ್ಪ ಸುಭಟರ್ಗೆ ನಾಲ್ಸಾಸಿರ ಪೊನ್ನಂ ಸುಡಿದು ಜಾವಮಿರಿಸಿ (ಸುಕುಮಾ. ೭-೮ವ).

[ <ಪ್ರಾ. ಜಾವ. / ಸಂ. ಯಾಮ ]

**ಜಾವ$_2$**(ನಾ). ಒಂದು ಬಗೆಯ ವನಸ್ಪತಿ: ಮಧುಪಿಪ್ಪಲಿ ಮೂಲದ ಭಲ್ಲಾತಕದರುಗದ ಜಾವದ ಪುಡಿಯಂ ಕುದಿಯಿಸಿ (ಲೋಕೋಪ. ೯-೧೪೫). [ ? ]

**ಜಾವಕ್** (ಗು). ಹೊರಕ್ಕೆ ಕಳುಹಿಸುವ. 'ಆವಕ್' ಪರಾ.

[ ←ಮರಾ. ಜಾವಕ್ ]

**ಜಾವಕ** (ನಾ). ೧. ಒಂದು ಬಗೆಯ ಧಾನ್ಯ ; ಅಲಸಂದೆ; ತಡಂಗುಣಿ. ೨. ಅರಗು : "ಜಾವಕ–ಯಾವಕ = ಅರಗು" (ಕಧ್ಯಕೋ. ೦೫). ಯಾವಕ, ಜಾವಕ (ಶಬ್ದಾನು. ೧೪೧ ಪ್ರಯೋ). [ <ಸಂ. ಯಾವಕ]

**ಜಾವಗಹಳೆ** (ನಾ). ಕಾವಲುಗಾರರು ಊದುವ ಕಹಳೆ; ಪಹರೆಯವರು ಜನರನ್ನು ಎಚ್ಚರಿಸುವುದಕ್ಕಾಗಿ ಊದುವ ಕಹಳೆ : ಹೊಡೆವ ಹೆಬ್ಬರ ಜಾವಗಹಳೆ ತಂಬಟೆಗಳ ಕಡುರವವೊಳಡುಗುದಿಗೆಯ ಜಡಿವ ದನಿಗಳಿಂದ (ಕಂಸವಿ. ೧೧-೧೪೦). [ ಜಾವ$_1$ + ಕಹಳೆ ]

**ಜಾವಗುತ್ತಿಗೆ** (ನಾ). ಕಾವಲು ಕಾಯುವ ಗುತ್ತಿಗೆ : ನಿತ್ಯಪೂಜೆಯನು ಮಲ್ಲಯ್ಯಂಗೆ ಮಾಡಿನೋಡುತ್ತ ತೋಟವನು ಕೆಜೆಯುನು ಜಾವಗುತ್ತಿಗೆ ಯನಿತ್ತು ತಾಂ ಹರುಪದಿಂ ಕವಿಲೆಗಳ ಕಜುವ ನೋಡುತ್ತ (ಸಿದ್ಧರಾ. ೫-೧೭); [ ಜಾವ$_1$ + ಗುತ್ತಿಗೆ (<ಗುತ್ತಗೆ) ]

**ಜಾವಟೆ**(ನಾ). ಚಪಲತೆ; ಚಾಪಲ್ಯ (?): ತೀವಿದರು ಭಂಡಿಯಲಿ ಮುಂದಣ ಜಾ[ಪಾಠಾ. ಚಾ]ವಟೆಯ ಚಪಲರಿಗೆ ಹರಿಯೆ ನೃಪಾವಳಿಗಳಲ್ಲಲ್ಲಿ ತೆತ್ತರು ಕಂಡ ವಸ್ತುಗಳ (ಕುವ್ಯಾಸ. ೬-೬) : ರಾವುತರು ಸಮತಳಿಸಿ ಮುಗ್ಗಲು ಮಾವುತರು ತಲೆದೋರಿತಿತ್ತಲು ಜಾವಟೆಯ ಟಾವಲ್ಲ (ಮೂಲರಾ. ೪-೧೭). [ ? ]

**ಜಾವಡಿ**$_1$ 'ಜಾವಳಿ$_1$' ನೋ.

**ಜಾವಡಿ**$_2$ (ನಾ). (?) : ಮುಮುಕ್ಷು ಮಧ್ಯದಿ ನಿಂದ ಕಾಲಭ್ರುವಿನ ತೆರ ಅಮಮ ಶಿವನ ಜಾವಡಿಗಳು ರಮಣೀಯ ಪಂಚಬ್ರಹ್ಮಗಳೆ ಭಿತ್ತಿಗಳಾಗಿ ವಿಮಲವೇದದ ಸಾಲಗಂಬ (ದೇವಾಂಪು. ೨-೩೮).
[ P ಇದು 'ಚಾವಡಿ' ಎಂಬುದರ ಅಪಲಿಖಿತವಿರಬಹುದು ]

**ಜಾವಡಿಕಾರ** (ನಾ). ಜಾವಡಿಗೀತೆಗಳನ್ನು ರಚಿಸುವವನು : ಜಾವಡಿ ಕಾರರು, ತುಮ್ರಿಕಾರರು ನಿತ್ಯಜೀವನದ ಲೀಲಾವಿಲಾಸವನ್ನು ಬಣ್ಣಿಸಿದ್ದಾರೆ (ಭಾರದ. ೫೮೦).
[ ಜಾವಡಿ$_1$ (<ಜಾವಳಿ$_1$) + – ಕಾರ$_1$ (< – ಕಾಱ) ]

**ಜಾವನಿಗಾಲೆ** (ನಾ). ಒಂದು ಬಗೆಯ ವನಸ್ಪತಿ : ಜಾವನಿಗಾಲೆ, ಸಣ್ಣ ಸಲ್ಲೆ, ಕಾಯೋರಿ, ಕರಿಸಲ್ಲಿ, ಕಾಡುಪತಂಗ, ಮುರಿಗೆ (ವೃಜಿಗಿ. ೪೦-೬೯೯). [ ? ]

**ಜಾವಯಿ** (ನಾ). ಮಗಳ ಗಂಡ; ಅಳಿಯ; ಜಾಮಾತ: ನಮ್ಮ ಜಾವಯಿನ್ನ ಆಶೀರ್ವದಿಸಿರಿ, ಸ್ವಾಮಿಜಿ (ಐರೀ., ೬೦೭) : ನಮ್ಮ ಜಾವಯೀ ಅಂಥಾವಲ್ಲ ತಗೀರಿ (ಗ್ರಾಮೂಜು. ೬೮).
[ ←ಮರಾ. ಜಾವಯೀ./ಪ್ರಾ. ಜಾವಣ್ಣಾ./ಸಂ. ಜಾಮಾತೃ ]

**ಜಾವರಿ** (ನಾ). (?) : ವಳ್ಳಿಯ ಪುರದ ಭೂಪದೇವರ ಜಾವರಿ ಗೊಬ್ಬರ ಸಿನಿಂಡಿವಾಡಿ × × × ದಿವಾಳಿ ಸತ್ರನಾತ (ಕಕುಲ. ೩-೫; 1071). [ ? ]

**ಜಾವಳ**$_1$ 'ಚಾವಲ' ನೋ.

**ಜಾವಳ**$_2$ (ನಾ). ೧. ಸಾಮಾನ್ಯ; ಸಾಧಾರಣ : "ಜಾವಳಮೆಂದು ಸಾಮಾನ್ಯಮುಂ ಚಾಪಲಮುಮಪ್ಪುದು" (ಶಬ್ದಮ. ೫೫) : ಇಳೆಯೊಳು ತ್ರಿಮಕೀರ್ತಿಗಳು ಜಾವಳದ ಪುರುಷರೆ ಧರ್ಮಪುತ್ರನ ಗೆಲು ವ ಪರಿಯೆಂತೈ (ಕುವ್ಯಾಉ. ೩-೧೩೦) : ಸುಂದರಿಯರನೊಲ್ಲದಿಪ್ಪುದದು ಜಾವಳಮೇ (ಹಮ್ಮೀರ. ೬-೪೦). ೨. ಸಾಮಾನ್ಯ ಮನುಷ್ಯ ; ನಾಡಾಡಿ : ಭೂವಳಯದೊಳಗುಳ್ಳ ಸರ್ವಜೀವಾಳಿಗಳ ಪಾವನಂಮಾಡಲೆಂದನುಗೆಯ್ದ ಶಿವ ಸಿದ್ಧ ಜಾವಳನೆ (ಸಿದ್ಧರಾ. ೧ ಸೂಚನೆ) : ಬಸವನೇಂ ಜಾವಳನೆ ಭಕ್ತರೊಳು (ಬಸಪು. ೧-೨೮): ಬಾಲರಾದಡೆ ಭಂಗವೇ ಜಾವಳನೆ ಅಭಿಮನ್ಯು (ಕುವ್ಯಾಕ. ೪-೧೪) : ಸತಿಯ ಮಚ್ಚು ಜಾವಳರ್ಗೆಂತು ದೊರಕುವುದು ಮುನ್ನೀಶನಂ ಭಜಿಸಿದಂಗಲ್ಲದೆ (ರಾಘಚ. ೭-೩೪). ೩. ಕೀಳಾದವನು; ಹೀನ : ಮುನಿದೊಡೆ ನಲ್ಲನೋಪಳ ಪದಾಂಬುರುಹಕ್ಕೆ ವಿನಮ್ರನಾಗೆ ಜಾವಳ ಮೊಜೆಯುಲ್ಲು ನೀನೆನಗೆ ಮುಟ್ಟದೆ ಪೋಗೆನೆ (ಶೃಂಗಾರ. ೩-೮೮): ಈ ಮಹಿಯೊಳ್ ಜಾವಳನುಂ ಕರಂ ಕುಪಥದೊಳ್ ಶಾಲಿಕ್ಕಂ (ಶಾಕುಂತ. ೬೪-೧೧೧). [ ? ]

**ಜಾವಳ**$_3$, **ಜಾವುಳ** (ನಾ). (ಉಕ). ೧. ಜುಟ್ಟು : ಕೂದಲು. ೨. ಮುಂಡೆಗೂದಲು : ಹುಟ್ಟುಗೂದಲು: ಶಿರಿಮೂಗುತೀ ಸಣ್ಣ ಶಿರದ ಜಾವಳ ಜಡೆ ಕಡೆಗೋಲು ನೇಣುಸಹಿತ (ವಾದಿಕೀ. ೬೩-೭): ಹುಟ್ಟಿದ ಕೂಸಿನ ಜಾವಳವನ್ನು ತೆಗೆಯುವಾಗ (ಕಥಾಗಿ. ೦೦೦); ಐದನೆಯ ವರುಷಕ್ಕೆ ಅವನ ಜಾವಳವನ್ನು ಕೋಟೆಯ ಮೇಲೆ ತೆಗಸುವದೆಂದೂ ಬೇಡಿ ಕೊಂಡಿದ್ದರು (ಸ್ಕೃತಿಜ. ೧೦೫). ೩. ಷೋಡಶ ಸಂಸ್ಕಾರಗಳಲ್ಲಿ ಒಂದು : ಮೊದಲನೆಯ ಸಲ ಕೂದಲು ತೆಗೆಸುವ ಸಂಸ್ಕಾರ; ಚೌಲ; ಚೂಡಾ ಕರ್ಮ : ಇವರಲ್ಲಿ ಜನ್ಮ, ಜಾವಳ, ಲಗ್ನ, ಮರಣ ಇಷ್ಟರ ಸಂಸ್ಕಾರಗಳು ಮಾತ್ರ ಉಂಟು (ಕಥಾಗಿ. ೧೩೪): ತನ್ಮಧ್ಯೆ ಐವ್ಮೆ ಶಾಮರಾಯ ತೃತೀಯ ಕುಮಾರನ ಜಾವಳಕ್ಕೆಂದು ಊರಿಗೆ ಬಂದರು (ದೀಪಪ. I, ೪೩). **ಜಾವುಳ**: ೧. "ಜಾವುಳ=ನವಿರು,ಕೂದಲು, ಜಡೆ" (ಕಂಸುಪು. ೮೬) : ಕರಿಯಂಗಿ ಕಸೂತಿ ತಲೆತುಂಬ ಜಾವುಳ (ಹಳ್ಳಿಯ. ೭೦).
[ ← ಮರಾ. ಜಾವಳ./ಸಂ. ಜಾತವಾಲ ]

**ಜಾವಳದವಸಿ** (ನಾ). ಹೀನನಾದ ತಪಸ್ವಿ : ನಾಡಾಡಿಯಾದ ಋಷಿ : ಜಾವಳದವಸಿಯು ಕವಡುವಾಯೆಗೊಳಗಪ್ಪರೇಂ (ರಾಮಾಶ್ವ. ೬೭-೧೧)
[ ಜಾವಳ$_2$ + ತವಸಿ$_1$ ]

**ಜಾವಳಿ**$_1$, **ಜಾವಡಿ**$_1$ (ನಾ). [ಸಂಗೀತ] ಶೃಂಗಾರ ಗೀತೆ; ಕಾಮ ಪ್ರಧಾನ ವಾದ ಗೀತೆ : ಪದವರ್ಣಗಳು ತಿಲ್ಲಾನಗಳು ಮತ್ತು ಜಾವಳಿಗಳನ್ನು ರಚಿಸಿದರು (ಸಂಗೀತ. ೨೮) ; ಶೃಂಗಾರಭಾವದಿಂದ ಕೂಡಿದ ಪದ ಗಳನ್ನೂ ಜಾವಳಿಗಳನ್ನೂ . . . ಅಳವಡಿಸಿಕೊಂಡಿದ್ದಾರೆ (ಆಧಾನ್ವ. ೫೭). **ಜಾವಡಿ**$_1$ : "ಶೃಂಗಾರ ಕಾವ್ಯ ; ಪ್ರಣಯಗೀತೆ ; ಜಾವಡಿ" (Erotic. ಇಂಕನಿ) ; ಜಾವಡಿಗಳನ್ನು ಹಾಡುತ್ತಿದ್ದರು (ಮಾಮರಾ. ೧೩೯) : ಮೋಹನ ರಾಗದಲ್ಲಿ ಒಂದು ಜಾವಡಿಯನ್ನೂ ರಾಗಮಾಲಿಕೆಯಲ್ಲಿ ಯಾವುದಾದರೂ ಒಂದು ಸಂಸ್ಕೃತ ಶ್ಲೋಕವನ್ನೂ ಹಾಡಬಹುದು (ಇಬದು. ೧೨೧).
[ ದೇ.೫ ತಮಿ. ಚಾವಳಿ ; ತೆಲು. ಜಾವಳಿ ]

**ಜಾವಳಿ**$_2$ (ನಾ). ಕಿವಿಗೆ ಹಾಕಿಕೊಳ್ಳುವ ಮುತ್ತಿನ ಒಡವೆ ; ಚೌಕಳಿ ; ನಾಲ್ಕು ಮುತ್ತುಗಳ ಹತ್ತಕಡುಕು : ನೋವ ಗುರು ಇದಕ್ಕಂಜ ಹೇಳದ ಶಿಷ್ಯ ಕಿವಿಮೂಳ ಮೌಕ್ತಿಕದ ಜಾವಳಿಯ ಘಳಿಸಿದಂತೆ ನಾರಾಯಣ ಪ್ರಿಯ ರಾಮನಾಥ (ಗುಪ್ತಮಂ. ೮೭). [ <ಚೌಕಳಿ ]

**ಜಾವಳಿಗ** (ನಾ). ಸಾಮಾನ್ಯ ವ್ಯಕ್ತಿ ; ಸಾಧಾರಣ ಮನುಷ್ಯ : ದೇವಿಯುನು ನೀ ಮರುಳು ಮಾಡಿದೆ ಜಾವಳಿಗನಲ್ಲ (ಪ್ರಭುಲಿಂ. ೫-೩೧) :ಜಾವಳಿಗರೊಳು ಲಿಂಗಸಂಗ ಸುಖಾವಳಿಯನಱುಹಿದೆನೊ (ಮದೇಪು. ೩-೨೭) ; ಈ ಜವ್ವನಂ ಬಱಿದೆ ಬಂದುದುಂಟೆ ರಾಯಕುವರಿಯಂ ಮರುಳಗೊಳಿಸಿದೆ ಜಾವಳಿಗ (ಪ್ರಭುಪು. ೫-೫೨). [ ಜಾವಳ$_2$ + – ಇಗ ]

**ಜಾವಳಿಸು** 'ಚಾವಲಿಸು' ನೋ.

**ಜಾವಳೆ** (ನಾ). ಚಂಚಲೆ ; ಹೀನೆ : ಗಾಡಿಯ ಮೋಡಿಯ ಕವಡು ವಲೆಯನೊಡ್ಡಿ ಮಿಡುಕಿನ ಸೆಡಕುಗಾರ್ತಿ ಜಾವಳೆ ಸೀತೆ ತಾನೆ ತನಗೊಲ್ದ ನೀಱನಂ ರಾವಣನಂ ಕಯ್ಯಾಱಿ ಕೊಂದು ಕುಡಿದಲ್ (ರಾಮಾಶ್ವ. ೧೧೩-೨).
[ ಜಾವಳ$_1$ (<ಚಾವಲ) + – ಎ$_2$ ]

**ಜಾವಾಳ** 'ಜಾಪಾಳ' ನೋ.

**ಜಾವಿಗೆ** 'ಜಾವುಗೆ' ನೋ.

**ಜಾವಿಗೆಬತ್ತಿ** (ನಾ). = ಜಾವುಗೆ : (ಸುಡುಮದ್ದಿನ ಬಾಣವನ್ನೂ) (ಗಣ ಮೊದಲಾದವುಗಳಲ್ಲಿ) ಸಿಡಿಮದ್ದನ್ನೂ ಹೊತ್ತಿಸಲು ಉಪಯೋಗಿಸುವ ಒಂದು ಬಗೆಯ ಜಾವಿಗೆ ಬತ್ತಿ (Port-fire. ಇಂಕನಿ). 'ಜಾಲಿಗೆ' ಪಠಾ.
[ ಜಾವಿಗೆ (<ಜಾವುಗೆ) + ಬತ್ತಿ ]

**ಜಾವು** [illegible]

**ಜಾವುಗೆ, ಜಾವಿಗೆ** (ನಾ). ಸುಡುಮದ್ದುಗಳನ್ನು ಹತ್ತಿಸಲು ಉಪಯೋಗಿಸುವ ಸಾಧನ,–ಬತ್ತಿ : ಹಿಂದು ಮುಂದಾಗಿ ಕೋವಿಯನಾಂತು ಕೆಲಬರು ತಂದು ಎದೆಗೆ ಜಾವುಗೆಯ (ಜ್ಞಾನಡ. ೧೩-೪೦). **ಜಾವಿಗೆ.** 'ಜಾವಿಗೆಬತ್ತಿ' ಪರಾ. [ ←ಮರಾ. ಝಾವ ]

**ಜಾವುಳ** 'ಜಾವಳ$_3$' ನೋ.

**ಜಾಸುದ್ದಾರ** (ನಾ). = ಜಾಸೂದು : ಸರ್ಕಾರಿ ಕಾಗದಗಳನ್ನು ತಲಪಿಸುವುದಕ್ಕೂ ಬೇಹುಗಾರರು, ಜಾಸುದ್‍ದಾರರು. ವರದಿಯವರು ಎಂದು ನೇಮಕವಾಗಿದ್ದರು (ಪಾಳೆಗಾ. ೫೫). [ <ಜಾಸೂದು + – ದಾರ$_4$ ]

**ಜಾಸೂದ** 'ಜಾಸೂದು' ನೋ.

**ಜಾಸೂದು, ಜಾಸೂದ** (ನಾ). ಗೂಢಚಾರ; ಗುಪ್ತಚಾರ ; ಬೇಹುಗಾರ; ಹೇರಿಗ : "ಜಾಸೂದು ವೇಷಧಾರಿಗಳು=ಗೂಢಚಾರರು" (ಚಿತ್ರಪಾ. ೨, ಅನು). **ಜಾಸೂದ :** ಯುದ್ಧ ಜರುಗುತಾ ಇರುವಲ್ಲಿ ಇಬ್ಬರು ಜಾಸೂದರ ವೇಷಾ ಹಾಕಿಕೊಂಡು ದುರ್ಗದ ಸಮೀಪಕ್ಕೆ ಬರುತ್ತಿದ್ದರು (ಚಿತ್ರಪಾ. ೮೬). [ ←ಮರಾ. ಜಾಸೂದ್ ; ಅರ. ಹಿಂ. ಜಾಸೂಸ್ ]

**ಜಾಸ್ತಿ** (ನಾ). ಹೆಚ್ಚು ; ಅಧಿಕ ; ಅತಿಶಯಂ : ಯಾದವರಲ್ಲಿ ಯೆಷ್ಟು ಜಾಸ್ತಿ ಹುಟ್ಟುವಳಿಮಾಡಿಕೊಂಡಾಗ್ಯು (ಮೈಅರಿ. ೧೯೩೯, ೪೨-೧೧೨ ;1825): ಕಮ್ಮಿ ಜಾಸ್ತಿಯು ಲೆಕ್ಕವಿದ್ದರಹಿತರು ಸಹಿತ ಫೈಸಲಿಗೆ ಬರುವಂತೆ ಕರಣಿಕರಿಗುಸುರು ನೀನೂ (ಅಷ್ಟಾವಿ. ೩೧-೩೮) : ಸಭೆಯಲ್ಲಿ ಗಲಾಟೆ ಜಾಸ್ತಿಯಾಯಿತು (ರಾಯುಕ. ೬೧) : ನಮ್ಮೂರು ಸುತ್ತ 'ಕಿರುಬನ ಕಾಟ ಜಾಸ್ತಿ (ಹಂಗೂರಿ. ೨೧). [ ←ಹಿಂ. ಮರಾ. ಜಾಸ್ತೀ ]

**ಜಾಹಕ** (ನಾ). ಇಲಿಯನ್ನು ಹಿಡಿಯಲಂ ಹೊಂಚು ಹಾಕುವ ಬೆಕ್ಕು : "ಜಾಹಕಃ, ಗಾತ್ರಸಂಕೋಚೀ, ಮಂಡಲೀ– ಈ ೩ ಇಲಿಯಂ ಹಿಡಿಯಲನುಗೆಯ್ವ ಬೆಕ್ಕು" (ಹಲಾಯು. ೪೦-೮೪). [ ಸಂ. ]

**ಜಾಹಿರಾತು** 'ಜಾಹೀರಾತು' ನೋ.

**ಜಾಹಿರು** 'ಜಾಹೀರು' ನೋ.

**ಜಾಹಿರ್ನಾಮ** 'ಜಾಹೀರುನಾಮೆ' ನೋ.

**ಜಾಹೀರನಾಮೆ** 'ಜಾಹೀರುನಾಮೆ' ನೋ.

**ಜಾಹೀರಾತಿ** 'ಜಾಹೀರಾತು' ನೋ.

**ಜಾಹೀರಾತು, ಜಾಹಿರಾತು, ಜಾಹೀರಾತಿ** (ನಾ). ಬಹಿರಂಗಪಡಿಸುವುದು; ಸಾರ್ವಜನಿಕರಿಗೆ ತಿಳಿಸುವುದು; ಪ್ರಕಟನೆ: ಕಣ್ಣು ಕೋರೈಸುವಂತೆ, ಬಣ್ಣಬಣ್ಣದ ದೀಪಗಳ ಪ್ರಕಾಶದಡಿ ಹೊಳೆಯುವ ಜಾಹೀರಾತುಗಳು (ವಾತ್ಸಲ್ಯ. ೫೯): ಪತ್ರಿಕೆಗಳು ಬಾಳಿ ಬದುಕಿ ಜನ ಸೇವೆ ಮಾಡಬೇಕಾದರೆ ಜಾಹೀರಾತುಗಳು ಅವಶ್ಯ (ಗಾಳಿಗು. ೨೬) : ಪ್ರತಿಭೆಯೊಂದಿರಬೇಕು ವ್ಯುತ್ಪನ್ನಮತಿಬೇಕು . . . ಕವಿಗೆ ಜಾಹೀರಾತು ಬೇಕು (ಇಂಚಾಪ. ೧೭೮-೭೮). **ಜಾಹಿರಾತು :** ತಾವಾಗಿ ಮೆರೆವುವು ಸುಜನರ ಗುಣಗಳು ಅದಕೆ ಜಾಹಿರಾತು ಬೇಕೆ? (ಇಂಚಾಪ. ೨೦೯-೮೩) : ಪತ್ರಿಕೆ ಪುನಃ ಆರಂಭವಾಗುವುದು ಎಂಬ ಸುದ್ದಿಯನ್ನು ಬೇರೆ ಬೇರೆ ಪೇಪರುಗಳ ಜಾಹಿರಾತುಗಳಲ್ಲಿ ಪ್ರಕಟಿಸಿದ (ಅಪನಾ. ೧೬). **ಜಾಹೀರಾತಿ :** ಹಣದಿಂದ ಮಂದಿಯ ಮಾನಮಟ್ಟವನ್ನು ಅಳೆಯುವ ನೀತಿ ಜಾಹೀರಾತಿಯ ಜಗತ್ತು (ಮಾವಾರ. ೧೦೩). [ ←ಅರ. ಮರಾ. ಜಾಹೀರಾತ್ ]

**ಜಾಹೀರು, ಜಾಹಿರು** (ನಾ). ಪ್ರಸಿದ್ಧಪಡಿಸುವಿಕೆ ; ಪ್ರಕಟನೆ : ಅವನ ಉತ್ತರಾಧಿಕಾರಿಗಳಾಗಿ ಮಕ್ಕಳಿಬ್ಬರು ಇರುವುದರಿಂದಲೂ . . . ಒಂದು ಪ್ರಕಟನೆಯ ಜಾಹೀರು ಕೊಡಬೇಕು (ತ್ಯಾಗಮ. ೭೨) : ಹೊಲೆಯರ ಕೆಂಚ ಪದ್ಧತಿಯಂತೆ ಈ ಸುದ್ದಿಯನ್ನು ತಮಟೆ ಹೊಡೆದು ಊರಿಗೆಲ್ಲ ಜಾಹೀರು ಮಾಡಿದ (ಊರುಕ. ೫). **ಜಾಹಿರು :** ಟೀಪುಸುಲ್ತಾನರಿಗೆ ಪಿರಿಯಾದಿಯಾಗಿ ಜಾಹಿರು ಮಾಡಿದ್ದರಿಂದ (ರಾಜೇಂದ್ರ. ೨೧).

**ಜಾಹೀರುಮಾಡು** = ಜಾಹೀರುಪಡಿಸು : ಆತನ ರೋದನ ನಾರಾಯಣಿಯ ಸಾವನ್ನು ಜಾಹೀರು ಮಾಡಿತು (ರಂಗವ. ೧೧) : ನಗರಕ್ಕೆ ಮತ್ತೊಮ್ಮೆ ಪ್ಲೇಗು, ಇಲಿಗಳು ಜಾಹೀರುಮಾಡಿದವು (ಸ್ವಕೀಜಿ. ೩೦೮). [ ←ಮರಾ. ಜಾಹೀರ್; ಅರ. ಹಿಂ. ಜಾಹಿರ್ ]

**ಜಾಹೀರುನಾಮೆ, ಜಾಹಿರ್ನಾಮ, ಜಾಹೀರನಾಮೆ** (ನಾ). ಪ್ರಸಿದ್ಧ ಪತ್ರಿಕೆ ; ಪ್ರಕಟನಪತ್ರ : ಈ ಎಲ್ಲಾ ಜಾಹೀರುನಾಮೆಗಳಲ್ಲಿ ಇಂಗ್ಲಿಷ್ ಶಬ್ದಗಳನ್ನು ತುಂಬಿದ್ದು ನೋಡುವಾಗ (ಪಾಶ್ಚಾವಿ. ೪೪೪). **ಜಾಹಿರ್ನಾಮ:** (ಮೈಗೆಜ. IV, ೭೭೧) ; (ರೈಸ್‌ಗೆ. II, ೫೫೦). **ಜಾಹೀರನಾಮೆ:** ಮಾಂಟಗೊಮ್ಮೆ ಸಾಹೇಬರು ೧೯೧೭ರಲ್ಲಿ ಒಂದು ಜಾಹೀರನಾಮೆಯನ್ನು ತೆಗೆದರು (ಕಾಂಗ್ರೆಸ್. ೦೦) : ಟ್ಯೂಡರ ಅರಸರು ತಮ್ಮ ಮಂತ್ರಿಗಳ ಸಲ್ಲಾ ತೆಗೆದುಕೊಂಡು ಜಾಹೀರನಾಮೆಗಳನ್ನು ತೆಗೆಯುತ್ತಿದ್ದರು (ಇಂಗ್ಲಇ. ೧೮೬). [ ←ಹಿಂ; ಮರಾ. ಜಾಹೀರನಾಮಾ ]

**ಜಾಹೀರುಪಡಿಸು** (ಕ್ರಿ). ಪ್ರಸಿದ್ಧಪಡಿಸು ; ಎಲ್ಲರಿಗೂ ತಿಳಿಯಪಡಿಸು : ಹೆಮ್ಲೆಟ್ ನಾಟಕವೆಂದು ಜಾಹೀರುಪಡಿಸಿರುವದು (ದ್ಯಾಮಹಾ. ೨೩). [ ಜಾಹೀರು + ಪಡು$_1$ + – ಇಸು$_3$ ]

**ಜಾಹೆ$_1$** (ನಾ). ಜಾಗರ (?) : ಅರ್ಜಿತ ಅವಧಾನವನಱಿದ ಸತ್ಯನ ನಿತ್ಯನ ಇರವು ಮಯೂರನ ಜಾಹೆಯಂತೆ ಪಟುಭಟನ ಎಚ್ಚಱಿಕೆಯಂತೆ (ಶಿವಮಂ. ೯೬). [ ? ]

**ಜಾಹೆ$_2$, ಜಾಹ್ಯೆ** (ನಾ). ನಿದ್ರೆ ; ನಿದ್ರಾವಸ್ಥೆ ; ಸುಷುಪ್ತಿ ; ಜಡತೆ : ಜಾಹೆಯಲ್ಲಿ ಮಱೆದೊಱಗಿರಲಾಗಿ ತನುವ ತಟ್ಟದಡೆ ಆತ್ಮನೆಚ್ಚಱುವಂತೆ (ಶಿವಮಂ. ೭೯) : ಕಾಲ ಪಸರಿಸಿ ಕಟ್ಟಿಕೊಳ್ಳುತ್ತ ಜಾಹೆಯಾಗಿ ಸುಮ್ಮನೆ ತಲೆಯ ಕ್ರುತ್ತುತ ಧನಹೀನನಾಗಿ (ಅಶ್ವವೈ. ೪-೨ ಟೀಕೆ). **ಜಾಹ್ಯೆ:** ದಿನದಲ್ಲಿ ಚಲನೆ ರಾತ್ರಿಯಲ್ಲಿ ಜಾಹ್ಯೆಗೊಳಗವುದು ಜೀವನೋ ಪರಮನೋ (ಬಾಬೂಮ್ಮ. ೨೯): ಪೂರ್ವದಿಂದ ಉತ್ತರಕ್ಕೆ ಬಂದ ಸೂರ್ಯನಂ ಅಸ್ತಮಯವಾಯಿತ್ತೆಂದು ಜಾಹ್ಯೆಗೆ ಒಡಲಾಗಿ (ಅವರೀ. ೬೬). [ ? ]

**ಜಾಹ್ನವಿ** (ನಾ). ಜಹ್ನುಮುನಿಯ ಮಗಳು ; ಜಹ್ನುಮುನಿಯ ಕಿವಿಯಿಂದ ಹೊರಕ್ಕೆ ಬಂದ ನದಿ ; ಗಂಗಾನದಿ : ಏದೊರೆ ಪೆಂಪೊ ಲಕ್ಷ್ಮಿಂ ನಿಜವಲ್ಲಭೆ ಜಾಹ್ನವಿ ತನ್ನ ಪಾದಪದ್ಮೋದಕಂ (ಜಗವಿ. ೦-೨೦) : ಜಾಹ್ನವಿಯೇ ತೀರ್ಥದೊಳುತ್ತಮಂ (ಸೋಮೇಶ. ೪) : ದಿವ್ಯರೂಪನಳವಡಿಸಿ ಜಗದಂಬೆ ಜಾಹ್ನವಿ ಸಲಿಲಮಧ್ಯದಿಂದೆದ್ದು ಬಂದು (ಜೈಮಿಭಾ. ೯-೨೮). [ ಸಂ. ಜಾಹ್ನವೀ ]

**ಜಾಹ್ನವೀಧರ** (ನಾ). ಗಂಗೆಯನ್ನು ತಲೆಯಲ್ಲಿ ಧರಿಸಿರುವವನು ; ಗಂಗಾಧರ ; ಶಿವ : ನರಶರದ ಜೋಡಿನ ಜುಂಜುವೊಳೆಯುಲಿ ಜಾಹ್ನವೀಧರ ಜಾಱುವನೆ (ಕುವ್ಯಾಅ. ೬-೪೦). [ ಸಂ. ]

**ಜಾಹ್ನವೀಮಕುಟ** (ನಾ). ಗಂಗಾನದಿಯನ್ನು ತಲೆಯಲ್ಲಿ ಧರಿಸಿರುವವನು ; ಗಂಗಾಧರ : ಜಯ ಜಾಹ್ನವೀಮಕುಟ ಜಯ ಜರಾಮರಣದೂರ (ಹಚಕಾ. ೧೦-೪೦). [ ಸಂ. (ಜಾಹ್ನವೀ + ಮಕುಟ) ]

**ಜಾಹ್ಯೆ** 'ಜಾಹೆ$_2$' ನೋ.

**ಜಾಳ$_1$** 'ಜಾಲೆ$_1$' ನೋ.

**ಜಾಳ$_2$** 'ಜಾಲ$_1$' ನೋ.

**ಜಾಳಂದರ** 'ಜಾಲಂದರ' ನೋ.

**ಜಾಳಂದ್ರ** 'ಜಾಲಂದ್ರ' ನೋ.

**ಜಾಳಂದ್ರಗೆಯ್** (ಕ್ರಿ). ತೂತುಮಾಡು ; ಚುಚ್ಚು ; ಜರ್ಜರಿತವಾಗುವಂತೆ ಮಾಡು : ವಕ್ರೋಕ್ತಿನಖದಿಂ ನೃಸಿಂಹಾವತಾರಮಂ ಪುನರಭಿನಯಿಸುವಂತೆ ಕೋಮಲೆಯ ಹೃದಯಮಂ ಜಾಳಂದ್ರಗೆಯ್ಯೆ (ಶ್ರೀರಾಮಾ. ೮೪೩-೪೩೫). [ ಜಾಳಂದ್ರ (<ಜಾಲಂದ್ರ) + ಕೆಯ್$_1$ ]

**ಜಾಳಂಧರ** ‘ಜಾಲಂದರ’ ನೋ.

**ಜಾಳಕ** ‘ಜಾಲಕ’ ನೋ.

**ಜಾಳಗಪ್ಪೆ** (ನಾ). ಒಂದು ಬಗೆಯ ಕಪ್ಪೆ: ಮೊದಲು ಕೋಳಿಯಂತೆ ನಡೆದು ಒಡನೆ ಜಾಳಗಪ್ಪೆಯಂತೆ ನಡೆದರೆ ವಾತಶ್ಲೇಷ್ಮನಾಡಿಯಂದರಿವುದು (ವಾಶಾಚ. ೭೫-೫). [ ಜಾಳ$_0$ + ಕಪ್ಪೆ$_1$ ]

**ಜಾಳಗೆ** (ನಾ). ಹೆಣೆದು ಮಾಡಿದ ಚೀಲ; ಬಲೆಚೀಲ; ಕಲ್ಲಿಚೀಲ: ಕಿಲಜಗಲಿಯೊಳಿದರ್ೂಟಿಗದವನಿಂದೊಂದು ಜಾಳಗೆಯಂ ಕೊಂಡು (ಚಕವಿ. ೬-೨೩೭ ವ). ‘ಜಾಳಿಗೆ’ ಪರಾ. [ <ಸಂ. ಜಾಲಕ ]

**ಜಾಳತಿಯೋಗು** (ಕ್ರಿ). ಜರ್ಜರಿತವಾಗು; ತೂತಾಗು: ಅನೇಕ ಶಸ್ತ್ರ ಮುಖದಿಂ ತನು ಜಾಳತಿಯೋದ ನೋವಿನೊಳ್ ಕೂಗಿಡೆ (ಅನಂಪು. ೯-೨೯). [ P ಇದು ‘ಜಾಳರಿಯೋಗು’ ಎಂಬುದರ ಅಪಲಿಖಿತವಿರಬಹುದು. ]

**ಜಾಳಮಾರ್ಗ** (ನಾ). ಕಿಟಕಿ; ಗವಾಕ್ಷದ ಕಿಂಡಿ: ಗಣಿಕೆಯರ ವಿಳಾಸಾಗಾರದೊಳ್ ಜಾಳಮಾರ್ಗಪ್ರಣಯಿನಿಯರಪಾಂಗ ಶ್ರೇಣಿಯೊಳ್ ಮೂಱು ಬಣ್ಣಂ ಪೆಣೆದೊದವೆ (ಆದಿಪು. ೧೧-೨೩): ಚಿನ್ನದ ಕಂಬದ ರಮ್ಯ ಜಾಳಮಾರ್ಗದ ವಿಳಸತ್ಕವಾಟದ ವಿಚಿತ್ರ ವಿಭೂತಿಗೆ ಜನ್ಮಮಂದಿರಂ (ಪುಷ್ಪಪು. ೨-೯೩). [ ಜಾಳ$_2$ (=ಜಾಲ$_1$) + ಮಾರ್ಗ ]

**ಜಾಳರ** ‘ಝಾಲರಿ$_2$’ ನೋ.

**ಜಾಳರಂಬೋಗು** (ಕ್ರಿ). ಜಾಲರದಂತಾಗು; ತೂತುತೂತಾಗು: ನಿಶಿತಾಸ್ತ್ರಹತಿಯಿನಾ ಮುನಿಯ ಶರೀರಂ ಕೂಡೆ ಜಾಳರಂಬೋಗಿರೆ . . . ಕಂಡು (ಪಾರ್ಶ್ವಪು. ೧೨-೮೫). [ ಜಾಳರ (<ಝಾಲರಿ) + ಪೋಗು$_1$ ]

**ಜಾಳರಿಗೆ** (ನಾ). ಜಾಲರಿಯಿಂದ ಕೂಡಿದ ಕಿಡಿಕೆ: ಇಂದ್ರನೀಲದ ಭದ್ರದೊಳಂ ಕರ್ಕೇತನದ ಜಾಳರಿಗೆಯೊಳಂ (ಪಂಪಭಾ. ೩-೭೪ ವ):
[ <ಸಂ. ಝುಲ್ಲರಿಕಾ ]

**ಜಾಳರಿಗೆಪೋಗು** (ಕ್ರಿ). = ಜಾಳರಂಬೋಗು: ಅಂಗೋಪಾಂಗಗಳೆಲ್ಲಂ ಶರಜಾಳಂಗಳ್ ಜಾಳರಿಗೆಪೋಗೆ ನಟ್ಟವು ಪಲರಂ (ವರ್ಧಮಾ. ೪-೫೮).
[ ಜಾಳರಿಗೆ + ಪೋಗು$_1$ ]

**ಜಾಳವಣೆ** (ನಾ). ಮೋಸ; ಕಪಟ; ಮಾಟ; ಮಾಯೆ: ಹುರುಡು ಜಾಣುಮೆ ಜಾಳವಣೆ [ಪಾಠಾಂ. ಚಳಬಳಿಕೆ, ಚಾಳವಣೆ] ಚಪ್ಪರಣೆ ವಂಚನೆ ನೇಹವೆಂಬೀ ಪರಿಯ ಮಾಯಾಮಯದ ಮಹಿಳಾಜನ ವಿರಾಜಿಸಿತು (ತೊರಠಾ. ೧-೫-೩೨). [ ಜಾಳವಿಸು$_1$ (<ಜಾಲಿಸು) + – ಅಣೆ$_4$ ]

**ಜಾಳವಿಸು$_1$** ‘ಜಾಲಿಸು’ ನೋ.

**ಜಾಳವಿಸು$_2$** (ಕ್ರಿ). ಹೊತ್ತಿಸಂ; ಪುಟವಿಡು; ಉರಿಗೊಳಿಸಂ: ಚಪಳರು ಜಾಳವಿಸಿದರು ಹವ್ಯವಾಹನನ (ನಿಭಾಗ. ೭-೪-೯೮).
[ ಜಾಳ$_1$ (<ಜಾಲೆ$_2$) + – ಇಸು$_3$ ]

**ಜಾಳಾಂದರ** ‘ಜಾಲಂದರ’ ನೋ.

**ಜಾಳಾಂದ್ರ** ‘ಜಾಲಂದರ’ ನೋ.

**ಜಾಳಾಂಧರ** ‘ಜಾಲಂದರ’ ನೋ.

**ಜಾಳಿ** (ನಾ). (ಕುದುರೆಗಳಿಗೆ ಬರುವ) ಒಂದು ಬಗೆಯ ರೋಗ: ಆ ತಿರುಳಂ ನಾರುವ ಬೇಳೆಯುವಿರದಳ್ಳೆಣ್ಣೆಯೊಳಗೆಯಿಕ್ಕೆ ಜಾಳಿಗಳಳಿಗುಂ (ಅಶ್ವವೈ. ೧೩-೧೭). [ ?./ಸಂ. ಜಾಬ = ಕಣ್ಣಿನ ಒಂದು ರೋಗ ]

**ಜಾಳಿಕ$_1$** ‘ಜಾಲಿಕ$_1$’ ನೋ.

**ಜಾಳಿಕ$_2$** ‘ಜಾಲಿಕ$_2$’ ನೋ.

**ಜಾಳಿಗೆ$_1$** (ನಾ). ೧. ಬಲೆ; ಜಾಲ: ಎಲುವಿನ ಪಂಜರ ಕರುಳಿನ ಜಾಳಿಗ (ಪಚಸಂ. ೪೫-೬೨); ಹೇಳು ಹೇಳೆನ್ನಾಣೆ ಮಾತಿನ ಜಾಳಿಗೆಯ ಮುಚ್ಚು ಬೇಡ (ಕುವ್ಯಾಕ. ೧-೧೧); ನಾನಿರುವ ಸ್ಥಳವು ದುಃಖವೆಂಬ ಜಾಳಿಗೆಯಿಂದ ತುಂಬಿದೆ (ಮಂಜುಕ. ೧೧೯): ಅದರ ಜೊತೆಗಾರ ಹಕ್ಕಿ ಬಲೆಯ ಬಳಿ ಬಂದು ತನ್ನ ಚುಂಚುವಿನಿಂದ ಜಾಳಿಗೆಯನು ಕಡಿದೆಸೆಯುವವರಲ್ಲಿ ತೊಡಗಿತ್ತು (ಅಶ್ರಮ. ೧೩). ೨. ಜೇಡನ ಬಲೆ,–ಗೂಡು: ಅದು (ಜೇಡ) ತನ್ನ ಆಹಾರದ ಜಂತುಗಳನ್ನು ಹಿಡಿಯುವುದಕ್ಕಾಗಿ ಒಂದು ತರದ ಸೂಕ್ಷ್ಮವಾದ ಜಾಳಿಗೆಯನ್ನು ಮಾಡುತ್ತದೆ (ಮುಂಬಯಿ. ೪-೧೧೮): ದೂರದರ್ಶಕ ಯಂತ್ರದ ನಳಿಕೆಯಲ್ಲಿ ಜೇಡವೊಂದು ಜಾಳಿಗೆ ಕಟ್ಟಿದರೆ (ವಿಜಾವಾ. ೭೯). ೩. ಜಾಳು ಜಾಳಾಗಿರುವ ಬಟ್ಟೆ,–ವಸ್ತ್ರ; ಜೀರ್ಣವಸ್ತ್ರ: ಬಟ್ಟೆಗಳೊಳು ಜಾಳಿಗೆಗಳು ಬಿದ್ದಿರೆ ಮುಟ್ಟಲಮ್ಮವು ಗೆದ್ದಲುಗಳು (ನಾಗಕು. ೨-೯೬). ೪. ಮುತ್ತು ಅಥವಾ ಮಣಿಗಳ ಸರಗಳಿಂದ ಮಾಡಿದ ಕುಚ್ಚು: ಸಾಲು ಮುತ್ತಿನ ಜಾಳಿಗೆ ಗೊಂಡ್ಯ ಶಿರದಲ್ಲಿ (ವಿದಾಕ್ಕ. ೧೧-೩): (ಕೊಂಕಣಿಗರು)-ಲಗ್ನದಲ್ಲಿ ಇವರು ಮದುಮಗನ ಬಾಸಿಂಗಕ್ಕೆ ಬಿಳೀನೂಲಿನ ಜಾಳಿಗೆಯನ್ನು ಕಟ್ಟುವರು (ಕಭಾಗ. ೮೭). ೫. ಮಂಟಪ ಮೊದಲಾದುವುಗಳನ್ನು ಸಿಂಗರಿಸುವಾಗ ಕಟ್ಟುವ ಕುಚ್ಚು: ಝುಗೆಯ ಲಹರಿಯ ಜಾಳಿಗೆಯ ಪಟ್ಟೆಗಳ ಪಾಗಾರದ ಸುರತ್ನಾಳಿಗಳಲೆಸೆದುದು ರಾಜಸಭೆ (ಕುವ್ಯಾಸ. ೧೩-೨೫): ಸಾಲ ರತುನಸ್ತಂಭನಿಕರದ ಜಾಳಿಗೆಯ ಮುತ್ತುಗಳ ಭಿತ್ತಿ (ನಿಭಾಗ. ೧೧-೯೭-೨೦). ೬. ಗುಂಪು; ಸಮೂಹ: “ಜಾಳಿಗೆ, ಕಿಕ್ಕಿಂದು . . . ಈ ೪೦ ಸಮೂಹಂ” (ಕಕಸಾ. ೧೧-೨೨೨): “ಜಾಳಿಗೆ ತೆಮ್ಮೆಲ್ ಗುಂಡೊಗ್ಗು ಗೊಟ್ಟೆಪೊಟ್ಟೆಲ್ ಪಂಡಿತರಿಂ ಗಡಣವಂಗಡಂ ಕಿಕ್ಕಿಂದಂ” (ಕವಿಕಂ. ೧೧೬). ಹೇಳಲೇನದನುಬ್ಬಸದ ಬಲುಗೋಳದಲಿ ತನು ಸಿಲುಕಿ ಕ್ರಿಮಿಗಳ ಜಾಳಿಗೆಗೆ ತುತ್ತಾಗಿ (ನಿಭಾಗ. ೩-೧೪-೨೦). ೮. ಹೆಣಿಕೆಯಂ ಚೀಲ; ಕಲ್ಲಿ: ಕಳ್ಳನ ಜಾಳಿಗೆಯಂತೆ ಒಳ್ಳೆಯ ಮುದ್ರೆಯನಿಕ್ಕಿದಡೆ ಸುರಿದಲ್ಲಿಯು ಕಾಣಬಂದಿತ್ತು (ಬಲೀಶ್ವ. ೨೫): ಕಾಯಿಪಲ್ಲೆಗಳ ಜಾಳಿಗೆಗಳಿಗೆ ಎಣಿಕೆಯಿಲ್ಲ (ಬಟ್ಟಹೂ. ೨). ೯. ಹಣದ ಚೀಲ; ಥೈಲಿ; ಹಮ್ಮಿಣಿ: ಆರಾಧನೆಗೆ ಚಿತ್ರವುರವಣಿಸಿ ಜಾಳಿಗೆಗಳಂ ತರಿಸುತಂ ಮುದ್ರೆಗಳನೊಡೆದು (ಬಸರ. ೮-೨೧): ಧನವಿಲ್ಲವೆಂದು ಜಾಳಿಗೆಗಳಂ ಹೇಳದಿರಿಸಿಯೆ ಪೋಗಲ್ (ಬಶಿಚಂ. ೩೭-೬೫); ಮಾಳಿಗೆ ಮನೆಯೂ ಇರಲಿ ಜಾಳಿಗೆ ತುಂಬಿ ಹೊನ್ನಿರಲಿ (ಪುರಂದ. ೨-೫೧-೮): ನಿಡುಬೊಂಬೆ ಪಟ್ಟೆ ಪಚ್ಚಡವಿತ್ತು ವೀಳೆಯಗೊಡುತ ಜಾಳಿಗೆ ನೂಱುಗೊಟ್ಟು (ಭರಪ. ೨-೯೯): ಅರಸುಗಳೆಲ್ಲರು ಜಾಳಿಗೆ ಜಾಳಿಗೆ ಸುರಿದು ಸೇಸೆಯನಿಕ್ಕಿದರು (ಜನರಾ. ೯-೭೩). ೧೦. (ಉಕ) ಬುಗುರಿಯನ್ನು ಆಡಿಸಲು ಉಪಯೋಗಿಸುವ ಹುರಿ,–ಚಾಟಿ: ಬೆಲ್ಲವತ್ತದ ಕಾಯ ಬುಗುರಿಯಲಿ ಜಾಳಿಗೆಯ ಸುತ್ತಿ ಬಿಚ್ಚಲು ನಾದ ಭೋಂಕಾರವು (ಭಾವಜೀ. ೪-೭೫). ೧೧. (ಆಲಂ) ತಂತ್ರ; ಕಪಟ; ವಂಚನೆ: ಅನೇಕ ಅಬಲೆಯರನ್ನು ಜಾಳಿಗೆಯಲ್ಲಿ ತೊಡಗಿಸಿ ಅವರ ಸತ್ವವನ್ನು ಹರಣಮಾಡಿದೆ (ಸ್ವಾಂಮಿ. ೧೮೬).
[ <ಸಂ. ಜಾಲಿಕಾ ]

**ಜಾಳಿಗೆ$_2$** (ನಾ). ೧. ಜಾಲಿಸುವಿಕೆ; ಚೆನ್ನಾಗಿ ಕೊಳೆಹೋಗುವಂತೆ ನೀರಿನಲ್ಲಿ ಜಾಲಾಡುವಿಕೆ. ೨. (ಆಲಂ). ಶುಚಿತ್ವ; ಪರಿಶುದ್ಧಿ: ವಿಜಯವಿಠಲನ ಸನ್ನಿಧಿಯಲ್ಲಿ ಜಾಳಿಗೆಯಿಂದ ಜನನ ನೀಗಲಿಬೇಕೋ (ವಿದಾಕ್ಕ. ೧೫೦-೬). [ <ಜಾಳಿಸು$_1$ + – ಗೆ ]

**ಜಾಳಿನಿ** ‘ಜಾಲಿನಿ’ ನೋ.

**ಜಾಳಿಯೂರು** (ನಾ). ಒಂದು ಊರಿನ ಹೆಸರು: ತಸ್ಯಪೂರ್ವತಃ ಜಾಳಿಯೂರು ನಾಮಗ್ರಾಮಃ (ಮೈಆರಿ. ೧೯೩೫, ೪೦-೫೮ : 951).
[? + ಊರು$_3$ (<ಊರ್) ]

**ಜಾಳಿಸು$_1$** (ಕ್ರಿ). ೧. ಚಲಿಸು; ನಡೆ; ಹೋಗು: ಶಕುಂತಪಾಳಿಕೆಯುರ್ ಪೊಱಗೆ ವಾಸಯಷ್ಟಿಗಳೊಳ್ ನಿಜಾದ ಪೊನ್ನ ಪಂಜರದ ಪುಗಿಲ್ಗಳಿಂ ಜಾಳಿಸಿ ಪೊಕ್ಕು (ಚಂದ್ರಪು. ೮-೪೩ ವ): ಕುಣಿವುತುಂ ಕೂಗುತುಂ ಜಾ[ಪಾಠಾಂ. ಚಾ]ಳಿಸುತ್ತುಂ ಜರಿವುತುಂ ನೋಡಿ ಹಿಗ್ಗುತುಂ (ನಂಬಿರ. ೧೧-೬೮): ಜಾಳಿಸಿದ ಜಯಕಾಮಿನಿಯ ಜಂಘಾಳತನವನ್ನು ನಿಲಿಸಿ ನಿನ್ನಯ ತೋಳನಲಿ

ತೋಱುವವು (ಕುವ್ಯಾಗ. ೪-೭೪) : ಪಿಸುಣರಿಂದಾರ್ಕೈಶ್ವರಿಯ ಜಾಳಿಸದು ಜಗವಲಿ (ತೊರಲಾ. ೨-೦-೪೦) : ಜಾಳಿಸಿದನಿಂದ್ರನನಲಂ ಪೋದನಂತಕಂ ಕಾಲ ಬೇಗಂದೋಱಿದಂ (ಚಬಪು. ೭೯-೭೬). ೨. ಹರಿ ; ಸುರಿ : ನೆರೆದ ಪೌರಜನ ಜಾಳಿಸುವ ಕಂಬನಿಗಳಲಿ ಬಱುನಾಲಿಗೆಯು ಬೈಗುಳಲಿ ಮುನಿಯನು ಕೀಳುನುಡಿಯಲಿ ಜಱಿವುತಿರ್ದರ್ದು (ತೊರಲಾ. ೧-೯-೪೭) : ಜಾಳಿಸುವ ರಕ್ತಪ್ರವಾಹದೊಳ್ ಕೌರವನೃಪಾಲ ಭೂಶಯನಮಂ ಕಾಳಿರಲ್ (ಕುರಂಗ. ೬೬-೧). ೩. ಅಲುಗು ; ಕಂಪಿಸು ; ನಡುಗು : ತೋಳ ತೊಡವುಗಳೆಳ್ದು ನಿಃಳದಿಂ ಜೋಲುತಿರೆ ಜಾಳಿಸುತ ಕಾಲುಡುಗಿ ಕೋಲಱಿ ನಿಲ್ಲುತಿರೆ (ಬಂದೂರ. ಹ. ೫೦೫-೧೬). ೪. ಸೇರು ; ಕೂಡು ; ಬೆರೆ: ತುಂಬಿಗಳ ನುಣ್ಣುರದೊಡನೆ ಜಾ[ಪಾಠಾಂ. ಜೋ]ಳಿಸಿ ಮಾಣವಾಣತಿಗೊಡುವ ಗಾಯಕರ (ಮಲುರ. ೧೦೬-೨೦) : ಜಾ[ಪಾಠಾಂ. ಚಾ]ಳಿಸಿದು ದಪಕೀರ್ತಿಯಕಟಾ ವಿಟಾಳಿಸಿತು ಯದುವಂಶವನೆ (ಕುವ್ಯಾಆ. ೧೯-೪೦). ೫. ಬೀಸು ; ಜಳಪಿಸು : ತೋಳಡವಿಯೊಳು ಪೊಕ್ಕು ಕೊಡಲಿಯ ಜಾಳಿಸಿಯೆ ತಱಿದೊಟ್ಟಿ ಸವಿಧೆಯು ಮಾಳಿಗೆಯು ಮಾಡಿದನು (ಕುವ್ಯಾಆ. ೬೭೩. ೨೬-೭೨). ೬. ಅಟ್ಟು ; ಕಳುಹಿಸಂ : ತಡೆದ ರಕ್ಕಸ ತಳವಱರ ಜವನೆಡೆಗೆ ಜಾಳಿಸುತಾಳುವೇರಿಯ ತಡಿವಿಡಿದು ಶೋಧಿಸಿದನಲ್ಲಿ ಸದನ ಸಂಕುಲವ (ತೊರಲಾ. ೫-೨-೧೬). ೭. ನೀಗು ; ಹೋಗಲಾಡಿಸು ; ಕಳೆ ; ನಿವಾರಿಸು : ಅಸುವಿದ್ದೇನಿದ್ದೇನು ಫಲವೆಂದುಸುರಲಾ ಜಾಬಾಲಿ ಮುನಿ ಜಾಳಿಸಿದನಂತಸ್ತಾಪವನು ಬಳಿಕಾ ನೃಪಾಲಕನ (ತೊರಲಾ. ೭-೨-೬): ಆ ಸೈಂಧವನ ನಾಳೆ ಕೊಲ್ಲದೊಡುರಿಗೆಂಡದೊಳಗೆ ಬಿಳ್ದು ಜಾಳಿಸುವೆನು ದೇಹವನು (ನೇಮಿಸಂ. ೨೮-೧೮೮). ೮. ಇಳಿ ; ಕುಗ್ಗು : ನಸ್ಯವಿಾಯಲ್ ಜಾಳಿಸುಗುಂ ಸರ್ಪವಿಷಂ (ಐಮದ. ೬-೧೬). ೯. ನಿಂದಿಸು ; ಬಯ್ಯು : ಮಱುಗಿದನು ಮನದೊಳಗೆ ವಿಧಿಯನು ಜಱಿದು ಜಾಳಿಸಿ[ಪಾಠಾಂ. ಧ್ಯಾನಿಸಿ] ಯಕ ಕಟ್ಟಾಸರು ಮಹಾರಾಜರಿಗೆ ಬಂದುದೆ ಶಿವಶಿವಾಯೆಂದ (ತೊರಲಾ. ೯-೨-೫). ೧೦. ಜೋಡಿಸು ; ಕೂಡಿಸು; ಸೇರಿಸು: ಜಾ[ಪಾಠಾಂ. ಚಾ]ಳಿಸಿದ ಹದವಿಲ್ಲುಗಳ ಬಡಿಕೋಲುಗಳ ಸಂಕಲೆಯು ನಾಯ್ಗಳ (ಕುವ್ಯಾಆ. ೫-೭೭) : ಅಖಿಳ ವೇದಮಂ ಜಾಳಿಸಿಯೆ ಕದ್ದು ಪೊಕ್ಕಂಬುಧಿಯೊಳ್ (ಲಕಿಹಂ. ೬-೧). [ <ಚಾಲಿಸು ]

ಜಾಳಿಸು₂ 'ಜಾಲಿಸು' ನೋ.

ಜಾಳು₁ (ನಾ). ೧. ಹುರುಳಿಲ್ಲದುದು ; ಪೊಳ್ಳಾದುದು ; ನಿಸ್ಸತ್ತ್ವವಾದುದು : "ಜಾಳನೆ ಪೊಳ್ಳನೆ ತಾಂ ನಿಷ್ಪ್ರಯೋಜನಾರ್ಥಮುದಕ್ಕುಂ" (ಛಾರನಿ. ೫೬) ; ಶ್ರೀರಾಮನಾಳೀಕ ವೇಗದಿಂ ಪೋಪೆನಗೆ ಜಳರಾಶಿ ಜಾಳೆನಿಸದಿರಾಗಲೆನಿತುಂಟು (ವೆಂಕಾರಾ. ೫-೧-೧೮). ೨. (ಆಲಂ) ಕೈಲಾಗದವ; ಹೇಡಿ ; ನಿಷ್ಪ್ರಯೋಜಕ : ಜಾಳ ಜಱಿದು ಜಡಾತ್ಮರಿಗೆ ಜಂಘಾಳತನವನು ಮೆಱಿದು (ಕುವ್ಯಾಕ. ೧೬-೨೧) : ಕಾಳಗಕೆ ಮೈದೋಱ ಬಾರದೆ ಭೀಮಫಲುಗುಣರು ಜಾ[ಪಾಠಾಂ. ಚಾ]ಳ ನೂಕಿಸಿ ಪೊತ್ತುಗಳೆವರು ಪೇಳ ಫಲವೇನಿನ್ನು (ಕುವ್ಯಾಭೀ. ೯-೧೬); ಜಾಳುಗಳೊಳಗುಗಾಣಿಸುವುದಲ್ಲದೆ ತತ್ವಶೀಲನೊಳಗ ಕಾಣ್ಬರಾರು (ಭರಚ. ೫-೧೦೭).

ಜಾಳಾಗು = ದೃಢಭಾವವಿಲ್ಲದವನಾಗು ; ಯಾವ ಕಾರ್ಯಕ್ಕೂ ಬಾರದವನಾಗು : ಇಹದಲ್ಲಿ ಪರದಲ್ಲಿ ಪರಿಣಾಮಿಗಳಗಲಿ ಇಂತಿವಕ್ಕೆ ದೂರವಾಗಿ ಬಾಳುಗೆಟ್ಟ ಬೀಳಾದೆ ಜಾಳಾದೆ (ಮೋಳಿಮಾ. ೯೬-೭೬೯). ಜಾಳುಚೋಳು = ಬೆಲೆಯಿಲ್ಲದ ವ್ಯಕ್ತಿ : (ಶ). [ <ಜಳ್ಳು ]

ಜಾಳು₂ (ನಾ). ನೆಯ್ಗೆಯಲ್ಲಿ ಎಳೆಗಳು ಒಂದಕ್ಕೊಂದು ದೂರವಾಗಿರುವುದು ; ಒತ್ತೊತ್ತಾಗಿ ಇಲ್ಲದಿರುವುದು : ಜಾಳಾಗಿ ನೆಯ್ದ ಬಟ್ಟೆಗಳು ಹೆಚ್ಚುದಿನ ಬಾಳಿಕೆ ಬರುವುದಿಲ್ಲ (ಗ್ರಹವಿ. ೬೯) : ಆ ಪಾಣಿಪಂಚೆ ಎಷ್ಟು ಜಾಳಾಗಿತ್ತೆಂದರೆ (ಮಲೆದು. ೯೮).

ಜಾಳುಜಾಳು (ದ್ವಿರುಕ್ತಿ) : ಅಂಥ ಸಂದರ್ಭದಲ್ಲಿ ಅವನ ನುಡಿಮುಗ್ಗ ಜಾಳುಜಾಳಾಗಿ ಕಾಣುತ್ತದೆ (ನಂಜುಂಡ. ೧೨೬). [ <ಜಾಲ₁ ]

ಜಾಳುಗೊಳಿಸು (ಕ್ರಿ). ಹೀನಗೊಳಿಸು ; ಹಾಳುಮಾಡು : ಖೂಳ ಮಾತಾಕೃತ್ಯ ಕುಲದ ಸಚ್ಚರಿತೆಯಂ ಜಾಳುಗೊಳಿಸಿದುದು (ವೆಂಕಾರಾ. ೨-೨೬-೧). [ ಜಾಳು₁ + ಕೊಳ್₁ + – ಇಸು₃ ]

ಜಾಳುಜೀವ (ನಾ). ಉಪಯೋಗವಿಲ್ಲದ ಪ್ರಾಣಿ ; ಯಾವ ಪುರುಷಾರ್ಥವನ್ನೂ ಸಾಧಿಸಲಾಗದವನು ; ಬಣಗು ಮನುಷ್ಯ : ಕೇಳಿದ್ಯ ಶ್ರುತಿ ವಾಕ್ಯವಾದುದ ಜಾಳುಜೀವರು ಹಲರು ಹರಿಯಲಿ ಕೀಳುಗಳು ಬ್ರಹ್ಮಾದಿ ದೇವಪರೆಂಬ ಶ್ರುತಿಕೋಟಿ (ಸಂಭಪ. ೮-೬೩). [ ಜಾಳು₁ + ಜೀವ ]

ಜಾಳುದಕ (ನಾ). ಸೋಸಿದ ನೀರು (?) : ನೀಳಮಾಗುತ್ತರಿಸಿ ಲವಣಸುತ ಪಚನಿಸುತ ಜಾಳುದಕಮಂ ತೆಗೆದು ಗುಡಮನಿಡುತಲಱಿದು ಮೇಳವಿಸಿ ತಿಲಕುಟಜಗಂಧಕೃಚ್ಛವಣವಣ ಜವಾಳುಕಮರೀಚರಜವ ಬಾಳುಕದೊಡನೆ ತಳಿದು ಹದವಡವುದನುಗ್ಗೈದು (ಲಿಂಗಪು. ೮-೭೬).

[ <ಜಾಳಿಸು₂ + ಉದಕ₂ ]

ಜಾಳುದೈವ (ನಾ). ಕ್ಷುದ್ರದೇವತೆ: ಜಾಳುದೈವದ ಪಾಳೆಯವನು ಸದೆಬಡಿದು ಕಾಲನ ಪುರಕೀಡಾಡಿದ ಜ್ವಾಲಾಮಾಲಿನಿಗಾನೆಱಗುವೆನು (ಅಂಜಚ. ೧-೭೯).

[ ಜಾಳು₁ + ದೈವ ]

ಜಾಳುನುಡಿ, ಜಾಳ್ನುಡಿ (ನಾ). ೧. ಪೊಳ್ಳುಮಾತು ; ಕೆಲಸಕ್ಕೆ ಬಾರದ ಮಾತು ; ವ್ಯರ್ಥಾಲಾಪ : ಬಿಡು ಜಾಳುನುಡಿಗಳ ಜವಳಿವಾತನೆನುತ್ತ ನರನೆಚ್ಚ (ಕುವ್ಯಾಕ. ೨೨-೨೪). ೨. ಸುಳ್ಳು : ನಾಳೆ ನಾಳಿದ್ದು ಬರುತ್ತಾರೆಂದು ಜಾಳುನುಡಿಗಳಿಂದ ಸಾರಿ ಸಾರಿ ವ್ಯರ್ಥವಾಗುವುದು ಸರಿಯಲ್ಲ (ಕಾಲಸಂ. ೦೭, ಪ್ರಸ್ತಾವನ): ಜಾಳ್ನುಡಿ: ೧. ಮನಬಂದಂತೆ ಬೋಧ ಜಾಳ್ನುಡಿಗಳಿಂದ ಖಲರಾಡುತಮಿರ್ದರ್ (ವೆಂಕಾರಾ. ೪-೦೮-೨೮). [ ಜಾಳು₁ + ನುಡಿ₂ ]

ಜಾಳುಮನುಜ (ನಾ). ಕ್ಷುದ್ರ ಮನುಷ್ಯ ; ಕೈಲಾಗದವನು : ಗಾಳಿ ಬೀಸುವ ವೇಳೆಯಲ್ಲಿ ತೂರಿಕೊಳ್ಳಿರೋ ಬೇಗ ಬೇಗ . . . ಜಾಳ[ಳು] ಮನುಜರಿರಾ (ಅಖಂಡೇ. ೬೪-೨೨). [ ಜಾಳು₁ + ಮನುಜ ]

ಜಾಳುಮಾತು (ನಾ). =ಜಾಳುನುಡಿ ೧ : ಕೂಳು ಪ್ರಸಾದವೆಂದು ನುಡಿವ ಜಾಳುಮಾತ ಕೇಳಿ ಕೂಳಿಂಗೆ ಆಳಾಗಿ (ಆದವ. ೨೪-೬೦) : ಹಾಳುಗುಡಿಯಲಿ ಕುಳಿತು ಜಾಳುಮಾತುಗಳಾಡಿ ಮೇಳಗಳ ಬಿಡದ ಶಿವಯೋಗಿ ಶಿವನಾಗಿ ಬಾಳುವನೆ (ಸರ್ವಜ್ಞ. ೫೮೬). [ ಜಾಳು₁ + ಮಾತು₁ ]

ಜಾಳುವಲೆ (ನಾ). ಒಂದು ಬಗೆಯ ಬಲೆ : ಕಾಲಸುಭಟರು ದೋಣಿ ದಲೆಗಳ ತೋಳ ಖಂಡಿಯ ಜಾಳುವಲೆಗಳವೋಲಿಯೇರಿನ ದೋರಿವಲೆಗಳಲ್ಪೆದೆ ಕೂಡಿದರು (ಸಂಭಪ. ೮-೦೦೬). [ ಜಾಳು₀ + ಬಲೆ₁ ]

ಜಾಳುವೆಣ್ (ನಾ). ದುರ್ಬಲಳಾದ ಹೆಂಗಸು; ಕೈಲಾಗದ ಹೆಣ್ಣು: ಜಾಳುವೆಣ್ಣುಗಳುಪವಾಸವ ಮಾಡಿವರೇಳಲಾಱರು (ಭರಚ. ೧೮-೧೭೫).

[ ಜಾಳು₁ + ಪೆಣ್ ]

ಜಾಳೆ 'ಜಾಲೆ₁' ನೋ.

ಜಾಳೆದೆ (ನಾ). ಪೊಳ್ಳಾದ ಹೃದಯ ; ಹೇಡಿ ಮನಸ್ಸು : ಜಾಳದ [ಪಾಠಾಂ. ಲೆ] ಧೈರ್ಯದಲಿ ಸರ್ಪನ ಹೇಳಿಗೆಯ ಶಾಂತಿಯಲಿ . . . ಖಳ ತನ್ನೋಲಗಕೆ ನಡೆತಂದು ಮಂತ್ರಿಪ್ರಕರಕಿಂತೆಂದ (ಅಕ್ರೂಚ. ೬-೮).

[ ಜಾಳು₁ + ಎದೆ (<ಎರ್ದೆ) ]

ಜಾಳೈಸು 'ಜಾಲಿಸು' ನೋ.

ಜಾಳ್ಕ (ನಾ). (?) : ಮಾಯುಮಂ ಪರಿದೊಡನೆ ಶಿಖರಾಗ್ರದಲ್ಲಿರ್ಪ ಪೀಯೂಷ ಫೇನಮಂ ಜಿಹ್ವಾಗ್ರದಲ್ಲುಣಬೇಕವಂ ನೆರೆ ಜಾಳ್ಕನು (ಶರಚು. ೯-೫). [ ? ]

ಜಾಳ್ನುಡಿ 'ಜಾಳುನುಡಿ' ನೋ.

**ಜಾಱಿಸಾಗು** (ಕ್ರಿ). ತಪ್ಪಿಹೋಗು ; ಇಲ್ಲದಂತಾಗು ; ನಷ್ಟವಾಗು : ಜಯಸಮರ ಜಾಱಿಸಾಯ್ತು ತೆಗೆ ಪಾಳೆಯಕೆ ಮರಳಿಚು ರಥವನು (ಕುಭ್ನಾ.ಕ. ೧೪-೩). [ ಜಾಱು₂ + ಆಗು₁ ]

**ಜಾಱಿಸು, ಜಾರಿಸು** (ಕ್ರಿ). ೧. ಹೋಗುವಂತೆ ಮಾಡು; ಕಳೆದುಬಿಡು: ಜವ್ವನಮಂ ಜಾಱಿಸಿ ಸುಖಮಂ ಸೂಱಿಗಳೆದು (ನಂಬಿರ. ೧೬-೨೮). ೨. ಬಿಟ್ಟುಕೊಡು ; ಹೋಗಗೊಡು ; ಸೋಲು : ತೋಱಿ ನುಡಿದರೆ ಭೀಷ್ಮದ್ರೋಣರು ಜಾಱಿಸಿದ ರಣವೆಮಗೆ ಸದರವೆ ದೂಱುವವರಾವಲ್ಲವೆಂದನು ಭಾನುಸುತ ನಗುತ (ಕುಭ್ನಾ.ಕ. ೧-೨೪). ೩. ಎಸೆ; ಬಿಸುಡು : ಪಾಳೆಯವ ಸೂಱೆಯನಾಡಿ ಗೂಡಾರಗಳನು ಕಿತ್ತು ಜಾಱಿಸಿದರು ದೆಸೆದೆಸೆಗೆ (ಕಂನವಿ. ೧೬-೮೦). ೪. ಸರಿಸು ; ಕದಲಿಸು ; ಓಸರಿಸು : ಹೇಳಿಗೆಯ ಮುಚ್ಚುಳ ಜಾಱಿಸಿದ ಫಣಿಯಂತೆ ಭುಲ್ಲವಿಸಿತ್ತು ಕುರುಸೇನೆ (ಕುಭ್ನಾ.ಕ. ೨೩-೩೮) : ಮಱಿದು ಮಲಗಿದಳವಳು ಮಗ್ಗುಲ ಸೆಱಗ ಮೆಲ್ಲನೆ ಜಾಱಿಸುತಲಾಗರಸ ವಸನವ ಕೊಂಡು ಮಲಗಿದ ಸತಿಯನೀಕ್ಷಿಸುತ ಮಱುಗಿದನು (ನಳಚ. ೫-೧೭) ; ಸುರತಾಂತದ ಶ್ರಮವಳಿವೊಡೆ ಮೈದಿಲ ಸೆಱಗ ಜಾಱಿಸಲಂಗನೆಯ ಮಿಱುಗುವ ಬಡ ಬಾಸೆಯೊಪ್ಪಿತು ಮುಖಚಂದ್ರಗುರವಣಿಸುವ ರಾಹುವೆನಲು (ಕಂನವಿ. ೬-೧೨೯). ೫. ಹಿಮ್ಮೆಟ್ಟಿಸು ; ಹಿಂದಕ್ಕೆ ತಳ್ಳು : ಹಿಮದಿಂದೆ ತಣ್ಣಸಂ ಬಡೆದಿರ್ದ ಮಾಗಿಯಂ ಕ್ರಮದಿಂದ ಜಾಱಿಸಿ ವಸಂತರ್ತು ತಲೆದೋರ್ಪ ಸಮಯದವೊಲು (ಕ್ರಮಿಥಾ. ೩೦-೧೬). **ಜಾರಿಸು**: ೧. ಪ್ರೀತಿಕರ ನುಡಿಗಳು ಬೀರಿ ಜಾರಿಸಿದನತ್ಯಾತುರದ ದುಃಖಮಂ (ವಂಕಾರಾ. ೨-೨೨-೩೭). ೪. ಕುಕ್ಕೆಗಳನ್ನು ಒಂದಾದಮೇಲೆ ಒಂದನ್ನು ಹೆಗಲ ಮೇಲಕ್ಕೆ ಜಾರಿಸಿ ಕೊಳ್ಳುತ್ತಿದ್ದ(ಕಂಗಾಳ್ಳ.೮೦). ೬. (ಆಲಂ) ಲಪಟಾಯಿಸು; ಅಪಹರಿಸು: ಮನೆಯಜನರೆಲ್ಲ ಬೇರೆ ಬೇರೆ ಕಾಮಗಾರಿಕೆಯಲ್ಲಿ ಮಗ್ನರಾಗಿದ್ದಾಗ . . . ಒಂದು ರೂಪಾಯಿ ಜಾರಿಸಿಯೇ ಬಿಟ್ಟಿದ್ದನು (ಕಂಳ. ೨೪).

[ ಜಾಱು₂ + – ಇಸು₃ ]

**ಜಾಱು₁, ಜಾರು₁** (ಕ್ರಿ). ೧. ಜಗುಳು ; ನುಣುಚಿಕೊಳ್ಳು ; ಕಳಚಿ ಕೊಳ್ಳು ; ತಪ್ಪಿಸಿಕೊಳ್ಳು : "ವೈಸರಿಸಿತನಲ್ಕೆ ಜಾಱಿತೆಂದಱಿಗೆ" (ಛಾರನಿ. ೩೫) : "ಜಗುಳಿತೆನಲ್ ನುಣ್ಚಿತೆನಲು ಜಾಱಿದುದದು ತಾಂ" (ಕವಿಕಂ. ೨೩೭); ತನ್ನ ಭೀಕರ ಗದಾಘಾತದೊಳಂ ಜಾಱಿ ಪಱಿಪಱಿದು ತೂಱು ಪಾಱಾದ . . . ತುರಂಗಮಂಗಳಡಿಯೊಳಡಂಗಿದನೆ ಗೆತ್ತು (ಗದಾಯು. ೬-೨೮ ವ) ; ಪರಬಲಕೆ ಜಾಱುವ ಜಯಸಿರಿಯ ಮುಂದಲೆಯ ಹಿಡಿಹಿಡಿಯೆನುತ ಹೆಕ್ಕಳಿಸಿದನು ಕುರುರಾಯ (ಕುಭ್ನಾ.ಕ. ೨-೫೦) ; ಜಾಱಿತು ಜಾಣ್ಕೆ ಬಿಂಕಮುರೆಗೊಂಕಿತು (ಚಕವಿ. ೬-೨೦೯). ೨. ಹೆಜ್ಜೆಯ ಹಿಡಿತ ತಪ್ಪು : ಬಾವಿಯು ಸೋಪಾನಮನಡರುತ್ತುಂ ಜಾಱುವಂದು (ಜಾವುಂಪು. ೨೦-೩೪). ೩. ಮೇಲಿನಿಂದ ಕೆಳಗೆ ಸರಿ : ಜನಬಸದಿಗಳನೇಱಿ ಯಲ್ಲಿಂದಿಳಿಯ ಜಾಱುತೆ (ಬಸವು. ೫೨-೧೩) ; ಕೈಪಱಿಗುಟ್ಟುವಂಡಲೆಗೆ ತೇಲ್ದು ಮೇಲುದು ಜಾಱಿ (ಕ್ರಮಿಥಾ. ೩-೭). ೪. ತಪ್ಪು ; ಹಾಳಾಗು : ನುಡಿದ ನುಡಿ ಜಾಱಿದಡೆ ಮನಕ್ಕೆ ಮನ ನಾಚಬೇಕು (ಬಸವ. ೬೬೭). ೫. ಕಳ್ಳ ಹೆಜ್ಜೆಯಲ್ಲಿ ಹೋಗು; ಕದ್ದುಹೋಗು: ಜಾಱಿ ನಿಱಿ ಜಾಱಿ ಸೋರ್ಮುಡಿ ಜಾಱಿ ಬೆಮರ್ಜಾಱಿ ಮೇಲುದಂ ಮುಡಿದಲರ್ಗಳ್ ಜಾಱಿ ಮುದಂ ಜಾಱಿ ಮದಂ ಜಾಱಿ ಪದಂಜಾಱಿ ಜಾರೆ ಜಾಱಿದ ಳೊರ್ವಳ್ (ರಾಆಶೀ. ೦೨-೯). ೬. ಹಿಮ್ಮೆಟ್ಟು ; ಹಿಜರಿ : ಸರಳಿಂಗೆ ತಮ್ಮನ ನೀಡಿ ತೋಱಿಸಿ ಜಾಱುತದೆಯಣ್ಣಂದಿರಾದವರು (ಕುಭ್ನಾ.ಕ. ೨೪-೦೮) : ಜಾಱಿತು ಮಹದಾದಿ ಶೀತ ಬೇಸಗೆ ಮೆಯ್ದೋಱಿತು (ವೋಹಕ. ೪-೪೮). ೭. ಮೀರು : ಜಾಱದೆನೆ ದಿನದಿನಕೆ ನಿಯಮಾಚಾರ ಭಾಷೆಗಳ (ಬಸವು. ೪೪-೧೮). **ಜಾರು₁** : ೧. ಹೊರಬರುವಳು ಶಿವನೆಡದಿಂ ಜಾರಿ ಜಗನ್ಮಾತೆ ರುದ್ರಜಾಯೆ ಗೌರಿ (ಗಜೇಶ. ೦೬-೪೨೦) : ಜವಾನನ ಮುಖಾಂತರ ನನಗೆ ತಿಳಿಯ ಜಾರಿ ಬಿಟ್ಟಿದ್ದಳು (ಮಧುವ. ೪೮): ಏಳೇಳು ರಾಜಕುವರ, ಶುಭಗಳಿಗೆ ಜಾರುತಿದೆ (ಸ್ವದಶೀ. ೯). ೩. ಮಕ್ಕಳು ಜಾರುಬಂಡೆಯ ಮೇಲಿಂದ ಜಾರುತ್ತಿದ್ದಾರೆ (ರೂಢಿ). ೪. ಜೀವನದಲ್ಲಿ ಒಮ್ಮೆ ಜಾರಿಬಿಟ್ಟರೆ ಎಚ್ಚೆತ್ತುಕೊಳ್ಳುವುದು ಕಠಿನ (ರೂಢಿ).

**ಜಾರಿಕೊಳ್ಳು** = ತಪ್ಪಿಸಿಕೊಳ್ಳು ; ಪಾರಾಗು : ಹಿಂದಕ್ಕೆ ಮುನಿಗಳ ಕೋಪ ಶಾಪಗಳಿಂದ ಅನೇಕರು ಅಳಿದುಳಿದು ಬನ್ನಬಟ್ಟಿದ್ದಾರೆ ; ನಾನೊಲ್ಲೆ ಎಂದು ಅಗ್ನಿ ಜಾರಿಕೊಂಡ (ಬಿದುರ. ೩೨). **ಜಾಱಿಗೆಡಹು**=**ಜಾರಿಬೀಳುವಂತೆ** ಮಾಡು ; ಉರುಳಿಸು : ಏಱುವುದು ನಿಮ್ಮವರ ಬಲವದ ಜಾಱಿಗೆಡಹು ವರವರು (ತೊರರಾ. ೬-೧೧-೧೧). **ಜಾಱಿಬೀಳು, ಜಾರಿಬೀಳು** = ಕಾಲುತಪ್ಪಿ ಕೆಳಗೆ ಬೀಳು; ಪತನಹೊಂದು; ಭ್ರಷ್ಟನಾಗು: ಸೌರಾಷ್ಟ್ರ ಸೋಮೇಶ್ವರ ಲಿಂಗವ ಹಿಡಿದು ನಿಲಲಱಿಯದೇಱಿದವರು ಜಾಱಿ ಬಿದ್ದು ಸೂಱಿ ಹೋದರು ಕಾಲಂಗೆ (ಆದವ. ೨೭-೭೬): ಗವಯ ಗತಿಗೆಟ್ಟು ಜಾಱಿ ಬಿದ್ದನು ಪನಸ (ಕಾಶಿರಾ. ೩೫-೧೭): ಜಾರಿ ಬಿದ್ದು ಉಣ್ಣೆಯಂಥ ನೆಲ ಅಂದ (ಗಾದೆ). **ಜಾಱಿವರಿ** = ಜಾರುವಂತೆ ಓಡು : ಪರಿವಾತಂ ವಾಪೀಸೋಪಾನ ಮನಡರುತ್ತುಂ ಜಾಱಿವರಿದು ಕೆಡೆದು (ಆದಿಪು. ೨-೧೪ ವ).

[ ದೇ.॥ ತಮಿ. ಚಾಱು; ಮಲ. ಚಾರು; ತುಳು. ಜಾರು; ತೆಲು. ಜಾಱು ]

**ಜಾಱು₂, ಜಾರು₂** (ನಾ). ೧. ಜಾರುವಿಕೆ ; ಸರಿಯುವಿಕೆ ; ತಪ್ಪುವಿಕೆ : ಆಱುಂ ಗುಣಂಗಳಿಂದಂ ಜಾಱಿಲ್ಲದೆ ಸಂದ ತುಱಿಲಸಂದರ್ (ನೇಮಿಪು. ೧೦-೧೦೮): ಹೇಳಿರೇ ಭೀಷ್ಮಾದಿ ಹಿರಿಯರು ಮೇಲುದಾಯವ ಬಲ್ಲವರು ಹೆಚ್ಚಾಳುತನದಲಿ ಹಿಗ್ಗಿ ಕಂಡಿರೆ ಜಯದ ಜಾಱುಗಳ (ಕುಭ್ನಾ.ಕ. ೦-೦). ೨. ಇಳಿಜಾರಾದ ಪ್ರದೇಶ ; ನುಣುಚಿ ಬೀಳುವ ಜಾಗ : ಪಾಱುವ ಪಕ್ಕಿಗೆ ಸಂಚರಮುಂ ಜಾಱಿನೊಳೆ ನೆರೆವರ್ಪಲರುಂ . . .ಪಾಱುಗಳಂ ಮಿಗೆ ನಂಬುವದೆ (ಮದಶಿ. ೧೦-೭೧) ; ಬಲೆದೊಡಕುಗಳು ಕರ್ಮಮಾರ್ಗಂಗಳ ವೊಳೆಗಳುಗ್ರಂಗಳಾಶಾವಳಯಿತಂಗಳು ಜಾಱುಗಳು ಬೀಱುಗಳು ರವಣೆ ಗಳು (ಬಸವು. ೪೦-೫೭). ೩. ಹಿಮ್ಮೆಟ್ಟುವ ಗಂಣವುಳ್ಳುದು ; ಅಪಸರಣವುಳ್ಳುದು : ಪಾಱುವ ಪಾಱುಂಬಳೆ ಕೊಳೆ ಜೀಱಿಟ್ಟಂಬರಕೆ ತಲೆ ಸಿಡಿಲ್ದೊಡಮಾ ಕಾಯ್ಪಾಱದೆ ಹರಣಂಗೆಯ್ದುವು ಜಾಱಲ್ಲದ ಜೋದರಟ್ಟೆಗಳ್ ಕಲವಾಗಳ್ (ಪಂಪಭಾ. ೧೦-೯೫). ೪. ಮಾಯೆ ; ಕಪಟ : ಮಾಱಾಂತ ದಾನವರ್ಕಳ ಜಾಱಿಂದರ್ವಿಸುವ ಬಳಮನೊರ್ವನೆ ರಣದೊಳ್ ಪಾಱಿಸಿದಂ ವಿದ್ಯೆಗಳಿಂ (ನೇಮಿಪು. ೦೨-೩೪). ೫. ಸಂಶಯ : ಸಂದೇಹ: ಕುಲಿಶಂ . . . ಮತ್ಸ್ಯಮೆಂದಿಂತಿವು ತಳದೊಳ್ ಪಾದದೊಳ್ ತೋಱಿ ಜಾಱೀಂ . . . ಪುಣ್ಯಾವಹಂ ತಾನೆನಿಕ್ಕುಂ (ಕೋಕೋಪ. ೧೦-೦೪): ನೀಱಿಯರ ಮನಮನೆಱಗಿಸೆ ಜಾಱೀಂ ಜವ್ವನದಿನಮರನೆಸೆದಂ ನಿಸದಂ (ಪಾರ್ಶ್ವಪು. ೫-೦೦೨): ಜಾಱಿಲ್ಲದೆ ಕೇಳ್ (ಅಭ್ರಿಮ. ೮-೨೦). **ಜಾರು₂** : ೨. 'ಇಳಿಜಾರಂ' ಪರಾ. [ <ಜಾಱು₁ ]

**ಜಾಱುಂಗಲ್, ಜಾರುಗಲ್ಲು, ಜಾಱುಕಲ್, ಜಾಱುಗಲ್ಲು** (ನಾ). ೧. ಜಾರಂವ ಕಲ್ಲು ; (ಪಾಚಿ ಕಟ್ಟಿರುವ) ನುಣುಪಾದ ಕಲ್ಲು. ೨. ಇಳಿ ಜಾರಾದ ಕಲ್ಲು; ಜಾರುಗುಪೆಯಂತಿರುವ ಕಲ್ಲು: ಸಂದಣಿಸಿ ಬರ್ಪ ಸೊರ್ಕಾನೆಗಳ ಕಾಲ್ಪೊಱಿಗೆ ನೆಲನೊಂದೆಸೆಗೊಳೆದು ಜಾಱುಂಗಲ್ಲಂತೆ ತೋಱಿಯುಂ (ಕಾವ್ಯಾ. ೩೮೮). **ಜಾರುಗಲ್ಲು** : ೧. ಕೆರೆಯ ಕೋಡಿಯ ಜಾರುಗಲ್ಲಿನ ಮೇಲೆ ಜಾರಿಬಿದ್ದನು(ರೂಢಿ). **ಜಾಱುಕಲ್**: ೧. ಜಾಱುಕಲ್ಪರಿ ವಂತಾಸೆಯ ಪೈಸರಂ ಮೆಱಿವ ಚೆಲ್ವಂ ದೇವ ನೀವೇಱಿ ನೋಡಿರೆ ಚಿತ್ರಂಬಡೆದಪ್ಪುವೆಂದು ಮೆಱಿದರ್ ಪಾಹಂಗಳಂ ವಾಹಕರ್ (ಅನಂಪು. ೨-೩೦). **ಜಾಱುಗಲ್ಲು**: ೧. ಹುಲ್ಲುಗಳ್ ಬೆಳೆದಾಗ ಪಾರಿಬಿಡದ ಜಾಱುಗಲ್ಲ ಮಱಿಸಿಕೊಂಡಿಹುವು (ಕಂನವಿ. ೧೮-೩೯). [ಜಾಱು₁+ಕಲ್, ]

**ಜಾಡುಕಲ್** 'ಜಾಡುಂಗಲ್' ನೋ.

**ಜಾಡುಗಲ್ಲು** 'ಜಾಡುಂಗಲ್' ನೋ.

**ಜಾಡುವಲೆ** (ನಾ). ಒಂದು ಬಗೆಯ ಬಲೆ: ಹಾಡುವಲೆ ಜಾ[ಪಾಠಾಂ. ಬೀ] ಡುವಲೆ ಬಡಿಗವಲೆ . . . ಮಂದಸಿನವಲೆಯ ಹೊಡೆಗಳ ಬೇಡವಡೆ ನೆರೆದುದು (ಹರಿಶಾ. ೫-೮). [ ಜಾಡು$_2$ + ಬಲೆ$_1$ ]

**ಜಾಡುವೊಯ್ಲು** (ನಾ). ಒಂದು ಬಗೆಯ ಏಟು; ಒರೆಯಾದ ಹೊಡೆತ : ಜಾಡುವೊಯ್ಲುಡವೊಯ್ಲು . . . ಉಬ್ಬೇಡುವೊಯ್ಲುನಲೊದಗಿದರು ಭಟ ರಸವಾಸಮರದಲಿ (ತೊರರಾ. ೪-೪-೨೪). [ ಜಾಡು$_2$ + ಪೊಯ್ಲು ]

**ಜಾಡುವೋಗು** (ಕ್ರಿ). ಹಿಮ್ಮೆಟ್ಟು : ಜಾಡಿಬಿದ್ದನು ಪನಸ ದಧಿಮುಖ ರೂರುಗೆಡಿಸಿದ ನಳನು ಮುಗ್ಗಿದ ಜಾ[ಜಾ]ಡುವೋದನು ನೀಲನು (ಕೌಶಿರಾ. ೩೫-೧೭). [ ಜಾಡು$_2$ + ಪೋಗು$_1$ ]

**ಜಾಟಿಗೆ** 'ಸಾಟಿಗೆ' ನೋ.

**-ಜಿ** (ಪ್ರ). ಗೌರವಾರ್ಥವಾಗಿ ನಾಮವಾಚಕಗಳ ಕೊನೆಯಲ್ಲಿ ಸೇರುವ ಪ್ರತ್ಯಯ. 'ಅಕ್ಕಾಜಿ', 'ಅಣ್ಣಾಜಿ', 'ಜೀಯ' ಪರಾ.
[ <ಪ್ರಾ. ಜಇ./ಸಂ. ಜಯಿನ್ ]

**ಜಿಂಕರ** (ನಾ). ಒಂದು ಬಗೆಯ ವಾದ್ಯ : ಪೊಯ್ವಕ್ಕವದ್ದಳೆಯ ದನಿಯುಂ ಊದುವ ಬುಂಚೆಯ ರವಮುಂ ಬಾಜಿಪ ಜಿಂಕರವುಂ ರವಳಿಯುಂ ನೆರವೆ (ಅರ್ಧನೇ. ೮-೭೫ ವ). [ ? ]

**ಜಿಂಕರಿಸು** 'ಜೇಂಕರಿಸು' ನೋ.

**ಜಿಂಕು** (ನಾ). ಒಂದು ಅನುಕರಣ ಶಬ್ದ : ಪೆಣ್ದುಂಬಿಯ ಜಿಂಕು ತುಂಬಿ ಗಟಪಂ ಕೈಸಾರ್ಚೆ ಕೈವರ್ಪ ಚೆಲ್ವನೆ ಪೋಲ್ತಿರ್ದುವು ನಂದನಾವಳಿಗಳೊಳ್ ಮಾಕಂದದಮಾ ಕಂದನಂ (ಸೂಕ್ತಿಸು. ೧೦-೨೭).

**ಜಿಂಕುವರಿ** (ಕ್ರಿ). (ನೊಣಗಳು ಮುತ್ತಿ) ಝೇಂಕಾರಮಾಡು ; ಮೊರೆ : ಪೊಲೆ ಮುಸಗಿ ಜಿಂಕುವರಿವಂ[ಪಾಠಾಂ. ದಿಕ್ಕುವರೆಗಂ]ತಲಸದೆ ಭಾರತ ಮನೆಯ್ದೆ ಕಿಡೆವೇಟ್ಟುದಜುಂ ಪೊಲೆಯರ ಬಸಿಟೊಳ್ಪಂದಮ್ಮೆನಾತ್ಮಂ ವ್ಯಾಸನೆಂಬರ್ (ಸಮಪ. ೧೦-೧೭೮). [ ಜಿಂಕು + ಪರಿ$_2$ ]

**ಜಿಂಕೆ** (ನಾ). ಚಿಗರೆ ; ಎರಳೆ ; ಹರಿಣ : ಉಬ್ಬನೇರ್ದುದೆ ಜಿಂಕೆ ? ಕೂಡೆ ಏರಿದನದಂ (ಶ್ರೀರಾಮಪ. ೨೩೫-೩೦೭).
[ ದೇ. ॥ ತುಳು. ಜಿಂಕೆ; ತೆಲು. ಜಿಂಕ ]

**ಜಿಂಗಿ$_1$** (ನಾ). ಮಂಜಿಷ್ಠೆಯೆಂಬ ಗಿಡ ಮತ್ತು ಅದರಿಂದ ತಯಾರಿಸುವ ಒಂದು ಬಗೆಯ ಔಷಧ : "ಮಂಜಿಷ್ಠಾ ವಿಕಸಾಖ್ಯಂ ತಾಂ ಜಿಂಗಿ" (ವಸ್ತುಕೋ. ೩೭-೨೩). [ ಸಂ. ಜಿಂಗೀ ]

**ಜಿಂಗಿ$_2$** (ನಾ). (ಉಕ) ಮಾದಕದ್ರವ್ಯದ ಸೇವನೆಯಿಂದುಂಟಾಗುವ ಮೈಮರೆವು,-ಮಾದಕತೆ. [ ←ಮರಾ. ಝಿಂಗೀ ]

**ಜಿಂಜರಗಿ** (ನಾ). ಒಂದು ಬಗೆಯ ಗಿಡ : ಕೆಲವು ಕಡೆಗಳಲ್ಲಿ ಗುರಗಿ, ಬಿದಿರು . . . ಜಿಂಜರಗಿ, ಮುಕ್ಕಡಕ ಮುಂತಾದ ಗಿಡ ಬಳ್ಳಿ ಪೊದೆಗಳಿದ್ದವು (ಪಂಜಪಾಂ. ೨). [ ? ]

**ಜಿಂಜಿ** (ನಾ). ಒಂದು ಅನುಕರಣ ಶಬ್ದ : ಪದಿರ ಪಟ ಮುಂದೆ ಗುಡಿ [ಯ]ಗ್ಗದ ಬಂಧು ತಗುಳ್ದು ಪೊಗಟ್ಟುಗೇಳ್ವರ್ ಪೆಜಗಂ ಪುದಿದೊದವಿದ ಜಿಂಜಿ ಕರಂ ಹೃದಯಂಗಮಮಾಗೆ ನಾಮುಕರ್ ನಡೆಗೊಂಡರ್ (ವರ್ಧಮಾ. ೮-೪೭).

**ಜಿಂಜಿಣ** (ನಾ). ತೊಂದಿಕೆ ; ಸಂಬಂಧ (?) : ಕಂಡರಿರ ಸೆಜ್ಜೆಯ ಜಿಂಜಿಣ[ಪಾಠಾಂ. ಸಿಂಜಿನಿ] ಪೋಕೆ ನಿನ್ನ ಕೂಟದೊಳಿನಿದಕ್ಕೆ ಮತ್ಸಖಿಗೆ (ಪಂಪಭಾ. ೫-೧೮) : ನನ್ನ ಅಸ್ಥಿಗಳನೆ ನನ್ನ ಹೆಸರಿನಿಂದ ಲಿಂಗವಾಗಿ ಪೂಜೆಗೊಳ್ಳಿ ನನ್ನ ಚರ್ಮವನೆ ಜಿಂಜಿಣಯಾಗಿ ಉಟ್ಟು (ಭೈರಕೂ. ೧೨೦).
[ ? ]

**ಜಿಂಜಿತ** (ನಾ). "ಕಾಮಚೇಷ್ಟೆ" (ಪ್ರಭುಪು. ಕೋಶ). 'ಜಿಂಜಿತಂಗೆಯ್' ಪರಾ. [ ? ]

**ಜಿಂಜಿತಂಗೆಯ್** (ಕ್ರಿ). ಕಾಮಚೇಷ್ಟೆ ಮಾಡು : ಚಂದುಟಿಯ ಕರ್ದುಕುತ ಭರದಿಯಿಂಬಿನಿಂ ಜಿಂಜಿತಂಗೆಯ್ವುತಂ ಕೊರಲ್ಕುಚಂ ಎದೆ ಪಾರ್ಶ್ವಗಳೊಳು (ಪ್ರಭುಪು. ೫-೬೦). [ ಜಿಂಜಿತ + ಕೆಯ್$_1$ ]

**ಜಿಂಜಿರ** (ನಾ). ಮೂಳೆಮಾತ್ರ ಉಳ್ಳವನು ; ಜೀರ್ಣನಾದವನು : ಕರಮ ಜಿಂಜಿರಾಗಿ ಮರುಳ ರೂಪಿನೊಳ್ ಸಮಾನರಂ . . . ಕನ್ನಡಿಯೊಳ್ ಕಂಡು ಬೆರ್ಚಿ (ಬಂಹರಿ. ೧೩-೩೩). [ ? ]

**ಜಿಂಜರಿ** 'ಜಂಜರ$_1$' ನೋ.

**ಜಿಂಜರಿಸಂಕಲೆ** (ನಾ). ಸರಪಳಿಯ ಬೇಡಿ,-ಸಂಕೋಲೆ : ಕಂಜಾಕ್ಷಿ ಕಾಲಸಂಕಲೆ ಮಕ್ಕಳಾದರೆ ಗುಂಜಿನ ಕೊರಳ ಸಂಕಲೆಯು ಜಿಂಜರಿಸಂಕಲೆ ಯೊಳಗಾರು ಬಾಳ್ವರೆಂದಂಜಿದರವರು ದಂದುಗಕೆ (ಭರತೇ. ೬೫-೨೯).
[ ಜಿಂಜರಿ ( <ಜಂಜರ$_1$) + ಸಂಕಲೆ ]

**ಜಿಂಟುಕ** (ನಾ). (?) : ಎಡಗಲಡಿಯದೆ ಜಿಣ್ಬುಕಮ್ಮಗುಟ್ಟುಂ ಬರಲಣ ಮಟಿಯದೆ ತಪ್ಪಂ ಪಿನ್ದುಂ ತೆಟನನಟಿಯದೆ ಭಂಗಮನಿಕ್ಕಿದುಂ (ಎಕ. II, ೦೩೩-೦೩೭ : ೪೮೭). [ ? ]

**ಜಿಂಡು** (ನಾ). (?) : ತಲೆಗಳ್ ಸೆಂಡುವೊಯ್ದಂತೆ ಪಾರುತ್ತಿರೆ ಮುಂಡಂ ಜಿಂಡು ಮುಂದಾಗುರುಳುತಿರೆ ರಣಕ್ಷೋಣಿಯೊಳ್ (ಎಕ. VIII, ಸೊರಬ. ೦೩೮-೨೭ : ಪು. 1145).
[ P ಇದು 'ಹಿಂದು' ಎಂಬುದರ ಅಪಲಿಖಿತವಿರಬಹುದು ]

**ಜಿಂದಗಾನಿ** (ನಾ). = ಜಿಂದಗಿ : (೬). [ ←ಪಾರ. ಹಿಂ.ಮರಾ. ಜಿಂದಗಾನೀ ]

**ಜಿಂದಗಿ, ಜಿಂದಿಗಿ, ಜಿಂದಿಗೆ** (ನಾ). ೧. ಒಬ್ಬ ವ್ಯಕ್ತಿಗೆ ಸೇರಿದ ದನಕರು ಮೊದಲಾದ ಚರಾಸ್ತಿ ಹಾಗೂ ಜಮೀನು ಮುಂತಾದ ಸ್ಥಿರಾಸ್ತಿ : ಜಪ್ತ ಮಾಡಿದ ಜಿಂದಗಿಯ ಬೆಲೆ ೧೩೩ ರೂ. ಇದ್ದರೆ ಪಂಚನಾಮೆಯಲ್ಲಿ ಕಾಣಿಸಿದ್ದು ೨೪ ರೂ. (ಕರವೀ. ೯೩); ಮಿಕ್ಕುಳಿದ ತತ್ವಗಳನ್ನು ಮನ್ನಿಸದ ವರನ್ನು ಕುರಿತು ೧ನೆಯ ತಪ್ಪಿಗೆ ಅವರ ಜಿಂದಗಿಯನ್ನು ಜಪ್ತಮಾಡುವದು (ಇಂಗ್ಲಇ. ೩೩); ಚರ ಜಿಂದಗಿ ವಿಷಯವಾದ ಹಕ್ಕು ಅಥವಾ ಅಂಥಾ ಜಿಂದಗಿಯ ಮೌಲ್ಯವನ್ನು ಕುರಿತ ದಾವೆ (ನ್ಯಾಮೂಕ. ೨೦). ೨. ಬದುಕು ; ಜೀವನ. **ಜಿಂದಿಗಿ :** ೧. ಸಾಹೇಬನ ಜಿಂದಿಗೆಲ್ಲ ಚೆನ್ನಮ್ಮನ ಪಾಲಿಗೆ (ಕೋಕಗೀ. ೨೨೨); ತಮ್ಮ ಜಿಂದಿಗಿಯನ್ನೆಲ್ಲ ಸುರಕ್ಷಿತವಾಗಿ ಇಟ್ಟುಕೊಳ್ಳುವುದಕ್ಕೆ ಎಂಥದೇ ಆದರೂ ಸರಿ, ಒಂದು ಬಾಗಿಲುಳ್ಳ ಮನೆಯಾದರೆ ಸಾಕು (ಕಾಳರಾ. ೨೫). **ಜಿಂದಿಗೆ :** ೧. ಇಲ್ಲಿ ಯಾವತ್ತೂ ಜಿಂದಿಗೆಯನ್ನು ನಾನು ಸ್ವತಃ ಸಂಪಾದಿಸಿರುತ್ತೇನೆ (ಶಿಖ್ರಮ. ೩೮) : ನನ್ನ ಜಿಂದಿಗೆಯು ಬರಿದಾಗುತ್ತ ಬಂದಿದೆ (ಅಡಿಕ. ೦೭); ಸಾಯುವ ಪೂರ್ವದಲ್ಲಿ ಅವನು ಮನೆಯಲ್ಲಿ ತಕ್ಕಮಟ್ಟಿಗೆ ಜಿಂದಿಗೆಮಾಡಿದ್ದನು (ಉತ್ತಗ್ರ. ೩೨).
[ ←ಪಾರ. ಹಿಂ. ಮರಾ. ಜಿಂದಗೀ ]

**ಜಿಂದಾಬಾದ್** (ನಾ). ಜಯವಾಗಲಿ, ಗೆಲುವಾಗಲಿ ಎಂಬುದನ್ನು ಸೂಚಿಸುವ ಒಂದು ಶಬ್ದ : ಇಂಕ್ವಿಲಾಬ್ ಜಿಂದಾಬಾದ್ (ಅಕ್ಕಾರ್ಷ. ೦೨೪). [ ←ಹಿಂ. ಜಿಂದಾಬಾದ್ : ಪಾರ. ಜಿಂದಹ್‌ಬಾದ್ ]

**ಜಿಂದಿಗಿ** 'ಜಿಂದಗಿ' ನೋ.

**ಜಿಂದಿಗೆ** 'ಜಿಂದಗಿ' ನೋ.

**ಜಿಂಭಳಿ** (ನಾ). (?) : ಸಂಭಳವಂ ಕಟ್ಟೆ ಭಯದಾ ಬಟ್ಟೆಯಂ ಹೊಗದೆ ಪೊಂಭುರಿಗರೆಯನಿಕ್ಕದೇ ಜಿಂಭಳಿ ಆಪತ್ತಿನಲ್ಲೀ ಬಂದರೆ ಸಾಕೇ (ಗುಭಕ. ೯-೩೦). [ ? ]

**ಜಿಂಪ** (ನಾ). ಆಲಸ್ಯ ; ಜಡತೆ. 'ಜಿಂಪಭಾವ' ಪರಾ.
[ <ಸಂ. ಜಪ್ಯ ]

**ಜೇಲು** 'ಜೈಲು' ನೋ.

**ಜೇವಡಿಸು** (ಕ್ರಿ). ಬಿಲ್ಲಿನ ಹೆದೆಯೇರಿಸಿ ಧ್ವನಿಯನ್ನುಂಟುಮಾಡು ; ಧನುಷ್ಟಂಕಾರಮಾಡು : ಸುರರಾಯನಂದನನೊಲವಿನಲಿ ಗಾಂಡೀವವ ಜೇವಡಿಸಿ (ಕುವ್ಯಾವಿ. ೬-೫೦). [ ಜೇವಡೆ₁ (<ಜೇವೊಡೆ₁) + - ಇಸು₃]

**ಜೇವಡೆ₁** 'ಜೇವೊಡೆ₁' ನೋ.

**ಜೇವಡೆ₂** 'ಜೇವೊಡೆ₂' ನೋ.

**ಜೇವಡೆಗೆಯ್** 'ಜೇವೊಡೆಗೆಯ್' ನೋ.

**ಜೇವಡೆಗೈ** 'ಜೇವೊಡೆಗೆಯ್' ನೋ.

**ಜೇವಣ, ಜವಣ, ಜೇಮಣ, ಜೇವಣ₁, ಜೇವಳಿ** (ನಾ). ೧. ಊಟ ; ಆಹಾರ ; ಭೋಜನ : ಅಂಬುಜಸೌರಭಂ ತನಗೆ ಗಾವಣ ಜೇವಣಮತ್ಕ ಪೂರ್ವಮಾಸ್ಯಾಂಬುಜಗಂಧಮೆಂದೆಟಗಿ ಬಗ್ಗಿಸೆ (ಶಾಂತಿಪು. ೮-೮೭) : ಹಯ ಪಂತಿಶಾಲೆಗೆ ಪೋಗಿ ಭಿಕ್ಷವನೆ ಕುದಿವ ಜೋಳದ ಜೇವಣವ ಪೊಯ್ಕಲು (ಪ್ರಭುಪು. ೪-೪೯) ; ಎಲ್ಲಾದರೂ ಔತಣ, ಜೇವಣ ಇದ್ದುಬಿಟ್ಟರಂತೂ ಅವಳ ತಾಯಿಗೆ ಇಲ್ಲದ ಭಯವಾಗಿ ಬಿಡುತ್ತಿತ್ತು (ಇಪ್ಪಕ. ೧೬೭). ೨. ತುತ್ತು; ಗ್ರಾಸ: "ಜೇವಣಂ, ವಳಿಗೆ, ಕವಳಂ—ಈ ೩ ತುತ್ತಿಂಗೆ ಪೆಸರ್" (ಕಶಸಾ. ೨೨-೪೭೩) : "ಜೇವಣಮೆಂದೆನೆ ಜೇಮನಾರ್ಥದಲ್ಲಿ" (ಕರ್ಣಾನಿ.೯೦). **ಜವಣ:** ೧. ಎರಡು ಪದಂಗಳಪಭ್ರಂಶಕ್ಕೆ—ಅವನಜೇಮನ-ಅವಣಜವಣ (ಶಮದ. ೨೮೯ ಪ್ರಯೋ). **ಜೇಮಣ :** ೧. ತಿಂಗಳಿಗೊಮ್ಮೆ ಜೇಮಣವ ಸೇವಿಸುತ ತೊಂಬತ್ತು ವತ್ಸರಂ ಕಾಮವಿಧ್ವಂಸ ಸುಜ್ಞಾನ ಮೊಳಗಿರಲು (ಪ್ರಭುಪು. ೯-೧೯). **ಜೇವಣ₁ :** ೨. ನಂದೋಪನಂದರು ಜವಗೆ ಜೇವಣ [ಪಾಠಾಂ. ಣೆ]ಯಾದರೇ ಕಲಿಭೀಮನಿದಿರಿನಲಿ (ಕುವ್ಯಾಕ. ೧೩-೧೯). **ಜೇವಳಿ:** ೧. 'ಜೇವಳಿಗೆಯ್' ಪರಾ. [<ಪ್ರಾ. ಜೇಮಣ./ ಸಂ.ಜೇಮನ]

**ಜೇವಣಶಾಲೆ** (ನಾ). ಊಟದ ಮನೆ ; ಭೋಜನಗೃಹ : ಒಲಗಶಾಲೆ ಪೂಗಿಡುಗಳೊಳಗೆ ಜೇವಣಶಾಲೆ ಮತ್ತ ಭೃಂಗಾಳಿಗೆ . . . ಎನಲೊಪ್ಪುವು ವಲ್ಲಿಯ ಪುಷ್ಪವಾಟಿಗಳ್ (ಪುಷ್ಪಪು. ೨-೫೦) : ಋತುಗಳ ಸೆಜ್ಜೆ ತುಂಬಿಗಳ ಜೇವಣಶಾಲೆ (ವಿರೂಪಾ. ೩೭): ಸಾರಮೇಯಗಳ ಜೇವಣಶಾಲೆಯೆಂದೆನಲಾ ರುದ್ರಭೂಮಿಯೊಪ್ಪಿದುದು (ಶ್ರೀಪಾಲ. ೮-೧೧) : ಧರೆಯ ಮಹಾರಣ್ಯವೆಲ್ಲ ಜೇವಣಶಾಲೆ ಶರಧಿ ವಾಪಿಗಳೇ ಭೃಂಗಾರಂಗಳು (ಕೃಕವ. ೫-೭೩-೩).

[ ಜೇವಣ + ಶಾಲೆ₁ ]

**ಜೇವಣಸಾಲೆ** (ನಾ). = ಜೇವಣಶಾಲೆ : ನೆರೆದ ತುಂಬಿಯ ಜೇವಣಸಾಲೆ ಜಕ್ಕವಕ್ಕಿಯ ಸುರತಾಲಯಂ (ಲೀಲಾವ.೬-೯೩): ಇದು ಮನಸಿಜ ಮೋಹನ ಮಂತ್ರಾಲಯಮಿದು ಗಾಳಿಯ ಗುಣದಾಗರಮಿದು ತುಂಬಿಯ ಜೇವಣಸಾಲೆ (ಜಯುಕಾ. ೪-೩). [ ಜೇವಣ + ಸಾಲೆ₃ ]

**ಜೇವಣಿ₁** 'ಜೇವಣ' ನೋ.

**ಜೇವಣಿ₂, ಜವಣಿ** (ನಾ). ಸತ್ತವರನ್ನು ಬದುಕಿಸುವುದೆಂದು ಹೇಳಲಾಗುವ ಒಂದು ಬಗೆಯ ಸಸ್ಯ ; ಸಂಜೀವಿನಿ : (ಶ). **ಜವಣಿ:** ಅದರೊಳಂ ಕಲ್ಪಲತೆ ಸುರತರುವು ಸುರಧೇನು ಪುದಿದಿಹವು ಜವಣಿಗಿಡಗಳಮಳ ಚಿಂತಾಮಣಿಯ ಬಹುಗುಂಡುಗಳ್ (ನವಮೋ. ೨-೧೫). 'ಮಜುಜೇವಣಿ' ಪರಾ. [ ? ]

**ಜೇವಣಿಕೆ** 'ಜೇವಣಿಗೆ₂' ನೋ.

**ಜೇವಣಿಗೆ₁** (ನಾ). = ಜೇವಣ : ದಾವಣಿಗಟ್ಟಿದ ಕುದುರೆಗುತ್ತಮಮಪ್ಪ ಜೇವಣಿಗೆಯನಿಕ್ಕಿ (ಶ್ರೀಪಾಲ. ೧೩-೧೧೮) : ಭಿಕ್ಷಮಂ ಬೇಡಿ ಬರೆ ಜೇವಣಿಗ ಲಾಯದೊಳ್ ಕುದಿವುದಂ ತಂದಿಕ್ಕೆ (ಲಶಿಚಂ. ೩೨-೪೯).

[ ಜೇವಣ₁ (<ಜೇವಣ) + – ಗೆ ]

**ಜೇವಣಿಗೆ₂, ಜೇವಣಿಕೆ** (ನಾ). ಒಂದು ಬಗೆಯ ಮರ ; ಸಿಹಿಹಾಲೆ : "ಜೇವಣಿಗೆ[ಪಾಠಾಂ. ಕೆ]ಮಾಧುರ್ಯೆಯಕ್ಕು" (ಮಂಗರಾ. ೪೨-೩೭). ನೆಲ್ಲಿ ಲೀವನಗೆ ಜೇವನಗೆ . . . [illegible] [illegible] = ಜೇವಣಿಗೆ₂ ಒಡಲಿನೊಳು ಮುಚಿದಿದ್ದ ಸಬಳವನುಡಿಯಲೀಯದೆ ಕೀಳ್ವ ಮದ್ದನು ಗಿಡಿವ ಜೇವಣಿಗೆಯೊಳು ಸಪ್ರಾಣಿಸುವ ದುರ್ವ್ರಣವ ತೊಡೆದು ಕಟ್ಟುವ ಹಸ್ತಿವೈದ್ಯರ ಗಡಣ (ಕುವ್ಯಾಭೀ. ೫-೪೦). **ಜೇವಣಿಕೆ :** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ.

[ <ಸಂ. ಜೀವನಿಕಾ ]

**ಜೇವಣಿಗೆಗೊಳ್** (ಕ್ರಿ). ಊಟಮಾಡು; ತುತ್ತುಗೊಳ್ಳು: ಗುಣಮಯುದ ಗರುವಾಯಿಯಲಿ ಜೇ[ಪಾಠಾಂ. ರ್ಘೀ]ವಣಿಗೆಗೊಂಬನು ಭೂತದಿಂದ್ರಿಯ ಗಣದೊಡನೆ (ಕುವ್ಯಾಸ. ೯-೧೫). [ ಜೇವಣಿಗೆ₁ + ಕೊಳ್₁ ]

**ಜೇವಳಿ** 'ಜೇವಣ' ನೋ.

**ಜೇವಳಿಗೆಯ್** (ಕ್ರಿ). ಉಣಬಡಿಸು; ಊಟಹಾಕು: ಮೊರೆವಳಿಕಳಭಗಳಿಗೆ ಜೇವಳಿಗೆಯ್ವ ಮರುತನ ಮೈಗೆ ಕಂಪಿಡುವ ಅರಲ ವಲ್ಲರಿ ಪಬ್ಬಿಬಿಡುವಾ ಇವಸ್ಥಾಪನೊರೆವೆನೆನದಟ ವರ್ಣನವ (ನೇಮಿಸಂ. ೧-೭೦).

[ ಜೇವಳಿ (<ಜೇವಣ) + ಕೆಯ್₁ ]

**ಜೇವೊಡೆ₁, ಜಯುವೊಡೆ, ಜೇವಡೆ₁** (ಕ್ರಿ). ಬಿಲ್ಲಿನ ಹೆದೆಯೇರಿಸಿ ಠೇಂಕಾರ ಮಾಡು ; ಧನುಷ್ಟಂಕಾರ ಮಾಡು : ವಜ್ರಕಾಂಡಮೆಂಬ ನಿಜವಿಜಯ ಕಾರ್ಮುಕಕ್ಕೆ ಸುರಕರಿಕರಾನುಕಾರಿಯಪ್ಪ ನಿಜಭುಜಾದಂಡಮಂ . . . ನೀವಿ ಜೇವೊಡೆದಾಗಳ್ (ಆದಿಪು. ೧೨-೮೭ ವ) : ಬಿಲ್ಲನಪ್ರತಿಮಲ್ಲಂ ಏಱಿಸಿ ನೀವಿ ಜೇವೊಡೆಯ (ಶಾಂತಿಪು. ೪-೪) ; ಘನಜ್ಯಾನಿನದಂ ಭಯಂಗೊಳಿಸೆ ಜೇವೊಡೆದಂ ನಿಜಚಾಪದಂಡಮಂ (ಪಂಪಾಮಾ. ೩-೫೦) ; ಬಾಲನನ್ನದಿರೆನುತ ರಿಪುಭಟಭಾಳಲೋಚನನೆನಿಸುವರ್ಜುನ ಬಾಳುಗನುತುದ್ದಂಡ ಕೋದಂಡವನು ಜೇವೊಡೆಯ (ಕುವ್ಯಾದ್ರೋ. ೪-೩೭) ; ಕಬ್ಬಿನ ಬಿಲ್ಲು ಜೇವೊಡೆದಂತೆ ಪಾಡಿದರೊಬ್ಬರಿಬ್ಬರಿಂಪು ನುಂಪಿನೊಳು (ಭರತ. ೧೩-೨೯). **ಜಯುವೊಡೆ :** ಬೆಮರ್ವರ್ಂ ಜಯುವೊಡೆದ ರವಕ್ಕದ್ಭುತಂ ಕಂಸಚಾಪಂ (ಜಗವಿ. ೬-೫೦). ☞ ಇದು ಛಂದಸ್ಸಿಗಾಗಿ ಮಾಡಿಕೊಂಡ ವ್ಯತ್ಯಾಸ. **ಜೇವಡೆ₁ :** "ಜೇವಡೆ (ಜೇ+ವಡೆ) (ಜೇವೊಡೆ)-ಶಿಂಜಿನೀ ಪ್ರಹರಣೇ (ಬಿಲ್ಲಿನ ಹೆದೆಯನ್ನು ಶಬ್ದಮಾಡಿಸು)" (ಶಮಧಾ): ವೀರಕೋದಂಡವನು ನೀಡಿದಪಾರಿತತ್ತ್ಲು ಕಪಿ ಭಟಾವಳಿ ನಾರಿಯನು ಸರಳಂಗೆ ತೂಡಿಸಿದ ತೀವಿ ಜೇವಡೆದ (ಕೌಶಿರಾ. ೧೭-೩೦) ; ಪಿಡಿದು ಚಾಪವನೇಱಿಸಿಯೆ ಜೇವಡೆಯ . . . ಗಿರಿ ಕೆಡೆದುರುಳಿದವು (ಸಾಳ್ವಭಾ. ೧೮-೭೯) ; ಬಿಲ್ಗಳ ಜೇವಡೆದು ತಿರುವಿನಲಿ ಶರಗಳನೋವಿ (ಕೋಗಹು. ೨೦-೬). [ ಜೇ₂ + ಪೊಡೆ₁ ]

**ಜೇವೊಡೆ₂, ಜೇವಡೆ₂** (ನಾ). ೧. ಬಿಲ್ಲಿಗೆ ಹೆದೆಯೇರಿಸಿ ಮಾಡುವ ಧ್ವನಿ; ಧನುಷ್ಟಂಕಾರ: "ಜೇವೊಡೆಯೆಂದು ಜ್ಯಾರವಂ" (ಕಶಸಾ. ೭-೧೨೦) : "ಜೇವೊಡೆ ಬಿಲ್ಲುಲಿಯೆಂದೆನಲ್" (ಕವಿಕಂ. ೮೨) ; ಮದನನ ಬಿಲ್ಲ ಜೇವೊಡೆ ವಿಪಂಚಿಯ ಬಂಚದ ನುಣ್ಪು . . . ಎನೆ ನೇವುರದಿಂದುಡನೂಲ ತೊಂಗಲಿಂ ಮೃದುರವಮುಣ್ಮೆ (ಅನಂಪು. ೪-೫೦) ; ಜೇವೊಡೆಯ ರಭಸದಿಯ ತೆಬ್ಬುಗಳ ತೆಗೆವರಳುಗೋಲಿನ ಕೊಬ್ಬಿನಾಳಿಚ್ಚಾಡಿತು (ಕುವ್ಯಾಭೀ. ೪-೧೨). **ಜೇವಡೆ₂ :** ೧. ಅತನ ಕುಡುವಿಲ್ಲ ಜೇವಡೆಗೆ ಬಿಗುರ್ತಂತೆ ಕಣ್ಣುಕುಳಿಸಿದುವು (ಕಾದಂಸಂ. ೭೭೦) ; ಪಡೆ ಪೆಟಬಿ ಸರಿದುದಾ ಜೇವಡೆಯ ಪಟುಧ್ವನಿಗೆ (ಕುಸುಮಾ. ೧೧-೭೯); ಇದೆ ಕಿರೀಟಿಯ ಬಿಲ್ಲ ಜೇವಡೆಯಿದೆ ಸಿತಾಶ್ವನ ಸಿಂಹಗರ್ಜನೆಯಿದೆ ಮುರಾರಿಯ ಮನಕೆ ಮುಂಚುವ ಪಯದ ಖುರನಿನದ (ಕುವ್ಯಾದ್ರೋ. ೧೧-೯) ; ಬೊಬ್ಬೆಯಾರ್ಭಟೆ ಬಿಲ್ಲ ಜೇವಡೆ ಪಯುಗಳ ಕೊಬ್ಬಿನ ಬಲು ಹೇಷಿತದಾ ಅಬ್ಬರ (ಕೆಂನವಿ. ೦೭-೩೦). ೨. ಬಿಲ್ಲಿನ ಹೆದೆಯ ಹೊಡೆತ ; ಸಿಂಜಿನಿಯ ಪ್ರಹರಣ: ಜೇವಡೆಗಳ ಪೊಣ್ಗಳಿಂ ತೊರೆವ ನೆತ್ತರ ಕೆಯ್ (ಕಾದಂಪೂ. ೧೮೩). [ <ಜೇವೊಡೆ₁ ]

**ಜೇವೊಡೆಗೆಯ್, ಜೇವಡೆಗೆಯ್, ಜೇವಡೆಗೈ** (ಕ್ರಿ). = ಜೇವೊಡೆ$_1$: ಕಡಿಖಂಡಂ ಮಾಡುವೆಂ ಚಕ್ರಮನೆಡೆಯೊಳೆನುತ್ತುಂ ಧನುರ್ದಂಡಮಂ ಜೇವೊಡೆಗೆಯ್ದು (ಪಂಪಾಭಾ. ೦೪-೭೬): ಭೀಕರಮೂರ್ತಿ ಶಿಂಜಿನಿಗೊಳಿಸಿರ್ದ ಪಿನಾಕವ ಜೇವೊಡೆಗೆಯ್ಯೆ (ಮೋಹತ. ೩೯-೨೨); ನಳಿನಲೋಚನನಾರ್ದು ಶಾರ್ಙ್ಗವ ಬಲಿದು ಜೇವೊಡೆಗೆಯ್ಯೆ ಲೋಕವನಳರಿಸುವ ದನಿ ಮಾಯವಾದುದು (ಸಾಳ್ವಭಾ. ೨೯-೬೫). **ಜೇವಡೆಗೆಯ್:** ಮದಗಜವಿಂಡು ಬಂದುದ ಕಂಡು ಸ್ಮರಸುತ ಹದವಿಲ್ಲ ಜೇವಡೆಗೆಯ್ದು (ಮೋಹತ. ೩೪-೭). **ಜೇವಡೆಗೈ:** ಆಚಾರವೆಂಬ ಬಿಲ್ಲಿಗೆ ವಿಚಾರವೆಂಬ ನಾರಿ ಸಮತೆಯೆಂಬ ತಿರುವ ಮೆಟ್ಟಿ ಜೇವಡೆಗೈದು (ಚನ್ನವ. ಕ. ೭೪೭-೧೪೫೧); ಒದಟಿ ಜೇವಡೆಗೈದು ಬಾಣವ ಕಿದಟಿದನು (ಕುಮಾಭೀ. ೦೦-೨). [ ಜೇವೊಡೆ$_2$ + ಕೆಯ್$_1$ ]

**ಜೇವೊಡೆವೊಯ್** (ಕ್ರಿ). = ಜೇವೊಡೆ$_1$: ದಿಶಾದಶ ಪ್ರಕರಣಂ ತಾನೆಂಬಿನಂ ನೀವಿ ಜೇವೊಡೆವೊಯ್ದಂ ವೈರಿಕುಲ ಚಿತ್ರಾಭಂಗಮಂ ಶಾರ್ಙ್ಗಮಂ (ಅನಂಪು. ೧೪-೧೬). [ ಜೇವೊಡೆ$_2$ + ಪೊಯ್$_1$ ]

**ಜೇಷ್ಟಮಧು** (ನಾ). ಒಂದು ಬಗೆಯ ಸಸ್ಯ ; ಅತಿಮಧುರ ; ಮಧುಕ : ಜೇಷ್ಟಮಧು ಅತಿಮಧುರ (ಮೃಶಿಗ. ೩೯-೭೭೯). [ <ಸಂ. ಯಷ್ಟಿಮಧು ]

**ಜೇಷ್ಟೆ** 'ಜೆಟ್ಟಿ' ನೋ.

**ಜೇಷ್ಠ** (ಗು). ೧. ಹಿರಿಯ ; ದೊಡ್ಡ : ಜೇಷ್ಠಪುತ್ರ (ರೂಢಿ). (ನಾ). ೨. ಚಾಂದ್ರಮಾನ ವರ್ಷದ ಮೂರನೆಯ ತಿಂಗಳು : ವೈಶಾಖದಲಿ ಲಾಭವು ಜೇಷ್ಠದಲ್ಲಿಯು ಲೇಸು (ಗಗಶಾ. ೪-೬೫). [ <ಸಂ. ಜ್ಯೇಷ್ಠ ]

**ಜೇಷ್ಠಾಂಸ** (ನಾ). ಹಿರಿಯ ಮಗನಿಗೆ ಕೊಡುವ ಹೆಚ್ಚಿನ ಪಾಲು,–ದೊಡ್ಡ ಪಾಲು : ಮೂಡಲು ಪಳ್ಳಿವಾಯ್ಕಾಲು ತೆಂಕಲುದ್ದಿಯಕಾಲು ಪಡುವಲು ನಾರಾಯಣಯ್ಯನ ಜ್ಯೇಷ್ಠಾಂಸದ ಭೂಮಿ (ಕಇಅ.೭೯-೦೩-೨೯: 1088). [ <ಸಂ. ಜ್ಯೇಷ್ಠಾಂಶ ]

**ಜೇಷ್ಠೆ** 'ಜೆಟ್ಟಿ' ನೋ.

**ಜೇಹಣೆ** 'ಚಿಹಣೆ' ನೋ.

**ಜೈ, ಜೇ$_1$** (ನಾ). ಜಯಜಯಕಾರ; 'ಜಯವಾಗಲಿ' ಎಂಬ ಹಾರೈಕೆಯ ನುಡಿಯ ಸಂಕ್ಷಿಪ್ತರೂಪ. 'ಜೈಗುಡು' ಪರಾ. **ಜೇ$_1$ :** ಹರುಷದಿಂ ಜೇಯೆಂದು ವಿದ್ವಾಂಸರುಗಳನುವತುದಿಂದೆ ಪೇಳ್ವೆನು ಪರಮ ನೇಮೀಶ್ವರನ ಚರಿತವನು (ಸಾಳ್ವಭಾ ೦-೩೫). [ <ಸಂ. ಜಯ ]

**ಜೈಗುಡು** (ಕ್ರಿ). ೧. ಜಯಜಯಕಾರ ಮಾಡು : ಜನಮಂಡಳಿ ಜೈಗುಡುತ್ತಿತ್ತು (ರೂಢಿ). ೨. ಧ್ವನಿಮಾಡು: ಪಟಹ ಭೇರಿಗಳ್ ಜೈಗುಡಲ್ಕಾ ದನಿಗೆ ದನಿಗೊಟ್ಟು ದಿಕ್ಕರಿಗಳೊಂಕಾರಗೈದುವಾಗಳ್ (ಧರಭ. ೧-೦೬). [ ಜೈ + ಕುಡು$_1$ (<ಕೊಡು$_1$) ]

**ಜೈತ್ರ** (ಗು). ಗೆಲವನ್ನು ಪಡೆದ; ಜಯಶಾಲಿಯಾದ; ಯಶಸ್ವಿಯಾದ: ರಾಜಪುತ್ರಿಸ್ಮಿತಮಧುಮಧುರಾಪಾಂಗಜೈತ್ರಾಂಗಜಾಸ್ತ್ರಂಗಳ ಕೋಳಂ ನೂತನ ಪ್ರೇಮದೆ ನಿಮಿರ್ವೆಡೆಯೊಳ್ ದೃಷ್ಟಿಯಂ ಕಾವನಾವಂ (ಆದಿಪು. ೪-೫೦). (ನಾ). ೨. ಗೆದ್ದವನು ; ವಿಜಯಿಯಾದವನು. ೩. ಗೆಲವು; ಜಯ. 'ಜೈತ್ರಕಥೆ' ಪರಾ. [ ಸಂ. ]

**ಜೈತ್ರಕಥೆ** (ನಾ). ಗೆಲವಿನ ಕಥೆ : ತೀವಿದೊಲವಿನ ದಂಪತಿಗಳಾಗೆ ಮನ ಬುದ್ಧಿ ಜೀವಿತವು ಜೈತ್ರಕಥೆ (ಮಂಕುಕ. ೫೪೩). [ ಜೈತ್ರ + ಕಥೆ ]

**ಜೈತ್ರಧ್ವಜ** (ನಾ). ಜಯದ ಗುರುತಾದ ಧ್ವಜ,–ಬಾವುಟ: ನಿನ್ನ ವಿಜಯ ಪ್ರಾರಂಭದೊಳ್ ತೋರ್ಕೆಗೆತ್ತಿದ ಜೈತ್ರಧ್ವಜಮೆಂದು ತೋರ್ಪ ತೆಱದಿಂ (ಆದಿಪು. ೧೦-೧೭). [ ಜೈತ್ರ + ಧ್ವಜ ]

**ಜೈತ್ರಯಾತ್ರೆ** (ನಾ). ವಿಜಯಯಾತ್ರೆ : ಪುಷ್ಪಾಕರ ಬಲವಿಜಯೋದ್ದರ್ಪ ಕಂದರ್ಪ ಲೀಲಾಕರನಾದಂ ಜೈತ್ರಯಾತ್ರೋತ್ಸವದೊಳಖಿಲ ಪಟ್ಟಂಡ ಭೂಮಂಡಲೇಶಂ (ಆದಿಪು. ೧೩-೭); ಮುಂದೆ ಶಾಂತೀಶ್ವರನ ದಿಗ್ವಿಜಯ ವರ್ಣನೆಯಲ್ಲಿ ರಘುಮಹಾರಾಜನ ಜೈತ್ರಯಾತ್ರೆಯನ್ನು ಅನುಸರಿಸುತ್ತಾನೆ (ಕಸಾಚ. ೧೦೪); ಅಗಾಧ ಸಂದಣಿಯೊಂದಿಗೆ ರಾಯ ಜೈತ್ರಯಾತ್ರೆ ಹೊರಟವನು (ಅಳಿಕ. ೨೦). [ ಜೈತ್ರ + ಯಾತ್ರೆ ]

**ಜೈತ್ರರಥ** (ನಾ). ಜಯವನ್ನು ಸಾಧಿಸಿ ಕೊಡುವ ರಥ ; ಗೆಲ್ಲುವ ರಥ : "ಗೆಲ್ವ ರಥಮಾಳೋಚಿಸಲು ಜೈತ್ರರಥಮಕ್ಕು" (ಮಂಗರಾ. ೮೪-೨೪). [ ಜೈತ್ರ + ರಥ ]

**ಜೈತ್ರಲಕ್ಷ್ಮಿ** (ನಾ). ಜಯದ ದೇವತೆ ; ಜಯಲಕ್ಷ್ಮಿ : ಮಹೀಚಕ್ರ ಸಂಸ್ತುತದೋರ್ದ್ದಂಡಳ . . . ದಿಗ್ವರ್ತಿತ ಜೈತ್ರಲಕ್ಷ್ಮಿ ಭರತ ಶ್ರೀಮಚ್ಚಮೂವಲ್ಲಭಂ (ಎಕ. VI, ಚಿಕ್ಕಮ. ೧೬೦-೮೭ ; 1187). [ ಜೈತ್ರ + ಲಕ್ಷ್ಮಿ ]

**ಜೈತ್ರಾಸ್ತ್ರ** (ನಾ). ಜಯವನ್ನು ಸಾಧಿಸಿ ಕೊಡುವ ಅಸ್ತ್ರ; ಗೆಲ್ಲುವ ಅಸ್ತ್ರ: ಜೈತ್ರಾಸ್ತ್ರನ್ನಿನಗೀ ಚಕ್ರರತ್ನದಿಂ ಪೆಱತುಂಟೇ (ಆದಿಪು. ೧೪-೦೨). [ ಜೈತ್ರ + ಅಸ್ತ್ರ ]

**ಜೈತ್ರೋರ್ವರೆ** (ನಾ). ಜಯದ ಭೂಮಿ : ಮಳಯಾನಿಳಂ ಸುಳಿದು ಕಾಲಕ್ಷೇಪಮಂ ವಿಷ್ಣುಭೂಪನ ಜೈತ್ರೋರ್ವರೆಯಲ್ಲಿ ಮಾಡುವುದು ಕಾವೇರೀನದೀತೀರದೊಳ್ (ಎಕ. V, ಹಾಸನ. ೫೩-೯ ; 1170). [ ಜೈತ್ರ + ಉರ್ವರೆ ]

**ಜೈದ** (ನಾ). ಒಂದು ವಂಶದ ಹೆಸರು (?) : ದಕ್ಷಿಣಸ್ಯಾಂ ದಿಶಿ ಬೆಳ್ಗಲ್ಲಿ ಗೆಱೆಯಾ ಒಳಗೆಱೆಯಾ ಪಳ್ಳದಾ ಕೂಡಲ್ದಕ್ಷಿಣ ಪಶ್ಚಿಮಾಯಾನ್ದಿಶಿ ಜೈದರಾ ಕೆಯ್ಯಾ ಬೆಳ್ಗಲ್ಲೊಱಿಡು (ಎಕ. IV, ನಾಗಮಂ. ೮೫-೬೨ : 776). [ ? ]

**ಜೈನ** (ಗು). ೧. ಜಿನನಿಗೆ ಸಂಬಂಧಿಸಿದ,–ಸೇರಿದ. (ನಾ). ೨. ಜಿನಮತದ ಅನುಯಾಯಿ ; ಜೈನಮತಕ್ಕೆ ಸೇರಿದವನು: ಜೈನನನುಪೇಕ್ಷಿಪೊಡಂತವ ಜೈನನೆ (ಸಮುಪ. ೪-೬೩); ಪಿನಾಕಿಭವನವನೊಬ್ಬ ಜೈನನು ಕೆರಹುಗಾಲ್ವರಿಸಿ ನೀಕರಿಸಿ ಹುಗಲೊಳಗೆ (ಬಸಪು. ೪೮-೮): ಹಿಂದು ಜೈನ ಮುಸ್ಲೀಮ ಕ್ರೈಸ್ತರಾವೊಂದೇ ಬಾಂಧವರು (ಗೀವಿಂ. ೪೬-೪). ೩. ಜೈನ ಗುರು : "ಜೈನರ್ ದಿಗಂಬರರ್ ಜೀವಕರ್ ಮಲಧರರ್ ತಾನಜೀವರ್ ಕ್ಷಪಣರೆನೆ ಗುರುಗಳಕ್ಕು" (ಮಂಗರಾ. ೬೬-೦). ೪. ಜಿನ ; ಅರ್ಹಂತ. 'ಜೈನಗೃಹ', 'ಜೈನಬಿಂಬ' ಪರಾ. ೫. ಜೈನಮತ ; ಜೈನಮತದ ಅಥವಾ ಜೈನ ಧರ್ಮದ ತತ್ವ: ಪುರುಳಿಲ್ಲದಂಗೆ ಜೈನಂ ದೊರೆಕೊಂಡುಂ ದುಶ್ಚರಿತ್ರಮಂ ಬಿಡದುದಱಿಂ ಚಿರಕಾಲಂ ನಿಲಲಱಿಯದು (ಸಮುಪ. ೪-೩೮): ಜೈನವೇ ಸಿದ್ಧ ಬದ್ಧ ನಾರಕಿಗಳು ಎಂಬ ಪುರುಷತ್ರಯಲಕ್ಷಣಂಗಳಂ . . . ಪ್ರತಿಪಾದಿಸುವುದು (ವಿವೇಕ. ೮). [ ಸಂ. ]

**ಜೈನಗೃಹ** (ನಾ). ಜಿನ ದೇವಾಲಯ ; ಜಿನಾಲಯ ; ಬಸದಿ : ದೆಸೆಗಳ್ ಪೆರ್ಚದೆ ಮೊಟ್ಟನಾದುವಗಲಕ್ಕೆಂಬನ್ನೆಗಂ . . . ವಸುಧೆಗಾ ಕಲ್ಪಾಂತಮೆಂಬಂತು ಮಾಡಿಸಿದಂ ಜೈನಗೃಹಂಗಳಂ (ಆದಿಪು. ೦೫-೪೭). [ ಜೈನ + ಗೃಹ ]

**ಜೈನಗೇಹ** (ನಾ). =ಜೈನಗೃಹ: ಗಿರಿರಾಜಂಗೊಟ್ಟಜಂಗೊಟ್ಟಪೊಲೆಸೆದುದದೇಂ ದಿವ್ಯಮೋ ಜೈನಗೇಹಂ (ಶಾಂತಿಪು. ೨-೧೦೭): ನವರತ್ನ ವಿನಿರ್ಮಿತನೂತ್ನ ಜೈನಗೇಹಮನತಿಭಕ್ತಿಯಿಂದೆ ಬಲವಂದು (ಪುಷ್ಪಪು. ೩-೭೫). [ ಜೈನ + ಗೇಹ ]

**ಜೈನಜನ** (ನಾ). ಜೈನಮತದ ಜನ : ಜಯಶ್ರೀಗೊಲವನೀಯೆ ನೆಗಟ್ದಂ ಭೂಗಧಿಪತಿ ಜೈನಜನಮನೋಹರಚರಿತಂ (ಚಂದ್ರಪು. ೨-೧): ಕಾಣದೆ ಮುಂದಂ ದೆಸೆಗೆಟ್ಟ ಜೈನಜನಕೆಲ್ಲಂ ಲೋಚನಂ ತಾನೆನಲ್ಕುದಯಂಗೆಯ್ದನ್ (ಎಕ. VIII, ಸೊರಬ. ೨೮-೪೫ ; 1208). [ ಜೈನ + ಜನ ]

**ಜೈನತನ** (ನಾ). ಜೈನಪದ್ಧತಿಯನ್ನು ಅನುಸರಿಸುವಿಕೆ ; ಜೈನನಾಗಿರುವಿಕೆ: ಅವನ ಮಕ್ಕಳ್ಗಡ ಮಾರ್ತಾಂಡಂಗೆ ಭಕ್ತರೆನಿಪಾ ಭಂಡಂಗಂ ಜೈನತನದ ಪೆಸರೆಂತೆಸೆಗುಂ[ಪಾಠಾಂ. ಉತ್ತಮದ ಜೈನವೆಸರೆಂತೆಸೆಗುಂ] (ಸಮುಪ. ೯-೦೨೫). [ ಜೈನ + – ತನ ]

**ಜೈನದೀಕ್ಷಿತ** (ನಾ). ಜೈನದೀಕ್ಷೆಯನ್ನು ಹೊಂದಿದವನು,–ಪಡೆದವನು: ನಾನಾ ವಿಧದಿಂದಮೇಂ ನಮೆದು ನಾರುಗಿದಿರ್ದರೋ ಜೈನದೀಕ್ಷಿತರ್ (ಶಾಂತಿಪು. ೮-೦೨೯). [ ಜೈನ + ದೀಕ್ಷಿತ ]

**ಜೈನದೀಕ್ಷೆ** (ನಾ). ೧. ಜೈನ ಸಂನ್ಯಾಸದ ದೀಕ್ಷೆ,–ವೈರಾಗ್ಯದ ದೀಕ್ಷೆ : ಜಗನ್ನುತ ಸ್ವಯಂಪ್ರಭಗುರುಪಾದಮೂಲದೊಳೆ ಕೊಂಡನಖಂಡಿತ ಜೈನದೀಕ್ಷೆಯಂ (ಆದಿಪು. ೨-೩೯). ೨. (ಅಲಂ). ಅಹಿಂಸಾವ್ರತ: ಜೈನದೀಕ್ಷೆಯ ಹಿಡಿದುದೆನ್ನ ಸಮಾನ ಸುಭಟರು ಜಯಸಿರಿಯ ಸಂಧಾನ ಮುಱಿದುದು (ಕುವ್ಯಾಕ. ೫-೧೪). [ ಜೈನ + ದೀಕ್ಷೆ ]

**ಜೈನಧರ್ಮ** (ನಾ). ಜಿನನಿಂದ ಬೋಧಿಸಲ್ಪಟ್ಟ ಧರ್ಮ : ಎಲ್ಲ ಧರ್ಮಗಳಿಗಿಂತಲೂ ಜೈನಧರ್ಮವು ಅಹಿಂಸೆಗೆ ಹೆಚ್ಚು ಮಹತ್ವವನ್ನು ಕೊಡುತ್ತದೆ (ಜೈನಪ. ೬): ಜೈನಧರ್ಮವು ವಿಶ್ವದ ಅತ್ಯಂತ ಪ್ರಾಚೀನ ಧರ್ಮಗಳಲ್ಲೊಂದಾಗಿದೆ (ಭಾರದ. ೧೬೮). [ ಜೈನ + ಧರ್ಮ ]

**ಜೈನಬಸ್ತಿ** (ನಾ). ಜೈನರ ಬಸದಿ,–ದೇವಾಲಯ ; ಜಿನಾಲಯ: ಹಲಸಿಯಲ್ಲಿರುವ ಜೈನಬಸ್ತಿಯು ಕದಂಬರ ಕಾಲದ ಅತ್ಯಂತ ಪುರಾತನ ಕಟ್ಟಡವೆಂದು ಹೇಳಬಹುದು (ಭಾರದ. ೫೦೦). [ ಜೈನ + ಬಸ್ತಿ (<ಬಸದಿ) ]

**ಜೈನಬಿಂಬ** (ನಾ).=ಜಿನಪ್ರತಿಮೆ : ಪೊಸಮುತ್ತಿನ ಮಂಡಪದೊಳಗೆಸೆವ ಕನತ್ಕನಕ ಪೀಠದೊಳ್ ವಿಧಿಸಹಿತಂ ಮಿಸಿಸಿ ಬಱಿಕ್ಕರ್ಚಿಸಿ ಪೂಜಿಸಿ ಮಣಿಮಯ ಜೈನಬಿಂಬಮಂ (ಶಾಂತಿಪು. ೬-೩೦). [ ಜೈನ + ಬಿಂಬ ]

**ಜೈನಮತ** (ನಾ). = ಜಿನಮತ : ಜಿನರು ಪ್ರತಿಪಾದಿಸಿದ ಮತವು ಜೈನಮತವು (ಜೈನಧ. ೧). [ ಜೈನ + ಮತ ]

**ಜೈನಮುನಿ** (ನಾ).=ಜಿನಮುನಿ : ಜೈನಮುನಿ ಸಂಕುಲವಿದೆವ್ಮೊಡನಬ್ಬಲೂರೊಳು ಮಲೆವುತಂ ಪ್ರತಿದೋಱಿಯಾಡಲು (ಬಸಪು. ೫೦-೩೦). [ ಜೈನ + ಮುನಿ$_3$ ]

**ಜೈನವೃತ್ತಿ** (ನಾ). ಜೈನಧರ್ಮದ ಆಚರಣೆ,–ವ್ಯವಹಾರ : ಮಹೇಂದ್ರಜಾಲಾಪರಿಮಿತಾದ್ವಯಶೂನ್ಯಮಾಯಾಕರಣವಿದ್ವಿಪ ಜೈನವೃತ್ತಿಯೊಳಿಂತು ತರ್ಕಿಸಲು (ಬಸಪು. ೫೦-೦೧). [ ಜೈನ + ವೃತ್ತಿ ]

**ಜೈನಶಾಸನ** (ನಾ).=ಜಿನಶಾಸನ : ತದನಂತರದೊಳ್ ಜೈನಶಾಸನ ಚೂಡಾಮಣಿ ಶ್ರೀದೇವಂ ಸೌಧರ್ಮೇಂದ್ರನಿಂದ್ರಾಣಿವೆರಸು ತನ್ನ ವಿಮಾನಕ್ಕೆ ಬರ್ಪುದನಱಿದು (ಶಾಂತಿಪು. ೬-೩೧). [ ಜೈನ + ಶಾಸನ ]

**ಜೈನಸಮಯ** (ನಾ).=ಜಿನಸಮಯ : ಶ್ರೀಮದಶೇಷ ಜೈನಸಮಯೈಕಶಿರೋಮಣಿ ಸರ್ವಜೀವರಕ್ಷಾಮಣಿಯೆಂದು ಭವ್ಯತತಿ ಬಿಚ್ಚಳಿಸುತ್ತಿರೆ (ಶಾಂತಿಪು. ೧-೦ ಪಠಿ). [ ಜೈನ + ಸಮಯ ]

**ಜೈನಸ್ತವ** (ನಾ). ಅರ್ಹಂತನ ಸ್ತುತಿ; ಜಿನಸ್ತುತಿ: ದೇವತೂರ್ಯನಗದೇವೀಗೀತ ಜೈನಸ್ತವ ಸಮುಪಹಿತಾತ್ಮೀಯಚಿತ್ತಂ ವಿಲಾಸಂ ಮಿಗೆ . . . ಮಹೋತ್ಸಾಹದಿಂ ಬಂದನಾಗಳ್ (ಆದಿಪು. ೮-೪೩). [ ಜೈನ + ಸ್ತವ ]

**ಜೈನಾಗಮ** (ನಾ). ಜೈನಸಿದ್ಧಾಂತ : ಸೂಕ್ತಂ ಭವ್ಯಜನ ಪ್ರವ್ಯಕ್ತಂ ಜೈನಾಗಮೋಕ್ತಮಿಂ ನಿನಗೆ ಮದೀಯೋಕ್ತಮಿವೆರ್ದೆಯೋಳ್ ನೆಲಸುಗೆ (ಆದಿಪು. ೫-೬೧). [ ಜೈನ + ಆಗಮ ]

**ಜೈನಾಗಮವಿದ** (ನಾ). ಜೈನಸಿದ್ಧಾಂತವನ್ನು ಬಲ್ಲವನು,–ತಿಳಿದವನು: ಜೈನಾಗಮವಿದರಂ ಸಾರದೆ ಪೋಗಿ ಕುಲಿಂಗಿಗಳನೀ ಜನಂ ಸೇವಿಸುಗುಂ (ಆದಿಪು. ೧೫-೩೫). [ ಸಂ. ಜೈನಾಗಮವಿದ್ ]

**ಜೈನಾಗ್ರಹಾರ** (ನಾ). ಜೈನರ ಅಗ್ರಹಾರ ; ಜೈನರ ಉಪಾಧ್ಯಾಯರು ವಾಸಮಾಡುವ ಗ್ರಾಮ: ಪಲವು ಜೈನಾಗ್ರಹಾರಂಗಳನಾಗಳ್ ಕೊಟ್ಟನಲ್ಲಿ ರತ್ನತ್ರಯ ಮಂಜುಳ ಜೈನೋಪಾಧ್ಯಾಯರ ಬಳಗಕ್ಕೆ (ಶಾದಪು.೧೬-೩೮೦). [ ಜೈನ + ಅಗ್ರಹಾರ ]

**ಜೈನಾಚಾರ್ಯ**(ನಾ). ಜೈನರ ಆಚಾರ್ಯ,–ಗುರು: ತಿರುವಾಕರೀಶನೆಸಿಪ್ಪ ಜೈನಾಚಾರ್ಯನೊರ್ಬನು ಜಿನಸಮಯಮುಖ್ಯನು (ಬಸಪು. ೪೯-೨೬). [ ಜೈನ + ಆಚಾರ್ಯ ]

**ಜೈನಾಲಯ** (ನಾ). = ಜೈನಗೃಹ : ಮುನೀಂದ್ರರಿಲ್ಲದಗಮಿಲ್ಲಾತೋದ್ಯದುದ್ಯೋಗಮಿಲ್ಲದ ಜೈನಾಲಯಮಿಲ್ಲ ನೋಡದಱಿೊಳ್ (ಶಾಂತಿಪು. ೯-೧೩೩). [ ಜೈನ + ಆಲಯ ]

**ಜೈನುಂಡೆ** ‘ಜೇನುಂಡೆ’ ನೋ.

**ಜೈನೋಕ್ತಿ** (ನಾ). ಜಿನನ ಮಾತು; ಅರ್ಹಂತನ ವಚನ: ಸೌಧರ್ಮಕಲ್ಪಕ್ಕೆ ಭಾವನೆ ಜೈನೋಕ್ತಿಯೊಳಾಗೆ ದುರ್ಗತಿಗಮಾ ಜೀವಕ್ಕಮೇಂ ಸಮ್ಮದಂ (ಶಾಂತಿಪು. ೭-೦೨). [ ಜೈನ + ಉಕ್ತಿ ]

**ಜೈಮಿನೀಯ** (ಗು). ೧. ಜೈಮಿನಿಮುನಿಗೆ ಸಂಬಂಧಿಸಿದ. (ನಾ). ೨. ಜೈಮಿನಿಮುನಿಯಿಂದ ರಚಿತವಾದ ಧರ್ಮಮೀಮಾಂಸೆ; ಆರು ಆಸ್ತಿಕ ದರ್ಶನಗಳಲ್ಲಿ ಒಂದು ; ಪೂರ್ವ ಮೀಮಾಂಸೆ : ಈ ಮೂಲ ತತ್ತ್ವಾನ್ವೇಷಣರೂಪದಲ್ಲಿ . . . ಯೋಗ, ಜೈಮಿನೀಯ, ಔಪನಿಷದಗಳೆಂಬ ಆರು ಆಸ್ತಿಕ ದರ್ಶನಗಳೂ ಆವಿರ್ಭವಿಸಿರುತ್ತವೆ (ಭಾರದ. ೨೨೯). ೩. ಜೈಮಿನಿಮುನಿಯ ಅನುಯಾಯಿ ; ಮೀಮಾಂಸಕ. [ ಸಂ. ]

**ಜೈಲು, ಜೇಲು** (ನಾ). ಸೆರೆಮನೆ ; ಬಂದಿಖಾನೆ ; ಕಾರಾಗೃಹ : ಹದಿಮೂರು ವರ್ಷದವನು ಕಳ್ಳನಾದರೆ ಅವನಿಗೆ ಜೈಲಾಗುವುದಿಲ್ಲ (ಜೀವಾತ್ಮ. ೨೬೫): ಜೈಲಿನಲಿ, ಅಧಿಕಾರಿಗಳ ಕ್ರೂರದರ್ಪದಲಿ . . . ಮುಂದಿಟ್ಟ ಕಾಲ ಹಿಂದೆಗೆಯದಳಿಪವನು ಸತ್ಯಾಗ್ರಹಿ (ಪಾಂಚಜ. ೨೦). **ಜೇಲು:** ಜೇಲಿನ ವಾತಾವರಣ ನಿಜವಾಗಿಯೂ ಉಸಿರುಕಟ್ಟುವ ವಾತಾವರಣ (ಆಪ್ತ್ಯಾರ್ಪ. ೪). ಜೇಲಿನ ಗೋಡೆ ಹಾರಲಿಕ್ಕಾಗಲಿಲ್ಲ (ಭಾರಶಿ. ೮೦). [ ←ಇಂ. Jail ]

**ಜೈವ** (ಗು). ಜೀವಕ್ಕೆ ಸಂಬಂಧಿಸಿದ. ‘ಜೈವಕ್ರಿಯೆ’ ಪರಾ. [ ಸಂ. ]

**ಜೈವಕ್ರಿಯೆ** (ನಾ).ಜೀವಕ್ಕೆ ಸಂಬಂಧಿಸಿದ ಕ್ರಿಯೆ: ಜೈವಕ್ರಿಯೆಯಿಂದಾಗುವ ಅಂಗವೃದ್ಧಿ, ಒಂದುಗೂಡಿಕೆ (Accretion. ಇಂಕನಿ.). [ ಜೈವ + ಕ್ರಿಯೆ ]

**ಜೈವಾತೃಕ** (ನಾ). ೧. ದೀರ್ಘಾಯುಸ್ಸನ್ನು ಉಳ್ಳವನು; ದೀರ್ಘಾಯು: “ಜೈವಾತೃಕನುಮಾಯುವಂತನೆನಿಸಿಕ್ಕು” (ಮಂಗರಾ. ೬೧-೦೮). ೨. ಚಂದ್ರ: “ಇಂದು ಜೈವಾತೃಕಂ . . . ದ್ವಿಜರಾಜನೆನೆ ಸುಧಾಂಶುವೆನಿಕ್ಕು” (ಮಂಗರಾ. ೦೧-೪): ಶರಧಿಯೊಳು ಜೈವಾತೃಕಂ ಪುಟ್ಟ ಜಗಕೆ ಪ್ರಭೆ ಮೆಱೆವಂತೆ (ಪ್ರಭುರಾ. ೧-೨೨). ೧, ೨ : ನಾಡಿಗರೊಳೆಲ್ಲರುಂ . . . ಜೈವಾತೃಕರ್ ದೋಷಾಕರರಲ್ತು (ರಾಮಾಶ್ವ. ೭-೨೪). [ ಸಂ. ]

**ಜೈಸು** ‘ಜಯಿಸು’ ನೋ.

**ಜೊ** ‘ಜೋ’ ನೋ.

**ಜೊಂಗುಳಿ** (ನಾ). ಬವಳಿ ; ಮೂರ್ಛೆ ; ಮೈಮರೆವು : “ಮುಚ್ಚಿ ಜೊಂಗುಳಿ[ಪಾಠಾಂ. ಜಂಗುಳಿ]ಹರವಸಂ ಮೂರ್ಛೆ ತಾನಕ್ಕು” (ಕಬ್ಬಮಂ. ೫೬): ಝುಳಕಂ ಝುಳಿಪಿಸಿದಂ ಜೊಂಗುಳಿ ಬೊಂಬುಳಿಯಾಳವಾಳವಂತೆ . . . ಗೋಳಿ ಪೇಳಿ ಆಟ ಸಂದೇಹಂ (ಶಮದ. ೨೫): ನಡುಗುತಿಹುದೊಡಲು ತೆಪ್ಪತ್ತು ತಲೆಯೆತ್ತಿ ಪೊತ್ತಿಕ್ಕೆ ಜೊಂಗುಳಿಗೆ ಬೆಪ್ಪಳಿಸುವಾಸರಿಂ ಬೆಳ್ಳ ಬರುತಿಹಳು (ಕಾಲೂರ. ೦೬೭-೩೭೩). [ ? ]

**ಜೊಂಗೆ** ‘ತೊಂಗೆ’ ನೋ.

**ಜೊಂಜಾಟ** ‘ಜಂಜಡ’ ನೋ.

**ಜೊಂದಗರ್ಬುರ್** 'ಜೊಂದೆಗರ್ಬುರ್' ನೋ.

**ಜೊಂದಿಂಗ** 'ತೊಂಡಂಗಿ' ನೋ.

**ಜೊಂಡಿಗ** 'ತೊಂಡಂಗಿ' ನೋ.

**ಜೊಂಡು$_1$** (ನಾ). ೧. ತಲೆಯ ಹಗರು,-ಹೊಟ್ಟು : (ಆ).
[ ದೇ.॥ ತಮಿ. ಚುಣ್ಣು ; ತೆಲು. ಚುಂಟು. ]

**ಜೊಂಡು$_2$**, ಜಂಡು (ನಾ). ೧. ನೀರಿನಲ್ಲಿ ಬೆಳೆಯುವ ಒಂದು ಬಗೆಯ ಹುಲ್ಲು; ಹೊಡಕೆ; ಆಪು: ಆಗ ಜೊಂಡುಗಳ ನಡುವೆ ಅವಿತುಕೊಂಡಿದ್ದ ಪಠಾಯಿತರು ತಟ್ಟನೆ ಕಾಣಿಸಿಕೊಂಡು . . . ಬಂದರು (ಜಗಜ್ಯೋ. ೯): ಕೊಳದಲ್ಲಿ ಜೊಂಡು ಬೆಳೆದು ನೀರನ್ನು ಮುಚ್ಚಿರುವಂತೆ (ವಢಭಾ. ೧೫೭): ಆನೆಯಾಗಿ ಜೊಂಡು ತಿನ್ನುವುದಕ್ಕಿಂತ ಇರುವೆಯಾಗಿ ಸಕ್ಕರೆ ತಿನ್ನುವುದು ಮೇಲು (ಗಾದೆ). ೨. ನೀರಲ್ಲಿ ಕೊಳೆತು ನಾರುವ, ಕೆಸರುಗಟ್ಟಿದ ಕಸ; ನೀರಿನ ಮೇಲೆ ತೇಲುವ ಕೊಳೆತು ನೊರೆಗಟ್ಟಿದ ಸೊಪ್ಪುಸದೆ ಮೊದಲಾದವು: ಏಸೋ ಈಶರು ದಾಸರಾಗಿ ಕೈಂಕರ್ಯದಲಿ ಜನದ ಬದುಕನು ತಿದ್ದಿ ಹಸನುಗೊಳಿಸಿ . . . ಮಲಗಿಹರು ನಾವು ನೊರೆ ಕೆರೆಗಳೋ ಜೊಂಡು ಪಾಚಿ (ಭಾವಜೀ. ೧೩-೨೫೨). **ಜಂಡು:** ೨. ಮನೆ ಎಂದರೆ ಜಂಡಿನ ಕೆರೆ. ಮಸಣಕ್ಕಿಂತಲೂ ಹೊಲಸಾಗಿದೆ (ಪದ್ಮಸ. ೨೭೪).

**ಜೊಂಡು$_3$** 'ದೊಂಡೆ$_1$' ನೋ.

**ಜೊಂಡುಮೀಸೆ**(ನಾ). ಜೊಂಡಿನಂತೆ ಬೆಳೆದ ಮೀಸೆ. [ಜೊಂಡು$_2$+ ಮೀಸೆ]

**ಜೊಂಡೆ** 'ದೊಂಡೆ$_1$' ನೋ.

**ಜೊಂದೆಗರ್ಬುರ್**, ಜೊಂಡಗರ್ಬುರ್ (ನಾ). ಒಂದು ಬಗೆಯ ಕಬ್ಬು: ತೋರಣಸ್ತಂಭಂಗಳಾಗಿ ಪೂಜೆಗಟ್ಟಿ ನಿಜಿಸಿದ ಜೊಂಡೆಗರ್ಬಿನ ತೆನೆಗಳ್ (ಲೀಲಾವ. ೧೦-೫೫ ವ). **ಜೊಂಡಗರ್ಬುರ್:** ಮಗಮಗಿಪ ಧೂಪದಿಂ ಜೊಂಡಗರ್ಬಿನಿಂ ವಣ್ಪಲಂಗಳಿಂ . . . ಬಗೆಗೊಳಿಕುಂ ಚಿತ್ರಶಾಲೆ (ಮದತಿ. ೧೦-೨೭). [ ಜೊಂಡೆ? + ಕರ್ಬುರ್ (<ಕರ್ವುರ್$_1$) ]

**ಜೊಂಡೇಳ್** (ಕ್ರಿ). ಮುದ್ದೆ ಮುದ್ದೆಯಾಗು ; ಗಿಜಿಗಿಜಿಯಾಗು : ತೋಳು ತೊಡೆ ಜೊಂಡೆದ್ದು ರಕುತದ ಸಾಲುಗೊಳಚೆಯ . . . ಮಂಚದ ಮೇಲೆ ರಣದಲಿ ಭೀಷ್ಮ ಪವಡಿಸಿದ (ಕುಮಾ,ಭೀ. ೧೦-೧೧) : ಓಂಡುಗೊಂಡು ಜೊಂಡೇಳ್ದ ಕಾಳ್ಕೆದುಳ ಕೊಳ್ಕೆಸಟ್ (ರಾಜಶೇ. ೫-೧೨೦ ವ).
[ ಜೊಂಡು$_3$ (<ದೊಂಡೆ$_1$) + ಏಳ್$_1$ (<ಏೞ್$_1$) ]

**ಜೊಂಡೊಡೆ** (ಕ್ರಿ). = ಜೊಂಡೇಳ್ : ಜೊಂಡೊಡೆದುದು ರಕ್ತಾಂಬು ರಾಸಿಯು ಪಂಡೆಗಟ್ಟ್ಯಾಯ್ತು (ಅಂಬಿಕಾ. ೧೭-೫೭).
[ ಜೊಂಡು$_3$ (<ದೊಂಡೆ$_1$) + ಒಡೆ$_1$ ]

**ಜೊಂಪ$_1$**,ಜಂಪ$_1$, ಜಂಪು$_2$, ಜೊಂಪು$_2$, ಜೊಂಪೆ, ಜೋಂಪ, ಜೋಂಪು$_2$ (ನಾ). ೧. ಗೊಂಚಲು; ಗುಚ್ಛ: "ಪದೆದು ತೊಂಗಲ್ . . . ಜೊಂಪಂ ತೊಂಗೆ ಗುಚ್ಛಮೆಂದಿರದೊಳ್ಕೆ ಪದೆದ ನಾಮಂ" (ಕಬ್ಬಿಗ. ೧೯). ೨. ಸಮೂಹ ; ಮೊತ್ತ ; ರಾಶಿ : ಉರಗನ ಜೊಂಪದಂತೆ ಸುರಿಯುತ್ತಿರೆ ಪೆರ್ಮುಗಿಲ್ (ಅನಂಪು. ೪-೧೯): ಮೊಗಸಸಿಯಿಂ ಪಸರಿಪ ಜೊನ್ನದ ಜೊಂಪದಂತೆಯುಮೆಸೆವ . . . ಮೆಯ್ಸಿರಿವಡೆದಿರ್ಪಂ (ಜಗಮಂ. ೦೯-೨೦). ೩. ಬಳ್ಳಿಮಂಟಪ: ಕಾವಣ ; ಕುಂಜ: ಅಲ್ಲಿಯ ಸುರತರುಗಳ ತಣ್ಣೆಲ್ಗಳೊಳಂ ಕಲ್ಪಲತೆಯ ಜೊಂಪಂಗಳೊಳಂ (ಆದಿಪು. ೨-೦೪ ವ) : ಚಂದನವೀಧಿ ಸಂಪಗೆಯ ಜೊಂಪಂ ಮಾಧವೀ ಮಂಡಪಂ (ಪಂಪಭಾ. ೦-೧೦೦): ಏಳವಳ್ಳಿಯ ಬಳಸಿಂಗೊಳಗಾದಸುಗೆಯ ಜೊಂಪಂಗಳೊಳ್ . . .ೞಗಿಲೆಯಂತೆ ಕೂಟಮನೊಡರ್ಚೆಯುಂ (ಕಬ್ಬಿಕಾ. ೧೨೫). ೪. ಪೊದೆ ; ಹೊದರು : ಸುತ್ತುಂ ನೀಳ್ದ ಪೊಟೆದುಂಗೆಯ ಜೊಂಪಮುಂ ವಿರಾಜಿಸೆ (ರಾಮಾಶ್ವ. ೩೦-೨೦). ಜಂಪು$_1$: ೨. ಪೆಣನ ಜಂಪ [ಪಾಠಾಂ. ಜಂತ, ಜೊಂಪ]ದ ನಿಟ್ಟೆಲುವಿನುಬ್ಬಣದ ತೊಂಗಲುಗರುಳ . . . ಸಂದಣಿಯ (ತೊರೆರಾ. ೬-೩೭-೪೯). **ಜಂಪು$_2$ :** ೧. ಉಳ್ಳಿಗಳ ಜಂಪಂ[ಪಾಠಾಂ. ಪ್ಪ]ಶಿರೋಮಾಲೆಗಳನಿಕ್ಕಿ ಉಳ್ಳಿಗಳ ಬಾಹುಬಳೆ ಕಂಠಮಾಲೆಯನಿಕ್ಕಿ (ಬಸರ. ೧೧-೦೨೧). **ಜೊಂಪು$_2$ :** ೧. ಅರಿಸಿನವುಂ ಪೇಸದೆ ಪೂಸಿ ಕಟ್ಟಿ ಬಾಸಿಗಮುಂ ಜೊಂಪಂ [ಪಾಠಾಂ. ಕೋಲಂ] ಪಿಡಿದು ಕುಣಿವರ್ (ಸಮುಪ. ೯-೯೩). **ಜೊಂಪೆ :** ೧. "ತೊಂಗಲ್ . . . ಜೊಂಪೆ ನೀಡುಂ ಕೊಡಂಬೆಯುದು ಗುಚ್ಛ ತಾನಕ್ಕುಂ" (ಶಬ್ದಮಂ. ೨೫): ಪ್ರಭುಗಳು ಮುತ್ತಿನ ಜೊಂಪೆಗಳಿಂದ ಕೂಡಿದ ನವರತ್ನ ಖಚಿತವಾದ . . . ತೋಡವನ್ನು ಕುವರನ ಬಲಗಾಲಿಗೆ ಬಹುಮಾನಿಸಿದರು (ಪಾಂಶಲಾ. ೨೦೭); ಬೀಗದ ಕೈ ಜೊಂಪೆಯನ್ನು ತೆಗೆದುಕೊಂಡು ಹೊರಡಿ (ಮುಸುಗ. ೧೨೪) : ಶಂಖವೋ ಪದ್ಮವೋ, ಹುಲ್ಲೆಯೋ, ಹೂವಿನ ಜೊಂಪೆಯೋ ಅವುಗಳ ಕೈಯಲ್ಲಿ ಮೈಯಲ್ಲಿ ಇರುತ್ತದೆ (ಸೌಂದಸ. ೦೩೪). **ಜೋಂಪ:** ೧.ದಂಪತಿಯುಷ್ಮ ಜೋಂ[ಪಾಠಾಂ. ಜೊಂ]ಪಮಂ ಪಳಲವದಿಂದೆ ಸಿಂಪಿಸುತುಮಿರ್ಪ ಸುಧಾಕರಕಾಂತ ನಿರ್ಝರಾವಳಿ ಬಗೆಗೊಷ್ಮ (ಜಗವಿ. ೯-೯೨). ೨. ಮರುಸ್ಥಳದ ಮಾಳದೊಳ್ ನಡುಪಗಲ್ಪರಂ ಗ್ರೀಷ್ಮದೊಳ್ . . . ಬೇವವರ್ಗೆ ಜೋಂಪವಿಮ್ಮಾವು ನಿರ್ಝರಾಂಬು ದೊರೆಕೊಳ್ವವೊಲ್ (ಆದಿಪು. ೦೩-೮೭). **ಜೋಂಪು$_2$ :** ೧. ಕುಡಿವಡೆದ ಮಾಮರಗಳೊಳ್ಸಹ ಜೋಂಪು ಕುಸುಮಗಳ (ಅಂಬಿಕಾ. ೩-೩). 'ತೊಂಬೆ$_1$' ಪರಾ.

**ಜೊಂಪ$_2$** 'ಜೊಂಪು$_1$' ನೋ.

**ಜೊಂಪಡಿ**, ಜೋಪಡಿ (ನಾ). ಗುಡಿಸಲು ; ಕುಟೀರ : ಗಂತ್ರಿಗಾರ ಜೊಂಪಡಿಯಲ್ಲಿ ಕರಿಯನು . . . ದಿನಗಳೆಯುತ್ತಿದ್ದನು (ಮುಂಗಾರು. ೧೨೫) : ಮುದಿಕೂಲಿಯು ನಮ್ಮನ್ನು ತನ್ನ ಜೊಂಪಡಿಯಲ್ಲಿ . . . ಕೂತುಕೊಳ್ಳಿಸುತ್ತಿದ್ದನು (ಕಲಿಕ. ೨೨). **ಜೋಪಡಿ :** ಆಹ್ವಾನಿತರ ಆನೆ, ಕುದುರೆ, ಒಂಟೆ, ಎತ್ತು ಇವುಗಳಿಗೆ ಜೋಪಡಿಗಳೂ, ಮೇವು, ನೀರು . . . ಎಲ್ಲಾ ಏರ್ಪಾಡುಗಳೂ ಸಮರ್ಪಕವಾಗಿ ಆದವು (ಪಾಂಶಲಾ. ೯೯): ತೆಂಗುಗರಿ ಜೋಪಡಿಯ ಜಾಡಮಾಲಿಯ ಬದುಕು ತಪ್ಪಲಿಲ್ಲ (ನಡದಾ. I. ೩೩೨) : ಮುರಕಲು ಹುಲ್ಲು ಜೋಪಡಿಗಳೂ, ಬಡಕಲು ಎತ್ತುಗಳೂ, ಈ ಜನರ ವಿಶಿಷ್ಟ ಆಸ್ತಿ (ಪಂಜಪಂ. ೦೪೫).
[ <ಪ್ರಾ. ಝುಂಪಡಾ./ಹಿಂ. ಝೋಂಪಡೀ, ಝೋಪಡೀ : ಮರಾ. ಝೋಂಪಡೀ ]

**ಜೊಂಪಲು** (ನಾ). ಗುಂಪು ; ಸಮೂಹ : ಪೂರ್ಣಚಂದ್ರನ ಕಿರಣದ ಜೊಂಪಲು ಬಿದ್ದು ಪೂರ್ಣಪೂರ್ಣಗೌರವದಿಂದ ಪ್ರಕಾಶಗೊಂಡಾ ಸುಂದರ ರಮಣಿಯ ವದನವು (ಕೋಹಿನೂ. ೪೦).
[ ಜೊಂಪ$_1$ + – ಅಲು (< – ಅಲ್$_2$) ]

**ಜೊಂಪಿಸು$_1$**, ಜೋಂಪಿಸು$_1$, ಝುಂಪಿಸು$_1$, ಝೊಂಪಿಸು$_1$, ಝೋಂಪಿಸು$_1$ (ಕ್ರಿ). ೧. ಮತ್ತಿನಿಂದ ಎಚ್ಚರ ತಪ್ಪು ; ಅಮಲೇರಿ ಮೈಮರೆ: ಕರ್ಣದಲ್ಲಿ ಕೇಳಿ ಜೊಂಪಿಸಿ ತಲೆದೂಗುವುದು ಆದೇನು ಹೇಳಾ (ಮಾಧೂಳ. ೭೫) ; ಬಳಲುತ ಜೊಂಪಿಸುತ್ತವೆ ಬಳಿಯಲ್ಲೈದುವ ಮರುಳುತಂಡವ ಜಜೀವುತ (ಶಾರಿರಾ. ೨೯-೧೮). ೨. ತೂಗಾಡು ; ತೊನೆದಾಡು ; ಹೊಯ್ದಾಡು ; ಜೋಲು : ಕಂಠದ ಬಣ್ಪಂ ಜೊಂಪಿಸುತ್ತುಂ ನಡೆದು ದಡವಿಯೊಳ್ ದೀರ್ಘದೇಹಂ ವರಾಹಂ (ಸೂಕ್ತಿಸು. ೩-೩೯) : ಕಂಪಂ ಕೆಯ್ಕೊಳುತಂ ಮಯ್ ಜೊಂಪಿಸಿ ಬೀಳ್ವಳಿನೀ ನಿಕಾಯ ಸಹಿತಂ . . . ಸಂಪಿಗೆಯಲರ್ದೊಂಗಲಂ ರತೀಶಂಗಿತ್ತಂ (ಗಿರಿಜಾ. ೭-೪) : ನಿರ್ಜರೇಂದ್ರನ ಸೂನು . . . ಜೊಂಪಿಸುತೆ ಮೈಮುಚಿದು ಬಿದ್ದನಿಳೆಯೊಳು (ಜೈಮಿಭಾ. ೨೫-೩೫) : ಮುಂಜಾನೆಯಿಂದ ಸಂಜೆಯ ತನಕವೂ ಕಳ್ಳಿನ ಅಮಲಿನಲ್ಲೇ ಜೊಂಪಿಸತೊಡಗಿದ (ಒಡ್ಡಲು. ೦೨೩). ೩. ಮರುಳಾಗು ; ಮೋಹಗೊಳ್ಳು ; ಬಯಸು : ವಸ್ತ್ರದ ಹುಯ್ಯಲಿಗೆ ಹೂಪತ್ರಿಗಳ ಜಂಜಡಕೆ ಜೊಂಪಿಸದೆ (ಪ್ರಭುಲಿಂ. ೧೭-೧೫). **ಜೋಂಪಿಸು$_1$ :** ೧. ಎಸಳ ಡಿಗೆತ್ತ

ತಾವರೆಗಳೋವರಿಯೊಳ್ ಸುಖನಿದ್ರೆಯಿಂದೆ ಜೋಂಪಿಸುವಳಿಯಂ (ವರ್ಧಪು. ೮-೩೩); ಜೋಂಪಿಸುತುಂ ಬಿಟಿಗ್ಗಳಟುತ್ತ ಪುಲ್ಲೆ ಕಳೆದತ್ತ್ರ ಭಾವದಿಂ ಜೀವಮಂ (ಕುಸುಮಾ. ೧೪-೪೧); ಜೊಂಪಿಸುತ ನಿದ್ದೆಗದ್ದುದು ಚೇತನಂ (ಶ್ರೀರಾಮಾ. ೪೭೮-೪). ಝುಂಪಿಸು$_1$: ೧. ತಲೆದೂಗಿ ಝುಂಪಿಸಿ ಅಂತಃಕರಣ ಕದಡಿ ಆನಂದಿಸುವದು ಭಾವಭಕ್ತಿ (ಮೋಹಮಾ. ೧೬-೬೩). ಝೊಂಪಿಸು$_1$: ೧. ಮೆಯ್ ಮರವಡೆ . . . ಝೊಂಪಿಸೆ ನಿಡುಸುಯ್ಯೆ ಹೆಯಂ ಕರಂ ಜ್ವರಾರ್ತನೆನಿಕ್ಕುಂ (ಲೋಕೋಪ. ೯-೩೬೪). ೨. ನಡೆ ತಡವಾಗೆ ನುಣ್ಣಡಿ ತೊದಳ್ಗೊಳೆ ಝೊಂಪಿಸೆ ಕೆಂಪನಾಳ್ದ ಕಣ್ಗಡಿ . . . ಪೊಳಪೇಱಿ ಕದಂಪು (ಸೂಕ್ತಿಸು. ೦೩-೫): ನೋಟದ ಮೊನೆ ಮುಱಿದು ಝೊಂಪಿಸುತ ಮುಂದಣಿಗೊನೆದು ಬಿದ್ದನು (ಕುವ್ಯಾ.ಕ. ೩-೨೬). ಝೋಂಪಿಸು$_1$: ೧. "ಝೋಂ[ಪಾಠಾಂ. ಜೊಂ]ಪಿಸಿತೆಂದು ಮಱವೆ" (ಕಠಸಾ. ೨೧-೪೩೩): ಇರುಳೋರಂತಿರೆ . . . ಝೋಂಪಿಸೆ ನಿದ್ರಾತುರನಾಗಿ ಪಕ್ಕ ಸಾರ್ವಂತಿರೆ ಸಾರ್ದಂ (ಕಾದಂಬ. ೦೬೩): ಕೆಟ್ಟರೆ ನಿದ್ರೆ ಝೋಂಪಿಸುತ್ತೊಲೆವಡೆ ಸನ್ನಿಪಾತ ವಿದಿತ ಜ್ವರಂ (ಕಲ್ಯಾ.ಕ. ೩-೦೩). ೩. ತರುಣಿಗೆ ಝೋಂಪಿಸಿದೊಡೆ ಬೊಮ್ಮರಕ್ಕಸಂ ದಾರುವರ್ಮನಂ ಮುಳಿಸಿಂ ಸಂಹರಿಸಿದನಂ (ದಶಕು. ೪-೦೧೫). [ ಜೊಂಪು$_1$ + -ಇಸು$_3$ ]

**ಜೊಂಪಿಸು$_2$**, ಜಂಪಿಸು, ಜೊಂಬಿಸು, ಜೋಂಪಿಸು$_2$, ಝುಂಪಿಸು$_3$, ಝೊಂಪಿಸು$_2$, ಝೊಂಬಿಸು, ಝೋಂಪಿಸು$_2$ (ಕ್ರಿ). ೧. ನಡುಗಿಸು; ಕಂಪನಗೊಳಿಸು; ಅಲುಗಾಡಿಸು: (೬). ೨. ಇಡುಗು; ತುಂಬು; ಆವರಿಸು; ವ್ಯಾಪಿಸು: ಜಯಸಬುದ ಜೊಂಪಿಸಿ[ಪಾಠಾಂ. ಝೋಂಪಿಸಿ]ದು ದುಂಬರವ (ಕುವ್ಯಾ.ಸ. ೦೩-೧೧): ತನ್ನೊಳು ಜೊಂಪಿಸುವ ಮನವೆಂಬ ತುಂಬಿಯ ಭಾವ ಮಿಗೆ ತುಂಬಿ (ಪ್ರಭುಲೀ. ೦೬-೩). ೩. ನಡುಗು; ಕಂಪಿಸು: "ನಡುಕವೆನೆ ಜೊಂ[ಪಾಠಾಂ. ಝೊಂ]ಪಿಸಿತ್ತು" (ಶಬ್ದಮಂ. ೭೬): ಸಂಪತ್ತು ತೋಱಿ ತೊಲಗಿತೆಂದು ನೃಪನೆದೆ ಜೊಂಪಿಸೆ ಹಳವಳಿಸಿದರು (ಭರತ. ೭೧-೮೫). ಜಂಪಿಸು: ೧. ಅಗಳು ಮದಿಲುದ್ದದಿಂದಂ ಜಗಮಂ ಜಂಪಿಸೂದೀಗಳೀತನ ಕೋಟೆ (ಮ್ಯಆರಿ. ೦೯೪೧, ೩೧-೪; ?). ಜೊಂಬಿಸು: ೨. ಅಂಬುಜಾಕ್ಷನ ಮುಡಿಯ ಸರಿಸಕೆ ಜೊಂಬಿಸಲು[ಪಾಠಾಂ. ಬೊಂಬಿಸಲು, ಝೊಂಬಿಸಲು]ಝಡಿತೆಯಲಿ . . . ಪೊಱಕ್ಯೆಯಿಂದ ಝಾಡಿಸಿದ (ತೊರವೆ. ೩-೪-೨೫). ಜೋಂಪಿಸು$_2$: ೩. ಜೋಂಪಿಪಂಗಂ ವಿಲುಪ್ತಾಕ್ಷರ ವಾಕ್ಯಂ . . . ಕರವೊಪ್ಪಲ್ ಪಾಡುತ್ತಾಡುತ್ತೆಸೆದುದಸದಳಂ ಮದ್ಯಪಾನಾಂಗನೌಘಂ (ಉದ್ಭಟ. ೫-೮೫). ಝುಂಪಿಸು$_3$: ೨. ಜಗಮಂ ಝುಂಪಿಸುತಿರ್ಪ್ಪ ಕೀರ್ತಿ ಮುಗಿಲಂ ಮುಟ್ಟಿರ್ಪ ಪೆಂಪು (ಎಕ. XI, ದಾವಣ. ೨೫-೭೭; 1224). ಝೊಂಪಿಸು$_2$: ೨. ವಿಕ್ರಮದ ಝುಳ ಜಗವಳುಕೆ ಝೊಂಪಿಸಿತು (ಕುವ್ಯಾ.ದ್ರೋ. ೦೮-೩೧). ೩. ಕಡುಶೋಕದಿಂದೆ ತನು ಝೊಂಪಿಸಲ್ (ಕೃಮಿಥಾ. ೦೯-೫೮). ಝೊಂಬಿಸು: ೨. ಶೋಕಾಡಂಬರದ ಡಾವರ ವಿವೇಕವ ಝೊಂಬಿಸಿತು (ಕುವ್ಯಾ.ಗ. ೪-೦೬). ಝೋಂಪಿಸು$_2$: ೧. ದಿನ ದಿನಕೆ ಹೆಚ್ಚುತಲಿ ಮಾಯಾವನಿತೆಗಂ ಜವ್ವನ ಜಗವ ಝೋಂಪಿಸುತ (ಪ್ರಭುಲೀ. ೩-೩೩): ವಿರಾಧನು . . . ಝುಂಕಿಸುತ ಝೋಂ[ಪಾಠಾಂ. ಝೊಂ]ಪಿಸಿದನು ವಿದೇಹಜೆಯ (ತೊರವೆ. ೩-೧-೯). ೪. ನಿವಾರಿಸು; ಕಳೆ: ಝುಳವ ಝೋಂಪಿಸಿ ಬೀಸಿದವು ತಂಬೆಲರ ಬೀಸಣಿಗೆಗಳು (ಕುವ್ಯಾ.ಆ. ೧೨-೦೫). [ ? + -ಇಸು$_3$./ಪ್ರಾ. ಝಂಪ=ಆಕ್ರಮಿಸುವಂತೆ ಮಾಡು ]

**ಜೊಂಪು$_1$**, ಜಂಪು$_1$, ಜಮ್ಮು, ಜುಮ್ಮು$_1$, ಜೊಂಪ$_2$, ಜೊಮ್ಮು$_1$, ಜೋಂಪು$_1$, ಜೋಮು$_1$, ಝುಂಪು, ಝೊಂಪು, ಝೊಮ್ಮು$_1$, ಝೋಂಪು (ನಾ). ೧. ಮತ್ತು; ಅಮಲು; ಮೈಮರೆವು: ಪಿತನ ಕಣ್ಗಳ ಸೊಂಪು ಆತುರದೆ ಪಾಡುತಲಿಹರ ಜೋಗುಳ ಜೊಂಪು (ಬಸರ. ೧-೦೪೦); ಚಿತ್ರದ ಬವಣೆ ಬೀತುದು ಮನದ ಜೊಂಪಳಿ[ಪಾಠಾಂ. ಜೊಮ್ಮಳಿ]ದುದು (ಕುವ್ಯಾ.ಕ. ೨೧-೧). ೨. ತೂಕಡಿಕೆ; ಮಂಪರು: ಕಣ್ಣಿಗೆ ನಿದ್ದೆಯ ಜೊಂಪು ಹಿಡಿದಂತಾಗಿ ಅವಳು ಗಂಭೀರ ಭಾವ ತಾಳಿದಳು (ಪುನರು. ೨೦೩): ನಿದ್ದೆಯ ಜೊಂಪು ಹತ್ತಿದ ಹೊತ್ತಿಗೆ ರೈಲು ಬಂದಿತು (ಮುನಿಮಾ. ೬). ಜಂಪು$_1$: ೨. ಜಂಪು ಹತ್ತುವುದು ಬೆಳತನಕ (ಕನ್ನಡಾ. ೧೯೪): ಕಣ್ಣಿಗೆ ನಸು ಜಂಪು ಬಂದಂತಾಗಿತ್ತು (ಅಕಾಶ. ೩೭): ದಣಿದಿದ್ದರಿಂದ ಅವನಿಗೆ ಚೆನ್ನಾಗಿ ಜಂಪು ಹತ್ತಿತು (ಸಮಜೀ. ೦೯೪). ಜಮ್ಮು: ೧. ಮದನ ವಿಕಾರದ ಜಮ್ಮು ಜಕ್ಕುಲಿಸಿ ಹಮ್ಮುದಂಬೋಗಿ (ಗಿರಿಕ. ೭-೧೧ ಪ). ಜುಮ್ಮು$_1$: ೧. ಸೌಂದರ ಸಂಕಿಲೆಯುರು ನಿದ್ರೆಗೆಯ್ದುರಾನಂದರಸದ ಜುಮ್ಮು ತಲೆಗೇಱಿ (ತ್ರಿಭುತಿ. ೨೪-೯). ಜೊಂಪ$_2$: ೧. ಇರದೆ ಮನಕ್ಕೆ ಸೊಕ್ಕುಹರ ಪೊಂಪುಟಿ ವಕ್ತ್ರದೊಳುಣ್ಕೆ ಜೊಂಪವಮಾವರಿಸೆ . . . ಎಸೆದರಂಗನೆಯರ್ ಮಧುಪಾನಕೇಳಿಯೊಳ್ (ಕುಸುಮಾ. ೧೧-೧೬೦). ಜೊಮ್ಮು$_1$: ೧. ಸುಗ್ಗವ್ವೆ ಕಡುಸುಖದ ಸೊಗಸಿನ ಜೊಮ್ಮು ತಳೆದು ಮೈ ಮುರಿದಿದ್ದಳು (ಸಿದ್ಧರಾ. ೧-೬೦); ಸುರೆಗುಡಿದು ಜೊಮ್ಮುಹತ್ತಿ ಕಣ್ಣರೆಮುಚ್ಚುತಂ (ಪಾಸೋಪು. ೦೩-೫೦). ೨. ಕುಸಿದು ಜೊಮ್ಮಿನ ಜಾಡ್ಯದಲಿ ಝೊಂಪಿಸಿದ ರಿಬ್ಬರು (ಕುವ್ಯಾ.ಗ. ೯-೪). ಜೋಂಪು$_1$: ೨. ಅರೆಗಣ್ಣು ಮುಚ್ಚಿ ನಿದ್ದೆಯ ಜೋಂಪನ್ನು ಅನುಭವಿಸುತ್ತಾ (ನಡಹಾ. III, ೧೪೩೩): ಸೀತಕ್ಕ ಮಲಗಿದ ಕೊಂಚ ಹೊತ್ತಿಗೆಲ್ಲ ಅವರಿಗೆ ಜೋಂಪು ಹತ್ತಿಬಿಟ್ಟಿತು (ದಾಡಿಬ. ೦೨೬). ಜೋಮು$_1$: ೨. ಕಣ್ಣಿಗೆ ಜೋಮು ಬರುತ್ತಿದೆ (ಕೂತಕಾ. ೮). ಝುಂಪು$_1$: ೨. "ನಿದ್ದೆ, ಝುಂಪು (ಝೋಂಪು), ಮರವೆ, ಮರಸು" (ಕಂನುಡಿ. ೮೬). ಝೊಂಪು: ೧. ವಿಭ್ರಾಂತಿಯ ಝೊಂಪಿನಲಿ ಹುದುಗಿದ ಮಹೇಶನ ಕಂಡನು (ಕುವ್ಯಾ.ಕ. ೧೬-೫). ಝೊಮ್ಮು$_1$: ೨. ನಿದ್ರಾಸಮುದ್ರವ ಮುಳುಗಿ ಝೊಮ್ಮಿನ ಝಾಡಿಯಲಿ ಝೊಂಪಿಸಿದುದರೆಜಾವ (ಕುವ್ಯಾ.ದ್ರೋ. ೦೬-೦೨): ನುಡಿ ತಡಂಬಡುಗುಟ್ಟೆ ಮಯ್ಯಲ್ಲಿ ಬೆಮರಿಡಲ್ ತನು ಝೊಮ್ಮಿನೊಳ್ಸೇರಲು (ಅರಾಚ. ೧೧-೧೬). ಝೋಂಪು: ೧. ತನು ಬಳಲಿಕೆಯ ಭಾರಣೆಯ ಕಡುಜೋಡಿಸಿದ ಝೋಂಪಿನಲಿ (ಕುವ್ಯಾ.ಆ. ೯-೫). ೨. ನವಕುಮಾರನು ಚಿಂತಿಸುತ್ತಿದ್ದ ಹಾಗೇ ಕಣ್ಣಿಗೆ ಝೋಂಪು ಹತ್ತಿತು (ಕಪಾಕುಂ. ೧೨). [ ದೇ.॥ ತಮಿ. ಚೋಮ್ಪು : ತೆಲು. ಜೋಮು ]

**ಜೊಂಪು$_2$** 'ಜೊಂಪ$_1$' ನೋ.

**ಜೊಂಪೆ** 'ಜೊಂಪ$_1$' ನೋ.

**ಜೊಂಬಿಸು** 'ಜೊಂಪಿಸು$_2$' ನೋ.

**ಜೊಕ್ಕಿರ್** (ಕ್ರಿ). ಕುಗ್ಗಿರು; ಕುಂದಿರು: ಮೊಗದ ಸಿರಿ ಜೊಕ್ಕಿರ್ದುದಂ ಕಂಡು (ತುರಂಗ. ೭೪-೮). [ ಜೊಕ್ಕು + ಇರ್$_1$ ]

**ಜೊಕ್ಕು**, ಜೊಗ್ಗು$_1$ (ಕ್ರಿ). ಕುಗ್ಗು; ಕುಂದಿಹೋಗು: ಕೌರವನ ಬಲದೊಳಗೆ ಸಿಕ್ಕಿದನು ಜೊಕ್ಕದೆ ಪುರಾಣಪುರುಷೋತ್ತಮ ಜನಾರ್ದನನೆ ರಕ್ಷಿಸೈ (ತುರಂಗ. ೨೪-೨೯). ಜೊಗ್ಗು$_1$: ಎಲೆ ಮರುಳೆ ಜೊಗ್ಗಿದನ ತಂದು ಸೇನಾಪಟ್ಟವಂ ಕಟ್ಟಿ ಹರಿಪಿಸುವೆ (ತುರಂಗ. ೪೩-೦೬). 'ಚೊಕ್ಕು$_1$' ಪರಾ. [ <ಜರ್ಗ್ ]

**ಜೊಕ್ಕೆ** (ನಾ). (?): ಮಿಕ್ಕ ಅವಲಕ್ಕಿಯನು ತನ್ನಯ ಜೊಕ್ಕೆಯಿಕ್ಕುಡಿತೆಯಲಿ ಪಿಡಿದುರೆಯುಕ್ಕರೆಯಿಂದಲಿ ಒಕ್ಕುಡಿತೆಯಾ ಮುಖಕೆ ನೆಗಹಿ (ಕುಚೇಲೋ. ೧೧೮). [ ? ]

**ಜೊಕ್ಕೆದ** (ನಾ). ಚತುರ (?): ಋತುಪರ್ಣರಾಯನಿದ ನೋಡಿಕೊಂಡನು ಸಚಿವರ ಜೊಕ್ಕೆದರ ಕರೆದನಾಳೋಚನೆಗೆ (ತುರಂಗ. ೩೨-೧೧). [ ? ]

**ಜೊಕ್ಕೆಯ** 'ಚೊಕ್ಕೆಯ' ನೋ.

**ಜೊಗಟೆ** (ನಾ). ಸಿಪ್ಪೆ; ಹಿಪ್ಪೆ: ಕಬ್ಬಿನ ಜೊಗಟೆಯು ಸಾಮಾನ್ಯವಾಗಿ ತನ್ನ ತೂಕದಷ್ಟೇ ರಸವನ್ನು ಇರಿಸಿಕೊಳ್ಳುವುದು (ದಾಂಪ್ರ. II, ೬೫೦). [ ? ]

**ಜೊಗ್ಗು$_1$** ‘ಜೊಕ್ಕು’ ನೋ.

**ಜೊಗ್ಗು$_2$** (ನಾ). ಕುಗ್ಗುವಿಕೆ; ಕ್ಷೀಣತೆ : (ಪಿತ್ತಪ್ರಕೃತಿ ತನು) ನರೆ ಜೊಗ್ಗು ಪಸುರಾದ ನರೆ ಉಳ್ಳವನಾಗಿ . . . ಪಾನ ದ್ರವ್ಯಾಸನಗಳಲ್ಲಿ ಇಚ್ಛೆಯುಳ್ಳವನಾಗಿಹನು (ವೃದ್ಧಸಾ. I, ೦೬). [ <ಜೊಗ್ಗು$_1$ ]

**ಜೊಟ, ಜೊಟ್ಟ** (ನಾ). ತುಂಬ ಹುಳಿ ; ಬಹಳ ಹುಳಿ : “ಹುಳಿ ಜೊಟ್ಟ; ಜೊಟಜೊಟ ಹುಳಿ” (ಕಂನುಹು. ೦೦೪). **ಜೊಟ್ಟ:** ಮೇಲಿನ ಪ್ರಯೋಗವನ್ನು ನೋಡಿ. [ ? ]

**ಜೊಟಜೊಟನೆ**(ಅ). ಜೊಟಜೊಟ ಎಂಬ ಶಬ್ದದೊಡನೆ: ಜೊಟಜೊಟನೆ ಮೈಯಲ್ಲಿ ಕ್ರಿಮಿ ಸುರಿದ ಕಾಲಕ್ಕು (ಮೋಕ್ಷದೀ. ೪೯-೩).
[ ಜೊಟಜೊಟ$_0$ + – ಅನೆ$_1$ ]

**ಜೊಟ್ಟ** ‘ಜೊಟ’ ನೋ.

**ಜೊಟ್ಟ** (ನಾ). ಗಟ್ಟಿಯಲ್ಲದುದು ; ಜೊಳ್ಳು : ಜೊಳ್ಳೋ ಜೊಟ್ಟ, ಟೊಕ್ಕನೆ ಪೊಟ್ಟ ಹುರುಳಿಲ್ಲದ ಬರಿ ಶಬ್ದವು ಹುಟ್ಟಿ (ಹೃದಸ. ೬೫-೭).
[ ದೇ.॥ ಮಲ. ಚೊತ್ತ ]

**ಜೊಣೆ** ‘ದೊಣೆ$_1$’ ನೋ.

**ಜೊತಕ** ‘ಜೊತ್ತಗೆ’ ನೋ.

**ಜೊತಗ** ‘ಜೊತ್ತಗೆ’ ನೋ.

**ಜೊತೆ$_1$**, ಜತೆ (ನಾ). ೧. ಕೂಡಿರುವಿಕೆ; ಕೂಟ ; ಸಹವಾಸ : “ಜೊತೆ (ಜತೆ)–ಯುತ” (ಶಬ್ದಕೋ. ೧೫). ೨. ಜೋಡು ; ಜೊತೆಯಾಗಿರುವ ಮತ್ತೊಂದು ಜೀವ, ವಸ್ತು ಮೊದಲಾದುವು: ಗೂಡಿನೊಳಗಿಹ ಹಣ್ಣುಗಿಳಿಗೊಂದು ಜೊತೆಯಿಲ್ಲ (ಚಂದ್ರಸ. ೬೨). ೩. ಎರಡರ ಜೋಡಿ ; ಯುಗಲ ; ಯುಗ್ಮ : ಈ ಹೃದಯಂಗಮವಾದ ಜೊತೆಯನ್ನು ಸಣ್ಣದೊಂದು ದೂರದರ್ಶಕದಲ್ಲಿ ನೋಡಿದರೆ (ಜ್ಯೋತಿರ್ವಿ.೭೦). ೪. ಜೋಡಣೆ; ಸಿದ್ಧತೆ; ತಯಾರಿ : ಫೌಜು ಜೊತೆಯಾಯಿತೋ ಇಲ್ಲವೋ (ಮುದ್ರಾಮಂ. ೧೬೨). **ಜತೆ:** ೨. ಹೂವಿಗೆ ಸಹ ಜತೆ ಆದ (ಗಂಗಾಸಾ.೧೦೯). ೫. ಸಮಾನ; ಎಣೆ : ದ್ವಾದಶಗತಿಯಲಿರುತಿಹ ಭಾನುವಿಗೆ ಸರಿ ಜತೆಯದಾರೆಂದ (ಗಗತಾ. ೫-೪೫). ೬. [ಸಂಗೀತ] ಸುಳಾದಿಯ ನುಡಿಗಳಾದ ಮೇಲೆ ಬರುವ ಕೊನೆಯ ಎರಡು ಸಾಲು : ಜತೆ ಕೊಡಬ್ಯಾಡ ಕೊಳಬ್ಯಾಡ ಸಿರಿ ವಿಜಯವಿಠಲನ್ನ ಅಡಿಗಳರ್ಥಾ ನಿಮಿಷಾ ನಂಬಲು ಕೈವಲ್ಯ (ವಿಸಾಸು.೬-೬).

**ಜೊತೆಕಟ್ಟು** = ಸಹವಾಸಮಾಡು ; ಗೆಳೆತನಮಾಡು : ನೀನು ನನ್ನ ಜೊತೆಕಟ್ಟುತ್ತೀಯೋ ಇಲ್ಲವೋ ? (ರೂಢಿ). **ಜೊತೆಮಾಡು, ಜತೆಮಾಡು**= ೧. ಜೋಡಿಸು ; ಕೂಡಿಡು ; ಸಂಗ್ರಹಿಸು : ಮೃತವಪ್ಪುದೆಂದು ಕರುವಿಗೆ ಗೋವು ಹುಲ್ಮೆದೆಯ ಜೊತೆಮಾಡುವುದೆ ? (ಶಿವಪು. ೫೦). ೨. ಕೂಡಿಸು; ಹೊಂದಿಸು: ಪ್ರಯಾಣಿಕರು ನಾಲ್ಕೈದು ಹಡಗುಗಳನ್ನು ಜತೆಮಾಡಿಕೊಂಡು ಪ್ರಯಾಣ ಮಾಡುವುದು ಪದ್ಧತಿಯಾಗಿದ್ದಿತು (ಕಪಾಕುಂ.೦): ಮನದ ಹಂಬಲು – ಕಟ್ಟಿಗೆ ಸುಸ್ವರೂಪಿ ಹೆಂಡತಿಯನ್ನು ಜತೆಮಾಡಿಕೊಟ್ಟು ತಾನು ಕಣ್ಮುಚ್ಚುವುದು (ಗಂಮೂಯಿ. ೦). [ <ಸಂ. ಯುತ ]

**ಜೊತೆ$_2$** (ಅ). ಸಹಿತವಾಗಿ ; ಸಂಗಡ : ನಿಪುಣಿಕೆಯ ಜೊತೆ ನಾನು ಬಾಗಿಲ ಬಳಿಗೆ ಬಂದೆ (ಶಾಡಾಅ. ೭೧); ವೆಂಕಮ್ಮ ಅಡಿಗೆ ಮನೆಯಲ್ಲಿಯೇ ಜನ್ನಯ್ಯನ ಹೆಂಡತಿಯ ಜೊತೆ ಮಲಗಿದರು (ಪದ್ಮಸ. ೨೩೨). [ <ಜೊತೆ$_1$ ]

**ಜೊತೆಗಾರ**, ಜತೆಗಾರ (ನಾ). ಜೊತೆಯಲ್ಲಿರುವವನು ; ಸಂಗಡಿಗ ; ಒಡನಾಡಿ : ಗಾನದ ಉತ್ಸಾಹದಲ್ಲಿ ಅವನಿಗೆ ದೇವರು ಒಡೆಯನೇ ಅಲ್ಲದೆ ಜೊತೆಗಾರನೇ ಆಗುವನು (ಧರ್ಮಸಾ. ೮೩) ; ತಮ್ಮ ತಮ್ಮ ಜೊತೆಗಾರರೊಡನೆ ಮುಂದಿನ ಪದ್ಯಗಳನ್ನು ಹೇಳಿಕೊಂಡು (ಹುಬ್ಬಹ.೨೯). **ಜತೆಗಾರ:** ನೀನೂ ನಿನ್ನ ಜತೆಗಾರನೂ ಕೂಡಿಬಂದರೆ ಹಣ ದೊರೆಯುವುದು (ಮುಂಬಯಿ. ೪-೭). [ ಜೊತೆ$_1$ + – ಗಾರ (<–ಕಾಱ) ]

**ಜೊತೆಗಾತಿ** ‘ಜೊತೆಗಾರ್ತಿ’ ನೋ.

**ಜೊತೆಗಾರ್ತಿ**, ಜತೆಗಾತಿ, ಜತೆಗಾರ್ತಿ, ಜೊತೆಗಾತಿ (ನಾ). ಜೊತೆಯಲ್ಲಿರುವವಳು ; ಸಂಗಾತಿ : ಆಕೆಯು ಜೊತೆಗಾರ್ತಿಯರು ಅನ್ಯೋನ್ಯ ಸುಖದಲ್ಲಿ ಸಂಸಾರ ಸಾಗುಹಾಕುತ್ತಿರುವ ಕಾಲ (ಜೀವನ. ೦೩). **ಜತೆಗಾತಿ :** ಸ್ವಲ್ಪ ಹೊತ್ತಿನಲ್ಲಿಯೇ ನವಕುಮಾರನು ಜತೆಗಾತಿಯನ್ನು ಕರೆದುಕೊಂಡು ಬಂದು ಊರನ್ನು ಸೇರಿದನು (ಕಪಾಕುಂ. ೪೨). **ಜತೆಗಾರ್ತಿ :** (೬). **ಜೊತೆಗಾತಿ :** ತನ್ನ ಮಗಳ ಜೊತೆಗಾತಿಯಾಗಿರಲೆಂದು ಅವಳನ್ನು ಆ ವಿಪ್ರನು ಮಥುರೆಗೆ ಕರೆದೊಯ್ದಿರಬೇಕೆಂದು ತಿಳಿಯಿತು (ತವನಿ. ೫೦) : ಜೊತೆಗಾತಿಯಿಲ್ಲದೆ ತಾನೊಂಟಿಯಾಗಿದ್ದಾಗ ಅದನ್ನು . . . ಕಣ್ಮನ ತಣಿಯುವ ತನಕ ನೋಡುತ್ತಿದ್ದಳು (ಪುನರು. ೬೨೩).
[ ಜೊತೆಗಾರ + – ತಿ$_1$ (< – ಇತ್ತಿ) ]

**ಜೊತೆಗೂಡು**, ಜತೆಗೂಡು (ಕ್ರಿ). ೧. ಕೂಡು ; ಸೇರು ; ಹೊಂದಿಕೊಳ್ಳು : ಜೊತೆಗೂಡಿ ಬಾಳಲಾಗದಿದ್ದರೆ ಮದುವೆಯಿಂದ ಪ್ರಯೋಜನವೇನು ? (ಪುನರು. ೨೫೦). ೨. ಸಂಭೋಗಿಸು: ಅಪೂರ್ವವಾಗಿ ಉಭಯಲಿಂಗಿಗಳು ಜೊತೆಗೂಡಿದ (Mate) ಗಂಡಿನ ರೇತ್ರಾಣುಗಳಿಂದ ಗರ್ಭಾದಾನ ಪಡೆಯುತ್ತವೆ (ಕೀಟಬಿ. ೦೦೫). **ಜತೆಗೂಡು:** ೧. ಹಕ್ಕಿಯು ಜತೆಗೂಡಿ ಹಾಡನು ಹಾಡುತ ಮುದವೂಡು ಮನಕೆ (ಇಂದಾಪ. ೨೦೨-೪೦).
[ ಜೊತೆ$_1$ + ಕೂಡು$_1$ ]

**ಜೊತೆಗೊಳಿಸು** (ಕ್ರಿ). ಸೇರಿಸು ; ಕೂಡಿಸು ; ಹೊಂದಿಸು : ಸೈನ್ಯವನ್ನು ಜೊತೆಗೊಳಿಸಿ . . . ಯುದ್ಧಸನ್ನಾಹ ಮಾಡತೊಡಗಿದರು (ಪ್ರಮುಹ. ೯೬).
[ ಜೊತೆ$_1$ + ಕೊಳ್$_1$ + – ಇಸು$_3$ ]

**ಜೊತೆಬಿಡು**, ಜತೆಬಿಡು (ಕ್ರಿ). ಸ್ನೇಹವನ್ನು ಬಿಡು ; ಗೆಳೆತನವನ್ನು ತೊರೆ : ಜೊತೆ ಬಿಟ್ಟರೂ ವ್ಯಥೆ ಬಿಡಲಿಲ್ಲ (ಗಾದೆ) ; ಅವರಿಬ್ಬರೂ ಜೊತೆ ಬಿಟ್ಟಿದ್ದಾರೆ, ಅದಕ್ಕೆ ಮಾತನಾಡುವುದಿಲ್ಲ(ರೂಢಿ). **ಜತೆಬಿಡು:** ಅವರಿಬ್ಬರೂ ಯಾವಾಗಲೂ ಜತೆಬಿಟ್ಟಿಲ್ಲ (ರೂಢಿ). [ ಜೊತೆ$_1$ + ಬಿಡು$_1$ ]

**ಜೊತೆಪಾಡು** (ನಾ). ಮೇಳದ ಹಾಡು : ಅಂಬಿಕೆ ಜೊತೆಪಾಡಂ ತಾಂ ಬೆಂಬಿಡದಡಿಗಡಿಗೆ ಪಾಡೆ (ಹಾಲಾಸ್ಯ. ೦-೭-೦೯). [ ಜೊತೆ$_1$ + ಪಾಡು$_2$ ]

**ಜೊತೆಹಾಕು** (ಕ್ರಿ). ೧. ಇನ್ನೊಬ್ಬರನ್ನು ಜೊತೆಗೆ ಹೊಂದಿಸು: ಅವನೊಡನೆ ಕುಸ್ತಿಗೆ ಜೊತೆಹಾಕಲು ಯಾರೂ ಸಿಗಲಿಲ್ಲ (ರೂಢಿ). ೨. ಮದುವೆಮಾಡು: ಅವನಿಗೆ ಜೊತೆಹಾಕದಿದ್ದರೆ ಬುದ್ಧಿ ಬರುವುದಿಲ್ಲ(ರೂಢಿ).
[ ಜೊತೆ$_1$ + ಹಾಕು (<ಪಾಯ್ಕು$_1$) ]

**ಜೊತ್ತಗ** ‘ಜೊತ್ತಗೆ’ ನೋ.

**ಜೊತ್ತಗಲ್** (ಕ್ರಿ). ಸಹವಾಸದಿಂದ ದೂರವಾಗು ; ಜೊತೆಬಿಡು : ಸುಂದರನೊಲವಿಂ ಜೊತ್ತಗಲದೆ ವರಸಹಾಯಮಂ ನಿಮಗೀವಂ (ಹಾಲಾಸ್ಯ. ೨-೧೪-೨೬). [ ಜೊತ್ತು$_1$ + ಅಗಲ್$_1$ ]

**ಜೊತ್ತಗಾಣಿ** ‘ಜೊತ್ತುಗಾಣಿ’ ನೋ.

**ಜೊತ್ತಗೆ**, ಚೊತ್ತಿಗೆ, ಜತಿಗೆ, ಜತ್ತಿಗೆ, ಜೊತಕ, ಜೊತಗ, ಜೊತ್ತಗ, ಜೊತ್ತಿಗೆ (ನಾ). ನೊಗವನ್ನು ಎತ್ತಿನ ಕೊರಳಿಗೆ ಸೇರಿಸಿ ಕಟ್ಟುವ ಹಗ್ಗ : “ಆಬಂಧಃ, ಯೋತ್ರಂ, ಯೋಕ್ತ್ರಃ ಎಂದೊಡೆ ಮಿಳಿ; ಜೊತ್ತಗೆ ಎಂದೂ ಎಂಬರು” (ನಾಚಿರಾ. ೬) : “ಜೊತ್ತಗೆ – ಯೋಕ್ತ್ರಕ = ಮಿಳಿ (ಜತ್ತಿಗೆ, ಚೊತ್ತಿಗೆ)” (ಶಬ್ದಕೋ. ೧೫) : ಕೊರಳ ಜೊತ್ತಗೆ ಸುರುಚಿರ ಬೆನ್ನ ಮಿಣಿ ಮತ್ತುರದೊಳು ಪೊನ್ನ ಘಂಟೆಗಳು (ಅಂಜಚ. ೬-೯೦) : ಬಿಗಿದ ಬಲುಹೋರಿಯ ಕೊರಳ ಜೊತ್ತ[ಪಾಠಾಂ. ತ್ತಿ]ಗೆಗಳಂ ಪಟು ಪಟು ನಿಮಿಷದಲಿ ಬಗೆಯದಿನ್ನಿರದೆಯ್ದಿಸುತ್ತಂ ಮುತ್ತಿ ಕೈಕೊಳ್ಳಿ (ಬಸಪು. ೫೬-೨೦) : ರಥಹಯದ ವಾಘೆಯ ಜೀನಗೆಲಸದ ಹಕ್ಕರಿಕೆಗಳ ನೊಗನ ಜೊತ್ತಗೆಯ ಭಾನುಸುತ ಮುಟಿಯೆಬ್ಬು (ಕುವ್ಯಾಕ. ೨೪-೪) : ಹರಿದ

ಕೂರಂಬುಗಳು ಸಿಂಹಗಳೆರಡು ಜೊತ್ರಗೆಗಡಿಯೆ ಹರಿಗಳು ಹರಿದವತ್ರಿತ್ರಲು (ಸಾಳ್ವಭಾ. ೧೯-೦೭). **ಚೊತ್ರಿಗೆ:** ಮೇಲಿನ 'ತದ್ಭಕೋ' ಪ್ರಯೋಗವನ್ನು ನೋಡಿ. **ಜತಿಗೆ:** ಎತ್ತಿನ ಕೊರಳಿಗೆ ಕಟ್ಟಿದ್ದ ಜತಿಗೆ ಹರಿಯಿತು (ಕಪಪು. ೪-೧೬): ಬಂಡಿ ಹೊಡೆಯುವ ಒಕ್ಕಲಿಗ ಎತ್ತಿನ ಕೊರಳಿನ ಜತಿಗೆಗಳನ್ನುಚ್ಚಿ ಮೆಲ್ಲನೆ 'ನಗ'ವನ್ನು ನೆಲಕ್ಕಿಟ್ಟ (ಅರಿಯೂ. ೮). **ಜತ್ರಿಗೆ:** ಎತ್ತಿನ ಜತ್ರಿಗೆಯ ಬಿಟ್ಟು ಚಕ್ಕಡಿಯ ಭಂಡಿಗಳ ಈಸಿನ ಮೇಕು ಹಿಡಿದು ಮೇಲಕ್ಕೆ ಎತ್ತಿ (ಶ್ರಿಪ್ರ. ೩೩). **ಜೊತಕ:** ಹೆಗಲೊಳು ನೇಗಿಲು ಜೊತಕವ ಹೊತ್ತು ಮುಂದೆ ನಡೆಯುತಿರೆ ಜೋಡಿಯ ಎತ್ತು ರೈತನು ಗದ್ದೆಯ ಸೇರುವನು (ಕದಕ. ೭-೩೦). **ಜೊತಗ:** ನಾನು ಜೊತಗ ಮಿಣಿ ತೆಗೆದುಕೊಂಡು ಗದ್ದೆಗೆ ಹೋಗುತ್ತೇನೆ (ಗಂಗಾಳ. ೮೦). **ಜೊತ್ರಗ:** ಮಹಾಗಜದಂಗೋಪಾಂಗಗಳೋಳ್ಬೊಡರ್ಚಿದ ಮಿಳಿ ಪೊರಜಿ ಜೊತ್ರಗಂಗಳುಮಂ ನಿಲುನಿಲುಕಿ ಪೊಯ್ವೊಯ್ದು ಕತ್ತರಿಸಿ (ಕಳನ್ನ. ೨-೩೮). **ಜೊತ್ರಿಗೆ:** ಹೊನ್ನ ನೇಣಿನ ಜೊತ್ರಿಗೆಯ ಪಿಡಿದಂದದಿಂದಡರಿದರು ಮಾವುತರು (ಸಂಭಪ. ೩೦-೧೧): ಕೊರಳಿಗೆ ಬೀಜುವ ಜೊತ್ರಿಗೆ ಮೆಚಿದು ವರ್ತಿಯಲಿ (ಕಂನವಿ. ೧೧-೧೩೫). [ <ಸಂ. ಯೋಕ್ತ್ರಕ, ಯೋತ್ರಕ ]

**ಜೊತ್ರಾಯ** (ನಾ). ರುಜುವಾತು; ಪ್ರಮಾಣ: ಶ್ರುತಿಯ ಮಾತಂ ಧರೆಗೆ ಜೊತ್ರಾಯಗೈದು ತೋರಿದ (ಪಂಕಾರಾ. ೨-೩೩-೨೪). [ಜೊತ್ರು$_1$+ಆಯ ?]

**ಜೊತ್ರಿಗೆ** 'ಜೊತ್ರಗ' ನೋ.

**ಜೊತ್ರಿಸು** (ಕ್ರಿ). ೧. ವಂಚಿಸು ; ಮೋಸಗೊಳಿಸು : ಎತ್ತಿಪವೆಂದು ದೇಗುಲವ ಸುತ್ತಿನ ಮಾತನೆ ತೋಟಿ ಲೋಗರಂ ಜೊತ್ರಿಸಿ ದ್ರವ್ಯಮಂ ಕಳೆದುಕೊಂಬರೊಳೀಂ (ಎಕ. VI, ಕಡೂರು.೦೨೭-೨೮; 1202). ೨. ಮರುಳು ಮಾಡು; ಮೋಹಗೊಳಿಸು: ಮುತ್ತಿನ ಪೊಸದುಡಿಗೆ ತಳಿರ ಸೋರ್ಮುಡಿ ಮನಮಂ ಪತ್ರಿಸಿ ಜೊತ್ರಿಸೆ (ಪಂಪಭಾ. ೫-೫೯); ನಿತಂಬಿನಿ ನಾನಾಪ್ರಕಾರದ ತತ್ರುಪಣಂಗಳಿಂ ಜೊತ್ರಿಸಿ ವಶೀಕೃತಂ ಮಾಡಿ (ಸುಕುಮಾ. ೭-೧೩ ವ): ಕೂಸುಗಳಂ ಮುದ್ದಾಡಿಸಿ ದೇಸಿಯ ಮಾತುಗಳನಾಡಿ ಪೆರ್ಚಿಸಿ ಪೆಜರಂ ರೇಸಾಗಿ ತನಗೆ ಜೊತ್ರಿಸುವಾಕಾವರು (ಧರ್ಮಾಮೃ. ೫-೯೧).

[ ಜೊತ್ರು$_3$ + – ಇಸು$_3$ ]

**ಜೊತ್ರು$_1$,** ಜತ್ರು (ನಾ). ಜೊತೆ ; ಜೋಡಿ: ಜವ್ವನದ ಜೊತ್ರೊ ಸವಿವೆಡಂಗಿನ ಬಿತ್ರೊ ನವಪರಿಮಳದ ಮುತ್ರೋ (ಗುರುಥ. ೭-೦೭). **ಜತ್ರು:** ಜತ್ರು ಹೆಂಡತಿ ಮೇಲೆ ಮತ್ತೆ ಸೂಳೆಯು ಏಕೆ (ಸರ್ವಜ್ಞ. ೧೯೪೬).

**ಜೊತ್ರಾಗು, ಜತ್ರಾಗು** = ಜೊತೆಯಾಗು ; ಜೋಡಿಯಾಗು : ಕೂಗಿ ಬೊಬ್ಬಿಟದರುಬ್ಬರ ಸಿಡಿಲ್ಕೋಟಿ ಜೊತ್ರಾಗಿ ಗರ್ಜಿಸುವಂತೆ ಬಲರು (ಮೋಹತ. ೩೫-೦೯): ಒತ್ತಿ ಹಿಡಿದ ಕಂಭ ವ್ಯರ್ಥವಾದ ಮೇಲಿನ್ನೇನಿನ್ನೇನು ಜತ್ರಾದ ಜನರೆಲ್ಲ ಜರಿದು ಹೋದ ಮೇಲಿನ್ನೇನಿನ್ನೇನು (ಪುರಂದ. ೪-೦೨೪-೨): ಮುತ್ತು ಮಾಣಿಕದ ರಥದ ಮೇಲೆ ಮುರಹರನು ಬಾಲ ಜತ್ರಾಗಿ ಕುಳ್ಳಿರೆ (ಶ್ರೀಕೃಪಾ. ೯೯); ರಂಗೊಂದು ದಂಗೊಂದು ಗುಂಗೊಂದು ಒಂದಕ್ಕೊಂದು ಹತ್ರಾಗಿ ಜತ್ರಾಗಿ ಸುಳಿಧಾಂಗ (ಸಬೀಗೀ. ೫೨-೭).

[<ಪ್ರಾ. ಜುತ್ತ. / ಸಂ. ಯುಕ್ತ ]

**ಜೊತ್ರು$_2$** (ನಾ). ೧. ನೆಲೆ; ಆಶ್ರಯಸ್ಥಾನ; ಗೊತ್ತು: ಬಹುವಿಧ ಕರ್ಮನಿಕರದ ಜೊತ್ರು ತನುವಿದನಾರು ನಂಬುವರಪ್ಪ (ನಿಭಾಗ. ೩-೦೪-೩೫): ಶಿವನ ಬಯಕೆಯ ಗೊತ್ತು ಶಿವನ ತನುವಿನ ಜೊತ್ರು (ಚಬಪು. ೩೪-೯). ೨. ಸಾಲು; ಶ್ರೇಣಿ: ಹೊಳೆಹೊಳೆವ ಬೈತಲೆಯ ಮುತ್ತುಗಳ ಜೊತ್ತುಗಳ ಥಳಥಳನೆ ಮೆರೆವಂದುಗಾವಳಿಯ . . . ಗಿರಿಜಾತೆ ರಂಜಿಸಿದಳು (ಚಬಪು. ೩೭-೨೩): ಜೊತ್ರಿನ ಸೂಳುಪಾಳಿಯೊಳಂಗನೆಯರ್ಕೈದಿದರು ಗೋಪತಿಯ (ಅಕ್ರೂರ. ೪-೧೫). [ ? ]

**ಜೊತ್ರು$_3$** (ನಾ). ೧. ವಂಚನೆ ; ಮೋಸ ; ಕುಯುಕ್ತಿ ; ತಂತ್ರ : ಸಿಪ್ಪು ಜೊತ್ರನ್ನನೇನಂ ಮಾಡಲಾಪುರ್ದು (ನಂಬಿರ. ೭-೮೩). ೨. [illegible] ಸುವಿಕೆ; ಮೋಹಗೊಳಿಸುವಿಕೆ (?): ಹುರುಡು ಹೋರಟೆ ಪೊತ್ರು ಜೊತ್ರು ಗನ್ನಂ ಗತಕ ಪರಿರಂಭಣಂ . . . ರತಿಪ್ರಾರಂಭದೊಳು ಪಸರಿಸೆ (ಹದಪಾ. ೪-೩೫); ಪುರುಡುಂ ಪೋರಟೆವೆತ್ರು ಜೊತ್ರು ಗತಕಂ ಗನ್ನಂ . . . ಒರಿದುಣ್ಮಲ್ ವಧು ನಲ್ಲನೊಳ್ ನೆರೆವುತಿರ್ದಳು (ಕೃಷವಿ. ೨೪-೧೮೦). [ ? ]

**ಜೊತ್ರುಗಾಜಿ, ಜೊತ್ರಗಾಜಿ** (ನಾ). ಜೂಜಾಡುವವನು ; ದ್ಯೂತಕಾರ: ಸದರದೆ ದಾಯಮುಂ ಒಡಿವ ವಿತ್ರಮನೊಡ್ಡುವ ಜೊತ್ರುಗಾಜಿರಿಂ (ದಶಕು. ೮-೮೯). **ಜೊತ್ರಗಾಜಿ :** ಗುಪ್ಪದಿ ಮುಂಚಿಗನ ಜೊತ್ರಗಾಜಿರು ಗಳ್ಳಿದೆ ಬಂದು (ಸಿಂಗಿರಾ. ೧೯-೧೧). [ <ಸಂ. ದ್ಯೂತಕಾರ ]

**ಜೊನ್ನ** (ನಾ). ೧. ಚಂದ್ರನ ಬೆಳಕು ; ಬೆಳುದಿಂಗಳು : ಒಂದೆಡೆಯೊಳ್ ನೆಲಸಿರ್ದ ಕಾಳಮುಂ ಜೊನ್ನಮುಮಂ (ಅಜಿಪು. ೯-೨೦): ಪುದಿಯೆ . . . ಜೊನ್ನದ ಸಿರಿ ಕಾರ ಕಾರಿರುಳ ಮೆಯ್ಸಿರಿ ತಪ್ಪದೆನಲ್ ದಿಗಂತಮಂ (ಪಂರಾಮಾ. ೪-೪೪): ಇಳೆಯೊಳ್ ಪಾರ್ವತಿ ಜನಿಯಿಸೆ ಕಳೆಯೇಟಿದನಿಂದು ಜೊನ್ನಮಲರ್ದುದು (ಗಿರಿಕ. ೩-೪೬): ಥಳಥಳಿಪ ನಗೆಮೊಗದ ಬೆಳಗಿನ ಬೆಳಪ ಜೊನ್ನವ ಹಸರಿಸುತ (ಸಾಳ್ವಭಾ. ೩೨-೦೭): ಪೆಟಿಮೊಗದ ನಗೆ ಜೊನ್ನಮುಂ ಕೂಡಿ ಸುಯ್ಕೆಲರ ನಚುಗಂಪನೂಡಿ (ರಾಮಾಶ್ವ. ೯-೦೭). ೨.ಪಾಡ್ಯದಿಂದ ಪೌರ್ಣಿಮೆವರೆಗಿನ ಕಾಲ; ಶುಕ್ಲಪಕ್ಷ: ಅಟವಿಶ್ರೀಯುಂ ಜೊನ್ನದ ಪಾಡಿವದೊಳಂ ಕಾಲದಷ್ಟಮಿಯೊಳಮೈದು ವರ್ಷಂಬರಂ ನೋಂಪ ಪ್ರವೃದ್ಧ ಕಲ್ಯಾಣಮನೆತ್ತಿಕೊಂಡಳ್ (ಪಾವುಂಪು. ೮೭-೨೦): ಸೌಮ್ಯಗಣಂ ಜೊನ್ನದೊಳನ್ಯರುಂ ಬಹುಳದೊಳ್ ನಿರ್ವ್ಯಾಜದಿಂ ಬಲ್ಲಿದರ್ (ಜಾತಕತಿ. ೨-೧೧): ಜೊನ್ನದಂದಿನ ಪೆಟಿಯುಂದದೆ ನೊಕ್ಕಮುತ್ತರೋತ್ತರಮಾದಂ (ಎಕ. VII, ಶಿಮೊ. ೧೧-೪೪ ; 1085 ?): ಮುದದಿಂದಾಶ್ವಯುಜದ ಜೊನ್ನದ ದಸಮಿಯೊಳಿಂದ್ರಧನುವಿನೊಳ್ . . . ಮುಟಿ ಕೊಳ್ಗುಂ (ಅಟ್ಟಮು. ೮-೧೭೧). [ <ಪ್ರಾ. ಜೋಣ್ಹಾ. / ಸಂ. ಜ್ಯೋತ್ಸ್ನಾ ]

**ಜೊನ್ನಪಾಡಿವ** (ನಾ). ಶುಕ್ಲಪಕ್ಷದ ಪಾಡ್ಯ; ಪ್ರತಿಪದೆ: ಅಟವಿಶ್ರೀಯುಂ ತನ್ನ ನೋಂಪಿಯ ಜೊನ್ನಪಾಡಿವದೊಳುಪವಾಸಂಗೆಯ್ದು (ಪಾವುಂಪು. ೫೭).

[ ಜೊನ್ನ + ಪಾಡಿವ ]

**ಜೊನ್ನರಸ** (ನಾ). ಬೆಳುದಿಂಗಳ ಒಡೆಯ ; ಚಂದ್ರ : ಜ್ಯೋತಿಸ್ಸ್ವರೂಪ ಜೊನ್ನರಸನ ಪಗಲಾಣ್ಮನಾತತತೇಜೋಭಿರಾಮ (ಭರಹ. ೪೫-೧).

[ ಜೊನ್ನ + ಅರಸ$_1$ ]

**ಜೊನ್ನವಕ್ಕಿ** (ನಾ). ಬೆಳುದಿಂಗಳನ್ನು ಸೇವಿಸಿ ಜೀವಿಸುವುದೆಂದು ಭಾವಿಸಲಾದ ಹಕ್ಕಿ ; ಚಕೋರ : "ಜೊನ್ನವಕ್ಕಿ = ಚಕೋರಂ" (ಕಮರ. ಪರಿ. ೨) : "ತಣ್ಗದಿರವಕ್ಕಿ ಜೊನ್ನವಕ್ಕಿಯು ಚಕೋರಂ" (ಅಭಿಮಂ. ೨೯) ; ಜೊನ್ನವಕ್ಕಿಗೆ ಬೆಳ್ದಿಂಗಳ ಸಾರಮಂ ಕಟಿಯುತುಂ . . . ಮೆಯ್ವೊಟಿದಂ ಚಂದ್ರಮಂ (ದಶಕು. ೮-೨೫೯): ಮುತ್ತಿನ ಪಳುಕಿನ ಧವಳವರ್ಣಗಳ ಬೆಳುದಿಂಗಳಿಂದಾಗ ಜೊನ್ನವಕ್ಕಿಗಳೈದಿ ನೆಲಸಿದುವತಿಮುದದಿಂದ (ಕಂನವಿ. ೭-೩) : [ ಜೊನ್ನ + ಪಕ್ಕಿ$_1$ ]

**ಜೊನ್ನೊಡಲ** (ನಾ). ೧. ಬೆಳುದಿಂಗಳು ಹೊಮ್ಮುವ ಒಡಲುಳ್ಳವನು ; ಚಂದ್ರ : "ಚಳಿಗದಿರಂ . . . ಜೊನ್ನೊಡಲನ್ಸೆಕಿಲ್ವೆಳಗಂ ತಣ್ಗದಿರ ಮುಂಜುಗೈಯುಂ ಚಂದಂ" (ಕವಿಕಂ. ೪೩): ಜೊನ್ನೊಡಲನ ತಿರಸ್ಕರಿಸುವ ಕೊರ್ವಳು ಕರ್ಣಿಯ್ದಲ ಕಣ್ಣ ಕಾಂತೆ (ಮೋಪತ. ೪-೧೪): ಜೊನ್ನೊಡಲಂ ನಿಮಿರ್ಚಿದಪನಗ್ನಿಯ ತಣ್ಗದಿರಿಂದಂ (ಜಾಕುಂತ. ೩೨-೭). ೨. (?): ಮುಗಿಲಂ ಕಂಡ ಜೊನ್ನೊಡಲನಂತೆ ಪೊಂಗಿ ಪೊಜಿಯೋಜ[illegible] (ಉದ್ಭಟ. ೧೧-೫೫ ವ).

ಜೊನ್ನೊಡಲನಳಿಯ = ಚಂದ್ರನ ಸೋದರಳಿಯ ; ಮನ್ಮಥ ; ಕಾಮ : "ಅಲರ್ಗಣೆಯ ಜೊನ್ನೊಡಲನಳಿಯುಂ ದಪ್ಪಕಂ ಮಯಣನೆಂಬಿವಿಂತೊಡನೆ ಮನ್ಮಥ ನಾಮವು" (ಶಬ್ದಮಂ. ೮).
[ ಜೊನ್ನ + ಒಡಲ್ + – ಅ$_7$ ]

**ಜೊನ್ನೊಡಲವಚ್ಚ** (ನಾ). ಚಂದ್ರನನ್ನೇ ಆಭರಣವಾಗುಳ್ಳವನು; ಶಿವ: ಮುದ್ದಿಸುವ ಜೊನ್ನೊಡಲವಚ್ಚಂಗೆ ಬೆಚ್ಚುತ್ತೆ ಮಣಿದು (ಕೊಟ್ಟೂರು. ೧-೮೦). [ ಜೊನ್ನೊಡಲ + ವಚ್ಚ$_2$ ]

**ಜೊಬ್ಬ** (ನಾ). (?) : ಹಬ್ಬದಲು ದೇವತೆಗಳುಂಬರು ಜೊಬ್ಬದಲು ದಾನವರುಂಬರು ಸಬ್ಬದಿನದಲು ಮನುಜರುಂಬರದೆಂದು ಋಷಿ ನುಡಿದ (ಸಂಭಪ. ೫-೩೨). [ ? ]

**ಜೊಮ್ಮನೆ, ಚೊಮ್ಮನೆ, ಝೊಮ್ಮನೆ** (ಅ). ಆಯಾಸದಿಂದ ಕೂಡಿ ; ಬಳಲಿ; ಸೋತು: ಜೊಮ್ಮನೆ ಜೋಮೇಱಿದ ತೋಳ್ಗಳಂ ನಿಮಿರ್ವ ಪೋಲ್ (ಲೀಲಾವ. ४-೧೧೦). **ಚೊಮ್ಮನೆ:** ಅಟ್ಟಱಿಂ ಚೊಮ್ಮನೆ ಜೋಲ್ದಂ ತಪ್ಪಿಕೊಂಡು (ಧರ್ಮಾಮೃ. ೬-೧೬೫). **ಝೊಮ್ಮನೆ:** ಮೂಡಿ ಮನ್ಮಥ ವಾರಿ ಮಿಗೆ ತುಳ್ಕಾಡಿ ಝೊಮ್ಮನೆ ಬೆಮರಿ ನಾಣ್ಗೆಟ್ಟೋಡಿ (ಸಾಳ್ವಭಾ. ೨೬-೫४).

**ಜೊಮ್ಮನೆವೋಗು, ಜೊಮ್ಮನೆವೋಗು**=ಚಲನೆಯಿಲ್ಲದಿರು; ಜಡವಾಗು: ಮೆಯ್ ಪಸಿದು ಜೊಮ್ಮನೆ [ಪಾಠಾಂ. ಜೋಂಪನೆ] ಪೋದವುದು (ಪಂಪಭಾ. ೫-೭೦); ಆ ದಂಪತಿಗಳ್ ಜೊಮ್ಮನೆವೋದಂತಿರ್ದವರ . . . ಬೆಡಂಗಂ ನೋಡಿದರ್ (ಆದಿಪು. ೫-೬೫); ಚಕಿತಮೃಗಾಕ್ಷಿ ನೀನೆಳಸಿ ಕೆಮ್ಮನೆ ಜೊಮ್ಮನೆವೋಗಿ ಭಾವದಿಂ ಪ್ರಕಟಿಸಲೇಕೆ ಪಾಱುತನಮಂ (ಪುಷ್ಪಪು. ೫-೩४).
[ ಜೊಮ್ಮು$_1$ (<ಜೊಂಪು$_1$) + – ಅನೆ$_1$ ]

**ಜೊಮ್ಮಿಡು** (ಕ್ರಿ). ಆಯಾಸಪಡು ; ಬಳಲು : ಜೊಮ್ಮಿಡುತ ಜೋಲುತ್ತ (ಅನಾರ. ದೇ. ೦೮೨-೨೦). [ ಜೊಮ್ಮು$_1$ (<ಜೊಂಪು$_1$) + ಇಡು$_1$ ]

**ಜೊಮ್ಮು$_1$** 'ಜೊಂಪು$_1$' ನೋ.

**ಜೊಮ್ಮು$_2$** 'ಜುಮ್ಮು$_3$' ನೋ.

**ಜೊಮ್ಮುತಟ್ಟು** (ಕ್ರಿ).=ಜೊಮ್ಮುವಿಡಿ : ರಕ್ತಸಂಚಾರವಿಲ್ಲದಾಗ ಕೈಕಾಲುಗಳಿಗೆ ಜೊಮ್ಮತಟ್ಟುವಂತೆ (ಬೆಳುಮ. ೨೫೭).
[ ಜೊಮ್ಮು$_1$ (<ಜೊಂಪು$_1$) + ತಟ್ಟು$_1$ ]

**ಜೊಮ್ಮುಮೈ** (ನಾ). ಮರಗಟ್ಟಿದ ದೇಹ: ಶಕ್ತಿಸಂಚಾರವಿಲ್ಲದೆ ಇವನಿಗೆ 'ಜೊಮ್ಮುಮೈ' ಬಂದಿದೆ (ಬೆಳುಮ. ೨೫೭).
[ ಜೊಮ್ಮು$_2$ (<ಜುಮ್ಮು$_3$) + ಮೈ (<ಮೆಯ್) ]

**ಜೊಮ್ಮುವಿಡಿ** (ಕ್ರಿ). ಮೈಮರೆವನ್ನು ಹೊಂದು: ಅತಿಚಿಂತೆಯೊಳು ಮಱೆದ ತನು ಜೊಮ್ಮುವಿಡಿದ ಪುರ್ಬತಿಭಾರವಾಗಿ (ಹದಲಾ. ೬-೫೯).
[ ಜೊಮ್ಮು$_1$ (<ಜೊಂಪು$_1$) + ಪಿಡಿ$_1$ ]

**ಜೊಮ್ಮೆನ್ನು** (ಕ್ರಿ). ಜೊಮ್ ಎಂದು ಶಬ್ದಮಾಡು ; ನೊಣ, ಜೇನೊಣ ಮೊದಲಾದುವು ಗುಂಪಾಗಿ ಆವರಿಸುವಾಗ ಅವುಗಳ ರೆಕ್ಕೆಗಳಿಂದ ಶಬ್ದವುಂಟಾಗು : ಜೊಮ್ಮೆಂದು ನೊಣ ಮುತ್ತಿದುವು (ರೂಢಿ).
[ ಜೊಮ್$_0$ + ಎನ್ನು (<ಎನ್$_1$) ]

**ಜೊಮ್ಮೇಱು, ಜುಮ್ಮೇರು** (ಕ್ರಿ). ಮಂಕಾಗು; ಮೈಮರೆ: ತಾಱವಱಾಗೆ ಜಯು ಜೊಮ್ಮೇಱುವ ಟೆಂಟಣಿಸುವರಸನರಸನೆ ವಿರಸಂ (ಶಾಂತಿಪು. ೨-४೦). **ಜುಮ್ಮೇರು:** ಸಂತಾಪದುರಿ ಪೆರ್ಚಿ ಹೃದಯ ತಲ್ಲಣಿಸಿ ಜುಮ್ಮೇರಿ (ನವಮೋ. ೨೫-೮೦). [ಜೊಮ್ಮು$_1$ (<ಜೊಂಪು$_1$)+ಏಱು$_1$ (<ಏಱ್$_1$)]

**ಜೊಯ್ಗುಱಿ** (ಕ್ರಿ). (?) : ಕರಿಕೋಡನಗುಳ್ದ ಬೇತಾಳರ ಬಳಗದಂತೆ ನೆರೆದು ಜೊಯ್ಗುಱಿವ ದಾರಿದ್ರದಾರವೆಯಂತೆ ತಲೆದಱಿಕೊಂಡು ಜೋನೆಗರ ಜಂಗುಳಿಯಂತೆ (ವಾಗೀಶ. ದೇ. ೨೫४-೦४). [ ಜೊಯ್$_0$ + ಕಱಿ$_1$ ]

**ಜೊಲ್ಲಯ** 'ಚೊಲ್ಲೆಯ$_1$' ನೋ.

**ಜೊಲ್ಲಿಕೆ** (ನಾ). ಒಂದು ಬಗೆಯ ಭಕ್ಷ್ಯ: ಸೇವಗೆಯ ಕರಮೆಸೆವ ಸಜ್ಜಗೆಯ . . . ಹೂರಣದ ಜೊಲ್ಲಿಕೆಯ ಕಂಪುಗಳ (ಲಿಂಗಪು. ೬-४೬). [ ? ]

**ಜೊಲ್ಲು, ಜಲ್ಲು$_3$** (ನಾ). ಬಾಯಿಂದ ಊರುವ ನೀರು ; ಲಾಲಾರಸ : ಜೊಲ್ಲು ಸುರಿವ ಮುದ್ದುಮೊಗದಲ್ಲಿ ನಗೆಯಾಂತು ಸೊಲ್ಲಿಸುವನು ತೊದಳ್ನುಡಿಯ (ಮೋಹತ. ೧೬-೬೫) ; ಮೊಳೆವಲ್ಲು ಜೊಲ್ಲುಂ ಪೊಳೆಯೆ ನಸುನಗುತ್ತುಂ ಬಾಲಲೀಲೆಯಂ ತೋಱಿಸಿದನು (ಚಬಪು. ೫-४೦) : ಮುಂದಲೆಯ ಕಂಪನಾಘ್ರಾಣಿಸಿ ತೊರೆದ ಜೊಲ್ಲ ಚೆಂದುಟಿಯ ಬಾಯ್ದೆಱೆಯನ್ನೆದೆ ಚುಂಬಿಸಿ (ಜೈಮಿಭಾ. ೧೮-೨೦); ಮಾಸಿದ ಸೀರೆ ಮಸಿಯ ತಿಲಕದ ಹೊಱಸೂಸುವ ಬಾಯ ಜೊಲ್ಲಿಂದ . . . ಮುದಿವೇಶಿಯರೆಡೆಯಾಡುತಿಹರು (ಕಂಸವಿ. ೬-೧೯೧). **ಜಲ್ಲು$_3$:** ಕಲರ ಬಾಯೊಳು ಜಲ್ಲು ಜೋರಿಡುತಾ ಬಲಿತ ದೃಷ್ಟಿಯ ತೆಗೆವ ಚೇತನಗೊಳದೆ (ಜಿನಭಾ. ೧೯-೩೨) : ನಗುತೋಲಾಡುವರ ನೋಡುತ ಮಾನವೇಶರು ನಾಂಚಿ ಜಲ್ಲೊರಸಿ (ಜಿನಮು. ४-४೦).
[ ದೇ.೫ ತಮಿ. ಚೊಳ್ಳು; ತುಳು. ಜೊಲ್ಲೆ, ದೊಲ್ಲೆ, ದೊಳ್ಳೆ ; ತೆಲು. ಜೊಲ್ಲು, ಚೊಲ್ಲು ]

**ಜೊಲ್ಲುತನ** (ನಾ). ೧. ಜೊಲ್ಲಂ ಸುರಿಸುವಿಕೆ. ೨. (ಆಲಂ) ಲಂಪಟತೆ: ಶೃಂಗಾರಪ್ರಧಾನವಿದ್ದರೆ ಅದರ ಬಲಿಗೆ ಬೀಳದ ಎಸರೊಸೆವ ಜೊಲ್ಲುತನಗೆದ್ದು ರಸಿಕರಾಗಿ ಹಾಡಿದ್ದಾರೆ (ಕನ್ನಜಾ. ९೬).
[ ಜೊಲ್ಲು + – ತನ ]

**ಜೊಲ್ಲುವಾಯ್, ಜೊಲ್ಲುವಾಯಿ** (ನಾ). ಜೊಲ್ಲು ಸುರಿಯುತ್ತಿರುವ ಬಾಯಿ : ತೆರೆ ಮುಸುಂಕಿದ ಮುಖಂ ಮುಱಿದ ಬೆನ್ ಜೊಲ್ಲುವಾಯ್ [ಪಾಠಾಂ. ಬೆನ್ಜೊಲ್ವಾಯ] ಏಱಿದು ಕಂಪಿಸುವ ಪಲ್ (ಸಮ್ಯಕ್ತ್ವಾ. ೧೦-४೩). **ಜೊಲ್ಲುವಾಯಿ:** ಮುಕ್ಕುಳಿಸುವ ಜೊಲ್ಲುವಾಯಿಗೆ ಕಡು ನೇಹ ಸೊಕ್ಕಾಂತು ಮುತ್ತನಿಕ್ಕುವಳು (ಮೋಹತ. ೧೬-೬೭).
[ ಜೊಲ್ಲು + ಬಾಯ್ ]

**ಜೊಲ್ಲುವಾಯಿ** 'ಜೊಲ್ಲುವಾಯ್' ನೋ.

**ಜೊಲ್ಲುಸುರಿಸು** (ಕ್ರಿ). ಬಾಯಲ್ಲಿ ನೀರು ಸುರಿಸು : ಸ್ವಾಭಾವಿಕವಾಗಿ ಆಹಾರ ಕಂಡೊಡನೆ ನಾಯಿಯೊಂದು ಜೊಲ್ಲುಸುರಿಸುತ್ತದೆ (ಶಿಕ್ಷದ. ४೨೮).
[ ಜೊಲ್ಲು + ಸುರಿಸು ]

**ಜೊಲ್ಲೆ** 'ಚೊಲ್ಲೆಯ$_1$' ನೋ.

**ಜೊಲ್ಲೆಯ$_1$** 'ಚೊಲ್ಲೆಯ$_1$' ನೋ.

**ಜೊಲ್ಲೆಯ$_2$** (ನಾ). ಒಂದು ಸ್ಥಳದ ಹೆಸರು (?): ಪಾವುಳ ಪರಿವಾರದ ಮನೆಯುಂ ದೇವರೊಡಮೆ ನಿವೇದ್ಯಕ್ಕೆ ಜೊಲ್ಲೆಯದಲು ಗರ್ದ್ದೆ ಕೋಲ ಮತ್ತರು ೧ (ನಾಂದೇಡ್. ३-೨೨ ವ; 1047). [ ? ]

**ಜೊಲ್ಲೆಹ** 'ಚೊಲ್ಲೆಯ$_1$' ನೋ.

**ಜೊಸೆ** 'ಜೋಸೆ' ನೋ.

**ಜೊಳಜೊಳ** (ನಾ). ಒಂದು ಅನುಕರಣ ಶಬ್ದ; ಜೋಳವೆಲ್ಲಾ ಚೀಲದಿಂದ ಜೊಳಜೊಳ ಎಂದು ಸುರಿದುಹೋಯಿತು (ರೂಢಿ).

**ಜೊಳಪಿಳ** (ನಾ). (ಉಕ) ಸಡಿಲವಾಗಿರುವುದು ; ದೊಗಲೆ ; ಅಳ್ಳಕವಾದುದು : ಆಕೆಯ ಹೊಸಬಗೆಯ ಉಡುಪು ಬಹಳ ಜೊಳಪಿಳಿಯಾಗಿದೆ (ರೂಢಿ). [ ? ]

**ಜೊಳ್ಳು** 'ಜಳ್ಳು' ನೋ.

**ಜೊಳ್ಳುಗಾಳು** 'ಜಳ್ಳುಕಾಳು' ನೋ.

**ಜೊಳ್ಳೆ** (ನಾ). ತಿರುಳಿಲ್ಲದುದು ; ನಿಸ್ಸಾರವಾದುದು; ಜೊಳ್ಳಾದುದು. 'ಅಳ್ಳೆಜೊಳ್ಳೆತನ', 'ಅಳ್ಳೆಜೊಳ್ಳೆಯ' ಪರಾ. [ <ಜೊಳ್ಳು ]

**ಜೊಜ್** (ನಾ). ಒಂದಂ ಅನುಕರಣ ಪದ : ಜೊಜ್ಜೆಂಬ ಘುಮ್ಮೆಂಬ . . . ಭೋರೆಂಬ ಕೂರಸಿಗಳುರವಣೆಯ ದನಿಯುಡಸುತಂ ಪುಟ್ಟೆ (ಇಪರ.ದೀ. ೪೧-೨೪) : ಧಳಧಳಂ ಜೊಜ್ಜೆಂ[ಪಾಠಾಂ. ಜೋಜ್ಜೆಂ]ಬ . . . ಧ್ವನಿಗಳವನಿಗೆ ಭಯವನೀವುತಿರೆ (ಸಾನಂಪ. ೮-೧೩).

**ಜೋ, ಜೊ** (ನಾ). ಮಕ್ಕಳನ್ನು ತೊಟ್ಟಿಲಲ್ಲಿಟ್ಟು ತೂಗುವಾಗ ಹೇಳುವ ಮಾತು; ಜೋಗುಳದ ಧ್ವನಿ: ತೂಗಿದರಚ್ಯುತ ಜೋ ಮಹಾತ್ಮ ಜೋ ಸದಮಲಬೋಧ ಜೋ . . . ಎನುತಂ ಲತಾಂಗಿಯರ್ (ಜಗವಿ. ೩-೨೮): ಜೋ ಸಂಪದೆ ಜೋ ವಿಶಾಲೆ ಜೋ ಶಿವೆ (ಗಿರಿಶ. ೩-೬೮) : ಸಸಿಯು ಕೊರಗಿಸಿ ರಸವ ಹಿಳಿದುಕೊಂಡಿಳಿಗೊಗುವ ಹಸುಳೆ ಜೋ ಒಡಹುಟ್ಟಿದರ ನಗಲ್ವ ನಿರ್ಮೋಹಿ ಜೋ (ಸಿದ್ಧರಾ. ೧-೫೯). **ಜೊ** : ಕಂದ ಜೊ ಸೋಮವಂಶಾಂಬುಧಿ ಪರಿಪೂರ್ಣೇಂದು ಜೊ . . . ಎಂದು ಪಾಡಿದರು (ಕಂನವಿ ೪.೬೪).

**ಜೋಜೋ** (ದ್ವಿರುಕ್ತಿ): ಜೋಜೋ ಶ್ರೀಕೃಷ್ಣ ಪರಮಾನಂದ ಜೋಜೋ (ಪುರಂದ. ೧-೧೨೮ ಪಲ್ಲವಿ) : ನಳಿನಲೋಚನ ಕಂದ ಜೋಜೋ ಚೆಲುವ ಚೆನ್ನಿಗ ಕಱುವೆ ಜೋಜೋ (ಸಾಳ್ವಭಾ. ೧೧-೨೫) : ಜೋಜೋ ಮಹಾವೀರ ಶೈವೋದ್ಧರಣ ಕೀರ್ತಿ ಜೋಜೋ (ಚಬಪು.೫-೨೯): ಜೋಜೋ ಮೂಲೋಕದ ಶಿರೋಮಣಿಯ ಜೋಜೋ (ನವಮೋ. ೦೫-೪೦).

[ ದೇ.॥ ತುಳು. ತೆಲು. / ಮರಾ. ಜೋ ]

**ಜೋಂಕೆ** (ನಾ).(?): ಎಱಗದರಾತಿರಾಯ × × × ಪರಜೋಂಕೆಯಬ್ಬಿಸಂ ಕಿಱಿಪಿ ಭುಜಾಸಿಯಂ ಜಸಮನೆಣ್ದೆಸೆಯಾನೆಯ . . . ಸಮಗ್ರ ಸಾಹಸಮನೀ ಧರೆಯೊಳ್ಮೆಱೆಯುತ್ತುಂ (ಎಕ. XII, ತುಮಕೂ. ೩೮-೧೩ : 1160). [ ? ]

**ಜೋಂಟಿಗ** 'ಜಟ್ಟಿಂಗ' ನೋ.

**ಜೋಂಪ** 'ಜೊಂಪ$_1$' ನೋ.

**ಜೋಂಪಿಸು$_1$** 'ಜೊಂಪಿಸು$_1$' ನೋ.

**ಜೋಂಪಿಸು$_2$** 'ಜೊಂಪಿಸು$_2$' ನೋ.

**ಜೋಂಪು$_1$** 'ಜೊಂಪು$_1$' ನೋ.

**ಜೋಂಪು$_2$** 'ಜೊಂಪ$_1$' ನೋ.

**ಜೋಕಣ್ಣ** (ನಾ). ಒಬ್ಬಾತನ ಹೆಸರು: ಜೋಕಣ್ಣಂ ಮೂಲಣ್ಣಂ × × × ನಂಬ್ಯನ್ನರ ಸಿದ್ಧಿ ಪಡೆದರ್ (ಎಕ. VIII, ಸೊರಬ. ೫೦೦-೮ : 958).

[ ಜೋಕ$_0$ + ಅಣ್ಣ$_1$ ]

**ಜೋಕರಿಸು** (ಕ್ರಿ). ಜೋತುಬೀಳು ; ಅಂಟಿಕೊಳ್ಳು (?): ಗುರು ಕೊಟ್ಟುದಿಲ್ಲ ನೀವಾದರು ವ್ರತವೆಂದು ಸ್ಮರಿಸಿತಿಲ್ಲರ್ತಿಯೊಳಾದ ಪರಿಣತಿ ಗೇತಕೆ ವ್ರತವ್ರತವೆಂದು ಜೋಕರಿಸಿಕೊಂಬಿರಿ ಬನ್ನಿರೆಂದಾ (ಭರಚ. ೪-೪೨): ಕೋಡಿ ಬಾಡಿ ಜೋ[ಪಾಠಾಂ. ಬೋ]ಕರಿವೆನಗೆತ್ತ ನಿರ್ಜರೆಯ ಮಾತು (ಅಪಶ. ೨೦); ರೆಕ್ಕೆಗಳ ಕೆಡಹಿಯಿಳಿಗಾಕರಿಸಿ ಜೋಕರಿಸಿ ಖಂಡತುಂಡುಗಳ ಗೈದೆ (ಜಿನಮು. ೨೮-೩೫). [ ? + – ಇಸು$_3$ ]

**ಜೋಕಾಲಿ, ಜೋಕಾಲೆ** (ನಾ). ಉಯ್ಯಾಲೆ : ಬಾಲೆಯರು ಜೋಕಾಲಿ ಯಾಡುವ ಕಾಲದಲಿ ತಮ್ಮಿನಿಯರನು ಕಣ್ಣಾಲಿಯಿಂ ನೆರೆ ನೋಡಿ (ರಘುವಂ. ೯-೪೬) : ಎಡಗಣ್ಣೂ ಬಲಗಣ್ಣೂ ಹಾರಿ ಹಾರಿ ಆಶೆ ನಿರಾಶೆಗಳ ಜೋಕಾಲಿಯನ್ನು ಜೀಕುತ್ತಿದ್ದುವು (ಮಾವಿಕೋ. ೬): ಜೋಕಾಲಿಯ ಮೇಲೆ ಕುಳಿತುಕೊಂಡು ಸಮುದ್ರವನ್ನು ಹಾರುವಾಗ ಜೋಕಾಲಿಯ ಹಗ್ಗ ಹರಿದು, 'ಜೋ' ಎಂದು ನಡುಸಮುದ್ರದಲ್ಲಿ ಧುಮುಕಿ ಬಿಟ್ಟ (ಮುಂಗಾರು. ೯೭) : ಅವನ ಜೀವನವೇ ಜೋಕಾಲಿಯಾಗಿ ತೂಗಹತ್ತಿತು (ಬಂಗಾಹ. ೨೭). **ಜೋಕಾಲೆ:** ಮಕ್ಕಳು ಜೋಕಾಲೆಯ ಮೇಲೆ ಕುಳಿತು ಆಡುತ್ತಿದ್ದಾರೆ (ರೂಢಿ). [ ? ]

**ಜೋಕಾಲೆ** 'ಜೋಕಾಲಿ' ನೋ.

**ಜೋಕಾಱ** (ನಾ).=ಜೋಕುಮಾರ ೧: ಮನೆಯೊಳ್ ಕಾಲ್ ನೆಲೆಗೊಂಡು ನಿಂದಱಿಯನೀ ಜೋಕಾಱಿಯಂತಿರ್ಕೆ (ಸೂಕ್ತಿಸು. ೮-೪೫೭). [ ? ]

**ಜೋಕು$_1$, ಜೋಕೆ$_2$, ಝೋಕು$_1$** (ನಾ). ೧. ಗೀತವಾದ್ಯವನ್ನು ಬಾರಿಸುವುದರಲ್ಲಿ ಒಂದು ಕ್ರಮ : ಮದ್ದಳೆಯಂ . . . ಜಾತಿ ಜೋಕು ತುಡುಕು . . . ಕೌತುಕಳಿಕೋತ್ತರಂಗಳಿಂ ಕೌತುಕದ ಬಾಜನೆಯೊಳೆಸಗಿದುವೆನಿಸಿ ಬಾಜಿಸುತ್ತಿರೆಯುಂ (ಶಾಂತೀಶ್ವ. ೭-೯೩ ವ). ೨. ಠೀವಿ ; ದೌಲು : ಮಾತಾಡಿದೊಡವನ ಧನಾಕರ್ಷಣವನು ಮಾಳ್ಪ ಜೋಕಿನ ನಾಯಕಿಯರಿರ್ದರು (ಕಂನವಿ. ೬-೧೦೮) ; ಈ ಹಾಡಿನಲ್ಲಿರುವ ಕಥೆ ಹೇಳುವ ಜೋಕು (ಕರ್ನಾಸಂ. ೪೩). ೩. ಮಲ್ಲಯುದ್ಧದ ಒಂದು ಬಗೆಯ ವರಸೆ (?): ಪೇತು ಸಾಧನೆಗಳ ಜೋಕಿನ ಪಟವನ್ನು ರೀತಿ ತಿಳಿದು ವರಸೆಗಳ ನೂತನ ಕತ್ತಿ ಕಠಾರಿ ದೊಣ್ಣೆಯ ಸಾಧಕೋತ್ತಮ ರಾಜಕುವರರು (ಕಂನವಿ. ೭-೦೮). ೪. ತಂತ್ರ ;ಕಪಟೋಪಾಯ : (ಕ). **ಜೋಕೆ$_2$** : ೧. ಗೀತಿ ಜತಿ ಜೋಕೆ ನಯಂ . . . ಎಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸವಂ (ಜಗವಿ.೫-೩) : ತುಡುಂಕೊತ್ತು ಜೋಕೆ [ಪಾಠಾಂ. ಜಂಕೆ]ಯುಂತರಿ ಜತಿ ರಿಗವಣೆ ಪಹರಣೆಯೆನಿಪ್ಪೀ ಪ್ರಬಂಧಮಂ (?) ಶ್ರೋತ್ರಬಂಧುವೆನೆ ಬಾಜಿಸಿದರ್ (ಪಾರ್ಶ್ವಪು. ೧೨-೨೧) : ಜತಿ ಜೋಕೆ ತುಡುಕು . . . ಸಂಗತಿವಡೆಯೆ ವಾದನಕಳಾವತಿ ಬಾಜಿಸುತಿರ್ದಳಂತು ಮುರಜಮಂ(ಶಾಂತೀಶ್ವ. ೦೩-೨೨೭): ಜಾಣುಣ್ಮೆ ಜೋಕೆಯಿಂ . . . ಕೇಳಿಸಿದರವರು (ಜೈಮಿಭಾ. ೨೧-೫೭). **ಝೋಕು$_1$** : ೨. ಆ ಕುಲವತಿಯ ಕಿರಿಯ ತನುಜೆಯನು ರವಿಸಿ ಬಹ ಝೋಕು ನೋಡೆಲೆ (ದಂಡ್ರಾವ. ೫೧-೪೦೫) : ಉದಯರಾಗಗಳನ್ನು ಹೇಳ ತೊಡಗಿದೆ. ಮನಸ್ಸು ಅಷ್ಟು ಝೋಕಾಗಿತ್ತು (ಸುಳಿವು. ೦೧೫) : ಇಂತಹ ನಾಟಕ ಎಲ್ಲಿ ನಡೆದರೂ ಎಷ್ಟು ಸಲ ನಡೆದರೂ ಆಡುವವರಿಗೆ ಬೇಸರವಾಗುವುದೇನು ? ಎಂದಿಗೂ ಇಲ್ಲ. ಅದೇ ಅದರ ಝೋಕು (ಮುಳ್ಳ. ೧೨).

[ ? / ಅರ. ಝೋಕ್ ]

**ಜೋಕು$_2$, ಝೋಕು$_2$**(ನಾ). ೧. (ಉಕ)ಪೆಟ್ಟು; ಹೊಡೆತ: ಅವರಲ್ಲಿ ಒಬ್ಬ ದೊಡ್ಡ ಹುಡುಗ ಬಂದು ನನ್ನನ್ನು ಕೆಳಕ್ಕೆ ನೂಕಿಬಿಟ್ಟು ಓಡಿಹೋದನು. ನಾನು ಜೋಕು ತಿಂದು ಮುಂದಕ್ಕೆ ಮುಗ್ಗರಿಸಿ ಬಿದ್ದೆ (ಸುಮಚ. ೬೭); ಜಿರರ್ ಜಿರರ್ ಎಂಬ ಸೊಕ್ಕಿನ ಮಾತುಗಳೊಡನೆ ಆ ಗಿರಿಯ ಮೇಲೆ ಜೋಕು ಹೊಡೆಯುತ್ತಿತ್ತು (ಕಗದ್ಯ. ೨-೩೫). **ಝೋಕು$_2$** : ೨. ಪ್ರತಿಸ್ಪಂದನ; ಚಲನೆ ; ಓಲಾಟ : ಮೊಣಕಾಲು ಕುಟ್ಟಿದಾಗ ಸರಿಯಾಗಿ ಝೋಕು ಹೊಡೆಯಿತು (ಮನೋನಂ. ೧೨೫). [ ←ಮರಾ. ಝೋಕ್ ]

**ಜೋಕುಗಾರ** (ನಾ). ಬೆಡಗುಗಾರ : ಒನಪುಗಾರ: ಆಡಂಬರದ ನಡವಳಿಕೆಯನ್ನುಳ್ಳವನು : (ಕ)

[ ಜೋಕು$_1$ + – ಗಾರ (< – ಕಾಱ) ]

**ಜೋಕುಗಾರ್ತಿ** (ನಾ). ಒನಪುಗಾತಿ ; ಆಡಂಬರದ ನಡವಳಿಕೆಯನ್ನುಳ್ಳವಳು : (ಕ). [ ಜೋಕುಗಾರ + –ತಿ$_1$ (< –ಇತ್ತಿ) ]

**ಜೋಕುಮಾರ, ಜೋಕುವರ, ಜೋಕೊವರ, ಜೋಕೋರ** (ನಾ). ೧. ಒಬ್ಬ ದೇವತೆಯ ಹೆಸರು. ℙ ಉತ್ತರಕರ್ನಾಟಕದ ಜನಪದದಲ್ಲಿ ಜೋಕುಮಾರನ ಕಥೆ ಪ್ರಚಲಿತವಿದೆ. ಮಣ್ಣಿನ ಬೊಂಬೆಯನ್ನು ಮಾಡಿ ಬುಟ್ಟಿಯಲ್ಲಿರಿಸಿ ಬೇವಿನ ಎಲೆಗಳಿಂದ ಅಲಂಕರಿಸಿ ಅದನ್ನು ಹೊತ್ತು ಮನೆಮನೆಗೆ ಸುತ್ತುತ್ತಾರೆ. ಅದಕ್ಕೆ ಅಂಬಲಿ ನೈವೇದ್ಯ ಮಾಡುತ್ತಾರೆ : ಚಾಮುಂಡಿಣ ಹಲ್ಲಿನ ಜೋಕುಮಾರ . . . [illegible] ಮತಿಯ ಕೊಡುವ ಜಂಪೆ ಜಡದೈವ (ವಿಸಾಸು. ೫೮-೨): ಜೋಕುಮಾರನೆಂಬ ಅಭದ್ರವಾದ ಗೊಂಬೆಯನ್ನು ಬುಟ್ಟಿಯೊಳಗೆ ಇಟ್ಟು . . . ಭಿಕ್ಷೆ ಬೇಡುತ

ತಿರುಗುವರು (ಕಭಾಗ. ೦೮೩) ; ನಾಳೆ ಬರದಿದ್ದರೆ? ಜೋಕುಮಾರನ ಆಣೆ (ರಕ್ತರ್ತ್ರ. ೩೦೦). ೨. (ಅಲಂ) ಚೆಲುವ; ಸುಂದರ : ಈಗ ಈ ಜೋಡು ರಿಪೇರಿಯು ಜೋಕುಮಾರ (ವ್ಯಧ್ಯವಿ. ೦೦೪). **ಜೋಕುವರ:** ೧. ನಿಟ್ಟಸಿರ ಬಾಗದ ಮಾನಿ(ನ)ಸವಾಟಿಗ್ಗ ನಾವೆ ಜೋಕು[ಪಾಠಾಂ. ಕೊ]ವರನ ಬಾಟ್ಕಿ ಲೇಸು ಗಡಂ (ಜೀವಸಂ. ೮-೬). **ಜೋಕೊವರ:** ೧. ದೇವತೆ . . . ತನ್ನ ವೆಮ್ಮಗಂ ಜೋಕೊವರಂ[ಪಾಠಾಂ. ಜೋಕಾರು]ಸಾವಾಗ ಕಾಯುಲಾಖದ ಕೀಎಲು ವೇಳ್ಪಖರ್ಗೆ ಮಾಡಲಾರ್ವಳೆ ಸುಖಮಂ (ಸಮಪ. ೯-೧೦೦): ಜೋಕೊ[ಪಾಠಾಂ. ಕು]ವರಂ ನೆಗಟ್ದಂ ಸುರಲೋಕವಿರುದ್ಧಮನೆ (ಪಾರ್ಶ್ವಪು. ೩-೬೫). **ಜೋಕೋರ:** ೧. ನವಪಂಚಮದೊಳ್ ಪುಟ್ಟಿದ ಕುವರಂ ಜೋಕೋರನಂತೆ ಪಲದಿವಸವಿರಂ (ಜಾತತಿ. ೬-೭): ಬಲೆ ಜೋಕೋ[ಪಾಠಾಂ. ಕಾ]ರನಂತಿರೇಟು ದಿವಸದರಸುತನಮಂ ಬೇಡಿ ಪಡೆದೆ (ಅರ್ಧನೇ. ೬-೦೯ ವ).

[ ಜೋ ? + ಕುಮಾರ ]

**ಜೋಕುವರ** 'ಜೋಕುಮಾರ' ನೋ.

**ಜೋಕೆ$_1$** (ನಾ). ೧. ಜೋಪಾನ; ಲಕ್ಷ್ಯ; ಜಾಗರೂಕತೆ: ದುರ್ಜನಿಕೆಯುಂ ಬಿಟ್ಟು ನೀಂ ಜೋಕೆಯಿಂ ಸಜ್ಜನನ ಮಾರ್ಗದಿಂ ನಡೆಯಲಿಹಲೋಕ ಪರಲೋಕಸುಖ (ವೀಶ್ವಪು. ೬-೦೬-೪೫) : ಜೋಕೆ ತಪ್ಪಿದ ಬಳಿಕ ಅರ್ಥ ವ್ಯರ್ಥ (ಪುರಂದ. ೦-೦೩೩-೪). ೨. ಸೊಗಸು ; ಚೆಲುವು : ಜಯಯೆಂದು ಪೊಗಳುತಿಹ ಜೋಕೆಯಿಂ ಮೆಱೆವ ಜಗದೀಶನಂ ನಿಟ್ಟಿಸಿದನು (ಹದಕಾ. ೦೦-೪೦): ನಾಟಕದ ಪಾತ್ರದ ವೇರಣೆಯು ಜೋಳಿಗಳ ಜೋಕೆಗಳ ಪ್ರಕಟ ವೆಸೆಯುಲು (ಬಸಪು. ೪-೭): ಸಾರತರ ಸತ್ಯದ ಜೋಕೆ . . . ಎನಿಸಿರ್ಪುದು ಕಾಶಿಯ ದೇಶಂ (ವೀರವಿ. ೦-೪೬): ತೊನೆವುತಿಹ ಚಿತ್ರದ ಪತಾಕೆಗಳ ಜೋಕೆಗಳ ಕೋಟಾವಳಿಯುಮೆಸೆದುದು (ಚಬಪು. ೪೨-೨೦). ೩. ರೀತಿ ; ಕ್ರಮ : ಮುನ್ನ ಬೇಂಟೆಯು ಜೋಕೆಯುಱಿದ ಬೇಡರು ಮಡಿದ ಚನ್ನ ನಚ್ಚಿನ ನಾಯ್ಗಳಿದಳಲು ಬೆರಸಿ . . . ತಮ್ಮೊಳಗೆ ಕೈಪೊಯ್ದು (ಹದಕಾ. ೬-೨೪): ಏಕಾತ್ಮಪಕ್ಷದೊಳನೇಕ ಭೋಗಂ ಘಟಿಪ ಜೋಕೆಯಿಲ್ಲ (ಅನುಸಾ. ೩-೨-೦೦) : ಏಕೆ ನೂತನ ಪರಿಯಿದೇತಱ ಜೋಕೆ (ಕೋಗಯು. ೯-೫೯). ೪. ಸಾಲು ; ಶ್ರೇಣಿ : ತೆಕ್ಕೆಯಿಂದೊತ್ತರಿಪ ಜೋದ ಜೋಕೆಗಳಲ್ಲಿ ಇಂತು ನೆರೆದುದು ಚಾತುರಂಗಬಲ (ಇಹರ. ದೇ. ೩೮-೪); ಆ ಮೋಹರದ ಜೋಕೆಯು ಹಿಂದೆ ಲಕ್ಷ ಕಳಿಂಗಘಟೆಗಳು ಸಂದಣಿಸಿದವು (ಕುಮ್ಯದ್ರೋ. ೨-೨೨): ಮೈಮಱೆದಳೊಂದೆರಡೆಂಬ ವಸ್ತುಗಳ ಜೋಡಣೆಯ ಜೋಕೆಗಳ. ರಘುಡಿತೆಯು ರಘಾಡಣೆಯ ರೆಘೂವಿಮ್ಮನಲಿ ಬಳಕೀಡಾಡಿದಳು (ತೊರರಾ. ೩-೪-೪). ೫. ಹಿಡಿತ; ವಶ: ಶಿವನ ಜೋಕೆಯನಱಿಯದೆ ಮಾತನಾಡುವ ಮಾತೆಲ್ಲವೂ ಮಾತಿನ ಮಾಲೆ (ಪದಗೋ. ೨೨೯-೦೦೨) ; ಜೋಕೆಯಾಗಿಹ ರೆಲ್ಲರೆನಗೆ ನಿನಗೆ ಚಿಂತೆಯೇಕೆ (ಕುರಾಸಾಂ. ೨೬-೦೪೫). ೬. ಸಿದ್ಧತೆ; ತಯಾರಿ : ನಿನಗಿದಿರಾಗಬೇಕೆಂದನೇಕ ಬಲವನು ಜೋಕೆಯ ಮಾಡಿ ಕೊಂಡಿರ್ದವನು (ಕುರಾಸಾಂ. ೩೦-೨೨). ೭. ಕಣ್ಣರಿಕೆ ; ಎಚ್ಚರಿಕೆ: ಮಂಗಳಮಯ ಮುಹೂರ್ತದ ಜೋಯಿಸರ ಜೋಕೆಯಲಿ ನಿರ್ಗಮ ನಿರತನಾದನು ಕೃಷ್ಣನು (ಕುವ್ಯ. ಉ. ೭-೪): ರಥರಾಜಿ ಮುಂಗುಡಿ ವರಿದುದವನೀಪತಿಯ ಚೂಣಿಯ ನೃಪರ ಜೋಕೆಯಲಿ (ಕುಮ್ಯದ್ರೋ. ೧-೪೬). ೮. ಚಾತುರ್ಯ ; ಕೌಶಲ : ಜೋಕೆ ಜವಗೆಡೆ ಮುಱಿವಡೆದು ಬಲದಾಕೆವಾಳರು ಸರಿಯೆ (ಕುವ್ಯಕ. ೨-೯): ಈ ಕುಮಾರರೊಳಗೆ ನೀನೇ ಜೋಕೆಯುಳ್ಳವನಹೆ (ಕುವ್ಯಕ. ೦೯-೩೯). ೯. ಎಚ್ಚರಿಕೆಯನ್ನು ಸೂಚಿಸುವ ಒಂದು ಪದ : ಕಿಳಿವನು ಕೊಡಲಾರದಾತನು ಜಗದೊಳು ಕೇಡಿಗನಾದಾನು ಜೋಕೆ (ಇಂದಾಪ. ೦೯೨-೪೭) : ಜೋಕೆ ಮೈಮೇಲೆ ಎಚ್ಚರವನ್ನಿಟ್ಟುಕೊಂಡು ಮಾತಾಡು (ಅಮಗಾಂ. ೧೪).

**ಜೋಕೆಮಾಡು** = ೧. ಜೋಪಾನ ಮಾಡು; ಕಾಪಾಡು ; ರಕ್ಷಿಸು : ಜೋಕೆಮಾಡದೆ ಮೇಲ್ವಾಯಿದು . . . ಪಱಿದಿಡಲು (ಅಂಜಿದ. ೬-೦೦೮) : ನಿಮ್ಮತಾಯಿಯೇ ನನ್ನ ಮಕ್ಕಳನ್ನು ಜೋಕೆಮಾಡಿದಳು (ಮುಂಬಯಿ. ೪-೦೯೬). ೨. ಎಚ್ಚರಿಕೆಯನ್ನು ತೆಗೆದುಕೊಳ್ಳು: ಜೋಕೆಮಾಡಿ ಪೋದವು ಹಂಸೆಗಳು ನಮಗೇಕೆ ನಡೆಯ ಸೊಬಗೆಂದು (ಅಂಜಿದ. ೯-೧೬೭). ೩. ಸಿದ್ಧ ಪಡಿಸು; ಏರ್ಪಾಟು ಮಾಡಂ: ಜಲಕೇಳಿಗೀಸರಸಿಗಳ ಜೋಕೆ ಮಾಡು ವುದು (ಪದ್ಮರಾ. ೮-೪೩) : ತೊಳಗುವಾಭರಣವ ಜೋಕೆಮಾಡುವ ಜಾಣ (ಕಂನವಿ. ೨೫-೭೪). [ ದೇ.ಶ ತುಳು. ಕೊಡ. ಜೋಕೆ ; ತೆಲು. ಜೋಕ ]

**ಜೋಕೆ$_2$** 'ಜೋಕು$_1$' ನೋ.

**ಜೋಕೆ$_3$** (ನಾ). ನೆಯ್ಗೆಯಂ ಸರಕು : "ಜೋಕೆ–ನೇಕಾರರ ಮಗ್ಗದ ಮಾಲು" (ಜಾನಕೋ. ೬೧). [ ? ]

**ಜೋಕೆಗಾಱ** (ನಾ). ಜೋಪಾನಮಾಡುವವನು ; ರಕ್ಷಕ : ಬೋಧ ಗಾಱರ ಜೋಕೆಗಾಱನು ಜಾಣನಹನೆಂದ (ನಿಭಾಗ. ೩-೮-೩೬):

[ ಜೋಕೆ$_1$ + – ಕಾಱ ]

**ಜೋಕೆಗುಟ್ಟು** (ಕ್ರಿ). ಎಚ್ಚರಿಕೆಯನ್ನು ಕೊಡು ; ಎಚ್ಚರಿಸು : ಅರಸನ ಸಮ್ಮುಖ ಬಂತು ಎಂದು ಅವರವರೆ ಪರಸ್ಪರ ಜೋಕೆಗುಟ್ಟಿದರು (ಮೂಮಲ್ಲ. ೧೦). [ ಜೋಕೆ$_1$ + ಕುಟ್ಟು$_1$ ]

**ಜೋಕೆಗೊಳ್** (ಕ್ರಿ). ಸಾಲುಗೊಳ್ಳು ; ಓರಣವಾಗಿರು : ಆ ಕೋಟೆಯುಡಿ ಮುಟ್ಟ ಕೆಳಗಣ ರಜತಾದ್ರಿಗೇಕಹಸ್ತವ ಬಿಟ್ಟು ಮೇಲೆ ಜೋಕೆಗೊಂಡ್ಯದು ಸಾವಿರಮಾರಿನೆಡೆಯೊಳನೇಕ ಸೋಪಾನಗಳಿಹುವು (ಭರದ. ೬೭-೯).

[ಜೋಕೆ$_1$ + ಕೊಳ್$_1$ ]

**ಜೋಕೆವಿಡಿ** (ಕ್ರಿ). ೧. ಎಚ್ಚರಿಕೆಯನ್ನು ತೆಗೆದಂಕೊಳ್ಳು : ಬಹಳ ಜೋಕೆ ವಿಡಿದು ಕೈಯಲ್ಲಿ ಪಂಜು ಹಿಡಿದುಕೊಂಡು ಸಾಗುತ್ತ . . . ತಲುಪಿದನು (ಇಪ್ಪಳ. ೩೪೨). ೨. ಅಚ್ಚುಕಟ್ಟಾಗಿರು ; ಸೊಗಸಾಗಿರು : ಜೋಕೆ ವಿಡಿದು ನೀಡುವೆಳೆಯ ಫಳಿಗೆಯ ಪರಾಕಿನೊಳಗೆ ಕೈಕೊಳುತ ಏಕೆ ನುಡಿ ಯನೋ ಇನ್ನೊಮ್ಮೆಯೆಂಬಂತೊಂದು ತೂಕದೊಳೆಸೆದನು (ಭರದ. ೦-೩೮).

[ ಜೋಕೆ$_1$ + ಪಿಡಿ$_1$ ]

**ಜೋಕೆವೆಱು** (ಕ್ರಿ). ಚಾತುರ್ಯದಿಂದ ಕೂಡಿರು ; ಕೌಶಲ್ಯದಿಂದ ಕೂಡಿರಂ : ನಾಕನಾಯಕನ ನರ್ತನದ ನೀಱೆಯರ ನಿರಾಕರಿಸುವ ನೃತ್ಯ ದಿಂದ ಜೋಕೆವೆತ್ತೆಸೆವ ನಚ್ಚಣಿಯರು (ಕುರಾಸಾಂ. ೫-೨೪).

[ ಜೋಕೆ$_1$ + ಪೆಱು$_1$ ]

**ಜೋಕೊವರ** 'ಜೋಕುಮಾರ' ನೋ.

**ಜೋಕೋರ** 'ಜೋಕುಮಾರ' ನೋ.

**ಜೋಗ$_1$, ಜೋಗು$_3$** (ನಾ). ೧. ತಪಸ್ಸು ; ಧ್ಯಾನ : ದೇವರಂ ಬಂದಿಸಿ ನಿಯಮಂಗೆಯ್ದು ಜೋಗ ಭಕ್ತಿಯಿಂದಿರ್ದರ್ (ವಡ್ಡಾರಾ. ೦೫೬-೮): ನಿಜಾರಿ ತಳೆ[ಯು]ಲು ಹೃದ್ರೋಗಮಂ ಜೋಗಮಂ ತತು ಪುತ್ರಂ ನೆಗಳ್ದಂ (ಕಇಲ. ೭೪-೦೨-೮: 1170) ; ಜೋಗಗೆಳೆಯರಣ್ಬರೇಱಿವರ್ಪನ್ನಮಱಿವಗೆ ಗಳಟಿಪೋದ ನಿಚ್ಚಣಿಗೆಯಂಬಂತಿರಿರ್ಬದಿಯೊಳಮೊಲ್ಗಳ ಸಾಲ್ಗಳ್ ತ್ತೋಱಿ (ರಾಮಾಶ್ವ. ೪೦-೨೬). ೨. ಸಂಪರ್ಕ; ಹೊಂದಿಕೆ ; ಸೇರಿಕೆ. ೩. ಉಪಯೋಗ. 'ಜೋಗಯಿಸು' ಪರಾ. ೪. ದೋಣಿ ; ನಾವೆ: "ಜೋಗಂ ಪರೀತಂ ನಿಮುಂಜರಂ ದುಗ್ಗಿಯೋಡಂ ದೋಣಿಯೆಂದೆನಲ್ ನಾವೆಯುಕ್ಕುಂ" (ಮಂಗರಾ. ೦೨೦-೪). **ಜೋಗು$_3$** : ೧. ಎನ್ನ ದ್ರೋಹ ಮರಸನ ಕಿವಿಯಂ ಮುಟ್ಟದಂತಾಗೆ ಮಾಟ್ಪೆನೆಂದುಪಾಯದಿಂ ಜೋಗಂ ಕೈಕೊಂಡು (ಧರ್ಮಾಮೃ. ೯-೧೫೪). 'ಜೋಗುಗೊಳ್' ಪರಾ. ೪. ಸಂಬುಕ ಪಡಗು ಜೋಗು[ಪಾಠಾಂ. ೧]ಗಳಿಗೆ ಸುಂಕವ ಕೊಂಬ ರಾಜೇಂದ್ರನ (ಕುರಾಸಾಂ. ೦೦-೨೦). [ <ಸಂ. ಯೋಗ ]

**ಜೋಗ$_2$** (ನಾ). ಒಂದು ಬಗೆಯ ವಸ್ತ್ರ: ಚೀನದ ಧವಳವಟ್ಟದ ಜೋ[ಪಾಠಾಂ. ಜೊಂ]ಗದ ದೇವಾಂಗದ ಸಕಳವಟ್ಟೆಗಳುಮಂ . . . ಜವನಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಆದಿಪು. ೪–೩೪ ವ). [?]

**ಜೋಗ$_3$** 'ಜೂಗ$_2$' ನೋ.

**ಜೋಗಂಬೋಗು, ಜೋಗವೋಗು** (ಕ್ರಿ). ಮೈಮರೆ ; ಪರವಶವಾಗು: ಪೊಸದಳಿರ ಪೊಸಸಿರಿಯ ಭಾರದಿಂ ಜೋಗಂಬೋದಂತೆ ಮಲಂಗಿದ ಜಾಗಂಗಳುಮಂ (ಲೀಲಾವ. ೧೧–೫೮ ವ): ತೂಗಾಡುತ ಮಡಕೆಗಳಂ ಬಾಚಿಸಿ ಜೋಗಂ[ಪಾಠಾಂ. ಜಾಗಂ]ಬೋಗುತ್ತುಂ (ಕುಂಬಳ.ಹ. ೨೫೫–೧೨): ಪಾರ್ವ ನೆರ್ದೆಯೊಳ್ ಕಿರ್ಚು ಬಿಟ್ಟಂತಾಗೆ ಜೋಗಂಬೋಗಿ (ಜೀವಸಂ. ೩೯–೨೪ ವ): ಆಗುಳಿಸುವ ತಳಮಳಿಸುವ ಜೋಗಂಬೋಪಲಸುವಗಿವ . . . ಕಂಟಳಿ ಸುವಖಿಳವಿಕೃತಿಗೆ ಸಲ್ಲಂ (ಪುಷ್ಪಪು. ೧೨–೮೪). **ಜೋಗವೋಗು:** ಸೊಗ್ಗುರಿಸಿ ರ್ಪೊಮ್ಮಿನಲಿ ಮುಂದಕೆ ಜೋಗವೋದನು ಸಾರಥಿಯ ಕೈಲಾಗಿನಲಿ ತಿರುಗಿದನು (ಕುಮಾ.ಕ. ೪–೧೫).

[ಜೋಗು$_1$ (<ಜುಮ್ಮು$_3$) + ಪೋಗು$_1$]

**ಜೋಗಣೆ (?)** (ನಾ). (?): ಒಂದು ಫಲವೆನಿಸಿದಡಿನಿವಣ್ಣದ ಕುಂದಿಲ್ಲದಿನ ಜೋಗಣೆಯಯೆಂದು ತಾಳಿದುದಿಲ್ಲವೆಂಬಂತೆ ಹೊಂಬಾಳೆ ಮರದ ಸಾಲಿ ನಿಂದೆಸೆಯೆ (ತರ್ಕಕಾ. ೧–೪೭). [?]

**ಜೋಗತಿ** 'ಜೋಗಿತಿ' ನೋ.

**ಜೋಗಪ್ಪ** (ನಾ). ಜೋಗಿತಿಯರ ಸಂಗಾತಿಯಾದವನು : (ಶಿ).

[ಜೋಗ$_1$ + ಅಪ್ಪ$_1$]

**ಜೋಗಬ್ಬೆ**(ನಾ).ಒಬ್ಬಾಕೆಯ ಹೆಸರು: ಪೆರ್ಮಾಡಿಯ ಸುಳಿಜೋಗಬ್ಬೆಯ ಮಗಳ್ . . . ಚಾವುಂಡಬ್ಬೆ (ಮೈ.ಆರಿ. ೦೯೩೦, ೧೪–೭ : 882).

[ಜೋಗ$_0$ + ಅಬ್ಬೆ$_1$]

**ಜೋಗಮರಸ** (ನಾ). ಒಬ್ಬಾತನ ಹೆಸರು: ಶ್ರೀಮನ್ಮಹಾಮಣ್ಡಳೇಶ್ವರಂ ಜೋಗಮರಸರ್ಮ್ಮಂಗಳಿವೇಡದೊಳು ರಾಜ್ಯಂಗೆಯ್ಯುತ್ತುಮಿರೆ (ಕಇ. II, ೧೧–೧೨ : 1092). [ಜೋಗಮ$_0$ + ಅರಸ$_1$]

**ಜೋಗಮಾಯಿ** (ನಾ). ಒಬ್ಬ ದೇವತೆಯ ಹೆಸರು : ಎಕ್ಕಲದೇವಿ ! ಜೋಗಮಾಯಿ! ಉಧೋ! ಉಧೋ! (ಅರಳು. ೩೦೮–೧).

[ಜೋಗ$_1$ + ಮಾಯಿ$_2$]

**ಜೋಗಮ್ಮ** (ನಾ). = ಜೋಗಿತಿ : (ಶಿ). [ಜೋಗ$_1$ + ಅಮ್ಮ$_1$]

**ಜೋಗಯಿಸು, ಜೋಗವಿಸು, ಜೋಗೈಸು$_1$** (ಕ್ರಿ). ೧. ಸೇರಿಸು ; ಹೊಂದಿಸು : ಹಟುಗೋಲನೆ ಜೋಗಯಿಸಿ [ಪಾಠಾಂ. ಜೋಗೈಸಿ] ಕೊಳುತಲೆ ತೋಟಿಯ ದಾಂಟುವರ್ (ಪ್ರಭುಲಿ. ೧೨–೧೪). **ಜೋಗವಿಸು:** ೧. ಮಾಯಾಂಗನೆಯ ಲಾಸ್ಯದ ಕೇಳಿಯೊಳಗವ ಜೋ[ಪಾಠಾಂ.ಭೋ]ಗವಿಸುತಿರುತಿರ್ದ ಭಕ್ತಿಯ ಭಾಗೆಯುಲಿ (ಪ್ರಭುಲಿ. ೫–೭೨). **ಜೋಗೈಸು$_1$:** ೧. ಇಂತಿವರು ದಂಪತಿಸಹವಾಗಿ ಯುಗಜುಗಂಗಳ ಜೋಗೈಸುತ್ತಿದ್ದರು (ಮನುಗುಂ. ೨೭೭–೮೨): ಆದರಿಸಿಯಾ ತನುವ ಲಿಂಗೋಪಾಧಿಯಲಿ ಜೋಗೈಸಿಕೊಳುತಲಿ ಸಾಧಿಸುವುದು ಸಮಾಧಿಯನು (ಪ್ರಭುಲಿ. ೧೮–೧೩). ೨. ಬಳಸು ; ಉಪಯೋಗಿಸು : ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯಾ (ಬಸವ. ೩೬೦). [ಜೋಗ$_1$ + – ಇಸು$_3$]

**ಜೋಗಯ್ಯ** (ನಾ). ೧.=ಜೋಗಿ ೧ : ಜೋಗಯ್ಯನೆನಬೇಡ ತ್ಯಾಗಿ ನಿಂದಿಸಬೇಡ ನಾಗಭೂಷಣನ ಹಳಿದ ದಕ್ಷನ ತಲೆಯು ಹೋಗಿಹುದು ನೋಡ (ಸರ್ವಜ್ಞ. ೫೨೫). ೨. ಶೈವಪಂಥದ ಜೋಗಿಗಳಲ್ಲಿ ಒಂದುಪಂಗಡ : (ಎಸಮ್ಮು. V, ೬). ೩. ಒಬ್ಬಾತನ ಹೆಸರು : ನಂಗಮ್ಮನ ಮಗ ಜೋಗಯ್ಯಂಗೆ ದಯೆಗೆಯ್ದು ಕೊಟ್ಟ ಸ್ಥಿತಿ (ಎಕ. VIII, ಸೊರಬ. ೪೭೭–೧೮ : 901). [ಜೋಗಿ$_1$ + ಅಯ್ಯ$_1$]

**ಜೋಗರ** (ನಾ). ಬಿಂಕ ; ಬಿಗುಮಾನ (?) : ಎಲಗೆ ಜೋಗರವಿಪ್ಪ ಸಲ್ಲದೆಮ್ಮರಸನೆಂಜಲು ಸೋಂಕಿದಾಗಳೆನಿನ್ನ ಕುಲಕೋಟಿ ಪಾವನವೆಂದಳು ಕುಸುಮಾಜಿ (ಭರತ. ೯–೮೦). [?]

**ಜೋಗರಿಸು** (ಕ್ರಿ). ಜೋಪಾನವಮಾಡು; ಸಲಹು: ತಾಯಿ ಮಗುವನ್ನು ಜೋಗರಿಸುವಷ್ಟೇ, ಅಷ್ಟೇಕೆ ಅದರ ಹಿರಿಯಕ್ಕನಷ್ಟುಕೂಡಾ ತಂದೆ ಲಾಲಿಸಿ ಪಾಲಿಸುವುದು ಎಲ್ಲಿ ಕಂಡು ಬರುತ್ತದೆ ? (ಹಾಗಲ. ೬೬) ; ನಿನಗೆ ಒಬ್ಬಾಕಿಗೆ ಜೋಗರಿಸೋದು ಆಗೋದಿಲ್ಲಾ (ವೃನಿ .೨೨೪).

[ಜೋಗರ$_0$ (ℙ←ಮರಾ. ಜೋಗಲಣೇ) + – ಇಸು$_3$]

**ಜೋಗವಟ್ಟಗೆ** (ನಾ). ಧ್ಯಾನಕಾಲದಲ್ಲಿ ಕುಳಿತುಕೊಳ್ಳಲು ಅನುಕೂಲವಾಗುವಂತೆ ಯೋಗಿಯು ಬೆನ್ನು ಮತ್ತು ಮೊಳಕಾಲುಗಳನ್ನು ಸೇರಿಸಿ ಸುತ್ತಿಕೊಳ್ಳುವ ಬಟ್ಟೆ : "ಜೋಗವಟ್ಟಗೆಯೆನ್ನಲೊಡನದು ಯೋಗವಟ್ಟಗೆ" (ಕವಿಕಂ. ೧೮೮) : "ಜೋಗವಟ್ಟಗೆ – ಯೋಗವಟ್ಟಕಾ = ಯೋಗಿಗಳ ಹೊದಕೆ" (ತದ್ಭಕೋ. ೧೫) : ಅಲ್ಲಿ ನೇಲಿದುದದು ಜೋಗವಟ್ಟಗೆ ಕಮಂಡಲವಂತದು . . . ಎಂದು ನೋಡಿದನತಿವಿಸ್ಮಯಂ ಬೆರಸು ತದ್ರೂಪೆಯಂ (ಕಾದಂಪೂ. ೬೯೨) : ಮಧುಕೇಶ್ವರದೇವರಾಚಾರ್ಯ್ಯರಂ ಬರಿಸಿ ಪೂಜೆಯಂ ಕೊಟ್ಟು ಜೋಗವಟ್ಟಗೆಯನಿಕ್ಕಿಸಿ (ಎಕ. VIII, ಸೊರಬ. ೨೭೨–೪೫ : 1077) ; ಪುಲಿದೊವಲ ಜೋಗವಟ್ಟಗೆ ತೊಳಗುವ ಸೆಳ್ಳುಗುರ ಮಿಂಚು . . . ರಂಜಿಸೆ ನಲವಿಂ ಮಾಯಾವಿಯೆಯ್ದಿದಂ ನೃಪಸಭೆಯಂ (ದಶಕು. ೭–೧೩೦) : ಜೋಗವಟ್ಟಗೆಯಾಣೆ ! ರಾಘವನಾಣೆ ! ಮುಗಳಿಂದೆ ನಿನ್ನಂ ಸಲಪುವೆಂ (ರಾಮಾಶ್ವ. ೪೨–೭). [<ಸಂ. ಯೋಗವಟ್ಟಕಾ]

**ಜೋಗವಟ್ಟೆ$_1$** (ನಾ). ಯೋಗಮಾರ್ಗ : ನೂಱುಂ ಜನ್ಮದೊಂದು ಬಲ್ಮೆಯಿಂ ಸಗ್ಗದೊಳ್ ಬಾಟ್ವಿಂದಿರನುಮಿಾಜೋಗವಟ್ಟೆಯಂ ಕಂಡಿರಂ (ರಾಮಾಶ್ವ. ೫೭–೩). [ಜೋಗ$_1$ + ಬಟ್ಟೆ$_1$]

**ಜೋಗವಟ್ಟೆ$_2$** (ನಾ). = ಜೋಗವಟ್ಟಗೆ : "ಜೋಗವಟ್ಟೆಯೆಂದು ಯೋಗಪಟ್ಟಕೆ" (ಕರಸಾ. ೨೨–೪೪೯) : ಇಂಬಾದ ನಗರಸಿದ್ಧನ ಜೋಗವಟ್ಟೆ ಯೆಂದೆಂಬಂತೆ (ಪ್ರಭಂಜ. ೦–೭೨). [ಜೋಗ$_1$ + ಬಟ್ಟೆ$_2$]

**ಜೋಗವಡ್ಡಿಗೆ,ಜೋಗವದ್ದಿಗೆ** (ನಾ). (?): ಹೊಂಗನೂರ ಶಾನ್ತಿದೇವರ ಜೋಗವಡ್ಡಿಗೆಯ ಬಸದಿ (ಮೈ.ಆರಿ. ೦೯೪೨ ; ೨೫–೪ : 1300). **ಜೋಗವದ್ದಿಗೆ:** ಕ್ರಮದಿನಸಂಪ್ರಾಪ್ತ ನಾಲ್ಕು ಮಹಾಮನೆ ಸಹಿತ ಜೋಗವದ್ದಿಗೆಯ ಚಂದ್ರ ಮಹೀತಳ ಉಳ್ಳನೆಗವಮಳಗುಣಕ್ಕರ್ಮಳಸೇನ ದೇವಗೊರ್ಗ್ಗಂಡರು (ಸೌಇಇ. XX, ೨೦೨–೯೭ : 1124). [?]

**ಜೋಗವದ್ದಿಗೆ** 'ಜೋಗವಡ್ಡಿಗೆ' ನೋ.

**ಜೋಗವಾವುಗೆ** (ನಾ). ಜೋಗಿಯು ಹಾಕಿಕೊಳ್ಳುವ ಹಾವುಗೆ,– ಪಾದುಕೆ: "ಯೋಗಪಾದುಕಾ–ಜೋಗವಾವುಗೆ" (ಶಮದ. ೨೯೨ ಪ್ರಯೋ); ಜೋಗವಾವುಗೆಯ ಮೆಟ್ಟಿಯ್ದುತಿಹ ಮುನಿಯ ಕಂಡು (ಪಾಸೋಲಪು.೫–೬೯).

[ಜೋಗ$_1$ + ಪಾವುಗೆ]

**ಜೋಗವಿಸು** 'ಜೋಗಯಿಸು' ನೋ.

**ಜೋಗವೋಗು** 'ಜೋಗಂಬೋಗು' ನೋ.

**ಜೋಗಳ$_1$** 'ಜೋಗುಳ' ನೋ.

**ಜೋಗಳ$_2$** (ನಾ). (?) : ಆಗದನ್ನಲಿ ತನ್ನಲಾ ನಿರ್ಭಾಗಧೇಯರ ವಿಜಯ ವೇತಕೆ ಜೋಗಳನು ಮಾಡುವಿರಿ ತನ್ನನು (ನಿಭಾಗ. ೯–೭–೬). [?]

**ಜೋಗಳಿವಾಡು** 'ಜೋಗುಳವಾಡು$_2$' ನೋ.

**ಜೋಗಳೆ** 'ಜೋಗುಳ' ನೋ.

**ಜೋಗಳೆವಾಡು** 'ಜೋಗುಳಂಬಾಡು' ನೋ.

**ಜೋಗಾಯಿ** (ನಾ). = ಜೋಗಮಾಯಿ : ಅಲ್ಲಾದ ಮಹದೇವಿ ತುಳಜಾ ಭವಾನಿ . . . ಹಳ್ಳದ ಜೋಗಾಯಿ (ವಿಸಾಸು. ೫೦–೨). [ಜೋಗ$_1$+ಆಯಿ$_1$]

**ಜೋಗಿ₁** (ನಾ). ೧. ಯೋಗಿ; ತಪಸ್ವಿ; ಋಷಿ: "ಶಿತ್ರಡಿ, ಜತಿ, ಜೋಗಿ, ತವಸಿ, ರಿಸಿ–ಗೆ ಋಷಿ" (ಕರಸಾ. ೨೧-೪೪೫): "ಜೋಗಿ ಶಿತ್ರಡಿ ಯೆನುತುಂ ತಾಂ ತವಸಿ ರಿಸಿಯುಮೆನೆ ಋಷಿಯುಕ್ಕುಂ" (ಕವಿಕಂ. ೧೮೬): ಜೋಗಿಗೆ ಜೋಗಿಣಿಯಾಗಿಹಳು ಮಾಯೆ (ಮಹಾದೇ. ಬ. ೯೮-೨೨೬); ಪುಲಿ ದೊವಲಸೆದುದು ಜೋಗಿಗೆ (ರೀಲಾವ. ೪-೬೮): ತರಳೆ ರನ್ನೆ ಕಪ್ಪು ಮಯ್ಯಿವ ಯಾತಟ ಜೆಲುವನ ಕರಿಯ ಜಡೆಯ ಜೋಗಿಗಿಂತ ಉತ್ತಮ ನೇನೇ (ಪುರಂದ. ೨-೬೩-೧): ಬೆಸಗೊಂಬಳು ಜೋಯಿಸರ ಜೋಗಿ ಪುರುಷರ(ಹದಿಬ. ೬-೩೪); ಜೋಗಿ ಜೋಗಿಯುನ್ನು ತಬ್ಬಿಕೊಂಡರೆ ವ್ಯೆಯುಲ್ಲ ಬೂದಿ (ಗಾದೆ). ೨. ನಿಂತಲ್ಲಿ ನಿಲ್ಲದೆ ಅಲೆಯುಂವ ಭಿಕ್ಷು,–ಬೈರಾಗಿ; ಗೋಸಾವಿ: ಆ ಕೋಡಗವನಾಡಿಸಿ ಕೊಂಡುಂಬ ಜೋಗಿಗಳಿಗೇಕೆ ಆರೂಢನ ಸುದ್ದಿ (ಮೋಳಿಮಾ. ೨೦೦-೬೬೪): ಮಹಾದೇವನೆತ್ತಲೈ ಸುರೆ ಗುಡುಹಿ ಜೋಗಿಗಳು ನೀವೆತ್ತಲೆಂದು ನುಡಿವುತಿರ್ದನು (ವೀಶೈಪು. ೪-೧೧-೧೪); ಜೋಗಿ ಜಂಗಮ ದರವೇಸಿಗಳಿಗೆ . . . ಅನ್ನವನೀವ ರಾಗದ ಭವನವೊಪ್ಪಿದುವು (ಕಂನವಿ. ೨೦-೪೬). [ <ಸಂ. ಯೋಗಿನ್ ]

**ಜೋಗಿ₂** (ನಾ). ಒಂದಂ ಬಗೆಯ ವಿಷಸರ್ಪ: ಬೇರೆ ವಿಷಯುಕ್ತ ಸರ್ಪಗಳು . . . ಸುಂಕಪಾಳ, ಜೋಗಿ, ಸುರ್ಗಂಡ (ಕಭಾಗ. ೬೬).

[ ←ಮರಾ. ಜೋಗೀ ]

**ಜೋಗಿಗ** (ನಾ). ಮಣಿಗಾರ; ಮಣಿಯಂನ್ನು ಮಾರುವವನು (?): ತಾಳಧಾರಿಗ ಮದ್ದಳಿಗ . . . ನಟುವಿಗರ ಪೇಳಲಳವೆ ಜೋಗಿಗ ಮುಟ್ಟಿಗರ ಗೃಹ ಸಾಲುವಿಡಿದು ರಾಜಿಪುವು (ಕಂನವಿ. ೬-೫೬).

[ ಜೋಗಿ ? + – ಇಗ ]

**ಜೋಗಿಜೆಡೆ ಜೋಳ** (ನಾ). ಒಂದು ಬಗೆಯ ಜೋಳ: ಪಟ್ಟಣಸಾಳಿ, ಗೌರೀ ಕುಲ . . . ಜೆಲ ಕೊಂಜೋಳ ಅಥವಾ ಜೋಗಿಜೆಡೀಜೋಳ . . . ಈ ಎಂಟು ಜಾತಿಗಳು (ಕಭಾಗ. ೨೬೧). [ ? + ಜೋಳ ]

**ಜೋಗಿಣಿ** (ನಾ). ತಪಸ್ವಿನಿ; ಯೋಗಿನಿ: ತೆಗೆದುಟ್ಟ ಸೋಗೆ ಕರವೊಪ್ಪಿರೆ ಜೋಗಿಣಿ ಬರ್ಪಳೊಪ್ಪಿದಳ್ (ರೀಲಾವ. ೪-೮೫): ಪಾವಿನ ಪಟ್ಟದಿನಟ್ಟರಿವಡೆದ ಜೋಗಿಣಿಯಂತಿರ್ಪಳ್ (ಕಬ್ಬಿಕಾ. ೩೧೫); ಜೋಗಿಗಂ ಜೋಗಿಣಿಯುದಾಯ್ತು ನಿನ್ನಯ ಮಾಯೆ (ಮದೀರ. ೬-೯೫); ಬಿಂಗಿಯಂತಾಡುವ ಕಂಥೆಯ ಜೋಗಿಣಿಯಂಗದಾಟವೆ ನಮ್ಮ ನೃತ್ಯ (ಭರಿಡ. ೧೪-೫೨): ಜೋಗಿಣಿಯಂತೆ ಮಧುದೂತಿಗೆಳಸಿದರ್ . . . ಬನದೊಳಾ ಪೆಣ್ಗಳ್ (ಚಿಬಶು. ೪೫-೪೦): ಉದಯದಿಗ್ವಧುವೆನಿಪ ಜೋಗಿಣಿಯ ಕೈಯಲೊಪ್ಪಿದ ಪದ್ಮರಾಗ (ನಂದಿಮಾ. ೧೯-೧೦).

[ <ಪ್ರಾ. ಜೋಗಿಣೀ, ಜೋಯಿಣೀ./ಸಂ. ಯೋಗಿನೀ ]

**ಜೋಗಿಣಿತಿ** (ನಾ). = ಜೋಗಿಣಿ: ಇಂತೆಂದೊರೆದಳೆಲೆ ಜೋಗಿಣಿತಿ ಸುರುಚಿರವ್ರತನಿನ್ನ ಸುವ್ರತಕೆ ಭಂಗವಿರದಾಯ್ತು (ಪ್ರಭುಂಜ. ೩-೧೧೩)

[ ಜೋಗಿಣಿ + – ಇತಿ₁ (<–ಇತ್ತಿ) ]

**ಜೋಗಿತಿ, ಜೋಗತಿ** (ನಾ). ೧. = ಜೋಗಿಣಿ: ಒಕ್ಕಲಿತಿ, ಸೆಟ್ಟಿತಿ, ಗಣತಿ, ಜೋಗಿತಿ (ಶಬ್ದಾಸು. ೨೦೨ ಪ್ರಯೋ): ಈ ರಗಳೆಯ ಹರಿಹರ ಜೋಗಿಯಂತೆ! ಆ ಹೆಣ್ಣುಗಳು ಜೋಗಿತಿಯರಂತೆ! (ತುಂಗಭ. ೧೧೮). ೨. ಎಲ್ಲಮ್ಮ ದೇವತೆಯ ಭಕ್ತೆ; ಜೋಗಮ್ಮ: ಜೋಗಿತಿಯ ದನಿ ಕೇಳಿದಾಗಲೇ ಅವರಿಗೆ ಈ ಲೋಕದ ಸ್ಮೃತಿ ಬಂದುದು (ಬನಸಿ. ೬೫): ಜೋಗಿತಿ ನಿನ್ನ ಮದುವೆ ಆಗಲೇ ಇಲ್ಲವೇ? (ಸ್ವಪ್ನಜೊ. ೨೯೨). ಜೋಗತಿ: ೨. ಸಂತೆಯಂಗಡಿ ಸೂಳೆ ಮುಂತೊಲಿವ ಡೊಂಬತಿಯ ಎಂತು ಗಂಡಸಿಯ ಜೋಗತಿಯ ಹೋದವನ ಸಂತಾನ ಕೆಡುಗು (ಸರ್ವಜ್ಞ. ೧೯೪೬): ಮುಬ್ಬಿನ ಕಾಲಕ್ಕಾದರೂ ಜೋಗತಿಯ ವೇಷ ಬೇಡವೇ (ದತ, ಹಾ. ೯೦): ಜೋಗಯ್ಯನಾಗಲಿ, ಜೋಗತಿಯಾಗಲಿ ಹಜ್ಜೆಗಳನ್ನು ಹಾಕಿ ಕುಣಿಯುವ ದೃಶ್ಯವು . . . ಆಕರ್ಷಿಸದಿರದು (ಕನ್ನಜಾ. ೧೩): ಹಾದಿ ಮುಪ್ಪಾಗಿ ಹಳ್ಳವಾಯಿತು, ಸೂಳೆ ಮುಪ್ಪಾಗಿ ಜೋಗತಿಯಾದಳು (ಗಾದೆ).

[ ಜೋಗಿ₁ + – ಇತಿ₁ (<–ಇತ್ತಿ) ]

**ಜೋಗಿಯರಳೆ** (ನಾ). ಒಂದು ಬಗೆಯ ಸಸ್ಯ: ಹೂವರಿಸಿ, ಜೋಗಿಯರಳೆ, ಬುಗುರಿ (ವ್ಯಜಿಗಿ. ೬೪-೧೫೨೧). [ ? ]

**ಜೋಗಿವರಾಳಿ** (ನಾ). [ಸಂಗೀತ] ಒಂದು ಮಿಶ್ರರಾಗದ ಹೆಸರು: ಶೋಕವರಾಳಿ ವಸಂತವರಾಳಿ ಜೋಗಿವರಾಳಿ . . . ನಾಗವರಾಳಿಯೆಂಬ ವರಾಳೀಸಪ್ತಕವೇ ಶುದ್ಧವರಾಳಿಗೆ ಮಿಶ್ರಂಗಳು (ವಿವೇಕ. ೨೩೫).

[ ಜೋಗಿ? + ವರಾಳಿ ]

**ಜೋಗಿಸು** 'ಜೋಗೈಸು₂' ನೋ.

**ಜೋಗು₁** 'ಜುಮ್ಮು₃' ನೋ.

**ಜೋಗು₂** 'ಜವುಗು' ನೋ.

**ಜೋಗು₃** 'ಜೋಗ₁' ನೋ.

**ಜೋಗುಗೊಳ್** (ಕ್ರಿ). ಧ್ಯಾನಮಾಡು; ತಪಸ್ಸನ್ನು ಕೈಗೊಳ್ಳು: ತಪಸ್ಸುಮಾಡು: ಇರ್ವರುಮೊಂದೆ ಗುಹೆಯೊಳ್ ಜೋಗುಗೊಂಡು ನಾಲ್ಕು ತಿಂಗಳಿರ್ವರುಮುಪವಾಸಂಗೆಯ್ದು (ವಡ್ಡಾರಾ. ೪೮-೬); ವಿಷ್ಣುಗಳೆಂಬಾಚಾರ್ಯರ್ ಸಮುದಾಯಂಬೆರಸಲ್ಲಿ ಜೋಗುಗೊಂಡಿರ್ಪುದುಂ (ಧರ್ಮಾಮೃ. ೯-೧೬೫): ಕಾಂತಾರಮಧ್ಯದೊಳಾ ವರ್ಷಕಾಲಮಾಸನ್ನಮಾಗೆ ಜೋಗುಗೊಂಡಿರ್ಪುದುಂ (ಪುಣ್ಯಾಸ್ರ. ೧೨-೨ ವ).

[ ಜೋಗು₃ (<ಜೋಗ₁) + ಕೊಳ್₁ ]

**ಜೋಗುಳ, ಜೋಗಳ₁, ಜೋಗಳೆ, ಜೋಗುಳಿ, ಜೋಗುಳೆ** (ನಾ). ಮಕ್ಕಳನ್ನು ಮಲಗಿಸುವಾಗ ಹೇಳಂವ ಹಾಡಂ; ಜೋ ಎಂಬ ಪಲ್ಲವಿಯಿಂದ ಕೂಡಿರುವ ಹಾಡು; ಲಾಲಿಪದ: ಜಗದಾತ್ಮ ಜೋ ಜರಾಮರಣವಿದೂರ ಜೋ ಎನುತೆ ಜೋಗುಳವಂ ಶ್ರುತಿಗೂಡಿ ಪಾಡಿದರ್ (ಅಸಂಪು. ೬-೩): ಆತುರದೆ ಪಾಡುತ್ತಲಿಹರ ಜೋಗುಳ ಜೊಂಪು (ಬಸರ. ೧-೧೪೦); ಆದ್ಯರ ಗೀತದೊರೆಯನಾಲಿಸುವಂತೆ ಜೋಗುಳವನಾಲಿಸುವನು (ಪದ್ಮರಾ. ೨-೬೦): ನುಡಿಗಗೋಚರದಮಳ ಬೊಮ್ಮದ ಕಡುಹು ನಿಂದುದು ಜೋಗುಳದಲವಗಡೆಯ ದೇವತ್ವಕೆ ಶಿಶುತ್ವದೊಳಾಯ್ತು ನಿರ್ವಾಹ (ತೊರರಾ. ೧-೮-೬೩): ಅಂಗನೆಯರೊಲ್ದು ಪಾಡಿದರು ಜೋಗುಳ (ಮಹಾವಿ. ೩-೨೦): ಬೆಟ್ಟ ಬೆಟ್ಟಕೆ ಕಟ್ಟಿ ಜೋಗುಳದ ತೊಟ್ಟಿಲನು ತೂಗಿದತ್ತು! (ಅನಿಕೇ. ೫೩-೫). **ಜೋಗಳ₁**: ಮನೆಯಲ್ಲಿ ತಾಯಿಯು ಜೋಗಳವೆತ್ತಿ ಲಾಲಿಗಳನ್ನು ಪಾಡಿ(ಕನ್ನಜಾ. ೩೬): ಕೂಸು ಕಾಸ ಹಡೆಯದು, ಜೋಗಳ ಮುಗಿಲು ಮುಟ್ಟಿತು (ಗಾದೆ). **ಜೋಗಳೆ**: ಸೋಮರ್ಡಿಯ ಸೊಬಗೆಯರು . . . ಜೋಗಳೆಯನು ಪಾಡಿದರು (ಅಂಜಡ. ೪-೪೬) **ಜೋಗುಳಿ**: ತೊಟ್ಟಿಲ ಶಿಶುವಿಂಗೆ ಜೋಗಳೆಯಲ್ಲದೆ ಹೊಟ್ಟೆಯ ಶಿಶುವಿಂಗೆ ಜೋಗುಳಿಯುಂಟೇ (ಸರ್ವವ. ೨೬-೦೨೪): ವಿಮಲಾಗಾರದ ಬಲಾಜನದ ಜೋಗುಳಿ[ಪಾಠಾಂ. ಳಿಗೆ]ಯರಸ ಜೋಯೆನುತ . . . ನಾರಿಯರು ಸ್ವರವೆತ್ತಿ ತೂಗಿದರು (ತೊರರಾ. ೬-೨೨-೧೨). **ಜೋಗುಳೆ**: ತೊಟ್ಟಿಲ ಶಿಶುವಿಂಗೆ ಜೋಗುಳೆಯಲ್ಲದೆ ಹೊಟ್ಟೆಯ ಶಿಶುವಿಂಗೆ ಜೋಗುಳೆಯುಂಟೇ (ಸರ್ವವ. ೨೬-೧೨೪): ತೊಟ್ಟಿಲ ಮಣಿಗೆ ಜೋಗುಳೆಯಂತೆ ಗಳಬಿದವಲ್ಲಿ ಚಕೋರಿ (ಶ್ರೀಪಾಂ. ೨-೨೩): ತೊಟ್ಟಿಲೊಳಗಾಬಾಲನೊಟಗುವನಳ್ತಿಯಿಂ ಜೋಗುಳೆಯನಾಲಿಸುತ (ಸಾಳ್ವಭಾ. ೪-೧); ಹಸುಳೆ ಜೋಗುಳೆಗೆ ಸರ್ಪ ಸುನಾಗಸರಕ . . . ಗುಂಡಾಕ್ರಿಗೆ ಶಿಲೆವೊಸರುವುದಿದು ಘನವೆ (ಭರಿಡ. ೧-೮೮).

[ ದೇ. ೫ ತುಳು. ಜೋಗುಳ; ತೆಲು. ಜೋಗಡ, ಜೋವಡ, ಜೋಲ ]

**ಜೋಗುಳಂಪಾಡಿಸು** (ಕ್ರಿ). ಲಾಲಿಯನ್ನು ಹಾಡಿಸು : ಬಾಯಿನವನೊಡನಿರ್ದ ರುದ್ರಕುಮಾರಿಯರ್ಗಿಕ್ಕಿ ತೊಟ್ಟಿಲೊಳು ಪಟ್ಟಿರಿಸಿ ಜೋಗುಳಂಪಾಡಿಸಿದಳು (ಸಿದ್ಧರಾ. ೧-೫೮).

[ ಜೋಗುಳಂಪಾಡು (<ಜೋಗುಳಂಬಾಡು) + – ಇಸು$_3$ ]

**ಜೋಗುಳಂಪಾಡು** 'ಜೋಗುಳಂಬಾಡು' ನೋ.

**ಜೋಗುಳಂಬಾಡು, ಜೋಗಳೆವಾಡು, ಜೋಗುಳಂಪಾಡು, ಜೋಗುಳಪಾಡು, ಜೋಗುಳವಾಡು$_1$, ಜೋಗುಳೆವಾಡು** (ಕ್ರಿ). ಜೋಗುಳವನ್ನು ಹಾಡು ; ಲಾಲಿಯನ್ನು ಹಾಡು : ಮಗನಂ ತೊಟ್ಟಿಲೊಳಿಟ್ಟು ತೂಗಿ ನಲವಿಂದಂ ಜೋಗುಳಂಬಾಡಿ (ಅನಂಪು. ೧೩-೫೦) : ಪುರಾತನರ ಗೀತದಿಂ ಜೋಗುಳಂಬಾಡಿ ಭಕ್ತಿಯ ಮಱಿಯಂ ಸಲಹುವಂತೆ . . . ಓವುತ್ತಿರಲು (ಬಸರ.೧೦-೧೧೩). **ಜೋಗಳೆವಾಡು** : ನಾಡೆ ನಲಿನಲಿದಾಡಿ . . . ಜೋಗಳೆವಾಡಿ ಕಂದನ ನೋಡಿ (ಸಾಳ್ವಭಾ. ೩೬-೩೩). **ಜೋಗುಳಂಪಾಡು** : ಅರವಿಂದಮುಖಿಯರೊಲ್ದು ಜೋಗುಳಂಪಾಡುತಿರ್ದರ್ (ಹಮ್ಮಿರ. ೨-೨೫ ಪ). **ಜೋಗುಳಪಾಡು** : ಜೋಗುಳಪಾಡಿ ತಾಯಿ ಹೊತ್ತಳು ಲೋಕಹಿತಕೆ (ಸೌಂದಕಾ. ೬-೨). **ಜೋಗುಳವಾಡು$_1$**: ತೊಟ್ಟಿಲ ತೂಗುವೆ ಜೋಗುಳವಾಡುವೆ (ಕೂನ್ನಸಂ. ೮-೧೬) : ಜೋಗುಳವಾಡಿ ಮಕ್ಕಳಂ ತೂಗುವೀ ನೆವದಿಂದೆ . . . ಪಾಡಿದರು (ಚಬಪು. ೯-೦೦) : ತೊಟ್ಟಿಲೊಳಿಟ್ಟು ಸಾಲ್ದ ಸೈಪಿಂದೆ ಜೋಗುಳವಾಡಿ ತೂಗುವಳು (ಕೃಮಿಥಾ. ೧೮-೨೧). **ಜೋಗುಳೆವಾಡು**: ತೊಟ್ಟಿಲ ಕಟ್ಟಿ ಗವರೇಶ್ವರ ಲಿಂಗಕ್ಕೆ . . . ಜೋ ಗು ಳೆ ವಾ (ಯಾ) ಡಿ ದೆ (ಸರ್ವವ. ೪೧-೨೦೯).

[ ಜೋಗುಳ + ಪಾಡು$_1$ ]

**ಜೋಗುಳಗೀತ** (ನಾ). = ಜೋಗುಳ : ಆ ಜೋಗುಳಗೀತವಲ್ಲಿ ಬರುವ 'ಬರ್‌ತಾನ ನಿನ ಮಾಮಾ' . . . ಎನ್ನುವುದೂ ಕಥೆಯ ಒಂದು ರೀತಿಯೇ (ಕಥಕ. ೧). [ ಜೋಗುಳ + ಗೀತ ]

**ಜೋಗುಳಗೀತೆ** (ನಾ). = ಜೋಗುಳ : ಅನುಪಮವಾದ ಅ ನೇ ಕ ಜೋಗುಳಗೀತೆಗಳು ಇವುಗಳ ಗುಂಫನದಲ್ಲಿ ಸೇರುತ್ತವೆ (ಭಾವಗೀ. ೫೧).

[ ಜೋಗುಳ + ಗೀತೆ ]

**ಜೋಗುಳಪಾಡು** 'ಜೋಗುಳಂಬಾಡಂ' ನೋ.

**ಜೋಗುಳವಾಡು$_1$** 'ಜೋಗುಳಂಬಾಡು' ನೋ.

**ಜೋಗುಳವಾಡು$_2$, ಜೋಗಳಿವಾಡು** (ನಾ). = ಜೋಗುಳ : ತೂಂಕಡಿಪ ಜೋಗುಳವಾಡು (ಸಂಸಪ. ೩೧-೮). **ಜೋಗಳಿವಾಡು** : ಕಡುನೇಹದಿಂದ ಜೋಗಳಿವಾಡ ಪಾಡುತ ಸಡಗರಗೊಂಡರಾಳಿಯರು (ಚಂಪ್ರಸಾಂ. ೪-೬೦).

[ ಜೋಗುಳ + ಪಾಡು$_2$ ]

**ಜೋಗುಳಿ** 'ಜೋಗುಳ' ನೋ.

**ಜೋಗುಳೆ** 'ಜೋಗುಳ' ನೋ.

**ಜೋಗುಳೆವಾಡು** 'ಜೋಗುಳಂಬಾಡು' ನೋ.

**ಜೋಗೆತ್ತು$_1$** (ಕ್ರಿ). ಜವುಗು ಆಗು ; ಕೆಸರಾಗು : ಧರಿತ್ರಿ ವಾರಣ ಘಟಾತಟ ದಾನಜಳಂಗಳಿಂದೆ ಜೋಗೆತ್ತೆ (ಮಹಾನೇ. ೦೧-೯೧).

[ ಜೋಗು$_2$ (<ಜವುಗು) + ಎತ್ತು$_1$ ]

**ಜೋಗೆತ್ತು$_2$** (ಕ್ರಿ). ಧ್ಯಾನವನ್ನು ಬಿಟ್ಟು ಏಳು ; ತಪಸ್ಸಿನಿಂದ ಬಹಿರ್ಮುಖನಾಗು : ಜೋಗೆತ್ತಿ ಮುನಿಶಿಖಾಮಣಿ ಪೋಗುತ್ತಿರೆ (ಪುರಾ.ಸ್ರ. ೩-೬೩). [ ಜೋಗು$_3$ (<ಜೋಗ$_1$) + ಎತ್ತು$_1$ ]

**ಜೋಗೇಱು** (ಕ್ರಿ). ಜೋಮಂ ಹಿಡಿ; ಜೋಮಂ ಹತ್ತು : ಪಾದಗಳು ಜೋಗೇಱಿಕೊಂಡು ಚುಮುಚುಮುಗುಟ್ಟುತ್ತಾ . . . ಇಹವು (ವೈದ್ಯಸಾ. I, ೪೦೯). [ ಜೋಗು$_1$ (<ಜುಮ್ಮು$_3$) + ಏಱು$_1$ (<ಏಱ್$_1$) ]

**ಜೋಗೈಸು$_1$** 'ಜೋಗಯಿಸಂ' ನೋ.

**ಜೋಗೈಸು$_2$, ಜೋಗಿಸು** (ಕ್ರಿ). ಕಾಪಾಡು ; ಸಲಹು ; ರಕ್ಷಿಸು : ರ ತಿ ದೇ ವಿ ತನ್ನಯಯಾತ್ಮತನಯನಂ ಪ್ರಾಣಮಂದಾಗಿ ಜೋಗೈಸುತಿ (ನವಮೋ. ೧೫-೪೮). **ಜೋಗಿಸು** : ಅನಿರುದ್ಧನಂ ಕೊಲದೆ ಜೋಗಿಸುವೆನು (ನವಮೋ. ೨೯-೨೨). 'ಜೋಗರಿಸು' ಪರಾ.

[ <ಜೋಪಾನ + ಕೈಸು (<ಕಯ್ಸು) ]

**ಜೋಡ**(ನಾ). ಹಾದರಿಗ ; ಜಾರ: "ಸಿತಗಂ, ಜೋಡಂ, ಪರಳಿಗಂ, ಪಾಣ್ಬಂ –ಳ್ ಜಾರಂಗೆ ಪೆಸರ್" (ಕಶಸಾ. ೧೯-೩೮೬) : "ಜೋಡಂ = ಸಿತಗಂ, ಪಾಣ್ಬಂ" (ಕಮದ. ಪರಿ. ೨) : "ಜೋಡಂ ಪರಳಿಗನು ಪಾಣ್ಬ ಸಿತಗಂ ಜಾರಂ" (ಕವಿಕಂ. ೧೬೦) ; ದನಿಗೆಟ್ಟಲಿ ಹೊದ್ದಿಯು ಪೊದ್ದದ ಹೊಯಿಲೆಸೆದವು ಜೋಡರ ಸುಸಿಲೊಳ್ (ಉದ್ಭದೀ. ೪-೧೬). [ಜೋಡು + – ಅ$_7$]

**ಜೋಡಂಗಿ** (ನಾ). ಎರಡು ಅಂಗಿ ; ಒಂದು ಜೊತೆ ಅಂಗಿ : ಬಿದ್ದಾನೊ ಬಿದ್ದಾನೊ ಬಿಳಿಅಂಗಿ ಮೇಲಾಗೆ ರುದ್ರ ಜೋಡಂಗಿ ಕಳಚ್ಯಾವ (ಲೋಕಗೀ. ೨೧೬). [ಜೋಡು + ಅಂಗಿ$_2$ ]

**ಜೋಡಗಲ್, ಜೋಡಗಲು** (ಕ್ರಿ). ಜೊತೆಯನ್ನು ಬಿಡು ; ಸಹವಾಸದಿಂದ ದೂರವಾಗು : ಜೋಡಗಲ್ದುವು ಜಕ್ಕವಕ್ಕಿ (ಸಮ್ಯಕೌ. ೧೦-೨೪). **ಜೋಡಗಲು** : ರಾಮ ಜೋಡಗಲಿ ಸೀತೆಯಂ ಬನಕೆ ಗಮಿಸಿದನೆಂಬ ರೂಢಿ (ವಂಶಾರಾ. ೨-೧೦-೨೩). [ ಜೋಡು + ಅಗಲ್$_1$ ]

**ಜೋಡಗಲು** 'ಜೋಡಗಲ್' ನೋ.

**ಜೋಡಗಿರಿ** (ನಾ).ಮರದ ತುಂಡುಗಳನ್ನು ಜೋಡಿಸುವಿಕೆ,-ಹೊಂದಿಸುವಿಕೆ: ಜೋಡಗಿರಿಯ ಕೆಲಸದಲ್ಲಿಯೂ ಮಾಟಿನ ಕೆಲಸದಲ್ಲಿಯೂ ಕೊಂಕಣದ ಬಡಿಗಿಗಳು ಮೇಲಾದವರು (ಕಥಾಗ. ೩೦೮). [←ಮರಾ. ಜೋಡಗಿರೀ]

**ಜೋಡಣೆ, ಜೋಡವಣೆ** (ನಾ). ೧. ಸೇರುವೆ ; ಹೊಂದಾಣಿಕೆ ; ಸಾಂಗತ್ಯ : ಅಸುರರಲಿ ಮರ್ತ್ಯರಲಿ ಸುರರಲಿ ಯೆಸಕವುಳ್ಳವನೆನಿಸಿದನು ಸಾಹಸದ ಜೋಡಣೆ ಜಡಿದುದವನಿಯಲಿ (ಕುವ್ಯಾಸ. ೩-೪೯): ನೋಡಿದನು ಜಾಂಬವನು ಜಲಧಿಯ ರಭಾಡಣೆಯ ಜಂಘಾಯ್ಲ ರಭಸದ ಜೋಡಣೆಯ (ತೊರರಾ. ೪-೧೩-೩) : ಜೀವತ್ವದಿಂ ನಾಡೆ ಪಲತೆಱನಾಗಿ ಸಕಲ ಸುಖದುಃಖಗಳ ಜೋಡಣೆಗೆ ಮೈಗೊಟ್ಟಿರುತ್ತೆ ಲೋಕಪ್ರಪಂಚನೊಳೆಸೆದು ತೋಱುತಿರ್ಪಂ (ಸಿದ್ಧೇಪು. ೨೨-೧೦); ಎರಡು ಜೀವಗಳ ಎರಡು ಭಾವಗಳ ಜೋಡಣೆಯನ್ನು ಸಾಧಿಸಿತು ಕ್ಷಣಕಾಲದ ಮೌನ (ಖಾಂಗಿ. ೩). ೨. ಮೇಳ; ಗುಂಪು; ಸಮುದಾಯ: ಚೂತವೃಕ್ಷಂಗಳಾ ಜೋಡಣೆಯ ಸುಚ್ಛಾಯ ಶೈತ್ಯದಿಂದಿರ್ದೆಸೆಯ ಮಾರ್ಗಯಿಸಿಕೊಂಡಿರಲು (ಪರಟು. ೪-೧೯). ೩. ಒಟ್ಟೈಸುವುದಂ ; ರಾಶಿಹಾಕುವುದು : (೬). ೪. ಸಿದ್ಧತೆ ; ಸಜ್ಜು ; ಸನ್ನಾಹ : ರಾಜೋಪಕರಣದ ಜೋಡಣೆಯ ಪಸರಿಕೆಯ ಪಾಳಯ ತರಳಿತಗಲದಲಿ (ತೊರರಾ. ೨-೩-೫೦). **ಜೋಡವಣೆ**: ೪. ಸಕಲ ಜೋಡವಣೆ ಸರಳ ಹೊದೆಗಳಲಿ ಸೈನ್ಯ ಕೂಡಿದುದು (ಪಾಂಡವ. ೫೬-೫) ; ತದ್ವೀಪ್ಸ ಜೋಡವಣೆ ಯುಕ್ತದಿಂದಾ ನೃಪನ ಕಾಣಲ್ಕೆ (ಪರಟು. ೬-೩೨).

[ ಜೋಡಿಸು$_1$ + – ಅಣೆ$_4$ ]

**ಜೋಡಣೆಗೆಯ್** (ಕ್ರಿ). ಸಿದ್ಧಮಾಡು; ಸಜ್ಜುಗೊಳಿಸು: ಜೋಡಣೆಗೆಯ್ದ ಸುವರ್ಣಮಂಟಪ (ಮೋಹಕ. ೧೪-೨೮). [ ಜೋಡಣೆ + ಕೆಯ್$_1$ ]

**ಜೋಡತನ** (ನಾ). ಹಾದರ; ಜಾರತನ: ಪಗಲ್ನಿದ್ದೆಗಂ ಜೂದಿಂಗಂ ಜೋಡತನಕ್ಕಂ . . . ಇಂಬುಗೊಡದೆ (ಚಕಮಂ. ೩೨). [ ಜೋಡ + – ತನ ]

**ಜೋಡವಣೆ** 'ಜೋಡಣೆ' ನೋ.

**ಜೋಡಾಟ** (ನಾ). ಒಂದೇ ಸ್ಥಳದಲ್ಲಿ ಅಕ್ಕಪಕ್ಕದ ಎರಡು ರಂಗಸ್ಥಳಗಳಲ್ಲಿ ಒಂದೇ ಕಥಾಪ್ರಸಂಗವನ್ನು ಆಡಿ ತೋರಿಸುವ ಬಯಲಾಟ: ಒಂದು ರಾತ್ರಿ ನಾಲ್ಕುಮೈಲು ದೂರದಲ್ಲಿ ಒಂದು ಜೋಡಾಟ ನೋಡಲು . . . ನಿಶ್ಚಯಿಸಿದಾಗ (ಪಾಶ್ಚಂ. ೮). [ ಜೋಡು + ಆಟ ]

**ಜೋಡಾಡು** (ಕ್ರಿ). ಹಾದರವನ್ನು ಮಾಡು : ತಾಂ ಜೋಡಾಡಲ್ ಬಗೆದು ಮನೆಯಾಣ್ಮಂ ಬಾರದನ್ನಂ . . . ತನ್ನಾತನಂ ಸಂಕೇತನಿಕೇತನಕ್ಕೊಡಗೊಂಡು ಬರ್ಪುದೆಂದು ಪೇಳ್ದಟ್ಟೆ (ಪಂಚತಂ. ೭೪-೧). [ಜೋಡು + ಆಡು$_1$]

**ಜೋಡಾಣಿಕೆ** (ನಾ). = ಜೋಡಣೆ ೧ : ವರದೆಯ ಜೋಡಾಣಿಕೆ, ಸನ್ನಿವೇಶಕ್ಕೆ ಹೊಂದಿಕೆಯಾಗುವ ವಸ್ತ್ರಾಭರಣಗಳನ್ನು ಆರಿಸುವುದು ಎಲ್ಲವೂ ಬಲದೇವನ ಕಾರ್ಯವೇ (ಕಲಾಸಾ. ೯೩). [ < ಜೋಡಣೆ + – ಇಕೆ ]

**ಜೋಡಿ$_1$** (ನಾ). ೧. ಜೊತೆ; ಜೋಡಂ : ರೂಢಿಯಲಿ ಸಮತಳದಲಂಘ್ರಿಯಂ ಜೋಡಿಗಳ ಮೆಲುದಳವದೊಪ್ಪಿರೆ (ನಿಭಾಗ. ೪-೦೩-೪೦) : ಕಿಂಖಾಪಿನ ಛತ್ರಿ ಚವರೀ ಜೋಡಿ (ಎಕ. XIV, ನಂಜನ. ೨೮೯-೬ನೇ ಕಲಂ ; 1847) ; ಆಕೆಯನ್ನು ತನ್ನ ತಂದೆಗೆ ಜೋಡಿಯಾಗಿ ಮಾಡಿದನು (ನೀಗಟ್ಟು. ೩೩). ೨. ಗುಂಪು ; ಸಮೂಹ : ಗಾಂಡೀವಿ ಚಾಪವ ಮಿಡಿದ ನಿಷ್ಠುರರಾವ ತಿವಿದುದು ಜರಿದವಡಕಿಲು ಜಗದ ಜೋಡಿಗಳ (ಕುಮಾ.ದ್ರೋ. ೯-೩೭) ; ಸಾರಿದರರೆ ಪೂಗೊಳನನಾ ಚಂಡಾಂಶುವಿನನ್ನೆ ಝಳದ ಝಾಡಿಯ ಜೋಡಿಯಧ್ವಶ್ರಮದ ಭಾರದಲಿ (ತೊರವೆ. ೨-೭-೩) : ಜಗದ ಜೋಡಿಯನುರುಹುವುರಗಾಧಿಪಮುಖಾನಲನೆರಡು ರೂಪಾಗಿ ಧರೆಯಲವತರಿಸಿತ್ತೊ (ನಿಭಾಗ. ೩-೮-೮). ೩. ಸಂಘಟನೆ ; ಒಗ್ಗಟ್ಟು : ಕೂಡೆ ತಳವಟವಾಯ್ತು ಸುಭಟರ ಜೋಡಿ ಜರಿದುದು (ಕುಮಾ.ದ್ರೋ. ೨-೫೮). ೪. ಒಡನಾಟ ; ಸಹವಾಸ : ಹತ್ತಿರದ ಜೋಡಿಗೋರ್ವರು ಮಿಲ್ಲ (ಮಲ್ಲಿಕ. ೦೭-೯). ೫. ಕಾಗದದ ಹಾಳೆ : (ಕ). 'ಜೋಡು' ಪರಾ.

**ಜೋಡಿ$_2$**, ಜೂಡಿ (ನಾ). ೧. ಕೊಡುಗೆಯಾಗಿ ಕೊಟ್ಟ ಭೂಮಿಗೆ ಸರ್ಕಾರ ತೋರಿಸುವ ಕಂದಾಯದ ಸವಲತ್ತು. ೨. ಕೊಡುಗೆ: ಮಲ್ಲಿಗೆ ಹಳ್ಳಿ ೪೨ ಬ್ರಾಹ್ಮಣರಿಗೆ ಜೋಡಿಯಾಗಿದೆ (ಗರುಡಾ.೧೧೫) : ಬೈಲಹಳ್ಳಿಯನ್ನು ನಿಮಗೆ ಜೋಡಿ ಹಾಕಿಕೊಟ್ಟಿದ್ದೇನೆ (ಬ್ರಸರ್ವ. ೦೪). ೩. ಕಪ್ಪ ; ವಳಿತ: "ಜೋಡೀ–ಕಪ್ಪಂ" (ಕಾಶಕ್. ೨೬೩); ಒಸಗೆ ಜೋಡಿಯಿಪ್ಪಲ್ಲವನೂ ಆ ಮೂಲಿಗರೇ ನಡೆಸಿ (ಸೌಇಇ. IX–II, ४೦೭–೧೧ ; 1377) : ಕಪ್ಪ ಜೋಡಿ ಬೇಡಿಗೆ ತಳವಾಟಿಕೆ . . . ಇವು ಮೊದಲು ಸರ್ವ್ವಮಾನ್ಯವಾಗಿ (ಎಕ. V, ಹಾಸನ. ೨-೦೭; 1563): ಕೊಡಗರು ನಮಗಳ್ಳಿ ಜೋಡಿಯ ತೆಱು ತಿಹರೀಗ( ಕಂಕವಿ. ೦೮-೨೫): ಚರಾದಾಯ ಜೋಡಿ ಬೇಡಿಕೆ ಹುಲ್ಲುಹಣ . . . ಮುಂತಾದ ಆ ಸಕಲ ಸ್ವಾಮ್ಯವು (ಬಿಟ್ಟಿಅ. ೨೧೦–೨೪). **ಜೂಡಿ :** ೩. ಊರೊಳಗಿನ ಇನಾಮುದಾರರು ಸರಕಾರಕ್ಕೆ ಜೂಡಿಯನ್ನೂ ಸಹ ಕೊಡುವುದಿಲ್ಲ (ಮೋಹಿನೀ. ೦೧): ಸರಕಾರದವರು 'ಜೂಡಿ' ಯೆಂದು ಕೆಲವು ಹಣವನ್ನು ಕಿತ್ತುಕೊಳ್ಳತೊಡಗಿದರೂ, ದೇಸಾಯಿಯವರಿಗೆ ಅದೊಂದು ಭಾರವೆನಿಸಲಿಲ್ಲ (ಜನಜೀ. ೦೩೭). [ ?. / ಮರಾ. ಜುಡೀ ]

**ಜೋಡಿ$_3$** (ಅ). ಜೊತೆಯಲ್ಲಿ: ದನದ ಜೋಡಿ ಇದ್ಕೊಂಡು ನಿನ್ನ ಬುದ್ದೀನೂ ದನದ ಬುದ್ಧಿ ಆಯ್ತೇನೊ (ಕಮ್ಮಟ. ೦೭). [ < ಜೋಡಿ$_1$ ]

**ಜೋಡಿಕೆ** (ನಾ). ಜೊತೆಯಾಗಿರುವಿಕೆ : ಆಡಲೇನದ ಜೀಯ ಲೋಕದ ಜೋಡಿಕೆಯ [ ಯೆ ] [ಪಾಠಾಂ. ಜೋಡಣೆಯ, ಜೋಡೆಯೇ]ಜಾನಕಿ ಜಗತ್ರಯು ಗಾಢಪತಿಭಕ್ತೆಯರಿಗೀ ಸತಿ ಮಾತೃಭವನವಲ (ತೊರವೆ. ೫-೩-೪೨). [ ಜೋಡು + – ಇಕೆ ]

**ಜೋಡಿಗ** (ನಾ). ಜೊತೆಗಾರ; ಸಂಗಾತಿ: ಕೀಱು ಮೃಗರೆದು ಜೋಡಿಗನ ಬರವನೆ ಪಾರ್ವ ಪೆಣ್ಬಕ್ಕಿಗಳ ತಂಡದಿಂದೆಯುಂ (ರಾಮಾಶ್ವ. ४-೨). [ ಜೋಡು + – ಇಗ ]

**ಜೋಡಿಗಲಹ** (ನಾ). ಸಾಟಿಯಾದ ಕಾಳಗ ; ಸಮಾನವಾದ ಯುದ್ಧ : ಆಡಲೇನದನಿಂದ್ರ ಜಂಭರ ಜೋಡಿಗಲಹವಿದೆನಲು ಗಗನವ ಘಾಡಿಸಿತು ರಣರಭಸ (ತೊರವೆ. ೩-೧೧-೨೦). [ ಜೋಡಿ$_1$ + ಕಲಹ ]

**ಜೋಡಿಗೆ** (ನಾ). ಜೋಡಣೆ : ಸ್ವಲ್ಪ ಹಳೆಯ ಕುರ್ಚಿ ಸ್ವಾಮಿ ! ಒಂದು ಕಾಲು ಮುರಿದಿತ್ತು, ಅಲ್ಲಿಂದಿಲ್ಲಿಗೆ ಜೋಡಿಗೆ ಹಾಕಿ ಗಟ್ಟಿಮಾಡಿದ್ದೇನೆ (ದೇವಮ. ४೧). [ < ಜೋಡಿಕೆ ]

**ಜೋಡಿಗೆಡೆ** (ಕ್ರಿ). ಗುಂಪಾಗಿ ಬೀಳು ; ಒಟ್ಟಾಗಿ ಉರುಳು : ನೂಱಾನೆ ಭೀಮನ ಗದೆಯ ಗಾಳಿಯಲಿ ಜೋಡಿಗೆಡೆದವು (ಕುಮಾ.ಗ. ೦-೫೯). [ ಜೋಡಿ$_1$ + ಕೆಡೆ$_1$ ]

**ಜೋಡಿಗೆದಱು** (ಕ್ರಿ). ಗುಂಪಾಗಿ ಚೆದರು,–ಬೇರೆಬೇರೆಯಾಗು : ಸುರಪಂದಿಗಳು ಮಗಧರು ಜೋಡಿಗೆದಱಿತು ನಿಜ ನಿಜಾಂಗದ ವಿದ್ಯೆಯಲಿ ನಲಿದು ಪಾಡಿದರು ಹರಿಮಹಿಮೆಗಳನು (ನಿಭಾಗ. ೩-೯-೩೮). [ ಜೋಡಿ$_1$ + ಕೆದಱು$_1$ ( < ಕೆದಱ್$_1$) ]

**ಜೋಡಿಗ್ರಾಮ** (ನಾ). ಕೊಡುಗೆಯ ಗ್ರಾಮ : ನಾಲ್ಕಾರು ವರ್ಷಗಳಲ್ಲೇ ಒಂದು ನಾಲ್ಕು ಜೊತೆ ಜೋಡೀಗ್ರಾಮ ತೆಗೆದು ಹಾಕಿಬಿಡಬೇಕು (ಮೂಂಗಿ. ೫೨). [ ಜೋಡಿ$_2$ + ಗ್ರಾಮ ]

**ಜೋಡಿಗ್ರಾಸ** (ನಾ). ಒಂದು ಬಗೆಯ ತೆರಿಗೆ(?): ಕ್ರಯ ಕಡ್ತಾಯ ಬಿಟ್ಟಿ ಬೀಧಾರ ಸೇಸೆ ಮರನ ಬಿಟ್ಟಿ ಜೋಡಿಗ್ರಾಸ ಆ ಗ್ರಾಮದ ತೋಟಗಾರಿಕ . . . ಮುಂತಾಗಿ ಸರ್ವಬಾಧಾ ಪರಿಹೃತವಾಗಿ (ಮೈಆರಿ. ೧೯೪೦, ೫೬–४४ ; 1399). [ ? ]

**ಜೋಡಿತೆಂಗು** (ನಾ). ಒಂದು ಬಗೆಯ ಸಸ್ಯ: ಜೋಡಿತೆಂಗು, ಕಡಲ್ತೆಂಗು (ಮೈಜಿಗ. ೫೦–೦೦೦೭). [ ? ]

**ಜೋಡಿದಾರ$_1$** (ನಾ). ಜೊತೆಗಾರ ; ಜೋಡಿಯಂವನು: ಇವರ ಜೋಡಿದಾರನು 'ಕೋಟ್' ಎಂದು ಒದರಿದಾಗ ವಿರುದ್ಧ ಪಕ್ಷದವರ ದಿವಾಳಿಯಾಗಿಬಿಟ್ಟಿತ್ತು (ಮೂರುದಾ. ೮). [ ಜೋಡಿ$_1$ + – ದಾರ$_4$ ]

**ಜೋಡಿದಾರ$_2$**, ಜೂಡಿದಾರ (ನಾ). ಜಮೀನು ಅಥವಾ ಗ್ರಾಮಗಳನ್ನು ಜೋಡಿಯಾಗಿ ಪಡೆದಿರುವವನು : ನನ್ನ ಸೇಹಿತ ಒಬ್ಬ ಭಾರೀ ಜೋಡಿದಾರ (ನಾಡಿಗೇ. ೫೪). **ಜೂಡಿದಾರ :** ಖಾಲಸಾತ ಭೂಮಿ ಜೂಡಿದಾರರಿಂದಾ (ಬೊಂಕಶಾ. ೧೯೩೪, ರಾಣೆಬೆನ್ನೂರ್. ೮೨–೬ : ?). [ ಜೋಡಿ$_2$ + – ದಾರ$_4$ ]

**ಜೋಡಿದಾರಿ** (ನಾ). ಕೊಡುಗೆಯಾಗಿ ಬಂದ ಗ್ರಾಮದ ಅಧಿಕಾರ : ಶಾನುಭೋಗರಿಗೆ ಆ ಹಳ್ಳಿಗಳ ಜೋಡಿದಾರಿ ಇದೆ (ಊರು). [ < ಜೋಡಿದಾರ$_2$ ]

**ಜೋಡಿಸು$_1$** (ಕ್ರಿ). ೧. ಸೇರಿಸು ; ಕೂಡಿಸು ; ಹೊಂದಿಸು : ಅವನಿಪಾಲನ ಗವಿಯ ಘಾಡಿಕೆ ಜೋಡಿಸಿತು ಗೀರ್ವಾಣರಾಲಿಗಳ (ಕುಮಾ.ಕ. ೦೫–೦೭) : ನೋಡಿದೊಡೊಂದೇ ದಿವಸದೆ ದಿನ ನಾಲ್ಕು ಜೋಡಿಸಿ ವೈವಾಹವಿಧಿಯ ಮಾಡಿದರು (ಮೋಹತ. ೦೩–೭೩) ; ಜೋಡಾಗಿ ಪೂಡುಪೊಡೆ ಸಾಲದೇಳೇ ಹಯಂ ಜೋಡಿಸುವನೀ ತುರಗವಂ ತನ್ನ ತೇರ್ಗೆಂದು (ಜೈಮಿಭಾ. ४–೧४) ; ಅವಳು ತನ್ನ ಪುಟ್ಟ ಕೈಗಳೆರಡನ್ನು ಎತ್ತಿ ಜೋಡಿಸಿ ಕರೆದಳು (ಹಂಗಾಳ್ಳ. ೩೩). ೨. ಸೇರು ; ಜೊತೆಯಾಗಂ : ಘಟೆಯೊಳ್ ಘಟೆ ಜೋಡಿಸಿ ದಂತಜಾಲದೊಳ್ ಭೋಂಕನೆ ಪೊಣ್ಮೆ ತೋರ ಕಿಡಿ ಸೂಸೆ (ಗಿರಿಕ. ೬-೭೨): ಪೆಣ್ಣವಿಲೆಂದು ಕೇಕಿ ಬಂದಾ ಲಲಿತೋಲ್ಲಸತ್ಕಬರಿಗೊಯ್ಯನೆ ಜೋಡಿಸೆ ಕಂಡು (ಉದ್ಭಟ. ೨-೯೮). ೩. ಜೊತೆಮಾಡು : ನೋಡುವುದಕ್ಕೆ ಹುಲ್ಲೆಯ ಹೆಣ್ಣುಮಱಿಗಳ ಜೋಡಿಸಿ ಕೊಟ್ಟಿರುತ್ತಿಪದಿ (ಮೋಹತ. ೦೯–೭೭) : ಎನ್ನೊಳಾಹವಕ್ಕನುಗುಣನಂ ಜೋಡಿಸು (ಶಬಶಂ. ४–೨೮). ೪. ಅಣಿಮಾಡಂ ; ಸಜ್ಜುಗೊಳಿಸಂ : ಜೋಡು ಹಕ್ಕರಿಕೆ ಹಲ್ಲಣ. . . ಜೋಡಿಸಿ ತುರಗವನೇಱಿ ರಾವುತರೊಡಗೂಡಿ ಬಂದರು ಭೂಪರೆಡೆಗೆ (ಅಂಜಿಕ. ೬–೮೧) : ಮಾಧವನ ಮರ್ದಿಸಿ ನಿನಗೆ ಜೋಡಿಸುವೆನು ಮಹಾನಳನ (ಕುಮಾ.ಸ. ೧೧–೫೫) ; ಮುಱಿದು ಹಱಿಹಂಚಾದ ನಿಜಮೋಹರವ ನೆಱ

ಸಂತೈಸಿ ಜೋಡಿಸಿ . . . ವಿರೋಧಿವ್ರಜದ ಥಟ್ಟಣೆಯ ಮುಱಿದು (ಕುವ್ಯಾ.ಕ. ೦೬-೨೪) ; ಆಗ ಮದನನು ತನ್ನ ಬಲವನು ಬೇಗದಲಿ ಜೋಡಿಸಲು (ನಳಚ. ೧-೩೭) : ಮನ್ನೆಯ ಮಂಡಲೇಶ್ವರರು ಜೋಡಿಸಿದ ಕರಿ ತುರಗ ರಥವಡೆಯಾಡಿದವು (ಕೊರರಾ. ೨-೭-೯) ; ಪದಾತಿ ಮೂಱುರ್ಬುದಂ ಜೋಡಿಸಿದರಾಹವಪ್ರೌಢರ್ಸುಬುದ್ಧಿ ಮೊದಲಾದ ಭಟರು (ಜೈಮಿಥಾ. ೨೨-೨). ೫. ಸಿದ್ಧವಾಗು ; ಅಣಿಯಾಗು ; ಅನುವಾಗು : ಕಳವೆಯಕ್ಕಿಯ ಕೂಳರಾಶಿಯ ಬಂಡಿ ಜೋಡಿಸಿತು (ಕುವ್ಯಾ.ಆ. ೧೦-೨೩) : ಅಡಿದೆ ಬೆಳಗಾಗದ ಮುನ್ನ ಬಹೆನೆಂದು . . . ಜೋಡಿಸಿ ನೀ ಬರ್ಪ ವೇಳೆಗೆ ಭಾಸ್ಕರ ಮೂಡಿದ ನೆಂದಳಾ ಕುವರಿ (ಮೋಹತ. ೨೯-೩೯). ೬. ಒದಗು ; ಉಂಟಾಗು ; ಲಭಿಸು : ಜಗದಳಿವು ಜೋಡಿಸಿತೆನುತ ನಡುಗಿದನಬುಜಭವನಂದು (ಕುವ್ಯಾ.ಬೀ. ೬-೩೦). ೭. ತಿಳಿಸು ; ಹೇಳಿಕೊಡು : ಬುದ್ಧಿಯಂ ಜೋಡಿಸಿದ ಕೊರ್ವಳಣುಗೆಗೆ (ಜೈಮಿಥಾ. ೬-೨೭) : ನೀನೆ ಬುದ್ಧಿಯ ಜೋಡಿಸೆನಲು ಸುಬುದ್ಧಿ ಪೇಳ್ದನು ನೀತಿ ಸಭೆಯಲಿ (ಬಿಜ್ಜಪು. ೫೦ ಸೂಚನೆ).

[ ಜೋಡು + – ಇಸು$_3$ ]

**ಜೋಡಿಸು₂** (ಕ್ರಿ). ಹೊಡೆ ; ಜಡಿ : (೬).

[ ಜೋಡಣ್$_0$ (**P** ← ಮರಾ. ಝೋಡಣೇ) + –ಇಸು$_3$ ]

**ಜೋಡು** (ನಾ). ೧. ಜೊತೆ ; ಜೋಡಿ : "ಜೋಡೆನಲು ಜೋಳಿ" (ಕಶರ. ೪೦) : ಪಕ್ಕ ಪಕ್ಕಗೆ ಸಾರೆ ಜಜ್ಜರಿಯ ಜಕ್ಕವಕ್ಕಿಯ ಜೋಡು (ಸಮ್ಮಕಾ. ೧-೩೭). ೨. ಸಮಾನ ; ಸಾಟಿ ; ಸರಿ : "ಜೋಡು, ಸರಿಸ, ತೋಡು . . . ಸಂಗಡಂ – ಈ ೧೮ ಸಮಾನಕ್ಕೆ ಪೆಸರ್" (ಕಶಸಾ. ೦೫-೨೯೦) : ಶ್ರೀಪಾಣ್ಡ್ಯರಾಜನೂರ್ಜ್ಜಿತತೇಜಂ[ವಿದ್ವಿ]ಪ್ಪಾರಾತಿಗೆ ವಿಗೆ ಜೋ[ಡೆನಿಸಿ] (ಸೌಇಇ. IX-1, ೦೫೪-೦೬ : 1085) : ಹರನ ಜೋಡು ಮುರಾಂತಕನ ಸಮ (ಕುವ್ಯಾ.ಸ. ೦೬-೬೯). ೩. ಎತ್ತಿನ ಜೊತೆ: ಮೂಡು ಬೈಲನು ಮಾಡಿಕೊಂಡೆನು ; ಜೋಡು ಹತ್ತನು ಕಟ್ಟಿದೆ (ಕಏಪು. ೧೮-೧೨). ೪. ಸಹಚರ ; ಸಂಗಡಿಗ : ಕೆಳೆಯ ಬೇಡುವ ಎದೆಗೆ ಯಾರು ಜೋಡು (ಉಯ್ಯಾಲೆ. ೩೭-೪). ೫. ಹಾದರ; ವ್ಯಭಿಚಾರ. 'ಜೋಡಾಡು' ಪರಾ. ೬. ಕಟ್ಟು ; ಕಂತೆ : ಓಡುವಾಕಳಿಗೆಳೆಯು ಹುಲ್ಲಿನ ಜೋಡ ತೋರಿಸಿ ನಿಲಿಸಿ (ವಿವೇಕ. ೬-೨೯) : ಬಲವಂತ ಶೇಣ್ವಿಯು ಇಸ್ಪೇಟಿನ ಜೋಡನ್ನು ಹೊರಹೊರಡಿಸಿದ್ದನು (ಅಂಬಿಕೆ. ೫). ಜೊತೆಗಾರರು ಯಾರೂ ಇರಲಿಲ್ಲ. ಇಸ್ಪೇಟು ಜೋಡಂತೂ ಮೊದಲೇ ಇರಲಿಲ್ಲ (ಮುಂಗಾರು. ೩೯). ೭. ಗುಂಪು ; ಸಮುದಾಯ : ನರಶರದ ಜೋಡಿನ ಜುಂಜುವೊಳೆಯುಲಿ ಜಾಹ್ನವೀಧರ ಜಾಱುವನೆ (ಕುವ್ಯಾ.ಆ. ೬-೦೧) : ಜೋಡು ಜೋಡಿಲಿ ನಿಂದು ನೋಡಿದರಾ ಪುರಪತಿಯ (ಸೌಂದರ್ಯಾ. ೩-೬). ೮. ಮೆಟ್ಟು ; ಪಾದರಕ್ಷೆ : ಜೋಡು ಕಿತ್ತುಹೋದರೆ ತಾನೇ ಅದನ್ನು ಸರಿಮಾಡಿಕೊಳ್ಳುತ್ತಿದ್ದನು (ಶೃಗಂಬ. ೦೧೧) : ಆರೂ ಕಾಲಿಗೆ ಜೋಡನ್ನು ಮೆಟ್ಟಿರಲಿಲ್ಲ (ದೇವೀಬಾ. ೦೩೭) ; ಜೋಡು ಕಂಡ ಕಾಲುಗಳು ನಮ್ಮೂರಿನಲ್ಲಿ ಎಲ್ಲೋ ನೂರ ಕ್ಕೊಂದು (ಹುಟ್ಟಿಹ. ೭). ೯. ನೆಲೆ; ಆಶ್ರಯ: ಪವಳದ ಬೀಡು ಕಂಬುಗಳ ನಾಡು ಜಲೇಶನ ಜೋಡು . . . ಮಣಿಗಳಾಗರಮಂದೆಸೆದತ್ತು ಸಾಗರಂ (ಸೂಕ್ತಿಸು. ೨-೩೭). ೧೦. ಕವಚ; ಅಂಗರಕ್ಷೆ; ಉಕ್ಕಿನ ಅಂಗಿ: "ಜೋಡೆನೆ ಸವಗಮುದಕ್ಕುಂ" (ಭಾರನಿ. ೩೯) : ಘನತರವಾದ ಪಂಚಾಕ್ಷರಿಯ ಜೋಡಂ ತೊಟ್ಟು (ಚನ್ನಪ. ೬೬-೧೫) : ಕಿಱುವುಲಿಯ ಜೋಡಂ ತೊಟ್ಟಂತಿರಿಟ್ಟಳ ಮಾಗೆಯುಂ (ಅನಂಪು. ೨-೨೯ ವ) : ಬೋಳೆಯಂಬೈದಱಲೆ ರಾಯನ ತೋಳನೆಚ್ಚನು ಜಡಿವ ಜೋಡಿನ ಮೇಲೆ ಮುಱಿದವು ಬಾಣ (ಕುವ್ಯಾ.ಕ. ೦೧-೨೬). ೧೧. ಒಂದು ಅಳತೆ: ನೆಲ್ಲ ಕಾಳು ೬೪ ಯೆಂಬುದು ಕರ್ಣಾಟಕದ ಜೋಡುವೊಂದು ಎನಿಸುವುದು ಯಿಂಥಾ ಜೋಡು ೧೨॥ ಗೆ ನೆಲ್ಲಕಾಳು ೮೦೦ (ವ್ಯವಹಾ. ಅನುಬಂಧ. ೦-೭-೯).

**ಜೋಡಾಗು** = ಜೊತೆಯಾಗು ; ಒಂದಾಗು : ಅಂಬಿನ ಬಂಬಲೊ ಜೋಡಾಗಿ ಕೋಡನೂಱಿ ಕೆಡೆದ ಗಜವ್ರಜಂಗಳ ಡೊಱೆವುಗಳಿಂದೊಱಿತು ಪರಿವ ನೆತ್ತರ ಕಡಲ್ಗಳುಂ (ಪಂಪಭಾ. ೦೦-೧೦೬ ವ). **ಜೋಡುಮಾಡು** = ೧. ಜೊತೆಗೂಡಿಸು ; ಸೇರಿಸು ; ಹೊಂದಿಸು : ಸಂಧಿಮಾಡಿ ಕುರುಪುತ್ರರೊಳಿನ್ನನೆ ಜೋಡುಮಾಟ್ಪಿರೇ (ಪಂಪಭಾ. ೯-೨೪) : ರಸಮುಯಮಂ ಕೃತಿಯುಂ ಸೇವಿಸಿ ವಿರಸಮನೆಯ್ದೆ ಜೋಡುಮಾಡುವ ವಿಬುಧಪ್ರಸರಂ (ಪುಷ್ಪಪು. ೧-೫೭). ೨. ಸೇರು ; ಕೂಡು; ಒಟ್ಟಾಗು : ಕೂಡೆ ಗಱಿಗಟ್ಟಿತು ಚತುರ್ಬಲ ಜೋಡುಮಾಡಿತು ರಾಯನಿದಿರಲಿ (ಕುವ್ಯಾ.ಕ. ೪-೨೭). ೩. ಸಮವೆಂದಂ ಪರಿಗಣಿಸು ; ಹೋಲಿಸು.

[ ದೇ.೫ ತುಳು. ತೆಲು. ಜೋಡು ]

**ಜೋಡುಕಟ್ಟು₁** (ಕ್ರಿ). ಜೊತೆಮಾಡು ; ಜೊತೆಗೊಳಿಸು : ಅವರಿಬ್ಬರೂ ದಸರೀಹಬ್ಬದಲ್ಲಿ ಕಾಳಗಕ್ಕೆ ಜೋಡುಕಟ್ಟಲ್ಪಟ್ಟರು (ಕಥಾಮಂ. IV, ೧).

[ ಜೋಡು + ಕಟ್ಟು$_1$ ]

**ಜೋಡುಕಟ್ಟು₂** (ನಾ). ಹೊಂದಾಣಿಕೆ ; ಜೋಡಣೆ : ದಾಸಸಾಹಿತ್ಯದಲ್ಲಿ ಶಬ್ದಗಳ ಜೋಡುಕಟ್ಟು ಬಹು ಸುಂದರವಾಗಿದೆ (ಜಗದಾ. ೭೧).

[ ಜೋಡು + ಕಟ್ಟು$_2$ ]

**ಜೋಡುಕಾರ್ತಿ** (ನಾ). ಜೊತೆಗಾತಿ ; ಸಂಗಾತಿ ; ಗೆಳತಿ ; ಸಖಿ : ತನ್ನೆಣೆವರೆಯುದ ಗೆಡೆಯು ಜೋಡುಕಾರ್ತಿಯರೊಡನಾಡುತಾಡುತೆ (ರಾಮಾಶ್ವ. ೬೫-೨೮). [ ಜೋಡು + – ಕಾಱ + – ತಿ$_1$ (<–ಇತ್ತಿ) ]

**ಜೋಡುಖಾತೆ** (ನಾ). ಜಂಟಿ ಖಾತೆ; ಇಬ್ಬರು ಅಥವಾ ಹೆಚ್ಚು ಜನರು ಒಟ್ಟಾಗಿ ಇಟ್ಟ ಖಾತೆ: ಜೋಡುಖಾತೆ (Joint account) ವ್ಯವಹಾರಕ್ಕೆ ಅನುಕೂಲವಾಗುವಂತೆ ಒಬ್ಬರಕ್ಕಿಂತ ಇಬ್ಬರಾಗಲೀ ಹೆಚ್ಚಾಗಲಿ ಜನರು ಕೂಡಿಕೊಂಡು . . . ಜೋಡುಖಾತೆಗಳನ್ನಿಡಬಹುದು (ಬ್ಯಾಂಕಕ್ಕೆ. ೪೮).

[ ಜೋಡು + ಖಾತೆ$_2$ ]

**ಜೋಡುಗವಣೆ** (ನಾ). ಜೋಡಿಸಿದ ಕವಣೆ ; ಜಂಟಿಯಂ ಕವಣೆ : ಜೋಡು[ಪಾಠಾಂ. ಕೋಡು, ತೋಡು]ಗವಣೆಯ ತೂಱುಗಲ್ಲಿನ ಝಾಡಿ ಝುಮ್ಮಿಡಿಸಿದವು ಗಗನವನು (ತೊರರಾ. ೬-೦೧-೩).

[ ಜೋಡು + ಕವಣೆ$_1$ ]

**ಜೋಡುಗೂಡು** (ಕ್ರಿ). ಒಟ್ಟಿಗೆ ಸೇರು; ಜೊತೆಗೂಡು: ಗಾಡಿಕಾತಿಯರು ಗಣನೆಯಿಲ್ಲದೆ ಜೋಡುಗೂಡಿರುವರು ಕೂರ್ವೆಯೊಳು (ಹರಿಬ. ೦-೦೭).

[ ಜೋಡು + ಕೂಡು$_1$ ]

**ಜೋಡುಗೊಡು** (ಕ್ರಿ). ಜೊತೆಕೊಡು ; ಜೋಡಿಯಾಗು : ಇಷ್ಟ ಮಿತ್ರರಿಲ್ಲದ, ಬಂಧು ಬಾಂಧವರಿಲ್ಲದ, ಪರದೇಶವಾಸದಲ್ಲಿ ಸದಾ ನಾನು ಅವಳಿಗೆ ಜೋಡುಗೊಡಬೇಕೇ? (ಇಷ್ಟಕ. ೨೯೪). [ ಜೋಡು + ಕೊಡು$_1$ ]

**ಜೋಡುದಗಲೆ** (ನಾ). ಜೊತೆಯಾದ ಕವಚ : ಇಱಿದರು ತಱಿದರು ಕೊಱೆದರು ಮೂಗನು ಜರಿಟೋಪಿ ಜೋಡುದಗಲೆಯು ಪರಿವಟ್ಟ ಮಾಡಿ (ಕಂನವಿ. ೩-೬೮). [ ಜೋಡು + ದಗಲೆ$_1$ ]

**ಜೋಡುದೀವಟಿಗೆ** (ನಾ). ಜೊತೆಯಾದ ದೀವಟಿಗೆ ; ಜೋಡಿಯಾದ ದೀವಟಿಗೆ : ನೋಡ ಬನ್ನಿರೋ ಜನರು ಶ್ರೀಕೃಷ್ಣನ ಜೋಡುದೀವಟಿಗೆ ಸೇವೆ (ಪುರಂದ. ೨-೪೨ ಪಲ್ಲವಿ). [ ಜೋಡು + ದೀವಟಿಗೆ ]

**ಜೋಡುಮೇಳ** (ನಾ). ಜೊತೆ ಮೇಳ; ಜಂಟಿಮೇಳ : ಜೋಡುಮೇಳದ ಓಲಗದವರನ್ನು ಕರೆಸಬೇಡವೇ? (ಬೆಳುಮ. ೩೭).

[ ಜೋಡು + ಮೇಳ ( = ಮೇಲ)]

**ಜೋಡುವಕ್ಕಿ** (ನಾ). ಜೊತೆಯಾಗಿರುವ ಪಕ್ಷಿ ; ಎಣೆವಕ್ಕಿ ; ಚಕ್ರವಾಕ: "ಜಕ್ಕವಕ್ಕಿ . . . ಜೋಡುವಕ್ಕಿಯು ತಾನದಕ್ಕುಮಾ ಚಕ್ರವಾಕಂ" (ಕಬ್ಬಮಂ. ೨೯) : "ಪೊಣರ್ವಕ್ಕಿ . . . ಜೋಡುವಕ್ಕಿ, ಗಡೆವಕ್ಕಿ.

ಆವುಳ್ವಕ್ಕಿ – ಈ ೭ ಚಕ್ರವಾಕಂ" (ಶಶಸಾ. ೧೦-೨೦೦); ಕುಕಿಲ್ವ ಪಕ್ಕಿ ಗಾವರಿಪ ಮದಾಳಿಯುಂಕುರಿವ ಮೆಲ್ಲೆಲರೊಂದುವ ಜೋಡುವಕ್ಕಿ(ವೃಷವಿ. ೯-೨೪); ಜೋಡುವಕ್ಕಿಗಳಿಲ್ಲಿಯಗಲದೆ ಕೂಡಿಯೊಂದಕ್ಕೊಂದು ಪ್ರೇಮದ (ರಘುವಂ. ೧೩-೩೦). [ ಜೋಡು + ಪಕ್ಕಿ$_1$ ]

**ಜೋಡುವಲೆ** (ನಾ). ಜೋಡಿಯಾಗಿ ಹೆಣೆಯಲ್ಪಟ್ಟ ಒಂದು ಬಗೆಯ ಬಲೆ: ತಿಣ್ಣವಲೆ ಜೋಡುವಲೆ ಪೊಸದಿಕ್ಕಣ್ಣವಲೆ . . . ವಿಂಧ್ಯಕನ ಕೂಡೆ (ಸಾಳ್ವಭಾ. ೩-೧೮). [ ಜೋಡು + ಬಲೆ$_1$ ]

**ಜೋಡುಶಬ್ದ** (ನಾ). ಜೊತೆ ಜೊತೆಯಾಗಿ ಬಳಸುವ ಶಬ್ದ: ಅರಿವೆ ಅಂಚಡಿ, ಕುಂದುಕೊರತೆ ಮುಂತಾದುವು ಜೋಡುಶಬ್ದಗಳು (ರೂಢಿ). [ ಜೋಡು + ಶಬ್ದ ]

**ಜೋಡುಸನಾದಿ** (ನಾ). ಜೋಡಿ ಓಲಗ; ಜಂಟಿಯಾಗಿರುವ ನಾಗಸ್ವರ: ಹಳ್ಳಿಗಳ ವಾದ್ಯಗಳಾದ ಕರಡಿಮಜಲು, ಜೋಡು ಸನಾದಿ, ತಾಳೆ ಮೊದಲಾದವುಗಳ ಘೋಷಣೆಗೂ ಅಲ್ಲಿ ಸ್ಥಾನವಿತ್ತು (ಮಹ್ಮ. ೧೩). [ ಜೋಡು + ಸನಾದಿ ]

**ಜೋಡುಸವಗ** (ನಾ). ಎರಡು ಕವಚ; ಜೋಡಿಕವಚ: ತಂತವ್ಮ ಕರಿತುರಗರಥಸಂತತಿಯುನಿಳಿದು ಸೀಸಕ ಜೋಡುಸವಗಮಂ ತೊಟ್ಟು ಕೊಂಡು (ಸಮ್ಯಕ್ತ್ವ. ೮-೩೦). [ ಜೋಡು + ಸವಗ ]

**ಜೋಡೆ**(ನಾ).ಹಾದರಗಿತ್ತಿ; ಜಾರೆ: "ಸಿತಗೆ,ಜೋಡೆ, ಪಾಣ್ಬೆ, ಬೆದೆಗಾರ್ತಿ-ಈ ೪ ಜಾರೆಗೆ ಪೆಸರ್" (ಶಶಸಾ. ೧೯-೩೮೭); "ಜೋಡೆಯೆನೆ ಜಾರೆ" (ಶಶರ. ೪೧): ಅಲಗಣ್ಣೊಳ್ ಸ್ಮರನಿರ್ದನಕ್ಕುಮೆಡೆವೋಪಾ ಜೋಡೆ ಕಾಮಂಗೆ ಕಾದಲೆಯಕ್ಕುಂ (ಪಂಪಭಾ. ೪-೮೪): ತನ್ನ ಪೆಂಡತಿ ಜೋಡೆಯಂದು ಸಂದೇಹಂಬಡುವಾತನವಳ . . . ಸಾಯೆ ಸದೆಬಡಿದು (ಪಂಚತಂ. ೭೪-೨೦): ಮಳಲೊಳಂ ನೀರ್ಮಾಡುವರ್ ಜೋಡೆಯರ್ (ಧರ್ಮಾಮೃ. ೩-೧೭೪): ಈ ಜೋಡೆ ಕನಲ್ದು ಬಂದು ತಪವಂ ತಳೆವಳ್ (ದಶಕು. ೮-೧೫) [ ಜೋಡ + -ಎ$_2$ ]

**ಜೋಡೆಗೆಯ್ತ** (ನಾ). ಜಾರೆಯ ನಡವಳಿಕೆ; ಹಾದರ; ವ್ಯಭಿಚಾರ: ನೋಡಿ ನಾಡಾಡಿಯಲ್ಲದಾಕೆಗಳ ಜೋಡೆಗೆಯ್ತಂಗಳಂ ಕಂಡು ಮುಗುಳ್ನಗೆ ನಗುತುಂ (ಪಂಪಭಾ. ೪-೮೧ ವ). [ ಜೋಡೆ + ಕೆಯ್ತ$_1$ ]

**ಜೋಡೆತ್ತು** (ನಾ). ಒಂದು ಜೊತೆ ಎತ್ತು: ಮರುದಿನ ಜೋಡೆತ್ತಿನ ಬಂಡಿಯು ಆನೆಕುಪ್ಪೆ ಕಾಡಿಗೆ ಹೊರಟಿತು (ಕಪಪು. ೪-೭೦). [ ಜೋಡು + ಎತ್ತು$_2$ (<ಎಱ್ತು$_1$) ]

**ಜೋಡೆಲುಬು** (ನಾ). ೧. ಜೋಡಿ ಎಲುಬು; ಜೊತೆಯಾಗಿರುವ ಮೂಳೆ. ೨. ದಷ್ಟಪುಷ್ಟವಾದ ಮೈಕಟ್ಟು: ಹೊಸತಾಗಿ ಕಸುಬಿಗೆ ಇಳಿದುದು. ಜೋಡೆಲುಬಿನ ಹುಡುಗಿ (ಬಂಗಬ. ೧೭೯). 'ಒಂಟೆಲುಂವು' ಪರಾ. [ ಜೋಡು + ಎಲುಬು (<ಎಲ್ವು) ]

**ಜೋತ** (ನಾ). ಕೈಜೋಡಿಸುವಿಕೆ; ನಮಸ್ಕಾರ: ಮದನಾರಿಯಪ್ಪ ತಿರಿಸಲಪೂರ್ಗೆ ತಾಂ ಬಂದು ನಿಂದು ಕಿವಿವಿಡಿದು ಕೈಮುಗಿದು ಜೋತಂ [ಪಾಠಾಂ. ಜೊತ್ತಂ]ಪೊತ್ತು ತಂದೆ ನೀಂ ಪೆಚ್ಚು ಬಾಳೆಂದು ಹರಕೆಯನಿತ್ತು (ಅರಿರ. ದೀ. ೧೭೩-೧); ಮರಿ, ಸ್ವಾಮಿಗೆ ಜೋತ ಮಾಡಮ್ಮ (ರೂಢಿ). [ <-ತೆಲು. ಜೋತ ]

**ಜೋತಿ** (ನಾ). ೧. ದೀಪ; ಬೆಳಕು: ಯತ್ವಲೋಪಕ್ಕೆ . . . ಜ್ಯೋತಿ–ಜೋತಿ (ಶಮದ. ೨೮೧ ಪ್ರಯೋ): ಜೋತಿ ಇದ್ದಲ್ಲಿ ಭೀತಿಯಿಲ್ಲ (ಗಾದೆ). ೨. ಆರತಿ: ಪ್ರೀತಿಯಲಿ ಲಿಂಗಂಗಳಿಗೆ ಹೊಸ ಜೋತಿ[ಪಾಠಾಂ. ಜ್ಯೋತಿ] ಗಳನೆತ್ತುವ (ಬಸಪು. ೧೯-೭೦). ೩. [ಯೋಗ] ಯೋಗಿಗಳಂ ಕಾಣುವ ಅಂತರಂಗದ ಬೆಳಕು: ಜೋತಿಯ ಧ್ಯಾನಬಲದಿಂದ ಸಕಲ ಸಿದ್ಧಿಗಳ ಪಡೆವನು ಯೋಗಿಯಾದವನು (ಗಗತಾ. ೧೯-೫). [<ಸಂ. ಜ್ಯೋತಿಸ್]

**ಜೋತಿಕಾಷ್ಠ** (ನಾ). ಒಂದು ಬಗೆಯ ಮೂಲಿಕೆ: ಚಿತ್ರಮೂಲ ತಳಕ ಜೋತಿಕಾಷ್ಠ . . . ಯಿವ ಸಮಾನಂಗೊಂಡು ಲೇಪವಂ ಮಾಡಲ್ (ವಾಹಾಚಿ. ೧೩-೧). [ ಜೋತಿ$_0$ + ಕಾಷ್ಠ$_2$ ]

**ಜೋತಿಷ್ಕ** (ನಾ). [ಜೈನ] ಭವನವಾಸಿ, ವ್ಯಂತರ, ಜ್ಯೋತಿಷ್ಕ ಮತ್ತು ಕಲ್ಪವಾಸಿ ಎಂಬ ನಾಲ್ಕು ಬಗೆಯ ದೇವತೆಗಳಲ್ಲಿ ಒಂದು ಪಂಗಡ; ಸೂರ್ಯ, ಚಂದ್ರ ಗ್ರಹಗಳೇ ಮೊದಲಾದ ಜ್ಯೋತಿಷ್ಕಲೋಕದಲ್ಲಿರುವ ದೇವತೆಗಳು: ವಾನಬ್ಯಂತರರುಂ ಚಂದ್ರಾದಿತ್ಯರೆಂಬಿರ್ಬ ಜೋತಿಷ್ಕರುಂ . . . ಚತುರ್ನಿಕಾಯ ದೇವನಾಯಕರುಮೆಲ್ಲಮೊಂದಾಗಿ (ಸುಕುಮಾ. ೮-೭೭ ವ). [ <ಸಂ. ಜ್ಯೋತಿಷ್ಕ ]

**ಜೋತಿಷ್ಮತಿ** (ನಾ). ೧. ಬೆಳಕುಳ್ಳುದು. ೨. ಒಂದು ಬಗೆಯ ಸಸ್ಯ; ಕಂಗುಂಗೆ: ಚಿಕ್ಕನ ಬುಡ್ಡೆಗಿಡ . . . ಜೋತಿಷ್ಮತಿ, ಚಿಟಕಿಪಂಬು, ಮಿಂಚುಬಳ್ಳಿ, ಕನಕಾಯ (ಮೃಶಿಗಿ. ೦೭-೩೦೮). [ <ಸಂ. ಜ್ಯೋತಿಷ್ಮತೀ ]

**ಜೋತೀಸ್ವರ** (ನಾ). ಬೆಳಕಿನ ಒಡೆಯ; ಜ್ಞಾನದ ಅಧಿಪತಿ: ಯೋಗಿಗಳ ಮನದ ಕೊನೆಯ ಜೋತೀಸ್ವರನುಂ ವೃಷಭನ ರೂಪಾಗಿ ಯಜಮಾನನುಂ ಆಚಾರ್ಯನುಂ ತಾನೆಯಾಗಿ (ಎಇ. XXIII, ೩೦-೭; 1265). [ ಜೋತಿ + ಈಸ್ವರ (<ಈಸರ) ]

**ಜೋತು$_1$** 'ಜೋಲ್$^1$' ಪರಾ.

**ಜೋತು$_2$** (ನಾ). ನೇತಾಡುವಂತೆ ತೂಗುಬಿಟ್ಟಿರುವ ವಸ್ತು; ಲೋಲಕ: ಈ ರೀತಿಯ ಸಾಮಗ್ರಿಗೆ ಜೋತು (pendulum) ಎನ್ನುತ್ತಾರೆ (ಬಾಲಪ್ರ. I, ೫೨೦). [ <ಜೋಲ್$^1$ ]

**ಜೋದ$_1$**(ನಾ). ಹೋರಾಟ ಮಾಡುವವನು; ಸೈನಿಕ: ಜೋದರಿಸುವಂಬಿನ ಬಲ್ಸರಿ ತಿಣ್ಣಮಾಗಿ (ಪಂಪಭಾ. ೧೦-೯೨): ಜೋದರ ಬಾಣಮಗ್ನಿಬಾಣಂ ಕರಚಕ್ರ ತಮೋರಿಚಕ್ರಮೆನಿಸಿದುದು (ಗದಾಯು. ೪-೩೭); ಪೋರ್ವ ಪದದೊಳ್ ಜೋದರ್ಕಳಿಕ್ಕೆಯಿಂ ತೆಗೆದಾರ್ದೆಚ್ಚ ಬಹೂಗ್ರ ನಿಷ್ಠುರ ಮಹಾನಾರಾಚಮುರ್ಚುತ್ತಿರಲ್ (ನೇಮಿಪು. ೧೦-೦೭೪): ಜೋದರುಚಿ ಕೈಮುಚಿದು ಕದನದ ಗಾಯುದಲಿ ನೊಂದೊಱಲಿ ಬಾಯುಲಿ ಬೆರಳನಿಟ್ಟುದು ವೈರಿ ಪಾಯುದಳ (ನಳಚ. ೯-೩೪); ಪಾಂಡವರ ಕಡೆಯ ಜೋದರು ಭೀಷ್ಮನ ಮೈಗಾವಲ ದಳವನ್ನು ಮುತ್ತಿ ಭಂಜಿಸಿದರು (ಭೀಷ್ಮಚ. ೦೮೧). [ <ಸಂ. ಯೋಧ ]

**ಜೋದ$_2$** (ನಾ). ಆನೆಯ ಸವಾರ; ಮಾವಟಿಗ: "ಜೋದನೆಂದು ಮಾವಂತಂ" (ಶಶಸಾ. ೦೭-೩೪೦); "ಜೋದರ್ಕಳೊಳ್ ಮಾವತರ್" (ಕರ್ಣಾನಿ. ೪೯); ಜೋದರ್ ಜೋದರೊಳಾನೆಯಾನೆಯೊಳಗುರ್ವಪ್ಪನ್ನೆಗಂ ಕಾದೆ (ಪಂಪಭಾ. ೧೦-೯೩); ಮುರರಿಪುರಾಮರ್ ಸುಟೀದರ್ ಕರಿಶಿಕ್ಷಕರಶ್ವಶಿಕ್ಷಕರ ಜೋದರ ಮಲ್ಲರ ಮಾವಂತರ . . . ಕೇರಿಗಳೊಳ್ (ಜಗವಿ. ೬-೨೬); ಏಱಿದ ಸಾರಥಿಯು ಮಾಱಿ ನಿಂದ ಜೋದರ ಭೀಕರರೂಪು ಲೋಕಕ್ಕೆ ಪೊಸತಾಗೆ (೧೮೪. ೬-೫೫ ವ): ಕರಿ ಕೆಡೆಯೆ ಕಾಲಿನಲಿ ಜೋದರು ತೆರಳದೆಚ್ಚಾಡಿದರು (ಕುಮ್ಮಾಕ. ೦೫-೨೮): ದಂತಿಶಿರವ ವಿಭಾಗಿಸಿ ಕೂರ್ಗಣೆಯಿಂದೆ ತಾಗಿಸಿ ಜೋದರ ತಲೆಯನಾಗಸಕಾಗಿ ಸಾಗಿಸಿದನು (ಮೋಹತ. ೩೪-೭); ಜೋದರ ಗೋಟಾಯಿಲರ ರಥಿಕರ . . . ಗಡಣಂ ನೆರೆದಿರೆ (ರಾಮಾಶ್ವ. ೩೦-೯). [ <ಸಂ. ಚೋದ ? ]

**ಜೋದಕ** (ನಾ). ಯುದ್ಧ ಮಾಡುವ ವೀರ: "ಜೋದಕ–ಯೋಧಕ = ಕಾದಾಡುವವ" (ತದ್ಭಕೋ. ೫೦). [ <ಸಂ. ಯೋಧಕ ]

**ಜೋದಗಾಳೆಗ** (ನಾ). ಆನೆಯ ಸವಾರರ ಕದನ; ಮಾವಟಿಗರ ಹೋರಾಟ: ಜೋದಗಾಳೆ [ಪಾಠಾಂ. ಳ] ಗದಿಂದೆ ಬಳಿಕೆರಡು ಸೀಱಾಗಿ ಮೇದಿನಿಗೆ ಬೀಳ್ವಂತಿಭವನೆಚ್ಚವನ ಧನುಶ್ಛೇದವಂ ಮಾಡಲು (ಜೈಮಿಭಾ. ೨೦-೨೭). [ ಜೋದ$_2$ + ಕಾಳೆಗ ]

**ಜೋದಸಂತತಿ** (ನಾ). ಮಾವಟಿಗರ ಸಮೂಹ: ಕುದುರೆರಾವ್ತರು ಜೋದ ಸಂತತಿ ಮದಗಜವ್ರಜವತಿರಥಾವಳಿ ಪ ದ ಚ ರ ರು ಚತುರಂಗಬಲ ವೊಂದುಳಿಯದಿದಟರೊಳಗೆ (ಕುವ್ಯಾಗ. ೩-೪೦). [ ಜೋದ$_2$ + ಸಂತತಿ ]

**ಜೋದಾವಳಿ** (ನಾ).=ಜೋದಸಂತತಿ: ಬಳಿಕ ನಂಬುಗೆಗೊಂಡು ಜೋದಾವಳಿ ಬೇಗ ತಳುವದೋಡಿತು ದೆಸೆದೆಸೆಗೆ (ಕಂನವಿ. ೧೫-೧೦೦).
[ ಜೋದ$_2$ + ಆವಳಿ$_1$ (= ಆವಲಿ) ]

**ಜೋದಾಳ್** (ನಾ). ಯುದ್ಧಮಾಡುವವನು: ಮೇಲೆ ಕವಿಕವಿದೆಸುವ ಜೋದಾಳಾಳಿವಿಲು ಕೆದಱದವು ಬೀಸಿಂಗೋಲನದ್ಭುತ ಸಮರವಾಯಿತು ಮತ್ತೆ ಪಾರ್ಥಂಗೆ (ಕುವ್ಯಾದ್ರೋ. ೭೦೩. ೩೦೯ ಪಠಿ.). [ ಜೋದ$_1$ + ಆಳ್$_3$ ]

**ಜೋನಗ** 'ಜೋನೆಗ' ನೋ.

**ಜೋನಾಯ್** (ನಾ). ಒಂದು ಬಗೆಯ ನಾಯಿ ; ಜೂಲುನಾಯಿ (?): ಕೊರಳೊಳಗಿಕ್ಕಿದ ಮಾಲೆ ಚಂದನದಣ್ಪುವೆರಸಿ ರನ್ನದ ವಿಪ್ಪರದೊಳು ಸ್ಥಿರವಾಗಿ ಕುಳಿತುಸಿರುವ ಜೋನಾಯನು ಧ ರ ಣೀ ಶ ಕಂಡುದಱಿಂದ (ಗೋಮಟೇ. ೧೫-೫೮). [ ಜೋ? + ನಾಯ್ ]

**ಜೋನಿ** 'ಜೋನೆ' ನೋ.

**ಜೋನಿಗರೆ** (ಕ್ರಿ). ರಸವನ್ನು ಒಸರು: ಫೇನ ಪಿಂಡೆಡೆಗೊಂಡ ಜಾಹ್ನವಿಯೊ ತನಿಬಿಂಕ ಜೋನಿಗರೆದುಕ್ಕಿಳಿವ ಸುರತರುವೋ (ಪರಶು. ೩-೩೫).
[ ಜೋನಿ (<ಜೋನೆ) + ಕರೆ$_2$ (<ಕಱೆ$_1$) ]

**ಜೋನಿಬೆಲ್ಲ** 'ಜೋನೆಬೆಲ್ಲ' ನೋ.

**ಜೋನುಗ** 'ಜೋನೆಗ' ನೋ.

**ಜೋನೆ, ಜೋನಿ** (ನಾ). (ಬೆಲ್ಲ ಮುಂತಾದ ವಸ್ತುಗಳು) ಕರಗಿ ದ್ರವ ರೂಪಕ್ಕೆ ಬಂದಿರುವ ಸ್ಥಿತಿ ; ಜಿನುಗಿರುವ ಸ್ಥಿತಿ: ಬೆಲ್ಲ ಜೋನೆಯಾಗಿದೆ (ರೂಢಿ). ಜೋನಿ: ಆ ಬಿಸಿ ಜಾಗದಲ್ಲಿ ಬೆಲ್ಲದ ಜೋನಿಯನ್ನು ಇಟ್ಟು, ನಾಯಿಯನ್ನು ಕಂಬದಿಂದ ಬಿಚ್ಚಿ ಅದರ ಬಳಿ ಕಟ್ಟಿದನು (ಮಹಿಮ. ೧೫೧): ಮೊಸರಿಗೆ ಸ್ವಲ್ಪ ಸಕ್ಕರೆ, ಜೇನು ಅಥವಾ ಬೆಲ್ಲದ ಜೋನಿಯನ್ನು ಸೇರಿಸಿ ಊಟವಾದ ಮೇಲೆ ಕುಡಿಯಲು ಚೆನ್ನಾಗಿರುತ್ತದೆ (ಆರುಶಾ. ೮೩): ಅದರಲ್ಲಿನ ಕಶ್ಮಲವನ್ನು ಆರಿಸಬೇಕು, ಅದನ್ನು ಜೋನಿಯಾಗಿ (Syrup) ಮಾಡಬೇಕು (ಬಾಲಪ್ರ. II, ೬೪೯).
[ ದೇ.॥ ತುಳು. ತೆಲು. ಜೋನೆ ]

**ಜೋನೆಗ, ಜೋನಗ, ಜೋನುಗ** (ನಾ). ೧. ಒಂದು ದೇಶದ ಹೆಸರು: ಜನ ಜೋನೆಗ ಅರಿಮಣ ಕೊಂಕಣ . . . ಘೋಡಾಮುಖವೆಂದು ಹೇಳಲು ಪಡುತ್ತಿಂವಿದ್ದಂಥಾ ರಾಷ್ಟ್ರಾಂತರಗಳಲ್ಲಿ (ಎಕ. V, ಬೇಲೂರು. ೩-೯೩ : 1397): ಲಾಳ ಜೋನೆಗ ಜೇನ . . . ವರಾಳ ವರದೇಶಾಧಿಪತಿಗಳು ಬಂದರೊಗ್ಗಿನಲಿ (ಕುವ್ಯಾಸ. ೭-೩) : ನಡೆದುದು ಭೂರಿಬಲ . . . ಜೋನೆ[ಪಾಠಾಂ. ನ]ಗ ವಿಂಧ್ಯ ಬೋಟಕ ಪಾರಶಿಕ ಸಾಂಬ್ರಾಣಿ ಹುರುಮಂಜಿಗಳ ಬ ಳಿ ವಿ ಡಿ ದು (ತೊರಲಾ. ೪-೯-೪): ಬಂಗಾಳ ಜೈನ ಜೋನೆಗ[ಪಾಠಾಂ. ಜೋಗಿ] ಸಗರ . . . ಕಾಂಬೋಜದೇಶದ ಸಕಲ ಶರಣರೈತರುತಿರ್ದರು (ಚಬಸು. ೭-೪೯). ೨. ಆ ದೇಶದ ನಿವಾಸಿ : ತಲೆದಱಿಸಿಕೊಂಡ ಜೋನೆಗರ ಜಂಗುಳಿಯಂತೆ ಎಲೆಗಳೆದು ಬತ್ತಲಿಸಿ ನಿಂದ ತ ರು ಕು ಲ ದ ಂ ತೆ (ವಾಗೀರ. ದೇ. ೩೫೪-೧೫). ೩. ತುರುಕ: "ಜೋನೆಗ–ಯವನಕ=ತುರುಕ" (ಶಬ್ದಕೋ. ೧೫). ಜೋನಗ: ೨. ಲೋಹಿತನೆಂಬ ವೀರನಂ ಗೆದ್ದು ಜೋನಗ ಜೇನಬೋಂಟರಂ ಅಪ್ಪಳಿಸಿ (ತುರಂಗ. ೦೯-೩೦). ಜೋನುಗ : ೨. ಜಾಣಾನ ಕಿನ್ನಾರಿ ಜಾತ್ರೆಗೆ ನಿಲುಭಾರ ಜಾಣ ನನ್ನಯ್ಯ ಮರುವಿನ ಕಿನ್ನಾರಿ ಜೋನುಗರಂಗಡಿಗೆ ನಿಲುಬಾರ (ಹಳ್ಳಿಯ. ೯೦).
[ <ಪ್ರಾ. ಜೋಣಯ./ಸಂ. ಯವನಕ ]

**ಜೋನೆಗಪಳಿ** 'ಜೋನೆಗವಳಿ' ನೋ.

**ಜೋನೆಗವಳಿ, ಜೋನೆಗಪಳಿ** (ನಾ). ಯವನರಿಂದ ತಯಾರಿಸಲ್ಪಟ್ಟ ಬಟ್ಟೆ : ಪಳದಿಯ ಜೋನೆಗವಳಿಯ ಪಲ ಬಗೆಯ ಪಲ್ಲಣದ ಪಕ್ಕ ಜಲ್ಲಿಯ . . . ಪರುಠವಣೆ ಪಸರಿಸೆ (ರಾಜಶೇ. ೬-೧೦ ಪ). ಜೋನೆಗಪಳಿ : ಹಳದಿ ಪಾರಿಯ ಪಚ್ಚೆ ಜೋನೆಗಪಳಿ ಸುವರ್ಣಾವಳಿಯ ಸಂಧ್ಯಾವಳಿ ಯುದಯರಾಗದಲಿ ರಚಿಸಿದ ಹಕ್ಕರಿಕ್ಕೆಗಳ (ಕುವ್ಯಾಭೀ. ೪-೪೯).
[ ಜೋನೆಗ + ವಳಿ$_6$ (<ಪಟಿ$^9_1$) ]

**ಜೋನೆಬೆಲ್ಲ, ಜೋನಿಬೆಲ್ಲ** (ನಾ). ನೀರೊಡೆದು ಜಿಗಿಯಾದ ಬೆಲ್ಲ ; ಜಿನುಗುಬೆಲ್ಲ; ದ್ರವರೂಪದಲ್ಲಿರುವ ಬೆಲ್ಲ: ಜೋನೆಬೆಲ್ಲದ ರುಚಿ ಸ್ವಲ್ಪ ಹುಳಿ (ರೂಢಿ). ಜೋನಿಬೆಲ್ಲ : (ಅ).
[ ಜೋನೆ + ಬೆಲ್ಲ ]

**ಜೋಪಕ** (ನಾ). ರಹಸ್ಯ; ಗುಟ್ಟು: ಆ ಪರಮಗುರುಲಿಂಗ ಜಂಗಮಾರ್ಚನೆಗೈವ ಜೋಪಕಮದೆಂತೆನೆ ವಿಲಾಸಮನನಾಗುತಂ ವ್ಯಾಪಕ ವಿರುದ್ಧನಾಗಿರಬೇಕು ಭಕ್ತಕುಲವೀ ಪರಿ ವಿರಕ್ತಿವಡದು (ಲಿಂಗಪು. ೧೪-೯).
[ <ಸಂ. ಗೋಪಕ ]

**ಜೋಪಡಿ** 'ಜೊಂಪಡಿ' ನೋ.

**ಜೋಪನ** 'ಜೋಪಾನ' ನೋ.

**ಜೋಪಾನ, ಜೋಪನ** (ನಾ). ೧. ಆರೈಕೆ; ಸಲಹುವಿಕೆ; ಕಾಪಾಡುವಿಕೆ; ರಕ್ಷಣೆ: "ಜೋಪಾನ – ಗೋಪನ = ಕಾದಿಡುವಿಕೆ" (ಶಬ್ದಕೋ. ೧೫): ಅಟ್ಟ ವಾತದ ತೈಲವಂ ತಾಂ ಬೊಟ್ಟಡಿಸಿ ಲೇಪಿಸುತ ಪಥ್ಯಂಗೊಟ್ಟದಕೆ ತಕ್ಕನಿತು ಜೋಪಾನವನದಾಚರಿಸಿ [ಪಾಠಾಂ. ಜೋಪಾಸನವನಾಚರಿಸಿ] (ಬಸವು. ೦೫-೮) : ಚಂದ್ರಣ್ಣ . . . ಕಕ್ಕನ ಜೋಪಾನದಲ್ಲಿ ಬೆಳೆದ (ಜನ್ನುಹಿಂ. ೨೩). ೨. ಎಚ್ಚರಿಕೆ ; ಅವಧಾನ ; ಜೋಕೆ ; ಜಾಗರೂಕತೆ : ಜೋಪಾನ ತಪ್ಪದೆ ರಾಜಮಂದಿರವ ಸರ್ಪ ನಿಧಾನವ ಕಾಯ್ವಂತೆ ಕಾದಿರೆಂದಪ್ಪಣೆಗೊಟ್ಟ ರಕ್ಕಸಗೆ (ಮೋಹತ. ೧೩-೦೦) : ಅಡವಿ ಗಿಡಗಳ ಕಡಿವ ಕೊಡಲಿಯ ಮಡಗಿ ಫಲವೇನೆಂದು ಅಲ್ಲಲ್ಲಿಡದೆ ಜೋಪಾನದಲಿ ಮಡಗುವುದಿನ್ನೂ ಧೇನುವನೂ (ಪಕುಧಾ. ೫-೪೭) : ದವಸ ಧಾನ್ಯ ಮುಂತಾದ ಸಾಮಾನವನ್ನು ಜೋಪಾನದಲ್ಲು ಇರಿಸತಕ್ಕ ಬಗ್ಗೆ (ರಾಜೇಂದ್ರ. ೩೯). ೩. ಎಚ್ಚರಿಕೆಯನ್ನು ಸೂಚಿಸುವ ಪದ : ಬಯಸಿ ನೆನೆದುದಿದಱೊಳಗಿರ್ಪುದು ಜೋಪಾನ ಜೋಪಾನ ಜೋಪಾನವಿನ್ನು ನಾಂ ಪೋಪೆನು (ಶಿವ್ಯತು. ೧೪-೩೩): ಜೋಪಾನ ಜಾರಿ ಬಿದ್ದೀಯೆ (ರೂಢಿ).ಜೋಪನ: ೧. ದೇವಿಯನು ಜೋಪನವ ಗೈಯುತ ದೇವ ಬಿಲುದುಡುಕೀಳು (ರಾಮಾಸಂ. ೩-೪-೩೯).
**ಜೋಪಾನಮಾಡು** = ಸಲಹು ; ಪೋಷಿಸು ; ಸಾಕು : ನನ್ನನ್ನು ನಮ್ಮಪ್ಪನ ಸೋದರತ್ತೆಯೇ . . . ಜೋಪಾನಮಾಡಿದ್ದಳು (ಮೇಧಿಮು. ೩).
[ <ಸಂ. ಗೋಪನ./ತುಳು. ಜೋಪಾನ, ಜೋಪನೆ ]

**ಜೋಪಾನಗೆಯ್** (ಕ್ರಿ). ಜೋಪಾನ ಮಾಡು ; ಎಚ್ಚರಿಕೆಯಿಂದ ನೋಡಿಕೊಳ್ಳು : ಈ ಪಾಟಿಯ ಚಕ್ರಶಕ್ತಿಯಿಂದಸುರಜಮೂವರ ಶಿರವ ಸೆಂಡಾಡಿ ಜೋಪಾನಗೆಯ್ದು ಜಗವ ರಕ್ಷಿಸುವ ಮಹೀಪತಿ ಶರಣು (ಮೋಹತ. ೩೯-೩೦). [ ಜೋಪಾನ + ಕೆಯ್$_1$ ]

**ಜೋಪಾಪಿ** (ನಾ). ಕೈಲಾಗದವನು; ನಿಷ್ಪ್ರಯೋಜಕ: ಆ ಗೆಳೆಯನ ಹತ್ತಿರ ನಾಲ್ಕು ದುಡ್ಡು ಬಿಕ್ಕೆ ಬೇಡಿ ಈ ಗೆಳೆಯನ ಹತ್ತಿರ ಒಂದಿಷ್ಟು ಬೇಡಿ. ಈ ಜೋಪಾಪಿಗಾಗಿ ಬೇಕಾಗುವ ಜೀನಸು ತರಬೇಕಾಗಿದೆ (ಚೀನಭಾ. ೨೯೭): ನಮ್ಮ ಬಾಬೂ . . . ಜೋಪಾಪಿಯಾಗಿದ್ದಾನೆ (ರಕ್ತಧ್ವ. ೨೩೭).
[ ?./ತೆಲು. ಜೋಪಾವ ]

**ಜೋಪಾಯನ** (ನಾ).=ಜೋಪಾನ ೨ : ಕುಚಗಳ್ಗೆ ತಾಪಸರ ದಿಟ್ಟ ಬಳ ಕಾದವುದನುತ್ತೂಡನೆ ಜೋಪಾಯನಂಗೊಳಿಸಿ ಬೈಚಿಟ್ಟಳು (ಪರಶು. ೮-[illegible]).
[ <ಸಂ. ಗೋಪಾಯನ ]

**ಜೋಪಾಸನ, ಜೋಪಾಸನೆ** (ನಾ). ಜೋಪಾನ ; ಆರೈಕೆ ; **ಪೋಷಣೆ** : ಯಾವ ನಾರೀಮಣಿಯು ಜೋಪಾಸನದಿಂದಾಗಿ, ಅನುಗ್ರಹದಿಂದಾಗಿ ಈ ನಮ್ಮ ಕುಮಾರನು ಪುನರ್ಜನಿಸಿ ಬರಲಿರುವನೋ (ನಾಗಶಾ. ೬೮) : ಮಕ್ಕಳನ್ನು ನನ್ನ ಪ್ರಾಣವಿರುವ ತನಕ ಜೋಪಾಸನ ಮಾಡುತ್ತೇನೆ (ಒಡ್ಡಿಉ. ೭೫). **ಜೋಪಾಸನೆ:** ಇದುವರೆಗೂ ಜನರು ಹುಟ್ಟಿದ ಮಕ್ಕಳ ಜೋಪಾಸನೆಯನ್ನು ಅಷ್ಟು ಲೆಕ್ಕಿಸಿರಲಿಲ್ಲ (ಸಾಹಿಸಂ. ೧೩೦): ಈ ರೀತಿಯಾಗಿ ಆಕೆಯ ಜೋಪಾಸನೆಯಲ್ಲಿ ನಮ್ಮ ದಿನಗಳು ಚೆನ್ನಾಗಿ ಕಳೆದುವು (ಶ್ರೀಕಾಂತ. ೬೦). [←ಮರಾ. ಜೋಪಾಸನಾ, ಜೋಪಾಸಣೇ./ತುಳು. ಜೋಪಾಸನ]

**ಜೋಪಾಸನೆ** 'ಜೋಪಾಸನ' ನೋ.

**ಜೋಬ** 'ಸೋಂಬ' ನೋ.

**ಜೋಬದ್ರ** (ನಾ). ಸೋಮಾರಿ ; ಅಲಸಿ : ಅವನೊಬ್ಬ ಜೋಬದ್ರ (ರೂಢಿ). 'ಜೋಬದ್ರತನ' ಪರಾ. [ <ಜೋಬ ]

**ಜೋಬದ್ರತನ** (ನಾ). ಸೋಮಾರಿತನ; ಆಲಸ್ಯ : ಅವನ ಬೋರ್ಡ್ ಸ್ಕೂಲು ವಿದ್ವತ್ತು ಎಂದರೆ, ಒಂದು ತರಹದ ಜೋಬದ್ರತನ (ಸ್ವಾಮಿಸ್ಮೃ. ೧೨೮). [ ಜೋಬದ್ರ + – ತನ ]

**ಜೋಬದ್ರೆ** (ನಾ). ಆಲಸ್ಯದಿಂದ ಕೂಡಿರುವವಳು : ಜೋಬದ್ರ ಥರ ಕೂತಿರಬೇಡ (ರೂಢಿ). [ ಜೋಬದ್ರ + – ಎ$_2$ ]

**ಜೋಬು** 'ಜೇಬು' ನೋ.

**ಜೋಮಾಲೆ** (ನಾ). ಕೊರಳಲ್ಲಿ ಧರಿಸುವ ಒಂದು ಬಗೆಯ ಉದ್ದವಾದ ಸರ : "ಲಂಬನಂ . . . ಲಲಂತಿಕಾ – ಕೊರಳಲ್ಲಿ ನೇತಾಡುವ ಒಡವೆ. ಜೋಮಾಲೇ ಸರ, ಕಂಠೀಸರ, ಮಣಿಗಳ ಹಾರ ಮುಂತಾದದ್ದು" (ಸಿದ್ಧಾಂತಿ. ೦೬೩): ಕನಕನಿಮ್ನಗೆಯುಂ ಮನೋಹರ ಕನಕಜೋಮಾಲೆಗಳ ರೂಪವನನುಕರಿಸಿ . . . ತೋರ್ಪಂತೊಪ್ಪಿತು (ಅರ್ಕವಿ. ೧೬-೨೧): ಸಣ್ಣ ಕಂದಮ್ಮಗಳ ಕಣ್ಣೀನ ಕವಡೀಯ ತಣ್ಣನ್ನ ಜೋಮಾಲೆ ಕೊರಳೊಳಗಿತ್ತ್ರೋ (ನಾದಲೀ. ೩೮-೯) : ಬಹಳೆ ಭರ್ಜಿಯಿಂದ ಹೊಡೆದವರಿಗೆ ಕಾಲುಗಗ್ಗರ, ಜೋಮಾಲೆ, ಈ ಮೇರೆಗೆ ಇನಾಂ ಕೊಡುತ್ತೇವೆ (ಚಿತ್ರಪಾ. ೮೦). [ <ಜೋಲ್$_1$ + ಮಾಲೆ ]

**ಜೋಮಾಲೆಸರ** (ನಾ). = ಜೋಮಾಲೆ : ಆಕೆಯ ಕೊರಳಿಗೆ ಕೊಕ್ಕೆತಾತಿ, ಸರಪಣಿ, ಕರಿಮಣಿಸರ ಮತ್ತು ಜೋಮಾಲೆಸರಗಳನ್ನು ಸೂಡಿದಳು (ಹುಲಿಪಾ. ೨೦೦). [ ಜೋಮಾಲೆ + ಸರ$_6$ ]

**ಜೋಮು$_1$** 'ಜೊಂಪು$_1$' ನೋ.

**ಜೋಮು$_2$** 'ಜುಮ್ಮು$_3$' ನೋ.

**ಜೋಮುಹಿಡಿ** 'ಜುಮ್ಮುಹಿಡಿ' ನೋ.

**ಜೋಯಿಸ, ಜೋವಿಸ** (ನಾ). ೧. ಗ್ರಹಗತಿಗಳನ್ನು ತಿಳಿಸುವ ಶಾಸ್ತ್ರ; ಜ್ಯೋತಿಶ್ಶಾಸ್ತ್ರ : ಗಣಿತಂ ಜೋಯಿಸಚ್ಛನ್ದ . . . ಬಲ್ಲ ಶಬ್ದ ಸಂಸ್ಕಾರವುಳ್ಳಾತ ನಾಗದೇಸಿಗರ್ಗ್ಗೆ . . . ಮತ್ತರಿಪ್ಪರ್ತ್ತೈದು (ಎಇ. XX, ೬-೨೫ : 1012) : ಶಕುನಂ ಜೋಯಿಸಮಾದಿಯಾಗಿ ಪೆಱವುಂ ವಿಜ್ಞಾನ ವಿದ್ಯಾವಿಶೇಷ ಕಳಾಕಳಾಪದೊಳಾಂ ಸಮಗ್ರನೆನೆ (ಸುಕುಮಾ. ೩-೨೧) : ಜೋಯಿಸಮನೋದುಪಂ ಜೋಯಿಸಿಗಂ (ಶಬ್ದಾನು. ೨೯೨ ಪ್ರಯೋ) : ಹರಿಶರ್ಮನ ಜೋಯಿಸವನ್ನು ಎಲ್ಲರೂ ಹೊಗಳಿದರು (ಕಸರಿ. ೪). ೨. ಜ್ಯೋತಿಷ್ಯವನ್ನು ಬಲ್ಲವನು; ಜ್ಯೋತಿಷಿ: "ಜೋಯಿಸ (ಜೋತಿಸ, ಜೊಯಿಸ) – ಜ್ಯೋತಿಷ" (ತದ್ಭಕೋ. ೧೬) : ಮುಟ್ಟಿಗಾಲ ಮುಂಟೆಂದು ತಪ್ಪಿದ ಜೋಯಿಸಂ ಬಾವಿಯ ನೀರನಡಕಿ ನೀರ್ವೊಯ್ದನೆಂಬ ಕಥೆಯಂತೆ (ಪಂಚತಂ. ೧೨೭-೨) : ಜೋಯಿಸನ ಮಗಳ್ [ಪಸೆಯ ಮೇಲೆ] ರಂಡೆಯಾದಳ್ (ಧರ್ಮಾಮೃ. ೧೨-೨೮) : ನೆಲೆದಪ್ಪಿದುದು ಗ್ರಹಮಾಲೆ ತಾರಾರಾಸಿ ಜೋಯಿಸ[ಪಾಠಾಂ. ತಿಷ]ರೋದು ಹುಸಿಯಾಯ್ತು (ಕುಮಾಭ್ರಾ. ೧೯-೧೯) : ಬಿಸರುಹಗಂಧಗಂಧಿನಿ ಕರೆಸಿದಳು ಜೋಯಿಸರ (ಮೋಹತ. ೨೩-೫೭) : ಬಳಿಕ ಜೋಯಿಸರಂದು ಸುಮುಹೂರ್ತದೊಳು ಲಗ್ನಗಳ ಪೇಳೆ (ಕಂಸವಿ. ೨೦-೭). **ಜೋವಿಸ :** ೨. ಜೋವಿಸ ಗೋವಿಂದ ದೇವಂಗೆ ಆಲೂರಲ್ಲಿ ಕೊಂಡಿಱುವನ ಮತ್ತ ೪ (ಕರ್ಣಾಶಾ. ೨೦b-೩೧ : 1278). [ <ಸಂ. ಜ್ಯೋತಿಷ ]

**ಜೋಯಿಸಚಕ್ರಿ** (ನಾ). ಜ್ಯೋತಿಶ್ಶಾಸ್ತ್ರಜ್ಞರಲ್ಲಿ ಶ್ರೇಷ್ಠನಾದವನು,– ಅಗ್ರಗಣ್ಯ : ಎಸೆವ ಮುಟ್ಟಿಗಾಲಮುಂ ಜೋಯಿಸಚಕ್ರಿಯೊಳ್ . . . ಭಾವಿಸಿ ಪೇಟ್ದಂ (ಜಟ್ಟಮ. ೧-೩೫). [ ಜೋಯಿಸ + ಚಕ್ರಿ ]

**ಜೋಯಿಸಮಾತು** (ನಾ). ಜ್ಯೋತಿಶ್ಶಾಸ್ತ್ರಜ್ಞನ ನುಡಿ ; ಜೋಯಿಸನ ಮಾತು : ಜೋಯಿಸಮಾತ ಕೇಳ್ದೆನ್ನ ತಂದೆತಾಯ್ಗಳು . . . ಕರೆದರು (ಶ್ರೀಪಾಲ. ೫-೮೨). [ ಜೋಯಿಸ + ಮಾತು$_1$ ]

**ಜೋಯಿಸಿಗ** (ನಾ) .=ಜೋಯಿಸ ೨ : "ಸಾಂವತ್ಸರಃ, ಜ್ಯೋತಿಷಿಕಃ . . . ಈ ೮ ಜೋಯಿಸಿಗಂ" (ಹಲಾಯು. ೬೭-೨೪೯): ಆ ಪೊತ್ತುಂ ಜೋಯಿಸಿಗರ್ ಪಾಪಗ್ರಹಮೆಂದು ಪೆಸರನಿಡೆ (ಸಮಪ. ೮-೧೬೨); ಮಾಂದರಿಗಂ, ಜೋಯಿಸಿಗಂ, ಸಂದಱಿಕೆಯ ಕಬ್ಬಿಗಂ ಸಮಂಜಸನೊಳನೇ (ಶಮದ. ೧೯೬ ಪ್ರಯೋ) : ಜೋಯಿಸಮನೋದುವಂ ಜೋಯಿಸಿಗಂ (ಶಬ್ದಾನು. ೨೯೨ ಪ್ರಯೋ) : ನವಲಕ್ಷ್ಮಿಯರ ವಿಲಸಿತೋತ್ಸವ ಪೂಜೆಗೆ ಶುಭಲಗ್ನವ ಸಲೆ ಜೋಯಿಸಿಗರುಸಿರಿದರು (ಕಂಸವಿ. ೨೨-೧). [ ಜೋಯಿಸ + – ಇಗ ]

**ಜೋರ್** (ನಾ). ಒಂದು ಅನುಕರಣ ಶಬ್ದ. 'ಜೋರನೆ' ಪರಾ.

**ಜೋರನೆ** (ಅ). ಒಂದೇ ಸಮನೆ: ನೆತ್ತರು ಬಿಡದೆ ಜೋರನೆ ಸುರಿಯೆ (ಬಸಪು. ೩೮-೨೮) : ಆ ಬೆಳಕಿನ ಝುಳಕ್ಕೆ ತಮ್ಮನ ಮೈ ಜೋರನೆ ಬೆವತಿತ್ತು (ಹೊಸಕ್ಷಿ. ೨೦೦) : ಜೋರನೆ ಬಿಟ್ಟ ಬೆವರಿನಿಂದ ಸೀರೆಯೆಲ್ಲ ತೊಯ್ದು ಹೋಗಿತ್ತು (ಗ್ರಾಮಾಯ. ೦೩೪). [ ಜೋರ್ + – ಅನೆ$_1$ ]

**ಜೋರಾವರಿ** (ನಾ). ಒತ್ತಾಯ; ಬಲಾತ್ಕಾರ; ಜುಲುಮೆ; ಜಬರದಸ್ತಿ : ನೀವು ಫೌಜು ಸಮೇತ ಜೋರಾವರಿಯಿಂದ ಆ ಶೀಮೆ ವಳನುಗ್ಗಿದ್ದೇ ಆದರೆ (ರಾಜೇಂದ್ರ. ೯೦). [ ← ಪಾರ. ಹಿಂ. ಮರಾ. ಜೋರಾವರೀ ]

**ಜೋರಿಡು** (ಕ್ರಿ). ಸ್ರವಿಸು ; ಹೊರಸೂಸು ; ಪ್ರವಹಿಸು : ಸೂಳು ಮಿಗೆ ಸಂಗರದ ರವದುಬ್ಬಾಳಿನಲಿ ತಿರುಹಿಟ್ಟನರುಣಜಲಾಳಿ ಜೋ[ಪಾಠಾಂ. ಝೋ]ರಿಡೆ ಋಷ್ಯಮೂಕ ಮಹಾಮಹೀಧರಕೆ (ತೊರರಾ. ೪-೨-೩೭) : ಧವಳ ವಸನದಿ ವೀಳ್ಯ ಜೋರಿಟ್ಟು ತನಿಯರುಣ ಕಾಣಿಪುದು (ಜಿನಭಾ. ೫೮-೫೭). [ ಜೋರು$_2$ (<ಸೋರ್$_2$)+ ಇಡು$_1$ ]

**ಜೋರಿಸು** 'ಸೋರಿಸು' ನೋ.

**ಜೋರು$_1$** ಸೋರ್$_1$' ನೋ.

**ಜೋರು$_2$** 'ಸೋರ್$_2$' ನೋ.

**ಜೋರು$_3$, ಝೋರು** (ನಾ). ೧. ವೇಗ ; ರಭಸ : ಜೋರಿನಿಂದೋಡಿಸಲು ಪದನದೆ ಸೋರುತಿಹ ನೊರೆಯಾಂತ ಕುದುರೆ (ಶ್ರೀರಾಡ. ೭೨, ಪೀಠಿಕೆ): ಸ್ವಲ್ಪ ತಡೆದು ಸಿಟ್ಟಿನಿಂದ ಉರುವಲ ಕಟ್ಟಿಗೆಯನ್ನು ಒಲೆಯಲ್ಲಿ ಜೋರಿನಿಂದ ತಿವಿದಳು (ಅಶೋಕ. ೨); ಮೋಹದ್ದೀನ ಸಾಹೇಬನು . . . ಕೈಯಲ್ಲಿ ದೊಣ್ಣೆಯನ್ನು ಹಿಡಿದುಕೊಂಡು ಹೊರಡುವ ಜೋರಿನಲ್ಲಿದ್ದನು (ರಂಗರೋ. ೨೦). ೨. ಒತ್ತಾಯ ; ಬಲಾತ್ಕಾರ : ಜೋರು ಜುಲುಮೆ ಮಾಡದ ಹೊರತು ಜನರು ಕಷ್ಟ ಸಹಿಸುವುದಿಲ್ಲ (ಜನನಾ. ೧೨). ೩. ಪ್ರಾಬಲ್ಯ ; ಜರಬು ; ದರ್ಪ : ಆದರೆ ಈ ಮೂರು ತಂಡಗಳಿಗಿಂತ ಇನ್ನೊಂದು ಜಾತಿಯದೇ ಜೋರು ಹೆಚ್ಚು (ಆಲಹೂ. ೦೦): ಈ ದಾದಿಯ ಜೋರು ಜಾಸ್ತಿಯಾಗಿದೆಯಲ್ಲಾ (ಮೊಗ್ಗು. ೮೧). ೪. ಹೆಚ್ಚು ; ಅಧಿಕ: ಬಿಸಿಲು ಬಹಳ ಜೋರಾಗಿದೆಯಲ್ಲವೇ (ಅಳಿನಿ. ೫೨) ; ಅವರ ಅಳಿಯನಿಗೆ ಜಡ್ಡು ಜೋರು (ಗಂಗಾಸಾ. ೨). ೫. ಬಲವಾದದು; ತೀವ್ರವಾದುದು:

ನಿನಗೆ ಜೋರಾದ ಪೆಟ್ಟು ಬಿದ್ದಂತೆ ಇದೆ (ಘೂರಾಚ. ೧೪): ಜೋರಾಗಿ ಬರೆಯಲಿಕ್ಕೆ ಒಂದು ವಿಷಯ ಆಯ್ತು ಅವನಿಗೆ (ಅಕ್ಮಮೇ. ೨೦). ಝೋರು: ೧. ಅದು ಬರುವ ಝೋರಿಗೆ ಗುಂಡಾದ ಕಲ್ಲುಗಳು ಕಟಕಟನೆ ಪುಟ ನೆಗೆಯುತ್ತಿದ್ದವು (ಡುಬ್ಕಹ. ೩೭): ಅದಕ್ಕೆ ಅಭ್ಯಾಸ ಒಳ್ಳೇ ಝೋರಿನಿಂದ ಮಾಡಬೇಕಾಗಿದೆ (ಶಿಕ್ರಮ. ೧೭). ೩. ನಿಂದೇನೋ ಝೋರ ಇದ್ಹಾಂಗ ಕಾಣತದ (ಚಂದುಟ. ೫೦).

**ಜೋರಾಗಿ** = ೧.ವೇಗವಾಗಿ; ತೀವ್ರವಾಗಿ: ಎದೆ ಜೋರಾಗಿ ಬಡಿದು ಕೊಳ್ಳುತ್ತಿತ್ತು (ಅಲಹೂ. ೩೮); ಹಳಿಯ ಮೇಲೋಡುತಿದೆ ರೈಲು ಜೋರಾಗಿ (ಚಂದ್ರವೀ. ೦೦೫-೦೮); ರಾಯರು ಜೋರಾಗಿ ತಲೆ ಅಲ್ಲಾಡಿಸಿದುದರಿಂದ . . . ತಿಳಿಯಿತು (ರಾಯಕ. ೪೭). ೨. ದರ್ಪದಿಂದೊಡಗೂಡಿ : ನೀನು ನಿಜವಾಗಿಯೂ ಈ ಕೊಡದಲ್ಲಿದ್ದ ಭೂತವಲ್ಲ . . . ಎಂದು ಕೊಂಚ ಜೋರಾಗಿ ಹೇಳಿದನು (ಷಂಚಾಮ್ಮ. ೧೧). **ಜೋರಾಗು** = ವೇಗವಾಗು ; ಬಲವಾಗು : ಮಳೆ ಜೋರಾಯಿತು (ರೂಧಿ). **ಜೋರುಮಾಡು** = ೧. ವೇಗಗೊಳಿಸು; ತೀವ್ರಗೊಳಿಸು: ಹೊತ್ತುಕೊಂಡು ಹತ್ತಬಲ್ಲ ತ್ರಾಣವಿದೆ ಬನ್ನಿ ಎಂದು ನನ್ನ ಕಾಲು ಜೋರುಮಾಡಿದೆ(ಚಂಗಾಕ್ಕ.೩೪೪). ೨.ಬಲಾತ್ಕಾರ ಮಾಡು: ನೀನು ಜೋರುಮಾಡಿ ಹಡಗಿನ ಮೇಲೆ ಹತ್ತುತ್ತಿ(ದೇವಿಡಾ.೧೪೫). ೩. ದರ್ಪತೋರು; ಜಬರುಮಾಡು: ಮೊದಲು ನನಗೆ ಕೊಟ್ಟಿದ್ದೀಯೇ ಎಂದು ನಾನು ಜೋರುಮಾಡಿದೆ (ಶಾಲಿಮ. ೪೧) ; ಅರಸರ ಬಳಿ ಹೆಚ್ಚು ಜೋರು ಮಾಡಬೇಕಾದರೆ ದೂರದೃಷ್ಟಿ ಇದ್ದು ಮಾಡಬೇಕು (ಬಕ್ಕರು. ೦).

[ ←ಪಾರ. ಹಿಂ. ಮರಾ. ಜೋರ್ ]

**ಜೋರುಗಟ್ಟು** 'ಸೋರುಗಟ್ಟು' ನೋ.

**ಜೋರುದಾರ** (ನಾ). ಶಕ್ತಿವಂತ ; ಬಲವುಳ್ಳವನು : ಇಬ್ಬರೂ ಕಸ್ತಿನಲ್ಲಿ ದ್ದಾರೆ, ಜೋರುದಾರರು (ಭೀಮಕಾ. ೪). [←ಪಾರ. ಹಿಂ. ಜೋರ್‌ದಾರ್]

**ಜೋರುದಾರಿ** (ನಾ). ದರ್ಪವುಳ್ಳ ಹೆಣ್ಣು; ಜರಬುಳ್ಳವಳು; ಜಬರ್ದಸ್ತಿ ನವಳು: ಅವನು ಶ್ರೀಮಂತ ಕುಟುಂಬದ ಜೋರುದಾರಿ ಹೆಣ್ಣೊಬ್ಬಳನ್ನು ಮದುವೆಯಾಗಿದ್ದನು (ಪುನರು. ೨೨೨). [ ಜೋರುದಾರ + – ಇ$_3$ ]

**ಜೋರುಮುಡಿ** (ನಾ). ದರ್ಪ ಠೀವಿಗಳನ್ನು ಎತ್ತಿ ತೋರಿಸುವಂತಹ ಒಂದು ಬಗೆಯ ಕೇಶ ಶೃಂಗಾರ: ಸೋರುಮುಡಿಗಳು, ಜೋರುಮುಡಿ, ಬಾದಾಮಿ ಬೊಂಬಾಯಿ ಮುಡಿಗಳು (ಗಣೇಶ. ೭೨-೦೦).

[ ಜೋರು$_3$ + ಮುಡಿ$_3$ ]

**ಜೋರುವರಾತ** (ನಾ). (ಸಾಲ ತೀರಿಸಬೇಕೆಂದು ಮಾಡುವ)ಒತ್ತಾಯದ ತಗಾದೆ : (*). [ ಜೋರು$_3$ + ವರಾತ ]

**ಜೋರೆ** (ನಾ). ಕೆಸರು ; ರಾಡಿ ; ಜವುಗು : ತಲೆ ಮುಂಡ ಕರುಳು ನೆತ್ತರು ಜೋರೆಯೇಳ್ವಂತಲಸದೆ ಕಾದಿ ಮಡಿದರು (ನೇಮಿಸಂ. ೩೦-೧೨) ; ದಾರಿಯಲ್ಲಿ ಒಂದು ಕಳ್ಳಬದಿಯ ಜೋರೆ ಸಿಕ್ಕಿತು (ಸುಮಚ. ೨೫೦). [?]

**ಜೋಲ್$_1$, ಜೋಲು$_1$** (ಕ್ರಿ). ಜೋತು, ಜೋಲ್ದು(ಭೂತನ್ಯೂ). ೧. ನೇತುಬೀಳು ; ಇಳಿಬೀಳು ; ಕೆಳಬಾಗು : "ಜೋಲ್ – ಆಲಂಬನೇ (ತೂಗಬಿಡು)" (ಶಮಧಾ) : ಜೋಲ್ದ ಪೂರ್ವನೆತ್ತಿ ಕಟ್ಟಿದ ಲಲಾಟಪಟ್ಟ ದೊಳ್ (ಪಂಪಭಾ. ೦೦-೫೨ ವ) : ಕಯ್ಯ ಕೊಡೆಯಿಂ ಮುಯ್ಯ ತೆರೆಯಿಂ ಜೋಲ್ವ ಪುರ್ವಿಂ (ನಂಬಿರ. ೭-೨೩) : ಅಸಿಯಳ್ ಕಾಣದೆ ನಿನ್ನನೆನ್ನ ಕೊರಲಂ ಜೋಲ್ದತ್ತಲುದ್ವೇಗದಿಂ (ಅನಂಪು. ೮-೪೦) : ಅಳಕಂ ಜೋಲ್ದಿರೆ ಹಾರಮೊರ್ಗುಡಿಸೆ (ದಶಕು. ೦೨-೨೭) ; ಫಲವಿತತಿ ಜೋತೊಡಗಿದುದು ಬನಬನಂಗಳೊಳ್ (ಜಿಬಪು. ೪೫-೦೦). ೨. ತೂಗಾಡು ; ತೊನೆದಾಡು ; ಅಲ್ಲಾಡು ; ಹೊಯ್ದಾಡು : ಮುಯ್ಯಿಂದಾವಗಂ ಸಂಭ್ರಮದೆ ರುಚಿರ ವಲ್ಮೀಕೋತ್ತರೀಯಾಂಚಲಂ ಜೋಲ್ವಿರೆ (ಕಾದಂಉ.೬೫೭): ಆಕಂಪದಿಂ ಜೋಲೆ ಕರ್ಣೋತ್ಪಳಮಾಲಿಪ್ಪಾಂಗರಾಗಂ ಮಸುಳೆ ಪುಳಕದಿಂ . . . ಎಸೆದಳ (ವರ್ಧಪು. ೭-೦೪) : ಮದಿರಾಪಾನಮಂ ಮಾಡಿ . . . ಕುಣಿಯುತುಂ ಮಣಿಯುತುಂ ಮಾಲುತುಂ ಜೋಲುತುಂ (ಉದ್ಭಟ. ೫-೪೦ ವ): ಪಚ್ಚಡದ ಸೆಱಗಂ ಪಿಡಿದು ಕೈಯಿಂದ ಸೆಳೆಸೆಳೆದು ಜೋಲುತ್ತ ತೆಗೆವಂ (ಬಸಪು. ೪೭-೪೭). ೩.ಸಡಿಲವಾಗು; ಅಳ್ಳಕವಾಗು: ಮಿಸುಗುವ ತೋರ ಮಲ್ಲಿಗೆಯ ಜೋಲ್ದ ಬಟಲ್ಮುಡಿ ತೊಟ್ಟ ಮೌಕ್ತಿಕಪ್ರಸರ ವಿಭೂಷಣಾಳಿ (ಸುಕುಮಾ. ೯-೧೦೪) : ೪. ಕುಸಿಬೀಳು ; ನಿಸ್ಸತ್ತ್ವವಾಗು : ಮಱಸೊಂದಿದಂದದೊಳೆ ಜೋಲ್ದ ನಿಜೇಶನನಾ ಲತಾಂಗಿ ತೊಟ್ಟಗೆ ಕೊಳೆ ನೋಡಿ (ಪಂಪಭಾ. ೨-೦೪) ; ಮೂರ್ಛಾವೇಗದಿಂದಿಕ್ಕುವಟ್ಟನವೊಲ್ ಝೊಂಪಿಸಿ ಜೋಲ್ದು ನೇಲ್ದು (ಕಾದಂಉ. ೪೪೪) : ತಲೆ ಪಱಿದು ಜೋಲ್ದು ತೊಪ್ಪನೆ ನೆಲದೊಳ್ ತನು ಬೀೞ (ಧರ್ಮಾಮೃ. ೦೩-೦೬೨) : ತೆತ್ತಿಸಿದಂಬಿನ ಗಱ ಮಿಱುಗುತ್ತಿರೆ ಬಾಯ್ಬಿಟ್ಟ ಪುಣ್ಗಳಿಂ ಜೋಲ್ವ ಭಟಂ (ವರ್ಧಪು. ೮-೫೫): ಒಱಲ್ದುಪಡೆ ಗೋಳಿಟ್ಟುದಾನೆ ಕುದುರೆಗಳೊರೆವ ಕಂಬನಿ ಬಳಲ್ಗಿವಿಗಳಿಂ ಜೋಲ್ದುವು (ಚಿಮಿಥಾ. ೦೩-೭೦). ೫. ಮನಸೋಲು ; ಪರವಶವಾಗು : ಮನ ದೊಳೊಱಲ್ದು ಜೋಲ್ದಳಿಪಿ ನೋಡಲೊಡಂ (ಪಂಪಭಾ. ೨-೪೦).

**ಜೋಲು$_1$** : ೧. ಕುಣಿವ ಕುಂತಾಗ್ರದಲಿ ಜೋಲುವ ಹಿಣಿಲುಗರುಳೊಪ್ಪಿ ದುವು (ಕುಮಾಭೀ. ೪-೪೪) ; ಕಟಿಯೊಳು ಜೋಲುವ ಪೀತಾಂಬರದ ಮೇಲುದಟ್ಟಿಯೊಳೊಪ್ಪುವ ಸುರಗಿಯ ಬಿಲ್ಲ ಕಾಲಪಾಯಕರೊಪ್ಪುತಿಹರು (ಕಂಸವಿ. ೦೮-೬೩): ತಾಳೆಗಳು ಬೆಳೆದು, ಖರ್ಜೂರದಲಿ ಹಣ್ಣು ಜೋಲುತಿಹ, ಬಿಸಿಲ ಸೀಮೆಯಲಿ ನೆಲಸಿಹುದೆ (ಕಎಪು. ೪೭-೩). ೨. ಲೋಹದಾ ಗುಂಡು ಗಳು ತಲೆಯನೆದೆ ಬೆನ್ನ ಜೋಲುತ್ತ ಪೊಡವುತಿರೆ (ವೀಶಿಪು. ೪-೦೪-೩೦).

**ಜೋತಾಡು** = ೧. ಜೋಲಾಡು ; ತೂಗಾಡು : ಗಿಳಿಗಿಂತ ಚೆನ್ನಾಗಿ ಮಾತಾಡಬಲ್ಲ, ದೊಡ್ಡದರ ಬಾಲಕ್ಕೆ ಜೋತಾಡಬಲ್ಲ (ನಲಮು. ೨೮-೨೧) : ನೀಳವಾದ ಹೆಳಲು ಆಕೆಯ ಹೆಗಲ ಮೇಲೆ ಜೋತಾಡುತ್ತಿದ್ದಿತು (ಪ್ರಣಸ. ೧). ೨. ತುಳುಕಾಡು : ಸ್ವಾತೀಯ ಮಳೆ ಹುಯ್ದು ಸೀತೆಯ ಕೆರೆ ತುಂಬಿ ಜೋತಾಡುತ್ಯತೆ ಕುಣಿಗಲು (ಹಳ್ಳಿಬಾ. ೩೨). **ಜೋತುಗೊಳ್ಳು** = ಅಂಟಿಕೊಳ್ಳು ; ಜೋತುಬೀಳು : ಅವನು ಆದರ್ಶಕ್ಕೆ ಜೋತುಗೊಂಡಿ ದ್ದಾನೆ (ರೂಧಿ). **ಜೋತುಬೀಳು** = ಅಂಟಿಕೊಳ್ಳು ; ಅವಲಂಬಿಸು ; ಆಧರಿಸು : ಜೀವಕ್ಕೆ ಜೋತುಬಿದ್ದ ಈ ಜಂತುಗಳಿಗೆ ಈಗ ಅನುಭವ ಬರುತ್ತಲಿದೆ (ಅಕ್ಮಮೇ. ೩೦) : ಭಾವಜೀವಿಯಾದ ನೆಕ್ಲುದೋವ್ . . . ಹೊಸ ಜೀವನವಿಧಾನಕ್ಕೆ ನಿಸ್ಸಂಕೋಚವಾಗಿ ಜೋತುಬಿದ್ದನು (ಪುನರು. ೬೧) ; ಆದರೆ ಜೀವ ಅಷ್ಟಕ್ಕೇ ಸೋಲಲೊಪ್ಪದೆ ಯಾವುದೋ ದೂರದ ಆಸೆಗೆ ಜೋತುಬಿದ್ದಿತ್ತು (ರೂಪಸ. ೬೮). **ಜೋತುಹಾಕು**=ನೇತುಹಾಕು; ತೂಗುಹಾಕು : ನಿನ್ನನ್ನು ಸೀಳಿ ನಾಲ್ಕು ಭಾಗಮಾಡಿ ನಾಲ್ಕು ಬಾಗಿಲು ಗಳಿಗೆ ಜೋತುಹಾಕುತ್ತೇನೆ (ಹಳ್ಳಿಹಾ. ೦೦೮). **ಜೋಲವಿಡು**=ಜೋತಾಡು ವಂತೆಮಾಡು ; ನೇತುಬಿಡು : ಕಯ್ಯೊಳ್ ಸೋರೆಯ ಕಾಯಂ ಕೊಟ್ಟು ಬಾವಿಯೊಳಗೆ ಜೋಲವಿಡೆ (ಪುಣ್ಯಾಸ್ರ. ೪-೨೫ ವ).

[ ದೇ.॥ ಮಲ. ಓಲ್ ; ಗೊಂಡಿ. ಹೋಲ್ ]

**ಜೋಲ್$_2$, ಜೋಲು$_2$** (ನಾ). ೧. ಜೋತುಬೀಳುವಿಕೆ ; ಇಳಿಬಿದ್ದಿರು ವಿಕೆ : ಚೆಲ್ವ ಪಣೆ ಕುರುಳ ಜೋಲಂಬೆಗಾಲು . . . ಸೊಗಯಿಸುವ ವರ ಶಿಶು (ಚಿಮಿಥಾ. ೨೮-೦೮). ೨. ಸಡಿಲ ; ಅಳ್ಳಕ : (*). ೩. ಹೊಯ್ದಾಟ; ತೂರಾಟ (?) : ಜಗುಟ್ದ ನಿಱ ಕರಂ ಜೋಂಪಿಪುಗಂ ವಿಲುಪ್ತಾಕ್ಷರ ವಾಕ್ಯಂ ರೋಮಹರ್ಷಂ ಬಿಡದೆಸೆವೆಳೆ ಜೋಲ್ ಹೂಂಕೃತಂ ತೋರ್ಪ ಚೆಲ್ಲಂ ಕರಮೊಪ್ಪಲ್ . . . ಎಸೆದುದಸದಳಂ ಮದ್ಯಪಾನಾಂಗನೌಘಂ (ಉದ್ಭಟ. ೫-೮೫). **ಜೋಲು$_2$** : ೪. ಜೋತುಬಿಟ್ಟುದು : ಬೆಂಡೆಯನಿಕ್ಕಿ ಪಾವಡೆಯ ಜೋಲಿನೊಳಗರದಿಕ್ಕಿ . . . ಗುಡಪಾಕವೆಂದು ಪೆಸರು ಕರೆ ವುದು (ಸೂಪಶಾ. ೨-೨೯). [ <ಜೋಲ್$_1$ ]

**ಜೋಲಕಾರುಣ್ಯ** (ನಾ). ಒಂದು ಬಗೆಯ ತೆರಿಗೆ : ಜೋಲಕಾರುಣ್ಯ ಜಡೆ ದೆರ್ಗ ವ ೩೪ ಬಟ್ಟೆಯ ಭಂ ೧ಕ್ಕಂ ಗ ೨ (ಎಕ. XVI, ಚಿಕ್ಕನಾ. ೭೦-೨೦ ; ?). [ ? ]

**ಜೋಲಾಡು** (ಕ್ರಿ). ನೇತಾಡಂ; ತೂಗಾಡು: ಆಡುವರು ಲತೆಯುಯ್ಯಲವ ಜೋಲಾ[ಪಾಠಾಂ. ಳಾ]ಡುವರು ಲತೆಗಳನು (ನಿಭಾಗ. ೧೦-೧೮-೯) : ಶಕ್ತಿ ಹೆಚ್ಚಿ ಅವೆಲ್ಲವೂ ಅರ್ಧನಿಮಿಷದ ತನಕ ಜೋಲಾಡಲು ಶಕ್ತವಾದವಂತೆ (ಜೀವಾಶ್ಚ. ೧೭೮). [ ಜೋಲ್$_1$ + ಆಡು$_1$ ]

**ಜೋಲಿ$_1$, ಜೋಲೆ$_1$** (ನಾ). ೧. ಕೆಲಸ ; ಕಾರ್ಯ : ತೀರಿತಲ್ಲಾ ಜೋಲಿಯಂದಿನ ಮಜುದಿನ ವೀರಕಟಕದ ಲಗ್ಗೆಯೊಳು (ಭರತ. ೪೪-೩೪) : ಆನುವೊಂದಿನಿಸು ಜೋಲಿಯಂ ತೀರಿಸಿ ಬೇಗದಿಂ ಬಂದಪೆಂ (ಮಿತ್ರಗೋ. ೫೯) : ಜೋಲಿಗಳು ಸಣ್ಣವಿರಲಿ ದೊಡ್ಡವಿರಲಿ ಅವುಗಳಿಗೆ ಕಾಲವು ಸಮಾನವೆ ಹೆತ್ತುತ್ತದೆ (ಮುಂಬಯಿ. ೫-೨೦೨). ೨. ಗೋಜು; ಗೊಡವೆ; ಸಂಬಂಧ: ನಿನಗೆಯನ್ನೇಕಿಳೆಯ ಜಾರರ ಜೋಲಿ [ಪಾಠಾಂ. ಕೆ] ಬಿಡು ಜಾನಕಿಯ (ತೊರರಾ. ೬-೨-೨೫) : ಸೌಜನ್ಯದೊಳು ಮುಂದೆ ಕಾರ್ಯವ ಕೊಂಚೆ ನಾನೀ ಜೋಲಿ ಬೇಡೆಂದಳೆಂದು (ಭರತ. ೪೨-೫೫) : ಈ ಜೋಲಿ ನಮಗೇಕೆಂದು ಸುಮ್ಮನಿರಬೇಕೆ ? (ಸಾಹಿಜೀ. ೪೨). **ಜೋಲೆ$_1$** : ೨. ಲೋಲುಪ ಭವದ ಲೀಲೆ ಹಗಲು ಇರಳು ಜೋಲೆಯೊಳಗೆ ಬಿದ್ದು ವ್ಯಾಳ್ಯ ತಿ ೪ ಯ ದ ಲೆ (ಮೋಕ್ಷದೀ. ೪೮-೨). [ ದೇ.೫ ತಮಿ. ಮಲ. ಚೋಲಿ ; ತೆಲು. ಜೋಲಿ ]

**ಜೋಲಿ$_2$** 'ಜೂಲು$_2$' ನೋ.

**ಜೋಲಿ$_3$, ರೆಝೋಲಿ** (ನಾ). ೧. ತೂಗಾಟ ; ತೊ ನೆ ದಾ ಟ ; ಹೊಯ್ದಾಟ : ಮನದ ಆರಡಿ ಅವರ ಮಧುರಸ ಕುಡಿದು ಹೊಡೆಯಲಿ ಜೋಲಿಯ (ಮಾನಸ. ೩೫-೨೦) : ತೂಗುತಿದೆ ನಿಜ ಬೈಲಲಿ ಜೋಕಾಲಿ – ಜೋಲಿ – ಲಾಲಿ (ಶರೀಫ. ೩೧ ಪಲ್ಲವಿ). ೨. ತಡ ; ಸಾವಕಾಶ : ಓಲಗವಾಗದ ಮುನ್ನ ಬಂದ್ಯ ನಸು ಜೋಲಿಯಾಯ್ತುದಱಿಂದ ನಿನ್ನ ಆಲಸ್ಯ ಗಂಡರೆಂದೆನ್ನದಿರು (ಭರತ. ೪೭-೫೬) : ಕೈವಲ್ಯಚೋಳನಹಿತರ ಮೇಲೆ ಪೋಗಿ ಮೂಱಬ್ದಮಂ ಜೋಲಿಯಾಗಲ್ ತನ್ನ ರಾಜ್ಯಕ ಬರನ್ಯೆದೆ ಸಿರಿವಂತ ಸೆಟ್ಟಿ (ಚಬಶು. ೫೫-೨೭); ವಿವಾಹಮನಂದು ತಾಂ ಜೋಲಿಯಾಗದೆ ಮಾಡಿ (ಜಾಲಾಸ್ಯ. ೨-೫-೪೧). ೩. ಸಮತೂಕ ; ಆಯ ; ಏಕೋ ಎಂತೋ ಅವರಿಗೆ ಸ್ವಲ್ಪ ಜೋಲಿ ಹೋಯಿತು (ಶರಚ. ೮೦೮). 'ಜೋಲಿತಪ್ಪು' ಪರಾ. ೪. ಥಟ್ಟನೆ ಚಲಿಸುವುದಂ. 'ಜೋಲಿಕೊಡು' ಪರಾ. **ರೆಝೋಲಿ.** 'ರೆಝೋಲಿತಪ್ಪು' ಪರಾ.

**ಜೋಲಿಮಾಡು** = ತಡಮಾಡಂ ; ಸಾವಕಾಶವಾಗು : ಜೋಲಿ ಮಾಡದೆ ಜೋಕೆವಿಡಿದುಱಿ ಪ್ರಾತಃಕಾಲದ ರಾಗವನಱಿದು ಆಳಾಪಿಸಿದರು (ಭರತ. ೦-೭೨) : ಕಾಲವ ಚುತಿಸಲು ಸಲ್ಲಾ ಜೋಲಿಮಾಡಲು ಕಾರ್ಯ ಕೆಡುವುದು (ಜಿನರಾ. ೩-೧೦). [ ←ಮರಾ. ರೆಝೋಲ, ರೆಝೋಲಾ ]

**ಜೋಲಿ$_4$, ಜೋಲೆ$_2$**(ನಾ). ಮೊಂಡುತನ; ಹಟ; ಚಂಡಿತನ. **ಜೋಲೆ$_2$**: ಕಾಂತೆಯು ಪುರುಷರೇಕಾಂತದೊಳಗಿರ್ದು ಇಂತು ಜೋಲೆ ಮಾಡಲೇನು ಕಾರಣವು (ಸಾರಂಗ. ೧೦).

**ಜೋಲಿ ಮಾಡು** = ಮೊಂಡುತನ ಮಾಡು ; ಹಟಹಿಡಿ : ಬೇಡವೆಂದರೆ ಕೇಳರಕಟ ನೀವೇ ಜೋಲಿಮಾಡಿದಿರಿ (ಭರತ. ೪-೪೮). [ ? ]

**ಜೋಲಿಕೊಡು** (ಕ್ರಿ). ಚಲಿಸುವಂತೆ ಮಾಡು ; ಜೀಕ ಕೊಡು : ನಿರ್ಮಲೆ ಏರಿ ಕೂತ ಜೋಕಾಲಿಗೆ ಜೋಲಿಕೊಟ್ಟಳು (ದುರುದಾ. ೨೩೯).

[ ಜೋಲಿ$_3$ + ಕೊಡು$_1$ ]

**ಜೋಲಿಗಾರ** (ನಾ). ತಿರುಗಾಡುವವನು ; ಅಲೆಮಾರಿ : ಜೋಲಿಗಾರನ ಬೇಲಿ ಮುರಿದರೆ ಹೊಲವೆಲ್ಲಾ ಪಾಲಿ (ಗಾದೆ).

[ ಜೋಲಿ$_3$ + – ಗಾರ ( < – ಕಾಱ) ]

**ಜೋಲಿಡು** (ಕ್ರಿ). ತೂಗಾಡು ; ಓಲಾಡಂ : ರೆಝೂಮ್ಮಿಡುತ ಜೋಲಿಡುತ [ಪಾಠಾಂ. ಜೋಲುತ್ತ]ಒಂದನೊಂದಂ ನೆಮ್ಮಿ ಸುಮ್ಮಾನವೇಱ ಮೆಯ್ಮಿಮಿರಿಯ ಸುಖಂ ಹೊಮ್ಮಿ (ಅನಾರ. ದೀ. ೧೮೨-೨೩).

[ ಜೋಲ್$_1$ + ಇಡು$_1$ ]

**ಜೋಲಿತಪ್ಪು, ರೆಝೋಲಿತಪ್ಪು** (ಕ್ರಿ). ಆಯ ತಪ್ಪು ; ತೂಕ ತಪ್ಪು : ಮಂಗವು ಜೋಲಿತಪ್ಪಿ ನೆಲದ ಮೇಲೆ ಅಂಗಾತವಾಗಿ ಬಿದ್ದುಕೊಂಡಿತು (ಹೇಮಂತ. ೩೦೦); ಜೋಲಿತಪ್ಪಿ ಬೀಳುತ್ತಿದ್ದೆಯಲ್ಲಾ (ಮೂರುದಾ. ೨೪೪). **ರೆಝೋಲಿತಪ್ಪು**: ಒಳಗೆ ನಿಂತವರೆಲ್ಲ ರೆಝೋಲಿತಪ್ಪಿ ಒಬ್ಬರ ಮೇಲೊಬ್ಬರು ಬಿದ್ದುಬಿಟ್ಟರು (ಹೂಸಕ್ಕಿ. ೦೮೧). [ ಜೋಲಿ$_3$ + ತಪ್ಪು$_1$ ]

**ಜೋಲಿತಿನ್ನು** (ಕ್ರಿ). = ಜೋಲಿತಪ್ಪು : ಜೋಲಿತಿನ್ನುತ್ತ ಯಾವಿವಾನ ಒರಯಿಂದ ಖಡ್ಗ ಹಿರಿದ (ನೂರಜ. ೭೦). [ ಜೋಲಿ$_3$ + ತಿನ್ನು ( < ತಿನ್) ]

**ಜೋಲಿಸು** (ಕ್ರಿ). ಜೋತಾಡಿಸು ; ನೇತುಬಿಡು : ಕಣ್ಗಳನರೆಮುಚ್ಚಿ ತೋದ ಗಱಿಯಂ ನಸು ಜೋಲಿಸಿ ಪಕ್ಕಿಗಳ್ . . . ದನಿಗೆಯ್ಯುತು ಮಿರ್ದುವು (ಜಗವಿ. ೧೪-೧೦) ; ತನುವನೊಲೆದವು ದಡದಡಸಿ ಕಿವಿಗೊನೆಯ ಜೋಲಿಸಲಲ್ಲಿ ಮಡಿಗಾಲಿನಲಿ ಕುಸಿದವು (ಕುವ್ಯಾವಿ. ೮-೮೩); ರೆಕ್ಕೆಗಳನುಱಿ ಜೋಲಿಸುತ್ತ ಜೋಂಪಿಪುದೊವ್ಮ (ಚಬಶು. ೪೬-೬). [ಜೋಲ್$_1$+ –ಇಸು$_3$]

**ಜೋಲಿಹಿಡಿ** (ಕ್ರಿ).=ಸಮತೂಕವನ್ನು ಕಾಯ್ದುಕೊಳ್ಳು ; ತೂಕಹಿಡಿ : ತಮಗೆ ಜೋಲಿಹಿಡಿಯಲು ಆಧಾರವೇನಾದರೂ ಬೇ ಕಾ ಗು ವ ದು (ಹೇಮಂತ. ೩೫೨) : ಕಾಮಿನಿ ರೇಲ್ವೆ ಹಳಿಯ ಮೇಲೆ ಜೋಲಿಹಿಡಿಯುತ್ತ ನಡೆಯತೊಡಗಿದಳು(ಮುಕ್ತಿ. ೧೨೫). [ ಜೋಲಿ$_3$ + ಹಿಡಿ$_1$ ( < ಪಿಡಿ$_1$) ]

**ಜೋಲಿಹೊಡೆ, ರೆಝೋಲಿಹೊಡೆ** (ಕ್ರಿ). ೧. = ಜೋಲಿತಪ್ಪು : ಎಂಥ ಭಾರಕು ಜೋಲಿಹೊಡೆಯದಿಹ ತೂಗುತೊಲೆ (ನಂಮು. ೫೦-೭). ೨. ತೂಗಾಡು ; ಹೊಯ್ದಾಡಂ ; ಒಲೆದಾಡು : ಶ್ರೀನಗರ ಸರಸಿಯಲಿ ನೌಕೆ ನೂರು ತೇಂಕಾಡಿ ಜೋಲಿಹೊಡೆಯೆ (ಕರುಣಾ. ೩೬-೧); ಆ ಬೀದಿಯ ಮೇಲೆ ಒಬ್ಬ ಯುವಕ ಜೋಲಿ ಹೊಡೆಯುತ್ತ ಹೊರಟಿದ್ದಾನೆ (ಹಾದುಹು. ೬೫) : ಶಕ್ತಿ ಇಲ್ಲದ ಅವನ ಕಾಲುಗಳು ನಿಲ್ಲಲು ಬಾರದೆ ಜೋಲಿಹೊಡೆಯುತ್ತ . . . ಬೀಳುವಂತಾಯಿತು (ಬಂಗಾಹ. ೮). **ರೆಝೋಲಿಹೊಡೆ**: ೨. ಸುರೇಶ . . . ಅತ್ತ ಇತ್ತ ರೆಝೋಲಿಹೊಡೆಯುತ್ತ ಹೊರಗೆ ಬಂದ (ಜೀವರಂ. ೧೯). [ ಜೋಲಿ$_3$ + ಹೊಡೆ$_1$ ( < ಪೊಡೆ$_1$) ]

**ಜೋಲಿಹೋಗು** (ಕ್ರಿ). = ಜೋಲಿತಪ್ಪು : ಪಾಪ ಮುದುಕರು ಜೋಲಿ ಹೋಗಿ ಬಿದ್ದಾರು (ಮೋಹಿನೀ. ೦೦೪) ; ಜೋಲಿಹೋಗಿ ಪಕ್ಕದಲ್ಲಿರುವ ಚಿಕ್ಕ ಸ್ಟೂಲಿನ ಮೇಲೆ ಬಿದ್ದೆ (ಮುಂಗಾಮು. ೧೦೩) ; ಆದರೆ ಎಚ್ಚರದಪ್ಪಿ ಜೋಲಿ ಹೋಗುವಾಗ ತಿಮ್ಮಯ್ಯನವರು ಕೂಡಲೇ ಸಾವರಿಸಿ ಹಿಡಿದರು (ಕಾಗಿಕ. ೨೮). [ ಜೋಲಿ$_3$ + ಹೋಗು$_1$ ( < ಪೋಗು$_1$) ]

**ಜೋಲು$_1$** 'ಜೋಲ್$_1$' ನೋ.

**ಜೋಲು$_2$** 'ಜೋಲ್$_2$' ನೋ.

**ಜೋಲುಗಡ್ಡ** (ನಾ). ಇಳಿಬಿದ್ದ ಗಡ್ಡ; ಉದ್ದವಾದ ಗಡ್ಡ ; ಹಾಗಾದರೆ ಈತನು ಈ ಚಿತ್ರಪಟದಲ್ಲಿ ಜೋಲುಗಡ್ಡದ ಋಷಿಗಳ ಗುಂಪನ್ನು ಬರೆದು ಮುಗಿಸಬೇಕು (ಶಾಕುಂತ. ೯೦-೩). [ಜೋಲು$_1$ ( < ಜೋಲ್$_1$)+ಗಡ್ಡ$_1$]

**ಜೋಲುಗರುಳು** (ನಾ). ನೇತಾಡುವ ಕರುಳು : ಆಳ್ಕೆಗಳ ಘಾಯದ ಜೋಲುಗರುಳಿನಲೊಱಗುವುವು ಕೆಲವು (ತೊರರಾ. ೩-೩-೧೬).

[ಜೋಲು$_1$ ( < ಜೋಲ್$_1$) + ಕರುಳು ( < ಕರುಳ್) ]

**ಜೋಲುಗಾಲು** (ನಾ). ಸ್ಥಿರವಾಗಿ ನಿಲ್ಲದ ಕಾಲು; ನಿಶ್ಶಕ್ತವಾದ ಕಾಲು: ಹೈಮಾವತಿ ಎದ್ದು ಜೋಲುಗಾಲುಗಳನ್ನು ಎಳೆದೆಳೆದು ಮುಂದಿಡುತ್ತ ನಡೆದು, ಕಿಡಕಿಯ ಮಾರ್ಗವಾಗಿ ಮನೆಯನ್ನು ಸೇರಿದಳು (ಎರಸಿ. ೮೬).

[ ಜೋಲು$_1$ ( < ಜೋಲ್$_1$) + ಕಾಲು$_1$ ( < ಕಾಲ್$_1$) ]

**ಜೋಲುಗಿವಿ** (ನಾ). ೧. ಜೋತುಬಿದ್ದ ಕಿವಿ: ಜೋಲುಗಿವಿಯ ಆ ನಾಯಿ ಬಹಳ ಚುರುಕಾಗಿದೆ (ರೂಢಿ). ೨. (ಆಲಂ) ಚಾಡಿಯನ್ನು ಕೇಳುವವನು: ಅವನೊಬ್ಬ ಜೋಲುಗಿವಿಯವನು (ರೂಢಿ). 'ಇಳಿಗಿವಿ' ಪರಾ.

[ ಜೋಲು$_1$ (<ಜೋಲ್$_1$) + ಕಿವಿ$_3$ ]

**ಜೋಲುಗೊಂಬೆ** (ನಾ). ಕೆಳಕ್ಕೆ ಬಾಗಿರುವ ಕೊಂಬೆ,-ರೆಂಬೆ : ಮೇಲು ವನು ಮಧ್ಯಕ್ಕೆ ಸುತ್ತಿ ಕಾಸಿಯ ಬಿಗಿದು ಜೋಲುಗೊಂಬೆಯನೆರಡು ಕರ ಗಳಲ್ಲಿ ಪಿಡಿದು (ನವಮೋ. ೨೪-೩೪).

[ ಜೋಲು$_1$ (<ಜೋಲ್$_1$) + ಕೊಂಬೆ$_1$ ]

**ಜೋಲುಜಡೆ** (ನಾ). ಜೋತಾಡುವ ಜಟೆ ; ಇಳಿಬಿದ್ದಿರುವ ಜಡೆ : ಆಲದ ಬಿಳಲಂತೆ ಜೋಲುಜಡೆಗಳ ಬಿಟ್ಟು (ಸರ್ವಜ್ಞ. ೩೮೨).

[ ಜೋಲು$_1$ (<ಜೋಲ್$_1$) + ಜಡೆ$_1$ ]

**ಜೋಲುತೋಲು, ಜೋಲುದೊಗಲು** (ನಾ). ಸಡಿಲವಾಗಿ ಇಳಿಬೀಳುವ ಚರ್ಮ : ಗೋಳುಮೋರೆಯ, ಜೋಲುತೋಲಿನ, ಜೂಲುಅರಿವೆಯ ತಿರುಕ (ಕಗದ್ಯ. ೭೪). **ಜೋಲುದೊಗಲು** : (ಕ).

[ ಜೋಲು$_1$ (<ಜೋಲ್$_1$) + ತೋಲು$_1$ (<ತೋಲ್$_1$) ]

**ಜೋಲುದುರುಬು** 'ಜೋಲ್ದುಱುಬು' ನೋ.

**ಜೋಲುದೊಗಲು** 'ಜೋಲುತೋಲು' ನೋ.

**ಜೋಲುಬಾವಲಿ** (ನಾ). ಕಿವಿಯಲ್ಲಿ ಧರಿಸುವ ಜೋತಾಡುವ ಒಂದು ಬಗೆಯ ಆಭರಣ,-ಬಾವುಲಿ : (ಕ).

[ ಜೋಲು$_1$ (<ಜೋಲ್$_1$) + ಬಾವಲಿ$_2$ (<ಬಾವುಲಿ$_2$) ]

**ಜೋಲುಬಿಡು** (ಕ್ರಿ). ಇಳಿಬಿಡು; ನೇತುಬಿಡು : ಅಳಿಯ ಮುತ್ತಿಗೆಗಳನು ಬೀಸದೆ ನೆಲಕೆ ಕಿವಿಯನು ಜೋಲುಬಿಡುವುದು ಬಲುಕಣೆಯು ಹಿಡಿಹಿಂಗೆ ಲಾಗಿಸುತಿರ್ದುದಾ ದಂತಿ (ಕುಮಾರವ್ಯಾ. ೩-೩೭).

[ ಜೋಲು$_1$ (<ಜೋಲ್$_1$) + ಬಿಡು$_1$ ]

**ಜೋಲುಬೀಳು** 'ಜೋಲ್ಬೀಳು' ನೋ.

**ಜೋಲುಮನಸ್ಸು** (ನಾ). ಉತ್ಸಾಹವಿಲ್ಲದ ಮನಸ್ಸು ; ಸ್ಥಿರವಾಗಿರದ ಮನಸ್ಸು : ಈ ಜೋಲುಮನಸ್ಸನ್ನು ತ್ಯಜಿಸು : ಇದು ನಿನಗೆ ತಕ್ಕದ್ದಲ್ಲ (ಷಡಧಾ. ೨೪೨). [ ಜೋಲು$_1$ (<ಜೋಲ್$_1$) + ಮನಸ್ಸು ]

**ಜೋಲುಮುಖ** (ನಾ). ಇಳಿಬಿದ್ದ ಮುಖ ; ಬಾಡಿದ ಮುಖ ; ಮ್ಲಾನವಾದ ಮುಖ : ಸೆಟ್ರು ಜೋಲುಮುಖ ತೋರಿ, 'ಹೌದು' ಎಂಬ ಭಾವಕ್ಕೆ ಸರಿಯಾಗಿ ಕೈ ಹೊಸಕಿಕೊಂಡರು (ಒಡ್ಡಿಅ. ೧೦).

**ಜೋಲುಮುಖ ಹಾಕು**=ಮುಖ ಇಳಿಬಿಡು; ನಿರುತ್ಸಾಹ ಹೊಂದು : ಮನೆಯ ಮೂಲೆಯಲ್ಲಿ ಜೋಲುಮುಖ ಹಾಕಿಕೊಂಡು ಕುಳಿತಿರುವ ಸ್ಥಿತಿಗಿಂತ . . . ಓಡಾಡಿಕೊಂಡು ಬಂದ ನಂತರ ನಮ್ಮ ಸ್ಥಿತಿಯೇ ಬೇರೆ (ಜೀಪಾತ್ಯ. ೮): ರಾಜಮಂಡಲವು ಜೋಲುಮುಖ ಹಾಕಿಕೊಂಡಿತು (ಷಡಧಾ. ೩೨) : ಆದ್ದರಿಂದ ಅದು ಜೋಲುಮುಖ ಹಾಕಿಕೊಂಡು ಬೀದಿಬೀದಿಗಳಲ್ಲೂ ಅಲೆಯುತ್ತಿತ್ತು (ಕಿಂಕಥ. ೧೩೦).

[ ಜೋಲು$_1$ (<ಜೋಲ್$_1$) + ಮುಖ ]

**ಜೋಲುಮೋರೆ** (ನಾ). = ಜೋಲುಮುಖ : ಈ ನಿಸ್ಸ ಮಾಧವನು ಜೋಲುಮೋರೆಯಿಂದ ಕುಳಿತಿದ್ದಾನೆ (ಉದವ್ಯ. ೭೭).

**ಜೋಲುಮೋರೆ ಹಾಕು**=ಮುಖಇಳಿಬಿಡು; ನಿರುತ್ಸಾಹ ಹೊಂದು: ಆದರೆ ಜೋಲುಮೋರೆ ಹಾಕಿಕೊಂಡು ಅವರೆಲ್ಲ ಹಿಮ್ಮೆಟ್ಟಬೇಕಾಯಿತು (ತಶ್ರೃಪ್ರ. ೫೭೪) : ಇನ್ನಿಷ್ಟು ಜೋಲುಮೋರೆ ಹಾಕಲು ಕೊತವಾಲನು ಪ್ರಯತ್ನ ಮಾಡಿದ (ಕೊತಕಾ. ೩): ಮಾಧವ ಜೋಲುಮೋರೆ ಹಾಕಿಕೊಂಡೇ ಒಳಗೆ ಬಂದ (ವಾತ್ಸಲ್ಯ. ೬೭).

[ ಜೋಲು$_1$ (<ಜೋಲ್$_1$) + ಮೋರೆ (<ಮೋಱೆ) ]

**ಜೋಲೆ$_1$** 'ಜೋಲಿ$_1$' ನೋ.

**ಜೋಲೆ$_2$** 'ಜೋಲಿ$_4$' ನೋ.

**ಜೋಲೆಗ** (ನಾ). ಜೋತುಬೀಳುವವನು ; ಮೋಡನಾದ ವಿಟ (?) : ಬೆನ್ನನೆ ಬರ್ಪ ಜೋಲೆಗರ ಬರವಂ ನಿರುಕಿಸುತುಂ ನಿಲ್ವ ಪೋಪ ದೇವಾಂಗನೆಯರುಂ ಕಣ್ಗೆವರ್ಪರ್ (ರಾಮಾಶ್ವ. ೭೩-೧೯).

[ಜೋಲೆ$_2$ (<ಜೋಲಿ$_4$) + – ಗ$_2$]

**ಜೋಲ್ಗೆಚ್ಚಲ್** (ನಾ). ನೇತಾಡುವ ಕಚ್ಚಲು ; ದೊಡ್ಡ ಕೆಚ್ಚಲು : ಪಾಲ್ಗೋಡಿನ ಜೋಲ್ಗೆಚ್ಚಲ ತೋರಮೊಲೆಯ ಎಳಗಂದಿ (ರಾಮಾಶ್ವ. ೧೦೦-೩೦). [ ಜೋಲ್$_1$ + ಕೆಚ್ಚಲ್ ]

**ಜೋಲ್ಗೈಯ** (ನಾ). ನೃತ್ಯ ಭಂಗಿಯಲ್ಲಿ ಕೈಯನ್ನು ಜೋತು ಬಿಟ್ಟಿರುವವನು ; ನಟರಾಜ : ಶಿವ : ಮಿಸುಪ ಸುಲಿಪಲ್ಗಳಿಂ ಜಸವೆತ್ತ ಜೋಲ್ಗೈಯ್ಯ ನೀವೆಮ್ಮ ಪಾಲ್ಗಿಕ್ಕಟಿಂ ಬಹುದು (ವೀಶೈವು. ೩-೧-೧).

[ ಜೋಲ್$_1$ + ಕೈ$_2$ (<ಕಯ್$_2$) + – ಅ$_7$ ]

**ಜೋಲ್ದುಟ** (ನಾ). ಇಳಿಬಿದ್ದ ತುಟಿ ; ಜೋತಾಡುವ ತುಟಿ : ನೊರೆವಾಯ್ಜೋಲ್ದುಟ ಪೆಮಾರ್ಗರಲ್ದ ಕೆಮ್ಮಿಸೆ ಕದರ್ದ ಪಱಗಡ್ಡಂ (ವ್ಯಷವಿ. ೧೧-೬೦). [ ಜೋಲ್$_1$ + ತುಟಿ$_2$ ]

**ಜೋಲ್ದುಱುಬು, ಜೋಲುದುರುಬು** (ನಾ). ೧. ಸಡಿಲವಾದ ಕೂದಲ ಗಂಟು; ಅಳ್ಳಕವಾದ ತುರುಬು: ಜೋಲ್ದುಱುಬನೊಂದಿಸುವ ನೆವದಿಂದೆ ಕೈನೆಗಪಿ (ಜೈಮಿಭಾ. ೫-೬೦). **ಜೋಲುದುರುಬು**: ೨. ಒಂದು ಬಗೆಯ ಕೇಶಾಲಂಕಾರ : ಗ್ರೀಕ್ ಹೆಂಗಸರ ಒಂದು ತೆರದ ಜೋಲುದುರುಬು (Greek-Knot. ಇಂಕನ್ನ.). [ಜೋಲ್$_1$ + ತುಱುಬು$_2$ (<ತುಱುಂಬು$_2$)]

**ಜೋಲ್ನವಿರ್** (ನಾ). ಇಳಿಬಿದ್ದಿರುವ ಕೂದಲು : ಜೋಲ್ನವಿರ ಕಪ್ಪು ಬೆಳ್ಪುಗಳ ಪೊಂದೊಗರ ನೇವರಿಸಿ (ಹಲಿಆರ. ೯೪-೦೮೭).

[ ಜೋಲ್$_1$ + ನವಿರ್ ]

**ಜೋಲ್ಬೀಳು, ಜೋಲುಬೀಳು** (ಕ್ರಿ). ಇಳಿಬೀಳು ; ಕೆಳಗೆಬೀಳು : (ಕ). **ಜೋಲುಬೀಳು** : ನಿದ್ದೆಯ ಹೊತ್ತಾಯಿತೆಂದರೆ . . . ಎವೆಗಳ ಕಾರ್ಯವು ಮಂದವಾಗುತ್ತದೆ; ಗದ್ದವು ಜೋಲುಬೀಳುತ್ತದೆ (ಮುಂಬಯಿ. ೬-೧೩೦) : ಗದ್ದ ಜೋಲುಬಿದ್ದಿರಲಿಲ್ಲ (ಮುಹಾಕಾ. ೦೯).

[ ಜೋಲ್$_1$ + ಬೀಳು$_1$ (<ಬೀೞ್$_1$) ]

**ಜೋಲ್ಮುಡಿ** (ನಾ). ೧. = ಜೋಲ್ದುಱುಬು: ಬಳಲುಮುಡಿ ಬಲ್ಮುಡಿಯು ಸೋಲ್ಮುಡಿಯು ಜೋಲ್ಮುಡಿಯು (ನವಮೋ. ೨೫-೦೮) ; ಎನ್ನೀ ಜೋಲ್ಮುಡಿಯ ಪೂಸರದಾಣೆ (ರಾಮಾಶ್ವ. ೮೯-೩೦). ೨. ಕಟ್ಟದೇ ಇರುವ ಕೂದಲು; ಮುಕ್ತಕೇಶ; ಬಿಡುಮುಡಿ; ಕಪ್ಪಗೆ ಅಲೆಅಲೆಯಾಗಿದ್ದ ಅವಳ ಜೋಲ್ಮುಡಿಯನ್ನು ಹಿಡಿದುಕೊಂಡನು (ವಡಧಾ. ೯೮).

[ ಜೋಲ್$_1$ + ಮುಡಿ$_3$ ]

**ಜೋವ** (ನಾ). ಅಸಹಾಯಕತೆ (?): ಬೆಂಬಲಮಿಲ್ಲದ ಕನ್ನಗಳ್ವನಂತೆ ಜೋವಂಬೊತ್ತಿರ್ಪಿನಂ ವರಪರಿವಾರ ಸ್ತ್ರಿಮಿತಂ ಸ್ತ್ರಿಮಿತಸಾಗರ ತನೂಜನಿಸೆ (ಶಾಂತಿಪು. ೪-೩೦ ವ) : ಭಾವಿಸುತುಂ ತನಗೆ ಮಹಾದೇವಂ ಕಾನಿಷ್ಪದೆಯ್ದು ಮೆಂಬರ್ ಮತ್ತಂ ಜೋವ[ಪಾಠಾಂ. ಬೋವ]ದೆ ದೇವತೆಗಳುಮಂ ಸೇವಿಪನೆಂದಂದು ನಗಿಸಿಕೊಳ್ವನೆ ತನ್ನಂ (ಸಮುಪ. ೯-೯೭).

[ <ಜೋಮು ? ]

**ಜೋವಿಸ** 'ಜೋಯಿಸ' ನೋ.

**ಜೋವು** 'ಜಂಮ್ಮು$_3$' ನೋ.

**ಜೋವೆಳಗ** (ನಾ). (?) : ಇಂತು ವಿನಯಮಂ ಮಾಡಿ ತಣ್ಗದಿರನಂ ಜೊನ್ನವೆಳಗಿಂ ಬನ್ನವಟ್ಟು ಜೋವೆಳಗನಂ ಕುರಿತು (ಕಮುಮಾ. ೨-೭೭ ವ).

[ ? ]

**ಜೋವೇಱು** (ಕ್ರಿ). ಮರಗಟ್ಟಿದಂತಾಗು; ಜೊಮ್ಮುಹಿಡಿ: ಮದನಶಿಖಿ ಪರ್ವಿದುದೆಂದಿರದೆ ಬಿದಿರ್ದಳ್ಕದಪಿನ ಭರದಿಂ ಜೋವೇಱಿದೊಂದು ಕರಕಿಸಲಯಮಂ (ಶಾ ದಂ ಉ. ೩೩೨): ಪಯಃಕುಂಭಂಗಳಂ ಪೊತ್ತು ಜೊಮ್ಮನೆ ಜೋವೇಱಿದ ತೋಳ್ಗಳಂ ನಿಮಿರ್ವ ಪೋಲಿಂದ್ರಂ ಸುರಾದ್ರೀಂದ್ರದೊಳ್ (ಲೀಲಾವ. ೪-೧೦೦): ಲಜ್ಜೆಯ ಬಿಡೆಯದಲಿ ಜೋವೇ[ಪಾಠಾಂ. ರೆಘಾಮ್ಮೇ]ಱಿದಂತವೆ ಮಿಡುಕದಿರೆ (ಕುವ್ಯಾ.ಆ. ೮-೫೦).
[ ಜೋವು (<ಜುಮ್ಮು$_3$) + ಏಱು$_1$ (<ಏಱ್$_1$) ]

**ಜೋಶಿ, ಜೋಸಿ** (ನಾ). =ಜೋಯಿಸ: ಜೋಶಿಯರ ಕೇಳ್ಕಾರ ಜೋತಿಷ್ಯ (ಸಿದ್ಧಪು. ೪-೬೮); ಲಗ್ನ ಮುಹೂರ್ತಗಳಿಗಾಗಿ ಜೋಶಿ ಜಾತಿಯವರನ್ನು ಕರೆಯುವವರು (ಕಥಾಗ. ೦೩೬). ಜೋಸಿ : ಶ್ರೀಮದಾಪುರ ಜೋಸಿ ನೇಮೆಯ್ಯಂಣನ ರಾಗಲ ಹೊಲ (ಎಕ. IX (8), ದಾನಹ. ೧೪೨-೪ : 17ನೆಯ ಶತ). [ <ಸಂ. ಜ್ಯೋತಿಷಿನ್ ]

**ಜೋಷ** (ನಾ). ತೃಪ್ತಿ ; ಸಂತೋಷ ; ಮೆಚ್ಚಿಗೆ. [ ಸಂ. ]

**ಜೋಷವಾಕ್ಯ** (ನಾ). ಸಂತೋಷದ ಮಾತು : ಜೋಷವಾಕ್ಯದೊಳಿದ್ದ ಮಕ್ಕಳ ನೋಡಿ ಸಂಭಾಷಣೆಗೈದನಾ ತಂದೆ (ಭರತ. ೫೮-೮೦).
[ ಜೋಷ + ವಾಕ್ಯ ]

**ಜೋಸ** (ನಾ). = ಜೋಷ : ಜೋಷಂ – ಜೋಸಂ (ಶಮದ. ಮು. ೨೬೭ ಪ್ರಯೋ). [ <ಸಂ. ಜೋಷ ]

**ಜೋಸಿ** 'ಜೋಶಿ' ನೋ.

**ಜೋಸೆ, ಜೊಸೆ** (ನಾ). ಹೆಂಗಸು ; ಹೆಣ್ಣು ; ಸ್ತ್ರೀ : "ಪೆಣ್ಗಳ್ ಜೋಸೆಯರಪ್ಪರ್" (ಕರ್ಣನಿ. ೯) : "ಜೋಸೆ – ಯೋಷಾ = ಸ್ತ್ರೀ" (ತದ್ಭಕೋ. ೦೭): ಬಿಡುಜಡೆಯ ನಿಡುಬಾಸೆಯ ಜೋಸೆಯರ್ ನಳಿದೋಳ ಸುೞಿವೊರ್ಕುಟ ಚೆಲ್ವೆಯರ್ (ರಾಮಾಶ್ವ. ೦೨೨-೨೪); ನಾಡಿಗರ ಗೊಂದಣಂ ಜೋಸೆಯರ ನೆರವಿ . . . ಅಲ್ಲಲ್ಲಿ ನೆಲೆಗೊಂಡಿರ್ದುವು (ಶ್ರೀರಾಮಾ. ೪೩-೪೪). **ಜೊಸೆ:** "ಪೆಣ್ಗಳ್ ಜೊಸೆಯರ್" (ಕವಿಕಂ. ೨೫೭). [<ಸಂ. ಯೋಷಾ]

**ಜೋಹ, ಚೋಹ** (ನಾ). ೧. ತೋರಿಕೆಯ ರೂಪ ; ವೇಷ ; ಸೋಗು: "ಜೋಹ (ಚೋಹ)–ಯೋಗ" (ತದ್ಭಕೋ. ೦೭): ಆತಂ ಗಡ ಹರಿ ಪಲವುಂ ಜೋ[ಪಾಠಾಂ. ಚೋ]ಹಂಗಳನಿದು ಯುಕ್ತಮಾಗಲಱಿಗುಮೆ ಪೇೞಿಂ (ಸಮಪ. ೦೦-೯೦): ರವಿಕುಲನನಾಮಿಕರ ಜೋ[ಪಾಠಾಂ. ಚೋ]ಷಮಂ ತಳೆದಂ (ಹದಶಾ. ೧೦-೪೦) : ಹೊತ್ತ ಜೋಹಕ ಚಾಳಿ[ಪಾಠಾಂ. ಚೋಹಕ ಚಾಳಿ, ಜೋಹದ ಜಾಳಿ] ಲೇಸಾಯಿತ್ತು (ತೊರರಾ. ೪-೪-೪೦) : ಪೋಗಸಣಿಯ ಗರುವಾಯ ಗೂಳೆಯದ ಜೋಹಮಂ ಬಿಡು(ರಾಮಾಶ್ವ.೯೨-೨೩). ೨. ನಟ ; ಪಾತ್ರಧಾರಿ : ನೋಡಿಮಿತ್ತೊಂದು ಪಗರಣದ ಜೋಹಂ ಬಂದಿರ್ದುದೆನೆ (ನೇಮಿಪು. ೩-೧೦೩ ವ): ಪೆಱರ ಬಳಿಸಂದು ತನ್ನಂ ಮೆಱೆವಂ ಕವಿಯಲ್ಲವಾಟಕಾಱರ ಜೋಹಂ (ಮಲ್ಲಿಪು. ೦-೩೨). ೩. ಆಕಾರ; ರೂಪ: ಪಾಳ್ಪ ಸದಿಯ ಪೆಣ್ಣ ಜೋಹದವೊಲೊಪ್ಪಿದಳೊರ್ವಳನಂಗರಾಗದಿಂ (ಶಾಂತಿಪು. ೮-೮೮) ; ವಿನಯಾನ್ವಿತೆ ತಪ್ಪದೆ ಮಾಣಿಕ ಲೆಪ್ಪದ ಪೆಣ್ಣಾ ಜೋಹಮೆಂಬಂತಿರ್ದಳ್ (ಸುಕುಮಾ. ೯-೭); ಪೊದಱೊಳಗಣ ಬೆನಕನ ಜೋಹದಂತೆ (ಚಂದ್ರಪ್ರ. ೯-೦೦೧ ವ) : ಕುಕ್ಕುಱಿಸಿರ್ದುದು ಮದಕರಿ ಬೆನಕನ ಜೋಹದಂದದಿಂದಾಹವದೊಳ್(ಶಾಂತೀಶ್ವ.೮-೮೮); ಕಿಱುವಿದಿರಿನ ಬಲ್ಪೊದಱೊಳು ಕಣ್ಗೆಱೆ ಮೆಱೆವಂತೆ ಬೆನಕನ ಜೋಹ (ನಾಗಕು. ೭-೫೨) : ಪಲವಣ್ಣ ಜೋಹಮಂ ಪಣ್ಣಿ ಪಳಂಚಿ ಸಂಚರಿಸಿ ನೋಡುತೆ . . . ತೀಡಿತೊಂದೆಳೆಯೆಲರ್ ನನೆಯಂಬನ ಚಾರನೆಂಬಿನಂ (ಚಕವಿ. ೬-೩೪). **ಚೋಹ:** ೧. "ಚೋಹಮೆನಲ್ ವೇಷ" (ಛಾರನಿ. ೫೩) : ಪಗರಣದ ಚೋಹದಂತಾಯಿತ್ತೆನ್ನ ಭಕ್ತಿ (ಬಸವ. ೮೯೧) ; ಆಹ ಇಳಿಯಿಳಿ ಗೊರವ ನಿನಗೀ ಚೋಹವೇಕಿನ್ನೆನಗೆ ಸಿಕ್ಕಿದೆ (ಬಸಪು. ೩೨-೧೫): ಸಾಹಸಿಕರ್ಕೈ ದ್ರುಪದರಿವದಿರ ಚೋಹದೋಲೆಯಕಾಱತನ ಮನಗಾಹಿನಲಿ ಹೆಮ್ಮಕ್ಕಳಿವದಿರು (ಕುವ್ಯಾ.ಭೀ. ೮-೩೦): ಶ್ವಾನಗೇಕೆ ಆನೆಯ ಚೋಹವಯ್ಯ (ಸಿದ್ಧೇವ. ೧೩೬-೪೦೨) : ಜಟ್ಟಿಗನ ಚೋಹದಿಂ . . . ಗೂಢವಾಗಿ ಪಯಣಂಬೋಗಿ (ಮರಾಚ. ೨-೩೦ ವ). ೩. ಹೊಗದ ಮನೆಯಂ ಹೊಕ್ಕು ಲಲನೆಯರ ನುಣ್ಣನೆಯ ಚೋಹಕ್ಕೆ ಮನವೊಕ್ಕು (ಖಿಂಡೋರ. ೧-೨೦). [ ?. / ಸಂ. ಯೋಗ ]

**ಜೋಹಡಿಗ** (ನಾ). ನಟ ; ಪಾತ್ರಧಾರಿ : ನುಡಿಯಿಪಂ ಮಾರ್ದಂಗಿಕಂ ಬೊಲ್ಪಿಸುಳ್ಪಿಡುವಂ ಜೋಹಡಿಗಂಬೋಲೇಂ ಕುಶಲನೋ (ರತ್ನಾಕ. ೯).
[ ಜೋಹ + – ಅಡಿಗ$_2$ ]

**ಜೋಹರ$_1$, ಜೋಹಾರ$_1$, ಜೋಹಾರು** (ನಾ). ೧. ನಮಸ್ಕಾರ ; ಪ್ರಣಾಮ : ಹಾರುವ ಹಕ್ಕಿಗೆ ಜೋಹರೆಂಬರ್ (ಸೂಕ್ತಿಸು. ೧೩-೩೦) : ಕರಮೆತ್ತಿ ಜೋಹರೆನುತುಂ ವಂದಿಸಲ್ಕೋಡಿ ವರರಥಾರೂಢನಂ ನೃಪತಿಯಂ ಕಂಡು (ಅರಾಚ. ೯-೫) ; ಇಲ್ಲದಿದ್ದರೆ, ಬಗೆ ಮುಟ್ಟಿಯೇ ಈ ಜೋಹದ ಜೋಹರವೋ (ಮಂತ್ರಕ. ೬೩-೪). ೨. ವಿಜ್ಞಾಪನೆ ; ಬಿನ್ನಹ: ಜನಪನೆಂದನು ಕೇಳನೇಕೈಯೆನ್ನ ಜೋಹರವ (ಬಸಪು. ೪೬-೭). **ಜೋಹಾರ$_1$** : ೧. ಆತನು ಕಂಡು ಜೋಹಾರೆಂದು ಪೊಡಮಡಲ್ (ಬಸಪು. ೪೬-೫) ; ನೆಟ್ಟನೆ ಶಿವಭಕ್ತ ಜೋಹಾರ ಎಂದಡೆ (ಗಣಭಾ. ೦೪೦-೬); ಕಾಮಿನಿ ಸಹಿತ ಬರುತೆ ಕಂಡು ಜೋಹಾರೆನುತೆ ಭೂಮಿಯೊಳ್ವಂದಿಸೆ (ಪಾಸೋಪು. ೭-೭೪) ; ಅಲ್ಲಿಯ ಭಿಲ್ಲ ಜನರು ಕಂದಮೂಲ ಫಲಾದಿಗಳನ್ನು ಕಾಣಿಕೆಯಾಗಿ ಇತ್ತು ಜೋಹಾರ ಮಾಡಿ . . . ಆ ಸುಂದರಮೂರ್ತಿಗಳನ್ನು ನೋಡುವರು (ತುಳಸಿ. ೧೫೦). **ಜೋಹಾರು:** 'ಜೋಹಾರುಗೈ' ಪರಾ. [ ← ತೆಲು. ಜೋಹಾರು. / ಪ್ರಾ. ಜೋಹಾರ ]

**ಜೋಹರ$_2$, ಜಹರ್, ಜೋಹಾರ$_2$** (ನಾ). ರಜಪೂತ ಸ್ತ್ರೀಯರು ಯುದ್ಧಕಾಲದಲ್ಲಿ ಶತ್ರುವಶವಾಗಬಾರದೆಂದು ಅಗ್ನಿಪ್ರವೇಶದ ಮೂಲಕ ಪ್ರಾಣತ್ಯಾಗ ಮಾಡುತ್ತಿದ್ದ ಪದ್ಧತಿ : ರಜಪೂತ ಸ್ತ್ರೀಯರು ಈ ರೀತಿಯಾಗಿ ಪ್ರಾಣಕೊಡುವ ಪದ್ಧತಿಗೆ 'ಜೋಹರ' ಅನ್ನುವರು (ಹಿಂಮುಸ. ೫೬). **ಜಹರ್:** ಬಹುಕಾಲ ಪ್ರಚಲಿತವಾಗಿದ್ದ 'ಜಹರ್' ವ್ರತವನ್ನು ಮಾಡತೊಡಗಿದರು (ಆರ್ಯಕೀ. ೩೩). **ಜೋಹಾರ$_2$** : ರಾಜಪೂತ ರಮಣಿಯರು ಜೋಹಾರವನ್ನಾಚರಿಸಿದರು (ಅಲ್ಪವಿ. ೩).
[←ಹಿಂ. ಜೋಹರ್, ಜೋಹಾರ್, ಜೌಹರ್; ಮರಾ. ಜೋಹಾರ್, ಜೌಹರ್; ಪಾರ. ಜೌಹರ್ ]

**ಜೋಹರಿ** (ನಾ). [ಸಂಗೀತ] ರಾಗಗಳಲ್ಲಿ ಒಂದು ಬಗೆ: ನೀಲೋತ್ಪಲಿನಿ, ಏಕಚ್ಛವಿ ಜೋಹರಿ . . . ವಸಂತಬಂಗಾಳವೆಂಬಿಪ್ಪತ್ತೆರಡು ರಾಗಗಳುಂ ಕ್ರಿಯಾಂಗದಿಂದ ಪುಟ್ಟಿದವು (ವಿವೇಕ. ೨೩೪). [ ? ]

**ಜೋಹರಿಸು** (ಕ್ರಿ). ನಮಸ್ಕರಿಸು ; ವಂದಿಸು : ಜನಸಮುದಾಯವು ಹೊಸನ್ನ! ಹೊಸನ್ನ ! (ಜಯಜಯಾ !) ಎಂದು ಜೋಹರಿಸುತ್ತಿರಲು (ಗೊರೂಥಾ. V, ಮುನ್ನುಡಿ). [ ಜೋಹರ$_1$ + – ಇಸು$_3$ ]

**ಜೋಹಾರ$_1$** 'ಜೋಹರ$_1$' ನೋ.

**ಜೋಹಾರ$_2$** 'ಜೋಹರ$_2$' ನೋ.

**ಜೋಹಾರು** 'ಜೋಹರ$_1$' ನೋ.

**ಜೋಹಾರುಗೈ** (ನಾ). ನಮಸ್ಕಾರಮಾಡು; ವಂದಿಸು: ಸಾರಿ ದಧಿಮುಖನ ನಿತಱೊಳು ಜೋಹಾರುಗೈದಮರೇಂದ್ರಪೌತ್ರ . . . ಅಚ್ಚರಿಯನುಸುರಿದನು (ಅನಂತಾ. ೪-೭-೦೦).
[ ಜೋಹಾರು (<ಜೋಹರ$_1$) + ಕೈ$_1$ (<ಕೆಯ್$_1$) ]

**ಜೋಹು** (ನಾ). ಭಲೆ, ಭೇಷ್ ಎಂಬ ಹೊಗಳಿಕೆಯ ಮಾತು: ಜೋಹು ಬಿರುಬಿರು ಕಣ್ಣ ಕೆಂಪಿಗೆ ಜೋಹು ನಿನ್ನೀ ಬಾತ ಬಸುಱಿಗೆ ಜೋಹು ಜೋಹೀ ಬಡಿವ ಕೈಕಾಲುಬ್ಬಸಂಗಳಿಗೆ (ಕಾಶಿರಾ. ೩೪-೪೨). [ ?]

# ಝು



**ಝು**(ನಾ).೧. ಕನ್ನಡ ವರ್ಣಮಾಲೆಯ ಇಪ್ಪತ್ತೊಂಬತ್ತನೆಯ ಅಕ್ಷರ. ೨. ಒಂಬತ್ತು ಎಂಬ ಸಂಖ್ಯೆಯ ಸಂಕೇತ : " ಆಙ ಝುಧಳವೊಂಭತ್ತು " (ಮಂಗರಾ. ೦೧೪-೧೧).

**ಝುಂಕಟ** (ನಾ). ಒಂದು ಬಗೆಯ ವಾದ್ಯ (?) : ಶಂಕರಿಯ ಸಿವಿಜ ವೆಂಪಿನ ಝುಂಕಟ ಬೊಂಬುಟಿಯ ಪಟವದುಳಿಕೆಯ ಢಕ್ಕಾ ಸಂಕುಳದ ತಾಳದುಲಿ ನೆಗಟ್ದಿಂ ಕರ್ಣಾಮೃತಸಮುದ್ರಘೋಷಣಗಾನವಾಯ್ತೊ(ಕೃಷ್ಣ. ೦೩-೨೭). 'ಜೇಗಂಟೆ' ಪರಾ. [ ? ]

**ಝುಂಕಣೆ** 'ಜಂಕಣೆ' ನೋ.

**ಝುಂಕಣೆ** 'ಜಂಕಣೆ' ನೋ.

**ಝುಂಕರಿಸು** (ಕ್ರಿ). ಆರ್ಭಟಿಸು ; ಗರ್ಜಿಸು : ಕನಲ್ದು, ಝುಂಕರಿಸುತ್ತಿರು ವರು (ಜಿಟ್ಟಿಅ. ೭೪-೩). [ ಝುಂಕರಣ$_0$ + – ಇಸು$_3$ ]

**ಝುಂಕಾರ** (ನಾ). ೧. ಝುಂ ಎಂಬ ಧ್ವನಿ : ಎಕ್ಕ ಮದ್ದಳೆಯ ಕೊಟುಲ ಝುಂಕಾರದ ಪಡೀಗಗ್ ಮುಂದೆ ಬಾಜಿಸುತ್ತಂ ಬಟೀಯಂ ಕಾಪಿನವರ್ ವರೆ (ಪದ್ಮಾರಾ. ೮೦-೦೨). ೨. ದುಂಬಿಗಳ ಮೊರೆತ,–ಧ್ವನಿ : ದರದಳಿತಾಂ ಭೋರುಹದಳವರೀತ ಷಟ್ಪದ ನಿಬದ್ಧ ಝುಂಕಾರೈಕಾಕ್ಷರ ದಿವ್ಯಮಂತ್ರ ದಿಂದಂ (ಮಲ್ಲಿಪು. ೩–೩) : ದುಂಬಿಗಳ ಝುಂಕಾರಕ್ಕೆ ಮುನಿಜನ ಡಿಳ್ಳಿಸಿತು (ತೊರೆಚರಿ. ೭-೧೧). 'ಝೇಂಕಾರ' ಪರಾ. [ ಸಂ. ]

**ಝುಂಕಾರಿತ** (ಗು). ಝುಂಕಾರವನ್ನು ಮಾಡುವ ; ಝೇಂಕರಿಸುವ : ನೂಪುರಾರವ ಝುಂಕಾರಿತ ಚಾರು ವಾಮಚರಣಾಘಾತಂ(ಆದಿಪು. ೦೨-೪೮).
[ ಸಂ. ]

**ಝುಂಕಿಸು** 'ಜಂಕಿಸು' ನೋ.

**ಝುಂಕೃತ** (ನಾ). ಝುಣಝುಣ ಶಬ್ದ : ತಾಳ ತತ್ಪರ ಶಿಶುನರ್ತನ ಪ್ರಹತ ಕಂಕಣ ಝುಂಕೃತ ಹಸ್ತತೂರ್ಯ ಸುಂದರರವದಿಂದದಂ ಮಜಿಸಿದಳ್ (ಶಾಂತಿಪು. ೮-೩೫); ಮರ್ಮುರಂ ವರ್ಣದೊಳು ಝುಂಕೃತಂ ಕಟಕದೊಳು ಹೇಪಾಕೃತಂ ವಾಜಿತತಿಯಲ್ಲಿ ವರ್ತಿಸಿರ್ದುಂ (ಮಂಗರಾ. ೨೭-೬).
[ ಸಂ. ]

**ಝುಂಕೃತಿ** (ನಾ).=ಝುಂಕಾರ ೨: ಶ್ವೇತಾತಪತ್ರಾಳಿ ಭೃಂಗವಧೂಝುಂಕೃತಿ . . . ಭೇರಿ ಘನಧ್ವಾನವಾಗೆ ವಸಂತಂ ಋತುಸಾರ್ವಭೌಮವಿಭವಂ ಮೆಯ್ವೆತ್ತದೇಂ ಬಂದುದೋ(ಚಂದ್ರಪು.೭-೩೭): ಕುಸುಮಾವೋದಕ್ಕೆಜಗಿದ ತುಂಬಿಯ ಧ್ವನಿಯಂತೆ ಕೇಳಲದೆ ಝುಂಕೃತಿಯೆನಿಪುದು (ಶಿವಪ್ರ. ೬೨-೧೧).
[ ಸಂ. ]

**ಝುಂಕೆ₁** 'ಜಂಕೆ' ನೋ.

**ಝುಂಕೆ₂** (ನಾ). [ನಾಟ್ಯ]ನೃತ್ಯದಲ್ಲಿ ಒಂದು ಗತಿ; ದೇಶೀಯ ಲಾಸ್ಯಾಂಗ ದಲ್ಲಿ ಒಂದು : ತೂಕವಡೆಯಂಕೆ ಝುಂಕೆ ಥಾಳ ಡಿಲ್ಲಾಯಿ ಚಂಡಣೆ ಚಬಳಿಕೆ ಉಲ್ಲಾಸದಜ್ಜರಿವಡೆಯ ನರ್ತಿಸುತ್ತುಮಿರೆ (ಶಾಂತೀಶ್ವ. ೦೭-೬೭ ವ); ವಿಭ್ರಮದ ನಿಶ್ಚಲನೋಟದ ದೃಢದ ಝುಂಕೆಯ ಬಿಂಕದಂಕಿತದ . . . ಲಲನೆಯಿಾ ಪರಿಯಿಂದ ನೃತ್ಯವ ಸಲಿಸೆ (ಬಸವಪು. ೦೨-೪೫). [ ? ]

**ಝುಂಝಾಟ** 'ಜಂಜಡ' ನೋ.

**ಝುಂಝಾನಿಲ** (ನಾ). ಮಳೆಯಿಂದ ಕೂಡಿದ ಗಾಳಿ,–ಬಿರುಗಾಳಿ : ಮಳೆಯ ಸಾರಿ ಬಹಗಾಳಿ ಝುಂ[ಪಾಠಾಂ. ಜಂ]ಝಾನಿಲಂ (ಮಂಗರಾ. ೦೫-೧೧). [ ಸಂ. (ಝುಂಝಾ + ಅನಿಲ) ]

**ಝುಂಝಾಮಾರುತ** (ನಾ).=ಝುಂಝಾನಿಲ : ಇವರು ಹೀಗೆ ಮಾತಾಡು ತ್ತಿದ್ದಾಗ ಝುಂಝಾಮಾರುತದಂತೆ . . . ರಭಸವಾಗಿದ್ದ ಒಂದು ಧ್ವನಿ ಕೇಳಿಸಿತು (ರಾವಿಜ. ೧೫೨); ಉತ್ತರದ ಕಡೆಯಿಂದ ಝುಂಝಾಮಾರುತದಂತೆ ನುಗ್ಗಿ ಬರುತ್ತಿದ್ದ ವಿಧರ್ಮೀಯರನ್ನು ತಡೆದು ನಿಲ್ಲಿಸುವಷ್ಟು ಪ್ರಬಲ ರಾಜ್ಯ ಗಳೇ ಇರಲಿಲ್ಲ (ಶ್ರೀವಿದ್ಯಾ. ೬೮). [ ಸಂ. (ಝುಂಝಾ + ಮಾರುತ) ]

**ಝುಂಝಾವಾತ** (ನಾ). = ಝುಂಝಾನಿಲ : " ಮಟೀವೆರಸಿದ ಘಾಳಿಯಂ ಝುಂಝಾವಾತಮೆಂಬುದು" (ಹಲಾಯು. ೦೪-೭೭) : ಎಲ್ಲಿ ಝುಂಝಾವಾತ ಘಾತಿಸಿ ಮುಳುಗಿ ತಳವನು ಕಾಣ್ಬೆನೊ (ಬಡನಕ. ४೦-೯) : ಅವರ ತರ್ಕ ಝುಂಝಾವಾತದ ಹೊಡೆತದಿಂದ ಉಪನಿಷತ್ತತ್ತ್ವಗಳು ಅಲ್ಲಾಡುವಂತೆ ದ್ದುವು (ಸೋಕ್ರಮ. ೧೦). [ ಸಂ. (ಝುಂಝಾ + ವಾತ) ]

**ಝುಂಝಾಸಮೀರ** (ನಾ).=ಝುಂಝಾನಿಲ: ರಿಪುಭೂಪೋದ್ದೀಪ ಪ್ರದೀಪ ಪ್ರಕರ ಪಟುತರಸ್ಫಾರ ಝುಂಝಾಸಮೀರಂ . . . ನೃಸಿಂಹಂ (ಎಕ. VI, ಕಡೂರು. ೦೪೯-೩೫ ; 1173). [ ಸಂ. (ಝುಂಝಾ + ಸಮೀರ) ]

**ಝುಂಝೆ** (ನಾ). ಗಾಳಿಯ ಮೊರೆತ; (ಮಳೆಯಿಂದ ಕೂಡಿದ) ಗಾಳಿಯ ಧ್ವನಿ. ೨. ಜಣತ್ಕಾರ. [ ಸಂ. ಝುಂಝಾ ]

**ಝುಂಡಾ** 'ಝಾಂಡ' ನೋ.

**ಝುಂಡಾಊರು** 'ಝಾಂಡಾಊರು' ನೋ.

**ಝುಂಪ** (ನಾ). ಹಾರುವುದು ; ನೆಗೆತ : ಝುಕಾರಕ್ಕೆ ಜಕಾರಂ . . . ಝುಂಪ–ಜಂಪ (ಶಮದ. ೨೫೫ ಪ್ರಯೋ). [ ಸಂ. ]

**ಝುಂಪರು** 'ಜಂಪರು' ನೋ.

**ಝುಂಪಳ** (ನಾ). ಹೊಳಪು; ಪ್ರಕಾಶ. 'ಝುಂಪಳಿಸಂ' ಪರಾ. [ ? ]

**ಝುಂಪಳಿಸು** (ಕ್ರಿ). ಹೊಳೆ ; ಪ್ರಕಾಶಿಸು: ವಿರೂಪಾಕ್ಷನತುಳರಥವಂಪಾಂ ಬಿಕಾ ರಥವನು ಝುಂಪಳಿಪ ನಾನಾರಸದ ಗಣಾಧಿಪ ರಥವ ಗುಂಪಟೀವರಳ ವಲ್ಲವೆನೆ (ಬಸಿಚಂ. ३೮-३೫೪). [ ಝುಂಪಳ + – ಇಸು$_3$ ]

**ಝುಂಪಾಳ, ಜಂಪಳ** (ನಾ). ಗವಸಣಿಗೆ ; ಮೇಲ್ಪುಸುಕು ; ಆವರಣ : ಗಿಳಿ ಪಾಯದಂತು ದಾಡಿಮಿಫಲಂಗಳ ಮೇಲೆ ಮುತ್ತಿನ ಝುಂಪಾಳಂಗಳಂ ಕವಿಯಲುಂ (ಕಾದಂಬೂ. ೦೦೦೬) : ದಾಳಿಂಬದ ಬಿಟ್ಟಂ ಕೊಕ್ಕಾಳೋಚದ ನೋಟ್ಬ ಧವಳ ಲೋಚನೆಯ ಕಟಾಕ್ಷಾಳೋಕಂ ಮುತ್ತಿನ ಝುಂಪಾಳಂ ಕವಿದಂತೆ ಬಳಸಿದುದು ತತ್ಕುಜಮಂ (ಚಂದ್ರಪು. ೭-೧೦೩). **ಜಂಪಳ** : 'ಜಂಪಳವಿಡು' ಪರಾ. [ <ಪ್ರಾ. ಝುಂಪ./ಮರಾ.ಝುಂಪಡೀ ]

**ಝುಂಪಾಳಿ** (ನಾ). ಒಂದು ಬಗೆಯ ಗುಡಾರ,–ಡೇರೆ (?) : ಶಿವುರಿ ಗುಡಿ ಗೂಡಾರಂ ಝುಂಪಾಳಿ ಚೌಕಿಗೆ ಜಂಪೆ ಮಂಡವಿಗೆ ಬಳಜಂ ಬಾಗಿಲ್ವಾಡಂ ಬನಂ ಮೊಗಸಾಲೆಯೆಂಬಿವಟಿ ಪಸುರಿಂ ಕರ್ಪಿಂ ಕೆಂಪಿಂ ಬಸಂತವ ಬೀದಿ ನಿಂತವಟ ಪೊಟವೀಡೆತ್ತಂ ಮಾಡಿತ್ತು ಕಣ್ಣನುರಾಗಮಂ (ಅನಂಪು. ೦೩-೭೩).
[ ? ]

**ಝುಂಪಿ** (ನಾ). ಲಾಸ್ಯ; ನಾಟ್ಯ (?): ಕೆಂಪುವಮೂಗಿನ ಪಕ್ಷಿ . . . ಹಂಪೆಯ ವಿರೂಪಾಕ್ಷಲಿಂಗನಲ್ಲಿ ಝುಂಪಿಯನಾಡುತಿದೆ (ಕನಕ. ೨೨೦ ಪಲ್ಲವಿ). [ ? ]

**ಝುಂಪಿಸು₁** 'ಜೊಂಪಿಸು₁' ನೋ.

**ಝುಂಪಿಸು₂** (ಕ್ರಿ). ಹೊಳೆ : ಶೋಭಿಸು : ಸೊಂಪಿನ ನುಂಪಿನ ಝುಂಪಿಪ ಗಂಪಿನ ಸಂಪಿಗೆಯ ವನದ (ಸುಸಾರ. ೧೨೮-೬). 'ಝುಂಪಳಿಸಂ' ಪರಾ. [ ಝುಂಪನ$_0$ + – ಇಸು$_3$ ]

**ಝುಂಪಿಸು₃** 'ಜೊಂಪಿಸು₂' ನೋ.

**ಝುಂಪು** 'ಜೊಂಪು₁' ನೋ.

**ಝುಂಪೆ** (ನಾ). [ಸಂಗೀತ] ಒಂದು ತಾಳದ ಹೆಸರು: ತ್ರಿವಿಡಿ ಚಚ್ಚರಿ ಝುಂಪೆಯಟಯೇಕತಾಳಮಂ ವಿವರವಱಿತುಂ ತಾಳಧಾರಿಗಳು ನುಡಿಸೆ (ಪ್ರಭುಪು. ೨-೭೭); ಆದಿತಾಳದಿಂದ . . . ಝುಂಪೆ, ತ್ರಿವುಡೆ, ಅಪ್ಪ, ಏಕ ತಾಳಗಳು ಹುಟ್ಟಿದವು (ಯಕ್ಷಗಾ. ೨೩). [ಸಂ. ಝುಂಪಾ]

**ಝುಂಪೆಯ** (ನಾ). = ಝುಂಪೆ ೧: ಚಚ್ಚಿಯ ಮಟ್ಟೆಯ ಪಡಿಮಟ್ಟೆಯ ಝುಂಪೆಯುಮಡ್ಡ ತ್ರಾಳರೂಪಕಮೆಕ್ಕತಾಳಂಗಳೆಂಬ ಸಪ್ತ ತಾಳಂಗಳಂ ನಿವರ್ತನಗೆಯ್ದು (ಬಾಧಪು. ೯-೧೮). [<ಝುಂಪೆ]

**ಝುಕಾರ** (ನಾ). = ಝು ೧: ಝುಕಾರಕ್ಕೆ ಜಕಾರಂ—ಝುಗಟಾ – ಜಗಳೆ (ಶಮದ. ೨೫೫ ಪ್ರಯೋ). [ಸಂ.]

**ಝುಕಾಸ** (ಗು). (ಉಕ) ೧. ಚೆನ್ನಾಗಿರುವ; ಸುಂದರವಾದ: ಆಕಿಗೆ ಝುಕಾಸ ಸೀರಿ ತಂದಿನು (ಸುವರ್ಣ. ೩೨೭). ೨. ಉತ್ತಮ; ಪ್ರಶಸ್ತ: ಮಾವನ ಆಯಾರಕೀತ ಝುಕಾಸ ಏತಿ ಏಳ (ನಿಸರ್ಗ. ೨೭೦).

[ ←ಮರಾ. ಝುಕಾಸ್ ]

**ಝುಕ್ಕಿಸು** (ಕ್ರಿ). ಸೋಲೊಪ್ಪು; ಕೀಳಾಗು: ಇವರ ಅಗ್ನಿಸೇವೆಗೆ ಯಾವ 'ಪುರೋಹಿತ'ನೂ ಝುಕ್ಕಿಸಿದನೆಂದುಕೊಂಡ (ಸಮಜೀ. ೨೯೮): ಬಣ್ಣ ಒಂದು ಇದ್ದಿದ್ರ, ನಿಮ್ಮ ತರಹದ ಹುಡುಗಿಯರು ಅವಳ ಮುಂದ ಝುಕ್ಕಿಸಿದರು (ತೀರು. ೫೮).

**ಝುಕ್ಕಿಸಿ ಹೋಗು** = ಸೋತುಹೋಗು; ಪರಾಜಯ ಹೊಂದು: ಈ ಟ್ರಾಜಿಡಿ ಮುಂದೆ ಷೇಕ್ಸ್‌ಪಿಯರಿನ ಟ್ರಾಜಿಡಿ ಕೂಡ ಝುಕ್ಕಿಸಿ ಹೋಯಿತು (ಹುಚ್ಚು‌ಟ. ೫೦).

[ಝುಕ್ಕ₀ (P ←ಮರಾ. ಜಕ್ಕತ್) + – ಇಸು₃]

**ಝುಕ್ಕಳಿಸು** 'ಜಕ್ಕುಲಿಸು' ನೋ.

**ಝುಗ** 'ಝುಗ್ಗೆ₂' ನೋ.

**ಝುಗರ್ಝುಗಿಸು, ಝುಗಿರ್ಝುಗಿಸು** (ಕ್ರಿ). ಹೊಳೆ; ಪ್ರಕಾಶಿಸು: ಝುಗ ಝುಗಿಸಿ ಹೊಳೆಹೊಳೆವ ಬಾಯ್ದಾರೆಗಳ ಬೆಳಗಿನ ಧಾಳಿ ಧೀಂಕಿಡೆ (ಕುಮಾ‌ಛೀ. ೮-೫೦); ಯೋಗಿಗಳ ಹೃದಯದೊಳು ಝುಗರ್ಝುಗಿಪ ದೇವಿ ಯರು (ವೀಶೈಪು. ೨-೭-೫೭); ಬಿಗಿದ ದವಾಣದಲೊಂಟೆಗಳಗಣಿತ ಝುಗ ಝುಗಿಸುವ ಕಾಂತಿಯಿಂದ (ಕಂನವಿ. ೦೦-೩೭). **ಝುಗಿರ್ಝುಗಿಸು:** ರುದ್ರ ವಿಷ್ಣು ಬ್ರಹ್ಮಾದಿಗಳ ಪತ್ತನಂಗಳನಾಂತ ಪೆರ್ಮೆಯಿಂ ಝುಗಿರ್ಝುಗಿಸುವಾ ಮಹಾಕನಕಗಿರಿಯು (ಚಉಪು. ೨-೯); ಝುಗಿರ್ಝುಗಿಪ ಮಕುಟಧರ (ವಿದಾಕ್ಯ. ೩೦-೨). [<ಝುಗ + – ಇಸು₃]

**ಝುಗನೆ** (ಅ). ಹೊಳಪಿನಿಂದ ಕೂಡಿ; ಕಾಂತಿಯುಕ್ತವಾಗಿ: ಝುಗನೆ ಬೆಳಗುವ ತನ್ನ ವಜ್ರಾಯುಧವನಬ್ಬರದೆ (ರಘುವಂ. ೨-೬೦).

[ ಝುಗ (<ಝುಗ್ಗೆ₁) + – ಅನೆ₁ ]

**ಝುಗಳೆ** 'ಜಗಳೆ' ನೋ.

**ಝುಗಾ, ಝುಗ್ಗೆ₁** (ನಾ). ೧. ಸ್ತ್ರೀಯರ ಒಂದು ಬಗೆಯ ಉಡುಪು; ಕೊರಳಿನಿಂದ ಕಾಲಿನವರೆಗೂ ಬರುವ ಲಂಗ: ನೀ ಮುಂದಿನ ಜಲ್ಮಕ್ಕ ಬರೋದರೊಳಗ, ಪೋಲಕಾ, ಝುಗಾ ಬಂದಿರತಾವೇಳು (ಹೊಸಂಸಾ. ೭೦). **ಝುಗ್ಗೆ₁:** ೧. ಆಕೆ ಹೊಸ 'ಝುಗ್ಗೆ' ಉಟ್ಟುಕೊಂಡರೆ . . . ಬಯಕೆ ಕೆರಳುತ್ತದೆ (ಬನಸಿ. ೦೪). ೨. ಹೊದಿಕೆ; ಆವರಣ: ಹರಿಗೆ ಕಂಪಿನ ಝುಗೆ ಸುರಾಂಗನೆಯುರಿಗೆ ಸುಭಟವ್ರಜಕೆ ಕುಂಟಣಿ ವರದಿಗಂಗನೆಯುರಿಗೆ ಬೈತಲೆಗೆ ಸೆವಸಿಂದೂರ (ಕುಮಾ‌ಛೀ. ೪-೭): ಲೋಹಸೀಸಕವಡಿಸಿ ಬಲ್ಲೆಹ ಬಗಿದು ನಟ್ಟುದು ಸರಪಣಿಯ ಝುಗೆಯ (ಕುಮಾ‌ಛೀ. ೪-೫೯).

[ ←ಮರಾ. ಝುಗಾ ]

**ಝುಗಿರ್ಝುಗಿಸು** 'ಝುಗರ್ಝುಗಿಸು' ನೋ.

**ಝುಗಿಸು** (ಕ್ರಿ). = ಝುಗರ್ಝುಗಿಸು: ರದನಗಳು ಝುಗಿಪ ರನ್ನಗಳಂತೆ ಯಂದದಿ ಸೊಗಯಿಸಲು (ಕವಿಚ. III, '೨೦೪, ಹರಿಲೀಲಾಮೃತ ಸಾರ); ಮುಗಿಲೆ ಮುಗಿಲೇ . . . ಝುಗಿಸಿ, ಗದರಿಸಿ ಜಗವ ಬೆದರಿಸಿ, ಮುಗಿಲೆ! ನೀನೇಂ ಮಾಡುವೆ ? (ಕಎಪು. ೨೯-೦).

[ ಝುಗ (<ಝುಗ್ಗೆ₂) + – ಇಸು₃ ]

**ಝುಗ್ಗೆ₁** 'ಝುಗಾ' ನೋ.

**ಝುಗ್ಗೆ₂, ಝುಗ** (ನಾ). ಹೊಳಪು; ಪ್ರಕಾಶ: ಅಂಬಿನ ಝುಗೆಯ ಝುಳ ದಲ್ಲಿ ಮುಳುಗಿ ಮೋನದೊಳಿರ್ದನಾ ಕರ್ಣ (ಕುಮಾ‌ಕ. ೪-೧೩): ಬಂಧು ಗಳಗೊಲಿದಿತ್ತನ್ . . . ಸೆಂದುರ ಹಳದಿ ಬೂದಿ ಪಚ್ಚೆಯ ಝುಗೆಗಳೆಂಬರವ (ಅಕ್ರೂಚ. ೮-೪೨). **ಝುಗ:** 'ಝುಗಿಸು' ಪರಾ.

**ಝುಗರ್ಝುಗ** (ದ್ವಿರುಕ್ತಿ): 'ಝುಗರ್ಝುಗಿಸು' ಪರಾ. [ ? ]

**ಝುಗ್ಗನೆ** (ಅ). ರಭಸವಾಗಿ; ತಟ್ಟನೆ; ಕೂಡಲೆ: ರಾಜರುಗಳೆಲ್ಲ ಭಯ ಭಕ್ತಿಗಳಿಂದ ಝುಗ್ಗನೆ ಎದ್ದು (ಸೌಗಂಧಿ. ೨೩೯-೭). [ಝುಗ್₀ + – ಅನೆ₁]

**ಝುಗ್ಗೆನ್ನು** (ಕ್ರಿ). ೧. ಝುಗ್ ಎಂದು ಶಬ್ದಮಾಡು. ೨. (ಆಲಂ) ಒಮ್ಮೆಲೆ ಅಂಜು; ತಟ್ಟನೆ ಬೆಚ್ಚು; ಗಾಬರಿಗೊಳ್ಳು: ಗೌಡರನ್ನು ಕಂಡತಕ್ಷಣವೇ ಮಲ್ಲಮ್ಮನ ಮನಸ್ಸು ಝುಗ್ಗೆಂದಿತು (ಗೋಪುರ. ೦೫೫).

[ ಝುಗ್₀ + ಎನ್ನು (<ಎನ್₁) ]

**ಝುಜ್ಜರ** 'ಜಜ್ಜರ' ನೋ.

**ಝುಜ್ಜರಂಪೋಗು** (ಕ್ರಿ). ಶಿಥಿಲವಾಗು; ಜರ್ಜರಿತವಾಗು: ಎಲುವಡದು ಮನವು ಝುಜರಂಬೋಗಿ ಲಿಂಗದಲ್ಲಿ ನೀರು ನೀರಾಗಿ ಬೆರಸಬೇಕು (ಶದಗೋ. ೦೭೭-೦೪). [ ಝುಜ್ಜರ (<ಜಜ್ಜರ) + ಪೋಗು₁ ]

**ಝುಟತಿ** 'ಝುಡಿತಿ₁' ನೋ.

**ಝುಟಪಟ, ಜಟಪಟ** (ಅ). ಬೇಗನೆ; ತಟಕ್ಕನೆ; ಚಟ್ಟನೆ: ಜೀವನದೀ. ಚಿತ್ರಪಟ ತೆರೆಮರೆಗಳ ಆಟದಲ್ಲಿ ಉರುಳುತಿಹುದು ಝುಟಪಟ (ಅರಳು. ೩೫-೨೦). **ಜಟಪಟ:** "ತಟಕ್ಕನೆ, ಚಟ್ಟನೆ" (ಜಾನಕೋ. ೫೮).

[ ←ಹಿಂ. ಮರಾ. ಝುಟ್‌ಪಟ್. / ಪ್ರಾ. ಝುಡಪ್ಪಡ ]

**ಝುಟಿ** (ನಾ). ಗಿಡ; ಪೊದರು. [ಸಂ.]

**ಝುಟಿತಿ** 'ಝುಡಿತಿ₁' ನೋ.

**ಝುಟಿಲ್** (ನಾ). ಒಂದು ಅನುಕರಣ ಶಬ್ದ: ಕಟಗಣ್ಣು ಝುಟಿಲೆಂದು ಪಾವುಗೆಗಳ ದನಿ ನಟಿಸಿ ಮೆಲ್ಲನೆ ಪೆಜ್ಜೆಯಿಡುವ (ಭರತ. ೪-೪).

**ಝುಟಿ** (ನಾ). ಕಿರುನೆಲ್ಲಿಗಿಡ: "ಝುಟಾ, ಆಮಲಾ . . . ತಾಮಲಕೀ– ೭ ಕಿರುನೆಲ್ಲಿಗಿಡದ ಹೆಸರು" (ಸಿದ್ಧಾಂಶಿ. ೧೨೪). [ಸಂ. ಝುಟಾ]

**ಝುಟ್ಟನೆ** (ಅ). ಕೂಡಲೆ; ತಕ್ಷಣ: ಝುಟ್ಟನೆ ತೀರಿಸಿ ಬಂದು ಬಿಡು (ದೀಪಹ. II, ೭). 'ಜಟ್ಟನೆ' ಪರಾ. [ ಝುಟ್₀ + – ಅನೆ₁ ]

**ಝುಟ್ಟಿ** 'ಜಟ್ಟಿ₁' ನೋ.

**ಝುಟ್ಟಿಂಗ** 'ಜಟ್ಟಿಂಗ' ನೋ.

**ಝುಡತಿ, ಜಡತಿ, ಜಡ್ತಿ, ಝುಡಿತಿ₂, ಝುಡ್ತಿ** (ನಾ). ಹುಡುಕುವುದು; ತಪಾಸಣೆ; ಶೋಧನೆ; ತನಿಖೆ: ಮತ್ತೆ ಮನೆಯ ಝುಡತಿಗೆ ಸುರುವಾಯಿತು (ಸಂಬಿಗೆ. ೨); ಬೇಕಾದರೆ ನಮ್ಮ ಚೀಲಗಳನ್ನೆಲ್ಲ 'ಝುಡತಿ' ಮಾಡಿ ನೋಡಿರಿ (ರಂಗರೂ. ೫); ಅವಳೇ ಜೇಬನ್ನು ಝುಡತಿ ಮಾಡುತ್ತಾಳೆ (ಸಮಾರೋ. ೫೭). **ಜಡತಿ:** ಹಾಗೆ ಮಾಡುವ ಮುಂಚೆ ನಮ್ಮ ಸಾಮಾನು ಗಳನ್ನೆಲ್ಲ ಜಡತಿಮಾಡತೊಡಂಗಿದರು [illegible] ಮನೋಹರನನ್ನು ಜಡತಿ ಮಾಡಿದ [illegible]. **ಜಡ್ತಿ:** [illegible] ಬರೆದಿರ್ದ ಲೆಕ್ಕದಾ ಜಡ್ತಿ[ಪಾಠಾಂ. ಜಡತಿ]ಗತಿಮಿಗಿಲಾಗಿ ತೋರಿಸಲು (ಪ್ರಾಥರಾ. ೦೭-೭); ಲೆಕ್ಕಪತ್ರ ಮುಂತಾದದನ್ನು ಜಡ್ತಿ ತೆಗೆದುಕೊಳ್ಳುತ್ತ

(ಎಕ. I, ೦೬-೨೬; 1820); ಮನೆಗೆ ಹೋಗಿ . . . ಜಡ್ತಿಮಾಡಹತ್ತಿದರು (ಕೊತಜಾ. ೫೯). ಝುಡಿತ್ತಿ: ಕಾಳುಕಡಿ ಕಿರಾಣಿ ಅರಳಿ ಮುಂತಾದ ಮಾರಾಟಕ್ಕೆ ಬಂದ ಜೀನಸುಗಳ ಮತ್ತು ಬಾರದಾನೆಯ ಝುಡತಿ ಇಡುವುದು (ಮುಂಬವ್ಯಾ. ೨೬೯). ಝುಡ್ತಿ: ಲಿಂಗನ ಮನೆಯನ್ನು ಝುಡ್ತಿ ಮಾಡಲಾಗಿ ಅದರಲ್ಲಿ ಅಡಿಗೆ ಉಗ್ರಾಣದ ಸಾಮಾನುಗಳ ಹೊರತು ಮತ್ತೇನೂ ಇರಲಿಲ್ಲ (ಕಿಲನ. ೦೦೬); ಅದ್ದಬಾದು ಜೇಬನ್ನೇ ಝುಡ್ತಿ ಮಾಡುತ್ತಾವ (ದಿಲ್ಲಿಪ. ೬೨). [ ←ಹಿಂ. ಮರಾ. ಝುಡತೀ ]

**ಝುಡಪ, ಜಡಪ** (ನಾ). ೧. ಹೆಚ್ಚಾದ ವೇಗ ; ಶೀಘ್ರತೆ : ಪಡಿಮುಖ ದಲೊದಟುವ ಕಿಡಿಯ ಘಂಟಾರವದ ರಭಸದ ಝುಡಪದಲಿ ಜೋಡಿಸಿದ ಶಕ್ತಿಯಲಿಟ್ಟನವನೀಶ (ಕುವ್ಯಾಕ. ೩-೬೬). ೨. ಗದಾಯುದ್ಧದಲ್ಲಿ ಒಂದು ಪಟ್ಟು,-ವರಸೆ : ಬಿಡುವ ಬಿಡಿಸುವ ವರರ ಘಾಯುವ ತಡೆವ ಗೋಮೂತ್ರಕದ ಚಿತ್ರದ ಝುಡಪದವಧಾನದ . . . ಕುಶಲದಲಿ ಕಾದಿದರು ಸಮರದಲಿ (ಕುವ್ಯಾಗ. ೬-೨೪). **ಜಡಪ** : ೩. ಚಳಕವುಳ್ಳವನು; ವೇಗಶಾಲಿ : ಕಡುಗಲಿಗಳೇಱಾಟದಲಿ ಮಿಗೆ ಜಡಪರಾದರು ಖಡ್ಗ ಹಸ್ತದಿ ಬಿಡುವವರ ರೇವಂತರಗ್ಗಳರಾದರೈಯುವರು (ಸಂಭಪ. ೦೮-೨).
[ <ಪ್ರಾ. ಝುಡಪ್ಪ ]

**ಝುಡಪಿಸು** 'ಝುಳಂಪಿಸು' ನೋ.

**ಝುಡಪು** 'ಝುಳಪು' ನೋ.

**ಝುಡಾವು** (ನಾ). ರತ್ನದ ಹರಳಂಗಳನ್ನು ಕೂಡಿಸಿದುದು ; ರತ್ನ ಖಚಿತವಾದುದು : ಮಾತೃಶ್ರೀಗಳು ಬಹಳ ಹರುಷಿತರಾಗಿ ಆಶೀರ್ವಾದ ವನ್ನು ಮಾಡಿ ಝುಡಿತ ಝುಡಾವು ನವರತ್ನ ಸುವರ್ಣಪುಷ್ಪ ಮೊದಲಾದು ವನ್ನು ನಿವಾಳಿಸಿ (ಬಚ್ಚರು. ೧೦). [ ←ಮರಾ. ಜಡಾವ್ ]

**ಝುಡಿ**$_1$ 'ಜಡಿ$_1$' ನೋ.

**ಝುಡಿ**$_2$ 'ಜಡಿ$_2$' ನೋ.

**ಝುಡಿ**$_3$ 'ಜಡಿ$_4$' ನೋ.

**ಝುಡಿತ** 'ಜಡಿತ' ನೋ.

**ಝುಡಿತಿ**$_1$**, ಜಡಿತಿ, ಜಡಿತೆ, ಝುಟತಿ, ಝುಂಟಿತೆ, ಝುಂಡಿತೆ** (ನಾ). ಬೇಗ ; ತ್ವರೆ : ಕೆಳದಿಯರು ಝುಡಿತಿಯಾಗಿ ಮಂದಿರದ ಬಾಗಿಲೊಳ್ ಬಂದು ಕಾದಿರ್ದು (ಸಾಗಂಧಿ. ೩೪೧-೦೧); ಝುಡಿತಿಯೊಳಗೆ ಯನ್ನವಡನೆಯೆಲೆ ಬಾಲ ನೀನು ನುಡಿಯಾದಿಹುದು ಧರ್ಮವೇನೊ (ಹಮುಚ. ೧೬೩): ಝುಡಿತಿಯಿಂ ಏಂತಗಸ್ತ್ಯನೀತಂಗಿತ್ತ ಸಾಯಕವೊಂದಂ ತೂಣೀರದಿಂ ತೆಗೆದು (ಅದ್ಭುತ. ೫೦-೧೧). **ಜಡಿತಿ:** "ಝುಕಾರಕ್ಕೆ ಜಕಾರಂ . . . ಝುಡಿತಿ–ಜಡಿತಿ" (ಶಮದ. ೨೫೫ ಪ್ರಯೋ). **ಜಡಿತೆ:** ಕೌರವ ರಾಜಕಾರ್ಯದ ಘನವನಱುಹಿ ದನವರೊಡನೆ ಸಾಧನವ ಸೂಚಿಸಿ ಜಡಿತೆಯಲ್ಲಿ[ಪಾಠಾಂ. ಜೋಡಿಸಿಕೊಟ್ಟು] ಕಳುಹಿದನು ಗುಪ್ತದಲಿ (ಕುವ್ಯಾಅ. ೬ಠಿ೩. ೨೧-೬೪). **ಝುಟತಿ:** ಚದರಿ ಹೋದ ಚಮೂಪತಿಗಳು ಮತ್ತೆ ಏರಿ ಬಂದು, ಫೂತ್ಕರಿಸಿ ಮೈಗೆ ಮೈಗೊಟ್ಟು ಚಿಮ್ಮಿ ಝುಟತಿಯಿಂದ ಕಾದಿದರು (ಕವೀರ. ೫೮). **ಝುಟಿತೆ:** ಕಟುವರ ಒಪ್ಪಲಿಯಂ ಮೇಣ್ ಝುಟಿತೆಯೊಳಿಕ್ಕಲ್ಕದಟಿಯದೇ ತದ್ವಿಷಮಂ (ಖಮದ. ೨-೪೪). **ಝುಡಿತೆ:** ಕಳಿಂಗ ಕರೂಪ ಕೌರವರರಸ ಮೊದಲಾದಖಿಳಬಲ ಜೋಡಿಸಿತು ಝುಡಿತೆಯಲಿ (ಕುವ್ಯಾಕ. ೧೩-೦೨): ಆಮರರೆದೆ ಜಜ್ಜರಿತವಾಗಲು ಝುಡಿತೆಯಲಿ ಹೊಕ್ಕನು ದಶಗ್ರೀವ (ತೊರರಾ. ೬-೨೧-೨೩); ಝುಡಿತೆಯಿಂದುರುಬಿದರ್ ಬಿಡದೆ ಮಾಯಾಶಬರರು (ಚಬಪು. ೫೩-೨೬). [ <ಸಂ. ಝುಟಿತಿ = ಜಾಗ್ರತೆಯಾಗಿ ]

**ಝುಡಿತಿ**$_2$ 'ಝುಡತಿ' ನೋ.

**ಝುಡಿತಿ**$_3$ (ನಾ). ಲಾವಣಿಗಳಲ್ಲಿ ಒಂದು ಭೇದ: ಇದರಲ್ಲಿ ಝುಡಿತಿಯೆಂಬ ಇನ್ನೊಂದು ಉಪಜಾತಿಯುಂಟು (ಕರ್ಣಾಸಂ. ೩೨). [ ? ]

**ಝುಡಿತೆ** 'ಝುಡಿತಿ$_1$' ನೋ.

**ಝುಡಿಸು** 'ಜಡಿಸು' ನೋ.

**ಝುಡುಪು** 'ಝುಡುಪು' ನೋ.

**ಝುಡ್ತಿ** 'ಝುಡತಿ' ನೋ.

**ಝುಣ್** (ನಾ). ಒಂದು ಅನುಕರಣ ಶಬ್ದ.
 **ಝುಣ್‌ಝುಣ್** (ದ್ವಿರುಕ್ತಿ) : ಪರಿಪರಿಯಿಂದ ಬಾರಿಸಿದಲ್ಲಿ ಝುಣ್ ಝುಣ್ ಎಂಬ ಧ್ವನಿಯು ಶಿವಪ್ರಸಾದಿಗೆ ಕೊಡುತಿರ್ಪುದೆಂಬುದೀಗ ಘಂಟಾ ನಾದವೆಂಬ ಶಬ್ದಕ್ಕರ್ಥ (ವಚಶಾ. II, ೨೦೬).

**ಝುಣ** (ನಾ). ಒಂದು ಅನುಕರಣ ಶಬ್ದ :
 **ಝುಣಝುಣ** (ದ್ವಿರುಕ್ತಿ): ತೊಡರ ಝುಣಝುಣ ರವದ ಸುರರುಗ್ರಡದ ಬಿರುದಿನ ಬಾವುಲಿಯ . . . ರಾಯರಕ್ಕಸನೈದಿದನು (ತೊರರಾ. ೧-೧೫-೧೧).

**ಝುಣಂಬ** 'ಜಳಂಬ' ನೋ.

**ಝುಣಕ** (ನಾ). ೧. ಚುರುಕು ; ಚಾತುರ್ಯ ; ಚಳಕ : ಝುಣಕವ ತೋರುತ ಕಣೆಗಳ ಬೀರುತ . . . ಕಣೆವೆಯ ದಾಟುತಲಿ (ಹಮುಚ. ೧೬). ೨. ಬೇಗ ; ಜಾಗ್ರತೆ : ಕ್ಷಣವು ನಿಲ್ಲದೆ ನೀವು ಹಣವ ಕೊಟ್ಟರೆ ಯೆನಗೆ ಝುಣಕದೊಳು ನಾ ಪೋಪೆ (ಹಮುಚ. ೧೨೦). [ ? ]

**ಝುಣಝುಣತ್ಕಾರ** (ನಾ). ಝುಣಝುಣ ಎಂಬ ಧ್ವನಿ. 'ಝುಣಝುಣ ತ್ಕಾರಿಸು' ಪರಾ. [ ಸಂ. ]

**ಝುಣಝುಣತ್ಕಾರಿಸು** (ಕ್ರಿ). ಝುಣಝುಣ ಎಂದು ಶಬ್ದಮಾಡು,- ಉಲಿ : ಝುಣಝುಣತ್ಕಾರಿಸುವ ಕಂಕಣದ ಹುಲಿಯುಗುರ . . . ಬಾಲ ದೊಡಿಗೆಯ ಮಾಯೆಗಿಕ್ಕಿದರು (ಪ್ರಭುಲೀ. ೩-೨೫).
[ ಝುಣಝುಣತ್ಕಾರ + – ಇಸು$_3$ ]

**ಝುಣಝುಣಾಟ** (ನಾ). ಝುಣಝುಣ ಎಂಬ ಶಬ್ದ: ರೊಕ್ಕದ ಝುಣ ಝುಣಾಟವು ಕೇಳಬರುತ್ತಿದೆ (ತಿದುಗು. ೧೯೩). [ <ಝುಣ + ಆಟ ]

**ಝುಣಝುಣಿತ** (ನಾ). = ಝುಣಝುಣತ್ಕಾರ : ಯುವತಿ ಕಂಕಣ ಕಿಂಕಿಣೀ ಝುಣಝುಣಿತ ಘೋಷಣವು (ಬಸಪು. ೫-೨೯). [ ಸಂ. ]

**ಝುಣಝುಣಿಸು** (ಕ್ರಿ). ಝುಣಝುಣ ಎಂಬ ಧ್ವನಿಯನ್ನುಂಟುಮಾಡು: ಝುಣಝುಣಿಸುವಂದುಗೆಗಳಂ ಘಣಘಣಯೆನಿಪ ಘಂಟೆಗಳಂ (ಬಸಪು. ೫೬-೫) ; ತಳುಕು ಕಡಗ ಕಂಕಣ ಝುಣಝುಣಿಸಲು (ಮೋಹತ. ೦೪-೫೦): ಕರಕಟಕ ಝುಣಝುಣಿಸಲು (ಅನಂರಾ. ೧-೩-೪೧). [ <ಝುಣ + – ಇಸು$_3$ ]

**ಝುಣತುಕೃತಿ** (ನಾ). = ಝುಣತ್ಕಾರ : ಭೂರಿಭೂಷಣ ಝುಣತುಕೃತಿ ಘಂಟಾರವದ ರಭಸದಲಿ (ನಿಭಾಗ. ४-೨-೬). [ <ಸಂ. ಝುಣತ್ಕೃತಿ ]

**ಝುಣತ್ಕಾರ** (ನಾ). ಝುಣ ಝುಣ ಎಂಬ ಶಬ್ದ : ದಕ್ಷಿಣಕರಕಲಿತ ಕನಕ ಕಂಕಣ ಝುಣತ್ಕಾರನುಂ (ಚಂದ್ರಪು. ೮-೮೨ ವ); ಹಾರ ನೂಪುರ ಕಂಕಣಾದಿ ಭೂಷಣ ಝುಣತ್ಕಾರ ಧ್ವನಿಗಳು (ಜೈಮಿಥಾ. ೬-೪೬). [ ಸಂ. ]

**ಝುಣತ್ಕೃತಿ** (ನಾ). = ಝುಣತ್ಕಾರ : ಕನಕಮಯ ದಿವ್ಯಸಿಂಹಾಸನದಿಕ್ಕೆಲ ದೊಳ್ ಬಂಕದಿಂ ಕೊಂಕಿ ನಿಂದು ಕಂಕಣ ಝುಣತ್ಕೃತಿ ಪೊಣ್ಮೆ (ರಾಜಶೇ. ೫-೦೯ ರಗಳೆ). [ ಸಂ. ]

**ಝುಣನ್ನೂಪುರ** (ನಾ). ಉಲಿಯುತ್ತಿರುವ ಕಾಲ್ಗಡಗ ; ಝುಣಝುಣ ಎಂದು ಧ್ವನಿಮಾಡುತ್ತಿರುವ ಅಂದುಗೆ : ಕ್ವಣತ್ಕಂಕಣ ; ಝುಣನ್ನೂ ಪುರ (ಶಮದ. ೮೧ ಪ್ರಯೋ). [ ಸಂ. (ಝುಣತ್ + ನೂಪುರ) ]

**ಝುಣಮಣ** (ನಾ). ಒಂದು ಅನುಕರಣ ಶಬ್ದ. 'ಝುಣಮಣಿಸು' ಪರಾ.

**ಝುಣಮಣಿಸು** (ಕ್ರಿ). ಝುಣಮಣ ಎಂದು ಸದ್ದುಮಾಡು ; ಗದ್ದಲ ಮಾಡು : ಝುಣಮಣಿಸದೆ ಶಂಬರಾಸುರವರ ಸಮಿರಣನಾಗಿ ಪೊಕ್ಕ ದ್ವಾರಕಿಯ (ಮೋಹತ. ೧೧-೨೨). [ ಝುಣಮಣ + – ಇಸು$_3$ ]

**ಝಣರು** (ನಾ). ಒಂದು ಅನುಕರಣ ಶಬ್ದ : ಕಿಣಿಕಿಣಿಕಿಣಿರೆಂಬ ಕರದ ಕಂಕಣ ಬಳೆ ಝಣರಝಣರೆಂಬ ನಡುವಿನ ಗಂಟೆ (ಪುರಂದ. ೨-೬೨-೨) : ಕಡಗ ಕಂಕಣ ಬಳೆಗೈ ಝಣರೆನೆ (ಕಂನವಿ. ೧೦-೪೫).

**ಝಣು** (ನಾ). ಭಲೆ, ಭೇಷ್ ಎಂಬಂತೆ ಒಂದು ಕೊಂಡಾಟದ ನುಡಿ : ಝಣು ವಿರೋಧಿವಿಭಾಡ ಝಣು ಝಣು ಝಣು (ಕುವ್ಯಾಸ. ೨-೧೦೭).

ಝಣುಝಣು (ದ್ವಿರುಕ್ತಿ) : ಜಗತ್ರಯ ಜಟ್ಟಿ ಝಣುಝಣು . . . ಎಂಬಬ್ಬರಣೆ ಮಸಗಿದುದೆರಡು ಬಾಹೆಯಲಿ (ಕುವ್ಯಾಸ ೨-೧೦೭). 'ಧಣು$_2$' ಪರಾ.

**ಝನಾನಾ** 'ಜನಾನಾ' ನೋ.

**ಝನಾನಾಖಾನೆ** 'ಜನಾನಖಾನೆ' ನೋ.

**ಝಪಝಪ** (ಅ). (ಉಕ) ಬೇಗನೆ ; ಜಾಗ್ರತೆಯಾಗಿ ; ಚುರುಕಾಗಿ : ಗುರಿಯ ಕಡೆಗೆ ಝಪಝಪ ಕಾಲುಹಾಕಲು ಅಡ್ಡಿ ಇಲ್ಲವೆಂದಾಯಿತು (ದೀಪಹ. II, ೨೨೭). [ ←ಮರಾ. ಝಪ್‌ಝಪ್ ]

**ಝಪಾಟ, ಜಪಾಟ** (ನಾ). ೧. ಆವೇಗ ; ಭರ ; ರಭಸ : ತನ್ನದು ನಡದರ ಸಾಕು ಅಂತ ಕೆಲಸದ ಝಪಾಟಯೊಳಗ ಇದ್ದಾಳ (ಹೊಸಂಸಾ. ೧೫೭). ೨. ಸರದಿ ; ಸಲ : ಇಗ್ಲಿ ಹೊಡೀರಿ ಕುಲಕರ್ಣೇರೆ ಒಂದು ಝಪಾಟ (ಹಸ್ಮೊಂದ. ೯). ಜಪಾಟ : ೨. "ಸಾರಿ" (ಜಾನಕೋ. ೫೯).
[ ←ಹಿಂ. ಮರಾ. ಝಪಾಟಾ ]

**ಝಬರಿ** (ನಾ). ತೆಳುವಾದ ಕೋಲು ; ಸೆಳೆ : ಆತ ಮತ್ತೊಮ್ಮೆ ಅದರ ಮೇಲೆ 'ಝಬರಿ' ಬೀಸಿದ (ಬನಸಿ. ೬೪). [ ←ತೆಲು. ಜಬರ ]

**ಝಮ್** (ನಾ). ಒಂದು ಅನುಕರಣ ಶಬ್ದ : ಝಮ್ಮೆಂದು ಸಮಿಧಾವಳಿ ಗಳಬ್ಬರಿಸಿದವು ಛಟ ಛಟ ಛಟ ನಿನಾದದಲಿ (ಕೂರರಾ. ೦-೬-೪೯).

**ಝಮಕು** (ನಾ). ಶೋಭೆ; ಸೊಗಸು: ತಿಲಕವ ತಿದ್ದುತ ಕಪ್ಪಿನಲಿ ವೀಳ್ಯದ ಝಮಕಿನಲಿ ಸುಲಲಿತಾಂಗ ಶೃಂಗಾರದ ಸೊಬಗಿನಲಿ . . . ಬರುತಿರೆ ಬೆಡಗಿಲಿ (ಚಂದ್ರಾವ. ೨೨) : ರುಮ್ಮಾಲ ಸುತ್ತ್ಯಾನೆ ಹದಿನಾರು ಮಡಿಕೀಲಿ ಚುಂಗ ಬಿಟ್ಟ್ಯಾನೆ ಝಮಕೀಲಿ (ಹಳ್ಳಿಪ. ೨೨೦). [ ←ಹಿಂ. ಝಮಕ್ ]

**ಝಮ್ಮಗೆ** (ಅ). = ಝಂಮ್ಮನೆ : ಅಟಿಯಲ್ಕೆವಂದುದು . . . ಚಂದ್ರ ಕಾಂತವೃತ್ತಿಕೆಯೊಸರ್ವಂತೆ ಝಮ್ಮಗೆ ಬೆಮರ್ತಿರವಿಂ ತರಳಾಯತಾಕ್ಷಿಯಾ (ರಾಂಕಿಪು. ೮-೯೬). [ ಝಮ್ + – ಅಗೆ$_3$ ]

**ಝಮ್ಮನೆ** (ಅ). ಒಂದು ಅನುಕರಣಾವ್ಯಯಂ : ಝ[ಪಾಠಾಂ. ಝು]ಮ್ಮನೆ ಬೆಮರ್ತುರ್ಭೀತಿಯ ಪರಮಕಾಷ್ಠೆಯಿಂ ರ್ಝೊಮ್ಮಿಡುತ ಕರೆದನೀಶನನೇಕ ನಿಷ್ಠೆಯಿಂ (ಪಂಚರ. ದೀ. ೬೪-೧೯) ; ತನು ಶೋಫವೋಟು ಮೆಯ್ ಝಮ್ಮನೆ ಬೆಮರುತ್ತಿರ್ಕುಮಪ್ಪೊಡಂ . . . ಹಯಕ್ಕೆ ತಪ್ಪದು ಮರಣಂ (ಅಶ್ವಶಾ. ೬-೫೨). [ ಝಮ್ + – ಅನೆ$_1$ ]

**ಝರ** (ನಾ). ಬೆಟ್ಟದಲ್ಲಿ ಹರಿದು ಬರುವ ಪ್ರವಾಹ; ಝರಿ ; ಗಿರಿನದಿ. [ ಸಂ. ]

**ಝರಣಿ** (ನಾ). = ಝರ : ಅಲ್ಲಿಯ ನರಸಿಂಹ ಝರಣಿಯಲ್ಲಿ ಸ್ನಾನಮಾಡಿ ವಿಭೂತಿ ಧರಿಸಿ (ಕಗದ್ಯ. ೦೨೨). [ ←ಹಿಂ. ಝರನೀ ]

**ಝರತಿ** (ನಾ). = ಝರ : ಝರತಿಯ ಮೃಗಗಳ ಪರಿಕಿಸಿ ನೋಡುತ (ಹಮಚ. ೧೬) ; ಸರಿಯ ರಾತ್ರಿಯೊಳಗೆ ಕರದಿ ಹಿರಿವ ಪಂಜ ಪಿಡಿದು ಬೇಗ ಝರತಿ ಹಳ್ಳ ಕೊಳ್ಳ ಕೂಪ ಕೆರೆಯ ಹುಡುಕುತ (ಹಮಚ. ೦೮೪). [ ? ]

**ಝರಿ$_1$** 'ಜರಿ$_6$' ನೋ.

**ಝರಿ$_2$** (ನಾ). = ಝರ : ಸುಶಾಂತಿಯು ಸುಂದರ ಬೆಟ್ಟದಿಂದ ನಿರಂತರವಾಗಿ ಸುರಿಯುತ್ತಿರುವ ಅಮೃತ ಝರಿಯಿದು (ಧರ್ಮಸಾ. ೧) ; ಉಗಮಸ್ಥಾನ ದಿಂದ ದೂರಾಗುವ ಝರಿಯಂತೆ (ಹೇಮಂತ. ೨೯೦). [ ಸಂ. ]

**ಝರಿ$_3$** 'ಜರಿ$_6$' ನೋ.

**ಝರಿಪಟ್ಟಿ** (ನಾ). ಜರಿಯಿಂದ ಕೂಡಿದ ರೇಷ್ಮೆಬಟ್ಟೆ (?) : ಅಡಕೆ ಮೆಣಸು ಝರಿಪಟ್ಟಿ ಕವಾಡ ಮುಂತಾದ ಘಡಿಸಿನ ಸರಕು ಪೂರತ್ವಾಗಿ (ಮೈಆರಿ. ೦೯೩೭; ೨೮-೩೪ ; 1708). [ ಝರಿ$_3$ (<ಜರಿ$_6$) + ಪಟ್ಟೆ$_3$ ]

**ಝರಿಸೀರೆ** 'ಜರಿಸೀರೆ' ನೋ.

**ಝರಿಸು** (ಕ್ರಿ). ಹರಿ ; ಪ್ರವಹಿಸು : ಮಣ್ಣೆದೆಯಲಿ ಝರಿಸುವ ನೀರ ಸೆಲೆಯಂತೆ (ಸವೀಗೀ. ೦೯-೩೦೦). [ಝರಿ$_2$ + – ಇಸು$_3$ ]

**ಝರ್ಝರ$_1$** 'ಜಂಜ್ಝಾರ' ನೋ.

**ಝರ್ಝರ$_2$** (ನಾ). ಒಂದು ಬಗೆಯ ವಾದ್ಯ : ಝರ್ಝರವೆಂಬ ಝಾಯಿ . . . ಇತ್ಯಾದಿದ ದಶವಾದ್ಯಂಗಳಂ ಬಾರಿಸಲುಳ್ಳ ವಿಚಕ್ಷಣರಿಂ ವಿನುತರಾಗಿ (ವಿವೇಕ. ೨೩೭). [ ಸಂ. ]

**ಝರ್ರನೆ** (ಅ). ಕೂಡ್ಲಲೆ ; ತಟ್ಟನೆ : ಆಕೆಯ ಉತ್ಸಾಹ ಝರ್ರನೆ ಇಳಿದು ಹೋಯಿತು (ಬರಹಾ. ೧೭); ರಮಾಬಾಯಿಯವರ ಮುಖವು 'ಝರ್ರನೇ' ಇಳಿಯಿತು (ಬೀಳತ ೪). [ ಝರ್$_0$ + – ಅನೆ$_1$ ]

**ಝಲ್, ಝಲ್ಲು$_1$** (ನಾ). ೧. ಒಂದು ಅನುಕರಣ ಶಬ್ದ: ಮಿಕ್ಕು ತನ್ನಯ ಮೇಲೆ ನೂಂಕುವ ಗಜಂಗಳಂ ಬಗಿದು '. . . ಮುತ್ತು ಝಲ್ಲೆನಲು ಸೂಸುತ್ತೆ (ಇಹರ. ದೀ. ೪೨-೯). ಝಲ್ಲು$_1$ : ೧. ಗದೆಗುದುಗೆಯ ಝಲ್ಲು ಝಲ್ಲೆಂದು ತಳವಾರರಿದೆ ಬಂದರೆಂದು ಕಾತರಿಸಿ (ಮೋಹತ. ೦೮-೨೫). ೨. "ಧಕ್ಕೆ, ಆಘಾತ" (ಬಾಸಿಗ. ಕೋಶ) : ತರವೇನೆ ಕ್ಷಣದೊಂದು ಝಲ್ಲಿನಲಿ ಜೀವಹಿಂಸೆ (ಬಾಸಿಗ. ೩೬-೨೦). 'ಜಲ್' ಪರಾ.

**ಝಲಕು** 'ಝಳಕ್ಕ$_2$' ನೋ.

**ಝಲಿರು** (ನಾ). ಒಂದು ಅನುಕರಣ ಶಬ್ದ :

ಝಲಿರಝಲಿರು (ದ್ವಿರುಕ್ತಿ): ಅಂದುಗೆಗಳ ಗೆಜ್ಜೆಗಳ ದನಿ ಝಲಿರಝಲಿ ರೆಂದೆನೆ ಪಂತಿ ಪಂತಿಯೊಳು (ಭರಪ. ೪-೬೯).

**ಝಲೆ** (ನಾ). ಶೋಭೆ ; ತೇಜಸ್ಸು ; ಪ್ರಕಾಶ. [ ಸಂ. ಝಲಾ ]

**ಝಲ್ಲ$_1$** (ನಾ). ೧. ಹುಚ್ಚು ; ಭ್ರಮೆ ; ಮನೋದೌರ್ಬಲ್ಯ: ರಾಜನ ಝಲ್ಲ ಬಿಟ್ಟಿತು (ದೀಪನಿ. ೪೪). ೨. ಚಿಂತೆ; ಭಯ. 'ಜಲ್ಲು$_4$' ಪರಾ.
[ ←ಹಿಂ. ಝಲ್ಲ ]

**ಝಲ್ಲ$_2$** (ನಾ). ಒಂದು ಬಗೆಯ ಸಕ್ಕರೆ : "ಝಲ್ಲ – ಖಂಡಸಕ್ಕರೆ" (ಅಕಾನಿ. ೧೧-೨) [ ? ]

**ಝಲ್ಲಡಿ** 'ಜಲ್ಲಡೆ' ನೋ.

**ಝಲ್ಲನೆ** (ಅ). ಒಂದು ಅನುಕರಣಾವ್ಯಯ : ಅನುಕರಣಕ್ಕೆ. . .ಝಲ್ಲನೆ, ದುಭುಮ್ಮನೆ, ಥಟಮ್ಮನೆ (ಶಮದ. ೧೪ ಪ್ರಯೋ). [ಝಲ್ + – ಅನೆ$_1$]

**ಝಲ್ಲರಿ** (ನಾ). ೧. ಡಮರುಗದಂತಹ ಒಂದು ಬಗೆಯ ಚರ್ಮವಾದ್ಯ: ಲೋಕತ್ರಯಮುದನುಕ್ರಮದೊಳ್ ವೇತ್ರಾಸನ ಝಲ್ಲರೀ ಮೃದಂಗ ಸಮಾನಂ (ಆದಿಪು.೧-೪೭); ನುತವೇತ್ರಾಸನ ಝಲ್ಲರೀ ಮೃದುಮೃದಂಗಾಭಂ (ಸುಕುಮಾ. ೧೧-೪೧) : ಪಟುಪಟಹ ರಣಂ ಝಲ್ಲರೀ ಶಬ್ದರಮ್ಯಂ (ಎಕ. VIII, ನಗರ. ೫೭-೭೦ ; ಸು. 1077) ; ವೇತ್ರಾಸನ ಝಲ್ಲರೀ ಮೃದಂಗ ಸಮಾನ ಅಧೋ ಮಧ್ಯೋರ್ಧ್ವ ಭೇದ ಭಿನ್ನಮುಂ (ಶತ್ರ್ಪ. ೨೭೫). ೨. ಕಂಚಿನ ಅಥವಾ ಹಿತ್ತಾಳೆಯ ದೊಡ್ಡತಾಳ : ಪಟುಪಟಹ ತುಣವ ಭಂಭಾ ಮರ್ದಳೆ ಝಲ್ಲರಿ ಮುಕುಂದ ತಾಳ ಕಾಹಳ ಶಂಖ ವಂಶ ವೀಣಾಸ್ವರಂಗಳೆಸೆಯೆ (ವಡ್ಡಾರಾ. ೭೭-೨೯): ತಳಿತ ಝಲ್ಲರಿಯ ಬಹಳ ವಾದ್ಯದ ನಡುವೆ ನಡೆದು (ಸಿದ್ಧರಾ. ೪-೧೮) ; ಮೃದಂಗ ಝಲ್ಲರಿ ತಾಳ ಪಳಂಚಿ (ಗಣೇಶ. ೧೮-೪೭೨). ೩. ಛತ್ರಿ ಮೊದಲಾದವುಗಳ ಅಂಚಿನಲ್ಲಿ ಜೋಲಾಡುತ್ತಿರುವ ಜಾಲರಿ,-ಕುಚ್ಚು ; ಉತ್ಸವಗಳಲ್ಲಿ ಎತ್ತಿಹಿಡಿಯುವ ಮಕರತೋರಣ : ಬಿರುದಿನ ಕತ್ತರಿಯ ಹಲಿಗೆಗಳ ಝಲ್ಲರಿ ಮುಸುಕಿದವು ಗಜವ (ಕುವ್ಯಾದ್ರೋ. ೩-೭) : ತಳಿತ ಪಲ್ಲವ

ಸತ್ತಿಗೆಯ ಹೊದರೆದ್ದ ಝಲ್ಲರಿಗಳ ವಿಚಿತ್ರಾಂಬರದ ಮುತ್ತಿನ ಮೇಲು ಗಟ್ಟುಗಳ (ತೊರರಾ. ೧-೭-೧೪); ಕುಸುಮಗಳ ಝಲ್ಲರಿಯ ಮುಸುಕಿನಿಂದ ಹಸನಾಗಿ ಯಿರುವ ಹೊಸ ಹಂಸತೂಲಿಕಾತಲ್ಪದೊಳ್ ಪವಳಿಸಿ (ಸೌಗಂಧಿ. ೧೯೬-೨೦). ೪. ಛತ್ರಿ; ಕೊಡೆ: ರಾಯನಾಯಕರ ಸಂದಣಿಯೊಳ್ ಎತ್ತಿದ ಝಲ್ಲರಿಗಳ ಮುತ್ತುವ ಕೈವಾರಿಗಳ ಕೋಲಾಹಲದಿಂ (ನಂಬಿರ. ೨-೪೫); ತುಂಬಿಗಳುಂ ನಭದಲ್ಲಿ ಮಂಡಲೀಕರಿಸಿ ನಿಳಿಂಪಕಾಂತೆಯರಿಗೆತ್ತಿದ ಪೀಲಿಯ ಚೆಲ್ವುವೆತ್ತ ಝಲ್ಲರಿಗಳೆವೆಂಬಿನಂ ಬಿಡದೆ ಬಂದುವು ಲೀಲೆಯನಂದು ಮಾಡುತುಂ (ದಾಧವು. ೬-೨೩); ಕರಿಘಟೆಯ ಕುಱುವದಲಿ ಹಯ ವೋಹರದ ತೆರೆವಾಲೆಯಲಿ ಬಲು ಝಲ್ಲರಿಯ ಬುದ್ಬುದತತಿ ಯಲಸ್ತದ ಕಿಡಿಯ ವಡಬನಲಿ (ಕುವ್ಯಾಭೀ. ೩-೨೩).

[ಸಂ. ಝಲ್ಲರೀ]

ಝಲ್ಲಳಿ 'ಜಲ್ಲರಿ₁' ನೋ.

△ಝಲ್ಲಟಿ 'ಜಲ್ಲರಿ₁' ನೋ.

ಝಲ್ಲಿ₁ 'ಜಲ್ಲಿ₂' ನೋ.

ಝಲ್ಲಿ₂ (ನಾ). ದಾಲ್ಚಿನ್ನಿ (?): ಲವಂಗದ ಝಲ್ಲಿಯಂ ಕಬ್ಬಿಣಮಂ . . . ಪುಡಿಮಾಡಿ ಸಮಾನಭಾಗಂಗಂಗೊಂಡು ಮಾಡಿದ ಅಂಜನಂ (ವಿವ್ಯವಿ. ೦೬೦).

[<ಪ್ರಾ. ಛಲ್ಲೀ = ತೊಗಟೆ]

ಝಲ್ಲಿಡಿ (ಕ್ರಿ). ಗೊಂಚಲುಗಳಿಂದ ತುಂಬಿಕೊಂಡಿರು; ಗರಿಗಳಿಂದ ತುಂಬಿರು(?): ಬಾಳೆಗಳ್ಬೆಳೆಯಲಾವ್ರು ಮದಾಳಿಗಳ ಮಱಿಗೊಂಡುದೆರ್ದೆ ನಿರಾಳವಾದುದು ಝಲ್ಲಿಡಿದು ತೆಂಗಿನಲಿಳಿಯ ಬಗಿದು ಕೇಳಿಗಿಳಿದವು (ಮದೀಪು. ೨-೩೦). [ಝಲ್ಲಿ₁ (<ಜಲ್ಲಿ₂) + ಇಡಿ₂]

ಝಲ್ಲಿಪಟೆ (ನಾ). ಒಂದುಂ ಸಂಬಾರ ಪದಾರ್ಥ; ದಾಲ್ಚಿನ್ನಿ (?): ಎತ್ತಿನಲ್ಲಿ ಅಡಕೆ ಮೆಣಸು ಝಲ್ಲಿಪಟೆ ಕೊಬರಿ ಕವಾಡ ಹೊರತಾಗಿ ಹೇರಿಕೊಂಬ ಜ್ಞಿನಿಸೂ (ಪ್ರಾಆರಿ. ೧೯೪೩, ೩೭-೨೦; 1643).

[ಝಲ್ಲಿ₂ + ಪಟೆ?]

ಝಲ್ಲಿಪಟ್ಟ (ನಾ).=ಝಲ್ಲಿಪಟೆ: ಅಡಕೆ, ಮೆಣಸು, ಝಲ್ಲಿಪಟ್ಟ ಕೊಬರಿ ಕವಾಡ ಮಿಡಿಸಿನ ಸರಕು ಹೊರತಾಗಿ (ಎಕ. VIII, ಸಾಗರ. ೫೩-೩೦; 1674).

[ಝಲ್ಲಿ + ಪಟ್ಟ?]

ಝಲ್ಲಿಪಟ್ಟೆ 'ಜಲ್ಲಿಪಟ್ಟೆ' ನೋ.

ಝಲ್ಲಿಮಿಗ 'ಜಲ್ಲಿಮಿಗ' ನೋ.

ಝಲ್ಲಿಮೃಗ 'ಜಲ್ಲಿಮೃಗ' ನೋ.

ಝಲ್ಲಿಸು₁(ಕ್ರಿ).ಬೆದರಿಸು; ಜಂಕಿಸು: ಝಲ್ಲಿಸಲು ಬಲನಹುದುಯಂಬಿನ್ನಿಲ್ಲಿ ಸತ್ಕಾರ್ಮುಖವಿವನದರಿಂ ಬಲ್ಲಿದನಿಸು ಪ್ರಹಸ್ತನೆನುತಾ ನೀಲ ಸರಳೆಳೆದಾ (ಜಿರಾಮಾ. ೬೦-೩೦); ನೀ ಪೆಣವ ಕೊಂಡು ಪೋಪುದುಯೆನುತಂ ಝಲ್ಲಿಸಿ ನುಡಿಯಲು (ಹಮದ. ೦೩೬).

[ಝಲ್ಲು₂(<ಜಲ್ಲು₄) + - ಇಸು₃]

ಝಲ್ಲಿಸು₂ (ಕ್ರಿ). ದ್ರವಿಸು; ಸ್ರವಿಸು: ಕಲ್ಲಲ್ತೇ ಶಶಿಕಾಂತಂ ಝಲ್ಲಿಸುವುದು ಚಂದ್ರಕಿರಣಮುಂ ತಾಗಲೊಡಂ (ಅನುಮು. ೮೯): ಝಲ್ಲಿಸುತ್ತಿಹುದ್ಯ ಮುಖದಿ ಬರುವಲ್ಲಣವ ಹೊತ್ತಂತೆ (ಸ್ವರೂಪಾ. ೧-೨೨): ಶಶಿಕಾಂತದ ಜಜ್ಜರಿಯೊಳು ಝಲ್ಲಿಸಿ ಪರಿವ ತಣ್ಣೀರಗಾಲುವೆಗಂಡು ನಿಲ್ಲದೆಯ್ದಿದನಾ ಭೂಪ (ಶ್ರೀಪಾಲ ೪-೬೩). [? + - ಇಸು₃]

ಝಲ್ಲಿಱು (ಕ್ರಿ). ಝಲ್ಲೆನ್ನುವಂತೆ ಹೊರಹೊಮ್ಮು: ಎಲ್ಲಾ ಮೈ ತುಂಬಿ ತೋಱುವನೊಮ್ಮೆಯೆದೆವೊಗದಲ್ಲಿ ಗರ್ಭದೊಳೊಮ್ಮೆ ಬೆಳಗು ಝಲ್ಲಿಱುವುದು (ಭರತ. ೬೦-೨೫). [ಝಲ್ + ಇಱು₁]

ಝಲ್ಲು₁ 'ಝಲ್' ನೋ.

ಝಲ್ಲು₂ 'ಜಲ್ಲು₄' ನೋ.

ಝಲ್ಲುಗೊಳ್ (ಕ್ರಿ). ತಳಮಳಗೊಳ್ಳು; ಗಾಬರಿಯಾಗು; ಹೆದರು: ಮಲ್ಲನಾರ್ಭಟದಿ ಮುನಿವಲ್ಲಭರು ಭಯಗೊಂಡು . . . ಝಲ್ಲುಗೊಂಡುರೆ ವನದಿ ಕಲ್ಲುತರುಗಳ ಕಂಡು ಮಲ್ಲನೆಂದೇ ಬಗೆವರು (ಮಲ್ಲಾರಿ. ೦-೨೩).

[ಝಲ್ಲು₂ (<ಜಲ್ಲು₄) + ಕೊಳ್₁]

ಝಲ್ಲೆನ್ (ಕ್ರಿ). ಭಯಗೊಳ್ಳು; ಹೌಹಾರು: ಹಗೆಯೆದೆ ಝಲ್ಲೆನಲು ಕಾಳಗಕೆ ಕವಿದವು ಕಟಕವೆರಡರಲಿ (ಕುವ್ಯಾದ್ರೋ. ೧೮-೩); ಎದೆ ಝಲ್ಲೆನಲು ಜವಗುಂದಿ ಲಕ್ಷ್ಮಣನೊಲಿದನವಯವವ (ತೊರರಾ. ೩-೩-೨೨).

[ಝಲ್ + ಎನ್₁]

ಝಷ (ನಾ). ೧. ಮೀನು; ಮತ್ಸ್ಯ: "ಮೀನಂ ಶಫರಂ ತಿಮಿ ಪಾಠೀನಂ ಝಷಮನಿಮಿಷಂ ವಿಶಾರಂ ಮತ್ಸ್ಯಂ ಮೀನವೆಸರ್" (ವಸುಕೋ. ೨೨-೫); ನಡು ಮಡು ಲೋಕಲೋಚನಝಷಕ್ಕೆ (ಪುಷ್ಪಪು. ೯-೪೨); ತರಂಗಸಂಘ ಸಂಭವ ರವ ವಾದ್ಯಕಾಡಿದುದು ಕೂಡೆ ಝಷಂ ಪೊಸಡೊಂಬವೆಂಬಿನಂ (ರಾಜಶೇ. ೨-೬೨). ೨. [ಜ್ಯೋತಿ] ಮೀನರಾಶಿ: ರವಿ . . . ಝಷದೊಳಿರೆ ವಧೂಪ್ರೀತಕಬ್ರವ್ಯಪಣ್ಯಂ (ಜಾತತಿ. ೧೭-೧೭). [ಸಂ.]

ಝಷಕೇತನ (ನಾ). ೧. ಮೀನಿನ ಗುರುತುಳ್ಳ ಧ್ವಜ; ಮನ್ಮಥನ ಧ್ವಜ: ಪೂವಿನ ಬಿಲ್ಗೆ ಪುರ್ವು ಕುಸುಮೇಷುಗೆ ಕಣ್ ಝಷಕೇತನಕ್ಕೆ ಚೆಲ್ವಾವಗ ಮಾದ ಸೋರ್ಮುಡಿ ರತಿಪ್ರಿಯಗಾಗೆ (ಶಾಂತಿಪು. ೮-೮೩); ನನೆಗಣೆಯಿಲ್ಲದ ಝಷಕೇತನಮಿಲ್ಲದ ಕುಸುಮಚಾಪಮಿಲ್ಲದ . . . ಮನಸಿಜನೆನೆ ಸಂದನಾ ಖಗೇಂದ್ರಕುಮಾರಂ (ವರ್ಧಮಾ. ೬-೬೬). ೨. ಮೀನನ್ನು ಧ್ವಜದಲ್ಲಿ ಗುರುತಾಗುಳ್ಳವನು; ಮನ್ಮಥ: ಶಶಧರಬಿಂಬಾನನೆಯಂ ಝಷಕೇತನ ಕೇತನಾಭತನುತನುವಂ . . . ಕಂಡೊಸೆದಂ ಬನದೊಳಗೆ ಜನಕತನಯಳ ನಣುವಂ (ಕವಿರಾ. ೨-೩೮); ಝಷಕೇತನಂ ವಸಂತಾಗಮಮಿಲ್ಲದೇನೊ ಲಿಸಲಾರ್ತಪನೇ ವಧುವಂ (ಮದಿತಿ. ೧೦-೩೩). [ಝಷ + ಕೇತನ]

ಝಷಕೇತು (ನಾ). ೧.=ಝಷಕೇತನ ೧: ಮೋಲುದು ಝಷಕೇತುವಂ ಮಿಗೆ ಮನೋಜಮನೋಹರಿಯೋಱು ಬರ್ಪವೊಲ್ (ಚಂದ್ರಪು. ೦೦-೬). ೨.=ಝಷಕೇತನ ೨: ಜಿತಝಷಕೇತುರೂಪನೆನಿಸಿದ ಮಲ್ಲಣಂಗೆ ಲೋಕಾಪ್ತ ಭಾರವಿಗೆಣಿಗುವೆಂ (ಪದ್ಮರಾ. ೦-೧೪); ಸಿಡಿಲ್ದ ಸೀರ್ವನಿ ಗಳೊಪ್ಪಿರೆ . . . ತುಪಾಕದಿಂ ನೆಗೆವ ಗುಂಡಿನವೋಲ್ ಝಷಕೇತು ವೀರನಾ (ರಾಜಶೇ. ೫-೬೯). [ಝಷ + ಕೇತು]

ಝಷಧ್ವಜ (ನಾ).=ಝಷಕೇತನ. [ಝಷ + ಧ್ವಜ]

ಝಷನೇತ್ರ (ನಾ). ಮೀನಿನಂತಹ ಕಣ್ಣು: ಎಳಸಿರಿಸಿತ್ರವಲ್ಲಿರ ಲಸಜ್ಝಷ ನೇತ್ರಮನೇಣನೇತ್ರಮಂ (ಪುಷ್ಪಪು. ೫-೨೫). [ಝಷ + ನೇತ್ರ]

ಝಷಪತಾಕೆ (ನಾ).=ಝಷಕೇತನ ೧: ಮೀನಕೇತುವೆತ್ತಿಸಿದ ಸಮುಲ್ಲ ಸಜ್ಝಷಪತಾಕೆಯೆನಿಪ್ಪವೊಲಾಂತಳಾಕೆಯಾ ವಸದನದೊಳ್ (ಚಂದ್ರಪು. ೬-೬೬). [ಝಷ + ಪತಾಕೆ]

ಝಷೆ (ನಾ). ಹೀರೆಗಿಡ: "ಗಾಂಗೇರುಕಿ, ನಾಗಬಲಾ, ಝಷಾ, ಪ್ರಸ್ಥಗ ವೇಧುಕಾ ೪ ಹೀರೆಗಿಡದ ಹೆಸರು. ಇವು ಹೀರೆ, ತುಪ್ಪಹೀರೆ, ಕಾಡುಹೀರೆ ಇವುಗಳೆಲ್ಲಕ್ಕೂ ಹೆಸರು" (ಸಿದ್ಧಾಂತಿ. ೧೨೦). [ಸಂ. ಝಷಾ]

ಝಸ₁ 'ಜಸ₁' ನೋ.

ಝಸ₂ 'ಜಸ₂' ನೋ.

ಝಸ₃ (ನಾ). ಬೇಗ; ತ್ವರೆ: ಮಸಣದೊಳು ಸಂಸ್ಕಾರಮಾಡಬೇಕೆಂದು ಝಸದಿಂದ ನಾ ಬಂದೆ ಪ್ರೇತನೆಲಕಾಗ (ಹಮದ. ೦೮೯). [?]

ಝಸಂಬಡೆ 'ಜಸಂಬಡೆ' ನೋ.

ಝಸಕೇತು (ನಾ). = ಝಷಕೇತನ ೨: ಪಂಕೇಜಚರಣ ಝಸಕೇತುದೇಹ ಕ್ಷಮಾಭೃದ್ವಜ್ರ ವಿರೂಪಾಕ್ಷ ಪಾಲಿಪುದು (ರಾಭಿಳ. ೨-೦೬).

[<ಸಂ. ಝಷಕೇತು]

**ಝುಳ** 'ಜಲ್ಲ$_1$' ನೋ.

**ಝುಳಂಪಿ** (ನಾ). ಕುದುರೆಯ ಆರು ಲಕ್ಷಣಗಳಲ್ಲಿ ಒಂದು (?): ಭಂಜಳ ಮುರಳಿ ಝುಳಂಪಿ ವಾಹಿಣಿ ರೀಪು ರಂಜಪ ರೇಖೆಯೆಂದೆಂಬ ಮಂಜುಳ ಮಾದ ಪಡಂಗದೊಳಾ ಹಯ ರಂಜನೆವಡೆದುದು (ಶ್ರೀಪಾಂ. ೪-೧೦). [ ?. ]

**ಝುಳಂಪಿಸು**, ಜಳಪಿಸು, ಜಳಿಪಿಸು, ಜಳಂಪಿಸು, ಝುಡಪಿಸು, ಝುಳಪಿಸು, ಝುಳುಂಪಿಸು, ಝುಳುಪಿಸು (ಕ್ರಿ). ೧. ನಡುಗಿಸು; ಅಲ್ಲಾಡಿಸು; ಬೀಸು : ಝೋಂಪಿಸಿ ಮುಂಬರಿದಾರ್ದು ಝುಳಂಪಿಸಿದೊಳ್ವಾಳ್ಗಳೊಡನೆ ಕಂಪಿಸೆಯರ್ದೆಯಂ (ಚಿಕವಿ. ೨-೯೯). ೨. ಹೆದರಿಸು ; ಭಯಪಡಿಸು : ಜಸಮೆಳೆಯೆಲ್ಲಮಂ ಬಳಸೆ ಬಲ್ಲು ನೆಗಟ್ಟಿಯ ಬೀರರಂ ಝುಳಂಪಿಸಿ (ಕಭ್ಯಪ. ೪೬). **ಜಳಪಿಸು :** ೧. ಕೆಯ್ಯ ಖಡ್ಗವ ಜಳಪಿಸಿ ದೈತ್ಯ ನುಡಿದ ಕಠೋರವಾಕ್ಯಗಳ (ಮೋಹತ. ೧೨-೦೦) ; ಬೆತ್ತವನ್ನು ಜಳಪಿಸುತ್ತಾ ಕೇಳಿದ (ಕೊತಕಾ. ೨೮). **ಜಳಿಪಿಸು :** ೧. ಒರಿಯುಬ್ಬಣವ ಜಳಿಪಿಸಿ ವಿಸಾಸೆಯ ಮೇಲೆ ಬೆರಳಿಡುತ (ಕಂನವಿ. ೦೩-೩೮). **ಜಳುಪಿಸು :** ೧. ಬೇಡಿದೊಡೆ ಬೀಳುವುದು ದಾಯವು ನಾಡೆ ಜಳುಪಿಸೆ ಹೊಳೆವ ದಾಳದ ರೂಢಿಗಚ್ಚರಿಯಾಗೆ (ನಳಚ. ೯-೪೪). **ಝುಡಪಿಸು :** ೧. ಖಡುಗ ಬರಲು ಕೈಕೊಂಡು ಝುಡಪಿಸಿ ನೋಡಿ ಪೊಡೆದನಾ ಶಂಭುಕನಡಗಿರ್ದ ಬಿದಿರ ಪಿಂಡಿಲನು (ಅಂಜಚ. ೦೩-೩೩). **ಝುಳಪಿಸು :** ೧. ಆಯುಧವ ಹಿಡಿದೊಡೆಯ ಸುಗಿದನಡಾಯುಧವ ಝುಳಪಿಸುತ (ಕುವ್ಯಾಕ. ೦೭-೨): ಕರವಾಳ ರೋಷಾವೇಶನಿಳಿದನು ಸಿಂಹವಿಷ್ಟರವ ಬಾಳ ಝುಳಪಿಸಿ ಕೆಂಪೊಗುವ ಕಣ್ಣಾಲಿಗಳಲಿ (ತೊರಚಾ. ೩-೩-೯). **ಝುಳುಂಪಿಸು:** ೧. ಜಡಿದಸಿಯಂ ಝುಳುಂಪಿಸಿ ಕರಾಗ್ರದೊಳೆತ್ತಿ ಕಡಂಗಿ ಸಾರ್ದು (ರಾಜಶೇ. ೩-೦೨೩). **ಝುಳುಪಿಸು :** ೧. ಕೈದುಗಳ ಝುಳುಪಿಸಿ ವಾಹನಂಗಳನೇರಿ ನಡೆತರಲು (ದೇವೀಮ. ೩-೩೨). ೩. ಥಳಥಳಗುಟ್ಟು ; ಮಿರುಗು : ಆ ಸುವರ್ಣದ ಮಧ್ಯದಿಂದ ವಜ್ರ ಮುಂತಾದ ರತ್ನಗಳು ಝುಳುಪಿಸುತ್ತಿದ್ದವು (ಕಪಾಕಿಂ. ೪೯). [ ಝುಳಂಪು$_0$ (<ಝುಳಪು) + – ಇಸು$_3$ ]

**ಝುಳಂಬ** 'ಜಳಂಬ' ನೋ.

**ಝುಳಂಬಾಯಿತ** 'ಜಳಂಬಾಯ್ತು' ನೋ.

**ಝುಳಂಬಾಯ್ತು** 'ಜಳಂಬಾಯ್ತು' ನೋ.

**ಝುಳಕ$_1$** 'ಜಳಕ' ನೋ.

**ಝುಳಕ$_2$**, ಝುಲಕು, ಝುಳಿಕು, ಝುಳುಕು (ನಾ). ಹೊಳಪು; ಪ್ರಕಾಶ; ಕಾಂತಿ : ಲುಳಿಯ ಮಿಂಚಿನ ಮುಂದೆ ಸುಗತಿಯ ಝುಳಕದನಿಲನ ಥಟ್ಟು . . . ಬಳಸಿದೆ (ಕುವ್ಯಾಭೀ. ೩-೦೭). **ಝುಲಕು :** ತಾಯಿತನದ ಹೊಸ ಝುಲಕು ಅವಳ ಮೊಗದಲ್ಲಿ ಕೂಡಿಕೊಂಡಿತ್ತು (ಸಿದಥಾ. ೦೦೯). **ಝುಳಿಕು :** ವಳುಕಿನೋಲ್ ಬಳುಕಿನೋಲ್ ನಳುಕಿನೋಲ್ ಝುಳಿಕಿನೋಲ್ ಶೋಭಿಸುವಳಾ ಸೌಂದರಿ (ಜನಮು. ೪೨-೪೨). **ಝುಳುಕು :** ಇಂತಹದಕ್ಕೆ ಮರ್ಯಾದೆ ಅಥವಾ ಸುಧಾರಣೆಯ ಝುಳುಕು ತಾಗಬೇಡವೆ ? (ಗೋಯಾತ್ರ. ೩೨). [ ←ಮರಾ. ಝುಳಕ್; ಹಿಂ. ಝುಲಕ್ ]

**ಝುಳಕಂಬೊಗು** 'ಜಳಕಂಬೊಗು' ನೋ.

**ಝುಳಕು** (ಕ್ರಿ). ೧. ಆತುರಪಡು ; ದಂಡುಕು. ೨. ತಳಮಳಗೊಳ್ಳು ; ಆವೇಗಗೊಳ್ಳು: ಝುಳಕದಿರು ಜಾಣ ಸುಭದ್ರೆಯನು ಕೊಡಿಸುವೆ (ಕನಾಕ. ೩೦೩). [ ←ಮರಾ. ಝುಳಕಣೇ ]

**ಝುಳಪ** (ನಾ). ಹೊಳಪು ; ಕಾಂತಿ : ಮಿಗೆ ನೋಯಿಪಾಸೆಯೆಂಬಲಗಿನ ಝುಳಪದಿಂ ಮೆಱೆವ ಮನಮೆಂದೆಂಬ ಮಾಸಾಳ (ಮೊನೆರ. ೧೪೦-೧೯) ; ಝುಳಪದಲಿ ಬೊಬ್ಬಿಡುವಡಾಯುಧ ಹೊಳವುಗಳ (ಕುವ್ಯಾಭೀ. ೨-೭). [ <ಝುಳಪು ]

**ಝುಳಪಿಸು** 'ಝುಳಂಪಿಸು' ನೋ.

**ಝುಳಪು**, ಝುಡಪು (ನಾ). ಕಾಂತಿ ; ಪ್ರಕಾಶ. 'ಝುಳಪುಗೊಳ್ಳು' ಪರಾ. **ಝುಡಪು :** ಝುಡಪುಗಳ ಗಿರಿಶಿರದ ನೆಗಟಿನ ಕಿಡಿಯುಲುಬರ ತುಂಬಿದುದು ಬೇರುಡಿಯ ಮರದಾಗುಗಳಲುದಿಸಿದ ಧೂತ ಧೂಮ ಶಿಖಿ (ತೊರಚಾ. ೪-೭-೦೦).

ಝಾಂಝುಡಪು (ದ್ವಿರುಕ್ತಿ) : ಗದಬದರೆನ್ನುತ ರಥ ಝುಂಝುಡಪುಗಳ್ ಪೊದುತಿರುವ ಶಂಖ ತಮ್ಮಟೆ ಭೇರಿಗಳ್ (ಬಾಣಾಕ. ೦೯). [ ಝುಳ (<ಜಲ$_1$) + – ಪು$_2$ ]

**ಝುಳಪುಗೊಳ್ಳು** (ಕ್ರಿ). ಹೊಳೆ ; ಪ್ರಕಾಶಿಸು : ಬಳ್ಳಿ ಮಿಂಚಿನಂತೆ ಝುಳಪುಗೊಂಡು (ವಿಗಡ. ೪೭-೧). [ ಝುಳಪು + ಕೊಳ್ಳು (<ಕೊಳ್$_1$) ]

**ಝುಳಪ್ಪ**, ಜಳಪ್ಪ (ನಾ). ೧. ಮೇಲೆರಗಿ ಹೊಡೆಯುವವನು ; ಶೂರ. ೨. ಹೆದರಿಸುವವನು ; ಸೋಲಿಸುವವನು ; ಒಂದು ಬಿರುದು. 'ರಾಯಝುಳಪ್ಪ' ಪರಾ. **ಜಳಪ್ಪ :** 'ರಾಯಜಳಪ್ಪ' ಪರಾ. [ <ಪ್ರಾ. ಝುಡಪ್ಪ ]

**ಝುಳವಟಿಗೆ** 'ಜಳವಟ್ಟಿಗೆ' ನೋ.

**ಝುಳವಟ್ಟಿಗೆ** 'ಜಳವಟ್ಟಿಗೆ' ನೋ.

**ಝುಳವೂಡು** (ಕ್ರಿ). ಕಾಂತಿಯನ್ನು ಹೊಂದು : ಬಾಡಿದವು ತಾವರೆಗಳುಱೆ ಝುಳವೂಡಿದವು ನೈದಿಲುಗಳು . . . ಸಾಂದ್ರಚಂದ್ರಿಕೆಯಲಿ (ಕುವ್ಯಾದ್ರೋ. ೦೭-೦೪). [ ಝುಳ (<ಜಲ$_1$) +ಊಡು ]

**ಝುಳಿಕು** 'ಝುಳಕ$_2$' ನೋ.

**ಝುಳಿಸು** (ಕ್ರಿ). ಹೊಳೆ; ಪ್ರಕಾಶಿಸು : ತಗ್ಗಿನಲ್ಲಿ ನೀರು ಧುಮುಕಿ ತರಂಗವು ಒಡೆದುಹೋದ ಕಡೆಯಲ್ಲಿ ಝುಲತ್ಕಾರವಾಗಿ ಝುಳಿಸುವುದು (ದೇವೀಕಾ. ೭೬). [ ಝುಳ (<ಜಲ$_1$) + – ಇಸು$_3$ ]

**ಝುಳುಂಪಿಸು** 'ಝುಳಂಪಿಸು' ನೋ.

**ಝುಳುಂಬಕ** (ನಾ). ಕುಚ್ಚು ; ಗೊಂಚಲು : ಪುನ್ನಾಗದ ಸೂಸಕಂಗಳೊಳಂ ನಾಗದ ಝುಳುಂಬಕಂಗಳೊಳಂ . . . ಕಾಮದೇವನನತಿಪ್ರೀತಿಯಿಂ ದರ್ಚಿಸಿ (ಕಾದಂಟಾ. ೭೮೩). [ ?. /ಮರಾ. ಝುಳುಂಬುಕಾ ]

**ಝುಳುಕು** 'ಝುಳಕ$_2$' ನೋ.

**ಝುಳುಪಿಸು** 'ಝುಳಂಪಿಸು' ನೋ.

**ಝುಳ್ಳಿಸು** 'ಜಳ್ಳಿಸು' ನೋ.

**ಝುಟಿಸು** (ಕ್ರಿ). (?) : ವರ್ಗ ಚತುರ್ಥಾಕ್ಷರಂಗಳ್ಗೆ . . . ಝುಟಿಸಿತು. ಝುಷಾಳಿಸಿತು (ಶಮದ. ೧೩ ಪ್ರಯೋ). [ ? ]

**ಝಾಂಕೃತ** (ನಾ). ೧. ಝಣ ಝಣ ಎಂದು ದನಿಗೆಯ್ಯುವ ಕಾಲಿಗೆ ಹಾಕಿಕೊಳ್ಳುವ ಆಭರಣ ; ಕಾಲುಂಗುರ ಅಥವಾ ಕಾಲ್ಗಡಗ: ೨. = ಝಂಝು "ಝಾಂ[ಪಾಠಾಂ. ಝಂ,ಯಿಂ]ಕೃತಂ ವಾತನೊಳು" (ಮಂಗರಾ. ೨೭-೬). 'ಝಾಂಕೃತ' ಪರಾ. [ ಸಂ. ]

**ಝಾಂಗಟೆ** 'ಜೇಗಂಟೆ' ನೋ.

**ಝಾಂಡ**, ಜಂಡೆ$_1$, ಜಾಂಡೆ, ಜಾಂಡೇಯ, ಝುಂಡಾ, ಝಾಂಡಾ (ನಾ). ೧. ಬಾವುಟ ; ಧ್ವಜ. ೨. (ಆಲಂ) ತಂಗುದಿಕೆ ; ಮೊಕ್ಕಾಂ : ನಾರಾಯಣನ ಝಾಂಡ ಈವತ್ತು ಕೋಡೀಬಾಗದಲ್ಲೇ ಎಂದು ತೋರುತ್ತದೆ (ಮೂರುದಾ. ೩೦೪) ; ಎಲ್ಲಾ ಕಡೆಯೂ ಮಕ್ಕಳ ಝಾಂಡ (ಸುವಸಂ. ೯೦). **ಜಂಡೆ$_1$:** (೬). **ಜಾಂಡೆ:** ೧. ಅಂಬಾರ ತಾಗುವಂದದಲಿ ಡೊಂಬನಾಟದ ಗಳೆಯಂತೆ ಜಾಂಡೆಗಳಲ್ಲಿ ರುಬಾಣದೋರಿ ಮೆರೆದರು (ಸೌಂದಕಾ. ೩-೨೯) : ಕೋಟೆ ಮೇಲೆ ಇಂಗ್ರೇಜಿ ಬಹಾದ್ದರರ ಜಾಂಡೆ ಹಾಕಿಸಿಕೊಳ್ಳುತ್ತೇನೆ (ರಾಜೇಂದ್ರ. ೨೯). **ಜಾಂಡೇಯ :** ೧. ಮೆಱೆದಿರಲ್ಕಿಂತುವಮಾ ಗುರುವರು

. . . ಜಾಂಡೇಯುಮಂ ನಿಲಿಸಿದಂ ವೃಭವವಿದೆಂಬ ತೆಱದಿ (ಸುಜಾವಿ. ೨೮-೧೦). **ಝಂಡಾ :** 'ಝಂಡಾಊರು' ಪರಾ. **ಝಾಂಡಾ :** ೨. ಮೂರು ಮಂದಿ ಪಾದುಷಹರು ತಮ್ಮ ತಮ್ಮ ಪೇಷುಖಾನೆ ಸಂಗಡ ಝಾಂಡಾವನ್ನು ಹೊರಗೆಹಾಕಿಸಿದರು (ಬಖೈರು. ೬).
[ ←ಹಿಂ. ಝಂಡಾ, ಝೇಂಡಾ ; ಮರಾ. ಝೇಂಡಾ ]

**ಝಾಂಡಹೂಡು,** (ಕ್ರಿ). ೧. ಬಾವುಟವನ್ನು ನೆಡಂ. ೨. (ಅಲಂ) ತಳ ವೂರು; ನೆಲಸಂ; ವಾಸಿಸು: ಯಾವುದೋ ಬೂಷ್ಟು ಒಂದು ತಟ್ಟೆಯಲ್ಲಿ ಝಾಂಡಹೂಡಿತು (ದುನೋಣಂ. ೨೭೦).
[ ಝಾಂಡ + ಹೂಡು (<ಪೂಡು) ]

**ಝಾಂಡಾ** 'ಝಾಂಡ' ನೋ.

**ಝಾಂಡಾಊರು,** ಝಂಡಾಊರು (ಕ್ರಿ). = ಝಾಂಡಹೂಡು ೨ : ಎಲ್ಲರೂ ಎಲ್ಲಿ ಬಂದು ಝಾಂಡಾ ಊರಿಬಿಡುವರೋ ಎಂಬ ದಿಗಿಲು (ನಾಡಿಗೇ. ೦೬೬). **ಝಂಡಾಊರು :** ಹಳ್ಳಿಗಾಡುಗಳಿಗೆ ಸರ್ಕೀಟಿಗೆ ಬಂದುಬಿಟ್ಟರೆ ಆಫೀಸರರು ರಝಂಡಾಊರುವುದು ಇಲ್ಲೇನೆ (ರೂಪಸಂ. ೬೦).
[ ಝಾಂಡಾ (<ಝಾಂಡ) + ಊರು$_1$ (<ಊಱು$_1$) ]

**ಝಾಂಡಾಹಾಕು** (ಕ್ರಿ). = ಝಾಂಡಹೂಡು ೨ : ಮಾವನಮನೆಯಲ್ಲಿ ಹೋಗಿ ಝಾಂಡಾ ಹಾಕಿದ್ದಾನೆ (ರೂಪ).
[ ಝಾಂಡಾ (<ಝಾಂಡ) + ಹಾಕು (<ಪಾಯ್ಕು$_1$) ]

**ಝಾಕಣೆ,ಜಾಕಣೆ**(ನಾ). (ಉಕ) ಪಾತ್ರೆಗಳ ಮೇಲೆ ಮುಚ್ಚುವ ಮುಚ್ಚಳ: ಅನ್ನದ ತಪ್ಪೇಲಿ ಮ್ಯಾಲಿನ ಝಾಕಣಿ ಸುದ್ದಾ ತಗದಿಲ್ಲಾ (ವೃನಿ. ೨೨೦). **ಜಾಕಣೆ :** ಹಿಂದೂಸ್ಥಾನೀ ದಾಸಿ ಜಾಕಣಿಯಲ್ಲಿ ಕಂಡ ತೆಗೆದುಕೊಂಡು ಬಂದಳು (ಅರಗಿ. ೨೨೩). [ ←ಮರಾ. ಝಾಕಣೀ ]

**ಝಾಗಟೆ** 'ಜೇಗಂಟೆ' ನೋ.

**ಝಾಟ** (ನಾ). ೧. ಪೊದರು ; ಹೊದೆ. ೨. ಲತಾಗೃಹ ; ನಿಕುಂಜ.
[ ಸಂ. ]

**ಝಾಟಣೆ** 'ಝಾಡಣೆ' ನೋ.

**ಝಾಟಲ** (ನಾ). ಮೊಕ್ಕೆಮರ : "ಗೋಲೀಢಃ, ಗೋಲೀಹಃ, ಝಾಟಲಃ . . . ಮೊಕ್ಕೆಮರದ ಪೆಸರು" (ಸಿದ್ಧಾಂತಿ. ೦೦೬). [ ಸಂ. ]

**ಝಾಡಣೆ,** ಜಾಡಣ, ಜಾಡಣೆ, ಝಾಟಣೆ (ನಾ). ೧. ಅಳ್ಳಾಡಿಸುವುದು ; ಕೊಡಹುವುದಂ ; ಜಳಪಿಸುವುದು : ಕೊನರ್ವ ಕೋಪದ ಖಿಂಡೆಯದ ಝಡಪುಗಳ ಝಾಡಣೆಯ (ತೊರರಾ. ೬-೯-೩). **ಜಾಡಣ :** ೧. 'ಜಾಡಣೆ ಹೊಡೆ' ಪರಾ. **ಜಾಡಣೆ :** ೧. ಝಡಪುಗಳ ಜಾ[ಪಾಠಾಂ. ಝಾ]ಡಣೆಯ ಮಿಂಚಿನ ಖಡುಗಗಳ (ತೊರರಾ. ೪-೬-೪). ೨. ಎಸೆಯುಂವುದಂ ; ತೆಗೆದಂ ಹಾಕುವುದಂ. ೩. ಭೇದಿಯಾಗುವುದು ; ಅತಿಸಾರ : ನಿನ್ನೆ ದಿನವೆಲ್ಲಾ ಜಾಡಣೆ, ಈಗ ಬಹಳ ಸುಸ್ತು (ರೂಪ). **ಝಾಟಣೆ :** ೧. ಒಂದು ಝಾಟಣೆಯಿಂದ ಕಾಲ ಆಧಾರವನ್ನು ಪಡೆಯಲೆತ್ನಿಸಿದಳು (ರಕ್ತಾಕ್ಷ. ೩೧೩). [←ಮರಾ. ಝಾಡಣೇ; ಹಿಂ. ಝಾಡನಾ]

**ಝಾಡಮಾಲಿ,** ಜಾಡಮಾಲಿ, ಝಾಡುಮಾಲಿ (ನಾ). ಕಸಗುಡಿಸುವ ಕೆಲಸಮಾಡಿ ಜೀವಿಸುವವನು; ಬೀದಿಗುಡಿಸುವವನು ; ಜಲಗಾರ : ಊರಿನ ಝಾಡಮಾಲಿಗಳ ಮಧ್ಯೆ . . . ವಾಸ (ದಿಲ್ಲಿಪ. ೨೩) : ನಂಜುಂಡ ಝಾಡಮಾಲಿಯಾದ ನಂತರ (ಬಿಸ್ತ್ರಿ. ೦೩೦) : ಝಾಡಮಾಲಿಗಳ ಗುಡಿಸಲುಗಳ ಮುಂದೆ ಹುಡುಗ ಹುಡುಗಿಯರು ಆಟವಾಡುತ್ತಿದ್ದಾರೆ (ಸಾಹೇಬ್. ೬೩). **ಜಾಡಮಾಲಿ :** ಜಾಡಮಾಲಿಗಳ ಕೆಲಸದಲ್ಲಿ ಕೊಡಗಿದ್ದ ಹೈದಿಗಳು (ಪುನರು. ೨೦೭). **ಝಾಡುಮಾಲಿ :** ಸಾಹೇಬರ ಝಾಡುಮಾಲಿಯು ಕೂಡ ಧರಿಸದಂಥ ಹೊಲಸು ಬಟ್ಟೆಗಳು ಅವರ ಮೈಮೇಲಿದ್ದವು (ನಾಕಡಿ. ೩೨). [ ?./ಹಿಂ. ಮರಾ. ಝಾಡೂ = ಕಸಪರಕೆ ]

**ಝಾಡಿ$_1$,** ಜಾಡಿ$_1$ (ನಾ). ೧. ಸಂದಣಿ ; ದಟ್ಟಣೆ ; ಸಮೂಹ : ಪಲ್ಲವ ಸತ್ತಿಯ ಝಾಡಿಗಳೊಳಗೆ ಕೈಗಾಯ್ದು ನಿಂದನು ಕರ್ಣ (ಕುಮಾರವ್ಯಾ. ಕರ್ಣ. ೩೮. ೨೬೩). ೨. ಹೆಚ್ಚಳ ; ಆಧಿಕ್ಯ : ಝಳದ ಝಾಡಿಗೆ ಬೆವರಿ ವಸನಾಂಚಲದ ಗಾಳಿಗೆ ಮೊಗವನೆತ್ತಿದರು (ಕುಮಾರವ್ಯಾ. ೧೯-೧೮) : ಅಕ್ಷಿಗಳಲುಬ್ಬುವ ತೋರಗಿಡಿಗಳ ದಾಡೆಗಳ ವಿಷದುರಿಯ ಝಾಡಿಗಳ (ತೊರರಾ. ೬-೧೩-೩೩). **ಜಾಡಿ$_1$ :** ೧. ಹೂಡಿದಂಬಿನ ಹೊದೆಯ ಬಂಡಿಯ ಕೋಹ ಕಡಿದನು ಛತ್ರಚಮರದ ಜಾ[ಪಾಠಾಂ. ಝಾ]ಡಿಗಳ ತಱಿದೊಟ್ಟಿದನು ಕಲಿಪಾರ್ಥ (ಕುಮಾರವ್ಯಾ. ೨೬-೯). ೨. ಪವನತನಯನ ಖತಿಯ ಜಾ[ಪಾಠಾಂ. ಝಾ]ಡಿಯ ಹವಣ ಕಂಡರು (ಕುಮಾರವ್ಯಾ. ೦೦-೨೩): ಕಣ್ಗಳ ಕಿಡಿಯ ಝಳದ ಜಾಡಿಯ ಭೀಷಣಧ್ವನಿಗಳ ಘೋರ ರಾಕ್ಷಸರು (ಜಲಕು. ೪೨-೪೩) : ಜಳದ ಜಾಡಿಯ ಬಿಂಕದಿಂದೆ ಸಲೆ ಗಮನಿಸುತಂತಾ ಬಾಣವೂ (ಘೋಡಾಪು. ೪೨).
[ ←ಹಿಂ. ಮರಾ. ಝಾಡೀ = ಪೊದೆ, ಪೊದರು ]

**ಝಾಡಿ$_2$** 'ಜಾಡಿ$_2$' ನೋ.

**ಝಾಡಿ$_3$** 'ಝಾಡ' ನೋ.

**ಝಾಡಿ$_4$** 'ಜಾಡಿ$_4$' ನೋ.

**ಝಾಡಿ$_5$** (ನಾ). ಗದಾಯುದ್ಧದಲ್ಲಿ ಒಂದು ವರಸೆ : ಝಾಡಿ ಝಂಕಣೆ ಝಡಪು ಪಾಡಾಪಾಡಿ . . . ಘಲ್ಲಣೆಗಳಲಿ ಗದೆ ಕುಣಿದಾಡಿದವು (ತೊರರಾ. ೬-೦೪-೦೬). [ ? ]

**ಝಾಡಿಕೆ** (ನಾ). = ಝಾಡಿ$_1$ ೨ : ಎಲೆಯಾಗ್ನಿ ಜಿಹ್ವೆಯ ಝಾಡಿಕೆಯ ಕುಡಿಯಂತೆ ಕಿಡಿಗೆದಱಿದವು ಕೈದುಗಳು (ತೊರರಾ. ೬-೨೦-೨೪).
[ ಝಾಡಿ$_1$ + -ಇಕೆ ]

**ಝಾಡಿಗಿಡಿ** (ನಾ). ಗುಂಪುಗೊಂಡ ಕಿಡಿ : ವೈಷ್ಣವ ಬಾಣವನು ಬೆಸಸೆ ಝಾಡಿಗಿಡಿಗಳ ಝಳದ ದಳ್ಳುರಿ . . . ಅಡಗಿಸಿತಾ ಶಿರತ್ರಯವ (ತೊರರಾ. ೩-೬-೨೩). [ ಝಾಡಿ$_1$ + ಕಿಡಿ$_1$ ]

**ಝಾಡಿಗೆದಱು$_1$,** ಜಾಡಿಗೆದಱು (ಕ್ರಿ). ೧. ಅಧಿಕವಾಗಿ ಹರಡು,-ವಿಸ್ತಾರಗೊಳ್ಳು : ಝಾಡಿಗೆದಱುವ ಗೌರುಗಹಳೆಗಳ ತೂಳುವಱೆಗಳ . . . ಘೋಷವವನಿಯ ಸೀಳೆ (ಕುಮಾರವ್ಯಾ. ೨-೨). **ಜಾಡಿಗೆದಱು:** ೨. ದಟ್ಟವಾಗಿ ನಿಮಿರು ; ಗುಂಪುಗುಂಪಾಗಿ ಕೆದರು : ಮೈಯಲಿ ಜಾ[ಪಾಠಾಂ. ಝಾ]ಡಿಗೆದಱಿತು ರೋಮ ಝಳಪಿಸಿತರುಣಮಯ ನಯನ (ಕುಮಾರವ್ಯಾ. ೦೩-೦೩).
[ ಝಾಡಿ$_1$ + ಕೆದಱು$_1$ (<ಕೆದಱ್$_1$) ]

**ಝಾಡಿಗೆದಱು$_2$** (ನಾ). ಅಧಿಕವಾಗಿ ಹರಡುವಿಕೆ; ವಿಸ್ತಾರಗೊಳ್ಳುವಿಕೆ: ತುಡುಕು ಚಮರಿಯ ಝಾಡಿಗೆದಱಿನ ಗಡಣಿಸುವ ಝಲ್ಲರಿಯ ದಳ ಬಱಿಸಿಡಿಲ ಮೇಳವದಂತೆ ನೆರೆದುದು (ಕುಮಾರವ್ಯಾ. ೦೮-೦೦).
[ ಝಾಡಿ$_1$ + ಕೆದಱು$_2$ (<ಕೆದಱ್$_2$) ]

**ಝಾಡಿಮಸಗು** (ಕ್ರಿ). ಅಧಿಕವಾಗಿ ಹರಡಂ; ಅತಿಶಯಂವಾಗು: ಆಹವದ ಖಯಖೋಡಿಯಿಲ್ಲದೆ ಸುಭಟರಬ್ಬರ ಝಾಡಿಮಸಗಿತು ಕದನದಲಿ (ಕುಮಾರವ್ಯಾ. ೮-೦೩). [ ಝಾಡಿ$_1$ + ಮಸಗು$_1$ ]

**ಝಾಡಿಯೆಸುಗೆ** (ನಾ). ವೇಗದಿಂದ ಬಿಡುವುದು; ರಭಸದಿಂದ ಪ್ರಯೋಗಿಸುವುದಂ : ಶರಜಾಳ ಕವಿದುದು ಗಜದ ಜೋಧರ ಝಾಡಿಯೆಸುಗೆಯಲಿ (ಕುಮಾರವ್ಯಾ. ೦೦-೦೬). [ ಝಾಡಿ$_1$ + ಎಸುಗೆ ]

**ಝಾಡಿವೆಳಗು** (ನಾ). ಅಧಿಕವಾದ ಬೆಳಕು ; ಪ್ರಸರಿಸುವ ಕಾಂತಿ : ಈಡಿಱಿದ ಮಣಿಮಯದ ಕಳಶದ ಝಾಡಿವೆಳಗಿನ ಹೇಮರುಷದಲಿ . . . ನಿಕೇತನವೆಸೆದವಲ್ಲಲ್ಲಿ (ತೊರರಾ. ೫-೨-೨೫) : ಮಣಿಗಣದ ಜೋಡಿನ ಝಾಡಿವೆಳಗಿನಲಿ ಥಾಳಿಸಿತು ಥಳಥಳನೆ (ತೊರರಾ. ೬-೦೮-೬).
[ ಝಾಡಿ$_1$ + ಬೆಳಗು$_2$ ]

**ಝಾಡಿಸು** 'ಜಾಡಿಸು' ನೋ.

**ಝಾಡು** (ನಾ). ಪೊದರು; ಪೊದೆ; ಮೆಳೆಗಳ ಗುಂಪು : ಅದರ ಸುತ್ತ ಗಿಡದ ಝಾಡಿದೆ (ಕನಕ. ೨೦) ; ಎದುರಿಗಿರುವ ಝಾಡಿನಲ್ಲಿ ಒಂದು ಭಯಂಕರವಾದ ಹುಲಿಯು ಮಲಗಿ ನಿದ್ದೆಮಾಡುತ್ತಿರುವುದು (ಕೀರಕ. ೧೧). [ ← ಹಿಂ. ಮರಾ. ಝಾಡ್./ಸಂ. ಝಾಟ ]

**ಝಾಡುಮಾಲಿ** 'ಝಾಡಮಾಲಿ' ನೋ.

**ಝಾಡೆ, ಜಾಡ₄, ಜಾಡಿ₃, ಜಾಡೆ₄, ಝಾಡಿ₃** (ನಾ). ೧. ಲೆಕ್ಕಾಚಾರವನ್ನು ತೀರಿಸುವುದು; ಫೈಸಲ್ ಮಾಡುವುದು : ಝಾಡೆಯಾಗಿ ವಸೂಲು ಮಾಡಬೇಕು (ಮುಹಾಪ. II, ೬೩). **ಜಾಡ₄:** ೧. ಅವನು ತನಗೆ ಮೊದಲು ದೊರೆತ ಹಣವನ್ನು ಸಾಲವನ್ನು ಜಾಡಮಾಡುವುದಕ್ಕೆ . . . ವಚನ ಕೊಟ್ಟು (ಪಂಜಿನ್. ೫೬). **ಜಾಡಿ₃ :** ೨. ಮುಂಗಿದು ಹೋಗುವಿಕೆ; ನಿಶ್ಶೇಷವಾಗುವುದು: ಕಾಳುಕಡಿ, ತುಪ್ಪ, ಎಣ್ಣೆ ಎಲ್ಲಾ ಜಾಡಿ ; ಏನೇನೂ ಉಳಿಯಲಿಲ್ಲ(ಊಾ). **ಜಾಡೆ₄:** ೩. ಒಂದು ಗ್ರಾಮದಲ್ಲಿರುವ ಮನೆಗಳ, ದನಕರಂಗಳ ಅಂಗಡಿ ಮುಂಗಟ್ಟುಗಳ ಹಾಗೂ ರಾಟೆ, ನೇಗಿಲು ಮೊದಲಾದುವುಗಳ ಸಂಖ್ಯೆಯನ್ನೂ ಜನಸಂಖ್ಯೆಯನ್ನೂ ಬರೆದಿಡುವ ದಾಖಲೆ ಪುಸ್ತಕ : (ಮೈಗೆಜ. IV, ೬೬೩). **ಝಾಡಿ₃ :** ೨. ಬಿಸ್ಕಿಟಿನ ಪೊಟ್ಟಣ . . . ಎಲ್ಲರಿಗೂ ಕೊಡಬೇಕು. ಒಂದು ದಿವಸದಾಗ ಎಲ್ಲ ಝಾಡಿ (ಕೈರಾಜಿ. ೨೫).

**ಜಾಡಾ ರಶೀದಿ** = ಲೆಕ್ಕಾಚಾರವು ಫೈಸಲಾಯಿತೆಂದು ಬರೆದುಕೊಡುವ ರಶೀದಿ,-ದಾಖಲೆಪತ್ರ: ಹಿರಣ್ಣನ ಹೆಸರಿನಲ್ಲಿ ಒಂದು ಜಾಡಾ ರಶೀದಿ ಮಾಡು (ಕರುಳ. ೯೫). [ ←ಮರಾ. ಝಾಡಾ ]

**ಝಾಣಾಸು** (ಕ್ರಿ). ಖಚಿತವಾಗಿ ಹೇಳು ; ಖಡಾಖಡಿಯಾಗಿ ತಿಳಿಸು : "ನಾಳೆ ನಾ ಕಾವಲಕ್ಕ ಇದ್ರು ಒಂದ ಕಾಯಿ ಬಿಡಾಕಿಲ್ಲಾ ಹೊರಗ!" ಯಾಯಾ ಝಾಣಾಸಿ ಹೇಳಿದಳು (ಬಾಬಂ. ೨೬). [ಝಾಣ₀ + - ಇಸು₁]

**ಝಾಪು** 'ಚಾಪು₁' ನೋ.

**ಝಾಪುಗಾಲು** 'ಚಾಪುಗಾಲು' ನೋ.

**ಝಾಬುಕ** (ನಾ). ಒಂದು ಬಗೆಯ ಮರ ; ದೂದೀಮರ; "ಕಕ್ಕೆಗಿಡ" : (ಅಮರ. ಟೀಕೆ) [ ಸಂ. ]

**ಝಾಮು** 'ಜಾವ₁' ನೋ.

**ಝಾಯಿ** 'ಜಾಯಿ₁' ನೋ.

**ಝಾರಿ, ಜಾರೆ₄, ಝಾರೆ** (ನಾ). ತೂತುಗಳುಳ್ಳ ಸೌಟು ; ಜಾಲರಿ : ಚಂದ್ರವ್ವ ಕಾಳು ಕರಿಯುತ್ತಿದ್ದಳು. ಝಾರಿಯಿಂದ ತೆಗೆಯುತ್ತಿದ್ದಳು (ಅಶೋಕ. ೨೪). **ಜಾರೆ₄ :** ಕುದಿದ ಅರಿಷಿಣವನ್ನು . . . ಜಾರೆಯ ಸವುಟನಿಂದ ತೆಗೆಯಬೇಕು (ಕೃಷಿಪ್ರ. ೦೮೯). **ಝಾರೆ :** ಮುಂಬಾಯಿ ಶಹರದಲ್ಲಿ ಆಗುವ ಜೀನಸಗಳ ವಿವರವು . . . ೩೭ ಝಾರೆಗಳು (ಝಾರಿಸವುಟು) (ಮುಂಬವ್ಯಾ. ೧೦೨). [ ←ಮರಾ. ಝಾರೀ, ಝಾರಾ ]

**ಝಾರೆ** 'ಝಾರಿ' ನೋ.

**ಝಾರೇ** (ಅ). ಒಂದು ಕೊಂಡಾಟದ ಮಾತು ; ಹೊಗಳಿಕೆಯ ನುಡಿ : ಝಾರೇ ಜರಝಾರೇ . . . ಎಂಬುಲಿ ನೆಗೆವಿನೆಗಂ ಬಿಟ್ಟು ಮಾಜಾಂತ ಮೇಲಾಳ್ಗಳನಾಗಳ್ ತಳ್ತು ಪೊಯ್ದು (ಕಬ್ಬಿಗಕಾ. ೨೬೯).

**ಝಾಲರ** 'ಝಾಲರಿ' ನೋ.

**ಝಾಲರಿ, ಜಲರಿ, ಜಾಲರಿ, ಜಾಳರ, ಝಾಲರ** (ನಾ). ೧. ಮೇಲ್ಕಟ್ಟು; ತೂಗಾಡುವ, ಬಲೆಯಂತಹ ಸಿಂಗಾರ ವಸ್ತ್ರ : ಬಳಸಿ ಕಟ್ಟುತ ಸುತ್ತವಳ ಝಾಲರಿಯಾ ಥಳಕುಗೊಡುತಿಹ ಕನಕಕಲಶಗಳನಿಟ್ಟು (ಯಕೋರ. ೯೮): ಸುತ್ತಲೂ ಮುತ್ತಿನ ಝಾಲರಿಗಳು ಕಂಗೊಳಿಸುತ್ತಿದ್ದುವು (ಶ್ರೀರಾಯು. ೦೨೮). **ಜಲರಿ:** ೨. ತಂತಿಯ ಬಲೆ; ತೂತುಗಳಿರುವ ರಚನೆ: ಒಂದೇ ಸೆಳೆತದ ನೋಟದಲ್ಲಿ ತನ್ನ ಜಲರಿಯು ಬಲೆಯಲ್ಲಿ ಸಿಕ್ಕಿಕೊಂಡಳು (ಕಾವೇರಿ. ೬). **ಜಾಲರಿ :** ೩. ತೂತುಗಳಿರುವ ಸೌಟು. 'ಜಾಲರಿಸೌಟು' ಪರಾ. ೪. ಅಗಲವಾದ ಕಂಚಿನ ತಾಳ. 'ಜಾಲರಿತಾಳ' ಪರಾ. **ಜಾಳರ :** ೨. 'ಜಾಳರಂಬೋಗು' ಪರಾ. **ಝಾಲರ :** ೧. ಮುತ್ತು ರತ್ನಗಳ ಝಾಲರಗಳಿಂದ ಅದು ಅಲಂಕೃತ (ನಿಬಂಧ. I, ೨೩೭). 'ಜಲ್ಲರಿ₁' ಪರಾ. [ ←ಹಿಂ. ಮರಾ. ಝಾಲರ್ ]

**ಝಾವ** 'ಜಾವ₁' ನೋ.

**ಝಾವುಕ** (ನಾ). ಒಂದು ಬಗೆಯ ಮರ; ದೂದೀಮರ; ಬೂರುಗ : ಕಕ್ಕೆಗಿಡ. [ ಸಂ. ]

**ಝಾಳಿಸು** (ಕ್ರಿ). (?) : ವರ್ಗಚತುರ್ಥಾಕ್ಷರಂಗಳ್ಗೆ . . . ಝಟಿಸಿತು. ಝಾಳಿಸಿತು (ಶಮದ. ೧೫ ಪ್ರಯೋ). [ ? ]

**ಝಾಳಿಯ** (ನಾ). ೧. ಸ್ವೀಕಾರ ; ತೆಗೆದುಕೊಳ್ಳುವುದು (?). ೨. ಅಪಹಾರ ; ಕಿತ್ತುಕೊಳ್ಳುವುದು. 'ಝಾಳಿಯಂಗೊಳ್' ಪರಾ. [ ? ]

**ಝಾಳಿಯಂಗೊಳ್** (ಕ್ರಿ). ೧. ಸ್ವೀಕರಿಸು ; ತೆಗೆದುಕೊಳ್ಳು (?) : ಪೆಱರ ಪಲವುಂ ಜೀವಧನಂಗಳನರಸರ ಕಾಪಿನ ಪೊಲನಂ ಪೊಕ್ಕು ಪೆಂಡುಂಡಿಗೆಯೊತ್ತಿಕೊಳುತ್ತು ಪೂಟಿಗವಾದೆಡೆಗಳೊಳ್ ಝಾಳಿಯಂಗೊಳುತ್ತುಮನಿತಱೊಳಂ ತಣಿಯದೆ (ಸುಕುಮಾ. ೬-೩೫ ವ). ೨. ಅಪಹರಿಸು ; ಕಿತ್ತುಕೊಳ್ಳು (?) : ತಣಿಯದೆ ಮತ್ತ್ರಯತಿಕಾಂಕ್ಷೆಯಿಂ ಲೋಗರೊಡವೆಯಂ ಝಾಳಿಯಂಗೊಂಡು (ಸುಕುಮಾ. ೬-೩೭ ವ). [ ಝಾಳಿಯ + ಕೊಳ್₁ ]

**ಝಿಂಟಿ** (ನಾ). ಒಂದು ಬಗೆಯ ಗಿಡ ; ಕರಿಯ ಗೋರಂಟಿ : "ನೀಲಿ. ಝಿಂಟೀ, ಬಾಣಃ–ಈ ೩ ಕರಿಯ ಗೋರಂಟೆ" (ಹಲಾಯು. ೩೪-೫೨).  [ ಸಂ. ಝಿಂಟೀ ]

**ಝಿಮಿಝಿಮಿ** (ನಾ). ಒಂದು ಅನುಕರಣ ಶಬ್ದ ; ಮಳೆಯನ್ನು ಅನುಕರಿಸುವ ಶಬ್ದ.

**ಝಿಮಿಝಿಮಿ ಹತ್ತು** = ಒಂದೇ ಸಮನೆ ಸುರಿ ; ಧಾರಾಕಾರವಾಗಿ ಸುರಿ : ಮಳೆ ಝಿಮಿಝಿಮಿ ಹತ್ತಿದರೆ . . . ಚೀಲ ಕಡಿಮೆ (ಮುಂಬವ್ಯಾ. ೨೦೬).

**ಝಿಲ್ಲಿ** (ನಾ). = ಝಿಲ್ಲಿಕೆ : ಸೀದು ಸೀಕರಿಹೋಗಿ ತಾರದೊಳಳುಪೊಲು ಕೂಗುತಲಿಹವು ಝಿಲ್ಲಿಗಳು (ಗಾಥಾಸ. ೫-೯೪) ; ಮರಗಳಲ್ಲಿ ಝಿಲ್ಲಿಗಳು ರೀ ರೀ ರೀ ಎಂದು ಕೂಗುತ್ತಿದ್ದುವು (ಈಕಥ. ೧೧೨). [ ಸಂ. ಝಿಲ್ಲೀ ]

**ಝಿಲ್ಲಿಕಾನಾದ** (ನಾ). ಜೀರುಂಡೆಹುಳುಗಳ ಶಬ್ದ,-ಧ್ವನಿ: ಝಿಲ್ಲಿಕಾನಾದ ಘರ್ಘರ ಘೋರಕರ್ಕಶಂ (ಶ್ರೀರಾಮಾ. ೧೮೦-೧೦೯). [ ಸಂ. (ಝಿಲ್ಲಿಕಾ + ನಾದ) ]

**ಝಿಲ್ಲಿಕೆ** (ನಾ). ಜೀರುಂಡೆಹುಳು : "ಝಿಲ್ಲಿಕೆಯೆನಲ್ ಜಮ್ಮುಂಡೆಗಕ್ಕು ನಾಮಂ" (ಮಂಗರಾ. ೫೨-೧೧) : ಕಟುವಾದುದ್ಯೆ ಝಿಲ್ಲಿಕಾಕಂಠಕೃತಿ ಕರ್ಕಶಂ (ಶ್ರೀರಾಮಾ. ೨೬೩-೭). [ ಸಂ. ಝಿಲ್ಲಿಕಾ ]

**ಝಿಲ್ಲೀಕೆ** (ನಾ).=ಝಿಲ್ಲಿಕೆ. [ ಸಂ. ಝಿಲ್ಲೀಕ ]

**ಝಿಸಾರುಕೆ** (ನಾ).=ಝಿಲ್ಲಿಕೆ. [ ಸಂ. ಝಿಸಾರುಕಾ ]

**ಝುಡುಪು, ಜುಡುಪು, ಝುಡುಪು** (ನಾ). ೧. ಪೊದೆ; ಪೊದರು : ಎಲ್ಲಾದರೂ ಗಿಡದ ಝುಡುಪಿನಲ್ಲಿ ಅಡಗಿಕೊಂಡಿರಬಹುದು (ಶ್ರೀಕಾಂತ. ೬೩). **ಜುಡುಪು :** ೨. ಕುಚ್ಚು ; ಗುಂಚ್ಛ : ಅವುಗಳಿಗೆ ಕಟ್ಟಿದ್ದ ಹಗ್ಗಗಳ ಜುಡುಪುಗಳೂ ಪಟಗಳೂ ವಿಚಿತ್ರವಾದ ಎಲೆಯ ಜಾಡಿನಂತೆ ಒಪ್ಪುತ್ತಿದ್ದವು (ಚೀನಬಾ. ೨೧೦). **ಝುಡುಪು :** ೧. ಸುತ್ತಲೂ ಗಿಡಗಳ ಝುಡುಪು, ವನಸ್ಪತಿನಲ್ಲಿ ಹಿಂಸ್ರಪಶುಗಳ ಭಯ(ಸ್ವ ತಿಜಿ. ೯೦) ; ವಕ್ಕದಲ್ಲಿಯೇ ಗಿಡಗಳ ಝುಡುಪಿನಲ್ಲಿ ಒಂಟಿಯಾಗಿ ನಡೆಯುತ್ತಿದ್ದ (ನೀರಸ. ೩೮). [ ←ಮರಾ. ಝುಡಪ್, ಝುಡೂಪ್ ]

ಝುಣಕ 'ಜುಣಕ' ನೋ.

ಝುಮಕಿ 'ಜುಮಕಿ' ನೋ.

ಝುಮರು 'ಜುಮುರು' ನೋ.

ಝುಮ್ಮಿಡು (ಕ್ರಿ). ೧. ನಡುಗು ; ಕಂಪಿಸು : ವರ ರಾಜೀವಸಂಭವ ಶರವ ಹೂಡಿದನಾ ವಿಬುಧರಸು ಝುಡಿಯ ಝುಮ್ಮಿಡೆ ತನು ತ್ರಿಯಂಬಕನ (ತೊರಿರಾ. ೩-೭-೨೮). ೨. ಝುಂವೆಮ್ಮಿಂದು ವಿಡಿ : ದೈತ್ಯನೆದೆ ಜರ್ಜರಿತವಾಯಿತು ನೆತ್ತಿ ಝುಮ್ಮಿಡೆ ತಿರುಗಿ ಬಿದ್ದನು (ಕಾಶಿ ರಾ. ೩೨-೪೦) ; ಅದ್ರಿಗಳು ಮಾರ್ದನಿಗೊಡಲ್ದಿಗ್ಗಜಂಗಳ ಕರ್ನದಲ್ಲಿ ಝು[ಪಾಠಾಂ. ಝು] ಮ್ಮಿಡೆ ಕರ್ನನಂಬಾ ಮಾತನು ಕಳವುತ (ವೀಶ್ವಕು. ೨-೭-೪೩).

[ ಝುಂ$_0$ (<ಜುಂ) + ಇಡು$_1$ ]

ಝುರಮತ್ತು 'ಜೂರತ್ತು' ನೋ.

ಝುರಕಿ 'ಜುರಿಕೆ' ನೋ.

ಝುರಿಕೆ 'ಜುರಿಕೆ' ನೋ.

ಝುರುಕಿ 'ಜುರಿಕೆ' ನೋ.

ಝುರುಕೆ 'ಜುರಿಕೆ' ನೋ.

ಝುಲುಮ್ಮನೆ (ಅ). ತಟ್ಟನೆ ; ಒಡನೆ ; ಕೂಡಲೆ : ಅನುಕರಣಕ್ಕೆ . . . ಝುಲುಮ್ಮ[ಪಾಠಾಂ ಮ್ಮ]ನೆ ಪರಿಲ್ಲನೆ (ಶಮಿದ. ೧೧ ಪ್ರಯೋ).

[ ಝುಲುಮ್$_0$ + – ಅನೆ$_1$ ]

ಝುಳಕು 'ಝುಳಂಕು' ನೋ.

ಝುಳುಕು, ಜುಳುಕು$_1$, ಝುಳಕು (ನಾ). ೧. ಅಸ್ಪಷ್ಟವಾಗಿ ಕಾಣುವಿಕೆ; ಸ್ವಲ್ಪ ತೋರುವುದು ; ಛಾಯೆ : ತಿಪ್ಪನ ಪ್ರಣಯದಲ್ಲಿ . . . ಗಾಂಧರ್ವಪದ್ಧತಿಯ ಝುಳುಕಿದೆ (ಸಮುಜೀ. ೪೦, ೬೬೨೪). ೨. ಕಾಂತಿ ; ಹೊಳಪು : ಸಾಲಿನಲ್ಲಿ ನಿಂತ ಜನರ ಮುಖದ ಮೇಲೆ ಗೆಲುವಿನ ಝುಳು ಕೊಂದು ಹಾಯ್ದುಹೋಯಿತು (ಪ್ರದಸ. ೩೫). ಜುಳುಕು$_1$ : ೧. ಹಾವ ಭಾವಗಳ ಜುಳುಕಿನಲ್ಲಿ ತಾಳಲಯಗಳ ಸಮ್ಮೇಳನವಾಗಿ ಮನಸ್ಸಿಗೆ ಶ್ರಮವನಿಸದ (ಕನ್ನಡಾ. ೩೫). ಝುಳಕು : ೧. ಹೆದರಿಕೆಯ ಒಂದು ಝುಳಕು ಮೈಯನ್ನು ನಡುಗಿಸಿತು (ಮೀದಮ. ೦೭)

[ ←ಮರಾ. ಝುಳೂಕ್, ಝುಳಕ್ ]

ಝುರಿ 'ಜುರಿ$_2$' ನೋ.

ಝೂಲ 'ಜೂಲು$_2$' ನೋ.

ಝೂಲಹಾಕು (ಕ್ರಿ). ಮೇಲು ಹೊದಿಕೆಯನ್ನು ಹೊದಿಸು; ಅಲಂಕಾರದ ಗೌಸುಹಾಕು ; ಗೌಸನ್ನು ಹೊದಿಸು : ಅವಳು ಝೂಲಹಾಕಿದ ಗೋವಿನಂತೆ, ಬಂಗಾಲೀ ಸ್ತ್ರೀಯರಂತೆಯೇ ಸೀರೆಕುಪ್ಪಸಗಳನ್ನು . . . ಧರಿಸಿಕೊಂಡಿರುತ್ತಿದ್ದು (ಹೇಮಂತ. ೪೨೩).

[ ಝೂಲ (<ಜೂಲು$_2$) + ಹಾಕು (<ಪಾಯ್ಕು$_1$) ]

ಝೂಲು 'ಜೂಲು$_2$' ನೋ.

ಝೆಂದ (ನಾ). ಆರ್ಯಭಾಷಾವರ್ಗಕ್ಕೆ ಸೇರಿದ ಒಂದು ಪುರಾತನ ಭಾಷೆ : ಏಸಿಯದ ಭಾಗದಲ್ಲಿ ಸಂಸ್ಕೃತ, ಝೆಂದ, ಇವೆರಡು ಪುರಾತನದ ಭಾಷೆಗಳುಂಟು (ಮುಂಬಯು. ೩-೨೩೮). [ ? ]

ಝೇಂಕರಿಸು (ಕ್ರಿ). ೧. ಮೊರೆ ; ಝೇಂಕಾರವನ್ನು ಮಾಡು: ಕುಸುಮ ಕುಲಮಂ ಮುತ್ತಿ ಝೇಂಕರಿಪ ತುಂಬಿಯಿಂ . . . ಮೆಚಿವುದು (ತಿರುಶ.ದೇ. ೨-೧೩) : ತನುಗಂಧಕೆಬಗಿ ತುಂಬಿಗಳು ಝೇಂಕರಿಸಲು (ಭರತ. ೯-೩೦) : ಷಟ್ಪದಿಗಳೆಡೆವಿಡದೆ ಝೇಂಕರಿಸದಿರ್ಪುವೆ ಬಂದು ನೆರೆದ ವಿದ್ಯತ್ಸಭಾ ನೀರೇರುಹಾಕರದೊಳು (ಜೈಮಿಭಾ. ೧-೧೨). ೨. ಬಿರುನಂಡಿಗಳನ್ನಾಡು ; ಆರ್ಭಟಿಸು : ಗೆಡವರ್ಚುರ್ವರ್. ಮನಗೊಂಡೊಡನೊಡನೋರಂತು ತಗುಳ್ದು ಝೇಂಕರಿಸಿದೊಡೆ(ಪಂಪಭಾ.೨-೭೩); ಪ್ರತಿಪಕ್ಷದವರು:– (ಕುಪಿತರಾಗಿ ಝೇಂಕರಿಸುವರು) (ಬಿರುಗಂ. ೦೩-೦೪). [ ಝೇಂಕರಣ$_0$+ – ಇಸು$_3$ ]

ಝೇಂಕಾರ (ನಾ). ದುಂಬಿ ಮೊದಲಾದುವುಗಳ ಧ್ವನಿ.–ಮೊರೆತ : ಇಂಬಿನಿಂ ಕುಳ್ಳಿರ್ದ ಮಜಿದುಂಬಿಗಳ ಝೇಂಕಾರದಿಂ (ಬಾಧಪು ೦-೦೦೯೮).

[ ಸಂ. ]

ಝೇಂಕೃತ (ನಾ).=ಝೇಂಕಾರ : ಝೇಂಕೃತಂ ತುಂಬಿಯೊಳು (ಮಂಗರಾ. ೨೭-೭). [ ಸಂ. ]

ಝೇಗೈ (ಕ್ರಿ). (ವೀಣೆ ಮೊದಲಾದುವನ್ನು) ನುಡಿಸು ; ಬಾರಿಸು : ಕೋಣನಿದಿರಲಿ ಪಾಡಿ ತುಂಬುರವೀಣೆಯಂ ಝೇಗೈದ ಪರಿ (ಗಗಕಾ. ೦೨-೪). [ ಝೇಂ$_0$ + ಕೈ (<ಕೆಯ್$_1$) ]

ಝೊಂಪಿಸು$_1$ 'ಜೊಂಪಿಸು$_1$' ನೋ.

ಝೊಂಪಿಸು$_2$ 'ಜೊಂಪಿಸು$_2$' ನೋ.

ಝೊಂಪು 'ಜೊಂಪು$_1$' ನೋ.

ಝೊಂಬಿಸು 'ಜೊಂಪಿಸು$_2$' ನೋ.

ಝೊಟ್ಟಂಗ 'ಜಟ್ಟಂಗ' ನೋ.

ಝೊಮ್ಮಿಡು 'ಜುಮ್ಮಿಡು' ನೋ.

ಝೊಮ್ಮಿಸು (ಕ್ರಿ). = ಜುಮ್ಮಿಡು : ಸವಿಯೇಜು ಸರ್ವಾಂಗವನ್ನು ಝೊಮ್ಮಿಸುತ [ಪಾಠಾಂ. ಝುಮ್ಮಿಡುತ್ತ, ಝೊಂಪಿಸುತ]ಮಿರೆ (ಇಹರ.ದೇ. ೩೦-೧೭). [ ಝೊಮ್ಮು$_2$ (<ಜುಂ)+ – ಇಸು$_3$ ]

ಝೊಮ್ಮು$_1$ 'ಜೊಂಪು$_1$' ನೋ.

ಝೊಮ್ಮು$_2$ 'ಜುಂ' ನೋ.

ಝೊಮ್ಮನೆ 'ಜೊಮ್ಮನೆ' ನೋ.

ಝೋಂಟಿಗ 'ಜಟ್ಟಂಗ' ನೋ.

ಝೋಂಪಿಸು$_1$ 'ಜೊಂಪಿಸು$_1$' ನೋ.

ಝೋಂಪಿಸು$_2$ 'ಜೊಂಪಿಸು$_2$' ನೋ.

ಝೋಂಪು 'ಜೊಂಪು$_1$' ನೋ.

ಝೋಕು$_1$ 'ಜೋಕು$_1$' ನೋ.

ಝೋಕು$_2$ 'ಜೋಕು$_2$' ನೋ.

ಝೋಮು 'ಜಂಮ್ಮು$_3$' ನೋ.

ಝೋಮ್ಮಿಡು 'ಜುಮ್ಮಿಡು' ನೋ.

ಝೋರ್ (ನಾ). ಒಂದು ಅನುಕರಣ ಶಬ್ದ : ಎಡೆಗಿಡಿದು ಚೆಂದಂಗಿನೆಳ ಗಾಯೊಡೆದು ಝೋರೆನೆ ಪೊಸರ್ವ ಪೊನಲಿಂ (ಸಾಳ್ವಭಾ. ೧-೩೦).

ಝೋರು 'ಜೋರು$_3$' ನೋ.

ಝೋಲಿ 'ಜೋಲಿ$_3$' ನೋ.

ಝೋಲಿತಪ್ಪು 'ಜೋಲಿತಪ್ಪು' ನೋ.

ಝೋಲಿಹೊಡೆ 'ಜೋಲಿಹೊಡೆ' ನೋ.

ಝೋಳಿ 'ಜೋಳಿ$_3$' ನೋ.

ಝೌಲಿಕ (ನಾ). ವೀಳೆಯದೆಲೆ ಮತ್ತು ಅಡಿಕೆಯ ಚೀಲ ; ಸಂಚಿ.

[ ಸಂ. ]

ಞ (ನಾ). ಕನ್ನಡ ವರ್ಣಮಾಲೆಯ ಮೂವತ್ತನೆಯ ಅಕ್ಷರ.

ಞಕಾರ (ನಾ).=ಞ. [ ಸಂ. ]

# ಟ



**ಟ** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ತೊಂದನೆಯ ಅಕ್ಷರ. ೨. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ: "ನಿರುತದಿಂ ಕಟಪ[ಯ]ಮೆನಲ್ಕೊಂದು" (ಮಂಗರಾ. ೧೧೪-೧೦).

**ಟಂಕ**(ನಾ).೧.ಕಲ್ಲುಕುಟಿಗನ ಒಂದು ಉಪಕರಣ: ಕಲ್ಲುಳಿ; ಚಾಣ: "ಟಂಕ ಮೆನಲುಳಿಯುಕ್ಕುಂ" (ಮಂಗರಾ. ೧೧೩-೮) ; ತುರಂಗಮ ವೇಗಬಲವತಿತ ಖುರಖುರಟಂಕ ಪರಿಸ್ಖಲನ ಕಳಿತವಿಷಮುಸಮರಭೇರೀನಿಸ್ವನಮುಂ (ಪಂಪಭಾ. ೧೩-೩೦ ವ) : ಕಟ್ಟೆಂಬ-ನುಡಿ ಮಾಲೆಗಾರ್ತಿಯರೊಳುನೆಟ್ ಪೆಟ್ಟೆಂಬ ನುಡಿ ಟಂಕದೊಳಗೆ (ಕಂನವಿ. ೨-೧೫). ೨. ನಾಣ್ಯವನ್ನು ಅಚ್ಚುಮಾಡುವ ಸಾಧನ ; ಅಚ್ಚು. ೩. ತಾಳೆಯೋಲೆಯಲ್ಲಿ ತೂತು ಕೊರೆಯುವ ಒಂದು ಬಗೆಯ ವೃತ್ತಾಕಾರದ ಮೊಳೆ : "ಟಂಕಃ=ಕಲ್ಲುಳಿಯುಂ, ಹೊನ್ನ ಅಚ್ಚಿನ ಮೊಳೆಯುಂ, ಓಲೆಯಂ ತೂತಂ ಕೊರೆವ ಉಂಗುರದ ಮೊಳೆಯುಂ" (ಕಾಕಶ್. ೨೬೫). ೪.=ಟಂಕನ. 'ಟಂಕಸಾಲೆ' ಪರಾ.೫. ಮುದ್ರೆಯೊತ್ತಿದ ನಾಣ್ಯ ; ಚಲಾವಣೆಯ ನಾಣ್ಯ: "ಉಳಿಯಭಿಮಾನ ನಾಣೆಯಗಳೆಂಬಿವು ಟಂಕಮೆನಿಕ್ಕು" (ನಾನಾರ. ೧೬೦). ೬.=ಟಂಕಸಾಲೆ: ಆಣೆಗಪಜಯವಿಲ್ಲಲೇ ಕೀಲಾಣಿ ಟಂಕದೊಳಿಲ್ಲಲೇ (ಕುವ್ಯಾಸ. ೦-೪೪). ೭. ಒಂದು ಬಗೆಯ ತೆರಿಗೆ ; ನಾಣ್ಯ ಮುದ್ರಿಸುವವರ ಮೇಲೆ ಹಾಕುವ ತೆರಿಗೆ : ಚತುಸ್ಸೀಮಾಭ್ಯಂತರ ಕವಿಳಾಸಪುರದಲ್ಲಿ ಸುಂಕಸಾದ ತಳಸಾರಿಗೆ . . . ಅಂಕೆ ಟಂಕ ಆಣೆ ಗೋಸನೆ ಮುದ್ರೆ ನಾಗೇಶ್ವರಕ್ಕೆ ಮಲ್ಲೇಶ್ವರಕೆ (ಎಇ. XXI, ೨-೭೩ ; 1260). ೮.=ಟಂಕಣ ೯. ಪಾತ್ರೆ ಮೊದಲಾದುವು ಗಳ ಸಂದನ್ನು ಸಂತ್ರಿಗೆಯಿಂದ ಬಡಿದು ಕೂಡಿಸುವಿಕೆ: ಬಿಂದಿಗೆ ಬಿರುಕು ಬಿಟ್ಟಿದೆ. ಸ್ವಲ್ಪ ಟಂಕ ಹಾಕಿಸಿಕೊಂಡು ಬಾ (ರೂಢಿ). ೧೦. ಬೆಟ್ಟದ ಇಳಿಜಾರು ಪ್ರದೇಶ;ತಪ್ಪಲು ಪ್ರದೇಶ: ಮಾದ್ಯಕ್ಕದ್ಗ ಜಗಂಡಭಿತ್ತಿ ಕಷಣಪ್ರೋದ್ಯೇದದಿಂ ಸಾರ್ದು ಬಂದಿದಿರೊಳ್ ಕೂಡುವುದಿಲ್ಲಿ ಚಂದನರಸಂ ಕೆಂಬೊನ್ನ ಟಂಕಂಗಳೊಳ್ (ಪಂಪಭಾ. ೪-೨೨). ೧೧. ಅಭಿಮಾನ; ಹೆಮ್ಮೆ ; ಗರ್ವ : "ಅಭಿಮಾನ, ಉಳಿ—ಈ ೨ ಟಂಕಮೆಂಬುದು" (ಅರಾಯು. ೧೩೭-೩೫) : ಮುಸಕಂ ಟಂಕಂ ಕಣೆ ಪುಸಿ ನಸೆ ಬಂಚನೆ ಕುಸುರಿಯ ಚಿತ್ರಂ ದ್ರಿಡವಂ ವಸುಧೆಯೊಳ್ ಪಸುಗೆಗೊಳ್ಗಂಡಂ ಕಡುಜಾಣಂ (ಎಕ. VI, ಚಿಕ್ಕಮ. ೯೪-೧೮ ; ಸು. 1060 ?). 'ಕಂಟ' ಪರಾ. [ ಸಂ. ]

**ಟಂಕಕ್ಷತ** (ಗು). ೧. ಕಲ್ಲುಳಿಯಿಂದ ಕೊರೆದ. (ನಾ). ೨. ಕಲ್ಲುಳಿಯ ಪೆಟ್ಟು,-ಹೊಡೆತ : ಗಿರಿಯ ಟಂಕಕ್ಷತವು ಘೋರ ಭದುರ ಹಣಿಗೆ ಸರಿ ಬರ್ಪುದೇ (ವಿವೇಭ. ೧೧-೭೦). [ ಟಂಕ + ಕ್ಷತ ]

**ಟಂಕಣ** (ನಾ). ಲೋಹವನ್ನು ಶುದ್ಧಿಗೊಳಿಸಲು ಉಪಯೋಗಿಸುವ ಒಂದು ಬಗೆಯ ಖನಿಜ ಲವಣ; ಬೆಳುಗಾರ; ಬಳಿಗಾರ: "ಟಂಕಣಂ ಬಿಳುಗಾರವೆಂದು" (ಮಂಗರಾ. ೩೦-೭) ; ವಿಸರಿಪ ಟಂಕಣವೋಲೆಯ ಮುಸಿಯೆಂಬಿವನೊರಸಿ ಮಾತುಲುಂಗದ ಪಣ್ಣಿಂ ಬಿಸಿಲೊಳ್ ಪಸರಿಸೆ ಶದ್ಧ್ರವಮೊಸರ್ಗುಮಶೇಷಂ (ಲೋಕೋಪ. ೮-೩೪); ಟಂಕಣಂ ರಜನಿ ನವ ಕುಂಕುಮಮುಗಿಲು ನೆಲ್ಲಿಯಂಕೋಲೆಯೊಳ್ಪೆತ್ರಿನಿಂ ಮರ್ದಿಸಿ (ಜನವ. ೧೩-೭೦): ಕೃಷ್ಣಾಭ್ರಕವನ್ನು ಧಾನ್ಯಾಭ್ರಕವ ಮಾಡಿ ಎಕ್ಕೆಹಾಲಿನಲ್ಲಿ ಚತುಷ್ಕಶಃ ಟಂಕಣವನ್ನಾಗಲೀ ಪುಟಕೆಯನ್ನಾಗಲಿ ಹಾಕಿ ಮರ್ದಿಸಿ ಗಜಪುಟವನ್ನು ೨೦ ಕೊಟ್ಟರೆ ಭಸ್ಮವಹುದು (ವಿವೈವಿ. ೨೨) : ತಾಪವಿಲ್ಲದ ಚಿನ್ನ ಟಂಕಣ ರೂಪದಿಂ ಬೆಚ್ಚುವದೆ (ವಿವೇಭ. ೧೧-೭೪). [ ಸಂ. ]

**ಟಂಕಣಕಾರ, ಟಂಕಣಖಾರ** (ನಾ).=ಟಂಕಣ : ಕಾಸಂಟ ಕೊಡಿಗೆಗೆ ವಿ ೫ ಕವರದಡೆಗೆ ವಿ ೨॥ ಟಂಕಣಕಾರ ಬಿಸಿಗೆಗೆ ವಿ ೭॥ (ಕಇಅ. ೧೦೪-೮-೩೦ ; 1076) ; ಬೋರಾನೆಂಬ ದುರ್ಮಿಲವಾದ ಅಧಾತುರೂಪವಮೂಲತತ್ವದಿಂದ ಟಂಕಣಕಾರ (ಬಳಿಗಾರ) ಹುಟ್ಟುತ್ತದೆ (ಮುಂಬಯಿ. ೪-೧೫) : ಟಂಕಣ ಕಾರವನ್ನು ತಂದು ಒಂದು ಚೂರನ್ನು ಚಮಚಿಯಲ್ಲಿಟ್ಟು ಕಾಯಿಸಿದರೆ ಅದು ಕರಗಿ ಆರಿ ಅರಳಾಗುವುದು (ಮ ನ ಮ. ೧೯). **ಟಂಕಣಖಾರ**: ಟಂಕಣಖಾರಂ ಓಲೆಯ ಮುಸಿಯುಮಂ ಕೂಡಿಕೊಂಡು ತೊಡೆದು ಬಿಸಿಲಲ್ಲಿ ಇಡಲ್ . . . ರಸಮಾಗಿರ್ಪುದು (ಲೋಕೋಪ. ೮-೩೪ ಟೀಕು).
[ ಟಂಕಣ + ಕಾರ$_2$ ]

**ಟಂಕಣಖಾರ** 'ಟಂಕಣಕಾರ' ನೋ.

**ಟಂಕನ** (ನಾ). ನಾಣ್ಯಗಳನ್ನು ಮಾಡುವುದು ; ನಾಣ್ಯಮುದ್ರಣ : ಚಲಾವಣೆ, ಟಂಕನ ಮತ್ತು ವಿಧಿಮಾನ್ಯ (ಭಾಭಾನ. ೨೮೦). [ ಸಂ. ]

**ಟಂಕಮುದ್ರೆ** (ನಾ). = ಟಂಕನ : ಟಂಕಿಸುವ ಕಾರ್ಯ . . . ಟಂಕಮುದ್ರೆ (Mintage. ಇಂಕನಿ.). [ ಟಂಕ + ಮುದ್ರೆ ]

**ಟಂಕರಿಸು** (ಕ್ರಿ). ೧. ಬಿಲ್ಲಿನ ಹೆದೆಯನ್ನು ಮಿಡಿದು ಧ್ವನಿಮಾಡು. 'ಟಂಕಾರ' ಪರಾ. ೨. (ವೀಣೆ ಮೊದಲಾದ ವಾದ್ಯಗಳ ತಂತಿಗಳು) ಟಂ ಟಂ ಎಂಬ ಶಬ್ದವನ್ನು ಮಾಡು : 'ಅಮರ್ದಿನ ಮಳೆ' ನಿಂತು ಮರದ ಹನಿಗಳಂತೆ ತಂತಿಯ ಮಿಡಿದನಿಗಳು ಟಂಕರಿಸುತ್ತಿದ್ದವು (ಕಗದ್ಯ. ೧೭೦). [ <ಟಂಕಾರ + – ಇಸು$_3$ ]

**ಟಂಕಶಾಲೆ** (ನಾ).=ಟಂಕಸಾಲೆ ೧ : ಸುಮಬಾಣನ ಬಾಣದ ಶಾಲಿ ಮಂಜರೀಯುದರದ ಟಂಕಶಾಲೆ . . . ಮಾಮರಂ (ಹಾಲಾಸ್ಯ. ೦-೪-೮೬).
[ ಟಂಕ + ಶಾಲೆ$_3$ ]

**ಟಂಕಸಾಲೆ** (ನಾ). ೧. ನಾಣ್ಯವನ್ನು ಮುದ್ರಿಸುವ ಕಾರ್ಖಾನೆ,-ಸ್ಥಳ : ತುಂಬಳಬೀಡಿನ ಶ್ರೀ ಪಂಚಲಿಂಗದೇವರಂಗಭೋಗಕ್ಕಂ ನಿವೇ × × × ಗಾಣ ೨ ಅಚ್ಚಿನ ಟಂಕಸಾಲೆಯಲು ದಳಕ್ಕೆ ವೀಸ ೨ (ಸೌಇಇ. IX-I, ೨೨೮-೧೧ ; 1133) ; ರೂಪ್ಯಾಧ್ಯಕ್ಷಃ, ನೈಷ್ಕಿಕಃ – ಈ ೨ ಟಂಕಸಾಲೆಯ ಅಧಿಕಾರಿಯ ಹೆಸರು (ನಾಚಿರಾ. ೧೬೧) ; ಪದಗಳು ಜನಮನದ ಟಂಕಸಾಲೆ ಯಲ್ಲಿ ಭಾವದ ಮುದ್ರೆಯನ್ನು ತಳೆದು ಚಲಾವಣೆಗೆ ಬರುವ ನಾಣ್ಯ ಗಳಿದ್ದಂತೆ (ಸೌಂದಸ. ೪೨). ೨. ಒಂದು ಬಗೆಯ ತೆರಿಗೆ ; ಟಂಕಸಾಲೆಯ ಮೇಲಿನ ತೆರಿಗೆ: ಅಂಕ ಸುಂಕ ಟಂಕಸಾಲೆ ತಳವಾಚುಕೆ . . . ಎಂಬಪ್ಪ ಭೋಗ ಸರ್ವಸ್ವಾಮ್ಯ ಸರ್ವಾದಾಯಪ್ರಾಪ್ತಿ ಸಹಿತವಾಗಿ (ಎಕ. VIII, ಸಾಗರ. ೦೬೩-೨೩ ; 1488). [ ಟಂಕ + ಸಾಲೆ$_3$ ]

**ಟಂಕಾರ** (ನಾ). ಬಿಲ್ಲಿನ ಹೆದೆಯನ್ನು ಮಿಡಿದರೆ ಹುಟ್ಟುವ ಶಬ್ದ ; ಧನುಸ್ಸಿನ ಶಬ್ದ ; ಸಿಂಜಿನಿ ಧ್ವನಿ: ಬಿಲ್ಲನೇಱಿಸಿ ಟಂಕಾರವಗುರ್ವುವಡೆಯ ಜೇವೊಡೆದು . . . ನಡೆದಂ (ಪಂರಾಮಾ. ೯-೩೭) : ಚಾಪಟಂಕಾರಂ ಜಗತ್ತ್ರಯದೊಳೆಲ್ಲಿಯುಂ ವ್ಯಾಪಿಸಲ್ಕೆ (ಜೈಮಿಭಾ. ೭೦-೧೨): ಪೂವಿಲ್ಲನೇರಿಸಿ ಕಾವನು ಕಣೆಗೊಂಡು ಟಂಕಾರ ಮಾಡಿದನಲ್ಲ (ಇಂಪಾಪ. ೧೪೪-೯). [ಸಂ.]

**ಟಂಕಾರಿಸು** (ಕ್ರಿ). ಟಂಕದಿಂದ ಕೆತ್ತು ; ಉಳಿಯಿಂದ ಸೀಳಂ : ಮೇರುವಿನ ಹಳಿಗಳೇಂ ಭಂಡಾರಕನ್ನಾಣೆ ವಜ್ರಧಾರೆಗಳಂ ಟಂಕಾರಿಸಿ ಸಲಿಸಿದೊಡೆಂ [ಸಲಿಸೊಡನೆಂ]ದು ಬಲಾರಿಗೆ ದಿವಿಜಾರಿ ರಾಜುಸಂ ಬರೆಯಿಸುವಂ (ಅನಂಪು. ೧೩-೮). [ <ಟಂಕ + – ಇಸು$_3$ ]

**ಟಕ್ಕ, ಠಕ, ಠಕ್ಕ** (ನಾ). ೧. ವಂಚಕ; ಮೋಸಗಾರ ; ಧೂರ್ತ : ನೀನಿಂದೆನ್ನ ಮನೆಗೆ ಬಾರದಂದು ನಿನ್ನ ಕೆಳೆ ಟಕ್ಕರ ಕೆಳೆಯಂತಕ್ಕುಮಲ್ಲದೆ ತಕ್ಕರ ಕೆಳೆಯಂತೊಪ್ಪಲಱಿಯದು (ಪಂಚತಂ. ೧೨೫-೧೮) : ತಕ್ಕನಿವನಲ್ಲ ನೞಿಪಂ ಟಕ್ಕಂ ಖಳನೆಂದು ಪೊರ್ದರ್ (ಧರ್ಮಾಮೃ. ೬-೩೬). **ಠಕ :** ೧. ಠಕ ನೞಿವನೇೞಿದಂ ವಂಚಕನುದ್ಧತನನೃತವಾದಿ ಪಂಚಮಹಾಪಾತಕನೆನಿಸುವಂ (ಜಿನಾಕ್ಷಿ. ೧೩). **ಠಕ್ಕ :** ೧. ಕಿವ್ಯಾಗೆ ಕೊಳಲಾಟಿಪಂ ದೊರೆಯೊ ಠಕ್ಕನೊ ಕಳ್ಳನೊ ಬಂದಿಕಾಱನೋ (ಗದಾಯು. ೧-೩೬) ; ಮಾಯಾವಿಯಂ ಪಡು ವೆಡೆಯೊಳ್ಕಾಣದೆ ಠಕ್ಕನೆಂದಱಿದು (ಧರ್ಮಾಮೃ. ೬-೮೮) : ಅಂತಕನೆಂಬ ಠಕ್ಕನತಿಭೀಕರಸಂಸೃತಿಯೆಂಬ ಕಾನನಾಭ್ಯಂತರದಲ್ಲಿಗೊಯ್ದಿರಿಸಿ (ಜೀವಸಂ. ೩೦-೪) : ಠಕ್ಕರಿವರು ಸ್ವಾಮಿ ಮೇಘರಾಜಗೆ ಮಾಲೆಯಿಕ್ಕಿದಳಾಕೆ ಚೊಕ್ಕ ವೆಣ್ಣಿಂದಾಣ್ಮಗಿರಲೆಂದು ನೆನೆದರೆಂದುಕ್ಕಿ ಸನ್ಮತಿ ಮಂತ್ರಿ ನುಡಿದಾ (ಭರತ. ೫೬-೫೦). ೨. ಕಳ್ಳ : ಠಕ್ಕ ಬಿಟ್ಟರೆ ಸಿಕ್ಕ (ರೂಢಿ). (ಗು). ೩. ಮೋಸ್ವದ; ವಂಚನೆಯ ; ಧೂರ್ತತನವುಳ್ಳ : ಒಂದು ಊರಲ್ಲಿ ಠಕ್ಕವೇದಾಂತಿಯು ಇದ್ದನು (ಕಗದ್ಯ. II, ೩೬). [ ಟಕ್ಕು$_1$ + – ಅ$_7$ ]

**ಟಕ್ಕಿ** (ನಾ). ಮೆಲ್ಲಗೆ ತಟ್ಟುವುದಂ,–ಬಡಿಯುವುದು: ಒಬ್ಬರ ಕೈಯಲ್ಲಿರುವ ಕೋಲಿಗೆ ಇನ್ನೊಬ್ಬರು ಟಕ್ಕಿ ಹೊಡೆಯುತ್ತಾ ಹಾಡುವರು (ಹುಟ್ಟಿಹ. ೩೦). [ ←ಮರಾ. ಟಾಕೀ ]

**ಟಕ್ಕಿಗ** (ನಾ).=ಟಕ್ಕ ೧ : ತಾಣ್ಮಕ್ಕಿಗರ್, ತಾಂ ಟಕ್ಕಿಗರ್ (ಶಬ್ದಾನು. ೮೦ ಪ್ರಯೋ). [ ಟಕ್ಕು$_1$ + – ಇಗ ]

**ಟಕ್ಕಿಸು, ಠಕ್ಕಿಸು** (ಕ್ರಿ). ಮೋಸಗೊಳಿಸಂ ; ವಂಚಿಸು : ಟಕ್ಕಿಪನಂ ತುೞಿ ಮೇಕುದೋರ್ವನಂ ಮಾಳಬೆಗಿಕ್ಕು ಪೂೞ್ ಪುಸಿವನಂ (ಲೀಲಾವ. ೨-೧೧೬): ಟ[ಪಾಠಾಂ. ಠ]ಕ್ಕಿಪ ನಲ್ಲನ ಟ[ಪಾಠಾಂ. ಠ]ಕ್ಕಿಪ ತೆಱನನು ಚದುರೆ ಚದುರಿಸದೆ ನೀನುಸುರಾ (ಉರಿವ. ೨೯-೧೧): ಹದಿರಿನೊಳು ಟಕ್ಕಿಸುವ ಬಯಲ ಮಾತಿನ ಮಾಲೆಯಂ ಅನುಮಾನಗಳ ಬಿಟ್ಟು . . . ಎನ್ನ ಮನಸಿಜನ ಬಾಣಕ್ಕೆ ಬಲಿಯನಿಕ್ಕನುತೆ ಕೈ ಮುಗಿಯೆ (ಪ್ರಭುಪು. ೮-೬೨). **ಠಕ್ಕಿಸು :** ವರ್ಗ ದ್ವಿತೀಯಾಕ್ಷರಂಗಳ್ಗೆ – ಠಾವು, ಠಾಣಂ, ಠಕ್ಕಿಸಿದಂ (ಠೆಕ್ಕಿಸಿದಂ) (ಶಮದ. ೧೫ ಪ್ರಯೋ): ಠಕ್ಕಿಸುವ ತನ್ನ ನಿಜಗುಣವನೇಕೆ ಮಾಣ್ಬಂ (ಪದ್ಮರಾ. ೧೩-೭); ಅಂಧಕಾದ್ಯರ ಠಕ್ಕಿಸಿಯೆ ಇಂದ್ರಾದಿದೇವರಿಗಿತ್ತನಾ ಸುಧೆಯ (ಸಂಭಪ ೬-೫೩); ಮಗನ ಠಕ್ಕಿಸಿ ತಾಯಿ ಮಲಗಿರಲಾ ಶಿಶುವು ಮಗುಳೆ ಕ್ರಮಗೆಟ್ಟು ಕಂಡಲ್ಲಿ ಅರಸಿ ಕಣ್ಣಿಗೆ ಬೀಳದಿರೆ (ವಿಪ್ರಸು. ೧೮-೪). [ ಟಕ್ಕು$_1$ + – ಇಸು$_3$ ]

**ಟಕ್ಕು$_1$, ಠಕ್ಕು$_3$, ಡಕ್ಕು, ತಕ್ಕು$_3$** (ನಾ). ೧. ಮೋಸ ; ವಂಚನೆ ; ಕಪಟ ; ತಂತ್ರ: ಮಾಯದ ಟಕ್ಕಿನ ಕಪಟದ ವಾಯದ ಕೃತ್ರಿಮದ ಮಱುಕದೆಱಕದ ಕಪಟೋಪಾಯದ ಕಣೆಗಳ್ ಸಂದ ಸ್ತ್ರೀಯರ್ಕೇವಲಮೆ ಸರ್ವಜನವಂಚಕಿಯರ್ (ಧರ್ಮಾಮೃ. ೭-೧೫೬) ; ಪೋ ಬರ್ಕದಂತುಂ ಹರಿಬವನಿನಿತುಂ ಟಕ್ಕನಾಂತಲ್ಲಿ ನೋಟ್ಟುಂ (ಚಂದ್ರಪು. ೬-೨೫ ವ) ; ದೂರ್ವಾಸ ಬರಲು ವಂದಿಸುತ ಟಕ್ಕಿನಿಂದೊರ್ವ ವನಿತೆಯ ಪೊಡೆಯೊಳೊಂದೊಸಕೆಯುಂ ಕಟ್ಟಿ ಗರ್ಭದೊಳಗಿರ್ಪುದೇನೆಂದು ಬೆಸಗೊಳಲ್ (ಸೌಂದಪು. ೪-೫೪) ; ಟಕ್ಕಂ ಟಾಳಿಸಿ ಕನ್ನಂಗೊಱಿದು (ಪ್ರಭುಪು. ೪-೧೪೬) ; ನಿನ್ನ ಮಗ ಭೀಷ್ಮನನ್ನು ಅರ್ಜುನ ಟಕ್ಕಿನಿಂದ ಕೊಂದ (ಬಿದುರ. ೪೨). ೨. ತೋರಿಕೆ; ಬೂಟಾಟಿಕೆ: ಧನಮಿತ್ರನೊಳ್ ಟಕ್ಕಿನ ಜಗಳವನಂದಂದಿಂಗೆಸಗೆಂದು ಪೇೞ್ದು (ದಶಕು. ೮-೧೫೨ ವ). **ಠಕ್ಕು :** ೧. ಉತ್ತಮರ ಮುಂದಾವ ಠಕ್ಕಿರಲಾಪುದು (ಹದಶಾ. ೧೧-೨೬) ; ಅನಿಲಸುತ ಫಡ ಮರಳು ಠಕ್ಕಿನ ವಿನಯವೇ ನಮ್ಮೊಡನೆ (ಕುಮಾರವ್ಯಾ. ೧೩-೮) ; ಠಕ್ಕು ವಿನೋದ . . . . ವಂಚನೆ ನೇಹವೆಂಬೀ ಪರಿಯ ಮಾಯಾಮಯದ ಮಹಿಳಾಜನ ವಿರಾಜಿಸಿತು (ಕೊರರಾ. ೧-೫-೩೨); ಠಕ್ಕು ಪೞಿವು ಬೆಳುಗವತೆ . . . ಗಳಹತನಮವಿವೇಕಮುಸಿರಲೇನಾ ಚೆನ್ನಬಸವನಿಹ ರಾಜ್ಯದೊಳ್ ವಿಸುಕವು (ಚಬಪು. ೬-೪೦); ಠಕ್ಕಿನ ಪಟ್ಕಿ ಕಾಳಿಯ ತವರ್ ಕವಡಿಂಗೆಡೆ (ಚಕವಿ.೬-೭೪). ೩. ಮಾಯೆ; ಮಾಟ: ಸಭೆ ಠಕ್ಕುಕವಿದಂತೆ ನೋಡುತಿರೆ (ತಿಪ್ಪುರ. ದೀ. ೧೬-೧೩). ೪. ಮರುಳು ; ಮೋಹ. 'ಠಕ್ಕುಗೊಳ್' ಪರಾ. **ಡಕ್ಕು :** ೫. ಮರುಳುಗೊಳಿಸುವ ಮದ್ದು ; ಎಚ್ಚರ ತಪ್ಪಿಸುವ ಮದ್ದು. 'ಡಕ್ಕುಗೊಳ್' ಪರಾ. **ತಕ್ಕು$_3$ :** ೧. ಕುನಿಕುನಿದು ವನದ ಗಿಡುಗಿಡುವಿನ ಮಱಿಮಱಿಯಲ್ಲಿ ಸುೞಿದು ಸುೞಿದೋಡುವ ತ[ಪಾಠಾಂ. ಟ]ಕ್ಕಿನ ಹರಿಣನನತಿಭರದಿಂ ತನತನಗೆ ಪುಳಿಂದರಟ್ಟಿ ಮುಟ್ಟುತ್ತೆಚ್ಚರ್ (ಗಿರಿಕ. ೦-೯೨). 'ತಕ್ಕುಗೊಡು' ಪರಾ.

**ಟಕ್ಕನಿಕ್ಕು, ಠಕ್ಕನಿಕ್ಕು**=ಮರುಳುಗೊಳಿಸುವ ಮದ್ದಿಡು ; ಎಚ್ಚರ ತಪ್ಪಿಸುವ ಮದ್ದನ್ನಿಣ್ಣಿಸು : ಶ್ರೀಧರಮುನಿನಾಥನವರ ಕಪಟವೃತ್ತಿಯನಱಿಯದುಂಡು ಸೊಕ್ಕಿ ಮೆಯ್ಯಱಿಯದೆ ಟಕ್ಕನಿಕ್ಕಿದಂತು ಕಡೆದು ನಿದ್ರೆಗೆಯ್ಯುದುಂ[ಪಾಠಾಂ. ಟಕ್ಕುಗೊಂಡಂತೆ ತೂಂಕಡಿಸಿ ಕಡೆದರ್] (ಧರ್ಮಾಮೃ. ೧೧-೧೨೬) : ಮನಸಿಜರಾಜಂ ನೋಟಕಜನಕ್ಕೆ ಲೇಸಾಗಿ ಠಕ್ಕನಿಕ್ಕಿದನೆಂಬಂತನವರತಂ ರಂಜಿಸಿದುವು ಜನಪತಿಯೋಲಗದೊಳಾದ ಪಲವುಂ ನೃತ್ಯಂ (ಧರ್ಮಾಮೃ. ೪-೧೫೦) : ಕಡು ಮುಳಿದೆಯ್ದಿ ಓಡಿದು ಮೊಗಮಿಕ್ಕಿದೊಡೆ ಪೊಳೆದು ಪೋಗಿ ಠಕ್ಕನಿಕ್ಕಿದಡೆ ನಿರ್ವರ್ತಿಸಿ ಕಳೆದು (ಬಂಹರಿ. ೨-೫೧ ವ). **ಟಕ್ಕು ತಿನಿಸು** = ವಂಚಿಸು ; ಮೋಸಗೊಳಿಸು : ಮುದ್ದಾಂ-ನನಗೆ ಟಕ್ಕು ತಿನಿಸಲಿಕ್ಕೆ ಅಂತ ಅವ ಮಾಡೋ ಅವನ (ಗಂಮಾಯಿ. ೧೧೬). **ಠಕ್ಕಿನ ಬೂದಿ** = ಮಂಕಂಬೂದಿ : ಮದನಾಂಜನ ಚೋರ ಮೋಹಿಜನದ ಮೇಲೆ ಕೆದರ್ವ ಠಕ್ಕಿನ ಬೂದಿಯಂತೆ (ಶ್ರಿಪಾಲ. ೪-೧೧೯). **ಠಕ್ಕ ನುಂಡೆ** = ಮಂಕುಗೊಳಿಸುವ ತಿಂಡಿ ; ಮದ್ದು ಹಾಕಿರುವ ಉಂಡೆ : ಸ್ಪಂದನಮಿಲ್ಲದಕ್ಷಿಗಳಿನೀಕ್ಷಿಸುತಿರ್ದುದು ಠ[ಪಾಠಾಂ. ಟ]ಕ್ಕನುಂಡೆಯಂ ತಿಂದವೊಲಾಗಳೊಂದಿನಿತು ಪೊಟ್ಟಿನೊಳಾ ಸಭೆ (ವರ್ಧಪು. ೩-೫೪). **ಠಕ್ಕು ಬಿಕ್ಕು**=ಮೋಸ; ವಂಚನೆ : ಠಕ್ಕುಬಿಕ್ಕಿನ ಮಾತುಗಳಾಡಲು ಯುಕುತಿಯ ನಾ ಕೇಳೆನೆಲವೊ (ವಿದಾಕ್ಷ. ೩೫ ಅನುಪಲ್ಲವಿ). **ಠಕ್ಕುಮಾಡು**=ಮೋಸಮಾಡು; ವಂಚಿಸು : ಆಚಾರ್ಯರೆ ನಿಜವಾಗಿ ನಿಮಗೆ ಮರವೆ ಹೆಚ್ಚಾಗಿದೆ. ಇಲ್ಲವೆ ಇನ್ನೂ ಠಕ್ಕುಮಾಡುತ್ತೀರಿ (ವಾಗ್ಮಿವಿ. ೩೬).

[ ದೇ.॥ ತಮಿ. ತುಳು. ತೆಲು. ಟಕ್ಕು ]

**ಟಕ್ಕು$_2$** (ನಾ). ಆತಂಕದಿಂದ ಕೂಡಿದ ಚಿಂತೆ,–ವ್ಯಥೆ : ವೇಣೂಬಾಯಿ ತನ್ನ ಚಿಕ್ಕಮಗ ಶ್ರೀಪಾದನನ್ನು ಎದೆಗೆ ಅವಚಿಕೊಂಡು ಒಂದೇ ಟಕ್ಕಿನಲ್ಲಿ ಮಲಗಿದ್ದಳು (ಗಂಮಾಯಿ. ೭೦) ; ಟಕ್ಕು ಹಿಡಿದ ಠಕ್ಕ . . . ಕಿಟಕಿಯ ಬಳಿ ಸಾರಿದಳು (ದೀಪಹ. II, ೨೪೩). [ ←ಮರಾ. ಠಕ್ ]

**ಟಕ್ಕು$_3$** (ನಾ). ಮಡಿಕೆ ಹಾಕಿ ಹೊಲಿದ ಹೊಲಿಗೆ; ಟಾಕಿ: ಲಂಗ ಬಹಳ ಉದ್ದವಾಗಿದೆ; ಟಕ್ಕು ಹಿಡಿಸಬೇಕು (ರೂಢಿ). 'ಟಾಕು$_1$' ಪರಾ.

[ ←ಇಂ. Tuck ]

**ಟಕ್ಕುಟವಳಿ, ಟಕ್ಕುಟೌಳಿ, ಠಕ್ಕುಠವಣೆ, ಠಕ್ಕುಠವಳಿ, ಠಕ್ಕುಠವುಳಿ** (ನಾ). ಮೋಸ ; ವಂಚನೆ ; ಕಪಟ : ಟಕ್ಕುಟವಳಿ ತಟವಟವಟ ಮಟವ ಬಿಟ್ಟಕ್ಕಱಂ ದಿಟಪುಟವತ್ತು ಜಟಿಸ್ವಲೆಂಟಕ್ಷರಕಾಗಿ ಮಯ್ದೋರ್ವ (ಶತಸಾಂ. ೭೦-೫೩). **ಟಕ್ಕುಟೌಳಿ :** ಟಕ್ಕುಟೌಳಿಯೆಸಗುವ ಕೋಟಲೆ ಸಾಕು (ಗೀತಗೋ. ೨೭-೪೬). **ಠಕ್ಕುಠವಣೆ :** ಸಾಹಸದಿಕ್ಕೆ ಸಕಲ ಠಕ್ಕುಠವಣೆಯ ಬೇಹ ಪತ್ತಿನ ಬಹು ಕಲೆಯ ಗೇಹವೆನಿಪ ಬೆಲೆವೆಣ್ಗಳ ಕೇರಿಗಳೂಹಾತೀತವಾಗಿಹವು (ಅಂಜಿಚ. ೩-೯೫). **ಠಕ್ಕುಠವಳಿ :** ಪುಸಿ ಠಕ್ಕುಠವಳಿಗಳಲ್ಲಿ ಕಟ್ಟಿ ಎಸೆದು ಕೊಲ್ಲುವರೋ ನಿನ್ನವರು ಕೇಳಲ್ಲಿ (ಪುರಂದ. ೨-೩೯-೪). **ಠಕ್ಕುಠವುಳಿ :** ಮಿಗೆ ಠಕ್ಕುಠವುಳಿ ವಂಚನೆ ದುರ್ಜನತ್ವ ಸಂಯುಗ ವಿಕೃತಿ ರೋಗ ಸಂತಾಪ ಬಲ್ಮುನಿಸು ಹಾನಿಗಳುದಿಸಿದುವು (ಚಬಪು. ೧೪-೨೪). P ಒಂದೇ ಅರ್ಥದ ಈ ಜೋಡಿಶಬ್ದಗಳಂ ಪ್ರತ್ಯೇಕವಾಗಿಯೂ ಬಳಕೆಯಾಗುತ್ತವೆ. [ ಟಕ್ಕು$_1$ + ಟವಳಿ ]

**ಟಕ್ಕುಟೌಳಿ** 'ಟಕ್ಕುಟವಳಿ' ನೋ.

**ಟಕ್ಕುತನ, ಠಕ್ಕುತನ** (ನಾ). ವಂಚಕತನ ; ಮೋಸಗಾರಿಕೆ : (ಹ). **ಠಕ್ಕುತನ:** ಬೊಕ್ಕನಾದರೂ ಠಕ್ಕುತನ ಬಿಡಲಿಲ್ಲ (ಗಾದೆ). [ ಟಕ್ಕು$_1$ + – ತನ ]

**ಟಕ್ಕುದೋಱು** (ಕ್ರಿ). ವಂಚಿಸು ; ಮೋಸಮಾಡು : ಬೆಲೆವೆಣ್ಗೆ ನಿಚ್ಚಮುಮೆಯ್ವಲೆಯಾಱಯದೆ ಟಕ್ಕುದೋಱಿ (ವ್ಯಪವಿ. ೨೯-೧೩). [ ಟಕ್ಕು$_1$ + ತೋಱು ]

**ಟಕ್ಕುರ** (ನಾ). ಒಡೆಯ ; ದೇವತೆ : ಟ[ಪಾಠಾಂ. ಠ]ಕ್ಕುರಂಗೆ ವಾಚಕ ಭೂಪತಿಗೆ ದೆಸೆ ಅಜಾತಂಗೆ ನಿಶ್ಚಯ! ನೇಮಂಗೆ ಖಂಡಿತಭಾವ ನಿರ್ಧರವಾಗಬೇಕು ಐಘಟದೂರ ರಾಮೇಶ್ವರಲಿಂಗವನಱಿವುದಕ್ಕೆ (ಸುಂಕ್ಪಿಂ. ೪೯-೧೭). [ <ಸಂ. ಠಕ್ಕುರ ]

**ಟಕ್ಕುವಗೆ** (ನಾ). ಮೋಸದ ಕ್ರಮ ; ವಂಚನೆಯ ಮಾರ್ಗ : ಆ ಲಾಕ್ಷಾಗೃಹದಾಹವೊಂದೆ . . . ಟಕ್ಕುವಗೆಯಿಂ ಗೆಲ್ದಿರ್ದ ಜೂದೊಂದೆ (ಪಂಪಭಾ. ೯-೨೨). [ ಟಕ್ಕು$_1$ + ಬಗೆ$_3$ ]

**ಟಕ್ಕುಹಿಡಿ** (ಕ್ರಿ). ಆತಂಕದಿಂದ ಪ್ರತೀಕ್ಷಿಸು; ಏಕಾಗ್ರತೆಯಿಂದ ನಿರೀಕ್ಷಿಸು: ಬಾವಿಯ ಮುಂದೆ ಯಾವಾಗ ತಮ್ಮ ಪಾಳಿಯು ಬಂದೀತೆಂದು ಟಕ್ಕು ಹಿಡಿದು ಕುಳಿತಿರುವ ಹೆಂಗಸರು (ಆನಕ. ೯). [ಟಕ್ಕು$_2$ + ಹಿಡಿ$_1$ (<ಪಿಡಿ$_1$)]

**ಟಕ್ಕೆ$_1$** 'ತಕ್ಕೆ$_4$' ನೋ.

**ಟಕ್ಕೆ$_2$** (ನಾ). (?) : ಕೊಠಾರದೊಳಂ ಪೊರೊಳಗಂ ಆಳದ ಟಕ್ಕೆ ಸಲಗೆಗೊಮನ ಮತ್ತ್ಯಯುಗುರ ಮೂನೂರ್ವ್ವರು ದೇವರ ಅಷ್ಟವಿಧಾರ್ಚ್ಚನೆಗೆ [ಯೇಣಗೆ] ಹಾರವಂ ಬಿಟ್ಟರು (ಕಇ. V, ೪೭-೮ ; 1288). [ ? ]

**ಟಕ್ಕೆಯ, ಟೆಕ್ಕೆ$_1$, ಟೆಕ್ಕೆಯಂ, ಟೆಕ್ಕೆಹ, ಠಕ್ಕೆಯ, ಠೆಕ್ಕೆಯ** (ನಾ). ಬಾವುಟ; ಧ್ವಜ : ಅಲಗಿಂ ಸಿಂಗಮನಿಱಿದನ ಕಲಿತನಮಂ ನಗುವ ತೆಱದ್ಕೆ ಮೆಱವುದು ಸೆಳೆಯಿಂ ಪುಲಿವೊಯ್ದ ಕುಱುವು ಪೊಯ್ಸಳ ಕುಲತಿಲಕನ ಮತ್ತಗಜದ [ಟ]ಕ್ಕೆಯದೊಳೀಗಳ್ (ಎಕ. VI, ಕಠೀಕ. ೪೨-೨; 1206) ; ಒತ್ತರಿಪ ಸಿತಕೀರ್ತಿಯೊಳು ಪ್ರಭೆವೆತ್ತು ಪರದರುಶನದ ಮೂಗಿನ ಕತ್ತಿಯೆಂಬಾ ಟ[ಪಾಠಾಂ. ಠೆ]ಕ್ಕೆಯವನಾ ಪುರದೊಳೆತ್ತಿಸಿದ (ಬಸಪು. ೩೩-೩೭): ಹೂವಿನ ತೇರೇನಾದುದು ನಟ್ಟನ ತಾವರೆಗೋಲೆತ್ತ ಪೋಯ್ತು ಕೋವಿದನೆ ಗಳ ಟಕ್ಕೆಯವಡಗಿದುದೆಲ್ಲಿ (ವರ್ಧಪ. ೧೨-೨೮). **ಟೆಕ್ಕೆ$_1$** : ಬಸವನ ಟೆಕ್ಕೆ ಗಗನದೊಳೆ ಸೊಗಸೆ (ಹಾಲಾಸ್ಯ. ೩-೯-೨೧ ರಗಳೆ) ; ನೆಲಕುದ್ದಿದರು ವಾಜಿಗಳ ಪರಿದರು ಬಿರುದು ಟೆಕ್ಕೆಗಳ (ಅನಂರಾ. ೬-೧೬-೧೩) : ಕುಗ್ಗದಂತೆ ಹಿಗ್ಗಿಪಂತೆ ನಿನ್ನ ಹೆಸರ ಟೆಕ್ಕೆಯಂ (ಗಿರಿಪಿಂ. ೮೨-೩೭). **ಟೆಕ್ಕೆಯ** : ಹೊಯ್ಸಳ ಕುಳತಿಳಕನ ಮತ್ತಗಜದ ಟೆಕ್ಕೆಯದೊಳ್ (ಪ್ರುಆರಿ : ೧೯೩೭, ೨೩-೩ ; 1196) : ಭೀಮ ನಗುತ ಧನಂಜಯನ ಟೆಕ್ಕೆಯಕೆ ಬಿಜಯಂಗೈಯಬೇಕೆಂದ (ಕುವ್ಯಾಅ. ೦೦-೪೦); ಪರುಠವಿಸಿರ್ದ ನಾನಾವಿಧ ಟೆಕ್ಕೆಯ ತೆರಳಿತು ನಭವನಳ್ಳಿಱಿದು (ಪೋಹತ. ೧೫-೩೧). **ಟೆಕ್ಕೆಹ**: ಟೆಕ್ಕೆಹವನೆತ್ತಿ ಸಾಱಿಸಿದನೀ ಭೂತಳದೊಳು (ವೀಶೈಪು. ೪-೩-೧೭). **ಠಕ್ಕೆಯ** : ಸೌರಾಷ್ಟ್ರನಾಥಂ ನಿಸದದಿಂ ನಾಳೆ ಬರ್ಪಂ ಠಕ್ಕೆಯವನು ಕಳುಹಿಸಿದಂ (ಪಾಸೋಪು. ೪-೦೦೯) ; ನಸುಗಾಳಿಗೊಲೆದಾಡುವೆಳಗೊಂಬೆ ಸೊಂಡಿಲಾಗಸಕೆದ್ದ ನಟ್ಟಗೊಂಬೆಸೆವ ಠಕ್ಕೆಯ ಮಾಗಲಸಮುಕರನೆಡಬಲದೊಳಿಟ್ಟಣಿಸಿ ನಡೆವ ಮಾಮರದಾನೆಗಳ್ ಮೆಱದುವು (ಕಬಪು. ೩೫-೮) ; ನೆನೆದಾಗ ಬರುವೆನು ರಥದ ಠಕ್ಕೆಯಕ್ಕೆನುತೆ ಕಳುಪಿಸಿಕೊಂಡ ಬಳಿಕ (ತುರಂಗ. ೧೫-೩೭). **ಠೆಕ್ಕೆಯ** : ಬಿಗಿದ ಗುಳದಲಿ ಹೊಳೆಯೆ ಹೊಂಗೆಲಸದ ಸುರೇಖೆಗಳು ಗಗನ ಗಂಗಾನದಿಯ ಕಾಲುವೆ ತೆಗೆದರೆನೆ ಠಕ್ಕೆಯದ ಪಲ್ಲವವಗಿಯ ಮೆಱೆದುದು (ಕುವ್ಯಾದ್ರೋ. ೩-೪) : ಶಲ್ಯ ಕಡಿದನು ಭಟನ ಠೆಕ್ಕೆಯವ (ಕುವ್ಯದ್ರೋ. ೬-೩೫). [ ದೇ.॥ ತಮಿ. ಟಕ್ಕಯ, ಟಕ್ಕಯ ; ತೆಲು. ಟೆಕ್ಕೆ, ಟೆಕ್ಕಯ ]

**ಟಗರು** 'ತಗರ್$_2$' ನೋ.

**ಟಗರುದಲೆಯ** (ನಾ). ಟಗರಿನ ತಲೆಯನ್ನು ಉಳ್ಳವನು ; ದಕ್ಷಪ್ರಜಾಪತಿ ; ದಕ್ಷಬ್ರಹ್ಮ : (ಹ). [ ಟಗರು (<ತಗರ್$_2$) + ತಲೆ$_1$ + – ಅ$_7$ ]

**ಟಣ್** (ನಾ). ಒಂದು ಅನುಕರಣ ಧ್ವನಿ : (ಹ).

**ಟಣ್‌ಟಣ್** (ದ್ವಿರುಕ್ತಿ) : ಸೈಕಲ್ ಬೆಲ್ಲು ಟಣ್‌ಟಣ್! ಎಂದು ಸದ್ದು ಮಾಡುತ್ತ ಹೋಯಿತು (ರೂಢಿ). 'ಟಂಟಣಿಸು$_1$' ಪರಾ.

**ಟಣಕಲಿ** 'ತನಕಲಿ' ನೋ.

**ಟಣ್ಣನೆ** (ಅ). ಚಂಗನೆ : ಒಬ್ಬೊಬ್ಬರೆ ಟಣ್ಣನೆ ಜಿಗಿದುಬಿಟ್ಟರು (ಮುಂಗಾಪು. ೬೮). [ ಟಣ್ + – ಅನೆ$_1$ ]

**ಟತ್ವ** (ನಾ). 'ಟ' ಎಂಬ ಅಕ್ಷರ ; ಟಕಾರ : ಕಡಿದು ನಿಡಿದೆಂಬ ನಡುವೆಂಬ ದಕಾರಂ ಟತ್ವಮಾಯ್ತು (ಶಮದ. ೧೮೦). [ ಸಂ. ]

**ಟನ್** 'ಟನ್ನು' ನೋ.

**ಟನ್ನು, ಟನ್** (ನಾ). ಸುಮಾರು ತೊಂಬತ್ತು ಮಣಗಳಷ್ಟು ತೂಕ : " ೨,೨೪೦ ಪೌಂಡಿನ ತೂಕ : ಟನ್ನು " (Ton. ಇಂಕನಿ.); ಸದ್ಯವೇ ಸಿಗಲಿದೆ ಸಾಲವು ಕಂದಾ ಸತ್ಯ ಅಹಿಂಸೆಯ ನೂರ್ ಟನ್ನು (ಅರರೋ. ೩೪-೧೫). **ಟನ್**: ೨೦ ಟನ್‌ಗಳ ಭರಾವಣೀ ಬಾಬತು ಜಹಜನ್ನು ಯಾ ಅಂತಸ್ತಿನ ಜಹಜನ್ನು ನಾಶಪಡಿಸುವ . . . ಇರಾದೆಯಿಂದ ಕೆಡಕು ಮಾಡೋಣ (ಗ್ರಾಮೂಕ. ೦೯೮). [ ←ಇಂ. Ton ]

**ಟಪಾರಿಕೆ, ಟೆಪಾರಿಕೆ** (ನಾ). ೧. ಮುಚ್ಚಳ ; ಹೊದಿಕೆ : ಮರುದಿವಸ ಬೆಳಗಾಧ ಮೇಲೆ ತಲೆ ಬಿಚ್ಚಿ ನೋಡಲು, ತಲೆಯ ಟಪಾರಿಕಯೇ ಕಡೆಗಾಯಿತು. ಆದರೆ ತಲೆಯು ಅಚ್ಚಳಿದಿದ್ದಿಲ್ಲ (ಕಲಕು. ೦೪). **ಟೆಪಾರಿಕೆ** : ೨. ಘನ ಅಳತೆಯ ಮಾನದಲ್ಲಿ ಅಳತೆಗಿಂತ ಹೆಚ್ಚಾಗಿರುವ ಧಾನ್ಯವನ್ನು ತೊಡೆದುಹಾಕುವಿಕೆ ; ಅಳತೆ ಮಾಡಿಕೊಡುವಾಗ ತಲೆಸವರುವಿಕೆ : (ಹ). [ ←ಹಿಂ. ಟಪರಾ; ಮರಾ. ಟಪ್ಪರ ]

**ಟಪಾಲ್** 'ಟಪಾಲು' ನೋ.

**ಟಪಾಲು, ಟಪಾಲ್, ಟಪ್ಪಾಲು** (ನಾ). ೧. ಅಂಚೆ; ಅಂಚೆಯ ಮೂಲಕ ಬಂದಿರುವ ಅಥವಾ ಕಳುಹಿಸಲಿರುವ ಪತ್ರ ಮೊದಲಾದುವು : ಈ ಮಾತುಗಳು ಮುಗಿಯುವ ಹೊತ್ತಿಗೆ ಟಪಾಲು ಬಂತು (ರಂಗಕ. ೩೦) : ವಾರಕ್ಕೊಮ್ಮೆ ಪೋಸ್ಟುಮನ್ ಚಾವಡಿಗೆ ಬಂದು ಟಪಾಲನ್ನಿತ್ತು ರಾತ್ರಿ ಅಲ್ಲಿಯೇ ತಂಗುತ್ತಾನೆ (ಗಾಳಿಗು. ೩). ೨. ಅಂಚೆಯ ರವಾನೆ. **ಟಪಾಲ್** : ೧. ಹಾಗೆ ರಿಜಿಸ್ಟರ್ ಪೋಸ್ಟಿನಲ್ಲಿ ರವಾನಿಸಬೇಕಾದರೆ ಟಪಾಲ್ ಛಾರ್ಜನ್ನು ಡಿಪಾಜಿಟ್ಟಾಗಿ ಇಡಬೇಕು (ಗ್ರಾಮೂಕ. ೬೬). **ಟಪ್ಪಾಲು** : 'ಟಪ್ಪಾಲುಕಟ್ಟೆ' ಪರಾ. [ ←ಮರಾ. ಟಪಾಲ್, ಟಪ್ಪಾಲ್ ]

**ಟಪಾಲುಗಾಡಿ** (ನಾ). ಅಂಚೆಯನ್ನು ಸ್ಥಳದಿಂದ ಸ್ಥಳಕ್ಕೆ ಒಯ್ಯುವ ಗಾಡಿ: ರಸ್ತೆಯ ಮೂಲಕ ಟಪಾಲು ಸಾಗಿಸುವ ಬಂಡಿ; ಟಪಾಲುಬಂಡಿ (Mail-Cart. ಇಂಕನಿ.). [ ಟಪಾಲು + ಗಾಡಿ$_2$ ]

**ಟಪಾಲುಸಿಪಾಯಿ** (ನಾ). ಅಂಚೆಯನ್ನು ತರುವ ಆಳು ; ಅಂಚೆಪೇದೆ : ತುಬಾಕಿಯ ಗುರಿತಪ್ಪಿ . . . ಮನೆಗೆ ಪತ್ರ ಕೊಡಲಿಕ್ಕೆ ಬರುತ್ತಿದ್ದ ಒಬ್ಬ ಟಪಾಲುಸಿಪಾಯಿಗೆ ತಾಕಿತು (ಮೋಹನೀ. ೦೧೨). [ ಟಪಾಲು + ಸಿಪಾಯಿ ]

**ಟಪ್ಪಾ** 'ಟಪ್ಪೆ' ನೋ.

**ಟಪ್ಪಾಲು** 'ಟಪಾಲು' ನೋ.

**ಟಪ್ಪಾಲುಕಚೇರಿ** (ನಾ). = ಟಪ್ಪಾಲುಕಟ್ಟೆ: ನಮ್ಮ ಹಳ್ಳಿಗೆ ಒಂದು ಟಪ್ಪಾಲುಕಚೇರಿ ಮಂಜೂರಾಗಿದೆ (ರೂಢಿ). [ ಟಪ್ಪಾಲು (<ಟಪಾಲು) + ಕಚೇರಿ ]

**ಟಪ್ಪಾಲುಕಟ್ಟೆ** (ನಾ). ಅಂಚೆಕಚೇರಿ : (ಹ). [ ಟಪ್ಪಾಲು (<ಟಪಾಲು) + ಕಟ್ಟೆ$_1$ ]

**ಟಪ್ಪೆ, ಟಪ್ಪಾ** (ನಾ). ೧. ಪ್ರಯಾಣದ ದಾರಿಯ ಮಧ್ಯದಲ್ಲಿ ಏರ್ಪಡಿಸಿರುವ ನಿಲುಂಗಡೆಯ ಸ್ಥಳ; ಮಜಲಂ; ವಾಹನವನ್ನು ಬದಲಾಯಿಸಿಕೊಳ್ಳುವ ಅಥವಾ ಹೊರೆಯನ್ನು ಒಂದು ತಲೆಯಿಂದ ಮತ್ತೊಂದು ತಲೆಗೆ ಬದಲಾಯಿಸಿಕೊಳ್ಳುವ ಎಲ್ಲೆ: ತಲೆಯಿಂದ ತಲೆಗೆ ಪೀಳಿಗೆಯಿಂದ ಪೀಳಿಗೆಗೆ ಅಲೆಯಿಂದಲಲೆಗೆ ಟಪ್ಪೆಯ ಚಾರನಂತೆ ಇಳಿಯುತಿದೆ ಯುಗದಿಂದ ಯುಗಕೆ ಮಾನವಧರ್ಮ (ಮಂಕುಕ. ៥೦೦). ೨. ಟಪ್ಪಾಲು ; ಅಂಚೆ : ಒಂದು ಪತ್ರವನ್ನು ಬರೆದು ಕುದುರೆ ಟಪ್ಪೆಯಿಂದ ಕಳುಹಿಸಿಕೊಟ್ಟನು (ಚಕರಂ. ៤೭៤). **ಟಪ್ಪಾ** : ೧. ದಾರಿಯಲ್ಲಿ ನಿಲ್ಲಡೆ; ನಿಲ್ದಾಣ; ಮಜಲು; ಟಪ್ಪಾ (Stage. ಇಂಕನಿ.).

**ಟಪ್ಪಾ ಬಂಡಿ** = "ಮಜಲಿನಿಂದ ಮಜಲಿಗೆ, ಬಾಡಿಗೆ ಗೊತ್ತು ಮಾಡಿದ ಅಥವಾ ಬಾಡಿಗೆಯ ಟಪ್ಪಾಕುದುರೆಯಿಂದ ನಡೆಸುವ, ಟಪ್ಪಾ ಬಂಡಿ"(Post-Chaise.ಇಂಕನಿ.);"ಮಜಲುಗಾಡಿ, ಟಪ್ಪಾಬಂಡಿ" (Stage-Coach. ಇಂಕನಿ.). **ಟಪ್ಪೆಓಟ**=ಒಂದು ಬಗೆಯ ಓಟದ ಪಂದ್ಯದಲ್ಲಿ ಒಂದು ಮಜಲಿನಿಂದ ಮತ್ತೊಂದು ಮಜಲಿಗೆ ಓಡುವ ಓಟ : ಆಯಾ ತಂಡದಲ್ಲಿ ಒಬ್ಬನು ಒಂದು ಮಜಲಿಂದ ಮುಂದಿನ ಮಜಲಿಗೆ ಓಡಿ ನಿಲ್ಲುವ, ಅಲ್ಲಿನವನು ಅಲ್ಲಿಂದ ಮುಂದಿನ ಮಜಲಿಗೆ ಓಡುವ, ಹೀಗೆ ಆಯಾ ತಂಡದಲ್ಲಿ ಪ್ರತಿಯೊಬ್ಬನೂ ಮುಂದಿನ ಮಜಲಿಗೆ ಓಡಿ, ಕೊನೆಗಿರುವವನು ಗುರಿಯನ್ನು ಮುಟ್ಟುವ ಓಟದ ಪಂದ್ಯ; ಟಪ್ಪೆ ಓಟದ ಪಂದ್ಯ; ಮಜಲು ಓಟದ ಪಂದ್ಯ (Relay race. ಇಂಕನಿ). **ಟಪ್ಪೆಕುದುರೆ, ಟಪ್ಪಾಕುದುರೆ** = ಒಂದೊಂದು ಮಜಲಿನಲ್ಲಿ ಬದಲಾಯಿಸಿಕೊಳ್ಳುವ ವಾಹನದ ಕುದುರೆ; ದೀರ್ಘಪ್ರಯಾಣದಿಂದ ಒಂದೇ ಕುದುರೆಗೆ ಆಯಾಸವಾಗದಂತೆ ಅಶ್ವಾರೋಹಿಗೆ ವಾಹನವನ್ನು ಬದಲಾಯಿಸಿಕೊಳ್ಳುವುದಕ್ಕಾಗಿ ಒಂದು ನಿರ್ದಿಷ್ಟ ಸ್ಥಳದಲ್ಲಿ ಸಿದ್ಧವಿರುವ ಕುದುರೆ; ಮಜಲಿನ ಅಶ್ವ: (ಕ); "ಟಪ್ಪಾಕುದುರೆ" (Post-horse.ಇಂಕನಿ.); ದಣಿದ ಕುದುರೆಗಳಿಗೆ ಬದಲಾಗಿ ಹೂಡುವ ಹೊಸ ಕುದುರೆಗಳ ತಂಡ; ಟಪ್ಪಾ ಕುದುರೆಗಳ ತಂಡ (Relay. ಇಂಕನಿ.). **ಟಪ್ಪೆಯ ಸವಾರ** = " (ಚರಿತ್ರೆ) ಕಾಗದ ಪತ್ರಗಳನ್ನು ಮುಂದಿನ ಮಜಲಿಗೆ ಒಯ್ಯುವುದಕ್ಕಾಗಿ ದಾರಿಯುದ್ದಕ್ಕೂ (ಹಲವು) ಮಜಲುಗಳಲ್ಲಿ ಕುದುರೆಯ ಸಮೇತ ನಿಲ್ಲಿಸಿರುವ ಸವಾರರಲ್ಲೊಬ್ಬನು" (Post. ಇಂಕನಿ.).

[ ←ಹಿಂ. ಮರಾ. ಟಪ್ಪಾ ]

**ಟಪ್ಪೆನಿಲ್ಲು** (ಕ್ರಿ). ಬೇರೊಬ್ಬರ ತಲೆಯ ಮೇಲಿನ ಹೊರೆಯನ್ನು ಇಳಿಸಿಕೊಂಡು ತಾನು ವಹಿಸಿಕೊಳ್ಳುವುದಕ್ಕಾಗಿ ಗೊತ್ತಾದ ಮಜಲಿನಲ್ಲಿ ಸಿದ್ಧವಾಗಿ ನಿಲ್ಲು : (ಕ). [ ಟಪ್ಪೆ + ನಿಲ್ಲು (<ನಿಲ್) ]

**ಟಪ್ಪೆಯಿಡು** (ಕ್ರಿ). (ಎತ್ತು, ಕುದುರೆ ಮೊದಲಾದ) ವಾಹನಗಳ ಬದಲಾವಣೆಗಾಗಿ ಅಲ್ಲಲ್ಲಿ ಗೊತ್ತಾದ ಮಜಲುಗಳಲ್ಲಿ ಬೇರೆಯ ವಾಹನಗಳನ್ನು ಸಿದ್ಧಪಡಿಸು : (ಕ).

[ ಟಪ್ಪೆ + ಇಡು$_1$ ]

**ಟಬರು** (ನಾ). (ಉಕ) ಅಧಿಕಾರ ದರ್ಪ ; ಜರ್ಬು; ಗರ್ವದ ವರ್ತನೆ : ಎಲ್ಲೀತನಕಪಾ ಇನ್ನೂ ಆಳಿಯಂದಿರು ಅಂಬೋ ಟಬರು (ವ್ಯನಿ. ೩೨೮) ; ಏಟ ಅವನ ಟಬರು (ಗ್ರಾಮಾಯ. ೧೨೩).

**ಟಬರು ನಡೆಸು** = ದರ್ಪವನ್ನು ತೋರು : ಸುಭದ್ರೆಯು ವಿದ್ಯಾಭೂಷಿತೆಯು, ಸುಧಾರಕಳು, ಈವರೆಗೂ ಗಂಡನ ಮೇಲೆ ಟಬರು ನಡೆಸುತ್ತ ಬಂದವಳು (ಧಾಮಿನಿ. ៤೨). **ಟಬರು ಮಾಡು** = ಅಧಿಕಾರ ಚಲಾಯಿಸು : "ಯಾಕರೀ ಸಾಹೇಬರ ಮತ್ತ ನೀವೂ ಬಾಡಿಗೀ ಕೊಟ್ಟಿಲ್ಲಂತ?" ಎಂದು ಹುಣಸೇಕೊಪ್ಪ 'ಟಬರು' ಮಾಡಿದನು (ರಾಯಚಾ. ೧೨೦).

[ <ಜಬರು ? ]

**ಟಬ್ಬು** (ನಾ). ನೀರು ತುಂಬಲು ಮರ ಅಥವಾ ಲೋಹದಿಂದ ಮಾಡಿದ ಅಗಲವಾದ ಬಾಯುಳ್ಳ ಪಾತ್ರೆ: ಜನಗಳಿಗಾಗಿ ಬಟ್ಟೆಬರೆ ಒಗೆಯುವುದಕ್ಕೋಸ್ಕರ ತುಂಬಿಟ್ಟ ದೊಡ್ಡದೊಂದು ಟಬ್ಬು (ಹೂಬಿಸಿ. ೧೭).

[ ←ಇಂ. Tub ]

**ಟಮಕಿ** 'ಟಮಕಿ' ನೋ.

**ಟಮಾಳ, ಟವಾಳ, ಠಮಳ, ಠಮಾಳ, ಠವಳ, ಠವಾಳ** (ನಾ). ೧. ಮೋಸ; ಕಪಟ; ವಂಚನೆ; ಧೂರ್ತವಿದ್ಯೆ: ದುರಾಗ್ರಹಂ ಚಿತ್ರದೊಳಾಗೆ ನಿನ್ನ ಬಟಿಯುಂ ಬರಲೀ ಮುಳಿಸೇಂ ಟ[ಪಾಠಾಂ. ಸಿಂತ]ಮಾಳದಿಂ ಸುತ್ತು ವರ್ಗಲ್ಲದೊಲ್ಲೆ (ಕಾವ್ಯಾವ. ៤៩០). ೨. ವಂಚನೆಯ ಮಾತು: ದುರ್ದಿಮಂತ್ರವುಂ ಪರೆವ ಟ[ಪಾಠಾಂ. ಠ]ಮಾಳಮಂ ಬಿರಿದನೋದಿದೊಡವ್ವ ಪದಾರ್ಥಮಾವುದೋ (ಪಂಪಭಾ. ೧೬-៤೭). **ಟವಾಳ**: ೩. ಮರುಳು ; ಮೋಹ ; ಮಾಯೆ. 'ಟವಾಳಿಸು' ಪರಾ. **ಠಮಳ**: ೧. ತೊಟ್ಟ ಠಕ್ಕು ಠಮಳವ ಬಿಟ್ಟು ಸರ್ವರಾಗವಿರಾಗನಾಗಿ (ಶೂನ್ಯಸಂ. ३४०). **ಠಮಾಳ**: ೧. ದ್ರೋಹ ಠಮಾಳಂ ಮಾಡುವೆನಾಹವಮಂ ಕಂಡು ಮಾಣೆಂ (ಬಂಜಿಂ. ೧೨-೮) : ಬೊಂಬುಳಿಯಾಳಮಾಳಮಂತೆ ಠಮಾಳಂ . . . ಜಟ ಸಂದೇಹಂ (ಶಮದ. ३៤). 'ಠಮಾಳತನ' ಪರಾ. **ಠವಳ**: ೧. ಭಕ್ತರ ಗುಣವ ನೋಡಿಹೆನೆಂದು ತೊಟ್ಟ ಠಕ್ಕು ಠವಳವ ಬಿಡು (ಮದೀವ. ३೭३-೧೨). **ಠವಾಳ**: ೧. ಎಳತಟ ಠಕ್ಕು ಠವಾಳ ತಿರಸ್ಕಾರ ಕಳವಳ ವಂಚನೆ(ಚೋಗಾಂವಿ. ೩-३៤) : ಕಳವಳದಾಳವಾಳದ ವಿಟಾಳಿ ಠವಾಳದ ಸೂಳೆವೆಂಗಳಾಕುಳ ರತಿಕಾಮಕೇಳಿಯ ವಿಕಾರದ ಭೋಗದೋರ್ದರಾಗಳುಂ (ಹರ್ಷಿಾರ. ३-៨៩).

[ ? ]

**ಟಯರು** 'ಟೈರು' ನೋ.

**ಟರಟರ** 'ಟಿಜಟಿಜ' ನೋ.

**ಟರ್ಕಿಕೋಳಿ** (ನಾ). ದೊಡ್ಡ ಆಕಾರದ (ಮಾಂಸಾಹಾರಿಗಳು ರುಚಿಕರವಾದುದೆಂದು ತಿಳಿದಿರುವ, ತುರ್ಕಿದೇಶದ್ದೆಂದು ಭ್ರಮಿಸಲಾಗಿದ್ದ) ಅಮೇರಿಕದ ಒಂದು ಬಗೆಯ ಕೋಳಿ : ಸಾಮಾನ್ಯ ಕೋಳಿಸಾಕಣೆಯನ್ನರಿತ ರೈತನು ಟರ್ಕಿಕೋಳಿ, ಗಿನಿಕೋಳಿ, ಬಾತುಕೋಳಿಗಳನ್ನು ಸುಲಭವಾಗಿ ಸಾಕಬಹುದು (ಜಾಲಶ್ರ. III, ೧೭೭೯).

[ ಟರ್ಕಿ$_0$ + ಕೋಳಿ$_1$ (<ಕೋಟ್$_1$) ]

**ಟರ್ಕಿಟವಲು** (ನಾ).ಗುಂಜುಗುಂಜಾದ ಹೆಣಿಗೆಯುಳ್ಳ ವಸ್ತ್ರ,-ಟವಲು: ಟರ್ಕಿಟವಲಿನಲ್ಲಿ ನೀರು ಚೆನ್ನಾಗಿ ಹೋಗುತ್ತದೆ (ರೂಢಿ).

[ ಟರ್ಕಿ$_0$ + ಟವಲು./ ಇಂ. Turkish Towel ]

**ಟರ್ನಿಪ್** (ನಾ). ಸಾಸವೆ ಜಾತಿಯ ಒಂದು ದ್ವಿವಾರ್ಷಿಕ ಸಸ್ಯ : (ಮೃಜಿಗಿ. ೧៤-३៩៤); ಟರ್ನಿಪ್ ತರಕಾರಿಯನ್ನು . . . ಹಗುರವಾದ ನೆಲದಲ್ಲಿ ಚೆನ್ನಾಗಿ ಬೆಳೆಯಬಹುದು (ತರಬೆ. ៤३). [ ←ಇಂ. Turnip ]

**ಟರ್ಪೆಂಟೈನ್** (ನಾ). ೧.ಕರ್ಪೂರ ತೈಲದ ಮರ: ಸೀಮೆ ಕರ್ಪೂರ ತೈಲದ ಮರ, ಟರ್ಪಂಟೈನ್ (ಮೃಜಿಗಿ. ៤३-೧३៤៩). ೨. ಬಣ್ಣ, ವಾರ್ನಿಶ್ ಮತ್ತು ಔಷಧಗಳಿಗೆ ಬಳಸುವ ಒಂದು ಬಗೆಯ ಮರದ ಮುಂದದ್ರವ, ಕರಾಳ; ಕರ್ಪೂರ ತೈಲ: ನೆಲದ ಮೇಲೆ ಪೇಂಟ್ ಕರೆಗಳಿದ್ದರೆ ಟರ್ಪಂಟೈನ್ ಒಂದನ್ನೇ ಉಪಯೋಗಿಸಿ ತೆಗೆಯಬಹುದು (ಗೃಹವಿ. ೧೭३).

[ ←ಇಂ. Turpentine ]

**ಟಲಾಯಿಸು, ಟಳಾಯಿಸು, ಠಲಾಯಿಸು, ಠಳಾಯಿಸು** (ಕ್ರಿ). ೧. ಕುದುರೆಯನ್ನು ಅತ್ತಿತ್ತ ನಡೆಸು : (ಕ). ೨. ಅತ್ತಿಂದಿತ್ತ ಇತ್ತಿಂದತ್ತ ತಿರುಗಾಡು,-ಅಡ್ಡಾಡು,-ಸುತ್ತಾಡು; ಶತಪಥ ತಿರುಗು: ಹಾಡುತ್ತ ಟಳಾಯಿಸುತ್ತಿದ್ದ (ಉಡುಗೊ. ៤೦) ; ಬೀದಿಯಲ್ಲಿ ಆವನೋ ಒಬ್ಬನು ಬಲುಹೊತ್ತಿನಿಂದಲೂ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಟಲಾಯಿಸುತ್ತಿರುವವನು

ತನಂತ್ರಾಣಃ (೬). ಟೌಳಿ₂: ೧. "ಟೌಳಿ ಸೀಸಕಮೊನಿಕು" (ಶಬ್ದಮಂ. ೪೩); "ಸೀಸಕಮನ್ನಲ್ ತಲೆಟೌಳಿಯುಂ" (ಕವಿಕಂ. ೦೩೧); ವಿಕಟಾಂಗದ ಕುದುರೆ . . . ಅದಱ ಮೇಲಿದ್ದ ಬಲ್ಲಹಂಗೆ ಬಲ್ಲಹ ಟೌಳಿ ಸುಲಲಿತ ತರಕಸ ಸಿಂಗಾಡಿಗತ್ತಿ (ಸುಂಕಬಂ. ೬೪). ತವುಳಿ₂: ೧. ಮಿಸುನಿಯ ಪಕ್ಕರೆ ಜೋಡು ಸವಗ ತವುಳಿ[ಪಾಠಾಂ. ತೌಳಿ]ಮಿಸುಪ ಖಂಡೆಯ ಪೇಡೆಯುಗಳ ವೊಸೆದಿತ್ತು (ಕುಠಾಸಾಂ. ೩೯-೬೩): ತಲೆತವುಳಿ ಜೋಡುದಗಲೆ ಬೆನ್ನೊಳಳ ವಟ್ಟ ಬಿಲ್ಲು ಬಾಣಗಳ ಬತ್ತಳಿಕೆಯ . . . ಕುದುರೆಯ್ಯೆತಂದುವು ಮುಲುಕರ ಹಿಮನೆಂಬುವನ (ಕಂನವಿ. ೧೮-೮೩). ತೌಳಿ₂: ೧. "ಕಂಕಟಕ ಮೊನೆ ತೌಳಿ" (ಮಂಗರಾ. ೮೬-೩೧): "ಸೀಸಕಮೊನೆ ತಲೆಯ ತೌಳಿ" (ಭಾರನಿ. ೦೨): ಪರಿಪರಿಯಾದ ಮೈಜೋಡು ತೌಳಿಯುನಾಂತುರವಣಿಸಿತು ರಾವುತರು (ಅಂಜಜ. ೬-೭೦): ತೊಟ್ಟ ವಜ್ರಾಂಗಿಯ ಜೋಡು ಸವಗ ಪೊಂಬಟ್ಟಲ ಚೀನಿಯ ತೌಳಿ ಕಟ್ಟಿದ ಬಿರಿದು ಮೊಱೆಯ (ಕುರಾಸಾಂ. ೦೨-೮೬): ಮುಱಿದ ಕೂರಸಿಯ ನೆಗ್ಗಿದ ಹರಿಗೆಯ ಹಂಚುಹಱಿಯಾದ ತಲೆಯ ತೌಳಿಗಳ . . . ಕಾಲಾಳ್ಗಳು ಕುಱಿದಱಿಯಾದರು (ವರ್ಧಜ. ೬-೯೩). [ ? ]

ಟವುಳಿಕಾಟಿ 'ಟವಳಿಗಾಟಿ' ನೋ.

ಟವುಳಿನುಡಿ (ನಾ). ವಂಚನೆಯ ಮಾತು; ಮೋಸದ ಮಾತು: ಮಿಗೆ ಟಕ್ಕುನುಡಿ ಟವುಳಿನುಡಿಗಳಿಂ ಪುರುಷರನು ದೆಗಡುಗೊಳಿಸುವ ಬಣ್ಣಣೆಯ ನುಡಿಯ ಭಾವೆಯರು (ನವಮೋ. ೨೪-೦೫). [ಟವುಳಿ₁ (<ಟವಳಿ)+ನುಡಿ₂]

ಟಸ್ಸೆ 'ಠಸ್ಸೆ' ನೋ.

ಟಳಾಯಿಸು 'ಟಲಾಯಿಸು' ನೋ.

ಟಱಟಱ, ಟರಟರ (ನಾ). ಒಂದು ಅನುಕರಣ ಶಬ್ದ: ಹುಯ್ಯಲನಿಕ್ಕು ವಂದದಿಂ ಟಱಟಱ ಱೀಕುಱೀಕು ಬೆಬೆ . . . ಎಂದುಮೊತ್ತಲುಂ . . . ದರ್ದುರವ್ರಜಂ (ಅನಂಪು. ೯-೦೩). ಟರಟರ: ಅಂತೊಪ್ಪುವ ಕೆಱೆಯೊಳ್ ಪಲವುಂ ಕಪ್ಪೆಗಳ್ ಟರಟರೆಂಬ ಶಬ್ದದೊಳ್ ಕರೆಯುತ್ತಮಿರ್ಪುದುಂ (ಪಂಚತಂ. ೩೦೪-೦೮).

ಟಾಂಕಿ, ಟಾಕಿ₃ (ನಾ). ನೀರು ತುಂಬುವ ತೊಟ್ಟಿ,-ಪಾತ್ರೆ: ನಮ್ಮ ಮನೆಯ ಟಾಂಕಿ ಸುಮಾರು ಇಪ್ಪತ್ತೈದು ಕೊಡ ನೀರು ಹಿಡಿಯುತ್ತದೆ (ರೂಢಿ). ಟಾಕಿ₃: ಪೇಟೆಯ ಮನೆಯಲ್ಲಿ ಒಂದು ಟಾಕಿ ಇಲ್ಲದಿದ್ದರೆ ಹೇಗೆ? (ರೂಢಿ). [ ←ಮರಾ. ಟಾಂಕೀ, ಟಾಕೀ ]

ಟಾಂಗ₁ 'ಟಾಂಗಾ' ನೋ.

ಟಾಂಗ₂, ಟಾಂಗು (ನಾ). ಕಾಲು; ಮೊಳಕಾಲು. ಟಾಂಗು: ಮುಗ್ಗರಿಸಿ ಬಿದ್ದಿರುವ ಆತನ ಬೆನ್ನನ್ನು ಇವನು ಟಾಂಗಿನಿಂದ ತಿವಿದನು (ರೂಢಿ).

ಟಾಂಗನಿಕ್ಕು = (ಮೊಳ) ಕಾಲನ್ನೂರು: ದೇವತೆಗಳು ಆ ರಕ್ಕಸನೆಡೆಗೆ ಬಂದು ತಮ್ಮ ಕಿವಿಯ ಹಿಡಿದುಕೊಂಡು ಟಾಂಗನಿಕ್ಕಿ ನಮಸ್ಕರಿಸಿ (ಶೃರಸೂ. ೪೦). ಟಾಂಗುಕೊಡು = (ಎದುರಾಳಿಯನ್ನು ಕೆಳಗೆ ಬೀಳಿಸಲು) ಎದುರಾಳಿಯ ಕಾಲಿಗೆ ಅಡ್ಡಗಾಲು ಇಡು: ಟಾಂಗುಕೊಟ್ಟು ನನ್ನನ್ನು ಅವನು ಬೀಳಿಸಿದ (ರೂಢಿ). [ ←ಹಿಂ. ಮರಾ. ಟಾಂಗ. / ಸಂ. ಟಂಗ ]

ಟಾಂಗಾ, ಟಾಂಗ₁ (ನಾ). ಸಾಮಾನ್ಯವಾಗಿ ಹಿಂಭಾಗದಲ್ಲಿ ಇಬ್ಬರು ಕುಳಿತುಕೊಳ್ಳಬಹುದಾದ ಎರಡು ಚಕ್ರದ ಒಂಟಿ ಕುದುರೆಯ ಗಾಡಿ: ಅಷ್ಟರಲ್ಲಿ ಹೊರಗೆ ಒಂದು ಟಾಂಗಾ ಬಂದು ನಿಂತಿತು (ಅಪನಾ. ೦೮೩): ಮನೆಯ ಮುಂದೆ ಟಾಂಗಾ ಬಂದು ನಿಲ್ಲುತ್ತಲೇ ಪದ್ಮಾವತಿ ಧಾವಿಸಿ ಹೊರಗೆ ಬಂದಳು (ಅಹೋಳ. ೦೫೩). ಟಾಂಗ₁: ಟಾಂಗ ರಿಕ್ಷಾಗಳ ಸಾಲಿಗೊಳ ಗಾಗದೆ ನಿಂತೆ (ಇಂಜಾಪ. ೦೦೩-೫): ಉಳಿದ ಪಯಣಿಗರಿಗೆ ಮೋಟರು ಟಾಂಗ ಮೊದಲಾದ ವಾಹನಸೌಕರ್ಯಗಳು ಸಿಗುತ್ತವೆ (ಅಳನಿ. ೨). 'ಜಟಕಾ₂' ಪರಾ. [ ←ಹಿಂ. ಟಾಂಗಾ ]

ಟಾಂಗಾವಾಲ (ನಾ). ಟಾಂಗಾ ಹೊಡೆಯುವವನು: ನಗರಗಳಲ್ಲಿ ಇನ್ನೂ ಟಾಂಗಾವಾಲಗಳ ಸೊಕ್ಕು ಇಳಿದಿಲ್ಲ (ಸಮಾಜ. ೮, ೩೬೩೪). [ ←ಹಿಂ. ಟಾಂಗಾವಾಲಾ ]

ಟಾಂಗು 'ಟಾಂಗ₂' ನೋ.

ಟಾಂಟಾಂ (ನಾ). ತಮಟೆಯನ್ನು ಬಾರಿಸುತ್ತ ಬೀದಿಬೀದಿಗಳಲ್ಲಿ ಪ್ರಚಾರಮಾಡುವ ಕ್ರಮ; ಟಮಕಿ ಬಡಿಯುತ್ತ ಡಂಗುರ ಸಾರುವಿಕೆ: ಹರಾಜು ಯಾವ ತಾರೀಖಿನಲ್ಲಿ, ಯಾವ ಸ್ಥಳದಲ್ಲಿ ಆಗುತ್ತದೋ ಅದನ್ನು ಕುರಿತು ಟಾಂಟಾಂ ಮೂಲಕ ಪ್ರಸಿದ್ಧಪಡಿಸಬೇಕು (ಗ್ರಾಮಾಕ. ೭೬).

ಟಾಂಟಾಂಮಾಡು = ಎಲ್ಲರಿಗೂ ತಿಳಿಯಪಡಿಸು; ಬಹಿರಂಗಪಡಿಸು: ಅಷ್ಟರೊಳಗೆ ಅವನು ಆ ಗುಟ್ಟನ್ನು ಟಾಂಟಾಂಮಾಡಿಬಿಟ್ಟನು (ರೂಢಿ).

ಟಾಂತ (ನಾ). ಟಕಾರದಲ್ಲಿ ಕೊನೆಗೊಳ್ಳುವ ಶಬ್ದ: ಟಾಂತಕ್ಕೆ ಅಟ್ಟು-ಅನುಧಾವನೇ (ಶಮುಧಾ). [ ಟ + ಅಂತ₂ ]

ಟಾಂತಾಕ್ಷರ (ನಾ). ೧. 'ಟ' ಎಂಬ ಅಕ್ಷರವು ಕೊನೆಯ ಅಕ್ಷರವಾಗಿರುವಂಥದು. ೨. [ಜೈನ] 'ಟ' ಎಂಬ ಅಕ್ಷರವನ್ನು ಕೊನೆಯಾಗುಳ್ಳ ಒಂದು ಮಂತ್ರ: ಟಾಂತಾಕ್ಷರಮನನುಚಿಂತಿಸೆ ಚಿಂತಿತ ಫಲಸಿದ್ಧಿಯಕ್ಕುಮೆಂಬರ್ (ಜಿನಾರ. ೦೨). [ ಟಾಂತ + ಅಕ್ಷರ ]

ಟಾಕ 'ಟಾಕಂ₂' ನೋ.

ಟಾಕಣ, ಠಾಕಣ (ನಾ). ಒಂದು ಬಗೆಯ ಗಿಡ್ಡ ಕುದುರೆ: ಬೆಟ್ಟಸೀಮೆಗಳಲ್ಲಿ ಕುದುರೆ, ಟಾಕಣ, ಹೇಸರಗತ್ತೆ, ಕತ್ತೆ ಹೆಚ್ಚು ಉಪಯೋಗಕರ (ಭೂವಿವ. ೨೭೦): ಮಡಿಕೇರಿಯ ಮಲೆಯಲ್ಲಿ ತಟ್ಟು, ಟಾಕಣ ಏರಲು ಕಲಿತ ಅವರು, ಅಶ್ವಾರೋಹಿಗಳಾಗಿ, ಬೆಟ್ಟದ ದೊರೆಯಂತೆ ಬಂದರು (ಕುಡಿಕೂ. ೩೪): ಮಾತಂಗಿ ಬಿಳಿಯ ಅರಬ್ಬೀ ಟಾಕಣದ ಮೇಲೆ ಕುಳಿತು . . . ಶತ್ರುಸೈನ್ಯವನ್ನಿದಿರಿಸಿದಳು (ನಡಿದಾ. II, ೯೯೩). ಠಾಕಣ: ಶೀನಪ್ಪನ ಹತ್ತಿರ ಮಾತನಾಡುತ್ತಿರುವಾಗ ಮನಸ್ಸು ಅರಬ್ಬಿ ಠಾಕಣದಂತೆ ನರ್ತಿಸುತ್ತದೆ (ಅನಾಥ. ೨೨೬): ರಾಯ ಹುಲಿಯಂತೆ ಒಂದೇ ಹಾರಿಗೆ ಠಾಕಣದ ಮೇಲೆ ಕುಪ್ಪಳಿಸಿ ಕುಳಿತನು (ಅಳಾಳ. ೬೪); ಯುದ್ಧದಲ್ಲಿ ಜಯಿಸಿದಾಗ ತನ್ನ ಪಾಲಿಗೆ ಬಂದಿದ್ದ ಒಂದು ಅರಬ್ಬಿ ಠಾಕಣವನ್ನು ಹತ್ತಿದನು (ಧಾಟವೀ. ೫). [ ←ಮರಾ. ಟಾಕಣ; ಹಿಂ. ಟಾಂಗನ್./ಸಂ. ಟಂಕಣ, ಟಂಕನ ]

ಟಾಕಾಪೂರ್ತಿ (ಅ). ತಾತ್ಪೂರ್ತಿಕವಾಗಿ; ಸದ್ಯಕ್ಕೆ: ಕನ್ನಡವಾಙ್ಮಯವನ್ನೇ ಪರೀಕ್ಷೆಗೆ ತೆಗೆದುಕೊಂಡು ಅಭ್ಯಾಸಿಸಿದವರು ಕೂಡ, 'ಟಾಕಾಪೂರ್ತಿ' ಎಂಬಂತೆ ಪರೀಕ್ಷೆಗಷ್ಟಷ್ಟೇ ಓದಿ ಆದಾದ ಮೇಲೆ . . . ಓದಿದುದನ್ನೂ ಮರೆತುಬಿಡುವ ಪರಿಸ್ಥಿತಿ ಕಂಡುಬರುತ್ತಿದೆ (ಬದುಕಿ. ೯೨ಪ್ರಸ್ತಾವನೆ). [ ←ಮರಾ. ತಾಕಾಪೂರ್ತೀ ]

ಟಾಕಿ₁, ಟಾಕು₁ (ನಾ). ಒಂದು ಬಗೆಯ ಹೊಲಿಗೆ;-ಜೋಡಣೆ: ಅಂಗಿ ಹರಿದಿದೆ. ಎರಡು ಟಾಕಿ ಹಾಕಿಕೊಡಿ (ರೂಢಿ). ಟಾಕು₁: "ಹೊಲಿಗೆ. ಟಾಕು" (Stitch. ಇಂಕನಿ.).

ಟಾಕಿ ಹರಿ = (ಉಕ) ಧೈರ್ಯ ಕುಗ್ಗು: ರಾಹು ಪೋಲೀಸರನ್ನು ಕರೆಯ ಕಳುಹಿಸಿದ. ಅದನ್ನು ಕಂಡಕೂಡಲೇ ಮಾರವಾಡಿಯ ಟಾಕಿ ಹರಿಯಿತು (ಮೋಜೀವ. ೧೨). ಟಾಕಿ ಹಾಕು, ಟಾಕು ಹಾಕು = ಜೋಡಿಸಿ ಹೊಲಿ: ಬಟ್ಟೆ ಹರಿದುಹೋಗಿದೆ, ಟಾಕಿ ಹಾಕಬೇಕು (ರೂಢಿ); ದಾಟು ಹೊಲಿಗೆ ಹಾಕು; ಟಾಕು ಹಾಕು (Baste. ಇಂಕನಿ.). [ ←ಹಿಂ. ಮರಾ. ಟಾಕಾ, ಟಾಂಕಾ ]

ಟಾಕಿ₂ (ನಾ). (ಲೋಹ, ಕಲ್ಲು ಇವನ್ನು ಕೆತ್ತಿ ಆಕಾರಕ್ಕೆ ತರುವ ಒಂದು ಬಗೆಯ ಉಕ್ಕಿನ ಬಾಯಿಯ) ಉಳಿ ಮತ್ತು ಅದರ ಪೆಟ್ಟು: ಅವನ ಮನೆಯಲ್ಲಿ ಪಾತ್ರ ಪಾತ್ರೆಗಳಿಗೆ ಟಾಕಿ ಹಾಕುವ ಕೆಲಸ ನಡೆದೇ ಇತ್ತು (ಮೂರುದಾ. ೯೯). [ ←ಮರಾ. ಟಾಕೀ. / ಸಂ. ಟಂಕ ]

**ಟಾಕಿ$_2$** 'ಟಾಂಕಿ' ನೋ.

**ಟಾಕಿ$_3$** (ನಾ). ಮಾತಾಡುವ ಚಲನಚಿತ್ರ: ಭಾರತದಲ್ಲಿದ್ದ ಮೂಕಿ ನಿರ್ಮಾಣ ಸಂಸ್ಥೆಗಳು ಒಂದೊಂದಾಗಿ ಟಾಕೀನಿರ್ಮಾಣಸಂಸ್ಥೆಗಳಾದುವು (ನಟಸಾ. ೬೩೭); ಈಗೇನು ಸಿನಿಮಾ, ಟಾಕಿ, ನಾಟು ಮುಂತಾದುವುಗಳಿಗೇ ಹೆಚ್ಚು ಪ್ರೋತ್ಸಾಹನ (ರಾಯುಕ. ೬೩). [ ←ಇಂ. Talkie ]

**ಟಾಕು$_1$** 'ಟಾಕಿ$_1$' ನೋ.

**ಟಾಕು$_2$, ಟಾಕ** (ನಾ). ೧. ಲೇಖನಿ: ಟಾಕು, ಗಲಗು ಅಲ್ಲದೆ ಬೆಂಕಿಪೆಟ್ಟಿಗೆಯ ಒಂದು ಕಡ್ಡಿಯೂ ಸಹ ನನಗೆ ನಡೆಯುತ್ತಿತ್ತು (ಸ್ಮೃತಿಚಿ. ೧೫೭); ಹಳ್ಳಿಯ ಆ ದೊಡ್ಡ ಅಧಿಕಾರಿ ಟಾಕನ್ನು ಯತ್ನಪೂರ್ವಕವಾಗಿ ಹಿಡಿಯುತ್ತ . . . ನೋಡಿದ (ಜಮೀನ್ದಾ. ೫); ಸಣ್ಣ ಸ್ವದೇಶಿ ಅಂಗಡಿಯನ್ನು ತೆರೆದು ಪೆನ್ಸಿಲ್ ಹಾಳೆ ಟಾಕು ಮೊದಲಾದುವನ್ನು ಮಾರಲು ಇಡುತ್ತಿದ್ದ (ಸೀನಾಪ. ೧೨). ೨. (ಘನವಸ್ತುಗಳ) ಭಾರದ ಒಂದು ಅಳತೆ,–ತೂಕ: ಇಪ್ಪತ್ತುನಾಲ್ಕು ಟಾಕಿನ ಘನವಾದ ಶಾರ್ಙ್ಗವ ತರಿಸಿದನು (ಕುರಾಸಾಂ. ೧೪–೧೦). **ಟಾಕ**: ೨. ೨೪ ರತಿ ಅಂದರೆ ೧ ಟಾಕ (ಮುಂಬವ್ಯಾ. ೧೩೭). [ ←ಮರಾ. ಟಾಂಕ್ ]

**ಟಾಕೋಟಾಕು, ಠಾಕೋಠಾಕು, ಠಾಕೋಠೀಕು** (ಅ). ಕಾಲಕ್ಕೆ ಸರಿಯಾಗಿ; ತಕ್ಷಣ; ತಡಮಾಡದೆ: ಟಾಕೋಟಾಕು ತಲುಪಿಸಬೇಕೆಂದು ವಿಳಾಸ ಬರೆದು ಟಪಾಲು ಮೇಲೆ ಹಾಕಿಬಿಟ್ಟರು (ಕಥಾಮಂ. IV, ೮೩). **ಠಾಕೋಠಾಕು**: ಠಾಕೋಠಾಕು ಎಂಟುಗಂಟೆಗೆ ಬಂದೇಬಿಟ್ಟ ಆಸಾಮಿ (ಊರು). **ಠಾಕೋಠೀಕು**: ಎರಡು ಗಂಟೆಗೆ ಠಾಕೋಠೀಕಾಗಿ ಗೌಡ ಹಾಜರಾದ (ದಂಡಕೋ. ೫೦). [ ←ಮರಾ. ಟಾಕೋಟಾಕ್ ]

**ಟಾಚಣಿ** (ನಾ). (ಉಕ) ಗುಂಡುಸೂಜಿ: ಅದು ಬಹಳ ಚಿಕ್ಕದಾಗಿ ಅಂದರೆ ಟಾಚಣಿಯ ಮೊನೆಯಷ್ಟು ಸೂಕ್ಷ್ಮವಾಗಿ ಕಾಣುತ್ತಿತ್ತು (ಮಹಾಕಾ. ೧೨೨); ಕೆಲವು ಮಾತುಗಾರರು ತಮ್ಮ ಮುಂದಿದ್ದ . . . ಪಿನ್ ಕುಶನ್ನಿನ ಟಾಚಣಿಯೊಡನೆ ನಿರರ್ಥಕವಾಗಿ ಹೋರಾಡುವರು (ಗೋಮಾತೃ. ೬೦). [ ←ಮರಾ. ಟಾಚಣೀ ]

**ಟಾಠಡಾಢಣ** (ನಾ). ನಿಶ್ಚಿತವಾದುದು; ನಿಸ್ಸಂದೇಹವಾದುದು; ನಿರ್ದಾಕ್ಷಿಣ್ಯವಾದುದು; ಅಚಲವಾದುದು (?): ಎನ್ನ ನುಡಿ ಟಾಠಡಾಢಣ [ಪಾಠಾಂ. ಯರಡಾದೊಡ]ಮೆನ್ನಂ ಬೆಸಸುವುದು ರಾಜಸೂಯಂ ದೇಳಲ್ (ಪಂಪಭಾ. ೬–೨೭): "ಟವರ್ಗಾಕ್ಷರಗಳಂತೆ ನಿಯತ, ಶಾಶ್ವತ" (ಪಂಪಡಿ. ೨೨೦). [ ? ]

**ಟಾಣ** 'ತಾಣ' ನೋ.

**ಟಾಣಕೋಲು** (ನಾ). ಬಟ್ಟೆ ನೇಯುವ ಮಗ್ಗದಲ್ಲಿ ನೂಲುಗಳನ್ನು ಹೆಣೆಯಲು ಹಾಸಿನ ಮೇಲ್ಗಡೆಗೆ ಹಾಗು ಕೆಳಗಡೆಗೆ ಜೋಡಿಸಿರುವ ಕೋಲು; ನೇಯ್ಗೆಕೋಲು: ಟಾಣಕೋಲುಗಳೆರಡು ಕಾಣಮಗ್ಗದೊಳೇನೊ (ಕನ್ನಜಾ. ೨೯೯). [ ←ಮರಾ. ಟಾಣಕೋಲ್ ]

**ಟಾಣಗುಂದೂರ್** (ನಾ). ಒಂದು ಊರಿನ ಹೆಸರು: ಅದರ ಸೀಮೆ ಬಡಗ ಟಾಣಗುನ್ದೂರ ಸೀಮೆಯು ಪಳ್ಳಂ (ಎಕ. VII, ಶಿಕಾ೦. ೧೩೦–೧೭; 1068). 'ತಾಣಗುಂದೂರ್' ಪರಾ. [ ? + ಊರ್ ]

**ಟಾಣದೀವಿಗೆ** 'ತಾಣದೀವಿಗೆ' ನೋ.

**ಟಾಣಯ, ಟಾಣೆಯ, ಠಾಣೆಯ, ಠಾಣ್ಯ, ತಾಣ್ಯ** (ನಾ). ೧. ನೆಲೆ; ಬೀಡು; ಆಶ್ರಯ: ಗರುಡ ಗಾಂಧರ್ವರ್ಗಳೆಕ್ಷಾದ್ಯರ್ಕಿಗೆ ಕೊಟ್ಟಹ ದೇಶಗಳು ತನ್ನವರಿಗೆ ಟಾಣಯವಾದವೆಲೆ ಭೂಪಾಲ (ದೇವೀಮ. ೫–೧೯). **ಟಾಣೆಯ**: ೨. (ಕೋಟೆ, ಕಿಲ್ಲೆ, ಪಟ್ಟಣ ಮೊದಲಾದುವುಗಳ) ರಕ್ಷಣೆಗಾಗಿ ಇಟ್ಟಿರುವ ಸೈನ್ಯ; ರಕ್ಷಕ ಸೈನ್ಯ; ಕಾವಲುದಂಡು: ದ್ವಿಸಪ್ತಲೋಕಂಗಳ್ಗೆ [ಟಾಣ]ೆಯುವನಿಟ್ಟು ವಿಧಿ ಸಪ್ತತ್ರಯಾವತಾರಾಧಿಪನನೆಬ್ಬಟ್ಟಿದಂ ಖಳಂ ಸಾವಮಾನ್ಯನೇ (ಚಬಶು. ೪೭–೧೦). **ಠಾಣೆಯ**: ೧. "ತಾಣಾಂತರವೆಂದೆನಲು ಠಾಣೆಯ" (ಚಕುನಿ. ೧೦೯); ಕುಪ್ಪಟೂರ ಠಾಣೆಯದೊಳ ರಾಣೌಘ ಸಹಿತಂ ಪಿರಿಯಕೆ[ರೆ]ಗೆ ೨ ಲಕ್ಕವಡಕೆಯ ಸುಂಕವಂ ಬಿಟ್ಟರ್ (ಕಇ. II, ೮–೨೦; 1072); ಗಣೇಶನೊಡನೆ ತಾನಿಂತೆಂದಂ ನಾಕಂ ನೋಳ್ಪೊಡೆ ನನ್ನದು ವೈಕುಂಠಂ ನನ್ನ ಠಾಣೆಯಂ (ವೀರವಿ. ೫–೧೨). ೩. ಸೇನಾ ಶಿಬಿರ; ಪಾಳೆಯ: ಇಂದು ನಾಳಿನೊಳೆಮ್ಮ ರಾಯ ಕೋಪದೊಳೆತ್ತಿ ಬಂದು ನಿಮ್ಮಯ ಠಾಣೆಯ[ಪಾಠಾಂ. ಣಯ, ಣ್ಯ]ಗಳ ಮುಂದುಗಡಿಸದಿರನು (ಕುಂರಾಸಾಂ. ೧೦–೧೨); ಸೆಳೆದರಿನೃಪರ ದುರ್ಗಗಳ ಠಾಣೆಯವನು ಬಲಿದು ಬಹಳ ದನಗಳನು ತಳುವದೆ ತಂದೀವೆನು (ಕಂಠವಿ. ೮–೩೮). **ಠಾಣ್ಯ**: ೧. ಊರಿಗೆ ಭೇಟಿ ಕೊಡುವ ಭಿಕ್ಷುಕರಿಗೆಲ್ಲ ರಾತ್ರಿ ಠಾಣ್ಯ ಇದೇ (ರೂಪಸಂ. ೬೦). ೩. "ಪ್ರಚಕಂ, ಚಲಿತಾರ್ಥಕಂ ದಂಡು ಠಾಣ್ಯದ ಸ್ಥಲ ಬಿಟ್ಟು ಹೊರಟದಕ್ಕೆ ಹೆಸರುಗಳು" (ಸಿದ್ಧಾಂತಿ. ೨೨೯). **ತಾಣ್ಯ**: ೧. ಶತಬಾಹುವಂ ಸುರನಗರದೊಳ್ ತಾಣ್ಯವಂ ಬಲಿದನಾಳಿದವಿಳದನುಜವಾಗ್ನೆಯರೊಳವುವಾ (ಪೋರಾಸು. ೬೭).

**ಠಾಣ್ಯ ಹಾಕು** = ಶಿಬಿರವನ್ನು ಸ್ಥಾಪಿಸು; ಪಾಳಯಂವನ್ನಿಡು: ದಂಡಿನೊಡನೆ ಠಾಣ್ಯ ಹಾಕಿ ಸಮಯ ಹೊಂಚುವಿಕೆ (ಸಿದ್ಧಾಂತಿ. ೨೦೭); ಐವಂಗಲ, ಪಾಳತಿ ಈ ಕೋಟೆಗಳನ್ನು ಮುತ್ತಿ ಠಾಣ್ಯ ಹಾಕಿದರು (ಚಿತ್ರಪಾ. ೨೪). [ <ಪ್ರಾ. ಥಾಣಯ ]

**ಟಾಣಾಂತರ** 'ತಾಣಾಂತರ' ನೋ.

**ಟಾಣಾದೀವಿಗೆ** 'ತಾಣದೀವಿಗೆ' ನೋ.

**ಟಾಣೆಯ** 'ಟಾಣಯ' ನೋ.

**ಟಾಣೋಘ, ಠಾಣೋಗ** (ನಾ). ಒಂದು ಬಗೆಯ ತೆರಿಗೆ; ಸರಕಿನ ರೂಪದಲ್ಲಿ ಪಡೆಯುವ ಸುಂಕ (?): ಸೋಮೇಶ್ವರದೇವರ್ಗ್ಗೆ ನಿವೇದ್ಯಕ್ಕಂ ಸೊಡರೆಣ್ಣೆಗಂ ಖಣ್ಣಸ್ಸುಟತಕ್ಕನ್ನು ವಡ್ಡರಾವುಳಂ ಟಾಣೋಘ ಸಹಿತಂ . . . ಮೂಱುಂ ಸುಂಕದೊಳವಾಗಿ ಬಿಟ್ಟ ಉಪ್ಪಿನ ಹೇಱು ಅಯ್ವತ್ತು (ಸೌಇಇ. XX, ೩೪–೦೯; 1053). **ಠಾಣೋಗ**: ದೇವಧರ ದಣ್ಣನಾಯಕನ ಬೆಸದಿಂ ಬಳ್ಳಿಗಾವಿಯ ಸ್ಥಳದ ಠಾಣೋಗದ ಸುಂಕವೊಗ್ಗಡೆ ಕೊಮ್ಮರಾಜಂ (ಎಕ. VII (೩), ಶಿಕಾ೦. ೩೩೪–೦೯; 1100). [ ? ]

**ಟಾನಿಕ್ಕು** (ನಾ). ಶಕ್ತಿವರ್ಧಕ ಔಷಧ: ಬಡರೋಗಿಗಳಿಗಾಗಿ ಸರಕಾರ ಒದಗಿಸುತ್ತಿರುವ ಮದ್ದುಗಳು, 'ಟಾನಿಕ್ಕು'ಗಳು ಅವರಿಗೆ ದೊರೆಯುತ್ತಿಲ್ಲ (ದೀಪದ. ೦೭೫). [ ←ಇಂ. Tonic ]

**ಟಾಪರಿಸು** (ಕ್ರಿ). ತಿನ್ನು; ಭಕ್ಷಿಸು: ಇದು ಜಂಬುನೇರಳೆ ಕಾಳಿದಾಸರೇ. ನೀವಿದನ್ನು ಟಾಪರಿಸಬೇಕು (ಗಂಗಾವ. ४೦). [ ಟಾಪರ$_0$ (▷ ←ಮರಾ. ಟಾಪರ) + – ಇಸು$_3$ ]

**ಟಾಪು** (ನಾ). ೧. ದ್ವೀಪ; ನಡುಗಡ್ಡೆ: ದಂಡು ಸೇರಿಸಿ ಆ ದಳವನ್ನು ಸ್ಥಲದುರ್ಗಗಳು ಅಂದರೆ ಸಮುದ್ರದ ಟಾಪುಗಳು . . . ಬೆಟ್ಟದ ಕೋಟೆಗಳು . . . ನೆಲೆಯಾಗಿರುವ ಹಾಗೆ ವಿಂಗಡಿಸಿದನು (ಕಥಾಮಂ. IV, ೭೯); ಒಂದು ಹಡಗಿನ ಮೇಲೆ ಇವರಿಬ್ಬರನ್ನು ಕೂರಿಸಿ ಸಮುದ್ರದ ಮೇಲೆ ಕರೆದುಕೊಂಡು ಹೋಗಬೇಕು . . . ದೂರವಾಗಿರತಕ್ಕ ಅಂಥಾ ಒಂದು ಟಾಪಿನ ಮೇಲೆ ಆ ಮೇದರವನನ್ನೂ ಅರಸನನ್ನೂ ಬಿಟ್ಟು ಬರಬೇಕು (ಸುಮುದ.೩೭). ೨. (ಕರಾ)=ಟಾಪುಶಿಕ್ಷೆ: ಆದುದರಿಂದ ಈ ಮರಣಾಂತರದ ಟಾಪನ್ನು ಸ್ವೀಕರಿಸಬೇಕು (ಸರಸ. ೧೧೧). [←ಹಿಂ. ಟಾಪೂ./ಪ್ರಾ. ಟಪ್ಪ]

**ಟಾಪುಟೀಪು** (ನಾ). ಶಿಸ್ತು; ಅಚ್ಚುಕಟ್ಟು: ಹೊಸ ಪದ್ಧತಿಯ ಟಾಪುಟೀಪಿನ ಮನೆಯಲ್ಲಿದ್ದ ಸುಶೀಲೆಗೆ ಈ ಹಳೇ ಪದ್ಧತಿಯ ಮನೆಯಲ್ಲಿ ಸ್ವಲ್ಪ ಎಡಬಿಡಚು ಎನಿಸಹತ್ತಿತು (ಅನಂತ. ೩). [ ←ಮರಾ. ಟಾಪ್‌ಟೀಪ್. / ಇಂ. Tip-Top ]

**ಟಾಪುಶಿಕ್ಷೆ, ಟಾಪೂಶಿಕ್ಷೆ** (ನಾ). ದ್ವೀಪಾಂತರ ವಾಸದ ಶಿಕ್ಷೆ ; ಕರಿನೀರಿನ ಶಿಕ್ಷೆ ; ಗಡೀಪಾರಿನ ಶಿಕ್ಷೆ : ನಿನ್ನ ಒಂದು ಸಾಕ್ಷಿಯಿಂದಲೇ ನಿನ್ನ ಧನಿಯ ಮಗನಿಗೆ ಜನ್ಮ ಟಾಪುಶಿಕ್ಷೆಯನ್ನು ಅಮಲ್ದಾರರು ವಿಧಿಸಿದರು (ವಿಧಿವ್ಯ. ೨೨). **ಟಾಪೂಶಿಕ್ಷೆ**: ಅದರಲ್ಲಿ ಇಬ್ಬರಿಗೂ ಇಪ್ಪತ್ತು ವರ್ಷದ ಟಾಪೂಶಿಕ್ಷೆ ಯಾಯಿತು (ಗುರುಪ್ರ. ೬೮). [ ಟಾಪು + ಶಿಕ್ಷೆ ]

**ಟಾಪೂಶಿಕ್ಷೆ** 'ಟಾಪುಶಿಕ್ಷೆ' ನೋ.

**ಟಾರ್** 'ಟಾರು' ನೋ.

**ಟಾರು, ಟಾರ್, ತಾರ್ರು** (ನಾ). ೧. "ಮರ, ಕಲ್ಲಿದ್ದಲು, ಮೊ. ನ್ನು ಒಣಬಟ್ಟಿ ಇಳಿಸುವುದರಿಂದ ದೊರೆಯುವ, ಮರ, ಕಬ್ಬಿಣ, ಮೊ. ನ್ನು ಕೆಡದಂತೆ ಇಡಲು ಉಪಯೋಗಿಸುವ, ಕಪ್ಪುಬಣ್ಣದ ಅಂಟು ದ್ರವ : ಡಾಂಬರೆಣ್ಣೆ, ಕೀಲೆಣ್ಣೆ" (Tar. ಇಂಕನಿ.). ೨. (ಆಲಂ) ಬಹಳ ಕಪ್ಪು : ದೇವರು ತನ್ನ ಭಕ್ತರನ್ನು ತನ್ನ ಬಣ್ಣದಲ್ಲಿ ಸೃಷ್ಟಿಸಿದ್ದಾನೆ ಎಂಬುದರಲ್ಲಿ ನನಗೇನೂ ಸಂದೇಹವಿಲ್ಲ, ನಮ್ಮೂರ ನರಸಿಂಹಸ್ವಾಮಿಯ ಮೂಲವಿಗ್ರಹ ನೋಡಿ, ಟಾರು (ದಿಸ್ತ.ಕ. ೫). **ಟಾರ್** : ೧. ರಕ್ತ ಸುರಿಯುವುದು ನಿಂತ ಕೂಡಲೆ ಒಡೆದ ಕೊಂಬಿನ ಮೇಲೆ ಟಾರ್ ಹಚ್ಚಿದ ಬಟ್ಟೆಯನ್ನು ಗಾಳಿಗೆ ಒಡದಂತೆ ಸಿಂಬಿಯಾಗಿ ಸುತ್ತುವುದು (ಗ್ರಾಮಾಕ. ೦೪೭). **ತಾರ್ರು** : ೧. ಉತ್ತಮವಾಗಿ ತಾರು (Tarred) ಮಾಡಿದ ರಸ್ತೆಗಳಿಂದ ಧೂಳು ಏಳುವುದಿಲ್ಲ (ದಾಂಪ್ರ. I, ೨೯೮). [ ←ಇಂ. Tar ]

**ಟಾರೆಣ್ಣೆ, ತಾರೆಣ್ಣೆ** (ನಾ).=ಟಾರು ೧: "ಡಾಂಬರೆಣ್ಣೆ; ಕೀಲೆಣ್ಣೆ, ಟಾರೆಣ್ಣೆ" (Tar. ಇಂಕನಿ.). **ತಾರೆಣ್ಣೆ**: ಮನೆಗೆ ಉಪಯೋಗಿಸಿದ್ದ ಮರಮುಟ್ಟುಗಳೆಲ್ಲ ಅನೇಕ ವರ್ಷಗಳಿಂದ ಹೊಗೆ ಹಿಡಿದು ತಾರೆಣ್ಣೆ ಬಳಿದಂತೆ ಕರ್ರಗಾಗಿದ್ದುವು (ಕಾನೂರು. ೩೭). [ ಟಾರು + ಎಣ್ಣೆ ]

**ಟಾಪು** 'ತಾವ್ನು' ನೋ.

**ಟಾವೆಲು** 'ಟವಲು' ನೋ.

**ಟಾವೆಲ್ಲು** 'ಟವಲು' ನೋ.

**ಟಾಳಿ** 'ಟವಳಿ' ನೋ.

**ಟಾಳಿಕಾಟಿ** 'ಟವಳಿಗಾಟಿ' ನೋ.

**ಟಾಳಿಸು, ಠಾಳಿಸು** (ಕ್ರಿ). ೧. ವಂಚಿಸು ; ಮೋಸಗೊಳಿಸು : ಟಕ್ಕಂ ಟಾಳಿಸಿ ಕಸ್ನಂಗೊಟಿದತಿ ಟಕ್ಕೆಯ ಮಣಿಗಳ ಕದ್ದು (ಪ್ರಭುಪು. ೪-೧೦೭). ೨. ಹೀಯಾಳಿಸು ; ತಿರಸ್ಕರಿಸು : ಅಮರ್ದುಗಯ್ಯನಂ ಪೊಂದಾವರೆಯ ನಮಳಮಣಿಮುಕುರಮಂ ಪದಪಿನಿಂದೇಳಿಪ್ಪ ಟಾಳಿಪ್ಪ ಜಾಳಿಪೊಂದದಟ ನಿಂದೇಳಿಸಿತು ಸುದತಿಯಾ ಮಿಱುಮಿನುಪ ವದನ (ಉದ್ಭದೇ. ೨-೫೫). **ಠಾಳಿಸು** : ೨. ಕನಕಹರ್ಮ್ಯದ ವಸತಿಯಿಲ್ಲದೇ ಕಟಕದೊಳು ಬಿನದಿಸುವ ತರು ಗುಲ್ಮ ಲತೆ ಬದಿರ್ ಚಿತ್ರಗಳ ವನಿತೆಯರು ನೀವು ಕಂಡಱಿಯರಿವ ನೋಡಿಯೆಂದಲ್ಲಮಂ ಠಾಳಿಸಿದನು (ಪ್ರಭುಪು. ೫-೦೯೫).

[ ಟಾಳಿ (<ಟವಳಿ) + – ಇಸು$_3$ ]

**ಟಿಂಕ್ಚರ್, ಟಿಂಚರು** (ನಾ). ಒಂದು ಬಗೆಯ ಕ್ರಿಮಿನಾಶಕ ದ್ರವ ; ಮದ್ದ್ಯಾರ್ಕ : ಅದರ ಹೊಕ್ಕುಳಿಗೆ ಟಿಂಕ್ಚರ್ ಐಡಿನ್ ಮೊದಲಾದ ಕ್ರಿಮಿನಾಶಕವನ್ನು ಸವರಬೇಕು (ದಾಂಪ್ರ. II, ೭೭೫). **ಟಿಂಚರು**: ಗಾಯಕ್ಕೆ ಟಿಂಚರು ಹಚ್ಚಿದರು (ರೂಢಿ). [ ←ಇಂ. Tincture ]

**ಟಿಂಗ್** (ನಾ). ಒಂದು ಅನುಕರಣ ಶಬ್ದ ; ಕಿಂದರಿ, ತಂಬೂರಿ, ವೀಣೆ ಮೊದಲಾದ ತಂತಿವಾದ್ಯಗಳನ್ನು ಬೆರಳುಗಳಿಂದ ಮಿಡಿಯುವಾಗ ಹುಟ್ಟುವ ಧ್ವನಿ.

**ಟಿಂಗ್‌ಟಿಂಗ್** (ದ್ವಿರುಕ್ತಿ) : ಕಿಂದರಿಜೋಗಿ ಟಿಂಗ್‌ಟಿಂಗ್ ಎಂದು ಕಿನ್ನರಿಯನ್ನು ಬಾರಿಸಿದನು (ರೂಢಿ).

**ಟಿಂಚರು** 'ಟಿಂಕ್ಚರ್' ನೋ.

**ಟಿಂಟಿಣಿ** (ನಾ). ಒಂದು ಅನುಕರಣ ಶಬ್ದ : ಸಂಜೆಯಾಗಲು ಎಲ್ಲರೊಡನೆ ಕರುಗಳ ಟಿಂಟಿಣಿಯಲ್ಲಿ ಯಾವುದೋ ಅವ್ಯಕ್ತ ಮಧುರ ಸಂದೇಶವನ್ನು ಕೇಳುತ್ತ ಮನೆಗೆ ಬರುತಿದ್ದ (ಶರಪ. ೩೦೫).

**ಟಿಂವ್‌ಗುಡು** (ಕ್ರಿ). ಟಿಂವ್ ಎಂದು ಕೂಗು : ಕೊಳದ ಬಾಳೆದಳದಲ್ಲಿ ಟಿಂವ್‌ಗುಡುವ ಟೀಂವಕ್ಕಿ ನೀನಾರೆ ಬಲ್ಲೆಯಾ ನಲ್ಲನೆಲ್ಲಿ (ನನಲ್ಲ. ೧೦-೬).

[ ಟಿಂವ್$_0$ + ಗುಡು$_1$ (<ಕೊಡು$_1$) ]

**ಟಿಂಹಕ್ಕಿ** 'ಟೀಂವಕ್ಕಿ' ನೋ.

**ಟಿಕ್** (ನಾ). ಒಂದು ಅನುಕರಣ ಧ್ವನಿ; ಗಡಿಯಾರದ ಚಲನದ ಶಬ್ದ.

**ಟಿಕ್‌ಟಿಕ್** (ದ್ವಿರುಕ್ತಿ) : ಗಂಟೆಯ ನಂಟನೆ ಓ ಗಡಿಯಾರ . . . ಟಿಕ್‌ಟಿಕ್ ಗೆಳೆಯಾ, ಟಿಕ್‌ಟಿಕ್‌ಟಿಕ್ (ಕಪಪು. ೩-೩೮); (ತಂತೀವರ್ತಮಾನವನ್ನು ತಾನೇ ಬರೆದಿಡುವ ಸಲಕರಣೆಯ ವಿಷಯದಲ್ಲಿ) ಟಿಕ್‌ಟಿಕ್ ಎಂದು ಸುದ್ದಿ ಗುರುತಿಸು (Tick-out. ಇಂಕನಿ.). **ಟಿಕ್‌ಟಿಕ್ ಎನ್ನು** = (ಗಡಿಯಾರ ಮೊದಲಾದುವುಗಳ ವಿಷಯದಲ್ಲಿ) ಟಿಕ್‌ಟಿಕ್ ಎಂದು ಹೊಡೆ: ಗಡಿಯಾರ ಟಿಕ್‌ಟಿಕ್ ಎನ್ನುವ ಶಬ್ದ ಮಾತ್ರ ಕೇಳಿಸುತಿತ್ತು (ರೂಢಿ).

**ಟಿಕ್ ಮಾಡು** = ಸರಿಯೆಂದು ಗುರುತುಮಾಡು : ಪತ್ರಿಕೆಗಳನ್ನು ಬೆರಳುಗಳಿಂದ ಎಲ್ಲಕ್ಕೂ ಟಿಕ್ ಮಾಡುವವರೇ ಹೆಚ್ಚುಮಂದಿ (ರೂಢಿ).

**ಟಿಕಳಿ, ಟಿಕಳೆ** (ನಾ). (ಉಕ) ೧. ಚುಕ್ಕೆ ; ಬೊಟ್ಟು : ಬೆಂಡೋಲೆ . . . ಹರಿದ್ವರ್ಣದ ಟಿಕಳಿಯೊಡನೆ ಸ್ಪರ್ಧಿಸುತ್ತಿದ್ದವು (ದೀಪಹ. II, ೩೮೯). ೨. ಸಣ್ಣ ಬಿಲ್ಲೆ ; ನಕ್ಕಿ : ಟೊಪ್ಪಿಗೆಯ ನೆತ್ತಿಯ ಮೇಲಿನ ದೊಡ್ಡ ಹೂ ಹರವಾಗಿತ್ತು, ದೊಡ್ಡ ದೊಡ್ಡ ಜರದ ಟಿಕಳಿಗಳಿಂದ (ವ್ಯನಿ. ೯). **ಟಿಕಳೆ** : ೧. ಹಣೆಯ ಮೇಲೆ ಒಂದು ತೀರ ಚಿಕ್ಕದಾದರೂ ಕುಂಕುಮದ ಟಿಕಳಿ ಇತ್ತು (ಮದ್ಮ. ೧೭೮). [ ←ಮರಾ. ಟಿಕಲಾ, ಟಿಕಲೀ ; ಹಿಂ. ಟಿಕಿಯಾ./ಪ್ರಾ. ಟಿಕ್ಕ./ಸಂ. ತಿಲಕ ]

**ಟಿಕಳೆ** 'ಟಿಕಳಿ' ನೋ.

**ಟಿಕಾಯಿಸು, ಟಿಕಾಸು** (ಕ್ರಿ). (ಉಕ) (ಹೆಚ್ಚುದಿನ) ತಾಳು, –ಉಳಿ : ಈ ಗ್ರಾಮದಲ್ಲಿ ಈ ವುಡಾರಿಯು ದರ್ಬಾರು ಟಿಕಾಯಿಸುವ ಹಾಗಿಲ್ಲ (ರೂಢಿ). **ಟಿಕಾಸು**: ಮಾಮಲೇದಾರನ ಹುಕುಮು ಹೌದಲ್ಲೋ ? ಅಪೀಲ ಮಾಡಿದರೆ ಟಿಕಾಸತದ ಏನೋ ಶೇಷಪ್ಪಾ (ಗ್ರಾಮಾಯ. ೨೨೬).

[ ಟಿಕಾವ್$_0$ (P ←ಹಿಂ. ಟಿಕನಾ ; ಮರಾ. ಟಿಕಣೇ) + – ಇಸು$_3$ ]

**ಟಿಕಾಸು** 'ಟಿಕಾಯಿಸು' ನೋ.

**ಟಿಕೀಟು, ಟಿಕೆಟ್ಟು, ಟಿಕೇಟು, ತಿಕೀಟು** (ನಾ). ೧. ಪ್ರಯಾಣಕ್ಕೆ ಅಥವಾ ಪ್ರವೇಶಕ್ಕೆ ಅಧಿಕಾರ ಕೊಡುವ ಗುರುತಿನ ಚೀಟಿ: ಟಿಕೀಟು ತೆಕ್ಕೊಡುವ ಮಾತು ಹಾಗಿರಲಿ (ಹುಟ್ಟಿಹ. ೦೫೭); ಟಿಕೀಟಿಲ್ಲದೆ ರೈಲಿನಲ್ಲಿ ಪ್ರಯಾಣ ಮಾಡುವವರಿಗೆ ಶಿಕ್ಷೆಯಾಗುತ್ತದೆ (ಮದ್ಮ. ೦೬೫). ೨. ಪಕ್ಷದ ಉಮೇದುವಾರಿಕೆಗೆ ಕೊಡುವ ಅನುಮತಿ ಪತ್ರ : ಅವರಿಗೆ ಈ ಸಲ ಚುನಾವಣೆಗೆ ಕಾಂಗ್ರೆಸ್ ಟಿಕೀಟು ಸಿಕ್ಕಲಿಲ್ಲ (ರೂಢಿ). **ಟಿಕೆಟ್ಟು** : ೧. ಅಂದಿನ ನಾಟಕದ ಉತ್ಪತ್ತಿಯನ್ನು ಅವರವರು ಮಾರಿದ ಟಿಕೆಟ್ಟುಗಳ ಪ್ರಮಾಣಾನುಸಾರವಾಗಿ ನಟರು ಹಂಚಿಕೊಳ್ಳುವ ಸಹಾಯಾರ್ಥ ನಾಟಕ (Ticket-night. ಇಂಕನಿ.). **ಟಿಕೇಟು** : ೧. ಟಿಕೇಟಿನ ಬೆಲೆ ಒಂದು ಡಾಲರು (ಮಹಾತ್ಮಾ. ೦೦೩); ಟಿಕೇಟಿನ ಮೂಲಕ ಆಟ ಆಡುವ ರೂಢಿಯು ಬಂದಿದೆ (ಮುಕ್ತಲ. ೨೦). **ತಿಕೀಟು** : ೧. ಎಷ್ಟು ಎರಡು ಪೆನಿಯ ತಿಕೀಟನ್ನೇ ತೆಗೆದುಕೊಂಡಿದ್ದ (ಸಮಜೀ. ೭೦೮). ೩. ಸ್ಟಾಂಪು: ಒಂದು ರೂಪಾಯಿ ತಿಕೀಟು ಕಳಿಸಿ ಪತ್ರವ್ಯವಹಾರ ಮಾಡಬೇಕು (ನಿರಾಧ. ೦೭೭). [ ←ಇಂ. Ticket ]

**ಟಿಕೆಟ್ಟು** 'ಟಿಕೀಟು' ನೋ.

**ಟಿಕೇಟು** 'ಟಿಕೀಟು' ನೋ.

ಟಿಕ್ಕರಿ 'ಠಿಕ್ಕರಿ' ನೋ.

ಟಿಕ್ಕರಿಗಳೆ 'ಠಿಕ್ಕರಿಗಳೆ' ನೋ.

ಟಿಕ್ಕಿ$_1$, ಟಿಕ್ಕೆ$_2$, ಟೀಕೆ (ನಾ). (ವಜ್ರದ ಅಥವಾ ಮಾಣಿಕ್ಯದ ಹರಳಿನಂತೆ ಕಾಣುವ) ಗಾಜಿನ ಮಣಿ: ಖೋಟಾರತ್ನ; ಕೃತಕಮಣಿ: ತಕ್ಕಿನ ಪವಳದ ಸಂಕೆಯು ಟಿಕ್ಕೆಯ ಮಣಿಗಳನನೇಕಮಂ ಕೊಂಡವನುಂ ಡೊಕ್ಕರಿಸದೆ (ಧರ್ಮಾಮೃ. ೨-೩೬); ಟಿಕ್ಕೆಯೊಳಗೆ ಮಾಣಿಕ್ಯ ಉಂಟೇ ಅಯ್ಯ (ಆದವ. ೧೩-೨೮): ಕನಕಶೈಲಕೆ ಮೇಣ್ಪರಮಾಣು ಟ[ಪಾಠಾಂ. ಟಿ]ಕ್ಕೆ ನಿರ್ಜರ ಮಣಿಗೆಯ್ದೆ ಕೋಪಿಸುವವೊಲ್ಮುಳಿದಂ (ವೀರವಿ. ೭-೫೬); ಇರುಳೆರಡೇಳು ಲೋಕವ ಸುತ್ತಿ ಟಿಕ್ಕೆಯ ಹರಳ ತಂದನಗೆ ತೋಱಿಸಿದೆ (ಮೋಹತ. ೩೦-೨೨). ಟಿಕ್ಕೆ$_2$: ಟಿಕ್ಕೆಯ ಕಲ್ಗವಿಗಾ ಕವಿಲೆ ಕರ್ಬುನಕಂ ಮನಸಂದು ಬಂದನೇ (ಶಮದ. ನ. ೧೬೮ ಪ್ರಯೋ); ಚಿಂತಾಮಣಿಗೆ ಕೈದುಡುಕಿ ಹರಳು ಟಿಕ್ಕೆಯಿದೆಂಬ ಪಾಪಿಗೆ ಪರಮಗುರು ನಾನಾದೆನ್ಯೆ (ಕುವ್ಯಾಭೀ.೬ಠಿ೫.೩-೭೯); ಟಿಕ್ಕೆಯ ಹರಳು ಗಡ ಕೌಸ್ತುಭಕೆ ಸರಿಯೆಂದನು (ಕುವ್ಯಾದ್ರೋ. ೦೫-೮); ಒಲವಿಂ ಟಿಕ್ಕೆಯ ಕಲ್ಗಳಾಭರಣದಿಂ (ಪಾವಶ. ೭): ಧರಿಸಿ ಚಿಂತಾಮಣಿಯ ಟಿಕ್ಕೆಯ ಹರಳಿಗಳಲುವರುಂಟೆ (ಉತ್ತರಾ. ೩೦-೪೯). ಟೀಕೆ: ರತ್ನವ ಬಿಟ್ಟು ಟೀಕೆಯ ಹಿಡಿವರೆ (ಬಿಜ್ಜರಾ. ೧೨-೧೦೦೮).

ಟಿಕ್ಕೆ$_2$ 'ಟೀಕೆ$_2$' ನೋ.

ಟಿಟ್ಟಿಬ, ಟಿಟ್ಟಿವ (ನಾ). = ಟಿಟ್ಟಿಭ: ತಾಪಸರು ಕೆಟ್ಟರು ಕೆಟ್ಟುದು ಸತ್ಯವೆಂದಲಸದೆ ಟಿಟ್ಟಿಬ ನುಡಿದುದಾ ಬನದಿ (ಮೋಹತ. ೭-೦೮). ಟಿಟ್ಟಿವ: ಹೊಱಸು ಟಿಟ್ಟಿವನು ಮಣಿಗನು ಗರುಡ ಕೊಣಕನು ಮೇಣು ಟೀವನು (ಸಾಳ್ವಭಾ. ೫-೨೩). [ <ಸಂ. ಟಿಟ್ಟಿಭ ]

ಟಿಟ್ಟಿಭ (ನಾ). ಒಂದು ಬಗೆಯ ಹಕ್ಕಿ; ಬಾನಾಡಿ ಹಕ್ಕಿ; ಲಕುಮಂಕಿ ಹಕ್ಕಿ: "ಟಿಟ್ಟಿಭಾಃ, ಕ್ಷುದ್ರಪಕ್ಷಿಕಾಃ—ಈ ೨ ಟಿಟ್ಟಿ" (ಹಲಾಯು. ೪೨-೯೯); "ಬಾನಡಿ ಟಿಟ್ಟಿಭ" (ಕವಿಕಂ. ೬೨): ಹರಡೆ ಗೌಜು ಟಿಟ್ಟಿಭ . . . ತುಱುಗಿ ನಭದೊಳು ಖಗಾನೀಕ ಮಂಡಳಿಸಲು (ಹಜಕಾ. ೫-೪೨): ವೈನತೇಯ ನಿರ್ಮಾಡಿದ ಗಾಳಿವಟ್ಟೆಗೆ ಮನಂ ಬಿಡೆ ಧೀಂಕಿಡುವಂತೆ ಟಿಟ್ಟಿಭಂ (ಕೃಷ್ಣಪು.೧-೪೨): ಟಿಟ್ಟಿಭ ಪಕ್ಷಿಗಳ ಕಣ್ಣುಗಳಂತೆಯೂ (ಸೌಗಂಧಿ. ೩೦೦-೨೦): ಟಿಟ್ಟುಟಿಟ್ಟೆಂದೊಂದು ನಿಟ್ಟಿಗೆ ಟಿಟ್ಟಿಭವು ತಾನಡಗಿದೆ (ಚಂತನ. ೦೮-೦೨). [ ಸಂ. ]

ಟಿಟ್ಟಿಭಕ (ನಾ). = ಟಿಟ್ಟಿಭ: "ಕೋಯಷ್ಟಿಕಃ—ಕೀಚುಬಾಲದ ಹಕ್ಕಿ. ಟಿಟ್ಟಿಭಕಃ, ಲಕುಮುಕೀಹಕ್ಕಿ" (ಸಿದ್ಧಾಂತ. ೦೪೩); ಕಾಗೆಗೂಗೆಗಳ ಟಿಟ್ಟಿಭಕ ಗರುಡಗಳ (ಸಿದ್ಧಕಾ. ೬-೩೩). [ ಸಂ. ]

ಟಿಟ್ಟಿವ 'ಟಿಟ್ಟಿಬ' ನೋ.

ಟಿನ್ನು (ನಾ). ೧. ತಗಡು: ಕೈಯಲ್ಲಿ ಒಂದು ಹಳೆಯ ಬಟ್ಟಲು ಒಂದು ಟಿನ್ನಿನ ಡಬ್ಬ (ದೀಪಜ. ೨೨). ೨. ತಗಡಿನ ಡಬ್ಬ,-ಡಬ್ಬಿ: ಎತ್ತರದ ರೆಂಬೆ ಕೆದರಿದ ಮರಗಳಿಗೆ ಕಟ್ಟಿದ ಟಿನ್ನಿನ ಬಾಯಿಗಳು ಬಂಡೆಯ ಮೇಲಿನ ಜೀವಕ್ಕೆ ಅಭಯ ಕೂಗಿದವು (ಎಮುಳ. ೫೩). [ ←ಇಂ. Tin ]

ಟಿಪಾಯಿಸು, ಟಿಪಾಸು (ಕ್ರಿ). ಇಸ್ಪೀಟಿನ ಎಲೆಗಳನ್ನು ಕಲಸು,-ಬೆರಸು: ಧಲೋ ಟಿಪಾಯಿಸರಿ ಪಾಟೀಲ್ರು (ಹುಚ್ಚಾಟ. ೦೦೮). ಟಿಪಾಸು: ಭುಜಂಗ ಎಲೆಯನ್ನು ಟಿಪಾಸಿ ಮೂರೆಲೆ ಆಟಕ್ಕೆ ಹಂಚಿದ (ದಿಪಾಬ. ೪೫).

[ ಟಿಪಾಯಿ$_0$ (P ← ಹಿಂ. ಟೀಪ್) + – ಇಸು$_3$ ]

ಟಿಪಾಸು 'ಟಿಪಾಯಿಸು' ನೋ.

ಟಿಪಿ 'ಟೀಪಿ' ನೋ.

ಟಿಪ್ಪಣ (ನಾ). ೧. ವಿವರಣೆ; ವ್ಯಾಖ್ಯಾನ: ಆ ಕೃತಿಗೆ ಪಂಚಿಕೆ ವೇೞ್ಪುದದರ್ಕೆ ಟಿಪ್ಪಣಂಬೇೞ್ಪುದು ಟೀಕುವೇೞ್ಪುದೆನೆ ಪೇೞ್ದವನುಂ ಕವಿಯೆಂಬ ಲೆಕ್ಕಮೋ (ಕಾವ್ಯಾವ. ೨೯೯); ಮನಸಿಜಾಗಮದ ಟಿಪ್ಪಣವ ಲೇಖಿಸುವಂತೆ ವನಿತೆ ಕಪೋಲಫಲಕದಿ ಕೊನೆಯುಗುರಲಿ ಬರೆದುದನೋದಿ ಮೆಱೆವೊಲು ಮಿನುಗಿತು ಗಳರವವಳ (ವರ್ಧಕ. ೫-೮೮). ೨. (ಭಾಷಣ, ಲೇಖನ, ವ್ಯಾಸಂಗ ಮೊದಲಾದುವುಗಳ ಅಥವಾ ಅವುಗಳಿಗಾಗಿ) ಮುಖ್ಯ ವಿಷಯುಗಳನ್ನು ಮಾತ್ರ ನೆನಪಿಗಾಗಿ ಗುರುತುಮಾಡಿಕೊಂಡ ಬರೆವಣಿಗೆ. [ ಸಂ. ]

ಟಿಪ್ಪಣಿ (ನಾ). ೧. = ಟಿಪ್ಪಣ ೧: ಫ್ರಿಟ್ಸನ ಒಲವು ಮತ್ತು ಮೇಧಾ ಶಕ್ತಿಯು, ಹೆಚ್ಚಾಗಿ ಪ್ರಾಚೀನಗ್ರಂಥಗಳಿಗೆ ಟೀಕೆ ಟಿಪ್ಪಣಿಗಳನ್ನು ಬರೆದು, ಅವುಗಳಿಂದ ಸೂಕ್ತ ಅಂತಿಮನಿರ್ಧಾರಗಳಿಗೆ ಬರುವ ಭಾಷಾಶಾಸ್ತ್ರಜ್ಞನಂತೆ ಇತ್ತು (ಸಸ್ಯಕ. ೮೩). ೨. = ಟಿಪ್ಪಣ ೨: "(ಭಾಷಣಕ್ಕಾಗಲಿ ಲೇಖನಕ್ಕಾಗಲಿ ಮಾಡಿಕೊಂಡ) ವಿಷಯಗಳ, ಅಭಿಪ್ರಾಯಗಳ, ಟಿಪ್ಪಣಿ; ಮುಖ್ಯಾಂಶಗಳ ಪಟ್ಟಿ" (Note. ಇಂಕನಿ.); ಟಿಪ್ಪಣಿ ಉಪಾಧ್ಯಾಯರ ಪೂರ್ವಸಿದ್ಧತೆಯ ಒಂದು ಅಂಗ (ಶಿಕ್ಷದ. ೨೫೭). [ ಸಂ. ಟಿಪ್ಪಣೀ ]

ಟಿಪ್ಪಣಿಗಾರ (ನಾ). ಟಿಪ್ಪಣಿ ಬರೆಯುವವನಂ; ಟೀಕಾಕಾರ: (ಕ). [ ಟಿಪ್ಪಣಿ + – ಗಾರ (< – ಕಾಱ) ]

ಟಿಪ್ಪಣಿಸು (ಕ್ರಿ). ಟಿಪ್ಪಣಿ ಬರೆ: ಸಂಗ್ರಹಿಸಿ ಬರೆದಂ, ಟಿಪ್ಪಣಿಸಿ ಬರೆದಂ (ಶಬ್ದಾನು. ೫೮೦ ಪ್ರಯೋ). [ ಟಿಪ್ಪಣಿ + – ಇಸು$_3$ ]

ಟಿಫನ್ನು 'ಟಿಫಿನ್ನು' ನೋ.

ಟಿಫಿನ್ನು, ಟಿಫನ್ನು, ಟಿಫೀನಿ (ನಾ). ಉಪಾಹಾರ; ಫಲಾಹಾರ: ಟಿಫಿನ್ನು ಸಿದ್ಧವಾಗಿದೆ, ಬನ್ನಿ (ರೂಢಿ). ಟಿಫನ್ನು: ಈ ದಿನ ಬೆಳಗಿನ ಟಿಫನ್ನಿಗೆ ಇಡ್ಲಿ ಮಾಡಿದ್ದರು (ರೂಢಿ). ಟಿಫೀನಿ: ಕಾಫಿ ಮಾಡಿಸಿದ್ದಾರೆ ಸಂಜೆಗೆ ಟಿಫೀನಿಯೂ ಇದೆ (ಸ್ವಪ್ನಹೊ. ೮೭).

[ ←ಇಂ. Tiffin. / ಅರ. ಹಿಂ. ಟಿಫನ್ ]

ಟಿಫೀನಿ 'ಟಿಫಿನ್ನು' ನೋ.

ಟಿಬಕಿ (ನಾ). ಒಂದು ಬಗೆಯ ಹೊಲಿಗೆ: ಟಬ್ಬಿ: ಅಂಚಿಗೆ ಟಿಬಕಿ ಹಾಕಿಧಾಂಗ ಆಗಿರಬೇಕು (ದೀಪಹ. II, ೩). [ ? ]

ಟಿಬ್ಬರಿಸು 'ಟೆಬ್ಬರಿಸು' ನೋ.

ಟಿಬ್ಬಿ$_1$ (ನಾ). ೧. ಒಂದು ಬಗೆಯ ಹೊಲಿಗೆ; ಟಾಕಿ ಹೊಲಿಗೆ: ಬ್ರಹ್ಮ ಗಂಟುದಾರ ವಿಷ್ಣುವಿಂಗೆ ಉಭಯದ ಹೊಲಿಗೆ ರುದ್ರಂಗೆ ಟಿಬ್ಬಿ ವಿಂಕ್ಕಾದ ದೇವಕುಲವೆಲ್ಲಕ್ಕೂ ಅಲ್ಲಲ್ಲಿಗೆ ಕಲ್ಲಿಯ ಹೊಲಿಗೆ (ಸರ್ವವ. ೦೨೩-೬೨೭). ೨. "(ಬಟ್ಟೆ, ಮೊ. ಗಳ) ಅಂಚು (ಮು. ಅಂಚು ಮಡಿಸಿ ಹೊಲಿದದ್ದು)" (Hem. ಇಂಕನಿ.). ೩. ಸ್ತ್ರೀಯರ ಕುಪ್ಪಸ ಮೊದಲಾದುವುಗಳಿಗೆ ಅಲಂಕಾರಕ್ಕಾಗಿ ಹಾಕುವ ಕುಸುರಿಕೆಲಸವುಳ್ಳ ಹೊಲಿಗೆ: ಗುಬ್ಬಿಕಣ್ಣಿನ ಸೀರೆ ಟಿಬ್ಬಿಯ ಕುಬ್ಬಸ ಹಬ್ಬಕುಡುವ ಸೀರೆಯನ್ನುಟ್ಟು ಹೊರಟಾರ (ಸಿದ್ಧಪು. ೦೭-೬೨).

[ ←ಹಿಂ. ಮರಾ. ಟೀಪ್ ]

ಟಿಬ್ಬಿ$_2$ (ನಾ). ಕುಸ್ತಿಯಂಲ್ಲಿ ಒಂದು ವರಸೆ: ಟಿಬ್ಬಿಹಾರಿಸುವುದು, ಸವಾರಿ ಹಾಕುವುದು . . . ಇತ್ಯಾದಿ ಪಟ್ಟುಗಳನ್ನೆಲ್ಲಾ ಸುಬ್ಬು ಚಟುಕಾಗಿ, ಸರಾಗವಾಗಿ ಉಪಯೋಗಿಸುವಂತೆ ಕಲಿತ (ಭೀಮಕಾ. ೪೩). [ ? ]

ಟಿಮ್ಮು (ನಾ). ಬಿಂದು; ಚುಕ್ಕೆ: ಎರಡು ಟಿಮ್ಮುಗಳು (ಭಾಷಾಶಾ. ೧೦೬).

[ ←ಮರಾ. ಟಿಂಬ್ ]

ಟಿಸಲು 'ಟಿಸಿಲು' ನೋ.

ಟಿಸಲೊಡೆ 'ಟಿಸಿಲೊಡೆ' ನೋ.

ಟಿಸಳು 'ಟಿಸಿಲು' ನೋ.

ಟಿಸಿಲು, ಟಿಸಲು, ಟಿಸಳು (ನಾ). ೧. ಕವಲೊಡೆದ ಕೊಂಬೆ; ಪಕ್ಕದಲ್ಲಿ ಮೂಡಿದ ಟೊಂಗೆ; ಚಿಕ್ಕ ಕೊಂಬೆ: ದೂರ ದೂರ ಬೇರು ಚಾಚಿ ಟೊಂಗೆ, ಟಿಸಿಲು ಮನುಕುಲ (ನಲಮು. ೨೫-೧೧): ಅವರ ಬಳ್ಳಿ ಮರವಾಗಿ

ಹಬ್ಬಿದೆ. ಆದರೆ ಅದಕ್ಕೆ ಒಡೆದ ಟಸಿಲು ಅನಂತವಾಗಿಬಿಟ್ಟಿದೆ (ಹಬ್ಬಿ.ಬ. ೧೦೩); ಕೊಂಚ ವಿಚಾರ ಮಾಡಿದರೆ, ಈ ಮೂರೂ ಒಂದೇ ರೆಂಬೆಯ ಟಸಿಲುಗಳೆಂದು . . . ಕಂಡು ಬರುವುದು (ಪ್ರೇಮಾಶ್ರ. ೧೧೫). ೨. ಕವಲು; ವಿಭಾಗ; ಸೀಳು: ಚಿಗುರೆಗಳು . . . ಕೋಡಿಗೆ ಒಂಬತ್ತರವರೆಗೆ ಟಸಿಲುಗಳಿರುತ್ತವೆ (ಕಥಾಗ. ೬೪): ಇವೆರಡೂ ಟಸಿಲುಗಳ ನಡುವಿರುವ ಪ್ರದೇಶವು ಬಲು ಗುಡ್ಡಗಾಡು (ವಿಜಾಭೂ. ೮) ಟಸಲು: ೧. ಟೊಂಗೆಗಳಿಗೆ ಬೇರೆ ಸಣ್ಣಸಣ್ಣ ಟಸಲುಗಳು ಒಡೆದಿರುತ್ತವೆ (ಕಸಾಪ. I, ೧೫೦). ೨. ನಾಗವರ್ಮನ ಛಂದೋಂಬುಧಿಯನ್ನು ಏತದ್ವಿಷಯಕ ಸಂಶೋಧಕ ದೃಷ್ಟಿಯಿಂದ ನೋಡಿದೆ ಅಲ್ಲಿ ಕೊಟ್ಟ ಸೂತ್ರಾರ್ಥಕ ಟಸಲುಗಳನ್ನು ಇನ್ನಷ್ಟು ಗುರುತು ಹಚ್ಚಿದೆ (ಸಂಶೋಧ. ೯೩). ಟಸಳು: ೧. ಗಲ್ಲು ಗಲ್ಲು ಎಲೆಎಲೆಯೂ ಚಂದ, ಟಸಳು ಎಸಳು ಕುಡಿ ಮಿಡಿ ಬಿಸವಂದ (ನಡಬಂ. ೯೩-೬). ೨. ಮನುಷ್ಯನು ವೈರಾಗ್ಯಬುದ್ಧಿಯನ್ನು ತಾಳಿ, ಕಾಮಮಾರ್ಗದಿಂದ ತಪ್ಪಿಸಿಕೊಂಡು, ಧರ್ಮಮಾರ್ಗಕ್ಕೆ ಹತ್ತಿದ ಬಳಿಕ, ಮುಂದೆ ಎರಡು ಟಸಳುಗಳೊಡೆದಿರುತ್ತವೆ (ಗೀತಾಸಂ. ೫೦). [ ? ]

ಟಸಿಲುದಾರಿ (ನಾ). ಕವಲುದಾರಿ; ಸೀಳಂದಾರಿ: ಆದರೆ ಇದರಷ್ಟೆ ಅರ್ಥಪೂರ್ಣವಾದ ಟಸಿಲುದಾರಿಯೊಂದಿದೆ (ಜೀಪಾಠ. ೩೩). [ಟಸಿಲು + ದಾರಿ]

ಟಸಿಲೊಡೆ, ಟಸಲೊಡೆ (ನಾ). ಕೊಂಬೆ ಹಂಟ್ಟು; ರೆಂಬೆ ಕವಲಾಗು: ಟಸಿಲೊಡೆದ ಹಲವು ಟೊಂಗೆಗಳಲ್ಲಿ ಕುಳಿತು (ತಿಂಮತ. ೦೩೯). ೨. ವಿಭಕ್ತವಾಗು; ಬೇರೆ ಬೇರೆ ಆಗು: ಮೋಡಕರ 'ಮರಾಠಿಗನ್ನಡ', ಸುಬ್ಬಣ್ಣಾಚಾರ್ಯರ 'ಶಿಷ್ಟಗನ್ನಡ' ಹೀಗೆ ಬಳಕೆಮಾತು ಟಸಿಲೊಡೆದಿದೆ (ಸಮಜೀ. ೧, ೩೮೫). ಟಸಲೊಡೆ: ೧. ಅಳ್ಳಿಗೊಂಬು = ಬಗಲೊಡೆದ ಟೊಂಗೆ; ಟಸಲೊಡೆದ ಟೊಂಗೆ (ಗಂಗಾಮ. ೨೦). [ ಟಸಿಲು + ಒಡೆ$_1$ ]

ಟೀ, ತೇ$_2$ (ನಾ). ಒಂದು ಬಗೆಯ ಸೊಪ್ಪು ಹಾಗೂ ಅದರಿಂದ ತಯಾರಿಸುವ ಪಾನೀಯ; ಚಹಾ: ನಮ್ಮ ಹಳ್ಳಿಗೆ ಪದೇ ಪದೇ ಕಾಫಿ, ಟೀ ವ್ಯಾಪಾರಸ್ಥರು ಕ್ರಿಸ್ತಮತ – ಬೋಧಕರು ಮುಂತಾದವರು ತಮ್ಮ ತಮ್ಮ ಮೋಟಾರುಗಳಲ್ಲಿ ಬಂದು (ಹುಟ್ಟಿಹ. ೧೮೮): ಒಂದು ಕಪ್ಪು ಟೀ ಕೊಡು (ರೂಢಿ). ತೇ$_2$: ಟೀ, ತೇ, ಚಾ, ಚಹ,–ಗಿಡ (Tea. ಇಂಕನಿ.). [ ←ಇಂ. Tea; ಡಚ್. Thee; ಚೀನಿ. ತೇ ]

ಟೀಂ (ನಾ). ಒಂದು ಅನುಕರಣ ಶಬ್ದ. 'ಟೀಂವಕ್ಕಿ' ಪರಾ.

ಟೀಂವಕ್ಕಿ, ಟಿಂಹಕ್ಕಿ (ನಾ). ಟೀಂವ್ ಟೀಂವ್ ಎಂದು ಕೂಗುವ ಒಂದು ಬಗೆಯ ಹಕ್ಕಿ; ಟೀವನ ಹಕ್ಕಿ: ಕೊಳದ ಬಾಂದಳದಲ್ಲಿ ಟಂವ್‌ಗುಡುವ ಟೀಂವಕ್ಕಿ ನೀನಾರ ಬಲ್ಲೆಯಾ ನಲ್ಲನಲ್ಲಿ (ನನಲ್ಲ. ೦೦-೯): ಆದೇ ವೇಳೆಯಲ್ಲಿ ಟೀಂವಕ್ಕಿಯೊಂದು, ಶಾಂತಿಕುಟೀರದ ಮೇಲಿಂದಲೆ 'ಟಂವ್', 'ಟಂವ್' ಎಂದು ಧ್ವನಿಮಾಡುತ್ತ ಸಿಡಿಸಿಡಿದು ಹಾರಿಹೋಯಿತು (ಅಶಾಂತಿ. ೧೪೬). ಟಿಂಹಕ್ಕಿ: ಕಾಡುಬೆಕ್ಕಿನಿಂದ ತಪ್ಪಿಸಿಕೊಂಡ ಟಿಂಹಕ್ಕಿಯೊಂದು ಗಿಡ ಬಿಟ್ಟು ಹಾರಿ, ಮದ ತಲೆಗೇರಿ ಸುತ್ತಿ ಚಿಮ್ಮಿ ಚೀರಿತು (ಪ್ರಕೃ. ೮೪). 'ಟೀವ' ಪರಾ. [ ಟೀಂ + ಹಕ್ಕಿ$_1$ (<ಪಕ್ಕಿ$_1$) ]

ಟೀಕಾಕಾರ (ನಾ). ವ್ಯಾಖ್ಯಾನ ಬರೆಯುವವನು; ವ್ಯಾಖ್ಯಾನಕಾರ: ಸಾರತರರೋಕ್ತಿಗೆ ನೆಲ್ಲುಂಮೋರುಂಗೋದಂತೆ ನೇಟಿ ಕಲ್ಪಾರ್ವರವರ್ಗೋರೆ ನಿಬಂಧನ ಟೀಕಾಕಾರಂಗಲ್ಲದೆ ಪೆಜಂಗೆ ಕೋಟ್ಯೋದವುದೇ (ಶಾಂತಿಪು. ೧೦-೧೫೨). [ ಸಂ. ]

ಟೀಕಾಚಿತ್ರ (ನಾ). ವಿಡಂಬನ ಚಿತ್ರ; ವ್ಯಂಗ್ಯಚಿತ್ರ: (ಹಾಸ್ಯಪತ್ರಿಕೆಯಲ್ಲಿ, ಮು. ರಾಜಕೀಯ ವಿಚಾರಗಳನ್ನು ಟೀಕಿಸಿ ರಚಿಸಿದ ಪತ್ರಿಕೆಗಳಲ್ಲಿ) ಪೂರ್ಣಪುಟ ಚಿತ್ರ, ದೊಡ್ಡ ಚಿತ್ರ: ಟೀಕಾಚಿತ್ರ; ಹಾಸ್ಯಚಿತ್ರ; ನಗೆಚಿತ್ರ (Cartoon. ಇಂಕನಿ.). [ಸಂ. (ಟೀಕಾ + ಚಿತ್ರ)]

ಟೀಕಾರಾಗ (ನಾ). [ಸಂಗೀತ] ರಾಗಗಳಲ್ಲೊಂದು: ಪಡಾರ ಟೀಕಾರಾಗ ಮಾಳವಿ . . . ಹಿಂದೋಳಮೆಂಬೆಂಟು ರಾಗಂಗಳುಂ ಅಪ್ಪಸಾಧಾರಣ ಜಾತೀಯಂಗಳು (ವಿವೇಕ. ೨೨೩). [ ಸಂ. ]

ಟೀಕಿಸು (ಕ್ರಿ). ೧. ವ್ಯಾಖ್ಯಾನ ಮಾಡು; ವಿವರಿಸು; ಅರ್ಥವನ್ನು ಸ್ಪಷ್ಟಪಡಿಸು. ೨. ಗುಣದೋಷ ವಿಮರ್ಶೆಮಾಡು: "ಟೀಕಿಸು, ಖಂಡಿಸು" (Judge. ಪತ್ರಿನಿ. ೪೮). ೩. ಆಕ್ಷೇಪಿಸು; ದೋಷಗಳನ್ನು ಎತ್ತಿ ತೋರಿಸು: ನೂತನ ಶಿಕ್ಷಣಕ್ರಮಗಳಲ್ಲಿ ಅನುಭವಸಾಧನೆಗೇ ಹೆಚ್ಚಿನ ಅವಕಾಶವುಂಟೆಂದೂ ಟೀಕಿಸುವುದುಂಟು (ಶಿಕ್ಷದ. ೬೯೭): ದಾಸರು ರಾಜಕೀಯವನ್ನು ಸಮಯೋಚಿತವಾಗಿ ಟೀಕಿಸುತ್ತಲೂ ಪ್ರಶಂಸಿಸುತ್ತಲೂ ಇದ್ದರು (ಬದುಬ್ಬಿ. ೩). [ ಟೀಕೆ$_1$ + – ಇಸು$_3$ ]

ಟೀಕು (ನಾ). ವ್ಯಾಖ್ಯಾನ; ಅರ್ಥವಿವರಣೆ: "ಟೀಕಾ, ಟೀಕು, ಈ ೨ ವಿವರಂ" (ಕಾಶಕ್ಕೆ. ೯೦); ಲೋಕಕ್ಕೆದರ್ಥಶಾಸ್ತ್ರದ ಟೀಕೆನಿಸಿದ ತನ್ನ ನುಡಿ ಮನಂಗೊಳಿಸೆ (ಶಂಶಥಾ. ೯-೦೪): ಟೀಕುವೇಟ್ಟುದೆನೆ ವೇಟ್ಟವನುಂ ಕವಿಯೆಂಬ ಲೆಕ್ಕಮೇ (ಕಾವ್ಯಾವ. ೨೯೯). [ <ಸಂ. ಟೀಕಾ ]

ಟೀಕುವರೆ (ಕ್ರಿ). ಟೀಕೆಯನ್ನು ಬರೆ; ವ್ಯಾಖ್ಯಾನವನ್ನು ಬರೆ: ಅನಿತೊಂದು ಸಿರಿಯ ಮೈಮೆಯೊಳನಿತೌದ್ಧತ್ಯಕ್ಕೆ ಸಲ್ಲದಾ ನೃಪತನಯಂ ವಿನಯೋನ ವಿನಾ ಕಾ ಶ್ರೀ ಎನಿಪುಕ್ತಿಗೆ ಟೀಕುವರೆದ ತೆಱದಿಂ ನಡೆದಂ (ಚಂದ್ರಪು. ೪-೦೦). [ ಟೀಕು + ಬರೆ$_1$ ]

ಟೀಕೆ$_1$ (ನಾ). ೧. ವ್ಯಾಖ್ಯಾನ; ಟೀಕು: "ಭಾಷ್ಯ; ವ್ಯಾಖ್ಯಾನ; ಟೀಕೆ" (Commentary. ಇಂಕನಿ.). ೨. ಗುಣದೋಷ ವಿಮರ್ಶೆ: "ವಿಮರ್ಶೆ, ಟೀಕೆ; ಗುಣದೋಷ ವಿವೇಚನೆ" (Criticism. ಇಂಕನಿ.): ಈ ವಿಚಾರದಲ್ಲಿ ಒಟ್ಟಿನ ಮೇಲೆ ಒಂದು ಟೀಕೆಯ ಮಾತನ್ನು ಹೇಳುವುದು ಅವಶ್ಯವಾಗಿದೆ (ಸಾಹಿಶ. ೬೩). ೩. ಆಕ್ಷೇಪಣೆ; ತಪ್ಪನ್ನು ಎತ್ತಿತೋರಿಸುವಿಕೆ; ನಿಂದಿಸುವಿಕೆ: ಪಾದಚಾರಿಯ ಕಂಡು ಕಾರೊಳು ಬಾ ಎಂದು ಹತ್ತಿಸಿಕೊಳ್ಳುವುದು ಬೇಡ ನಿನ್ನ ಕಾರಿನ ಟೀಕೆ ಮುಗಿಸಿಯೆ ಕಾರಿನಿಂದಿಳಿವನು ನೋಡ (ಇಂಚಾಪ. ೨೩೦-೩೭); ಎಂದಿನಂತೆಯೆ ಶ್ಯಾಮ್ ಅವರಿವರನ್ನು ಟೀಕೆ ಮಾಡುತ್ತ ಕೆಲವರನ್ನು ಹೊಗಳುತ್ತ ಇದ್ದ (ಅಂಡೂ. ೯೨). ೪. [ಸಂಗೀತ] ಒಂದು ಬಗೆಯ ರಾಗ: ಟೀಕೆ, ಸೈಂಧವಿ, ಪಂಚಮ . . . ಉಪಾಂಗವೆಂಬೆಂಟು ರಾಗಂಗಳುಂ (ವಿವೇಕ. ೨೨೩). [ ಸಂ. ಟೀಕಾ ]

ಟೀಕೆ$_2$, ಟಿಕ್ಕೆ$_1$ (ನಾ). ಕೊರಳಲ್ಲಿ ಧರಿಸುವ ಒಂದು ಬಗೆಯ ಚಿನ್ನದ ಆಭರಣ; ಅಡ್ಡಿಕೆ: ಮನೆಯಲ್ಲಿ ಅತಿಥಿಗಳು ಬಂದಿದ್ದಾರೆ, ನನ್ನ ಕರಿಮಣಿ ಟೀಕೆಯನ್ನು ಕಟ್ಟಿಕೋ (ಪವಶೀ. ೮೦). ಟಿಕ್ಕೆ$_1$: ಕೊರಳಲ್ಲಿ ಭಾರವಾದ ಗೆಜ್ಜೆಯ ಟಿಕ್ಕೆ (ಹಬ್ಬಿಬ. ೬): ಅವಳುಟ್ಟ ಮಡಿಯ ಸೆರಗು ಎದೆಯ ಮೇಲಿಂದ ಸರಿದು ಕೊರಳೊಳಗಿನ ದೊಡ್ಡ ಗೆಜ್ಜೆಯ ಟಿಕ್ಕೆ ಹೊರಗೆ ತೋರುತ್ತಿದ್ದಿತು (ಅಹೋಳ. ೮). [←ಹಿಂ. ಮರಾ. ಟೀಕ್ ]

ಟೀಕೆಟಿಪ್ಪಣಿ (ನಾ). ೧. ಶಬ್ದಾರ್ಥವಿವರಣೆ: ಟೀಕೆಟಿಪ್ಪಣಿಗಳೂ ಗ್ರಂಥದ ವಿಷಯವನ್ನು ಹುಡುಕಲು ಅನುಕೂಲಿಸುವಂತೆ ಮುಖ್ಯಾಂಶಗಳ ಅಕಾರದಿ ಪಟ್ಟಿಯೂ ಪುಟಸಂಖ್ಯೆಯೂ ಕೊನೆಯಲ್ಲಿರಬೇಕು (ಶಿಕ್ಷದ. ೨೮೦). ೨. ದೋಷವನ್ನು ಎತ್ತಿ ಹೇಳುವುದು: ಸಮಾಜಸೇವೆಯ ವ್ಯಕ್ತಿ ಎಷ್ಟೇ ಪ್ರಾಮಾಣಿಕತೆಯಿಂದ ನಡೆದುಕೊಂಡರೂ ಟೀಕೆಟಿಪ್ಪಣಿ ಅವನಿಗೆ ಕಟ್ಟಿಟ್ಟ ಗಂಟು (ರೂಢಿ). P ಈ ಜೋಡಿ ಶಬ್ದಗಳು ಬೇರೆಬೇರೆಯಾಗಿಯೂ ಬಳಕೆಯಾಗುತ್ತವೆ. [ ಟೀಕೆ$_1$ + ಟಿಪ್ಪಣಿ ]

ಟೀಕೆಬರೆ (ಕ್ರಿ). = ಟೀಕುವರೆ: ಸಂಸ್ಕೃತ ಮಹಾಕಾವ್ಯಗಳಿಗೆ ಟೀಕೆ ಬರೆಯುವುದರಲ್ಲಿ ಮಲ್ಲಿನಾಥ ನಿಸ್ಸೀಮ (ರೂಢಿ). [ಟೀಕೆ$_1$ + ಬರೆ$_1$]

ಟೀಪಾಯ್ 'ಟೀಪಾಯಿ' ನೋ.

**ಟೀಪಾಯಿ, ಟೀಪಾಯ್** (ನಾ). ೧. ಮೂರುಕಾಲಿನ ಮಣೆ; ಮುಕ್ಕಾಲು ಮಣೆ. ೨. ಒಂದುಬಗೆಯ ಕಾಲುಮಣೆ; ಪುಟ್ಟ ಮೇಜು:ಟೀಪಾಯಿಯ ಮೇಲೆ ಫಲಾಹಾರವನ್ನಿಡು (ರೂ೨). **ಟೀಪಾಯ್:** ೨. ಚಹದ ಟ್ರೇಯನ್ನು ಹತ್ತಿರದ ಟೀಪಾಯ ಮೇಲಿಟ್ಟು (ತೊಸಕ್ಕ. ೦೭೦): ಹತ್ತಿರದ 'ಟೀಪಾಯ್'ದ ಮೇಲೆ ಅದನ್ನಿಟ್ಟು ಗಂಡನಿಗೆ ಹೇಳಿದಳು (ಮುತ್ತ್ಯದ. ೮೦).
[ ← ಹಿಂ. ತಿಪಾಈ./ಸಂ. ತ್ರಿಪಾದಿ ]

**ಟೀಪು** (ನಾ). ಅಡಿ ಟಿಪ್ಪಣಿ: ಈ ಮಾತಿಗೆ ಒಂದು ಟೀಪು ಕೊಡಬೇಕು (ರೂ೨). [ ←ಮರಾ. ಟೀಪ್]

**ಟೀಮು** (ನಾ). ಒಟ್ಟಿಗೆ ಕೆಲಸಮಾಡುವವರ ಅಥವಾ ಆಟಗಾರರ ತಂಡ,–ಗುಂಪು: ಮ್ಯಾಚಿನಲ್ಲಿ ಏನಾಯಿತು? ನಿಮ್ಮ ಟೀಮು ಗೆದ್ದಿತೋ ಹೇಗೆ (ಮಹಾಗ. ೦೬). [← ಇಂ. Team ]

**ಟೀಯ** 'ಟೀವ' ನೋ.

**ಟೀಲ** (ನಾ). ಒಂದು ಬಗೆಯ ಹಕ್ಕಿ : (ಕ). [ ? ]

**ಟೀವ, ಟೀಯಂ** (ನಾ) ಉದ್ದವಾದ ಬಾಲವುಳ್ಳ ಒಂದು ಬಗೆಯ ಪಕ್ಷಿ ; ಬಾನಾಡಿ: "ಟೀವಂ ಚಕೋರಾಂಡಮನಿಸಿಕ್ಕು" (ಮಂಗರಾ. ೩೨-೦೦); "ಬಾನಡಿ ಟಿಟ್ಟಿಭ ಟೀವಂ ತಾನಾಗಸವಕ್ಕಿ ಖಂಜರೀಟಮೆನಿಕ್ಕುಂ" (ಕವಿಕಂ. ೬೨); ಟೀ[ಪಾಠಾಂ. ಪೀ]ವ ಕಕ್ಕಳ ಸೋಜಿಗ ಮೆಳೆಗಿಳಿ ಕಾಡ್ಕೋಳಿ ಪೂವಜಿಗಳ ಮಾಜುವರ ಕಂಡೆ (ಕೂಬಸೋ. ೦೮-೩೪); ಅರೆ ಹೋಜಿಸು ಟಿಟ್ಟಿವನು ಮಣಿಗನು ಗರುಡ ಕೊಣಕನು ಮೇಣು ಟೀವನು (ಸಾಳ್ವಭಾ. ೫-೨೩): ಪಾರಾವತಂ ಪಂಗುರು ಟೀ[ಪಾಠಾಂ. ಲಾ]ವಂ ಟಿಟ್ಟಿಭಂ . . . ಶಿಖಿ ಶುಕಂ ತದ್ವನಾಂತಸ್ಥಮಿರ್ಕುಂ (ಕಬಕಂ. ೩-೩೩). **ಟೀಯ:** ಶಕುನಿ ಶುನಿಗಿಲು ಟಿಟ್ಟಿಭಂ ಕೌಶಿಕಂ ಟೀಯ ನಿಕರಬಿಗ್ಗಂ . . . ಪಕ್ಷಿಮುಖ್ಯಗಳ್ಸುಖಮಿಪ್ಪವಾವನದೊಳು (ಜಕೋಪು. ೦೦-೩೦).

ಟಿವೇನ ಹಕ್ಕಿ, ಟೀಯನ ಹಕ್ಕಿ=ಟಿಟ್ಟಿಭ: "ಟೀವನಹಕ್ಕಿ" (ದಾಹಟೀ. ೨-೬); "ತೈತ್ತಿರಿಃ–ಟೀವನ ಹಕ್ಕಿ" (ಟಷಧಿ. ೬೨): "ಕೋಯಷ್ಟಿಕಃ–ಟೀಯೇನ ಹಕ್ಕಿ" (ಟಷಧಿ. ೪೦). [ ? ]

**ಟೀವಕ** (ನಾ). (ನೃತ್ಯಕ್ಕೆ ಸರಿಯಾಗಿ ತಂತಿಯನ್ನು ಮಿಾಟಿದಾಗ) ತಂಬೂರಿಯಿಂದ ಹೊರಡುವ ಧ್ವನಿ. 'ಟೀವಕಟೆಂಬಕ' ಪರಾ.
[ ? ]

**ಟೀವಕಟಿಂಬಕ, ಟೀವಕಟೆಂಬಕ** (ನಾ). "ತಂಬೂರಿಯ ತಂತಿಯನ್ನು ಮಿಾಂಟಿದಾಗ ಹೊರಡುವ ಧ್ವನಿಗಳು; ಇವುಗಳಿಗೆ ಸರಿಯಾಗಿ ನೃತ್ಯಕಾರನು ಹೆಜ್ಜೆಯನ್ನು ಹಾಕಬೇಕಾಗುವುದು" (ಬಸವ. ಕೊ೨೮): ದಿಟಪುಟ ಧಕುತಿ ಸಂಪುಟ ನೆರೆಗೊಳ್ಳದಾಗಿ . . . ಟೀ[ಪಾಠಾಂ. ಟೇ]ವಕ ಟಿಂಬಕನಾ[ಪಾಠಾಂ. ಟಿಂಬನನಾ, ಟಿಂಬಕವನಾ]ಡಿಸುತ್ತಿದ್ದಿತಯ್ಯಾ ನಿನ್ನ ಮಾಯೆ (ಬಸವ. ೦೮). **ಟೀವಕಟೆಂಬಕ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಟೀವಕ + ಟಿಂಬಕ ]

**ಟೀವಕಟೆಂಬಕ** 'ಟೀವಕಟಿಂಬಕ' ನೋ.

**ಟೀವಿ** 'ಠೀವಿ' ನೋ.

**ಟೀಸೊಪ್ಪು** (ನಾ). ಟೀ ಗಿಡದ ಸೊಪ್ಪು : (ಮ್ಯಶಿಗಿ. ೧೬–೨೯೩).
[ ಟೀ + ಸೊಪ್ಪು$_3$ ]

**ಟು** (ಪ್ರ). ಅಂತು, ಇಂತು, ಉಂತು ಮೊದಲಾದ ಶಬ್ದಗಳ ಮೇಲೆ ಪ್ರಕಾರಾರ್ಥದಲ್ಲಿ ಸೇರುವ ಒಂದು ಪ್ರತ್ಯಯ. 'ಅಂತುಟು', 'ಇಂತುಟು', 'ಉಂತುಟು' ಪರಾ.

**ಟುಂಟುಕ** (ಗು). ೧. ಕೆಳಮಟ್ಟದ : ಅಲ್ಪ ; ಕ್ಷುದ್ರ ; ತುಚ್ಛ : ಆದಿತ್ಯನ ಕಿಲದೊಳ್ ಚಂದ್ರೋದಯಮುಮೆಸೆಯುವಪ್ಪೊಲೀ ಧರಾಮಂಡಲದೊಳ್ ವಾದಿ [illegible] ವಾದಿರಾಜನ ಕಿಲದೊಳ್ (ಎಕ. VIII, ನಗರ. ೩೫-೭೫; 1077); ಆಚರಸನರೆನ್ನು ಪೋಲಿಸುವೆ ಟುಂಟುಕ ಮಂಡಳಿಕವ್ರಜಂಗಳಂ (ಮುಂಬರಾ. XI, ೩೬೦-೨೪ ; 1162). (ನಾ). ೨. ಕ್ರೂರ : ದುಷ್ಟ : ಕಂಟಕದ ಬಂಟರಾಗಿ ಬುಧಸಂತತಿಗಂ ಪತಿಗಂ ಕುಬುದ್ಧಿಯಿಂ ಕಂಟಕರಪ್ಪ ಟುಂಟುಕರದಿಕ್ಕಿಮ (ಎಕ. V. ಬೇಲೂರು. ೦೦೪-೪೦ ; 1173). ೩. ಒಂದು ಬಗೆಯ ಮರ ; ಹೆಮ್ಮರ ; ತಿಗಡು ಮರ : "ಟುಂಟುಕ=ದಿಂಡಲಮರ" (ಗಂಗಾಮ. ೦೪೪). [ ಸಂ. ]

**ಟುಣುಪುಣು** (ನಾ). ಒಂದು ಅನುಕರಣ ಶಬ್ದ : ಹುರುಟಿನ ಹುರಿದ ಬೀಜದಂತೆ ಟುಣುಪುಣು ಹಾರಾಡುತ್ತಿದ್ದ ತನ್ನ ಗೆಳೆಯನು ಈಗ . . . ಕಂಡವರ ಕೈಗೆ ಅತ್ತರು ಸವರುತ್ತಿರುವ ದೃಶ್ಯ ಮನೋವೇಧಕವಾಗಿ ಅವನಿಗೆ ಕಾಣತೊಡಗಿತು (ರಂಗರೋ. ೧೯೩).

**ಟುಪುಟುಪು** (ನಾ). ಒಂದು ಅನುಕರಣ ಶಬ್ದ : ಎಲ್ಲರೂ ಇರ್ಲ್ಲೊಂದು ಅರ್ಲ್ಲೊಂದು ಟುಪುಟುಪು ಬಿದ್ದ ಆಲಿಕಲ್ಲುಗಳನ್ನು ಆರಿಸಿಕೊಂಡು ಬಂದು ಸೂರಿನ ಕೆಳಗಡೆ ನಿಂತು ಬಾಯಿಗೆ ಹಾಕಿಕೊಳ್ಳುತ್ತಿದ್ದವು (ಪಟಾಕ್ಷ. ೩೮).

**ಟುಪ್ಪೀಕೆ** (ನಾ). ಬಹು ಸಂಕ್ಷೇಪವಾದ ವ್ಯಾಖ್ಯಾನ : ಶಾಬರ ಭಾಷ್ಯದ ಮೇಲೆ ವ್ಯಾಖ್ಯಾನವನ್ನು ಆರಂಭಿಸಿದ ಕುಮಾರಿಲಭಟ್ಟನು (ಕ್ರಿ. ಶ. ಶತ. ೭೦೦) ೧–೧ರ ಮೇಲೆ ಶ್ಲೋಕವಾರ್ತಿಕವನ್ನು . . . ೪ ರಿಂದ ೧೨ರವರೆಗೆ ಟುಪ್ಪೀಕೆಯನ್ನೂ ರಚಿಸಿದ್ದಾನೆ (ತತ್ವಪ್ರಾ. ೨೭೦).
[ ಸಂ. ಟುಪ್ಪೀಕಾ ]

**ಟುಮಕ** 'ಟುಮುಕ' ನೋ.

**ಟುಮಕಿ$_1$** 'ಟುಮುಕು' ನೋ.

**ಟುಮಕಿ$_2$** (ನಾ). ನೀರಿನಲ್ಲಿ ಎರಡೂ ಕೈಗಳಿಂದ ಸದ್ದಾಗುವಂತೆ ಹೊಡೆಯುವಿಕೆ : ಒಂದೀಟು ಟುಮಕೀ ಹೊಡೀರೀ ಮಾರಗ್ಯ ಹಾಕ್ರಿ (ಧರ್ಮಸಿ. ೮೩). [ ? ]

**ಟುಮುಕ, ಟುಮಕ** (ನಾ). ದಪ್ಪನಾಗಿರುವವನು: ಗಜ್ಜರೆಯ ತುಂಬಿನಂತೆ ಅವನು ಕೆಂಪಾಗಿಯೂ ಟುಮುಕನಾಗಿಯೂ ಇರುವನೆಂದು ಕಂಡು ನೀನು ಮನಸೋತಿರುವಿ (ಪವಕಿ. ೬೩). **ಟುಮಕ:** ಇವ ಗಿಡ್ಡ, ಟುಮಕ: ಗುಳ್ಳಿಗಣ್ಣನವ; ಮುಖ ಬಲು ರಾವು (ಮೀರಿಮ. ೪). [ ? ]

**ಟುಮುಕು, ಟಮಕಿ, ಟುಮಕಿ$_1$, ತುಮುಕು$_2$** (ನಾ). ಒಂದು ಬಗೆಯ ಚರ್ಮವಾದ್ಯ : ಸಣ್ಣತಮಟೆ : ಕಂಸಾಳ ಡೊಳ್ಳಾರಿ ಟುಮುಕು ತಂಬಟಂ . . . ಮದ್ದಳೆಗಳೆಂಬ ಬಹುವಾದ್ಯದುಬ್ಬಟೆಯುಮೆಳದೆಸೆಯೊಳಾವರಿಸಲು (ಚಬಪು. ೫-೭) : ಡೋಳಿನ ಕುದುರೆ ಡಮಾನದ ಮದಕರಿ ಸೂಳೈಪ ಟುಮುಕುಗಳೊಂಟೆ . . . ಮೇಳದೊಳಗೆ ತಿರುಗುವುವು (ಕಂನವಿ. ೦೯-೨೩). **ಟಮಕಿ:** ಕೋರ್ಟಿನವರು ಟಮಕಿ ಹೊಡೆಯಿಸುವುದರ ಮೂಲಕ ಯುಕ್ತವಾದ ನೋಟೀಸನ್ನು ಕೊಟ್ಟ ನಂತರ (ಗ್ರಾಮೂಕ. ೩೮). **ಟುಮಕಿ$_1$:** ಎಲೇ, ಇದು ಮೂರನೆ ಡಂಗುರದ ರಾವುಂಟು, ಟುಮಕೀ ಹೊಡಿಯಲೇ (ಮುಂಬಯು. ೬-೨೧೮). **ತುಮುಕು$_2$:** ರಸಪೂರಮತಿಗಭೀರಂ ಕಾವ್ಯಂ ನೀರಸರಜೀವಂತೇನಿದು ತಾರೆಲೆಯ ಬೀದಿವಾಪೆ ನೆರವಿಯ ತು[ಪಾಠಾಂ.ದು]ಮುಕೀ (೧೨ಕ. ೦-೩೦).

ಟಮಕಿ ಬಾರಿಸು = ೧. ತಮಟೆ ಬಾರಿಸು : ಡಂಗುರ ಹೊಡೆ. ೨. (ಆಲಂ) ಎಲ್ಲರಿಗೂ ತಿಳಿಯಪಡಿಸು ; ಪ್ರಸಿದ್ಧಪಡಿಸು: ಬಹಿರಂಗಪಡಿಸು ; ಸಾರು : ಸ್ವಾಮಿಯವರು ತಾವು ಎಲ್ಲಿಗೆ ಹೋಗುವುದಾದರೂ ಹೇಳದೆ ಹೋಗುತ್ತಾರೆ : ಹಾಗೆ ಟಮಕಿ ಬಾರಿಸಿ ಹೋಗುವುದಕ್ಕೆ (ನಂಬಿಸಾ. ೩೨೯). ಟಮಕಿ ಸಾರು=ಟಮಕಿ ಬಾರಿಸು ೨: 'ಸಣ್ಣಪ್ಪನನ್ನು ಶಾಲೆಗೆ ಸೇರಿಸಿ ಬಂದೆ' ಎಂದು ಟಮಕಿ ಸಾರುವುದಕ್ಕೆ ಅವರು ಬಂದಿದ್ದರು (ಸ್ವಪ್ನಹೂ. ೯೧). [ ←ಮರಾ. ಟಮಕೀ, ಟಿಮಕೀ : ಹಿಂ. ಟಮಕೀ./ತುಳು. ಟಮುಕಿ : ತೆಲು. ಟಮಟಮ ]

**ಟುರು** (ನಾ). ಒಂದು ಅನುಕರಣ ಶಬ್ದ. 'ಟುರುಗುಟ್ಟು' ಪರಾ.

**ಟುರುಗುಟ್ಟು, ಟುರ್ಗುಟ್ಟು** (ಕ್ರಿ). ಟುರುಟುರು ಎಂದು ಶಬ್ದಮಾಡು. **ಟುರ್ಗುಟ್ಟು** : ಬಾಟೆದೋಂಟಮುಂ ಪುಗುವಂತೆ ಪೊಕ್ಕು ಬೊಬ್ಬಿಱಿವರೆಡೆಯೊಳ್ ಟುರ್ಗುಟ್ಟುತೆ (ಅದ್ಭುತ. ೪೭-೭). [ ಟುರು + ಕುಟ್ಟು$_1$ ]

**ಟುರ್ಗುಟ್ಟು** 'ಟುರುಗುಟ್ಟು' ನೋ.

**ಟುವ್ವಿಡು** (ಕ್ರಿ). ಟುವ್ ಟುವ್ ಎಂದು ಶಬ್ದಮಾಡು : ಟುವ್ವಿಡುವ ಕುಕಿಲಿಡುವ ಗಾನದೊನಪು (ನೇಮಿಜಿ. ೩-೨೩). [ ಟುವ್$_0$ + ಇಡು$_1$ ]

**ಟುಸ್** (ನಾ). ಒಂದು ಅನುಕರಣ ಶಬ್ದ : ಪಟಾಕಿ ಟುಸ್ ಎಂದುಬಿಟ್ಟಿತು (ರೂಢ).

**ಟೂನಮರ** (ನಾ). ಒಂದು ಬಗೆಯು ಮರ : ಕೆಂಪುಗಂಧಗಿರಿ, ಸಂದಿವೃಕ್ಷ, ಟೂನಮರ . . . ಗಂಧಗರಿಗೆ (ವೃಕ್ಷಗಿ. ೦೯-೩೪೮).

[ ಟೂನ$_0$ + ಮರ$_1$ ]

**ಟೆಂಕ$_1$** 'ತೆಂಕು' ನೋ.

**ಟೆಂಕ$_2$** 'ಟಂಕೆ$_1$' ನೋ.

**ಟೆಂಕದೆಸೆ** 'ತೆಂಕದೆಸೆ' ನೋ.

**ಟೆಂಕಿ** 'ಟಂಕಿ$_2$' ನೋ.

**ಟೆಂಕೆ** 'ಟಂಕಿ$_2$' ನೋ.

**ಟೆಂಗು** 'ತೆಂಗು$_3$' ನೋ.

**ಟೆಂಟಣಿಸು, ಟಂಟಣಿಸು$_2$,** ಟಂಠಣಿಸು, **ಟೆಂಟೆಣಿಸು, ಟೆಂಠಣಿಸು,** ಟೆಂಠೆಣಿಸು, ಡಂಢಣಿಸು, ಡೆಂಡಣಿಸು, ಡೆಂಡೆಣಿಸು, ಡೆಂಢಣಿಸು, ಡೆಂಢಳಿಸು, ಡೆಂಢೆಣಿಸು, ಢೆಂಢೆಣಿಸು (ಕ್ರಿ). ೧. ವಿರೋಧಿಸು ; ದ್ವೇಷಿಸು ; ವೈರತಾಳು ; ಸ್ಪರ್ಧಿಸು : ಮೊಂಟಾಗಿ ಕೈಗಳೆರಡುಂ ಗೆಂಟಾಗಿರೆ ತನಗೆ ಸಿರಿಯು ಕೂಟುಂ ಕಾಲುಂ ಕುಂಟಾಗಿ ನಮೆಯುತಿರ್ಪ ಟೆಂಟಣಿಸಿ ಮಹಾತಪಂಗಳಂ ಕಿಡಿಸಿದವರ್ (ಧರ್ಮಾಮೃ. ೬-೧೮೦); ತಳ್ತು ಗಂಟಿಕ್ಕಿ ಟೆಂಟಣಿಸುವಂಕಮುಂ ಸೆಳೆದು ಕೆಡೆವುವ . . . ಮಾಸಾಳ್ಗಳ ಮಂತಣದೊಳಂ (ಗಿರಿಜೆ. ೨-೧೦೫ ವ) : ಟೆಂಟಣಿಪ ವೈರಿಗಳ ಗಳಹುವ ಗಂಟಲನು ಮುಱಿಯೊದೆವ ಹರೆಯಕೆ ಕಂಟಕವಲಾ ಮುಪ್ಪು ಬಂದುದು ಮಗನೆ ತನಗೆಂದ (ನಿಘಂಗ. ೩-೮-೨೫). ೨. ಉತ್ಸಾಹಪಡು ; ಸಂಭ್ರಮಿಸು ; ಹಿಗ್ಗು : ಹಿಡಿ ಹಿಡಿ ಹೊಡೆ ಹೊಡೆಯೆಂದು ಟೆಂಟಣಿಸಿ ಬೆಂಕೊಂಡಾರ್ಭಟಿಸಿ (ಭರತ. ೫೬-೪೩) ; ಲಕ್ಷ್ಮಿಯ ಗೆಂಟನೊಳು ಶ್ರೀರಾಮ ಕುಳಿತಿರೆ ಟೆಂಟಣಿಸಲೋಲಗರು ನಾಟ್ಯದ ಜನರು ಸಹವಾಗಿ (ಪಟುಭಾ. ೧೪-೨೦). ೩. ಅಂಜು ; ಭಯಪಡು ; ಹಿಂದೆಗೆ : ಕಾಱುವಱುಗೆ ಜಯಂ ಜೊಮ್ಮೇೞುವ ಟೆಂಟಣಿಸುವರಸನರಸನೆ ವಿರಸಂ (ಶಾಂತಿಪು. ೨-೪೦) ; ತಾಂ ಟೆಂಟಣಿಸದೆ ಬಲ್ವಿಡಿದಂ ಮಿಾಂಟುಂಜವ್ವನಿಗನಾ ನುಡಿಗಳಂ ಮನದೊಳ್ (ಉದ್ಭಟ. ೧೧-೪೪) ; ಟೆಂಟಣಿಸದಿದಿರಾಗು (ಕುಮಾ.ವಿ. ೮-೦೮) : ಟೆಂಟಣಿಸದಿರು ದಕ್ಷ (ವೀರಶೈವ. ೩-೪-೧೮) ; ಕೃಷ್ಣನ ಮುಂದೆ ಭಾಷೆಯಂ ಪೂರೈಸಿ ಟೆಂಟಣಿಸದೊಡಲಂ ತೊಱೆದು (ಜೈಮಿಭಾ. ೦೩-೬೨). ೪. ಆಧಾರವಾಗು ; ಊರೆಯಾಗು : ಎಂಟು ಕಾಲ ಮಂಟೆಯ ಟೆಂಟ[ಪಾಠಾಂ. ಟೆ]ಣಿಸಿ ನಿಂದವೈದು ಕಂಭ (ಮೋಳಿಮಾ. ೨೫೪-೮೦೫) ; ಅಂತಪ್ಪ ದೇಹಕ್ಕೆ ಪಂಚಕರಣಂಗಳೇ ಆಧಾರವಾಗಿಹುದೆಂಬುದೀಗ ಟೆಂಟಣಿಸಿ ನಿಂದವೈದು ಕಂಭ ಎಂಬ ಶಬ್ದಕ್ಕರ್ಥ (ಮೋಳಿಮಾ. ೮೦೫ ಟೀಕೆ). ೫. ಒಟ್ಟಿಗೆ ಸೇರು ; ಒತ್ತೊತ್ತಾಗಿರು ; ಗುಂಪು ಸೇರು ; ನಿಬಿಡವಾಗಿರು : ಆ ಕುಸುಮ ಗುಚ್ಛಗುಂಜಾಗೃಹದೊಳ್ ಟೆಂಟಣಿಸದೆ ಗಳಪುವ ಪೋಲ್ ನೀಂಟಾದಿಂಚರ ಮಾನಿಸಗುತೊಪ್ಪಿದುವಳಿಗಳ್ (ಉದ್ಭಟ. ೯-೨೯) ; ಕಱೆಕಂಠಗಲ್ಲದಳೆಂದು ತೋಂಟಗಳ್ಪೂಱಿಗಿಕ್ಕಿದಂತೆ ಟೆಂಟಣಿಸಿಯೆ ಬೆಳೆದಿಹವು ಕೇತಕಿಗಳು (ಅಂಜನ. ೨-೮೬); ಕಂಟಕಿಯು ಸಹಕಾರ ರಂಭ ದಾಡಿಮಫಲಂ ಟೆಂಟಣಿಸಿ ತಳ್ತೊಡೆದು ರಸಪ್ರವಾಹಗಳಾಗೆ (ಪ್ರಭುಪು. ೩-೨೧). ೬. ಉಂಟುಮಾಡು; ಜನಿಯಿಸು: ತುಂಟತನದಿ ಹುಸಿದಾ ಪುಸಿ ತನಗೇಳಂಟು ದಿವಸದೊಳಗೆ ಕಂಟಕಮುಂ ಮಾಳ್ಪುದು ಮಱುಭವದೊಳ್ ಟೆಂಟಣಿಪುದು ದುಃಖಮುಂ(ಜಯಾ. ೦೦-೦೦). ೭. ಶೋಭಿಸು : ಅಣಿಮಾದ್ಯಷ್ಟಗುಣಂಗಳಂ ನೆಲೆಗಳಂ ಮೇಗಾರ್ದರಿಂದೆಂದು ಟೆಂಟಣಿಸುತ್ತಿರ್ಪುದು (ಶಾಂತಿಪು. ೬-೦೨೨): ಬೇರೊಂದು ವರ್ಣವಳ್ಕು ಟೆಂಟಣಿಪ ನುಣ್ಪುಗಂ ಪೊಳೆವ ಕಂಪನಮಿನಿತು ಪೆಂಟಣಿಸೆ (ಸೌಂದಪು. ೯-೧೧). **ಟಂಟಣಿಸು$_2$**: ೧. ಸದ್ಬುಧರ್ಗಿಂದ್ರಭೂಜದೊಳ್ ಟಂಟಣಿಸುತ್ತಮಿರ್ಪ ನಿಜಬುದ್ಧಿಯಿನಾತ್ಮನೃಪಂಗೆ ಕೂಡೆ ನಿಷ್ಕಂಟಕಮಾಗೆ ಮಾಡಿದ ನಿಳಾತಳಮನೆಲ್ಲಮನೊಲ್ದು ಮಲ್ಲಮಂ (ಎಕ. V, ಬೇಲೂರು. ೦೦೪-೪೦; 1173) ; ಮಲೆವವರಿಲ್ಲ ಗಂಡೆಸೆವರಿಲ್ಲಿದಿರಪ್ಪವರಿಲ್ಲ ತೇಜವೆಂದುಲಿವವರಿಲ್ಲ ಟಂಟಣಿಪರಿಲ್ಲ . . . ಕೃಷ್ಣವಿಭುಕೇಶವದೇವಚಮೂಪ ರಾಜ್ಯದೊಳ್ (ಎಕ. VII, ಶಿಕಾರಿ. ೦೦೯-೩೪; 1181) ; ಟಂಟಣಿಸುತ್ತುಮಿರ್ಪರಿನ್ನಪಾಳರ ಹಿಣ್ಣ ನಿಜಾಸಿದಣ್ಣದಿಂ ಕಣ್ಬಿಯ ಜಾರದೊಳ್ ಸುಳಿಸಿ (ಇಹಿ. XII. ೯೭-೧೯ : 1187). **ಟಂಠಣಿಸು**: ೮. ನಡುಗು; ಅಲುಗಾಡು; ಕಂಪಿಸು; ಅದುರು : ಧರಣಿ ಟಂಠಣಿಸೆ ಪದಹತಿ ಧೂಳಿಯಾವರಿಸೆ ತರಣಿ ತೇಜಂಗುಂದೆ (ಸೌಂದಪು. ೦೭-೦೨). **ಟೆಂಟೆಣಿಸು** : ೫. ಉಂಟು ಒಬ್ಬೊಬ್ಬರಿಗೆ ಬೆನ್ನಲಿ ಎಂಟುಕೋಟಿ ಪ್ರಮಥರು ಟೆಂಟೆಣಿಸಿ ನಿಂದಿಹರು (ಶರಲೀ. ೪೧-೨); ತಾಳೆ ಕಂಸಾಳ ಭೂರಗ ಭೇರಿ ಟೆಂಟೆಣಿಸಿ ಭೋರ್ಗರೆಯಲು (ಸವಮೋ. ೦೦-೩೦). **ಟೆಂಠಣಿಸು**: ೧. ಸೆಣಸಲ್ ಮಾರ್ಮಲೆಯಲ್ ಬೆಸಕ್ಕೆ ಬೆಸೆಯಲ್ ದಂಡೋಪನತ್ಯಕ್ಕೆ ಟೆಂಠಣಿಸಲ್ ಪೇಟ್ಬುದನಿರ್ಮ ಕೇಳಲರಿಯಿಲ್ಲೆಂಬನ್ನೆಗಂ ಗೆಲ್ದು (ಶಾಂತಿಪು. ೦೦-೦೮೫); ಭೀಮನ ಗದೆಯ ಘಾತಿಯ ಘಲ್ಲಣೆಗೆ ಕಂಠಣಿಸಿದವು ಟೆಂಠಣಿಸುವಾನೆಗಳು (ಕುಮಾ.ಗ. ೧-೫೪); ಗುರುಹಿರಿಯರೊಳು ಟೆಂಠಣಿಪ ಕಡುಪಾತಕಂಗಿದನಂಟಸದಿರಲೆ ಮಗನೆ ಮಱೆದೀ ಗುರುರಹಸ್ಯವನು (ಸದ್ಗುರು. ೦-೩೦) ; ಹಿರಿಯರೊಳು ಟೆಂಠಣಿಸಿ ಕಡುಮೂರ್ಖರಾಗಿಹ ಗಂಟುಗಳ್ಳರು (ಅನುಸಾ. ೭-೨). ೩. ಮಣಿದಿರೆ ಮಱವೆಯೊಳಿಂದ್ರಿಯ ಭಟರು ಟೆಂ[ಪಾಠಾಂ. ವೆಂ]ಠಣಿಸದೆ ಗನ್ನವನಿಕ್ಕಿ ನೋಡಿದಾಯುದೀವಿಗೆಯನು ಜೀವಚಿಂತಾಮಣಿಯ ಕೊಂಡೊಯ್ದನು ಜವನು (ವರ್ಧಮ. ೮-೦೫). ೫. ಪಲವು ಸ್ತ್ರೀರತ್ನಗಳಿಂದೆಂದು ಟೆಂಠಣಿಸಿಯೆ ಸೊಬಗಿಂದ (ಶರಶಾ. ೦-೦೦೩). ೯. ವ್ಯಾಕುಲಗೊಳ್ಳು ; ದುಃಖಿಸು ; ಕಂಗು ; ಕೊರಗು: ವರಪಾಂಡವರು ಕಣನೊಳು ವೆಂಠಣಿಸಿದರು ಕಮಠ ಟೆಂಠಣಿಸೆ (ಕುಮಾ.ಉ. ೧೧ ಸೂಚನೆ) : ಕಣಂಗಳರ್ದಂಧಕರಪೊಲು ಟೆಂಠಣಿಸುವವರಿಬ್ಬರು ಕಣಾ (ಅಂಬಿಕಾ. ೪೭-೫೨). **ಟೆಂಠೆಣಿಸು** : ೧. ಏಱಿ ಹಿಡಿಗುದುರೆಗಳನು ಎಣಿಕೆ ಮಾಡದೆ ಹಿಡಿವ ರಾಯರಾವುತರು ಟೆಂಠೆಣಿಸಿ ಮಾರ್ಮಲೆತು ಕಾದುವ ಮಾವತಿಗರು (ಸಮ್ಯಕ್ತ್ವ. ೮-೪೯). ೯. ಪುರಮನುಪ್ಪರಾಧರಣಿಪರ್ . . . ಸಚರಾಚರಮಾ ವಿಧಿಯ ಪ್ರತಾಪದಿಂ ಟೆಂಠೆಣಿಸುತ್ತಪೋದರ್ (ಪಂಪಭಾ. ೬೬-೬.). **ಡಂಢಣಿಸು** : ೩. ಸಾಯದ ರೀತಿಯಲಿ ಮುರಿಯೆಬ್ಬಡವ ಡಂಢಣಿಸಿ ತಿರುಗಿದನು (ತಿಮ್ಮಅ. ೫-೩೯). **ಡೆಂಡಣಿಸು** : ೨. ಹಗ್ಗರಿಡೊಂದ ಕಿತ್ತಿಕ್ಕಿ ಡೆಂಡಣಿಸಿ ಬಲುಹಿಂದ ಕಪಿಭಟ ಮುಂಡೆಯಲಿ ಪೊತ್ತಿಕ್ಕಿ ತಂದನು (ಕೌಶಿರಾ. ೦೭-೭). ೮. ಬಲವಳಿದುಡೆಂಡ[ಪಾಠಾಂ. ಡೆ]ಣಿಸಿ ಹಡ್ಡೆ ಹುಣ್ಣಂತಾಗೆ ಅಂಗಾಲೊಳುರಿಗೆಳ್ದ ಬೊಕ್ಕೆ ನೆತ್ತರನುಗುಳೆ (ಟಹಿರ. ಡ. ೨೦೪-೨೨); ಪೊಯ್ವಳ್ಳಿ ಡೆಂಡಣಿಸುವಡಿಹನಿವ ಬೆಮರು (ಹದಶಾ. ೬-೬೭): ಕೋದಂಡವ ಪಿಡಿದೇಱಿಸಿಯುಮುಂಡಿಸಿ ತೆಗೆದಿಸೆ ಪುಂಡರೀಕನ ರಥ ಡೆಂಡಣಿಸಿತು (ಅಂಜನ. ೬-೦೭೯) ; ಬಾಡಿದೆಳೆವಳ್ಳಿಯೊಲು ಡೆಂಡಣಿಪ ನಂಬಿಯಣ್ಣ (ಸೌಂದಪು. ೦೭-೨೯); ಬಿಟ್ಟ ಮುಂಡೆಯ ಬೆನ್ನ ಮಲಗಿದ ಪೊಟ್ಟೆಗಳ ಡೆಂಡಣಿಪ ಕೈಕಾಲಿಟ್ಟ ಗೋಳಿನಪಿಳಜನ ನಡೆತಂದುದು (ನಿಘಂಗ ೪-೦೨-೫). ೯. ಕೌಸಲೆಯ ಮನೆಗಾ ಭರತ ಡೆಂಡಣಿಸುತ್ತ ಬಂದನು

ಕೆಡೆದನು ಕರುಣೆಸಂದೆನುತ (ಕಾಶಿರಾ. ೪-೧೩): ಆದಿಶಕ್ತಿಯ ಕಾಣುತಸುರಗೆ ಮನದಿ ನವ ಪೂಬಾಣ ಮಸೆದೋಟಿದುದು ವಿರಹಾಗ್ನಿಯಲಿ ಡೆಂಡಣಿಸಿ (ಅಂಬಿಕಾ. ೧೮-೪೭). ಡೆಂಡೆಣಿಸು : ೮. ಸೈಗೆಡೆಯುತ್ತಂ ಬಿಡದೇಳ್ದು ಡೆಂಡೆಣಿಸುತಂ ಬಾಯಾಱುತಂ ಬಳ್ಕುತಂ (ವೃಷವಿ. ೯-೮೦): ಕರಗತಿಯಲಿ ಡೆಂಡೊಣಿಸು ಕಾಗ ಧರೆಗುರುಳೆ (ಅಭಿಕಾ. ೦೭). ಡೆಂಢಣಿಸು: ೧. ಬಲನ ಘಾತಕೆ ಸೈರಿಸದೆ ಕಳವಳಿಸಿ ಗಿರ್ರನೆ ತಿರುಗಿ ಛೀಳಿಡುತಳಲು ಮಿಗೆ ಡೆಂಢಣಿಸಿ ಮೇಲ್ವಾಯ್ದೊದೆದು ಸೊಂಡಿಲಲಿ ಸೆಳೆದು ನಭಕೀಡಾಡುತಿರೆ (ಅಳೂ್ರಿದ. ೬-೨೯). ೩. ಅಡರಿದರಾ ಗಿರಿಯನು ಮಡದಿಯರಂದು ನಡುಗಿ ಡೆಂಢಣಿಸಿ ಬೀಟುತ (ಅಂಜಿದ. ೯-೦೭೬) ; ಭಲ್ಲೆಯದ ಬಲುಗಾಯದಲಿ ತನು ತಲ್ಲಣಿಸಿ ಡೆಂಢಣಿಸಿ ರಥದಲಿ ಬಿಲ್ಲ-ಬಿಸುಟನು (ನಿಭಾಗ. ೦೦-೫೭-೪೦). ೮. ಬಿಗುಹುಗೆಟ್ಟಳ್ಳಿ ಡೆಂಢಣಿಸುವಡಿಯಾಲಿಸುತಳಲ್ದ ಶಿವಿ (ಹದಕಾ. ೫-೨೭) ; ಕಂಗಳ ದಾಯ ತಪ್ಪಿತು ಡೊಂಢಣಿಸಿ ಕಲಿ ವಾಯುಸುತನಪ್ಪಳಿಸಿ ಬಿದ್ದನು ಕಯ್ಯ ಗದೆ ಕಳಚಿ (ಕುಮ್ಯಾಗ. ೬-೦೦) ; ಡೊಂಢಣಿಸಲು ತನು ಕೂಗಿದಳಾಗ ಭೂಮಂಡಲ ಪೊದರುವಂದದಲಿ (ಕೃಷ್ಣಗೋ. ೧-೬೨). ೧೦. ನೂಕು ; ತಳ್ಳು ; ಬೀಳಿಸು: ಮಾರುತಿಯು . . . ವಾಮಕರ ತಳದೆರಡು ಬೆರಳಿಂದ ಡೊಕ್ಕರಿಸುತಸುರೆಯಂ ನೆಲಕೆ ಡೆಂಢಣಿಸೆ ಕೆಡೆದಳು ನಿಮಿಷಮಾತ್ರದಿಂದ (ವಂಕಾರಾ. ೫-೩-೦೭). ಡೆಂಢಳಿಸು : ೮. ಕಳವಳಿಸಿ ಚಿಸವಳಿದು ಮಿಗೆ ಡೆಂಢಳಿಸಿ ಯಮನಂದನನು ಬಿದ್ದನು (ತಿಮ್ಮಅ. ೦-೨). ಡೆಂಢೆಣಿಸು : ೩. ಮಾಗಧನು ಹೊಡೆಗೆಡೆದನವನಿಯಲಿ ಛೋಟ ಡೆಂಢಣಿಸಿದನು (ಜೈಮಂಡ. ೦೫-೨೪). ೮. ಮಡಲ್ವ ಮರ್ಬಿನಿಂ ಹರವಸಗೊಂಡು ಡೆಂಢಣಿಸಿ ಪಿಂದೆಗೆದಾಟಿದ ನೆಮ್ಮಿ ಗೋಡೆಯಂ . . . ಎಟಗಿದರ್ ಪದಪದ್ಮಕೆ (ಚಿಕವಿ. ೪-೦೪೩). ಢೆಂಢೆಣಿಸು : ೮. ಮೂಗಿನ ನೆರೆಯೊಡೆದು ಪೊಸನೆತ್ತರ್ ಪೊನಲಿಡೆ ಢೆಂಢಣಿಸಿಪಿಂತಣ್ಗೆ ಸರಿದು (ಚಿಕವಂ. ೦೬೪-೦೭). [ ? + - ಇಸು$_3$ ]

**ಟೆಂಟು** (ನಾ). ಗುಡಾರ ; ಡೇರೆ : ಅನಂತ ತನ್ನ ಟೆಂಟಿಗೆ ಬಂದ (ಜೀದಾನ. ೬೨). [ ←ಇಂ. Tent ]

**ಟೆಂಟೆಣಿಸು** 'ಟೆಂಟಣಿಸು' ನೋ.

**ಟೆಂಠಣಿಸು** 'ಟೆಂಟಣಿಸು' ನೋ.

**ಟೆಂಠಿಣಿಸು** 'ಟೆಂಟಣಿಸು' ನೋ.

**ಟೆಂಠೆಣಿಸು** 'ಟೆಂಟಣಿಸು' ನೋ.

**ಟೆಕ್ಕರಿ** 'ಠಿಕ್ಕರಿ' ನೋ.

**ಟೆಕ್ಕರಿಗಳೆ** 'ಠಿಕ್ಕರಿಗಳೆ' ನೋ.

**ಟೆಕ್ಕೆ$_1$** 'ಟಕ್ಕೆಯ' ನೋ.

**ಟೆಕ್ಕೆ$_2$** 'ಟೆಕ್ಕೆ$_1$' ನೋ.

**ಟೆಕ್ಕೆಯ** 'ಟಕ್ಕೆಯ' ನೋ.

**ಟೆಕ್ಕೆಹ** 'ಟಕ್ಕೆಯ' ನೋ.

**ಟೆನಿಸ್** 'ಟೆನ್ನಿಸ್' ನೋ.

**ಟೆನ್ನಿಸ್, ಟೆನಿಸ್** (ನಾ). ಒಂದು ಬಗೆಯ ಚೆಂಡಾಟ : ಟೆನ್ನಿಸ್ ಆಟ ಮುಗಿಸಿಕೊಂಡು ಅವನೊಂದಿಗೆ . . . ಮನೆಗೆ ಹೋಗುತ್ತಿದ್ದ (ಅಲಹೂ. ೯೨). ಟೆನಿಸ್ : ಸುತ್ತಲೂ ಆವರಣ ಹಾಕಿ ಗಟ್ಟಿಸಿದ ನೆಲದ ಮೇಲೆ ಮಧ್ಯೆ ಅಡ್ಡಲಾಗಿ ಎಳೆದು ಕಟ್ಟಿದ ಬಲೆಯ ಮೇಲ್ಗಡೆ ಹಾಯ್ದುಹೋಗುವಂತೆ ದಾಂಡಿನಿಂದ ಚೆಂಡನ್ನು ಹೊಡೆಯುವ, ಇಬ್ಬರು, ಮೂವರು ಅಥವಾ ನಾಲ್ವರು ಆಡುವ ಒಂದು ಆಟ: ಟೆನಿಸ್ (Tennis. ಇಂಕನಿ.).

[ ←ಇಂ. Tennis ]

**ಟೆಪರಿ** (ನಾ). ಗೆಜ್ಜೆಗಳನ್ನು ಕಟ್ಟಿರುವ ಚಿಟಿಕೆ,-ತಾಳ: ಎಂದಿನಂತೆ ಇಂದು ಅವರ ಕಾಲಲ್ಲಿ ಗೆಜ್ಜೆ ಇರಲಿಲ್ಲ; ಕೈಯಲ್ಲಿ ಟೆಪರಿಯೂ ಇರಲಿಲ್ಲ (ಅಬಲಾ. ೨೫).

[ ←ಮರಾ. ಟಪರೀ ]

**ಟೆಪಾರಿಕೆ** 'ಟಪಾರಿಕೆ' ನೋ.

**ಟೆಪ್ಪರ$_1$** (ನಾ). ೧. (ಕುದುರೆ ಮೊದಲಾದುವುಗಳ) ನಾಗಾಲೋಟ ; ಪುಟನೆಗೆತ ; ನೆಗೆಯುತ್ತ ಮುಂಬರಿಯುವಿಕೆ : ನಿಯತದ್ವಿತ್ವಕ್ಕೆ: ವಪ್ಪುಕಂ, ಕಪ್ಪಡಿ . . . ತೆಪ್ಪಂ, ಟೆಪ್ಪರಂ, ದುಪ್ಪಡಿ (ಶಮದ. ೩೭ ಪ್ರಯೋ). ೨. ಒಂದು ಬಗೆಯ ಕುಸ್ತಿವರಸೆ ; "ಜಟ್ಟಿಗಳ ಸಾಧನೆ" (ಶಮದ. ವ. ೦೭೦ ಅಡಿಟಿ) ; ದ್ವಿತ್ವಕ್ಕಿಲ್ಲದುದರ್ಕೆ: ತಪ್ಪು, ಹೆಪ್ಪು, ಟಪ್ಪಣಂ, ಟೆಪ್ಪರಂ (ಶಮದ. ವ. ೧೭೦ ಪ್ರಯೋ). [ ? ]

**ಟೆಪ್ಪರ$_2$** 'ಟೆಬ್ಬರ' ನೋ.

**ಟೆಪ್ಪರಿಸು** (ಕ್ರಿ). ನಾಗಾಲೋಟ ಓಡು; ನೆಗೆಯುತ್ತ ಓಡು; ಪುಟನೆಗೆ. 'ಟೆಪ್ಪರಿಸುಹ' ಪರಾ. [ ಟೆಪ್ಪರ$_1$ + - ಇಸು$_3$ ]

**ಟೆಪ್ಪರಿಸುಹ** (ನಾ). ನಾಗಾಲೋಟ ಓಡುವಿಕೆ ; ನೆಗೆಯುತ್ತ ಓಡುವಿಕೆ; ಪುಟನೆಗೆಯುವಿಕೆ ; "ಟೆಪ್ಪರಿಸುಹ - ವಲ್ಗಿತ" (ನಾಚಿಂ. ೬).

[ ಟೆಪ್ಪರಿಸು + - ಹ$_2$ ]

**ಟೆಪ್ಪು** (ನಾ). (?): ದ್ವಿತ್ವಕ್ಕಿಲ್ಲದುದರ್ಕೆ-ತಪ್ಪು, ಹೆಪ್ಪು, ಟೆಪ್ಪು, ಉಪ್ಪರಂ (ಶಮದ. ೬. ೧೫೯ ಪ್ರಯೋ). [ ? ]

**ಟೆಬ್ಬರ, ಟೆಪ್ಪರ$_2$** (ನಾ). ಹಿಂಸೆ ; ಕಾಟ ; ಪೀಡೆ : ಭುಂಜ, ರಾಜ . . . ಟೆಬ್ಬರ, ಗಬ್ಬರ, ಅಬ್ಬರ (ಶಬ್ದಾನು. ೫೩೯ ಪ್ರಯೋ) ; ಆತನಿಗೆ ಬಿರುನೋಟವನ್ನೊಡ್ಡಿ ಅನಿಮೇಷನಾಗಿ, ತೇಜಗೆಟ್ಟು, ಟೆಬ್ಬರಕ್ಕಾಗಿ, ಬರತ ತುಟಿಗಳನ್ನರತ ನಾಲಗೆಯಿಂದಾರಯ್ದುಕೊಂಡು (ಮಂತ್ರಶ. ೬೫-೦೫). ಟೆಪ್ಪರ$_2$ : ಬಿಸುವಳಿದರ್ಕನುಕರ್ಕ್ಕಡಿಗಿಱಿವಿಂದುವ ಕಾಂತಿ ಕಳಲ್ದುವ್ . . ಇಲ್ಲಿ ಲಕ್ಷ್ಮಣಂ ಪುಸಿದೊಡಮಾರ್ಗ್ಗೆ ಟೆಪ್ಪರಮನೊಡ್ಡಿದೊಡಂ ಮನಮೊಲ್ದು ಕೂಡಿ ಛಿದ್ರಿಸಿದೊಡಮನ್ಯನಾರಿಗೆ ಮರುಳ್ದೊಡಮಾಹವದೊಳ್ ಮರಲ್ದಡಂ (ಎಕ. VII, ಶಿಕಾರಿ. ೦೩೭-೩೧ ; 1068). [ ? ]

**ಟೆಬ್ಬರಿಸು, ಟಿಬ್ಬರಿಸು** (ಕ್ರಿ). ೧. ಸತ್ವಹೀನವನ್ನಾಗಿ ಮಾಡು ; ಶಕ್ತಿಗುಂದಿಸು; ಕುಗ್ಗಿಸು; ಕುಂಠಿತಗೊಳಿಸು: "ಟೆಬ್ಬರಿಸು-ಕುಂಠೀಕರಣೇ" (ಶಮಧಾ) : ಪಗೆಗಳ ಪಗೆಯಂ ಕಟ್ಟುಚ್ಚರಿಯಿಂ ಟೆಬ್ಬರಿಸಿದ ಮನದಿಂ ವಾಜಿ ನೀರೊಳಾಯ್ತು (ರಾಮಾಶ. ೧೨೧-೪). ೨. ಗಾಯಪಡಿಸು: ಹೆಬ್ಬುಲಿಯು ನೋಡಿಲ್ಲಿ . . . ಟೆಬ್ಬರಿಸಲೊಬ್ಬನೇ ಸಾಕಲ್ತೆ ಮಲೆಯ (ಕಾರೂರ. ೮೭-೦೭೮). ೩. ನಡುಗು ; ಶಕ್ತಿಗುಂದು : ಟೆಬ್ಬರಿಸುವನೆ ಕಲಿಭೀಮನು ಬ್ಬಟೆಯುರಿಗಳಾಹವಧೀರರಾದರೆ ಧಾತುಗೆಡುವವನೆ (ಕುಮ್ಯಾಕ. ೦೨-೨೭). ೪. ಹೇವರಿಸು ; ಅಸಹ್ಯಪಡು ; ಜಂಗುಪ್ಸೆತಾಳು ; ವಿಮುಖವಾಗು : ಪಾಡುವಿಂಚರಕೆ ಕಡುಕನಲಿ ಬಿತ್ತರಿಪ ಸಬ್ಬವಕೆ ಟೆಬ್ಬರಿಸಿ ಕೇಳುವ ಕಥೆಯ ಕಿವುಡುಗೇಳಿ (ಸೌಂದಪು. ೦೭-೫೨). ಟೆಬ್ಬರಿಸು : ೫. ಮೊಂಡಾಟಮಾಡು; ಪಟ್ಟುಹಿಡಿ; ಹಟಮಾಡು: ಟೆಬ್ಬರಿಸದಿರಾತ್ಮಜ ಭವಿಯಂತೆ ಚಿದಭ್ಯಾಸವ ಬಿಡದಿರು (ಯೋಗಾಂವಿ. ೩-೩೩).

[ ಟೆಬ್ಬರ + - ಇಸು$_3$ ]

**ಟೆಲಿಗ್ರಾಂ** (ನಾ). ತಾರು ; ತಂತಿವರ್ತಮಾನ : ದೂರಲೇಖಕದ ಮೂಲಕ ಬಂದ, ಕಳಿಸಿದ, ಸುದ್ದಿ: ತಂತಿ, ತಂತಿವರ್ತಮಾನ, ತಾರು, ದೂರಲೇಖನ, ಟೆಲಿಗ್ರಾಂ (Telegram. ಇಂಕನಿ.) ; ನನಗೆ ಮೈಸೂರಿನಿಂದ ಟೆಲಿಗ್ರಾಂ ಬಂತು (ಹೊಸಕ್ಷ. ೧೨೪) ; ನಾಗರಾಜನಿಗೆ . . . ಟೆಲಿಗ್ರಾಂ ಊಟದ ಹೊತ್ತಿಗೆ ಬಂತು (ಮಹಾಗ. ೯೨).

[ ←ಇಂ. Telegram ]

**ಟೆಲಿಗ್ರಾಫ್** 'ಟೆಲಿಗ್ರಾಫು' ನೋ.

**ಟೆಲಿಗ್ರಾಫ್‌ಗಿಡ** (ನಾ). ಒಂದು ಬಗೆಯ ಗಿಡ: ಕಾಡುಹುರುಳಿ, ನಾಗತಗರ, ಟೆಲಿಗ್ರಾಫ್‌ಗಿಡ (ವೃಜಿಗಿ. ೩೦-೫೭೨).

[ ಟೆಲಿಗ್ರಾಫ್ ? + ಗಿಡ (<ಗಿಡು) ]

**ಡಾಕಿನಿ** (ನಾ). ೧. ಹೆಣ್ಣು ದೆವ್ವಗಳಲ್ಲಿ ಒಂದು ಬಗೆ ; ಒಂದು ಬಗೆಯ ಹೆಣ್ಣು ಪಿಶಾಚಿ : ಡಾಕಿನಿ ಪಿಶಾಚ ವೇತಾಳ ಭೂತಂಗಳಿಂ ಭೀಕರದೊಳಂ ಜೆಸಿದವಾರ್ದುರ್ ಠಿಂಗಣಗುಣಿವ ಕಲಿಗಳ ಕಪಾಲಂಗಳು (ಕೃಮಿಥಾ. ೦೨-೪೫); ಸೀತಾರಾಮನು ಒಬ್ಬ ಡಾಕಿನಿಯ ವಶವಾಗಿಬಿಟ್ಟಿದ್ದ (ಬಂಕಿಮ. ೩೦೮). ೨. ಕಾಳಿಕಾದೇವಿಯ ಪರಿಚಾರಿಕೆಯರ ಒಂದು ವರ್ಗಕ್ಕೆ ಸೇರಿದವಳು. ೩. ರಕ್ಕಸಿಯ ಕತ್ತಿ,-ಖಡ್ಗ : "ಡಾಕಿನಿಯೆನಲು ರಕ್ಕಸಿಯ ಕತ್ತಿಗಿರದಪ್ಪ ನಾಮಂ" (ಶಬ್ದಮಂ. ೪೪). ೪. (ಅಲಂ) ಕಠೋರಹೃದಯದವಳು; ಕೆಟ್ಟ ಹೆಂಗಸು : ತನ್ನ ಮರ್ಯಾದೆ ತೆಗೆದ ಡಾಕಿನಿ ಎಂದೊಮ್ಮೆ ಅವಡು ಗಚ್ಚಿದನು (ಗ್ರಾಮಾಯ. ೪೬೨). [ ಸಂ. ಡಾಕಿನೀ. ]

**ಡಾಕಿನಿದೋಷ** (ನಾ). ಡಾಕಿನಿಯ ಆವೇಶದಿಂದುಂಟಾಗುವ ಬಾಧೆ ; ಭೂತೋಪದ್ರವ : ಇಪ್ಪೆಯ ಬೇರ ಆಡಿನ ಮೂತ್ರದಿಂದ ಏಳುಬಾರಿ ಭಾವನೆಯ ಕೊಟ್ಟು ಅರಿಸಿ ಸೈಂಧವ, ಬಜೆ, ತ್ರಿಕಟುಕ, ಇದರಿಂದ ನಸ್ಯ ಮಾಡೆ, ಭೂತ, ಶಾಕಿನಿ, ಡಾಕಿನಿದೋಷ, ಸನ್ನಿಪಾತ ಜ್ವರಂಗಳು ಬಿಟ್ಟು ಹೋಗುವುವು (ವಿಪ್ರವಿ. ೦೩೯). [ ಡಾಕಿನಿ + ದೋಷ ]

**ಡಾಕಿನೀತಂತ್ರ** (ನಾ). [ತಂತ್ರಶಾ] ಒಂದು ಬಗೆಯ ತಾಂತ್ರಿಕ ಸಿದ್ಧಿ ಮಂತ್ರ : ಡಾಕಿನೀತಂತ್ರ ಕೂಚಿಮಾರತಂತ್ರ ಶಲ್ಯತಂತ್ರ . . . ವಚನ ತಂತ್ರಾದಿ ತಾಂತ್ರಿಕಸಿದ್ಧಿಮಂತ್ರಂಗಳಂ (ವಿವೇಕ. ೮೦). [ ಸಂ. ]

**ಡಾಕು₁, ಢಾಕು** (ನಾ). ೧. ಮಂತ್ರಿಗೆ ; ಮೇಲೆಬೀಳುವಿಕೆ ; ಆಕ್ರಮಣ ; ಆಘಾತ : ನೂಕಿದೊಡೆ ಕರ್ಣಾದಿ ದೊರೆಗಳ ಡಾ[ಪಾಠಾಂ. ಢಾ]ಕನಾನು ವನಾರು ದಿವಿಜಾನೀಕದಲಿ (ಕುಮಾ್ಯಅ. ೧೯-೦೩). ೨. ಸತ್ತ್ವ ; ಬಲ ; ಪರಾಕ್ರಮ : ಭೀಷ್ಮದ್ರೋಣರಿಂಗೆ ಸರಿವಿಗಿಲೆನಿಸಿ ತೋರುವೆನು ಕೈಗುಣವನು ಡಾಕನರಿಯದೆ ತನ್ನ ವಿಕ್ರಮದ ಸಿರಿಯನವಿವೇಕಿಗಳು (ಕುರಂಗ. ೬೨-೨೩); ಭೀಕರಬಲ ಶಿವಭೂಪನ ಡಾಕಿಂಗಗಿದಖಿಲ ರಾಜರಗಣಿತ ಧನಮಂ ಬೇಕಾದ ವಸ್ತುಚಯುವನನೇಕವನಿತ್ತರಗಿ ತದನುಚರರಾಗಿರ್ದರ್ (ಕೆಳನೃ. ೭-೦೬). ೩. ಪ್ರಭೆ; ತೇಜಸ್ಸು; ಕಾಂತಿ: ತರುಣಿಯರುಗಳಿಟ್ಟಣಿಸಿ ಮೈಮೈಸೋಂಕಲುರು ಹೇ ಮ ದೊ ಡ ವು ಗ ಳ್ ಸೆ ದು ಪರರಜವಿಳಿಯೊಳೊಪ್ಪಿತು ಬಾಲಸೂರ್ಯನ ಕಿರಣದ ಡಾ[ಪಾಠಾಂ.ಢಾ]ಕ ತೋರ್ಚಿಸುತ (ಕೆಂಸವಿ. ೨೪-೪೮) ; ರಥವೆರಸಿ ಡಾಕಿನಿಂ ಥಳಕಿಡುವ ಸಿಂಧ ಸೀಗುರಿ ಛತ್ರಚಾಮರ ಚಮೂಪಂಗಳ (ಶರಬು. ೬-೨೦). ೪. ಜವ; ವೇಗ; ತ್ವರೆ: ಈ ಕಥೆಯ ಧರ್ಮಜಂಗೊರೆದು ಮತ್ತಲ್ಲಿಂದ ಡಾಕಿಲಿ ಪ್ರಭಾಸಕಂ ಬರಲು (ಕುರಂಗ. ೩೧-೦೪). ೫. ಲೂಟಿ ; ಕೊಳ್ಳೆ ; ದರೋಡೆ. **ಢಾಕು** : ೩. 'ಢಾಕುಗೆಡಿಸು' ಪರಾ.

**ಡಾಕಳಿ**=ಸತ್ತ್ವಗುಂದು; ತೇಜಸ್ಸು ನಾಶವಾಗು; ಪ್ರಭಾವ ಕುಗ್ಗು: ಸುರಬಲದಾಕವಾಳ ಮೃಗೇಂದ್ರನ . . . ಡಾಕಳಿದುದಾ ಸತ್ತ್ವದಲ್ಲಿರ್ದಾ ಕುಠಾರ ಕೃತಾಂತನವ (ಅಂಬಿಕಾ. ೩೬-೨೨). [ ←ತೆಲು. ಢಾಕ ]

**ಡಾಕು₂** 'ಡಾಗು₁' ನೋ.

**ಡಾಕ್ಟರಿಕೆ** (ನಾ). ಡಾಕ್ಟರನ ಉದ್ಯೋಗ ; ವೈದ್ಯವೃತ್ತಿ : ಅತ್ತ ಡಾಕ್ಟರಿಕೆ ಕೆಲಸಕ್ಕೆ ಪುರುಸೊತ್ತಿದೆಯೇ ಅಂದರೆ, ಬೆಳಗ್ಗೆದ್ದು ಹೋದರೆ ಹೊತ್ತು ಮಿಾರಿದ ಮೇಲೆಯೇ ಬಂದು ಊಟಮಾಡುವುದು (ಚಾರುದಾ. ೩೩೫) : ಅವನು ಉಡುಪಿಯಲ್ಲಿ ಡಾಕ್ಟರಿಕೆ ಮಾಡಲಾರಂಭಿಸಿದ ಮೇಲೆ ಮತ್ತೆ ಮತ್ತೆ ಆದರ ಪ್ರಸ್ತಾಪ ಬರುತ್ತಿತ್ತು (ಕೃಹಿಕಾ. ೩೭) : ಡಂಬನಿಗೂ ಈಗ ತನ್ನ ಮಗನ 'ಡಾಕ್ಟರಿಕೆಯ' ಬಗ್ಗೆ ಸಾಕಷ್ಟು ಹೆಮ್ಮೆಯೆನಿಸಿತು (ದಂಬನಾ. ೬೦). [ ಡಾಕ್ಟರು + – ಇಕೆ ]

**ಡಾಕ್ಟರು, ಡಾಗದೊರೆ, ದಾಕಂದಾರ, ದಾಕ್ತಾರ, ದಾಗ್ದಾರು** (ನಾ). ೧. ರೋಗಿಗಳಿಗೆ ಮದ್ದುಕೊಡುವವನು ; ವೈದ್ಯ ; ಚಿಕಿತ್ಸಕ : ನನ್ನ ತಮ್ಮನಿಗೆ ನೂರೆರಡು ಡಿಗ್ರಿ ಜ್ವರವಿದೆಯೆಂದು ಡಾಕ್ಟರು ಹೇಳಿದರು (ಮಧ್ಯಮ. ೧೬೫) : ಆ ಆಫೀಸರವರು ಕೂಡಲೇ ಆ ವಿಷಯುವನ್ನು . . . ದನಕರುಗಳ ಡಾಕ್ಟರಿಗೆ ತಿಳಿಯುಪಡಿಸುವರು (ಗ್ರಾಮಾಕ. ೧೦೬). ೨. ಗೌ ರ ವಾ ನ್ವಿ ತ ವಾ ದ ಉನ್ನತಪದವಿಯನ್ನು ಪಡೆದವನು ; ವಿಶ್ವವಿದ್ಯಾನಿಲಯುಗಳು ಕೊಡುವ ಗೌರವಪ್ರಶಸ್ತಿ ಪಡೆದವನು; ವಿದ್ವಾಂಸ. **ಡಾಗದೊರೆ** : ೧. ಡಾಗದೊರೆ ಕೇಮರ್ ಸಾಹೇಬರ ಬಂಗಲೆ ಎಲ್ಲಿದೆ ಬಲ್ಲೆಯ (ಮುಸುಗ. ೦೩೦). **ದಾಕುದಾರ**: ೧. ಕೊನೆಗೆ 'ದಾಕುದಾರ' ರನ್ನು ಬರಮಾಡಬಹುದಿತ್ತು (ಮುಂಗಾಮು. ೧೩೦). **ದಾಕ್ತಾರ** : ೧. ಅಲ್ಲಿ ಈಗಿರುವ ದಾಕ್ತಾರರು ಮನುಷ್ಯರನ್ನು ತಿನ್ನುವುದಿಲ್ಲ ಎಂದೆ ನಾನು (ಮೃಂಮಾ. ೨೫). **ದಾಗ್ದಾರು** : ೧. ಅವರನ್ನು ಗಾಂಧೀಜನ, ಓದಿಸೋ ಅಯ್ನೋರು, ದಾಗ್ದಾರು, ಗೋಸಾಯಿಗಳು ಏನೆಂದಾದರೂ ಕರೆದುಕೊಳ್ಳಿ (ಸುವಸಂ. ೦). [ ←ಇಂ. Doctor ]

**ಡಾಗ** 'ಡಾಗು₂' ನೋ

**ಡಾಗದೊರೆ** 'ಡಾಕ್ಟರು' ನೋ.

**ಡಾಗಾನ್** (ಕ್ರಿ). ಮುದ್ರೆಯನ್ನು ಪಡೆ ; (ಕಾದ ಕಬ್ಬಿಣದ ಗುಳದ) ಬರೆಯನ್ನು ಹೊಂದು: ತತ್ಪಶುವು ಮೇಣವನಲ್ಲದುರೆ ಭಿಕ್ಷುಕನ ಡಾಗಾಂತ ಮನೆಯಾಕಳೆ (ಶರಬು. ೨೨-೨೫). [ ಡಾಗು₁ + ಅನ್₁ ]

**ಡಾಗೀನು** 'ದಾಗೀನು' ನೋ.

**ಡಾಗು₁, ಡಾಕು₂, ದಾಕ, ದಾಕು₁** (ನಾ). ೧. ಕಾದ ಕಬ್ಬಿಣ ಮೊದಲಾದ ಲೋಹಗಳ ಸಾಧನದಿಂದ ಒತ್ತುವ ಮುದ್ರೆ,-ಗುರುತು : ಬ್ರಹ್ಮನ ಡಾಗು ಬೆನ್ನಮೇಲೆ ವಿಷ್ಣುವಿನ ಡಾಗು ಕೈಯ್ಯ ಮೇಲೆ (ಮೋಹಮಾ. ೧೦೨-೪೦೬) : ಬುಂದಿಯ ಅರಸರ ಕುದುರೆಗಳಿಗೆ ಮೊಗಲರ ಡಾಗನ್ನು ಎಂದಿಗೂ ಹಾಕಕೂಡದು (ಅಕ್ಬರ. ೯೦). ೨. ಕಪ್ಪುಕಲೆ,-ಗುರುತು ; ಕರೆ : ರಿಪೋರ್ಟ್‌ ಸಾಹೇಬರ ಮಸಿಯ ಕಲೆಯ ಡಾಗು ಇಲ್ಲದೆ ಮೇಲೆ ಹೋಗುವಂತೆ ದಕ್ಷತೆ ವಹಿಸುತ್ತಿದ್ದರು (ದೀಪಹ· II, ೨೩೨). ೩. ಮೈಲಿರೋಗ ; ಸಿಡುಬು : ಸಂಸಾರವೆಂಬ ಡಾಗು ಎನ್ನ ಮತ್ತತನದಲ್ಲಿ ಕೊಂದಿತ್ತು (ಮೋಹಮಾ. ೪೭-೦೯೩). **ಡಾಕು₁**: ೨. "ಕಲೆ" (ಜಾನಕೋ. ೬೩). ೪. ದೇವಿಹಾಕಲು ಬಳಸುವ ಒಂದು ಬಗೆಯ ರಸಿಕೆ : ಮುಂದೆ ಸಿಡುಬುರೋಗ ತಗುಲದಂತೆ ದೇಹದೊಳಕ್ಕೆ ಹೊಗಿಸಿದ ಸಿಡುಬಿನ ರಸಿಕೆ : (೬). ೫. ದೇವಿಹಾಕಿದ ಗುರುತು ; ಮೈಲಿ ಕಲೆ : ಈ ಹುಡುಗನ ಕೈಯಲ್ಲಿ ಡಾಕು ಬಹಳ ಚೆನ್ನಾಗಿ ಕಾಣಿಸುತ್ತಿದೆ (ರೂ೦). **ದಾಕ** : ೬. 'ಕಾಲರಾ' ಮುಂತಾದ ಕೆಲವು ರೋಗಗಳು ತಗುಲದಂತೆ, ಅವುಗಳನ್ನು ಪ್ರತಿಭಟಿಸುವ ಶಕ್ತಿಯುಳ್ಳ ಸೂಕ್ಷ್ಮರೋಗಾಣುಗಳನ್ನೊಳಗೊಂಡ ರಸಿಕೆ ; ರೋಗವಿಷ: ಇತ್ತೀಚೆಗೆ ಹೊಸ ದಾಕಗಳ ಶೋಧನೆಯಾಗಿದೆ (ದೇವದೂ. ೨೫೨). **ದಾಕು** : ೬. ಮಗುವು ಹುಟ್ಟಿದ ನಾಲ್ಕು ತಿಂಗಳಿನಿಂದ ಹಿಡಿದು ಒಂದು ವರುಷದೊಳಗೆ ಕಡ್ಡಾಯವಾಗಿ, ಮೈಲಿಗೆ, ಕಾಲರಾ, ಟೈಫಾಯ್ಡ್ ಇತ್ಯಾದಿ ೧೮ ಬೇನೆಗಳಿಗಾಗಿ ದಾಕು ಹಾಕುವ ಯೋಜನೆಯು ನಡದಿದೆ (ದೇವದೂ. ೨೫೨).

**ಡಾಗನೊತ್ತು** = ಮು ದ್ರೆ ಯೊ ತ್ತು ; ಗು ರು ತು ಮಾ ಡು ; ತನ್ನದೆನಿಸಿಕೊಳ್ಳು: ಹರಿಯೆದೆಯೊಳು ಬೊಮ್ಮನ ಬಾಯೊಳು ಪುರಹರನ ವಾಮಾಂಗದೊಳು ಅರಲಸರಲ ಡಾಗನೊ[ಪಾಠಾಂ. ತಾಗಲೊ]ತ್ತಿದಂಗಜ ವೀರ ಬರಲಂಜಿದನು ರಾಮನೆಡೆಗೆ (ಕುರಾಸಾಂ. ೩೩-೧೧) ; ನಾಗಭೂಷಣನಂತಿರಲಿ ನಿರ್ಜರರೊಳು ಭೋಗದೇವೇಂದ್ರನ ಮೇಲೆ ಡಾಗನೊತ್ತಿದ ನೋಡು (ಮೋಹತ. ೩೮-೧೧); ಸುರಪನಂಗದಲಿ ತಮ್ಮಯ ಡಾಗನೊತ್ತಿದವು ಧರೆಯೊಳಿನ್ನುಳಿದ ಮಾನವರೆಮ್ಮ ವೆಣ್ಣನಕೆ ಸರಿಯೆಯೆಂದೆಂಬ ಬಿರುದಿನ ವಾರನಾರಿಯರು ಪುರದಲ್ಲಿ ಕಣ್ಗೆಸೆದರು (ಭಿಕ್ಷಾಟ. ೨-೦೨) ; ಧಾತನ ಜಿಹ್ವೆಪೀಠದೊಳು ನಿಂದೆಯಾಖಂಡಲಗೆ ಡಾಗನೊತ್ತಿದೆ (ಪ್ರಭುಪು. ೫-೧೫೦).

ಡಾಗಿನ ಪಶು = ಮುದ್ರೆಯೊತ್ತಿದ ಪಶು : ಡಾಗಿನ ಪಶುಗಳೆಲ್ಲರೂ ಭೇದವನಜಿಯಬಲ್ಲರೇ (ಅಂಬಿಪ. ೩೯೯-೮೭) : ಡಾಗಿನ ಪಶುಗಳಿಗೆ ಅನಾಗತನ ಸುದ್ದಿ ಏಕೋ (ಮೋಕ್ಷಮಾ. ೧೦೨-೪೦೭); ಇಂತಿವರೆಲ್ಲರು ಡಾಗಿನ ಪಶುಗಳು ವೇಷಧಾರಿಗಳು (ಮೋಕ್ಷಮಾ. ೧೦೮೩-೬೯೨).

[ ←ಮರಾ. ಡಾಗ್, ದಾಗ್ ; ಪಾರ. ಹಿಂ. ದಾಗ್./ತಮಿ. ಡಾಕು : ತೆಲು. ಡಾಗು ]

**ಡಾಗು₂**, ಡಾಗ (ನಾ). ೧. ಸಾಮಾನು ; ಗಂಟು; ಮೂಟೆ ; ಭಾಂಗಿ : ಮಜೂರಿಯು ಡಾಗಿನ ಆಕಾರದಂತೆ ಮತ್ತು ಬದುಕಿನ ಮಹತ್ತ್ವ ಇದ್ದಂತೆ (ಮುಂಬವ್ಯಾ. ೧೯, ಪ್ರಸ್ತಾವನೆ); ರಾಶಿರಾಶಿಯಾಗಿ ಪಾರ್ಸಲ್ಲ "ಡಾಗು" ಗಳು ಬಿದ್ದಿದ್ದವು (ನಡದಾ. II, ೧೨೬೭). ೨. (ಒಬ್ಬ ಮಾಲೀಕನ) ಅಂಶ ; ಪಾಲು ; ಭಾಗ ; ಹಿಸ್ಸೆ : ನಾಲ್ವತ್ತು ಎಕರೆಯ ಏಕ ಡಾಗನ್ನು ಮಾಡಿಕೊಂಡು (ದೀಪಹ. II, ೨೮೮). ಡಾಗ : ೧. ಕಿರಾಣಿಯ ಬದುಕು ಒಂದು ಡಾಗದ ಒಳಗೆ ಒಂದೇ ತರದ್ದು ತರಿಸಿಕೊಳ್ಳುವವರಿಗೆ ಮಜೂರಿಯ ದರ (ಮುಂಬವ್ಯಾ. ೧೭, ಪ್ರಸ್ತಾವನೆ).

[ ←ಮರಾ. ಡಾಗ್ ]

**ಡಾಗೋಬ** (ನಾ). (ಬೌದ್ಧರ) ಸ್ತೂಪ ; ಪಗೋಡ ; ಸ್ತೂಪದ ಆಕಾರದಲ್ಲಿರುವ ಬಹಳ ಎತ್ತರವಾದ ಕಟ್ಟಡ ; ಸಮಾಧಿ : ಅನಂತರ ಬುದ್ಧನ ಅಸ್ಥಿ ಮೊದಲಾದ ಅವಶೇಷಗಳನ್ನು 'ಡಾಗೋಬ' ಗಳಲ್ಲಿ ಇರಿಸುತ್ತಿದ್ದರು (ದಾಲಪ್ರ. II, ೮೫೬); ಗುಹೆಯೊಳಗೆ ಸೂರ್ಯನ ಕಿರಣವು ಪ್ರಾತಃಕಾಲದಲ್ಲಿ ನೇರಾಗಿ ಡಾಗೋಬದ ಮೇಲೆ ಬೀಳುವಂತೆ, ಕಮಾನುಳ್ಳ ಕಿಟಕಿಗಳನ್ನು ಕೊರೆದಿರುತ್ತಾರೆ (ದಾಲಪ್ರ. III, ೧೬೭೦). 'ಪಗೋಡ' ಪರಾ. [←ಪಾಲಿ. ಡಾಟಿಗ; ಮರಾ. ಡಾಗೊಬಾ./ಸಂ. ಧಾತುಗರ್ಭ ]

**ಡಾಡಿಮ** 'ದಾಳಿಂಬ' ನೋ.

**ಡಾಣ** 'ದಾಣ₂' ನೋ.

**ಡಾಣಾಡಂಗರ** 'ಢಣಾಡಂಗುರ' ನೋ.

**ಡಾಣಾಡಂಗುರ** 'ಢಣಾಡಂಗುರ' ನೋ.

**ಡಾಣಾಡಾಣಿ** (ನಾ). ದೊಣ್ಣೆಯಿಂದ ಪರಸ್ಪರ ಹೊಡೆದಾಡಿ ಮಾಡುವ ಜಗಳ,–ಯುದ್ಧ : ಡಾಣಾಡಾಣಿ, ಬಾಡಾಬಾಡಿ (ಶಬ್ದಾನು. ೩೩೦ ಪ್ರಹೋ). [ <ಡಾಣೆ₂ + ಡಾಣೆ₂ + – ಇ₃ ]

**ಡಾಣೆ₁** 'ದಾವಣಿ₁' ನೋ.

**ಡಾಣೆ₂** 'ಢಾಣೆ₁' ನೋ.

**ಡಾಣೆ₃** 'ದಾಣ₂' ನೋ.

**ಡಾಣೆಗ** (ನಾ). ದಪ್ಪನಾಗಿರುವವನು ; ದಡಿಯ ; ಧಾಂಡಿಗ : ದುರಹಂಕಾರಿ ಹಮ್ಮಿನ ಹಗರಣಿಗನು ಡಂಬದ ಡಾಣೆಗರರೆಯ (ಕೋರಲ. ೯-೬೪). [ ಡಾಣೆ₂ (<ಢಾಣೆ₁) + – ಇಗ ]

**ಡಾಣೆ₁** 'ದಾಣ₂' ನೋ.

**ಡಾಣೆ₂** 'ಢಾಣೆ₁' ನೋ.

**ಡಾಬು**, ದಾಬು (ನಾ). ಸ್ತ್ರೀಯರು ನಡುವಿನಲ್ಲಿ ಧರಿಸುವ, ಚಿನ್ನದ ಅಥವಾ ಬೆಳ್ಳಿಯಿಂದ ಮಾಡಿದ ನಡುಪಟ್ಟಿ ; ಒಡ್ಯಾಣ : ಮಣಿಯದ್ಧುಗೆಯ ಡಾಬಿನ ಮೇಖಲಾಂಚಿತ (ಅನಂರಾ. ೧-೩-೩೫); ಕಿರೀಟವನ್ನು ಡಾಬಿನ ಉಡುದಾರವನ್ನು . . . ಬ್ರಾಹ್ಮಣನಿಗೆ ಕೊಟ್ಟು (ಕೈಪಾಳ. ೨೦೦); ಕಡಗ ಪಟ್ಟಿಯು ಡಾಬು, ಬುಗುಡಿ ಗೀರ್ಬಳೆ ಸರಿಗೆ (ಸಿದ್ಧಕಾ. ೮-೦೨) ; ಸಂಕ್ಷುಭಿತಪಕ್ಷಿಶ್ರೇಣಿಯೇ ಡಾಬು (ಧನ್ಯಾರೋ. ೬೭) ; ಕಟಿಪ್ರದೇಶದಲ್ಲಿ ವಜ್ರದ ಡಾಬು ವಿರಾಜಿಸುತ್ತಿತ್ತು (ದೌಲತ್. ೩೬೮). ದಾಬು : "ಡಾಬು (ದಾಬು)–ದಾಮನ್ = ಒಡ್ಯಾಣ" (ತದ್ಭಕೋ. ೧೬).

[ ದೇ.॥ ತಮಿ. ತೆಲು. ಡಾವ್ಪು./ಸಂ. ದಾಮನ್ ]

**ಡಾಮರ₁** (ಗು). ೧. ಭಯಂಕರವಾದ ; ಆಶ್ಚರ್ಯಕರವಾದ. (ನಾ). ೨. ದಂಗೆ; ಮುತ್ತಿಗೆ; ಲಗ್ಗೆ ; ಆಕ್ರಮಣ; ಸೂರೆ: ಆ ಮಾಧವೀಲತಾ ಮಂಟಪಮಂ ಕಾಮನ ಡಾಮರಕ್ಕಳ್ಕಿ ವನದುರ್ಗಂಬುಗುವಂತೆ ಪೊಕ್ಕು (ಪಂಪಭಾ. ೫-೬ ವ) ; ತೋಮರಂ ಜವನ ಡಾಮರವಾದುವು (ಪಂಪರಾಮಾ. ೧೩-೬೧) : ಕಾಮನ ಡಾಮರಮಲ್ಲಿ . . . ಪಲ್ಲೊರೆವ ಮದಾಳಿಯಲ್ಲಿ ಸಖಿ ಸಾರದಿರಾ ಮರನಂ ವಸಂತದೊಳ್ (ಕಾವ್ಯಾವ. ೩೬೭) ; ತನಗುಣವಿಲ್ಲದುದಂ ಪಸವನ್ನದೊಡಂ ತನ್ನಂ ಕೋಟ್ಟಟ್ಟುದಂ ಡಾಮರಮನ್ನದೊಡಂ . . .ಬಂಧಹೇತುಗಳಂ ಪೆರ್ಚಿಸುವ ಮೈಯ್ಯಂ ಪಾಪದ ರೂಪೆನ್ನದೊಡಂ ನೀಮಜಿಯಿರ್ (ಜೀವಸಂ. ೭೩-೫). ೩. ರೋಗರುಜಿನಗಳ ಬಾಧೆ ; ವ್ಯಾಧಿ ; ಪೀಡೆ : ಪಾಂಡ್ಯರಾಜ್ಯದಲ್ಲಿ ಎರಡು ವರ್ಷಗಳಿಂದಲೂ ವೀರಕ್ಷಾಮವು ಆವರಿಸಿದ್ದಿತು. ಈ ಯುದ್ಧವು ಸಂಭವಿಸಿದ ಮೇಲೆ ಡಾಮರಕ್ಕೂ ಆರಂಭವಾಯಿತು (ಶ್ರೀರಾಘ. ೩೫೯). ೪. ತೊಂದರೆ ; ಕೋಟಲೆ ; ಉಪದ್ರವ : "ಉಪಸರ್ಗಮರಿಷ್ಟಂದುಷ್ಪೀಡೆ ಡಾಮರಮಜನ್ಯಮಿಈತಿಪ್ರಕರಂ" (ಪಮ್ಕೋ. ೯೬-೦) : ಅರಿಷ್ಟಮುಪಸರ್ಗಮುತ್ಪಾತಮುಪಲಿಂಗಮಜನಂ ಡಾಮರಂ ವಿಡಂಬರಿ ವಿಪ್ಲವವೆನಲ್ಕುಪದ್ರವಮಕ್ಕು (ಮಂಗರಾ. ೮-೨೭) ; ಮನೋಜಂ ಮುಯ್ಯಂ ನೋಡಿ ವಿಯೋಗಿಗೆ ಕಯ್ಯೋಸಿದನಾಯ್ತು ಡಾಮರಂ ಪಾಮರದಿಂ (ಪುಷ್ಪಪು.೫-೦೦). ೫. ಬರಗಾಲ ; ಕ್ಷಾಮ ; ದುರ್ಭಿಕ್ಷ : ಡಾಮರ ಆಗಿದ್ದರೂ ವಿಗತಾಗಿತ್ರಿವಾಚ್ಯವಾಗಿ ಸರ್ವವೃತ್ತಿಯ ನಡೆಸಬೇಕೆಂದು ಶಿವಾರ್ಪಿತವೆಂದು ಕೊಟ್ಟೆವಾಗಿ (ಮೈಆರಿ ೧೯೨೮ ; ೬೫-೩೨ ; 1509). ಕ್ಷಾಮ ಡಾಮರಂಗಳುಂ ಬೇರುಡಿದು ಪಾಟಿಸ್ರೋಕುಂ ಪೊಟಲೆಯೊಳ್ (ರಾಜಶೇ. ೦೪-೫೯). ೬. ಗಲಿಬಿಲಿ ; ಗದ್ದಲ ; ಗೊಂದಲ. ೭. ಯಾವುದಾದರೂ ಆಶ್ಚರ್ಯಕರವಾದ ವಸ್ತು, ನೋಟ ಅಥವಾ ಘಟನೆ.

ಡಾಮರಮಲ್ಲ = ಆಕ್ರಮಣವನ್ನು ಎದುರಿಸಬಲ್ಲ ಶೂರ; ಶತ್ರುಗಳನ್ನು ಆಕ್ರಮಿಸುವುದರಲ್ಲಿ ದಿಟ್ಟನಾದವನು ; ಒಂದು ಬಿರುದು : ಸಿನ್ದನಾರಾಯಣ ನಲ್ಲಗ್ಗ ನಲ್ಲ ಡಾಮರಮಲ್ಲ ಏಕಾಂಗಶೂದ್ರಕ ಶ್ರೀಪುಲಿಕಾಲ (ಎಇ. III, ೨೩೨-೯ ; 1070). [ ಸಂ. ]

**ಡಾಮರ₂**, ಡಾಂಬರ, ಡಾಂಬರು, ಡಾಮರು, ದಾಂಬರು (ನಾ). = ಡಾಂಬರೆಣ್ಣೆ : ಪಟಗರದ ಪೀಪಗಳೂ, ಡಾಮರದ ಪೀಪಗಳೂ, ರಾಂಜಾ ಪೀಪಗಳೂ (ಮುಂಬವ್ಯಾ. ೯) ; ಆ ಗಳಿಗೆಯಲ್ಲಿ ಆರಂಭವಾಗಿತ್ತು . . . ರಸ್ತೆಯ ಹೊದಿಕೆ ಡಾಮರ ಕಳಚಿ ಚೂಪುಕಲ್ಲು ಕಾಲಿಗೆ ಮುಳ್ಳಾಗುವುದಕ್ಕೆ (ಬೀಜೀ. ೦೩೫). ಡಾಂಬರ : ನೀರು ಬಟ್ಟ ಮೇಲೆ ತೆರೆದಿರುವ ಕಟ್ಟಿಗೆಗಳು ಹುಳಹತ್ತಿ ಕೆಡದ ಹಾಗೆ ಅವುಗಳಿಗೆ ಎಣ್ಣೆರಾಳ . . . ಹಚ್ಚಬೇಕು. ಡಾಂಬರವನ್ನಾಗಲಿ ರೋಗಂಧವನ್ನಾಗಲಿ ಹಚ್ಚಿದರೂ ಬರುತ್ತದೆ (ಕೃಷಿಪ್ರ. ೧೦೨) ; ಡಾಂಬರದಲಿ ಮೈಮತ್ತಿದೆ (ನವ್ಯಕ. ೦೫-೦೦) ; ಸುತ್ತೂಕಡೆಗೆ ಡಾಂಬರ ಸುಟ್ಟ ವಾಸನೆ ಬರಹತ್ತಿತು (ಸ್ವಾತಿಚೆ. ೯೩೭) : ಇದರ ಜೊತೆಗೆ ಒಬ್ಬರ ಮುಖಕ್ಕೊಬ್ಬರು ಡಾಂಬರವನ್ನು ಬಳಿಯುತ್ತಿದ್ದರು (ರಂಗರೋ. ೪೮). ಡಾಂಬರು : ಡಾಂಬರಿನೊಳಗೆ ಇದ್ದರೀ ತೆಯ್ಯು ಬಯಕೀ ತೀರಿಸಿಕೊಳ್ಳಲಿಕ್ಕೆ ಕುಡಥಾಂಗ ಕಾಣ್ತದ (ತಿರುಗು. ೦೫). ಡಾಮರು : ಮಾರ್ಗವೇನೋ ಡಾಮರು ಹಾಕಿದ ಮಾರ್ಗ ಆದರೆ ಅಲ್ಲಲ್ಲಿ ಡಾಮರು ಎದ್ದು ಹೋಗಿ ದೊಡ್ಡ ದೊಡ್ಡ ಹೊಂಡಗಳು ಹುಟ್ಟಿದ್ದವು (ಸೀತಾರ. ೯೪) ; ದಾರಿ ಡಾಮರು ಹಾಕಿದ ಒಳ್ಳೆಯ ರಸ್ತೆ (ಅಬೂಬ. ೭). ದಾಂಬರು : ವಾಹನದ ಗಾಲಿ ಅದರುಸಿರು ಕಪ್ಪು ದಾಂಬರಿನ ಬೀದಿ ಕಪ್ಪು ಈ ಕಪ್ಪು ಪ್ರಿಯವು, ಅಪ್ರಿಯವದೇಕೆ ಹೇಳೆನ್ನ ಮೈಯ ಕಪ್ಪು? (ಕರುಣ್ಯಾ. ೭೩-೦೫).

[ ←ಹಿಂ. ಮರಾ. ಡಾಮರ್ ]

**ಡಾಮರರಸ್ತೆ,** ಡಾಂಬರರಸ್ತೆ (ನಾ). ಡಾಮರ ಹಾಕಿದ ರಸ್ತೆ : ಈ ಮಧ್ಯಾಹ್ನದ ಉರಿಬಿಸಿಲಿಗೆ ಎಕ್ಕಡವಿಲ್ಲದೆ ಡಾಮರರಸ್ತೆಯಲ್ಲಿ ನಡೆಯುವಂತಿಲ್ಲ (ಬೂಡಿ). **ಡಾಂಬರರಸ್ತೆ :** ಅವನು ಡಾಂಬರರಸ್ತೆಗುಂಟ ಒಂದೇ ಸವನೇ ಸಾಗತೊಡಗಿದ (ಮುಕ್ತ್ಯಾದ. ೬೭) ; ಆ ಕಪ್ಪು ಡಾಂಬರರಸ್ತೆಯನ್ನು ನೋಡುತ್ತಿದ್ದಂತೆ ಏಕೋ ಅರ್ಥವಾಗದ ಸಮಾಧಾನ ಶಾಂತಿಗಳು ಸುರೇಶನ ಮನಸ್ಸಿನಲ್ಲಿ ನೆಲಸಹತ್ತಿದವು (ಅದೋಲೀ. ೦೦೭). [ ಡಾಮರ$_2$ + ರಸ್ತೆ ]

**ಡಾಮರು** 'ಡಾಮರ$_2$' ನೋ.

**ಡಾಮರ್ಬಂಕೆ** (ನಾ). ಒಂದು ಬಗೆಯ ಸಸ್ಯ : ಬಿಳೀಭೋಗಿ, ಆಸಿನ ಮರ, ಅಶ್ವಕರ್ಣ, ಡಾಮರ್‌ಬಂಕೆ (ಮೈಶಿಗಿ. ೭೦- ೦೪೨೫).' [ ? ]

**ಡಾಯಿಮ** (ನಾ). ಒಬ್ಬಾತನ ಹೆಸರು : ರಟ್ಟರ ಮೇರು ಡಾಯಿಮ ಮಹೀಪಾಳಂ ನೃಪಾಳೋತ್ತಮಂ (ಸೌಇಇ. XX, ೨೪೭-೯ ; 1087). [?]

**ಡಾಲರು** (ನಾ). ಅಮೇರಿಕಾದಲ್ಲಿ ಬಳಕೆಯಲ್ಲಿರುವ ಒಂದು ನಾಣ್ಯ : ಈ ಮನೆಯ ಮುಂಗಡ ಬಾಡಿಗೆ ೨೫ ಡಾಲರು (ಸಮುಸಾ. ೦೨೪); ಟಿಕೇಟಿನ ಬೆಲೆ ಒಂದು ಡಾಲರು (ಮಿಹಾತ್ಮಾ. ೦೦೩) : ಹೂವಿಲ್ಲ ಹಣ್ಣಿಲ್ಲ ಡಾಲರನು ಪಡೆಯುವ ಭಾಗ್ಯವಿಲ್ಲ (ಅರರೋ. ೦೦). [ ←ಇಂ. Dollar ]

**ಡಾಲಿಬಾರು** (ನಾ). ಚರ್ಮದ ಪಟ್ಟಿ (?) : ತುರುಕರ ಡಾಲಿಬಾರಿನ ಪಟ್ಟ ಠಿಂಬರು ಹೇರಿ ಪೈಜರವ (ಕಾಲಸಂ. ೨೩-೦೦). [ ? ]

**ಡಾಲಿಮ** 'ದಾಳಿಂಬ' ನೋ.

**ಡಾಲಿಯಾ** 'ಡೇಲಿಯಾ' ನೋ.

**ಡಾಲು$_1$** 'ಡಾಳ$_1$' ನೋ.

**ಡಾಲು$_2$,** ಡಾಳ$_2$, ಡಾಳು, ಢಾಲು$_2$, ಢಾಳ (ನಾ). ೧. ಗುರಾಣಿ : "ಡಾಲು–ಢಾಲ=ಅಡ್ಡಣ" (ತರ್ಕಕೋ. ೦೬); ಬಿರುದಿನ ಡಾಲ ರಾವುತರೆಂಟು ಸಾವಿರ ತುರಗವನೇಱಿಯ್ಯೆತರಲು (ಕಂನವಿ. ೧೧-೯೬) ; ಗರುಡಹನುಮ ಮಕರದ ಟೆಕ್ಕೆಯ ಡಾಲಬಿರುದಿನ ದೊರೆರಾಯನಾರೊ (ಕಂನವಿ. ೦೩-೩೭); ಅವನ ಡಾಲು ಡಮಾಮಿ ಸತ್ತಿಗೆ ಕೆಂಪಿನ ನಿಶಾನಿಯುಮಂ . . . ಕೈಸೆಱೆ ತಂದು ರಾಯರಿಂಗೊಪ್ಪಿಸಲ್ (ಕೆಳನೃ. ೨-೪೯) ; ಅದರಿಂದ (ಗಂಡಕದ ತೊಗಲಿನಿಂದ) ಬಹಳ ಬೆಲೆಯುಳ್ಳ ಡಾಲುಗಳು ಆಗುತ್ತವೆ (ಮುಂಬಯಿ. ೪-೪೮) ; ಕಾಲ್ದಳದವರು ಎಡಗೈಯಲ್ಲಿ ಹದಮಾಡಿದ ಎತ್ತಿನ ಚರ್ಮದ ಡಾಲುಗಳನ್ನು ಹಿಡಿದಿರುತ್ತಾರೆ (ಪ್ರವಾಇ. I, ೪೦ ಅಡಿಟಿ). **ಡಾಳ$_2$ :** "ಕೊಪ್ಪರ ದಂಡೆ ಡಾಳ ಕಳಾಸ[ಪಾಠಾಂ. ಡೋಳಕ್ಕು ಕಳಾಸ]ಜಾಳಿಯ ಮಂದಿ ಸೀರಣಂ ಹೆಚ್ಚೆಯಕ್ಕುಂ(ಮುಂಗರಾ.೦೮-೩೮); ಬಿರುದಿನ ಡಾಳ ಹಯದ ಮೊತ್ತದಲಿ ತಮಾಸುರನಂತೆ ಮೆಱೆವವನಾರು (ಕಂನವಿ. ೦೨-೪೩) ; ಬಿರುದಿನ ಡಾಳ ದರ್ಪದೆ ಸೆಳೆತಂದು ಭೂಪಾಲನಿದಿರಿನಲಿ ತಪ್ಪದೆ ಮೆದೆಯ ನೊಟ್ಟಿದರು (ಕಂನವಿ. ೦೫-೦೦೬). **ಡಾಳು :** ೧. ಬಿರುದಿನ ಡಾಳು ಡಮಾಮಿ ಮಕರಟೆಕ್ಕೆಯುರುತರ ರಾಜಚಿಹ್ನೆಗಳ ಪರಿಯ ತೋಱುತ(ಕಂನವಿ.೩-೩೭): ಅಂಕೆಯಿಲ್ಲದೆ ನಾನಾ ಬಗೆ ಚಿತ್ರಗಳಂಕಿತವಹ ಡಾಳುಗಳ ಅಂಕುಶಖಾನನ ತೇಜಿ ಸಾವಿರವಾಗ ಮುಂಕೊಂಡು ಬಂದುವು (ಕಂನವಿ. ೦೮-೮೪). **ಢಾಲು$_2$ :** ೧.ಬೆಳ್ಳಿ ಢಾಲು ಚಿನ್ನದ ಮುಲಾಮಿನ ಗುಬ್ಬಿ (ಎಕ. XIV, ನಂಜನ. ೨೯೨-೯ : 1847) ; ಕೈಯೊಳಗಿನ ಕತ್ತಿ ಢಾಲುಗಳನ್ನು ನೋಡಿರಿ (ಮೋಹಿನಿ. ೬೭) ; ನಾಯಕನು ಚಾತುರ್ಯದಿಂದ ಖಡ್ಗಕ್ಕೆ ತನ್ನ ಢಾಲನ್ನೊಡ್ಡಿ ಹೊಡತವನ್ನು ತಪ್ಪಿಸಿಕೊಂಡನು (ಕುಮುದಿ. ೦೭) : ಒಂದು ಕೈಯಲ್ಲಿ ಎತ್ತಿನ ತೊಗಲಿನ ಢಾಲನ್ನು ಜೋತುಬಿಟ್ಟು . . . ಇಪ್ಪತ್ತೈದು ಹುಡುಗರು ಬಂದರು (ದೀದಿಮ. ೦೦೦). ೨. ಪಂದ್ಯಗಳಲ್ಲಿ ಗೆದ್ದಿರುವ ತಂಡಕ್ಕೆ ಕೊಡುವ ಗುರಾಣಿಯಾಕಾರದ(ಬೆಳ್ಳಿಯ)ಪಾರಿತೋಷಕ,– ಬಹುಮಾನ : ಗೆದ್ದವರಿಗಿದ್ದೆಯಿದೆ ಬೆಳ್ಳಿಯ ಢಾಲು (ನೆಂಮು. ೩೩-೨೪). **ಢಾಳ :** (೧). [ <ಸಂ. ಢಾಲ ]

**ಡಾಲು$_3$** (ನಾ). ಒಂದು ಬಗೆಯ ರಣವಾದ್ಯ : ಕೊಂಬುಕಹಳೆ ತಮ್ಮಟೆ ಡಾಲು ಡಮಾಲು ರಾಯಭಟ ಮುಂತಾದ ರಣವಾದ್ಯಗಳು ತಟ್ಟನೆ ನಿಂತವು (ದೂಲೇಜಾ. ೫). [ ? ]

**ಡಾಲುಹೊಡೆ** (ಕ್ರಿ). ಪ್ರಕಾಶವನ್ನು ಬೀರು ; ಥಳಥಳಿಸು : ಅವಳು ಕಿವಿಯಲ್ಲಿ ಹಾಕಿಕೊಂಡಿದ್ದ ಕೆಂಪಿನೋಲೆಗಳು ನಾಲ್ಕು ಕಡೆಗೂ ತಳತಳನೆ ಡಾಲುಹೊಡೆಯುತ್ತಿದ್ದುವು (ಛಾರವಿ. ೦೦೦).
[ ಡಾಲು$_1$ (<ಡಾಳ$_1$) + ಹೊಡೆ$_1$ (<ಪೊಡೆ$_1$) ]

**ಡಾಲ್ಮರ** (ನಾ). ಒಂದು ಬಗೆಯ ಮರ : ಕಲ್‌ಗರಿಕೆ, ಡಾಲ್‌ಮರ, ಗವುಡ, ಮದಗಿಂಬೇವು (ಮೈಶಿಗಿ. ೨೦-೩೮೦). [ ? + ಮರ$_1$ ]

**ಡಾವ್** 'ಡಾವು' ನೋ.

**ಡಾವಣ** 'ದಾವಣ$_1$' ನೋ.

**ಡಾವಣಿ** 'ದಾವಣ$_1$' ನೋ.

**ಡಾವಣಿಕಟ್ಟು** 'ದಾವಣಿಗಟ್ಟು$_1$' ನೋ.

**ಡಾವಣೆ** 'ದಾವಣ$_1$' ನೋ.

**ಡಾವಣೆನೇಣ್** (ನಾ). ದನ ಮೊದಲಾದುವನ್ನು ಸಾಲಾಗಿ ಕಟ್ಟುವ ಉದ್ದವಾದ ಹಗ್ಗ : ವಾರುವಗಳ ಡಾವಣೆನೇಣ್ಗಳ ಬಲು ಜೀರುಗುಣಿಕೆಗಳ ಪರಿದು ಕೇರಿಕೇರಿಯೊಳು ತಮ್ಮಿಚ್ಛೆಯೊಳಗೆ ಸಲೆ ತಾಱುಮಾಱಾಗಿ ಯೋಡಿದವು (ಕಂನವಿ. ೦೫-೯೦). [ ಡಾವಣೆ (<ದಾವಣ$_1$) +ನೇಣ್$_1$ ]

**ಡಾವಪೇಚು,** ಡಾವುಪೇಚು (ನಾ). ೧. ಉಪಾಯ ; ತಂತ್ರ : ಗೊತ್ತದ ನನಗ, ನಿಮಗೇನು ಖಾಸಗೀ ಮಾತಾಡೋದದ ಎಂಬೋದು.ಮುತ್ಸದ್ದಿಗಿರೀ ಡಾವಪೇಚು ನಡಸೋದದ (ಜೂಜು. ೦೬). **ಡಾವುಪೇಚು:** ೨. ಪಟ್ಟು : ನೋಡಿದ ಹಿಡಿತಗಳನ್ನೂ ಡಾವುಪೇಚುಗಳನ್ನೂ ಬಣ್ಣಿಸುವ ರಭಸದಲ್ಲಿ . . . ಅವನನ್ನು ನೆಲಕ್ಕೆ ಅಪ್ಪಳಿಸುವರು (ಗಾಳಿಪ. ೬೫).
[ ←ಮರಾ. ಡಾವಪೇಚ್ ]

**ಡಾವರ,** ಡಾವರಿ, ಡಾವುರ, ಡಾಹರ, ದಾವರ (ನಾ). ೧. ಬರಗಾಲ ; ಕ್ಷಾಮ ; ದುರ್ಭಿಕ್ಷ : "ಡಾವರಮಾ ಕ್ಷಾಮಮುದಕ್ಕುಂ" (ಕವಿಕಂ.೨೬೯); ಇಂಚೆಯ ಪಸವಿನ ಬಱಿದ ಕಱಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದ ಪಿಂಚದ ಬೆಳೆದು ಏಱಿಂಚಿಯ ಕೆಯ್ಪಿಡಿವೊಲಾದುವಾ ನಾಡರ್ಗಳ್ (ಪಂಪಭಾ. ೮-೩೦) ; ಗೋಪ್ರವೇಶಲಕ್ಷಣ (ನಿಮಿತ್ತ) ಏಡಂ ಪೊಕ್ಕೊಡೆ ಚಿತ್ರವೃಷ್ಟಿ . . . ಸೇಡಂ ಪೊಕ್ಕೊಡೆ ಡಾವರಂ (ಅಟ್ಟಮಱು. ೪-೭). ೨. ಕೊಳ್ಳೆ ; ಸೂರೆ ; ಲೂಟಿ : ದಳವುಳ ದೆಳುಗವತೆಯನ್ನಾಯ ಡಾವರ [ಪಾಠಾಂ. ಪರಿಭವ] ಠಕ್ಕು ಡೊಳ್ಳಾಸ . . . ನಿನ್ನೊಳಿಲ್ಲಲೆ ರಾಯ ಕೇಳೆಂದ (ಕುವ್ಯಾಸ. ೦-೪೩) ; ಕರುಬುತನ ದುರ್ಭಿಕ್ಷ ಡಾವರ ಪೊರಿಗೆ ಲಂಚ . . . ಸ್ವಪ್ನದೊಳಗಿಲ್ಲಾಳ್ಕೆಯೊಳು ಸಳನ (ಅಂಬಿಕಾ. ೯೮-೯೦). ೩. ಬಾಧೆ ; ಹಿಂಸೆ ; ಕೋಟಲೆ ; ಉಪದ್ರವ : ಪುಂಡರೀಕ ಭೋಂಕನೆ ನಿನಗೀಗಳಿಂದ್ರಿಯದ ಡಾವರವೆತ್ತಣನೆತ್ತ ಬಂದುದೋ (ಕಾದಂಪೂ. ೭೭೪) ; ಡಕ್ಕೆಯ ಡಾವರಕ್ಕೆ ಸಿಕ್ಕಿ ನೊಂದೆನು (ಡಪೊಮ್ಮ. ೨೨೦-೭) : ಕಾಮನ ಡಾವರಂ ಕೊಳ್ಳದುಳಿದ ಮಾಯೆಯ ಮಾತು ಬೇಡ (ಹಡಕಾ. ೮-೫೯): ಸಾವು ತಪ್ಪದು ತನಗೆ ಕಾಮನ ಡಾವರವು ಘನ (ಕುವ್ಯಾವಿ. ೨-೨೭) ; ರಕ್ತಬೀಜಜನ ಡಾವರಕೆ ಬೆಚ್ಚಿದರಿ (ಅಂಬಿಕಾ. ೩೦-೯). ೪. ತೀವ್ರತೆ ; ರಭಸ ; ಅತಿಶಯ : ಬಿತ್ತಿದ ಬಿತ್ತು ಪೃಥ್ವಿಯ ಕೂಟ ಅಪ್ಪುವಿನ ದ್ರವದಿಂದ ಮಸ್ತಕ ಒಡೆದುದಲ್ಲದೆ ಉಷ್ಣದ ಡಾವರಕ್ಕೆ ಬೆಂಕಿಯ ಬೇಗೆಗೆ ಮಸ್ತಕ ಒಡೆದುದುಂಟೇ (ದೋರಮಾ. ೨೮೦-೪೭); ಉಗಿದು ಹಾಯ್ಕುವ ಖಳನ ನಿಡುದೋಳುಗಳು ಬಳಲಿದವಳ್ಕೆ ಹೊಯ್ವ ಥಗೆಯ ಡಾವರವಾಯ್ತು ಬಹಳ ಸ್ವೇದಜಲ ಜಡಿಯೆ (ಕುವ್ಯಾಸ. ೦೫-೨). ೫. ಕಾವು ; ದಗೆ ; ತಾಪ : ಉರಿಯ ಡಾವರವೆಳೆಯ ಬಾಳೆಯ ಬೆರಸುವಂತಿರೆ

ರಾಯಕುವರನ ಮರಣವಾರ್ತೆಯನಾ ಸುಭದ್ರಾದೇವಿ ಕೇಳಿದಳು (ಕುವ್ಯಾ.ದ್ರೋ. ೭-೧೧) ; ಬಿಸಿಲಿನ ಡಾವರವು ಅತಿಯಾಗಿದ್ದರೂ ಆತನು ತಲೆಗೆ ಟೋಪಿಯನ್ನೂ ಹಾಕಿರಲಿಲ್ಲ (ಕಾನೂರು. ೧). ೬. ಪ್ರತಾಪ ; ಶಕ್ತಿ ; ಸಾಮರ್ಥ್ಯ : ಆ ವಿವಿಧ ಮಂತ್ರಾಸ್ತ್ರವನು ಶತಸಾವಿರವನಾ ಬ್ರಹ್ಮದಂಡದ ಡಾ[ಪಾಠಾಂ. ಧಾ]ವರದಲೇ ಗೆಲಿದನೊಬ್ಬ ವಸಿಷ್ಠ ಮುನಿಯಿಂದ (ಕುವ್ಯಾ.ಆ. ೧೧-೪೩) : ಆವುದಂತರ ವನಕಳಭಕ್ಕೆರಾವತಕೆ ಮಝು ಭಾಪು ದ್ರೋಣನ ಡಾವರಕೆ ಪಾಂಚಾಲನ್ಯೆಸಱವನು (ಕುವ್ಯಾ.ಭೀ. ೮-೩೩). ೭. ಗದ್ದಲ ; ಗಲಿಬಿಲಿ ; ಸಡಗರ : ಧೂರ್ಜಟಿಯ ಡಾವರದ ಡಮರಧ್ವನಿಯೊ ವಿಲಯದ ಬಱಸಿಡಿಲ ಬೊಬ್ಬಾಟವೋ (ಕುವ್ಯಾ.ಕ. ೨೧-೧೬). ೮. ಬಯಕೆ ; ಉತ್ಕಟವಾದ ಇಚ್ಛೆ : ಮಹಾವಾರ್ಧಿಜಲವನೊಂದೇ ಸಾರಿ ಸುಱಗೊಂಬ ಡಾವರದೊಳಿದ್ದ ವಡಬಾಗ್ನಿಯೋ . . . ಎಂದೆಂಬೊಪಾದುದು ಧನಂಜಯನ ಪಾವಕಾಸ್ತ್ರಂ (ಜೈಮಿಭಾ. ೧೩-೧೧) : ಆಳ್ದನೂಱಿಗಮನಿತುಮಂ ತಾನೂರ್ವನೆ ಗೆಯ್ವ ಡಾವರದಿಂ (ಚಕವಂ: ೮೫-೨೧). ೯. ಭಯಂಕರವಾದುದು ; ಭೀಷಣತೆ ; ಕರಾಳತೆ : ಆವ ಕೌಳಿಕಮಂತ್ರತಂತ್ರದ ಡಾವರದ ಡೊಳ್ಳಾಸವಿಕ್ಕಿದ ದೀವಸದ ಬೇಳುವೆಯ ನೇಸೆಂಬೆನು (ಕುವ್ಯಾ.ಸ. ೧೩-೬೧) ; ಜಲಧಿ ಜಲಧಿಯ ಹಳಚಲಿಗಿದವ್ವಳಿಪ ವಾದ್ಯಧ್ವನಿಯ ಡಾವರ ಸೆಳೆದುದಸುರರ ಧುರದ ಧೈರ್ಯವನು (ಕುವ್ಯಾ.ಆ. ೧೨-೦೨). ೧೦. ಆವರಿಸುವಿಕೆ; ಸುತ್ತಲೂ ವ್ಯಾಪಿಸುವಿಕೆ. 'ಡಾವರಿಸು' ಪರಾ. ಡಾವರಿ: ೪. ಅತ್ರಲರ್ಜುನನುರಿಯ ಡಾವರಿಯನು[ಪಾಠಾಂ. ಡಾವರವನು]ಭಂಗಿಸಿದನೆಚ್ಚು ನಾರಾಯಣಾಸ್ತ್ರದೊಳು (ಜೈಮಿಭಾ. ೮-೪೫). ಡಾವುರ: ೮. "ಡಾವುರವಮನಲಾಪೇಕ್ಷೆಯು" (ಭಾರನಿ. ೩೨). ಡಾಹರ: ೬. ಡಾಹರದೊಳಿಱಗಿದಕ್ಕಲನದಟುವಮಂ ಮುಱಿಯೆ ನೇಹದಿಂ ಹರಿ ತನ್ನ ಕುವರಿಯಂ ಕೊಡೆ (ಅಂಗಪು. ೧-೦೬). ದಾವರ: ೧೧. ಬಾಯಾರಿಕೆ ; ದಾಹ; ನೀರಡಿಕೆ; ಸೇದೆ : ಬಳಸಿ ಬಂದಿಹ ನಮಗೆ ಇಷ್ಟು ದಾವರವಾಗೆ ಏರಿಬರುವವನಿಗೆಷ್ಟು ದಾವರವೊ (ಅರುಜ. ೩೯-೨೧); ಉಪ್ಪು ತಿಂದಷ್ಟೂ ದಾವರವಾಗಿ ಒಣಗಿ ಹೋದೀಯೇ, ಬೆಲ್ಲವೇ ತಿನ್ನು (ಕಥಾಮಂ. IV,೪೨). 'ಡಮರ' ಪರಾ. [ <ಸಂ. ಡಾಮರ ]

ಡಾಮರಿ 'ಡಾವರ' ನೋ.

ಡಾವರಿಗ (ನಾ). ೧. ಕೊಳ್ಳೆಹೊಡೆಯುವವನಂ ; ದಂಗೆಮಾಡುವವನು; ಸೂರೆಕಾರ ; ದರೋಡೆಗಾರ : ಅಱಿವಿನ ಗರ್ವದಿಂದಿಳಿಸದೀ ತ್ರಿಜಗಂಗಳನೊತ್ತಿ ಮೋಹವೆಂಬಱಕೆಯ ಸಂದ ಡಾವರಿಗನುಂ ಪಗೆ ತನ್ನೊಳಗಿರ್ದೊಡೆಂತುಮೇತೆಱದೊಳಮೊಳ್ಪಿಕೆಯ್ಗುಮ (ಚಂದ್ರಪ್ರಭಪು. ೦೫೮-೦೬); ಡೊಂಬಿಗರ ಡಾವರಿಗರಿವದಿರ ತಿಂಬೆನೀಗಳೆ (ಕುವ್ಯಾ.ಸ. ೧೫-೩೫). ೨. ಶೂರ; ಸಮರ್ಥ; ವೀರ : ಕಂಸನಾನೆಯನಸುಬಡಿದ ಗಡ ಮಲ್ಲರನು ಮರ್ದಿಸಿದನೇ ಡೊಳ್ಳಾಸದಲಿ ಡಾವರಿಗನಹನೆಂದ (ಕುವ್ಯಾ.ಸ. ೦೦-೧೭). ೩. ಗದ್ದಲವಮಾಡುವವನಂ ; ಕೋಲಾಹಲವನ್ನುಂಟುಮಾಡುವವನು ; ಆರ್ಭಟಿಸುವವನು : (೬). [ ಡಾವರ + -ಇಗ ]

ಡಾವರಿಗತನ (ನಾ). ಸಾಮರ್ಥ್ಯ ; ಶೌರ್ಯ ; ಪರಾಕ್ರಮ : ಕರ್ಣ ಗಳಹದಿರು ಡಾವರಿಗತನವಾರ ಕೂಡೆ ವೃಥಾ ವಿಲಾಸಿಗಳೆಲವೊ ಸುಭಟರೆ ನೀವು (ಕುವ್ಯಾ.ದ್ರೋ. ೧೩-೨೩). [ ಡಾವರಿಗ + -ತನ ]

ಡಾಮರಿಗವಿದ್ಯೆ (ನಾ). ಕೊಳ್ಳೆಹೊಡೆಯುವುದು ; ಲೂಟಿ ; ಸೂರೆ : ಆವ ಸೇರಿಕೆ ಜವಕೆ ಚಾಪಶರಾವಳಿಗೆ ಶಮೆ ದಮೆಗೆ ಖಡ್ಗಕೆ . . . ಆವುದಿದರಭಿಧಾನ ತಪವೋ ಡಾವರಿಗವಿದ್ಯಾಸಮಾಧಿಯೊ ನೀವಿದೆಂತಹ ಋಷಿಗಳು (ಕುವ್ಯಾ.ಆ. ೪-೪೫). [ ಡಾವರಿಗ + ವಿದ್ಯೆ ]

ಡಾವರಿಸು, ಧಾವರಿಸಂ, ದಾವರಿಸು (ಕ್ರಿ). ೧. ಸುತ್ತು ; ತಿರುಗಾಡು ; ತ್ವರೆಯಿಂದ ಆಚೀಚೆಗೆ ಚಲಿಸು ; ರಭಸದಿಂದ ಮುನ್ನುಗ್ಗು : ರಥಿಕರ್ ಕಡುಪಿಂ ರಥಂಗಳಿಂ ಡಾವರಿಸುತ್ತೆ (ದಕಕು. ೬-೬೩) : ಧುರಧೀರಂ ಗುಂಡದಂಡಾಧಿಪನ ನಿಜಯಶಃಕಾಂತೆ . . . ದಿಶಾಚಕ್ರದೊಳ್ ಡಾವರಿಸಲ್ (ಎಕ. V, ಬೇಲೂರು. ೩-೭೯; 1397) : ತೀವಿ ತೆಗೆದನು ವಜ್ರಶರದಲಿ ಡಾವರಿಸಿದನು ಕಳನೊಳು (ಕುವ್ಯಾ.ದ್ರೋ. ೦೦-೨೮) : ನೂಱಾನೆಯಲಿ ಡಾವರಿಸಿದನು ಧರ್ಮಜನ ದಳದಲಿ ಧೀರ ಕುರುರಾಯ (ಕುವ್ಯಾ.ಗ. ೨-೩೫); ನೆಲ ಹಱಯೆ ಹರಿದವು ತೇರುಗಳು ತೇರವದ ತೋಳುಗಳ ಉರುಕೃಪಾಣದ ದಂತಿಗಳು ಡಾವರಿಸಿದವು (ತೊರರಾ. ೫-೫-೧೬). ೨. ಬಾಯಾರಿಕೆಯಾಗು: ನರನ ತೇರಿನ ಕುದುರೆಗಳು ಡಾವರಿಸಿದುವು ಡಗೆಹೊಯ್ದು ಮಿಗೆ ದಳ್ಳುರಿಯ ಸಸಿಯಂತಾದನರ್ಜುನದೇವ ನಿಮಿಷದಲಿ (ಕುವ್ಯಾ.ಭೀ. ೬-೩೪) : ತೀವಿದ ಪಾಲ್ಗೊಲೆಯಂ ತಳಿರ್ವಾಯಿಂ ಡಾವರಿಸುತ ಕರ್ಚುವ ಕಂದನ ಸದ್ಭಾವವಮನೀಕ್ಷಿಸದಾಕೆಯ ಕಣ್ಗಳ್ ಪೀಲಿಯ ಕಣ್ಣ್ಗೆಸೆ (ಜಯಕಾ. ೨-೩೭). ೩. ಹಬ್ಬು; ಆವರಿಸಂ ; ವ್ಯಾಪಿಸು : ಅವಿರಳಾಸ್ತ್ರಾನೀಕ ಡಾವರಿಸಿದವು ದಿಗುತಟವ (ಕುವ್ಯಾ.ಭೀ. ೮-೩೭): ಉರಿಯ ಕರಡಿಗೆಯಂತೆ ಶಿಖಿ ಡಾ[ಪಾಠಾಂ. ಸಿಡಿದಾ]ವರಿಸಿತಬುಜಭವಾಂಡಭವನವನು (ತೊರರಾ. ೬-೪-೩೨); ವಿಷದ್ವಾಲೆ ವಿಗೆ ಡಾವರಿಸಿತು . . . ಪರಬಲದೊಳು (ಜೈಮಿಭಾ. ೨೪-೩೦) ; ಆತನ ಕೀರ್ತಿಯು ದಶದಿಕ್ಕುಗಳಲ್ಲಿ ಡಾವರಿಸುತ್ತಿತ್ತು (ಕವೀರ. ೦೨೦). ೪. ಚುಚ್ಚು ; ತಿವಿ; ಹೊಡೆ; ಹಿಂಸಿಸು; ನೋಯಿಸಂ: ನೀವು ಕಂಡಿರೆ ನಾಭಿ ಜಂಘೆಗೆ ಡಾವರಿಸಿದನು ಹಲವು ಬಾರಿ ಜಯಾವಲಂಬನವೆಂತು ಕೃಪೆಮಾಡಿಂದನಾ ಪಾರ್ಥ (ಕುವ್ಯಾ.ಗ. ೭-೪೩). ೫. ಉರಿ ; ಪ್ರಜ್ವಲಿಸು : ಝಳದ ಡಗೆ ಡಾವರಿಸೆ ಹೊಕ್ಕರು ಕೊಳನ (ತೊರರಾ. ೨-೪-೨೨) : ಭುಗಿಲ್ಭುಗಿಲ್ಭುಗಿಲೆಂದು ಡಾವರಿಸೆ . . . ಎಲ್ಲರಂ ದಹಿಸತೊಡಗಿದುದು ದಳ್ಳುರಿ (ಜೈಮಿಭಾ. ೮-೫೯): ಕಂಬನಿಯ ಕಡಲೊಳಗೆ ಡಾವರಿಪ ವಡಬಶಿಖಿ (ಜೈಮಿಭಾ. ೧೩-೫೯). ೬. ಅತಿಯಾಗಿ ಬಯಸು ; ಉತ್ಕಟವಾಗಿ ಆಸೆಪಡು ; ಆಸೆಯಿಂದ ಹಾತೊರೆ : ವಿಷಯವ ಡಾವರಿಸುವವ ಸ್ಮೃತಿನಿಂದೆಯ ಬಲ್ಲನೆ (ಸರ್ವವ. ೩೫-೧೮೮) : ಆವರಿಸುವ ಮನ ಭಕ್ತಿಗೆ ಡಾವರಿಸುವ ಮನ ಶಿವಾರ್ಚನೆಗೆ . . . ದೊರಕಿದೊಡಾವುದಸಾಧ್ಯಂ (ಶಂಕರಂ. ೨೦). ೭. ಆರ್ಭಟಿಸು ; ಅಬ್ಬರಿಸಂ : ಕಡುಲುಳಿ ಮಸಗಿ ಡಾವರಿಸಿ . . . ತಾಗಿದರು (ಕುವ್ಯಾ.ಸ. ೨-೦೦೩) : ಪಾವಿನಂತಾವಿನಂತಡಿಗಡಿಗೆ ಮೊರೆದೆದ್ದು ಡಾವರಿಸಿ ಸೀವರಿಸಿ ಮನೆಗೆಲಸವಂ ಗೆಯ್ಯದಾ ವನಿತೆ ಸಾವನಿತೆ ಲೇಸು (ಜೈಮಿಭಾ. ೫-೫೪): "ಹಟಮಾರಿತನ ಮಾಡು; ಮೊಂಡಾಟಮಾಡು"(ಪ್ರಯೋ). ಧಾವರಿಸು: ೬. ಆವುದಱ ದೆಸೆಯಿಂದ ಮನವಿದು ಧಾವರಿಸುತಿಹುದದು ಕಣಾ ಭವಧಾಮತಿಗೆ ಕಾರಣವು (ಸ್ವರೂಪಾ. ೧-೪). ದಾವರಿಸು : ೪. ಆನೊಲಿದು ಬಂದರೆ ನಿಮ್ಮ ಬಱನುಡಿಯಲಗಿನಲಿ ದಾ[ಪಾಠಾಂ. ಡಾ]ವರಿಸಿದಿರಿ ಡೊಳ್ಳಾಸವಿದ್ಯೆಯಲಿ (ತೊರರಾ. ೩-೪-೨೦). ೮. ನೋಯು; ಹಿಂಸೆಗೊಳ್ಳು; ಯಾತನೆಯನ್ನನುಭವಿಸು : ಆತುರದಲ್ಲಿ ಕಳವಳಿಸಿ ವ್ಯಾಕುಲದಲ್ಲಿ ದಾವರಿಸುತಿಪ್ಪುದೀ ಮನವು (ವಚನ. II, ೪೪೯) ; ಮಗ್ಗುಲದ ಮರಿಯಳೀ ಯೇಸುವಿಗೆ ಮನಸೋತು . . . ಬೆಂದು ಮನನೊಂದು ಭುಗಿಭುಗಿಲ್ವ ಕಾವರಕೆ ದಾವರಿಸಿ (ಗೊರೂಥಾ. ೩-೬೦). 'ಡವರಿಸು' ಪರಾ.
[ ಡಾವರ + - ಇಸು₃ ]

ಡಾವಳಿ 'ಧಾವಳಿ' ನೋ.

ಡಾವು, ಡಾವ್, ಡಾವೆ (ನಾ). ೧. ಹೊಟ್ಟೆಕಿಚ್ಚು ; ಡಂಕಂ ; ದ್ವೇಷ ; ವೈರ : ಆ ಹಾವು ಡಾವು ಇಟ್ಟುಕೊಂಡು ಒಂದು ವರ್ಷದ ನಂತರ ಅವನನ್ನು ಕಚ್ಚಿದೆ (ರೂಢಿ). ೨. ಕುಸ್ತಿಯಲ್ಲಿ ಒಂದಂ ಬಗೆಯ ಹಿಡಿತ : ಇಂತಹ ಹಿಡಿತಗಳಿಗೆ ಭಾರತ ಪ್ರತಿ ಡಾವು ಮಾಡುವಷ್ಟು ಸಾಧನೆ ಪಡೆದಿದೆ (ಎಚ್ಚಸಾ. ೦೪೮). ೩. ಆಟ ; ಕುಸ್ತಿಯಾಟ : 'ಡಾವುಪೇಚು' ಪರಾ. ೪. ಹಂಚಿಕೆ ; ಉಪಾಯ ; ಯುಕ್ತಿ : ಮುದ್ದಾಂ ಮಳ್ಳತನವನು

ಪ್ರದರ್ಶಿಸುವ ಡಾವಿನಿಂದ ನಾನೂ . . . ಅವನ ತಲೆ ಚಿಟ್ಟುಹಿಡಿಸುವಂತೆ ಬಾತವಿಾ ಒಪ್ಪಿಸಿದ್ದೆ (ದೀಪಹ. II, ೧೪). ಡಾವ್ : ೧. ಸಾಹೇಬರ ಡಾವ್ ಶ್ಯಾಮರಾಯರಿಗೆ ಹೊಳೆದಿತ್ತು (ದೀಪಹ. II ೩೧). ಡಾವೆ : ೧. ಕಾವಳಂ ಮರೆಗೊಂಡು ತಸ್ಕರರ್ ಬಳಿಕಿಂದು ಡಾವೆಯಿಂ ಪರಶುಧೀರಧರನಿಲ್ಲದಿಹ ಸಮಯದೊಳ್ ಮೋಪಿತಿನ್ನಾರ್ ಕಾವರೆಮ್ಮನೆಂದೊಳಗೊಳಗೆ (ಶರಕು. ೩೫-೦೪). [ ←ಹಿಂ. ಮರಾ. ಡಾವ್ ]

**ಡಾವುತೀರಿಸು** (ಕ್ರಿ). ಹಗೆತನವನ್ನು ಸಾಧಿಸಿಕೊಳ್ಳು ; ಮುಯ್ಯಿ ತೀರಿಸಿಕೊಳ್ಳು : (೩). [ ಡಾವು + ತೀರಿಸು ]

**ಡಾವುಪೇಚು** 'ಡಾವಪೇಚು' ನೋ.

**ಡಾವುರ** 'ಡಾವರ' ನೋ.

**ಡಾವೆ** 'ಡಾವು' ನೋ.

**ಡಾಶೇರು** (ನಾ). ಒಂದಂ ತೂಕದ ಅಳತೆ ; ಎರಡೂವರೆ ಸೇರು ; ಅಡೀಸೇರು : ವಂದು ಮಣುವಿಂಗೆ ದಡಯ ನಾಲ್ಕುಂ ಪಂಚೇರು ಧಂದದೊಳಿಂಟು ಡಾಶೇರು ಷೋಡಶಮಕ್ಕುಂ (ಭಾಸ್ಕರ. ೬೫-೭).

[ ಡಾ₀ (P ←ಹಿಂ. ಢಾಈ) + ಶೇರು₁ (<ಸೇರು₃) ]

**ಡಾಹ, ದಾವು₁** (ನಾ). ೧. ಸುಡುವಿಕೆ; ದಹಿಸುವಿಕೆ : ತೊಟಿ ಯಂತೆ ಮಳಮಂ ತೋಱ ಬೆರ್ಚಿಸದೆ ಕಿರ್ಚಿನಂತೆ ಅಡಕವಮಂ ತೋಱ ನಂಬಿಸದೆ ದಾಟಿಯಂತೆ ಡಾಹಮಂ ಮಾಡಿ ಕಿಡಿಸದೆ (ಧರ್ಮಾಮೃ. ೫-೯೯). ೨. ಸೆಕೆ ; ದಗೆ; ತಾಪ : ಮನುಷ್ಯ ಲೋಕದೊಳಾದ ಸುಖಮಲ್ಲಂ ಡಾ[ಪಾಕಾಂ. ದಾ]ಹಕ್ಕೆ ಶೀತಲಕ್ರಿಯೆಗೆಯ್ವಂತೆ ನೋವನಾಱಿಸುವ ಸುಖಂ ಅದು ಸುಖಮೆ (ಜೀವಸಂ. ೫೧-೨೪ ವ). ೩. ನೀರಡಿಕೆ ; ಬಾಯಾರಿಕೆ. ದಾವು₁ : ೨. ಬಿಸಿಲಿನ ದಾವು ತಗ್ಗಿತ್ತು (ಶಳಮು. ೨೦).

[ <ಪ್ರಾ. ಡಾಹ./ಸಂ. ದಾಹ ]

**ಡಾಹರ** 'ಡಾವರ' ನೋ.

**ಡಾಹಿಣಿ** 'ಡಾಕಿಣಿ' ನೋ.

**ಡಾಹಿಸು** (ಕ್ರಿ). ದಾಹಗೊಳ್ಳು ; ಅತಿಯಾದ ತಾಪದಿಂದ ಕೂಡಿರು ; ಉತ್ಕಟವಾಗಿ ಕುದಿ : ಮೋಹ ಮದ ಸಮೂಹದಿಂದ ಡಾ[ಪಾಕಾಂ. ದಾ]ಹಿಸುತ್ತ ಮಿರ್ದನಯ್ಯ ದೇಹದಿಚ್ಛೆ ಹೆಚ್ಚಿ ಮಚ್ಚರಕ್ಕೆ ವೇಳೆ ಮಾಡೆನಯ್ಯ (ಹಂಪರ. ಹ. ೫೦೦-೨೦). [ ಡಾಹ + - ಇಸು₃ ]

**ಡಾಳ₁, ಡವಳ₁, ಡಾಲು₁, ಧವಳ, ಢಾಲು, ಥಾಳ₁, ಥಾಳು** (ನಾ). ೧. ಹೊಳಪು ; ಪ್ರಭೆ ; ಕಾಂತಿ : "ತೊಳಗು, ಬೆಳಗು . . . ಡಾಳಂ, ಪೊಗರ್, ತೊಳಪಂ, ಮಸೆ-ಈ ೧೪ ಕಾಂತಿ" (ಕಕಸಾ. ೦೦-೨೦೫) ; "ಡಾಳ ಹಬೆ ಪೊಗರೆಂದೆನೆ ಕಳೆ ಪೊಳಪು . . . ಕಾಂತಿಯೆನಿಕ್ಕುಂ" (ಕಷಿಕಂ. ೦೦೦) ; ಮಾರ್ಪೊಳೆದುವಾಕೆಯ ಡಾಳಮನಾಂತ ದಿಟ್ಟಿಗಳ್ (ಕಬ್ಬಿಗ. ೩೩೦); ಕನಸಿನ ಸಿರಿ ಕಾಮುರ್ಗಿರೊಡ್ಡಿನ ಚಿತ್ರಂ ಸತಿಯುರೊಲ್ಮೆ ಮಿಂಚಿನ ಡಾಳಂ ಜನಪತಿಯ ಕೂರ್ಮೆಯೆನಲಾತನೊಲಾಯ್ತು ಜನ ಸೌಖ್ಯಂ (ದಶಕು. ೫-೫೮) ; ಮಿಸುನಿಯೋಲೆಯ ಡಾ[ಪಾಕಾಂ. ಢಾ]ಳ ಕದಪಿನೊಳೆಸೆಯೆ (ನಳಚ. ೨-೭); ವ್ಯಾಲೋಲ ಖಡ್ಗಗಳ ಡಾಳದಿಂ ಮೇಳದಿಂ . . . ಪಡೆ ಪಡೆಬಿನಿಂ ನಡೆದುದು (ಜಬಪು. ೫೭-೦೦). ೨. ಅಂದ ; ಚಂದ ; ಸೊಬಗು : "ಡಾಳಮನೆ ಲಾವಣ್ಯಂ" (ಧಾರನಿ. ೩೫) ; ಡಾಳದ ಕಣ್ಣ ನೀರ್ವನಿಗಳುಂ ಪೊಸಮುತ್ತುಗಳುಂ ನಭೋಂತದೊಳ್ ಸಾಲಿಡಲ್ (ದಶಕು. ೦೨-೦೮೬) : ತೋರಮೊಲೆಗಳ ಡಾಳದಲಿ ಮಣಿಹಾರ ಮೆಱೆಯಲು (ಜೀವಂಧ. ೮-೯): ಥಳಥಳಿಸುವೆಳಮಿಾನ ಡಾಳವ ಗೆಲುವ ಕಂಗಳ (ಅಕ್ರೂರ. ೪-೨೯). ೩. ರೀತಿ ; ಕ್ರಮ ; ಪದ್ಧತಿ ; ತರಹ : ಕಾಲದೇಶಾಗಮದ ನಿಗಮದ ಡಾಳವಱಿದ್ದೆಹಿಕಪರತ್ರ ವಿಚಾರಿಸದೆ ನಡೆ ಕಿಡದ (ಕುವ್ಯಾಸ. ೦೫-೬೨). ೪. ಕುಂದು ; ಹಾನಿ ; ಭಂಗ : ಅಜ್ಜಮುತ್ತರ ತೆಱದಿ ನಡತೆಗಳೆಜ್ಜವಿರದೊಜ್ಜದೊಲು ನಡೆತರುತೆಜ್ಜ ಸಾಸಿರ ಬಿದ್ದು ಡಾಳಗಳಾದವವಕೀಗ (ಬಜ್ರಪು. ೭೭-೦೭). ೫. ಉಜ್ಜು ಹೊಳಪುಗೊಳಿಸುವುದು. 'ಡಾಳವಿಡಿ' ಪರಾ. ೬. ತೋರಿಕೆ ; ಥಳುಕು ; ಠಕ್ಕು. 'ಡಾಳಿ' ಪರಾ. ೭. ಥಳುಕಿನವನು ; ಡಾಂಭಿಕ ; ಮೋಸಗಾರ; ವಂಚಕ: ಕುಡದೆ ಕಾಡುವವಂ ರಸಬೋನವೆತ್ತು ಮಾಱಾಳಿಗೆ ಡಾ[ಪಾಕಾಂ. ಕಾ, ಗಾ]ಳನಂ ನೆಗಪು ಟಕ್ಕಿಪನಂ ತುಬಿ (ರೀಶಾವ. ೨-೧೦೭) ; ಡಾಳಂಗಪ್ಪುಯಿಸಿದುದು ಬಿಡಾಳಕ್ಕಂ ಪಾಲ ಕಾಪನಿತ್ತವೋಲಾಯ್ತೆಂದೀಲೋಕಮುಲಿಯೆ ನೀತಿನುತಾಲೋಕನರಹಿತನಹಿತಚಿಂತದ ನೆಗಬ್ದಂ (ಪಾರ್ಶ್ವಪು. ೩-೦೦೩). ಡವಳ₁ : ೭. ಥಾಳರನು ಡ[ಪಾಕಾಂ. ಥ]ವಳರನು ಠಕ್ಕಿನ ಠೌಳಿಕಾಱರನು (ಕುವ್ಯಾಗ. ೫-೦೦). ಡಾಲು₁: ೧ 'ಡಾಲುಹೊಡೆ' ಪರಾ. ಧವಳ: ಮೇಲಿನ 'ಕುವ್ಯಾಗ. ೫-೧೧'ರ ಪ್ರಯೋಗದ ಪಾಠಾಂತರವನ್ನು ನೋಡಿ. ಢಾಲು₁: ೮. [ಸಂಗೀತ] ದಾಟುಸ್ವರಗಳ ಪ್ರಯೋಗ : ಢಾಲು - ಸಪಾ, ಸಮಾ, ಸಗಾ, ಸರೀ ಎಂದು ಅನುಕ್ರಮಿಸುವ ದಾಟುಸ್ವರಗಳ ಪ್ರಯೋಗ (ಸಂಗೀಕಂ. ೨೮). ಥಾಳ₁: ೧. ಸರ್ವಾಂಗದೊಳ್ ಥಾಳಂ ನೆಟ್ಟನೆ ಪುಟ್ಟೆ ನಾಟ್ಯರಸದೊಳ್ ತೇಂಕಾಡುವಂತಾಡಿದರ್ (ಪಾರ್ಶ್ವಪು. ೦೪-೦೫೯) : ಎಳೆಯ ಮುತ್ತಿನ ಥಾಳವನು ಮುಕ್ಕುಳಿಸಿದಂಗಚ್ಛವಿಯ (ಕುವ್ಯಾಅ. ೬-೬೩) : ಭ್ರೂಲತೆಯ ಲಾವಣ್ಯನಿಧಿಯ ವಿಶಾಲ ಭಾಳದ ಥಾಳದಲಿ (ನಿಥಾಗ. ೨-೦-೨೬); ಸುಲಿಪಲ್ಲ ಥಾಳದಿ ಕರ್ಣಕುಂಡಲದಿ (ಶಂಕರದಾ. ೫-೭೭): ಚೆಲ್ಲೆಗಂಗಳ ಥಾಳ (ಅಂಬಿಕಾ. ೩೪-೭೦). ೭. ಥಾಳರನು ಡ[ಪಾಕಾಂ. ಥ]ವಳರನು ಠಕ್ಕಿನ ಠೌಳಿಕಾಱರನು (ಕುವ್ಯಾಗ. ೫-೦೦). ೯. ಅಶುಚಿವಂತ ; ಶೀಲಗೇಡಿ (?) : ಖೂಳರಿಲ್ಲ ಜಾಣರುಂಟು ಗೆಲ್ವರಿಲ್ಲ ಒಲ್ವರುಂಟು ಥಾಳರಿಲ್ಲ ಶುಚಿಗಳುಂಟು ಹುಸಿವರಿಲ್ಲ ಸತ್ಯರುಂಟು (ಮೇರ. ಹ. ೨೩೦-೨೩). ೧೦. [ನಾಟ್ಯ] ಒಂದು ಬಗೆಯ ನೃತ್ಯ: ರೂಪು ರೇಖೆ ಥಾವಣೆ ತೂಕವಣೆಯಂಕೆ ಝುಂಕೆ ಥಾಳ ಡಿಳ್ಳಾಯಿ ಚಂಡಣೆ ಚಳಬಳಿಕೆ ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೧೬-೭೭ ವ). ಥಾಳು : ೧. ನೂರು ಬಣ್ಣದ ಹೊಳವನೊಳಗಾಂತು ಇದರ ತೆರವಿಂಥದೆನೆ ಮತ್ತೊಂದು ಥಾಳಿನಿಂದ ಕಂಗಳನು ಕೋರೈಸು ವಚ್ಚರಿಯ ಹೀರದಂತಿವನ ಬಗೆಗೆನ್ನ ಬಗೆಯಚ್ಚರಿವುದು (ಗೋಕಾನಿ. ೨೦-೨) : ಚಂದಕೆ ಮರುಳಾಗಿ ಕಣ್ಣಮುಚ್ಚಿಸಿತವ್ವ ನಿನ್ನ ಪರಿವಾರದ ಸುರರ ಥಾಳು (ಹಂಸದ. ೦೬೫-೧೭).

**ಡಾಳಾಗು, ಥಾಳವಾಗು, ಥಾಳಾಗು** = ೧. ಉಜ್ವಲವಾಗು ; ಪ್ರಕಾಶಮಾನವಾಗು; ಚೆನ್ನಾಗಿ ಪ್ರಕಾಶಿಸು; ಪ್ರಜ್ವಲಿಸು: ದೀವಿಗೆಯು ಡಾಳಾಗಿ ಉರಿಯುತ್ತಿರಲಿಕ್ಕೆ ಬೇಕು (ಮುಂಬಯಿ. ೫-೦೭೨) ; ಬರಬರುತ್ತ ಆ ಬೆಳಕು ಥಾಳವಾಗಿ ಖಿಂಡಿಯಿಂದ ಹೊರಚೆಲ್ಲಿ (ಗೀಜುಗ. ೦೦) ; ಅವನ ಕಣ್ಣಲ್ಲಿ ಸತ್ಯದ, ಬಂಧುತ್ವದ ದಿವ್ಯಜ್ಯೋತಿಯೊಂದು 'ಥಾಳಾಗಿ' ಉರಿಯುತ್ತಿತ್ತು (ಬರಹಾ. ೯೮); ವಿಶ್ವವಿದ್ಯಾನಿಲಯದ ಕೋಣೆಯಲ್ಲಿ ಇನ್ನೂ ದೀಪ ಥಾಳಾಗಿ ಉರಿಯುತ್ತಿದ್ದುದು . . . ಕಾಣುತ್ತಿತ್ತು (ದೀಪಹ. II, ೦೦೭). ೨. ಎದ್ದು ಕಾಣಿಂ; ಸುಸ್ಪಷ್ಟವಾಗು : ಭವ್ಯಮಂದಿರಗಳು ಮದರಾಸಿನಲ್ಲಿ ಬೀಚಿನ ಹತ್ತಿರವೇ ಥಾಳವಾಗಿ ಕಾಣುತ್ತಿವೆ (ಹೂಅರ. ೦೭) ; ಕೂರಿಗೆಗೆ ವಿಭೂತಿಯನ್ನು ಬಳಿದು ಥಾಳವಾಗಿ ಕುಂಕುಮ ಲೇಪಿಸಿದರು (ಮತ್ತಮು. ೩೫೭).

[ ದೇ.೫ ತೆಲು. ಡಾಲ./ಮರಾ. ಢಾಳ ]

**ಡಾಳ₂** 'ಡಾಲು₂' ನೋ.

**ಡಾಳ₃** (ನಾ). (ಚಾಮರ ಮೊದಲಾದವನ್ನು) ಬೀಸುವಿಕೆ ; ಗಾಳಿ ಹಾಕುವಿಕೆ.

**ಡಾಳಹಾಕು** = ಬೀಸು ; ಇಕ್ಕು : ಡಾಳಹಾಕುವ ಚಾಮರದ ಪೊಡೆವ ಡೌಡೆಯ (ಹಮ್ಮೀರ. ೩-೩೩ ವ).

[ <ಪ್ರಾ. ಢಾಲ ]

ಡಾಳಕ, ಥಾಳಕ (ನಾ). ೧. ತೋರಿಕೆಯ ನಡೆನುಡಿಯುಳ್ಳವನು ; ಡಾಂಭಿಕ ; ಮೋಸಗಾರ : ಬೋಳೆಯನೆಂದು ನಂಬಬೇಡ ಡಾ[ಪಾಠಾಂ. ಥಾ]ಳಕನವನು ಜಗದ ಬನ್ನಾಣಿ (ಮುಹಾದೇ. ಬಿ. ೦೦೯-೨೪೬) : ನೆಱೆ ಡಾಳಕನಂ ತಗುಳ್ದು ಕೂರ್ತಂಗಜಕೇಳಿಯೊಳ್ ತೊಡರ್ದು (ಪುನ್ನವಿ. ೭-೫) : ಮಾಲೆಯನೊಬ್ಬಗಿಕ್ಕಿದಳೆಂದರಾ ಹೆಣ್ಣ ಮೇಲಾಸೆ ನೃಪಗಾಗದೆಂದು ಡಾಳಕನಾ ಮಂತ್ರಿ ಮತ್ತೊಂದು ತಂತ್ರದಿ ಚಾಳಿಸಿ ಮಡಿದನೇನೆಂಬೆ (ಭರತ. ೫೬-೫). ೨. ಕಪಟ ; ವಂಚನೆ ; ಮೋಸ. 'ಡಾಳಕವಂತ' ಪರಾ. ಥಾಳಕ : ೧. ಥಾಳಕರಿಗರ್ಥಾರ್ಥಿಗಳಿಗೆ ಪೇಳದಿರನುಭವಾಮೃತವ (ಅಮೃತ. ೦೦-೨). ೨. ನಿರುದಯವು ನಿಷ್ಠುರವು ದುರುಳತ್ವ ಥಾಳಕವು (ಸುಶರ. ೦೨-೨). [ ಡಾಳ$_1$ + – ಕ$_3$ ]

ಡಾಳಕತನ, ಥಾಳಕತನ (ನಾ). ಥಳುಕು ; ವಂಚನೆ ; ಮೋಸ : ಕಾಳಗ ಕಿದಿರಾಗಿ ನಿಲ್ಲಲಾಱದೆ ಚಣ್ಣ ಡಾಳಕತನದೊಳೋಡುವನು (ಮೋಹತ. ೧೨-೩೧). ಥಾಳಕತನ : ನಾವು ನಮ್ಮಯ ಸೇವಕಾಂಗದ ಭಾವದಿಂದಿರ ಬೇಕೆನುತ ನಾನಾ ವಿಧದ ಥಾಳಕತನಂಗಳ ನುಡಿದನಲ್ಲವೆನು (ಪ್ರಭುಲೀ. ೫-೩೬) : ಕರ್ಕಶದಿಂ ಕಾಣನೆ ಯಮರಾಟ್ ಜನನಾದಿಯ ಥಾಳಕತನದಿಂ ಥಾಳಕಿಯ ದಿಟ ಮಾಯೆ (ಯೋಗಾಂವಿ. ೨-೩೩) : ಠಕ್ಕು ಥಾಳಕತನ ಬಜುಬೋಸರಣೆ ಬೇಳಕ್ಕೆ ವ್ಯಸಿಕಗಳೆಂಬಿವಕೆ ಸಿಕ್ಕುವರೇ ಕೋವಿದರು (ಉರಾಸಾಂ. ೨೮-೭೦). [ಡಾಳಕ + – ತನ ]

ಡಾಳಕವಂತ (ನಾ). ತೋರಿಕೆಯ ನಡೆನುಡಿಯುಳ್ಳವನು ; ಮೋಸಗಾರ ; ವಂಚಕ : ನೇಣು ಕೊಂದಿತ್ತಂದಾ ದಾಯಗಾರಿಕೆಯಲ್ಲಿ ಹೋಹ ದರ್ಶನ ಡಾಳಕವಂತಂಗೆ (ಸರ್ವಪ. ೧೩೧-೬೭೦). [ ಡಾಳಕ + – ವಂತ ]

ಡಾಳಕಿ, ಥಾಳಕಿ (ನಾ). ಗಯ್ಯಾಳಿ ; ಮೋಸಗಾತಿ : ಸಗ್ಗಂಬಡೆದು ಬಂದ ಪ್ರತ್ಯಕ್ಷಮಿಲ್ಲೆನಬಹುದೆ ಈ ಡಾಳಕಿ (ಸಮ್ಯಕೌ. ೪-೬೫). ಥಾಳಕಿ : ಕರ್ಕಶದಿಂ ಕಾಣನೆ ಯಮರಾಟ್ ಜನನಾದಿಯ ಥಾಳಕತನದಿಂಥಾಳಕಿಯ ದಿಟ ಮಾಯೆ (ಯೋಗಾಂವಿ. ೨-೩೩). [ ಡಾಳಕ + – ಇ$_2$ ]

ಡಾಳಯಿಸು$_1$, ಡಾಳಯ್ಸು, ಡಾಳವಿಸು, ಡಾಳಿಸು$_1$, ಡಾಳ್ಯಸು$_1$, ಥಾಳವಿಸು, ಥಾಳಿಸು$_1$, ಥಾಳ್ಯಸು (ಕ್ರಿ). ೧. ಮಿಂಚು ; ಹೊಳೆ ; ಮಿನುಗು ; ಥಳಥಳಿಸು. ಡಾಳಯ್ಸು : ೧. ಕದಪುಗಳು ನಿರ್ಮಳಪೊದಗಿ ಡಾಳಯ್ಸು[ಪಾಠಾಂ. ಥಾಳ್ಯಸು]ತಿಪ್ಪವು ಲೋಲಲೋಚನೆಯ (ಬಸವು. ೪-೨೩). ಡಾಳವಿಸು : ೧. ಡಾ[ಪಾಠಾಂ. ಥಾ]ಳವಿಪ ಸುಲಿಪಲ್ ಮುಗುಳ್ನಗೆ ಮೇಳವಿಸುವ ಮುಖಪ್ರಸನ್ನತೆ (ಬಸವು. ೩-೨೬). ಡಾಳಿಸು$_1$ : ೧. ನೀಲದ ಸರ ಮಾಣಿಕದ ಕುಚ್ಚು ವಜ್ರದ ಮೇಲುಗೊಂಚಲು ವೈಡೂರ್ಯ ಡಾಳಿಸುತಿಹ ಬಲು ಪಸರದಂಗಡಿಗಳು ಸಾಲುಗೊಂಡೆಸೆದುವು (ಕಂಸವಿ. ೬-೩೮) : ಲೀಲೆಯಿಂ ನರಸಿಂಹನಂತ್ಯದಿದ ರತ್ನ ಡಾಳಿಪೋಲಗದ ಚಾವಡಿಗೆ (ಕಂಸವಿ. ೧೦-೦೨೫) : ಭಾಸುರ ವೇದಮಾತೆ ಗಾಯತ್ರಿ ಡಾಳಿಸೆ ತಾಳ್ದ (ಉಮಾಪ್ರ. ೦-೭೦). ಡಾಳ್ಯಸು$_1$ : ೧. ಕದಪುಗಳು . . . ಡಾಳ್ಯಸು[ಪಾಠಾಂ. ಡಾಳಯ್ಸು, ಥಾಳ್ಯಸು]ತಿಪ್ಪವು ಲೋಲಲೋಚನೆಯು (ಬಸವು. ೪-೨೩); ಎಳಲಿಟ್ಟು ಡಾಳ್ಯಸುತಿಹ ಹಾರವಲ್ಲವುಂ ಸಂತೋಷದಿಂ ಪರಿದು ಪಸರಿಸಲು (ವೀರಶೈ. ೩-೦೫-೭). ಥಾಳವಿಸು : ೧. ಥಾ[ಪಾಠಾಂ. ಡಾ]ಳವಿಪ ಸುಲಿಪಲ್ ಮುಗುಳ್ನಗೆ ಮೇಳವಿಸುವ ಮುಖ ಪ್ರಸನ್ನತೆ (ಬಸವು. ೩-೨೬). ಡಾಳಿಸು$_1$ : ೧. ಶಾಲಿಯು ತೆರೆಯು ತಟ್ಟುಬಟ್ಟೆ ದೀಪದ ಕಾಂತಿ ಥಾಳಿಸುವಂತೆ ಲೋಕದೊಳು ಆ ಲಲಿತಾಂಗನ ತನುಕಾಂತಿ ಪೊದೆದದುಕೂಲದ ಹೊಱಗೆ ರಂಜಿಸಿತು (ಭರತ. ೦-೪೫) : ಮೇಲಿಪ್ಪ ಚಿನ್ನದ ಕಳಶದಿಂ ಗೋಪುರ ಥಾಳಿಸಿ ತುಡು ಕಿತಂಬರವ (ಕಂಸವಿ. ೭-೮೪). ೨. ಪ್ರಕಾಶಗೊಳಿಸು; ಹೊಳಪುಮಾಡು; ಬೆಳಗಿಸು : ಬಾಲಶಶಾಂಕನಂದದ ಪುಲಿಯುಗುರನು ಥಾಳಿಪ ಬಂದಿ ರಂಜಿಸಿತು (ಅಂಜತ. ೪-೪೪). ೩. ಉಜ್ಜಿ ಹರಿತವಾಗಿಸು : ಮಸೆ ; ಸಾಣೆಹಿಡಿ : ಕುಂತದ ಧಾರೆಗಳ ಥಾಳಿಸುವ ನೆಱೆ ಸೊಪ್ಪಾದ ಹಿಳುಕಿನ ಗಱೆಯ ಕೀಲಿಸುವ . . . ವೀರಭಟರೊಪ್ಪಿದರು (ಉಪ್ಪಾಭಿ. ೫-೩೮). ಥಾಳ್ಯಸು : ೧. ನೀಲಗಿರಿಯೊಳಗಾಡುವ ಶಿಶುಗಳೆರಡಾಲಿಂಗಿಸಲು ಭೂಮಿಯು ಥಾಳ್ಯಸುತಡರ್ದುರಿಗಳಿಂ ನಕ್ಷತ್ರಮಾಲೆ ಪಗಲೊಳೆ ತೋರ್ಪುದು (ಕೃಕವ. ೮೯-೩). [ ಡಾಳ$_1$ + – ಇಸು$_3$ ]

ಡಾಳಯಿಸು$_2$ 'ಡಾಳಿಸು$_2$' ನೋ.

ಡಾಳಯ್ಸು 'ಡಾಳಯಿಸು$_1$' ನೋ.

ಡಾಳವಿಡಿ (ಕ್ರಿ). ಉಜ್ಜಿ ಬೆಳಗಿಸು ; ಮೆರುಗುಕೊಡು : ಬಗೆಗೊಳಿಪ ಡಾಳವಿಡಿದಿರ್ದ ಕಟ್ಟಾಣಿಮುತ್ತಿನ ಕಂಠಮಾಲೆ (ಸೌಂದಪು. ೪-೨೨). [ ಡಾಳ$_1$ + ಪಿಡಿ$_1$ ]

ಡಾಳವಿಸು 'ಡಾಳಯಿಸು$_1$' ನೋ.

ಡಾಳಾಹಿ (ಕ್ರಿ). ಹೊಳೆಯುವ ಮೈಯನ್ನುಳ್ಳ ಹಾವು; ಕೃಷ್ಣಸರ್ಪ (?) : ಮೊಲೆಪುತ್ತುಗಳ ಬಳಿಯೊಳು ಡಾಳಾಹಿ ಕಣ್ಗೊಳಿಸದೆಯಿಪ್ಪ ನಿಕ್ಷೇಪ ನೆಲೆಯೆಂದು ವಿಟರು ಸೆಳ್ಳುಗುರ್ಗಳಿಂ ತೊ[ತೋ]ಡುವರೆಳಸಿ ಗಣಿಕೆಯರ ಕುಚವ (ಗೊಮ್ಮಟ. ೨-೯೩).

[ ? ಇದು 'ಕಾಳಾಹಿ'ಯ ಅಪಲಿಖಿತವಿರಬಹುದು ]

ಡಾಳಿ$_1$ (ನಾ). = ಡಾಳ : ಪ್ರಾಣೇಶನಂ ನೆರೆದಂತೆ ಕಳುಪಿ ತತ್ ಕಾಲರತಿ ಚಿಹ್ನದುಂ ಮತ್ತೊರ್ವನೊಳ್ ಪುಸಿದು ಡಾಳಿಯೊಲಿದಿಂತಿರ್ದಳು (ಜಮಿ. ೦೦-೬೪). [ ಡಾಳ$_1$ + – ಇ$_2$ ]

ಡಾಳಿ$_2$ 'ದಾಳಿ' ನೋ.

ಡಾಳಿಂಬ 'ದಾಳಿಂಬ' ನೋ.

ಡಾಳಿಂಬೆ 'ದಾಳಿಂಬ' ನೋ.

ಡಾಳಿಂಬ್ರ 'ದಾಳಿಂಬ' ನೋ.

ಡಾಳಿಮ 'ದಾಳಿಂಬ' ನೋ.

ಡಾಳಿಸು$_1$ 'ಡಾಳಯಿಸು$_1$' ನೋ.

ಡಾಳಿಸು$_2$, ಡಾಳಯಿಸು$_2$, ಡಾಳ್ಯಸು$_2$, ಥಾಳಯಿಸು, ಥಾಳಿಸು$_2$ (ಕ್ರಿ). ೧. (ಚಾಮರ, ಬೀಸಣಿಗೆ ಮುಂತಾದುವನ್ನು) ಬೀಸು ; ಗಾಳಿ ಹಾಕು : ಅಂಗಜನೃಪಂಗೆ ಬನವೆಂಬಂಗನೆ ಡಾಳಿಸುವ ಚಾರುಚಾಮರಮದೆನಲ್ . . . ಎಸೆದುದಲ್ಲಿ ಪೂಗಪುಹೀಜಂ (ಉದ್ಭಟ. ೯-೦೬) ; ಚಕಚಕಿತಮಾಗಿ ಡಾಳಿಪ ಚಾಮರಂಗಳಿಂ (ಜನ್ನಕಾ. ೩-೫೦) ; ಗಾಯತ್ರಿ ಸಾವಿತ್ರಿಯರು ರಂಜಿಸಿದರಾ ಮಹಾದೇವನೆಡಬಲದಲ್ಲಿ ಡಾಳಿಸುತ ಚಾಮರವನೆಸಕದಿಂದ (ಸೌಂದಪು. ೦-೩೫) : ನೀಲಗಿರಿಯ ಮೇಲೆ ಮುಸುಕಿದ ಸಿತಮೇಘದಾಲಮೆಂದೆನೆ ಡಾಳಿಸುವ ಮೇಲುಚವರಗಳು ಮೆಱೆದವು (ಉರಾಸಾಂ. ೪೨-೪೪) ; ಬೆರಳ ಮುದ್ರಿಕೆಯ ಹೊಳಹು ದೊಱೆಯುತ ಶುಭ್ರಚಮರವ ಡಾಳಿಸುತಳಿವಂಗಳೆಸದರರ್ತಿಯಲಿ (ಕಂಸವಿ. ೮-೨೪). ೨. ಸುತ್ತಲೂ ಬೀರು ; ಹರಡು ; ವ್ಯಾಪಿಸು : ಗಾಳಿಯಲಿ ಬೆಳಕು ಬಣ್ಣಗಳಲೆಯನೊಡಸಿ ಕಣ್ಕಟ್ಟು ಮೋಹನವ ಡಾಳಿಸುವ ನಾಡು (ದ್ರಾಕ್ಷಿದಾ. ೫-೫). ೩. (ಪಗಡೆಯ ದಾಳವನ್ನು) ಬೀಸಿ ಹಾಕು ; ಎಸೆ ; ಉರುಳಿಸು : ಕಾಲೋಚಿತ ಕಿತವರನನ್ಯತಾಲಯರಂ ಪೊರಗೆ ಕರೆದು ಪಣಬಂದವನೊಲ್ದಾಳೋಚಿಸಿ ಡಾಳಿಸಿದಂ ಸೋಲಕ್ಕಿರ್ದಕ್ಷಯುಗಳಮಂ ನಳಭೂಪಂ (ನಳಚಂ. ೫೦೫) : ಡಾಳಯಿಸು$_2$ : ೧. ಇಕ್ಕೆಲದಾಲವಟ್ಟಂ ಚವರ ಕುಂಚಂ ಡಾ[ಪಾಠಾಂ. ಥಾ]ಳಯಿಸೆ ಗದ್ದುಗೆಯ ಮೇಲಿಹ ಬಿಜ್ಜಳನ ಕಂಡು (ಬಸವು. ೬೦-೩೦) : ಡಾಳಯಿಸುತಿಹ ಕನಕ ಚಾಮರದೋಳಿ (ಕಂಳದಾ. ೯-೨೨). ಡಾಳ್ಯಸು$_2$ : ೧. ಬಾಲೆಯರು ಬಣ್ಣಿಸಿ ಚಮರವ ಡಾಳ್ಯಸುತ ಬಂದರು (ಶ್ರೀಪಾಲ. ೦೩-೦೯೭). ಥಾಳಯಿಸು : ೧. ಚವರ ಕುಂಚಂ ಥಾ[ಪಾಠಾಂ. ಡಾ]ಳಯಿಸೆ (ಬಸವು. ೩೧-೩೦). ಥಾಳಿಸು$_2$ : ೧. ಥಾಳಿ

ಸುವ ಚವುರಿ ಸೀಗುರಿಗಳೊಗ್ಗಿನ ಕುಣಿಯುಹುವಿಡಿದು ನಡೆದು (ಹಕಶಾ. ೮-೭೦) : ಲೋಚನಪೃಥ್ವಿಕೆಗಳು ಢಾಳಿಸುತಿರ್ಪಾ ಚವುರಗಳೆಂಬಂತೆ ಖೇಚರ ಭೂಚರಸತಿಯರ ಕಣ್ಗಾ ಮರೀಚಿಯೊಪ್ಪಿದುವೀಶ್ವರಗೆ (ಶ್ರೀಪಾಂ. ೦೪-೮೦) : ನಳಿನಮುಖಿಯರು ಚವರಗಳನೆಡಬಲದೊಳಗೆ ಢಾಳಿಸುತಿಯ್ಯುರಲು (ಕುಮಾಸಾಂ. ೧೦-೭೦) ; ಎತ್ತುವಾರತಿ ಸೇಸೆ ಇಡುವ ನಿವಾಳಿ ಢಾಳಿಸುವ ಚಾಮರಂಗಳಿಂ (ಭರತ. ೩-೫೦): ಚಂದ್ರಾದಿತ್ಯರುಭಯಚಾಮರಗಳಂ ಪಿಡಿದು ಢಾಳಿಸೆ (ಚಬಪು. ೨-೩೦). ೪. ಅ ಲು ಬು ; ತೊಳೆ ; ಜಾಲಾಡಿ ಹೊಳೆಯುವಂತೆ ಮಾಡು : ಅಟುವೆಂಬ ಮೂಸೆಯೊಳಗಿಟ್ಟು ಪರವು ಜ್ಞಾನದಿಂ ಕರಗಿಸಿ ಸುಮನವೆಂಬ ನಿರ್ಮಲೋದಕದಲ್ಲಿ ಢಾಳಿಸಿದ ಶುದ್ಧ ಸುವರ್ಣ (ಅರವ. ೦೩೮). [ ಡಾಳ್$_3$ + – ಇಸು$_1$ ]

**ಡಾಳು** 'ಡಾಲು$_2$' ನೋ.

**ಡಾಳೆ, ಢಾಳೆ** (ನಾ). ಮೋಸಗಾರ್ತಿ ; ವಂಚಕಿ ; ಥಳುಕುಂಗಾತಿ ; ಗಯ್ಯಾಳಿ : ಮಯ್ಯನೆ ಮಾಱು ವಾಕೆ ಭವವಂ ಪೇಟ್ ಮಾಡಿಳೆ ಸಂತೆಯೊಳ್ ಧನಕಸಾನಾಱಿನಿವಳ್ಗೆ ದೈವವಱಿಗ್ನೀ ಸೂಳೆಯುಂ ಡಾಳೆಯುಂ (ರೀಶಾವ. ೨-೦೦೩) ; ಚಂಡಪ್ರದ್ಯೋತನೆಂಬರಸಂ ಆಕೆಯನೆಟ್ಟುದುಕೊಳ್ಳೆನೆಂದು . . . ತನ್ನ ಪೆರ್ಗಡೆಗಳಂ ಡಾ[ಡಾಂ. ತಾ] ಳೆಯರಪ್ಪ ಸಬ್ಬವದ ಪೆಂಡಿರುಮಂ ಪ್ರಭಾವತಿಯಲ್ಲಿಗಟ್ಟಿ (ಜೀವಸಂ. ೨೨೭-೩೫ ಪ) : ಅಟ್ ನೇಹಮಂ ಮೆಱೆದು ಹೊಳ್ಳಿಸಿ ಬಿಟ್ಟಪೆನೆಂಬ ಡಾಳೆಯಂ ಸುಡುವುದು ಸುಟ್ಟು ತೂಱುವುದು ತೂಱಿದ ಬೂದಿಯ ಹಿಟ್ಟುಗುಟ್ಟಿ ಬೊಟ್ಟಿಡುವುದು (ಅಸಂಪು. ೮-೫೩) ; ಕೂಸಾನೆ . . . ದಾಂಟುವುದಿಡುಗುಡ್ಡಗಳ ಗಿರಿಗಳನಿಕ್ಕಿ ದಾಂಟುವ ಡಾಳೆಯಂದದೊಳು (ಭರತ. ೩೭-೭೩). **ಢಾಳೆ**: ಇಳಿಕೆಯ್ಯುದು ಹೊಳ್ಳಿಸಿ ತಿಂಬ ಢಾಳೆಯಂ (ಪಾರಪು. ೧೫-೦೦೭) ; ಪುಸಿಯುಳಿವಂ ನಿರ್ಮಿಸಿ ತಮಗಿಲ್ಲದ ದೇಂಟಮನುಂಟುಮಾಡಿ . . . ಮುಟ್ಟದ ಮುನ್ನಮೆನ್ನರಂ ದೆಸೆವಲಿಗೆಯ್ವರೇನೋ ಕಡು ಢಾಳೆಯರೊಂದಿರುಳಲ್ಲಿ ಸೂಳೆಯರ್ (ಧರ್ಮಾ. ೨-೦೦೩) : ಮುತ್ತಿನ ಹಾರವ ಕಳ್ದರೆಂದೆಮಗಾಪತ್ತನೆನಿಸಿದ ಢಾಳೆಯನು ಅತ್ತಿತ್ತ ಹೋಗದಂದದಿ ಕಾದುಕೊಂಡಿರಿ (ಪ್ರಭಂಜ. ೦-೦೭೯).

[ ಡಾಳ್$_1$ + – ಎ$_2$ ]

**ಡಾಳೆವೆಂಡತಿ** (ನಾ). ಧೂರ್ತಳಾದ ಹೆಣ್ಣು ; ಹಾದರಗಿತ್ತಿ : ತೊಡಿಗೆ ಸುಸರ ಹಾರದ ಮುತ್ತಿನಂತೆ ಸರದೊಳಳವಡುವ ಡಾಳೆವೆಂಡತಿಯಂತೆ ಕೈಸನ್ನೆಯುಱಿವ ಜಾತಿ ಜಾಯಿಲಂಗಳಂ (ಅನಂಪು. ೨-೩೦ ಪ).

[ ಡಾಳೆ + ವೆಂಡತಿ (<ಪೆಂಡತಿ) ]

**ಡಾಳೈಸು$_1$** 'ಡಾಳಯಿಸು$_1$' ನೋ.

**ಡಾಳೈಸು$_2$** 'ಡಾಳಿಸು$_2$' ನೋ.

**ಡಿಂಕಿಸು** (ಕ್ರಿ). (?) : ಉತ್ತರಗುಣಂಗಳವನಲ್ಲಮನಾಂ ಡಿಂಕಿಸದೆ ನೆನವಱೆ ನನಾಚಾರಂಗಳಂ (ರಕ್ಷ. ೩-೦೫) . [ ? ]

**ಡಿಂಗರ** (ನಾ). ೧. ಸೇವಕ ; ಅಡಿಯಾಳು ; ಕಿಂಕರ ; ಭಕ್ತ : ಪರ್ವರೆಂ ದೊಡೆ ಪಾಪಂ ಬಡೆ ಸೋಲಂತದು ಪೇಟಾ ತುಡುಗುಣಿಯೋ ಕಿಂವ ಗೊರವನೋ ಡಿಂಗರನೋ [ಪಾಠಾಂ. ಪೇಟ್‌ವಿಂದು] (ಸುಮ. ೦೦-೮೮) ; ಹರಶರಣೆಂಬಂ ಭಕ್ತರ ಕರುಣವ ಕರಣೆಂಬ ಶಿವನ ಡಿಂಗರನೆಂಬುಂ ಪಿರಿಯಣ್ಣ ಸಾವಿದೇವನ ಪರಮಾನುಜ್ಞೆಯುನೆ ತಾಳ್ದಿದಂ ಮುದ್ದರಸಂ (ಸೌಇಇ. IX-1, ೨೯೭-೩೦ ; 1177) ; ಕುಲಮುಳ್ಳ ನರಂ ಪೆಱರೆಂಜಲನುಂಡುಂಡೆಲ್ಲಮುವನ ಡಿಂಗರನೆಂಬರು ಸಲೆಯಡಗಂ ನಾಯೆಂಜಲ ನಲಿದಲಸದೆ ತಿಂದೆಂದು ನಾಯ ಡಿಂಗರನಲ್ತೆ (ಪಸಾರ. ೫೯೮-೦೪). ೨. ವಂಚಕ ; ಮೋಸಗಾರ; ಠಕ್ಕ. ೩. ನೀಚ ; ಅಲ್ಪಮನುಷ್ಯ ; ಕ್ಷುದ್ರ. ೪. ಬೊಜ್ಜು ದೇಹವುಳ್ಳವನು ; ದಪ್ಪವಾದ ಶರೀರವುಳ್ಳವನು ; ಸ್ಥೂಲಕಾಯ ; ಡೊಣಪ. [ ಸಂ. ]

**ಡಿಂಗರಿಗ** (ನಾ). = ಡಿಂಗರ ೧ : ಒಪ್ಪ ನಂಬದ ಕರಣರ ಡಿಂಗರಿಗ ನಾನಪ್ಪ (ಬಸವ. ೯೭೪) : ಶಿವನ ಡಿಂಗರಿಗನಹಿಗರ್ ಗುಹದಾದು ನೋಡ (ಜಡರ. ೧೩೩-೨೨) ; ಸಕಲಕ್ಕೆ ರಾಜಾಧಿರಾಜನಾ ತ್ರ್ಯಂಬಕಂ ತ್ರಿಪುರಾರಿಯಾತಂಗೆ ಡಿಂಗರಿಗರಂಜಾಜಭವಾಚ್ಯುತ_ದ್ಯುಮಿಲರು (ಕೆರ. ೦೦-೪೧) ; ಕೊಲುವ ಮನವೇ ಬಿಸುಡು ಚಕ್ರವನೆನ್ನ ಕಾಯದಲಿ ಅಳುಕ ಕೂದಲು ಹಱಿದುದಾದರೆ ಬಳಿಕ ನಾ ಡಿಂಗರಿಗನಲ್ಲ (ಕಾವ್ಯರ. ೭-೪೩) , ಡಂಗುರವ ಸಾಱಿ ಹರಿಯು ಡಿಂಗರಿಗರೆಲ್ಲರು ಭೂಮಂಡಲದಿ ಪಾಡು ರಂಗವಿಟ್ಠಲ ಪರದೈವವೆಂದು (ಪುರಂದ. ೦ ೫೩-೦) ; ಸಂಗೀತರೋಳು ಶಿವಿ ವಿಜಯವಿಠಲರೇಯನ ಡಿಂಗರಿಗನಾಗದೆ ಸಕಲ ಸೌಖ್ಯ ಬಾರದು (ವಿಜಸು. ೮೭-೦); ಇಲ್ಲದ್ದರಲ್ಲಿ ಬಾಯಿಹಾಕುವ ಊರ ಡಿಂಗರಿಗ ಅವ (ಸಂಕ್ಷಿಸ. ೪೩). 'ಶನಿಯ' ಎಂಬ ಅರ್ಥವಾನುಪ ಕಿಂಕರನೂ ಕಿನ್ನರವರ್ಗಕ್ಕೆ ಸೇರಿದ ಒಬ್ಬ ಅತಿಮಾನುಷ ಡಿಂಗರಿಗನೂ ಇದ್ದರು (ಬಗಾಕ. ೭).

[ ಡಿಂಗರ + – ಇಗ ]

**ಡಿಂಗಿ** (ನಾ). ದೋಣಿ ನಡೆಯುಲು ಹಾಯಿಬಟ್ಟೆಯನ್ನು ಹಗ್ಗಗಳಿಂದ ಬಿಗಿಯಲು ಉಪಯೋಗಿಸುವ ಕೂವೆಮರ ; ಕೂಪಕ. 'ಡಿಂಗಿ ದೋಣಿ' ಪರಾ. [ ←ಪಾರ. ಡಿಂಗೀ ]

**ಡಿಂಗಿದೋಣಿ** (ನಾ). ಹಾಯಿ ಕಟ್ಟಿದ ದೋಣಿ; ಕೂವೆಮರವುಳ್ಳ ದೋಣಿ : ನದಿಯ ಮಧ್ಯೆ ಸರಿಯಾಗಿ ಒಂದು ಡಿಂಗಿದೋಣಿ ವೇಗ ಪ್ರವಾಹದಲ್ಲಿ ಓಡುತ್ತಿದೆ (ನಿಲಂಧ. II, ೨೦೭). [ ಡಿಂಗಿ + ದೋಣಿ$_3$ ]

**ಡಿಂಗು$_1$** (ನಾ). ಒಂದು ಕ್ಷುದ್ರ ದೇವತೆ: ಗಾಡಿಗ ಡಿಂಗು [ಪಾಠಾಂ. ಬು] ಗಂಗೆ ಚಿಕ್ಕು ಮುಟ್ಟಗೆ ಹಸುರಂಬಲಿ ಮುಟ್ಟಗೆ ಹುರಿಬುತ್ತಿಯ ಬೇಡಿ ಮನುಷ್ಯರ ಹಿಡಿದು ಪೀಡಿಸಿ ತಮ್ಮ ಬಸುರ್ಗೆ ಕಾಣದೆ ಕಾಡಾಡಿದ ಕೂಳಂಬಲಿಯನಾಯ್ದು ಕುಱುಕುವ ಹೇಸಿದೈವಂಗಳ ಬೇಡಿ ಬೇಡಿ ನಿರರ್ಥಕ ಕೆಡದೇಡ (ಬಸವ. ೩೫೭). [ ? ]

**ಡಿಂಗು$_2$** 'ಧಿಂಗು' ನೋ.

**ಡಿಂಡ** 'ದಿಂಡ$_4$' ನೋ.

**ಡಿಂಡಲ** 'ದಿಂಡ$_1$' ನೋ.

**ಡಿಂಡಿಗ** 'ದಿಂಡ$_1$' ನೋ.

**ಡಿಂಡಿಮ** (ನಾ). ೧. (ಡಿಮ್, ಡಿಮ್ ಎಂಬ ಶಬ್ದಮಾಡುವ) ಒಂದು ಬಗೆಯ ಚರ್ಮವಾದ್ಯ ; ಡಪ್ಪಡೆ : "ಡಿಂಡಿಮವೆನಲು ಪೊರೆವ ಡೌಡೆಯನಿಕ್ಕು" (ಮಂಗರಾ. ೨೪-೭): ಡಿಂಡಿಮರವದೊಳ್ ವನವೇತಂಡಮನೆಚ್ಚರಿಸುತಿರ್ಪವೋಲ್ (ಶಾಂಪೂ. ೦೯೭): ಎಱಗನ ಗಂಡ ಡಿಂಡಿಮದ ಡಂಬರವೊಪ್ಪುವುದೀ ಧರಿತ್ರಿಯೊಳ್ (ಎಕ. V, ಅರಸೀ. ೦೩೮-೩೦; 1176); ಕೋಟಿ ಡಿಂಡಿಮಂಗಳನು ಬಾರಿಸೆ ಗೋಟು ತುಂಬಿತು ಜಗದ ಕಿವಿಗಳ ಪಾಟ ಹೊಟ್ಟಿತು (ಕೌಶಿಚ. ೨೪-೪). ೨. [ಛಂದ] ಒಂದು ವೃತ್ತದ ಹೆಸರು : (ಕ). [ ಸಂ. ]

**ಡಿಂಡೀರ** (ನಾ). ಕಡಲನಾಲಗೆ ; ನೊರೆ ; ಫೇನ ; ಬುರುಗು: "ಫನತರ ಫೇನಂ ಡಿಂಡೀರ ನಾಮಂ" (ಪಶ್ಚಕೋ. ೨೨-೪). "ಡಿಂಡೀರಮನೆ ಫೇನಮೆನೆ ನೊರೆಯಕ್ಕು" (ಮಂಗರಾ. ೦೩೩-೦೩). "ಡಿಂಡೀರಃ, ಅಬ್ಧಿಕಫಃ, ಫೇನಃ – ಸಮುದ್ರದ ನೊರೆ" (ನಿಘಂ. ೩೩೨) : ಡಿಂಡೀರಪಾಂಡುರ ಶುಭ್ರವಲ್ಲರಿಯಿಂ . . . ವಿದ್ರುಮಂ ಚಂಡ್ ಪಾರ್ ಸಲಿಲ . . . ದ್ವಿಗುಣಿಸುತ್ತಿರ್ಪಾ ಮಹಾಂಭೋಧಿಯಂ ಕಂಡು (ಅಗಿ. ೭-೫೬) . ಸಚರಾಚರವ್ಯಾಪಕ ಕೋಟಿ ತೋಱುತುಂಗುವುದು ಡಿಂಡೀರಜಲದ ಪೋಲು (ನಿಘಾಗಿ. ೦೦-೦೪-೨೫), ಡಿಂಡೀರ ಬಂದೆಯ ಮಂಡಳಗಳಂ ಪೊಱವ ಲಂಬನಾಳ್ವ ಪೊಳೆಯಂ ಪೇಳ್ಬಣ್ಣಸಬ್ಬಕರ್ಪಾವೇ (ಅಕಾರ ೨೦)

[ ಸಂ. ]

**ಡಿಂಡೀರಪಾಂಡುರ** (ಗು). ನೊರೆಯಂತೆ ಬೆಳ್ಳಗಿರುವ,–ಬಿಳುಪಾದ : ನಿರವದ್ಯಾನ್ವಯನುದ್ಭಮುದ್ಧತ ಮಹಾಕ್ಷೀರಾಬ್ಧಿ ಡಿಂಡೀರಪಾಂಡುರಂ . . . ನೆರೆಗೊಳ್ಗಾಚಂದ್ರತಾರಂಬರಂ (ಕವಿರಾ. ೩-೨೩೬). [ ಡಿಂಡೀರ + ಪಾಂಡುರ ]

**ಡಿಂಡೀರಪಿಂಡ** (ನಾ). ನೊರೆಯ ಮುದ್ದೆ,–ಉಂಡೆ ; ಫೇನರಾಶಿ : ಏಕಾವಳೀವಿಳಾಸಾವಹಸಿತಾವೃತ ಡಿಂಡೀರಪಿಂಡಪಾಂಡುರಂ (ಶಾಂತಿಪು. ೭-೦೩ ವ): ಕಂಡರಿಸಿ ವಳುಕಿನಿಂದಮಖಂಡಿತಶೌಚಗುಣ ಸುರನದೀಸಮುಪ ಚಿತಂ ಡಿಂಡೀರಪಿಂಡಮೆನಿಸಿ ಕಮಂಡಲು ಸೊಗಯಿಪುದು ಬಾಳಚಂದ್ರ ವ್ರತಿಯಾ (ಮಲ್ಲಿಪು. ೧೧-೧೩೬). [ ಡಿಂಡೀರ + ಪಿಂಡ ]

**ಡಿಂಬ** (ಗು). ೧. ಅಲ್ಪವಾದ ; ಸಣ್ಣದಾದ. 'ಡಿಂಬಾಹವ' ಪರಾ. (ನಾ). ೨. ಮೈ ; ದೇಹ; ಶರೀರ: ಸಂಸಾರ ಮಾಯಾಪಾಶವ ಬಿಡಲೊಲ್ಲದ ಡಿಂಬವ ನೆಚ್ಚಿ ಕೆಟ್ಟೆಯಲ್ಲಾ ಹಂಸಾ (ಬಸಿಹ. ೧೧-೨೫); ಕುಂತೀ ಮಕ್ಕಳೆಂದೊಡೆ ಹರಹಿಕೊಂಬಿರಿ ಡಿಂಬವೆಮ್ಮಲಿ ಜೀವವವದಿರಲಿ (ಕುಮಾ.ಉ. ೫-೧೮) ; ಎವೆ ಮಿಡುಕದವನಿವರು ಪೀಠಾವಳಿಯೊಳಿರ್ದರು ಬಳಿಯ ಡಿಂಬದೊಳು (ಜೀವಂಧ. ೮-೭೦) ; ಕಂಬ ಮುಱಿದು ಡಿಂಬ ಬಿದ್ದು ಅಂಬರಕೆ ಹಾಱಿಹೋಯಿತು (ಪುರಂದ. ೧-೧೦೨-೬) ; ಈಸು ಪುತ್ರರೆಸೆ ಪವಡಿಸಿದನೆಂದಬ್ಬಿಸಲ್ ಶ್ವಾಸವಿಲ್ಲದ ಡಿಂಬವಿರೆ··ಕಂಡು (ಜೈಬಪು. ೬-೨೩) ; ವಿಷಯಂಗಳಿಗೆ ಕಿವಿ ಜೋತುಬಿದ್ದು ಈ ಡಿಂಬವನ್ನು ಮೋಹಿಸದಿರಲವು ಪ್ರಾಣ (ವಿರಾಕ್ಕ. ೧೮-೭). ೩. ಎಳೆವಯಸ್ಸಿನ ಮಗು ಅಥವಾ ಪ್ರಾಣಿ ; ಶಿಶು. ೪. ವಿಪ್ಲವ ; ದಂಗೆ ; ಲೂಟಿ. 'ಡಿಂಬ ಯುದ್ಧ' ಪರಾ. ೫. ಅತಿವೃಷ್ಟಿ, ಅನಾವೃಷ್ಟಿ, ಇಲಿಹೆಗ್ಗಣಗಳ ಕಾಟ, ಮಿಡಿತೆ, ಹಕ್ಕಿ ಮೊದಲಾದುವುಗಳ ಹಾವಳಿ ಮತ್ತು ಪರ ರಾಜರ ಮುತ್ತಿಗೆಗಳಿಂದಾಗುವ ತೊಂದರೆ ; ಈತಿಬಾಧೆ ; ಡಾಮರ: (ಶ). ೬. ಗೋಲಾಕಾರದ ವಸ್ತು; ಉರುಳಿ; ಚೆಂಡು. ೭. ಮೊಟ್ಟೆ; ತತ್ತಿ. ೮. ದಿಬ್ಬ ; ತಿಟ್ಟು (?): ತಲೆ ಕಾಮನಗುಡ್ಡದ ಬೊಂಬೆಗಲ್ಲ ಮಂತ್ತು ಡಿಂಬದ ಮೇಲೆ ಬಗುತನ ಕಟ್ಟಿಗೆ ಬ (ಎಕ. III, ತಿರುಮು. ೭೩-೪೫; 1748). [ ಸಂ. ]

**ಡಿಂಬಯುದ್ಧ** (ನಾ). ೧. ಸಣ್ಣ ಕದನ ; ಕ್ಷುಲ್ಲಕ ಕಲಹ : "ಸಣ್ಣ ಸಣ್ಣ ಅಥವಾ ಹೊರವಲಯದಲ್ಲಿರುವ ಸೈನಿಕ ಪಂಗಡಗಳಿಗೆ ಅನಿಯತವಾಗಿ, ಮುನ್ನಿರೀಕ್ಷೆಯಿಲ್ಲದೆ, ನಡೆಯುವ ಹೋರಾಟ; ಡಿಂಬಯುದ್ಧ; ಸಣ್ಣಕಾದಾಟ, ಅಲ್ಪ ಕದನ, ಹೊಡೆದಾಟ; (ಬುದ್ಧಿವಂತಿಕೆ, ತರ್ಕ,ಮೊ. ಗಳ) ವಾಗ್ಯುದ್ಧ" (Skirmish. ಇಂಕನ್.). ೨. ದಂಗೆ ; ಲೂಟಿ ; ಕೊಳ್ಳೆ. 'ಡಿಂಬಾಹವ' ಪರಾ. [ ಡಿಂಬ + ಯುದ್ಧ ]

**ಡಿಂಬಾಹವ** (ನಾ). = ಡಿಂಬಯುದ್ಧ ೨ : (ರೀವ್). [ ಡಿಂಬ + ಆಹವ ]

**ಡಿಂಬು** (ನಾ). ೧. ಮೈ ; ದೇಹ ; ಶರೀರ : ಕುಂಭಿನಿಪತಿ ನಮ್ಮ ವಿಜಯವಿಠಲರೇಯ ಡಿಂಬಿನೊಳಗೆ ನಿಂದು ಪಾಲಿಸುವನು ನಿತ್ಯ (ವಿಜಾಸು. ೩೦-೪). ೨. ಸ್ವಲ್ಪ ಎತ್ತರವಾದ ಸ್ಥಳ ; ದಿಬ್ಬ ; ತಿಟ್ಟು : ಆ ಮಹಾ ರಭಸಕ್ಕೆ . . . ಪರ್ವತದಾ ಮಹಾಡಿಂಬಿನಲ್ಲಿ ಪಾಂಡುವಿನರಸಿ ನಡುಗಿದಳು (ಸಂಭಪ ೧೫-೭೩). ೩. ದೀಪದ ಆಧಾರ ; ದೀಪವನ್ನಿಡುವ ಸಣ್ಣ ಪೀಠ : (ಶ). [ <ಸಂ. ಡಿಂಬ ]

**ಡಿಂಬೆ** (ನಾ). ಮೂಗಿನ ಹೊರಳೆಗಳ ನಡುವಿನ ಸಿಂಬೆ (?) : ತುಂಬಿದ ಕಾನಗಳರ ಬನ್ನಿ ರಾಯನ ತುಂಬಿದ ಬವರಿಗಳಂತೆ ಕೆಂಬಲ್ಲ ಥಾಳದಂತರಸನ ಮೂಗಿನ ಡಿಂಬೆಯಂತೆಂದು ಪಾಡಿದಳು (ಶರಡ. ೧೧-೭೧). [ ? ]

**ಡಿಂಭ** (ನಾ). ೧. ಆಗ ತಾನೆ ಹುಟ್ಟಿದ ಕೂಸು ಅಥವಾ ಪ್ರಾಣಿಗಳ ಮರಿ: ಒಗರು ಚಿಗುರುಗಳುಂಡ ಪಿಕ ಡಿಂಭಗಳು ಚದುರುತ ನುಡಿವವೋಲ್ (ಅನಂತಾ. ೨-೧-೩೮). ೨. ಮೈ ; ದೇಹ ; ಶರೀರ : ಅಕ್ಕ ಮರುಳೌ ಚಿತ್ರವವಳಲಿ ಸಿಕ್ಕಿ ಬೇರ್ವರಿಯುತ್ತು ಬಂದೀ ಮಿಕ್ಕ ಡಿಂಭ[ಪಾಠಾಂ. ಬ]ಕೆ ಮದುವೆಯುಂಟೇ ಮನವ ಬೇಱಿಂಸಿ (ಕುವ್ಯಾವಿ. ೨-೪೬) ; ಡಿಂಭದೊಳು ಶಬ್ದ ವಾಗಾದಿ ಶ್ರೋತ್ರಗಳಲ್ಲಿ ಇಂಬಾಗಿ ತತ್ವೇಶರೆಲ್ಲ ತುಂಬಿಹರೊ (ಪುರಂದ. ೧-೨೧೫-೪) : ಡಿಂಭದೊಳು ಕಾಂಬುದೆಂದಸಮುಗ್ರವಲ್ಲವಿದು ಕುಂಭದೊಳ ಗಡಗಿದ್ದರೂ ಅಲ್ಪವಲ್ಲ (ಮರಿಚೀ. ೩೬-೧). ೩. ತಿಳಿಗೇಡಿ ; ದಡ್ಡ ; ಮೂರ್ಖ. ೪. ಗರ್ಭಾಶಯ ; ಗರ್ಭಕೋಶ : ಡಿಂಭಗಳನೊಡೆದು ಬನ್ನಿ ಕಂಭಗಳನೊಡೆದುಬನ್ನಿ (ಗಿರಿ. ೫೬-೧೧). [ ಸಂ. ]

**ಡಿಂಭಕ** (ನಾ). = ಡಿಂಭ. [ ಸಂ. ]

**ಡಿಂಭೆ** (ನಾ). ಮಗು ; ಶಿಶು. [ ಸಂ. ಡಿಂಭಾ ]

**ಡಿಕಮಲಿ, ಡಿಕ್ಕಿಮಾಲೆ, ದಿಕಾಮಲಿ, ದಿಕ್ಕಾಮಲ್ಲಿ** (ನಾ). ಒಂದು ಬಗೆಯ ಮರ ಮತ್ತು ಆ ಮರದಿಂದ ತೆಗೆದ ಒಂದು ಗಂದಿಗದ್ರವ್ಯ: ಸೂರ್ತಿ ಚವಾಳಾ ಮಣದ ಮೇಲೆ ಕಿಮ್ಮತ್ತು ಇರತಕ್ಕ ಜೀನಸಗಳು ೧ ಅಕ್ಕಲಹಾರ . . . ಡಿಕಮಲಿ (ಕಾರಿಂಗ) (ಮುಂಬಮ್ಯಾ. ೮೨೫). **ಡಿಕ್ಕಿಮಾಲೆ:** ಕಡಲೆಕಾಳಿನಷ್ಟು ಡಿಕ್ಕಿಮಾಲೆಯನ್ನು ಹಾಲಲ್ಲಿ ತೇದು ಕುಡಿಸುವುದು (ಖನಿಮ. ೮). **ದಿಕಾಮಲಿ:** ಬಿಕ್ಕಿಗಿಡ, ದಿಕಾಮಲಿ, ಕಂಬಿಮೇಣ (ಮೈಜಿಗಿ. ೩೮-೭೬೦). **ದಿಕ್ಕಾಮಲ್ಲಿ:** (ಶ). [ ←ಹಿಂ. ಡಿಕಾಮಾಲೀ; ಮರಾ.ಡಿಕಾಮಾಲೀ, ಡಿಕೇಮಾಲೀ, ಡಿಂಕೇಮಾಲೀ ]

**ಡಿಕಿ** 'ಡಿಕ್ರಿ' ನೋ.

**ಡಿಕಾವು** 'ದಿವಾವು' ನೋ.

**ಡಿಕ್ಕಿ, ಢಿಕ್ಕಿ** (ನಾ). ೧. ತಲೆಯಿಂದ ತಲೆಯನ್ನು ತಾಟಿಸುವಿಕೆ. 'ಡಿಕ್ಕಿ ಹೊಡೆ' ಪರಾ. ೨. ಒಂದು ವಸ್ತುವು ಇನ್ನೊಂದು ವಸ್ತುವನ್ನು ಜೋರಾಗಿ ತಾಗುವುದು, – ಅಪ್ಪಳಿಸುವುದು, – ಘಟ್ಟಿಸುವುದು : ಮುಂಬಯಿಯಲ್ಲಿ ಇಂತಹ "ಡಿಕ್ಕಿ"ಗಳು ದಿನಾಲೂ ನೂರಾರು ಆಗುತ್ತವೆ (ಎಡಹ. ೧). ೩. (ಆಲಂ) ಮಾತಿನಲ್ಲಿ ಹೊಂದಾಣಿಕೆಯಿಲ್ಲದಿರುವುದು; ವಿರೋಧದ ಮಾತು : ಬೆಳಗಿನ ಹೇಳಿಕೆಯು ಸಂಜೆಯ ಹೇಳಿಕೆಗೆ ಡಿಕ್ಕಿಯಾಗಲೇಬೇಕು (ಹನ್ನೊಂದ. ೭೭). **ಢಿಕ್ಕಿ** : 'ಢಿಕ್ಕಿಹೊಡೆ' ಪರಾ. [ < ಡೀ ]

**ಡಿಕ್ಕಿಕೊಡು** (ಕ್ರಿ). ೧. ಜೋರಾಗಿ ತಲೆಯಿಂದ (ಇನ್ನೊಬ್ಬನ) ತಲೆಯನ್ನು ಹಾಯು,–ತಾಗು,–ತಾಟಿಸು: ಅವನು ಓಡಿಬಂದು ನನ್ನ ತಲೆಗೆ ಡಿಕ್ಕಿಕೊಟ್ಟನು (ರೂಢಿ). ೨. ಇನ್ನೊಂದು ವಸ್ತುವನ್ನು ಜೋರಾಗಿ ತಾಗು,–ಅಪ್ಪಳಿಸು,–ಘಟ್ಟಿಸು : ನೋಡ ನೋಡುತ್ತಿದ್ದಂತೆ ವಾಹನಗಳೆರಡು ಡಿಕ್ಕಿಕೊಟ್ಟು ಕೆಳಕ್ಕೆ ಉರುಳಿದವು (ರೂಢಿ).

**ಡಿಕ್ಕಾಡಿಕ್ಕಿಕೊಡು** (ದ್ವಿರುಕ್ತಿ) : (ಶ). [ ಡಿಕ್ಕಿ + ಕೊಡು₁ ]

**ಡಿಕ್ಕಿಮಾಲೆ** 'ಡಿಕಮಲಿ' ನೋ.

**ಡಿಕ್ಕಿಹೊಡಿಸು** (ಕ್ರಿ). ತಲೆಯನ್ನು ಜೋರಾಗಿ ತಾಗುವಂತೆ ಮಾಡು ; ಘಟ್ಟಿಸುವಂತೆ ಮಾಡು: ಅವರು ಸಂತೋಷದಿಂದ ಆಡುತ್ತಿದ್ದಾಗ . . . ಜುಟ್ಟುಹಿಡಿದು ತಂದು ತಲೆತಲೆಗೆ ಡಿಕ್ಕಿಹೊಡಿಸುವನು (ವಕಥಾ. ೧೬). [ ಡಿಕ್ಕಿ + ಹೊಡಿಸು (<ಪೊಡೆಯಿಸು) ]

**ಡಿಕ್ಕಿಹೊಡೆ, ಢಿಕ್ಕಿಹೊಡೆ** (ಕ್ರಿ). ೧. = ಡಿಕ್ಕಿಕೊಡು ೧. 'ಡಿಕ್ಕಿಹೊಡಿಸು' ಪರಾ. ೨. = ಡಿಕ್ಕಿಕೊಡು ೨: ಒಂದು ದಿನ ಓಡುತ್ತ ಹೋಗುತ್ತಿರುವಾಗ ದಾರಿಯಲ್ಲಿನ ಲೈಟು ಕಂಬಕ್ಕೆ ಡಿಕ್ಕಿ ಹೊಡೆದು ಹಣೆಯಲ್ಲಿ ಬೋರ ಬರಿಸಿಕೊಂಡ (ಪಾಠಮ. ೨೧೮) ; ನನ್ನ ಮುಖ ನೋಡಬ್ಯಾಡಿ ಬಂದರ ಯಾರಿಗಾದರೂ ಡಿಕ್ಕಿಹೊಡೆಯುತ್ತೀರ (ದೂಬಿಟ್ಟ. ೪೯). **ಢಿಕ್ಕಿಹೊಡೆ:** ೧. ಢಿಕ್ಕಿಹೊಡೆದೆನು ಪಂಜರದ ಕಂಭ ಮಾಡಕ್ಕೆ (ನವ್ಯಕೃ. ೮೫). ೨. ಮೇಲ್ವಾಯ್ದುದಟ್ಲಾಂಟಿಕಾಂಭೋಧಿ ಪೆಸಿಫಿಕಂಬುಧಿಯೊಡನೆ ಢಿಕ್ಕಿಹೊಡೆದುಕ್ಕಿ (ಶ್ರೀರಾಮಾ. ೧೬೫-೩೩೭). [ ಡಿಕ್ಕಿ + ಹೊಡೆ₁ (<ಪೊಡೆ₁) ]

**ಡಿಕ್ರಿ, ಡಿಕರಿ** (ನಾ). (ನ್ಯಾಯಾಲಯದ) ತೀರ್ಪು,- ತೀರ್ಮಾನ : ಆದರೆ ಡಿಕ್ರಿಯು ಬೆಂಚಿನ ೩ ಜನ ಮೆಂಬರ ಹೆಸರಿನಲ್ಲಿಯೂ ಕೊಡಲ್ಪಡ ತಕ್ಕದ್ದು (ಗ್ರಾಮಾಕ. ೧೮). ಅಂತೂ ಕೋರ್ಟಿನಲ್ಲಿ ನಾಡಿದ್ದು ಆದು ಡಿಕ್ರೀ ಆಗಿಬಿಟ್ಟರೆ, ನನ್ನ ಹಣ ಪುನಃ ಸೆಟ್ಟಿ ಪೆಟ್ಟಿಗೇಲಿ ಸುರಕ್ಷಿತವಾಗಿರುತ್ತೆ (ಮಾಂಗಲ್ಯ. ೪೪); ಕೋರ್ಟಿನಲ್ಲಿ ವ್ಯಾಜ್ಯಮಾಡಿ ಡಿಕ್ರಿಮಾಡಿ ಸಾಲಿಗನ ಸರ್ವಸ್ವವನ್ನು ಸುಲಿದುಬಿಡುತ್ತಾರೆ (ಕುರುಕ್ಷಾ. ೩೪); ಕೋರ್ಟಿನಲ್ಲಿ ವಿವಾಹವಿಚ್ಛೇದನವಾಗುವಂತೆ ಅರ್ಜಿದಾರಳ ಪರ ಡಿಕ್ರಿ ಬಗ್ಗೆ ಪ್ರಾರ್ಥನೆ- ಅಂತ ಅರ್ಜಿಯಲ್ಲಿದೆ. (ಬಣಾಂಗಿ. ೨೦೪). **ಡಿಕರಿ :** ಮೋಸದಿಂದ ತನಗೆ ಬರಬೇಕಾಗಿಲ್ಲದ ಹಣಕ್ಕೆ ಡಿಕರಿ ಆಗುವಂತೆ ಮಾಡಿದರೂ (ಗ್ರಾಮಾಕ. ೬೪).
[ ←ಇಂ. Decree ]

**ಡಿಕ್ರಿದಾರ** (ನಾ). (ನ್ಯಾಯಾಸ್ಥಾನದಲ್ಲಿ) ತನ್ನ ಕಡೆಗೆ ತೀರ್ಪನ್ನು ಪಡೆದಿರುವ ವ್ಯಕ್ತಿ : ಸದರೀ ಸ್ವತ್ತನ್ನು ಹಿಡಿದು ಡಿಕ್ರೀದಾರನಿಗೆ ಒಪ್ಪಿಸು ವುದರ ಮೂಲಕ ಡಿಕ್ರಿಯನ್ನು ಜಾರಿಮಾಡಬಹುದು (ಗ್ರಾಮಾಕ. ೩೩).
[ ಡಿಕ್ರಿ + – ದಾರ$_4$ ]

**ಡಿಗರು** 'ದಿಗರು' ನೋ.

**ಡಿಗುರು** (ನಾ). ಸ್ತ್ರೀಯ ಜನನೇಂದ್ರಿಯ ; ಯೋನಿ : (೬).
[ < ಡೊಗರು ]

**ಡಿಗ್ರಿ** (ನಾ). ೧. (ಉಷ್ಣಮಾಪಕಯಂತ್ರದಲ್ಲಿ ಅಳೆಯುವ) ಉಷ್ಣದ ಅಳತೆ,-ಮಾನ : ನನ್ನ ತಮ್ಮನಿಗೆ ನೂರೆರಡು ಡಿಗ್ರಿ ಜ್ವರವಿದೆಯೆಂದು ಡಾಕ್ಟರು ಹೇಳಿದರು (ಮಧ್ಯಮ. ೧೬೫); ಜ್ವರ ಅಪರೂಪವಾಗಿ ೧೦೩ ಡಿಗ್ರಿಗಳಿಗಿಂತ ಹೆಚ್ಚಾಗಿ ಹೋಗುತ್ತದೆ (ಕಲಕೋ. ४೨). ೨. [ಗಣಿತ] ಕೋನಮಾನ ; ಅಳತೆ ; ವೃತ್ತಪರಿಧಿಯ $\frac{೧}{೩೬೦}$ ನೆಯ ಭಾಗ : ಅವುಗಳ ಮೇಲೆ ಅಕ್ಷಾಂಶಗಳಂತೆ ಗುರುತು ಮಾಡಿರುವ ರೇಖೆಗಳು ಆಯಾ ಭಾವಗಳ 'ಡಿಗ್ರಿ'ಯನ್ನು ಸೂಚಿಸುತ್ತವೆ (ಸೌಂದಸ. ೧೯). ೩. ವಿಶ್ವವಿದ್ಯಾ ನಿಲಯಗಳು ಕೊಡುವ ಪಾಂಡಿತ್ಯಪದವಿ; ವಿದ್ಯಾಪ್ರಶಸ್ತಿ: ನಮ್ಮ ಹುಡುಗ ಕಾಲೇಜಿನಲ್ಲಿ ಓದಿ ಡಿಗ್ರಿ ಪಡೆದಿದ್ದಾನೆ (ರೂಢಿ). [ ←ಇಂ. Degree ]

**ಡಿಟ್ಟಂ ಜಮಾಬಂದಿ, ದಿಟ್ಟಂಜಮಾಬಂದಿ** (ನಾ). "ಹುಜೂರು ಜಮಾ ಬಂದಿಗೆ ಮುನ್ನ ತಾಲ್ಲೋಕು ಅಮಲ್ದಾರರು (ತಹಸೀಲ್ದಾರರು) ಪೂರ್ವಭಾವಿಯಾದ ಲೆಕ್ಕಗಳ ತನಿಖೆಮಾಡಿ ಹುಜೂರು ಜಮಾಬಂದಿ ಲೆಕ್ಕಗಳನ್ನು ತಯಾರಿಸುವುದು" (ನನ್ನೂರು. ಕೋಶ) : ಡಿಟ್ಟಂ ಜಮಾ ಬಂದಿಯಲ್ಲಿ ಮತ್ತು ಹುಜೂರು ಜಮಾಬಂದಿಯಲ್ಲಿ ಎಲ್ಲಾ ಶಾನು ಭೋಗರ ಲೆಕ್ಕ ಚೆಕ್ಕಾದರೂ ನನ್ನೂರಿನ ಲೆಕ್ಕ ಇನ್ನೂ ಬಾಕಿ (ನನ್ನೂರು. ೧೫೨). **ದಿಟ್ಟಂಜಮಾಬಂದಿ:** ಚುಂಚನಕಟ್ಟೆ ಜಾತ್ರೆ, ಸ್ಪಾರ್ಕ್ಸ್ ಸಾಹೇಬರ ಆಗಮನ, ಕಸಬ ಹೋಬಳಿ ದಿಟ್ಟಂಜಮಾಬಂದಿ, ಇವುಗಳೆಲ್ಲಾ ಮುಗಿದ ಮೇಲೆ ನಾನು ಸಾಲಿಗ್ರಾಮಕ್ಕೆ ಹೋದೆ (ಕೆಂನಿ. ೦೫೧)
[ ಡಿಟ್ಟಂ$_0$ + ಜಮಾಬಂದಿ ]

**ಡಿತ್ಥ** (ನಾ). ೧. ಮರದಿಂದ ಮಾಡಿದ ಆನೆ ; ಮರದಾನೆ. ೨. ಒಂದು ಸಂಜ್ಞಾಶಬ್ದ; ಒಬ್ಬ ವ್ಯಕ್ತಿಯನ್ನು ಕುರಿತಂ ಹೇಳುವ, ಅವ್ಯುತ್ಪನ್ನ ವಾದ ಸಂಕೇತ ಶಬ್ದ: ಇವನು ಹೋಗುವವನು ಇವನು ಡಿತ್ಥನು ಎಂಬ ಅನುಭವಗಳಿಗೆ ಅನುಸಾರವಾಗಿ ಕ್ರಮವಾಗಿ ಜಾತಿವಿಕಲ್ಪ, ದ್ರವ್ಯವಿಕಲ್ಪ, ಗುಣವಿಕಲ್ಪ, ಕ್ರಿಯಾವಿಕಲ್ಪ ಮತ್ತು ನಾಮವಿಕಲ್ಪ ಎಂದು ಐದು ವಿಧ (ಭಾತತ್ತ್ವ. ೩೮೬). [ ಸಂ. ]

**ಡಿಪೊ** (ನಾ). (ಮಾರಲಿರುವ) ವಸ್ತುಗಳನ್ನು ಸಂಗ್ರಹಿಸಿರುವ ಮಳಿಗೆ,- ಉಗ್ರಾಣ : ರೇಷನ್ ಡಿಪೋಗಳಲ್ಲಿನ ಜನಸಂದಣಿಯಂತೆ ಜನಗಳ ನೂಕು ನುಗ್ಗಲು ನೋಡಿದರೆ ನಮ್ಮ ಎದೆ ಒಡೆದು ಚೂರುಚೂರಾಗುತ್ತದೆ (ನಾಡಿಗೇ. ೩೧). [ ←ಇಂ. Depot ]

**ಡಿಫ್ತೀರಿಯ** (ನಾ). (ಸಾಮಾನ್ಯವಾಗಿ ಮಕ್ಕಳಿಗೆ ಬರುವ) ಒಂದು ಬಗೆಯ ರೋಗ; ಗಳಚರ್ಮರೋಗ; ಲೋಳೆ ಸಂಕೋಲೆ. ಗಂಟಲಿನಲ್ಲಿಯ ಶ್ಲೇಷ್ಮ ಚರ್ಮವು ಉದ್ದೀಪನಗೊಂಡು ಅದರಿಂದ ಹೊರಟ ಸ್ರಾವವು ಕೃತಕ ಚರ್ಮದಂತೆ ಪರಿವರ್ತನೆ ಹೊಂದುವ ಒಂದು ಭಯಂಕರ ವ್ಯಾಧಿ : ಡಿಫ್ತೀರಿಯದಿಂದ ನರಳುವ ಮಕ್ಕಳಿಗೆ ಧ್ವನಿ ಬದಲಾಯಿಸಿ, ಅವು ಏನೋ ವಿಚಿತ್ರವಾಗಿ ಅಳುತ್ತವೆ (ಗೃಹವಿ. ೦೯೫) : ಡಿಫ್ತೀರಿಯ ಮತ್ತು ಟೈಫಾಯ್ಡ್‌ಗಳಂತಹ ರೋಗಗಳು ಮೊಟ್ಟಮೊದಲನೆಯ ಬಾರಿ ಕಂಡ ರೋಗಿಗಳ ಮನೆಯ ವಾತಾವರಣವನ್ನು ಪರೀಕ್ಷಿಸಬೇಕು (ಕಲಕೋ. ४). [ ←ಇಂ. Diphtheria ]

**ಡಿಮ** (ನಾ). [ಕಾವ್ಯವಿ] ಹತ್ತು ವಿಧವಾದ ರೂಪಕಗಳಲ್ಲೊಂದು : ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥಿ, ಅಂಕ, ಈಹಾಮೃಗ – ಎಂದು ರೂಪಕಗಳು ಹತ್ತುವಿಧ (ಸಂನಾಟ. ೨೯) ; ಡಿಮ – ಇದರ ವಸ್ತು ಪ್ರಖ್ಯಾತ ; ಮಾಯ, ಇಂದ್ರಜಾಲ, ಗ್ರಹಣ, ಯುದ್ಧಾದಿಗಳಿಂದ ತುಂಬಿರುತ್ತದೆ. (ಭಾರದ. ೫೬೨). [ ಸಂ. ]

**ಡಿಮುಕಿ** 'ಡುಮುಕಿ$_1$' ನೋ.

**ಡಿಯ್ಯನಹಕ್ಕಿ** (ನಾ). ಒಂದು ಬಗೆಯ ಪಕ್ಷಿ ; ಟಿಟ್ಟಿಭ : "ಕೋಯಷ್ಟಿಕಃ ಟಿಟ್ಟಿಭಕಃ – ಈ ೨ ಡಿಯ್ಯನಹಕ್ಕಿ" (ನಾಚಿರಾ. ೧೧೫).
[ ? + ಹಕ್ಕಿ$_1$ (< ಪಕ್ಕಿ$_1$) ]

**ಡಿಲ್ಲ** 'ಢಿಳ್ಳ' ನೋ.

**ಡಿಲ್ಲಿ** (ನಾ). ದಿಬ್ಬ : ಹತ್ತಿನೋಡ್ಯಾಳೆ ಡಿಲ್ಲೀಯಾ (ಹುಟ್ಟಿಹ. ೫೬). [ ? ]

**ಡಿವಿಡಿವಿ** (ನಾ). ೧. ಒಂದು ಬಗೆಯ ಮರ ; ಸುವಾಸನೆಯ ಹೂವನ್ನು ಬಿಡುವ ಒಂದು ವೃಕ್ಷ : (೬). ೨. ಒಂದು ಬಗೆಯ ಸಸ್ಯ : ಸೀಮೆ ಅಲೆಕಾಯಿ, ಡಿವಿಡಿವಿ (ಮೃಜಿಗಿ. ೧೫-೨೬೮). [ ? ]

**ಡಿಳ್ಳ** 'ಢಿಳ್ಳ' ನೋ.

**ಡಿಳ್ಳಯಿಸು** 'ಡಿಳ್ಳಿಸು' ನೋ.

**ಡಿಳ್ಳವಾಜು** (ಕ್ರಿ). ತಳಮಳದಿಂದ (ಎದೆ)ಹಾರು,-ಡವಡವ ಬಡಿದು ಕೊಳ್ಳು ; ಎದೆಗುಂದು : ಕಟಿಗಂದಿದಾನನಂ ರಸಮಚಿತಧರಂ ಡಿಳ್ಳ [ಪಾಠಾಂ. ಳ್ಳ]ವಾಜಿದದ ಬಿಸುಪಿಂದಂ ಪೊಜಪಾಯ್ದು ಸುಯ್ಗಳ್ (ವೃಷವಿ. ೨೯-೨೬). [ ಡಿಳ್ಳ (< ಢಿಳ್ಳ) + ಪಾಜು$_1$ ]

**ಡಿಳ್ಳವೋಗು, ಡಿಳ್ಳುಹೋಗು** (ಕ್ರಿ). ಗಾಬರಿಗೊಳ್ಳು ; ಬೆದರು ; ಗಾಸಿ ಪಡು ; ಹೆದರಿಕೆಯಿಂದ ಎದೆ ಡವಡವನೆ ಬಡಿದುಕೊಳ್ಳು : ತಲ್ಲಣಿಸಿ ಹೋಗುತ ಬರುತ್ತದೆ ಡಿಳ್ಳವೋ[ಪಾಠಾಂ. ವಾ]ಗುತ್ತಿರನೆ ಲಕ್ಷ್ಮೀವಲ್ಲಭಂ ನಂದೀಶ್ವರನ ಪೇರುಸುರೊಳಗೆ ತೊಡಕಿ (ಬಸಪು. ೫೪-೪೦) ; ತಳ್ಳವಾಜಿಸಿ ರಾಮನ ತಂದುಕೊಡುವನು ಡಿಳ್ಳವೋ[ಪಾಠಾಂ. ಡಿಳ್ಳಯೋ]ಗದಿರುಪ ಯೊಳಗೆ (ಕುರಾಸಾಂ.೨೫-೩೩). **ಡಿಳ್ಳುಹೋಗು:** ಅಳ್ಳೆದೆಯವಳು ರೂಪಾಣ ಯೊಬ್ಬಳು ಲಜ್ಜೆಯಿಲ್ಲದ ನಿನಗೆ ಎರಗಿದಳೆಂದರೆ ಈ ಪದ್ಮಿನಿ ಡಿಳ್ಳುಹೋಗು ವಳೇ (ಮಾಮಲ್ಲ. ೦೦೭). [ ಡಿಳ್ಳ (< ಢಿಳ್ಳ) + ಪೋಗು$_1$ ]

**ಡಿಳ್ಳಸ** (ನಾ). ದುರ್ಬಲತೆ ; ದೀನತೆ : ಕಳವಳಪೊಳಗೆ ಹೊಜಿಗೆ ನವಾಯಿ ಡಿಳ್ಳಸವೊಳಗೆ ಹೊಜಿಗೆ ಸಘಾಡಮದ . . . ಮಹೇಶ ಹದನಿದು ನಿನ್ನ ನಂದನನ (ಕುಮಾ.ಕ. ೨-೧). 'ಡೊಳ್ಳಾಸ' ಪರಾ. [ < ಢಿಳ್ಳ ]

**ಡಿಳ್ಳಾಯ$_1$, ಢಿಳ್ಳಾಯ** (ನಾ). [ನಾಟ್ಯ] ಒಂದು ಬಗೆಯ ನೃತ್ಯ : ತಾಳವಟ್ಟನಂ ನುಡಿವ ಮೆಲ್ಲಡಿಗಳೊಡನೊಡನೆ ಡಿಳ್ಳಾಯದಿಂ ದುಂಡುಗಸ ತೊಡಗಿತು (ಸೌಂದಪು. ೮-೧೫) ; ಡಿಳ್ಳಾಯದುರುಕಾಳರವೆಯ[ ರವ ] ಚೆಲ್ವಡರೆ (ರೇವಣ. ೩೨-೪೯). **ಢಿಳ್ಳಾಯ:** ಝಂಕೆ ಥಾಳ ಢಿಳ್ಳಾಯ[ಪಾಠಾಂ. ಡಿಳ್ಳಾಯ]ಚಂಡಣ . . . ಉಲ್ಲಾಸದಟ್ಟರಿವಡೆಯೆ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೧೭-೭೭ ಪ). [ < ಸಂ. ಡಿಲ್ಲಾಯಾ ]

**ಡಿಳ್ಳಾಯ್ಯ₂** (ನಾ). ಮೋಸಗಾರಿಕೆ ; ವಂಚಕತನ ; ಠಕ್ಕು : ನುಸುಳು ನೆರೆ ಡಿಳ್ಳಾಯ್ಯು [ಪಾಠಾಂ. ಡಿಳ್ಳಾಯ್ಯ, ಡಿಳ್ಳಾಸ]ವ್ಯಸರ ಬೆಸುಗೆ ಬಿಗುಹುಳು ಕೊತ್ತು ಕಲೆಗಳ ರಸದ ಪಸರವನಱಿಯಬಾರದು ವಿಗಡ ವಿಟರುಗಳ (ಶಬ್ದಾಳಿ. ೧೫-೨೫). [ ? ]

**ಡಿಳ್ಳಾಯಿ** (ನಾ). = ಡಿಳ್ಳಾಯ್ಯ₁ : ನುಣ್ದೋಳ ಡಿಳ್ಳಾಯಿಯಿಂ ಮೃದು ಹಸ್ತಾಯತದಿಂ . . . ಸಲೆ ರಾಗಮಂಜರಿ ಕರಂ ಮೇಳೈಸಿದಳ್ ಲಾಸ್ಯಮಂ (ದಶಕು. ೮-೧೬೪) ; ಪಯಪಾಡು ನಿಜ್ಜವಣೆ ಚಾಳೆಯ ಮುಲ್ಲಾಸ ಸಂ ಕಿರುಂಪು ತದವಿತ್ರಡ ಮುನ್ನಯನವಿಶೇಷಂ ಡಿಳ್ಳಾ[ಪಾಠಾಂ. ಲ್ಲಾ]ಯಿಯ ಲುಳಿಪುರಿ ದುಸುರಮಸೆವಿನಂ ನರ್ತಿಸಿದಳ್ (ಧರ್ಮಪ ೨-೨೬).

[ ಸಂ. ಡಿಲ್ಲಾಯಿ ]

**ಡಿಳ್ಳಿತ** (ನಾ). ಭಯಂಗೊಳಿಸಿದುದು ; ಬೆದರಿಸಿದುದಂ ; ಕುಗ್ಗಿಸಿದುದು: ಡಮರುಗಧ್ವತ ಡಾಮರನಿರ್ದಡಿಳ್ಳಿತ ತ್ರ್ಯವಮಲಡೀಂಣಾಂಧಕ (ಪ್ರಭುಪು. ೫-೧೬೪). [ <ಢಿಳ್ಳ ? ]

**ಡಿಳ್ಳಿಸು, ಡಿಳ್ಳಯಿಸು, ಡಿಳ್ಳೈಸು, ದಿಳ್ಳಿಸು** (ಕ್ರಿ). ೧. ನಡುಗು; ಕಂಪಿಸು; ಹೆದರು; ಭಯಪಡು: ನುಣ್ಗೊರಳಂ ಕಂಡು ವಿಳಾಸದಿಂದ ಸರಿಯಾಯ್ತು ಲ್ಲೆಂಬ ಲಜ್ಜಾಭರಾತುರದಿಂದಂದೊಳಗೆಯ್ದಿ ಡಿಳ್ಳಿಸಿ ಜಲಂ ಪೊಕ್ಕಿರ್ದುದು . . . ಆ ಕಂಬು (ಶಾಭಪು. ೯-೭೧) ; ಡಿಳ್ಳಿಸಿದವಂ ಸ್ಖಲಿತನಾ ಪ್ರಸ್ಯಂದನಕ್ಕು (ಮುಂಗರಾ-೮೯-೬೯); ಕಳ್ಳನೊಳಗು ಡಿಳ್ಳಿಸಿ ಸರಿಯಲಾವ ಕಡೆಯೊಳು ಪೋಪು ಪಾಯವಟ್ಟೆಗಳಱಿಯದೆ (ಸಿಂಗಿರಾ. ೧೧-೧೨) ; ಜಲ್ಲಿದುಂಬಿಗಳ ಝುಂಕಾರಕ್ಕೆ ಮುನಿಜನ ಡಿಳ್ಳಿಸಿತೇನ ಹೇಳುವೆನು (ಮೋಹತ. ೭-೧೧) ; ಹುಸಿಯಲ್ಲ ನನ್ನನಾಗಿನಿಸವ್ವವಾಗ ಡಿಳ್ಳಿಸಿತದೆ ಜುಮ್ಮನೊಸರಿಸಿ (ಭರತ. ೯-೧೦೦೦). ೨. ಭಯದಿಂದ ನಡುಗಿಸು ; ಗಾಬರಿಗೊಳಿಸು ; ಎದೆಗುಂದಿಸು ; ಗಾಸಿ ಪಡಿಸು : ದಿಗಿಲು ಡಿಳ್ಳಿಸಿಯೆನ್ನ ಚಿಕ್ಕದೇವನೃಪನ ಬಗೆಯಲಿ ತಾಳ್ದ ಶ್ರೀರಂಗ ಬಲ್ಲಹನನಗಲದ ನೆರೆದಿರೆಂದವುದೀ ಹದನ (ಮುದ್ದಿಕ್ಕಾ. VI, ೧೬೫ ಶೃಂಗಾರ ಸೂತ್ರೋದಾಹರಣ). ೩. ದುರ್ಬಲಗೊಳಿಸು;ಶಕ್ತಿಹೀನವಾಗಿಸು; ಕುಗ್ಗಿಸು. **ಡಿಳ್ಳಯಿಸು :** ೧. ರಾಜೇಂದ್ರ ಶಿಖಾಮಣಿ ತನ್ನಯ ಭೂರಿ ಬಳಂದೆರಸು . . . ಧಾರಿಣಿ ಡಿಳ್ಳಯಿಸುವವೊಲ್ ಬಡಗಣ ದಾರಿವಿಡಿದು ನಡೆತಂದು (ಜಯಚಾ. ೯-೬). **ಡಿಳ್ಳೈಸು :** ೧. ಅವಯವಶಂಬಡೆದನೆಂದತಿ ನಯಂಗುಂದಿ ಕಂದಿತ್ತಲೆರ್ದ ಡಿಳ್ಳೈಸಿ ಗುರುಪದೋಚಿತ ಸಲಿಲವಂ ಅತಿಶಯದೊಳಾಂತು (ಕೊಟ್ಟೂರಬ. ೧೫-೬೨). **ದಿಳ್ಳಿಸು :** ೧. ಮೇಲಣ ಲೋಕ ದಿಳ್ಳಿಸುತಿಹುದಾ ಮಹಾವ್ಯಾಳ ತುಡುಕೆ ಬಿಲ್ಲ ಕೋಲ (ನಾಗಕು. ೧೧-೬). [ ಡಿಳ್ಳ (<ಢಿಳ್ಳ) + - ಇಸು₁ ]

**ಡಿಳ್ಳು** 'ಢಿಳ್ಳ' ನೋ.

**ಡಿಳ್ಳುಹೋಗು** 'ಡಿಳ್ಳವೋಗು' ನೋ.

**ಡಿಳ್ಳೈಸು** 'ಡಿಳ್ಳಿಸು' ನೋ.

**ಡೀ** (ನಾ). ಒಂದು ಅನುಕರಣ ಶಬ್ದ ; ಡಿಕ್ಕಿ. 'ಡೀಕೊಡು' ಪರಾ.

**ಡೀಕಾಡು** (ನಾ). ಸೇಡನ್ನಿಟ್ಟುಕೊಳ್ಳುವುದಂ ; ಜಿದ್ದು ; ಮಾತ್ಸರ್ಯ; "ಜಿದ್ದಾಟ" (ಜಾನಪೋ. ೬೩). [ ಡೀಕು₁ + ಆಡು₂ ]

**ಡೀಕು** 'ದೇಕು₁' ನೋ.

**ಡೀಕೊಡು** (ಕ್ರಿ).=ಡಿಕ್ಕಿಕೊಡು ೧ : ತಗರುಗಳು ಮಹಾರಭಸದಿಂದ ತಲೆ ತಲೆಗೆ ಡೀಕೊಟ್ಟು ಕಾದಿದುವು (ಛಾರವೀ. ೦೦೧). [ ಡೀ + ಕೊಡು₁ ]

**ಡೀಕೊಳ್ಳು** (ಕ್ರಿ). ಡಿಕ್ಕಿಹೊಡೆಸಿಕೊಳ್ಳು ; ತಿವಿಸಿಕೊಳ್ಳು: (ಕ).

[ ಡೀ + ಕೊಳ್ಳು₁ (<ಕೊಳ್₁) ]

**ಡೀಗು** 'ಢೀಗು' ನೋ.

**ಡೀನ** (ಗು). ೧. ಆಕಾಶದಲ್ಲಿ ಹಾರಾಡಿದ,-ಸಂಚರಿಸಿದ. (ನಾ). ೨. ಹಾರುವಿಕೆ ; ಹಾರಾಟ. [ ಸಂ. ]

**ಡೀಲ** 'ಢಿಳ್ಳ' ನೋ.

**ಡೀಲಿ** 'ಡೇಲಿಯಾ' ನೋ.

**ಡೀಲು** 'ಢಿಳ್ಳ' ನೋ.

**ಡೀಹೊಡೆ** (ಕ್ರಿ).=ಡಿಕ್ಕಿಕೊಡು : (ಕ).

[ ಡೀ + ಹೊಡೆ₁ (<ಪೊಡೆ₁) ]

**ಡುಂಡುಕ** (ನಾ). ೧. ಎರಡು ತಲೆಯ ಹಾವು ; ಡುಂಡುಭ. ೨. ವಿಷ ವಿಲ್ಲದ ನೀರುಹಾವು; ಒಳ್ಳೆ: ಭಾನುತೇಜವ ರಾಹು ಕೊಂಡಲ್ಲಿ ಸೋನೆಯ ಡುಂಡುಕ ತನ್ನಯ ಕೇಣವನೆತ್ತಿದಂತೆ (ಸುಂಕಲಿಂ. ೫೪). ೩. "ಹೆಮ್ಮರ; ತಿಗಡುಮರ" (ಅಮರ. ೬೮೫). ೪. ದುರ್ಗಸಿಂಹನ ಪಂಚತಂತ್ರದಲ್ಲಿ ಬರುವ ಒಂದು ತಿಗಣೆಯ ಹೆಸರು : ಡುಂಡುಕನೆಂಬ ತಿಗುಣೆ ಮಾಡಿದ ದೋಷದಿಂ ಮಂದವಿಸರ್ಪಿಣಿಯೆಂಬ ವಸ್ತ್ರಮೃಗಂ ಕೆಟ್ಟುದು (ಪಂಚತಂ. ೦೨೨-೦೬). [ ಸಂ. ]

**ಡುಂಡುಕೆ** (ನಾ). = ಡುಂಡುಕ : "ಡುಂಡುಭಃ - ಡುಂಡುಕೆ" (ಒಪಧಿ. ೭೪).

[ ಸಂ. ಡುಂಡುಕ ]

**ಡುಂಡುಚಿ** (ನಾ). ಒಂದು ಬಗೆಯ ಚರ್ಮವಾದ್ಯ ; ಗೊರವರು ಬಾರಿ ಸುವ ವಾದ್ಯ; ಡಮರು: ಪಂಡಿತರುಂ ವಿವಿಧ ಕಳಾಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್ ಕಂಡರೆ ಕೇಳ್ದೊಡೆ ಗೊರವರ ಡುಂಡುಚಿ[ಪಾಠಾಂ. ಡುಂಡುಂಚಿ]ಯೇ ಬೀದಿವಱಿಯ ಬೀರನ ಕತೆಯೇ (ಧರ್ಮನಾ. ೦-೫೬) : 'ಗೊರವರ ಡುಂಡುಚಿ' ಯು ಪುರಾತನ ಕಾಲದಿಂದ ಹೆಸರಾಗಿದೆ (ಕರ್ಣಾಕ್ಷು. ೨೬).

[ ? ]

**ಡುಂಡುಬ** (ನಾ). ಒಂದು ಬಗೆಯ ನೀರು ಹಾವು ; ಒಳ್ಳೆ : "ಡುಂಡುಬ - ವಳ್ಳೆಹಾವು" (ಆಕಾನಿ. ೧೧-೧೧). 'ಡುಂಡುಕ' ಪರಾ.

[ <ಸಂ. ಡುಂಡುಭ ]

**ಡುಂಡುಭ** (ನಾ). ೧. ಎರಡು ತಲೆಯ ಹಾವು ; ಇರ್ತಲೆಗುಯ್ಯ ; ಉರಿ ಶಿಂಗಿ : "ರಾಜಿಲಃ, ಡುಂ[ಪಾಠಾಂ. ದುಂ]ಡುಭಃ-೨ ಎರಡು ತಲೆಗಳುಳ್ಳ ಶಿಖಂಡಿಯೆಂಬ ಸರ್ಪಭೇದದ ಹೆಸರುಗಳು. ಎರಡುತಲೆ ಉರಿಶಿಂಗಿ" (ಸಿದ್ಧಾಂತಿ. ೬೫). ೨. ನೀರುಹಾವು ; ಒಳ್ಳೆ: "ರಾಜಿಳಃ, ಡುಂಡುಭಃ - ಈ ೨ ಒಳ್ಳೆ" (ಹಲಾಯು. ೦೦೬-೨೦) ; ಒಂದು ಕೃಷ್ಣತರುಣೋರಗಂ ಬಂದು ಕೊರ್ಬಿಯಾಡುವ ಡುಂಡುಭಂಗಳಂ ಕಂಡು (ಪಂಚತಂ. ೦೨೩-೨೦). 'ದುಂಡುಭ' ಪರಾ. [ ಸಂ. ]

**ಡುಗಡುಗಿ, ಡುಗುಡುಗಿ** (ನಾ). (ಉಕ) ಆತಂಕ ; ಹೆದರಿಕೆ ; ಭೀತಿ : ನನ್ನ ಮ್ಯಾಗ ಯಾವ ಏನು ಹೇಳತಾನೋ ಸರಕಾರಕ್ಕ ಅಂತ ಮೊದಲು ಡುಗಡುಗಿ ಇರ್ತಿತ್ತು (ಕ್ರೀಮೂಶ್ರ. ೨೬೬). **ಡುಗುಡುಗಿ :** ನೀ ಕಬೂಲಾ ಗತ್ಕೋ ಇಲ್ಲೋ ಅಂತ ನನಗ ಡುಗುಡುಗಿ ಇತ್ತು (ದೀಪಹ. II, ೦೪).

[ ←ಮರಾ. ಡುಗಡುಗೀ, ಡುಗಡುಗ ]

**ಡುಗುಡುಗಿ** 'ಡುಗಡುಗಿ' ನೋ.

**ಡುಣ್ಣ** (ನಾ). ಒಂದು ಬಗೆಯಂ ನೆಲ್ಲು,-ಬತ್ತ : ಕೊಡಗು ಮಾಳಲಕಂತೆ ಹರಹಿನ ಡುಣ್ಣಗಳೊಡನೊಪ್ಪುತಿಹ ಬೈರಾವಳಿಯು ಕಡು ಸೊಬಗಾಂತಿಹ ಚಂದ್ರೋದಯ ಶಾಲಿಯೆಡವಿಡದೆಸೆದುಪರ್ತಿಯಲಿ (ಕಂಸವಿ. ೫-೭೦).

[ ? ]

**ಡುಬರಿ** (ನಾ). ೧. ಮೇಲಕ್ಕೆ ದುಂಡಾಗಿ ಉಬ್ಬಿರುವ ಸ್ಥಿತಿ: (ಕ). ೨. ಒಂಟೆಯ ಬೆನ್ನಿನಲ್ಲಿರುವ ಉಬ್ಬು,-ಮೇಲಕ್ಕೆ ಎದ್ದಿರುವ ದುಂಡಗಿರುವ ಭಾಗ : ಅರಬೀ ದೇಶದ ಒಂಟೆಗಳ ಬೆನ್ನಮೇಲೆ ಒಂದೇ ಡುಬರಿ ಇರುವುದು (ಮುಂಬಯಿ. ೩-೭೪). 'ದಿಮ್ಮು₁' ಪರಾ.

[ ←ಮರಾ. ಡುಬರ, ಡುಬರಾ ]

**ಡುಬಲಿ** (ಗು). ಬೊಜ್ಜು ಬೆಳೆದ; ದಪ್ಪನಾದ ಶರೀರವುಳ್ಳ; ಸ್ಥೂಲ ದೇಹವುಳ್ಳ: ಸುಟ್ಟ ಮೋರೆಯು ಜನರು ನನಗೆ ಡುಬಲಿ ಅಜ್ಜ ಎಂದು ಕರೆಯುತ್ತಾರೆ (ಜಮಿಸಾ. ೩೦).

[ ←ಮರಾ. ಥಬುಲಾ ]

**ಡುಬಾಯಿಸು** (ಕ್ರಿ). ೧. ನೀರಿನಲ್ಲಿ ಮುಳುಗು. ೨. ನೀರಿನಲ್ಲಿ ಮುಳುಗಿಸು. ೩. ಹಾಳುಮಾಡು; ನಾಶಮಾಡು: (ಕ).

[ ಡುಬಾ೦ (P ←ಹಿಂ. ಡುಬಾನಾ) + – ಇಸು₃ ]

**ಡುಬುಕಿ, ಡುಮಕಿ, ಡುಮುಕ್ಕಿ₂** (ನಾ). ೧. ಮುಳುಗುವಿಕೆ. ೨. (ಅಲಂ) ಸೋಲು; ತೇರ್ಗಡೆಯಾಗದಿರುವುದು; ಅಪಜಯ. **ಡುಮಕಿ**: ೨. ಈ ವರ್ಷದಲ್ಲಿಯೂ ಶಾಲೆಗೆ ಡುಮಕಿ (ರೂಢಿ). **ಡುಮುಕ್ಕಿ₂**: ೨. ಪರೀಕ್ಷೆಯಲ್ಲಿ ಈ ಸಲವೂ ಡುಮುಕಿಯೇ (ರೂಢಿ).

**ಡುಬುಕಿಹೊಡೆ** = (ಪರೀಕ್ಷೆ ಮುಂತಾದುವುಗಳಲ್ಲಿ) ತೇರ್ಗಡೆಯಾಗದಿರು; ಸೋಲು; ಫೇಲಾಗು: ರಾಮುವಿಗೆ ತೇರ್ಗಡೆಯಾಯಿತು, ವೆಂಕಟೇಶ ಡುಬುಕಿಹೊಡೆದ (ಸಂಧ್ಯಾರಾ. ೫೩).

[ ←ಹಿಂ. ಮರಾ. ಡುಬಕೀ ]

**ಡುಬ್ಬ** 'ದುಮ್ಮು₁' ನೋ.

**ಡುಬ್ಬಕೆತ್ತು** (ಕ್ರಿ). ೧. ಬೆನ್ನಮೇಲಿನ ಚರ್ಮವನ್ನು ಸುಲಿ. ೨. (ಅಲಂ) ಸ್ವಲ್ಪವೂ ಬಿಡುವು ಕೊಡದೆ ದಂಡಿಸಿಕೊಳ್ಳು; ಬೊಜ್ಜನ್ನಿಳಿಸು: ಬಡ್ಡಿಯೊಳಗೆ ಡುಬ್ಬಾ ಕೆತ್ತುವ ಸಾವಕಾರ ನೀನಿರಬಹುದು (ಮನಚಿ. ೫).

[ ಡುಬ್ಬ (<ದುಮ್ಮು₁) + ಕೆತ್ತು₃ ]

**ಡುಬ್ಬು** 'ದುಮ್ಮು₁' ನೋ.

**ಡುಬ್ಬುಳ** 'ದಬ್ಬುಳ' ನೋ.

**ಡುಮಕಿ** 'ಡುಬುಕಿ' ನೋ.

**ಡುಮುಕ್ಕಿ₁, ಡಿಮುಕಿ** (ನಾ). ಒಂದು ಬಗೆಯ ಚರ್ಮವಾದ್ಯ: ಎಲ್ಲಿಯೋ ಒಬ್ಬ ಹಳ್ಳಿಯ ಹುಡುಗನು ಡುಮುಕಿ ಬಾರಿಸುತ್ತ ಹಾಡುತ್ತಾನೆ(ಆಕ್ಕತಂ. ೭). 'ಟುಮುಕಿ' ಪರಾ. **ಡಿಮುಕಿ**: ಬುಡಬುಡಿಕೆ, ಡಕ್ಕೆ, ಡಮಕಿ, ಝಾಲ್ರಿ, ಮದ್ದಳೆ, ಗೋಮುಖಾದಿ ವಾದ್ಯಗಳೂ ಉಂಟು (ಸಿದ್ಧಾಂತಿ. ೫೫).

[ ←ಮರಾ. ಥುಮಕೇ ]

**ಡುಮುಕ್ಕಿ₂** 'ಡುಬುಕಿ' ನೋ.

**ಡುಮುಕು** (ನಾ). ದಪ್ಪ; ಡೊಳ್ಳು: ಡುಮುಕಾದ ಗಿಡ್ಡದೇಹ; ತೆಂಗಿನ ಕಾಯಿಗೆ ಎರಡೂ ಮಗ್ಗಲು ಮೀಸೆ ಹೊರಟದ್ದರೆ ಹೇಗೆ ಕಾಣಬಹುದೋ ಅಂತಹ ಮೋರೆ (ಕಾಂಹಿಂ. ೭೨). 'ಟುಮುಕು' ಪರಾ.

[ ←ಮರಾ. ಥುಮಕೇ ]

**ಡುಮ್ಮ** (ನಾ). ಹೊಟ್ಟೆ ಉಬ್ಬಿದವ. 'ಡುಮ್ಮಣ್ಣ' ಪರಾ.

[ಡುಮ್ಮು (<ದುಮ್ಮು₁) + – ಅ₇ ]

**ಡುಮ್ಮಣ್ಣ** (ನಾ). ಹೊಟ್ಟೆ ದಪ್ಪಾಗಿರುವವನು: ಕೈಕಾಲು ಸಣ್ಣ ಹೊಟ್ಟೆ ಡುಮ್ಮಣ್ಣ (ಗಾದೆ). [ ಡುಮ್ಮ + ಅಣ್ಣ₁ ]

**ಡುಮ್ಮಣ್ಣಿ** (ನಾ). ದಪ್ಪನಾಗಿರುವ ಹುಡುಗಿ; "ಲಠ್ಠಮಂಠ್ಠ ಹುಂಡಿಗಿ" (ಧರ್ಮಾಕಾಂ. ೨೬೬). [ ಡುಮ್ಮಣ್ಣ + – ಇ₂ ]

**ಡುಮ್ಮಿ** 'ದುಮ್ಮು₁' ನೋ.

**ಡುಮ್ಮು** 'ದುಮ್ಮು₁' ನೋ.

**ಡುರಕಿ** 'ಡುಂಡುಕು' ನೋ.

**ಡುರಕಿಹಾಕು** 'ಡುರುಕುಹಾಕು' ನೋ.

**ಡುರಕಿಹೊಡೆ** (ಕ್ರಿ). = ಡುರುಕುಹಾಕು: (ಕ).

[ ಡುರಕಿ (<ಡುಂಡುಕು) + ಹೊಡೆ₁ (<ಪೊಡೆ₁) ]

**ಡುರಿಕೆ** 'ಡುಂಡುಕು' ನೋ.

**ಡುರುಕಿಡು, ಡುರ್ಕಿಡು** (ಕ್ರಿ). = ಡುರುಕುಹಾಕು: ಉಭಯಸೈನ್ಯಂಗಳಂ ನಿಮಿರ್ಚಿ ನೆಲನ ಪಡಣೆ ಘ್ರಾಣಿಸುತ ಡುರುಕಿಡಲಜಾಂಡದ ಘಟಂ ನಡುಗಿತ್ತು (ನವಪುರಾ. ೬-೪೫). **ಡುರ್ಕಿಡು**: ಇರ್ಕೆಲದ ದಾನವರ ನಿಚ್ಚವಂ ತುಂಬಿಪುತುಂ ಡುರ್ಕಿಡುತ್ತಸುರರಂ ಕೆಡಪುತುಂ . . . ವೃಷಭಂ ಪ್ರಪಾರಿಸಿದನು (ಪುಪು. ೪೪-೦೮). [ ಡುರುಕು (<ಡುಂಡುಕು) + ಇಡು₁ ]

**ಡುರುಕು** 'ಡುಂಡುಕು' ನೋ.

**ಡುರುಕುಹಾಕು, ಡರಿಕೆಹಾಕು, ಡುರಂಕಿಹಾಕು, ಡುರುಕೆಹಾಕು** (ಕ್ರಿ). (ಎಮ್ಮೆ, ಗೂಳಿ, ಹಂದಿ, ಗೊಂಕರುಕಪ್ಪೆ ಮೊದಲಾದ ಪ್ರಾಣಿಗಳು) ಕರ್ಕಶ ಧ್ವನಿಮಾಡು; ಗುಟುರುಹಾಕು: ಹಂದಿ ಡುರುಕುಹಾಕಿದ ಶಬ್ದ ಕೇಳಿಸಿತು (ನಡಿದಾ. II, ೧೦೬೯). **ಡರಿಕೆಹಾಕು**: ಕಪ್ಪೆಗಳು ಎತ್ತುಗಳಿಗಿಂತ ಎತ್ತರವಾಗಿ ಡರಿಕೆಹಾಕಬಹುದು (ಪ್ರಪಾಕೋ. ೬೩). **ಡುರಕಿಹಾಕು**: ಎಮ್ಮೆಯೊಂದು ಮೈಯಲ್ಲಿ ತುಂಬಿದ್ದ ಸೊಳ್ಳೆಗಳೊಂದಿಗೆ, ಡುರಕಿಹಾಕುತ್ತ ಒಳಗೆ ನುಗ್ಗಿಬಿಟ್ಟಿತು (ಮರಸಾ. ೨೭); ಎತ್ತುಗಳು ಡುರಕಿಹಾಕುತ್ತವ (ಮುಂಬಯಿ. ೩-೦೮). **ಡುರುಕೆಹಾಕು**: ಎರಡು ಗೂಳಿಗಳು ಸೊಕ್ಕಿಗೆ ಬಂದು ಎರಡನೇ ದನಗಳನ್ನು ಇರಿಯುತ್ತ ಡುರುಕೇಹಾಕುತ್ತ (ಮುಂಬಯಿ. ೫-೯೦). [ ಡುರುಕು (<ಡುಂಡುಕು) + ಹಾಕು (<ಪಾಯ್ಕು₁) ]

**ಡುರುಕೆ** 'ಡುಂಡುಕು' ನೋ.

**ಡುರುಕೆಹಾಕು** 'ಡುರುಕುಹಾಕು' ನೋ.

**ಡುರ್ಕಿಡು** 'ಡರುಂಕಿಡು' ನೋ.

**ಡುರ್ಕು** 'ಡುಂಡುಕು' ನೋ.

**ಡುಲಿ, ಡುಳಿ** (ನಾ). ಹೆಣ್ಣಾಮೆ: "ಡುಲಿ[ಪಾಠಾಂ. ಢುಳಿ]ಯೆನಲು ಹೆಣ್ಣಾಮೆಯಕ್ಕುಂ" (ಮಂಗರಾ. ೦೨೦-೮). **ಡುಳಿ**: 'ಡುಳಿರಾಜ' ಪರಾ.

[ ಸಂ. ]

**ಡುಳಿ** 'ಡುಲಿ' ನೋ.

**ಡುಳಿರಾಜ** (ನಾ). ೧. ಆಮೆಗಳ ಒಡೆಯ; ಕೂರ್ಮಪತಿ; ದೊಡ್ಡ ಆಮೆ. ೨. ವಿಷ್ಣುವಿನ ಅವತಾರಗಳಲ್ಲೊಂದಾದ ಮಹಾಕೂರ್ಮ; ಕಮಠ: ಡುಳಿರಾಜನಿಲ್ಲದೆಡೆ ಧರಣಿ ನಿಲ್ಲುವದುಂಟೆ ನೀನಾವ್ರನಿಲ್ಲದಡೆ ನಡೆವುದೇ ಜಗವು (ದೇವೀಚ. ೫೬). [ ಡುಳಿ (= ಡುಲಿ) + ರಾಜ ]

**ಡುಳ್ಳಿ** (ನಾ). ವಂಚನೆ; ಸುಳ್ಳು: ತಲ್ಲಣಿಸಿ ನಿಲಲಾಱದಾ ಖಳಂ ಕೈಯೊಡನೆ ಡುಳ್ಳಿಯಿಂದಾ ಮುನಿವನುರುಶಿರೋಲಕ್ಷ್ಮಿಯಂ ಕೊಳ್ಳೆಗೊಂಡಡಹುತಂ (ಶರಕು. ೩೫-೨೫): ಡುಳ್ಳಿಯೋ ಸತ್ಯಮೋ ಎಂಬೆನೆ (ಹಾ.ಹುಸ್ಕ. ೩-೦೦-೦೩).

[ ? ]

**ಡುಳ್ಳಿಮನ** (ನಾ). ಸುಳ್ಳುಮನಸ್ಸು; ಕ್ಷುದ್ರಮನ (?): ಕಳ್ಳಕನ್ನಡಿ ಸಾಯಿ. ಡೊಳ್ಳು ಕೋಮಟಿಗನಾ ಹುಳ್ಳಿ ನಯಶೂಲಯೇರಿಮಾಯುಂಬಗಾದೆ ಡುಳ್ಳಿಮನವು ಯಿದು ಪಾಪವ ಮಾಡ್ದರೆ ಸುಳ್ಳಿಗೆ ಆತ್ಮಗೆಯೆಂದು ಪೂಹಿಸುವರು (ಚಿದಾವ. ೦೦-೮). [ ಡುಳ್ಳಿ + ಮನ ]

**ಡುಂಡುಕಿ** 'ಡುಂಡುಕು' ನೋ.

**ಡುಂಡುಕಾರವ** (ನಾ). ಡುರುಕಿನ ಗಟ್ಟಿಯಾದ ಶಬ್ದ; ಗುಟುರು: ತೋರ ಹೋರಿಗಳ ಡುಂಡುಕಾರವಂ ಗಳದ ಘಂಟಾರವಂ ಪಶುಗಳಂಬಾರವಂ (ಚಿಪುಪು. ೦೦-೦೭). [ ಡುಂಡುಕು + ಆರವ ]

**ಡುಂಡುಕು, ಡರಕೆ, ಡರಿಕೆ, ಡುರಕಿ, ಡುಂರಿಕೆ, ಡುಂರುಕು, ಡುರಂಕಿ ಡುರ್ಕು, ಡುಂಡುಕೆ** (ನಾ). ೧. (ಎಮ್ಮೆ, ಗೂಳಿ, ಹಂದಿ, ಗೊಂಕರು ಕಪ್ಪೆ ಮೊದಲಾದ ಪ್ರಾಣಿಗಳು ಮಾಡುವ) ಒಂದು ಬಗೆಯ ಕರ್ಕಶ ಶಬ್ದ; ಗುಟುರು. 'ಡುಂಡುಕೆನ್' ಪರಾ. **ಡರಕೆ**: ೧. ಗೂಳಿಯ ಡರಕೆ (ಗುಟುರು) ಇವು ಶಬ್ದಾನುಕೃತಿಯೇ (ಕೆಹಾಟ. ೩೩೯). **ಡರಿಕೆ**: ೧. 'ಡರಿಕೆ ಹಾಕು' ಪರಾ. **ಡುರಕಿ**: 'ಡುಂರಕಿಹಾಕು' ಪರಾ. **ಡುರಿಕೆ**: ೧.

ದೂರದಿಂದ ಡುರಿಕೆ ಕೇಳಿಸಿತು ಅದು ಕಾಡುಹೋರಿಯು ಡುರಿಕೆಯಾಗಿತ್ತು (ಬಂಗಾಹ. ೧೮). ೨. ನಿದ್ದೆಯಲ್ಲಿ ಮೂಗಿನಿಂದ ಹೊರಡುವ ಶಬ್ದ ; ಗೊರಕೆ : ಇಬ್ಬರೂ ಮಹಾ ಕುಡುಕರು . . . ವಿದ್ಯಾಬುದ್ಧಿಗಳ ಪರಿಚಯ ವಾದದ್ದು ಇಲ್ಲಿಯವರೆಗೆ ಇವರ ಡುರಿಕೆ ಮಾತ್ರ (ಕಾರಿಹಿಂ. ೧೧೬) **ಡುರುಕು** : ೧. 'ಡುರುಕಿಡು', 'ಡುರುಕುಹಾಕು' ಪರ್ಯಾ. **ಡುರುಕೆ** : ೧. 'ಡುರುಕೆಹಾಕು' ಪರ್ಯಾ. **ಡುರ್ಕು** : ೧. 'ಡುರ್ಕಿಡು' ಪರ್ಯಾ. **ಡುಱಿಕೆ** : ೧. ಬಸವನಾಗವಗಡಿಸುತೆದ್ದು ಪುಟನೆಗೆದು ಡುಱಿಕೆಯನಿಕ್ಕು ತವರ ಬಲವರುತ (ಗುರುಚಾ. ೧೦-೮೮).

**ಡುಬುಕೆನ್** (ನಾ). = ಡುರುಕುಹಾಕು : ಪಂದಿ ಡುಬುಕೆಂದೊಡೆ ಕಾಂ ಡುಬುಕೆಂಬುದೆ ಮಹಾವನಕರಿಯುಂ ವಿದಾರಿಸುವ ಸಿಂಹಂ (ಗಿರಿಕ. ೧-೨೯) : ಪರಪ್ರತಿಭೆಯ ಗುಣ್ಪುಱಿಯದೆ ಕಾಮುಂ ಕೆಮ್ಮಗೆ ಡುಬುಕೆಂಬುವು ಕುಕವಿಕೂಪಮಂಡೂಕಂಗಳ್ (ಅನಂಪು. ೧-೪೩) ; ಪಂದಿಯೊಂದು ಡುಬು ಕೆಂದೊಡೆ ಸಿಂಗಮಂಡಲೆವುದೆ (ರಾಮಾಶ್ವ. ೨೫-೨೬).

[ ಡುಬುಕು + ಎನ್$_1$ ]

**ಡೂಗ** (ನಾ). ೧. ಗೂನುಬೆನ್ನಿನವನು; ಗೂನ ; ಬೆನ್ನುಬಾಗಿದವನು: ೧ನೇ ವಿಷ್ಣುವರ್ಧನನು ಇವನಿಗೆ ಕುಬ್ಜ ವಿಷ್ಣುವರ್ಧನನೆಂಬ ಹೆಸರಿದ್ದ ಕಾರಣ ಇವನು ಡೂಗನಿದ್ದಂತೆ ತೋರುತ್ತದೆ (ಕಭಾಗೆ. ೩೨೪) :- ಪಾಪ್ಲ, ಹಲ್ಲು ಬಿದ್ದಾವೆ, ಮೇಲಾಗಿ ಡೂಗನಿದ್ದಾನೆ (ದೇಯೂನಿ. ೧೫೩). (ಗು). ೨. ಬೆನ್ನು ಬಗ್ಗಿದ ; ಗೂನುಬೆನ್ನಿನ : ಆ ಡೂಗ ಹೆಂಗಸು ಅಂದಿನಿಂದಲೂ ಇಲ್ಲಿಯೇ ಇದ್ದಾಳೆ (ಹೊಸಕ್ಷಿ. ೧೮೯). [ ಡೂಗು$_2$ + – ಅ$_7$ ]

**ಡೂಗು$_1$** (ಕ್ರಿ). ಬಾಗು; ವಕ್ರವಾಗು ; ಗೂನಾಗು.

**ಡೂಗಿಕೊಳ್** = ಬಗ್ಗಿಕೊಳ್ಳು ; ಬೆನ್ನನ್ನು ಬಗ್ಗಿಸು : ಅವರ ತಾಯಿ ವೆಂಕಮ್ಮ ಡೂಗಿಕೊಂಡೇ ಅಲ್ಪ ಸ್ವಲ್ಪ ಕೆಲಸಮಾಡುತ್ತ ಹೊರಗೇ ಇದ್ದಳು (ದಂಬನಾ. ೩). [ ? ]

**ಡೂಗು$_2$** (ನಾ). ಬೆನ್ನು ಬಗ್ಗಿರುವಿಕೆ ; ಗೂನು ; ಕುಬ್ಜತೆ.

**ಡೂಗಾಗು** = ಗೂನುಬೆನ್ನಿನಿಂದ ಕೂಡಿರು ; ಗೂನಾಗು : ಅದೇ ಹೆಂಗಸು ಇನ್ನೂ ಅಷ್ಟೇ ಡೂಗಾಗಿ ಬಲ್ಲಿನಂತೆ ಬಾಗಿ ನಡೆಯುತ್ತಿದ್ದಾಳೆ (ಹೊಸಕ್ಷಿ. ೧೮೮) : ಯಾವಾಗಲೂ ಡೂಗಾಗಿ ಕೈಯೂರಿ ಇಲ್ಲವೇ ಗಾದಿ, ಗೋಡೆ ಕಂಬಳಿಗಾತು ಕುಳಿತದ್ದೇ ಕಂಡುಬರುವದು (ಬ್ರಹ್ಮಚೀ. ೨೪).

[ < ಡೂಗು$_1$ ]

**ಡೆಂಕ** 'ಡಕ್ಕೆ' ನೋ.

**ಡೆಂಕಣ** 'ಡೆಂಕಣಿ' ನೋ.

**ಡೆಂಕಣಿ, ಡೆಂಕಣ, ಡೆಂಕಣೆ, ಡೆಂಕಳಿ, ಡೇಂಕಣೆ, ಢಂಕಣ, ಢಂಕಣಿ, ಢೇಂಕಣಿ, ಢೇಂಕಣೆ** (ನಾ). ೧. ಕೋಟೆಗಾಳಗದಲ್ಲಿ ಉಪಯೋಗಿ ಸುತ್ತಿದ್ದ ಒಂದು ಯಂತ್ರ; ಕಲ್ಲುಗುಂಡುಗಳನ್ನು ತೂರುವ ಯಂತ್ರ: ಪುದಿದಿರ್ದಟ್ಟಳೆ ಪೆಟ್ಟದಾಳ್ವೆಱೆಯುಗುವರ್ಗಿರ್ದ ಮೇಲ್ಗೊತ್ತಳಂ ಕದನ ಕ್ಕದ್ಭುತಮಪ್ಪ ಡೆಂಕಣಿ (ಎಕ. V, ಅರಸೀ. ೫೧೩ ; 1194) ; ಎತ್ತಿಡುತಿರ್ಪ ಡೆಂಕಣಿಗಳಾದುರ್ಗಱ ಪಾಯಿಪ ಗೆಗ್ಗ . . . ಪೊಯ್ಯ ಲಗ್ಗೆವಱ ಬೊಬ್ಬೆಱವಬ್ಬರಮಾಗಳದ್ಭುತಂಬೆತ್ತುದು (ಕುಸುಮಾ. ೧೧-೪೦) : ಗೆಗ್ಗ ಡೆಂಕಣಿ ಗುಮ್ಮಂ ಪಡಿಗೋಂಟೆಯೆಂಬ ಬಹು ಕೋಟಾಯಂತ್ರ ಸಾಮಗ್ರಿ ತಿಂತಿಣಿಗೊಂಡಾಂತಿರೆ (ಅನಂಪು. ೧೦-೮೩); ತೂಳ್ದಿಡುವ ಡೆಂಕಣಿ ಪೊಯ್ಯುರಿ ಯಣ್ಣೆ ಕಾಸಿ ಸೂಸುವ ಮಳಲೆಂಬಿವೆತ್ತಲುಮಗುರ್ವಿಸೆ (ಪುಷ್ಪಪು. ೬-೬೪): ಸಡೆಡೆಂಕಣಿ ಸೂಸುಡೆಂಕಣಿ ಬಲುಗುಂಡನಿಡುವ ಡೆಂಕಣಿ ತೋಱದೆಡೆಗೆ ಸಿಡಿಪಡೆಂಕಣಿ ರಾಯಡೆಂಕಣಿಗಳ ಸಾಲು ಬಿಡದೊಪ್ಪಿದುವು (ಕುರಾಸಾಂ. ೪೩-೩೯) : ತರತರದೊಳಿರಿಸಿರ್ದ ಬಲ್ಗೊಲೆಯ ಡೆಂಕಣಿಯ . . . ಮೊತ್ತಂ ಗಳಾಳ್ವೇರಿಯೊಳ್ ಪಸರಿಸಿದುವು (ಕಬಪು. ೪೩-೧೧). ೨. ಕೊತ್ತಳಗಳ ಮೇಲೆ ಪೊದರಿನಂತೆ ಒತ್ತೊತ್ತಾಗಿ ಅಳವಡಿಸಿ ನಿಲ್ಲಿಸುವ ಉದ್ದವಾದ ಸಬಳದಂತಹ ಒಂದು ಆಯುಧ ವಿಶೇಷ : ನಟ್ಟ ಡೆಂಕಣಿಗಳೋ ಹಗೆಗಳನು ದುರ್ಗವಱೆಯಟ್ಟಲೆತ್ತಿದ ಹಲವು ಕೈಯೊ (ಹದಕಾ. ೧-೩೬) : ಅಟ್ಟಳೆಯಾಳ್ವೇರಿ ಕೊತ್ತಲಂಗೊಳಳಪಟ್ಟಡೆಂಕಣಿ ಸಬಳಗಳು ನಟ್ಟರಂತೆಯದ ಕಂಭಗಳಿಂದಾ ದುರ್ಗ ಸೃಷ್ಟಿಗೆ ಪೊಸತಾಗಿಹುದು (ಜೀವಂಸಾಂ. ೮-೦೩) : ದೇವತೆಗಳ ಮುಟ್ಟ ತಿವಿದ ಸಬಳಗಳೊಯೆಂದೆನಲಲ್ಲಿ ನೆಟ್ಟ ಡೆಂಕಣಿಗಳೆಸೆದವು (ಕುರಾಸಾಂ. ೧೬-೧೪); ಕನ್ನಡದಲ್ಲಿಯು ಕೋಶಕಾರರೆಲ್ಲರೂ ಧ್ವಜಸ್ತಂಭ ಎಂಬ ಅರ್ಥ ಹೇಳಿರುವರು. ಆದರೆ ಕೋಟೆಗಾಳಗದಲ್ಲಿ "ಮಾರಿಮೊಗದಡೆಂಕಣಿ" ಮಾಡುವ ಹಿಂಸಾಕಾರ್ಯವನ್ನು ನೋಡಿದರೆ, ಅದೊಂದು ಭವ್ಯವಾದ ಆಯುಧ ವಿಶೇಷ (ಕಡಾಗಚ. ೫೬). 'ಡೊಂಕಣಿ' ಪರ್ಯಾ. ೩. ಕೋಟೆಯ ಮೇಲಿನ ಬುರುಜು; ಬತ್ತೇರಿ: ಬಳಸಿದ ಕೊತ್ತಳಂ ಸೊಗಯಿಪಾಳ್ವರಿ ಡೆಂಕಣಿ ಸಾರವಾಗಿಯಗ್ಗಳಿಸುವ ಗೋಪುರಂ (ಗಿರಿಕ. ೩-೬೯); ಅಗಟುಂ ಪ್ರಾಕಾರದಿಂ ಡೆಂಕಣಿಯಿನನುಪಮದ್ವಾರದಿಂ ಸತ್ಪತಾಕಾವಳಿಯಿಂದಾಳ್ವೇರಿ ಯಿಂ . . . ಬಗೆಗೊಳ್ಪಂ ಬೀಱ (ದಕಕು. ೬-೯) : ಇತ್ತರದೊಳುದ್ದಕ್ಕೆ ಕೋಂಟೆಯಕೊತ್ತಳಂಗಳ ಸಂದಿಸಂದಿಯೊಳೆತ್ತಿಸಿದನಟ್ಟಣೆಗಳಂ ಡೆಂಕಣಿಗಳಂ (ಬಸಪು. ೧೬-೯): ಸಿದ್ಧ ಕಂಡನು ಮುಂದೆ ಮಾರ್ಗವ ಹೊದ್ದಿತೆನೆ ಕೊತ್ತಳವ ಡೆಂಕಣಿ ಚಿತ್ರಕೆಲಸದಿ ಪಚ್ಚೆಲೋಹದಯೆಸೆವ ಕದಗಳನು (ರೇವಕಾ. ೨-೫): ಬಗೆವೆತ್ತ ಪವಳ ಡೆಂಕಣಿಗಳಿಂದಂ ಮುತ್ತು ಬಿಗಿದಟ್ಟಣಗಳಿಂದ . . . ಝಗಝಗಿಸುತೊರ್ಪುದುದು (ಜೀರವು. ೧-೩೩) ; ಗಗನಲಂಬಿತ ನೀಲ ದಟ್ಟಳೆಯ ಕಟ್ಟಳೆಯ ಮಣಿಮಯದ ಡೆಂಕಣಿಗಳ (ರುಕ್ಮಾಂಗ. ೩-೪) ; ಕ್ರಮದ ಡೆಂಕಣಿ ಕೋಟೆ ಗೋಪುರಗಳಿಂದ ಆಶ್ಚರ್ಯವಾದಂಥ ಆರಮನೆ ಗಳಿಂದ (ಯನಳ. ೯). ೪. ಕೋಟೆಯಂ ಮೇಲಿನ ಬುರುಜುಗಳ ಮೇಲೆ (ಸಾಮಾನ್ಯವಾಗಿ ಎಂಟು ಕಡೆಗಳಲ್ಲೂ) ನೆಟ್ಟಿರುವ ನಿಶಾನಿಯೊಡ ನಿರುವ ಅಥವಾ ನಿಶಾನಿಯಿಲ್ಲದ ಧ್ವಜಸ್ತಂಭ : ಕುಣಿವ ಪಲ್ಲವ ಝಲ್ಲರಿಯು ಡೆಂಕಣಿಯ ತಲೆ ಚಮರಿಗಳ ಗಗನಾಂಗಣವನಣಿವ ಪತಾಕೆಗಳ . . . ಲಗ್ಗೆವಱಗಳಲೆಸೆದುದಾ ದುರ್ಗ (ತೊರರಾ. ೬-೭-೧೬) ; ಎತ್ತಿದ ಛತ್ರ ಚಾಮರ ಚೌಕ ಡೆಂಕಣಿ ಮತ್ತು ಕಾಲಾಳ ಘರ್ಜನೆಯು (ದೇವಾಂಪು. ೩-೧೯೩) : ಹಮ್ಮಿನಲಿ ಸಗ್ಗಿಗರ ಕರೆವಂತೆ ಕೈಯೆತ್ತಿ ಗಮ್ಮನೆಯು ಡೆಂಕಣಿ ಗಳೆಸೆಯೆ (ಪ್ರಾಥರಾ. ೧-೩೬) : ನೋಟಕರ ಕಣ್ಗೆ ಕಾಣಿಸಿದುಮಣ್ದೆಸೆಯ ಡೆಂಕಣಿಯ ಪಳವಿಗೆಗಯ್ಗಳು (ಕೃಮಿಥಾ. ೧೬-೯); ಕುಂಭಿನಿ ಕೈನೀಡಿ ಕರೆವೋಲು ಡೆಂಕಣಿ ಮುಂಬರಿದೆಸೆದುವರ್ತಿಯಲಿ (ಕಂನವಿ. ೬-೮) : ಅಗಣಿ ತೋನ್ನತ ಹರಿಮಯದ ಡೆಂಕಣಿಗಳೊಪ್ಪಿದುವು (ಕೋಗಯು. ೩-೮) ; ಜೀವಮಾನದ ಕಟ್ಟಡದಲ್ಲಿ ಆ ಒಂದು ಕ್ಷಣದ ಬಾಳು ಗೋಪುರದ ತುದಿಯ ಕಳಶದ ಚಿನ್ನದ ಡೆಂಕಣಿಯಾಗಿ ಸ್ವರ್ಗದೊಡನೆ ಸರಸವಾಡಿತು (ಮಶಿಮ. ೫೨). **ಡೆಂಕಣ** : ೧. ಇಡಿಸುವ ಡೆಂಕಣಕ್ಕೆ ನೆಲವಾಳಿಗೆ ಕೊತ್ತಳದಂಬು ಗುಂಡಿಯಿಂದುಡುಗದೆ . . . ಗಡಣಿಸೆ ಕಾದುತಿರ್ದುದು ಮಹೇಂದ್ರ ಪದಾತಿನಿ ಮುತ್ತಿ ಸುತ್ತಲುಂ (ಚಂದ್ರಪು. ೫-೧೦೬). ೩. ಇರಲಿಯಿತ್ತೊಳ ಗೇಳುಕೋಟೆಯ ತೆರನು ಮರಕತ ಸುತ್ತು ಮೇಲುರುತರದ ಕೆಂಪಿನ ಸುತ್ತು ಕೆನೆಗಳು ಡೆಂಕಣಟ್ಟಣೆಯೂ (ಜರಾಮಾ. ೨೪-೨೬). **ಡೆಂಕಣೆ** : ೧. ನಿಱಸಿದ ಬಸಿಯೊಳಂ ಪೂಸಿದ ಡೆಂಕಣಿಯೊಳಂ . . . ಮೊನೆಯಂ ಪೂಣಿಸಿದ ಕೊಂತದೊಳಂ ಕೈಗೆಯ್ದು ಕಟ್ಟಾಸುರಮಾಗೆ (ಅನಂಪು. ೧೧-೮೩ ವ) ; ಡೆಂಕಣೆ[ಪಾಠಾಂ. ಣಿ]ಯ ಗವಣೆಗಳ ಕೋಟೆಯ ಕೊಂಕುಗಳ ಕೊತ್ತಳದ ತೆನೆಗಳ . . . ದುರ್ಗವನೀಕ್ಷಿಸುತ (ನಿಭಾಗ. ೧೦-೩೬-೩೫); **ಡೆಂಕಣೆ** ಕವಣೆ ಧ್ರುವಲೋಕವ ಹಾಯಲಿಡುವ ಮಕರಡಿಬ್ಬ ಕವಿದ ದುರ್ಗದೊಳಿಹವು (ಸೌಂದಕಾ. ೫-೩೪). **ಡೆಂಕಳಿ** : ೪. ಪಳಹರದ ಪಲ್ಲವದ ಸತ್ತಿಗೆಯಗಳ ವಿಡಾಯಿಯುಲರಿಬಿರುದ ಡೆಂಕಳಿಯ ಸೀಗುರಿ ಪೊದರುಗಳ ತೋಮರದ

ಸಂದಣಿಯು (ಕುಮಾರವ್ಯಾ. ಶಲ್ಯ. ೬. ೧೮೭). **ಡೇಂಕಣಿ** : ೩. ಮೂರು ಸುತ್ತಿನ ಪರಿಧಿ ತಾಂಬ್ರದಿ ತೋರೆ ತನೆ ಡೇಂಕಣಿಗಳಟ್ಟಣೆ (ಬಿಜ್ಜ.ಪು. ೨೦–೨೦).
**ಢೆಂಕಣ** : ೧. ವರ್ಗಚತುರ್ಥಾಕ್ಷರಂಗಳ್ಗೆ . . . ಢೊಂಕಣಿ, ಢೆಂಕಣ [ಪಾಠಾಂ. ಣಿ]ಅಢಾಳಂ (ಧಾಳಂ) (ಶಮದ. ೧೫ ಪ್ರಯೋ). **ಢೆಂಕಣಿ** : ೧. ಇಟ್ಟಿಡುವ ಢೆಂಕಣಿ ಶಿಲೋಚ್ಚಿರಮನಿಕ್ಕು (ಮಂಗರಾ. ೫೭–೫). **ಢೇಂಕಣಿ**: ೧. ಆತುರದಿಂ ಢಗ್ಗೆ ಢೇಂಕಣಿ ನೆಲಗುಮ್ಮ ಮಾತೇನು ಗಗನದಟ್ಟಳೆಯು (ಆನಂದ. ೦೮–೫೨). **ಢೇಂಕಣಿ** : ೧. ಕಲ್ಲ ಹೆಗ್ಗೊಬಿದುಬ್ಬಿಯೊಣ್ಣ ಕಾಯ್ದ ಮಣಲಗ್ಗದ ಢೇಂಕಣಿ (ಸೌಇಇ. XX, ೦೨೭–೪ ; 1186).

**ಡೆಂಕಣಿಯ ಗುಂಡು** = ಡೆಂಕಣಿಯಂ ಯಂತ್ರದಿಂದ ಚಿಮ್ಮಿಸುವ ಇಡುಗುಂಡು : ಉಟ್ಟ ವಸ್ತ್ರವು ಬಳಸಿದ ಕೋಂಟೆಯುಗಟ್ನೆ . ಕಟ್ಟಿದ ಕಟಸೂತ್ರವೆಸೆಯ ಬಟ್ಟವೊಲೆಯು ಡೆಂಕಣಿಯ ಗುಂಡಿಂದಳವಟ್ಟ ಜಂಗಮ ದುರ್ಗದಂತೆ (ಅಂಜದ. ೮–೮೪).

**ಡೆಂಕಣಿಕಾಱ** (ನಾ). ಡೆಂಕಣಿಯನ್ನು ಬಳಸುವುದರಲ್ಲಿ ನಿಯುಕ್ತನಾದವನಂ : ಕಾಳಗದಲಿ ಡೆಂಕಣಿಕಾಱ ಡಾವುದ (ಚೊಂಕಪ. ೦೯೪೦, ಸಿರಸಿ. ೪೨–೮ ; ?). [ ಡೆಂಕಣಿ + – ಕಾಱ ]

**ಡೆಂಕಣಿಕುಲ** (ನಾ). ಡೆಂಕಣಿಗಳ ಸಮೂಹ,–ಗುಂಪು ; ಇಡಂಗುಂಡಂ ಮೊದಲಾದುವನ್ನು ಚಿಮ್ಮುವ ಯಂತ್ರಗಳ ಸಮೂಹ : ಬೆಲೆಗೆಯ್ ಲಲನೆಯನೆಂಬುದು ವೇಶ್ಯಾವಲಿಯೊಳ್ ಕೊಲೆಗೈಯೆಂಬುದು ಡೆಂಕಣಿ ಕುಲದೊಳ್ (ಉದ್ಯದೀ. ೨–೦೩).

[ ಡೆಂಕಣಿ + ಕುಲ ]

**ಡೆಂಕಣಿಕ್ಕೈ** 'ಡೆಂಕಣಿಗ್ಗೈ' ನೋ.

**ಡೆಂಕಣಿಗ್ಗೈ, ಡೆಂಕಣಿಕ್ಕೈ, ಡೆಂಕಣೆಗ್ಗೈ** (ನಾ). ಗುಂಡನ್ನು ಚಿಮ್ಮಿಸಲು ಡೆಂಕಣಿಯಂತ್ರಕ್ಕೆ ತುದಿಯಲ್ಲಿ ಜೋಡಿಸಿರುವ ಮಾರಿಮೊಗದ ಅಥವಾ ಹಂದಿ ಮೊದಲಾದ ಪ್ರಾಣಿಗಳ ತಲೆಯ ರಚನೆ ಇರುವ ತೋಳಿನ ಆಕಾರದ ಕೈ ; ಡೆಂಕಣಿಯಲ್ಲಿ ಅಳವಡಿಸಿರುವ ಚಿಮ್ಮು ಗೋಲು : ಬಲಿವ ಪಟಲ ಬಣಿ ಡೆಂಕಣಿ[ಪಾಠಾಂ. ಣೆ]ಗ್ಗೈ ಪಂದಿದಲೆ ತಿರುಗುಣಿ ಭೀಮಗದೆಯು ಬಲಿದು ಕೆತ್ತುವ ಬಡಗಿ (ಕುರಾಸಾಂ. ೩೭–೫೮). **ಡೆಂಕಣಿಕ್ಕೈ** : ಒಡಿಗುಂಡಿಟ್ಟು ಕವಣೆಯಾಂತ ಸತಿಯರ ನಿಡುದೋಳ್ಗಳೆಸೆದುವಾ ಕಂತು ಕಡುಮುಳಿಸಿಂ ಪಾಂಥರೆರ್ದೆಗೋಂಟೆಯ ಮುತ್ತಿಯಿಡುವ ಡೆಂಕಣಿಕ್ಕೈಗಳಂತೆ (ಶ್ರೀಪಾಂ. ೧–೫೨) ; ಡೆಂಕಣಿಕ್ಕೈ ಡಗ್ಗೆವರೆ ಪಾರೆ . . . ಶರಗಳ ಸಂಕುಳವೈದಿತು (ಕುರಾಸಾಂ. ೪೧–೫೧). **ಡೆಂಕಣೆಗ್ಗೈ** : ಮೇಲಿನ 'ಕುರಾಸಾಂ. ೩೭–೫೮'ರ ಪ್ರಯೋಗದ ಪಾಠಾಂತರವನ್ನು ನೋಡಿ.

[ ಡೆಂಕಣಿ + ಕೈ$_2$ (< ಕೆಯ್$_2$) ]

**ಡೆಂಕಣಿಜಂತ್ರ** (ನಾ). ಇಡುಗುಂಡುಗಳನ್ನು ಚಿಮ್ಮಿಸುವ ಯಂತ್ರ : ಗಿರಿಯ ಡೆಂಕಣಿಜಂತ್ರವನು ತರಹರಿಸುವವರಾರರಸ (ಕುಮಾರವ್ಯಾ.ಕ. ೨೩–೩೭).

[ ಡೆಂಕಣಿ + ಜಂತ್ರ ]

**ಡೆಂಕಣೆ** 'ಡೆಂಕಣಿ' ನೋ.

**ಡೆಂಕಣೆಗ್ಗೈ** 'ಡೆಂಕಣಿಗ್ಗೈ' ನೋ.

**ಡೆಂಕಳಿ** 'ಡೆಂಕಣಿ' ನೋ.

**ಡೆಂಕೆ$_1$** 'ಡಕ್ಕೆ' ನೋ.

**ಡೆಂಕೆ$_2$** (ನಾ). ಗೋಡೆಗಳ ಮೇಲೆ ಅಥವಾ ಕಂಬಗಳ ಮೇಲೆ ಮನೆಯ ಮಾಡನ್ನು ಹೊರಲು ಹಾಕಿದ ಮರದ ಅಡ್ಡೆ ; ಜಂತೆ : ಮೃಗಲಕ್ಷ್ಮನುದಯದೊಳ್ ನಿಲಿಸುಗೆ ಕಂಬಮನಿಂದುಸುತನ ಲಗ್ನಂಬರೆ ಬೆಟ್ಟುಗೆ ಡೆಂಕೆ[ಪಾಠಾಂ. ಜಂತೆ]ಗಳಂ (ಲೋಕೋಪ. ೩–೨೭) ; ಢಕಾರಕ್ಕೆ ಡಕಾರಂ– ಗಾಢ–ಗಾಡ ; ಢಕ್ಕಾ–ಡಕ್ಕೆ ; ಢೆಂಕಾ–ಡೆಂಕೆ (ಶಮದ. ೨೫೫ ಪ್ರಯೋ).

[ < ಪ್ರಾ. ಢೇಂಕಾ = ಬಾವಿಯ ಮೇಲಿನ ಅಡ್ಡತೊಲೆ ]

**ಡೆಂಕೆಬರ** (ನಾ). ಭಯಂಕರವಾದ ಕ್ಷಾಮ ; ಬರಗಾಲ : ಭರಮಪ್ಪ ನಾಯಕನ ಆಳಿಕೆಯಲ್ಲಿ ವೀರಕ್ಷಾಮ ಪ್ರಾಪ್ತವಾಯಿತು. ಇದಕ್ಕೆ 'ಡೆಂಕೆಬರ' ವೆನ್ನುತ್ತಾರೆ (ಚಿತ್ರಪಾ. ೮, ಉಪೋದ್ಘಾತ). 'ಡೋಗಿಬರ' ಪರಾ.

[ ಡೆಂಕೆ$_0$ + ಬರ$_1$ (< ಬಱ) ]

**ಡೆಂಗಿಜ್ವರ** (ನಾ). "ಮೈ ಮೇಲೆ ಗುಳ್ಳೆಗಳೆದ್ದು ಜ್ವರಬಂದು ಕೀಲುಗಳಲ್ಲಿ (ಸಂಧಿಗಳಲ್ಲಿ) ತೀವ್ರಯಾತನೆಯಾಗುವ ಸೋಂಕುರೋಗ: 'ಡೆಂಗಿ ಜ್ವರ'" (Dengue. ಇಂಕನಿ.). [ ಡೆಂಗಿ$_0$ + ಜ್ವರ ]

**ಡೆಂಚಾ** (ನಾ). ಒಂದು ಬಗೆಯ ಗಿಡ : ಸಣಬು (Sunhemp), ಕಳಂಜಿ, ಡೆಂಚಾ ಮೊದಲಾದ ಗಿಡಗಳನ್ನು ಬೆಳೆಯಿಸಿ ಅವುಗಳನ್ನು ನೆಲದೊಳಕ್ಕೆ ಉತ್ತುಬಿಟ್ಟರೂ ಆಯಿತು (ಬಾಂಪ್ರ. I. ೨೯೦). [ ? ]

**ಡೆಂಚೆಯ** (ನಾ). ಆನೆಯ ಬೆನ್ನಮೇಲೆ ಕುಳಿತುಕೊಳ್ಳಲು ಹಾಕುವ ಮಂಟಪ ; ಅಂಬಾರಿ ; ಹೌದ : ವಿಕ್ರಮಪಾಳಪಾವುಸ ಶಿರಃಕಂಜಂಗಳಲ್ಲಾಡುತಿರ್ದುವು ತನ್ನಾನೆಯ ಹೊನ್ನ ಡೆಂಚೆಯದ ಚಂಚತ್ಕೇತುದಂಡಂಗಳೊಳ್ (ಎಕ. XI, ದಾವಣ. ೨೫–೩೯; 1224); ಡೆಂಚೆಯನವಱಿದೇಣಿಯೊಳ ಮೆಟ್ಟಿಗಡಿಯಿಟ್ಟನು . . . ಕರಿಯಿಂದ ಧರೆಗೆ (ಸಿಂಗಿರಾ.. ೨೭–೮).

[ P ಇದು 'ಟೆಂಚೆಯ' ಎಂಬುದರ ಅಪಲಿಖಿತವಿರಬಹುದು ]

**ಡೆಂಡಣಿಸು** 'ಟೆಂಟಣಿಸು' ನೋ.

**ಡೆಂಡೆಣಿಸು** 'ಟೆಂಟಣಿಸು' ನೋ.

**ಡೆಂಡೆಲಿ** (ನಾ). ೧. ಆನೆಯ ಮೇಲೆ ಹಾಕುವ ಪಕ್ಷರಕ್ಷೆ ; ಹಕ್ಕರಿಕೆ ; ಜೂಲು. ೨. ಮದಿಸಿದ ಆನೆ: ಡೆಂಡಲಿಯೆಂಬ ಶಬ್ದಂ – ಗುಟಿದಲ್ಲಿಯುಂ, ಮತ್ತವಾರಣದಲ್ಲಿಯುಂ (ಶಮದ. ಮ. ೩೦೭). [ ? ]

**ಡೆಂಥಣಿಸು** 'ಟೆಂಟಣಿಸು' ನೋ.

**ಡೆಂಥಳಿಸು** 'ಟೆಂಟಣಿಸು' ನೋ.

**ಡೆಂಥೆಣಿಸು** 'ಟೆಂಟಣಿಸು' ನೋ.

**ಡೆಂಬಕ** (ನಾ). (?) : ದಿಟವುಟಭಕುತಿಸಂಪುಟ ನೆಲೆಗೊಳ್ಳದಾಗಿ ಡೆಂಬಕ [ಪಾಠಾಂ. ಟಂಬಕ, ಟಂಬನ, ಟೆಂಬಕ ]ನನಾಡಿಸುತ್ತಿದ್ದಿತಯ್ಯಾ ನಿನ್ನ ಮಾಯೆ (ಬಸವ. ೧೮). [ ? ]

**ಡೆಕ್ಕು** (ನಾ). ಹಡಗಿನ ಹೊರಮೈಯಲ್ಲಿರುವ ವೇದಿಕೆ,–ಅಂತಸ್ತು: ಡೆಕ್ಕಿನ ಮೇಲೆ ಒಬ್ಬಳೇ ನಿಂತು ಮಂದಾಕಿನಿ ಸಮುದ್ರದ ತೆರೆಗಳನ್ನು . . . ನೋಡುತ್ತ ನಿಂತಿದ್ದಾಳೆ (ಹೊಸಕ. ೦೩೩). [ ← ಇಂ. Deck ]

**ಡೆಕ್ಕರಿಕ್ಕೆ** (ನಾ). ಒಂದು ಬಗೆಯ ಜಟ್ಟಿವರಸೆ; ಮಲ್ಲಯುದ್ಧದಲ್ಲಿ ಒಂದು ಪಟ್ಟು : ಮೈಲಾಗಿನಲಿ ತೆಕ್ಕೆಯಲಿ ಸವಡಿಯ ಡೆಕ್ಕರಿಕ್ಕೆಯಲಿ . . . ಭೀಮಜೀಮೂತಗಳು ಹಳಚಿದರು (ಕುಮಾರವ್ಯಾ.ವಿ. ೬.೮೩. ೪–೭೭). 'ಡೊಕ್ಕರ$_2$' ಪರಾ. [ ? ]

**ಡೆಗ್ಗೆ, ಡಗ್ಗೆ** (ನಾ). ಕಾಳಗದಲ್ಲಿ ಕೋಟೆಯ ತೆನೆಗಳನ್ನು ದೂಡಿ ಉರುಳಿಸಲು ಬಳಸುತ್ತಿದ್ದ ಉದ್ದವಾದ ಮರದ ದಿಮ್ಮಿ : ನಡೆಸಾರಂ ನೆಲಮಾಳಿಗೆ ಪಡಕಿಡವುವ ಡೆಗ್ಗೆ ಬದ್ದಿರಂಗಳ್ (ತ್ರಿಪುವಿ. ೫–೦೦) ; ನಡೆ ಚಪ್ಪರದ ಮರ ಬದ್ದರ ಡೆಂಕಣಿ ಸುಡುವ ಪಟಲು ಕೋಟೆಯನು ಕೆಡಹುವ ಡೆಗ್ಗೆ[ಪಾಠಾಂ. ಗೆ] (ಕುರಾಸಾಂ. ೩೭–೭೭); ಕೋಟೆಯ ತೆನೆಗಳನು ಕೆಡವಲು ನಿಡುವ ಡೆಗ್ಗೆಗಳಿಂದ (ಚಂಪ್ರಸಾಂ. ೮–೪) : ಡೆಗ್ಗೆಯಿಂದುದಿರ್ದವು ಕಲ್ಲ ಕೋಟೆಯ ಗುಂಡು ಮೆಗ್ಗಳ ಬಿದ್ದುದು ಪಟಲ (ಆನಂದ. ೦೮–೭೧). 'ಡೆಗ್ಗೆವರ' ಪರಾ. **ಡಗ್ಗೆ** : ತಳಿ ನಡೆ ಚಪ್ಪರ ಡಗ್ಗೆ ಬದ್ದರಗಳ ಬಳಸಂದು ಭಟರು ಸಂದಣಿಸಿ ಬಳಿಸಿ ಕೋಟೆಯ ಲಗ್ಗೆಯೊಳು (ಕುರಾಸಾಂ. ೪೫–೨) : ಡಗ್ಗೆ ನೆಲಗುಮ್ಮಗಳ ತರಹೇಳಿ (ಪ್ರಹ್ಲಾದ. ೫–೯೦). [ ? ]

**ಡೆಗ್ಗೆವರ** (ನಾ).=ಡೆಗ್ಗೆ : ನಡೆಚಪ್ಪರವನು ನಡೆಯಿಸಿ ಡೆಗ್ಗೆವರಗಳಂ ಜಡಿದು ಹೊಯಿಸುವ ಭರವಸಕ್ಕೆ ಬದ್ದರಗಳೊಳಗಡಗಿ ಗುದ್ದಲಿಹಾರೆಯಿಂದಗೆವ

ರಭಸಕ್ಕೆ (ಶಮ್ಮು ಳಾ. ೮-೩೭); ತುಡುಕಲೆಂದೆನುತ ವಾಹುಸಕದಿಂ ಬಹುರೂಪುವಡೆದು ತಾಗುವ ರಾಹುಕೇತುವೋ ಯೆಂಬಂತೆ ಗಡಿಯಿಲ್ಲದಲ್ಲಲ್ಲಿ ಹಾಯಿಸುವ ಡಗ್ಗೆವರನತಿಭೀಕರಂಬಡೆದವು (ಶಮ್ಮುಳಾ. ೮-೪೦).
[ಡಗ್ಗ + ಮರ₁]

**ಡೆಬ್ಬೆ₁** 'ದಬ್ಬೆ₁' ನೋ.

**ಡೆಬ್ಬೆ₂** 'ದಬ್ಬೆ₂' ನೋ.

**ಡೆಮ್ಮಿ** (ನಾ). ಬರೆಯುವ ಮತ್ತು ಗ್ರಂಥಗಳ ಮುದ್ರಣಕ್ಕೆ ಉಪಯೋಗಿಸುವ ಕಾಗದದ ಅಳತೆಯ ಒಂದು ಪ್ರಮಾಣ; (ಬರೆಯುವ ಕಾಗದ, ೧೫½" × ೨೦"; ಮುದ್ರಣಕಾಗದ, ೧೭½" × ೨೨½"; ಡೆಮ್ಮಿ ೧೮ ಪೌಂಡು ಎಂದರೆ, ಡೆಮ್ಮಿ ಅಳತೆಯ ಐನೂರು ಹಾಳೆಗಳುಳ್ಳ ಒಂದು ರೀಮಿನ ತೂಕ (ಮುದ್ರಕ. ೮೩). [←ಇಂ. Demy]

**ಡೆಳ್ಳೆ** (ನಾ). ಬಿದಿರಿನ ಬುಟ್ಟಿ: ಕಳಶಂ ಶುಕ್ತಿಕೆ ವರ್ತುಲಂ ಪಟಲಕಂ ವ್ಯಸ್ತಾಳಿ ನೀರಾಜನಂ ವಿಲಸತ್ ಕುಂಡಿಕೆ ಡೆಳ್ಳೆಯೆಂಬೆಡೆಗಳೊಳ್ ಸಂಪೂರ್ಣ ತೋಯಾದಿ ಮಂಗಳವಸ್ತುಪ್ರಕರಕ್ಕದೇಂ ಶಚಿಯು ಕೆಯ್ಯುಂ ಕಣ್ಣುಮೋರಂದನಗ್ಗಲಿಸುತ್ತಿರ್ದುದು ಪೂಜೆಗುಜ್ಜುಗಿಸಿ ತನ್ನಂ ನೋಡೆ ಸಕ್ರಂದನಂ (ಆಪಂಪು. ೧೧-೯೭); ನಾನಾ ನವೀನ ಕೋಮಳ ಪಕ್ವಫಳಂಗಳಿಂ ತುಂಬಿದ ಡಳ್ಳೆಗಳ ಬಳಗಂಗಳಂ ತಂದಮಚ್ಚಯಿಸಿ ನೀಡುವುದುಂ (ಕಾರಪು. ೧೭-೨೪೯ ವ). [<ಪ್ರಾ. ಡಲ್ಲ, ಡಲ್ಲಗ]

**ಡೇಂಕಣೆ** 'ಡೆಂಕಣೆ' ನೋ.

**ಡೇಕು** 'ದೇಕು₁' ನೋ.

**ಡೇಗು₁** 'ತೇಗು₂' ನೋ.

**ಡೇಗು₂** 'ತೇಗು₃' ನೋ.

**ಡೇಗೆ** (ನಾ). ೧. ಹದ್ದಿನ ಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ; ಗಿಡುಗ: ಒಂದು ದಿನ ಡೇಗೆಯಂ ಪಾರಿಸುತ್ತಿರೆ ಪಾರಿ ಬಂದು ಕಿರಿಯಮ್ಮನರ ಮನೆಯಂ ಪೊಗಲ್ಕೆ (ಗುರುಚಾ. ೧೩-೪೦); ಈಟ ಭಲ್ಲೆಯ ಸರಳು ಕವಲಂಬುಗಳು ಬಡಿಗೋಲುರುವ ಸಾಳುವ ಡೇಗೆ ಸಿಪ್ಪಂಗಿಗಳು (ಅನಂರಾ. ೩-೩-೭); ಡೇಗೆಯದುರೊಳು ಕಂಡ ಲಾವುಗೆ ಬಾಗುಪೋಲ್ (ಜನಪಾ. ೭೨-೯); ಮರಗಳ ಮೇಲೆ . . . ಗಿಳಿ, ಕೋಗಿಲೆ, ಡೇಗೆ ಮತ್ತೊಂದು ಎಂದು ಸಾವಿರ ಜಾತಿಗಳಿವೆ (ಸ್ವಪ್ನಪೂ. ೧೨). [ದೇ.? ತೆಲು. ಡೇಗ]

**ಡೇಗೆಕಣ್ಣು** (ನಾ). ೧. ಗಿಡುಗನ ಕಣ್ಣು. ೨. (ಅಲಂ) ಸೂಕ್ಷ್ಮದೃಷ್ಟಿ; ತೀಕ್ಷ್ಣದೃಷ್ಟಿ: ಅದರ ಡೇಗೆಕಣ್ಣಿಗೆ ಮೀನು ಕಾಣಿಸಿದೊಡನೆಯೇ ಬಾಣದಂತೆ ನೀರೊಳಗೆ ನುಸುಳಿ ಕೊಕ್ಕಿನಲ್ಲಿ ಅದುಮಿ ಬಂಡೆಗಲ್ಲಿನ ಮೇಲೆ ಕುಳಿತು ನುಂಗುತ್ತದೆ (ಪಾಳಿಗಿ. ೮೩); ಆದಕ್ಕಾಗಿ ಬೇಕನೊಡನೆ ಸುಬ್ಬನೂ ಒಂದು ಡೇಗೆಕಣ್ಣು ಮಾಡಿ ಕುಳಿತುಕೊಳ್ಳುವನು (ಮುಂಗಾರು. ೫೮).
[ಡೇಗೆ + ಕಣ್ಣು (<ಕಣ್)]

**ಡೇಗೆಬೇಗ** (ನಾ). ಗಿಡುಗನ ರಭಸ; ಬಹಳ ವೇಗ; ಅತಿರಭಸ: ಹೊಲದ ಹೊದರೊಳು ಹುದುಗಿ ಹೊಂಚುತಿಹ ಹೊರಸಿಗೆರಗುವ ಡೇಗೆಬೇಗದಲಿ (ಶ್ರೀರಾಮಾ. ೫೯೩-೪೦೦). [ಡೇಗೆ + ಬೇಗ]

**ಡೇರ** 'ಡೇರೆ₁' ನೋ.

**ಡೇರಾ₁** 'ಡೇರೆ₁' ನೋ.

**ಡೇರಾ₂** 'ಡೇಲಿಯಾ' ನೋ.

**ಡೇರಿ** 'ಡೈರಿ₂' ನೋ.

**ಡೇರೆ₁, ಡೇರ, ಡೇರಾ₁** (ನಾ). ಬಟ್ಟೆಗಳನ್ನು ಹೊದಿಸಿ ತಯಾರಿಸಿದ ತಾತ್ಕಾಲಿಕ ವಸತಿಗೃಹ; ಗುಡಾರ; ಬಿಡದಿ: ಜಗವು ಸರ್ಕಸ್ಸಿನ ಡೇರೆ (ಚಂದ್ರವೀ. ೦೪-೩೪); ಈ ರಾತ್ರಿ ಕಳೆಯಲು ಒಂದು ಡೇರೆ ಸಿಕ್ಕಿದ್ದರೆ ಚೆನ್ನಾಗಿತ್ತು (ಪುತಪ. ೨೯); ಈ ಬಯಲಾಟದವರು. ಡೇರೆ ಹಾಕಿಕೊಂಡು ಟಿಕೇಟಿನ ಮೂಲಕ ಆಟವಾಡುವ ರೂಢಿಯು ಬಂದಿದೆ (ಯಕ್ಷಬ. ೨೦). **ಡೇರ**: ಮುಂದೆ ನೋಡು ದಾರಿ ಸಾವಿರಾರು ಮೈಲಿದೂರ, ಸಾಲುಸಾಲು ಡೇರ (ನಡಬಂ. ೨-೨). **ಡೇರಾ**: ದೂಳುತುಂಬಿದ ಡೇರಾ ಬಟ್ಟೆಯ ಮೇಲ್ಛಾವಣಿ ಕಟ್ಟಿದಂತೆ . . . ಆಕಾಶದಲ್ಲಿ ಮೋಡಕಟ್ಟುವುದು (ಚಾಂಪ್ರ. II, ೧೧೮೦). [←ಹಿಂ. ಡೇರಾ]

**ಡೇರೆ₂** 'ಡೇಲಿಯಾ' ನೋ.

**ಡೇಲಿಯಾ, ಡಾಲಿಯಾ, ಡೀಲಿ, ಡೇರಾ₂, ಡೇರೆ₂, ಡ್ಯಾಲಿಯಾ** (ನಾ). ಒತ್ತೊತ್ತಾಗಿ ಎಸಳುಗಳುಳ್ಳ, ಬಣ್ಣಬಣ್ಣದ ದುಂಡಗಿನ ಹೂವುಗಳನ್ನು ಬಿಡುವ ಒಂದು ವಿಧದ ಗಿಡ ಮತ್ತು ಅದರ ಹೂವು: (ಪ್ರುಶಿಗಿ. ೨೮-೫೪೪). **ಡಾಲಿಯಾ**: ಮೂಡಿದೀ ಡಾಲಿಯಾ ಗಿಡದ ಹಸುರು ಕೈಯಲ್ಲಿ ಜಗದ ಅಮ್ಮ ಬಿಸಿಲು ಗಾಳಿಯನಿಡಲು ಮೆಲ್ಲನೆಯೆ (ಅನಿಶೀ. ೩೯-೦). **ಡೀಲಿ**: "ಬಣ್ಣಬಣ್ಣದ ಸುತ್ತು ಹೂವುಗಳು ಬಿಡುವ ಮಕ್ಕಿಕೊ ತವರಿನ ಒಂದು ಜಾತಿಯ ಗೆಡ್ಡೆಯ ಗಿಡ: ಡೀಲಿ" (Dahlia.ಇಂಕಪ.). **ಡೇರಾ**: ಮನೆಯ ಮುಂದೆ ಚಮನ್, ರೋಜಾ, ಡೇರಾ ನಂದಿಬಟ್ಟಲು ಗಿಡಗಳ ಮಧ್ಯೆ ಪನ್ನೇರಳೆ ಹಣ್ಣಿನ ಮರ (ಹೊಸಕ್ಕ. ೧೨೩). **ಡೇರೆ**: ಡೇರೆಯು ಗಿಡದಿಂದ ಹೂದೋಟಕ್ಕೆ ಕಳೆ ಹೆಚ್ಚುತ್ತದೆ (ರೂಢಿ). **ಡ್ಯಾಲಿಯಾ**: ತೂಗುತ್ತಿವೆ ತೋಟದಲಿ ತರತರ ಗುಲಾಬಿಹೂ ಡ್ಯಾಲಿಯಾ ಬೋಗನ್‌ವಲಿಯ (ಸುನೀತ. ೬-೭). [←ಇಂ. Dahlia]

**ಡೈನಮೊ, ಡೈನಾಮೊ** (ನಾ). "ತಾಮ್ರದ ತಂತಿಯ ಸುರುಳಿಗಳನ್ನು ಕಾಂತ ಕ್ಷೇತ್ರದಲ್ಲಿ ವೇಗವಾಗಿ ತಿರುಗಿಸುವುದರಿಂದ ಯಾಂತ್ರಿಕಶಕ್ತಿಯನ್ನು ವಿದ್ಯುಚ್ಛಕ್ತಿಯನ್ನಾಗಿ ಮಾರ್ಪಡಿಸುವ ಯಂತ್ರ" (Dynamo. ಇಂಕಪ.): ಆ ತಂತಿಯ ಮತ್ತೊಂದು ಅಂಚನ್ನು ಒಂದು ಡೈನಮೋವಿನ ಋಣಧ್ರುವಕ್ಕೆ ಲಗತ್ತಿಸಬೇಕು (ಮುದ್ರಕ. ೫೯). **ಡೈನಾಮೊ**: ತಿರುಗುವ ಚಕ್ರಗಳಿಗೆ ವಿದ್ಯುತ್ತನ್ನು ಹೊರಡಿಸುವ ಡೈನಾಮೋವನ್ನು ಜೋಡಿಸುವರು (ಚಾಂಪ್ರ. I, ೪೦). [←ಇಂ. Dynamo]

**ಡೈನಾಮೊ** 'ಡೈನಮೊ' ನೋ.

**ಡೈನಾಮೈಟ್** (ನಾ). ಪ್ರಬಲವಾದ ಸಿಡಿಮದ್ದು; ತೀವ್ರ ಸ್ಫೋಟಕ: ಬಾವಿ ತೋಡುವಾಗ ಸಿಕ್ಕ ಬಂಡೆಯನ್ನು ಡೈನಾಮೈಟ್ ಉಪಯೋಗಿಸಿ ಒಡೆಸಿದರು (ರೂಢಿ). [←ಇಂ. Dynamite]

**ಡೈರಿ₁** (ನಾ). ದಿನಚರಿ ಬರೆಯುವ ಪುಸ್ತಕ: ಕುಳಿತ ಕುರ್ಚಿಯ ಮೇಲೆ ತೆರೆದು ಹಳೆ ಡೈರಿಯನ್ನು ಮುಗುಚುತ್ತ ನಡೆದ ಒಂದೊಂದೆ ಪುಟವ (ದೋಣಿಹಬ. ೮೩); ಓ, ಅದೇ ಡೈರಿ ಬರೆದಿದ್ದೇನಮ್ಮ (ಚಂಡಮು. ೨೩-೨೦).
[←ಇಂ. Diary]

**ಡೈರಿ₂, ಡೇರಿ** (ನಾ). ಹಾಲು, ಮೊಸರು, ಬೆಣ್ಣೆಗಳನ್ನು ತಯಾರಿಸುವ ಸ್ಥಳ; ಹೈನುಶಾಲೆ: ಬೆಂಗಳೂರು ಡೈರಿಯ ಹಾಲನ್ನು ಕೊಳ್ಳುತ್ತಿದ್ದೇವೆ (ರೂಢಿ). **ಡೇರಿ**: ಸಹಕಾರಿಸಂಘಗಳು ಡೇರಿಗಳನ್ನು ನಡೆಸುತ್ತಿವೆ (ರೂಢಿ).
[←ಇಂ. Dairy]

**ಡೊಂಕ₁** (ನಾ). ೧. ವಕ್ರವಾದುದು; ಕೊಂಕಿದುದು: ಕರ್ಕಂದುಡುಡುಕ್ಕೆ ನಿತು ಮುಳ್ಳೆಂಬುದು ಡೊಂಕನೂ ಸಸಿನಮೊಯೆಂಬುದಂ (ಶುಕ್ಕಸ. ೩-೦೫ ವ). ೨. ಬಾಗಿಸುವವನು (?): ತೊಡರ್ದರ ಡೊಂಕ . . . ಸೆಟ್ಟುಕಗಂ (ಎಕ. IX (೩). ಕಾನಕಾ. ೬೮-೮: 1319). (ಗು). ೩. ಕೊಂಕಿದ; ಬಾಗಿದ; ವಕ್ರವಾದ. [ಡೊಂಕು₂ + -ಅ₇]

**ಡೊಂಕ₂** (ನಾ). ಒಂದು ಕುಲದ ಹೆಸರು (?): ಶರಣಾಗತಜನಮಂ ನಿತ್ತರಿಪೆಡೆಯೊಳ್ ವಜ್ರಪಂಜರಂ ತಾನೆನೆ ಡೊಂಕರ ಮಾದಿರಾಜವಿಭು ತೊಡರ್ದರ ಡೊಂಕಿಯನಿಪ್ಪ ಬಿರುದನಿರದತ್ತಿಸಿದಂ (ಮುಂಬರಾ. X, ೨೩೪-೨೭; 1229).
[?]

**ಡೊಂಕಣ** 'ಡೊಂಕಣಿ' ನೋ.

**ಡೊಂಕಣಿ, ಡೊಂಕಣ, ಡೊಂಕಳಿ, ಧೊಂಕಣಿ** (ನಾ). ಒಂದು ಬಗೆಯ ಆಯುಧ ; ಸಬಳ : "ಕೊಂತಂ, ಡೊಂಕಣಿ–ಈ ೨ ಸಬಳಂ" (ಕಠಸಾ. ೧೪-೨೬೬) ; "ಡೊಂಕಣಿಯುಂ ಕೊಂತ ಸಬಳಮೆನಿಕ್ಕುಂ" (ಕವಿಕಂ. ೧೨೮) ; ಕೂರ್ಬಿನ ಡೊಂಕಣಿಯುಲ್ಲಿ ಜುಂಜಿನಂತಿರೆ ಪಿಳಿರ್ದಾಡುತಿರ್ಪ ಪೊಸಚೌರಿಯ ದಿಟ್ಟಿಗಳುಕ್ಕೆ (ಕಬ್ಬಿಗ. ೨೬೩) ; ಹೆಣನ ಹೋಳಿನ ಹಿಡಿದಡಗು ಡೊಂಕಣಿ ಯೊಳೆಸೆದುವು ಕಾಲನಾರೋಗಣೆಗೆ ಏಗೆ ಪಡಿಸಾದ ನೋಡದ ಮಾಣ ವೆಂಬಂತೆ (ಕುಮಾ.ಭಾ. ೮-೪೪) : ಪರಶು ಗದೆ ಚಕ್ರ ಡೊಂಕಣಿ . . . ಮೊದಲಾಗಿರ್ದ ಕೈದುಗಳ ಪಂಚಿಡಿಯೊಳುರವಣಿಸಿ ಪೊಯ್ಪುಂ (ಚಮಿಭಾ. ೧೨-೨೪). **ಡೊಂಕಣ :** ಡೊಂಕಣಕ್ಕೆ ಡಗ್ಗವರ ಪಾರೆ ಗುದ್ದಲಿ ಡೊಂಕಣ ಸಬಳ ಶರಗಳ ಸಂಕುಳವೆಯ್ದುತು (ಕುಂಡಾಸಾಂ. ೪೧-೩೦). **ಡೊಂಕಳಿ:** "ಡೊಂಕಳಿ = ೧. ಬತ್ತಳಿಕೆ. ೨. ಈಟಿಯ ಗಣೆ" (ಗಂಗಾಮ. ೧೯೩). **ಧೊಂಕಣಿ :** "ವರ್ಗಚತುರ್ಥಾಕ್ಷರಂಗಳ್ಗೆ . . . ಧೊಂಕಣಿ, ಧಂಕಣ ಅಧಾಳಂ (ಧಾಳಂ) (ಶಮದ. ೦೫ ಪ್ರಯೋ). 'ಡೆಂಕಣಿ' ಪರಾ.

[ ←ತೆಲು. ಡೊಂಕನಿ ]

**ಡೊಂಕಣಿಕಾರ** 'ಡೊಂಕಣಿಕಾಱ' ನೋ.

**ಡೊಂಕಣಿಕಾಱ, ಡೊಂಕಣಿಕಾರ** (ನಾ). ಸಬಳವನ್ನು ಹಿಡಿದು ಯುದ್ಧ ಮಾಡುವವನು ; ಭರ್ಜಿಯವನು : ಕಡುನಿಮಿರ್ದು ಪೊಳೆವ ಪೊಸ ಪೂಗುಡಿಯೆಂಬಗ್ಗಳಿಕೆವಡೆದ ಸಬಳಮನೊಲವಿಂ ಪಿಡಿದು ಬರುತಿರ್ದುದೆತ್ತಂ ಕಡು ಸೊರ್ಕಿದ ತುಂಬಿಯೆಂಬ ಡೊಂಕಣಿಕಾಱರ್ (ಕಬ್ಬಿಗ. ೨೧೩); ಧುರ ದೊಳಗೆ ಬಿಲುಗಾಱರೊಗ್ಗಿನ ಹಲಗೆಕಾಱರು ಹಲಗೆಯವರುಬ್ಬರದ ಡೊಂಕಣಿಕಾಱರಾಂತು ಕೃತಾಂತನಾಲಯವ ಥರಥರದಿ ಹೊಕ್ಕರು (ಕುಮಾ.ಭಾ. ೮-೪೬). **ಡೊಂಕಣಿಕಾರ:** ಧುರದೊಳಗೆ ನಿಂದರ್ಕೆ ಹರಿಗೆಕಾರರು ಹಲಗೆಯವರು ಡೊಂಕಣಿಕಾರರು (ತುರಂಗ. ೫೨-೩). 'ಡೆಂಕಣಿಕಾಱ' ಪರಾ. [ ಡೊಂಕಣಿ + – ಕಾಱ ]

**ಡೊಂಕತನ** 'ಡೊಂಕುತನ' ನೋ.

**ಡೊಂಕಬಂಕ** (ನಾ). ೧. ಬಹಳ ಕುಟಿಲಸ್ವಭಾವದವನು; ಅತಿವಕ್ರ. (ಗು). ೨. ಅಂಕುಡೊಂಕಾದ : ಕೃತ್ರಿಮವಾದ ಅವಯವಗಳಿಂದ ಸ್ತ್ರೀಪಾತ್ರವನ್ನು ಡೊಂಕಬಂಕನಾಗಿ ಅಭಿನಯಿಸುವವನನ್ನು ನೋಡಿ (ಸಾಹಿಚೇ. ೨೦). [ ಡೊಂಕ$_1$ + ಬಂಕ$_3$ ]

**ಡೊಂಕಳಿ** 'ಡೊಂಕಣಿ' ನೋ.

**ಡೊಂಕಿ$_1$** (ನಾ). ೧. ಬಾಗಿಸುವವನು: ಕಾವೇರೀವಲ್ಲಭ ಕರದೀವ ದಾನಿ ಮಚ್ಚ ಹೊಕ್ಕರೆ ಕಾವ ತೊಡೆದರ ಡೊಂಕಿ ಬಿರಿವರ ಬಾಯ ಬೊಂದಿಗೆ . . . ಮಾದಿಗದೇವನೊಡನೆ (ಎಕ. IX, ಕಾನಕಾ. ೧೨೭-೩ ; 1293). ೨. ಗಾಳದ ಮಿಣಿಯಿನ ತುದಿಯ ಕೊಕ್ಕೆ; ಗಾಳದ ತುದಿಯಲ್ಲಿ ಅಳವಡಿಸಿದ ಕೊಕ್ಕೆ,–ಮುಳ್ಳು (?): ಗಾಳದ ಡೊಂಕಿಯುಗ್ರಮನೆ ಬಾಳರಮಂ ಪಿಡಿದಿರ್ದ . . . ಕಟರ್ಕಳನೊಪ್ಪಿದುದೊಂದು ಪಕ್ಕಣಂ (ಕುಸುಮಾ. ೧೦-೧೪೮).

[ ಡೊಂಕು$_2$ + – ಇ$_3$ ]

**ಡೊಂಕಿ$_2$** (ನಾ). ಒಂದು ಬಗೆಯ ತೆರಿಗೆ : ದೇವರಗಾಣಕ್ಕೆ[ತ]ಱಬಿಟ್ಟಗೆ ಡೊಂಕಿ ಬೀರವಣ ಸರ್ವ್ವಬಾಧಪರಿಹಾರವಾಗಿ ಬಿಟ್ಟರು (ಕಾಇಇ. XI-ii, ೦೫೮-೨೬ ; 1109). [ ? ]

**ಡೊಂಕಿವಣ, ಡೊಂಕೆವಣ** (ನಾ). ಡೊಂಕಿಯ ತೆರಿಗೆಯ ಹಣ : ನನ್ನಾದೀವಿಗೆಗೆ ಡೊಂಕಿವಣ ಪಾನೆಣ್ಣೆಸಹಿತಂ ಬಿಟ್ಟ ಗಾಣವೊಂದು (ಕಇ. II, ೧೦-೩೭ ; 1181). **ಡೊಂಕೆವಣ :** ವರ್ಷಸಂಪ್ರತಿಯಾಗಿ ನಡಸುವ ಗದ್ಯಾಣವೆರಡು ಒಂದು ಗಾಣದ ಡೊಂಕೆವಣ ಕಾರುಕದೆಱ . . . ಕೊಟ್ಟರು (ಕಇ. IV, ೦೩-೭೫ ; 1165). [ ಡೊಂಕಿ$_2$ + ಪಣ$_3$ ]

**ಡೊಂಕಿಸು** (ಕ್ರಿ). ಓರೆಯಾಗು; ವಕ್ರವಾಗು : ಬಡಗಣ ಓವರಿಯೊಳು ಹುಟ್ಟಿ ತೆಂಕ [illegible] ಡೊಂಕಿ [illegible] ಗಂಗೆ (ಭರಜ. ೨೩-೫೯). [ ಡೊಂಕು$_1$ + – ಇಸು$_3$ ]

**ಡೊಂಕು$_1$** (ಕ್ರಿ). ಓರೆಯಾಗು; ವಕ್ರವಾಗು: ಬಾಗು [illegible] [illegible]ದ ದೋಷವನುಸರಿಸಿ ನಡೆವುದು (ಪ್ರಗಿಣ. ೫ ೪೬೩-೨೪); ಅಗುಳಸುತಡೊಂದು ಕಾಲು ಡೊಂಕಿ ನಡೆವುದು (೯೩-೨೨); ನಗುವರಾರಾನೊಂದು ಜನದವ ದಾಡಲ್ಕೆ ಮೊಗಗಳು ಡೊಂಕುದವು (ಭರಜ. ೯೬-೧೪೦) : ಮಧುವಾಣಿಯ ಮೋಜ್ ಚಿಟ್ಟದಿ ಡೊಂಕಿತು (ಭರಜ. ೯೬-೧೯೩). [ ದೇ.ಹ ತೆಲು. ಡೊಂಕು, ಟೊಂಕು ]

**ಡೊಂಕು$_2$** (ನಾ). ೧. ಬಾಗಿರುವಿಕೆ; ನೆಟ್ಟಗಿಲ್ಲದಿರುವಿಕೆ: ಸೊಟ್ಟಾಗಿರು ವಿಕೆ ; ಓರೆಯಾಗಿರುವಿಕೆ : ವಕ್ರತೆ : ತೆಂಗಿನ [illegible] ದಿಂಗಳ್ವರವಾಡಿ [illegible] [illegible] ಡೊಂಕೆಂಬ ನಾಯ ಬಾಲದ [illegible] (ಭಮೂಕಮ. ೨-೯೨) ; ಹಾವಿನ ಡೊಂಕು ಹುತ್ತಕ್ಕೆ ಸಹಿಸ (ಬಸವ. ೦೪೪): ಕಬ್ಬಿಗೆ ಡೊಂಕಲ್ಲದೆ ಮಧುರಕುಂಟೆ ಡೊಂಕು (ನಗಮಾ. ೭೦): ನರವತಿಗದಿರಾಗಿ ನಲಿದು ತಿರುಗಿದರಾಗಲೆ ಡೊಂಕನಳಿದು ಗಂಗೆ ಹರಿವಂತೆ ನೇರದೆ [illegible] (ಭರಜ. ೦೩-೯೭); ಡೊಂಕು ಹಣ್ಣುಗಳಲ್ಲಿ ಡೊಂಕು ಬಾಳೆಯ ಹಣ್ಣು ಡೊಂಕಿನ [illegible] ಒಳಗೆ ರುಚಿಯುಂಟು ಸಜ್ಜನರ ಡೊಂಕು ಲೇಸು (ಸರ್ವಜ್ಞ. ೮೬೨). ೨. ಓರೆ ಯಾದುದು ; ಸೊಟ್ಟಾಗಿರುವುದು : ವಕ್ರತೆಯುಳ್ಳದು : [illegible] ದಂಟೆಡೆ ಡೊಂಕು (ಪ್ರಭು. ೩-೨೦) ; [illegible] ಡೊಂಕಾದ ಮಾತ್ರಕ್ಕೆ ಕತ್ತರಿಸಿದ ಕಬ್ಬು ಡೊಂಕೆ (ಕಂಠ. ೭೧-೯೬) ; [illegible] ಡೊಂಕು ಬಾಂಬನವರು ಡೊಂಕೆ ರಸಿಕರ [illegible] (ಗಾ. ೩೩-೮೦) : ಒಂದು ಎಲೆಯಂತೆ ಇನ್ನೊಂದಿಲ್ಲ . . . ಕೆಲವು ಸೊಟ್ಟು, ಡೊಂಕು (ರಾಜಾಂ ೧೦೫) ; ಕಬ್ಬು ಡೊಂಕಾದರೆ ಸವಿ ಡೊಂಕೇ ? (ಗಾದೆ). ೩. ಬಾಗಿರುವ ಸ್ಥಳ ; ಸೊಟ್ಟಾಗಿರುವ ಪ್ರದೇಶ : ಡೊಂಕಿಸಿ ಮೂಡ ಹರಿದು ಕಡಲ ಕೂಡಿದ್ದಾ ಗಂಗೆಮಾವಳ ಡೊಂಕಿನೆಡೆಯೊಳು ಬಿಟ್ಟನಾ ಚಕ್ರ (ಭರಜ. ೨೩-೫೯). ೪. ಅಡ್ಡಿ ; ಅಡಚಣೆ ; ತೊಂದರೆ : [illegible] ಕಟ್ಟಗಿಯ [illegible] ಡೊಂಕಿಲ್ಲ (ಭರಜ. ೨೨-೫೫). ೫. (ಅಲಂ) ನೇರವಲ್ಲದ ಮಾತು ; ಕೊಂಕುಮಾತು : [illegible] ಡೊಂಕು ಲೇಸೆಂದ (ಸರ್ವಜ್ಞ. ೮೦೨). ೬. (ಅಲಂ) ಕೊಂಕು ನಡತೆ ; ಅವಗುಣ ; ವಕ್ರಸ್ವಭಾವ ; ದೋಷ : ಲೋಕದ ಡೊಂಕ ನೀವೇಕೆ ತಿದ್ದುವಿರಿ . . . ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ (ಬಸವ. ೨೫೯) ಎನ್ನ ಮನದ ಡೊಂಕ ತಿದ್ದಯ್ಯ (ಪ್ರಭು. ೯-೨೦೫ ವಚನ). [illegible] [illegible] ಡೊಂಕಿನಿಂದ [illegible] (ಭರಜ. ೨೪-೯೭); ತನ್ನ ಡೊಂಕನು ತನಗೆ ತಿಳಿಯದೆ ಅನ್ಯರಿಗೆ [illegible] ಶುನಕ ಬುದ್ಧಿಯೊಳು ಬೆರೆದಗೆ ಧರ್ಮಯೋಗ್ಯವಲ್ಲೆಂದ (೩-೩) ಅವನ ನುಡಿಯಲ್ಲಿ ಎರಡಿರಲಿಲ್ಲ ನಡೆಯಲ್ಲಿ ಡೊಂಕಿರಲಿಲ್ಲ (೩೫). ೭. ವಕ್ರಸ್ವಭಾವವುಳ್ಳದು ; ಕೀಳುವರ್ತನೆಯುಳ್ಳದು : ಮನ ಡೊಂಕು ಮನಸು ಡೊಂಕಾದರು [illegible] ಜನಕಲ್ಪರಿರ [illegible] (ಭರಜ. ೩-೭೦). (ಗು). ೮. ಡೊಂಕಾದ : ವಕ್ರವಾದ ; ನೇರವಲ್ಲದ; ಕುಟಿಲವಾದ: ಡೊಂಕುಬಾಲದ ನಾಯಕರ [illegible] (ಪ್ರಭು. ೯-೯೦ ವಚನ) [illegible] [illegible] ಡೊಂಕುಗೋಣಿ[illegible] (ರಾಜಾಂ. ೩೮೭). 'ಡೊಂಕುಗೋಣು' ಪರಾ.

[illegible] = ಓರೆಕೋರೆ : (ಕ). [illegible] ಡೊಂಕು ಡೊಸುರು : (ಕ). [ <ಡೊಂಕು$_1$ ]

**ಡೊಂಕುಗ** (ನಾ). ವಕ್ರಸ್ವಭಾವದವನು; ವಂಚಕ: "ಕುಟಿಲಂ=ಡೊಂಕುಂ; ಡೊಂಕುಗನುಂ" (ಕಾಶಕ್ಕ. ೨೨೭). [ಡೊಂಕು$_2$ + – ಗ$_2$]

**ಡೊಂಕುಗಾಲು** (ನಾ). ಡೊಂಕಾದ ಕಾಲು; ಸೊಟ್ಟಗಾಲು: ಕುಸಿದ ನಡುವಿನ ಹೊರಟ ಬೆನ್ನಿನ ಬೀಸುಗೈಗಳ ಡೊಂಕುಗಾಲುಗಳ . . . ತೋರ ಕಾರೊಡಲ ಕುಬುಬನು (ಬಸವು. ೨೦-೦೦). [ಡೊಂಕು$_2$ + ಕಾಲು$_1$ (<ಕಾಲ್$_1$)]

**ಡೊಂಕುಗೋಣು** (ನಾ). ಓರೆಯಾದ ಕುತ್ತಿಗೆ; ಸೊಟ್ಟ ಕತ್ತು; ವಕ್ರವಾದ ಕಂಠ: (ಓ). [ಡೊಂಕು$_2$ + ಗೋಣು (<ಗೋಣ್)]

**ಡೊಂಕುತನ, ಡೊಂಕತನ** (ನಾ). ೧. ಬಾಗಿರುವಿಕೆ; ಓರೆಯಾಗಿರುವಿಕೆ; ವಕ್ರತೆ: (ಓ). ೨. ವಕ್ರಸ್ವಭಾವ. **ಡೊಂಕತನ**: ೧. "ನಮ್ರತೆ" (ಗುವಿವೋ). [ಡೊಂಕು$_2$ + – ತನ]

**ಡೊಂಕುನಡೆ** (ನಾ). ಓರೆಯಾಗಿ ನಡೆಯುವಿಕೆ; ವಕ್ರಗಮನ; ಸೊಟ್ಟ ನಡಿಗೆ: "ಸರ್ಪಣಂ=ಡೊಂಕುನಡೆ" (ಕಾಶಕ್ಕ. ೭೬); "ಕುಟಿಲಾಯಾಂ ಗತೌ, ಡೊಂಕುನಡೆಯೊಳ್" (ಕಾಶಕ್ಕ. ೦೩೯). [ಡೊಂಕು$_2$ + ನಡೆ$_2$]

**ಡೊಂಕುವೆಱು** (ಕ್ರಿ). ಓರೆಯಾಗು; ವಕ್ರತ್ವವನ್ನು ಪಡೆ: ಬಂದಡಿ ಡೊಂಕುವೆತ್ತ ಬೆರಲೋರೆಯ ಪೇರ್ದೊಡೆ ವಕ್ರಮಧ್ಯಮುಬ್ಬರಿಸಿದ ಪೇರ್ಬಸಿಱ್ (ವೃಷವಿ. ೦೦-೬೦). [ಡೊಂಕು$_2$ + ಪೆಱು$_1$]

**ಡೊಂಕುಹೋಗು** (ಕ್ರಿ). ಬಾಗು; ಸೊಟ್ಟಾಗು; ವಕ್ರವಾಗು: ಈ ಯೊಡಲು ಕೈಕಾಲು ಶಿರವಯ್ಯೋಯಿವೀಗಳೆ ಡೊಂಕುಹೋಹವು (ಬಸವು. ೦೭-೪). [ಡೊಂಕು$_2$ + ಹೋಗು$_1$ (<ಪೋಗು$_1$)]

**ಡೊಂಕೆವ್ವಣ** 'ಡೊಂಕಿವಣ' ನೋ.

**ಡೊಂಗಱು**, ಡೊಂಗುಱು, ಡೊಕ್ಕರ$_1$, ಡೊಗರು, ಡೊಗಱು, ಡೋಱ್, ಡೋಱು, ದೊಂಗರ, ದೊಗರು, ದೋಱು (ನಾ). ೧. (ಗುಹೆ, ಮರ ಮೊದಲಾದುವುಗಳ ಒಳಗಿನ) ರಂಧ್ರ; ಬಿಲ; ಪೊಟರೆ: ಪರಿವಿಡಿಯಿಂದೆಯ್ದು ಗುಹೆಯ ಸಾರ್ದದಱ ಡೊಂಗಱದಲ್ಲಿ ಸೂಸೆಯುರ ಳುಕುತ ಬರಲೇಕೆ (ಭರತ. ೪೪-೪೩). ೨. ಹಳ್ಳ; ಕುಳಿ; ತಗ್ಗು: ಕುಳಿಯೊಳೊರ್ಗುಡಿಸಿ ಡೊಂಗಱನನೇಱ್ ಸರವುಗಳೊಳಿಳಿದದಟುಗೆಟ್ಟು ಬೆಂಡಾದಸುಖಿಗಳನು (ಹಡಕಾ. ೯-೩೩); ಇಡುಕುಱು ಡೊಂಗಱ ಘಟ್ಟ ಬೆಟ್ಟದ ಸಿಕ್ಕು ತಡೆಕಟ್ಟು ಸಮತಳವಾಗೆ (ಭರತ. ೨೮-೫೦). **ಡೊಂಗುಱು**: ೨. ಬಳ್ಳಿಗುರುವಿನ ಕೈ ಬಳ್ಳಿಗುರುಡ ಪಿಡಿದು ಕಾಣದ ಡೊಂಗುಱವ ಬಿದ್ದಂತೆ ಗುರುಶಿಷ್ಯರೆಂಬುಭಯರು ಯಮುಗೊಂಡದಲ್ಲಿ ಬೀಳುವರು (ವಚಸಂ. ೦೨೭-೦೦೭). **ಡೊಕ್ಕರ$_1$**: (ಓ). **ಡೊಗರು**: ೧. ಡೊಗರಿನಿಂದ ಆಹಾರಾನ್ವೇಷಣೆಗಾಗಿ ಆಗ ತಾನೆ ಹೊರಗೆ ಬಂದಿದ್ದ ಕಾರೇಡಿಯೊಂದು ತನ್ನ ಬಳಿಗೆ ಕರಿಯ ಕೋಲು ಬರುತ್ತಿದ್ದುದನ್ನು ಕಂಡು ಬೆದರಿ . . . ಡೊಗರಿನ ಕಡೆಗೆ ಓಡತೊಡಗಿತು (ಕಾನೂರು. ೨೦); ಬಹಳ ಹೊತ್ತು ಹುಡುಕಿದ ಮೇಲೆ ಒಂದು ಡೊಗರು ಸಿಕ್ಕಿತು (ಷಂ ಪಾ ಮ್ಮ. ೦೦೦); ಇಕ್ಕಟ್ಟಾದ ಬಂಡೆಯ ಡೊಗರಿನಲ್ಲಿ ಒಬ್ಬರ ಹಿಂದೆ ಒಬ್ಬರು ಮೇಲೆ ಹತ್ತಲಾರಂಭಿಸಿದರು (ಧಾರವೀ. ೦೦೩). ೨: ಮುದುಕಿ ಬಿದ್ದವಳೆ ಡೊಗರಲ್ಲಿ (ಹಳ್ಳಿಯ. ೧೬೬). **ಡೊಗಱು**: ೧. ಒಂದು ದಿವಸದೊಳು ತಾನಿರ್ಪ ನೆಲದ ಡೊಗಱೊಳಗೆ ಹೊಕ್ಕುಗೆಯುತ್ತುವಿರೆ (ಸಮ್ಯಕ್ತ್ವಾ. ೫-೪೩). **ಡೋಱ್**: ೨. ಸುಳಿದಲೆಯ ಕೆಮ್ಮಾಸೆಗಳಮಿಗೆ ಬೆಳೆದ ಮುಡುಗುಗಳೊಡ್ಡಿದುರದುಚ್ಚಳಿತ ರೋಮದ ನೊಸಲ ಡೋಱಿಯ. . .ಕದನ ಪ್ರಚಂಡರ ಕಂಡು ಬೆಱಗಾದ (ಕುಮ್ಮಾರ. ೨-೩೧); ಮುಱಿದ ಮೂಗುಗಳ ನೊಸಲ ಡೋಱಿಯ. . . ಯಮದೂತರಂದಾಗಸಕೆ ನೆಗಹಿದ ಪಾಶಹಸ್ತರು ಬಂದರಾಕ್ಷಣಕೆ (ನಿಭಾಗ. ೬-೧-೧೯). **ಡೋಱು**: ೧. ಮದಹಸ್ತಿಯಿಱಿದ ಘಾಯಂಗಳ ವರಾಹನೆತ್ತಿದ ಡೋಱು[ಪಾಠಾಂ. ನೆ]ಗಳ . . . ಕಡವೆ ತುಳಿದ ಹೆಜ್ಜೆಗಳ ಚಿಪ್ಪದ ಬೇಡನಾಯಕರು ನೆರೆದರು (ಹವಕಾ. ೫-೫); ಮಾದ್ರವತಿಯೆದೆಡೋಱಿನಲಿ ಡಾವರಿಸಿದವು ರಕ್ತಾಂಬುಧಾರೆಗಳು (ಕುಮ್ಮಾರ. ೩-೬೮); ಆರಾಳ್ ಶರಂಗಳಿಂದೆಚ್ಚವರ ತನುಗಳಂ ಡೋಱಿನಿಸಿ (ಚೆಬಪು. ೪೯-೨೨). 'ಡೋಱುಗಳೆ', 'ಡೋಱುವೋಗು' ಪರಾ. **ದೊಂಗರ**: ೨. ಸಿದ್ಧನ ಹಳ್ಳಿಯ ಬಳಿ ಒಂದು ದೊಡ್ಡ ದೊಂಗರವಿತ್ತು. ಅದನ್ನು ಹಾದರೆ ಮುನೇಶ್ವರನ ಗುಡಿಯವರೆಗೂ ನಿರ್ಜನವಾದ ದಿನ್ನೆ, ಕೊರಕಲು ಪ್ರದೇಶ (ಊರುಕ. ೧೬೦). **ದೊಗರು**: ೧. ಅಪ್ಪರಲ್ಲಿ ನಾಯಿ ದೊಗರಿನ ಬಾಯಿಗೆ ಮೂತಿಯನ್ನು ತುರುಕಿ ಉಸಿರು ಎಳೆಯುತ್ತಾ, ತನ್ನ ಮುಂಗಾಲುಗಳಿಂದ ಬಿಲದ ಬಾಯಿಯನ್ನು ಪರಪರನೆ ಕೆರೆಯತೊಡಗಿತು (ಮಗಮಾಂ. ೩೭). **ದೋಱು**: ೧. 'ದೋಱುವೋಗು' ಪರಾ.

[ದೇ.॥ ತಮಿ. ಟೊಱ್ಚು; ತೆಲು. ಡೊಂಗು, ದೊಂಗು]

**ಡೊಂಗು** (ಕ್ರಿ). "ಕಂಪಿಸು; ನಡುಗು" (ಬಾಧಪು. ಕೋಶ): ರವಿಬಿಂಬಂ ಪ್ರತಿಬಿಂಬಿಸಿರ್ದದಱೊಳಂ ತೋಱುತ್ತಿರಲ್ ಕಂಡು ಮದ್ಯಮುಷಾಸ್ವಾದಿಸುತಿರ್ದವಳ್ . . . ಪೋಗುಪೋಗೆಂದು ಡೊಂಗುವ ಕೈಯಂ, ಮಿಗೆ ನೀಡಿ ಮತ್ತೆ ಬಲಿದೌಡಂ ಕಚ್ಚುತಂ ನೂಂಕಿದಳ್ (ಬಾಧಪು. ೧೦-೦೩೫). [<ಡೊಂಕು$_1$?]

**ಡೊಂಗುಱು** 'ಡೊಂಗಱು' ನೋ.

**ಡೊಂಡೊಂಡೆ** (ನಾ). ದಿಂಡುರುಳಿಕೆ (?): ದಂಭಕ ಭಕ್ತಿಗೆ ಮೆಚ್ಚಕೊಡನು ಕೃಷ್ಣ ಡೊಂಬಲಾಗವು ಹಾಕಿ ಡೊಂಡೊಂಡೆ ಹೊರಳಿದರಿಲ್ಲ (ಪುರಂದ. ೫-೦೩೮ ಅನುಪಲ್ಲವಿ). [?]

**ಡೊಂಬ$_1$** 'ದೊಂಬ' ನೋ.

**ಡೊಂಬ$_2$** 'ದಂಬ' ನೋ.

**ಡೊಂಬಕಾಗೆ** (ನಾ). ಒಂದು ಬಗೆಯ ಕಾಗೆ; "(ಕಪ್ಪು ಗರಿಗಳೂ ಒರಟು ಧ್ವನಿಯೂ ಉಳ್ಳ, ಮುಖ್ಯವಾಗಿ ಮಾಂಸವನ್ನು ತಿಂದು ಜೀವಿಸುವ, ಅನೇಕ ವೇಳೆ ಸಾಕಿ ಪಳಗಿಸಿದ ಮತ್ತು ಜನಬಳಕೆಯಲ್ಲಿ ದುಶ್ಶಕುನ ಸೂಚಕವೆಂಬ ಭಾವನೆಯುಳ್ಳ) ಕಾಗೆಜಾತಿಯ ಒಂದು ದೊಡ್ಡ ಹಕ್ಕಿ" (Raven. ಇಂಕನಿ.): ಮೊಲ ಮತ್ತು ನರಿಗಳನ್ನು ನಾಯಿಗಳಿಂದ ಬೇಟೆಯಾಡುವ, ಡೊಂಬಕಾಗೆ, ಡೇಗೆ, ಕಾಗೆ ಮತ್ತು ರಣಹದ್ದುಗಳಿಂದ ಬೇಟೆಯಾಡುತ್ತಾರೆ (ಪ್ರಪಾಇ. I, ೦೩). [ಡೊಂಬ$_1$ (<ದೊಂಬ) + ಕಾಗೆ]

**ಡೊಂಬಕಾಣಿಕೆ** (ನಾ). ಒಂದು ಬಗೆಯ ತೆರಿಗೆ (?): ಯಿವಿಲ್ರಿಗೆ ಚ್ಚಪರ ಕಾಣಿಕೆಯಿಲ್ಲ ಮುರಿಕಾಣಿಕೆಯಿಲ್ಲ ಡೊಮ್ಬುಕಾಣಿಕೆಯುಲ ಲಿಂಗಕಾಣಿಕೆಯಿಲ (ಎಕ. XVI, ಗುಬ್ಬಿ. ೬೯-೩೩: ?). [ಡೊಂಬ$_1$ (<ದೊಂಬ) + ಕಾಣಿಕೆ (<ಕಾಣ್ಕೆ)]

**ಡೊಂಬತಿ** 'ದೊಂಬಿತಿ' ನೋ.

**ಡೊಂಬರಗೆ** (ನಾ). (ಉಕ) ಎತ್ತಿನ ಗಾಡಿಯ ತೋಳು; ಗುಜ್ಜುಗಳ ಮೇಲ್ಭಾಗದಲ್ಲಿ ಕೂಡಿಸಿದ ಬಿದಿರಬೊಂಬು. [?]

**ಡೊಂಬವಱ$^3$** (ನಾ). ಡೊಂಬರು ತಮ್ಮ ಆಟದಲ್ಲಿ ಬಾಜಿಸಲು ಬಳಸುವ ಒಂದು ಬಗೆಯ ಚರ್ಮವಾದ್ಯ; ದಡ್ಡಸ: "ದಡ್ಡಸ–ಡೊಂಬವಱ" (ಶಮದ. ಷಂ. ೨); "ದಡ್ಡಸವೆಂದು ಡೊಂಬವಱ" (ಕರ್ಣಾನಿ. ೦೮). [ಡೊಂಬ$_1$ (<ದೊಂಬ) + ಪಱ$^3_1$]

**ಡೊಂಬವಿದ್ದೆ** (ನಾ). ಯಕ್ಷಿಣೀ ವಿದ್ಯೆ; ಬೇರೆಬೇರೆ ವೇಷವನ್ನು ಧರಿಸುವ ಮಾಯಾ ವಿದ್ಯೆ; ಮೋಸಗಾರಿಕೆ; ವಂಚಕತನ: ಏನಾನವೆ ಪಂದಿಯೆಂದೆನಿತಾನುಂ ತೆಱನಾಗಿ ಡೊ[ಪಾಠಾಂ. ದೊ]ಂಬವಿದ್ದೆಯನಾಡಲ್ ನೀನೆಱಿವೆಯುಱದಿರ್ದೊಡಾನೞಿವೆಂ ನಿನ್ನನಿಲ್ಲಿ ದೆಸೆವಲಿಗೆಯ್ವಲ್ (ಪಂಪಭಾ. ೬-೫೭). [ಡೊಂಬ$_2$ (<ದಂಬ) + ವಿದ್ದೆ]

**ಡೊಂಬಿ₁** 'ದೊಂಬಿ' ನೋ.

**ಡೊಂಬಿ₂** 'ದಂಬ' ನೋ.

**ಡೊಂಬಿಗ₁** 'ದೊಂಬಿಗ' ನೋ.

**ಡೊಂಬಿಗ₂** (ನಾ). ಒಣಹೆಮ್ಮೆಯನ್ನು ತಾಳಿದವನು ; ಆಡಂಬರಕಾರ ; ಡಾಂಭಿಕ : 'ರಣಡೊಂಬಿಗ' ಪರಾ.

[ ಡೊಂಬು₂ (<ದಂಬ) + – ಇಗ ]

**ಡೊಂಬಿಗಾರ** 'ದೊಂಬಿಗಾರ' ನೋ.

**ಡೊಂಬಿಗೈ** (ಕ್ರಿ). ಗುಂಪುಸೇರು ; ಒಟ್ಟಾಗು : ಡೊಂಬಿಗೈದಲ್ಲಲ್ಲಿ ದನಿಗೈವ ಕಾರಂಡಚಕ್ರದಿಂ (ವಂಕಾರಾ. ೨–೧೮–೨೩).

[ ಡೊಂಬಿ₁ (<ದೊಂಬಿ) + ಗೈ (<ಕೆಯ್₁) ]

**ಡೊಂಬಿತಿ₁** 'ದೊಂಬಿತಿ' ನೋ.

**ಡೊಂಬಿತಿ₂** (ನಾ). ಮಾಯಾವಿನಿ ; ಕೆಟ್ಟವಳು ; ಧೂರ್ತೆ : ಪೆಂಪಿನಾಲಡ್ಡುಗೆಯಂ . . . ಡೊಂಬಿತಿ ಜೋಡೆ ಸೋಲದಿಂ ಬಡ್ಡಿಸಿದಪ್ಪಳೆಂದು ನೆಱೆ ದೂಱುವರೆನ್ನನವಳ್ಗೆಯಿಂ ಪೆಱರ್ (ಧರ್ಮಾಮೃ. ೧೦–೨೦೨).

[ ಡೊಂಬು₂ (<ದಂಬ) + – ಇತಿ₁ ( <– ಇತ್ತಿ) ]

**ಡೊಂಬಿದೈವ** (ನಾ). ವಂಚನೆಯ ದೈವ ; ಮೋಸಗಾರ ದೇವರು : ಕೊಂಬು ಹೋತ ಕುಱಿ ಕೋಣನ ಬಲಿಗೊಂಬ ಡೊಂಬಿದೈವಗಳ ಭಜಿಸದಿರು ಮನವೆ (ಕನಕ. ೧೭೩–೨). [ ಡೊಂಬು₂ (<ದಂಬ) + ದೈವ ]

**ಡೊಂಬಿಬೀಸು** (ನಾ). ಕತ್ತಿವರಸೆಗಳಲ್ಲೊಂದು ; ಖಡ್ಗ ಬೀಸುವಿಕೆಗಳಲ್ಲಿ ಒಂದು ವಿಧಾನ (?) : ಆ ಸ್ಥಾನದಲ್ಲಿ ದೇಹಭ್ರಮಣಉ ಅಲ್ಪವಾಗಿ ಯಿದ್ದಂಥಾ ಪಾದಗಳ ಗಮನಉ ಬಂಡಿಕೋಲಿನ ಭ್ರಮಣವು ಆವದು ಅದು ಡೊಂಬಿಬೀಸುಯೆಂದು ತಿಳವರು (ಪಡ್ಮಱ. ೫–೨೯).

[ ಡೊಂಬಿ₂ + ಬೀಸು₂ ]

**ಡೊಂಬಿಮಾಡು** 'ದೊಂಬಿಮಾಡು' ನೋ.

**ಡೊಂಬಿವರಿ** (ಕ್ರಿ). ಗುಂಪಾಗಿ ನುಗ್ಗು ; ಒಟ್ಟಿಗೆ ಧಾವಿಸು ; ಮೊತ್ತವಾಗಿ ಮುಂದೆ ಸಾಗು: ಡೊಂಬಿವರಿದಿಱಿದಾಡಿ ಸೂತ್ರದ ಬೊಂಬೆಯಂದದಿ ಕೆಡೆದರಧಟರು (ಸಾಳ್ವಭಾ. ೨೩–೨೮).

[ ಡೊಂಬಿ₁ (<ದೊಂಬಿ) + ಪರಿ₂ ]

**ಡೊಂಬಿಸು** (ಕ್ರಿ). ಮೋಸಮಾಡು ; ವಂಚಿಸು : ಜನಮುಳ್ಳನಂ ಕರಂ ಡೊಂಬಿಸಿ ತಿಂಬರ್ (ಜೀವಸಂ. ೬೯–೦೪).

[ ಡೊಂಬು₂ (<ದಂಬ) + – ಇಸು₃ ]

**ಡೊಂಬು₁** 'ದೊಂಬಿ' ನೋ.

**ಡೊಂಬು₂** 'ದಂಬ' ನೋ.

**ಡೊಂಬುಮಾಡು** 'ದೊಂಬಿಮಾಡು' ನೋ.

**ಡೊಂಬೆ₁** 'ದೊಂಬಿ' ನೋ.

**ಡೊಂಬೆ₂** (ನಾ). ಮೋಸಗಾತಿ ; ವಂಚಕಿ : ಒಡಿದನೊಳ್ ಪರಾಂಗನೆಯೊಳೋತೊಡಗೂಡಿದನೊಳ್ ಸರಾಗದಿಂ ಕೂಡುವಳೆಂಬ ಡೊಂಬೆ ಸಿರಿ ಪಾತಕಿ ನಾಣಿಲಿ ಕೆಟ್ಟ ಬೂತು ನಾಚಿಳ್ದೋಡೆಯವಳ್ಗದಕ್ಕುಮುಟಿದಾವಳು ವೊಲ್ವಳೆ ಕೀರ್ತಿಯೆಂಬವಳ್ನೋಡಳು ನಿಂದು ಬೀರಸಿರಿ ಕೇಳಳವಂದಿರ ಮಾತನಪ್ಪಡಂ (ಬಂಹರಿ. ೧೦–೦೦೪).

[ ಡೊಂಬು₂ (<ದಂಬ) + – ಎ₂ ]

**ಡೊಕ್** (ನಾ). (ಆಯುಧದಿಂದ ತಿವಿಯುವುದು ಮೊದಲಾದ ಸಂದರ್ಭದಲ್ಲಿ ಬಳಸುವ ಒಂದು ಅನುಕರಣ ಶಬ್ದ : 'ಡೊಕ್ಕನೆ' ಪರಾ.

**ಡೊಕ್ಕನೆ** (ಅ). ಡೊಕ್ ಎಂಬುದಾಗಿ : ಡೊಕ್ಕನೆ ಸುಂಗೆಯೊಳುರವಂ ದಿಕ್ಕನೆ ಬಿರಿಯುಱಿದು (ಪಂಪಭಾ. ೦೨–೦೫೩). [ ಡೊಕ್ + – ಅನೆ₁ ]

**ಡೊಕ್ಕರ₁** 'ಡೊಂಗಟ' ನೋ.

**ಡೊಕ್ಕರ₂**, ಡೊಕ್ಕರೆ, ಢಕ್ಕರ, ಢೊಕ್ಕರ, ದೊಕ್ಕರಿ (ನಾ). ೧. ಬಲವಾದ ಹೊಡೆತ; ಒದೆತ; ಮುಷ್ಟಿಯ ಪೆಟ್ಟು; ಗುದ್ದು: "ಡೊಕ್ಕರ[ಪಾಠಾಂ. ೪] ಗುದ್ದುಂ" (ಛಾಂದಿ. ೫೬). ೨. ಮಲ್ಲಯುದ್ಧದ ಒಂದು ಪಟ್ಟು. ಪ್ರತಿಮಲ್ಲನ ಕೊರಳ ಹಿಂಭಾಗವನ್ನು ಒಂದು ಕಂಕುಳಲ್ಲಿ ಇರಿಸಿಕೊಂಡು, ಕುತ್ತಿಗೆಯನ್ನು ಮುಂಗೈಯಿಂದ ಅದುಮುತ್ತ ಇನ್ನೊಂದು ಕೈಯಿಂದ ಮೊಣಕಾಲ ಸಂಧಿಗಳನ್ನು ಗಟ್ಟಿಯಾಗಿ ಹಿಡಿದೆಳೆದು ದೇಹವನ್ನು ಹುದುಗಿಸಿ ಕಾಲುಗಳೆಡೆಗೆ ಹೊಟ್ಟೆಯನ್ನು ಎರಡು ತೊಡೆಗಳಿಂದ ಪೀಡಿಸುತ್ತ ಅವನಿಗೆ ಪ್ರಾಣಾಂತಕವಾದ ನೋವನ್ನೊದಗಿಸುವ ಜಟ್ಟಿಕಾಳಗದ ಒಂದು ಪಟ್ಟು: ಸ್ಫುರಿತ ಕೃಪಾಣಪಾಣಿಗಿದಿರಂ ನಡೆದಟ್ಟುಱೆ ತೊಟ್ಟುವಾಯ್ದು ಡೊಕ್ಕರದೊಳೆ ಮಿಕ್ಕ ದಿಕ್ಕರಿಯನಿಕ್ಕುವವೊಲ್ ನೆಲಕಿಕ್ಕಿ (ಪಂಪಭಾ. ೧೧–೧೧೪): ತಗುಳ್ದು ಪತ್ತಿಸುವ ಮಾನಸಗೋಳಮೆನಿಪ್ಪ ಡೊ[ಪಾಠಾಂ. ಢ]ಕ್ಕರಕಿಕ್ಕಿದ ವಜ್ರಲೇಪಮೆನೆ (ಚಂದ್ರಪು. ೫–೮೦); ಅಂ ಪಿಡಿದುದೆ ಕತ್ತರಂ ಕರವಳಂ ಸೆರವಟ್ಟಣೆ ಹತ್ತೆ ಡೊಕ್ಕರಂ . . . ಮುಹಡಂ ದಣುವಟ್ಟೆ ಪಟ್ಟಿಸಂ ಎಂದು ಮಲ್ಲಮಾತಂ ಮಾಡಿ (ಅನಂಪು. ೨–೨೭): ಸಿಕ್ಕಿದವು ಹೆದ್ದೊಡೆಗಳುರಗನ ತೆಕ್ಕೆಯಲಿ ಡಂಡಣಿಸಿ ಫಣಿಪತಿ ಡೊಕ್ಕರಕೆ ಹಬ್ಬಿದನು ಬಿಗಿದನು ಭಟನ ಪೇರುರವ (ಕುಪ್ರಾಅ. ೧೩–೫೩) ; ಅಥಟುಂದಂ ಮೂಱುಂ ಲಗ್ಗದ ನಾಲ್ಕು ಸ್ಥಾನಮಯ್ದು ಡೊಕ್ಕರದ ಮಹೋಗ್ರದ ಮೂವತ್ತೆರಡು ಬಿನ್ನಣದೊದವಂ ಪಲತೆಱದ ಪಾತಮಂ ನೆಱೆ ಮೆಱೆದರ್ (ತ್ರಿಪುವಿ. ೨೭–೧೭) : ಆಯತಿಕೆ ಬಂಧಂ ಡೊಕ್ಕರಂ (ಕಬಕಂ. ೮–೭೭) ; ಜಟ್ಟಿಗರ ಡೊಕ್ಕರಂ ಗಳಹತ್ತಂ ಮೊದಲೆನಿಸಿದ ಪಲವುಂ ಪಟ್ಟುಗಳ್ (ಮರಾಚ. ೨೦೭–೪೯). **ಡೊಕ್ಕರೆ : ೨.** ವೀರ ಚಿಕದೇವಂ ನೋಟಕರ್ ಮೆಚ್ಚೆ ಮಲ್ಲಗೆಯೊಳ್ದೊಕ್ಕರೆಯೊಂಟಿ ಮಂಡಿ ಕರಲಂ . . . ಮಗುಟ್ಟಿಂತೀ ಗತಿಭೇದದಿಂ ತೊಡಕಿ ತೋರ್ಕುಂ ಸಾಧಕಪ್ರೌಢಿಯಂ (ಚಿಕವಿ. ೪–೦೧೬). **ಢಕ್ಕರ: ೨.** ನಾಲ್ಕುಂ ಸ್ಥಾನದೊಳಂ ಮೂಱುಂ ಲಗ್ಗದೊಳಂ ಐದುಂ ಢ[ಪಾಠಾಂ. ಡೊ]ಕ್ಕರದೊಳಂ . . . ಪಲತೆಱದ ಪಾತಂಗಳೊಳಂ ನೆಱೆದು (ಚಂದ್ರಪು. ೫–೭೭ ವ). **ಢೊಕ್ಕರ : ೨.** ವರ್ಗ ಚತುರ್ಥಾಕ್ಷರಂಗಳ್ಗೆ. . .ಢಂಕೆ, ಢೊಕ್ಕರಂ (ಶಮದ.೦೩ ಪ್ರಯೋ). ಕತ್ತರಂ ಕರವಡು ಸೀವಟ್ಟಣಂ ಢೊಕ್ಕರಂ ಪಸರಂ ಸಂದಣುವಟ್ಟೆ . . . ಎಂದು ಮಲ್ಲವಾತುಮಂ ನುಡಿದು (ಬಾಧಪು. ೦೭–೦೯). **ದೊಕ್ಕರಿ :** 'ದೊಕ್ಕರಿಗೊಳ್' ಪರಾ. [ ?. / ತೆಲು. ಡೊಕ್ಕರ ]

**ಡೊಕ್ಕರ₃**, ಡೊಕ್ಕಾರ (ನಾ). ಒಂದು ದೇಶದ ಹೆಸರು: ಕ್ಷಾರಕರ ಹೂಣಕರ ಡೊಕ್ಕರಪಾರಕರ ಬುರಸಹಣ ಭೂಪರೊಳಾರುಭಟೆಯಲಿ ಕಾದಿ (ಕುಪ್ರಾಸ. ೩–೨೮). **ಡೊಕ್ಕಾರ :** ಅಂಗ ವಂಗ ಕಳಿಂಗ . . . ಡೊಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕರಸಮುಂ . . . ನೆಗಟುತ್ತುಮಿರೆಯಿರೆ (ಜಗವಿ. ೨–೩೯ ವ). [ ? ]

**ಡೊಕ್ಕರಂಗೊಳ್**, ದೊಕ್ಕರಿಗೊಳ್ (ಕ್ರಿ). ೧. ಒದೆತದಿಂದ ಅಥವಾ ಮುಷ್ಟಿಯ ಪೆಟ್ಟಿನಿಂದ ನಜ್ಜುಗುಜ್ಜಾಗು : ಅಂತಿಕ್ಕಿ ಡೊಕ್ಕರಂಗೊಂಡುರಸ್ಥಳ ಪರಿವಿಷ್ಟರನಾಗಿರ್ದ ಕೃಷ್ಣನಂ ದಕ್ಷಿಣದಿಕ್ಪಾಲಕಂ ನಿರೀಕ್ಷಿಸಿ (ಜಗವಿ. ೭–೨೯ ವ). ೨. ಡೊಕ್ಕರವೆಂಬ ಮಲ್ಲಯುದ್ಧದ ಪಟ್ಟನ್ನು ಹಾಕು ; ಡೊಕ್ಕರಪಟ್ಟನಿಂದ ಆಕ್ರಮಿಸಿ ಹಿಡಿ : ಕೋಡ ಕಯ್ಯು ಕಾಲೆಡೆಗಳೊಳ್ ಬಿಣ್ಪುಮಂ ಪೆಣಿವಂದದಿಂದೇರ್ದು ಡೊಕ್ಕರಂಗೊಂಡು ಕುರುಕ್ಷೇತ್ರದಿಂದತ್ತ ಪನ್ನೆರಡುಯೋಜನಬರಮೊತ್ತುವುದುಂ (ಪಂಪಭಾ. ೧೦–೭೪ ವ). **ದೊಕ್ಕರಿಗೊಳ್: ೨.** ಭುವನೈಕಮಲ್ಲಂ ಮೋಹಮಲ್ಲನೆಕ್ಕತುಳದಿಂದಕ್ಕುಳಿಸದೆ ದೊ[ಪಾಠಾಂ. ಡೊ]ಕ್ಕರಿಗೊಂಡು ನೆಟ್ಟನೆ ಮುಱಿದಿಕ್ಕಿ ಗೆಲ್ದ ವಿದ್ಯಾಧರಕಳನಿದು (ಪಾರ್ಶ್ವಪು. ೦೭–೧೦ ವ).

[ ಡೊಕ್ಕರ₂ + ಕೊಳ್₁ ]

**ಡೊಕ್ಕರಣೆ** (ನಾ). = ಡೊಕ್ಕರ್ರ್ವ ೨: ಲಗಡಿಯಲಿ ಲಟಕಟಿಸುವಂತರ ಲಗಡಿಯಲಿ ರಾಲಿಸುವ ಡೊಕ್ಕರಣೆಗಳ ಬಿಗುಹಿನ ಬಿಡೆಯ ಬಿನ್ನಾಣದಲಿ ಹೆಣಗಿದರು (ಕುಮಾ.ಭ. ೧೯-೪೩). [ ಡೊಕ್ಕರ್ರ + - ಅಣೆ ]

**ಡೊಕ್ಕರಪಟ್ಟು** (ನಾ). = ಡೊಕ್ಕರ್ರ್ವ ೨: ಒಂದೇ ಸಮನಾಗಿ ಭೀಮ ಜರಾಸಂಧರು ಡೊಕ್ಕರಪಟ್ಟು, ಲಗಡಿ, ಕತ್ತರಿಪಟ್ಟು, ನಾಗಬಂಧ ಮುಂತಾದ ಹಲವು ಪಟ್ಟುಗಳನ್ನೊಡ್ಡಿ ಕಾಳಗ ನಡೆಸಿದರು (ರಾಜಸೂ. ೨೩). [ ಡೊಕ್ಕರ್ರ + ಪಟ್ಟು₁ ]

**ಡೊಕ್ಕರವಾಯ್** (ಕ್ರಿ). ೧. (ಕುತ್ತಿಗೆಯನ್ನು) ತೋಳುಗಳಿಂದ ಬಳಸಿ ಬಿಗಿಯಾಗಿ ಹಿಡಿದುಕೊಳ್ಳು: ಕೊರಳ ಡೊಕ್ಕರವಾಯ್ದು ಹಣೆಯಿಂದೂರಿಸಿ ಹಣೆಯನು . . . ಮೋಹದರೊಸದು ಮುಂಡಾಡಿ (ಕುರಂಗ. ೨-೩-೪೦). ೨. = ಡೊಕ್ಕರಂಗೊಳ್ ೨: ಹಾವು ಹದ್ದಿನ ಪದಪತಿಗೆ ನೆಟೆ ನೋವವೊಲು ನೆಲಕೊಡೆಗಿ ರಕ್ಕಸನಾ ವಿಘಾತಿಯೊಳೆದ್ದು ಡೊಕ್ಕರವಾಯ್ದನಗ್ನಿಜನ (ಕುರಂಗ. ೬-೧೯-೬೦). [ ಡೊಕ್ಕರ್ರ + ಪಾಯ್₁ ]

**ಡೊಕ್ಕರವಿಕ್ಕು** (ಕ್ರಿ). = ಡೊಕ್ಕರಂಗೊಳ್ ೨: ಹೊಯ್ದು ತುಡುಬನು ಹಿಡಿದು ತಡೆಗಾಲ್ವೊಯ್ದು ಕೆಡಹಿದನಸಬಡಿದು ಹೊಯ್ ಹೊಯ್ದು ಬಿಡ ಬೊಪ್ಪರಿಸಿ ಡೊಕ್ಕರವಿಕ್ಕಿ ರಾಘಯುಲಿ (ಕುಮಾ.ಭ. ೧೯-೪೮). [ ಡೊಕ್ಕರ್ರ + ಇಕ್ಕು ]

**ಡೊಕ್ಕರಿ** (ನಾ). ಜಲಕ್ರೀಡೆಯಲ್ಲಿ ವಿನೋದಕ್ಕಾಗಿ ಒಬ್ಬರ ಮೇಲೊಬ್ಬರು ನೀರನ್ನೆರಚಲು ಬಳಸುವ (ವಿವಿಧಾಕಾರದ) ಜಲಯಂತ್ರ; ಜೀರುಕೊಳವೆ; ಪಿಚಕಾರಿ: ಡೊಕ್ಕರಿಗಳಂ ಮೊಗೆದೂರ್ಬರೊಳೂರ್ಬರಾಗಳ್ . . . ಪೊಯ್ದರೊಲವಿಂ ವಿಜಯಾವತಿಯುಂ ನರೇಂದ್ರನುಂ (ಕು ಸು ಮಾ. ೫-೦೩೫): ಸುಧಾಂಶುಕಳೆಗಳವೆನೆ ಕಣ್ಗೊಳಿಪಿಂದುಶಿಲೆಯ ಡೊಕ್ಕರಿಗಳನಾಗಳೆ ಕೊಂಡು (ಶಾಂತೀಶ್ವ. ೦೦-೦೬೦). [ ? ]

**ಡೊಕ್ಕರಿಸು, ದೊಕ್ಕರಿಸು** (ಕ್ರಿ). ೧. ಹೊಡೆ; ಒದೆದು ಕೆಳಕ್ಕೆ ಅಪ್ಪಳಿಸು; ಗುದ್ದು: ಮಚ್ಚರಂ ಬೇಡೆಜಗಿಂ ನೀವೆಂಬವೊಲ್ ಡೊಕ್ಕರಿಸಿ ದಿಗಿಭಹಸ್ತಂಗಳಂ (ಅರ್ಧನೇ. ೮-೯೦): ಧಿಕ್ಕರಿಸಿ ಡೊಕ್ಕರಿಸಿ ಝಂಕಿಸಿ ಸುರವನಗ್ನಿ . . . ಧನದನೀಶಾನ್ಯರೆಂಬವರ (ಹರಿಶಾ. ೦-೪೩); ಹರಿ ಮದೋತ್ಕಟದಂತಿಯನು ಡೊಕ್ಕರಿಸಿ ಡಾವರಿಸುವವೊಲು (ಕುಮಾ.ಭ. ೧೯-೪೯); ವಾಮಕರತಳದೆರಡು ಬೆರಳಿಂದ ಡೊಕ್ಕರಿಸುತಸುರೆಯಂ (ಪಂಪಾಶ. ೫-೩-೧೬). ೨. ಹಿಸುಂಕು; ನಜ್ಜುಗುಜ್ಜುಮಾಡು; ಸದೆಬಡಿ; ಸಾಯುಂವಂತೆ ಬಡಿ: ಕುರುಸೂನುವನಿರದಿಕ್ಕಿ ಮೆಟ್ಟಿ ಡೊಕ್ಕರಿಸಿದಪೆಂ (ಗದಾಯು. ೬-೨೫); ಪೊಡವಂ ಕಾಲನನಿಕ್ಕಿ ಡೊಕ್ಕರಿಸುವೆಂ ದೈತೇಯನಂ (ಜಗವಿ. ೩-೨೦); ಇಕ್ಕಿ ಕೆರಳ್ದು ಡೊಕ್ಕರಿಸಿ (ವಿಷ್ಣುಪು. ೫-೫-೬೪). ೩. ಡೊಕ್ಕರಪಟ್ಟನಿಂದ ಬಿಗಿಹಿಡಿ: ಒರೊರ್ವರನುರವಣೆಯಿಂದಿಕ್ಕುವೊರೊರ್ವರಂ ಡೊಕ್ಕರಿಸುತ್ತೊರೊರ್ವರಂ ಟಾಳಿಸುವ ಪದದೊಳ್ (ಜಗವಿ. ೬-೬೪): ಚೊಕ್ಕೆಯುದನುವಮಾನದೊಳು ಡೊಕ್ಕರಿಸಿ ಒಡಿವಂದಿರುದಿನ ಕಲ್ಲಮಾನಿಸರಂತಿರ್ಪ ಮಲ್ಲರ ನೆರವಿಗಳೊಳಂ (ಗಿರಿಶ. ೨-೦೦೫ ವ): ತಡೆದರೆ ಕಡೆದೊಡ್ಡ ಲೊಡ್ಡೆಟಕೆಯೊಳಿಟ್ಟು ಹೊಡೆದರೆ ಹೊಡೆದು ಡೊಕ್ಕರಿಸಿ ಕೆಡೆದರೆ ಕೆಡೆದು ಗುರ್ಗಳೊಳೊತ್ತಿ ಭೀಕರವಡೆದು ಹೊಯ್ದಾಡಿದುವೆರಡು (ಮೋಹಚ. ೩೮-೨೮). ೪. (ಅಲಂ) ಕೊರಳನ್ನು ಬಿಗಿ ಹಿಡಿ; ಉಸಿರಾಟವನ್ನು ತಡೆ: ಬಿಕ್ಕುಳಿಯ ತಾಳಿಗೆಯ ಮೂಗಿನೊಳೊಕ್ಕು ರುಧಿರದ ಧಾರೆ ಬಿಗಿದುಡೆ ಡೊಕ್ಕರಿಸಲಸು ನೀಗಿತಸುರನ ತನುವ ನಿಮಿಷದಲಿ (ಕುಮಾ.ಭ. ೧೦-೩೮). **ದೊಕ್ಕರಿಸು**: ೧. ಮರಳಿ ಸುಗ್ರೀವನು ರಿಪುವ ದೊಕ್ಕರಿಸಿ ಕಿವಿದನು (ಅರಾಮಾ. ೪-೨-೩). ೩. ತುಡುಕಿ ಪಿಡಿದು ತೊಡೆಗಳಿಂ ನಡುವಂ ದೊಕ್ಕರಿಸಿ ಬಾಹುಗತ್ತರಿಯಿಂ ಗಳವನೊತ್ತುವುದುಂ(ಸುಕುಮಾ. ೬-೬೫ ವ). [ ಡೊಕ್ಕರ್ರ + - ಇಸು ]

**ಡೊಕ್ಕರೆ** 'ಡೊಕ್ಕರ್ರ' ನೋ.

**ಡೊಕ್ಕಾರ** 'ಡೊಕ್ಕರ್ರ' ನೋ.

**ಡೊಕ್ಕು₁** ( ? ) (ಕ್ರಿ). (?): ಪರವೇದಮದು ಕರ್ಶ್ಯಮಲ್ಲದೊಡೆ ಡೊಕ್ಕದುರುಕರ್ಮದಿಂದೊಗೆದ ಸತ್ಫಣ್ಣನಿಕರಮಂ ಪರವರ ಸ್ವರ್ಗಾಪವರ್ಗಮು (ಅರಾಧ. ೩-೨). [ ←ತೆಲು. ಡೊಕ್ಕು = ನಾಶವಾಗಂ ]

**ಡೊಕ್ಕು₂** (ನಾ). ಒಂದು ಅನುಕರಣ ಶಬ್ದ: ಹಿಮದ ಹೊಯ್ಲಿಗೆ ಹೊದಕಗೊಂಬನೆ ತಮವಿರೋಧಿ ವಿಲೋಕನದಲುಭ್ರಮಿಸಿ ಹಳಚಿತು ಡೊ[ಪಾಠಾಂ. ಪೊ]ಕ್ಕು ದಡದುಡ ದೂಪ್ಪು ದಿನ್ನನಲು (ಕುರಂಗ. ೬-೪೫-೩೦).

**ಡೊಕ್ಕೆ, ದೊಕ್ಕೆ** (ನಾ). ೧. ಮೈ; ದೇಹ; ಶರೀರ: "ಒಡಲು ಮೈ ಡೊಕ್ಕೆ" (ಕಬ್ಬಮಂ. ೬೨); ಡೊ[ಪಾಠಾಂ. ದೊ]ಕ್ಕೆ ಬೇರಾತ್ಮ ಬೇರೆಂದರೆ ವಿಡದೆ ಕಣ್ಣಕ್ಕಿ ಜಾನಿಸುವ ತಾಪಸಗೆ (ಭರತ.೩-೪೨); ನಿನ್ನಯ ಡೊಕ್ಕೆಯುಂ ಸಿಗಿದು ರಣಬಲಿಯನೀಯದೊಡಾನು ಕಕ್ಕಸದ ಬಲುಗೆಯ್ಮ ವೀರನೆ (ಘೋರಾಸು. ೦೩): ಈ ಡೊಕ್ಕೆ ಬೀಳಲು ಸುರರ ಸೇರಿಸಲು ನೀವೆ ಗತಿಮತಿ (ಕುರಂಗ. ೨೫-೨೩); ಶರಪತಿಯನನಿಬರ ಡೊಕ್ಕೆಗಳಂ ದೋಟುಗಳೆದನಾ ನೃಪತಿಲಕಂ (ಕಳನ್ನ. ೨-೦೪). ೨. ಹೊಟ್ಟೆ; ಉದರ: "ಡೊಕ್ಕೆಯನಲುದರ" (ಕಕರ.. ೦೨೪); ಮನದೊಳಗೆ ಕೌರವನ ಶಿಕ್ಕಿ ತನಿಗರುಳ ರಕ್ತಂಗಳಂ ಶಾಕಿನಿಗೆ ಡೊಕ್ಕೆಯಂ ತುಂಬಿಸುವವೆಂದು ಭೀಮಾರ್ಜುನರು ನಿಂದಿರಲು (ಕುರಂಗ. ೨೪-೨೦); ಭೂತಗಣಕೆ ಡೊಕ್ಕೆ ತುಂಬಿತು (ಕುರಂಗ. ೪೫-೯). ೩. (ಅಲಂ) ಮನಸ್ಸು; ಅಂತರಂಗ: ಎನಗೆ ಈತ ಮಿತ್ರನು ಯಿತ ಸೇವಕನುಯಿತ ಗುಣಸಾಧುವೆಂದು ಡೊಕ್ಕೆಯೊಳಗಿರಿಸದಿರು ಬೆಳಸದಿರು ಮುಂದ ವಿಷವಕ್ಕು . . . ಪಾಂಡವರ ನೆಳಲಿವರು (ಕುರಂಗ. ೨೫-೨೯). ೪. ಒಂದು ಬಗೆಯ ಪಾತ್ರ (?): ಡೊಕ್ಕೆಯೊಳಗಣ ಕಸುರ ಪರುವೆನಗೆ ನೀಡೆ (ಕಿರಿಶ. ೬೯-೯). **ದೊಕ್ಕೆ**: ೧. ಇಕ್ಕಿದಲು ಬಲೆಯ ಕೃಶತರಗಾತ್ರನಾದ ಬರಿ ದೊಕ್ಕೆಯನ್ನುಡಿ[೪]ಸಿ ಫಲವೇನು(ಕುರಂಗ. ೨-೨೩). [ ದೇ.೩ ತೆಲು. ಡೊಕ್ಕ; ಕುಣ. ಡಕಿ = ಎದೆ, ಎದೆಮೂಳೆ; ಕುವಿ. ಡೋಕ್ಕು = ಅಸ್ಥಿಪಂಜರ ]

**ಡೊಗರು** 'ಡೊಂಗಟಿ' ನೋ.

**ಡೊಗರುಬೀಳು, ದೋಟುವೀಟ್** (ಕ್ರಿ). ೧. ತೂತುಬೀಳು; ರಂಧ್ರವುಂಟಾಗು; ಛಿದ್ರವುಂಟಾಗು. ೨. (ಅಲಂ) ಅವಿಶ್ವಾಸವುಂಟಾಗು; ನಂಬಿಕೆಕೆಡು: ಅಂತಃಪುರದಲ್ಲಿಯೂ ಎಲ್ಲಿಯಾದರೂ ಡೊಗರುಬಿದ್ದಿದೆಯೋ . . . ಎಂಬ ಬಗ್ಗೆ ಒಮ್ಮೆಯಾದರೂ ಪರೀಕ್ಷಿಸಿ ನೋಡಬೇಕೆಂದು ಭೂಪತಿಯ ಮನಸ್ಸಿಗೆ ಹೊಳೆದಿರಲೇ ಇಲ್ಲ (ತಪ್ಪಳ. ೨೬೬). **ದೋಟುವೀಟ್**: ೧. ಪೆರ್ಬುಲಿ ಪಾಯ್ದುಗಿಯುಲ್ಕೆ ದೋಟುವಿರ್ದುರದ ಸಿಪ್ಪುಟ್ಟಿ [ಪಾಠಾಂ. ದೋಣಿವಿರ್ದುರದ ಪಿಸುಟ್ಟ] ಪೆರ್ದೂಡೆಯ ನುರ್ಗಿದ ದಂಡೆಯ ಭಂಗಿ ರೌದ್ರಮಾಗಿರೆ (ಜಗವಿ. ೦೬-೨೧). [ ಡೊಗರು (<ಡೊಂಗಟಿ) + ಬೀಳು₁ (<ಬೀಟ್₁) ]

**ಡೊಗರುಹಾಯು** (ಕ್ರಿ). = ಡೊಗರುಬೀಳು ೧: ದಕ್ಷಿಣದ ಗೋಡೆಯ ಒಂದು ಮೂಲೆಯು ಡೊಗರುಹಾಯ್ದುತ್ತು (ಬಾಲಲಿ. ೦). [ ಡೊಗರು (<ಡೊಂಗಟಿ) + ಹಾಯು (<ಪಾಯ್₁) ]

**ಡೊಗಟು** 'ಡೊಂಗಟಿ' ನೋ.

**ಡೊಗೆ** 'ಡೋವಿ' ನೋ.

**ಡೊಗ್ಗಾಲಿಕ್ಕು** (ಕ್ರಿ). ೧. ಮೊಣಕಾಲನ್ನು ನೆಲಕ್ಕೆ ಊರು; ಮಂಡಿಯೂರು: ಕ್ರೈಸ್ತರು ದೇವಮಂದಿರದಲ್ಲಿ ಡೊಗ್ಗಾಲಿಕ್ಕಿ ಪ್ರಾರ್ಥನೆ ಮಾಡುತ್ತಾರೆ (ರೂಢಿ). ೨. (ಅಲಂ) ರಭಸದಿಂದ ಬರು (?): ಕರಡಿ ಖಂಡೆಯವನ್ನು ಜಡಿವುತ ಭರದಿ ಡೊಗ್ಗಾಲಿಕ್ಕಿ ಪ್ರಳಯದ ಶರಧಿಯೋಲ್ ದಂಡೆತ್ತಿ ಬರುವರ್ (ದೇವೀಪ್ರ. ೬೦). [ ಡೊಗ್ಗಾಲು + ಇಕ್ಕು ]

**ಡೊಗ್ಗಾಲು, ದೊಗ್ಗಾಲು** (ನಾ). ಊರಿದ ಮೊಣಕಾಲು. 'ಡೊಗ್ಗಾಲು ಸಲಾಂ' ಪರಾ. ದೊಗ್ಗಾಲು: ದೊಗ್ಗಾಲಿಟ್ಟು ಸಸಿನದಿ ಹಾರಿ ಅಂತರ ಬಟ್ಟೆಯೊಳಗಬ್ಬಿಯಸು ಮುಟ್ಟಲುಯಿಳಿದು (ಜಿಶಾಮೂ. ೨೬೧-೭೦).

**ಡೊಗ್ಗಾಲು ಕೃಷ್ಣ**=ಮಂಡಿಯುರಿದ ಕೃಷ್ಣ ; ಅಂಬೆಗಾಲಿನ ಕೃಷ್ಣ.

**ಡೊಗ್ಗಾಲುಹಾಕು**=(ಅಲಂ)ಬಹಳ ಶ್ರಮಪಡು: ಹಪ್ಪಳಾ ಮುರಿಯೋಕೆ ಡೊಗ್ಗಾಲು ಹಾಕಬೇಕೇ? (ಗಾದ). [ ಡೊಗ್ಗು + ಕಾಲು$_1$(<ಕಾಲ್$_1$) ]

**ಡೊಗ್ಗಾಲುಸಲಾಂ** (ನಾ). ೧. ಮೊಣಕಾಲನ್ನು ಊರಿಕೊಂಡು, ಬಲಗೈಯಿಂದ ಮೂರುಸಲ ಹಣೆಯನ್ನು ಮುಟ್ಟುತ್ತ ಮಾಡುವ ವಂದನೆ. ೨. ಬೀಳ್ಕೊಡುಗೆ: ಸುಬ್ರಹ್ಮಣ್ಯದ ಸೀಮೆಗೆ 'ಡೊಗ್ಗಾಲುಸಲಾಂ' ಹೊಡೆಯುತ್ತಿದ್ದೆ (ಬಟ್ಟಜೀ. ೫೮). [ ಡೊಗ್ಗಾಲು + ಸಲಾಂ ]

**ಡೊಗ್ಗಾಲೂರು, ದೊಗ್ಗಾಲೂರು** (ಕ್ರಿ). ೧. ಮೊಣಕಾಲನ್ನು ನೆಲದ ಮೇಲೆ ಊರು ; ಮೊಣಕಾಲನ್ನೂರು. ೨. (ಅಲಂ) ಸೋಲು ; ಪರಾಜಯಹೊಂದು: ಈ ಸಲ ಪರೀಕ್ಷೆಯಲ್ಲಿ ಡೊಗ್ಗಾಲೂರುವ ಪ್ರಸಂಗವೆಲ್ಲಿ ಬರುತ್ತದೋ ಎಂದು . . . ಚಿಂತಿಸುತ್ತಿದ್ದ(ಸಮಜೀ. ೩೪೦); ಅವನು ಡೊಗ್ಗಾಲೂರಿ ಅಸಹಾಯನಾಗಿದ್ದ (ಸಮಜೀ. ೧೨೦೫). **ದೊಗ್ಗಾಲೂರು**: ೧. ತಿಟ್ಟನಲ್ಲಿ ಬಂಡಿಯನ್ನೆಳೆಯಲಾರದೆ ಎತ್ತುಗಳು ದೊಗ್ಗಾಲೂರಿದವು (ರೂಢಿ). [ ಡೊಗ್ಗಾಲು + ಊರು$_1$ (<ಊಱು$_1$) ]

**ಡೊಗ್ಗಿಸು** (ಕ್ರಿ). ಬಾಗುವಂತೆ ಮಾಡು ; ಬಗ್ಗಿಸು : ನೀವು ಎಲ್ಲಾರಂಗ ಸಂಸಾರ ಮಾಡಿಕೊಂಡು ಇದ್ದು ತೋರಿಸಿದರ ಸಮಾಜ ನಿಮಗ ತಲೀ ಡೊಗ್ಗಿಸಿ ಸಲಾಮು ಹೊಡಿತದ (ಅಪನಾ. ೧೯೦).

[ ಡೊಗ್ಗು + – ಇಸು$_2$ ]

**ಡೊಗ್ಗಿಱ್** (ಕ್ರಿ). ಬಾಗಿ (ಬೋರಲಾಗಿ) ಬೀಳು : ಸುಖ ಬೇಸಜಂ ನುಡಿಪೊಡೊಬ್ಬರ ಕಾಣೆನೊಂದು ಹೊರಸಿನೊಳೊಬ್ಬಳೇ ಡೊಗ್ಗಿಱ್ದು ಕೆಡೆದಂ (ಸಮ್ಯಕೌ. ೫-೨೨). [ ಡೊಗ್ಗು + ಇಱ್$_1$ ]

**ಡೊಗ್ಗು** (ಕ್ರಿ). ೧. ಬಾಗು ; ಬಗ್ಗು : ಆಗ ನೀವು ಡೊಗ್ಗಿ ಮುಜರೆ ಮಾಡುತ್ತಿದ್ದಿರಿ (ಐತ್ಯಬ. ೨೦೦). ೨. ವಂದಿಸು ; ನಮಸ್ಕರಿಸು : ಕ್ಷೀರಾಬ್ಧಿಗಂ ಪೋಗಿ ಡೊಗ್ಗಿದರು ಮುರವೈರಿಗಂ ಸುರರು ಪುಯ್ಯಲಿಡುತ (ತುರಂಗ. ೮-೨೬). ೩. ಜಗ್ಗು ; ಕುಗ್ಗು ; ಸೋಲು : ಡೊಗ್ಗುವನೆ ಕಲಿಪಾರ್ಥ ಸರಳುಗಳ್ಸಂಹರಿಸಿ ನುಗ್ಗಿದನು (ತುರಂಗ. ೪೬-೪೬): ಡೊಗ್ಗುವನೆ ಪದ್ರುಥರಿಗಂ ಬಾಲಂ (ತುರಂಗ. ೫೨-೦೨).

**ಡೊಗ್ಗಿ ನಡೆ** = ವಿಧೇಯವಾಗು ; ಆಜ್ಞಾವರ್ತಿಯಾಗು : ಹಿಂಗ ಡೊಗ್ಗಿನಡೆದರೆ. ನನ್ನ ಗುಮಾಸ್ತಿಕೆ ನಡದ್ಹಾಂಗಾತು (ಪ್ರೇಮೂಶ್ರ. ೧೨): ಗುರುಗಳಿಗೆ ಡೊಗ್ಗಿ ನಡೆಯಬೇಕು (ರೂಢಿ).

[ ದೇ.೫ ತುಳು. ಡೊಗ್ಗು, ದೊಗ್ಗು ; ತೆಲು. ಡೋಗು, ದೋಗು ]

**ಡೊಣಗ** 'ದೊಣ್ಣೆಗ' ನೋ.

**ಡೊಣೆ$_1$** 'ಟೊಣೆ' ನೋ.

**ಡೊಣೆ$_2$** 'ದೊಣೆ$_1$' ನೋ.

**ಡೊಣೆ$_3$** 'ತೊಣೆ$_2$' ನೋ.

**ಡೊಣೆಗಣ್ಣು** (ನಾ). (ಉಕ) ಕುಳಿಬಿದ್ದ ಕಣ್ಣು ; ಗುಳಿಗಣ್ಣು: (೬).

[ ಡೊಣೆ$_2$ (<ದೊಣೆ$_1$) + ಕಣ್ಣು (<ಕಣ್) ]

**ಡೊಣೆಗತ್ತಿ** (ನಾ). ಒಂದು ಬಗೆಯ ಕತ್ತಿ : ಡೊಣೆಗತ್ತಿ, ಕೊಂಗತ್ತಿ ಧರಿಸಿ ಪಾಲಗದಿ ನಿಂದಿಹರು (ಸೌಂದಕಾ. ೩-೧೧೧).

[ ಡೊಣೆ$_1$ (<ಟೊಣೆ) + ಕತ್ತಿ ]

**ಡೊಣೆಗೆ** (ನಾ). (?) : ಪಗೆಗಳ ಶೃಂಗಲಮಂ ಡೊಣೆಗೆಗೆತ್ತಿ ತತ್ಪುರವರೇಶ ನಾನಂದಲತಾಳಿಗೆಗಳ್ ಪರ್ಚಿಪುದೆಂತುಂ ಬಗೆಗೆನಿತುಂ ಬಿಂಕದಿಂದೆ ನಿಡು ಡೆಂಕಣಿಗಳ್ (ದಶಶು. ೧-೩೫). [ ? ]

**ಡೊಣೆನಾಯಕ** 'ದೊಣೆನಾಯಕ' ನೋ.

**ಡೊಣೆಯುಪ್ಪು**(ನಾ).ಒಂದು ಬಗೆಯ ಉರುಟಾದ ಉಪ್ಪು : "ಊಷರಕಂ– ಅಟ್ಟುಪ್ಪು, ಡೊಣೆಯುಪ್ಪು " (ಒಷಧಿ. ೦೬) ; "ಸಾಕ್ಯಂ, ಬಿಡಂ – ಈ ೨ ಕೃತಕ ಅಟ್ಟುಪ್ಪಿನ ಹೆಸರು. ತೊಳೆದು ಕಾಯಿಸಿ ತೆಗೆದ ಉಪ್ಪು, ಡೊಣೆಯುಪ್ಪು ಮತ್ತು ಪೆಟ್ಲುಪ್ಪು ಮುಂತಾದ ಅಡಿಗೆಯುಳಿಸಿದ ಕೃತ್ರಿಮ ಲವಣಕ್ಕೂ ಬಿಡಾಲವಣಕ್ಕೂ ಹೆಸರುಗಳು " (ಸಿದ್ಧಾಂತಿ. ೦೪೫).

[ ಡೊಣೆ? + ಉಪ್ಪು$_1$ ]

**ಡೊಣೆವು** (ನಾ). (ಗಾಯದ) ಬಿರುಕು ; ಡೊಗರು ; ತೋಡು (?) : ಅಂಬಿನ ಬಂಬಲೊಳಂ ಜೋಡಾಗಿ ಕೋಡನೂಱ್ ಕಡೆದ ಗಜವ್ರಜಂಗಳ ಡೊಣೆವು[ಪಾಠಾಂ. ಣವು, ಣೆವು]ಗಳಿಂದೂಱ್ತು ಪರಿವ ನೆತ್ತರ ಕಡಲ್ಗಳುಂ (ಶಂಕಪು. ೧೦-೧೧೬ ವ). [ ? ]

**ಡೊಣೆವೋಗು** 'ದೊಣೆವೋಗು' ನೋ.

**ಡೊಣ್ಣಪ್ಪ** (ನಾ). ೧. ದಪ್ಪವಾಗಿರುವವನು; ಸ್ಥೂಲದೇಹದ ವ್ಯಕ್ತಿ : ಅವನೊಬ್ಬ ಡೊಣ್ಣಪ್ಪ (ರೂಢಿ). ೨. ಸೋಮಾರಿ ; ಆಲಸಿ : ಉಂಡೋಕೆ ಉಣ್ಣೋಕೆ ಅಣ್ಣಪ್ಪ, ಕೆಲಸಕ್ಕೆ ಮಾತ್ರ ಡೊಣ್ಣಪ್ಪ (ಗಾದ).

[ ಡೊಣ್ಣೆ$_1$ (<ದೊಣ್ಣೆ) + ಅಪ್ಪ$_1$ ]

**ಡೊಣ್ಣೆ$_1$** 'ದೊಣ್ಣೆ' ನೋ.

**ಡೊಣ್ಣೆ$_2$** 'ದೊನ್ನೆ' ನೋ.

**ಡೊಣ್ಣೆ$_3$** 'ತೊಂಡೆ$_2$' ನೋ.

**ಡೊಣ್ಣೆಕಾಟ** 'ತೊಂಡೆಕೇತ' ನೋ.

**ಡೊಣ್ಣೆಕೇತ** 'ತೊಂಡೆಕೇತ' ನೋ.

**ಡೊಣ್ಣೆಗ** 'ದೊಣ್ಣೆಗ' ನೋ.

**ಡೊಣ್ಣೆಮುಳ್ಳು** 'ದೊಣ್ಣೆಮುಳ್ಳು' ನೋ.

**ಡೊಣ್ಣೆಮೂಗು** 'ದೊಣ್ಣೆಮೂಗು' ನೋ.

**ಡೊಣ್ಣೆಸಣ್ಣಕ್ಕಿ** (ನಾ). ಮಧ್ಯಮಗಾತ್ರದ ಒಂದು ಬಗೆಯ ಅಕ್ಕಿ : (೬).

[ ಡೊಣ್ಣೆ$_1$ (<ದೊಣ್ಣೆ) + ಸಣ್ಣ + ಅಕ್ಕಿ$_1$ ].

**ಡೊಣ್ಣೆಹುಳು** (ನಾ). ಸಗಣಿಯಲ್ಲಿ ಹುಟ್ಟಿ ಬೆಳೆಯುವ ಒಂದು ಬಗೆಯ ದಪ್ಪ ಹುಳು ; ಗೊಣ್ಣೆಹುಳು: (೬).

[ ಡೊಣ್ಣೆ$_1$ (<ದೊಣ್ಣೆ) + ಹುಳು$_2$ (<ಪುೞು$_1$) ]

**ಡೊಪ್ಪೆ, ದೊಪ್ಪೆ** (ನಾ). ಧಪ್ಪ ದೊನ್ನೆ : (೬). ದೊಪ್ಪೆ : (೬).

[ ದೇ.೫ ತೆಲು. ಡೊಪ್ಪ, ದೊಪ್ಪ ; ಕೊಲಾ. ಡೊಂಪಾ, ಡೊಂಪ ; ನಾಯ್ಕಿ. ಡೊಪ್ಪ ; ಪರ್ಜಿ. ಗೊಂಡಿ. ಡೊಪ್ಪೋ ]

**ಡೊವಿಗೆ** 'ಡೋವಿ' ನೋ.

**ಡೊಳುಹೊಟ್ಟೆ** 'ಡೊಳ್ಳುಹೊಟ್ಟೆ' ನೋ.

**ಡೊಳ್ಳ** (ನಾ). ೧. ದೊಡ್ಡ ಹೊಟ್ಟೆಯವನು ; ಬೊಜ್ಜು ಬೆಳೆದ ಹೊಟ್ಟೆಯುಳ್ಳವನು. ೨. (ಅಲಂ) ಸೋಮಾರಿ ; ಆಲಸಿ : ಕಳ್ಳರಿಗೆ ಸುಳ್ಳರಿಗೆ ಡೊಳ್ಳರಿಗೆ ಡೊಂಬರಿಗೆ ಸುಳ್ಳುಗೋರ್ಧನಿಗೆ ಕೊಡುವವರು ಧರ್ಮಕ್ಕೆ ಎಳ್ಳಷ್ಟು ಕೊಡರು (ಸರ್ವಜ್ಞ. ೬೭೩).

[ ಡೊಳ್ಳು$_1$ (<ಟೊಳ್ಳು) + – ಅ$_7$ ]

**ಡೊಳ್ಳಾಸ, ದೊಳ್ಳಾಸ** (ನಾ). ೧. ಮೋಸ ; ವಂಚನೆ ; ಕಪಟ : "ಡೊಳ್ಳಾಸಮೆ ವ್ಯಸಿಕಮೆನಿಪ್ಪುದು" (ಚತುಹಿ. ೨೦); "ಡೊ[ಪಾಠಾಂ. ದೊ]ಳ್ಳಾಸಮೆನಲ್ ಕಪಟ" (ಭಾರನಿ. ೩೫): ಬಹಳಾಭ್ಯಾಸಿಗಳು ದಾವರಿಸಿದರು ಡೊಳ್ಳಾಸವೋ ರಿಪುಸೇನೆ ಕಾಣದು ಚಿತ್ರವಯಗತಿಯ (ಕುಮಾವ್ಯಾ. ೬-೮) ; ಹುಸಿ ನುಸಿಳು ಡೊಳ್ಳಾಸ ಹಿಂಸಾವ್ಯಸನವು . . . ಎಂಬಿವರೆಸಕ ಪೊದ್ದ ದಯೋಧಿಪನ ಧರಣೀತಳಾಗ್ರದಲಿ (ತೊರರಾ. ೧-೩-೨೬) ; ವಂಚನೆ ಬಾಟ ಚೆಲ್ಲ ಡೊಳ್ಳಾಸ ಬೆಡಂಗು (ಯಾದವ. ೩-೯೩). ೨. ಬೆಡಗು : ಬಿಯ್ಯಾರ

ಬಿನ್ನಾಣ; ವಿಲಾಸ. 'ಡೊಳ್ಳಾಸಕಾತಿ' ಪರಾ. ೩. ವಿಸ್ತಾರ; ವ್ಯಾಪಕತೆ; ಅತಿಶಯ: ಡೊ[ಪಾಠಾಂ. ದೊ]ಳ್ಳಾಸದಲಿ ಡಾವರಿಸಿದವು ಕಿಡಿ ಧೂತ ಧೂಮದಲಿ (ಕುಮಾ.ಅ. ೨೦-೬೦); ಇಕ್ಕಡಿಯ ಬಸುಱುಚ್ಚುಗಳ ನರಸೊಕ್ಕು ಡೊ[ಪಾಠಾಂ. ದೊ]ಳ್ಳಾಸದ ಮಹಾಭಯವಕ್ಕಸರದಲಿ ಕಾಣಲಾದುದು ವೈರಿಬಲದೊಳಗೆ (ಕುಮಾ.ದ್ರೋ. ೧೭-೨೬). ದೊಳ್ಳಾಸ: ೧. ತವಕದ ತವರ್ಮನೆ ವಿಲಾಸದ ನಿವಾಸವು . . . ವ್ಯಸಿಕದ ನಿವಹ ದೊಳ್ಳಾಸದಾಗರ ಡೊತ್ತಿನಿಕ್ಕೆ ಕೈತವ ಕಟಕಿಗಳ ಮಂದಿರ (ಸೌಂದಪು. ೭-೫೦); ತೊದಳ್ ದೊಳ್ಳಾಸಂ ಸುರಯುದ್ಧವಿಸಿದ ದೇಶವಿದನೆ ಸೂಳೆಗೇರಿ ಕಣ್ಗೆಸೆದಿರ್ಕುಂ (ವೀರವಿ. ೬-೯೬). ೩. ದೊ[ಪಾಠಾಂ. ಡೊ]ಳ್ಳಾಸದಲಿ ಡಾವರಿಸಿದವು ಕಿಡಿ ಧೂತ ಧೂಮದಲಿ (ಕುಮಾ.ಅ. ೨೦-೬೦).

**ಡೊಳ್ಳಾಸಕಾತಿ** (ನಾ). ಬಿನ್ನಾಣಗಾತಿ; ಬೆಡಗಿ; ಒಯ್ಯಾರ ಮಾಡುವವಳು: ಡೊಳ್ಳಾಸಕಾತಿಯರಾ ವಿಬುಧಪತಿಯೋಲಗವ ಹೊಕ್ಕರು ಸವಾಯಿಯಲಿ (ಕುಮಾ.ಅ. ೬-೯೦). [ ಡೊಳ್ಳಾಸ + – ಕಾತಿ$_2$ ]

**ಡೊಳ್ಳಾಸವಿದ್ಯೆ** (ನಾ). ಮೋಸದ ವಿದ್ಯೆ; ಕಪಟವಿದ್ಯೆ: ನಿಮ್ಮ ಬಿಱುನುಡಿಯಲಗಿನಲಿ ಡಾವರಿಸಿದಿರಿ ಡೊಳ್ಳಾಸವಿದ್ಯೆಯಲಿ (ಕೊರಿರಾ. ೩-೪-೨೦). [ ಡೊಳ್ಳಾಸ + ವಿದ್ಯೆ ]

**ಡೊಳ್ಳಿಗ** (ನಾ). ಡೊಳ್ಳು ಹೊಟ್ಟೆಯವನು; ಉಬ್ಬಿದ ಹೊಟ್ಟೆಯುಳ್ಳವನು: ಮುಂದೆ ಕುಳ್ಳಿರ್ದ ಸೆಟ್ಟಿ ಡೊಳ್ಳಿಗನಪ್ಪುದಱಿಂ ಪರೀಕ್ಷಿಸದೆ ಪೋದರ್ (ಧರ್ಮಾಮೃ. ೦೨-೭೫). [ಡೊಳ್ಳು$_1$ (<ಟೊಳ್ಳು) + – ಇಗ]

**ಡೊಳ್ಳು$_1$** 'ಟೊಳ್ಳು' ನೋ.

**ಡೊಳ್ಳು$_2$** 'ಡೋಲು' ನೋ.

**ಡೊಳ್ಳುಗ** (ನಾ). ೧. = ಡೊಳ್ಳಿಗ. ೨. (ಅಲಂ) ಪರಾಕ್ರಮವಿಲ್ಲದವನು: ಅಳ್ಳೆದೆಯ ಮನ್ನೆಯರನೊಗ್ಗಿನ ಡೊಳ್ಳುಗರ ಕಟವಾಯ ಕೊಯ್ (ಕುಮಾ.ದ್ರೋ. ೩-೨೦). [ ಡೊಳ್ಳು$_1$ (<ಟೊಳ್ಳು) + – ಗ$_2$ ]

**ಡೊಳ್ಳುಹೊಟ್ಟೆ**, ಡೊಳುಹೊಟ್ಟೆ (ನಾ). ದೊಡ್ಡದಾಗಿ ಮುಂದಕ್ಕೆ ಚಾಚಿಕೊಂಡಿರುವ ಹೊಟ್ಟೆ; ಬೊಜ್ಜು ಬೆಳೆದಿರುವ ಹೊಟ್ಟೆ: ಡೊಳ್ಳುಹೊಟ್ಟೆಗೆ ಸಾಲದಿನ್ನುಂ ಕೊಂಡು ಬಾ (ಬಸವ. ೫೯-೦೦); ಕುಕ್ಕುಱಸಲೊಡನಾ ಡೊಳ್ಳುಹೊಟ್ಟೆಯಿಬ್ಬಗಿಯಾಗಿ (ವೀರಪು. ೩-೪-೨೬): ಡೊಳ್ಳುಹೊಟ್ಟೆಯನೆತ್ತಿಕೊಂಡೋಡಲಾಱದೆ ಹಳ್ಳಕೊಳ್ಳದಲಿ ಮುಗ್ಗರಿದು (ಕಂನವಿ. ೦೭-೩೫). **ಡೊಳುಹೊಟ್ಟೆ**: ಒಣಕಲು ಗೌರಿಯನಿಣಕಿಣಿಕಿ ನೋಡಿದ ನೆಮ್ಮೂರ ಡೊಳುಹೊಟ್ಟೆ ಮಾದ (ಇಂಚಾಪ. ೧೦೪-೫೯): ಡೊಳುಹೊಟ್ಟೆಗೆ ನಾಗರ ಬಿಗಿದವನೇ (ಗಜೀಶ. ೦-೦೨).

[ ಡೊಳ್ಳು$_1$ (<ಟೊಳ್ಳು) + ಹೊಟ್ಟೆ$_1$ (<ಪೊಟ್ಟೆ$_1$) ]

**ಡೊಳ್ಳುಹೊಟ್ಟೆಗ** (ನಾ). ೧. ಹೊಟ್ಟೆ ದೊಡ್ಡದಾಗಿ ಮುಂದಕ್ಕೆ ಚಾಚಿಕೊಂಡಿರುವವನು. ೨. ಲಂಬೋದರ; ಗಣಪತಿ: ನುಡಿದಂತೆ ಕೂರ್ಗೋಲ ಕೊರತೆಕ್ಕೊ ಎಂದೆನುತಿಡಿದನು ಡೊಳ್ಳುಹೊಟ್ಟೆಗನು (ಮೋಹತ. ೩೮-೫೦). [ ಡೊಳ್ಳುಹೊಟ್ಟೆ + – ಗ$_2$ ]

**ಡೊಳ್ಳೆ** 'ಟೊಳ್ಳು' ನೋ.

**ಡೊಳ್ಳೊಡಲು** (ನಾ). ದೊಡ್ಡದಾಗಿ ಮುಂದಕ್ಕೆ ಚಾಚಿದ ಹೊಟ್ಟೆ: ರಾಹುಮುಖನು ದೊಡ್ಡಕಂಗಳವನು ದೀರ್ಘದೇಹ ಡೊಳ್ಳೊಡಲ ಕರಿಕನು (ಭರತ. ೨೫-೫೬). [ ಡೊಳ್ಳು$_1$ (<ಟೊಳ್ಳು) + ಒಡಲು (<ಒಡಲ್) ]

**ಡೋಂಗಾ** (ನಾ). "ತಾಳೆಮರದ ತುಂಡಿನಲ್ಲಿ ತೋಡಿ ತಯಾರಿಸಿರುವ ಒಬ್ಬರು ಅಥವಾ ಇಬ್ಬರು ಹೋಗಲು ಅನುಕೂಲಿಸುವ ಸಣ್ಣ ದೋಣಿ" (ನಿಬಂಧ. I, ೩೨೩ ಅಡಿಟಿ): ಆಚೆಯ ತೀರದಲ್ಲಿರುವ ಡೋಂಗಾ ಒಂದನ್ನು ತೋರಿಸಿಕೊಡುವುದಾಗುತ್ತದೆ (ನಿಬಂಧ. I, ೩೨೩).

[ ←ಹಿಂ. ಮರಾ. ಡೋಂಗಾ ]

**ಡೋಂಗಿ** 'ಧೋಂಗಿ' ನೋ.

**ಡೋಂಗು** 'ಧೋಂಗಿ' ನೋ.

**ಡೋಕಾ** 'ಧೋಕಾ' ನೋ.

**ಡೋಕಾರಿ** (ನಾ). (ಉಕ) ೧. ಕಪಟ; ಮೋಸ; ವಂಚನೆ: ಅನ್ನವಿಲ್ಲದೆ ಸಾಯುತ್ತಾಳಂತೆ. ಪ್ರಭೂ, ಇದೆಲ್ಲವೂ ಧೋಂಗಿ ಧೋಂಗಿ, ಡೋಕಾರಿ (ಹನ್ನೊಂದ. ೬೫). ೨. ಅಪಾಯಕ್ಕೆ ಒಳಗಾದಂತೆ ಸೋಗುಹಾಕಿ ಅಳುವ ವ್ಯಕ್ತಿ; ನೋಯಿಸದಿದ್ದರೂ ನೋವಾದಂತೆ ನಟಿಸುತ್ತ ಕೂಗಾಡುವ ವ್ಯಕ್ತಿ: ಮಾತುಮಾತಿಗೆ ಅಳುತ್ತೀಯಲ್ಲೇ ಡೋಕಾರಿ (ಅರಗಿ. ೮೫). [ ? ]

**ಡೋಕಾರಿಗ** (ನಾ). ಮೋಸಗಾರ: ಗೊಲ್ಲರ ಕೂಡಲಿ ಬೆಳೆದು ಆಕಳನು ಕಾಯ್ದು ಕಾಕುಲಾತಿಯಿಂದ ಡೋಕಾರಿಗನಾಗಿ ನೂಕಲು ಭಯಬಡದೆ (ಮೋಹದೀ. ೨೧-೨). [ ಡೋಕಾರಿ + – ಗ$_2$ ]

**ಡೋಕಾರಿತನ** (ನಾ). ನೋವಾದಂತೆ ನಟನೆಮಾಡಿ ಅಳುವಿಕೆ; ಅಪಾಯವಿಲ್ಲದೆಯೇ ಗದ್ದಲವೆಬ್ಬಿಸುವ ಸ್ವಭಾವ; ಇಲ್ಲದ ಗಾಬರಿಯನ್ನು ತೋರಿಸುವುದು: ಡೋಕಾರಿತನಮಾಡಿ, ನಿನ್ನ ಕೆಲಸ ಮಂದೀ ಮೈ ಮೇಲೆ ಹಾಕುವ ಹಂಚಿಕೆ ಮಾಡುತ್ತೀ (ಮುಂಬಯಿ. ೪-೦೩೪): ಉರವಲದ ಹೊಗೆಯು ಬಾಣತಿ ಬಳುಬಿನಾ ಬೇನೆ; ಡೊಂಕುತನ, ಡೋಕಾರಿತನದ ತಂಬಾಕುಹೊಗೆ (ದ್ಯಾವಾಪೃ. ೬-೯): ಡೋಕಾರಿತನಕ್ಕೆ ಡಾಕ್ಟರೇನು ಔಷಧಿ ಕೊಡುತ್ತಾರೆ, ಮಣ್ಣು (ಹುಚ್ಚಾಟ. ೩೬). [ ಡೋಕಾರಿ + – ತನ ]

**ಡೋಗಿ** 'ಡೋವಿ' ನೋ.

**ಡೋಗಿಬರ**, ಡೌಗಿಬರ (ನಾ). ಆಹಾರವಿಲ್ಲದೆ ಸತ್ತ ಪ್ರಾಣಿಗಳ ಮತ್ತು ಮನುಷ್ಯರ ತಲೆಬುರುಡೆಗಳು ದಿಕ್ಕುದಿಕ್ಕುಗಳಲ್ಲಿ ಉರುಳಾಡುತ್ತಿದ್ದ ಭಯಂಕರವಾದ ಬರಗಾಲ: ಸನ್ ೧೭೯೧ನೇ ವರ್ಷದ ಬರಕ್ಕೆ "ಡೋಗೀಬರ" ವೆಂಬ ಹೆಸರು ಬಿದ್ದದೆ; ಮನುಷ್ಯರ ತಲೆ ಡೋಗಿಗಳು ದಿಕ್ಕಿಲ್ಲದೆ ಉರುಳಾಡುತ್ತಿದ್ದದರಿಂದ ಅದರ ಸ್ಮರಣೆ ಜನರೊಳಗೆ ಇನ್ನೂ ಪೂರಿಕಾಗಿ ಇರುತ್ತದೆ (ಕಥಾಗ. ೨೭೭). **ಡೌಗಿಬರ**: ಹಲವು ವರ್ಷಗಳ ಹಿಂದೆ 'ಡೌಗೀಬರ'ದಲ್ಲಿ ಆವನ ಸವಿಾಪದ ಸಂಬಂಧಿಕರೆಲ್ಲರೂ ತೀರಿಹೋಗಿದ್ದರು (ಪಾತರ ೧೮): ಹಿರಿಯರು ಡೌಗಿಬರದಲ್ಲಿ ದಿನನಿತ್ಯ ಬಡವರಿಗೆಲ್ಲ ಕಾಳು ಹಂಚಿದ ಮೇಲೆ ತಾವು ಊಟ ಮಾಡುತ್ತಿದ್ದರಂತೆ (ಗ್ರಾಮಾಯ. ೦೭೫). [ ಡೋಗಿ (<ಡೋವಿ) + ಬರ$_1$ (<ಬಱ) ]

**ಡೋಣಿ$_1$** 'ದೊಣೆ$_1$' ನೋ.

**ಡೋಣಿ$_2$** 'ದೋಣಿ$_3$' ನೋ.

**ಡೋಣಿಡು** (ಕ್ರಿ). ನೀರು ತುಂಬುವ ದೋಣಿಯನ್ನು ಮುಂದೆ ಇಡು,- ಇರಿಸು: ಡೋಣಿಟ್ಟು ದನಕ್ಕೆ ನೀರೆಱೆವ ಸಂಭ್ರಮಮುಣ್ಮಿದುದೂರ ವಕ್ಕದೊಳ್ (ಸೂಕ್ತಿಸು. ೧೦-೯೩).

[ ಡೋಣಿ$_2$ (<ದೋಣಿ$_3$) + ಇಡು$_1$ ]

**ಡೋಣಿವಟ್ಟೆ** (ನಾ). (ನಡೆದಾಟದಿಂದ ಸವೆದು) ತಗ್ಗುಬಿದ್ದ ದಾರಿ: ನಡನಡೆದು ಖಿಗೆ ಡೋಣಿವಟ್ಟೆ ಬಿದ್ದಿರ್ದಪ್ಪುದು (ಸೌಂದಪು. ೧೫-೬೫).

[ ಡೋಣಿ$_1$ (<ದೊಣೆ$_1$) + ಬಟ್ಟೆ$_1$ ]

**ಡೋಣಿವೀೞ್** (ಕ್ರಿ). ಡೊಗರು ಬೀಳು; ಹಳ್ಳವುಂಟಾಗು; ಕುಳಿಯಾಗು: ಕರಿ ಪೊಣರ್ದಕ್ಕಲಂ ಮಲೆತು ಪೆರ್ಬುಲಿ ಪಾಯ್ದುಗಿಯಲ್ಕೆ ಡೋಣಿವಿೞ್ದುರದ[ಪಾಠಾಂ. ದೋಱುವಿರ್ದುರದ]ಪಿಸುಟ್ಟ ಪೆರ್ದೊಡೆಯ ನುರ್ಗಿದ ಪಂಡೆಯ ಭಂಗಿ ರೌದ್ರಮಾಗಿರೆ (ಜಗವಿ. ೦೬-೨೦).

[ ಡೋಣಿ$_1$ (<ದೊಣೆ$_1$) + ಬೀೞ್$_1$ ]

**ಡೋಣಿವೋಗು** 'ದೊಣೆವೋಗು' ನೋ.

**ಡೋಬಿ** 'ಧೋಬಿ' ನೋ.

**ಡೋಬಿಕಜ್ಜಿ** (ನಾ). ಒಂದು ಬಗೆಯ ಚರ್ಮರೋಗ,-ಕಜ್ಜಿ; ಆ ಅಗಸನು ಚರ್ಮರೋಗಿಯ ಬಟ್ಟೆಯೊಡನೆ ಸೇರಿಸಿ ಒಗೆದಿರುವ ಬಟ್ಟೆಯನ್ನು ಉಪಯೋಗಿಸುವುದರಿಂದ ಅಂಟುವ ಒಂದು ಬಗೆಯ ಕಜ್ಜಿ: ಎಲ್ಲರ ಮನೆಯ ಬಟ್ಟೆಗಳನ್ನು ಒಟ್ಟಿಗೆ ಸೇರಿಸಿ ಒಗೆಯುವ ಕಾರಣ, ಕಜ್ಜಿ, ಕುರು, ಡೋಬಿಕಜ್ಜಿ (Doby's itch) ಮುಂತಾದ ಚರ್ಮರೋಗಗಳು . . . ಅಗಸರ ಮನೆಯಿಂದ ಬಂದ ಮಡಿಬಟ್ಟೆಗಳಿಂದ ಒಬ್ಬರಿಂದ ಒಬ್ಬರಿಗೆ ಹರಡಬಹುದು (ಗೃಹವಿ. ೮೨). [ ಡೋಬಿ (<ಧೋಬಿ) + ಕಜ್ಜಿ ]

**ಡೋಮೆ** (ನಾ). ಒಂದು ಬಗೆಯ ದೊಡ್ಡ ಡೋಲು: "ಯಶಃಪಟಃ, ಢಕ್ಕಾ – ೨ ಢವಣೆ ಹೆಸರು, ಅಂದರೆ ಡೋಮೆ" (ಸಿದ್ಧಾಂತ. ೫೪). 'ಡವಣೆ' ಪರಾ.. [ ? ]

**ಡೋಯಿಗೆ** 'ಡೋವಿ' ನೋ.

**ಡೋರಿಗೊರೆ** 'ಡೋಜುಗೊಟ್[3]' ನೋ.

**ಡೋರೆ** 'ದೋರೆ$_1$' ನೋ.

**ಡೋಲ** (ಗು). ೧. ಚಂಚಲವಾದ; ಓಲಾಡುವ. (ನಾ). ೨. [ನಾಟ್ಯ] ಹದಿಮೂರು ಸಂಯುತ ಹಸ್ತಗಳಲ್ಲೊಂದು; ಎರಡು ಕೈಗಳನ್ನೂ ಸೇರಿಸಿ ಅಭಿನಯವನ್ನು ಮಾಡುವಾಗ ಉಪಯೋಗಿಸುವ ಒಂದು ವಿಧದ ಹಸ್ತಮುದ್ರೆ; ದೋಲ: ನಾಟ್ಯಶಾಸ್ತ್ರದಲ್ಲಿ ಹೇಳಿರುವ ಸಂಯುತ ಹಸ್ತಗಳು ಯಾವುವೆಂದರೆ – ೧. ಅಂಜಲಿ . . . ೮. ಡೋಲ . . . ೧೩. ವರ್ಧಮಾನ (ಅಭಾನ್ಯ. ೪೮). [ ಸಂ. ]

**ಡೋಲಕ** (ನಾ). ಒಂದು ಬಗೆಯ ಚರ್ಮವಾದ್ಯ: ನೃತ್ಯಕಾಲದಲ್ಲಿ ಒಂದಲ್ಲ ಒಂದು ಬಗೆಯ ಡೋಲು, ಡೋಲಕ, ಡಮರು, ತಮಟೆ ಮೊದಲಾದುವನ್ನು ಬಳಸುತ್ತಾರೆ (ಯಕ್ಷಬ. ४೦). [←ಹಿಂ. ಢೋಲಕ್./ಸಂ. ಢೋಲಕ]

**ಡೋಲಪಾದ** (ನಾ). ೧. [ನಾಟ್ಯ] ಮಾರ್ಗ ಆಕಾಶಚಾರಿಗಳ ಅತಿಕ್ರಾಂತವೇ ಮೊದಲಾದ ೧೬ ಭೇದಗಳಲ್ಲೊಂದು; ಒಂದು ಕಾಲನ್ನು ಕುಂಚಿತಮಾಡಿ, ಎತ್ತಿ, ಎರಡು ಪಾರ್ಶ್ವಗಳಲ್ಲೂ ತೂಗಿಸಿ ಹಿಮ್ಮಡಿಯನ್ನು ತನ್ನ ಪಾರ್ಶ್ವದಲ್ಲಿ ನೆಲದ ಮೇಲಿಡುವುದು: ಎತ್ತಿರೆ ಕುಂಚಿತ ಪದಮಂ ಬಿತ್ತರದಿಂದೆರಡು ಕೆಲಕೆ ಡೋಲದ ಪಾಂಗಿಂ ಮತ್ತೆ ಹಿಮ್ಮಡದ ಕಡೆ[ಪಾಠಾಂ. ತೊಡೆ]ಯುಂ ತೆತ್ತಿಸಿದೊಡೆ ಡೋಲಪಾದಚಾರಿಯೆನಿಕ್ಕುಂ (ಲಾಸ್ಯರಂ. ೬-४೮). ೨. [ನಾಟ್ಯ] ನೂರೆಂಟು ಕರಣಗಳಲ್ಲೊಂದು; ಊರ್ಧ್ವಜಾನು ಮತ್ತು ಡೋಲಪಾದಚಾರಿಗಳನ್ನು ಮಾಡಿ ದೋಲ ಹಸ್ತವನ್ನೂ ಮಾಡುತ್ತ ಅಭಿನಯಿಸುವುದು: ಸಮದೂರ್ಧ್ವಜಾನು ಪದದಿಂದಮ ನಿಂದುಂ ಡೋಲಪಾದಚಾರಿಯನೆಸಗಲ್ ಕ್ರಮದಿಂದೆ ಡೋಲ ಕರಮಂ ಸಮನಿಸಲದು ಡೋಲಪಾದಕರಣಮೆನಿಕ್ಕುಂ (ಲಾಸ್ಯರಂ. ४-೦೧೬). [ ಡೋಲ + ಪಾದ ]

**ಡೋಲಫಲ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು: ಕೋಲ ಚಂಪಕ ತಿಲಕ ಮುನಿ ತಕ್ಕೋಲ ಲುಂಗ ಲವಂಗ ಧಾತ್ರೀಡೋಲಫಲ ಭಲ್ಲಾತಕೀಕುಜಗಳು ವಿರಾಜಿಪವು (ಅನಂರಾ. ४-४-೨೭). [ಡೋಲ್ಯ+ಫಲ]

**ಡೋಲಾಗೃಹ** (ನಾ). ಉಯ್ಯಾಲೆಯ ಮನೆ: ಇದೇ ಪದ್ಮಸರೋವರವು ಇದೇ ಡೋಲಾಗೃಹವು ಇದೇ ಕೃತಕಾದ್ರಿಯು (ಪುರುಚ. ೬-೩೬). [ ಸಂ. (ಡೋಲಾ + ಗೃಹ) ]

**ಡೋಲಿ** (ನಾ). ಮನುಷ್ಯರು ಹೊರುವ, ತೊಟ್ಟಿಲಿನಂತಹ ಒಂದು ವಿಧವಾದ ವಾಹನ: ಇವರಲ್ಲಿ ಕೆಲವರು . . . ಡೋಲಿ ಮತ್ತು ಮೇನಾಗಳನ್ನು ಸಾಗಿಸುವುದಕ್ಕೂ ನೇಮಕವಾಗಿದ್ದರು (ಮಹಾಪಂ.II, ೨೦); ಕೊನೆಗೆ ಬೀಳಲುಗಳಿಂದ ಒಂದು ಡೋಲಿಯನ್ನು ಮಾಡಿ, ದೊಡ್ಡನನ್ನು ಮಲಗಿಸಿ ಕೆಲವರು ತಲೆಗೊಟ್ಟು ಹೊತ್ತು ಮುಂದೆ ನಡೆದರು (ಕಾಲೂರ.೭, ಕಥಾಸಾರ). [ ←ಮರಾ. ಡೋಲೀ: ಹಿಂ. ಡೋಲೀ, ಡೋಲಾ./ಸಂ. ದೋಲೀ ]

**ಡೋಲು, ಡೊಳ್ಳು$_2$, ಡೋಳು, ಢೋಲು, ಢೋಳು, ದೋಲು, ದೋಳು$_1$** (ನಾ). ಎರಡು ಮಗ್ಗುಲಲ್ಲೂ ಬಾರಿಸುವ ಒಂದು ಬಗೆಯ ದೊಡ್ಡ ಚರ್ಮವಾದ್ಯ: "ಡೋಲು (ದೋಲು)—ಢೋಲ= ಒಂದು ಮಹಾವಾದ್ಯ" (ಕದ್ಯಕೋ. ೧೬); ಆಗ ಬಡಿಯಿತು ಡೋಲು ಬಡಬಡ (ಕಎಪು. ೩೮-೬); ಡೋಲು, ಶಹನಾಯ್, ಕಾಳೆಗಳು ಸ್ವರ ಹಿಮ್ಮೇಳ ಒದಗಿಸುತ್ತವೆ (ಭಾರಹಾ. ೦೦४); ನೃತ್ಯಕಾಲದಲ್ಲಿ ಒಂದಲ್ಲ ಒಂದು ಬಗೆಯ ಡೋಲು, ಡೋಲಕ, ಡಮರು, ತಮಟೆ ಮೊದಲಾದುವನ್ನು ಬಳಸುತ್ತಾರೆ (ಯಕ್ಷಬ. ४೧). **ಡೊಳ್ಳು$_2$**: ಧಡಲ್ಬಾಜಿ ಸಪ್ಪಳವ ಬೇಡುವದು ಡೊಳ್ಳು ಡೊಂಬರಾಟ (ಅರಳು. ೩४೩-४); ಲಗ್ನದ ದಿವಸ ಗಂಡಸರೂ ಹೆಂಗಸರೂ ಸಿಂದಿಯ ಕುಡಿದು ಕೊಳಲು ಡೊಳ್ಳುಗಳೊಂದಿಗೆ ಕುಣಿದ ಬಳಿಕ ವಧೂವರರ ಮೇಲೆ ಅಕ್ಕೀಕಾಳು ಹಾಕುವರು (ಕಥಾಗ. ೨೨४): ಆ ಸೋಮವಾರ ಬೆಳಗಿನ ಝಾವದಲ್ಲಿ ಝುಗಂಝುಳ್ಳು ಝುಗಂಝುಳ್ಳು ಎಂಬ ಡೊಳ್ಳುಗಳ ನಿನಾದವು ಗಂಗನಹಳ್ಳಿಯನ್ನು ಜಾಗ್ರತಗೊಳಿಸಿತು (ಹಬ್ಬಬ. ೬೨). **ಡೋಳು**: ಕಹಳೆಗಳುನ್ನತ ಡೌಡೆ ನಿಸ್ಸಾಳ ಸನ್ನೆ ಡೋಳು . . . ಒದಱಿದವು (ಅಂಜಚ. ೬-೬೫): ಭೇರಿ ತಂಬಟ ಡೋಳು ಮುಂತಾದ ಬಹು ವಾದ್ಯ ಭೂರಿ ಬೊಂಬಾಳ ದೀವಿಗೆಯ ಪಾಠಿಯ ಪಟುಭಟರುಗಳು (ಮೋಹತ. ೦೦-೨೦); ಡೋಳಿನ ಕುದುರೆ ಡಮಾಸದ ಮದಕರಿ (ಕಂಸವಿ. ೦४-೨೬); ಡೋಳು ಮೊದಲಾದಖಿಳವಾದ್ಯವ ಸೂಳವಿಸುತ (ಪ್ರಹ್ಲಾದ. ४-೦೦); ಸಿಡಿಲನೊಂದು ಕೈಲಿ ಹಿಡಿದು ಬಾನ ಡೋಳ ಬಡಿಯುತ (ಪಾಂಡಜ. ४-೨೦). **ಢೋಲು**: ಕಷ್ಟತರವಾದ ಹೆಜ್ಜೆಗಳನ್ನು ಹಾಕಿ ಢೋಲಿಗೆ ತಕ್ಕುದಾಗಿ ಕುಣಿಯುವುದುಂಟು (ಅಭಾವ್ಯ. ೦೦೩). **ಢೋಳು**: ಬೊಂಬುಳಿ ಢೋ[ಪಾಠಾಂ. ಡೋ]ಳು ನಿಸ್ಸಾಳ ಬೊಬ್ಬೆಯ ದನಿ ತುಂಬಿ ದುದೆಣ್ದೆಸೆಯನು (ಸೂಲಸೋ. ೫-४೨). **ದೋಲು**: ಊದುವರು ದೋಲು ಇತ್ಯಾದಿಗಳನ್ನು ಹಿಡಿದುಕೊಂಡಿದ್ದರು (ಕಿಶ್ರೂ. ೦೨): ತಾಳಬದ್ಧವಾಗಿ ಒಂದು ಕಡೆಯಿಂದ ದೋಲನ್ನೂ ಕಿಂಕಿಣಿಯನ್ನೂ ಬಾರಿಸತೊಡಗಿದರೆ (ಬಾಂಪ್ರ. II, ४೧೬). **ದೋಳು$_1$**: ದೋಳು ಬಡಿದು ಗೆರಸಿ ಮುಚ್ಚಿದ ಹಾಗೆ (ಗಾದೆ). [ <ಸಂ. ಢೋಲ ]

**ಡೋಲೆ** (ನಾ). ಉಯ್ಯಾಲೆ: ಝುಗಝುಗಿವ ಡೋಲೆಯೊಳ್ ಕಾಮಿನಿಯರಾಗ ಲೀಲಾವಿನೋದದಿಂ ತೂಗಲು (ಸಾನಂಗ. ೩೫). [ ಸಂ. ಡೋಲಾ ]

**ಡೋಲೋತ್ಸವ, ಡೋಳೋತ್ಸವ** (ನಾ). ದೇವರನ್ನು ಉಯ್ಯಾಲೆ ಮೇಲೆ ಕೂಡಿಸಿ ಮಾಡುವ ಉತ್ಸವ: ಇವೊತ್ತು ಊರದೇವರ ಡೋಲೋತ್ಸವ ಇದೆ (ರೂಢಿ). **ಡೋಳೋತ್ಸವ**: ಶ್ರೀಹಯಗ್ರೀವ ಲಕ್ಷ್ಮೀನಾರಾಯಣ ದೇವರವರ ಡೋಳೋತ್ಸವದ ಬಗ್ಗೆ (ಮೈಆರು. ೦४३೮, ೨೭-೨; 1816). [ ಸಂ. (ಡೋಲಾ + ಉತ್ಸವ) ]

**ಡೋವಿ, ಡವಿಗೆ, ಡವುಗೆ, ಡೊಗೆ, ಡೂವಿಗೆ, ಡೋಗಿ, ಡೋಯಿಗೆ, ಡೋವಿಗೆ, ಡೋವೆ, ಡೌಗಿ, ಡೌಗೆ** (ನಾ). ೧. ತಲೆಯ ಚಿಪ್ಪು; ತಲೆಬುರುಡೆ; ಕರೋಟಿ: ವೇದಂಗಳಂ ಕೇಳು ನಂಬುದೇಜಡೆ ಬಜುನುಡಿಯೊಳಾದ ಫಲವೇನು ನಾಲಗೆಯ ಸಡಗರ ಡೋವಿಗಾದುದವೆಪ್ಪತ್ತು (೦ಶಿಚಂ. ೮-೬). **ಡವಿಗೆ**: ೧. ಪಾಕ ಮಾಡುವ ಭಾಂಡ ಸೌಟಾಗನೆ ಡ[ಪಾಠಾಂ. ಡೊ]ವಿಗೆಯುಯ್ಯಾ (ಬಸವ. ೬೦४): ಹೋದಾಗ್ಯೆಯೊಳಗೆ ಡವಿಗೆಯನು ಹಿಡಿಯುತಲಿ ಬೇಡಿ ಉಂಡವನೆ (ಕನ್ನಡಾ. ೩೦೮): ಅಲ್ಲೊಂದು ಮನುಷ್ಯ ಡವಿಗೆ ಕಂಡಿತು (ಮೂಪಾಸಾ. ೨೦). ೨. ಟೊಳ್ಳಾದ ದಪ್ಪ ಬಿದಿರು: "ಡವಿಗೆ – ದೊಡ್ಡ ತೊಳ್ಳು ಬಿದಿರು" (ಜಾನಕೋ. ೬೨). **ಡವುಗೆ**: ೧. ಯೇಸುವಿನ ಚಿತ್ರದಲ್ಲಿ ಯೇಸುವಿನ ಕಾಲ ಬುಡದಲ್ಲಿ ಒಂದು ತಲೆಯ ಡವುಗೆ ಇದೆ (ಗೊಲ್ಗೊಥಾ. ೧೮, ಟಿಪ್ಪಣಿ); ಅದು ಪ್ರಾಚೀನಕಾಲದ ಒಬ್ಬ ಮನುಷ್ಯನ ಡವುಗೆಯಾಗಿರಬಹುದೆಂಬ ತಿಳುವಳಿಕೆ ಇದೆ (ಮತಂಟಿ. ೨೨).

ಡೊಗೆ: ೧. ಬಟ್ಟೆಯೆಲುಗಳ ಕುಂಡಲಗಳಿಂದೆ ಕಱಿಶಿರದ ಡೊಗೆಯ ಸಲಿಲದ ಕಮಂಡಲದಿಂದೆ (ಜೈಮಿಭಾ. ೧೬-೨೪); ಆನೆಯ ತಲೆಯ ಡೊಗೆಯೇ ಅವನ ಕಮಂಡಲು (ಬದುಕಿ. ೭೭). ಡೊವಿಗೆ: ೧. ಡೊವಿಗೆ ವ್ಯುತ್ಪತ್ತಿವಿನ ನುಡಿಗೊಳಗಾಯಿತ್ತು (ಬಸವ. ೫೬೪). ಡೋಗಿ: ೧. ಕೊರಳಿಗೊಂದಿದ ಗಂಡಮಾಲ ಡೋಗಿಯ ಹುಣ್ಣು ಶಿರಕೆ ಬೆನ್ನಿಗೆ ಜರಡಿಹುಣ್ಣು (ಮುಕ್ತದ. ೧೦-೨೮). ಡೋಯಿಗೆ: ೧. ಆಯುಧದ ಪರಹುಗಳ ತಲೆಗಳ ಡೋ[ಪಾಠಾಂ. ದೋ]ಯಿಗೆಯ ಕಥಿಖಂಡಮಯದ ಮಹಾಯಂತ್ರದ ರಣದೊಳಗೆ ಬಂದನು ಭೀಷ್ಮನಿದ್ದೆಡೆಗೆ (ಕುಮಾ.ದ್ರೋ. ೧-೨೦). ಡೋವಿಗೆ: ೧. ನೆಲಕೊಲಿವ ಡೋವಿಗೆ . . . ದರ್ಪವಳಿದವಯವಂ ಮೆಱೆವ ಘೋರತಪ ದಚಲಿತರನೀಕ್ಷಿಸಿದನವನೀಶನು (ಹದಿಬ. ೬-೩೫). ಡೋವೆ: ೧. ಪೊರ ಕುಱಿದವನಂತೆ ಶಿರದ ಡೋವೆಯೊಳು ತಾ ತಿರಿದು ತಿಂಬುವನೆಂದು ಹರನ ಜರಿದು (ಪ್ರಭುಲಿಂ. ೦೦೬-೩೬). ಡೌಗಿ: ೧. ಪ್ರತಿಯೊಂದು ನಾಟಕದಲ್ಲಿ ಕೆಲವು ದಿಂಡಗಳೂ ಹಲವು ಡೌಗಿಗಳೂ ಬರುತ್ತಿದ್ದವು (ಜನಪ. VII, ಪ್ರಸ್ತಾವನೆ). 'ಡೌಗಿಬರ' ಪರಾ. ೨. 'ಡೌಗಿಕೊಳವಿ' ಪರಾ. ಡೌಗೆ: ೧. "ಓಡು = ೧. ಒಡಕ ಗಡಿಗೆ. ೨. ತಲೆಯ ಡೌಗೆ" (ಗಂಗಾಪು. ೫೯).

ಡೋಗಿಯ ಬರ = ಡೋಗಿಬರ: ತುಸು ದಿವಸಗಳಲ್ಲಿ ದೇಶದಲ್ಲಿ ಡೋಗಿಯ ಬರವು ಪ್ರಾಪ್ತವಾಯಿತು (ಗುರುಪ್ರ. ೬).

[ ←ಮರಾ. ಡೋಈ ]

**ಡೋವೆ** 'ಡೋವಿ' ನೋ.

**ಡೋಹ** 'ಡೋಹರ' ನೋ.

**ಡೋಹರ**, ಡೋಹ, ಡೋಹಾರ, ಢೋರ (ನಾ). ಚಂಡಾಲ ಜಾತಿಯವನು: ಅಪ್ಪನು ನಮ್ಮ ಮಾದರ ಚನ್ನಯ್ಯ ಬೊಪ್ಪನು ನಮ್ಮ ಡೋಹರ ಕಕ್ಕಯ್ಯ (ಬಸವ. ೩೪೮): ಬೇಡಂಗೆ ಡೋಹ[ಪಾಠಾಂ. ಹಾ]ರಂಗೆ ಹೊಲೆಯಂಗೆ ರೂಢಿಗೀಶ್ವರನೊಲಿದ ಪರಿಯ ನೋಡ (ಅಂಬಿಗ. ೪೦೨-೦೦೦); ವರ ಡೋಹರ ಕಕ್ಕಯ್ಯಂ ಚರಗುರು ಶಿವಲಿಂಗಭಕ್ತನೀ ವಸುಮತಿಯೊಳ್ (ವೃಷಭ. ೩೮-೦೦೪). ಡೋಹ: ಪೇಸಿಕೆಯಿಲ್ಲದಾ ಪೊಲೆಯ ಮಾದಿಗ ಕೀಲಿಗ ಡೊಂಬ ಡೋಹನತ್ಯಾಸುರಕರ್ಮಿ ಕಳ್ಳಗ ಡುಹಿ ತೊನ್ನರೊಳಾದೊಡುರುಳ್ದ . . . ಕೂಳೆ (ಶಾಸ್ತ್ರಸಾ. ೧೦೦೨) : ಮಾದಾರ ಕೇರೆಲ್ಲ ಮೊದಲಿಗೆ ಹೊರಟೀತು ಅದು ನೋಡಿ ಡೋಹರೆಲ್ಲರು ಮಗ್ಗಿದರು (ಸಿದ್ಧಪು. ೪-೭೪). ಡೋಹಾರ: ಸೆಟ್ಟಿಯೆಂದೆಂಬೆನೆ ಸಿರಿಯಾಳನ ಮಡಿವಾಳನೆಂದೆಂಬೆನೆ ಮಾಚಯ್ಯನ ಡೋಹಾರನೆಂದೆಂಬೆನೆ ಕಕ್ಕಯ್ಯನ (ಬಸವ.೩೪೪): ಈತನೆ ಮೇದಾರ ಕೇತಯ್ಯ ನೆಂಬಾತನೀತನೇ ಡೋಹಾರ ಕಕ್ಕಯ್ಯನೆಂಬಾತನು (ಚಬಪು. ೫೬-೫೭). ಢೋರ: ಪೂರ್ವದ ಋಷಿಗಳೆಲ್ಲರು ಕಮ್ಮಾರ, ಮಚ್ಚಿಗಾರ, ಢೋರ, ಕಬ್ಬಲಿಗ, ನಾಯಿಂದ ಮೊದಲಾದ ಕುಲದಲ್ಲಿ ಹುಟ್ಟಿದವರಾದಾಗ್ಯೂ (ಶ್ರೀಬಿಚ್ರ. ೨೯೬); ಚರ್ಮಕ್ಕೆ ಕರೆ ಹಾಸುವುದೇ ಢೋರರ ಮುಖ್ಯ ಹೋರೆಯು (ಕದಾಗಿ. ೨೦೯).

[ ←ಮರಾ. ಡೋಹರ್, ಡೋಹಾರ್, ಢೋರ್ ]

**ಡೋಹಾರ** 'ಡೋಹರ' ನೋ.

**ಡೋಳಾಕೇಳಿ** (ನಾ). ಉಯ್ಯಾಲೆಯ ಆಟ: ಡೋಳಾಕೇಳಿಯ ಕಂದುಕ ಕೇಳಿಯ . . . ಬಿಸದದೊಳೆ ಸತಿಯನವರೊಸೆಯಿಸಿದರ್ (ಪುಷ್ಪಪು. ೯-೮೨).

[ ಸಂ. ಡೋಲಾಕೇಲಿ (ಡೋಲಾ + ಕೇಲಿ) ]

**ಡೋಳು** 'ಡೋಲು' ನೋ.

**ಡೋಳೋತ್ಸವ** 'ಡೋಲೋತ್ಸವ' ನೋ.

**ಡೋಱು** 'ಡೊಂಗಱು' ನೋ.

**ಡೋಱುಗಳಿ** 'ಡೋಱುಗಳಿ' ನೋ.

**ಡೋಱುಗೊಱು**$^3$ 'ಡೋಱುಗೊಱು$^3$' ನೋ.

**ಡೋಱುದಲೆ** (ನಾ). ಡೊಗರು ಬಿದ್ದ ತಲೆ; ಕುಳಿಬಿದ್ದ ತಲೆ: ಶರಧಿಯಲಿ ಹುಟ್ಟಿರ್ದ ವಿಷದಲಿ ಕರಿಕುದಲೆಯಾದವರು ಅಂಧಾಸುರನ ಬಿಡಿಸಲು ಹರನು ಪೊಡದಾ ಡೋಱುದಲೆಯವರು (ಕಾಶಿರಾ. ೨೧-೧೬).

[ ಡೋಱು (<ಡೊಂಗಱು) + ತಲೆ$_1$ ]

**ಡೋಱುವೋಗು** 'ಡೋಱುವೋಗು' ನೋ.

**ಡೋಱು** 'ಡೊಂಗಱು' ನೋ.

**ಡೋಱುಗಲೆ** (ನಾ). ಸೀಳಿದ ಗುರುತು: ಗಾಯದ ಚಿಹ್ನೆ: ಸುರಪತಿಯ ಮೋಱುಯಲೀತನಱಿಗಿದ ಡೋಱುಗಲೆ[ಪಾಠಾಂ. ಳೆ]ಯದೆ ಭೂತಳಾಧಿಪ ನೋಡು ದೇವಾಂತಕ ನಿಶಾಚರನ (ತೊರರಾ. ೬-೨೦-೭೮).

[ ಡೋಱು (<ಡೊಂಗಱು) + ಕಲೆ$_2$ ]

**ಡೋಱುಗಳೆ**, ಡೋಱುಗಳೆ (ಕ್ರಿ). ೧. ಸೀಳು; ತೂತುಮಾಡು; ಕೊರೆ; ಕತ್ತರಿಸು: ಐದಾಱು ಶರದಲಿ ಕರ್ಣನೆದೆಯನು ಡೋಱುಗಳೆಯಲು ಬಳಲಿದನು ಪೂರಾಯ ಘಾಯದಲಿ (ಕುಮಾ.ದ್ರೋ. ೫-೨೮); ತೊಡೆಯನು ಡೋಱುಗಳೆವ ಪುಳುವಿಗಿನಸುತನು ಬಳಲಿ ಮೈಮಱೆದೊಱಗಿದ ರಾಮಗೆ ನಿದ್ದೆಯಳಿವುದೆಂದು ಚಿಂತಿಸಿದ (ಕರ್ಣಪ. ೪-೮) : ಪಾರ್ಥಿಯ ಶಿಲೀಮುಖಾಳಿ . . . ಸ್ಯಂದನವಿತಾನಮಂ ಡೋಱುಗಳೆದುದು (ಜೈಮಿಭಾ. ೨೨-೪೨). ೨. ಸೀಳಿ ಹೋಗು; ಬಿರಿ; ಭಂಗಹೊಂದು; ಡೊಗರುಬೀಳು: ಎದೆ ಡೋಱುಗಳೆವಂತೆ ತಿವಿದುರುಳಿಸಿದ (ಭೈರವೇ. ೩-೦೩). ಡೋಱುಗಳೆ: ೨. ಡೋಱು[ಪಾಠಾಂ. ಱು]ಗಳೆದುದು ಗರ್ವಪರ್ವತಂ (ರಶಿಚಂ. ೩೩-೨೬).

[ ಡೋಱು (<ಡೊಂಗಱು) + ಕಳೆ$_1$ ]

**ಡೋಱುಗೊಱು**$^3$, ಡೋರಿಗೊರೆ, ಡೋಱುಗೊಱು (ಕ್ರಿ). ತೂತುಕೊರೆ; ರಂಧ್ರಮಾಡು; ಸೀಳು; ಛಿದ್ರಿಸು: ರಕ್ತಮಾಂಸಾಹಾರಿಯಾದ ದುಷ್ಕೀಟಕವೊಂದ್ಯೆತಂದು ಕರ್ಣನ ತೊಡೆಯಂ ಡೋಱುಗೊಱೆದು ರಕ್ತಮನೀಂಟಿ ಮಾಂಸಮಂ ಭಕ್ಷಿಸುತ್ತಿರಲಾಗಿ (ಭಾರತಾಂ. ೩). ಡೋರಿಗೊರೆ: ಕಿನಿಸಾಂತು ಶರವರ್ಷಮಂ ಕರೆಯಲಸುರರಂ ತನುಗಳಂ ಡೋರಿಗೊರೆಯಲ್ಕಮಮ ದೈತ್ಯರನುಪಮಿತ ಖಡ್ಗ ತೋಮರ ಗದೆಗಳಿಂದಂತಮಂ ಖಂಡಿಸುತಾಗಳು (ಧೋರಾಸು. ೬). ಡೋಱುಗೊಱು$^3$: ಕುಂತಮೆರ್ದೆಯನು ಡೋಱುಗೊಱೆದಂತೆ (ಚಕಸ. ೨೬).

[ ಡೋಱು (<ಡೊಂಗಱು) + ಕೊಱು$^3_1$ ]

**ಡೋಱುನೊಸಲು** (ನಾ). ಕುಳಿಯಾದ ಹಣೆ; ಹಳ್ಳವಿರುವ ಹಣೆ: ತಗ್ಗಿರುವ ಲಲಾಟ: ಏಳನೆಯ ಬಾಗಿಲಲಿ ಡೋಱುನೊಸಲಿನ ಕಿಱುಬೆಮರ ಕಾಹೇಱುದಕ್ಷಿಯ ಸರಥಸದ ಪಡಿಹಾಱರಿಬ್ಬರು ನಿಂದಿರಲು (ನಿಭಾಗ. ೩-೬-೮).

[ ಡೋಱು (<ಡೊಂಗಱು) + ನೊಸಲು (<ನೊಸಲ್) ]

**ಡೋಱುಮೈ** (ನಾ). ಗೂಡುಬಿದ್ದ ಮೈ; ಜೀರ್ಣವಾದ ದೇಹ: ಡೋಱುಮೈಯಾದ ಮುದುಕಿಹೋಹುದಱಿಂದ ಕಾಱಿಕೊಂಡುಣ್ಣೊ (ಸರ್ವಜ್ಞ. ೦೭೪೭). [ ಡೋಱು (<ಡೊಂಗಱು) + ಮೈ (<ಮೆಯ್) ]

**ಡೋಱುವೋಗು**, ಡೋಱುವೋಗು, ದೋಱುವೋಗು (ಕ್ರಿ). ಡೊಗರು ಬೀಳು; ಹಳ್ಳವಾಗು; ಕುಳಿಬೀಳು; ಸೀಳಿಹೋಗು; ಬಿರಿ: ಕೀಱು ಕಾಲಿಡೆ ದಿಕ್ಕರಿಗಳೆದೆ ಡೋಱುವೋಗಲು ಸರ್ವ ಲಗ್ಗೆಯಲೇಱಿತೀ ದಳ (ಕುಮಾ.ಕ. ೧೫-೨೦); ಬಿದ್ದನು ಘಾತಿಯಲಿ ಧರೆ ಶೈಲ ವನ ಸಹಿತ ಡೋಱುವೋಗಲು (ನಿಭಾಗ. ೧೦-೩೨-೧೪). ಡೋಱುವೋಗು: ಡೋಱುವೋದುವು ತೋಳು ನೆತ್ತರ ಕಾಱು ರಾವಣ ಗಂಡುಗೆಟ್ಟನು (ಕಾಶಿರಾ. ೨-೩೧); ಬೀಸಿ ಬಾಲದಿ ಗೋಣ ಬಿಗಿದನು ಸಾಸಿಗನ ಶಿರ ಡೋಱುವೋದುವು (ಕಾಶಿರಾ. ೨೨-೧೧). ದೋಱುವೋಗು: ವಿಮಾಱು ಪೊಗುವ ಅಂಗಜನ ಶರದಲಿ ದೋಱುವೋಯಿತು ಹೃದಯ (ಕುಮಾ.ವಿ. ೨-೧೧).

[ ಡೋಱು (<ಡೊಂಗಱು) + ಪೋಗು$_1$ ]

**ತಂತ್ರಪಾಳ** 'ತಂತ್ರಪಾಲ' ನೋ.

**ತಂತ್ರಪ್ರಯೋಗ** (ನಾ). ಇಂದ್ರಜಾಲದ ಪ್ರದರ್ಶನ; ಯಕ್ಷಿಣೀವಿದ್ಯೆಯ ಪ್ರಯೋಗ : ಇಂದ್ರಜಾಲದ ನೋಳ್ಪರಸುರಿಗಂ ದೃಢಾಚಂದೋರ್ವೆದದ ರೊಳಸಂದ ತಂತ್ರಪ್ರಯೋಗವೆತ್ತಲಿಗಪ್ಪರೊಡವಿಹುದೇ (ಗಗಚಾ ೧೭-೬೦). [ ತಂತ್ರ + ಪ್ರಯೋಗ ]

**ತಂತ್ರಲಿಪಿ** (ನಾ). ಸಾಂಕೇತಿಕ ಲಿಪಿ : ಸ್ವಾಮಿ ಶಂಕರಾನಂದ ಎಂಬುವರು ಇಲ್ಲಿನ ಲಿಪಿ ತಂತ್ರಲಿಪಿಯೆಂದೂ, ಅದು ಏಕಾಕ್ಷರಗಳಿಂದ ರಚಿತವಾಗಿದ್ದು ಗುಪ್ತಭಾಷೆಯಲ್ಲಿ ಬರೆದ 'ವೇದಗಳೆಂದೂ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು (ಜ್ಞಾವಿ. ೨೪). [ ತಂತ್ರ + ಲಿಪಿ ]

**ತಂತ್ರವೇದಿ** (ನಾ). ತಂತ್ರಗಳನ್ನು ತಿಳಿದವನು ; ವೈದ್ಯ : "ದೋಷಜ್ಞಂ ತಂತ್ರವೇದಿ " (ವಸ್ತುಕೋ. ೭೪-೪೨). [ ಸಂ. ತಂತ್ರವೇದಿನ್ ]

**ತಂತ್ರಶಾಸ್ತ್ರ** (ನಾ). ೧. ಆಗಮಶಾಸ್ತ್ರ : ಆಗಮಶಾಸ್ತ್ರವನ್ನು (ತಂತ್ರ ಪ್ರಧಾನವಾದುದರಿಂದ) "ತಂತ್ರಶಾಸ್ತ್ರ"ವೆಂದೂ ಪರ್ಯಾಯನಾಮದಿಂದ ಕರೆಯುತ್ತಾರೆ (ಭಾರಡ. ೬೯). ೨. ಯಂತ್ರಕಲಾಶಾಸ್ತ್ರ : ತೀವ್ರಗತಿಯಲ್ಲಿ ಬೆಳೆಯತೊಡಗಿದ ತಂತ್ರಶಾಸ್ತ್ರ (Technology) ಜನರ ಜೀವನ ವಿಧಾನವನ್ನೇ ಕ್ರಾಂತಿಕಾರಿಯಾಗಿ ಬದಲಾಯಿಸಿದುದಲ್ಲದೆ ಅವರ ಮನೋಧರ್ಮವನ್ನೇ ಬದಲಾಯಿಸಿತು (ಪುಸ್ತಾರ. ೩೩, ೬೮೬೩). [ ತಂತ್ರ + ಶಾಸ್ತ್ರ ]

**ತಂತ್ರಶುದ್ಧಿ** (ನಾ). ಪ್ರಯೋಗದಲ್ಲಿರುವ ಶುದ್ಧತೆ; ವಿಧಾನದಲ್ಲಿ ದೋಷವಿಲ್ಲದಿರುವಿಕೆ: ಆ ಆಕ್ಷೇಪವು...(೪)ಸ್ವವಿರುದ್ಧವೆಂದೋ ಅಥವಾ (೫) ತಂತ್ರಶುದ್ಧಿ(Technical correctness)ಗೆ ವ್ಯತಿರಿಕ್ತವಾಗಿದೆಯೆಂದೋ ಇರುತ್ತದೆ (ಅರಿಶಾ. ೦೪೭). [ ತಂತ್ರ + ಶುದ್ಧಿ ]

**ತಂತ್ರಸಿದ್ಧಾಂತ** (ನಾ). ಪಾಂಚರಾತ್ರಾಗಮದಲ್ಲಿ ಪ್ರತಿಪಾದಿತವಾಗಿರುವ ನಾಲ್ಕು ವಿಧವಾದ ಸಿದ್ಧಾಂತಗಳಲ್ಲಿ ಒಂದು : ಪಾಂಚರಾತ್ರಾಗಮದಲ್ಲಿ -'ದಿವ್ಯಮಂತ್ರಸಿದ್ಧಾಂತ', 'ಆಗಮಸಿದ್ಧಾಂತ', 'ತಂತ್ರಸಿದ್ಧಾಂತ' . . . ಎಂದು ನಾಲ್ಕು ವಿಧ (ಭಾರಡ. ೭೭). [ ತಂತ್ರ + ಸಿದ್ಧಾಂತ ]

**ತಂತ್ರಪಾಳ, ತಂತ್ರಾಳ** (ನಾ).=ತಂತ್ರಪಾಲ ೧ : ಹರ್ಮ್ಮನೃಪನ ನಚ್ಚಿನ ನಯಸಂಸ್ಕಾಸಕರ ಕಟ್ಟಿದಲಗದನಟಿಯರೆ ತಂತ್ರಪಾಳನಂ ತೊಂಡಮನ . . . ಅನ್ನೆನಿಸಿ ನೆಗಳ್ದ ತಂತ್ರಪಾಳ [ತೊಂ]ಡಮರಸಂಗನುಜಾತನಾಗಿಯುಂ (ಸೌಇಇ. XV, ४೩-೧೮ : 12ನೆಯ ಶತ). **ತಂತ್ರಾಳ** : ತುಳುವದ ಶಾಸನಗಳಲ್ಲಿ ಬರುವ ಅಧಿಕಾರಿಗಳು . . . ಮಹಾಪ್ರಭು, ಸೇನಾಪತಿ; ತಂತ್ರಾಳ, ತಂತ್ರಿನಾಯಕ (ತುಳುನಾ. ೨೬೦). [ <ಸಂ. ತಂತ್ರಪಾಲ ]

**ತಂತ್ರಪಾಳಿಕೆ** (ನಾ). ತಂತ್ರಪಾಲನ ಅಧಿಕಾರ,-ಹುದ್ದೆ : ಅಸ್ತಪ್ಪರ ದಧ್ಯಕ್ಷಂ ಕುಸ್ತಳಪತಿಯಿತ್ತ ಸುರಿಗೆವಿಡಿವಧಿಕಾರಂ ಸನ್ನತದ ತನ್ನಪಾಳಿಕೆ ಯಿಸ್ತು ಮಹಾಮಾತ್ಯಪದವಿಗಿವು ಸಂಚಕರ (ಸೌಇಇ XI-I, ೧೭೪-೧೨ : 1124). [ ತಂತ್ರಪಾಳ + - ಇಕೆ ]

**ತಂತ್ರಹೂಡು** (ಕ್ರಿ). ಸಂಚುಮಾಡು ; ಉಪಾಯಮಾಡು: ಮುದುಕಿಯ ಆಸ್ತಿಪಾಸ್ತಿಯೆಲ್ಲ ಪರಭಾರೆಯಾಗುವಂತೆ ತಂತ್ರ ಹೂಡಿದ್ದ ವಕೀಲ (ಪುನರು. ೨೫). [ ತಂತ್ರ + ಹೂಡು$_1$ (<ಪೂಡು) ]

**ತಂತ್ರಾಧ್ಯಕ್ಷ** (ನಾ). ದಳಪತಿ : ದಂಡನಾಯಕ : ತಂತ್ರಾಧ್ಯಕ್ಷನಂ ಬರಿಸಿ ಬೆಸಸುವುದು ಮಾತಂ ವಿಜಯಪ್ರಯಾಣಭೇರಿಯಂ ಪೊಯ್ಸಿಡಾಗಳ್ (ಶಂಧ್ರಪು. ೧೧-೧ ವ) : ಸಮರಪ್ರಸ್ಥಾನಭೇರಿಯಂ ಪೊಡೆಯಿಸೆಂಬುದುಮುಮ ತಂತ್ರಾಧ್ಯಕ್ಷನಪ್ಪ ಮೇಘನಾದನಂ ಬರಿಸಿ ಬೆಸಸುವುದುಂ (ರಾಜಶೇ.೬-೧೧ ವ). [ ತಂತ್ರ + ಅಧ್ಯಕ್ಷ ]

**ತಂತ್ರಾಲಯ** (ನಾ). ತಂತ್ರದ ನೆಲೆ : ಉಪಾಯದ ನೆಲೆ: ವಿಜಯ ಲಗ್ನಾನಂದವಂ ಬೇರ್ವಡಿಸಲಾದ ತಂತ್ರಾಲಯ ಶೀರ್ಣಭಯ ಯತಿ ಸಿದ್ಧ ಸಂಸ್ಪೃಷ್ಟ ದೇವಾಲಯ (ಮಲದೇ. ೨೭-೯). [ ತಂತ್ರ + ಆಲಯ ]

**ತಂತ್ರಾವಾಪ** (ನಾ). ೧. ತಂತ್ರಗಳನ್ನು ಹೂಡುವಿಕೆ, -ಪ್ರಯೋಗಿಸು ವಿಕೆ. ೨. [ರಾಜನೀ] ರಾಜ್ಯಪಾಲನೆಯ ಮತ್ತು ರಾಷ್ಟ್ರರಕ್ಷಣೆಯ ಚಿಂತೆ ; ಸ್ವರಾಷ್ಟ್ರ ಮತ್ತು ಪರರಾಷ್ಟ್ರ ವಿಚಾರ : ಮುಕ್ತಿಸಾಮ್ರಾಜ್ಯ ದೊಳತಿಪ್ರಾಜ್ಯ ಸಂಜನಿತ ನಿಸ್ಸೃಹನನವರತಕಲ್ಯಾಣ ಪರಿಪಾಕದೊಳ್ ನಿರಂತರಂ ತಂತ್ರಾವಾಪ ಚಿಂತಾಂತರಾಯುಪ್ರಾಯ ಸುಖಲವದೋಳ್ ಮಹೀತಳರಾಜ್ಯದೊಳ್ ನಿಜಸುವುದುಂ ಮದುವೆ ನಿಜಸುವುದು ಮೆನಗಶಕ್ಯಾನುಷ್ಠಾನಂ (ಆದಿಪು. ೮-೮ ವ). [ ತಂತ್ರ + ಆವಾಪ ]

**ತಂತ್ರಾಳ** 'ತಂತ್ರಹಾಳ' ನೋ.

**ತಂತ್ರಿ$_1$** (ನಾ). ೧. ತಂತ್ರಶಾಸ್ತ್ರವನ್ನು ಬಲ್ಲವನು ; ಆಗಮೋಕ್ತರೀತಿ ಯಲ್ಲಿ ಪೂಜಾವಿಧಿಯನ್ನು ನಡೆಸುವವನು: ಅವರು ಹಾಡುವ ಭೂತದ ಪಾಡ್ದನಗಳಲ್ಲಿ . . . ತಂತ್ರಿ, ಬ್ರಾಹ್ಮಣ, ಪುರೋಹಿತ, ಮೊದಲಾದವರು ಬರುತ್ತಾರೆ (ಜಾನಗೀ. ೩೪) ; ತಂತ್ರಿಯವರು ಕೂಡಾ ಹೇಳುತ್ತಾರೆ . . . ಆ ಕೋಳದ ಸುತ್ತಲೂ ಹದಿನಾರು ದೇವ್ರುಗಳಿವೆ . . . ಎಂದು (ಪದ್ಯಸ. ೨೭). ೨. ಯುಕ್ತಿಯನ್ನು ಬಲ್ಲವನು ; ಉಪಾಯಗಾರ : ಮಂತ್ರಿ ಬಸವನ ಕೇಳು ತಂತ್ರಿಗಳ ಮಂತ್ರಗಳು ಜಂತ್ರದಲಿ ತಲೆಯ ಕೊಟ್ಟಂತೆ (ಕನ್ನಡ. ೨೫೦) : ಅವನ ಮುಖಭಾವದಲ್ಲಿಯಾಗಲಿ ಅಥವಾ ಮಾತಿನಲ್ಲಿಯಾಗಲಿ ಅವನು ತಂತ್ರಿ ಎಂದು ಕಾಣುತ್ತಿರಲಿಲ್ಲ (ಮಲಿನಾ. ೧೫೯).

[ ಸಂ. ತಂತ್ರಿನ್ ]

**ತಂತ್ರಿ$_2$** (ನಾ). ೧. ದಾರ ; ಎಳೆ ; ಸೂತ್ರ. ೨. ತಂತಿ ; ವೀಣೆ ಮೊದಲಾದ ವಾದ್ಯಗಳ ತಂತಿ : ನಯಮುಳವಟ್ಟ ಜೀವೆಯುಳವಟ್ಟ ಧರೋತ್ತರ ತಂತ್ರಮುಪ್ಪ ತಂತ್ರಿಯೊಳನುವಾದಿಯಾಗೆ ಪೊಸ ಮೂರ್ಛನೆ ರಂಜಿಸೆ ಮಂದ್ರ ತಾರ ಗೀತಿಯ ಬವಣೊಪ್ಪೆ . . . ವೀಣೆಯುಂ ಮಿಡಿದಳೆಳ್ದೆರ್ದೆಯಂ ಮಿಡಿದಳ್ ಪ್ರಗೀತರಾ (ಶಾಂತಿಪು. ೯-೧೬೭) : ಸೇರಿಸಿ ತಂತ್ರಿಯುಂ ಸಂಚಿನಿಂ ಮೇಚನು ಬಾಜಿಸುತೆಸೆಯೆ ಭಾವೆಯರು (ಜೀವಂಧರಾ. ೨೦-೧೩) : ಗಗನ ವೀಣಾತಂತ್ರಿಯಂ ಮಿಡಿದ ತೆರನಾಗಲ್ (ಶ್ರೀರಾಮಾ. ೧-೧೭) : ಸಹಸ್ರತಂತ್ರೀನಿಃಸ್ವನದಂತೆ . . . ಗುಡುಗಾಡುತ್ತಿದೆ ಗಗನದ ತುಂಬ ಪ್ರಣವಪ್ರವೀಣನ ನಾದಸ್ತಂಭ (ಅರಳು. ೭೭-೧). ೩. ಒಂದು ತಂತೀವಾದ್ಯ ; ವೀಣೆ: ವಾಣಿ, ಓ ಪ್ರಾಣವೀಣಾಪಾಣಿ, ಕವಿಯೆರ್ದೆಯ ರಸರಾಣಿ, ಮಿಡಿಯೆನ್ನಾತ್ಮತಂತ್ರಿಯಂ (ಶ್ರೀರಾಮಾ. ೦೪೨-೨).

[ ಸಂ. ತಂತ್ರೀ ]

**ತಂತ್ರಿಕೆ** (ನಾ). ಒಂದು ಬಗೆಯ ಸಸ್ಯ : ಅಮೃತಬಳ್ಳಿ : "ವತ್ಸಾದನೀ, ಛಿನ್ನರುಹಾ, ಗುಡೂಚೀ, ತಂತ್ರಿಕಾ . . . ಮಧುಪರ್ಣೀ - F ಅಮೃತ ಬಳ್ಳೀ ಹೆಸರು" (ಸಿದ್ಧಾಂತಿ. ೧೧೫). [ ಸಂ. ತಂತ್ರಿಕಾ ]

**ತಂತ್ರಿಗ** (ನಾ). ೧. ಪಿತೂರಿ ಮಾಡುವವನು. ೨. ರಾಜತಂತ್ರವನ್ನು ಬಲ್ಲವನು : ನಾನು ವಾಲಗಕೆ ತಪ್ಪಿದದರಿಂದಿನ್ನು ತಂತ್ರಿಗನಪ್ಪುದದರಿಂ ರಾಜಗಪ್ರತಿಯುಪ್ಪರಾರೇಗೈದರಾಗದು ಎನಲು (ಬಿಜ್ಜಳ. ೭೭-೪).

[ ತಂತ್ರ + - ಇಗ ]

**ತಂತ್ರೋದಿತ** (ಗು). ತಂತ್ರದಲ್ಲಿ ಹೇಳಿರುವ ; ನೀತಿಶಾಸ್ತ್ರೋಕ್ತವಾದ : ಸತ್ಪ್ರಜಾಪಾಲನೆಯ ನೆಗಳ್ವುಪಾಯಂಗಳಂ ಸಾದರ್ F ಶಕ್ತಿಸ್ಫುರಣ ಕೈಗಣ್ಮೆ ತಂತ್ರೋದಿತ ಗುಣಗಣಮಂ ತಾಳ್ದ ಮೋಘಂ ಪ್ರಭುತ್ವಂ ಮೇರೆ ಕೊಂಡೆಮ್ಮಾಳ್ದನಾವಲ್ಲಭಂ ಪಿರಿದಿರೆ ಪರತಿಭ್ರೀಯಮಂ ಮಾಳ್ಪುದು (ರಾಜಶೇ ೧-೦೩). [ ತಂತ್ರ + ಉದಿತ$_2$ ]

**ತಂಥಳಿಸು** 'ತಟಿತಟಿಸು' ನೋ.

**ತಂದನತಾನ** 'ತಂದಾನತಾನ' ನೋ.

**ತಂದನಾನ** 'ತಂದಾನತಾನ' ನೋ.

**ತಂದನೋತಾನಾನಿ** 'ತಂದಾನತಾನ' ನೋ.

**ತಂದನ್ನತಾ** 'ತಂದಾನತಾನ' ನೋ.

**ತಂದರಿ**, ತಂದಿರಿ, ತಂದುರಿ (ನಾ). ೧. ತೂಕಡಿಕೆ; ಜೊಂಪು. ೨. ದಣಿವು; ಬಳಲಿಕೆ ; ಆಯಾಸ : ತಂದ್ರಿ–ತಂದರಿ, ತಂದಿರಿ, ತಂದುರಿ (ಶಬ್ದಾನು. ೧೪೭ ವ್ಯಾಖ್ಯಾ). **ತಂದರಿ :** ಮೇಲಿನ ಪ್ರಯೋಗವನ್ನು ನೋಡಿ. **ತಂದುರಿ :** ಮೇಲಿನ ಪ್ರಯೋಗವನ್ನು ನೋಡಿ.

[ <ಸಂ. ತಂದ್ರಿ, ತಂದ್ರೀ ]

**ತಂದಲ್**, ತಂದಲು$_1$ (ನಾ). ೧. (ನೀರಿನ) ಹನಿ; ತುಂತುರು : "ಸೀವರ ಮೆಂದುಂ ತಂದಲೆಂದುಂ ಶೀಕರಂ" (ಕಶಸಾ. ೮-೧೪೫) : "ಸೀವರಂ ತಂದಲೆನೆ ಜಲಕಣಂ" (ಕಬ್ಬಿಗ. ೦೨) : ಗಲ್ಗಲನೊಕ್ಕ ಪಾಲ ತಂದಲ್ಗಳಿನಾವಗಂ ಮಡಿಯ ನೀರ್ ಕಡುವೆಳ್ಪಿನೊಳೊಂದೆ (ಲೀಲಾವ. ೫-೫೭) : ಪೞಿದಾಗಳ್ ಪನಿವುಲ್ಲ ಬಿಂದುಗಳ ತಂದಲ್ . . . ನೆಱೆ ಸಾರುತ್ತಿರೆ (ಕುಸುಮಾ. ೭-೦೩) : ಚಂದ್ರಮರೀಚಿಯಂತೆ ತನಿಮಾವಿನ ಪಣ್ಗಳ ತಂದಲಂತೆ . . . ಸೋಮರಾಜೇಂದ್ರನ ಕಬ್ಬದಿಂಪು (ಉದ್ಭಟ. ೦-೩೨); ತನ್ನ ಕಂಬನಿಯ ತಂದಲಿಂದತಿಸ್ನೇಹಲತೆಯಂ ಬೆಳೆಯಿಸಿದಳ್ (ಅನಂಪು. ೮-೨೭ ವ) : ಮುಗಿಲ ಪೊೞೆಯಿಂ ಸುರಿವ ಮುತ್ತುಗಳಂ ಕಾರ ಮುಂಬನಿಯ ತಂದಲೆಂದು ಬಂದು ನುಂಗಲಂಗೈಸುವ ಚಾದಗೆಯು ಮಱಿಗಳುಮಂ (ಕಬ್ಬಿಗಕಾ. ೨೩೪) ; ತನಿರಸದ ತಂದಲ್ ಸುರಿವರನೇಱಲ ಗೊಂಚಲಂ ಕಟ್ಟಿದಿರೊಳ್ ಕಂಡು (ರಾಜಶೇ. ೫೪-೬). ೨. ಬಿಟ್ಟೂಬಿಡದೆ ಸುರಿಯುವ ಮಳೆ ; ಜಡಿಮಳೆ : "ಸೋನೆಯೊಳ್ ತಂದಲಕ್ಕುಂ" (ಕರ್ಣಾನಿ. ೫೦) ; ಸೋನೆಯಿಂ ಸರಿಗಳಿಂ ತಂದಲ್ಗಳಿಂದಂದು ಭೂತಳಮೇಕಾರ್ಣವಮಾಗೆ (ಆದಿಪು. ೦೩-೫೯) : ಎಳೆನೀರ ತಂದಲಂ ಕೞೆವೆಳೆದಂಗು (ಎಕ. XI, ದಾವಣ. ೩೫-೩೭; ಕು. 1160) ; ತಂದಲ್ ಸೋನೆ ನಟ್ಟ ಬಡಪಮೆನಲ್ಸುರಿದುವು ಬಿಡದೆ ಮೞೆಗಳಿರುಳುಂ ಪಗಲುಂ (ಜಗವಿ. ೪-೩೨) : ಉತ್ತಮವನಂ ರಾಮಣೀಯಕ ತರುಗಳಿಂ . . . ಜೇನ್ನೆಯ್ಯ ತಂದಲ್ಗಳಿಂ (ವೀಶೈಪು. ೩-೯-೭). 'ಸೋನೆದಂದಲ್' ಪರಾ. **ತಂದಲು$_1$:** ೧. ತಂಬೆಲರ ಮೊಗಸಿರಿಯ ತಂದಲಿನ ಮೈದೊಡವು . . . ಕಂಗೊಳಪಂತೆ ಮಲ್ಲಿಗೆಗಳು (ಪಂಪಾರಾ. ೦-೪-೧೪). ೨. "ಮಳೆ, ಸರಿ, ಸರವು . . . ಒದ್ದೆ, ತಂದಲು, ತುಂತುರು" (ಕಂನುಡು. ೮೯).

**ತಂದಲು$_1$** 'ತಂದಲ್' ನೋ.

**ತಂದಲು$_2$** (ನಾ). ಸೇವಕ ; ದಾಸ (?) : ಮಾರಹರ ನಿಮ್ಮ ಪಂಚಾರಕರ ದಾಸಿಯರ ತಂದಲೆನಗಿನಿತುಚಿತವೇ (ಕೊಟ್ಟೂಬ. ೦-೭೦). 'ತಂಡಾಲಯು' ಪರಾ. [ ? ]

**ತಂದವೂರ್** (ನಾ). ಒಂದು ಊರಿನ ಹೆಸರು ; ಬೆಳ್ಗುಹೆಯೆಟ್ಟಿತ್ತಡೆ ನಾಡೆಟ್ಟಿತ್ತು ತಂದವೂರ ಪನ್ನೆರಡು ಗೆದೆಯು ಪನ್ನೆರಡು(ಎಕ. VIII, ಸೊರಬ. ೪೭೭-೦೩ : 991). [ ತಂದ ? + ಊರ್ ]

**ತಂದಸಿ** 'ತಂಡಸು' ನೋ.

**ತಂದಾನತಾನ**, ತಂದನತಾನ, ತಂದನಾನ, ತಂದನೋತಾನಾನಿ, ತಂದನ್ನತಾ, ತಂದಾನತಾನಾನ, ತಾಂದನಿತಾನೊ (ನಾ). ಜಾನಪದ ಹಾಡಂಗಳಲ್ಲಿ ಬರುವ ಒಂದು ಪಲ್ಲವಿ; "ದಂರುಗಮಂರಗಿಯಂರ ಸೊಲ್ಲು" (ಜಾನಕೋ. ೭೪). **ತಂದನತಾನ :** (೬). **ತಂದನಾನ :** (೬). **ತಂದನೋತಾನಾನಿ :** ತಂದನೋತಾನಾನಿ ತಂದನೋತಾನಾನಿ ತಾನು ತಂದನು ತಂದೆ, ನಾನಿ ತಂದನುತಾನಿ ತಾನುತಂದನು ತಂದೆ ಶಿವ್ನೀಗೆ ಶರಣೊ (ಜುಟ್ಟಿಹ. ೩೦). **ತಂದನ್ನತಾ :** ತಂದನ್ನತಾಯೆಂದು ಕೈಲಿ ಕಿನ್ನರಿ ಧರಿಸಿ ಅಂದವಾಗಿ ಶ್ರೀಹರಿಯ ಮುಂದೆ ಕುಣಿವ ಚರಣ (ವಿದಾಶ್ಯ. ೨೭-೦). **ತಂದಾನತಾನಾನ :** (೬). **ತಾಂದನಿತಾನೊ :** ಕಿನ್ನೂಡಿ ಮೇಲೆ ಕಿರುಗೆಜ್ಜೆ–ತಾಂದನಿತಾನೋ (ಜಾಪದ. ೨೦).

[ ದೇ.॥ ತುಳು. ತಂದನ; ತೆಲು. ತಂದನತಾನ, ತಂದಾನತಾನ ]

**ತಂದಾನತಾನಾನ** 'ತಂದಾನತಾನ' ನೋ.

**ತಂದಿರಿ** 'ತಂದರಿ' ನೋ.

**ತಂದುರಿ** 'ತಂದರಿ' ನೋ.

**ತಂದೆ** (ನಾ). ೧. ಅಪ್ಪ ; ಜನಕ : ತನ್ದೆಯ ತಾಯ್ವಿರಾ ಸನ್ಯಾನಮ(ಂ) ನುಳಿದು ಬಿಸುಟೋಂ (ಶಾಶಾಶ. XI-I, ೦೦-೫ : 866) ; ತಾಯ್ಗಂ ತಂದೆಗ ಮೆಲ್ಲಾ ನಂಟರ್ಗೆಯುತ್ಸಾಹಮುಂ ಸುಖಮುಂ ವಿಭವಮುಮಂ ಪಡೆವುದಱಿಂದಮಾ ಕೂಸಿಂಗೆ . . . ಭದ್ರಬಾಹುವೆಂಬ ಪೆಸರನೆಲ್ಲರುಂ ನೆರೆದಿಟ್ಟೊಡೆ (ವಡ್ಡಾರಾ. ೭೩-೦೭) : ತಂದೆಯ ರೂಪೆ ತಂದೆಯ ವಿಳಾಸಮೆ ತಂದೆಯ ಚೆಲ್ವೆ . . . ತನ್ನೊಳಮರ್ಕೆವೆತ್ತುದು (ಆದಿಪು. ೮-೪೩) : ಹಿತವಂ ತೋಱುವನಾತ್ಮಬಂಧು ಪೊರೆವಾತಂ ತಂದೆ (ಸೋಮೇಶ. ೮). ೨. ಹಿರಿಯರನ್ನು ಕುರಿತು ಭಕ್ತಿ ಗೌರವಗಳಿಂದ ಹೇಳುವ ಮಾತು: ತಂದೆ ಚಿತ್ತೈಸುವುದು ಕಿಂಕರನ ಬಿನ್ನಪಂ (ನಂಬಿರ. ೦-೭೬) : ಎಮ್ಮಂತಪ್ಪ ಪಾಪಿಗಳಿಗೊಗೆವನೇ ತಂದೆಯೆನಲ್ (ಸಿದ್ಧರಾ. ೦-೨೯) : ಗಂಗಾವರಕುಮಾರ ದ್ರೋಣ ಕೃಪರೀ ಸೞಿಗ ಬಿಡಿಸಿರೆ ತಂದೆಗಳಿರೆಂದೊಱಲಿದಳು ತರಳೆ (ಕುಮ್ಯಾಸ. ೦೪-೦೦೪). ೩. ಕಿರಿಯರನ್ನು ಕುರಿತು ವಾತ್ಸಲ್ಯದಿಂದ ಹೇಳುವ ಮಾತು : ಬಾರೆಲೆ ತಂದೆ ಬಾರರಸ ಬಾ ಪೊರೆವಾಳ್ದನೆ (ರಾದಂಪು. ೩೬೦): ಬಾಲಲಿಂಗವೆ ಬಾರ ತಂದೆ (ಬಸವು. ೪೭-೨೯) : ತಂದೆ ನಿನಗೆನ್ನಲ್ಲಿ ಋಣಸಂಬಂಧ ಸವೆದುದೆ ಶಿವಶಿವಾ ತಾ ಮಂದಭಾಗ್ಯಂಗಣುಗ ದಕ್ಕುವನಲ್ಲ ಎನಗೆಂದ (ಕುಮ್ಯಾದ್ರೋ. ೮-೨೦). ೪. ಹೆಸರಿನ ಮುಂದೆ ಗೌರವಸೂಚಕವಾಗಿ ಬಳಸುವ ಶಬ್ದ. ಉದಾ : ಆಱುವಿನ ಮಾರಿತಂದೆ.

**ತಂದೆವಿರ್** (ಬಹುವ) : ವಿರ್ಗೆ–ತಂದೆವಿರ್, ತಾಯ್ವಿರ್, ಸೊಸೆವಿರ್ (ಶಮುದ. ೯೭ ಪ್ರಯೋ). **ತಂದೆಯ ತಂದೆ** = ೧. ಅಜ್ಜ ; ತಾತ ; ಪಿತಾಮಹ : "ತಾತ – ತಂದೆಯ ತಂದೆಗೂ . . . ಪಿತಾಮಹ ಎಂಬ ಹೆಸರು" (ನಾನಾರ. ೨೩ ಟೀಕೆ). ೨. ಬ್ರಹ್ಮ : "ಅಂಚೆದೇರು . . . ತಂದೆಯ ತಂದೆ, ಅರಲಿಚಂ, ನಾಲ್ಮೊಗಂ, ತಾವರೆವಸೆಯಂ – ಈ ೮ ಬ್ರಹ್ಮಂಗೆ ಪೆಸರ್" (ಕಶಸಾ. ೪೮-೦೫) : "ಪೊಂಬೊಡೆಯಂ . . . ಬೊಮ್ಮ ತಂದೆಯ ತಂದೆ ಮಿಸುಪ ತಾವರೆಗಂದನು ತಾಂ ಬ್ರಹ್ಮಗೆಸೆವ ನಾಮಂ" (ಕಬ್ಬಿಗ. ೯). **ತಂದೆಯ ತಂದೆಯಿಲ್ಲದಂ** = ತಾತನಿಲ್ಲದವನಂ ; ವಿನಾಯಕ : "ಕರಿಮೊಗಂ, ಇಲಿದೇರಂ . . . ತಂದೆಯ ತಂದೆಯಿಲ್ಲದವಂ–ಈ ೭ ವಿನಾಯಕಂಗೆ ಪೆಸರ್" (ಕಶಸಾ. ೦-೪) : "ಬಿಜ್ಜವಳನೆಡರ್ಗೇಡಿ ಮೇಣೆಲರುಣಿವಸಿಱನು ತಂದೆಯ ತಂದೆಯಿಲ್ಲದಂ[ಪಾಠಾಂ. ತಂದೆಯಯ್ಯನಿಲ್ಲದವಂ] . . . ಎನೆ ವಿನಾಯಕನ ನಾಮಂ", (ಕಬ್ಬಿಗ. ೫).

[ ದೇ.॥ ತಮಿ. ತನ್ತೈ; ಮಲ. ತನ್ದ; ತೆಲು. ತಂಡ್ರಿ, ತಂಡಿರಿ; ಪರ್ಜಿ. ತೆಂದ್; ಕುೞ. ಕುವಿ. ತಂಜಿ ]

**ತಂದ್ರ** (ಗು). ೧. ದಣಿದ ; ಬಳಲಿದ. ೨. ಸೋಮಾರಿಯಾದ ; ಮೈಗಳ್ಳತನದಿಂದ ಕೂಡಿದ. (ನಾ). ೩. ಮೈಗಳ್ಳತನ ; ಸೋಮಾರಿತನ; ಜಡತೆ : ಮಹೇಂದ್ರಂ ದಧೀಚಿಯೆಡೆಗಂ ತಂದ್ರಮನುಳಿದೆಯ್ದಿ ವಂದಿಸುತ್ತ ಬಳಿಕಂ (ಹಾಲಾಸ್ಯ. ೦-೨-೪೨). [ ಸಂ. ]

**ತಂದ್ರತೆ** (ನಾ). ೧. ಬಳಲಿಕೆ; ದಣಿವು. ೨. ಆಲಸ್ಯ ; ಜಡತೆ ; ಮಾಂದ್ಯ : ತಳೆದ ಸುಮನೋದಾಮಂ ನೀರೋಡಿ ಬಾಡಿದುದಾಗಳಾಗುಳಿಯನೊಳಕೆಯ್ದು ತ್ರಾಸ್ಯಾಂಭೋರುಹಂ ನಿಜದೇಹದುಜ್ಜ್ವಳಿಕೆ ಮಸುಳ್ದು ತಂದಂದೊಂದು ತಂದ್ರತೆ ಚಿತ್ರಮಂ ಬಳಸಿದುದು (ಚಂದ್ರಪು. ೪-೭೭).

[ ಸಂ. ತಂದ್ರತಾ ]

**ತಂದ್ರಾವಸ್ಥೆ** (ನಾ). ಸೋಮಾರಿತನ ; ಜಡತೆ : ಅತ್ತ ದೇಶವೂ ಮೂಕ–ಮೂಢ – ತಂದ್ರಾವಸ್ಥೆಯಿಂದ ಎಚ್ಚತ್ತು . . . ತನ್ನ ಭಾವನೆಗಳನ್ನು ವ್ಯಕ್ತಗೊಳಿಸಲು ತೊಡಗಿತು (ಮಹಾಯೋ. ೮೭). [ ತಂದ್ರ + ಅವಸ್ಥೆ ]

**ತಂದ್ರಾಸಿ, ತಂಡರಸಿ** (ನಾ). ಒಂದು ಬಗೆಯ ಗಿಡ: ತಂದ್ರಾಸಿ, ತಂಡರಸಿ, ತನಸಿವೆಳೆ (ಮೃಡಿಗಿ. ೮೦-೮೦೭): ಸಂಕೀರ್ಣ: . . . ಹುರುಗಲು, ಕಂಗೊಂದಿ, ತಂದ್ರಾಸಿ, ಮುಕ್ಕರಿವೆ (ನಮ್ಮನು. ೨೪೮). **ತಂಡರಸಿ** : ಮೇಲಿನ 'ಮೃಡಿಗಿ' ಪ್ರಯೋಗವನ್ನು ನೋಡಿ. [ ? ]

**ತಂದ್ರಿ** (ನಾ). ೧. ಆಲಸ್ಯ ; ನಿರುತ್ಸಾಹ ; ಜಡತೆ : ಸಂದ್ಯಾತ್ಮ ವಾತ್ಮವಾತ್ಮಕ ಬೇರೆ ಕರಣದಿಂ ತಂದ್ರಿ ಬಿಡೆ ದೊರೆವುದದು (ಮಂಕುಕ. ೬೧೩). ೨. ನಿದ್ದೆಯ ಮಂಪರು ; ಜೊಂಪು : ಲಕ್ಷ್ಮಣನನೆಬ್ಬಿಸಿದನಾತನುಂ ತಂದ್ರಿಯಂ ಬಿಟ್ಟೇಳಲನಿಬರುಂ ತೊರೆಯ ಶಿವಸಲಿಲದೊಳ್ ಮೊಗಂ ದೊಳೆದು ಮುಂಬರಿದರ್ (ಶ್ರೀರಾಮಾ. ೦೬೯-೪೦೦): ಓದು ಓದುತ್ತಿರುವಾಗಲೇ ನಿದ್ರೆಯ ತಂದ್ರಿ ಕಣ್ಣಿಗೆ ಸೋಂಕಿಹೋಗುತ್ತಿತ್ತು (ಕಮನೆ. ೦೦೦). ೩. ಗುಂಗು; ತಲ್ಲೀನತೆ: ಬಾಬು ವಿಚಾರತಂದ್ರಿಯೊಳಗಿಂದ ಹೊರಬಿದ್ದು . . . ನೋಡಿದನು (ರಕ್ತರ್ಕ. ೦೩೦) ; ಮಧುಕರನು ತಂದ್ರಿಯಲ್ಲಿಯೇ ಕುಳಿತಿದ್ದನು (ಕೃತಕ್ಕ. ೦೦೦). [ ಸಂ. ]

**ತಂದ್ರಿತ** (ನಾ). ಮಗ್ನನಾದವನು; ತಲ್ಲೀನನಾದವನು: ನೀವು ವಿಚಾರದಲ್ಲಿ ತಂದ್ರಿತರಾಗದೆ ಇರಲಾರಿರಿ (ನೀರಜ. ೮). [ ಸಂ. ]

**ತಂದ್ರೀಭೂತ** (ಗು). ಜಡವಾದ; ಮಂದವಾದ; ಚಟುವಟಿಕೆಯಿಲ್ಲದ : ಭರತಂ ವಿಷಾದಭರ ತಂದ್ರೀಭೂತಚೇತಸನಾಗಿರ್ಪುದುಂ (ಪಂಪರಾಮಾ. ೬-೦೦೨ ವ). [ ಸಂ. ]

**ತಂದ್ರೆ** (ನಾ). ೧. ಆಲಸ್ಯ ; ಜಡತೆ : ಸನ್ನಿಪಾತಜ್ವರಲಕ್ಷಣಂ ತಂದ್ರೆ, ನಿದ್ರಾಭಂಗ . . . ಗಂಟಲನೋವು (ಕಳವ್ಯ. ೯೭). ೨. ಮಗ್ನತೆ ; ಗುಂಗು: ಈ ತಂದ್ರೆಯು ಅವರನ್ನು ಮರುಳುಗೊಳಿಸಿತು (ಮೂವಿಕೋ. ೯೩).

[ ಸಂ. ತಂದ್ರಾ ]

**ತಂಪಗಿ** (ಕ್ರಿ). ತಂಪು ಆವರಿಸು,–ವ್ಯಾಪಿಸು : ತಿಳಿಗೊಳನ ತಂಪಗಿವ ತೆಕ್ಕೆ ೨ ತೊಳಲಿಕೆಯ ತಾವರೆಯ ತನಿಪರಿಮಳದ ವಿಸರದ ಹಸರದಲಿ ತೀಡಿ ೨ದು ತಂಗಾಳಿ (ತೊರರಾ. ೨-೬-೩). [ತಂಪು$_2$(<ತಣ್ಪು$_2$)+ಅಗಿ$_1$]

**ತಂಪಿಗ** (ನಾ). ತಂಪನ್ನು ಉಂಟುಮಾಡುವವನು ; ಹಿತವನ್ನುಂಟುಮಾಡುವವನು : ನೆಲವೊಲೆಗಳಂ ತಡವುತೊತ್ತೊ ತಳಿರ್ಗೆಯ್ಯ ತಂಪಿಗ ವಿರಹಮುಂ ತವಿಸಿ ನೆರೆಯೊ ಹದಗಾಜ (ಚಿಬಿಘ. ೦೯-೩೭).

[ ತಂಪು$_2$ (<ತಣ್ಪು$_2$) + – ಇಗ ]

**ತಂಪಿಡಿ** 'ತಣ್ಪಿಡಿ' ನೋ.

**ತಂಪಿಸು** 'ತಣ್ಪಿಸು' ನೋ.

**ತಂಪು$_1$** (ಕ್ರಿ). ೧. ಶಾಖವನ್ನು ಕಳೆದುಕೊಳ್ಳು; ತಣ್ಣಗಾಗು: ಬಿಸಿಲು ತಂಪುವವರೆಗೆ ಹೊರಗೆ ಹೋಗಬೇಡ (ರೂಢಿ). ೨. (ದುಃಖ ಮೊದಲಾದ ಭಾವನೆಗಳ)ಆವೇಗ ಕಡಮೆಯಾಗು : ಮಂದಿ ಸುಳಿಯದೊಂದೆ ಗುಡಿಲು ; ತೋವು, ನೆರೆಯೊಳು ; ನೆರಳು ಸಾವತನಕ ನನ್ನ ನೋವು ತಂಪಲು (ಇಂಗೀತ. ೯೩-೦೪). [ <ತಂಪು$_2$ ]

**ತಂಪು$_2$** 'ತಣ್ಪು$_2$' ನೋ.

**ತಂಪುಕನ್ನಡಕ** (ನಾ). ಬಿಸಿಲಿನ ಚುರುಕು ಕಣ್ಣುಗಳಿಗೆ ತಗಲದಂತೆ ತಂಪಾಗಿಡುವ ಕನ್ನಡಕ : ಕಣ್ಣಿಗೆ ಬಿಸಿಲಿನ ತಂಪುಕನ್ನಡಕವನ್ನು ಹಾಕಿದ್ದರಿಂದುತೂ ಯಾರಿಗೂ ನನ್ನ ಗುರುತು ಹತ್ತಲಿಲ್ಲ (ಮೋದಿಮ. ೨೦೭).

[ ತಂಪು$_2$ (<ತಣ್ಪು$_2$) + ಕನ್ನಡಕ$_2$ ]

**ತಂಪುಗೈ** 'ತಣ್ಪುಗೆಯ್' ನೋ.

**ತಂಪುಗೊಳ್** (ಕ್ರಿ). ತಾಪವನ್ನು ಆರಿಸಿಕೊಳ್ಳು; ತಣ್ಣಗೆ ಮಾಡಿಕೊಳ್ಳು: ಹರನುರಿಗಣ್ಣಿಂದೆ ಬೆಂದ ಸಂತಾಪ ಪೀವರಕುಚಾನ್ವಿತೆಯುರ ತಾಪ ಸ್ಮರ ನಿನ್ನ ಮಯ್ಯೊಳಗಿದೆ ತಂಪುಗೊಳ್ಳೆಂದು ಶರಳೆ ನೂಂಕಿದಳು ತಣ್ಗೊಳದ (ಪೋಚಿಕ. ೦೪-೭೮). [ ತಂಪು$_2$ (<ತಣ್ಪು$_2$) + ಕೊಳ್$_1$ ]

**ತಂಪುತೀಡು** (ಕ್ರಿ). ತಣ್ಣಗೆ ಬೀಸು; ತಂಪಾಗಿ ಸುಳಿ: ಇಂದಿರನ ದೆಸೆಗೆಂಪು ಮೂಡೆ ಕತ್ತಲೆಯೋಡೆ ಮಂದಾನಿಲಂ ತಂಪುತೀಡೆ (ಚಿಬಿಘ. ೪-೬).

[ ತಂಪು$_2$ (<ತಣ್ಪು$_2$) + ತೀಡು$_1$ ]

**ತಂಪುವಡೆ** 'ತಣ್ಪುವಡೆ' ನೋ.

**ತಂಪುವೆಟ್ಟ** (ನಾ). ಹಿಮವತ್ಪರ್ವತ ; ಹಿಮಾಲಯ : ತಂಪುವೆಟ್ಟದ ಬಡಗಭಾಗದೊಳಗೊಪ್ಪುವುದು ಕಿಂಪುರುಷವರ್ಷಂ (ಚಿಬಿಘ. ೦೩-೦೬).

[ತಂಪು$_2$ (<ತಣ್ಪು$_2$) + ಬೆಟ್ಟ (<ಬೆಟ್ಟು$_2$) ]

**ತಂಪುವೇಱು** 'ತಣ್ಪುವೇಱು' ನೋ.

**ತಂಪುಹೊತ್ತು** (ನಾ). = ತಂಪೊಟ್ಟು : ಎಂಥ ಪುಣ್ಯಾತ್ಮ ! ಆತನನ್ನು ತಂಪುಹೊತ್ತಿನಲ್ಲಿ ನೆನೆಯಬೇಕು (ರೂಢಿ).

[ ತಂಪು$_2$ (<ತಣ್ಪು$_2$) + ಹೊತ್ತು$_2$ (<ಪೊಟ್ಟು) ]

**ತಂಪುಳಿ** (ನಾ). "ಕಾಯಿಸದ ಕಬ್ಬಿಣಕ್ಕೆ ಆಕಾರ ಕೊಡಲು ಉಪಯೋಗಿಸುವ ಉಕ್ಕಿನ ಅಥವಾ ಕಬ್ಬಿಣದ ಚಾಣ : ತಂಪುಳಿ" (Cold-chisel. ಇಂಕನಿ.). [ ತಂಪು$_2$ (<ತಣ್ಪು$_2$) + ಉಳಿ$_6$ ]

**ತಂಪೆರೆ** 'ತಣ್ಪೆಱೆ' ನೋ.

**ತಂಪೆಸೆ** (ಕ್ರಿ). ತಂಪಾಗಿ ಶೋಭಿಸು,–ಕಂಗೊಳಿಸು: ತಂಪೆಸೆವ ತಣ್ಣೆಳಲ ತಾಣಂ (ನವಮೋ. ೪-೨೨). [ ತಂಪು$_2$ (<ತಣ್ಪು$_2$) + ಎಸ$_2$ ]

**ತಂಪೇರು** 'ತಣ್ಪೇಱು' ನೋ.

**ತಂಪೇಱು** 'ತಣ್ಪೇಱು' ನೋ.

**ತಂಪೊಟ್ಟು** (ನಾ). ತಂಪಾದ ಹೊತ್ತು; ಸಂಜೆಯ ಹೊತ್ತು; ಸಾಯಂಕಾಲ: ಈ ಪೊಟ್ಟು ತಂಪೊಟ್ಟು ಪೂವಿನ ಪೊಟ್ಟೆಂದಿನವಾಯ್ತು ಧಾರಿಣಿಗೆ ಭಾಸ್ವನ್ಮಂಡಲಂ ಕುಂಡಲಂ (ಸೂಕ್ತಿಸು. ೮-೬).

[ ತಂ$_1$ (<ತಣ್$_2$) + ಪೊಟ್ಟು ]

**ತಂಬಟ, ತಂಬಟೆ, ತಂಬಟ್ಟ, ತಪಟೆ, ತಪ್ಪಟೆ, ತಪ್ಪಟೆ, ತಬಟೆ, ತಮಟೆ, ತಮ್ಮಟ$_1$, ತಮ್ಮಟೆ, ತಮ್ಮಟ್ಟೆ** (ನಾ). ಒಂದು ಬಗೆಯ ಚಪ್ಪಟೆಯಾದ ಚರ್ಮವಾದ್ಯ ; ಹಲಗೆ: ವಿಳ್ಳಿವ ಪಟಯಿಗೆ ಸೂಳೈವ ತಂಬ [ಪಾಕಾಂ. ಮ್ಮ]ಟಂ (ವರ್ಧಪು. ೮-೩೦) : ಬೀಸುವ ಚಾಮರದ ಪೊಯ್ಲು ತಂಬಟದ . . . ಸರ್ವಸಂಭ್ರಮದ ನಡುವೆ ಸಕಲ ಜನದಾನಂದರಸಮಡುಗಟ್ಟೆ (ಸಂಬಿರ. ೮-೩೩) ; ಕಾಟಿಸುವ ತಂಬಟದ . . . ಕಾಳೆಯ ಬಲ್ಲುಲಿಯ ಸಡಗರಮೆಲ್ಲಾ ದೆಸೆಗಳಂ ಕಿವುಡುವಡಿಸೆ (ಕಲ್ಯಾಕಾ. ೨೩೦) : ತುಡುಕಿದವು ತಂಬಟದ ದನಿ ಜಗದಡಕಿಲನು (ಕುಮಾರವ್ಯಾ. ೦-೪೭) : ಭೇರಿ ತಂಬಟ ಬೊಂಬುಳಿ ಬುರುಗು ಡಿಂಡಿಮದ ಮುಂಬರಿದೆಸೆವ ರವಗಳಾಕಾಶವ ತುಂಬಿದುವು (ಕಂಸವಿ. ೮-೦೯). **ತಂಬಟೆ** : ಭೇರಿ ತಂಬಟೆ ನಿಸ್ಸಾಳ ಕಹಳೆಗಳ ಭೂರಿ ನಿನದ (ಅಂಜನ. ೩-೯೯) ; ತಂಬಟೆ ಡೋಲು ಚಂಬಕವಱ . . . ಕಹಳೆಗಳ ದನಿಯು ಬೆಂಬಳಿ (ಕುರಾಸಾಂ. ೦೦-೩೩) ; ಪಱೆಯ ಪೆರ್ಗಾಳೆಯು ಪಳಹದ ಕೊಟಲ ತಂಬಟೆಯು . . . ಭೇರಿಯ ಭೂರಿ ನಿನಾದಂ ದೆಸೆಮುಟ್ಟೆ ಪಳಂಚಲೆಯೆ (ರಾಮಾಶ್ವ. ೩೦-೦): ತಂಬಟೆಯ ಹೊಯ್ದು ಮೈಮರೆತವರು ಹಲರು (ವಿಸೀಗೀ. ೨೩-೪). **ತಂಬಟ್ಟ** : "ಆನಕ" (ನಾಚಿರಾ. ೬). **ತಪಟೆ** : ಕಠಿನ ದುಂದುಭಿ ತಪಟೆ ತಾಳ ಮದ್ದಲೆಗಳುಂ . . . ದಿಕ್ತಟಗಳೊಳ್ಮೊಳಗುತಿವೆ (ಅರ್ಜಾವಿ. ೩೪-೩೦). **ತಪ್ಪಟ** : ಕೊಂಬು ಕೊಳಲು ತಾಳ ತಪ್ಪಟ ಭೇರಿ ಸಂಭ್ರಮದಿಂದ ವೃಂದಾವನ ಸೇರಿ (ಪ್ರಸಭಾ. ೨೩-೪). **ತಪ್ಪಟೆ** : ಕೊಂಬು ಕೊಳಲು ತಪ್ಪಟೆ ಮೃದಂಗದ ರವ ತುಂಬಿತು ಲೋಕವನಿರದೆ (ರಾಮವಿ. ೬-೦೨) ; ಚಪ್ಪಾಳೆಗಳ ರವ ಕೊಂಬು ಕೊಳಲು ಹೊನ್ನ ತಪ್ಪಟೆಗಳ ದನಿಯಿಂದ ಸರ್ವಶಯನ ರಂಗಧಾಮನ ತೇರು ಬಂದೊಪ್ಪಿತು ಮುನ್ನಿನ ಸ್ಥಳದೆ (ಕಂಸವಿ. ೨೩-೦೦೦). **ತಬಟೆ** : ತಬಟೆ ಕಾಸಿ ಸಿದ್ಧ ಮಾಡಿಕೊಂಡರು (ರೂಢಿ). **ತಮಟೆ** : ತಮಟೆಯನ್ನು

ಕಾಯಿಸಿ ಹೆಗಲಿಗೆ ಹಾಕಿಕೊಂಡು (ಹುಟ್ಟಿಡ. ೧೯) : ಎದೆ ತಮಟೆಯಂತೆ ಬಡಿಯತೊಡಗಿತು (ಸಿದಿಲು. ೮೬). **ತಮ್ಮಟ್ಟ₁:** ಪೊಯ್ವ ನಿಸ್ಸಾಳ ತಮ್ಮಟದ ಭೇರಿಗಳಲ್ಲಿ ನೆರೆದುದು ಚಾತುರಂಗ ಬಲ (ಇಹರ. ದೇ. ೩೭-೨೦) ; ಸೂಳೈವ ತಮ್ಮಟಂಗಳ . . . ಸಂಭ್ರಮದ ಸೌರಂಭದಿಂ ಎಾಜಿ ನಡೆದನು (ಸಿದ್ಧರಾ. ೬-೨೦) : ತಮ್ಮಟವೆಂಬ ಹಲಿಗೆ ಶಂಖವೆಂಬ ಧವಳ . . . ಜಯಘಂಟೆಯೆಂಬ ಜಾಗಟೆ ಇತ್ಯಾದಿ ಪಂಚಮಹಾವಾದ್ಯಂಗಳಂ (ವಿವೇಕ. ೨೩೬); ಪಟಹ ತಮ್ಮಟ ಢಕ್ಕೆ ಡವುಡೆ ಕಹಳಾ ಸಮುತ್ಕಟನಾದಮಳ್ಳಿಱಿಯೆ (ಚಬಸು. ೧೬-೧೩). **ತಮ್ಮಟೆ:** "ಆನಕಃ, ಪಟಹಃ-೨ ತಮ್ಮಟೆ ಹೆಸರುಗಳು" (ಸಿದ್ಧಾಂತಿ. ೫೪) : ಮನಸ್ಸಿನಲ್ಲಿ ಬಂದರೆ . . . ಹದಿನೇಳುನೂರು ಡೊಳ್ಳು ನಗಾರಿ, ಹಲಿಗೆ, ತಮ್ಮಟೆ, ಶಂಖ, ತುತ್ತೂರಿಗಳನ್ನು ಬಾರಿಸಬಹುದು (ಕುರಿಹಿಂ. ೧೪೫). **ತಮ್ಮಟ್ಟೆ:** ಚೀಱಿದವು ಕಹಳೆಗಳುಂ ತಮ್ಮಟ್ಟೆ ಭೇರಿ ನಿನಾದ (ರಾಮಚ. ೨೩-೧).

[ದೇ.೫ ತಮಿ. ತಪ್ಪಟ್ಟ, ತಪ್ಪಟ್ಟ, ತಪ್ಪಟ್ಟೈ; ಮಲ. ತಮ್ಮಿಟ್ಟ, ತಪ್ಪಿಟ್ಟ; ತುಳು. ತಂಬಟ, ತಂಬಟೆ, ತಂಬಡ, ತಬಿಟೆ, ತಮಟೆ, ತಮ್ಮಟೆ ; ತೆಲು. ತಮ್ಮಟ, ತಪ್ಪಟ ; ನಾಯ್ಕಿ. ತಪ್ಪಟಿ, ತಪ್ಪ ]

**ತಂಬಟಜಾಲಿ** 'ತಂಬತ್ರಿಜಾಲಿ' ನೋ.

**ತಂಬಟಿಕಿ** (ನಾ). (?) : ಹರಿಸು ಧೀಯಿಂದು ತುಚ್ಛಿತ ಬುದ್ಧಿಗಂಡರೆನು ತೋರಿಸುವರ್ ಸಲಿಗೆಯಿತ್ತನ್ಯೋನ್ಯದಿಂ ಮೆಲ್ಲನೆ ತರಿಸುವರ್ ಅರಿಯ ದೋಲ್ ಮನೆಯ ತಂಬಟಿಕಿಯರ ಮೂಲದಿಂ ಲೂಟಿಯಂತೆ (ಜಿನಮು. ೪೯-೪೦) [ ? ]

**ತಂಬಟಿಗ** (ನಾ). ತಾಮ್ರದ ಕೆಲಸ ಮಾಡುವವನು : ಸ್ವರಮನಱಿಗೆ ತಾಂ ಭರತಜ್ಞನಂದದಿಂ . . . ಎಱಕಮನಱಿಗೆ ತಂಬಟಿಗನಂತೆ (ಮುದ್ರಾ. ೧೧-೭೭). [ ತಂಬ₀ (<ತಾಂಬ್ರ) + -ಅಟಿಗ ]

**ತಂಬಟೆ** 'ತಂಬಟ' ನೋ.

**ತಂಬಟೆಗ** (ನಾ). ತಮಟೆ ಬಾರಿಸುವವನು : ಡೊಂಬಿಯ ತಂಬಟೆಗರು ಪಾಡುವ ತಿವದಿಗಳು (ಸಾಹಿವಿ. ೮೩). [ತಂಬಟೆ (<ತಂಬಟ) + -ಗ₂]

**ತಂಬಟೆಹೊಯಿಲು** (ನಾ). ತಮ್ಮಟೆಯ ಬಡಿತ : ತಂಬಟೆಹೊಯಿಲಿಲ್ಲ ವಾದ್ಯದ ಪಲುಬಿಲ್ಲ. ಹೆಣವ ಕೋಟೆಗೆ ನಾವು ತ್ವರೆಯಲೊಯ್ವಾಗ (ಇಂಗೀತ. ೦೯-೦). [ತಂಬಟೆ (<ತಂಬಟ) + ಹೊಯಿಲು (<ಪೊಯ್ಲು)]

**ತಂಬಟ್ಟ** 'ತಂಬಟ' ನೋ.

**ತಂಬತ್ರಿ** (ನಾ). = ತಂಬತ್ರಿಜಾಲಿ : (+). [ ? ]

**ತಂಬತ್ರಿಜಾಲಿ, ತಂಬಟಜಾಲಿ** (ನಾ). ಬಿಳಿಯ ಉದ್ದನೆಯ ಮುಳ್ಳು ಗಳಿರುವ, ಸುವಾಸನೆಯ ಹಳದಿ ಹೂವುಗಳನ್ನು ಬಿಡುವ ಒಂದು ಬಗೆಯ ಜಾಲಿ ; ಸುಗಂಧಜಾಲಿ: (+). **ತಂಬಟಜಾಲಿ :** ಪೀಕಜಾಲಿ, ತಂಬಟಜಾಲಿ (ವ್ಯಜಿಗಿ. ೧-೧೨). [ ತಂಬತ್ರಿ + ಜಾಲಿ₁ ]

**ತಂಬನಿ** 'ತಣ್ಬನಿ' ನೋ.

**ತಂಬಲ** (ನಾ). ೧. ಒದ್ದೆ; ತಂಪು; ತೇವ. 'ತಂಬಲಗಱ' ಪರಾ. (ಗು). ೨. ಆರ್ದ್ರ, ತೊಯ್ದು" (ಚಾನಕೋ. ೬೫).

**ತಂಬಲದ ಹುಳು** = ಬಚ್ಚಲುಂ, ಮೋರಿ ಮೊದಲಾದ ತೇವವಾದ ಜಾಗಗಳಲ್ಲಿ ಇರುವ ಒಂದು ಬಗೆಯ ಹುಳು ; ಬಾಲದ ಹುಳು. [ <ತಣ್ಪು₂ ]

**ತಂಬಲಗಱ³** (ಕ್ರಿ). ತೇವವನ್ನುಂಟುಮಾಡು ; ತಂಪುಗೊಳಿಸು : ಶ್ರೀಕೃಷ್ಣಸಂಭೋಧಿವರ್ಣನದಿಂದೆ ಮುಂಬರಿದ್ದೆದುವ ಕಾಲಾಗ್ನಿಯ ಮೆಟ್ಟಿ ತಂಬಲಗಱಿದನಾ ಬಲಕೆ (ಮೋಹತ. ೩೭-೫೫). [ ತಂಬಲ + ಕಱಿ³₁ ]

**ತಂಬಹಾಲು** 'ತಣ್ಪಾಲ್' ನೋ.

**ತಂಬಳಕೋಲ್** (ನಾ). ಭೂಮಿಯನ್ನು ಅಳೆಯುವ ಒಂದು ಅಳತೆ ಗೋಲು,-ಪ್ರಮಾಣ (?) : ಪವಿರಗೆಯ ಸಾಲೆಯ ತ್ರಾಯಿಪ್ಪುರುಪ ದೇವಗ್ಗ್ರೆಯಲ್ಲಿಯ ತಂಬಳಕೋಲಲಿನ್ನೂಱು ಮತ್ತರು ಕೆಯ್ಯು (ಎಇ. IV, ೬೫-೧೭ ; ಸು. 11ನೆಯ ಶತ). [ ತಂಬಳ₀ + ಕೋಲ್₁ ]

**ತಂಬಳಿ** 'ತಂಬುಳಿ' ನೋ.

**ತಂಬಾಕ** 'ತಂಬಾಕು' ನೋ.

**ತಂಬಾಕು, ತಂಬಾಕ** (ನಾ). ಒಂದು ಬಗೆಯ ಗಿಡ ಮತ್ತು ಅದರ ಸೊಪ್ಪು ; ಹೊಗೆಸೊಪ್ಪು : ತಂಬಾಕು, ಕಾಡುಸಣ್ಣ ಹೊಗೆಸೊಪ್ಪು (ವ್ಯಜಿಗಿ. ೭೦-೧೪೫೨) ; ಅದೇ ಗುಡಿಸಲಿನಲ್ಲಿ ದೇವದಾಸ ತಂಬಾಕು ಸೇದುತ್ತಾನೆಂಬುದು ಪಾರ್ವತಿಗೆ ಗೊತ್ತಿದ್ದಿತು (ದೇವದಾ. ೮) : ತಂಬಾಕು ಮಿಶ್ರಿತ ಕವಳವು ಅವರ ಗಲ್ಲವನ್ನು ಯಾವಾಗಲೂ ಉಬ್ಬಿಸುತ್ತಿತ್ತು (ರಂಗರೋ. ೧). **ತಂಬಾಕ :** ಹಾಳುಭೂಮಿಗಳಲ್ಲಿ ಸಜ್ಜೆ ಮತ್ತು ಜೋಳವು ಗೊಬ್ಬರ ವಿಶೇಷವಾದರೆ ತಂಬಾಕವು ಬೆಳೆಯುತ್ತವೆ (ಕೃಷಿಶ್ರ. ೬೭) : ಸಿಂಹಲದ್ವೀಪದಲ್ಲಿ . . . ಕಬ್ಬು, ತಂಬಾಕ, ಬುಂದು ಮುಂತಾದವುಗಳು ಬೆಳೆಯುತ್ತವೆ (ಮುಂಬಯಿ. ೪-೨೦೦) ; ತಂಬಾಕವನ್ನು ನೀರಿಡಿಸುತ್ತಲೇ ಅದನ್ನು ಅಗಿಯುಲು ಸುರುವು ಮಾಡುತ್ತಾರೆ (ಗಾಳಿಗು. ೨೮).

[ ←ಹಿಂ. ತಂಬಾಕೂ, ತಮಾಕೂ ; ಮರಾ. ತಂಬಾಕೂ, ತಂಬಾಖು, ತಮಾಕೂ, ತಮಾಖು. / ಇಂ. Tobacco. / ಪೋರ್ಚ್. ಸ್ಪ್ಯಾನಿಷ್. ಟಬಾಕೋ ; ಜಪಾನೀ: ತಾಬಾಕೋ ]

**ತಂಬಾಲ್** 'ತಣ್ಪಾಲ್' ನೋ.

**ತಂಬಾಲು** (ನಾ). ಒಂದು ಊರಿನ ಹೆಸರು (?) : ಪಾರಾಶರಗೋತ್ರದ ಆಪಸ್ತಂಬ ಸೂತ್ರದ ತಂಬಾಲದ ಕೃಷ್ಣಭಟರ ಮಕ್ಕಳು ದೇವಣಭಟರು (ಎಕ. XII, ತಿಪಟೂ. ೧೩೯-೧೨೫ : ?). [ ? ]

**ತಂಬಾಲು** 'ತಣ್ಪಾಲ್' ನೋ.

**ತಂಬಾಣ** 'ತಾಂಬಾಣ' ನೋ.

**ತಂಬಾಳೆ** 'ತಾಂಬಾಣ' ನೋ.

**ತಂಬಿ₁** 'ತಮ್ಮ' ನೋ.

**ತಂಬಿ₂** (ನಾ). ದಂಡಿಸುವಿಕೆ ; ದಂಡನೆ ; ಶಿಕ್ಷೆ.

**ತಂಬಿ ಪಹುಂಚಾಯಿಸು** = ದಂಡಿಸು ; ಶಿಕ್ಷಿಸು : ತಮ್ಮ ರಾಜ್ಯದಲ್ಲಿ ಟೀಪುಸುಲ್ತಾನರ ಕಡೆಯಿಂದ ಉಂಬಳಿ ಪಡಕೊಂಡು ಇದ್ದಂತಾ . . . ಮುಸಲ್ಮಾನರಿಗೆ ತಂಬಿ ಪಹುಂಚಾಯಿಸಿ ಅವರನ್ನು ಪಲಾಯನಮಾಡಿ (ರಾಜೇಂದ್ರ. ೨೦). [ ←ಅರ. ತಂಬೀಹ್ ; ಮರಾ. ತಬೀ ]

**ತಂಬಿಗೆ** 'ತಂಬುಗೆ' ನೋ.

**ತಂಬಿಟ್ಟು₁, ತಣ್ಪಿಟ್ಟು** (ನಾ). ಹುರಿಕಡಲೆ, ಅಕ್ಕಿ ಮೊದಲಾದುವು ಗಳ ಹಿಟ್ಟಿನಿಂದ ಮಾಡುವ ಒಂದು ಬಗೆಯ ಸಿಹಿ ತಿಂಡಿ: ಕಬ್ಬಿನ ರಸ ಜೇನುತುಪ್ಪ ನವಣೆಯ ಹಿಟ್ಟಿನ ತಂಬಿಟ್ಟು ಹೂರಿಗೆ ಕಡುಬು . . . ಮಂತ್ರಸಮನ್ವಿತವಾಗಿ ಮೂಱುದಿನ ಬಲಿಯಂ ಕೊಡಲು (ಬಾಲಚಿ. ೦೫೨-೨) ; ತಂಬಿಟ್ಟು ಕೊಡುವೆನು ದಾಸಯ್ಯ (ಪುರಂದ. ೨-೬-೫); ನಾಳೆಗೆ ಬೆಣ್ಣೆ ನೈವೇದ್ಯ, ತಂಬಿಟ್ಟು ನೈವೇದ್ಯ, ಕಡುಬು ನೈವೇದ್ಯ. ಅನ್ನೋದಕ ನೈವೇದ್ಯವೆಂದು ಪಲತೆರದ ಹರಕೆಯಂ ಪೊತ್ತರೆ (ಶರಲೀ. ४೧೬) ; ನೆನಗಡಲೆ ಚಿಗುಳಿ ತಂಬಿಟ್ಟು ಉಂಡಲಿಗೆ ನಾನಾ ಫಲಂಗಳು (ಸಾಗಂಧಿ. ४೩-೦೭) ; ತಂಬಿಟ್ಟು ತಣ್ಣುಹಿಟ್ಟು. ದೇವರನ್ನು ತಣಿಸುವ, ಅಥವಾ ದೇವರ ಕೋಪ ವನ್ನು ತಂಪು ಮಾಡುವ ಹಿಟ್ಟು (ನಮ್ಮನು. ೮೮) ; ತಂಬಿಟ್ಟಿಗೆ ಉಪ್ಪುಂಟೆ ತವರಿಗೆ ಮುಪ್ಪುಂಟೆ ? (ಹೇಳ್ತಾ. ೮೬). **ತಣ್ಪಿಟ್ಟು :** ರೊಟ್ಟಿ ಸಕ್ಕರೆ ತುಪ್ಪ ಬೆಲ್ಲ ಗೋಧುವೆ ತಣ್ಪಿಟ್ಟು ರಾಯುಳ್ಳಿಯಬಿನಿಯ ಒಟ್ಟಿಲು . . . ಅಂಗಡಿಯೊಳು (ಕುಮಾಸಾಂ. ४೨-೬೧). [ತಣ್₃+ಪಿಟ್ಟು. /ಕೊಡ. ತಂಬುಟ್ಟ್]

**ತಂಬಿಟ್ಟು$_{3}$** (ನಾ). ಒಂದು ಬಗೆಯ ಗಿಡ: ತಂಬಿಟ್ಟು, ಕುಕ್ಕುಟು, ಉಷ್ಟಾಲ (ವೈದ್ಯಸಂ. ೫೨-೧೦೩೮). [? ]

**ತಂಬಿಲ** (ನಾ). (ಕರಾ) ಭೂತಗಳಿಗೆ ಮಾಡುವ ನೈವೇದ್ಯ: ಬನದ ಪಂಜುರ್ಲಿ ಇವನಲ್ಲಿ ಕೇಳಿ 'ತಂಬಿಲ' ವನ್ನು ಸ್ವೀಕರಿಸುತ್ತಾನೆ (ದೇವಮ. ೪).
[ ←ತುಳು. ತಂಬಲ, ತಂಬಿಲೊ ]

**ತಂಬಿಸು$_{1}$** 'ತಣ್ಪಿಸು' ನೋ.

**ತಂಬಿಸು$_{2}$** (ಕ್ರಿ). ೧. ಸ್ತಂಭೀಭೂತವಾಗು; ನಿಶ್ಚಲವಾಗು; ನಿಂತುಬಿಡು: ಸೂತ್ರ ಹರಿದ ಕಾವನ ಕೈಯ ಜಂತ್ರದ ಪುತ್ರಿಕೆ ನಿಂದ ಮಾಳ್ಕೆಯೊಳು ಧಾತ್ರೀಪತಿಯ ಮೊಗವ ಕಾಣುತಾ ಮೃಗನೇತ್ರೆ ತಂಬಿಸಿ ನಿಂದಳಾಗ (ಶ್ರೀಪಾಂ. ೪-೧೧೯). ೨. ತಡೆ; ನಿಲ್ಲಿಸು: ಲಂಕಾಪುರದ ಲಗ್ಗೆಗೆ ಬೇಗ ಬೆಸಸಂ ಕೊಡುವುದೆಂದೆನಲು ಧರಣಿಪತಿಗಳ ನೀತಿ ಸಂಧಿಯ ಪರುಠವಿಪುದದ ಮೀರಿದಡೆ ಸಂಗರಕೆ ನೇಮವನೀವೆನೆಂದವರುಗಳ ತಂಬಿಸಿದ (ಅನಂರಾ. ೫ ೮-೧೦): ಕುಸುಮಮಂಜರಿಯಲ್ಲಿಯಧ್ವಗರ ತಂಬಿಸುವ ಸುಸ್ವರದ ಶುಕಪಿಕಂ ಕಾಣದಿಳೆಯಿಲ್ಲ (ಜಿನಮು. ೨-೧೮). ೩. ತೊಲಗಿಸು; ನಿವಾರಿಸು: ತುಂಬಿಗಳನೋಡಿಸದ ಚಂಪಕಂ ಸೊಕ್ಕಾನೆಯಂ ಬೆದರಿಸದ ಸಿಂಗಮಿಡಿದಂಧಕಾರಮಂ ತಂಬಿಸದ ಚಂದ್ರಮಂಡಲಮಿರಲ್ (ಜೈಮಿಭಾ. ೮-೨೦).
[ <ಸ್ತಂಭಿಸು ]

**ತಂಬು, ತಂಬೂ** (ನಾ). ತಾತ್ಪೂರ್ತಿಕ ವಾಸಕ್ಕಾಗಿ ಹಾಕಿರುವ ಬಟ್ಟೆಯ ಬಿಡಾರ; ಗುಡಾರ; ಡೇರೆ: ಹೊದಿಸಿದ ತಂಬು ಅಂಬರ ತಾಗುವಂದದಿ ಪೈಸರಿಸಿ ನಿಲ್ಲಿಸಿದ ಬಲವಾ (ಸಾಂದಕಾ. ೬-೨೨): ಮಹಾರಾಜರವರ ತಂಬಿಗೆ ಬಂದು (ರಾಜೇಂದ್ರ. ೯೩); ಈಗ ತಂಬು ಡೇರೆ ಮುಂತಾದ ದಂಡಿನ ಸಾಮಾನುಗಳನ್ನು ಮಾತ್ರ ಅವುಗಳ (ಆನೆಗಳ) ಮೇಲೆ ಹೇರುತ್ತಾರೆ (ಮುಂಬಯಿ. ೯-೨೩). **ತಂಬೂ**: ಅರಸುಮಗನ ಸ್ವಂತ ತಂಬೂದಲ್ಲಿ ಬಹಳ ಹೊತ್ತಿನಿಂದ ಸಂಗೀತ ಕಚೇರಿಯು ನಡೆದುದನ್ನು ಹೋದ ಕೂಡಲೆ ಕಂಡೆ (ಶ್ರೀಕಾಂತ. ೨): ಸರ್ಕಸ್ಸಿನ ತಂಬೂದಲ್ಲಿ ಬಂದು ತಂತಿಯನ್ನು . . . ಸೂಕ್ಷ್ಮವಾಗಿ ನೋಡುತ್ತ ನಿಂತಾಗ (ಮೂಡಿದು. ೪೯).
[ ←ಪಾರ. ಹಿಂ. ಮರಾ. ತಂಬೂ ]

**ತಂಬುಗೆ, ತಂಬಿಗೆ** (ನಾ). ತಾಮ್ರ, ಹಿತ್ತಾಳೆ ಮೊದಲಾದ ಲೋಹಗಳಿಂದ ಮಾಡಿದ ನೀರಿನ ಸಣ್ಣ ಪಾತ್ರೆ; ಚೆಂಬು; ಚರಿಗೆ: ಜಲಪಾತ್ರೆಯ ಕಮಂಡಲಂ ಗಿಂಡಿ ತಂಬುಗೆ" (ಮಂಗರಾ. ೬೩-೨೫); ಮಡದಿಯರಾವಗರ [ಕೆ]ರಸಿ ಕಾವಲಿ ತಂಬುಗೆ ಹುಟ್ಟು ಸಟ್ಟುಗಂ ಕೊಡನೊರಲಕ್ಕಿಯೆಂಬವನೆ ಚಿಂತಿಸಿ ಕೋಟಲೆಗೊಂಬರ್ (ಕಇ. IV, ೧-೫೭: 1204); ನೀರ್ಗೊಟ್ಟಳೊಂದು ಪೊಸ ತಂಬುಗೆಯಿಂ (ದಶಕು. ೧೨-೧೨೯); ಪೊನ್ನ ತಂಬುಗೆಗಳೊಳು ಮೊಗೆ ಮೊಗೆದು (ಬಸವು. ೫೮-೬೮): ತಳಿಗೆ ತಂಬುಗೆ ಗಿಂಡಿ ಹರಿವಾಣ ಪಡಿಗ ಬಟ್ಟಲು ಮೊದಲಾಗಿ ಭೋಜನಕೆ . . . ಅನುಗೊಳಿಸಿದರು (ಭರತೇ. ೪-೫೮). **ತಂಬಿಗೆ**: ಮಿಗೆ ರಮ್ಯವಡೆದ ಹೊಂಬರಿಯಣ ತಳಿಗೆ ತಂಬಿಗೆ ಗಿಂಡಿ ಗಿಣ್ಣಲುಗಳನು ನಗೆಮೊಗ ದರ್ಪಣ ಹಂಸೆಪುತ್ತಳಿಯ ದೀವಿಗೆಗಂಬಗಳನಿತ್ತನೊಲಿದು (ಮೋಹತ. ೧೫-೧೮); ಹೊನ್ನ ತಂಬಿಗೆ ಗಿಂಡಿ ಪನ್ನೀರ ಚಂಬಿನಲಿ ಪೂರ್ಣ ಜಲವ ಕೊಂಡು (ಕಂಸವಿ. ೫-೫೫); ಕರತಳದಲ್ಲಿ ತಾಳ್ದ ಶಶಿಕಾಂತದ ತಂಬಿಗೆಯಂ (ಚಂದ್ರಛು. ೨-೩೦); ಅಲ್ಲಿ ತಂಬಿಗೆಯಲ್ಲಿ ನೀರಿದೆ ಕೈಕಾಲು ತೊಳೆದುಕೊ (ನಿಷ್ಯಮು. ೩೭); ಗಂಗೆಗೆ ಹೋದರೂ ತಂಬಿಗೇ ಮೇಲೆ ಜ್ಞಾನ (ಗಾದೆ); ಮನೆ ನಿಮ್ಮದು ತಂಬಿಗೆ ಮುಟ್ಟಬೇಡಿ (ಗಾದೆ). 'ಚೆಂಬು$_{1}$' ಪರಾ.

**ತಂಬಿಗೆ ತೆಗೆದುಕೊಂಡು ಹೋಗು** = ಶೌಚಕ್ಕೆ ಹೋಗು; ಮಲವಿಸರ್ಜನೆಗೆ ಹೋಗು: ಅವನೀಗ ಇಲ್ಲ. ಮುಂಜಾನೆಯೇ ತಂಬಿಗೆ ತೆಗೆದುಕೊಂಡು ಹೋಗಿದ್ದಾನೆ (ರೂಢಿ). **ತಂಬಿಗೆ ಕೈಗೆ ಬರು** = ಬೇಡುವಂತಾಗು; ಭಿಕ್ಷೆಗೆ ಹೋಗುವಂತಾಗು: ಸಿರಿ ಇದ್ದಾಗ ಮೆರೆದಿದ್ದನು; ಈಗ ತಂಬಿಗೆ ಕೈಗೆ ಬರುವಂತಾಯಿತು (ರೂಢಿ).
[ ದೇ.॥ ತಮಿ. ತಪ್ಪಿಕೈ; ತುಳು. ತಂಬಿಗೆ; ತೆಲು. ತಂಬಿಗಿ, ತಂಬುಗ ]

**ತಂಬುರಿ** 'ತಂಬೂರಿ' ನೋ.

**ತಂಬುಲ, ತಾಂಬುಲ, ತಾಂಬುಳ, ತಾಂಬೂಟ, ತೊಂಬಲ$_{1}$, ತೊಂಬಲು** (ನಾ). ೧. ಅಡಕೆ; ಕ್ರಮುಕ: "ತಂಬುಲಂ, ಕ್ರಮುಕಂ–ಈ ೨ ತಂಬುಲಂ" (ಹಲಾಯು. ೯೦-೩೯೦): ಕ[ಯ್ಯ]ಲೆ ಕಯ್ಯೊಳೆ ಬಾಯ ತಂಬುಲಂ ಬಾಯೊಳೆ ತೋಱೆ ಮೆಯ್ಮಱೆದು ನೋಡಿದಳಾ ಸಮರೈಕಮೇರುವಂ (ಪಂಪಭಾ. ೪-೩೭). ೨. ವೀಳೆಯ; ಅಡಕೆ ಮತ್ತು ಎಲೆ: "ತಂಬೂಲಮೆಂದು ವೀಳೆಯಮೆಂದುಂ ವೀಟಿಕೆ" (ಕಶಸಾ. ೨೫-೫೩೬): ಪೂವುಂ ತಂಬುಲಮುಂ ತಿಂಬಡಂಗಳುಂ ಬಂದುವು (ವಡ್ಡಾರಾ. ೦೦೬-೩೦): ತಂಬುಲಮಿಲ್ಲದ ವದನಂ . . . ಶೀತಲಜಲಮಿಲ್ಲದ ಪೂಗೊಳಂ ಮನಂಗೊಳಿಸುಗುಮೇ (ಅಜಪು. ೬-೯೫); ಒಂದನಲ್ಲದೆ ನಿನ್ನ ತಲೆಗೆರಡಂಬ ತೊಡಚಿದರೆ ಇಂದು ನಿನ್ನಯ ಬಾಯ ತಂಭುಲ ತಿಂದವನು ನೋಡು (ಕುವ್ಯಾದದ್ರೋ. ೦೭-೩೮). ೩. ಅಗಿದು ಉಗುಳುವ ಕವಳ; ಚರ್ವಿತ ತಾಂಬೂಲ: ಕುರ್ಚಿಯ ಹಿಮ್ಮಗ್ಗಲು ಇರುವ ಕಿಟಕಿಯಲ್ಲಿ ತಂಬುಲದ ಪಿಚಕಾರಿಯನ್ನು ಬಿಡುತ್ತಿದ್ದರು (ರಂಗರೊ. ೧). ೪. ಒಂದು ಬಗೆಯ ತೆರಿಗೆ; ತಂಬುಲಿಗರು ಕೊಡಬೇಕಾದ ತೆರಿಗೆ: ಮನ್ನೆಯದೆಱೆ ಆಳಿವಸತಾಯ ಪೊ[ಗೆ]ವೊಗೆ ತಳಾರಿಗೂಲಿ ಇ×ದಿ ತಂಬುಲಂ ಮೊದಲಾಗಿ ಆತನ ಮಕ್ಕಳ್ವ[ರುಳ್ಳ]ರ ಸರ್ವ್ವಬಾಧಪರಿಹಾರಂ ಕಾದು ನಡೆಯಿಸುವರ್ (ಸೌಇಇ. XI-I, ೬೫-೨೨: 1042): ಚೈತ್ರಪೈತ್ರಕೆ ಬಿಟ್ಟ ಪಣ ೪ ದಿವಸವಳ ದೇವ[ರ] × × × ಕೆಯರಂ × ಗಡಿಯ ತಂಬುಲಮಂ ಬಿಟ್ಟರು (ಸೌಇಇ. XX, ೦೩೭-೯: 1180). **ತಾಂಬುಲ**: ೨. ನಿಟಲಕ್ಕೆ ತಿಲಕಮದು ಕುಂತಳಕೆ ಕುಸುಮಗಳ್ ತುಟಿಗೆ ತಾಂಬುಲರಸಂ (ಪರಶು. ೧೫ ೩೫). **ತಾಂಬುಳ**: ೨. ಶ್ರೀ ಕೇದಾರೇಶ್ವರ ದೇವರಂಗಭೋಗಕ್ಕಂ ಧೂಪಾರತಿ ನಿವೇದ್ಯ ತಾಂಬುಳ ನಂದಾದೀವಿಗೆ ಪಾತ್ರ ಪಾವುಳಕ್ಕಂ (ಕಇಅ. ೦೬-೫-೨೭; 1136). △**ತಾಂಬೂಟ**: ೨. ಬ್ರಹ್ಮೇಶ್ವರ ದೇವರಂಗಭೋಗ ಜಳಗಂಧಾಕ್ಷತೆ . . . ತಾಂಬೂಟವೆಂಬ ಅಷ್ಟವಿಧಾರ್ಚನೆಗಂ (ಸೌಇಇ. XX, ೮೪-೪೬; 1123). **ತೊಂಬಲ$_{1}$**: ೨. "ನಾನು ತೊಂಬಲ ತಂದುಕೊಡುತ್ತೇನೆ" ಎಂದವಳೇ . . . ವೀಳ್ಯ ಸಜ್ಜುಗೊಳಿಸುವ ನೆವದಿಂದ ಹೊರಟುಹೋದಳು(ಇಶ್ವಕ. ೨೫೦). ೩. "ತೊಂಬಲ–ಎಂಜಲು" (ಜಾನಕೋ. ೬೮). **ತೊಂಬಲು**: ೩. ಚಿತ್ತ ನಿನ್ನಲ್ಲಿಡಿಸಿ ಕಾಯೊ ಕೊತ್ತಿನ ತೊಂಬಲು ತಿಂಬೆ (ಪುರಂದರದೀ. ೩೦-೭): ಜಗದೀಶಾ ನಿನ್ನಯ ಉಗುರು ಕಾಣದವರು ಉಗುಳಿದಾ ತೊಂಬಲು ನಾನು (ಪುರಂದರದೀ. ೮೯-೩).

ತಂಬುಲ ತಿನ್ನು = ಎಂಜಲನ್ನು ತಿನ್ನು: ಅವಳ ತಂಬುಲ ತಿನ್ನೋದಕ್ಕೆ ಅಲ್ಲಿಗೆ ಏಕೆ ಹೋದೆ ? (ರೂಢಿ). **ತಂಬುಲದೆಲೆ** = ವೀಳ್ಯದೆಲೆ: ಎರ್ಕಯೆಲೆ ಸಾಸಿವೆ ತಂಬುಲದೆಲೆಯುವನಿಕ್ಕುಗೆ ಗೋಕುಲಕ್ಕೆ ರುಜೆ ತೀರ್ಗುಂ (ಲೋಕೋಪ. ೯-೨೧೮): ಒಂಭತ್ತೆಕ್ಕೆಯ ಪೂವಂ ತಂಬುಲದೆಲೆ ಪುಟಿದರಲ್ಲಿ ಮಿದಿದಿಕ್ಕುಗೆ ಶೀತಂ ಬಪ್ಪಾಗಳು (ಕಲ್ಯಾಕಾ. ೩-೪೫). [ <ಸಂ. ತಾಂಬೂಲ ]

**ತಂಬುಲಂಗುಡು** 'ತಂಬುಲಂಗೊಡು' ನೋ.

**ತಂಬುಲಂಗೊಡು, ತಂಬಲಂಗುಡು** (ಕ್ರಿ). ವೀಳೆಯವನ್ನು ಕೊಡು; ತಾಂಬೂಲವನ್ನು ಕೊಡು: ಸಾಹಸಾಭರಣನ ಸಾಪಸಮನಳವಲ್ಲದೆ ಪೊಗಟ್ದು ತೊಡೆಯನೇಱಿಸಿಕೊಂಡು ಬಾಯೊಳ್[ಪಾಠಾಂ. ಬಾಯ್ವಾಯೊಳ್]ತಂಬುಲಂಗೊಟ್ಟಂ (ಪಂಪಭಾ. ೭-೩೮ ವ): ಎನಗೆ ತಂಬುಲಂಗೊಡಲುಜ್ಜುಗಂಗೆಯ್ವಲ್ಲಿ ನಡುಗುವ ಕೆಂದಳಮಂ ಚೆನ್ನಿದಿರೆಗೆತ್ತು (ಕಾದಂಬ. ೯೦). **ತಂಬುಲಂಗುಡು**: ಅವಂದಿರ್ಗಳ್ಗೆ ಪಜಾತ ಪರಿಚಯಮಿಂ ತಂಬುಲಂಗುಡಲ್ವೇಟ್ದು (ಕಾದಂಬ. ೨೭೨). [ ತಂಬುಲ + ಕೊಡು$_{1}$ ]

**ತಂಬುಲಂಗೊಳ್** (ಕ್ರಿ). ತಾಂಬೂಲವನ್ನು ತೆಗೆದುಕೊಳ್ಳು; ವೀಳೆಯವನ್ನು ಸೇವಿಸು: ದಿವ್ಯಾಹಾರಂಗಳನಾರೋಗಿಸಿ ಕೆಯ್ಗಟ್ಟಿಗೊಂಡು ತಂಬುಲಂಗೊಂಡು (ಪಂಪಭಾ. ೫-೭೭ ವ).
[ ತಂಬುಲ + ಕೊಳ್$_1$ ]

**ತಂಬುಲಂದೀವು** (ಕ್ರಿ). ತಾಂಬೂಲವನ್ನು ತುಂಬು; ವೀಳೆಯವನ್ನು ಜೋಡಿಸು: ತಂಬುಲಂದೀವಿದ ಪೊಂಗವಳಿಗೆಯುಂ ಪಿಡಿದಂಬಿಕೆಗವಟಯ್ಯು ದಳೊರ್ವಳಿಂದ್ರವಧು ತಂಬುಲವಂ (ಶಾಂತಿಪು. ೯-೦೫೦).
[ ತಂಬುಲ + ತೀವು ]

**ತಂಬುಲಂಬಿಡಿ** (ಕ್ರಿ). = ತಂಬುಲಂಗೊಳ್: ಮಾಸಿದೆಯಾದೆ ಮೇಣುಡಲ. ತರಿವವೆ ತಂಬುಲಂಬಿಡಿ (ಪಂಪಭಾ. ೮-೬೪). [ ತಂಬುಲ + ಪಿಡಿ$_1$ ]

**ತಂಬುಲಗುಟುಕು** (ನಾ). ಬಾಯಿಗೆ ಬಾಯಿಟ್ಟು ಕೊಡುವ ತಾಂಬೂಲ; ಕುಟುಕುದಂಬುಲ: ದೇವಿಯ ಪಾಣಿಪದ್ಮದಿಂ ತೊಲಗದೆ ಪದ್ಮರಾಗನಿಭ ಚಂಚುವನೊಯ್ಯನೆ ನೀಡಿ ನೀಡಿ ತಂಬುಲಗುಟುಕಂ ಕೊಡುತ್ತೆ (ಕುಸುಮಾ. ೦೩-೨೦). [ ತಂಬುಲ + ಕುಟುಕು$_2$ ]

**ತಂಬುಲಪೆಚ್ಚ** (ನಾ). ತಾಂಬೂಲದ ಹುಚ್ಚು ಹಿಡಿದವನು; ಅತಿಯಾಗಿ ತಾಂಬೂಲವನ್ನು ಸೇವಿಸುವವನು: ಪಿಚ್ಚ ಪಿಚ್ಚ ಎಲೆಗಳನ್ನು ನಿಃಪಾರ್ಥದಲ್ಲಿ ಅರೆದು ಅಗಿದು, ಪಿಚಿ ಪಿಚಿ ಉಗುಳುವ ತಂಬುಲಪೆಚ್ಚರಾದ ಆ ಸದಾನಂದಿಗಳ ಬಗ್ಗೆ ನಾನಿಲ್ಲಿ ಬರೆಯಲು ಬಯಸುವದಿಲ್ಲ (ವಿರಾಥ. ೦೩೭).
[ ತಂಬುಲ + ಪೆಚ್ಚ (<ಪಿಚ್ಚ) ]

**ತಂಬುಲವಿಡು** (ಕ್ರಿ). ೧. ತಾಂಬೂಲವನ್ನು ಕೊಡು; ವೀಳೆಯ ನೀಡು. ೨. ಆಹ್ವಾನಿಸು; ಕರೆ: ಜಗಳಕೆ ತಂಬುಲವಿಟ್ಟು ವುಗ್ಗಡಿಸುವ ಬಗೆಯಾದುದಾ ಭದ್ರಹಸ್ತಿ (ಶ್ರೀಪಾಂ. ೭-೫೦). [ ತಂಬುಲ + ಇಡು$_1$ ]

**ತಂಬುಲಿ** (ನಾ). ೧. ವೀಳೆಯದೆಲೆಯನ್ನು ಮಾರುವವನು; ತಂಬುಲಿಗ: ಹರದರ ಸುವ್ವಕ್ಕರ ಕಾರುಕರ ಚಿತ್ರಕರ ತಂಬುಲಿಗಳ ವಿನೋದಿಗಳ . . . ಸೇರುವೆಯು ಕಂಡು (ಅಕ್ರೂತ. ೭-೯೮). ೨. ವೀಳೆಯದೆಲೆಯನ್ನು ಮಡಿಚಿಕೊಡುವವನು; ಹಡಪದವನು; "ಹಡಪಾಳಿ" (ಚತುವಿ. ೬. I. ೨೫). [ ತಂಬುಲ + – ಇ$_2$ ]

**ತಂಬುಲಿಗ** (ನಾ). ೧. = ತಂಬುಲಿ ೧: ಗೊಜ್ಜಿಗಂ ತಂಬುಲಿಗರೆಟ್ಟಂ ಕಳ್ಳಕೆರ್ಳಿಳೆ ಕಾದಿ . . . ದೇವಲೋಕಕ್ಕೆಸೆದನ್ (ಎಇ. XVI. ೭೫-೦೦: 1007): ತಂಬುಲಿಗರ್ ನಂಬುಗೆಗೆಟ್ಟವರಂತೆ ಪೆಱಸಾರೆ (ಧರ್ಮಾಮೃ. ೨-೬೯); ದೂಸಿಗರ ಕಂಚಗಾಱರ ಬಳೆಗಾಱರ ತಂಬುಲಿಗರ ಮಣಿಗಾಱರ ಗಂದಿಗ ರಾವಣಂಗಳೊಳ್ ನಡೆತಂದರ್ (ಜಗವಿ. ೭-೦೮); ಮಾಱುವಂಗೆ–ಗಂದಿಗಂ, ದೂಸಿಗಂ, ತಂಬುಲಿಗಂ (ಶಮದ. ೦೯೭ ಪ್ರಯೋ); ತಂಬುಲಿಗ ಜಂಗಮ ಜೋಗಿಗಳ ಜಂಗುಳಿಗಗೇರಿಗಳೊಳಗೆ ರಥಾಡಿಸಿದನು ಶಿಶಪಾಳಗಳ (ಕೊರರಾ. ೫-೮-೫೩). 'ತಂಬುಲಿಗವಸರ' ಪರಾ. ೨. = ತಂಬುಲಿ ೨: ಅಯ್ಯಗೆಲೆಯ ಕೊಡುತಿರ್ದ ತಂಬುಲಿಗನ ಕೈಯ ತಬಕನರ್ಕಕೀರ್ತಿ ಒಯ್ಯನೆ ಸೆಳೆಕೊಂಡು ತಂದಗೆಲೆಯ ತನ್ನ ಕೈಯಾರ ಕೊಡತೊಡಗಿದನು (ಭರತ. ೨೭-೭೭).

**ತಂಬುಲಿಗ ಸಾಸಿರ್ವರ್** = ವೀಳೆಯದೆಲೆಯ ವರ್ತಕ ಸಂಘದ ಸಾವಿರ ಸದಸ್ಯರು: ಸುಂಕದನ್ನಾಯ ಪೆರ್ಜುಂದಡೆ ಬಾಳ್ಗುಳಿಯಯ್ದು ದಿಂಬರುಂ . . . ತಂಬುಲಿಗಸಾಸಿರ್ವ್ವರುಂ ಅಯ್ನೂರ್ವರುಂ ಪೋಗಿ . . . ಬಿನ್ನಪಂಗೆಯ್ದಡೆ (ಸೌಇಇ. IX-1, ೭೭-೦೦: 991); ಅಲ್ಲಿಯ ತಂಬುಲಿಗ ಸಾಸಿರ್ವ್ವರುಮಿಬ್ದು ಹೇಱಿಗೆ × [ವೀ]ಸವಂ ಬಿಟ್ಟರು (ಸೌಇಇ. XV, ೨೭-೩೦: 1144); ದೇವರಂಗಭೋಗಕ್ಕೆ ತಂಬುಲಿಗಸಾಸಿರ್ವ್ವರಶೇಷವಿರ್ದು . . . ಕೊಟ್ಟರ್ (ಮುಂಬರಾ. XI, ೨೫೪-೨೫: 1144).
[ ತಂಬುಲ + – ಇಗ ]

**ತಂಬುಲಿಗವಸರ** (ನಾ). ವೀಳೆಯದೆಲೆಯನ್ನು ಮಾರುವ ಅಂಗಡಿ; ತಂಬುಲಿಗರ ಅಂಗಡಿ: ಮಾಲೆಗಾರ್ತಿಯರಲರ್ಗಣ್ಣಾಲರ್ವಳಗು ನಟ್ಟವೊರ್ ಬಿಳಿಯೆಲೆಗಳ್ ತಂಬುಲಿಗವಸರದೊಳ್ ಕರಮೆಸೆಗುಂ (ಲೀಲಾವ. ೭-೦೫). [ ತಂಬುಲಿಗ + ವಸರ ]

**ತಂಬುಲಿಗಸೆಟ್ಟಿ** (ನಾ). ತಾಂಬೂಲದ ವ್ಯಾಪಾರಿ; ವೀಳೆಯದೆಲೆಯ ವರ್ತಕ: ತಂಬುಲಿಗಸೆಟ್ಟಿಗಳು ಬಿಟ್ಟ ಧರ್ಮ್ಮವಾವುದೆಂದಡೆ ಹೇಱಿಂಗ ವೀಸ (ಸೌಇಇ. XI-II, ೦೫೮-೨೫; 1109). [ ತಂಬುಲಿಗ + ಸೆಟ್ಟಿ ]

**ತಂಬುಳಿ, ತಂಬಳಿ** (ನಾ). (ಕರಾ) ತೆಂಗಿನಕಾಯಿ, ಜೀರಿಗೆ ಮುಂತಾದುವನ್ನು ರುಬ್ಬಿ ಅದಕ್ಕೆ ಮಜ್ಜಿಗೆ ಬೆಂದ ತರಕಾರಿಗಳನ್ನು ಹಾಕಿ ಕುದಿಸದೆ ಮಾಡುವ ಒಂದು ಬಗೆಯ ಮೇಲೋಗರ: ಪುಡಿಚಟ್ನಿ ಇದೆ. ತಂಬುಳಿ ಮಾಡಿದರಾಯ್ತು (ಬಂದಜೀ. ೭೦). **ತಂಬಳಿ**: ಬಟ್ಟಲಲ್ಲಿ ಅನ್ನ, ತಾಳದ, ತಂಬಳಿ, ಸಾರು . . . ಕಂಡವು (ಕುಕಥ. ೦೨೪); ಬೇಸಿಗೆ ಬಂದರೆ ಕೊಳದ ನೀರು ಹಸುರು ತಂಬಳಿಯಾಗುತ್ತದೆ (ಚಾರುದಾ. ೩೮).
[ ತಂ$_1$ (<ತಣ್$_2$) + ಪುಳಿ$_2$. / ತುಳು. ತಂಬುಳಿ ]

**ತಂಬೂ** 'ತಂಬು' ನೋ.

**ತಂಬೂರ** 'ತಂಬೂರಿ' ನೋ.

**ತಂಬೂರಿ, ತಂಬುರಿ, ತಂಬೂರ** (ನಾ). ಆಧಾರಶ್ರುತಿಗಾಗಿ ನುಡಿಸುವ, ನಾಲ್ಕು ತಂತಿಗಳುಳ್ಳ ಒಂದು ಬಗೆಯ ವಾದ್ಯ: ತಂಬೂರಿ ಮೊದಲಾದ ಅಖಿಲ ವಾದ್ಯಗಳಿದ್ದು . . . ಹರಿ ನಂಬಲಾಜಿ ಈ ಡಂಭಕದ ಕೂಗಾಟ (ಪುರಂದ. ೪-೭೭-೦); ತಾಳ ಶಂಖ ಭೇರಿಯು ತಂಬೂರಿಯು ಮೊದಲಾದ ಮೇಲು ಪಂಚಕಂಗಳೆಲ್ಲ ಹೊಗಳು ಹೊಗಳಲೂ (ವಾದಿಕೀ. ೫೦-೨); ನಿಸ್ಸಾಳ ಪಟಹ ತಂಬೂರಿ ಪಣವ ಕಂಸಾಳೆ ಕಂಬು ಡಿಕ್ಕಿ ವಾದ್ಯ ಸೂಳೈಸುತಲಿರೆ (ವಿದಾಕ್ಯ. ೭೭-೩); ಪಟುವಾದ ಬಾರ ತಂಬೂರಿ ತುತ್ತೂರಿಗಳ್ (ಅಜಾಪಿ. ೨೪-೩೦); ತಂಬೂರಿ ತುಂಬೆಲ್ಲ ಕೀಸರ ಬಾಸರ ಬೇಸರ ಬಂದೈತಿ (ಸಬೀಗೀ. ೪೮-೪). **ತಂಬುರಿ**: ಒಂದೆಡೆಗೆ ವೀಣೆ ಸಾರಂಗಿ ತಂಬುರಿಯಂತು ಸಂದಣಿಸಿ ಪೂರೈಸೆ (ಶ್ರೀರಾಮ. ೪-೫೫). **ತಂಬೂರ**: ಮಾಧುರ್ಯತರದ ಸುಮ್ಮಾನದಿಂ ಪರವಶತೆಯಾಂತರೋಯೆನಲಂಬುಜಾನನೆಯರತಿಶಯದ ತಂಬೂರಗಳ ಪಿಡಿದು ಮಾಲಗಿರ್ವರಂ ಕಂಡನು (ವಂಶಾರಾ. ೫-೪-೦೨)
[ ←ಅರ. ತಂಬೂರಾ; ಹಿಂ. ತಂಬೂರಾ, ತಾನ್‌ಪೂರಾ; ಮರಾ. ತಂಬೂರಾ, ತಂಬೋರಾ. / ಸಂ. ತುಂಬುರಿ = ಒಂದು ಬಗೆಯ ವೀಣೆ ]

**ತಂಬೆಧಡೆ** (ನಾ). ಒಂದು ಊರಿನ ಹೆಸರು. P ಈಗಿನ ವಿಜಾಪುರ ಜಿಲ್ಲೆಯ ತಮ್ಮಡ್ಡಿ: ಶ್ರೀಮತು ತಂಬೆಧಡ ಬಲೇಶ್ವರ ದೇವರ್ಗೆ ಬಿಟ್ಟ . . . ಮತರು ೩೦ (ಸೌಇಇ. XI-I, ೭೮-೦೦; 1038). [ ? ]

**ತಂಬೆರಲ್** 'ತಂಬೆಲರ್' ನೋ.

**ತಂಬೆಲರ್, ತಂಬೆರಲ್, ತಂಬೆಲರು** (ನಾ). ತಂಪಾದ ಗಾಳಿ: ಕಮ್ಮಿತಪ್ಪ ತಂಬೆಲರ್ವೀಸಿ (ವಡ್ಡಾರಾ. ೦೦೭-೨೦); ಮನಮಾಱೆ ತೀದಿದುದು ತೆಂಕಣ ತಂಬೆಲರಕ್ಕಿಕೊಳ್ವವೋಲ್ (ಪಂಪಭಾ. ೦೪-೦೨); ಕಾವಂಗೆ ವಸಂತ ಸಮಯಮುಂ ವಸಂತಸಮಯಕ್ಕೆ ತಂಬೆಲರುಮೆಂಬಂತೆ (ಕಾದಂಪೂ. ೮೦೪). **ತಂಬೆರಲ್**: ಕೀಡುವ ತಂ[ಪಾಠಾಂ ತೆಂ]ಬೆರಲ್ (ಪಂಪಭಾ. ೩-೩೭); ತಂಬೆರಲ್ಸಂಚರಿಸಿದುದಾ ಪುರದ ಪೂಜೆಗೆ ಸುರಭಿಸಮೇತಂ (ಉದ್ಭಟ. ೭-೫). **ತಂಬೆಲರು**: ಸುಳಿವೆಲರು ತಂಬೆಲರು . . . ಹಂಸೆ ರಾಜಹಂಸೆಗಳೆಸೆದುವಾ ವನದೊಳು (ಹಜಕಾ. ೩-೩೭); ಪಸರಿಸಿತು ತಂಬೆಲರು ಬೀತುದು ಬಿಸಿಲ ಬಿಂಕ (ಕಾವ್ಯಾಆ. ೦೩-೩೮); ಅಳಿವಿಂಡುಗಳ ಗಾನಕೆ ತಂಬೆಲರಿಗೆ . . . ತಲೆದೂಗುವಂದದೆ ಕಳವೆಯ ತೆನೆಗಳಂದೊಲೆದಾಡುತಿರ್ದುವು (ಕಂಪವಿ. ೫-೭೨). [ ತಂಪು$_2$ (<ತಣ್ಪು$_2$) + ಎಲರ್ ]

**ತಂಬೆಲರು** 'ತಂಬೆಲರ್' ನೋ.

**ತಂಬೆಳಕು** 'ತಣ್ಬೆಳಗು' ನೋ.

**ತಂಬೆಳಗ** (ನಾ). ತಂಪಾದ ಬೆಳಕನ್ನು ಬೀರುವವನು ; ಚಂದ್ರ : "ತಂಬೆಳಗಂ[ಪಾಠಾಂ ತೆಳ್ಬೆಳಗಂ] . . . ಚಂದ ಚೆಳಗದಿರ ಕತ್ತಲೆವಣಿಯ ಶಶಿಯ ನಾಮಂ" (ಕಬ್ಬಿಗ. ೪೩). [ ತಂಬೆಳಗು (<ತಣ್ಬೆಳಗು) + – ಅ$_7$ ]

**ತಂಬೆಳಗು** 'ತಣ್ಬೆಳಗು' ನೋ.

**ತಂಬೇಲು** (ಗು). ಹೆಬ್ಬಾದ ; ಅತಿಶಯವಾದ ; ತುಂಬಿದ : ದುಶ್ಶಾಸನ ಕೇಳು ತಂಬೇಲು ಗರ್ವದಿಂದ ದ್ರುಪದಾತ್ಮಜೆಯೆಮಗೆ ಈ ಕುಂಭಿಣಿಯೊಳು ಅಜೋದ್ಯವೆನಿಪ ಸುಖದ್ಯೂತದೊಳ್ ಸೋಲ್ದೊಳಿಸಿದ ಪ್ರಯುಕ್ತ ಬಾಯೆಂದು ಕರೆದರೆ . . . ಬಾಹೋಣಯಿಲ್ಲವೆಂದು ಪ್ರಾತಿಕಾಮಿಕನಿಗೆ ನಿರೂಪಿಸಿದಳಂತೆ (ದುಶ್ಶಾಳ. ೧೮).

[ ?. / ತುಳು. ತವೆಲ್ = ತುಂಬಿ ತುಳುಕು ]

**ತಂಬೈಸು** 'ತಣ್ಬಿಸು' ನೋ.

**ತಂಭಾಲು** 'ತಣ್ಬಾಲ್' ನೋ.

**ತಃಖ್ತಿ** 'ತಖ್ತಿ' ನೋ.

**ತಃಖ್ತೆ** 'ತಖ್ತೆ' ನೋ.

**ತಕ** (?). (?) : ಕಗ್ಗಲಿಪುರಕ್ಕೆ ಪಡವಲು ತಕದ ಕರಿಮುರುಟಿಗೆ ಬಡಗಣ ಪೊತ್ತಿನಲ್ಲೂ ನೆಟ್ಟಕಲ್ಲು ೧ (ಎಕ. XIV. ಮೈಸೂರು. ೦೦೫-೩೯೦ ; 1674).

[ ? ]

**ತಕಣೆಚಿಯ** (ನಾ). ಒಬ್ಬಾತನ ಹೆಸರು (?) : ಮನೆವಗತಿ ತಕಣೆಚಿಯ ಕೊನವಮಾ ಎಚಿಅಂಗ ಪೊಲುಕೇಸಿಯ ಬೂದಿಗನ ಕಾಳಗದೊಳ್ . . . ಸತ್ತ (ಎಕ. III, ಮೈಸೂರು. ೪೪-೩ ; ಸು. ೨೨೦). [ ? ]

**ತಕತಕ** (ನಾ). ಕುಣಿಯುವುದನ್ನು ಸೂಚಿಸುವ ಒಂದು ಅನುಕರಣ ಪದ: ದೀಪಾವಳಿ ಬಂದರೆ ಹುಡುಗರು ತಕತಕ ಎಂದು ಕುಣಿಯುತ್ತಾರೆ (ರೂಢಿ).

**ತಕತ್ತು**, ತಕಥು, ತಗತ್ತು$_2$ (ನಾ). ೧. ರಾಜ್ಯ : ಪಟ್ಟದ ಕೊರಸಿಯುನವನ ಕೈಗಿತ್ತಿದಂತಿರ್ಪುದನಲವನಳ್ಕಿ ಹೂಣಿಸಿ ನಿಲಲಾರದೆ ಕಂಪಿಸುತ್ತಿರಲವನಂ ಕಂಡಿವಂ ತಕತ್ತನಾಳ್ವುದರ್ಕಯೋಗ್ಯನೆಂದು ಬಗೆದು(ಕಳನ್ನ. ೯-೩೬). **ತಕಥು:** ೧. ಶಾಹಮುರ್ತಜಾ ಅಲ್ಲಿಯಾದಿಯಾಗಿ . . . ವಿಜಾಪುರದ ತಕಥನಾಳ್ದ ಪಾತುಶಾಹರ್ (ಕಳನ್ನ. ೯-೩೯). **ತಗತ್ತು$_2$:** ೨. ಸಿಂಹಾಸನ ; ಪಟ್ಟ : ಜಗದ ರಾಯರು ನಿನಗೆ ಸಾಟಿಯೆ ತಗತನಿಳಿಯ್ಯ ಪಾವಕನಿಳಯದಿ ವಂಗ ಸಹಿತ ಮುಂಡಿಸುವದೂಚಿಸ್ಥಾನ ಹೋಗೆಂದ (ಅಂಬಿಕಾ. ೪೮-೭೩).

[ ←ಪಾರ. ಹಿಂ. ತಖ್ತ್ ; ಮರಾ. ತಕ್ತ್, ತಖತ್, ತಖ್ತ್ ]

**ತಕಥು** 'ತಕತ್ತು' ನೋ.

**ತಕಪಕ** (ನಾ). ಒಂದು ಅನುಕರಣ ಶಬ್ದ : ಅನ್ನ ತಕಪಕ ಎಂದು ಕುದಿದು, ಉಕ್ಕಿ ಹೊರಗೆ ಬರುತ್ತಿದ್ದಿತು (ರೂಢಿ). 'ತಕಪಕನೆ' ಪರಾ.

**ತಕಪಕನೆ** (ಅ). ತಕಪಕ ಎಂದು ; ತೀವ್ರವಾಗಿ : ಒಳಗೆ ತಕಪಕನೆ ಕುದಿವ ವಡಬಾಗ್ನಿಯ ಕಳಾಪದಿಂದಾ ಕಡಲ್ ಕಣ್ಗೆಸೆದುದು (ಚಿಬವು. ೨-೩) ; ಕಡಲು ತಕಪಕನುಕ್ಕಲಮರರ ಗಡಣ ಕಂಗೆಟ್ಟೋಡಲು (ಪ್ರಹ್ಲಾದ. ೩-೪೫).

[ ತಕಪಕ + – ಅನೆ$_1$ ]

**ತಕಯೂದ** (ನಾ). ಕಟ್ಟು ; ನಿರ್ಬಂಧ : ಜುಲುಮು, ಜಬರದಸ್ತಿ, ಪೆಟ್ಟು, ಕೊಲೆ ಮಾಡಿದವರಿಗೆ ಚೆನ್ನಾಗಿ ಶಿಕ್ಷೆಮಾಡಿ ಮುಂದೆ ಈ ಪ್ರಕಾರ ಅನ್ಯಾಯ ವಾಗದ ಹಾಗೆ ತಕಯೂದ ಇಡಬೇಕು (ಮಹಾಪಂ. II, ೩೩).

[ ←ಪಾರ. ತಕಯಾದ್ ]

**ತಕರಾರ್** 'ತಕರಾರು' ನೋ.

**ತಕರಾರು**, ತಕರಾರ್, ತಕರಾಲು, ತಕ್ರಾರ, ತಕ್ರಾರು(ನಾ). ೧. ವಿವಾದ; ದೂರು: ಚೌಗ್ರಾಮದವರ ಕರಸಿಕೊಂಡು ಗಡಿ ತಕರಾರು ಬಾರದಂತೆ . . . ಭೂಮಿಗೆ ಶಿಲಾಸ್ಥಾಪಿತವ ಮಾಡಿಸಿಕೊಟ್ಟು (ಎಕ. VIII, ಸೊರಬ. ೩೫೪-೬೮; 1748). ೨. ಅಡ್ಡಿ ; ಆಕ್ಷೇಪಣೆ; ವಿರೋಧ: ಯಾರಾದರೂ ಕೊಡದೆ ತಕರಾರು ಮಾಡಿದರೆ (ಮೈಆರಿ. ೧೯೩೦, ೨೧-೨೦ : 1712) : ನನ್ನದೇನು ತಕರಾರು ಇಲ್ಲ (ಬದುಜ.೫೬); ತಂಟೆ ತೀರಿದರೂ ತಕರಾರು ಹೋಗಲಿಲ್ಲ (ಗಾದೆ). **ತಕರಾರ್:** ೧. ಕಂದಾಯ ಬಾಕಿ ಇರುವ ಜಮೀನಿನ ಸ್ವಾನ್‌ದಾರಿಕೆಯು ತಕರಾರ್ ಬದ್ದಿದ್ದಲ್ಲಿ . . . ಹರಾಜು ಮಾಡುವುದು ನ್ಯಾಯವಲ್ಲವು (ಗ್ರಾಮಾಕ. ೭೮). **ತಕರಾಲು:** ೨. ಕೆಂಚಿ ತನ್ನ ಮಕ್ಕಳ ಹೆಸರಿನಲ್ಲಿ . . . ನೀರಗಂಟಿತನ ನೋಡಿಕೊಳ್ಳಲು ಬಂದಾಗ ಮಾರಪ್ಪನ ಮಕ್ಕಳು ತಕರಾಲು ಎತ್ತಿದರು (ಊರುಕ. ೭೮). **ತಕ್ರಾರ:** ೧. ಗಡಿ ತಕ್ರಾರ ಬಾರದ ರೀತಿಯಲ್ಲಿ . . . ಶಿಲಾಸ್ಥಾಪಿತವ ಮಾಡಿಕೊಟ್ಟು (ಮೈಆರಿ. ೧೯೩೪, ೯-೦೪ : 1693). ೨. ಪ್ರತಿಯೊಬ್ಬ ಭಕ್ತರೂ ಹೀಗೆ ಒಂದಿಲ್ಲೊಂದು ಬಗೆಯಿಂದ ತಕ್ರಾರ ಹೂಡಿದರು (ಗೌರಾಂಗ. ೦೭೬). **ತಕ್ರಾರು:** ೧. ಗಡಿ ತಕ್ರಾರು ಬಾರದ ರೀತಿಯವರ ಮುಂದಿಟ್ಟು ರೇಖೆ ಪ್ರಮಾಣು ಭೂಮಿಗೆ ಗಡಿಕಲ್ಲು ಹೂಳಿಸಿ ಕೊಟ್ಟು (ಮೈಆರಿ. ೧೯೨೯, ೭೦-೦೫ ; 1817).

**ತಕರಾರು ತೆಗೆ** = ಆಕ್ಷೇಪಿಸು ; ತಕರಾರು ಮಾಡು : ರೂಲ್ಸ ಪ್ರಕಾರ ನಾವು ನಡೆದುಕೊಂಡಿಲ್ಲ ಅಂತ ತಕರಾರು ತೆಗೆದು ನಮ್ಮ ಈ ದೀಪ ಬಂದ ಮಾಡಬಹುದು (ಮನೆಬಿ.೧೬೩). **ತಕರಾರು ಮಾಡು** = ೧. ದೂರು: ಮಾಣೆ ಬೋಣಿಯಾಗಲಿಲ್ಲವೆಂದು ತಕರಾರು ಮಾಡಿದ್ದರಿಂದ ಹೋಟಲಲ್ಲಿ ಜಗಳ ಕಾಯಬೇಕಾಯಿತು (ಹೊಸಕ್ಷಿ. ೫೮). ೨. ಅಡ್ಡಿಮಾಡು ; ವಿರೋಧಿಸು : ಈಗ ಅವರ ಮಗ ಟೀಪುಸುಲ್ತಾನರು ತಕರಾರುಮಾಡಿ . . . ಕರಾರತು ಮಾಡುತ್ತಾರೆ (ರಾಜೇಂದ್ರ.೫೦). **ತಕರಾರು ಹೂಡು**=ತಕರಾರುಮಾಡು೧: ಸಂಬಳ ಸಾಲದು . . . ಎಂದೆಲ್ಲರೂ ಅವರಿವರ ಮಾತು ಕೇಳಿ ತಕರಾರು ಹೂಡಿದರು (ಹುಚ್ಚುಹು. ೭೦) ; ನಾನು ಹಡಗಿನಿಂದ ಸಾಮಾನುಗಳನ್ನು ಇಳಿಸಿದೆನೊ ಇಲ್ಲವೊ ಇಲ್ಲಿಯ ರಾಜ ತಕರಾರು ಹೂಡಿದ (ಪ್ರವಾಇ. II, ೧೯೦). [ ←ಅರ. ಹಿಂ. ಮರಾ. ತಕರಾರ್, ತಕ್ರಾರ್ ]

**ತಕರಾರು ಅರ್ಜಿ** (ನಾ). ೧. ಕೆಳಗಿನ ಕೋರ್ಟಿನ ತೀರ್ಪನ್ನು ಪ್ರತಿಭಟಿಸಿ ಸಲ್ಲಿಸಿದ ಅರ್ಜಿ : (ಶ). ೨. (ನ್ಯಾಯಾಲಯಕ್ಕೆ) ಒಬ್ಬನು ಸಲ್ಲಿಸಿದ ಅರ್ಜಿಗೆ ಪ್ರತಿಯಾಗಿ ಸಲ್ಲಿಸಿದ ಅರ್ಜಿ : (ಶ). [ತಕರಾರು + ಅರ್ಜಿ$_2$]

**ತಕರಾರುಇಸಮು** (ನಾ). ಅಡ್ಡಿ ಮಾಡುವ ಸ್ವಭಾವದವನು : ಬಲು ತಕರಾರು ಇಸಮು (ಕಮಳ. ೧೬೮). [ತಕರಾರು + ಇಸಮು (<ಇಸಂ)]

**ತಕರಾರುತಃಖ್ತೆ** (ನಾ). ೧. ಹಳ್ಳಿಯ ಶ್ಯಾನುಭೋಗರು ಸರ್ಕಾರಿ ಜಮೀನುಗಳ ಒತ್ತುಗಡೆ ಮುಂತಾದ ವಿಚಾರಗಳನ್ನು ಗುರುತು ಮಾಡಿ ಇಟ್ಟಿರುವ ದಾಖಲೆ ಪುಸ್ತಕ. ೨. ತಕರಾರು ಅರ್ಜಿಗಳನ್ನು ನಮೂದು ಮಾಡುವ ಪುಸ್ತಕ : ಗ್ರಾಮ ಪಂ ಚಾ ಯ ತಿ ಯ ವ ರು ಯಾವಾಗಲೂ ಒಂದು ತಕರಾರು ತಃಖ್ತೆಯನ್ನು ಇಟ್ಟಿರಬೇಕು (ರೂಢಿ).

[ ತಕರಾರು + ತಃಖ್ತೆ (<ತಖ್ತೆ) ]

**ತಕರಾಲು** 'ತಕರಾರು' ನೋ.

**ತಕಲಿ**, ಟಕಳಿ (ನಾ). ನೂಲನ್ನು ತೆಗೆಯುವ ಒಂದು ಉಪಕರಣ ; ಕದಿರು : ರಂಗಣ್ಣ ಕಾಕಾ ಪಡಸಾಲೆಯಲ್ಲಿ ಕುಳಿತುಕೊಂಡು ತಕಲಿಯಿಂದ ನೂಲು ತೆಗೆಯುತ್ತಿರುವರು (ಬಂದಯು. ೧೨) ; ಹಿಂದಿನ ಕಾಲದಲ್ಲಿ ಕೈಗಳಿಂದ ಅಥವಾ ತಕಲಿ, ಚರಕಗಳಂಥ ಸಣ್ಣ ಉಪಕರಣಗಳಿಂದ ಎಳೆಗಳನ್ನು ತೆಗೆಯುತ್ತಿದ್ದರು(ಗೃಹವಿ.೭೨). **ಟಕಳಿ:** ನಿತ್ಯ ನೂಲಬೇಕೆಂದು ನಿಯಮ ಮಾಡಿದವರಿಗೆ ನೂಲಲು ಟಕಳಿಯನ್ನು ಕೊಡಲಿಲ್ಲ (ಧಾರಸಂ. ೪೭) : ಟಕಳಿಯಲ್ಲಿ . . . ನೂಲು ತೆಗೆಯುತ್ತಿದ್ದ (ದೀಪದ. I, ೯೮). [ ←ಹಿಂ. ತಕಲೀ ]

**ತಕಲೀಫು** (ನಾ). ತೊಂದರೆ ; ಕಷ್ಟ : ಇದು ತುಂಬಾ ತಕಲೀಫು ಕೊಡುವ ಕೆಲಸ (ರೂಢಿ). [ ←ಅರ. ಹಿಂ. ಮರಾ. ತಕಲೀಫ್ ]

**ತಕಲು** 'ತಕ್ಕಿಲ್$_2$' ನೋ.

**ತಕಶೀರು** 'ತಕ್ಸೀರು' ನೋ.

**ತಕಶೀರುದಾರ** 'ತಕ್ಸೀರುದಾರ' ನೋ.

**ತಕಾರ** (ನಾ). 'ತ' ಎಂಬ ಅಕ್ಷರ : ಕಿಱಿದರ್ಕೆ ಕುಟಿಂಬೆಡೆಯಲ್ಲಿ ತಕಾರಂ ಸ್ವರಮುಡಸೆ ಪರಕ್ಕುತ್ವಮುಸ್ವರಂ ನಿಲೆ ಪರದೊಳ್ (ಶಮದ. ೧೮೧).

[ ಸಂ. ]

**ತಕಾವಿ, ತಗಾಯಿ, ತಗಾವಿ** (ನಾ). ವ್ಯವಸಾಯಂದ ಸೌಕರ್ಯಗಳಿಗಾಗಿ ರೈತರಿಗೆ ಸರಕಾರದವರು ಕೊಡುವ ಸಾಲ,-ಮುಂಗಡ ಹಣ: ರೈತರಿಗೆ ಬೇಕಾದರೆ ಮುನಾಸಬು ತಕಾವಿ ಕೊಡುವುದಕ್ಕೂ . . . ಏರ್ಪಾಡಾಗಿತ್ತು (ಮುಹಾವಂ. II, ೩೧). **ತಗಾಯಿ:** ತಗಾಯಿ ವಸೂಲಿಯ ಕೆಲಸವನ್ನು . . . ಆ ಕಾಲದಲ್ಲಿ ಅವರು ಮಾಡುತ್ತಿದ್ದರು (ಬ್ಯಾಂಕಕ್ಕೆ. ೧೨೭) : ಇನ್ನೊಬ್ಬರಿಗೆ ತಗಾಯಿಯ ಹಣವನ್ನು ಕೊಡಿಸುವದಾಗಿಯೂ . . . ಹೇಳುವರು (ಗಂಗಾಸಾ. ೪೮). 'ತಗಾಯಿಸಾಲ' ಪರಾ. **ತಗಾವಿ:** ತಗಾವಿಯಲ್ಲಿ ನೋಡಲಿಲ್ಲವೇ, ತಹಸೀಲದಾರ ಸಾಹೇಬರು ಸಾವಿರಗಟ್ಟಲೆ ಹೊಡ ಕೊಂಡರು (ಪ್ರೇಮಮೂರ್ತಿ. ೩).

[ ←ಅರ. ಹಿಂ. ತಕಾವೀ ; ಮರಾ. ತಕಾವೀ, ತಗಾಈ ]

**ತಕಾವಿರಕಮು** (ನಾ). ತಕಾವಿ ಸಾಲದ ಮೊತ್ತ : ಭೂಕಂದಾಯವನ್ನೂ ತಕಾವಿ ರಕಮನ್ನೂ ಸರಕಾರಕ್ಕೆ ತುಂಬಿ ಅಧಿಕಾರದಿಂದ ನಿವೃತ್ತರಾದರು (ದಾಕೊಟಿ. ೯).

[ ತಕಾವಿ + ರಕಮು (<ರಕಂ) ]

**ತಕಾವಿಸಾಲ, ತಗಾಯಿಸಾಲ** (ನಾ). = ತಕಾವಿ : ಸರ್ಕಾರದಿಂದ ರೈತರಿಗೆ ತಕಾವಿ ಸಾಲ (ಗ್ರಾಮೂಕ.೧೫೯). **ತಗಾಯಿಸಾಲ:** ತಗಾಯಿಸಾಲ ಮಂಜೂರ ಮಾಡುವ ಬಗ್ಗೆ ರೈತರು ಅಧಿಕಾರಿಗೆ ಅರ್ಜಿಮಾಡಿಕೊಂಡರು (ಕರವೀ. ೭೩).

[ ತಕಾವಿ + ಸಾಲ$_1$ ]

**ತಕ್ಕ$_1$** (ನಾ). ೧. ಯೋಗ್ಯನಾದವನು ; ಅರ್ಹನಾದವನು ; ಸಮರ್ಥನಾದವನು: ಮಂದರಾಚಲಮಂ ತಂದವನಾವನಾತನೆ ವಲಂ ತಕ್ಕಂ ಪೆಱರ್ ತಕ್ಕರೇ (ಪಂಪಭಾ. ೬-೪೧) ; ಸೇನೆಯ ಬಹುಳತೆಯ ಲೆಕ್ಕಿಸಲ್ ತಕ್ಕನಾವಂ (ಕುಸುಮಾ. ೩-೦೪) ; ತಕ್ಕರಿಲ್ಲದ ಸಭೆ ಮದಾಂಬುವನುಕ್ಕದಿಭ (ಸಾಳ್ವಭಾ. ೩-೧೧) ; ತಕ್ಕನ್ ತಕ್ಕವೊಲ್ ಬಾಟ್ದುವನ್ (ಅಶ್ವಶಾ. ೧೯-೪೦೩). ೨. ಒಳ್ಳೆಯವನು ; ಸಜ್ಜನ : "ಕುಳಜಾತಂ ತಕ್ಕನಾರ್ಯಂ ಸುಜನನಭಿಜನಂ ಸಾಧು ಸದ್ವೃತ್ತನಪ್ಪಂ" (ವಸ್ತುಕೋ. ೧೦೦-೦೦) ; ತಕ್ಕನಂ ಪೊಲೆಯನೆ ಮಾಟ್ಪ ಮುಂ ಪೊಲೆಯನಂ ತಕ್ಕನೆ ಮಾಟ್ಪ . . . ನೃಪಚಿತ್ತವೃತ್ತಿ ಸಂಚಲಂ (ಪಂಪಭಾ. ೧೨-೯೨) ; ಪಾಪಕ್ಕಂಜುಗುಂ ತಕ್ಕಂ (ಭಾಷಾಭೂ. ೮೦ ಉದಾ) ; ಮಕ್ಕಳಾಟಿಕೆಯಾದಡಾಗಲಿ ತಕ್ಕರಲ್ಲೆಂದೆನಲಿ ಸಲಹುವಡಕ್ಕ ಸೈರಂಧ್ರಿಯನು ಸೇರಿಸಬೇಕು ತನಗೆಂದ (ಕುಪ್ಪಾವಿ. ೩-೪೭) ; ತಕ್ಕರ ಗೋಷ್ಠಿ ತನೂದರಿಯರ ಪೊಸತಕ್ಕೆ . . . ಹೃದಯಕ್ಕೆ ವಿಲಾಸಮನೀವುದು (ಜಯಕಾ. ೧-೩೪). ೩. ಹಿತವನ್ನು ಬಯಸುವವನು ; ಗೆಳೆಯ : "ತಕ್ಕನೆಂದು ಹಿತವಂ" (ಕಶಸಾ. ೧೮-೩೭೧) : "ಹಿತವಂ ತಕ್ಕನೆನಿಸಿರ್ಕು" (ಶಬ್ದಕ್ಕೆ. ೩೭) ; ನಿನ್ನ ಕೆಳೆ ಟಕ್ಕರ ಕೆಳೆಯಂತಕ್ಕುಮಲ್ಲದೆ ತಕ್ಕರ ಕೆಳೆಯಂತೊಪ್ಪಲಱಿಯದು (ಪಂಚತಂ. ೧೨೩-೧೯) : ನೆಯ್ದಿಲ ತಕ್ಕನುದಯಗಿರಿಶಿಖರಮನೇಱಲ್ (ಜಯಕಾ. ೧೧-೫೯). ೪. ಊರಿನ ಮುಖ್ಯಸ್ಥ : "ಆ ಅಪ್ಪಯ್ಯ, ತಕ್ಕರಿ ಪಾರೇನೊ?" ಎಂದನು (ಚಕರಾ. ೩೪) : ನೀನು ಇಲ್ಲದುದು ಒಂದು ದೊಡ್ಡ ಕೊರತೆಯಾಯಿತೆಂದು ಊರ ತಕ್ಕ ಮತ್ತು ಅರುವರು ಹೇಳಿ ಕೊಂಡರು (ನಡದಾ. III, ೦೦೫೯). 'ಗ್ರಾಮತಕ್ಕ' ಪರಾ.

[ ತಕ್ಕು$_2$ + – ಅ$_7$. / ಕೊಡ. ತಕ್ಕೆ ]

**ತಕ್ಕ$_2$** 'ತಗು' ಪರಾ.

**ತಕ್ಕಡಿ$_1$** (ನಾ). ವಸ್ತುಗಳನ್ನು ತೂಕಮಾಡುವ ಸಾಧನ; ತ್ರಾಸು: ರತ್ನ ಪರೀಕ್ಷಕರು ಯಣಿಸಲಶಕ್ತರಾಗಿ ತಕ್ಕಡಿಗಳಿಂದಾ ಮಣಿ ಯಿಷ್ಟೆಂದು ತಿಳಿದವರಲ್ಲಾ (ಸೌಗಂಧಿ. ೬೩೩-೧೯) ; ಗೀತೆಯು ಪ್ರತಿಯೊಂದು ವಿಷಯದಲ್ಲಿ ತಕ್ಕಡಿಯನ್ನು ಸಮತೂಕವನ್ನಾಗಿ ಹಿಡಿಯಲು ಪ್ರಯತ್ನಿಸುತ್ತದೆ (ಗೀತಾಸಂ. ೧೨೩) ; ತಕ್ಕಡಿಗೋ ಬೇಡ ಕಾಣಿ ತೂಗುತಿರಲಿ ಸತ್ಯವಾಣಿ (ಅರಳು.೪೦೦-೩).

**ತಕ್ಕಡಿ ಹಿಡಿ**=೧. ತೂಗು ; ತೂಕಮಾಡು. ೨. ವ್ಯಾಪಾರಮಾಡು. ೩. ಪರೀಕ್ಷಿಸಂ; ಬೆಲೆಕಟ್ಟು : ಪರಿಶೀಲಿಸಲಿ, ತಕ್ಕಡಿ ಹಿಡಿಯಲಿ, ಕೇರಲಿ, ತೂರಲಿ (ಕಜಸಾ. IV ೬೬೦೩). [ ದೇ.॥ ತಮಿ. ತಕ್ಕಟ, ತಕ್ಕಟ್ಟೈ ; ಮಲ. ತಕ್ಕಿಡಿ ; ತುಳು. ತಕ್ಕಡಿ ; ತೆಲು. ತಕ್ಕಡ ]

**ತಕ್ಕಡಿ$_2$** (ನಾ). ಮೋಸ : ಎಱಕಮಲ್ಲದೆ ಪೊಲ್ಲದಾಗೆಱಗಿ ದೊರೆಕೊಂಡ್ಕೊಳ್ಳ ತೆಱನಲ್ಲದ ನೆಱೆಯೆ ಬರಲೆ ತಕ್ಕಡಿಯಲ್ಲಿ ಬೀಸುವಲ್ಲಿಯೆ ಬೀಸಲಱಿದೆಯಿಲ್ಲ . . . ಆಸುವನುಂ ಕೂಸುವನುಂ ಬೀಸುವನುಂ ಗಡಯೆ ನೆಗಟ್ದ ತಕ್ಕಡಿಯೊಳಿನುತ್ತಾಸದೆಯು ಕುಂಕದೆಯುಂ ಬೀಸದೆಯು ಬಿದ್ದ ಮೆಱೆಗುಮೆಱೆವ ಬೆಡೆಂಗಂ (ಎಳ್. II, ೦೩೩- ೧೨೪ ; 982).

[ ದೇ.॥ ತಮಿ. ತ್ರಕ್ಕಟ ; ತೆಲು. ತಕ್ಕಿಡಿ ]

**ತಕ್ಕಡಿಗ** (ನಾ). ತಕ್ಕಡಿ ಹಿಡಿಯುವವನು ; ವ್ಯಾಪಾರಿ.

[ ತಕ್ಕಡಿ$_1$ + – ಗ$_2$ ]

**ತಕ್ಕಡುಗುದುರೆ** (ನಾ). ಯೋಗ್ಯವಾದ ಅಶ್ವ ; ಚುರುಕಾದ ಕುದುರೆ : ಲಂಡಿ ಸವೆದು ಹೋದರೆ ಬಿಚ್ಚುವುದ ತಾ ಕಂಡು ತಕ್ಕಡುಗುದುರೆಯನು ಕೊಂಡು ಬಂದೀ ಹುಯ್ಯಲೊಳಗೆಱಗುವೆನೆಂದು ಬಂಡಾದ ಬೆನಕರಾವುತನು (ಮೋಹತ. ೩೮-೪೨). [ ತಕ್ಕಡು$_0$ (P←ಮರಾ. ತಾಖಡಾ) + ಕುದುರೆ ]

**ತಕ್ಕನೆ** (ಅ). ಒಮ್ಮೆಲೆ ; ಫಕ್ಕನೆ : ಎನೆ ನಕ್ಕನ್ ತಕ್ಕನ್ ತಕ್ಕನತಿ ಕ್ರಮಣೀಯಮಿಾ ಜಯೋತ್ಸವದೊಳ್ (ವಿಷ್ಣುಪು. ೧೫-೦೦೩).

[ ತಕ್$_0$ + – ಅನೆ$_1$ ]

**ತಕ್ಕಯಿಸು** 'ತಟ್ಕೈಸು' ನೋ.

**ತಕ್ಕಲಿ** (ನಾ). ಒಂದು ಬಗೆಯ ಔಷಧಿ ಮೂಲಿಕೆ : ಕರ್ಕಾಟಕಶೃಂಗಿ, ಮರದರಿಸಿನ . . . ತಾರೆಬೇರು, ತಕ್ಕಲಿ ಇವಂ ಕಷಾಯವಿಟ್ಟು ಕೊಡಲು ವಾತಜ್ವರ ನಿಲ್ಲುವುದು (ಸಕವೈ. ೬೯). 'ತಕ್ಕಿಲ್$_1$' ಪರಾ. [ ? ]

**ತಕ್ಕಲು** 'ತಕ್ಕಿಲ್$_2$' ನೋ.

**ತಕ್ಕವಲ** (ನಾ). = ತಕ್ಕೋಲ$_2$ ೧ : ಉಪಯುಕ್ತಮಪ್ಪ ತಕ್ಕವಲ ವುಟ್ಟಯೇಲಕ್ಕಿ[ಪಾಠಾಂ. ತಕ್ಕಪ್ಪವಲಘಟ್ಟ] ತಗರಮಲಯಜಮಿನಿತಂ . . . ಉಪಸೇವಿಸೆ ಪೊಗೆಯಿನೊಗೆದ ಬಟಲಿಕೆಯುಟಿಗುಂ (ಜಮದ. ೩-೧೮೪).

[ <ಸಂ. ತಕ್ಕೋಲ ]

**ತಕ್ಕವಿಸು** 'ತಟ್ಕೈಸು' ನೋ.

**ತಕ್ಕಸೈಲ** (ನಾ). ಮೈಲುತುತ್ಥ ; ರಸಾಂಜನ : "ತಾರ್ಕ್ಷ್ಯ-ತಕ್ಕಸೈಲ" (ಓಷಧಿ. ೬೬). [ <ಸಂ. ತಾರ್ಕ್ಷ್ಯಶೈಲ ]

**ತಕ್ಕಳಿ** 'ತಕ್ಕಟು' ನೋ.

**ತಕ್ಕಳಿಸು**(ಕ್ರಿ). (ನೀರು ಮೊದಲಾದುವನ್ನು) ಚಿಮುಕಿಸು; ಸಿಂಪಡಿಸು: ತುಂಬಾ ಧೂಳಿದ್ದಿದೆ, ನೀರು ತಕ್ಕಳಿಸಬೇಕು (ರೂಢಿ). [ ? + – ಇಸು$_3$ ]

**ತಕ್ಕಟು, ತಕ್ಕಳಿ**(ಕ್ರಿ).೧. ಘನತೆಯನ್ನು ಕಳೆದುಕೊಳ್ಳು; ಹಿರಿಮೆಗುಂದು: ಘನತೆಗೆಡು : ತಕ್ಕಟಾದನಗೆ ಸವತ್ನಿಯರಿಕ್ಕುಂಗೂಟಿಂಗೆ ಬ ಯ ಸಿ ಪಾರ್ದಿರ್ಪ ವಿಷಾದಕ್ಕೆ ಗುರಿಯಪ್ಪ ದುರ್ಯಶಮುಕ್ಕುಂ ತನಯಂ ತಪಕ್ಕೆ ಪಕ್ಕಾಗಲೊಡಂ (ಪಂರಾಮಾ. ೬-೯೧). ೨. ಎದೆಗುಂದು ; ಶಕ್ತಿಗುಂದು ; ಧೈರ್ಯವುಡುಗು : ಇಭರಿಪುವಂ ತಕ್ಕಟುವಿನೆಗಂ ನೊಂದು ನಿಂದು ಕೊಂದುದಿಭೇಂದ್ರಂ (ಶಾಂತಿಪು. ೨-೦೧೭) : ಮಱುವಕ್ಕದ ನಾಯಕರನಾಜಿಯೊಳ್ಕಂಡನಿಸುಂ ತಕ್ಕಟಾದನೆ ಬಗೆಯೊಳ್ ಬೆಳ್ವಕ್ಕಿಯ ಪಿಂಡಿಂಗವಂದಿರಂ

ಸರಿಗಂಡಂ (ಪಂಪಾಮ. ೯-೫೮) ; ತಕ್ಕಟಿಯದೆಕ್ಕತುಳಂ ಪೊಣರ್ದು . . . ಒಂದನೊಂದಿಱಿಯಲಿರ್ದುವು ತಟ್ಟಿರಡುಗ್ರ ದಂತಿಗಳ್ (ಪುಷ್ಪಪು. ೫-೮೦); ಪಜ್ಜೆ ಪಜ್ಜೆಗೆ ತಕ್ಕಟಿದು ಬಗೆಗುಂದಿ ಕಂಡರಂ ಬೆಸಗೊಳುತುಂ (ರಾಮಾಶ್ವ. ೧೧೦-೬). ೩. ಔಚಿತ್ಯವನ್ನು ಮೀರು ; ಮರ್ಯಾದೆಯನ್ನು ತಪ್ಪು : ನೆರೆಯೊಳಘಮರ್ಷಣಧ್ರೋರ್ವ ಮುನಿಗಳಂ ಲೆಕ್ಕಿಸದೆ ತಕ್ಕಟಿದು ಮುಕ್ಕುಳಿಸಿ ಜಕ್ಕುಳಿಸಿದಂ (ರಾಮಾಶ್ವ. ೧೩೭-೩೧). ತಕ್ಕಳಿ : ೨. ಬಿಕ್ಕುತುಂ ಬೀಗುತುಂ ಬಲ್ಪಳಿದು ಬಾಡುತುಂ ತಕ್ಕಳಿದು ತಡವಾಗಿ ಹೊರೆಯೇಱ ನೋಡುತುಂ (ನಂಬಿರ. ೭-೧೩೦); ಕೆಲ ಪೌಜು . . . ತಲ್ಲಣಂಗೊಂಡು ತಕ್ಕಳಿದು ನಿಂದೆಡೆಯಲ್ಲಿ ನಿಲ್ಲದಾಯಿತು (ಸಮ್ಯಕೌ. ೮-೫೧) ; ಪೆಂಪಳಿದರ್ ಜಗುಳ್ದರ್ ತಿಣಿದರ್ ತಕ್ಕಳಿದರ್ ಪರಪೃಥಿವೀಪಾಲಕ ಬಲದವರು (ಜಯುಕಾ. ೭-೧).

[ ತಕ್ಕು$_{2}$ + ಅಟಿ$_{1}$ ]

**ತಕ್ಕಾಬಿಕ್ಕಿ**, ತೆಕ್ಕಿಬಿಕ್ಕಿ (ನಾ). ಮೋಸ ; ವಂಚನೆ : ಅಪ್ರಾಮಾಣಿಕ ವ್ಯವಹಾರ: "ತಕ್ಕಾಬಿಕ್ಕಿ-ಮೋಸತನ" (ಜಾನಕೋ. ೬೩). ತಕ್ಕಿಬಿಕ್ಕಿ: (✝).

[ <ತಕ್ಕು$_{3}$ ]

**ತಕ್ಕಾಮೆ** (ನಾ). ೧. ಘನತೆ ; ಗೌರವ : ಜೊತೆ ತಕ್ಕರನ್ನತಾರ ; ಕೊಡಗ ಅದನ್ನ ತಡೆಯುಬಹುದೆ ? ತಡದೆ, ತಕ್ಕಾಮೆ ಉಳಿಯತ್ತೇನು ? (ಚಿಕರಾ. ೧೦೯). ೨. ಒಡೆತನ ; ಪದವಿ ; ಸ್ಥಾನಮಾನ : ಇವರು ಬೇಸರಗೊಂಡ ವರಲ್ಲಿ ಮುಖ್ಯರಾದ ಜನ ಇಂಥವರು ನಾಡಿನ ಎಲ್ಲ ಸೀಮೆ ಎಲ್ಲ ತಕ್ಕಾಮೆ ಯಲ್ಲಿಯೂ ಇರುವರು (ಚಿಕರಾ. ೫೩). 'ತಕ್ಕುಮೆ' ಪರಾ.

[ ←ಕೊಡ. ತಕ್ಕಾಮೆ ]

**ತಕ್ಕಾರಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೀಜ : ತಕ್ಕಾರಿ ಯೆಂಬ ಬೀಜವಂ ಚೂರ್ಣವಂ ಮಾಡಿ ನೀರಿನಲ್ಲಿ ಕದರಿ ಗಿಡಗಳ ಬೇರಿಗೆ ಹಾಕಿದರೂ . . . ಆ ಗಿಡಗಳು ಚನ್ನಾಗಿ ವೃದ್ಧಿಯಂ ಹೊಂದುವದಿಲ್ಲ (ಸೌಗಂಧಿ. ೪೩೭-೭೧). 'ತಕ್ಕಿಲ್$_{1}$' ಪರಾ. [ <ಸಂ. ತರ್ಕಾರೀ ]

**ತಕ್ಕಾಳಿ** (ನಾ). ಟೊಮ್ಯಾಟೊ; ಚಪ್ಪರಬದನೆ: ತಕ್ಕಾಳಿ (ಟೊಮ್ಯಾಟೋ) ಬೇರನ್ನು ಕಷಾಯಮಾಡಿ ಕಲ್ನಾರು ಗ ೧ ತೂಕವನ್ನು ಅರೆದು ಕಲಸಿ ತೆಗೆದುಕೊಳ್ಳಲು ಬಹುಮೂತ್ರ ನಿಲ್ಲುವುದು (ಸಕವ್ಯ. ೫೦೧ ಪರಿ) : ಗೂದೆ ಹಣ್ಣು, ಚಪ್ಪರಬದನೆ, ಟೊಮಾಟೋ, ತಕ್ಕಾಳಿ (ಮೃಶಿಗಿ. ೫೦-೧೦೩೦) : ವಿಟಮಿನ್ ಸತ್ವ ಅಧಿಕವಾಗಿರುವುದು ತಕ್ಕಾಳಿ ಹಣ್ಣುಗಳಲ್ಲಿ (ಕರಬಿ. ೪೦).

[ ದೇ.॥ ತಮಿ. ಮಲ. ತಕ್ಕಾಳಿ; ತೆಲು. ತಕ್ಕಲಿ ]

**ತಕ್ಕಿಬಿಕ್ಕಿ** 'ತಕ್ಕಾಬಿಕ್ಕಿ' ನೋ.

**ತಕ್ಕಿಲ್$_{1}$**, ತಕ್ಕಿಲೆ (ನಾ). ಒಂದು ಬಗೆಯ ಮರ ; ತಗ್ಗಿಮರ : ಎಲವಂ ಪಾದರಿ ಹಾಲೆ ನುಗ್ಗೆ . . . ಬೊಬ್ಬುಲಿ ತಕ್ಕಿ[ಪಾಠಾಂ. ತೊಕ್ಕ, ತೊಲ್ಕಿ] ಲ್ತಿರುಕಾಮು ನೆಲ್ಲಿ (ಸೂಕ್ತಿಸು. ೩-೨೩). ತಕ್ಕಿಲೆ: "ಜಯಾ, ಜಯಂತೀ, ತರ್ಕಾರೀ, ನಾದೇಯೀ, ವೈಜಯಂತಿಕಾ-ಶಿ ತಕ್ಕಿಲೇಗಿಡ, ತಗ್ಗೀಸೊಪ್ಪಿನ ಗಿಡ" (ಸಿದ್ಧಾಂತಿ. ೦೦೦): ಈಜಿಗಿಡ, ಅಗ್ನಿಮಂದ, ತಕ್ಕಿಲೆ, ಚಾಟಣಿಗೆ ಮರ (ಮೃಶಿಗಿ. ೬೪-೦೩೦೦).

**ತಕ್ಕಿಲ್$_{2}$**, ತಕಲು, ತಕ್ಕಲಂ, ತಕ್ಕಿಲು, ತರ್ಕಿಲ್ (ನಾ). ವ್ಯವಸಾಯಕ್ಕೆ ಯೋಗ್ಯವಾದ ಭೂಮಿ : ತಕ್ಕಿಲ ೩ ಮತ್ತರ್ಕೆಯುಮಂ . . . ಬಿಟ್ಟರು (ಕಇ. II, ೦೦-೩೧ ; 1080) ; ನೆಸಟುವಾಡವಾ ಗಡಿಂಬದಿಂ ತಕ್ಕಿಲ ನೆಲ ಮತ್ತ ೨ (ಸೌಇಇ. IX-1, ೨೫೩-೭೯ ; 1149) ; ಹಳ್ಳದಿಂ ಪಡುವಲ್ ತಕ್ಕಿಲ ಮತ್ತರು ೩ (ಎಇ. XIV, ೨೭೨-೪೦ ; 1173) ; ಖಂಡಸ್ಫುಟಿತ ಜೀರ್ಣೋದ್ಧಾರವಿನ್ನಿನಿತಕ್ಕಂ ಬಿಟ್ಟ ತಕ್ಕಿಲ ಮತ್ತರ್ ೨ (ಸೌಇಇ. IX-1, ೨೯೭-೬೩ : 1176). ತಕಲು : ಯೆರಡನೆಯ ವರಿಸಕೆ ವ ೨ ಮೂಱನೆಯ ವರಿಸಕೆ ವ ೩ ಯರಿ ಹೊಲ ತಕಲು ನೂಱಕೆ ವ ೧ (ಎಕ. XIV, ತಿರುಮ. ೭೨-೨೩ ; 1309). ತಕ್ಕಲು: ಮಣ್ಣ ಮೊರಟೆ ಕೆಳಗಿರುವ ಕುರುಬರ ತಕ್ಕಲ ಮೂಡಣ ತವಿರೊತ್ತಿನಲ್ಲಿ ನೆಟ್ಟ ಕಲ್ಲು (ಎಕ. XIV, ನಂಜನ. ೨೯೫-೨೦೬ ; 1716). ತಕ್ಕಿಲು : ತೆವರಕೇರಿಯಡ್ಡವಸುಗೆಯ ತಕ್ಕಿಲು ಮತ್ತರು (ಎಇ. XIII, ೪೯-೮೧ ; 1112) : ಹಟ್ಟಣದ ದಾರಿಯಿಂ ತೆಂಕಲು ತಕ್ಕಿಲು ಒಡ್ಡಿಹಟ್ಟಿಯ ಗಡಿಂಬದ ಘಳೆಯಲು ಮತ್ತರು (ಸೌಇಇ. IX-1, ೨೯೭-೪೩ ; 1177) : ಸೋಭನೇಶ್ವರದ ಹೊಲಸ ಮೇರೆ ಮನ್ತ್ರಂ(ತ್ರಂ) ತೋಂಟ್ಟ[ತ]ಕ್ಕಿಲು ಅರವನ್ತ(ತ್ತ)ರು (ಸೌಇಇ. XV, ೦೩೧-೭ ; 1178) ; ಹಲವುತಕ್ಕಿಲ ನಡುವೆ ಸವೆದ ಬೆಳೆಕ್ಕೆಯಂತೆ ಹಲವು ಬಸದಿಯ ನಡುವೆ ಸುರಹೊನ್ನೆ ಬಸದಿ ಯಗ್ಗಲಿಸಿ ಮೆಱೆಯಲು (ಸೋಮಚ. ೪-೦೫). △ ತರ್ಕಿಲ್ : ನಾಗಯ್ಯ ಗೇರಿಯ ಶತದ ತರ್ಕ್ಕಿಲ್ಗೆಯ್ಯ ಮತ್ತರು ೩ (ಕಇ. II, ೯-೧೯ : 1075).

ತಕ್ಕಲು ಕೀಳು = ವ್ಯವಸಾಯದ ಭೂಮಿಯಲ್ಲಿರುವ ಕಳೆಯನ್ನು ಕೀಳಂ,-ಕಿತ್ತುಹಾಕು : ಆ ಸಾಲಿನಲ್ಲಿ ಸ್ವಲ್ಪ ತಕ್ಕಲುಕಿತ್ತು ಹೊಗೆಹಾಕ ಬೇಕೆಂದೂ ಅವರ ವಾದ (ಡಂಗಾಳ್ಯ. ೩೦೩) : ಮೂರು ಕೊಳಗದಷ್ಟು ತಕ್ಕಲು ಕಿತ್ತು ಹೊಗೆ ಹಾಕಿದ್ದರಿಂದ ಸುಂಕಗಿಂಕ ಕಳೆದು ಅರುವತ್ತು ವರಹ ಬಂತು (ಡಂಗಾಳ್ಯ. ೩೦೩).

**ತಕ್ಕಿಲು** 'ತಕ್ಕಿಲ್$_{2}$' ನೋ.

**ತಕ್ಕಿಲೆ** 'ತಕ್ಕಿಲ್$_{1}$' ನೋ.

**ತಕ್ಕಿಸು$_{1}$** (ಕ್ರಿ). ಅಪೇಕ್ಷಿಸು ; ಬಯಸು : ತಕ್ಕಿಸಲೆ ತಕ್ಕ ಶೋಭೆಗೆ ಪಕ್ಕಾದೊಡಮರಸನಲ್ಲಿ ಪುಗಲೊಲ್ಲದೊಡಂ ಪಕ್ಕಣಮುಂ ಬಲ್ಪಿಂದು ಪೊಕ್ಕುವ ನಿಯಮಿಸುವರಾರೊ ಕಣ್ಣಂ ಮನಮಂ (ಲೀಲಾವ. ೮-೪೦) ; ಅಸಮಶರನ ತನುವಾಂತನೊಳೆಸೆಯದು ತನಗಿನಿತು ಶೋಭೆಯೆಂದೊಲವಿಂ ತಕ್ಕಿಸಿದುದು ಕಡುಗಾಡಿಯೆನಲ್ ವಸುದೇವನ ಗಂಡಗಾಡಿ ಗಣನೆಗಳುಂಬಂ (ಮಹಾನೇ. ೪-೨). [ ತಕ್ಕು$_{2}$ + – ಇಸು$_{3}$ ]

**ತಕ್ಕಿಸು$_{2}$** 'ತಟ್ಕಿಸು' ನೋ.

**ತಕ್ಕಿಟಿ** (ಕ್ರಿ). ಸಾಮರ್ಥ್ಯ ತಗ್ಗು ; ಶಕ್ತಿಗುಂದು : ವಿಳಯಜಳಧರದ ವೊಲ್ ಕಡುಮುಳಿಸಿಂ ಖಚರೇಂದ್ರಸೇನೆ ಕವಿದೆನಸುಂ ತಕ್ಕಿಟಿಯೆ ರಿಪು ಬಲದ ಮೇಲಾಗಳೆ ಸುರಿದುದು ತರನೆ ಸರಲ ಬಲುಸರಿವಟೆಯಂ (ಶಾಂತೀಶ್ವ. ೩-೯೩). [ ತಕ್ಕು$_{2}$ + ಇಟಿ ]

**ತಕ್ಕು$_{1}$** (ಕ್ರಿ). ೧. ಪಡೆ ; ತೆಗೆದುಕೊಳ್ಳು : ಎಮ್ಮಣ್ಣ ಪಾತಿಯಿಂ ರಣವ ಜಯಿಸಲು ದಿವ್ಯವಸ್ತುಗಳ ನೀ ತಕ್ಕಿಕೊಂಡು ಬಹುದಯ್ಯಾ ಸೈರಂಧ್ರಿ ಯೆಂದುರೆ ಹರಸಿ ಬೀಳ್ಕೊಟ್ಟಳು (ಲಕ್ಷ್ಮೀಭಾ. ೪-೪-೬). 'ತೆಗೆ$_{1}$' ಪರಾ. ೨. (?) : ಮರೆವ ಮಧುಮಾಸವಿದು ವರ್ಷರ್ತುವಲ್ಲಲೇ ಬೆರಗಿದೇನುಕ್ಕಿ ದಂತೈತಂದು ಪೆರ್ಜಲಂ ಪರಿದುಕ್ಕಿ ತಕ್ಕುತಿದೆ ಮಚ್ಚಿವಾರಾಧನೆಯು ಮೊಂದಲ್ಲದೆರಡು ವೇಳೆ (ಪರಕು. ೦೩-೨೯). [ ? ]

**ತಕ್ಕು$_{2}$**, ತರ್ಕು (ನಾ). ೧. ಶ್ರೇಷ್ಠತೆ ; ಘನತೆ; ದೊಡ್ಡಸ್ತಿಕೆ ; ಹಿರಿಮೆ: ಯೋಗ್ಯತೆ : ಅಂತದಟರನ್ನೊಂದೆಪೊಯ್ಯುದ್ಮೆರಡುಂ ಬಲಮನ್ನನೆ ನೋಡೆ ತಕ್ಕಿನೆನ್ನದಟುಮನೆನ್ನ ವೀರಮುಮನಾಜಿಯೊಳೆನ್ನರಸಂಗೆ ತೋಱುವೆಂ (ಪಂಪಭಾ. ೦೦-೪೦) : ಪುಸಿವುದೆ ತಕ್ಕು ಕೊಟ್ಟಟಿಬಿಕೊಳ್ವುದೆ ಮನ್ತಣಂ (ಎಕ. II, ೧೩೩-೪೫ ; 982) : ತಕ್ಕಿನ ಪವಳದ ಸಂಕೆಯ ಟಿಕ್ಕೆಯ ಮಣಿಗಳನೇಕವುಂ . . . ಸೂಱೆಗೊಳ್ವನವನುತ್ಸವದಿಂ (ಧರ್ಮಾಮೃ. ೨-೩೬) : ಒಕ್ಕಲ್ತನವುಮನಱಿವಿನ ತಕ್ಕುಮನಟಿವವಗುಣಂಗಳೆಮಗೇವುವು(ಬಂಹರಿ. ೦-೨೦) : ಸದ್ವಿದ್ಯರ್ ಸಭಾಮಧ್ಯದೊಳ್ ಪಲಬರ್ ಸತ್ಕವಿಗಿತ್ತ ತಕ್ಕಿನ ಪೆಸರ್ ಸಲ್ವಂತ ನೀಚಂಗೆ . . . ಗಾವಿಲನೊರ್ವಂ ಕುಡೆ ಕೊಂಡ ತೊಂಡು ಪೆಸರಿಂದೇಂ ಸಲ್ವುದೇ ನಿಲ್ವುದೇ (ಧರ್ಮನಾ. ೦-೪೯). ೨. ತಕ್ಕುದು: ಯೋಗ್ಯವಾದುದು ; ಉಚಿತವಾದುದು : ರಕ್ಕಸನ ಮಾಡಮೊಳಗಂ ಪೊಕ್ಕಾಮಂ ಸುಖದಿನಿರ್ದನಾತಂಗೆ ಕರಂ ತಕ್ಕಪ್ಪೆ[ಪಾಠಾಂ. ತಕ್ಕಿಪ]ನ್ನಾತ್ತ್ಮ ಜೆಯುಂ ಮಿಕ್ಕಿದರ್ಧ ನಾಡುಮಂ ನಿತಾಂತಂ ಕುಡುವೆಂ (ಜೀವಸಂ. ೨೦೫-೪೯):

ಮಾರ್ಗಮಂ ತಕ್ಕೈಸಿ ಪನ್ನೆರಡು ಸಾವಿರದ ಗಾವುದಮ್ಮಕ್ಕ್ಯದನುದಿನಕೆ ಪೋಪವನಾರುಯೆನುತಲಾ ಮಂತ್ರಿ ಸಹ ಯೋಚಿಸುತಿರೆ (ತುರಂಗ. ೩೨-೧೧). ೩. ಯೋಗ್ಯವಾದ ಮಾತು ; ನಾಣ್ನುಡಿ ; ಗಾದೆ : ಕಾಲಿಕ್ ಬುದ್ಧವಂಡ ಎದೆ ಚವುಟತ್ರ ಎಂಬ ಕೊಡವ ತಕ್ಕನ್ನು ಅರಿತು ನಡೆಯುವ ವರು ದೊರೆಗಳು (ಹುಂಜಾ. ೮೫) ; ಕೈಲಾಗದವನಿಗೆ ಮೂಗಿನ ತುದಿಯಲ್ಲಿ ಚೊಡಿ ಎಂಬ ತಕ್ಕನ್ನು ನೀನು ಕೇಳಿಲ್ಲವೆ? (ಹುಂಜಾ. ೧೩೦). ೪. ಶೌರ್ಯ; ಸಾಮರ್ಥ್ಯ ; ಪರಾಕ್ರಮ : "ಪನ್ನಿಕೆ, ಪೆಟ್ಟುವೆರ್ಚು, ತಕ್ಕು . . . ಅರ್ವು, ಅಣ್ಮು–ಈ ೮ ಪರಾಕ್ರಮಂ" (ಕಕಸಾ. ೧೩-೨೬೩) ; ನಲ್ಲಂಬಿಂದಿಸೆ ಪುಷ್ಪಬಾಣನೆರ್ದೆಯಂ ಬೆಂಬಿಟ್ಟು ಬೆಳ್ಳಾಗಿ ತಕ್ಕೆಲ್ಲಂ ಕಿಟ್ಟೆರ್ದೆಗೆಟ್ಟು ಜಂಗಮಲತಾ ಸಲ್ಲೀಲೆಯರ್ ಬಾಲೆಯರ್ ಚೆಲ್ಲಂ ಬೇಂಟದ ತೋಟಿಯೊಳ್ ತೊಡರೆ (ಕಾವ್ಯಸಾ. ೫೫೦ ಶೂದ್ರಕ) : ಕಡುಗೆಯ್ಯನಾಗಿ ಶೀಘ್ರಸಂಧಾನವಿಂಸು ಪಶ್ವಗ್ರೀವನ ತಕ್ಕುಂ ಬೇಗಯ್ಯುಯುಂ ಕಿಡೆ (ಶಾಂತಿಪು. ೫-೬೦ ವ) ; ತಕ್ಕಿನಿನೀ ಶನೆಚ್ಚ ತಿಮಿರೇಷುಗಿನೇಷುವನಗ್ನಿಮಿತ್ರ ಬಾಣಕ್ಕಿಹಿಬಾಣವಂ . . . ಅಧೋಕ್ಷಜನೆಚ್ಚು ಪೊಡರ್ಪುದೋಱಿದಂ (ಜಗವಿ. ೧೮-೨೯) : ಧುರದೊಳಿದಿರ್ಚಿದ ಪಗೆವರನುರವಣೆಯಿಂ ಗೆಲ್ದ ತಕ್ಕು . . . ಅಂಗರಕ್ಕೆಗೆ ನಿಜಂ (ಎಕ. V, ಅರಸೀ. ೩೯-೩೦ : 1186) ; ಪಿಕ್ಕರಸನುಂ ತಕ್ಕಂ ಬಿಸುಟ್ಟೋಡಿದಂ (ಪ್ಯಅರಿ. ೧೯೪೦, ೧-೩೨ : 1200) ; ಎಕ್ಕಲಗಳು ತಮ್ಮ ತೆಗೆದ ಜಾಯಿಲಗಳ ನಿಕ್ಕಡಿಮಾಡಿ ಹಾಯ್ದುಂದನು ತ[ಪಾಠಾಂ. ಟ]ಕ್ಕಿನ ದೇಡರ ಕೆಡಹಿದುದನು ಕಂಡಿಕ್ಕಿದನಾ ವನಚರನು (ನೇಮಿಸಂ. ೨-೫೬) ; ಎಕ್ಕೆಯೊಳೊಕ್ಕು ಪಳಂಚುವ ಪಾಂಗಿಂ ತಕ್ಕು ಮಿಗಿಲ್ಕೆಕ್ಕತುಳಂ ಪೊರ್ಕುಳಿವೊಕ್ಕು ಕರಂ ಪಾಡಾಪಾಡಿಯೊಳಾಱದಿಱಿದರ್ ತಮ್ಮೊಳಗೆ (ಜಯುಕಾ. ೬-೩೦). ೫. ಬೆಡಗು ; ರೀತಿ : ಅವಿರಳವಾದ ತುಂಗಕುಚಭಾರದ ತೋಳ್ಸೆಳೆದಿಟ್ಟ ತಕ್ಕಿನೊಳ್ ಕವಣೆಯ ಗುಂಡು ಪಾಯುವ ಮೃಗಾವಳಿ ಪಾಯುವ . . . ಪಾಂಥರೆರ್ದೆ ಪಪ್ಪನೆ ಪಾಱುವವಾ ಪ್ರದೇಶದೊಳ್ (ಅನಂಪು. ೧-೮೨). ೬. ಸ್ನೇಹ ; ಪ್ರೀತಿ : "ತಕ್ಕು, ಅಚ್ಚಿಱು, ಒಚಿಲ್ . . . ಎಱಕಂ, ಓಪು–ಈ ೮ ಸ್ನೇಹಕ್ಕೆ ಪೆಸರ್" (ಕಕಸಾ. ೧೯-೩೯೦); "ತಕ್ಕೆಂಬುದು ನೇಹ ಮಪ್ಪುದು" (ಚತುನಿ. ೩೬) ; "ಎಱಕಂ ತಕ್ಕಚ್ಚಿಱು ಕೂರ್ಪೊರ್ಚಿಲುಂ ಕಾದಲ್ಮೆಯೆನ್ನಲಿವು ಸುಸ್ನೇಹಂ" (ಅವಿಕಂ. ೧೬೩). ೭. ಆಸೆ ; ಇಚ್ಛೆ ; ಉತ್ಸಾಹ : ಕ್ಷಿತಿತಲಮಂ ಗೆಲ್ದಿರ್ದಪ್ರತಿಮಲ್ಲನನಿಕ್ಕಿ ಮುಯ್ಯನೆಣಮಾನದೆ ದರ್ಪಿತ ದುರಿತಮಲ್ಲನುಮನುಡಿವ ತಕ್ಕಿನಿಂ ಸಭೆಗೆ ನಡೆದ ನಿಂದ್ಯಾರ್ಜಿತನಾ (ಆದಿಪು. ೧೪-೧೩೪); ನಡೆತಂದರಾಜಿಗಿರ್ವಲದಲರಾಶಿನಾಯಕರುಮೊರ್ಬರನೊರ್ಬರೆ ಗೆಲ್ವ ತಕ್ಕಿನೊಳ್ (ಪಂಪಭಾ. ೧೧-೫೨) ; ಮುಕ್ಕುಪೋಗದಱುರ್ಕುಮಂ ನೋಟಕರಪ್ಪನಮಪ್ಪವರಿಂ ಪೊಗಱಿಸುವೆನೆಂದು ತಱಿಸಂದು ತಮ್ಮುತಿರ್ವರುಮನಿಕ್ಕುವ ತಕ್ಕು ಕೈಮಿಕ್ಕು ನಿಲೆ (ಶಾಂತಿಪು. ೪-೩೬ ವ) : ಮಹೇಂದ್ರಂ ಪುರಮಂ ಪೊಱಮಟ್ಟು ಮಱುವಕ್ಕಮನಿಕ್ಕುವ ತಕ್ಕು ಮಿಕ್ಕು ಬರೆ ಕಡಂಗಿ ಕಾದುವಲ್ಲಿ (ಪಂಪರಾಮಾ. ೧೧-೫೦ ವ) ; ಪ್ರತಿರೋಧಕನಾರಟಗೊಳ್ವ ತಕ್ಕಿನವಂ (ವಸುಕೋ. ೬೫-೮೨) ; ಈ ಗೋಪಾಲಬಾಲಕರಂ ಮಟ್ಗಿಸುವೆನೆಂಬ ತಕ್ಕು ಮಿಕ್ಕು ಬರೆ (ಜಗವಿ. ೬-೯ ವ) : ಬೆಳ್ಳಿಯ ಬಳ್ಳಿಮಾಡಮಂ ತಕ್ಕಿನೊಳೇಱಿ ನೋಡಿದಳ ದೊರ್ವಳಗುರ್ವಿಪ ಕರ್ಪುವಿಲ್ಲನಂ (ಕಬ್ಬಿಗಕಾ. ೩೪೦). ೮. ನೆರವು; ಬೆಂಬಲ; ಆಶ್ರಯ: 'ತಕ್ಕುಗುಡು' ಪರಾ. ೯. ಕಾವ್ಯದಲ್ಲಿರುವ ಔಚಿತ್ಯ : ಕವಿತೆಯ ಬರ್ದು ಮೆಯ್ಸಿರಿ ಬೆಡಂಗು ರಸಂ ಚದುರೊಳ್ಪು . . . ಸವಿ ತಕ್ಕು ಪೊದಳ್ಕೆ ಬಿನ್ನಣಂ . . . ಪೊಡರ್ಪವರಿನಿತಿಂತುಟೆಂದಳೆದರಂ ಧರೆ, ಪೇಳ್ವೆಯ ಶಾಳ್ದೆಯೆಂದದಂ ? (ಸಂಕಪ. ೬-೧೧). △ ತರ್ಕು : ೪. ನಾಳೆ ನೋಡುವನಾತನ ಚಕ್ರದುರ್ಕುಮಂ ಮೊನೆಗನುಕೂಲರಾಗಿ ನೆಱವಂದ ನೃಪಾಳರ ತೋಳ ತರ್ಕುಮಂ (ಮಹಾನೇ. ೧೧-೯೯). [ <ತಗು ]

ತಕ್ಕು$_{3}$ 'ಟಕ್ಕು$_{1}$' ನೋ.

ತಕ್ಕು$_{4}$ 'ತಟ್ಟು' ನೋ.

ತಕ್ಕು$_{5}$ (ನಾ). ಒಂದು ಬಗೆಯ ಔಷಧಿ ಸಸ್ಯ : "ಷಟ್ಟರಣ – ತಕ್ಕು, ಗರುಗ" (ಓಷಧಿ. ೧೬೩).

ತಕ್ಕುಂಗೆಡು, ತಕ್ಕುಗಿಡು, ತಕ್ಕುಗೆಡು (ಕ್ರಿ). ೧. ಘನತೆಯನ್ನು ಕಳೆದುಕೊಳ್ಳು ; ಹೀನಸ್ಥಿತಿಗೆ ಬರು ; ದೈನ್ಯಾವಸ್ಥೆಯನ್ನು ಹೊಂದು : ಶಾಮಸವಿಲ್ಲದೆ ತಕ್ಕುಂಗೆಡದಭಿರಾಮಂ ರಿಪುನಿರ್ಧೂಮಂ ಶರಣಲಲಾಮಂ ಕೇದೋಧಾಮಂ . . . ಕುಳ್ಳಿದು ಸೋಮೇಶನನೀಕ್ಷಿಸಿ (ಉದ್ಭಟ. ೩-೬೦). ತಕ್ಕುಗಿಡು : ೧. ಬಾಹುಬಲಮಿಲ್ಲದ ರಾಜಪುತ್ರನಂತೆ ತಕ್ಕುಗೆಟ್ಟು (ಶಾಂತಿಪು. ೪-೩೦ ವ). ೨. ಶಕ್ತಿಗುಂದು ; ನಿರ್ಬಲನಾಗು : ತೇರಚ್ಚುಂ ಮುಱಿಯೆಚ್ಚುಂ . . . ಸಾರಥಿಯಂ ಕೆಡೆಯೆಚ್ಚುಂ ಮಾರುತಿಯ ರಣಕ್ಕೆ ತಕ್ಕುಗಿಡದವನಾವಂ (ಪಂಪರಾಮಾ. ೧೧-೫೨). ತಕ್ಕುಗೆಡು : ೧. ತಕ್ಕುಗೆಟ್ಟಿಲ್ಲ ಶಿವಶಿವಯೆನುತ್ತಂ ಜನಂ (ಪುಣ್ಯಾ ರ. ರೀ. ೬೫-೧೬) ; ಚಿತ್ರಜಚಾಪಂ ಮನಮಂ ಸುತ್ತಿರೆ ಮಿಗೆ ತಕ್ಕುಗೆಟ್ಟು ಪೌರೋಹಿತನುದ್ವೃತ್ತತೆಯನೊಕ್ಕು ಧೈರ್ಯಗೆಡುತ್ತಂ ದತ್ತೂರಮಂ ಸವಿದ ಮಾಟ್ಕೆಯೊಳಿರ್ದಂ (ಪುಣ್ಯಾಸ್ರ. ೧-೯೨). [ ತಕ್ಕು$_{2}$ + ಕೆಡು$_{1}$ ]

ತಕ್ಕುಗಿಡು 'ತಕ್ಕುಂಗೆಡು' ನೋ.

ತಕ್ಕುಗುಡು (ಕ್ರಿ). ನೆರವನ್ನು ನೀಡು ; ಒತ್ತಾಸೆಯಾಗು ; ಬೆಂಬಲವಾಗು : ಬೆರಲೆಡೆಯೊಳಡಸಿದ ಕಪ್ಪುರವಳುಕಿನೊಳೆ ನಗಿಸುವ ಱೋಡಗರನಿಡುವ ನೆವದಿಂ ಪರಿವ ಮುಗುಳ್ನಗೆಯ ಮುಗುಳ್ಗಳಿಗಿಂಗೆ ತಕ್ಕುಗುಡುವಂತೆಯುಂ ಕೋಮಳಾಂಗುಳಿಜಾಳಕಂ ಮೆಱೆಯೆ (ಅನಂಪು. ೮-೬ ವ).

[ ತಕ್ಕು$_{2}$ + ಕುಡು$_{1}$ (<ಕೊಡು$_{1}$) ]

ತಕ್ಕುಗೆಡಿಸು (ಕ್ರಿ). ಘನತೆಯನ್ನು ತಗ್ಗಿಸು ; ಹಿರಿಮೆಯನ್ನು ಕುಂದಿಸು : ಕರೆಸೂಮ್ಮೆ ಬಾರದಿರ್ದಱೆ ತಕ್ಕುಗೆಡಿಪೆನೆಂದೊರೆದ ಚೋಳನ ಬಱುನುಡಿಯ ಶಿರಸ[ಸಾ]ವಹಿಸಿಕೊಂಡು (ಭೃಂಗವೇ. ೧-೧೪೩): ಕೆಕ್ಕದಿರ್ಪ ಮುನಿಸಾಪತ್ನ ಸಂತಾನಮಂ ತಕ್ಕುಗೆಡಿಸಿ ರಾಜ್ಯಂಗೆಯ್ವನಾ ಪಣ್ಯವಧುವಾಟಿಯೊಳಗನಂಗಂ (ಉದ್ಭಟ. ೪-೧೬). [ ತಕ್ಕು$_{2}$ + ಕೆಡಿಸು$_{1}$ ]

ತಕ್ಕುಗೆಡು 'ತಕ್ಕುಂಗೆಡು' ನೋ.

ತಕ್ಕುಗೊಡು (ಕ್ರಿ). ವಂಚಿಸು ; ಟಕ್ಕಿಸು : ಚಿಂತಾಗತಿಯುಂ ತನ್ನ ಪೆಸರಂ ನನ್ನಿಮಾಡಿ ತರುಣಗೆ ತಕ್ಕುಗೊಟ್ಟು ಪೆಱಗೆ ಪಾಱಿ ಪೋಗಿ (ಅರ್ಥನೇ. ೩-೧೮ ವ). [ ತಕ್ಕು$_{3}$ (<ಟಕ್ಕು$_{1}$) + ಕೊಡು$_{1}$ ]

ತಕ್ಕುದಕ್ಕು (ನಾ). ಖಡ್ಗಯುದ್ಧದ ಒಂದು ವರಸೆ (?) : ಪುಸಿ ನಸು ವಂಚನೆ ನೋರ್ಪನುಮಸಿದಗಲಿತು ತಕ್ಕುದಕ್ಕು ಪಗೆ ಕಯ್ಯುಗೆ ಕಯ್ಯುಸುರಿನುಸುಳೆಂಬ ಕೇಣದ ಕುಸುರಿಯನಱಿದಿಱಿದು ಮೆಱೆದು ನೆಱೆದುಱದರೆಬರ್ (ಪಂಪಭಾ. ೧೧-೮೦).

[ ಇಲ್ಲಿ ತಕ್ಕು ಮತ್ತು ದಕ್ಕು ಎಂಬವು ಭಿನ್ನ ಶಬ್ದಗಳಿರಬಹುದು ]

ತಕ್ಕುಬೊಕ್ಕು (ನಾ). ಒಂದು ಅನುಕರಣ ಶಬ್ದ : ತೆಱಪಂ ನಿಟ್ಟಿಸಿ ಕುಕಿಱಿದಿಱಿಕಡಂ ಪುಟ್ಟೆ ತಕ್ಕುಬೊಕ್ಕೆನೆಯೆನೆ ತತ್ತಱದಱಿದ ಕಡಿತಲೆಯೊಳ್ಪಱಿಸಿಡಿಲರಹಲ್ಲವೀರನುಂ ಮದ್ದನುಂ (ಎಕ. XV, ಬೇಲೂರು ೩೬೦-೯ ; ಸು. 1200).

ತಕ್ಕುಮೆ (ನಾ). ೧. ತಕ್ಕುದಾಗಿರುವಿಕೆ ; ಔಚಿತ್ಯ : ಉಮೆಗೆ – ತಕ್ಕುಮೆ (ಶಮದ. ೨೦೦ ಪ್ರಯೋ). 'ತಕ್ಕುಮೆಗಿಡು', 'ತಕ್ಕುಮೆವಡೆ' ಪರಾ. ೨. ಯೋಗ್ಯತೆ ; ಅರ್ಹತೆ : ಗಂಡಿಲ್ಲದ ಭಟನ ಯುದ್ಧಮುಂ . . . ಮಿಂಡನ ತಕ್ಕುಮೆಯುಮೊಪ್ಪಲಾಱವು ಜಗದೊಳ್ (ಧರ್ಮಾಮೃ. ೬-೪೯): ಅಧಿಕಾರಿಗಳ್ಗಂ ಬಲ್ಲಿತ್ತಾದ ತಕ್ಕುಮೆಯುಂ ಬಿತ್ತರಿಪ ಬಗೆಬಗೆಯ ಮಹಾಬಿರುದುಗಳಂ ದಯೆಗೆಯ್ಯಲೊಡಲ್ವಡಿಯುಂ (ಮಲ್ಲಿಪ. ೩-೩೬) : ತನ್ನ

ದಂಡಿನವರಿಗೆ ಅವರವರ ತಕ್ಕುಮೆಯಂತೆ ಹಣವನ್ನು ಕೊಟ್ಟು, ಉಳಿದುದನ್ನು ಕಾಬೂಲಿನಲ್ಲಿದ್ದ ತನ್ನ ಪ್ರಜೆಗಳಿಗೆ ಹಂಚಿದನು (ಮೋಬಾದ. ೨೩). ೩. ಶೌರ್ಯ ; ಪರಾಕ್ರಮ : "ಪನ್ನತಿಕೆ ಪೆಟ್ಟು ತಕ್ಕುಮೆಯಿನ್ನುಂ ಕಾಂಸಾಸ ದಪ್ಪುಮದಟಾರ್ಪಗ್ಗಿಂದೆನ್ನಲ್ ಪರಾಕ್ರಮಾಖ್ಯಂ" (ಕವಿಕಂ. ೧೨೩). 'ತಕ್ಕೂರ್ಮೆ$_1$' ಪರಾ. [ ತಕ್ಕು$_2$ + – ಉಮೆ$_1$ ]

**ತಕ್ಕುಮೆಗಿಡು** (ಕ್ರಿ). ಔಚಿತ್ಯವಿಹಾರು : ನಿಮ್ಮ ಬಗೆಯ ದ್ರೋಹಿ ದುರಾತ್ಮರಿಗೆ ತಕ್ಕುಮೆಗಿಡದ ಒಂದೇ ದಂಡನೆ ಎಂದು ತರಿಸಂದು ತೀರುಕಣಿಗೊಟ್ಟರುವರು (ಚಟ್ಟಿಅ. ೨೦೯-೨೨). [ ತಕ್ಕುಮೆ + ಕಿಡು (<ಕೆಡು$_1$) ]

**ತಕ್ಕುಮೆವಡೆ** (ಕ್ರಿ). ೧. ಔಚಿತ್ಯವನ್ನು ಪಡೆ ; ತಕ್ಕುದಾಗಿರು : ಮಹಾರಾಜ ಸನ್ನಿಧಿಯ ಭೋಗೋಪಭೋಗಗಳಿಗೆ ತಕ್ಕುಮೆವಡೆದ, ಉಪಸ್ಕರಾಲಂಕಾರಾದಿ ವಸ್ತು ಪ್ರಪಂಚವು . . . ರಂಜಿಸುತ್ತಿರುವುದು (ಚಟ್ಟಿಅ. ೧೩೮-೬) : ಮಹಾರಾಣಿಗೆ ತಕ್ಕುಮೆವಡೆದ ಬೀಡಾರವನ್ನು ನಿಮಗೆಂದೇ ಅಣಿಮಾಡಲಾಗಿದೆ (ಸವತಿ. ೨೬೯). ೨. ಘನತೆಯನ್ನು ಪಡೆ : ದುಃಖದಿಂ ಪರಿಪಕ್ವವಾದ ; ತಕ್ಕುಮೆವಡೆದ (ಸಂಸಪ. ೨೩-೧೭).

[ ತಕ್ಕುಮೆ + ಪಡೆ$_1$ ]

**ತಕ್ಕೂರ್ಮೆ$_1$** (ನಾ). ಹಿರಿತನ ; ದೊಡ್ಡಸ್ತಿಕೆ ; ಘನತೆ : ತನ್ನದೊಂದು ಸವಿಗಂ ಸೋಲಕ್ಕಮಿತ್ತಂ ನಿಜಕ್ರಮಮುಮಂ ತನ್ನಯ ಬೇಟದಾಕೆಯ ಮಗಂಗೆಂದೊಂದವಪ್ಪಾತಿ ಲೋಕಮನಾವರ್ಜಿಸೆ ಬಟ್ಟೊಡನ್ನ ಕುಲಮುಂ ತಕ್ಕೂ[ಪಾಠಾಂ. ತ್ಕೂ]ರ್ಮೆಯುಂ ಮಾಸದೆ (ಪಂಪಭಾ. ೧-೭೦) ; ಪೇಸುಗೆಗೆಟ್ಟೀ ನಾಣವುತ್ತಪ್ಪುಬ್ಜಗಟದೂಳೇನಮ್ಮ ತಕ್ಕೂರ್ಮೆಯುಂಟೇ (ಶಾಂತಿಪು. ೬-೮೭) ; ಸರ್ವ್ವ ಜನೋಪಕಾರಿ ತಕ್ಕೂರ್ಮ್ಮೆಯ ಜನ್ಮಭೂಮಿ (ಸೌಇಇ. XI-ii, ೧೩೩-೨೪ : 1087) ; ಕಲಿಯುಂ ಛಾಗಿಯುಮಿನ್ನರಾರ್ ಮನುಕುಲರ್ ಮುನ್ನಾದರೆಂಬನ್ನೆಗಂ ನೆಲನಂ ನೇಸಱುಮುಳ್ಳಿನಂ ನಿಲಿಸಿದಂ ತಕ್ಕೂ[ಪಾಠಾಂ. ತ್ಕೂ]ರ್ಮೆಯಂ ಪೆರ್ಮೆಯಂ (ಪಂಪಾಮಾ. ೬-೦೭೦). [ ತಕ್ಕು$_2$ + ಊರ್ಮೆ. /ತಮಿ. ತಕ್ಕೋರ್ಮೈ ]

**ತಕ್ಕೂರ್ಮೆ$_2$** (ನಾ). ಪ್ರೀತಿ ; ಸ್ನೇಹ : ಬರ್ಮ್ಮೆಯನೀಗಳೆಯ್ದೆ ಪರಿಭಾವಿಸಿ ನೋಳ್ಪಡೆ ಮೇರೆನಿಪ್ಪನಾ ಧರ್ಮ್ಮತನೂಭವಂಗೆನುತ ಬಣ್ಣಿಪುದೀ ಜಗಮೆಲ್ಲ ಮೊಲ್ದು ತಕ್ಕೂರ್ಮೆಯಿನೆನ್ನೊಡೇವೊಗಳ್ವನಿಂ ಪೊಗಳ್ವಂ ಬುಧಕಲ್ಪವೃಕ್ಷನಂ (ಕರ್ಣಾ.ಶಾ. ೮-೧೬ : 1147). [ ತಕ್ಕು$_2$ + ಕೂರ್ಮೆ ]

**ತಕ್ಕೂರ್ಮೆಗೆಡು** (ಕ್ರಿ). ಘನತೆಯಿಲ್ಲವಾಗು ; ಯೋಗ್ಯವಾದುದನ್ನು ಕಡೆಗಣಿಸು : ಏಟಿನಕ್ಕೆ ತೆರಳ್ವನ್ನವಮಾಂ ಪೊಱಮಟ್ಟೆನೆಂದು ಕೇಳ್ದು ಮಗಲ್ದಿರಲಾಱದೊಂದು ಮೋಹದಿಂ ಬೆಂಬತ್ತಿದ ನಿನ್ನಂ ತಕ್ಕೂರ್ಮೆಗೆಟ್ಟುಂ ಪೇಟದೆಯುಮಾನೆ ಪಟುವಿಂಗಟ್ಟಿದನೇ (ರಾಮಾಶ್ವ. ೪೩-೨೨).

[ ತಕ್ಕೂರ್ಮೆ$_1$ + ಕೆಡು$_1$ ]

**ತಕ್ಕೆ$_1$** 'ತಟ್ಕೆ' ನೋ.

**ತಕ್ಕೆ$_2$** (ನಾ). ಯೋಗ್ಯಳಾದವಳು ; ತಕ್ಕವಳು : ನಿಮ್ಮಡಿಗಾಹಾರದಾನಂ ಕುಡಲ್ ತಕ್ಕೆನಲ್ಲೆನಾಂ ಸೂಳೆಯಂ (ಧಾಪುಂಪು. ೩೮-೩೦).

[ ತಕ್ಕ$_1$ + – ಎ$_2$ ]

**ತಕ್ಕೆ$_3$, ಟಕ್ಕೆ$_1$, ತೆಕ್ಕೆ$_2$** (ನಾ). ದಿಂಬು ; ಒರಗುದಿಂಬು ; ಲೋಡು : ಕಚೇರಿಯ ತುಂಬ ಹಾಸಿದೆ ; ನಟ್ಟನಡುವೆ ಎದುರಿನ ಗೋಡೆಗೆ ಒಂದು ತಕ್ಕೆ (ವೃದ್ಧಾ. ೯) : ಹಾಸಿದ್ದ ಹೊಸ ಜಮಖಾನೆಯ ಮೇಲೆ ತಕ್ಕೆಗೆ ಒರಗಿ ಚೆನ್ನಪ್ಪ ಕುಳಿತುಕೊಂಡಿದ್ದ (ಜನಜೀ. ೩೪). **ಟಕ್ಕೆ$_1$**: ಮೂರೆಲೆ ಆಟ ಆಡಲು ಕುಳಿತಿದ್ದಾರೆ. ಹತ್ತಿರ ಒಂದೆರಡು ಟಕ್ಕೆಗಳು (ಶಿಡುಗು. ೯೭). **ತೆಕ್ಕೆ$_2$** : ಗಾದಿಗಳನ್ನು ಜೋಡಿಸಿ, ಅವರ ತೆಕ್ಕೆಯನ್ನೇ ತಲೆಗಿಂಬುಮಾಡಿ ನಾನು ನನ್ನ ಸಚ್ಚಿಕೆಯನ್ನು ಸಜ್ಜುಗೊಳಿಸಿದೆ (ದೀಪಹ. II. ೦೮೦).

[ ←ಅರ. ಪಾರ. ಹಿಂ. ತಕಿಯಾ ; ಮರಾ. ತಕಿಯಾ, ತಕ್ಯಾ ]

**ತಕ್ಕೆಗಟ್ಟು$_1$** 'ತೆಕ್ಕೆಗಟ್ಟು' ನೋ.

**ತಕ್ಕೆಗಟ್ಟು$_2$** (ನಾ). ಅಪ್ಪುಗೆಯ ಹಿಡಿತ; ಆಲಿಂಗನದ ಬಂಧನ: ಬಟ್ಟೆಗರ ಬಗಸೆಗಣ್ಣಿಂ ಕರೆದು ಸವಿದಕ್ಕೆಗಟ್ಟನೊಳ್ಪಾಸಿಕೆಯೊಳಿಟ್ಟಧರಪಾನಮುಂ ಕೊಟ್ಟು (ಪದ್ಮಾ. ೮-೧೦) ; ಪಟುಭಟರು . . . ಸುರಾಂಗನೆಯರ ತೋಳ ತಕ್ಕೆಗಟ್ಟನೊಳೊಜಗಿದರು (ಕುಮಾರಾಮ. ೦೨-೬೭).

[ ತಕ್ಕೆ$_1$ (<ತಟ್ಕೆ) + ಕಟ್ಟು$_2$ ]

**ತಕ್ಕೆಗೊಳ್** 'ತಟ್ಕೆಗೊಳ್' ನೋ.

**ತಕ್ಕೆಗೊಳಿಸು** (ಕ್ರಿ). ಅಪ್ಪುಗೆಗೆ ಒಳಪಡಿಸು; ತಬ್ಬಿಕೊಳ್ಳು: ಹೊಸಹೊನ್ನ ಬಿಂದಿಗೆದುಂಬಿಯೋಕುಳಿಯ ಇಂದಿಗೆ ಸುಖ ಸಿದ್ಧಿಸಿತೆಂದು ಚೆಲ್ಲಿದರುದು ಕೃಷ್ಣನ ತಕ್ಕೆಗೊಳಿಸಿ (ಮೋಹತ. ೧೪-೬೯).

[ ತಕ್ಕೆಗೊಳ್ (<ತಟ್ಕೆಗೊಳ್) + – ಇಸು$_2$ ]

**ತಕ್ಕೆಬೀಳು, ತಳಿಕೆಬೀಳು, ತೆಕ್ಕೆಬೀಳು** (ಕ್ರಿ). ತೋಳುಗಳಿಂದ ಗಟ್ಟಿಯಾಗಿ ಅವುಚಿಕೊಳ್ಳು ; ತಬ್ಬು : ನಾನೂ ಅಳುತ್ತ ಅಮ್ಮನನ್ನು ತಕ್ಕೆಬಿದ್ದೆ (ತಂದುಟಿ. ೨೦) : ನನಗೆ ಚೆಲೋ ಚೆಲೋ ಗೊಂಬೆ ತಂದಿದ್ದೀಯಾ . . . ಕೊರಳಿಗೆ ತಕ್ಕೆಬಿದ್ದು ಮಗು ಕೇಳಿತು (ಎರಸಿ. ೩). **ತಳಿಕೆಬೀಳು** : ಅವಳು ಕಣ್ತೆರೆದುದನ್ನು ಕಂಡು ವಿದ್ಯ ಹಾರಿಹೋಗಿ ಅವಳ ಕೊರಳಿಗೆ ತಳಿಕೆಬಿದ್ದಳು (ಪ್ರೇಮೂಶ್ರ. ೬೦). **ತೆಕ್ಕೆಬೀಳು** : "ಅಪ್ಪಯ್ಯ" ಎಂದು ಶಾಸ್ತ್ರಿಗಳಿಗೆ ತೆಕ್ಕೆಬಿದ್ದು ತಡೆದಷ್ಟೂ ಅವಳಿಗೆ ಅಳು ಉಕ್ಕಿ ಬರುತ್ತಿತ್ತು (ಜೊಸಕ್ಕ. ೨೨) ; ಭಯ್ಯಾ ಮಲ್ಲನನ್ನು ತೆಕ್ಕೆಬಿದ್ದು ಅಳಹತ್ತಿದ (ಜೀದಾನ. ೦೨೭).

[ ತಕ್ಕೆ$_1$ (<ತಟ್ಕೆ) + ಬೀಳು$_1$ (<ಬೀೞ್$_1$) ]

**ತಕ್ಕೆಮುಕ್ಕೆ, ತೆಕಿಮಂಕ್ಕಿ, ತೆಕ್ಕಾಮಂಕ್ಕೆ, ತಕ್ಕಿಮುಂಕ್ಕಿ** (ನಾ). ಬಿಗಿಯಾಗಿ ಹಿಡಿದುಕೊಳ್ಳುವಿಕೆ ; ಗಟ್ಟಿಯಾಗಿ ತಬ್ಬಿಕೊಳ್ಳುವುದು : ಒಬ್ಬರನೊಬ್ಬರು ತಕ್ಕೆಮುಕ್ಕೆಯಲ್ಲಿ ಹಿಚುಕಿ ಅಸುವನ್ನು ಹಿಂಡಲಣಿಯಾದ ವೀರರಿಬ್ಬರು ಒಬ್ಬರನ್ನೊಬ್ಬರು ಬಿಗಿದಪ್ಪಿಕೊಂಡು ಒಬ್ಬರೊಬ್ಬರ ಹೃದಯವನ್ನು ಸೂರೆಗೊಂಡರು (ಕವೀರ. ೬೩). **ತೆಕಿಮುಕ್ಕಿ** : 'ತೆಕಿಮುಕ್ಕಿಬೀಳಂ' ಪರಾ. **ತೆಕ್ಕಾಮುಕ್ಕೆ**: 'ತೆಕ್ಕಾಮುಕ್ಕೆಬೀಳಂ' ಪರಾ. **ತಕ್ಕಿಮುಕ್ಕಿ** : 'ತೆಕ್ಕಿಮಂಕ್ಕಿಬೀಳು' ಪರಾ. [ <ತಕ್ಕೆ$_1$ ]

**ತಕ್ಕೆಯ್ಸು** 'ತಟ್ಕೈಸು' ನೋ.

**ತಕ್ಕೆವರ್** (ಕ್ರಿ). ಗಂಅಪುಗೂಡು : ವಾಸವವ್ಯರಿ ಮತ್ತ ಮಗುಟಿಟ್ಟನ್ನೊಳೆ .ಕೀಳ್ಗನದಟ್ಟಿ ಪ್ರಟ್ಟೆಯಭ್ಯಾಸನಿಮಿತ್ತದಿಂದಿರದೆ ಬರ್ಚಮನುತ್ತಮ ತಕ್ಕೆವಂದು ಕೈಲಾಸಮನಂತಮಾಯ್ತನೆ ವಿಯತ್ತಳವಂ ತುಡುಕುತ್ತು ಮಿರ್ಪವೋಲ್ ಭಾಸುರಮಾಗೆ ಸಾಂದ್ರ ಶಶಿಕಾಂತದ ದೇವನಿವಾಸ ಕೋಟಿಗಳ್ (ಕುಸುಮಾ. ೦೦-೦೩೯). [ ತಕ್ಕೆ$_1$ (<ತಟ್ಕೆ) + ಬರ್$_1$ ]

**ತಕ್ಕೈಸು** 'ತಟ್ಕೈಸು' ನೋ.

**ತಕ್ಕೋಲ$_1$** (ನಾ). ಒಂದು ಊರಿನ ಹೆಸರು. ಈ ತಮಿಳುನಾಡಿನ ಅರಕೋಣದ ಬಳಿಯ ಈಗಿನ ತಕ್ಕೋಲ : ಶ್ರೀಮತ್ ಕನ್ನರದೇವ ಅಟ್ಟೋವದೆ ಚೋಳರಾಜಾದಿತ್ಯನ ಮೇಲೆ ಬನ್ದು ತಕ್ಕೋಲದೊಳ್ಕಾದಿ ಕೊನ್ದು ಬಿಜಯಂಗೆಯ್ಯುತ್ತಿರ್ದ್ದು (ಎಕ. III, ಮಂಡ್ಯ. ೪೧-೪ : ೯೫೦).

**ತಕ್ಕೋಲ$_2$** (ನಾ). ೧. ಒಂದು ಬಗೆಯ ಸುಗಂಧದ ವೃಕ್ಷ ಮತ್ತು ಅದರ ಕಾಯಿ : "ಪಂಚಸುಗಂಧ– ಶ್ರೀಗಂಧ, ತಕ್ಕೋಲ, ಜಾಯಿಫಲ, ಪದ್ಮಕೇಸರ, ತಾವರೆಯ ಕೇಸರ" (ಬಪಧಿ. ೯೨) : ಕಾಚೀಕಾಯಿ, ಲವಂಗ, ಚವ್ಯ, ತಕ್ಕೋಲ . . . ಇವಿಷ್ಟನ್ನೂ ಪ್ರತ್ಯೇಕ ಒಂದು ವರಹ ತೂಕವ ಸಣ್ಣನಾಗಿ ಕತ್ತರಿಸಿ ಚೂರ್ಣಿಸಿ (ವೃದ್ಧಸಾ. II, ೩೩) ; ಬದರಿ ತಕ್ಕೋಲ ನಾರಿಕೇಳಾಶ್ವತ್ಥ . . . ಭೂರುಹವೃಂದದಿಂ ಪೂಜ್ಯಮಾಗಿರ್ಪ ಆರಾಮಗಳು ಎಸೆವುತಿರ್ದವು (ಕುಚೇಲೋ. ೪೪) : ಜಂಜೀರ ಮಾಧವೀ ಮಧೂಕ ತಾಲ ತಕ್ಕೋಲ ತಮಾಲ ಹಿಂತಾಳ . . . ಸುಮನಸಭರಿತವಾಗಿ

ಶೋಭಿಸುತಲಿತ್ತು (ಪುರಾವಿ. ೯೬). ೨. ತಕ್ಕೋಲವೃಕ್ಷದಿಂದಾದ ಒಂದು ಬಗೆಯ ಸುಗಂಧದ್ರವ್ಯ,-ಸುಗಂಧದ ಔಷಧದ್ರವ್ಯ : ಕುಂಕುಮ ಕಸ್ತೂರೀ ಲವಂಗ ತಕ್ಕೋಲಮನಂಕ ಮೃಗಾಂಕವಹ್ನಿ ಚಂದ್ರಮ ಹಿಮ ಕೃತ್ಪುರವಿಂತದೊಳರೆಗೆ ಗಂಧೋದಕದಿಂ (ಲೋಕೋಪ. ೬-೬). 'ಕಕ್ಕೋಲ' ಪರಾ. [ ಸಂ. ]

**ತಕ್ಕೋಲಕ** (ನಾ). = ತಕ್ಕೋಲ$_{2}$ ೨ : "ತಕ್ಕೋಲ ವೃಕ್ಷದ ಪರಿಮಳದ್ರವ್ಯ" (ಅಮರ. ಟೀಕ). [ ಸಂ. ]

**ತಕ್ಕೋಲಪುಟ್ಟಿ** (ನಾ). = ತಕ್ಕೋಲ$_{2}$ ೨ : "ತಕ್ಕೋಲಂ-ತಕ್ಕೋಲಪುಟ್ಟಿ" (ಓಷಧಿ. ೬೫) : " ನಿಷ್ಕುಟಂ – ತಕ್ಕೋಲಪುಟ್ಟಿ " (ಓಷಧಿ. ೯೬).

[ ತಕ್ಕೋಲ$_{2}$ + ಪುಟ್ಟಿ ? ]

**ತಕ್ತ್ರರೋಹಿತ** (ನಾ). ಒಂದು ಬಗೆಯ ಗಿಡ : ನೀರು ಕಣಗಲು, ತಕ್ತ್ರರೋಹಿತ, ನೀರುಸಣ್ಣೆಸೊಪ್ಪು (ಮೃಶಗಿ. ೬೩-೧೨೯೧). [ ℙಇದು 'ತಿಕ್ತ್ರರೋಹಿತ' ಎಂಬುದರ ಅಪಲಿಖಿತವಿರಬಹುದು]

**ತಕ್ತ್ರರೋಹಿತಕ** (ನಾ). ಒಂದು ಬಗೆಯ ಗಿಡ : ಮುಳ್ಳುಮುತ್ತಲ, ತಕ್ತ್ರರೋಹಿತಕ, ರೋಹಿತಕ (ಮೃಶಗಿ. ೮-೧೩೧). 'ತಕ್ತ್ರರೋಹಿತ' ಪರಾ.

[ ? ]

**ತಕ್ರ** (ನಾ). (ನಾಲ್ಕನೆಯ ಒಂದು ಭಾಗದಷ್ಟು) ನೀರು ಬೆರಸಿ ಕಡೆದ ಮೊಸರು; ಮಜ್ಜಿಗೆ: "ಗೋರಸ ದಂಡಾಹತ ಮಥಿತಾರಿಷ್ಟೋದಶ್ವಿದಾಹ್ವ ಮಂತದು ತಕ್ರಂ" (ವಸ್ತುಕೋ. ೯೨-೧): ಆಲದ ಬೀಟಲನರೆದು ತಕ್ರದೊಳ್ ಕುಡಿಯುಲೊಡನೆಯತಿಸಾರರೋಗವಾಗಳೆ ಕಿಡುಗುಂ(ಲೋಕೋಪ. ೯-೧೦೯): ಕಪಿಯುಂ ಗಾಣಿಗ ಪಾವು ಕಾಷ್ಠಜಿನ ತಕ್ರಂ . . . ಧೂಮಮುಂ ನಿಪುಣರ್ ಕಂಡರೆ ಪೋಗರ್ಪ (ಸೋಮೇಶ. ೬೮) : ಹಾಲೊಡೆಯ ಕಡೆದದನು ತಕ್ರವಾಗಿಪುದು . . . ಹಳದ ಹೊಸತಾಗಿಪುದು ಬಾಳಿಗಿದ ಚಿರಧರ್ಮ (ಮಂಕುಕ. ೨೩೨). [ ಸಂ. ]

**ತಕ್ರತೈಲ** (ನಾ). ಮಜ್ಜಿಗೆಯಲ್ಲಿ ಎಣ್ಣೆ ಮಂತ್ರಿತರ ಔಷಧಿವಸ್ತುಗಳನ್ನು ಹಾಕಿ ಸಿದ್ಧಪಡಿಸಿದ ಒಂದು ಬಗೆಯ ಔಷಧಿ : ತಕ್ರತೈಲ – ಒಂದು ಕೊಳಗ ಮಜ್ಜಿಗೆಯಲ್ಲಿ ಒಂದು ಬಳ್ಳ ಎಣ್ಣೆಯಂ ಹನಿಸಿ ಪಾನಾಭ್ಯಂಗನ ನಸ್ಯಂಗಳಂ ಮಾಡಲು . . . ವಾತರೋಗ ಸಹ ಗುಣಮಕ್ಕುಂ (ಕಕವ್ಯ.೦೦೫).

[ ತಕ್ರ + ತೈಲ ]

**ತಕ್ರಬಲಿ** (ನಾ). ಮೂಲಂಗಿ, ಈರುಳ್ಳಿ ಹಾಗೂ ಹಸಿಶುಂಠಿಗಳಿಗೆ ಮಜ್ಜಿಗೆ ಅಥವಾ ಹುಳಿ ಹಾಕಿ ಮಾಡುವ ಒಂದು ಬಗೆಯ ವ್ಯಂಜನ ಪದಾರ್ಥ : " ಮುಲ್ಲಂಗಿ ಮೊದಲಾದವುಳ್ಳಿಯಲ್ಲಂಗಳೊಳ್ ಪುಳಿವೆರಸಲವು ತಕ್ರಬಲಿ [ಪಾಠಾಂ. ತಕ್ರಕಂಬಲಿ, ಸಸ್ಯಬಲಿ]ಗಳಕ್ಕುಂ " (ಮಂಗರಾ. ೬೫-೬).

[ ತಕ್ರ + ? ]

**ತಕ್ರಾರ** 'ತಕರಾರು' ನೋ.

**ತಕ್ರಾರು** 'ತಕರಾರು' ನೋ.

**ತಕ್ರಿ** (ನಾ). ಒಂದು ಬಗೆಯ ಪೊದರು,-ಕಂಟಿ : " ಪಂಚಾಂಗುಲಿ – ಅವ್ವರಣಿ, ತಕ್ರಿ " (ಓಷಧಿ. ೯೩). [ ? ]

**ತಕ್ಕೀರು** 'ತಕ್ಸೀರು' ನೋ.

**ತಕ್ಷ** (ನಾ). ೧. ಮರಗೆಲಸ ಮಾಡುವವನು ; ಬಡಗಿ. ೨. ಸ್ಥಪತಿ ; ಶಿಲ್ಪಿ : ಪವನಂಜಯನೆಂಬ ತುರಂಗರತ್ನದಿಂದಂ ಭದ್ರಮುಖನೆಂಬ ತಕ್ಷನಿಂದಂ . ಪದಿನೆಣ್ಬಾಸಿರ್ವರ್ ಮ್ಲೇಚ್ಛರಾಜರಿಂದಂ ನೆಟ್ಟೈಶ್ವರ್ಯಂ (ಶಾಂತಿಪು. ೧೧-೮೪ ವ). [ ಸಂ. ತಕ್ಷನ್ ]

**ತಕ್ಷಕ** (ನಾ). ೧. ಬಡಗಿ ; ಮರಗೆಲಸ ಮಾಡುವವನು : " ವರ್ಧಕಿ ದಲ್ ರಥಕಾರಂ ತ್ವಷ್ಟ್ರ ಕಾಷ್ಠತಟ್ ತಕ್ಷಕಾಭಿಧಾನಮೆನಿಕ್ಕುಂ " (ವಸ್ತುಕೋ. ೬೪-೭೩) : ತಕ್ಷಕರು, ಚಿತ್ರಕಾರರು, ವೈದ್ಯರು, ಗಾಯಕರು, ಕವಿಗಳು ಎಲ್ಲರೂ ಸೇರಿ, ಆ ಚರಿತ್ರೆಯನ್ನು . . . ಒಂದು ಉಜ್ವಲ ಪ್ರಕರಣವನಿಸಿದ್ದಾರೆ (ಜೀವಸಾ. ೦೦). 'ತಕ್ಷಪತಿ' ಪರಾ. ೨. ಅಷ್ಟಫಣಿಗಳಲ್ಲಿ ಒಂದು; ವಾಸುಕಿಯ ಸಹೋದರ: ಇಂದ್ರಾಗ್ನಿ ಮೊದಲಾದೆಂಟು ದಿಕ್ಕಿನ ಭೂಮಿಯಂ ಕ್ರಮದಿಂ ಪೊತ್ತು ಅನಂತ ತಕ್ಷಕ . . . ಕಾಲವೆಂಬಷ್ಟಕುಲಫಣಿಗಳಿರ್ಕು೯ಂ (ವಿವೇಕ. ೧೬೬) : ಅಗ್ನಿಗೆ ತೃಪ್ತಿಯಾಯಿತು; ಆದರೆ ತಕ್ಷಕನು ತಪ್ಪಿಸಿಕೊಂಡು ಕುರುಕ್ಷೇತ್ರಕ್ಕೆ ಹೊರಟುಹೋದನು (ವಡಭಾ. ೬೪). ೩. ಒಂದು ಬಗೆಯ ಹಾವು,-ಸರ್ಪ : ತಕ್ಷಕಭೂಷಣ ಪಕ್ಷಿವಾಹನವಿನುತ ದಕ್ಷಶಿಕ್ಷಣನಿಪುಣಜಗದೇಕಶರಣ (ಯುಗಿಕ. ೨೦) : ಬೆನ್ನಿನಲ್ಲಿ ಸ್ವಸ್ತಿಕ ಲಾಂಛನ ಉಳ್ಳುದು ತಕ್ಷಕನೆನಿಸಿಕೊಂಬುದು (ವಿಷಚಿ. ೨-೧). [ ಸಂ. ]

**ತಕ್ಷಕಪತಿ** (ನಾ). ಶ್ರೇಷ್ಠನಾದ ಶಿಲ್ಪಿ : ಕಾಮವೃಷ್ಟಿಯೆಂಬ ಭಂಡಾರಿಗನುಂ ಭದ್ರಮುಖನೆಂಬ ತಕ್ಷಕಪತಿಯುಂ . . . ಆತ್ಮೀಯ ಸಾಮ್ರಾಜ್ಯಪರಿಚ್ಛೇದ ಮಾಗೆ (ಆದಿಪು. ೧೫-೩ ವ). [ ತಕ್ಷಕ + ಪತಿ$_{3}$ ]

**ತಕ್ಷಕರತ್ನ** (ನಾ). [ಜೈನ] ಏಳು ಜೀವರತ್ನಗಳಲ್ಲಿ ಒಂದು; ವಾಸ್ತುಶಿಲ್ಪಿ : ಸ್ಥಪತಿ : ಅನುಸ್ಮರಣ ಮಾತ್ರ ನಿಷ್ಪಾದಿತ ಸಪ್ತತಳಾತಿಪ್ರಾಸಾದಪ್ರಕರನುಮಪ್ಪ ಭದ್ರಮುಖನೆಂಬ ತಕ್ಷಕರತ್ನಮುಂ (ಆದಿಪು. ೧೧-೩ ವ).

[ ತಕ್ಷಕ + ರತ್ನ ]

**ತಕ್ಷಣ**$_{1}$ 'ತತುಕ್ಷಣ$_{1}$' ನೋ.

**ತಕ್ಷಣ**$_{2}$ 'ತತುಕ್ಷಣ$_{2}$' ನೋ.

**ತಕ್ಷಣಿ** (ನಾ). ಮರವನ್ನು ಕೆತ್ತುವ ಒಂದು ಸಾಧನ ; ಬಾಚಿ : " ವಾಸಿ ತಕ್ಷಣೀನಾಮಂ " (ವಸ್ತುಕೋ. ೫೧-೩೬).

[ ಸಂ. ತಕ್ಷಣೀ ]

**ತಕ್ಷೀರು** 'ತಕ್ಸೀರಂ' ನೋ.

**ತಕ್ಷೀರುವಂತ** (ನಾ). ತಪ್ಪಿತಸ್ಥ ; ಅಪರಾಧಿ : ಈ ಇಬ್ಬರು ಚೇಲೇರು ಬಹಳ ತಕ್ಷೀರುವಂತರಿದ್ದಾರೆ (ರಾಜೇಂದ್ರ. ೫೬).

[ ತಕ್ಷೀರು (<ತಕ್ಸೀರು) + –ವಂತ ]

**ತಕ್ಷೋಪಜೀವ್ಯ** (ನಾ). ಮರಗೆಲಸದಿಂದ ಉಪಜೀವನ ಮಾಡುವವನು: ರವಿ ಚಾಪಕ್ಷೇತ್ರದೊಳ್ ನಿಂದೊಡೆ ಧನಪತಿ ಸತ್ಪೂಜಿತಂ . . . ತಕ್ಷೋ[ಪಾಠಾಂ. ಕಷ್ಟೋ]ಪಜೀವ್ಯಂ (ಜಾತತಿ. ೦೬-೧೬).

[ ಸಂ. (ತಕ್ಷ + ಉಪಜೀವ್ಯ) ]

**ತಕ್ಸೀರ್** 'ತಕ್ಸೀರು' ನೋ.

**ತಕ್ಸೀರು, ತಕಶೀರು, ತಕ್ಕೀರು, ತಕ್ಷೀರಂ, ತಕ್ಸೀರ್** (ನಾ). ಅಪರಾಧ; ತಪ್ಪು ; ದೋಷ : ಯಾವುದಾದರೂ ಒಂದು ತಕ್ಸೀರಿನಲ್ಲಿ ಶಿಕ್ಷೆಯನ್ನು ಪಡೆದು (ಗ್ರಾಮೂಳ. ೧೦) : ಕೋರ್ಟಿನಲ್ಲಿ ಕ್ರಮವಾದ ವಿಚಾರಣೆಯಾಗಿ ತಕ್ಸೀರು ರುಜುವಾತಾದ ಮೇಲೆ ಶಿಕ್ಷೆವಿಧಿಸಬೇಕು (ಸಕತಿ. ೮೬). **ತಕಶೀರು**: 'ತಕಶೀರುದಾರ' ಪರಾ. **ತಕ್ಕೀರು** : ಮರಣದಂಡನೆ ತಕ್ಕೀರನ್ನು ಮರೆಪಡಿಸುವದಕ್ಕೆ ಇನಾಂ ಕೊಡುವದಾಗಿ ಹೇಳಿದರೆ . . . ಖೈದು ಅಥವಾ ಜುಲ್ಮಾನೆ (ಗ್ರಾಮೂಳ. ೧೮೪). **ತಕ್ಷೀರು** : ಇದು ಹೊರ್ತು ನಮ್ಮಿಂದಾಯೇನಾದರೂ ತಕ್ಷೀರು ಆಗಲಿಲ್ಲಾ (ರಾಜೇಂದ್ರ. ೦೦೮) : ವಲ್ಲಭಭಾಯಿಯವರು ನ್ಯಾಯಾಧೀಶರ ಮುಂದೆ ಯಾವುದೋ ಒಂದು ತಕ್ಷೀರಿನ ಕುರಿತು ಜೋರಿನಿಂದ ವ್ಯವಹರಿಸುತ್ತಿದ್ದರು (ರಾಜಪ. ೨೮) : ಮುಂದೆ ಅವನು ತಕ್ಷೀರು ನಿರಾಕರಿಸಿದರೆ ಅವನ ಮೇಲೆ ನಿರಾನುಮಾನವಾದ ಪ್ರಮಾಣರೂಪವಾಗಿ ಅಂಗೀಕರಿಸಲ್ಪಡುವದಕ್ಕೋಸ್ಕರ ಅವನ ಕೈ ಉಂಗುರಗಳನ್ನು ಸೆಳಕೊಂಡು ಹಾಜರುಪಡಿಸಿದ್ದಾನೆ (ಪಾಗ್ಯವಿ. ೧೮೩). **ತಕ್ಸೀರ್** : ಅವರಿಗೆ ತಕ್ಸೀರ್ ವಿಚಾರಣೆ ಮಾಡುವ ಅಧಿಕಾರವನ್ನು (Magisterial power) ಕೊಟ್ಟಿತ್ತು (ಮಹಾವಂ. II, ೨೬).

[ ←ಅರ. ಹಿಂ. ತಕ್‌ಸೀರ್; ಮರಾ. ತಕ್‌ಶೀರ್, ತಕ್‌ಸೀರ್ ]

**ತಕ್ಸೀರುದಾರ**,ತಕಶೀರಂದಾರ (ನಾ). ಅಪರಾಧಿ; ತಪ್ಪಿತಸ್ಥ: "ಅಪರಾಧಿ, ಪಾತಕಿ; ತಕ್ಸೀರುದಾರ" (Criminal. ಪಶ್ರಿನಿ. ೨೬). **ತಕಶೀರುದಾರ:** ಖೈದಿನಿಂದ ತಪ್ಪಿಸಿಕೊಂಡು ಹೋದ ತಕಶೀರುದಾರನಿಗೆ ಆಸರೆಕೊಟ್ಟರೆ (ಗ್ರಾಮೂಕ. ೧೮೪). [ ತಕ್ಸೀರು + – ದಾರ್$_4$ ]

**ತಕ್ಸೀರುನಾಮೆ** (ನಾ). ಅಪಾದನೆಯ ವಿವರಣೆಗಳನ್ನು ತಿಳಿಸುವ ಪಟ್ಟಿ. [ ←ಹಿಂ. ತಕ್ಸೀರ್‌ನಾಮಾ ]

**ತಖ್ತೆ**, ತಃಖ್ತ, ತಃಖ್ತೆ (ನಾ). ಆಯವ್ಯಯ ಮುಂತಾದ ವಿಷಯಗಳ ವಿವರಣೆಯ ಪಟ್ಟಿ,–ವಿವರಗಳನ್ನು ಸೂಚಿಸುವ ಪಟ್ಟಿ: ಕುಲ್ಲು ಜಮಾಬಂದೀ ಗೋಷ್ವಾರೆ ತಪ್ಸೀಲುವಾರು ಗ್ರಾಮವಾರು ತಖ್ತೆ ಸಹ ತಯಾರು ಮಾಡಿಸಿ (ಮಹಾಪಂ. II, ೬೨): ಲಾಭ ನಷ್ಟಗಳ ತಖ್ತೆಯನ್ನು ಪರಿಷ್ಕಾರವಾಗಿ ತಯಾರಿಸಿ ವಾರ್ಷಿಕ ಆದಾಯವನ್ನು ಕಂಡುಹಿಡಿಯುವ ವಿಧಾನ (ಛಾಗ್ಯಶಿ. ೮೩): **ತಃಖ್ತ:** (ಮ್ಯಗಜ. IV, ೬೮೬). **ತಃಖ್ತೆ:** ಪ್ರತಿ ತಿಂಗಳು ಪಾವತಿಯಾಗತಕ್ಕ ತಲಬುಗಳ ಒಂದು ತಃಖ್ತೆಯನ್ನು ತಯಾರ್ಮಾಡಿ ರವಾನಿಸಬೇಕು (ಗ್ರಾಮೂಕ. ೫); ಮಕ್ಕಳ ಅಭಿವೃದ್ಧಿಯ ತಃಖ್ತೆಯನ್ನು ತಪ್ಪದೆ ಇಡಬೇಕು (ರಂಗಕ. ೮೦).

[ ←ಪಾರ. ತಖ್ತಹ್ ; ಹಿಂ. ತಖ್ತಾ ; ಮರಾ. ತಕ್ತಾ, ತಖ್ತಾ ]

**ತಗ** 'ದಗ' ನೋ.

**ತಗಚಿ** 'ತಗಚೆ' ನೋ.

**ತಗಚೆ**, ತಗಚಿ, ತಗಸಿ, ತಗ್ಗಚ್ಚಿ (ನಾ). ೧. ಅಗಸೆ; ಚೊಗಚೆ; ಚಕ್ರಮರ್ದ: "ಏಡಗಜಃ, ಪ್ರಪುನ್ನಾಟಃ, ದದ್ರುಘ್ನಃ, ಚಕ್ರಮರ್ದನಃ– ಈ ೪ ತಗ(ಚೆ)ಟೆ" (ಹಲಾಯು. ೦೦೦-೪೬೫); ನೆಗ್ಗಿಲ್ ತಗಚೆ ನಿದಿಗ್ಧಿಕೆ ತಗ್ಗಿಯಪಾಮಾರ್ಗದೊಡನೆ ಬೆರಸಿದುದಂ . . . ಕುಡಿಸೊಗ್ಗಿಸಿದಂಬಿಲದ ಬೇದುಗಟ್ಟು ವಿಷಘ್ನಂ (ಖಮದ. ೧೬-೬೪); ತಗಚೆ, ತಾಕೋಟೆ (ಮ್ಯಜಿಗಿ. ೫೪-೦೦೯೫). ೨. ಹಿಪ್ಪನೇರಳೆ ಅಥವಾ ಉಪ್ಪುನೇರಳೆ ಗಿಡ: (ಕಿ). **ತಗಚಿ:** ೧. "ಪ್ರಪುನ್ನಾಟಃ, ಏಡಗಜಃ ದದ್ರುಘ್ನಃ, ಚಕ್ರಮರ್ದಕಃ, ಪದ್ಮಾಟಃ, ಉರಣಾಕ್ಷಃ, ಈ ೬ ತಗಚಿ[ಪಾಠಾಂ. ಚೆ]" (ನಾಚಿರಾ. ೦೦೨); ಮುತ್ತುಗ ತಗಚಿ ಯುಗಚಿ . . . ಮೊದಲಾದ ಗಗನಮಂ ತುಡುಕುವ ವೃಕ್ಷಂಗಳ್ (ಸಾಗಂಧಿ. ೫೪-೬). **ತಗಸಿ:** ೧. "ಪ್ರಪುನ್ನಾಟಮದೇಡಗಜಂ ಕಪಿತ್ಥಪರ್ಣಾಖ್ಯ ತಗಸಿ (ವಸ್ತುಕೋ.೩೬-೨೦). 'ಕೋಲ್ತಗಸಿ' ಪರಾ. **ತಗ್ಗಚ್ಚಿ:** ೧. "ಪ್ರಪುನ್ನಾಟಃ, ಏಡಗಜಃ, ದದ್ರುಘ್ನಃ, ಚಕ್ರಮರ್ದಕಃ, ಪದ್ಮಾಟಃ, ಉರಣಾಕ್ಷಃ–೬ ತಗಚೆಃ ಗಿಡದ ಹೆಸರುಗಳು, ತಗಚಿ, ತಗ್ಗಚ್ಚಿ" (ಸಿದ್ಧಾಂತಿ. ೦೨೮).

[ ದೇ.೫ ತಮಿ. ತಕರೆ ; ಮಲ. ತಕರ ; ತೆಲು. ತಗರ್ಚೆ, ತಗಿರ್ಸ, ತಗಿರಿಸ ]

**ತಗಟೆ** (ನಾ). ಜರತಾರಿ ರೇಷ್ಮೆ : ಪಟ್ಟಸಾಲೆಯೊಳು ಮೇಲ್ಕಟ್ಟು ಲಕ್ಷಾವೆ ಬಾಳ್ವದು ಪಟ್ಟೆಮಂಚಕೆ ವಜ್ರದಾ ದಟ್ಟತವಾದ, ಕಾಲ್ಗಳೂ ವಟ್ಟಿದ್ದಾ ಸೂವರಳೆ ಸುಪ್ಪತ್ತಿಗೆ ತಗಟೆ ತಲೆದಿಂಬು ಕಟ್ಟಿದಾ ಮುತ್ತಿನಾ ಗೊಂಚಲು (ಶ್ರೀಕೃಪಾ. ೨೫). [ ದೇ.೫ ತಮಿ. ತಕಟು; ತೆಲು. ತಗಟಿ ]

**ತಗಟೆ** 'ತಂಗಡಿ' ನೋ.

**ತಗಡತಿ** (ನಾ). ಒಂದು ಬಗೆಯ ಗಿಡ: ತಗಡತಿ, ಹರಿಯಾಗೆ, ಮೈಸಾಲೆ (ಮ್ಯಜಿಗಿ. ೫೦-೧೦೦೦). [ ? ]

**ತಗಡು** (ನಾ). ೧. ತೆಳುವಾಗಿ ಬಡಿದ ಲೋಹದ ಹಾಳೆ,–ಹಲಗೆ,–ಫಲಕ: ಬಿಳಿಯ ಕಬ್ಬಿನ ಜಂತೆಯೊತ್ತಿನೊಳು ಕೇತಕೀದಳದ ತಗಡವಕೆ ಮುಡಿವಾಳದ ಹೊದಕೆ (ಸೋಮದ. ೧-೦೦೧); ಕಪ್ಪುರವಳಿಕಿನ ತಗಡಿಂದ ಮಾಡಿದಂತಿರೆ ಕಂಪಂ ತಳೆದ ಬಿಳಿಯಲೆಯನಂಬುಜದಳದಿಂ ಪುದಿದಂತೆ ಬಿಡಿದು ಸುರಸತಿಬಿತ್ತಳ್ (ಪಾರ್ಶ್ವಪು. ೦೩-೧೨೬); ರವಿಯ ತಗಡೆನೆ ತೆಳಿತವಾಯುಧನಿವಹ (ಕುಮಾರಉ. ೯-೬೧): ತಿಂಗಳ ತಂಗದಿರನು ತಗಡನು ತಳೆದಂಗಜನೆಂಬ ಸೊನ್ನಾರಿ ಒಂಗದೆ ಮಾಡುವನೆನೆ ಪಟ್ಟೆಗರ್ಪೂರದಂಗಡಿಯುದಜಿಸೊಳೊಪ್ಪಿದವು (ರಾಮವಿ. ೩-೬೫): ತಪ್ತಕಾಂಚನದ ತಗಡಿನಲ್ಲಿ ಬರೆದಂಥ ಜಂತ್ರದಂತೆ (ಅರಳು. ೪೯-೧೧). ೨. ಕುಂದಣದ ಹರಳುಗಳ ಕೆಳಗೆ ಜೋಡಿಸಿದ ಹೊಳಪಿನ ವರ್ತಿ,–ರೇಕು: ಹೊನ್ನ ತಗಡ ಮೇಲೆ ಹೊಳೆವ ಮಾಣಿಕವು ಕರ್ಬೊನ್ನೊಳಗತಿ ರಂಜಿಪುದೆ (ನೇಮಿಸಂ. ೧೦-೧೪೫): ಕುಂದಣದ ತಗಡಿಗಕ್ಷರ ತಾಗಿ ರಕ್ಷೆಯಾದಂತೆ (ಭರಚ. ೪೨-೯). ೩. ಕನ್ನಡಿಯ ಹಲಗೆ; ಕನ್ನಡಿಯಂತಿರುವ ಲೋಹದ ಫಲಕ: ತಗಡಿನೊಳಗ ತೋರ್ಪ ಛಾಯಾಪ್ರತಿಮೆಯೊ ಹಗಲಲ್ಲಿ ಬೆಳುದಿಂಗಳಲ್ಲಿ ಸೊಗಸುವ ಛಾಯಾಪುರುಷನೊಯೆಂಬಂತೆ ಬಗೆಗೊಳಿಸುವುದಾತ್ಮರೂಪು (ಭರಚ. ೦-೧೧೧). ೪. ಜರಿ; ಜರತಾರಿ; ಕಲಾಬತ್ತು: ಹೇಮವರ್ಣದ ತಗಡಿನುಡಿಗೆಯ ಹೇಮಕೂರಳಿನ ಸೊಗಸು ಮಿಗಲು (ಸಂಭಪ. ೮-೯೮); ಹಳದಿ ಪೊಪ್ಪಳಿ ಚಂದ್ರಗಾವಿ ಬೊಂಬೆಯ ಬಣ್ಣ . . . ಹೊನ್ನ ತಗಡಿನ ಬಿಳುವಟ್ಟೆ ನಾನಾವರ್ಣದ ಜವಳಿಯ ಮಳಿಗೆಗಳೆಸೆದುವು (ಕಂನವಿ. ೬-೭೧). ೫. ದಟ್ಟಣೆ; ಸಾಂದ್ರತೆ; ಸಂದಣಿ: ಒಗುಮಿಗೆಯ ಪರಿಮಳದ ಕಂಪಿನ ತಗಡ ತಕ್ಕೆಯ ಬೀದಿವರಿಗಳ . . . ಸೊಗಸ ಸೇರಿಸಿ ಮಂದಮಾರುತನಟ್ಟಿದನು ಮಗನ (ಕುಮಾರಅ. ೧೦-೪೩). 'ತಗಡುಗತ್ತಲೆ' ಪರಾ.

[ ದೇ.೫ ತಮಿ. ತಕಟು ; ಮಲ. ತಕಡು, ತಕಿಡು ; ತುಳು. ತಗಡ್ ; ತೆಲು. ತಗಡು. / ಮರಾ. ತಗಡ್, ತಕಟ್ ]

**ತಗಡುಗತ್ತಲೆ** (ನಾ). ದಟ್ಟವಾದ ಕತ್ತಲೆ: ಅಂಡಲೆಯ ಬಲುನಿದ್ರೆ ನಳಿನಭವಾಂಡಭವನದ ತಿಮಿರರಕ್ಕಸಿ ಚಂಡಕರದೀಪವನು ಮಲಗಿಸಿ ಮಹಿಯ ಮಂಚದಲಿ ಮಂಡಿಸಿದಳೆನೆ ತ[ಪಾಠಾಂ. ನಲ]ಗಡುಗತ್ತಲೆ ಚಂಡಿಸಿತು ತತ್ಸಮಯದಲಿ (ಕೂರರಾ. ೫-೨-೨).

[ ತಗಡು + ಕತ್ತಲೆ$_1$ (<ಕಟ್ತಲೆ) ]

**ತಗಡುನ್ನಾಡು** (ನಾ). ಒಂದು ನಾಡಿನ ಹೆಸರು: ಮಣಿಯಾಚಾರಿಯ ಅಳಿಯ ಪಾಲ್ಪಡುವಿನ ಚೋಳಾಚಾರಿ ತಗಡುನ್ನಾಡ ಪೊಲ್ಲೆಯೂರ ತುಱುವಿ ಕಳ್ಕರ್ಕ್ಕೊಣ್ಡುಪೋಗೆ . . . ಇಱಿದು ಸಗ್ಗಸ್ತನಾದಂ (ಎಕ. X, ಕೋಲಾರ. ೧೪-೫ : 1035). [ ತಗಡು$_0$ + ನಾಡು ]

**ತಗಡುರಿ** (ನಾ). ದಟ್ಟವಾದ ಉರಿ: ಕನಲಿ ಫಲುಗುಣನಾದಡಿದ ಕೊಳ್ಳಿನುತ ಕೊಳ್ಳಿಯೊಳಿಟ್ಟನಗ್ನಿಯ ನೆನೆದು ಮಂತ್ರಿಸಲುರಿಮುಖದ ಕಾರ್ಬೊಗೆಯ ಪೊಬ್ಬನಲಿ ಹೊಸಲುಗಿಡಿಗಳ ತಗಡುರಿಯ ಕೊಂಡಿ[ಡ]ನಲಿ ಮುತ್ತಿತು ರಥವನಾತನ ಧನುವನಾತನ ತನುವನು (ಕುಮಾರಅ. ೧೦-೩೩).

[ ತಗಡು + ಉರಿ$_2$ ]

**ತಗಡೂರ್**, ತಗಡೂರು (ನಾ). ಒಂದು ಊರಿನ ಹೆಸರು: ಪೊಂಕುನ್ನದ ಬಾರಾನ್ಲರವಯ್ಯ ತಗಡೂರ ಕೆಳೆಯ ಕಾಳೆಗದೊಳ್ ಬಸವಯ್ಯನ ಮುನ್ದೆ ಕಾದಿ ಸತ್ತು (ಎಕ. X, ಬಾರಿಂಗ್. ೪೪-೩ ; ಸು. 950). **ತಗಡೂರು:** ತಗಡೂರು ಸ್ತಳದ ಬದಣೆವಾಳ ಕಾಲುವಳ್ಳಿ (ಮ್ಯಆರಿ. ೦೯೪೬, ೧೮-೬ ; 1488). [ ತಗಡು$_0$ + ಊರ್$_3$ ]

**ತಗಡೂರು** 'ತಗಡೂರ್' ನೋ.

**ತಗಣ** (ನಾ). [ಛಂದ] ಅಕ್ಷರಗಣಗಳಲ್ಲಿ ಒಂದು; ಎರಡು ಗುರು ಮತ್ತು ಕೊನೆಯಲ್ಲಿ ಒಂದು ಲಘುವಿರುವ ಗಣ (– – ⏑): ತಗಣಾಂಬರ ಜಗಣಾರ್ಕಂ (ಛಂದೋಂಬು. ಕಿ. ೧-೩೫). [ ತ$_1$ + ಗಣ ]

**ತಗಣೆ** 'ತಗುಣೆ' ನೋ.

**ತಗಣೆ** 'ತಗುಣೆ' ನೋ.

**ತಗತು$_1$** (ನಾ). ಕಲಾಬತ್ತು; ಜರತಾರಿ: ಚಿನ್ನದೆಳೆ ಮುಂಡಾಸನವಃಸಿರದಿಯಾಂತು ಧವಲಾಂಬರದ ತಗತಿನಂಗಿಯ ತೊಟ್ಟು ಸಂತಸದಿ ಪಸಃಮಯದ ಪಚ್ಚಡಂಗಳ ಪೊದೆದು (ನವಮೋ. ೭-೪೪). [ <ತಗಡು ]

**ತಗತ್ತು₂** 'ತಕತ್ತು' ನೋ.

**ತಗಪಡು** (ಕ್ರಿ). ಅಡ್ಡಿಮಾಡಲ್ಪಡು ; ನಿರ್ಬಂಧಕ್ಕೊಳಗಾಗು : ಭೋಗತೃಷ್ಣೆಯನುೞಿದ ಕಿಱುಗೂಸುಗಳುಂ ಕೌಮಾರ ಬ್ರಹ್ಮಚಾರಿಗಳುಂ ಕಟ್ಟುಂ ಪಟ್ಟುಂ ತಗಪಟ್ಟುಂ ಸೆಱೆಯೊಳಿರ್ದುಂ ಅಳಲದ ಬೇಸಱದೆ ಮುನಿಯದೆ ಕಾಯಕ್ಕೆ ಶಮಂ ಪರವಶತೆ ಮಾಳ್ಪವರುಂ ನೀಚದೇವರಾಗಿ ಪುಟ್ಟುವರು (ಧ್ರಾವಕಾ. ೧೮-೦೪). 'ಅಗಪಡು' ಮರಾ. [ <ತಗೆ + ಪಡು₁ ]

**ತಗಪ್ಪು** 'ತಗೆಪ್ಪು' ನೋ.

**ತಗಬೊಗರಿ**(ನಾ). ಚಿನ್ನದ ಬುಗುರಿ; ಪೊಂಬುಗುರಿ: ಅಂಗಜನಮಳ್ಳುಡಿಗಳ ಬೆಳಗಾಯ್ಗಳ ತೇಂಗಾಯ್ಗಳ ತ[ತ]ಗಬೊಗರಿಗಳವಱಂ ಪಿಂಗಡೆಗಲ್ಲ ಕುಚದ ಕೋಮಲೆಯರ್ ತೊಳಗಿದರಂತಲ್ಲಿ (ಜಯಕಾ. ೦೪-೩೭).
[ ತಗ₀ (P ←ತಮಿ. ತಙ್ಕ=ಚಿನ್ನ, ಅಪರಂಜಿ) + ಬೊಗರಿ ]

**ತಗರ್₁**, ತಗುರು (ಕ್ರಿ). ೧. ತಡೆ ; ಅಡ್ಡಗಟ್ಟು ; ಅಡ್ಡಿಪಡಿಸು ; ನಿರೋಧಿಸು: "ತಗರ್—ಗತಿಬಂಧನೇ (ನಿಲ್ಲಿಸು) ಅಜಭೇದೇ ಚ (ಟಗರು)" (ಶಮಧಾ) ; ಪೋ ಪೋಗಲೆಂದೊದಱುತ್ತುಂ ಪರಿತಂದು ತಾಗಿ ತಗರ್ದುಂ [ಪಾಠಾಂ. ತಗೆದಂ, ತಗೆದಂ]ಗಂಗಾಸುತಂ ಭೀಮನಂ (ಪಂಪಭಾ. ೦೦-೦೦) ; ತಂತಮ್ಮ ವಿಷಯಂಗಳಿಗೆ ಪರಿಯಲೀಯದೆ ತಗರ್ದು . . . ಚತುರ್ವಿಧಾಹಾರಮಂ ಅಷ್ಟಮಿ ಪರ್ವದಿನಂಗಳೊಳು ತೊಱೆವುದು (ಪಸಾರ. ೬೩೨-೦೦); ವ್ರತಸಮಿತಿ ಗುಪ್ತ್ಯಾದಿಗಳಿಂ ಕರ್ಮಗಳುಂ ತಗರ್ವುದು ಸಂವರತತ್ತ್ವಂ (ಜಾಸ್ತಟೀ. ೦೦೩-೦). ೨. ನಿಲ್ಲು; ಅಡ್ಡಿಗೊಳಗಾಗು; ನಿರ್ಬಂಧಿತವಾಗು: ಸುದತೀವಕ್ತ್ರಸುಧಾಂಶುದರ್ಶನದೊಳಾತಂಗಂದು ಕಾಮಾಂಧಕಾರದ ಪೆರ್ಚಾಯ್ತು ಮನಶ್ಚಕೋರಿಯ ರತಂ[ತರಂ]ಗಾಂಭೋಧಿಯಾಗಳ್ತಗರ್ದು ಬಳ್ಸೇದೆ ಪೊದಳ್ದು ಪೊಣ್ಮಿತು (ವೀರವಿ. ೬-೪೮). **ತಗುರು**: ೧. ಆತು ತಗುರೊಮ್ಮೊಮ್ಮೆಗಂ ಪವನಸೂನು ಸಂಘಾತ ತಪ್ಪಿಸಿ ಪೊಯ್ದು ಕುರುನೃಪಂ ಮತ್ಸರದೊಳೀತ ಪೊಯ್ಯನು ಬೀಳು ಬೀಳೆನುತಲದಬೀಯುಮುಮ್ಮಾಳ್ಪನಾ ಕುರುಪತಿ (ತುರಂಗ. ೭೩-೪೧). [ ? ]

**ತಗರ್₂**, ಟಗರು, ತಗರು (ನಾ). ಗಂಡು ಕುರಿ ; ಮೇಷ : "ತಗರ್—ಗತಿಬಂಧನೇ (ನಿಲ್ಲಿಸು) ಅಜಭೇದೇ ಚ (ಟಗರು)" (ಶಮಧಾ) ; ಮೂಗುರ್ಚಿದಮ್ಮೆಪೋರಿಯುಂ ಪೆಜಮೆಟ್ಟಿದ ತಗರುಂ ತಾಗುವಂತೆ . . . ಪೆಣದಿಱಿವ ಪದದೊಳ್ (ಶಾಂತಿಪು. ೬-೮೨ ವ) ; ಕೊಣಕಟ್ಟು ತಗರೆರಡುಂ ತಮ್ಮೊಳ್ ತಾಗಿ ಕಿಡಿಗುಟ್ಟಿದಂತಾಗೆ ಪೋರುತ್ತಿರೆ (ಪಂಚತಂ. ೭೩-೦೩); ತಗರ್ ತಗರೊಳ್ ಮಲ್ಲರ್ ಮಲ್ಲರೊಳ್ ತಾಗುವಂತೆ ಕಿಚ್ಚುಂ ಕಿಡಿಯುಮಾಗಿ ತಂತಮ್ಮೊಳ್ ತಾಗಿ (ಧರ್ಮಾಮೃ. ೩-೮೭) ; ಇಂಗುಳದ ವಣ್ . . . ಲೊಕ್ಕಿಯ ವರ್ಣಂಗಳ ರಸದಿಂ ನಸ್ಯಂ ಕಂಗಳೊಳೆಚ್ಚಲ್ಕೆ ತಗರ ವಿಷಮಂ ಕಳೆಗುಂ (ಖಮದ. ೦೩-೭೭). **ಟಗರು**: ಪುರಾಣವೆಂಬುದು ಪುಂಡರ ಗೋಷ್ಠಿ ತರ್ಕವೆಂಬುದು ಟ[ಪಾಠಾಂ. ತ]ಗರ ಹೋರಟೆ (ಅವಚಂ. ೦೦೩-೯೬೫); ಟಗರಿನ ಹೋರಾಟದಂತೆ . . . ತಾನು ಹಿಡಿದುದ ಬಿಡದೆ ಹೋರಾಡುವುದೇ ತರ್ಕಮರ್ಕಟ ವಿಧಿ (ಸಿದ್ಧೇವ. ೧೮-೪೫ ಟಿಪ್ಪಣಿ) ; ಎಳ್ಳೊ ಹೊಲ್ದಾಗೆ ಎಳೆ ಟಗರಾ ಸಾಕಿ (ಮುಟ್ಟಿಹ. ೩೨). **ತಗರು**: ತಗರಿನ ಬಲಿದ ಕೊಂಬಂ ತನ್ನೆಡದ ಕೈಯುಲಿ ಹಿಡಿದುಕೊಂಡು (ಬಸವು. ೨೯-೯) ; ತಗರು ಮುಳಿದಾರಿದರ ತೋಳನು ತೆಗೆದು ಜೀವಿಸಲಱಿವುದೇ (ಕುಮ್ಯಾಕ. ೧೦-೪೫) ; ತಗರು ಸಿಪಿಲೆ ಕೋಳಿ ಕಾಳಗಗಳು (ಕಂಸವಿ. ೭-೦೯೭) ; ತೊಗರೆಯ ತೊಗೆ ಲೇಸು ತಿಗುರಿಗೆ ಪೊಳೆ ಲೇಸು ತಗರ ಹಿಂಗಾಲ ಸತು ಲೇಸು (ಸರ್ವಜ್ಞ. ೭೨೨).

ತಗರ ಕಾಳಗ = ಟಗರುಗಳನ್ನು ಹಂರಿದುಂಬಿಸಿ ಹೋರಾಟ ಮಾಡಿಸುವ ಒಂದು ಪಂದ್ಯ,—ಜೂಜು : ತಗರ ಕಾಳಗ ಮದಕರಿಗಳ ಹೋರಾಟ . . . ಸೊಗಸ ಬೀಱಿದುದೋಲಗದೆ (ಕಂಸವಿ. ೨೦-೯೮).
[ ದೇ.೨ ತಮಿ. ತಕರ್ ; ತುಳು. ತಗರು, ಟಗರ್ ; ತೆಲು. ತಗರು ]

**ತಗರ₁** 'ತವರ' ನೋ.

**ತಗರ₂**(ನಾ). ಸುವಾಸನೆಯಾದ ಬಿಳಿಯ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ ; ನಂದಿಬಟ್ಟಲು ; ನಂದಿವರ್ಧನ : "ನಂದಿವಟ್ಟಮದು ತಗರ ಸಂಜ್ಞಕಂ ತಾನಕ್ಕುಂ" (ವಸ್ತುಕೋ. ೩೮-೩೫) : "ನಮ್ರುಂ – ತಗರೆ, ನೀರುಮಂಜ" (ಚಿಷಧಿ. ೮೩) : ತಗರಂ ಕೊಳ್ಕುಳಿ ನುಗ್ಗಿ ಕಗ್ಗೊಱಲೆ ಕೊಟ್ಟಿಲ್ . . . ಪುತ್ತಿನ ಮಣ್ಣುಮಂ ಕದಡಿ ಕಾಸಿಟ್ಟೆಡ್ಡೆ ಪೊಯ್ಯುವ ಬಾವುಗಳುಂ ತೀರ್ಗುಗುಂ (ಲೋಕೋಪ. ೯-೨೧೦) ; ತಕ್ಕೋಲ, ಶ್ರೀಗಂಧ, ತಗರ, ಲಾಮಂಚ, ಸಿವನ್ನಿಯ ಬೇರು . . . ಚೂರ್ಣಿಸಿ ಹಾಕಿ (ವೃದ್ಧಸಾ. I, ೪೦೫) : ಸಿಂಧುವಾರ ತಗರ ಮೊದಲಾದ ಲತಾವಿಶೇಷಂಗಳು ಕೊಂಬೆಗಳಂ ನೆಡಲು ಹುಟ್ಟುವವು (ಸೌಗಂಧಿ. ೪೨೫-೦೦). [ ಸಂ. ]

**ತಗರಪುರ** (ನಾ). ಒಂದು ಪಟ್ಟಣದ ಹೆಸರು. P ಈಗಿನ ಆಂಧ್ರ ಪ್ರದೇಶದ ಬಳಿ ಉಸ್ಮಾನಾಬಾದ್ ಸಮೀಪದಲ್ಲಿರುವ ತೇರ : ಮಹಾಸಾಮನ್ತಾಧಿಪತಿ ತಗರಪುರ ಪರಮೇಶ್ವರ ಸಿಲಾಹಾರ ನರೇಂದ್ರ (ಇಇ. V, ೨೭೮-೨ : 1026). [ ತಗರ? + ಪುರ₃ ]

**ತಗರಬುಗರಿ** 'ತಗರುಬೊಗರು' ನೋ.

**ತಗರಸನ್ನೆ** (ನಾ). ಹತ್ತು ಬಗೆಯ ಲೆತ್ತದ ಆಟಗಳಲ್ಲಿ ಒಂದು (?) : ಆರಿದಿರಾದೊಡಾಡಿದಪೆನೆಕ್ಕಡಿಯ ಪಡೆ ಪಂಚಬಾಯುಮಂ ವೀರವಿಳಾಸಮಂ ತಗರಸನ್ನೆಯನ್ನೆದೆರಡಂ ನೆಗಟ್ಟ ಚೌಸಾರಿಯನಾಱು ಪನ್ನೆರಡನೊಪ್ಪುವ ರಾಜಕುಮಾರನಂ ಮಹೋದಾರವನೊಡ್ಡಿ ದೊಡ್ಡನೆನುತನ್ನನವಂ ಕಡುಖೋ ಕೆರಳ್ಚಿದಂ ಇವು ಮೊದಲಾಗಿ ಪತ್ತು ವಿಧದ ನೆತ್ತವನಾಡುವೆನೆಂದೆನ್ನಂ ಕೆರಳ್ಚಲ್ (ದಶಕು. ೮-೯೨). [ ? ]

**ತಗರಿ** (ನಾ). ಕುದುರೆಯ ಬಾಲದ ಕೆಳಗಿನ ಭಾಗ : "ಬಾಲದ ಕೆಳಗು ತಗರಿಯೆಂಬ ಪೆಸರಕ್ಕುಂ" (ಅಶ್ವಶಾ. ೮೯-೦೦). [ ? ]

**ತಗರು** 'ತಗರ್₂' ನೋ.

**ತಗರುಬಿಗುರು** 'ತಗರುಬೊಗರು' ನೋ.

**ತಗರುಬೊಗರು**, ತಗರಬುಗರಿ, ತಗರುಬಿಗುರು (ನಾ). ೧. ಕಪಟ; ಮೋಸ ; ಬೂಟಾಟಿಕೆ : ಬೇಟಪೂರ್ವಕಲ್ಲಿ ಪುರ್ಬಿನಾಟಪೂರ್ವಕಲ್ಲಿ . . . ತಾಟೊಟು ತಗರುಬೊಗರು ಟಕ್ಕುಟೌಳಿಯೆಸಗುವ ಕೋಟಲೆ ಸಾಕು ದಮ್ಮಯ್ಯ (ಗೀತಗೋ. ೨೭). **ತಗರಬುಗರಿ**: ೧. ತಗೀರಿ, ತಗೀರಿ, ನೋಟಿನ ಕಟ್ ತಗೀರಿ . . . ಸುಂಕಿ ತಗರಬುಗರಿ ಒಡಿಬ್ಯಾಡಿ ಬುದ್ದಿ (ಕಶಾರ. ೦೫೦). **ತಗರುಬಿಗುರು** : ೨. ತಬ್ಬಿಬ್ಬು ; ಗೊಂದಲ : ಸೇರೆಗಾರ ಕೇಳಿದ ಪ್ರಶ್ನೆಗಳಿಗೆ ಸಾಬ್ರು ಎಂಥೆಂಥ ಜಟಿಲ ಉತ್ತರ ಕೊಡುತ್ತಿದ್ದರು ಎಂದರೆ ಅವುಗಳ ವಿದ್ವತ್ತಿಗೇ ಚೀಂಕ್ರ ತಗರುಬಿಗುರಾಗಿ ಮಾರುಹೋಗಿ , . . ಒಪ್ಪಿಗೆ ಕೊಟ್ಟಿದ್ದನು (ಮರಳಿಮ. ೭೮೨). [ ? ]

**ತಗರೆ** (ನಾ).=ತಗರ₂ : ಗಂಧ ತಗರೆಯ ಮೂಲ . . . ತಂದು ಕುಟ್ಟಿನಿ ಜಾತಿ ಪೆಣ್ಣಿಗೆ ಕೊಡಲು ತಾ ವಶ್ಯಾ (ಕಕ್ಕೋಕ. ೫-೩೩) [ <ತಗರ₂ ]

**ತಗರೆನಾಡು** 'ತಗಂರೆನಾಡು' ನೋ.

**ತಗರೇಱು** (ನಾ). ಮಲ್ಲಯುದ್ಧದ ಒಂದು ಪಟ್ಟು ; ತಗರಿನಂತೆ ಮೇಲೇರುವುದಂ (?) : ಲಾಗಿನಲಿ ಬವರಿಯಲಿ ಒಡಮುಱಿದಾಗಿನಲಿ ತಗರೇಱಿನಲಿ ಮೈಲಾಗಿನಲಿ ತೆಕ್ಕೆಯಲಿ . . . ಗೆಲುಸೋಲುಗಳ ಬಗೆ ಸಂದೇಹವಾಗಿರೆ ಭೀಮ ಜೀಮೂತಗಳು ಹಳಚಿದರು (ಕುಮ್ಯಾವಿ. ೭೦೪. ೪-೭೭). [ ತಗರು(<ತಗರ್₂) + ಏಱು₆ (<ಏಱ್₆) ]

**ತಗರ್ತಲೆಯು** (ನಾ). ಒಂದು ಬಗೆಯ ಬಾಣ : ನೆಱೆದು ನಿರ್ವಾಯಂ ನರುವಾಯಂ ಮುಮ್ಮೊನೆ ನೆರಕೆ ನಾರಾಚಂ ತಗರ್ತಲೆಯುಂ ನೆಱನಂ[ಪ]ಕಣೆ ಗೆಲೆಯುಂಬು ಕಕ್ಕಂಬು ಕಲ್ಲಂಬು ಮೊನೆಯುಂಬು . . . ಸಾರ್ದು ಸಾರ್ದೆಚ್ಚು ಕಾದಿದರತಿರಥರೊಂದು ಜಾವಂ (ಪಂಪಭಾ. ೦೪-೩೯). [ ? ]

**ತಗರ್ತಿ** (ನಾ). ಒಂದು ಸ್ಥಳದ ಹೆಸರು. ☞ ಈಗಿನ ಸಾಗರ ತಾಲೂಕಿನ ತಗರ್ತಿ: ಮುದನು ತಗರ್ತ್ತಿ ಕೊರೆಯ ಪತ್ತಿ (ಪ್ರಾಲಿ. ೧೯೨೯, ೦೨-೪: ೧೭ನೆಯ ೫೩). 'ತಾಗರತಿ' ಪಠಾ. [ ? ]

**ತಗರ್ದಲೆಯ** (ನಾ). ಟಗರಿನ ತಲೆಯುಳ್ಳವನು; "ದಕ್ಷಬ್ರಹ್ಮ" (ಪ್ರಭಂ.). [ ತಗರ್$_2$ + ತಲೆ$_1$ + - ಅ$_7$ ]

**ತಗರ್ದೇರ** (ನಾ). ಟಗರನ್ನು ವಾಹನವಾಗಿ ಉಳ್ಳವನು; ಅಗ್ನಿ: "ಅಗಿನಿ ಮರಗೂಬಿಂ . . . ತಗರ್ದೇರ ಪೊಗೆವಟಯುಗೆಯುನು ಕಾರ್ವಟ್ಟೆಗನಿವೆಯ್ದೆ ಯನಲನ ನಾಮವು" (ಕಬ್ಬ. ಮಂ. ೦೨) : ತಗರ್ದೇರಂ ನೇಣ್ಗೆಯ್ಯಂ ಮುಂತಪ್ಪರ್ ದೆಸೆವಳರಾದರ್ (ರಾಮಾಶ್ವ. ೦೧೦-೩). [ ತಗರ್$_2$ + ತೇರ್$_2$ + - ಅ$_7$ ]

**ತಗರ್ವಣಗಿಸು** (ಕ್ರಿ). ಟಗರುಗಳನ್ನು ಕಾದಾಡಿಸಂ; ಟಗರಿನ ಕಾಳಗವನ್ನು ಏರ್ಪಡಿಸು: ತಗರ್ವಣಗಿಸುವ ಸಿಪಿಲೆಗಟ್ಟಿಸುವ ಕೋಳಿಗಾಳೆಗವ ಕಾದಿಸುವ . . . ರಾಜಪುತ್ರರ (ಕೃಮಿಥ. ೬-೩೯). [ ತಗರ್$_2$ + ಪಣಗಿಸು ]

**ತಗಲ್$_1$** 'ತಗುಳ್$_1$' ನೋ.

**ತಗಲ್$_2$** 'ದಗಲು' ನೋ.

**ತಗಲ** (ನಾ). ಮೋಸಗಾರ; ವಂಚಕ; ದ್ರೋಹಿ: ಜಸವಂತಸಿಂಗನು ತಗಲನಿದ್ದರಂತೂ ನೆಟ್ಟಗೆ ಆಯಿತು (ಕಮಂ. ೨೦): ಈಕೆಯು ನಖಶಿಖಾಂತ ತಗಲಳಿರುವಳೆಂದು ತಿಳಿದು ಆಕೆಯ ಹೆರಳು ಹಿಡಿದು ದರದರ ಎಳೆಯ ಹತ್ತಿದನು (ತುಳಸಿ. ೦೫೯). [ ತಗಲು$_3$ (<ದಗಲು) + - ಅ$_7$ ]

**ತಗಲಿಸು** 'ತಗುಳಿಸು' ನೋ.

**ತಗಲು$_1$** 'ತಗುಳ್$_1$' ನೋ.

**ತಗಲು$_2$** 'ತಗುಳ್$_2$' ನೋ.

**ತಗಲು$_3$** 'ದಗಲು' ನೋ.

**ತಗಲುಗಾರ** (ನಾ). ವಂಚಕ; ಠಕ್ಕ: ತಗಲುಗಾರನಿಗೆ ಬಗಲ ಮೇಲೆ ಜ್ಞಾನ (ಗಾದೆ). [ ತಗಲು$_3$ (<ದಗಲು) + - ಗಾರ (<-ಕಾಱ) ]

**ತಗಲುತನ** (ನಾ). ಅಪ್ರಾಮಾಣಿಕತೆ; ಮೋಸಗಾರಿಕೆ: ಅವನ ತಗಲುತನವನ್ನು ಬೈಲಿಗೆಳೆಯುವುದು ಬಿಗಿಯಲ್ಲ (ಕಮಂ. ೨೦). [ ತಗಲು$_3$ (<ದಗಲು) + - ತನ ]

**ತಗಲುಬೇರೀಜು** (ನಾ). ಲೆಕ್ಕಮಾಡುವಾಗ ತಪ್ಪಾಗಿ ಕೂಡಿಸುವುದು; ತಪ್ಪು ಸಂಕಲನ: ಕುಳಗಳು ಆಗಾಗ್ಗೆ ಒಯ್ದು ರಕಮುಗಳನ್ನು ಒಟ್ಟು ಗೂಡಿಸುವಾಗ "ನಾಲ್ಕೂ ಎರಡೂ (ಕೂಡಿ) ಎಂಟು" "ಎಪ್ಪತ್ತೇಳೂ ಆರು ಕೂಡಿ ಎಂಬತ್ತಾರು" ಹೀಗೆ ತಗಲುಬೇರೀಜು ಮಾಡುವರು (ಗುರುಚ. ೪). [ ತಗಲು$_3$ (<ದಗಲು) + ಬೇರೀಜು ]

**ತಗಲುಮೊಳೆ** (ನಾ). ಉಡುಪು ಮೊದಲಾದುವುಗಳನ್ನು ತಗಲು ಹಾಕುವುದಕ್ಕಾಗಿ ಅಳವಡಿಸಿದ ಮೊಳೆ: ಅವರು ರುಮಾಲನ್ನೆತ್ತಿ ಸ್ಟ್ಯಾಂಡಿನ ತಗಲುಮೊಳೆಯ ಮೇಲೇರಿಸಿದಾಗ (ವಿನೋದ- ೦೮೦). [ ತಗಲು$_1$ (<ತಗುಳ್$_1$) + ಮೊಳೆ$_2$ ]

**ತಗಲುಸಾಕ್ಷಿ** (ನಾ). ಸುಳ್ಳು ಸಾಕ್ಷಿ: ನಾಯಕರು ತಗಲುಸಾಕ್ಷಿ ನುಡಿಯಲಿಲ್ಲ ಕೋರ್ಟಿನ ಮೆಟ್ಟಲು ಹತ್ತಲಿಲ್ಲ (ಗುರುಪ್ರ. ೨). [ ತಗಲು$_3$ (<ದಗಲು) + ಸಾಕ್ಷಿ ]

**ತಗಲೂಪಿ** 'ತಗಲೂಫಿ' ನೋ.

**ತಗಲೂಫಿ, ತಗಲೂಪಿ** (ನಾ). ಅಪ್ರಾಮಾಣಿಕತೆ; ಮೋಸ; ಠಕ್ಕು: ನಿಮ್ಮಪ್ಪಯ್ಯನಿಂದ ಜಮಿನಾನು ತಗೊಂಡೋರು ಯಾರೂ ತಗಲೂಫಿ ಮಾಡಿಲ್ಲ; ಸಾಚಾ ವ್ಯಾಪಾರಮಾಡಿ, ರೊಕ್ಕಕೊಟ್ಟು ಜಮಿನಾನು ತಗಂಡವರ (ಚಂದಕೋ. ೦೯೫). **ತಗಲೂಪಿ**: ಅವನೊಬ್ಬ ತಗಲೂಪಿ ಮನುಷ್ಯ (ರೂಢಿ). [ ←ಅರ. ಪಾರ. ಹಿಂ. ತಕಲ್ಲುಫ್; ಮರಾ. ತಕಲುಪೀ. ತಕಲುಬೀ ]

**ತಗಲೆ** 'ದಗಲೆ$_1$' ನೋ.

**ತಗವು$_1$** 'ತಗಹು$_1$' ನೋ.

**ತಗವು$_2$** 'ತಗೆಪು' ನೋ.

**ತಗವೆ** (ನಾ). ತಡೆ; ಅಡ್ಡಿ; ಪ್ರತಿಬಂಧ: ಕನ್ನಡದೊಳ್ ಯತ್ವ ವತ್ವಂಗಳ್ಗೆ ಬಹುಳತೆಯಿಂ ಲೋಪಮುಂಟು – ಒತ್ತೆ + ಇಟ್ಟಂ = ಒತ್ತಿಟ್ಟಂ . . . ತಗವೆಯುಪ್ಪೊಡೆ, ತಗವಪ್ಪೊಡೆ (ಶಮದ. ೫೫ ಪ್ರಯೋ). 'ತಗವು$_2$' ಪಠಾ. [ <ತಗ$_1$ + - ವೆ ]

**ತಗಸಿ** 'ತಗಚೆ' ನೋ.

**ತಗಸು** (ಕ್ರಿ). ಅಡ್ಡಿಪಡಿಸಂ; ನಿರ್ಬಂಧಪಡಿಸು; ಬಂಧನದಲ್ಲಿರಿಸು: ಹರನ ಭಕ್ತರ ಮಹಾತ್ಮೆಯನಱಿಯದೀ ಲಾವಕರ ಮಾತಗೇಳಿ ತಗಸಿದ ಭೂರಿ ದುರ್ಭಾವದುರವಣೆಯ ನೋಡಲೆಂದಾ ಶೀತಕರ ನಿಂದನ್ನೆಸೆ (ಸಿಂಗಿರಾ. ೨೨-೩೪); ಕ್ರೀರೂಪು ನೃಪ ಧನದ ಕಾರ್ಪಣ್ಯದಿಂದಲತ್ಯಾರೋಪದಿಂದ ಲಿಂಗಾಂಗಿಗಳ ತಗಸೆ (ಸಿಂಗಿರಾ. ೨೨-೩೬). [ ತಗ$_1$ + - ಸು$_1$ ]

**ತಗಹಿಕ್ಕು** (ಕ್ರಿ). ತಡೆಯನ್ನು ಒಡ್ಡು; ಅಡ್ಡಿಪಡಿಸು; ನಿರ್ಬಂಧವನ್ನುಂಟುಮಾಡು: ಹಗಲಿರುಳೆಡೆವಿಡದೀ ಮಳೆ ಕಱೆದುದು ತೆಗಹಿಲ್ಲ ಮುಂದೆ ಹೆಚ್ಚುತಿದೆ ತಗಹಿಕ್ಕಿದಂತಾಯ್ತು ಪಾಯ್ದಾಳೆಂದು ಚಕ್ರಿಗೆ ಮತ್ತೆ ಯೋಚನೆಯಾಯ್ತು (ಭರತ. ೩೪-೬೨). [ತಗಹು$_2$ (<ತಗೆಪು) + ಇಕ್ಕು]

**ತಗಹಿಡು** (ಕ್ರಿ). = ತಗಹಿಕ್ಕು: ಕೊಡುವೊಡವೆ ಬರಲಿ ದಾರದೆ ಕೆಡಲಿ ಕಾನನದ ನಡುವೆ ತಗಹಿಟ್ಟುರಿಸಿ[ಪಾಠಾಂ. ತಗಹಿನಲಿರಿಸಿ]ಕೆಲವುದಿನ ವುವವಾಸ ಬಡಿಸಿರ್ದು . . . ನುಡಿದವಧಿಯಾಯ್ತೆಂದು ಧರೆಯಱಿಯೆ ನೃಪನಂ ಹುಸಿಕನೆನಿಸು (ಹರಿಕಾ. ೯-೦೬). [ ತಗಹು$_2$ (<ತಗೆಪು) + ಇಡು$_1$ ]

**ತಗಹು$_1$, ತಗವು$_1$** (ಕ್ರಿ). ತಡೆ; ನಿಲ್ಲಿಸು; ನಿರೋಧಿಸು: ನೆಗೆವ ಕಂಬನಿಯು ನಿಲ್ಲಿಸುತೇಳ್ವ ಶೋಕವ ತಗಹುತ ನೃಪ ಧೈರ್ಯದಿಂದ ಮೊಗವಿಡಿದೆತ್ತಿ ತಂಗಿಯರ ಕಂಬನಿಯ ಕೈಮಿಗೆ ತೊಡೆದಳಲನಾಱಿಸಿದ (ಭರತ. ೭೯-೭೩). **ತಗವು$_1$**: "ವಿಷ್ಕಂಭಃ, ಪ್ರತಿಬಂಧಃ–ಈ, ಎರಡೂ ತಗವುದು" (ಅಕರಾಜು. ೦೨೭-೮೪). [ <ತಗ$_1$ + -ಹು$_1$ ].

**ತಗಹು$_2$** 'ತಗೆಪು' ನೋ.

**ತಗಹು$_3$** (ನಾ). ಸಂಬಂಧ; ಸಂಪರ್ಕ; ಹೊಂದಿಕೆ: ಜಗದೊಳುಳ್ಳ ಚರಾಚರ ಪ್ರಾಣಿಗಳವೆಲ್ಲರ್ದೆಡೆಯೊಳಸುಗಳ ತಗಹು ಬಿಟ್ಟವು . . . ಲೋಕವಳುಕಿದವು (ಬಸವು. ೨೦-೫೫); ಹೆಗಲ ಕೊಯ್ಲಿನ ತಗ್ಗಿನಲಿ ಸೈನೆಗೆದ ರೋಮದ ವಿಕ್ರಮಾಗ್ನಿಯ ತಗಹು ಬಿಡದಭಿಮನ್ಯು ಮೆಱೆದನು ಶಸ್ತ್ರಶಯನದಲಿ (ಕುಮಾ.ದ್ರೋ. ೬-೬೨); ಹೊಗರುಗೆಟ್ಟುದು ಕುಮುದ ಕಮಳದ ಬಿಗುಹು ಬಿಟ್ಟುದು ಚಕ್ರವಾಕದ ತಗಹು ಕೆಟ್ಟುದು (ಕುಮಾ.ದ್ರೋ. ೦೫-೩೪). [ <ತಗು + - ಹು$_2$ ]

**ತಗಳೂರ್** (ನಾ). ಒಂದು ಊರಿನ ಹೆಸರು: ದೇವಯನೆವ್ನೋನ್ ನೊಬಮ್ಮನ್ನಗಳೂರ ಕೋಟ್ಟೆ ಕೊಣ್ಣನ್ದು ಶತ್ತಾನ್ (ಎಕ. XII, ಮಧ್ಯಗಿ. ೩೮-೫; ಸು ೯೬೦). [ ತಗಲ್$_1$ + ಊರ್ ]

**ತಗಾದಿ** 'ತಗಾದೆ' ನೋ.

**ತಗಾದೆ, ತಗಾದಿ** (ನಾ). ೧. ಆಗ್ರಹ; ಒತ್ತಾಯ; ಬಲವಂತ: ಚಿಕ್ಕಮ್ಮಯ್ಯ ಊರಿಗೆ ಹೋಗಬೇಕು ಎಂದು ತಗಾದೆ (ಕಂಗಾಳ್ಯ. ೨೨೬): ಸರ್ಕಾರಿ ಅಧಿಕಾರಿಗಳಿಂದ, "ಮನೆಗಳನ್ನು ಬಿಟ್ಟು ಗುಡಿಸಲುಗಳಲ್ಲಿ ವಾಸಿಸಬೇಕೆಂದು" ತಗಾದೆ ಬಂದಿತು (ಗುರುದಾ. ೦೮). ೨. ಕೊಡಬೇಕಾದ ಹಣಕ್ಕಾಗಿ ಒತ್ತಾಯ ಮಾಡುವಿಕೆ: ಲೆಕ್ಕಾಚಾರ ಬಾಕಿಯಿಂದ ಅಥವಾ ಇತರ ವಿಧದಿಂದ ಸಾಲ ಯಾ ತಗಾದೆಯು ೨೦ ರೂಪಾಯಿ ಮೊಬಲಗು

ಯಾ ಮಹಾಲ್ಯಕ್ಕೆ ಮಾರದೆ ಇದ್ದ ಪಕ್ಷದಲ್ಲಿ (ಗ್ರಾಮೂಕ. ೨೦) : ಸಾಲಗಾರರ ತಗಾದೆಯನ್ನು ವೈಮೇಲೆ ಅವನ ಸಾಲದ ತಗಾದೆ ತಾನೇ? (ಅನಾಮಿ. ೩): ಇಟ್ಟುಕೊಂಡು ದಾನಧರ್ಮ ಮಾಡುವುದು ವಿವೇಕವಲ್ಲ (ಮೋಹಿನೀ. ೨೨). ೩. ವ್ಯಾಜ್ಯ; ವಿವಾದ; ಮೊಕದ್ದಮೆ: (೩). ತಗಾದಿ: ೩. ಫವುಜವವರು ಅರಶಿನವರ ಮೇಲೆ ತಗಾದಿ ಕುಳಿತರು (ಹೃದರ. ೭೦) : ನಮ್ಮ ಹಿರಿಯರು ಗಳಿಸಿದ ಮಠ ಮಾನ್ಯವೆಂದು ಹೋರಾಡಿ, ತಳ್ಳಿ ತಗಾದಿ ಮಾಡಿ ಸರಕಾರಕ್ಕೆ ಹೊಸ್ಸ ಕೊಟ್ಟವರು ಮಹೇಶ್ವರರಲ್ಲ (ವಚಶಾ. I. ೩೩೦). ೪. ಒಂದಂ ಬಗೆಯ ಸುಂಕ (?) : ತಪ್ಪು ತಗಾದಿ ದಂಡ ಉಂಡಿಗೆ ಎಂದು ನಾಡವಳಿಕಾಜಿ ಪ್ರಭುಗಳು ಕೊಳಸಲ್ಲ (ಸೌಇಇ. IX-II, ೪೩೩-೩೪ : 1408).

**ತಗಾದಿ ಹಚ್ಚು** = ಒತ್ತಾಯ ಮಾಡು ; ಮೇಲಿಂದ ಮೇಲೆ ಕೇಳು : ಅರಮನೆಗೆ ಬಟ್ಟೆ ಮಡಕೆಗಳು ಬೇಕೆಂದು ತಗಾದಿ ಹಚ್ಚಿ ಬಹಳ . . . ತೊಂದರೆ ಪಡಿಸಿ (ಕಥಾಮಂ. IV, ೩೦). **ತಗಾದೆ ಪತ್ರ** = ಒತ್ತಾಯಮಾಡಿ ಬರೆಯುವ ಪತ್ರ : ಅವರಿಗೆ ಹಣ ಹಿಂತಿರುಗಿಸಿಯೆಂದು ತಗಾದೆ ಪತ್ರ ಬಂದಿತ್ತು (ರೂಢಿ). **ತಗಾದೆ ಮಾಡು** = ಒತ್ತಾಯ ಮಾಡು : ಸಿನಿಮಾ ನೋಡದಿದ್ದ ಅತ್ತೆಯನ್ನು ತಗಾದೆ ಮಾಡಿ ಅವಳು ಕೆಲವು ವೇಳೆ ಕರೆದು ಕೊಂಡು ಹೋಗುವುದೂ ಉಂಟು (ಮೂರಾನ. ೧೯೨) : ಸಾಲಗಾರರು ಬಹಳ ತಗಾದೆ ಮಾಡುತ್ತಿದ್ದಾರೆ (ರೂಢಿ).

[ ←ಹಿಂ: ತಗಾದಾ, ತಕಾಜಾ; ಮರಾ. ತಗಾದಾ ; ಅರ. ತಕಾಜಾ ]

**ತಗಾದೆಗಾರ** (ನಾ). ಒತ್ತಾಯಂ ಮಾಡಂಪವನಂ : ನಮ್ಮಂತಹ ಬಡಜನರ ಬಾಗಿಲುಗಳನ್ನು ಸದಾ ತಟ್ಟುತ್ತಿರುವ ಈ ಸುಖೀ ತಗಾದೆಗಾರರು ನಮ್ಮನ್ನು ಶಾಂತಿಯಿಂದುಳಿಸಿದರೆ ಸಾಕು (ಸಾಹಿಪ್ರ. ೨೩೦).

[ ತಗಾದೆ + – ಗಾರ (< –ಕಾಜಿ) ]

**ತಗಾಯಿ** 'ತಕಾವಿ' ನೋ.

**ತಗಾಯಿಸಾಲ** 'ತಕಾವಿಸಾಲ' ನೋ.

**ತಗಾಯಿಸೂಟು** (ನಾ). ತಕಾವಿಸಾಲದ ಮರುಪಾವತಿಯ ಸಂಬಂಧದಲ್ಲಿ ತೋರುವ ವಿನಾಯತಿ,–ರಿಯಾಯತಿ : "ತಗಾಯಿ ಸೂಟ" ಬಿಡಿಸತಿ ಏನವ? (ಸುಮೂಕಾ. ೧೮೯). [ ತಗಾಯಿ (<ತಕಾವಿ) + ಸೂಟು$_1$ ]

**ತಗಾವಿ** 'ತಕಾವಿ' ನೋ.

**ತಗಿಬಗಿ** 'ತಗೆಬಗೆ' ನೋ.

**ತಗಿಬಗಿಗೊಳಿಸು** (ಕ್ರಿ). ತಬ್ಬಿಬ್ಬುಗೊಳಿಸು ; ಕಕ್ಕಾಬಿಕ್ಕಿಯಾಗುವಂತೆ ಮಾಡು : ನಗೆಗಳಿಂ ಕೆಲಕೆಲರ ಪುರ್ಬಿನ ಬಿಗುಹಿನಿಂ ಕೆಲಕೆಲರ . . . ತಗಿಬಗಿಗೊಳಿಸಿ ಮಂಗ್ನರನು ಮಾಡಿ (ಅನಂರಾ. ೧–೨೨–೨೦).

[ ತಗಿಬಗಿ (<ತಗೆಬಗೆ) + ಕೊಳ್$_1$ + – ಇಸು$_3$ ]

**ತಗಿರಿಟ್** (ನಾ). ಒಂದು ಊರಿನ ಹೆಸರು : ಶ್ರೀಮಜ್ಜಯಸಿಂಹದೇವರ್ ನಿಜವಿಜಯಕಟಕ ಸಮನ್ವಿತಂ ಲೀಲಾವಿಳಾಸದಿಂದೆ ತಗಿರಿಟ ನೆಲೆವೀಡಿನೊಳ್ . . . ಅಭಿನವ ತೇಜಮುಮಂ ಪಡೆದು (ಎಕ. VII, ಶಿಕಾರಿ.೨೦–೯; 1032).

[ ? ]

**ತಗಿಲ್** (ನಾ). ಸಂಬಂಧಪಟ್ಟುದು : "ದೇವಿಕಾ, ದೈವಿಕಂ– ಈ ೨ ದೇವರ ತಗಿಲ್" (ಶಾಶಕ್ಯ. ೧೮೦). [ ತಗು + – ಇಲ್$_3$ ]

**ತಗಿಸು** 'ತಬ್ಗಿಸಂ' ನೋ.

**ತಗು** (ಕ್ರಿ). ತಕ್ಕ$_2$ (ಭೂತಕೃ). ೧. ಸರಿಯಾಗು : ಹೊಂದು ; ಉಚಿತ ವಾಗು ; ಯೋಗ್ಯವಾಗು ; ಅನುರೂಪವಾಗು : ದೇವಿಯರ್ಕಳ ಕೈಯೊಳ್ ಋಷಿಯರ್ಕಳ್ಗನಲುಂ ಕುಡಿಯಲುಂ ತಗದು (ವಡ್ಡಾರಾ. ೧೧೪–೯) : ಕ್ಷೀರಾಬ್ಧಿಯ ನೀರಲ್ಲದೆ ಧೀರನ ಮಜ್ಜನಕೆ ಪೆಱವು ನೀರ್ ತಗವು (ಆದಿಪು. ೭–೮೦); ಅಲ್ಲಿಗಲ್ಲಿಗೆ ತಕ್ಕತಕ್ಕ ಬಗೆಬಗೆಗಳೊಳವೆಲ್ಲರ್ಕೆ ಕಟ್ಟುಮಟ್ಟಂ ಮಾಡಿ (ಪದ್ಮರಾ. ೪–೨೫) : ತೊಟ್ಟ ಜೋಹಕ್ಕೆ ತಕ್ಕ ನುಡಿಗಳ ಬಿಟ್ಟೆವಲ್ಲದ ನಿಮ್ಮ ರಾಯನ ಕಟ್ಟಲಾವುದೆ (ಕುಮಾವ್ಯಾದ್ರೋ. ೨–೫೨) : ಅಂಗವಂಗಕ್ಕೆ ತಕ್ಕ ಲಾವಣ್ಯ (ಭರತ. ೦–೫೨); ಬೆಕ್ಕು ನೀಂ ರಾವಣನೆ ರಾಮನು ಸೊಕ್ಕಿದಾನೆಯು ಪೇಳ್ ಜಗದಲಿ ತಕ್ಕುಮೇ ತತ್ಸಾಮ್ಯ ನಿನಗದು ಹಾಸ್ಯಕೆಡೆಯಲ್ತೆ (ಸೀತಾಚ. ೫–೧೭) : ತಗುವ ನೆರವಿತ್ತ ಕಾಳಂ ನಿಲದೆ ನಡೆದು (ಕಾಳಿಚರ. ೧೪೧–೩೦೫). ೨. ಸಾಕಾಗು ; ಸಾಲು : ನಿನಗಮೆನಗಂ ಬೀಯಕ್ಕೆ ತಕ್ಕನಿತು ಪೊನ್ನಂ ಕೊಂಡು (ಪಂಚತಂ. ೦೭೦–೦೦).

**ತಕ್ಕಂದ** = ಯೋಗ್ಯವಾದ ರೀತಿ: ಇನ್ನಿದಕ್ಕೆ ತಕ್ಕುದಂ ತಕ್ಕಂದದೊಳ್ ಪೇೞಿಂ (ಶಾಂತಿಪು. ೩–೬೬ ವ); ನೆಗಟ್ದ ಶೌರ್ಯಕ್ಕೆ ತಕ್ಕಂದದಿಂ ಪಾಂಡವರುಂ ಕೌರವರುಂ ಕೈಮುಗಿಯೆ ನೆಗೞ್ದ ಪೆಂಪಿಂಗೆ ತಕ್ಕಂದದಿಂ ಬಿಲ್ಲೊಳ್ವಜಂ ಗಾಂಡೀವಿಯೊಳ್ಕಾದಿದಂ (ಗದಾ ಯು. ೨–೩೦). **ತಕ್ಕ ಮಟ್ಟಿಗೆ** = ೧. ಸಾಕಾಗುವಷ್ಟು; ಸಾಕಷ್ಟು : ಇದರಿಂದ ಪ್ರಚಾರವೇನೋ ತಕ್ಕಮಟ್ಟಿಗೆ ನಡೆದರೂ ಉತ್ಪತ್ತಿಯು ಎಣಿಸಿದಷ್ಟು ಬರಲಿಲ್ಲ (ಚಿಕಸ. ೧೨೮). ೨. ಸ್ವಲ್ಪ ಮಟ್ಟಿಗೆ ; ಕೆಲಮಟ್ಟಿಗೆ : ನಿಮಗೆ ಚಿತ್ರಕಲೆಯಲ್ಲಿ ಚೆನ್ನಾಗಿ ಪರಿಶ್ರಮ ವಿದೆಯೆಂದು ಕೇಳಿದ್ದೆ ನಿಜವೆ? ತಕ್ಕಮಟ್ಟಿಗೆ ಉಂಟು (ಚಿಕ್ಕದೇ. ೦೪೬). **ತಕ್ಕಷ್ಟು** = ಸಾಲುವಷ್ಟು : ಉಚಿತಕೆ ತಕ್ಕಷ್ಟು ಪೇಳ್ವೆನಧ್ಯಾತ್ಮವೆ ನಿಜತ ಪ್ರಯೋಜನವೆನಗೆ (ಭರತ. ೦–೦೫) : ತಕ್ಕವನಲ್ಲಿ ಹೊಕ್ಕಿದ್ದರೆ ತಕ್ಕಷ್ಟು ಆದರೂ ಸಿಕ್ಕುವುದು (ಗಾದೆ). **ತಕ್ಕುದು, ತಕ್ಕದ್ದು**=೧. ಸರಿಯಾದುದು; ಉಚಿತವಾದುದು : "ತಕ್ಕುದೆನೆ ಸಹಜಮಕ್ಕು" (ಕಶರ. ೦೨೪) ; ಇಲ್ಲಿಗಿದು ತಕ್ಕುದಿಲ್ಲಿಗೆ ಪೊಲ್ಲದಿದೆಂದಱಿದು . . . ಇದು ಮೃದುಪದಮಂ (ಕವಿರಾ. ೨–೪) ; ಇಱಿಯದ ಕೆಮ್ಮನಂತೆ ಭುವನಂಗಳಸುಂಗೊಳೆ ತಕ್ಕುದೆಂದೊಡೇ ಮಱುಕಮನೆಂಬುದೇವಿರಿದಿದೆನ್ನ ಭುಜಾಸಿಗೆ ತೇದು ಪೂಸಲುಂ ನೆಱಿಯದು (ಕಾವ್ಯಸಾ. ೪೧೧ ಕುದ್ರಕ) : ನುಡಿಯದೆ ಪೆಱತಂ ದ್ರೌಪದಿ ನುಡಿದಳ್ ತಕ್ಕುದನೆ (ಪಂಪಭಾ. ೭–೫೩) : ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲ ಮುಮಂ (ಧರ್ಮಾಮೃ. ೧–೪೨) : ನಂಬಿಕೆ ನೆಚ್ಚಿಕೆಯಿಲ್ಲದ ದೇಶವು ಪ್ರಜಾ ಪ್ರಭುತ್ವಕ್ಕೆ ಎಂದೂ ತಕ್ಕುದಾಗಲಾರದು (ಜುಕ್ಷಪ್ರ. ೬೫) : ಕುಜನರ ಸಂಗ ಅಜಗೂ ತಕ್ಕದ್ದಲ್ಲ (ಗಾದೆ). ೨. ಅಗತ್ಯವಾದುದು, ಬೇಕಾದುದು ಎಂಬ ಅರ್ಥದಲ್ಲಿ ಸೇರುವ ಪದ : ನೀನು ಈ ಕೆಲಸ ಮಾಡತಕ್ಕದ್ದು (ರೂಢಿ). **ತಕ್ಕುವು** (ಬಹುವ) : ಇವು ಚಮರೀ ಜಾತಂ ದುಗ್ಧವಾರ್ಧಿಫೇ ನೋಪಮಾನಮಿವು ನಿನಗೆಯು ತಕ್ಕುವು (ಆದಿಪು. ೦೫–೦೮). **ತಕ್ಕೆಡೆ**=ಉಚಿತ ವಾದ ಸ್ಥಳ,–ಅವಕಾಶ,–ಸನ್ನಿವೇಶ : ಮುಂದೆ ನಿಂದರಂ ಕಾಣದ ತಕ್ಕೆಡೆಯೊಳ್ ಕಡೆಗಣಿಸುವ ನೃಪವಿಡಂಬಮಿವು ಲಕ್ಷ್ಮಿ ನಿನ್ನ ದೂಸಱಿನಲ್ತೇಂ (ಗದಾಯು. ೯–೮) : ತಕ್ಕೆಡೆಗೆ ತಕ್ಕುದಂ ಕುಡುವಂ (ಸಮುಪ. ೭–೭೮) : ಅಱಿವಿಲ್ಲದ ತಕ್ಕೆಡೆಯೊಳ್ ತಱಿಸಲ್ಲದೆ ತೊಡರ್ದು ಸಮೆವ ಜೀವಕ್ಕೆಲ್ಲಂ ನೆಱಿಯ ಹಿತಮೆಂದು ಬಗೆದಿದನಱಿಪುವೆಂ (ಜೀವಸಂ ೨–೭).

[ ದೇ.೫ ತಮಿ. ಮಲ. ತಕು; ತೆಲು. ತಗು ]

**ತಗುಣಬಿಗುಣಂಬರಿ** (ಕ್ರಿ). ಸ್ವೇಚ್ಛೆಯಾಗಿ ಓಡಾಡು : ಅಂತು ಕೊಂಡು ಪೋಪುದುಮೊಂದು ಪಡೆಯುದಡಹಡಿಸಿ ನೋಡಿ ಕಾಣದೆ ಮಾಣದೆ ಮಗುಟ್ದು ಪಱಿ ಬೆಂಬತ್ತಿ ಸುತ್ತಿ ವಿಯತ್ತಳದೊಳ್ ತಗುಣಬಿಗುಣಂಬರಿದು ಬಂದು ಚಾರುದತ್ತನಿರ್ದ ತಿದಿಯನೊಯ್ದೋಕಾಕ್ಷನಪ್ಪ ಪಕ್ಷಿಯು ಸಮಕ್ಷಮಂ ಸಾರ್ದು (ನೇಮಿಪು. ೪–೧೦೭ ವ). [ ತಗುಣಬಿಗುಣ$_0$ + ಪರಿ$_2$ ]

**ತಗುಣ** 'ತಗುಣೆ' ನೋ.

**ತಗುಣೆ**, ತಗಣಿ, ತಗಣೆ, ತಗಂಣೆ, ತಿಗಣಿ, ತಿಗಣೆ, ತಿಗುಣೆ (ನಾ). ಗೋಡೆಯ ಬಿರುಕಂ, ಹಾಸಿಗೆ ಮುಂತಾದ ಕಡೆ ಇದ್ದು ಮನುಷ್ಯನ ರಕ್ತಹೀರುವ ಒಂದು ಬಗೆಯ ಹುಳಂ ; ಮತ್ಕುಣ : ಗುಡಮಾಕ್ಷಿಕ ಮಳಯಜ ಎಂಬಿವನಿಂಬಾಗೊಡಗೂಡಿ ಧೂಪಿಸುಗೆ ಚಿಕ್ಕದು ನೊಱಜುಂ ತಗುಣೆ ಬಾವಲೆಂಬಿವು ಕಿಡುಗುಂ (ಲೋಕೋಪ. ೯–೩೯) ; ತಗುಣೆಗಳಂ

ಪೆಱತೇನೊರಸುತ್ತುಂ ಮೆಯ್ಯಱಿಯದೆ ಕೊಲುತುಂ ನೊಣಂಗಳಂ ನಿರ್ದಯೆಯಿಂ ಇರ್ಪುದುಂ (ಧರ್ಮಾಮೃ. ೫-೧೭೪) ; ಮಾನವನ ಕ್ಷುದ್ರಶತ್ರುಗಳ ಶ್ರೇಣಿಯಲ್ಲಿ ತಗುಣೆಗೇ ಅಗ್ರತಾಂಬೂಲ (ನಂಟರು. ४೭). **ತಗಣೆ:** ಮಲಗಿ ಶಿಶುವು ಇರುತಿರಲು ತಗಣೆ ಗುಂಗಾಡಿ ಕಟ್ಟಿ (ಚಿದಾವ. ೧೧೭-೭). **ತಗಣೆ:** ತಗಣಿ, ತಗಣೆ, ತಿಗಣೆ–ಈ ರೂಪಗಳನ್ನೂ ಕಿಟೆಲ್ ಉಲ್ಲೇಖಿಸುತ್ತಾನೆ (ನಂಟರು. ೫೮) : ತಗಣೆ ಉಪದ್ರ ಮಗಳಿಗೂ ಬಿಡಲಿಲ್ಲ (ಗಾದ). **ತಗುಣಿ:** ತಗುಣಿ ಹೆಬ್ಬುಲಿಯ ಹಿಡಿದಂದು ಹೆಣ್ಣನ ಬಗೆಯು ನಂಬುವದು (ಸರ್ವಜ್ಞ. ೧೭೭೯) : ಚಿಕ್ಕಾಡಿ ತಗುಣಿಯೂ ರಕ್ಕಸರು ಜಾರೆಯರು ಒಕ್ಕಲಿಕ್ಕುವರು ಇರುಳೆಲ್ಲ ಬೆಳಗಾಗಿ ಸುಕ್ಕಿದಂತಿಹರು (ಸರ್ವಜ್ಞ ೧೮೫೫). **ತಿಗಣಿ:** ಶೂಲಿಯು ಕೊಂಡು ವಿಷವನು ಕೊರಳ ಪೂಸಲು ಖಂಡಿಯಲಿ ಹಿಡಿಯಲಿಕೆ ತಿಗಣಿಗಳಾದವಾಕ್ಷಣಕೆ (ಸಂಭಪ. ೬-೩೭ ಅ೩೮). **ತಿಗಣೆ:** "ಮತ್ಕುಣ – ತಿಗಣೆ" (ಒಷಧಿ. ೧೧೭) : ಗಗನಯಾತ್ರಿಗಳಾದರಾ ಸೂರ್ಯಚಂದ್ರರು ಎಲ್ಲರು ತಿಗಣೆಗಂಜಿದರು (ಇಂಚಾಪ. ೧೧೮-೭೮). **ತಿಗುಣೆ:** ಡುಂಡುಕನೆಂಬ ತಿಗುಣೆ ಬಂದು ಅನುಂ ನಿನ್ನ ಸಮೀಪದೊಳಿರ್ಪನೆನೆ (ಪಂಚತಂ. ೦೩೩-೧೧) : ದೇಶಾಂತ್ರಿಯಾದವ ತಿಗುಣೆ ಚಿಕ್ಕುಟ ಪಸಿವು ಬಾಯಾಚಿಕೆಗಂಜಿದರಂತಹುದು (ರೇವರ. ಹ. ೩೭೭-೧೨) : ಚಿಕ್ಕಟು ತಿಗುಣೆಯ ತಿಕ್ಕುವಂದದಿ ನೆಲಕಿಕ್ಕಿದನರಗಳಿಗೆಯೊಳು (ನೇಮಿಸಂ. ೨೯-೩೦).

[ದೇ.॥ ತುಳು. ತಗುಳೆ, ತಗುರೆ, ಚಗುಳೆ, ಸಗುಳೆ ]

**ತಗುಣೆಗಾಟ** (ನಾ). ತಗುಣೆಗಳ ಕಾಟ ; ತಗುಣೆಗಳಿಂದಾಗುವ ಹಿಂಸೆ : 'ತಗುಣೆಗಾಟಂಗಾಡು' ಪರಾ. [ ತಗುಣೆ + ಕಾಟ$_1$ ]

**ತಗುಣೆಗಾಟಂಗಾಡು** (ಕ್ರಿ). ತಗುಣೆಯಂತೆ ಬಹಳವಾಗಿ ಹಿಂಸಿಸು,– ಮತ್ತೆ ಮತ್ತೆ ಕಾಡುಂ : ಈ ರಾಜಹಂಸನಂ ಸರಸೀರತಲಂಪಟನನಸುರನೊರ್ವಂ ಗದೆ ಕೊಳ್ಗಾರವೊಲುದ್ಯತನಾದನಪಾರಬಲಂ ತಗುಳೆ ತಗುಣೆಗಾಟಂಗಾಡಲ್ (ಶಾಂತಿಪು. ೮-೬೮). [ ತಗುಣೆಗಾಟ + ಕಾಡು$_1$ ]

**ತಗುತ್ತೆಂಗು** (ನಾ). ಒಂದು ಬಗೆಯ ಮೂಲಿಕೆ (?) : ತಗುತ್ತೆಂಗು ಕೋಳಿಜುಟ್ಟಿನ ರಕ್ತದಿಂ ಅರೆದು ಗುಳಿಗೆಯಂ ಮಾಡಿ ಚೆಂದೆಂಗಾಯಿ ಎಲೆರಸದಲ್ಲೂ, ಆ ಬೀಜದಲ್ಲೂ ತೇದು ಹಚ್ಚಲು ಇರುಳುಗಣ್ಣು ಮಾಣ್ಗುಂ (ವಿವೈವಿ. ೬೩). [ ? ]

**ತಗುಬಗೆ** 'ತಗೆಬಗೆ' ನೋ.

**ತಗುರು** 'ತಗರ್$_1$' ನೋ.

**ತಗುರೆನಾಡು, ತಗರೆನಾಡು** (ನಾ). ಒಂದು ಪ್ರದೇಶದ ಹೆಸರು : ತಗುರೆನಾಡ ಮಹಾಜನಂ ಪೋಗಿ ಕಣ್ಣರೂ (ಎಕ. VI, ಕಡೂರು. ೧೪೭-೩ : 972). **ತಗರೆನಾಡು:** ಕೋಗೋಡಿನೊಕ್ಕಲ್ತಗರೆನಾಡ ಕೂಡಿಟ್ಟಲ್ಲಿ (ಮೈಆರಿ. ೧೯೩೯, ೩೬-೧ : 1034). [ ತಗುರೆ$_0$ + ನಾಡು ]

**ತಗುರ್ಚು** 'ತಗಳ್ಚು' ನೋ.

**ತಗುಲಿಸು** 'ತಗುಳಿಸು' ನೋ.

**ತಗುಲು$_1$** 'ತಗುಳ್$_1$' ನೋ.

**ತಗುಲು$_2$** 'ತಗುಳ್$_2$' ನೋ.

**ತಗುಲುಬೀಳ್**, ತಗುಲುಬೀಳು (ಕ್ರಿ). ೧. ನೇತುಬೀಳು; ಜೋತುಬೀಳಂ; ಕೈಗೆ ಸಿಕ್ಕು : ತಗುಲುಬಿದ್ದಪ್ರದೆಂತು ಪಕ್ಷವಿರಹಿತ ಪಕ್ಷಿಗೊಗು ಮಿಗೆಯ ಶಾಖಾಗ್ರಫಲ (ಪರಶು. ೭-೩೭). **ತಗುಲುಬೀಳು:** ೧. ಸಲುಗೆಯಲಿ . . . ಮೈದುನನೆಂಬ ಮತ್ತೊಮ್ಮೆ ಬಗೆವ ಸಾಕ್ಷಾದ್ವಿಷ್ಣುವೆಂದೇ ತಗುಲುಬೀಳುವನೊಮ್ಮೆ ಕುತ್ತಿಗೆಗಡುತನ ನರ ಮಾಡೆ ಹರಿ ಸಂತೋಷಿಸುವನೆಂದ (ಜ್ಞಾನಸಿಂ. ೧४-೯೫). ೨. ಗಂಟುಬೀಳು; ಅಂಟು : ದೊಡ್ಡ ಕೆಲಸವೇ ನನಗೆ ತಗುಲು ಬಿತ್ತು (ರೂಢಿ).

[ ತಗುಲು$_1$ (<ತಗುಳ್$_1$) + ಬೀಳ್$_1$ (<ಬೀೞ್$_1$) ]

**ತಗುಲುಬೀಳು** 'ತಗುಲುಬೀಳ್' ನೋ.

**ತಗುಸಿ** (ನಾ). ಕುಂದು ; ದೋಷ : "ತಗುಸಿಯೆಂದೊಡೆ ಕುಂದುಂ" (ಧಾರನಿ. ೭೦). [ ? ]

**ತಗುಳ್$_1$**, ತಗಲ್$_1$, ತಗಲು$_1$, ತಗುಲು$_1$, ತಗುಳು$_1$, ತಗುೞ್ (ಕ್ರಿ). ೧. ಸೇರು ; ಕೂಡಿಕೊಳ್ಳು ; ಹೊಂದಿಕೊಳ್ಳು : . ಪೆಱಗಸಿದಾಗಿ ಮುಂತಗಲಿತಪ್ಪುದಱಿಂದೆ ಧರಾತಳಂ ತಗುಳ್ದಿಱಿಪುದಱಿಂದೆ ಕೊಂಕಿಪರಿಯುತ್ತಿರವಿಂದೆ . . . ಪೋಲ್ತುದು ಮಹಾನದಿ ರುಂದ್ರಫಣೀಂದ್ರರಾಜನಂ (ಕಾವ್ಯಸಾ. ೭४೭ ಶೂದ್ರಕ) : ಕಾರಕವಿಭಕ್ತಿಯೊಳೊಂದ ಸಮಾಸಯುಕ್ತಿ ಲೇಸಕ್ಕುಮಭೇದರೂಪಗುಣಮಾಗೆ ತಗುಳ್ದಿರೆ ಮೇಣ್ ಕ್ರಿಯಾಪದಂ (ಕವಿರಾ. ೧-೧೧೭) ; ತಳಿರೋಳಿ ತಗುಳ್ದು ತಳ್ತ ಕೇತನತತಿ ಚಾಮರೋತ್ಕರದೆಲರ್ ಮಲಯಾನಿಲನಾಗೆ (ಆದಿಪು. ೧೩-೬) : ತಗುಳ್ದ ವಿಹತಾಂಬುವ ಬಲ್ಸೊನಲಿಂದಿರ್ಪಾಱದ ಬಟ್ಟೆಯೊಳೊಕ್ಕ ಪಲ್ಲವನಿಕಾಯದಿನಂದಱಿದಂ ಕಾಡಾನೆಗಳಾಗಡೆ ಪೋದುದಂ (ಕಾವ್ಯಾವ. ೬೩೭): ಆಗಮದ ಬಗೆಯ ಹೊಗನಗಣಿತಸೂಕ್ಷ್ಮನು . . . ತಗುಳನಲುಗ ತಿಳಿಯಲು ಹರಿಯಲು ಬಾರದಾರಿಗಗೋಚರನುಭಯಭೃಪ್ಪ (ಶಿವಗೀ. ೧೩೩-೩೧೧). ೨. ಅಂಟು ; ಹತ್ತು : ಮನೋಹರವಾದುದವಮರಕಾಂತೆಯರುರದೊಳ್ ಕುರುಳೊಳ್ತಗುಳ್ದ ದುಗ್ಗಲವಂಗಳ್ (ಆದಿಪು. ೭-೯೩) : ಮಹಾದೋಷಂ ತಗುಳ್ಗುಮೆಂದವಧರಿಸಿ (ವೃಷವಿ. ೩೩-೩೪). ೩. ಮೆಚ್ಚು ; ಇಷ್ಟಪಡು ; ಆಸಕ್ತಿವಹಿಸು : ಯಾಚಕಭೃಂಗಕೋಟಿ ಕೈಕೊಂಡು ನಿರಂತರಂ ತಗುಳ್ದು ಕೀರ್ತಿಸೆ (ಪಂಪಭಾ. ೧-೩): ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇೞ್ವೊಡೆ ಪಂಪನೆ ಪೇೞ್ಗುಮೆಂದು ಪಂಡಿತರ್ ತಗುಳ್ದು ಬಿಚ್ಚಟಿಸೆ ಪೇೞಲೊಡರ್ಚಿದೆನೀ ಪ್ರಬಂಧಮಂ (ಪಂಪಭಾ. ೧-೧೧) ; ವೀರಲಕ್ಷ್ಮಿಗಧಿನಾಯಕನೆನ್ನು ಧರಾತಳಂ ಮಹೋತ್ಸವದೆ ತಗುಳ್ದು ಬಣ್ಣಿಸುತವಿರ್ಪ್ಪುದು (ಸೌಇಇ. XX, ೩೧-೩೩ : 1044). ४. ಮೋಹಿಸು ; ಪ್ರೀತಿಮಾಡು : ಆತನ ಸುತರ್ ಕಾಮಾಗಳೇ ಯೋಗ್ಯರಾಗರೆ ಪಟ್ಟಕ್ಕೆ ತಗುಳ್ದು ಪಾಲನೆಱೆವಿರ್ ಪಾವಿಂಗೆ (ಪಂಪಭಾ. ೨-೯೯). ೫. ಸಮೀಪಿಸು ; ಹಿಂಬಾಲಿಸು ; ಬೆನ್ನಟ್ಟು : "ತಗುಳ್ – ಅನುಧಾವನೇ (ಹಿಂದೋಡು)" (ಶಮಧಾ) : "ಬೆನ್ನಟ್ಟೆನಲು ತಗುಳ್ವುದಕ್ಕುಂ" (ಕವಿಶಂ. ೨४೦) ; ಕರಿಣಿಯ ಸೀಯನಪ್ಪ ಮೊಲೆವಾಲ್ಗೆ ತಗುಳ್ವುದು ತತ್ಕಿಶೋರಕೇಸರಿ . . . ಇಂದ್ರತನೂಜತಪಃಪ್ರಭಾವದಿಂ (ಪಂಪಭಾ. ೬-೮೦) ; ಜಾಯಿಲಂಗಳ್ ಕಂಡು ತಗುಳ್ದು ಬಂದೆಮ್ಮ ಕಡಿದುಮಾದೊಡೆ (ಪಂಚತಂ. ೨೦-೨) ; ಗೞೆವೞೆಯ ಪಾವಿನಂತೆ ಬೆಂಬೞಿಯಂ ತಗುಳ್ದು ಪರಿತರೆ (ಸುಕುಮಾ. ೬-೫೩): ಗರ್ಭಿಣಿಯನೆಮ್ಮೆ ತಗುಳ್ದಂತೆ (ಧರ್ಮಾಮೃ. ೨-೭೧) : ಒತ್ತರಿಪ ಸಂಸಾರವಂ ಬೆಂಬತ್ತಿ ಪಾೞೆ ತಗುಳ್ದು ನಲಿದಾಡುತ್ತಲಿಪ್ಪವೊಲೆರಡು ಕಯ್ಯಂ ಬಿಚ್ಚಿಯಾಡುವನು (ಬಸವು. ೩-೩೭). ೬. ಆವರಿಸು; ಆಕ್ರಮಿಸು; ಮೇಲೆಬೀಳು: ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ವಿಱಿದುಂ (ಧರ್ಮಾಮೃ. ೩-೭೩) ; ವಾರಣವಾಗಿ ಪೋರ್ವ ಪುಲಿಯಾಗಿ ತಗುಳ್ವ . . . ಮಹಾಸ್ತ್ರದಿ ನೆಚ್ಚು ಕಿರೀಟ ಕಾದಿದಂ (ಜಗವಿ. ೦೫-೨೦) ; ತಗುಳ್ದು ಪೊಯ್ಯ ಗದೆಗೆ (ಚಂದ್ರಪು. ೧೧-೮೦) ; ಕಾಳ್ಗಿರ್ಚು ತಗುಳ್ದ ತೆಱದಿಂ ನಿಳ್ಕಿಸದೆ ನೊಂದು ಬೆಂದು ಬಳಲುತ್ತೆಂದಂ (ಗಿರಿಕ. ೧-೧೧೭) ; ಖಳನುರವಣೆಸಿದನು ರಾಹು ತಾರಾಧಿಪನ ತಗುಳ್ವಂತೆ (ಕುಮಾವ್ಯಾಸ. ೧४-೬೩); ಕಯ್ಗೊಳ್ಗಲ್ಪಂ ರಾಷ್ಟ್ರದಿಂದೆಂದುಂ ತೆರೆಯಿಂ ಪೆರತೇನನುಂ ತಗುಳ್ವ ಸೊರ್ಕಂ ಪಗೆಯೊಳ್ ಆಳ್ಗಳಿಂದವನಳ್ಗಿಪಂ (ಸೌನಂದ. ೨-೩೩). ೭. ಓಡಿಸು ; ತೊಲಗಿಸು ; ನೀಗು ; ನಿವಾರಿಸು : ಕುಳಿಶಾಸ್ತ್ರಂ ಕುಧರಾಸ್ತ್ರಮಂ . . . ಜ್ವಳನಾಸ್ತ್ರಂ ಗಗನಾಸ್ತ್ರಮಂ ತಗುಳೆ (ವರ್ಧಪು. ೮-೭೩) ; ಅನೆತುವುಂ ಪೋಗೆನೆಂದೆನಲುಪಾಯದಲು ನಿನ್ನಂ ತಗುಳಲೆಂದಾಡಿದನೆ ಧರೆಯ ಹಿತವನಾಚರಿಸಲಾಡಿದೆನಲ್ಲದೆ (ಸಿದ್ಧರಾ. ೩-೦೭)

ತಾನೊಗೆದತ್ತು ಕಾರ್ಮುಗಿಲ್ ಗಡಣಮೆನಿಪ್ಪ ದಂತಿಶತಿಯುಗ್ರದ ಡಿಂಡಿಮ ನಾದದಂತೆ ಪೆರ್ಗುಡುಗು ನಿದಾಘನಂ ತಗುಳಲ್ಕೆದಿದ ನೀರದ ಕಾಲರಾಜನಾ (ರಾಜಶೇ. ೮-೧೦೩). ೮. ವಿವೇಚನೆಯಿಲ್ಲದೆ ದುಡುಕು : ಎಂ ತಗುಳ್ದಿ ಯಿನ್ನುಕಿರದಿರೀವ ಮಾತನಿವನುಣ್ಬುದು ಖಾಂಡವಮಾತನಗ್ನಿ (ಪಂಪಭಾ. ೫-೭೩). ೯. ತೊಡಗು; ಮೊದಲುಮಾಡು; ಪ್ರಾರಂಭಿಸು; ತಪಂಬಟ್ಟ ದಿವಸದಿಂ ತಗುಳ್ದಿಂದಿಂಗಯ್ದು ದಿವಸಮುಣ್ಬುದಿಲ್ಲ (ವಡ್ಡಾರಾ. ೮೩-೫) ; ಭದ್ರಶಾಲದಿಂ ತಗುಳ್ದು ಪಾಂಡುಕವನಂಬರಂ (ಆದಿಪು. ೩-೩೨೭) ; ಜಯಂ ಬೆಸಗೊಳೆ ಗಂಗಾದೇವಿ ಪೇಟಲ್ತಗುಳ್ದಳ್ (ಚಾಪುಂಪು. ೮೩-೫) : ಸವಿಸ್ತರಂ ಪೇಟ್ವಲ್ ತಗುಳ್ದು (ಪಂಚತಂ. ೩೦-೭). ೧೦. ಅನುಸರಿಸು ; ಆಚರಿಸು ; ಪಾಲಿಸು: ಭೋಗಿಪೆನೆನ್ನ ಜವ್ವನಮುಮಿಾಧನಮುಂ ತವುವನ್ನೆಗಂ . . . ಅನ್ನೆಗಮತ್ತಜಿನ ತಗುಳ್ವೆನೆಂತಾಗಿಯುಮೆಂಬ ನಿನ್ನ ಮೊಲಗಟ್ಟಲೆಗಾಂ ಬೆಱಗಾದೆಂ (ಆದಿಪು. ೩-೭೩). ೧೧. ಉಂಟಾಗು; ಸಂಭವಿಸು; ಒದಗು; ಬರು: ಗುರುಸಮಕ್ಷಪರೋಕ್ಷವಿನೇಯವೃತ್ತಿಯಿಂದಮ್ಮನದುಕ್ಕೆಮಂ ತಗುಳೆ ನಿರ್ವಹಣಾಸ್ಥಿತಿಗುಯ್ದುರೀ ಪುರಾಣಂ ಮಹಿರತ್ನವಿಂತಿದೆಯುಳಂಕೃತಿ (ಶಾಂತಿಪು. ೦೩-೩೧) ; ಅರೋಚಕಂ ತಗುಳ್ವಡೆ ಬಱಿಬೇನೆ ಎತ್ತುವಡೆ . . . ತಗುಳ್ಗುಂ ಪುಟ್ಟುಗುದಾತ್ತ ಬಲಕ್ಷಯಂ (ಕಲ್ಯಾಕಾ. ೭-೦); ದೀರ್ಘಕ್ಕೆ ದೀರ್ಘ ಮೊದವೆ ಸಮಸಂಧಾ ಯುಗಳಂಗಳೊಳಮಳಿನಮಾಗೆಲ್ಲಿಯುಂ ಸವರ್ಣ ವಿಧಾನಂ (ಕಮುದ. ೭) ; ತನಗೆ ಕಂತುಹರಕರುಣದಿಂ ತಗುಳ್ದ ರೂಪದೊಳು ಹಿಮವಂತಸುತೆಯಾಸ್ವಾಂತಮತ್ಯಂತಚಂಚಲಮಾದ ಬಳಿಕ ತಾನೆಂತು ನಿಶ್ಚಿಂತೆಯಿಂದಿರ್ಪಂ (ನಂದಿಮಾ. ೯-೫೩). ೧೨. ಬಯ್ಯು; ತೆಗಳು; ಮಂೂದಲಿಸು: ಒರ್ವರೊರ್ವರಂಟಿಯುತ್ತಂ ಮುನಿದು ತಗುಳುತ್ತಂ . . . ಬಿಡದೆ ನರಳುತ್ತಂ ಪುಡಿಯೊಳು ಪೊರಳುತ್ತಮಿಪ್ಪರ್ (ಪ್ರಭುಚಾ. ೨೩-೧೫). 'ತೆಗಟ್₁' ಪರಾ. ತಗಲ್₁ : ೧೩. ತಾಕು; ಸೋಂಕು; ಸ್ಪರ್ಶಿಸು: ಕಣೆ ಅವಂಗೆ ತಗಲ್ದು ಮೂರ್ಛೆವೋದಂ (ಅದ್ಭುತ. ೪೩-೧೯). ತಗಲು₁ : ೧. ಪೊಗಳಿದ ಭಕುತರ ತಗಲಿ ತೊಲಗನೆಂದು ಮಿಗೆ ಕೂಗುತ್ತಿರಲು (ವಿದಾಳ್ಯ. ೭೫-೨) : ತನುಲತೆಗಳನ್ಯೋನ್ಯಮಾಗಿ ತಗಲಿರೆ . . . ತನುಭಾವಮಳಿದು ನಿದ್ರಿಪ ಮಾನಿನೀಗಣವ ಕಂಡನಾ ವಾಯುಸುತನು (ವೆಂಕಾರಾ. ೫-೪-೦೮); ೧೩. ತೆನೆಗಳಿಸಶಿಯಾ ತಗಲಿ ಪೆರ್ಬಾಗಿಲೊಳು ಚಂದ್ರನನುಗಿವವು (ಜಿನಭಾ. ೨-೨೨) : ಈ ಬಾಣವು ಈ ನೀಚನ ಮಗನಿಗೆ ತಗಲಲಿ (ನೀತಿಚಂ. XI, ೦೪) : ಆಕಾಶಬಾಣವನ್ನು (rocket) ಚಂದ್ರಗ್ರಹಕ್ಕೆ ತಗಲುವಂತೆ ಎಸೆದಿದ್ದಾನೆ (ಶಿಲ್ಪನಾ. ೦೮೩). ೧೪. ಸಂಭೋಗಮಾಡು: ತಗಲಿದವನಿಗೆ ಹಗಲೇನು ಇರುಳೇನು (ಗಾದೆ). ತಗುಲು₁ : ೧. ಸೊಗಸಿಂದಮಾನಂದಗೊಳುವ ಸುಕುಮಾರಾಂಗಿ ಮಿಗೆ ರಕ್ಕಸೀಗಣದಿ ತಗುಲಿ ಸಂಕಟಗೊಂಬ ಬಗೆಯ ನೋಡಲು ವಿಧಿಯ ಬಲಮೆಂತೊ (ವೆಂಕಾರಾ. ೫-೮-೧); ಕೇಶಿಧ್ವಜನು ಆ ರಾಜ್ಯ ಭೋಗಗಳಲ್ಲಿ ತಗುಲಿ ಕೊಳ್ಳದೆ ಯೋಗನಿಷ್ಠನಾಗಿದ್ದು . . . ಯಜ್ಞವನ್ನು ಮಾಡತೊಡಗಿದನು (ಸಾಹಿಜೀ ೯೬). ೨. ರಾವಣನ ತೇಜಸ್ಸಿಗೆ ಸ್ತ್ರೀವ್ಯಾಮೋಹದ ಕಳಂಕವೊಂದು ತಗುಲದಿದ್ದರೆ ಅವನ ಸಮಾನರು ಯಾರು (ಕಾವ್ಯಸ. ೩); ಒಂದು ಹುಲ್ಲುಕಡ್ಡಿ ನನ್ನ ಬಟ್ಟೆಗೆ ತಗುಲಿಕೊಂಡಿದೆ (ನೀತಿಚಂ. IV, ೨೮) : ಅರಸರ ತೈಲಚಿತ್ರಕ್ಕೆ ನಂದಾದೀಪಗೆ ತಗುಲಿ, ಅದು ಉರಿದುಹೋಗುತ್ತದೆ (ಸಂಪಕ. ೯೯). ೧೫. ಬೆಲೆಯಾಗು ; ವೆಚ್ಚವಾಗು ; ಖರ್ಚಾಗು : ಅಷ್ಟೇ ಕೆಲಸಕ್ಕೆ ಕನಿಷ್ಠ ಪಕ್ಷ ಹತ್ತು ರೂಬಲ್ ತಗುಲುತ್ತಿತ್ತು (ಪುನರು. ೨೭೪). ತಗುಳು₁: ೬. ಮಗನ ಕರೆದರೆ ಯಮನ ದೂತರ ತಗುಳುವಂದು ಸಮಿಾಪವರ್ತಿಯೆ ನಗಧರ ಶ್ರೀಕಾಂತ ಸಲಹೆನೆ ಮುನಿಕುಮಾರಕನ ಉಗುಳಿಚಿದೆಲಾ (ಕುಮ್ಮಾಅ. ೨-೨೯): ಹಾಳಾಹಳಂ ತಗುಳಿ ನಾಲ್ದಿಕ್ಕನಾಂತು ನೆಱೆ ಪರಿಪರಿದು ಸುಡುತ ಬರಲು (ಲಶಿಚಂ. ೧೨-೮) ; ಘುಗುಘುಗಿಲು ಘುಗಿಲೆಂದು ಕೇಸುರಿ ತಗುಳಿದುದು (ನಿಭಾಗ. ೦೦-೧೭-೩೦). ೧೨. ಪಾಪಿ ಪೋಗೆಂದಂದು ನಿನ್ನಂ ಕೋಪದಿಂ ನಾಂ ನುಡಿದು ತಗುಳಿದ ಪಾಪವಂ ಸೈರಿಸುವುದು (ಬಸವು. ೦೩-೨೩) ; ಜಿನ ದತ್ತೆಯಾಲಯಕೆ ಪುಗಲವಳ್ಕಂಡೆಲೇ ಕಡುಪಾಪಿ ಪೋಗೆಂದು ತಗುಳಿದಳ್ (ಸಮ್ಯಕೌ. ೦೦-೧೮) : ವಿಭಾಡಿಸಿ ತಗುಳಲ್ ದೂತಂ ಬಂದಾಕ್ಷಣದೊಳ್ ವಿಕ್ರಮ ಕೌರವನೆಂದಂದಮನೊರೆಯಲ್ (ಜಯುಕಾ. ೬-೦೦). △ತಗುಟ್: ೬. ಅಸಹಾಯಸಿಂಹಂ ತಗುಟ್ದಿಳ್ದ ಬಡಿವಂ ದುಷ್ಟಮನ್ನೆಯ ಪ್ರಳಯಕಾಳಂ (ಸೌಇಇ. XX, ೨೪-೬ ; 1034).

ತಗಲು ಹಾಕು, ತಗಲ್ಹಾಕು=ತಗುಲಿಸು; ತೂಗುಹಾಕು; ಅಳವಡಿಸು: ಗುರು ಕೊಟ್ಟ ಚೀಲವೆಂದು ಗೂಟಕ್ಕೆ ತಗಲು ಹಾಕಿದರೆ ಹೊಟ್ಟೆ ತುಂಬೀತೆ (ನೀತಿಚಂ. VII, ೩೨) ; ಯಮನ ದೂತರು ಬಂದು ಪಾಶವನು ತಗಲ್ಹಾಕಿ ಮಮತೆಯಿಲ್ಲದೆ ಪ್ರಾಣ ಎಳೆಯುತಿರಲು (ಪುರಂದ. ೦-೫೩-೫). ತಗುಳೆ ಗಟಪು= ಮನಸ್ಸಿಗೆ ತಾಕುವಂತೆ ಹರಟು ; ಮರ್ಮೋದ್ಘಾಟನೆ ಮಾಡು : ಪದುಳಂ ಕುಳ್ಳಿರ್ದಮಗಾಯದ ಮಾತಂ ತಗುಳೆ ಗಟಪಿ ಪೋದಂ (ಗದಾಯು. ೨-೧೩). ತಗುಳೆ ಪಾಡು = ಮನಸ್ಸಿಗೆ ಹಿಡಿಸುವಂತೆ ಹಾಡು; ಮನೋಹರವಾಗಿ ಹಾಡು: ಪದ್ಮಜಂ ತಗುಳೆ ಪಾಡಿ ಸಾಮಂಗಳಂ (ಕಾವ್ಯಾವ. ೦೩೫). ತಗುಳೆ ಪೀರು = ಎಡೆಬಿಡದೆ ಕುಡಿ : ಬಡಬಾನಳಂ ಬಿಡದಾಗಳುಂ ತಗುಳೆ ಪೀರೆಯುಮಂತದೆಳ್ಳನಿತಪ್ಪೊಡಂ ತವದಂತೆವೊಲ್ (ಕಾವ್ಯಾವ. ೭೨೩). ತಗುಳೆ ಬಾಜಿಸು=ಹೊಂದಿಕೆಯಾಗಿ ಬಾರಿಸು; ಕೂಡಿಕೊಂಡು ಬಾಜಿಸು: ವಿತತ ಘನಾವನದ್ಧ ಸುಷಿರಂಗಳನೊರ್ಮೆಯೆ ಕೂಡೆ ಕೂಡಿಕೊಂಡತಿದ್ರುತ ವಾದಕರ್ತಗುಳೆ ಬಾಜಿಸೆ (ಮಲ್ಲಿಪು. ೮-೨೭). ತಗುಳೆವರ್ = ಅನುರೂಪವಾಗಂ; ಹೊಂದಿಕೊಳ್ಳು; ಸಮನಾಗು: ಈತನುದಾತ್ತ ಪೂರ್ವಭೂಮಿಪರುಮನೊಳ್ಪಿನೊಳ್ ತಗುಳೆವಂದೊಡೆಯಾ ಕಥೆಯೊಳ್ ತಗುಳ್ಚಿ ಪೋಲಿ ಪೊಡೆನಗಟ್ಟಿಯಾದುದು ಗುಣಾರ್ಣವ ಭೂಭುಜನಂ ಕಿರೀಟಿಯೊಳ್ (ಪಂಪಭಾ. ೦-೦೪).

[ ದೇ.೫ ತುಳು. ತಗರು, ತಗರ್ ; ತೆಲು. ತಗುಲು, ತವುಲು ]

**ತಗುಳ್₂, ತಗಲು₂, ತಗುಲು₂, ತಗುಳು₂ (ನಾ).** ೧. ಸೇರಿಕೆ; ಹೊಂದಿಕೆ; ಜೋಡಣೆ : "ತಗುಳೆಂದು ಸಂಧಾನಂ" (ಕಕಸಾ. ೨೮-೫೮೬). ತಗಲು₂ : ೨. ಸಂಬಂಧ ; ಸಂಪರ್ಕ : ಎಲ್ಲಿಯು ಗುಡಿಯ ಕಟ್ಟಿದ ಸಿದ್ಧರಾಮಯ್ಯ ಎಲ್ಲಿಯು ಬಟ್ಟೆ ಬಂತೆನಗೆ ಎಲ್ಲಿಯ ತಗ[ಗ]ಲು ತಾಪತ್ರಯವೆಂದಾಗ ಮಲ್ಲಿಕಾರ್ಜುನ ಚಿಂತಿಸಿದನು (ಅಮುಸಾಂ. ೫-೭೦) : ತನಗೀ ವೃತ್ತಿಗಸಂಗತ್ವವ ತಿಳಿದನಿಗಘವುಣ್ಟದ ತಗಲುಂಟೆ (ಕೃಕವ. ೫-೪೮-೪) ; ಹರಿಯ ನೆನೆಸಿದ ಹಗಲು ಮುಕ್ತಿಗೆ ಬಲು ಮಿಗಿಲು ಹರಿಯ ನೆನೆಸದ ಹಗಲು ನರಕಕ್ಕೆ ತಗಲು (ವಿದಾಳ್ಯ. ೨೨-೨). ತಗುಲು₂: ೨. ಕೊಂಕು ಕೊಸರುಗಳ ಕಿನಿಸೆಂಬ ತಗುಲುಗಳ ಸೋಂಕದಿಹ . . . ನೆಲದೊಳು (ವೆಂಕಾರಾ. ೬-೬೨-೩೫). ತಗುಳು₂ : ೩. ಹತ್ತಿರ ಬರುವುದು ; ಸಮಿಾಪಿಸುವುದು.

ತಗುಲಾಗು=ಸೇರುವೆಯಾಗು: ರಾಮಚಂದ್ರನ ಸೇವೆಗೆ ಕಲಿ ಹನುಮಂತ ನೇಮದೆ ತಗುಲಾದಂತೆ ಭೂಮಿಪ ಕಂಠೀರವೇಂದ್ರಗೆ ನಂದೇಂದ್ರ ತಾ ಮನೋಹರದೊಳೊಪ್ಪಿದನು (ಕಂನವಿ. ೪-೧೦೪); ನಿಂಮ ಚರಣಾರವಿಂದದ ಸೇವೆಗೆ ತಗುಲಾಗಿಯಿಧೇವೆ (ಪ್ರಾಅರಿ. ೦೯೪೩, ೫೦-೪೦ ; ಸು. 1700). ತಗುಳುಮಗುಳು, ತಗಳುಮಗುಳು = (ಶತ್ರುವನ್ನು) ತಾಗುವುದು ಮತ್ತು ಹಿಂದಿರುಗುವುದು ; ಆಕ್ರಮಣ ಮಾಡಿ ಶತ್ರುವಿನ ಕೈಗೆ ಸಿಕ್ಕದಂತೆ ತಪ್ಪಿಸಿಕೊಳ್ಳುವುದು : ಎದ್ದು ನಭದೊಳ್ಪಳಂಚುವರೊಮ್ಮೆ ಭೂತಳದೊಳಿದ್ದು ಹೆಣಗುವರೊಮ್ಮೆ ಬಳಸಿ ಮಂಡಲದಿಂದೆ ಹೊದ್ದಿ ಹೋರುವರೊಮ್ಮೆ ತಗುಳುಮಗುಳಾಗಿ ತಾಗುವರೊಮ್ಮೆ ಸಂಬರಿಯೊಳು (ಜೈಮಿಭಾ. ೨೨-೨೯) ; ತಗಳುಮಗುಳಾಗಸಮಸಮರದಲಗಣಿತದ ಭಟನಿವಹ ವಡಗೆಡೆದುಗುಳಿಚಿದರಸುಗಳನು (ಕೋಗಯು. ೨೦-೨೪). [<ತಗುಳ್₁]

**ತಗುಳ** (ನಾ). ಒಟ್ಟಾಗಿರುವುದು; ಗೊಂಚಲು ; ಮಂಜರಿ: ನಗೆಯಿಂದ ಬಿರಿವಂತೆ ಬಿರಿವ ಬಿರಿಮುಗುಳ ತಗುಳದಿಂ ಸೊಗಯಿಸುವ ಮಲ್ಲಿಕಾಲತೆಯ ಜೊಂಪಂಗಳುಂ (ಪುಷ್ಪಪು. ೨-೩೯ ವ) : ಚೆಲ್ವಿಂ ಬಳ್ವಲಾದ ಮಲ್ಲಿಗೆಯ ಮುಗುಳ ತಗುಳದಿಂದೆಸೆವ ಬಾಸಿಗಂಗಳೊಳಮಳಂಕರಿಸೆ (ಪುಷ್ಪಪು. ೪-೮೧ವ). [<ತಗುಳ್$_1$ ? ]

**ತಗುಳಿಸು, ತಗಲಿಸು,** ತಗುಲಿಸು (ಕ್ರಿ). ೧. ಸೇರಿಸು ; ಹೊಂದಿಸು : ಮೊಗಮೆಂಬಲರ್ಗೊಳದ ತಡಿಯೊಳಿರಿಸಿದಳಿವಳಂಚೆಗಳನೆನೆ ಸತಿಯ ಕಿವಿಯೊಳ್ ತಗುಳಿಸಿದಳ್ ಹಂಸರಚನೆಯೋಲೆಯನೊರ್ವಳ್ (ಪುಷ್ಪಪು. ೯-೭೭). ೨. ತಳ್ಳಿಸು ; ಓಡಿಸು ; ಹೊರದೂಡಿಸು : ಹರಹರಾಯಿಂದೀ ವ್ರತಭ್ರಷ್ಟರ ದೆಸೆಯನೀಕ್ಷಿಪೊಡೆ ನುಡಿವೊಡೆ ಪರಮಪಾತಕವೆನುತ ಹುಗಲೀಯದೆ ತಗುಳಿಸಿದೊಡೆ (ಬಸಪು. ೬೦-೨೭). **ತಗಲಿಸು :** ೧. ದಿಟ್ಟನೋಲೆ ಮೊಣಕಾಲಿಗೆ ತಗಲಿಸಿ ಗಟ್ಟಿಕಂಕಣ ಕಿವಿಗಿಟ್ಟು (ಪುರಂದ. ೧-೦೦೦-೪). ೩. ಮುಟ್ಟಿಸು; ತಾಗಿಸು: ಮತ್ತೆ ಪ್ರಾಗ್ನ್ಯಾಸನೆಯ ಪೆಸರಿನ ಸುತ್ತುವಳ್ಳಿಯ ಮೆಟ್ಟರದ ಮೈ ಪತ್ತುತಿಹ ಸಂಕಲ್ಪ ಚಿಗುರಿಗೆ ಜುಟ್ಟ ತಗಲಿಸದೆ (ಗಗತಾ. ೧೬-೧೮) ; ನಾನು ಸ್ವಲ್ಪ ರೋಗದ ಸೋಂಕನ್ನು ತಗಲಿಸಿದರೆ ಅವು ಸತ್ತ ಪ್ರಾಣಿಯ ಅಂಗಾಂಗಗಳನ್ನೆಲ್ಲ ವ್ಯಾಪಿಸಿರುತ್ತವೆ (ವಿಕಾಸ.೬೩). **ತಗುಲಿಸು:** ೧. ಉಪ್ಪು ಮೆಣಸು ಜೀರಿಗೆ ಸರಿಯಾಗಿ ಹಾಕಿ ಸ್ವಲ್ಪ ಹಿಂಗು ತಗುಲಿಸಿ ಆಯಕಟ್ಟು ಮಾಡಿ (ಕಥಾಮಂ. IV, ೦೪). ೪. ನಿಂದಿಸು; ದಬಾಯಿಸು: ಆ ಚಿಕ್ಕಮಗು ಆ ಭಾರತದ ದೇವರಾಜೈಯ್ಯ ಎಷ್ಟು ಧೈರ್ಯವಾಗಿ ಪಂಡಿತನಿಗೆ ಜವಾಬು ಕೊಟ್ಟ ನೀವೂ ಹಾಗೆಯೇ ಪಂಡಿತನಿಗೆ ತಗುಲಿಸಬೇಕಾಗಿತ್ತು (ಬೆಂಗಾಳ್ಳ. ೫೭೮). 'ತಗುಳ್ಚು' ಪರಾ. [ತಗುಳ್$_1$ + – ಇಸು$_3$ ]

**ತಗುಳು$_1$** 'ತಗುಳ್$_1$' ನೋ.

**ತಗುಳು$_2$** 'ತಗುಳ್$_2$' ನೋ.

**ತಗುಳ್ಚಿಸು** (ಕ್ರಿ). ನೂಕು ; ತೊಲಗಿಸು ; ನಿವಾರಿಸು ; ದೂರಮಾಡು: ಕರಕಪಾಲಮಂ ಕಂಡೊರ್ವ ಶಶಿಮುಖಿಯುರಾದೊಡಂ ಭಯ ಬಿಭತ್ಸಗೆ ಸಂದುದಿಲ್ಲವೆನೆ ಶಿವಮುಖದೊಳು ಬೆಸುಗೆಗಣ್ಗಳ್ ಪೆಟಿತು ಕಾಣ್ಬುವೇ ಮೇಣ್ ಮಿಕ್ಕ ರಸಮೆನಿತ್ತಾದೊಡಂ ಮೋಹರಸಮಂ ತಗುಳ್ಚಿಸಬಲ್ಲುದೇ (ಚಬಪು. ೨೦-೨) [ ತಗುಳ್ಚು + – ಇಸು$_3$ ]

**ತಗುಳ್ಚು**, ತಗುರ್ಚು (ಕ್ರಿ). ೧. ಸೇರಿಸು ; ಕೂಡಿಸು ; ಬೆರಸು : ಅರಸನಟಿದೇಂ ಮಹಾಪುರುಷರತ್ನದೊಳ್ ರತ್ನಮಂ ತಗುಳ್ಚಿದನೊ (ಶಾಂತಿಪು. ೨-೬೫); ಪಟಿಗನ್ನಡಂ ಪುದುಂಗೊಳೆ ಕೊಟಿ ಸಕ್ಕದಮಂ ತಗುಳ್ಚಿ ಜಾಣ್ ಕಿಡೆ ಮುತ್ತುಂ ಮೆಟಸುಂ ಕೋದಂತಿರೆ ಪೇಟ್ವಟಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ (ಕಾವ್ಯಾವ. ೫೫); ತದೀಯ ದುಸ್ತರ ಸ್ಮರದಶಾವ್ಯತಿಕರಕ್ಕೆ ತಲ್ಲಟಿಸಿ . . . ನಲ್ಲಳಸುವನಾಂ ಸಾಹಸದೊಳ್ ತಗುಳ್ಚಿ ನಿಲೆ ಪಿಡಿವನಯಮಂ ಬಗೆದು (ವರ್ಧಪು. ೪-೮೨ವ). ೨. ಅಳವಡಿಸು ; ಸಿಕ್ಕಿಸು : ಮಘವಂ ಶಚಿ ಪೂತ ಚೂತಮಂ ನೆಮ್ಮಿದಶೋಕವಲ್ಲರಿಯ ಪಲ್ಲವಮೊಂದನೆ ಕೊಯ್ದು ರಾಗದಿಂ ಸೋರ್ಮುಡಿಯೊಳ್ ತಗುಳ್ಚಿದೊಡೆ ಸೂಟನೆ ಬಾರಿಸಿದಂ (ಪಂಪಭಾ. ೫-೮೨); ಕೋಡ ಮೊನೆಯೊಳ್ ತಗುಳ್ಚಿದ ಸೂನಗಿಗತ್ತಿಯ (ರಾಜಶೇ. ೬-೧೧ವ). ೩. ತೊಡು ; ಧರಿಸು : ಸೌಭಾಗ್ಯನಿಧಿಯ ವಿಯೋಗದಿಂ ಜೀವವಿಯೋಗಮಾಗದಿರ್ಕೆಂದು ತಗುಳ್ಚಿದ ರಕ್ಷಾವಳಿಯಂತೆ ಕೊರಲೊಳಿರ್ಕ್ಕೆ ರಕ್ಷಾವಳಿಯುಂ (ಕಾದಂಪೂ. ೭೯೧); ಗಳದೊಳ್ ತುಲಸೀಸ್ರಜಮಂ ತಗುಳ್ಚಿ (ದಿವ್ಯಚ. ೯-೧೯). ೪. ಹೊಂದಿಸು ; ಅನ್ವಯಿಸು : ಸಂಪ್ಕೆಗಳೊಳೇಕಬಹುತ್ವವಿಪರ್ಯಯಕ್ಕೆಸಂಖ್ಯಾತಗುಣಾಂವಿಕಲ್ಪಮದು ಕನ್ನಡದೊಳ್ ಗುಣಮಂ ತಗುಳ್ಚುಗುಂ (ಕವಿರಾ. ೦-೧೧೯) ; ಈ ಕಥೆಯೊಳ್ ತಗುಳ್ಚಿ ಪೋಲಿಪೊಡೆನಗಟ್ಟಿಯಾದುದು ಗುಣಾರ್ಣವಭೂಭುಜನಂ ಕಿರೀಟಿಯೊಳ್ (ಪಂಪಭಾ. ೧-೧೪): ಒಹಿಲಯ್ಯಂಗೆ ಪೆರ್ಮೆಯುಂ ತಗುಳ್ಚಿ ನೀಂ ಮಿಗೆ ಪೊಗಳ್ವುದನುಚಿತಮಕ್ಕುಂ (ವೃಷವಿ. ೨೯-೧೬೬ವ) : ಬೆಳಕಿನ ಅನುಭವವನ್ನು ಪರಿಭಾವಿಸಿ ಆ ಬೆಳಕನ್ನು ಗಾಂಧೀಜಿಯ ವ್ಯಕ್ತಿತ್ವದ ಚಿತ್ರಣಕ್ಕೆ ತಟಕ್ಕನೆ ತಗುಳ್ಚಿರುವುದು ತುಂಬ ಹಿತವಾಗಿದೆ (ಸೌಂದಷ. ೬೪೬). ೫. ತಗುಲಿಸು ; ಗಂಟುಹಾಕು : ಗಾಳಗೊರವಂ ತಗುಳ್ಚಿ ಪಳಾಳಮನೇನೊಂದನಪ್ಪೊಡಂ ಗಟಬದೊಡಂ ಬೇಳಸುಡಿಗೇಳ್ದು ಕಿಮ್ಮನೆ ಬೇಳಲ್ ನಿಮಗಂತು ರಾಜಸೂಯಂ ಮೊಗ್ಗೇ (ಪಂಪಭಾ. ೬-೨೪). ೬. (ಉರಿ) ಹತ್ತಿಸು; ಅಂಟಿಸು: "ತಗುಳ್ಚು–ಉದ್ಯೋಗೇ, ಅಗ್ನಿಬಾಧನೇ ಚ" (ಶಮುದಾ) ; ಬಳೆದ ತಮಮೆಂಬ ಕರಡಮನೆಳವಲ್ಲದೆ ಸುಟ್ಟು ಕಿಡಿಸಲೆಂದಜನುದಯಾಚಳದೊಳ್ ತಗುಳ್ಚಿ ತಳ್ತೊಡನಳುರ್ವ ದವಾಗ್ನಿಯ ಪೊಲರ್ಕನುದಯಂಗೆಯ್ದಂ (ಕಾವ್ಯಸಾ. ೮೭೧ ಕೂದ್ರಕ) : ಎನ್ನ ಬಸಿಱೊಳ್ ಕಿಚ್ಚಂ ತಗುಳ್ಚಿದಂ (ಅರ್ಧನೇ. ೬-೬೯ವ). ೭. ಮಾಡು ; ನಿರ್ಮಿಸು : "ತತುಳ್ಚು–ಉದ್ಯೋಗೇ,ಅಗ್ನಿಬಾಧನೇ ಚ"(ಶಮುದಾ);ಸುರಪತಿಯಿಲ್ಲಿಟುಲ್ಲದೆ ಜಿನಾಭಿಷವೋತ್ಸವಮಂ ತಗುಳ್ಚನಾ ಸುರತರುಯಿಲ್ಲಿಯುಲ್ಲದುದಿತೋದಿತಮಾಗದು (ಮಹಾನೇ. ೦-೫೫) ; ಅಲ್ಪಾರ್ಥವಸಾಳ್ದರೆ ವಸ್ತುವಿನರ್ಥವನು ಸಿರುತ್ತಿರೆ ತಗುಳ್ಚುವುದಾ ಸಂಹಿತೆಯುಂ (ಶಮುದ. ೬೪). ೮. ಆರಂಭಿಸು ; ತೊಡಗು; ಉಪಕ್ರಮಿಸು: ಪಂಕಜೋತ್ಕರಮುಮನಿಂದುಮಂಡಲಮುಮಂ ಮೊದಲೊಳ್ಸಮೆದಬ್ಜಜಂ ಮನೋಹರಮೆನೆ ಮಾಡಿದೀ ಪೊಗದ ಪೋಲ್ವೆಗೆ ಮುನ್ನಗಳಲ್ತಗುಳ್ಚಿ ಬಿತ್ತರಿಸಿದನಲ್ಲದಿಂತು ಸಮಪಸ್ತುಗಳಂ ಪಡೆವಂತು ಗಾಂಪನೇ (ಕಾದಂಪೂ. ೭೪೩). ೯. ಆಗಿಸು; ಉಂಟುಮಾಡು: ನುಡಿಯಂ ತಗುಳ್ಚಿ ನೋಟಂ ನುಡಿ ಪರಿಚಯಮಂ ತಗುಳ್ಚಿ ಪರಿಚಯ ಮಳಿಪಂ ತಡೆಯದೆ ತಗುಳ್ಚಿ ಮನದಳಿಪೊಡಗೂ[ಡಿದು]ದಂ ತಗುಳ್ಚುಗುಂ ಕಾಮಿಗಳಾ (ಕವಿರಾ. ೩-೨೦೨) ; ಛಾತ್ರರಗೋಗ್ರಹಂ ಪಿರಿದುಮಾಗ್ರಹಮಂ ಮನದೊಳ್ ತಗುಳ್ಚೆ (ಪಂಪಭಾ. ೮-೯೨) ; ಮಾಡಿದಾ ಸಲೆ ಸಂದೆಯಮಂ ತಗುಳ್ಚದಂತೆ(ವಿಷ್ಣುಪು.೦೦-೦೫೩). ೧೦. ತಲುಪಿಸು;ಮುಟ್ಟಿಸು:ಮಾರಿಯ ಮಸಣಿಯ ಚೂಳಿಯಂ ಪಿಡಿದು ಜಡಿವ ಜವಹುರಮಂ ತಗುಳ್ಚಿ ತಾಮೊಕ್ಕಲಿಕ್ಕುವ . . . ಬಲ್ಗೈ ಬಂಟರ (ರಾಮಾಶ್ವ. ೯೦-೨೫). ೧೧. ತೊಲಗಿಸು; ನಿವಾರಿಸು ; ದೂರಮಾಡು : ಸುನಯಾಂಶುಗಳಿಂ ಕುನಯಾಂಧಕಾರದೊಂದುನ್ನತಿಯಂ ತಗುಳ್ಚಿ ಖರಭಾನುವಿನಂತೆಸೆದಂ ನರೇಶ್ವರಂ (ಬಾಧಪು. ೪-೩೫). **ತಗುರ್ಚು :** ೧. × × × ಪತಿ ಕೊಯ್ದೊಡೆ ನಡು ಕೋಯುಲೆ ಪೋದುದು ತಗುರ್ಚಿ ಪೊಡೆಯ ಘರಿಯಲ್ಲೆನಲ್ಕೆ ತೋಳುಡಿದು ಸಲಕ್ಕೆವಿಟ್ಟ(F)ದು (ಸೌಇಇ. IX-1, ೦೬೩-೧೪ : 1098). [ ತಗುಳ್$_1$ + – ಚು$_1$ ]

**ತಗುಳ್ಪು** (ನಾ). ೧. ಕೂಡಿಕೊಂಡಿರುವುದು ; ಬೆಸುಗೆ ; ಜೋಡಣೆ ; ಕೂಟ : ನಿಗಳಂಬೊಲ್ ತೊಡರ್ದೊಂದು ಮೋಹನಿಗಳಂ ತಜ್ಜನ್ಮದೊಳ್ ನೋಡೆ ತೊಟ್ಟಗೆ ಮತ್ತಂ ಪೊಸತಾಗೆ ತಮ್ಮ ಮನದೊಳ್ ತಳ್ಪಿಯ್ದು ತಳ್ತಾ ತಗುಳ್ಪುಗಳೊಳ್ ಪೊಕ್ಕುವು ವಜ್ರಲೇಪದ ತಗುಳ್ಪಂ ಪೋಲ್ವಿನಂ ವಜ್ರನಾಭಿಗತಿಪ್ರೀತಿಯನುಂಟುಮಾಡಿದರವರ್ ಜನ್ಮಾಂತರಸ್ನೇಹದಿಂ (ಆದಿಪು. ೬-೨೨): ತೊಡೆಯ ತೋಳ ತಗುಳ್ಪುಮದೊರ್ಪ್ಪೆ (ಚಂದ್ರಪು. ೮-೯೫). ೨. ಸಂಬಂಧ ; ಸಂಪರ್ಕ : ತ್ರಿದಶಾನಕಲಯದಿಂ ನೀರದಪಥದೊಳ್ ನಾರದಂಗೆ ತಾಂಡವದ ತಗುಳ್ಪುದವಿದುದು (ಶಾಂತಿಪು. ೪-೫೭) : ಪಕ್ಷಿದ ಸೈಪುವೆಯ್ದಿದತಿದುಃಖಿಮುಮೆನ್ನ ಪುರಾಕೃತಾರ್ಥ ಸದ್ವ್ಯಕ್ತಿಯ ದುಶ್ಚರಿತ್ರದ ತಗುಳ್ಪಿನೊಳಾದ ಶುಭಾಶುಭಂಗಳಿಂದೆತ್ತವಿವಾದುಮೆಂದೊಸಗೆಯುಂ ಕರಮುಬ್ಬೆಗಮುಂ ವಿಮೋಹದಿಂ ಚಿತ್ತದೊಳಾಗಲೀಯದೆ (ಜೀವಸಂ. ೭೩-೨೬). ೩. ಆಧಾರ ; ಆಶ್ರಯ ; ಅವಲಂಬನ : ನೆಲನಂ ಪರ್ವಿವ ಬಳ್ಳಿಗಂ ಚದುರನೊಳ್ ಮೈಮ್ಮೆಯೊಡಂಬಟ್ಟು ತಳ್ತಲರ್ವ ಕೋಮಳೆಗಂ ತಗುಳ್ಪು ಪೆಱದೊಂದೆಂತಕ್ಕುಂ (ಆದಿಪು.೧೨-೧೯): ನಿನ್ನ ಹೇಮಲತಾವಿತಾನೋಪಮಾನ

ತನುಲತಾಪ್ರತಾನದ ತಗುಳ್ಪಿಂಗೀತನನಲ್ಪಕಲ್ಪಪಾದಪೋಪಮಾನಾನೂ ...ಂಗಯಪ್ಪಿಯೆ ದೊರೆ (ಶಾಂತಿಪು. ೫-೧೩೭ ವ). ೪. ಆವರಣ; ಆಚ್ಛಾದನ: ನಗರನಾರೀಕದಂಬದ ಸೋರ್ಮುಡಿಯ ಸೊಂಪು ಕಾರ್ಮುಗಿಲ ತಗುಳ್ಪುಮಂ ನೆಗಟ್ಚಿಯುಂ (ಪುಷ್ಪಪು. ೫-೩೪ವ). ೫. ಪ್ರದರ್ಶನ (?) : ಅಮರೇಂದ್ರನಘವಿಘಾತಾರ್ಥಮೌದ್ಧತ್ಯಾವಗತಮುಮಾರಭಟ್ಯಾಯತ್ತಮುಮೆನಿಸಿದ ತಾಂಡವದ ತಗುಳ್ಪಂ ತೋಱಲುದ್ಯೋಗಂಗೆಯ್ದು (ಮಹಾನೇ. ೯-೬ವ). [ ತಗುಳ್$_1$ + – ಪು$_2$ ]

△ ತಗುಟ್ 'ತಗುಳ್$_1$' ನೋ.

**ತಗೆ$_1$** (ಕ್ರಿ). ೧. ತಡೆ; ನಿಲ್ಲಿಸು; ಅಡ್ಡಿಪಡಿಸು; ನಿರೋಧಿಸು: " ತಗೆ– ಸ್ತಂಭನೇ (ನಿಲ್ಲಿಸು) " (ಶಮದ): ಅಗಲಲಸಹ್ಯಮೆಂದು ಪೆಱಗೀ ಬಟ್ಟಸಲ್ವಳಿ ಮುಂದೆ ಬಂದಳೀ ತಗೆವೊಡೆ ಚಿತ್ರದುತ್ಕಲಿಕೆಯಿಂ ನಭಕೀ ನೆಗೆತಂದಳ್ (ಕಾದಂಬ. ೧೮೦) : ಕರ್ಮಾಸ್ರವಮಂ ಜನಿಯಿಸಲೀಸದೆ ಸದ್ಗುಣದಿನಂತವಂ ತಗೆವುದದುವೆ ಸಂವರಮಕ್ಕುಂ (ಸುಕುಮಾ. ೮-೩೩): ಅಳವಿಯೊಳ್ ಬಳವದ ಹುಂಕಾರದ ಬರೆ ತಗೆವಂ[ಪಾಠಾಂ. ತೆಗೆದಂ]ಸ್ತಂಬೇರಮಕಳಭಮಂ (ಕಾವ್ಯಾವ. ೪೭೩) ; ಸೂಂಕಿ ತಂದುಪ್ಪರದ ಬಿಱುವಿಸಿಲ ಬೀದಿಯೊಳು ತಗೆದನವನನಿಬರಂ ನಿಷ್ಕರುಣನು (ಹಚಕಾ. ೧೦-೪೭) : ನೃಪಂ ಪಾವಕನೊಲುರಿದವರ ತಗದು [ಪಾಠಾಂ. ತೆಗೆದ]ದಯದಿಂ ಮುನ್ನ ಧನಗೊಳ್ಳನುತ್ತ ಪೇಳೆ (ಸಿಂಗಿರಾ. ೨೨-೧೧) ; ಬಿಗಿವ ಬಿಡಿಸಿಕೊಳ್ವ ತಗೆವ ತವಕಿಸುವ . . . ಹೋರಾಟದ ವಿಗಡ ಮಲ್ಲರುಗಳೊಪ್ಪಿದರು (ಕಂಸವಿ. ೨೧-೯೩). ೨. ತಡೆಯಾಗು; ಅಡ್ಡಿಯಾಗು: ಎನಗೆ ನೀವು ಮಾಡುವ ರಾಜಕಾರ್ಯದ ಮಣಿಹ ನಿಮಗೆ ತಗೆಯಿತು (ಕುಸವ. ೧೧). ೩. ಸೆಳೆ; ಆಕರ್ಷಿಸು: ನೋಳ್ಪರ ಕಣ್ಣ ತ[ಪಾಠಾಂ. ತೆ]ಗೆವ ಮೊಲೆಯ: (ಕುರಾಸಾಂ. ೨೧-೪೭); ಕಣ್ಬುಗುವ ಸೆಣಸುವ ಮುಳಿವ ಚಿತ್ರವ ತಗೆವ ತಾಗಿಸುವೆಳಸಿ ಕೂಡುವ . . . ವೇಶ್ಯಾವೀಧಿಗಳೊಳಸುರಾರಿ ನಡೆತಂದ (ಅಕ್ರೂರ. ೭-೭೦). ೪. ಸ್ತಂಭೀಭೂತನಾಗು; ದಿಗ್ಭ್ರಮೆಗೊಳ್ಳು: ಸಾಗರದತ್ತನೆಂಬನೊಳ್ ಜೂದಾಡಿ ತನ್ನುಳ್ಳುದೆಲ್ಲಮಂ ಸೋಲ್ತು ಕುಡಲಿಲ್ಲದೆ ಸಮುದ್ರದತ್ತಂ ಸಾರಮೇಯಶಕ್ಯದ್ಧಾಮಾಂತರ್ಗತನಾಗಿ ಬಿಸಿಲೊಳ್ ತಗೆದಿರ್ದುದುಮಂ (ಚಾವುಂಪು. ೯೭-೯) ; ತಗೆಯಲ್ ಜೈಮಿನಿ ಸಿಕ್ಕಿಕೊಂಡು ಪರಿಯಲ್ ವೈಶೇಷಿಕಂ . . . ಅಮ್ಮಮ್ಮ ಪಟ್ಟರ್ಕವೀಧಿಗಳೊಳ್ ತೂಳ್ದಿತು ಗೋಪನಂದಿ ದಿಗಿಭಪ್ರೋದ್ಭಾಸಿ ಗಂಧದ್ವಿಪಂ (ಎಕ. V. ಚನ್ನರಾ. ೧೪೮-೩೮ ; 1094).

**ತಗೆತಗೆ** (ದ್ವಿರುಕ್ತಿ) : ತಗೆತಗೆದು ತಗುಳ್ದೆಲ್ಲರಂ ದಹಿಸತೊಡಗಿತು ದಳ್ಳುರಿ (ಜೈಮಿಭಾ. ೮-೩೯). [ ದೇ.॥ ತಮಿ. ತಕ್ಕೈ ]

**ತಗೆ$_2$** (ನಾ). ೧. ತಡೆ; ಅಡ್ಡಿ; ಪ್ರತಿಬಂಧಕ: ಆ ಚಂಡಾಲಕನ್ನಿಕೆ ರೋಮಂ ಬೊರೆದ ಪಂದೊವಲ ಪಂಜರದೊಳಿಕ್ಕಿ ಮಹಾಶ್ವೇತಾವಲೋಕನ[ಕೆ] ತಗೆಯಂ ಮಾಟ್ಪಂತೆ ಪಡಿಯಂ ಕೆತ್ತಗುಟ್ಟಯನಿಕ್ಕಿ (ಕಾದಂಬ. ೭೫೩). ೨. ತಂಗುವಿಕೆ; ನಿಲ್ಲುವಿಕೆ: ಬಲ್ಪ ಪಟ್ಟಿಯೊಳ್ ಮನದ ಚಿಂತೆಯಿನ್ ಪಲರ್ಕೆ ಒನ್‌ದಿರುಗಿದಪನೆಂದು ಪಿನ್‌ಮುನ್ ಅಱೆದು, ಪಲ ತಗೆಗಳ್ ಆದುವಯ್ (ಅಂತಿಗೂ. ೧೧-೨೦೭). [<ತಗೆ$_1$]

**ತಗೆಪ** (ನಾ). ಅಡ್ಡಿ; ನಿರ್ಬಂಧ; ಸ್ತಂಭನ: ತೆಗಪಂ, ತಗೆಪಂ, ತೊಡೆಪಂ, ನಡೆಪಂ, ಮೊಗೆಪಂ (ಶಬ್ದಾನು. ೫೭೧ ಪ್ರಯೋ). [ ತಗೆ$_1$ + – ಪ$_2$ ]

**ತಗೆಪು, ತಗಪ್ಪು, ತಗವ್ಪು$_2$, ತಗಹು$_2$** (ನಾ). ೧. ಅಡ್ಡಿ; ನಿರ್ಬಂಧ: ಪೆಱರಱಿದು ತನ್ನ ಸಾಲಂಗೊಟ್ಟೊಡಂ ತಾನಱಿದು ಸಂಸಾರಮೋಹಂಗೆಟ್ಟೊಡಂ ಆತನ ತಗೆಪುಮಾತನ ಕರ್ಮದ ಬಿಗಿ(ಗು)ಪುಂ ಪತ್ತುವಿಡುಗುಂ (ಜೀವಸಂ. ೧೭೩-೨೧ವ). **ತಗಪ್ಪು**: ೨. ಒತ್ತಾಯ; ತಗಾದೆ: ಒಮ್ಮೆ ಇತ್ತರ್ಗೆ ಇಕ್ಕರ್ಗಳ ಜೋಳವಮ್ ಕುಡುವುದು ತಗಪ್ಪಿಲ್ಲ ಗೋಸನೆ ಇಲ್ಲ ರಾಜಪುರುಷರ್ಗೆ ಪುಗಲಿಲ್ಲ (ಇಂಆ. X, ೧೭೭-೪ : 7ನೆಯ ಶತ). **ತಗವ್ಪು$_2$**: ೧. ಇತ್ತನಂದೇ ಕೃಷ್ಣ ನಿನಗಾ ಪುತ್ರನನು ನೀ ಬೇಡಿಕೊಳಲೇಕುತ್ತಮನೆ ತಗ[ಪಾಠಾಂ. ಡ]ವೇಕೆ ತನ್ನನು ನಾಚಿಸಲದೇಕೆ (ನಿಘಾಗ. ೧೦-೬೩-೩೦) ; ತಗವಹುದು ತನಗೆನುತ ಶೈಲನಿತಂಬಕೈತಂದು ವಿಗಡ ರಕ್ಕಸನಾ ಹರಾದ್ರಿಯ ಬಿಗಿದನ್ನೆ (ಉತ್ತರಾ. ೫-೫೧). **ತಗಹು$_2$** : ೧. ತಪವೆರಿಬುದು ತಗಹು ನೇಮವೆಂಬುದು ಬಂಧನ (ಅವಚಂ. ೧೫೮-೭೨೩) ; ಧ್ಯಾನದ ಧ್ಯೇಯವಳವಟ್ಟು ಆನಂದಿಪಂಗೆ ತಪದ ತಗಹೆ[ಪಾಠಾಂ. ಫಲವೆ]ಲ್ಲಿಯದೊ (ಚನ್ನವ. ಕ. ೩೨೪-೭೮೩) : ಓಲಗದಿಂ ಪಡೆದಂ ತಗಹಿಂ ಸಿಲ್ಕಿದಂ (ಶಮದ. ೧೨೮ ಪ್ರಯೋ); ಹಗಲು ಹಱಚಿಂತೆಯನು ಮಾಳ್ಪರೆ ತಗಹಲಾ ಬಹುವಿಧ ಗೃಹವ್ಯಾಪ್ತಿಗಳ ಬಯಲಾಯಾಸ ಕೃತ್ಯದ ಕಾಲುಕಣ್ಣಗಳ (ನಿಘಾಗ. ೨-೧-೯) ; ಗಗನವನೊಳಕೊಂಬ ತಿಳಿವಿದೆ ಇದಕಿಲ್ಲಿ ತಗಹೇತಕಾಯ್ತೆಂಬನಾಗ (ಭರತ. ೭೦-೩೭). ೩. ಕವಿದಿರುವಿಕೆ; ಆವರಣ; ಮುಸುಕು; ಹೊದಿಕೆ: ಮಱವೆಯ ತ[ಪಾಠಾಂ.ತೆ]ಗಹು ತೆಗೆದಚ್ಚಱಿಕೆ ತೋಱಿತು (ಪ್ರಭುಲೀ. ೯-೧೫) : ಉಗಿದವಂಬರವನು ಮಯೂಖಾಳಿಗಳು ಭುವನದ ಜನದ ಕಂಗಳ ತಗಹು ತೆಗೆದುದು ಸೆಱೆಯ ಬಿಟ್ಟರು ಚಕ್ರವಕ್ಕಿಗಳ (ಕುಮ್ಮಾದ್ರೋ. ೧-೪೩) ; ಕಳಿದರೀ ಚಂಡಾಂಶುವಂಶೋಜ್ಜ್ವಲರು ಬಳಿಕಾ ಹಿಮಸಮಯವನು ಪುಲಿದೊಗಲ ಹರಿಣಾಜಿನದ ಹಾಸಿಕೆಯ ಹೊದಿಕೆಯಲಿ ತಳಿರ ತಗಹಿ[ಪಾಠಾಂ. ಡಿ]ನ ಮನೆಗಳಲಿ (ತೊರರಾ. ೩-೨-೫).

[ ತಗೆ$_1$ + – ಪು$_2$./ತಮಿ. ತಕ್ಕೈಪ್ಪು ]

**ತಗೆಬಗೆ, ತಗಿಬಿಗಿ, ತಗುಬಗೆ** (ನಾ). ೧. ಅರೆಮನಸ್ಸು; ಅನಿಶ್ಚಿತವಾದ ಮನಸ್ಸು: ಅಕ್ಕುಮಾನುಂ ತಗೆಬಗೆಯೊಳೊಪ್ಪುವೆಂ (ರಾಮಾಶ್ವ. ೦೫-೩): " ಪ್ರತಿಹತವಾದ – ತಡೆದ – ಮನಸ್ಸು " (ರಾಮಾಶ್ವ. ಕೋಶ). ೨. ಅಸ್ತವ್ಯಸ್ತತೆ: ತಗೆಬಗೆಯ ನಡೆನುಡಿಯ ಮಗಳ ನಡೆವಳಿಯಂ (ಕಾಲೂರ. ೪೭-೭೫) : "ಕ್ರಮತಪ್ಪುವಿಕೆ" (ಕಾಲೂರ. ಟಿಪ್ಪಣಿ). ೩. ತೊಂದರೆ; ಹಿಂಸೆ: ಹಾವಿಂಗೆ ಹಾಲನೆಱೆದೊಡೆ ತೀವಿದ ವಿಷವಪ್ಪುದಲ್ಲದುಂಗಜನಂ ಸಂಭಾವಿಸಿದೊಡೆ ಕೋಮಳೆಯರ ಜೀವಕೆ ತಗೆಬಗೆಯನೀವನೆಂಬುದು ಪುಸಿಯೇ (ನಳಚಂ. ೨೧೦). ೪. ಸಂಕಟ; ತಳಮಳ: ಉಸುರ ತಗೆಬಗೆಯೊಳ ಸುರೇಂದ್ರ ಬಸವಳಿದು (ಶರಬು. ೧೩-೩೮). ೫. ಲಗುಬಗೆ; ಅವಸರ: ತಗೆಬಗೆಯೊಳೋಡಾಡಿ ಕೆರವೊಂದು ಸವೆಯದಿರೆ (ಕಾಲೂರ. ೭೩-೦೩೨). **ತಗಿಬಿಗಿ**: ೪. ತನ್ನ ರೆಕ್ಕೆಯಂ ನೆಗಪಲೆನುತೆಂದು ಬಿಚ್ಚಿದ ದೆಸೆಗಳೆಂಟು ಮುಚ್ಚಲು ತರಣಿಗುಸುರು ತಗಿಬಿಗಿಯಾಗಲು (ತುರಂಗ. ೪-೩೯). ೫. ಬಗೆಬಗೆಯಾಟದಿ ಜಗವ ನಗಿಸುತ ತಗಿಬಿಗಿ ಓಡುತ್ತ ನೆಗೆದು ಕುಪ್ಪಳಿಸಿ (ಶರಲೀ. ೩೪೩-೮). ೬. ತಬ್ಬಿಬ್ಬು; ದಿಗ್ಭ್ರಮೆ: ಮಗುವಾಗಿ ಪೂತನಿಯ ಮೊಲೆಯುನುಂಡೆ ಇಂಥ ತಗಿಬಿಗಿಯಾಟಗಳೆಲ್ಲಿ ಕಲಿತ್ಯೋ ರಂಗ (ಪುರಂದ. ೪-೧೫೭-೩). 'ತಗಿಬಿಗಿಗೊಳಿಸು' ಪರಾ. **ತಗುಬಗೆ**: ೩. ಬಿಸಿಗೆ ಬೆಚ್ಚಿದ ಎದೆಯು ಮರುಚಲ ಬಸಿರಿಯ ಬಯಕೆಗೆ ತಗುಬಗೆಯಾಗುತಿರೆ (ಸಹೀಗೀ. ೪-೯೩) : ಅಗ್ನೀವಹನ ಅವಸ್ಥೆ ತಗುಬಗೆಯಾಯಿತು ಇವನ ಗಂಟಲೂ ಕಟ್ಟಿಕೊಂಡಿತು (ನೀರಸ. ೩೩). 'ತೆಗೆಬಗೆ' ಪರಾ.

[ ತಗೆ$_1$ + ಬಗೆ$_3$ ]

**ತಗೆವುಗಿಲ್** (ನಾ). (?) : ಸ್ವಾಂತಂ ಪಂಚೇಷುವಿಂದಂ ತಗೆವುಗಿಲ[ಪಾಠಾಂ. ತಗೆವುಲ, ಜಂತಗೆವುಗಿಲ]ವೊಲಪ್ಪಂತು ಕಂದರ್ಪನೆಚ್ಚೆಚ್ಚೆಂತುಂ ಕೈವಾರದಟ್ಟಾಸುರವೆನೆ ಮುಳಿದೆಟ್ಟಟ್ಟೆ ಕೋದಂಡದಿಂ ಪೊಯ್ದಂತಾನುಂ ನಿನ್ನ ಸೌಂದರ್ಯದಿನೆನಗೊಳಗಾದಂ ದಶಗ್ರೀವನೆಂದಾ ಕಾಂತಾರತ್ನಕ್ಕೆ ವೈದೇಹಿಗೆ ಮಕುಟ ಪಟದ್ರುತ್ನದಿಂದರ್ಘ್ಯಮಿತ್ತಂ (ಪಂರಾಮಾ. ೯-೮೪). [ ? ]

**ತಗ್ಗೈರ್** 'ತಗ್ಗೈರು' ನೋ.

**ತಗ್ಗೈರು, ತಗ್ಗೈರ್** (ನಾ). (ಕೆಲಸದಿಂದ) ತೆಗೆದುಹಾಕುವುದು; ಉಚ್ಚಾಟನೆ: (ಕ). ತಗ್ಗೈರ್ : (ರೈಸ್‌ಗ. II. ೫೭೩).

[ ← ಹಿಂ. ತಗೀರ್, ತಗೀರೀ ; ಮರಾ. ತಗಿರೀ ; ಅರ. ತಗಯ್ಯುರ್ ]

**ತಗೊಣೆ** (?). (?): ಶ್ರೀ ವರದರ ಪನ್ದಿಮಿಂಯನ್ದಗೊಣೆ ರಣದೊಳಾ ಮಣವೊಡ್ಡುವೊನ್ ಮೂಳಿಯೆನೆಯ್ಕೆಳ[ವೋ]ನ್ ಪೆಣದ ಸಜ್ಜಡಿ ಕಟ್ಟುವೊನ್ (ಕಇ. I, ೫-೨ : 8ನೆಯ ಶತ).

[ ? ]

**ತಗ್ಗಜ್ಜಿ** 'ತಗಚೆ' ನೋ.

**ತಗ್ಗಾಳು** (ನಾ). ಗಿಡ್ಡ ; ಕುಳ್ಳ : (ಕ). [ ತಗ್ಗು$_2$ + ಆಳು$_3$ (<ಆಳ್$_3$) ]

**ತಗ್ಗಿ**, ತಂಗಿ$_2$, ತರ್ಗಿ (ನಾ). ಒಂದು ಬಗೆಯ ಗಿಡ; ತಕ್ಕಿಲೆ; ಅಗ್ನಿಮಂಥ; ನರುವಲು: "ಜಯಾ, ಜಯಂತೀ, ತರ್ಕಾರೀ, ನಾದೇಯಾ, ವೈಜಯಂತಿಕಾ– ಈ ೫ ತಗ್ಗಿ" (ನಾಚರಾ. ೧೦೮) ; "ವಹ್ನಿಮಂಥಃ–ನರುವಲು, ತಗ್ಗಿ" (ಒಷಧಿ. ೧೪೭) ; ಬಿಲ್ವಂ ತಗ್ಗಿ ಸೀವನ್ನಿ ಪಾದರಿಯಾವುಂಡಗೆಯೆಂಬಿವಂ ತೆಗಪಿ ಸೇಕಂಗೆಯ್ಕೆ ಮಾಣ್ಗುಂ ಕಫಂ (ಲೋಕೋಪ. ೯-೨೨೫) ; ಚಿಲ್ಲವೇ ಹೇಳಕಟ ಎನ್ನೀ ಚಿಲ್ಲತನವೆಂದಿಂಗೆ ಮಾಣ್ಬುದು ಸೊಲ್ಲು ತಗ್ಗಿಯೆನ್ನಳಲು ತಗ್ಗುವುದರೇತಱಿಲಿ (ಬಸಪು. ೪೫-೯೧) ; ತುಲಸಿಯ ನುಗ್ಗಿಯ ತಗ್ಗಿಯ . . . ಪತ್ರಂಗಳನೊಡನೆ ತೆಗಪಿಕೊಂಡದಱೊಳೆ ಸೇಕಂಗೆಯ್ಕೆ (ಅಶ್ವಶಾ. ೧೦-೨೧). **ತಂಗಿ$_2$** : ಸಣ್ಣನಾದ ಎಲುಗಳ ಹಾಕಿ ಮಣ್ಣು ಮೆತ್ತಿ ಆಮೇಲೆ ಒಳಗಿನ ಮಣ್ಣ ತಂದು ತಂಗಿಯ ರಸ ಹೊಯ್ದು ಅರೆದು (ಅಶ್ವಟೀ. ೭೯-೫). △ **ತರ್ಗಿ** : ಉಪಶಮಿಸುಗುಮಾತಪದೊಳ್ ಕಟ್ಟಿ ಪೂಸೆ ತರ್ಗಿಯ ರಸಮಂ (ಅಶ್ವಶಾ. ೦೧-೬೯).

**ತಗ್ಗಿಯ ಮಾನ್ಯ**, ತಗ್ಗಿಯ ಮಾನ್ಯ = ಒಂದು ಬಗೆಯ ಮಾನ್ಯ,– ಉಂಬಳಿ : ದೇವರ ನಿವೇದಕ್ಕೆ ತಗ್ಗಿಯ ಮಾನ್ಯದೊಳಗೆ ಕೊಟ್ಟ ಮತ್ತರು ೧೬ ತೋಟ ಮತ್ತರು ೧ (ಕೊಲ್ಲಾಶಾ. ೬-೧೨; 1127): ಸಂಕ್ರಾಂತಿಪರ್ವ್ವ ನಿಮಿತ್ತಂ ಅಗ್ರಹಾರದ ತಗ್ಗಿಯಮಾನ್ಯ ದೊಳು ಠಾವಸಟ್ಟಿಯಕೆಱೆಯಿಂಯ ಕೇಶವೇಶ್ವರದೇವರ ಭೂಮಿಯಿಂಬಡಗಲು (ಕಇ. V, ೨೫-೨೪; 1139). [?]

**ತಗ್ಗಿಲು** 'ತುಗ್ಗಿಲ್' ನೋ.

**ತಗ್ಗಿಸು** 'ತಱ್ಗಿಸು' ನೋ.

**ತಗ್ಗು$_1$** 'ತಱ್ಗು' ನೋ.

**ತಗ್ಗು$_2$**, ತರ್ಗು$_2$, ತೆಗ್ಗು$_2$ (ನಾ). ೧. ಕುಣಿ; ಹಳ್ಳ; ಕೆಳಕ್ಕೆ ಕುಸಿದುದಂ; ಗುಂಡಿ: ನೆಲನ ತಗ್ಗಿನಲು ಪ್ಪರದ ಮೆಯ್ಯೊಲವಿನಲಿ ಪಾರಗದ ಬವರಿಯ ಸುಳುಹಿನಲಿ . . . ಖಂಡೆಯದ ಖಣಿಕಟಿಲೆಸೆಯೆ ಕಾದಿದರು (ಕುಮಾರವ್ಯಾ. ೧೪-೭) : ಹಿಡಿಸದೆ ತುಂಬಿದೆ ತಗ್ಗಿಲ್ಲ ತೆವರಿಲ್ಲ (ಸಪೀಗೀ. ೨೪-೪೧೯) : ನದಿ ಎತ್ತರವಾದ ಕಡೆಯಿಂದ ತಗ್ಗಾಗಿರುವ ಕಡೆಯನ್ನು ಹುಡುಕಿ ಹರಿಯುತ್ತದೆಯಲ್ಲವೆ? (ವ್ಯಾಸಜಿ. ೦೦೭) : ಆಳವಾದ ತಗ್ಗನ್ನು ತೋಡಿ ಅದರಲ್ಲಿ ಹುಗಿದು ಬಿಡುತ್ತಿದ್ದೇನೆ (ವ್ಯಾಮುತಾ. ೫). ೨. ಸಣ್ಣದು; ಕುಳ್ಳಾದುದು ; ಎತ್ತರವಲ್ಲದುದಂ: ಗುಡ್ಡದ ಮೇಲೆ ಅವನ ತಗ್ಗಾದ ಮನೆ ಕಾಣಿಸುತ್ತಿತ್ತು (ಮಹಾಕಾ. ೧೫). ೩. ಕುಗ್ಗಿರುವ ಸ್ಥಿತಿ; ಕಡಿಮೆಯಾಗಿರುವಿಕೆ ; ಕುಸಿತ : ಕುರುಳು ಜುಂಜುಱುದಲೆಯ ತಗ್ಗಿನ[ಪಾಠಾಂ. ದ]ಕೊರಳ ಕೆಂಗಱಿಗಣ್ಣ ಮೋಱಿಯ ಪಱಕುಗಡ್ಡದ (ನಳಚ. ೪-೪). ೪. ಬೆಲೆ ಹೆಚ್ಚಾಗಿರುವಿಕೆ ; ತುಟ್ಟಿಯಾಗಿರುವಿಕೆ : (ಮ್ಯುಗಚ. IV, ೭೦೬). 'ತಗ್ಗುಕಾಲ' ಪರಾ. ೫. ವ್ಯಾಪಾರದ ವಸ್ತುಗಳ ಪೂರೈಕೆ ಕಡಿಮೆಯಾಗಿರುವುದು. ೬. ಪಾತ್ರೆ ಮೊದಲಾದವು ನೆಗ್ಗಾಗಿರುವಿಕೆ: 'ತಗ್ಗಿತ್ತು' ಪರಾ. ೭. (ಆಲಂ) ಕಷ್ಟಕಾಲ : ತೆರೆಯಲಾರೆನು ಮರೆಯಲಾರೆನು ದೈವವಿತ್ತೀ ಕಷ್ಟದ ತಗ್ಗು ಸಾರುತಲಿರಲಿ ಸ್ಮಾರಕವಾಗಿ ಒಗ್ಗಿನ ನಷ್ಟವ (ಹಾಡುಪಾ. ೬೯-೨). **ತರ್ಗು$_2$** : ೪. ಧಾರಣೆಯ ತರ್ಗಂ ಪೋರುವವನು ನಿಂದಿತನು (ವೀಕ್ಪು. ೪-೧೭-೨೯). **ತೆಗ್ಗು$_2$**: ೧. ನಿಬ್ಬಣದ ಈ ಎತ್ತು ಹುಗ್ಗಿಯ ಮೇದಾವ ತೆಗ್ಗಿನ ನೀರ ಕುಡಿದಾವ (ಲೋಕಗೀ. ೨೭) : ನೆಲವು ಸಮತಲವಾಗಿರಲಿಲ್ಲ, ಅಲ್ಲಲ್ಲಿ ತೆಗ್ಗುಗಳು (ಕುರಿಹಿಂ. ೬೪).

**ತಗ್ಗುತಿಟ್ಟು** = ೧. ಏರು ಇಳಿ ; ಹಳ್ಳ ದಿಣ್ಣೆ ; ಕುಳಿ ತೆವರು. ೨. ಹೆಚ್ಚುಕಡಿಮೆ; ನ್ಯೂನಾಧಿಕತೆ : ಅಲ್ಲಿ ರೂಪಗುಣಗಳಿಲ್ಲ. ಸ್ವಲ್ಪ ತಗ್ಗುತಿಟ್ಟುಗಳಿರಬಹುದು, ಆದರೆ ಸತ್ವವೊಂದೇ (ರಾಮಾನಿ. ೧೧೪). **ತಗ್ಗುದಿಂಟೆ** = ತಗ್ಗುತಿಟ್ಟು ೧ : ತಗ್ಗುದಿಂಟೆ ಕಲ್ಲುಮುಳ್ಳು ಕೆಸರುನೆಲ ಕಾಗುತಳ್ಳು (ಬಟ್ಟಳ. ೧೯೩-೧೧). **ತಗ್ಗುದಿನ್ನೆ** = ತಗ್ಗುತಿಟ್ಟು ೧ : ಕಿತ್ತಳೇಹಣ್ಣು . . . ಚೆನ್ನಾಗಿ ದಿಟ್ಟಿಸಿ ನೋಡಿದರೆ ಅದರ ಮೇಲೆ ಹಲವು ಸಣ್ಣ ಸಣ್ಣ ತಗ್ಗುದಿನ್ನೆಗಳು ಕಾಣಿಸುವವು (ಮುಂಬಯಿ. ೪-೬೭) ; ತಗ್ಗುದಿನ್ನೆಗಳು . . . ಸಾಲುಸಾಲಾಗಿ ನಿಂತಿವೆ (ಅಶ್ವಮೀ. ೨). **ತಗ್ಗುಬ್ಬು** = ತಗ್ಗುತಿಟ್ಟು ೧ : (ಕ). **ತೆಗ್ಗುತೆವರು** = ತಗ್ಗುತಿಟ್ಟು ೨ : ಲೇಖಕರ ಸೌಮನಸ್ಯ . . . ಕತೆಯ ಹೇರುಪೇರುಗಳಲ್ಲಿ ತೆಗ್ಗುತೆವರುಗಳಲ್ಲಿ ತನ್ನ ಸಮತೂಕವನ್ನು ರಕ್ಷಿಸಿಕೊಳ್ಳುತ್ತಿದೆ (ಅಬೋಲೀ. I, ಸಂಪಾದಕರ ಮಾತು). [ <ತಱ್ಗು ]

**ತಗ್ಗುಕಾಲ** (ನಾ). ವಸ್ತುಗಳ ಪೂರೈಕೆ ಕಡಿಮೆಯಾಗಿರುವ ಕಾಲ: ಈ ತಗ್ಗುಕಾಲದಲ್ಲಿಯೂ ಸೀರೆಯ ಬೆಲೆ ನೂರ ಅರವತ್ತೇ ರೂಪಾಯಿ (ಶಿವರಾ. ೨೫). [ ತಗ್ಗು$_2$ + ಕಾಲ ]

**ತಗ್ಗುಗನ್ನಡಿ** (ನಾ). ಒಳಮುಖವಾಗಿ ಬಾಗಿರುವ ಕನ್ನಡಿ; ಅಂತರ್ಗೋಲ ಕನ್ನಡಿ : ತಗ್ಗುಗನ್ನಡಿಯನ್ನು ನಮ್ಮ ಮುಖದ ಹತ್ತಿರ ಹಿಡಿದುಕೊಂಡರೆ ಮುಖದ ದೊಡ್ಡ ಪ್ರತಿಬಿಂಬವು ಕಾಣುವುದಲ್ಲದೆ ಈ ಪ್ರತಿಬಿಂಬವು ತಲೆಕೆಳಗಾಗಿರದೆ ನೆಟ್ಟಗಿರುವುದು (ಭೌತವಿ. ೧೭೨). 'ಉಬ್ಬುಗನ್ನಡಿ' ಪರಾ.

[ ತಗ್ಗು$_2$ + ಕನ್ನಡಿ$_1$ ]

**ತಗ್ಗುಗುಟ್ಟು** (ಕ್ರಿ). ತಗ್ಗುವಂತೆ ಕುಟ್ಟು; ಕುಸಿದು ಬೀಳುವಂತೆ ಹೊಡೆ,– ಮೆಟ್ಟು : ಬೆದಱಿದ ಬಾಳವೃದ್ಧರನೆ ಬಾಯ್ಬಿಡೆ ಬಾಯ್ಬಿಡೆ ಸೀಳ್ದು ಪೋಲ್ದು ಬಂದದಿರದೆ ನಿಂದ ಬೀರರನೆ ಬೊಬ್ಬಿಡೆ ಬೊಬ್ಬಿಡೆ ತಗ್ಗು[ಪಾಠಾಂ·ಗ್ಗ]ಗುಟ್ಟಿ ಲಾಯದ ತುರಗಂಗಳಂ ತರದೆ ಗೋಱಿಡೆ ಗೋಱಿಡೆ ಕೋಡೊಳೆತ್ತಿ . . . ಕೊಂದುದಾ ಗಜಂ (ಪಾರ್ಶ್ವಪು. ೪-೧೩೬).

[ ತಗ್ಗು$_1$ (<ತಱ್ಗು) + ಕುಟ್ಟು$_1$ ]

**ತಗ್ಗುದನಿ** (ನಾ). ತಗ್ಗಿಸಿದ ದನಿ ; ಕೆಳದನಿ : ಹೆಂಗಸರು ಗಂಡಸರೆಲ್ಲ . . . ತಗ್ಗುದನಿಯಲ್ಲಿ ಮಾತನಾಡುತ್ತ ಕುಳಿತಿದ್ದರು (ಪುನರು. ೨೩೭).

[ ತಗ್ಗು$_1$ (<ತಱ್ಗು) + ದನಿ$_2$ ]

**ತಗ್ಗುನೆಲ** (ನಾ). ಎತ್ತರವಲ್ಲದ ಭೂಮಿ ; ತಗ್ಗಾದ ಭೂಮಿ : ಸಮುದ್ರವು ತಗ್ಗುನೆಲದ ಮೇಲೆ ಹೆಸರೂ ಬಣ್ಣವೂ ಬೇರೆ ಬೇರೆಯಾಗಿ ಮೆರೆಯುತ್ತದೆ (ಅನಂಶ. ೪೧ ಟೀಕೆ). [ ತಗ್ಗು$_2$ + ನೆಲ$_1$ ]

**ತಗ್ಗುಬೀಳು**, ತೆಗ್ಗುಬೀಳು (ಕ್ರಿ). ಹಳ್ಳಬೀಳು ; ನೆಗ್ಗಾಗು : ಮನೆಯ ಪಾತ್ರೆಗಳೆಲ್ಲ ತಗ್ಗುಬಿದ್ದಿವೆ (ರೂಢಿ). **ತೆಗ್ಗುಬೀಳು** : "ಗುಣಿಗಲ್ಲ = ತೆಗ್ಗುಬಿದ್ದಗಲ್ಲ" (ಗಂಗಾಮು. ೧೧೭). [ ತಗ್ಗು$_2$ + ಬೀಳು$_1$ (<ಬೀೞ್$_1$) ]

**ತಗ್ಗುಮುಗ್ಗು** (ನಾ). ೧. ಹೆಚ್ಚು ಕಡಮೆ ; ಏರುಪೇರು : "ವಿಷಮ–ಸಮವಲ್ಲದ್ದು, ತಗ್ಗು ಮುಗ್ಗು" (ಗಂಗಾಮು. ೨೯೩). ೨. (ಆಲಂ) "ಸುಖದುಃಖ" (ಜಾನಕೋ. ೬೩). [ತಗ್ಗು$_2$ + ಮುಗ್ಗು$_3$/ತೆಲು. ತಗ್ಗುಮೊಗ್ಗು]

**ತಗ್ಗುಶ್ರುತಿ** (ನಾ). ತಗ್ಗಿದ ಶ್ರುತಿ; ಮಂದವಾದ ಶ್ರುತಿ : ಅವಳು ಹಾಡುವುದು ಯಾವಾಗಲೂ ತಗ್ಗುಶ್ರುತಿಯಲ್ಲಿಯೇ (ರೂಢಿ). [ತಗ್ಗು$_2$ + ಶ್ರುತಿ]

**ತಗ್ಗುಸಿರು** (ನಾ). ತಗ್ಗಿದ ದನಿ ; ಕೆಳದನಿ : "ಈಗ ತಾನೆ ಬಂದೆ" ಎಂದು ತಗ್ಗುಸಿರಿನಿಂದ ಹೇಳಿದ. (ಚಿಂಗಾಳ್ತಿ. ೧೧೭).

[ ತಗ್ಗು$_2$ + ಉಸಿರು$_2$ (<ಉಸಿರ್$_2$) ]

**ತಗ್ಗುಸೋಪಾನ** (ನಾ). ಇಳಿಯುವ ಸೋಪಾನ; ಇಳಿ ಮೆಟ್ಟಿಲು: ತಗ್ಗುಸೋಪಾನದೊಳಿಳಿವಾಗ ಮುನಿಗಳ್ಗೆ ಬೊಗ್ಗನೆ ಕೈಲಾಗುಗೊಡುವಾ, ಉಗ್ಗಡದೇಱುಸೋಪಾನದೊಳವರ ಕೈಯೊಗ್ಗಿ ಹಿಡಿದು ಮೇಲೆ ನೆಗೆವಾ (ಭರತೇ ೩-೭೮). 'ಏಱುಸೋಪಾನ' ಪರಾ. [ ತಗ್ಗು$_2$ + ಸೋಪಾನ ]

**ತಗ್ಗೆತ್ತು** (ಕ್ರಿ). ಪಾತ್ರೆಗಳ ತಗ್ಗುಗಳನ್ನು ಸರಿಪಡಿಸು: ನುಗ್ಗಾದ ಪಾತ್ರೆಗಳನ್ನು ತಗ್ಗೆತ್ತದಿದ್ದರೆ ಚೆನ್ನಾಗಿ ಕಾಣುವುದಿಲ್ಲ (ರೂಢಿ).

[ ತಗ್ಗು₂ + ಎತ್ತು₁ ]

**ತಗ್ಗೊತ್ತು**, ತಗ್ಗೊರ್ತು (ಕ್ರಿ). ೧. ತಗ್ಗುವಂತೆ ಒತ್ತು ; ಅದುಮು ; ಹತ್ತಿಕ್ಕು ; ನಿಗ್ರಹಿಸು : ಆದರಿಸುತಮರೇಂದ್ರನೆದ್ದನು ಹೋದ ವಜ್ರವ ಕೊಂಡು ನಗುತ ವಿಷಾದವನು ತಗ್ಗೊತ್ತಿ ನುಡಿದನು ದೈತ್ಯಪತಿಯೊಡನೆ (ನಿಭಾಗ. ೬-೧೦-೧೦). **ತಗ್ಗೊರ್ತು** : ೨. (ಆಲಂ) ತಗ್ಗಿಸು ; ಕಡಮೆ ಮಾಡು : ಈ ಮತ್ಸರಮಂ ತಗ್ಗೊರ್ತಿ . . . ರಕ್ಷಿಪ್ಪುದೆನ್ನಂ (ರಕ್ಷಾಕ. ೧೧).

[ ತಗ್ಗು₁ (<ತಟ್ಟು) + ಒತ್ತು₁ ]

**ತಚ್ಚಣ** 'ತತುಂಕ್ಷಣ₂' ನೋ.

**ತಜವಿಜಿ** 'ತಜವೀಜು' ನೋ.

**ತಜವೀಜಿ** 'ತಜವೀಜು' ನೋ.

**ತಜವೀಜು, ತಜವಿಜಿ, ತಜವೀಜಿ, ತಜುಬಿಜಿ** (ನಾ). ೧. ಏರ್ಪಾಟು ; ವ್ಯವಸ್ಥೆ ; ಸಿದ್ಧತೆ : ನಾ ಬಂದು ಎಷ್ಟೊತ್ತಾತು . . . ಚಹಾದ್ದೇನಾದರೂ ತಜವೀಜು ಮಾಡ್ರೀಯೋ (ದೀಪಕ. I, ೧೯). 'ತಜವೀಜುದಾರಿ' ಪರಾ. ೨. ಪ್ರಯತ್ನ ; ಉದ್ಯೋಗ : (ಮೃಗಜ. IV, ೭೮೭). **ತಜವಿಜಿ** : ೨. ತಾಯಿ ತನಗೆ ಬೇರೆ ಮದುವೆ ಮಾಡಿಸುವ ತಜವಿಜಿಯಲ್ಲಿದ್ದಾಳೆಂದು . . . ಅತ್ರೆಯನ್ನು ಇನ್ನಷ್ಟು ಅಂಜಿಸಿದ್ದ (ಹೊಸಕ್ಟ. ೨೭). ೩. ವಿಚಾರಣೆ ; ಶೋಧನೆ ; ಚೌಕಸಿ (ಉಕ) : "ತಜವಿಜಿ–ಹುಡುಕುವುದು; ಶೋಧ" (ಜಾವಕೋ. ೬೩). **ತಜವೀಜಿ** : ೨. ಆಸ್ತಿ ವಿಲೇವಾರಿಮಾಡುವ ತಜವೀಜಿಯಲ್ಲಿದ್ದಾರೆ (ರೂಢಿ). **ತಜುಬಿಜಿ** : ೧. ಅಮುದಾ ನಗರಕ್ಕೆ ಬರುವ ಮಧ್ಯಮಾರ್ಗದಲ್ಲಿ ಪಾದಶಹಾರು ತಜುಬಿಜಮಾಡಿ (ಕೆಳದಿನೃ. ೫೮-೦೯).

[ ←ಅರ. ಹಿಂ. ತಜವೀಜ್ ]

**ತಜವೀಜುದಾರಿ** (ನಾ). ವಿಚಾರಣೆ ; ಶೋಧನೆ : ಪಟೇಲರ ಬಹಿರಂಗ ಹಾಜರುಬಾಕಿ ಮತ್ತು ತಜವೀಜುದಾರಿ ಹೆಚ್ಚಾದವು (ಕಲಿನ. ೩೧೫).

[ <ತಜವೀಜು ]

**ತಜನೆವಟಯಿಗೆ** (ನಾ). ಒಂದು ಬಗೆಯ ಧ್ವಜ (?) : ಬೆಳ್ಗೊಡೆಗಳುಂ ಪಾಳಿಧ್ವಜಂಗಳುಂ ತಜನೆವಟಯಿಗೆಗಳುಂ ಚಂದ್ರಾದಿತ್ಯರ್ಕಳುಂ ಸಿಂಹ ವ್ಯಾಘ್ರ ಮಕರ ಮತ್ಸ್ಯಗಳೆಂದಿವು ಮೊದಲಾಗೊಡೆಯ ರಾಜ್ಯಚಿಹ್ನಂಗಳ್ ಮುಂದೆ ಪರಿಯೆ (ವಡ್ಡಾರಾ. ೦೩೩-೦೯). [ ತಜನೆ₀ + ಪಟಯಿಗೆ ]

**ತಜವಿಜಿ** (ನಾ). ಪಿಸುದನಿ(?) : ಗಜಬಜಿಸಿ ಕೆಲಕೆಲರು ಹಾಸ್ಯದ ತಜವಿಜಿಗಳಿಂ ಕೆಲರು ಮುಸುಕಿನ ಗುಜುಗುಜುಗಳಿಂ ಕೆಲರು ಸಂಜ್ಞೆಗಳಿಂದ ಕೆಲರಿರಲು (ಅಶಂರಾ. ೩-೪-೨೩). 'ಗಜಬಿಜಿ' ಪರಾ. [ ? ]

**ತಜುಬಿಜಿ** 'ತಜವೀಜು' ನೋ.

**ತಜ್ಜ್ಞ** (ನಾ). ವಿಷಯವನ್ನು ಬಲ್ಲವನು ; ತಿಳಿದವನು ; ನುರಿತವನು ; ಬುದ್ಧಿವಂತ : ಮೋಹರಾಜನ ಸಂದಾಜ್ಞೆಯನಾವ ತಜ್ಜ್ಞನುಮಣಂ ವಿವಜಿಲ್ಕೆ ಮೇಣ್ ಬರ್ಪನೇ (ನೇಮಿಪು. ೦-೮೯) ; ತಜ್ಜ್ಞರ್ ತಲೆದೂಗೆ ದೇವಸಭೆ ಸಂತೋಷಕ್ಕೆ ಪಕ್ಕಾಗೆ (ಪುಷ್ಪಪು. ೧೨-೫೦). [ ಸಂ. ]

**ತಜ್ಞ** (ನಾ). = ತಜ್ಜ್ಞ : ಕಲಿಸಿದ ಭಾರ್ಗವಾತ್ಮಜರ ನೋಡಿದ ತಜ್ಞರ ಮುಯ್ಯುನಿತ್ತಿಯುಂ ಗೆಲೆ ಸಲೆ ರಾಮಲಕ್ಷ್ಮಣರದೇಂ ನೆಟ್ ಕಲ್ತರೊ ಕೈದುವೆಲ್ಲಮಂ (ಪಂರಾಮಾ. ೩-೦೫೦) ; ತಡೆಯದೆ ವಿಚಾರಿಸೆಂಬಜ್ಞತಜ್ಞರ ಬಗೆಗೆ ಸಂಶಯಂ ಸರಿಯಾದುದು (ಹಕಕಾ. ೧೧-೨೭). [ ಸಂ. ತಜ್ಜ್ಞ ]

**ತಜ್ಞತೆ** (ನಾ). ನಿಪುಣತೆ ; ಪಾಂಡಿತ್ಯ : ಉಪಾತ್ತಾಲಾಪ ಪ್ರಯೋಗಂಗಳಿಂ ತಜ್ಞತೆಯನಾ ಮಾನಸರರ ಮುಂದಿಡೆಯುಂ (ಶಾಂತಿಪು. ೯-೮೨ವ).

[ ಸಂ. ತಜ್ಜ್ಞತಾ ]

**ತಟ₁** (ನಾ). ಒಂದು ಅನುಕರಣ ಶಬ್ದ. 'ತಟಗುಟ್ಟು' ಪರಾ.

**ತಟತಟ₁** (ದ್ವಿರುಕ್ತಿ) : ಜನಕೆಲ್ಲ ತಟತಟ ಬೆವರು ಸುರಿವುದು (ಸಿದ್ಧಪು. ೫-೪೭) : ವರುಷವರುಷವೂ ನಾವಿದ್ದಲ್ಲಿಯೆ ಹೊಸ ವಿದ್ಯಾರ್ಥಿಗಳಾಗುವವು ಪುಟಗಳ ತೆರೆಯದೆ ತಟತಟ ಓದದೆ ಬಿಸಿಲಿಗೆ ಗಾಳಿಗೆ ಮಾಗುವವು (ಕಿರಾಂ. ೧೭-೧೧).

**–ತಟ₂** (ಪ್ರ). ಒಂದು ಭಾವನಾಮ ಪ್ರತ್ಯಯ : 'ಎಳೆತಟ' ಪರಾ.

**ತಟ₃** (ನಾ). ೧. ಬೆಟ್ಟದ ತಪ್ಪಲು₁–ಇಳುಕಲು : "ಆ ನಗಕಟಕಂ ಪ್ರಸ್ಥಂ ಸಾನು ತಟಂ ಭೃಗು ನಿತಂಬಮಂತದು ತಟ್ಟಲ್ ತಾನೆನಿಸುಗುಂ" (ವಸ್ತುಕೋ. ೨೦-೨೭) ; "ಸಾನುಕಟಕಂ ಭೃಗು ಪ್ರಸ್ಥಂ ತಟಂ ನಿತಂಬಂ ಗಿರಿಯ ಹೊರೆಯುಕ್ಕು" (ಮಂಗರಾ. ೩೦-೨). ೨. ದಡ ; ಅಂಚು; ತೀರ : "ತೀರಂ ರೋಧಂ ತಟಂ ಪ್ರಪಾತಂ ಕೂಲಂ" (ವಸ್ತುಕೋ. ೨೪-೧೩); "ತಟಂ ದಡಂ" (ಚತುನಿ. ೯೩) ; ಕಾಸಾರದಾ ತಟದಿ . . . ತವದಿ ಮುನಿಗಳ ಶ್ರೇಷ್ಠ ಮಾರ್ಕಂಡ್ಯನಿರೆ (ಪ್ರಾಥರಾ. ೧೦-೧೮) ; ಬಾಲಲೀಲೆಗಳಾಡಿದ್ದು ಯಮುನಾ ತಟದಲ್ಲಿಯೇ (ನನದಿ. ೧೩). ೩. ಸ್ಥಳ; ಪ್ರದೇಶ: ವೃಂದಾವನ ತಟದೊಳ್ ಗೋವೃಂದಾವನ ವಾಂಛೆಯಿಂದೆ ಮನೆಗಟ್ಟಿದನಾ ನಂದ (ಜಗವಿ. ೩-೬೭). ೪. ಹೊಲ; ಕ್ಷೇತ್ರ. ೫. ಆಕಾಶ. ೬. ದಿಗಂತ ; ಕ್ಷಿತಿಜ.

**ತಟತಟ₂** (ದ್ವಿರುಕ್ತಿ) : ತಟತಟ ತಾಗಿದ ಪರಮಾನಂದದಿ ಪುಟವೇಱಿದ ತನುಕಾಂತಿಯ ಲಿಂಗದಿ (ಯೋಗಾಂವಿ. ೬-೦೩) ; ಅಟಮಟ ಕುಟಿಲೇಂದ್ರಿಯಗಳ ತಟತಟಗಳ ಜಯಿಸಿದವನೆ ಪಟುಭಟನಣುಗ (ಷಡಿಲ. ೨-೩೮). **ತಟತಟವಾಗಿ**=ಸಂಪೂರ್ಣವಾಗಿ : ನೀವು ತಟತಟವಾಗಿ ಲೋಗರ ಸೇವೆಯಲಿ ಬೆಂದೊಡಲ ಹೊಱುವಿರಿ (ಕುಮ್ಮಾವಿ. ೩-೬೪). [ ಸಂ. ]

**ತಟಂಕ**, ತಡಂಗ (ನಾ). ಕೆರೆ ; ತಟಾಕ : ಗೊಪ್ಪಯ ಸುತನ್ ಪರಮೇಶ್ವರ ದೇವಶಕ್ತಿಯಾಕ್ಷತ್ರಯಣಿಯಾ ತಟಂಕಮಿದು (ಎಕ. XVI, ಶಾಪುಗ. ೦೨-೬ ; ೭೬೩). **ತಡಂಗ** : ಅವೇಂ ನೆಟ್ ಪೋಲ್ತುದೋ ಚಂಡಹುಂಡ ಸಂಸ್ಥಾನದ ಗುಂಡುದೀವಿದ ತಡಂಗಮನಂಗದ ಪಾಂಗವಂದಿರಾ (ಆದಿಪು. ೫-೯೦) ; ಕೊಳ್ವೆಸಕದಿಂ ಬಿಸಿನೀರ ತಡಂಗದಂದದಿಂದಿರೆ . . . ಪಾಂಥಜನಂ ನಡೆಯಿತ್ತು ಮಾರ್ಗದೊಳ್ (ಜಗವಿ. ೦೭-೭).

[ <ಸಂ. ತಟಾಕ ]

**ತಟಂಕಷ** (ಗುಂ). ೧. ದಡವನ್ನು ಕೊರೆಯುವ. ೨. ಸಮಗ್ರವಾದ ; ಸಂಪೂರ್ಣವಾದ : ಜಿನೇಂದ್ರರುಂದ್ರ ಕಥೆಯೊಳ್ ನವಭಾವರಸಂಗಳಂ ತಟಂಕಷಮೆನೆ ತೋಱಿ (ಪುಷ್ಪಪು. ೧-೩೪). 'ಕೂಲಂಕಷ' ಪರಾ. [ಸಂ.]

**ತಟಂಬಿಡಿ** (ಕ್ರಿ). ದಂಡೆಗುಂಟ ಸಾಗು; ತೀರವನ್ನು ಅನುಸರಿಸು: ಬರಂತು ಪೋಪ ದಿವಿಜರ ಹಾರಿ ತಟಂಬಿಡಿದು ಪೊಕ್ಕು ಪೂಜಿಮಡುವೊಂದಾಕಾರಂ (ಶಾಂತಿಪು. ೦೦-೨೭). [ ತಟ₃ + ಪಿಡಿ₁ ]

**ತಟಕನೆ** 'ತಟಕ್ಕನೆ' ನೋ.

**ತಟಕಾವು** (ನಾ). ಅಡ್ಡಿ ; ತಡೆ; ವಿಘ್ನ : ಹೆಂಡ ಮಾರುವುದಕ್ಕೆ 'ತಟಕಾವು' ಮಾಡುವರಂತೆ (ಬೆಳುಮು. ೦೩೯). 'ಅಟಕಾವು' ಪರಾ.

[ ?. / ಮರಾ. ತಟಕಾ = ತಂಟೆ, ವಿವಾದ ]

**ತಟಕಿ** (ನಾ). ತಡಿಕೆ ; ತಟ್ಟಿ : ಮರುಗ ಪಚ್ಚೆಯು ದವನದಿಂದೆ ತಟಕಿಯ ಬಿಗಿದು ಸುರುಚಿರ ಸುಲಾಮುಂಚದಿಂದ ಪಂದರ ರಚಿಸಿ (ನವಮೋ. ೧೦-೬೭).

[ <ತಡಿಕೆ ]

**ತಟಕು₁, ತುಟುಕು₁, ತೊಟಕು₁** (ಕ್ರಿ). ಹನಿ ; ತೊಟ್ಟಿಕ್ಕು : ಒಂಟಿ ಕುಕಿಲಿದು ಕೂಗದೇಕೆ ? ಬಿರಿನನೆ ನಾರು ಬೀರದೇಂ ? ತಟಕದೀ ಎಲೆವನಿ ಇದೇನು ? (೧೧ವಿಂ. ೨೦-೪೦). **ತುಟುಕು₁** : ಹನಿಗಳು ಬೀಳುತ್ತಲೇ ಇದ್ದುವು. ಮುಖಕ್ಕೊಂದೆರಡು ಬಾರಿ ತುಟುಕಿದಾಗ ಮಾತ್ರ ನನ್ನ ಮೂಗು ಮುರಿದಿರಬೇಕು (ಮೃಂಮಾ. ೦೨೨). **ತೊಟಕು₁** : ಮೈಯಿಂದ ಬೆವರು ತೊಟಕುತ್ತಿತ್ತು (ಬಂಗಾಹ. ೨೨). 'ತೊಟ್ಟಿಕ್ಕು' ಪರಾ.

**ತಟಕ್ಕು$_2$, ತಟುಕು, ತಟುಗು, ತುಟುಕ್ಕು$_2$, ತೊಟಕ್ಕು$_2$** (ನಾ). ೧. ಹನಿ; ತೊಟ್ಟು; ಬಿಂದು: ಗುಟುಗುಟುಗುಟು ಎನುತಾ ತೆರಳುವ ಕಾಲಕ್ಕು ಗುಟುಕು ತಟಕಿನ ಚಿಂತೆ ತೊಲಗದಯ್ಯ (ಮೋಕ್ಷದೀ. ೧೩೯-೩); ಬಾಯೊಳಗಿನ ಎಂಜಲ ತಟಕು ಆ ಹೂಜಿಯ ಮೇಲೆ ಬೀಳುವವು (ಮುಂಬಯಿ. ೩-೯೨); ಉಪ್ಪಿನ ರಾಶಿಯ ಮೇಲೆ ಮಜ್ಜಿಗೆ ತಟಕು (ಗಾದೆ). ೨. ಕೊಂಚ; ತುಸು; ಸ್ವಲ್ಪ: ತಟಕೂ ಅವರಿಗೆ ಚಿಂತೆಯಿರಲಿಲ್ಲ (ಪದ್ಮಸ. ೨೪೦). **ತಟುಕು:** ೧. ಎಣ್ಣೆಯು ತಟುಕನ್ನು ಕೆಲಕಾಲದಿಂದಲೂ ನೋಡದಿದ್ದು ಅವನ ಮುಂಗುರುಳು . . . ಜಡೆಕಟ್ಟಿ ಇತ್ತು (ವಿಧಿಪ್ರ. ೬೭). ೨. ಮೊಲೆಯುಣ್ಣನವ್ವ ತಟುಕು ಮುಖ ಮೇಲಕ್ಕೆತ್ತನವ್ವ (ಪುರಂದ. ೧-೭೯-೧); ತನ್ನಿಂದ ಉಪಕಾರ ತಟುಕಾದರೂ ಇಲ್ಲ ಬಿನ್ನಾಣ ಮಾತಿಗೆ ಕೊನೆಯಿಲ್ಲವು (ಪುರಂದ. ೧-೧೦೭-೩). **ತಟುಗು:** ೨. ಮೊದಲೇ ತಟುಗು ಸೂಕ್ಷ್ಮ ಹೇಳಿದ್ರೆ ನಾನು ಕೂಗಾಡುತಿದ್ನಾ (ಮರೀ. ೪೦). **ತುಟುಕ್ಕು:** ೧. ಅಲ್ಲಿ ಇದ್ದವರೆಲ್ಲರು ಅವಳ ಬಾಯಿಗೆ ಒಂದೊಂದು ತುಟುಕು ಹಾಲು ಎರೆದರು (ಕಗದ್ಯ. ೪೦). **ತೊಟಕ್ಕು:** ೧. ಗುಟುಕು ಕೊಡು ತೊಟಕು ಕೊಡು (ಸಪೀಗೀ. ೧೯-೧೭). ೨. ತುಣುಕು ರೊಟ್ಟಿಗೂ ತೊಟಕು ಮಾನಕ್ಕೂ ಪಶುಗಳಂತೆ ಸಂಕಟಪಡಬೇಕಾದ ಈ ಕಾಲದಲ್ಲಿ (ವಿಚಾಮಂ. ೭೪).

**ತೊಟಕು ತೊಟಕು** (ದ್ವಿರುಕ್ತಿ): ಕಿಂಡಿಗಿಂಡಿಯಿಂದ ಬೆಳಕು ಜಿನುಗು ತಿತ್ತು, ತೊಟಕು ತೊಟಕು (ನಡಬಂ. ೬೭-೩). [ <ತಟಕು$_1$ ]

**ತಟಕುವನಿ, ತುಟುಕುಹನಿ, ತೊಟಕಂಹನಿ** (ನಾ). ೧. ತೊಟ್ಟಿಕ್ಕುವ ಹನಿ; ಉದುರುವ ಹನಿ: ತಟಕು[ಪಾಠಾಂ. ಟುಕು]ವನಿ ನೆತ್ತರಿನ ಲಯ ಸಂಘಟದ ಚಂಚಲ ಜೀವದಿಂದವಘಟೆಯ ಖಳ ನೆಮ್ಮಿದನು ಬಳಲಿಕೆಯಿಂದ ಹಳವಿಗೆಯ (ಕೊರರಾ. ೬-೪೦-೪೫). **ತುಟುಕುಹನಿ:** ೨. (ಆಲಂ) ಅಲ್ಪ ಸ್ವಲ್ಪ; ತೀರ ಸ್ವಲ್ಪ: ಏನಾದರೂ ಬಂದರೆ ತುಟುಕುಹನಿ ಮಾತ್ರ (ಸನ್ಯಾಸಿ. ೧೨೩). **ತೊಟಕುಹನಿ:** ೧. ಒಂದು ತೊಟಕುಹನಿ ಆಗಸದಿಂದ ಸಿಡಿದು ಬೀಳಲಿಲ್ಲ (ಬರಹಾ. ೫೮). [ ತಟಕು$_1$ + ಪನ್ನಿ ]

**ತಟಕ್ಕನೆ, ತಟಕನೆ** (ಅ). ಬೇಗನೆ; ಕೂಡಲೆ; ಒಮ್ಮೆಲೆ; ಇದ್ದಕ್ಕಿದ್ದಂತೆ: ಕಳಂಕಗಳು ಇದ್ದುದಿದ್ದ ಹಾಗೆ ತಟಕ್ಕನೆ ಹುಟ್ಟುವುದಿಲ್ಲ (ಜ್ಯೋತಿರ್ವಿ. ೮೯); ಇಂದಿರೆಗೆ ತಟಕ್ಕನೆ ಕೋಪ ಬಂತು (ನಿರಾಶ. ೧೨೮). **ತಟಕನೆ:** ಕೋಟೆಗಂ ತಟಕನೆ ಬಿಟ್ಟರೆನ್ನ ವ್ರತವೆಲ್ಲವ ತೀರಿಸಿಕೊಂಡು ನಿಲ್ಲದೆ (ಯುಕೋರ. ೩೭). [ ತಟಕ್೦ + – ಅನೆ$_1$ ]

**ತಟಗಿ** (ನಾ). (?): ಮೆಣಸು ಸಂಬಾರ ತಟಗಿಯೆಲ್ಲವಕ್ಕಿ ಸಹಿತ (ಸೌಇಎ. ೧೯೨೯, ಮಂಗಳೂರು. ೪೬೫-೩೪: 1312). [ ? ]

**ತಟಗುಟ್ಟು** (ಕ್ರಿ). ೧. ಸುತ್ತಾಡು; ಅಲೆದಾಡು; ತೊಳಲು; ತಾಟಾಡು: ನಾನಾ ಯೋನಿಯಲಿ ತಟಗುಟ್ಟಿ[ಪಾಠಾಂ. ಭವಪಟ್ಟು]ಬಳಲುವುದುಚಿತವೇ (ಕುಪ್ಪಾಉ. ४-೦೨). ೨. ತಡವರಿಸು (?): ಗಾಢಾಂಧಕಾರದಲಿ ತಟಗುಟ್ಟಿ ನಿದ್ರೆಯಲ್ಲಿರುತಿರ್ಪ ನೀರೆಯುಂ ಸಾರ್ದೊಡುಂ ಮಾರಿಯಂತೊಪ್ಪಿರ್ದಳು (ಶಠಕು. ೨೪-೦೨). ೩. ಹನಿಹನಿಯಾಗಿ ಸುರಿ; ತಟತಟನೆ ಸುರಿ; ತೊಟ್ಟಿಕ್ಕು: ಧಗೆಹೊಡೆದಳ್ಳೆ ಹೊಯ್ಯುತ ಬಿಸಿಲಿಂಗೆ ನಾಲಗೆ ನೀರು ತಟಗುಟ್ಟಿ ಸುರಿಯೆ (ಮೋಹಕ. ೧೯-೦೪); ಅವನ ಕಣ್ಣೊಳಗಿಂದ ನಡು ನಡುವೆ ನೀರು ತಟಗುಟ್ಟುತ್ತಿತ್ತು (ನಿರಾಶ. ೯೩). ೪. ಗೊಣಗು: ಅವಳು ಬೆಳಗಿನಿಂದ ತಟಗುಟ್ಟುತ್ತಲೇ ಇದ್ದಾಳೆ (ರೂಢಿ).

[ ತಟ$_1$ + ಕುಟ್ಟು$_1$ ]

**ತಟಗುಡು** (ಕ್ರಿ). ತೊಟ್ಟಿಕ್ಕು; ಹನಿಹನಿಯಾಗಿ ಬೀಳು; ಸ್ರವಿಸು: ಗೌಳಿಗಳ ಹಿಂದೆ ಧಾವಿಸಿ ಹೋಗಿ ಬಿದ್ದುಬಿದ್ದು ಆ ತಟಗುಡುತ್ತಿರುವ ಹನಿಗಳನ್ನು . . . ನೆಕ್ಕತೊಡಗಿದರು (ಅನ್ನ. ೩೩೭).

[ ತಟ$_1$ + ಕುಡು$_1$ (<ಕೊಡು$_1$) ]

**ತಟಜ** (ಗು). ೧. ತೀರದಲ್ಲಿ ಹುಟ್ಟಿದ, -ಬೆಳೆದ: ಕೆಂಗದಿ ಗಂಧಶಾಲಿವನಮುಂ ತಟಜೋತ್ಪಳ ಗಂಧದೊಳ್ ತಡಂಗಲಸಿದ ಕಂಪಿನಾಸೆಗೆ ಮುಸುಂಕಿದ ಭೃಂಗಕದಂಬಕಂ (ಚಂದ್ರಪು. ೦-೯೪). (ನಾ). ೨. ತೀರದಲ್ಲಿ ಹುಟ್ಟಿದ ಮರ ಮೊದಲಾದುವು: ಕೆಡವಲ್ಕೆ ಕೆಳಸುವ ಕೂಲಂಕಷ ಶೈವಲಿನಿಯು ಪೋಲ್ ತಿಳಿದ ಜಲಮುಮಂ ತಟಜಮುಮಂ (ಶಾಕುಂತ. ೬೯-೨). [ಸಂ.]

**ತಟತಟ$_1$** 'ತಟ$_1$' ಪರಾ.

**ತಟತಟ$_2$** 'ತಟ$_3$' ಪರಾ.

**ತಟತಟನೆ** (ಅ). ೧. ಪಟಪಟನೆ; ದಡದಡಿಸುತ್ತ: ಹಸಿದು ಬಳುಕುಗು ತಟತಟನೆ ಕಾಟಸುಗಡಿಗಳಂ ಪೊಡವಿಯೊಳು ಹೊಸೆಹೊಸೆದುಕೊಳುಗಂತ ಸಿಯ ಬಸುಜಿಂ (ಬಸಪು. ೦೪-೦೭); ವಾತಪಿತ್ತವೆರಡಜ ದ್ವಂದ್ವಜರೋಗದಲ್ಲಿ ಅಡಿಗಡಿಗೆ ಹಾವಿನ ಹಾಗೆ ನಡೆಯುತ್ತಾ ತಟತಟನೆ ಹಾರಿಯಾಡುತ್ತಾ ಇಹುದು (ವೈದ್ಯಸಾ. I, ೪). ೨. ಬೇಗಬೇಗನೆ; ಶೀಘ್ರವಾಗಿ: ಸಂಹಾರ ನಿಟಲರುದ್ರನವೋಲು ಬಗೆಯುದತಿ ಪಟುಬಲರ ತಟತಟನೆ ಮಾರ್ಗವಂ ನಡಸಿದಂ ಯಮುನಗರಿಗಂ ಭೀಮ ಕಲಿತನದೊಳು (ಕುರಂಗ. ೫೫-೩೦).

[ <ತಟ$_1$ + – ಅನೆ$_1$ ]

**ತಟತಟಿಸು** (ಕ್ರಿ). ತಳಮಳಿಸು; ಸಂಕಟಪಡು: ನಿಂದು ಡಿಳ್ಳಿಸಿ ತಟತಟಿಸಿ ಮನನೊಂದು ಸುಯ್ಯುತೆ . . . ಚಿಂತಿಸುತಿರ್ದನಾ ಕಂಸ (ಅಕ್ರೂರ. ೬-೦೪).

[ <ತಟ$_1$ + – ಇಸು$_3$ ]

**ತಟಪಟ$_1$** (ನಾ). ಪ್ರಾಣಾಪಾಯ; ಪ್ರಾಣಬಾಧೆ: "ತಟಪಟ[ಪಾಠಾಂ. ಕಟ, ತಟ, ಮಟ]ಮೆನೆ ತಾಂ ಪ್ರಾಣಬಾಧೆ" (ಭಾರನಿ. ೩೦); ತಟಕಿನಿಂದ ತಟಪಟವಾಯಿತು (ಗಾದೆ). [ ? ]

**ತಟಪಟ$_2$** (ಅ). ೧.=ತಟತಟನೆ: ದಿಟಭಕ್ತನಂತೆ ಭಸಿತೋದ್ಧೂಳನಂ ಮಾಡಿ ತಟಪಟಿನುತಂಗಂ ಕರನ್ಯಾಸಮುಂ ಮಾಡಿ (ಸೌಂದರ. ದೀ. ೬೩-೨). ೨. ಜೋರಾಗಿ ಮಿಡಿಯುತ್ತ; ವೇಗವಾಗಿ ಹೊಡೆದುಕೊಳ್ಳುತ್ತ: (ಕ).

**ತಟಪುಟನೆ, ತಟಪೊಟನೆ, ತಟಹೊಟನೆ** (ಅ). ದಡದಡನೆ; ಪಟಪಟನೆ; ಬೇಗಬೇಗ: ತಳರ್ವಜ್ಜೆ ತಟಪುಟನಿಡುವಾಗ ಮಿಟರೆದೆ ತಳಹೊಳಗೊಳು ತಿಹುದೊಡನೆ (ಭರತ. ೦೩-೬೮); ಅಂಬರ ತುದುಕೆ ಗಳೆಯನೇಜ್ ನೃಪನ ಮುಖಾಂಬುಜವನೆ ನೋಡುತಿರ್ದು ಕಂಬೆಳಗೊಲೆಯಲೊಡನೆ ತಟಪುಟ ನುಬ್ಬಿ ಡೊಂಬರು ಲಾಗುದೋಜುವರು (ಭರತ. ೨೦-೬೯). **ತಟಪೊಟನೆ:** ಅಟಮಟಲಿಪಿಗಾಗಿ ಕಟಕವಜೆಯ ಬಾಯ ತಟಪೊ[ಪಾಠಾಂ. ಮು]ಟನುಚ್ ಹೊಯ್ಸಿಕೊಂಡು ತುಟಿಯ ಚುಂಬಿಸುವ ಹಲ್ಲುಗಳ ನೀಗಿದರೆಂದು ವಿಟ ನಕ್ಕು ನುಡಿದನೆಲ್ಲರೊಳು (ಭರತ. ೩೬-೯೩). **ತಟಹೊಟನೆ:** ವೃಶ್ಚಿಕು ರುಂಬಮಲ್ಲಂ ತತ್ಫಲಂಗಳಂ ತಿಂದೊಡಲು ತುಂಬುವನಿತಜ್ಞೋಳಿಕಾತರಕ ತಟಹೊಟನೆ ಬಿಳ್ದುರುಳ್ದುದಂ ಕಂಡು (ಸಮ್ಯಕ್ತ್ವ. ೦೦-೫೦).

[ ತಟಪುಟ$_0$ + – ಅನೆ$_1$ ]

**ತಟಪೊಟನೆ** 'ತಟಪುಟನೆ' ನೋ.

**ತಟಬಂದಿ** (ನಾ). ರಕ್ಷಣೆಗಾಗಿ ಕಟ್ಟಿದ ಗೋಡೆ; ಪ್ರಾಕಾರ; ಕೋಟೆ; ಕಿಲ್ಲೆ: ಕೈಲಾಸಪರ್ವತದ ಸುತ್ತಲಿನ ತಟಬಂದಿಯು ಸಿಡಿಯಹತ್ತಿ, ಪರ್ವತವೆಲ್ಲ ಲಿಕಿಲಿಕಿಯಾಗಿ ಮೇಲಿನವರು ಒಬ್ಬೊಬ್ಬರೆ ಕೆಳಗುರುಳ ಹತ್ತಿದರು (ಶೃವಸು. ೩೨೭); ಬಂಡುಗಾರರು ವಿಹನೆಗಾರ್ ಹಿಲ್ಲದ ಮೇಲೆ ತಟಬಂದಿಯನ್ನು ಕಟ್ಟಿಕೊಂಡು ಕೆಲವು ದಿವಸಗಳವರೆಗೆ ಇದ್ದರು (ಇಂಗ್ಲಇ. ೫೦). [ ←ಮರಾ. ತಟಬಂದೀ ]

**ತಟಮಟ** (ನಾ). ಕೊರತೆ; ಅಭಾವ; ತೊಂದರೆ: (ಕ). [ ? ]

**ತಟವಟ** 'ತಾಟುಪೋಟು' ನೋ.

**ತಟವಟಗಾರ** (ನಾ). ಮೋಸಗಾರ; ಕಪಟಿ; ವಂಚಕ: (ಕ).

[ ತಟವಟ (<ತಾಟುಪೋಟು) + – ಗಾರ (< – ಕಾಜ) ]

**ತಟವಾಣಿ$_1$** 'ತಟ್ಟುವಾಣಿ' ನೋ.

**ತಟವಾಣಿ$_2$** (ನಾ). ಗಟ್ಟಿಗಿತ್ತಿ ; ದಿಟ್ಟೆ ; ತಾಟಗಿತ್ತಿ : ಯಾರಿಗೂ ಅರೆ ಹೊಟ್ಟೆಯೂ ಇಲ್ಲದ ಹಾಗೆ ಮಾಡಿದೆಯಲ್ಲೆ, ತಟವಾಣಿ, ನಿನ್ನ ಹಾಳವಿದ್ಯಕ್ಕೆ ಬೆಂಕೀ ಹಾಕ (ಪಾಮುರಾ. ೮೭) ; ಇವಳು ಸಾಧಾರಣ ಹೆಂಗಸಾಗಿ ತೋರುವುದಿಲ್ಲ; ಬಹು ತಟವಾಣಿಯಾಗಿ ತೋರುತಾಳೆ (ಪೀಟಮೂ. ೨೭). 'ಗಟ್ಟಿವಾಳಿ' ಪರಾ. [ ? ]

**ತಟವುಚ್ಚು** 'ತಟ್ಟುಚ್ಚು' ನೋ.

**ತಟಸ್ತ** (ನಾ). = ತಟಸ್ಥ ೩ : ತಟಸ್ತರಾಗಿಯಿದ್ದವರು ಅವ್ಮಾ ಯೇನು ದುಃಖವ ಪಡುತ್ತಿದ್ದಿರಿಯೆಂದು ಕೇಳಿದರೆ (ಈಶ್ವಸ್ವ. ೭-೧೩).

[ <ಸಂ. ತಟಸ್ಥ ]

**ತಟಸ್ಥ** (ಗುಂ). ೧. ದಡದಲ್ಲಿರುವ ; ಹತ್ತಿರ ನಿಂತಿರುವ. ೨. ಯಾವ ಪಕ್ಷವನ್ನೂ ವಹಿಸದ : ನಮ್ಮದು ತಟಸ್ಥ ರಾಷ್ಟ್ರ (ರೂಢಿ). (ನಾ). ೩. ಯಾವ ಪಕ್ಷಕ್ಕೂ ಸೇರದವನು : ತಟಸ್ಥನಾದವನಿಗೆ ತಂಟೆಯೇನು (ಗಾದೆ). ೪. ಔದಾಸೀನ್ಯವನ್ನು ತಾಳಿದವನು ; ಆಸಕ್ತಿಯಿಲ್ಲದವನು: ಅವಳು ಸರ್ವಾಂಗಸುಂದರಿಯಾಗಿರಲಿಲ್ಲವಾಗಿ ನಾವು ತಟಸ್ಥರಾದೆವು (ಕಪಾಕುಂ. ೪೩). ೫. ಚಲನೆಯಿಲ್ಲದಿರುವಿಕೆ ; ನಿಷ್ಕ್ರಿಯತೆ: ಸಮಯವು ಸ್ತಬ್ಧವಾಯಿತು. ಜಗತ್ತು ತಟಸ್ಥವಾಯಿತು (ಸೀತಾರ. ೧) ; ಪ್ರಗತಿ ಮಾರ್ಗದಲ್ಲಿಯೇ ಅಥವಾ ತಟಸ್ಥವಾಗಿದೆಯೇ (ಭಾರದ. ೫೪೫). [ ಸಂ. ]

**ತಟಸ್ಥತೆ** (ನಾ). ಯಾವ ಪಕ್ಷವನ್ನೂ ವಹಿಸದಿರುವುದು : ಅಮೇರಿಕಾ ದೇಶವು ಸಜ್ಜನರಂತೆ ತಟಸ್ಥತೆಯಿಂದ ಸತ್ಯಾಸತ್ಯ ಪರೀಕ್ಷೆಯನ್ನು ನಡೆಸಿರುವರು (ವಿಜಾಮಂ. ೮).

[ ಸಂ. ತಟಸ್ಥತಾ ]

**ತಟಹಾಯ್**, ತಟಹಾಯು, ತಟಾಯು (ಕ್ರಿ). ೧. ಸೀಳಿಕೊಂಡು ಹೋಗು ; ಭೇದಿಸಿಕೊಂಡು ಹೋಗು : ಸುರುತಾಳ ಖಾನರ ಗಂಡ ನೆನಿಸಿಕೊಂಬ ಬಿರಿದಿನ ಭಟನಾರಿವನು ಇರದೇಳು ಕೊಪ್ಪರಿಗೆಯ ತಟಹಾಯ್ದೆಚ್ಚ ಧುರಧೀರ ಬಾದುರಖಾನ (ಕುಂಜಾಸಾಂ. ೨೧-೮೫). **ತಟಹಾಯು** : ೧. ಕಟಕಿಯ ಮಾತುಗಳೇಕೆ ಕನ್ಯಾಚೋರ ದಿಟ ನೋಡು ನೋಡು ನಿನ್ನೆರ್ದೆಯ ತಟಹಾಯುಬೇಕೆಂದು ಮಸೆದ ಕೂರ್ಗಣೆಯನಾರ್ಭಟದಿಂದಲಿಕ್ಕಿದರ್ ಖಳರು (ಮೋಹತ. ೩೪-೨೭) ; ಆ ಬಾಣ ಸುಬಾಹುವಿನ ಎದೆಯೊಡೆದು ತಟಹಾಯಲು ಅವನು ಗತಪ್ರಾಣನಾಗಿ . . . ಒರಗಿದನು (ಕಕುಮೂ. ೦೪೯-೪). **ತಟಾಯು** : ೧. ಅದು . . . ಸುಯೋಧನನ ದೇಹದಲ್ಲಿ ನೆಟ್ಟು . . . ಆಚೆಗೆ ತಟಾದು ಭೂಮಿಯಲ್ಲಿ ಪ್ರವೇಶಿಸಿತು (ಕೃಪಾಕ. ೨೭). ೨. ದಾಟು ; ಹಾಯ್ದುಹೋಗು : ಅವನ ಅಂಗಡಿ ತಟಾದು ನೇರವಾಗಿ ಪೂರ್ವದಿಕ್ಕಿನ ಕಡೆ ಹೋಯಿತೆಂದರೆ ಸ್ವಲ್ಪ ದೂರದಲ್ಲೇ ಓಣಿ ಬಾಗುತ್ತದೆ (ಸಾಹೇಬ್. ೨). [ ತಟ$_3$ + ಹಾಯ್$_1$ (<ಪಾಯ್) ]

**ತಟಹಾಯಿಸು**, ತಟಾಯಿಸು (ಕ್ರಿ). ೧. ದಾಟಿಸು ; ದಡವನ್ನು ಮುಟ್ಟಿಸು : ಆ ಕುರಿಗಳ ದೊಡ್ಡಿಯನ್ನು ಅಟ್ಟಿಕೊಂಡು ಹೋಗಿ, ಈ ನಾಡಿನ ಎಲ್ಲೆಯಿಂದಾಚೆಗೆ ತಟಹಾಯಿಸಿಬಿಡಬೇಕೆಂದು (ಮಂತ್ರಶ. ೪೭-೨೪). ೨. ದಾಟು ; ಹಾಯ್ದು ಹೋಗು : ಅಪ್ರಮೇಯನನ್ನು ಕರೆದುಕೊಂಡು ಹೋಗುತ್ತಾ ಒಂದು ಕೊಟ್ಟಡಿಯಿಂದ ಇನ್ನೊಂದು ಕೊಟ್ಟಡಿ ಹೀಗೆ ಎಂಟು ಹತ್ತು ಬಾಗಿಲನ್ನು ತಟಹಾಯಿಸಿ ಹೋದರು (ಮುಸುಗ. ೧೧೦). **ತಟಾಯಿಸು** : ೧. ತಟ್ಟು ಇದ್ದರೆ ತಟಾಯಿಸಿ ನಡೆದಾನು (ಗಾದೆ). ೨. ಮೂರು ಪಹರೆಗಳನ್ನು ತಟಾಯಿಸಿ ಹೋಗಿ (ದೌಲತ್. ೨೨೪) ; ಇಷ್ಟು ಏರುಪೇರುಗಳನ್ನು ತಟಾಯಿಸಿ ಇಂಥ ಸತ್ವವನ್ನುಳಿಸಿಕೊಂಡು ಬಂದಿರುವುದು ಜಗತ್ತಿನ ಇತಿಹಾಸದಲ್ಲೇ ಹೊಸದು (ಭಾರದ. ೪೧೭).

[ ತ[illegible]ಹಾಯ್ + ಇಸು$_3$ ]

**ತಟಹಾಯು** 'ತಟಹಾಯ್' ನೋ.

**ತಟಹೊಟ** (ನಾ). ೧. ಆತುರ ; ಉದ್ವೇಗ (?) : ಪಟುವಾಗಿ ಕರ್ಮಭಟನಂ ಜಯಿಸು ಬಯಲ ತಟಹೊಟದ ಕಾಂಕ್ಷೆಯನೆ ಪರಿಹರಿಸು (ಸಮ್ಯಕ್ತ್ವಾ. ೧-೫) ; " ಟಕ್ಕು, ಮೋಸ " (ಸಮ್ಯಕ್ತ್ವಾ. ಟಿಪ್ಪಣಿ). ೨. ತೊಂದರೆ ; ಜಂಜಡ : ಆವ ಸಂಕಟದ ತಟಹೊಟಂ ಸಮನಿಸಿಲ್ಲ (ಪರಶು. ೪೧-೫೦). ೩. ಗದ್ದಲ ; ಗಲಾಟೆ (?) : ಕಟಕಣಿಲ ಧನಿಯುಪ್ಪತ್ಕಟೆಯ ಮಾಗಧರ ಉಬ್ಬಟೆಯು ಕಾಮಾಟದರ ತಟಹೊಟ ಮಹೋನ್ನತೆಯಕಟಕಟಾ ಬ್ರಹ್ಮಾಂಡಘಟ ಪೊಡೆಯದಿರದೆನಲ್ ಪಟುತರದೊಳೊಪ್ಪಿರ್ದುದು (ಲಕ್ಷ್ಮಿಭಾ. ೭-೧-೩೦).

[ ? ]

**ತಟಹೊಟನೆ** 'ತಟಪುಟನೆ' ನೋ.

**ತಟಾಕ** (ನಾ). ಕೆರೆ ; ಕೊಳ ; ಕಾಸಾರ ; ಪುಷ್ಕರಿಣಿ : "ಸರಸಿ ಸರಂ ಕಾಸಾರಂ ಸರೋಜಷಂಡಂ ತಟಾಕಮಾಧಾರಂ ಪುಷ್ಕರಿಣಿಯದು" (ವಸ್ತುಕೋ. ೨೪-೧೫) ; "ತಟಾಕಂ ಜಲಾಧಾರಮೆನೆ ಕೆಱೆ" (ಮಂಗರಾ. ೧೨೩-೧೪) ; ಗಗನತಳಮೆ ಪಱಿದು ಬಿಬ್ಬುದೆನಿಪ ಬಹು ತಟಾಕದಿಂ (ಶಂಪಭಾ. ೧-೫೭ ರಗಳೆ) ; ಕುಟಿಗಳ್ ಬಹು ತಟಾಕಮಾದುವು (ಲೋಕೋಪ. ೧-೮ ಟೀಕೆ) ; ಉದಕಮಟಿತ ಘನತಟಾಕಕ್ಕೆ ಫಲವಿಳುಹಿದ ಮರಕ್ಕೆ ನೆಟ್ಟನೆ ಜೋಡಿಯಾದುದಾ ಪುರಜನಂ (ಹಡಕಾ. ೯-೨೪). [ ಸಂ. ]

**ತಟಾಯಿಸು** 'ತಟಹಾಯಿಸು' ನೋ.

**ತಟಾಯು** 'ತಟಹಾಯ್' ನೋ.

**ತಟಾರನೆ** (ಅ). ಕೂಡಲೇ ; ಇದ್ದಕ್ಕಿದ್ದಂತೆ; ತಟ್ಟನೆ: "ತಟಾರನೆ-ತಟಕ್ಕನೆ" (ಜಾನಕೋ. ೬೪). [ತಟಾರ್$_0$ +– ಅನೆ$_1$. / ತೆಲು. ತಟಾಲುನ]

**ತಟಿ** (ನಾ). ದಡ ; ತೀರ : ಸಕಲವೆಂದಡೆ ಇಷ್ಟ ನಿಷ್ಕಲವೆಂದಡೆ ಅದಟಿ ಅಭೀಷ್ಟ ಈ ಉಭಯದ ತಟಿಗಾಟದೆ ಹೊತ್ತು ಹೋರುವ ಮಾತಿನ ಕತ್ತಿಯ ಬಾಯಿಧಾರೆಯ ಘಾಯಕ್ಕೆ ಇನ್ನೇತಟ ಮದ್ದು (ಮೋಳಮಾ. ೪೪-೧೮೧).

[ ಸಂ. ತಟೀ ]

**ತಟಿಚ್ಚಂಚಳೆ** (ನಾ). ಮಿಂಚಿನಂತೆ ಚಂಚಲಳಾದವಳು,–ಅಸ್ಥಿರಳು : ತಟಿಚ್ಚಂಚಳೆ ಲಕ್ಷ್ಮೀಕಾಂತೆ ಪೂರ್ವಸ್ಥಿತಿಯನುಳಿದತಿಸ್ಥೈರ್ಯಮಂ ತಾಳ್ದಿದಳ್ (ಮಲ್ಲಿಪು. ೩-೧೯). [ಸಂ. ತಟಿಚ್ಚಂಚಲಾ (ತಟಿತ್ + ಚಂಚಲಾ)]

**ತಟಿಚ್ಛೃಂಗಾಟ** (ನಾ). ೧. ಮಿಂಚಿನಂತೆ ತಳತಳಿಸುವ ಚೌಕ,–ಚತುಷ್ಪಥ. ೨. ಮಿಂಚಿನ ಧಾರೆಯ ಸಂಚಾರ,–ಚಲನೆ; ಮಿಂಚುಗಳಿಂದಾದ ಚತುಷ್ಪಥ. ೧, ೨ : ನಾಟಕ ಪ್ರಕರದಂತೆ ವಿಪುಳ ವೀಥಿ ವಿಭಾಸಿಯುಂ ಮೇಘಪಟಳದಂತೆ ತಟಿಚ್ಛೃಂಗಾಟನಿರತಮುಂ (ಪುಷ್ಪಪು. ೯-೩೧ ವ). [ ಸಂ. (ತಟಿತ್ + ಶೃಂಗಾಟ ; ತಟಿತ್ + ಶೃಂಗ + ಅಟ) ]

**ತಟಿತ್ಕಣ** (ನಾ). ಮಿಂಚಿನ ಕಣ ; ವಿದ್ಯುತ್ತಿನ ಕಿಡಿ : ಕುರುಕ್ಷೇತ್ರದೆರಡು ಬಣ ವಿಜ್ಞಾನದ ತಟಿತ್ಕಣ (ಸೂರ್ಯಪಾ. ४೦-೮). [ಸಂ. ತಟಿತ್ + ಕಣ]

**ತಟಿತ್ತು** (ನಾ). ಮಿಂಚು : ಉಚ್ಚ ತಟಿತ್ಕರವಾಳನಾಂತು ತಜ್ಜಲದ ಭಟಂ ಗದಂ ಕುಡದೆ ತನ್ನಯ ಜೀವನಮಿತ್ತುದಬ್ಧಿ (ರಾಜಶೇ. ೧-೯೯) ; ತಟಿತ್ಕೋಟಿನಿಭಕಾಯ ಜಗನ್ನಾಥವಿಠಲಯ್ಯಾ ವಿಠಲಯ್ಯ (ಜಗದಾ. ೧೫೮) ; ತಟಿತ್ತು ಮೇಘಂಬೊಕ್ಕು ಮರೆಯಪ್ಪವೊಲ್ (ಶ್ರೀರಾಮಾ. ೫೯೩-೨೯೨).

[ ಸಂ. ತಟಿತ್ ]

**ತಟಿತ್ಪ್ರಭೆ** (ನಾ). ಮಿಂಚಿನ ಹೊಳಪು,–ಪ್ರಕಾಶ : ತಟಿತ್ಪ್ರಭಾಪರಿವೃತಮಾದ ವಾಜಿಗಳ ವಂಗಡದಿಂದಮುಮಂ (ಶಾಕುಂತ. ೧೦೦-೧೭೦).

[ ಸಂ. ತಟಿತ್ಪ್ರಭಾ (ತಟಿತ್ + ಪ್ರಭಾ) ]

**ತಟಿದ್ವಲ್ಲರಿ** (ನಾ). ಬಳ್ಳಿಮಿಂಚು: ತಟಿದ್ವಲ್ಲರಿ ಬಳಸಿದ ಶರಲ್ಲಕ್ಷ್ಮಿಯಂತೆಯುಂ ತಾರಾವಳಿ ಬಳಸಿದಿಂದುಕಳೆಯಂತೆಯುಂ . . . ಕನ್ನಕಾಕದಂಬದ ಬಳಸಿಂ ಬಗೆಗೊಳಿಸಿ (ಪಂಚಾಮಾ. ೫-೫೭ ವ). [ ಸಂ. (ತಟಿತ್ + ವಲ್ಲರಿ) ]

**ತಟಿದ್ವಳಯ** (ನಾ). ಮಿಂಚಿನ ಆವರಣ,-ವರ್ತುಲ : ತಟಿದ್ವಳಯ ವಿಳಸಿತಂಗಳಾಗಿ ನಿಜಪ್ರಕೋಪ್ಪನಿಷ್ಠಿತಂಗಳಪ್ಪ ವೀರಾಂಗದಂಗಳೆಂಬ ಕಟಕಂಗಳುಂ (ಆದಿಪು. ೧೫-೩೭).

[ ಸಂ. ತಟಿದ್ವಲಯ (ತಟಿತ್ + ವಲಯ) ]

**ತಟಿದ್ವಿಲಾಸ, ತಟಿದ್ವಿಳಾಸ** (ನಾ). ಮಿಂಚಿನ ಲೀಲೆ,-ಹೊಳಪು : ಈ ಕೇವಲ ಸೌಂದರ್ಯದ ಅದ್ಭುತವಾದ ತಟಿದ್ವಿಲಾಸವನ್ನು ನಾವು ಲಲಿತಾಸಹಸ್ರನಾಮದಲ್ಲಿ ಗುರುತಿಸಬಹುದು (ಸೌಂದಸ.೧೧೩). **ತಟಿದ್ವಿಳಾಸ:** ದಶನಾಂಶು ಪೊದಟ್ಟ ತಟಿದ್ವಿಳಾಸಮಂ ಗೆಲೆ ನುಡಿದಂ. . . ಖೇಚರಾಧಿಪಂ (ಶಂರಾಮಾ. ೫-೦೭). [ ಸಂ. (ತಟಿತ್ + ವಿಲಾಸ) ]

**ತಟಿದ್ವಿಳಾಸ** 'ತಟಿದ್ವಿಲಾಸ' ನೋ.

**ತಟಿನಿ** (ನಾ). ಹೊಳೆ; ತೊರೆ; ನದಿ: ಉರ್ವೀಧರ ಚಕ್ರಪ್ರಾಂತದೊಳ್ನಿರ್ಝರತತಿ ತಟನೀವ್ಯೂಹದೊಳ್ಪೂರವಾರಂ . . . ಪರ್ವಿಸುತ್ತಿರ್ದುವೆತ್ತಂ (ಕಾದಂಉ. ೫೩೩) : ಇವರಲ್ಲಿ ಗುಪಿತಚರಿತೆಯ ಕಂಡು ದೇವಮುನಿ ತಟ[ಪಾಠಾಂ· ಟ]ನಿಗಳು ತಪಸು ಫಲವಾಯಿತೆಂದು (ವಿದಾಕ್ಕ. ೧೪೦).

[ ಸಂ. ತಟಿನೀ ]

**ತಟಿನೀತನೂಜ** (ನಾ). ನದೀಸುತ; ಗಂಗೆಯ ಮಗ ; ಭೀಷ್ಮ : ವಿವರಿಸಿ ತಿಳುಹಿದನು ತಟನೀತನೂಜನಜಾತಶತ್ರುವಿಗೆ (ತಿಮ್ಮಅ. ೬ ಸೂಡನೆ).

[ ಸಂ. (ತಟಿನೀ + ತನೂಜ) ]

**ತಟಿನ್ನಾದ** (ನಾ). ಗುಡುಗು; ಮೇಘನಾದ: ಚತುರ್ದಶ ಭುವನಾವಧಿಯೆನೆ ದುರ್ಯಶಸ್ತಟಿನ್ನಾದ[ ಪಾಠಾಂ. ಪಟಹನಾದ ]ಮಾದಮೇನೊದವಿದುದೋ (ಶಂರಾಮಾ. ೬-೯೭).

[ ಸಂ. (ತಟಿತ್ + ನಾದ) ]

**ತಟಿನ್ಮಾಲಿಕೆ, ತಟಿನ್ಮಾಳಿಕೆ** (ನಾ). ಮಿಂಚಿನ ಮಾಲೆ : ಜಲಮಯಮಿಳೆಯೆಲ್ಲಂ ಪ್ರಜ್ವಲಿತ ತಟಿನ್ಮಾಲಿಕಾಮಯಂ ದೆಸೆಯೆಲ್ಲಂ (ವೃಷವಿ. ೧೪-೨೭). **ತಟಿನ್ಮಾಳಿಕೆ:** ಜಳದೌಘಶ್ಯಾಮಧೂಮಪ್ರತತಿ ಚಳತಟಿನ್ಮಾಳಿಕಾಲೋಲ ಕೀಲಾವಳಿಸಂಜಾತೇಂದ್ರಗೋಪಪ್ರಸರವಿಸರದರ್ಚಿಃಕಣಂ . . . ಬಂದುದು . . . ಅಬ್ದಕಾಲಂ (ಚಂದ್ರಪು. ೪-೨೯).

[ ಸಂ. ತಟಿನ್ಮಾಲಿಕಾ (ತಟಿತ್ + ಮಾಲಿಕಾ) ]

**ತಟಿನ್ಮಾಳಿಕೆ** 'ತಟಿನ್ಮಾಲಿಕೆ' ನೋ.

**ತಟಿಲ್** (ನಾ). ಒಂದು ಅನುಕರಣ ಶಬ್ದ : ತಟಿಲ್ಛಿಟಿಲ್ಪಟಿಲ್ ಗರಿಗರಿಲೆಂಬ ನಿಷ್ಠುರರವಂ ಮಿಗೆ ತಳ್ತಿರ್ದುದತ್ತು ಯುದ್ಧದೊಳ್ (ಗಿರಿಕ. ೭-೭೮).

**ತಟಿಲ್ಲತೆ** (ನಾ). ಬಳ್ಳಿಮಿಂಚು : ತಟಿಲ್ಲತೆವೊಲಾಕಾಶಕ್ಕೆ ನೆಗೆದು ಪಾರ್ದಳಾಗಳ್ (ಶಂರಾಮಾ. ೯-೪೧) : ಇನಿಸಿನಿಸು ಮುಗಿಲ ತುಂತುರ್ವನಿಯ ತಟಿಲ್ಲತೆಯು ವಿಮಳ ಶಿಶಿರವಿಗಳ್ (ಅಟ್ಟಮು. ೮-೧೨೪) : ನಯನಾಂಶು ಗಗನಕೆ ತಟಿಲ್ಲತೆಯು ಪರ್ಬಂ ಪಡೆಯುಲು (ಚಬಪು. ೫-೧೨).

[ ಸಂ. ತಟಿಲ್ಲತಾ (ತಟಿತ್ + ಲತಾ) ]

**ತಟಿಸು**$_1$ 'ತಟ್ಟಿಸು' ನೋ.

**ತಟಿಸು**$_2$ (ಕ್ರಿ). ಆವರಿಸು ; ಮುಸುಕು (?) : ಛಿಟಿಲು ಛಿಟಛಿಟಿಲೆಂದು ಸಿಡಿಯುತ ಪಿಟಿಪಿಟಿನೆ ಪಿಟಿಲೆಂದು ಕಣಗಳು ತಟಪಟನೆ ಹಾರುತಲಿ ಕಾರ್ಬೊಗೆ ತಟಿಸುತಾಕ್ಷಣದಿ (ಹಮುಕ. ೬೭). [ ? ]

**ತಟುಕು** 'ತಟಕ್ಕು' ನೋ.

**ತಟುಗು** 'ತಟುಕ್ಕು$_2$' ನೋ.

**ತಟುವಳ್ಳುವೆರೆ** (ನಾ). ಒಂದು ಗದ್ದೆಯ ಹೆಸರು (?): ಕೊಡುಗೂನ್ನಾಡಾ ಕಲ್ಲಿವುಸೂರಾ ಚಿಡಿ ಅಕ್ಕ ಕರ್ಗುಲವ್ಪೊಲತ್ತಟುವಳ್ಳುವೆರೆಉಂ ವಸವಿಗಾಲುಂ ಎರಡು ಕಳನಿಉಂ ತೋಟ್ಟಮುಂ (ಮೈಆರಿ. ೧೯೩೫, ೧೦೭-೧೮ ; ೨ನೆಯ ಶತ).

[ ? ]

**ತಟಿ**$_1$ (ಕ್ರಿ). ತಟ್ಟು ; ಬಡಿ : ಹತವಿಧಿಯೆ ! ಕದ ತೆರೆಯಲಿಲ್ಲ ಕದ ತಟಿವಾಗ. ಕದ ತರೆಯೆ, ಆ ಪುರುಷ ಬರಲೊಲ್ಲ (ಉಮ್ಮಾಕಿ. ೧೦-೧೩) ; ತಾಗು, ತಗಲು: ಪಳಂಚಲೆ, . . . ತಟಿ, ಬಡಿ, ಸೋಂಕು (ಕಂನುಹು. ೮೪). 'ತಟ್ಟು$_1$' ಪರಾ. [ <ತಟ್ಟು$_1$ ]

**ತಟಿ**$_2$ (ನಾ). ತಡಿ ; ದಡ : ತುಂಗಭದ್ರೆಯು ತಟಿಯು ಕನ್ನನ (ಕಇಳ. ೧೯೯-೨೪-೧೦ : ?). [ ಸಂ. ತಟಾ ]

**ತಟಿತಟಿ** (ನಾ). ವ್ಯರ್ಥ (?) : ತಟಿತಟಿಯಹ ಲಾಲಸೆಯನು ಸೂಡಿ ಪಟಪಟನೈದಿ ಪರರ ತಾ ಬೇಡಿ ದಿಟಹುಸಿಗಳ ಮನದೊಳಗೆಡೆ ಮಾಡಿ ತಟಮನುಜರು ಬಳಲ್ವರು ಸುಖಕಾಡಿ (ಅವಧೂ. ೨೯). [ ? ]

**ತಟ್ಟ**$_1$ (ನಾ). ತಟ್ಟನ್ನು ಧರಿಸಿದವನು ; ಜೈನಯತಿ : ತಟಟುಂದಲೆಗಳ ತಟ್ಟರೋ ನೂರೆ ಸುರಿವ ಬಾಯ್ಮನಿಕೆ ಹಡಿಕೆಗಳೊ . . . ತಟ್ಟುಗಳ ಹಗರಣಿಗರೊ ಎನಲು ಮಲಧಾರಿಗಳು ಗಜಬಜಿಸಿ ನೆರೆವುತ್ತ (ಬಸವು. ೫೦-೫೩).

[ ತಟ್ಟು$_7$ + – ಅ$_7$ ]

**ತಟ್ಟ**$_2$ 'ಥಟ್ಟು' ನೋ.

**ತಟ್ಟಗ್ಗೆಱೆ** (ನಾ). ಒಂದು ಊರಿನ ಹೆಸರು : ಪೊಲಮೇರೆ ತಟ್ಟಗ್ಗೆಱೆಯ ಕಿಟ್ಕಿಱ ಪೋಗಿ ಅಕ್ಷರಕಲ್ಲ ಮೇಗೆ (ಎಕ. II, ೩೫-೫ ; ಸು. 800).

[ ? + ಕೆಱೆ ]

**ತಟ್ಟಡಿ** 'ದಟ್ಟಡಿ' ನೋ.

**ತಟ್ಟನೆ** (ಅ). ಕೂಡಲೆ; ಬೇಗನೆ: ಪೂಸರಳಿಂದೆ ಶಿವನ ತಟ್ಟನೆ ತಾಗಲಿಕ್ಕುವೆನೆಂದು ಬಾಸೆಯ ಕೊಟ್ಟ ಮನ್ಮಥ (ಮೋಹತ. ೫-೭೦) ; ನಿನ್ನಯ ಕರುಣಾದೃಷ್ಟಿಯೊಳೆನ್ನನುದ್ಧರಿಸಿ ತಟ್ಟನೆ ಸಲಹು (ಕಂನವಿ. ೪-೩೮) : ನೈಜವಾದ ಉಪಮಾನಗಳು ; ಮನಸ್ಸಿಗೆ ತಟ್ಟನೆ ಹೊಳೆಯುವಂತೆ ಜನಜೀವನದಿಂದಲೇ ಆರಿಸಿದ ಆಣಿಮುತ್ತುಗಳು (ಜಗದಾ. ೭೨).

[ <ತಟಕ್ಕನೆ ]

**ತಟ್ಟಮ್ಮ** (ನಾ). ಮೈಮೇಲೆ ಸಣ್ಣಗುಳ್ಳೆಗಳೇಳುವ ಒಂದು ಬಗೆಯ ರೋಗ; ಗೋಣಿತಟ್ಟು; ದಡಾರ:"ಗೊಬ್ಬರರೋಗ" (ಜಾನಕೋ. ೬೪).

[ ತಟ್ಟು$_2$ + ಅಮ್ಮ$_2$ ]

**ತಟ್ಟಲ್** (ನಾ). ಒಂದು ಊರಿನ ಹೆಸರು (?) : ತಟ್ಟಲ ಏಚಗಾವುಣ್ಣನ ಮೂವ ಸಾನ್ತಯ್ಯ ಕೊಟಗವ್ವನ್ನು ತುಱುವ ಕೊಣ್ಡು ಪೋಪಾಗ (ಮೈಆರಿ. ೧೯೪೧, ೨೫-೧೨ ; 1030). [ ? ]

**ತಟ್ಟಲಿ, ತಟ್ಟಲೆ** (ನಾ). (ಉಕ) "ಹೆಣ್ಣುಮಕ್ಕಳ ಚಪ್ಪಲಿ; ಕೆರವು" (ಜಾನಕೋ. ೬೪). **ತಟ್ಟಲೆ:** ಮಗಳಿಗೆ ಒಂದು ಜೊತೆ ಹೊಸ ತಟ್ಟಲೆ ಕೊಡಿಸಿದರು (ರೂಢಿ). [ ? ]

**ತಟ್ಟಲೆ** 'ತಟ್ಟಲಿ' ನೋ.

**ತಟ್ಟಾಡು** (ಕ್ರಿ). ೧. ಒಂದಕ್ಕೊಂದು ತಗಲು ; ಘರ್ಷಣೆಯಾಗು : ಜೋಗಿ ಜೋಗಿ ತಟ್ಟಾಡಿದರೆ ಮೈಯೆಲ್ಲಾ ಬೂದಿ (ಗಾದೆ). ೨. ಅತ್ತಿತ್ತ ಓಲಾಡು ; ತೂರಾಡು ; ತೂಗಾಡು : ಶಕ್ತಿಯು ಬತ್ತಿ ಕರಗಳು ಜಾರಿ ತಟ್ಟಾಡುತ್ತ ಪಿಂಗಡೆಗೊಲೆದು ನಿಂದನು (ಜಿನಭಾ. ೨೦-೧೨) ; ನೀತಿಯ ಮೆಟ್ಟಿಲ ಮೇಲೆಯೇ ನಿಲ್ಲಲಾರದೆ ತಟ್ಟಾಡುವವನು ನಿಯಮಗಳನ್ನು ಹೇಗೆ ಹಿಡಿದಾನು (ನೀಗಟ್ಟು. ೭). 'ತಾಟಾಡು' ಪರಾ.

[ ತಟ್ಟು$_1$ + ಆಡು$_1$. / ತೆಲು. ತಟ್ಟಾಡು ]

**ತಟ್ಟಾಮಾಲೆ** (ನಾ). ಅಪ್ಪಾಲೆ ತಿಪ್ಪಾಲೆ; ಕಳ್ಳೆಮಳ್ಳೆ (ಉಕ).

[ ←ತಮಿ. ತಟ್ಟಾಮಾಲೈ ]

**ತಟ್ಟಾರ** (ನಾ). ಅಕ್ಕಸಾಲಿಗ: ಜೋಮತ್ತಟ್ಟಾರ ನಾಮಧೇಯೇನ ಲಿಖಿತಂ ತಾಮ್ರಸಾಧನಂ (ಮೈಆರಿ. ೧೯೪೫, ೩೦-೫೨ ; ಸು. 610).

[ <ಸಂ. ತ್ವಷ್ಟೃ ]

**ತಟ್ಟಾಟಿಸು** (ಕ್ರಿ). ಸಂಪೂರ್ಣವಾಗಿ ಒಣಗಿಸು ; ನಿರ್ದ್ರವಗೊಳಿಸು ; ಬಳಲಿಸು : ತುಟಗಂಟಲಿರ್ಪೊಡಿ ನೆಟಿ ಪೊತ್ತಿ ಕರವು ನೀರಡಿಕೆ ಮಿಗೆ ತಟ್ಟಾಟಿಸುತ್ತ ಬರೆ ಮರಗಟ್ಟಿನಂತೆ ಪಸಿವೊಳಗೊಳಗೆ ಸುಡುತ್ತ ಬರೆ (ಸಾನಂದ. ೪-೧೭೧). [ ತಟ್ಟಾಟು + –ಇಸು$_{3}$ ]

**ತಟ್ಟಾಟು** (ಕ್ರಿ). ೧. ಒಣಗಿ ತಾರಲಾಗು ; ಸಂಪೂರ್ಣವಾಗಿ ನೀರು ಇಂಗಿಹೋಗು : ನಿರ್ದ್ರವಮಪ್ಪುದೇ ಕಾರಣಮಾಗಿ ಕಡುವಿಸಿಲಿಂಗೆ ತಟ್ಟಾಟಿದ ಚರ್ಮದಿಂ ಪೃಷ್ಠದ್ವಾರಂ ಮುಚ್ಚಲ್ (ಬಂಧತಂ. ೦೯-೯) : ಮರ ತಟ್ಟಾಟಬೇಡೆಂದು ಇರಿಸಿ ಬಂದೆ (ಸರ್ವಜ. ೧೦೫-೫೬೬). ೨. (ಆಲಂ) ಇಲ್ಲವಾಗು; ಅದೃಶ್ಯವಾಗು: ಮಯ್ಯುಗ್ಗಷ್ಟ ಏಟಿತು ಬೇಟ ಬೇರೂಟಿತು ಲಜ್ಜೆ ತಟ್ಟಾಟಿತವಳಿಗೆರ್ದೆಯೊಳಗೆ (ಕುರಾಸಾಂ. ೨೨-೯). 'ತಾಟು$_{1}$' ಪರಾ. [ ತಟ್ಟು$_{0}$ + ಆಟು$_{1}$ ]

**ತಟ್ಟಿ$_{1}$, ಚಟ್ಟಿ$_{3}$, ಚಟ್ಟೆ$_{3}$** (ನಾ). ೧. ಬಿದಿರಿನ ತಡಿಕೆ ; ಬಿದಿರನ್ನು ಹೆಣೆದು ಮಾಡಿದ ಗೋಡೆ : ರಾಜಿಪುವು ಬಳ್ಳಿಗವುಂಗಿನ ತಟ್ಟಿ ಬಳ್ಳಿಮಾವಿನ ಮನೆ ಬಳ್ಳಿಮಲ್ಲಿಗೆಯ ಮಂಡಪಮೆಂಬಿನಿತುಂ ಬಸಂತದೊಳ್ (ಶಾಂತಿಪು. ೭-೦೩೦): ವರವೇಲಿ ತಟ್ಟಿ ತಳೆ ಗೋಪುರವಾಳ್ವೆಟಿ ಪಡಿ ತವಂಗ ವಂಕದ ಕಳನೋವರಿ ಸೀಯಬಾರವಂತಃಪುರಮುಯ್ಯಲ್ ಕೃತಕ ಶಿಖರಿಯುದ್ಯಾನವನಂ (ಪುಷ್ಪಪು. ೭-೨೩) ; ನಮ್ಮನೆಯ ಮುಂಭಾಗಕ್ಕೆ ಕಾಂಪೋಂಡು ಹಾಕಿಸಬೇಕೆಂತ ತಟ್ಟಿಗಳನ್ನು ಕೊಂಡಿಟ್ಟಿದ್ದೆ (ಮುಳ್ಳಿಹಾ. ೧೭) : ಗಳಗಳು ನಿಂತವು; ತಟ್ಟಿಯೂ ತಯಾರಾಯಿತು; ಕೆಮ್ಮಣ್ಣು ಸೆಗಣಿಗಳನ್ನು ಕಲೆಯಿಸಿ ದಂಟಿನ ತಟ್ಟಿಗಳಿಗೆ . . . ತುಂಬ ಮೆತ್ತಿಸಿ ಭದ್ರಮಾಡಿಸಿದರು (ಗಂಗಾಸಾ. ೦೫೨). ೨. ಬಿದಿರಿನ ಚೌಕಟ್ಟು ; ಚಪ್ಪರ : ಮಿಂಚಿನ ತಟ್ಟಿಯಂ ಬಳಸಿದಂತಿರೆ ಕಣ್ಗಳ ಮಿಂಚು ಮೇಗೆ ಪೂಗೊಂಚಲ ಪಂದರಂ ಪಡೆಯೆ (ಅರ್ಧನೇ. ೨-೯೫); ನಡು ಜಿಗುಪ್ಸಾರಸದ ನಟ್ಟನಡುವೆಂದಿರದೆ ಎಡಬಲದ ಪ[ಪಾಠಾಂ.ಬ]ರಿಗಳೆಲ್ವಿನ ತಟ್ಟಿಯಂ[ಪಾಠಾಂ. ಕಟ್ಟಡೆ]ದಿರದ (ಬಂಡೋರ. ಹ. ೫೦೩-೧೦). ೩. ಚಾಪೆ ; ಬಿದಿರಿನ ಚಾಪೆ : ಗುಣಸಾತೀತ ವಿಮುಕ್ತ ಮಾರ್ಗಣಗಣಂ ಗೀರ್ವಾಣಮಾರ್ಗಾಂತದೊಳ್ ಪೆಣೆದರ್ ತಟ್ಟಿಯನೆಂಬಿನಂ ದಲೆನೆ ಪರ್ವಿರ್ಪನ್ನಮೆಚ್ಚೆಚ್ಚು . . . ಕಾದುತ್ತಿರಲ್ಕೆ (ನೇಮಿಪು. ೦೨-೨೩೮) : ಮುಟಿದ ಗುಡಿಲೊಳಗೆ ಹಟಿದ ತಟ್ಟಿಯ ಮೇಲೆ ಹಟಿದ ಬೊಂತೆಯ ಹಾಸಿಕೊಂಡು ಕೆಡೆದಿಹಂಗೆ (ಸರ್ವಜ. ೦೬೩-೭೭೬); ಹಿರಿಯ ಗಗನವ ಪಿಡಿದು ತೆರೆ ತಟ್ಟಿಯಂತೆ ಸುತ್ತಿರಿಸಲಳವಡೆ ಮುಕ್ತಿ ನರರ್ಗಪ್ಪುದು (ಸಾನಂದ. ೨-೨೦೫) ; ಎನಗೊಂದು ಪಟಿದ ತಟ್ಟಿಯುಂ ಮಠದ ಗೊಂಟನೊಳ್ ಪಾಸಿ ಕೊಟ್ಟೊಡೆ (ದಳಳು. ೦೦-೩೩ವ) : ಒದೆದು ಸತ್ವದೊಳೌಂಕಿ ತಟ್ಟಿಯ ಮುದುಡುವಂದದಿ ಸುತ್ತಿ ಧರಣಿಯ (ಪ್ರಹ್ಲಾ.ಚ. ೩-೧೦). ೪. ತಡಿಕೆಯ ಬಾಗಿಲು,–ಕದ : ಸದನ ತಾನಿರಲಡವಿ ಯಾತಕೆ ಕದವಿರಲು ತಟ್ಟಿಗಳ ದ್ಯಾತಕೆ (ಳನಶಾಂ. ೨೩) ; ತಟ್ಟಿ ಮುಚ್ಚು (ರೂಢಿ). ೫. ಬಿದಿರಿನಿಂದ ಮಾಡಿದ ಬುಟ್ಟಿ ; ಮಂಕರಿ. ೬. ಜೇನುಗೂಡು : ನಾಲ್ಕೆಂಟು ತಟ್ಟಿಗಳು, ಆನೆಯ ಕಿವಿಗಳಂತೆ ಬಂಡೆಯ ಸೆರಗಿಗೆ ಅಲಂಕಾರವಾಗಿ ತೂಗಿಕೊಂಡಿದ್ದುವು (ಕುಡಿಳೂ. ೨೯). ೭. ಗುರಾಣಿ; ಢಾಲು : ಕರಮೆಸೆದತ್ತು ಕಲಾಭೃದ್ಬಿಂಬಂ ಬರಿಮುಗುಳ್ಗಣೆಯುನ ಬಂಗದ ಬಿಜ್ಜಣದರಲಂಬನ ಮೂಲದ ತಟ್ಟಿಯು ಕಾವನ ಕೈಗನ್ನಡಿಯು . . . ವಿಲಾಸಮನನುಕರಿಸಿ (ಜಯುಕಾ. ೦೪-೭). **ಚಟ್ಟಿ$_{3}$** : ೮. ಯಾತ್ರಿಕರಿಗಾಗಿ ನಿರ್ಮಿಸಿದ ಹುಲ್ಲಿನ ಚಪ್ಪರ : ಒಂದು ರಾತ್ರಿ ಆತ ಒಂಟಿಯಾಗಿ ಚಟ್ಟಿಯೊಂದರಲ್ಲಿ ಮಲಗಿದ್ದ (ಸನ್ಯಾಸಿ. ೪೪). **ಚಟ್ಟೆ$_{3}$** : ೫. ಚಟ್ಟಿಯಾದರೂ ಬುಟ್ಟಿಯಷ್ಟು ದೊಡ್ಡದಿದೆಯಲ್ಲ (ರೂಢಿ).

ತಟ್ಟಿಯ ಬಿಲ್ಲು = ಒಂದು ವಿಧವಾದ ಬಿಲ್ಲು : ಅಲ್ಲಿಯಾತನ ಕೂಡೆ ತಟ್ಟಿಯ ಬಿಲ್ಲುಗಳನಾ ಪೊಂಗುವಿಲುಗಳ ಬಲ್ಲಿತೆನಿಪಾ ನಾಳಿವಿಲ್ಲುಗಳ . . . ಪಿಡಿದಾ ನಿಶಾಟರು ನೆರೆದುದವನೊಡನೆ (ಸಾಳ್ವಭಾ. ೫-೧೩). **ತಟ್ಟಿ ಹಾರಿಸು** = ಲಘುವಾಗಿ ಎಣಿಸು : ಸಲಹೆ ಕೊಟ್ಟ ಹಿತೈಷಿಗಳ ಮಾತನ್ನು ಅವನು ಮುಗುಳುನಕ್ಕು ತಟ್ಟಿ ಹಾರಿಸಿದ್ದನು (ಮಲಮ. ೧೧೦).

[ ದೇ.॥ ತಮಿ. ತಟ್ಟಿ, ತಟ್ಟಿಯ; ಮಲ. ತುಳು. ತಟ್ಟಿ; ಕುಇ. ತಟಿ. /ಪ್ರಾ. ತಟ್ಟೀ. / ಹಿಂ. ಮರಾ. ಚಟ್ಟೀ ]

**ತಟ್ಟಿ$_{2}$** (ನಾ). ಒಂದು ಬಗೆಯ ಸಸ್ಯ (?) : " ಕಾಷ್ಠವಲ್ಲಿಕಾ – ತಟ್ಟಿ " (ಒಷಧಿ. ೩೨). [ ? ]

**ತಟ್ಟಿಕೆ** (ನಾ). ತಾಗುವಿಕೆ ; ಸೋಂಕುವಿಕೆ ; ಸ್ಪರ್ಶ : ಪುಟ್ಟುಗೆ ಸದ್ವಂಶದ ಸವಿದಟ್ಟಿಕೆ ಸಲೆ ಸರಸಮೆನಿಸೆ . . . ಊದುವಿರಿನ್ನುಂ (ಜಕವಿ. ೬-೦೨೮). [ ತಟ್ಟು$_{1}$ + – ಇಕೆ ]

**ತಟ್ಟಿಗಟ್ಟು** (ಕ್ರಿ). ತಡಿಕೆ ಕಟ್ಟು (?) : ನೆರೆದು ಪೊತ್ತ ನೃಪಾಳಜಾಳ ಕಿರೀಟಕೋಟಿ ಮಣಿಪ್ರಭಾ ಪರಿಕರಂ ಧೃತಮೌಕ್ತಿಕಾತಪವಾರಣಕ್ಕೆ ಕದಂಬ ರಝಲ್ಲರಿಗಳಪ್ಪಿನಮುಂದುಸಾರದದಂತೆ ತಾಳ್ದಿದುದಿತ್ತಲುಂ ಸುರಶರಾಸನ ದಿಂದಮೆಣ್ದೆಸೆ ತಟ್ಟಿಗಟ್ಟಿದ ಭಂಗಿಯಂ (ಅನಂಪು. ೯-೭೨) : ಶರದೊಳೆ ತಟ್ಟಿಗಟ್ಟಿದುದು ದಿಕ್ತಟವಂಬಿನ ಹಂದರಿಕ್ಕಿದಂಬರತಳವೆಂಬಿನಂ (ಅನಂಪು. ೧೪-೬). [ ತಟ್ಟಿ$_{1}$ + ಕಟ್ಟು$_{1}$ ]

**ತಟ್ಟಿಗೆ** (ನಾ). ತಡಿಕೆ (?) : ಚೌರಾಸಿ ಲಕ್ಷ ಜೀವಿಗಳೆಲ್ಲ ತಿರುಗುವ ರಾಟಲಗಂಟೆಂಬ ಕರರಾಟಳವ ಮಾಡಿ ಭಕ್ತೆಂಬ ಕದರಿಗೆ ಸರಮುಕ್ತಿ ಬಿಲ್ಲ ಪೂಡಿದನು ಅಷ್ಟತನುಗಳ ಸೆಡೆಯ ತಟ್ಟಿಗೆಯ ಮಾಡಿ ಅಷ್ಟಂತರಂಗವ್ಪ ಮದವಾ ಜೇಷ್ಠ ಕುಂಟಿಯ ಮೊಳಗೆಗಳ ಮಾಡಿ ದಾರವ ಘಟ್ಟಿಸ್ತ ಕಟ್ಟಿಗೆಸಿದದ (ದೇವಾಂಪು. ೫-೭೮). [ ? ]

**ತಟ್ಟಿಗೋಡೆ** (ನಾ). ಬಿದಿರು ಮೊದಲಾದುವನ್ನು ಹೆಣೆದು ಮಾಡಿದ ಗೋಡೆ; ತಡಿಕೆಗೋಡೆ: ಅಡಕೆದಬ್ಬೆಯ ತಟ್ಟಿಗೋಡೆಗಳನ್ನು ಹಾಕಿದ್ದರು (ಮಲಮ. ೮೧) ; ತಿಮ್ಮಪ್ಪಹೆಗ್ಗಡೆ ತಟ್ಟಿಗೋಡೆಯ ಒಳಗೆ ಹೋಗಿ (ಮಲಮ. ೭೦೪). [ ತಟ್ಟಿ$_{1}$ + ಗೋಡೆ ]

**ತಟ್ಟಿಡು** (ಕ್ರಿ). "ಪರಿತ್ಯಾಗಮಾಡು" (ಸಾನಂದ. ಕೋಶ) : ಓಡಾಂತು ಕಯ್ಯಲ್ಲಿ ಮೋಟಿಾಂತು ತಲೆಯಲ್ಲಿ ಮಾನಮಂ ತಟ್ಟಟ್ಟು ಕೀರ್ದ ತಟ್ಟುಟ್ಟಂಗೆ (ಸಾನಂದ. ೭-೪೮).

[ ತಟ್ಟು$_{0}$ + ಇಡು$_{1}$ ]

**ತಟ್ಟಿಬಲೆ** 'ತಟ್ಟಿವಲೆ' ನೋ.

**ತಟ್ಟಿಮೆಡಱು** (ಕ್ರಿ). ತಟ್ಟಿಯನ್ನು ಹೆಣೆ; ತಡಿಕೆ ಕಟ್ಟು: "ತಟ್ಟಿಮೆಡಱಿದು –ತಟ್ಟಿವೆಣೆದಂ " (ಶಮದ. ಪರಿ. ೨) : ಮಿಂಚಂ ತ[ಪಾಠಾ. ಕ]ಟ್ಟಿ ಮೆಡಱಿದಂತೆ ಸುತ್ತಿಱಿದ ಕಾಲ್ಗಾಪಿನ ಕಡಿತಲೆಯ ಬಳಸಿದಗಣ್ಯ ಪಣ್ಯಾಂಗನಾಜನದ ನಡುವೆ ಮಣಿಮಯ ಪೀಠಂಗಳನೇಱಿ (ಪಂಪಭಾ. ೩-೫೫ ವ) : ನೂಱುಯೋಜನದಳವಿಯ ಖಾಂಡವವನಮೆಲ್ಲಮಂ ತಟ್ಟಿಮೆಡಱಿ ಮಶಕಮಾತ್ರಮಪ್ಪೊಡಂ ಮಿಸುಕಲ್ ಛಿದ್ರಮಿಲ್ಲದಂತಾಗೆ ಶರಪಂಜರದೊಳ್ ಮುಚ್ಚಿ ಮುಸುಕಿದಾಗಳ್ (ಪಂಪಭಾ. ೫-೯೬ ವ).

[ ತಟ್ಟಿ$_{1}$ + ಮೆಡಱು ]

**ತಟ್ಟಿಯು, ತಟ್ಟೆಯು** (ನಾ). ತಡ ; ಸಾವಕಾಶ ; ನಿಧಾನ : ತಡೆಯದೀ ಕಾರ್ಯವನು ನೀ ಕೈಯೊಡನೆ ಮಾಡುವುದುಚಿತವಿದನೀನೊಡಬಡದೆ ತಟ್ಟಿಯುವ ಮಾಡಲುಯೆಮ್ಮ ಮಂಶಾಳಿ ಕೆಡುವುದು (ಜೀವಂಧ. ೪-೬೯) ; ಗಾಳಿಯಳ್ಳಿಯನಿಟಿಯಲಗ್ನಿಜ್ವಾಲೆಯಲಿ ತಟ್ಟಿಯವೆ (ಕುಮಾ.ಸ. ೧೪-೬೧). **ತಟ್ಟೆಯು** : ಹೋಗು ಫಲುಗುಣ ಕಂಸಮಥನನ ಬೇಗ ಬಿಜಯಂಗೈಸಿ ತಾ . . . ತಟ್ಟೆಯುವಾಗದೀಕ್ಷಣವೆನಲು (ಕುಮಾ.ಸ. ೬-೧೮) : ಗಮನ ತಟ್ಟೆಯುವಾಯ್ತು ವೇಗಭ್ರಮಣ ಜಡವಾಯ್ತು (ಕುಮಾ.ದ್ರೋ. ೧೦-೨೫). [ ?. / ತಮಿ. ತಟ್ಟಿಯ = ಗುರಾಣಿ, ಢಾಲು ]

**ತಟ್ಟೆರಾಯ** (ನಾ). (ಕರಾ) ಬಿದಿರು, ಹುಲ್ಲು ಮೊದಲಾದುವುಗಳಿಂದ ಮಾಡಿದ ಬೆದರುಬೊಂಬೆ; ಬೆಚ್ಚು : ಅವುಗಳನ್ನು ಹೆದರಿಸಲು ಬೈಹುಲ್ಲಿನ ತಟ್ಟೇರಾಯನನ್ನು ತಯಾರಿಸಿದರು. ಮನುಷ್ಯಾಕೃತಿಯ ಈ ತಟ್ಟೇರಾಯ ನಿಗೆ ಹರಕು ಅಂಗಿ ತೊಡಿಸಿ . . . ಮಡಕೆಯ ಕುಲಾವಿಯನ್ನಿಟ್ಟರು ತಲೆಗ (ವಾಳಗ. ೧೦೬). [ ತಟ್ಟೆ$_1$ + ರಾಯ ]

**ತಟ್ಟೆವಲೆ, ತಟ್ಟೆಬಲೆ** (ನಾ). ಒಂದು ಬಗೆಯ ಬಲೆ : ತಡಿಕೆವಲೆ ತಟ್ಟೆವಲೆ ಹಾಸುವಲೆ ಬೀಸುವಲೆ ಕೊಡತಿವಲೆ ಕೋಲುವಲೆ (ಹಚಕಾ. ೫-೮) : ಕಟ್ಟಿದನು ಕಣೆಗಳಲಿ ಸುತ್ತಲು ತಟ್ಟೆವಲೆಗಳ ಸೋಹಿನಲಿ (ಕುಮ್ಯಾದ್ರೋ. ೫-೬೪) : ಹಾಸುವಲೆ ಬೀಸುವಲೆಯು ತಟ್ಟೆವಲೆ ತಿಣ್ಣವಲೆ . . . ಪೇರ್ವಲೆಯ ಪೊಱೆಗಳು ವಿಂಧ್ಯಕನ ಕೂಡೆ (ಸಾಳ್ವಭಾ. ೫-೧೮) : ತಡಿಕೆವಲೆ ತಟ್ಟೆವಲೆ ಸಾಲುವಲೆ ಕೋಲುವಲೆ . . . ಮಲೆವಲೆಗಳಿರ್ದುವಾ ಶಬರರಲ್ಲಿ (ಸಿದ್ಧೇಪು. ೮-೬). **ತಟ್ಟೆಬಲೆ** : ಪಾರವಲೆ ಗುಂಡಿವಲೆ ಮತ್ಸ್ಯಾನೆಯ ಬಲೆ ತಟ್ಟೆಬಲೆಗಳೆಂಬಿವನು (ಪುಣ್ಯಾಸ್ರ. ೯-೩೬). [ ತಟ್ಟೆ$_1$ + ಬಲೆ$_1$ ]

**ತಟ್ಟೆವೆಣೆ** (ಕ್ರಿ).=ತಟ್ಟೆಮೆಡಱು : " ತಟ್ಟೆಮೆಡಱಿದಂ – ತಟ್ಟೆವೆಣೆದಂ " (ಶಮದ. ಪರಿ. ೨). [ ತಟ್ಟೆ$_1$ + ವೆಣೆ$_1$ ]

**ತಟ್ಟಿಸು, ತಟಿಸು$_1$** (ಕ್ರಿ). ೧. ತಗುಲಿಸು ; ತಾಕಿಸು ; ಸೋಕಿಸು ; ಅನುಭವಕ್ಕೆ ತರು : ಕಟ್ಟಿದಾಗಳೆ ಕರ್ಮಗಳು ಫಲಗೊಡವವು ಕಟ್ಟಿರ್ದು ಕಾಲದ ಮೇಲೆ ಬಿಟ್ಟು ಪೋಪಾಗ ಜೀವಗೆ ಸುಖದುಃಖವ ತಟ್ಟಿಸಿ ತಾವು ಜಾಱುವುವು (ಭರಜ. ೬೮-೫೫). **ತಟಿಸು$_1$** : ೧. ತೋಟದಲಿಹ ಹೂವಿಗೆಲ್ಲ ತಟಿಸೆ ನಾವು ನಿನ್ನ ಗಲ್ಲ . . . ನಕ್ಕ ನೀನು (ಚಂಕನ. ೨೪-೧೦). ೨. ಅಡ್ಡಿಪಡಿಸು; ತಡೆದು ನಿಲ್ಲಿಸು ; ತಡೆಹಿಡಿ : ಅಲ್ಲಿಯ ಸರ್ಪ ಫೂತ್ಕಾರ ಗಳಿಂದೆದ್ದ ವಿಷಧೂಮವು ಜಗತ್ತಿನ ಮೂಗನ್ನೇ ಮುಸುಕುತ್ತಿದೆ. ಯಾವ ಶಿವನು ಇದನ್ನು ತಟಿಸುವನೊ ಯಾರು ಬಲ್ಲರು (ಸಾಹಿಸಂ. ೨೦೧).

**ತಟ್ಟಿಸಿ ಮಾತಾಡು**=೧. ತಡವರಿಸಿ ಮಾತನ್ನಾಡು. ೨. (ಮಾತನಾಡು ವಾಗ; ಓದುವಾಗ) ತಡವರಿಸು ; ಉಗ್ಗು ; ಗುಕ್ಕು (ಉಕ): " ಉಗ್ಗು–ತಟ್ಟಿಸಿ ಮಾತಾಡು " (ಗಂಗಾಮು. ೩೮).

[ ತಟ್ಟು$_1$ + – ಇಸು$_3$ ]

**ತಟ್ಟೆಹುಚ್ಚ** (ನಾ). ವಿವೇಚನೆ ಇಲ್ಲದವನು ; ಮೂರ್ಖ : ಅವನೇನು ತಟ್ಟೆಹುಚ್ಚನಲ್ಲ (ಅಪಾಭೂ. ೫೯).

[ ತಟ್ಟೆ$_0$ (P ← ತಮಿ. ತಟ್ಟೆ$_1$) + ಹುಚ್ಚ (< ಪಿಚ್ಚ$_1$) ]

**ತಟ್ಟೆಱಿ** (ಕ್ರಿ). ಅಪ್ಪಳಿಸಿ ಹೊಡೆ : ಅಂತರಡುಂ ಬಲದ ಕರಿಘಟೆಗಳೊಂ ದೊಂದಱೊಳ್ ತಾಗಿ ತಟ್ಟೆಱಿಯೆ ಬಸುನೆತ್ತ [ರ] ಬೆಗಳುರ್ವಿ ಪಾಯೆ (ಪಂಪಭಾ. ೧೦-೯೬ಅ). [ ತಟ್ಟು$_1$ + ಇಱಿ$_1$ ]

**ತಟ್ಟು$_1$** (ಕ್ರಿ). ೧. ಬಡಿ ; ಕುಟ್ಟು ; ಹೊಡೆ ; ಬಾರಿಸು ; ಅಪ್ಪಳಿಸು : "ತಟ್ಟು–ತಾಡನೇ" (ಶಮಧಾ): ಮೆಯ್ಯಂ ವನಜವದನೆ ಕೇಳ್ ಗ್ರೀಷ್ಮದೊಳ್ ನಿಚ್ಚಮೆತ್ತಂ ಸಕಿ ತಟ್ಟುತಿರ್ಪ[ ರ್ಪ ] [ಪಾಠಾಂ. ತಟ್ಟಾಂತಿರ್ಪ] ಕಾಯ್ಪಿಂದು ರಿವ ಬಿಸಿಲೊಳ್ (ಕಾವ್ಯಾವ. ೮೦೮); ಪೊಯ್ವ ರಣತೂರ್ಯರವಂ ತಱಿಸಂದು ತಾಗಿ ತಟ್ಟುತ್ತಿಱಿದವು (ಮಜಾನೇ. ೧೨-೨೨೦) : ಮೆಟ್ಟುವ ತಟ್ಟುವ ಮೇಲೆವಾಯ್ವ . . . ದುಷ್ಪಮಪ್ಪ ಹಯಮಂ (ಧರ್ಮಾಪ. ೮-೧೩) : ಕೈವಾರಿಸಿ ಕೊಡೆದಟ್ಟಲೊಡನೆ (ಮೋಹತ. ೦೮-೧೦೦). ೨. ಮುಟ್ಟು ; ತಾಗು ; ಸೋಕು : ತನ್ನ ಮೃಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೊಲ್ ಸೋಲ್ತು (ಪಂಪಭಾ. ೧-೭೦) : ಪೊಡರ್ದುದ್ಯದ್ದ್ಯೋತಿ ತಟ್ಟುತ್ತಡಿದರೆರ್ಗಳ ವಿನ್ನೂಡಿದಂತಪ್ಪುವೀಗಳ್ (ಕಾವ್ಯಾವ. ೦೩೭) : ಕನಕದಾಸನ ಕಾವ್ಯದೊಳ್ ದೋಷ ತಟ್ಟದು (ಮೋಹತ. ೧-೨೪) ; ಕಲಿದೋಷಂ ತಟ್ಟದವೋಲ್ ಕುಲಜರನುದ್ಧರಿಸೆ (ಅಪ್ರತಿ. ೫೨-೨) : ಲೋಕದ ಚೆಲುವಿನ ವಸ್ತುಗಳು ಕವಿಯ ಮನವನ್ನು ಮುಟ್ಟುವ ಮತ್ತು ತಟ್ಟುವ ಪರಿಗಳನ್ನು ಹೀಗೆ ಗುರುತಿಸುತ್ತಾನೆ (ಸೌಂದಸ. ೨೪). 'ಮನದಟ್ಟು' ಪರಾ. ೩. ಬೆನ್ನು ಚಪ್ಪರಿಸು ; ಉತ್ಸಾಹಗೊಳಿಸು ; ಉಬ್ಬಿಸು : ಈಗಳೆ ನಿಪಸ್ಮಾಳ್ವನಂ ತಟ್ಟಿ ರಣಕಟ್ಟಿಂ (ರಾಮಾಶ್ವ. ೦೦೦-೦೪). ೪. ರೊಟ್ಟಿ, ವಡೆ, ಒಬ್ಬಟ್ಟು ಮುಂತಾದ ಭಕ್ಷ್ಯಗಳನ್ನು ಕೈಯಿಂದ ಬಡಿದು ಮಾಡು : ಮೃದುಪಾಕ ಮಾಡಿ . . . ಪೆಱದುಪ್ಪದಿಂದವೆ ಬೆರಸಿ ವಡೆಯಂತೆ ತಟ್ಟಿಕೊಂಡು (ಸೂಪಶಾ. ೧-೬೮) : ನಾಳೇನೇ ಒಬ್ಬಟ್ಟು ತಟ್ಟಿಟ್ಟುಕೊಂಡರೆ ನಾಷಿದ್ದು ಗೌರೀ ಬಾಗಿನ ಕೊಡೋದಕ್ಕೆ ಅನುಕೂಲವಾಗುತ್ತೆ (ಮಾಂಗಲ್ಯ. ೬೬) : ರೊಟ್ಟಿ ತಟ್ಟು (ರೂಢಿ). ೫. ಲೇಪಿಸು ; ಬಳಿ ; ಸವರು: 'ತಟ್ಟುಕ' ಪರಾ. ೬. ಅಟ್ಟು ; ಓಡಿಸು : (ಕ). ೭. ಮೆಲ್ಲನೆ ಬಡಿ : ಮಗುವನ್ನು ತಟ್ಟಿ ಮಲಗಿಸಿದಳು (ರೂಢಿ). ೮. ಅನ್ವಯಿಸು ; ಹೊಂದು : ಶಾಕುಂತಲ ನಾಟಕಕ್ಕಾದರೆ ಈ ಮಾತು ತಟ್ಟುವುದಿಲ್ಲ (ಕಾವ್ಯಸ. ೩೫). ೯. ಹಿಡಿಸು : ಇಷ್ಟವಾಗು : ಜನವಚನಮೆಂತುಟಂತುಟುಮನನುನಯದಿಂ ಪೇಱದಂತೆ ತನ್ನಿಚ್ಚೆಗೆ ಕೆಮ್ಮನೆ ತ[ಪಾಠಾಂ. ಕ]ಟ್ಟೆ ಗಟ್ಟಿ ಪೆಱರಂ ತನಗೆ ವಶಂ ಮಾಳ್ಪ ನೆಯ್ದುಗುಂ ದುರ್ಗತಿಯಂ (ಧರ್ಮಾಮೃ. ೫-೧೦೦೧). ೧೦. ಉಂಟುಮಾಡು; ತಗುಲಿಸು : ಕೊಟ್ಟು ಕುಡುಕುದಂಬುಲಮಂ ಸವಿಯಂ ತಟ್ಟುವ ತನಿಗಲೆಯುಪಚರದಿಂ ಮನಮುಟ್ಟೆ ಕರಂ ಕೂಡಿದರ್ (ಜಯುಕಾ. ೨-೫೩). ೧೧. ಬಯಸು ; ಇಚ್ಛಿಸು (?) : ಖ್ಯಾತಿ ಲಾಭ ಪೂಜೆಯಂ ತಟ್ಟದೆ ಇಹಪರಂಗಳಂ ಸಾರದೆ ಭವಬಂಧಕ್ಕೆ ಬಾರದೆ ಗೆಲ್ಲ ಸೋಲಕ್ಕೆ ಹಾರದೆ (ಆದವ. ೩೦-೮೭) . ೧೨. (?) : ತನ್ನನೆ ತಾನೊಲವಿಂದೆ ಜಾನಿಸುತ್ತಗಲದೆ ನಿಂದನೊರ್ವ ಸವಣಂ ಬಗೆಗೊಳ್ವೆಱೆ ತಟ್ಟತೆಂಬಿನಂ (ಅಭ್ಯಕಾ. ೨೨೭).

**ತಟ್ಟಿ ನೋಡು** = ಪರೀಕ್ಷಿಸು : ಶಿವಮಂತ್ರ ಶಿವಲಿಂಗ ಭಸಿತ ರುದ್ರಾ ಕ್ಷಿಯೆಂಬಿವು ನೆಲಸಿ ನಿಂದೆಡೆಯೊಳವು ನಿಲ್ಲವೆಂಬುದಿದು ಶಿವವಾಕ್ಯವಿನ್ನೆನ್ನ ಮನವನಿನ್ನೇಂ ತಟ್ಟಿ[ಪಾಠಾಂ. ಘಟ್ಟಿಸಿ]ನೋಡುವೆ ಯತೀಶಯೆನಲು (ಸೋಮದ. ೩-೪೪).

[ ದೇ.೫ ತಮಿ. ಮಲ. ತಟ್ಟು ; ಕೊಡ. ತಟ್; ತುಳು. ತೆಲು. ತಟ್ಟು ]

**ತಟ್ಟು$_2$** (ನಾ). ೧. ಅಪ್ಪಳಿಕೆ ; ಅಂಗೈ ಹೊಡೆತ. ೨. ಒಂದು ಬಗೆಯ ರೋಗ ; ಗೋಣೆತಟ್ಟು ; ದಡಾರ. ೩. ಸ್ಪರ್ಶ ; ಸೋಕುವುದು; 'ತಾಗುದಟ್ಟು', 'ಮುಟ್ಟುದಟ್ಟು' ಪರಾ. ೪. ಇಚ್ಛೆ ; ಬಯಕೆ : ಸ್ತ್ರೀ ಸಂನ್ಯಾಸಿಯಾದಡೇನಯ್ಯಾ ಜಾಗ್ರತ್ ಸ್ವಪ್ನ ಸುಷುಪ್ತಿಯಲ್ಲಿ ತಟ್ಟೆ [ಪಾಠಾಂ. ಷ್ಟ]ಲ್ಲದಿರಬೇಕು (ಮಹಾದೇ.ಬ. ೧೦೫-೫೩೭). ೫. ಲೇಪಿಸುವುದು: ಲೇಪನ : ತಟ್ಟು ಚಟ್ಟು ಶಬ್ದೌ ಶ್ರೀಖಣ್ಡಕುಂಕುಮಾದಿ ಗಂಧದ್ರವ್ಯ ಕರ್ದಮಕೃತ ಸ್ಥಾಸಕವಚನೌ (ಶಬ್ದಾನು. ೪೪೧ ವ್ಯಾಖ್ಯ). ೬. [ನಾಟ್ಯ] ಭರತ ನಾಟ್ಯದ ಹತ್ತು ವಿಧವಾದ ಅಡವುಗಳಲ್ಲಿ ಒಂದು : ಪ್ರಸಿದ್ಧ ನಾಟ್ಯಾಚಾರ್ಯರು ಈ ಅಡವುಗಳನ್ನು ಹತ್ತು ವಿಧವಾಗಿ ವಿಂಗಡಿ ಸಿದ್ದಾರೆ (೧) ತಟ್ಟು. (೨) ಮೆಟ್ಟು. (೩) ನಾಟು . . . (೧೦) ನಡೈ (ಅಭಾನ್ಯ. ೩೨) . [ < ತಟ್ಟು$_1$ ]

**ತಟ್ಟು$_3$** 'ತಟ್ಟೆ' ನೋ.

**ತಟ್ಟು$_4$, ಥಟ್ಟು$_1$** (ನಾ). ಪಕ್ಕ ; ಕಡೆ : ಆಗ್ನೇಯ ಮೊದಲಾಗಿ ನೈಋತ್ಯ ಪರಿಯಂತರ ತೆಂಕಣ ತಟ್ಟು . . . ಪಡುವಣ ತಟ್ಟು (ಮ್ಯಾಆರಿ. ೦೯೪೬. ೦೮-೧೩; 1488); ಗೃಹಸ್ಥಾಶ್ರಮಮೇ ಒಂದು ತಟ್ಟುಂ ವಿಕ್ಕ್ಯದ ಮೂಱು ಮಾಶ್ರಮಂಗಳುಮೊಂದು ತಟ್ಟು (ಧಾರಚಾಂ. ೧೨-೫೮); ಬೀಳ್ವರು ಸಾವಿರದ ಸಂಖ್ಯಾತ ಬಲವು ಅತಿರಾವದಲಿ ಬಳಿಕೆರಡು ತಟ್ಟಿನ ಬಿಲ್ಲನತಿಬಲರು (ಕೋಗಯ. ೨೧-೬); ತಂಗಾಳಿ ಮೊದಲಾದ ವಿರಹೋದ್ದೀಪನಕಾರಿಗಳೆಲ್ಲವ ಒಂದು ತಟ್ಟು ಈ ಪಾಪಿಯಾದ ಚಂದ್ರನೆ ಒಂದು ತಟ್ಟು (ವಚಕಾ. ೩೩) **ಥಟ್ಟು$_1$**: ಕಟ್ಟಿವಕಟಕಟೆನುತ ನಾಲ್ವರೊಂದಾಗಿ ಬಾಯ್ಬಿಟ್ಟರ್ಗೆ ಘಟಘಟ ಧ್ವನಿಗಂಜಿ ಶಿವ ಯಾವ ಥಟ್ಟನೋಳ್ವೆಂತೆನುತ (ಶುರಂಗ. ೯೪-೪೦)

ತಟ್ಟಾಗು = ಪಕ್ಕಕ್ಕೆ ಸರಿ ; ಕೆಲಸಾರು : ಹಿಂದೆಗೆ : "ಕೆಲಸಾರು = ಬದಿಗಾಗು, ತಟ್ಟಾಗು, ಸರಿ" (ಗಂಗಾಮ. ೯೭) ; ತುರಗದ ತಟ್ಟು ತಟ್ಟಾದು ದಾತನ ಭಟರೊಳಸರಿದು (ಚಂಪ್ರಸಾಂ.೮-೮೭): ಆರ್ಭಟಿಸುತ್ತ ಬರ್ಪಾಯುಧಕೆ ತನ್ನಯು ಮೆಯ್ಯಗೊಡದೆ ತಟ್ಟಾಗಲು (ನವಮೋ. ೧೨-೮೩).

[ದೇ.॥ ತಮಿ. ತೆಲು. ತಟ್ಟು]

**ತಟ್ಟು$_5$** 'ಥಟ್ಟು$_2$' ನೋ.

**ತಟ್ಟು$_6$** (ನಾ). ಕುದುರೆಗಳಲ್ಲಿ ಒಂದು ಬಗೆ ; ಗಿಡ್ಡ ಕುದುರೆ : ಹೆಣ್ಣು ಕುದುರೆಗಳನ್ನು ಟಾರಣಗಳನ್ನು ತಟ್ಟುಗಳನ್ನು (ಗ್ರಾದೂಕ. ೧೦೪) ; ಅವರ ಕುದುರೆಗಳು ತಟ್ಟುಗಳಾಗಿದ್ದವು (ತೋಳಮು. ೭೬).

ತಟ್ಟಿನ ಚಂಬಳಿ = ತಟ್ಟುಕುದುರೆಗಳ ಮೇಲೆ ಹಾಕುವ ತೆರಿಗೆ (?) : ಅನುಪು ಕೊಡವೀಸ ಹಂದರ ಹಣ ಹರವಿಗೂಳು ಮೇಟುಕೊಳಗ ಕಬಿಲೆಯು ಪಾವಂತಿಗೆ ತಟ್ಟಿನ ಬೆಂಬಳಿಯು ಆರು ಹನ್ನೆರಡರ ದಂಡ (ಮ್ಯಆರಿ. ೧೯೩೪, ೨೭-೨೦ ; 1430). [←ಮರಾ. ತಟ್ಟೂ; ತಟೂ; ಹಿಂ. ತಟ್ಟೂ]

**ತಟ್ಟು$_7$, ತಾಟ್ಟು$_6$** (ನಾ). ೧. ಗೋಣಿಯ ಪಟ್ಟೆ : ಕುನ್ನಿ . . . ಕಾಲೂರಸುವ ತಟ್ಟಿನ ಮೇಲೆ ನಿಂತು ಬಾಲವನ್ನು ಅಲುಗಾಡಿಸಿತು (ಪ್ರೇಮತ. ೧೮) ; ಹರಿದ 'ತಟ್ಟು'ಗಳ ಮೇಲೆ ಒರಗಿಕೊಂಡು ಉರುಳಾಡು ತ್ತಿದ್ದ (ಜನಸಿ. ೮೫). ೨. ಜೈನ ಅಥವಾ ಬೌದ್ಧ ಸಂನ್ಯಾಸಿಗಳ ವಸ್ತ್ರ,- ಹೊದಿಕೆ : "ತಟ್ಟು ತಾಡನೇ, ಕ್ಷಪಣಕಾಚ್ಛಾದನೇ ಚ (ಜೈನ ಸಂನ್ಯಾಸಿಯ ಹೊದಿಕೆ)" (ಶಮದ) : "ಸವಣರ ಉಳ್ಪುಡೆ" (ಚತುನಿ. ೬. I, ೭೪) : ತಟ್ಟು ದೋಷಮೆಂಬೊಡೆ ತಟ್ಟೆಂಬುದು ಪಸೆ (ಧರ್ಮಾಮೃ. ೯-೮೯) : ತಟ್ಟು ಕುಂಚ ಕಮಂಡಲುಗಳಿಂ . . . ಬೌದ್ಧಕಾರಿಗಳು ಕೇಳಿರೊ (ಮನುಗುಂ. ೩೪೭-೪) : ಜಡೆಯೆಂಬುದು ಗೊರವಂಗೆ ತಟ್ಟೆಂಬುದು ಸವಣಂಗೆ (ಅನಂಪು. ೨-೨೮ ವ) ; ಋಷಿಯರ್ಗೆ ತಟ್ಟು ಕುಂಚ ಪುಸ್ತಕಂಗಳುಮಂ ಅಜ್ಜಿಯರ್ಗೆ ವಸ್ತ್ರಂಗಳುಮಂ ಕುಡುವುದು (ಪುಣ್ಯಾಸ್ರ. ೧-೧೦೭ ವ) ; ತಟ್ಟುಗಳ ಹೆಗರಣೆಗರೊ ಎನಲು ಮಲಧಾರಿಗಳು ಗಜಬಜಿಸಿ ನೆರೆವುತ್ತ (ಬಸಪು. ೫೧-೫೩). **ತಾಟ್ಟು$_6$** : ೧. ಚಾಪೆತಾಟುಗಳನ್ನು ಕಂಕುಳಲ್ಲಿರಿಸಿ . . . ಕೊನೆಯ ಬಾರಿ ಕಲಾವಿದರನ್ನು ಕಂಡು (ಬಣ್ಣಮಾ. ೩೨).

ತಟ್ಟು ಸೀಳು = ಚರ್ಮವನ್ನು ಸುಲಿ : ಕಟ್ಟಧಿಕ ಜನನನಾ ಪರಿಕರವ ನೆಯ್ದೆ ಹುಡಿಗುಟ್ಟುವನೆಯವನನಿನ್ನಾವುಪಾಯದಿ ಪಿಡಿದು ತಟ್ಟ[ಪಾಠಾಂ. ಕಟ್ಟ, ದಟ]ಸೀಳುವೆವೆಂದು ನೆರೆದ ಶ್ರವಣನಿಕಾಯ ಕೆರಳಿ ಕಿಡಿಕಿಡಿ ಯೋದುದು (ಸೋಮಚ. ೪-೮೭). [?. / ಮರಾ. ತಾಟ್]

**ತಟ್ಟುಂಗೆಡೆ** (ಕ್ರಿ). ಶಕ್ತಿಗುಂದಿ ಬೀಳು; ದುರ್ಬಲವಾಗಿ ಕುಸಿ: ಒಡೆದೆಡದ ಬರಿಯ ಪಲಗೆಯನುಡಿಯೆಲ್ಗಳ್ ನೆಳ್ಕು ನೆಳಲೆನಲ್ ಕರಿ ತಟ್ಟುಂಗೆಡೆಯೆ ಭಗದತ್ತನಿಟ್ಟಂ ಕಡುಪಿಂ ಪಿಡಿದಿರ್ದ ನಿಶಿತ ವಜ್ರಾಂಕುಶದಿಂ (ಮಹಾನೇ. ೧೨-೧೪೩). [ತಟ್ಟು$_3$ (<ತಟ್ಟೆ) + ಕೆಡೆ$_1$]

**ತಟ್ಟುಂತಾಱುಂ, ಥಟ್ಟುತಾಱು** (ಅ). ಛಿನ್ನಭಿನ್ನವಾಗಿ ; ಚಲ್ಲಾಪಿಲ್ಲಿ ಯಾಗಿ ; ಅಸ್ತವ್ಯಸ್ತವಾಗಿ : ನಾಲ್ಕುಂ ತೆಱದ ಶಸ್ತ್ರಾಸ್ತ್ರಮುಖಂಗಳೊಳ್ ತಟ್ಟುಂತಾಱುಂ ಬೀಟ್ವ ಚತುರಂಗ ಪೃತನಾಪ್ರತಾನದ ತುಮುಲ ಸಮರಸಂಘಟ್ಟನಾ ಕಾಂಡ ಪ್ರಚಂಡ ಪ್ರಳಯಪ್ರಕ್ಷೋಭದೊಳಗೆ (ಅನಂಪು. ೧೪-೧ ವ). **ಥಟ್ಟುತಾಱು** : ಪರತ್ತರ್ಥಟ್ಟುತಾಱಿಱಾದರ್ (ಶಬ್ದಾನು. ೭೫ ಪ್ರಯೋ). 'ತಾಳುತಟ್ಟುಂ', 'ತಾಱುಂತಟ್ಟುಂ' ಪಾಠಾ. [?]

**ತಟ್ಟುಕ** (ನಾ). ೧. ತಟ್ಟುವವನು ; ಹೊಡೆಯುವವನು : ಕಟ್ಟುಕಂ, ತಟ್ಟುಕಂ (ಶಬ್ದಾನು. ೨೦೩ ಪ್ರಯೋ). ೨. ಸುಗಂಧದ್ರವ್ಯವನ್ನು ಮೈಗೆ ಲೇಪಿಸುವವನು : "ತಟ್ಟುಕಂ, ಚಟ್ಟುಕಂ, ತಟ್ಟು ಚಟ್ಟು ಶಬ್ದೌ [illegible] ಡ ಕುಂಕುಮಾದಿ ಗಂಧದ್ರವ್ಯಕರ್ದಮಕೃತ ಸ್ಥಾಸಕವಚನೌ ತತ್ಕುರ್ವನ್" (ಶಬ್ದಾನು. ೪೪೧ ವ್ಯಾಖ್ಯಾ). [ತಟ್ಟು$_1$ + - ಕ$_3$]

**ತಟ್ಟುಗಿ, ಥಟ್ಟುಗಿ** (ಕ್ರಿ). ಜೋರಾಗಿ ಭೇದಿಸುವಂತೆ ಇರಿ ; ಬಲವಾಗಿ ನಾಟು ; ನಟ್ಟು ಹೊರಬೀಳು : ಕಾದಿ ತಟ್ಟುಗಿದು (ರಣದೆ) ತೆಗೆದ ನಕ್ಕುಂ ನಷ್ಟಂ (ವಸುಕೋ. ೮೫-೫): ಮದನಂ ವಿಯೋಗಿಗಳನಿಸಲೆರ್ದೆಯಂ ತಟ್ಟುಗಿದು ಲೋಹಿತಂಬೊರೆದಿರದುಣ್ಮಿದ ಶರಮೆನೆ (ಉದ್ಭಟ. ೫-೪೮) : ಅಳಿಯ ಮಾವನುಂ × × ಕಕಡೆ ಕಠಾರದೇಱು ತಟ್ಟುಗಿದು ಮುತ್ತ ಹೊತಂ (ಎಕ. VIII, ತೀರ್ಥಹ. ೨೫-೧೭; 1250); ನುಡಿದ ನುಡಿ ಕೂರಂಬಿನಂದದಿಂ ಹೃದಯಮಂ ತಟ್ಟುಗಿಯಲ್ (ಧಾವಚಂ. ೮-೩೩). **ಥಟ್ಟುಗಿ** : "ಥಟ್ಟುಗಿ [ಪಾಠಾಂ. ರಿ]ದುದೆನಲ್ಕೆ ಬೆಂಗೆ ಮೂಡಿದುದಕ್ಕುಂ" (ಭಾರನಿ. ೪೫) : ಅಂಗಜಾಸ್ತ್ರತತಿ ಮೆಲ್ಲೆರ್ದೆಯಂ ಸಂಧಿಸಿ ಥಟ್ಟುಗಿಯಲ್ ಧೃತಿಗುಂದದೆ (ಉದ್ಭಟ. ೭-೧೩೦); ಶಕಟವ್ಯೂಹವನು ಮಧ್ಯದೊಳು ಥಟ್ಟುಗಿದುರವಣಿಸಿ ಪವಮಾನಸುತ ನಡೆದ (ಉತ್ತರಾದ್ರೋ. ೧೨-೧೮); ಮದನ ವಿಯೋಗಿಗಳೆದೆಯ ಥಟ್ಟುಗಿದೆಚ್ಚ ಪದುಮಾಸ್ತ್ರದಲಗಿನಗ್ರದಲಿ (ಕಂನವಿ. ೯-೧೮). 'ತಟ್ಟುಚರ್ಚು' ಪಾಠಾ. [ತಟ್ಟು$_1$ + ಉಗಿ$_3$]

**ತಟ್ಟುಗುಟ್ಟು** (ಕ್ರಿ). ತಾಗಿ ಹೊಡೆ ; ಅಪ್ಪಳಿಸಿ ಹೊಡೆ : ಮುರಹರಂ . . . ಕೋಪದಿಂ ಧುರಧರೆಗೆಯ್ದೆವಂದು ರಿಪುಸೇನೆಯನೋವದೆ ತಟ್ಟುಗುಟ್ಟೆ ಕಿಂಕರ ರಥವಾಜಿ ವಾರಣದಳಂ ಪಡಲಿಟ್ಟುದು ಯುದ್ಧಮಧ್ಯದೊಳ್ (ಮಹಾನೇ. ೭-೯೯). [ತಟ್ಟು$_1$ + ಕುಟ್ಟು$_1$]

**ತಟ್ಟುಗೆಡಹು** 'ಥಟ್ಟುಗೆಡಹು' ನೋ.

**ತಟ್ಟುಗೆಡೆ** 'ಥಟ್ಟುಗೆಡೆ' ನೋ.

**ತಟ್ಟುಚ್ಚು** 'ತಟ್ಟುಚರ್ಚು' ನೋ.

**ತಟ್ಟುಡು** (ಕ್ರಿ). ಕಾವಿಯ ಬಟ್ಟೆಯನ್ನು ಧರಿಸು : ಮಾನಮಂ ತಟ್ಟುಟ್ಟು ಕೀರ್ದ ತಟ್ಟುಟ್ಟಂಗದಾಗುರ್ಂಟು ರಾಗಂ (ಸೌನಂದ. ೭-೪೮); ಪೊರಮಟ್ಟನುಂ ಪೊರಮಡದ ಕಾಮನಾರವಂ ತಟ್ಟುಟ್ಟನುಂ ಬಿಟ್ಟು ಕಳೆಯದೆ ಕಷಾಯನುಂ (ಸೌನಂದ. ೭-೪೯). [ತಟ್ಟು$_7$ + ಉಡು$_1$]

**ತಟ್ಟುಪಳಗು** (ನಾ). ಒಂದು ಲೇಪನ ದ್ರವ್ಯ (?) : ಕರ್ಪೂರದ ಕಳಂಜು ೧ ಕಸ್ತೂರಿ ಕಳಂಜು॥ ಕುಂಕುಮ[ದ ಹೂ]ಕಳಂಜು ೧ ತಟ್ಟು ಪಳಗು ಕಳಂಜು॥ (ಸೌಇಇ. IX-II, ೫೫೧-೪ ; 1532). [ತಟ್ಟು$_2$ + ಪಳಗು?]

**ತಟ್ಟುಪೊಟ್ಟು** (ನಾ). ಒಂದು ಅನುಕರಣ ಶಬ್ದ : ತಮ್ಮ ಬಲಮುಂ ಮಾರ್ವಲಮು[ನ]ಱಿಯದೆಯುಂ ಚಾತುರ್ವಲಂಗಳ್ಮೊದಲ ಸಮಕಟ್ಟುಗೆಟ್ಟು ತಡವರಿಸಿ ತಟ್ಟುಪೊಟ್ಟೆಂದೆಚ್ಚುಮಿಟ್ಟುಮಿಱಿದುಗ್ಗಡಿಸೆ (ಪಂಪಭಾ. ೧೧-೭೦ವ) ; ಎರಡು ಬಲದ ದಟಿಂಗಳ್ಮೇಲಾಟಮಾಡುವಂತೆ ಕಿಱಿದಾನುಂ ಬೇಗಂ ತಟ್ಟುಪೊಟ್ಟೆಂದು ಕೋಟ್ಟುಕಟ್ಟೆ (ಪಂಪಭಾ. ೧೧-೮೦ವ).

**ತಟ್ಟುಬಳೆ** (ನಾ). ಚಪ್ಪಟೆಯಾಗಿ ಅಗಲವಾಗಿರುವ ಸಾದಾ ಬಳೆ : (ಕ).

[ತಟ್ಟು$_3$ (<ತಟ್ಟೆ) + ಬಳೆ$_3$]

**ತಟ್ಟುಬೀಳು** 'ತಟ್ಟುವೀೞ್' ನೋ.

**ತಟ್ಟುಮಟ್ಟ** (ನಾ). ಲೇಪನದ ಮಣ್ಣು ; ಮತೀಯ ಲಾಂಛನವನ್ನು ಧರಿಸುವುದಕ್ಕಾಗಿ ಬಳಸುವ ಮಣ್ಣು : ತಟ್ಟುಮಟ್ಟ[ಪಾಠಾಂ. ತಟಮಟ, ತಟ್ಟುಮುಟ್ಟ]ಯನಿಟ್ಟ ಭ್ರಷ್ಟಂಗೆ ಶಿಷ್ಯನಾದ ಕಷ್ಟನ ಮುಟ್ಟಲಾಗದಯ್ಯಾ (ಚನ್ನವ. ಕ. ೧೭೭-೩೭೭). [ತಟ್ಟು$_8$ + ಮಟ್ಟ]

**ತಟ್ಟುಮಣೆ** (ನಾ). ನೆಲ, ಮೊದಲಾದುವುಗಳನ್ನು ತಟ್ಟಿ ಸಮಮಾಡಲು ಉಪಯೋಗಿಸುವ ಸಾಧನ,-ಮಣೆ ; ಧಮ್ಮಸ್ಸು : ತಟ್ಟುಮಣೆ ಹೊಡೆದು ಸಮ ಮಾಡಬೇಕು (ರೂ). [ತಟ್ಟು$_1$ + ಮಣೆ]

**ತಟ್ಟುಮುಟ್ಟು** (ನಾ). ೧. ಮೈಲಿಗೆ ; ಸೂತಕ ; ಹೊಲೆ : ವ್ರತಕ್ಕೆ ಮುನ್ನವೆ ತಟ್ಟುಮುಟ್ಟು ತಾಗು ಸೋಂಕು ಬಪ್ಪುದನಱಿಯಬೇಕು (ಬಲೇಶ್ವ. ೪೩೫-೪೦) : ತಟ್ಟುಮುಟ್ಟು ತಾಗು ನಿರೋಧವಿಲ್ಲದಿಹುದೆ ಪೂಜೆ (ಚನ್ನವ. ೧೦೨-೫) : ಮಂಗಳವಾರದ ದಿನ ಮನೆಯ ಸಾರಿಸೆಯುವ

ತಟ್ಟುಮುಟ್ಟು ಹೊಱಯಿಕೆ ಬಿಸಾಡೆಯುಮ್ಮ (ಶಿವಗೀ. ೭೯೯ ವ) : ಅಶುದ್ಧ ಸಲೇಪಭಾವವಾ ಶ್ವಪಚನ ತಟ್ಟುಮುಟ್ಟಿನೆಡೆಯುಲ್ಲಿಯು ಬರ್ಪುದಱಿಂ ಶಿವಾಧವಾ (ಶತಕ. ೩೬). ೨. ದುರದೃಷ್ಟಕರವಾದ ಪೆಟ್ಟು ; ಆಘಾತ ; ಅಪಾಯ ; ಸಂದಿಗ್ಧ ಪರಿಸ್ಥಿತಿ ; "ಸಮಸ್ಯೆ" (ಜಾನಕೋ. ೬೪). ೩. (?) : ಇಷ್ಟಲಿಂಗದಲ್ಲಿ ತಟ್ಟುಮುಟ್ಟು ಬಲ್ಲವಂಗೆ ಇಷ್ಟವ ಮುಟ್ಟುವ ಭೇದವು ತಟ್ಟದಿಹ ಪರಿ ಇನ್ನೆಂತೋ (ಮೋಳಿಮಾ. ೧೮-೭೦) : "ಲಿಂಗ ಭೋಗೋಪಭೋಗ" (ಮೋಳಿಮಾ. ಕೋಶ): ಸಕ್ಕರೆಯು ರಾಶಿಗೆ ಕೇಸಿಯು ಕೆಲಸುಂಟೇ ನಿಶ್ಚಯದ ಲಿಂಗಾಂಗಿಗೆ ಉಭಯದ ತಟ್ಟುಮುಟ್ಟೆಂಬಿ ಗುಟ್ಟಿನ ಕುಲವಿಲ್ಲ (ಮಡೀವ. ೩೭೬-೩೭); ಪ್ರಾಣಲಿಂಗಿ ಎಂದಡೂ ತಾನಾಗಿ ಶರಣನೆಂದಡೂ ತಾನಾಗಿ. . .ಸತ್ತು ಚಿತ್ತಾನಂದವೆಂಬ ಗೊತ್ತ ಹಿಡಿದವಂಗೆ ತಟ್ಟು ಮುಟ್ಟು ಹತ್ತುವ ಭಾವ ಒಂದೂ ಇಲ್ಲ (ವಚಶಾ. I, ೧೩೧) : ಇಷ್ಟ ಲಿಂಗಂ ಸುತ್ತಿ ಸಜ್ಜೆಯೊಳಗಿರುತಿಹುದು ತಟ್ಟುಮುಟ್ಟಿನ ಸುಖವನೆಹಗ ಯರ್ಪಿಸಬಹುದು (ದೀಕ್ಷಾಬೋ. ೩-೭೮). [ ತಟ್ಟು$_1$ + ಮುಟ್ಟು$_2$ ]

**ತಟ್ಟುಮೆಟ್ಟು** (ನಾ). [ನಾಟ್ಯ] ಭರತನಾಟ್ಯದ ಹತ್ತು ಬಗೆಯ ಅಡವು ಗಳಲ್ಲಿ ಒಂದು : ಪ್ರಸಿದ್ಧ ನಾಟ್ಯಾಚಾರ್ಯರು ಈ ಅಡವುಗಳನ್ನು ಹತ್ತು ವಿಧವಾಗಿ ವಿಂಗಡಿಸಿದ್ದಾರೆ : (೧) ತಟ್ಟು, (೨) ಮೆಟ್ಟು, (೩) ನಾಟು, (೪) ತಟ್ಟುಮೆಟ್ಟು (ಅಭಾನೃ. ೩೨). [ ತಟ್ಟು$_2$ + ಮೆಟ್ಟು$_2$ ]

**ತಟ್ಟುರ್ಚು**, ತಟವುಚ್ಚು, ತಟ್ಟುಚ್ಚು, ತಟ್ಟುಟ್ಟು, ಥಟ್ಟುಚ್ಚು (ಕ್ರಿ). ಸೀಳಿಕೊಂಡು ಹೊರಬರು ; ಭೇದಿಸಿಕೊಂಡು ಹೊರಗೆ ಕಾಣಿಸು ; ನಟ್ಟು ಪಾರಾಗು : ರೋಮಾಂಚಸಂಚಯಂ ತೊಟ್ಟಂಗಿಗಳ ತಟ್ಟುರ್ಚಿ ಪೆರ್ಚಿದ ಮುಯ್ವುನೆಡೆ ಪೊಟ್ಟನೊಡೆಯೆ ಪರಸ್ಪರಾಲಿಂಗನಂಗೆಯ್ದು (ಅನಂಪು. ೧೧-೩೪ ವ) : ಇಟ್ಟೆಡೆ ಸೆಲ್ಲಹ ಕಂಗಲ ಜೋಡನು ತಟ್ಟುರ್ಚಿ ಮೆಯ್ಯನುಚ್ಚಳಿಸಿ (ಕುರಾಸಾಂ. ೧೩-೧೧೭) ; ನೆಟ್ಟನೆ ತಾಗಿ ತಟ್ಟುರ್ಚಿತೆಂಬ ಶಕ್ತಿಯ ಕೈಮಱೆಯದೆ ಕೃಷ್ಣ ಖಂಡಿಸಿದ (ಮೋಹತ. ೪೦-೭೭); ಪೆರ್ವೆಟ್ಟಿನ ತಟ್ಟನೊಳ್ ನಟ್ಟು ತಟ್ಟುರ್ಚಲೆಱಗುವ ಬಱಸಿಡಿಲಂತೆಯುಂ (ಚಿಕವಂ. ೧೪-೫). **ತಟವುಚ್ಚು**: ಕರಿಯುರವಣಿಸಿ ಬಂದು ದೀರ್ಘಕರಾಗ್ರದಿಂ ಪಿಡಿದು ಭರದೊಳುದ್ಧಕೆ ಹಾಯ್ಕೆ ಕೊಂಬುಗಳೆರಡ ನೆಗ್ಗಲು ದೇಹವದು ನೆತ್ತರು ಸುರಿಯೆ ತಟ[ಪಾಠಾಂ. ಟು]ವುಚ್ಚಿ ಜೀವವಿಯೋಗತಾವದಲಿ (ಬಸಪು. ೩೨-೧೦) : ಉರಗವಿದು ಕರ್ಕೋಟಕನ ಬಗೆಯಿದಱ ಹಲ್ಲುಗಳು ಎರಡೆರಡು ತಟವುಚ್ಚಿದವು (ಬಸಪು. ೪೬-೩೩). **ತಟ್ಟುಚ್ಚು** : ಗಿರಿಘಟವುಂ ತಟ್ಟುಚ್ಚ ಲಿಸುವವು (ಕುಮರಾ.೮-೬೨); ಗಾಜಿನ ಕುಪ್ಪಿಗೆಯೊಳಗಿನ ದೀಪವನ್ನಿಟ್ಟರಾ ಜ್ಯೋತಿ ಹೊಱಗೆಸೆವಂತೆ ಶ್ರೀಜಿನನುಜ್ಜ್ವಲ ದೇಹವ ತಟ್ಟುಚ್ಚಿ ರಾಜಿಸುತಿ ಹುದಾತ್ಮಕಾಂತಿ (ಭರತ. ೬೬-೯೦): ತಟ್ಟುಚ್ಚಿದ ಸುರಂಗಳಂ ಕೀಳ್ವ (ಚಬಪು. ೫೬-೧೬). △**ತಟ್ಟುಟ್ಟು** : ನಿಶ್ಶ್ಯೇಷಮಾ ಯುದ್ಧದುಳ್ ಉಱಕೀಲಿಚ್ಚಿದ ವಂಬುವಾಳ್ಪಲಗೆಯುಳ್ತಟ್ಟುಟ್ಟು ವಲ್ಪನ್ನಿಪಿನ್ ಮಱಮೋಗೀಶ್ವರನುಳ್ಳಿ ಕದಿ ತಣಿದ ನಾಗವ್ಮನೀ ಶೂದ್ರಕನ್ (ಸೌಇಇ. IX-I, ೩೯೩-೩; 8ನೆಯ ಶತ): ☞ ಇದು 'ತಟ್ಟುಟ್ಟು' ಎಂಬುದರ ಅಪಲಿಖಿತವಿರಬಹುದಂ. **ಥಟ್ಟುಚ್ಚು** : ತೊಡು ನಿನ್ನ ಶರವ ನೀಂ ಗಿಡುಮರದ ಹೊದಱೊಳೆಡೆ ಯಾಡುತಿಹ ಹಕ್ಕಿಗಳ ಗಡಣವನು ಥಟ್ಟುಚ್ಚ[ಪಾಠಾಂ. ತಟ್ಟುರ್ಚ]ಲಿಸುವ ಬಲು ಬಿಲುಗಾಱ (ಸಾಳ್ವಭಾ. ೩೫-೩೭) : ಚುಚ್ಚಿದವು ಕೂಡೆ ಥ[ಪಾಠಾಂ. ತ]ಟ್ಟುಚ್ಚಿದವು ಸೀಳಾಗಿ ಪಚ್ಚಿದವು ಮೈಯೊಳಗೆ ಹೊಚ್ಚಿದವು ಪೊಗರಲಗು (ಜೈಮಿಭಾ. ೧೩-೧೮) : [ ತಟ್ಟು$_1$ + ಉರ್ಚು ]

**ತಟ್ಟುವರಿಯಿಸು** 'ಥಟ್ಟುವರಿಯಿಸು' ನೋ.

**ತಟ್ಟುವಾಣಿ**, ತಟವಾಣಿ$_1$ (ನಾ). 'ತಟ್ಟು' ಜಾತಿಯ ಹೆಣ್ಣು ಕುದುರೆ : ಕಡಿವಾಣಂಗಳಂ ಕಟ್ಟಿರುವ ತಟ್ಟುವಾಣಿಗಳ ಮೇಲ್ಮುಳಿತು (ಸೌಗಂಧಿ. ೧೮೩-೭). **ತಟವಾಣಿ$_1$** : (ಕ). [ ←ಹಿಂ. ಟಟವಾನೀ ]

**ತಟ್ಟುವೀೞ್**, ತಟ್ಟುಬೀಳು (ಕ್ರಿ). ಕುಗ್ಗು ; ದುರ್ಬಲವಾಗಿ ಕುಸಿದು ಬೀಳು : ಅಹಿರಾಜಂ ಪೆಡೆ ತಟ್ಟುವೀೞೆ ದಿಗಿಭವ್ರಾತಂ ಕೊರಲ್ಮುರ್ಗೆ (ಲೀಲಾವ. ೧-೮೭). **ತಟ್ಟುಬೀಳು** : ಸೂರ್ಯಾಸ್ತಮಯಕ್ಕೆ ಪಾಂಡವರ ಪಡೆಯು ಮುರಿದು ತಟ್ಟುಬಿದ್ದಿತು (ಭೀಷ್ಮಪ. ೧೭೭). [ ತಟ್ಟು$_3$ (<ತಟ್ಟೆ) + ಬೀೞ್$_1$ ]

**ತಟ್ಟುಸೆಱಗು** (ನಾ). ಜರತಾರಿ ಮತ್ತು ರೇಷ್ಮೆಯ ಕುಸುರಿಗೆಲಸ ಮಾಡಿದ ಸೆರಗು (?) : ಪೀತಾಂಬ್ರ ೧ಕ್ಕೆ ತಟ್ಟುಸೆಱಗು ಲತೆ ಹೂಗಳು ಸಹಾ ತೂಂಕ ೧೧೯ಕ್ಕೆ ವಿವರ ಸುತ್ತಣ ಲತೆ ಹೂಗಳು ಹಳೆ ಕೆಂಪು ೧೦೫೫ (ಸೌಇಇ. IX-II, ೫೪೭-೩ ; 1532). [ ತಟ್ಟು$_0$ (<ತಗಡು) + ಸೆಱಗು.(<ಸೆಱಂಗು) ]

△**ತಟ್ಟುಟ್ಟು** 'ತಟ್ಟುರ್ಚು' ನೋ.

**ತಟ್ಟೆ**, ತಟ್ಟ$_1$, ತಟ್ಟು$_3$ (ನಾ). ೧. ಚಪ್ಪಟೆ ; ಸಮತಲ : ಭೂಮಿ ತಟ್ಟೆಯಾಗಿಲ್ಲ, ಗುಂಡಾಗಿದೆ (ರೂಢಿ). ೨. ಹಣ್ಣು-ಹಂಪಲು ಮೊದ ಲಾದುವುಗಳನ್ನು ಹರಡಿ ಇಡಲು ಉಪಯೋಗಿಸುವ ಬಿದಿರು ಅಥವಾ ಬೆತ್ತದ ಹೆಣಿಕೆಯಿಂದ ಮಾಡಿದ ಚಪ್ಪಟೆಯಾದ ಮುಚ್ಚಳ ದಂತಹ ಬುಟ್ಟಿ : ಸತ್ಯವೆಂಬ ತಟ್ಟೆಯಲ್ಲಿ ಚಿತ್ತಶುದ್ಧವೆಂಬ ವಿಭೂತಿಯ ಬೈಚಿಟ್ಟು (ಶೂನ್ಯಸಂ. ೩೬೧-೧). ೩. ಬೆತ್ತ, ಲೋಹ ಮೊದಲಾದುವು ಗಳಿಂದ ಮಾಡಿದ ಅಂಚುಳ್ಳ ಮುಚ್ಚಳದಂತಹ ಪಾತ್ರೆ : ಆಧಾರದಲಿಪ್ಪ ಮೂಲಿಕೆಯ ಬೇರನಗಿ(ರೆ)ದು ಆ ಇಂದ್ರಿಯುವ ಕೂಡಿಕೊಂಡು ಮಲ ಮೂಱು ಮುಟ್ಟದ ತಟ್ಟೆಯಲ್ಲಿ ಬೇಗ ತೆಗೆದುಕೊಳ್ಳಿ (ಸರ್ವವ. ೧೯-೯೧). ೪. ತಳಿಗೆ ; ಹರಿವಾಣ; ಗಂಗಾಳ : ತಟ್ಟೆ ಬಟ್ಟಲಲ್ಲಿ ಎಡೆಮಾಡಬೇಕಾದರೆ (ಮುಹಾದೇ. ಬ. ೧೩೪-೩೮೪) : ವಿಸುನಿದಟ್ಟೆಯೊಳೊಪ್ಪುವುಜ್ವಲ ಸೀಧುವಂ ನಡೆ ನೋಡಿ . . . ಮುಗುಟ್ದು ವಂದಿಸಿಯಾಂಟಿದಳ್ (ಉದ್ಭಟ. ೫-೮೨) ; ತಿಗುರನಿಕ್ಕುವ ಲೇಪಿಸುವ ತಟ್ಟೆಗಳ ತಿಲಕಾಂಜನಕರಂಡದ (ಬಸಪು. ೧೩-೧೧). ನವರತ್ನದಡ್ಡಣಿಗೆಯೊಳ್ ತಟ್ಟೆಬಟ್ಟಲನಿಟ್ಟು ಹೊನ್ನ ಹರಿಯಣ ಮುಂದೆ ಧಗಧಗಿಸುತಿರಲಲ್ಲಿ (ಸಮ್ಯಕೌ. ೪-೯). ೫. (ತಕ್ಕಡಿಯ) ಬಟ್ಟಲು ; ಪರಡಿ : ತಕ್ಕಡಿಯ ತಟ್ಟೆಗಳನ್ನು ನಿರ್ದೇಶಿಸುವ ಎರಡನೆಯ ವರ್ಗಕ್ಕೆ ಸೇರಿದ ಎರಡು ನಕ್ಷತ್ರಗಳು (ಜೋತಿರ್ವಿ. ೪೦). ೬. (ಅವರೆಕಾಯಿ, ಕಡಲೆಕಾಯಿ ಮೊದಲಾದುವುಗಳಲ್ಲಿ) ಬೀಜ ಬಲಿಯದಿರುವ ಕಾಯಿ ; ಚಟ್ಟು : ತಟ್ಟೆ ಬೈಸಿ ಕೊಂಡರೂ ತಟ್ಟೆ ಹುಳಿ ಚೆನ್ನಾಗಿದೆ (ಗಾದೆ). ೭. ಸೀಳಿದ ಬಿದಿರು ; ದೆಬ್ಬೆ : (ಕ). **ತಟ್ಟ$_1$** : 'ತಟ್ಟತಳ$_8$' ಪರಾ. ತಟ್ಟು$_3$ : ೧. ಬೆಟ್ಟುವುಂ ತಟ್ಟುವುಂ ತಟ್ಟು ಗೆಯ್ದಂತಪ್ಪತಿ ವಿಶಾಲಮೆನಿಪ್ಪ ಪಾಸಱೆಯುಂ . . . ಗಳಲನಿಱಿಪಿದಾಗಳ್ (ಶಾಂತೀಶ್ವ. ೧೦-೧೮೬ ವ) ; ಹೋಗುತ್ತ ಹೋಗುತ್ತ, ಬಂಡೆಯ ಮೈ ತಟ್ಟಾಗಿ ಇರುವ ಬದಲು, ಕೆಳಕ್ಕೆ ಇಳಿಯುತೊಡಗಿತು (ಕುಧಿಕೂ. ೨೫). ೫. ಕೋಪವನ್ನು ತೆಗೆದು ಒಂದು ತಟ್ಟನಲ್ಲಿ ಇರಿಸಲು ಅಮರನೀತಿಯು ನೂತನ ವಾದ ಒಂದು ವಸ್ತ್ರವನ್ನು ತಂದು ಎರಡನೆ ತಟ್ಟನಲ್ಲಿ ಇರಿಸಲು (ಶಿವತ. ೮೫-೬): ತ್ರಾಸಿನ ಒಂದು ತಟ್ಟನಲ್ಲಿ ಜಂಗಮರ ಕೌಪೀನವನ್ನು, ಮತ್ತೊಂದು ತಟ್ಟನಲ್ಲಿ ಬೇರೊಂದು ಕೌಪೀನವನ್ನಿಟ್ಟು ಮೇಲಕ್ಕೆತ್ತಿದರು (ಪುರಾವಿ. ೭೫). ೮. ಕತ್ತಿಯ ಅಲಗು,-ಧಾರೆ: "ಖಡ್ಗಫಲ, ಪುಷ್ಕರ – ಅಡ್ಡಾಯುಧದ ತಟ್ಟು" (ಹಲಾಯು. ೬) : ಕತ್ತಿಕೊಂತದ ತಟ್ಟನ ಮೇಗೆ ಏನಾದರುವೆ ಚುಕ್ಕೆ ಕಂಡರೋ ತೀರಿ ಹೋಯಿತು ಅವನ ಬಾಳು (ಮಂತ್ರಶ. ೮೦-೧). ೯. ನಿತ್ರಾಣ ; ದರ್ಬಲತೆ ; ಅಶಕ್ತಿ : ಕಂಬನಿಗಳಿಂದುಂಬಿ ಗಳಗಳನೆ ಅಳುತ ನಿಟ್ಟುಸುರುಗಳಂ ಬಿಟ್ಟು ತಟ್ಟುತಟ್ಟಾಗಿ (ಸೌಗಂಧಿ. ೪೭೫-೩) : ದನ,ಹುಲ್ಲು ಇಲ್ಲದೆ ತಟ್ಟಾಗಿವೆ (ರೂಢಿ). ೧೦. ಕಿವಿಯ ಒಂದು ಆಭರಣ: ಮಗುವಿನ ಕಿವಿಗೆ ತಟ್ಟು ತೊಡಿಸಬೇಕು (ರೂಢಿ).

**ತಟ್ಟಾಗು** = ಸೋತುಹೋಗು; ನಿತ್ರಾಣವಾಗು: ಮುಟ್ಟಲಱಿಯವು ಯೋಗಿಗಳ ನಿರ್ಮಲ ಚಿತ್ತ ತಟ್ಟಾದುವಜಸಿ ವೇದಗಳು (ಕೃಷ್ಣಗೋ. ೦-೦೦೩). **ತಟ್ಟು ಮಾಡು** = ನಿತ್ರಾಣಗೊಳಿಸು ; ದುರ್ಬಲಗೊಳಿಸು; ಒಣಗಿಸು : ಕಾಲು ಕೈಯನಗಚಿ ತೋರಣದೊಳು ಕಟ್ಟಿ ಸೀಳಿ ನರರನಾಱಿಸುವರು ತಟ್ಟು ಮಾಡಿ ಪೋಳ್ದು ನೂಱುವರುಷವಿಟ್ಟು ವಕ್ತ್ರ ಭಾಳ ಚರಣ ಕರ ದೊಳಿಡಿಯ ಮೊಳೆಯನಿಕ್ಕಿ ಹೆಟ್ಟಿ (ಸಾನಂಚ. ೬-೧೪೯ ರಗಳೆ). **ತಟ್ಟೆ ಹಾಕು** = ಊಟಕ್ಕೆ ಬಡಿಸು : ಅಡಿಗೆ ಮನೆಯಲ್ಲಿ ತಟ್ಟೆಹಾಕಿಕೊಂಡು (ದೂಬಿಟ್ಟ. ೧).
[ ದೇ.॥ ತಮಿ. ತಟ್ಟು, ತಟ್ಟೆ, ತಟ್ಟು, ತಟ್ಟ್ಯ; ಮಲ. ತಟ್ಟ, ತಟ್ಟು; ತುಳು. ತಟ್ಟು; ಕೊಡ. ತಟ್ಟೆ; ತೆಲು. ತಟ್ಟ ]

**ತಟ್ಟೆಕಾಲು** (ನಾ). ಮಗ್ಗದ ಹಾಸಿಗೆ ಆಧಾರವಾಗಿ ನಿಲ್ಲಿಸುವ ಕತ್ತರಿ ಕಾಲು ; ತಿಕ್ಕಡಿ: (ರೀಪ್).
[ ತಟ್ಟೆ + ಕಾಲು$_1$ (<ಕಾಲ್$_1$) ]

**ತಟ್ಟೆಕೆಱೆ** (ನಾ) ಒಂದು ಊರಿನ ಹೆಸರು (?) : ದತ್ತಿ ತಟ್ಟೆಕೆಱೆ ಸರ್ವ ಬಾಧ್ಯಾ ಪರಿಹಾರಾ (ಮೈಆರಿ. ೧೯೩೩, ೦೦೩-೩೪ ; 10ನೆಯ ಶತ) ; ಪಟ್ಟದ ಬಸದಿಯ ಪ್ರತಿಬದ್ಧವಾಗಿ ಸವಾದೇಯವುರ್ಮುಖ್ಯವಾಗಿ ಬಿಟ್ಟ ದತ್ತಿ ತಟ್ಟೆಕೆಱೆ ಸರ್ವ್ವಬಾಧಾ ಪರಿಹಾರ (ಎಕ. VII, ಶಿವಮೊ. ೪-೭೦ ; 1122).
[ ? ]

**ತಟ್ಟೆಗಲ್ಲು** (ನಾ). ಚಪ್ಪಟೆಯಾದ ಕಲ್ಲು : ಅಲ್ಲಿಂದಂ ಪಡುವ ನಡದು ವಟ್ಟ ಹುಲಗೆಗಲ್ಲು ಅಲ್ಲಿಂ ಪಡುವ ನಡದು ನಟ ತಟ್ಟೆಗಲ್ಲು (ಎಕ. XII, ತಿಪಟೂ. ೦೩೯-೭೬ ; ?). [ ತಟ್ಟೆ + ಕಲ್ಲು (<ಕಲ್$_3$) ]

**ತಟ್ಟೆಗೋಡು** (ನಾ). ಚಪ್ಪಟೆಯಾದ ಕೋಡು,-ಕೊಂಬು : ನಮ್ಮ ಮನೆ ಎಮ್ಮೆಗೆ ತಟ್ಟೆಗೋಡು (ರೂಢಿ). [ ತಟ್ಟೆ + ಕೋಡು$_5$ ]

**ತಟ್ಟೆಯು** 'ತಟ್ಟೆಯು' ನೋ.

**ತಟ್ಟೆವಟ್ಟಲು** (ನಾ). ೧. ತಟ್ಟೆ ಮತ್ತು ಬಟ್ಟಲು. ೨. ತಟ್ಟೆಯ ಸುತ್ತಲು ಇಡುವ ಬಟ್ಟಲು ; ಎಡೆಬಟ್ಟಲು : ಪೊನ್ನ ಪರಿವಾಣದೊಳು ದಿವ್ಯಾನ್ನಮುಮನು ತೀವಿ ತಾ ಪೊಳೆವ ಚಿನ್ನದುರೆ ತಟ್ಟೆವಟ್ಟಲಲಿ ತಿಳಿದುಪ್ಪವಂ ಪೊರೈಸಿ (ನಪವೋ. ೯-೨೭). 'ಎಡೆವಟ್ಟಲ್' ಪರಾ.
[ ತಟ್ಟೆ + ಬಟ್ಟಲು (<ಬಟ್ಟಲ್) ]

**ತಟ್ಟೆವಳ್ಳ** (ನಾ). ಒಂದು ಪ್ರದೇಶದ ಹೆಸರು (?) : ಪಡೆದ ತಟ್ಟೆವಳ್ಳವ ಕಲ್ಲ ನಟು (ಮೈಆರಿ. ೧೯೩೪, ೧೧೭-೧೦ ; 8ನೆಯ ಶತ). [ ? ]

**ತಟ್ಟೈಸು** 'ಥಟ್ಟೈಸು' ನೋ.

**ತಟ್ಟೆಯ** (ನಾ). ಎದುರಿಸುವವನು; ಪ್ರತಿಭಟಿಸುವವನು : ಆತನೀ ಪರಿ ರಣಗಳಲಿ ಸತ್ವಾತಿಶಯವನು ತೋಱಿದಡೆ ಮಾಂಧಾತನಲಿ ತಟ್ಟೆಯರ ತಱಿದೊಟ್ಟಿದನು ಬೇಗದಲಿ (ಉತ್ತರಾ. ೧೭-೩೭). [ ? ]

**ತಡ$_1$** (ನಾ). ೧. ಅಡ್ಡಿ ; ತಡೆ; ವಿಘ್ನ : ತಂದೆ ಪೇಟ್ದಟ್ಟಿದ ರಾಜ ಸೂಯಮುಖಮಂ ತಡವಿಲ್ಲದೆ ಬೇಳ್ದ ಬೀರಮಂ ನೆಟ್ಟನೆ ನೀನೆ ಕಂಡಱಿಸಲಕ್ಕುಮೆ ಗಾಂಡಿವಿಯುಂ ಸುಯೋಧನಾ (ಗದಾಯು. ೨-೩೭). ೨. ಹೊತ್ತು ಮೀರುವುದು ; ಸಾವಕಾಶ ; ವಿಳಂಬ : ತಡವಾದರೆ ಬಡವಾದೆ ತಾಯೆ (ಮುಹಾದೇ. ಬ. ೦೪೨-೩೩೩) ; ತಡವಾದುದುಂಟು ನಲ್ಲನೆ (ಮುಕೋಟ. ೨-೫೦) ; ಅರಗಿನರಸನ ಬಾಗಿಲಲಿ ದಳ್ಳುರಿಗೆ ತಡವೇ ಹೊಕ್ಕು ನಿಮಿಷದೊಳೊರಸಿದನು ಚತುರಂಗ ಬಲವನು (ಕುಮಾವ್ಯಾ. ೫-೪೦). ೩. ಗಜಾರೋಹಣದ ರೀತಿಗಳಲ್ಲೊಂದು (?) : ಅಗ್ಗಳವಾಗಿ ಕಾಲ್ಗಿಡಿಸಲುಂ ಮುರಿದು ಕಿಟ್ಟಿಡಂ ತಡಮೆಂಬಿವಱಿಂದಂ ಬಾಪು ಕೈಕೊಳ್ವೆಂಬಿವು ಮೊದಲಾಗಿ ಗೋಮೂತ್ರ ಮಂಡಲಮುಮಾಕಾಶಂ ಪೇಜವಿತಿಯೆಂಬ ವಿಧಿಗಳೊಳ್ ಬಂದು ನೆಲಗಿಡಿಸಲುಂ ಪೊಲಗಿಡಿಸಲುಂ ಬಲ್ಲನೆನ್ನ ಕೆಯ್ಯೊಳ್ (ಶಾಂತಿಪು. ೬-೨೩ ವ).

**ತಡಮಾಗು$_1$, ತಡವಾಗು$_1$** = ೧. ವಿಳಂಬವಾಗು ; ನಿಧಾನವಾಗು : ಮರಣಕ್ಕಿನ್ನಿಂದೆ ನೀಂ ಮುಂಚಿದಯ್ ಮೊನೆಯೊಳ್ಪೊಟ್ಟಿಡಮಾಯ್ತು ದೊಂದೆಡೆಯೊಳಂ ಹಾ ವತ್ಸ ದುಶ್ಯಾಸನಾ (ಗದಾಯು. ೬-೭) ; ತಡವಾದ ಪುದುಟಿದರನೀ ಯೆಡೆಗೆ ನಿಯೋಜಿಸಲೆಂಬವೊಲ್ ನೃಪವರನಿರ್ದೆಡೆಗೆ ಬಿಡದೆಡೆಯಾಡುವ ಬೆಸಕೆ ಕನ್ನೆ ತನ್ನಯ ಮನವಂ (ಕಾದಂಬ. ೮೭) ; ಅಲ್ಪ ಶ್ರೀಮಂತನಂತೆ ನಡೆ ತಡವಾಗಲುಂ (ಧರ್ಮಾಮೃ. ೬-೩೮). ೨. ತಡವರಿಸು ; ತೊದಲು : ನುಡಿ ತಡವಪ್ಪುದೊಂದು ಮೊಗದೊಳ್ ಮಱುಕಂ ದೊರೆಕೊಳ್ವುದೊಂದು . . . ಕಳ್ಗುಡಿದವರಂದಮಿಂತು ಸಿರಿ ಸಾರ್ತರೆ ಸಾರ್ವುದು (ಪಂಪಭಾ. ೨-೪೯). **ತಡ ಮಾಡು$_2$** = ಕಾಲಹರಣ ಮಾಡು ; ವಿಳಂಬ ಮಾಡು : ಮಾಡಿಸಿ ಲಾಕ್ಷಾಮಯಮಂ ಮಾಡಮನತಿ ಗೋಪ್ಯದಿಂದಂ . . . ತಡ ಮಾಡದೆ ನಡೆತಂದು ತಮ್ಮ ಜನಕಂಗಾಗಳ್ (ಮುಹಾನೇ. ೯-೪೯); ನಾನೇನು ಬೇಕೆಂದು ತಡಮಾಡಲಿಲ್ಲ (ಕೀವಣೋಚ. ೦೦೯).
[ ದೇ.॥ ಮಲ. ತಡ = ಅಡ್ಡಿಪಡಿಸುವಂತಹುದು ; ಕೊಡ. ತಡು ; ತುಳು. ತೆಲು. ತಡ ]

**ತಡ$_2$, ದಡ$_3$, ಧಡ$_1$** (ನಾ). ೧. ತಡಿ ; ದಂಡೆ; ಅಂಚು ; ತೀರ : ತಟ – ತಡ, ತಟಿ – ತಡಿ (ಶಮದ. ೨೫೫ ಪ್ರಯೋ) ; ತನ್ನಲ್ಲಿ ಸ್ನಾನವನ್ನು ಮಾಡಿದ ಮನುಷ್ಯರ ಸಕಲ ಪಾಪಗಳನ್ನು ಪರಿಹರಿಸುವಂತಾಗಿ ತನ್ನ ತಡದಲ್ಲಿ ಹುಟ್ಟಿದ ಹುಲ್ಲುಬಳ್ಳಿಗಳು (ಶಿವದ. ೨೮-೩). ೨. ಹೊಂದಾಣಿಕೆ; ಬೆರೆಯುವಿಕೆ: 'ತಡಂಗಲಸು' ಪರಾ. ೩. ಸಮವಾದುದು ; ಸಾಟಿ ; ಸಮಾನ: 'ತಡಂಬರ್ಸೆ' ಪರಾ. **ದಡ$_3$** : ೧. ಇಂದು ನೀರದಡದಲ್ಲಿರುವನ ಏನೆಂದರು ಮುಖವೆತ್ತಿ ನೋಡನೆ (ಪುರಂದ. ೧-೫೪-೧) ; ಕಲಿ ವಸುದೇವ ಮಿಂದೀಸಾಡಿ ದಡದಲಿ ದೇವರನು ವಂದಿಸಿ (ಸಾಳ್ವಭಾ. ೧೬-೦೦) ; ತಟ, ದಡ (ಶಬ್ದಾನು. ೦೪೩ ಪ್ರಯೋ) ; ಬೊಬ್ಬುಳಿ ಕೆರೆಯನು ದಡಕ್ಕೆ ಹೊಮ್ಮಿಸಿ (ಕನ್ನಡಾ. ೦೦೦-೭). **ಧಡ$_1$** : ೧. ಹೊಳೆಗಳ ಧಡದಲ್ಲಿದ್ದ ಭೂಮಿಯಂತು ಕೇವಲ ಚಿನ್ನವೆಂದೆನ್ನಿಸಿಕೊಳ್ಳುತ್ತದೆ (ಮುಂಬಯಿ. ೫-೦೯೫) ; ವಿಶಾಲವಾದ ಅನಂತ ನೀಲ ಸಮುದ್ರದಲ್ಲಿ ಧಡ ಕಾಣದೇ ಅಲೆಯುತ್ತಿರುವ ಹಡಗ ದಂತಾಗಿರುವೆನು (ನಿರ್ಲೋಟ. ೦೫೭) ; ಸಮುದ್ರ ಧಡಕ್ಕೆ ಬಂದು ಕುಳಿತೆವು (ಮೀಐವಾ. ೫೩).

**ತಡತಡಮಾಗು** = ತಡವಾಗು$_2$ : ಅದಱಿ ಕಟಾಕ್ಷಚಂದ್ರಿಕೆ ಪಳಂಚಿ ಗವಾಕ್ಷದ ಚಂದ್ರಕಾಂತದಿಂದುದುಗದೆ ಸೋರ್ವ ನೀರ್ವನಿಗಳುಣ್ಮಿದ ನರ್ತನ ಘರ್ಮವಾರಿಯೊಳ್ ತಡತಡವಾಗೆ ಮಾಧವಿ ಮುಗುಳ್ವೊಲಿರ್ದೆಳ ಮಿಂದಿರಿಂದಂ (ಮಲ್ಲಿಪು. ೨-೭೦). **ತಡಮಾಗು$_2$, ತಡವಾಗು$_2$** = ೧. ಸಾಟಿಯಾಗು ; ಸಮಾನವಾಗು : ಅಕ್ಷಿಗಳ ಚಂದ್ರಿಕೆ ಚಂದ್ರಿಕೆಯಂ ಪಳಂಚಿ ಗೇಯದ ರುತಿ ಕಂತುಚಾಪರುತಿಯೊಳ್ ತಡವಾಗೆ . . . ಕಾಂತೆ ಮಿಂಚು ಪೊಳೆದಾದುವವೊಲ್ 'ಪೊಳೆದುಯ್ಯಲಾಡಿದಳ್' (ಅಗವಿ. ೧೭-೦೦೩) ; ಆಮೋದಿತಮುದಿತ ಮಧುಕರ ದಾಮಕದೊಳ್ ನೀಲರತ್ನದಾಮಂ ಮಲ್ಲೀಧಾಮಕದೊಳ್ ಮುಕ್ತಾಫಲದಾಮಂ ತಡವಾದುವೊಡನೆ ಮಣಿ ಮಂಡಪದೊಳ್ (ಪಂರಾಮಾ. ೫-೦೦೫). ೨. ಹೊಂದಿಕೊಳ್ಳು ; ಜೊತೆಯಾಗಂ : ಮೊಱೆ ತಡವಾಗೆ ನಾಣಗಲೆ ತೆಳ್ವದನೊಳ್ವದನಾಗಿ ಪಾಯೆ (ಸೂಕ್ತಿಸು. ೦೪-೩೩) ; ಸುರಸುಂದರಿಯರ್ ನಡೆತಂದರಿಂದು ಸುಯ್ಯೊಗೆ ವಳಿಮಾಲೆ ತಮ್ಮ ಲುಲಿತಾಲಕದೊಳ್ ತಡವಾದುದೆಂಬಿಸಂ (ಪಂರಾಮಾ. ೧೬-೯೩). [ <ಪ್ರಾ. ತಡ. / ಸಂ. ತಟ ]

**ತಡ$_3$** (ನಾ). ಆಧಾರ ; ನೆಲೆ ; ತಳ : ತಡದಿಂ ಕಿತ್ತಡಿಯೆಂಬುದಗಡಿಗಿಡೆ ಪೊಕ್ಕು . . . ಪೊಯ್ದರ್ (ಗದಾಯು. ೮-೦೭). 'ತಡಂಗಿಡಿಸು' ಪರಾ.
[< ತಳ ]

**ತಡ$_4$** (ನಾ). ಗಾಬರಿ ; ಗೊಂದಲ ; ತಬ್ಬಿಬ್ಬು ; ದಿಗ್ಭ್ರಾಂತಿ : (ಕಿ).

**ತಡತಡ, ತಡದಡ** (ದ್ವಿರುಕ್ತಿ) : 'ತಡತಡವರ್', 'ತಡತಡಿಸು', 'ತಡ ದಡವರ್' ಪರಾ.

**ತಡತಡಂದೊಡರ್** = ಅಸ್ಥಿರತೆಯುಂಟಾಗು ; ತೂಕತಪ್ಪು : ಇರದೆ ಮನಕ್ಕೆ ಸೊಕ್ಕಿದರೆ ಪೊಂಪುಟಿ ವಕ್ಕದೊಳುಣ್ಮೆ ... ಕಣ್ಮಲರೊಳ್ ನಸುಗಂಪು ಪೊಣ್ಮೆ ತಚ್ಚರಣಸರೋಜದೊಳ್ ತಡತಡಂ ದೊಡರ್ದಾ ರಸನಾಗ್ರದೊಳ್ ತೊದಳ್ವಿರಸಿದ ಮಾತಿನಿಂದೆಸೆದರಂಗನೆಯರ್ ಮಧುಪಾನಕೇಳಿಯೊಳ್ (ಕುಸುಮಾ. ೧೧-೧೬೦). **ತಡತಡಾಗು, ತಡತಡವಾಗು**=ಅಸ್ಥಿರವಾಗು ; ತತ್ತರಿಸು : ಅದು ತಡತಡಾದೊಡರ್ಪಾತ್ಪದ ಮನೆ ನಾಲಗೆಗೆ ತರ್ಪುದದು ಬಾರದೊಡಿರ್ಪುದಕಾರವೊಂದಜಿೞ್ (ಆದಿಪು. ೨-೫೭) ; ಬಾಡಿದ ಪೂಮಾಲೆಯೊಡನೆ ಬಟಲ್ದ ಸೋರ್ಮುಡಿಗಳು ಮಡಿಗಡಿಗೆ ತಡದಡವಪ್ಪ ನಡೆಗಳುಂಬೆರಸು (ಆದಿಪು.೧೦-೭೦ವ). **ತಡವಾಗು**$_3$, **ತಡವಾಗ್ಯು**$_4$=೧. ತಬ್ಬಿಬ್ಬಾಗು; ಕಕ್ಕಾಬಿಕ್ಕಿಯಾಗು; ದಿಗ್ಭ್ರಾಂತವಾಗು: (?). ೨. ತೊಡಕಾಗು; ತಪ್ಪಾಗು: ಪದದಪ್ಪದೆಯುಂ ಬಗೆ ಬೆದಱದೆಯುಂ ಕತೆ ಕೆಡದೆಯುಂ ಭವಾವಳಿ ತಡವಾಗದೆಯುಂ (ಶಾಂತಿಪು. ೫-೧೧): ಸುಖದ ಸೊರ್ಮೆಯೊನಲ್ಕೆ ಪಾಡಿ ಮೆಚ್ಚಿಸುವನಿಮೇಷಗಾಯಕಿಯರಾಲಯದೊಳ್ ತಡವಾಗದೋದಿ ಬಾಜಿಸುವ ಮರುದ್ಧರಾ ವಿವಿಧವಾದ್ಯವಿಶಾರದ ವಾದಕರ್ಕಳುಂ (ಮಹಾನೀ. ೨-೪೭) ; ತಕ್ಕಳಿದು ತಡವಾಗಿ[ಪಾಠಾಂ. ಉಕ್ತಿ ತಡಬಡವೋಗಿ, ತಳರ್ದುತಡಬಡವಾಗಿ]ಪೊರೆಯೇಱಿ ನೋಡುತುಂ (ನಂಬಿರ. ೭-೧೮೦). **ತಡಮಾಡು**$_3$ = ತಳ್ಳಂಕಗೊಳ್ಳು ; ಆಕುಲಗೊಳ್ಳು ; ಕಳವಳಗೊಳ್ಳು : ರೋಮೋದ್ಗಮಂ ಪೊಣ್ಮೆ . . . ಮತ್ತಂತೆ ನಡೆ ನೋಡಿ ಚಿತ್ರದೊಳ್ ತಡಮಾಡಿ (ಜಗವಿ. ೧೭-೧೦೦ ರಗಳೆ) : ನಿಂದ ಭರಕ್ಕೆ ಧಾತ್ರಿ ನಡುಗುತ್ತಿರೆ ಮೆಟ್ಟಲಯಕ್ಕೆ ದಿಗ್ಗಜಂ ಪಿಂದಡಿಯಿಟ್ಟು ಬೆರ್ಚುತಿರೆ ಪಿಂದೆಸೆಗಳ್ ತಡಮಾಡೆ[ಪಾಠಾಂ. ವಾಗೆ]ತಾಂಡವಾನಂದದಿನಾಡುವಲ್ಲಿ ಹರಿ (ಅನಂಪು. ೫-೯೮). [ ? ]

**ತಡಂ** (ಅ). ೧. ಬೇಗನೆ ; ಕೂಡಲೆ : ಓಲೆಯುಂ ಬಾಚಿಸುವುದು ತಡಮೇಟ್ರಿಂದು ತಾಂ ಕಾಣ್ಬುದೆಮ್ಮಂ (ಕಾದಂಬ. ೨೫೯). ೨. ಮೆಲ್ಲನೆ ; ನಿಧಾನವಾಗಿ : ಸೊಗಯಿಸೆ ತೊಟ್ಟ ಪೂದುಡುಗೆ ಮೆಲ್ಲನೆರ್ದೆಯೊಳ್ ತಡಮಾಡೆ ಗಾಡಿ (ಪಂಪಭಾ. ೨-೧೮) ; ಆನೆಯುನೇಱಿ ಸೌಷ್ಠವದೆ ಬರ್ಪರಿಕೇಸರಿಯೊಂದು ಗಾಡಿಯುದ್ಧ್ವಾನಿ ತಗುಳ್ದು ಕಣ್ಣೊಳೆ ತೊಟಲ್ದೆರ್ದೆಯೊಳ್ ತಡಮಾಡೆ (ಪಂಪಭಾ. ೪-೫೮) ; ಮಲಿನಂಗಳಂ ತೊಳೆಯಿಯೂ ತಡಂಬಡಿಸಿದೆಯೊ ಬಿಂದಿಗೆಯ (ಬಸವಪು. ೪೭-೧೩). [<ತಡ$_1$ ]

**ತಡಂಗ** 'ತಟಂಕ' ನೋ.

**ತಡಂಗಡಿ, ತಡಗಡಿ** (ಕ್ರಿ). ೧. ಸಂಪೂರ್ಣ ಕತ್ತರಿಸು ; ಪೂರ್ತಿ ಕಡಿ : ಸಂಧಿ ಸಂಧಿಗಳಂ ಗಂಟುಗಡಿವುದುಂ ತಡಂಗಡಿವುದುಂ (ಸುಕುಮಾ. ೧೦-೪೭ ವ) : ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ದಿಱಿದುಂ (ಧರ್ಮಾಮೃ. ೩-೭೩) : ಮಾಳವನಂ ತಡಂಗಡಿದು (ಎಇ. XV, ೩೨೦-೨೧ : 1172) : ಕೊಯ್ಯೆ ಪೊರಳ್ಚಿ ಕುತ್ತೆ ಕೊಱೆದಿಕ್ಕಿ ತಡಂಗಡಿದೊಟ್ಟೆ ನೆತ್ತಿಯುಂ ಪೊಯ್ಯೆ (ಅನಂಪು. ೯-೩೨). ೨. ದಡವನ್ನು ಕೊಚ್ಚು ; ತಟವನ್ನು ಮೀರು : ಅದಱ ಬಿದುಮುಟ್ಟೆ ದಿವಮುಂ ಮದಧಾರಾಸಾರದಿಂ ತಡಂಗಡಿದ ವಿಯನ್ನದಿಯಸಿತಮಾಗೆ ಮೃಗಮದನದಿಯೆಂದೆವ್ವೈಪರಮುರರಘುಮರ್ಷಣದೊಳ್ (ಅನಂಪು. ೧೩-೨೦). **ತಡಗಡಿ** : ೧. ಕತ್ತಲೆಯ ಮೊತ್ತಮಂ ತಡಗಡಿದು ಬೆಳಗುತ್ತ ಪತ್ರಮಿತ್ರನುಪುದಿಸಿದ (ನವಮೋ. ೨೦-೭೩). [ತಡ$_2$ + ಕಡಿ$_1$]

**ತಡಂಗಲಸು, ತಡಂಗಲಿಸು** (ಕ್ರಿ). ೧. ಕೂಡಿಕೊಳ್ಳು ; ಒಂದಂಗೊಡು ; ಸೇರಿಕೊಳ್ಳು; ಬೆರೆ : ಆ ದೇವಗಣಿಕೆಯರ್ ಪೆಂಡವಾಸದೆಳವೆಂಡಿರೊಳ್ ತಡಂಗಲಸಿ ನಿಲೆ (ಜಗವಿ. ೦೯-೯೨ ವ). ೨. ವ್ಯಾಪಿಸು: ಲವಲಿಕೆಯೆಂಬಳಂಚು ನವರುಚಿ ತಡಂಗಲಸೆ ಪೂವಲಿಗೆದಱಿಯುಂ (ಚಂದ್ರಪು. ೧೧-೦೪೫ ವ) : ಯುವತಿಯರ ನುಡಿಯೊಳ್ ತಡಂಗಲಸಿದ ಪುಣ್ಯಾಪಾಠಕಜನಂಗಳಾಶೀರ್ವಾದನಾದಮುಮುಂ (ಚಂದ್ರಪು. ೬-೯೭ವ). **ತಡಂಗಲಿಸು** : ೧. ನೇಱಿದ ನೇಱಿಲ ಪಣ್ಗೊನೆಯ ಸೀಗುರಿಗಳಮುದಱೊಳ್ ತಡಂಗಲಿಸಿ ತೂಗುವ ಪೊಂಬಾಳೆಯ ಪೊಸ ಚಾಮರಂಗಳಂ (ಲೀಲಾವ. ೧೦-೫೫ವ) ; ನಳನಳಿಪ ಕೇಸರದ ಸಸಿಯೊಳ್ ತಡಂಗಲಿ[ಪಾಠಾಂ. ಲ]ಸಿ ಬೆಳೆದ ದವಸದ (ಚಂದ್ರಪು. ೬-೯೫ವ);ಸಂಚರಿಸುವ ಚಂಚರೀಕಚಯದಿಂಪಿನ ಸೊಂಪಿನ ಗಾವರಂ ವಿಯುಚ್ಚರಿಯರ ನೂಪುರಧ್ವನಿ ತಡಂಗಲಿಸಿತ್ತು ವಿವಾಹಗೇಹದೊಳ್ (ಶಾಂತೀಶ್ವ. ೪-೦೯೯). ೩. ಒಂದುಗೂಡಿಸು ; ಸೇರಿಸು : ಇಳಿಯುಂ ವ್ಯೋಮಮುಮುಮಂ ತಡಂಗಲಿಸಿ ದಿಕ್ಚಕ್ರಕ್ಕೆ ನಿಂದಿಕ್ಕೆ ಮಂಗಳ ತೂರ್ಯಧ್ವನಿ (ಅನಂಪು. ೦೪-೭೮). ೪. ಸಮಾನವಾಗು : ಎಲೆಪಚ್ಚೆಯ ಪಲ್ಲಣಮುಳ್ಳಲರ್ದಜ್ಜಂ ಛತ್ರಮದರ್ದಾ ನೊರೆ ಜಲ್ಲಿ ತಡಂಗಲಿಸೆಸೆಯೆ ರಾಜಹಂಸಂ ನಲವಿಂ ತೆರೆಗುದುರೆಯೇಱಿ ಕುಣಿಯಿಪನದಱೊಳ್ (ವೃಷವಿ. ೪-೦೩).

[ ತಡ$_2$ + ಕಲಸು$_1$ ]

**ತಡಂಗಲಿಸು** 'ತಡಂಗಲಸು' ನೋ.

**ತಡಂಗಲು** (ನಾ). ಅಡ್ಡಿ ; ತೊಂದರೆ : ರಾಜಕೀಯ ಕಾರಣಗಳಿಂದಲೋ ಏನೋ ಈ ಮುನ್ನಡೆಗೆ ತುಸು ತಡಂಗಲಾಗಿ (ನಂಜುಂಡ. ೩೯).

[←ತಮಿ. ತಟಙ್ಕಲ್ ]

**ತಡಂಗಾ** (ಕ್ರಿ). ನಿಲ್ಲುವಂತೆ ರಕ್ಷಿಸು ; ತಡೆದಿಟ್ಟುಕೊಳ್ಳು : ಕಣ್ಗೊಳೋಪರಂ ಕಾವುದು ಸುತ್ತಿ ಪತ್ತಿ ಸವಿಯೊಳ್ ಸೆಱೆಗೆಯ್ವುದು ಜೀವಮಂ ತಡಂಗಾವುದು (ಲೀಲಾವ. ೦೪-೪೩). [ ತಡ$_1$ + ಕಾ$_1$ ]

**ತಡಂಗಾಲ್, ತಡಂಗಾಲು, ತಡಗಾಲ್** (ನಾ) ೧. ನಡೆಗೆ ಅಡ್ಡಿಪಡಿಸುವ ಕಾಲು; ಅಡ್ಡಗಾಲು; ತೊಡರುಗಾಲು: ಕೆಲವು ಪದಂಗಳ್ ಸ್ವಭಾವದಿಂ ನಿತ್ಯಬಿಂದುಗಳಪ್ಪುವು ಅವರ್ಕೆ ಪ್ರಯೋಗಂ–ಬೆಡಂಗು . . . ತೊಡಂಕು, ತಡಂಗಾಲ್ (ಶಮದ. ಮ. ೪೭ ಪ್ರಯೋ). ೨. ಅಡ್ಡಿ ; ತಡೆ; ನಿರೋಧ; 'ತಡಂಗಾಲ್ವೊಯ್' ಪರಾ. **ತಡಂಗಾಲು** : ೨. 'ತಡಂಗಾಲಂ ಪೊಯ್' ಪರಾ. **ತಡಗಾಲ್** : ೧. ಅರೆಬರ್ ತಡಗಾಲೆಂಬಂತಬಿಂದುವು ಮನಾಚರಿಪರ್ (ಶಮದ. ೦೭೩).

**ತಡಗಾಲ್ಮಾಧವ, ತಡಂಗಾಲಮಾಧವ** = ಶತ್ರುರಾಜರಿಗೆ ತೊಡರುಗಾಲಿನಂತಿರುವ ಮಾಧವ; ಒಂದು ಬಿರುದು: ಗಂಗನಿಂ ಭಯವಿಲ್ಲದ ಹರಿವರ್ಮ್ಮ ವಿಷ್ಣುನೃಪನಿಂ ನಿಜದಿಂ ಬಲ್ಲೆ ತಡಂಗಾಲ್ಮಾಧವನಲ್ಲಿಂ ಬಳಿಚುಚ್ಚುವಾಯ್ದು ಗಂಗನೃಪಾಳಂ (ಎಕ. VII, ಶಿವಮೊ. ೫೭-೮ : 1115) : ಬಿರುದರಂ ತಡಂಗಾಲುಪೊಯ್ದುಡಿಗಿಡಿಸುವ ತಡಂಗಾಲಮಾಧವನ್ (ಎಕ. VII, ಶಿವಮೊ. ೪-೪೦ : 1122). [ ತಡ$_1$ + ಕಾಲ್$_1$ ]

**ತಡಂಗಾಲು** 'ತಡಂಗಾಲ್' ನೋ.

**ತಡಂಗಾಲುಪೊಯ್** 'ತಡಂಗಾಲ್ವೊಯ್' ನೋ.

**ತಡಂಗಾಲ್ಗೊಳ್** (ಕ್ರಿ). ಅಡ್ಡಗಾಲಾಗು ; ಕಾಲಿಗೆ ಅಡ್ಡಲಾಗಿ ಬರು : ಪೊಸವಾಣಿತಿವುಲ್ಲೆ . . . ತವಕದಿಂ ಬರುತ್ತುಂ ಕೂಡೆವರಲುಮಿರಲು ಮಱೆಯದೆ ತಡಂಗಾಲ್ಗೊಂಡು ತಡೆದು ತಡದಡವರ್ಪ ತರುಣ ಹರಿಣಂ (ಪುಷ್ಪಪು. ೩-೭೭ ವ). [ ತಡಂಗಾಲ್ + ಕೊಳ್$_1$ ]

**ತಡಂಗಾಲ್ವೊಯ್** 'ತಡಂಗಾಲ್ವೊಯ್' ನೋ.

**ತಡಂಗಾಲ್ವೊಯ್, ತಡಂಗಾಲುಪೊಯ್, ತಡಂಗಾಲ್ವೊಯ್** (ಕ್ರಿ). ಅಡ್ಡಗಾಲು ಹಾಕು; ಅಡ್ಡಿಯನ್ನು ಉಂಟುಮಾಡು; ಅಡ್ಡಡ್ಡ ಬರು: ಮೊಗೆದು ಮೊಗೆದು ನೀರ ಮೊಗಕೆ ಚೆಲ್ಲುವ ಪುಟನೆಗೆವ ತಡಂಗಾಲ್ವೊಯ್ವುದು (ಕುರಾಸಾಂ. ೨೭-೧೧೧). **ತಡಂಗಾಲುಪೊಯ್** : ಬಿರುದರಂ ತಡಂಗಾಲುಪೊಯ್ದುಡಿಗಿಡಿಸುವ ತಡಂಗಾಲಮಾಧವಂ (ಎಕ. VII, ಶಿವಮೊ. ೪-೪೦ : 1122). **ತಡಂಗಾಲ್ವೊಯ್** : ತೊಡರೆ ತಡಂಗಾಲ್ವೊಯ್ವೊಡೆ ಕೆಡೆದುಂ

. . . ಮೋದಿದೊಡಿರದೆಲ್ವಡಗಾಗಿ ಮಡಿದು ಬಿಬ್ದುವು ಗಡಣದೆ ಕರಿಘಟೆಗಳೇಂ ಬಲಸ್ಲನೋ ಭೀಮಂ (ಪಂಪಭಾ. ೧೧-೬೮) : ಎನಿತಾನುಂ ಕುತ್ಸಿತಮಪ್ಪುದಾಹರಣೆಗಳಂ ತೋಱ ಶೂನ್ಯವಾದಮುಂ ಮಾಡಿ ತಡಂಗಾಲ್ಪೊಯ್ದುದುಂ ಸಂಘಶ್ರೀಯ ವೃಥಾಲಾಪಕ್ಕೊಳಗಾಗಿ (ಧರ್ಮಾಮೃ. ೧೧-೧೫೭): ನೂಪುರದುಲಿಯ ಸನ್ನೆಗೆ ಬನ್ನನೆ ಬಂದು ಮೆಲ್ಲಡಿಗಳಂ ತಡಂಗಾಲ್ಪೊಯ್ವರ ಸಂಚಿಗಂಜಿಸೆ . . . ಮಣಿಗಂಭಮನಿಂಬುಗೊಳ್ವ ಮಂದಗಮನೆಯುರಿಂ (ಧರ್ಮನಾ. ೨-೧೩೩ ವ). [ ತಡಂಗಾಲ್ + ಪೊಯ್$_1$ ]

**ತಡಂಗಿಡಿಸು**, ತಡಗೆಡಿಸು (ಕ್ರಿ). ನೆಲೆಗೆಡಿಸು; ಆಧಾರವಿಲ್ಲದಂತೆ ಮಾಡು; ನಿರಾಧಾರಗೊಳಿಸು : ಸಿಂಧುತೋಯದಂತೆಱಗದರಂ ತಡಂಗಿಡಿಪ ನಮ್ಮರನುರ್ವಿಪ ರಾಜಲೀಲೆ ಕಣ್ದೆಱದುದು ಪುಷ್ಪದಂತ ಮಹಿಪಾಳನೊಳತ್ಯಮಳಾದ್ರ್ರಶೀಲನೊಳ್ (ಪುಷ್ಪಪು. ೦೩-೭). **ತಡಗೆಡಿಸು** : ಗಿಡುವುಗಿಸಿತ್ತು ಪಾಂಡುಸುತರಂ ಯದುವಂಶವನೊರ್ವರೊರ್ವರಿಂ ತಡಗೆಡಿಸಿತ್ತು . . . ಮಿಕ್ಕರಂ ಬಿಡುವುದೆ ಬಾತೆಗೆಟ್ಟ ವಿಧಿ (ನಳಚಂ. ೬೪೩).

[ ತಡ$_3$ + ಕಿಡಿಸು (<ಕೆಡಿಸು$_1$) ]

**ತಡಂಗು** (ನಾ). ಕುದುರೆ ಸವಾರ ಕಾಲಿರಿಸಿಕೊಳ್ಳಲು ಇರುವ ಸಾಧನ; ರಿಕಾಪು (?).

**ತಡಂಗಿನವ** = ರಿಕಾಪು ಹಿಡಿಯುವವನು ; ಕುದುರೆ ಚಾಕರ (?) : ಇಬ್ಬರೂ ಕುದುರೆಗಳನ್ನೇರಿ ಎದುರಲ್ಲಿ ನಾಲ್ಕು ಜನ ಹರಿಕಾರರನ್ನು ಬಿಟ್ಟುಕೊಂಡು ಜೊತೆಗೆ ನಾಲ್ಕು ಜನ ತಡಂಗಿನವರೊಂದಿಗೆ ಅಪ್ಪಂಗೊಳಕ್ಕೆ ಹೊರಟರು (ಚಿಕರಾ. ೩೪೨) : ಅರಸ . . . ತಡಂಗಿನವನ ಸಹಾಯದಿಂದ ಕುದುರೆಯಿಂದಿಳಿದನು (ಚಿಕರಾ. ೩೪೫). [ ? ]

**ತಡಂಗುಂಡಿ** (ನಾ). ಸುತ್ತಲೂ ಕಟ್ಟೆಯಿರುವ ನೀರಿನ ಗುಂಡಿ ; ಕೊಳ ; ಸರೋವರ : ಸರಸಿಜದ ಸಿರಿಯ ನಾನಪಹರಿಸೆಂ ಮನ್ಮುಖದಿನದುವೆ ನಿಜಮೆಂದು ತನೂದರಿ ತಂಡ[ ತಡಂ ]ಗುಂಡಿವುಗುವವೊಲರಸನ ಕೆಲದಲ್ಲಿ ಮುಱುಗಿದಳ್ ನಲಿದೊರ್ವಳ್ (ಚಂದ್ರಪ್ರ. ೭-೦೩೭): ಕರ್ಮಡುವಿನ ತಡಂಗುಂಡಿಯೊಳಡಂಗುವುವು (ರಾಮಾಶ್ವ. ೩-೦೯) : ತಡಂಗುಂಡಿಯೊಳೊತ್ತಿ ಬಾಳ್ಗಿಡಿವ ಸಂಧಾನಕ್ಕೆ (ಸಂಸಪ. ೦೯-೧೦). [ ತಡ$_2$ + ಗುಂಡಿ$_2$ ]

**ತಡಂಗೂಡು** (ಕ್ರಿ). ಬೆರಸಿಕೊಳ್ಳು ; ಕೂಡಿಕೊಳ್ಳು : ತಳಿರಂ ತೂಗಿ ಪರಾಗಮಂ[ ಪೊರೆ ]ದು ಪೂನೀರಂ ತಡಂಗೂಡಿ ಗುಗ್ಗುಳ ನಿರ್ಯಾಸಮನಾಂತು . . . ಗಂಧಂಗಳಂ ತಳೆದೇಂ ಗಂದಿಗರಂತೆ ಬಂದೊಲೆದುದೋ ಮತ್ತೊಂದು ಮಂದಾನಿಳಂ (ಅರ್ಧನೇ. ೫-೯೭). [ ತಡ$_2$ + ಕೂಡು$_1$ ]

**ತಡಂಗೆಡೆ** (ಕ್ರಿ). ಕುಸಿದು ಬೀಳು; ತತ್ತರಿಸಿ ಬೀಳು; ನೆಲೆಗೆಡು : ಪಿರಿಯ ಗುಹೆಯೊಳಡಂಗಿ ಬೆಡಂಗಳಿದು ತಡಂಗೆಡೆದಿರ್ಪ ಮಾತಂಗದಂಪತಿಗಳಂ (ಗಿರಿಕ. ೧-೧೩೮ವ): ಬೆದಱದುದಭ್ರಮೂರಮಣನೊಟ್ಟಜೆಗೆಟ್ಟುದು ಪುಂಡರೀಕಮಟ್ಟುದು ಕುಮುದಂ ತಡಂಗೆಡೆದುದಂಜನಂ (ಪುಷ್ಪಪು. ೫-೮).

[ ತಡ$_3$ + ಕೆಡೆ$_1$ ]

**ತಡಂತಡಿಸು** 'ತಡತಡಿಸು' ನೋ.

**ತಡಂತೊಡರ್** (ಕ್ರಿ). ಸಮನಾಗಿ ತೊಡಕಿಕೊಳ್ಳು; ಚೆನ್ನಾಗಿ ಸೇರಿಕೊಳ್ಳು: ಸಂಚಳ ಮಿಾನಸಂಚಯಂ ಪೂದುಱುಗಲ್ ತಡಂತೊಡರ್ದು ತೋರ್ಪವೊಲೊಪ್ಪಿರೆ ಕೊಂಕುವೆತ್ತ ಸೀತೋದೆ ಸಡಿಲ್ದು ನೀಳ್ದ ಶರದಿಂ ನಿಱಗೊಂಡು ಬಟಲ್ದ ಭಂಗಿಯಿಂ (ಅರ್ಧನೇ. ೧-೬೧). [ ತಡ$_2$ + ತೊಡರ್$_1$ ]

**ತಡಂನುಡಿ** (ನಾ). ನಿಧಾನವಾಗಿ ಆಡುವ ಮಾತು ; ತಡೆದು ತಡೆದು ಆಡುವ ಮಾತು : ನಡೆತಂದರ್ ಚೆಲ್ವಿಂದೊಳ್ನುಡಿಯ ತಡಂನುಡಿಯ ತೊಡಳ ನುಡಿಯೊಳ್ವೆಂಡಿರ್ (ಜಗವಿ. ೪-೧೨೭). [ ತಡ$_1$ + ನುಡಿ$_2$ ]

**ತಡಂಬಡ** 'ತಡಬಡ' ನೋ.

**ತಡಂಬಡಿಸು** 'ತಡಬಡಿಸು' ನೋ.

**ತಡಂಬಡು$_1$** (ಕ್ರಿ). ತಡಮಾಡು ; ವಿಳಂಬಮಾಡು : ಈಗಳೆನಸುಂ ತಡಂಬಡದೆ ಬಣ್ಣಿಸಿ ನಿನತೊಂದೊಲ್ಮೆವಡೆದಪೆಂ (ರಾಮಾಶ್ವ. ೮೮-೧೫) : ತಡಂಬಡದಯ್ಯನ ನೇಹದಿಂ ತಾಂ ಮಱುಗದೆ ಬಗೆಗುಂದದೆ ಕಾಂತನಂ ರಣಕೆ ಬೀಱೊಟ್ಟಳ್ (ರಾಮಾಶ್ವ. ೧೩೧-೫).

[ ತಡ$_1$ + ಪಡು$_1$ ]

**ತಡಂಬಡು$_2$** 'ತಡಬಡು' ನೋ.

**ತಡಂಬಡು$_3$** (ಕ್ರಿ). = ತಡಂಬಡೆ : ಸೂಸುವ ಶೀಕರಾಳಿ ತಾರಕಗಣದೊಳ್ ಸಮಂಬಡೆಯೆ ತೇಂಕುವ ಮೌಕ್ತಿಕ ರತ್ನಗರ್ಭಶುಕ್ತಿಕೆ ಪೆಱಯೊಳ್ ತಡಂಬಡೆ ಸುಧಾರ್ಣವಮೊಪ್ಪಿದುದುದ್ಗತಾರ್ಣವಂ (ಜಗವಿ. ೧-೪೪).

[ ತಡ$_2$ + ಪಡು$_1$ ]

**ತಡಂಬಡೆ** (ಕ್ರಿ). ಸಮಂಕ್ಕೆ ಬರು; ಸಮಾನತೆಯನ್ನು ಪಡೆ; ಸರಿಯಾಗು: ಹೀರಮನೊಂದಿಸಿದ ಹಾರಮನುರಸಿಜಕೆಳಲಿಟ್ಟು ಸುಧಾಗಾರಮನೇಱ ತಡಂ[ಪಾಠಾಂ. ಱತೆಡ್ಡಂ]ಬಡೆದಳ್ ನೀಹಾರಮಹೀಧರಮಂ ಪರ್ವಿದ ಶೃಂಗಾರಮರುಲ್ಲತೆಗೆ (ಉದ್ಭದೇ. ೪-೪೪).

**ತಡತಡಂಬಡೆ** (ದ್ವಿರುಕ್ತಿ) : ತುಂಬಿಗುರುಳೊಳ್ ತಡತಡಂಬಡೆದು ತುಂಬಿಗಳ ಬಿಂಬಮೆಳಸುತಿರೆ (ಸೂಕ್ತಿಸು. ೦೩-೧೦). [ ತಡ$_4$ + ಪಡೆ$_1$ ]

**ತಡಂಬರ್**, ತಡವರ್ (ಕ್ರಿ). ೧. ತಡವಾಗಿ ಬರು; ನಿಧಾನವಾಗಿ ಬರು (?) : ಮತ್ತೊಂದು ದಿವಸಂ ಪ್ರಭಂಕರಿಯೆಂಬ ಕೊಳದೊಳ್ ಸ್ವೇಚ್ಛೆಯಿಂ ನೀಡುಂ ಕ್ರೀಡಿಸುತ್ತಂ ತಡಂಬಂದು ಮನಃಪೂರ್ವಕಮಲ್ಲದೆ ಪೊಜಿಮಡುವಾಗಳ್ (ವಡ್ಡಾರಾ. ೩೭-೩೦). **ತಡವರ್** : ೨. ಅಡ್ಡಿ ಬರು: ತಲೆಗರೆಯದಣ್ಮ ಸತ್ತರ ತಲೆಗಳನಟ್ಟೆಯೊಳಮರ್ಚಿಕೊಂಡೊಯ್ವೆಡೆಯೊಳ್ ತಲೆ ತಡವರಲಮರಿಯರೇಂ ತಲೆಯಂ ತಲೆವಿಡಿದು ಬಡದೆ ತಲೆವತ್ತಿದರೋ (ಪಂಪರಾಮಾ. ೧೩-೫೭) ; ನಟ್ಟರೆ ಕಿವಿಯುಂ ಕಣ್ಗಳ್ ಬಟ್ಟರೆ ಮೆಯ್ಯಱಯುದೆಱಗಿ ತಡವಂದು ತಡಂಮೆಟ್ಟೆ . . . ಕರಂ ವಿಕಲನಾದ ತುರಗಂ ಸಾಯ್ಗುಂ (ಅಶ್ವಶಾ. ೧೧-೪೭). [ ತಡ$_1$ + ಬರ್$_1$ ]

**ತಡಂಬರ** (ನಾ). ಕಳವಳ; ಗಾಬರಿ; ಸಂಕಟ: ತಲ್ಲಳ (ತಲ್ಲಣ), ತಳಮಳ, ತಡಂಬರ, ಕಳವಳ, ಸಿಡಿಮಿಡಿ, ಕಸಿವಿಸಿ, ಬೇಗುದಿ, ಅಳಲು, ತೊಳಲು (ಕೆಂನುಡು. ೮೪). [ ? ]

**ತಡಂಬರಿ** (ಕ್ರಿ). ೧. ಮುನ್ನುಗ್ಗು (?) : ತಳರೆ ತಳಚ್ಚುರ್ವಂಗೆ ಕನಕಾಚಳಮೊತ್ತುವವಂಗೆಲೇ ವಿಯತ್ತಳಮುಲಿವರ್ಣಂಗೆ ತೀವಿ ತೆಗೆದಂಬು ತಡಂಬರಿವಂಗೆ ಕಂಟಕಪ್ರಳಿಯಂ . . . ಚಟ್ಟಮನೆಂಬ ಜೆಟ್ಟಿಗಂ. (ಎಕ. XI. ದಾವಣ. ೪೩-೪೮ ; 1164). ೨. ಹೊರಹೊಮ್ಮು.–ಸೂಸು : ಮುಸುಂಕುವ ಕುಂಕುಮಾಂಬು ಸಂಕುಲದೊಳದೊಂದು ಕೆಮ್ಮುಗಿಲ ಕಾವಣದೊಳ್ ಕುಡಿಮಿಂಚುಗಳ್ ತಡಂಬರಿವವೊಲೇಂ ಬೆಡಂಗಡರ್ದರೋ ರುಚಿಮದ್ವಿಚಳಲ್ಲ ತಾಂಗಿಯರ್ (ಅನಂಪು. ೭-೨೮).

**ತಡಂತಡಂಬರಿ** (ದ್ವಿರುಕ್ತಿ) : ಪಿಡಿದರಂಗನೆಯಂ ಪಿಡಿದೊಯ್ದರೆಂದು ತಲ್ಲಱಸಿ ತಡಂತಡಂಬರಿಯೆ ಪುಯ್ಯಲ ಗಾವಳಿ ಕೆಯ್ಯನಿಟ್ಟುದೀ ತೊಡಸಿದ ಪಾಂಗೆ ಕಿಟ್ಟಲೆ ಕಿಱುಂದಲೆಯಾದುದು ಕೂಡೆ ಪಟ್ಟಣಂ (ಅನಂಪು. ೧೧-೭೩).

[ ತಡ$_2$ + ಪರಿ$_2$ ]

**ತಡಂಬರೆ$_1$** (ನಾ). ಅಡ್ಡಿಪಡಿಸುವಿಕೆ ; ಪ್ರತಿಭಟನೆ : ತಳ್ಪೊಯ್, ತಡಂಬರೆ ಪೋರ್ಕುಳಿ . . . ವಿಗು, ತಡಂಬೊಯ್ . . . – ಈ ೨೫ ಪ್ರತಿಹತಕ್ಕೆ ಪೆಸರ್ " (ಕಶಸಾ. ೧೫-೨೯೭) : " ತಡಂಬರೆಯು ಪ್ರತಿಹತಾಖ್ಯಂ " (ಕವಿಕಂ. ೧೩೯). [ ತಡ$_1$ + ಬರ್$_1$ + ? ]

**ತಡಂಬರೆ$_2$** (ನಾ). ಸಮನಾದುದು: " ತಡಂಬರೆಯುಮೆಂದು ಸಮನೆನಿಪುದಕ್ಕೆ ನಾಮಂ " (ಕಬ್ಬಿಕ್ಕ. ೬೯).

[ ತಡ$_3$ + ಬರ್$_1$ + ? ]

**ತಡಂಬಾಯ್**, ತಡವಾಯ್, ತಡವಾಯಂ, ತಡಹಾಯು (ಕ್ರಿ). ೧. ಅಧಿಕವಾಗು; ಅತಿಶಯವಾಗು; ಮೇರೆವಿಾರು: ಬಿಲ್ಲಂ ನಿಷಾದಿಗಳಂ ದೊಲ್ಲದೆ ಕಿಟ್ಟಿ ಗೇಣೊಳಿ ತಡಂಬಾಯ್ದುಯ್ದ ತದ್ವೈರಿಯೋಧಿಗಳಂ ತಾನನೆ ತಕ್ಕಿನೆಕ್ಕತುಳದಿಂ ಕೈಯಾರ್ವಿನಂ ಕಾದಿದರ್ (ಚಂದ್ರಪ್ರ. ೧೦-೮೩). **ತಡವಾಯ್**: ೧. ಹೊತ್ತುವೆದೆಗಳ ಹೊಗೆವ ಮೋಹೆಯ ಕಿತ್ತಡದ ಕಡುಗೋವ ಸುವತ[ಪಾಠಾಂ. ಸವುತ]ಗಳಿತ್ತಡಿಯ ತಡವಾಯ್ದು ನೃಪ ರೈತಂದರೊಗ್ಗಿನಲಿ (ಕುಮಾ.ಸ. ೧೬-೬೭). ೨. ಸಮನಾಗು; ಸಾಟಿಯಾಗು: ವರವರಧವಳಾಂಗದ್ಯುತಿ ಚರಚರದೂರ್ವಿಗ ಸ್ಫುಟತ್ತಟೋಜ್ಜ್ವಲ ಫೇನೋತ್ಕರಕರದೊಳ್ ತಡವಾಯ್ದಿರೆ ಪರಿಪರಿ ರಂಜಿಸುವುದೊಂದು ಕೊಳನಂ ಕಂಡಂ (ಜಗವಿ. ೧೦-೫೮); ಅಳಿಗೆ ಕುರುಳ್ ತಳಿರ್ಗೆ ತಳಂ ಕಳಿಕೆಗೆ ಬೆರಲಲರ್ಗೆ ಕಣ್ಮಲರ್ ದೊರೆಯೆನೆ ಕೋಮಳಲತೆಗಳೊಳಂ ಸಲೆ ಕೋಮಳೆಯರ್ ತಡವಾಯ್ದುರೆಯ್ದೆ ಪೂಗೊಯ್ವೆಡೆಯೊಳ್ (ಚಂದ್ರಪ್ರ. ೬-೯೯). **ತಡವಾಯು**: ೧. ರಾಯರೆಲ್ಲರ ಗೆಲಿದು ತಂದೆನು ನಾಯಕವನನುಪಮಿತ ಮೌಲ್ಯವನಮಲ ಮೌಕ್ತಿಕವ ತಾಯೆ ಚಿತ್ತೈಸಿದಿರೆಯೆನೆ ತಡ[ಪಾಠಾಂ. ಕಡೆ] ವಾಯಿದಳು ತನಿಹರುಷದಲಿ ಲೇಸಾಯಿತೈವರು ಕೂಡಿ ಭೋಗಿಪುದೆಂದಳಾ ಕುಂತಿ (ಕುಮಾ.ಆ. ೧೬-೬). **ತಡಹಾಯು**: ೩. ಎಲ್ಲೆಯನ್ನು ದಾಟಿ ಹೋಗು; ನುಗ್ಗಿಹೋಗು: ಕೊಪ್ಪರಿಗಗೆಳೇಳನು ತಡ[ಪಾಠಾಂ. ಟ] ಹಾಯಲೆಸುವನು (ಕುರಾಸಾಂ. ೧೮-೪೦): ಹೆಣ್ಣಾನೆಯು ಅದನ್ನು ತಡ ಹಾಯ್ದು ಬೇರುಸಹಿತವಾಗಿ ಕೆಡವಿದಂತೆ ಆಯಿತು (ತುಳಸಿ. ೦೦೪).

[ ತಡ$_3$ + ಪಾಯ್$_1$ ]

**ತಡಂಬುಗಿಸು** (ಕ್ರಿ). ಕೂಡಿಸು; ಸೇರಿಕೊಳ್ಳುವಂತೆ ಮಾಡು; ಬೆರಸು: ಆ ನರ್ತಕಿಯರ ಬಳ್ಳಿಗುರುಳ ಬಂಬಲೊಳ್ ತುಂಬಿಯ ಬಂಬಲಂ ತಡಂಬುಗಿಸೆ (ಅನಂಪು. ೧೦-೩೩ವ). [ತಡಂಬುಗು (<ತಡಂಬೊಗು)+-ಇಸು$_3$]

**ತಡಂಬುಗು** 'ತಡಂಬೊಗು' ನೋ.

**ತಡಂಬೂರು** (ನಾ). ಒಂದು ಊರಿನ ಹೆಸರು: ಪರಮೇಶ್ವರ ದತ್ತಿಯಾಗಿ . . . ಗುಡಿಯುೂರು ತಡಂಬೂರು . . . ಧಾರಾಪೂರ್ವಕಂ ಮಾಡಿ ಕೊಟ್ಟರ್ (ಕಇಆ. ೧೦೯-೧೫-೩೫; 1050). [ ? + ಊರು$_3$ (<ಊರ್) ]

**ತಡಂಬೊಗು**, ತಡಂಬುಗು (ಕ್ರಿ). ಒಂದರೊಡನೊಂದು ಸೇರಿಕೊಳ್ಳು; ಸಮನಾಗಿ ಬೆರೆ; ಮಿಶ್ರವಾಗು: ದೆಸೆಯಂ ತಳ್ಪೊಯ್ಯೆ ಕೀರ್ತಿಪ್ರಸರ ದೊಡನೆ ಕಾಲ್ಗೂಡಿ ತೀವ್ರಪ್ರತಾಪಂ . . . ಧರ್ಮಾವಸಥಂ ತಾನಾಗೆ ದಾನೋನ್ನತಿಯೊಡನೆ ತಡಂಬೊಕ್ಕು ಸತ್ಯವ್ರತಂ (ಎಕ. V. ಚನ್ನರಾ. ೨೦೩-೯; 1223). ತಡಂಬುಗು: 'ತಡಂಬುಗಿಸು' ಪರಾ. [ ತಡ$_4$ + ಪೊಗು ]

**ತಡಂಬೊಯ್$_1$**(ಕ್ರಿ). ೧. ವಿರೋಧಿಸು; ಪ್ರತಿಭಟಿಸು. ೨. ಜೋರಾಗಿ ಹೊಡೆ (?): ಪಿಡಿದೊಂದೊಂದಱ ಗಾತ್ರಮಂ ಶಿರಿಪಿಕೊಡೊಂದೊಂದಱೊಳ್ ಪೊಯ್ದು ಮೆಲ್ಪಡಗಪ್ಪನ್ನೆಗಮೆತ್ತಿಕೊಂಡಸಗಪೊಯ್ಲೊಳ್ ತಡಂಬೊಯ್ದಂ[ಪಾಠಾಂ. ಪೊಯ್ಯುತುಂ, ಪೊಯ್ದುಂ, ಪೊಯ್ದೊಯ್ದು] . . . ಕೊಂದಂ ಮದೇಭಂಗಳಂ (ಪಂಪಭಾ. ೧೦-೧೦೪): "ಬಿರಂಸಾಗಿ, ಜೋರಾಗಿ ಹೊಡೆದಂ" (ಪಂಪದೀ. ೩೭೪). [ ತಡ$_1$ + ಪೊಯ್$_1$ ]

**ತಡಂಬೊಯ್$_2$** (ನಾ). ಅಡ್ಡಿಪಡಿಸುವಿಕೆ; ಪ್ರತಿಭಟನೆ: "ತಳ್ಪೊಯ್, ತಡಂಬರೆ . . . ತೊಡರ್, ಉರ್ಕೇರ್ಕೆ, ಮಿಗು, ತಡಂಬೊಯ್-ಈ ೨೫ ಪ್ರತಿಹತಕ್ಕೆ ಪೆಸರ್" (ಕಶಸಾ. ೧೫-೨೯೬). [ ತಡ$_1$ + ಪೊಯ್$_2$ ]

**ತಡಂಮಾಡು**, ತಡಮಾಡು$_1$ (ಕ್ರಿ). ತಬ್ಬಿಬ್ಬುಗೊಳಿಸು; ದಾರಿತಪ್ಪಿಸು; ತಳ್ಳಂಕಗೊಳಿಸು: "ತಡಮಾಡು, ತಡಂಮಾಡು – ವಿಪರ್ಯಾಸೇ (ದಾರಿ ತಪ್ಪಿಸು)" (ಶಮದ). **ತಡಮಾಡು**: ೧. "ತಡಮಾಡಿದಂ=ತಳ್ಳಂಕಗೊಳಿಸಿದಂ" (ಶಮದ. ಪರಿ. ೨): "ತಡಮಾಡಿದನೆನಲ್ಕೆ ತಳ್ಳಂಕಗೊಳಿಸಿದಂ" (ಶಬ್ದಕೈ. ೯೦). [ ತಡ$_4$ + ಮಾಡು$_1$ ]

**ತಡಂಮೆಟ್ಟು**, ತಡಮೆಟ್ಟು (ಕ್ರಿ). ೧. ಸಾವಕಾಶವಾಗಿ ನಡೆ; ನಿಧಾನಿಸು: ಚತುರಂಗಂ ಚತುರಂಗಸೈನ್ಯದೊಳಡು[ತುರ್ಗಂ]ತಿಜ್ಜನೆಯ್ತಂದು ತಾಗಿ ತಡಂಮೆಟ್ಟದೆ ಕಾದೆ (ಪಂಪಭಾ. ೧೧-೭); ಗುರುಜಘನಭರಂಗಳಿಂ ತಡಂಮೆಟ್ಟುತುಂ . . . ಸೀತೆ ಸೆಡೆದು ಮೆಲ್ಲನೆ ನಡೆದಳ್ (ಪಂರಾಮಾ. ೭-೩೭); ಮೆಯ್ಯುಱಿಯದೆಱಗಿ ತಡವಂದು ತಡುಮೆಟ್ಟಿ ತಿದಿಯಂತೆ ಬಾತಿರೆ ಪೊಟ್ಟೆ ಕರಂ ವಿಕಲನಾದ ತುರಗಂ ಸಾಯ್ತುಂ (ಅಶ್ವಶಾ. ೧೧-೪೭). ೨. (ಭಯದಿಂದ) ಮುಗ್ಗರಿಸು: ಬೆರ್ಚಿ ಪೊಳೆದು ಪರಿವ ಪೊಳೆವುಲ್ಲೆಗಳುಮಂ . . . ಸೋಂಕಿ ಪರಿವೆಯ್ಗಳುಮಂ ತಡಂಮೆಟ್ಟಿ ಪರಿವ ಕಡವಿನ ಕಾಡಮ್ಮೆಯ ಮರೆಯ ಪಿಂಡುಗಳುಮಂ (ಪಂಪಭಾ. ೫-೪೮ವ). **ತಡಮೆಟ್ಟು**: ಹರಳೊತ್ತಿ ಸೆಡೆವುತಂ . . . ಗುರು ಜಘನ ಭಾರದಿಂ ತಡಮೆಟ್ಟುತಂ(ಕುಮುರಾ. ೬-೩).

**ತಡತಡಮೆಟ್ಟು** (ದ್ವಿರುಕ್ತಿ): ಜೋಲ್ವ ಝೋಂಪಿಸುವ ಭಂಗಿ ಮಸಂಗೊಳೆ ತಕ್ಕಿನೆಕ್ಕಿಯೊಳ್ ತಡತಡಮೆಟ್ಟಿ ಪಾಡಿ ಪೊಸಕಳ್ಗಳನೀಂಟಿದುದಂಗನಾಜನಂ (ಸೂಕ್ತಿಸು. ೧೩-೭); ಕಡಲಿಟ್ಟಳಿವ ಕಂಬನಿಯು ತಡತಡಮೆಟ್ಟಿ ಬಳಲುತ ಬಳುಕುತೇಳುತ . . . ಗೋಳಿನಲವಿಳಿಜನ ನಡೆತಂದುದರಮನೆಗೆ (ನಿಧಾಗ. ೪-೧೨-೫). [ ತಡ$_1$ + ಮೆಟ್ಟು$_1$ ]

**ತಡಕಯ್** 'ತಡಕೆಯ್' ನೋ.

**ತಡಕಲ್** (ನಾ). ಒಂದು ಊರಿನ ಹೆಸರು. P ಈಗಿನ ಮಹಾರಾಷ್ಟ್ರದ ತಡಿಖೇಲ್: ದಯಿಗಾವೆಯು ತಡಕಲ್ಲೆಡೆವೊಲದಲೆರಡೂರ ಪ್ರಜೆಗಳ ಸನ್ಮತದಿಂ ಬಿಟ್ಟ ಕರಿಯ ನೆಲಂ (ನಾಂದೇಡ್. ೮-೩೪; 1070): ತಡಕಲ್ಲ ಪ್ರಭು ದಣ್ಣನಾಯಕಂ ನಾಗವರ್ಮ್ಮಯ್ಯನುಂ (ನಾಂದೇಡ್. ೮-೪೧; 1070).

[ ? ]

**ತಡಕಸ** 'ತಡಗಸ' ನೋ.

**ತಡಕಾಟ** (ನಾ). ಹುಡುಕಾಟ; ಅರಸುವಿಕೆ: ಒಡಕುಬಾಯಿಯು ಸಿಡುಕು ಕೆಡಕುನುಡಿ ಮಾರ್ನುಡಿಯ ತಡಕಾಟ ಪರಿದಾಟವನಿತುವರೆಗೆ (ಧಾವಜೀ. ೨-೩೪). [ <ತಡಕಾಡು ]

**ತಡಕಾಡು** (ಕ್ರಿ). ೧. = ತಡಕು ೧: ಕತ್ತಲಲ್ಲಿ ತಡಕಾಡುವವನಿಗೆ ಬೆಳಕು ಸಿಕ್ಕಂತಾಯಿತು (ಹಂಗೀತ. ೮೭); ಬೆಂಕಿ ಪೊಟ್ಟಣಕ್ಕಾಗಿ ಅಂಗಿಯ ಕಿಸೆಗಳನ್ನು ತಡಕಾಡಿದ (ಮುನ್ನುಡಿ. ೨); ಒಂದೊಂದು ದಿನ ನನಗೆ ಪಾಠ ಹೇಳಿ ಕೊಡುವಾಗ ಮಾತಿಗೆ ತಡಕಾಡಿ, ಜ್ಞಾಪಕಕ್ಕೆ ಬರದೆ, ಆತನಿಗೆ ನಾಚಿಕೆಯಾಗುತ್ತಿತ್ತು (ನಿಬಂಧ. II, ೭೮). ೨. = ತಡಕು ೨: ಅವನ ಮಾತುಗಳು ನೇರವಾಗಿ ಹೃದಯವನ್ನು ತಡಕಾಡಿದವು (ಮಹಾತ್ಮಾ. ೭೫). [ ತಡಕು + ಆಡು$_1$ ]

**ತಡಕಿಲು** (ನಾ). ಒಂದು ಬಗೆಯ ಔಷಧಿ ಸಸ್ಯ: ತಡಕಿಲು ಬೇರನ್ನು ಗೋಮೂತ್ರದಲ್ಲರೆದು ಕುಡಿಯಲು ರಕ್ತಕಾಸ ನಿಲ್ಲುವುದು(ಸಕವೈ.ಪರಿ.೪೩೩). [?]

**ತಡಕಿಸು** (ಕ್ರಿ). ತಡಕುವಂತೆ ಮಾಡು; ಹುಡುಕಿಸು: (೩).

[ ತಡಕು + -ಇಸು$_3$ ]

**ತಡಕು** (ಕ್ರಿ). ೧. (ಕತ್ತಲಲ್ಲಿ) ಕೈಯಾಡಿಸಿ ನೋಡು; ತಡವರಿಸು; ಹುಡುಕು; ಅರಸು: ಬೆಟ್ಟಂಗಾಡನಡರ್ದು ಪೊಕ್ಕು ತಡಕುತ್ತಾ ದಿಟ್ಟಿ ಮುಂಗೆಟ್ಟು(ಹರಿಶ್ಚಂ.ರ. ೮-೩೩); ಒಂದು ಗೊಂಟನೊಳಾನಿರಲ್ಕೆ ಕರತಳದಿಂದ ತಡಕಿ ಕಂಡನ್ನ ತಲೆಯಂ ಸೊಣೆದು (ಪಾಸೋಪು. ೧೧-೨೯); ಬರೆಬರೆದಂತದಂ ತೊಡೆದು . . . ಒಂದುಮಂ ಸರಸ ಪದಾರ್ಥಮುಂ ತ[ಪಾಠಾಂ. ತು]ಡಕಿ ಕಾಣದೆ. ಕಳ್ದು ಪರೋಕ್ತಿಯುಕ್ತಿಯುಂ (ರಾಜಶೇ. ೧-೩೩): ಪುಣ್ಯಭೂಮಿಗಳೆಲ್ಲಲ್ಲಾ ವ್ಯಾಪಿಸಿ ತಡಕಿ ನೋಡಿದಾಗ್ಯೂ . . . ಕಾಣದೆ (ಅರ್ಹಾವಿ. ೨೯ ಸೂಚನೆ.); ಎರಡೂ ಜಗಲಿಗಳನ್ನು ತಡಕಿ ನೋಡಿದ (ಅನಾಥ ೧೪೨). ೨. ತಗುಲು; ತಾಕು; ಮುಟ್ಟು: ಕಣಜದಲ್ಲಿನ ಅಕ್ಕಿ ತೆಗೆಯುವುದಕ್ಕೆ ಕೈಹಾಕಿದ ತುಳಸಾಬಾಯಿಗೆ ಕೈಗೆ ಏನೋ ತಡಕಿದ ಹಾಗಾಯಿತು (ನಡೆದಾ. II, ೮೩೪). 'ತಡವು$_1$' ಪರಾ.

ತಡತಡಕು (ದ್ವಿರುಕ್ತಿ) : ಆ ನೆನಹಿನೊಸಗೆಗಳ ನಿಧಿಗೊಳುತ, ಗುಡಿಯ, ನಿಂತೆ ನನ್ನ ಮಾನಸ ನಿನ್ನ ಶ್ಯಾಮಸುಂದರಗರ್ಭದೊಳಗವನು ತಡತಡಕಿ ತೀರದಂತೆ (ಮುರದೇ. ೨-೧೧). [ <ತಡವು$_{2}$ + – ಕು ]

**ತಡಕೆ** 'ತಡಿಕೆ' ನೋ.

**ತಡಕೆಪಂದ್ಯ** 'ತಡಿಕೆಪಂದ್ಯ' ನೋ.

**ತಡಕೆಯ್**, ತಡಕಯ್, ತಡಕ್ಕೈ, ತಡೆಕ್ಕೈ (ನಾ). ಅಪ್ಪುಗೆ ; ತೆಕ್ಕೆ ; ಆಲಿಂಗನ: "ಪಟ್ಕತಟ್ಕ್ಯಸಿದಂ[ಪಾಠಾಂ. ಬಳ್ಕ ತಟ್ಕ್ಯಸಿದಂ, ಪಟ್ಕ್ಯಸಿದಂ]= ತಡಕೆಯ್ಯಂ[ಪಾಠಾಂ. ಕಯ್ಯಂ, ಕೈಯಂ, ಕೈಸಂದು]ಮಾಡಿದಂ" (ಕಮಿದ. ೫೦. ೧). **ತಡಕಯ್** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ತಡಕ್ಕೈ** : "ಪಟ್ಕ ತಟ್ಕ್ಯಸಿದನೆಂಬಲ್ಲಿ ತಡಕೈಯ್ಯಂ ಮಾಡಿದನೆಂಬರ್ಥಂ" (ಕಮಿದ. ೧೯ ಪ್ರ ಯೋ). **ತಡೆಕ್ಕೈ** : ವ್ಯಡನತಿ ಸಂತಸದಿಂದರ ತಡೆಕ್ಕೈಯಂ ಮಾಡಿ ಮುದ್ದಿಸುತ್ತಿನಿವಾತಂ ನುಡಿವುತ (ವೀರವಿ. ೮-೫೧). [<ತಟ್ಕ್ಯ ]

**ತಡಕ್ಕೈ** 'ತಡಕೆಯ್' ನೋ.

**ತಡಗ** (ನಾ). ಗಂಟು ; ಮೂಟೆ : ದೇವಾಂಗವಸ್ತ್ರಂಗಳು ಮುಂತಾದ ಸೆಲೆ ತಡಗ ಗಂಧ ಕಸ್ತೂರಿ ಕರ್ಪೂರ ಬಾಳು ಜವಾದಿ . . . ಮುಂತಾದ ಸಮಸ್ತ ಬೆವಹಾರಕೆಉ (ಎಕ. XII, ಸಿರಾ.೬೬-೧೪; 1870); ಪಠ್ಯಾವಳಿ ಮಂಚಿಪ್ಪಿಯ ಕಾಂಚಿನಾಲದ ಜವಳಿಯ ತಡಗದ[ ವ ]ಬೀಜಾದರು (ಜ್ಞಾನಸಿಂ. ೬-೬೩) : ಗುಡಿ ಗೂಡಾರ ಸರಾತಿಪಟ್ಟಿಗೆ ಚೋನ ಗುಡಿಕೆ ನೂತನ ವಸ್ತ್ರಗಳ ತಡಗಗಳಾದಿ ನಾನಾ ಹೊಜಕಾಜಿರ ಗಡಣವೆಸೆದುದಲ್ಲಲ್ಲಿ (ರಾಮವಿ. ೬-೧೩) : ಉರಿಯ ಮಳೆ ಸಂಗಡಿಸಿದೆಡೆಯೊಳು ಸಸಿದ ಹತ್ತಿಯು ತಡಗಮುಳಿವುದೆ (ಅಂಬಿಕಾ. ೩೧-೨೧). [ ? ]

**ತಡಗಡಿ** 'ತಡಂಗಡಿ' ನೋ.

**ತಡಗಣೆ** 'ತಡಗುಣೆ' ನೋ.

**ತಡಗಸ**, ತಡಕಸ (ನಾ). ಕ್ಷೋಭೆ ; ತೊಂದರೆ ; ಅಪಾಯ ; ಕೇಡು : "ತಡಗಸಮೆನಲುಪಹತಿಯಕ್ಕು" (ದಶುನಿ. ೨೦೨) ; ಕಾಯ ತಡಗಸವ ಪರಿಹರಿಸು ಎಂದಾಣತಿಯನಿತ್ತು (ಕಗದ್ಯ. ೬೯). **ತಡಕಸ** : "ತಡಕಸ [ಪಾಠಾಂ. ತಡಗಸ, ಗಡಗಸೆ]ಮೆನಲುಪಹತಿಯಕ್ಕು" (ಧಾರವಿ. ೬೦). [?]

**ತಡಗಾಲ್** 'ತಡುಂಗಾಲ್' ನೋ.

**ತಡಗು** (ಕ್ರಿ). ತಡೆ; ಅಡ್ಡಿಪಡಿಸು : ಇಂತಪ್ಪವಂ ತಡಗ[ಪಾಠಾಂ. ಸ]ಲಾಗದೆಂಬುದುತ್ತರ ವಾಕ್ಯಂ (ನೀತಿವಾ. ೨೪-೧೧).

[ ದೇ.I ತಮಿ. ಮಲ. ತಟುಕ್ಕು ]

**ತಡಗುಂಡಿಗೆ** (ನಾ). ಜಲಪಾತ್ರೆ : "ತಡಗುಂಡಿಗೆಯನಲ್ಕೆ ತಾಂ ಜಲಪಾತ್ರ [ಪಾಠಾಂ. ಜಲಪ್ರತ್ಯಯಾಖ್ಯಂ]" (ಶಬ್ದಕ್ರ. ೬೫). [ ತಡ$_{1}$ + ಗುಂಡಿಗೆ ]

**ತಡಗುಣೆ**, ತಡಗಣೆ, ತಡುಗಣೆ, ತಡುಗುಣೆ (ನಾ). ಒಂದು ಬಗೆಯ ದ್ವಿದಳಧಾನ್ಯ; ಅಲಸಂದೆ; ಕಾರಾಮಣಿ: ಹೆಸರು ತಡಗು[ಪಾಠಾಂ. ಗ]ಣೆ ಕಡಲೆತೊಗರಿಗಳ ಬೇಳೆಯಂ ಹೊಸಬೆಲ್ಲವಿಕ್ಕಿ ಬೇಯಿಸಿ (ಸೂಪಶಾ. ೧-೬೦). **ತಡಗಣೆ**: ಅಲಸಂದಿ, ತಡಗಣೆ (ಮೃಡಗಿ. ೬೬-೧೫೯೦). **ತಡುಗಣೆ**: ಬದನೆ ಹೆಗ್ಗುಳ್ಳ ಪಡವಲ ಪಲಸು ತಡುಗಣೆ ಬಾಳೆ ಚಪ್ಪರದವರೆ (ಅನಂರಾ. ೬-೨೫-೩೯). **ತಡುಗುಣೆ** : ಎಳದಾದ ಕಡಲೆ ತಡುಗುಣೆ ಹೆಸರು ಕುಸುಬೆ ಮೊದಲಾದ ಹುರುಕಲು ರುಚಿನೋಡುತ್ತ (ಸೌಗಂಧಿ. ೩೬-೧೧).

**ತಡಗೆಡಿಸು** 'ತಡಂಗಿಡಿಸು' ನೋ.

**ತಡಗೆಯ್** (ಕ್ರಿ). ತಡೆ; ನಿಲ್ಲು; ಕಾಯು: ನಾಳಿನುದಯಕ್ಕೆ ಕೋಂಟೆಯ ನಿಕ್ಕಿಸಿದ ಬಳಿಕ ಪಾಳೆಯಂ ಸಹಿತ ಬಿಜಯಂಗೆಯ್ವರೆಂಬ ನುಡಿಗೇಳಿಯಂತೆಯ ಗೆಯ್ವೆನೆಂದು ತಡೆಗೆಯ್ದು (ಸಮ್ಯಕ್. ೨-೫೨).

[ ತಡ$_{1}$ + ಕೆಯ್$_{1}$ ]

**ತಡಗೊಳ್** (ಕ್ರಿ). ತಡಮಾಡು; ವಿಳಂಬಮಾಡು: ತಡಗೊಂಡೆ[ಪಾಠಾಂ. ಡ] ನಲ್ಲದೆ ಹಿಡಿಯೆ ನಾ ಕದ್ದನೆ (ಸರ್ವಜ್ಞ. ೧೪೦೧). [ ತಡ$_{1}$ + ಕೊಳ್$_{1}$ ]

**ತಡತ** 'ತಡೆತ' ನೋ.

**ತಡತಡವರ್**, ತಡದಡವರ್ (ಕ್ರಿ). ೧. ತೊಡರು ; ತಪ್ಪುತಪ್ಪಾಗು : ಕುಡುವುಂ ಕಯ್ಯುಂ ಜತಿಯೊಳ್ ತಡತಡವರೆ ವಾದಕಂಗೆ ಪೂರ್ವಿಂ ಜತಿಯಂ ತೊಡರದೆ ನಡೆಯಿಸಿ . . . ನರ್ತಕಿಯೆ ಸಭೆಗೆ ವಾದಕಿಯಾದಳ್ (ಆದಿಪು. ೯-೩೨). ೨. ತೊದಲು ; ತಡವರಿಸು : ಮಗನನಪ್ಪಿಕೊಂಡಶ್ರುಜಲಂ ಗುಡುಗುಡನೆ ಸುರಿಯೆ ನಾಲಗೆ ತಡತಡವರೆ ನುಡಿದನಂಧನೃಪನಾ ನೃಪನಂ (ಗದಾಯು. ೪-೧೩). **ತಡದಡವರ್** : ೧. ತಡದಡವಾರದೆ ಗತಿಯೊಳ್ ತೊಡರದೆ ರಂಜಿಸಿದರಮರಲಂಜಿಕೆಯರ್ ... ಕಡೆಯ ತಾಳದ ಯತಿಯೊಳ್ (ಅಜಿಪು. ೫-೪೦). [ <ತಡ$_{4}$ + ಬರ್$_{1}$ ]

**ತಡತಡಿಸು**, ತಡಂತಡಿಸು, ತಡದಡಿಸು (ಕ್ರಿ). ೧. (ಗಾಬರಿಯಿಂದ) ಮುಗ್ಗರಿಸು ; ತತ್ತರಿಸು ; ನಡುಗು ; ತಡೆದು ತಡೆದು ನಡೆ : ತಡತ[ಪಾಠಾಂ. ವ]ಡಿಸಿ ಯತಿಯನಿಂತಿರೆ ತೊಡರ್ಚೆ ಕಡೆ ಪೇಟ್ರೊಡಕ್ಕುಮದು ಯತಿಭಂಗಂ (ಕವಿರಾ. ೧-೬೩) : ನಡೆದೊಡೆ ತಡತಡಿಸುವ ಕುಳ್ಪೋರೋರ್ವರಂ ಮಲಂಗುವ ಕಟ್ಟಲಸರಪ್ಪರಸುಗಳ್ಗೆ ರಾಜ್ಯಶ್ರೀ ಕೈಗಣ್ಪೊಣ್ಮುವುದು (ಧರ್ಮಾಮೃ. ೬-೧೩೩). **ತಡಂತಡಿಸು**: ೧. ಪದಂ ತಡಂತಡಿಸೆ ಹರ್ಮ್ಯಾಗ್ರಂಗಳಂ ಬಂದು ಸಂಗಡದಿಂದೇಱ ಲತಾಂಗಿಯರ್ತವಕದಿಂ ಶಾಂತೀಶನಂ ನೋಡಿದರ್ (ಶಾಂತೀಶ. ೧೫-೩೮). **ತಡದಡಿಸು** : ೧. ತಡದಡಿಸದೆ ನಡದು ದಹನನ[ಂ] . . . ಪಾಯ್ದು ಸಮ್ಮುಖವೆ ದೀರಂ (ಇಆ. XX, ೬೯-೩ ; 9ನೆಯ ಶತ) ; ತೂಂಕಡಿಂ ತಡದಡಿಸುತ್ತೆರ್ದು ತಡವರಿಸಿ (ರಾಮಾವ. ೫-೧೩೪). ೨. ರಭಸದಿಂದ ಮುನ್ನುಗ್ಗು : ದಶನನಿಪೀಡಿತ ದಶನವಸನನಸಿಧೇನುವಂ ಕಿಟ್ಟು ನಡನಡನಡುಗಿ ತಡದಡಿಸುತ್ತು ಮಿಱಿಯಲ್ ಪರಿವಾತಂ (ಆದಿಪು. ೨-೧೪ ವ). [<ತಡ$_{4}$ + – ಇಸು$_{2}$ ]

**ತಡದಡ** 'ತಡತಡ' ನೋ.

**ತಡದಡವರ್** 'ತಡತಡವರ್' ನೋ.

**ತಡದಡಿಸು** 'ತಡತಡಿಸು' ನೋ.

**ತಡಪಡಿಸು** 'ಧಡಪಡಿಸು' ನೋ.

△**ತಡಪು**$_{1}$ 'ತಡವು$_{2}$' ನೋ.

△**ತಡಪು**$_{2}$ 'ತಡವು$_{3}$' ನೋ.

**ತಡಪು**$_{3}$ 'ತೊಡಪು$_{1}$' ನೋ.

**ತಡಫಡಿಸು** 'ಧಡಪಡಿಸು' ನೋ.

**ತಡಬಡ**, ತಡಂಬಡ (ನಾ). ೧.ತಬ್ಬಿಬ್ಬು; ಗೊಂದಲ; ಆತಂಕ; ಭಯ: ಸಡಗರಂಗಳು ಗುಜುಗುಜುಗಳಾಱಡಿಗಳನುಚಿತ ಕಾರಣಂಗಳು ತ[ಪಾಠಾಂ. ಚ]ಡಬಡಂಗಳು ತಪ್ಪುಗಳು ಮುಂಡುಗಳು ಮುಱುಹುಗಳು (ಬಸವು. ೪೦-೬೨). ೨. ನಡೆನುಡಿಗಳಲ್ಲಿ ಉಂಟಾಗುವ ವ್ಯತ್ಯಾಸ, – ಅಸ್ಥಿರತೆ; ಅಸ್ತವ್ಯಸ್ತತೆ ; ತೊಡರು ; ತೊದಲು : ನುಡಿದ ಮಾತಿಂಗೆ ತಡಬಡ ಬಂದಲ್ಲಿ ನುಡಿದ ಭಾಷೆಗೆ ಭಂಗ ನೋಡಯ್ಯ (ಶೂನ್ಯಸಂ. ೨೫೪-೧೬); ನಡೆಗೆ ತಡಬಡವಾಯ್ತು ವಾಣಿ ತಬ್ಬಿಬ್ಬಾಯ್ತು (ಚಬಪು. ೨೦-೧೯); ತಡಬಡ – ವಾಕ್ಯಂಠನಾರ್ಥಃ (ಶಬ್ದಾನು. ೨೦ ವ್ಯಾಖ್ಯಾ). ೩. ಅಡ್ಡಿ ; ತಡೆ : ಪರಿಪರಿ ಗೃಹವಸ್ತುಗಳನು ನೆರೆವುವುದವನೊಂದು ವಿಭವವ ಮಾಳ್ಪನೆಂದರೆ ತಡಬಡ ವುಂಟೆ ಬಲುಹೆ (ಭರತ. ೧೬-೧೦೩). **ತಡಂಬಡ** : ೧. "ತಡಂಬಡಮೆನೆ ತಳ್ಪಂಕಮದು" (ದಶುನಿ. ೨೧). ೨. ಮೊಗಮಲದೊರ್ಪ್ಪೆ ಬಾಸೆ ಕಡು ನೇಱದವಾಗಿರೆ . . . ಕೈವಿಂಗೆ ನಡೆದಳ್ ತಡಂಬಡಮೊಡಂಬಡೆ ಗರ್ಭದಗುರ್ವಿಂ (ಪುಣ್ಯಾಸ್ರ. ೩-೨೩).

[ ←ತಮಿ. ತಟಪಟ = ಆತುರಪಡು, ತತ್ತರಿಸು ]

**ತಡಬಡಂಗೊಳ್**, ತಡಬಡಗೊಳ್ (ಕ್ರಿ). ೧. ತಬ್ಬಿಬ್ಬಾಗು; ಗೊಂದಲದಲ್ಲಿ ಬೀಳು : ಅನುಮಿಸುವ ಭಕ್ತನುರವಣೆಗೆ ಸಿಡಿಮಿಡಿಗೊಂಡು ಮನದೊಳಂಜುತ್ತ ನಡನಡುಗಿ ತಡಬಡುಗೊಂಡು [ಪಾಠಾಂ. ಗೊಂಬುತ, ಬೋಗುತ] (ಶಿರುರ. ದೇ ೧೨-೦೨). ೨. ತೊದಲು ; ತಡವರಿಸು : ಮೃಡನರ್ಚನೋತ್ಸವದೊಳಿರದೆಯುಂಗದೊಳು ಬೆವರಿಡೆ . . . ಸೆರೆ ಬಿಗಿದು ನುಡಿ ತಡಬಡಂಗೊಳುತ ಕೊಂಡಾಡಿ ನೋಡಿ (ಪಾಸೋಪು. ೬-೨೨). **ತಡಬಡಗೊಳ್** : ೩. ಚಿಂತೆಗೊಳಗಾಗು ; ಆತಂಕಪಡು : ಊರ ಸೀರೆಗೆ ಅಗಸ ತಡಬಡಗೊಂಬಂತೆ [ಪಾಠಾಂ. ತಡಬಡಿಹಡೆದಂತೆ, ಬಡಿಹಡೆದಂತೆ] ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದೆಂದು ಮರುಳಾದೆ(ಬಸವ.೩೧೮). [ ತಡಬಡ + ಕೊಳ್$_1$ ]

**ತಡಬಡಂಬೋಗು** (ಕ್ರಿ). ತಬ್ಬಿಬ್ಬಾಗು ; ತಳ್ಳಂಕಗೊಳ್ಳು : ಬೇಡಲ್ಕೆ ಬೇಡದಿರಲ್ಕೆಯಂಜುತ್ತ ಬಂದು ಭಯದಿಂ ಕುಗ್ಗಿ ತಡಬಡಂಬೋಗುತ್ತ (ಮಾನರ. ದೇ. ೦೬೨-೦೨). [ ತಡಬಡ + ಪೋಗು$_1$ ]

**ತಡಬಡಗುಟ್ಟು** (ಕ್ರಿ). ತಡವರಿಸು ; ತೊದಲು : ಪ್ರೀತಿಯಿಂ ನೋಡುವಾ ವೈಶ್ಯನಂದನನ ಕಾತರಿಪ ಚಿತ್ತ ಕರಗುವ ಲಜ್ಜೆಯೋಸರಿಸುವೆಜಾವು ತಡಬಡಗುಟ್ಟುವಾ ಮಾತು (ಸಮ್ಯಕ್ತ್ವ. ೯-೦೨). [ ತಡಬಡ + ಕುಟ್ಟು$_1$ ]

**ತಡಬಡಗೊಳ್** 'ತಡಬಡಂಗೊಳ್' ನೋ.

**ತಡಬಡಗೊಳಿಸು** (ಕ್ರಿ). ತಬ್ಬಿಬ್ಬುಗೊಳಿಸಂ; ತಡವರಿಸುವಂತೆ ಮಾಡು: ನುಡಿಗೆಡಿಸುವ ಕೂಡೆ ನುಡಿಸುವ ನುಡಿಗಳ ತಡಬಡಗೊಳಿಸಿ ನಗುವನು (ಛರದ. ೬-೮೬). [ ತಡಬಡಗೊಳ್ (<ತಡಬಡಂಗೊಳ್) + – ಇಸು$_3$ ]

**ತಡಬಡನೆ** (ಅ). ಗೊಂದಲವಾಗಿ : ಕಡುಜಾಣೆವೆಣ್ಣುಗಳು ಕೂಡಿ ಅಗ ತಡಬಡನೆ ಹಿಡಿದು ಬಡಿದಾಡಿ . . . ಮೆಸರ ಬೆಡಗ ಮೇಳೆಂದು ಹೊಡೆದಾಡಿ (ಕರಲೀ. ೦೪೫-೦); ನಡುಗುತಲಿ ಬೆಮರಿಟ್ಟು ತಡಬಡನೆ ಕಡಹುತಲಿ ಅಡವಿಯೊಳಗವರು (ಹಮಚ. ೬೦). [ ತಡಬಡ + – ಅನೆ$_1$ ]

**ತಡಬಡಾಯಿಸು** (ಕ್ರಿ). ತಬ್ಬಿಬ್ಬಾಗು ; ಕಕ್ಕಾವಿಕ್ಕಿಯಾಗು : ಅಗಾಧವಾದ ಅಂತರಾಳದ ಮುಂದೆ ನಮ್ಮ ಮನಸ್ಸು ತಡಬಡಾಯಿಸಿ ಬೆರಗಾಗದ (ಕ್ಷೋಣಿವಿ. ೨೬೨) ; ಉತ್ತರಕೊಡಲು ಸ್ವಲ್ಪ ತಡಬಡಾಯಿಸಿದುದು ನಿಜ (ಅವಕಂ. ೦೬೬). [ < ತಡಬಡಿಸು ]

**ತಡಬಡಿಸು**, ತಡಂಬಡಿಸಂ, ತಡಮಡಿಸು, ತಡವಡಿಸು (ಕ್ರಿ). ೧. (ಭಾವಾತಿರೇಕದಿಂದ) ತಬ್ಬಿಬ್ಬಾಗು ; ಕಕ್ಕಾವಿಕ್ಕಿಯಾಗು : ಮಜ್ಜನ ಕೆಱೆದು ತಳ್ಕಿಱಿದು ತಪ್ಪಿ ತಡಬಡಿಸುತಂ ಪೊಸಪೂಜೆಯುಂ ಮೆಱೆದು(ಹರಿಚಾರ. ಹ. ೦೯೩-೦೬) ; ಗಿರಿಜೆಯೊಡನುಸಿರ್ದುಂ ತಡಬಡಿಸುತ್ತ ಮಿಸುವ ಪೊಸಪುಸಿವಾತಂ (ಗಿರಿಕ. ೯-೯೯). ೨. ತಡವರಿಸು; ತತ್ತರಿಸು; ಮುಗ್ಗರಿಸಂ; ಎಡವು ; ನಡಗೆ ಅಸ್ಥಿರವಾಗು : ಹೋಗಲ್ಕಂಜಿ ಹೋ ಎನುತ ಕಾಲ ತಡಬಡಿಸುತ್ತ ನಿಲುತಂ (ಬಸಪು.೨೬-೨೮); ನಡೆ[ಪಾಠಾಂ. ನುಡಿ] ತಡಬಡಿಸುತ ಗೊಲ್ಲವೆಣ್ಣುಗಳು ಕಡುಗಾಡಿಯಿಂ ಬಂದು ಸೋಹುತಿಹರು ನೆಲ್ಲಮಡಿಗಳಿಗಿಳಿವ ಗಿಳಿಗಳ (ಕುರಾಸಾಂ. ೨-೩೬) ; ಇದಿರ್ವರ್ಪನಂ ಪದೆದು ನಿಟ್ಟಿಸಿ ಮೆಯ್ಯುರವಟ್ಟಳಟ್ರಿಯುಂ ತಡಬಡಿಸುತ್ತ ನಿಂದು ಪಳಗಾಜಿನ ಪುತ್ತಳಿಯಂತಿರೊಪ್ಪಿದರ್ (ರಸರ. ೦೯೯-೨) ; ಅಧರಂ ಬೆಳರ್ತುದು ನಡಗೆ ತಡಬಡಿಸಿದುದು (ಚಿಬಪು. ೩೬-೬೬) ; ಬಳಲುತ್ತಡವಿಯುಲಿ ತಡಬಡಿಸಿ ಬೆಂಡಾಗುತ್ತ ಬೇಸರಿಸಿ (ರಾಮಾಸಂ. ೫-೩-೩). ೩. ತಬ್ಬಿಬ್ಬಾಗಿ, ತಡೆತಡೆದು ಮಾತನಾಡು ; ತಡವರಿಸುತ್ತ ನುಡಿ ; ತೊದಲು : ಅಂದದಿಂ ಶರಣಾರ್ಥಿಯೆಂದಹನೆಂದು ಬಾಯ್ತುಡಬಡಿಸಿ (ಬಸಪು. ೩೬-೦೯) : ಬಂಬಲುಬಾಡುವಂಗ ತಡಬಡಿಪ ನುಡಿ (ಸಮ್ಯಕ್ತ್ವ. ೧೦-೪೯); ರಾಜವಾರ್ತೆಯನು ತಡಬಡಿಸದೆ ಪೇಳ್ವ ರಾಯಭಾರಿಗಳಿಂ (ಕುರಾಸಾಂ. ೨೯-೬೮) : ತಡಬಡಿಸದೆ ಹಿಂದು ಮೆಟ್ಟದ ವಾಚಕವಡಗದ ವಕ್ಕಣೆ ಕೆಡದೆ . . . ರಾಯುಸವಿಡಿದವನೋದಿದನಿಂತು (ರಾಮವಿ. ೦೫-೩೨) : ತೇಲಿ ಮುಗಿವ ಕಣ್ . . . ನಾಲಿಗೆಯೊಳ್ತಡಬಡಿಪಿನುಡಿಗಳ್ (ಉದ್ಭದೇ. ೨-೬೫). ೪. ವ್ಯತ್ಯಸ್ತವಾಗು : ಬೀಯಲ್ ಸುಣ್ಣೊರಲಂಲಿ ಬಳಲಲ್ ಸುಯ್ ತಡಬಡಿಸಲ್ ಬಾಯ್ದುಗ್ಗಟಂ ದಣಿಮುಕ್ತಿರಲು(ಜಜುಶಾ. ೮-೬೪). ೫. ಶಬ್ದಮಾಡು ; ಕೋಲಾಹಲವುಂಟುಮಾಡು : ಸಡಗರಂಗಳು ಬರಿಯ ರಕ್ಕಿನ ಗಡಬಡಂಗಳು ಬಾಂಗು ಧಲಗಳು ಕೊಡೆಗಳುಂ ಹಳಮಿಗೆಗಳುಂ ತಡಬಡಿಪ ವಾದ್ಯಗಳು (ಬಸಪು. ೫೬-೦೭). ೬. ಚಡಪಡಿಸು ; ಕಳವಳಿಸು : ದ್ರಾಕ್ಷಾರಸ ತಪ್ಪಿಹೋದಾಗ ಅವಳ ಮನಸ್ಸಿಗೆ ತುಂಬ ಸಂಕಟವಾಗಿ ತಡಬಡಿಸುತ್ತಿದ್ದಳು (ಪುನರು. ೦೦) **ತಡಂಬಡಿಸು** : ೩. ಚರಣಂಗಳುಂ ನುಡಿಗಳುಂ ತಡಂಬಡಿಸಲತಿ ಥರವಸದೊಳಯ್ತಂದು ನೋಳ್ಪ ತರುಣೀಜನಂ (ಚಿಬಪು. ೫-೦೩) ; ದಡದಡಿಪಡಿ . . . ತಡಂಬಡಿಪ ತಳರ್ನುಡಿ (ರಾಜಶೇ. ೬-೩೩). **ತಡಮಡಿಸು** : ೧. ನುಡಿಯೊಳ್ಪುಸಿವಾತಂ ಮೆಟ್ಟಡಿಕುಂ ತಡಮಡಿಸಿಪೊಂದನೊಂದಂ ನೆಗಬ್ದುಂ (ಮದತಿ. ೧೧-೩೪). **ತಡವಡಿಸು** : ೧. ಅಚ್ಚಿಗಂಗೊಳಿಸಿ ತಡವಡಿ [ಪಾಠಾಂ. ಕಳವಳಿ]ಸಿತನ್ನಯ ಭಕ್ತಿ (ಶಿರುರ. ದೇ. ೨೦-೨೦); ಶೆಟ್ಟಿಯೆಂದುದ ಕೇಳಿ ತಡವಡಿಸುತಲವನಿಂತೆಂದ (ತ್ರಿಪುರ. ೨೦-೦೨) ; ಕಡೆಗಂಗಳ ಸರಳಿಯೊಳು ತೊಡಕಿ ಹಮ್ಮಯಿಸುವರು ತಡವಡಿಸುವರು ಮತ್ತಲ್ಲಿ (ಕೊಲ್ಲಾದ. ೨೯). ೭. ತಡಕಾಡು : ತಡವರಿಸಂ : ಬಟ್ಟೆಯೊಳ್ ಬಟ್ಟನೇಱಲ ಚೆಂಗಾರೆಯು ಮೆಲ್ದುಗುಟ್ಟ ಸಹಕಾರೋಚ್ಚಿಷ್ಟ ಪಕ್ವಂಗಳಂ ತಡವಡಿಸಿ ಪುಡುಕಿ ಪಂಜಿನ ನಡುಬೀದಿಯೊಳಿರ್ದುರ್ ಮಱುಗುಕಿರೆ ಕಂಡು (ಸುಕುಮಾ. ೪-೫೮). [ ತಡಬಡ + – ಇಸು$_3$ ]

**ತಡಬಡು**, ತಡಂಬಡು$_2$ (ಕ್ರಿ). ೧. ತತ್ತರಿಸು ; ದಡದಡಿಸು : ತಡಬಡುತ ಖಳನೆದ್ದು ಕಂಗಳ ಕಿಡಿಯುದುರೆ ಹೂಂಕರಿಸಿ (ಅನಂರಾ. ೬-೦೭-೨೯) ; ನಿನ್ನ ಸೈನ್ಯಗಳಲ್ಲಿ ಕೆಲವರು ಕಾಲುಗಳು ತಡಬಡಲು, ಶರೀರಗಳು ಬೆವರಲು . . . ಕೆಳಕ್ಕೆ ಬಿದ್ದು ಮುದುರಿಕೊಂಡಿದ್ದರು (ಕೃವಾಛೀ. ೦೪೦). ೨. ದುಡುಕು ; ಆತುರಪಡು : ಗಡಿಗೆ ಮಡಿಕೆಯು ಕೊಂಡು ಅಡಿಗೆಯ ವೇಳೆಯೊಳು ಬಿಡದೆ ಮಳೆಮೋಡ ಪೊದೆಯಲ್ಕೆ ಈರ್ವರಿಗೆ ತಡಬಡಲಾಯ್ತು (ಸರ್ವಜ್ಞ. ೮). **ತಡಂಬಡು$_2$** : ೧. ಅನಂಗಾವೇಶದಿಂ ಕಾಲ್ತಡಂಬಡೆ ಬಂದಾಟಿಸಿ ನೋಡಿದಳ್ ಪದಪಿನಿಂ ಶ್ರೀವಿಪ್ರಮಾರ್ತಂಡನಂ (ಕಾವ್ಯಾವ. ೮೦೩). [ ತಡ$_4$ + ಪಡು$_1$. / ತೆಲು. ತಡಬಡು ]

**ತಡಬೆ** 'ತಡಮೆ' ನೋ.

**ತಡಮಡಿಸು** 'ತಡಬಡಿಸು' ನೋ.

**ತಡಮಾಗು$_1$** 'ತಡ$_1$' ಪರಾ.

**ತಡಮಾಗು$_2$** 'ತಡ$_2$' ಪರಾ.

**ತಡಮಾಡು$_1$** 'ತಡೆಂಮಾಡು' ನೋ.

**ತಡಮಾಡು$_2$** 'ತಡ$_1$' ಪರಾ.

**ತಡಮಾಡು$_3$** 'ತಡ$_2$' ಪರಾ.

**ತಡಮಾರಿ** (ನಾ). ತಡಮಾಡುವ ಸ್ವಭಾವದವನು : ಯಾವಾಗಲೂ ತಡಮಾರಿಯಾದ ಮ್ಯಾಥ್ಯೂ ನಿಕಿತಿಷ್ ಕೊಟ್ಟಕೊನೆಗೆ ಬಂದನು (ಪುನರು.೩೨) 'ಹರಮಾರಿ' ಪರಾ.

[ ತಡ$_1$ + – ಮಾರಿ$_1$ ]

**ತಡವಿಕ್ಕು**, ತಡವಿಕ್ಕು$_1$ (ಕ್ರಿ). ತಡೆದಿಡು ; ತಡೆದು ನಿಲ್ಲಿಸು ; ಕಟ್ಟಹಾಕು : ಮನೋಜ ಜೈತ್ರಪತಾಕಾಪ್ರತಿಮಭ್ರೂವಿಭ್ರಮಯುರಾ ಸ್ಮರಶರಾಸನ ಭ್ರೂವಿಭ್ರಮನಂ ತಮ್ಮ ಭ್ರೂವಲ್ಲಿಗಳೊಳ್ ತಡಮಿಕ್ಕಿಯುಂ (ಸುಕುಮಾ. ೧೦-೧೦೦ ವ). **ತಡವಿಕ್ಕು$_1$** : ಹಸ್ತಿಯ ಬೆಂಗೆವಂದು ಸುತ್ತಿಱಿದು ಪಗಲಂ ತಡವಿಕ್ಕಿದುತೆ ಬೆಳಗುವ ಕೆಯ್ದಾವಿಗೆಗಳ ಬೆಳಗೆ ಬೆಳಗಾಗ (ಶಾಂಪಥಾ. ೦೨-೫೨ ವ). [ ತಡ$_1$ + ಇಕ್ಕು ]

**ತಡವೆ**, ತಡಚೆ, ತೊಡವೆ (ನಾ). ೧. ದನಕರುಗಳು ಒಳಗೆ ಬರದಂತೆ ಬೇಲಿಗೆ ಅಳವಡಿಸಿರುವ ಬಿದಿರು ಅಥವಾ ಬೊಂಬಿನ ಚೌಕಟ್ಟು; ತಡೆಬಾಗಿಲು : ಮನೆಯ ಮುಂದಿನ ಅಡ್ಡಗಟ್ಟಿದ ಗುಜ್ಜು ತಡವೆ ದಾಟಿ, ಬೇಲಿಯೊಳಕ್ಕೆ ಹೋಗಿ ನಿಂತು . . . ಕರೆದರು (ಕೋಟೆಚ. ೨೩) : ಸಿದ್ದಣ್ಣ ಕೂಕ್ರನ ಮನೆಯ 'ತಡವೆ' ದಾಟುವಾಗ (ಒಡ್ಡಿಉ. ೪೯) : ಹೆಗ್ಗಡೆಯವರು . . . ತಡವೆಯತನಕ ಹೋದರು (ನಂದಿನಾ. ೩೫೮). **ತಡಚೆ** : ೧. ತಡಚೆಯ ತೆಗೆಯುವ ಸದ್ದಾಯಿತೆನುವಳು ಅಡಿಗೆಯ ಮನೆ ಯಿಂದ ಬಂದು (ಚಂದ್ರವೀ.೨೨-೮೬); ಗುತ್ತಿ...ಹೆದ್ದಾರಿಯ ಅಂಚಿಗೆ ಹಾಕಿದ್ದ ಬಿದಿರಡ್ಡೆಯ ಬೇಲಿಯನ್ನು ಉಣುಗೋಲಿನ ಬದಿಯೆ ಇದ್ದ ತಡಚೆಯ ಮೇಲೆ ಹತ್ತಿ ದಾಟಿ ಮುಂಚೆಕಡೆಯ ಅಂಗಳಕ್ಕೆ ಹೋದನು (ಮಲೆಮ. ೫೮). ೨. ಅಡ್ಡಿ ; ತಡೆ ; ಪ್ರತಿಬಂಧ : ಧರೆಯ ನಿಮ್ನೋನ್ನತಂಗಳ ತಡಚೆ ಯೇನೊಳದೆ ಪ್ರತಿಭೆಯ ವಿಮಾನಯಾನಕ್ಕೆ ? (ಶ್ರೀರಾಮಾ. ೦೨೫-೨೨). **ತೊಡವೆ** : ೧. ಅವರು ಜಗಲಿ ಇಳಿದು, ತೊಡವೆ ದಾಟಿ, ಮನೆ ಹಾದಿ ಯಲ್ಲಿ ಅರ್ಧ ಸಾಗಿಯಾಯಿತು (ಹಹಸ. ೪೨): ಆ ತಂಡ ರಸ್ತೆಯ ಹತ್ತಿರದ ಬಯಲಂಚಿಗೆ ಬಂದು . . . ಮತ್ತೆ ಎತ್ತರದ ತೊಡವೆ ಹತ್ತಿ ಹಾರಿ . . . ಹೊರಟು ಹೋದರು (ಪದ್ಮಸ. ೬೫) ; ಅಪ್ಪರಲ್ಲೆ ಐತಾಳರ ಬಾಯಿಂದ, ಪದ್ಧತಿಯಂತೆ, ತೊಡವೆ ದಾಟುವಾಗ 'ಸಾಂಬಶಿವ' ಎಂದು ಕೇಳಿಬಂತು (ಮರಮ. ೩೨). [ <ತಡ₁./ತುಳು. ತಡವೆ./ಪ್ರಾ. ತಡಿವು ]

**ತಡವೆಟ್ಟು** 'ತಡಂವೆಟ್ಟು' ನೋ.

**ತಡಲು** (ಕ್ರಿ). ಹೂತುಂಹೋಗು: ಸಿಕ್ಕಿಕೊಳ್ಳು (?): ಗಾಲಿಗಳ್ಮಣನೊಗನ ಕೀಲಚ್ಚುಗಳ್ತಡಲಿ ಮೇಲೇಳದಿರೆ ಕುದುರೆಗಳ್ಪಳಲಿ ನಿಂದಿರಲ್ (ತುರಂಗ. ೭೦-೨೦). [ ? ]

**ತಡವಡಿಸು** 'ತಡಬಡಿಸು' ನೋ.

**ತಡವರ್** 'ತಡಂಬರ್' ನೋ.

**ತಡವರಿಸು₁** (ಕ್ರಿ). ೧. ಕೈಯಾಡಿಸಿ ಹುಡುಕು ; ತಡಕಾಡು ; ಅರಸು ; ಬೆದಕು : "ತಡವರಿಸು – ಅನ್ವೇಷಣೇ" (ಶಮದ) : ನೇಜಿಲವಮರದ ಕೆಲಗೆ ತಡವರಿಸಿ ನೇಜಿಲವಣ್ಗಳಂ ತಿಂಬ ಜಾತ್ಯಂಧಯಪ್ಪ ಪೊಲೆಯರ ಕೂಸಂ ಕಂಡು (ವಡ್ಡಾರಾ. ೯-೨೪) ; ಬಲ್‌ಕಟ್ಟುವರ್ ಕೀಲಂ ತಡವರಿಸಿದ ರೆಂಬಂತೆ (ಧರ್ಮಾಮೃ. ೦೨-೬೫) ; ನಿಂದಿರದೆ ಹರಿದು ತಡವರಿಸಿ ಕಾಣದ ಮನಂ ನೊಂದು (ಸಿದ್ಧರಾ. ೨-೪೬); ಬಾಗಿಲನೊಂದು ಠಾವಿನೊಳಡಿಸಿ ತಡವರಿಸಿದನು ಭಿತ್ತಿಗಳ (ಕುಮಾ.ಸ. ೦೨-೪೦). ೨. ಕೈಯಿಂದ ನೇವರಿಸಂ; ಸವರಂ ; ಮುಟ್ಟು : ಇರ್ವರುಂ ಪರಸಿ ತಡವರಿಸಿಯುಂ ತೆಬ್ಬರಿಸಿಯು ಮಪ್ಪುಕೊಳಪ್ಪಿಕೊಂಡು (ಪಂಪಭಾ.೦೩-೮ ವ): ಶಿರವ ತಡವರಿಸುತ ಮಹಾ ದೇವರಿಯ ಬವರದ ಬೋಳಕೊಮ್ಮಿಗೆ ಹರಣವುಳಿದುದೆಯೆನುತ ರವಿಸುತ ನೇಡಿದನು ಗಿರಿಜು (ಕೊಠರಾ. ೪-೩-೧೭); ಅವರಿಬ್ಬರೂ ಕೆಳಗೆ ಬಿದ್ದಿದ್ದ ವಸ್ತು ತಡವರಿಸಿ ನೋಡಿ (ಡಂಗಾಳ್ಳ. ೪೩೪). ೩. ನಡೆಗೆಡು ; ತೆತ್ತರಿಸಂ ; ದಡದಡಿಸು : ತಡವರಿಸುತ್ತಿರಲ್ಕೆ ತೊಡೆ ಜೋಲೆ ಸಡಿ ಲ್ಪುಡೆ . . . ಶಂಭುಮದಿಂ ಮಚಿಗೆಂಡು ನೋಡಿದರ್ (ಕಾದಂಉ. ೦೩೬) ; ತಡವರಿಸಿ ಬೀಟ್ಟ ಮುನಿನಾಥನಂ ಬೀಟಲೀಯದೆ ತರ್ಕೈಸಿಕೊಂಡು (ಧರ್ಮಾಮೃ. ೪-೦೬೯). ೪. ತಡೆತಡೆದು ಮಾತನಾಡು : ಭಾಸ್ಕರ ಅವಾಕ್ಕಾದ, ನಾಲಗೆ ತಡವರಿಸತೊಡಗಿತು (ಕಮನಿ. ೨೨೩) : ಇಂಗ್ಲಿಷಿ ನೆಲ್ಲಾದರೆ, ಒಂದೊಂದು ವೇಳೆ ತಡವರಿಸಬಹುದು (ಬಂಕಿಮ.೩೯); ಒಂದು ಸಲವಾದರೂ ತಪ್ಪಿದನೆ? ತಡವರಿಸಿದನೆ? (ನನ್ನಜೊ. ೩). [ <ತಡವು₂ ]

**ತಡವರಿಸು₂** (ಕ್ರಿ). ತಬ್ಬಿಬ್ಬಾಗು; ಕಕ್ಕಾಬಿಕ್ಕಿಯಾಗು; ಕಂಗೆಡು: ತಮ್ಮ ಬಲಮುಂ ಮಾರ್ವಲಮುಮನಟಿಯದೆಯುಂ ಚಾತುರ್ವಲಂಗಳ್ ಮೊದಲ ಸಮಕಟ್ಟುಗೆಟ್ಟು ತಡವರಿಸಿ ತಟ್ಟು ಪೊಟ್ಟೆಂಡೆಚ್ಚುಮಿಟ್ಟುಮಿಡಿದು (ಪಂಪಭಾ. ೧೧-೭೦ ವ) ; ನಡುಗಿ ತಡವರಿಸಿ[ಪಾಠಾಂ. ದಡಿಸಿ]ಬೆಂಕೆಯ ಕಡುಗಾಯ್ಪಿಂಗಗಿದು ಜೆಡೆಗಳುವಿನೊಳಹಿಗಳ್ ತೊಡರ್ದು ನುಸುಳ್ದೋಡಿ ಗಂಗೆಯ ಮಡುಗಳನಡಹಡಿಸಿ ಪುಗುವಿನಂ ಭಯವಶದಿಂ (ಕಾವ್ಯಾವ. ೪೦೦). [ <ತಡ₄ + – ಇಸು₃ ]

**ತಡವಳಿ** (ನಾ). ತಡ ; ಸಾವಕಾಶ ; ವಿಳಂಬ : ಒಂದೇ ಒಂದು ನಿಮಿಷದ ತಡವಳಿ ಇಲ್ಲದೆ ನಮ್ಮ ಚಕ್ರವರ್ತಿಗಳ ಭೇಟಿ ಸಾಗುತ್ತಿದೆ (ವೀರಬಂ. ೩೭). [ ತಡ₁ + – ವಳಿ₁ ]

**ತಡವಾಗು₁** 'ತಡ₁' ಪರಾ.

**ತಡವಾಗು₂** 'ತಡ₂' ಪರಾ.

**ತಡವಾಯ್** 'ತಡಂಬಾಯ್' ನೋ.

**ತಡವಾಯು** 'ತಡಂಬಾಯ್' ನೋ.

**ತಡವಿಕ್ಕು₁** 'ತಡವಿುಕ್ಕು' ನೋ.

**ತಡವಿಕ್ಕು₂** (ಕ್ರಿ). ೧. ಹಿಂದೆಹಾಕು ; ಸೋಲಿಸಂ: ಇನಿಯವೆನಿಪ್ಪ ಮೆಲ್ನುಡಿಗಳುಂ ಕಳಕೋಕಿಳನಾದಮುಂ . . . ನಡೆಯುಂ ಕಳಹಂಸ ಯಾನಮುಂ ತವತನಗೊಂದನೊಂದು ತಡವಿಕ್ಕು [ಪಾಠಾಂ. ರ್ಕು] ಗುಮೆಕ್ಕೆಯಿನಾ ಬನಂಗಳೊಳ್ (ಮಲ್ಲಿಪು.-೧೪-೧೦೦). ೨. ನಿಧಾನಮಾಡು; ಸಾವಕಾಶಮಾಡು : ಕಣ್ಗೊಳಿಸುವ ಮೌಕ್ತಿಕಧ್ವಜಮರೀಚಿಗಳಿಂದೆ ಸಹಸ್ರ ಕಾಂಚನೋಜ್ಜ್ವಳ ಕಳಶಂಗಳಿಂದಮಿರುಳುಂ ಪಗಲುಂ ತಡವಿಕ್ಕೆ ಕೈರವಂಗಳ್ ಕಮಲಂಗಳುಳ್ಪಲರ್ವುದಂ ತಡವಿಕ್ಕುವುದಾ ಜಿನಾಲಯಂ(ಲೀಲಾವ. ೮-೭೦). [ ತಡವು₁ + ಇಕ್ಕು ]

**ತಡವಿಡು₁** (ಕ್ರಿ). ತಬ್ಬಿಬ್ಬಾಗು; ಗಾಬರಿಯಾಗು: ಕೊಡಚಿ ಕುಂಭಸ್ಥಳವ ತಡವಿಡಲುಡುಗಿದವು ದಿಗುದಂತಿ (ನಿಘಂಗ. ೮-೧೫-೩೭). [ ತಡ₄ + ಇಡು₁ ]

**ತಡವಿಡು₂** (ಕ್ರಿ). ೧. ತಡವರಿಸು ; ತಡಕಾಡಂ ; ಹುಡುಂಕು : ಒಡನೆ ಮಾನಿಸರಿಲ್ಲ ಕರೆದೊಡೆ ನುಡಿವರಿಲ್ಲ ಕರದ್ವಯದಿ ತಡವಿಡುತ ವೈಸರದೊಳಗೆ ಸೂಸಿತು ಮೈ ಮಹಾಸತಿಯ (ಕುಮಾ.ಆ. ೯-೨೬). [ ತಡವು₂ + ಇಡು₁ ]

**ತಡವಿಡು₃**, ತಡಹಿಡಂ (ಕ್ರಿ). ೧. ತಡಮಾಡು : ಕೋಪದಿಂ ಹೊಡಕರಿಸಿ ತಡವಿಡದೆ ಕುದುರಾಡೆಯಂ ಬೇಡವಡೆಯೊಡಲನೀಡಿಚುವುತ (ಹರಿಕಾ.೬-೮). **ತಡಹಿಡು** : ೨. ತಡೆದಿಡು ; ನಿರೋಧಿಸು : ಕಡೆಗಾಣದ ದುಃಖವೆಂಬ ಕಡಲೊಳಾ ಮಡದಿಯಾಳುತಲೇಳುತಿಹಳು ನುಡಿಯಲವ್ಯದ ಮೌನವಿಡಿದು ಸಖೀಜನ ತಡಹಟ್ಟರೆನೆ ಸುಮ್ಮನಿಹರು (ಅಂಜಚ. ೬-೨೫). [ ತಡವು₃ + ಇಡು₁ ]

**ತಡವಿರ್**(ಕ್ರಿ). ತಡೆ; ನಿಲ್ಲು: ಹರಿದಾಡುತಿಹ ರಥಗಾಲಿಗಳ್ಪೂಳ್ ಕಲಕಡಗಲಾ ರಥಂ ತಡವಿರ್ದುದು (ತುರಂಗ. ೭೦-೨೦). [ ತಡವು₁ + ಇರ್₁ ]

**ತಡವು₁**, ತಡಹು₁ (ಕ್ರಿ). ೧. ತಡೆ ; ನಿಲ್ಲು ; ವಿಳಂಬವಾಗು ; ಸ್ತಿಮಿತ ವಾಗು : "ತಡವು–ಹಸ್ತಾನ್ವೇಷಣೇ, ಸ್ತಿಮಿತಭಾವೇ ಚ" (ಶಮದ); "ಕರದೆ ನೇವರಿಸುವಲ್ಲಿ ಸ್ತಿಮಿತದೊಳ್ ತಡವೆಂಬ ಶಬ್ದಮದು" (ಶಬ್ದಮಂ. ೧೦೯) ; ತಡವಲುಚ್ ಬೈದು ತೆಗೆದಾನು ಸಾಲಿಗನು ನಡುವೆ ಜಗಳವನು (ಸರ್ವಜ್ಞ. ೦೪೦೦). **ತಡಹು₁** : ೨. ತಡಮಾಡು ; ಸಾವಕಾಶಮಾಡು : ಒಡೆಯಗೆ ಚಿಂತೆಯಾದಾಗೂಟವಿಾಹದ ಸಡಗರವ ನನಗಿಲ್ಲ ಸುಡುಸುಡಾ ಸುಖವ ಸಾಕಾ ಮಾತ ಮಟಿಯಿನ್ನು ತಡಹಲಾಗದು ಸ್ವಾಮಿಯೊಂದಾ (ಭರತ. ೫೭-೬೮) ; ತಡಹದೆ ಮಾಡಿದ ನಿರ್ಜರೆ ಭವವೆಂಬ ಕಡಲೊಳು ತೊಳಲಿಸುತಿಹುದು (ಭರತ. ೬೮-೭೭). [ ದೇ.॥ ತಮಿ. ತಟುಕ್ಕು ; ಮಲ. ತಡಯು,ತಡುಕ್ಕು ; ತುಳು. ತಡೆಯು. ತಡೆವು ; ತೆಲು. ತಡಯು ]

**ತಡವು$_2$**, ತಡಪು$_1$, ತಡಹು$_2$ (ಕ್ರಿ). ೧. ತಡವರಿಸು : ತಡಕಾಡು ; ಹುಡುಕು : " ತಡವು – ಹಸ್ತಾನ್ವೇಷಣೇ ಸ್ತಿಮಿತಭಾವೇ ಚ" (ಶಮುಧಾ); ಕತ್ತಲೆಯು ಕಾಹೊನಲನೀಸಾಡುವಂತೆ ತಡವುತ್ತ ನೋಡುತ್ತ . . . ತಮತಮಗೆ ಕರೆದರು (ಸಿದ್ಧರಾ. ೨-೪೭) : ಪೊಂಗಳಶಾಗಳೊ ತನ್ನುರೋರು ಹಂಗಳೊ ದಿಟಮೆಂದು ಕೈ ತಡವೆ ಕಣ್ ನಡೆಯಾಡೆ ಲತಾಂಗಿ ಕಂಡಳುಜ್ಜ್ವಳ ಕಳಶಂಗಳಂ (ಅನಂಪು. ೪-೧೧೮) : ರೂಪಕಂದರ್ಪನೆಂದೆನಿಸುವ ತನ್ನ ಪ್ರಾಣೇಶನ ತಡವಿ ನೋಡಿದಳು (ಮೋಹತ. ೨೭-೪೫); ಕಗ್ಗತ್ತಲೆಯಲ್ಲಿ ತಡವುತ್ತಾ ನಡೆದನು (ಮಲಮ. ೪). ೨. ನೇವರಿಸಂ: ಸವರು; ಮುಟ್ಟು: " ಕರದೆ ನೇವರಿಸುವಲ್ಲಿ ಸ್ತಿಮಿತದೊಳ್ ತಡವೆಂಬ ಶಬ್ದಮದು" (ಶಬ್ದಮಂ. ೧೦೯) : ಚಿತ್ರಭ್ರಾಂತಿಶ್ರಾಂತಂ ಪೊತ್ತುದುಮಂ ತಡವಿ ನೋಡುತುಂ ಭಾಗಲಮಂ (ಪಂಚತಂ. ೧೪೭-೧೩) : ಕಯ್ಯಿಂದಲವಯವಂಗಳನೋವಿ ತಡವುತು (ರುದ್ರರ. ದೇ. ೨೧೩-೪): ಸಂದಿಯಿಂ ಪೊಜಿಮುಟ್ಟು ತನ್ನ ತಲೆಯಂ ತಡವಿ ನೋಡುತ್ತಿಪ್ಪನ್ನೆಗಂ (ಪುಣ್ಯಾಸ್ರ. ೫-೫೫ ವ): ನಡೆ ವಿಜಯನಾಗೆಂದು ತನುವನು ತಡವಿದರು (ಕುಮಾರ್ದೊ. ೪-೫೩) . ೩. ಕೆಣಕು ; ಕೆರಳಿಸು : ವಿರಾಧನೆಂಬಾಸುರಂ ತಡವಲಿಕೆ ಕೊಬ್ಬ ಮುರಿದಾತನಂ ಸೀಳ್ದೊಗೆದು (ಪರಶು.೨-೭); ತಡವದೆ ಬಹುತರವಾಗಿ ಹಾವುಗಳು ಕಚ್ಚುವದಿಲ್ಲ (ಮುಂಬಯಿ. ೨-೩೪) ; ಅವಳನ್ನು ತಡವುವದೂ ಸರ್ಪವನ್ನು ಕೆಣಕುವದೂ ಒಂದೇ (ರಂಗರೋ. ೧೮೩). △ **ತಡಪು$_1$** : ೨. ಅ ಕುವರನ ನಟ್ಟಿನ ಬಿನದಕ್ಕೆ ಬಗೆವೆತ್ತು ನೋಡಿ ಮುದ್ದುಗೆಯ್ದು ಮುಂಡಾಡಿ ಮೆಯ್ಯಂ ತಡಪಿ ಮನ್ನಿಸಿ (ವೃಷವಿ. ೩೩-೮ ವ). **ತಡಹು$_2$** : ೧. ಕುರುಡನೆಡಹುತ್ತ ತಡಹಿ ಹಿಡಿದು ಕಂಡಂತಾಯಿತ್ತು (ಅವಚಂ. ೨೦೯-೯೪೦) : ಸಡಿಲುವ ಮುಡಿಯ ಸಾಗಿಸದೆ ಸೇವಕಿಯರ ತಡಹದೆ ಪತಿಗೆ ಶಂಕಿಸದೆ ನಡೆತರುತಿರ್ದರು (ಭರಚ. ೪೭-೭೫). ೨. ಕೌರವ ಬಲದ ನಾಯಕರು ಶಿರವ ತಡಹುತ ತಮ್ಮ ಶಿಬಿರಕೆ ತಿರುಗಿದರು (ಕುಮಾರ್ದೊ. ೭-೭೭); ಪಣ್ಗಳ ರಸಾಯನಮನೀಂಟಿ . . . ನೀಗುರ್ಡಿದು ಹೊಟ್ಟೆಯ ತಡಹುತೆಳ್ದು ಕೈದೊಳೆದರಾಗ (ಸಮ್ಯಕ್ಕಾ. ೭-೨೮) ; ಮೈಯ ಗಾಯಂಗಳಂ ತಡಹಿ ತಕ್ಕೈಸಿ (ಜೈಮಿಥಾ. ೩೧-೫೯) : ಎಣ್ಣೆ ಗಂಟುಗಳ ತಡಹುತ ಬಣ್ಣದುಟಿಯ ಭಾವವ ಬೀಱುತ ಮುದ್ದುವೆಣ್ಣುಗಳ್ಳೈ ತಂದರಾಗ (ಕಂಸವಿ. ೨೧-೭೪) . ೩. ಱೊಪ್ಪವಿಡಿದ ಹಂದಿಗೆ ತಡಹಿ [ಪಾಠಾಂ. ವಿ]ಬಿಡು ನಾಯನೆಚ್ಚರಳೆಯಂ. . . . ಎಂಬ ಬೇಡರ ಬೊಬ್ಬೆ ಯಿಂದಡವಿ ಘೀಳಿಟ್ಟುದು (ಹದಶಾ. ೫-೨೩) ; ಈಗವಳ ಸುದ್ದಿಯನು ತಡಹಬೇಡಮ್ಮಾಜಿ ರಾಯನ ವನಕೇಳಿಗೆಡಱಾಗದಿರದು ನಿನ್ನಾಣೆ (ನಾಗಕು. ೪-೩೨) ; ಯಕ್ಷ ರಾಕ್ಷಸ ಗಂಧರ್ವರಿಗೆ ಸಹ ನನ್ನ ತಮ್ಮಂದಿರನ್ನು ತಡಹುವ ಶಕ್ತಿಯಿಲ್ಲ (ಕಪಪು. ೭-೪೪). ೪. ಬಳಿ; ತೊಡೆ; ಸವರು ; ಲೇಪಿಸು : ಪರಿಯಣಕ ಶುಪ್ಪವಂ ತಡಹಿ (ಸೂಪಶಾ. ೧-೨೦): ಹೂರಿಗೆಗೆ ಸಮದುಂಡೆ ಯೊಂದನೆ ತೆಗೆದು . . . ಪದಟನಿಂ ಹಂಚಿನೊಳು ತುಪ್ಪವ ತಡಹಿ ಅಡಲು ಮಂಡಗೆಯನಿಸಿಕೊಂಬುದು (ಸೂಪಶಾ. ೧-೨೯). ೫. ತಟ್ಟು ; ಬಡಿ : ನಿಶಿಯೊಳೈತಂದು ಬಾಗಿಲ ತಡಹಲು (ನವಮೋ. ೧೫-೨) ; ಬಂದೊರ್ವ ಜಾರ ಬಾಗಿಲ ತಡಹಲು (ನವಮೋ. ೧೭-೨೫). [ ದೇ.॥ ತಮಿ. ತಟವು ; ಮಲ. ತಡವು ; ಕೊಡ. ತವ್ಡ್ ; ತೆಲು. ತಡವು, ತಡವು ]

**ತಡವು$_3$**, ತಡಪು$_2$, ತಡಹು$_3$ (ನಾ). ೧. ಅಡ್ಡಿ ; ತಡೆ ; ವಿಘ್ನ : ನೀ ನಿವನೆನಗೆ ಕೊಡಬೇಕೆಬೇಕೆಂದು ಕೊಂಡೊಯ್ವರೆನಗಿಲ್ಲಿ ತಡವುಂಟೆ ತಾತ ನಧರ್ಾಂಗಿ (ಕುರಾಸಾಂ. ೩೨-೯೭). ೨. ಸಾವಕಾಶ ; ವಿಳಂಬ : ಚರರಂ ತಡವಿಲ್ಲದೆ ಬೇಗಮಟ್ಟೆ ಪಂಕೇರುಹನಾಭನಂ ಬರಿಸಿ (ಪಂಪಭಾ. ೬-೨೧) : ಮಗಂ ಪುಟ್ಟಿದಾಗಡೆ ಮಾಡಲ್ಪಗೆದಂದೆನಿಲ್ಲಿನಿಸುಮಾಯುಷ್ಯಾಮುಮಂ ಯಜ್ಞಮಂ ತಡವಂ ಮಾಡಿದೆನೀಗಳಿಂದೆ ಬಗೆ ನೀಂ ತತ್ಕಾರ್ಯಸಂಸಿದ್ಧಿಯಂ (ಕಾದಂಬ. ೭೨೪) : ತಡವು ಬೇಡನೆ ಕೌರವೇಂದ್ರನ ನುಡಿಗೆ ಮುನ್ನನಂ [illegible] (ಕುಮಾರ್ದೊ. [illegible]). ೩. [illegible] ; [illegible] 'ತಡವುಗೊಡು' ಪರಾ. △ **ತಡಪು$_1$** [illegible] ಮೊಳೆಯು ಸಡಿಲವಾಗದಂತೆ ಅದರ ಕೊನೆಯಲ್ಲಿಡುವ ತಡೆಬಿಲ್ಲೆ : (ಶಿ). **ತಡಹು$_3$** : ೧. ಶರಣರ್ಗೆ ತಡಹಿಲ್ಲವೆಂಬುದು ತನ್ನ ಮನಜ್ಞಾನ ದಿಂದವೇ ಅಱಿದು (ಘನಪ. ೫೧) : ಬಿರಿದು ಕಟ್ಟಿದ ಬಂಟಂಗೆ ತಡಹಿಲ್ಲದೆ ಬಱುಬಂಗುಂಟೆ ಮನೆದಗಹು (ಕೋಲಶಾಂ. ೧೨-೫೭). ೫. ಏರಿ; ಕಟ್ಟೆ (?): ಕಡುಗಲಿ ವರುಣನಾತ್ಮಜರು ತಡಹನೊಡವ ಸಿಡಿಲಂತು ಗರ್ಜಿಸುತವೆ ನಡೆದು ಬಂದರದೇನೆನಲಿ (ಅಂಜಚ. ೬-೧೭೭) : ಶೋಕಿಪ ಮಡದಿಯರ ಕಂಗಳ ಜಲ ತಡಹನೊಡೆದ ಮಳೆಯಾಯಿತು (ಅಂಜಚ. ೭-೯೯).

[ <ತಡವು$_1$ ]

**ತಡವು$_4$** (ನಾ). ಸೋಂಕು ; ಸ್ಪರ್ಶ : ಹೊಣಕೆಗಳ ತಡಹುಗಳ ಕಲಿತನದ ಕಡುಹುಗಳ ರಣದವಕದಿಂ ಕುದಿಯುತಿಹುದು ಹಂಸಧ್ವಜನ ಪರಿವಾರಂ (ಜೈಮಿಥಾ. ೦೦-೪೧) ; ಸವಿ ಬೆಳಗು ತಡವು ದನಿ ನಾತಮೆಂಬೈದಱ ಬಗೆ ತಿಳಿವನೆಡೆಯದೇ ಲೋಕಂ (ಕುಱಳ್. ೧-೩-೭). 'ಕೈತಡವು' ಪರಾ.

[ <ತಡವು$_2$ ]

**ತಡವುಗೊಡು** (ಕ್ರಿ). ಅವಕಾಶಕೊಡು ; ತೆರಪುಗೊಡು : ಇವು ಪಟ್ಟಣಂ ಗಳು ಇವು ಅರಣ್ಯಗಳು ಎಂದು ವೆರ್ಬಡಿಶಿ [ಬೇರ್ಪಡಿಸಿ] ನೋಡುವುದಕ್ಕೆ ತಡವುಗೊಡದೆ (ಸೌಗಂಧಿ. ೦೭೮-೨೦). [ ತಡವು$_3$ + ಕೊಡು$_1$ ]

**ತಡವೆ** (ನಾ). ಸಲ ; ಸರತಿ : ಬಾರಿ : ವೆಂಕಟಾರ್ರಾವು ಶಾಸ್ತ್ರಿಗಳಿಗೆ . . . ನಾಲ್ಕು ತಡವೆ ಪ್ರವರ್ತಿ ಆಗಿ ತೀರಿ ಹೋದದ್ದರಿಂದ (ಮೈಅರಿ. ೧೯೩೮, ೫೩-೫ ; 1806) ; ಎರಡು ದಿನ ಮೂರುದಿನಕೆ ಒಂದೊಂದು ತಡವೆ ಬೆಂಗಳೂರು ಪ್ಯಾಟೆ ಹೊಕ್ಕು (ಹೈದರ. ೭೭) ; ಬಡಿಸುವಾಗ ಒಂದೆರಡು ತಡವೆ ಅಳಿಯನಾಗುವವನನ್ನು ನೋಡಿದಳು (ಸಾವಿತ್ರಿ. ೦೦).

[ ದೇ.॥ ತಮಿ. ತಟವೈ ; ತೆಲು. ತಡವ ]

**ತಡಸ** 'ತಡಸು$_3$' ನೋ.

**ತಡಸಲ$_1$** 'ತಡಸಲು$_1$' ನೋ.

**ತಟಸಲ$_2$** 'ತಡಸಲು$_2$' ನೋ.

**ತಡಸಲು$_1$**, ತಡಸಲ$_1$ (ನಾ). (ಉಕ) ೧. = ತಡಸು$_1$ : (ಶಿ). ೨. ಎತ್ತರ ದಿಂದ ಆಳಕ್ಕೆ ಧುಮುಕುವ ನೀರು; ಅಬ್ಬಿ ; ಜಲಪಾತ ; ಧಬಧಬೆ (ಉಕ) : ತಡಸಲು ತಡಸಲು ಆಗೊ ಅಲ್ಲಿ, ದಡದಡ ಎನ್ನುವುದು ಎದೆ ಇಲ್ಲಿ (ಉಯ್ಯಾಲೆ. ೭೭-೦) ; ವಚನಗಳ ಪ್ರವಾಹ ಹತ್ತುಕಡೆಗೆ ಹರಿದು ತಡಸಲಾಗಿ ಬೀಳತೊಡಗಿತು (ಕಸಾಚ. ೩೦೫). **ತಡಸಲ$_1$** : ಸೆಳವಿನೋಳ್ಸಿಕ್ಕೊದರಿ ತಡಸಲಕೆ ಬಿದ್ದಸುವನಳಿವಲ್ಲಿ (ದುರಪು. ೨೦-೧೧); ಗೋಕಾವಿಯ ಪಶ್ಚಿಮಕ್ಕೆ ಸುಮಾರು ಮೂರೂವರೆ ಮೈಲುಗಳ ಮೇಲೆ ಘಟಪ್ರಭೆಯ ತಡಸಲವುಂಟು (ಮುಂಬಯಿ. ೫-೭೭) ; ಕನ್ನಡದ ಈ ತುದಿಯು ತಡಸಲದಿಂದ ಜೋಗದ ಮಿಂಚಿಗೂ . . . ಇದುವು ನಡುಗಿಸಲರಿಯದೋ (ಅರಳು. ೩೦೨-೩). [?]

**ತಡಸಲು$_2$**, ತಡಸಲ$_2$ (ನಾ). ಒಂದು ಬಗೆಯ ಮರ : ತಡಸಲು ತಡ್ಸಾಲ್ (ಮೈಶಿಗಿ. ೪೧-೮೦೯) ; ಮರಗಳು: ಹೆಸವ . . . ಬೀಟೆ, ಪಚರಿ, ಬರಿಡಿ, ಕೂಲಿ, ತಡಸಲು, ತಪಸಿ, ನಂದಿ, ಕುಂಕುಮ (ನಮ್ಮಸು. ೨೩೭). **ತಡಸಲ$_2$**: ತಡಸಲ (ಧಾಮಣ),–ತಕ್ಕಮಟ್ಟಿಗೆ ದೊಡ್ಡದು, ಕಟ್ಟಿಗೆ ನಸುಗೆಂಪು ಗಾಡಿಗಳಿಗೆ ಮೇಲಾದದ್ದು (ಕಥಾಗಿ. ೪೦). [ ? ]

**ತಡಸಲುದೀಪ** (ನಾ). ನಿರ್ದಿಷ್ಟವಾದ ಕಡೆಗೆ ಅತಿಶಯವಾದ [illegible] ಹರಿಸುವ ವಿದ್ಯುದ್ದೀಪ : ರಂಗದ ಮೇಲೆ ವಿಶೇಷ ರೀತಿ[illegible] ಬೆಳಕು ನಿಯೋಜನೆಗಾಗಿ ಹೊಸದಾಗಿ ನಾಲ್ಕು 'ತಡಸಲುದೀಪ' (Flood-light) ಕೊಂಡದ್ದಾಯಿತು (ನಟಸಾ. ೭೨೨).

[ P ಇದು ಇಂಗ್ಲಿಷಿನ 'Flood-light' ಎಂಬ ಪದದ ಅನುವಾದ ]

**ತಡಸು$_1$** (ನಾ). (ಗದ್ದೆಯಲ್ಲಿ ಒತ್ತಾಗಿ ಬೆಳೆದ ಸಸಿಗಳಂತೆ) ಒಂದಕ್ಕೊಂದು ತಡೆಯಾಗಿರುವಿಕೆ ; ಪರಸ್ಪರ ಪ್ರತಿಬಂಧಕವಾಗಿರುವುದು : (೬).

[ ದೇ.; ಮಲ. ತಡಸ್ಸು ]

**ತಡಸು$_2$**, ತಡಸ (ನಾ). ಒಂದು ಬಗೆಯ ಮರ ; ತಡಸಲು ಮರ : "ತಡಸು[ಪಾಠಾಂ. ತಟಸು] ನಿಟಿಳಂ" (ಮಂಗರಾ. ೩೬-೧೮) : ಹಲಸಾಲಂ ತಡಸಾಸು ತೇಗು ತದಿಕು . . . ಎಂಬೀ ಮರದುಱುಗಲಿಱುಂಬಿನಿಂದತಿಗಹನಮೆನಿಪ ಗಹನಾಂತರದೊಳಗೆ (ಪಾರ್ಶ್ವಪು. ೧೨-೫೮) : ಅಂಬಟೆ ತಡಸೀಳೆ ಬಾಳೆ ಸಿರಿಸಂ . . . ಇಡಿಕಿಱಿದಿರ್ದ ಪೇರಡವಿ (ಧರ್ಮಪ. ೩-೪೬) : ಪಾಲಾಶಮರಟಾಳಮಾ ತಡಸು ಕಕ್ಕೆಯಂಕೊಲೆ . . . ಮೊದಲಾದ ವೃಕ್ಷಂಗಳಿಂ ವನಮೆಸೆದುದು (ಜಬಪು. ೫೩-೧೮). ತಡಸ : ತಂಡಸ ತಡಸ[ಪಾಠಾಂ. ಲು]ತುಗ್ಗಿಲು ತದಿಕು ತಪಸಿಗಳ . . . ತಮಾಲತರು ಮೊದಲಾದ ವನ ಭೂಜಾಳಿಯಲಿ ಹೊಳೆದರು (ತೊರರಾ. ೭-೧೮-೧೭) : ತಡಸ ತಾಱ ನೆಲ್ಲಿ ಹುಣಿಸೆ ಬಸುರಿ ಬೇವು ಮೊದಲಾದ ತರುಗಳು ಎಣಿಕೆಗೆ ಇಲ್ಲದಲ್ಲಿಹವು (ರಾಮವಿ. ೦೫-೫೮) ; ತಾಱದ ತಡಸದ ಬೇವಿನ ಬೇಲದ . . . ಮರದೋಳಿಯಿಂದೆಸೆದುದಾ ವಿಪಿನ (ಕುರಾಸಾಂ. ೨೭-೫೬).

**ತಡಹ** (ನಾ). ಗೊಡವೆ ; ಗೋಜು; ಪ್ರಸಕ್ತಿ : ಕಾನನದೆಡೆಯ ಮೃಗಪಕ್ಷಿಗಳ ವಾರ್ತೆಯು ತಡಹವೇತಕ್ಕಕಟ (ಸದ್ಗುರು. ೭-೧೭). [ <ತಡವು$_2$ ]

**ತಡಹರ** (ನಾ). "ಬೊಕ್ಕೆ; ಗುಳ್ಳೆ; ಹೊಪ್ಪಳೆ" (ಪ್ರಭಾ.) : ಮೆಯ್ಯೊಳಿಟ್ಟ ಕೈ ಸಿಡಿಪಿನಮೆಳ್ವಿಕೊಳ್ವ ವಿರಹಜ್ವರದುಗ್ರತರಾತಿರೇಕದಿಂ ತಡಹರಮೆರ್ದು ವೆಂಬಿನೆಗಮೆರ್ದುವು ಮೆಯ್ಯುವಿರಾ ಮೃಗಾಕ್ಷಿಯಾ (ಲೀಲಾವ. ೧೨-೩೭). 'ದಡಾರ' ಪರಾ. [ ? ]

**ತಡಹಾಯು** 'ತಡಂಬಾಯ್' ನೋ.

**ತಡಹಿಡು** 'ತಡವಿಡು$_2$' ನೋ.

**ತಡಹು$_1$** 'ತಡವು$_1$' ನೋ.

**ತಡಹು$_2$** 'ತಡವು$_2$' ನೋ.

**ತಡಹು$_3$** 'ತಡವು$_3$' ನೋ.

**ತಡಹು$_4$** (ನಾ). ೧. ಧೈರ್ಯ. ೨. ಸಮಾಧಾನ : ನಿನ್ನನು ಭಂಜಿಸಲು ಬಂದವನನಟ್ಟುವೆ ನಿನ್ನ ರಕ್ಷಿಸುವೆ ಕಂಜನಾಭ ಕಪರ್ದಿಗಳ ಪದಕಂಜಗಳ ಮೇಲಾಣೆ ದಿಟವಿದುವಂಜ ಬಿಡು ತಡಹಿರಲಿ ಮನದೊಳಗೆ (ಕೋಗಯು. ೧೧-೪೬). [ ? ]

**ತಡಾಕ** (ನಾ). ಕೆರೆ ; ತಟಾಕ. [ ಸಂ. ]

**ತಡಾಗ** (ನಾ). = ತಟಾಕ : ತಡಾಗತತಿ ಕಣ್ಗೆನುನ್ನತ ಪಾದಪೋತ್ಕರಂ ಸೀಗುರಿಯಿಂ ಕರಂ ಕಿಱಿಯವಾದವು ಕಣ್ಗೆ (ಅರ್ಧನೇ. ೭-೪); ಮಹಾಪಮಾಯಿ ತಡಾಗದಂಬಿಕೆ ಪಸಂತಾದೇವಿ . . . ಶ್ರೀ ಗುಪ್ತಚಾಮುಂಡಿಯೆಂಬ ಮಹಾದೇವಿಯರಿರ್ಪ ಸ್ಥಿಪಿನೊದವಿಂದಂ ಕುಕ್ಕನೂರ್ಪಾವನಂ (ಶಾಸಪ. ೮೭; 1179): ಕದಂಬವಂಶದ ಮಯೂರಶರ್ಮನು ತಡಾಗವನ್ನು ಕಟ್ಟಿಸಿದನೆಂದು ಬರೆದಿದೆ (ಕರ್ನಾಅ. ೦೬). [ ಸಂ. ]

**ತಡಾಯಿಸು** (ಕ್ರಿ). ದಾಟಿಸು; ದಂಡೆಗೆ ಮುಟ್ಟಿಸು : ದೊಡ್ಡ ಕಾರ್ಯ. ದೊಡ್ಡಮನಸ್ಸುಮಾಡಿ ನದಿ ತಡಾಯಿಸಬೇಕು (ಮಾಮನ. ೧೯೬). 'ತಟಾಯಿಸು' ಪರಾ. [ ತಡ$_2$ + ಹಾಯಿಸು (<ಪಾಯಿಸು) ]

**ತಡಿ$_1$** (ನಾ). ತೇವ; ಒದ್ದೆ : ಅಳ್ಳೆಗಳನು ಹೊಯ್ಯುತ್ತ ಉಬ್ಬಸದಿ ತಡಿಯಿನಿತು ಬಾಯೊಳಗಿಲ್ಲದಾರಿ ಒಣಗಿದ ನಾಲಿಗೆಯಲಿ ತೊದಲ್ನುಡಿಯಿಂದಯಿಂತೆಂದನು (ಪಪದೊ. ೨೮-೫೬). 'ತಡಿಯಾರಂ' ಪರಾ.

[ ←ತೆಲು. ತಡಿ ]

**ತಡಿ$_2$**, ದಡಿ$_2$, ಧಡಿ$_1$ (ನಾ). ೧. ದಡ ; ದಂಡೆ ; ತೀರ : ತುಂಗಭದ್ರೆಯಾ ತಡಿಯೊಳ್ ತಾಣ ಬೀಡುಗಳ್ ಇಟ್ಟು (ಇಅ. XI. ೧೨೬-೮ : 804) : ವಿಶಾಳೆಯೆಂಬ ತೊಱೆಯ ತಡಿಯೊಳನಿಬರುಮೇಕಪಾರ್ಶ್ವದೊಳ್ ಪಟ್ಟಿರ್ದು (ವಡ್ಡಾರಾ. ೧೧೧-೧೧): ಪೂಗೊಳದ ತಡಿಯ ಮಾಮರದಡಿಯೊಳ್ . . . ನಿತ್ಯನಿಯಮಂಗಳಂ ತೀರ್ಚಿ (ಪಂಚತಂ. ೧೨೦-೮) ; ಸಮುದ್ರದ ತಡಿಯಲೊಂದು ಮನೆಯ ಮಾಡಿ ನೊರೆತೆರೆಗಳಿಗಂಜಿದೊಡೆಂತಯ್ಯ (ಮಹಾದೇ.ಬ.೪೫-೧೧೬); ಕಂದನ . . . ಜಾಹ್ನವಿ ತರಂಗದಿ ನೋಯಲೀಯದೆ ಮುಳುಗಲೀಯದೆ ಬಾಚಿದಳು ತಡಿಗೆ (ಕುವ್ಯಾಅ. ೩-೨೨). ೨. ಎಲ್ಲೆ; ಮೇರೆ ; ಮಿತಿ : ಲೋಗರ ಲೋಕದ ತೃಷ್ಣೆಗೆ ತಡಿಯುಂಟೆ (ರಾಮಾಶ್ವ. ೬೫-೪). ೩. ಸಮೀಪ ; ಹತ್ತಿರ : ನೀ ನಡೆವೈ ಸಂಪತ್ತಿನ ತಡಿಗೆ (ಕಎಪು. ೭-೨೦). **ದಡಿ$_2$** : ೨. ಘುಡುಘುಡಿಸಿದನು ರೋಷವಹ್ನಿಯ ದ[ಪಾಠಾಂ. ತ]ಡಿಯ ಹೊಕ್ಕನು (ಕುವ್ಯಾಸ. ೧೫-೫೬). ೪. ವಸ್ತ್ರ ಮೊದಲಾದವುಗಳ ಅಂಚು : ನನನಲ್ಲ ಮಲ್ಲಿಗ ದಡಿಯುಳ್ಳ ದೋತರ ಮಾನವಿಟ್ಟಕೊಂಡು ತರುವೇನ ಮಾರಾಯ್ನ ಮೈಗೆ ಮುಡುಪಾಗಿ (ಜಾಸಿಗ. ೯೩-೧೧). ೫. ದಿಂಡು; ಕಟ್ಟೆ : ಇದಿರಿನ ಕಿಡಕಿಯ ದಡಿಯಮೇಲೆ ಕೂತು . . . ಗೆಳೆಯನ ಮಾತನ್ನು ಆಲಿಸಹತ್ತಿದ (ಮೂರುದಾ. ೨೦೦). **ಧಡಿ$_1$** : ೧. ಸಂಸಾರವೆಂದೆಂಬೊ ಉಬ್ಬಲದೊಳು ಬಿದ್ದು ಬಳಲಿ ತೊಳಲಿ ಒಬ್ಬರಾದರು ಧಡಿಗೆ ನಿಲಿಪಾರಿಲ್ಲ (ಮೋಕ್ಷದೀ. ೧೯೯). ೪. ಕಲ್ಲಪ್ಪ . . . ಧಡಿಯ ದೋತರವನ್ನು ಹೆಗಲಮೇಲೆ ಸರಿಯಾಗಿ ಒಗೆದುಕೊಂಡು . . . ನುಡಿದ (ಅಶೋಕ. ೪).

**ತಡಿದಡಿ, ತಡಿತಡಿ** (ದ್ವಿರುಕ್ತಿ) : ತಡಿತಡಿಯ ತೆಂಗಿನೆಳ ನೀರ್ ಕೂಡೆ ಕರೆಗಣ್ಮುವ ಕೊಳಂಗಳೊಳಪೊಕ್ಕು . . . ಎಳವಿದಿರ ಬಣ್ಣಮಂ ತಳೆದ ನೀರ್ವಣ್ಣಂತಿರ್ಪಳ್ (ಕಬ್ಬಿಕಾ. ೩೦೫) : ಜಿನಮತಾಂಭೋಧಿಯುಮಂ ಪುಗದಾಗಮಮಱಿವರ ಬಗೆವುಗದೆ ಕೆಲರ್ ಕವಿಗಳಾಡಿದರ್ ತಡಿವ[ಪಾಠಾಂ. ತ]ಡಿಯೊಳ್ (ಅಜಿಪು. ೧-೯೫) ; ಕಡಲ ತಡಿದಡಿಯೊಳಾತಂ ನಡಿಸಿದ ಕಾಂಚನ ಜಗಜ್ಜಯಸ್ತಂಭಂಗಳ್ (ಚಂದ್ರಪು. ೭-೩೧). **ತಡಿಗಾಗು**=ದಡವನ್ನು ಸೇರು: ತೆಪ್ಪವನು ನಂಬಿದಡೆ ತಪ್ಪದಲೆ ತಡಿಗಹುದು (ಸರ್ವಜ್ಞ. ೨೭೮).

[ <ಪ್ರಾ. ತಡಿ./ಸಂ. ತಟೀ ]

**ತಡಿ$_3$**, ಥಡಿ, ದಡಿ$_3$ (ನಾ). ೧. ಕುದುರೆಯ ಬೆನ್ನ ಮೇಲೆ ಹಾಕುವ ಹಲ್ಲಣ; ಜೀನು : ತ[ಪಾಠಾಂ. ದ]ಡಿಯ ಬಲಿಸುವ ಗುಳವ ಱೆಂಚೆಯ ಗಡಣಿಸುವ . . . ಉತ್ಸಹವಾಯ್ತ್ರವರ ಪಾಂಡವರ ಬೀಡಿನಲಿ (ಕುವ್ಯಾಉ. ೧೧-೧೨) : ಅರೆಗಡಿದ ಪಕ್ಕರೆಯ ಖಂಡಿಸಿದ ತಡಿಯ . . . ಹೇರಾಳದಿಂ ಬಿಡದೆಸೆದುದು ರಣಭೂಮಿ (ಕುರಾಸಾಂ. ೨೦-೪೪) : ಕುದುರೆಗೆ ತಡಿಯನ್ನು ಕೂಡ ಹಾಕದೆ ಅದನ್ನು ಹತ್ತಿಕೊಂಡು ಹೊರಟನು (ಪ್ರಮುಹ. ೭೦). **ಥಡಿ** : ೧. ಕುದುರೆಯ ಥಡಿಯಂಥ ಮೆತ್ತನ್ನ ಹಾಸಿಗೆ ನನಗೆ ಒಳ್ಳೆಯದೆನಿಸಿತು (ಸ್ವಕಿಟಿ. ೨೫೫) : ಥಡಿ ಹಾಕೊ ರಾಯ ಕುದುರೇಗೆ (ಹಳ್ಳಿಯು. ೯೨). ೨. ಹಾಸು ; ಹಾಸಿಗೆ : ನಡುಮನೆಯಲ್ಲಿ ಶೀನಪ್ಪಯ್ಯನಿಗೊಂದು ಥಡಿ ಹಾಕಿದರು (ಪ್ರಕೃ. ೧೪೨). **ದಡಿ$_3$** : ೧. ತಗೆ ದಡಿಯ ಹಾಯಿಕು ಗುಳವ ಕಾ ಮೊಗವಡವ (ಕುವ್ಯಾಕ. ೮-೧೧) : ಕಡಿದ ಹಕ್ಕರಿಕೆಗಳ ಸೀಳಿದ ದಡಿಯ ನೆಗ್ಗಿದ ಗುಳದ ಱೆಂಚೆಯ . . . ಕುಸುರಿಗಳಲೆಸೆದುದು ರಣಭೂಮಿ (ಕುವ್ಯಾಕ. ೧೫-೩೦). ೩. (?) : ಜೋಡಿ ಹಱಿದುದು ಸೀಸಕದ ದಡಿ ಬೀಡು ಬಿರಿದುದು ತಲೆಯ ಚಿಪ್ಪಿನ ಜೋಡು ಜಱಿದುದು ಮನಕೆ ಸುಱಿದುದು ಸೊಗಡು ರಣರಭಸ (ಕುವ್ಯಾಅ. ೧೯-೩೭).

[ ←ಹಿಂ. ಮರಾ. ಥಡಾ ]

**ತಡಿಕೆ**, ತಡಕೆ (ನಾ). ೧. ಬಿದಿರು, ಗರಿ ಮೊದಲಾದುವುಗಳನ್ನು ಹೆಣೆದು ಮಾಡಿದ ತಟ್ಟಿ : ಎಲುವಿನ ತಡಿಕೆ ಕೀವಿನ ಹಡಿಕೆ ಸುಡಲೀ ದೇಹವ (ಮಹಾದೇ. ಬ. ೪೭-೧೧೮) ; ಹಡಹಿನಾಸೆಯೊಳೊರ್ವ ಬಡ ಸೂಳೆ ತನ್ನಯ ತಡಿಕೆಯಂತೆಸೆವ ಗಲ್ಲವನು ಪಿಡಿದಬ್ಬೆಯಿಂದ ಮಿಡಿಸಿ . . . ನಿಂದಿಹಳು (ಅಂಜಿದ. ೩-೦೫೦) : ತಡಿಕೆ ಮಕ್ಕರಿ ಸಹ ಬಹ ಕಾಮಾಟದ ಬಿಡುಮಂದಿಗೆ

ರೆಕ್ಕವಿಲ್ಲ (ಕಂಸವಿ. ೧೧-೪೦) ; ಮುಡಿವಾಳ ಚಾಪೆಗಳಿಂ ತಡಿಕೆಗಳಿಂ ರಚಿಸಿ (ಸೌಗಂಧಿ. ೧೩೭-೧೭) : ಒಳಗೋಡೆಗಳೆಲ್ಲಾ ತಡಿಕೆ (ಅರಮ. ೧೮೨). ೨. ಒಂದುಂ ಬಗೆಯ ಬಲೆ ; ತಡಿಕೆವಲೆ : ತಡಿಕೆ ದೀವದ ಖಗಮೃಗ ಸಂತತಿ ಗೂಡಿ ನಡೆತಂದನಾ ವನಚರನು (ನೇಮಿಸಂ. ೨-೩೮) : ಬಾಣನಂದನೆಯೆಂಬ ತಡಿಕೆಯು ಮುಟ್ಟೆಯ ಸುಜಾಣ ಮನ್ಮಥನುರುಳ್ಗಣೆಯು ಕೇಣವಿಲ್ಲದೆ ನೀಡಿ ಸುರರೆರ್ದೆಯೊಳಗಿರ್ದ ಪ್ರಾಣಹಂಸಗಳ ಬಂಧಿಸಿದ (ಮೋಹತ. ೨೫-೧೭) : ತಡಿಕೆಯುಂ ಪಿಡಿದೊರ್ವ ಮಾಯಾ ಪುಳಿಂದನಡಿಯಿಡುವುದುಂ ಕಂಡೊಂದು ಪುಲ್ಲೆ ತನ್ನೆರ್ದೆಯೊಳಂ ನಡುಗಿ (ಚಬಪು. ೫೩-೨೯) : ಪಾಸುವಲೆ ಬೀಸುವಲೆ ತಡಿಕೆ ಕಾಲ್ಗಣ್ಣಂಟುಗಟ್ಟಿಗೆಯು (ರಾಘವ. ೧೭-೬೭). ೩. ತೆರೆ ; ಮರೆ : ಇವರನಂಗಡಿಯ ತಡಿಕೆಯು ಕೀಳಲ ಕೆಳಗಿಟ್ಟೊಡೆ ದಣ್ಡಮುಂ ದೋಷಮುಮಿಲ್ಲ (ಎಇ. XV, ೬೯-೨೭ ; 1050) : ಲೋಹದ ತಡಿಕೆಗಳ ನೆಳವಡಿಸಿ ಬೀಡಿನ ನಡುವೆ ರಚಿಸಿದರವನಿಪಾಲನ ರಾಜಮಂದಿರವ (ಕುವ್ಯಾ.ಭೀ.೧-೫೧): ಈ ಪೀಠಗಳ ಸುತ್ತ ಬೆಳಕು ತೂರದ ಗಾಜಿನಿಂದ ಮಾಡಿದ ತಡಿಕೆಗಳಿವೆ (ಪ್ರವಾಇ. I, ೩೯೭). ೪. ಚೌಕಟ್ಟು ; ಚಪ್ಪರ ; ಹಂದರ ; ಹೆಣಿಗೆ : ಕತೆಯು ತಡಿಕೆಯನ್ನು ಎಲ್ಲಿಂದಲೋ ಎತ್ತಿಕೊಂಡಿದ್ದರೂ . . . ಮುನ್ನೂರು ಬರವಣಿಗೆಯ ಪುಟಗಳಷ್ಟು ವೃದ್ಧಿಯಾಗಿತ್ತು (ದಯ್ಯಮ. ೪): ಕಲೆಗಾರನೊಬ್ಬನು ಒಂದು ವಿಚಿತ್ರ ಸನ್ನಿವೇಶಕ್ಕೆ ಒಳಗಾಗಿ ಅವಸಾನ ಹೊಂದುವುದು ಇವುಗಳೆರಡರಲ್ಲಿಯೂ ಇರುವ ತಡಿಕೆ (ಅನುಕ. ೧೧೭) **ತಡಕೆ :** ೪. ಬಳ್ಳಿಯನ್ನು ತಡಕೆಗಳ ಅಥವಾ ಕಂಬಗಳ ಮೇಲೆ ಹಬ್ಬಲು ಬಿಡಬಹುದು (ಅಡುಸೌ. ೧೨೯). [ ದೇ.॥ ತಮಿ. ತಟುಕ್ಕು ; ಮಲ. ತಡುಕ್ಕು ; ತೆಲು. ತಡಕ, ತಡಿಕ ; ಕೊಲಾ. ತಡ್ಕಾ ]

**ತಡಿಕೆಗಟ್ಟು** (ಕ್ರಿ). ತಡಿಕೆಬಲೆಯನ್ನು ಕಟ್ಟು: ಎರೆಯ ಚೆಲ್ಲು . . . ತೋಹುಗೊಡು ತಡಿಕೆಗಟ್ಟಂಟುದೊಡೆ (ಹದಶಾ. ೫-೨೫). [ತಡಿಕೆ + ಕಟ್ಟು$_1$]

**ತಡಿಕೆಗೋಡೆ** (ನಾ). ಬಿದಿರು ಅಥವಾ ಅಡಕೆ ದಬ್ಬೆಗಳನ್ನು ಹೆಣೆದು ತಡಿಕೆಗೆ ಮಣ್ಣು ಮೆತ್ತಿ ಮಾಡಿದ ಗೋಡೆ : ಪ್ರವೇಶಿಸಿತು ಪ್ರಥಮ ಕಿರಣಂ . . . ಪರ್ಣಕುಟಿಯುಂ, ತರಗೆಲೆಯ ತಡಿಕೆಗೋಡೆಯ ಬಿರುಕಿನಿಂದ (ಶ್ರೀರಾಮಾ. ೪೮೭-೨). [ ತಡಿಕೆ + ಗೋಡೆ ]

**ತಡಿಕೆಪಡಿ** (ನಾ). ಬಿದಿರಿನಿಂದ ಹೆಣೆದುಮಾಡಿದ ಬಾಗಿಲು ; ತಟ್ಟಿಯ ಬಾಗಿಲು: ಪನ್ನಗುಡಿ ತಡಿಕೆಪಡಿಯಂ ಕೆಲಕ್ಕೋಸರಿಸಿ ಬಂದಳು ಬಯಲ್ಗೆ (ಶ್ರೀರಾಮಾ. ೪೮೭-೪೦).

[ ತಡಿಕೆ + ಪಡಿ$_2$ ]

**ತಡಿಕೆಬಲೆ** 'ತಡಿಕೆವಲೆ' ನೋ.

**ತಡಿಕೆವಲೆ, ತಡಿಕೆಬಲೆ** (ನಾ). ತಡಿಕೆಗಳಿಂದ ಮಾಡಿದ ಒಂದು ಬಗೆಯ ಬಲೆ: ತಡಿಕೆವಲೆ ಕಣ್ಣವಲೆ ನಿಟ್ಟಡಕಿಲ್ವಲೆ ಗೂಂಟವಲೆ . . . ಸಿಡುವಲೆಗಳೊಪ್ಪಿದವು (ಗಿರಿಕ. ೧-೮೦) : ತೊಡಕಿದನು ಗಡ ಗರುಡ ಹಾವಿನ ತಡಿಕೆವಲೆಯಲಿ (ಕುವ್ಯಾ.ಕ. ೧೭-೩೦) : ಮಡದಿ ಮನೆ ಮನೆವಾರ್ತೆ ಮಕ್ಕಳಗಡಣವೆನ್ನದೆನುತ್ತ ಮಮತೆಯ ತಡಿಕೆವಲೆ[ಪಾಠಾಂ. ತಡಕಿವೊಲೆ] ಯಲಿ ತನು ಸಿಲುಕಿ (ನಿಭಾಗ. ೭-೧೪-೧೦) : ಅಂಟುವಲೆಯು ತಡಿಕೆವಲೆಯು ಬೀಸುಬಲೆಯು (ರಾಮಾಶ್ವ. ೮೩-೨೨). **ತಡಿಕೆಬಲೆ:** ಮಡದಿಯನೋಟವೆಂಬೀ ತಡಿಕೆಬಲೆಯಲಿ ಸಿಕ್ಕಿ (ಅಮೃತ. ೨-೬೨). [ ತಡಿಕೆ + ಬಲೆ$_1$ ]

**ತಡಿಗಾಣ್** (ಕ್ರಿ). ದಡವನ್ನು ಕಾಣು; ತೀರವನ್ನು ಸೇರು: ಈ ಸಂಸಾರಾಂಭೋಧಿಯನೀಸುವ ನಿನಗಿದುವೆ ನಾವೆ ತಡಿಗಾಣ್ಬೆಯುನಾಯಾಸದೊಳೆ (ಆದಿಪು. ೫-೬೦). [ ತಡಿ$_2$ + ಕಾಣ್ ]

**ತಡಿಗೂಡು** (ಕ್ರಿ). ದಡವನ್ನು ಸೇರು : ಹಡಗೋಲನೇಱಿದಡೆ ಅದ ಹಿಡಿವ ಕೆಱನಱಿದಿರಬೇಕು ತಡಿ ಮುಡು ಅದಱಡಿಯನಱಿದು ತಡಿಗೂಡಬೇಕು (ಮೋಹಮಾ. ೫೭-೨೩೫). [ ತಡಿ$_2$ + ಕೂಡು$_1$ ]

**ತಡಿಗೆಹಣ** (ನಾ). ಕೊಡದೆ ಉಳಿದ ಹಣ ; ಬಾಕಿ ನಿಲ್ಲಿಸಿದ ಹಣ : ಮಿಟ್ಲಕೊಪ್ಪದ ಚಂನವೀರ ಗೌಂಡನು ತಡಿಗೆ ಹಣ ಅದೆ ಅಂತ ಹೇಳಿದ್ರಿಂದ (ಎಕ. VIII, ಸಾಗರ. ೪೭-೧೭ : ?). [ <ತಡೆ$_1$ + - ಗೆ + ಹಣ ]

**ತಡಿಗೊಳ್** (ಕ್ರಿ). ದಡವನ್ನು ಅನುಸರಿಸು ; ದಂಡೆಗುಂಟ ಇರು : ಆ ತರಂಗಿಣಿಯು ತಡಿಗೊಂಡು ಬೆಳೆದರೆವಿರಿದ ಸರಸಿಜದರಲ್ (ರಾಜಶೇ. ೨-೮ ವ).

ತಡಿತಡಿಗೊಳ್ (ದ್ವಿರುಕ್ತಿ) : ತಡಿತಡಿಗೊಂಡಿಂಬಾಗೆ ಪೊಳೆವ ಪಚ್ಚೆಯ ಕೊಂಬುಗಳಂ ಪಿಡಿದು ನಿಳಿಕೆ ನೆಯ್ದಿಲನಾಯ್ದರ್ (ರೀರಾವ. ೫-೩೩).

[ ತಡಿ$_2$ + ಕೊಳ್$_1$ ]

**ತಡಿದೆರೆ** (ನಾ). ದಡಕ್ಕೆ ಅಪ್ಪಳಿಸುವ ತೆರೆ : ತ್ರಿದಶೋರ್ವೀಜಂ ಪಯೋವಾರ್ಧಿಯ ತಡಿದೆರೆಗಳ್ ಪೊಯ್ದುಪೊಲ್ ನೀಡುಮಳ್ಳಾಡಿದುವು (ವರ್ಧಪು. ೧೦-೫೭). [ತಡಿ$_2$ + ತೆರೆ$_4$ ]

**ತಡಿಮಿಾಱು** (ಕ್ರಿ). ದಡವನ್ನು ಮಿಾರು ; ಮೇರೆ ಮಿಾರು : ತಡಿಮಿಾಱಿಬಂದ ತೆಂಕಣ ಬಡಗಣ ಕಡಲೊಂದನೊಂದು ತಾಗುವ ತೆಱದಿಂ (ಕಬ್ಬಿಗ. ೨೭೫). [ ತಡಿ$_2$ + ಮಿಾಱು ]

**ತಡಿಮುಟ್ಟು** (ನಾ). ದಡವನ್ನು ತುಳಿ ; ತೀರವನ್ನು ಸೇರು : ಒಡನಾಗ ಜಲಕೇಳಿಯೊಳಗೆ ಮೈ ತಣ್ಣಸವಿಡಿಯಲು ಭರದೊಳಗೈದಿ ತಡಿಮುಟ್ಟಿ ಶಶಿಕಾಂತಕೂಲದೊಳಗೆ ಸಾಲುವಿಡಿದೊಪ್ಪಿದರು (ಕಂಸವಿ. ೨೫-೧೩೧).

[ ತಡಿ$_2$ + ಮುಟ್ಟು$_1$ ]

**ತಡಿಯಾರು** (ಕ್ರಿ). ತೇವ ಒಣಗು; ದ್ರವ ಬತ್ತು: ಒಡನೆ ದುಃಖಾನಲನು ಒಡಲನಾವರಿಸೆ . . . ಚೇತನದಿ ಸೊರಗಿ ಬಾಯ್ತಡಿಯಾರಿ ಹವ್ವೈಸಿ (ನವಮೋ ೭-೬). [ ತಡಿ$_1$ + ಆರು$_4$ (<ಆಱು$_1$) ]

**ತಡಿವಲೆ** (ನಾ).=ತಡಿಕೆವಲೆ: ತಡಿವಲೆಯು ಬಗರಗೆಯ ವಾಜಿಯ ಸಿಡಿವಲೆಯ ಕಾಲ್ಗಣ್ಣಗಂಟಲ ಬಡಿವಲೆಯು ಬೆಳ್ಳಾರವಲೆ ಪೇರ್ಬೀಸುವ ವಲೆಗಳನು (ಅನಂರಾ. ೩-೩-೫). [ <ತಡಿಕೆವಲೆ ]

**ತಡಿವಿಡಿ** (ಕ್ರಿ). = ತಡಿಗೊಳ್ : ಏಂ ನಡೆದುದೋ ಪೆರ್ಬಡೆ ಗಂಗೆಯ ತಡಿವಿಡಿದೆರಡನೆಯ ಗಂಗೆ ನಡೆವಂತಾಗಳ್ (ಆದಿಪು.೧೨-೬೩); ತಡಿವಿಡಿದೊಪ್ಪಿ ತೋಱುವ ತಮಾಲವನಂಗಳ ಮುರ್ಪು ಪರ್ವಿ (ಕಾದಂಪೂ. ೬೩೯): ತತ್ಕೂಪ ಸಮಿಾಪದೊಳ್ ನಿಂದು ಪೋಗಲಿಂಬಿಲ್ಲದೆ ತಡಿವಿಡಿದೆಬಿಲುತ್ತಿರ್ದ ಸರ್ಪನ ಬಾಲಮಂ ಬಳ್ಳಿಯೆಂದು ಬಗೆದು (ಪಂಚತಂ. ೧೦೮-೧೮) : ತಡೆದ ರಕ್ಕಸ ತಳವಱರ ಜವನೆಡೆಗೆ ಜಾಳಿಸುತಾಳುವೇರಿಯು ತಡಿವಿಡಿದು ಶೋಧಿಸಿದನಲ್ಲಿ ಸದನಸಂಕುಲವ (ತೊರರಾ. ೫-೨-೧೭). [ ತಡಿ$_2$ + ಪಿಡಿ$_1$ ]

**ತಡಿಸರಿ** (ಕ್ರಿ). ಹತ್ತಿರಬರು (?): ಇರಿವುರಿವಳ್ಳಂ ತಡಿಸರ[ರಿ]ದೆರದಪ್ಪಿದ ಹಾವು ಪಸಿದ ಪೆಣ್ಬುಲಿಯಿಾಂದಾ ಕರಡಿ ಕಡುಮುಳಿದ ಸಿಂಹು ಸ್ಫುರದನಲನ ಜ್ವಾಲೆ ಬಾಳೆಯೆಂಬನೆ ಸುಜನಂ (ಉಸಾರ. ೨೦೨). [ ತಡಿ$_2$ + ಸರಿ$_1$ ]

**ತಡಿಸಾರ್** (ಕ್ರಿ). ಕೊನೆಯನ್ನು ಮುಟ್ಟು; ಮುಗಿ ; ತೀರು: ಪೊಣ್ಮಿರ್ದ ಮೋಹೋದಯಂ ತಡಿಸಾರ್ದಿರ್ದಪುದು (ಅಜಿಪು. ೧೦-೫೪).

[ ತಡಿ$_2$ + ಸಾರ್$_1$ ]

**ತಡಿಹುಡಿ** (ನಾ). "ಪುಡಿಪುಡಿ" (ಪ್ರಭಂ.) : ಹೆಜ್ಜೆಹೆಜ್ಜೆಗೆ ವಸುಧೆ ತಡಿಹುಡಿಯಾಗುತಿರ್ದುದು (ಅಂಬಿಕಾ. ೪೨-೨೦). [ ? ]

**ತಡುಂಬು** (ಕ್ರಿ). ತಡೆ ; ನಿಧಾನಿಸು (?) : ಕುಡಿದು ಚಳಲ್ಬುಳಲ್ಗರೆಯೆ ನಾಲಗೆಯಂ ಮಿಗೆ ನೀಡಿ ನೀರನೋಗಡಿಸಿ ಮುರಲ್ದು ನಕ್ಕಿ ತುಟಿಯಂ ಕಡೆವಾಯ್ಗಳನಗ್ರಪಾದದಿಂ ತೊಡೆದು ತಡುಂಬಿ ತಾಂ ತೊಡಬಗೆತ್ತುವ [ಪಾಠಾಂ. ದೊಡಲನೆತ್ತುತ]ಮಾಗುಳಿಸುತ್ತೆ ಬಿಟ್ಟು ಕಣ್ಬೊಡರ್ಗಳನಿಕ್ಕಲಕ್ಕಲಸಿ ಪೋಪ ತರಕ್ಷುವನುದ್ಬಭುಕ್ಷುವಂ (ರೀರಾವ. ೭-೫೯). [ ? ]

**ತಡುಗಣಿ** 'ತಡಗುಣಿ' ನೋ.

**ತಡುಗುಣಿ** 'ತಡಗುಣಿ' ನೋ.

**ತಡುವು** 'ತೊಡವು₂' ನೋ.

**ತಡುಮಾಡು** (ಕ್ರಿ). ನೆಲೆಯಾಗಿ ನಿಲ್ಲು ; ಆಸಕ್ತವಾಗು ; ತೊಡಗು : ಬಾಡದ ಬಾಸಿಗಮುಡ ಚೆಲ್ವೋಡದ ದಿವ್ಯಾಂಬರಂ ಮನಂಗೊಳಿ ಸುಖದೊಳ್ ಮೂಡುವ ಮುಟ್ಟಾಡುವ ತಡುಮಾಡುವ ಬಗೆಯಿಲ್ಲದಲ್ಲಿ ಬಗೆ ಪಱಿತುಂಟೀ (ಆದಿಪು. ೬-೪೦). [ P 'ತಡಮಾಡು' ಎಂಬುದರ ಅಪಲಿಖಿತ ]

**ತಡೆ₁** (ಕ್ರಿ). ೧. ತಡಮಾಡು ; ಹೊತ್ತುಗಳೆ ; ನಿಧಾನಿಸು : "ತಡ-ಕಾಲಕ್ಷೇಪೇ" (ಶಮಧಾ) : ನಿಡಿಯಲರ್ಗಣ್ಣಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಱದೆ ತಡೆಯೆ ಪಗಲ್ ಕಿರಿಯುವವ್ವಾ ಪುರವರದೊಳ್ (ಕಾವ್ಯಸಾ. ೧೭೮ ಕೂದ್ರಳ): ಜಡಜನಮುಮೆಲ್ಲಮೋದಂ ತಡೆಯದೆ ಕಲ್ಗುಂ ಗುರೂಪದೇಶಕ್ರಮದಿಂ (ಕವಿರಾ. ೧-೧೧) : ನೀರಂ ಕೊಂಡು ತಡೆಯದೆ ಬಾಯೆಂಬುದುಂ (ಪಂಪಭಾ. ೮-೪೦ ವ) : ತಡೆದ್ಯೆ ವಂಚಕ ಕೂರ್ತಪೊಲ್ ಕುಱುವುವೇಟ್ದೊಲ್ಲಿರ್ದ (ಕಾದಂಪೂ. ೩೨೩): ಅನಲಜೆಯನಂದು ಪರಿಭವಿಸಿಯೆ ದಳ್ಳೆಂದುರಿದು ಸೊರ್ಕಿದವನಂ ಕೊಂದಂ ಕುರುಪತಿಯನಿಂ ಕೊಲಲ್ತಡೆದ ಪೆನೇ (ಗದಾಯು. ೬-೨೭): ಮಹಾಮಹಿಮ ರಾಜಸುತ ಪ್ರತಿಪಕ್ಷಿಯೆಂಬಿವಂ ತಡೆಯದೆ ವೀರಸಾನ್ವರ ಮಹೀಪತಿ ತಾ ದಯೆಗೆಯ್ದು ಕೊಳ್ವೊಡಂ. . . ನೆಗಟ್ತೆಯನೆಯ್ದೆ ಕೊಟ್ಟನ್ (ಮೈ.ಆರಿ. ೧೯೩೦, ೭೪-೫೭ : 1053); ಮಗನ ನಿಜಾಯುಧವ ಹಿಡಿ ಶಲ್ಯ ತಡೆಯದಿರೆಳು ಕೃತವರ್ಮ (ಕುಮಾರವ್ಯಾ.ದ್ರೋ. ೫-೨೨) : ಪೆಣ್ಗಳಿ ತನ್ನ ಮನದನ್ನ ಮಧುಮಿತ್ರನೆಂಬರಸಗಿಳಿಯಿರುಳ್ ತಡೆಯೆ ಶೋಕಿಸುತಿರ್ದುದು (ಚಿಬಪು.೪೭-೪). ೨. ತಡವಾಗು ; ವಿಳಂಬವಾಗು : ಗಾಂಧಾರಿ . . . ತನ್ನ ಗರ್ಭಂ ತಡೆದುದರ್ಕೆ ಕಿನಿಸಿ ಕಂಕಿರಿವೋಗಿ (ಪಂಪಭಾ. ೧-೧೨ ವ). ೩. ಉಳಿ ; ನಿಲ್ಲು : ಆತನ ಕೆಲದೊಳ್ನೀಂ ತಡದ ಬೇಗವೆನಿತು (ಕಾದಂಪೂ. ೮೦೭) ; ನಡೆದೊಡೆ ಕಾಲ್ನೊಂದಪುದೆಂದಡಿಗಡಿ ಗಾರಯ್ದು ತಡೆಯಿಮಂದಾಳಿಯರಂ ಜಡಿವಾ ಜನನಿಯುಂ (ಧರ್ಮಾಮೃ. ೩-೫೫) ; ತಡೆಯದು ಜವ್ವನಂ ಪದವಿ ನಿಲ್ಲದು (ಅನಂಪು. ೯-೪೫); ಅರಮನೆಯೊಳಗೆ ಮತ್ತಾ ದಿನ ತಡದು ಶ್ರೀ ಗುರುಹಂಸನಾಥನ ಭಜಿಸಿ (ಭರತ. ೩೭-೫೪). ೪. ಅಡ್ಡಗಟ್ಟು ; ಎದುರಿಸು ; ನಿರೋಧಿಸು ; ನಿಲ್ಲಿಸು : ಅದರ್ವದೆ ವಿಜಯಾರ್ಧ ಗಿರಿಯನಿಂತೀಗಳೆ ಪೂಣ್ದಡೆಗಿಡುವುದೆ ಸಿಂಧುವನಿಂ ತಡೆವಂದುವಿದಾವುದಮ್ಮನೆಮ್ಮನೆ ಬೆಸಸಾ (ಆದಿಪು. ೧೩-೨೦) : ಆರ್ ಕೊಳ್ವೊಡಂ ತಡೆಯದ ಕನಕರಾಶಿಯುಮಂ (ಅಜಿಪು. ೧೦-೧ ವ); ಖಿತಿಯಲಿ ವಿಹಿರಸುತನಡಹಾಯ್ದು ತಡೆದನು ಮತ್ತೆ ಬಾಲಕನ (ಕುಮಾರವ್ಯಾ.ದ್ರೋ. ೫-೫೦) ; ಮೇದಿನಿಯೊಳಾರಾದೊಡಂ ಮಿಡುಕುಳ್ಳೊಡುನ್ನತ ಪರಾಕ್ರಮಿ ತಡೆಯಲಿ ವಾಜಿಯನು (ಜೈಮಿಭಾ. ೨-೨೮) ; ತಡೆದೊಡೆ ತಡೆವೆಂದು ಕಟ್ಟಿ ನುಡಿವುದುಂ (ರಾಮಾಶ್ವ. ೧೫೯-೧೧). ೫. ತಾಳಿಕೊಳ್ಳು ; ಸೈರಿಸು ; ಸಹಿಸು : ಪೆರ್ಬೆಟ್ಟೊತ್ತಿ ನೂಕುವ ಮಹಾವಾತಘಾತಮಂ ತಡೆದೊಲೆಯದಿಪ್ಪಂತಿರೆ (ಜೈಮಿಭಾ. ೪-೨೯). ೬. ಸರಿಹೋಗು; ಸಹನೀಯವಾಗು; ಒಗ್ಗು : ಮುಟ್ಟಿನವರಿಗೆ ರಾತ್ರೀಊಟ ತಡೆಯುವದಿಲ್ಲ (ಮುಂಬಯಿ. ೫-೧೫೨). ೭. ಹೆಚ್ಚು ಕಾಲ ಬಾಳು; ತಾಳಿಕೆ ಬರು; ಬಾಳಿಕೆ ಬರು : ಹೋದವರ್ಷ ಕೊಂಡ ಸೀರೆ ನಾಲ್ಕು ತಿಂಗಳು ತಡೆಯಲಿಲ್ಲ (ರೂಢಿ). 'ತಡೆತ' ಪರಾ. ೮.ನಿಂತುಹೋಗು ; ಸ್ಥಗಿತವಾಗು : ಬಾಳಂ ಕಿತ್ತೆತ್ತಿ ಪೊಯ್ಯಲದು ನಾಗವೇದಿಕೆಯುಂ ತಾಗಿ ತಡೆಯೆ[ಪಾಠಾಂ.ದೊಡೆ](ಪಂಪಶಂ. ೧೯೭-೯); ಬೆರ್ಚಿ ಭಯವಶದಿಂ ಪ್ಯನಡುಗೆ ಮತಿಗೆಟ್ಟು ಕಾಲ್ಗಳ್ ತಡೆದೊಡೆ (ಧರ್ಮಾಮೃ. ೭-೮೪): ಉಸಿರಿಕ್ಕುತಿರ್ಪುಸಿರ್ ತಡೆದೊಡವಿಲ್ಲ (ಶಂಪಾಶ. ೮೩); ತಡೆಯದೆಲ್ಲೆಡೆಯೊಳ್ ತಾನು ಬೀಸುವನೀಯೆಡರನೇಳಿಪನೆಂದೆಲರು ಸಡಗರದಿಂದ . . . ಮುಡಿಯೊಳಾನುವುದು (ಜಡಬ. ೨-೭). 'ತಡ₁' ಪರಾ.

**ತಡಕೊಳ್ಳು**=ತಾಳಿಕೊಳ್ಳು; ಸಹಿಸು; ಸೈರಿಸು: ಹವಣಿಸಿ ಹಲವು ಕಬ್ಬುನವ ತಾಡಿಪ ತನ್ನ ತವರವ ತಡಕೊಂಬುದರಿಂದ (ಮೋಹತ. ೪೧-೪೯) ; ಕಡು ಕೋಪ ಬಂದಾಗ ತಡಕೊಂಡವನೇ ಜಾಣ (ಗಾದೆ).

[ ದೇ.೫ ತಮಿ. ತಟು, ತಟ್ಟೈ ; ಮಲ. ತಟು, ತಟೆ ; ತುಳು. ತಡೆ ; ಕೊಡ. ತಡೆ ]

**ತಡೆ₂** (ನಾ). ೧. ತಡ ; ಸಾವಕಾಶ; ವಿಳಂಬ : 'ತಡೆವಡು' ಪರಾ. ೨. ಅಡ್ಡಿ ; ನಿರ್ಬಂಧ; ವಿಘ್ನ : ಬಯಲಿಂಗೆ ಕಡೆಯಿಲ್ಲ ಮರುತಂಗೆ ತಡೆಯಿಲ್ಲ (ಅವಚಂ. ೨೫೭-೧೧೭೯) ; ತವನರಥಮದಾ ಪುರದ ಮಿಗೆ ಪುಗಲ್ ತಡೆಯಿಲ್ಲದಬ್ಜಜಂ ಮಾಡಿದ ರಂಧ್ರಪಥಂಗಳೆಂಬಿನಂ ರಾಜಿಪುವಾ ತೆನೆತೆನೆಗಳಂಬುಗಂಡಿಗಳಿನಸುಂ (ಕುಸುಮಾ. ೨-೭೮) ; ತೊಡೆಗಳೊ . . . ರಂಭಾವಿಭವದ ತಡೆಗಳೊ ಸಿಂಗರದ ಕಡೆಗಳೋ ಶಶಿಧರನಾ (ಗಿರಿಕ. ೧೦-೫೯); ನಿರಾಯುಧರನಿಱಿವಲ್ಲಿ ತಡೆಗಿಡೆಗಳುಂಟೀ (ಚಿಬಪು. ೨೧-೧೯) : ಈ ಕಲ್ಲುಮಣ್ಣಿನ ರಾಶಿ, ನದಿಯ ಓಟಕ್ಕೆ ತಡೆಯಾಗುತ್ತದೆ (ನನದಿ. ೨೩). ೩. ಅಡ್ಡವಾಗಿ ಬರುವಿಕೆ : ಬಳಿಕ ಕಲಿ ರಾಧೇಯ ಬರುತಿರೆ . . . ವಾಯಸದ ತಡೆ ಭೂಮಿಕಂಪ ನಿಜಾಯುಧಂಗಳ ಕಿಡಿ ಗಜಾಶ್ವನಿಕಾಯ ರಥವಾಜಿಗಳ ಕಂಬನಿ ಕಾಣಲಾಯ್ತೆಂದ (ಕುಮಾರವ್ಯಾ.ಕ. ೮-೨೭). ೪. ಸಂಕೋಚ: ನುಡಿ ನೋಟ ಸರಸಗಳಿಂದ ಅಡಿಗಡಿಗಬಲೆಯರಂತರಂಗದ ತಡೆಯೊಡೆಯಿಸುತಿಹನೇನನೆಂಬೆ (ಭರತ. ೬-೭೯). ೫. ರಕ್ಷೆ ; ತಾಯಿತಿ: 'ತಡೆಗಟ್ಟು₂' ಪರಾ. ೬. (ನಿಂತಲ್ಲಿಯೇ ನಿಲ್ಲುವಂತೆ) ಹಾವುಗಳಿಗೆ ಹಾಕುವ ಮಂತ್ರ; ಸ್ತಂಭನಮಂತ್ರ : ತಡೆಯೆಂಬ ನುಡಿ ಪಾವಡಿಗರೊಳಲ್ಲದಾ ಪೊಡವಿಯೊಳಿಲ್ಲ ಭಾವಿಸಲು (ಕುರಾಸಾಂ. ೨-೬೯) ; ಕೊಡೆಯೆಂಬರಾತಪತ್ರವನು ತಡೆಯೆಂಬುದಹಿಮಂತ್ರದೊಳಗಲ್ಲದಾ ದೇಶದಡೆಯೊಳೀ ಶಬ್ದಂಗಳಿಲ್ಲ (ಮೋಹತ. ೨-೨೦). ೭. ತಿರುಪು ಅಥವಾ ತಿರುಗಣೆ ಸಡಿಲವಾಗದಂತೆ ಅದರ ಕೊನೆಯಲ್ಲಿ ಅಳವಡಿಸುವ ಚಿಕ್ಕ ಬಿಲ್ಲೆ : (ತಾ). ೮. ಕಿವಿಯ ಹಾಲೆಯ ವೆಜ್ಜ ಮುಚ್ಚಿಹೋಗದಂತೆ ಇರಿಸುವ ಕಡ್ಡಿ,–ಬೆಂಡು : (ತಾ). ೯. ಮೀಸಲು ಪಡೆ ; ಕೈಗಾವಲಿನ ಸೈನ್ಯ (?) : ಶ್ರೀಮನ್ಮಹಾಪ್ರಧಾನಂ ತಡೆಯ ದಣ್ಣನಾಯಕಂ ಲಕ್ಷ್ಮಣಯ್ಯಂಗಳ್ (ಎಕ. XII. ೩೩೪-೫; 1126). ೧೦. ಆಜ್ಞೆ ಅಥವಾ ಕಾರ್ಯ ಜಾರಿಯಾಗದಿರುವಿಕೆ,–ಸ್ಥಗಿತಗೊಳಿಸುವಿಕೆ : ತಡೆಯು ಆಜ್ಞೆ ಹಠಾತ್ತನೆ ಆಗಮಿಸಿತು (ನಿಕಉ. ೨೪). ೧೧. ವೇಗವನ್ನು ತಡೆಯುವ ಸಾಧನ ; ಬಿರಿ : ಗಾಳಿಯ ತಡೆ (ರೂಢಿ).

**ತಡೆಹಾಕು**=೧. ನಿಲ್ಲಿಸು ; ತಡೆಗಟ್ಟು ; ತಡೆಯುಂಟುಮಾಡು : ನೀಲ, ಅರ್ಜನ ಹೂಂಕಾರಕ್ಕೆ ತಡೆಹಾಕಿ ಹೇಳಿದನು (ಬಂಗಾಹ. ೭೩). ೨. ಆಕ್ಷೇಪಿಸು ; ಆಕ್ಷೇಪಣೆಮಾಡು : (ತಾ). [ <ತಡೆ₁ ]

**ತಡೆ₃** (ನಾ). ದಡ ; ತೀರ : "ತೀರಂ ತಟಂ ಕೂಲಮೆನೆ ತೊಱೆಯ ತಡೆ [ಪಾಠಾಂ. ಡಿ]ಗೆ ನಾಮಂ" (ಮಂಗರಾ. ೧೨೨-೧೧) : "ತಡೆ–ತಟಾ=ದಂಡೆ" (ಕರ್ಣಕೋ. ೧೭); ದೇವರೊಲವುಳ್ಳವರ ಕಂಡು ತಾನಾದೆನೆಂದೊಡೆ ಚಲಿಸದು ಕಂಡಯ್ಯ ನೇಮವೆಂದಡೆ ತಡೆಮುಟ್ಟಸಲೀಯ್ಯ (ಸಮೂವ. ೧೧-೪೦).

[ <ಸಂ. ತಟಾ ]

**ತಡೆಅರ್ಜಿ** (ನಾ). "ಪ್ರತಿಪಕ್ಷದ ಹೇಳಿಕೆಯನ್ನು ಕೇಳಿದ ಹೊರತು ಮುಂದಿನ ಕ್ರಮ ಜರುಗಿಸಕೂಡದೆಂದು ಹಾಕುವ ಅರ್ಜಿ; ತಡೆಅರ್ಜಿ : ಎಚ್ಚರಿಕೆಯ ಅರ್ಜಿ" (Caveat. ಇಂಕನಿ.).

[ ತಡೆ₂ + ಅರ್ಜಿ₂ ]

**ತಡೆಕಟ್ಟು** 'ತಡೆಗಟ್ಟು₁' ನೋ.

**ತಡೆಕವಾಟ** (ನಾ). ತಡೆಯುವ ಬಾಗಿಲು,–ಕದ : ನೀರು ನಿರ್ಗಮನಾಳವನ್ನು ಹಾಯ್ದು ತಡೆಕವಾಟದ (ಚೆಕ್‌ವಾಲ್) ಮೂಲಕ ಉಗಿಯ ಗುಡಾಣವನ್ನು ಸೇರುತ್ತದೆ (ಕವಿಕೋ. I, ೭೪). [ ತಡೆ₁ + ಕವಾಟ ]

**ತಡೆಕಾವಲುಗಾರ** (ನಾ). (ಮುಷ್ಕರ ಮೊದಲಾದಂವುಗಳಲ್ಲಿ ತಮ್ಮವರು ಕೆಲಸಕ್ಕೆ ಹೋಗದಂತೆ) ತಡೆಯುವ ಕಾವಲುಗಾರ : "ಕಾವಲುಪಡೆ, ಗಸ್ತುಪಡೆ; ತಡೆಕಾವಲುಗಾರರು ; ಪಿಕೆಟ್" (Picket. ಪ್ರತಿನಿ. ೬೨).

[ ತಡೆ$_2$ + ಕಾವಲುಗಾರ (<ಕಾವಲುಗಾಱ) ]

**ತಡೆಕ್ಕೆ** 'ತಡಕೆಯ್' ನೋ.

**ತಡೆಗ** (ನಾ). ತಡೆಯುವವನು ; ಅಡ್ಡಿಪಡಿಸುವವನು : "ರುಂಧನ್ ರೋಧಕ: – ಈ ೨ ತಡೆಗಂ" (ಶಾಶಕ್ತ. ೨೩೩). [ ತಡೆ$_2$ + – ಗ$_2$ ]

**ತಡೆಗಂಬಿ** (ನಾ). ತಡೆಯುವ ಕಂಬಿ,–ತಂತಿ : (ಇಳಿಜಾರಿನಲ್ಲಿ ಹೋಗುತ್ತಿರುವಾಗ) ಗಾಲಿ ತಿರುಗದಂತೆ ತಡೆಯುವ ಕಂಬಿ; ತಡೆಗಂಬಿ (Spoke. ಇಂಕನಿ.). [ ತಡೆ$_2$ + ಕಂಬಿ$_1$ ]

**ತಡೆಗಟ್ಟು$_1$**, ತಡೆಕಟ್ಟು (ಕ್ರಿ). ೧. ಅಡ್ಡಿಪಡಿಸು ; ಅಡ್ಡಗಟ್ಟು ; ತಡೆದು ನಿಲ್ಲಿಸು ; ಪ್ರತಿಬಂಧಿಸು ; ಸ್ತಬ್ಧಗೊಳಿಸು : ಕಂಪೆನಿಯ ಸೈನ್ಯವು ಅವರನ್ನು ತಡೆಗಟ್ಟುತ್ತಿದೆ (ಝೂರಾಣ. ೪೩೭) ; ರಾಜಭಟರು ರಾಜಒಡೆಯನನ್ನು ತಡೆಗಟ್ಟಲಿಲ್ಲ (ಶ್ರೀರಾಯ. ೩೦೦) : ಅವನ್ನು ತಡೆಗಟ್ಟುವುದು ಅಪ್ಪಾಜಿಯವರಿಂದಲೂ ಸಾಧ್ಯವಲ್ಲ (ಚದೇವ. ೨೦೦) : ವೃದ್ಧಾಪ್ಯ ಮತ್ತು ಮೃತ್ಯುಗಳನ್ನು ತಡೆಗಟ್ಟುವ ಉಪಾಯವನ್ನು ಈತ ಕಂಡುಹಿಡಿದಿದ್ದಾನು (ಆಶ್ರಮ. ೭೮) : ನಿಯಂತ್ರಣ ಕ್ರಮಗಳಿಂದ ನೊಣಗಳನ್ನು ತಡೆಗಟ್ಟಬಹುದು (ಆಹುಸಾ. ೫೦). **ತಡೆಕಟ್ಟು** : ೨. ಮಳೆ, ಬೆಂಕಿ, ಹಾವು, ಹುಲಿ ಮುಂತಾದುವನ್ನು ಮಂತ್ರಬಲದಿಂದ ಸ್ತಂಭನಗೊಳಿಸು : ಭವಭೂತಿಯು ತನ್ನ ವಿದ್ಯೆಯ ಶಕ್ತಿಯನ್ನು ತೋರಿಸಬೇಕೆಂದು ತಡೆಕಟ್ಟಿದನು; ಬರುತ್ತಿದ್ದ ಮಳೆಯು ನಿಂತು ಹೋಯಿತು (ನೀತಿಚಂ V. ೨೪) ; ಬೇಟೆಯಾಗದಿದ್ದರೆ ಯಾರೋ ತಡೆಕಟ್ಟಿರುವರು; ಅದನ್ನು ಬಿಡಿಸಬೇಕೆಂದು ಮಂತ್ರವಾದಿಯ ಬಳಿಗೆ ಹೋಗಿ ಆ ಶಾಸ್ತ್ರವನ್ನು ನೆರವೇರಿಸುತ್ತಿದ್ದರು (ಹುಟ್ಟಿದ. ೨೭). [ ತಡೆ$_2$ + ಕಟ್ಟು$_1$ ]

**ತಡೆಗಟ್ಟು$_2$** (ನಾ). ೧. ಅಣೆಕಟ್ಟು : (ಶ). ೨. ಪೀಡಾಪರಿಹಾರಕ್ಕಾಗಿ ಕಟ್ಟುವ ರಕ್ಷೆ,–ತಾಯಿತ. ೩. ಅಡ್ಡಿ ; ತಡೆ; ಪ್ರತಿಬಂಧಕ : ಯಕ್ಷಿಣಿಯಾಟದಂತೆ ಫಕ್ಕನೆ ತೆರೆವ–ಕಣ್ಮಾಯವಾಗುವ – ಎದ್ದರೆಯು ತಡೆಗಟ್ಟಾಗಿ ನಿಲ್ಲುವ–ಕದಬಾಗಿಲ್ಗಳೂ (ಬಟ್ಟಿಅ. ೪೯–೮). [ ತಡೆ$_2$ + ಕಟ್ಟು$_2$ ]

**ತಡೆಗಟ್ಟೆ** (ನಾ). ಅಡ್ಡಗಟ್ಟೆ ; ಅಣೆಕಟ್ಟು : (ಶ).

[ ತಡೆ$_1$ + ಕಟ್ಟೆ ]

**ತಡೆಗಡಿ** (ಕ್ರಿ). ೧.=ತಡಂಗಡಿ ೧ : ವೀರರಂ ತಡೆಗಡಿದ ನೆತ್ತರ ಕಡಲ್ಕಟ್ಟೆ (ಇಹರ. ದೇ. ೪೨.೪) : ಮಿಾಱಿದಡೆ ಕೆಡಹಿ ತಡೆಗಡಿವೆನು (ಹಜಕಾ. ೧೧–೩೮); ತಡೆಗಡಿ ಸುಯೋಧನನೂರುಗಳನು (ಕುವ್ಯಾಸ. ೧೫–೩೧) : ತಾನೀ ಬಲವ ನೆಱೆ ತಡೆಗಡಿದು ಗೋಸಂಕುಲವ ತಿರುಹುವೆನೆಂದು ಮುಳಿದೀಕ್ಷಿಸಿ ಕುಮಾರಕರ (ಜೀವಂಧ. ೪೦–೩೪) : ಎಚ್ಚೊಡಚ್ಯುತನ ಬಾಣಂಗಳ ತಡೆಗಡಿದು (ಮೋಹಶ. ೪೦–೩೪) : ಬಂದ ವಾಜಿಗಳ ನಾನಳವಿಯೊಳ್ಕಾಣೆನೆಂಬಂದವಾಗಲ್ಕೆ ತಡೆಗಡಿದು ಮೆದೆಗೆಡಹಿದಂ (ಜೈಮಿಭಾ. ೧೨–೪೩). ೨. ಅಡೆತಡೆಗಳನ್ನು ಗೆಲ್ಲು ; ವಿಘ್ನವನ್ನು ದಾಟು : (ಶ). ೩. ನಡುನಡುವೆ ಭಂಗವಾಗು : ಆಗಾಗ್ಗೆ ನರಳುದನಿಯಿಂದ ತಡೆಗಡಿಯುತ್ತಿದ್ದ ಅವಳ ಮೇಲುಗೊರಕೆಯನ್ನೂ . . . ಕೇಳಿಸಿಕೊಳ್ಳುತ್ತಿದ್ದಾಗ (ಪುನರು. ೫೪೪). ೪. ನಡುನಡುವೆ ನಿಲ್ಲಿಸು,–ಭಂಗಪಡಿಸು : ಇತರರು ತನ್ನ ಮಾತನ್ನು ತಡೆಗಡಿಯಲವಕಾಶಕೊಡಲಿಲ್ಲ (ಪುನರು. ೧೦೫). 'ತಡಂಗಡಿ' ಪರಾ.

[ ತಡೆ$_2$ + ಕಡಿ$_2$ ]

**ತಡೆಗಡಿಸು** (ಕ್ರಿ). ಸಂಪೂರ್ಣವಾಗಿ ಕತ್ತರಿಸಿ ಹಾಕಿಸು : ಕ್ಷಾತ್ರವ ತಡೆಗಡಿಸಿ ಚತುರಂಗ ಬಲವನು ಹುಡಿಹುಡಿಯ ಮಾಡುವರು (ಕುವ್ಯಾಉ. ೪–೭೭).

[ ತಡೆಗಡಿ + – ಇಸು$_3$ ]

**ತಡೆಗರ್ಚು** (ಕ್ರಿ). ದಂಡೆಯನ್ನು ಹಿಡಿ ; ದಡಕ್ಕೆ ಬರು (?) : ಎಡೆವಿಡದಾವಾವ ಕಱೆ ತೊಱೆ ಬಾವಿಯೊಳ್ತಡೆಗರ್ಚದುವು ಸೀರ್ವೊಕ್ಕ ತಡೆಯದೆ ಬಹುಮೃಗ ಪೊಸ ತುಪ್ಪುಳಿಂತು ಮೆಯ್ಮುಡಿಯಲ್ಕೆನರರಳಲಿದರು (ಪೋಹಶ. ೪–೪೪). [ ತಡೆ$_3$ + ಕರ್ಚು$_1$ ]

**ತಡೆಗಾಲ್**, ತಡೆಗಾಲು (ನಾ). ೧. ಮುಂದೆ ಹೆಜ್ಜೆ ಇಡದಂತೆ ಅಡ್ಡಿಪಡಿಸುವ ಕಾಲು ; ಅಡ್ಡಗಾಲು : ಪೌಜು ಬಂದೊಡನೊದಗಲಿಟ್ಟಣಪ ಜನದ ತಡೆಗಾಲ್ಗಳಿಂದಾ ಸುತಂ ಪೊಡೆಗೆಡೆಯಲು (ಭಾವಚಂ. ೮–೧೮) : ಸಂದಣಿಪ ಮಂದಿಯೊಳಪೊಕ್ಕು ನಿಂದು ನಿರೀಕ್ಷಿಪಾಗಳ್ಕವಿವ ಪಡೆಯ ತಡೆಗಾಲ್ಪೊಡೆಯೆ ಪೊಡವಿಯೊಳ್ಕೆಡೆದು ಕಣ್ಗೆಟ್ಟಳಲ್ದು (ರಾಜಶೇ. ೦೩–೯೫ವ). 'ತಡೆಗಾಲ್ವೊಯ್' ಪರಾ. ೨. ತಡೆತಡೆದು ನಡೆಯುವ ಕಾಲು ; ತಡವರಿಸುವ ಕಾಲು : ಸೆಡೆವ ನಡ ತೊಡೆಯ ತಡಗಾಲ್ ನಡುವಿಂಗತಿ ಗಾಢದುಡಿಗೆ ಬಡತನು . . . ಸೊಗಯಿಸಿತ್ತು ಪಂಕಜಮುಖಿಯೊಳ್ (ಗಿರಿಕ. ೩–೨೨). **ತಡೆಗಾಲು** : ೧. ತಿವಿದು ಹಿಂಗುವ ಭಟನ ಪವನಜನವಚಿ ತಡೆಗಾಲಿಂದ ಕೆಡಹಲು (ತೊರರಾ. ೫–೫–೩೩) : ಓಡೆ ಬೆಂಬತ್ತುತಂ ತಡೆಗಾಲ ಹೊಡೆದಲ್ಲಿ ಕೂಡೆ ಬೊಬ್ಬಿಱಿದು (ವೀಶೈವು. ೨–೧೨–೨೩); ತಡೆಗಾಲೊಳಾತನಂ ಕೆಡಹಿ ಭುಜಯುಗ್ಮಮಂ ತೊಡರಿಕೊಂಡುಪ್ಪರಿಸಿ (ಜೈಮಿಭಾ. ೨೪–೫೪)

[ ತಡೆ$_1$ + ಕಾಲ್$_1$ ]

**ತಡೆಗಾಲು** 'ತಡೆಗಾಲ್' ನೋ.

**ತಡೆಗಾಲ್ಪೊಡೆ** (ಕ್ರಿ). ತೊಡರುಗಾಲು ಹಾಕು ; ಕಾಲಿಗೆ ಅಡ್ಡ ಬರು : ಮೊಗಮಂ ಮುರಿದು ಮೊಲೆಯೂಡಲಡ್ಡಸಾರ್ದ ಪುಲ್ಲೆಯಿರ್ದಂತೆ ಪರಿಚಯಕ್ಕೆ ಪರಿತಂದು ಡೆಕಪಾಯಪಾಲಂ ತೊಡೆಯೊಳ್ ತಡಗಾಲ್ಪೊಡೆದು ಕೊಣಕಿಡುವ ಕೊಣಸುಗಳಂ ಪಿಡಿದು ಮುದ್ದಾಡಿಸುತ್ತುಂ (ಅರ್ಧನೇ. ೦–೯೨ ವ). [ ತಡೆಗಾಲ್ + ಪೊಡೆ$_1$ ]

**ತಡೆಗಾಲ್ವೊಯ್** (ಕ್ರಿ). ಅಡ್ಡಗಾಲುಹಾಕು,–ಹೊಡೆ: ಹೊಯ್ದು ತುಱ; ಬಸು ಹಿಡಿದು ತಡೆಗಾಲ್ವೊಯ್ದು ಕೆಡಹಿದನು (ಕುವ್ಯಾಕ. ೦೯–೪೮); ಬಾಸುಳೇಳ್ವಂತೆ ಬಡಿವ ತಡೆಗಾಲ್ವೊಯ್ದು ಓಸರಿಸದೆ ಕೆಡಹುವನು ಗಾಸಿಮಾಡುವನು ಮಕ್ಕಳನು (ನೇಮಿಸಂ. ೦೫–೧೧೦).

[ ತಡೆಗಾಲ್ + ಪೊಯ್$_1$ ]

**ತಡೆಗಾಱ** (ನಾ). ಹಾವಿಗೆ ತಡೆಮಂತ್ರವನ್ನು ಹಾಕುವವನು; ಗಾರುಡಿಗ: ಹಾವನು ನಾ ಪಿಡಿವರೆ ತರಳ ನಾ ತಡೆಗಾಱನೆ (ಕನಕ. ೫೦–೭).

[ ತಡೆ$_2$ + – ಕಾಱ ]

**ತಡೆಗಿಡು** 'ತಡೆಗೆಡು' ನೋ.

**ತಡೆಗೆಡವು** 'ತಡೆಗೆಡಹು' ನೋ.

**ತಡೆಗೆಡಹು**, ತಡೆಗೆಡವು (ಕ್ರಿ). ಅಡ್ಡಗಟ್ಟಿ ಕೆಡಹು,–ಉರುಳಿಸು : ನುಡಿಯವೆ ನೀನಿಂತಿದರ್ೊಡೆ ಕೆಡೆನೂಂಕಿ ಪೊರಳ್ಚಿ ಗಂಟಲಂ ಮೆಟ್ಟಿ ಕರಂ ತಡೆಗೆಡಹಿ ತನುವ ಜಡಿದೆನ್ನೊಡಮೆಯನುಗುಱಿಸದೆ ಮಾಣೆಂ (ಧರ್ಮಾಮೃ. ೧೨–೨೦೯) : ತಡೆಗೆಡಹಿ ಮೂಗಂ ಕೊಯ್ಯದೆ ಮಾಣ್ಬನೆ (ಬಸವ. ೪೧೩). **ತಡೆಗೆಡವು** : ವಾನರ ವರಧ್ವಜಂ ಮುಳಿದು ನೀಲಧ್ವಜನ ಸೇನೆಯಂ ತಡೆಗೆಡವು[ಪಾಠಾಂ. ಗಡಿಯು]ತಾತನಂ ಮುಸುಕಿದನನೂನ ಶರಜಾಲದಿಂ (ಜೈಮಿಭಾ. ೮–೩೭). [ ತಡೆ$_2$ + ಕೆಡಹು (<ಕೆಡವು) ]

**ತಡೆಗೆಡು**, ತಡೆಗಿಡು (ಕ್ರಿ). ತಡೆಯಿಲ್ಲದಂತಾಗು ; ಅನಿರ್ಬಂಧವಾಗು ; ಅಡ್ಡಿಯಿಲ್ಲದಿರು : ನಡೆಗೆಡೆ ಚಿತ್ತಂ ಧೃತಿಲತೆ ಕುಡಿಗೆಡೆ ಮನಸಿಜ ವಿಕಾರತತಿ ಮಾನಸದೊಳ್ತಡೆಗೆ[ಪಾಠಾಂ. ಗಿ]ಡೆ ಕೈಯಂಕುಶಮದಂ ಪಡಲಿಡೆ ಧರಣಿಯೊಳೆ ವಿರಹವಿಹ್ವಳನಾದಂ (ವೃಷವಿ. ೨೮–೨೧). **ತಡೆಗಿಡು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ ತಡೆ$_2$ + ಕೆಡು$_1$ ]

**ತಡೆಗೆಡೆ** (ಕ್ರಿ). ನಡೆಗೆಟ್ಟು ಬೀಳು : ಎಡವಿ ಬೀಳು : ಉಡಿದುಡಿದು ಸೂಸಿದ ಮೃದುಮೃಣಾಳನಾಳ ತಂತುಜಾಲಕದೊಳೊಯ್ಯನೊಯ್ಯನೆ ರಯ್ಯಮನೆ ನಡೆವಡೆಯೊಳಡಿ ತೊಡಂಕಿ ತಡೆಗೆಡೆವ ತರುಣ ಮರಾಳಂಗಳಂ ಕಂಡು (ರಾಜಶೇ. ೬-೨೪ ವ). [ ತಡೆ$_2$ + ಕೆಡೆ$_1$ ]

**ತಡೆಗೆಯ್** (ಕ್ರಿ). ಸ್ತಂಭನಗೊಳಿಸು ; ಚಲಿಸದಂತೆ ಮಾಡು : ಚ್ಯವನಂ ತನ್ನೊಂದು ಬಲ್ಮೆಯಿಂ ಸುರಪನುಮಂ ಕೈದುವುಂ ತಡೆಗೆಯ್ದಂ (ರಾಮಾಶ್ವ. ೭೦-೧೯). [ತಡೆ$_2$ + ಕೆಯ್$_1$ ]

**ತಡೆಗೊಳ್** (ಕ್ರಿ). ಅಡ್ಡಬರು; ಅಡ್ಡಿಯಾಗು; ಅಡ್ಡಗಟ್ಟು; ತರುಬು: ಕೂರ್ಪುಡುಗದೆ ಬಂದು ತಾಗೆ ಯಮಳರ್ ತಡೆಗೊಂಡೊಡ[ಪಾಠಾಂ. ರರಾರ್ತಡೆಗೋದಡೆ] . . . ರಥಂಗಳನಚ್ಚುಡಿಯೆಚ್ಚು (ಪಂಪಭಾ. ೧೨-೧೬೨) [ ತಡೆ$_2$ + ಕೊಳ್$_1$ ]

**ತಡೆಗೊಳಿಸು** (ಕ್ರಿ). ೧. ಅಡ್ಡಿಪಡಿಸು ; ನಿಲ್ಲಿಸು : (ಕ). ೨. ಕಟ್ಟು ; ಬಂಧಿಸು: ಉದ್ದಾನಂ, ಬಂಧನಂ – ೨ ಕಟ್ಟಿಹಾಕುವುದಕ್ಕೆ ಹೆಸರುಗಳು. ಕಟ್ಟು; ತಡೆಗೊಳಿಸುವಿಕೆ (ಸಿದ್ಧಾಂತಿ. ೨೦೯). [ ತಡೆಗೊಳ್ + – ಇಸು$_3$ ]

**ತಡೆತ,** ತಡತ (ನಾ). ಹೆಚ್ಚುಕಾಲ ಉಳಿಯುವಿಕೆ ; ಬಾಳಿಕೆ ; ತಾಳಿಕೆ : ಈ ರೀತಿ ತಡತ ಬಾರದ ಬಟ್ಟೆಗಳನ್ನು ಇಂಥಾ ಉಪಯೋಗಕ್ಕೆ ಕೊಳ್ಳುವುದು ಅನುಚಿತ (ಗೃಹವಿ. ೮೧) ; ಹೊರಗಡೆ ತಡೆತ ಬರುವ, ಮೆದುವಾದ ಅಸ್ಥಿ ಪಂಜರ–ಬಾಹ್ಯ ಚರ್ಮವಿದೆ (ಕೀಟಪ. ೫). **ತಡತ :** ಯಾಕೋ ಈ ಸೀರೆ ತಡತ ಬರಲೇ ಇಲ್ಲ (ರೂಢಿ). [ ತಡೆ$_2$ + – ತ$_2$ ]

**ತಡೆನಡೆ** (ನಾ). ನಿಧಾನವಾದ ನಡಿಗೆ : ನಿಧಾನಚಲನ; ಮಂದಗತಿ; ತಡೆನಡೆ (Drag. ಇಂಕನಿ). [ ತಡೆ$_2$ + ನಡೆ$_2$ ]

**ತಡೆಪ** (ನಾ). ತಡ ; ಸಾವಕಾಶ ; ನಿಧಾನ : ತೊಡೆಪಂ, ನಡೆಪಂ, ಮೊಗೆಪಂ, ತಡೆಪಂ, ಅಣಪಂ (ಶಬ್ದಾನು. ೫೬೧ ಪ್ರಯೋ). 'ತಡೆಪಂಬೆಱು' ಪರಾ. [ ತಡೆ$_2$ + – ಪ$_2$ ]

**ತಡೆಪಂಬೆಱು** (ಕ್ರಿ). ಸಾವಕಾಶವಾಗು ; ನಿಧಾನವಾಗು : ಬೆಳರ್ಗೆಂಪಿಡಿ ದಧರಮಿಂಪನಪ್ಪಿದ ನುಡಿ ತಡೆಪಂಬೆತ್ತ ನಡೆ ನಿಜಂ ಕೋಮಳೆಯಾ (ಚಂದ್ರಪ್ರ. ೬-೬೮). [ ತಡೆಪ + ಪೆಱು$_1$ ]

**ತಡೆಬಂಡೆ** (ನಾ). ತಡೆಯುವ ಬಂಡೆ : ಓಡಿ ಹೋಗುವ ಬಾಣಭಟ್ಟ ಅಂದು ಪ್ರಳಯಪೂರದ ತಡಬಂಡೆಯಾಗುತ್ತಾನೆ (ಬಾಣಕ. ೧೪೨). [ ತಡೆ$_1$ + ಬಂಡೆ$_1$ ]

**ತಡೆಬಡೆ** (ನಾ). ೧. ಅಡ್ಡಿ ; ಆತಂಕ ; ಅಡೆತಡೆ : ಜನಗಳ ತಡೆಬಡೆ ಇಲ್ಲದ ಮಾತಿನ ಪ್ರವಾಹವನ್ನು ಕೇಳಿ ಕೇಳಿ ಮಾಲತಿಗೂ ಚಿಟ್ಟುಹಿಡಿದಿತ್ತು (ಪತಂಗ. ೨೯) ; ಅವರ ನಿವೃತ್ತಿಯ ಕುರಿತ ಇತ್ಯರ್ಥವು . . . ತಡವಾಗುತ್ತಿರುವಾಗ ಬಂದಿತು ಮೃತ್ಯುವು ಅದಕ್ಕೆ ತಡೆಬಡೆಯಿಲ್ಲವಾಗಿ (ಇಂಜಾಪ. ೨೧-೯೩). ೨. ನಿಲುಗಡೆ ; ವಿರಾಮ : ನಾಲ್ಕೈದು ದಿನ ತಡೆಬಡೆಯಿಲ್ಲದ ಅಗೆದರು (ಪುಟ್ಟಹ. ೬೨) : ಊರನ್ನು ತಲುಪುತ್ತಲೇ ತಡೆಬಡೆಯಿಲ್ಲದ ಅಂಗಡಿಯನ್ನು ತೆರೆಯುವ ಯೋಚನೆಯಲ್ಲಿ ಬಂದ (ಗಂಗಾಳ. ೧೩). 'ಅಡೆತಡೆ' ಪರಾ. [ ತಡೆ$_2$ + – ಪಡೆ$_6$ ]

**ತಡೆಬಿಡು** 'ತಡೆವಿಡು' ನೋ.

**ತಡೆಮಂತ್ರ** (ನಾ). ಸ್ತಂಭನಗೊಳಿಸುವ ಮಂತ್ರ : ಕಡಿಕಡಿದು ಕೆಡಹಿದರ್ ಕುರಿಕೋಳಿ ಲಕ್ಕಮುಂ . . . ಕೂಗಿದರ್ ತಡೆಮಂತ್ರಮುಂ (ಶ್ರೀರಾಮಾ. ೬೭೦-೨೪೧). [ ತಡೆ$_1$ + ಮಂತ್ರ ]

**ತಡೆಯಿಡು** (ಕ್ರಿ). ಅಡ್ಡಿಯುಂಟುಮಾಡು ; ತಡೆಯೊಡ್ಡು : ಬಲ್ಲಿದನಂಕಮಾಲೆಗೆ ತಡಯಿಡಲೇಕೆ ಹಲ್ಲ ಹೋಗಾಡಲದೇಕೆ (ಭರತ. ೩೯-೨೩). [ ತಡೆ$_2$ + ಇಡು$_1$ ]

**ತಡೆಯಿಸು,** ತಡೆಸು (ಕ್ರಿ). ಅಡ್ಡಿಪಡಿಸು ; ವಿಘ್ನಬರುವಂತೆ ಮಾಡು ; ನಿರ್ಬಂಧಿಸು : ನಿನ್ನನೆ ಪೂಜಿಸಿ ಪಡೆದರ್ಕನ್ನೆಯರಭಿಮತಮನಾದ ಮಾರಾಧಿಸಲಾನಿನ್ನವರಂ ರತಿಪತಿ ನೀನೆನ್ನ ಮನೋರಥಮನೇಕೆ ಪೇಱ್ ತಡೆಯಿಸಿದ್ಯೆ (ಕಾದಂಬ. ೭೮೪). **ತಡೆಸು :** ನುಡಿಸು ಕೈಲಾಸಮುಂ ಕೆಡಿಸು ಹರಸಾಸಮುಂ ತಡೆ[ಪಾಠಾಂ. ಡ]ಸದೆನ್ನಿಂ ದಾಳಿಯಿಡಿಸು ಬೇಗದೊಳೆ ನುತ್ತೊತ್ತಡನೊಡನೆ ನೇಮಿಸಿದನು (ಚಬಪು. ೪೭-೨೨) ; ಆರೆನ್ನನಿಂತು ತಡೆ[ಪಾಠಾಂ. ಡ]ಸಿದರಾಯ್ತು ದುರ್ಭಿಕ್ಷಮುರೊಳ್ಪಳೆಯದೆ ಧಾನ್ಯಂ (ಜೈಮಿಭಾ. ೬-೫೦). [ ತಡೆ$_2$ + – ಇಸು$_3$ ]

**ತಡೆಯುಸಿರ್** (ನಾ). ತಡೆತಡೆದು ಆಡುವ ಉಸಿರು : ಕಿರುಬೆಮರ ತಡೆಯುಸಿರ ಕರುಣಾಸ್ಪದೆಯಾಗಿ (ಮಂತ್ರಶ. ೫೮-೧೫). [ ತಡೆ$_1$ + ಉಸಿರ್$_2$ ]

**ತಡೆಯೋಟ** (ನಾ). "ಸ್ವಾಭಾವಿಕವಾಗಿರುವ ಅಥವಾ ಕೃತಕವಾದ ತಡೆಗಳನ್ನು ದಾಟಿಕೊಂಡು ಓಡಬೇಕಾದ ಜೂಜೋಟ : ತಡೆಯೋಟ" (Obstacle-race. ಇಂಕನಿ.) [ ತಡೆ$_2$ + ಓಟ ]

**ತಡೆರಾಜ್ಯ** (ನಾ). "ಎರಡು ಪ್ರಬಲರಾಜ್ಯಗಳ ಮಧ್ಯೆ ಇದ್ದು ಒಬ್ಬೊಬ್ಬರಿಗೆ ಕಾದಾಟದ ಸಂಬಂಧವನ್ನು ಕಡಮೆ ಮಾಡುವ ಸಣ್ಣ ರಾಜ್ಯ : ತಡೆರಾಜ್ಯ" (Buffer-state. ಇಂಕನಿ.). [ ತಡೆ$_2$ + ರಾಜ್ಯ ]

**ತಡೆವಡು** (ಕ್ರಿ). ತಡವಾಗು ; ನಿಧಾನವಾಗು : ಬಿನದಿಪ ಕಾಮಿನಿಯರ್ಗೆ . . . ನೊಸಲೊಳ್ ಬೆಮರ್ ಪನಿಯೆ ತೆಳ್ಗದಂಪು ಕಂಪಡರೆ ಎರ್ದೆ ದಡದಡಿಸೆ ಸುಯ್ ಪೆರ್ಚೆ ನಡೆ ತಡೆವಡೆ (ರಾಮಾಶ್ವ. ೧೨೩-೬). [ ತಡೆ$_2$ + ಪಡು$_1$ ]

**ತಡೆವಡೆ,** ತಡೆಪಡೆ (ಕ್ರಿ). ಅಡ್ಡಿಗೊಳಗಾಗು ; ತಡೆಯಲ್ಪಡು ; ನಿಂತುಹೋಗು : ಸಡಗರಗಳಲ್ಲಲ್ಲಿ ತಡೆವಡೆದು ಸುಗಿದು ನುಡಿಯರಾರುಂ (ಕಾಲೂರ. ೧೫೮-೩೪೮). **ತಡೆಪಡೆ :** ಅಲ್ಲಿ ತಡೆಪಡೆದು ತಾಂ ತಳುಹಿಲ್ಲದೆ ನಿಜದೇಶಕೆಯ್ದೆವಂದು (ಧರ್ಮಪ. ೨-೩೯). [ ತಡೆ$_2$ + ಪಡೆ$_1$ ]

**ತಡೆವರ್** (ಕ್ರಿ). ಅಡ್ಡಿಯಾಗಿ ಬರು : ತಡೆಯುಂಟುಮಾಡು : ಕೆಱುಂಬಿ ನಿರ್ನೆರಮಿಾವುಜಜ್ಜುಗಕ್ಕೆ ತಡೆವರ್ಪರ್ (ರಾಮಾಶ್ವ. ೫೬-೨). [ ತಡೆ$_2$ + ಬರ್$_1$ ]

**ತಡೆವಲೆ** (ನಾ). ಒಂದು ಬಗೆಯ ಬಲೆ : ನಡುವಲೆ ತಡವಲೆ ಸಿಡಿವಲೆ ನಿಡುವಲೆಗಳೊಟ್ಟಿದವು ಲುಬ್ಧಕರೊಳ್ (ಗಿರಿಜಾ. ೧-೮೦). [ ತಡೆ$_1$ + ಬಲೆ$_1$ ]

**ತಡೆವಿಡು,** ತಡೆಬಿಡು (ಕ್ರಿ). ೧. ತಡೆಯನ್ನು ತೆಗೆದುಹಾಕು ; ಬಂಧನದಿಂದ ಬಿಡುಗಡೆ ಮಾಡು : ಪಟುಭಟತರ್ಗಿದರ್ಕಲ್ಪಮೇಘಂಗಳಂ ತಡೆವಿಟ್ಟ ಮಳೆಯೆನಲ್ಕಣೆಗಱೆಯುತೆ (ಜೈಮಿಭಾ. ೮-೨೯). ೨. ಮಂತ್ರ ಪ್ರಭಾವದಿಂದ ಮುಕ್ತವಾಗು. ೩. ಬಿಡುಗಡೆ ಹೊಂದು; ಸ್ವತಂತ್ರವಾಗು : ತಾಂ ತನಗೆ ಹಯಂ ತಡೆವಿಟ್ಟ ಪಾವೆಂತಂತು ನಡೆವಟ್ಟು ತನ್ನಿಚ್ಛೆಯಿಂ ಪೋಗೆ (ರಾಮಾಶ್ವ. ೧೩೮-೧೨). **ತಡೆಬಿಡು :** ೧. ತಡೆಬಿಟ್ಟ ಕಂಬನಿಯು ಕೈಯಿಂದ ಮುಂಗಾಣದೆಡಹುತ್ತ ಶಾಗುತ್ತ ಒಡವರ್ಪ ಪರಿವಾರವುಂ ಕಂಡು (ಜಪಶಾ. ೯-೨೦). [ ತಡೆ$_2$ + ಬಿಡು$_1$ ]

**ತಡೆವೇಂಟೆ,** ತಡೆವೇಟೆ (ನಾ). ಒಂದು ಬಗೆಯ ಬೇಟೆ ; ಮೃಗಗಳನ್ನು ತಡೆದು ಆಡುವ ಬೇಟೆ : ಭಾಸುರ ವರೂಥಪನೇಱ ಭೂಪಾಲಮಕರ ಧ್ವಜಂ ನಡೆಯೆ ತಡೆವೇಂಟೆಗೆ (ಹಪಶಾ. ೬-೧); ಮೇಲ್ವಾಸು ಮಂಚಗಳ ಗಡಣವೆಯ್ದಿತು ರಾಯನ ನಿಯಮದೊಳಂದು ತಡೆವೇಂಟೆಯ ಸಮಕಟ್ಟು (ಕುರಾಸಾಂ. ೨೬-೪೬). **ತಡೆವೇಟೆ :** 'ತಡೆವೇಟೆಕಾತಿ' ಪರಾ. [ ತಡೆ$_2$ + ಬೇಂಟೆ ]

**ತಡೆವೇಂಟೆಕಾತಿ**, ತಡೆವೇಟೆಕಾತಿ (ನಾ). ತಡೆವೇಟೆಯನ್ನು ಆಡುವವಳು: ಜನಮನದ ಸಂಕಲೆವನೆಯೊ ಲೋಚನಮೃಗದ ತಡೆವೇಂ[ಪಾಠಾಂ. ವೇ] ಟೆಕಾತಿಯೊ ಮನುಮಥನ ಸಂಜೀವನೌಷಧಿಯೋ . . . ಎನಿಸಿದೂರ್ವಸಿ ಬಂದಳು (ಕುವ್ಯಾಅ. ೮-೧೦). **ತಡೆವೇಟೆಕಾತಿ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ತಡೆವೇಂಟೆ + – ಕಾತಿ$_5$ ]

**ತಡೆವೇಟೆ** 'ತಡೆವೇಂಟೆ' ನೋ.

**ತಡೆವೇಟೆಕಾತಿ** 'ತಡೆವೇಂಟೆಕಾತಿ' ನೋ.

**ತಡೆಸು** 'ತಡೆಯಿಸು' ನೋ.

**ತಡೆಹಡೆ** 'ತಡೆವಡೆ' ನೋ.

**ತಡೆಹಿಡಿ** (ಕ್ರಿ). ೧. ತಡೆದು ಹಿಡಿ; ಅಡ್ಡಿಪಡಿಸು; ನಿಗ್ರಹಿಸು: ಅವರಿವರು ಓಡಿ ಬಂದು ಜಗಳವನ್ನು ಬಿಡಿಸಿ ತಿಮ್ಮನನ್ನು ತಡೆಹಿಡಿದರು (ತಿಂಮತ. ೩೫). ೨. (ದುಃಖ ಮೊದಲಾದ ಭಾವಗಳನ್ನು) ಒತ್ತಿರಿಸು; ಅದುಮಿಡು; ಹತ್ತಿಕ್ಕು: ಉಮ್ಮಳಿಸಿ ಬರುತ್ತಿರುವ ಎದೆಯ ದುಃಖವನ್ನು ಪ್ರಯತ್ನಪೂರ್ವಕವಾಗಿ ತಡೆಹಿಡಿಯುವಂತೆ . . . ತೋರುತ್ತಲಿತ್ತು (ಚಿತಸ. ೧೦೪): ಉಕ್ಕುತ್ತಿದ್ದ ಕಣ್ಣೀರನ್ನು ಬಿಗಿಯಾಗಿ ತಡೆಹಿಡಿದನು (ಪುನರು ೧೯೦). ೩. ಪ್ರಕಟ ಪಡಿಸದೆ ಇರು; ಜಾರಿಗೆ ತರದೆ ನಿಲ್ಲಿಸು: ಪರೀಕ್ಷೆಯ ಫಲಿತಾಂಶವನ್ನು ತಡೆಹಿಡಿದಿದ್ದಾರೆ (ರೂಢಿ). [ ತಡೆ$_2$ + ಹಿಡಿ$_1$(<ಪಿಡಿ$_1$) ]

**ತಣ್**$_1$, ತಣಿ$_2$ (ಕ್ರಿ). ತಣ್ಣಗಾಗು; ಉಷ್ಣವಳಿ; ಆರು: ಲಂಕೆ ಮಿಳ್ಳಿಳನೆ ಬೆಬ್ಬಳಿಸೆ, ಭಯಕೆ ನೆತ್ತರ್ ತಣ್ತುವೋಲ್ (ಶ್ರೀರಾಮಾ. ೭೩೩-೭೭೦). **ತಣಿ$_2$**: ಬಿಸಿಲ್ ತಣಿಯೆ ತಂಗಾಳಿ ಮೈದೋಱೆ . . . ಸೀತಾಲಕ್ಷ್ಮಣರುತ್ತರಾಭಿಮುಖರಾಗಿ ಪೊಱಮಟ್ಟರ್ (ರಾಮಾಶ್ವ. ೩೨-೩): ತಣಿದನ್ನ ತಂಗುಳೆನಿಕ್ಕುಂ (ಕಶರ. ೧೨೪); ಚಹಾ ಆಗಲಿ. ಬಿಸಿ ಇರುವಾಗಲೇ ಅದನ್ನು ತಣಿಯುವ ಮೊದಲೇ ತೆಗೆದುಕೊಳ್ಳಿ (ಒಂಟಿದ. ೧೭೧).

[ ದೇ.॥ ತಮಿ. ತುಳು. ತಣಿ ]

**ತಣ್**$_2$, ತಂ$_1$, ತಣು$_1$ (ನಾ). ೧. ತಂಪು; ಶೈತ್ಯ: (ಶಿ). (ಗು). ೨. ತಂಪಾದ; ಶೀತವಾದ; ತಣ್ಣಗಿರುವ: 'ತಣ್ಗದಿರ್', 'ತಣ್ಗಳಸ', 'ತಣ್ಜೊಡರ್', 'ತಣ್ಬಿಸಿಲ್' ಪರಾ. **ತಂ$_1$**: ೨. 'ತಂಗಡಲೆ', 'ತಂಗಾಲ' ಪರಾ. **ತಣು$_1$**: ೧. ತಣುವಿರಬಲ್ಲುದೇ ಅತಿಶುಷ್ಕವಾದ ವರ್ಣತರುವಿಡಿದ ಅನಲನ ನಡುವೆ (ಮೋಳಮಾ. ೧೭೧-೭೦೧): ಸಕಲ ಗಣಸಂಕುಳಂ ತಣು[ಪಾಠಾಂ. ನು]ವಿನೋಕುಳಿಯಾಡಿ (ಬಸರ. ೭-೧೮೪); ಭಾನು ತಣುವಾದಾನು ಸೋಮ ಸುಟ್ಟಾನು . . . ಜಗ ಶೂನ್ಯವಾದೀತು ಮೌನದಲಿ ಸಿದ್ಧನಿರಂ (ಮುಂಕುಕ. ೭೮೪).

[ <ತಣ್$_1$. / ತಮಿ. ಮಲ. ತಣ್; ತುಳು. ತಣು; ಕೊಡ. ತಣಿ. / ಪ್ರಾ. ತಣ್ಣಾಯ = ಒದ್ದೆಯಾದ, ತೇವವಾದ ]

**ತಣವು** 'ತಣಿವು' ನೋ.

**ತಣಾಪತ್ತಿ** (ನಾ). ದೇವಾಲಯದ ವ್ಯವಸ್ಥಾಪಕ: ಸ್ಥಾನಪತಿ: ತಣಾಪತ್ತಿ ಬೆಯಳ ಜೀಯನುಂ ಊರಪುರವನ್ನು × × ಸಕ್ಷಿ (ಎಕ. III. ನಂಜನ. ೧೯೯-೨೧; ?). 'ತಾನಪತಿ' ಪರಾ. [ <ಸಂ. ಸ್ಥಾನಪತಿ ]

**ತಣಿ**$_1$, ದಣಿ$_1$ (ಕ್ರಿ). ೧. ತೃಪ್ತಿಹೊಂದು; ಸಮಾಧಾನಗೊಳ್ಳು: " ತಣ ತೃಪ್ತೌ " (ಶಮುಧಾ); ನೆಲನುಂ ವಳಗಾ ಪಾರ್ವರು[ಂ] ಪ್ರಜೆಯುಂ ತಣಿಗೆ (ಎಕ. VII, ಶಿಕಾರಿ. ೧೫೪-೧೮; ೧೧೨೬); ಕರುಣಿಸಿ ಪರ್ವಮೆಂದು ತಣಿಯೆ ಯುಣಲಿಕ್ಕಿದನೆಂದೊಡೆ (ವಡ್ಡಾರಾ. ೭೭-೧೫); ಆತಂ ಬೆರಸದೆಲ್ಲಮಂ ತಿಂದು ತಣಿಯದೆ ಪಲ್ಲಂ ತಿಂಬಂ (ಪಂಪಭಾ. ೩-೨೫); ಜಗಮೆಲ್ಲಂ ತಣಿಗುಪೊಂದು ಬಳ್ಳಿಯ ಕಾಯೊಳ್ (ರೋಕೋಪ. ೬-೫೮); ಮಾಣುದರವಿದೆ ಬೀಗಿಹುದು ಕಲ್ಯಾಣಿದೇವಾ ತಣಿಯಿರೇ (ಬಸಪು. ೫೯-೩); ಕಮ್ಮನೆ ತುಪ್ಪ ಕಜ್ಜಾಯ ಪಾಯಸದಿಂದ ದಮ್ಮನೆ ತಣಿದವೆಂದೆನುತ (ಮೋಹತ. ೩-೫೯); ಅದಕ್ಕೆ ತಂದೆನು ನಿನ್ನಡೆಗಿಂದು ಕಡುಬಂ ತಣಿವಂದಂ ನೀಡೆಂದು (ಗಡೀಕ. ೨-೩೦) ೨. ಆಯಾಸಗೊಳ್ಳು; ಸೋತುಹೋಗು: " ದಟ್ಟಂದಱಿದು[ಪಾಠಾಂ. ಗೆಂಟೆಂದೆಱಿದು] ದನಲ್ ತಣಿದುದು " (ಚಕುನಿ. ೩೪): ಧೈರ್ಯಗೆಟ್ಟುದು ಕೂಡೆ ಕುರುಸೇನೆ . . . ತಣಿದುದ್ಯ ಪರಿಭವದ ಸೂಱೆಯಲಿ (ಕುವ್ಯಾದ್ರೋ. ೧೭-೧೨). **ದಣಿ$_1$**: ೧. ಇತ್ತುದನೆ ಕೊಂಡು ದ[ಪಾಠಾಂ. ತ]ಣಿಯದೆ ಮತ್ತಿನ್ನುಂ ಬೇಕುಮೆಂದು ಪಾಯ್ವುಮೂರ್ಖರ್ (ಸಮಜ. ೩೯೧-೨೭ ಅನು. I): ಆಡಿ ಕಾಲು ದಣಿಯವು ನೋಡಿ ಕಣ್ಣು ದಣಿಯವು ಹಾಡಿ ನಾಲಗೆ ದಣಿಯದು (ಬಸವ. ೪೮೭): ನೋಡಿ ದಣಿಯನು ಬಿರುದ ಹೊಗಳಿಸಿ ಹಾಡಿ ದಣಿಯನು ನಿಚ್ಚಲುಚಿತವ ಮಾಡಿ ದ[ಪಾಠಾಂ. ತ]ಣಿಯನು (ಕುವ್ಯಾಉ. ೧೦-೧೮); ಹಂಸ ನೀಕ್ಷಣದಿಂದುಮ್ಮಿದಮೃತವ ಹಂಸನಂತೀಂಟಿ ದಣಿವನು (ಭರಿದ. -೨೯): ಕಂಡು ದಣಿದೆಯೋ ಉಂಡು ದಣಿದೆಯೋ (ಗಾದೆ). ೨. ಅರಿಗದಾಘಾತದಲಿ ಕೈಮೈದಣಿದು ಮನದಣಿದು ತೆರಳಿದರು (ಕುವ್ಯಾದ್ರೋ. ೩-೭೯): ಶ್ರುತಿ ಶಾಸ್ತ್ರ ಪುರಾಣಗಳನೋದಿ ಬೆಂಡಾದೆ ಅತಿಶೀಲಗಳನೆಲ್ಲ ಮಾಡಿ ದಣಿದೆ (ಪುರಂದ. ೨-೧೮-೨). ೧, ೨: ಚಣಚಣಕು ಪರಿಪೂರ್ಣ ನೀನು ತಣಿದೇ ದಣಿವೆ: ನನಗೆ ಪೂರ್ಣತೆಯೆಂದೂ, ನಾನು ದಣಿದೇ ತಣಿವೆ (ಉಯ್ಯಾಲೆ. ೧೮-೧೩).

**ತಣತಣ** (ದ್ವಿರುಕ್ತಿ): ತಣತಣದು ತಕ್ಕೈಸಿ ಮಿಕ್ಕು ಮಲೆಮಲೆದಾಡಿ (ಬಸರ. ೩-೧೧೪).

[ ದೇ.॥ ತಮಿ. ಮಲ. ತುಳು. ಕೊಡ. ತೆಲು. ತಣಿ ]

**ತಣಿ$_2$** 'ತಣ್$_1$' ನೋ.

**ತಣಿ$_3$**, ತನಿ$_3$ (ನಾ). ತೃಪ್ತಿಪಡಿಸುವಿಕೆ; ತರ್ಪಣ: ತೊಡು ಜವದಿ ಬಿಡು ಬೇಗದಿಂದವನ ತಲೆಗಡಿದು ತಮ್ಮಂಗೆ ನೆತ್ತರ್ ತಣಿಯನೆರವೆ (ಶ್ರೀರಾಮಾ. ೮೦೨-೪೯). 'ತಣಿಯೆಱೆ' ಪರಾ. **ತನಿ$_3$**: ಗರುಡನೂರವರೆಱೆವರೇ ನಾಗರಿಗೆ ತನಿಯನು (ಕುವ್ಯಾಕ. ೨-೧೫). 'ತನಿಯೆರೆ' ಪರಾ.

[ <ತಣಿ$_1$ ]

**ತಣಿಗೆ** 'ತಳಿಗೆ' ನೋ.

**ತಣಿಪು**$_1$, ತಣುಪು, ತಣ್ಪು$_1$ (ಕ್ರಿ). ತಣಿಸು; ತೃಪ್ತಿಯನ್ನುಂಟುಮಾಡು; ಸಂತೋಷಪಡಿಸು: " ತಣಿಪು – ತೃಪ್ತೌ " (ಶಮುಧಾ); ದಿವ್ಯಾಹಾರವನೂಡಿ . . . ತಾಂಬೂಲಾದಿಗಳಿಂ ತಣಿಪಿದಾಗಳ್ (ವಡ್ಡಾರಾ. ೫೫-೨೦); ಬೇಪ್ರ್ವರನುತ್ಸಾಹದಿನಾವಗಂ ತಣಿಪಿ (ಎಕ. XIII, ೩೨೯-೫; ೧೨೨೨); ನಿಜ ಸಂತತಿಯಂ ತಣಿಪಿ ಸುಹೃತ್ಸಂತತಿಯಂ ಪೆರ್ಚಿಪುದು (ಆದಿಪು. ೮-೭೫): ವನಬರ್ಹಿಗಳಂ ಮೇಘಧ್ವನಿ ತಣಿಪುವ ತೆಱದೆ ದೇವ ನಿನ್ನಯ ದಿವ್ಯಧ್ವನಿ ತಣಿಪಿದಪುದು ವಿಪ್ರಜನಮಂ (ಅಜಿಪು. ೮-೧೧); ತನ್ನಿಂದೆ ತಿಳಿದು ತನ್ನಂ ತನ್ನೊಳೆ ತಾಂ ನಿಂದು ತನ್ನೊಳುದಯಿಸಿದ ಸುಖಂ ತನ್ನನೆ ತಣಿಪುತ್ತಿರೆ (ಚಂದ್ರಪು. ೯-೨೨): ಜಾಗದೊಂದೆಸಕವಲಂಪಿನಿಂ ಬಡವರಂ ತಣಿಪುತ್ತಿರೆ (ಕಬ್ಬಿಗಕಾ. ೪೭): ಒಂದೆ ಶಶಿಬಿಂಬವೀ ಜಗದಿಂದೀವರತತಿಯನೆಯ್ದೆ ತಣಿಪುವ ತೆಱದಿಂ (ಕಾವ್ಯಸಾ. ೫೫೪). **ತಣುಪು**: ಪೆಂಪಿನಿಂದೀವ × × ಮಂ ತಣುಪಿ ಕಲ್ಪಕುಜಕ್ಕೆಣೆ × × × ಸುದ್ದ ಮತಿವರವಾನ ಗುಣಭೂಷಣೆ (ಎಕ. VII. ಶಿವಮೊ. ೯೭-೨೦ : 1118); ಬಸವಾದಿ ಶರಣರಾರೋಗಣಂ ಬರಲವರ ತಣುಪಲಂದಾಯ್ದುಕ್ಕಿಮಾರಣ್ಣನೊಪ್ಪಿದನು (ವೀಶೈಪು. ೭-೧೦-೧೨). **ತಣ್ಪು$_1$**: ಅನ್ನಯ ದೊದವು ತಾಯುಮಂ ತಂದೆಯುಮಂ ತಣ್ಪಿದುದವಾರ ರಾಗಾಮೃತದಿಂ (ಶಾಂತಿಪು. ೧-೭೮). [ ತಣಿ$_1$ + – ಪು$_1$ ]

**ತಣಿಪು$_2$** (ನಾ). ತೃಪ್ತಿ; ಸಮಾಧಾನ; ಸಂತುಷ್ಟಿ: ಪಾಲ್ ಕೆಚ್ಚಲೊಳ್ ತಣಿಪು ಊಟದೊಳ್ ಸೀರೆ ನೂಲೊಳ್ . . . ಪುಟ್ಟುವಂತೆ (ಧರ್ಮಾಮೃ. ೮-೮೩): ಲೋಕ ತಾಪದಿ ಬೆಂದು ತಣಿಪನೆಳಸಿದವಂ ಈ ಕಂತೆಯಲ್ಲಿ ತನ್ನ ನಂಬಿಕೆಯ ನೆಯ್ದಿಹನು (ಮುಂಕುಕ. ೯೪೦). [ ತಣಿ$_1$ + – ಪು$_2$ ]

**ತಣಿಯಿಸು**, ತಣಿಸು$_2$, ದಣಿಯಿಸು, ದಣಿಸು (ಕ್ರಿ). ೧. ತೃಪ್ತಿಪಡಿಸು; ಸಂತೋಷಪಡಿಸು: ಎಳವಾವಿನ ಚೆಲ್ವಿಂ . . . ತೆಂಕಣೆಲರಿನೆಳನೀರ್ಗಳಿನಿಂದೊಳದಿಂ ತಣಿಯಿಪುದು ಜನಂಗಳ ಪಂಚೇಂದ್ರಿಯಮನಂದು ಬಂದು ವಸಂತಂ (ಕಾದಂಬ. ೭೭೯) ; ತಮ್ಮೆಲ್ಲ ಹಸಿವುಗಳ ತಣಿಯಿಪನಿತನ್ಯೋನ್ಯ ಪೊಮ್ಮುಗೌದಾರ್ಯ ಜನಜನಪದಂಗಳಲಿ (ಮಂಕುಳ. ೯೪೪). **ತಣಿಸು$_2$**: ೧. ಗುಣಮೇಱಿದ ಧರ್ಮಂ . . . ನೃಪಾಗ್ರಣಿಯನಿಹಸೌಖ್ಯದಿಂದಮೆ ತಣಿಪುದದೆ ಪರಮಸುಖೈಕಕಾರಣಮಲ್ತೇ (ಪುಷ್ಪ ಪು. ೩-೧೧) ; ಮಾಹೇಶ್ವರರಿಗಿಷ್ಟಾರ್ಥಂಗಳಿಂದಾದರಿಸಿ ಪರಿಚಯಂಗಳಿಂ ತಣಿಸುತ್ತ (ಬಸವು. ೪-೪೭) ; ರಣದೊಳಾಡುವ ಮರುಳ ಬಳಗವ ತಣಿಸಿದನು (ಕುಮಾ್ಯದ್ರೋ. ೫-೭೭) ; ಎಣಿಸುವುದವನೊಲಿದೆಸಗುವ ನಲ್ಮೆಯ ತಣಿಸುವುದಿಂತು ಚಿತ್ರವನು (ಹರಿಬ. ೩-೪೩) ; ಕಣ್ಣುಗಳ ಹೊಳವು ಮೊದಲೆ ಅವನ ನೀರಡಿಕೆಯನ್ನು ತಣಿಸಿತ್ತು (ಹಾಡುತ್ತ. ೮೯). **ದಣಿಯಿಸು**: ೧. ಧರಣಿಯ ಮರರ ದಣಿಯಿಸಿದಳು ಹಿರಣ್ಯದಾನದಲಿ (ಸಂಭಪ. ೨೦-೨೨). **ದಣಿಸು**: ೧. ಪರಿವಾರವನು ನಿರ್ದಾಯದಲಿ ದಣಿಸುವೆನು ರಿಪುಗಳ ಸಿರಿಯ ಸೂಱೆಯಲಿ (ಕುಮಾ್ಯದ್ರೋ. ೧-೧೭) ; ನಾನಾ ವರ್ಣಮಂ ಮಹಾಭೂರಿ ದಕ್ಷಿಣೆಗಳಿಂ ದಣಿಸುತಂ . . . ಬರುತಿರ್ದನು (ಚಲಪು. ೫-೧೭) ; ವಿಪ್ರವೃಂದಮಂ ದ[ಪಾಠಾಂ. ತ]ಣಿಸು ಬಹುವಿಧದಿಂದ (ಜೈಮಿಭಾ. ೩೧-೭೦). ೨. ಆಯಾಸಗೊಳಿಸಂ; ಶ್ರಮಪಡಿಸು; ದಣಿವುಂಟುಮಾಡು: ಗಂಡನ ದಣಿಸುವುದಿಲ್ಲಿ ಯಮಕುಂಡದೊಳಗೆ ಹಾಕಿ ಕುದಿಸುವರಲ್ಲಿ (ಪುರಂದ. ೨-೩೯-೨).

ತಣಿತಣಿಸು, ತಣಿಸುತಣಿಸು (ದ್ವಿರುಕ್ತಿ): ಚೆನ್ನೆಯರು ಕುಣಿಯುತಿಹರು ದಣಿವಿಲ್ಲ ಮೈಗೆ ತಂತಾನೆ ಒಳಗೆ ತಣಿತಣಿಸಿ ತಣಿಯುತಿಹರು (ಸೂರ್ಯಪಾ. ೫೭-೬) : ದಾನಾರ್ಥಿಗಳನಂಬರ ಹೇಮಮಣಿಗಣ ಭೂಷಣಾವಳಿಯಿಂ ತಣಿಸಿ ತಣಿಸಿ (ಬಸವು. ೭-೨೯). [ ತಣಿ$_1$ + -ಇಸು$_3$ ]

**ತಣಿಯುಣ್**, ದಣಿಯುಣ್ (ಕ್ರಿ). ತೃಪ್ತಿಯಾಗುವಂತೆ ಊಟಮಾಡಂ: ದಿವ್ಯಾಹಾರಮನಾಕಂಠಪ್ರಮಾಣಂಬರೆಗಂ ತಣಿಯುಂಡು (ವಡ್ಡಾರಾ. ೭೮-೨೨); ತಣಿಯುಂಡಮರ್ದಂ ಗೋಮೂತ್ರದಿಂದೆ ಬಾಯುಮ್ಮಿಸಿದವೋಲ್ (ಪಂಪಭಾ. ೬-೪೮) ; ತಣಿಯುಂಡನಂತೆ ಸಾಲ್ಗುವೆನ್ನದೆ (ಧರ್ಮಾಮೃ. ೧-೧೩೫) : ಭೂತಪಿಶಾಚಕೋಟಿಯುಂ ನೆಱೆ ತಣಿಯುಣ್ಡು ಚೆಣ್ಡುಮರಲ್ದಿಂನ್ನುಮದಕ್ಕಿಸಲಾಱವೆನ್ದೊಡೆ (ಎಕ. XVI, ಚಿಕ್ಕನಾ. ೯೮-೨೫ : 1170) : ಪಸಿವಿಂದೆ ನಿನ್ನ ಮೇಲೆ ಕಟ್ಟೆಱಗಿ ದಿನಮೆಲ್ಲ ತಣಿಯುಣುತೆ (ಬದ್ಧಪ್ರ. ೫೪-೧೧೮೫). **ದಣಿಯುಣ್**: ಗಗನದ ಮೇಘಂಗಳೆಲ್ಲಾ ಸುರಿದವು ಭೂಮಿಯ ಮೇಲೆ ಭೂಮಿ ದಣಿಯುಂಡು ಸಸಿಗಳೆಲ್ಲಾ ಬೆಳೆದವು (ಅವತಂ. ೧೦೭-೪೮೭) ; ಅನಿತೋಗರವನೊಡನೆ ಕಱುಗಾವ ಮಕ್ಕಳುಗಳನಿಬರ್ಗೆ ದಣಿಯುಣಲಿಕ್ಕಿ ತಣಿದು (ಸಿದ್ಧರಾ. ೨-೧೭). [ ತಣಿ$_1$ + ಉಣ್ ]

**ತಣಿಯುಣಿಸು** (ಕ್ರಿ). ತೃಪ್ತಿಯಾಗುವಂತೆ ಉಣಿಸು: ಸುಪ್ರೀತನಾಗುವೊಲು ತಣಿಯುಣಿಸಿ (ಪಾರಸಿ. ೨೭-೮೮೩). [ ತಣಿ$_1$ + ಉಣಿಸು$_1$ ]

**ತಣಿಯೂಡು** (ಕ್ರಿ). ತೃಪ್ತಿಯಾಗುವಂತೆ ಊಟಮಾಡಿಸಂ ; ತಣಿಯುಂವಂತೆ ತಿನ್ನಿಸು: ತೊಱೆದ ಮೊಲೆಯುಂ ಸಾರ್ಚಿ ತಣಿಯೂಡದೆ ನಡೆಗೊಳಿಸಿ ತವಕದಿಂ ಬರುತ್ತುಂ (ಪುಷ್ಪಪು. ೩-೭೬ ವ); ದಾನಜಳಮಂ ತಣಿಯೂಡಿದಡೆ (ದೊಂಕಪಾ. ೧೯೩೭. ಹಾನಗಲ್. ೭೭-೪೭ : ?). [ ತಣಿ$_1$ + ಊಡು$_1$ ]

**ತಣಿಯೆಱೆ**, ತನಿಯೆರೆ (ಕ್ರಿ). ೧. ತರ್ಪಣ ಕೊಡು; (ಹಾಲು ಮುಂತಾದುವನ್ನು ಅರ್ಪಿಸಿ) ತೃಪ್ತಿಯುನ್ನುಂಟುಮಾಡು : ಪೆಣಮಾರೊ ಇದು ತಾನೆ, ಪುಣ್ಮಾಡಿ ಪೋದರ್; ಬಱುಮಣ್ಣನೆಱೆ, ತಾಮ್ ಶ್ರದ್ಧೆಯಿನ್ ತರ್ಕೈಂತೆ ತಣಿಯೆಱೆದುಮಿರ್ಪರ್ (ಅಂತಿಗೊ. ೧೨-೨೨೮). **ತನಿಯೆರೆ**: ಇದೂ ತಂದೆ ತನಿಗಳನು, ನನ್ನ ಮಗನಯ್ಯಂಗೆ, ಪಿತೃಗಳಿಗೆ ತನಿಯೆರೆಯೆ (ಪಾರಸಿ. ೨೩-೫೧೮); ನಾಗರಿಗೆ ತನಿಯೆರೆಯುತ್ತಾರೆ (ರೂಢಿ). [ ತಣಿ$_1$ + ಎಱೆ$_1$ ]

**ತಣಿರು** 'ತಳಿರ್$_2$' ನೋ.

**ತಣಿವೀ** (ಕ್ರಿ). ತೃಪ್ತಿಯುನ್ನು ನೀಡಂ ; ತಣಿವನ್ನುಂಟುಮಾಡಂ: ಅಱೆಯದೆಳಸಿದೆನೆಂದು ನವಿಸಿದಸುರೆಯ ಬಸುರ ಬಱಿನಳಿಯೆ ತಣಿವಿತ್ತು (ಸಿದ್ಧರಾ. ೬-೯);ಅಂತದು ತಣಿವೀವುದು ಬಾನುದ್ದಮಪ್ಪ ಪೇರೊಡಲವರ್ಗಂ (ಶಬ್ದಾನು. ೫೪೨ ಪ್ರಯೋ). [ ತಣಿವು + ಈ$_2$ ]

**ತಣಿವು**, ತಣವು, ತನಿವು, ದಣಿವು, ದಣುವು (ನಾ). ೧. ತೃಪ್ತಿ ; ಸಮಾಧಾನ: " ಪರ್ಯಾಪ್ತಂ, ಉಪಸಂಪನ್ನಂ, ತೃಪ್ತಿಃ, ಸೌಹಿತ್ಯಂ–ಈ ೪ತ (ಣ)ಣುವು " (ಹಲಾಯು. ೫೪-೧೭೧): ತಣಿವಂ ಕೈಕೊಂಡಮೂರ್ತರ್ಚರಮತನು ಸಮಾಕಾರರ್ (ಆದಿಪು. ೧-೨) ; ಕನಸಿನ ತೊಱೆಯೊಳ್ ನೀರ್ಗುಡಿದು ತಣಿವನಱಿಸಿದರೊಳರೇ (ಶಾಂತಿಪು. ೪-೯೮) : ತಣಿವಿಲ್ಲದರಂ ಪೂಜಿಸೆ ತಣಿವಕ್ಕುಮೆ (ಮಲ್ಲಿಪು. ೧೨-೧೭೧) ; ಪರಮಶಿವಸುಖ ಸಂಗಸುಧೆಯಂ ಸವಿಸವಿದು ತಣಿವಿಲ್ಲದೀಂಟುತ್ತ (ಬಸವು. ೩೫-೨) ; ಕಿಚ್ಚಿಂಗೆ ತಣಿವಿಲ್ಲ ಮೊಚ್ಚೆಗೆ ಹೊಲೆಯಿಲ್ಲ (ಸರ್ವಜ್ಞ. ४೮೯). **ತಣವು** : ೧. " ಸೌಹಿತ್ಯಂ, ತರ್ಪಣಾಂ, ತೃಪ್ತಿಃ – ೩ ತಣವು[ಪಾಠಾಂ. ತಣುವು]" (ಸಿದ್ದಾಂತಿ. ೨೬೯): ಆರಾ ಅಮರ್ದಿನ ತೀರಾ ತಣವಿನ್ (ಹೊಂಗಳು. ४४-೫). **ತನಿವು**: ೧. ತಂಬೆಲರು ಜೀವಕ್ಕೆ ತನಿವು ನೀಡಿತ್ತು (ಜೀವನ.೭). **ದಣಿವು** : ೧. ಭೋಜನದ ದ[ಪಾಠಾಂ. ತ]ಣಿವು ಪರ್ಯಾಪ್ತಮುಪಪನ್ನಮಾತ್ಮತೃಪ್ತಿ ಸೌಹಿತ್ಯಮಕ್ಕುಂ (ಮಂಗರಾ. ೬೫-೭). ೨. ಆಯಾಸ ; ಬಳಲಿಕೆ ; ಶ್ರಮ : ನಿಪುಣಿಕೆ ಕ್ರಮಕ್ರಮೇಣ ದಣಿವಿನಿಂದ ಹಣ್ಣಾಗುತ್ತಲೆ ಇದ್ದಳು (ದಾರಳ. ३೦೧) : ಶ್ರೀನಿವಾಸ ಪಾತ್ರ ದಿನದ ದಣಿವಿನಿಂದ ಕೂಡಲೆ ನಿದ್ದೆಹೋದ(ಶೀಮೋಧ. ४೫). **ದಣುವು**: ೨. ದಣುವಿಲ್ಲದೊಲ್ದು ಕುಣಿವಚ್ಚ ಕೇಳಿಕೆಗಳಿಂ (ಉದ್ಭಟ. ३-೯೮); ದಾರಿಗರಿಗೆ ದಣುವು ತೋರುತ್ತಿರಲಿಲ್ಲ (ಶ್ರೀರಾಪ. ೧३). ೩. ಆಸೆ ; ತೃಷೆ : ಪಾಂಡುಕುಮಾರರ ಚರಿತ್ರವು ಎಷ್ಟು ಕೇಳಿದರೂ ದಣುವು ತೀರದು (ಕೃಷ್ಣಾಭೀ. ೮೮).

ತಣವು ಮುದ್ದೆ = ತಂಬಿಟ್ಟು: ಅವರೂ ತಮ್ಮ ಕಾಹಿಲೆ ವಾಸಿಮಾಡಲು ಮಾರಮ್ಮನಿಗೆ ಕುರಿ, ಕೋಳಿ, ತೆಂಗಿನಕಾಯಿ, ತಣವು ಮುದ್ದೆಗಳನ್ನು ಅರ್ಪಿಸಲು ಮುಂದೆ ಬಂದಿದ್ದರು (ಊರುಕ. ೫).

[ ತಣಿ$_1$ + – ವು. / ತಮಿ. ತಣಿವು; ತೆಲು. ತನಿವು, ತನಿವಿ, ತನ್ವಿ, ತನ್ವು ]

**ತಣಿವೇಱು** (ಕ್ರಿ). ತೃಪ್ತಿಯುನ್ನು ಹೊಂದು: ಪೊಗಸುತ್ತದಂತೆ ಕೈಕೊಂಬುದು ಹವ್ಯಮಂ ಬಯಸಿಯುಣ್ಬಮರರ್ ತಣಿವೇಱುವಂತೆವೋಲ್ (ಚಕವಿ. ४-೭೭).

[ ತಣಿವು + ಏಱು$_1$ (<ಏಱ್$_1$) ]

**ತಣಿಸು$_1$**, ತಣ್ಣಿಸು, ತಣ್ಣಳಿಸು (ಕ್ರಿ). ೧. ತಣ್ಣಗೆ ಮಾಡು ; ತಂಪುಗೊಳಿಸಂ ; ಆರಿಸು : ತಣ್ಣೀರಾದಡಂ ತಣಿಸಿ ಕುಡಿ (ಪಾರ್ತಿಸು. ೭೬) ; ಕುಡಿಯುವ ನೀರನ್ನು . . . ಕುದಿಸಿ ಆದಮೇಲೆ ಮಣ್ಣಿನ ಪಾತ್ರಗಳಲ್ಲಿ ಹಾಕಿ ತಣಿಸಬೇಕು (ಆಯುಸಾ. ೮४). **ತಣ್ಣಿಸು** : ೧. ಕಳ್ತಲೆಗಣಂ ಪ್ರಾರಾಂಪಶೂರಂ ಲಸಲ್ಲಲಿತಂ ತಣ್ಣಿಪ ಚನ್ದ್ರನಂ ನುಡಿವರ್ (ಸಂಸಪ. ೦४-४): ಅಣ್ಣ ದತ್ತನ ಬಗೆಯ ಬೇಗೆಯನು ತಣ್ಣಿಸೈ (ನನಲ್ಲ. ೮೭-೦). ೨. ಅಡಗು ; ಇಲ್ಲದಂತಾಗು : ಬಯಲಾತು ಮಾತಿನ ಭ್ರಾಂತಿ ತಣ್ಣಿಸಿತು. ಶಾಂತಿ (ಸೂರ್ಯಪಾ. ೧೮-४). **ತಣ್ಣಳಿಸು** : ೧. ಸಣ್ಣಕ್ಕಿಯಶನ ಸದ್ಘೃತದೊಳೆ . . . ಕೈದಣ್ಣಲರ್ ದಧಿಪತ್ರಮಾಲೆ ತಣ್ಣಳಿಸದೆ ಪದಾರ್ಥಂಗಳ ರುಚಿಯ ಮುಕ್ಕಣ್ಣಗರ್ಪಿತವ ಮಾಡಿದರು (ಮೋಹತ. ೨೭.೯). [ತಣ್$_2$ + – ಇಸು$_3$]

**ತಣಿಸು$_2$** 'ತಣಿಯಿಸು' ನೋ.

**ತಣಿಸು$_3$** (ನಾ). ೧. ತಂಪು ; ಶೈತ್ಯ : " ಸ್ವಿದಿ – ಶೈತ್ಯೇ, ತಣಿಸಿನೊಳ್ " (ಕಾಶಕ್ಕ. ೮೨). ೨. ತೇವ ; ಒದ್ದೆ : (?). ೩. ತೃಪ್ತಿ ; ತುಷ್ಟಿ : ಗುಲಾಬಿ ನಗುವುದೊಂದರೆನಿಮಿಷ; ನಗಲು ಬಾಳ್ಮಾಗಿಯುವುದು ಮುಗುಳು ದುಡಿತಕೆ ತಣಿಸು (ಮಂಕುಳ. ४೭೮). 'ತಣ್ಣಸ' ಪರಾ. [ ತಣಿ$_1$ + – ಸು$_2$ ]

**ತಣು₁** 'ತಣ್₂' ನೋ.

**ತಣು₂** (ನಾ). (?) : ಕೆಲವೆಡೆಗೊಳ್ ವ್ಯಂಜನಮಿಲ್ಲ. . . ಕರು, ತಣು, ಅನು, ಕಱು (ಶಮದ. ೪೮ ಪ್ರಯೋ). [ ? ]

**ತಣುಕು** (ನಾ). ಒಂದು ಬಗೆಯ ಗಿಡ : ತಣುಕು, ಕಾಡುಬೆಂಡೆ (ವೃಜಿಗ. ೪೧-೮೨೨). [ ? ]

**ತಣುನೆಳಲು** 'ತಣ್ಣೆಳಲ್' ನೋ.

**ತಣುಪು** 'ತಣಿಪು₁' ನೋ.

**ತಣೆಸೆ** (ನಾ). (?): ತಾವರೆಯ ತಣೆಸೆಯೊಳು (ಇಎ. ೧೯೪೭, ಮುಂಡರಗಿಪೇಟಾ. ೩೩೫-೯ ; ?). [ P ಇದು 'ತಣ್ಣಸೆ' ಯ ಅಪಲಿಖಿತವಿರಬಹುದು ]

**ತಣ್ಗಂಪು** (ನಾ). ಆಹ್ಲಾದಕರವಾದ ಸುವಾಸನೆ : ಅಧರದ ಪೊದಟ್ಟ ತಣ್ಗಂಪಿಂಗಂ ಮೃಗನಯನೆಯರನೆ ಬಿಡದೋಲಗಿಸಿದುದಳಿನಿಕರಂ (ಆದಿಪು. ೧೧-೧೧೨) ; ವನಲತಾಳಿ ಪ್ರಸೂನಾವಳೀ ಗಂಧವಹಂ . . . ತಣ್ಗಂಪನೀಬೀಱುದವುದು (ಕಾದಂಉ. ೭೧೭) ; ಕಂಪಿನೊಳ್ ಪೊಂಪುಳಿವೋಗುತಿರ್ದ ಮಳ ವಕ್ತ್ರಸರೋಜಮ ಸಾಲ್ಗುಮೆಂದು ತಣ್ಗಂಪನುಣಲ್ಕೆ ಬಂದೆಱಗಿ (ಧರ್ಮಾಮೃ. ೭-೨೦೦) ; ಮುಡಿಯಿಂದಂ ಬೀಬ್ದ ಪೂಮಾಲೆಯಿಂ ತ[ಪಾಠಾಂ. ಮ]ಣ್ಗಂಪಂ ಸವಿದಲ್ಲಿ ವಂಗಡದೆ ಪಾಡುತಿರ್ಪ ಪೆಣ್ದುಂಬಿಯಿಂ (ಕಬ್ಬಿಕಾ. ೩೫) ; ನಸುಬಿರಿದ ಜಾಜಿಯ ನನೆಯ ತಣ್ಗಂಪನುಂಡು . . . ಸುಳಿವ ಮಱಿದುಂಬಿಯ ವಿಳಾಸದಂತೆ (ಸೌಂದಪು. ೧-೧೭).

[ ತಣ್₂ + ಕಂಪು ]

**ತಣ್ಗದಿರ್, ತಂಗದಿರ್** (ನಾ). ತಂಪಾದ ಕಿರಣ : ಸ್ಮರಶರಮೇವುವೆಂಬ ಶಿಶಿರಾಂಶುವ ತಣ್ಗದಿರೇವುವೆಂಬ ಬದ್ದರನಱಿಯಟ್ಟ (ಅಜಿಪು. ೭-೨೭) ; ನೆಱಿದಿಂಗಳ ತಣ್ಗದಿರಂತೆ . . . ಲೋಲಲೋಚನರುಚಿ ಸುತ್ತಿಮುತ್ತಿದುದು (ಶಂಕಾಮಾ. ೫-೭೦) ; ಭುವನವುನಾವಗಂ ಪುದಿದು ತೀವಿದ ತಣ್ಗದಿರ್ಗಳ್ ಪೊದಟ್ಟ ಕೈರವವನಮಾದುವು (ರೇಣಾವ. ೩-೭) ; ವರ ಹಿಮಕರಬಿಂಬದ ಬೆಂಬಳಿಯೊಳಿಳಿವ ತಣ್ಗದಿರ್ಗಳೆನಲ್ (ಗಿರಿಕ. ೭-೯) : ಸೊಗಯಿಪ ಬೆಳ್ಪಸದ ನಮಂ . . . ಕೈಕೊಂಡಾಗಳ್ ಮಿಗೆ ತಣ್ಗದಿರಾವರಿಸಿದ ಮೃಗಧರ ಮಂಡಳಿಯಪೋಲ್ ವಿರಾಜಿಸುತಿರ್ದಳ್ (ಬಾಧಪು. ೭-೧೦೦೦). **ತಂಗದಿರ್** : ತಂಗದಿರ್ಗಳು ಸರ್ವಾಂಗದಿ ನೆಲಸಿರೆ (ಶಿವಗೀ. ೦೭೦-೮೫೦) ; ತಳಿತ ತಂಪಿನ ತಂಗದಿರ ತೊಱಿಯೊಳಗೆ ಕೇಂಕಾಡಿದುದು ಬಲ (ಕುಮಾರ್‍ದ್ರೋ. ೦೭-೦೮).

[ ತಣ್₂ + ಕದಿರ್₂ ]

**ತಣ್ಗದಿರ, ತಂಗದಿರ** (ನಾ). ತಂಪಾದ ಕಿರಣಗಳುಳ್ಳವನು ; ಚಂದ್ರ : "ಜೊನ್ನೊಡಲಂ . . . ತಣ್ಗದಿರಂ, ಅಲಿವೆಳಗಂ, ಮಂಜುಗ್ರೆಯ್ಯಂ . . . ತಿಂಗಳ್ - ಈ ೨೦ ಚಂದ್ರನ ಪೆಸರ್" (ಕಕಸಾ. ೩-೨೩) : "ತಣ್ಗದಿರನೆನಲ್ಕೆ ಚಂದಿರಂ ಸೊದೆಗದಿರಂ" (ಕರ್ಣಾನಿ. ೯) : ಆನನಾಂಬುಜಂ ತಣ್ಗದಿರಂಗೆ ಸೋಲವುನೊಡರ್ಚೆ (ರಾಜಶೇ. ೧೩-೭೦) ; ಬೆಂಗದಿರನ ಕಾಯ್ಪು ತಣ್ಗದಿರನ ತಣ್ಪು . . . ಪಡಿಗೊಳೆ (ರಾಮಾಶ್ವ. ೭-೧೭) ; ಬೆಂಗದಿರನ ಬಿಸಿ ನಾನು, ತಣ್ಗದಿರನ ತಂಪಾನು ! (ಪಾಂಚಜ. ೦೭-೨೧). **ತಂಗದಿರ** : "ತಂಗದಿರನೆಂದೊ ಡಂಬುಜಬಾಂಧವಂ" (ಕಶರ. ೦೩೦) ; ತಂಗದಿರನಿಂದಿಂಗಡಲ್ ಪೆರ್ಚದಿರಲ್ (ನಂದಿಮಾ. ೯-೭೫) : ಸರಸದಿಂ ತಂಗದಿರನುದಯದಿ ಶರಧಿ ಪೆರ್ಚುವ ತೆರದೊಳ್ (ಕೃಕರ್ಣಾ. ೩-೭೮) : ತಂಗದಿರ ನೇಸರರ್ ತಾವು ಕದುಹರುಸ ದಿಂದೆಸಗುತಿರಲು (ಕವಿಕಾ. ೨-೧) ; ತಂಗದಿರನೆಸಕ ಕಣ್ಗಮೃತ, ಕಣಜಕದೇಂ ? (ಮಂಕುತ. ೪೪೮). 'ಬೆಂಗದಿರ' ಪರಾ.

ತಣ್ಗದಿರನನ್ವಯ = ಚಂದ್ರವಂಶ : ತಣ್ಗದಿರನನ್ವಯದ ಪಾರ್ಥನ ತುರಂಗಮದು ಪೆಣ್ಣುದುರೆಯಾಗಿ . . . ಸ್ತ್ರೀ ರಾಜ್ಯಮಂ ಪೊಕ್ಕುದು (ಜೈಮಿಭಾ. ೦೫ ಸೂಚನೆ). [ ತಣ್ಗದಿರ್ + - ಅ₇ ]

**ತಣ್ಗದಿರವಕ್ಕಿ** 'ತಣ್ಗದಿರ್ವಕ್ಕಿ' ನೋ.

**ತಣ್ಗದಿರಱೆ** (ನಾ). ಚಂದ್ರಕಾಂತ ಶಿಲೆ : ಅಮೃತಶಿಲೆ : ಪಾಸಿದ ತಣ್ಗದಿರಱೆಯ ಪಾದವಟ್ಟಗೆಗೊಳಗೇರಿಯು ನಿಡುಮುರಂಗಳಜುಂಜನ ಕಟ್ಟಿಲೆಯನೊಳಕೊಂಡು (ರಾಮಾಶ್ವ. ೫೨-೧೯). [ ತಣ್ಗದಿರ + ಅಱೆ₄ ]

**ತಣ್ಗದಿರಾಡಿ** (ನಾ). ಚಕೋರ ಪಕ್ಷಿ ; "ಜೊನ್ನವಕ್ಕಿ" (ಚಕುನಿ. ೬. I, ೩೮).

[ ತಣ್ಗದಿರ್ + - ಆಡಿ₁ ]

**ತಣ್ಗದಿರ್ಗಲ್, ತಂಗದಿರ್ಗಲ್** (ನಾ).=ತಣ್ಗದಿರಱೆ : ಪೊಳೆವ ತಣ್ಗದಿರ್ಗಲ್ಲ ಪಸೆಯೊಳೆಳೆಲೆವಾಳೆಯೆಳೆಯಲೆಯು ಪಚ್ಚಡಿಸಿ . . . ಕಾಂತೆಯ ಮಲಂಗಿಸಿ (ಪದ್ಮರಾ. ೮-೯೩) ; ತಲೆವೆಱಿ ಸಜ್ಜೆವನೆಯ ತಣ್ಗದಿರ್ಗಲ್ಲ ಮೆಲ್ವಳಗೆಯಂ ಸೋಂಕೆ ಕರಗಿ ಸೂಸೆ (ಸೌಂದಪು. ೭-೧) : ತಳಿರೆಲೆ ಬಿಜ್ಜಳ ತಣ್ಗದಿರ್ಗಲ್ . . . ಬುವನ್ನದಿನಾಳಿಯರೆಳಸಿ ಕರಂ ಸತ್ಕರಿಸಲು (ಜಯುಕಾ. ೪-೪೦) ; ಮೆಱಿವ ತಣ್ಗದಿರ್ಗಲ್ಲ ಮಂಟಪದೊಳ್ . . . ಸಂಭ್ರಮದ ಕುಳಿರ್ವಟ್ಟಣಾಗಿಯೊಡನೆ ಪಸನಿಂದು (ಧಾವಚಂ. ೯-೫೭). **ತಂಗದಿರ್ಗಲ್** : ಕಂಗೊಳಿಪ ಸೋಪಾನದುತರಂಗಳೊಳೆಸೆವ ತಂಗದಿರ್ಗಲ್ಲ ಪುತ್ಥಳಿಗಳೋ (ಚಬಪು. ೪೫-೭೫) ; ತಂಗದಿರ್ಗಲ್ಲ ಗಹ್ವರದ ಚಂದಳಿರ್ವಾಸಿನೊಳತ್ತಮಿತ್ತ ಚೆಲ್ವಿಂಗೆಡೆಯಾಗಿ ಸೂಸಿದರಲುಂ (ಶಬಶಂ. ೧-೫೦). [ ತಣ್ಗದಿರ್ + ಕಲ್₃ ]

**ತಣ್ಗದಿರ್ವಕ್ಕಿ, ತಂಗದಿರ್ವಕ್ಕಿ, ತಣ್ಗದಿರವಕ್ಕಿ** (ನಾ). ಬೆಳುದಿಂಗಳ ಹಕ್ಕಿ ; ಚಕೋರ ಪಕ್ಷಿ ; ಜೊನ್ನವಕ್ಕಿ : "ಜೊನ್ನವಕ್ಕಿ, ತಣ್ಗದಿರ್ವಕ್ಕಿ - ಈ ೨ ಚಕೋರಂ" (ಕಕಸಾ ೧೧-೨೦೨) ; ತಣ್ಗದಿರ್ವಕ್ಕಿ ಮೊಗವಿಟ್ಟು ನಭವ ನೋಡೆ (ರೇವಣ. ೭೪-೧೭). **ತಂಗದಿರ್ವಕ್ಕಿ** : "ತಂಗದಿರ್ವಕ್ಕಿ ಜೊನ್ನದ ಪಕ್ಕಿಯನೆ ಚಕೋರಂಗಳ ಪೆಸರ್" (ಕಬ್ಬಿಕೈ. ೨೦) ; "ಜೀವಂಜೀವ - ತಂಗದಿರ್ವಕ್ಕಿ" (ಬಾಹಟೀ. ೨-೭-೩೫ ವ). **ತಣ್ಗದಿರವಕ್ಕಿ** : "ತಣ್ಗದಿರವಕ್ಕಿಯೊಡನದು ಚಕೋರಾಖ್ಯೆಯುಕ್ಕು" (ಕಶರ. ೪೨).

[ ತಣ್ಗದಿರ್ + ಪಕ್ಕಿ₁ ]

**ತಣ್ಗದಿರ್ಪೊದಱ್** (ನಾ). ತಂಪಾದ ಕಿರಣಗಳ ಸಮೂಹ : ತಿಂಗಳ ತಣ್ಗದಿರ್ಪೊದಱೊಳ[ಪಾಠಾಂ. ಱನ]ವಾಂಗಚ್ಛವಿ ಸೆಣಸೆ ತಂದು ತಲೆವಾಗಿಪ ಪೊಲ್ . . . ಅಮರಾಂಗನೆ ಚಾಮರಮನಿಕ್ಕಿದಳ್ (ಅನಂಪು. ೪-೮೩).

[ ತಣ್ಗದಿರ್ + ಪೊದಱ್ ]

**ತಣ್ಗರಗ, ತಂಗರಗ** (ನಾ). ತಂಪಾದ ಕೊಡ ; ಶೀತಲ ಕಲಶ : ತಣ್ಗರಗದ ನೀರ್ವರಸು ಕೆಲದೊಳಿರ್ದ ಕೆಳದಿಯಿರನಟ್ಟುವುದುಂ (ಶಂಕಾಮಾ. ೭-೧೦೭ ವ) : ಅಱಿವಟ್ಟಗೆಯೊಳ್ ಕದುಗೋಡುವೆತ್ತ ತಣ್ಗರಗಮನೆತ್ತಿ ನೀರೆಱಿಯೆ (ಜಗವಿ. ೦೭-೭೯) : ಹಗಲಿನೊಳು ತಂದ ಪೊಸನೀರನಾಕ್ಷಣದೊಳಗೆ ಮಿಗೆ ಸೋದನೆಯ ಮಾಡಿ ತಣ್ಗರಗ[ಪಾಠಾಂ. ತಂಗರಗ]ದೊಳು ತುಂಬಿ (ಸೂಶಕಾ. ೨-೪೩) ; ತಣ್ಗರಗದ ನೀರಿಂದ ತೊಳೆದಾನನ ಕರಚರಣಂಗಳನು (ಕುರಾಸಾಂ. ೩೭-೫) : ಕುಳಿರ್ವಾಲಿನೀರನಬಳಾವಳಿ ತಣ್ಗರಗದೊಳೆ ತೀವಿ ಪಥಿಕರ್ಗೆಱಿಗುಂ (ವೃಷವಿ. ೪-೨೫). **ತಂಗರಗ** : ತಂಗರಗದಿಂ ಶೈತ್ಯೋದಕಮಂ ಕುಡಿಯಲೆಱಿವುತ್ತ (ಪುಣ್ಯಾಸ್ರ. ೨-೨೦ ವ) ; ತಂಗರಗದ ತಿಳಿನೀರನಂಗದ ಮೇಲೆ ತಳಿವುತಿರಲು (ಪ್ರಭಂಜ. ೪-೧೭) ; ತನಿವಣ್ಣಾ ಹೊಱಿಗಳಿಂ ತಿಳಿದ ಜಲಪೂರ್ಣವಹ ತಂಗರಗದಿಂದಲಾಭರಿತ ಚಂದ್ರಾನನೆಯರಿಂ . . . ನಿರ್ಮಳ ವಸಂತಂ ಸಹಿತ ನಡೆದು ಪೊಱಪೊಳಲ ಬನವೊಕ್ಕು ಬರೆ (ಜೀರಮ. ೫-೨೨).

[ ತಣ್₂ + ಕರಗ ]

**ತಣ್ಗಲ್, ತಂಗಲ್, ತಂಗಲ್ಲು** (ನಾ). ಚಂದ್ರಕಾಂತ ಶಿಲೆ : "ಸಸಿಗಲ್, ತಣ್ಗಲ್-ಈ ೨ ಚಂದ್ರಕಾಂತಂ" (ಕಕಸಾ. ೪-೫೩). **ತಂಗಲ್** : ವಿಸುಪ ಪೇಡಾಕುಳಿಯ ಕುಂಕುಮರಸದ ಕತ್ತುರಿಗೆಸರ ತಂಗಲ್ಲೊಸವರ ಪನ್ನೀರುಗಳ . . . ಓಕುಳಿಯಾಡಿದರು (ಅನಂಶಾ. ೧-೨೩-೩೦). **ತಂಗಲ್ಲು** : ಒಸರಲಾ ತಂಗಲ್ಲು ಕರಗಾದ ಜಲ ತಣ್ಣಸದೋಱಿ ಶ್ರಮವಡಗಿಪುದ (ಕಂವವಿ. ೭-೭೭). [ ತಣ್₂ + ಕಲ್₃ ]

**ತಣ್ಣಲಸುಗೂಟ್** (ನಾ). ತಣ್ಣನೆಯ ಕಲಸನ್ನ,-ಕಲಸಿದ ಅನ್ನ : ಕೆನೆಗೊಂಡ ಗೆಡ್ಡಮೊಸರಂ ಸುರಿದೇಲೆಯ ಚೂರ್ಣಮಿಕ್ಕಿ . . . ಪವಣ್ಬುಗೆ ಕಲಸಿರ್ದ ತಣ್ಣಲಸುಗೂಟನಿಳಾಪತಿಗಿತ್ತನಟ್ಟಿಯುಂ (ಲೀಲಾವ. ೫-೭೦). [ ತಣ್$_2$ + ಕಲಸುಗೂಟ್ ]

**ತಣ್ಣಳಸ** (ನಾ). = ತಣ್ಣರಗ : ತಾವರೆಯ ಕೊಡೆಯೆಲೆಗಳಿಂ ಮುಚ್ಚಿದ ಪಚ್ಚೆಯ ಪವಳದ ಪದ್ಮರಾಗದ ಪಳುಕಿನ ತಣ್ಣಳಸಂಗಳುಮಂ (ಕಾದಂಬ. ೨೧೬) : ಪಱಿಪಡೆ ಸೇದ ಒಂಗೆ ತೃಷೆ ತಣ್ಣಳಸಂಗಳನೆತ್ತಿ ನಿಂದು ನೀರೆಱೆವ ಚೆಳಲ್ಲತಾಂಗಿಯರ್ (ಅನಂಪು. ೧-೮೩). [ ತಣ್$_2$ + ಕಳಸ$_1$ ( = ಕಲಶ) ]

**ತಣ್ಗಾಚು** (ನಾ). ಹಿತಕರವಾದ ರುಚಿಯುಳ್ಳ ಕಾಚು : ಬೆಳ್ಳಲೆ ಕ್ರಮುಕ ತಣ್ಗಾಜಿ[-ಚಿ]ನಂ[ಪಾಠಾಂ. ಮೊದಲಾದಂ]ಗಡಿಯರೆ (ಅಬ್ಬಲೂ. ೩-೬೫). 'ತಂಗಾರ' ಪರಾ. [ ತಣ್$_2$ + ಕಾಚು$_1$ ]

**ತಣ್ಗಾಲ್** (ನಾ). = ತಣ್ಗಾಲುವೆ : ಸೊಕ್ಕೇಱಿದರ್ ಬೇಟಿಗ್ಗ ಕಾಮನ ಕೂರಂಬಿನ ಕೋಳ್ಗೆ ಸುಗ್ಗಿ ಪೊಸವೆಳ್ದಿಂಗಳ್ ಬನಂ ಬಂದ ಮಾವಿನಿತುಂ ತಣ್ಣಿದುವಕ್ಕಿ ತಂಬೆಲರ್ಗಳಿಂ ತಣ್ಗಾಲೊಳೆಂದೂರ್ಮಳಚ್ಚನೆಯಾಟಂ ಸತಿ ಬೇಟದೇವತೆಗೆ ಪಾನೋನ್ಮತ್ತೆ ನಿಂದಾಡಿದಳ್ (ಅನಂಪು. ೮-೩೦). [ ತಣ್$_2$ + ಕಾಲ್$_2$ ]

**ತಣ್ಗಾಲುವೆ** (ನಾ). ತಂಪಾದ (ನೀರಿನ) ಕಾಲುವೆ : ನೀಲದ ನೆಲಗಟ್ಟು ಪರಿವೇಷ್ಟಿಸಿರ್ದ ತಣ್ಗಾಲುವೆ ತಳಿರ್ಮಾಸಿನಲಿ ಮೂಲೋಕಮೋಹನರನ್ನೆಯ ಸೈಪಿಡೆ (ಮೋಹತ. ೨೮-೧೩). [ ತಣ್$_2$ + ಕಾಲುವೆ (<ಕಾಲ್ವಾಯ್) ]

**ತಣ್ಗಾಳಿ, ತಂಗಾಳಿ** (ನಾ). ತಂಪಾದ ಗಾಳಿ : ಗಂಧೋದಕಮಂ ಮೇಲೆ ತಳಿದು ತಣ್ಗಾಳಿಯುಂ ವಿಗುರ್ವಿಸಿ ದೇಹಕ್ಕಾಪ್ಯಾಯನಂ ಮಾಡೆ (ಪಮ್ಪಾರಾ. ೫೬-೧೩): ಎಲೆ ತಣ್ಗಾಳಿಯೆ ನೀನೇಕಲೆದಪೆ (ಕಬ್ಬಿಗಕಾ. ೬೫) : ಆಳಿಯರ್ ಬೀಸುವ ಚಮರಾಲವಟ್ಟ ತಣ್ಗಾಳಿಯಿಂದವಳೊಡಲ್ಗಿಚ್ಚು . . . ಧಡಾಳಿಸಿತು (ಮೋಹತ. ೨೭-೬೨). **ತಂಗಾಳಿ** : ತಂಗಾಳಿಯುಂ ತಿಂಗಳುಂ ಬನಮುಂ ಬೆಂಬಲಮಾಗಿ ತೀರ್ಚಮೆ ಗಡಂ ಕೊಂಡುಗ್ಗಿಯುಂ ಸುಗ್ಗಿಯೊಳ್ (ಅಜಪು. ೬-೨೮) : ಬಡತನದೊಳ್ ಸಿರಿ ಮೆಯ್ ಬೆಮರ್ವಡೆಯೊಳ್ ತಂಗಾಳಿ ಮರ್ವು ಪರ್ವಿದ ಸಮಯಕ್ಕುಡುಪೋದಯಮೆಂಬಂದದೆ ಗಡಣಿಸಿದುದು ಸುತನ ಬರವು ಬಯಸುವ ಪದದೊಳ್ (ಚಂದ್ರಪು. ೬-೯೨) ; ಪುಳಿನಕ್ಕೆ ತಂಗಾಳಿಗೆಸೆವ ದೀಹದ ಮೃಗಾವಳಿಗೆ ಬೆಱಗಾಗುತ್ತ ನಡೆತರುತ್ತ (ಹರಿಶಾ. ೫-೫೬) : ಆಗ ದಟ್ಟವಾಗಿ ಮೋಡಗಳು ಕವಿದುಕೊಂಡು ತಂಗಾಳಿ ಬೀಸಲಾರಂಭವಾಗಿತ್ತು (ರಾವಿಜ. ೨೩). [ ತಣ್$_2$ + ಗಾಳಿ$_1$ ]

**ತಣ್ಣೂಳ್** 'ತಣ್ಣೂಟ್' ನೋ.

**ತಣ್ಣೂಟ್, ತಂಗಳು, ತಂಗಟ್, ತಂಗುಳು, ತಂಗುಟ್, ತಂಗೂಳು, ತಂಗೂಟ್, ತಣ್ಣೂಳ್** (ನಾ). ೧. ತಣ್ಣಗಾದ ಅನ್ನ ; ಆರಿದ ಅನ್ನ : ತಣ್ಣೂಟಂ ಪಡವಿನೊಳೆಲೆಗಟ್ಟಿ ಮುಟ್ಟುಪಡೆದಱಸುವುದೇ (ಲೀಲಾವ. ೨-೦೧೫). **ತಂಗಳು** : ೧. ಇದ್ದ ತಂಗಳು ನನಗಿಕ್ಕು ನಿನಗೆಂದೆಂದಿಗೂ ಹಸಿವಿಲ್ಲದ ಹಾಗೆ ಮಾಡುತ್ತೇನೆ (ಗಾದೆ). ೨. (ಆಹಾರ ಪದಾರ್ಥಗಳ ವಿಷಯದಲ್ಲಿ) ಆರಿದುದು ; ಮಾಡಿ ಬಹಳ ಹೊತ್ತಾದುದು : ತಂಗಳು ಎರಡು ಮುದ್ದೆಗಳಿವೆ (ಚಂಗಾಳಿ. ೧೬) ೩. ತಂಗಳೂಟ: ಬೆಳಗ್ಗೆ ಎದ್ದು ಸ್ನಾನ, ಶಿವಪೂಜೆ, ತಂಗಳು ತೀರಿಸಿಕೊಂಡು (ನಾಲ್ಮ. ೩೪). ೪. ಹಳೆಯದು ; ಹಳಸಲಾದುದು ; ಹೊಸತನವಿಲ್ಲದುದು : ಹೋಗಲಿ ಆ ಹಳಬರ ತಂಗಳು – ಈ ನಿನ್ನ ಹಿರಿಯರೊಳಗೆ ಈಗ ಯಾರಿದ್ದಾರೆ ? (ನಡದಾ. I, ೪೪೫). 'ತಂಗಳುತತ್ತ್ವಜ್ಞಾನ' ಪರಾ. **ತಂಗಟ್** : ೧. ತಂಗಟಲುತ್ತ, ಕದನ್ನಮಲುತ್ತ ಪೂರಣಗಡುಬುಂಟು (ರಾಮಾಶ್ವ. ೨೩-೨೨). **ತಂಗುಳು** : ೧. ಭಂಗಬಟ್ಟುಂಬ ಬಿಸಿಯನ್ನಕ್ಕಿಂತಲೂ ತಂಗುಳವೇ ಲೇಸು (ಸರ್ವಜ್ಞ. ೦೫೩೪). ೨. ಶೈತ್ಯವಾದ ಜಲಪಾನದಿಂದಲೂ, ತಂಗುಳು ಅನ್ನವನ್ನುಂಬುವುದರಿಂದಲೂ . . . ಬಿಕ್ಕುಳನ್ನುಂಟುಮಾಡುವುದು (ಸಕವೈ. ೨೪೧) : ಮುದುಕಿ ಬಲು ಬುದ್ಧಿವಂತೆ . . . ಅವನಿಗೆ ಬೆಚ್ಚಗಿ ತಂಗುಳು ಹಾಕಿದಳು (ಚಂದಾಮ್ಮ. ೫೬). **ತಂಗುಟ್** : 'ತಂಗುಟ್ದ್ದಿರಿಕ' ಪರಾ. **ತಂಗೂಳು** : ೧. ಬಿಸಿಗೂಡಿ ತಂಗೂಳುಣಬೇಡ (ಸರ್ವಜ್ಞ. ೨೦೧೧). ೨. ಮುಂಜಾವದಡಿಗೆ ಸಂಜೆಗಾಗಲೇ ತಂಗೂಳು (ನೆಲಮು. ೩೨-೧೪). **ತಂಗೂಟ್** : ೧. ಉಣಲಱಿಯಂ ತಂಗೂಟುಂ ಗುಣಮುಳ್ಳ ಗೃಹಸ್ಥನೆಂದೊಡಿಂ ತಪಸಿಗೆ ಪೇಟುಣಲಕ್ಕುಮೆ ತಂಗೂಟುಂ (ಸಮಯ. ೧೪-೬೪). **ತಣ್ಣೂಳ್** : ೧. ಇಪ್ಪ ಭೋಜನಮನುಂಡ ಮೈಸಿರಿಯೆತ್ತ ಖಳನ ಸೆಱೆವನೆಯ ತಣ್ಣೂಳೆತ್ತ (ಶ್ರೀರಾಮ. ೫-೮೫). [ ತಣ್$_2$ + ಕೂಟ್$_1$ ]

**ತಣ್ಗೆಸಱ್** (ನಾ). ತಣ್ಣನೆಯ ಕೆಸರು,-ಪಂಕ : ಜಿಗಿದು ಹಾಱಿದ ವಿಹಗೇಶನುಬ್ಬಟೆಗೆ . . . ಕೂರ್ಮನ ದೇಹ ಹುಗಿದುದು ತಣ್ಗೆಸಱೊಳಗೆ (ಮೋಹತ. ೩೬-೪೬). [ ತಣ್$_2$ + ಕೆಸಱ್ ]

**ತಣ್ಗೊಳ, ತಂಗೊಳ** (ನಾ). ತಂಪಾದ (ನೀರಿನ) ಕೊಳ : ತಣ್ಗೊಳದೊಳ್ವಿಜೃಂಭಿಪರಸಂಚೆ (ಉದ್ಭಟ. ೬-೪೩) ; ಬಿಸಿಲೊಳ್ ಬೇಗುದಿಗೊಂಡವಂ ತಣ್ಗೊಳನಂ ಪೊಕ್ಕಂತೆಯುಂ (ಕಬ್ಬಿಗಕಾ. ೩೨೦) ; ಚಂದ್ರಕಾಂತ ಕಲ್ಗಟ್ಟ ಸೋಪಾನ ತಣ್ಗೊಳದ ಮಧ್ಯದಲಿ . . . ವಿಮಾನಾಂಕನಿರ್ದನೋಲಗದಿ (ಮೋಹತ. ೫-೩೨) : ತಣ್ಗೊಳಂ ಕಱೆಕಾಲ್ವೆಳೆಗಳಿಲ್ಲದಿಳೆಯಿಲ್ಲ (ಜೈಮಿಧಾ. ೧೮-೧೩). **ತಂಗೊಳ** : ತಂಗೊಳದೊಳಾಡಿ ತೊಯ್ದು ಮನಂಗೊಳಿಪರ ಸಂಚೆಯಂತೆ (ಉದ್ಭಟ. ೪-೨೯) : ಉದಿಸಿತು ಘುಳುಘುಳು ಘುಳುಘುಳು ಧ್ವನಿ ತಂಗೊಳದೊಳು ತನುತಾಪದಿಂದೆ (ಮೋಹತ. ೯-೪೨) ; ಎಳನನೆತೀವಿ ತೋರ್ಪ ಮೊನೆಮಲ್ಲಿಗೆ ತಾವರೆ ತೀವಿ ತೋರ್ಪ ತಂಗೊಳಂ (ರಾಜಶೇ. ೨-೩೬). [ ತಣ್$_2$ + ಕೊಳ$_2$ ]

**ತಣ್ಗೊಳ್ಳು** (ಕ್ರಿ). ತಂಪಾಗು ; ಶೀತಲವಾಗು : ದಕ್ಷಿಣದಿಕ್ಕಿನಿಂದ ಮೃದು ಮಧುರವಾಗಿ ಬೀಸುತ್ತಿದ್ದ ತಣ್ಗೊಂಡ ಮಂದಮಾರುತದಿಂದ (ದೇವಿಶಾ. ೮೦). [ ತಣ್$_2$ + ಕೊಳ್ಳು$_1$ (<ಕೊಳ್$_1$) ]

**ತಣ್ಗೋಡು** (ಕ್ರಿ). ತುಂಬ ತಂಪಾಗು : ತಣ್ಣರಗದ ತಣ್ಗೋಡುವಾಲಿನೀರಂ ಆರ್ಪನಿತಂ ಕುಡಿದು (ಧರ್ಮಾಮೃ. ೧-೧೫೨). [ ತಣ್$_2$ + ಕೋಡು$_1$ ]

**ತಣ್ಸೊಡರ್** (ನಾ). ತಂಪಾದ ಬೆಳಕನ್ನು ಬೀರುವ ದೀಪ ; ಹಿತಕರವಾದ ದೀಪ : ಬೇಱದೊಂದು ಬಗೆಗಿಕ್ಕಿದ ಟಕ್ಕನೆ ಪಶ್ಯದೊಂದು ತಣ್ಸೊಡರೆ[ಪಾಠಾಂ. ಕಣ್ಸೊಡವೆ]ನೆ ನೋಟ್ಪ ನೋಟಕರ ಕಣ್ಗೊಳಗಾದುದು (ಶಂರಾಮಾ. ೩-೩೯) : ರನ್ನದ ತಣ್ಸೊಡರ್ ಮಳಯಜಂ ಕಸ್ತೂರಿ ಕಾಶ್ಮೀರಮೆಂಬಿವಱಿಂ ತಕ್ಕನೆ ತೀವಿ ಪೊಂಬರಿಯಣಂ ಚೆನ್ನಾದುದು (ಜಗವಿ. ೧೦-೯೮) ; ಎಳವೆಟ್ಟೆಯಂತೆ ಮಾಣಿಕದ ತಣ್ಸೊಡರಂತೆ . . . ತಳತ್ತಳಿಪಂಗಕಾಂತಿಯಂ ತಳೆದೆಸೆದಿರ್ಪ ಬಾಲಕನ ಮುಗ್ಧಮುಖೇಂದುವನಂದು ನೋಡಿ (ಪುಷ್ಪಪು. ೪-೩೮) ; ಮುಂಜೆರಂಗು ; ತಣ್ಸೊಡರ್ (ಕಮುದ. ೬೮ ಪ್ರಯೋ). [ ತಣ್$_2$ + ಸೊಡರ್ ]

**ತಣ್ಣಗಮ್ಮ** (ನಾ). ಶೀತಕರ ; ತಂಪನ್ನುಂಟು ಮಾಡುವವನಂ ; ಚಂದ್ರ: 'ತಣ್ಣಗಮ್ಮಂದಲೆಯ' ಪರಾ. [ ತಣ್$_2$ + ಕಮ್ಮ$_3$ ]

**ತಣ್ಣಗಮ್ಮಂದಲೆಯ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿರುವವನು; ಶಿವ : ತಣ್ಣಗಮ್ಮಂದಲೆಯ ನಿನ್ನನಿತ್ತುಂ ನಮಗೆ ಕನ್ನವಿತ್ತಂ (ಪ್ರಭುಲಿ. ೩-೧೧೨). [ ತಣ್ಣಗಮ್ಮ + ತಲೆ$_1$ + – ಅ$_7$ ]

**ತಣ್ಣಗೆ$_1$** (ನಾ). ತಂಪನ್ನು ಬೀರುವ ನಗೆ ; ಉಲ್ಲಾಸಕರವಾದ ನಗೆ ; ಸುಖ ತರುವ ನಗೆ : ಬಿಸಿನಗೆ ಯಾವುದು ತಣ್ಣಗೆ ಯಾವುದು ಹುಸಿನಗೆ ಮುಗುಳು ನಗೆಗಳು . . . ಎಂತಿಹುವೆಂದು ನಸುನಗುತವಳು ಪಾಡಿದಳು (ಭರಚ. ೧೧-೩೦). [ ತಣ್$_2$ + ನಗೆ ]

**ತಣ್ಣಗೆ₁, ಥಣ್ಣಗೆ** (ಅ). ೧. ತಂಪಾಗಿ; ಶೀತಲವಾಗಿ: ತಣ್ಣನೆ, ತಣ್ಣಗೆ, ನುಣ್ಣನೆ, ನುಣ್ಣಗೆ (ಶಬ್ದಾನು. ೪೯ ಪ್ರಯೋ); ತಣ್ಣಗೆ ಮೊಸರಲ್ಲಿ ಬೆಣ್ಣೆ ಮುದ್ದೆಯಹಾಗೆ ಕಣ್ಣಗೆ ಕಾಣುವ ಹುಣ್ಣಿಮೆಚಂದ್ರನ (ಕಎಪು. ೮-೪). ೨. ಸುಖವಾಗಿ; ಹಾಯಾಗಿ; ಸಂತುಷ್ಟವಾಗಿ; ಕ್ಷೇಮವಾಗಿ: ಹೋದವರು ಹೋಗಲಾಗಿ ಇರುವವರನ್ನು ತಣ್ಣಗೆ ಕಾಪಾಡಿಕೊಂಡು ಬಾ ಸ್ವಾಮಿ (ಎಸಮ್ಮ. XII. ೧೧ ಅಡಿಟಿ): ಆ ಮಹಾತಾಯಿ ನಮ್ಮ ಮಹಾರಾಜರ ಮನೆತನವನ್ನು ತಣ್ಣಗೆ ಇಟ್ಟಿರಲಿ (ಕಳಹು. ೯೮). ೩. ಶಾಂತವಾಗಿ: ಹಣ್ಣನ ಪುಣ್ಯದೇವತೆ ಪಂಪಾದೇವಿ ತಣ್ಣಗಿರ್ದಡೆ ಸಾಕವಳು ಕಣ್ಣ ಬೇಡಿದರಿತ್ತಪಳು (ಕುಡಾಸಾಂ. ೨೩-೪೮): ತಾಯಿಹೊಟ್ಟೆ ತಣ್ಣಗ ಮಾಡುವ ಸೀರೆಗಳನ್ನಪ್ಪು ಉಡಿಸಿ ಕಳಿಸಿದರೆ ಪಾರಾಪನೆಂದು ಕಲ್ಲಪ್ಪ . . . ಓಡಾಡುತ್ತಿದ್ದಾನೆ (ಅಕೋಕ. ೧೪). ೪. ತೆಪ್ಪಗೆ; ಕೆಲಸಮಾಡದೆ; ನಿಶ್ಚಿಂತೆಯಾಗಿ: ನಿಷ್ಕ್ರಿಯವಾಗಿ: ತಣ್ಣಗಿದ್ದರೆ ಮಣ್ಣಾದರೂ ಅಸಾಧ್ಯ (ಗಾದೆ): ಏನಾದರೂ ಕೆಲಸ ಮಾಡು ಯಾಕೆ ತಣ್ಣಗೆ ಕುಳಿತಿರುವೆ? (ರೂಢಿ). **ಥಣ್ಣಗೆ**: ೨. ನಂಮ್ಯಾಲೆ ವಿಶ್ವಾಸಿಟ್ಟು ಥಣ್ಣಗೆ ಕೂಡು ಅಂತ (ಅಶ್ವಮೇ. ೧೧೧); ಊರ ಥಣ್ಣಗ ಇರಲಿ ಅಂತ (ನಿಸರ್ಗ. ೧೫೪); ಊರ ಥಣ್ಣಗ ಇರತದ (ಗ್ರಾಮಾಯ. ೯೪).

**ತಣ್ಣಗಾಗು**=೧. ಕಾವು ಕಳೆದುಕೊಳ್ಳು; ತಂಪಾಗು; ಉಷ್ಣವಳಿ: ಪುತಾಪದೊಳಗೆ ನಂದಿ ಮಿಗೆ ಕುಂದಿ ರವಿ ತಣ್ಣಗಾದನೆನೆ (ಜೈಮಿಥಾ. ೨೮-೫): ಮುಟ್ಟಿದರೆ ಮೈ ತಣ್ಣಗಾಗತೊಡಗಿತ್ತು (ಕಾಲ.೨ರ. ೧೭, ಕಥಾಸಾರ). ೨. (ಬೆಂಕಿ, ದೀಪ ಮೊದಲಾದುವು) ನಂದಿ ಹೋಗು; ಆರಿ ಹೋಗು: ಆ ಜ್ವಾಲೆಯು . . . ಜಾಜ್ವಲ್ಯಮಾನವಾಗಿ ನಿಲ್ಲದೆ ಉರಿದು ತಣ್ಣಗಾಯಿತು (ವಾರಾಕ್ಕ. ೨೭). ೩. ಅಡಗು; ಇಲ್ಲದಂತಾಗು: ಅದನ್ನು ನೋಡಿದ ಮೇಲೆ ಉತ್ಸಾಹವೆಲ್ಲ ತಣ್ಣಗಾಯಿತು (ದ್ರಾವಿವಿ. ೧೯೩): ಮಹಡಿಯ ಮೇಲೆ ಗದ್ದಲ ಮತ್ತೆ ತಣ್ಣಗಾಯಿತು (ಪುನರು. ೨೦೯). ೪. ನಿಷ್ಕ್ರಿಯವಾಗು; ಸುಮ್ಮನಾಗು: ಅಲ್ಲಿನ ಸುತ್ತಮುತ್ತಣ ಗಿರಿಚರರು, ವನಚರರು ತಣ್ಣಗಾದರು (ರಾಜಸೂ. ೩೭): ಗುಣಗಳನು ತಾವೆಣಿಸಲಾರದೆ ದಣಿದು ಶ್ರುತಿಗಳು ತಣ್ಣಗಾದವು (ರಘುವಂ. ೧೧-೩೩). ೫. ಸಮಾಧಾನ ಗೊಳ್ಳು; ನೆಮ್ಮದಿಗೊಳ್ಳು; ಶಾಂತವಾಗು: ನಾಲ್ಕು ಸೂತ್ರ ಓದಿ ಅರ್ಥಮಾಡಿಕೊಳ್ಳುವುದರೊಳಗೆ ಮನಸ್ಸು ತಣ್ಣಗಾಗುತ್ತೆ (ಹೊಸಕ್ಕ. ೧೭೪). ೬. ಸಾಯು; ಮರಣಹೊಂದು: ರೋಗಿಗಳೂ ನಿರೋಗಿಗಳೂ ತಣ್ಣಗಾಗುವ ಹೊತ್ತು ಬಂದಂತೆಯೇ (ಸ್ಮಶಿಚಿ. ೩೦೧). **ತಣ್ಣಗಿರು** = ೧. ತಂಪಾಗಿರು: ಬೇಸಿಗೆಯಲ್ಲಿ ಮರದ ನೆರಳು ತಣ್ಣಗಿರುತ್ತದೆ (ರೂಢಿ). ೨. ಹಾಯಾಗಿರು: ಸುಖವಾಗಿರು: ದುಡಿವ ಬಡವನ ಹೊಟ್ಟೆ ತಣ್ಣಗಿರಲಿ (ನೆಲಮು. ೨೦-೨೨). ೩. ತೆಪ್ಪಗೆ ಇರು; ಸುಮ್ಮನಿರು: ಯಾವುದಕ್ಕೂ ಉತ್ತರ ಕೊಡದೆ ತಣ್ಣಗೆ ಇದ್ದರೆ ಆಯಿತೆ? (ರೂಢಿ). **ತಣ್ಣಗೆ ತಣೆ** = ಚೆನ್ನಾಗಿ ತೃಪ್ತಿಯನ್ನು ಹೊಂದು; ಸಂಪೂರ್ಣವಾಗಿ ತಣೆ: ಧೂಪದ ಕವಲ್ವೊಗೆಯೊಳ್ ತನಿಗಂಪನುಂಡು ತಣ್ಣಗೆ [ಪಾಠಾಂ. ನೆ]ತಣದೊಯ್ಯನೊಯ್ಯನಿದಿರುಂ ಬಟಾಯುಂ ನೆಗೆಯುತ್ತಮಿರ್ಪ ತುಂಬಿಗಳ್ (ಶಂಪಾಮಾ. ೩-೭೭). 'ತಣ್ಣನೆ' ಪರಾ. [ತಣ್₂ + – ಅಗೆ₃]

**ತಣ್ಣನೆ, ಥಣ್ಣನೆ** (ಅ). ೧. ತಂಪಾಗಿ; ಶೀತಲವಾಗಿ; ತಣ್ಣಗೆ: ತಿಂಗಳ ತಣ್ಣನಪ್ಪ ಕದಿರ್ದೊಂಗಲೊಳಭ್ಯಸಿಸಿತ್ತೊ ಕಾಮಬಾಣಂಗಳೊಳಾದ ಮೋದಿದುದೊ . . . ಮೋಹನಮನಗ್ಗಳ ನಿನ್ನಯ ವಾಕ್ಪ್ರಗುಂಭನಂ (ಚಂದ್ರಪು. ೧-೫೯): ತಣ್ಣನೆ ತೀಡಿತ್ತನಸುಂ ಪ್ರಭಾತಸಮಯಪ್ರೋದ್ಭೂತ ಶೀತಾನಿಲಂ (ಕುಸುಮಾ. ೧-೫೨): ಸುಣ್ಣವೆಲ್ಲಂ ತಣ್ಣನಾಗೆ (ವಾಗೀರ. ದೀ. ೩೭೭-೧೪); ತಣ್ಣನೆ, ತಣ್ಣಗೆ, ನುಣ್ಣನೆ, ನುಣ್ಣಗೆ (ಶಬ್ದಾನು. ೪೯ ಪ್ರಯೋ). ೨. ಸುಖವಾಗಿ; ಹಾಯಾಗಿ: ತಣ್ಣನೆ ಲೇಸಾಗಿ ಮಿದದಿನುಣ್ಬರ ಬಾಯೊಳ್ ತಿಣ್ಣನೆ ಕಿರ್ಚಂ ಪುಡಿಯುಂ ಮಣ್ಣಂ ಪೊಯ್ದು[illegible] ದೂರ್ತಿಂದಂ (ಧರ್ಮಾಮೃ. ೯-೧೩೭); ಎನ್ನಯ ಪಳ್ಳಿಗೆಯಿಂತಂದು [illegible] (ಬಸಪು. ೧೮-೧೭); ಭಕ್ತಿಯ ತಿಣ್ಣದಿಂ ತಲೆವಾಗಿ [illegible] ನಾಂತು ಮಗುಳ್ದು ಪುರದೊಳು ಸುಖದೊಳಿರುತಿರ್ದ [illegible] ೩. ಶಾಂತವಾಗಿ: ಅನುದ್ವಿಗ್ನವಾಗಿ: ಸಾವಿರ [illegible] ಕಡಿವ ಯಾತನೆಯು ಸಿಲುಬೆಯಮೇಲುರಿಯು ತಣ್ಣನೆ ತಳೆದು (ಗೂಲಿಕ್ರಿಧಾ. ೧೨-೨೯೭). **ಥಣ್ಣನೆ**: ೧. ಮುಳುಗಿ ಥಣ್ಣನೆ ತಣಿದು ನಿಂದನು (ಫಣಿಪ. ೪-೪೧). ೨. ನೀವು ಥಣ್ಣನೆ ಸಿರಿ ಸಹಿತ ಮೃದು ಪಾವಿನಂಕವಲೊಜಿಗುತ {ಗಲು}ವರನು ದೇವಕಾರ್ಯಕೆ ತಂದೆವಾತ್ಮಜನೆಂಬ ಸಲುಗೆಯಲಿ (ನಿಥಾಗ. ೧೧-೧೧-೩೭).

**ತಣ್ಣತಣ್ಣನೆ, ತಣ್ಣನೆತಣ್ಣನೆ** (ದ್ವಿರುಕ್ತಿ): ಅವ್ಯಯ ಪದಾಂತ ಲೋಪಕ್ಕೆ– ಕಮ್ಮಕಮ್ಮನೆ, ತಣ್ಣತಣ್ಣನೆ (ಶಮದ. ೧೯೩ ಪ್ರಯೋ): ಕೋಪದಿ ದಿರೊಳೊರ್ವಾನಳಂ ತಣ್ಣತಣ್ಣನೆ (ಜಕ್ಕಣ. ೧-೪೧): ಮಾವಿನ ಸೊನೆದಂದಲೊಳ್ ನೆನೆದು ತಣ್ಣನೆ ತಣ್ಣನೆ ಬಂದುದಂದು . . . ಮಾರುತಂ (ಶಬ್ದಾನು. ೯೪ ಪ್ರಯೋ). **ತಣ್ಣನೆ ತಣಿ, ದಣ್ಣನೆ ದಣಿ**=ಸಂಪೂರ್ಣವಾಗಿ ತೃಪ್ತಿಯನ್ನು ಹೊಂದಂ: ನಾಳಿಕೇರೀಫಳಾಮೃತಾಸ್ವಾದದೆ ತಣ್ಣನೆ ತಣಿದು (ಆದಿಪು. ೧೧-೬೧): ಕಣ್ ತಣ್ಣನೆ ತಣಿವಿನಮೊಲ್ದು ನೋಡಿ (ಸಮಪು. ೧-೧೧೪); ತಣ್ಣನೆ ತಣಿದಿರೆ ಬನದೊಳ್ ಪಣ್ಣನೆ ತಿನುತಿರ್ಪುವೆಳಸಿ ತರುಚರಕುಳಮುಂ (ಕಾವ್ಯಾವ. ೨೨೨); ನಡುಹರೆಯದಿಂದೆಸೆವ ಸಿರಿಯ ನಡೆನೋಡಿ ದಣ್ಣನೆ ದಣಿವ ಕಾಲದೊಳು (ಭಾಪಚಂ. ೯-೧೫). **ತಣ್ಣನೆಯವನು** = ತಂಪಾಗಿರುವವನು; ಚಂದ್ರ: ಬಂದನು ಸೋಮನು ಸೊದೆವನಿ ಸೋನೆಯ ಸಿಂಚಿಸಿ ತಣ್ಣನೆಯವನು (ಇಂಪಾಪ. ೧೧೧-೫೮). [ತಣ್₂ + – ಅನೆ₁]

**ತಣ್ಣನೆಯ, ತಣ್ಣನ್ನ** (ಗು). ೧. ತಂಪಾದ; ತಣ್ಣಗೆ ಇರುವ: ತಣ್ಣನೆಯ ಗಾಳಿ ಬೀಸುತ್ತಿದೆ (ರೂಢಿ). ೨. ಪ್ರಶಾಂತವಾದ: ಗಿಡಮರಗಳು, ಹುಲ್ಲು, ತೂಳಿದ ಪಸಿರುಬಣ್ಣವಾಗಿ ತಣ್ಣನೆಯ ನಗು ನಗುತ್ತಿವೆ (ಚಿಕಂಜಾ. ೧). **ತಣ್ಣನ್ನ**: ೧. "ತಣ್ಪೆಲರು – ತಣ್ಣನ್ನ ಉಸುಬು" (ಗಂಗಾಮ. ೧೪೭). [ತಣ್₂ + – ಅನೆಯ₂]

**ತಣ್ಣನ್ನ** 'ತಣ್ಣನೆಯ' ನೋ.

**ತಣ್ಣಲೆ** (ಕ್ರಿ). ತಂಪನ್ನುಂಟುಮಾಡು; ತಂಪನ್ನು ಹರಡು: ತಣ್ಣ[ಪಾಠಾಂ. ಣ್ಣ]ಲೆವ ಕೊಳಕ್ಕೆವಂದಮಳಿನಂ ಪುಳಿನಂ ನಳಿನಂ ನಿಜಾರ್ತಿಯುಂ ನೆಲೆವಿದಿ[ಪಾಠಾಂ. ಗೆಲೆವಡೆ]ಯಲ್ ಬಳಿಕ್ಕವಳಟಲ್ದು ಬಬಲ್ದು ತೊಬಲ್ದು ಜಾನಿಪಳ್ (ಜಗವಿ. ೧೧-೨೩): ಅವಳ ಬಿಸುಸುಯ್ಯ ಬೆಂಕೆಯೊಳ್ ಬೆರಸಿದನಿತಟೊಳೆ ತಣ್ಣ[ಪಾಠಾಂ. ಣ್ಣ]ಲೆವ ತೆಂಗಾಳಿಯುಂ ನಂಜಿನ ಧಾಳಿಯೆನಿಸಿ (ವರ್ಧಪು. ೪-೫೮ ವ): ಅಲರ್ವಂಡು ಮೊಗೆದು ತಳಿಯುತಿರೆ ತಣ್ಣಲರ್ಕಲದ ಪರಿಕಾಲ್ಗಳಿಂ ತಣ್ಣ[ಪಾಠಾಂ. ಣ್ಣ]ಲೆವೆಳಪಸಲೆಗಳನೆಳಸಿ ಸುಟಿವೆಳೆಯವಳ (ವರ್ಧಪು. ೪-೭೫). 'ತಣ್ಮಲೆ' ಪರಾ. [ತಣ್₂ + ಅಲೆ₁]

**ತಣ್ಣಲೆಯಿಸು** (ಕ್ರಿ). ತಣಿಸು; ತಂಪನ್ನುಂಟುಮಾಡು: ನಿಜಕೀರ್ತಿ ಬಂಧುರ ಸುಧಾವರ್ಷದಿಂ ಧರೆಯ ತಣ್ಣಲ{ಲೆ}ಯಿಸಿದನಾ ದೀಳಪಂ (ಕುಮುರಾ. ೧-೭೪). [ತಣ್ಣಲೆ + – ಇಸು₃]

**ತಣ್ಣಸ, ತಣ್ಣಸು** (ನಾ). ೧. ತಂಪು; ಶೈತ್ಯ: "ತಣ್ಣಸಮೆನೆ ಶೈತ್ಯಂ" (ದಶುನಿ. ೨೮); ಅರಲ್ದನೇಕ ಕೋಕನದವನಂಗಳೊಳ್ ಸುಟಿದು ತಣ್ಣ[ಪಾಠಾಂ. ಸ್ನೆ]ಸಮಾಗದೆ ಕೂಡೆ ಬಂದ ಮಾವಿನಪೊಸಪೂವಿನೊಳ್ ಪೊರೆದ ಪೊಣ್ಮದ[ಕ]ಂಪು ಮೊಗಂಗಳಂ ಚಳಿಲ್ಲನೆ ಕೊಳೆ ಪೊಯ್ಯೆ ತೀಡಿ[illegible] ತೆಂಕಣಗಾಳಿ ವಸಂತಮಾಸದೊಳ್ (ಪಂಪಭಾ. [illegible]) [illegible] ಬಾನಲ ತಣ್ಣಸದೊಳ್ ಪಗಿಲ್ತು ಪಾವಸೆಗೊಳೆ ಕಾರ ತಂಪಲೊಳಗ[illegible] ಯಾಗಿರೆ ನಟ್ಟು ಸೋರ್ವ ಪಾಳ್ಪಸದಿ[illegible]

(ಶಾಂತಿಪು. ೮-೮೮) ; ಸೊಗಯಿಸುವ ಸಕ್ಕರೆಗಳೆಳನೀರ ಕಾಯಿದಿಳುಂಪ ತಣ್ಣಸವಾದ ತಾಣದೊಳಗಿರಿಸಿ (ಸೂಶಬ. ೨-೩೧) : ಬೆಂಗೆ ತಣ್ಣಸಮೋಱಲೆಚ್ಚತ್ತು (ಹಲಪು. ೪೬-೨೨) ; ರೋಷಾಗ್ನಿ ಕರ್ಣನ ಸಿರಿಮೊಗಮುಂ ನೋಡಿದ ಮಾತ್ರದೊಳೆ ತಣ್ಣಸಮನೊಂದಿ ನಲ್ಮೆಯುಂಟಾಗುವುದು (ಭಾರಶಾಂ. ೧-೬). ೨. ಒದ್ದೆ; ಆರ್ದ್ರವಾದುದು : 'ತಣ್ಣಸಗೊಳ್', 'ತಣ್ಣಸವಸ್ತ್ರ' ಪರಾ. ೩. ತೃಪ್ತಿ ; ಸಮಾಧಾನ; ಸಂತುಷ್ಟಿ : ಪೂರ್ಣಿಮೆಯಾದುದು ಮುಖಚಂದ್ರಮಂಡಲ ತಣ್ಣಸವೆದೆಯೊಳಾದರಿಸೆ ಕಣ್ಣಱ್ಱ ಯುದೊಡೇನು ಕರುಳ್ಪಲ್ಲುದೆಂಬಂತೆ ಚಿಣ್ಣನ ತಾಯಿ ನೋಡಿದಳು (ಮೋಹತ. ೧೩-೨೫) : ಹಣ್ಣಿದುತ್ಸಾಹಮಂ ಕೇಳ್ದು ತನ್ನೊಡಲೊಳಗೆ ತಣ್ಣಸಂ ತಳ್ತು ಬಹ ನಿನ್ನ ನಿಜಮಾತೆಯಂ ಕಣ್ಣಾರೆ ಕಾಣ್ಬೆನೆಂತು (ಜೈಮಿಥಾ. ೧೩-೫೭). **ತಣ್ಣಸು** : ೧. 'ತಣ್ಣಸುವುಟ್ಟು' ಪರಾ. ೨. ಚಮರೀಮೃಗಂಗಳ ಸಾರಣೆಯೊತ್ತುಗೊಂಡು ನೆಲನ ತಣ್ಣಸಾಱ ತಮ್ಮ ಮೊಗದ ಸರೆನವಿರಿನುರ್ದುತೆ **ಪೋಪ** ಗಂಡುಗರಡಿಗಳಿಂ (ರಾಮಾಶ್ವ.೪೩-೨೬). [<ತಣ್$_2$./ತುಳು.ತಣಸ್, ತನಸ್]

**ತಣ್ಣಸಂದೋರು** 'ತಣ್ಣಸಂದೋೞು' ನೋ.

**ತಣ್ಣಸಂದೋೞು,** ತಣ್ಣಸಂದೋರು, ತಣ್ಣಸದೋೞು (ಕ್ರಿ). ತಂಪುಂಟಾಗು ; ಶೀತವಾಗು : ಮೈಗಳ್ಗೆ ತಣ್ಣಸಂದೋ[ಪಾಠಾಂ. ತೋ] ಜಲಾ ಕೊಳದಿಂದೆ ಪೊಱಮಟ್ಟರು (ಜೈಮಿಥಾ. ೩೦-೧೨). **ತಣ್ಣಸಂದೋರು:** ಮೈಯಲ್ಲ ತಣ್ಣಸಂದೋರಿ ಮತಿಗೆಟ್ಟು ಕಾರುವುದುಂ (ಸಕವೈ. ೧೪೯). **ತಣ್ಣಸದೋೞು** : ಒಸರಲಾ ತಂಗಲ್ಲು ಕರಗದ ಜಲ ತಣ್ಣಸದೋೞೆ ಶ್ರಮವಡಗಿವುದು (ಕಂನವಿ. ೬-೭೬). [ತಣ್ಣಸ + ತೋೞು]

**ತಣ್ಣಸಂಬಡೆ** (ಕ್ರಿ). ತಂಪಾಗು ; ಶೈತ್ಯವನ್ನು ಹೊಂದು : ಹಿಮದಿಂದೆ ತಣ್ಣಸಂಬಡೆದಿರ್ದ ಮಾಗಿಯುಂ ಕ್ರಮದಿಂದೆ ಜಾಱಿಸಿ (ಜೈಮಿಥಾ. ೩೦-೧೬).
[ತಣ್ಣಸ + ಪಡೆ$_1$]

**ತಣ್ಣಸಗಯ್** 'ತಣ್ಣಸಗೆಯ್' ನೋ.

**ತಣ್ಣಸಗಯ್ಯ** 'ತಣ್ಣಸಗೆಯ್ಯ' ನೋ.

**ತಣ್ಣಸಗೆಯ್,** ತಣ್ಣಸಗಯ್ (ನಾ). ತಂಪಾದ ಕಿರಣ ; ಶೀತಲವಾದ ಕಿರಣ : 'ತಣ್ಣಸಗೆಯ್ಯ' ಪರಾ. **ತಣ್ಣಸಗಯ್** : 'ತಣ್ಣಸಗಯ್ಯ' ಪರಾ. [ತಣ್ಣಸ + ಕೆಯ್$_2$]

**ತಣ್ಣಸಗೆಯ್ಯ,** ತಣ್ಣಸಗಯ್ಯ (ನಾ). ತಂಪಾದ ಕಿರಣಗಳುಳ್ಳವನು ; ಚಂದ್ರ : 'ತಣ್ಣಸಗೆಯ್ಯವಟ್ಟು' ಪರಾ. **ತಣ್ಣಸಗಯ್ಯ** : ಬಿಸುಗಯ್ಯಂ [ಪಾಠಾಂ. ಮ್ಮಂ]ತಣ್ಣಸಗಯ್ಯಂ[ಪಾಠಾಂ. ಮ್ಮಂ]ಪೊಸ ಕಿಸುಬಿಸುಮಯ್ಯಂ ಕಣ್ಣಾದಂ (ಉದ್ಭದೇ. ೧-೨). [ತಣ್ಣಸಗೆಯ್ + - ಅ$_7$]

**ತಣ್ಣಸಗೆಯ್ಯವಟ್ಟು** (ನಾ). ಚಂದ್ರಬಿಂಬ; ಚಂದ್ರಮಂಡಲ: ತಣ್ಣಸಗೆಯ್ಯ ವಟ್ಟನವಮರ್ದಾನನವೇಳಿಸೆ . . . ನಡೆದಪುರ್ಳಿಂದಿಯರ್ (ಉದ್ಭಟ. ೨-೬೩).
[ತಣ್ಣಸಗೆಯ್ಯ + ಬಟ್ಟು$_1$ (<ಬಟ್ಟ$_1$)]

**ತಣ್ಣಸಗೊಳ್,** ತಣ್ಣಸುಗೊಳ್ (ಕ್ರಿ). ೧. ತಣ್ಣಗಾಗು : ತಂಪಾಗು. ೨. ಒದ್ದೆಯಾಗು ; ತೇವವಾಗು : ಒಸರ್ವ ಬೆರಲ ಬೆಮರ್ವನಿಯಿಂ ತಣ್ಣಸಗೊಂಡ ತಂತಿಗಳನಾಱಿಸುವರ್ ಬಿಸುಸುಯ್ದು ಕಿನ್ನರರ್ ಬೀಣೆಗಳಂ (ಲೀಲಾವ. ೯-೩೧). **ತಣ್ಣಸುಗೊಳ್** : ೧. ಇನಶಶಿಗಳ್ ಬೆಳಗದಿರೆ ಕಿಚ್ಚು ತಣ್ಣಸುಗೊಳೆ (ಪುಣ್ಯಾಸ್ರ. ೮-೪೯). [ತಣ್ಣಸ + ಕೊಳ್$_1$]

**ತಣ್ಣಸದಳೆ** (ಕ್ರಿ). = ತಣ್ಣಸಂಬಡೆ : ಪುಳಕಾಂಬುವಿನಿಂದ ತನುಲತೆ ತಣ್ಣಸದಳೆಯೆ ನಿದ್ರಾಂಗನೆ ಸರಿಯೆ (ಕಂನವಿ. ೯-೧೯೭). [ತಣ್ಣಸ + ತಳೆ$_1$]

**ತಣ್ಣಸದೋೞು** 'ತಣ್ಣಸಂದೋೞು' ನೋ.

**ತಣ್ಣಸವಸ್ತ್ರ** (ನಾ). ಒದ್ದೆಬಟ್ಟೆ ; ನೆನೆದ ವಸ್ತ್ರ : ಕಳೆದು ತಣ್ಣಸವಸ್ತ್ರಗಳ ಚೀನಾಂಬರಗಳನುಟ್ಟು ಸತಿಯರೊಪ್ಪಿದರು (ಕಂನವಿ. ೨೫-೧೩೪).
[ತಣ್ಣಸ + ವಸ್ತ್ರ]

**ತಣ್ಣಸವಿಡಿ** (ಕ್ರಿ). ತಂಪು ಹಿಡಿ; ತಣ್ಣಗಾಗು : ಒಡನಾಗ ಜಲಕೇಳಿಯೊಳಗೆ ಮೈ ತಣ್ಣಸವಿಡಿಯಲು ಭರದೊಳಗೈದಿ ತಡಿವಟ್ಟಿ . . . ಒಪ್ಪಿದರು ಚಲುವೆಯರು (ಕಂನವಿ. ೨೫-೧೩೧). [ತಣ್ಣಸ + ಹಿಡಿ$_1$]

**ತಣ್ಣಸವೆಱು** (ಕ್ರಿ). = ತಣ್ಣಸಂಬಡೆ : ಉಡುವಸನಂಗಳು ತೋಯ್ದು . . . ಕುಡಿತೆಗಣ್ಣಬಲೆಯರುಗಳು ತಣ್ಣಸವೆತ್ತು ನಡುಗಿದರ್ (ಮೋಹತ. ೧೪-೩೧). [ತಣ್ಣಸ + ಪೆಱು$_1$]

**ತಣ್ಣಸಿಗ** (ನಾ). ೧. ತಂಪಾದವನು. ೨. ಜಡಸ್ವಭಾವದವನು; ಆಲಸ್ಯಸ್ವಭಾವದವನು; ಆಲಸಿಗ: ನ ಶೀತಲಃ–ತಣ್ಣಸಿಗನಲ್ಲದೊಂ (ಆಲಸ್ಯನು) (ನೀತಿವಾ. ೧೦-೩೩). [ತಣ್ಣಸ + - ಇಗ]

**ತಣ್ಣಸು** 'ತಣ್ಣಸ' ನೋ.

**ತಣ್ಣಸುಗೊಳ್** 'ತಣ್ಣಸಗೊಳ್' ನೋ.

**ತಣ್ಣಸುವುಟ್ಟು** (ಕ್ರಿ). ತಂಪುಂಟಾಗು ; ಶೈತ್ಯ ಒದಗು : ತಣ್ಣಸುವುಟ್ಟಿ ಬೆಟ್ಟವೇಸಗೆಯ ಬಿಸಿಲ್ಗೆ ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ (ಶಂರಾಮಾ. ೭-೧೩೯). [ತಣ್ಣಸು (<ತಣ್ಣಸ) + ಪುಟ್ಟು$_1$]

**ತಣ್ಣೆ,** ಥಣ್ಣೆ (ನಾ). ನೀರು ; ಜಲ: ನೊಂದು ಬಾಯಾಱಿ ತಣ್ಣೀರ್ ತಣ್ಣೆ[ಪಾಠಾಂ. ಣ್ಣಿಯೆ]ಏನುತಮಿರೆ (ಚಂಡೀರ. ದೇ. ೩೫೦-೧೬). **ಥಣ್ಣೆ**: ಥಣ್ಣೆಯೊಳಗೆ ಮುಳುಗಿದರೇನು (ಚಿದಾವ. ೦೪೯-೧).
[ದೇ.; ತಮಿ. ಮಲ. ತಣ್ಣ]

**ತಣ್ಣೆತು** 'ತಣ್ಣೆತ್ತು' ನೋ.

**ತಣ್ಣೆತ್ತು,** ತಣ್ಣೆತು (ನಾ). ೧. ತಂಪಾದುದು; ತಂಪು; ಶೈತ್ಯ : "ತಣ್ಣೆತ್ತು ಶೈತ್ಯಮಕ್ಕುಂ" (ಕಶಬ. ೪೩). (ಗು). ೨. ತಂಪಾದ ; ತಣ್ಣನೆಯ ; ಶೀತಲವಾದ : ಕೂರಿತ್ತು; ಉದ್ದಿತ್ತು; ನುಣ್ಣಿತ್ತು; ತಣ್ಣಿತ್ತು; ಬಿಣ್ಣಿತ್ತು (ಶಮದ. ೭೭ ಪ್ರಯೋ). **ತಣ್ಣೆತು** : ೧. "ಕೋದುಂ ಕೊಟ್ಟಮುಂ ತಣ್ಣೆತೆಂದುಂ ಶೈತ್ಯಕ್ಕೆ ನಾಮಂ" (ಕಬ್ಬಿಕೈ. ೨೨) : "ಕುಳಿರು ತಣ್ಣೆತು ಕೋದು ಕೊಟ್ಟಮಿಂತಿವು ಶೈತ್ಯಕಳವಟ್ಟ ನಾಮವಕ್ಕುಂ" (ಶಬ್ದಮಂ. ೩೭) : ವಡಬಶಿಖಿ ತಣ್ಣತನೆ ಕೋಪವಮಂ ತಾಳುವರು (ಸಿದ್ಧರಾ. ೧-೨೦): ಉರಿವ ಬೆಂಕಿಯು ತಣ್ಣತಾಗಲಿ (ರಾಮಾಸಂ. ೫-೪-೨೬).

**ತಣ್ಣಿದುವು** (ಬಹುವ) : ಚಂದ್ರಕರಂಗಳಿಂದು ತಣ್ಣಿದುವೆರ್ದೆಗಕ್ಕೆ (ಪಂಪಭಾ. ೫-೧೮). **ತಣ್ಣಿದಂ, ತಣ್ಣಿದೊಂ** = ತಣ್ಣಗೆ ಇರುವವನು ; ತಂಪಾದವನು : ಖರಕರನುಷ್ಣಮಂ ತೊಱೆದು ತಣ್ಣಿದನಪ್ಪೊಡಮಿಂದು ತಣ್ಪನಚ್ಚರಿಯೆನೆ ಬಿಟ್ಟು ತೀವ್ರಕರನಪ್ಪೊಡಂ (ಧರ್ಮಾಮೃ. ೫-೧೯೮) : ಅತಿದೀಪ್ತಿಬೋಧಮಯನಾಗಿ ತಣ್ಣಿದೊಂ ಜನನಿಯುದರದೊಳ್ ರತ್ನಸ್ತ್ರೀ ಪ್ರತಿಕೃತಿಯೊಳರ್ಕಬಿಂಬ ಪ್ರತಿಬಿಂಬಂ ನೆಲಸಿ ಪೀಡೆಯಂ ಮಾಡುಗುಮೇ (ಶಾಂತಿಪು.೯-೨೧೪). **ತಣ್ಣಿದಯಾಗು**=ತಂಪಾದವನಾಗು: ಮೆಚ್ಚಿ ಬರವನಗ್ನಿದೇವಂ ಬೇಡಿಕೊಳ್ವೆಮೆಂದೊಡಮ್ಮನ್ವಯಕ್ಕೆ ನೀನ್ ತಣ್ಣಿದಯಾಗೆಂದು ಬೇಡುವುದುಂ (ಪಂಪಭಾ. ೫-೧೦೦ ವ).
[<ತಣ್$_2$]

**ತಣ್ಣೆರ್ಪದಲೆ** (ನಾ). ಒಂದು ಪ್ರದೇಶದ ಹೆಸರು : ಅನ್ತೆ ಬಂದು ತಣ್ಣೆರ್ಪದಲೆಯ ಪುಣುಸೆಯ ವಾಯುವ್ಯನಾ ದೆಸೆಗೆ ಸೀಮೆನೊಕ್ಕಿ ಯೊಟ್ಟೆಯೆ (ಎಕ. IX (S), ಬೆಂಗಳೂ. ೧೫೦-೪೨ ; 828). [ ? ]

**ತಣ್ಣಸು** 'ತಣಸು$_1$' ನೋ.

**ತಣ್ಣೞ್** (ಕ್ರಿ). (ತೆಳ್ಳಗಾಗುವಂತೆ) ಒತ್ತು (?) : ನುಣ್ಣನೆಯ ಹಿಟ್ಟನಂ ಗಯ್ಯ ಸರಿದಟ್ಟದೊಳು ತಣ್ಣೞ್ದು[ಪಾಠಾಂ. ತಣಿದು]ಮಡಗಿಯಮ್ಮೆಯ ಬೆಣ್ಣೆಯಂ ಕಾಸಿ ಬೇಯಿಸೆ ಸಮುದ್ರಫೇನ (ಸೂಶಬ. ೧-೨೩). "ತಟ್ಟು" (ಸೂಶಬ. ಟೀಕ). 'ಲತೆಯಿೞ್' ಪರಾ. [ P ಇದು 'ಸಣ್ಣೞ್' ಎಂಬುದರ ಅಪಲಿಖಿತವಿರಬಹುದು ]

**ತಣ್ಣೀರ್**, ತಣ್ಣೀರು (ನಾ). (ತಂಪಾದ) ನೀರು : ಮುನ್ನೀರ್ ಬೆನ್ನೀರೆನೆ ಬೆರಸಲಣ್ಣ ತಣ್ಣೀರೊಳವೇ (ಪಂಪಾಭಾ. ೯-೯೨) ; ತಣ್ಣೆಲ್, ತಣ್ಣೀರ್ (ಭಾಷಾಭೂ. ೧೧೪ ಉದಾ) : ತಣ್ಣೀರ ಕಣಿಕೆಯು ಹೊತ್ತು (ಗುಪ್ತಮಂ. ೧೫-೧೮೭). **ತಣ್ಣೀರು** : ತನಿವಾಲೊಳುಕ್ಕರಿಸಿದಕ್ಕಿ ತಣ್ಣೀರೊಳಗೆ ನೆನೆದಕ್ಕಿ ಯಿವನು ಸರಿಗೂಡಿ ಹಾಲೊಳಗರೆದು (ಸೂ ಪ ಶಾ. ೧-೬೧) : ತಣ್ಣೀರು ಬೇಸಿಗ್ಗೆ ಗುಣ ತೋಚುತಿಲ್ಲ (ಪುರಂದ. ೨-೫೭-೫) : ಸರೋಜಪತ್ರಿಕೆಯ ಪೊಟ್ಟಣದಿ ರಾಜಾಮೃತವೆನೆ ತಣ್ಣೀರ ತಂದಿತ್ತರು (ಮೋಹತ. ೧೯-೫೪) : ತಣ್ಣೀರು ಆವರೂ ಪುಣ್ಯದಿಂದ ದೊರಕಬೇಕು (ಗಾದೆ).

ತಣ್ಣೀರವನು=(ದೇವಸ್ಥಾನಕ್ಕೆ) ನೀರನ್ನು ತರುವ ಕಾಯಕದವನು (?) : ಕೋವಿಲ್ ತಿರುಮಲೆ ಪೆರುಮಾಳ್ ಕೋವಿಲ್ ತಿರುನಾರಾಯಣ ಪುರ ಮುಖ್ಯವಾದ ಸಕಳಾಚಾರ್ಯರೂ ಸಕಳ ಸಮೂಹಗಳೂ . . . ತಿರುಪಣಿ ತಿರುವಡಿ ತಣ್ಣೀರವರು ನಾಲ್ವತ್ತೆಂಟು ಜನಂಗಳು (ಎಕ. II, ೩೪೪-೧೨ : 1368). [ ತಣ್$_2$ + ನೀರ್$_1$ ]

**ತಣ್ಣೀರು** 'ತಣ್ಣೀರ್' ನೋ.

**ತಣ್ಣೀರೆರಚು** (ಕ್ರಿ). ೧.=ತಣ್ಣೀರೆರೆ. ೨. (ಆಲಂ) ನಿರುತ್ಸಾಹಗೊಳಿಸು: ಲಲಿತ ಬರುವುದಿಲ್ಲವೆಂದಾಗ ಅವರ ಉತ್ಸಾಹದ ಮೇಲೆ ತಣ್ಣೀರೆರಚಿದ ಹಾಗಾಯಿತು (ರೂಪಸ. ೩೩) : ನೆಕ್ಲುದೋವನ ಉತ್ಸಾಹಕ್ಕೆ ತಣ್ಣೀರೆರಚಲು ಪ್ರಯತ್ನಿಸುತ್ತಿರುವಂತೆ ಅವನು ಮೌನವಾಗಿ ಹೊಗೆಯೆಳೆಯುತ್ತ ಕುಳಿತಿದ್ದನು (ಪುನರು. ೫೭೭). 🄿 ಇದು ಇಂಗ್ಲಿಷಿನ 'To throw cold water on' ಎಂಬ ಪದಪುಂಜದ ಅನುವಾದವಿರಬಹುದು.

[ ತಣ್ಣೀರು (<ತಣ್ಣೀರ್) + ಎರಚು (<ಎಱಚು) ]

**ತಣ್ಣೀರೆರೆ** (ಕ್ರಿ). ೧. ತಣ್ಣೀರು ಸುರಿ. ೨. (ಆಲಂ) ಸಮಾಧಾನಮಾಡು: ಯುವರಾಜರೆದೆಯು ಸುಡುನೀರಿಗೆ ಒಂದಿಷ್ಟು ತಣ್ಣೀರೆರೆದಿರುವಂತೆ ತೋರಿಸಿ ಕೊಂಡಿದ್ದಾರೆ (ವೀರಬಂ. ೭೫).

[ ತಣ್ಣೀರು (<ತಣ್ಣೀರ್) + ಎರೆ$_1$ (<ಎಱೆ$_1$) ]

**ತಣ್ಣೀರ್ದಳಿ** (ಕ್ರಿ). ತಣ್ಣೀರನ್ನು ಚಿಮುಕಿಸು,-ಸಿಂಪಡಿಸು : ಬಳಿಕ ಸೌಮಿತ್ರಿ ಮಱುಗಿ ತಣ್ಣೀರ್ದಳಿದು ಪತ್ರದೊಳ್ಗೊಡೆವಿಡಿದು . . . ರೋದಿಸಿದನು (ಜೈಮಿಭಾ. ೧೯-೧೭). [ ತಣ್ಣೀರ್ + ತಳಿ$_1$ ]

**ತಣ್ಣುಣುಕ** (ನಾ). ಒಂದು ಬಗೆಯ ಗಿಡ : ತಣ್ಣುಣುಕ, ಅಂಡಿಲು (ಮೃಷಿಗಿ. ೪೯-೯೮೭). [ ? ]

**ತಣ್ಣುಸಿರು** (ನಾ). ತಣ್ಣನೆಯ ನಿಶ್ವಾಸ; ಉತ್ಸಾಹ ಅಥವಾ ಕಾವು ಇಲ್ಲದ ಉಸಿರು : ಅವಳು ತಿರಸ್ಕಾರದ ತಣ್ಣುಸಿರಿನೊಡನೆಂದಳು (ನಿರಾಶ. ೩೦); ನಿನ ಮುಸುಕ ಕತ್ತಲೀಯೊಳಗ ಹೊರಳಿ ಬೆಳ್ಬೆಳಗ ಬಿಡತ ತಣ್ಣುಸಿರು (ನಾದಲೀ. ೫೭-೯). [ ತಣ್$_2$ + ಉಸಿರು$_2$ (<ಉಸಿರ್$_2$) ]

**ತಣ್ಣೆ** (ನಾ). (ಕರಾ) ತಂಗಳನ್ನ ; ನೀರುಹಾಕಿ ಇರಿಸಿದ ತಂಗಳನ್ನ : 'ತಣ್ಣೆಮಡೆ' ಪರಾ. [ ←ತುಳು. ತಣ್ಣಣ, ತಣ್ಣನ ]

**ತಣ್ಣೆಮಡೆ** (ನಾ). (ಕರಾ) ತಂಗಳು ; ತಂಗಳನ್ನ : ಅದಕೂ ಇದಕೂ ಬೀಗ, ತಣ್ಣೆಮಡೆಗೂ ಬೀಗ (ಒಂ೧). [ ತಣ್ಣೆ + ಮಡೆ$_1$ ]

**ತಣ್ಣೆರಲ್** 'ತಣ್ಣೆಲರ್' ನೋ.

**ತಣ್ಣೆಲರ್**, ತಣ್ಣೆರಲ್ (ನಾ). ತಂಪಾದ ಗಾಳಿ ; ತಂಗಾಳಿ : ಅಲರಿಂ ತುಂಬಿಗಳಿಂ ತಣ್ಣೆಲರಿಂ ತುಂಬಿದ ತಿಳಿಗೊಳದಿನೆಸೆವ ಬನಮುಂ ಪೊಕ್ಕಳ್ (ಪಂಪಭಾ. ೫-೨); ತಣ್ಣೆಲರೂದುತ್ತಿರಲಾನದರ್ಕೆಳಸಿ ಪಟ್ಟಿರ್ದೆಂ ಶಿಲಾಪಟ್ಟ ದೊಳ್ (ಕಾದಂಉ. ೫೭೨) : ಮೆಲ್ಲನೆ ತೂನೆಯುತ್ತುಮಿರ್ದಲೆಯ ತಣ್ಣೆಲರಿಂ ಬೆಮರಾಱೆ . . . ಸುಖಮಿಂ ಪಥಿಕರ್ ಪಡೆವರ್ (ಚಂದ್ರಪು. ೩-೧೫); ಬಣ್ಣವಳಿಯದ ಪೂಗಳಂ ಕೊಯ್ದು ಬೆಂಡಾಗಿ ತಣ್ಣೆಲರ್ಗೊಡ್ಡಿ ಮೈ ಬೆಮರನಾಱಿಸಿಕೊಂಡು (ಜೈಮಿಭಾ. ೮-೧೪). **ತಣ್ಣೆರಲ್**: ತಣ್ಣೆರಲೆಸಗೆ ಕುಸುಮವರ್ಷಂ ದೊರೆಕೊಳೆ ಸಾಶ್ಚರ್ಯಮಾಯ್ತು ಪಂಚಾಶ್ಚರ್ಯಂ (ಅಜಿಪು. ೭-೩) ; ಪತ್ರಿದೆಸಟೆಱ್ಖನೆ ಬಿರ್ಚಿ ತಣ್ಣೆರಲ್ಗೆಡದೆಜವಾಗೆ ಪೊಕ್ಕು ಸುಬಿಯುತ್ತಿರೆ (ಚಂದ್ರಪು. ೮-೧೦೩): ಪೊಸ ಬೆಳೆಯಿಂ ಭೂಮಿ ಭೂಮಿಜದಿ ತಣ್ಣೆರಲಿಂ ಮಾರ್ಗಂ . . . ಎಸೆಗುಂ ದೇಶದೊಳ್ (ರಾಜಶೇ. ೨-೨೭).

[ ತಣ್$_2$ + ಎಲರ್ ]

**ತಣ್ಣೆಲೆ** (ನಾ). ೧. ತಣ್ಣನೆಯ ಎಲೆ; ಹಸಿರೆಲೆ: ತಿಕ್ಕಿ ತಣ್ಣೆಲೆಗಳಿಂ ಕಣ್ಣಳನದೊಬ್ಬನಾ ಕಕ್ಕುಗುರಿನೇಗರ್ಗಳಂ ಸುಯ್ಯುಟ್ಟು ಸುಗಿದು (ಕಾಲೂರ. ೯೮-೧೯೬). ೨. ತಣ್ಣನೆಯ(ಹೂವಿನ) ಎಸಳು,-ದಳ: ಆರಲ್ದ ತಾವರೆಯ ತಣ್ಣೆಲೆಯ ಪಲಗೆಗಟ್ಟ[ಟ್ಟ]ನೋವರಿಗಳೊಳಗಣ ಕಪ್ಪುರ ವಳಿಕಿನಳವಟ್ಟ ಜಗಲಿಗಳ ಮೇಲೆ ಪಸರಿಸಿದ ಕುಸುಮದೆಸಟ ಪಸೆಗಳೊಳಂ (ಚಂದ್ರಪು. ೭-೯೫ ವ). [ ತಣ್$_2$ + ಎಲೆ$_1$ ]

**ತಣ್ಣೆಳಲ್** 'ತಣ್ಣೆಟಲ್' ನೋ.

**ತಣ್ಣೆಟಲ್**, ತಣುನೆಳಲು, ತಣ್ಣೆಳಲ್(ನಾ). ತಂಪಾದ ನೆಳಲು,-ಛಾಯೆ: ಹಿಂಛಾತಪತ್ರಂ ಪುದಿದೆತ್ತಂ ತಣ್ಣೆಟಲ್ಮಾಡುವುದು ಗಡಂ (ಪಂಪಭಾ. ೧೩-೯೮): ರಕ್ತಾಶೋಕ ತರುವಿನ ತಣ್ಣೆಟಲೊಳ್ (ಕಾದಂಪೂ. ೩೬೦): ನಿನ್ನ ಬೆಳ್ಗೊಡೆಯ ತಣ್ಣೆಟಲೊಳ್ ನಿಲಲಾರರೂ ಯೋಗ್ಯರ್ (ಪಂಪಾಭಾ. ೧೪-೧೯೪) ; ಕಲ್ಪ ಪಾದಪದ ತಣ್ಣೆಟಲಲ್ಲಿ ವಸಂತಲಕ್ಷ್ಮಿಪೋಲ್ ನೆಲಸಿದ ಯುಕ್ತಿ (ಅರ್ಧನೇ. ೧-೯) : ತಣ್ + ನೆಟಲ್ = ತಣ್ಣೆಟಲ್ (ಶಮದ. ೧೫೪ ಪ್ರಯೋ). **ತಣುನೆಳಲು** : ತೊಳಪ ಪಲ್ಲವ ಸತ್ತಿಗೆಯ ತಣುನೆಳಲೊಳ್ (ಸಾಳ್ವಭಾ. ೧೮-೭೫). **ತಣ್ಣೆಳಲ್** : ಎತ್ತಿ ಸತ್ತಿಗೆಯ ತಣ್ಣೆಳಲೊಳ್ ಬಳೆವಂತು ಮಾಡಿ (ಗಿರಿಕ. ೧-೧೦೭) ; ಮಲ್ಲಿಕಾಮಂಟಪದ ತಳಿದ ತಣ್ಣೆಳಲ ತಿಳಿಗೊಳನ ಪುಳಿನ ಸ್ಥಳದಿ ದಿವ್ಯಲಿಂಗಂ ಮೆಱೆದುದು (ಸಿದ್ಧರಾ. ೨-೧೫) ; ಮುತ್ತಿನ ಸತ್ತಿಗೆಯ ತಣ್ಣೆಳಲೊಳತ್ತರದಾಲವಟ್ಟದ ಸೊಗಸಿನೊಳಮರ್ದು (ಬಸಪು. ೩-೪೫) ; ತಳಿತ ತಣ್ಣೆಳಲೊಳಗೆ ಹಾಸಿದ ತಳಿರ ಸಿಂಹಾಸನದ ಸುತ್ತಲು (ಕುಮಾವ್ಯಾ. ೭೦೩. ೪-೫೦). [ ತ್ಯಣ್ + ನೆಟಲ್$_1$ ]

**ತಣ್ಣೆಟಿ** (ನಾ). ತಂಪಾದ ಎಳೆ ; ತಣ್ಣನೆಯ ನೂಲು : ಎಳೆದೆನಿಸಿರ್ದ ಪಾವಸೆಯ ತಣ್ಣೆಟಿಯಿಂದಮೆ ನೆಯ್ದ ಸೀರೆ . . . ಕಣ್ಗೊಳೆ ನೆಲಸಿರ್ದ ರಲ್ಲಿ ಜಲದೇವಿಯರಂತೆ ವಿಲಾಸಿನೀಜನಂ (ಕಾದಂಉ. ೪೫೯).

[ ತಣ್$_2$ + ಎಟಿ$_2$ ]

**ತಣ್ಣೆಸು** 'ತಣಿಸು$_1$' ನೋ.

**ತಣ್ಣೊಡಲ್** (ನಾ). ತಂಪಾದ ಒಡಲು,-ಬಸಿರು; ಪ್ರಸನ್ನವಾದ ಶರೀರ: ತಿಂಗಳ ಬಾಲನಂ ಪಡೆದ ತಣ್ಣೊಡಲಿಂದಿರೆಯಿರ್ದ ತೌರು . . . ಎಂದೆನಿಸಿರ್ದುದಾ ಕಡಲ್ (ಕವಿಚ. III, ೫೨ ಹಾಲಾಸ್ಯಮಾಹಾತ್ಮ್ಯ).

[ ತಣ್$_2$ + ಒಡಲ್ ]

**ತಣ್ಣೊಱೆಗಲ್ಲು** (ನಾ). ತಂಪಾದ ನೀರನ್ನು ಒಸರುವ ಕಲ್ಲು,-ಚಂದ್ರ ಕಾಂತಶಿಲೆ : ತಿಣ್ಣಮಾದರೆ ತನ್ನ ತಲೆದೊಱೆಯನು ಮುಕ್ಕಣ್ಣನೀ ಬನ ದೊಳಿಟ್ಟಂತೆ ತಣ್ಣೊಱೆಗಲ್ಲ ಸೋಪಾನದ ಕೊಳ (ಮೋಹತ. ೨೪-೫೫).

[ ತಣ್$_2$ + ಒಱೆಗಲ್ಲು ]

**ತಣ್ಣೋಟ** (ನಾ). ತಂಪಾದ ನೋಟ ; ಪ್ರಸನ್ನತೆಯಿಂದ ಕೂಡಿದ ದೃಷ್ಟಿ: ನಿಮ್ಮೂರ ಹೆಣ್ಣುಗಳ ಕಣ್ಣೋಟ, ತಣ್ಣೋಟ ಕರ್ಪು, ಬಲು ಕರ್ಪು (ಹೊಂಗಳು. ೧೫-೧೭).

[ ತಣ್$_2$ + ನೋಟ ]

**ತಣ್ತೊಡವು** (ನಾ). ತಂಪನ್ನುಂಟುಮಾಡುವ ಆಭರಣ; ಮೈಗೆ ತಣ್ಣಗೆ, ಹಿತವಾಗಿರುವ ಒಡವೆ : ಕಂಪಿನೊಳ್ ಪೊರೆವ ವಸಂತದೊಳ್ಮಗುಳ ತಣ್ತೊಡವಂ ತುಡಿಸಲ್ಕೊಡರ್ಚಿದವಳ್ (ಕಾದಂಉ. ೭೮೫).

[ ತಣ್$_2$ + ತೊಡವು ]

**ತಣ್ಪಳಿರ್** (ನಾ). ತಣ್ಣನೆಯ ಚಿಗುರು,–ತಳಿರು: ಎಯ್ದೆ ಮುಸುಕಿ ನಿಂದ ತಣ್ಪಳಿರ್ಗಳನೊಪ್ಪಿ ತೋರ್ಪ ಜಲಮಂಟಪದಲ್ಲಿಗೆ ಬಂದನಾ ನೃಪಂ (ಕಾದಂಬ. ೪೫೮). [ ತಣ್$_{2}$ + ತಳಿರ್$_{2}$ ]

**ತಣ್ಪಟು** (ಕ್ರಿ). ತಂಪು ನಾಶವಾಗು ; ಶೈತ್ಯವಿಲ್ಲದಂತಾಗು : ಅತುಳ ತುಷಾರ ಜನ್ಮಗೃಹವೆಂತಿದಂತಾನೆನಿಪಿಂದುಕಾಂತನಿರ್ಮಿತದೆಸೆದಿರ್ಪ ಸೆಜ್ಜೆವನೆ ತಣ್ಪಟಿದುಂ ನೃಪಕಂತುಕಾಯದುದ್ಭವ ವಿರಹಾನಲ ಪ್ರಬಲ ತಾಪಕಳಾಪದೆ ಕಾಯ್ದು ಸಂತತಂ ಪುತವಹನಿರ್ಪ ಸೆಜ್ಜೆವನೆಯಂತೆ ಪೊಲಿರ್ದುದು (ಕುಸುಮಾ. ೧೮-೨೦). [ ತಣ್ಪು$_{2}$ + ಅಟು$_{1}$ ]

**ತಣ್ಪಟ್ಟು** 'ತಂಬಿಟ್ಟು$_{1}$' ನೋ.

**ತಣ್ಪಡಿ, ತಂಪಿಡಿ** (ಕ್ರಿ). ತಂಪಿನಿಂದ ಕೂಡಿರು ; ಶೀತಲದಾಗಿರು : ಪೊಸ ಮಲ್ಲಿಗೆ ಮಲ್ಲಗೆ ಕಂಪು ನಾಱೆ ತಣ್ಪಡಿದೆಲರೂದೆ . . . , ಗುಣಾರ್ಣವಂ ನೆಱೆಯೆ ನಿಟ್ಟಿಸಿದಂ ಬೆಳಗಪ್ಪ ಜಾವಮಂ (ಪಂಪಭಾ. ೪-೧೧೦). **ತಂಪಿಡಿ :** ಬಿಸಿಮಾಣ್ದ ರವಿಯೊ ತಂಪಿಡಿದಿರದ ಚಂದ್ರಮನೊ . . . ಪೇಳೆಂಬ ಸೌಭರಿಮುನಿಪನು (ಜೈಮಿಭಾ. ೧೨-೧೬). [ ತಣ್ಪು$_{1}$ + ಇಡಿ$_{1}$ ]

**ತಣ್ಪಡು** (ಕ್ರಿ). ತಂಪುಂಟುಮಾಡು : ಕಾಳಿಂದೀಜಲದಿಂದಮೇಂ ತೊಳೆವನೋ ತಣ್ಪಟ್ಟನೋ ಕಾರಗಿಲ್ಧೂಳಂ ಕತ್ತುರಿಯಿಂದಮಣ್ಪಡಿದನೋ . . . ಎಂಬಾಳಾಪಕ್ಕೆಡೆಯಾಗಿ ಮೂಜಗಮದೇನೊಪ್ಪಿತ್ತೊ ಪರ್ವಂರ್ಬಿನಿಂ (ಚಿಕವಿ. ೬-೧೨). [ ತಣ್ಪು$_{2}$ + – ಇಡು$_{1}$ ]

**ತಣ್ಪಿಸು, ತಂಪಿಸು, ತಂಬಿಸು$_{1}$, ತಂಬ್ಪೈಸು, ತಮಿಸು, ತಮ್ಮಿಸು** (ಕ್ರಿ). ೧. ತಂಪುಗೊಳಿಸು ; ತಣ್ಣಗೆಮಾಡು : ತಿಳಿಪೊಸರ ಚೆಲ್ಲುವರ ಸವಿನುಡಿಯ ಹರಕೆಯಿದು ಬೇಗೆಗಳ ತಣ್ಪಿಸುವ ಮಾತು (ನಳ್ಳ. ೩೭-೬). **ತಂಪಿಸು :** ೧. ಬಿಸಿಲಿನ ಬೇಗೆಗೆ ತಲೆಯಾನಿಸಿ ತರುವುಂ ಶ್ರಿತರ ತಂಪಿಸುವುದೆಲೆ ನೆಳಲಿಂ (ಶಾಕುಂತ. ೬೩-೧೧೬). ೨. ಆರಿಸು ; ನಂದಿಸು: ಪಾವಕ ಮಹಾಬಾಣಮಂ . . . ತೆಗೆದೆಚ್ಚೊಡದನಂದು ಕೈಗೆಡದೆ ಕರ್ಣಾತ್ಮಜಂ ವಾರುಣಾಸ್ತ್ರ ಪ್ರಯೋಗದೊಳದಂ ತಂಪಿಸಿದನು (ಜೈಮಿಭಾ. ೪-೩೬): ತನುವ ನಂಡಲೆವ ತಾಪಾಗ್ನಿಯ ರಭಳವ ಪುಳಕಾಂಬುವಿನಿಂದ ತಂಪಿಸು (ಕಂವಿ. ೯-೧೮೫). **ತಂಬಿಸು$_{1}$ :** ೩. ಆರು ; ತಣ್ಣಗಾಗು : ಬಾಣದ ಮದ್ದನರೆವ ಸಮಯಕೆ ಕಿಚ್ಚು ಮಾಣದೆ ಮನೆಗಳ ಸುಡಲು ಕ್ಷೋಣೀಶ ಸಿದ್ಧರಾಮನ ಪಾದದರಾಣೆಯಿಡಲು ತಂಬಿಸಿತು (ಅಮುಸಾಂ. ೪-೪೩). ೪. ಕೋಪ, ದುಃಖ ಮೊದಲಾದುವನ್ನು ತಗ್ಗಿಸು ; ಸಮಾಧಾನ ಮಾಡು ; ಶಮನಗೊಳಿಸು ; ಶಾಂತಗೊಳಿಸು : ಚೆಂದೊಡಲ ಬೇಗೆಯುಮನೇತರದಿ ತಂಬಿಸುವೆಂ (ಸಮ್ಯಕ್ತ್ವ. ೫-೨೨) : ಆ ವಿಗನ ಅತಿಕೋಪವನು ತಂಬಿಸಿ (ನೇಮಿಸಂ. ೧೧-೫೦); ಬಳಲಿದ ಶ್ರಮವನು ತಂಬಿಸುವೆನೆಂದು ಅಳಿದು ರಕ್ಷಕರ ಕಾವಲಿಟ್ಟು (ಚಂದ್ರಹಾ. ೨-೬೪). ೫. ಇಂಗಿಸು; ನಿವಾರಿಸು: ಲಲಿತ ಕರ್ಪೂರ ತಾಂಬೂಲವಂ ತಮ್ಮಿಣಲೊಳಳವಡಿಸಿ ಪುದಿದ ಬೆಮರ್ವನಿಗಳಂ ತತ್ಕ್ಷಣಂ ಕಳನ ದೂಳಿಯೊಳೆ ತಂಬಿಸಿ ಮುಪ್ಪಿಯಂ ಬಲಿದು (ಜಬಪು. ೧೬-೩೬). **ತಂಬೈಸು :** ೨. ತುರಗಗಳನೋಡಿಸುತ ನಿಲ್ಲಿಸುತ್ತ ನಿಲ್ಲಿಸುವ ತುರುಬಿ ತಂಬೈಸುವರುವಾಳಿಸಿ ಮುರಿವ ಹೋರುವ ಮೆರೆವ ಕುಣಿಸುವ ಚಪಳಗತಿಗಳಲಿ (ಮೂಲಲಾ. ೪-೯). **ತಮಿಸು :** ೨. ಅಸ್ತ್ರಗಳು ದೇವಲೋಕ ದಿನ್ನಿಂದು ಸುಡುತ್ತಿದ ಬೇಗೆ ಪರಿಹರಿಸುಯೆನಲಿಂದ್ರನಂದನಂ ತಮಿಸಿದನು (ತುರಂಗ. ೩೦-೨೯). ೪. ಪೊಂದಿರುವ ದುಃಖಮಂ ತಮಿಸಿ (ತುರಂಗ. ೩೪-೬): ಬಳಲಿಕೆಯ ತಮಿಸಿ ಮುಂದುರವಣಿಸಿ (ತುರಂಗ. ೭೩-೧೬). **ತಮ್ಮಿಸು :** ೪. ಸೊಗಸಿಸಿಂ ಬಸವ ನೀಲಾಂಬಿಕೆಯು ಗುರುವರನ ಪಸುವ ತಮ್ಮಿಸು ವೆನೆನುತ (ಚೋರಬ. ೯-೪೨); ನೀವೀಗ ಕೋಪವ ತಮ್ಮಿಪುದು ತಮ್ಮಿಪುದು ಗಾಂಗೇಯಯೆಂದನು ನೋಡಿ ಧರ್ಮಜನು (ಜನಭಾ. ೩೯-೫೯). [ ತಣ್ಪು$_{2}$ + – ಇಸು$_{3}$ ]

**ತಣ್ಪು$_{1}$** 'ತಣಿಪು$_{1}$' ನೋ.

**ತಣ್ಪು$_{2}$, ತಂಪು$_{2}$** (ನಾ). ೧. ತಣಿವು ; ಶೈತ್ಯ : "ತಣ್ಪೆಂದು ಶೈತ್ಯಂ" (ಶಶಾ. ೨೭-೫೭೪) ; ಕುಡಿಯಲ್ ನೀರುಂಟು ಪದ್ಮಾಕರಾಳಿಗಳೊಳ್ ತಣ್ಪುಗಳುಂಟು ಹೇಮಲತಿಕಾ ಕುಂಜಂಗಳೊಳ್ (ಪಂಪಭಾ. ೭-೩೦) ; ಸಿಂಪಿಣೆಯ ತಣ್ಪನಿಂ ಪೂವಲಿಯ ತಿಣ್ಪನಿಂ ಮನಂಗೊಳಿಸುವ ಭವನಾಂಗಣದೊಳವತರಿಸಿ (ಕಾದಂಬ. ೪೬೨); ತಣ್ಪಂ ಬಿಟ್ಟು ಬಿಸಿಲಂ ಕಾಯ್ವ ಪಿತ್ರಾಧಿಕನುಮಂ ಪೋಲ್ವೆಂ (ಧರ್ಮಾಮೃ. ೮-೫೦) ; ಕಾಲ ತಳಂ ನೆರೆ ತಣ್ಪಾಗಿರೆ ಸರುಜಂ (ಕಲ್ಯಾಕಾ. ೨-೫೨) ; ಅಪ್ಪಿನಿಂ ತಣ್ಪು ಮಲಯಾದ್ರಿಯಿಂ ಮಲಯಜಂ . . . ಪುಟ್ಟುವಂತಿರೆ ಪುಟ್ಟಿದುದು (ಬಸರ. ೧-೧೨೬) ; ಕಂಪಿಸುವ ನುಣ್ಪಿನ ತಣ್ಪ[ಪಾಠಾಂ. ತಂಪಿ]ನಾವೋದಿಸುವ ಸೊಂಪಿನ ಬಿಲ್ವಪತ್ರೆಯನಾಗ ಕೊಯ್ದುಂದು (ಬಸವು. ೧೮-೩೦); ರವಿರುಚಿ ತಣ್ಪನೇಱೆ [ಪಾಠಾಂ. ತಣ್ಣಸೆರೆ] ಕೇತಕಿವನಂ ಸುಳಿಯೇಱೆ (ಸಾಳ್ವಭಾ. ೨೭-೧೮) ; ನಿಸ್ಸ ತಣ್ಪು ಶಾಂತಿ ಸವಿದು ಶಾಂತಿಗೊಳುವೆನು (ವಿಸೀಗೀ. ೬೫-೧೬). ೨. ತೃಪ್ತಿ; ಸಂತುಷ್ಟಿ; ಸುಖ : ವಜ್ರಮಂ ಮಸೆದಂತೆ ತಣ್ಪು ಮನದೊಳ್ ಪೊಂಪುಳಿವೋಗೆ (ಶಾಂತಿಪು. ೨-೨೭ ವ). **ತಂಪು$_{2}$ :** ೧. ಪೂಗೊಳಂಗಳೊಳ್ ತೇಂಕಿ ಪಾಱುವ ಪಕ್ಕಿಗಳೆಱಂಕೆ [ವಿಡಿದುದಿರ್ಪ] ತಂಪನೀವ ತುಂತುರ್ವನಿಯ ತುಱುಗಲಮಂ (ಕಾದಂಬ. ೫೨೬) ; ಬೇವಿನ ಗೊಟ್ಟೆಯೊಳನಿದನರ್ಕನೊಳ್ ತಂಪಂ . . . ಘನವಾಗಿರಲಱಿಸಿ ತೊಬಲುವಾತನೆ ಗಾಂಪಂ (ಧರ್ಮಾಮೃ. ೫-೧೬೦) ; ಮನದ ಕೋಪವ ಹೃದಯದಲ್ಲಿಟ್ಟುಕೊಂಡಿಪ್ಪವನ ಅವನ ಪಾದಕ್ಕೆ ಎನ್ನ ನೊಸಲ ತಂಪ ತಂದು ತಳೆವೆ (ಸಿದ್ಧವ. ಶ. ೧೦೨-೩೪೪) ; ತೆಗೆದುದಗ್ಗದ ತಂಪು ನದಿ ಸರಸಿಗಳ ತಡಿಯಲಿ (ಕುಮಾರವ್ಯಾಸ. ೫-೫) ; ದೆಸೆದೆಸೆಗೆ ಬೀರ್ಪ ತನಿಗಂಪಿನಿಂ ತಂಪಿನಿಂ . . . ಆ ಕೊಳಂ ಕಣ್ಗೆಸೆದುದು (ಜೈಮಿಭಾ. ೧೫-೯). ೨. ಪೆತ್ತ ನಿನ್ನೊಡಲಿಂಗೆ ತಂಪಿನ ತೆತ್ತಿಗನೊ ಮೇಣ್ ಬಹಳ ತಾಪದ ಮುತ್ತಯನೊ ಕುರುರಾಯ ನೆಲೆ ಧೃತರಾಷ್ಟ್ರ ಕೇಳೆಂದ (ಕುಮಾರವ್ಯಾಸದ್ರೋ. ೪-೨) ; ಅಕ್ಕತಮ್ಮದಿರೊಬ್ಬರೊಬ್ಬರನೋರಂತೆ ನೆನೆಯದಿದ್ದರ ತಂಪೆ ಮನಕೆ (ಇಂಪಾಪ.೩೨-೪೯). ೩. ನೆಳಲಿನ ತಂಪಾದ ಪ್ರದೇಶ: ದಕ್ಷಿಣದ್ವಾರದ ವೃಕ್ಷದ ತಂಪಿನಲ್ಲಿ ಸ್ವಯಂಜ್ಯೋತಿಯ ಕಂಡನಯ್ಯ (ಅದವ. ೨೪-೬೯) ; ತಳಿತ ಮರನಡಿಗಳೊಳಗೆಳಲತಯ ತಂಪಿನೊಳು . . . ಅಱಸಿದಂ ಸಿದ್ಧರಾಮನಾ ಪರ್ವತಾಗ್ರಣಿ ಮಲ್ಲಿಕಾರ್ಜುನನನು (ಸಿದ್ಧರಾ. ೨-೩೬). ೪. ಹಿಮ ; ಮಂಜು. 'ತಂಪುಬೆಟ್ಟ' ಪರಾ.

**ತಣ್ಪಾಗು, ತಂಪಾಗು**=೧. ತಣ್ಣಗಾಗು: ಪೂಜಗಣ್ಗೆ ಪೋಗಿ ತಣ್ಪಪ್ಪೆಡೆಯೊಳ್ ಪಡುಗುಂ (ಧರ್ಮಾಮೃ. ೧-೧೫೬). ೨. ದುಃಖ ಮೊದಲಾದ ಭಾವನೆಗಳ ಆವೇಗ ಕಡಮೆಯಾಗು : ಶಶಿವದನೆಯ ಮನಸ್ತಾಪ ತಂಪಾದುದು (ಮೋಹತ. ೪-೯೩). **ತಂಪಿನ ಗಿರಿ** = ಹಿಮವತ್ಪರ್ವತ ; ಹಿಮಾಲಯ: ಭಾರತವರುಷವನು ದಾಂಟಿದನು ತಂಪಿನಗಿರಿಯ ತಪ್ಪಲನೇಱಿದನು (ಕುಮಾರವ್ಯಾಸ. ೪-೩೫). **ತಂಪಿನ ಬೆಟ್ಟ**=ತಂಪಿನ ಗಿರಿ : ತರಳಾಕ್ಷಿ ತಂಪಿನ ಬೆಟ್ಟದಬಲೆಗೆ ವಿಧಿ ಸದಸ್ಯವ ಕೊಟ್ಟಪೊಲು ತನುವೆಳದಳಾ ಮೇನಕಿಯ ಜಠರದಲಿ (ನಿಭಾಗ. ೪-೫-೨).

[ ತಣ್$_{2}$ + – ಪು$_{2}$. / ತಮಿ. ತಣ್ಪು ; ಮಲ. ತಣುಪ್ಪು ]

**ತಣ್ಪುಗಂಪು** (ನಾ). ತಂಪಾದ ಸುಗಂಧ ; ಹಿತಕರವಾದ ಪರಿಮಳ : ಪಾದರಿಗಳ ತಣ್ಪುಗಂಪು ಸರಸೀರುಹದೊಳ್ ತನಿಗಂಪು . . . ಬಗೆಗೊಂಡುದು ತದ್ವನದೊಳ್ (ರಾಜಶೇ. ೧೧-೧೯). [ ತಣ್ಪು$_{2}$ + ಕಂಪು ]

**ತಣ್ಪುಗೂಡು** (ಕ್ರಿ). ಶೈತ್ಯದಿಂದ ಕೂಡಿಕೊಂಡಿರು ; ತಂಪಿನಿಂದ ಬೆರೆತಿರು : ವದನಶಶಿಯ ತಣ್ಪುಗೂಡಿ ಸೌರಭ್ಯದೆ ಪುದುಗಿದ ಮಂದಮಾರುತನ . . . ಸೂಸುಪೋಲೊರ್ಪ ಚದುರೆ ಬೀಸಿದಳಾಲವಟವ (ಕಂವಿ. ೨೪-೮೦). [ ತಣ್ಪು$_{2}$ + ಕೂಡು$_{1}$ ]

**ತಣ್ಪುಗೆಯ್, ತಂಪುಗೈ** (ಕ್ರಿ). ೧. ತಂಪನ್ನುಂಟುಮಾಡು : ಕರಿಯ ಕರ್ಬಿನ ಕಾವಿ[ನೆ]ಳ ಮೈಂದವಾಟ್ಯಿಲಿಯ ಬಿಜ್ಜಣಿಗೆಗಳಿಂ ಬೀಸಲ್ವೇಟ್ಟು ತಣ್ಪುಗೆಯ್ಯೆ (ಪಂಪಥಾ. ೫-೬ ವ). **ತಂಪುಗೈ:** ೨. ಪ್ರಸನ್ನತೆಯುಂಟು ಮಾಡು ; ಸಂತೋಷಪಡಿಸು : ಆದಿದೇವರೆ ಮುನ್ನ ತಂಪುಗೈದನು ದೇವರಾದರಿಸಿದಿರೆಮ್ಮನಿಂದು (ಭರತ. ೩೮-೮). [ ತಣ್ಪು$_2$ + ಕೆಯ್$_1$ ]

**ತಣ್ಪುಗೊಳಿಸು** (ಕ್ರಿ). ೧. ತಣ್ಣಗೆಮಾಡು. ೨. ಸಮಾಧಾನಗೊಳಿಸು : ಮನದೊಳುರ್ಕುವ ಮುಳಿಸನೀಜಾತಿಗಿದುಚಿತಮೆಂದು ತಿಳಿದು ಮನದೊಳ ತಣ್ಪುಗೊಳಿಸಿ (ಚಕವಿ. ೬-೨೩೬ ವ). [ ತಣ್ಪು$_2$+ ಕೊಳ್$_1$ + – ಇಸು$_3$ ]

**ತಣ್ಪುದರ್** (ಕ್ರಿ). ತಂಪನ್ನು ತರು ; ತಂಪನ್ನುಂಟುಮಾಡು : ಸತಿಯುರ್ ಕರ್ಪೂರ ಪಾಳೀಕೃತ ಸತಿಮುರೆನಲ್ ನಲ್ಲರೊಳ್ ತಣ್ಪುದಂದರ್ (ಜಗವಿ. ೧೬-೮೧). [ ತಣ್ಪು$_2$ + ತರ್ ]

**ತಣ್ಪುವಡೆ, ತಂಪುವಡೆ** (ಕ್ರಿ). ತಂಪನ್ನು ಹೊಂದು ; ತಣ್ಣಗಾಗು : ತುಹಿನಕರನ ತಣ್ಗದಿರ್ಗಳ ತನಿಸೋಂಕಿನಿಂ ತಣ್ಪುವಡೆದ ತಾರಹಾರಂಗಳೊಳಂ (ಕಾದಂಬ. ೫೬೮) ; ವನದೇವತೆಯುರಮೃತಸಾರವಾರಿಯಂ ಪಚ್ಚೆವರಲ ಕರಗಂಗಳೊಳ್ ತೀವಿ ತೆಂದೆಲರ ಪೊಯ್ಲಿನಿಂ ತಣ್ಪುವಡೆಯಲೆಂದು ನೆಟ್ಟಿದಂತಿರ್ದ ನೀರ್ಗಾಯಿ ತುಱುಗಲಿಂದೆಱಗಿದ ನಾಳಿಕೇರ ಭೂರುಹಂಗಳುಂ (ಚಂದ್ರಪು. ೧-೧೦೫ ವ). **ತಂಪುವಡೆ:** ಹಂಸಧ್ವಜಂ ನಂದನನನೆಲ್ಲೆಗಾದಿರ್ದ ಕೊಪ್ಪರಿಗೆಯೊಳ್ಗಂದು ಕೆಡಹಿಸಲಚ್ಯುತಧ್ಯಾನದಿಂ ತಂಪುವಡೆದನವನಚ್ಚರಿಯೆನೆ (ಜೈಮಿಭಾ. ೧೧ ಸೂಚನೆ). [ ತಣ್ಪು$_2$+ಪಡೆ$_1$ ]

**ತಣ್ಪುವೀಱು** (ಕ್ರಿ). ೧. ತಂಪನ್ನುಂಟುಮಾಡು. ೨. ನೆಮ್ಮದಿಯುಂಟು ಮಾಡು; ಸುಖ ತರು : ಚಿಂತಿಸುತೆ ಪಲವಂದದೆ ಬಗೆ ನೊಂದು ಹಮ್ಮದಂ ಬೋಗಿರೆ ಪಾರ್ಥಂ ದಯೆಯಿಂದವನಿರ್ದೆಡೆಗಿಂದುಧರಂ ತಳರ್ದು ತಣ್ಪು ವೀಱಿದನಾಗಳ್ (ಕಬಕಂ. ೪-೧೩೬). [ ತಣ್ಪು$_2$ + ಬೀಱು$_1$ ]

**ತಣ್ಪುವೆಸ** (ನಾ). ತಂಪನ್ನುಂಟುಮಾಡುವ ಕೆಲಸ ; ಶೈತ್ಯೋಪಚಾರ : 'ತಣ್ಪುವೆಸಕೆಯ್' ಪರಾ. [ ತಣ್ಪು$_2$ + ಬೆಸ$_1$ ]

**ತಣ್ಪುವೆಸಕೆಯ್** (ಕ್ರಿ). ತಂಪನ್ನುಂಟುಮಾಡುವ ಕೆಲಸವನ್ನು ಮಾಡು; ಶೈತ್ಯೋಪಚಾರ ಮಾಡು : ಮಲಯುಸವಿಸಾರಣೀರಣ ಚಲತ್ತರುಶಾಖೆಗಳೊರ್ಮ್ಮೆಗೊರ್ಮ್ಮೆ ನೀರೊಳಗೆ ಬಟಲ್ದು...ನ್ನಭಂಬರಂ ಮಿಳಿರ್ದಲಂಪಿನ ದಂಪತಿಯರ್ಪ್ಪ ಜೊಂಪಮಂ ತಳಿತಳಿದಲ್ಲಿ ತಣ್ಪು[ಪಾಠಂ. ಸಾಂಕು, ಗೂಂಕು]ವೆಸಕೆಯ್ವುವು ತೀರವನಾಂತರಾಳದೊಳ್ (ಆದಿಪು. ೧೧-೬೬).
[ ತಣ್ಪುವೆಸ + ಕೆಯ್$_1$ ]

**ತಣ್ಪುವೆಱು, ತಂಪುವೆಱು** (ಕ್ರಿ). ತಂಪನ್ನು ಹೊಂದು ; ತಂಪಾಗಿರು : ಮರಂಗಳ ಚಿಗುರ್ಗಳಿಂದೊಗೆದೆಲರಿಂ ತಣ್ಪುವೆತ್ತಿರ್ಪ ತೀರಜಲಂಗಳೊಳಂ (ಕಾದಂಪೂ. ೧೧೭) ; ಕಮಲಭವಂ ಲಸತ್ಪರಿಮಳೋತ್ಕರದಿಂ ಕರುವಿಟ್ಟು ಮಾಡಿದಂಗವಿದೆನೆ ತಣ್ಪುವೆತ್ತ ವಿಜಯಾವತೀದೇವಿಯ ಮೆಯ್ (ಕುಸುಮಾ. ೫-೧೨೭). **ತಂಪುವೆಱು:** ಓಪರೊಳ್ನೆರೆದು ವಿರಹಿಗಳ್ಮಲಯುಜದ ಘನಸಾರದೊಳ್ದಂಪುವೆತ್ತು (ಜೈಮಿಭಾ. ೮-೫). [ ತಣ್ಪು$_2$ + ಪೆಱು$_1$ ]

**ತಣ್ಪುವೇಱು** (ಕ್ರಿ). ತಂಪನ್ನು ಹೊಂದಿರು ; ಶೈತ್ಯವನ್ನು ತುಂಬಿಕೊಂಡಿರು: ಕುಕಿಲ್ವ ಪಿಕಾಳಿ ತಣ್ಪುವೇಱಿದ ಸುಟ್ಟಿಗಾಳಿ (ಪುಷ್ಪಪು. ೨-೨೦).
[ ತಣ್ಪು$_2$ + ಪೇಱು$_1$ ]

**ತಣ್ಪುಳಿಲ್** 'ತಣ್ಪುಟಿಲ್' ನೋ.

**ತಣ್ಪೂಳಿಗ** (ನಾ). ತಂಪನ್ನುಂಟುಮಾಡುವ ಸೇವೆ ; ಶೈತ್ಯೋಪಚಾರ: ವ್ಯಮುರೆತೊರಗಲಾಕೆ, ಪಿಡಿದೆತ್ತಿ ಕುಳ್ಳಿರಿಸಿ ತಣ್ಪೂಳಿಗವನೆಸಗಿ . . . ಕರ್ಚಿದನ್ ಕಣ್ಪನಿಪೊನಲ್ಗಳಿಂ ಭರತನಾ ರಘುರಾಮನಂಬಿಕೆಯ ಪುಣ್ಯಮಯ ಪದಪ್ರಪಾದಂಗಳಂ (ಶ್ರೀರಾಪಾ. ೧೧೬-೧೯೯).
[ ತಣ್ಪು$_2$ + ಊಳಿಗ (<ಊಟಿಗ) ]

**ತಣ್ಪೆಱೆ$^{2}$, ತಂಪೆರೆ** (ಕ್ರಿ). ತಂಪನ್ನು ಸೂಸು,-ಬೀರು : ಒಡಿದೆನ್ . . . ತಣ್ಪೆಱೆವ ಪೊನಲೆಡೆಗೆ (ಬದ್ಮಪ್ರ. ೩೬-೭೭೩). [illegible] ಎಲೆ, ಪುಲ್ಲಿನ ಹಸಿರು, ಬಿಸಿಯನ್ನೇ ಕಕ್ಕುತ್ತಿವೆ ([illegible]
[ ತಣ್ಪು$_2$ + ಎಱೆ$^{3}_{1}$ ]

**ತಣ್ಪೇರಿಸು** (ಕ್ರಿ). ೧. ತಂಪನ್ನುಂಟುಮಾಡು. ೨. ತೃಪ್ತಿಗೊಳಿಸು : ಧಾರುಣಿಯುಂ ಶಕ್ರಂ ತಣ್ಪೇರಿಪನೊಳ್ಪರಿದು ಸೂಸಿ ಕೃಷ್ಣಮಹೀಶಂ ಸಾರತರೋತ್ಸರ್ಗಪಯಃಪೂರದೆ ತಣ್ಪೇರಿಪಂ (ನರಜ. ೪೧-೯೦).
[ ತಣ್ಪೇರು (<ತಣ್ಪೇಱು) + – ಇಸು$_3$ ]

**ತಣ್ಪೇರು** 'ತಣ್ಪೇಱು' ನೋ.

**ತಣ್ಪೇಱು, ತಂಪೇರು, ತಂಪೇಱು, ತಣ್ಪೇರು** (ಕ್ರಿ). ತಣ್ಣಗಾಗು ; ಉಷ್ಣತೆಯನ್ನು ಕಳೆದುಕೊಳ್ಳು : ಸರಳಾಂಗು ಮಿಗೆ ಕುಂದಿ ತೋಱೆ ಕಿವಿಗಳ್ ತಣ್ಪೇಱೆ[ಪಾಠಂ. ಗಂಪೇಱೆ] (ಲೀಲೋಪ. ೯-೨೧೨) ; ತಣ್ಪೇಱಿದ ಪಱೆಯಂತೆ ದನಿ ಪೊಱಮಡದೆ (ಧರ್ಮಾಮೃ. ೧-೧೬೮) ; ಸರಸೀಜಾತ ಪಯಃಕಣಪ್ರತತಿಯಿಂ ತಣ್ಪೇಱೆ . . . ತೀಡಿದುದಿಂತೀ ಜಾಂಬೂಕವನೋದ್ಯಂಗೀರುತಂ ಮಾರುತಂ (ಕುಸುಮಾ. ೭-೪೫). **ತಂಪೇರು :** ನಿರುತಮೈಶ್ವರ್ಯ ಕೈಸಾರಿದೊಡೆ ಸಂತಸದಿ ಪರಮಶಾಂತಿಯಲಿ ಪೆರ್ಚುವ ಮಾಳ್ಕೆಯಿಂದೆ ಮೈ ತಂಪೇರಿ (ನವಮೋ. ೧೫-೮). **ತಂಪೇಱು :** ಬೆದಱ ಬಂದಿಗೆ ಸಿಲುಕಿತವನಿಪನದಟು ವಿಕ್ರಮವಹ್ನಿ ತಂಪೇಱಿದುದು (ಕುಮ್ವಾಭಿ. ೧೦-೧೭). **ತಣ್ಪೇರು.** 'ತಣ್ಪೇರಿಸು' ಪರಾ.
[ ತಣ್ಪು$_2$ + ಏಱು$_1$ (<ಏಱ್$_1$) ]

**ತಣ್ಪೊದವು** (ಕ್ರಿ).=ತಣ್ಪೇಱು: ತಣ್ಪೊದವಿದ ನಿರ್ಝರಾಂಬುಗಳನೊಯ್ಯನೆ ಪೀರ್ದು (ಕಾವ್ಯಾವ. ೭೨೨). [ ತಣ್ಪು$_2$ + ಒದವು$_1$ ]

**ತಣ್ಬಗೆ** (ನಾ). ಆರ್ದ್ರ ಹೃದಯ ; ಕರುಣೆಯಿಂದ ಕೂಡಿದ ಮನಸ್ಸು : ಕಣ್ಬಡಿಯೆನಲ್ ಗುಣಂಗಳ್ ಪೆಣ್ಬರಿಜಂ ತಳೆದು ತೊಳಪುವೆಂಬಂತೆಪೊಳೀ ತಣ್ಬಗೆಯ ರಾಣಿಯೊಲವಿಂ ಪಣ್ಬದಗುಂ ಕಲ್ಪಕಲ್ಪ ಸಂಕಲ್ಪಂಗಳ್ (ಚಕವಿ. ೩-೭೩). [ ತಣ್$_2$ + ಬಗೆ$_3$ ]

**ತಣ್ಬನಿ, ತಂಬನಿ** (ನಾ). ತಂಪಾದ ಹನಿ ; ತಣ್ಣನೆಯ ಬಿಂದು: ಮನವೊಲ್ದಾತನ ಗಾಡಿಯಂ ದರವುರಂಗಂಡಾಕೆಗಳ್ . . . ಚಂದನಕಂ ಪಸು ರ್ಪಸವ ಬಾಳ್ಗೊಂಪಕ್ಕಮೊಂದೊಂದೆ ತಣ್ಬನಿಯೊಳ್ಮೋಡಿಸುತಿರ್ಪ [ಪಾಠಂ. ದೊಳ್ಮೂಡಿಸಿರ್ಪ]ಬಿಜ್ಜಣಿಗೆಗಂ ಪಕ್ಕಾಗದೇಂ ಪೋಪರೇ (ಆದಿಪು. ೧-೬೫) ; ತಣ್ಬನಿಯುಂ ಚಂದನಗಂಧಮುಂ ಮಲೆಯೆರಲ್ದುಂದೀಯೆ ಬಂದತ್ತು ಫಾಲ್ಗುನಂ (ಅರ್ಧನೇ. ೨-೫೭) ; ತದ್ವನದ ಕೊಳಂಗಳೊಳ್ದೆರೆಯಿನುಣ್ಮುವ ತಣ್ಬನಿಯಿಂದೆ ಪಾದ್ಯಮಿತ್ತು (ಚಂದ್ರಪು. ೬-೮೩) ; ಚಂದನದ ಪೊಟ್ಟಣಂಗಳಿಂ ಪಟ್ಟನೆ ಪನಿವ ತಣ್ಬನಿಯ ತಂದಲುಂ (ವರ್ಧಪು. ೫-೬೧ ವ). **ತಂಬನಿ:** ಬೇಗ ಮುಸಗಲಿಂತು ಶಾನೆ ದೂರವೆ ವೃಷ್ಟಿ ತಂಬನಿಗಿಂಬಾಗೆ ತಾನೆ ಮೊಳೆಯದೆ ಸೃಷ್ಟಿ ? (ಗೀವಿಂ. ೧೧೭-೩೧) : ತೊಳೆವ ಮಳೆಯನಿತರಿಂ ಚೆಲ್ವಡೆದುದೀ ಸುಗ್ಗಿ ಕುಳಿರ ತಂಬನಿಯನಿತರಿಂ ಮಿಂದಿರುವುದು (ಕಾಲಾರ. ೧೧೮-೨೪೭). [ ತಣ್$_2$ + ಪನಿ$_2$ ]

**ತಣ್ಬಸಲೆ** (ನಾ). ತಂಪಾದ ಹುಲ್ಲುನೆಲ,-ಹುಲ್ಲುಗಾವಲು : [illegible] ದನುಂಡಿಗೆಯುಂ ಬಿರುದಿಂಗೀ ಧರೆಯು ಬೆನ್ನೊಳೆನಿಸಿರ್ಪ್ಪವು ತದ್ವಿರಹಾರ್ತೆ ಮಯ್ಯನಿಕ್ಕಿರೆ ಕರಿಂಕುಪ್ಪೋದೆಡೆಯು ಪಜ್ಜೆ ತಣ್ಬಸಲೆಗಳೊಳ್ [illegible] ೪-೫೯). [ ತಣ್$_2$ + ಪಸಲೆ ]

**ತಣ್ಬಾಲ್, ತಂಬಹಾಲು, ತಂಬಾಲ್, ತಂಬಾ**[illegible] ತಣ್ಣನೆಯ ಹಾಲು : ಚಾರಿವರಿದು ಚಂದ್ರಸುರಧೇನು ಕೂತುರ್ಚಕೋರವತ್ಸಗೆ ಮೊಲೆಗುಡಲು ಪೂರಿಸಿ ಕಡೆವಾಯ್ದೋಳೆವ ತಣ್ಬಾಲೆನೆ ಸೋರಿತು ಬೆಳ್ದಿಂಗಳಳಿಗೆ (ಮೋಹತ. ೧೬-೫೫). ತಂಬಹಾಲು: ಉದಯುದಲಿ

ವಂದು ಸಿದೆ ತಂಬಹಾಲು ಅಸ್ತಮಯದಲಿ ವಂದು ಸಿದೆ ತಂಬಹಾಲ ಲೆಕ್ಕದಲಿ ಶ್ರೀ ಪಾರಿಸ್ವನಾಥ ದೇವರಲಿ . . . ಬಿಟ್ಟ ಧರ್ಮಸಾಧನ (ಕಇ. III-1, ೧೧-೪೫ ; 1542). **ತಂಬಾಲ್ :** ಎಳಗಂದಿ ಕರ್ದುಱುವಿನ ತೊಱೆದ ತಂಬಾಲಂ ಬೆರೆದು ಹನಿಸಿ (ರಾಮಾಶ್ವ. ೧೦೧-೧). **ತಂಬಾಲು :** ಚಿಲುಪಾಲು ತಂಬಾಲು ಕೆನೆವೆರಸಿದ ಪಾಲು ಸುಲಲಿತ ಬಟ್ಟವಾಲುಗಳ . . . ಲಲನೆಯರುಣಬಡಿಸಿದರು (ಕಂನವಿ. ೮-೯೧) ; ಶಾಂತಲಾದೇವಿ . . . ತಂಬಾಲಿನ ಗಿಂಡಿಯನ್ನು ತನಿವಣ್ಣುಗಳ ಹರಿವಾಣಗಳನ್ನು ನೋಡಿದಳು (ಸವತಿ. ೮೫). **ತಂಭಾಲು :** ಯಿಪ್ಪತ್ತನಾಲ್ಕು ಮುಡ ಭತ್ತಕೆ ತಂಭಾಲು ಯೆರಡು ಸಿದ್ದೆ ಹಾಲನೂ ಯರಡು ಹೊತ್ತು ನಡಿಸಿ ಬಹರು . . . ಹನೆರಡು ಮುಡೆ ಭತ್ತಕ್ಕೆವೊಂದು ಸಿದ್ದೆ ತಂಭಾಲನುವೊಂದು ಹೊತ್ತು ನಡಸುಉಪದು (ಕಇ. III-1, ೧೧-೮ ; 1542).

[ ತಣ್$_2$ + ಪಾಲ್$_1$ ]

**ತಣ್ಬಿಸಿಲ್, ತಣ್ಬಿಸಿಲು** (ನಾ). ೧. ತಂಪಾದ ಬಿಸಿಲು ; ತೀಕ್ಷ್ಣವಲ್ಲದ ಬಿಸಿಲು ; ಎಳೆಬಿಸಿಲು ; ಹಿತವಾದ ಬಿಸಿಲು : ಅನುಕ್ರಮದಿಂ ತಣ್ಬಿಸಿಲಾಯ್ತನಂತರಂ ಪೊಂಬಿಸಿಲಾದುದು (ಪಂರಾವಿ. ೧೧-೧೭೭) ; ರವಿಕಿರಣಂ ನೀರೋಡುತ್ತಿವೆ ತಣ್ಪಂ ಬೀಱುತಿವೆ ರಥಾಂಗಕುಲಂಗಳ್ ತವೆ ತಣ್ಬಿಸಿಲೊಳ್ ನಿಂದಿರ್ದಿವೆ ಮೇಘಂ ಹಿಂಡಿ ಹರಹಿದಂತಿವೆ ನಭದೊಳ್ (೧೮೪. ೯-೬೩) ; ಎಸೆದನಚ್ಚರಿ ನಡುವಗಲಿವನೊಬ್ಬ ತಣ್ಬಿಸಿಲ ಭಾಸ್ಕರ ನೋಯೆಂದನಿಸಿ (ಭರಥ. ೩-೨೪) ; ತರಣಿ ನಿಶಿಸಂಗಮಂ ಬಯಸಿ ವಿಧುವೇಷಮಂ ಧರಿಸಿ ಬರಲೊಗೆದ ತಣ್ಬಿಸಿಲೊ ಪೇಳೆಂಬಿನಂ ಕರಮೆ ಸೆದುದ್ದೆದೆ ಚಂದ್ರಾತಪಂ (ಜಬಪು. ೯-೩೦); ನೇಸರಿದೊ ತಣ್ಬಿಸಿಲ ಬೆಳ್ಮಳೆಯು ಕರೆಯುತಿದೆ (ಹಪ್ಪರ. ೫-೭೬). ೨. ತಂಪಾದ ಕಾಂತಿ,–ಪ್ರಕಾಶ: ಉತ್ತಂಸ ಮಣಿಮರೀಚಿಗಳಿಂ ಭೂಪಾಲನ ಚರಣಸರೋಜಕ್ಕೋಲಗಿಸಿದನುದಯ ಸುಂದರಂ ತಣ್ಬಿಸಿಲಂ (ಪಂರಾವಿ. ೨-೫). ೩. ಬೆಳುದಿಂಗಳು ; ಚಂದ್ರಿಕೆ : ನೆಱೆದಿಂಗಳ ತಣ್ಬಿಸಿಲ್ಮುಗುಳ್ನಲ್ಲಿಗೆ ಬಂದ ಮಾವು . . . ತುಂಬಿಯ ಗೇಯ ಮೆಂಬಿನಂ ಬಲ್ಲವರಂ ಮನಂಗೊಳಿಸುಗುಂ ಕೃತಿ (ಮಲ್ಲಿಪು. ೧-೪೪). **ತಣ್ಬಿಸಿಲು :** ೨. ಎಱಗುವ ದಿವಿಜರ ಮುಕುಟದ ತುಱುಗಿದ ಮಾಣಿಕದ ತಣ್ಬಿಸಿಲುಗಳ ಪೊಳಪಿಂ (ಎಕ. VI, ಚಿಕ್ಕಮ. ೧೬೦-೪೪ ; 1103).

[ ತಣ್$_2$ + ಬಿಸಿಲ್ ]

**ತಣ್ಬಿಸಿಲು** ‘ತಣ್ಬಿಸಿಲ್’ ನೋ.

**ತಣ್ಪುಳಿಲ್** ‘ತಣ್ಪುಟಿಲ್$_1$’ ನೋ.

**ತಣ್ಪುಟಿಲ್$_1$, ತಣ್ಪುಳಿಲ್, ತಣ್ಪುಳಿಲ್** (ನಾ). ತಂಪಾದ ಮಳಲು,–ಮರಳ ದಂಡೆ : ತರುಣಿಯರಾ ವಿಲಾಸ ಕುಸುಮಾಸ್ತ್ರನಿಕ್ಷೇಪಿಸೆ ಕಾಮತಾಪದಿಂ . . . ಕೊರಗಿ ಮೃಣಾಳನಾಳಿಕೆಗೆ ಚಂದನದಣ್ಕೆಗೆ ತಣ್ಪುಟಿಲ್ಗೆ ತಣ್ಗರಗದ ಸೂಸುನೀರ್ಗೆ ಕೊಳವೇರ್ಗೊಡಲಂ ಗುಱಿಯಾಗೆ ಮಾಡುವರ್ (ಮಲ್ಲಿಪು. ೩-೨೮); ಪಾಸಿದ ಪಸೆಯ ಪಸರದಂತಸದಳಮೆಸೆವ ನುಣ್ಪೆಳಂತಿಗೆ ಮಟಲ ತಣ್ಪುಟಿಲೊಳ್ ವಿಲಾಸಂಬಡೆದ ಬಾಲಸಹಕಾರನಂದನಂ (ಅನಂಪು. ೭-೭ ವ). **ತಣ್ಪುಳಿಲ್ :** “ತಣ್ಪುಳಿಲನೆ ಸೈಕತಂ” (ಜಶುನಿ. ೧೦). **ತಣ್ಪುಳಿಲ್ :** ಸುಖದ ತನಿರಸದ ಪೆರ್ಮಡು ಸುಖದೊತ್ತಿನ ಸುತ್ತಸುಖದ ತಣ್ಪುಳಿಲನಿಕುಂ (ಶ್ರೀಪದಾ. ೭೭) ; ತಳಿರ್ಜೊಂಪದೋಪರಿಯ ತಣ್ಪುಳಿಲೆಡೆಯೊಳ್ಪುಸುಪ ಚಂದ್ರಕಾಂತದ ಘಟ್ಟದೊಳ್ . . . ತೀವಿ ಪಥಿಕರ್ಗೆಱಗುಂ (ವೃಷವಿ. ೪-೨೬) ; ತಣ್ಪುಳಿಲಿರ್ಪೆಡೆಯೊಳುಮಾರಪೆಗಳ ತಣ್ಣೆಳಲೊಳು (ಗೊಮ್ಮಟ. ೩-೧೨೦). [ ತಣ್$_2$ + ಪುಟಿಲ್$_1$ ]

**ತಣ್ಪುಟಿಲ್$_2$** (ನಾ). “ತಂಪಾದ ತೋಪು” (ಪಂಪದೀ. ೧೨೧) : ಎಲ್ಲಿ ಕೊಳನೆಲ್ಲಿ ತಣ್ಪುಟಿಲೆಲ್ಲಿ ಲತಾಭವನಮೆಲ್ಲಿ ಧಾರಾಗೃಹಂ (ಪಂಪಭಾ. ೩-೧೯).

[ ತಣ್$_2$ + ಪುಟಿಲ್$_2$ ]

**ತಣ್ಬೆಮರ್** (ನಾ). ತಣ್ಣಗಿರುವ ಬೆವರು : ಆತನ ರೂಪವೆಂಬಾರು ಸುಧಾರಸಮಂ ನಯನಂಗಳೆಂಬ ಸತ್ಪಾತ್ರೆಗಳಲ್ಲಿ ಕಾಮಿನಿಯರಾತುರದಿಂ ಕುಡಿದಂತರಂಗದೊಳ್ನೂತನಮಾಗಿ ತೀವಿದೊಡಮುಣ್ಮುವ ತಣ್ಬೆಮರೊಂದು ದಂಭದಿಂದಾತತಮಾಗಿ ತಾಂ ಪೊಱಗೆ ಪೊಣ್ಮದುದೆಂಬಿನಮೊಪ್ಪಿ ತೋಱುಗುಂ (ಧಾರಪು. ೨-೩). [ ತಣ್$_2$ + ಬೆಮರ್$_2$ ]

**ತಣ್ಬೆಳಗು, ತುಂಬೆಳಕು, ತಂಬೆಳಗು** (ನಾ). ೧. ತಂಪಾದ ಬೆಳಕು ; ಶೀತಲವಾದ ಕಾಂತಿ : ನುಣ್ಪುಟಿಲೊಳಗದಿರ್ಮುತ್ತೆ ಪವಣ್ಪಡೆ ಕಟ್ಟಲಿಸಿ ಬೆಳೆದು ಬಳಸಿದೆರ್ಡದಂ ತಣ್ಬೆಳಗನೀಯೆ ಬೆಳತಿಗೆಗಣ್ಬೆಳಗೊಳಪೊಕ್ಕು ಚಪಳೆ ಕಳಿಕೆಯನಾಯ್ದಳ್ (ಚಂದ್ರಪು. ೭-೧೦೫) : ರತ್ನಕಲಶಂಗಳ ತಣ್ಬೆಳಗುಣ್ಮೆ ಪೊಣ್ಮೆ (ಕುಸುಮಾ. ೧೧-೧೪೦). ೨. ಬೆಳುದಿಂಗಳು ; ಚಂದ್ರಿಕೆ : ಅಭಿಷವವಿಧಿಯಂ ಮಾಡುವೆಂ ಚಂದ್ರಿಕಾವಾರಿಯಿನೆಂಬಂತೆತ್ತಲುಂ ತಣ್ಬೆಳಗಿನ ಬಳಗಂ ಸಿಂಪಿಸಲ್ . . . ಬಂದುವಯಿಸಿತುದಯಾದ್ರೀಂದ್ರದೊಳ್ಚಂದ್ರಬಿಂಬಂ (ಕಾದಂಉ. ೩೭೬) ; ಬಂದೆಳಮಾವೆಂದೊಡೆ ನೆಱೆದಿಂಗಳ ತಣ್ಬೆಳಗೆಂದೊಡುನ್ನಮುರಿವಂ ಗೊರವಂ (ಕಬ್ಬಿಗಾ. ೧೪೬). **ತಂಬೆಳಕು :** ೨. ತಂಬೆಳಕಾಗಲಿ ನಂಬೆಳಕೆನುವೊಲು ಹೊಂಬೆಳಕೇ ಹೊರಸೂಸಲಿ (ಅರಳು. ೩೦೧-೭) ; ಹೊತ್ತು ಮೇಲೇರಿದರು, ಬಿತ್ತರದಲೆ ಸುಡುಬಿಸಿಲ ಸುತ್ತ ಹೂಬಿಸಿಲು ದೀಪಾಗಿ ಬೆಳಗುವದು ಎತ್ತ ನೋಡಿದರು ತಂಬೆಳಕು (ಕನ್ನಜಾ. ೨೦೫). **ತಂಬೆಳಗು :** ೧. ಎಳೆಯ ಬೆಳದಿಂಗಳವೊಲೀಕೆಯ ತಳತಳಿಪ ಮುಖ ಚಂದ್ರಮನ ತಂಬೆಳಕು ಸುಳಿದುದು (ಕುವ್ಯಾಆ. ೮-೧೬). ೨. ಅಬ್ದುದು ಪಶ್ಚಿಮಾಬ್ಧಿಯೊಳ್ ತಂಬೆಳಗೊಂದೆ ಜೋಡೆ ನಲಿದಾಡೆ ಸಮುಜ್ಜ್ವಲ ಚಂದ್ರಮಂಡಲಂ (ಉದ್ಭಟ. ೧೦-೧೦೪). [ ತಣ್$_2$ + ಬೆಳಗು$_2$ ]

**ತಣ್ಬೆಳಗುವಣಿ** (ನಾ). ತಂಪಾದ ಬೆಳಕನ್ನು ಸೂಸುವ ಮಣಿ,–ರತ್ನ : ಅರಗಿಳಿಯೆಸಗುಂ ತಣ್ಬೆಳಗುವಣಿಯ ಪೇಟೆಯೊಳೆಂಬಾಗಿ ಮನಂಗೊಳಿಪ್ಪ ಮರಕತಮಣಿವೊಲ್ (ಉದ್ಭಟ. ೩-೨೫). [ ತಣ್ಬೆಳಗು + ಮಣಿ$_3$ ]

**ತಣ್ಪೊಲ** (ನಾ). ತಂಪಾದ ಹೊಲ : ತಣ್ಪೊಲಂ ಕಲ್ಮರಂ ಪೊರೆವ ನಾಡೆಲ್ಲಿ (ಕಾಲೂರ. ೩-೨೫). [ ತಣ್$_2$ + ಪೊಲ ]

**ತಣ್ಪೊಳೆ** (ನಾ). ತಂಪಾದ ಹೊಳೆ : ತಣ್ಣನೆಯ ನದಿ : ಅಸಿಯಳ ಯೌವನವನವುಂಟು ಲಾವಣ್ಯರಸದ ತಣ್ಪೊಳೆಯುಂಟು ಭಾವಾ (ಭರಥ. ೯-೪೭) : ಬೀಯೋಷಿಯದ ಬಯಲ ತಣ್ಪೊಳೆ ಆಸೋಪಸಿನ ದಡದಲ್ಲಿ ಚಳಿಗಾಲವನ್ ನೂಂಕೆ ಬಡಿಸುವನು (ಪಾರಸಿ. ೩೦-೬೯೨).

[ ತಣ್$_2$ + ಪೊಳೆ$_4$ (<ಪೊಟ$_1$) ]

**ತಣ್ಪೊಟ್ಟು** (ನಾ). ತಂಪು ಹೊತ್ತು : ತಣ್ಪೊಟ್ಟಾದುದು ತಳರ್ದುದು ನುಣ್ಪಸಲೆಗೆ ಹಂಸಮಿಥುನಂ (ಲೀಲಾವ. ೫-೭೫). [ ತಣ್$_2$ + ಪೊಟ್ಟು ]

**ತಣ್ಮಡು** (ನಾ). ತಂಪಾದ ನೀರಿನ ಮಡು; ತಣ್ಣೀರ ಕೊಳ: ಹಿಮವುಂಡು ಬಾಬ್ವ ತಣ್ಮಡುವಿನ ಪೂವೆ ಸುಟ್ಟಪುದು (ಅರ್ಥನೇ. ೪-೮೩) ; ಕಪ್ಪುರದ ಪುಳಿಲ್ ಪಗಿಲ್ತಲರ ಬಾಡಿನ ಸಣ್ಣ ಮಣಲ್ ಮನಕ್ಕೆ ಬಂದಿರೆ ಕೃತಕ ಪ್ರವಾಹಿನಿಯ ತಣ್ಮಡುವಂ[ಪಾಠಾಂ. ಳಲಂ] ಬಿಡದಿರ್ಪ ನಲ್ಲಳಂ (ವರ್ಧಪು. ೪-೭೩). [ ತಣ್$_2$ + ಮಡು$_2$ ]

**ತಣ್ಮಲೆ** (ಕ್ರಿ). ೧. (ಆಲಂ) ಹಿತವಾಗಿ ಪಸರಿಸು,–ಹರಡು,–ಆವರಿಸು. –ವ್ಯಾಪಿಸಂ : ಅರ್ಹತ್ಪದವಂ ನೆನೆಯುತ್ತುಮನುಪ್ರೇಕ್ಷೆಯ ಮನದೊಳ್ ತಣ್ಮಲೆಯೆ ಸೇಸೆಗೊಳ್ ಖಚರಪತೀ (ಆದಿಪು. ೨-೫೭); ಕಂಪು ತ[ಪಾಠಾಂ.ಕ]ಣ್ಮಲೆಯೆ ಪೂತ ಸುರಯಿಯಿಂ (ಪಂಪಭಾ. ೩-೨೨) : ಅರ್ಕನೆ ಸಸಿ ದಿವಸಮೆ ರಾತ್ರಿಯಾದುದೆನೆ ಕಲ್ಲೆಲೆಯೊಳ್ ಮಿಸುಕದೆ ಶಾಂತರಸಂ ಮಾನಸದೊಳ್ ತಣ್ಮಲೆಯೆ ನೆಲಸಿದಂ ಯೋಗೀಂದ್ರಂ (ಚಂದ್ರಪು. ೧೧-೧೩) : ಓರೊರ್ಮೆ ತಣ್ಮಲೆವ ಕಪ್ಪುರದ ಜಗಲಿಯೊಳ್ ಕರಮೆ ಕೊರಗಿದ ಶರೀರವಲ್ಲರಿಯ ನೀಡಾಡಿ (ವರ್ಧಪು. ೪-೫೮ ವ) : ಸುತ್ತಿ ನಡೆ ನೋಟ್ಪ ದೇವರ ಮೊತ್ತಂ

ತಣ್ಮಲೆಯೆ ಘುಸೃಣಮಲಯಜರಸಮಂ ಬಿತ್ತರದಿಂ ಕಱೆದಪುವಿದೆ ಮುತ್ತಿನ ಮಾಣಿಕದ ಲಂಬಣಂ ನುಣ್ಪೆಳಗಂ (ಅನಂಪು. ೫-೫೩) : ಸೇದೆಯಂ ನೂಂಕಿ ದೊಂದುಳಿಯಣ್ಮ ತಣ್ಮಲೆಯೆ (ಕಾಲೂರ. ೧೫೩-೩೩೫). ೨. (ಆಲಂ) ಹಿತವನ್ನು ಹೊಂದು ; ಸುಖಿಪಡು : ನೆಗಟ್ದೀ ಪಟ್ಖಂಡಮಂ ಸಾಧಿಸಿದೊಡೆ ಫಲವೇಂ ಭೋಗದಿಂ ಸಾಧ್ಯಮೇಂ . . . ಪಡೆಮ ಶಾಶ್ವತ ಶ್ರೀಯನೆಂಬುಜ್ಜುಗದೊಳ್ ಚಿತ್ತಂ ಕರಂ ತಣ್ಮಲೆಯೆ ನೆಱೆಯೆ ನಿಶ್ಚೈಸಿದಂ ಸಾರ್ವಭೌಮಂ (ಆದಿಪು. ೬-೩೬) ; ಎರೆ ಪರಪುಷ್ಪ ಕೇಳಿಲೆ ಮಧುವ್ರತ ಕೇಳ್ . . . ನೆನೆಯುತಿರ್ಪುದು ಕೂರ್ಪುದು ಸ್ವೈರಿಸಿರ್ಪುದಗ್ಗಲಿಸಿದ ನಲ್ಮೆ ತಣ್ಮಲೆಯೆ ಬೆನ್ನನೆ ಪೋದಪೆಮೆಮ್ಮ ಸ್ವಾಮಿಯಾ (ಅಜಿಪು. ೬-೧೧೩); ಅಂತು ತಣ್ಮ[ಪಾಠಾಂ. ಣ್ನ]ಲೆದು ನಲಿವ ಮನದೊಳ್ ತದೀಯ ವಿರಹೋಪಚಾರಿತ ಚೇಷ್ಟೆಗಳೆ ಮತ್ತಮವಿಚಳಂಗಳಾಗೆ (ವರ್ಧಪು. ೪-೬೩ ವ).

[ ತಣ್$_2$ + ಮಲೆ ? ]

**ತಣ್ಮಲೆಯೆಲರ್** (ನಾ). ಬೆಟ್ಟದ ತಂಗಾಳಿ: ತಣ್ಮಲೆಯಲರೊಳಲೆಮುದಯ್ ಸಿಪಿಲೆವಕ್ಕಿಯ ಸಿಳ್ಳಿನಿಂಚರಂ (ಶ್ರೀರಾಮಾ. ೩೦೧-೮).

[ ತಣ್$_2$ + ಮಲೆ$_4$ + ಎಲರ್ ]

**ತಣ್ಮಳಲ್** (ನಾ). = ತಣ್ಬುಟಿಲ್$_1$ : ಭಾಸುರದ ಪೌಳಿಯಂಗಣದಲ್ಲಿ ತಣ್ಮಳಲ ಪೊನ್ನ ಜಗುಲಿಯನಾಗಿಸಿ (ನವಮೋ. ೩೩-೧೭).

[ ತಣ್$_2$ + ಮಳಲ್ (<ಮಣಲ್) ]

**ತಣ್ಮೆಯ್** (ನಾ). ತಂಪಾದ ದೇಹ ; ತಣ್ಣನೆಯ ಒಡಲು.

**ತಣ್ಮೆಯ್ಯವೆಟ್ಟ**=ಹಿಮಾಲಯ ಪರ್ವತ; ಹಿಮವಂತ: ತ್ಮಣೆಯ್ಯವೆಟ್ಟ ಮಗಳಾಣ್ಮ (ನಂದಿಮಾ. ೧೮-೧೫). [ ತಣ್$_2$ + ಮೆಯ್ ]

**ತಣ್ವಣ** (ನಾ). ವೀಣೆಯ ಧ್ವನಿ : " ತಣ್ವಣ [ಪಾಠಾಂ. ತಿತ್ತಣಂ, ತಿಣ್ಣಣಂ] ವೀಣೆಯ ಧ್ವನಿಯಕ್ಕು " (ಮಂಗರಾ. ೩೪.೮).

**ತಣ್ವಳ್ಳಿ** (ನಾ). ಒಂದು ಊರಿನ ಹೆಸರು : ವಡಗಣ್ಣಾ ಸೀಮೆ ಪೆರಮುಟೆ ಪಡುವಣ್ಣಾ ಸೀಮೆ ತಣ್ವಳ್ಳಿ ಗಾರಪಾಟೆ(ಎಇ. XXI, ೩೯-೧೭೮: 8 ನೆಯಶತ). [P ಇದು ಹೊನ್ನಾವರದ ಸಮೀಪದಲ್ಲಿರುವ 'ತುಂದೊಳ್ಳಿ' ಇರಬಹುದು.] [ ? + ಪಳ್ಳಿ$_1$ ]

**ತಣ್ಸಾಲಿಗಾಲ್** (ನಾ). ಒಂದು ಕಾಲುವೆಯ ಹೆಸರು : ಅಸ್ತೆ ಬಸ್ತು ತಾಯೂರ ಇಗ್ಗಲಿಯ ಅರಿಪುರ ಮೂಡಿೂರ ಸನ್ನಿನಲ್ಲಿ ತಣ್ಸಾಲಿಗಾಲ ಮೂಡಣ ಪೇರೊಟ್ಟೆಯಿಂ (ಎಕ. III, ನಂಜನ. ೧೩೯-೧೯ ; 915).

[ ತಣ್ಸಾಲಿ$_0$ + ಕಾಲ್$_2$ ]

**ತಣ್ಹೆ** (ನಾ). ತೃಷ್ಣೆ ; ವಿಷಯಲಾಲಸೆ : ತಣ್ಹೆಯರಣ್ಯಮಂ ತರಿದು ತೋರ್ದನರಿಯಟ್ಠಂಗಿಕದ ಧಮ್ಮಮಗ್ಗಂ (ಗಿರಿವಿಂ. ೪೫-೭).

[ <ಪ್ರಾ. ತಣ್ಹಾ. / ಸಂ. ತೃಷ್ಣಾ ]

**ತತ** (ಗು). ೧. ವಿಸ್ತರಿಸಿದ ; ಬಿಚ್ಚಿದ ; ಹರಡಿದ ; ವ್ಯಾಪ್ತವಾದ : ವಿಳಸದ್ವಂದನಮಾಳೆಯಿಂ ತತಪತಾಕಾನೀಕದಿಂ ಕೀರ್ಣಪುಷ್ಪಳಸತ್ಸಂಗದಿ ಸಂಗನಾಲಟಹ ವಾದ್ಯವ್ರಾತದಿಂ ಗೀತದಿಂ (ಪುಷ್ಪಪು. ೧೩-೧೧೮). (ನಾ). ೨. ವೀಣೆ ಮೊದಲಾದ ತಂತೀವಾದ್ಯ : " ತತವೆಂಬುದು ತಂತ್ರಿಯೊಳನ್ವಿತಂ " (ವಸ್ತುಕೋ. ೭೯-೩೫) ; ಅತಿಮೃದುರವದಾಯಿಗಳಂ ತತ ಘನ ಸುಷಿರಾವನದ್ಧ ವಾದ್ಯಂಗಳಂ (ಆದಿಪು. ೫-೩೫); ದಿವಿಜವಾದಕ ಕರಹತ ತತವಿತತಘನ ಸುಷಿರಾವನದ್ಧವಾದಿತ್ರಂ ಸಂಗೀತ ತೂರ್ಯವಾಗೆ(ಶಾಂತಿಪು. ೧೦-೬೦ ವ) : ತತವಿತತಾದಿ ವಾದ್ಯಪ್ರಸರಮೇಳನದಲಿ ಸೊಗಸಲಾಡುತ್ತ ಕೇಳಿಸಲು (ಬಸಪು. ೩೭-೩) ; ತಂತಿಯಂ ಕಟ್ಟಿ ನುಡಿಸುವ ವೀಣಾದಿಕವೇ ತತವೆನಿಸುವುದು (ವಿವೇಕ. ೩೩೭). ೩. ಗಾಳಿ ; ವಾಯು. ೪. ಭೇರಿ ಮೊದಲಾದ ಚರ್ಮವಾದ್ಯ : ಚರ್ಮತತ ನಿಮಿತ್ತ ಪುಷ್ಕರ ಭೇರೀ ಮೃದಂಗಾದಿ ಪ್ರಭವಂ ತತವೆಂಬುದು. (ತತ್ತ್ವಪ್ರ. ೩೪೩). [ ಸಂ. ]

**ತತಲೋಚನ** (ನಾ). ವಿಶಾಲವಾದ ಕಣ್ಣು : [illegible] ತತಲೋಚನರೋಚಿಯಿಂ (ರಾಜಶೇ. ೭-೯೩). [ [illegible] ]

**ತತಾತಪ**(ನಾ). ಹರಡಿದ ಬಿಸಿಲು: ಸುಳಿಗೊಳುತೆತ್ತ ಸುಟ್ಟ [illegible] ಕೆಳಗೊಂದೆ ದುಂಡದುಂತುಳಿದ ತತಾತಪಂ ಬಳಸಿ ಪಲ್ಲವದಂತಿರೆ . . . ಬಟ್ಟ ಬಲ್ಮುಗಿಲ್ಮಳೆದುದು ಕಾಲಭೂಪತಿಯ ಓಲಿಯ ಸತ್ತಿಗೆಯೊಂದು ಲೀಲೆಯಂ (ರಾಜಶೇ. ೮-೯೫). [ತತ + ಆತಪ ]

**ತತಿ**$_1$, ತತು, ತತುವು (ನಾ). ೧. (ಮುಖ್ಯವಾಗಿ ಕೃಷಿಗೆ ಸಂಬಂಧಿಸಿದಂತೆ) ಸರಿಯಾದ ಸಮಯ ; ಹದವಾದ ಕಾಲ: ತತಿ ಮೀರದ ಹಾಗೆ ರಾಗೀ ಅಗೆ ಹೊಯ್ಯಿ (ಸ್ಯಾಂಡರ್. ೩೮) ; ಗಂಗಿ ಹತ್ತಿ ಕೆಂಪುಹತ್ತಿಯನ್ನು ಮೃಗಶಿರ ಆರದ್ರಿ ಪುಷ್ಯ ಮಳೆಗಳಲ್ಲಿ . . . ಬಿತ್ತಬೇಕು. ಈ ಹತ್ತಿಗೆ ಇದೇ ತತಿಯು (ಕೃಷಿಪ್ರ. ೭೬) ; ತತಿಗೆ ಸರಿಯಾಗಿ ಒಂದು ಮಳೆ ಹೊಡೀತು ಅಂದರ ಹದಿನೈದು ಚೀಲ ಕಾಳ ಬರತೈತಿ (ಜಾಬಲ. ೧೦). **ತತು** : ೨. ಸುಗ್ಗಿಯ ಕಾಲ; ಸುಗ್ಗಿ : ಈಗ ಮಾವಿನ ಹಣ್ಣಿನ ತತು (ರೂ೦). **ತತುವು**: ೧. (೬). [ ದೇ.ಗ ತಮಿ. ತೆಲು. ತತಿ ]

**ತತಿ**$_2$ (ನಾ). ಗುಂಪು ; ಸಮೂಹ ; ಶ್ರೇಣಿ : ಸಕಲಂ ತತಿ ವ್ರಾತಂ . . . ರಾಶಿ ಚಯ ಕುಳಮೆನಲ್ ಮತ್ತೆ ಸ್ತೋಮಕ್ಕೆ ನಾಮಮಕ್ಕುಂ " (ಮಂಗರಾ. ೧೩೬-೧) ; ಕಳಹಂಸ ಕೋಮಲ ಸ್ವರತತಿಯಿಂ ಕಳಾಪಿಗಳ ಚಾಪಳ ನಿಸ್ಸ್ವನದಿಂ ಬಹುಸಾರಸ ಪ್ರಭಾಸುರ ರುತಿರಾಜಿಯಿಂದ ವಿಪುಳಾನದಿ ನಾದಮಯಂ ನಿರಂತರಂ (ಕುಸುಮಾ. ೧-೮೩) ; ಸುಧೆಯು ಜನಿಸಲು , ಯಾ ವಿಬುಧರ ತತಿಗೆಱೆದಮರರ ಮಾಡಿದ್ಯೆ ನೀನು (ಸಂಧಪ. ೮-೯೦). [ ಸಂ. ]

**ತತು** 'ತತಿ$_1$' ನೋ.

**ತತುಕ್ಷಣ**$_1$, ತಕ್ಷಣ$_1$ (ನಾ). ಆ ಕ್ಷಣ ; ಅದೇ ಸಮಯ : ಮುತ್ತದ ಬೂದಿಯೂಜಿಲೆ ತಚ್ಚತುರ್ಗುಣಮೆನೆ ಕೊಂಡದನಟ್ಟು ಪೂಸಿದೊಡಂ ತತುಕ್ಷಣದೊಳೆ ಮಾಣಸುಗುಂ ಗುದಾಂಕುರದೇಟ್ಗಿಯುಂ (ಲೋಕೋಪ. ೯-೧೪೩) ; ಸದುಗುರುವಿನಂಘ್ರಿಸ್ಮರಣೆ ಜನಿಸಲು ಹಿಂಗುವುದು ಗರವದು ತತುಕ್ಷಣಕೆ (ನಿಜಾಗ. ೪-೧೫-೧೫). **ತಕ್ಷಣ**$_1$ : ತಕ್ಷಣದೊಳರಸನ ತಾಗಿ ದ್ರೋಣನ ಕಣಕಿ . . . ಸೆಣಸಿ ನಿಂದನು (ಕುಮಾದ್ರೋ. ೧೬-೪೮).

[ <ಸಂ. ತತ್‌ಕ್ಷಣ ]

**ತತುಕ್ಷಣ**$_2$, ತಕ್ಷಣ$_2$, ತಚ್ಚಣ (ಅ). ಆ ಕ್ಷಣದಲ್ಲಿ; ಆಗಲೇ; ಕೂಡಲೇ: ಆ ತತುಕ್ಷಣವೊಯ್ದುದಂ ಸಂಪ್ರೀತಿಯೊಳೆ ಮಾಡಿದಳು ಪಾಕವಂ (ಬಸಪು. ೩೪-೩೬) ; ಆ ತತುಕ್ಷಣ ಧನುವ ಬಿಸುಟು ವಿಧೂತರಿಪುಬಲ ಪಾರ್ಥನಿದ್ದನು ಹೊತ್ತ ದುಗುಡದಲಿ (ಕುಮಾದ್ರೋ. ೩-೬೩) : ಪೂತುರೆನುತಂಗದನು ಪುಟನೆಗೆದಾ ತತೂ[ ತು ] ಕ್ಷಣ ಖಳನ ಮುಂದಲೆಯಾತು ಹಿಡಿದರೆ ಕೊರಳು ಸಿಕ್ಕಿತು ಕೈಗೆ ಹಾರದಲಿ (ಕಾಶಿರಾ. ೩೮-೫೪). **ತಕ್ಷಣ**$_2$ : ಅವನು ತಕ್ಷಣವೆ ಪ್ರಶ್ನಿಸಿದನು (ಪುನರು. ೩೦೧). **ತಚ್ಚಣ** : "ತಚ್ಚಣ – ತತ್ಕ್ಷಣ = ಆಗಲೇ" (ತದ್ಭಕೋ. ೧೬).

[ <ತತುಕ್ಷಣ$_1$ ]

**ತತುವ**, ತತ್ತುವ (ನಾ). = ತತ್ತ್ವ : ಕಾಯುಸೌಖ್ಯಕೆ ಕಾಮಸುಖದ ವಿಡಾಯ ತತುವಕೆ ವೇಡೆಗೊಂಡು ಸಮಾಯಿಯಲಿ ದರ್ಗತಿಗೆ ದುಮ್ಮಾಳಿಸುವನಲ್ಲೆಂದ (ಕುಮಾಲ. ೮-೩೧). 'ತತುವಮಾರ್ಗ' ಪರಾ. **ತತ್ತುವ** : (೬). [ <ಸಂ. ತತ್ತ್ವ ]

**ತತುವಮಾರ್ಗ** (ನಾ). ತತ್ತ್ವದ ಹಾದಿ ; ತತ್ತ್ವಮಾರ್ಗ : ಶ್ರುತಿಕಥಾಭಾಗ ಪದ್ಯ . . . ತತುವಮಾರ್ಗದಿ ನುಡಿವ ಬಲು ಉನ್ನತ ಮಹಿಮರಾ ನೋಡಿದೆ (ಕೀರ್ತಮ. ೬೩). [ ತತುವ + ಮಾರ್ಗ ]

**ತತುವು** 'ತತಿ$_1$' ನೋ.

"ತನತೆಂದು ತನ್ನದಕ್ಕು" (ಕವಿರಾ. ೨೧೯) : ತನತೊಂದು ಜನ್ಮಮಂ ಸಫಲಂ ಮಾಳ್ಪುದು (ಆದಿಪು ೧೩-೧೨೦): ನಿನತೆನತು ತನತೆನಿಪ್ಪವು ಜನಿಯಿಸುಗುಂ ನಿನ್ನದೆನದುಂ ತನ್ನದೆನಿಪ್ಪನಿತಱೊಳಂ (ಶಮದ. ೧೪೭) : ತನತು ವಿಚಿತ್ರಮಪ್ಪ ನಡೆಮಾಡದ ಗಾಡಿಯು ಸದ್ವಿಮಾನಮಂ ತನತು ಸುರಮ್ಯಹರ್ಮ್ಯದ ವಿಳಾಸದ ರುಂದ್ರ ಫಣೀಂದ್ರ ಗೇಹಮಂ (ಪುಷ್ಪಪು. ೯-೧೧೧) ; ತನುವಿದು ತನತಲ್ಲೆಂದು ವಿಚಾರಿಸಿ (ಜಯುಕಾ. ೧೭-೩೨) : ನಿನಗೆಂದಾದೋದನಮಂ ತನತೆಂದುಂ ತಿಂದವಂಗಪಾಯಂ ಬರ್ಕುಂ (ಕಂದಶ. ೭೬). **ತನ್ನತು :** ತನ್ನತೂಟಂ[ಪಾಠಾಂ. ತನ್ನುಂಡೂಟಮಂ]ತನಗೆ ಜನ್ಮಾಪೂರ್ವಮಪ್ಪುದಱಿಂ ಮಹಾವಿಸ್ಮಯಂಬಟ್ಟು (ಧರ್ಮಾಮೃ. ೧-೧೫೪). **ತನ್ನದು :** ನೆಗಟ್ತೆವೆತ್ತ ಪಶಿಭಕ್ತಿಯ ಪ್ರೇಮೆಯ ಮಾನಸಿಕ್ಕೆಯಗ್ಗಲದ ಪೊಗಟ್ತೆ ತನ್ನದೆನೆ ಪೆಂಪು ಮನೋಹರಿಗಲ್ಲದಕ್ಕುಮೇ (ಆದಿಪು. ೧-೭೨); ತನ್ನದೆಂದೇ ಸ್ಮರಿಸಿ ಪಶುಗಂ ಪ್ರಾಣಪದವಾಗಿಪ್ಪುದಾ ಕಱುವು (ಬಸಪು. ೫೧-೨೨). **ತಮತು :** ನಿಮತು ಎಮತು ತಮತು : ವಿಕಲ್ಪದಿಂದವಱ ದ್ವಿಭಾವಮುಮುಂಟು – ನಿಮತ್ತು ಎಮತ್ತು ತಮತ್ತು – ಎಂದು (ಶಮದ. ೧೪೭ ವೃತ್ತಿ) : ಅಸಮ ಪದಂ ತಮತೆಂಬುದನೊಸೆದೀರೇಳ್ಪಗಕೆ . . . ಕಾಣಿಸುವರ್ (ಕಂದಶ. ೪೮). **ತಮತ್ತು :** ಪರಬೊಮ್ಮಂ ತಿಳಿದುಂ ತಮತ್ತು ಕಱಿಯಂ ತೀರ್ಥಂಗಳೊಳ್ನೀಗಿಯುಂ (ಮೃಸೂಮ. ೫-೩೭). **ತಮುತು :** ವಿಭುಗಳ್ ನಭದಿಂ ಬಂದು ಪೊಕ್ಕಲ್ಲಿ ಧೈರ್ಯಚ್ಯುತಿಯಿಂ ಕೊಂಡೋಡಿ ಪೋದರ್ ತಮುತೊಡಮೆಯನೇಂ ಬಂದರೇಗೆಯ್ದರೆಂಗುಂ ಕ್ಷಿತಿಪಾಳಾನೀಕಂ (ನೇಮಿಪು. ೧೧-೧೧೭). **ತಮುತ್ತು :** ತಮುತ್ತಿರ್ವರುಮಂ ನೋಳ್ಪ ಪುಳಿಂದಿಯರಂ ನೋಡುತ (ಜಯುಕಾ. ೦೫-೩೫). **ತಮ್ಮತು :** ನಿಮ್ಮತಮ್ಮತು ತಮ್ಮತೆನೆ ಬಹುವಚನ ಮಕ್ಕುಂ (ಶಬ್ದಸ್ಮೃ. ೬೦). **ತಮ್ಮದು :** ಬೆಳೆದ ಬೆಳಸಿನಾಯವು ತಂಮದು (ಎಇ. XXIII, ೩೦-೭೫ ; 1265). **ತಮ್ಮುತು :** ಆ ಪಾಂಡವರ್ ತಮ್ಮುತಯ್ವರುಮಿರ್ದರ್ ದ್ರುಪದಾಧಿರಾಜಪುರದೊಳ್ (ಪಂಪಭಾ. ೪-೨): ತಮ್ಮುತಿರ್ವರುಂ ಪೊನ್ನಿಗನಿಂ ಬರೆಯಿಸಿದರ್ . . . ಸಲೆ ಪುರಾಣ ಚೂಡಾಮಣಿಯಂ (ಅಜಿಪು. ೦-೩೪). **ತಮುತ್ತು :** ಇವು ತಮ್ಮುತ್ತಿಬ್ಬರ ಕಲ್ಗಳ್ (ಎಇ VI, ೧೭೧-೫ ; 765) ; ತಮ್ಮುತ್ತು ಮೂವರಾ ಪಾಶುಪತಂ (ಎಇ. IX, ೦೮-೫ : ಸು. 900) ; ತಮ್ಮುತ್ತಿಬ್ಬೊರ್ಬರ್ ತುಱುಗೋಳೊಳ್ ಕಾದಿ ಸತ್ತರ್ (ಎಕ. IV, ಹುಣಸೂ. ೯೨-೮ ; ಸು. 920). [ <ತಾನ್ ]

**ತನದೆಕಲ್** (ನಾ). ಒಂದು ಊರಿನ ಹೆಸರು (?) : ಭಟರ್ ತನದೆಕಲ್ಲ ತುರುಗಳೊಳ್ ಕಾದಿ ಸತ್ತು ಸಗ್ಗತರ್ ಆದರ್ (ಮೈಆರಿ. ೧೯೨೩, ೩೧-೧೫ : 8ನೆಯ ಶತ). [ ? ]

**ತನನ, ತನನನ** (ನಾ). ಹಾಡಿನ ಪ್ರಾರಂಭದಲ್ಲಿ ಗುಣುಗುಟ್ಟುವಿಕೆ ; ತನ್ನಲ್ಲಿ ತಾನು ಹಾಡನ್ನು ಗುಣುಗುಣಿಸುವುದು : 'ತನನವೆನ್ನು' ಪರಾ. **ತನನನ:** ತನ್ನ ಕೊಂದುಕೊಂಬ ಜನ ಭಾವವಿರದ ತನನನ (ಅರಳು. ೧೧೯-೧೨).

**ತನನನ** 'ತನನ' ನೋ.

**ತನನನವೆನ್ನು** 'ತನನವೆನ್ನು' ನೋ.

**ತನನವೆನು** 'ತನನವೆನ್ನು' ನೋ.

**ತನನವೆನ್ನು, ತನನನವೆನ್ನು, ತನನವೆನು** (ಕ್ರಿ). ೧. ಹಾಡಿನಲ್ಲಿ ಮಗ್ನವಾಗು. ೨. (ಆಲಂ) ಆನಂದಪರವಶವಾಗು: ಪತಿಯ ಪ್ರಾಣಗಳೊಡನೆ ತನನವೆಂದಿತು ದೇಹ (ಚಿಂತನ. ೦೫-೧೧). **ತನನನವೆನ್ನು :** ೨. ದೊರೆತ ಕುಮಾರನನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡು ಮನವೆಲ್ಲ ತನನನವೆನ್ನುತಿರಲು . . . ಹೊರಟನು (ಕರಡ. ೭೯೪). **ತನನವೆನು:** ೨. ನಿನ್ನ ಮನನದಿಂದ ತನನವೆನುತಿದೆ ತನು ಪಾವನಾ (ಗರಿ. ೧೧೩-೫). [ತನನ+ಎನ್ನು(<ಎನ್₁)]

**ತನಮಾನಿ** (ನಾ). ಒಂದು ಬಗೆಯ ಕಂಠಾಭರಣ : ತನಮಾನಿ ವಜ್ರ ಪಚ್ಚೆದ ಬಳಿ ಮೂಗಿನಲಿ ರನ್ನದ ಮೂಗುತಿ ಇಟ್ಟಿಹಳು (ಸಿದ್ಧಪು. ೧೯-೭೩).
[ ←ಮರಾ. ತನಮಣೀ, ತನ್ಮಣೀ ]

**ತನಯ** (ನಾ). ಮಗ; ಸುತ : "ಸೂನುಃ, ಸಂತತಿಃ . . . ತನಯಃ, ಸ್ತನಂಧಯಃ, ಅಪತ್ಯಂ – ಈ ೧೨ ಮಗವು" (ಹಲಾಯು. ೮೨-೩೪೩) : ತನಯಶತಮಾದುದಲ್ತೆನಗನಿವಾರಿತ ದುಃಖ ಶತಮೆ ತಾನಾದುದು (ಪಂಪಭಾ. ೧೪-೮) : ಅತ್ರಿಮಚ್ಚೆಗಮಾದಂ ತನಯಂ ಪಡೆವಳತ್ತೆಲಂ (ಅಜಿಪು. ೧-೪೧) ; ತನಯನಂ ಪೆತ್ತಳ್ ಗಡಂ ನಿನ್ನ ಪತ್ನಿ (ಜಗವಿ. ೩-೨೩).
**ತನಯಳ್** = ಮಗಳಂ : ತನಯಳಂ ಬಸವಂಗೆ ಭಕ್ತಿಯೊಳಿತ್ತು ಶರಣೆಂದ (ಬಸಪು. ೪ ಸೂಚನೆ). [ ಸಂ. ]

**ತನಯಸ್ಥಾನ** (ನಾ). [ಜ್ಯೋತಿ] ಜಾತಕದಲ್ಲಿ ಲಗ್ನದಿಂದ ಐದನೆಯ ಸ್ಥಾನ ; ಪುತ್ರಸ್ಥಾನ : ವನಜದ್ವಿಟ್ಸುತನೊಂದಿದಂದುದಯದೊಳ್ ಪ್ರಾಜ್ಞಂ . . . ತನಯಸ್ಥಾನದೊಳಾತ್ಮಮಂತ್ರಿ ರಿಪುವೊಳ್ ನಿಶ್ಯತ್ರು (ಜಾತತಿ. ೧೮-೦೦). [ ತನಯ + ಸ್ಥಾನ ]

**ತನಯೆ** (ನಾ). ಮಗಳು : "ದುಹಿತಾ, ತನಯಾ, ಪುತ್ರೀ–ಈ ೩ ಮಗಳ್" (ಹಲಾಯು. ೮೩-೩೫೧) : ತನಯೆ ತಪದಿಂದ ನೀ ನಿನ್ನನೆಯಲ್ಲದೆ ನಮ್ಮ ಕುಲಮುಮಂ ಬೆಳಗಿದೆ (ಜಾಂತಿಪು. ೪-೧೧೫). [ ಸಂ. ತನಯಾ ]

**ತನಸಿಮೆಳೆ** (ನಾ). ಒಂದಂ ಬಗೆಯ ಸಸ್ಯ : ತಂದಪ್ರಸಿ, ತಂಡರಸಿ, ತನಸಿಮೆಳೆ (ಮೈಜಿಗ. ೪೦-೮೧೭). [ ತನಸಿ₀ + ಮೆಳೆ ]

**ತನಾಲುಮೊನಾಲು** (ನಾ). ಆನೆಯ ಒಂದು ಬಗೆಯ ಅಲಂಕಾರ ವಸ್ತು (?) : ಆನೆಗೆ ಅಲಂಕಾರಕ್ಕೆ . . . ಹಿತ್ತಾಳೆ ಗುರಾಣಿಗೆ ಚಿಂನದ ಮುಲಾವಿನ ಗುಬ್ಬಿ ೪ ಸಹ ೧ ಯಿದಕ್ಕೆ ಚಿಂನದ ಮುಲಾವಿನ ತನಾಲುಮೊನಾಲು ಬೆಳ್ಳಿಸರಪಣೀ ಸಹ ಕತ್ತಿ ೧ (ಎಕ. XIV, ನಂಜನ. ೨೯೨ ಪುಟ. ೧೪೨ ; 1847).
[ ? ]

**ತನಿ₁** (ಕ್ರಿ). ತನಿತು, ತನಿತ್ತು (ಭೂತನ್ಯೂ). ೧. ಒಂಟಿಯಾಗಿರು ; ಪ್ರತ್ಯೇಕವಾಗಿರು ; ಬೇರೆಯಾಗಿರು : ಪೊಟ್ಟೆ ತನಿತುಱಿಯೆ ಪಕ್ಕಿ ಪಾಱಿದನಿತೇ ಒಡಲೊಡನೆ ಉಸಿರಿನೆಡೆ ನಂಟು (ಕುಱಳ್. ೧-೩೪-೮). ೨. ಪಕ್ವವಾಗು; ಹಣ್ಣಾಗು; ಮಾಗು : ತನಿತು ತೊಡಂಬೆವಿಟ್ಟುದಿರ್ದ ಪಣ್ಗಳನಟ್ತಿಯೆ ಮೆಲ್ದು (ಚಂದ್ರಪು. ೩-೧೫). ೩. ಹೆಚ್ಚಾಗು; ಅತಿಶಯವಾಗು : ಗೀತವಾದ್ಯ ನಿನದಂ ಜಗಮಂ ಪಿಡಿದಿರ್ದ ಗಾಳಿಯೊಳ್ ಮೇಳಿಸೆ ತಾಂಡವಂ ತನಿತು ದಂದಮರೇಂದ್ರ ತನುಪ್ರಯೋಗದಿಂ (ಮಹಾಸೇ. ೯-೧೧). ೪. ಸೊಗಸಾಗು; ಹಿತವಾಗು: ಮೊಱೆಯುಂ ವಿಡಾಯುವ ಮಾತು ಕಿಂದೆಸಪ ನಾಣ್ದಾಣಂ ತನಿತ್ತೆಂಬು ಮೈಮಱೆಪಂ . . . ಅಳುಂಬಂ ಕೂಟದೊಳ್ ನಲ್ಲರಾ (ಚಂದ್ರಪು. ೮-೭೮); ನ್ಯೂನತೆಗಳನೀ ಜಗಮಂ ತೋರಿ ಸಾರಿ ಪೆಣೆದು ಬಿದಿ ಬಿಸಾಡೆ ನರರ ಮಿಡುಕಿನಾ ನೆರೆನೆರೆವೋಲ್ ತಿರ್ದುವ ಮೊಗಸಂ ಮೆಲ್ಲನೆ ಪರಿಪೂರ್ಣತೆಗೊಲ್ದೇರುವಾರ್ಪನವರ ತನಿವ ಗೆಲ್ಲವ ಕವಿ ನಿರವಿಪಂ (ಸಂಸಪ. ೧೫-೯).

[ದೇ.॥ ತಮಿ. ಮಲ. ತನಿ; ತೆಲು. ತನರು, ತನಿಯು; ಮಲ್ತೊ. ತನ್ಯರೆ]

**ತನಿ₂** (ನಾ). ೧. ಒಂಟಿಯಾಗಿರುವಿಕೆ ; ಏಕಾಂತ ; ಏಕಾಂತತೆ : ಬಯ್ತಿಡಿಮ್ ಕಲ್ಲಱಿಯೊಳ್, ಒರ್ವಳನೆ ತನಿಯಾಗಿ (ಅಂತಿಗೊ. ೯೦-೮೩೫) : ಮನೆಯಲ್ಲಿ ತನಿಯಾಗಿ ಹಾಡುವಾಗ ಕಾಣದ ಒಂದು ಹೊಸ ಸೊಗಸು, ಈ ಮೇಳಗಾನದಲ್ಲಿ ಕಂಡುಬರುತ್ತದೆ (ಕರ್ನಾಟ. ೩೫೭) : ಈಗ ನಾವಿಬ್ಬರೇ ತನಿಯಾಗಿ ಒಟ್ಟಿಗಿದ್ದೆವು (ಕುಟುಂಸಾ. ೧೫೩) ; ಪುಷ್ಪಿಸಿದ ಮರಗಳ ಮಧ್ಯದಲ್ಲಿ ಪರಾವಸುವಿನ ಹೆಂಡತಿ ತನಿಯಾಗಿ ನಡೆಯುತ್ತಾ ಇದ್ದಳು (ವ್ಯಾಸಪಿ. ೧೭೧). ೨. ಅಂದ; ಸೊಗಸು 'ತನಿಗೆಡು' ಪರಾ. (ಗು). ೩. ಪ್ರತ್ಯೇಕವಾದ ; ಬೇರೆಯಾದ: ಕೃಷ್ಣಯ್ಯರ್ ಅವರ ತನಿ ಪಿಟೀಲು [illegible]

ಏಪರ್ಾಡಾಗಿತ್ತು (ನಾಕಲಾ. ೯೧). ೪. ಚೆನ್ನಾಗಿ ಬೆಳೆದ ಪುಷ್ಟವಾದ ; ಪಕ್ವವಾದ ; ಪೂರ್ಣವಾಗಿ ವಿಕಾಸಗೊಂಡ. 'ತನಿಗರುಳು', 'ತನಿಗಬ್ಬು'. 'ತನಿಜವ್ವನ' ಪರಾ. ೫. ಹೆಚ್ಚಾದ; ಅತಿಶಯವಾದ: ಉಕ್ಕಿದುದು ತನಿವೀರರಸ ಕುದಿದುಕ್ಕಿ ಹರಿದುದು ರೌದ್ರರಸ (ಕುವ್ಯಾಕ. ೧೬-೨೭) : ತನಿನೇಹದೆಸವ ಜಾಣೆನ ಬರ್ದಿನೆಯರು (ಧ್ರುವೇ. ೨-೧೪) : ಭಾವಿಸೆ ಸೊಗದ ಸುಗ್ಗಿಯು ತನಿಸೊಕ್ಕೆನ್ನನಾವರಿಪುದು ಪಾತ್ರೇವೆ (ಹದಿಬ. ೦-೪೩). ೬. ಹದವಾದ ; ಹಿತಕರವಾದ ; ಸವಿಯಾದ. 'ತನಿರಸ', 'ತನಿವಾಲ್' ಪರಾ. ೭. ಹೊಚ್ಚ ಹೊಸತಾದ ; ತಾಜಾ : 'ತನಿದುಡಗು', 'ತನಿರಕುತ' ಪರಾ. ೮. ನಿರ್ಮಲವಾದ: ಪರಿಶುದ್ಧವಾದ. 'ತನಿಜೊನ್ನ', 'ತನಿಯೆಣ್ಣೆ' ಪರಾ.

ತನಿತನಿ (ದ್ವಿರುಕ್ತಿ) : ಶಾಂತಲಾದೇವಿ ಊಳಿಗದ ಹೆಣ್ಣೊಂದೊಂದನ್ನೂ ತನಿತನಿಯಾಗಿ ನೋಡಿದಳು (ಸವತಿ. ೨೬೭) : ನಾಲ್ಕು ಕಡೆಗಳಲ್ಲೂ ತನಿತನಿಯಾಗಿ ಏಕಘನದ ನಿಡುಬಂಡೆಗಳು—ವಿಶ್ವಶಿಲ್ಪಿ ನಿರ್ಮಿಸಿದ ಅದ್ಭುತ ಕಮಲದ ದಳಗಳಂತೆ (ನಂಟರು. ೧೩೫). ತನಿಯಳ್ = ಒಂಟಿಯಾಗಿರುವವಳು ; ಏಕಾಕಿನಿ : ತನ್ನವನ ಕಳೆದುಕೊಂಡಿನಿಯಳ್ . . . ತನ್ನೊಳೇ ಬಾಡುವಳು ತನಿಯಳ್ (ಪಾರಸಿ. ೨೦-೪೫೮). [ <ತನಿ₁ ]

ತನಿ₃ 'ತಣಿ₃' ನೋ.

ತನಿಕಛೇರಿ (ನಾ). ಒಂದು ವಾದ್ಯಕ್ಕೆ ಅಥವಾ ಒಬ್ಬನೇ ಸಂಗೀತಗಾರನಿಗೆ ಪ್ರಾಧಾನ್ಯ ಏರುವ ಸಂಗೀತ ಕಚೇರಿ : ಆಧುನಿಕ ಸಂಗೀತದಲ್ಲಿ ಪಿಟೀಲು. ತನಿಕಛೇರಿ ನಾಡಲೂ ಉಪಯೋಗವಾಗಿದೆ (ಸಂಗೀದಂ. ೧೯೫).

[ ತನಿ₂ + ಕಛೇರಿ (<ಕಚೇರಿ) ]

ತನಿಕಾಧಿಕಾರಿ (ನಾ). ಪರೀಕ್ಷೆ ಅಥವಾ ವಿಚಾರಣೆ ನಡೆಸಲು ಬಂದ ಅಧಿಕಾರಿ : ಎಲ್ಲ ಮಟ್ಟದಲ್ಲೂ ತನಿಕಾಧಿಕಾರಿಯಂತೆ ಶಿಕ್ಷಿಸುವ ಮನೋಭಾವದ ದರ್ಪದಿಂದ ಕೆಲಸ ಮಾಡುವುದು ತಪ್ಪಿ ಸ್ನೇಹಿತನಂತೆ, ಹಿರಿಯ ವ್ಯಕ್ತಿಯಂತೆ ವರ್ತಿಸಬೇಕು (ಶಿಕ್ಷದ. ೭೫೪).

[ P ಇದು ವ್ಯಾಕರಣಬದ್ಧವಲ್ಲ ]

ತನಿಕಿ 'ತನಕಿ' ನೋ.

ತನಿಕೆ 'ತನಕಿ' ನೋ.

ತನಿಖಿ 'ತನಕಿ' ನೋ.

ತನಿಖಿಸು (ಕ್ರಿ). ಪರಿಶೀಲಿಸು ; ಪರೀಕ್ಷಿಸು : ಸುರೇಶನ ಮಾತಿನಲ್ಲಿಯ ಸತ್ಯಾಂಶವನ್ನು ವಿಶ್ವಾಸ ತನಿಖಿಸಿ ನೋಡಿದ (ದೀಪದ. II, ೨೧೯).

[ ತನಿಖೆ (<ತನಕಿ) + – ಇಸು₃ ]

ತನಿಖೆ 'ತನಕಿ' ನೋ.

ತನಿಖೆವರದಿ (ನಾ). ಪರೀಕ್ಷೆ ಅಥವಾ ಪರಿಶೀಲನೆಯಲ್ಲಿ ಕಂಡು ಬಂದ ಅಂಶಗಳನ್ನು ತಿಳಿಸುವ ವರದಿ: ಸ್ಕೂಲುಗಳ ತನಿಖೆವರದಿಗಳನ್ನು ಬರೆದಿರಲಿಲ್ಲ (ತಂಗಕೆ. ೨೦). [ ತನಿಖೆ(<ತನಕಿ) + ವರದಿ ]

ತನಿಗಂಡ (ನಾ).(ಕತ್ತರಿಸಿ)ಬೇರೆಯಾದ ಮಾಂಸ: ಮುಜಿದ ಮೂಳೆಗಳುಂ ಪಜಿದ ಪೊರ್ಕುಟ್ಟಗಳುಂ ಸೋರ್ವ ಕರುಳ್ಗಳುಂ ಆರ್ವ ಮರುಳ್ಗಳುಂ ಕೆತ್ತುವ ತನಿಗಂಡದುಂ ಕುಣಿವ ಮರುಳ್ತಂಡಮುಂ (ಪಂಪಭಾ. ೧೩-೫೪ ವ): ತನಿಗಂಡದ ತುಂಡು ಭೋಂಕನೆ ಸೂಸೆ (ನೇಮಿಪು. ೧೧-೧೮೧).

[ ತನಿ₂ + ಕಂಡ₁ ]

ತನಿಗಂಧ (ನಾ). = [illegible] : ಶೋಭಿಸುವ ತನಿ[ಪಾಠಾಂ. ಸು]ಗಂಧ [illegible] ಪಸರ ಸಿದ್ರಾಭಂಗವಾಗಿ ಕಂಡವರ್ (ತ್ರಿಮಿಥಾ. ೨೬-೮).

[ ತನಿ₂ + ಗಂಧ ]

ತನಿಗಂಪ (ನಾ). [illegible]

ಗೊಂತಿಕ್ಕುತಿದ್ರ್ದುದು ವೀರಕ್ಕಳ ಬಿಳ್ದ ತೋಟ್ಟಿಡಿದ ಖಳ್ಗಂ ಪೊಯ್ವ ಸೂಳ್ಸೋಟುತಿದ್ರ್ದುದಿದೇನದ್ಭುತಮಾಯ್ತೊ ವೀರವಿಭವಂ ಸಂಗ್ರಾಮ ರಂಗಾಗ್ರದೊಳ್ (ಎಕ. V, ಬೇಲೂರು. ೦೭೧-೦೭ ; 1160). [ ? ]

ತನಿಗಂಪು (ನಾ). ಅತಿಶಯವಾದ ಸುವಾಸನೆ ; ಶ್ರೇಷ್ಠವಾದ ಸುಗಂಧ: ಅಲರ್ದರೆಗಳಿಗೆಯೆ ಜಾದಿಯ ಮಲೆಪುಂ ಮಲ್ಲಿಗೆಯ ಪೊಂಕಮುಂ ಬಟ್ಟೆಕವನಾರ್ ತಲೆಯೊಳ್ ತಾಳ್ದುವರೆಂದೇನಲೆದುದೊ ಸಿಂಧುರಮೆ ತವದ ತನಿಗಂಪಿಂದಂ (ಆದಿಪು. ೧೧-೧೧೮) ; ತನಿಗಂಪಂ ಚಂಪಕಂ ವಿಸ್ಫುರಿತ ವದನಮಂ ಪಂಕಜಂ . . . ಪೋಲ್ವೆಯುಂ ತಾಳ್ದಿದುದು (ಸುಕುಮಾ. ೯-೭೫): ಬಿರಿದ ಸಂಪಗೆಯ ತನಿಗಂಪಿಂ ತೀವಿರ್ದುದಟ್ಟೆಂದೆಂದುಂ ಪೂವಿನ ಪೊಟ್ಟಲೆಂಬುದೊಂದು ಪೆಸರೆಸೆದಿರ್ಕುಂ (ಕಬ್ಬಿಕಾ. ೨೭): ತಿಳಿಗೊಳನಪುಳಿನಸ್ಥಳದ ಕಮಲಕ್ಕೆರವದ ತನಿಗಂಪುವೆರಸಿ ಸುಳಿವ ತಣ್ಣೆಲರ ತಂಪಂಕಂಡು (ಹದಕಾ. ೭-೪೦) : ಪಾದರಿಗಳ ತಣ್ಪುಗಂಪು ಸರಸೀರುಹದೊಳ್ತನಿಗಂಪು ಮಲ್ಲಿಕೋತ್ಕರದ ಬೆಡಂಗುಗಂಪು (ರಾಜಶೇ. ೧೦-೧೯). [ ತನಿ₂ + ಕಂಪು ]

ತನಿಗಣೆ (ನಾ). ಶ್ರೇಷ್ಠವಾದ ಬಾಣ : ತನಿಗಣೆಗಳಿಂದಹಿತರಂಗದ ಕೊನೆಗಳನು ಖಂಡಿಸುತ (ಜರಾಮಾ. ೪೭-೬೫). [ ತನಿ₂ + ಕಣೆ₁ ]

ತನಿಗಬ್ಬು 'ತನಿಗರ್ವು' ನೋ.

ತನಿಗರುಳು (ನಾ). ಚೆನ್ನಾಗಿ ಬೆಳೆದ ಕರುಳು : ತಿನ್ನಡಗನೊಡೆಹೊಯ್ದು ಭೀಮನ ಬೆನ್ನಲುಗಿ ತನಿಗರುಳನು (ಕುವ್ಯಾಕ. ೧೫-೧೭) : ಕಾಚಿದನು ತನಿಗರುಳ ಪನಸನು (ಶಾಶಿರಾ. ೨೭-೩). [ ತನಿ₂ + ಕರುಳು (<ಕರುಳ್)]

ತನಿಗರ್ಪು (ನಾ). ಅತಿಶಯವಾದ ಕಪ್ಪು ; ಅಚ್ಚಕಪ್ಪು : ತೊಳಪ ತನಿಗರ್ಪು ಕೇಶಾವಳಿಯೊಳೊತ್ತರಿಸಿ (ಕುಸುಮಾ. ೭-೧೩೩ ರಗಳೆ) : ಪೂರ್ವಾಂಗನೆ ಮುಚ್ಚಿದಕ್ಷಿಪಕ್ಷ್ಮದ ತನಿಗರ್ಪೆನಿಸಿದುದು ಕೊನರ್ವ ಕತ್ತಲೆ ನಭದೊಳ್ (ಅನಂಪು. ೩-೬೭) ; ಬೆಳ್ವೊಗರಿಂ ಕೆಂಗದಿರಿಂ ತನಿಗರ್ಪೊಳ್ವೆಳಮಿನುಗಿಂ ಪೊನ್ಪೊಳಪಿಂ (ಉದ್ಭದೇ. ೭-೧೫). [ ತನಿ₂ + ಕರ್ಪು₁ ]

ತನಿಗರ್ಬು 'ತನಿಗರ್ವು' ನೋ.

ತನಿಗರ್ವು, ತನಿಗಬ್ಬು, ತನಿಗರ್ಬು (ನಾ). ಚೆನ್ನಾಗಿ ಬಲಿತ ಕಬ್ಬು ; ರಸಭರಿತವಾದ ಕಬ್ಬು : ಮಿಡಿದೊಡೆ ತನಿಗರ್ವು[ಪಾಠಾಂ. ಬ್ಬು] ರಸಂ ಬಿಡುವುವು (ಪಂಪಭಾ. ೧-೫೭). ತನಿಗಬ್ಬು : ಪಸುರೆಲೆಗಳ ಬಿಟ್ಟು ತನಿಗಬ್ಬಿನೊಳಗಣ ರಸವ ಕೊಂಬಾನೆಗಳಂತೆ ಹಸಗೆಟ್ಟು ತನುಸುಖಕೊಲಿಯದೆ ಕೆಲರು ಭೇದಿಸಿ ನಿಜಸುಖವ ಭೋಗಿಪರು (ಭರತ. ೧-೧೦೬). ತನಿಗರ್ಬು: ಎಳನೀರ್ಗಳ ತನಿಗರ್ಬಿನ ತಿಳಿರಸದ ರಸಾಲಪಕ್ವಫಳಸಾರದ . . .. ಪಾನಂಗಳನಲ್ಲಲ್ಲೆ ಜೀವರಾ ಪ್ರಪಾಪಾಲಿಕೆಯರ್ (ವೃಷವಿ. ೪-೩೦).

[ ತನಿ₂ + ಕರ್ವು₁ ]

ತನಿಗಲಿ (ನಾ). ಶ್ರೇಷ್ಠನಾದ ಶೂರ : ತನಿಗಲಿಗಳಾಱುಸಾವಿರಮಂ ಪೊರಳ್ಚಿ . . . ಸೆಕ್ಕಿದಂ ಕಾಯದೊಳ್ಪಾಯುತವನಂ (ತ್ರಿಮಿಥಾ. ೨೩-೧).

[ ತನಿ₂ + ಕಲಿ2 ]

ತನಿಗಲೆ (ನಾ). ಉತ್ತಮವಾದ ಕಲೆ : ಕೊಟ್ಟು ಕುಡುಕುದಂಬುಲಮಂ ಸವಿಯಂ ಪಟ್ಟುವ ತನಿಗಲೆಯುಪಚರದಿಂ ಮನಮುಟ್ಟೆ ಕರಂ ಕೂಡಿದರ್ (ಜಯುಕಾ. ೨-೫೩). [ ತನಿ₂ + ಕಲೆ₃ ]

ತನಿಗಳ್ (ನಾ). ಸವಿಯಾದ ಕಳ್ಳು.–ಮದ್ಯ : ತನಿಗಳ್ಳ ತವಕಿಗಂ ಬಾಡಿನ ಬಾಕುಳನೀತನೆಂದು ಲೋಹದ ರಸಮಂ ತನು ಕುಡಿಯೆ ಕುಡಿಯಿಪರ್ (ಅನಂಪು. ೯-೩೫). [ ತನಿ2 + ಕಳ್₃ ]

ತನಿಗಾಲುವೆ (ನಾ). ತುಂಬಿ ಹರಿಯುವ ಕಾಲುವೆ : ಸೀಳಿ ನಾಯ್ಗಳ ನೆತ್ತರಿನ ತನಿಗಾಲುವೆಯಲೇ ಬೆಳಸುವೆನು ದಿವಿಜಾಳಿಗಳ ಸಂತೋಷ ಪಸಿಯನೆನುತ್ತ ಗರ್ಜಿಸಿದ (ಕುವ್ಯಾಅ. ೧೧-೧೦).

[ ತನಿ₂ + ಕಾಲುವೆ (<ಕಾಲ್ವಾಯ್) ]

**ತನಿಗಾಱ** (ನಾ). ಒಂದು ವಂಶದ ಹೆಸರು (?) : ದೇವಣಸೆಟ್ಟಿಯರ ಕೋಣನ ಕಾವ ತನಿಗಾಱ ಮಾಳೆಯು ಗೇಸಿದ ಉತ್ತರಂಗ (ಇಎ. ೧೯೪೭, ಬೈಲಹೊಂಗಲ್. ೫೬೦-೩ : 13ನೆಯ ಶತ). [ ? ]

**ತನಿಗಿಚ್ಚು, ತನಿಗಿರ್ಚು** (ನಾ). ೧. ಹಿತಕರವಾದ ಬೆಂಕಿ,-ಕಾವು : ನೆನೆಯಲೊಡಮೆತ್ತಿ ಮನದೊಳ್ ತನಿಗಿಚ್ಚಂ[ಪಾಠಾಂ. ರ್ಚಂ]ಹಿಮಮ ನೋಡಿಸುವ ನವಯುವತೀಸ್ತನಭರಮಂ ತೆಗೆದಪ್ಪದ ಮನುಜರದೇನರಿವು ದರಿದೆ ಮಾಗೆಯ ಮೂಗಂ (ಲೀಲಾವ. ೯-೧೭) ; (ಕಾವ್ಯಸಾ. ೭೮೯ ನೋ.). ೨. ಪ್ರಖರವಾದ ಬೆಂಕಿ : ಕೇರಿಕೇರಿಗಳೊಳು ತನಿಗಿಚ್ಚು ನೆಗೆದು ದಳ್ಳುರಿಯ ಕೊನೆನಾಲಗೆಯಿಂದ ತೆಗೆತೆಗೆದಾ ಪುರಜನಗಳ ತಿಂದು ತೇಗಿದುದು (ಕುರಾಸಾಂ. ೧೨-೪೭). **ತನಿಗಿರ್ಚು** : ೨. ತನಿಗಿರ್ಚು ಕರಗಿಕುಂ ಕಾಂಚನಮುಂ ಕರಗಿಕುಮೆ ವಜ್ರಮುಂ (ಶಾಂತಿಪು. ೧೧-೫೫) : ಮನೆಮನೆದಪ್ಪದೆ ನೆಗೆದುದು ತನಿಗಿರ್ಚೆ[ಪಾಠಾಂ. ಚ್ಚಿ]ನೆ ದಹನವಿದ್ಯೆಯಿಂ ಸುಟ್ಟಂ ಪಾವನಿ ಲಂಕೆಯಂ (ಪಂರಾಮಾ. ೧೧-೧೪೪). [ ತನಿ₂ + ಕಿಚ್ಚು ]

**ತನಿಗಿಡಿ** (ನಾ). ಪ್ರಜ್ವಲಿಸುವ ಕಿಡಿ ; ತೀಕ್ಷ್ಣವಾದ ಕಿಡಿ : ತನಿಗಿಡಿಯ ದಳ್ಳುರಿಯ ನಾಲಿಗೆಕೊನೆಗಳಲ್ಲಾಡಿದವು ಕಡುಲಾಗಿನಲಿ ಲಂಬಿಸಿ ಚುಂಬಿಸಿದುದುರಿ ಲಲಿತನಂದನವ (ಕುವ್ಯಾಆ. ೨೦-೩೭) ; ರಘುಗರ್ಘುಗಿಪ ತೇಜದ ಸುಪ್ರತಾಪದ ಮೊಗದ ಕೋಪದ ತಾಪಕದ ತನಿಗಿಡಿಯ ದಾಡೆಗಳ (ತೊರರಾ. ೭-೯-೭). [ ತನಿ₂ + ಕಿಡಿ ]

**ತನಿಗಿರ್ಚು** ‘ತನಿಗಿಚ್ಚು’ ನೋ.

**ತನಿಗೀತೆ** (ನಾ). ಒಂಟಿಯಾಗಿ ಹಾಡುವ ಗೀತೆ : ಗ್ರೀಕ್ ರುದ್ರನಾಟಕ ದಲ್ಲಿ ಒಬ್ಬನೇ ನಟನು ಹಾಡುವ ಗೀತೆ : ತನಿಗೀತೆ (Monody. ಇಂಕನಿ.) ; ಪ್ರಮಿತ್ಯೂಸ್ ಮತ್ತು ಆಯೋ ಇವರ ತನಿಗೀತೆ, ಮೇಳಗೀತೆಗಳ ಅಡಕ . . . ಇವೆಲ್ಲ ಪರಿಣಾಮಕಾರಿಯಾದವು (ಬಧ್ರಪ್ರ. LVIII, ೫೬೫).
[ ತನಿ₂ + ಗೀತೆ ]

**ತನಿಗುದಿ₁** (ಕ್ರಿ). ಹೆಚ್ಚಾಗಿ ಕುದಿ ; ಕತಕತನೆ ಕುದಿ ; ತೀವ್ರವಾಗಿ ಕುದಿ : ರಘುಳಕೆ ತಿಳಿಗೊಳದುದಕ ಕಾದುಚ್ಚಳಿಸಿದವು ತನಿಗುದಿದು ಮತ್ಸ್ಯಾವಳಿಗಳಂ ಬುಜದೆಸಳು ಸೀದವು ತುಂಬಿಗಳು ಸಹಿತ (ಕುವ್ಯಾಆ. ೨೦-೬೪).
[ ತನಿ₂ + ಕುದಿ₁ ]

**ತನಿಗುದಿ₂** (ನಾ). ತೀವ್ರವಾದ ಕುದಿತ. ‘ತನಿಗುದಿಗುದಿ’ ಪರಾ.
[ ತನಿ₂ + ಕುದಿ₂ ]

**ತನಿಗುದಿಗುದಿ** (ಕ್ರಿ). = ತನಿಗುದಿ₁ : ರಘುಳಕೆ ಛೀಳಟ್ಟೊಜಲಿದವು ಕರಿಕುಳ . . . ಹಯವೋಡಿದವು ಮುಮ್ಮಳಿಸಿ ತನಿಗುದಿಗುದಿದು ಕೋಟಲೆ ಗೊಂಡುದರಿಸೇನೆ (ಕುವ್ಯಾದ್ರೋ. ೧೯-೫೭). [ ತನಿಗುದಿ₂ + ಕುದಿ₁ ]

**ತನಿಗುಸುರು** (ನಾ). ಶ್ರೇಷ್ಠವಾದ ಕುಸುರಿಕೆಲಸ: ಇಂಥ ಪದವನು ಹಾಡು ಹಾಡೊಮ್ಮೆ ನಲ್ಲೆ, ಅಂಥ ತನಿಗುಸುರನ್ನು ನೀನೋರ್ವೆ ಬಲ್ಲೆ! (ಗರಿ. ೩೯-೧೦). [ ತನಿ₂ + ಕುಸುರು₂ (<ಕುಸುರಿ₁) ]

**ತನಿಗುಳ್ಳ** (ನಾ). ಒಂದಂ ಬಗೆಯ ಬದನೆ ; ಮುಳ್ಳುಬದನೆ : ವಾರ್ತಾಕೀ, ಹಿಂಗುಳೀ, ಸಿಂಹೀ, ಭಂಟಾಕೀ, ದುಷ್ಪ್ರದರ್ಷಿಣೀ – ಶಿ ಬದನೇಗಿಡದಲ್ಲಿ ಮುಳ್ಳುಜಾತಿ ಗುಳ್ಳ, ವಾದಿರಾಜಗುಳ್ಳ, ತನಿಗುಳ್ಳ, ರಾಮಗುಳ್ಳ, ಮುಂತಾದದ್ದು (ಸಿದ್ಧಾಂತಿ. ೧೨೧). [ ತನಿ₂ + ಗುಳ್ಳ ]

**ತನಿಗೆಂಡ** (ನಾ). ನಿಗಿನಿಗಿ ಕೆಂಡ ; ಪ್ರಜ್ವಲಿಸುವ ಬೆಂಕಿ : ಉಗ್ರದ್ವಿಪಂಗಳ್ ಪಳಂಚೆ ನಿಕೃಷ್ಟೋನ್ನತ ದಂತದಂತಹತಿಯಿಂದೋರಂತೆ ಪೋರುತ್ತಿರಲ್ ತನಿಗೆಂಡಂಗಳ ತಂದಲುರ್ವೆ ಪೊಗೆಯುತ್ತುಂ ಪೊತ್ತಿ (ಶಾಂತೀಶ್ವ. ೮-೯೦) : ತನಿಗೆಂಡಮನೊಱಲೆ ಪತ್ತಲೇನಱಿದಪುದೇ(ಪುಷ್ಪಪು. ೧೪-೩೯) : ಕೊಕ್ಕರಿಸು ತುಗುವ ತನಿಗೆಂಡದಿಂಡೆಗಳ ಸಲೆ ಮುಕ್ಕುಳಿಸಿ ಮೊಗೆವ ಪೆರ್ಗಿಚ್ಚುಗಳ ವೆಂಕೆ (ಜೈಮಿಭಾ. ೧೫-೧೩). ‘ತರಿಗೆಂಡ’ ಪರಾ. [ ತನಿ₂ + ಕೆಂಡ ]

**ತನಿಗೆಚ್ಚು** (ನಾ). ಹೆಚ್ಚಾದ ಎದೆಗಾರಿಕೆ,-ಶೌರ್ಯ: ಮೊದಲ ಬಲುಹನು ಕಂಡನಿನ್ನೀ ತುದಿವರನ ತನಿಗೆಚ್ಚು ನಮ್ಮನು ಬಿದಱಿಸುವುದೋ ಶಿವಶಿವಾ ತಪ್ಪೇನು (ಕುವ್ಯಾಕ. ೨೦-೧೮). [ ತನಿ₂ + ಕೆಚ್ಚು₄ (<ಕೆರ್ಚು) ]

**ತನಿಗೆಡು** (ಕ್ರಿ). ಸೊಗಸುಗೆಡು ; ಅಂದಗೆಡು ; ಕಾಂತಿಹೀನವಾಗು : ನಟ್ಟಿರುಳ ತಾವರೆಯವೊಲು ತನಿಗೆಟ್ಟ ವದನದ ನಯನಜಲಗಳ ನಿಟ್ಟುಸಿರ ನಲಿ ಬಂದರು (ನಿಭಾಗ. ೧೧-೧-೫೪). [ ತನಿ₂ + ಕೆಡು₁ ]

**ತನಿಗೆಡೆ** (ಕ್ರಿ). ಬಲವಾಗಿ ಬೀಳು ; ದೊಪ್ಪನೆ ಬೀಳು ; ವಿವಶವಾಗಿ ಉರುಳು : ಇನಿತು ಬಲ ತೂಕಡಿಸಿ ರ್ಘೂಂಟಿಸಿ ತನಿಗೆಡೆಯೆ (ಕುವ್ಯಾವಿ. ೮-೮೮) : ಚೆನ್ನಾಗಿ ಬಸವಳಿದು ಅಸುವಿರೆ ಹೊಂದಿದರು ಧರೆಗೊಬ್ಬ ರೊಬ್ಬರ ಮೇಲೆ ತನಿಗೆಡೆದು (ನಿಭಾಗ. ೧೦-೭-೮).
[ ತನಿ₂ + ಕೆಡೆ₁ ]

**ತನಿಗೆತ್ತು₁** (ಕ್ರಿ). ಹೆಚ್ಚಾಗಿ ಅದಿರು,-ಸ್ಪಂದಿಸು;-ನಡುಗು: ನಿಡುಸುಯ್ದ ಧರಂ ತನಿಗೆತ್ತಲ್ ಮನವಿಕ್ಕೊಯ್ಯನೆ ನುಡಿದಂ (ಕಾದಂಉ. ೫೪೬) : ಮನದೊಳ್ ಮನ್ಮಥರಾಗಮುಬ್ಬರಿಸಿ ನೋಟಂ ನಟ್ಟು ನೋಟಕ್ಕೆ ತೊಟ್ಟನೆ ಗಾತ್ರಂ ತನಿಗೆತ್ತಿ (ಕುಸುಮಾ. ೯-೭೦); ಗಾತ್ರವೆತ್ತಂ ತನಿಗೆ[ಪಾಠಾಂ. ಗಿ]ತ್ತ ಲಾಕ್ಷಣದಿನಾ ಪಟಚಿತ್ರದ ಮೇಲೆ ಪಾಯ್ದು . . . ಮೂರ್ಛೆಯನಾಗಳೆ ಯ್ದಿದಳ್ (ಕುಸುಮಾ. ೧೩-೮೪). [ ತನಿ₂ + ಕೆತ್ತು₁ ]

**ತನಿಗೆತ್ತು₂** (ನಾ). ಅತಿಶಯವಾದ ನಡುಕ,-ಸ್ಪಂದನ : ಪದವು ಮನಕ್ಕೆ ಸೊರ್ಕು ನಯನಕ್ಕೆಸೆಯುತ್ತಿರೆ ಚುಂಬನಾಭಿಲಾಷದ ತನಿಗಿ[ಗೆ]ತ್ತು ಬಾಯ್ಗೆ ಬಳಸಲ್ (ಆದಿಪು. ೪-೧೬): ತಮ್ಮ ಕೆಂಪಂ ಕಣ್ಗಳ್ಗೆ ಕೊಟ್ಟು ಕಣ್ಗಳ ಬೆಳ್ಪಂ ತಮಗೆ ಮಾಱುಗೊಂಡಂತೆ ತನಿಗೆ[ಪಾಠಾಂ. ಗಿ]ತ್ತುವೆರಸಿ ಬತ್ತಿ ಸೊಗಯಿಸುವ ಬೆಳವಾರ್ಯ್ಗಳೊಳ್ (ಪಂಪಭಾ. ೪-೮೮ ವ).
[ ತನಿ₂ + ಕೆತ್ತು₄ ]

**ತನಿಗೆದಱು₁** (ಕ್ರಿ). ೧. ಚೆನ್ನಾಗಿ ಚೆದರಿಹೋಗು ; ಚೆಲ್ಲಾಪಿಲ್ಲಿಯಾಗಂ : ತೆಱಹ ಕೊಡುಕೊಡು ಭಾಷೆಕಾಱನು ಮೆಱೆದು ಹೋಗಲಿ ವಹ್ನಿಕುಂಡ ದೊಳೊಱಗುವುದ ನೋಡುವೆವೆನುತ ತನಿಗೆದಱೆತರಿಸೇನೆ (ಕುವ್ಯಾದ್ರೋ. ೧೪-೫೭); ವನಧಿಗಳು ತುಳುಕಾಡೆ ತಾರಕಿ ತನಿಗೆದಱೆ ತಳ್ಳಂಕಗೊಳೆ ಮೇದಿನಿ . . . ಬೊಬ್ಬಿಱಿದುಬ್ಬಿದನು ರಘುಜ (ತೊರರಾ. ೫-೭-೭). ೨. ಚೆನ್ನಾಗಿ ಸರಿಸು,-ಓಸರಿಸು : ಕುರುಳ ತುಂಬಿಯ ತನಿಗೆದಱೆ ಮುಖಸರಸಿಜವ ಚುಂಬಿಸಿ (ಕುವ್ಯಾಆ. ೨೦-೬೦). ೩. ಹೆಚ್ಚಾಗಿ ಕೆದಕು,-ಕಲಕು : ಅಳಕ ನಿಕರವ ಕುಣಿಸಿ ಮಣಿಕುಂಡಲವನಲುಗಿಸಿ ಹಣೆಯ ಮುತ್ತಿನ ತಿಲಕವನು ತನಿಗೆದಱೆ ನಡೆದುದು ಕೂಡೆ ಸತಿನಿವಹ (ಕುವ್ಯಾಆ. ೧೮-೩೩).
[ ತನಿ₂ + ಕೆದಱು₁ (<ಕೆದಱ್₁) ]

**ತನಿಗೆದಱು₂** (ನಾ). ಹೆಚ್ಚಾಗಿ ಚೆದರುವಿಕೆ,-ಹರಡುವಿಕೆ : ಬೆಳ್ನೊರೆಯ ತೊಳಪೆಳೆಯ ಮೀನ್ಬೊಳೆಯಲಿರದೆಳೆಯಲೆಡೆಸೆಳೆಯ ‘ತುಂತುಱಿನ ತನಿ ಗೆದಱಿನ . . . ಅತುಳಗಂಗೆ ಸುತರಂಗೆ ನೋಳ್ಪಂಗೆ ಸಲೆ ಕಣ್ಗೆಸೆದಳಂದು ದಿವಿಜಸಿಂಧು (ಜೈಮಿಭಾ. ೯-೩೪). [ ತನಿ₂ + ಕೆದಱು₂ (<ಕೆದಱ್₂) ]

**ತನಿಗೆನೆವಾಲ್, ತನಿಗೆನೆವಾಲು** (ನಾ). ರುಚಿಕರವಾದ ಕೆನೆಹಾಲು : ಬಾಯ್ಗೋರಂದದಿಂ ತೀವಿದ ತನಿಗೆನೆವಾಲಂತೆ ನೇರ್ಪಟ್ಟ ನಿನ್ನಗ್ಗದ ದೇಹ ಚ್ಛಾಯೆಯಿಂ ತಣ್ಣನೆ ತಣಿಯದೆ ಲೋಕತ್ರಯಂ (ಧರ್ಮನಾ. ೬-೭೫). **ತನಿಗೆನೆವಾಲು** : ಖಂಡಶರ್ಕರೆ ಬೆರೆಸಿದ ತನಿಗೆನೆವಾಲನಂಪಲೆವವಳ ಚೆಂದುಟಿಗೆ . . . ಎಳೆದಳಿರೆಂಬುದಿದು ಸರಿಗಂಡು ಪೇಳ್ವುಪಮಾನವಲ್ಲ (ಕುರಾಸಾಂ. ೭-೫೫). [ ತನಿ₂ + ಕೆನೆವಾಲ್ ]

**ತನಿಗೆನೆವಾಲು** ‘ತನಿಗೆನೆವಾಲ್’ ನೋ.

**ತನಿಗೆರಳ್** (ಕ್ರಿ). ಹೆಚ್ಚಾಗಿ ಕೆರಳು; “ಅತಿಯಾಗಿ ಕೋಪಿಸು” (ಪ್ರಧಣ.)
[ ತನಿ₂ + ಕೆರಳ್ (<ಕೆಳರ್) ]

**ತನಿಗೊಂಬು** (ನಾ). (?) : ಊರುಂ ಮೂಳೆಯುಂ ತಿಂಬಗುರು ಪಯುಗರಿಯು ತನಿಗೊಂಬಂ ಬಳೆಗೊಯ್ಯಲ್ ಪೂಣ್ದು ತುದಿಯೊಳೋಡಿಪೋಪ ಭೀರುವಪ್ಪ ಪಣೆದಕಾಜಿನಂತೆ (ಶಾಂತಿಪು. ೮-೪೯ ವ).

[ತನಿ$_2$+ಕೊಂಬು ?]

**ತನಿಗೊಡಹು** (ಕ್ರಿ). ಚೆನ್ನಾಗಿ ಕೊಡಹು,–ಒದರು,–ಜಾಡಿಸು : ಮೊನೆಯುಲಗು ಮುಕ್ಕುಳಿಕೆ ರಥವನು ತನಿಗೊಡಹಿ ಮುಗ್ಗಿದವು ತೇಜಿಗಳನುವರಕೆ ಮುಖದಿರುಹಿದವು ಕಲಿಭೀಷ್ಮನುಪಟಳಕೆ (ಕುವ್ಯಾಭೀ. ೯-೩೮).

[ ತನಿ$_2$ + ಕೊಡಹು$_1$ (<ಕೊಡವು) ]

**ತನಿಗೊಬ್ಬು** 'ತನಿಗೊರ್ವು$_1$' ನೋ.

**ತನಿಗೊಬ್ಬು** 'ತನಿಗೊರ್ವು$_2$' ನೋ.

**ತನಿಗೊರ್ವಿಸು** (ಕ್ರಿ). ಇನ್ನೂ ಅಧಿಕಗೊಳಿಸು ; ತುಂಬ ಬಲಗೊಳಿಸು : ಇಂದ್ರವನದರಲ್ಗಳಂ ಪೊಡರ್ಚುವಲ್ಲಿ ಕಂಕಣದ ಮಲ್ಲುಲಿಯಿನೆಳಸುವಳಿಗಳಿನಿದನಿಯುಂ ತನಿಗೊರ್ವಿಸಿಯುಂ (ಚಂದ್ರಪ್ರ. ೧೦-೧೪೫ ವ).

[ ತನಿಗೊರ್ವು$_1$ + – ಇಸು$_3$ ]

**ತನಿಗೊರ್ವು$_1$**, ತನಿಗೊಬ್ಬು (ಕ್ರಿ). ೧. ಚೆನ್ನಾಗಿ ಕೊಬ್ಬು ; ಹೆಚ್ಚಾಗಿ ಪುಷ್ಟಿಗೊಳ್ಳು; ಬೀಗಂ ; ಬೀಗಿ ಬೆಳೆ : ತನಿಗೊರ್ವಿದ ವೀರರ ಮೆಯ್ಗೆ ಪುಗವೆ ಸನ್ನಾಹಂಗಳ್ (ಚಂದ್ರಪ್ರ. ೦೦-೬೩) ; ಅಳಿಗಳ ಪಕ್ಷಸಂಭವ ಮರುತ್ತಿಯಿಂ ತನಿಗೊರ್ವಿ ಕಂಪಿತಾಖಿಲ ಕುಸುಮೋಲ್ಲಸತ್ಪರಿಮಳೋತ್ಕರದಿಂ ಪೊಣ್ಮಿಯೇಱ . . . ಸುೞಿವುದು ಸಂತತಂ ಪುರಬಹಿರ್ವನಚಾರಣನಾ ಸವಿಾರಣಂ (ಕುಸುಮಾ. ೨-೭೦). ೨. ಹೆಚ್ಚಾಗಿ ಉಬ್ಬು,–ಉಕ್ಕು : ಪರಮಜಿನ ದಿವ್ಯಾಂಗಗಂಧದಿ ಪರಿಕಲಿಸಿ ತನಿಗೊರ್ವಿ . . . ಬರಿದು ನಿರ್ಜರವಾಗಿ ಪರಿವಾ ಪರಮಪಾವನ ಗಂಧಜಲ (ಸಾಳ್ವಭಾ. ೩೩-೬೯). **ತನಿಗೊಬ್ಬು** : ೧. ಕುಳ್ಳಿರ್ದ ಸರೋಜಷಂಡಮಲರ್ದೊರ್ಪುವ ಮಲ್ಲಿಗೆ ಮಾಧವೀಲತಾವಳಿ ತನಿಗೊಬ್ಬಿದಿಕ್ಷುವನಂ . . . ಕಣ್ಗೊಳಿಸುವುದು (ಎಕ.XI. ಚಿತ್ರದು. ೨೩-೨೭ : 1205). [ ತನಿ$_2$ + ಕೊರ್ವು$_1$ ]

**ತನಿಗೊರ್ವು$_2$**, ತನಿಗೊಬ್ಬು (ನಾ). ೧. ಹೆಚ್ಚಾದ ಕೊಬ್ಬು,–ಪಂದ,–ಸೊಕ್ಕು : ಎಡೆವಿಡದೆ ಮೞೆಗಱೆವ ವಾಸವನ ತನಿಗೊರ್ವು ತಳಕಿೞಿಯೆ ತಳೆದು ಗೋವರ್ಧನವನನುಗೊಳಿಸಿ (ಗೀತಗೋ. ೩-೪). **ತನಿಗೊಬ್ಬು** : ೨. ಹೆಚ್ಚಾದ ಉಬ್ಬರ : ವನರುಹಷಂಡದ ವಾರಿಯ ತನಿಗೊಬ್ಬುಗೆ ತೊಲಗಿ ತಿಳಿಯೆ ತತ್ಪದದೊಳ್ ಕಾಮಿನಿಮುಖ ವೀಕ್ಷಾತುರತೆಯಿನೆನಸುಂ ನಿಮಿರ್ದಂತೆ ತೋಱಿದುವು ಜಲಜಂಗಳ್ (ಕುಸುಮಾ ೭-೪೬).

[ ತನಿ$_2$ + ಕೊರ್ವು$_2$ ]

**ತನಿಗೊಳ್ಳು** (ಕ್ರಿ). ಪುಷ್ಟವಾಗು ; ಸಮೃದ್ಧವಾಗು : ವೀರರಸದಷ್ಟೇ ಶಾಂತರಸವು ಈ ಯುಗದ ಕೃತಿಗಳಲ್ಲಿ ತನಿಗೊಂಡಿದೆ (ಕಸಾಚ. ೪೨) ; ಅವನ ಶಕ್ತಿವಿಶೇಷಗಳೆಲ್ಲ ಇದರಲ್ಲಿ ತನಿಗೊಂಡು ಮೇಳಗೊಂಡಿವೆ (ಕಸಾಚ. ೧೮೩).

[ ತನಿ$_2$ + ಕೊಳ್ಳು$_1$ (<ಕೊಳ್$_1$) ]

**ತನಿಗೋಡು** (ನಾ). ಕೊಬ್ಬಿ ಬೆಳೆದ ಕೊಂಬು : ಹುಲ್ಲಗೊಂಬತ್ತು ಮುಖ ಬೆಳ್ಳಿಲಿಗೆ ನಾಲ್ಕು ತನಿಗೋಡು ಮೂಡಿದ್ದನಿಲ್ಲಿಯೇ ಕಂಡೆ (ಸರ್ವಜ್ಞ. ೨೦೬೯). [ ತನಿ$_2$ + ಕೋಡು$_5$ ]

**ತನಿಚೂಣಿ** (ನಾ). ಬಲವಾದ ಮುಂದಳ ; ಮುಂಭಾಗದ ಪ್ರಬಲವಾದ ಸೈನ್ಯ : ರಾವುತರು ರಾಷ್ಟ್ರರ ತಱುಬಿದರು ತನಿಚೂಣಿ ಮಸಗಿತು ತಾಱು ಥಟ್ಟನಲಿ (ಕುವ್ಯಾಕ. ೨-೧೭). [ ತನಿ$_2$ + ಚೂಣಿ (<ಚೂಳಿ$_1$) ]

**ತನಿಜಡಿ** (ಕ್ರಿ). ಹೆಚ್ಚಾಗಿ ಬಳುಕು ; ಭಾರದಿಂದ ಜಗ್ಗು : ವೃಂದದಲಿ ನಾನಾ ಮೃಗೌಘವ ಕೊಂದು ಮಾಂಸದ ಹೊಱೆಗಳನು ಯಮನಂದನನ ಹೇರಿಗೆಗಟ್ಟಿದರು ಕಂಬಿಗಳು ತನಿಜಡಿಯೆ (ನಿಭಾಗ. ೧೦-೭೮-೨೨).

[ ತನಿ$_2$ + ಜಡಿ$_2$ ]

**ತನಿಜವ್ವನ** (ನಾ). ೧. ತುಂಬುಯೌವನ,–ಪ್ರಾಯ. ೨. ತುಂಬು ಮೊಲೆ,–ಸ್ತನ: ತಳುವಸುಱ ಸೆಳೆನಡುವ ನುಣ್ದೊಡೆಗಳ ಬೆಳೆದ ತನಿಜವ್ವನದ ಕಡು ಚಲು ಶಬರಿಯರು (ಸಾಳ್ವಭಾ. ೧೬-೭). [ ತನಿ$_2$ + ಜವ್ವನ ]

**ತನಿಜನುಗುದನಿ** (ನಾ). ಮಧುರವಾಗಿ ಗುಣುಗುಣಿಸುವ ಧ್ವನಿ ; ಇಂಪಾದ ಮೆಲುದನಿ : ಜಾಲಗಾರನು ಉಸುಕು ಜಾಳಿಸುವ ಹಾಗೆ ಜೊತೆಗಾರ ತನಿಜನುಗುದನಿಯಲಿ ಸೋಸುತಿಹನು (ಉಯ್ಯಾಲೆ. ೧೧-೧೦).

[ ತನಿ$_2$ + ಜನುಗು$_1$ (<ಜನುಂಗು$_1$) + ದನಿ$_2$ ]

**ತನಿಜೇನು** (ನಾ). ಸವಿಯಾದ ಜೇನಂ : ತನಿಜೇನನು ಹೀರಿಹುದೆ (ಕವಿಕಾ. ೨೩-೯) ; ತನಿಜೇನ ಸುರಿಸುಗುಂ ತನ್ನ ಮೆಚ್ಚಿರುವರಳೆ (ಕಾಂಚಾರ. ೪೭-೭೪).

[ ತನಿ$_2$ + ಜೇನು$_1$ (<ಜೇನ್$_1$) ]

**ತನಿಜೊನ್ನ** (ನಾ). ಅಚ್ಚ ಬೆಳುದಿಂಗಳಂ ; ಶುಭ್ರವಾದ ಚಂದ್ರಿಕೆ : ಚಂದ್ರಂ ಪರಿವೇಷದಿನಗ್ಗಳಮೊಪ್ಪುವ ತನಿಜೊನ್ನದಿನತ್ತಿ ಕಣ್ಗೆದ್ದಂಬಡೆದಂ (ಉದ್ಯದೀ. ೪-೧೪) : ತನಿಜೊನ್ನವಾಲನೀಂಟುವ ಪದದೊಳದು ಬತ್ತೆ ಮನದೊಳಂ ಕಂದಿ ತೋಱುವ ಹಂಸಮಱಿಯೊ (ಚಿಬಪು. ೧೦-೮೧).

[ ತನಿ$_2$ + ಜೊನ್ನ ]

**ತನಿತು** 'ತನಿ$_1$' ಪರಾ.

**ತನಿತ್ತು** 'ತನಿ$_1$' ಪರಾ.

**ತನಿನಂಜು** (ನಾ). ತೀಕ್ಷ್ಣವಾದ ನಂಜು ; ಘೋರವಿಷ : ಕಟ್ಟನರಿ ವತ್ಸದ ಪೊತ್ತುವ ಬೇಗೆ ಪಾವು ತಿನ್ನದ ತನಿನಂಜು ತನ್ವಿಯರೊಳಾದಳುಱ ಪೆಱತುಂಟೆ ಲೋಕದೊಳ್ (ರೀರಾವ. ೪-೫೫). [ ತನಿ$_2$ + ನಂಜು$_2$ ]

**ತನಿನಗೆ** (ನಾ). ಅತಿಶಯವಾದ ನಗೆ,–ಹಾಸ್ಯ : ಗಂಡುಗಲಿಗಳೊ ವೀರಸಿರಿಯುಳಿವಿಂಡರೋ ತನಿನಗೆಯು ಬಿರುದಿನ ಭಂಡರೋ (ಕುವ್ಯಾಶ. ೨-೩೦) : ತನಿನಗೆಯನುಬ್ಬಿಸುವ ಹಾಸ್ಯದ ವಿನುತ ಪರಿಹಾಸಕರಿನೆಸೆದುದು ಸಭೆ ದಶಾನನನ (ತೊರರಾ. ೭-೧೦-೧೦). [ ತನಿ$_2$ + ನಗೆ ]

**ತನಿನಿದ್ರೆ** (ನಾ). ೧. ಗಾಢವಾದ ನಿದ್ದೆ : ನೆನಸಿಂಗೆ ಸಾತ್ವಿಕಂ . . . ತನಿನಿದ್ರೆಗಲ್ಲಿ ತಾಮಸಗುಣಂ ಬೀಜವೆನಿಸಿರ್ಪುದು (ಅನುಸಾ. ೨-೪-೧೦). ೨. ಅತಿಶಯವಾದ ಜಡತೆ : ಕರ್ಮವಶದಿಂದೆ ತನಿನಿದ್ರೆ ಮುಸುಕುತಿಹುದೊರ್ಮೆ (ಅನುಸಾ. ೫-೫-೨) ; ಜೀವನದಲ್ಲಿರುವ ಭಕ್ತಿಯು ತನಿನಿದ್ರೆಯಿಂದ ಎಚ್ಚತ್ತು ಜೀವನ ನಿಜಸ್ವರೂಪವನ್ನು ಪ್ರಕಾಶಿಸುತ್ತದೆ (ತತ್ವಪ್ರ. ೩೯೨). [ ತನಿ$_2$ + ನಿದ್ರೆ ]

**ತನಿನೀರ್** (ನಾ). ತಿಳಿಯಾದ ನೀರು : ಐಗೂರರಸನ ಪೆಂಡಿರ ಮೂಗುತಿ ಕಣ್ಬನಿಯೊಳೞಿದ ಕಾಡಿಗೆಯಿಂ ಕರ್ಪಾಗಿ ಬೞಿಕುಗುವ ತನಿನೀರ್ ತಾಗುವಿನಂ ತೊಳಗಿತೆಂದಿನಂತಪ್ರತಿಮಾ (ಅಪ್ರತಿ. ೦೧೯-೧೩).

[ ತನಿ$_2$ + ನೀರ್$_1$ ]

**ತನಿನುಡಿಸು** (ಕ್ರಿ). (ಹಾಡಿಗೆ ಮೇಳವಾಗಿರದೆ) ಒಂಟಿಯಾಗಿ, ಪ್ರತ್ಯೇಕವಾಗಿ ವಾದ್ಯ ನುಡಿಸು : ಎಷ್ಟೋ ಬಾರಿ ತಮ್ಮ ಕಚೇರಿಗಳಲ್ಲಿ ಅವರು ಕೊನೆಯಲ್ಲಿ ಮಾತ್ರ ಮೃದಂಗ ನುಡಿಸುವವರಿಗೆ ತನಿನುಡಿಸಲು ಬಿಡುತ್ತಿದ್ದುದೂ ಉಂಟು (ಸಂಗೀತ. ೫೪).

[ ತನಿ$_2$ + ನುಡಿಸು (<ನುಡಿಯಿಸು) ]

**ತನಿನೇಹ** (ನಾ). ಅತಿಶಯವಾದ ಸ್ನೇಹ,–ಪ್ರೀತಿ : ತನಿನೇಹದಿಂ ಹರಣವಾಗಿಪ್ಪಳಾತಂಗೆ (ಐಹರ. ದೀ. ೨೯-೪) : ಬಾವನ್ನಮುಂ ತನಿನೇಹದಿಂ ಪೂಸಿ ಪೂಮಾಲೆಗಳ ಸೂಡಿ (ಕೊಟ್ಟೂಬ. ೪-೧೩೮). [ ತನಿ$_2$+ ನೇಹ ]

**ತನಿನೋಟ** (ನಾ). ನಿರ್ಮಲವಾದ ದೃಷ್ಟಿ ; ಪರಿಶುದ್ಧವಾದ ದೃಷ್ಟಿ : ತನಿನೋಟವಂ ನೋಡಿ ಬೆಟ್ಟಿತೆಂದಂಜುತಂ (ರುದ್ರರ. ದೀ. ೨೦೪-೧೧) : ಮನದೊಳ್ಗಿರಿಶಧ್ಯಾನಂ ತನಿನೋಟದೊಳೀಶಮೂರ್ತಿ (ಉದ್ಭಟ. ೧-೧೦೪).

[ ತನಿ$_2$ + ನೋಟ ]

**ತನಿಪರಿಮಳ** (ನಾ). = ತನಿಗಂಪು : ತಿಳಿಗೊಳನ ತಂಪಗಿದ ತಳ್ಳಿಯ ತೊಳಲಿಕೆಯ ತಾವರೆಯ ತನಿ[ಪಾಠಾಂ. ತಿಳಿ]ಪರಿಮಳದ ಪಿಸರದ ಹಸರದಲಿ ತೀಡಿದುದು ತಂಗಾಳಿ (ಕೊರರಾ. ೨-೭-೩). [ ತನಿ$_2$ + ಪರಿಮಳ (=ಪರಿಮಲ) ]

**ತನಿಪಾಕ** (ನಾ). ಹದವಾದ ಪಾಕ ; ರುಚಿಯಾದ ಪಾಕ : ರೂಪ ಸೌಂದರ್ಯ ಯವ್ವನ ಶೃಂಗಾರ ಕಲೆಗಳೆಂಬ ಪಂಚಾಸವಗಳನ್ನು . . . ಅಂಗಜಾಗ್ನಿಯಿಂದ ಹದಗಾಸಿ ತನಿಪಾಕ ಮಾಡಿಕೊಂಡು ಸವಿನೋಡಿಯೇ ಬಿಡಬೇಕು (ಮಂತ್ರಶ. ೨೯-೧೭). [ ತನಿ$_2$ + ಪಾಕ$_2$ ]

**ತನಿಬಾಳೆ** (ನಾ). ಬಾಳೆಯಲ್ಲಿ ಒಂದು ಜಾತಿ: ಜಾಳೆ ರಸಬಾಳೆ ಬಿಜುಬಾಳೆ ತನಿಬಾಳೆ ಕಂಬಾಳೆ (ವಿವೇಕ. ೨೦೦). [ ತನಿ$_2$ + ಬಾಳೆ$_1$ (<ಬಾಟ್) ]

**ತನಿಬಿಗಿ** (ಕ್ರಿ). ಗಟ್ಟಿಯಾಗಿ ಕಟ್ಟು ; ಬಲವಾಗಿ ಬಂಧಿಸು : ಹೊಗೆಯ ನೊಡೆದೊಳಜಿದ್ದು ಕಿಡಿಗಳನುಗಿದು ದಳ್ಳುರಿದುಜುಗಲಸು ತನಿಬಿಗಿದು ಭೀಮನ ರಥದ ಸುತ್ತಲು ಸೂಸಿ . . . ಉರವಣಿ ಸಿತಮುಳಾಸ್ತ್ರ (ಕುಮಾ್ವದ್ಯಾ. ೧೯-೪೭). [ ತನಿ$_2$ + ಬಿಗಿ$_1$ ]

**ತನಿಬಿಡು** (ಕ್ರಿ). ಸಂಗೀತಕಚೇರಿಯಲ್ಲಿ ವಾದ್ಯಗಾರನಿಗೆ ತನಿಬಾರಿಸಲು ಅವಕಾಶ ಕೊಡು : ಗಾಯಕನು ಹಾಡಿನ ಕೊನೆಯಲ್ಲಿ ಮೃದಂಗೆಯವನಿಗೆ ತನಿಬಿಟ್ಟನು (ರೂಢಿ). [ ತನಿ$_2$ + ಬಿಡು$_1$ ]

**ತನಿಬೀಜ** (ನಾ). ಗಟ್ಟಿಯಾದ ಬೀಜ ; ಸಾರವತ್ತಾದ ಬೀಜ: ಪ್ರೇಮರಸದಲಿ ಬೇಜ್ ಬೇಜುದ್ದಾಮಭುಜನಿಟ್ಟಿದನು ಚಿತ್ರದ ತಾಮಸದ ತನಿಬೀಜ ಮುಸುಕಿತು ಹರ್ಷರಚನೆಯಲಿ (ಕುಮಾ್ವಸ. ೧೩-೯). [ ತನಿ$_2$ + ಬೀಜ ]

**ತನಿಬೆಲ್ಲ** (ನಾ). ಸಿಹಿಯಾದ ಬೆಲ್ಲ ; ರುಚಿಕರವಾದ ಬೆಲ್ಲ : ಶೋಧಿಸಿದ ತನಿಬೆಲ್ಲವಿಕ್ಕಿದ ಹೂರಿಗೆಯ ಮದೆಯಲ್ಲಿ . . . ನೋಡಲಿ ನಮ್ಮನೆಂದುದು ಧೂರ್ತವಟುನಿಕರ (ಕುಮಾ್ವಆ. ೧೫-೭) ; ಹರಿಕರಣರಚ್ಚು ಬುಧಜನರಿಗೆ ಪೆಚ್ಚು . . . ಕೇಳ್ವರಿಗಿದು ತನಿಬೆಲ್ಲದಚ್ಚು (ಮೋಹಕ ೧-೩೮). [ ತನಿ$_2$ + ಬೆಲ್ಲ ]

**ತನಿಬೆಳಕು** 'ತನಿವೆಳಗು' ನೋ.

**ತನಿಮದ** (ನಾ). ಅಧಿಕವಾದ ಮತ್ತು : ಉದ್ದಾಮ ಸಿಂಹಧ್ವನಿಗೆ ನಿದ್ರಾ ಕಾಮುಸದ ತನಿಮದವಡಗೆ ಕಂಡೆಜ್ದನಾ ಹನುಮ (ಕುಮಾ್ವಆ. ೧೦-೧೨). [ ತ$_2$ + ಮದ$_1$ ]

**ತನಿಮನೆ** (ನಾ). ಹಿತದ ನೆಲೆ : ತಾಯೆ ತನಿಮನೆಯೋ (ಗಿರಿ. ೭-೧) ; ತಾಯಿಯು ತನಿಮನೆಯಾಗಿದ್ದಾಳೆ (ಗೊತ್ತುಗು. ೦೩೭). [ ತನಿ$_2$+ಮನೆ ]

**ತನಿಮರ್ವು** (ನಾ). ದಟ್ಟವಾದ ಕತ್ತಲೆ ; ಕಗ್ಗತ್ತಲೆ ; ಗಾಢಾಂಧಕಾರ : ಅಸ್ತಂಗತ ಸೂರ್ಯನಾಗಲ್ ತನಿಮರ್ವುರ್ವಲ್ (ಉದ್ಭಟ. ೧೧-೫೭). [ ತನಿ$_2$ + ಮರ್ವು ]

**ತನಿಮಸಗು** (ಕ್ರಿ). ಹೆಚ್ಚಾಗಿ ಕೆರಳು ; ಅತಿಶಯವಾಗಿ ಉದ್ರೇಕಗೊಳ್ಳು ; ಇಟ್ಟಣಸುಮೀ ರಣಮಾದಾಂಧನ ತೊಟ್ಟುಳಿಕೆಯನು ಕೇಳ್ವ ರಾಯ ಘರಟ್ಟನಿಲ್ಲಾ ಎನುತ ತನಿಮಸಗಿತು ಭಟಸ್ತೋಮ (ಕುಮಾ್ವಶ. ೨೦-೨). [ ತನಿ$_2$ + ಮಸಗು$_1$ ]

**ತನಿಮಳೆ** 'ತನಿವಳೆ' ನೋ.

**ತನಿಮಾಡಿಸು** (ಕ್ರಿ). ತಂಪುಮಾಡಿಸು ; ಶಾಂತಿಮಾಡಿಸು : ಆಗಲೇ ಒಂಬತ್ತು ಜನರನ್ನು ತೆಗೆದುಕೊಂಡಿದ್ದ ಪ್ಲೇಗಿನಮ್ಮನ ಎಳನೀರಿನ ತನಿಮಾಡಿಸಿ ಕೊಂಡು ಹೊರಟು ಹೋದಳು (ನನ್ನೂರು. ೯೩). [ ತನಿ$_3$ (<ತಣ$_3$) + ಮಾಡು$_1$ + – ಇಸು$_3$ ]

**ತನಿಮಾವು** (ನಾ). ಮಾವಿನಲ್ಲಿ ಒಂದು ಬಗೆ : ಮಾವು ಸೀಮಾವು ತನಿಮಾವು ಗಿಣಿಮಾವು (ವಿವೇಕ. ೨೦೦). [ ತನಿ$_2$ + ಮಾವು ]

**ತನಿಮಿಂಚು** (ನಾ). ಉಜ್ವಲವಾದ ಮಿಂಚು : [illegible] ಮಿಂಚು : [illegible] (ಹೃದಸ. ೪-೫). [ ತನಿ$_2$ + ಮಿಂಚು$_3$ ]

**ತನಿಮಿನುಗು** (ನಾ). ಹೆಚ್ಚಾದ ಕಾಂತಿ,–ಪ್ರಕಾಶ : ತನಿಮಿನುಗು [illegible] (ಕುಮಾ್ವಆ. ೧೧-೪). [ ತನಿ$_2$ + ಮಿನುಗು$_2$ ]

**ತನಿಮೊನೆದೋಱಿಸು** (ಕ್ರಿ). ಚೆನ್ನಾಗಿ ಗೋಚರಿಸುವಂತೆ ಮಾಡು,– ಅಭಿವ್ಯಕ್ತಗೊಳಿಸು : ಮನದೊಳೆ ವಾಕ್ಯನೊಳ್ಕರತಳಾಮಳಕಾಕೃತಿಯಾಗಿ ಸತ್ಯ ಜಪ್ಪನ [illegible] (ಚಂಶ. ೬೮). [ ತನಿಮೊನೆದೋಱು + – ಇಸು$_3$ ]

**ತನಿಮೊನೆದೋಱು** (ಕ್ರಿ). ಚೆನ್ನಾಗಿ ಗೋಚರವಾಗು ; ಸ್ಪಷ್ಟವಾಗಿ ಕಾಣಿಸು. 'ತನಿಮೊನೆದೋಱಿಸು' ಪರಾ. [ ತನಿ$_2$ + ಮೊನೆದೋಱು ]

**ತನಿಮೊರೆ** (ಕ್ರಿ). ಇಂಪಾಗಿ ಝೇಂಕರಿಸು : ಸೈದಿಲುಗಳಲಿ ತನಿಮೊರೆವ ತುಂಬಿಯ ಕಳರವಕೆ ಬೆಚ್ಚಿದವು . . . ಮುಮ್ಮುಲುದಂಜುಗಾತಿರ್ದವು ಜಕ್ಕವಕ್ಕಿಗಳು (ಕುಮಾ್ವದ್ಯಾ. ೦೭-೦೫). [ ತನಿ$_2$ + ಮೊರೆ$_1$ ]

**ತನಿಮೊಲೆ** (ನಾ). (ಹಾಲು) ತುಂಬಿದ ಸ್ತನ : ಕಿಱುಹುಲ್ಲೆ ಮೋಹದ ಶಿಶುಗೆ ತನಿಮೊಲೆಯನೂಡುತಿದೆ (ಸಾಳ್ವಭಾ. ೩-೯). [ ತನಿ$_2$ + ಮೊಲೆ$_1$ ]

**ತನಿಮೋಹರ** (ನಾ). ದೊಡ್ಡ ಮೊತ್ತ ; ಬಹಳವಾಗಿ ದಟ್ಟಯಿಸಿದುದು: ಊಹೆದೆಗಹಿನ ಕಂಬನಿಯ ತನಿಮೋಹರದ ಘನಶೋಕವಹ್ನಿಯ ಮೋಹು ಗಾಡಿನ ಮನದ ಕೌರವಸಿತ್ರನೋಲಗವ (ಕುಮಾ್ವದ್ಯಾ. ೧-೧೨). [ ತನಿ$_2$ + ಮೋಹರ ]

**ತನಿಯನ್** (ನಾ). ಗುರುಗಳ ಪ್ರಾರ್ಥನಾರೂಪವಾದ ಬಿಡಿ ಪದ್ಯ : ಮೇಲುಗೋಟೆ ತಿರುನಾರಾಯಣಸ್ವಾಮಿಯವರ ಸನ್ನಿಧಿ ಮೊದಲಾದ ಸನ್ನಿಧಿಗಳಲ್ಲಿ ಪ್ರಬಂಧಾನುಸಂಧಾನಗಳು ನಡವಾಗ . . . ರಾಮಾನುಜ ದಯಪಾತ್ರ ತನಿಯನೆ ಆವ ರೀತಿಗೆ ನಡದು ಬಂತು ಯೀಗಲೂ ಅದೇ ರೀತಿಗೆ ರಾಮಾನುಜದಯಾಪಾತ್ರ ತನಿಯನೆ ನಡೆಸಿಕೊಂಡು ಬರ್ರುವದು (ಮೈಲಿರಿ. ೧೯೩೮. ೧೫-೩ : 1709). [←ತಮಿ. ತನಿಯನ್ ]

**ತನಿಯಡಗು** (ನಾ). = ತನಿಗಂಡ : ಏಱ ಬಾಯ್ಗೆ ಬಾಯೊಡ್ಡಿ ರಕ್ತವನೀಂಟಿ ತನಿಯಡಗನಡಸಿ ತಿಂದು ಬಸುಱ ನೆಱ ಬೇಗೆ ತಣ್ಣನೆ ತೇಗಿ (ಸಾಳ್ವಭಾ. ೨೫-೨೩). [ ತನಿ$_2$ + ಅಡಗು$_3$ ]

**ತನಿಯರಳು** (ಕ್ರಿ). ಚೆನ್ನಾಗಿ ಅರಳು ; ಪೂರ್ಣವಾಗಿ ವಿಕಸಿತವಾಗು : ಹರಿಹರನಿಗಂತ ಜೇಗನೆ ಅದರ ಪ್ರತಿಭೆ ತನಿಯರಳಿ ಗಮಗಮಿಸತೊಡಗಿ ತೆಂದು ಹೇಳಬಹುದು (ಕಸಾಡ. ೩೫೩). [ ತನಿ$_2$ + ಅರಳು$_1$ (<ಅಲರ್$_1$) ]

**ತನಿಯುಣ್** (ಕ್ರಿ). ಒಬ್ಬನೇ ಉಣ್ಣು ; ಒಂಟಿಯಾಗಿ ಅನುಭವಿಸು : ನೆರಪಿದುವನ್ ತಾಮೇ ತನಿಯುಣ್ಬುದು (ಕುಶಲ್. ೧-೨೩-೯). [ ತನಿ$_2$ + ಉಣ್ ]

**ತನಿಯುರಿ** (ನಾ). ತೀಕ್ಷ್ಣವಾದ ಉರಿ ; ಪ್ರಖರವಾದ ಬೆಂಕಿ : ಉಗಿದನು [illegible] (ಕುಮಾ್ವದ್ಯಾ. ೩-೫೫). [ ತನಿ$_2$ + ಉರಿ$_2$ ]

**ತನಿಯೆಣ್ಣೆ** (ನಾ). ಶುದ್ಧವಾದ ಎಣ್ಣೆ ; ತಿಳಿಯಾದ ಎಣ್ಣೆ : ತನುವಂಟ ತನಿಯೆಣ್ಣೆ [illegible] ನೆನಪದೆತ್ತಣದು (ಸವರಜ. ೪೫೭). [ ತನಿ$_2$ + ಎಣ್ಣೆ ]

**ತನಿಯೆರಕ** (ನಾ). ಚೆನ್ನಾಗಿ ಎರಕಹೊಯ್ದು ಮೂರ್ತಿ,–ಆಕಾರ: ವೀರದೈತ್ಯನ ಬಹಳ ದುಷ್ಪರಿವಾರವದನಾರಣಿಸುವರು ಮುಂಗಾರಿರುಳ ತನಿಯೆರಕ ನೀಲಾಚಲದ ಖಂಡರಣೆ (ಕುವ್ಯಾ.ಆ. ೯–೩೪).

[ ತನಿ$_2$ + ಎರಕ$_2$ ]

**ತನಿಯೆರೆ** 'ತಣಿಯೆಱು' ನೋ.

**ತನಿಯೆರೆತ** (ನಾ). ತನಿ ಎರೆಯುವಿಕೆ; ತರ್ಪಣ ಬಿಡುವಿಕೆ: ಏಕೆನ್ನ ನಿಸಿದಿಗೆಯು ಬಳಿ ಬಾಗಿ ಬಾಡಿ ನಿಂದಿರ್ಪಳೀ ನನ್ನರಸಿ ? ತನಿಯೆರೆತವೇಕೀಗ ? (ಪಾರಸಿ. ೨೬–೨೮೩). [ ತನಿ$_3$ (<ತಣಿ$_3$) + ಎರೆತ$_1$ ]

**ತನಿಯೊಸರು** (ನಾ). ಹೆಚ್ಚಾಗಿ ಸುರಿಯುವಿಕೆ,– ಒಸರುವಿಕೆ: ಎನಿತು ನರುಗಂಪು . . . ತನಿಯೊಸರ ಪೂವುಡಿಯ ಪೊಸಸೋನೆಯೆನಿತು (ಕಾಲೂರ. ೧೨೦–೨೫೦). [ ತನಿ$_2$ + ಒಸರು$_2$ (<ಒಸರ್$_1$) ]

**ತನಿರಕುತ** (ನಾ). ೧. ಹೊಸರಕ್ತ; ಬಿಸಿನೆತ್ತರು: ಮನದೊಳಗೆ ಕೌರವನ ಕರುಳನು ತನಿರಕುತದಲಿ ಕುದಿಸಿದರು(ಕುವ್ಯಾ.ಸ ೧೪–೬೫). ೨. ರುಚಿಯಾದ ರಕ್ತ: ನೋಡುವನು . . . ಬಾಡುಗರುಳಿನ ಚೀತ್ಕೃತಿಯು ತಲೆಯೋಡುಗಳ ತನಿರಕುತಪಾನದ ಶಾಕಿನೀಜನವ (ಕುವ್ಯಾ.ಗ. ೩–೧೦). [ ತನಿ$_2$ + ರಕುತ ]

**ತನಿರನ್ನ** (ನಾ). ಶ್ರೇಷ್ಠವಾದ ರತ್ನ: ತನಿರನ್ನದೊಂದು ಕೆಂಗಿಡಿಯ ಕುಡಿಯೆ ಸಿಡಿದರಳಿ ಉರುಳಿದಂತೆ (ಅರಳು. ೫–೩).

[ ತನಿ$_2$ + ರನ್ನ ]

**ತನಿರಭಸ** (ನಾ). ಅತಿಶಯವಾದ ರಭಸ,–ವೇಗ: ಸೂಗುರಿಸೆ ತುದಿವಾಲ ವಮರರ ಕೂಗುಗಳ ಕಹಳೆಗಳ ಹಱೆ ತಾಗುಗಳ ತನಿರಭಸ[ಪಾಠಾಂ. ಹರುಷ]ದಲಿ ಹಾಱಿದನು ಹನುಮಂತ (ತೊರರಾ. ೪–೧೨–೩೩).

[ ತನಿ$_2$ + ರಭಸ ]

**ತನಿರಸ** (ನಾ). ೧. ಸವಿಯಾದ ರಸ: ಗಿಳಿಗಳ ಗೂಡಿಂದುದಿರ್ದ ದಾಳಿಂಬದ ಬಿತ್ತುಗಳೆನೊಸರ್ದ ತನಿರಸದಳಿಪದೊಳಂ(ಕಾದಂಪೂ. ೯೭); ತಮ್ಮಿಂ ತಾವೆ ಬಿಗಿದು ಬಿರಿವಟ್ಟು ಸುರಿವ ದಾಳಿಂಬದ ಪಣ್ಗಳ ತನಿರಸದ ಪರಿಪೊನಲ ಪರಿನೀರಾಗೆ (ಶಂಕರಂ. ೧೧೭–೧೫); ಅಂಬುಜವನವಿದಿರು ಬಂದಂತೆ ಕಂಪಿನ ತನಿರಸದ ತಾವರೆಯ ತೆಕ್ಕೆಯ ತೋಳ ತೋಱಿಕೆಯ ಜಿನುಗುದುಂಬಿಯ ಜಾಳಿಗೆಯ ತನಿಮಿನುಗುವೋಱೆಯ . . . ಭೀಮನ ಕಂಡನವನೀಶ (ಕುವ್ಯಾ.ಆ. ೧೧–೪): ಕುಱೆ ಕಬ್ಬನೊಳು ಹೊಕ್ಕು ಅಱೆವುದೆ ತನಿರಸವ (ಸರ್ವಜ್ಞ. ೪೨೦): ತನಿರಸಂ ಸೋಱುವನ್ನಂ ನಾಲಗೆಯೂಱೆ ಸೀಯೆಂದು ಚುಂಬಿಸಿಯುಂ (ರಾಮಾಶ್ವ. ೬೦–೧೬). ೨. ಶುದ್ಧವಾದ ರಸ; ತಿಳಿಯಾದ ರಸ: ಬೆಳರ್ಮಣ್ಣ ಪೊಸಕಡಾಯದೊಳ್ ತುಂಬಿದ ನೀಲಿಯ ತನಿರಸಮೆಂಬಂತಿರೆ ಕಳಿಂದಜೆಯು ಕರ್ಮಡುವಿನೊಂದು ಪೊಳೆಪಿಂ (ರಾಮಾಶ್ವ. ೫೨–೨೨). ೩. ಗಟ್ಟಿಯಾದ ಕದಡು; ಮಂದವಾದ ದ್ರವ,–ಕಲ್ಕ: ಕಾರ್ಮುಗಿಲಂ ಜನವ ಕಲಸಿ ತನಿರಸದೊಳು ನೆಱೆ ಪೊರಳ್ಚಿದ ನೀಲಪುತ್ರಿಕೆಗಳಂತೆ . . . ನಡೆತಹ ಕಿರಾತರ ತನುಚ್ಛವಿ (ರಾಘವ. ೧೭–೭೪). ೪. ಮನೋಹರವಾದ (ಕಾವ್ಯವಿಷಯಕವಾದ) ಶೃಂಗಾರಾದಿ ನವರಸಗಳು: ಕಂದಂಗಳವ್ಯತಲತಿಕಾಕಂದಂಗಳನೂನವಾಕ್ಯಫಲವಿಲಸನ್ಮಾಕಂದಂಗಳ್ ತನಿರಸದುಕ್ಕಂದಂಗಳ್ (ಗಿರಿಜಾ. ೧–೧೨). ೧, ೪: ಕೊರ್ವಿ ಪೊಱಪೊಣ್ಮೆ ತನಿರಸಮುರ್ವೆ ಕರಂ ಕೊಂಕು ಕಿವಿವರಂ ನವ್ಯಗುಣಂ ಪರ್ವೆ ತೆಗೆದಿಸುವ ಕಾವನ ಕರ್ವಿನ ಬಿಲ್ಲಂತೆ ಕಾವ್ಯವೆಂ ಮೋಹಿಸದೇ (ಧರ್ಮನಾ. ೧–೪೬). [ ತನಿ$_2$ + ರಸ ]

**ತನಿರಸವಡೆ** (ಕ್ರಿ). ಮನೋಹರವಾದ ಶೃಂಗಾರಾದಿ ನವರಸಗಳಿಂದ ಕೂಡಿರು: ಇನಿವಾತುಗಳ ಸತ್ಪದಬಂಧ ವ್ಯಂಗ್ಯೋಕ್ತಿ ಧ್ವನಿಯರ್ಥ ಗೌರವದಿಂದ ತನಿರಸವಡೆದ ಮತ್ಕೃತಿಯು ಚಿತ್ರೈಸು (ಮೋಹತ. ೨೮–೨).

[ ತನಿರಸ + ಪಡೆ$_1$ ]

**ತನಿವಂದು** (ನಾ). ರುಚಿಯಾದ ಮಕರಂದ: ಅಲರ್ದ ತಾವರೆಯ ತನಿವಂಡಿನ ಪನಿಗಳಿಂ (ಕಾದಂಪೂ. ೧೧೬): ತಮ್ಮ ತನಿವಂಡನೂಡಿ ನಡಪಿದ ಮೋಪದಿಂ ಬಸಿಱೊಳಗೆ ಬಯ್ತು ಮುಚ್ಚುವಂತಿರಳಿವಳಗಮನೊಳಕೊಂಡು ನಳಿನಿಗಳ್ ಮುಗಿಯೆಯುಂ (ವರ್ಧಪು. ೬–೨೩ ವ).

[ ತನಿ$_2$ + ಬಂದು$_1$ ]

**ತನಿವಗೆ** (ನಾ). ಶುದ್ಧವಾದ ಮನಸ್ಸು; ವಾತ್ಸಲ್ಯ: ಗಂಗಾಂಬೆ ಮತ್ತು ನೀಲಾಂಬಿಕೆಯರು . . . ಶರಣರಿಗೆಲ್ಲ ತನಿವಗೆಯ ತಾಯಂದಿರಾಗಿ ಬಾಳಿದರು (ಶರಚ. ೧೬೩). [ ತನಿ$_2$ + ಬಗೆ$_3$ ]

**ತನಿವಡಹ** (ನಾ). ಹೆಚ್ಚಾದ ಜಡಿಮಳೆ: ತನಿವಡಹಕ್ಕೆ ಕೋಡಿ ತನುವೊರ್ಬುಳಿವಂದು ಕೊರಲ್ ಕುನುಂಗಿ . . . ಮೃಗಪ್ರಕರಮಿರ್ದುದು (ಕುಸುಮಾ.೬–೩೮): ತನಿವಡಹಕ್ಕೆ ಕೋಡಿ ತನುವೊರ್ವುಳಿವಂದು ಕೊ[ರ]ಲ್ಕುನುಂಗಿ ಮೃಗಪ್ರಕರಮಿರ್ದುದು (ಶಾಂತೀಶ್ವ. ೧೨–೫೮).

[ ತನಿ$_2$ + ಬಡಹ (<ಬಡವ) ]

**ತನಿವಣ್**, ತನಿವಣ್ಣು (ನಾ). ಪಕ್ವವಾದ ಹಣ್ಣು; ಹದವಾಗಿ ಮಾಗಿದ ಹಣ್ಣು: ಪಥಿಕರ್ಬರ್ಕೆಂದು ಭೃಂಗಂಗಳಿಂದುಲಿವಂತಿರ್ದುದು ಪಣ್ತ ಬಕ್ಕೆ ತನಿವಣ್ಣಾಗಿರ್ದುದಿವ್ಯಾವು (ಆದಿಪು. ೧೧–೬೮); ನಾಲಗೆ ಚಿಗುರುತ್ತಿರೆ ಸವಿದುದೊಂದು ಗಿಳಿ ತನಿವಣ್ಣಂ (ಗಿರಿಜಾ. ೨–೩೯); ತನಿವಣ್ಣಂ ಲಂಚವಿವಾವೆಂವುರುಳಿ ನಿನಗೆ . . . ಎನ್ನೋಪನನಿಂದಾರಯ್ದು ತಂದೆನ್ನೊಡನಿರಿಸಿದೊಡೆ (ಕಬ್ಬಿಕಾ. ೩೧೮): ಪೊಂಗೆ ಪರಿಮಳವಿದೆನಿಪ ಕಬ್ಬಿಂಗೆ ನಿತವಣ್ಣಾದ ತೆಱದಲಿ (ಪ್ರಭುಲೀ. ೧೯–೫೭). **ತನಿವಣ್ಣು**: ತನಿವಣ್ಣಿರಲು ಕಸುಗಾಯನೇತಕೆ ಕೊಯ್ದೆ (ಬಸವು. ೪೮–೧೦); ಕೊನರಿಲ್ಲದ, ಮಿಡಿಯಿಲ್ಲದ . . . ತನಿವಣ್ಣಿಲ್ಲದ ಮರಂಗಳಿಲ್ಲ (ರಾಮಾಶ್ವ. ೫೩–೨೪); ತನಿವಣ್ಣು ಕೆನೆವಾಲು ತಾಂಬೂಲ ನೀಡುವೆನು (ಕವಿಸೋ. ೪೫–೧೩). [ ತನಿ$_2$ + ಪಣ್$_3$ ]

**ತನಿವಣ್ಣು** 'ತನಿವಣ್' ನೋ.

**ತನಿವದನು** (ನಾ). ಸರಿಯಾದ ಹದ,–ಪಕ್ವತೆ: ತನಿವದನಾಗಿ ಕೆಂಪನೊಳಕೊಂಡು ಸುಗಂಧಮನಾಂತು (ದಶಕು. ೬–೨೫)

[ತನಿ$_2$ + ಪದನು (<ಪದನ್$_1$)]

**ತನಿವರಿ** (ಕ್ರಿ). ೧. ಬೇರೆ ಬೇರೆಯಾಗಿ ಓಡಾಡು; ಸಡಗರದಿಂದ ನಡೆದಾಡು: ತವತವಗೆ ತನಿವರಿವ ಜನದುತ್ಸವವನದನೇನೆಂಬೆನಂದಿನ ದಿವಸದೊಸಗೆ ಯನಮರಲೋಕದೊಳು (ಕುವ್ಯಾ.ಆ. ೧೨–೫೮). ೨. ಹೆಚ್ಚಾಗಿ ಹರಡು,–ವ್ಯಾಪಿಸು: ಮೊರೆವ ತುಂಬಿಯು ತಟ್ಟುಗಳ ತನಿವರಿವ ತಂಪಿನ ತುಱು ಗಲಿನ ತತ್ಸರಸಿಯನು ದೂರದಲಿ ಕಂಡುಬ್ಬಿದನು ಕಲಿಭೀಮ (ಕುವ್ಯಾ.ಆ. ೧೦–೪೨). [ ತನಿ$_2$ + ಪರಿ$_2$ ]

**ತನಿವಳೆ**, ತನಿಮಳೆ (ನಾ). ಹಿತವಾದ ಮಳೆ: ತನತನಗೆ ತರುಣಿಯರು ಹೂವಿನ ತನಿವಳೆಯ ಕಱೆದರು (ಕುವ್ಯಾ.ಸ. ೩–೬೦): ಗಿಳಿಯ ತುಂಬಿಯ ಹಂಸೆಗಳ ಕೋಗಿಲೆಯ . . . ಕಲರುತಿಯ ಕರ್ಣಾಮೃತದ ತನಿವಳೆಯ ಕಱೆದುದು ಇಭಪುರಿಯ ಹೊಱವಳಯದುದ್ಯಾನ (ಕುವ್ಯಾ.ಉ.೭–೨೩). **ತನಿಮಳೆ**: ನಿರ್ಜರರ ಭೇರಿ ನವಾಯಿಯುಲಿ ಮೊಳಗಿದವು ಸುರಿದವು ಮುಗುಳ ತನಿಮಳೆಯ (ಕುವ್ಯಾ.ಸ. ೮–೮): ಮುನಿಜನ ಜಾಲವನು ನೋಡಿದನು ಕಱೆದನು ಕೃಪೆಯ ತನಿಮಳೆಯ (ಕುವ್ಯಾ.ಆ. ೫–೨೪). [ ತನಿ$_2$ + ಮಳೆ (<ಮೞೆ) ]

**ತನಿವಾಲ್**, ತನಿವಾಲು, ತನಿಹಾಲು(ನಾ). ೧. ರುಚಿಕರವಾದ ಹಾಲು; ಸವಿಯಾದ ಹಾಲು: ತನಿವಾಲನುಂಡು ಬಳೆವರಗಿಳಿಗಳ್ (ತಿರುರ. ದೇ. ೨–೧೧); ನಂಬಿ ಕೊವಗೂಸು ಕೂರ್ತಿತ್ತ ತನಿವಾಲ್ಗುಡಿದೆ(ಸೌಂದಪು.೧೧–೧೫); ತನಿವಾಲ್ಗೆ ತವರಾಜ ಸಕ್ಕರೆಯನೊಡಗಲಸಿ (ರೇವಣ. ೧೦೫–೭). ೨. ಗಟ್ಟಿಯಾದ ಹಾಲು: ಧಾನ್ಯದೊಳಕ್ಕಿ ಪಾಲೊಳ್ ತನಿವಾಲ್ (ಧರ್ಮಾಮೃ. ೯–೧೦೮). **ತನಿವಾಲು$_1$**: ೧. ಪುಟದ ಸಕ್ಕರೆಯನು ತನಿವಾಲಿನೊಳು ಸೂಸಿ

ಗುಟುಕಿಸವಂತೆ ಸಂಗೀತ (ಭರಜ. ೨೫-೧೨). ಅವಳ ಕೊರಳಿಂದ ಹೊರಟ ಹಾಡುಗಳು ತನಿವಾಲನೆರೆದು ಅವನ ಮನಸ್ಸನ್ನು ತಂಪಾಗಿಸಿದವು (ಹಾದುತ್ತ. ೬೨). ೨. ಬಟ್ಟವಾಲನು ಚಿಲುಪಾಲನು ಕೆನೆವಾಲನೆಟ್ಟೆವಾಲನು ತನಿವಾಲ . . . ಎಡೆಮಾಡಿದಳರಸಗೆ (ಭರಜ. ೧೦-೩೪). **ತನಿಹಾಲು : ೨.** ಕೆನೆಹಾಲು, ಎಟ್ಟೆಹಾಲು, ತನಿಹಾಲು . . . ತಂದು ಎಡೆಮಾಡಿದಳು (ಮಾಮಲ್ಲಿ. ೫೪). [ ತನಿ$_2$ + ಪಾಲ್$_1$ ]

**ತನಿವಾಲು** 'ತನಿಪಾಲ್' ನೋ.

**ತನಿವಿತ್ತು** (ನಾ). ಸಾರವತ್ತಾದ ಬೀಜ; ಉತ್ತಮವಾದ ಬೀಜ: ಒಲಿದು ಕುಂದಣದ ತನಿವಿತ್ತುಗಳ ಬಿತ್ತಿ ವಿಗೆ ಬಳೆಯಿಪ ವಸಂತಮಾಲಾಕಾರನೆನೆ (ನಂದಿಮಾ. ೭-೧೮). [ ತನಿ$_2$ + ಬಿತ್ತು$_2$ (<ಬಿಟ್ತು) ]

**ತನಿವಿಷ** (ನಾ). ತೀಕ್ಷ್ಣವಾದ ನಂಜು ; ಘೋರವಿಷ: ರಾಮನಾಮಕ ತಣಿಯಲಿಲ್ಲವೆ ಶಿವನ ಗಂಟಲ ತನಿವಿಷ (ಹಾದುಪಾ. ೪೯-೩). [ ತನಿ$_2$ + ವಿಷ ]

**ತನಿವೀರರಸ** (ನಾ). ಮಿಗಿಲಾದ ಶೌರ್ಯ; ಅತಿಶಯವಾದ ಪರಾಕ್ರಮ: ತೆತ್ತಿಸಿದಂಬೊಡಲೊಳಿಡಿದ ತನಿವೀರರಸವೊತ್ತರಿಸಿ ಮೇಲುಕ್ಕುವಂದದಿಂ ಬಸಿವ ಬಿಸಿನೆತ್ತರೆಸೆದಿರೆ (ಜೈಮಿಭಾ. ೧೨-೨೫). [ ತನಿ$_2$ + ವೀರರಸ ]

**ತನಿವು** 'ತಣಿವು' ನೋ.

**ತನಿವೆಚ್ಚು** 'ತನಿವೆರ್ಚು' ನೋ.

**ತನಿವೆರ್ಚಿಸು** (ಕ್ರಿ). ಹೆಚ್ಚಾಗಿ ಅಭಿವೃದ್ಧಿಪಡಿಸು : ಧರ್ಮಮಂ . . . ಗಜಹಯರತ್ನಕೋಶತತಿಯಂ ತನಿವೆರ್ಚಿಸಿ ನಳನೃಪಂ ಪರಿಪಾಲಿಸುವಂ ಧರಿತ್ರಿಯಂ (ನಳಚಂ. ೨೫). [ ತನಿ$_2$ + ಪೆರ್ಚಿಸು ]

**ತನಿವೆರ್ಚು, ತನಿವೆಚ್ಚು, ತನಿಹೆಚ್ಚು** (ಕ್ರಿ). ೧. ಅತಿಶಯವಾಗಿ ಹೆಚ್ಚು; ಬಹಳವಾಗಿ ವರ್ಧಿಸು : ಚುಂಬನಮೊರ್ಮೆಗೊರ್ಮೆ ತನಿವೆರ್ಚುವುದು (ಚಂದ್ರಪು. ೬-೮೪) ; ಅಂಗಕಾಂತಿ ತನಿವೆರ್ಚಿ ಮುಖಾಬ್ಜವರಲ್ದು ಸಮ್ಮದಂ ನನೆಕೊನೆವೋಗಿ . . . ಮನೋನುರಾಗದಿಂ ವನಿತೆಯ ಮೂರ್ತಿ ನೂತ್ನ ವೆನಿಸಿತ್ತು (ನಳಚಂ. ೨೮೦) ; ಸಂತತಂ ಪರಿಕಿಸಲಂತರಂಗ ಬಹಿರಂಗಸುಖಂ ತನಿವೆರ್ಚಿ ಯೋಗಮುಬ್ಬರಿಸಿಯನೂನಧರ್ಮವೊದಗಿಪ್ಪುದು ತಪ್ಪದು (ದಶಕು. ೮-೫೦). **ತನಿವೆಚ್ಚು : ೨.** ಬಹಳವಾಗಿ ಉಬ್ಬು,-ಹಿಗ್ಗು; ಸಂತೋಷಪಡು : ಸೂನುಗೊಲವಿಂ ಸೊಡರ್ವಕ್ಕಿನ ಬೊಟ್ಟನಿಟ್ಟು ತೂಪಿಜಿದು ಪಲರ್ಮೆಯುಂ ಪರಸಿ . . . ತನಿವೆಚ್ಚು[ಪಾಠಾಂ. ರ್ಚು]ವ ಸ್ಪೈಪೆನಗೆಂದು ಸಾರ್ಗುಮೋ (ಚಂದ್ರಪು. ೩-೪೫). **ತನಿಹೆಚ್ಚು : ೨.** ವೈರಿಯ ಘಾಯಘಾಯದ ಧರಧುರಕೆ ತನಿಹೆಚ್ಚಿ ಮನದುಬ್ಬರದಲಿಜಿದಾಡಿದರೆ ದಿಟ ಕೃತಕೃತ್ಯ ತಾನೆಂದ (ಕುವ್ಯಾಕ. ೮-೩೯). [ ತನಿ$_2$ + ಪೆರ್ಚು$_1$ ]

**ತನಿವೆಳಗು, ತನಿಬೆಳಕು**(ನಾ). ೧. ಉಜ್ಜ್ವಲವಾದ ಪ್ರಕಾಶ; ಥಳಥಳಿಸುವ ಕಾಂತಿ : ಚಂದ್ರಾದಿತ್ಯರುಗಳ ತನಿವೆಳಗನು ನಿಂದಿಸುತ್ತಿಪ ದಿವ್ಯದೇಹ (ತ್ರಿಪುಣಾಂ. ೨೪-೩೬೫) ; ಮೇಳವದ ತನಿವೆಳಗುಗಳ ಮಣಿಮೌಳಿಮಂಡಿತರು . . . ಹೊಕ್ಕರು ಸಭಾಸ್ಥಳವ (ಕುವ್ಯಾಸ. ೨-೧) ; ನೆನೆಯಿಸುತಿಂದ್ರಚಾಪವ ತೊಟ್ಟ ತೊಡಿಗೆಯ ತನಿವೆಳಗಿಂದ ಭೂವರನು ಮನವೊಲಿದೆಯ್ತಂದು ಮಂಡಿಸಿದನು (ಕುರಾಸಾಂ. ೧೧-೭೧). ೨. ಶುಭ್ರವಾದ ಕಾಂತಿ ; ಧವಳ ಕಾಂತಿ : ತನಿವೆಳಗಿಂ ತೊಳಗುವ ಪಳುಕಿನ ಕುಟ್ಟಿಮತಳದೊಳೆಸೆವ ಚೂತ ಕುಜಾತಂ (ಕುಸುಮಾ. ೧-೧೧೪) ; ನಸುನಗುತೆ ಮೊಗವೆತ್ತಿ ದೊಡೆ ಹಾಲಂತೆ ತನಿವೆಳಗನುಗುಳುತೊಗೆವುತಿದೆ ನೆಜಿದಿಂಗಳು (ಪದ್ಮರಾ. ೮-೯೫) ; ಪಳುಕಿನಲಿ ಮನಸಿಜ ಸಮೆದ ಪುತ್ಥಳಿಯೊಯೆನೆ ಬೆಳುವಸದನದ ತನಿವೆಳಗಿನಲಿ ಶಿವದೇವಿ ಬಂದಳು (ಸಾಳ್ವಭಾ. ೩೨-೪೫). **ತನಿಬೆಳಕು : ೩.** ಹಿತವಾದ ಕಾಂತಿ,-ಬೆಳಕು : ಕಣ್ಣುಗಳ ಬಣ್ಣ ನೀನು ಉಣ್ಣಿಸಾ ತನಿಬೆಳಕು ಹಣ್ಣು ಜೇನು (ಅಂಅಳು. ೧೨-೭). [ ತನಿ$_2$ + ಬೆಳಗು$_2$ ]

**ತನಿವೆಳ್ದಿಂಗಳ್** (ನಾ). ಸೊಗಸಾದ ಬೆಳುದಿಂಗಳು : [illegible] ತನಿವೆಳ್ದಿಂಗಳ . . . ಭಾಂಡಮಸಿಸಿತಜಾಂಡಂ (ಕುಸುಮಾ. ೧೦-೧೬) ; ತನಿವೆಳ್ದಿಂಗಳ್ಗಳುಂತಾತಪದ ಬಿಸ[illegible] ತನಿವೆಳ್ದಿಂಗಳ ಬಳಗಂ ಮುನಿಮೂರ್ತಿಯನಾಂತುದು [illegible] [ ತನಿ$_2$ + ಬೆಳ್ದಿಂಗಳ್ ]

**ತನಿವೇಟ** (ನಾ). ೧. ಅತಿಶಯವಾದ ಕಾಮಾಸಕ್ತಿ,-ಪ್ರಣಯ,-ಕಾಮ: ತನಿವೇಟದಲಿ ತಾ ಮುಸಿ ನಿರಂಬರೆಯಾಗಿ ನಲಿದಪ್ಪಿದಳು ನಿಜಪತಿಯ (ತೊರರಾ. ೫-೩-೪): ಓರ್ವನೊಳ್ವೆಂಚಿಸಿ ಕೊರ್ವಿದ ಬೇಟಮನೊರ್ವ ನೊಳಿಲ್ಲದಿರ್ದೊಡಂ ತನಿವೇಟಮುರ್ವಿಸಿ ಪಣಮಂ ಪಡೆವುದು (ರಾಜಶೇ. ೧೧-೯೩). ೨. ಹಲವು ಬಗೆಯಾದ ಶೃಂಗಾರಚೇಷ್ಟೆ : ದೇಸಿಯನಾಂತ ಕನ್ನಡಿತಿಯರ್ . . . ಪಲರ್ ವೇಸಿಯರುಳ್ಳ ವೈಸಿಕಮನೀಯೆಡೆಯೊಳ್ ನೆರೆವರ್ಗರ್ದುಕಿರ್ ಪೇರಾಸೆಯೊಳಾಟಪಾಟ ತನಿವೇಟದ ಕೂಟದ ನಾಟಕಂಗಳಿಂ (ಚಕವಿ. ೫-೧೬೫). [ ತನಿ$_2$ + ಬೇಟ$_2$ (<ಬೇಂಟ) ]

**ತನಿವೇಸಗೆ, ತನಿವೇಸಿಗೆ** (ನಾ). ತೀಕ್ಷ್ಣವಾದ ಬೇಸಿಗೆ; ನಡುಬೇಸಿಗೆ: ತನಿವೇಸ[ಪಾಠಾಂ. ಸಿ]ಗೆಯ ದಿನದೊಳಧ್ವರಾಶ್ವದ ಕೂಡೆ ಪಡೆ ನಡೆದುದು (ಜೈಮಿಭಾ. ೧೫-೫). **ತನಿವೇಸಿಗೆ:** ಮೇಲಿನ ಪ್ರಯೋಗದ ಪಾಠಾಂ ತರವನ್ನು ನೋಡಿ. [ ತನಿ$_2$ + ಬೇಸಗೆ ]

**ತನಿವೇಸಿಗೆ** 'ತನಿವೇಸಗೆ' ನೋ.

**ತನಿವೊಗರ್, ತನಿಹೊಗರು** (ನಾ). ಉಜ್ಜ್ವಲವಾದ ಪ್ರಕಾಶ,-ಕಾಂತಿ : ಕೈನೀಡಿದನು ತುದಿಯಂಬಿನಲಿ ತುಱುಗಿದ ಕಿಡಿಯ ಬಿಜಕೇಸುರಿಯ ಧಾಳಿಗಳ ತನಿವೊಗರ ಬಲುಪೊಗೆಯ ಹೊರಳಿಯ . . . ಹೊಗಜಿಯ ನಾರಾಯಣಮಹಾಶರಕೆ (ಕುವ್ಯಾದ್ರೋ. ೧೯-೧೪). **ತನಿಹೊಗರು:** ಸಾಹಸದ ತನಿಹೊಗರಿನಾತಗಳಿಲ್ಲಿ ಭೀಮಾರ್ಜುನರ ಬರಹೇಳು(ಕುವ್ಯಾದ್ರೋ. ೧-೫೩) ; ತನಿಹೊಗರುಗಣೆಗಳ ಸೂಸಿದನು ರವಿಸೂನು ಸಮರದಲಿ (ಕುವ್ಯಾದ್ರೋ. ೧೩-೩೩). [ ತನಿ$_2$ + ಪೊಗರ್ ]

**ತನಿವೊನಲ್** (ನಾ). ತುಂಬು ಹೊಳೆ ; ಮಹಾಪೂರ : ಕಮಳಭವನ ಕವಿತಾರಸಮುಮರ್ದಿನ ತನಿವೊನಲನಂಗಮೋಹನಬಾಣಂ(ಶಾಂತೀಶ್ವ.೧-೫೯). [ ತನಿ$_2$ + ಪೊನಲ್ ]

**ತನಿಸಯ್ಪು** (ನಾ). ಹೆಚ್ಚಿನ ಪುಣ್ಯ : ತನ್ನ ಬಾಳ್ವೆಯ ಬಿಸುಗೆಯೆಂದೆಣಿಸಿ ಪಣ್ಣಕವ ತನಿಸಯ್ಪಿದೆನ್ನುವಳ್ ಕಾಲೂರ ಚೆಲುವೆ (ಕಾಲೂರ. ೧೦೫-೨೩೮). [ ತನಿ$_2$ + ಸಯ್ಪು ]

**ತನಿಸವಿ** (ನಾ). ಅತಿಶಯವಾದ ರುಚಿ: ಕವಿತೆ ತಪಃಫಲದಾ ತನಿಸವಿ ಯೆಂಬುದು (ಸಂಸಪ. ೧೩-೩೨). [ ತನಿ$_2$ + ಸವಿ$_2$ ]

**ತನಿಸುಸಿಲ್** (ನಾ). ಸವಿಯಾದ ಸಂಭೋಗ; ಸುಖರತಿ: ಶಶಿಶಿಲಾ ಸದನದೋವರಿಯ ಪೂವಸೆಯೊಳ್ ತನಿ[ಪಾಠಾಂ. ಸವಿ]ಸುಸಿಲೆಸಗುವ ಖಚರದಂಪತಿಗಳ ಗಳರವದ ಕಳಕಳಮಂ ಕೇಳ್ದು (ಶಬಶಂ. ೩-೩೫ ವ). [ ತನಿ$_2$ + ಸುಸಿಲ್ ]

**ತನಿಸೂಜಿ** (ನಾ). ಹೆಚ್ಚಾಗಿ ಕೊಳ್ಳೆಹೊಡೆಯುವುದು,-ಸೂರೆಗೊಳ್ಳು ವುದು : ದ್ವೀಪಪಾಲಕರ ಸೆಜೆವಿಡಿದು ತನಿಸೂಜೆಯಲಿ ಪಡೆ ನೆಜೆ ದಣಿಯಲಾ ಮ್ಲೇಚ್ಛವರ್ಗವ ತಜಿದು ಶೋಧಿಸಿ ತೆಗೆವನಲ್ಲಿಯ ಸಾರ ವಸ್ತುಗಳ (ಕುವ್ಯಾಸ. ೪-೧೨). [ ತನಿ$_2$ + ಸೂಱೆ ]

**ತನಿಸೂಜೆಬಿಡು** (ಕ್ರಿ). ಹೆಚ್ಚಾಗಿ ಸೂರೆಮಾಡು : ಕಿಚ್ಚುಗಿಡಿಗೆದಱುವ ಸಿಳೀಮುಖ ಕೊಚ್ಚಲಿಭದವಯುವವನಮುರಿಗಿಚ್ಚರಿಯ ತನಿಸೂಜೆಬಿಟ್ಟನು ಭೀಮ ಬವರದಲಿ (ಕುವ್ಯಾದ್ರೋ. ೧೨-೨೧). [ ತನಿಸೂಱೆ + ಬಿಡು$_1$ ]

**ತನಿಸೆಳಕು** (ನಾ). ಮಧುರವಾದ ಸೆಳಕು; ಹಿತಕರವಾದ ಮಳೆ: ಚೈತ್ರನ ತನಿಸೆಳಕಿನ ಸೋಂಕಿಗೆ ಮಧುಮಯವಾಗಿದೆ ಗಾಳಿ (ನೆಲಮು. ೯೬-೧). [ ತನಿ$_2$ + ಸೆಳಕು ]

**ತನಿಸೊಂಕು** 'ತನಿಸೋಂಕು$_2$' ನೋ.

**ತನಿಸೊಕ** 'ತನಿಸೊಗ' ನೋ.

**ತನಿಸೊಕ್ಕು$_1$** (ಕ್ರಿ). ಹೆಚ್ಚಾಗಿ ಮದವೇರು,-ಉನ್ಮತ್ತವಾಗು: ಸಂಗರ ಜಯದ ಮಡುವಿನಲಿ ಸಲೆ ಸೊಗಸಿ ತನಿಸೊಕ್ಕಿ ದೆಸೆಪಟದುಳಿದು ಸೌಭದ್ರೇಯ ಭೃಂಗನ ಬಲುದನಿಯು ಭರವಂಜಿಸಿತು (ಕುವ್ಯಾದ್ರೋ. ೬-೩೧): ಗಣಿಕೆಯರಮಧ್ಯದಲಿ ಮಾದ್ಯದ ತಣಿವಿನಲಿ ತನಿಸೊಕ್ಕಿ ಬತ್ತಲೆ ಕುಣಿವ ಭಂಗಿಯು ಭಂಡರು (ಕುವ್ಯಾಕ. ೯-೨೧). [ತನಿ$_2$+ಸೊಕ್ಕು$_1$ (<ಸೊರ್ಕು$_1$)]

**ತನಿಸೊಕ್ಕು$_2$** 'ತನಿಸೊರ್ಕು' ನೋ.

**ತನಿಸೊಗ, ತನಿಸೊಕ** (ನಾ). "ಹೆಚ್ಚಾದ ಸುಖ; ಬಹು ಆನಂದ": (ಪ್ರಭಷ.). **ತನಿಸೊಕ**: ಪದಮಂ ಮೋಕ್ಷಚತುಷ್ಟಯಮಂ ಬಯಸದೆ ದುಚ್ಚೌಕಮನಾಡುವ ತನಿಸೊಕದೊದವಂ ಮುದಮನೆರಳ್ಕಯ್ಯಿಂದಿತ್ತಿದ್ದು ಗವಾಡುವನು (ಉದ್ಯದೇ. ೩-೧೩). [ ತನಿ$_2$ + ಸೊಗ ]

**ತನಿಸೊಬಗು** (ನಾ). ಮಿಗಿಲಾದ ಅಂದ; ಅತಿಶಯವಾದ ಸೌಂದರ್ಯ: ತನಿಸೊಬಗಂ ಪ್ರಸಾರಿಸಿ ಸಮುಂಚಿತ ಕೈತವಮಂ ನಿಮಿರ್ಚೆ . . . ಸುಮ್ಮನೆ ಪೊಗಟುತ್ತೆಯಿರ್ಪುದೆ ವಸುಂಧರೆಯೊಳ್ಪಿಲೆವೆಣ್ಗೆ ಲಕ್ಷಣಂ (ಉದ್ಯಟ. ೧೦-೬೧): ತನಿಸೊಬಗುವಡೆದ ಸನ್ಮೋಹನದ ಕಣೆಯು ಬಾ (ಜೈಮಿಭಾ. ೬-೨೫).

[ ತನಿ$_2$ + ಸೊಬಗು ]

**ತನಿಸೊರ್ಕು, ತನಿಸೊಕ್ಕು$_2$** (ನಾ). ೧. ಹೆಚ್ಚಾದ ಮದ,-ಅಮಲು: ಅಲರ್ವಂಡನುಂಡು ತನಿಸೊರ್ಕಿಂ ಸೊರ್ಕಿ ತೆಱಂದಿರಿದು ಪಾಱುವ ಪೆಣ್ದುಂಬಿಗಳ ಬಳಗವಂ (ಕಾದಂಉ. ೫೨೬): ಕಾಯಜನೆಸುಗೆಯ ಕಮ್ಮ ಸರಂಗಳ ಗಾಯದ ತನಿಸೊರ್ಕಿಂ . . . ಲೋಚನಮಂ ಮುಚ್ಚಿ (ಜಯುಕಾ. ೪-೩೬). **ತನಿಸೊಕ್ಕು$_2$**: ೧. ಬೆಡಗು ಬೇಟ ತನಿಸೊಕ್ಕು ತವಕ ತಳ್ಳಂಕ ಇನಿಮಾತು ದಣಿವಿಲ್ಲದ ಕೂಟವಾ ನಾಡವನಿತೆಯರೊಳಗೆಸೆದಿಹುದು (ಕುರಾಸಾಂ. ೨-೬೨); ಭಾವಿಸೆ ಸೊಗದ ಸುಗ್ಗಿಯು ತನಿಸೊಕ್ಕನ್ನನಾವರಿವುದು ಮತ್ತೇವೆ (ಹದಿಬ. ೦-೪೩). ೨. ಮಾದಕತೆ: ತಾವರೆವಂಡಿನ ತನಿಸೊರ್ಕಿಂ ಸೊರ್ಕಿದ ಪೆಣ್ಣಂಚೆಗಳಿಂಚರಂಗಳೊಳಂ (ಕಾದಂಪೂ. ೧೧೬); "ಮದ್ಯ" (ಕಾದಂಪೂ. ಅಡಿಟಿ). [ ತನಿ$_2$ + ಸೊರ್ಕು$_2$ ]

**ತನಿಸೋಂಕು$_1$** (ಕ್ರಿ). ಹಿತವಾಗಿ ಸ್ಪರ್ಶಿಸು; ಮೃದುವಾಗಿ ಮುಟ್ಟು: ತನಿ[ಪಾಠಾಂ. ನು]ಸೋಂಕಿ ಸೋಂಕಿನೊಳ್ ಬಂದು ನಿಂದ ಸಹಕಾರ ಕಾಂತನೊಳ್ ಸೊಗಯಿಸಿದತ್ತೆನಸುಂ . . . ಪ್ರಿಯಮಲ್ಲಿಕಾಲತಾವೇಷ್ಟಿತಕಂ (ಚಂದ್ರಪು. ೬-೯೩): ತಳೆದು ನಿಜಾಂಗಪೀಠತಟದೊಳ್ ಜನನಂ ತನಿಸೋಂಕಿ ಹಸ್ತದಿಂ ಪುಳಕಿತಗಾತ್ರನಾಗಿ ಮಘವಂ ಮೆಱೆದಂ (ಪುಷ್ಪಪು. ೧೦-೨೨).

[ ತನಿ$_2$ + ಸೋಂಕು$_1$ ]

**ತನಿಸೋಂಕು$_2$, ತನಿಸೊಂಕು** (ನಾ). ಮೃದುವಾದ ಸ್ಪರ್ಶ; ಹಿತವಾದ ಸ್ಪರ್ಶ: ಸುರನಂದನದಿಂ ಪೊದಟ್ದ ಬಲ್ಮುಗುಳ್ಗಳ ತಂದಲಂದು ಕವಿತಂದುದದಂ ತನಿಸೋಂಕು ಸೋಂಕಿ ಮೆಲ್ಲಗೆ ಮಲಯಾನಿಳಂ ಸುೞಿದೊಡಂದು ಜಗಂ ಪೊಸತಾದುದು (ಪಂಪಭಾ. ೧೪-೧೯): ತುಹಿನಕರನ ತಣ್ಗದಿರ್ಗಳ ತನಿಸೋಂಕಿನಿಂ ತಣ್ಪುವಡೆದ ತಾರಹಾರಂಗಳೊಳಂ (ಕಾದಂಉ. ೫೯೮): ತನಿಸೋಂಕಿಂ ತನಗೀಯೆ ಹರ್ಷಭರಮಂ ಲಜ್ಜಾಭರಾಕುಂಚಿತಾನನೆ ವೈದೇಹಿ . . . ಇತ್ತು ತಿರ್ಯಗ್ವಿಳೋಕನಮಂ (ಪಂರಾಮಾ. ೫-೧೧೧). **ತನಿಸೊಂಕು**: ಇನಿಯಳ ತನಿಸೊಂಕಿನ್ನುಣಿಸನೆ ಮಾಲ್ಯಾಭರಣ ಲೇಪನಂ ತಂಬುಲಮೆಂಬಿನಿತುಂ ರಾಗಮನಾಗಿಸೆ ಮನದೊಳ್ ದಿವಿಜೇಂದ್ರ ವಿಭವದಿಂ ಸುಖಿಮಿರ್ದಂ (ಶಾಮ್ಯಾದ. ೨೨೫). [ ತನಿ$_2$ + ಸೋಂಕು$_2$ ]

**ತನಿಹರಕೆ** (ನಾ). ತುಂಬು ಹರಕೆ; ಪೂರ್ಣಾಶೀರ್ವಾದ: ತೂಪಿಱಿದು ಸುಳಿವುಪ್ಪಾರತಿಯ ತನಿಹರಕೆ ತಳಿತುದು ತಾಯ ನೇಮದಲಿ (ಕುವ್ಯಾಅ. ೬-೩೦). [ ತನಿ$_2$ + ಹರಕೆ (<ಪರಕೆ$_1$) ]

**ತನಿಹಳುಕು** (ನಾ). ಹಿತಕರವಾದ ಹಳುಕು,-ತುಂಡಂ: ತೊಲಗಿ ನಿಂದರು ಕರ್ಪುರದ ತನಿಹಳುಕನಣಲೊಳಗಡಸಿ ದಂಡೆಯ ಬಲಿದು ಬಱಿಸಿಡಿಲೆಱಕವನೆತಾಗಿದರು ಬಳಸಿನಲಿ (ಕುವ್ಯಾಸ. ೨-೧೦೩). [ತನಿ$_2$ + ಹಳುಕು (<ಪಳಿಕು)]

**ತನಿಹಾಡಿಕೆ** (ನಾ). "ಯಾವ ಪಕ್ಕವಾದ್ಯವೂ ಇಲ್ಲದೆ, ಇದ್ದರೂ ಅದನ್ನು ಬಹಳ ಗೌಣವಾಗಿಟ್ಟು ಒಬ್ಬನೇ ಹಾಡುವ ಹಾಡು, ನುಡಿಸುವ ಗೀತೆ; ತನಿಹಾಡಿಕೆ" (ಶಿಂ. ಇಂಕನಿ.).

[ ತನಿ$_2$ + ಹಾಡಿಕೆ ]

**ತನಿಹಾಲು** 'ತನಿಪಾಲ್' ನೋ.

**ತನಿಹುಲ್ಲು** (ನಾ). ಸವಿಯಾದ ಹುಲ್ಲು; ರುಚಿಕರವಾದ ಹುಲ್ಲು: ಆನೆ ಕುದುರೆ ಗೋವು ತನಿಹುಲ್ಲ ನೀರಾಶೆಯುಳಿದು ಹನಿವ ಕಂಬನಿಯಿಂದ ದೂನಿಸುತೊಂದರಳ್ದಿನವಿದ್ದುವಾ ರಾಯನಗಲೆ (ಭರಚ. ೭೮-೧೦೪).

[ ತನಿ$_2$ + ಹುಲ್ಲು (<ಪುಲ್) ]

**ತನಿಹೆಚ್ಚು** 'ತನಿಪೆರ್ಚು' ನೋ.

**ತನಿಹೆದಱು** (ಕ್ರಿ). ಬಹಳವಾಗಿ ಬೆದರು,-ದಿಗಿಲುಗೊಳ್ಳು: ಸೂಳೈಸಿದರು ಭುಜವನು ಸಿಡಿಲು ತನಿಹೆದಱೆ (ಕುವ್ಯಾದ್ರೋ. ೨-೯). [ತನಿ$_2$ + ಹೆದಱು$_1$]

**ತನಿಹೊಗರಿಱು** (ಕ್ರಿ). ಅತಿಶಯವಾದ ಪ್ರಕಾಶವನ್ನು ಬೀರು; ಹೆಚ್ಚಾದ ಕಾಂತಿಯನ್ನು ಹರಡು: ಹೊಸ ಕೈದುಗಳ ಮಿಂಚಿನ ಮಕುಟಮಣಿ ಕಾಂತಿಗಳ ಸುರಧನುವಿನ ಚತುರ್ಬಲರವದ ಸಿಡಿಲುಗಳ ವಿಗಡಕುಂಭಜ ಮೇಘಯುತು ತನಿಹೊಗರಿಱಿದು ಪರಬಲದ ಕಡುವೇಸಗೆಗೆ ಕವಿದುದು ರಾಜಹಂಸ ಪ್ರಕರವೋಸರಿಸೆ (ಕುವ್ಯಾದ್ರೋ. ೧-೪೮).

[ ತನಿಹೊಗರು (<ತನಿಪೊಗರ್) + ಇಱು$_1$ ]

**ತನಿಹೊಗರು** 'ತನಿಪೊಗರ್' ನೋ.

**ತನಿಹೊಗೆ** (ನಾ). ದಟ್ಟವಾದ ಹೊಗೆ: ದುಗುಡವೋ ಮೇಣ್ ವಿಕ್ರಮಾಗ್ನಿಯ ತಗಹುಗಳ ತನಿಹೊಗೆಯೊ ರಾಯರ ಮೊಗವ ನೋಡ್ಯೆ (ಕುವ್ಯಾದ್ರೋ. ೧೬-೨೪). [ ತನಿ$_2$ + ಹೊಗೆ$_2$ (<ಪೊಗೆ$_2$) ]

**ತನಿಹೊಟ್ಟು** (ನಾ). ಬೇರೆಯಾದ ಸಿಪ್ಪೆ; ಬರಿಯ ಹೊಟ್ಟು: ತೂಱಿದರೆ ತನಿಹೊಟ್ಟು ಗಾಳಿಗೆ ಹಾಱುವುದು ಕುಲಗಿರಿಯು ಬೈಸಿಕೆ ಜಾಱುವುದ (ಕುವ್ಯಾದ್ರೋ. ೧೬-೪೪). [ ತನಿ$_2$ + ಹೊಟ್ಟು (<ಪೊಟ್ಟು) ]

**ತನಿಹೊರಳು** (ಕ್ರಿ). ಹೆಚ್ಚಾಗಿ ಹೊರಳಾಡು,-ಉರುಳಾಡು: ಪಾಂಚಾಲ ಸತಿಯರು ಜೀವದಲಿ ಜಾಱಿದರು ರಮಣರ ಮೇಲೆ ತನಿಹೊರಳೆ (ಕುವ್ಯಾಗ. ೧೨-೯). [ ತನಿ$_2$ + ಹೊರಳು (<ಪೊರಳ್) ]

**ತನಿಹೊಳಹು** (ನಾ). ಹೆಚ್ಚಾದ ಹೊಳಪು,-ಕಾಂತಿ: ತಳಿತ ಮಿಂಚಿನ ಮುಱಿವುಗಳೊ ತನಿಹೊಳಹುಗಳೊ ಖಂಡೆಯದ ಧಾರೆಯ ಕೊಳುಗಿಡಿಯೊ (ಕುವ್ಯಾದ್ರೋ. ೧೪-೬). [ ತನಿ$_2$ + ಹೊಳಹು$_1$ (<ಪೊಳೆವು) ]

**ತನಿಹೊಳೆ** (ಕ್ರಿ). ಹೆಚ್ಚಾಗಿ ಪ್ರಕಾಶಿಸು,-ಮಿರುಗು: ಮಿಱುಮಿಱುಪ ದಿವ್ಯಾಭರಣಕಿರಣದ ತುಱುಗಿನಲಿ ತನಿಹೊಳೆವ ದಿವ್ಯಾಂಬರದ ಕಾಂತಿಯಲಿ . . . ಒಪ್ಪಿದರಿಂದ್ರತೇಜದಲಿ (ಕುವ್ಯಾಅ. ೬ರಿಇ. ೩೩-೫೬); ಎಡಬಲಕೆ ತನಿಹೊಳೆವ ತೇಜಿಯ ಕಡುಮದದ ಕರಿಘಟೆಯ . . . ಕಳಕಳವಾಯ್ತು ರಣದೊಳಗೆ (ಕುವ್ಯಾದ್ರೋ. ೯-೧೨).

[ ತನಿ$_2$ + ಹೊಳೆ$_1$ (<ಪೊಳೆ$_1$) ]

**ತನು** (ಗು). ೧. ತೆಳುವಾದ; ಕೃಶವಾದ: "ಕ್ಷಾಮಂ, ಶಾಂತಂ, ಕೃಶಂ . . . ತನು – ಈ ೭ ಅಸಿದು" (ಹಲಾಯು. ೧೧೯-೩); ತನು ತನುವಾಗೆ ನೋಂತು (ಅಜಿಪು. ೩-೨): ವನಿತೆಯು ತನುತನು ಹರಿಚಂದನ ಶಾಖೆಯು

ನಡರ್ದು . . . ನೋಳ್ಪ ಭುಜಗಾಂಗನೆಯೆನೆ ಘನವೇಣಿ ಜಾಣೆಗೇ ನೊಪ್ಪಿದುದೊ (ರಾಜಶೇ. ೭-೫೯). 'ತನುಮಧ್ಯೆ' ಪರಾ. ೨. ಕೋಮಲವಾದ. 'ತನುಗಾತ್ರಿ' ಪರಾ. ೩. ಸಣ್ಣ; ಚಿಕ್ಕ: ತನುವಲ್ಲದತನುತಾಪಂ ತನುವಂ ಸುಡೆ . . . ತನುಮಧ್ಯೆಯರಲರ್ವಾಸಿನ ಮೇಲೆ ಪಾಸಿದರ್ ತನುತನುವಂ (ಮಲ್ಲಿಪು. ೩-೨೯). 'ತನುಮುನಿ' ಪರಾ. (ನಾ). ೪. ಮೈ; ದೇಹ: "ತನುಃ, ತನೂಃ . . . ಗಾತ್ರಃ, ಅಪಘನಃ, ಮೂರ್ತಿಃ –ಈ ೧೭ ಶರೀರಂ" (ಹಲಾಯು. ೮೪-೩೫೭); ಪಾರ್ದೆಚ್ಚ ವೃಷಾಂಕನಂಬು ತನುವಂ ಪಚ್ಚಂತೆ ಕೊಂಡತ್ತು (ಪಂಪಭಾ. ೮-೧೭); ತನುವಂ ತೆಯ್ದುಪ್ಪಳಕ್ಕಂ ಬ್ರತದೊಳ್ (ಕಾದಂಬ. ೭೯); ತನು ಕರಗಿ ಮನ ಕರಗಿ ಮಾಡುವದು ಭಕ್ತಿಸ್ಥಲ (ಬಸವ. ೮೭೪); ತನು ಕರಗದವರಲ್ಲಿ ಮಜ್ಜನವನೊಲ್ಲೆಯಯ್ಯ ನೀನು (ಮಹಾದೇ. ಬ. ೦೩-೯); ತನುವ ಮಱೆದನು ಪುಳಕಜಲದಲಿ ನನೆದು (ಕುಮಾ. ೮-೮); ತನು ನಿನ್ನದು ಜೀವನ ನಿನ್ನದೊ (ಕನಕ. ೩೭ ಪಲ್ಲವಿ); ತನುವರಿಯದ ನೋವಿಲ್ಲ ಮನವರಿಯದ ಪಾಪವಿಲ್ಲ (ಗಾದೆ). ೫. ಚರ್ಮ; ತೊಗಲು.

ತನುಮಾಡು = ಸೊರಗಿಸು; ಕೃಶಗೊಳಿಸು: ಪಿರಿದಪ್ಪ ದಾರುಣವ್ರತದಹನಾರ್ಚಿಯಿಂದನುದಿನಂ ತನುವಂ ತನುಮಾಡುತಿರ್ಪನೆಂಬತನು ವಿರೋಧಮುಮಂ ತನುವಿರೋಧಮುಮೊಪ್ಪುಗುಮತ್ತಿಮಬ್ಬೆಯೊಳ್ (ಅಜಿಪು. ೧-೪೯). ತನುವಾಗು = ಸೊರಗು; ಕೃಶವಾಗು: ತನು ತನುವಾಗೆ ನೋಂತು . . . ತಾಳ್ದಿದಂ ವಿಮಲವಾಹನಯೋಗಿ ತಪೋನಿಯೋಗಮಂ (ಅಜಿಪು. ೩-೨). [ಸಂ.]

ತನುಕಂಪ (ನಾ). ದೇಹದಲ್ಲಿನ ಕಂಪನ; ಮೈನಡುಕ: ಶ್ರೀಗಿರೀಶನ ಹೃದಯ ಭುಗಿಲಿಡಿದು ತನುಕಂಪವಾಗಿ ಜರ್ಝರಿಸಿ ತಲ್ಲಣಗೊಳುತಿರಲು (ಪವಮೂ. ೭-೪೮). [ತನು + ಕಂಪ್ರ]

ತನುಕಾಂತಿ (ನಾ). ದೇಹದ ಕಾಂತಿ,-ತೇಜಸ್ಸು: ತನುಕಾಂತಿ ತುಂಬಿದ ಸಭೆಯೆಂಬ ಕೊಳದಲ್ಲಿ . . . ರಾಜಹಂಸನಿದ್ದನು (ಭರಜ. ೧-೨೯); ಭಕ್ತರ ಭವದುರಿ ತಣಿಯದ ಹರ ನಿನ್ನ ತನುಕಾಂತಿಯಿಂದೆ (ಇಂಚಾಪ. ೭೩-೬೦).

[ತನು + ಕಾಂತಿ]

ತನುಕೇಶ (ನಾ). ತೆಳುವಾದ ಕೂದಲು: ತನುಕೇಶಂ ಪುಣ್ಯವಂತಂ ಕುಟಿಳಮೃದು ಘನಸ್ನಿಗ್ಧ ಕೇಶಂ ಮಹೀಶಂ ಧನವಂತಂ (ಲೋಕೋಪ. ೧೧-೨೭).

[ತನು + ಕೇಶ]

ತನುಗಂಪು (ನಾ). ಮೈಯ ಪರಿಮಳ; ದೇಹದ ಸಂಗಂಧ: ಪೂಸುವೊಡ ಕಸ್ತೂರಿ ಜವಾಜಿಗಳೆಸಲೇ ಪರಿಮಳವು ಸುತ್ತಲು ಸೂಸಿ ತನುಗಂಪಿನಲಿ ಮಘಮಘಿಸಂವಳು ಯೋಜನವ (ಕುಮಾಆ. ೭೦೩. ೫೯-೧೪); ಅಂಬರ ಚರಿಯರ ತನುಗಂಪಿಗೆಱಗುವ ತುಂಬಿಯ ಬಳಗದಂದದಲಿ ಜಂಬುನೇಱುಲಿಗಳೊಪ್ಪಿದುವು (ಕಂನವಿ. ೨-೪೪).

[ತನು + ಕಂಪು]

ತನುಗತ (ಗು). ದೇಹವನ್ನು ಸೇರಿದ,-ಬೆರೆತ (?): ಬಾರಿಸಿದ ಸರಣಿ ಶ್ರಮೋದ್ಭವವಾರಿ ತನುಗತವಾದವಂಗ ಮನೋರಥದಲುಬ್ಬಿದುದು ವಿಶ್ವಾಮಿತ್ರಮುನಿವರನ (ತೊರರಾ. ೦-೯-೦೭).

[ತನು + ಗತ್ಮ]

ತನುಗಾತ್ರ (ನಾ). ಬಡಕಲುಮೈಯುವನಂ; ಕೃಶವಾದ ಶರೀರವುಳ್ಳವನು: ತನುಗಾತ್ರಂ ದೀನನೇತ್ರಂ ತುಪಲಘುತರಮಾತ್ರಂ (ರತ್ನಾಕ. ೨೦).

[ತನು + ಗಾತ್ರ]

ತನುಗಾತ್ರಿ (ನಾ). ಕೋಮಲವಾದ ಶರೀರವುಳ್ಳವಳು; ಕೋಮಲಾಂಗಿ: ತನುಗಾತ್ರಿ ನಿನ್ನ ತಪಿಪಂ ಮನಸಿಜನಾವಗಮುಮೆನ್ನನಾದೊಡ ದಹಿಪಂ (ಶಾಕುಂತ. ೩೮-೬೮). [ಸಂ. ತನುಗಾತ್ರೀ]

ತನುಗುಣ (ನಾ). ದೇಹಗುಣ; ದೇಹಧರ್ಮ: ಅಂತರಂಗದಲ್ಲಿ ಸಹಜದಾಡುವ ತನುಗುಣಾದಿಗಳ ಮನಗುಣಾದಿಗಳ ಪ್ರಾಣಗುಣಾದಿಗಳ ಕಳೆದಲ್ಲಿ ಶರಣರಹರೆ (ಅಪಹಂ. ೯೦-೧೦೪). [ತನು + ಗುಣ]

ತನುಗೆಡು (ಕ್ರಿ). ದೇಹವು ಸೊರಗು; ಬಡವಾಗು; ಕೃಶವಾಗು: ವಿನಯವಿದ್ದಧಿಕರನು ತನುಗೆಟ್ಟ ಬಡವರನು . . . ಕರೆದುಣ್ಣದವನೂಟ ಶುನಕ ತಿಂದಂತೆ (ಸರ್ವಜ್ಞ. ೬೬೦). [ತನು + ಕೆಡು$_1$]

ತನುಗೊಳ್(ಕ್ರಿ). ಮೈದಳೆ; ದೇಹವನ್ನು ಧರಿಸು; ಮೂರ್ತಿಮತ್ತಾಗು: ಜಲಜನಾಭನ ಭಕುತಿ ತನುಗೊಂಡಿಳೆಗೆ ಪುರುಷಾರ್ಥವನು ಮಾಡುತ ಸುಳಿವವೊಲು ನರಲೋಕವಂದ್ಯನು ಯಮುನೆಗೈತಂದ (ನಿಭಾಗ. ೩-೨-೩೫).

[ತನು + ಕೊಳ್$_1$]

ತನುಗ್ರಹಣ (ನಾ). ದೇಹವನ್ನು ಧರಿಸುವುದು; ಜನ್ಮತಾಳುವುದು; ಅವತಾರ: ಅನಿಮೇಷರಕ್ಷಣಾರ್ಥಂ ನಿನಗೆ ತನುಗ್ರಹಣಂ . . . ಕುಶೇಶಯನಯನಾ (ಜಗವಿ. ೩-೧೦೩). [ತನು + ಗ್ರಹಣ]

ತನುಚತುಷ್ಟಯ (ನಾ). [ದ್ವೈತ] ನಾರಾಯಣನ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ ಮತ್ತು ವಾಸುದೇವ ಎಂಬ ನಾಲ್ಕು ಬಗೆಯ ರೂಪಗಳು: ತನುಚತುಷ್ಟಯಗಳೊಳು ನಾರಾಯಣನು ಹೃತ್ಕಮಲಾಖ್ಯ ಸಿಂಹಾಸನದೊಳನಿರುದ್ಧಾದಿ ರೂಪಗಳಿಂದ ಶೋಭಿಸುತಾ (ಹಸಾರ. ೩-೭): "ತನುಚತುಷ್ಟಯಗಳೊಳು=ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವನೆಂಬ ನಾಲ್ಕು ರೂಪಗಳುಳ್ಳ ತನ್ನ ಶರೀರಗಳಲ್ಲಿ" (ಹಸಾರ. ೩-೭ ಪದ್ಯಾರ್ಥ). [ತನು + ಚತುಷ್ಟಯ]

ತನುಚ್ಛವಿ (ನಾ). = ತನುಕಾಂತಿ: ತಾವರೆಯ ಮಿತ್ರನ ಕರಗಿ ಕರುವಿನೊಳೆಱೆದರೆಂದೆನೆ ಥಳಥಳಿಸಿ ತೊಳಗುವ ತನುಚ್ಛವಿಯ . . . ವರಕುಮಾರನ ಕಂಡು (ಕುಮಾಆ. ೩-೨೦). [ತನು + ಛವಿ]

ತನುಚ್ಛಾಯೆ (ನಾ). = ತನುಕಾಂತಿ: ಈ ಕಾಂತಿಯಿಾ ತನುಚ್ಛಾಯೆಯಿಾ ವಿಸ್ಮಯಂ . . . ಮಾನವರ್ಗಿಲ್ಲ ದೇವರ್ಕಳ ಚರಿತವಿದು (ನಂಬಿರ. ೧೭-೨೦).

[ತನು + ಛಾಯೆ]

ತನುಜ (ನಾ). ೧. ಮಗ; ಸುತ: "ಸೂನುಃ, ಸಂತತಿಃ, ಆತ್ಮಜಃ, ತನುಜಃ, ಪುತ್ರಃ . . . ಅಪತ್ಯಂ–ಈ ೧೨ ಮಗವು" (ಹಲಾಯು. ೮೨-೩೪೩); ತನುಜರು ಮನುಜರುಮುಚಿತಾಸನದೊಳ್ ಮಂತ್ರಿಗಳುಮಿರೆ (ಶಂರಾಮಾ. ೧೨-೪೫); ತನುಜನಖಿಲಾರ್ಥಕಲ್ಪಾವನಿಜಂ (ಪುಷ್ಪಪು. ೩-೯೨); ಕಂದನಾವೆಡೆ ತನ್ನ ಮೋಹದ ಸಿಂಧುವಾವೆಡೆ ತನುಜವನವಮಾಕಂದನಾವೆಡೆ (ಕುಮಾದ್ರೋ. ೮-೧೭); ಮನದೊಳೆ ತನುಜರೆಂದೆಂಬ ಜಾಣ್ನುಡಿಯನರಿತು (ಶ್ರೀರಾಮಾ. ೧೨-೩೦೫). ೨. ಮರಿ; ಪೋತ: ಆನೆಯ ತನುಜನ ಅಡು ಮುಟ್ಟಿದರೆ ಹೀನವಾಗಿಗಪ್ಪುದಯ್ಯ (ಘನವ. ೧೫). [ಸಂ.]

ತನುಜನ್ಮ (ನಾ). = ತನುಜ ೧: "ನಂದನ ತನುಜನ್ಮ ತೋಕ ಸುತ ಪುತ್ರ ತನೂಭವ ಸೂನುನಾಮಕಂ ತನಯಂ" (ವಸ್ತುಕೋ. ೫೪-೦೭).

[ಸಂ. ತನುಜನ್ಮನ್]

ತನುಜಾತ (ನಾ).=ತನುಜ ೧: ತನುಜಾತೋದಯಮಪ್ಪ ಪುಣ್ಯದಿನಮಂ ಮೆಯ್ವೆರ್ಚೆ ಕಾಣಲ್ಕೆ ನೋನೆನೋ (ಸುಕುಮಾ. ೯-೧೦೩); ತನ್ನಯ ತನುಜಾತರುಗಳನಾಹವಕೆ ಭೂತಳೇಶನು ಬೀಳ್ಕೊಡಲು (ತ್ರಿಪುಸಾ. ೧೮-೦೯೯); ನಿನ್ನ ತನುಜಾತರಭ್ಯುದಯಕಾಗಿ ಬಂದಿಹೆನ್ (ಶ್ರೀರಾಮಾ. ೩೦-೭೮). [ಸಂ.]

ತನುಜಾತಕಾಮೇಷ್ಟಿ (ನಾ). ಪುತ್ರನನ್ನು ಪಡೆಯುವುದಕ್ಕಾಗಿ ಮಾಡುವ ಯಜ್ಞ; ಪುತ್ರಕಾಮೇಷ್ಟಿ: ದಶರಥನೃಪಂ . . . ವಾರೆಯುರ್ವರೆಗೆ ತನುಜಾತಕಾಮೇಷ್ಟಿಯುಂ ಕೈಕೊಂಡು (ಶ್ರೀರಾಮಾ. ೧೧-೨೯೯).

[ಸಂ. (ತನುಜಾತ + ಕಾಮ + ಇಷ್ಟಿ)]

**ತನುಜಾತೆ** (ನಾ). ಮಗಳು ; ಪುತ್ರಿ : ದ್ರುಪದತನುಜಾತೆಯಂ ಪಿಡಿದೆತ್ತಿ ಕರುಣೆಯಿಂದುಪಚರಿಸಿ ಮನೆಗೆ ಬೀಳ್ಕೊಟ್ಟು (ಜೈಮಿಭಾ. ೨-೩೧). [ ಸಂ. ತನುಜಾತಾ ]

**ತನುಜೆ** (ನಾ). = ತನುಜಾತೆ : ಸ್ತ್ರೀರತ್ನದೊಳ್ ಮಿಗಿಲೆಂಬ ಪೆಂಪಿನ ತನುಜೆಯಂ ಕೊಟ್ಟಂ (ಶಾಂತಿಪು. ೧೧-೬೯) ; ನೀಲಧ್ವಜಂ . . . ಪಡೆದನತಿರೂಪಗುಣಶೀಲಗಳಿಂದೆಸೆವ ತನುಜೆಯ (ಜೈಮಿಭಾ. ೯-೩). [ ಸಂ. ತನುಜಾ ]

**ತನುತನುತ್ರ** (ನಾ). ಮೈಕವಚ ; ಮೈಜೋಡು : ವನದೊಳಗೆ ರತ್ನಮೃಗಮಾಗಿ ನಲಿಯುತಂ ಪೊನ್ನತನು ತನುತ್ರಂ ಚಾಪಂ ತನಗವುರೆ ಕಿನ್ನರಾಕೃತಿಯಿನೆಸೆದು ತೋರ್ಪಂ ತುಲಾಂತಿಮದ್ರೇಕ್ಕಾಣಂ (ಜಾತತಿ. ೧೯-೨೦). [ ತನು + ತನುತ್ರ ]

**ತನುತರ** (ಗು). ೧. ಹೆಚ್ಚು ಸೂಕ್ಷ್ಮವಾದ, - ಕೋಮಲವಾದ : ಅನೈಕಾಂತಿಕರ್ಕಲರ್ತನುತರ ತನುಗಳೊಳಮತಿವಿಶದ ಪ್ರಜ್ಞಾತಿಶಯಮಂ ಕಾಣಲಾದಪ್ಪುದು (ಆದಿಪು. ೨-೧೧ ವ) ; ಕೇಕ ತನುತರತಂತುವನ್ನೆಳೆದು ಕುಶಲದಿಂ ನೆಯ್ದುವ್ಯುತಕೌಶೇಯ ಯುವನಿಕಾಚ್ಛಾದಿತಂ ಮೆರೆದಿರೆ ಮನೋಹರಾಸ್ಪಷ್ಟ ಕಾನನಭೂಮಿ (ಶ್ರೀರಾಮಾ. ೨೦೦-೧೬೦). ೨. ತೀರ ಸಣ್ಣ ; ಅತ್ಯಲ್ಪವಾದ ; ಕ್ಷುದ್ರವಾದ : ಶಿತಿಕಂಠನಲ್ಪವ್ರತಕ್ಕೆ ತನುತರ ತಪಕ್ಕಮೇನೊಲ್ಲದವನೇ (ಶಬಶಂ. ೨-೮೬). [ ಸಂ. ]

**ತನುತಲ** (ನಾ). ದೇಹದ ಅಡಿ : ತನುತಲಲೀನಳಾಗಿಹ ಛಾಯೆ ತುಸು ಕೂಡ ಹೊರಗಡೆಗಿಣುಕಳಿಂದೆನಲು ಇಂಥ ಅವಸರದೊಳು ಪಾಂಥನೆ ನೀ ಕೂಡ ವಿರಮಿಸಬಾರದೆ ಹೇಳು (ಗಾಥಾಸ. ೧-೪೯). [ ತನು + ತಲ ]

**ತನುತಾಪ**(ನಾ).ದೇಹದ ತಾಪ: ತನುತಾಪದಿಂದೆ ಪೊರ್ದಿದ ಬನಮುರಿವುದು (ವರ್ಧಪು. ೪-೬೦) ; ತನುತಾಪಕ್ಕಾಜದೆ ಮೇದಿನಿಯೊಳ್ಪೊರಳ್ವರಸನಂ ನಿರೀಕ್ಷಿಸಿ (ತ್ರಿಪುವಿ. ೩೩-೪೬). [ ತನು + ತಾಪ$_2$ ]

**ತನುತೆ** (ನಾ). ತೆಳುವಾಗಿರುವಿಕೆ ; ಕೋಮಲತೆ : ಶುಭಾಂಗಿಯ ತೆಳ್ವಸಿರ ತನುತೆಯನ್ನಣಕವಾಡಿ ಇಳಿಹುತ್ತಿದೆ (ಮಂತ್ರಶ. ೮೯-೨). [ಸಂ. ತನುತಾ]

**ತನುತ್ರ** (ನಾ). ಕವಚ ; ಜಿಲುಖಿತ್ತು ; ಜೋಡು : ದಿವ್ಯ ಶರಾಸನ ಶರಧಿ ವಿಚಿತ್ರ ತನುತ್ರಂಗಳೆಲ್ಲಮಂ ಗೆಲ್ಲಮಂ ತನಗಾವಗಂ ಕೊಳ್ವಂತೆ ಕೊಂಡು (ಪಂಪಭಾ. ೮-೧೦೦ ವ) ; ನೆಱೆಯೆ ತನುತ್ರಮಿಕ್ಕಿದಪೊಲಿಟ್ಟ ಮಲಂ ತಿನೆ ಮೆಯ್ಯನೊರ್ಮೆಯುಂ ತುಱಿಸುವುದಿಲ್ಲ (ಎಕ. II, ೩೫೧-೧೭ ; 1119) ; ಶರಹತಿಗೆ ಭೀಮನ ಬಲುಪತಾಕೆ ತನುತ್ರ ರಥಕರ್ಣಾಸ್ತ್ರಮುಯುವಾಯ್ತು (ಕುವ್ಯಾದ್ರೋ. ೦೩-೩೫). [ ಸಂ. ]

**ತನುತ್ರಯ** (ನಾ). ಸ್ಥೂಲ, ಸೂಕ್ಷ್ಮ, ಕಾರಣವೆಂಬ ಮೂರು ಬಗೆಯ ಶರೀರಗಳು : ಸ್ಥೂಲಸೂಕ್ಷ್ಮಕಾರಣವೆಂಬ ತನುತ್ರಯುವನಱಿತು (ಮೋಳಿವಾ. ೦೫೦-೫೭೦) ; ಎನ್ನ ತನುತ್ರಯಂಗಳಲ್ಲಿ ಮುಸುಕಿದ ಮಲತ್ರಯಂಗಳ ಕಳೆದು ಲಿಂಗತ್ರಯಗಳ ನೆಲೆಗೊಳಿಸಿದ ಗುರುವೇ (ಅಖಂಡೇ. ೧೯-೬) ; ತನುತ್ರಯಗಳನು ಹೇಳ್ವೆ ಅರಿಯೈ ತನಯ ಸ್ಥೂಲವು ಸೂಕ್ಷ್ಮ ಕಾರಣ (ಜ್ಞಾನಸಿಂ. ೪-೮೯). [ ತನು + ತ್ರಯ ]

**ತನುತ್ರಾಣ** (ನಾ). ೧. ದೇಹದ ಶಕ್ತಿ. ೨. = ತನುತ್ರ : "ಸನ್ನಾಹಂ, ಕವಚಂ, ವರ್ಮ, ತನುತ್ರಾಣಂ . . . ಜಾ(ಳಿ)ಳಕಾ—ಈ ೧೦ ಕವಚಂ" (ಚಲಾಜು. ೭೬-೩೦೫). [ ಸಂ. ]

**ತನುತ್ವ** (ನಾ). ೧. = ತನುತೆ : "ಕಟಲ್ - ತನುತ್ವೇ (ಸಣ್ಣನಾಗು)" (ಶಮಧಾ). 'ತನುತ್ವಂಬಡೆ' ಪರಾ. ೨. ದೇಹವನ್ನು ಹೊಂದಿರುವಿಕೆ: ಮಿತನಖಕೇಶಶೋಭಿತ ತನುತ್ವಮುಭುಕ್ತ್ಯುಪಸರ್ಗಭಾವಮಂ . . . ಪರಿಪೀತದೇಹಬಿಂಬತೆವೆರಸಿಂತು ಪತ್ತತಿಶಯಂಗಳಿವೇಂ ಜಿನನೊಳ್ ಪೊದಟ್ಟುವೊ (ಆದಿಪು. ೧೦-೪೨). [ ಸಂ. ]

**ತನುತ್ವಂಬಡೆ** (ಕ್ರಿ). ತೆಳುವಾಗು; ಬಡವಾಗು: ತನುನಾಮಮುಮಂ ಸಾರ್ಥಕಂ ಮಾಳ್ಪಂತೆ ತನು ತನುತ್ವಂಬಡೆಯೆ (ರಾಜಶೇ. ೭-೯೩ ವ). [ತನುತ್ವ+ಪಡೆ$_1$]

**ತನುದಂಡ** (ನಾ). ದೈಹಿಕ ಶಿಕ್ಷೆ : ಸಮನಿಸೆ ಹಾ ಮಾ ಧಿಗ್ದಂಡಮುಯ್ಯು ರಿಂದಾಯ್ತು ಭರತನಿಂ ತನುದಂಡಂ (ಪುರಾಮಾ. ೧-೮೯). [ ತನು+ ದಂಡ ]

**ತನುದಂಡನೆ** (ನಾ). ದೇಹವನ್ನು ದಂಡನೆಗೆ ಗುರಿಪಡಿಸುವುದು ; ವ್ರತನೇಮಗಳಿಂದ ದೇಹವನ್ನು ದಂಡಿಸುವುದು : ಅಜ್ಞಾನಿಗಳಾದಂಥ ಗಂಡಂದಿರು ಬಾಹ್ಯಪ್ರಪಂಚವನ್ನು ತನುದಂಡನೆಯಿಂದ ನಿವೃತ್ತಿ ಮಾಡಬೇಕೆನ್ನುವವರು (ಕರ್ನಾಕ. ೧೫೨). [ ತನು + ದಂಡನೆ ]

**ತನುಧರ್ಮ** (ನಾ). ದೇಹದ ಗುಣ : ತನುಧರ್ಮಮಿಂದ್ರಧರ್ಮಂ ಘನ ಸಂಪದದಾದ ಪೆರ್ಮೆ . . . ಅಧ್ರುವಂ (ನೇಮಿಪು. ೧೪-೪೯) ; ತನುಧರ್ಮ ಗಳುಳಿದು ಏಚ್ಛಿನ್ನ ಸ್ವೈರಣೆಯಲಿ ಮಲುಹಣನು . . . ಒಲುಮೆಯಂ ನೆನೆವ (ಬಸಪು. ೪೨-೨೦). [ ತನು + ಧರ್ಮ ]

**ತನುಧಾತುಜ್ಞ** (ನಾ). ದೇಹದ ಧಾತುಗಳ ಬಗ್ಗೆ ತಿಳಿದವನು ; ವೈದ್ಯ : ಧಾತುಜ್ಞರ್ ಸಂತತ ತನುಧಾತುಜ್ಞರ್ ಭೂರಿಸಾರಧಾತುಜ್ಞರ್ ಸದ್ಧಾತುಜ್ಞರ್ ನೆರೆದಿರ್ದರ್ (ಹವಿಸ್ಮ್ರ. ೨-೧೧೩). [ ಸಂ. ]

**ತನುನವಿರ್** (ನಾ). ದೇಹದ ರೋಮ; ಮೈಗೂದಲು : ಬೇಗದಲ್ಲಿ ತನು ನವಿರ್ಗುಡಿಗಟ್ಟಿ (ಕಂಸವಿ. ೯-೫೪). [ ತನು + ನವಿರ್ ]

**ತನುಪರಿಮಳ** (ನಾ). = ತನುಗಂಪು : ತರುಣಿ ನಿಜತನುಪರಿಮಳದಲುಱೆ ಹೊರೆದ ಹೂವಿನ ದಂಡೆಯನು ನಿಜವರನ ಕೊರಳಲಿ ಹಾಯ್ಕಿದಳು (ಕುವ್ಯಾಅ. ೧೫-೩೫) ; ಆ ತರುಣಿಯರ ತನುಪರಿಮಳದ ಸೋಂಕಿನಲಿ ಸುತ್ತಲು ಪರಿಮಳಿಸಿದುದು ತರು (ತೊರೆರಾ. ೧-೫-೪೫). [ ತನು + ಪರಿಮಳ (=ಪರಿಮಲ) ]

**ತನುಪುಳಕ** (ನಾ). ಮೈನವಿರೇಳುವುದು ; ರೋಮಾಂಚನ : ಸಂದಣಿಸೆ ತನುಪುಳಕ ಪರಮಾನಂದರಸಮಯ ನಯನಜಲಭರದಿಂದಲೆಸೆದರು (ಕುವ್ಯಾಅ. ೨೨-೫೩) ; ತನುಪುಳಕದುಬ್ಬುಗಳಲಾಲಿಂಗನವ ಮಾಡಿದನೊಲಿದು . . . ಮುನಿರಾಯ (ತೊರೆರಾ. ೧-೧೧-೨೩). [ತನು + ಪುಳಕ (=ಪುಲಕ)]

**ತನುಭವ** (ನಾ). = ತನುಜ ೧: ತನುಭವಲಾಭ ದೌಹದ ನಿಮಿತ್ತದ ಸಂಗತಿ . . . ಇನಿತುಂ ಸುತಶೋಭನ ವರ್ಣನಸ್ಥಳಂ (ಸೂಕ್ತಿಸು. ೬-೧) ; ತನುಭವರ ನಾವೇನೆಂದು ಕಾಣೆವೆ ಸಾಕವೇ ಹೆತ್ತು (ಬಸಪು. ೨೪-೬೨) ; ತನುಭವರಿಲ್ಲದೀ ತನ್ನ ಅರಸುತನವದು ಮೆಱೆಯದು (ಕಾಶಿರಾ. ೧-೩೫). [ ಸಂ. ]

**ತನುಭವೆ** (ನಾ). = ತನುಜೆ : ತನುಭವೆಯನೀವುದೆನರ್ಗಚ್ನೆಮಾಡುವೆನೊಲ್ಲು ದೇವಿ ನಿಸಗಾಂ (ಲೀಲಾವ. ೭-೪೪). [ ಸಂ. ತನುಭವಾ ]

**ತನುಭೃದ್ಗಣ** (ನಾ). ಜೀವಸಮುದಾಯ; ಜೀವ ಜಾಲ: ಕ್ಷಣಭಂಗವೃತ್ತಿ ತನುಭೃದ್ಗಣಜೀವನಮಲ್ಲಿ ಸಂಶಯಂ ನೋಟಿಗ್ಱೊಡಿನಿತ್ಯಣಮಿಲ್ಲ (ಚಂದ್ರಪು. ೨-೩೦) ; ತನುಭೃದ್ಗ[ಪಾಠಾಂ. ದ್ಘು]ಣದೊಳ್ಸೊರ್ಪೀ ತನುಧನ ಲೋಭಂಗಳೆಂತುಮೇಂ ತೋರ್ಕುಮೆ ಪೇಳ್ ನಿನಗೆ (ರಾಜಶೇ. ೦೩-೦೭). [ ಸಂ. (ತನುಭೃತ್ + ಗಣ) ]

**ತನುಮಧ್ಯ** (ನಾ). ೧. ಸಣ್ಣನಡು ; ತೆಳುವಾದ ಸೊಂಟ : ತನುಮಧ್ಯಂ ನಿರುಪಮರೂಪನ ವಿನಯ ವಿಳಾಸನಿಧಿಯ ತನುಮಧ್ಯಂ (ಕುಸುಮಾ. ೭-೧೨೭) : ತನುಮಧ್ಯಂ ಬಟ್ಟೆ ಬೆನ್ನಿ ಮರ್ದಿಸೆ . . . ಏಂ ಮೆಱೆದಳೊ ಸುರತಕ್ರೀಡೆಯಂ (ಕಾವ್ಯಸಾ. ೬೬೪) : ಶಂಕರ ತನುಮಧ್ಯದುಮೆಯೊಡನೆ (ಗುರುಚಾ.೨-೬೪). ೨. [ಛಂದ]ಪ್ರತಿಪಾದದಲ್ಲಿ ಆರು ಅಕ್ಷರಗಳುಳ್ಳ ಒಂದು ಅಕ್ಷರವೃತ್ತ; ತಿಲಕವೃತ್ತ: ಪ್ಯೋಮಾದಿ ಜಲಾಂತಂ ತಾಮಾಗೆ ನಿತಾಂತಂ ಶ್ರೀಮಾನಿನಿ ಕೇಳಾ ನಾಮಂ ತನುಮಧ್ಯಂ [ಪಾಠಾಂ. ಧ್ಯೆ] (ಛಂದೋಂಬು. ೨-೭೮). [ ತನು + ಮಧ್ಯ ]

**ತನುಮಧ್ಯೆ** (ನಾ). ಸಣ್ಣ ನಡುವಿನವಳು ; ಚೆಲುವೆ : ಭಂಗುರಕೇಶಪಾಶೆ ತನುಮಧ್ಯೆ ಮೃಗಾಕ್ಷಿ (ಶಾಂತಿಪು. ೮-೧೦೬) : ತನುಮಧ್ಯೆ ಕೇಸರಚ್ಛವಿ ವನಜಾನನೆ ಪೃಥುನಿತಂಬೆ ಕಂಡಲ್ ನೃಪಸಿಂಹನಾ (ಅನಂತಪು. ೪-೧೨೧). [ ಸಂ. ತನುಮಧ್ಯಾ (ತನು + ಮಧ್ಯ + – ) ]

**ತನುಮಾನಸ** (ನಾ). ಮನಸ್ಸನ್ನು ಸೊರಗಿಸುವುದು; ಮನೋನಿಗ್ರಹ: ಯೋಗವಾಸಿಷ್ಠಕಾರರ ಸಪ್ತಭೂಮಿಕೆಗಳು ಬೇರೆ. ಅವು ಯಾವವೆಂದರೆ:– ಶುಭೇಚ್ಛೆ . . . ವಿಚಾರಣಾ – ಆತ್ಮವಿಚಾರವನ್ನು ಮಾಡುವದು. ತನುಮಾನಸ–ಮನಸ್ಸನ್ನು ವಿಷಯಗಳ ಕಡೆಗೆ ಬಿಡದೆ ಸೊರಗಿಸುವದು (ಅಮೃತ. ೬-೬ ಅಡಿಟಿ). [ತನು + ಮಾನಸ ]

**ತನುಮುನಿ** (ನಾ). ಸಣ್ಣದೇಹವುಳ್ಳ ಋಷಿ ; ಕುಳ್ಳ ಮುನಿ : ಅಗಸ್ತ್ಯಂ ತನುಮುನಿ ಮುನಿದಾಪೋಶನಂಗೊಂಡೊಡೆತ್ತಂ ಪುಡಿವಿಟ್ಟತ್ತೊಂದೆ ಧೀಂಕಾದುದು ಕಪಿಗಣಮಂಗೆಂದಗಟು್ ವಾರ್ಧಿಯಂ ಕೀಟ್ಟಡಿಕುಂ (ಜಗವಿ. ೨-೧೮). [ ತನು + ಮುನಿ$_3$ ]

**ತನುಮೆ** 'ತನ್ಮೆ' ನೋ.

**ತನುಮೋಹ** (ನಾ). ಶರೀರದ ಮೋಹ : ತನುಮೋಹಂ ನಾಡೆ ತನ್ನಿಂ ತೊಲಗಿ (ಶಾಂತೀಶ್ವ. ೯-೧೩೯). [ ತನು + ಮೋಹ ]

**ತನುರಕ್ಷೆ** (ನಾ). ಅಂಗರಕ್ಷಣೆ ; ಮೈಗಾವಲು : ವನಿತೆಯ ತನುರಕ್ಷೆಗೆ ತಕ್ಕನುಚರಜನ ಕುಶಲಜನ . . . ಸಖಿಜನಮನಿತನಿತುಮನವನಿಪತಿ ನಿಯೋಜಿಸಿ ತಳರ್ದಂ (ಪುಷ್ಪಪು. ೪-೧೪). [ ತನು + ರಕ್ಷೆ ]

**ತನುರುಚಿ** (ನಾ). ದೇಹಕಾಂತಿ : ತನುರುಚಿ ರೂಪು ಸನ್ನುತ ವಯಸ್ಸ್ವರ ಚೇಷ್ಟೆಗಳಿಂದಮೊಂದಿ ನಿನ್ನನೆ ನೆಟ್ಟಿ ಪೋಲ್ವುದೊಂದು ಗಿಳಿ (ಪಂಚತಂ. ೧೨೦-೩) ; ತನುರುಚಿ ಕರ್ಣಕುಂಡಲ ಮರೀಚಿ ವಿಯತ್ತಳಮೆಲ್ಲಮಾ ಪಳಚ್ಚನೆ ಬೆಳಪಂತು (ಪಂಪರಾಮಾ. ೪-೨೦). [ ತನು + ರುಚಿ ]

**ತನುರುಜೆ** (ನಾ). ದೈಹಿಕ ರೋಗ ; ಶಾರೀರಕ ಅಸ್ವಸ್ಥತೆ : ತನುರುಜೆಗೆ ಪಥ್ಯಾನ್ನ, ಬಾಯ ಚಪಲಕ್ಕಲ್ಲ (ಮಂಕುತಿ. ೯೦೭). [ ತನು + ರುಜೆ ]

**ತನುರುಹ** (ನಾ). ಮೈನವಿರು ; ಮೈಗೂದಲು : ತನುರುಹಮಗೆವೊಯ್ದು ಪೊಲಿರೆ . . . ಅತನುಸುಖದ ಸುತನುವಿಂತನುಭವಿಸುತಿರ್ದಳ್ (ರಾಜಶೇ. ೧೧-೧೨೦). [ ಸಂ. ]

**ತನುರೋಮಾವಳಿ** (ನಾ). ಮೈನವಿರುಗಳ ಸಮೂಹ : ತನುರೋಮಾವಳಿ ಗೊಯ್ಯನೊಯ್ಯನೆ ಪಸುರ್ಪಂ ಚೂಚಕಕ್ಕೊಯ್ಯನೊಯ್ಯನೆ ಕರ್ಪಂ . . . ಮಿಗೆ ಮಾಡುವಾ ಸತಿಯ ಗರ್ಭಾಧಾನಮೇನೊಪ್ಪಿತೋ (ಪುಷ್ಪಪು. ೯-೧೧೬). [ ತನು + ರೋಮ + ಆವಳಿ$_1$ (= ಆವಲಿ) ]

**ತನುವರ್ಣ** (ನಾ). ದೇಹದ ಬಣ್ಣ : ತನುವರ್ಣಂ ಮುಗಿಲಿಂದ್ರಚಾಪಲತೆ ನಾನಾರತ್ನಭೂಷಾಂಶು (ಉದ್ಭಟ. ೧-೬). [ ತನು + ವರ್ಣ ]

**ತನುವಾತ** (ನಾ). [ಜೈನ] ವಿಶ್ವಾಕಾಶವನ್ನು ಆವರಿಸಿಕೊಂಡಿದ್ದು, ಎಂಟು ಲೋಕಗಳಿಗೆ ಆಧಾರವಾಗಿರುವ ಮೂರು ಅನಿಲಗಳಲ್ಲಿ ಕೊನೆಯದು: ಘನೋದಧಿ ಘನಾನಿಳ ತನುವಾತತ್ರಿತಯ ಭಾಗದೊಳ್ ನೆಲಸಿರ್ದಂ (ಆದಿಪು. ೧೬-೫೦ ವ) : ಎಂಟುಂ ಪೊಡವಿಗಳಂ ತಾಳ್ದಿದುವೋಗಡಿಸದೆ ಮೂಱುಂ ಮಹಾನಿಲಂಗಳ್ ಕ್ರಮದಿಂ ಅವರ ಪೆಸರ್ಗಳುಂ ಘನೋದಧಿ ಘನವಾತ ತನುವಾತಂಗಳೆಂಬುವು (ಶಾಂತಿಪು. ೧೫-೫೦ ವ). [ ತನು + ವಾತ ]

**ತನುವಿಕಾರ** (ನಾ). ೧. ದೇಹವಿಕಾರ ; ಅಂಗವಿಕಾರ: ತನುವಿಕಾರಂ ಪೆರ್ಚಿದಂತೆ ಮನಸಿನ ಮಮತೆ ನೂರ್ಮಡಿಸಿತ್ತು ಕೈಕೆಯ ಮೇಲೆ (ಶ್ರೀರಾಮಾ. ೨೪-೬೩೦). ೨. [ನಾಟ್ಯ] ಅಂಗಾಂಗಗಳ ಚಲನೆಯ ಮೂಲಕ ಭಾವಗಳನ್ನು ಸೂಚಿಸುವುದು ; ಅಭಿನಯ : "ಅಂಗಹಾರವೆನೆ ತನುವಿಕಾರಮದಕ್ಕು" (ಮಂಗರಾ. ೩೩-೨). [ ತನು + ವಿಕಾರ ]

**ತನುವಿಡಿ** (ಕ್ರಿ). ೧. ಆಕಾರವನ್ನು ತಾಳು ; ಮೈದಳೆ ; ದೇಹವನ್ನು ಧರಿಸು : ಕುಡಿಯಲಮೃತವನಮರರಿಗೆ ತನುವಿಡಿದು ತನ್ನಂಗಿಯ ತಪೋಧನರೊಡೆಯನೋವಿದನಮರಸಿಕರನ (ನಿಘಾಗ. ೨ ೩ ೬ . . .) ನರರೂಪ ತಾಳಿ ತನುವಿಡಿದೈತರುವಂದದೊಳಾಕ್ಷಣ ಕೊಸಬುದೋಽಜುತಲ್ಲಿ ತಂದ (ಕಂಠವಿ. ೯-೯೭). ೨. ಬದುಕಿರು ; ಜೀವಿಸು : ಜನಿಸಿದುಳು ಮತ್ತಿಂದು ನಿಜಸುತೆಯೆನಿಸಿ ಸತಿ ಜಗದೇಕನಾಥನ ವನಿತೆ ತಥ್ಯಾನಾನು ರಂಜಿತ ಚಿತ್ರವೃತ್ತಿಯಲಿ ತನುವಿಡಿದಳು (ನಿಘಾಗ. ೪-೫-೧೫); ನಳಿನೋದ್ಭವ ಕೋಟಿವತ್ಸರ ತನುವಿಡಿದಳಿದೊಡದೇನು ವೃಥಾಯು ಸುಳಿಗುರುಳಬಲೆಯ ತೋಳತಕ್ಕೆಯೊಳೊಂದು ಗಳಿಗೆ ಬಾಳಲು ಮುಕ್ತಿಯಹುದು (ಮೋಹತ ೩೩-೪೩). ೩. ದೇಹವನ್ನು ಹಿಡಿದಿಡು ; ಪ್ರಾಣವನ್ನುಳಿಸಿಕೊಳ್ಳು : ಗಿಡುಮರಗಳಿಡಿದಡವಿಯಲಿ ತನುವಿಡಿದು ಬದುಕುವುದೆಂತು ಮಗಳೇ (ನಳಚ. ೭-೧೫). [ ತನು + ಪಿಡಿ$_1$ ]

**ತನುವಿದಾಹ** (ನಾ). ದೇಹಕ್ಕುಂಟಾಗುವ ತಾಪ ; ದೇಹತಾಪ : ಬಿಸಜೋದ್ಭವಂಸಮದನಂಬುದಮಂ ಪವಮಾನ ಧೂಮತೇಜೋಂಬುಗಳಿಂದಮೆಂಬ ನುಡಿ ಸತ್ಯಮದಲ್ಲದೊಡುಂತೆ ಕಾರಕಾದಂಬಿನಿ ಮಾಟ್ಕುಮೇ ಬಿರಯಿಗಂಗಜ ವಹ್ನಿ ವಿಜೃಂಭವಮಂ ವಿಳೋಳಾಂಬಕವಾಗಿಯಂ ತನುವಿದಾಹ [ಪಾಠಾಂ. ಹೃದಯ ತಾಪ] ಮನುತ್ಕಳಿಕಾ ಪ್ರಪಂಚಮಂ (ಚಂದ್ರಪು. ೪-೩೩). [ತನು + ವಿದಾಹ]

**ತನುವು** (ನಾ). ಒದ್ದೆ ; ತೇವ : ಶಾಖ ಮತ್ತು ತನುವು (Temparature & Humidity) (ಕೀಟಜಿ. ೫೦) ; ಚೊಕ್ಕಟಗೊಳಿಸಿದ ಫಾರಂ ಮೇಲೆ ತನುವಿನಿಂದ ಮಾಡಿರುವ ಫ್ಲಾಂಗನ್ನು ಇಟ್ಟು . . . ಬಿಗಿಯಿಂದ ಒತ್ತಬೇಕು (ಮುದ್ರಕ. ೫೮). [ <ತಣ್$_2$ + – ವು ]

**ತನುವೆರಸು** (ಅ). ದೇಹ ಸಹಿತವಾಗಿ ; ಸಶರೀರವಾಗಿ : ತನುವೆರಸೊಯ್ಯಲ್ಕುನಿಗಳನನಲಂ ಸ್ವರ್ಗಕ್ಕೆ ಸೇತುಗಟ್ಟಿದನೆನೆ ಪಾವನಹೋಮ ಧೂಮಮೊಗೆಯಲ್ (ಕಾದಂಪೂ. ೨೧೪). [ ತನು + ಬೆರಸು$_3$ ]

**ತನುವೆಳೆ** (ಕ್ರಿ). ಶರೀರವು ಬೆಳೆ,–ವೃದ್ಧಿಸು : ಬಿಟ್ಟು ಪೂರ್ವಶರೀರವನು ಸತಿ . . . ತಂಪಿನ ಬೆಟ್ಟದಬಲೆಗೆ ವಿಧಿಸದಸ್ಯವ ಕೊಟ್ಟವೊಲು ತನುವೆಳೆದಳಾ ಮೇನಕಿಯ ಜಠರದಲಿ (ನಿಘಾಗ. ೪-೫-೨) ; ದಿನದಿನಕೆ ತುಸುಮಾತ್ರ ಸುತ್ತಲು ತನುವೆಳ[ಳೆ]ದನುರಿ ಹೊಡೆದ ಬಹಳಾಂಜನಗಿರಿಯವೋಲು (ನಿಘಾಗ. ೬-೯-೯). [ ತನು + ಬೆಳೆ$_1$ ]

**ತನುವೇರು** (ಕ್ರಿ). ತಂಪಾಗಿರು ; ತೇವ ಉಂಟಾಗು ; ತಂಪಡರು : ನೆನೆಯಕ್ಕಿ ನೆನೆಗಡಲಿ ಗೊನೆಯ ಬಾಳೇಹಣ್ಣು ತನುವೇರಿದಡಿಕೆ ಬಿಳಿಯೆಲೆಯ ತಗೊಂಡು ಗಂಗವ್ವ ಪೂಜೆಗೈದಾರ (ಲೋಕಗೀ. ೧೩೨) ; ಎಂಟುದಿನ ಮಳೆ ಸುರಿದು ಗೋಡೆಗಳೆಲ್ಲ ತನುವೇರಿದ (ರೂಢಿ). [ ತನುವು + ಏರು$_1$ ( <ಏಱ್$_1$ ) ]

**ತನುವ್ಯಸನ** (ನಾ). ಹತ್ತುಬಗೆಯ ವ್ಯಸನಗಳಲ್ಲಿ ಒಂದು : ತನುವ್ಯಸನ, ರಾಜ್ಯವ್ಯಸನ ವಿಶ್ವವ್ಯಸನ ಸ್ತ್ರೀವ್ಯಸನ . . . ಕಾಷ್ಠವ್ಯಸನಗಳೆಂಬ ದಶವ್ಯಸನಗಳಿಂ ಹಸಗೆಟ್ಟು (ವಿವೇಕ. ೨೪೬). 'ದಶವ್ಯಸನ' ಪರಾ. [ ತನು + ವ್ಯಸನ ]

**ತನುಶಕ್ತಿ** (ನಾ). ದೇಹದ ಶಕ್ತಿ : ತನುಶಕ್ತ್ಯಯುಜುದು ತಿಂಗಳ್ಗೆ ನಾಲ್ಕು ಪರ್ವೋಪವಾಸಮಂ ಮಾಟ್ಪ (ಶಾಂತೀಶ್ವ. ೧೩-೮೦). [ ತನು + ಶಕ್ತಿ ]

**ತನುಸಂಭವ** (ನಾ). =ತನುಜ ೧: ಈ ಘಟೋತ್ಕಚನ ತನುಸಂಭವಂ ಬಡವನೇ ಮಂಘನಾದಂ (ಜೈಮಿನಿಭಾ. ೨-೩೫). [ ತನು + ಸಂಭವ ]

**ತನುಸಿದ್ಧ** (ನಾ). ದೇಹಸಿದ್ಧಿಯನ್ನು ಪಡೆದವನು : . . . ಮಾಯೆಗೀಯೆಯನೇಡಿಸುವುದಾ ಮಿತ್ತುಗಿತ್ತು . . . ರಾವ್ಯ ಪ್ರಭುವೆ (ಪ್ರಭುಲಿಂ. ೧೯-೨೩). [ ತನು + ಸಿದ್ಧ ]

ತಮ್ಮಂದಿರ್, ತಮ್ಮಂದಿರು, ತಮ್ಮಗಳು, ತಮ್ಮದಿರು, ತಮ್ಮರು (ಬಹುವ): ತಮ್ಮಂದಿರಪ್ಪ ಕುಮಾರರೊಡನೆ ಸ್ವಾಮಿ ಕಾರ್ತಿಕಂ ಬಳೆದು (ವಡ್ಡಾರಾ. ೧೧೬-೧೭): ಈ ತಮ್ಮಂದಿರೊಳಿಂತಿಂತು ಕಟ್ಟುವರ್ಪುದು ಪೆಂಪೇ (ಆದಿಪು. ೧೪-೧೩೮): ತಮ್ಮಂದಿರ್ ತಾಯಿಂದಿರ್ ಅಣ್ಣಂದಿರ್ ತಂದೆವಿರ್ (ಭಾಷಾಭೂ. ೪೩ ಉದಾ); ನಿನಗೆ ಎಷ್ಟು ಜನ ತಮ್ಮಂದಿರು? (ರೂಢಿ): ಬಾಳಿನಲಿ ಕೈಹಿಡಿದು ನಡೆಸಿದಿರಿ ಜೊತೆಯು ಅಣ್ಣಗಳನು ತಮ್ಮಗಳಿಗೆ ಕಂಡದ್ದ ತೋರಿ ತೆರೆಸಿದಿರಿ ಕಣ್ಣುಗಳನು (ಹೃದಸ. ೭೬-೧೭); ಶಿವಶಿವಾ ಕೌರವನ ತಮ್ಮದಿರವಗಡಿಸಿದರು (ಕುವ್ಯಾಕ. ೧೩-೧೯): ಧರ್ಮಸುತ ಸಭೆಯೊಳೊಪ್ಪಿದಂ ತಮ್ಮರೊಡನೆ (ತುರಂಗ. ೨೩-೧).

[ದೇ.॥ ತಮಿ. ತಮ್ಬಿ; ಮಲ. ತಮ್ಬಿ, ತಮ್ಬಾನ್; ತುಳು. ತಮ್ಮಯ್ಯ, ತಮ್ಮಯು; ಕೊಡ. ತಂಬಿ, ತಮ್ಮಣೇ; ತೆಲು. ತಮ್ಮುಡು; ಗೊಂಡಿ. ತಮ್ಮುರ್; ಕುಇ. ತಂಬೆಸ]

**ತಮ್ಮಂಗವಮ** (?) (ನಾ). (?): ತಪ್ಪು ತಲುಡಿ ದಂಡ ಉಂಡಿಗೆ ಹಡರಹನು ಕೊಂಬಂಣ ಕೊಡಿದೆ ತಂಮಂಗವಮ ಹಿಡಿವೆ (ಎಕ. IX, ಕಾನಕಾ. ೪೦-೦೩: 1300). [ ? ]

**ತಮ್ಮಗೌಡ** (ನಾ). ಒಬ್ಬಾತನ ಹೆಸರು: ರೇವಂತ ನಡೆಗೌಡ ಸುರಿತಂಣ ಪಿರಿಯ ತಮ್ಮಗೌಡರು (ಎಕ. VII, ಶಿವಮೊ. ೧೧೪-೧೭: 950).

[ತಮ್ಮ + ಗೌಡ$_1$ (<ಗಾವುಂಡ)]

**ತಮ್ಮಚಿ** (ನಾ). ಒಂದು ಊರಿನ ಹೆಸರು (?):

ತಮ್ಮಚಿಯ ಮುದ್ರೆ = ನಾಣ್ಯಗಳ ಮೇಲೆ ಒತ್ತುತ್ತಿದ್ದ ಒಂದು ಬಗೆಯ ಮುದ್ರೆ: ಕುಳಿಯ ಸುಂಕವ ತಮ್ಮಚಿ[ಯ] ಮುದ್ರೆಯ ಪೊತ್ತ ದೊಳ್ × × × ಕೆ ತಿಂಗಳಿಗೊಂದು ಗದ್ಯಾಣ ಪೊನ್ನುಮಂ ತಮ್ಮಚಿಯ ಮುದ್ರೆಯ ಮೂಱುವೀಸದ ಹತ್ತಡಕೆಯು . . . ಲೆಕ್ಕಂ ಮಾಡಿ ಕುಡುವರ್ (ಸೌಇಇ. XI-II, ೧೫೦-೩೨: 1102). [ ? ]

**ತಮ್ಮಟ$_1$** 'ತಂಬಟ' ನೋ.

**ತಮ್ಮಟ$_2$, ತಮ್ಮಡ$_1$** (ನಾ). ಒಂದು ಬಗೆಯ ಬಳ್ಳಿ: (ಮ್ಯಾಡಿಗಿ. ೬೨-೧೨೬೪). ತಮ್ಮಡ$_1$: 'ತಮ್ಮಡವಳ್ಳಿ' ಪರಾ. [ದೇ.॥ ತಮಿ. ತಮ್ಮತ]

**ತಮ್ಮಟೆ** 'ತಂಬಟ' ನೋ.

**ತಮ್ಮಟ್ಟಿ** 'ತಂಬಟ' ನೋ.

**ತಮ್ಮಡ$_1$** 'ತಮ್ಮಟ$_2$' ನೋ.

**ತಮ್ಮಡ$_2$** (ನಾ). ತಡೆದುದು; ಅಡ್ಡಿ; ವಿಘ್ನ: "ತಮ್ಮಡಂ=ತಡೆದುದು" (ಕಮದ. ಪರಿ. ೩). [?./ತಮಿ. ತಮ್ಮಿಟು]

**ತಮ್ಮಡವಳ್ಳಿ** (ನಾ). = ತಮ್ಮಟ2: "ಕ್ಷಾರಕಿಯೆನಲ್ಕೆ ತಮ್ಮಡ[ಪಾಠಾಂ. ಡಿ] ವಳ್ಳಿ[ಪಾಠಾಂ. ಲ್ಲಿ]" (ಮಂಗರಾ. ೪೪-೫೫). [ತಮ್ಮಡ$_1$ (<ತಮ್ಮಟ$_2$)+ಬಳ್ಳಿ]

**ತಮ್ಮಡಿ$_1$, ತಮಡಿ** (ನಾ). ೧. ಗುರು; ಆಚಾರ್ಯ: ಸ್ವಸ್ತಿ ಶ್ರೀಭಟ್ಟಾರಕ ಥಿಟ್ಟಗಪಾನದಾ ತಮ್ಮಡಿಗಳ ಶಿಷ್ಯರ್ (ಎಕ. II, ೧೯-೧: ಸು. 700); ಆಟ್ಟೂಱ ತಮ್ಮಡಿಗಳ . . . ನಿಸಿಧಿಗೆ (ಎಕ. II, ೧೫-೧: ಸು. 800); ಶ್ರೀಸಿಂಹನನ್ದಿ ತಮ್ಮಡಿಗಳ್ (ಕೊಪ್ಪಳಶಾ. ೭-೧: 1010): ಆದಿಯೊಳು ಕಂಡ ನವಣೆಯು ಕಯ್ಯ ತಮ್ಮಡಿಯು ಹೆಸರಲೊಂದು . . . ಗುರು ಮೂರ್ತಿಯಲಿ ಬಳಿಕೆಯ್ಯಂದಿಂತು ಹದಿನೇಳು ಯೋಗಲಿಂಗಂಗಳಂ ನಿರ್ಮಿಸಿದನು (ಸಿದ್ಧರಾ. ೩-೪೪). ೨. ಒಡೆಯ; ಯಜಮಾನ: ತಮ್ಮಡಿಗೆ ವೊಜೆಸಿಪ ಶ್ವಾನಂ ದಮ್ಮಿ[ಪಾಠಾಂ. ಪರ್ಮಿ, ಧರ್ಮಿ]ಯನೇಕೆ ಬಾಬಲಿತ್ತಪುದು ಎಂಬಂತೆ (ಪಂಚತಂ. ೧೭೮-೧೫). ೩. ಪೂಜಾರಿ; ಅರ್ಚಕ: "ದೇವಾಜೀವಃ, ದೇವಲ" (ನಾಚಿರಾ. ೬); ಪೂಜಿಸುವ ತಮ್ಮಡಿ ಲಿಂಗ ಪಾಡುದ ಕಂಡೆ (ಮೋಳಿಮಹಾ. ೨೭೭-೮೧೯): ಕವಾಟಂ ಬಂಧಿಸಿ ಪಿರಿದುಂ ಬೀಯುಗವುಸಿಕ್ಕಿದರ್ ತಮ್ಮಡಿಗಳ್ (ಉದ್ಭಟ. ೧೧-೫೮); ಕಣ್ಣಪನ ಮನದ ವಿರಳಪ್ರಿಯಭಕ್ತಿಯಂ ಮುಗ್ಧಸ್ವಭಾವವನು ಭವಹರಂ ತಾಂ ತಮ್ಮಡಿಗೆ ತೋಱುವೆನೆನುತ (ಬಸವು. ೦೮-೪೫): ಶ್ರೀಸೋಮೇಸ್ವರನ ತಮ್ಮಡಿ ಕೇತಜೀಯ (ಎಕ. XI, ಹಿರಿಯೂ. ೫೨-೩೭; 1428); ಗುಡಿಯ ಗೋಪುರಮಂ ಕೆಡಪಿ ತಮ್ಮಡಿಯಂ ಜಡಿಯಲು (ವೃಷವಿ. ೩೭-೪ ವ); ಆ ದಾರಿಯಲ್ಲಿ ಹೋಗುತ್ತಿದ್ದ ಒಬ್ಬ ತಮ್ಮಡಿ ಇವರ ಮಾತುಗಳನ್ನು ಕೇಳಿ ಹತ್ತಿರ ಬಂದು (ನಗಗ. ೫೭); ತನಗೇ ಇಲ್ಲದ ಮಾರಿ ತಮ್ಮಡಿಗೆ ವರ ಕೊಟ್ಟೀತೇ? (ಗಾದೆ). ೪. ಋಷಿ; ಮುನಿ: ಇದೇನು ತಮ್ಮಡಿ ನಿನಗೆ ತಪದಲಿ ಖಡ್ಗವೇಕೆ (ಕುವ್ಯಾಅ. ೬-೩); ಜಡೆಯ ಹೊತ್ತುದೊ ಸಿಡಿಲು ಶಿವಶಿವ ಪಡಬ ತಮ್ಮಡಿಯಾದನೋ (ಕೌಶಿರಾ. ೩-೧೩). **ತಮಡಿ**: ೩. ಮಸಪ ಮಡಿಯಾಗಿಡಲು ದಮ್ಮಡಿಯ ತಮ್ಮಡಿ ನಮಗೆ ಬೇಕೀತನಿಗೊ ನಲ್ವೊರೆಯ ತಮಡಿ (ಗಡೀಶ. ೭೦-೫). [←ತೆಲು. ತಮ್ಮಡಿ]

**ತಮ್ಮಡಿ$_2$** 'ತಮ್ಮಡೆ' ನೋ.

**ತಮ್ಮಡೆ, ತಮ್ಮಡಿ$_2$** (ನಾ). (?): ಆ ಮುಗುಳಸಹಳ್ಳಿಯಲ್ಲಿ ತಮ್ಮಡೆಯಾದಡೆ ಅಣ್ಣನೊಡವೆ ತಮ್ಮಂಗೆ ತಮ್ಮನೊಡವೆಯಣ್ಣಂಗೆ (ಎಕ. IX, ಚನ್ನಪ. ೭೩-೩೦: 1318). **ತಮ್ಮಡಿ$_2$**: ಅನ್ಯಾರೂ ಇಲ್ಲದಿದ್ದಡೆ ಆ ಅಪುತ್ರಿಕದ ನಕಱ ದೇವಾಲ್ಯಕೆಕ್ಕುವದು ತಮ್ಮಡಿ ಎಂಬ ವಾರ್ತೆ ಇಲ್ಲವೊದವತಲೆ (ಎಕ. IX, ಚನ್ನಪ. ೭೩-೩೭; 1318). [ ? ]

**ತಮ್ಮಣಿ** 'ತಮ್ಮಣೆ' ನೋ.

**ತಮ್ಮಣಿಗೊಳಿಸು** (ಕ್ರಿ). ಸಮಾಧಾನಪಡಿಸು; ಶಾಂತಗೊಳಿಸು: ನಾನೇ ತಪ್ಪನ್ನು ಒಪ್ಪಿಕೊಂಡಂತಾಗಿ ಅವಳ ಬೇಗುದಿಯ ಮನಸ್ಸನ್ನು ತಮ್ಮಣಿಗೊಳಿಸಿದಂತೆಯಾಗಿತ್ತು (ಹೇಮಂತ. ೩೭). [ತಮ್ಮಣಿಗೊಳು + – ಇಸು$_3$]

**ತಮ್ಮಣಿಗೊಳು, ತಮ್ಮಣಿಗೊಳ್ಳು** (ಕ್ರಿ). ಉಪಶಮನಗೊಳ್ಳು; ಶಾಂತತೆ ಹೊಂದು; ಸಮಾಧಾನವಾಗು. 'ತಮ್ಮಣಿಗೊಳಿಸು' ಪರಾ. **ತಮ್ಮಣಿಗೊಳ್ಳು**: ನಟರಾಜನ ಭಾವಸಮಾಧಿಯು ಒಂದಿಷ್ಟು ತಮ್ಮಣಿಗೊಂಡ ಬಳಿಕ ನಸು ಕಣ್ತೆರದು ನಿಟ್ಟಿಸಿದರೆ ಮುಂದೆ ನಿಂತ ಗೌರಿ ಮೊರೆಯಿಡುತ್ತಿದ್ದಾಳೆ (ಶಾಳಬ. ೧). [ತಮ್ಮಣಿ (<ತಮ್ಮಣೆ) + ಕೊಳು (<ಕೊಳ್$_1$)]

**ತಮ್ಮಣಿಗೊಳ್ಳು** 'ತಮ್ಮಣಿಗೊಳು' ನೋ.

**ತಮ್ಮಣೆ, ತಮಣೆ, ತಮ್ಮಣಿ** (ನಾ). ಶಾಂತಿ; ಸಮಾಧಾನ; ಉಪಶಮನ: ದೇಶದಲ್ಲಿ ತಮ್ಮಣೆ (ಶಾಂತಿ) ಯಿರಲಿಲ್ಲ (ಅಕ್ಬರ. ೧೪೦). **ತಮಣೆ**: ತಾನಾಗಿ ತಣಿಯದೆ ಯಾರು ಏನೆಂದರು ತಮಣೆಗೆ ಬರುವುದೆ ಗೋಳು (ಇಂದಾಪ. ೩೦-೪೪). **ತಮ್ಮಣಿ**: 'ತಮ್ಮಣಿಗೊಳಿಸು', 'ತಮ್ಮಣಿಗೊಳು' ಪರಾ.

ತಮ್ಮಣಿಯಾಗು = ಶಮನವಾಗು; ಶಾಂತವಾಗು: ಇವರ ದಂಗೆಗಳು ತಮ್ಮಣಿಯಾದವು (ಇಂಗ್ಲಂಡ. ೨೦೦). [?./ಪ್ರಾ. ಥಂಭಣ./ಸಂ. ಸ್ತಂಭನ]

**ತಮ್ಮತು** 'ತನತ್ತು' ಪರಾ.

**ತಮ್ಮದು** 'ತನತ್ತು' ಪರಾ.

**ತಮ್ಮಲೋಪಾದಿ** (ನಾ). (?): ಸತ್ತಿಮಂಗಲದ ಸಾಮಿಯ ಸಮ್ಮಸ್ಥಂ ಮಾರಯ್ಯನುಂ ಪುಣಸೆಯಮ್ಮನುವಿಟ್ಟು ತಮ್ಮಲೋಪಾದಿಗೊಟ್ಟರ್ (ಎಕ. IX, ಹೊಸಕೋ. ೧೧೧-೭: 997). [ ? ]

**ತಮ್ಮಿನುಗ** (ನಾ) ತಂಪಾದ ಬೆಳಕಂ ಅಥವಾ ಕಾಂತಿಯುಳ್ಳವನಂ; ಚಂದ್ರ: ಕೆಂಗದಿರ ತಮ್ಮಿನುಗ ಮರಗೂಳ (ಮಲ್ಲಾರಿ. ೨-೪೧).

[ತಂ$_1$ (<ತಣ್$_2$) + ಮಿನುಗು$_2$ + – ಅ$_7$]

**ತಮ್ಮಿಸು** 'ತಣ್ಪಿಸು' ನೋ.

**ತಮ್ಮುಟುಕಾಱ** (ನಾ). ತಮ್ಮಟೆ ಬಾರಿಸುವವನು: ಅಮೃತಪಡಿ ನಂದಾದೀಪ್ತಿ ನೈವೇದ್ಯ ಸ್ಥಾನಿಕ ಹಸಟು ತಂಮುಟುಕಾಱರಿಗೆ ಸಂದು ಬಂದು (ಎಕ. VIII, ಸೊರಬ. ೩೭೯-೧೯: 1533).

[ತಮ್ಮುಟು$_0$ (<ತಂಬಟ) + – ಕಾಱ]

ತಮ್ಮುತು 'ತನತ್ತು' ಪರಾ.

ತಮ್ಮುತ್ತು 'ತನತ್ತು' ಪರಾ.

ತಮ್ಮುಳೆ (ನಾ). ಒಬ್ಬಾತನ ಹೆಸರು (?) : ಬಾಗೆಯೂರ ಬಲ್ಲಹನೇಱಿ ನೊಳ್ಪಿಯಾನ್ ವೈರಿಗಳ್ ಸಮುಪದರುಳ್ ಕೊಪುಳವೂರಬಾಳಿಯೊಳ್ಪೊಣ್ಣೆ ದಿಕ್ಕಿಜ್ಜಿಯ ತಮ್ಮುಳೆ ಪಡೆಯುಳಿಱಿದು ಸತ್ತನ್ (ಎಕ. XVI, ಕುಮುಕೊ. ೯೨-೧೩; ಸು. 780). [ ? ]

ತಮ್ಮೆ (ನಾ). ೧. ಕಿವಿಯ ಹಾಲೆ, ಮೂಗಿನ ತುದಿ ಮುಂತಾದ ಮೂಳೆಯಿರದ ಸ್ಥಳ. ೨. (ಕುದುರೆ, ದನ ಮುಂತಾದುವುಗಳನ್ನು ಕಟ್ಟಿಹಾಕಲು ಬಳಸುವ) ಹಗ್ಗದ ಕುಣಿಕೆ. ೩. ದನಗಳ ಗಂಗೆದೊಗಲು : (೬). [ ದೇ.॥ ತೆಲು. ತಮ್ಮೆ ]

ತಮ್ಮೆಗಿಡ (ನಾ). ೧. ಒಂದು ಬಗೆಯ ಗಿಡ ; "ಉದ್ದಾಲಕ" (ಪಂಡಿತ). ೨. ಒಂದು ಬಗೆಯ ಪೊದೆ. P ಇದರ ಬೇರನ್ನು ಔಷಧಿಗಾಗಿ ಉಪಯೋಗಿಸುತ್ತಾರೆ. [ ತಮ್ಮೆ₀ + ಗಿಡ (<ಗಿಡು) ]

ತಯಾರಿ 'ತಯಾರು' ನೋ.

ತಯಾರಿಕೆ (ನಾ). ೧. ಅಣಿಮಾಡುವಿಕೆ ; ಸಿದ್ಧಪಡಿಸುವಿಕೆ : ಅಜಯ . . . ಬಾಂಬ್ ತಯಾರಿಕೆಯ ಕೆಲಸದಲ್ಲಿ ನಿರತನಾಗುತ್ತಿದ್ದ (ಅಶ್ವಾರ್ಜ. ೧೩೮); ಉಪಕರಣಗಳ ತಯಾರಿಕೆಯ ಹಕ್ಕನ್ನು ತಮಗೆ ವರ್ಗಾಯಿಸಬೇಕೆಂದು ಬೇಡಿಕೆ ಬಂದಿತು (ಸಸ್ಯಕ. ೯೯). ೨. ತಯಾರಾದ ವಸ್ತು : ಇದು ಟಾಟಾ ಕಂಪನಿಯ ತಯಾರಿಕೆ (ರೂಢಿ). [ ತಯಾರು + -ಇಕೆ ]

ತಯಾರಿಸು (ಕ್ರಿ). ಸಿದ್ಧಪಡಿಸು ; ಸಜ್ಜುಗೊಳಿಸು : ದೊಡ್ಡ ಒಲೆಯಾದರೆ ಯಾವುದೇ ಅಡುಗೆಯನ್ನೂ ಅದರಲ್ಲಿ ತಯಾರಿಸಬಹುದು (ಅಡುಕಾ. ೦೭); ಒಂದು ಕಾವಡಿಯನ್ನು ತಯಾರಿಸಿ ಹೊರಟನು (ಸುಧಾ. ೫೭); ಚಹಾ ತಯಾರಿಸಿಕೊ (ಮಹಾತ್ಮಾ. ೦೩). [ ತಯಾರು + -ಇಸು ]

ತಯಾರು, ತಯಾರಿ, ತಯ್ಯಾರಿ (ನಾ). ಸಿದ್ಧತೆ ; ಸಿದ್ಧಪಡಿಸುವಿಕೆ ; ಏರ್ಪಾಡು ; ಸಜ್ಜು ; ಅಣಿ. ತಯಾರಿ : ಇನ್ನೊಂದು ಗ್ಲಾಸು ಎತ್ತಿ ಕುಡಿಯುವ ತಯಾರಿಯಲ್ಲಿದ್ದರು (ಲೀಪಹ. I, ೦೫೯). ತಯ್ಯಾರಿ : ಮೊದಲು ಚಹಾ ಫಳಾರದ ತಯ್ಯಾರಿ ನಡೀಲಿ (ಧನಂಜ. ೫೭).

ತಯಾರಾಗು = ೧. ಸಿದ್ಧವಾಗು ; ಅಣಿಯಾಗು : ಸಂಗಡಿಗರೊಡನೆ ತಯಾರಾಗಿ ಬನ್ನಿರಿ (ನಡದಾ. I, ೪೨೮); ಅವಳು ತಿರುಗಿ ಹೊಡೆಯಲು ತಯಾರಾಗುವವರೆಗೂ ಹೊಡೆಯುತ್ತಿರುವುದೇ ಮೇಲು (ಹುಡ್ಕುಹು. ೦೫). ೨. ನಿರ್ಮಾಣವಾಗು ; ಉತ್ಪನ್ನವಾಗು : ಭ್ರೂಣವು ತಯಾರಾಗುವುದು (ಸಸ್ಯಕ. ೦೮). ತಯಾರುಮಾಡಿಸು, ತಯ್ಯಾರುಮಾಡಿಸು=ಸಿದ್ಧವಾಗುವಂತೆ ಮಾಡು ; ರಚಿಸುವಂತೆ ಮಾಡು ; ನಿರ್ಮಾಣಮಾಡಿಸು : ಬೆಳೆದು ಬದಲಾಯಿಸುತ್ತಿರುವ ಕನ್ನಡಕ್ಕೆ ತಕ್ಕ ವ್ಯಾಕರಣವೊಂದನ್ನು ತಯಾರುಮಾಡಿಸಿಕೊಡುವ ಕೆಲಸವು ನಮ್ಮ ವಿದ್ಯಾಪ್ರಚಾರ ಇಲಾಖೆಯವರ ದೃಷ್ಟಿಯಲ್ಲಿದೆ (ಸಾಹಿಕ. ೫೮); ಕೋಟೆಯನ್ನು ರಚಿಸಿ, ಅದರ ಸುತ್ತ ಅಗಳು ಮುಂತಾಗಿ ತೆಗಸಿ ತಯ್ಯಾರುಮಾಡಿಸಿ (ರಾಜೇಂದ್ರ. ೨). ತಯಾರುಮಾಡು = ೧. ಸಿದ್ಧಮಾಡು; ಸಜ್ಜುಮಾಡು ; ಅಣಿಗೊಳಿಸು : ಶ್ರೀಪಾದರಾಜರು ದ್ವೈತಮತ ಪ್ರಚಾರಮಾಡಲು . . . ಭಾಗವತರ ತಂಡವೊಂದನ್ನು ತಯಾರು ಮಾಡಿದರು (ಜಗದಾ. ೮೧); ಮೈಸೂರಿನಿಂದಲೇ ತಯಾರುಮಾಡಿ ತಂದಿದ್ದ ಚಿರೋಟಿಗಳನ್ನೂ . . . ಎಲ್ಲರಿಗೂ ಹಂಚಿದರು (ಮೂಲಾನ. ೦೨೩). ೨. ಉತ್ಪಾದಿಸು ; ಉತ್ಪನ್ನಮಾಡು : ಇಂತಹವರು ಇಲ್ಲಿಯೇ, ಹೀಗೆಯೇ ಅದನ್ನು ತಯಾರುಮಾಡಿ ಇಂಥವರ ಮೂಲಕವೇ ಮಾರಿರುವರೆಂಬುದು ತಿಳಿಯದು (ಹಪ್ರ. ೧೧).

[ ←ಹಿಂ. ಮರಾ. ತಯಾರ್, ತಯಾರೀ, ತಯ್ಯಾರ್, ತೈಯಾರೀ ; ಪಾರ. ತಯ್ಯಾರ್, ತಯ್ಯಾರೀ ; ಅರ. ತೈಯಾರ್ ]

ತಯಿಮಾಸ 'ತ್ರೈಮಾಸ' ನೋ.

ತಯ್ಮಾನ (ನಾ). (?) : ಸಡಗರದಿ ಬಹರಗ್ರ ವೈಮಾನ ತಯ್ಮಾನ ತುಡುಕು ತಿಹವೇಣ್ದಿಸೆಯ ಸಿಂಗರದ ಛಂಗರದೊಳ್ಪಿದೆ ಮಧುಬಲಿ ಬಂಧನ (ಜಿನಮು. ೪೭-೨೯). [ ? ]

ತಯ್ಯಾರಿ 'ತಯಾರು' ನೋ.

ತರ್, ತರು₁ (ಕ್ರಿ). ತಂದ (ಭೂತಕೃ), ತಂದು (ಭೂತಸನ್ಯೂ), ತರ್ಪ, ತಹ₁, ತಾಹ₁ (ವರ್ತಕೃ), ತಾ₁, ತಾರ್ಕ (ವಿದ್ಯರ್ಥ). ೧. ತೆಗೆದುಕೊಂಡು ಬರು: ಪದಿಂಬರ್ ತರ್ಪ ಪೂಱೆಯು ನೊರ್ವನೆ ತರ್ಪಂ (ವಡ್ಡಾರಾ. ೭೭-೪); ಪೇರಡವಿಯೊಳ್ ಪಣ್ಫಲಂಗಳ ನಱಿಸಿ ತನ್ನಿಮೆಂದು ಪೇಟ್ದುದುಂ (ಧರ್ಮಾಮೃ. ೨-೧೮೩); ತಾರಂ ತಾರರ್; ಬಾರಂ ಬಾರರ್ (ಭಾಷಾಭೂ. ೨೨೭ ಉದಾ); ಚನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮುಂಡೆಗೆ ಹುವ್ವ ತಾಹೆನಲ್ಲದೆ ಹುಲ್ಲ ತಾರೆನು (ಮಹಾದೇ. ೧೧-೧); ಹೊಳಲ ಹೊಱಶೂಲದಲಿ ರಿಪುಗಳ ಸೆಳಸುವೆನು ತಾ ವೀಳೆಯುವನು (ಕುವ್ಯಾಭೀ. ೧-೭). ೨. ಕರೆತರು ; ಕರೆದುಕೊಂಡು ಬರು : ತಾರಾ ಜಾನಕಿಯುಂ ಪೋಗಿ ತಾರಾ ತರಳನೇತ್ರೆಯುಂ (ಕವಿರಾ. ೨-೧೨೮); ನಾಳಿನೋಲಗದೊಳ್ ತಂದು ಕಾಣಿಸು (ಪಂಪಭಾ. ೯-೨೦ ವ); ಆಕೆಯುಂ ತರ್ಪುದನುಱಿಯೆ ಬಟ್ಟಿಕ್ಕಿಲ್ಲ ಬೇಱಿಂದುದಾಯಮ್ (ಕಾದಂಪೂ. ೦೫೯); ಅಪ್ಸರಗಣಿಕೆಯರು ಕೋಮಳನ ತಂದರು ವಾಸವನ ಸಿಂಹಾಸನದ ಹೊರೆಗೆ (ಕುವ್ಯಾದ್ರೋ. ೭-೬೫); ಅರ್ಧರಾತ್ರಿಯ ಹೊತ್ತಿನೊಳಗಾಗಿ ಸುಗುಣಾನಿರುದ್ಧನ ತಹೆನು (ವೀರಹಕ. ೩೦-೧೧); ನಾಲ್ಕೆಂಟು ದಿನದೊಳು ಕಂತುಸನ್ನಿಭನ ನಾ ತಹೆನು (ಕಂನವಿ. ೯-೦೪೫). ೩. ಕೊಡು ; ನೀಡು : ಚಿಂತಿಸದಿರ್ ತಾ ತೋಱು ನಿನ್ನೀ ಬರದ ಪಟಮನುತ್ಫುಲ್ಲಪಂಕೇಜನೇತ್ರೇ (ಆದಿಪು. ೩-೪೪); ಎನಗೆ ತರಲಾಱಿದಿರ್ದೊಡಂ ನಿಮಗಪ್ಪನಿತಾಹಾರಮನಿಂದಿನೊಂದು ದಿವಸಕ್ಕಮಱಿಸಿಕೊಳ್ಳಿಂ (ಪಂಚತಂ. ೦೪೨-೧); ಒನಕೆಯುಂ ತಾ ಶಿರದೊಳಾಂ ಸುತ್ತಿದಪೆನೆಂಬಾ ನರನವೊಲು ಆಯಿತ್ತು (ಬಸಪು. ೨೦-೨೧); ಅಮಲ ಸುಮತಿಯಂ ತಾಯೆನಗೆ ತಾಯೆ (ಚೆನ್ನಿಭಾ. ೧-೪). ೪. ವಿಸ್ತರಿಸು ; ಚಾಚು : ಕಯ್ಯುಗೆ ಕರಮಂ ತರಲಾಱದೆ (ಗದಾಯು. ೪-೩೧). ೫. ಎತ್ತು ; ಹೊರಕ್ಕೆ ತರು: ಎಳೆಯುಂ ವಿಕ್ರಮದಿಂ ತರಲ್ ಮಹೀಧರಂ ಮುನ್ ಪಂದಿಯಾದಂತೆ (ಪಂಪಭಾ. ೮-೫೫). ೬. ಉಂಟುಮಾಡು : ಮುದಿತ ಸುರಾನಂದ ಬಾಷ್ಪೋದಬಿಂದೂತ್ಕರ ಮೆಂಬಂತಾಗೆ ತಂದತ್ತರಲ ಮುಟಿಗಳಂ ಪುಷ್ಪಮೇಘಪ್ರತಾನಂ (ಆದಿಪು. ೦೪-೧೦೮); ಬವರವಾದರೆ ಹರನ ವದನಕೆ ಬೆವರ ತಹೆನು (ಕುವ್ಯಾದ್ರೋ. ೪-೫೭). ೭. ನಿಶ್ಚಯಿಸು ; ನಿರ್ಧರಿಸು : ಅತ್ತ ಮನಂ ತರಲೆವೇಡ (ಸಮುಪ. ೩-೮೧); ಈ ಧರ್ಮಮಂ ಪತ್ತುವಿಡಿಸಿ ಮದೀಯ ಧರ್ಮದೊಳ್ ಪತ್ತಿಸುವೆನೆಂಬ ಬಗೆಯುಂ ತಂದು ಸೆಟ್ಟಿಗಿಂತೆಂದಂ (ಧರ್ಮಾಮೃ. ೧-೧೧೯); ಜನದ ಕೊಲೆಗೆಲಸದ ನಿರೂಪಕೆ ಮನವ ತಂದಳು ಮೃತ್ಯು (ಕುವ್ಯಾದ್ರೋ. ೭-೩೫). ೮. ಮದುವೆ ಮಾಡಿಸು ; ಸಂಬಂಧ ಬೆಳೆಯುವಂತೆ ಮಾಡು: ಆತನ ತಂಗೆಯುಂ ಜ್ಯೋತಿರ್ಮಾಲೆಯುಂ ನಿಮ್ಮ ಮಗನರ್ಕಕೀರ್ತಿಗೆ ತರ್ಪುದು (ಚಾವುಂಪು. ೫೦-೧೫). ೯. ಮದುವೆ ಮಾಡಿಕೊಳ್ಳು ; ಸಂಬಂಧ ಬೆಳೆಸು : ಎರಡನೆಯ ಹಿಡಿಂಬಿಯನೆಮ್ಮರಸಂ ರಕ್ಕಸಿಯನೆಲ್ಲಿ ತಂದನೊ ನಿನ್ನಂ (ಗದಾಯು. ೨-೯). ತರು₁ : ೧. ತಮ್ಮಲ್ಲಿದ್ದ ಪುಡಿದುಡ್ಡುಗಳಿಗೆ ಎಣ್ಣೆಯನ್ನು ಕೊಂಡು ತಂದರು (ರಾವಿಜ. ೨೨); ಮರಿಯಾನೆ ಬೆಳ್ಳಿಹೊರೆ ತರುವುದೆಂಬಂತೆ (ಕಾಲೂರ. ೭೨-೧೩೦). ೨. ಎಲೆ ನಾರಿ ನೀನಾತನ ತರುವನಕ ಸಲೆ ಸೈರಿಸದೆನ್ನ ಮನಸು (ಕಂನವಿ. ೯-೦೫೧); ಅದೇ ದೇವರು ನನ್ನನ್ನು ಇಲ್ಲಿಗೆ ತಂದನೆಂದು ತಿಳಿದುಕೋ (ಮುಂಬಯಿ ೪-೭೮). ೩. ತಾರಕ್ಕ ಬಿಂದಿಗೆ ನಾ ನೀರಿಗ್ಹೋಗುವೆ ತಾರೇ ಬಿಂದಿಗೆಯ

(ಪುರಂದ. ೧-೪೯ ಪಲ್ಲವಿ) : ಇಲ್ಲಿ ತಾ ಅದನ್ನು ನಾವಿಬ್ಬರೂ ಸರಿಯಾಗಿ ಹಂಚಿಕೊಂಡು ಬಿಡುವಾ (ಮುಂಬಯಿ. ೬-೩೦) ; ಮಾತು ಬಲ್ಲವ ಮಾಣಿಕ ತಂದ, ಮಾತು ಅರಿಯದವ ಜಗಳ ತಂದ (ಗಾದೆ). ೧೦. ಕೊಂಡುಕೊಳ್ಳು: ತನಗೆ ಹೇಗೋ ದೊರೆತ ದುಡ್ಡು ತರುವ ಪಡಿಪದಾರ್ಥ ಆದು ಗುರು ಲಿಂಗ ಜಂಗಮಕ್ಕೆಂದೂ ಅರ್ಪಿತವಾಗಬಾರದು (ಮೋಳಿಮಾ. ೦೦೬ ಪ್ರಸ್ತಾವನೆ) ; ದುಡ್ಡಿದ್ದರೆ ಅದನ್ನೂ ತರಬಹುದಿತ್ತು (ರೂಢಿ).

ತಂದಿಕ್ಕು = ೧. ಸಂಪಾದಿಸಿಕೊಡು; ತಂದುಕೊಡು: ತಾವಿರ್ಬರುಂ ಕಿಡಿದು ತಂದಿಕ್ಕಿದೆಂಜಲವುಟುವಮಂ ತಿಂದು (ಆದಿಪು. ೩-೩೪ ವ) : ಇನ್ನುಮ ನ್ನೊಡಲೊಳಿನ್ನೀ ಪ್ರಾಣಮುಳ್ಳನ್ನಮೇವದೆ ಕೌಂತೇಯರಸಿಕ್ಕಿ ಪಂದಲೆಗಳಂ ತಂದಿಕ್ಕು (ಗದಾಯು. ೯-೨೪) ; ಕಂದಮೂಲಫಲಂಗಳಂ ಪೆಱರ್ ತಂದಿಕ್ಕೆ ತಿಂದು ಆನಂದಮನಸ್ಕರಾಗಿ ನಿಂದ ತಪೋಧನರುಮಂ (ಪಂಚತಂ. ೦೮೯-೧೧). ೨. ತೆಗೆದುಕೊಂಡು ಬಂದು ಬಡಿಸು,–ನೀಡು : ಮೋನದಿಂದಮುಂಣ್ಬುದು ನಾವೇನಂ ತಂದಿಕ್ಕಿದೊಡಂ (ಧರ್ಮಾಮೃ. ೧-೧೬೩). ೩. ಎಸೆ ; ಬಿಸುಡು ; ಕೆಡವು : ಈ ದೊರೆಯನುಮಳವಟಿಯೆ ವಸುಂಧರೆಯೊಳ್ ತಂದಿಕ್ಕಿ ಭಂಗಮಂ ಮಾಡುವನೇ (ಆದಿಪು. ೧೪-೧೦೨) : ಇಂತನ್ನಯದಿಂದೀ ಪಟುವಿನೊಳಿನ್ನರಸನನಿಂತು ಬಿದಿಯೆ ತಂದಿಕ್ಕುವುದೇ (ಪಂಪಭಾ. ೨-೩೨). ೪. ತಂದು ಸೇರಿಸು ; ಕೂಡಿಸು ; ಬೆರೆಸು : ಮುಖದರ್ಪಣಕ್ಕೆ ತಂದಿಕ್ಕಿದ ರನ್ನದ ಬಿಡಿ ಸೊದೆಯುಮೇನೆನೆ . . . ಕಂಬುಕಂಧರಮೆಸೆಗುಂ (ಮಲ್ಲಿಪು. ೩-೭೩); ಸಕ್ಕದಮಂ ಪೇಟಿಸ್ವೊಡೆ ನೆಟಿ ಸಕ್ಕದಮಂ ಪೇಟ್ಗೆ ಸುದ್ದಗನ್ನಡದೊಳ್ತಂದಿಕ್ಕುವುದೇ ಸಕ್ಕದಮಂ (ಧರ್ಮಾಮೃ. ೧-೪೨). ೫. (ಜಗಳ, ವಿರಸ ಮುಂತಾದುವನ್ನು) ಉಂಟುಮಾಡು : ಆ ಕೊರಮ ಅವರಿಬ್ಬರ ನಡುವೆ ತಂದಿಕ್ಕಿದ (ರೂಢಿ).

ತಂದಿರಿಸು = (ಸಮೀಪಕ್ಕೆ) ತಂದು ಇಡು ; ತೆಗೆದುಕೊಂಡು ಬಂದು ಇಡು : ಬೆಲೆಯ ಕರುಮಾಡೂ ಕಾಂಚನಕಲಶತತಿಯಿನೆಸೆದುದು ಕನಕಾದ್ರಿಯನಲ್ಲಿ ಕಡೆದು ತಂದಿ[ಪಾಠಾಂ. ಕಂಡ]ರಿಸಿದಪೋಲ್ (ಕಾದಂಪೂ. ೩೦೪) : ಮಂಗಳದ್ರವ್ಯಂಗಳಂ ಕೂಡೆ ತಂದಿರಿಸಿ (ನಂಬಿರ. ೩-೩೯) : ಬೆಟ್ಟವ ಕಿತ್ತು ತಂದಿರಿಸಿದಂದದಿ ಮುಗಿಲಟ್ಟಣೆ ತನೆಗಳಗ್ರದೊಳಿ ಬಟ್ಟರನ್ನಗಳ ತೆತ್ತಿಸಿದ ಹೊಂಗಲಸಂಗಳಿಟ್ಟಿರ್ದುವು (ಮೋಹತ. ೨೦-೮). ತಂದೀ=ತಂದುಕೊಡು : ರಾಣಿಕೆಯ ತಂದಿತ್ತರು ಗೀರ್ವಾಣಫಣಿನರರಾಜರು (ತೊರವೆ. ೦-೭-೨) : ಕಂಗೊಳಿಸುವ ಮಾದಳವಣ್ಣ ತಂದಿತ್ತು (ಮೋಹತ. ೪-೩೦). ತಂದುಕೊಡು, ತಂದುಕುಡು = ತೆಗೆದುಕೊಂಡು ಬಂದು ಕೊಡು ; ಒದಗಿಸು : ತಂದೆ ತಾಯ್ಗಳು ಮೃಗಗಳಾದವು ಬಂಧು ಬಳಗವು ಖಗಗಳಾದುವು ತಂದು ಕೊಟ್ಟವರಾದರಾ ಮೃಗಗಳು ಕಿರಾತಂಗೆ (ಸಾಳ್ವಭಾ. ೫-೩೦): ಅಂಜನಚೋರಂ ಘುಟಿಕಾಪ್ರಯೋಗದಿಂದದೃಶ್ಯರೂಪದಿಂ ಪೋಗಿ ಕಳ್ದು ತಂದು ಕುಡುವ ಸಮರ್ಥನೆಂಬುದಂ ತಾಂ ಬಲ್ಲಳಪ್ಪುದಱಿಂದ (ಧರ್ಮಾಮೃ. ೨-೦೦೮). ತಂದುಕೊಳ್, ತಂದುಕೊಳು, ತಂದುಕೊಳ್ಳು = ೧. ಕರೆದುಕೊಳ್ಳು ; ಬರಮಾಡಿಕೊಳ್ಳು : ತನಗಱಿಕೆಯ ಮಿಟ್ಟುವನಿಂತು ತಂದುಕೊಂಡರು ಮೊಳರೇ (ಶಾಂತಿಪು. ೩-೭೨) ; ಮುಂಗುರುಳಗರ ಕಣ್ಣಿನೊಳೊತ್ತಿ ಜಲವನು ಹಿಂಗದೆ ತಂದುಕೊಂಡಾಗ ಅಂಗನೆ ಪುಸಿಗೆ ದುಃಖಿಸುತ (ಕಂನವಿ. ೭-೧೭೬). ೨. ತಾಳು ; ಹೊಂದು ; ಪಡೆ : ತಂದೆ ನೀನಪಹನೆಂಬ ಹಮ್ಮನು ತಂದುಕೊಳದಿರು (ತೊರವೆ. ೦-೯-೭೯). ೩. ಮದುವೆ ಮಾಡಿಕೊಳ್ಳು ; ಮನೆ ತುಂಬಿಸಿಕೊಳ್ಳು: ಮಾವನ ಮಗಳೆ, ತಂದುಕೊಂಡೇನು ತೆರ ಹೇಳಿ (ಜಲ್ಬಾ. ೫೩). ತಂದುಹಾಕು=೧. ಸಂಪಾದನೆ ಮಾಡು ; ಗಳಿಸಿಕೊಡು: ಹತ್ತು ಜನರ ಸಂಸಾರಕ್ಕೆ ತಂದುಹಾಕುವವ ಒಬ್ಬನೇ ಆದರೆ ಬಹಳ ತೊಂದರೆ (ರೂಢಿ). ೨. (ಜಗಳ, ವಿರಸ ಮುಂತಾದುವನ್ನು) ಉಂಟು ಮಾಡು ; ಕಲ್ಪಿಸು ; ಉತ್ಪತ್ತಿಮಾಡು : ಎನಗೂ ನಿನಗೂ ಹಗೆಯಿಲ್ಲ, ಎನ್ನೆಡೆ ನಿನ್ನೆಡೆ ತಂದುಹಾಕಿದವರೆ ಹಗೆ (ಸಗಜೂ. ೫೪) ; ತಂದುಹಾಕಿ ತಮಾಷೆ ನೋಡಿದ (ರೂಢಿ). ತಂದೊಡ್ಡು = ೧. ಈಡುಮಾಡು ; ಗುರಿಮಾಡು : ವನಿತೆಯುಮಂ ನಂಜರುಮಂ . . . ತೋಱಿದು ತವಕಂ ತನುವಂ ತಂದೊಡ್ಡಿ (ಧರ್ಮಾಮೃ. ೬-೬೯). ೨. ಉಂಟುಮಾಡು ; ಕಲ್ಪಿಸು : ಆಗ ಮನೋವ್ಯಥೆಯನ್ನುಂಟುಮಾಡುವ ಸನ್ನಿವೇಶಗಳನ್ನು ತಂದೊಡ್ಡಬೇಕು (ಶಿಕ್ಷದ. ೧೦೯). ತರವೇೞ್, ತರಹೇಳು = ೧. ತರುವಂತೆ ಹೇಳು ; ತೆಗೆದುಕೊಂಡು ಬರುವಂತೆ ಹೇಳು : ಸಾರಥಿಯಪ್ಪೊಡಪ್ಪ ನೆನಗೀತನೆ ಪೋ ಪೆಱರೇವರಿಂ ನೆರಂಬಾರೆನೆನುತ್ತೆ ತನ್ನ ರಥಮಂ ತರವೇೞ್ದು (ಪಂಪಭಾ. ೮-೮೫); ಅದು ಪೊಜಗಾಗೆ ನೀನೇನಂ ತರವೇೞ್ವೊಡಂ ತಂದಿತ್ತಪೆನಿದೊಂದು ಮಾತ್ರಂ ಬೇಡ (ಧರ್ಮಾಮೃ. ೨-೧೧೮) : ತರವೇೞ್ ಮಾಣಿಕ್ಯಭಂಡಾರಮಂ (ಕಾವ್ಯಾವ. ೯೧೩). ೨. ಕರೆತರುವಂತೆ ಹೇಳು ; ಕರೆದುಕೊಂಡು ಬರುವಂತೆ ಹೇಳು : ತರವೇೞ್ದು[ಪಾಠಾಂ. ಟಿ] ವಿಜಯಪರ್ವತಗಜಮಂ (ಆದಿಪು. ೧೨-೫೭) : ಎನ್ನ ಮಗನನಂತಕಪುರದಿಂ ತರವೇೞ್ಪುದು (ಅಜಪು. ೧೧-೧೫) : ಕನಸಿಂದದಂ ನೆರೆವವನಂ ನೆನಸಿಂ ನೆರೆದಪ್ಪೆನೆಂದು ತರವೇೞ್ದಪೆ ಕಾಂತನಂ (ಅಗವಿ. ೧೭-೧೦೨) : ತರವೇೞ್ ಸಾಲುವ ವೇಗನಂ ತೊಗರನೂ ಹೆಗ್ಗಾಳನಂ ಜೂಗನಂ (ನಳಚಂ. ೭೭) ; ಇತ್ತ ನವರಿಗೆ ನೇಮವನು ಮುನಿಪೋತ್ತಮನ ತರಹೇಳೆ(ತೊರವೆ.೦-೫-೩೪). ತರಪೋಗು=ತರಲು ಹೋಗು ; ತೆಗೆದುಕೊಂಡು ಬರಲು ಹೋಗು : ಸಮಿತ್ಕುಶಮಂ ತರಪೋಪ ಧೌತವಲ್ಕಲಮಸಲುಂಬುಪಕ್ಷಮಣಿಯುಂ ಸಮೆವೀ ವ್ಯವಸಾಯಮೆತ್ತಲುಂ (ಕಾದಂಪೂ. ೨೦೪). ತರುಬರು = (ಉಕ) (ಸಾಮಾನು ಮೊದಲಾದುವನ್ನು) ಕೊಂಡು ತಂದು ಒದಗಿಸು ; ವಹಿವಾಟು ನಡೆಸು : ಜಯಂತನು ಮನೆಯ ತರುಬರುವ ವ್ಯವಸ್ಥೆಯನ್ನು ಮಾಡುತ್ತಿದ್ದನು (ಜಯಂತ. ೦೫೩); ಮನೆಯಲ್ಲಿ ತರುಬರುವ ಸಣ್ಣ ದೊಡ್ಡ ಕೆಲಸಗಳನ್ನೆಲ್ಲ ಅವನೇ ಮಾಡುತ್ತಿದ್ದನು (ಸಂಚಿತ್ರ. ೨೪) : ತರುಬರೋನ ಹೆಂಡತಿ ಅಡಬಲ್ಲಳು. ತಲೆಕರೆದುಕೊಂಡು ಉಣಬಲ್ಲಳು (ಗಾದೆ).

ತಾರಮ್ಮಯ್ಯ = ಸಣ್ಣಮಕ್ಕಳನ್ನು ಆಡಿಸುವ ಒಂದು ಬಗೆಯ ಆಟ ಮತ್ತು ಆಗ ಹೇಳುವ ಹಾಡು : ಕೈದು ತಾರಮ್ಮಯ್ಯಕ್ಕೆ ತೊಡಲ ನುಡಿಯು ತಿಲ್ಲಾಣ (ಉಯ್ಯಾಲೆ. ೦೦೯-೫). ತಾರಮ್ಮಯ್ಯ ಮಾಡು = ೧. ತಾರಮ್ಮಯ್ಯಹಾಡು : ಏನೋ ಸಮಯ ಎಂದು ಸಹಾಯ ಕೇಳಿದರೆ ತಾರಮ್ಮಯ್ಯ ಮಾಡಿಬಿಟ್ಟರು (ರೂಢಿ). ೨. ನಟಿಸು ; ಸೋಗುಹಾಕು. ತಾರಮ್ಮಯ್ಯ ಹಾಡು = ನಕಾರ ಸೂಚಿಸು; ಇಲ್ಲವೆಂದು ಕೈಯಾಡಿಸು: 'ಹಣಕ್ಕೇ ಕಷ್ಟವಾಗಿದೆಯಪ್ಪಾ, ನೋಡೋಣ ತಡೆ' ಎಂದು ತಾರಮ್ಮಯ್ಯ ಹಾಡಿದರು (ಮರಳಿ. ೦೭೨). P ಈ ಧಾತು ಹಲವು ಶಬ್ದಗಳ ಜೊತೆಗೆ ಸೇರಿ ಸಂಯುಕ್ತಧಾತುಗಳಾಗಿ ವಿವಿಧವಾದ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಉದಾ: ಎಯ್ತರ್, ಇೞಿತರ್, ನಡೆತರ್, ಬೀೞ್ತರ್, ಮಂನಂದರ್ ಇತ್ಯಾದಿ. [ದೇ.॥ ತಮಿ. ಮಲ. ತರು; ತೆಲು. ತೇರ್]

ತರ$_1$ (ನಾ). (ಭಯಂ ಅಥವಾ ಕೋಪದಿಂದ) ನಡುಗುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ. 'ತರಗುಟ್ಟು', 'ಥರ$_1$' ಪರಾ.

ತರತರ$_1$ (ದ್ವಿರುಕ್ತಿ) : ಅದನ್ನು ಕೇಳಿ ತರತರ ಎಂದು ನಡುಗಿದಳು (ರೂಢಿ).

ತರ$_2$ (ನಾ). ಸುಂಕ; ತೆರಿಗೆ : ತಿಱುನರಯಂಗಲ್ಲ ಕೊಯ್ದಿಲೆಯ ಹೇಱಿಂಗೆ ವೀಸಪೊಂದು ತರ (?ಕೊಟ್ಟರ್) (ಮುಂಬರಾ. XI, ೨೫೪-೨೭ ; 1144). [P ಇದು 'ತೆರ' ಎಂಬುದರ ಅಪಲಿಖಿತವಿರಬಹುದು ]

ತರ$_3$, ಥರ$_2$ (ನಾ). ೧. ಸಾಲು ; ಓಳಿ ; ಕ್ರಮ ; ಪಂಕ್ತಿ : "ತರ ಪರಿವಿಡಿಯೆನಲ್ಕಿವು ಪರಿಯರ್ಥದೊಳ್" (ಕಶಬ್ದ. ೪೪) : ತರದಿಂ ದೆಯ್ವದ

ಮೊಗದೊಳ್ ಕರದೊಳ್ ತೊಡೆಯೊಳ್ ಪದಂಗಳೊಳ್ ದ್ವಿಜರುಂ ಭೂಪರುಮಂತೆ ವೈಶ್ಯರುಂ ಶೂದ್ರರುಮೋಜೆಯಿನೊಗೆದರೆಂಬರಿನ್ನವು ಪುಸಿಗಳ್ (ಸಮುಪ. ೧೧-೫೯) : ಇಂತು ತರದಿಂ ಸ್ವಪ್ನಂಗಳನೀರೆಂಟಂ ನೃಪ ಕುಲತಿಳಕನ ಸಿದ್ಧಾರ್ಥನರಸಿ ಕಂಡಳ್ನಲವಿಂ (ವರ್ಧಪು. ೧೩-೭೩) : ತರದೆ ಪಾಱುದುವು ಬೆಳ್ವಕ್ಕಿ ನೂಲ್ದೆಗೆದಂತೆ (ಅನಂಪು. ೯-೧೭ ರಗಳೆ): ಪರಿಸದೆ ಸಗ್ಗದ ಜತಿಗಳ್ ನೆರೆದಂತೆರಡುಂ ಕೆಲಂಗಳೊಳ್ ತರದಿಂ ಕುಳ್ಳಿರೆ (ಕಬ್ಬಿಗಕಾ. ೧೬೫). ೨. ಸರಿಯಾದುದು ; ಯೋಗ್ಯವಾದುದು ; ಉಚಿತವಾದುದು : ತರವಲ್ಲದ ಕಾರ್ಯವ ತೆಗಳ್ದಡೆ ಸುರನರನಾಗರೋಕ ಮೆಚ್ಚುವುದೇ (ಕೋಪಚಕ. ೭-೪೦) : ಇವಳು ನಮ್ಮೊಡೆಯಂಗೆ ತರವಾದವಳ್ (ದೇವೀಮ. ೫-೭೫) ; ಕಯ್ಗೆ ಬಾರದ ಬೇಂಟೆಗಿಂದು ಕಯ್ ತುಡುಕುವುದ ತರವಲ್ಲ (ಅಂಕಿಗೊ. ೫-೭೭). ೩. ಅಂತಸ್ತು ; ಯೋಗ್ಯತೆ ; ದರ್ಜೆ : ಬಿರಿಸಿ ಋಷಿಗಳನವರವರ ತರವಱಿದು ಕೊಡಿಸಿದನು (ಕುವ್ಯಾಅ. ೩-೩೭). ೪. ಮನೋಹರತೆ ; ಸೌಂದರ್ಯ : ಮುನ್ನ[೦] ಕೆಯ್ಗೆ[ಯ್ಯುತಿರ್ದ] ತರದ ಗುಱುಗೆಯುರವ್ಪಂತಃಪುರ ಪುರಂಧ್ರಿಯರಂ ಕರೆದು (ಪಂಪಭಾ. ೩-೪೪ ವ) : ತವತವಗೆ ಸಿದ್ಧ ಕನ್ಯಾನಿವಹಂ ಸಂಧ್ಯಾರ್ಚನಕ್ಕೆ ಸೂಸಿದ ಕುಸುಮಾಳಿವೊಲೆಸೆಯೆ ಪರೆದು ಕಣ್ಗೊಳಿಪುವು ತರದಿಂ ತುಱುಗಿ ಮಿಱುಪ ಕಾರಾನಿಕರಂ (ಕಾದಂಪೂ. ೫೮೦) ; ಅಲರ್ಗಳನಾಂತ ಪಾದರಿಗಳೊಳ್ ತರದಿಂದೆಱಗಿರ್ದ ತುಂಬಿಗಳ್ (ಕಬ್ಬಿಗಕಾ. ೫೭). ಥರ್$_1$: ೨. ದೊರೆಗಳೊಲುಮೆ ಉಂಟೆಂದೆಲ್ಲರೊಳು ಹಗೆ ಥರವಲ್ಲ [ಪಾಠಾಂ. ದೊರೆ ಎನ್ನ ಬಲವು ಸುಸ್ಥಿರ ವೆಂದೆಲ್ಲರ ಹಗೆ ತರವಲ್ಲ] (ಪುರಂದ. ೨-೪೫-೨) ; ಥರವಲ್ಲದ ಮಾತು ಮರಾ ಏರಿದರೂ ಆದೀತೇ ? (ಗಾದೆ). ೩. ಬೊಕ್ಕಸದಿ ತರಿಸಿದಂ ಧನಕನಕಮಣಿಗಳಂ ದಿಕ್ಕುದಿಕ್ಕಿನ ಧರಣಿಸುರರಿಗಂ . . . ಅವರವರ ಥರವನರಿತು ಇತ್ತನು (ಕುರಂಗ. ೯೧-೩೧).

ತರಂತರ, ತರತರ$_1$, ಥರಥರ$_1$ (ದ್ವಿರುಕ್ತಿ): ೧. ಸಾಲು ; ಪಂಕ್ತಿ ; ಕ್ರಮ : ನವದೂರ್ವಾಂಕುರಮಂ ಪಲ್ಲವಮಂ ಪೂಗೊಂಚಲಂ ತರಂತರದಿಂ ನೀಡುಮಪೊಲ್ಮಣಿಕಿರಣಂ ಪೊಣ್ಮುವಿನಂ ಮಣಿದೊಡವನೊರ್ವಳಂಗನೆಗಿತ್ತಳ್ (ಮಲ್ಲಿಪು. ೪-೬೨) ; ಮುತ್ತು ಪಚ್ಚೆ ಪವಳಂ ವಜ್ರಂ ಸುನೀಲಂ ತರಂತರದಿಂ ಸಾಲಿಡೆ (ಕೃಷ್ಣಕೃ. ೯-೫೪) ; "ತರತರವೆಂದು ಪಂಕ್ತಿಯೊಳ್" (ಕರ್ಣಾನಿ. ೦೨) ; ನೆಲದಾಕಾಶದೆಡೆಯೊಳಂಬುಗಳಂ ತರತರದಿಂದೆಚ್ಚು ಸೋಪಾನಂ ಮಾಡಿ (ಪಂಪಭಾ. ೭-೩೮ ವ) ; ಕಾರ್ಮುಕವ ತುಡುಕಿ ತರತರದಲೈತಂದು ಬಿಲ್ಲಿನ ತಿರುವ ತೊಡಿಸಲು (ಸಂಭಪ. ೧೯-೨೮) : ವರ ಸಣ್ಣಕ್ಕಿಯೋಗರ ತೊವ್ವೆ ಪಳಿದ್ಯವ ತರತರದಲಿ ಬಡಿಸಿದರು (ಮೋಹಕ. ೩-೫೧). ೨. ಸಮೂಹ ; ಗುಂಪು ; ರಾಶಿ : ಸುರಿವ ಖಂಡದ ರಕುತಧಾರೆಗೆ ತರತರದಿ ಬಾಯ್ದೆಗೆದು ಶಾಕಿನಿಯರ ಸಮೂಹವು ಬಳಿಯುಲ್ಕೆದಿತು ಪಾರ್ಥನಂದನನ (ಕುವ್ಯಾದ್ರೋ. ೩-೪೦) : ಕರುಣಾಮೃತಾಬ್ಧಿಯ ಕಲ್ಲೋಲಗಳಂತೆ ತರತರ ದೊಳು ಕವಿತರುವ ಸರಸಕಟಾಕ್ಷವನೆಸಗಿಯೆನ್ನೊಳು (ಹದಿಬ. ೧-೨೧) : ಧುರದೊಳಗೆ ಬಿಲುಗಾಱರೊಗ್ಗಿನ ಪರಿಗಕಾಱರು ಹಲಗೆಯವರುಬ್ಬರದ ಡೊಂಕಣಿಕಾಱರಾಂತು ಕೃತಾಂತನಾಲಯುವ ಥರಥರದಿ ಕೀವಿದರು ರುಧಿರದ ಹರಹು ಹೇರಾಳಿಸಿತು ಚೂಣಿಯೊಳು (ಕುವ್ಯಾಭೀ. ೪-೪೭). ೩. ಅಂತಸ್ತು ; ದರ್ಜೆ ; ಮಟ್ಟ : ಕೊಟ್ಟನು ಬಂಗಾರವ ಬಲುಸುಱುಳಿನ ಪಟ್ಟೆಯ ಕರಿತುರಂಗಗಳ ಕೊಟ್ಟನವರ ತರತರವಱಿದವನಂತೆ (ರಾಮವಿ. ೭-೪೮). ತರದೆ = ನಿರಂತರವಾಗಿ ; ಒಂದೇ ಸಮನೆ : ಅನುಭವಿಸಿದ ಕೋಟಲೆಗಳನಿನಿಸಂದಣಿಸಲ್ಕೆ ಮೌಕ್ತಿಕಾಕ್ಷಾವಳಿಯುಂ ಪವಜದಳನಯನೆ ಸಮೆದಪಳಿವೆ ಸುರಿದುವು ತರದೆ ತೋರ ಕಣ್ಬನಿದುಱುಗಲ್ (ಕಾದಂಬ. ೨೯೨). [ ದೇ. [illegible] ತಮಿ. ಮಲ. ತುಳು. ತೆಲು. ತರ ]

ತರ$_4$ 'ಧರ$_3$' ನೋ.

ತರ$_5$ (ನಾ). ಜವ ; ವೇಗ : [illegible] (ಶಬ್ದಕೋ. ೧೭) : ತರದೇಂ ಬರ್ಪುದೆ ತೊಟ್ಟನಿಲ್ಲಿಗೆ ಮಹೀಭೃತ್ಕಂತುವಂ ದೇವಿ ಮುದ್ದುಗರೆದಾತಂ ಬರವೇಟ್ಟುಮೆಂದಿರದೆ ನಿನ್ನಂ ತಂದೆ (ಕುಸುಮಾ. ೧೩-೯೭). [ ಸಂ. ತರಸ್ ]

ತರ$_6$ 'ತರಹ' ನೋ.

ತರಂಗ (ನಾ). ೧. ಅತ್ತಿತ್ತ ಅಲೆಯುವುದು,-ಚಲಿಸುವುದು. ೨. ನೀರು, ವಿದ್ಯುತ್ತು, ಶಬ್ದ ಮೊದಲಾದುವುಗಳ ತೆರೆ,-ಅಲೆ: "ವೀಚಿಃ. ಭಂಗಃ. ತರಂಗಃ – ಈ ೩ ತೆರೆ" (ಪದಾರ್ಥಚು. ೧೦೮-೩೧) : "ಪಳಿಯೆನೆ ತರಂಗಮುದು ಕಾಂ" (ಕವಿಕಂ. ೯೦) : ರಂಗತ್ತುಂಗತರಂಗಭಂಗುರಲಸದ್ಗಂಗಾಜಳಂ (ಪಂಪಭಾ. ೧೪-೩೧) : ಜಳಧಿ ತರಂಗತಾಟಿತ ಮಹೀಪತಿ ಚಕ್ರಧರಂ ತಪಂಬಡಲ್ (ಅಜಿಪು. ೧೧-೧) : ಒದೆವ ಮಂದರವನು ತರಂಗದಲುದಧಿ ಹೊಯ್ವಂದದಲಿ ಹೊಕ್ಕವು ಕುದುರೆ (ಕುವ್ಯಾಕ. ೧೧-೮) : ಉಚ್ಚಳಿತ ತರಂಗಪ್ರಪಾತದಿಂ ಚಲಿಯಿಪ ಪಾಂಗಳವಡೆ (ರಾಜಶೇ. ೦೨-೭೮) : ಪುಳಿನೆ ಯೊಳಿರ್ದು ಸೀತಾದೇವಿ ಕಾನುತ್ಕಂಠೆ, ನೋಡುತಿರ್ದಳ್ ತರಂಗೋಲ್ಲಾಸಮಂ (ಶ್ರೀರಾಮಾ. ೩೩೧-೭). ೩. ಭಾಗ ; ಪ್ರಕರಣ ; ಅಧ್ಯಾಯ : ಆ ಒಂದು ಸಾಹಸದ ಸೋಲು-ಗೆಲವುಗಳನ್ನು ಈ ಪ್ರಬಂಧದ ತರಂಗ ತರಂಗಗಳಲ್ಲಿ ಯಾರಾದರೂ ಕಾಣಬಹುದು (ಸಾಂಡಸ I, ಮೊದಲಮಾತು). ೪. ಕುದುರೆಯ ಒಂದು ಬಗೆಯ ಗತಿ ; ನಾಗಾಲೋಟ. ೫. [ಛಂದ] ಪ್ರತಿಪಾದದಲ್ಲಿ ಇಪ್ಪತ್ತೊಂದು ಅಕ್ಷರಗಳಿರುವ ಒಂದು ಸಮವೃತ್ತ: ಪಾವಕಂ ತ್ರಿದಿವ ಪಾವಕಂ ದಿವಿಜ ಪಾವಕಂ ಸುರಪ ಪಾವಕಂ . . . ಧಾವಿಸಿಂತಿದನೆ ಪೀವರಸ್ತನೆ ತ[ಪಾಠಾಂ. ತು]ರಂಗಮಂ (ಛಂದೋಂಬು. ೨-೧೯೦). [ ಸಂ. ]

ತರಂಗಭಂಗ (ನಾ). ಅಲೆಗಳು ಒಡೆಯುವಿಕೆ,-ಚೂರಾಗುವಿಕೆ : ಸುಧಾರ್ಣವಮಸದತ್ತು ರತ್ನವಳಯಾಂಚಿತ ತುಂಗತರಂಗಭಂಗದಿಂ (ಮಲ್ಲಿಪು. ೦೨-೧೩೦). [ ತರಂಗ + ಭಂಗ ]

ತರಂಗಮಾಲೆ (ನಾ). ಅಲೆಗಳ ಸಾಲು : ಕರಿಮಕರಂಗಳುಚ್ಚಳಿತ ಭಂಗುರ ತುಂಗತರಂಗಮಾಲೆಯುಂ ಖರರದನಾಗ್ರದಿಂದಿಱಿಯೆ ಮುತ್ತುಗಳಂತಿರೆ ಸೂಸಿ ಪಾಯ್ವ ಶೀಕರದೊಳೆ ನಾಂದು (ಕಾವ್ಯಸಾ. ೭೮ ಶೂದ್ರಕ).

[ ತರಂಗ + ಮಾಲೆ ]

ತರಂಗರೇಖೆ (ನಾ). ಅಲೆಯ ಆಕಾರದಲ್ಲಿ ಅಂಕುಡೊಂಕಾಗಿ ಇರುವ ರೇಖೆ,-ಗೆರೆ : ಸಂದೇಹಗ್ರಸ್ತವಾದ ಅಕ್ಷರವನ್ನೋ ಪದವನ್ನೋ ಪಂಕ್ತಿಗಳನ್ನೋ ನಿರ್ದೇಶಿಸಲು . . . ಅವುಗಳ ಕೆಳಗೆ ಒಂದು ತರಂಗರೇಖೆಯನ್ನು ಎಳೆದಿರುತ್ತಾರೆ (ಕನ್ನಸಂ. ೨೧೮). [ ತರಂಗ + ರೇಖೆ ]

ತರಂಗಲಹರಿ (ನಾ). ಅಲೆಗಳ ಸಾಲು,-ಪರಂಪರೆ: ಒಂದೇ ತರಂಗಲಹರಿಯಲ್ಲಿ ಬರುವ ಜಾತಿಯವು (ಮೂರ್ತಿಶಾ. ೩೨-೨).

[ ತರಂಗ + ಲಹರಿ$_1$ ]

ತರಂಗಲೇಖೆ (ನಾ). ಅಲೆಯ ಸಂದಿ : ತಡೆಯದೆ ಚಿತ್ರವೇತ್ರಧರೆಯುಂ ರಥಮಂ ಕ್ಷಿತಿಪಾಂತರಕ್ಕದಂ ನಡೆಯಿಸಿದಳ್ ಸಮಿರಾರಣಸಮುತ್ಥವಿಲೋಲ ತರಂಗಲೇಖೆ ಬೆಲ್ವಿಡಿದ ಸರೋರುಹಾಂತರಕೆ ಮಾನಿತಮಾನಸರಾಜಹಂಸಿಯುಂ ನಡೆಯಿಸುವಂತೆ ಸುಂದರನತಾಂಸೆಯುನಲ್ಪಕಪೋಲಮಾಂಸೆಯುಂ (ಶಾಂತಿಪು. ೫-೧೧೨). [ ತರಂಗ + ಲೇಖೆ ]

ತರಂಗವಾದ (ನಾ). [ವಿಜ್ಞಾ] ಬೆಳಕು ಅಲೆಗಳ ಮೂಲಕ ಪ್ರಸರಿಸುವುದೆಂಬ ವಾದ : ತರಂಗವಾದವೂ ಬೆಳಕು ಪ್ರಸರಿಸುವಾಗ ಅನುಸರಿಸುವ ನಿಯಮಗಳನ್ನು ಸಾಧಿಸಲು ತಕ್ಕ ತಳಹದಿಯಾಗಿವೆ (ಭೌತವಿ. ೨೦೧).

[ ತರಂಗ + ವಾದ$_3$ ]

**ತರಂಗವಿಕ್ಷೇಪ** (ನಾ). ಅಲೆಗಳ ತುಯ್ದಾಟ,–ಕ್ಷೋಭೆ: ನಕ್ಷತ್ರಮಾಲೆಗಳು . . . ನೀಲಾಂಬರದಲ್ಲಿ ತೇಲಾಡುವುವಾದರೆ ಅದಾ ಸಾಗರದ ತರಂಗ ವಿಕ್ಷೇಪದ ಸ್ವರೂಪಕ್ಕೆ ಹೋಲುವುದು (ಶಬಾಕುಂ. ೧೮).

[ ತರಂಗ + ವಿಕ್ಷೇಪ ]

**ತರಂಗಾಭ** (ಗು). ಅಲೆಗಳಂತಿರುವ : ಸಾರಸಾರಸನಾದಾಮಸಾರಸಾರ ನಿತಂಬೆಯುಂ ತಾರಾತಾರಾತರಂಗಾಭಾಕಾರತಾ ರ ಮ ಣೀ ೯ ಯ ಯ ಂ (ಕವಿರಾ. ೨–೧೩೦). [ ಸಂ. ]

**ತರಂಗಿಣಿ** (ನಾ). ೧. ತೆರೆಗಳಿಂದ ಕೂಡಿದುದು ; ಹೊಳೆ ; ತೊರೆ; ನದಿ : "ಹ್ರದಿನಿ ತರಂಗಿಣಿ . . . ಧುನಿ ತೊಱೆ" (ವಸ್ತುಕೋ. ೨೩–೧೧) ; ನಿರವದ್ಯ ನಿಖಿಲ ವಿದ್ಯಾತರಂಗಿಣೀಸಂಗದಲಿ ತೋಱುವ ಸುಟಿಯಂತಿರ . . . ಗಂಭೀರ ನಾಭಿಮಂಡಲಮೆಸೆಗುಂ (ಕಾದಂಪೂ. ೭೩೭) ; ಸೀತಾ ತರಂಗಿಣೀತರಂಗೋತ್ಕರೆಯುಂ ನೀಲಾಚಲ ವಿಚಿತ್ರರತ್ನಕಟಕಮುಂ . . . ತನಗೆ ಸಹಜಾಭರಣವಾಗೆ (ಮಲ್ಲಿಪು. ೩–೨೩ ವ); ನವೀನ ನಿಜಭಕ್ತಿತರಂಗಿಣಿ ಮಿಱುತುಬ್ಬರಂಬರಿಯುತುಂ (ಪಂಪಾಶ. ೬) ; ಲಕ್ಷ್ಮಣದೇವನೆಸೆದನಯ್ . . . ನೆರೆಯೇರ್ದ ಮಳೆಗಾಲದ ಮಹಾ ತರಂಗಿಣಿಯ ಧೀರ ಶೈಲಿಯಲಿ (ಶ್ರೀರಾಮಾ. ೨೬–೬೮೮). ೨. [ಸಂಗೀತ] ಒಂದು ರಾಗದ ಹೆಸರು : ತರಂಗಿಣಿ–ಚಾರುಕೇಶಿ (ಸಂಗೀದಂ. ೪೭). [ ಸಂ. ತರಂಗಿಣೀ ]

**ತರಂಗಿತ** (ಗು). ಅಲೆಗಳಿಂದ ಕೂಡಿರುವ; ತೆರೆಗಳೆದ್ದಿರುವ ; ಅಲೆಅಲೆಯಾಗಿರುವ : ದೂರದ ತರಂಗಿತ ದಿಗಂತದಲಿ ಚೈತ್ರರವಿ ಮುಗಿಲ ನೆತ್ತರ್ಗೆಂಪಿಸಲಿ ಮುಳುಗುವೋಲಂತೆ (ಶ್ರೀರಾಮಾ. ೧೯–೩೭೮). [ ಸಂ. ]

**ತರಂಗಿಸು** (ಕ್ರಿ). ೧. ಅಲೆಯಂತೆ ಚಲಿಸು,– ಸಂಚಲವಾಗು : ಮತ್ತಂ ವಳಿವಕ್ರತೆಯನೀವ ವಹಣಿ ತರಂಗಿಸುವ ತಿರುವು ಸುಳಿಗೊಳ್ವ ಹೆಂಪು ಇಂಪಂ ಕಱೆವ ಸುಧಾರಸಗಾಪಂ ನಾನಾರಸದ ಲಹಣಿಯ ರೂಪುವಡೆಯೆ ಪಾಡುವ ಗಾಯಕರೊಳಂ (ಗಿರಿಶ. ೨–೧೦೫ ವ); ಘನಮೃದುತರ ಮೃದಂಗಗತಿ ರಯಿಸಲು ತರಂಗಿಸುವ ತಾನಮಾನಂಗಳ ಸುಗೀತಂಗಳು (ಸೌಂದಪು. ೧–೪೦). ೨. (ಅಲಂ) ಸಂದಣಿಸು ; ದಟ್ಟಯಿಸು : ಕಲಬಲದೊಳ್ ತುರಂಗಬಲಂ ತರಂಗಿಸೆ ಪದಾತಿಬಲಂ ಪಡಿಸಲಿಸೆ (ನಂಬಿರ. ೧೨–೧೪) ; ತರಂಗಿಪ ತನು ಕಾಂತಿಯಿಂದ ಶೃಂಗಾರರಸ ತಾನೆ ಸ್ತ್ರೀರೂಪನಾಂತ ಬೆಡಂಗಿನೊಳಿರ್ದಳಾ ಕನ್ನೆ (ಭರತ. ೫೮–೯೭). [ ತರಂಗ + – ಇಸು$_3$ ]

**ತರಂಗು** (ನಾ).=ತರಂಗ ೨ : "ತರಂಗ–ತರಂಗು; ದಂಡ–ದಂಡು" (ಶಮದ. ೨೬೮ ಪ್ರಯೋ): "ತರಂಗು – ತರಂಗ = ನೀರ ತೆರೆ" (ಶದ್ಬಕೋ. ೧೭).

[ < ಸಂ. ತರಂಗ ]

**ತರಂಗೊಳ್** (ಕ್ರಿ). ೧. ಸಾಲುಗೊಳ್ಳು ; ಕ್ರಮವನ್ನು ಹೊಂದು : ತರಂಗೊಂಡಿಕ್ಕಿದ ಹೊಸ ಹೊಂಗೇದಗೆಯೆಸಳ್ಗಳ್ (ಜಯನೃಶಾ. ೫–೬). ೨. ಸಾಲುಗೊಳಿಸು ; ಕ್ರಮಪಡಿಸು : ಎಣಿಸಿ ತರಂಗೊಂಡು ನಕ್ಷತ್ರಮಂ ಪೇಳಾರಾನುಂ ಬಲ್ಲರೆ (ಎಕ. VII, ಶಿವಮೊ. ೬೪–೮೭ ; 1112). ೩. ಒಟ್ಟುಗೂಡು ; ಗುಂಪುಗೂಡು ; ಮೇಲೆ ಮೇಲೆ ಬದಗಂ : ವಿತತ ಪ್ರಾಟ್ಯಾದ್ರಿಪೀಠಾಗ್ರಮದರುಣಶಿಲಾವೃತ್ತಲಿಂಗಂಬೊಲಿಂಬಾಯ್ತು ತರಂಗೊಂಡೇಟ್ಗಿಯಿಂ ರಾಗದಿನುಪಚಿತಚೇತಶ್ಚಕೋರೀಕದಂಬಂ (ಜ ಗ ವಿ. ೦೭–೧೦೪) : ಅಖಿಲವಿಮಾನ ತರಂಗೊಂಡು ತಡೆಯದೆ ನೊಂಕೆ (ಭರತ. ೫೭–೮೫). ೪. ಮನೋಹರವಾಗು ; ಸುಂದರವಾಗು : ಇದೇಲಾವನ ಪೊದ್ದುಗೊಂಡ ಕದಳೀಕಾಂಡಂ ತರಂಗೊಂಡ ಚೂತದ ಸಾಲ್ (ಶಂಕಾಮಾ. ೦–೦೦೦).

**ತರತರಗೊಳ್ಳು** (ದ್ವಿರುಕ್ತಿ) : ದಂಡಧರ ಸೇನಾಧಿಪರು ಉದ್ದಂಡ ರಾಜರು . . . ತಂಡತಂಡದಿ ನಮಿಸಿ ತರತರಗೊಂಡು ಕುಳಿತಿರೆ (ಬಿಜ್ಜಪು. ೬೬–೧೩). [ ತರ$_3$ + ಕೊಳ್$_1$ ]

**ತರಂಗೊಳಿಸು** (ಕ್ರಿ). ಕ್ರಮಪಡಿಸು ; ಓರಣಗೊಳಿಸು : ತೆಗೆದು ತರಂಗೊಳಿಸಿದ ಪಂಚವಣ್ಣಿಗೆಯ ಪಟ್ಟೆಯು ಸಿಂಗರಿಸಿದ ಮಕರತೋರಣದ . . . ವೈಢೂರ್ಯದ ಲೋವೆಯ ಗಾಡಿವಡೆದ ಮಂಟಪದ ಮಧ್ಯದಲ್ಲಿ ನೆರೆದ ವಿಬುಧರಿಂ (ರಾಜಶೇ. ೮–೫ ವ).

[ ತರಂಗೊಳ್ + – ಇಸು$_3$ ]

**ತರಂಟು** 'ತಱಂಟು' ನೋ.

**ತರಂಡ$_1$** (ನಾ). ನೀರಿನ ಮೇಲೆ ಹೋಗುವ ಸಾಧನ; ತೆಪ್ಪ; ದೋಣಿ: ಎಸೆವ ವಾರ್ಧಿಯಂ ನೋಡುತುಂ ಕೊಂಡಾಡುತುಂ ತರಂಡದ ಮೇಲವ ರ್ಪೋಗುತಿರೆ (ಶಬ್ದರಾ. ೧೧–೦೭೬) ; ಕುಲುಷಜಲಮುತ್ತರಿಪೊಡವದಿರ ಲಲಿತಪದಧೂಳೀತರಂಡಂಗೊಳದೆ ಶಕ್ಯನೆ ಮಾನವಂ ದುರ್ಮಾನವಂದ್ಯ ದೃಶಂ (ವಿವೇಧ. ೧೨–೬). [ ಸಂ. ]

**ತರಂಡ$_2$** (ನಾ). ಒಂದು ಬಗೆಯ ಸಸ್ಯ (?) : "ಗ್ರಂಥಿಫಲಾ – ತರಂಡ" (ಓಷಧಿ. ೪೬). [ ? ]

**ತರಂಬಿಡಿ, ತರವಿಡಿ, ಥರಂಬಿಡಿ, ಥರವಿಡಿ** (ಕ್ರಿ). ೧. ಸಾಲುಹಿಡಿ ; ಕ್ರಮವನ್ನು ಹೊಂದು : ದೆಸೆದೆಸೆಯೊಳ್ ತರಂಬಿಡಿದು ಪಾಱುವ ವೀರರ ಸೆಕ್ಕೆ (ಎಕ. VII, ಶಿಕಾರಿ. ೨೪೨–೨೨ ; 1163). ೨. ಚೆಲುವಾಗು ; ಮನೋಹರವಾಗು : ಎಡ್ಡವಾದ ಪಡ್ಡಳಿಯ ಕಿಱುನನೆಯ ಕೊನೆ ತರಂಬಿಡಿದು ತೋಱೆ ಮೂಱುಂ ಧಾರೆಗಳನಳವಡಿಸಿದ ಕಿಂಕಿರಾತದೆಸಟ ಕಂಕಣಂಗಳುಮಂ (ಜಗವಿ. ೬–೧೭ ವ) ; ಪರಿವಿಡಿಯಿಂ ತರಂ[ಪಾಠಾಂ. ದಿತ್ತರಂ]ಬಿಡಿದು ಕಂದರ್ಪನಂ ಪಿಂದುಗಳೆಪಂದವಂ ತಳೆದು ನಿಂದ ರಾಜಪುತ್ರರಿಂ (ರಾಜಶೇ. ೫–೧೯ ವ). **ತರವಿಡಿ:** ೧. ತರವಿಡಿದು ಹಡಪದಾರತಿಯ ಮಜ್ಜನದಿ ಸಿಂಗರದ ಭೂಷಣ ಯಕ್ಷಕರ್ದಮದ . . . ನೆರವಿಗಳ್ಸಹಿತ ಪುಷ್ಪಕವೇಱೆ (ಲಶಿಚಂ. ೦೩–೬); ಕುರುಬಲನಿಕರ ತಳಿತುದು ತರವಿಡಿದು ಕಳನೊಂದು ಮೂಲೆಯಲಿ (ಕುವ್ಯಾಶ. ೨–೯). ೨. ಚಿಮ್ಮುವ ಚಾಮರದ ತರವಿಡಿದ ಸೀಗುರಿಗಳ ವಿಡಾಯಿಯು ನೊಸಲ ಬಾಸಿಗದ . . . ರಾಜಕುಮಾರಕರು ನಡೆತಂದರೊಲವಿನಲಿ (ತೊರರಾ. ೧–೦೭–೪೦). **ಥರಂಬಿಡಿ:** ೧. ಸಿರಿ ಸತಿಯರ ಸಾಲ್ವಿಡಿದಿಹ ಸರ್ವಾಮರನಿಚಯದ ಮುಂದೆ ಥರಂಬಿಡಿದಿಪ್ಪ ದಿಶಾಧಿಪರಂ ಬಳಸಿದ ಮನುಮುನಿತತಿಯಿಂ ಸಭೆಯೊಪ್ಪಿದುದು (ವೀರೇಶ. ೧–೦೫). **ಥರವಿಡಿ:** ೧. ಅಂಗಣದ ವೀಧಿಗಳ ಥರವಿಡಿದಂಗಡಿಯ ಪುಣ್ಯೋಪಕರಣದ ತುಂಗರಚನೆಯ ರಾಜಮಾರ್ಗದ ವರಪತಾಕೆಗಳ . . . ಈಕ್ಷಿಸುತ ನಡೆದರು (ನಿಘಾಗ. ೧೧–೩೬–೩೦).

**ತರತರಂಬಿಡಿ** (ದ್ವಿರುಕ್ತಿ) : ೧. ಸಾಲಾಗು ; ಕ್ರಮವಾಗಿರು ; ಓಳಿಗೊಳ್ಳು: ಗಜಘಟಾಘಳಕ ಕರಿಮಕರ ಕೈಗೈದ ಬಿಳಿಯ ಚಮರಿಗಳು ನೊರೆ ತರತರಂ[ಪಾಠಾಂ. ಥರಥರಂ] ಬಿಡಿದ [ಪಾಠಾಂ. ಬಿಡದೆ, ವಿಡಿದ] ಥಟ್ಟುಗಳು ತೆರೆತೆರೆಯ ಬಳಗ (ಸೋಮಚ. ೫–೩೦) : ಮಹಾವಿಭವದಿಂ ಪರಿಪರಿಯ ಬಣ್ಣದಾರತಿಗಳಂ ಹೊನ್ನ ಹರಿವಾಣಂಗಳೊಳ್ ತುಂಬಿಸಿ ತರತರಂಬಿಡಿದು ನಡೆತಂದು . . . ನಿವಾಳಿಸಿ ಬಿಸುಟು ತೂಪಿಱಿದು (ಚಲಪು. ೫–೧೯). ೨. ಮನೋಹರವಾಗು; ಚೆಲುವಾಗು: ಮತ್ತಮಾಸ್ಥಾನಮೆಂಬ ನೀರ್ ತೆಗೆದ ರತ್ನಾಕರದೊಳಲ್ಲಲ್ಲಿ ತರತರಂಬಿಡಿದುಗುಡಿಸಿದ ರತ್ನರಾಸಿಗಳೆ ವೆಂಭಂತೆ ಮಣಿನಿಕರಖಚಿತ ಮಕುಟಕೋಟಿಗಳ್ ಮೆಱೆಯೆ (ಗಿರಿಶ. ೨–೦೦೫ ವ). [ ತರ$_3$ + ಪಿಡಿ$_1$ ]

**ತರಂಬೆಱು** (ಕ್ರಿ).=ತರಂಬಿಡಿ ೧: ನೆರೆನೆರೆದು ತರಂಬೆತ್ತು ಭರ್ಮಹರ್ಮ್ಯಂಗಳೊಳ್ಳುಮ್ಮರ್ಮೆಯಿಂ ನೋಳ್ಪ ಪೊಳಲ್ವೆಂಡಿರ ಕಣ್ಗೆ ಕೌತುಕಾವಹಮಾಗೆ ನರೇಂದ್ರಂ ತುರಂಗಮಂ ಕರತಳಾಸ್ಫಾಳನಂಗೆಯ್ದು (ರಾಜಶೇ.೦೩–೭೭ ವ).

[ ತರ$_3$ + ಪೆಱು$_1$ ]

**ತರಕಟ** 'ತಱಕಟ' ನೋ.

**ತರಕಟಾಲು** (ಗು). ಕೆಲಸಕ್ಕೆ ಬಾರದ; ಉಪಯೋಗವಿಲ್ಲದ: ತರಕಟಾಲು, ಕ್ಷುದ್ರ,-ಮನುಷ್ಯ (Sorub. ಇಂಕನಿ.); ಅದು ನಿಮ್ಮ ತರಕಟಾಲು ಗಡಿಯಾರದ ಹಾಗಲ್ಲ (ಸಾಹೇಬ'. ೪೪೩). 'ತಱಕಟ' ಪರಾ.
[ ←ತೆಲು. ತರಕಟ, ತಱಕಟ = ವ್ಯರ್ಥ, ಪೊಳ್ಳು ]

**ತರಕಲು** (ನಾ). ೧. ಒರಟಾದಂದು ; ನಯವಿಲ್ಲದಂದು. ೨. ಕಲ್ಲು, ಮರಳಂಗಳ ಸಣ್ಣ ಕಣ. ೩. (ಧಾನ್ಯಗಳ) ನುಚ್ಚು; ತರಿ; ರವೆ: (೬).
**ತರಕಲು ತರಕಲು** (ದ್ವಿರುಕ್ತಿ): ಅವರು ಆ ಕಡ್ಡಿಯನ್ನು ಪೆಟ್ಟಿಗೆಯ ಮೇಲೆ ತರಕಲು ತರಕಲಾಗಿದ್ದ ಕಡೆ ಸ್ವಲ್ಪ ತಿಕ್ಕಿದರು (ಕಳಹು. ೯೮): ಅವರ ಮೈಯೂ ಮೊಸಳೆಯ ಚರ್ಮದಂತೆ ತರಕಲು ತರಕಲು (ನಮ್ಮೂರು. ೫೮). [ ತರಕು + - ಅಲು (< - ಅಲ್$_2$). / ತೆಲು. ತರಕಲು ]

**ತರಕಷ್** 'ತರಕಸ' ನೋ.

**ತರಕಷಿ** 'ತರಕಸ' ನೋ.

**ತರಕಸ**, ತರಕಷ್, ತರಕಷಿ (ನಾ). ೧. ಬಾಣದ ಕೋಶ ; ಬತ್ತಳಿಕೆ : ತರಕಸ ಸಿಂಗಾಡಿ ಕೂರಂಬು ಖೇಡೆಯ ಕರವಾಳು (ಡಂಪ್ರಸಾಂ. ೨೦-೫೯): ಸರಳು ತುಂಬಿದ ತರಕಸ ಸಿಂಗಾಡಿಗಳಿರದೆ ಸಾಸಿರ ಬಂಡಿಗಳಲಿ ಪರಿಪೂರ್ಣದಲಿ ಬರುತಿರ್ದುವು (ಕಂನವಿ. ೧೧-೩೬); ಬೆನ್ನ ಬಳಿಯ ತರಕಸ (ಬತ್ತಳಿಕೆ)ಗಳನ್ನು ಪುಡಿಮಾಡಿದರು (ಕರ್ಣಾಜ. ೧೪೬). ೨. ಅಂಬು; ಬಾಣ: ಅದಱ ಮೇಲಿದ್ದ ಬಲ್ಲಹಂಗೆ ಬಲ್ಲಹ ಟೌಳಿ ಸುಲಲಿತ ತರಕಸ ಸಿಂಗಾಡಿಗತ್ತಿ (ಸುಂಕಬಂ. ೬೪): ತರಕಸ ಸಿಂಗಾಡಿ ಕರದೊಳು ಬಲ್ಲೆಯ ತುಂರಗದ ಮೇಲೆ ಕತ್ತಿಗಳು . . . ಠೌಳಿಯನಾಂತುರವಣಿಸಿತು ರಾವುತರು (ಅಂಜಿಡ. ೬-೭೦). ೩. ಬಿಲ್ಲು; ಧನುಸ್ಸು: ಪೊನ್ನ ಬತ್ತಳಿಕೆಯಂ ಬೆನ್ನೊಳ್ತಳೆದು ತರಕಸ ಮನೆಡಮೆಗಲೊಳ್ತೊಡರ್ಚಿ (ರಾಜಶೇ. ೬-೧೧ ವ). **ತರಕಷ್**: ೨. ಮೊದಲು ತುರಕಷ್ ಕಮಾನ್ ಲಡಾಯಿ ಆಯಿತು (ಚಿಕ್ರಪಾ. ೫೭). **ತರಕಷಿ**: ೨. ಅನಂತರ ರಾಜಭೂವರರು ಖಾಸಾ ಆನೆಗಳಿಗೆ . . . ಸವಡೋಲು ಹಾಕಿಸಿ ತರಕಷಿ ಕಮಾನುಗಳನ್ನು ಆ ಸವಡೋಲಿನಲ್ಲಿಡಿಸಿದರು (ಬಖೈರು. ೧೩).
[ ←ಹಿಂ. ತರಕಸ್, ತರಕಶ್, ತೀರಕಸ್ ; ಮರಾ. ತರಕಸ್, ತರಕಶ್, ತರ್ಕಶ್ ; ಪಾರ. ತರ್‌ಕಶ್, ತೀರ್‌ಕಶ್ ]

**ತರಕಾರಿ**, ತರ್ಕಾರಿ$_2$ (ನಾ). ೧. ಕಾಯಿಪಲ್ಯ ; ಅಡುಗೆಗಾಗಿ ಬಳಸುವ ಸಸ್ಯ, ಕಾಯಿ ಮೊದಲಾದಂವು : ಮಾರುಕಟ್ಟೆಯಿಂದ ತಂದ ತರಕಾರಿಗಳನ್ನು ಮೊದಲು ತೊಳೆದು . . . ಕೊನೆಗೆ ಬೇಯಿಸುವುದಷ್ಟ (ಅಡುಸಾ. ೧೨): ರಾಧಾಬಾಯಿ ತರಕಾರಿ ತರಲೆಂದು ಕೆಲಸದ ಆಳಿನ ಜೊತೆಗೆ ಮಾರ್ಕೆಟಿಗೆ ಹೋದರು (ವಾತ್ಸಲ್ಯ. ೨೫): ತರಕಾರಿ ತೋಟಗಳನ್ನು ಮಾಡಬೇಕಾದರೆ ನೀರು, ಗೊಬ್ಬರ ಇವುಗಳ ವಸತಿ ಚೆನ್ನಾಗಿರಬೇಕು (ವ್ಯವಮು. ೫೯). ೨. ತರಕಾರಿಯನ್ನು ಬೇಯಿಸಿ ಮಾಡಿದ ಪಲ್ಯ : ತರಕಾರಿ ಊಟಕ್ಕೆ ಸೊಗಸು ಕೊಡುತ್ತದೆ (ರೂಢಿ). **ತರ್ಕಾರಿ$_2$**: ೧. ತರ್ಕಾರಿ ತರಲು ಚಿಲ್ಲರೆ ತೆಗೆದುಕೊಳ್ಳಲು ಅಂಗಿಯ ಜೇಬಿಗೆ ಕೈಹಾಕುತ್ತಾನೆ (ನಡದಾ. I, ೫೧೨). [ ←ಪಾರ. ಹಿಂ. ಮರಾ. ತರಕಾರೀ ]

**ತರಕಿ**, ತರಕ್ಕಿ(ಗು). ೧. ಬಲವಾದ; ಹೆಚ್ಚಿನ; ಮೇಲಾದ: ದುರುಳ ದೈತ್ಯರ ಕೊಂದು ನಾರಿಯರಿಗೊಲಿದು ನೀ ಸರಕು ಮಾಡದೆ ಜಾಂಬವಂತನೊಡನೆ ತರಕಿ ಯುದ್ಧವ ಮಾಡಿ ತಪ್ಪದೆ ಮುರಹರಾ ಕೌಸ್ತುಭ ಸ್ಯಮಂತಮಣಿ ಮುದ್ದು ಕನ್ನಿಕೆಯ ಕರಗ್ರಹಣವನೆ ಮಾಡಿ (ಶ್ರೀಕೃಪಾ. ೦೪). **ತರಕ್ಕಿ**: (ನಾ). ೨. ಏಳಿಗೆ ; ಅಭಿವೃದ್ಧಿ ; ಉನ್ನತಿ: ನಿಮ್ಮ ತರಕ್ಕೀ ಸಲುವಾಗಿ ನಾನೇಸ್ವತಃ ನಿಮ್ಮನ್ನು ರಿಕಮೆಂಡ್ ಮಾಡಿ ಕಳಿಸೀನಿ(ಜೀದಾನ. ೬೨).
[ ←ಮರಾ. ತರಕೀ ; ಪಾರ. ಅರ. ಹಿಂ. ತರಕ್ಕೀ ]

**ತರಕು**, ದರಕು, ದರಗು$_2$, ದೊರಗು (ನಾ). ೧. ಒರಟಾದುದಂ; ನಯವಿಲ್ಲದುದು. ೨. ತರಿತರಿಯಾದುದು; ನುಚ್ಚು : (೬). **ದರಕು**: ೧. 'ದರಕುಂದನಿ' ಪರಾ. **ದರಗು$_2$**: ೧. 'ದರಗುನಾಲಗೆ' ಪರಾ. **ದೊರಗು**: ೧. ಒರಟಾದ ನೆಲ ಇಲ್ಲವೆ, ದೊರಗಿನ ಮೈಯುಳ್ಳ ಪದಾರ್ಥ (ಬಾಂಕ್ರ. II, ೮೦೯); ಪಾತ್ರೆ ಒರಸುವ ವಸ್ತ್ರ ದೊರಗಾಗಿ ಟವಲಿನಂತೆ ಇರಬೇಕು (ಅಡುಸಾ. ४೭).
**ತರಕುತರಕು** (ದ್ವಿರುಕ್ತಿ): ಹಿಟ್ಟು ತರಕುತರಕಾಗಿದೆ (ರೂಢಿ).
[ <ತಱು$_2$. / ತಮಿ. ತರಿಚು; ಮಲ. ತರಿಸು; ತುಳು. ದೊರಗ್ ]

**ತರಕ್ಕಿ** 'ತರಕಿ' ನೋ.

**ತರಕ್ಕು** (ನಾ). ಒಂದು ಬಗೆಯ ಭೂಮಿ (?): ಮುಕ್ಕಣ್ಣ ಕತ್ತು ವಞಾಮ್ಮನೆಯುಮ್ಪಾಟುಪ್ಪಟ್ಟಿಯುನ್ತರಕ್ಕುಮ್ ಒಡೆಅನ್ (ದ್ರಾಅಶಿ ೧೯೪೨, ೩೧-೫೪; 610). [ ? ]

**ತರಕ್ಷು** (ನಾ). ೧. ಹುಲಿಯ ಜಾತಿಗೆ ಸೇರಿದ, ಮೈಮೇಲೆ ಪಟ್ಟೆಗಳುಳ್ಳ ಒಂದು ಬಗೆಯ ಪ್ರಾಣಿ; ಕಿರುಬ. ೨. ಹುಲಿ; ವ್ಯಾಘ್ರ: "ವ್ಯಾಘ್ರಃ, ದ್ವೀಪೀ, ಪುಂಡರೀಕಃ, ತರಕ್ಷುಃ, . . . ಮೃಗಾರಿಃ – ಈ ೭ ಹುಲಿ" (ಹಲಾಯು. ३೮-೭३); ವಾಯಸಗೃಧ್ರಸಂಕುಳವೃಕಪ್ರಕರೋರು ತರಕ್ಷು ಋಕ್ಷ ಗೋಮಾಯು ನಿಕಾಯಮಂ ತಣಿಪಿ (ಪಂಪಭಾ. ೬೧-೧೧೬): ಎರಲೆಯ ಕೋಡಿಂ ಕಣ್ಣಂ ತರಕ್ಷು ತುಱುಸಿದುವು ನೆಱೆದು ಸಿಂಗದ ಮಱಿಗಳ್ ಶರಭದ ಕೆಲದೊಳ್ ನಲಿದುವು ನಿರವದ್ಯಚರಿತ್ರನಿರ್ದ ಋಷ್ಯಾಶ್ರಮದೊಳ್ (ಮಲ್ಲಿಪು. ೧೪-೧೮); ತರುಣ ವನಹರಿಣಯುಗಮಂ ತರಕ್ಷು ಪಿಡಿವಂತೆ ಚಂಡಕರ್ಮಂ ಪಿಡಿದಂ (ಯಶೋಧ. ೧-೪೭): ಕನಲ್ಕೆಯಿಂ ನೋಡಿ ಕಡಂಗಿ ಗರ್ಜಿಪ ತರಕ್ಷುಗಳೊಪ್ಪುಗುಮಾ ವನಾಂತದೊಳ್ (ರಾಜಶೇ. ೫-೬३). [ ಸಂ. ]

**ತರಗ** 'ತಱಗು' ನೋ.

**ತರಗಡಿ** (ಕ್ರಿ). ಸಾಲನ್ನು ಕಡಿ; ಗುಂಪಿನಿಂದ ಬೇರೆಮಾಡು: ಬಿಂಕೊಂಡು ಬಹ ಸೇನೆ ತರಗಡಿದು ಕರಗಡಿದು ನೂಂಕಿದರು (ಜನಮು. ३೯-೨೫).
[ ತರ$_3$ + ಕಡಿ$_2$ ]

**ತರಗಡೆ** (ನಾ). ಕೊರತೆ ; ನಷ್ಟ ; ಹಾನಿ : ಅಪಹಾರಃ, ಅಪಚಯಃ – ೨ ಹಾನಿಯ ಪೆಸರು. ಕೊಯಿಲು, ಕಸುಗೊಳ್ಳುವಿಕೆ, ತರಗಡೆ ಬರುವಿಕೆ (ಸಿದ್ಧಾಂತಿ. ३೦೦). [ <ತಱಕಟ ]

**ತರಗತಿ** (ನಾ). ೧. ವರ್ಗ ; ಇಯತ್ತೆ; ಕ್ಲಾಸು : ಕೊನೆಯ ತರಗತಿಯವರೆಲ್ಲಾ ನುಗ್ಗಿ ಖುರ್ಚಿಗಳನ್ನು ಆಕ್ರಮಿಸಿ . . . ಕಲ್ಲುಗಳನ್ನು ತೆಗೆದುಕೊಂಡು ಹೊಡೆಯಲಾರಂಭಿಸಿದರು (ರಾಯಚಿ. ೬೬): ಪ್ರಥಮ ಮಧ್ಯಮ ತರಗತಿಯ ಪಾಠಗಳನು ಮನೆಯೊಳೆ ಹೇಳಿದರೆನಗೆ (ಅಂಜಾಪು. ೧೪-೫೮). ೨. ಮಟ್ಟ ; ದರ್ಜೆ: ಸಲಕರಣೆಗಳು . . . ಒಳ್ಳೆಯ ತರಗತಿಯವುಗಳಾಗಿರಬೇಕು (ಅಡುಸಾ. ३೨): ಬಿ. ಎ. ಪರೀಕ್ಷೆಯಲ್ಲಿ ಅತಿ ಉಚ್ಚ ತರಗತಿಯಲ್ಲಿ ಉತ್ತೀರ್ಣನಾದನು (ಸಸ್ಯಕ. ೯೫). ☞ ಇದನ್ನು 'ತರ+ಗತಿ' ಎಂಬ ಸಂಸ್ಕೃತ ಶಬ್ದಗಳಿಂದ ರೂಪಿಸಿಕೊಂಡಿರಬಹುದು. ತರ = ತರಣ, ಗತಿ = ಗಮನ. [ ?. / ತೆಲು. ತರಗತಿ ]

**ತರಗಬರಗ** 'ತಾಱಗಬೀಱಗ' ನೋ.

**ತರಗಾರ** (ನಾ). ಇಟ್ಟಿಗೆ ಕೆಲಸ ಮಾಡುವವನು ; ಉಪ್ಪಾರ : ಗೋಡೆಯನ್ನು ತರಗಾರರು ಕಟ್ಟುತ್ತಾರೆ (ಮುಂಬಯಿ. ४-೧೧೮): ಅವಳ ಗಂಡ ರುದ್ರಪ್ಪ ತರಗಾರ (ದಂಡಜೀ. ೬೯). [ ? + – ಗಾರ (< –ಕಾಱ) ]

**ತರಗು$_1$** 'ತಱಗು' ನೋ.

**ತರಗು$_2$**, ತರುಗು (ನಾ). ೧. ದಳ್ಳಾಳಿ ; ಸುಂಕ ; ವಟ್ಟ: 'ತರಗು ಪೇಟೆ' ಪರಾ. ೨. ದಳ್ಳಾಳಿ ವ್ಯಾಪಾರ ನಡೆಸುವ ಸ್ಥಳ : ಹಳೇ ತರಗಿಗೆ ಬಂದು ಯಾರನ್ನು ಕೇಳಿದರೂ ಹೇಳುತ್ತಾರೆ (ಬಾಯಿಕ. ४२). **ತರುಗು**: ३. ಸೋಡಿ ; ರಿಯಾಯಿತಿ : "ತರುಗು, ವಟ್ಟ, ವಣ್ಣೀ" (Discount. ಪಾರಿನಿ. ३೧).

ತರಗಿಸಂಗಡಿ = ದಳ್ಳಾಳಿ ಅಂಗಡಿ; ವ್ಯಾಪಾರದ ಮೌಲ್ಯದ ಮೇಲೆ ರುಸುಮು ತೆಗೆದುಕೊಳ್ಳುವ ಅಂಗಡಿ: (+). **ತರಗಿನ ಪೇಟೆ** = ಮಾರುವ ಸ್ಥಳ; ಅಂಗಡಿ ಬೀದಿ: ವಿಪಣಿಃ, ಪಣ್ಯವೀಥಿಕಾ – ೨ ಅಂಗಡಿಬೀದಿ, ತರಗಿನ ಪೇಟೆ, ಮಾರ್ಕೆಟ್ಟು, ಮಾರುವ ಕೇರಿ (ಸಿದ್ಧಾಂತಿ. ೮೮).

[ ದೇ.॥ ತಮಿ. ಮಲ. ತರಕು; ತೆಲು. ತರಗು, ತರುಗು, ತಱುಗು ]

**ತರಗುಗುಡಿಸು** (ಕ್ರಿ). ೧. ಒಣಗಿದ ಎಲೆಗಳನ್ನು ಗುಡಿಸು; ಕಸಕಡ್ಡಿಗಳನ್ನು ಗುಡಿಸು: ಅವನು ತರಗುಗುಡಿಸುತ್ತಿದ್ದಾನೆ (ರೂಢಿ). ೨. (ಆಲಂ) (ಮನೆ ಕಟ್ಟುವ ಸಂದರ್ಭದಲ್ಲಿ) ಭೂಶುದ್ಧಿಮಾಡು: ಯಲೆಯೂರವಳಿತವದರಮನಹಳಿ ಗ್ರಮುವನು ನಿನಿಗೆ ಪುವ್ರಕೆ ನಡದು ಬರುವಂತ ತರಗು[ಗು]ಡಿಸಿ ಕಟ್ಟಿಸಿದ ದಸೆಗೌಡನ ಹಳಿ (ಎಕ. XII, ಶಿರಾ. ೯೩-೦೦ : ?); ಅವರು ತರಗುಗುಡಿಸಿ ಮನೆ ಕಟ್ಟಿದಾಗ ಯಾವ ತರಹ ಮನೆ ಕಟ್ಟಿದರೋ ಅದೇ ತರಹ ಮನೆಗಳಲ್ಲಿ, ಬಹುಶಃ ಅದೇ ಮನೆಗಳಲ್ಲಿ, ಈಗಲೂ ಇದ್ದಾರೆ ಎಂದು ಹೇಳಬಹುದು (ಪನ್ನೂರು. ೭).

[ ತರಗು$_1$ (<ತಱಗು) + ಗುಡಿಸು$_1$ (<ಗುಡಿಯಿಸು) ]

**ತರಗುಟ್ಟು** (ಕ್ರಿ). (ಕೋಪ ಅಥವಾ ಭಯದಿಂದ) ನಡುಗು; ಕಂಪಿಸು: ತರಗುಟ್ಟುತ್ತಾ . . . ಅವರ ಮನೆಯ ಋಣಾನುಬಂಧ ಹರಿಯಿತು ಎಂದು ಮನಸ್ಸಿನಲ್ಲಿ ತೀರ್ಮಾನಿಸಿಕೊಂಡಳು (ಕೂನಳೇ. ೦೯೯). 'ಥರಗುಟ್ಟು' ಪರಾ.

**ತರತರಗುಟ್ಟು** (ದ್ವಿರುಕ್ತಿ) : ಅವನು ಹೆದರಿಕೆಯಿಂದ ತರತರಗುಟ್ಟಿದ (ರೂಢಿ). **ತರತರಗುಟ್ಟಿಸು** = ಬಹಳವಾಗಿ ನಡುಗಿಸು : ಅನೇಕ ವಿಷಯಗಳನ್ನು ಸಂಗ್ರಹಿಸಿಕೊಂಡು ಬಂದಿದ್ದ ನಬತೋವ್ ತರತರಗುಟ್ಟಿಸುವಂಥ ಸುದ್ದಿ ತಂದಿದ್ದನು (ಪುನರು ೩೪೫). [ ತರ$_1$ + ಕುಟ್ಟು$_1$ ]

**ತರಗುಪೇಟೆ** (ನಾ). ದಳ್ಳಾಳಿ ವ್ಯಾಪಾರ ನಡೆಯುವ ಪೇಟೆ,–ಮಾರುಕಟ್ಟೆ : ಹೊಸ ತರಗುಪೇಟೆಗಳ ಮಂಡಿವರ್ತಕರು (ಕಾಮಿಕಾಂ. ೦೯೯).

[ ತರಗು$_2$ + ಪೇಟೆ$_2$ ]

**ತರಗೆಲೆ** 'ತಱಗೆಲೆ' ನೋ.

**ತರಚಲು** (ನಾ). ತರಚಿಕೊಂಡುದು; ಪರಚಿದುದು: ಏನಾದರು ಗೀಚುಗಳು ಘಾಯಗಳು ತರಚಲುಗಳು (ಗ್ರಾಮಾಕ. ೩೯).

[ ತರಚು$_1$ (<ತಱಚು) + – ಅಲು (< – ಅಲ್$_2$) ]

**ತರಚೀಟಿ** (ನಾ). ಕರಚೀಟಿ; ಅಪ್ಪಣೆ ಚೀಟಿ : ತಾಟಿತಸು ಕಂಠದಲುಸುರ ಪರಿಪಾಟ ತಪ್ಪಿತು ಮೃತ್ಯುವಿನ ತ[ಪಾಠಾಂ. ಥ, ದ, ಧ]ರಚೀಟಿ ಹಿಡಿದನೊ ಹೇಳೆನಲು ಮಲಗಿದನು ಮೈಮಱೆದು (ಕುಮಾ.ಗ. ೬-೧೨).

[ ? + ಚೀಟಿ$_2$ (<ಚೀಟು$_2$) ]

**ತರಚು$_1$** 'ತಱಚು' ನೋ.

**ತರಚು$_2$** 'ತಱುಚು' ನೋ.

**ತರಜೆಗತ್ತರಿ** (ನಾ). (ಕುದುರೆಗೆ ತೊಡಿಸುವ) ಒಂದು ಬಗೆಯ ಆಭರಣ: ಸೆತ್ತಿಯ ಬೆಳ್ಗಱಿಯ ನೊಸಲ ಕನ್ನಡಿಯ ರೇಪಂತಮಾಲೆಯ ಗರ್ಗರದ ತರಜೆಗತ್ತರಿಯ ಪೂರ್ಕುಳ ಘಂಟೆಯ . . . ತುರಗಸಂಘಾತದಿಂ (ರಾಜಶೇ. ೬-೧೧ ವ). [ ? ]

**ತರಟ** (ನಾ). ಬೋಳುತಲೆಯುಳ್ಳವನು : ಅವನೊಬ್ಬ ತರಟ (ರೂಢಿ).

[ ತರಟು (<ತಱಂಟು) + – ಅ$_7$ ]

**ತರಟು** 'ತಱಂಟು' ನೋ.

**ತರಟುತಲೆ** 'ತಱಂಟುದಲೆ' ನೋ.

**ತರಟುದಲೆ** 'ತಱಂಟುದಲೆ' ನೋ.

**ತರಟೆ** 'ತಱಟ್ಟೆ' ನೋ.

**ತರಡಿ** (ನಾ). (ಉಕ) ಚಿಕ್ಕ ತಟ್ಟೆ; ಸಣ್ಣ ತಬಕ: ವಿಜಯಾಬಾಯಿ ಎದ್ದು ಒಳಗೆ ಹೋಗಿ ಒಂದು ತರಡಿಯಲ್ಲಿ ಅಂದೇ ತಯಾರಮಾಡಿದ ಗುಲಾಬ ಜಾಮ ಮತ್ತು ಚಕ್ಕಲಿ ತೆಗೆದುಕೊಂಡು ಬಂದಳು (ಕ್ಷಿತಿಜ. ೬೦).

[ ←ಮರಾ. ಧರಡೀ ]

**ತರಡಿಗೆ** (ನಾ). (?) : ಪಡುವಲು ತೆಂಕಣದ ಕಲ್ಲಯ ಬಂಡರ ಬಡಗಲು ಪಡುವಲು ಕರಿಯ ತರಡಿಗೆ ಮೂಡಲು ಬಡಗಲು ಬೞಚನ ಮರಡಿ . . . ಬಂಡೆ ತೆಂಕಲು ಯೀ ಚತುಸೀಮೆ (ಎಕ. X (8), ಮಾಲೂರು. ೧೯೬-೦೦ : 1408). [ ? ]

**ತರಡು** 'ತರುಡು' ನೋ.

**ತರಣ$_1$** (ನಾ). ತ್ರಾಣ; ಶಕ್ತಿ; ಸಾಮರ್ಥ್ಯ : "ತ್ರಾಣ – ತರಣ" (ಶಮದ. ೨೩೪ ಪ್ರಯೋ): "ತರಣ – ತ್ರಾಣ = ಶಕ್ತಿ, ಆಧಾರ" (ತದ್ಭಕೋ. ೧೭); ಅಂದಿನ ಮಹಿರಾವಣ ರಾವಣ ಕುಂಭಕರ್ಣಾದ್ಯರ ಸೌರ್ಕುಂ ಚೆರ್ಕುಂ ನಿಮ್ಮವರ ತರಣದ ನೆಲೆಯುಂ ಪೇಟವೆ ! (ರಾಮಾಶ್ವ. ೧೧೨-೦೯). [ <ಸಂ. ತ್ರಾಣ ]

**ತರಣ$_2$** (ಗು). ೧. ದಾಟಿಸುವ; ಪಾರುಗಾಣಿಸುವ : ಪ್ರಬಲಭಕ್ತಿಪುಂಡಂ ಸುಗುಣಮಣಿಕರಂಡಂ ಭವಾಂಬುಧಿತರಣ ತರಂಡಂ (ಪದ್ಮರಾ. ೦-೦೯). (ನಾ). ೨. ದಾಟುವಿಕೆ; ಪಾರಾಗುವಿಕೆ. 'ತರಣಪಣ್ಯ' ಪರಾ. ೩. (ನೀರನ್ನು) ದಾಟುವ ಸಾಧನ; ಹಡಗು, ದೋಣಿ, ಹರಿಗೋಲು ಮುಂತಾದವು : ಸಕಲ ಭಯಹರನೆ ನಿನ್ನಭಯಕರಂ ಸಂಸಾರವಾರ್ಧಿತರಣಂ ಶರಣಂ (ಪತ್ತಿದಂ. ೦೭-೦೨೦). [ ಸಂ. ]

**ತರಣಕ** (ನಾ). ದಾಟುವವನು; ಪಾರಾಗುವವನು; ಅತಿಕ್ರಮಿಸುವವನು : ಧೃತಮಾನಮಾನಸರ್ಕುಪಿತಮುಖಕರ್ಕಶರ್ವಿತತರಣತರಣಕರ್ಚಂಡಭುಜಬಲಯುತರ್ನುತಶಾರ್ಙ್ಗಿಕಾರ್ಷ್ಣಿಗಳ್ಕಡುಪಿಂದೆ ಕಾದಿದರ್ (ಕೃಮಿಥಾ. ೨೨-೬೦). [ ಸಂ. ]

**ತರಣದ್ರೋಣಿ** (ನಾ). (ನೀರನ್ನು) ದಾಟಿಸುವ ದೋಣಿ; ಹರಿಗೋಲು: ದುರಿತವ್ರಾತಲತಾಕೃಪಾಣ ವಿಸರದ್ದುರ್ಬೋಧ ರೋಧಸ್ವಿನೀತರಣದ್ರೋಣಿ . . . ವಾಣಿ (ಚಂದ್ರಪ್ರ. ೦-೦೨). [ ತರಣ$_2$ + ದ್ರೋಣಿ ]

**ತರಣಪಣ್ಯ** (ನಾ). ದಾಟಿಸುವುದಕ್ಕಾಗಿ ಕೊಡುವ ಕೂಲಿ; ದೋಣಿಗೆ ಕೊಡುವ ಕೂಲಿ : ನಾವಿಕರ್ಗೆ ತರಣಪಣ್ಯಮನಿತ್ತು ಮನ್ನಿಸಿ ಇರ್ವರು ಮನುಕೂಲದೆಡೆಯ ಪುಳಿನದೊಳಿೞಿದರ್ (ರಾಮಾಶ್ವ. ೩೦-೯).

[ ತರಣ$_2$ + ಪಣ್ಯ ]

**ತರಣಿ** (ನಾ). ೧. ದಾಟುವಿಕೆ; ಹಾಯುವಿಕೆ. ೨. ದಾಟುವ ಸಾಧನ: ದೋಣಿ; ಹರಿಗೋಲು; ಹಡಗು : "ತರಣಿ ಯಾನಪಾತ್ರಂ" (ವಸ್ತುಕೋ. ೨೨-೦೦): ಪ್ರಬಲವಾದ ಜಲಪ್ರವಾಹದ ವೇಗವು ತರಣಿಯನ್ನು ರಸೂಲಪುರದ ನದಿಯ ಮಧ್ಯಭಾಗಕ್ಕೆ ಹೊಡೆದುಕೊಂಡು ಹೋಯಿತು (ಕಪಾಕುಂ. ೮). ೩. ಸೂರ್ಯ; ರವಿ; ಭಾನು : "ರವಿ ಮಾರ್ತಂಡಂ . . . ತರಣಿ ಸಪ್ತಾಶ್ವನಾದಿತ್ಯನಕ್ಕುಂ" (ವಸ್ತುಕೋ. ೦೧-೬೪); ಸನ್ನೈಯಾಯಿಕೋದ್ಯತ್ತಿಮಿರ ತರಣಿಯಿ ಬಂಧನೀ ಬಂಧನೀ ಬಂಧನ್ (ಎಕ. II, ೦೪೦-೦೪೬ : 1145); ನರಸಿಂಗವೊನೆಯರ್ ತಾವೆ ಕೈಗೊಟ್ಟು ತರಣಿಯುಂ ಪೂರ್ವಾದ್ರಿಗೇಱಿಸುವ ಮಾಳ್ಕೆಯಿಂ (ನಂಶಿರ. ೩-೬೪); ತರಣಿ ತೇಜಂಗೆಡದಿರಗ್ನಿ ಬಿಸುಪಾಱದಿರು (ಹಜಕಾ. ೨-೬೦): ತರಣಿ ದೂರದೊಳಿಹನು; ಕಿರಣ ನಮಗೆಟಕುವುದು (ಮಂಕುತ. ೨೦೯). ೪. ಒಂದು ಬಗೆಯ ಅಸ್ತ್ರ; ಸೂರ್ಯಾಸ್ತ್ರ : ಅರಸನೆಚ್ಚಾ ಸರ್ವಬಾಣವ ಗರುಡಬಾಣಾದಿ ತಮಕೆ ತರಣಿಯ (ಕೌಶಿರಾ. ೩೨-೩೦). ೫. ಒಂದು ಬಗೆಯ ಸಸ್ಯ : ತರಣಿ, ರಾಯಭೋರೆ (ಮೃಶಿಗಿ. ೨೦-೩೬೪): ಪಾಪಟೆ, ಪಾಮಟೆ, ತರಣಿ, ಸೂಳೆಬೊಟ್ಟುಗಿಡ (ಮೃಶಿಗಿ. ೬೦-೨೨೦೩).

ತರಣಿಯ ತನಯ=ಸೂರ್ಯನ ಮಗ ; ಕರ್ಣ : ತರಣಿಯ ತನಯನ ನೆನೆದಾಸ್ಮರಣದೇ ಕಣ್ಣುಗಳುವೆನ್ನ ಶೋಕವಮಹಾಸಾಗರವಂ ತವೆ ಪೀರ್ದುದು ಶೋಕರ ಮಕ್ಕೋಪಾಗ್ನಿ ಬಾಡಬಾಗ್ನಿಯ ತೆಱದಿಂ (ಗದಾಯು. ೫-೩೭). [ಸಂ.]

**ತರಣಿಕರ** (ನಾ). = ತರಣಿಕಿರಣ : ತರಣಿಕರರೋತ್ಕರಾಹತಿಗೆ ತಕ್ಕ ತವಂ ನೆಱೆ ಬಂದು ತನ್ನನಾವರಿಸಿದುದು (ಕುಸುಮಾ. ೨-೫೮)

[ತರಣಿ + ಕರ$_3$]

**ತರಣಿಕಾಂತ** (ನಾ). ಸೂರ್ಯಕಾಂತ ; ಸ್ಫಟಿಕ : "ತರಣಿಕಾಂತಮಿನಾಶ್ಮ ಮೆಂದೆನಲ್ ಸ್ಫಟಿಕಮಕ್ಕು" (ಮಂಗರಾ. ೩೧-೬).

[ತರಣಿ + ಕಾಂತ$_2$]

**ತರಣಿಕಿರಣ** (ನಾ). ಸೂರ್ಯಕಿರಣ : ತರಣಿಕಿರಣಕ್ಕೆ ಭುಗಿಲೆಂದುಱಿವಿನ ಮಾಣಿಸಾನುವಿಂದವೋಸಱೆವೆಯೊಳ್ (ಚಂದ್ರಪು. ೧೧-೩೭).

[ತರಣಿ + ಕಿರಣ$_1$]

**ತರಣಿಕುಲ** (ನಾ). ೧. ಹಡಗುಗಳ ಗುಂಪು,-ಸಮೂಹ. ೨. ಸೂರ್ಯ ವಂಶ; ರವಿಕುಲ: ತರಣಿಕುಲಾಗ್ರಗಣ್ಯ ಬಿಡದಾಲಿಸು (ಉದ್ಭಟ. ೭-೧೧೯). ೧, ೨ : ತರಣಿಕುಲರಥಘನಹರಿದ್ವಿರದಾತುಳವನಚರಾಗ್ರಪದಬಲದಿಂದಂ ಧರಣೀಶಂ ರಾಮನಪೊಲ್ ಸುರಗಣವರವರದ ಶರಧಿಕರಮೆಸೆದಿರ್ಕುಂ (ಹವಿಷ್ಯರ. ೧-೯೦). [ತರಣಿ + ಕುಲ]

**ತರಣಿಜ** (ನಾ). ೧. ಸೂರ್ಯನ ಮಗ ; ಕರ್ಣ ; ತರಣಿಜನಂತೆ ದಾನ ಗುಣದಿಂ ರಘುವಂಶಜನಂತೆ ಸತ್ಯದಿಂ . . . ಅಮರನೀತಿ ಸಮಮುಖ್ಯದ ಭಕ್ತ ನೊಪ್ಪುವಂ (ಕ್ರಿಪುವಿ. ೯-೫). ೨. ಸುಗ್ರೀವ : ಮುನ್ನ ನೊಂದವರಳು ಕುವರು ದಿಟ ಎನ್ನ ಪತಿ ತರಣಿಜನ ನುಡಿಸುವ ಹರನ ಹೊಣೆಗೊಡುವೆ (ಕಾಶಿರಾ. ೭-೬). ೩. ಶನಿ. ೪. ಯಮ. [ಸಂ.]

**ತರಣಿನಂದನ** (ನಾ). = ತರಣಿಜ ೨ : ತರಣಿಯಂತಿಹ ರತುನಪದಕವ ತರಣಿನಂದನಗಿತ್ತ ಮಾಣಿಕವಿರಚಿತಾಂಗವನಿತ್ತನಂಗದಗೆ (ಕಾಶಿರಾ. ೯೯-೫೨).

[ತರಣಿ + ನಂದನ]

**ತರಣಿಪ್ರಭ** (ನಾ). ಸೂರ್ಯನಂತೆ ಕಾಂತಿಯುಳ್ಳವನು,-ತೇಜಸ್ವಿ ; ತರಣಿಪ್ರಭನರ್ಭಕನೀ ತರುಣಿಯ ಹೃತ್ತಿಮಿರಮಂ ನಿರಾಕರಿಸಿ ಟಿಹಿಷ್ಕರಿಸಿದಂ (ಜಗವಿ. ೨-೯೨). [ಸಂ. (ತರಣಿ + ಪ್ರಭಾ + -)]

**ತರಣಿಬಾಣ** (ನಾ). ಸೂರ್ಯಬಾಣ ; ಸೂರ್ಯಾಸ್ತ್ರ : ಕರಳ ಕೋದಂಡ ದಲಿ ರಘುಪತಿ ತರಣಿಬಾಣವ ಹೂಡಿ ತೆಗೆದಿಸೆ . . . ಬೆಳಕು ವಸರಿಸಿತು (ಕಾಶಿರಾ. ೧೯-೨೭). [ತರಣಿ + ಬಾಣ]

**ತರಣಿವೀಧಿ** (ನಾ). ಪೂರ್ವಪಶ್ಚಿಮವಾದ ಬೀದಿ ; ಸೂರ್ಯಬೀದಿ : ಎರಡು ಬಾಗಿಲ ಸೂತ್ರದಲಿ ವಿಸ್ತರಿಸಿದಂಗಡಿ ಸೋಮವೀಧಿಯ ತರಣಿ ವೀಧಿಯಲವರವರ ಪಾಳೆಯಕೆ ಮುರಿವುಗಳ ಸುರರು ಸೃಷ್ಟಿಸಬಾರದಿನ್ನೀ ನರರುಗಳ ಪಾಡೇನು (ಕುಮಾ್ಯ. ೧೧-೯೮). 'ಸೋಮವೀಧಿ' ಪರಾ.

[ತರಣಿ + ವೀಧಿ]

**ತರಣಿಸುತ** (ನಾ). ಸೂರ್ಯನ ಮಗ; ಶನಿ : ಗುರುರವಿಗಳುತ್ತುಂಗ ಭಾಗೆಯುಲಿರಲು ತರಣಿಸುತ ಜೂಕದಲಿ ಮೆಱೆದಿರೆ . . . ಪುತ್ರೋದಯ ಗಳಾದವು ಭೂಪ ದಶರಥಗೆ (ಕಾಶಿರಾ. ೦-೬೬).

[ತರಣಿ + ಸುತ]

**ತರಣೋಪಾಯ** (ನಾ). ದಾಟುವ ಉಪಾಯ ; ಪಾರಾಗುವ ಹಂಚಿಕೆ: ಅವರೊಡನೆ ಸಹಕಾರವಾಗಲೀ "ರಾಜಿ" ಯಾಗಲೀ ಸಾಧ್ಯವಿರಲಿಲ್ಲ ಸಾಧಿಸಿದರೆ ಅದು ಕೇಶವನೊಡನೆ ಸಾಧಿಸಬೇಕು. ಇದೇ ತರಣೋಪಾಯ ವೆಂದು ಅವರಿಗೆ ಮನವರಿಕೆಯಾಯಿತು (ಕಮುಜೀ. ೩೪೬).

[ತರಣ$_2$ + ಉಪಾಯ]

**ತರತಮ** (ನಾ). ಹೆಚ್ಚು ಕಡಮೆ ; ಮೇಲು ಕೀಳು ; ತಾರತಮ್ಯ : ತರತಮವುವಾಗಿ ಯೋಗಿಕತಿ ಯೋಗವಿಭೇದದೆ ನಿಟ್ಟಿಪ . . . ಮಹಾತ್ಮನೆ (ಜಗವಿ. ೭-೯೧) : ವಾಚಕರ ತರತಮಗಳನ್ನರಿತು ಗ್ರಂಥಗಳನ್ನಾಯ್ದುಕೊಳ್ಳ ಬೇಕು (ಗ್ರಂಥಾಲ. ೧೧). [ಸಂ.]

**ತರತಮಭಾವ** (ನಾ). ನ್ಯೂನಾಧಿಕ್ಯ ; ತಾರತಮ್ಯ : ಕೂಡಿ ನುಡಿವೆಡೆ ಯೊಳೆಂದುಂ ಕೂಡದು ಲಿಂಗತ್ರಯಕ್ಕೆ ತರತಮಭಾವಂ (ಶಮದ. ೧೫೧).

[ತರತಮ + ಬಾವ$_2$]

**ತರತರ$_1$** 'ತರ$_1$' ಪರಾ.

**ತರತರ$_2$** 'ತರ$_3$' ಪರಾ.

**ತರತರ$_3$** 'ತರಹ' ಪರಾ.

**ತರತರನೆ** (ಅ). ಗಡಗಡನೆ : ಛಳಿಯಿಂದ ಅವನು ತರತರನೆ ನಡುಗುತ್ತಿದ್ದಾನೆ (ರೂಢಿ). [<ತರ$_1$ + - ಅನೆ$_1$]

**ತರತರಿಸು$_1$** (ಕ್ರಿ). ನಡುಗಂ ; ಕಂಪಿಸು : ಹಱೆಯ ಪೊಯ್ಲಿನಲುಮರಗಿರಿ ತರತರಿಸೆ (ಕೂರರಾ. ೩-೭-೮) : ಎಡವುತೆ ಪೂರ್ಣಕುಂಭಗಳ ಭೃಂಗಾರವ ಕೆಡವುತ ತರತರಿಸುತೆ ಬಿರ್ದು ಒಡೆವುತೆ ಗಳಿಗೆವಟ್ಟಲ ವಾರ್ವರ ಮೇಲೆ ಕೆಡೆದನು ಮೂರ್ಛೆವೋದವನಂತೆ (ಕ್ರಿಭುಕಿ. ೯-೨೫).

[<ತರ$_1$ + - ಇಸು$_2$]

**ತರತರಿಸು$_2$** (ಕ್ರಿ). ವಿಧವಿಧವಾಗಿರು : ಫಲ್ಲಿಸಿ ಗಟ್ಟಿಯ ಕಟ್ಟಿದ ಪಿರಿಯ [ಯು]ರು ಪುಲ್ಲಿಗೆಗಳು ತರತರಿಸೆ (ಮೋಹಚ. ೩-೫೬).

[<ತರ$_6$ + - ಇಸು$_2$]

**ತರತರೀತ** (ನಾ). ೧. ಸೊಗಸಾದುದು ; ತಾಜಾ : ನಮಗೆ ತರತರೀತ ಬೇಕು (ರಕ್ತಧ್ವ. ೩೦೮). ೨. ಚಟುವಟಿಕೆಯುಳ್ಳುದು ; ಲವಲವಿಕೆ ಯುಳ್ಳುದು : ಜಳಕಾ ಬಗೀಹರಿಸಿ, ಅಪ್ಪ ಉಂಡ ಅಡ್ಡಾಗಿ ತರತರೀತ ಆಗತೀರಿ (ದೀಪಹ. I, ೧೬೫). [←ಮರಾ. ತರತರೀತ್]

**ತರತ್ತರಂಗ** (ನಾ). ಚಲಿಸುತ್ತಿರುವ ಅಲೆ : ಭಾಸ್ಕರತನೂಜೆಯುನುಭಯತಟ ನಿಕಟಕುಸುಮನಿವಹ ಶತ್ತರಾಗಪಟಳ ಪಿಶಂಗಕರತ್ತರಂಗಸರೋಜೆಯಂ ಮೆಚ್ಚಿ ಪೊಗಟ್ಟು ಜಲಕ್ರೀಡೆಯಾಡಲ್ ಬಗೆದು (ಶಂಪಥಾ. ೫-೫೮ ವ).

[ಸಂ. (ತರತ್ + ತರಂಗ)]

**ತರತ್ತರಂಗೆ** (ನಾ). ಚಲಿಸುತ್ತಿರುವ ಅಲೆಗಳುಳ್ಳವಳು ; ಉಕ್ಕುತ್ತಿರುವ ತರಂಗಗಳುಳ್ಳವಳು ; ನದಿ : ಗಂಗೆಗೆ ಶಫರೋಚ್ಚಲಿತ ತರತ್ತರಂಗೆ ಗೊರ್ವಳೆ ಬಂದಳ್ (ಶಂಪಥಾ. ೦-೯೦).

[ಸಂ. ತರತ್ತರಂಗಾ (ತರತ್ + ತರಂಗ + -)]

**ತರತ್ತರಳ** (ಗು). ಚಲಿಸುವ ; ಕಂಪಿಸುವ ; ಚಂಚಲವಾದ : ಸುಲಿಪಲ್ ಮಿಂಚಿನ ಗೊಂಚಲುಟ್ಟ ದುಗುಲಂ ಗಂಗಾನದೀಫೇನಮುಜ್ಜ್ವಲ ಮುಕ್ತಾಭರಣಂ ತರತ್ತರಳ ತಾರೋದಾರ ಭಾಭಾರಮುಂಗಲಕಾ ಲಾಲಿತ ಸಾಂದ್ರ ಚಂದನರಸಂ ಬೆಳ್ದಿಂಗಳೆಂಬೊಂದು ಮಂಬಲ ಬಂಬಲ್ಗೆ[ಡೆ]ಯಾಗೆ ಬೆಳ್ಪಸದಱೆ ಕಣ್ಗೊಪ್ಪಿತಾ ಕಾಂತೆಯಾ (ಶಂಪಥಾ. ೧೧-೩೭).

[ಸಂ. ತರತ್ತರಲ (ತರತ್ + ತರಲ)]

**ತರತ್ತಾರನೇತ್ರ** (ನಾ). ೧. ಚಂಚಲವಾದ ಗುಡ್ಡೆಯಿರುವ ಕಣ್ಣು. ೨. ಅಂತಹ ಕಣ್ಣುಗಳುಳ್ಳವನು : ಘನಕೋಪಾಟೋಪಮಂ ತಾಳ್ದರುಣತರ ತರತ್ತಾರನೇತ್ರಂ ತತಸ್ಪಂದನಯುಕ್ತೋಷ್ಠಂ . . . ಭೋಂಕನೆ ಬಂದು (ರಾಜಶೇ. ೫-೧೩೦). [ಸಂ. (ತರತ್ + ತಾರ + ನೇತ್ರ)]

**ತರದೂದು**, **ತದ್ರೂದು** (ನಾ). ೧. ಸಜ್ಜು ; ಏರ್ಪಾಟು ; ಸಿದ್ಧತೆ ; ತಯಾರಿ : ಆಳು ಬಹಳ ತರದೂದಿನಿಂದ . . ತಗಾದೆ ತಪ್ಪಿಸಿಕೊಂಡು . . . ಓಡಿಹೋದನು (ಕಥಾಮಂ. IV, ೬೫) ; ಕಮ್ಮ ಇಪ್ಪ ಈಡೇರು ವುದಕ್ಕೆ ತಕ್ಕ ತರದೂದನ್ನು ಮಾಡುತ್ತಿದ್ದರು (ಮುಸುಗ. ೫೨) : ಸಾಗ

ಬಹಿಷ್ಕಾರ ಹಾಕಿಸಬೇಕೂಂತ ತರದೂದು ನಡೆಸುತಾ ಇದಾರೇಂತ ಹೇಳು (ಘೂಂಗಲ್ಳ. ೨೨); ಹೀಗೆ ಕೆಲಸದ ತರದೂದಿನಲ್ಲಿರುವಾಗ ಒಂದು ವಿಶೇಷ ಘಟನೆ ಜರುಗಿತು (ಇಬದು. ೦೨೯). **ತರ್ದೂದು:** ೨. ಅವಸರ; ಜರೂರು: ಅವರು ತರ್ದೂದಾಗಿ ಹುಣಸೂರಿಗೆ ಹೋಗವ್ರೆ (ಸರ್ವಮಂ.೧೫). [←ಅರ. ತರದ್ದೂದ್; ಹಿಂ. ತರದ್ದುದ್; ಮರಾ. ತರತೂದ್, ತರದೂದ್]

**ತರದೇವಾಡಿ** 'ತರ್ದವಾಡಿ' ನೋ.

**ತರನದಿ** (ನಾ). ದಾಟಬೇಕಾದ ನದಿ: ಉರಗವು ಗಜ ಹಯ ಸಿಂಹವು ಚರಿಸುವ ಪಥದೊಳಗೆ ತಾವು ಬೆದರದೆ ಬೇಗಂ ಹರಿಯನು ನೆನೆಯುತ ಮನದೊಳ್ ತರನದಿಗಳ ದಾಂಟಿ ಭರದಿ ಬಂದರು ವನದೊಳ್ (ಹಮಹ. ೬೫). [ಸಂ. ತರನದೀ]

**ತರನ್ಮಣಿ** (ನಾ). (?) : ಕಿಱಿದೆಂದನಱಿವೆಯಿಂದುಱಿದ ನರಂ ಚಿಂತಿತಾರ್ಥದಿ ತರನ್ಮಣಿಯಂ ಕಿಡಿದೆಂದುಱಿದನ ತೆಱದಿಂ ಬಱಿದಾಗದೆ ಬಯಸಿದರ್ಥಮಂ ಪಡೆದವನ (ಶ್ರೀಪದಾ. ೧೧). [?]

**ತರಪಡಿ** (ನಾ). ಅಡಕೆಯಲ್ಲಿರುವ ಧೂಳು, ಚೂರುಗಳ ತೂಕವನ್ನು ಸರಿತೂಗಿಸುವುದಕ್ಕಾಗಿ ಕೊಡುವ ಹೆಚ್ಚಿನ ಭಾಗ: ಗೇಣಿದಾರರು ಗೇಣಿಯನ್ನು ಕೊಡುವುದರ ಜೊತೆಗೆ ತರಕಾರಿ, ತರಪಡಿ, ತಳರಾಸಿ, ವೋಲೆಗ್ಲೊಳಗ, ಲಾಭಸರೆ ಮುಂತಾದ ಮರ್ಯಾದೆಗಳನ್ನೂ ಭೂಮಾಲೀಕರಿಗೆ ಕೊಡಬೇಕಾಗಿತ್ತು (ಕಂಜಿಪಂ. ೦೦). [ತರ? + ಪಡಿ$_1$]

**ತರಪಣ್ಯ** (ನಾ). = ತರಣಪಣ್ಯ. [ಸಂ.]

**ತರಪು** (ನಾ). ವಜ್ರವನ್ನು ಹೋಲುವ ಒಂದು ಬಗೆಯ ಕಡವೆ ಬೆಲೆಯ ಬಿಳಿಯ ಹರಳಂ: (ಕ). [ದೇ.॥ ತಮಿ. ತರುಪ್ಪು, ತಱುಪ್ಪು; ತೆಲು. ತರುಪು, ತಱುವು]

**ತರಪೇತಿ** 'ತರಬೇತು' ನೋ.

**ತರಪೇತು** 'ತರಬೇತು' ನೋ.

**ತರಪೇತುಕೇಂದ್ರ** (ನಾ). (ಯಾವುದಾದರೊಂದು ವಿಷಯದಲ್ಲಿ) ಶಿಕ್ಷಣವನ್ನು ಕೊಡುವ ಕೇಂದ್ರ,–ಸಿದ್ಧಪಡಿಸುವ ಸಂಸ್ಥೆ: ಅವನು ತರಪೇತು ಕೇಂದ್ರದಲ್ಲಿ ಶಿಕ್ಷಣ ಪಡೆದು ಬಂದಿದ್ದಾನೆ (ರೂಢಿ). [ತರಪೇತು (<ತರಬೇತು) + ಕೇಂದ್ರ]

**ತರಫ್** 'ತರ್ಫೆ' ನೋ.

**ತರಫು, ತರ್ಫಿ, ತರ್ಫು** (ನಾ). ೧. ನಿಟ್ಟು; ದಿಕ್ಕು; ಪಕ್ಷ: 'ಚೌತರಫು' ಪರಾ. ೨. ಗುಂಪು; ಬಣ: (ಕ). ೩. ದೇಶದ ಒಂದು ಭಾಗ; ಜಿಲ್ಲೆ: (ಕ). **ತರ್ಫಿ:** ೨. ಮುನಿಸೀಪಾಲಿಟಿ ಮಂತದಾರ ತರ್ಫಿಯಿಂದ ಅನಿಲನು ಆ ಕಾರಕೂನನ ಮೇಲೆ ಕೇಸುಹಾಕಿದನು (ಅಪನಾ. ೮೦); ಇಸೋಪನು ಮುಂದೆ ಬಂದು, ತನ್ನ ಒಡೆಯ ತರ್ಫಿಯಿಂದ . . . ಹೇಳಿದನು (ಇಸೋಪ. ೯). **ತರ್ಫು:** ೧. ಪ್ರಜೆಗಳ ತರ್ಫಿನಿಂದ ಕರಿಸಿಕೊಂಡ ಪ್ರತಿನಿಧಿಗಳನ್ನು ಕೂಡಿಕೊಂಡು ರಾಜ್ಯವನ್ನು ಸಾಗಿಸಿದರು (ಮುಂಬಯಿ. ೬–೦೫೦); ಕೋರ್ಟಿನಲ್ಲಿ ಪೋಲೀಸು ತರ್ಫು ಕೇಸನ್ನು ನಡೆಸಿದ ಇನ್‌ಸ್ಪೆಕ್ಟರು ಚನ್ನಮರಾಜರವರು ಹೇಳಿದರು (ಕೆಲನ. ೩೮೫). [←ಅರ. ಹಿಂ. ಮರಾ. ತರಫ್, ತರ್ಫ್]

**ತರಫೆ** 'ತರ್ಫೆ' ನೋ.

**ತರಬರ** (ನಾ). ಆತುರ; ಆವೇಗ (?): ತರಬರದೊಳು ವೈಷ್ಣವರನು ನೆರವಿಗೊಂಡಿರದ್ವೈತಂಮೊಡನೆನ್ನ ಕರೆದೊಯ್ಯು (ಕರ್ನಾಕ. ೨೨೬). [?]

**ತರಬಿಯತ್ತು** 'ತರಬೇತಂ' ನೋ.

**ತರಬೇತಿ** 'ತರಬೇತು' ನೋ.

**ತರಬೇತು, ತರಪೇತಿ, ತರಪೇತು, ತರಬಿಯತ್ತು, ತರಬೇತಿ, ತರ್ಬಿಯತ್ತು** (ನಾ). ಶಿಕ್ಷಣ; ತಿದ್ದುವಿಕೆ; ಪಳಗಿಸುವಿಕೆ; ಸಿದ್ಧಗೊಳಿಸುವಿಕೆ: ಅನುಭವಶಾಲಿಗಳಾದ ಒಬ್ಬ ವೈದ್ಯರನ್ನೂ, ಉತ್ತಮ ತರಬೇತು (Training) ಪಡೆದ ಸೂಲಗಿತ್ತಿಯನ್ನೂ ಗೊತ್ತುಮಾಡಬೇಕು (ಗೃಹವಿ. ೦೦೨). **ತರಪೇತಿ:** ವಸ್ತುತಃ ನಿಸ್ವಾರ್ಥತೆಯ ಸಾಧನೆಗೆ ಅದು ಉತ್ತಮ ತರಪೇತಿಯನ್ನು ಕೊಡಬಲ್ಲದೆಂಬುದನ್ನು ಹಿಂದೂಧರ್ಮವು . . . ತೋರಿಸಲು ಯತ್ನಿಸುತ್ತಿದೆ (ತತ್ವಪ್ರಾ. ೫೭೮); ಆತನಿಗೆ ಕೆಲವು ಅರ್ಹತೆಗಳಿರಬೇಕು: ಸೂಕ್ಷ್ಮದೃಷ್ಟಿ, ಹೆಚ್ಚಿನ ಲೌಕಿಕಜ್ಞಾನ . . . ಮುದ್ರಣದಲ್ಲಿ ತರಪೇತಿ . . . ಮತ್ತು ಎಲ್ಲಾ ವಿಷಯಗಳ ಅರಿವು (ಮುದ್ರಕ. ೨೯). **ತರಪೇತು:** "ಅವನ ತರಪೇತೇ ಇರಬೇಕು" ಎಂದು . . . ಹೇಳುತ್ತಾರೆ (ಗೋಕುರ. ೬೦); ನೀವೆಲ್ಲ ಮುಂದೆ ನಮ್ಮ ದೇಶದ ನಾಯಕರಾಗುವವರು. ಈಗಿನಿಂದಲೇ ಅದಕ್ಕೆ ತರಪೇತು (ಅನಾಮಿ. ೫೨). **ತರಬಿಯತ್ತು:** ಜ್ಞಾಪಕಶಕ್ತಿಯ ತರಬಿಯತ್ತಿಗೆ ಕೋಷ್ಟಕಗಳ ಅಭ್ಯಾಸವೂ ಅರ್ಥರಹಿತವಾದರೂ . . . ಪದ್ಯಗಳ ಕಂಠಪಾಠವೂ ಆರಂಭವಾದುವು (ಶಿಕ್ಷದ. ೦೨೩); ಅನುವಂಶೀಯತೆ, ಪರಿಸ್ಥಿತಿ ಮತ್ತು ತರಬಿಯತ್ತು ಈ ಮೂರರ ಸಂತತವಾದ ಪ್ರಭಾವದಿಂದ ಪ್ರತಿಯೊಬ್ಬರ ವ್ಯಕ್ತಿತ್ವವೂ ಬೆಳೆಯುತ್ತದೆ (ಕ್ರಿಯಾಶಿ. ೦೬). **ತರಬೇತಿ:** ಜೋಸೆಫ್‌ಹೊಕರನ ಸಸ್ಯವಿಜ್ಞಾನದ ವಿದ್ಯಾಭ್ಯಾಸ ಮತ್ತು ತರಬೇತಿ, ತಂದೆಯ ವನಸ್ಪತಿಗಳ ಸಂಗ್ರಹದಿಂದ ಪ್ರಾರಂಭವಾಯಿತೆನ್ನಬಹುದು (ಸಸ್ಯಕ. ೮); ಅಧ್ಯಾಪಕತರಬೇತಿಗೆ ಸೇರುವ ಯೋಚನೆ ಮಾಡಿದ (ತ್ಯಾಗವು. ೦೮೮); ನಾಳಿನಿಂದಲೇ ನಮ್ಮ ತರಬೇತಿ ಆರಂಭವಾಯಿತೆಂದೇ ತಿಳಿಯಿರಿ (ಅಪನಾ. ೦೬) **ತರ್ಬಿಯತ್ತು:** ಬಹಳ ಬಗೆಯಿಂದಾ ನಮಗೆ ತರ್ಬಿಯತ್ತು ಮಾಡಿದರು (ರಾಜೇಂದ್ರ. ೦೦೮).

ತರಬೇತಾಗು, ತರಪೇತಾಗು = ತರಪೇತಿಯನ್ನು ಹೊಂದು; ಶಿಕ್ಷಣವನ್ನು ಪಡೆ: ತರಬೇತಾದವರು ೩೦–೪೦ಜನ (ಸಸ್ಯಕ. ೫೯); ಈ ರೀತಿ ತರಪೇತಾದ ಮಾರ್ಕೊಪೋಲೊನನ್ನು ಖಾನನು ಕಳುಹಿಸಿಕೊಟ್ಟನು (ಪ್ರವಾಇ. II. ೭); ವೃತ್ತಿಶಿಕ್ಷಣಶಾಲೆಯಿಂದ ಹೊರಬಿದ್ದವರೆಲ್ಲರೂ ತಕ್ಷಣ ಕಾರ್ಯ ಆರಂಭಿಸುವಷ್ಟು ತರಪೇತಾಗಿರುವುದಿಲ್ಲ (ಶಿಕ್ಷದ. ೧೯೭).

**ತರಬೇತುಕೊಡು, ತರಪೇತಿಕೊಡು** = ಶಿಕ್ಷಣವನ್ನು ಕೊಡು: ನಂಜರಾಜನೇ . . . ಸೈನ್ಯಕ್ಕೆ ತರಬೇತು ಕೊಟ್ಟು ಯುದ್ಧಕ್ಕೆ ಸಿದ್ಧಪಡಿಸುತ್ತಿದ್ದನು (ಶ್ರೀರಾಯ. ೧೧೬); ಸಾಹಿತ್ಯ, ನಟನಾಕೌಶಲ್ಯದಲ್ಲಿ ತರಬೇತು ಕೊಟ್ಟವರು ನಮ್ಮ ರಾಯರು (ಬಂಡಜೀ. ೦೦೮); ಅವರಿಗೆ ತರಬೇತು ಕೊಡುತ್ತಿದ್ದ ಆಸ್ಪತ್ರೆಗಳು ಕೂಡ ಸುಸಂಘಟಿತವಾಗಿದ್ದವು (ಮಾಮನಾ. ೩೩); ಅನೇಕ ಕಾರ್ಯಾಲಯಗಳನ್ನು ಇಡಿಸಿ ಕೆಲಸವಿಲ್ಲದವರಿಗೆ ತರಪೇತಿ ಕೊಡಿಸಿದವು (ಪ್ರತಾಪ. ೯೦). **ತರಬೇತುಗೊಳಿಸು, ತರಬಿಯತ್ತುಗೊಳಿಸು** = ತರಬೇತಂಮಾಡಂ: ಮಗನನ್ನು ಬಟ್ಟೆ ಹೊಲಿಯುವುದಕ್ಕೆ ತರಬೇತುಗೊಳಿಸಿದ್ದ (ತ್ಯಾಗಮ. ೫೫); ಮಾಧವರಾಯರ ಉಪದೇಶವೂ, ಸಹವಾಸವೂ ದೇಶಕ್ಕಾಗಿ ದುಡಿಯಲು ತರಬೇತುಗೊಳಿಸಿತು (ಕುರುಕಾ. ೦೪೨); ಅಪರಾಧಿಯನ್ನು ಉಳಿಸುವುದಕ್ಕಾಗಿ ಈ ವಕೀಲರು ಸುಳ್ಳು ಹೇಳುವ ಸಾಕ್ಷೀದಾರರನ್ನು . . . ತರಬಿಯತ್ತುಗೊಳಿಸುತ್ತಿರುತ್ತಾರೆ (ಮಾತನಾ. ೯೫). ತರಬೇತುಮಾಡು, ತರಪೇತುಮಾಡು, ತರಬಿಯತ್ತುಮಾಡು = ತಯಾರು ಮಾಡಂ; ಸಿದ್ಧಮಾಡು; ಪಳಗಿಸು: ಅವರನ್ನು ತರಬೇತುಮಾಡಲು ಮೈಸೂರು ಸರ್ವಪ್ರಯತ್ನವನ್ನೂ ಮಾಡಬೇಕು (ದಾದಾನ. ೦೪೭); ತರಬೇತು ಮಾಡಿದರೆ . . . ಮಗುವನ್ನು ಬೆಳೆಸುವ ಕೆಲಸ ಸುಲಭವಾಗುತ್ತದೆ (ಗೃಹವಿ. ೦೧೫); ಆತನಿಗಾಗಿಯಾದರೂ ಆಕೆಯನ್ನು ತರಪೇತುಮಾಡಬೇಕು (ಕಂಕಣ. ೭೯); ಕಾಶೀಬಾಯಿಯವರು. . .ಸ್ತ್ರೀಯರನ್ನು ತರಪೇತು ಮಾಡುವುದರಲ್ಲಿ ರಾಣಿಗೆ ಸಹಾಯವೆಸಗುತ್ತಿದ್ದರು (ಝಾರಾಣಿ. ೦೬೯);

ಅವನು ನಮ್ಮ ಟೀಮನ್ನು ಎಷ್ಟು ಚೆನ್ನಾಗಿ ತರಪೇತು ಮಾಡಿದ ಎಂದರೆ ಶಾಲೆಯ ಎಲ್ಲಾ ಟೀಮುಗಳನ್ನೂ ನಾವೇ ಗೆದ್ದು ಜಯಭೇರಿ ಹೊಡೆದುಬಿಟ್ಟೆವು (ಶಾಲಮ. ೨೨೦): ಅವನ ನಾಟಕಗಳಲ್ಲಿ ಆಗಿಂದಾಗ ಜಿಂಕೆಯ ಬೇಟೆ, ಕುದುರೆಗಳನ್ನು ಸಾಕಿ ತರಬಿಯತ್ತುಮಾಡುವುದು . . . ಇಲ್ಲಗಳೆಯಬವಂಥಾದ್ದಲ್ಲ (ಷೇಕ್ಸ್‌ಬಿ. ೭).

[ ←ಅರ. ತರ್ಬಿಯತ್ ; ಹಿಂ. ತರಬಿಯತ್ ; ಮರಾ. ತರಬೇಜ್ ತರಬೇತ್, ತರಬೇದ್ ]

**ತರಮು** (ನಾ). (ಉಕ) ಕಂದಾಯ : ಅವನು ತರಮು ಕಟ್ಟಿ ಬರಲಿಕ್ಕೆ ಹೋಗಿದ್ದಾನೆ (ಊಭಿ).

[ ←ಅರ. ಮರಾ. ತರವ್ = ಕಂದಾಯ ಹಾಕಲು ಆಸ್ತಿಯನ್ನು ಬೆಲೆ ಕಟ್ಟುವುದು ]

**ತರಲ,** ತರಳ (ಗು). ೧. ಅತ್ತಿತ್ತ ಚಲಿಸುವ; ಕಂಪಿಸುವ; ಚಂಚಲವಾದ; ಅಸ್ಥಿರವಾದ: ದುಃಖದ ಹೊರ ಉಬ್ಬರವು ಹೀಗೆ ತರಲವಾಗುತ್ತ ಹೋಗುವದೇನೋ ನಿಜವೇ (ಕಾಳರಾ. ೩). ೨. ಹೊಳೆಯುವ ; ಮಿಂಚುವ ; ಮಿರುಗುವ. 'ತರಲತೆ' ಪರಾ. ೩. ದ್ರವರೂಪವಾದ; ದ್ರವೀಭೂತವಾದ. ೪. ಕಾಮುಕನಾದ ; ವಿಷಯಲಂಪಟನಾದ. (ನಾ). ೫. ಬೆರಗು ; ವಿಸ್ಮಯ ; ಆಶ್ಚರ್ಯ : ತರಲಾ[ಪಾಠಾಂ. ಳಾ]ರ್ಥದಲ್ಲಿ ಬೆಳ್ಪಳಮಕ್ಕುಂ (ಶಮದ. ೩೦೨). ೬. ಎಳೆವಯಸ್ಸಿನವನು ; ಬಾಲಕ ; ಹುಡುಗ : "ಚಂಚಲಃ ಹಾರಮಧ್ಯಮಣಿ ಬಾಲಕರುಂ ತರಲಾಭಿಧಾನ" (ನಾನಾರ. ೬೪). ೭. ಹಾರದ ಮಧ್ಯದಲ್ಲಿರುವ ಮಣಿ,-ರತ್ನ ; ಪದಕ: "ಹಾರಮಧ್ಯದ ರತ್ನನಾಯಕಂ ತರಲ[ಪಾಠಾಂ. ಳ]ಮದು" (ಮಂಗರಾ. ೧೦೦-೨೪); ಮಿರುಗುವ ಕೆಂಬರಲ ತರಲದಂತಿರೆ ಸಸಿಗಲ್ (ದಮಸ್ಕ. ೧-೯೧). ೮. [ಛಂದ] ಪ್ರತಿಪಾದದಲ್ಲಿ ಹತ್ತೊಂಬತ್ತು ಅಕ್ಷರಗಳಿರುವ ಒಂದು ಸಮವೃತ್ತ. **ತರಳ:** ೧. ತರಳಕಟಾಕ್ಷಮಾಲೆಯೊ ಸಿತೋತ್ಪಲಮಾಲೆಯೊ ಕಯ್ಯ ಮಾಲೆಯೊ (ಮಲ್ಲಿಪು. ೨-೫೯); ವಿಮ್ಬಾಧರನ ಜನ್ಮಸ್ಥಾನವಾದತ್ತಸಮ ತರಳಗಂಭೀರಸದ್ಗೇಹವಾದತ್ತನಿಸಲ್ಕಿಂತುಳ್ಳ ನಾನಾಮಹಿಮೆಯೊಳೆಸೆಗುಂ ಚಾರುಕರ್ಣ್ಣಾಟದೇಶಂ (ಎಕ. VIII, ಸೊರಬ. ೨೬೦-೧೫ ; 1408) : ಆ ಗಂಭೀರ ದಿಗ್ದಂತಿ, ತೊರೆದು ಗಾಂಭೀರ್ಯಮಂ, ತರಳ ಚಂಚಲಚಿತ್ತದಿಂ ಬೀದಿವರಿವುದಯ್ ದೆಸೆದೆಸೆಗೆ (ಶ್ರೀರಾಮಾ. ೯೬-೪೬೩). ೨. ತರಳಸ್ಫಾಟಿಕಭಿತ್ತಿರುಚಿರಮಂ . . . ಪುರಾಣಕೂಪಮನಗಾಧಮಂ ಭೀಕರಮಂ ಅಂತಾ ಬಾವಿಯಂ ತೋಱೆ (ಪಂಚತಂ. ೯೦-೧೭). ೩. "ತರಳಂ ಚಂಚಲರೂಪಂ" (ವಸ್ತುಕೋ. ೦೨೭-೫೩). ೬. ತರಳನಪೂರ್ವಿಗಂ . . . ವರವಿಪ್ರಂ (ಗಿರಿಕ. ೯-೯೦); ಮನೆಯವರೆಯ್ದೆ ಕರಕರಿವ ದುಃಖವನು ತರಳ ನಿನ್ನಂ ನೋಡಿ ಮಱೆದು ಪರಿಣಾಮಮಂ ಧರಿಸುತಿಪ್ಪೆನ್ನ ಗೋಣಂ ಕೊಯ್ದೆ (ಹದಿಕಾ. ೦೫-೨೮) ; ತರಳರರ್ಜುನ ಸಾತ್ಯಕಿಗಳವದಿರಿಗೆ ಪಂಥವದೇತಕೆ (ಕುಮ್ಯಾದ್ರೋ. ೦೫-೦೫) ; ನರಸಿಂಹನ ಜಮುಂತಿಯಲಿ ಜನಿಸಿದೀ ತರಳನು ನರಸಿಂಹನೃಸೆ (ಕಂಸವಿ. ೪-೭೭); ಈ ತರಳ ಬಟ್ಟೆಯಣ್ಣನು . . . ಆನೆಗಳ ಹಿಂಡು ಹಿಂಡುಗಳನ್ನೂ, ಕೋಳಿಯನ್ನೂ ತಂದನಂತೆ (ಸವತಿ. XII, ಪ್ರಸ್ತಾವನೆ). ೭. "ತರಳಂ ಹಾರೋಪವಸದ್ಧ ಮಧ್ಯಮರತ್ನಂ" (ವಸ್ತುಕೋ. ೦೨೭-೫೩) : "ಹಾರದ ನಡುವೆಯಿದ್ದ ನಾಯಕರತ್ನವು ತರಳಂ ಎನಿಸುಗು" (ನಾಚಿರಾ. ೧೨೩) : ತರಳಮನಾಂತ ಚಂದನದಳಂಕೃತಿ ಭಾವಮನಾಂತ ವಸ್ತುವಿಸ್ತರ ಕೃತಿ (ಚಂದ್ರಪು. ೩-೮೯): ೮. ಸುರವ ಶೀತಕರಾಗ್ನಿ ಮಾರುತ ಭಾನುಯುಗ್ಮಗಣಂಗಳಿಂ ಪರದೊಳೊಪ್ಪೆ ಹಿಮಾಂಶು ಶೇಖರನಿರ್ದು ವಿಶ್ರಮಣಂ ದಿಶಾಕರಿಯೊಳಾಗಿರೆ ಸಂದುದಿಂತಿದು . . . ತರಳಂ ಕವೀಂದ್ರಜನಸ್ತುತಂ (ಛಂದೋಂಬು. ೨-೦೨೧). ೯. ಮಗ ; ಸಂತ : ತಾಯಿ ಮಾರಿಯಾದರೆ ತರಳನೆಲ್ಲಿ ಹೋದಾನು ? (ಗಾದ). [ ಸಂ. ]

**ತರಲತೆ,** ತರಳತೆ (ನಾ). ೧. ಕಂಪಿಸುವಿಕೆ ; ಚಂಚಲವಾಗಿರುವಿಕೆ : ಚಾಂಚಲ್ಯ : ಸರಳತರೋಷ್ಣ ನಿಶ್ವಸಿತಮಾರುತನಿಂದೆ ನಿಜೋತ್ತರೀಯದೊಳ್ ತರಲ[ಪಾಠಾಂ. ಳ]ತೆಯಂ ನಿಯೋಜಿಪ ನೆಗಟ್ಚಿಗೆ ಕಾರಣಮೇನೊ ಕಾಮಿನೀ (ಚಂದ್ರಪು. ೩-೫೪). ೨. ಹೊಳೆಯುವಿಕೆ ; ಪ್ರಕಾಶ ; ಮಿರುಗುವಿಕೆ. **ತರಳತೆ:** ೧. ನೀಂ ಭವ್ಯನೈ ಮುಕ್ತಿಸಮಿಥ್ಯಾಜ್ಞಾನಿವೋಲ್ ನೀಂ ತರಳತೆವೆರಸಿಂತೇಕೆ ವಿಭ್ರಾಂತನಪ್ಪೈ (ಆದಿಪು. ೩-೭); ಅನ್ಯರ್ಪರಿಭವಿಸಿದೊಡಂಮುಪುದೆ ಸ್ವೈರಣೆ ತರಳತೆಯೆ ನೋಡುತ್ತಾಪ ಮೆಂಬರ್ಧೂರ್ತರ್ (ಕಾದಂಪೂ. ೫೬೭).; ಕರೆದು ತಳ್ಳುವ, ತಳ್ಳಿರಿಸು ತೊಳಗೆ ಕಟ್ಟಿಡುವ ತರಳತೆಯುದೇಂ ತಂತ್ರ ? (ಮಂಕುತ. ೧೬೯).

[ ಸಂ. ತರಲತಾ ]

**ತರಲಾಕ್ಷಿ,** ತರಳಾಕ್ಷಿ (ನಾ). ೧. ಚಂಚಲವಾದ ಕಣ್ಣು. ೨. ಚಂಚಲವಾದ ಕಣ್ಣುಗಳುಳ್ಳವಳು ; ಚಂಚಲಾಕ್ಷಿ : ಲಿಪಿಯನೆತ್ತಿ ವಾಚಿಸಿಕೊಂಡ ತರಲಾ[ಪಾಠಾಂ. ಳಾ]ಕ್ಷಿ ತಾನದಕೆ ಮತ್ತೊಂದಭಿಪ್ರಾಯಮಂ ತಿಳಿದಳ (ಜೈಮಿಭಾ. ೩೦-೨೭). **ತರಳಾಕ್ಷಿ:** ೧. ತರಳಾಕ್ಷಿದ್ವಂದ್ವಂ (ಲೀಲಾವ. ೨-೪೭). ೨. ತರಳಾಕ್ಷಿಯುನಾ ಕಾದಂಬರಿಯಂ . . . ಚಿಂತಿಸುತುಮಿರ್ದಾಯಿರುಳನದೆಂತಾನುಮಾವನಿಪಾಲಂ ಕಳೆದಂ (ಕಾದಂಉ. ೧೯೩) : ಅಲರ್ಗಣೆಯನರ್ಚಿಸಿದ ವಿಚಕಿಲಮಾಲೆಯನಾಂತ ಪೂರ್ಣಕುಂಭದ ಚೆಲ್ವಂ ಗೆಲೆವಂದುದಿಲ್ಲ ಕುಚಮಂಡಲಮಿದು ತರಳಾಕ್ಷಿ ಮುತ್ತಿನೇಕಾವಳಿಯಿಂ (ರಾಜಶೇ. ೩-೫೯).

[ ಸಂ. ತರಲಾಕ್ಷೀ (ತರಲ + ಅಕ್ಷಿ + –) ]

**ತರಲಾಪಾಂಗ,** ತರಳಾಪಾಂಗ (ನಾ). ಚಂಚಲವಾದ ಕಡೆಗಣ್ಣು—ಕಡೆಗಣ್ಣ ನೋಟ : ತರಲಾಪಾಂಗವಿಲಾಸಸ್ಫುರಿತಮೆ ಲೆಕ್ಕಣಿಕೆಯಾಗೆ ನಲ್ಲಳ ಮುನ್ನಂ ಬರೆದತನುಚರಿತಮಿಗಾಗಳ್ ಬರೆದಂತಿರ್ದಪುದು ಮನ್ಮನಃಪುಸ್ತಕದೊಳ್ (ಆದಿಪು. ೪-೦೪) ; ತರಲಾಪಾಂಗದಿನಾ ನೃಪಾಲತಿಲಕಂ . . . ನಿರಂತರಮುದ್ಯಾನವಿನೋದಮಂ ಸಲಿಸುವಂ (ಅನಂಪು. ೨-೦೪). **ತರಳಾಪಾಂಗ:** ಪರುಷಾಲಾಪಮುಮತಿನಿಷ್ಠುರವೀಕ್ಷಣಮುಮುಖವಿಕಾರಮುಂ ಮಱಸಿರೆಯುಂ ತರಳಾಪಾಂಗಮುಮಾಕೆಯ ದರಹಸಿತಮುಮುಬಿಯೆ ಪೇಟ್ಟುಗಿ ಮೆಱೆಕಮನೆರ್ದೆಯೊಳ್ (ಕವಿರಾ. ೩-೧೦೯) ; ತರಳಾಪಾಂಗಂಗಳೊಳ್ ಮಚ್ಚರಿಪಲರ್ಗಣೆಯುಂ ಕಟ್ಟಿ ತೂಪಂದದಿಂ (ಲೀಲಾವ. ೭-೦೪) ; ತರುಣಿಯರ ತನುಪರಿಮಳದ ಸೋಂಕಿನಲಿ ಸುತ್ತಲುಪರಿಮಳಿಸಿದುದು ತರುಸುತರಳಾಪಾಂಗರೋಚಿಯಲಿ ಮುರಿದುದಾ ಮರಗತ್ತಲೆಯ ಮೈಸಿರಿ (ತೊರರಾ. ೧-೫-೪೫). [ ಸಂ. (ತರಲ + ಅಪಾಂಗ) ]

**ತರಲಾಯತಾಕ್ಷಿ,** ತರಳಾಯತಾಕ್ಷಿ (ನಾ). = ತರಲಾಕ್ಷಿ ೨ : ಚಿಂತಾತರಳತ್ವಮಂ ತೋಱೆವುದಂತದಱಿಂ ತರಲಾ[ಪಾಠಾಂ. ಳಾ]ಯತಾಕ್ಷಿ ನಿರ್ಹೇತುಕಮಪ್ಪ ಖೇದಮಂ (ಚಂದ್ರಪು. ೩-೬೫) : ಲಾವಣ್ಯಕಾಂತಿಯಿಂ ದಿಕ್ತಟವ ಬೆಳಗುತ್ತ ನಿನ್ನ ನಡೆಮುಖವಿರಲು ತರಲಾಯತಾಕ್ಷಿ (ಧನ್ಯಾರೋ. ೦೦೪). **ತರಳಾಯತಾಕ್ಷಿ:** ಇಂದುಕರಸ್ಪುತ ಚಂದ್ರಕಾಂತಪುತ್ರಿಕೆಯೊಸರ್ವಂತೆ ಝಮ್ಮಗೆ ಬೆಮರ್ತಿರವಿಂ ತರಳಾಯತಾಕ್ಷಿಯಾ (ಶಾಂತಿಪು. ೮-೯೭). [ ಸಂ. (ತರಲ + ಆಯತ + ಅಕ್ಷಿ + –) ]

**ತರಲಿತ,** ತರಳಿತ (ನಾ). ಅಲ್ಲಾಡುವುದು ; ಚಲಿಸುವುದು ; ಚಂಚಲವಾದುದು: "ತರಲಿ[ಪಾಠಾಂ. ಳಿ]ತಂ ಪ್ರೇಂಖಿತಂ ಲುಳಿತಮಲ್ಲಾಡುವುದು" (ಮಂಗರಾ. ೦೩೪-೩೨). **ತರಳಿತ:** "ಪ್ರೇಂಖೋಳಿತಂ, ತರಳಿತಂ, ಪ್ರೇಂಖಿತಂ, ಲುಳಿತಂ – ಈ ೪ ಅಲ್ಲಾಡುವುದು". (ಹಲಾಯು. ೦೨೩-೭೧).

[ ಸಂ. ]

**ತರಲೆ₁,** ತರಳೆ₁ (ನಾ). ೧. ಕಾಟ ; ಹಿಂಸೆ ; ತಂಟೆ ; ಪೀಡೆ ; ಜಂಜಾಟ: ಈ ಒಣ ತರಲೆ ಏಕೆ ಕಟ್ಟಿಕೊಳ್ಳುತ್ತೀ ಅಪ್ಪ? (ಕಾಮಿಲಾಂ. ೮ ಹೋದ ಮರುದಿನವೇ ತಲೆತುಂಬ ತರಲೆ ತುಂಬಿಕೊಂಡು ಕೆಟ್ಟಮೋರೆ

ಮಾಡಿಕೊಂಡು ಹಿಂದಿರುಗುತ್ತಿದ್ದ (ಬಾಗಿನ. ೨೮) ; ಸಂಸಾರ ಅಂದ್ಮೇಲೆ ತರಲೆ ತಾಪತ್ರಯ ಇದ್ದೇ ಇರುತ್ತೆ (ಹೊಸಕ್ಷಿ. ೯೩). ೨. ಅಪ್ರಯೋಜಕವಾದುದು ; ನಾಡಾಡಿಯಾದುದು : ಅವನ ಟ್ಯಾಟಿಂಗು ಸಹ ಅಂಥ ತರಲೆಯಲ್ಲ (ಸ್ವಾಮಿಸ್ಮೃ. ೦೬೬) ; ಮನೆಯು ಕಡೆ ತರಲೆ ಹೊಲದ ಕಡೆ ವುರಲೆ (ಗಾದೆ). ೩. ಆಧಾರರಹಿತವಾದ ದೂರು; ಪಿಸುಣು ; ಚಾಡಿ : ಅರಸರ ಕಿವಿಗೆ ತರಲೆ ಹಾಳು, ಬಾಗಿಲ ಕಿವಿಗೆ ಒರಲೆ ಹಾಳು (ಗಾದೆ). ೪. ತರಲೆಮಾಡುವ ಸ್ವಭಾವದವನು ; ತಂಟೆಕೋರ : ಆ ತರಲೆಯ ಸಹವಾಸ ಮಾಡಬೇಡ (ರೂಢಿ). ತರಳೆ₁: ೪. "ಶುದ್ಧ ತರಳೆಗಳು" ಎಂದು ರಾಮಣ್ಣನವರು ಒಂದೇ ಮಾತಿನಲ್ಲಿ ಉತ್ತರ ಕೊಟ್ಟರು (ಕಳಹು. ೦೦೪).

[ ದೇ.॥ ತುಳು. ತರಳೆ ]

**ತರಲೆ₂, ತರಳೆ₂** (ನಾ). ಅಕ್ಕಿಯ ಗಂಜಿ; ಅಂಬಲಿ. ತರಳೆ₂ : "ಯವಾಗೂ . . . ತರಳಾ, ವಿಲೇಪಿಕಾ – ಈ ೫ ಗಂಜಿ" (ಹಲಾಯು. ೫೩-೦೬೫).

[ ಸಂ. ತರಲಾ ]

**ತರಲೆಅರ್ಜಿ, ತರಳೆಅರ್ಜಿ** (ನಾ). ತಂಟೆ, ತಕರಾರುಗಳಿಂದ ಕೂಡಿದ ಅರ್ಜಿ : ಒಂದೋ ಎರಡೋ ಮೂಕರ್ಜಿ ತರಲೆಅರ್ಜಿ ಬೋರಂಟಿ ಬಿಟ್ಟಕಾಯ್ತು (ಮುನಿಮೂ. ೦೦೫). ತರಳೆಅರ್ಜಿ : ಶ್ಯಾನುಭೋಗನೂ ಸಹ ರೈತರಿಗೆ ವಿರೋಧವಾಗಿ ಬೇಕಾದಂತೆ ತರಳೆಅರ್ಜಿಗಳನ್ನು ಬರೆಯತೊಡಗಿದ್ದನು (ಗರುಡಾ. ೦೦೩). 'ಮೂಗರ್ಜಿ' ಪರಾ.

[ ತರಲೆ₁ + ಅರ್ಜಿ₂ ]

**ತರಲೆಕಾರ** (ನಾ) ತರಲೆಯನ್ನುಂಟುಮಾಡುವವನು ; ತಂಟೆಕೋರ : "ದ್ರಾಘಕಃ, ದ್ರಾಘನಃ, ದ್ರಾಘಮಾಣಃ – ಈ ೩ ತರಲೆಕಾರನುಂ, ನಿಡಿಯನುಂ" (ಕಾಶಕ್ಕ. ೯೩). [ ತರಲೆ₁ + – ಕಾರ₁ (< ಕಾಜ) ]

**ತರಲೆತನ** (ನಾ). ಕರಲೆಮಾಡುವ ಸ್ವಭಾವ ; ಕಿಡಿಗೇಡಿತನ : ಹಳ್ಳಿಗಳು ಏಳಿಗೆಯಾಗಬೇಕಾದರೆ, ಇಂಥ ತಂದಿಟ್ಟು ತಮಾಷೆ ನೋಡುವ ತರಲೆತನ ತಪ್ಪಬೇಕು (ನಮ್ಮಳ್ಳಿ. ೪೪). [ ತರಲೆ₁ + – ತನ ]

**ತರಲೆವ್ಯವಹಾರ** (ನಾ). ತಂಟೆ, ತಕರಾರುಗಳಿಂದ ಕೂಡಿದ ಕಾರ್ಯಭಾರ,–ವಹಿವಾಟು : ಯಾವುದೋ ತರಲೆವ್ಯವಹಾರ, ನಾನು ಸಿಕ್ಕಿಕೊಂಡು ಒದ್ದಾಡಬೇಕಾಗಿದೆ (ರೂಪಕಿ. ೨೬೩). [ ತರಲೆ₁ + ವ್ಯವಹಾರ ]

**ತರಲೇಕ್ಷಣ** (ನಾ). ಚಂಚಲವಾದ ಕಣ್ಣು : ನಮ್ರುಶಿರೋಧರೆ ಸೀತೆ ಲೋಕಸಂತ್ರಾಸಿಯ ರೂಪು ಪಾದನಖದರ್ಪಣದೊಳ್ ಪಲವಾಗಿ ತೋಱೆ ಕಂಡಾ ಸತಿ ಬೆರ್ಚಿ ಮುಚ್ಚಿದಳಿರಟ್ಟಿರದಿಂ ತರಲೇಕ್ಷಣಂಗಳಂ (ಪಂಪರಾಮಾ. ೯-೦೦೨). [ ಸಂ. (ತರಲ + ಈಕ್ಷಣ) ]

**ತರವಂಗಿ** 'ತರುವಂಗಿ' ನೋ.

**ತರವರ** (ನಾ). ತೀಕ್ಷ್ಣತೆ; ತೀವ್ರತೆ (?): ಕಿರಿಯಣ್ಣನರ್ಥೋಪಾರ್ಜನೆಯಿಂ ಮನದೆರಕದಿನಾ ದಶಪುರಕೆ ತರವರನಾದ ಬೇಸಗೆಯೊಳು ಬಂದೊಂದು ಮಿರುವ ದೈವದ ಶಾಲೆಯೊಳು ಮಲಗಿರಲು (ಪ್ರಭಂಚ. ೩-೦೨೬).

[ ? ]

**ತರವರಿ** (ಕ್ರಿ). (ಯೋಗ್ಯತೆಯಲ್ಲಿ) ವ್ಯತ್ಯಾಸವನ್ನು ತಿಳಿ,–ತಾರತಮ್ಯವನ್ನು ತಿಳಿ : ತರವರಿತು ಇಹನಾತ ಶಾಸ್ತ್ರಿಗ ದುರುಳನಡೆಗೈನೆಂದು ವಹಿಸಿತಿ ಮುರುಕದಲಿ ನಿನಗಿತ್ತ ರಾಜ್ಯವ ಬಸವನೆನಲರಸು (ಬಿಜ್ಜಪು. ೭೦-೩೦); ರಾಜಕುಮಾರಕರ್ ಸಂಭ್ರಮಂ ಮಿಕ್ಕು ಪೊಕ್ಕು ತರವರಿದಿಕ್ಕಿದ ಪೊನ್ನಗದ್ದುಗೆಗಳೊಳುಕ್ಕಿವಂ ಮಿಗೆ ಕುಳ್ಳಿರ್ಪಾಗಳ್ (ದಮುಶ್ಮ. ೪-೬ ವ).

[ ತರ₃ + ಅರಿ₂ (< ಅಱಿ) ]

**ತರವಳಿ₁** (ನಾ). ತೆರ ; ಪ್ರಕಾರ ; ರೀತಿ: ಪರಿಪರಿಯ ವರ್ಣಾಶ್ರಮಂಗಳ ತರವಳಿಯುಂ ಕೇರಿಗಳ ಲಕ್ಷ್ಮೀಕರವನಭಿವರ್ಣಿಸುವಡಸದಳವಾಗಿ ಫಣಿಪತಿಗೆ (ಆಪಂಚಾ. ೦-೧೭-೬). [ ←ತಮಿ. ತರವಟು ]

**ತರವಳಿ₂** (ಗುಂ). ಕ್ಷುದ್ರವಾದ ; ಅಲ್ಪವಾದ: ಪರಮಾತ್ಮ ನೀನು ಪರತತ್ವವೆಂದು ಭಾವಿಸಿ ನಿನ್ನ ಬಯಸಿ ಮಿಕ್ಕ ತರವಳಿ ದೈವದಾಸೆಗೆ ಸಿಲುಕಿ ದಾರಿದಪ್ಪುವೆನೆಂತು (ಗೀತಗೋ. ೬೫). [ ? ]

**ತರವಾರ, ತಲವಾರ್, ತಳವಾರ₂** (ನಾ). ಕತ್ತಿ ; ಖಡ್ಗ : ಕಾಲಭೈರವನ ಹಣೆಗಣ್ಣಿನಂತೆ ಕಿಚ್ಚಿಡುವ ಪುಲಿಕೇಶಿಯ ತರವಾರದ ಧಾರೆಯಿಂದ ಪಲ್ಲವೇಂದ್ರನ ಕಚ್ಚಿದೆ ಬಾಡಿಹೋಯಿತು (ಕರಶ್ಮ. ೦೨). ತಲವಾರ್ : ಪೋಲಿ ಸಾಂಬಾ ತಲವಾರ್ ಪೆಟ್ಟು ತಿಂದು ಗೌಡರ ಕೇರಿ ತಾಲಿಂನಲ್ಲಿ ಸಾಯುತಾ ಬಿದ್ದಿದ್ದಾನೆ (ಕಲಿನ. ೨೬೩) ; 'ತಲವಾರ್' ಶಬ್ದಕ್ಕೆ ಒಂದು ವಿಶೇಷ ಅರ್ಥವಾಗುತ್ತದೆಂಬುದನ್ನು . . . ತಿಳಿಸಿರಿ (ಧಾರತಿ. ೦೫). ತಳವಾರ₂ : ತಿಗುಳರ ಪಡೆಯುಂ ಕೂಡೆ ಬೆಂಕೊಂಡ ಗಂಡಂ ತಳವಾರಲು ತಳ್ತ ಭೂಪಾಳರ ಪೆಡತಲೆಯಂ ಧೊಪ್ಪೆನಲು ಹೊಯ್ದ ಗಂಡಂ(ಎಕ. IV, ಸಾಗಮಂ. ೬೭-೦೦ : 1145).

[ ←ಹಿಂ. ಮರಾ. ತರವಾರ್, ತಲವಾರ್ / ಸಂ. ತರವಾರಿ]

**ತರವಾರಿ** (ನಾ). = ತರವಾರ : "ತರವಾರಿ ಮಂಡಲಾಗ್ರಂ . . . ಅಡಾಯುಧಮೆನಿಕ್ಕು" (ಮಂಗರಾ. ೮೮-೩೭) ; ತದ್ವಧೂದ್ಯಗುತ್ಪಳಕುಳಕುಟುವಮಳಿತಹೃದ×ದು ರವಿಮಂಡಳವೊ ತರವಾರಿ ಪೆರ್ಮ್ಮಾಭೂಪಾಳಕನ (ಸೌಇಇ. XI-ii, ೦೨೯-೦೭ : 1083) ; ಜಾನುದಘ್ನಮಾದುವು ತರವಾರಿಯಿಂದಿಱಿಯೆ ಲೋಹಿತವಾರಿಗಳಾಸವಾರಿಗಳ್ (ಪಂಪಾಮಾ. ೦೩-೬೦); ಕದನದೊಳಂದು ನಿನ್ನ ತರವಾರಿಯ ಬಾಯಿಗೆ ಮೆಯ್ಯನೊಡ್ಡಲಾಜಿದ ನಳಿದಿನ್ನುವಂತದನೆ ಜಾನಿಸಿ ಜಾನಿಸಿ (ಎಕ. II, ೨೪೦-೨೩ : 1176); ಚಾಪವಿದ್ಯೆಯಂ ಚಾರಣ ಚೂರಣಾದಿ ತರವಾರಿಯ ವಿದ್ಯೆಯನಾಗಮಂಗಳಂ . . . ಈತನಲ್ಲದಿಳೆಯೊಳ್ ಮಿಗೆ ಬಲ್ಲವರಾರ್ (ದಶಕು. ೦,೦-೯೬).

[ ಸಂ. ]

**ತರವಿಡಿ** 'ತರಂಬಿಡಿ' ನೋ.

**ತರವೀಸ, ತಾರವಿಸ** (ನಾ). ಒಂದು ಬಗೆಯ ನಾಣ್ಯ ಮತ್ತು ಅದರ ಬೆಲೆ : ನೂರಯಿಪ್ಪತ್ತು ವರಹ ತರವೀಸ ಉಳಿದುದೆ ನಂಮ ಅರಮನಿಗೆ ಸಾಕಲ್ಯವಾಗಿ (ಎಕ. VI, ಕೊಪ್ಪ. ೨೦-೬ : 1591 ?). ತಾರವಿಸ : ಮುವತ್ತು ವರಹಂನು ತಾರವಿಸ ವುಳಿಯದೆ ಸಲ್ಲಿಸಿಕೊಂಡೆವಾಗಿ (ಮೈಆರಿ. ೦೯೩೦, ೦೦-೦೯ : 1585). [ ←ಪಾರ. ತರ್ವೀಜ್ ]

**ತರಸ₁** (ಗು). ೧. ಚಲಿಸುವ; ಸಂಚರಿಸುವ : "ತ್ರಾಸ – ತರಸ" (ಕಮುದ. ೨೩೪ ಪ್ರಯೋ). (ನಾ). ೨. ಭಯ ; ಹೆದರಿಕೆ ; ಅಂಜಿಕೆ : "ತರಸಂ ತ್ರಾಸದೊಳಂ" (ಕರ್ಣಾನಿ. ೯೨) ; "ತರಸ – ತ್ರಾಸ = ಭಯ, ಆಯಾಸ" (ಕದ್ರಕೋ. ೦೭). [ <ಸಂ. ತ್ರಾಸ ]

**ತರಸ₂** (ನಾ). ಮಾಂಸ ; ಬಾಡು ; ಅಡಗು : "ಪಲಲಂ, ಜಾಂಗಲಂ . . . ತರಸಂ – ಈ ೮ ಮಾಂಸ" (ಹಲಾಯು. ೦೦೪-೯): ಹಿಂಸಾಜನ್ಯಂ ತರಸಂ ಅದಂ ತಿನ್ನುದಾರ್ಗಮುಚಿನಲ್ತು (ನೀತಿಮಂ. II, ೨೦೪). [ ಸಂ. ]

**ತರಸು** (ನಾ). ಸಾಗುವಳಿಯಿಲ್ಲದುದಂ ; ಜಂಬರು. 'ತರಸಂಭೂಮಿ' ಪರಾ. [ <ತರಕು ]

**ತರಸುಭೂಮಿ** (ನಾ). ಸಾಗುವಳಿಯಿಲ್ಲದ ಭೂಮಿ ; ಪಾಳುಬಿದ್ದ ಭೂಮಿ ; ಬಂಜರು : (ಕ).

[ ತರಸು + ಭೂಮಿ ]

**ತರಸ್ವಿ** (ಗುಂ). ೧. ವೇಗವಾದ; ಶೀಘ್ರವಾದ. (ನಾ). ೨. ವೇಗಶಾಲಿ; ಚುರುಕಾದವನು : "ತರಸ್ವಿನ್, ತ್ವರಿತಃ, ವೇಗಿನ್, ಪ್ರಜವೀ, ಜವನಃ, ಜವಃ– ೬ ಜಾಗ್ರತೆಯೂ, ತ್ವರೆಯೂ, ವೇಗವೂ ಉಳ್ಳವನು" (ಸಿದ್ಧಾಂತಿ. ೨೨೨). ೩. ಕೆಚ್ಚುಳ್ಳವನು; ಧೈರ್ಯಶಾಲಿ; ಶೂರ; ಧೀರ. ೪. ಚಾರ; ದೂತ ; ಹರಿಕಾರ. ೫. ಗರುಡ. [ ಸಂ. ತರಸ್ವಿನ್ ]

**ತವರ್ನಾಡು** (ನಾ). ತಾಯಿನಾಡು ; ಆಶ್ರಯ ; ನೆಲೆ : ನಿನ್ನ ಮೆಯ್ ಏರಿಯುಸಿರ್ ಬೀಡು, ಪೆರ್ಬಗೆಯ ಪೆರ್ಮೆಗೆ ತವರ್ನಾಡು (ಶ್ರೀರಾಮಾ. ೭೦೭-೨೩೩). [ ತವರ್ (<ತಮರ್) + ನಾಡು ]

**ತವರ್ಮನೆ** 'ತವುರ್ಮನೆ' ನೋ.

**ತವಲಾಯ** 'ತವಲಾಯಿ' ನೋ.

**ತವಲಾಯಿ, ತವಲಾಯ** (ನಾ). ೧. ಕರ್ಪೂರದ ಹಳಕು,–ಬಿಲ್ಲೆ : "ತವಲಾಯಿಯೆಂದು ಕಪ್ಪುರವಳಿಕು" (ಕಶಸಾ. ೩೨-೬೭೨): "ತವಲಾಯಿಯೆ ಕಪ್ಪುರವಳಿಕು" (ಕವಿಕಂ. ೨೪೮). ೨. ಕರ್ಪೂರವನ್ನು ಹಾಕಿ ಇರಿಸುವ ಕರಂಡ,–ಭರಣಿ : ವರ ಜವಾಜಿಯ ಶೃಂಗಗಳ ಕರ್ಪುರದ ತವಲಾಯಿಗಳ ಸಾದಿನ ಭರಣಿಗಳ ಮೃಗನಾಭಿಗಳನಡಕಿದರು ಬಂಡಿಯುಲಿ (ಕುವ್ಯಾ.ಆ. ೧೨-೧೭): ತೆಗೆಸಿದನು ಗಜದಂತಮಯ ಪೆಟ್ಟಿಗೆಗಳನು ಕರ್ಪುರದ ತವಲಾಯಿಗಳ ಹವಳದ ಮಂಚವನು ಮಣಿಖಚಿತ ರಚನೆಗಳ (ಕುವ್ಯಾ.ಸ. ೫-೪೫) ; ಉಗಿದರೋ ಕತ್ತುರಿಯ ತವಲಾಯಿಗಳ ಮುಚ್ಚಳವೆನೆ ಕವಾಟವ ತೆಗೆಯೆ ಕವಿದರು ದಿವ್ಯಪರಿಮಳಸಾರ ಪೂರವಿಸೆ (ಕುವ್ಯಾ.ಆ. ೭-೮೯): ಕರ್ಪುರದ ತವಲಾಯಿಗಳನೊಡೆದೊಡೆದು ಭಟರಿಗೆ ಹಾಯಿಕಿದನಂಜುಳಿಗಳಲಿ ಮೊಗೆ ಮೊಗೆದು ಬೇಸಱದೆ (ಕುವ್ಯಾ.ಕ. ೮-೩೩) : ತಾಯೆನುತ ಘನಸಾರದುರು ತವಲಾಯಿಗಳ ನೂಕಿದನು ಮುದದಲಿ ಬಾಯಿತಂಬುಲವಿತ್ತು ತಮ್ಮನ ಮತ್ತೆ ತಕ್ಕೈಸಿ (ಕುವ್ಯಾ.ಕ. ೧೮-೯) ; ರಘುಗರ್ಘುಗಿವ ಹೊಂಬೆಸದ ರಂಜಣಿಗೆಗಳ ನವಕರ್ಪುರದ ತವಲಾಯಿಗಳ ತಿಂಥಿಣಿ ಮೆಱೆದುದಲ್ಲಿಯ ಸುತ್ತುವಳಯದಲಿ (ತೊರರಾ. ೧-೦೩-೯). ೩. ವೀಳೆಯ ; ತಾಂಬೂಲ : (೬). **ತವಲಾಯ :** ೩. "ತವಲಾಯಮೆನಲ್ ವೀಳೆಯ" (ಛಾರನಿ. ೨೩). [ ? ]

**ತವಸ** 'ತಪಸ' ನೋ.

**ತವಸಿ, ತಪಸಿ, ತಬಸಿ, ತವಸೆ** (ನಾ). ೧. ತಪಸ್ಸನ್ನು ಮಾಡುವವನು; ತಪಸ್ವಿ; ಋಷಿ: "ತವಸಿ ರಿಸಿಯುಮೆನೆ ಋಷಿಯುಕ್ಕುಂ" (ಕವಿಕಂ. ೧೮೭) ; ಮುತ್ತ ಕುರುಡ ತವಸಿಗಳ ಕೈಯಂ ಪಿಡಿದುಯ್ದುವರ್ತ ಗುಹೆಗಳಂ ಪುಗಿವ ಪೂಜಿಮಡಿವ ಚಪಳ ಕಪಿಗಳುಮಂ (ಪಂಪಭಾ. ೧-೧೧೫ ವ) : ಈ ಜವ್ವನಿಗ ತವಸಿ ತೊಟ್ಟಿರ್ಪ ಕರ್ಣಾವತಂಸಂ ಪೊಸತೀ ಲೋಕಕ್ಕೆ (ಕಾದಂಪೂ. ೭೭೦) ; ವತ್ವ ಲೋಪಕ್ಕೆ—ಈಶ್ವರ–ಈಸರ . . . ತಪಸ್ವಿ–ತಪಸಿ, ತವಸಿ (ಶಮುದ. ೨೮೦ ಪ್ರಯೋ) : ವಟುಜನದ ನಡುವೆ ಶೋಭಿಸಿದಂ ವಿಮಲಜ್ಞಾನಿವೆಸರ ತವಸಿ (ಜಯಕಾ. ೨-೨೫); ಆಯತಿ ಹೆಣ್ಣುಗಳೇನು ಗಹನವೆಂಬ ಬಾಯಿಬಡಿಕ ತವಸಿಗಳ ತಾಯೆ ನೀ ಕೆಡೆಮೆಟ್ಟು (ಮೋಹತ. ೨೩-೪೭). ೨. ಒಂದು ಬಗೆಯ ಮರ ; ಇಂಗುಳದ ಮರ ; ತಾಪಸತರು : "ಪ್ರಕೀರ್ಯಃ, ಪೂತಿಕರಜಃ, ಪೂತಿಕಃ, ಕಲಿಮಾರಕಃ ಈ–೪ ತವಸಿಯ ಮರ" (ನಾಚಿರಾ. ೧೧೭) : "ಚಿರಬಿಲ್ವ–ತವಸಿ, ಹೊಂಗೆ" (ಓಷಧಿ. ೫೨) ; ತವಸಿಯ ಬೇರ ಕಷಾಯಾಂಬುವಿನೊಳಮುದ ಪಲವು ಸೂಟಿಯೊಳಂ ಭಾವಿಸಿದೋಮುದನರೆದು (ಲೋಕೋಪ. ೯-೧೨೩) : ತವಸಿಯ ತೊಪಲೊಳಗೆ ಪುನರ್ನವಿಯುಮನಾ ಕಟಿಸ್ತಿಗಿರಿಯುಮಂ ಲೊಕ್ಕಿಯುಮಂ ಸವನಾಗಿ ಕೂಡಿಕೊಳ್ವುದು ಲವಣ ಸಮೇತಂ (ಅಶ್ವಶಾ. ೭-೩೨). **ತಪಸಿ :** ೧. ನ ಕರ ಮುಂ ಸ್ಥಾನದ ತಪಸಿಯರ್ಕಳುಂ ಗಾಮುಣ್ಡುಗಳುಂ (ಸೌಇಇ. IX-I, ೧೯-೫; ೧೧ನೆಯ ಶತ) ; ಎರಡು ಗೀಜಗವಕ್ಕಿಗಳಂ ವಿಗುರ್ವಿಸೆಯಾ ತಪಸಿಯ ಗಡ್ಡದೊಳವು ಗೂಡನಿಟ್ಟಿರ್ಪುದುಂ (ಧರ್ಮಾಮೃ. ೨-೨೩೦); ಭಾಪುರೇ ಜಗದೀಶ ತಪಸಿಯ ರೂಪದಲಿ ತಲೆಗಡಿದೆ (ಕಾಶಿರಾ. ೪೩-೪೭).೨. ತಾಪತರುಃ–ತಪಸಿ, ಇಂಗುಳ" (ಓಷಧಿ. ೭೭) : "ಪ್ರಕೀರ್ಯಃ, ಪೂತಿಕರಜಃ, ಪೂತಿಕಃ, ಕಲಿಕಾರಕಃ–೪ ತಪಸೀಗಿಡದ ಹೆಸರು. ನೌಲಿಗಿಡವೆಂದು ಕೆಲವರನ್ನುವರು" (ಸಿದ್ಧಾಂತಿ. ೧೧೪) : ತಾಪಿಸುವ ತಪಸೆನಗೆಂದುಕೆಡುವುದು ತಪಸಿಯೇ ಹೇಳಾ (ಬಸಪು. ೪೫-೩೭): ತದಿಕು ತಂಡಸು ತಡಸು ತಪಸಿ ಕುರಂಜಿ ಖರ್ಜೂರ (ತೊರರಾ. ೩-೧-೨೭) ; ತಪಸಿಬೇರಿನ ಪಟ್ಟೆ . . . [illegible] ಕಟ್ಟಿಕೊಳ್ಳಲು ಛಳಿಜ್ವರ ನಿಲ್ಲುವುದು (ಸಕಪ್ರ. ೬೬) ; [illegible] ತಂಡಸಿ ತಪಸಿ (ಸಿದ್ಧಕಾ. ೬-೧೭) : ಮರಗಳು–ಹೆಸವ, ಹೆಬ್ಬಲಸು . . . ಕೂಲಿ, ತಡಸಲು, ತಪಸಿ, ನಂದಿ (ನಮ್ಮನು. ೨೬೭). **ತಬಸಿ :** ೨. ತಬಸಿಯ ಒಳನಾರು ಸೇರು ೧ (ಸಕಪ್ರ. ೧೩೫). **ತವಸೆ :** ೨. "ಪೂತಿಕರಜಃ–ತವಸೆ, ಹೊಂಗೆ" (ಓಷಧಿ. ೦೦೨) : ಚಿತ್ರಕ ಸುಗ್ಗಿ ತವಸೆಯಾರಗ್ವಧ ಕತ್ತರಿ ಬೃಹ್ಮದಂಡೆ ಬಿಲ್ವಂ (ಜಮುದ. ೮-೧೭). 'ತಪಸ' ಪರಾ. [<ಪ್ರಾ. ತವಸಿ./ಸಂ. ತಪಸ್ವಿನ್]

**ತವಸಿಗ, ತಪಸಿಗ** (ನಾ). ತಪಸ್ವಿ ; ಋಷಿ : ಆರಾಶ್ರಮ ? ತವಸಿಗರಾರೇ ಬಗೆಯುವರಿವರು? (ಅಹಲ್ಯ. ೬-೪). **ತಪಸಿಗ :** ಅತ್ತ ಮುನ್ನವ [illegible] ತಪಸಿಗರಿ[ಜಾತಾಂ. ೯]ತ್ತ ಕಾಂತಿಯ [illegible] (ಬಸಪು. ೪೩-೨೮). [ತವಸು + – ಇಗ ]

**ತವಸಿಣಿ** (ನಾ). ತಪಸ್ಸನ್ನಾಚರಿಸುವವಳು ; ತಪಸ್ವಿನಿ : [illegible] ಬಜಿತ ಮಯ್ಯ ತವಸಿಣಿ (ರಾಮಾಶ್ವ. ೧೨೦-೨೭). [<ಸಂ. ತಪಸ್ವಿನೀ ]

**ತವಸು, ತಪಸು** (ನಾ). ತಪಸ್ಸು : ದೆಟ್ಟದ ಮೇಲೆ ಕೈಯೆತ್ತಿ ಪಲರುಂ ಜತಿಗಳ್ ತವಸಿಂಗೊಳಗಾಗಿ (ಕಬ್ಬಿಗಾ. ೨೨೬) : ಇನಿಯಳಂ ಬಿಟ್ಟು ತವಸ ನಾರ್ ಗೆಯ್ದುರೋ (ಸೌನಂದ. ೭-೧೩). **ತಪಸು:** ತಾಪಿಸುವ ತಪಸೆನಗೆಂದು ಕೆಡುವುದು ತಪಸಿಯೆ ಹೇಳಾ (ಬಸಪು. ೪೫-೩೭); ತಪಸಿಗೆ [illegible] ಮಾಪಾಜ ಸಾಗಿದ (ಭರಜ. ೪೩-೧೫). [<ಸಂ. ತಪಸ್ ]

**ತವಸೆ** 'ತವಸಿ' ನೋ.

**ತವಾಯಿ** (ನಾ). ೧. ದಂಡ ; ತಪ್ಪು : (೬). ೨. (ವ್ಯಾಪಾರದಲ್ಲಿ) ನಷ್ಟ : (೬). ೩. ಆಪತ್ತು ; ಸಂಕಟ : ನಿನ್ನ ತಮ್ಮನಿಗೆ ಒಂದು ತವಾಯಿ ಬಂದಿತ್ತು. ಅವನ ಸಾಲವನ್ನು ತೀರಿಸುವುದಕ್ಕಾಗಿ ನಾನು ಹೊಣೆಯಾದೆ (ಸುಮಜ. ೧೨೪). [ ←ಪಾರ. ತವಾಈ ; ಮರಾ. ತವಈ, ತವಾಈ ]

**ತವಿ** 'ತವೆ$_1$' ನೋ.

**ತವಿಗೋಲ್** (ನಾ). ನಾಶಕರವಾದ ಬಾಣ (?) : ಪಯದಮನಕ್ಕಮೇ ಱಿದನ ಬಿನ್ನಣಕಂ ದೊರೆಯಾಗಿಯುಂ ನೆಗಟ್ತಿಯ ಪಣಿದಕ್ಕೆ ಮಿಕ್ಕಿಸೆವ ತಕ್ಕಿನ ಬೀರರನಟ್ಟಿ ಕೊಲ್ವಲುರ್ಕಿಯ ತವಿಗೋಲ[ಲು]ಮಿಲ್ಲದಿರೆಯುಂ ವಿಭುಗಟ್ಟಿಯ ಸೆಂಡನಾಡಲಾನೆಯ ಪರಿ ನೋಡಲೆಂದೊಲೆದು ಮಾಡಿದ ವಾಪಳಿಗಳ್ ಮನೋಹರಂ (ಶಾಂತಿಪು. ೯-೧೪೪).

[ <ತವಿಲ್$_2$ ? + ಕೋಲ್$_1$ ]

**ತವಿಯಿಸು** (ಕ್ರಿ). ಕಡಮೆ ಮಾಡು ; ಕುಂದಿಸು : ಒಡೆಯರಿಲ್ಲೆಂಬ ಪೌರರ ಮನವಿಡಿದ ತವುವ ತವಿಯಿಸುತ ನಡೆದನು (ಪ್ರಭಂಜ. [illegible]) 'ತವಿಸು' ಪರಾ. [ ತವಿ (<ತವೆ$_1$) + – ಇಸು$_3$ ]

**ತವಿಲ್$_1$** (ಕ್ರಿ). ಕುಂದು ; ಕುಗ್ಗು ; ನಷ್ಟವಾಗು : ಕನತ್ಕನಕ ಚಾಮರಂ ಧವಳ ಚಾಮರಂ ಕೆಯ್ಗಳೊಳ್ . . . ತನ್ನ ಬಿನ್ನನಿರ್ದ ಮೊಗದಿಂ ತವಿಲ್ದಿರೆ ವಿಲಾಸಮುಂ ಮುಂದೆ ಕಂಡನಲ್ಲಿ ಕಮಳಾಕ್ಷಿಯುಂ [illegible] ಲಕ್ಷ್ಮಿಯುಂ (ಗದಾಯು. ೯-೩). [ <ತವು$_1$ ]

**ತವಿಲ್$_2$, ತವಿಲು** (ನಾ). ೧. ಕುಂದು : ಕೊರತೆ ; ಕ್ಷಯ: ಸಿರಿಯ ತವಿಲಿಂ ಮಕ್ಕಳ್ ಕೈಮಿಕ್ಕು ಪೇಟಿದ್ದದು ಗೆಯ್ಯದಿರ್ಪರವಂ[ವಿಂ] . . . ಚಿಂತಿಸಿ ದುಃಖದೊಳ್ ಪಿರಿದುಮಾವಲಿಂ ಕಣ್ಗೆಟ್ಟಂ (ಸುಕುಮಾ. ೨-೯): ನೇತ್ರ ಜ್ಯೋತ್ಸ್ನೆಯುಂ ರತ್ನಮಂಡನಬಾಲಾತಪಮುಂ ತಮಕ್ಕೆ ತವಿಲಂ ತರ್ಪನ್ನ ಮೆಯ್ಚಿರ್ಪಗಳಂ . . . ಕಣ್ಣೆಮೆಯಿಕ್ಕದೀಕ್ಷಿಸಿದನಾ ಸ್ತ್ರೀರತ್ನಮಂ ಲಕ್ಷ್ಮ [illegible] (ಪಂಪರಾಮಾ. ೮-೬) : ಮೊದಲೊಳ್ ಲಾವಣ್ಯಸರ್ವಸ್ವದ ತವಿಲನಾಂ ನೋಡದಾ ಕನ್ನೆಯುಂ ಮಾಡಿದಂ . . . ಪದ್ಮಸದ್ಮಂ (ಚಂದ್ರಪ್ರ. ೫-೯೭) ಅನೇಕ ನವೀನ ರತ್ನಮಯದರ್ಪಣ ಕನಕಕಳಶ ವಿಚಿತ್ರಪತ್ರ ಪರಿಶೋಭಿ

ವಾಗಿ ಕವಿಗಳ ... ವಿಶ್ವಾಸ ... ಪವಿತ್ರ ... (ಗಿರಿಕ. ೪-೧೫೭ ವ). ೨. ಕೊನೆ ; ಅವಸಾನ; ನಾಶ : ಕವಿವ ನೆಳಲೊಳ ಗಾವನಿರ್ದನಾತಂಗೆ ತಾಂ ತವಿಲೆಡಱು ಬಡತನ ನಿರೋಧವಪಕೀರ್ತಿ ಪರಿಭವಭಯಂ ಹಱಿವುದು(ಹಚಕಾ. ೭-೧೦); ಕಾಯಲಿಟ್ಟೆಡೆಯೊಳ್ ಪಾಲಿರ (ಡೆ) ನೀರ ತಪ್ಪ ತವಿಲುಂ ಸಂಶುದ್ಧ ಸುಕ್ಷೇತ್ರಮುಪ್ಪೆಡೆಯೊಳ್ ಬಿತ್ತಿದ ಬೀಜದೊಂದು ತವಿಲುಂ . . . ಪೇಟ್ ತಪ್ಪುವೇ ಜೀವನೇ (ಜೀವಸಂ. ೨೨೨-೩೪) : ನವರಸಸುಖದೊಳಗೋಲಾಡಿಸುವಳ್ ತವಿಲಱಿಯದ ಕೂಟ ಮನೊಸೆದೀವಳ್ (ಉದ್ಭರ. ೧೫೭-೧೫) ; ನೆಲ್ಲಿ ಬೆಳುಹೂಲಿಗಳ ಬೇರಿಲ್ಲಣ ಮುಳುಗೊಗ್ಗಿಯುಂಬನಿತ್ತಱ ಪುಡಿಯುಂ ಚೆಲ್ಲನೆ ಮೂಗಿನೊಳೂಡಿದೊಡೆಲ್ಲಾ ಪಾವಿನ ವಿಷಕ್ಕೆ ತವಿಲದೆ ಸಾಲ್ಗುಂ (ಖಮದ. ೭-೫೩). ೩. ಖರ್ಚು ; ವ್ಯಯ: ನವಂಗಾವಗಂ ತವಿಲನೆಯ್ದ ... (... ೧೧-೯೨). ೪. ಬಡತನ; ದಾರಿದ್ರ್ಯ; ದೈನ್ಯ: "ಎಡಱೆಂದುಂ ತವಿಲೆಂದುಂ ದಾರಿದ್ರ್ಯಂ" (ಕಶಸಾ. ೭೧-೭೧೨) : "ಎಡಱೆನುತುಂ ತವಿಲೆನಲ್ಕೆ ದಾರಿದ್ರ್ಯಂ" (ಕವಿಕಂ. ೨೪೨) ; ಅವನ ಸತ್ಕರಿಪ ಸೋಂಕಿನ ದುಃಖಂ ತವಿಲಸುರ್ಬ್ಬಯಮುಮುತ್ಕಟ ಸುತ್ತ್ರಂ ಸವಿಯುಕಂ ಜಗಕೆ ಹರ್ಷದ ... ಕವಿಯಿ ... (ಸಂಸಪ. ೧೭-೧). ೫. ತೊಂದರೆ ; ವಿಪತ್ತು : (+). ೬. ಸಂಕೋಚ: 'ತವಿಲ್ತೊಡಱ್' ಪರಾ. ೭. "ಆಲಸ್ಯ; ಬೇಸರಿಕೆ" (ಪ್ರಭಣ್ಣ). ೮. (?): ಪೊಣ್ಮುವ ರೋಮಾಂಚನ ಸಾಲಿನೆತ್ತುವ ತವಿಲ್ಗ[ಪಾಠಾಂ. ಲ್ಗ್]ರ್ದ ... ಪವ್ಯೇಳಿ ... ಪಿಡಿದ ... ನೆರೆದರ್ ... ಕಾದ ಲರ್ (ಅನಂಪು. ೮-೫೦) ; (ಕಾವ್ಯಸಾ. ೭೫೯ ನೋ). ತವಿಲು : ೫. ಲೋಕದ ಅಸುಖ ... ತವಿಲು ಸಂತಾಪ ಆಧಿವ್ಯಾಧಿಗಳನ್ನು ತಗ್ಗಿಸಲು ನಿರ್ವಂಚನೆಯಿಂದ ಕಷ್ಟಪಡುತ್ತಿರುವ ಸಾತ್ತ್ವಿಕ ಸಾಧುಸಿ (ಸಂಸಶ. ೧೧೭).

ತವಿಲಾಗು = ೧. ತಗ್ಗು ; ಕೊರತೆಯಾಗು ; ಕಡಮೆಯಾಗು : ಕುಂದದ ಚಂದ್ರಲೇಖೆ ನಸುಗಂದದೆ ರಂಜಿಪ ಪುಷ್ಪಮಾಲೆ ಕುಂದೊಂದದ ಸೋಮಂಡಾವೆ ತವಿಲಾಗದ ಕೆಗೆಯನೆಮಾಟ . . . ಯನೇಕ ನಾನಾ ದೆಸೆಗುಂ ಮೃದುಬಂಧುರ ಗಂಧಶಾಲಿಗಳ್ (ದಶಕು. ೧-೨೪) : ಕ್ಷಾಮ ಮದುರ್ಜುರ್ ಧಾನ್ಯತೃಣಪತ್ರಜಲಂ ತವಿಲಾಗಲ್ (ದಶಕು. ೧೨-೬೯). ೨. ನಾಶವಾಗು; ಸಾಯು; ಅಳಿದುಹೋಗು: ನಾನಾಸೆಯಿಂದಂ ತವಿಲಾದಂ ಕೋಪದಿಂದಳ್ಕಿದಂ (ರತ್ನಾಕ. ೨೪) ; ಎತ್ತ ಲಯವಾದ ಮದೀಶ್ವರ ಎತ್ತಣ ಕ್ರಮಕ್ಕೊದವಿದ ಎತ್ತ ಸಾರ್ದ ಕಳಿದೆತ್ತಲಣಂ ತವಿಲಾದ ಮನ್ಮಥಾ (ಗಿರಿಕ. ೮-೭೪); ಎಲೆ ತಂದೆಗಳಿರ ನೀಮಿಾತನೊಳ್ ತಾಗಿ ತವಿಲಾಗಲ್ವೇಡಿಂ ಬೇಡಿಕೊಂಡಂ (ಚಾಂಶೀಕ್ಕ. ೫-೧೭೭ ವ) : ಕವಿಗಳಿಂ ತನ್ನ ಕೃತಿಯಂ ನಾಡೆ ಶಿರ್ದಿಸಿದೊಡವನಿಯೊಳ್ ಚಂದ್ರಾರ್ಕರುಳ್ಳನ್ನೆವರೆಗಮದು ತವಿಲಾಗದು (ಅರಾದ. ೧-೪೭). ೩. ಖರ್ಚಾಗು; ವ್ಯಯವಾಗು : ಆ ತವನಿಧಿಯೂ ತವಿಲಾಗಿ ಹೋಗಿದ್ದಿತು (ಶರಚ. ೫೪).

[ ತವು$_2$ + – ಇಲ್$_3$./ತಮಿ. ತವಲ್ ]

ತವಿಲಿಲಿ (ನಾ). ನಾಶರಹಿತವಾದುದು : ಭವಿಸೂತಕಾದಿ ಕರ್ಮವನೆಸಗುವ ವನಂತೆ ಶಿವಭಕ್ತನಂ ಕಂಡನಾದೊಡವನ ತವಿಲಿಲಿ[ಪಾಠಾ. ಲಿತಿ, ಲಿಲ]ಯ ನರಕಾಗ್ನಿ ಭವನದೊಳಗೋರಂತೆ ನವೆವನೆಂದೊರೆದ ಸೌರಾದಿಯಿಂದಂ (ಸಾನಂದ. ೩-೮೮). [ ತವಿಲ್$_2$ + – ಇಲಿ$_3$ ]

ತವಿಲು 'ತವಿಲ್$_2$' ನೋ.

ತವಿಲ್ತೊಡಱ್ (ಕ್ರಿ). ಸಂಕೋಚಪಡು ; ಹಿಂಜರಿ ; ಹೈನ್ಯಪಡು ; ... : ಕಾಂತೆಯರ್ ತಡಿಗೇರ್ದನಂತ ಭೂಷಾಂಬರಗಳಂ ತಾಳ್ದು ಭಕ್ತಿಯಿಂದಂ ತವಿಲ್ತೊಡಱದುವಾಕಾಂತನ . . . ಸಂತರ್ಪಣಂಗೈದು (ನಂದಿಮಾ. ೬-೩೫): ಎಲೆ ಮಗನೆ ನಿನ್ನ ಪ್ರಾರ್ಥವುಂ ತವಿಲ್ತೊಡಱದುಸಿರಾಲಿಸುವೆನೆಂದು ಜಗ ದಂತರಾತ್ಮಿಕೆ ನುಡಿದಳು (ನಂದಿಮಾ. ೯-೩೦). [ತವಿಲ್$_2$ + ತೊಡಱ್$_1$]

ತವಿಲ್ಪಗಲ್ (ನಾ). ಇಳಿಹೊತ್ತು; ಸಂಜೆ: ಪ್ರಿಯಂ ಮಡಿದುದು ಪ್ರಿಯನಾಸ್ತ್ಮ ನಿಯುಂ ತೊಟ್ಟುಱವಾಡಿ ಕೀಟ್ಟುಡಿಸಿದಂ ತಾನೆಂದು ಕಾಯ್ದಂತೆ ಕೆಂಪಿನ ಸೊಂಪು ತಳೆದಂ ತವಿಲ್ಪಗಲೊಳಂ ವಿಶ್ವಂಭರಾವಲ್ಲಭಂ (ಅನಂಪು. ೭-೫೭).

[ ತವಿಲ್$_2$ + ಪಗಲ್ ]

ತವಿಸು$_1$(ಕ್ರಿ).೧.ನಾಶಮಾಡು; ಕೊಲ್ಲು: ಅಱದಱಿಪಿ ಬಱಯನುಱಯದೆ ಪಱವರುಮಂ ತವಿಸಿ ಕಱಯದುಱವಳನಾದಂ ಪಱಕೆಯ್ದು ತೊಟ್ಟನುಱ ದಂತುಱದ ಮಹಾಪುರುಷರಱಯದುಱದರೆ ಸಿರಿಯುಂ (ಕವಿರಾ. ೩-೧೭೫); ಎನ್ನೊಡಲನಾಂ ತವಿಪೆಂ ರಣರಂಗಭೂಮಿಯೊಳ್ (ಪಂಪಭಾ. ೯-೭೦) : ಇದಿರಾನ್ನರಂ ತವಿಸಿ × × × (ಎಇ. XVIII, ೩೪-೧೪ ; 1082); ತವಿಸಿದಂ ದಿವಿಜಾರಿ ವಿರೋಧಿಸೈನ್ಯಮಂ (ಜಗವಿ. ೭-೮೪) ; ಕಪ್ಪೆಗಳೊಱಲೆ ಬೋಟಿ ಗಱಲುಗಳೆಂಬ ಹೊಳೆವಳಿಯು ಮಿನ್ನಳಂ ತವಿಸುತಿಪ ಬೇಡರಂ ನೋಡಿದಂ ಭೂಪಾಲನು (ಪಡಕಾ. ೫-೬೬) ; ಅದ್ವೈತರನಪಹರಿಸಿ ತವಿಸಿ ಜಾರ್ವಾಕರ ನವನಿಯೊಳು ಶಿವನ ಭಕ್ತಿಯ ತಾಂ ಪ್ರತಿಷ್ಠಿಸಿ (ಬಸಪು. ೫೩-೧೦) ; ಉರಗಬಾಣವನಿವರು ಕಱದರು ಗರುಡಶರದಲಿ ಪಾರ್ಥ ತವಿಸಿದನು (ಕುವ್ಯಾಕ. ೯-೪೪);ಮುಪ್ಪಿಸುವೆವವನ ವೀರವನೆನುತೆ ಕವಿಸಿದರ್ ತವಿಸಿದರ್ ಸುರರದಟನು (ಜಬಪು.೪೩-೪೨); ಸಿಂಹಳಂ ...ಪೊಕ್ಕನಳ್ಕಿ ಕಡಲಿಂ ತೊಡದಿರ್ ತವಿಪಂಬಂ[ಪಾಠಾಂ.ಬಿಂ] (ರಾಜಶೇ. ೬-೧೧೧) ; ನೀನೇ ಜಗವುಂ ತವಿಪ್ಪೆ ಯೌವನಂ ಪಯೋನಿಧಿಯಾಗಿಂಟುಪ್ಪೋಲ್(ವಿಷ್ಣುಪು.೫-೨-೧೭೮): ತವಿಪಂ ಪಗೆಯಂ ಕೋಲಿಂ (ಸೌನಂದ. ೨-೨೭). ೨. ಪರಿಹರಿಸು ; ನಿವಾರಿಸು : ದಿವಿಜನೋ ಫಣಿನಾಯಕನೋ ಮನೋಭವನಿವಂ ಕರಮೊಪ್ಪಿದನೆಂಬುದಂ ಕವಿಗಳಿಟ್ಟ ವಿಶಂಕೆಯ ಪಾಟಿಯುಂ ತವಿಸಿ ನಿಲ್ಕೆ ಮನೋಹರ ಕಾವ್ಯದೊಳ್ (ಕವಿರಾ.೧ ೧೪೦) . ಉತ್ಪಲಪತ್ರದೊಳೊಲ್ದು ಬೀಸಿಯುತ್ಪುಲ್ಲಶರಾಗ್ನಿಯಂ ತವಿಸುವುಜ್ಜುಗಮಂ ತಳೆದಂ ಮನಃಪ್ರಿಯಂ (ದಶಕು. ೬-೧೦೭) ; ಭವ ಭವಾರ್ಜಿತ ದುರಿತಕೋಟಿಯ ತವಿಸುವಗ್ಗದ ನಾಮ (ತೊರರಾ. ೧-೧-೧೪); ಅಲ್ಲಿ ನಿಜಸಖಿಯರುಱ್ಲೆಯ ಚಿತ್ತದಾಸಱಂ ಮೆಲ್ಲಮೆಲ್ಲನೆ ತವಿಸಲೆಂದುಪ ಚರಿಸಲು (ಜೈಮಿಭಾ. ೩೦-೩೭) ; ವರ ಪುಣ್ಯಕಥೆವೇಳ್ದು ನಮ್ಮ ಕಿವಿ ಯಾಸಱಂ ತವಿಸೆಂದರು (ನಂದಿಮಾ. ೨-೩೭) : ಬನದ ತಪಸ್ವಿಗಳ್ಗುಪಹತಿ ಗೆಯ್ವುದಿದಂ ತವಿಪುದೆನಗೆ ಕರ್ತವ್ಯಮಕ್ಕುಂ (ಶಬಶಂ. ೪-೨೪ ವ); ಶಶಿಮೊಗದ ಪಾಣ್ಬೆಯರು . . . ಯಮುನ ಕೋಪವ ತವಿಪರು (ಬಕೋಪು. ೪-೭೦). ೩. ಕುಗ್ಗಿಸು ; ಕ್ಷೀಣಗೊಳಿಸು : "ತವಿಸು—ಕ್ಷಯೇ (ಕ್ಷೀಣವಾಗುವಂತೆ ಮಾಡು)" (ಶಮಧಾ) : ಪಿರಿದಪ್ಪ ತಪದೊಳೊಡಲಂ ಪರಧರ್ಮದೊಳರ್ಥಮೆಲ್ಲಮಂ ತವಿಸುವರಂ ಧರೆ ನಚ್ಚಿ ಮೆಚ್ಚಿ ಬಣ್ಣಿಪುದು (ಧರ್ಮಾಮೃ. ೪-೨೨) : ಕುಡಿದಂಭೋಧಿಗಳೆಲ್ಲಮಂ ತವಿಪುದೇ ಗೋತ್ರಾದ್ರಿ ಸಂಘಾತಮಂ ಪಿಡಿದೆಂ ಕೀಟ್ಬುದೆ (ಕಾವ್ಯಾವ. ೩೧೮). ೪. ನಾಶವಾಗು ; ಇಲ್ಲವಾಗು ; ನಿವಾರಣೆಯಾಗು : ಇಂತೆಂದನೇಕ ದೃಷ್ಟಾಂತಂಗಳಿನವನ ಸಂಶಯಂ ತವಿಸಲೊರೆಯೆ (ಪದ್ಮರಾ. ೧೨-೪೩): ಸಂದೇಹದುದಯಂಗಳೆಯ್ದೆ ತವಿಪುವು (ಅನುಸಾ. ೭-೪-೧೭). ೫. ವ್ಯಯಮಾಡು ; ಖರ್ಚುಮಾಡು ; ವಿನಿಯೋಗಿಸು: ತನ್ನೊಡಮೆಯನನವರತ ದಾನದಿ ತವಿಸಿ ಜಸಂಬಡೆದಳ್ (ಅಜಿಪು. ೧-೫೧) : ವಿಪ್ರಾವಳಿಗೆ ತವಿಸಿ ಧನಮಂ (ಜೊಂಕಶಾ. ೧೯೪೪, ಬಂಕಾಪುರ. ೨೧-೪೨; 1069) : ಪರಮಾರ್ತ್ಥಂ ವಿದ್ವದರ್ತ್ಥಂ ತವಿಸದನ ಧನಂ ವ್ಯರ್ತ್ಥಂ (ಎಕ.V, ಬೇಲೂರು. ೧೨೪-೪೪: 1133): ಸವಿ ತವದನ್ನೆಗಂ ವಾಸಿಸಿ ಪತ್ನಿಗಳ್ ತವನ್ನೆಗಂ ಪೆಱಂಗವಳೆವೊಗವನ್ನೆಗಮೊದಂಬಡು ಮೇವಮುಮಿಲ್ಲದನ್ನೆಗಂ ತವಿಪುದು ತನ್ನನೊಪ್ಪಿಸುವುದು(ಚಂದ್ರಪು.೮-೮೧). ೬. ಕಳೆ ; ಪೋಲುಮಾಡು: ಸ್ತ್ರೀದ್ಯೂತವ್ಯಸನಾದಿಗಳಿನಾ ಪೊನ್ನೆಲ್ಲಮಂ ತವಿಸಿ (ಪಾವುಂಪು. ೩೪೭-೫). ೭. ಕೃಶಗೊಳಿಸು ; ಸೊರಗಿಸು ; ಸವೆಯಿಸು : ನೋಂಪಿಗಳಿಂದಂ ಗಿಡಿಗಿಡಿಜಂತ್ರಂ ಮಿಳಿಮಿಳಿನೇತ್ರಮಾಗಿ

ತಮ್ಮ ಮೆಯ್ಯಂ ತವಿಸಿ (ವಡ್ಡಾರಾ. ೧೫೦-೨೫) : ದೇಹೋತ್ಪನ್ನ ಪರೀಷಹ ಸಂಹತಿ ತನ್ನೊಡಲಂ ನೆಱೆಯೆ ತವಿಸುತಿರ್ಪುದುಂ (ಆದಿಪು. ೨-೫೨) ; ತವಿಸುತಿರೆ ತಪದೊಳೊಡಲಂ (ಸಮಪ. ೪-೪೧); ಒಡಲೆಂತುಂ ಕಿಡಲಿರ್ದುದು ಕಿಡುವೊಡಲಂ ತವಿಸಿ ಕಿಡದ ಮುಕ್ತಿಶ್ರೀಯುಂ ಪಡೆಯಲ್ಕೆ (ಧರ್ಮಾಮೃ. ೪-೧೨೦) ; ತವಿಸಲ್ವೇಟ್ಟುದು ಜನ್ಮಕ್ಕವಶಿಷ್ಟಾನಿಷ್ಟಯೋಗವುಂ (ಅನಂಪು. ೬-೩೫) ; ತನಗೆ ಮಕ್ಕಳಾದುದಿಲ್ಲೆಂದು ಮೆಯ್ಯಂ ತವಿಸಿ ನೋಂಪಿಯುಂ ನೋಂತಳ್ಗಡಾ (ರಾಮಾಶ್ವ. ೪೬-೩). ೮. ವಿರೂಪಗೊಳಿಸು: ತದ್ವನಿತೆಯಂ ತಂದು ಲಕ್ಷ್ಮಣನಿನವಳ ಕ್ಷಿತಿಯುಱೆಯೆ ತವಿಸಿ (ಪಾಸೋಪು. ೯-೧೫೭). ೯. ಸೋಲಿಸು : ನಿಕಳಂಕಸ್ವಾಮಿಗಳನು ತವಿಸಿದ ಬೌದ್ಧನಿಕರವ ಗೆಲ್ದು ತರ್ಕದೊಳು ಸಕಲ ವಿದ್ವಜ್ಜನ ಪೊಗಳೆ ಸಿಂಗಳಕಟ್ಟಿದಕಳಂಕ ಸ್ವಾಮಿ ಗೊಂದಿಪೆನು (ನಾಗಕು. ೦-೧೩). ೧೦. ಮುಗಿಸು ; ಪೂರೈಸು ; ಕೊನೆಗೊಳಿಸಂ: ತಲ್ಪಯಾಗಕ್ಕಿದು ಪ್ರಯೋಗಪದ್ಧತಿಯುಂತಿರ್ಪುದು ಇದಂ ತವಿಸಿ ಮುಂತಣ್ಗೆ ನಡೆಯುವೇಟ್ಟುದು (ಚಿಕವಿ. ೬-೧೩೩ ವ); ಬವಸಿ ನೊಂದು ಕಜ್ಜಮಂ ತವಿಸಿ ಬೇಸರ್ಗೆ ಕುಡಿಯುರ್ ಕಡುಸುಮ್ಮಾನದಿನೊಂದೆಡೆಯೊಳ್ ನೆರೆದು (ರಾಮಾಶ್ವ. ೨೨-೨೦). ೧೧. ನಿಲ್ಲಿಸು ; ಸಾಕುಮಾಡು : ಬಲ್ದಣಿದೆ ಇಂದು ಮೊದಲ್ಗೊಂಡು ತಪಮಂ ತವಿಸೈ (ಅದ್ಭುತ. ೨೯-೫). ೧೨. ಉಪಶಮನಗೊಳಿಸು ; ಶಾಂತಗೊಳಿಸು : ತದ್ವನದಿ ನೆಳಲುಂ ನೀರುಯಿರ್ದಪವು ಅಸುವಿನನುತಾಪಮಂ ತವಿಸವ್ವ (ನವಮೋ. ೮-೨೩) ; ತನ್ನ ಹೆಂಡಿರನು ತಾನೆ ತವಿಸದಿನ್ನಾರು ಶಮಿಸಲಹುದು (ಮೇಘದೂ. ೧೦-೩೯): ತವಿಸಲಾರದ ದುಃಖವೊಂದನ್ನು ಮರೆಯಲು ಅವನು ಸುಖವನ್ನರಸಿ ಮುಂಬಯಿಗೆ ಬಂದಿದ್ದ (ರೂಪಸ. ೬೦). ೧೩. [ಗಣಿತ] ಭಾಗಾಕಾರ ಮಾಡು; ಭಾಗಿಸು: ಭಾಗಂ ಎಂಬುದಕ್ಕೆ ಪೆಸರು: ತವಿಸು, ಭಾಗಿಸು, ಉಗಿ, ಎತ್ತು, ಕೊಡು, ಕೊಳು (ವ್ಯವಹಾ. ೧೨-೧೨). ೧೪. (?) : ತವಿಪಂ ಮಾರಂಗಳೆಂ ಕಂಪರಂ ಪರಮೋತ್ಸಾಹದೆ ಪುಟ್ಟಿ ಸನ್ನವಿದುನ್ನೂನತ ಕಂಪರಾತ್ರಿರ್ಕೃತನಂನಾಪೊಂನಂ (ಎಕ. XIV, ಎಡತೊ. ೩೧-೪ ; ಸು. ೯೦೦). [ ತವು₁ + – ಇಸು₃ ]

**ತವಿಸು₂** (ಕ್ರಿ). ೧. ತಪಸ್ಸುಮಾಡು : ಅಲೌಕಿಕ ಚಮತ್ಕಾರ ಸಿದ್ಧಿಗಾಗಿ ತವಿಸಿ 'ಸಿದ್ಧ'ರೆನಿಸುವ ಗುರಿಯ ಯತಿಮುನಿಗಳು (ಕರ್ನಾಟ. ೬೪) ; ಚಿಂತೆಯ ಕಾಮರ್ುಗಿಲಿರುಳೊಳಗೆನ್ನದೆ ಬೆಳಕನು ಕಾಣಲು ತವಿಸಿತ್ತು (ಭಾವಗೀ. ೨೮೯). ೨. ಪರಿತಪಿಸು ; ವ್ಯಾಕುಲಪಡು ; ದುಃಖಿಸು : ಎಲೆ ಮಾರಾಯನೆ ನೀಂ ತವಿಸಬೇಡ ಆಂ ಬೇಗದಿಂ ಬರ್ಪೆಂ(ಮಿತ್ರಗೋ. ೪೨). [ <ತಪಿಸು₂ ]

**ತವು₁** (ಕ್ರಿ). ತಪ್ಪ (ಭವಿಕೃ). ೧. ಕುಗ್ಗು ; ಕಡಮೆಯಾಗು ; ಕ್ಷಯಿಸು; ಸವೆ: "ತವು–ಕ್ಷಯೇ" (ಶಮಧಾ); ನೆಗಟ್ದ ನೀಲಾಂಜನೆ ತನ್ನಾಟಮನೊಱಲ್ದು ನೋಡುವ ನೋಟಕರಂ ತವದ ಮಾಟ್ಕೆಯಿಂ ಮೋಹಿಸಿದಳ್ (ಆದಿಪು. ೯-೩೮) ; ಒಱತೆಯುಳ್ಳನ್ನೆಗಮೆನಿತಂ ತೋಡಿಕೊಂಡಡನ್ನೀರ್ತವದಂತಗಣಿತಪುಣ್ಯಮುದುಳ್ಳನ್ನೆಗಂ . . . ತವದು ಧನಮೇಗೆಯ್ದುಂ (ಸಮಪ. ೫-೧೩೭); ಬಡಬಾನಳಂ ಬಿಡದಾಗಳಂ ತಗುಳೆ ಪೀರೆಯುಮಂತದೆಳ್ಳನಿತಪ್ಪೊಡಂ ತವದಂತೆವೋಲ್ ಬಗೆದು ನೋಡೆ ಮಹಾತ್ಮರಪ್ಪವರೇಕರೂಪರದೆಲ್ಲಿಯುಂ (ಕಾವ್ಯಾವ. ೭೨೩) ; ತವದ ಪೊಡರ್ಪಿನಿಂದಿಸುವ ಕೂರ್ಗಣೆ (ಜಗವಿ. ೬-೫೯) : ತಪದಾಯುಷ್ಯಮು ಮೇಟ್ಟಿಗುಂದದೊಡಲುಂ (ಅನಂಪು. ೯-೪೧); ಆತುಕೊಳ್ಳಲ್ ಕೋಲುಗಳ ಕೈಯಾ ತವದ ಕಣೆಗಳಿಗೆವುಗ್ರಭಟಾತಿಶಯುರಾರೆನುತ ತೆಗೆದಚ್ಚರು ಮಹಾರಥರು (ಕುಮಾರವ್ಯಾ. ಕರ್ಣ. ಪರಿ. ೫೯೧) : ತವದ ಕಾಮೋದ್ರೇಕದಲಿ ಕೂಡುವ ಸಮಪ್ರಣಯಿಗಳ ನೀಡುಗಣ್ಣೆವೆಗಳರೆಮುಗಿವುತಿರೆ (ಸಾಳ್ವಭಾ. ೧೮-೩೭): ೨. ಅಳಿ; ಸಾಯು; ನಾಶವಾಗು: ತತ್ಸುಯೋಧನಸುತರೆನ್ನ ಬಾಣಗಣದಿಂ ತವದಿರ್ದಪರೆ (ಪಂಪಭಾ. ೧೧-೧೦೭) : ಸಂನ್ಯಸನಮಂ ಕೈಕೊಂಡ ಮಹಾಪುರುಷನ ಕರ್ಮಂ . . . ಸೊಡರಂ ಪೊರ್ದಿದ ಪತಂಗದಂತೆ ತವುಗುಂ (ಧರ್ಮಾಮೃ. ೧೪-೧೦೨) : ತನು ತವುವನ್ನವೋತಗಲದಿರ್ಪ ವನೆನ್ನೊಳೆ ನೋಡದಿರ್ಪವಂ ಕನಸಿನೊಳಪ್ಪೊಡಂ [illegible] (ಧರ್ಮಾ. ೨-೮೫) : ಎತ್ತ ದವಾನಳನಟುಜಿದುದತ್ತಲೆ ಪೇರಡವಿ ತವುವ [illegible] (ಜಗವಿ. ೬-೬೭). ೩. ವ್ಯಯವಾಗು ; ತೀರಂ : ಭೋಗಿಪೆನೆನ್ನ ಜವ್ವನಮುಮೀ ಧನಮುಂ ತವುವನ್ನೆಗಂ (ಆದಿಪು. ೩-೬೩) : ತನ್ನ ದೊಣೆಯುಂಬುಗಳ್ ತವುವನ್ನೆಗಮೆಚ್ಚಂಬು ತಪ್ಪೊಡಭಿವಾದಯೆನಲ್ಕಿನ್ನೆನಗೆ ಪದನಿದೆಂದು (ಪಂಪಭಾ. ೧೩-೪೦); ಆಕೊರ್ಗಳ್ವೊಡಂ ತವದ ಕನಕರಾಶಿಗಳುಂ (ಚಾವುಂಪು. ೭೧-೧೭); ತವೆ ತೈಲಂ ದೀಪಂ ನಂದುವಂತೆ (ಪಂರಾಮಾ. ೧-೮೨): ವಾರ್ದ್ಧಿಪವ್ರಾತಮುಂ ಸುಱ್ಟನೆ ತವುವಿನೆಗಂ ಪೀರನೇ ಕೋಪದಿಂ ಪೊಯ್ಮನೆ ಬೆಟ್ಟಂ ಪಿಟ್ಟು ಪಿಟ್ಟಾಗಿರೆ ಸಮರದೊಳೀ ವೀರಪೆರ್ಮಾಡಿದೇವಂ (ಎಕ. VII, ಶಿಮೊ. ೪-೯೪; 1122): ಪನ್ನೆರಡುವರುಷದಂದಿಗೆ ಮೂವತ್ತೆರಡು ಕೋಟಿಯುಂ ನೆಱೆಯೆ ತವುವುದಮೊಂದು ದಿವಸದ ಬೀಯಕ್ಕೆ ಮನೆಯುಂ ಮಾಱೆ (ಬಂಹರಿ.೪-೩ ವ). ೪. ಮುಗಿ; ಕೊನೆಗೊಳ್ಳು; ಉಪಾದ್ರಿಯೊಳ್ ದ್ರವಿಣಮುಂ ಬಯ್ಯುದ್ದತಂ ತನ್ನುಸಿರ್ ತವೆ ಪಂಕಪ್ರಭೆಯೊಳ್ ದಶಾಬ್ಧ್ಯುಪಮೆಯಿಂ ದುಃಖಾಗ್ನಿಯೊಳ್ ಬೆಂದು (ಆದಿಪು. ೫-೪): ನುಡಿಯಿಸಿ ಕೇಳ್ಗಂ ಹರಿಗನ ಪಡೆಮಾತನೆ ಮಾತು ತಪ್ಪೊಡಂ ಮತ್ತಮದಂ ನುಡಿಯಿಸುಗುಂ ಮೊದಲಿಂದಾ ನುಡಿ ಪಱಿಪಡೆ ಮುಳಿದು ನೋಡುಗುಂ ಕೆಳದಿಯರಂ (ಪಂಪಭಾ. ೪-೫೭); ಇಸೆ ನಿಶಿತಶಸ್ತ್ರಹತಿಯಿಂ ಬಸಮಱಿದು ಶರಾಸನಾಗಮಾಚಾರ್ಯನುಮುಂದಸುವಂ ಬಿಟ್ಟಂ ವಿದ್ಯಾಪ್ರಸರತೆಯೀಗೆಯ್ವುದಾಯುಂ ತಪ್ಪೊಡೆ ಪೇಱೆಂ (ನೇಮಿಪು. ೧೨-೧೩೪) ; ಕುಸುಮದಿಂ ಮೊರೆದೇಟ್ವಳಿಜಾಲದೊಂದು ಝುಂಕಾರಮುಮೊರ್ಮೆಯುಂ ತವದು ಭಾವಿಪೊಡಲ್ಲಿಯ ನಂದನಂಗಳೊಳ್ (ಜಗವಿ. ೨-೧೧). ೫. ಮರೆಯಾಗು; ಮುಳುಗು ; ಅಸ್ತಮಿಸು: ತವುತಿರ್ದತ್ತಲ್ತೆ ತಾರಾಸಮುದಯಮಿದೊ ಪಂಪಾಸರಸ್ತೀರ ಸುಪ್ತೋತ್ಥವಿಹಂಗಧ್ವಾನಮೀ ಪೊಣ್ಮುವುದು (ಕಾದಂಬ. ೭೦೪). ೬. ಸೊರಗು; ಕೃಶವಾಗು; ಬಡವಾಗು: ಇರ್ಪತ್ತೊಂದು ದೆವಸ ಮೇಕೋತ್ತರವೃದ್ಧಿಯಿಂ ಮನಂ ತವದೆ ತನು ತವೆ ನೋನುತ್ತಿರ್ಪನಂ (ಶಾಂತಿಪು. ೪-೬೭ ವ) : ಧರ್ಮಮುಂ ಗೆಯ್ದು ತಪ್ಪೊಕ್ಕಲ ಬಡತನಮಂ ತಪಂಗೆಯ್ದು ತಪ್ಪನ ಮೆಯ್ಯ ಬಡತನಮುಂ ಸನ್ಯಾಸದೊಳ್ ಸತ್ತನ ಸಾವುಮಂ ತವಿಲುಂ ಬಡತನಮುಂ ಸಾವುಮೆಂಬುದೆ (ಜೀವಸಂ. ೪೮-೧೬ ವ). ೭. ಹಿಮ್ಮೆಟ್ಟು; ಹಿಂಜರಿ: ಇವರಂತಲ್ತು ಮಹೀಶೂರವರದಟದು ಬೇಱೆ ವಿಱೆ ಪೋಪುದು ಮೋಸಂ ತವುವುದು ಲೇಸೆಂದುಱೆ ಸಾರುವ ಹನುಮನ ಮಾತನೆಣಿಸದೆಯ್ತಂದನವಂ (ಚಿಕವಿ. ೨-೧೦೧). ೮. ನಾಶಪಡಿಸು : ತವುಗೆ – ತಪ್ಪಂ, ತಪ್ಪಪಂ. ತಪ್ಪಂ ತನ್ನೊಳ್ ಪಳಂಚಿ ಕಿಡುಗುಟ್ಟಿ ತಪ್ಪುವಂಬುಗಳನವಂ (ಶಮದ. ೨೪೦ ಪ್ರಯೋ).

**ತವದೊಣೆ, ತವಡೊಣೆ** = ಎಷ್ಟು ಬಾಣಗಳನ್ನು ಹೊರಗೆ ತೆಗೆದರೂ ಬರಿದಾಗದ ಬತ್ತಳಿಕೆ; ಅಕ್ಷಯತೂಣೀರ : ವಿಕ್ರಾಂತತುಂಗನುತ್ತುಂಗ ಭುಜಪರಿಘದೆರಡುದೆಸೆಯೊಳಂ ತವದೊಣೆಗಳಂ ಬಿಗಿದು (ಪಂಪಭಾ. ೫-೮೪ ವ); ಬಿಗಿದ ತವದೊಣೆಗೆ ಕೆಯ್ಯಂ ನೀಡಿ ನಿಶಿತಾಸ್ತ್ರಮನೊಂದನುರ್ಚಿ ಕೊಂಡು (ಶಾಂತಿಪು. ೪-೪ ವ) ; ಪಗಲೊಳ್ ತವದೊಣೆಯುಂ ಬಿಗಿದು (ಪಂರಾಮಾ. ೯-೫೭): ತವದೊಣೆಯುಂ ತವದ ಮಂತ್ರಾಸ್ತ್ರಪ್ರಯೋಗದಿಂ ಕೈಮಿಕ್ಕು ಪ್ಯಮೆದಳೆಯುಲುಂ (ಜಗವಿ. ೧೫-೫ ವ) : ಉರುತರಪೆನಿಸಿದ ತವ[ಪಾಠಾಂ. ಪ]ದೊಣೆ[ಯುಂ] ಚಚ್ಚರಮಾಗಲ್ಪೆಗಲೊಳ್ಪಿಗಿದು ನಡೆದಂ (ಕುಮುರಾ. ೮-೪೨) : ತವಡೊ[ಪಾಠಾಂ. ದೊ]ಣೆಗಳಂ ಬಿಗಿದು ಗಾಂಡೀವಮಂ ನೇಱಿಸಿ ನೀವಿ ಜೇವೊಡೆದು (ಪಂಪಭಾ. ೭-೩೭ ವ).

ತವನಿಧಿ = ಅಕ್ಷಯುವಾದ ನಿಧಿ : ಇನ್ನು ಚತುರಂತ ಧಾತ್ರೀಕಾನ್ತೆಯನಳವಡಿಸಿ ಚಕ್ರವರ್ತ್ತಿಶ್ರೀಯುಂ ತಾಂ ತಳೆದು ಸುಖದೆ ಪಲಕಾಲನ್ನವೆ ತವನಿಧಿಗಧೀಶನಾಹವವಮಲ್ಲಂ (ಎಕ್. VII, ಶಿಕಾರಿ. ೧೩೬-೫ : 1068); ವಾಸಿದೇವ ತನ್ನ ವಸ್ತ್ರವಸಿತ್ತು ತವನಿಧಿಯ ಪ್ರಸಾದವ ಪಡೆದ (ಬಸವ. ೩೨೦) : ಒಬ್ಬ ಶಿವಶರಣ ಚೋಳದಾಸ ಉಣಲುಡಲಿತ್ತ ಕೈಯೊಡನೆ ಹೊನ್ನ ಮಳೆ ತವನಿಧಿಯ ಪಡೆದರು (ಆದವ. ೧೨-೨೨) ; ಅವನಾಗ ತವನಿಧಿಯ ಅಡಗಿಸಿದನಲ್ಲಿಯೆ (ಬಸಪು. ೨೩-೯) ; ಚೆದಱು ತ ವ ನಿ ಧಿ ಯಾ ಯ್ತು ಪಟುಭಟರದೆಗಳಿಬ್ಬಗಿಯಾಯ್ತು (ಕುವ್ಯಾಭೀ. ೧೦-೧೩) ; ಸವಿದು ಸವೆಯದ ಸವಿಯ ಸಾರಿನ ತವನಿಧಿಗಳಹ ತನ್ನದೊಂದೊಂದವಯವದ ಲಾವಣ್ಯ ರಸಪೀಯೂಷಪಾನದಲಿ (ನಿಧಾಗ. ೩-೧೩-೪೨); ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವು ಒಂದು (ಕಸಾಡ. ೨೯೬).

[ ದೇ.॥ ತಮಿ. ತವು, ತವ್ವು, ತವ್ವು, ತಾವು ]

**ತವ್ರು₂** (ನಾ). ೧. ಕಡಮೆಯಾಗುವಿಕೆ; ತಗ್ಗುವಿಕೆ: (೩). ೨. ಅಳಿವು ; ನಾಶ ; ಕ್ಷಯ : "ತವು ಕ್ಷಯುವುಕ್ಕುಂ" (ಕವಿಕಂ. ೨೨೩).

[ <ತವು₁./ ತಮಿ. ತವ್ವು, ತಾವು ; ತುಳು. ತಾವು ]

**ತವುಂಕಲ್**, ತವುಕಲ್, ತೌಂಕಲ್, ತೌಕಲ್ (ನಾ). ೧. ಕುಗ್ಗುವುದು ; ಕಡಮೆಯಾಗುವುದು ; ಕ್ಷಯ : "ತವುಂ[ಪಾಠಾಂ. ತೌಂ]ಕಲ್ ಕ್ಷಯ" (ಶಬ್ದಮಂ. ೬೫): ಔಕಾರಕ್ಕೆ – ಕವುಂಗು, ಕೌಂಗು . . . ತವುಂಕಲ್, ತೌಂಕಲ್ (ಶಮದ. ೧೫೬ ಪ್ರಯೋ). ೨. "ಅರೆಮಿದಿದ ಬತ್ತ" (ಶಮದ. ನ. ೧೬೮ ಪ್ರಯೋ. ಅಡಿಟಿ). **ತವುಕಲ್** : ೧. ರಥದೊಳಗುಳ್ಳಾಯುಧಂಗಳೆಲ್ಲಂ ತವುಕಲಾಗೆ ಮಾಣ್ದು ಮಾಣ್ದೆಸುವುದು ಸ್ಯೆಂಧವಂ ಕಂಡು (ಬಂಪಠಿ. ೧೨-೨೩ ವ). ೩. ಮುಗಿಯುವಿಕೆ; ಕೊನೆ: ಅಗ್ರಜಾತ ಪಾದಪಯೋಜಾತಂಗಳ್ಗೆಱಗಿ ಕತಿಪಯಾವಶೇಷವಾದ ತವುಕಲ ಕಲಹನುನೆನಗೆ ದಯೆಗೆಯ್ವುದೆಂದು ಬೇಡಿಕೊಳ್ವುದುಂ (ಶಾಂತಿಪು. ೪-೩೨ ವ). **ತೌಂಕಲ್** : ೧. 'ತವುಂಕಲ್' ಉಲ್ಲೇಖದ 'ಶಮದ' ಪ್ರಯೋಗವನ್ನು ನೋಡಿ. **ತೌಕಲ್** : ೩. ಎಣ್ಬತ್ತೊಂದುಲಕ್ಕಬರಿಸಂ ಬಟ್ಟಾ ಪರವಾಯುವ ತೌಕಲೊಳರ್ಧರಾತ್ರುದೊಳ್ ಕಱಿದು ಸ ಪ್ತ ಮಾ ವ ನಿ ಗಿ ೞ ದೊಂ (ಶಾಂತಿಪು. ೫-೭೦). [ ತವು₁ + – ಕಲ್₄ ]

**ತವುಕಲ್** 'ತವುಂಕಲ್' ನೋ.

**ತವುಕುರಿ**(ನಾ). ಒಂದು ಬಗೆಯ ತೆರಿಗೆ: ದಣ್ಡದೋಷಂ ತವುಕುರಿ ತವುದಾಯ ಸುಬೂದಗೂಳ ಪ್ರಾ[ಯ]ಶ್ಚಿತ್ತಂ ತಿಪ್ಪೆಸು[ಙ್ಕ]ಂ ಗಾಡಿಯ ಸುಙ್ಕಂ (ಎಕ್. XI, ದಾವಡ. ೧೩೯-೫೦ ; 1106). [ ? ]

**ತವುಗೆ**, ತೌಗೆ (ನಾ). ಕೊನೆ ; ಅವಸಾನ : (೩). **ತೌಗೆ** : ತಳೆದ ಸುಮನೋದಾಮು ನೀ ರೋ ಢಿ ಬಾಡಿದುದು . . . ತಂದ್ರುತ ಚಿತ್ರಮುಂ ಬಳಸಿದುದು ಪೇಟಾವೊಂಗೇನಾಗದಾಯುವ ತೌಗೆಯೊಳ್ (ಚಂದ್ರಪು. ೪-೭೭). [ ತವು₁ + – ಗೆ ]

**ತವುಟ** 'ತವುಟೆ' ನೋ.

**ತವುಟೆ**, ತವುಟ (ನಾ). ಒಂದು ಜಗೆಯ ಗಿಡ ; ಬೆಟ್ಟದ ನೆಲ್ಲಿಗಿಡ : (೩). **ತವುಟ** : ಗುಡ್ಡದ ನೆಲ್ಲಿ, ತವುಟ (ಪ್ರಜಿಗಿ. ೭೭-೧೩೪೮).

[ ದೇ.॥ ತಮಿ. ತವಿಟ್ಟು ]

**ತವುಡಂಗಿ** 'ಚವುಡಂಗಿ' ನೋ.

**ತವುಡಿ₁**, ತ ವು ಡೆ. ತೌ ಡಿ, ತೌ ವು ಡಿ (ನಾ). ಒಂ ದ ಂ ಬ ಗೆ ಯ ತೆರಿಗೆ : ಸಲುವುದು ಪಟ್ಟಣಕೇರಿಯಲಿ ತಪ್ಪ [illegible] ಗಿಗೆ (ಎಕ್. IX, ಬೆಂಗಳೂ. ೬೧-೨೦ ; 1332). **ತವುಡೆ** : ಆಯದೆಱೆ ಪಡುವರ ಜೀರವಣ . . . ದಣ್ಡಾಯ ತವುಡೆಯೊಳಗಾದ ಸಮಸ್ತ ಕಿಱುಕುಡವೆಲ್ಲವಂ (ಎಕ್. V, ಬೇಲೂರು. ೫೯-೮೭ ; 1117) : ಅಳಿವು ಅಂನ್ಯಾಯ ತಪ್ಪು ತವುಡೆ . . . ಸಲುವುದು (ಮೈಆರಿ. ೧೯೪೦, ೧೪-೧೭ ; 12ನೆಯ ಶತ). **ತೌಡಿ** : ಅಳಿವು ಅಂನ್ಯಾಯ ಕಿಱುಕುಳ ತಪ್ಪು ತೌಡಿವೊಳಗಾದ ಸಮಸ್ತ ಬಳಿಸಹಿತಂ . . . ಪುತ್ರ ಪೌತ್ರಾದಿಗಳಿಗೆ ಸಲುಉದು (ಎಕ್. XI, ಹಿರಿಯೂ. ೮೭-೨೦ ; 1313) : ಅಳಿವು ಅನ್ಯಾಯ ಕಿಱುಕುಳ ತಪ್ಪು ತೌಡಿವೊಳಗಾದ ಸಮಸ್ತ ಬಳಿ ಸಹಿತವಾಗಿ . . . ಪುತ್ರ ಪೌತ್ರಾದಿಗಳಿಗೆ ಸಲ್ವುದು (ಎಕ್. XVI, ಚಿಕ್ಕನಾ. ೬೮-೨೪ ; 1319) ; ಪೂರ್ಬ್ಬಾಯ ಅಪೂರ್ಬ್ಬಾಯ ತಪ್ಪೆ ತೌಡಿ ಕಿಱುಕುಱ ಸ್ಥಾನಮಾಂನ್ಯವೊಳಗಾಗಿ ಸಮಸ್ತಬಳಿಸಹಿತವಾಗಿ (ಎಕ್. XII, ಗುಬ್ಬಿ. ೩೦-೬೫ ; 1331). **ತೌವುಡಿ** ; ಅಳಿವನ್ಯಾಯ ಸುಂಕ ಹಟ್ಟ[ದರೆ] ತಪ್ಪು ತೌವುಡಿ (ಎಕ್. XI, ಚಿತ್ರದು. ೨-೨೨ ; 1365). [ ? ]

**ತವುಡಿ₂** (ನಾ). ತೆರವು ; ಖಾಲಿ ; ವಾರಸುದಾರರು ಇಲ್ಲದಿರುವ ಸ್ಥಿತಿ (?) : ನಿರುಗುಂದದ ಸಿದ್ಧನಾಥದೇವರ ಸ್ಥಾನಿಕ ನಲ್ಲಜೀಯನ ಮಗ ಸಿದ್ಧಜೀಯನು ಸ್ವರ್ಗ್ಗಸ್ತನಾಗಲು ಆ ಸ್ಥಾನ ತವುಡಿ ಆಗಲು ಪಟ್ಟಮಹದೇವಿಯರ ಮಗ ಚೋಳಯ್ಯಂಗೆವುಂ . . . ಸಲುವಂತಾಗಿ (ಎಕ್. XI, ಹೊಳಲ್ಕೆ. ೧೨೨-೨ ; 1268 ?). [ ? ]

**ತವುಡು**, ತವಡು, ತಿವುಡು₂, ತೌಡು (ನಾ). ೧. ಬತ್ತ ಮುಂತಾದ ಧಾನ್ಯದ ಹೊಟ್ಟು ; ಉಮಿ : "ಶಮಿಾ, ಶಂಬಾ – ೨ ಕಾಯ ಧಾನ್ಯವನ್ನು ಒಡೆಯಿಕ್ಕಿದ ಹೊಟ್ಟು, ಸಿಪ್ಪೆ ತವುಡಿ[ಪಾಠಾಂ. ತೌಡಿ]ಗೂ ಹೆಸರು" (ಸಿದ್ಧಾಂತಿ. ೨೪೧) ; ಸತುಪಾಭ್ಯವಹಾರೀ ಚೇತಿ = ತವುಡುವೆರಸಿಯುಂಬ [ಸುಂಬ]ನಂತೊಳ್ಳಿತುಂ ಪೊಲ್ಲದುಮಂ ಪೇಟ್ವರುಮೊಂದಿಂತು (ನೀತಿವಾ. ೩೧-೭): ತವುಡಂ ತಿಂದು ತುಯ್ಯಲನುಂಡನೆಂಬಂತೆ (ಧರ್ಮಾಮೃ. ೦೩-೧೮೦): ತವುಡಂ ತಂಡುಲಾಪೇಕ್ಷೆಯಿಂ ಕುಟ್ಟುತ್ತುವಿರ್ಪಂತು (ಮಹಾನೇ.೧೭-೭೧ ವ): ಕೆಂದೇಟ್ ಮಿಡಿದೊಡೆ ತವುಡಂ ತಂದಿಕ್ಕಿದ ಧೂಪದಿಂದೆ ತದ್ವಿಷ ಮಱಗುಂ (ಖಮದ. ೧೧-೪೧); ಘನದರಿದ್ರತೆಯಾದುದಯ್ಯೋ ಮನೆಯೊಳಗೆ ನೋಡಲು ತವುಡು ನೊಣವಿಂಗೆಱಗಲಿಲ್ಲ (ಬಸಪು. ೨೩-೬) ; ಪೊತ್ತುವುದು ಸಱಯುಹುದು ನನೆಗುದಿಯುಹುದು ತವುಡು [ಪಾಠಾಂ. ತಡಹು]ಹತ್ತಿಹುದು . . . ಒಣಗಿಹುದು ದೋಷವಶನಕ್ಕೆಂಟು ತೆಱನಪ್ಪುದು (ಸೂಪಶಾ. ೩-೧). ೨. ಪುಡಿ ; ಧೂಳು : ಬಲದ ಪದಹತಿಗೆ ತವುಡಾಯ್ತು ಗಿರಿಸಂಕುಲಂ (ಚಬಪು. ೪೮-೨೨) ; ಭತ್ತದ ಉಮಿ ಅಥವಾ ಪೊರಕವಚವನ್ನು ತೆಗೆದರೆ ಬರುವ ಅಕ್ಕಿಯಲ್ಲಿ ಮೇಲ್ಭಾಗದಲ್ಲಿ ಭ್ರೂಣ, ಕಂದುಬಣ್ಣದ ಪೊರಕವಚ, ಅನಂತರ ತವುಡು ಮತ್ತು ಒಳಗೆ ಪಿಷ್ಟದ ಭಾಗ ಇರುತ್ತವೆ (ಅಡುಸಾ. ೬೨). ೩. (?): ತದ್ವೃಕ್ಷಕುಲ ಮಹಾತ್ಮ್ಯಗ್ಯಸ್ಯ ನಿಕರದಿಂದುದ್ವರ್ತನಂ ಮಾಡಿ ದಾಮ್ನ ಮಧುರಂಗಳಿಂ ಸದ್ವಿಚಾರದ ತುಱುವೆ ತವುಡು ಸುಣ್ಣಂಗಳಿಂ . . . ಗೋಧೂಮ ತಿಲ ಮಾಷ ಸಂಪದ್ವಿಮಲ ಪಕ್ವಾನ್ನಮುಂ ವ್ಯಂಜನಂಗಳಂ ಪರವೆಯರು ಗಡಣಿಸಿದರು (ಚೀರವು. ೧೦-೨೭). **ತವಡು** : ೧. ತವಡು ತಿಂಬುವವನಿಗೆ ಒಯ್ಯಾರವೇಕೆ? (ಗಾದೆ). **ತಿವುಡು₂** : ೧. 'ತಿವುಡುಗಳೆ' ಪರಾ. ೪. ಹಣ್ಣು ಮೊದಲಾದುವುಗಳ ಸಿಪ್ಪೆ : ಬಾಱೆಯ ಪಣ್ಣೀಱಲ ತಿವುಡಾಳೋಚಿಸೆ ಮೇಣದುಕ್ಕಿನುದಕಂ ಮೇಣ್ ಸಿತಬಾಳಂ ತೋಯಸಮೇತಮುದೇಱಲಮೇನಿಟ್ಟಿಯೆಸೆವ ವಿಷಮಂ ಕಳೆಗುಂ (ಖಮದ. ೨-೪೬). **ತೌಡು** : ೧. ಒಪ್ಪುವ ಮಾಣಿಕಮುಂ ತೌಡಿಂಗವಯವದಿಂ ಮಾಱುಗುಡುವ ಮರುಳಂ ಪೋಲ್ಗುಂ (ಶಾಂತಿಪು ೧೧-೯೦) ; ಆರಾನುಂ ಭರಂಗೆಯ್ದು ಕಬ್ಬುಗಳಂ ಜೋಳವನಕ್ಕಿಯುಂ ಕಡಲೆಯುಂ ತೌಡುಂ ಮುಸಂ ಪೆರ್ಚಿ ಪಿಂಡಿಗಳಂ ಪುಳ್ಗಳಸಿಕ್ಕಿ ಮೇದು (ಧರ್ಮಾಮೃ. ೧೨-೧೧೬): ತೌ[ಪಾಠಾಂ. ತವು]ಡಿನ ಮಾಱಿೞೊಳ್ ಮಾಣಿಕಂ ದೊರೆಕೊಂಡೊಡಂ ಕೆವ್ವಗೆ ಸಾರ್ದು ಬಂದ ನಿಧಿಯೆನ್ನದೆ ಮಾಱಿಂದು ಬಗೆವಾ (ಜೀವಸಂ. ೨೦೪-೩ ವ): ಮುತ್ತನೊಗುವರೆ ಮೊಱನ ತೌಡಿಗೆ (ಕೌಶಿರಾ. ೨೩-೩೦). ೫. (ಅಲಂ) ನಿಷ್ಪ್ರಯೋಜಕವಾದುದುಂ ;

ನಿಸ್ಸಾರವಾದುದು : ವೇದಶಾಸ್ತ್ರಾಗಮಪುರಾಣಂಗಳೆಂಬುವ ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣ ಭೋ (ಮಹಾದೇ. ಬ. ೪೬-೧೦೭).
[ ದೇ.॥ ತಮಿ. ತವುಟು, ತವಿಡು; ಮಲ. ತವಿಡು; ತುಳು. ತವುಡು, ತೌಡು ; ಕೊಡ. ತವ್ಡಿ ; ತೆಲು. ತವುಡು. ತೌಡು]

**ತವುಡೆ** 'ತವುಡಿ$_1$' ನೋ.

**ತವುತರ್, ತೌತರ್** (ಕ್ರಿ). ೧. ಕಡಮೆಯಾಗು ; ಕುಗ್ಗು ; ಕುಂದು ; ಕ್ಷೀಣಿಸು : ಅಪನೋದುವನಿತು ಶಕ್ತಿಯೆ ತವುತಂದೊಡೆ ಪಂಚಪದದ ನಾಮಾಕ್ಷರಮಂ ಧ್ರುವಮೋದುವುದು (ಆದಿಪು. ೩-೫೫); ಆಗಳೋಡುವಾತನ ಭಯಮುಟ್ಟುವಾತನ ಚಲಂ ತವುತಂದುವು ತತ್ಸಮಿಾಪದೊಳ್ (ಶಾಂತಿಪು. ೬-೪೦) ; ಅಮರಲೋಕಸುಖಾಮೃತಸೇವೆಯಿಂದ ತಣ್ಣನೆ ತಣಿದಾಯುರಬ್ಧಿಗಳನುಕ್ರಮದಿಂದಯುನಾಪಶೇಷಮುಂಟೆನೆ ತವುತರ್ಪುದುಂ ತನುವಳಂಕರಣಾಂಬರಪುಷ್ಪಮಾಲಿಕಾಜನಿತ ವಿವರ್ಣದಿಂದನಿಬರುಂ ತಿಳಿದಾಯುವಿನಂತ್ಯಚಿಹ್ನಮಂ (ಮಹಾನೇ. ೩-೫೪). ೨. ಸಾಯು ; ಅಳಿ; ನಾಶವಾಗು ; ಇಲ್ಲದಂತಾಗು : ಜವನೆರ್ದೆ ಬಿರ್ಚುವ ತೆಱದಿಂ ತವುತರ್ಪುದುಮುಭಯಬಲಧನುರ್ಧರಸೈನ್ಯಂ ಜವನೆಪುರ್ವೋಱಿಗಳ್ ತಗುವಂತೆ ತಾಗಿದರರದುತರ್ಪ ಕಡಿತಲೆಕಾಱರ್ (ಪಂರಾಮಾ. ೧೩-೫೩) ; ದೂರದೊಳೆ ಕಂಡು ವನಾಂತರದೊಳ್ ನಿಪಾನಪಂಕಾವಿಳವಾರಿಯಂ ಹರಿಣಿಯೊಂದು . . . ಉಷ್ಣತೃಷ್ಣಾವಶಮುಂದಮುಂದಗತಿ ಬರ್ಪನಿತರ್ಕಿನ ತಾಪದಿಂದೆ ತಜ್ಜೀವನಮುಂ ಮೃಗಾಂಗನೆಯ ಜೀವನಮುಂ ತವುತಂದು ಪೋರ್ದುದಲ್ (ಚಂದ್ರಪು. ೯-೭೮). ೩. ಬರಿದಾಗು ; ಖರ್ಚಾಗು ; ವ್ಯಯವಾಗು; ಕೊನೆಗಾಣು : ಕುಡೆ ತವುತಪ್ಪುದಲ್ತು ಪಡೆದಂಗೆಡಱಿಲ್ಲ ದರಿದ್ರನಪ್ಪನುಂ ಪಡೆಗುವುದಕ್ಕೆ ಬೇಱೆ ಬೆಲೆ ಬೇಡ . . . ಕೂಡೆ ಪುಂಜಿಸಿದ ವಾಙ್ಮಯರತ್ನಚಯಂ ಜಿನೇಶನಾ (ಸಮುಪ. ೨-೩೦) : ಅನುಪಮ ವಸಂತತಿಳಕೆಯೊಳನುನಯದಿಂದಂತು ಚಾರುದತ್ತನಿರಲ್ ತದ್ಧನಮುಂ ತವುತಂದುದು (ನೇಮಿಪು. ೪-೫೭) : ಕೆಱೆ ನೆಱೆ ನೀರ್ ತವುತರೆ ಬಱಿಗೆಱೆಯಾದುವು (ಜಗವಿ. ೧೭-೬೪). ೪. ಕಡಮೆಮಾಡು; ಕುಗ್ಗಿಸಂ : (ಸ). **ತೌತರ್** : ೨. ವಿಳಯೋಗ್ರಾಂತಕನಂತೆ ಮುಂತಣ ಬಲಂ ತೌತಂದುದಂ ಕಂಡು ದೋರ್ವಳವಿಖ್ಯಾತನಗುರ್ವಿನಂಕದ ಕಲಿ ಶ್ವೇತಂ ಧನುರ್ಜ್ಯಾರವಂ ಬಳೆಯಲ್ ಜೇವೊಡೆ ಗೆಯ್ದು (ನೇಮಿಪು. ೧೨-೮).
[ ತವು$_1$ + ತರ್ ]

**ತವುದಟ್ಟಿಗೆ** (ನಾ). ಒಂದು ಊರಿನ ಹೆಸರು: ಗಾವುಂಡಯ್ಯ ನಾಟ್ಗಿವ[ಡು]ಗೆಯ್ಯೆ ತವುದಟ್ಟಿಗೆ ನಱಿಬ್ಬೆಗವುಣ್ಡಯ ಮಗ ಅಮ್ಮಣ್ಣಗವುಣ್ಡ ತನ್ನೂರಟಿವ ಕಣ್ಡು (ಎಕ. VIII, ಸೊರಬ. ೩೩೪-೯ : 999). [ ? ]

**ತವುದಲೆ, ತೌದಲೆ** (ನಾ). ಮುಂಗಿವು; ಮುಕ್ತಾಯ; ಕೊನೆ; ಅಂತ್ಯ: ಜೂದಾಡಿ ಸೋಲ್ತು ನನ್ನಿಗೆ ಮೇದಿನಿಯಂ ಕೊಟ್ಟು ಪಾಂಡುನಂದನರೀಗಳ್ ಪೋದೊಡಮೇನ್ ತಿಣುಕಾಗದೆ ಪೋದಪುದೇ ನಮ್ಮ ನೃಪತಿಗವು ತವುದಲೆಯೊಳ್ (ಪಂಪಭಾ. ೭-೧೮) : ಅಪರನುಭವಿಸುವರಾಯುವ ತವುದಲೆವರ ಮಧಿಕದುಃಖಮಂ (ಅಜಪು. ೧೧-೧೧) ; ಕವುಂಗು, ಕೌಂಗು ; ತವುದಲೆ, ತೌದಲೆ[ಪಾಠಾಂ. ಕವದಲೆ, ಕೌದಲೆ] (ಭಾಷಾಭೂ. ೧೩೩ ಉದಾ) : ಶಿಶಿರದ ತವುದಲೆಯುಂ ನವವಸಂತಸಮಯಪ್ರವೇಶಮುಂ ತಮ್ಮೊಳ್ ಸಂದಿಸೆ ಬಣ್ಣಿಸಲರಿದು (ಗಿರಿಕ. ೭-೩೫). **ತೌದಲೆ** : ಅರಮನೆಗಿಂಬುವೆತ್ತ ರಣಮಂಡಳಮಾ ರಣಮಂಡಳಕ್ಕೆ ಬಿತ್ತರಿಸಿದ ಬೀದಿ ವೀಧಿಗಳ ತೌದಲೆ[ಪಾಠಾಂ. ಕಾದಲೆ, ಕಾಲ್ಗೆಲೆ]ಗೊಪ್ಪುವ ಮಂಡಪಂ ಮನೋಹರತರ ಮಂಡಪಕ್ಕೆ ಕರುವಿಟ್ಟವೊಲಿರ್ಪ ಸುಧಾಗೃಹಂಗಳಚ್ಚರಿಯೆನೆ ಚೈತ್ರಚಂದ್ರಮರೆ ಚಿತ್ರಿಸಿದಂತೆಸೆದಿರ್ಪುದಾ ಪುರಂ (ಅನಂಪು. ೧೧-೧೩) ; (ಸೂಕ್ತಿಸು. ೪-೧೪೭ ನೋ.).
[ ತವು$_1$ + – ದಲೆ ]

**ತವುದಲೆಗಾಣಿಸು, ತೌದಲೆಗಾಣಿಸು** (ಕ್ರಿ). ಕೊನೆಯಾಗ್ನು ಕಾಣಿಸು ; ಕೊಲ್ಲು ; ನಾಶಪಡಿಸು : ತೊಲಗದೆ ನಿಂದ ವೀರನಂ ತಲೆಗಱಿದುರುಳ್ಚುವ ಮೂದಲಿಪ ವೀರನಂ ತವ[ಪಾಠಾಂ. ತೌ]ದಲೆಗಾಣಿಪ (ರಾಜಶೇ. ೬-೧೧ ವ). **ತೌದಲೆಗಾಣಿಸು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ತವುದಲೆ + ಕಾಣಿಸು ]

**ತವುದಾಯ** (ನಾ). ಒಂದು ಬಗೆಯ ಸುಂಕ : ದಣ್ಣದೋಷಂ ತವುಕುಲಿ ತವುದಾಯ ಸುಬೂದಗೂಳ ಪ್ರಾ[ಯ]ಶ್ಚಿತ್ತಂ ತಿಪ್ಪೆಸು[ಙ್ಕ]ಂ ಗಾಡಿಯ ಸುಙ್ಕಂ (ಎಕ. XI, ದಾವಣ. ೧೩೯-೫೧ ; 1108). [ ? ]

**ತವುರು** 'ತಮುರ್' ನೋ.

**ತವುಳಿ** 'ಟವಳಿ' ನೋ.

**ತವೆ$_1$, ತವಿ** (ಕ್ರಿ). ೧. ಕುಂದು ; ಕಡಮೆಯಾಗು : "ತವೆದುದು ತೀರ್ದುದು ಬೀತುದು ಸವೆದುದೆನಲ್ ಕ್ಷಯಮನೈದಿತೆಂದಱಿಗೆ ಬುಧರ್" (ಛಂದೋಂ. ೪೩) ; ಚಕೋರಚಿತ್ತದೊಳ್ ನೆಲಸಿದ ಸನ್ಮುದಂ ತವೆದು ತೊಟ್ಟನೆ ಪೋಯ್ತು . . . ನೆಱೆ ನಿಷ್ಕಳನಾಗೆ ಕರಂ ನಿಶಾಕರಂ (ಕುಸುಮಾ. ೪-೬೮): ತವೆಯದ ಸೊಬಗಿಂ ನೀರಾಟವನಾಡುವ ಕಾಂತೆಯರ್ಕಳೊಳ್ಜನನಾಥಂ . . . ಜಲಕೇಳಿಯಂ ನೆಗಟ್ಚಿ ತಮೆಸೆದಂ (ಉದ್ಭಟ. ೯-೯೬): ಗೃಹಗುಪ್ತಂ ವಣಿಙ್ಮುಖ್ಯನಿರ್ಪಂ ಮುದದಿಂ ಕಲ್ಯಾಣದಿಂದಂ ತವೆಯದ ನವರತ್ನಂಗಳಿಂ (ಧರ್ಮಾ. ೧೩-೧೬೩) : ಲತೆಗೆಸೆವಾಲಿಂಗನದಿಂ . . . ಅತಿರಂಜಿಸುವಮುಳ್ಗುಬ್ಬಿಗೆ ತವೆಯದ ರತಿಯ ಪರಿಣತೆಯಿನಾ ಮೋಹಿಪ ದಂಪತಿಗಳ್ ಮುಂ ಗುರುವಾಗಿ ಕರಂ ಕ್ರೀಡಿಸದರ್ ವನದೊಳಗೆ (ಜಯನೃ. ೧೩-೬೬): ತವಕಂ ತವೆಯದವೊಲ್ . . . ಅಣ್ಮಂಗೊಲವೀವಳ್(ಉದ್ಭಟ. ೨-೬೩). ೨. ಮುಗಿ ; ತೀರು : ಅಲ್ಲಿಯ ಸಾರಮಪ್ಪ ಬೆಳಸಂ ಸಲೆ ಕೊಯ್ದುದಱೆ ತೀರ್ಚಲಾಱರಂತಲ್ಲದೆ ಕೊಯ್ದೊಡಂ ತವೆಯಲೊಕ್ಕಿ ಸುರಾಶಿಗಳಂ ವಿನಿರ್ಮಿಸಲ್ ಸಲ್ಲರ್ (ಬಾಧಪು. ೪-೧೮). **ತವಿ** : ೩. ಸೊರಗು ; ಬಡವಾಗು; ಕೃಶವಾಗು : ಅನುದಿನಂ ನೊಂತು ನೊಂತು ತನು ತವಿಯೆ (ರಾಮಾಶ್ವ. ೭೭-೧೮). ಸವೆ, ಸವೆ, ತವಿ(ತವು), ಸೊರಗು, ಕೊರಗು, ನೆಳ್ಗು (ನೆಗ್ಗು) (ಕಂನುಡು. ೮೬). [ <ತವು$_1$./ತಮಿ. ತವ ]

**ತವೆ$_2$** (ಅ). ಅತಿಶಯವಾಗಿ, ಹೆಚ್ಚಾಗಿ, ಪೂರ್ತಿಯಾಗಿ, ಸಂಪೂರ್ಣವಾಗಿ, ಚೆನ್ನಾಗಿ, ಸರಿಯಾಗಿ, ಮುಗಿಯುವಂತೆ ಎಂಬೀ ಅರ್ಥಗಳಲ್ಲಿ ಪಾದಪೂರಣಕ್ಕಾಗಿ ಬರುವ ಶಬ್ದ : "ನೆಱೆ ಸಲೆ ತವೆ ಮಿಗೆಯೊಗು ಮಿಗೆಯುಱೆಯೆಂಬಿವು ಪಾದಪೂರಣಾರ್ಥಂ"(ಛಂನಿ. ೩೪): ದುಷ್ಟನೊರ್ವ ನದಱ ಫಲಮಂ ತವೆ ತಿಂಬವಂ . . . ಕುಷ್ಟವಿಟ್ಟ ಬಿದಿರನ್ತೆ ಕುಲಕ್ಷಯವಾಗುಗುಂ (ಎಕ. VIII, ನಗರ. ೬೦-೧೩ ; 897) : ಭುಜಬಲಿ ಕಣ್ಗೊಳೆ ತವೆ ಪೀರ್ವವೊಲೇ ನಿಶ್ಚಳ ತನು ಸಡೆ ನೋಡೆ ಭರತರಾಜಂ ಸೋಲ್ತಂ (ಆದಿಪು. ೧೪-೧೦೫) : ಪೊಸ ಪೂಮಾಲೆಯಿದಿರ್ಪುದೇನು ತವೆ ಮುಡಿವರಿಲ್ಲದೊಡೆ (ಪಪಕಾ. ೧-೩೫) : ತಿಮಿಯುಂ ತಿಮಿಂಗಿಳನಡಂಗುವಿನಂ ತವೆ ನುಂಗೆ (ಕಾವ್ಯಸಾ. ೭೬); ನವರತ್ನದ ಗಿಂಡಿಯ ಪನ್ನೀರಲಿ ತವೆ ಕೈಕಾಲ್ತೊಗದೊಳೆದು (ಕಂನವಿ. ೧೦-೫೩). [ <ತವು$_1$ ]

**ತವೆ$_3$** (ನಾ). ೧. ರೊಟ್ಟಿ ಮೊದಲಾದುವನ್ನು ಬೇಯಿಸಲು ಉಪಯೋಗಿಸುವ ಕಬ್ಬಿಣದ ಒಂದು ಬಗೆಯ ಸಾಧನ; ಕಾವಲಿ: ಹಂಚು: ಅಡುಗೆ ಮಾಡಲು ಅವರಲ್ಲಿ ಗಡಿಗೆ–ಮಡಕೆಗಳೂ ತಪ್ಪೇಲಿ ತವೆಗಳೂ ಇದ್ದಿಲ್ಲ (ಮತಂಪ. ೨೫): ಇನ್ನು ಧಾರವಾಡದಲ್ಲಿರುವುದೆಂದರೆ ಕಾಯ [illegible] ಮೇಲೆ ತಲೆಯಿಟ್ಟು ಮಲಗಿದಂತೆ (ಮುಕ್ತಿ. ೨೦೧): ರೊಟ್ಟಿಗಳನ್ನು [illegible] ಅತ ತವೆ ಹಚ್ಚಿದ (ಧೂಮಮ. ೯೮). ೨. ಅಡುಗೆಯ ಪಾತ್ರೆಗಳ ಮೇಲೆ ಮುಚ್ಚುವ ತಾಮ್ರ, ಹಿತ್ತಾಳೆ ಮೊದಲಾದುವುಗಳಿಂದ ಮಾಡಿದ [illegible] (ಸ) [ ←ಹಿಂ. ಮರಾ. ತವಾ ]

**ತಶಬೀರು** 'ತಸಬೀರು' ನೋ.

**ತಶಬೀರುಯಂತ್ರ** (ನಾ). ಚಿತ್ರವನ್ನು ತೆಗೆಯುವ ಯಂತ್ರ; ಛಾಯಾ ಗ್ರಹಣ ಯಂತ್ರ: ನಾಟಕಕಾರರು ತಮ್ಮ ಮನಸ್ಸೆಂಬ ತಶಬೀರುಯಂತ್ರ (Camera) ದಿಂದ, ನಮ್ಮ ಹಳ್ಳಿಯ ಸಮಾಜದ ಕೆಲವು ದೃಶ್ಯಗಳನ್ನು ಮೂಡಿಸಲು ಯತ್ನಿಸಿದ್ದಾರೆ (ತಿರುಗು. ೪, ೩೬೦೫).
[ ತಶಬೀರು (<ತಸಬೀರು) + ಯಂತ್ರ ]

**ತಷ್ಟ** (ಗು). ಕೆತ್ತಿದ; ಹೆರೆದು ತೆಳುವಾಗಿ ಮಾಡಿದ. [ಸಂ.]

**ತಷ್ಟಿ** (ನಾ). ತೊಂದರೆ; ಕಷ್ಟ: ಸೃಷ್ಟಿಸುವ ರಕ್ಷಿಸುವ ಕೆಡಿಸುವ ತಷ್ಟಿಯಿಲ್ಲದವಂ ಸವಿಗಳಿಂ ದೃಷ್ಟವಾಗದವಂ (ಬಸಪು. ೫೧-೪೯). "ಉಸಾಬರಿ" (ಬಸಪು. ಕೋಶ). [ ? ]

**ತಷ್ಟೃ** (ನಾ). ಬಡಗಿ; ಮರಗೆಲಸದವನು. [ಸಂ.]

**ತಸಕ್** 'ತಸಕು₂' ನೋ.

**ತಸಕಲು** (ನಾ). ಮೋಸ; ವಂಚನೆ; ಠಕ್ಕು: (ಶಿ).
[ ತಸಕು₁ (<ತಸುಕು) + -ಅಲು (<-ಅಲ್₂) ]

**ತಸಕು₁** 'ತಸುಕು' ನೋ.

**ತಸಕು₂, ತಸಕ್** (ನಾ). ಒಂದು ಅನುಕರಣ ಶಬ್ದ. **ತಸಕ್**: 'ತಸಕ್ಕನೆ' ಪರಾ.

**ತಸಕ್ಕನೆ** (ಅ). ತಸಕ್ ಎಂದು ಶಬ್ದವಾಗುವಂತೆ: (ಶಿ).
[ ತಸಕ್ (<ತಸಕು₂) + -ಅನೆ₁ ]

**ತಸದೀಕು, ತಸ್ತಿಕು, ತಸ್ತೀಕು** (ನಾ). ೧. ದೇವಸ್ಥಾನ, ಮಸೀದಿ, ಛತ್ರ ಮೊದಲಾದುವುಗಳಿಂದ ವಶಪಡಿಸಿಕೊಂಡಿರುವ ಭೂಮಿಗೆ ಪರಿಹಾರವಾಗಿ, ಸರಕಾರವು ಕೊಡುವ ನಿಗದಿಯಾದ ಹಣ: ಚತ್ರದ ತಸದೀಕಿನ ಐವಜಿನಲ್ಲಿ ಶ್ರೀಮಠಕ್ಕೆ ಸಲ್ಲುತ್ತಾಯಿದದ್ದನ್ನು ಮವಕುಫ್ ಮಾಡ್ಸಿ (ಮೈಆರಿ. ೧೦೩೮, ೨೬-೯; 1830). ೨. ಸರ್ಕಾರವು ಕೊಡುವ ವರ್ಷಾಶನ; ಉಂಬಳಿ: ನಿತ್ಯನೈಮಿತ್ತಿಕ ಪೂಜಾ ನಡೆಯೂ ಬಗ್ಗೆ ತಸದೀಕು ದಾಖಿಲೆಯ ಮಾಡಿಸಿ ತಸದೀಕಿಗೆ ದಸಕತ್ತು, ಮೊಹರು ಮಾಡಿಸಿರುವ ಪ್ರಕಾರ ಖುಲ್ಲ ತಸದೀಕು ಕಂ ೨೨ (ಎಕ. III, ತಿರುಮ. ೫೬-೫೦; 1855); ಮಾಜಿ ಅಮಿಲಾಲರು ಕಾಗದಪತ್ರ, ತಸದೀಕು, ಜಿನಸಿ ಮುಂತಾದುದನ್ನು ವಹಿಸಿಕೊಡುವುದು (ಮಹಾವಂ. II, ೫೬); ಪ್ರಾಕಿನಿಂದ ಹತ್ತೋ ಇಪ್ಪತ್ತೋ ರೂಪಾಯಿ ತಸದೀಕು ಸಿಗುತ್ತದೆಯಂತೆ (ಹಹಸ. ೧); ಅರ್ಚಕ ವೃತ್ತಿಗೆ ಪ್ರತಿಫಲವಾಗಿ ಹದಿನಾರು ರೂಪಾಯಿ ತಸದೀಕು ಕೊಡುತ್ತಾರೆ (ಅನಾಥ. ೯). **ತಸ್ತಿಕು**: ೨. ಸರಕಾರದಯಿಂದಾ ಯೆನಾದರ್ರು ತಸ್ತಿಕು ಅಪ್ಪಣೆ ಆಗಬೇಕೆಂಬದಾಗಿ (ಮೈಆರಿ. ೯೯೪೩, ೩೯-೧೫; 1813). **ತಸ್ತೀಕು**: ೧. ಮುನ್ನೂರು ತೊಂಬತ್ತಮೂರು ವರಹಾವು ಐದುಹಣ ತಸ್ತೀಕು ನಡಶಿಕೊಂಡು ಬರುವಂತೆ (ಎಕ. III, ಮೈಸೂರು. ೧-೨೦; 1822); ತಸ್ತೀಕು ನಿರೂಪಕ್ಕೆ ಅಪ್ಪಣೆ(ಎಕ. II, ೧೬-೨೫; 1830); ಈ ದೇವರಿಗೆಲ್ಲಾ ನಿತ್ಯ ಕಟ್ಟಲೆ ಪಡಿತರ ದೀಪಾರಾಧನೆ ರಥೋತ್ಸವ ಮೊದಲಾದ ಉತ್ಸವಗಳು ನಡೆಯುವದಕ್ಕೆ ತಸ್ತೀಕುಗಳನ್ನು ಉಂಟುಮಾಡಿ ಗ್ರಾಮ ಭೂಮಿಗಳನ್ನು ಕೊಡಿಸಿದನು (ಚಾಮವಂ. ೫೬); ಛತ್ರದ ತಸ್ತೀಕು ಹೆಚ್ಚಿಸುವ ವಿಚಾರ ಅರಿಕೆಮಾಡಿಕೊಳ್ಳಲು ಬಂದೆ (ಬೆಂಗಾಳ್ಯ. ೫೩೬).
[ ←ಅರ. ತಸದ್ದುಕ್; ಮರಾ. ತಸ್‌ದೂಕ್, ತಸ್ದೀಕ್ ]

**ತಸಬೀರ** 'ತಸಬೀರು' ನೋ.

**ತಸಬೀರು, ತಶಬೀರಂ, ತಸಬೀರ, ತಸವೀರು, ತಸ್ವೀರು** (ನಾ). ಚಿತ್ರ; ಭಾವಚಿತ್ರ: ನಮ್ಮ ತಸಬೀರು ಬರೆಯುವೆಯಾ ಎಂದು ಹೋಳಕರನು ಕೇಳಲು (ಮುಂಬಯಿ. ೩-೪೯); ಮೊಗಲ ಅರಸರು ತಸಬೀರು (Portrait) ಪ್ರಿಯರು (ಬಾಲಪ್ರ. I, ೩೨೧); ಅದು ನನ್ನ ತಂದೆಯ ತಸಬೀರು (ನಿಪ್ಪಾಮ. ೭೫). **ತಶಬೀರು**: ಒಂದು ಚಿತ್ರ ಅಥವಾ ತಶಬೀರು(ತಿರುಗು ೩೧). **ತಸಬೀರ**: ದೊಡ್ಡ ದೊಡ್ಡ ಚೌಕಟ ಸಹ ಕನ್ನಡಿಗಳೂ ತಸಬೀರಗಳೂ . . . ಹೇಳಿ ತಯಾರಮಾಡಿಸಬೇಕಾಗುತ್ತದೆ (ಮುಂಬಪ್ರಾ. ೨೮೧). **ತಸವೀರು**: ಮನೆಯ ತಸವೀರುಗಳನ್ನೂ ಮಾರಿದೆಯಾ (ದೇವದಾ. ೯೩); ಅದರಿಂದಲೇ ಅವರಲ್ಲಿ, ತಸವೀರನ್ನು (Portrait) ಬರೆಯುವ ಪದ್ಧತಿಯು ಬೆಳೆದುದು (ಭಾಚಿತ್ರ. ೩೦). **ತಸ್ವೀರು**: ತಸ್ವೀರು ಬರೆಯುವಂಥ ನಸ್ಸಾಪೇಬರವರು ಮಡಿಕೇರಿಗೆ ಬಂದು ಇದ್ದಲ್ಲಿ (ರಾಜೇಂದ್ರ. ೧೪೭).
[ ←ಅರ. ತಸ್ವೀರ್; ಹಿಂ. ತಸ್ವೀರ್; ಮರಾ. ತಸ್‌ಬೀರ್; ತಸ್‌ವೀರ್ ]

**ತಸರೀಫ್, ತಸ್ಲೀಪು** (ನಾ). ಗೌರವಪೂರ್ವಕವಾಗಿ ಕೊಟ್ಟ ಕಾಣಿಕೆ,-ಉಡುಗೊರೆ: ವಿಲಾಯಿತಿಯಿಂದ ಬಂದ ತಸರೀಫ್ ಪದಾರ್ಥಗಳನ್ನು . . . ಆನೆಯ ಮೇಲೆ ಅಂಬಾರಿಯಲ್ಲಿಟ್ಟು ಸಕಲ ಮರ್ಯಾದೆಗಳೊಡನೆ ಮೆರೆವಣಿಗೆ ಮಾಡಿಸಿಕೊಂಡು (ಮಹಾವಂ. II, ೧೧೮). **ತಸ್ಲೀಪು**: ಅರಸರು ಅವನನ್ನು ಸಮಾಧಾನ ಪಡಿಸಿ ಅನೇಕ ತಸ್ಲೀಪು ತಾಂಬೂಲಗಳನ್ನು ಕೊಟ್ಟು ಮರ್ಯಾದೆ ಮಾಡಿ ಕುಳ್ಳಿರಿಸಿದರು (ಬಜ್ಜೆರು. ೩).
[ ←ಅರ. ಹಿಂ. ತಶ್‌ರೀಫ್; ಮರಾ. ತಶ್‌ರೀಫ್, ತಸ್‌ರೀಫ್ ]

**ತಸವೀರು** 'ತಸಬೀರು' ನೋ.

**ತಸುಕು, ತಸಕು₁** (ನಾ). ಮೋಸ; ವಂಚನೆ; ಠಕ್ಕು: ನಾಗರಿಕತೆಯೆಂದೆನಿಸಿಕೊಳ್ಳುವ ಲೋಕಾಚಾರದ ತಸುಕುಗಳನ್ನೂ ಮರೆಯುವಂತೆ ಮಾಡುವೆಯಲ್ಲವೆ ನೀನು (ಜ್ಯೋತಿರ್ವಿ. ೧೮). **ತಸಕು₁**: ಇನ್ನೂ ನಿಮ್ಮ ತಸಕು ಬಿಡುವದಿಲ್ಲವಷ್ಟೆ? (ವಾಗ್ಜೀವಿ. ೧೪೯). [ದೇ.॥ ತೆಲು. ತಸುಕು]

**ತಸ್ಕರ** (ನಾ). ಕಳ್ಳ; ಚೋರ: "ಐಕಾಗಾರಿಕಃ, ತಸ್ಕರಃ, ದಸ್ಯುಃ . . . ಸ್ತೇನಃ-ಈ ೧೦ ಕಳ್ಳಂ" (ಹಲಾಯು. ೫೬-೧೮೩); ತಸ್ಕರ ನನಧನನಂ ನೀಡಜಿಂ ನೋಡಿ ಕಂಡಳ್ (ಸುಕುಮಾ. ೭-೧೮); ದುರ್ಜನಂ ದುರ್ಮದಂ ತಸ್ಕರರೆಂಬೀ ಕಂಟಕಸ್ತೋಮದ ನಡುವೊಡಲಿರ್ಪಂದಮೇಂ ಸೋಜಿಗಂ (ರಕ್ಷಾಶ. ೨೯); ಪುಂಡಾಟವ ಕಲಿತ ಮಗನು ತಸ್ಕರ ಭೃತ್ಯಂ ಚಂಡಿಯ ಮಾಡುವ ಸೊಸೆ ಹಗೆ ಕಂಡಾ (ಪಂಚಶ. ೩೦-೪೮); ನಾನು ತಸ್ಕರನಾಗಿ . . . ಗುಲಾಬಳ ಮಂದಿರವನ್ನು ಹೊಕ್ಕೆನು (ಎಳೆಕ.೫೫). [ಸಂ.]

**ತಸ್ಕರಶಾಸ್ತ್ರ** (ನಾ). ಚೋರವಿದ್ಯೆ; ಕಳತನದ ಉಪಾಯ ಮೊದಲಾದುವುಗಳನ್ನು ತಿಳಿಸುವ ಶಾಸ್ತ್ರ: ಆ ಕಳ್ಳನು ಬಗೆಬಗೆಯ ತಸ್ಕರಶಾಸ್ತ್ರಗಳಲ್ಲಿ ಬಹು ಕುಶಲನಾದವನು (ಕಸಾಚಿ. ೧). [ತಸ್ಕರ + ಶಾಸ್ತ್ರ]

**ತಸ್ಕರಿಸು** (ಕ್ರಿ). ಕಳವುಮಾಡು; ಕದಿ; ಅಪಹರಿಸು: ಶಿವಭಕ್ತರು . . . ಅನ್ಯದ್ರವ್ಯವ ತಸ್ಕರಿಸಿಕೊಳ್ಳಲಾಗದೆಂಬುದಂ . . . ನುಡಿದರ್ ಮಹಾಪುರಾತನರು (ಗಣಭಾ. ೦೬೭); ಪರಮವೇದಂಗಳ ತಸ್ಕರಿಸಿದ ತಮಾಸುರ ಗುಪ್ತದೊಳಡಗಿರಲು (ಮೋಹತ. ೩೭-೨೨); ರಾವಣ ನಿಮ್ಮನ್ನು ದುರುಳ ಬುದ್ಧಿಯಲ್ಲಿ ತಸ್ಕರಿಸಿಕೊಂಡಿತ್ತ ಬರಲು (ಹನುಮ. ೩೩); ತಮ್ಮ ವಸ್ತುವನ್ನು . . . ಇತರರು ತಸ್ಕರಿಸಿಕೊಂಡು ಹೋಗಲು ಅವಕಾಶ ಕೊಟ್ಟು (ರಾವಿಜ. ೮೧). [ತಸ್ಕರ + -ಇಸು₃]

**ತಸ್ಕರೆ** (ನಾ). ಅಪಹರಿಸುವವಳು; ಕಳ್ಳಿ: ತಪಿತೆ ತಸ್ಕರೆ ತವಕಿ ತವೆ ತಂದ್ರಿ ತಾಮಸಿಯೆನಿಪ ವನಿತೆಯರ ನಿಜಕೆ ನಿಲಿಸಿ ನಿಶ್ಚೈಸಿದೊಡೆ ಬಳಿಕ ಬಳಲಿಕೆ ಬಾರದೆ (ಜೈಮಿಭಾ. ೫-೭೧). [ಸಂ. ತಸ್ಕರಾ]

**ತಸ್ಕಾನ** (ನಾ). ಮಲ; ಹೇಲು: ಆ ವಿಷಯ ತೀರಿದ ಬಳಿಕ ಆ ಯೋನಿ ತಸ್ಕಾನದ ಕುಣಿಗಿಂದ ಕಡೆಯಾಗಿಪ್ಪುದು ನೋಡಾ (ಸಿದ್ದೇವ. ೪೧-೦೦೨); ಲಲನೆಯರ ನಂಬಿ ಶಿವಸುಖವನಜಿಯದಿಪ ಮಲದೇಹಿಗೆತ್ತಣದು ನಿತ್ಯಾ ತಸ್ಕಾನದಾ ಕುಳಿಯ ವಿಸ್ತರಿಸಲೇತಕೆಲೊ ವಿಸ್ತರಿಸಿ ಹೋದಳಡ್ಡವಾಗ ಹುದು ನರಕವದು ಒತ್ತರಿಸಿ ಕಳದಡವ ಮುಕ್ತಾ (ಗುರುಬೋ. ೧೧-೦೦೭).
[←ಪಾರ. ಮರಾ. ದಸ್ತ್]

**ತಸ್ತ** 'ತಸ್ತು' ನೋ.

**ತಸ್ಸಿಕು** 'ತಸದೀಕು' ನೋ.

**ತಸ್ಸೀಕು** 'ತಸದೀಕು' ನೋ.

**ತಸ್ತು, ತಸ್ತ** (ನಾ). ಅಗಲವಾದ ಬಾಯುಳ್ಳ ಹಿತ್ತಾಳೆ ಅಥವಾ ತಾಮ್ರದ ನೀರಿನ ಪಾತ್ರೆ: (ಶ). **ತಸ್ತ:** ಟಂಕಸಾಲೆಯಲ್ಲಿ ೧೨೫೦ ರೂಪಾಯಿ ತೂಕ ಬೆಳ್ಳಿಯನ್ನು ತಸ್ತದಂಥದ್ದೊಂದು ಮುಶಿಯೊಳಗೆ . . . ಕರಗಿಸುವರು (ಕಥಾಗ. ೨೮೨). [ ←ಪಾರ. ಹಿಂ. ತಷ್ತ್ ; ಮರಾ. ತಸ್ತ್ ]

**ತಸ್ಥಿವಾಂಸಕೆ** (ನಾ). [ಸಂಗೀತ] ಶ್ರುತಿಗಳಲ್ಲಿ ಒಂದು : ರೇಣುಕಿ, ಲಲಿತೆ, ತಸ್ಥಿವಾಂಸಕೆ[ಪಾಠಾಂ. ತಸ್ತುವಾಂಸೆ, ಸ್ವರವಾಂಸೆ]ಯೆಂಬ ನಾಲ್ಕು ಶ್ರುತಿಗಳೇ ಪಂಚಮಸ್ವರದಿಂದೊಗೆದವು (ವಿವೇಕ. ೨೩೨). [ ? ]

**ತಸ್ಲೀಫು** 'ತಸರೀಫ್' ನೋ.

**ತಸ್ಲೀಮು** (ನಾ). ಸಲಾಮು; ವಂದನೆ: ಆತನು ಮೂರು ಸಾರೆ ತಸ್ಲೀಮು ಮಾಡಿ ಹಿಂದಕ್ಕೆ ಸರಿಯಲು . . . ಮಂತ್ರಿಯು ತಸ್ಲೀಮು ಮಾಡಹತ್ತಿದನು (ಸತ್ಯಸಾ. ೪೬). [ ←ಅರ. ಹಿಂ. ಮರಾ. ತಸ್ಲೀಮ್ ]

**ತಸ್ವೀರು** 'ತಸಬೀರು' ನೋ.

**ತಹ₁** 'ತರ್' ಪರಾ.

**ತಹ₂** (ನಾ). ಸಂಧಾನ ; ಒಪ್ಪಂದ. 'ತಹಪತ್ರ' ಪರಾ.

**ತಹಮಾಡು** = ಸಂಧಾನಮಾಡು : ಮುಂದಹ ಕಾರ್ಯಗಳ ತಹಮಾಡಿ ನಿರ್ಧರಿಸೆನಲು ಜಾಂಬವ ಮುಖ್ಯಮಂತ್ರಿಗಳ ಕೂಡಿ ಯೋಚಿಸಿದನು (ಅನಂರಾ. ೪-೨-೨೮). [ ←ಪಾರ. ಮರಾ. ತಹ್ ]

**ತಹಕ** (ನಾ). ತವಕ ; ಕಾಳಜಿ; ಚಿಂತೆ ; ಗೊಡವೆ (?) : ಮಲುತಿರಲು ಬೇವನು ಸಹಜದಿಂ ಬೇಡೆನಲು ಬಿಡುವನೆ ತನಗೆ ವಿಷವೇರಿ ಅಹಿತವಾದರೆ ತಾನೆ ಬಿಡುವನು ತಹಕ ನಮಗೇಕದಕ (ಜನಥಾ. ೨೦-೬೪); ಅಹಿತ ಬಂದಿಹುದೀಗ ಮುಂದವರಿಹರು ಅನ್ಯೋನ್ಯದಲಿ ಯಿಂತಿದಕೇನು ಸಂಗಟದಾ ತಹಕ ನಮಗೇಕಾನು ನೀ ನೆರವಹುದು ಅವರವರಿಂಗೆ ಸರಿಯಂತಿಹುದೊ ಅದಕೇನೆಮಗೆ (ಜನಥಾ. ೪೭-೪೨) ; ಇಹುದು ಸಂತಸದಲ್ಲಿ ಕಾರ್ಯದ ತಹಕವರಿದ್ಯದಿಸುವೆನೆಂದತಿಗಹಕದಲಿ ಮತ್ಸ್ಯೇಂದ್ರ ಸಹಿತೊಲವಿಂದ ಬೀಳ್ಕೊಟ್ಟ (ಜನಥಾ. ೬೨-೮). [ <ತವಕ? ]

**ತಹಕೀಕು** (ನಾ). ೧. ಶೋಧನೆಯಿಂದ ಸಿದ್ಧವಾದುದು ; ಸತ್ಯಸಂಗತಿ; ನಿಶ್ಚಿತವಾದುದು : (ಶ). ೨. ಒಂದು ವಿಷಯ ಅಥವಾ ಘಟನೆಯ ಮುಖ್ಯ ಅಂಶಗಳನ್ನು ಕಂಡುಹಿಡಿಯುವುದು ; ಶೋಧನೆ ; ವಿಚಾರಣೆ; ತನಿಖೆ : ಆಗ ತಕರಾರು ಸಲ್ಲಾ ಅದ ಪ್ರಕಾರ ತಹಕೀಕು ಮಾಡಲಾದೀತು (ರಾಜೇಂದ್ರ. ೫೦). [ ←ಅರ. ಹಿಂ. ಮರಾ. ತಹಕೀಕ್ ]

**ತಹಕೂಫ್** 'ತಹಕೂಬ' ನೋ.

**ತಹಕೂಬ, ತಹಕೂಫ್** (ನಾ). ಕೆಲಕಾಲದವರೆಗೆ ತಡೆಹಿಡಿಯುವಿಕೆ ; ಸಮಯವನ್ನು ಮುಂದೂಡುವುದು: ಈ ಮೂರೂ ತಾಲೂಕಿನ ರೈತರು ಸರಕಾರದವರಿಗೆ ಮೊರೆ ಇಟ್ಟು ಕಂದಾಯ ವಸೂಲಿ ತಹಕೂಬ ಇಡಲು ಪ್ರಾರ್ಥಿಸಿಕೊಂಡಿದ್ದರು (ಕರವೀ. ೬೩) ; ತಮ್ಮ ಚಟುವಟಿಕೆಗಳನ್ನು ದಯವಿಟ್ಟು ಸದ್ಯಕ್ಕೆ ತಹಕೂಬ ಇಡಬೇಕು (ಗಂಮಾಯಿ. ೯೮). **ತಹಕೂಫ್ :** ಅರಸನು ಪಾರ್ಲಿಮೆಂಟ ಸಭೆಯನ್ನು ಒಂದು ಸಭಾಕಾರ್ಯ ಕಾಲದಿಂದ ಮತ್ತೊಂದು ಸಭಾಕಾರ್ಯ ಕಾಲದವರೆಗೆ ತಹಕೂಫ್ ಮಾಡಬಹುದು (ಮುಂಬಯಿ. ೬-೧೩೬).

[ ←ಮರಾ. ತಹಕೂಬ್, ತಕೂಬ್ ; ಅರ. ತವಕ್ಕುಫ್ ]

**ತಹತಹ** (ನಾ). ೧. ಆತುರ ; ತವಕ. 'ತಹತಹಪಡು' ಪರಾ. ೨. ಕಳವಳ ; ಚಿಂತೆ : ಯಾತಕೀ ಪರಿತಾಪ ಲಕ್ಷ್ಮಣ ಚೇತರಿಪನಿನಕುಲನ ಬಾಣದಿ ಯಾತುಧಾನರು ಮಡಿವರೀ ನುಡಿಗಿಲ್ಲ ಸಂದೇಹ . . . ತಹತಹವೇಕೆ ನಿನಗೆಂದ (ಅನಂರಾ. ೬-೧೪-೫೦): 'ಯಾವ ಮಹಾರಾಯ ಮಾಡಿದನೊ ತಾಸಿಗೆ ಅರವತ್ತು ನಿಮಿಷ' ಎಂದು ಶಾಮಿಗೆ ತಹತಹ (ಕರಿಶಂ. ೨೫).

[ದೇ.॥ ತಮಿ. ತಹೈಪು ; ತೆಲು. ತಹತಹ ]

**ತಹತಹಪಡು** (ಕ್ರಿ). ೧. ಆತುರಪಡು ; ತವಕಪಡು : ಅನುವಿನ ವಿಷಯ ತಿಳಿಯಬೇಕೆಂದು ಆನಂದನ ಮನಸ್ಸು ತಹತಹಪಡುತ್ತಿತ್ತು (ಮುರುಕು. ೯೯) ; ಅವರ ಒಡವೆಗಳ ಚಿನ್ನವನ್ನು ಎಷ್ಟು ಹೊತ್ತಿಗೆ ಬೆಂಬೂದಿಯಿಂದ ಬಾಚಿಕೊಳ್ಳುವೆವೋ ಎಂಬುದಾಗಿ ಪುರೋಹಿತರು ತಹತಹಪಡುತ್ತ ನಿಂತಿದ್ದರು (ಭಾರವೀ. ೯). ೨. ಕಳವಳಪಡು ; ಸಂಕಟಪಡು : ಎಚ್ಚರ ವೇನೂ ಬರಲಿಲ್ಲ . . . ಏನು ಮಾಡಬೇಕೆಂದು ತೋರದೆ ತಹತಹಪಡುತ್ತ ನಿಂತಿದ್ದನು ಅಮರ (ಸಿಡಿಲು. ೮೪) : ಎರಡು ಹೊತ್ತು ಸರಿಯಾದ ಊಟ ಕಂಡರೆ ಸಾಕಲ್ಲಾ ಎಂದವನು ತಹತಹಪಡುತ್ತಿದ್ದ (ಶನಿಸಂ. ೬೫).

[ ತಹತಹ + ಪಡು₁ ]

**ತಹತಹಿಸು** (ಕ್ರಿ). ಆತುರಪಡು ; ತವಕಿಸು : ಮಿಂಚಿನ ಕಂಚುರಿನಾಲಗೆ ನಮ್ಮನೆ ನೋಡೆವಂತೆ ತಹತಹಿಸಿದೆ, ಗುಡುಗಾಗಿದೆ, ನಮ್ಮನೆ ನಗುವಂತೆ (ಅಹಲ್ಯ. ೨೧-೧೧). [ ತಹತಹ + – ಇಸು₃ ]

**ತಹನಾಮೆ, ತಹಾನಾಮೆ** (ನಾ). ಲಿಖಿತವಾದ ಒಪ್ಪಂದ; ಕರಾರುಪತ್ರ: ಮಹೀಶೂರದೇಶವನ್ನು ವಿಭಾಗ ಮಾಡಿಕೊಡುವ ವಿಷಯದಲ್ಲಿ ಇಂಗ್ಲಿಷ್‌ನವರಿಗೂ ನಿಜಾಮರವರಿಗೂ . . . ಒಂದು ತಹನಾಮೆಯು ನಡೆಯಿತು (ಜಾಮವಂ. ೨೬೧) : ಆ ಕಾಲದಲ್ಲಿ ಇಂಗ್ಲಿಷ್ ಸರ್ಕಾರದವರಿಗೂ ಮೈಸೂರು ಮಹಾರಾಜರವರ ಕಡೆ ಮಹಾಮಾತ್ಯಶ್ರೀ ಲಕ್ಷ್ಮಮ್ಮಣ್ಣಿಯವರಿಗೂ ನಡೆದ ತಹನಾಮೆಯ ಪ್ರಕಾರ (ಮಹಾವಂ. II, ೩) ; ರಾಬರ್ಟ್ ಟೈಲರ್ ಸಾಹೇಬರ ಮಾರಿಪತ್ತಿನಿಂದ ತಹನಾಮೆಯನ್ನು ಬರೆಸಿ, ತಲಚೇರಿ ಸರಕಾರದ ದಫ್ತರದಲ್ಲು ಮಡಗಿ ಇದೆ (ರಾಜೇಂದ್ರ. ೫೩). **ತಹಾನಾಮೆ :** ತಹಾನಾಮೆ ಬರದು ಇಡುವಾಗ್ಯೆ (ರಾಜೇಂದ್ರ. ೩೦). [ ←ಮರಾ. ತಹನಾಮಾ ]

**ತಹಪತ್ರ** (ನಾ). = ತಹನಾಮೆ : ಅದೇ ರೀತಿ ತಹಪತ್ರ ಮಾಡಿ ವಕೀಲರ ಕೈಯಲ್ಲಿ ಕೊಡುವಂತೆ ನಿಶ್ಚಯವಾಯಿತು (ಹಸಿವು. ೬೦).

[ ತಹ₂ + ಪತ್ರ ]

**ತಹಬಂದು** (ನಾ). ೧. ನಿಯಮ ; ನಿರ್ಬಂಧ : ಮುನ್ನಂ ಮಾಡಿದ ತಹಬಂದು ಕಟ್ಟುಗಳ್ ಮುರಿದುವೆಂಬ ಭಾವಮಂ ಮಾಡಿ (ಕಳನ್ನ. ೧೧-೩೮). ೨. ಹತೋಟಿ ; ಹಿಡಿತ ; ವಶ : ಸಾವಿತ್ರಿಯು ಮನಸ್ಸನ್ನು ತಹಬಂದಿಗೆ ಹೇಗೆ ತರುವುದೆಂದು ಯೋಚಿಸುತ್ತ ಕುಳಿತ (ತಾಯಿಕ. ೬೨) : ಅವಳು ಆ ಯೋಚನೆಯನ್ನು ತಹಬಂದಿಗೆ ತೆಗೆದುಕೊಂಡಳು(ಧೂಮಕೇ. ೬೪).

**ತಹಬಂದಿಗೆ ತರು** = ಅಳವಿಗೆ ತರು ; ಹತೋಟಿಗೆ ಒಳಪಡಿಸು : ಈ ಸೀಮೆಯನ್ನು ತಹಬಂದಿಗೆ ತರುವುದಕ್ಕೆ ಪೂರ್ಣಯ್ಯನವರಿಗೆ ತುಂಬಾ ಸಹಾಯಮಾಡಿದರು (ಮಹಾವಂ. II, ೩) : ತುಳಸಾಬಾಯಿಯವರು ಫಾಜರಿಯನ್ನು ಸ್ವಲ್ಪ ತಹಬಂದಿಗೆ ತಂದುಕೊಂಡು (ನಡದಾ. I, ೮೫೩). **ತಹಬಂದಿಗೆ ಬರು** = ಹತೋಟಿಗೆ ಬರು ; ಸಮಸ್ಥಿತಿಗೆ ಬರು : ತರಗತಿ ತಹಬಂದಿಗೆ ಬಂತು (ಸ್ವಾಮಿಸ್ನೇ. ೪೭) ; ಏಮುಸಿರು ಇನ್ನೂ ತಹಬಂದಿಗೆ ಬಂದಿರಲಿಲ್ಲ (ವಂಶವೃ. ೨೮೨) ; ಚಿಕಿತ್ಸೆಯನ್ನು ಪ್ರಾರಂಭಿಸಿದ ೨೪ ಗಂಟೆಗಳೊಳಗೆ ರೋಗ ತಹಬಂದಿಗೆ ಬಾರದೆ ಹೋದಲ್ಲಿ (ಕಲರೋ. ೨೫) : ವೈದ್ಯರು ಎಷ್ಟು ಪ್ರಯತ್ನ ಪಟ್ಟರೂ ರೋಗ ಇನ್ನೂ ತಹಬಂದಿಗೆ ಬಂದಿಲ್ಲ (ರೂಢಿ). [ ? ]

**ತಹರೀರು** (ನಾ). ಸಾರ್ವಜನಿಕ ಕೆಲಸಗಳ ಮೇಲ್ವಿಚಾರಕರಿಗೆ ಕೊಡುವ ಸಂಭಾವನೆ,–ಭತ್ಯ : (ಶ).

[ ←ಅರ. ಮರಾ. ತಹರೀರ್ = ಲೇಖನಕ್ಕಾಗಿ ಕೊಡುವ ಸಂಭಾವನೆ ]

**ತಹಲ್** 'ತಹಲು' ನೋ.

**ತಹಲು, ತಹಲ್** (ನಾ). ಸದ್ಯ ; ಪ್ರಕೃತಕಾಲ: ಡೆಪ್ಯೂಟಿಕಮಿಾಷನ್ನರೋ ಸಬ್‌ಡಿವಿಜನ್ ಆಫೀಸರೋ ತಾಲ್ಲೂಕಿನಲ್ಲಿ ತಯಾರಿಸಿ ತಹಲಿಗೆ ತರಲ್ಪಟ್ಟ ಲೆಖ್ಖಗಳನ್ನು . . . ಖಾಯಂ ಮಾಡುತ್ತಾರೆ (ಕಲನಿ. ೧೫೭). **ತಹಲ್ :** ಇಬ್ಬರನ್ನೂ ನಾನು ತಹಲ್‌ವರೆಗೂ ಒಂದು ಏಟು ಕೈಎತ್ತಿ ಹೊಡೆದಿಲ್ಲ (ಡಂಗೂರ. ೧೨೭). [ ? ]

**ತಹಶೀಲದಾರ** 'ತಹಸೀಲುದಾರ' ನೋ.

**ತಹಶೀಲುದಾರ** 'ತಹಸೀಲುದಾರ' ನೋ.

**ತಹಶೀಲ್ದಾರ** 'ತಹಸೀಲುದಾರ' ನೋ.

**ತಹಸಿಲದಾರ** 'ತಹಸೀಲುದಾರ' ನೋ.

**ತಹಸೀಲಿ** 'ತಹಸೀಲು' ನೋ.

**ತಹಸೀಲು,** ತಹಸೀಲಿ, ತಹಸೀಲೆ, ತಾಸೀಲು (ನಾ). ೧. ಕಂದಾಯದ ವಸೂಲಿ: (*). ೨. ಕಂದಾಯದ ವಸೂಲಿಗಾಗಿ ಮಾಡಿದ ಜಿಲ್ಲೆಯ ಭಾಗ ; ತಾಲ್ಲೂಕು : ಖಾಂಡ್ವಾ ತಹಸೀಲಿನಲ್ಲಿರುವ ಈಗಿನ ಮಾಂಧಾತ ವೆಂದೂ...ಹೇಳಿದ್ದಾರೆ(ಕರ್ನಾಅ. ೨): ತಹಸೀಲುಗಳಿಗೆಲ್ಲಾ ಈ ಸಮಾಚಾರ ವನ್ನು ತಿಳಿಯಪಡಿಸಿ ಆಂಗ್ಲೇಯ ಸರ್ಕಾರವನ್ನು ಸ್ಥಾಪಿಸಿದರು (ಧೂಂಡಿ. ೧೫೦). **ತಹಸೀಲಿ :** ೨. ರಾಜಾನುಗ್ರಹಕ್ಕೆ ಸಂಪೂರ್ಣ ಪಾತ್ರನಾಗಿ ಆದವಾನಿಯ ತಹಸೀಲಿಯಲ್ಲಿದ್ದನು (ಕಥಾ. II, ೨). **ತಹಸೀಲೆ :** ೨. ಸರಕಾರದಲ್ಲಿ ನೌಕರಿಗೆ ಸೇರಿದ್ದರೂ ಬಹುಕಾಲ ತಹಸೀಲೆಯ ವರ್ಗದಲ್ಲಿ ತಾಲೂಕುಗಳನ್ನು ಆಳಿ . . . ನಿವೃತ್ತರಾಗಿದ್ದರು (ದಾಸಕೂ. ೭): ರಂಗನಾಥರಾಯರ ತಹಸೀಲೆಯ ಆಳಿಕೆಯಲ್ಲಿ ಅವರು ತಾಲೋಕು . . . ಕ್ಷಾಮಕ್ಕೆ ಈಡಾಯಿತು (ದಾಸಕೂ. ೮). **ತಾಸೀಲು :** (*). [ ←ಅರ. ಹಿಂ. ತಹಸೀಲ್; ಮರಾ. ತಹಸೀಲ್; ತಹಶೀಲ್ ]

**ತಹಸೀಲುದಾರ,** ತಹಶೀಲದಾರ, ತಹಶೀಲುದಾರ, ತಹಶೀಲ್ದಾರ, ತಹಸಿಲದಾರ, ತಹಸೀಲ್ದಾರ, ತಾಶೀಲ್ದಾರ, ತಾಸಿಲ್ದಾರ, ತಾಸೀಲುದಾರ (ನಾ). ತಾಲ್ಲೂಕಿನ ಕಂದಾಯವನ್ನು ವಸೂಲು ಮಾಡುವ ಅಧಿಕಾರಿ ; ಮಾಮಲೇದಾರ(ಉಕ) ; ತಾಲೂಕಿನ ಮುಖ್ಯಾಧಿಕಾರಿ: (*). **ತಹಶೀಲದಾರ:** ಕನ್ನೆಯ ತಂದೆಯು ದೊಡ್ಡದೊಂದು ತಾಲೂಕಿನ ತಹಶೀಲದಾರನಾಗಿದ್ದನು (ತೋಳಮು. ೨೦೪). **ತಹಶೀಲುದಾರ :** ಆ ತಾಲೂಕಿನಲ್ಲು ಇರುತ್ತಿದ್ದ ತಹಶೀಲುದಾರ ಮುಂತಾ ದವರಿಗೆ ತಾಕೀತಿ ಸಹ ಬರೆಸಿ (ರಾಜೇಂದ್ರ. ೧೨೩). **ತಹಶೀಲ್ದಾರ:** ಮದರಾಸ್ ಕಲ್ಕತ್ತಾ ಮಧ್ಯಪ್ರಾಂತ್ಯ ಬೊಂಬೈ ಜಿಲ್ಲಾದಲ್ಲಿ ತಹಶೀಲ್ದಾ ರರುಗಳ ಹಾಜರಾತಿ ಹುಕುಂನಲ್ಲಿರತಕ್ಕದ್ದು (ಗ್ರಾಮಾಕ. ೪). **ತಹಸಿಲ ದಾರ :** ಅದು ಆ ಪ್ರಾಂತದ ಸಬ್‌ರಿಜಿಸ್ಟ್ರಾರರಿಂದ ಹಿಡಿದು, ತಹಸಿಲದಾರ ರನ್ನು . . . ಕಲೆಕ್ಟರ ದೊರೆಗಳವರೆಗೂ ತಿಳಿದ ವಿಷಯ (ಹಸಿವು. ೨೯). **ತಹಸೀಲ್ದಾರ :** ಸೀತಾರಾಮನು ಬಾಕಿದಾರರನ್ನೂ ತಹಸೀಲ್ದಾರರನ್ನೂ ಸೆರೆಯಲ್ಲಿಡಿಸಿದನು (ಬಂಕಿಮು. ೩೦೪). **ತಾಸಿಲ್ದಾರ :** ನಾವಿಬ್ಬರೂ ಪೂಂಗಾಪೂರು ತಾಲೂಕಿನ ತಾಸಿಲ್ದಾರರ ಸೇವಕರು (ಪ್ರತಾಪ. ೩೪). **ತಾಸೀಲುದಾರ :** (*). [ ←ಅರ. ಪಾರ. ಹಿಂ. ತಹಸೀಲ್‌ದಾರ್ ; ಮರಾ. ತಹಸೀಲ್ದಾರ್ ; ತಹಶೀಲ್ದಾರ್ ]

**ತಹಸೀಲೆ** 'ತಹಸೀಲು' ನೋ.

**ತಹಸೀಲ್ದಾರ** 'ತಹಸೀಲುದಾರ' ನೋ.

**ತಹಾನಾಮೆ** 'ತಹನಾಮೆ' ನೋ.

**ತಹಿ** (ನಾ). ಒಡನಾಟ ; ಜೊತೆ ; "ಸ್ನೇಹ" (ಪ್ರಶಬ್ದ) : "ತಹಿ (?) ಯುಂತದು[ಪಾಠಾಂ. ತಹೆಯೊಂದುಂ]ಜ[ಪಾಠಾಂ. ಜೊ]ತ್ತು" (ಚತುನಿ. ೬೨) ; ಉಂಟುಂಟು ತಹಿಯಾಗಿ ನಿಮ್ಮೊಳಗೆ ನೀವು ಪಳಿನಂಟುಗಳ ಬೆದಕಬೇಡ (ಸೌಂದಪು. ೫-೮). 'ತಹಿಕಾಜಿ' ಪರಾ. [ ? ]

**ತಹಿಕಾಜಿ** (ನಾ). ಜೊತೆಗಾರ ; ಸ್ನೇಹಿತ : ಕನ್ನದ ಬೊಮ್ಮಿದೇವಯ್ಯನ ನೊಲವಿನೊಡಗೊಂಡು ಬರುತಾ ಗಳಿಹಮಂ ಕೊಂಡು ಮನಪೊಸೆದು ತಹಿಕಾಜನವೊಲರಮನೆಯನಂಜದೆ ಪೊಕ್ಕು (ಬಸವು. ೩೧-೧೧).

[ ತಹಿ + – ಕಾಜಿ ]

**ತಳ್$_1$** 'ತಱ್$_1$' ನೋ.

**ತಳ್$_2$,** ತಱ್$_2$ (ಕ್ರಿ). ತತ್ತ$_2$, ತಳ್ತ$_1$ (ಭೂತಕೃ). ತಳ್ತು$_2$ (ಭೂತನ್ಯೂ). ೧. ಎದುರಿಸು; ಪ್ರತಿಭಟಿಸು; ಆಕ್ರಮಣ ಮಾಡು: ಕಿಡಱ ಚತುರ್ಬಲಂ ಬೆದಱ ತಳ್ತ ದಳಂ . . . ಗುಣಾರ್ಣವನಂದು ಲಕ್ಕಲೆಕ್ಕದೆ ಕೊಳೆ (ಪಂಪಭಾ. ೮-೨೦) ; ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ ಬಾಳೊಳ್ ಬಾಳ್ ಪಳಂಚಿ ಮಾರ್ಕಿಡಿವಿಡೆ (ಪಂಪಭಾ. ೧೧-೪೨): ರಣದೊಳರಾತಿಭೂಭುಜಬಲಂಗಳನುಗ್ರಭುಜಾಸಿಯೊಳ್ ಖಿಲಲ್ ಖಿಲಲೆನೆ ತಳ್ತು ಪೊಯಿದು ಪಡಲಿಟ್ಟಪೊಲಾಗಿರೆ ಮಾಡಿ (ಎಕ. VIII, ಸಾಗರ. ೧೦೯-೩೨ ; 1042) ; ಪರಿವೆಯ್ದಿ ತಾಗಿ ಧುರದೊಳಿದಿರ್ಚ್ದ ವೀರಭಟರಂ ಅದಟಿನ ಕಾಳಿಗನಿರದೆಯ್ದಿ ತಾಗಿ ತಳುರ್ತ್ತಿಸುಳುದು (ಎಕ. VIII, ಸೊರಬ. ೬-೯ : 1165) ; ℙ ಇದು ತಳ್ತು ಎಂಬುದರ ಅಪಲಿಖಿತವಿರಬಹುದು. ತತ್ತರೆ ಭೂತನಾಥನ ತಡೆವನೆಂದನು ದನುಜ ರಘುಪತಿಗೆ(ಕಾಶಿರಾ. ೩೬-೨೦); ಕನಸು ಮನಸಿನೊಳಾಗಳೆನ್ನಯ ತನುವಿನಲಿ ನೀ ಸುಳಿದು ಮುಚ್ಚಿಸಿಯಿನಿತು ಧಾವತಿಗೊಳಿಸಿ ನಿಷ್ಕರುಣದಲಿ ನೀನೆನ್ನ ಕನಲಿ ನುಡಿದೊಡೆ ನಾನು ಬಿಡುವೆನೆ ತನಗೆ ತತ್ತಡೆ ಭಾವಿಸಲು ಸಾವನಿತು ಬಂದೊಡೆ ಬರಲಿ ಬಿಡೆ ನಾನೆಂದಳಾ ಮಾಯೆ (ಪ್ರಭುಲೀ. ೭-೪೦); ಈ ಬಲವನು ತತ್ತೊಡರಿದೋಡಿಸುವೊಡಸುರಂಗೆ ವಶವೆ (ಚಬಪು. ೩೮-೨೪). ೨. ತಡೆ ; ಅಡ್ಡಿಪಡಿಸು : 'ತಳ್ಪೊಯ್$_2$', 'ತಳ್ವು$_1$' ಪರಾ. △**ತಱ್$_2$ :** ಬಾಳ್ ಕಿಟ್ಟು ಇದಿರೆ ನಡದು ಕಱ್ತ್ತಪೋಗಿ ತಱ್ತು ಸತ್ತ (ಸೌಇಇ. IX-I, ೬-೧೧ ; 9ನೆಯ ಶತ).

**ತತ್ತಾಳು** = ಎದುರಿಸಿದ ಸೈನಿಕ : ಕೆಟ್ಟು ಬಂದವರಲ್ಲ ರಿಪುಶಿರದಿಂ ಸೇತುಗಟ್ಟಿ ಬಂದೆವು ಜೀಯ ತೊರೆಗೆ ಕುಟ್ಟುತ್ತ ಬಂದೆವು ತತ್ತಾಳೆನೆಂದನು ದಿಟ್ಟ ಕನ್ನಡಿಗ ಮಾಚಯ್ಯ (ನಾಗಕು. ೦೭-೦೨). **ತಳ್ತಿಕ್ಕು**=ಮೇಲೆ ಬಿದ್ದು ಹೊಡೆ; ಎದುರಿಸಿ ಕೊಲ್ಲು: ಕಂಚನೆಂಬೋನಿಳಾಮುಹಿತಂ ವೀರನರ್ಕ್ಕಸುತ ನಿನುವಾರ[ಂ] ಪಿಡಿದಡಸಿ ನವಿಲ ಕೊನ್ದಡಿಗ[ಡೆ] ತಳ್ತಿಕ್ಕಿ ಬೇಡವಡೆಯಂ ಬಲ್ಲಾಳ್ಪಡೆದಂ ಬೆಳ್ಳಲಮಂ (ಸೌಇಇ. XI-I, ೪೫-೩ : 980). **ತಳ್ತಱ$_1$,** ತಳುತಿಱ, ತಳುತ್ತಿಱ, ತಳ್ತಿರಿ, △ತಱ್ತಿಱ = ತಳ್ತಿಕ್ಕು : ದುಗ್ಗಯ್ಯ ಸಾನ್ತನೂರ ತೊಱುಗೊಳ್ಳ ಧಾಳಿ ಕಳ್ಳರೊಳ್ತಳ್ತಿಱದು ಆಟ್ಸಿ ಸತ್ತ (ಎಕ. IX(8), ಕಾನಕಾ. ೪೮-೦೭ : ಸು. 900) ; ಆತಂಗೆ ಚಕ್ರಿವೇಟ್ಟುಮ ಪೋ ತಳ್ತಿಱದಾಮ ಗೆಲ್ವಂ (ಆದಿಪು. ೧೪-೬) ; ಪೊಜಗಣರಿವರ್ಗಮಂ ತಳ್ತಿಱದು ಗೆಲಲ್ಬರ್ಕುವೊಳಗಣರಿಷಡ್ವರ್ಗಂ ನೆರೆದಿರೆ ಬಾರದು (ಶಾಂತಿಪು. ೨-೦೭) ; ಪೊಯ್ಯಲೋಡಿ ಪೋಗುವುದಿಲ್ಲದೆ ತಾಗಿ ತಳ್ತಿಱಯಲಱಯೆವು (ಪಂಚತಂ. ೨೦೭-೫); ಸಾರಥಿಗಳ್ ಸಾರಥಿಗಳೊಡನೆ ತಳ್ತಿಱಯೆ (ಪಂರಾಮಾ. ೧೩-೬೮) ; ನೆರೆದಿಂತೀಗಳೆ ಪೋಗಿ ತಳ್ತಿಱವೆನೆಂಬಾ ಮಾತದಂತಿರ್ಕೆ (ಕಬ್ಬಿಕಾ. ೧೫೯) ; ಪೆಱಮೆಟ್ಟ ತುಱುಗಿ ಮಿಗೆ ತಳ್ತಿಱದಪ್ಪುವೊಡನೊಡನೆ ತಮ್ಮೊಳೀ ಕಾಂತೆಯ ನುಣ್ದುಱುಗಿವೆಗ[ಣ್ಗ]ಳ್ಕೀಗಿನ ಕೊಱತೆಗೆ ದಲ್ಪಾಱುಗಣ್ಣ ಬಟ್ಟಗದು ಸಹಜಂ (ಪುಷ್ಪಪು. ೩-೫೦) ; ಮುಂಡಮುಂಡ ಗಳೆದ್ದು ಜವದಿ ತಳ್ತಿಱದು ಗೆಲಗೊಂಡುದು (ಲಶಿಚಂ. ೧೭-೧೭); ಸಿರಿವುರದ ಬೀರಣ್ಣನುಭಯ ಬಲಂ ನೋಡಲು ತಳುತಿಱದು ಸುರಲೋಕ ಪ್ರಾಪ್ತನಾದಂ (ಕಇ. V, ೯-೨೪: 1072); ತಾಗಿ ತಳುತಿಱದು ಸ್ವರ್ಗಲೋಕ ಪ್ರಾಪ್ತನಾದ (ಎಕ. VII, ಶಿವಮೊ. ೧೧೯-೭ : 1188 ?) ; ಗೊರವರ ಪೊನ್ನಯ್ಯಂ ತುಱುಮಂ ಪಿಂತಿಕ್ಕಿ ಪಲರುಂ ಕೊಂದು ತಳುತ್ತಿಱದು

ದೇವಲೋಕಕ್ಕೆ ಸನ್ದೊಂ (ಎಕ. VIII, ಸೊರಬ. ೭೪-೧೧; 1032): ಒತ್ತೊತ್ತಿ ಬರುವ ಸೈನ್ಯಕ್ಕೆ ಆವನು ಇದಿರಾಗಿ ತಾಗಿ ತಳ್ತಿರಿದು ಕೊಂದನು (ಕವೀರ. ೨೬): ಎಡೆಯೊಳ್ತಾಗಿ ತ[ಟ್ಟಿ]ಱಿದು ಸಗ್ಗಮೇಱಿದಂ (ಸೌಇಇ.IX-I, ೪-೯; ಸು. ೨ನೆಯ ಶತ). ತಳ್ತಿಱಿಯಿಸು=ಒಬ್ಬರನ್ನೊಬ್ಬರು ಆಕ್ರಮಿಸಿ ಕಾದಾಡುವಂತೆ ಮಾಡು; ಕೊಲ್ಲಿಸು: ಇಱಿಯಿಸುವ್ಯೆ ಸೋದರರ್ಕಳಂ ತಮ್ಮೊಳ್ತಳ್ತ[ತ್ತಿ]ಱಿಯಿಸುವ್ಯೆ ಗುರುಶಿಷ್ಯರನಱಿಗುಲಿ ನಿನ್ನಿಂ ನಿಕೃಷ್ಟರಾರದರುಮೊಳರೇ (ಗದಾಯು. ೯-೭). [ದೇ.॥ ತಮಿ. ತಳ್]

**ತಳ್$_3$** (ಕ್ರಿ). ತತ್ತು$_3$, ತಳಿತ$_2$, ತಳ್ತ$_2$ (ಭೂತಕೃ). ತತ್ತು$_5$, ತಳ್ತು$_3$ (ಭೂತನ್ಯೂ). ೧. ತಳೆ; ಧರಿಸು; ಹೊಂದು: ಧ್ಯಾನದೊಳಭವಂ ನೆಱೆದಿನಿಸಾನುಮನರಮುಚ್ಚಿ ಕಣ್ಗಳಂ ನಿಶ್ಚಳಿತಂ ತಾನಿರ್ದು ಮಱಿದು ಕೆಂದಿದ ಮಿನಂ ತಳ್ತಾ[ಪಾಠಾಂ. ಳ್ತಾ]ದದಿರ್ದ ಮಡುವಂ ಪೋಲ್ತಂ (ಪಂಪಭಾ. ೮-೧೩): ತಚ್ಚಂದ್ರಿಕಾನವ್ಯಸಂಗಮದಿಂ ಸಂಭವಿಸಿ ಪರ್ಸಿಪರ್ಪನಿಗಳಂ ತಳ್ತಲ್ಲಿ ವಿಸ್ತಾರಮಪ್ಪಮಳೇಂದೂಪಲದೊಂದು ಪಾಸಱಿಕರಂ ಶುಭ್ರದ್ಯುತಿಪ್ರಾತನಿಂದಮೆ ವಿಭ್ರಾಜಿಸುತಿರ್ದುದು (ಕುಸುಮಾ. ೧೧-೬೪). ೨. ಹರಡು; ವ್ಯಾಪಿಸು; ಕವಿ; ಆವರಿಸು: ಚೆಲ್ವಾದ ಲತಾಂತಂ ತಳ್ತ ಶಯ್ಯಾಶ್ರಿತ ಸಿತಮೃದುಳ ಪ್ರಚ್ಛದಚ್ಛನ್ನ ಶಯ್ಯಾತಲದೊಳ್ . . . ಶೂದ್ರುಕನೃಪತಿ ಸುಖಾಸೀನನಾಗಿರ್ದನಾಗಳ್ (ಕಾದಂಪೂ. ೮೧): ಧರಣೀನ್ದ್ವಂಬರಮೆಯ್ದೆ ಸಪ್ತತಳಮಂ ತಳ್ತತ್ತು . . . ಅಜಾಣ್ಡತಟದೊಳ್ಕೀರ್ತ್ತಿರ್ಲತಾವಲ್ಲಿ (ಸೌಇಇ. IX-I, ೧೦೨-೩೭; 1046): ತಡಿವಿಡಿದು ಪವಳದ ಬಳ್ಳಿ ತಳ್ತ ಪಾಲ್ಗಡಲ ಚೆಲ್ವುಮಂ ನಿಜಾಂಗಪ್ರಭೆ ನಿರಾಕರಿಸುತ್ತುಮಿರೆ (ವರ್ಧಪು. ೧೦-೨೪ ವ): ಪಟುಂ ಕಡಲಂ ಕಡಂಗಿ ಕುಡಿವೆಂ ತಳ್ತಾಱಿಲಂ ಪೊಯ್ದು ತೂಱುವೆನ್ಸೆದುಂ ಮೊಗಮುಳ್ಳನಂ ಕೆಡಪುವೆಂ (ಕಬ್ಬಿಗಕಾ. ೧೩೪); ತಳಿತ ಹೋಮದ ಹೊಗೆಗಳಲಿ ದಿನಬಲದೊಳಾಯುಷ್ಯಾಭಿವೃದ್ಧಿಯ ಬೆಳವಿಗೆಗಳಹವರಸ (ಕುವ್ಯಾಉ. ೬-೩೫): ತಳಿತ ಮೇಘದಿ ಹೊಳೆವ ಮಿಂಚಿನ ಬಳಗವೆನೆ ಹಂಸಗಳು ನಭದಿಂದಿಳಿಗಿಳಿದ ಸತಿಯರ ಸಭಾಮಂಡಲದಿ ಕುಳ್ಳಿರಲು (ನಳಚ. ೨-೩೨). ೩. ಸೂಸು; ಚೆಲ್ಲು: ಕರುಳಿನ ಜೊಂಡು ಮಸಗಿತು ಕಡಿದ ಖಂಡದ ದಿಂಡು ತಳಿತುದು (ಕುವ್ಯಾಭೀ. ೯-೧೩) ೪. ಉಂಟಾಗು; ಆಗು; ಸಂಭವಿಸು: ಬೀತ ಸೊಂಟಿನ ತಳಿತ ಬೆಡಗಿನ ಪಾತಕದ ಪರುಠವದ ಮುಖದ ಮಹೀತಳಾಧಿಪ ಸುಯ್ದು ನೊಂದನು ಶಿವಶಿವಾಯೆನುತ (ಕುವ್ಯಾಆ. ೪ ೧೬): ಪೂಜೆಗಂಧಕಾಸುರಂಗಂ ನಾಡೆ ವಿಗಡವೀರೇಶಂಗೆ ಕಾಳಿಗಂ ತಳ್ತುದು (ಚಬಪು. ೫೦-೩೧); ತನಗವರೊಳು ತ[ಪಾಠಾಂ. ತೆ]ತ್ತುದಾಹವಮೆಂದು ನಿಜಸುತಂ ಬಿನ್ನೈಸೆ (ಜೈಮಿಭಾ. ೨೫-೩೮): ಕಾಳೆಗ ತತ್ತುದವರಿಬ್ಬರಿಗೆ (ಕೋಗಯು. ೧೦-೩೮). ೫. ಮೂಡು; ಹುಟ್ಟು; ಗೋಚರಿಸು: ತಳಿರ್ ಪುದಿದಾವ್ರುದಂತೆ ತೇಜೋನಿಧಿಯಪ್ಪ ಬಾಲರವಿ ತಳ್ತ ವಿಯತ್ತಳದಂತೆ ವಿಶ್ವಧಾತ್ರೀನುತ ಕೌಸ್ತುಭಾಭರಣನಚ್ಯುತನೀಗೆಮಗೊಲ್ದು ರಾಗಮಂ (ಸೂಕ್ತಿಸು. ೧-೧). ೬. ಚಿಗುರು; ಮೊಳಕೆಯೊಡೆ; ಪಲ್ಲವಿಸು: ಸೊಗಯಿಸಿ ಬಂದ ಮಾಮರನೆ ತಳ್ತಲೆವಳ್ಳಿಯೆ ಪೂತ ಜಾತಿಸಂಪಗೆಯೆ . . . ನೋಟಿಪ್ಪೊಡಾವ ಬೆಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿದೇಶದೊಳ್ (ಪಂಪಭಾ. ೪-೨೮); ಪವಳದ ಬಳ್ಳಿಯ ತುಱುಗಲ್ಪವಣೆಲ್ಲದೆ ತಳ್ತು ಬೆಳೆದು ಕುಡಿವಿಟ್ಟಪರಾರ್ಣವ ತಟದೊಳ್ಪಱೆದಪುದೆಂಬವೊಲಿರದೆಸೆದತ್ತು ಸಾಂದ್ರ ಸಂಧ್ಯಾರಾಗಂ (ಕಾದಂಪೂ. ೨೭೭). 'ತಳಿ$_1$' ಪರಾ.

**ತತ್ಕಲಹ** = ಉಂಟಾದ ಜಗಳ; ಒದಗಿದ ಕಾದಾಟ: ಸೇದಿರಾಜಂ ತತ್ಕಲಹದೊಳ್ ಕಪಟಜಂಗಮವಿಜಿಯೆ ಶಿವನೆಂದು ಕಾದುತೆ (ಚಬಪು. ೫೫-೩೮). **ತತ್ಕಾರಿಯ** = ತೊಡಗಿದ ಕೆಲಸ; ಉದ್ದೇಶಿಸಿದ ಕಾರ್ಯ; "ಹಿಡಿದ ಕೆಲಸ" (ಲಶಿಬಂ.ಕೋಶ): ಭೂತಳದೊಳುದಿಸಿದ ನಂದಿಕೇಶ್ವರಂ ಯುಕ್ತಿಯಿಂ ನೋಳ್ಪಡೀಶ್ವರ ತಾನೆಯೆಂದೆಸಿಪ ಯೋಗಪರಮಾನಂದನು ತತ್ಕಾರಿಯುಮೇ[ಪಾಠಾಂ. ಯಾರ್ಯವದೇ]ನು (ಲಶಿಬಂ. ೨೯-೧). **ತತ್ಕಾರ್ಯ**=ತತ್ಕಾರಿಯ: ಆದು ಮಾಣಲೀಗ ನಿನಗಂ ತತ್ಕಾರ್ಯಮಂ [ಪಾಠಾಂ. ಕಾರಣಂ ನಾನು ನಿನಗೇನ ಮಾಡಲೆಂ]ಬುದನುಸುರು ಸುರಪ (ಲಶಿಬಂ. ೦೪-೩೭). **ತತ್ಕಾಳೆಗ** = ತೊಡಗಿದ ಯುದ್ಧ: [illegible] (ಕುವ್ಯಾಭೀ. ೩-೩೪). **ತತ್ತವಸರ** = ಒದಗಿದ ಅಗತ್ಯದ ಸಂದರ್ಭ,- ಆವಶ್ಯಕತೆ: ಬಿಜಯಂಗೆಯ್ವುದೆಂಬಳಕಡೆಗೆಂದೊಡೆಮಗೊಳಗಾವ ತತ್ತವಸರವು ನಮಗೇಕರಸುಮನೆಗಳಲಿ ಭಾವಿಸಲು ಸಂಚಾರ (ಪ್ರಭುಲೀ. ೦೪-೧೭); "ಇರುವ ಕೆಲಸ" (ಪ್ರಭುಲೀ. ಕೋಶ). **ತತ್ತವೇಳೆ** = ಒದಗಿದ ಸಮಯ,-ಸಂದರ್ಭ: ತೆತ್ತಿಗರು ತಾವಾದ ಕಾರಣ ತತ್ತವೇಳೆಯು ಲಾದಿರ್ಪ ದಿಟ ಪೆತ್ತ ತಂದೆಗಳಹುದು ಮಡಿವಳ ಚನ್ನಬಸವಗಳು (ಪ್ರಭುಲೀ. ೨೩-೪೭). **ತತ್ತಹೊತ್ತು** = ತತ್ತವೇಳೆ: ಎಲೆಲೆ ಬಾಣಸಿ ತತ್ತಹೊತ್ತಿನ ಚಲವ [illegible] (ಕುವ್ಯಾವಿ. ಒಶಿಇ. ೪-೬೩): [illegible] ತತ್ತಹೊತ್ತಿನೊಳಾತುಕೊಂಬವ[illegible] (ಕುವ್ಯಾದ್ರೋ. ೪-೧೧). **ತಳ್ತಱಿ**= ೧. ಮುತ್ತು; ಕವಿ; ಆವರಿಸು: ಮಿಱಿದ ಬೇದಮುಂ ಮುದಮುಮೊರ್ಮೆಯೆ ಕೋಕ ಚಕೋರ ಕೋಟಿಗಿಂತೇಱಿದುದು . . . ವಿಯೋಗಿಗೆ ಪಯೋನಿಧಿಗೊರ್ಮೆಯೆ ಕಿಚ್ಚ ಪೆರ್ಚೆ ತಳ್ತಱಿಯುದಾಗಳಂತಮಂ ದಿಕ್ಕುಧರೇಂದ್ರಮನೇಱಿ ಚಂದ್ರಮಂ (ಕುಸುಮಾ. ೧೦-೧೧). ೨. ಆಲಿಂಗಿಸು; ಚಲಿಸು: [ದೆಯ್ಯಂ ತಗುತ್ತುಂ] ಉನ್ಮತ್ತಚೇಷ್ಟೆಯಿಂದೆರೆಯುಂ ತಿಂದ ಮಿನಂತೆ ಪೊಳೆಯುತ್ತುಂ ಪೊಲ್ಲಮನನಾಗಿ ಕಯ್ಯಂ ತಳ್ತಱಿದು ಪೆಱಗಂಜಿ . . . ಪರವಶಮಾದರಂತೆ ಜಡನಾಗುತ್ತುಂ ಮಿಱಲಾಗದೆಂಬೀ ಮೂಱವತ್ತೆರಡು ದೋಷಂಗಳಂ ಹಿಂಗಿ (ಧರ್ಮಾಮೃ. ೫-೧೩೭). **ತಳ್ತುನೋಡು**=ಚೆನ್ನಾಗಿ ನೋಡು; ಮನಸ್ಸಿಟ್ಟು ನೋಡು: ಎಳವರೆಯುದೊಳೆಳೆಯರ್ಕಳನೆಳಸುತೆ ನೆಳನೊಳ್ಗೆಂದೆ ಬಿಗಿದಪ್ಪಿ ಮನಂಗೊಳೆ ತಳ್ತುನೋಡಿ ಮುದ್ದಿಪ ವಿಳಾಸದೊಂದಕ್ಕೆ ನೋಂತುದಿಲ್ಲಂ ಕೆಳದೀ (ರಾಜಶೇ. ೩-೪೭). **ತಳ್ತೊಗೆ**=ಅಂದವಾಗಿ ಉದಯಿಸು,-ಕಾಣಿಸಿಕೊಳ್ಳು: ಇರುಳೆಂಬ ಕಂಥಿನಿ ಹಿಮಕರನಾನು ಕಳಿಸು ತಳಿಸಿ ತಟಸ್ಥ[ತ್ತೊ]ಗೆಯೆ ಸುಧಾಕಿರಣ ಮಿಱುಮ್ಸಿ ಪರಿದಾ[illegible] ಪೆಣಜುತ್ತುಂ (ಅಜಪು. ೭-೪೩).

**ತಳ್$_4$** (ನಾ). ಅಡ್ಡಿ; ಅಡಚಣೆ; ತಡೆ: (೬). [ <ತಳ್$_2$ ]

**ತಳ** 'ತಲ' ನೋ.

**ತಳಂಕು** (ನಾ). ಒಂದು ಬಗೆಯ ಮರ: ತವಕಿನ ತಾಳ ತೆಂಗಿನ ತಳಂಕಿ[ಪಾಠಾಂ. ಗಿ]ನ ತುಂಬುರ ಚಿಲ್ಲ ಬೆಲ್ಲವತ್ತದ ಬಿಳಿಯತ್ತಿಯುಪ್ಪೆಯ ಮರಂಗಳ . . . ಕಾನನವೆತ್ತ ನೋಟಿಪ್ಪೊಡಂ (ಲೀಲಾವ. ೬-೨೭). [ ? ]

**ತಳಂಗು** (ಕ್ರಿ). ಗರ್ಜಿಸು; ಗರ್ಜನೆಮಾಡು: ಕಟ್ಟಳ ತಾಗಿ ತಳಂಗೆ ಕಟ್ಟದಲಗಂ ತಳ್ತಱಿದು ಮೆರೆವ ಹಡಪಳ ಸುಬ್ಬ (ಎಕ. VIII, ಸಾಗರ. ೯೫-೧೪; 1189). [ ←ತಮಿ. ತಟಙ್ಕು ]

**ತಳಂಗೆಡು** (ಕ್ರಿ). ಆಧಾರ ತಪ್ಪು; ನೆಲೆಯಿಲ್ಲದಾಗು: ಭರತನಳ್ಕರೆಯೊಂದ ಪಿರಿಯ ನೆಮ್ಮಾಗಿರ್ದ ಕುಬ್ಜೆಯಾತ್ಮಂ ತಳಂಗೆಟ್ಟುರುಳ್ದುದು (ಕ್ರೀರಾಮಾ. ೧೧೪-೭೭). [ ತಳ (= ತಲ) + ಕೆಡು$_1$ ]

**ತಳಂಗೊಳ್** (ಕ್ರಿ). ಕೈಯಲ್ಲಿ ಹಿಡಿ: ಚಾಮರಂ ಧವಳಚಂಚತ್ತಾಳವೃಂತಂ ಸಮಂತು ತಳಂಗೊಂಡೊಡನೆಟ್ಟರಲ್ ಮದನರಾಜ್ಯಶ್ರೀಲಸನ್ಮೂರ್ತಿವೆತ್ತಿ ತೆನಲ್ ಭೀಮಸುತನೂಜೆ ಪೊಕ್ಕಳೊಲವಿಂದುದ್ಯಾನಗೇಹಾಂತಮಂ (ನಳಚಂ. ೩೩೦). [ ತಳ( = ತಲ) + ಕೊಳ್$_1$ ]

**ತಳಂಬಿಗೂಲಿ** (ನಾ). ಒಂದು ಬಗೆಯ ತೆರಿಗೆ : ಮಹಾಜನಂ ಮಹಾದೇವಯ್ಯಂಗೆ ನಾವಿದವಾರಿಯುಂ ತಳಂಬಿಗೂಲಿಯುಮನಾವಕಾಲಮುಂ ಪರಿಹಾರಂ ಮಾಡಿದರ್ (ಸೌಇಇ. IX-1, ೧೩೨-೨೭ ; 1068).

[ ತಳಂಬಿ? + ಕೂಲಿ$_1$ ]

**ತಳಕ್**(ನಾ). ಮಿಂಚಿನ ವೇಗವನ್ನು ಅಥವಾ ಮಿಂಚಿನಂತೆ ಹೊಳೆಯುವುದನ್ನು ಅನುಕರಿಸುವ ಶಬ್ದ. 'ತಳಕ್ಕನೆ' ಪರಾ.

**ತಳಕ** (ನಾ). ಒಂದು ಬಗೆಯ ಔಷಧಿ ಮೂಲಿಕೆ : ಈಶ್ವರಿ ನೆಲಅಣಬೆ ಚಿತ್ರಮೂಲ ತಳಕ ಜೋತಿಕಾಷ್ಠ . . . ಯಿವ ಸಮಾನಂಗೊಂಡು ಲೇಪವಂ ಮಾಡಲು ಮಾಣ್ಗು (ವಾಶಾಟಿ. ೦೩-೧). [ ? ]

**ತಳಕಂಭ** 'ತಳಗಂಬ' ನೋ.

**ತಳಕಟ್ಟು** 'ತಳಗಟ್ಟು' ನೋ.

**ತಳಕಾಡು** 'ತಲಕ್ಕಾಡು' ನೋ.

**ತಳಕಿತ್ತು** (ಕ್ರಿ). ಜಾಗಬಿಡು ; ಊರು ಬಿಟ್ಟುಹೋಗು ; ಓಡಿಹೋಗು ; ದೂರವಾಗು: ಇಲ್ಲಿಂದ ತಳಕಿತ್ತಬೇಕೆಂದು ಪ್ರಸ್ತಾಪ ತೆಗೆದ ಕೂಡಲೇ ವಾಂಗಾನು ಈದ ಹುಲಿಯಂತೆ ಮೈಮೇಲೆ ಬಂದನು (ಮೇದಿಮು. ೦೫೬): ಹಾನಗಲ್ಲು ಬನವಾಸಿಸೀಮೆಗಳಿಂದ ಹೊಯ್ಸಳರು ತಳಕಿತ್ತುವಂತೆ ಮಾಡುವುದು (ಕವನಿ. ೧೪೩): ತಂದೆಗೆ ಜಡ್ಡಾಗಿದೆಯೆಂದು ತಾರು ಕೊಟ್ಟರೂ . . . ಅಲ್ಲಿಂದ ತಳಕಿತ್ತಿರಲಿಲ್ಲ (ಬಟ್ಟಹೊ. ೧೫) ; ತಳಕಿತ್ತಿ ಓಡಲೆ ; ತಳವೂರಿದ ಚಿಂತಿ (ಸಬೀಗೀ. ೪೮-೨) : ಈ ಮಾತು ನೆನಪಾಗುತ್ತಲೇ ಅವಳ ಸಮಾಧಾನವು ತಳಕಿತ್ತತೊಡಗಿತು (ಮುಕ್ತ್ಯದ. ೯೯).

[ ತಳ (=ತಲ) + ಕಿತ್ತು$_1$ ]

**ತಳಕೀಳು** (ಕ್ರಿ). = ತಳಕಿತ್ತು : ಒಂದೆರಡು ವಾರದೊಳಗೆ ತಳಕೀಳಬೇಕು (ಬಾಬಲ. ೫೭) : ಮುದ್ರಣದ ಕರಡು ಕಾಗದದೊಳಗಿನ ಕಾಟುಹಾಕಿದ ಅಂಶದ ಹಾಗೆ, ತಾವು ತಳಕೀಳತಕ್ಕದ್ದು (ಇಪ್ರಕ. ೪೮೪).

[ ತಳ (= ತಲ) + ಕೀಳು$_1$ (<ಕೀಟ್$_1$) ]

**ತಳಕು$_1$,** ತಳ್ಕು$_1$ (ಕ್ರಿ). ೧. ಹೊಳೆ ; ಮಿನುಗು : ಕಿವಿಗಳಲ್ಲಿ ತಳಕುವ ಭಂಗಾರದ ಕರ್ಣಭೂಷಣಗಳು ತೂಗಾಡುತ್ತಿದ್ದುವು (ಕಪಾಕುಂ. ೯೪). **ತಳ್ಕು$_1$ :** ೨. ಲೇಪಿಸು ; ಬಳಿ ; ಸವರು : "ತಳ್ಕು – ಅನುಲೇಪನೇ, ತದ್ಭಾವೇ ಚ (ಪ್ರಕಾಶ)" (ಶಮುಧಾ).

[ ದೇ.॥ ತಮಿ. ತಳುಕ್ಕು ]

**ತಳಕು$_2$,** ತಳುಕ್ಕು$_4$, ತಳ್ಕು$_4$, ಥಳಕು, ಥಳುಕು (ನಾ). ೧. ಹೊಳಪು ; ಮಿನುಗು ; ಕಾಂತಿ : ಮುಗಿಲಲ್ಲಿ ನೆರೆದ ಚಿಕ್ಕೆಯ ಜಾತ್ರೆಗೆ – ಇರುಳ ತಳಕಿಗೆ (ಉಯ್ಯಾಲೆ. ೧೦೫-೪): ಅವಿಭಾಜ್ಯವಾಗಿಯೂ ನೆನೆವವರ ಹಿತವರಿತು ರೂಪಿನುಪದೆಯ ಭೂಮೆ ಪತಿಕರಿಪ ತಳಕೋ (ಮಲೆದೇ. ೨೮-೪). ೨. ಒನಪು ; ಒಯ್ಯಾರ ; ಬೆಡಗು : ಈ ಹುಡುಗಿ ಬಹಳ ತಳಕು ಮಾಡುತ್ತಾಳೆ (ರೂಢಿ). **ತಳುಕು$_4$ :** ೧. ಬಲುಸರಳ ಸರಿವಳೆಯ ಮಿದುಳೊಡೆಗಲಸುಗಳಡಾಯುಧದ ತಳುಕಿನ ಕೊಳುಗುಳದ ಜಯಸಿರಿಯ ಕಾಹಿನೊಳಾರು ನೀನೆಂದ (ಕುವ್ಯಾಸ. ೨-೭೮). ೨. ಅಳಿಯನು ತಂಗಿಯ ಮಕ್ಕಳು ತಳುಕಿನ ಪೆಂಡತಿಯುಂ ಬಂಧುಜನ ಸಂತತಿಯುಂ ತಳಿಯೊಳಗತ್ತೆಯುಂ ಮಾವನು ತಿಳಿಯದವ್ರೋಲೊಳಗೆ ತಿಂಬ ಮೂಷಕತತಿಗಳ್ (ನೀತಿಸಾ. ೮೪೪). ೩. ಒಂದು ಬಗೆಯ ಕಿವಿಯ ಆಭರಣ : ಕರ್ಣತಾಟಂಕ ಜಡಿಯೆ ತಳುಕು ದುವ್ವಾಳಿಸಲು . . . ನೂಪುರರವವಡಿಗಡಿಗೆ ಬಡದುಲಿಯೆ (ಕೃಷ್ಣಗೋ. ೧-೧೧೧) : ಒರಿಯ ತಳುಕು ಬಾವುಲಿಗಳಂ ಕಿವಿಗಳೊಳಿಟ್ಟು (ಸೌಗಂಧಿ. ೨೨೯-೬). ೪. ಗಾಂಭೀರ್ಯ ; ಬಿಗುಮಾನ : ತಳುಕನುಗಿದೀಡಾಡಿ ಪರಿಣತ ಪುಳಕದಲಿ ನನೆನನೆದು ಹರುಷದ ಜಲಧಿಯಲಿ ಮನ ಮುಳುಗಿ (ಕುವ್ಯಾಉ. ೯-೬೩). **ತಳ್ಕು$_4$ :** ೨. 'ತಳ್ಕಿಕ್ಕು' ಪರಾ. ೫. ಅನುಲೇಪನ; ಕದಡು; ಕಲ್ಕ: ಇಂದೊಳದಿನುನ್ಮದಷಟ್ಪದವೃಂದವಿರಾಗಳೀಗಳೆ ಮೊರೆದತ್ತು ಚಂದನದ ತಳ್ಕ[ಪಾಠಾಂ. ತ್ಕ]ಬಲಾನಿಕರಕ್ಕದೀಗಳೀಗಳೆ ನೆಗಟ್ಟತ್ತಲೇ ಪುಗಿಲಿದಾಗಡೆ ವೇಡ ವಸಂತರಾಜನಾ (ಆದಿಪು. ೧೩-೫); ಒತ್ತಿದ ತಳ್ಕಿತ್ತಿದ ತಟಿ ಮುತ್ತಿನ ಪೊಸದುಡುಗೆ ತಳಿರ ಸೋಮರ್ಗುಡಿ ಮನಮಂ ಪತ್ತಿಸಿ ಜೊತ್ತಿಸೆ . . . ಬಂದರರಸಿಯರರೆಬರ್ (ಪಂಪಭಾ. ೫-೫೯) ; ಬೆಳಗುವ ಚಂದನದಣ್ಪಂ ತೊಳಗುವ ಕುಂಕುಮದ ತಳ್ಕಿನಿಂ ಕರಮೆಸೆದಂ (ಕಾದಂಪೂ. ೨೯). **ಥಳಕು :** ೧. ಇದನ್ನೇ ಥಳಕು ಎಂದು ಕರೆಯುವುದು (ನನ್ನಪ. ೨೯). ೩. ಪದಕ ಕಂಠಿಯು ಥಳಕು ಚಿಂತಾಕು ಸರಿಗೆಗಳು (ಬಾಡಾಕ. ೧೧). **ಥಳುಕು :** ೨. ಸೋಮು ಥಳುಕಿನ ಜೀವನಕ್ಕೆ ಮಾರುಹೋಗಿದ್ದ (ಅನಾಮಿ. ೫೨) ; ಕಾಲೇಜಿನ ಹುಡುಗಿಯಾದರೂ ಶ್ರೀಮಂತನ ಮಗಳಾದರೂ ಥಳುಕಿನ ಶೃಂಗಾರವಿಲ್ಲ (ನಿಕಉ. ೫೬).

**ಥಳಕು ಪಳಕು, ಥಳಕು ಬೆಳಕು** (ದ್ವಿರುಕ್ತಿ) : ಥಳಕು ಪಳಕುಗಳೇನೆ ಇರಲಿ, ಯಾರು ಸಾಜ, ಅವನೆ ರಾಜ (ಇಂಗೀತ. ೩೭-೧೪) ; ಆ ಹೊಸ ಸೊಸೆಯು ಥಳಕು ಬೆಳಕುಗಳಿಂದ ರಾಯರಂತಹ ದೊಡ್ಡಮನುಷ್ಯರು ತಮ್ಮ ಮನೆಗೆ ಬಂದಿರುವಾಗ (ರಾಯುಕ. ೧೦೦).

[ <ತಳಕು$_1$. / ತಮಿ. ತಳುಕು ; ತೆಲು. ತಳುಕು, ತಳ್ಕು ]

**ತಳಕು$_3$** 'ತಟ್ಕು' ನೋ.

**ತಳಕುಮಲಕು, ತಳಕುಮಳಕು** (ನಾ). ಗಂಟುಹಾಕುವುದು; ಜೋಡಣೆ: ಇಷ್ಟೆಲ್ಲಾ ತಳಕುಮಲಕುಗಳನ್ನು ಹಾಕಿ ಪುನಃ ಬಿಡಿಸಿ ಎಲ್ಲರನ್ನೂ ಆನಂದಾಂಬುಧಿಯಲ್ಲಿ ನಲಿದಾಡಿಸಿ ನೋಡಿದ ಆ ಪರಮೇಶ್ವರನ ಲೀಲೆಯೆಂಥಾದ್ದು (ಛದ್ಮಾಯು. ೫೬). **ತಳಕುಮಳಕು :** ಪ್ರೇಮಕ್ಕೆ ಇದಕ್ಕೆ ತಳಕುಮಳಕು ಹಾಕುವ ಅವನ ಗುರಿ ತಿಳಿಯಲಿಲ್ಲ (ಬಾಬಲ. ೭೯).

[ ತಳಕು$_3$ (<ತಟ್ಕು) + ಮಲಕು$_2$ ]

**ತಳಕುಮಳಕು** 'ತಳಕುಮಲಕು' ನೋ.

**ತಳಕ್ಕನೆ** (ಅ). ಪ್ರಕಾಶಮಾನವಾಗಿ ; ಜಗ್ಗನೆ : ಗಳಗಳನೆ ಮುಕ್ಕುಳಿಸಿ ನೀರನುಗುಳೆ ತಳಕ್ಕನೆ[ಪಾಠಾಂ. ಪಳಲ್ಕನೆ, ದಳಕ್ಕನೆ, ಪಳಚ್ಚನೆ] ಮಿಂಚಲು (ಬಸವು. ೪೨-೩೦). [ ತಳಕ್ + – ಅನೆ$_1$ ]

**ತಳಗಂಬ, ತಳಕಂಭ** (ನಾ). ಆಧಾರಸ್ತಂಭ : ಧಾತ್ರೀಧರಮನಿತುಮಂ ಗುಂಡುಗಲ್ಲಿಕ್ಕಿ ದಿಗ್ದಂತಿ ಸಮೂಹೋತ್ತುಂಗ ಗಾತ್ರಾಪರಮವೆ ತಳಗಂಬಂಗಳಾಗಲ್ಕಿದೇಂ ಮಾಡಿಸಿದಂ ಹಿಮಾದ್ರಿಯಂ ದೇಗುಲಮನೆನೆ ಮಹಾದೇವ ದಂಡಾಧಿನಾತಂ (ಎಇ. XIII, ೪೬-೫೭ ;1112) ; ಧರೆ ರಂಗಂ ಕುಳಪರ್ವತಾಳಿ ತಳಗಂಬಂಗಳು ದಿಶಾಭಿತ್ತಿ ಭಿತ್ತಿ ರಸಾಲಂಕೃತ ಚಿತ್ರಪುತ್ರಿಕೆಯರಾ ದಿಗ್ದೇವಿಯರ್ (ಎಇ. XIII, ೪೬-೫೮; 1112) ; ದೇವಸ್ಥಾನದ ಭಾರವನ್ನು ಹೊರುವ ಕಂಬಗಳನ್ನು 'ತಳಗಂಬ'ಗಳೆಂದು ಕರೆದಿದೆ (ಕಶಾಅ. ೯೬೩). **ತಳಕಂಭ :** ಪೃಥ್ವಿಕುಳ ಮಂಟಪದ ಮೇಲೆ ಪದಶಿಲೆ ಬಿಗಿದು ತಳಕಂಭ [ಪಾಠಾ. ಬ]ಕಳಶದ ಮೇಲೆ ಕೆಸಟುಗಲ್ಲು (ಅಪದಂ. ೨೭-೧೧೨).

[ ತಳ (= ತಲ) + ಕಂಬ$_1$ (<ಕಂಭ) ]

**ತಳಗಟ್ಟು, ತಳಕಟ್ಟು** (ನಾ). ೧. ಆಧಾರವಾದ ಚೌಕಟ್ಟು,–ರಚನೆ : ರಾಕೆಟ್ಟಿನ ತಳಗಟ್ಟು ಸುಮಾರು ೭೦ ಅಂಗುಲಗಳ ಅಡ್ಡಳತೆ ಇದ್ದಿತು (ಅಕಾಶ. ೪೭). ೨. (ಆಲಂ) ಮೂಲತತ್ತ್ವ, – ನಿಯಮ: ಆತ್ಮವಿಶ್ವಾಸವೇ ಅವರ ಹೆದ್ದಾರಿ ; ಸ್ವಾರ್ಥತ್ಯಾಗವೇ ಆ ಮಾರ್ಗದ ತಳಗಟ್ಟು (ರಾಜವ. ೧೫). **ತಳಕಟ್ಟು :** ೧. 'ಕಾಣಿಕೆ' ಯ "ನುಡಿ"ಯನ್ನೇ ನೋಡಿ. ಇದರ ತಳಕಟ್ಟು ಹಿಂದಿನ ಭೋಗಪಟ್ಟದಿ (ಸಮಾಲೋ. ೧೯) : ಗಾಡಿಯ ಚಕ್ರಗಳ ಚೌಕಟ್ಟು ; ಗಾಡಿಯ ತಳಕಟ್ಟು (Carriage. ಇಂಕನಿ.). [ ತಳ (= ತಲ) + ಕಟ್ಟು$_2$ ]

**ತಳಗಡಿ** (ನಾ). ದಡದ ಕೆಳಭಾಗವನ್ನು ಕೊರೆಯಂಬಿಕೆ : ತಳುವುಡಿಯ ಮಳಲಿಡಿಯುಲಿತ್ತಡಿಯ ತಳಗಡಿಯ ಪೊಳೆ (ಜ್ಞಮಿಥಾ. ೯-೨೪).
[ ತಳ (= ತಲ) + ಕಡಿ$_3$ ]

**ತಳಗಡೆ** (ನಾ) ಕೆಳಭಾಗ ; ಕೆಳಗಿನ ಹಂತ . 'ತಳಗಡೆಕಾಲು' ಪರಾ.
[ ತಳ (= ತಲ) + ಕಡೆ$_3$ ]

**ತಳಗಡೆಕಾಲು** (ನಾ). ಏಣಿ ಅಥವಾ ನಿಚ್ಚಣಿಕೆಯ ತೀರ ಕೆಳಗಿನ ಮೆಟ್ಟಲು ; ಪಟ್ಟಿ ; ತಳದ ಹಲ್ಲಂ : (ಕ).
[ ತಳಗಡೆ + ಕಾಲು$_1$ (<ಕಾಲ್$_1$) ]

**ತಳಗಲ್ಲು** (ನಾ). ಅಡಿಗಲ್ಲು; ತಳಹದಿಯ ಕಲ್ಲು ; ಅಸ್ತಿಭಾರಶಿಲೆ: ಆಯುರ್ವೇದದ ಆದರ್ಶಶಾಲೆಗೆ ತಳಗಲ್ಲು ಹಾಕಿ ಹತ್ತುವರ್ಷವಾಯಿತು (ಕಗದ್ಯ. ೧೨೦). [ ತಳ (= ತಲ) + ಕಲ್ಲು (<ಕಲ್$_3$) ]

**ತಳಗು$_1$** 'ತಳ್ಗು$_1$' ನೋ.

**ತಳಗು$_2$** (ನಾ). ಕೆಳಭಾಗ ; ಬುಡ: ಮೇಲಿಲ್ಲ ತಳಗಿಲ್ಲ ನಡುವಿಲ್ಲ ರೂಪಿಲ್ಲ (ವೀಶೈಪು. ೧-೨-೪).

ತಳತಳಗು (ದ್ವಿರುಕ್ತಿ) : ಸರಸರಗು, ಬೆಳಬೆಳಗು, ತಳತಳಗು, ಮೇಮೇಗು, ಮೂಮೂಗು (ಶಬ್ದಾನು. ೩೯೨ ಪ್ರಯೋ). [ <ತಳ ]

**ತಳಗು$_3$** (ನಾ). (?) : ತಳಗು ಕಲೆ ಕಚರಿ ಜರ್ಝರೆ ಪುಳಕಂ ತಿಳಿಗಾರೆ ತಿರವಿ ವರ್ಣಮಣಂ ಸಂಗಳಿಸದೆ ಪಳುಕಿನ ಕುಟ್ಟಿಮತಳಮದು ತಳತಳಿಸಿ ತೊಳಗುವುದು ತನಿವೆಳಗಿಂ (ಕುಸುಮಾ. ೦-೧೧೩). [ ? ]

**ತಳಚಪ್ಪಟೆ** (ನಾ). ನೆಲೆಗಟ್ಟು ; ಕುಟ್ಟಿಮ : ಆ ಬಾಗಿಲವಾಡಗಳು ಅಡಿಗೆ ಮನೆ ಆ ಮುಂದಣ ಚಪ್ಪರವೋಲಗದ ಘಾಳಿಮಂಟ್ಟಪ ಸುತ್ತಣ ತಳಚಪ್ಪಟೆ (ಸೌಇಇ. IX-II, ೩೮೩-೧೪ : 1538).
[ ತಳ (= ತಲ) + ಚಪ್ಪಟೆ ]

**ತಳಚಿಪ್ಪೆ** (ನಾ). = ತಳಚಪ್ಪಟೆ : ರಘುಪತಿರಾಜವೊಡೆಯರು ಮಾಡಿಸಿದ ತಳಚಿಪ್ಪೆಯ ಸೇವೆ (ಮೈಆರಿ. ೧೯೩೮, ೧೨-೪ : ಸು. 1538).
[ ತಳ (= ತಲ) + ಚಿಪ್ಪೆ (<ಚಪ್ಪೆ$_1$) ]

**ತಳಚ್ಛಂದ** (ನಾ). ತಳದ ವಿನ್ಯಾಸ : ಆ ನಾಲ್ದೆಸೆಯ ಮಾನಸ್ತಂಭಂಗಳೆಡೆಯೆಡೆಯೊಳರ್ಧಯೋಜನವ್ಯಾಸಮನಪ್ಪುಕೆಯ್ದು ಸಮಚತುರಶ್ರಂ ಪಾದಾಧಿಕ ಚತುರಶ್ರಂ ವೃತ್ತಮಾಯತವೃತ್ತಮಪ್ಪಾಶ್ರಂಗಳೆಂಬ ತಳಚ್ಛಂದಂಗಳಿಂ (ಚಂದ್ರಪು. ೧೫-೨೨ ವ). [ ಸಂ. ತಲಚ್ಛಂದ ]

**ತಳಚ್ಛವಿ** (ನಾ). ಒಂದು ಬಗೆಯ ಬಣ್ಣ ; ಬಿಳುಪು ಮತ್ತು ಕಪ್ಪು ಬಣ್ಣದ ಮಿಶ್ರಣ : ರೋಮುವೊಡೆಗು ಕರಂ ಕಡುರೋಮಂಗಕ್ಕಂ ತಳಚ್ಛವಿ ಪ್ರಕಟನದಿಂ ತಾಮಸ ಹರಿಸಮನೋಡುಗುಮಾ ಮಾರುತರುಚಿ ಹಯಂಗಳೊಳ್ ಕರಮಶುಭಂ (ಅಶ್ವಶಾ. ೩-೫೦). [ ಸಂ. ತಲಚ್ಛವಿ ]

**ತಳಝಾಡಿಸು** (ಕ್ರಿ). (ಚೀಲ ಮೊದಲಾದುವುಗಳನ್ನು) ತಳ ಬರಿದಾಗುವಂತೆ ಕೊಡಹು ; ಒದರು ; ಖಾಲಿಮಾಡು : ಮನೆಯಲ್ಲಿಯ ಕಾಳುಕಡಿಗಳೆಲ್ಲ 'ತಳಝಾಡಿಸಿ' ಪ್ರತಿಯೊಂದು ಒಕ್ಕಲುಕುಟುಂಬವೂ ಹಪಹಪಿಸಿತು (ಬರಹಾ. ೫೪).
[ ತಳ (= ತಲ) + ಝಾಡಿಸು (<ಜಾಡಿಸು) ]

**ತಳತಂತ್ರ** (ನಾ). ೧. ಕಾಲಾಳುಗಳ ಪಡೆ; ಪದಾತಿಸೈನ್ಯ : ಜಾಳಾಂದ್ರದೇಶದ ಅರಸು . . . ತಳತಂತ್ರ ಮಾರ್ಬಲ ಸಹಿತ ರಾಜಬೀದಿಯೊಳು ಬರುತ್ತಿರಲು ಹಜ್ಜೆಗಾಣದೆ ತಳಿತ ಕಾರೆಯ ಮೆಳೆಯೊಳಗಿಪ್ಪ ಬಿಜ್ಜು ಅರಸು ಆನೆ ಮೊದಲಾದ ತಳತಂತ್ರ ಮಾರ್ಬಲವ ನುಂಗಿತ್ತ ಕಂಡೆ (ಸರ್ವವ. ೨೦೫-೯೩೦) ; ಮುಂದಣ ತನ್ನ ತಳತಂತ್ರಮಂ ಕೆಲಕ್ಕೆ ತೊಲಗವೇಟ್ಟು . . . ವನಕೇಳೀವಾರಣಮನಣೆದು ನೂಂಕಿ (ಚಂದ್ರಪು. ೧೦-೯೪ ವ) ; ಲಲಿತಾಂತಃಪುರಕೋಟಿ ಬಿಂದೆ ತಳತಂತ್ರಂ ಮುಂದೆ (ಪುಷ್ಪಪು. ೮-೨೬) ; ವ್ಯೂಹವನು ರಚಿಸುವಸು ನಾಳಿನೊಳಾಹವಕೆ ತಳತಂತ್ರವೊಂದೇ ವೋಹರಕೆ ನಡೆತರಲಿ ಪಡುರಥರಾದಿಯಾದವರು (ಕುವ್ಯಾದ್ರೋ. ೮-೬೬) ; ತಳತಂತ್ರದಗಲವ ದಾಟಲಾಜಿದ ಮೇಲೆ ಚಲಪಕ್ಷಿಗಳಾಗ ಬಳಲಿ ಇಳಿಯೊಳುದಿರಿದುವು (ಕಂಸವಿ. ೧೦-೨೭); ತಳತಂತ್ರವೀರರ ಜೀವಿತವ ಒಡಿಯದಿರು (ಶಂಕದಾ. ೧೩-೬). ೨. ಸೈನ್ಯ : (ಕ). ೩. (ಆಲಂ) ಕೈಚಳಕ; ಮೋಸಗಾರಿಕೆ; ಏನೋ ತಳತಂತ್ರದಮಾಡಿ ಕೆಲಸ ಸಾಧಿಸಿಬಿಟ್ಟ (ರೂಢಿ). [ ತಳ (= ತಲ) + ತಂತ್ರ ]

**ತಳತಂತ್ರಗೂಡು** (ಕ್ರಿ). ಕಾಲಾಳಿನ ಪಡೆಯನ್ನು ಜೊತೆಗೂಡು ; ಪದಾತಿಸೈನ್ಯವನ್ನು ಒಡಗೊಂಡಿರು : ನರಸಿಂಹಪುರ ಬೇಲೂರ ದೊರೆಗಳಾಗ ಹರುಷದೆ ತಳತಂತ್ರಗೂಡಿ . . . ಭರದಲಿ ಬಂದರೇನೆಂಬೆ (ಕಂಸವಿ. ೩-೨೪) ; ತಳುವದೆ ತಳತಂತ್ರಗೂಡಿ ಸನ್ನಾಹದೊಳಳವಟ್ಟು ನಡೆದ ನುಬ್ಬಿನಲಿ (ಕಂಸವಿ. ೧೦-೧೦). [ ತಳತಂತ್ರ + ಕೂಡು$_1$ ]

**ತಳತಳ** 'ತಟತಟ' ನೋ.

**ತಳತಳಗುಟ್ಟು** (ಕ್ರಿ). ತಳತಳಿಸು ; ಹೊಳೆ ; ಮಿಂಚು : (ಕ).
[ ತಳತಳ (<ತಟತಟ) + ಕುಟ್ಟು$_1$ ]

**ತಳತಳನೆ** 'ತಟತಟನೆ' ನೋ.

**ತಳತಳಿಕೆ** (ನಾ). ತಳತಳಿಸುವುದು ; ಹೊಳಪು ; ಪ್ರಕಾಶ : "ಜ್ವಲ–ದೀಪ್ತೌ, ತಳತಳಿಕೆಯೊಳ್" (ಧಾಕಕ. ೧೪೫).
[ ತಳತಳ (<ತಟತಟ) + – ಇಕೆ ]

**ತಳತಳಿಸು** 'ತಟತಟಿಸು' ನೋ.

**ತಳತಾಳ** (ನಾ). ಕೈಯಿಂದ ಹಾಕುವ ತಾಳ : ತಾಳತರುವಿತತಿಯೊಳ್ ಬೇತಾಳಂಗಳ್ ವೊಜೆದು ತಜೆದು ಬಾಯ್ಗಳನಾ ಪಾತಾಳಬಿಲಂಗಳ ಪೋಲ್ ತಳತಾಳಲಯಕ್ರಮದೆ ಕುಣಿಯೆ ಭಯಮನನಾದಂ (ಕವಿರಾ. ೩-೧೯೩). [ ತಳ (= ತಲ) + ತಾಳ$_2$ (= ತಾಲ) ]

**ತಳತ್ತಳಿಸು** 'ತಟತಟಿಸು' ನೋ.

**ತಳಥಳ** 'ತಟತಟ' ನೋ.

**ತಳಥಳಿಸು** 'ತಟತಟಿಸು' ನೋ.

**ತಳದಳಿಸು** 'ತಟತಟಿಸು' ನೋ.

**ತಳಧಾರಣೆ** (ನಾ). ಸ್ಥಳದ ಧಾರಣೆ ; ಸ್ಥಳೀಯ ಬೆಲೆ ; "ಮೂಲ ಬೆಲೆ" (ಜಾನಕೋ. ೬೫). [ ತಳ (= ತಲ) + ಧಾರಣೆ ]

**ತಳಪ$_1$** (ನಾ). ೧. ಹೊಳಪು ; ಕಾಂತಿ ; ಪ್ರಕಾಶ : "ತೊಳಗು, ಬೆಳಗು, ಮಿನುಗು . . . ಮಿಂಚು, ಡಾಳಂ, ಪೊಗರ್, ತ[ಪಾಠಾಂ. ತೊ]ಳಪಂ, ಮಸೆ–ಈ ೧೪ ಕಾಂತಿ" (ಕಶಸಾ. ೦೦-೨೦೨) : "ಮಸೆಯೆಂದು ತಳಪ [ಪಾಠಾಂ. ತೊಳಪ]" (ಕಬ್ಬಿಕ್ಕ. ೫೩) ; "ತೊಳಗೆನೆ ಮಿನುಗೆನೆ . . . ಕಳಿಪೊಳಪು ಪೊಣಜು ಮಸೆಯೆನೆ ತಳಪಮನಲ್ ಕವಿಗಳಿಂದೆ ಕಾಂತಿಯೆನಿಕ್ಕುಂ" (ಕವಿಕಂ. ೧೦೦) ; ಝಳಪದಲಿ ಬೊಬ್ಬಿಡುವಡಾಯುಧ ಹೊಳಪುಗಳ ದೊಂಕಣೆಯ ತಳಪದ ಬೆಳಗುಗಳ (ಕುವ್ಯಾಭೀ. ೨-೬) ; ತಳಿತ ಹೊಗರಿನ ಬಾಯಿಧಾರೆಯ ಹೊಳಹುಗಳ ಹೊಸಮಸೆಯ ತಳ[ಪಾಠಾಂ. ಳಿ]ಪದ ಬೆಳಗುಗಳ (ಕುವ್ಯಾದ್ರೋ. ೫-೦೩) ; ಹೊಂಬರಹದ ಸುರೇಖೆಯ ತಳಪದಸ್ತ್ರದಲವಳ ಹಸ್ತವ ಕಳಚಲೆಚ್ಚನು (ತೊರಾ. ೧-೧೦-೦೩) ; ತೆರೆಯ ಹರಿಗೆ ತಳಪದ ಕತ್ತಿ ಮೆಯ್ಜೋಡು . . . ಬಿಗಿದುಟ್ಟ ದಟ್ಟಿಯ ಹರಿಗೆಯವರು ತಜುಬಿದರು (ಕುರಾಸಾಂ. ೧೧-೭೦) : ಚುಚ್ಚಿದಳು ಶೂಲದಲಿ ಕವಚವ ಬಿಚ್ಚಿದಳು ಖಡ್ಗದಲಿ ದೈತ್ಯನ ಮುಚ್ಚಿದಳು ಹೊಂಗರಿಯ ಹೊದರಿನ ತಳಪದಸ್ತ್ರದಲಿ (ಅಂಬಿಕಾ. ೧೮-೬೪) ೨. ತಲೆಗೂದಲು ಹೊಳೆಯುವಂತೆ ಹಚ್ಚುವ ಕಪ್ಪು : ತಲೆಗೂದಲನು ಸಿಂಗರಿಸುವುದಕ್ಕಾಗಿ ಹಚ್ಚುವ ಲೇಪನ ; "ನರೆಗೆ

"ಇಡುವ ಕಪ್ಪು" (ಚತುನಿ. ೬ I, ೭೮). 'ಪಚಿಪು' ಪರಾ. ೩. (ಸುಗಂಧ ದ್ರವ್ಯಗಳ) ಲೇಪನ: ಪೊನ್ನಬಟ್ಟಲಲಿ ಕುಂಕುಮ ಗಂಧ ಸಲಿಲ ಬಾವನ್ನ ಕಸ್ತೂರಿ ಕಪ್ಪುರವ ಚೆನ್ನಾಗಿ ಹದಮಾಡಿ ಲೇಪಿಸಿ ಪೆಣ್ದಲೆರನ್ನಗೆ ತಳಪನಿಕ್ಕಿದರು (ಮೋಹತ. ೩೧-೫). [ <ತಳಪು$_1$ ]

**ತಳಪ$_2$** (ನಾ). ಹಾಸುಗೆ ; ತಲ್ಪ. 'ಅಹಿಪತಿತಳಪ' ಪರಾ. [ <ಸಂ. ತಲ್ಪ ]

**ತಳಪಗಣ್ಣು** (ನಾ). ಹೊಳಪುಗಣ್ಣು ; ಥಳಥಳಿಸುವ ಕಣ್ಣು : ಎಳೆನಗೆ ಗಣ್ಣೆಸಳ್ಗಣ್ಣು ತಾವರೆಗಣ್ಣು ತಳಪಗಣ್ಣು [ಪಾಠಾಂ. ಪೊಳಪೆಳೆವಾಳೆಗಣ್ಣು] . . . ಬಾಲೆಯರು (ಕುರಾಸಾಂ. ೨೧-೪೪). [ ತಳಪ$_1$ + ಕಣ್ಣು (<ಕಣ್) ]

**ತಳಪಟ** (ನಾ). ೧. ಸಮತಲವಾದ ಪ್ರದೇಶ ; ಬಯಲು ; ಮೈದಾನ: "ತಳಪಟವೆಂದೊಡೆ ಬಯಲು" (ಭಾರನಿ. ೩೮) ; ಇಚಿುಬಿನಲಿ ಸಿಕ್ಕಿರ್ದ ಪುಲಿಯನು ಮುಚಿದು ಕಳೆಯದೆ ತಳಪಟಕೆ ಬಿಟ್ಟೆಬಿಯಬಹುದೇ ಕೊಂದು ಕೂಗದೆ ಬಿಡುವುದೇ ಬಳಿಕ (ಕುವ್ಯಾ.ಅ. ೮-೨೧); ಹೊಲಬುದಪ್ಪಿದ ತಳಪಟದ ಹೆಬ್ಬುಲಿಯವೊಲು ನಿನ್ನಾತ ಸಿಲುಕಿದ ನಿಲುಕಿ ನೋಡಿದನೆಲ್ಲಿ ತೋಜಜರ್ಜುನನನೆನಗೆನುತ (ಕುವ್ಯಾ.ದ್ರೋ. ೧೪-೩೭) ; ತೋಚಿದನು ತಾ ಬಳಿಕವಗೆ . . . ತಳಪಟದೊಳಗೆ ಹಾರಕ ಹಾಚುವಭಿನವ ಭಾವ ಭಂಗಿಯ ಬಹಳ ಕೌತುಕವ (ತೊರರಾ. ೩-೮-೧೪) . ೨. ರಣರಂಗ ; ಯುದ್ಧಭೂಮಿ : ಪೊಳೆಪೊಳೆದು ಹೊಂದೇರು ಹರಿದವು ತಳಪಟಕೆ (ಕುವ್ಯಾ.ಭೀ.೮-೨); ತಳಪಟವ ತುಂಬಿತ್ತು ಪಯದಳವು(ಕುವ್ಯಾ.ದ್ರೋ. ೧೨-೮).

**ತಳಪಟವ ಮಾಡು**= ೧. ನೆಲವನ್ನು ಸಮತಲವಾಗಿ ಮಾಡು; ಮಟ್ಟ ಮಾಡು : ಕುಳಿ ತೆವರ ತಳಪಟವ ಮಾಡುವ ಪದಾಗ್ರದ ಸಲಿಕೆ ಗುದ್ದಲಿ ಹಾರೆಗಳ ಬಲುಗೆಲಸದೊಡ್ಡರ ಕಳಕಳದಿ ಬರುತಿರ್ದುದಸುರ ರಥ (ತೊರರಾ. ೫-೭-೧೨). ೨. ನೆಲಸಮ ಮಾಡು; ನಾಶ ಮಾಡು: ತಳಪಟವ ಮಾಡಿದನು ಭಾಷೆಯ ಬಳಿಗೆ ಕೊಂದನು ಹತ್ತುಸಾವಿರ ನೆಲನ ವಲ್ಲಭರನು (ಕುವ್ಯಾ.ಭೀ. ೭-೭) ; ಕೊಲುತ ಕಯ್ಯಲಿ ನೆರೆದ ಸೇನೆಯ ತಳಪಟವ ಮಾಡಿದನು (ಶಾಶಿರಾ. ೨೫-೩೬); ರಥಿಕರ ತಳಪಟವ ಮಾಡಿದನು ನಿಮಿಷಾರ್ಧದಲಿ ಕಲಿಹನುಮ (ತೊರರಾ. ೭-೩೧-೬) : ಕದಳಿವೃಂದಂಗಳಂ ತಳಪಟವ ಮಾಡುವ ಮದೇಭಪೋಲ್ ಕೋಪಮಂ ಧರಿಸಿದಂ ಕಲಿಭೀಮನು (ತುರಂಗ. ೫೫-೩೪). **ತಳಪಟವಾಗು** =೧. ನೆಲ ಸಮತಟ್ಟಾಗು : ಲಂಕಾಪೊಡವಿ ತಳಪಟವಾಯ್ತು ಕಪಿವಾಹಿನಿಯ ಕಾಲ್ದುಳಿಗೆ (ತೊರರಾ. ೭-೭-೨೨). ೨. ನೆಲಸಮವಾಗು ; ನಾಶವಾಗು : ತೇರು ತಳಪಟವಾಗಿ ಬಿದ್ದುದು (ಶಾಶಿರಾ. ೩೩-೩೦) ; ಅಟವಿ ತಳಪಟವಾ [ಪಾಠಾಂ. ಕೆಳಕಾ]ಗೆ ನಡೆದುಗ್ಗಟದ ಮಳೆಯಾದ್ರಿಯಲಿ ಬಿಟ್ಟುದು ಪಟುಪರಾಕ್ರಮಿ ನೀಲನಾಜ್ಞೆಯಲಾ ಮಹಾಸೇನೆ (ತೊರರಾ. ೭-೧-೧೫) : ಕೂಡೆ ತಳಪಟವಾಯ್ತು ಗದೆಯ ಬಿರುಹೊಯ್ಲಿನೊಳ್ ಗಜವೃಂದವು (ತುರಂಗ. ೭೧-೩೩).
[ ←ಮರಾ. ತಳವಟ್, ತಳಪಟ್ = ಕುಲಕ್ಷಯ. ಸರ್ವನಾಶ; ಹಿಂ. ತಲಪಟ್ = ನಾಶ ]

**ತಳಪಟಂಮಾಡು, ತಳಪಟಮಾಡು**(ಕ್ರಿ). ನೆಲಸಮಮಾಡು;ಧೂಳೀಪಟ ಮಾಡು ; ಪೂರ್ತಿ ಹಾಳುಮಾಡು : ನಿರ್ನಾಮಗೊಳಿಸು : ಮೊಳೆವ [illegible] . . . ಉಳಿದ ಬೆಳೆಯಂ ನಕುಲ ಪೆಗ್ಗಣಂ [illegible] ಬಳವಂತರೆಲ್ಲರಂ ಸರ್ಪಸಂತತಿ ತಿಂದು ತಳಪಟಂಮಾಡಿ ನಾಡೆಲ್ಲಮಂ ಗೋಳಿಡಿಸುತಿರ್ದುವು (ಹದಶಾ. ೩-೭೩). **ತಳಪಟಮಾಡು** : [illegible] ದ್ರೋಣ (ಕುವ್ಯಾ.ದ್ರೋ.೧೮-೪೭): ಸಾಲಸಂದಣ ಪುರನಗಲಕೆ ತೂಳಿ ತಳಪಟಮಾಡಿದನು ಬನದಗಲದಲಿ [illegible] [ ತಳಪಟ + ಮಾಡು$_1$ ]

**ತಳಪಟಗಾಜಿ** (ನಾ). ಸಮತಳ ಮಾಡುವವನು : ಅಳಿದುಕೊಂಬುದು ಧರೆಯನಾವ ಸ್ಥಳದಲಭಿಮತವೆಂದು ಬಲಿ ಕೈಗಳ ಮುಗಿಯಲಸುರಾಂತಕನು ತನ್ನೊಳಗೆ ನಸುನಗುತ ಕಳೆವರವ ನಿಗುಚಿದನು ರವಿಮಂಡಲ ವನಂಢಲೆವುತ್ತಲಂಬರತಳದ ತಳಪಟಗಾಜಿ ಕೈಕೊಂಡನು ತ್ರಿವಿಕ್ರಮವ (ನಿಭಾಗ. ೮-೧೭-೪). [ ತಳಪಟ + – ಕಾಜಿ ]

**ತಳಪಟಮಾಡು** 'ತಳಪಟಂಮಾಡು' ನೋ.

**ತಳಪಟವರಿಗೆ** (ನಾ). ಸಮಂತಲವಾದ ಒಂದು ಬಗೆಯ ಗುರಾಣಿ,–ಢಾಲು : ಇಡಿದ ತಳಪಟವರಿಗೆ ಪೊಜಿಸುತ್ತಡಸಿ ಕವಿವಾ ಬಿಲ್ಲು ಬಿಲ್ಲಿನ ಬಿಡೆಹೊಳೌಕಿದ ಮುಸುಂಡಿ ಸಲ್ಲಹ ಶಕುತಿ ಸಬಳದಲಿ (ಕುವ್ಯಾ.ದ್ರೋ. ೬ರಿ೩. ಪರಿ. ೨೭೫). [ ತಳಪಟ + ಪರಿಗೆ$_3$ ]

**ತಳಪಟ್ಟು** (ನಾ). ೧. ಕೆಳಗಿನಿಂದ ಹಿಡಿಯುವ ಪಟ್ಟು,–ಹಿಡಿತ. ೨. ಕುಸ್ತಿಯ ಒಂದು ಪಟ್ಟು. ೧, ೨ : ಜಡೆಯೆಂಬುದು ಗೊರವಂಗೆ ತಟ್ಟೆಂಬುದು ಸವಣಂಗೆ ತಳಪಟ್ಟೆಂಬುದು ಪೊಲ್ವಂಗಲ್ಲದೆ ಕೊಲ್ವ ಗೆಲ್ವ ಕಲಿಗಂ ಬಿರುದಂಗಮೇವುದು (ಅನಂಪು. ೩-೨೮ ವ). [ ತಳ (= ತಲ) + ಪಟ್ಟು$_1$ ]

**ತಳಪವೆಜು** (ಕ್ರಿ). ಹೊಳಪಿನಿಂದ ಕೂಡಿರು; ತಳತಳಿಸು ; ಪ್ರಕಾಶಿಸು: ಪಜ್ಜಳಿಪ ದಾಡೆಯ ಮುರಿದ ಕವಿಮ್ಮಾಸೆಗಳ ಕೆಂಗಣ್ಣ ತಳಪವೆತ್ತಿಹ ಖಡ್ಗಹಸ್ತದ . . . ಭೈರವಂ (ಶಂಕದಾ. ೧೫-೩೪). [ ತಳಪ$_1$ + ಪೆಜು$_1$ ]

**ತಳಪಳನೆ** (ಅ). (ಕಂದಿಯುವುದನ್ನು ಹೇಳುವಾಗ) ತೀವ್ರವಾಗಿ ; ಸಳವಂಳನೆ: ಛಿಳಛಿಳಿಲ್ ಛಿಳಿಲೆಂದು ಚಿಮ್ಮಿತು ಜಲಜಜಾಂಡದ ಚಿಪ್ಪು ಕುದಿದುದು ತಳಪಳನೆ ತತ್ಕಮಲಜಾಂಡಾವರಣ ಜಲರಾಶಿ (ತೊರರಾ. ೫-೮-೭೦) : ತಳಪಳನೆ ಕುದಿವೆಣ್ಣೆಗೊಪ್ಪರಿಗೆ ಕಾಯ್ವಲ್ಲಿಗೆಳತರಿಸಿ (ಜೈಮಿಭಾ. ೧೦-೩೧). [ ತಳಪಳ$_0$ + – ಅನೆ$_1$ ]

**ತಳಪಾಯ** (ನಾ). ೧. ಅಡಿಪಾಯ ; ತಳಹದಿ ; ಬುನಾದಿ : ಈಗೇನಿದೆ . . . ಮಣ್ಣಿನಲ್ಲಿ ಹುದುಗಿ ನಿದ್ರಿಸಿದ ಮನೆಮಠಗಳ ತಳಪಾಯಗಳು ಮಾತ್ರವೇ (ಆಳನಿ. ೦೪೭) : ಬಿಡುಗಡೆಯ ತಳಪಾಯದ ಮೇಲೆ ನಾನು ನನ್ನ 'ಕನಸಿನ ಮನೆ'ಯನ್ನು ಕಟ್ಟಿದೆ (ಕಮನೆ. ೨೩೪). ೨. ಮೂಲವಾದ ಅಂಶ,– ಆಧಾರ : ಇವೆಲ್ಲವಕ್ಕೂ ಬೇಕಾಗುವ ತಳಪಾಯ ನಮ್ಮ ಯಕ್ಷಗಾನನೃತ್ಯದಲ್ಲಿದ್ದೇ ಇದೆ (ಯಕ್ಷಬ. ೧೦೭). [ ತಳ (= ತಲ) + ಪಾಯ$_3$ ]

**ತಳಪು$_1$, ತಳ್ಪು$_1$, ಥಳಪು** (ನಾ). ಹೊಳಪು ; ಕಾಂತಿ ; ಮಿನುಗು : "ಪೊಗರ್ತೊಳಗು ಬೆಳಗಾವಗಂ ಮಿನುಗು ತ[ಪಾಠಾಂ. ತೊ]ಳಪುಂ ಮಿಜುಗು . . . ಮಿಂಚು ಡಾಳಂ ತಾವೆನಲ್ಕಾಂತಿಗೆ ಪೆಸರ್" (ಕಬ್ಬಿಕೈ. ೨೪) : "ತಳಪು ಕಾಂತಿ" (ಕಶರ. ೪೩); ನೀರಧರನಿಚಯ ಚತುರಂಗ ಬಲದಂಗ ತರವಾರಿಗಳ ತಳಪ ತಳಪಿಂದ್ರಧನುರುಚಿತ ರುಚಿರಭೂರಿ ಭೇರಿ ಪ್ರಣಾದಂ ಮೊಳಗು (ಮದೇಪು. ೧೩-೨೦) ; ಜಾತಿಮುತ್ತಿನಯಳೆಯು ಜಾಣೆ ಬೈತಲೆ ತಳಪಿಗಾತುಹಾಕಿದಳು ಇಮ್ಮಡಿಕೆಯಲಿ ಸಂಪಿನಲಿ ದೂತಿಯರು ಚಂದ್ರ ಸೂರ್ಯರ ಮುಂದಲೆಗೆ ಸಾರ್ಚೆ ನೂತನೊಪ್ರದ ಬಟ್ಟು ನೊಸಲಿಲೊಲು ವಂತೆ (ಶ್ರೀಕೃಪಾ. ೧೧). 'ತಳಪೆತ್ತು' ಪರಾ. **ತಳ್ಪು$_1$** : ಪೊಳೆವುತ್ತಾತಾಸಿಜಾಳಂಗಳ ಸಕಲುಷಸಾದೀಕ್ಷಣೋದಂಶುಜಾಳಂಗಳ ತಳ್ಪಂ ತಾಳ್ದಿ ಚಂಚಚ್ಚಪಲಶಫರಸಂದೋಹದಿಂದಂ ಪ್ರವಾಳಾವಳಿಯಿಂದಂ ತಳ್ತ ವೀಚೀಚಯಮಿದೆನಿಸಿ ಸೈನ್ಯಾಬ್ಧಿಯಿಂ ಬರ್ಪ ವಾಹಂಗಳನೌರ್ವಜ್ವಾಲೆಯಂತಚ್ಯುತನ ಕಣೆಗಳಟ್ಟಾಡಿಸುತ್ತಿರ್ದುವೆತ್ತಂ (ಜಗವಿ. ೧೨-೧೮). **ಥಳಪು** : ಸಕ್ಕರೆ ತುಟಿ ಕೂರ್ಪು ಕದಪು–ಕಣ್ಣೆ ಗಿಕ್ಕಿದ ಸೊಬಗಿನ ಕಪ್ಪು–ತಲೆ ಹಿಕ್ಕಿ ಬಾಚಿದ ಕೇಶ ಥಳಪು-ಸರ್ವ ದಿಕ್ಕು ಮೋಹಿಸುವಂಥ ವಲಪು (ವಿದಾಕೈ. ೧೦೩-೧೧). [ ದೇ.॥ ತಮಿ. ತಳತಳಪ್ಪು ]

**ತಳಪ್ಪು₂** 'ತಟ್ಟು₂' ನೋ.

**ತಳಪುಗಣ್** (ನಾ). ಹೊಳಪುಗಣ್ಣು: ತಳಪುಗಂಗಳ ಮುಚ್ಚಿ ತೆಟ³ವಳನುಳ ವುದದು ಶಿವನಂಶಕಲ್ಲದೆ ನರರಿಗೆಂತಹುದು (ಸುಸಾರ. ೯೯-೨).

[ ತಳಪು₁ + ಕಣ್ ]

**ತಳಪೆತ್ತಿಸು** (ಕ್ರಿ). ಹೊಳಪನ್ನುಂಟುಮಾಡು: ವಸಂತನೆಂಬೆಸೆದ ಕಮ್ಮಾರಂ ಶಶಿಬಿಂಬಶಾಣದೊಳ್ ಮಸೆದು ತಳಪೆತ್ತಿಸಿದ ಕುಸುಮಶರನ ಕೂರಸಿಯಂ ಕೇರ್‍ಸಿದ ಮುತ್ತಿನ ಮುಗ್ಧೆಯರುಂ (ಶಾಂತೀಶ್ವ. ೭-೯೩ ವ).

[ ತಳಪೆತ್ತು₁ + – ಇಸು₁ ]

**ತಳಪೆತ್ತು₁** (ಕ್ರಿ). ಹೊಳಪು ಕೊಡು ; ಕಾಂತಿಗೊಳಿಸು : ಎಸೆವಮೃತಾಂಶು ಬಿಂಬ ಮಣಿಶಾಣದೊಳಿಂತು ಬಸಂತಗಮ್ಮಾರಂ ಮಸೆದು ಪಳಚ್ಚನಾಗಿ ತಳಪೆತ್ತಿದ ಕಾಮನ ಖಡ್ಗದಂತೆ ಮೋಹಿಸಿತೆನಸುಂ ಸ್ವಯಂಪ್ರಭೆಯ ರೂಪವಿಲಾಸದ ಪಾಟಿ (ಶಾಂತೀಶ್ವ. ೨-೨೦). [ ತಳಪು₁ + ಎತ್ತು₁ ]

**ತಳಪ್ರಹಾರಿ** (ಗು). ೧. (ವೈರಿಗಳನ್ನು) ಕೆಳಕ್ಕುರುಳುವಂತೆ ಹೊಡೆಯುವ,– ಇಕ್ಕಿ ಮೆಟ್ಟುವ. (ನಾ). ೨. ಅಂಗೈಯಿಂದ ಹೊಡೆಯುವವನು. ೩. ಇಕ್ಕಿ ಮೆಟ್ಟುವ ವ್ಯಕ್ತಿ : ಸುಲಿಪಲ್ ತಟ್ಟಲ ತಾರಕಾವಯವಮುಂ ಪೀನಂ ಲಲಾಟಾಗ್ರದೊಳ್ ನೆಲೆಗೊಂಡೊಪ್ಪುವ ವೀರಪಟ್ಟಮುದಯುಂಗೆಯ್ವಿಂದುವಂ ತೋರ್ಪ ತೋಂಗಲೆ ಜಂಬೂವಿಟಪ ಪ್ರಹಾರ[ವಾಲ]ರುಚಿಯುಂ ವಕ್ತ್ರಾರುಣಂ ಸಂಜೆಯುಂ ಗೆಲೆ ಪೋಲ್ತತ್ತು ತಳಪ್ರಹಾರಿಯ ಶಿರಂ ಹೇಮಾದ್ರಿಯಾಕಾರಮಂ (ಕಾವ್ಯಸಾ. ೫೨೫ ಶೂದ್ರಕ): ಸರಸಿರುಹದಲರ ನಡುವಣ ಸಿರಿಯಪೊಲತ್ಯಂತಮಪ್ಪ ತೇಜದಿನಂತಃ ಪುರಮನಲಂಕರಿಪುದಱಿಂ ಧಳಿಸವತಿತಳಪ್ರಹಾರಿಯೆನೆ ಸಲೆ ನೆಗಟ್ದಳ್ (ಎಇ. XV, ೩೩೦-೦೩ : 1028) : ಮಣಲರಭೀಮಂ ಅರಿಮನ್ನೆಯ ತಳಪ್ರಹಾರಿ (ಎಇ. XVI, ೩೩೫-೨೨: 1038) ; ರಿಪುಮಂಡಳಿಕ ತಳಪ್ರಹಾರಿ (ಮುಂಬಇಶಾ. XI, ೨೪೭-೧೧ : 1121). [ ಸಂ. ತಲಪ್ರಹಾರಿನ್ ]

**ತಳಬೋಗಿ** (ನಾ). ತಳಭೋಗದ ಸುಂಕವನ್ನು ತೆಗೆದುಕೊಳ್ಳುವವನು : ಸಮಸ್ತಗುಣಸಂಪನ್ನರಪ್ಪ ಸುಂಕವೆರ್ಗ್ಗಡೆ ಬಮ್ಮರ್ಣ್ಣ ಅಯ್ಚಿಮಯ್ಯ ತಳಬೋಗಿ ದಾಸಿಯಣ್ಣಂ ಸಮಸ್ತ ಸುಂಕಿಗ (ಎಇ. XVI, ೩೩೦-೧೭ : 1077). [ <ಸಂ. ತಲಭೋಗಿನ್ ]

**ತಳಭಂಡ** (ನಾ). ವ್ಯಾಪಾರದ ಸರಕು ಮತ್ತು ಆ ಸರಕಿನ ಮೇಲೆ ಕೊಡಬೇಕಾದ ಸುಂಕ (?) :

ತಳಭಂಡದ ಸುಂಕ = ಸ್ಥಳದ ಸರಕಿನ ಮೇಲಣ ಸುಂಕ (?) ; "ವ್ಯಾಪಾರಸಾಮುಗ್ರಿಗಳ ಮೇಲಿನ ಸುಂಕ" (ಶಶಾಅ. ೩೯೯) : ಆ ಯೆರಡೂರ ತಳಭಣ್ಡದ ಸುಂಕವೊಳಗಾಗಿ ಯಿನ್ನಿನಿತುಮಂ ಭುಜಬಳ ಗಂಗಪೆರ್ಮ್ಮಾಡಿದೇವರುಂ ಗಂಗಮಹಾದೇವಿಯರುಂ . . . ದೇವರ ಶ್ರೀಪಾದಪದ್ಮಮೂಳದೊಳ್ ಧಾರಾಪೂರ್ವ್ವಕಂಮಾಡಿ ಬಿಟ್ಟರು (ಎಕ. VII, ಶಿವಮೊ. ೯೭-೪೭ ; 1113). [ತಳ (=ತಲ) + ಭಂಡ₁ (<ಬಂಡ₁)]

**ತಳಭಿತ್ತರಿ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ: ಕೆಳಗಡೆಯಲ್ಲಿ ಇದಿರಾದವನ ಬಂಡಿಕೋಲನ್ನು ಮುಟ್ಟಿಸಿ ಆಮೇಲೆ ಒಳಗೆ ತಿರುಹುವುದು ಮುಂತಾಗಿ ಪಾದಗಳಲ್ಲಿ ಏಟು ಆವದು ಅದು ತಳಭೇದನವೂ ತಳಭಿತ್ತರಿ ಯೆಂದು ತಿಳಿಯಲ್ಪಟ್ಟಿತು (ಖಡ್ಗಲೀ. ೫-೬೮).

[ ತಳ (=ತಲ) + ಭಿತ್ತರಿ ]

**ತಳಭೇದನ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ ; ಕಾಲುಗಳಿಗೆ ಹೊಡೆಯುವ ಹೊಡೆತ: ಕೆಳಗಡೆಯಲ್ಲಿ ಇದಿರಾದವನ ಬಂಡಿಕೋಲನ್ನು ಮುಟ್ಟಿಸಿ ಆಮೇಲೆ ಒಳಗೆ ತಿರುಹುವುದು ಮುಂತಾಗಿ ಪಾದಗಳಲ್ಲಿ ಏಟು ಆವದು ಅದು ತಳಭೇದನವೂ ತಳಭಿತ್ತರಿಯೆಂದು ತಿಳಿಯಲ್ಪಟ್ಟಿತು (ಖಡ್ಗಲೀ. ೫-೬೮). [ ತಳ (=ತಲ) + ಭೇದನ ]

**ತಳಭೋಗ** (ನಾ). ಒಂದು ಬಗೆಯ [illegible] ಕೋಂಟಕ್ಕೆ ಕರವಂಟ ತಳಭೋಗಮುಸತು ಮೊದಲಾಗೆ ಸರ್ವ್ವಬಾ[illegible] (ಸೌಇ. XI-1, ೫೩-೬೪ : 1007) ; ಸೂಯ್ಗ[illegible] ಪೊಂಗೆರೆಡುವರೆ ವೀಸವಮುಂ [illegible] (ಸೌಇ. XI-1, ೧೦೭-೧೫ : 1076) ; ತಕ್ಕಿಲ ೩ ಮತ್ತರ್ಕ್ಕೆಯುಮಂ ಕರವಡ ತಳಭೋಗ ತಳಾಜರಾಯಮೊಳಗಾಗಿ ಸರ್ವ್ವಬಾಧಾಪರಿಹಾರವಾಗಿ ಬಿಟ್ಟರು (ಕಇ. II, ೧೦-೩೦ ; 1080). [ ತಳ (=ತಲ) + ಭೋಗ ]

**ತಳಮುಗುಚು** (ಕ್ರಿ). ೧. ಬುಡಮೇಲು ಮಾಡು ; ತಲೆಕೆಳಗುಮಾಡು ; ಕಿತ್ತುಹಾಕು : ನಾಶಮಾಡು : ಬಿಗಿದ ಬಾಣದ ದಡ್ಡಿಯ ನ ತಳಮುಗುಚಿದನು ನೂಱುಬಿನಲಿ (ಕುಪ್ಪಾಕ. ೪-೧೩) : ಬಳಿಕವ ಗೋ[illegible]ದನು ಗುಡಿಯುಱಿದು ಬಾಲದ ಗೋರಿಯಲಿ ತಳಮುಗುಚಿದನು ತೋ[illegible] ಸಾಲುಗಳ (ತೊರಶಾ. ೫-೭-೦೬). ೨. ತಳವನ್ನು ಕಲಕು,-ಕದಡು; ಕ್ಷೋಭೆ ಗೊಳಿಸು (?) : ಸೊಗಸು ತಳಿತುದು ತರಳಮನ ತಳಮುಗುಚಿದಂತಾಯ್ತು ವರೊಲವು ಕಾಡಿಗೆಯ ಕೆಸಱೊಳಗದ್ದ ನೀಲದ ಸರಿಗೆ ಸರಿಯಾಯ್ತು (ಕುಪ್ಪಾಅ. ೧೭-೧೮) : ಸಿಡಿಲ ಪಳಗಿಸುವರಿವು, ರವಿಯು ಸೆರೆಹಿಡಿವರಿವು, ಸಾಗರದ ತಳಮುಗುಚಿ ಸೂರೆಗೈವರಿವು (ಮಲೆದೇ. ೪೮-೨).

[ ತಳ ( = ತಲ) + ಮುಗುಚು ( <ಮುಗುಚ್ಚು ) ]

**ತಳಮಳ, ತಳವಳ, ತಳ್ಳಮಳ** (ನಾ). ೧. ದಿಗಿಲು ; ಕಕ್ಕಾಬಿಕ್ಕಿ ; ಬೆರಗು: "ತಳಮಳಂ ಬೆಳ[ಱ]ಗಾಗಿಪ ಪೇಳಿಯೊಳ್ ಕರಂ"(ಕರ್ಣಾನಿ.೩೩); "ತಲ್ಲಣಂ ತಳವಳಗು ಬಕ್ಕುಡಿ ಬೆಗಡಳುರ್ವು ಮಲ್ಲಳಿ ಬಿಗುರ್ಬೆಬ್ಬಳಂ ತಳಮಳವೆನಲ್ಕೆ ಸೊಲ್ಲಿಪ್ಪುದು ಬೆಱಗಪ್ಪ ಭಾವದೊಳು" (ಶಬ್ದಮಂ. ೫೦). 'ತಳಮಳಂಗೊಳ್', 'ತಳಮಳಗು₂' ಪರಾ. ೨. ಕಳವಳ ; ಸಂಕಟ : ಚಿತ್ತಕ್ಷೋಭೆ : ತಮಾಷೆಯ ಮಾತು ತಳಮಳಕ್ಕೆ ಹೇಗೆ ದಾರಿಮಾಡುತ್ತದೆ (ಮಹಾಗ. IV, ಮುನ್ನುಡಿ) : ನಲ್ಲೆಯ ಬಗೆಯಾಳದಾ ತಳಮಳವಿಂದು ಮತ್ತೊಮ್ಮೆಯುಕ್ಕಿತು ಕುದಿದು (ಇಂಪಾಪ. ೫೦-೪೪) : ರೈತರ ತಳಮಳದ ಬೆಂಕಿ ಜಮೀನುದಾರರನ್ನು ಒಂದಿಲ್ಲ ಒಂದು ದಿನ ಸುಡದೇ ಬಿಡುವುದಿಲ್ಲ (ಮಣ್ಣಮ. ೧೦೧). ತಳವಳ : ೧. "ತಳವಳವೆ [ಪಾಠಾಂ. ಮಳಗ]ನಲ್ಕೆ [illegible]ಂ ಬೆಱಗಾಗುಹುಂ" (ಶಬ್ದಕೈ. ೮೦). ೨. '[illegible]' ಪರಾ. ತಳ್ಳಮಳ : ೩. ತೀವ್ರವಾಗಿ ಕುದಿಯುವುದು: '[illegible]' ಪರಾ.

ತಳಮಳಮಾಗು = ಕಲಕು ; ಕದಡು; ಅಲ್ಲೋ[illegible] ಸೀರ್ಪನಿ ಸಿಡಿಯೆ ತೆರೆಮಸಗೆ ಕೊಳಂ [illegible] ಮಯ್ಗ್ಗರೆಯ ದಟಿಂಬಟನೆ ಕೈಕಾಲ್ಗಳೊಳೀಸುವ ಕಾವನ [illegible] ಬೋಲಾಡಿದರ್ ಬಾಲೆಯರ್ (ರಾಮಾಶ್ವ. ೧೨೩-೨೪).

[ ದೇ.॥ ತುಳು. ತಳಮಳ, ತಳಬಳ ]

**ತಳಮಳಂಗೆಯ್** (ಕ್ರಿ). ಕ್ಷೋಭೆಗೊಳಿಸು ; ಅಲ್ಲೋಲಕಲ್ಲೋಲ ಗೊಳಿಸು : ದಿವಿಜ ದನುಜ ಮನುಜರೊಳಂ ಮೊಸೆಯೊಳ್ಕದ ಬಳ್ಕದತಿ ಕಾಯನಂ ಹತಕಾಯನಂಗೆಯ್ದಂಗೆ ತನ್ನೊಂದಟ್ಕೆಯಿಂ [illegible] ತಳಮಳಂಗೆಯ್ದಂ (ರಾಮಾಶ್ವ. ೧೬೦-೨೫). [ ತಳಮಳ + ಕೆಯ್₁ ]

**ತಳಮಳಂಗೊಳ್, ತಳಮಳಗೊಳ್, ತಳಮಳಗೊಳು, ತಳಮಳ ಗೊಳ್ಳು** (ಕ್ರಿ). ೧. ದಿಗಿಲುಗೊಳ್ಳು ; ಕಕ್ಕಾವಿಕ್ಕಿಯಾಗು: ಮೊಳಗಿದುವು ಬಹುವಾದ್ಯತತಿ ಪೆಕ್ಕಳಿಸಿ ರಿಪುಬಲ ತಳಮಳಂಗೊಳಲ್(ಕೋಗಯ. ೧೮-೬೮). ತಳಮಳಗೊಳ್ : ೧. ಬಲಮಲ್ಲಂ ಬೆನ್ನೀರ್ಪೊನಲಿಪ್ಪುದ ಬಿಲದೊಳಗಣ ಬೆಳ್ಳಿಲಿ ವಿಂಡಿನ ಪೋಲ್ ತಳಮಳ[ಪಾಠಾಂ. ತೆವಪೊಳ]ಗೊಂಡತ್ತು (ಜಯುಕಾ. ೭-೫೫). ತಳಮಳಗೊಳು : ೨. ಕಳವಳಗೊಳ್ಳು, ಸಂಕಟ ಪಡು; ಚಿಂತೆಗೊಳಗಾಗು; ಕ್ಷೋಭೆಗೊಳ್ಳು: ತನೂಭವನುಳ್ಳೊಡಾಗಲ

ನಿಲಿಸಿದಡೆ ನಿಂದಪೆವೆನುತ ಮಲಧಾರಿ ಮುನಿಪಂಸ ಸಲೆ ಪರಸಿ ಬಿಜಯಂಗೆಯ್ದುಲು ತಳಮಳಗೊಳುತೆ ದಾನಾಂತರಾಯವು ಪಳಿಯಿಸಿತ್ತೆನೆ ಪುತ್ರಲಾಭವು ನಿನಗೆ ಸಮನಿಪುದೇ (ಸಾಳ್ವಭಾ. ೩-೭) : ವ್ಯಸನಾಭಿಭೂತರು ಉತ್ಸಾಹಹೀನರು ದೀನರು ನಷ್ಟಚೇತನರು . . . ತಳಮಳಗೊಳುವರು ಬರಿದೆ (ಇಂಚಾಪ. ೧೩೭-೭೩). **ತಳಮಳಗೊಳ್ಳು**: ೨. ಶಾಂತಲೆಯ ಮನಸ್ಸು ತಳಮಳಗೊಂಡಿತು (ಶಾಂತಲಾ. ೬೫) : ಅವನ ಮನಸ್ಸು ತಳಮಳ ಗೊಳ್ಳುತ್ತಿತ್ತು (ರಾವಿಜ. ೫೩). [ ತಳಮಳ + ಕೊಳ್$_1$ ]

**ತಳಮಳಕು** (ನಾ). ಹೊಳಪು (?) : ಚಿಲಕತ್ತು ಒಲೆಗತ್ತಿ ತಳಮಳಕಿನ ಸಾಲುಬಂಟರ ಸಾಲು ಐನೂರು . . . ಹಿರಿದು ಬಯಲಾಗ ನಿಂತಾಗ (ಕೋಳಗೀ. ३३೭). [ ? ]

**ತಳಮಳಗು$_1$** (ಕ್ರಿ). ದಿಗಿಲುಗೊಳ್ಳು ; ಕಂಗೆಡು; "ಹೆದರು, ತಲ್ಲಣಿಸು" (ಪ್ರಥಮ) : ತಳಮಳಗು[ಪಾಠಾಂ. ಗೊ]ತ್ತುಂ ಜನಿತ ನಿಜಭೀತಿ ಮನಂಗೊಳೆ ಕಳವಳಿಸಿ ಚಲಿತ ನಿಲಲಣ್ಮದೆ ಮಕ್ಕಳವೊಳಗೆ ಸುಟಿದರರಸಂ ಮನದೊಳ್ಳುಳಿದಸಿಯನೆ ನೋಡಿ ಪರಿವಾರದವರ್ (ಕವಿರಾ. ೨-೧೪೯) : ತಳಮಳ[ಪಾಠಾಂ. ಳು]ಗುತ್ತೆಱಗುವುದುಂ ವಿಳಸನ್ಮಾಗಧ ಕಿರೀಟ ರತ್ನಾಂಶು ಗಣಂ ಗಟಿಯಿಸಿದುದವನ ಗರ್ವಮ ಗಟಿಯಿಸುವಂತಿರೆ ನೃಪೇಂದ್ರ ಪದಸರಸಿಜದೊಳ್ (ಆದಿಪು. ೧೨-೧೦೨) : ಒಳಕೊಳ್ ಮುಂ ನಿನಗಿಲ್ಲದ ಮುಳಿಸಂ ಕಾಲ್ಗೆಱಗಿದೋಪನಂ ತೋಱಿ ದಯೆಯಿಂ ತಳಮಳಗು[ಪಾಠಾಂ. ಮಳುಕು]ತ್ತನುನಯದಿಂ ತಿಳಿಪಲ್ಕೆಂದೆಱಗದನ್ನರುಮುಟಿಗುಂ (ಕಾವ್ಯಾವ. ೪೫೭) ; ಮುಳಿದಿರೆ ನಿಜವಲ್ಲಭೆಯುಂ ತಿಳಿಪಲ್ ಕಾಲ್ಗೆಱಗಲಿನಿಯನಿರ್ಪವಸರ ದೊಳ್ ಜಳಧರನಿನದಂ ನೆಗೆದುದು ತಳಮಳಗುತ್ತಾಕೆ [ಪಾಠಾಂ. ಗಾದಾಕೆ, ಗಾಗಾಕೆ]ತಾನೆ ಬಿಗಿಯಪ್ಪುವಿನಂ (ಕಾವ್ಯಾವ. ೭೫೪).

**ತಳಮಳಗು$_2$**, ತಳವಳಗು (ನಾ). ಬೆರಗು ; ವಿಸ್ಮಯ : "ತಳಮಳಗು = ಬೆಱಗಾಗುಹಂ" (ಶಮದ. ಪರಿ. ೨). **ತಳವಳಗು** : "ತಳವಳಗೆಂದು ನಿಬ್ಬೆಱಗು" (ಕಕಸಾ. ೩೦-೬೨೮).

**ತಳಮಳಗಾಗು** = ೧. ದಿಗಿಲುಗೊಳ್ಳು ; ಕಕ್ಕಾಬಿಕ್ಕಿಯಾಗು ; ಅಂಜು : ಒಳಗಟಿಯದೆ ಪಚ್ಚೆಯ ಸಿಲೆಗಳನಂಚೆಯು ಪಿಂಡು ಕಂಡು ಪಾವಸೆಗೆತ್ತವ್ವಳಿಸಿ ಕರ್ದುಕುತ್ತುಮೇಂ ತಳಮಳಗಪ್ಪುವೊ ನಗೆ ಖಗೇಂದ್ರ ಮಿಥುನಚಯಂಗಳ್ (ಶಾಂತಿಪು. ೨-೪೮). ೨. ಕಳವಳಗೊಳ್ಳು; ಸಂಕಟಪಡು ; ಕ್ಷೋಭೆಗೊಳ್ಳು : ಇರ್ಮಡಿಸಿದ ಶೋಕದಾವಾನಲ ಸೆರ್ದೆಯೊಳ್ ಪೊಟ್ಟರದ ಕಿರ್ಚಿನಂತಳುರೆ ತಳಮಳಗಾಗಿ ಸ್ವರಣೆಗೆಟ್ಟು ಬಾಯಟಿದಟುತುಂ (ಶಾಂತಿಪು. ೧-೯೪ ವ). [ <ತಳಮಳಗು$_1$ ]

**ತಳಮಳಗುಟ್ಟು** (ಕ್ರಿ). ತಳಮಳಿಸು ; ಕಳವಳಪಡು ; ಕ್ಷೋಭೆಗೊಳ್ಳು: ಆ ಅಸ್ತ್ರವನ್ನು ಬಿಟ್ಟನು . . . ಅವುಗಳ ಜ್ವಾಲೆಯಲ್ಲಿ ಲೋಕವೇ ಬೆಂದು ಹೋಗುವಂತೆ ತಳಮಳಗುಟ್ಟಲು (ವಚಭಾ. ೩೦೯).

[ ತಳಮಳ + ಕುಟ್ಟು$_1$ ]

**ತಳಮಳಗುಡು** (ಕ್ರಿ). = ತಳಮಳಗುಟ್ಟು : ಜಳವಿಹಗಂಗಳ್ ಮುಲರೊಳ ಗುಲಿವಳಿಗಳುಮಳವುಗಟಿಯೆ ತಳಮಳಗುಡೆ ಗೊಂದಳಗಳ ರವದಿಂದು ಲಿದವು ಕೊಳನೊಳಕೊಳಲಂಜಿ ಪುಯ್ಯಲಿಡುವಂತಾಗಳ್ (ಬಂಹರಿ. ೦೨-೪೪).

[ ತಳಮಳ + ಕುಡು$_1$ (<ಕೊಡು$_1$) ]

**ತಳಮಳಗೊಳ್** 'ತಳಮಳಂಗೊಳ್' ನೋ.

**ತಳಮಳಗೊಳಿಸು**, ತಳ್ಳಮಳಗೊಳಿಸು (ಕ್ರಿ). ೧. ಕಳವಳಗೊಳಿಸು ; ಕಲಕು ; ಕ್ಷೋಭೆಗೊಳಿಸು : ಬಹಿರಂತರುಪವನಂಗಳೊಳಹರಹಮಾ ವರಭೃತಂಗಳುಲಿವ ರವಂಗಳ್ ಸಹಸಾ ತಳಮಳಗೊಳಿಸಿದವಹೋ ಮನಂಗಳನಿತಸ್ತತಂ ವಿರಹಿಗಳಾ (ಕವಿರಾ. ೧-೫೩). **ತಳ್ಳಮಳಗೊಳಿಸು** : ೨. ತೀವ್ರವಾಗಿ ಕುದಿ ; ಕತಕತನೆ ಕುದಿ : ಎಲ್ಲಿಯೆಲ್ಲೆಲ್ಲಾಪ ಸಮುಯು ದೊಳಿಲ್ಲ ಮಾರುತಿ ಪಾರ್ಥನಾ ಗುಣದಲ್ಲಿ ಮನಸೋತಾಡುತಿಹರಾ ನುಡಿಗಳೈತಂದೂ ತಳ್ಳಮಳಗೊಳಿಪಾಜ್ಯದೊಳು ಜಲ ಚಲ್ಲಿದಂತಾ ಕೌರವನ ಮನದಲ್ಲಿ ಬುದ್ಬುದ ಕೋಪ ಮಸಗಿದುದು (ಜನಭಾ. ೧೨-೧೭).

[ ತಳಮಳಗೊಳ್ (<ತಳಮಳಂಗೊಳ್) + – ಇಸು$_3$ ]

**ತಳಮಳಗೊಳು** 'ತಳಮಳಂಗೊಳ್' ನೋ.

**ತಳಮಳಗೊಳ್ಳು** 'ತಳಮಳಂಗೊಳ್' ನೋ.

**ತಳಮಳಲ್** (ನಾ). (ಕೊಳ, ಸಮುದ್ರ ಮೊದಲಾದುವುಗಳ) ತಳದಲ್ಲಿರುವ ಮರಳು,-ಮಳಲು : ತಳಮಳಲ ಮೊಗೆಮೊಗೆದು ಕದಡಿತು ಕೊಳನ ಜಲಚರನಿಚಯಮೀ ಬೊಬ್ಬುಳಿಕೆ ಮಿಗಲೊಬ್ಬುಳಿಕೆ ನೆಗೆದವು ವಿಗತವೈರದಲಿ (ಕುವ್ಯಾಗ. ೫-೨) : ಸಮುದ್ರಂ ಕುದಿದು ತಳಮಳಲನುಗುಳುತಿರ್ದುದು (ಚಬಪು. ೪೦-೨೦): ಕಡಲು ಕುದಿದುಕ್ಕಿದುದು ತಳಮಳಲ ಮಾಣಿಕ್ಯ ಸಿಡಿಗೊಂಡವು ಬತ್ತಿದುದು ಕೆರೆ ಭಾವಿ ಹರಿ ಚಕ್ರವಂ ತುಡುಕಲು (ತುರಂಗ. ೨೨-೪೦).

**ತಳಮಳಲಾಗು**=ತಳದ ಮರಳು ಕಲಕು,-ಕವಡು; ಪ್ರಕ್ಷುಬ್ಧವಾಗು: ನೆಲ ಬಿರಿವಂತೆ ನಾನಾವಾದ್ಯರಭಸದಿ ಕುಲಗಿರಿ ನಡನಡುಗಿದವು ಜಲನಿಧಿ ತಳಮಳಲಪ್ಪವೊಲನಿರುದ್ಧ ಬಲಗೂಡಿ ಬಂದ ಪಟ್ಟಣಕೆ(ಮೋಹತ. ೧೯-೮೭).

[ ತಳ (= ತಲ) + ಮಳಲ್ (<ಮಣಲ್) ]

**ತಳಮಳಲೇಳು** (ಕ್ರಿ). ತಳದ ಮರಳಂ ಮೇಲಕ್ಕೇಳು ; ಅಲ್ಲೋಲ ಕಲ್ಲೋಲವಾಗು : ಇಳೆಯದಿರಲು ತಾರಗೆಯುದಿರಲು ತಳಮಳಲೇ [ಪಾಠಾಂ. ಗೊ]ಳಲು ಮುನ್ನೀರು (ಕುರಾಸಾಂ. ೦೨-೪೫) ; ನಡನಡುಗಿದುವು ಪರ್ವತ ತಳಮಳಲೆದ್ದು ಕಡಲೇಳು ಮೇರೆದಪ್ಪಿದುವು (ಮೋಹತ. ೩೭-೨೭).

[ ತಳಮಳಲ್ + ಎಳು$_1$ (<ಎೞು$_1$) ]

**ತಳಮಳವೇಳು** (ಕ್ರಿ). ತಳಮಳ ಉಂಟಾಗು ; ಕಳವಳವಾಗು : ಅವರ ಅಂತರಾಳದಲ್ಲಿ ಮಾತ್ರ ತಳಮಳವೆದ್ದಿತು (ಹಬ್ಬಿಲ. ೧೦೪).

[ ತಳಮಳ + ಎಳು$_1$ (<ಎೞು$_1$) ]

**ತಳಮಳಿಸು**, ತಳವಳಿಸು (ಕ್ರಿ). ಕಳವಳಿಸು ; ಸಂಕಟಪಡು ; ಕ್ಷೋಭೆಗೊಳ್ಳು: ಆಗುಳಿಸುವ ತಳಮಳಿಸುವ . . . ತೇಂಕುವ ತೇಗುವ ಕಂಟಳಿಸು ವಖಿಳ ವಿಕೃತಿಗೆ ಸಲ್ಲಂ (ಪುಷ್ಪಪು. ೧೨-೮೪) : ಅವನ ಹೃದಯ ಏಕೋ ತಳಮಳಿಸುತ್ತಿತ್ತು (ದಕ್ಷಿನ. ೭೩) : ಅವಳ ಪ್ರಗತಿಯನ್ನು ಕಂಡು ಒಳ ಗೊಳಗೇ ತಳಮಳಿಸುತ್ತಿದ್ದ (ಅಶ್ರಮು. ೫೯). **ತಳವಳಿಸು** : ಕಳವಳಿಸಂ ಕನಲನೊನಲನಳ್ಕಂ ಬಳ್ಕಂ ಚಳವಳಿಸಂ ಚಪ್ಪರಿಸಂ ತಳವಳಿಸಂ ಬೇಸಟಿಯ್ದಿ ಬೆಳ್ಳೊಗದಿನಿರಂ (ಅಜಿಪು. ೫-೯೦) : ನೀಂ ತಳವ[ಪಾಠಾಂ. ಮ]ಳಿಸದಿರೆಂದಿ ನಿಯಳಂ ಸಂತೈಸಿ (ಜೈಮಿಭಾ. ೧೧-೧೨) ; ವ್ಯಾಕುಲದಿ ಕಳವಳಿಸಿ ಹಳವಳಿಸಿ ತಳವಳಿಸಿ ಹೀಕರಿಸಿ ಭೀಕರಿಸಿ (ಜನಮು. ೨೪-೨೩) : ಈ ಪರಿ ಬೆಳತನಕ ತಳವಳಿಸಿದರಿಂದ ಮುಖವು ಕಳೆಗುಂದಿ (ಕಗದ್ಯ. ೦೯).

[ತಳಮಳ + – ಇಸು$_3$ ]

**ತಳಮಿತಮಧ್ಯೆ**(ನಾ).ಒಂದು ಹಿಡಿ ಅಳತೆಯ ನಡುವುಳ್ಳವಳು;ತೆಳ್ಳನೆಯ ಸೊಂಟವುಳ್ಳವಳು ; ಸೂಕ್ಷ್ಮಮಧ್ಯೆ: ತಳಮಿತಮಧ್ಯೆಯನಾಯತ ವಿಲೋಳಲೋಚನೆಯನುನ್ನತಸ್ತನಯುಗೆಯಂ . . . ಉಬಿದಂ (ಕವಿರಾ. ೩-೧೧). [ಸಂ. ತಲಮಿತಮಧ್ಯಾ (ತಲ + ಮಿತ + ಮಧ್ಯ + –)]

**ತಳಮೀನು** (ನಾ). ಒಂದು ಬಗೆಯ ಮೀನು : "ನೀರಿನ ತಳದಲ್ಲಿ ವಾಸ ವಾಗಿರುವ ಮೀನು ; ತಳಮೀನು" (Ground-fish. ಇಂಕನಿ.).

[ ತಳ (=ತಲ) + ಮೀನು$_2$ (<ಮೀನ್$_3$) ]

**ತಳಮುಟ್ಟ** (ಅ). ತಳದವರೆಗೂ ; ಬುಡದವರೆಗೂ : ಅಗೆ ತಳಮುಟ್ಟ [ಟ್ಟ]ಕೋಟೆಯ ದ್ವಾರಗಳ ಮಾಡಿ ಹೊಗುವಡ್ಡಲಾದರಿಭಟರ ಮಿಗೆ ಬೀಳಲಿಱಿ (ಕಂನವಿ. ೧೪-೮). [ತಳ(= ತಲ) + ಮುಟ್ಟ$_2$ (< ಮುಟ್ಟಂ)]

**ತಳಮುಟ್ಟಿಸು** (ಕ್ರಿ). (ಆಲಂ) ಕುಗ್ಗಿಸು; ಎದೆಗುಂದಿಸು: ಇನ್ನೂ ಮಾಡ ಬೇಕಾಗಿರೋ ಕೆಲಸ, ಈಗಾಗಲೇ ನನ್ನನ್ನು ತಳಮುಟ್ಟಿಸಿ ಬಿಟ್ಟಿದೆ (ವೀರಯೋ. ೧೪). [ ತಳ (= ತಲ) + ಮುಟ್ಟಿಸು ]

**ತಳಮೇಲು** (ನಾ). ೧. ಅಡಿಮೇಲು ; ತಲೆಕೆಳಗು. ೨. ವ್ಯತ್ಯಸ್ತವಾದುದು; ವಿಪರೀತವಾದುದು. ೩. ಮಲ್ಲಯುದ್ಧದ ಒಂದು ಪಟ್ಟು,-ವರಸೆ: ಹೊಕ್ಕರಿಬ್ಬರು ಬಿಸುಟು ಮರಗಳ ಡೊಕ್ಕರಕೆ ಫಣರಾಜನೆದೆ ನೆಳನಿಕ್ಕೆನಲು ತಳಮೇಲು ತಳಬಲ ಸಂಧಿ ಬಂಧದಲಿ (ತೊರರಾ. ೪-೪-೨೭): ಗಳಹತ್ತ ಡೊಕ್ಕರ ತಳಮೇಲು ವೈಸರ ಸುಳಿವು ಪಂಚನೆ ಪತನದಲಿ ಅಳವಟ್ಟ ಗಾಯ ಗಾಯಕೆ ಕನ್ನೀರ್ಗಳು ತುಳುಕೆ ಹೋರಿದರೇನೆಂಬೆ (ಕಂನವಿ. ೨೦-೯೨).

**ತಳಮೇಲಕಿಕ್ಕು** = ಕೆಳಗು ಮೇಲಾಗು ; ಕೆಳಭಾಗ ಮೇಲಕ್ಕೆ ಹೋಗು : ನಿನ್ನೆ ಮೊದಲಾಗಿ ಕೂಳಿಲ್ಲದೇ ಓರಿದಾಗಿ ಹಸಿದ ಕಾರಣದಿ ಬೆಂಬತ್ತಿದೊಡಲಿರದೆ ತಳಮೇಲಕಿಕ್ಕುವ ದಿಟ್ಟಿ ಹೂಳಿದಂಗುಳು ಸಾರವಱತ ಬಾಯಿ ( ಸಮ್ಯಕೌ. ೧೦-೪೯ ). **ತಳಮೇಲಾಗು** = ಸತ್ತ್ವವನ್ನು ಕಳೆದುಕೊಳ್ಳು : ವಿಷವೀರ್ಯ ದುಸ್ಸಹವಾದ ಕಂಗಳ ಸುಯ್ಯ ಹೊಗೆಗಳ ಭೀಕರಾನನದ ಹಾದಿಯನು ಪತ್ತಿಸುತ ಬಹ ಕಾಳೋದರುರಗನ ಕಡುಹು ತಳಮೇಲಾದುದೆಯ್ದಲು ನೆಱೆಯದಾ ವೇದಾಂತವಿಶ್ರುತನ ( ನಿಘಾಗ. ೧೦-೧೭-೩೭ ). **ತಳಮೇಲುಮಾಡು**=೧. ಬುಡಮೇಲುಮಾಡು ; ಹಾಳುಮಾಡು ; ನಾಶಪಡಿಸು : ಕೊಲೆಯೆಂಬ ಕೋಟೆಯು ಬಲಯುತವಹ ಮೂಱು ಪೊಳಲನು ಬಳಸಿರುತಿರಲು ತೊಲಗದ ಹಿಂಸೆಯೆನಿಪ ವಜ್ರಹಾರೆಯಿಂ ತಳಮೇಲು ಮಾಡಿದರಂದು ( ಶ್ರೀಪುಸಾಂ. ೨೨-೨೫೪ ). ೨. ವ್ಯತ್ಯಸ್ತಗೊಳಿಸು : ಭಾರತದಲ್ಲಿ ನಮ್ಮ (ಕ್ರಿಸ್ತ)ಮತದ ಬೇರು ಎಂದಿಗೂ ಊರಲಾರದು . . . ಅದಕ್ಕೆ ಬದಲಾಗಿ ಭಾರತದ ಜ್ಞಾನಧಾರೆಯು ಯೂರೋಪಿನಲ್ಲಿ ಪ್ರವಹಿಸಿ ನಮ್ಮ ವಿಚಾರಗಳನ್ನು ತಳಮೇಲುಮಾಡುವುದು (ಭಾರದ. ೪೭). ೩. ತಳದಲ್ಲಿರುವುದನ್ನು ಮೇಲೆ ತರು ; ಕೈಯಾಡಿಸು ; ತೊಳಸು : ತೆಂಗಿನಕಾಯ ಹೂದಿಕ್ಕಿ ತಳಿದು ಬೇಯದ ತೆಱದಿನಡುವಿವಾಗಲದಱೆಸರು ಹೆಚ್ಚಿದರೆ ತೆಗೆದು ಹಾಕಿ ಒಳಗುಳ್ಳ ಚಟ್ಟಿಯೊಳು ಹೊಸತುಪ್ಪವೆಱೆದದಂ ತಳಮೇಲು ಮಾಡಿ ಬೇಯಿಸಿಕೊಂಡು (ಸೂಪಶಾ. ೪-೫೮). **ತಳಮೇಲೊಡರ್ಚು** = ತಳಮೇಲುಮಾಡು ೨ : ಮುನಿಸಿಂ ಲೆಕ್ಕಕೆ ಬಾರದಂತೆ ಮದನಾ ನೀನೆಚ್ಚು ಬಾಣಂಗಳಂ . . . ಕಾವಂಗೈದು ಕೋಲಂತವರ್ಕೆನಿತೋ ಏನ್ನವೊಲಿರ್ಪವಂ ಗುಱೆಯೆನುತ್ತುಂ ಲೋಗರೊಲ್ದಾಡುವೀಯುನು ವಾತಂ ತಳಮೇಲೊಡರ್ಚಿದೆ ಗಡಾ (ಮಿತ್ರಗೋ. ೩೯-೫೯).

[ ತಳ (=ತಲ) + ಮೇಲು (<ಮೇಲ್)]

**ತಳರ್**, ತಳರು (ಕ್ರಿ). ೧. ಚಲಿಸು ; ಕದಲು ; ಅಲ್ಲಾಡು : "ತಳರ್-ಚಲನೇ" (ಶಮದ): ನೀಮೊಂದು ಕೆಲದೊಳ್ ಮುಗುಱದೆ ತಳರದ [ಪಾಠಾಂ. ಮುಸಗದೆ]ಕೈಯುಂ ಕಾಲ್ಗಳುಮನುಡುಗದೆ ನೀಡದೆ ಬಾಟ್ಟನ್ನೆಗಂ ಪಟ್ಟಿರ್ದು ಪಂಚನಮಸ್ಕಾರಮಂ ಮನದೊಳ್ ಓದುತ್ತಿರಿಂ (ವಡ್ಡಾರಾ. ೮೨-೨೮) ; ಓಡಿದಾರ್ಪ ಭರದಿನೆತ್ತಲ್ಕೊಡರಿಸಿದೊಡೆ ನೆಲದಿನಣಮೆ ತಳರದೆ ಬಿಲ್ ನಿಲ್ವೊಡೆ (ಪಂಪಭಾ. ೩-೫೯): ಪ್ರಳಯಾನಿಳನಿಂ ಕನಕಾಚಳಮೆಂತುಂ ತಳರ[ಪಾಠಾಂ. ರಳ]ದಂತೆ ದರ್ಶನಶುದ್ಧಂ ಚಳಿಯಿಸಲಱಿಯಂ (ಸಮುಪ. ೪-೧೩೩); ಬಾಹುಬಲಿಯಂತೆ ನಿಂದೆಡೆಯಿಂ ತಳರದೆ (ಧರ್ಮಾಮೃ. ೭-೨೬೨): ಜಳನಿಧಿ ಮೇರೆಯ ದಾಂಟುಗು ತಳರುಗು ಕನಕಾದ್ರಿ (ಸೌಇಇ. XX, ೩೦೪-೭; 12ನೆಯ ಶತ) ; ಸಂಕಿಲಿನಾಚಿಯರ ನೋಟದೊಡನೆ ತನ್ನ ನೋಟಂ ಘಳಿಲನೆ ಸಂದಿಸೆ . . . ನಡೆಗೆಟ್ಟು ಕಂಪಿಸಿ ನಸು ಬೆಮರ್ತು ಹೊಸನೋಟಂ ಪೋರಟೆಗುಟ್ಟಿ ತೈತಿಕ್ಕಿ ತಳರದೆ [ಪಾಠಾಂ. ತರಳದೆ, ತರಳರದೆ, ತೆರಳದೆ] ತಂತವಮ್ಮೊಳಪೊಕ್ಕ ರೂಪ್ರ ಮುಗುಳಲಾಱದೆ ನಟ್ಟು ನೋಡುತ್ತಿರಲ್ (ನಂಬಿರ. ೧೨-೫೩): ಬಪಪಂ ಕೈಕೊಂಡುಮರ್ಪಿಸಿತಳಮಿದು ನೆಱೆ ಜೋಗಿರ್ದು ಮೆಟ್ಟಲ್ಕೆ ಬಲ್ಪೊಂದೆಡೆಯುಲ್ಲಂಬಾತ ಪಂಕಂ ಮಸಗೆ . . . ತಳರದಲ್ಲಲ್ಲಿ ತಮ್ಮೊಳ್ಳ ಕಾಲಿಂ ಬಿಡೆ ಕೀಬಲ್ಕಾಱದಿರ್ದಂತಿರೆ ಮೃಗನಿಕರಂ ಕೋಡುತುಂ ಕೂಡೆ ಕಾಡೊಳ್ (ಕುಸುಮಾ. ೭-೩೫): ಮುಸಿದ್ಯೆನಾಱುಂ ಕುನ್ನಿಗಳನಿತುಮನೊರ್ಮೊದಲೆ ತೋಱೆ ಕುಕ್ಕುಱಿಸಿ ಮುಹಾಮುನಿ ತಳರದ ಮೇರುವೊಲಿರೆ (ಯುಶೋದ.೪-೪೩): ತಳರ್ವ ವಿಮಾನಕೋಟಿ ನಡೆದೊಪ್ಪುವ ವಾರಣಕೋಟಿ ಬಾಜಿವಗ್ಗಳಿಕೆಯ ತೂರ್ಯಕೋಟಿ . . . ಬಗೆಗೊಂಡುದು (ಪುಷ್ಪಪು. ೦೦-೩೧) ; ಕಾಳಮೇಘಾಳಿ ನಡೆದವುವೊ ಕೈಕಾಲ್ ಮೂಡಿ ನೀಲಾದ್ರಿಗಳ್ ತಳರ್ದವುವೊ . . . ಪೇಳೆನಲ್ಕೆ (ಜಬಪು. ೩೨-೩೩). ೨. ಅದಿರು; ನಡುಗು; ಕಂಪಿಸು: ಅಂತು ಪುಗವೇಟ್ಟುದುಂ ದಿಗ್ದಂತಿಗಳುಂ ಕುಲನಗಂಗಳುಂ ಗಡಣಂಗೊಂಡೆಂತು ಕವಿತರ್ಕುವಂತೆ ನೆಲಂ ತಳರ್ವಿನೆಗಂ ಪ್ರಚಂಡ ಕೋದಂಡಧರರ್ . . . ಬಂದು (ಪಂಪಭಾ. ೨-೭೦) ; ತಳರೆ ತಳೆಚ್ಚುರ್ವಂಗೆ ಕನಕಾಚಳವೊತ್ತುವಂಗೆಲೇ ವಿಯತ್ತಳಂ . . . ಚಟ್ಟಿವಮನೆಂಬ ಜೆಟ್ಟಿಗಂ (ಎಕ. XI, ದಾವಣ. ೪೩-೪೭ ; 1164) ; ಕಿಡುತಂದುದು ಮನದಱೆಯುಮೆ ನುಡಿಯ ತೊವಲ್ ಒಂಗಿ ಪೋಯ್ತು ತಳರ್ವಡಿಯೊಳ್ ಬಲ್ಪಡರ್ದುದು . . . ನಾಡೆ ಶೈಶವಾತಿಕ್ರಮದೊಳ್ (ಚಂದ್ರಪು. ೪-೨) : ಚೌರಿಯ ಗಾಳಿಯ ಕೋಟಿಗೆ ಬೆಟ್ಟುಗಳ್ ತಳರೆ (ಕಬ್ಬಿಕಾ. ೨೦೪). ೩. ಹೊರಡು ; ಪ್ರಯಾಣ ಮಾಡು ; ಮುಂಬರಿ ; ಸಾಗು : "ಪೊಱಮಟ್ಟಂ ತಳರ್ದನಕ್ಕುಂ" (ಕವಿಕಂ. ೨೭೭) : ತೆಱಪನೆ ಪಾರ್ದಿಪಂ ಮಾಯ್ದುಱುಗುಲಿ ಜವನದಱೆ ನಿನಿಸು ಪೊಟ್ಟುಂ ತನ್ನಂ ಮಱೆ ದಿರಲಕ್ಕುಮೆ ತಳರದೆ ತಱೆಸಲದಿನ್ನೆಱೆದುಮಱೆದುವಿರ್ಪುದೆ ಚದುರಂ (ಆದಿಪು. ೪-೭೭) ; ಅಪರಾಚಲಶಿಖರದತ್ತಲೊಯ್ಯನೆ ತಳರ್ದಂ ರಾಜೀವ ಜೀವಿತೇಶ್ವರನಾಗಳ್ (ಕಾದಂಬ. ೧೩೮) ; ಬನದಿಂದರಗಿಳಿ ತಳರ್ವುವು ದೇಶಾಂತರಕ್ಕೆ (ಅಜಪು. ೨-೯): ಆಲಿಂಗನೇಚ್ಛೆಯೊಳ್ ನಿಮಿರ್ವ ಗಾತ್ರಮಂ ತಳರಲೀಯದೆ ತಱುಂಬುವಂತಿರಗ್ಗಳಿಸಿದುತ್ಕಟಸ್ತಬ್ಧಭಾವಮುಂ (ವರ್ಧಪು. ೬-೧೨ ವ) : ಅಲ್ಲಿಂ ತಳರ್ದು ಮೋನದಿಂ ಸಾಧುಬ್ರಾಹ್ಮಣನಂತೆ ಚಪ್ಪರದಿಂ ಪೊಱಮಟ್ಟು (ನಂಬಿರ. ೭-೮೩): ಅಲ್ಲಿಂ ತಳರ್ದು ಮನೆಗೆಯುಂಬ್ಬೆಗಮೆಱೆದು ಯ್ದಂಪದೆ ಬಂದು (ಯುಶೋದ. ೩-೨೯) ; ಇಳಿದಂದಳವನು ತತ್ಪುರದ ಮುಂದಲ್ಲಿಂದ ತಳರ್ದು ಕಾಲ್ನಡೆಯಿಂದ ಪೊಱಪೊಳಲ ದಾಟಿ (ಸೌಂದಪು. ೫-೯೫): ನಲಿದು ನರ್ತಿಸುತಮರನಗರಿಗೆ ತಳರ್ದನಮರವಿಮಾನದಲಿ (ತೊರರಾ. ೨-೭-೧೭) ; ದಿನಪನುದಯಕ್ಕರಸು ನೀರಾಟಕಂ ಪೋಪ ವಿನಯದಿಂ ಪುರುಷರೆಲ್ಲರು ತಳರ್ವುದೆಂದು ಮಿಗೆ ಮನೆಮನೆಗೆ ಡಂಗುರವ ಸಾಱೆಸೆ(ಪ್ರಾಭರಾ. ೨-೩೯); ತುಂಗಭದ್ರೆಯನಾಗ ಗಿರಿಸುತೆಗೆ ತೋಱೆಸುತ ತುಂಗ ಸಂತೋಷದಿಂದು ತಳರೆ (ಚಬಪು. ೩೪-೨೨) ; ಮಾನಸಸರದತ್ತ ತಳರ್ದುದಾ ಕಳಹಂಸಂ (ದಮಸ್ಕ. ೨-೪೭). ೪. ದಾಟು ; ಮೀರು : ಪುರದ್ವಾರಮಂ ತಳರ್ದು ಗಂಭೀರವಾದ್ಯಂಗಳ ಮುಹಾರವಂಗಳು ಪೊಣ್ಮಲೋರಂತೆ ನಡೆದು ಬಂದು ಸಾರತರವೈಹಾಳಿಯಾ ರಮ್ಯಸುಸ್ಥಲವ ಸೇರಲು (ಭಾವಚಿಂ. ೮-೯). ೫. ವೇಗವಾಗಿ ಹೋಗು ; [illegible] ಸರಳ ಪೊದಟ್ಟ ಬಲ್ಸರಿಯ ಕೋಳ್ಗಿರಲಾಱದ [illegible] [ಹಯು]ಮುಟ್ಟಿ . . . [illegible] ತಳರ್ [illegible] ನರ್ವದೊಂದು [illegible] ಕುದುರೆಗಳಿಂಗಾಗಿಪುದದು ತಾಗುದಾಣ (ಕುರಾಸಾಂ. ೪-೧೭) ; ಸಿಂಗರಿಸಿರ್ದ ಧಳಧಳಿಪ ಮಣಿರಥಾವಳಿಗಳು ಪಳಂಚಿದವು ಜೋಡಿಸುವ ಸಾರಥಿಗಳಿಂ ತಳ[ಪಾಠಾಂ. ೪]ರ್ವ ಹಯುಚಯುದಿಂದೆ (ಸಾಳ್ವಭಾ. ೨೩-೧೭) : [illegible]

ಶಂಖ ಸಮುದಯಂ ನೆಗೆದು ಪೋಪಂತೆ ಬೆಗಡುಗೊಂಡು ತಳರ್ವ ತರುಣ ಮರಾಳಂಗಳಿಂ (ರಾಜಶೇ. ೧-೧೦೩ ವ). ೬. ದಂಡೆತ್ತಿ ಬರು ; ಆಕ್ರಮಣ ಮಾಡು : ಜಳಧಿತರಂಗತಾಟಿತ ಧರಾತಳಭಾರಮಿದೆತ್ತ ಬಾಳನೆತ್ತಳವಿನಿ ತುಂಟೆ ತಾಳ್ದಲಿದನೊಟ್ಟಜೆಯಿಂ ಕೊಳಲೆಂದು ವೈರಿಗಳ್ ತಳರ್ದಪರೆಂತು ತನ್ನ ಬಲಮಿಲ್ಲದೆ ತಾಳ್ದುವೆಂ (ಆದಿಪು. ೪-೮೪). ೭. ಹಬ್ಬು ; ಹರಡು ; ಪ್ರಸರಿಸು : ಬೆಳಗುಗಳ ಬಳಿದ ಬಳಗದ ಬಳಸುಗಳೊಳಗೊಳಗೆ ತೊಳಗಿ ಪೊಳೆಪೊಳೆದೊಳಗುಬ್ಬಳಿಸಿ ತಳತಳಿಸಿ ದೆಸೆಗಳನಳುರ್ದುಸಿರೊಳ್ ಕೆಳರ್ದು ಮಿಳಿರ್ದು ತಳರ್ದತ್ತಾಗಳ್ (ಕಾವ್ಯಾವ. ೨೩). 'ತಳರ್ಪು' ಪರಾ. ೮. ಹಿಂಜರಿ ; ಹಿಮ್ಮೆಟ್ಟು ; ಅಳುಕು : ಚಳುಕ್ಯಕುಳತಿಳಕನಪ್ಪ ವಿಜಯಾದಿತ್ಯಂಗೆ ಗೋವಿಂದರಾಜಂ ಮುಳಿಯೆ ತಳರದೆ ಪೆಱಗಿಕ್ಕಿ ಕಾದ ಶರಣಾಗತ ಜಳನಿಧಿಯ ಪೆಂಪುಮಂ (ಪಂಪಭಾ. ೯-೫೩ ವ) : "ಚಲಿಸದೆ" (ಪಂಪದೀ. ೩೨೧) : ಸುರವಾರಣಮಿಾ ವಾರಣದೊರಗಂ ಬರಲಱಯದೆಂತುಮಿಾ ವಸುಮತಿಯೊಳ್ ಪರಿಕಿಸುವೊಡಮಳವಲ್ಲಂ ಧುರಕದಲ್ಲಿರ್ದಾಸೆಯಿಂದೆ ತಳರದದೆಂದುಂ (ನೇಮಿಪು. ೧೧-೫೩) : ಕುಱುಗೋಡ ತಳದೊಳಗೆ ತಳರದ ಯ್ದೂರ್ವ್ವರುಂ ನೆಱೆ ನೋರ್ಪ್ಪಡವರೊಳಗೆ ಪಗೆಗಂಜರೊರ್ವರುಂ (ಸೌಇಇ. IX-I, ೨೯೭-೨೫ ; 1176). ೯. ಸಡಿಲಬೀಳು ; ಕಳಚಿಬೀಳು ; ಉದುರು: ಬೀಸುವ ಚಾಮರದ ಗಾಳಿಯಲಂಪಿನೊಳಲ್ಲುಗುವ ಬಂಬಲ್ಗುರುಳ್ಗಳ ಬಂಬಲಿಂದಂ ತಳರ್ವ ಚಿನ್ನಪೂಗಳನವಯವದೊಳ ಸಯ್ತುಮಾಡುವ ಕೆಯ್ತುಮುಮಂ (ಆದಿಪು. ೪-೯ ವ). ೧೦. ಆಗು; ಉಂಟಾಗು: ತನುವಿಂದೊಂದು ಗುಣಗಳಿಂದೆರಡು ಸಾಹಿತ್ಯಂಗಳಿಂ ಮೂಱು ಸನ್ಮನದಿಂ ನಾಲ್ಕು . . . ಸುತತ್ವದಿಂದೆ ತಳರ್ದಂಟಂಗಂ ಭುಜದ್ವಂದ್ವದೊಳ್ ತನಗಿನ್ನಾರ್ ಸರಿ ನಾಗವರ್ಮ ಕೃತಿಗೆಂದಂ ಕಾಳಿದಾಸಂ ಬರಂ (ಛಂದೋಂಬು. ೧-೨೫). **ತಳರು :** ೩. ಆತನ ಮನಸಿನ ಬಗೆಯಱಯದೆ ನಾರಿ ಸೋತಳು ನೀ ತಳರೆಂದು ಕಾತರಿಸಿಯೆ ಕರೆದೊಡೆ ಪರಿಹಾಸ್ಯದ ಮಾತಲ್ಲದೆ ಸೊಗಸಲ್ಲ (ಕಂನವಿ. ೯-೧೪೦); ನೋಟವ ಮಿಂಚಿಸಿ ಮೊಗವನು ಹೊಂಚಿಸಿ ತಳುವದೆ ಹೊನ್ನಿಯು ತಳರಿವಳು (ನರ್ಕ್ಕ. ೧೧-೨೪); ಎಳಹರೆಯವೆಂಬ ಸಂತಸದ ಹೊನಲಡಗುತಿರೆ . . . ಕಡೆಯುಡುಗಿ ಹಡಿಲಾಗಿ ಬಗೆಅಳಲ ಮಡಿಲಾಗಿ ತಳರುತಿದೆ ಮೃತ್ಯುವಿನ ತಡಿಗೆ (ಧಾರಂಗ. ೭-೮). ೫. ಕಿಡಿಗಣ್ಣಿನಿಂದಳಿದುಳಿದ ದೇಹವನಿನ್ನು ಸುಡಿಸದೆ ತಳರೆಂದ ನಗುತೆ (ಮೋಹತ. ೩೮-೮) ; ರಕ್ಕಸವಗೆ ಖಗರಾಜಂಗೆ ಪೇಳ್ದ ಪೆಣ್ಮಕ್ಕಳು ಭೀತಿಸದಂತೆ ಚೊಕ್ಕಟವಾಗಿ ನೀ ತಳರೆಂದು ಬಳಿಕವೆ ಪಕ್ಕಿಯ ಪರುರವಿಸಿದನು (ಮೋಹತ. ೪೩-೭). ೯. ಕಿವಿಗಳಿಗಮರ್ದಿನ ಸರಿಯುಪೊಲಿನಿದಪ್ಪ ಸವಿನುಡಿ ತಳರಿತು ಬಿನದ ತವೆದುದೊಡನೆ ಹೆಱಸಾರಿತವಳ ಲವಲವಿಕೆ (ಚಂಪ್ರಸಾಂ.೧೦-೩೩). 'ತೆರಳ್' ಪರಾ. ೧೧. "ಹೊಡೆದಟ್ಟು" (ಗುರುಚಾ. ಕೋಶ) : ಬಸವರಾಯ ನಮ್ಮಯ ಮನೆಯ ಸತಿಸುತರ ತೆಕ್ಕೊಂಡು ನಾಯ ತಳರುವ ತೆಱದೊಳೆನ್ನೋರ್ವನಂ ನೂಂಕಿ ಜಂಗಮುಕ್ಕಿತ್ತನಕಟ (ಗುರುಚಾ. ೮-೪೯). ೧೨. ನಿಧಾನವಾಗು. ೧೩. ಬಳಲು ; ಆಯಾಸಗೊಳ್ಳು. ೧೪. ಜೋಲುಬೀಳು. 'ತಳರ್ನಾಲಗೆ' ಪರಾ.

[ ದೇ.೫ ತಮಿ. ತಳರ್ ; ಮಲ. ತಳರು ; ಕೊಡ. ತಳರ್ ; ತೆಲು. ತರಲು, ತಲರು, ತಱಲು ]

**ತಳರ** 'ತಳವಱ' ನೋ.

**ತಳರಡಿ** (ನಾ). ತತ್ತರಿಸುವ ಹೆಜ್ಜೆ ; ತಪ್ಪುಹೆಜ್ಜೆ ; ದಟ್ಟಡಿ : ತಳರಡಿಯಿಡುತಂ ಕುಟ್ಟಿಮತಳದೊಳ್ಮಾರ್ಪೊಳೆಯುತಿರೆ ನಿಜಪ್ರತಿಬಿಂಬಂಗಳ ನೀಕಿಸುತಿರೆ ಕೌತುಕಚಳನಯನದೆ ತನಯನೆಂದು ಬೞಸಂದಪನೋ (ಕಾದಂಪೂ. ೩೭೦) : ತಳರಡಿಯಿಡುವತ್ತಲೆ ಪರಿದೆಳಸುವ ಜನನಿಯರ ದಿಟ್ಟಿ ಮಣಿಕುಟ್ಟಿಮಮಂ ಬಳಸೆ ಪೊಸತಲರ್ದ ನೆಯ್ದಿಲ್ಗೊಳದೊಳಗಣ ರಾಜಹಂಸನಂ ನೆಸೆಯಿಸಿದರ್ (ಪಂರಾಮಾ. ೩-೧೪೦) : ಎಳವಸಲೆಯ ಮೇಲೊಯ್ಯನೆ ತಳದಾಡುವ ರಾಜಹಂಸ ಬಾಳಕನೆಂಬೊಂದಳತಗೆವಂದು ಮರಕತತಳದೊಳ್ ತಳರಡಿಯನಿಡುವ ತನ್ನೃಪತನಯಂ (ಚಂದ್ರಪು. ೧೩-೩). [ ತಳರ್ + ಅಡಿ$_1$ ]

**ತಳರಾಸಿ** (ನಾ). ರಾಶಿಯನ್ನು ತುಂಬಿಕೊಂಡಾಗ ಕೆಳಗೆ ಉಳಿಯುವ ಉಳಿಕೆಕಾಳಿನ ರಾಶಿ,–ಸಣ್ಣ ರಾಶಿ (?) : ಗೇಣಿದಾರರು ಗೇಣಿಯನ್ನು ಕೊಡುವುದರ ಜೊತೆಗೆ ತರಕಾರಿ, ತರಪಡಿ, ತಳರಾಸಿ, ಮೇಲ್ಗೊಳಗ, ಲಾಭಸೆರೆ ಮುಂತಾದ ಮರ್ಯಾದೆಗಳನ್ನೂ ಭೂಮಾಲೀಕರಿಗೆ ಕೊಡಬೇಕಾಗಿತ್ತು (ಪಂಜಪಂ. ೧೦). [ ತಳ (= ತಲ) + ರಾಸಿ$_2$ ]

**ತಳರಿಕೆ** (ನಾ). ಚಲನೆ (?) : ಮಿಸುಪ ಪೊಸದಳಿರ್ಗಳೊಳಂ ತಳಿರ್ವರಲ ತಳರಿಕೆ[ಪಾಠಾಂ. ತರತರಕೆ]ಯ ತುಂಬಿಯ ತಳರ್ವಕ್ಕಿಯ ಕುಸುಂಕುಱುಗೊಂಡೆಸಟ ಚಾಟ್ವೀಲಿಯ ಕೇಸರದ ಕಕ್ಕುಂಪಱಯ ಕಾಪಿನ ಕಂಪಿನ ಕೋಶಮಿರ್ಪಂತೆ ಪೊಸವಾಸಿಗಮನೆತ್ತಿದಂ[ಪಾಠಾಂ. ತ್ತುವಂ]ತೆಯುಮಿರ್ಪ ಗೊಂಚಲ್ಗಳೊಳಂ (ಲೀಲಾವ. ೮-೫೧ ವ). [ ತಳರ್ + – ಇಕೆ ]

**ತಳರಿಸು** (ಕ್ರಿ). ಕಳುಹಿಸು ; ಕಳಿಸು ; ಸಾಗಿಸು : ತಳುಮಾಡದೀ ಬಳ್ದ ಬಂಧುಗಳನೆಚ್ಚಱಸಿ ನಮ್ಮ ನಿಜಪುರವರಕ್ಕೆ ತಳರಿಸೆನಲ್ (ಸಮ್ಯಕ್ತ್ವ. ೧೦-೫೩). [ ತಳರ್ + – ಇಸು$_3$ ]

**ತಳರು** 'ತಳರ್' ನೋ.

**ತಳರುಜೆ** (ನಾ). ಕುದುರೆಯ ಗೊರಸಿನ ಒಂದು ಬಗೆಯ ರೋಗ: ಅರಿದಾಳಂ ಬೆಲ್ಲಂ ಸಜ್ಜರಸಂ ಕಾಸೀಸಮರಗು ಕೇಮರ್ಣಶಿವನೊಂದಿರೆ ತಿಲತೈಲದೊಳಟ್ಟಂತೊರಸುಗೆ ತುರಗಕ್ಕೆ ಪಿಂಗುಗುಂ ತಳರುಜೆಯುಂ (ಲೋಕೋಪ. ೯-೨೪೪) : "ತಳರೋಗ" (ಲೋಕೋಪ. ಟೀಕು).

[ ತಳ (= ತಲ) + ರುಜೆ ]

**ತಳರೋಗ** (ನಾ). = ತಳರುಜೆ : ಕಿಱುಗಲ್ಗಳ್ ಕೆಸಱೊಳ್ ಮೊಳೆ ಕೊಱಡುಗಳೊಳ್ ಮುಳ್ಳೊಳಿಡುಕುಱಡೆಗಳೊಳಂ ಪಾಯ್ದುಱದೆ ಕೊಳಗುಗಳ್ ಸಲೆ ಕುತ್ತಿಱದೊಡೆ ಕುತ್ತಡಿಯನಿಡುವೊಡದು ತಳರೋಗಂ (ಅಶ್ವಶಾ. ೧೫-೧); ಮತ್ತೊಂದುಪಾಯುವುಂಟೆಲ್ಲ ತೆಱದ ತಳರೋಗಂಗಳ್ಗೆ ಪಶಮುಮಂ ಪುಟ್ಟಿಸುಗುಂ ತ್ರಿಫಲೆಯುಮೆಳ್ಳೆಣ್ಣೆಯೂಡೆ ತಳರೋಗ ಹರಂ (ಅಶ್ವಶಾ. ೧೫-೭). [ ತಳ (= ತಲ) + ರೋಗ ]

**ತಳರ್ಚು** (ಕ್ರಿ). ೧. (ಸ್ಥಾನದಿಂದ) ಕದಲಿಸು ; ಸರಿಸು ; ಅಲ್ಲಾಡಿಸು : ಚಲಿಸುವಂತೆ ಮಾಡು : "ತಳರ್ಚು – ಸ್ಥಾನಾಪಗಮನೇ" (ಶಮದಾ) : ಎಣ್ಬರಿಂದಂ ತಳರ್ಚಲಾಱದಂತಪ್ಪ ಪಿರಿದೊಂದು ಸಿಲೆಯಂ ತಂದು ತಲೆಯತ್ತಿಟ್ಟು ಪಟ್ಟಿರ್ದುದಂ . . . ಕಂಡು (ವಡ್ಡಾರಾ. ೭೭-೨೭); ಪದಘಾತಕ್ಕೆ ಧರಿತ್ರಿ ಬಾಯ್ಬಿಡೆ ಭುಜಾದಂಡಂಗಳಂ ಸಾರ್ಚಿ ಬಿರ್ಚಿದಿಳಾಸಂಧಿಗೆ ಮೆಯ್ಯೊಣರ್ಚಿ ನೆಲೆಯಿಂದಕ್ಷೂಣಸತ್ವಂ ತಳರ್ಚಿ ದಶಗ್ರೀವನ ಕಂಠಕಂದಳದ ಬೇರಂ ಕೀಳ್ವವೋಲ್ ಕಿೞ್ತಂ . . . ಸಿದ್ಧಶೈಲೇಂದ್ರಮಂ (ಪಂರಾಮಾ. ೧೧-೯) : ನೋಡಿ ಮಹೋಗ್ರಚಾಪಮನದಂ ಕೆಲರಾಗಳೆ ಪಿಂಗಿ ಪೋದರ್ . . . ಉದ್ಧತಿಕೆಯಿಂ ಕೆಲರೆಯ್ದಿ ತಳರ್ಚಿ ಬಿಟ್ಟು ನಾಡಾಡಿಯುದಲ್ಲದೆಂದು ಪುಡಿಯಂ ಬಿದಿರ್ದಂದವರೆಟ್ಟಿ ಪೋಪುದುಂ (ನೇಮಿಪು. ೯-೯೭) ; ತಳರೆ ತಳರ್ಚ್ಚುವಂಗೆ ಕನಕಾಚಳಮೊತ್ತುವಂಗೆಲೇ ವಿಯತ್ತಳಂ . . . ಚಟ್ಟವನೆಂಬ ಚೆಟ್ಟಿಗಂ (ಎಕ. XI, ದಾವಣ. ೪೩-೪೭ : 1164) ; ಎಂದುಂ ಕಾಲಕ್ಕೆ ಚಲಂ ಸಂದುದು ಮೂಜಗದೊಳಚಲಮೆಂದೊಡೆ ನಗುತುಂ ಬಂದು ತಳರ್ಚುಗುಂ (ಅರ್ಧನೇ. ೪-೧೯) ; ಪದತಳಮಂ ತಳರ್ಚಲಿನಿಸಿಲ್ಲೆನೆ ಧಾರಿಣಿ ಮಾಯವಾದುದೋ . . . ತನುವಿಂಗೆ ಸಾರಲಿನಿಸಿಲ್ಲೆನೆ ನಾಲ್ದೆಸೆ ತಾಪಿಸಿತ್ತೋ ಪೇೞದು ವಿಪರೀತಮೆಂದು ಸುಱವರ್ ನೆಲೆ ಕಟ್ಟಲೆ ಪೆತ್ತುದೇೞಱ್ಗೆಯಂ (ಸೂಕ್ತಿಸು. ೮-೭೧). ೨. ಸ್ಥಳ ಬಿಟ್ಟುಹೋಗು ;

ಹೊರಡು : (ಕ). ೩. ಹಿಂಜರಿ ; ಅಳುಕು ; ಹೇಸು : ನಿಷ್ಠುರ ಗಜರಾಜಿಯಿಂ ತುಬಿಸಿಕೊಳ್ವುದು ಪೆರ್ಗಡಲಲ್ಲಿ ಗಂಟಲಂ ಮುಱಿದು ತಳರ್ಚದಿಕ್ಕುವುದು ಲೇಸು ಕುದೃಷ್ಟಿಗೆ ಸೋಲು ಕೂಸನಾದರದೊಳಿ ಬೇಗಮಿಾವುದಱಿಂ (ಧರ್ಮಾಮೃ. ೧೦-೪೯). ೪. ಚೆದರಿಸು ; ಚೆಲ್ಲಾಪಿಲ್ಲಿಗೊಳಿಸು : ಅಲರ್ದ ಪೊಸಸಿಂದುರಂಗಳನಲೆವಳಿಕುಳಮಂ ತಳರ್ಚಿ ತಣ್ಮಲೆವೆಲರೀಯಲೆಯುದಪುದೆವ್ಮಂತಃಪುರಲಲನೆಯುರಂ(ಆದಿಪು. ೧೧-೯೦) : ದೋಷಮಂ ತಳರ್ಚುವ ಗುಣಮುಂ ಕಟಿಲ್ವುವಮರ್ದಿಂಪನೊಡರ್ಚುವ . . . ಕಾವ್ಯಸತ್ಕಳಾರ್ಣವ ಮೃಗಲಕ್ಷ್ಮಲಕ್ಷಣವಚೋವಧುವಂ ಬುಧರೊಲ್ದು ವರ್ಣಿಕುಂ (ಪುಷ್ಪಪು. ೧೪-೫೭) ; ಮಹಾಡ್ರೂಂಕಾರದಿಂದಂ ತಳರ್ಚಿ ಕೆಲವರನೊಡನೆ ವಾಲಾಗ್ರದಿಂದಿರದೆ ಬಾರ್ಚಿ ಕೆಲಬರನಿಂತು ಪುಂಗವಂ ಭಂಗವಂ ಮಾಡುತ್ತೈತರುತಿರ್ದನು (ಚಲಪು. ೪೪-೧೯).

[ ತಳರ್ + – ಚು$_1$ ]

**ತಳರ್ನಡೆ** (ನಾ). ದಟ್ಟಡಿ ; ಅಸ್ಥಿರವಾದ ಹೆಜ್ಜೆ ; ತಪ್ಪುಹೆಜ್ಜೆ : ನಡೆವ ತಳರ್ನಡೆಯೊಳ್ ಪುಡಿಪುಡಿಯಾದುವು ಶಿಲೆಗಳೊಡದು (ಪಂಪಭಾ. ೨ ೫) : ಕಿವಿಗಿನಿದೆನಿಪ್ಪ ವೀಣಾರವದೊಳನಾದರಮನುಂಟುಮಾಡಿತ್ತು ತನೂಭವನ ತಳರ್ನಡೆಯೊಳ್ ಪೊಣ್ಮುವ ಮೃದುಪದಕನಕಕಿಂಕಿಣೀಝಣಝಣಿತಂ (ಪಂರಾಮಾ. ೩-೧೨೭) ; ಈ ನಡೆದುದೆ ತಾಯ ಬೆನ್ನೊಳೆ ತಳರ್ನಡೆಯಿಂ ಕಳಹಂಸಪೋತಕಂ(ಅರ್ಧನೇ.೧-೯೪); ಕಂಪಿಕುಂ ಧರೆ ತಳರ್ನಡೆವಂಘ್ರಿಭರಕ್ಕೆ ಕೃಷ್ಣನಾ (ಜಗವಿ. ೩-೪೩) : ಪೊರಳ್ದುರುಳ್ದಂಬೆಗಾಲಿಕ್ಕಿ ದಟ್ಟಡಿಯನಿಟ್ಟರದ ತಳರ್ನಡೆ ನಡೆದು (ಕುರಾಸಾಂ. ೭-೬೭) ; ತೊದಲ್ನುಡಿಯ ಸೊಗಸು ತಳರ್ನಡೆಯ ಗಾಡಿ ಮನಂಬುಗೆ ಕಣ್ಗಂಬಾದರಾಲಂಬಾಲಕರ್ ಬಾಲಕರ್ (ರಾಮಾಶ್ವ. ೧೫೦-೨೮). [ ತಳರ್ + ನಡೆ$_2$ ]

**ತಳರ್ನಾಲಗೆ** (ನಾ). ಜೋಲಾಡುವ ನಾಲಗೆ ; ಚಾಚಿದ ನಾಲಗೆ : ಸೋಱುವ ಜೊಲ್ಲಸರಬಿಯ ವೊದಲಾಗೆ, ಱೊಬ್ಬೆಯು ನೀಟದ ತಳರ್ನಾಲಗೆ ಕೀಟಿಲಾಗೆ (ರಾಮಾಶ್ವ. ೧೧೧-೨೯). [ ತಳರ್ + ನಾಲಗೆ ]

**ತಳರ್ನುಡಿ** (ನಾ). ೧. ತೊದಲುಮಾತು ; ತಡವರಿಸುತ್ತ ಆಡುವ ಮಾತು : ದಡದಡಿಪಡಿ ಪಡಿಮಾತಂ ಪಡೆಯಲೊಡರ್ಚುವ ಮನಂ ತಡಂಬಡಿಪ ತಳರ್ನುಡಿಯುಗಡಿಗೊಡನೊಡನಿಟ್ಟೆಡೆಗೊಂಡಿರೆ ನುಡಿದ ನಾಗಳಾ ಚರಮುಖ್ಯಂ (ರಾಜಶೇ. ೭-೩೩). ೨. ನಡುಗುವ ದನಿ ; ಕಂಪಿಸುವ ಸ್ವರ : (ಕ). [ ತಳರ್ + ನುಡಿ$_2$ ]

**ತಳರ್ನೋಟ** (ನಾ). ಚಂಚಲವಾದ ದೃಷ್ಟಿ : ಕೊಡಕೆ ನಿಮಿರೆ ನವಿಕೋರ್ಕ್ಕರಿಸೆ ತಳರ್ನೋಟದಿಂ ನೋಟ್ಪ ಹರಿಣಸಂದೋಹದಿಂದೆಯುಂ (ರಾಮಾಶ್ವ. ೩-೨೮). [ ತಳರ್ + ನೋಟ ]

**ತಳರ್ಪು** (ನಾ). ವಿಸ್ತಾರ ; ಹರಹು : ತನ್ನ ಜಸದಂತೆ ಪಸರಿಸಿದಚ್ಚವೆಳ್ದಿಂಗಳನಾಕೆಯು ಕಣ್ಗಳ ಬೆಳ್ಪಿನ ತಳರ್ಪನುತ್ತುಂ ಪೆಳ್ಪಳಿಸಿ ಚಂದ್ರನಂ ನೋಡಿ (ಪಂಪಭಾ. ೪-೭೯ ವ). [ ತಳರ್ + – ಪು$_1$ ]

**ತಳರ್ವಕ್ಕಿ**(ನಾ). (ಚೆಲುವಾಗಿ)ನಡೆಯುವ ಪಕ್ಷಿ; "ನಡೆವಕ್ಕಿ, ಹಂಸಪಕ್ಷಿ" (ಪ್ರಭಂ) : ತಳಿರ್ವೆರಲ ತರತರಕೆಯ ತುಂಬಿಯ ತಳರ್ವಕ್ಕಿಯ ಕುಸುಂಕುಱುಗೊಂಡೆಸಟ ಬಾಟ್ಸೇಲಿಯ ಕೇಸರದ ಕಕ್ಕುಂದರಿಯ ಕಾಪಿನ ಕಂಪಿನ ಕೋಶಮಿರ್ಪಂತೆ (ಲೀಲಾವ. ೮-೫೧ ವ). [ ತಳರ್ + ಪಕ್ಕಿ$_1$ ]

**ತಳರ್ವಜ್ಜೆ** (ನಾ). ಚುರುಕಾಗಿ ಇಡುವ ಹೆಜ್ಜೆ : ತಳರ್ವಜ್ಜೆ ತಟಪುಟ ನಿಡುವಾಗ ವಿಟರೆದೆ ತಳಹೊಳಗೊಳುತಿಹುದೊಡನೆ (ಭರತ. ೧೨-೭೮).

[ P ಇದು 'ತಳಿರ್ವಜ್ಜೆ'ಯ ಅಪಲಿಖಿತವಿರಬಹುದು ]

**ತಳರ್$_1$**, ತಳಲು$_1$ (ಕ್ರಿ). ಹೋಗು ; ತೆರಳು : ಕಾಂಚಿಯೊಳ್ ವಿರಾಜಿಸಲೊಸಗೆಯಿಂದ ಸಂದರುಶನಂಗೆಯ್ದು ತಳಲ್ದಿರ್ದನೆಂದು ಕೂಷ್ಮಾಂಡ ಗಣನಾಥಂ ಪೇಳ್ದನು (ನಂದಿಮಾ. ೧೦-೫೩). **ತಳಲು$_1$** : ಕಲುಷಯುತ ಚಂಡಾಲನೊಂದುದಿನ ಶಿವಭಕ್ತರಲಘುತರದುಪಕರಣಮಂ ಕದ್ದು ಕೊಂಡವಂ ತಳಲುತಿರೆ ಬೆಂಬತ್ತಿ ಬರಲೋಡಿ ಬಂದು ಮಸಣದೊಳು ಕೆಡೆದಸುವ ಬಿಡಲು (ಪಾಸೋಪು. ೩-೮೭). 'ತೆರಳ್' ಪರಾ. [ <ತಳರ್ ? ]

**ತಳಲ್$_2$**, ತಳಲು$_2$ (ಕ್ರಿ). ಚಿಗುರು; ಪಲ್ಲವಿಸು: "ಎಳೆ[ಪಾಠಾಂ. ಲೆ]ತಳಲ್ – ಪಲ್ಲವ ಪ್ರಾಪ್ತೌ (ಎಲೆ ಚಿಗುರು)" (ಶಮದ); " ತಳಲ್ – ಶಾಖಾಮುಖೇ (ಚಿಗುರು) " (ಶಮಧಾ). **ತಳಲು$_2$** : 'ತಳಲುಗಾವಿ', 'ತಳಿರ್$_1$' ಪರಾ. [ ? ]

**ತಳಲು$_1$** 'ತಳಲ್$_1$' ನೋ.

**ತಳಲು$_2$** 'ತಳಲ್$_2$' ನೋ.

**ತಳಲು$_3$** 'ತಟಿಲ್' ನೋ.

**ತಳಲು$_4$**, ತಳಿಲು$_3$ (ನಾ). ನಿಗಿನಿಗಿಯಾದುದು ; ಪ್ರಖರವಾದುದು. 'ತಳಲುಗೆಂಡ', 'ತಳಲುರಿ' ಪರಾ. **ತಳಿಲು$_3$** : ಮೂಳೆಯ ಮಾಂಸ ತಳಿಲು ಸುಡುಗೊಳ್ಳಿಯು ನೀಳದ ಹುರಿಯ ಬಾರುಗಳು ತಾಳಿಸಿ ತಿಂಬ ಸೀಗುಡಿ ಕರಿಮಿಾನಿನ ಗೂಳೆಯವನು ಕಂಡ ರಾಯ (ಹರಿಸಾಂ. ೪-೨). [ ದೇ.॥ ತಮಿ. ತಟಲ್, ತಣಲ್, ಅಟಲ್ ; ಮಲ. ಅಟಲ್, ಅಟಲು ]

**ತಳಲುಂಬಳಲುಂ**, ತಳಲುಮಳಲು (ಅ). ನುಗ್ಗುನುರಿಯಾಗಿ; ನುಗ್ಗುನುಗ್ಗಾಗುವಂತೆ. 'ತಳಲುಂಬಳಲುಂಗುಟ್ಟು' ಪರಾ. **ತಳಲುಮಳಲು**: 'ತಳಲುಮಳಲುಗುಟ್ಟು' ಪರಾ. [ ? ]

**ತಳಲುಂಬಳಲುಂಗುಟ್ಟು**, ತಳಲುಮಳಲುಗುಟ್ಟು (ಕ್ರಿ). ನುಗ್ಗುನುರಿಯಾಗುವಂತೆ ಕುಟ್ಟು ; ನುಗ್ಗುನುಗ್ಗಾಗುವಂತೆ ಹೊಡೆ ; ಅಜಗಿಜಿಯಾಗುವಂತೆ ಚಚ್ಚು : ಮುಳಿದು ಗಜೆಗೊಂಡು ಕೌರವಕುಳವಿಳಯಂ ಕೌರವಾನುಜರ್ಕಳನಾಗಳ್ ತಳಲುಂಬಳಲುಂಗುಟ್ಟಿದನೆಳೆಯೊಳ್ ಪಡಲಿಟ್ಟು ಸೊಪ್ಪುಸೊವಡಪ್ಪಿನೆಗಂ (ನೇಮಿಪು. ೧೨-೮೩). **ತಳಲುಮಳಲುಗುಟ್ಟು**: ಕೌರವಾನುಜರ ತಳಲುಮಳಲುಗುಟ್ಟಿ ಪಡಲಿಟ್ಟಂದದಿನಿಳೆಯೊಳು ನೆರಪಿದನು (ನೇಮಿಸಂ. ೨೯-೩೮). [ ತಳಲುಂಬಳಲುಂ + ಕುಟ್ಟು$_1$ ]

**ತಳಲುಗಾವಿ**(ನಾ).=ತಳಿರ್ಗಾವಿ ೨: ಹಲವಾಭರಣ ತಳಲುಗಾವಿ ಪೊಂಬಟ್ಟು ಸೆಳೆಗೋಲು ಕೈಯ ಕೊಳಲ ಧ್ವನಿಗೈಸುತ್ತಾಕಳ ಕಾಯಿದನೀತ (ವಿಸೋಸು. ೫೯-೦). [ ತಳಲು$_2$ (<ತಳಲ್$_2$) + ಕಾವಿ ]

**ತಳಲುಗೆಂಡ** (ನಾ). ಚೆನ್ನಾಗಿ ಉರಿಯುವ ಕೆಂಡ ; ನಿಗಿನಿಗಿ ಕೆಂಡ ; ತನಿಗೆಂಡ : ಬಳಿಕವಾ ಗೂಡ ಬಿಸಿಮಾಡಿ ಮತ್ತದಱೊಳಗೆ ತಳಲುಗೆಂ[ಪಾಠಾಂ. ಕೆಂ]ಡವ ಹಾಕಿ ಅದಱ ಮಧ್ಯದೊಳೊಂದು ಕಳಸಿಗೆಯನಿರಿಸಿ (ಸೂಪಶಾ. ೫-೨೭) : ತಳಲುಗೆಂಡದ ರಾಸಿಯ ಮೇಲೆಯಿಱುಪೆಯ ಬಳಗ ಮುಸುಕಿ ಸಾವಂತೆ (ರಾಮವಿ. ೧೮-೧೧೪). [ ತಳಲು$_4$ + ಕೆಂಡ ]

**ತಳಲುಪಂಚಮಿ** (ನಾ). ಹೊಲದಲ್ಲಿ ಬೆಳೆ ಪಕ್ವವಾದಾಗ ಮಾಡುವ ಒಂದು ಬಗೆಯ ಹಬ್ಬ : ಹೂವುಪಂಚಮಿ, ಕಾಯಿಪಂಚಮಿ, ತಳಲುಪಂಚಮಿ ಎಂದು ಹುತ್ತದ ಹತ್ತಿರ ಪೂಜೆ ಊಟಗಳು ನೆರವೇರುತ್ತಿದ್ದವು (ಹುಟ್ಟಿದ. ೬೫). [ ತಳಲು$_3$ (<ತಟಲ್) + ಪಂಚಮಿ ]

**ತಳಲುಮಳಲು** 'ತಳಲುಂಬಳಲುಂ' ನೋ.

**ತಳಲುಮಳಲುಗುಟ್ಟು** 'ತಳಲುಂಬಳಲುಂಗುಟ್ಟು' ನೋ.

**ತಳಲುರಿ** (ನಾ). ಧಗಧಗಿಸುತ್ತಿರುವ ಉರಿ : ತಱಿಗೆಂಡದ ತಳಲುರಿಯೊಳು ಮಧುರ ಬೊಬ್ಬೆಱಿದು ಧೀಂಕಿಟ್ಟನಂದು (ಸೊಬಗೋ. ೯-೭೨).

[ ತಳಲು$_4$ + ಉರಿ$_2$ ]

**ತಳಲುಶ್ರಮ** (ನಾ). ಮಾರ್ಗಾಯಾಸ : ವಿಳಸಿತವೆನಿಪ್ಪ ಪೊಱವಳಲು ಪಾಂಥಾವಳಿಗೆ ನೆಳಲು ಜೇವೊಸ್ಮೃಪಿದ ತಳಲುಶ್ರಮದ ಬೇರ ಕಿಳಲು ಮನವಂ ಸೂಱೆಗೊಳಲು ಸಾಕೆಂದು ಹೊಗಳುತ್ತಲ್ಲಿಯುಱುವಟಿಗೆಯ . . ಈಕ್ಷಿಸಿ (ಸೋಮದ. ೧-೧೧೪). [ ತಳಲು$_1$ (<ತಳಲ್$_1$) + ಶ್ರಮ ]

ತಳಲೆ 'ತಾಳೋಲೆ' ನೋ.

ತಳಲೋಕ (ನಾ). ಕೆಳಗಿನ ಲೋಕ; ಅಧೋಲೋಕ; ಪಾತಾಳ: ಚೆಲುವಿಕೆಗವನ ಶೃಂಗಾರಕೆ ಜಾಣ್ಮೆಗೆ ವಿಲಸಿತಗಂಭೀರಗುಣಕೆ ತಳಲೋಕ ನರಲೋಕ ಸುರಲೋಕದೊಳು ಮೆಚ್ಚೆ ತಲೆದೂಗದವರೊಬ್ಬರಿಲ್ಲ (ಭರತೇ. ೭೬-೫). [ ತಳ (=ತಲ) + ಲೋಕ ]

ತಳವಕಾರ 'ತಲವಕಾರ' ನೋ.

ತಳವಗಲ್ (ಕ್ರಿ). ನೆಲೆದಪ್ಪು; ಆಶ್ರಯತಪ್ಪಿ ಉರುಳು (?): ಆರ ವ್ಯದೂಕ್ತಿಯುಂ ಬಯಸಿ ಕೇಳ್ದು ತನೂಜ ಮದೀಯ ಕರ್ಣದೊಳ್ ಪೂರಿಪೆನಿಂ ರಸಾಯನಮನಾರ ಮುಖೇಂದುವನೊಲ್ದು ನೋಡಿ ವಿಸ್ತಾರಿಪೆನೀ ಮದಕ್ಷಿಗೆ ಸುಧಾರಸಪೂರಮನೆಂದು ತಾರಹಾರಾ[ಹಾ]ರವದಿಂದವಳ್ ತಳವಗಲ್ದಳೊಱಲ್ದನಿಳಾತಳಾಧಿಪಂ (ಚಂದ್ರಪು. ೫-೧೭).

[ ತಳ (=ತಲ) + ಅಗಲ್$_1$ ]

ತಳವಗ್ಗ (ನಾ). = ತಳವರ್ಗ (?): ಗಜವದ ನಿಸನ್ದ ತಳವಗ್ಗ ಮಾದಿಯರ ವಿದ್ಯಾದರ ಪ್ರಿತುವೀ ಗಂಗದೇಸ (ಮೈಆರಿ. ೧೯೨೦, ೯-೨೫; 267 ಕ್ರಿಶ).

[ ? ]

ತಳವಟಗೊಳ್ಳು (ಕ್ರಿ). ತಳಮುಳಗೊಳ್ಳು (?): ಅರಮನೆಯೊಳಿಹರೆಲ್ಲ ಹಾಯೆಂದಜಚ ಕಂಬನಿಯೊಸರಿ ಶೋಕದ ಭರದಿ ತಳವಟಗೊಂಡು ಸುಮ್ಮನಿರಲ್ಕೆ (ತಿಮ್ಮಸ್ಕಿ. ೧-೧೫): "ಮುಳುಗಿಹೋಗು" (ಪಟ್ಟನಿ).

[ ತಳವಟ್$_0$ (<ತಳವಟ) + ಕೊಳ್ಳು$_1$ (<ಕೊಳ್$_1$) ]

ತಳವಡು (ಕ್ರಿ). ಕಂಳಿತಂಕೊಳ್ಳು; ಆಸೀನನಾಗು: ತಡೆ ನಿಲ್ಲಾಜ್ಞಾಬಲ್ದೆ ತಳವಡು ಮಿಡುಕಿನ್ನೇಕೆ ಸಾರ್ (ಚಕವಿ. ೭-೧೭೪).

[ ತಳ (=ತಲ) + ಪಡು$_1$ ]

ತಳವನ (ನಾ). = ತಟಿಕ್ಕಾಡು: ಮಲೆಯುಂ ಸಾಧಿಸಿ ಮಾಣ್ದನೇ ತಳವನಂ ಕಾಂಚೀಪುರಂ ಕೋಯತೂರ್ಮ್ಮಲೆನಾಡಾ ತುಳುನಾಡು . . . ಇವೆಲ್ಲಂ ಭುಜಾಬಲದಿಂ ಲೀಲೆಯೆ ಸಾಧ್ಯವಾದುದೆಯಾವ್ವಿಷ್ಣು ಕ್ಷಮಾಪಾಳನೊಳ್ (ಎಕ. V, ಅರಸೀ. ೧-೧; 1168). P ಇದು 'ತಲಕಾಡು' ಎಂಬುದರ ಸಂಸ್ಕೃತೀಕರಣ. [ ತಳ (=ತಲ) + ವನ ]

ತಳವನಪುರ (ನಾ). = ತಟಿಕ್ಕಾಡಂ: ತಳವನಪುರದೊಳ್ತಳವಿತ್ತಿಯ ಮಣ್ (ಎಕ. I, ೧-೨೦; 466); ತಳವನಪುರದೊಳಿಟ್ಟು (ಮೈಆರಿ. ೧೯೩೩, ೩೮-೪; 801); ಎಳೆಗೆಸೆವ ಕೋಯತೂರ್ತ್ತಳವನಪುರಮಂತೆ ರಾಯರಾಯಪುರಂ (ಎಕ. VII, ಶಿವಮೊ. ೭೪-೧೭; 1112). 'ತಲವನನಗರ' ಪರಾ.

[ ತಳವನ + ಪುರ$_3$ ]

ತಳವರ 'ತಳವಟಿ' ನೋ.

ತಳವರ್ಗ (ನಾ). ಅಂಗರಕ್ಷಕ ದಳ (?): ಅನೇಕ ಪ್ರಜೆ ಪರಿವಾರ ಬಂಧುವರ್ಗ್ಗಮುಂ ತಳವರ್ಗ್ಗಮುಂ ಕುಲಸ್ತ್ರೀ ಚಿಕ್ಕಲದೇವಿಯುಂ ಬೆಸಕೆಯ್ಯೆ (ಎಕ. IX, ಕೊಡಗು. ೫೭-೩೯; 1095): ದೂರೀಕೃತಾರಿ ಷಡ್ವರ್ಗನುಂ ಸಮಾಕೃತ ತ್ರಿವರ್ಗನುಂ ದೃಢೀಕೃತ ತಳವರ್ಗನುಂ ಸಮಾಶ್ರಿತ ಕಾಮುಕವರ್ಗನುಮಪ್ಪಾಗಿ (ಚಂದ್ರಪು. ೪-೨೮ ವ): ಪದ್ಮನಾಭ ನರನಾಥನಾತನ ಮನಮುಮಂ ಪತ್ತೆಸಾರ್ವ ತಳವರ್ಗದ ನಿಗ್ರಹ ವ್ಯಕ್ತಿಯುಮಂ ಕಂಡಿದು ಮದೀಯ ವಿಕ್ರಾಂತ ದರ್ಶನಾರ್ಥಮೆಂದು (ಚಂದ್ರಪು. ೧೧-೯೪ ವ). 'ತಳತಂತ್ರ' ಪರಾ. [ತಳ (=ತಲ) + ವರ್ಗ]

ತಳವಳ 'ತಳಮಳ' ನೋ.

ತಳವಳಗು 'ತಳಮಳಗು$_2$' ನೋ.

ತಳವಳಿಸು 'ತಳಮಳಿಸು' ನೋ.

ತಳವಜ, ತಳರ, ತಳವರ, ತಳವಾರ$_1$, ತಳವಾಜ, ತಳಜ, ತಳಾರ$_1$, ತಳಾರಿ, ತಳಾಜ, ತಜವಳ, ತಜವಾಳ, ತಾಳವಾರ$_2$ (ನಾ). ಕಾವಲುಗಾರ: ಗ್ರಾಮರಕ್ಷಕ; ನಗರರಕ್ಷಕ: ಮಂತ್ರಿ ಪುರೋಹಿತ ತಳವಜಾದಿಗಳ್ಗಿಂತೆಂದೋಲೆಯನಟ್ಟಿದೊಂ (ವಡ್ಡಾರಾ. ೭೫-೧೪); ಸೇನಾಪತಿ ತಳವಜ ದಂಡನಾಯಕ ಪ್ರಭೃತಿಗಳುಂ (ಅಜಿಪು. ೧೦-೨ ವ); ತಳವಜರ್ . . . ದುರಾತ್ಮಂ ಸಿಲ್ಕಿದನೆಂದಾತನಂ ಪಿಡಿದು (ದಶಕು. ೧೨-೯೭ ವ); ದುಃಖಂಗಳನನುಭವಿಸುತ್ತಿರ್ಪರ್ ತಳವಜರ ವಶಕ್ಕೆ ಸಂದ ಕಳ್ಳರ ತೆಜದಿಂ (ಪಾರಪು. ೫-೪): ಬಲ ಮಹಾಂಬುಧಿಯೊಳಗಿರುಳ ಮೇಲ್ತಳವಜನು ಹೈಡುಂಬ[ಪಾಠಾಂ. ತಜವಳಿಕೆ ಹೈಡಿಂಬಂಗೆ] (ಕುವ್ಯಾಉ. ೧೦-೪೯): ಹೊಳೆವ ಕಠಾರಿ ಕೈಗತ್ತಿ ತೋಮರ ಬಿಲ್ಲು ಬಲುದಡಿ ಪಿಡಿಚಕ್ರದಲಿ . . . ತಳವಜರೂರ ಕಾದಿಹರು (ಮೋಹತ. ೧೮-೧೦೩); ತುಂಬಿಗಳೆಂಬದಿರ್ಗೋಲನಾಂತೆಲರ್ ತಳವಜನಂತೆ ಸಾಜುತನುಗೆಯ್ದುದು ದರ್ಪಕವೀರಸೇನೆಯುಂ (ಚಕವಿ. ೬-೩೬). ತಳರ: ಅರಟ್ಟಿಗ ತಳರ ಕೂಡಲೂರ ವೃತ್ತಿ ನೊಕ್ಕಿಉೂರೊಳೆ . . . ಕೊಟ್ಟ ನೆಲ (ಮೈಆರಿ. ೧೯೧೭, ೦೩-೬; 8ನೆಯ ಶತ): ಬಮ್ಮಂದಳರಂ [ಕೊ]ಣ್ಡು ಬಿಟ್ಟ ಸರಣ ವ್ರಿತ್ತಿ (ಮೈಆರಿ. ೧೯೩೦, ೭೫-೩೯; 1082). ತಳವರ: ಕಾವಲು ನಿಂತಿಹ ತಳವರರಂದದ ತೆಂಗಿನ ಕೌಂಗಿನ ಸಾಲಲ್ಲಿ (ನರ್ಕ. ೩-೨). ತಳವಾರ$_1$: ಜತ್ತ ತಳವಾರ ಪೊಗುಣ್ದ ಕಾಳೆಗದುಳ ಎಜಿದು ಸತ್ತ (ಎಕ. IX, ನೆಲಮಂ. ೩೪-೩; ಸು. 750 ?); ಬಟ್ಟೆಗಾರಕದ ತೆರನು ತಳವಾರ ಮುಖಾಂತ್ರ (ಎಕ. VII, ಶಿವಮೊ. ೩-೨೫; 1671); ಕಳವು ಮಾಡದಿದ್ದರೂ ಕಳ್ಳನೆಂಬ ಶಂಕೆಯಿಂದ ತಳವಾರರು ಶೂಲಕ್ಕೆ ಹಾಕಲು (ಕೃವಾಅ. ೧೦೨); ನಲಿಯುತ ಕಾಲಚಕ್ರನು ತಾನೆಂಬುವ ತಳವಾರನಿರುವನಾ ನೃಪಗೆ (ಸೌಗಂಪ. ೧-೨೨); ಊರಿನ ತಳವಾರ ತಾಸಿಗೊಮ್ಮೊಮ್ಮೆ ಗಂಟೆ ಬಾರಿಸುವುದನ್ನು ಕೇಳಿ (ಧರ್ಮಸಾ. ೬೩); ಗ್ರಾಮಶಾಂತಿಗೆ ತಳವಾರ ತಲೆ ಬೋಳಿಸಿಕೊಂಡ (ಗಾದೆ). ತಳವಾಜ: ಹಾಹಾಕ್ರಂದನರವದಿಂ ಪುಯ್ಯಲಿಡುವ ಕರುಣಾರವಮಂ ತಳವಾಜಂ ಕೇಳ್ದು (ಪಂಚತಂ. ೭೯-೧): ನೆಲ ತಳವಾಜನಾದಡೆ ಕಳ್ಳಂಗೆ ಹೋಗಲೆಡೆಯುಂಟೇ (ಮೋಳಿಮಾ. ೭೮-೨೭೩); ಆ ಕಾಂತಕನೆಂಬ ತಳವಾಜ ನಾಯಕಂ ಅರಸನೋಲಗದಿಂ . . . ಪೋಗುತ್ತಿರೆ (ದಶಕು. ೮-೨೭೪ ವ); ಐಸಜಿಯೊಳೀಕ್ಷಿಸುತ ತಳವಾಜರದೆಯದೆ ಪೋದನೆಂದೆನುತ (ಬಸಪು. ೫೬-೪೮); ತಳವಾಜವರಿ ಮುಂತಾಗಿ ಯೆಲಾಉ ಸರ್ವಮಾನ್ಯವಾಗಿ ಬಿಟ್ಟು (ಎಕ. X (S), ಮುಳಬಾ. ೫-೨; 15ನೆಯ ಶತ): ಜಡಿವ ದನಿಗಳಿಂದ ತಳವಾಜರುಗಳ ಪಡೆ ತಿರುಗುವುದು ದುರ್ಗದಲಿ (ಕಂಸವಿ. ೧೧-೧೪೦). ತಳಜ: ಅಮಾವಾಸ್ಯೆಯುಂದು ತಳಜಙ್ಗೆ ಆವಣದೊಳೊರ್ವ್ವಳ್ಳ ಜೋಳಂ (ಕಇಆ. ೮೭-೧೮-೪೨; 932); ಇನ್ನೆನಿಸಿ ನೆಗಬ್ದ ನ್ರಿಪತಿಗೆ ಸನ್ಮಂ ಜಯಲಕ್ಷ್ಮಿಯುಂ ಭುಜಾಸಿಯೊಳಿರಿಸಲ್ಕಿನ್ನಿವನೆಸೆಟಿವನೆನಿಸುವನೆನ್ನುಂ ಶ್ರೀ ತಳಜ ನಾಗವರ್ಮ್ಮಂ ಧರೆಯೊಳ್ (ಸೌಇಇ. XX, ೫೫-೨೫; 1082). 'ತಳಜಸುಂಕ' ಪರಾ. ತಳಾರ$_1$: 'ತಳಾರ, ತಳವಾರ – ತಲಾರೋ ನಗರಾರಕ್ಷಕಃ' ಸಂ – ಸ್ಥಲವಾರಃ (ಕಸಾಪ. II, ೧೮೨): ಆ ಪಟ್ಟಣದಲ್ಲಿ ಯಮದಂಡನೆಂಬವನೊಬ್ಬ ತಳಾರ (ಕಸಾಚ. ೧); ಆಗಿನ ಕಾಲದಲ್ಲಿ ಈ ತಳಾರನು, ಈಗಿನ ಪೋಲೀಸರಂತೆ ಹಳ್ಳಿಗಳಲ್ಲಿರುತ್ತಿದ್ದನೆಂದು ಹೇಳಬಹುದು (ಕನ್ನಜಾ. ೦೪೨). ತಳಾರಿ: (ರೈಸಗೆ. II, ೫೬೨); ಒಕ್ಕಲಿಗನು ಮುಂದೆ ತೋಟಿ ತಳಾರಿಗಳು ಹಿಂದೆ (ಕಥಾಮಂ. IV, ೨೦); ಪಟೇಲಿ, ಶಾನುಭೋಗಿ, ನೀರಗಂಟಿ, ತೋಟಿ ಅಥವಾ ತಳಾರಿ ನೌಕರಿಯು ಖಾಲಿಯಾದಾಗ (ಗ್ರಾಮಾಕ. ೯೦). ತಳಾಜ: ತಳಾಜಂಗೆ ಇಪ್ಪತ್ತನಾಲ್ಕು ದ್ರಮ್ಮ (ಹೈಆರಿ. ೧೯೩೭, ೨೭-೨೮; 572); ತಳಾಜಂಗೆ ಕಳ್ಳನೀತನಲ್ಲೆಂಬುದೊಂದು ನಂಬುಗೆಯಾಗಿ (ವಡ್ಡಾರಾ. ೨೨೪-೨೩); ತಳಾಜನಂತೆ ನಿದ್ರೆಗೆಟ್ಟು (ಧರ್ಮಾಮೃ. ೧-೦೭೮); ತಳಾಜನ ಕೆಯ್ಯಂ ಬಡಗಲು (ನಾಂದೇಡ್. ೩೧-೧೯; 1134): ಅಂಧತಮಮುಮನೋಡಿಸಿ ದೋಷಾಕರನಂ ಕಳೆಗುಂದಿಸಿ

ಪರಿವರಿದುವು ತರಣಿಯ ತಳಾಜರಂತಿರೆ ಕಿರಣಂ (ಗಿರಿಕ. ೫-೭); ಸಂದಣಿಸಿ ಚೋರರೊಡವೆಗಳ ಕೊಂಡೊಯ್ಯುತಿರಲಂದು ಕಾಣುತ್ತಂ ತಳಾಜರಟ್ಟಿ ಬರಲ್ಕೆ (ಪಾಸೋಕು. ೧೩-೧೦). **ತಜವಳ**: ಕಲುಕುಟಿಗರಂ ಬಡಗಿಯರನಾ ಬಳಗೆಲಸಮಂ ಮಾಳ್ಪರಂ ತರ[ಜ]ವಳರ[ಪಾಠಾಂ. ಮಾಳ್ಪವರುಗಳ ತಳುವದಿಜ]ನಟ್ಟಾಳುಗಳಂ . . . ಸುಯಿಧಾನರಂ ಹಲವಾಳುಗಳನಾಯ್ದು (ಬಸವು. ೧೭-೧೩): ತಜವಳರಾ ರನ್ನವೊಳಲ್ಗೇರಿಗೇರಿಯೊಳೊಜಲಿಸಿದರು ಸಂಗುರವನು (ಸೊಬಸೋ. ೨೦-೩೧): ತಜವಳರ ತೂಳಲಿಕೆಯ ಮೇಲೆಚ್ಚಜಿಕೆ ಮಸುಳಿಸೆ ಮಧ್ಯರಾತ್ರಿಯೊಳಜಿತದಂಘವಣೆಯಲಿ ಪರುರವಿಸಿದನು ಗುರುಸೂನು (ಕುವ್ಯಾಗ. ೯-೧೪). **ತಜವಾಳ**: ಬನವಾಸಿಯೆಂಬ ಪಟ್ಟಣದಲ್ಲಿ ಕನಕರತಿಯೆಂಬ ಅರಸು ಮನಸಿಜನೆಂಬ ಪ್ರಧಾನ ಕನಸ ಕಂಡಡೆ ಅಜಿವ ತಮಸೂನು ತಜವಾಳ[ಪಾಠಾಂ. ತಳವಾಜ] (ಕೋಲಬಾಂ. ೨೧-೭); ಮೋಜಿಯಿಟ್ಟು ಸುಯ್ಯಲಿಡುತಲಾ ಪೊಳಲಿನ ತಜವಾಳಗಜುವೆ ಕೇಳ್ದವನು (ರಾಮವಿ. ೧೬-೭೩). **ತಾಳವಾರ$_2$**: ತಾಳವಾರನುಂ ಕಾಕಂಬಾಟಿ ಕಂಬಯ್ಯನುಂ ಅಸಗಗೋಡ ಸಿರಿಯಮ್ಮನುಂ (ಎಕ. XI. ಚಿತ್ರದು. ೭೫-೨೨; 941).

[ <ಪ್ರಾ. ತಲವರ, ತಲಾರ./ಸಂ. ತಲವರ, ತಲಾರಕ್ಷ. / ತುಳು. ತಳವಾರೆ; ತೆಲು. ತಲವರಿ, ತಲವಾರಿ, ತಲಾರಿ ]

**ತಳವಜಗಾಹು** (ನಾ). ನಗರರಕ್ಷಣೆ; ಪಹರೆ; ಕಾವಲು: ಆಹವಕೆ ನಿನ್ನೂರ ತಳವಜಗಾಹಿನವರನು ಕಳುಹುವುದು (ಕುವ್ಯಾಭೀ. ೧-೧೧).

[ ತಳವಜ + ಕಾಹು$_1$ (<ಕಾಪು) ]

**ತಳವಜಗೇರಿ** (ನಾ). ತಳವಾರರು ವಾಸಿಸುವ ಕೇರಿ,-ಓಣಿ: ಚೋರರಂಗದ ಮಾತು ತಳವಜಗೇರಿಯಲಿ ಭೂಷಣವೆ (ತೊರರಾ. ೭-೨೨-೭).

[ ತಳವಜ + ಕೇರಿ ]

**ತಳವಜಿಕೆ,** ತಲಾರಿಕೆ, ತಳವಾರಿಕೆ, ತಳವಾಜಿಕೆ, ತಳಾರಿಕೆ, ತಳಾಜಿಕೆ, ತಜವಳಿಕೆ, ತಜವಾಳಿಕೆ (ನಾ). ೧. ತಳವಾರನ ವೃತ್ತಿ,-ಕೆಲಸ; ಕಾವಲು; ರಕ್ಷಣೆ; ಮೇಲ್ವಿಚಾರಣೆ: ಅಲ್ಲಲ್ಲಿ ಜಾವಮುಕ್ಕಡೆ (ಗ)ರವಟಿಗೆ ತಳವ(ಜಿಕೆ)ಯು(ಮ)ಕ್ಕಿಕ್ಕೆಯೊಳಂ ಠಾಣಾಂತರಮಂ ನಿರವಿಸೆಯುಂ (ಪುಷ್ಪಪು. ೭-೭೯ ವ). ೨. ಕಾವಲು ಅಥವಾ ಪಹರೆಯ ವ್ಯವಸ್ಥೆಗಾಗಿ ಕೊಡಬೇಕಾದ ಸುಂಕ: ಬಂಕದೆಜಿ ಸಿದ್ದಾಯ ಬಿಟ್ಟ ಕೊಟ್ಟಣವನುಪ ಸುಂಕ ಮಲವದಿಕೆ ಸೊಲ್ಲಗೆ ಕವಣ ಕಡ್ಡಾಯದಂಕ ತಳವಜಿಕೆ ಕೋರಾಯ ಗುತ್ತಿಗೆ ಅಪುತ್ರಿಕೆ ದಂಡವುಂಡಿಗೆಗಳು (ಸಿಂಗಿರಾ. ೨೨-೨೭).**ತಲಾರಿಕೆ:** ೧. ಸುಂಕವ ಕೊಂಡವನು ತನ್ನ × × × ತಲಾರಿಕೆಗೆಉ ಮದುವೆ × × ಮದವಣಿಗೆ ಕೊಟ್ಟವನುಯೆಂದು ಹಾಕಿದ ಶಾಸನ (ಸೌಇಇ. IX-ii, ೪೮೦-೧೩; 1510). **ತಳವಾರಿಕೆ:** ೧. ಹರುಪದಿ ತಳವಾರಿಕೆ ನಿನಗೆಂದಾಗ ಕರದು ಕೊಟ್ಟನು ವೀಳೆಯವ (ಜಿನರಾ. ೭-೪೭); ಅಪ್ಪನ ತಳವಾರಿಕೆಯಲ್ಲಿ ಮಗಳ ಸೂಳೆಗಾರಿಕೆ ಚಂದ (ಗಾದೆ). ೨. ಏನುಳ್ಳ ಸುಂಕ ತಳವಾರಿಕೆಗಳು ಸಲುವ ಅಂಬಲಿ ಪುದುಗೊರೆ ಗೌದುಂಬಳಿ ಸಹವಾಗಿ (ಎಕ. VII, ಶಿವಮೊ. ೭೦-೩೦; 1431); ಸೀಮೊಗ್ಗೆ ತಳವಾರಿಕೆಯಿಂದ ಗಾಜನೂರು ಯುಡತ್ತೂರೆ ಸೀಮೆಯಲ್ಲೂ ಯಿ ಮಠಕ್ಕೆ ಉತ್ತಾರವಾದ ಗ್ರಾಮದವರು . . . ತೈಗೆದುಕೊಂಡು ಹೋಹಂಥಾದಕ್ಕೆ (ಎಕ. VIII, ತೀರ್ಥಹ. ೯೦-೭೭; 1709); ಭೈರನಾಯಕನು ಕೊಟ್ಟ ಭೈರಾಪುರಕ್ಕೆ ಜೋಡಿ ಬೇಡಿಗೆ ತಳವಾರಿಕೆ ವಿರಹಿತ (ಮೈಆರಿ. ೧೯೨೭, ೪೫-೭; ?). **ತಳವಾಜಿಕೆ:** ೧. ಮಂದಾನಿಲಗೆ ಚೈತ್ರ ತಳವಾಜಿಕೆಯನಿತ್ತಂದದೊಳೆಸೆದನೇವೇಳ್ವೆ (ಕಂಸವಿ. ೯-೧೧). ೨. ಸುಂಕ ಮಗ್ಗಮೆ ತಳವಾಜಿಕೆ ಕಾಣಿಕೆ ಕಡ್ಡಾಯ (ಎಕ. X, ಮುಳಬಾ. ೨೦-೨; 1468): ಅಂಕ ಸುಂಕ ಟಂಕಸಾಲೆ ತಳವಾಜಿಕೆ ನಿಧಿ ನಿಕ್ಷೇಪ (ಎಕ. VIII, ಸಾಗರ. ೧೬೩-೨೩; 1488). **ತಳಾರಿಕೆ:** ೨. ದಂಡ ದೋಷ ತಳಾರಿಕೆ . . . ಕಳ್ಳರ ಬಾಧೆ ಆ ಆಸ್ಥಳದ ಮಹಾಜನಂಗಳವಲ್ಲದೆ ಮೂನೂರ್ವ್ವರ ಕಾರಣವಿಲ್ಲ (ಎಕ. VI, ಕಡೂ. ೫೫-೨೪; 1291 ?). **ತಳಾಜಿಕೆ:** ೧. ಯಮದುಡಂಗಂ ಪೊಬಲ ತಳಾಜಿಕೆಯುಂ ಕೊಟ್ಟು (ಪದ್ಮರಾ. ೧೩೩-೧೭); ಪಡವಳರವರಿಗೆ ತಳಾಜಿಕೆಗೆ ಯಿಕ್ಕಿದ ಮತ್ತರಾಜು (ಸೌಇಇ. XV, ೧೨೨-೬೮; 1173); ಬಸಂತನ ಕಾಪು ಕಾಮದೇವನ ರತಿಯಾಜ್ಞೆ ಚಂದ್ರನ ತಳಾಜಿಕೆ ತಂಬೆಲರೊಂದು ಬೆಂಬಲಂ (ಅನಂಪು. ೧-೮೭); ಬಂದ ಬಸಂತನ ಬೀಡು ಮಂದಮಾರುತನ ತಳಾಜಿಕೆ ಯೊರ್ಗಳೆಬಂದದೊಳಾ ವನಮಿಹುದು (ಶ್ರೀಪಾಲ. ೧-೭೩). ೨. ಪೊಜವೆಚ್ಚವೊಳವೆಚ್ಚಮಂತೆ ಸುಂಕಂ ತಳಾಜಿಕೆ ಚರಾದಾಯಮೆಂಬಿಂತೆಲ್ಲವಂ ಪರಿಕಿಸಿ (ಪದ್ಮರಾ. ೪-೨೪). **ತಜವಳಿಕೆ:** ೧. ಅಜಿಯೆ ನೀನೆಲೆ ಮಾರುಳೆ ಗರುಡನ ತಜವಳ[ಪಾಠಾಂ. ೦]ಕೆಯೊಳು ಹಾವು ಕನ್ನವ ಕೊಜೆದು ಬದುಕುವುದೇ (ಕುವ್ಯಾವಿ. ೮-೭೩). ೨. ಹಗಿಲುವಣಂ ಇದು ತಜವಳಿಕೆಗೆ ಕೊಟ್ಟುದು (ಕಇ. IV, ೧೬-೨; ?). **ತಜವಾಳಿಕೆ:** ೧. ತೋಟಂಗಳ ತಜವಾಳಿಕೆ ಊರ ತಜವಾಳಿಕೆ ಸೇನಬೋವಿಕೆ ಇಂತಿವೆಲ್ಲವಕ್ಕೆವೂ ಹತ್ತುವ ಹೊನ್ನಿಂಗೆ (ಎಕ. XII, ಚಿಕ್ಕನಾ.೨-೭೭; 1261). ೨. ಸುಂಕಕಾರುಕದಿಂದಿರುಪ್ಪ ತಜವಾಳಿಕೆಕ್ಕ ಅಂತು ೧೨ ॥ ೧ (ಮೈಆರಿ. ೧೯೩೪, ೫೩-೧೩; 1405). 'ತಳಜಸುಂಕ' ಪರಾ. [ ತಳವಜ + - ಇಕೆ ]

**ತಳವಜಿತಿ** (ನಾ). ತಳವಾರನ ಹೆಂಡತಿ: ಅರಸನ ಪೆಂಡತಿ, ಅರಸಿತಿ, ಏವಂ ಪ್ರಧಾನಿತಿ, ತಳವಜಿತಿ, ಸುಂಕಿಗಿತಿ, ತೋಟಿಗಿತಿ (ಶಬ್ದಾನು. ೧೯೧ ಪ್ರಯೋ).

[ ತಳವಜ + - ಇತಿ$_1$ (< - ಇತ್ತಿ) ]

**ತಳವಾರ$_1$** 'ತಳವಜ' ನೋ.

**ತಳವಾರ$_2$** 'ತರವಾರ' ನೋ.

**ತಳವಾರಗಟ್ಟೆ** (ನಾ). ತಳವಾರನಂ ಕಾರ್ಯವನ್ನು ನಿರ್ವಹಿಸುವ ಸ್ಥಳ; ಕೊತವಾಲನ ಚಾವಡಿ: ಪುರ ಪೇಟೆ ತಳವಾರಗಟ್ಟೆ ಮುಂತಾದುವಂ ರಚನೆಗೈಸಿ (ಕಳನ್ನ. ೧-೧೦೫). [ ತಳವಾರ$_1$ (<ತಳವಜ) + ಕಟ್ಟೆ$_1$ ]

**ತಳವಾರನಬಳ್ಳಿ** (ನಾ). ಒಂದು ಬಗೆಯ ಬಳ್ಳಿ: ಹುಳಿಮಂಗರವಳ್ಳಿ, ತಳವಾರನ ಬಳ್ಳಿ (ಮೈಜಿಗಿ. ೨೨-೩೯೯); ಜುಟ್ಟುವೆಬಳ್ಳಿ, ತಳವಾರನ ಬಳ್ಳಿ . . . ಕುಂಟಗ (ಮೈಜಿಗಿ. ೬೦-೧೨೦೫).

**ತಳವಾರಸರಕಾರ** (ನಾ). ದೇಶದ ಸಂರಕ್ಷಣೆಯನ್ನಷ್ಟೇ ನೋಡಿಕೊಳ್ಳುವ ಸರಕಾರ: ಶಿಪಾಯಿ, ಮ್ಯಾಜಿಸ್ಟ್ರೇಟು, ಪೋಲೀಸು . . . ಇವರಿಂದ ಆಗುವಂಥ ಪ್ರಜಾಸಂರಕ್ಷಣೆಯೇ ಬಹುಪುರಾತನವಾದ ರಾಜ್ಯಕರ್ತವ್ಯ. ಇಂಥಾ ಸರಕಾರವನ್ನು ಸಂಕ್ಷೇಪವಾಗಿ "ತಳವಾರ ಸರಕಾರ" ಎಂದು ಕರೆಯಬಹುದು (ರಾಜ್ಯಶಾ. ೧೬೦). P ಇದು 'police state' ಎಂಬುದರ ಕನ್ನಡ ಅನುವಾದ. [ ತಳವಾರ$_1$ (<ತಳವಜ) + ಸರಕಾರ ]

**ತಳವಾರಿಕೆ** 'ತಳವಜಿಕೆ' ನೋ.

**ತಳವಾಸುಗೆ** (ನಾ). ನೆಲಗಟ್ಟು: ತಳವಾಸುಗೆಯು [ಪಾಠಾಂ. ವಾಸಿಗೆಯು] ಪಚ್ಚೆ ಪಳಿಕೆಸೆವ ಪಾಗರಂ ಪೊಳೆವ ವಜ್ರಸ್ತಂಭ (ಮನೋವಿ. ೧-೨೩).

[ ತಳ (= ತಲ) + ಪಾಸುಗೆ ]

**ತಳವಾಜ** 'ತಳವಜ' ನೋ.

**ತಳವಾಜವರಿ** (ನಾ). = ತಳಜಸುಂಕ: ತಳವಾಜವರಿ ಮುಂತಾಗಿ ಯೆಲಾಉ ಸರ್ವಮಾನ್ಯವಾಗಿ ಬಿಟ್ಟು (ಎಕ. X (S), ಮುಳಬಾ. ೫-೨; 15ನೆಯ ಶತ). [ ತಳವಾಜ (<ತಳವಜ) + ವರಿ$_1$ ]

**ತಳವಾಜಿಕೆ** 'ತಳವಜಿಕೆ' ನೋ.

**ತಳವಿಘಾತಿ** (ನಾ). ಹೆಜ್ಜೆಯ ಹೊಡೆತ; ಪದಾಘಾತ: ಉಗ್ರೋರುಸೋಂಕಿನಲಜುಜಜಾಂಡದ ಬಿಗುಹು ಬಿಡುವುದು ತಳವಿಘಾತಿಗೆ ಜಗತಿ ಜರಿವುದು (ತೊರರಾ. ೬-೮-೧೧). [ ತಳ (= ತಲ) + ವಿಘಾತಿ ]

**ತಳವಿಡಿ** (ಕ್ರಿ). ಕೈಯನ್ನು ಹಿಡಿ ; ಹಸ್ತಲಾಘವ ಕೊಡು : ಯುವರಾಜನನ್ನು ತಳವಿಡಿದುಯ್ದು ನಿವಿಷ್ಟಮಾಡಿ (ಬಟ್ಕಳ. ೪೮-೨೫).

[ ತಳ (=ತಲ) + ಪಿಡಿ$_1$ ]

**ತಳವಿತ್ತಿ**, ತಳವಿರ್ತಿ, ತಳವ್ರಿತಿ (ನಾ). = ತಳವೃತ್ತಿ : ಅಮ್ಮಲಿಮಣ್ಣಿಂ ತಳವನಪುರದೊಳ್ತಳವಿತ್ತಿಯ ಮಣ್ಣ್ಪಗರಿಗೆಱೆಯೊಳ್ಪನ್ನಿರ್ಕಣ್ಡುಗಂ ಪಿರಿಕೆಱೆಯೊಳಂ . . . ಪನ್ನಿರ್ಕಣ್ಡುಗಂ ಮನೋಹರಂ ದತ್ತಂ (ಎಕ. I, ೧-೨೦ : 466) : ಅಂಗಭೋಗ ರಂಗಭೋಗ ಜೀರ್ಣೋದ್ಧಾರಕ್ಕಂ ಪಾರಣೆಯ ಜಂಗಮಾರಾಧನೆಗಂ ಕೊತ್ತ್ರಸಿ ಕುಱುವನಿಗೆ ತಳವಿತ್ತಿ ಅಂಕವಲ ಕೂಂಡಿನಾಡೊಳು ಸಲುವಂತೆ (ಎಇ. XXI, ೨-೬೧ : 1260). ತಳವಿರ್ತಿ: ಮಹಾದೇವರಿಗೆ ಅಂಕನಾಥವೆಸರಿಂ ಅಂಕವಲತಳವಿರ್ತಿ ಕೊತ್ತ್ರಸಿ ಕುಱುವನಿಗೆ ಈ ಹಳ್ಳಿ ಮಾಂಧಾತ ಚಕ್ರವರ್ತ್ತಿ ಬಿಟ್ಟ ಧರ್ಮ್ಮ (ಎಇ. XXI, ೨-೫೫ ; 1260). ತಳವ್ರಿತಿ : ಶ್ರೀ ಸ್ವಯಂಭುದಕ್ಷಿಳ ಸೋಮನಾಥ ದೇವರ ಅಂಗಭೋಗ [ಕ್ಕಂ] ಶ್ರೀಗಂನ್ದಕ್ಕ ತಳವ್ರಿತಿಯ ಸೂಳೆವೊಲದ ದಸವನ್ದದ ತಮಗೆ ನಡೆವ ಎಂಟ್ಟು ಗದ್ಯಾಣ ಹೊನ್ನುಮಂ . . . ಬಿಟ್ಟರು (ಸೌಇಇ. XX, ೨೨-೪೪ ; 1153). [ <ತಳವೃತ್ತಿ ]

**ತಳವಿರ್ತಿ** 'ತಳವಿತ್ತಿ' ನೋ.

**ತಳವುಕಾರ** (ನಾ). ೧. ಸಾಮವೇದದ ತಲವಕಾರ ಶಾಖೆ. ೨. ಆ ಶಾಖೆಗೆ ಸೇರಿದವನು : ದೇವರಂಗಭೋಗ ಉಪಹಾರಕ್ಕೆಂದು ಆದನೂರ ತಳವುಕಾರ ಇರುಳುನೀಕ್ಕಿಯಾಂಡರು ಬಿಟ್ಟ ತೋಟಸ್ಥಳ (ಸೌಇಇ. IX-1, ೧೪೧-೪೫ ; 1174). [ <ಸಂ. ತಲವಕಾರ ]

**ತಳವೂರು** (ಕ್ರಿ). ೧. ನೆಲೆಯಾಗಿ ನಿಲ್ಲು ; ನೆಲಸು ; ತಂಗು : ಭದ್ರವಾಗಿ ತಿಂಗಳ ದಿನ ತಳವೂರಿ ಬಿಡ್ತೇನಿ (ಮರಳಿ. ೧೪೭); ಅಮೆರಿಕೆಗೆ ತೆರಳಿ ಅಲ್ಲಿಯೇ ತಳವೂರಿದನು (ಪ್ರಬಂಧ. ೧೦೧); ಬಹಳ ಜನ ಪ್ರವಾಸಿಗಳು ಪಶ್ಚಿಮ ಕರಾವಳಿಯಲ್ಲೇ ಮೊದಲು ತಳವೂರಿದ್ದು (ಪ್ರವಾಇ. II, X ಪ್ರಸ್ತಾವನೆ) : ಅಂದು ಅವನ ಮುಖದ ಮೇಲೆ ಅಪೂರ್ವಕಳೆ ತಳವೂರಿರಬೇಕು (ಸುವಸಂ. ೫೨) : ಎಳೆಯ ಕಾಲದಲ್ಲಿ ಆರಂಭವಾದ ಗುರುತುಗಳು ಅವರಲ್ಲಿ ಭದ್ರವಾಗಿ ತಳವೂರುತ್ತವೆ (ಶಿಕ್ಷದ. ೨೦೩). ೨. ಕುಳಿತುಕೊಳ್ಳು ; ಟಿಕಾಣಿ ಹಾಕು : ವರನ ಕಡೆಯ ದಿಬ್ಬಣ ಆಗಲೇ ಬಂದು . . . ಅಶ್ವತ್ಥ ಕಟ್ಟೆಯ ಮೇಲೆ ತಳವೂರಿದೆ (ಮೂರುದಾ. ೨೦೫) : ಕಂಪನಿಯೊಂದು ಅಲ್ಲಿಗೆ ಬಂದು ತಳವೂರಿತು (ನಾಪೂಲೀ. ೧೬೦).

[ ತಳ (=ತಲ) + ಊರು$_1$ (<ಊಱು$_1$) ]

**ತಳವೃತ್ತಿ** (ನಾ). ದೇವಾಲಯ ಮೊದಲಾದುವುಗಳ ಸಂರಕ್ಷಣೆಗಾಗಿ ಬಿಟ್ಟು ಕೊಟ್ಟ ದತ್ತಿ : ಶ್ರೀಮತ್ ಶಂಕರಗಣ್ಡರಸಂ ಕುಪಣದೊಳ್ತನ್ನ ಮಾಡಿಸಿದ ಜಯಧೀರ ಜಿನಾಲಯದ ತಳವೃತ್ತಿಗೆ ಪೊಲನಂ ಬೇಡಿದೊಡೆ (ದಾಸಪ. ೫-೧೨ : 965) : ಬಸದಿಗೆ ತಳವೃತ್ತಿ ಸಾಯಿರ ಮತ್ತರು(ಂ) ಮಿಪ್ಪತ್ತುನಾಲ್ಕುಮತ್ತರು ಗಟ್ಟಿದ್ದಿಯುಂ (ಸೌಇಇ. IX-1, ೭೭-೩೦ : 992) ; ಶ್ರೀಲೊಕ್ಕಿಗುಣ್ಡಿಯೊಳ್ಬಸದಿಯಂ ಮಾಡಿಸೆಯುದಕ್ಕ ತಳವೃತ್ತಿಯೆಂದು ಕೊಟ್ಟ ಸುಱುಕಿಯ ಸೀಮಾಮರ್ಯ್ಯಾದೆ (ಸೌಇಇ. XI-1, ೫೨-೫೬ : 1007) ; ದುರ್ಜ್ಜಯ ವೈರಿಮದೇಭಸಿಂಹನುಂಮೆನೆ ನೆಗೞ್ದಂ ಜಯಲಕ್ಷ್ಮೀಪತಿ ತಳವೃತ್ತಿಯ ಹೆಗ್ಗಡೆ ಮಲಿದೇವನೆನೆ ಪೊಗಳದರಾರು (ಕೊಲ್ಲಾಶಾ. ೧೦-೧೯ : 1161). [ತಳ (=ತಲ) + ವೃತ್ತಿ$_2$ ]

**ತಳವೆಳಗಾಗಿಸು** (ಕ್ರಿ). ದಿಗಿಲುಗೊಳಿಸು ; ಗಾಬರಿಗೊಳಿಸು : ತಳಕಾಡಂ ತಳವೆಳಗಾಗಿಸಿ ಅಮ್ಮಚವಾಡಿಯಂ ಮುಟ್ಟಱೆವುಗಿಸಿ (ಚಕವಿ. ೨-೩೯).

[ ತಳವೆಳಗಾಗು + -ಇಸು$_3$ ]

**ತಳವೆಳಗಾಗು** (ಕ್ರಿ). ೧. ದಿಗಿಲುಗೊಳ್ಳು ; ಗಾಬರಿಯಾಗು ; ದಿಕ್ಕುತೋಚದಂತಾಗು : ಉಮ್ಮಳಿಸಿ ಕಳವಳಿಸಿ ವಿರಹಾಕುಳನವೊಲಾ ಖಚರನಿಂತು ತಳವೆಳಗಾದಂ (ಆದಿಪು. ೨-೧೪): ಬೆಳಗಿ ಸಮಸ್ತ ಭೂವಳಯಮಂ ನಿಜತೇಜದಿನಾಂತ ದೈತ್ಯರಂ ತಳವೆಳಗಾಗೆ ಕಾದಿ (ಪಂಪಭಾ. ೧೩-೭೪) ; ಅತ್ತ ಪುಲಿಯಿತ್ತ ದರಿಯೆಂದತ್ತಿತ್ತಡಿಯಿಡದೆ ಲಕ್ಷ್ಮೀ ತಳವೆಳಗಾದಳ್ (ಗದಾಯು. ೯-೧೭) : ನಿದ್ರೆಗೆಟ್ಟಿರ್ದ ಯಶೋಭದ್ರೆಗಱಿಪಿದೊಡೆ ತಳವೆಳಗಾಗಿಯೆೞ್ದು ಬಂದು ತಾನುಮಾಕೆಗಳುಂ ಮಾಡದೊಳಗೆಲ್ಲಂ ನೋಡಿ ಮಗನಂ ಕಾಣದೆ (ಜೀವಸಂ. ೧೧೩. ೪೫ ವ) : ಅದು ಜಾತಿಸ್ಮರನಾಗಿ ಬೆನ್ನಬೆನ್ನನೆ ಪರಿದೆಯ್ತರೆ ಪರದಿ ಬೆಚ್ಚಿ ತಳವೆಳಗಾದಳ್ (ಪುಣ್ಯಾಸ್ರ. ೧-೫೪); ಕಪಿರೋಮಾಳಿ ಸೋಂಕಿನಲಂಜಿ ತಳವೆಳಗಾದುದಖಿಳಜನ (ತೊರರಾ. ೬-೧೦-೨೬). ೨. ಬೆರಗಾಗು ; ಆಶ್ಚರ್ಯಚಕಿತವಾಗು ; ವಿಸ್ಮಯಪಡು : ಬೆಳಗುಗಳೆಲ್ಲಮೊಂದುರುಳಿಯಾಗಿ ನಭಸ್ಥಳದಿಂದಮಾ ಮಹೀತಳಕಿೞಿತರ್ಪುದೆಂದು ಮನುಜಾಕೃತಿಯೆಂದು ಮುನೀಂದ್ರನೆಂದು . . . ಕಮಳಸಂಭವನಂದನನೆಂದು ನೋಟಕರ್ ತಳವೆಳಗಾಗೆ ಸಾರೆವರೆ ನೀರದಮಾರ್ಗದಿನಂದು ನಾರದಂ (ಪಂಪಭಾ. ೬-೬) ; ತರುಣರು ತಳ[ಪಾಠಾಂ. ಳೆ]ವೆಳಗಾಗೆ . . . ವಿರಹಾಗ್ನಿಯಿಂ ವಿಕಳತೆಗೊಳೆ ವಿಟರಾ ಸರಸಿಜನೇತ್ರೆಯೆಯ್ದಿದಳು (ಕುರಾಸಾಂ. ೬-೮೧). ೩. ಕಳವಳಿಸು ; ತಲ್ಲಣಿಸು ; ವ್ಯಾಕುಲಗೊಳ್ಳು; ಪರಿತಪಿಸು : ತಿಳಿದಿರ್ದ ಕೊಳದ ಜಲದೊಳ್ ಪಳಚ್ಚಸೆಸೆದಿರ್ದ ತನ್ನ ನೆಟಲಂ ತನ್ನೋಪಳೆ ಗೆತ್ತು ಮುಱುಗಿ ಕಾಣದೆ ತಳವೆಳಗಾಗಿರ್ದು ವಿರುಳ ವಿರಹ ವಿಹಂಗಂ (ಅಜಪು. ೬-೬೨) : ಸಾಸವೆಗುಡಿದಂತಿರೆ ಕರಮಱುಗಿ ತಳವೆಳಗಾದಂ (ಧರ್ಮಾಮೃ. ೧-೧೪೩) : ಮೂರ್ಛೆವಿಳಿದುಂ ಮೋಹಮೂರ್ಛೆ ತಿಳಿಯದಿರೆ ತಳವೆಳಗಾಗಿ ತನ್ನೊಳ್ತಾನೆ ಬಗೆದು (ಅರ್ಧನೇ. ೨-೪೮ ವ) : ಬಳಿಸಂದು ತಿರುಗಿ ತಳವೆಳಗಾಗಿ ಅಳವಳಿಯುತಲ್ಲಿಯುಂ ಪಡೆಯದಾತುರನಾಗಿ (ಬಂದೋರ. ಹ. ೫೦೫-೩) ; ಖಳನಿವನೆಂದಿಗಳವನೆನುತ್ತ ತಳವೆಳಗಾಯ್ತು ಸುರಕಟಕ (ತೊರರಾ. ೬-೨೬-೪೨). ೪. ಭಾವೋದ್ವೇಗಕ್ಕೊಳಗಾಗು ; ಉದ್ರಿಕ್ತವಾಗು ; ಉತ್ತೇಜಿತವಾಗು : ಎನಿತಂತರದೊಳ್ಕಂಡಿರೆಲ್ಲಿದಂ ಬಂದನೆ ಭೂಕಾಂತನೆನುತ್ತಂ ಬೆಸಗೊಳುತಂ ತಳವೆಳಗಾಗಿ (ಕಾದಂಉ. ೫೧೫) : ತಳವೆಳಗಾದಂ ವನಿತಾತಿಳಕದ ಪೆಱನೊಸಲ ರೋಚನಾತಿಲಕದ ಚೆಲ್ವೞಿಕುಳಿಗೊಳೆ ಸಮ್ಮೋಹನತಿಳಕದವೋಲ್ ಮನಮನವನಿಪಾಲಕತಿಲಕಂ (ಪಂರಾಮಾ. ೫-೬೧) : ಆನೊಂದ ಕನಸ ಕಂಡೆ . . . ಆತನನಪ್ಪಿಕೊಂಡು ತಳವೆಳಗಾದೆನೆಲಗೇ ಚೆನ್ನಮಲ್ಲಿಕಾರ್ಜುನನ ಕೂಡಿ ಕಣ್ಮುಚ್ಚಿ ತೆಱೆದು ತಳವೆಳಗಾದೆನೆಲಗೇ (ಮಹಾದೇ. ಬ. ೪೧-೯೦); ಎನ್ನ ಮಹಾಘನದ ನಿಲವಿನ ಪ್ರಭೆಯನುಟ್ಟು ತಳವೆಳಗಾಗಿ ಸ್ವಯಜ್ಞಾನಿ ಕೂಡಲಸಂಗಯ್ಯನಲ್ಲಿ ಮಹಾದೇವಿಯಕ್ಕಗಳ ನಿಲವ ಮಡಿವಾಳನಿಂದಱಿದು ಬದುಕಿದೆನಯ್ಯಾ (ಬಸಹ. ೮೨-೨೪೭) : ಚಿಂತಾಪರವಶತೆಯಿನಿನಿಸಂ ತಡೆದಿದಿರೇಱದಾತ್ಮಪರ್ಯಂಕದೊಳಾ ಕಾಂತಂ ಕುಳ್ಳಿರೆ ಕಂಡು ಕರಂ ತಳವೆಳಗಾಗಿ ಸಖಿಯನೇಂ ನೋಡಿದಳೋ (ಪುಷ್ಪಪು. ೩-೬೬); ಬಳಿಕಲ್ಲಿ ನೆರೆದಿರ್ದ ಪಾರ್ಥಿವರೆದೆ ತಳವೆಳಗಾಗೆ ರಾಯನ ಕುಮರಿ . . . ಐದಿದಳಾ ಸಭೆಗೆ (ಕರ್ಣವ್ಯ. ೫-೧೨). ೫. ಭ್ರಾಂತಿಗೊಳಗಾಗು ; ಭ್ರಮಿಸು : ತಳತಳಿಸಿ ಪೊಳೆವ ಮಾವಿನ ತಳಿರ್ಗಳಶೋಕೆಗಳ ಮಿಸುಪ ಲತೆಗಳ ನೆಲೆ ಬಳ್ವಳ ಬಳೆದ ಬೇಟದುರುಳಿಯ ಬಳಗಮಿದೆಂದೆಳೆಯುಳಿಸಿ ತಳವೆಳಗಾದಳ್ (ಪಂಪಭಾ. ೫-೩) ; ಗಳಿಲನೆ ಕಾಂತೆ ಚಿತ್ರಪಟದೊಪ್ಪುವ ನೀಕ್ಷಿಸಿಯಾಗಳೊರ್ಮೊದಲ್ ಪುಳಕಿತೆಯಾಗಿ ಕಂಪಿಸಿ ಬೆಮರ್ತಧರಂ ನಸುಗೆತ್ತು ಲಜ್ಜೆ ಕೈಗಳಿದು ಕಳಾಪಮೊಯ್ಯನೆ ಸಿಡಿಲ್ದು ಕರಂ ಮಱವಟ್ಟು ಚಿತ್ರದೊಳ್ ತಳವೆಳಗಾಗಿ ಮೆಯ್ಮಱೆದಳಿಂತುಟೆನಲ್ ನಿಜಚಿತ್ರವಿಭ್ರಮಂ (ದಶಕು. ೧೦-೫೧). ೬. ಬುಡ ಮೇಲಾಗು ; ಅಸ್ತವ್ಯಸ್ತವಾಗು : ಏಳಣ್ಣ ಬೆಳಗಾಯ್ತು : ತಮವು ತಳವೆಳಗಾಯ್ತು (ಮುಕ್ತಕಂ. ೩೦-೧).

[ ತಳವೆಳಗು$_1$ + ಆಗು$_1$ ]

**ತಳವೆಳಗು₁** (ನಾ). ೧. ಭಯ ; ದಿಗಿಲು ; ದಿಗ್ಭ್ರಾಂತಿ : ಸುಯ್ಗಳ ಬಿಸುಪಲ್ಲದಿಲ್ಲುಸಿರ್ಗಳಂಗಭವಜ್ವರಮಲ್ಲದಿಲ್ಲ ಮೆಯ್ತಳವೆಳಗಲ್ಲದಿಲ್ಲಱಿವುಮಿಲ್ಲೆರ್ದೆತಲ್ಲಟಮಲ್ಲದಿಲ್ಲ ಕೋಮಳೆಗೆ (ಅನಂಪು. ೮-೩೯) ; ಕೊಲಲು ಬಂದನಲಾಯೆನುತ ತಳ[ಪಾಠಾಂ. ಕಳ, ತಲೆ]ವೆಳಗಿನಲಿ ತಲೆಮುಸುಕಿನಲಿ . . . ರಾಮರಾಮೆನುತಿರ್ದಳಬುಜಾಕ್ಷಿ (ತೊರರಾ. ೬-೪೫-೩೦) : ಕೊಳುಗುಳದೊಳದಟರೆರ್ದೆಗುಮ್ಮಳಮಂ ತಳವೆಳಗನುಂಟುಮಾಡುವ ಕಲಿಗೆ (ನೀತಿಮಂ. I, ೩೬೨). ೨. ಬೆರಗು ; ಆಶ್ಚರ್ಯ ; ವಿಸ್ಮಯ : "ತಲ್ಲಣಂ ತಳವೆಳಗು ಬಕ್ಕುಡಿ ಬೆಗಡಳುರ್ಕೆ . . . ಬಿಗುರ್ ಬೆಬ್ಬಳಂ ತಳಮಳವೆನಲ್ಕೆ ಸೊಲ್ಲಿಪುದು ಬೆಱಗಪ್ಪ ಭಾವದೊಳು" (ಶಬ್ಧಮಂ. ೫೦) : "ತಳವೆಳಗೆನಲ್ ಬೆರಗೆನಿಕ್ಕು" (ಕಶರ. ೧೨೪): ನೋಡಲ್ಕಮ್ಮದೆ ಕಣ್ಮುಚ್ಚಿ ತಳವೆಳಗಾಗುತೆ ನೋಡಿದಳ್ (ಉದ್ಭದೇ. ೩-೯). ೩. ಭಾವೋದ್ವೇಗ ; ಉದ್ರೇಕ : "ತಳವೆಳಗೆಂದೆನ್ನಲದುವೆ ನಿಬ್ಬರಮುಕ್ಕುಂ" (ಕವಿಕಂ. ೨೪೩) : ಕಳಭಾಷಿಣಿ ನಿನಗಾಂ ನೆಱೆ ತಿಳಿವಂತಿರಲೇನನುಸಿರ್ವೆನಾತನ ಕೆಯ್ತುಂಗಳನವನೆನುತುಂ ಜಾನಿಸಿ ತಳವೆಳಗಿಂ ಜರಿಯುತಿರ್ದು ಮತ್ತಿಂತೆಂದಳ್ (ಕುಸುಮಾ. ೧೨-೧೫೨). ೪. ಕಳವಳ ; ಚಿಂತೆ ; ವ್ಯಾಕುಲತೆ. 'ತಳವೆಳಗಾಗು' ಪರಾ. ೫. ಭ್ರಮೆ ; ಭ್ರಾಂತಿ. 'ತಳವೆಳಗಾಗು' ಪರಾ. ೬. ತಲೆಕೆಳಗು ; ಅಸ್ತವ್ಯಸ್ತತೆ : ಮೂಗಿನ ಕಪ್ಪುಪಣೆತೆಯ ಕತ್ತಲೆ ಜ್ಯೋತಿಯೆಂಬರು . . . ಮಾಣಿಕ್ಯ ಸ್ವಯಂಜ್ಯೋತಿ ಜ್ಞಾನದ ಪ್ರಭೆ ಮಹಾಲಿಂಗ ಗಜೇಶ್ವರನ ನೆನೆವ ಮನವು ಕಾಪಳ ತಳವೆಳಗು ಭೋ (ಸರ್ವವ. ೬೫-೩೯೭); "ಬುಡಮೇಲು, ತಳವೆಳಗು, ಅಡಿಮೇಗು, ತಲೆಕೆಳಗು, ತಿರುವು ಮುರುವು, ಅದಲುಬದಲು" (ಕಂನುಹು. ೮೮). [<ತಳಮಳಗು₁]

**ತಳವೆಳಗು₂** (ನಾ). ಸಂತ್ತಲಿನ ಪ್ರಕಾಶ (?) : ಒಳಗೆ ಶೋಧಿಸಿ ಹೊಱಗೆ ಶುದ್ಧವಿಸಿ ಒಳಹೊಱಗೆಂಬ ಉಭಯಶಂಕೆಯು ಕಳೆದು ಸ್ಫಟಿಕದ ಶಲಾಕೆಯಂತೆ ತಳವೆಳಗುಮಾಡಿ (ಮಹಾದೇ. ಬ. ೨೧-೩೭). [ತಳ ? + ಬೆಳಗು₂]

**ತಳವೆಳಗುಗೊಳ್** (ಕ್ರಿ). ೧. ದಿಗಿಲಂಗೊಳ್ಳು ; ಬೆದರು : ಬಾಣವೃಷ್ಟಿಯ ಬಹಳತೆಯು ಸರಿ ಕಾಣಿಸಿತು ಕಪಿಯೂಥನಾಥರ ತಾಣದಲಿ ತಳವೆಳಗುಗೊಳೆ ತರಣಿಜ ಸವಿರಾರಜರು (ತೊರರಾ. ೬-೩೮-೪). ೨. ಬೆರಗಾಗು; ಆಶ್ಚರ್ಯಪಡು; ವಿಸ್ಮಿತನಾಗು : ಅದು ಬಳಿಕ . . . ಮೃದು ಕರಾಂಜಲಿಯರ್ಘ್ಯದುದಕವ ಮಧ್ಯದೊಳೆ ಬೀಳೆ ಕೆದರಿ ಹರಿ ಕೋಪಿಸುತ ಲಂಬರಸದನವನು ಮಿಗೆ ನೋಡಿ ಕಾಣದೆ ಹೃದಯದೊಳ್ ತಳವೆಳಗುಗೊಂಡಾಶ್ಚರ್ಯಮನನಾದ (ಕೋಗಯು. ೫-೮). [ತಳವೆಳಗು₁ + ಕೊಳ್₁]

**ತಳವೃತಿ** 'ತಳವಿತ್ತಿ' ನೋ.

**ತಳಸಂಕಲೆ** (ನಾ). =ತಳಹಗ್ಗ : ಬಲವೊರಜೆ ಎಡವೊರಜೆ ಬೆನ್ನಿನ ಮಿಳಿಯ ಜಾಳಿಗೆವೊರಜೆ ತಳಸಂಕಲೆಯ ತೊಡರಂಕಣಿಯ ಕೊಂಡೆಯ ಪಕ್ಕಗಂಟೆಗಳ . . . ಬಿಗಿದರು (ಕುಮ್ಯಾದ್ರೋ. ೩-೨) : ಬೆಳಗುವ ದಂತ ಪೊಂಬೊರಜೆ ತಳಸಂಕಲೆ ತೊಡರುಲಿವ ಪೊಕ್ಕಳಗಂಟೆಯೆಳಸಲೆಯ್ತಂದುದಾ ಹಸ್ತಿ (ಕುರಾಸಾಂ. ೭-೮೯) ; ಬಿಗಿದು ಗುಳವನು ತಳಸಂಕಲೆಯನಳವಡಿಸಿ ಕರಿಯುನೇಱೆ ಕಲಿಜೋದರೆಳ್ತಂದರಂದು (ಕುರಾಸಾಂ. ೧೧-೨೫).

[ ತಳ (= ತಲ) + ಸಂಕಲೆ ]

**ತಳಸಂಚ** 'ತಳಸಂಚು' ನೋ.

**ತಳಸಂಚು, ತಳಸಂಚ** (ನಾ). ೧. ಖಡ್ಗಯುದ್ಧದ ಒಂದು ವರಸೆ ; ಕೆಳಮಟ್ಟದಲ್ಲಿ ಕತ್ತಿಯನ್ನು ಬೀಸುವುದು : ತಳಸಂಚು ಮೇಲ್ಸಂಚು ಓಂಕೋರೆ ಮುಂಕೋರೆ ಬಲಸನ್ನೆಯೆಡದ ಸನ್ನೆಯೊಳು ಅಲಗ ನೀಡಿದರಲಗಿನೊಳಾಂತು ನೆಗೆದು ವ್ಯೆ ಹೊಳೆದು ತಪ್ಪಿಸಿದವೆಲ್ಲವನು (ಭರಚ. ೬೩-೨೭). ೨. [ಸಂಗೀತ] ವಾದ್ಯವನ್ನು ನುಡಿಸುವುದರಲ್ಲಿ ಒಂದು ಗತ್ತು ; ಮಂದ್ರದಲ್ಲಿ ತೋರಿಸುವ ಚಮತ್ಕಾರ: ತಳಸಂಚು ಮಧ್ಯಸಂಚುಪ್ಪರದ ಸಂಚುಗಳನಳವಡಿಸಿ ಸಂಯೋಗ ವಿಪ್ರಯೋಗಾಕ್ರ[illegible] ಸ್ವರ ಸ್ವರ ಜನಿತವಾದ ವಿವಿಧ ವಿಧ ಪಾರಂಗಳಂ ([illegible]). ೩. [ನಾಟ್ಯ] ನೃತ್ಯದ ಒಂದು ಗತಿ : ತಳಸಂಚು ಮಧ್ಯ[illegible] ಮಂಜುಳವಾಗೆ ನಿಡುಗಣ್ಣ ಥಾಳವಾಳವನಾಡಲೆಳೆಮಿಂಚುವೋರಣದಿ ಳಾಯದ ವಿಡಾಯಿಯಂದಂಬಡೆಯೆ . . . ದೇಶಿಯನಾಡಿದಳು ಪರವೆನಾಚಿ (ಸೌಂದಪು. ೮-೧೦) : "ನಾಟ್ಯದ ತಾಳದಲ್ಲಿ ಮೊದಲನೆಯ ಕಾಲ" (ಪಟ್ಟನಿ). **ತಳಸಂಚ :** ೧. ವಿಾಱೆ ತಳಸಂಚದೊಳು ಮೊನೆಯನು ತೋಱೆ ತಿರುಪಿನೊಳಡಿದು ಕಳಚುವರೇಱುಗಾಣದೆ ಮಧ್ಯಸಂಚಕೆ ಸಿಲುಕಿ ಕೈಮಾಡಿ . . . ದಂಡೆಯನ್ನೆತ್ತಿ ಕಾದಿತು ಸುರಗಿಯತಿಬಲರು (ಕುಮ್ಯಾಭೀ. ೪-೨೨). ೪. (?): ಭರದ ಮುಷ್ಟಿಯ ಬಿಲ್ಲೊಳಡಗಿತೊ ಶರೀರವೆನೆ ತಳಸಂಚದೊರ್ಮೆಯ್ಯರವಿನಿಂ ನೆಱೆ ನಿಂದು ಕೂರ್ಗಣೆವಿಳುಕನಾಯತದೀ ತಿರುವಿನೆಡೆಯೊಳು ತೊಡಚಿ (ಜಾಳ್ಯಭಾ. ೫-೨೭).

[ ತಳ (=ತಲ) + ಸಂಚು ]

**ತಳಸಮಸ್ತ** (ನಾ). ಊರಿನ ಪ್ರಮುಖ ಜನ ; ಎಲ್ಲ ಸಮಸ್ತರು : ಹತ್ತಿಯ ಸೋಬಿಸೆಟ್ಟಿ ಮಗಂ × × × ಱೆ ಬೀರಿಸೆಟ್ಟಿ ಇನ್ತಿವರ್ಮುಖ್ಯಮಾಗಿ ತಳಸಮಸ್ತವಿರ್ದ್ದು (ಸೌಇಇ. XI-II, ೧೯೮-೯ ; 1123).

[ ತಳ (=ತಲ) + ಸಮಸ್ತ ]

**ತಳಸಾರ್** (ಕ್ರಿ). ತಳವನ್ನು ಸೇರು ; ತಳಮುಟ್ಟು : ತಳಸಾರ್ದುದು ಪಾಲ್ಗಡಲೀ ಮಳರಹಿತನ ಮಜ್ಜನಕ್ಕೆ ಸಲಿಲಂ ಕಲಿಲಂಗಳಿವಾದುವೆಂದು ದೇವರ್ಕಳನಿಂದ್ರಂ ಹಸ್ತಸಂಜ್ಞೆಯಿಂ ಬಾರಿಸಿದಂ (ಅನಂಪು. ೫-೭೨).

[ ತಳ (= ತಲ) + ಸಾರ್₁ ]

**ತಳಸಾರಿಕೆ** 'ತಳಸಾರಿಗೆ' ನೋ.

**ತಳಸಾರಿಗೆ, ತಳಸಾರಿಕೆ** (ನಾ). ಒಂದು ಬಗೆಯ ತೆರಿಗೆ; ಸ್ಥಳದ ತೆರಿಗೆ : ಬಡಗಿಕೂಂಟೆಯ ಮನೆದೆಱೆ ಹೊಲದೆಱೆ ಸಾದಂ ಬಣ್ಣಿಗೆ ಬಳಂಚೆಯ ತೆಱೆ ತಳಸಾರಿಗೆ ಕಾಣಿಕೆ ಕವಣಾಯ ದಣ್ಣದಾಯವಿನ್ತಿನಿತುಮಂ . . . ಕೊಟ್ಟರ್ (ಸೌಇಇ. IX-I, ೧೭೨-೧೮ : 1106) : ಅಂಗಡಿ ೧ ಅದಕ್ಕೆ ತಳಸಾರಿಗೆ ದನಬಳ ಕೊಟ ಹ[೧] ಸವಮಳೆ[ಗ](ಸೌಇಇ. XV, ೨೩೨-೧೦ : 1206); ಯಿಬ್ಬಡಗ ೬ ಕಯ್ಯನೀಳದ ಅಂಗಡಿ ೧ ಅದರ ತಳಸಾರಿಗೆಗೆ ಸ × × ಕೊಟ ಹ ೧(ಕಇ. V, ೬೭-೧೦ : 1206) ; ಸುಂಕಾಧಿಕಾರಿ ಭಿಲ್ಲವನಾಯಕಂ ಮಲ್ಲಿಕಾರ್ಜುನ ದೇವರಿಗೆ ಧೂಪದೀಪಕ್ಕೆ ಮೊಲದ ಕಲ್ಲೊಳು ಸುಂಕ ತಳಸಾರಿಗೆ . . . ಧಾರಾಪೂರ್ವ್ವಕವಾಗಿ ಮಾಡಿದರು (ಸೌಇಇ. IX-I, ೩೭೪-೨೦ ; 1210). **ತಳಸಾರಿಕೆ :** ಒಳವಾಱು ಹೊಱವಾಱು ತಳಸಾರಿಕೆ ಅಲೆದೆರೆ ತೋಟದೆರೆ ಯೇನುಳ್ಳದನೂ . . . ಕೊಟ್ಟೆವಾಗಿ (ಎಕ. VIII, ತೀರ್ಥಹ. ೧೩೦-೪೪; 1404). [ ತಳ (= ತಲ) + ಸಾರಿಗೆ₁ ]

**ತಳಸಿಂಗ** (ನಾ). ಒಂದು ಬಗೆಯ ಔಷಧಿ ಮೂಲಿಕೆ (?) : ದೇವದಾರಿ ಬೇರು, ಭೂದೇವಿಬೇರು, ತೀಟಕೋಗಿಲಬೇರು, ತಳಸಿಂಗ, ಈಪತ್ರೆ ಇವು ಒಂದೊಂದೂ ೫ ಗ ತೂಕ (ಸಕವ್ಯ. ಪು. ೪೫೨). [ ? ]

**ತಳಸುಂಕ** (ನಾ). ಭೂಮಿಕಂದಾಯ : ಸಂತೆಯ ತಳಸುಂಕ ವಸೂಲಿ ಮಾಡುತ್ತಾರೆ (ರೂ). [ ತಳ (= ತಲ) + ಸುಂಕ ]

**ತಳಸೋಸು** (ಕ್ರಿ). ೧. ಬಾವಿ, ಕೊಳ ಮೊದಲಾದುವುಗಳ ತಳದ ಹೂಳನ್ನು ತೆಗೆ. ೨. ತಳದವರೆಗೂ ಬೆದಕಿ ಶೋಧನೆ ಮಾಡು ; ಸಂಪೂರ್ಣವಾಗಿ ನೋಡು ; ಶೋಧಿಸು : [illegible] ಸಂಸ್ಕೃತಿಯು ದ್ರಾವಿಡರದಿದ್ದಪ್ಪಾದರೆ ಕನ್ನಡವನ್ನು ಇನ್ನೂ ತಳಸೋಸಿ ನೋಡುವ ಅಗತ್ಯವು ಬಹಳೇ ಇದೆ (ಸಾಹಿಸಂ. ೧೪೩) : ತಮವನೆಲ್ಲ ತಳಸೋಸಿ ಮಾಡು ಸ್ಥಿರಶಾಂತಿ ಕಾಂತಿಯಾಗಿ (ಹೃದಸ. ೬೨-೯).

[ ತಳ (= ತಲ) + ಸೋಸು ]

**ತಳಹಗ್ಗ** (ನಾ). ಆನೆಗೆ ಕಟ್ಟುವ ಹಗ್ಗ,-ಸರಪಳಿ : ತಳಕ್ಕೆ-ಕರತಳ, ಕೆಂವಳ, ತಟ್ಟತಳ, ತಳಹಗ್ಗ, ಧರಣೀತಳ-ಎಂಬಂತೆ (ಶಮದ. ೨೯೮ ಪ್ರಯೋ); ತಳಹಗ್ಗಮೆಂದು ಕರತಳ ಪಾದತಳಮುಮೆಂದು . . . ತತ್ಸಮಕ ಕನ್ನಡ ಸಕ್ಕದಂಗಳಲಿ ಕ್ರಮದಿಂದ ತೋರ್ಪುದಾಹರಣೆಯಕ್ಕುಂ (ಕಬ್ಬಿಕೈ. ೯೭). 'ತಳಸಂಕಲೆ' ಪರಾ. [ ತಳ (=ತಲ) + ಹಗ್ಗ ]

**ತಳಹಚ್ಚು** (ಕ್ರಿ). ತಳಕ್ಕೆ ಇಳಿಸು ; ತಳಕಾಣುವಂತೆ ಮಾಡು ; ಬರಿದು ಮಾಡು: ಅನ್ನ-ರಘುಣಕ ಮಾಡಿದೆ. ಮೂವರೂ ಅದನ್ನು ತಳಹಚ್ಚಿ ಮುಗಿಸಿದವು (ಸ್ವತಿಚಿ. ೨೫೭). [ ತಳ (=ತಲ) + ಹಚ್ಚು$_1$ ]

**ತಳಹತ್ತ, ತಳಹತ್ತು$_2$** (ನಾ). ಮಲ್ಲಯುದ್ಧದ ಒಂದು ಪಟ್ಟು : ಕರವಳಯ ತಳಹತ್ತ ಡೊಕ್ಕರ ಶಿರವ ಧಣುಧಣುವಟ್ಟತಳ ಪೊಪ್ಪರ ಮುವಂಗುಲ ಕಂದ ಡೊಕ್ಕರ ತೋರಪತ್ತದಲಿ . . . ತೋಱಿದರು ಕೌಶಲವ (ಕುವ್ಯಾಅ. ೬-೨೯) : ಕರವಲಯಕೋರೊರ್ವ್ವ ತಳಹತ್ತಕೋರೊರ್ವ್ವ ಸರಿಸ ಮುಂಕಡಕೊರ್ವ್ವ . . . ಹರಿ ಕಮಲಭವರೊದಗಿದರ್ (ಡಬಪು. ೧೬-೩೯) ; ತಳಹತ್ತ ಡೊಕ್ಕರ ಲವಣ ಲಾಗು ಕರವಳಯದಿಂದ (ಶರ್ಕಕಾ. ೪-೩೪). **ತಳಹತ್ತು$_2$** : ಅಂತರಿಪ ನರಸಿಂಗ ಪಟ್ಟಸುಮಂತಡರೆ ತಳಹತ್ತು [ಪಾಠಾಂ. ತ್ರ] ಗಳಹತ್ತಂ ತುಳಿಲವಿಂದಾಣದಲಿ ಹರಿ ಕಾದಿ ಬಳಲಿಸಿದಾ (ಸಾಳ್ವಭಾ. ೨೨-೬೨). 'ಗಳಹತ್ತ', 'ತೋರಹತ್ತ' ಪರಾ.

[ < ಸಂ. ತಲಹಸ್ತ ? ]

**ತಳಹತ್ತು$_1$** (ಕ್ರಿ). ೧. ಕೆಳಮಟ್ಟಕ್ಕೆ ಇಳಿ ; ತಗ್ಗು : ಗಂಗಾಪ್ರವಾಹದಂಥ ಆಕೆಯ ವಾಗ್ಧೋರಣೆಯಲ್ಲಿ ಮಿಕ್ಕವರ ಪ್ರಸಂಗವು ತಳಹತ್ತಿ ಹೋಗುತ್ತಿದ್ದಿತು (ಲಕ್ಷ್ಮೀಪ್ರ. ೧೨). ೨. ನೆಲಸು; ಇರು : ಅವನು ಎಲ್ಲೂ ತಳಹತ್ತಲಿಲ್ಲ (ರೂಢಿ). ೩. ತಳಕಾಣು ; ನೆಲೆಯನ್ನು ತಿಳಿ : ಎಷ್ಟೇ ಆದರೂ ಅವನ ಗುಟ್ಟು ತಳಹತ್ತುವುದು ಕಷ್ಟ (ರೂಢಿ). ೪. (ಬೇಯಿಸುವಾಗ) ತಳಕ್ಕೆ ಅಂಟಿಕೊಳ್ಳು ; ತಳಹಿಡಿ ; ಸೀಯು : ಕಷಾಯದಲ್ಲಿ ಕದಡಿ ಶೋಧಿಸಿ ೩೦ ಹಲ ಬೆಲ್ಲ, ತುಪ್ಪ ೨೦ ಪಲ ಸಹ ಹನಿಸಿ ತಳಹತ್ತದ ಹಾಗ ಸಟ್ಟುಗದಿಂ ತೊಳಸಿ ಲೇಹ್ಯಪಕ್ವದಿಂದಿಳುಹಿ (ಸಕವೈ. ೨೯೭).

[ ತಳ (= ತಲ) + ಹತ್ತು$_1$ (< ಪತ್ತು$_1$) ]

**ತಳಹತ್ತು$_2$** 'ತಳಹತ್ತ' ನೋ.

**ತಳಹದಿ** (ನಾ). ತಳಪಾಯ ; ಅಸ್ತಿವಾರ ; ಬುನಾದಿ : ಗೋಡೆಯನ್ನು ಕಟ್ಟುವ ಮೊದಲು ತಳಹದಿಯು ಬೇಕಲ್ಲವೆ (ಹೂಬಿಸಿ. ೬೩) : ಕಟ್ಟಲಿರುವ ಗಾನಮಂದಿರಕ್ಕೆ ಈ ಆಲಾಪವೇ ತಳಹದಿ (ಅಬೋಲೀ. ೧೬೫) ; ಜಗತ್ತೆಲ್ಲ ಈಶ್ವರಾಂಶ ಎಂಬ ತತ್ವಜ್ಞಾನ ಮಾತ್ರ ನಿಜವಾದ ವಿಶ್ವಪ್ರೇಮಕ್ಕೆ ತಳಹದಿಯಾಗಬಲ್ಲುದು (ಪುಕ್ವಾರ. ೪೬ ಜೀರಿಕೆ). [ ತಳ (= ತಲ) + ಹದಿ$_2$ ]

**ತಳಹರಿ** (ಕ್ರಿ). ಕೆಳಕ್ಕೆ ಹರಿ (?) : ಎಡೆವಿಡದೆಯೆಡೆಯಾಡುತಿರ್ಪರ ತೊಡಿಗೆಗಳ್ಪಾಟ್ಯಾಡಿಯುದಿರ್ದರಲುಡಿ ಸುರತ್ನಾವಳಿ ಕನಕನಗರೋಹಣಾದ್ರಿಗಳ ನಡುವೆ ಸುರಿದುರುವಳಿಯ ಬಿರುಪೊನಲ್ಗೊಡೆದು ಪರಿದೇಳ್ವಂದು ತಳಹರ [ರಿ]ದೆಡೆಯು ಪುಳಿನ ಪರಳ್ಗಳೆನಿಸಿಹವಾ ಪ್ರಜೂಳಿಯಲಿ (ಮದೇಪು. ೨-೪೦). [ ತಳ (= ತಲ) + ಹರಿ$_2$ (< ಪರಿ$_2$) ]

**ತಳಹಸಿ** (ನಾ). ನೆಲದ ಕೆಳ ಪದರದಲ್ಲಿ ಉಂಟಾಗಿರುವ ತೇವ ; ತಳದವರೆಗೂ ಇರುವ ಹಸಿ : ಮಳೆಯಾಗಿ ಸಾಲಿನಲ್ಲಿ ನೀರು ನಿಂತು ತಂಪಾದರೆ ಹೊಲವು ಚೆನ್ನಾಗಿ ಹಸಿಯಾಗಿ ತಳಹಸಿ ಕೂಡುವುದು (ಕೃಟಿಪ್ರ. ೯೩). [ ತಲ (= ತಳ) + ಹಸಿ$_2$ (< ಪಸಿ$_3$) ]

**ತಳಹಳ, ತಳಹೊಳ** (ನಾ). ೧. ದಿಗಿಲು; ದಿಗ್ಭ್ರಮೆ. 'ತಳಹಳಂಗೊಳ್' ಪರಾ. ೨. ತಳಮಳ ; ಕಳವಳ ; ವ್ಯಾಕುಲತೆ. 'ತಳಹಳಗೊಳ್' ಪರಾ. **ತಳಹೊಳ** : ೨. "ಕ್ಲದ – ವೈಕಲ್ಯೇ, ತಳಹೊಳದೊಳ್" (ಕಾಶಕ್ಕ. ೧೬೬). 'ತಳಹೊಳಗೊಳ್' ಪರಾ.

**ತಳಹಳಂಗೊಳ್, ತಳಹಳಗೊಳ್, ತಳಹೊಳಂಗೊಳ್, ತಳಹೊಳಗೊಳ್** (ಕ್ರಿ). ೧. ಬೆಗಡುಗೊಳ್ಳು ; ದಿಗಿಲುಗೊಳ್ಳು ; ದಿಕ್ಕುತೋಚದಂತಾಗು : ನಿಜಪುರಕೆ ಪೋಪ ದಾರಿ ಆವ ಕಡೆಯೆಂದು ಕಾಣದೆ ತಳಹ[ಪಾಠಾಂ.ಹೊ]ಳಂಗೊಳುತ್ತಾ ವನಾಂತದೊಳು ಮದ್ದಳೆಯ ಹೊಕ್ಕಿಲಿಯಂತೆ . . . ವೈಶ್ಯನಿಕುರುಂಬಮೆಲ್ಲವುಂ ತಬ್ಬಿಬ್ಬುಗೊಂಡುದಾಗ (ಸಮ್ಯಕೌ. ೧೦-೪೦). **ತಳಹಳಗೊಳ್** : ೧. ಕೊಳದೊಳಲರ್ದಬ್ಬದಲರಂ ನಳಿನೇಕ್ಷಣೆ ಮುಱಿವೆನೆಂದು ಪುಗೆ ತೆರೆಪೊಯ್ಲಿಂ ಮುಳುಗುತ್ತೇಳುತೆ ಭಯದಿಂ ತಳಹಳಗೊಳ್ವಂತೆ[ಪಾಠಾಂ. ತಳಮಳಗಾದಂತೆ, ತಳಹೊಳಗೊಳ್ವಂತೆ]ಕಣ್ಗಾದೇಂ ರಂಜಿಸಿತೋ (ರಾಜಶೇ. ೧೦-೪೭). ೨. ತಳಮಳಿಸು; ವ್ಯಾಕುಲಗೊಳ್ಳು : ಅಳಲುತ ಬಳಲುತಂಜುತ ಚಿಂತೆಯಾಂತಳ ತಳಹಳಗೊಳುತ ತಲ್ಲಣಿಸಿ ಕಳವಳಿಸುತ ಕಂಗೆಟ್ಟು ರಂಗಾಯೆಂಬೆಳೆಯಳನು (ಶತಸಾಂ. ೩೪-೮೦). **ತಳಹೊಳಂಗೊಳ್** : ೧. ಮೇಲಿನ 'ತಳಹಳಂಗೊಳ್' ಉಲ್ಲೇಖಕ್ಕೆ ಕೊಟ್ಟಿರುವ 'ಸಮ್ಯಕೌ' ಪ್ರಯೋಗದ ಪಾಠಾಂತರವನ್ನು ನೋಡಿ. **ತಳಹೊಳಗೊಳ್**: ೧. ಜಲಧಿ ಮೇರೆಯ ಮಿಱಿ ಪೆರ್ಚಿ ತಳಹೊಳಗೊಳೆ[ಪಾಠಾಂ. ತಳವಳಗೊಳೆ, ತಳಹೊಳಗಾಗಿ] ತಾರಾಲೋಕ ಭೇರೀಕುಳ ಮೊಳಗಿದುದು ಬೇಗದೊಳು (ಕುರಾಸಾಂ.೧೬-೧೮); ದಳವಾಯಿ ನಂಜರಾಜೇಂದ್ರನ ದಾಳಿನ ಪೊಳಹು ಡವಮಾಮಿಯಬ್ಬರದ ಸುಳಿವ ಕಂಡಾಕ್ಷಣ ಹತ್ತು ಪೌಜೊಂದಾಗಿ ತಳಹೊಳಗೊಂಡುದೇವೇಳ್ಕೆ (ಕಂನವಿ. ೧೬-೫೧). ೨. ಅಳುರ್ವಂಗಜಾಗ್ನಿಯು ತಾಳಲಾಱದೆ ತಳಹೊಳಗೊಳುತಾ ತರಳಾಕ್ಷಿ ತಳುವದಲ್ಲಿಂದೆಳ್ದು . . . ತೊಳಲಿದಳರಮನೆಯೊಳಗೆ (ಕುರಾಸಾಂ. ೨೫-೨೨): ತಳರ್ವಜ್ಜೆ ತಟಪುಟನಿಡುವಾಗ ವಿಟರೆದೆ ತಳಹೊಳಗೊಳುತಿಹುದೊಡನೆ (ಭರಪ. ೧೨-೬೮); ಇಳಿವ ಕಣ್ಣೀರು ಬಾಯ್ಮುದ್ರೆ ತಲೆಗಿಟ್ಟ ಮುಸುಕಿಂದ ಬೀದಿಯೊಳ್ಬರೆ ಕಂಡು ತಳಹೊಳಗೊಂಡಿತು ನಗರ (ಭರಪ. ೭೧-೬). [ ತಳಹಳ + ಕೊಳ್$_1$ ]

**ತಳಹಳಗೊಳ್** 'ತಳಹಳಂಗೊಳ್' ನೋ.

**ತಳಹಿಡಿ** (ಕ್ರಿ). ೧. = ತಳಹತ್ತು ೧ : ಅನ್ನ ತಳಹಿಡಿದಿದೆ (ರೂಢಿ). ೨. (ಜಟ್ಟಿಕಾಳಗದಲ್ಲಿ) ನೆಲಕಚ್ಚು : ನಮ್ಮೂರ ಪೈಲ್ವಾನ ಜದ್ದಿನ ಕುಸ್ತಿಯಲ್ಲಿ ತಳಹಿಡಿದು ಕುಸ್ತಿಯನ್ನು ಸಮಮಾಡಿದ (ರೂಢಿ).

[ ತಳ (= ತಲ) + ಹಿಡಿ$_1$ (< ಪಿಡಿ$_1$) ]

**ತಳಹೊಳ** 'ತಳಹಳ' ನೋ.

**ತಳಹೊಳಂಗೊಳ್** 'ತಳಹಳಂಗೊಳ್' ನೋ.

**ತಳಹೊಳಗ** (ನಾ). ದುಃಖಿಸುವವನು ; ಅಳುವವನು ; ವ್ಯಾಕುಲಪಡುವವನು : "ಕ್ರುಂದಕಃ, ಕ್ರುಂದಮಾನಃ, ಈ ೨ ತಳಹೊಳಗು" (ಕಾಶಕ್ಕ. ೧೪೭). [ ತಳಹೊಳ (<ತಳಹಳ) + – ಗ$_2$ ]

**ತಳಹೊಳಗೊಳ್** 'ತಳಹಳಂಗೊಳ್' ನೋ.

**ತಳಹೊಳಗೊಳಿಸು** (ಕ್ರಿ). ೧. ದಿಗಿಲುಗೊಳಿಸು ; ದಿಗ್ಭ್ರಮೆಗೊಳಿಸು: ಬಳಿಕ ಸಂಗಮದೇವನಿಡೆ ಕಂತುಕ ಕೈದಳಕೆ ಸಿಕ್ಕದೆ ರಿಪುಭಟರ ತಳಹೊಳಗೊಳಿಸಿ ತಳುವದೆಯ್ದಿ ಲಗ್ಗೆಯ ಕಳಕುಳವನು ಮಾಡಿದುದು (ಕುರಾಸಾಂ. ೩೦-೮೫). ೨. ಕ್ಷೋಭೆಗೊಳಗುಮಾಡು: ಪ್ರಳಯಪವನನಂದದಿನೊಂದು ಸುಂಟುರ ಸುಳಿವಾ ಭೈತ್ರವನಿರದೆ ತಳಹೊಳಗೊಳಿಸಿ ಮತ್ತಾ ಕೂಪಕಂಬಮನುಳಿಯದೆ ಮುಱಿದು ಹಾಕಿದುದು (ನೇಮಿಸಂ. ೧೦-೧೮೦).

[ ತಳಹೊಳಗೊಳ್ (<ತಳಹಳಂಗೊಳ್) + – ಇಸು$_3$ ]

**ತಳಹೊಳಿಸು** (ಕ್ರಿ). ತಳಮಳಿಸಂ; ದುಃಖಿಸು; ಅಳು; ವ್ಯಾಕುಲಪಡು: "ಕ್ರುಂದತೇ, ಕ್ರುಂದಯತಿ = ತಳಹೊಳಿಸಿದಪಂ" (ಕಾಶಕ್ಕ. ೧೪೭).

[ ತಳಹೊಳ (<ತಳಹಳ) + – ಇಸು$_3$ ]

**ತಳಱ** 'ತಳವಱ' ನೋ.

**ತಳಱಸುಂಕ** (ನಾ). ಒಂದು ಬಗೆಯ ಸುಂಕ : ತಳವಾರನಿಗೆ ಸಲ್ಲುವ ತೆರಿಗೆ : ಖಂಡಸ್ಫುಟಿತ ಜೀರ್ಣ್ಣೋದ್ಧಾರಕ್ಕೆ ಮತ್ತರೆಂಟು ಪೂದೋಂಟಂ ನಾಲ್ಕು . . . ವಡ್ಡರಾವುಳ ವಡ್ಡಾರ್ದಾನ ತಳಱಸುಂಕಂ ಮೂಂನ್ನಂ (ಎಕ. VII, ಶಿಕಾರಿ. ೧೩೭–೫೪ ; 1114).

[ ತಳಱ (<ತಳವಱ) + ಸುಂಕ ]

**ತಳಾತಳ** 'ತಲಾತಲ' ನೋ.

**ತಳಾತಳಲೋಕ** (ನಾ). = ತಲಾತಲ ೧ : ಜಾನುವಿನಲ್ಲಿ ಮಹಾತಳಲೋಕ ಉರುವಿನಲ್ಲಿ ತಳಾತಳಲೋಕ (ಅಖಂಡೇ. ೧೪೧–೧೫೪); ಕಟಿ–ಕಟಿಪ್ರದೇಶವು, ತಳಾತಳಂ–ತಳಾತಳಲೋಕವೆಂದು, ಪ್ರೋಕ್ತಂ–ಹೇಳಲ್ಪಟ್ಟಿತು (ಉತ್ತ.ಟೀ. ४೧–೫). [ ತಳಾತಳ (= ತಲಾತಲ) + ಲೋಕ ]

**ತಳಾಮಳಕ** 'ತಲಾಮಲಕ' ನೋ.

**ತಳಾಯ**(ನಾ). ಮಲ್ಲಯುದ್ಧದಲ್ಲಿ ಒಂದು ಭಂಗಿ,–ವರಸೆ (?): ತಱಹು ಗೊಂಡು ತಳಾಯದಲಿ[ಪಾಠಾಂ. ಹಕೊಂಡು ತಳಾಯುಧದಿ, ಹುಗೊಂಡು ತಳಾಯತದಿ]ಬೊಬ್ಬಿಱಿದು ಬಾಹುವ್ವಳಿಸಿ ನಿಂದಿದರಱಿಚಿ ನೆಲಕುಕ್ಕುರಿಸೆ ಕರಿ ಕಮರಾಹಿನಾಯಕರು (ಕೊರರಾ. ೬-೧೭–೩೭).

[ ತಳ (= ತಲ) + ಆಯ₇ ]

**ತಳಾರ₁** 'ತಳವಱ' ನೋ.

**ತಳಾರ₂** (ನಾ). ೧. ತಡ ; ನಿಧಾನ ; ವಿಳಂಬ : ಇದಕ್ಕಿಂತ ಮುಂಚೆ ಬಂದು ಏನು ಮಾಡಬೇಕಾಗಿತ್ತಿಲ್ಲಿ ಎಂದು ತಳಾರದಲ್ಲಿಯೇ ಬಂದೋ (ಜಂಗಾಳ್ಕೆ. ೨೯೮) ; ನೋಡಿಕೊಂಡು ಬನ್ನಿ ತಳಾರದಲ್ಲಿ ಎಂದು ಉತ್ತರವಿತ್ತ (ದಾಗಿಡ. ೨೦೩) ; ತಳಾರ ಮಾಡಬಾರ್ದು ಬುದ್ದಿ (ಶಕಾರ. ೧೫೧). ೨. ವಿರಾಮ : ಒಂದಿನ ಆ ಸೊಗಸು, ಆ ತಳಾರ, ಆ ಹಾಸ್ಯ, ಗೇಲಿ, ಇನ್ನೊಬ್ಬನ ಮನೆಯ ಮದುವೆ ತನ್ನ ಮನೆಯ ಮದುವೆ ಎಂಬ ಭಾವನೆ ಇಲ್ಲವೇ ಇಲ್ಲ (ನನ್ನೂರು. ೩೧೭). [ <ತಳರ್ ]

**ತಳಾರಗೋಲ್** (ನಾ). ತಳವಾರನು ಗಸ್ತು ತಿರುಗುವಾಗ ನೆಲಕ್ಕೆ ಕುಟ್ಟುವ ಕೋಲು : ಸಬಳಗೆಜ್ಜೆಗಳ ತಳಾರಗೋಲ ಗಗ್ಗರಿಗಳ ಬಾಜನೆ (ಮಂತ್ರಶೆ. ३೦–೬). [ ತಳಾರ₁ (<ತಳವಱ) + ಕೋಲ್₁ ]

**ತಳಾರಿ** 'ತಳವಱ' ನೋ.

**ತಳಾರಿಕೆ** 'ತಳವಱಿಕೆ' ನೋ.

**ತಳಾರಿಸು** (ಕ್ರಿ). ವಿರಮಿಸು; ವಿಶ್ರಾಂತಿ ತೆಗೆದುಕೊಳ್ಳು : ಅವಳೀಗಾಪ್ಲೂ ತಳಾರಿಸಿಕೋತಾಳೆ ಅಂತೀರ. ಇಲ್ಲ. ಆವಾಗಲೆ ಕಣಜದ ಕಡೆಗೆ ಹೋಗ್ತಾಳೆ (ಪುನರು. ४೭೭). [ ತಳಾರ₂ + – ಇಸು₃ ]

**ತಳಾಲೆ** 'ತಾಳೋಲೆ' ನೋ.

**ತಳಾಱ** 'ತಳವಱ' ನೋ.

**ತಳಾಱಗೂಲಿ** (ನಾ). = ತಳಱಸುಂಕ : ಸೋವಗಾವುಣ್ಡಂ ವೆರ್ಗ್ಗಡೆ ಸೋವಯ್ಯ[ನ]ೃಱುವಗರ್ಗ್ಗವುಣ್ಡುಗಳ್ಗೆಟ್ಟು ಮನೆಯ ಸಾಮ್ಯದೊಳ್ ಬಿಟ್ಟ ಮರ್ನ್ನಣೆಯೆನ್ತೆನ್ದೊಡೆ ಮಸ್ಸೆಯದೆಱೆ ಅವಸರದಾಯ ಪೊ[ಗೆ] ಪೊಗೆ ತಳಾಱಗೂಲಿ (ಸೌಇಇ. XI-i, ೭೫-೨೧ : 1042) ; ಬೆಳಗೊಡೆ ಬಾಗಿಲು ಜೋಳ ತಳಾಱಗೂಲಿ ಅಸತನ್ನಾಯ (ದೊಂಕಶಾ. ೧೯३೦, ದಾಗವಾಡಿ. ೧೦३–४४ ; 1165).

[ ತಳಾಱ (<ತಳವಱ) + ಕೂಲಿ₁ ]

**ತಳಾಱಗೆಯಿ** (ನಾ). ತಳವಾರನ ಜೀವಿತಕ್ಕಾಗಿ ಕೊಟ್ಟ ಗದ್ದೆ : ಅಂಜಗ ಗೆಯಿ ಮತ್ತ ೮ ತಳಾಱಗೆಯಿ ಮತ್ತ ೧೨ ಅಂತಿನಿತುಮಂ ಸ್ವಧರ್ಮದಿಂ ಪ್ರತಿಪಾಳಿಪ್ಪರ್ (ಸೌಇಇ. IX-i, ೭४–೮ ; 981).

[ ತಳಾಱ (<ತಳವಱ) + ಕೆಯಿ (<ಕೆಯ್₄) ]

**ತಳಾಱಿಕೆ** 'ತಳವಱಿಕೆ' ನೋ.

**ತಳಾಱಿಕೆದಾಯ** (ನಾ). [illegible] ಶ್ರೀಮತು ಹಟ್ಟಗಾಱ ಕಡುಂಬರ ಕಾಡೆಯನಾಯಕನುಮಾವರ ಮಾಮ ಸೋವೆಯನಾಯಕನುಂ ತಳಾಱಿಕೆಯಾಯದಲ್ಲಿ ಶ್ರೀಮರುಳೇಶದೇವರ ನನ್ದಾದೀವಿಗೆಗೆ ಡೊಂಕಿವಣ ಮಾನೆಣ್ಣೆ ಸಹಿತಂ ಬಿಟ್ಟ ಗಾಣವೊಂದು. . . ತಳಾಱಿಕೆಯಾಯದೊಳಗೆ ಕೊಟ್ಟು ಸಧರ್ಮ್ಮದಿಂ ಪ್ರತಿಪಾಳಿಸಿ ನಡಸುವರು (ಕಇ. II, ೧೦–೩೭ ; 1181). [ ತಳಾಱಿಕೆ (<ತಳವಱಿಕೆ) + ಆಯ₇ ]

**ತಳಾಱು** (ನಾ). ೧. [illegible] ಮಹಾರಾಜಙ್ಗೆ ಚಾತೆಯಪರಸಿನ × × ಕಣ್ಡ ಕೊಟ್ಟ ಱಾಮಡಿಯ ತಳಾಱು ಮಿಣ್ಡಪೋದಿಯ ಬಿಳ್ಳಯ ತಲೆದ × × ಗಾರವುಂವರ್ × × (ಎಕ. X, ಗೌರಿಬಿ. ೭३-४ ; 900). ೨. ತಳವಾರನ ವೃತ್ತಿ,–ಕೆಲಸ : 'ತಳಾಱುಗೆಯ್' ಪರಾ. ३. = ತಳಱಸುಂಕ (?): ಉಗುರವೂರ [illegible] ಬಿಟ್ಟರ್ ತಳಾಱಿನೊಳು ದೇವರ್ಗ್ಗೆ ಬಿಟ್ಟ ಗದ್ಯಾ ೧ (ಸೌಇಇ. XI-ii, ೧४೫–३ ; 1198). [ ತಳಾಱ (<ತಳವಱ)₊ – ಉ₄ ]

**ತಳಾಱುಗೆಯ್** (ಕ್ರಿ). ತಳವಾರನ ಕೆಲಸವನ್ನು ಮಾಡು ; ಕಾವಲು ಮಾಡು : ಮಗನೆ ನೀನೆನ್ನ ತಳಾಱು[ಪಾಠಾಂ. ನಿನ್ನನೆನ್ನ ತಳಾಱಿಕೆ] ಗೆಯ್ವುದು ಕಳ್ದೊಡೆ ನಿನ್ನಂ . . . ದಂಡಿಸದಾಗಳೇನಾಯ್ತು (ವಡ್ಡಾರಾ. ೧३೯–೯) ; ಆನುಮಿಾ ಪೊಟಲೊಳ್ ತಳಾಱುಗೆಯ್ವೆಂ [ಪಾಠಾಂ. ಱಸೆಂ] (ವಡ್ಡಾರಾ. ೧३೯–೧೮). [ ತಳಾಱು + ಕೆಯ್₁ ]

**ತಳಿ₁, ತಳ್ಕೆ₂** (ಕ್ರಿ). ೧. (ನೀರನ್ನು) ಚಿಮುಕಿಸು ; [illegible] ; [illegible] ; ಸೇಚನಮಾಡು : "ತಳಿ–ಸೇಚನೇ(ಚಿಮುಕಿಸು), ಸೇತ್ರ್ ಚ (ಸತ್ರ) ಸ್ಥೂಲದಾರೌ ಱಟಿಂ(ತಟಿ)" (ಶಮುಧಾ); ನಾನಾಪ್ರಕಾರದ ಯಂತ್ರಂಗಳಿಂದಂ ಜೀರ್ಣಟಿಗಳಿಂದಂ ತಳಿಯುತ್ತುಂ [illegible] . . . ಆಡುತ್ತಿರ್ಪನ್ನೆಗಂ (ವಡ್ಡಾರಾ. ೧३೭–३) ; ಪದನಱಿದು ತಳಿದ [illegible] (ಆದಿಪು. ४–४೧೮); ಬಟಿಲ್ದರ ಮೊಗದೊಳ್ ನೀರಂ ತಳಿದು ಬೀಸಿ ಚೇತರಿಸಿದಾಗಳ್ (ಧರ್ಮಾಮೃ. ೧೦–೮೭) ; ಯುವತಿಯರು ತಳಿವ ಪನ್ನೀರ ಮಂಜಿಂಗೆ (ಹದಕಾ. ३–೬३) ; ಅಡಿಗಡಿಗುತ್ಸವದೆ ತಳಿವ ಪಟವಾಸಚಯಂ (ಪುಷ್ಪಪು. ೦३–೧೮) ; [illegible] (ಕುವ್ಯಾಕ. ೧–೧೧) ; ಬಗೆಯೊಳೊಗೆದ ಜೇಟವಗೆಗೆ [illegible]ವಂತೆ ಮೃಗನೇತ್ರೆಯರು ಪಥಿಕರ್ಗೆ ನಗುತ ನೀಱಿರೆವುತಿಹರು (ಕುರಾಸಾಂ. ೨–४೭). ೨. ಎರಚು ; ಚೆಲ್ಲು ; ಉದುರಿಸು : ಅತಿಸಿತಸರ್ಷಪ ಶೇಷಾಕ್ಷತಂಗಳಂ . . . ಪರಸಿ ತಳಿದರ್ (ಸುಕುಮಾ. ೧೧-೬) ; ಡಕ್ಕೆಯ ಮೇಲೆ ತಕ್ಕೆಯ ತಳಿದನು (ಬಸವ. ೭೫೦), [illegible] ಇತ್ತನಟ್ಟಿಯಿಂ (ಲೀಲಾವ. ೫–೭೦) : ನಿಷ್ಪೆ ನೇವಂಗಳ ಜೀರಗೆ ಬೆಲ್ಲಂಗಳಂ ತಳಿದು (ಬಸರ. ४–೧೦४) ; ಚಾರು ಚಂದ್ರಿಕೆಯ ಬೀಜಂಗಳೋ ಚಂದ್ರಂ ಚಕೋರಾವಳಿಗೆ ತಳಿದ ಕುಟುಕುಗಳೊ (ಹದಕಾ. ३–೭೯) ; ಕಚಾವಳಿಗಳಂ ಬಗಿಬಗಿದು ಪುಡಿಗತ್ತುರಿಯನೆಯ್ದೆ ತಳಿದೋರಣಂಗೊಳಿಸಿ [illegible] ಯೊಲಾ (ಕುವ್ಯಾಕ. ೧४–೧೯) ; ಸುರಸತಿಯರಕ್ಷತೆಯ ತಳಿದರು ನರಕ ನಳನೃಪಗೆ (ನಳಚ. ೯–೭४) ; ಏನೇನೋ ಬೋಧಿಸಿ ಮಂಕುಬೂದಿಯನ್ನು ತಳಿದು ಮಾನಸನಂ . . . ಕೊಂಡು ಪೋದಳೆಂದು ರೋದನಂಗೈಯುತ್ತ (ಅರ್ಜಾವಿ. ೨೯–೫). ३. (ಬೀಜವನ್ನು) ಊರು : ಬಿತ್ತು : ನೆಡು :

ಬಗಯೊಳ್ಪೇಟವ ಬೀಜವಮಂ ತಳಿದು ನೀರ್ವೊಯ್ವಂದದಿಂ . . . ಎತ್ತಿ ತಣ್ಗಳಸಮಂ ನೀರ್ವೊಯ್ವುದುಂ (ಮಲ್ಲಿಪು. ೨-೨೯) ; ಪೃಥ್ವಿಯಲ್ಲಿ ಅಪ್ಪು ಸಾರವಿಲ್ಲದಿರೆ ಬೀಜವ ತಳಿಯಲಾಗಿ ಪ್ರತ್ಯಕ್ಷ ಅಂಕುರ ದೃಷ್ಟವಪ್ಪುದೇ (ಸರ್ವವ. ೧೩೭-೭೮೦) ; ಆ ನೆಲದೊಳುಳ್ಳುದೊಮ್ಮನ ಬೀಜವಂ ತಳಿದು (ಇಳರ. ದೇ. ೫೦-೧೧). ೪. ಹರಡು ; ಕೆದರು : ತಲೆಗಳೊಟ್ಟಲ ತೋಳ ಕಡಿಗಳ ತಳಿದ ಖಂಡದ ಕುಣಿವ ಮುಂಡದ ಸುಳಿಯು ರಕುತದ ಕಡಲ ರೌಕುಳವಾಯ್ತು ನಿಮಿಷದಲಿ (ಕುವ್ಯಾಕ. ೧೩-೨೭). ೫. ಥಳಿಸು; ಕುಟ್ಟು; ಹೊಡೆ. 'ಅಕ್ಕಿದಳಿ', 'ತಳಿಸು$_1$' ಪರಾ. ತಳಿ$_2$ : ೧. ಜಳಧಿಗೆ ಜಳಧಿಯ ಜಳಮಂ ತಳೆದಂಜುಳಿಯಿಂದಮರ್ಘ್ಯಮಿೂವಂತೆ (ವರ್ಧಪು. ೦೪-೯೭); ಉದಕವನು ತಳಿಯಲಸವಸದಿಂದ ಅಡಪಚ್ಚೆಯೆಂದೇಳೆ (ಪ್ರಾಭರಾ. ೨-೨೯).

ತಳಿಯುಪಡು=ಚಿಮುಕಿಸಲ್ಪಡು ; ಸುರಿಯಲ್ಪಡು : ಸಂಸಿತ್ರೋ-ತಳಿಯುಪಟ್ರೊನಾಗಿ (ಪದ್ಮಾರಾ. ೦೦೬-೭).

[ ದೇ.॥ ತಮಿ. ಮಲ. ತಳಿ ; ತುಳು. ತಳಿಪು, ತಲಿಪು; ಕೊಡ. ತಳಿ ]

ತಳಿ$_2$, ಚಳಿ$_3$, ಚಳೆ$_1$, ಥಳಿ, ದಳಿ$_1$ (ನಾ). ಸಿಂಪಡಿಸಂವುದಂ ; ನೆಲ ಗುಡಿಸಿದ ನಂತರ ನೀರನ್ನು ಚೆಲ್ಲುವುದು ; ಚಳೆಯು ; ಸೇಚನ : ಕಲ್ಯಾಣಿಯು ಅದೇ ಸಮಯಕ್ಕೆ ಎದ್ದು ಹೊಸತಿಲು ಸಾರಿಸಿ, ಬಾಗಿಲ ಮುಂದೆ ತಳಿ ಹಾಕಿ . . . ಒಳಗೆ ಹೋದಳೆಂದರೆ ಹೊರಗೆ ಬರುತ್ತಿರಲಿಲ್ಲ (ಅಪವಾ. ೩೦). ಚಳಿ$_3$ : ಹಾದಿಯ ಉಡುಗಿಸಿ ಹಾಲ ಚಳಿಯು ಕೊಟ್ಟು (ಲೋಕಗೀ. ೩೫). 'ಚಳಿಕೊಡು' ಪರಾ. ಚಳೆ$_1$ : ಪನ್ನೀರ ಚಳೆಯಿಂ ಕತ್ತುರಿಯ ಸಾರಣೆಯಿಂ (ಹಮ್ಮೀರ. ೨-೫೫ ವ) ; ಚಳೆಯನುರೆ ಚಲ್ಲುವವು ಬಗ್ಗವುರಿಗಳು (ನವಮೋ. ೬-೧೦) ; ಭೋಗಿಗಳು ಪನ್ನೀರಿನ ಚಳೆಯನ್ನು ಬಯಸಿದರು (ಕಗದ್ಯ. ೯೭). ಥಳಿ : ಮಾತಲ್ಲ ಮುತ್ತಿನ ಎಳಿ ಜೇನಿನ ಥಳಿ (ಮೂರ್ತಿಶಾ. ೫೧-೯) ; ಅಣ್ಣ ಬರತಾನಂತ ಅಂಗಳಕೆ ಥಳಿಕೊಟ್ಟು (ಹಳ್ಳಿಯು. ೧೧೦). ದಳಿ$_1$ : ಶಿವನ ದಾಸೋಹದ ಶಿಶುವೆಂದು ಕಸಕಿಲಂ ಪಿಡಿದು ಬಯಲನುಡುಗಿ ಹೊತ್ತ ನೀರಲ್ಲಿ ದಳಿಯ [ಪಾಠಾಂ. ಪುತ್ಥಳಿಯ, ಪೃಥ್ವಿಯ] ಸೌಖ್ಯವ ಮಾಡಿ (ಬಸವ. ಕ. ೨೩೨-೫೦೭).

ತಳಿಹಾಕು, ಥಳಿಹಾಕು =ನೆಲವನ್ನು ಗುಡಿಸಿ ನೀರನ್ನು ಚಿಮುಕಿಸು : ನಗರ ಸಭೆಯು ಕಟ್ಟಡದ ಸುತ್ತಲೂ ತಳಿಹಾಕಿ (ಭಾರಥಿ. ೮೮) : ಮನೆ ಮುಂದೆ ಥಳಿಹಾಕಿ ರಂಗೋಲಿ ಹಾಕುತ್ತಿದ್ದಾಳೆ (ರೂಢಿ). ತಳಿಹೊಡೆ = ತಳಿ ಹಾಕು : ಈ ನನ್ನಯಂತರಂಗದ ಸಭಾಮಂಟಪವ ನಾನೆನ್ನ ಕಣ್ಣೀರಿನಿಂದ ತಳಿಹೊಡೆದೆನ್ನೆ (ಸಖೀಗೀ. ೬೭-೧೦) ; ತುಳಸಿಯ ಕಟ್ಟೆಯ ಸುತ್ತು ತಳಿ ಹೊಡೆದು ರಂಗವಲ್ಲಿಯನ್ನು ಬರೆದಳು (ಜಯಂತ. ೧).

[ <ತಳಿ$_1$./ತಮಿ. ತಳಿ ]

ತಳಿ$_3$ (ನಾ). ಛತ್ರ ; ಅನ್ನಸತ್ರ : "ತಳಿ–ಸೇಚನೇ (ಚಿಮುಕಿಸು), ಸತ್ರೇಚ (ಸತ್ರ) ಸ್ಥೂಲದಾರೌ ಜಟಂ (ತಟಿ)" (ಶಮಧಾ) : ಆರೋಗ್ಯಶಾಲೆಗಳುಂ ತಳಿಗಳುಮಣಿಪಟಗೆಗಳುಂ . . . ಪ್ರಾಣಿಗಳ್ಗಾರ್ಮಮಪ್ಪುದುಂ (ಪಸಾರ. ೯೨-೧) : ತಳಿಯು ಕೂಟಿದಿರೊಳ್ ಪಣ್ಣಾರವೆ (ಶಮದ. ಮ. ೨೭ ವೃತ್ತಿ) : ಬಗೆಯಿಾ ಜಗಂ ಗಡಾ ಮುರುಕು ತಳಿಯಂತೆ (ಗಿಳಿವಿಂ. ೦೧೮-೧೧).

[ ದೇ.॥ ತಮಿ. ಮಲ. ತಳಿ ]

ತಳಿ$_4$ 'ತಟಿ' ನೋ.

ತಳಿ$_5$ (ನಾ). ೧. ವಂಶ ; ಮನೆತನ: "ಸೇಚನ ವಂಶ ಸ್ಥೂಲದಾರುಗಳೊಳು ತಳಿ" (ಶಬ್ದಮಂ. ೧೦೪) ; ಈ ಕಾಳು ತಿನ್ನುವ ತಳಿಯವರು ಕಂಡ ತಿನ್ನುವ ನಮ್ಮ ತಳಿಯವರನ್ನು ನುಂಗಿ ನೀರು ಕುಡಿಯುವವರು (ಮುಂಬಯಿ. ೬-೨೮೮). ೨. ಆನುವಂಶಿಕವಾದ ಗುಣ : ತಳಿ ಅಪ್ಪನದು ಮಾತ್ರ ಅಲ್ಲ ತಕರೆ, ಅಮ್ಮನದೂ ಹೌದು. ಮಗಳ ತಳಿ ಅಪ್ಪನಿಗಿನ್ನ ಅಮ್ಮನದೇ ಹೆಚ್ಚು (ಚಕರಾ. ೫೦೧). ೩. ಪಶು ಅಥವಾ ಧಾನ್ಯಗಳ ಪೀಳಿಗೆ : "ತಳಿಯೆನಲ್ಗೋವುಗಳ ವಂಶದೊಳ್ ಸತ್ರದೊಳ್ ಕುಳನದು" (ಸಂಜೀವ. ೨೪) : ಒಣಿಗಿರ್ದುವು ತಳಿಯ ನಾಯ್ಗಳೋರೊಂದೆಡೆಯೊಳ್ (ಲೀಲಾವ. ೬-೧೩); ಉತ್ತಮ ತಳಿಯ ಕುದುರೆ ಕಟ್ಟಿದ್ದ ರಬ್ಬರ್ ಪಟ್ಟಿಯ ಸಣ್ಣ ಬಂಡಿ (ಪುನರು. ೧೮೪) ; ಹೊಸ ತಳಿಯ ಬೀಜಗಳನ್ನು ಉಪಯೋಗಿಸಿದಲ್ಲಿ ಹತ್ತಿಯ ಉತ್ಪತ್ತಿಯು ಹೆಚ್ಚಾಗುತ್ತದೆ (ವ್ಯವಮ. ೪೩).

[ ←ಮರಾ. ಥಳ್, ಥಳೀ ]

ತಳಿಕೀರೇಸೊಪ್ಪು (ನಾ). ಒಂದು ಬಗೆಯ ಸೊಪ್ಪು: (ಮೈಜಿಗಿ. ೪೭-೯೦೫).

[ ತಳಿಕೀರೆ$_0$ + ಸೊಪ್ಪು$_3$ ]

ತಳಿಕುದುರೆ (ನಾ). ಜಾತಿ ಕುದುರೆ ; ಜಾತ್ಯಶ್ವ : ನಾಡ ಕುಳತಿಳಕಮಪ್ಪ ಮುಕ್ಕಡರ ಸೋವಿಸೆಟಿಯ ಮಗಂ ಕಾಳೆಯನಾಯಕ ತಳಿಕುದುರೆಯಂ ನಿಱಿದು ಪಲರಂ ಕೊಂದು ತುಱುವಂ ಮಗುಳ್ಚಿ ಸುರಲೋಕಪ್ರಾಪ್ತನಾದ (ಎಕ. VII, ಶಿಕಾರಿ. ೧೮೧-೭ : 1170 ?). [ ತಳಿ$_5$ + ಕುದುರೆ ]

ತಳಿಕೆ$_1$ 'ತಟಿಕ್ಕ' ನೋ.

ತಳಿಕೆ$_2$ (ನಾ). ಒಂದು ಬಗೆಯ ಔಷಧಿ ಸಸ್ಯ : "ಮಹಾತ್ವಕ್ಕಃ – ತಳಿಕ" (ಓಷಧಿ.೧೧೮). [ ? ]

ತಳಿಕೆಬೀಳು 'ತಕ್ಕೆಬೀಳು' ನೋ.

ತಳಿಗು 'ತಳ್ವು$_1$' ನೋ.

ತಳಿಗೂಳು (ನಾ). ಬೆರಳಿನಿಂದ ಸಿಡಿಸಿದ ಅನ್ನ ; ತೀರ ಅಲ್ಪವಾದ ಆಹಾರ : ಜಂಗಮಕ್ಕೆ ತಳಿಗೂಳ ತಳಿದು ತಾ ಗಂಗಳ ತುಂಬಿ ಒಟ್ಟಿಸಿಕೊಂಡು ಕೊಂಬನೇ ಪ್ರಸಾದಿ (ಸಿದ್ಧೇವ. ೯೮-೩೦೨).

[ ತಳಿ$_1$ + ಕೂಳು$_2$ (<ಕೂಟ್$_1$) ]

ತಳಿಗೆ, ತಣಿಗೆ (ನಾ). ತಟ್ಟೆ ; ತಾಟು : "ಅಮತ್ರಂ, ಭಾಜನಂ, ಪಾತ್ರಂ, ಸ್ಥಾಲಂ – ಈ ೪ ತಳಿಗೆ" (ಹಲಾಯು. ೫೪-೧೭೨) : ಪೊನ್ನ ತಳಿಗೆಯೊಳ್ ನಾಯ್ ತುಯ್ಯಲುಣ್ಬುದುಮಂ (ಪದ್ಮಾರಾ. ೮೫-೨೮) ; ಮುಳಿದು ತನಗರ್ಘ್ಯಮೆತ್ತಿದ ತಳಿಗೆಯೊಳಿಡೆ ತಿಱಿದ ತೆಜದೆ ತಲೆ ಪಱಿದಾಗಳ್ ಕಳಕಳಿಸಿ ನಗುತುಮಿರ್ದುದು ತಳಿಗೆಯ ಮೇಲಸುರನದಟಿದೇನಚ್ಚರಿಯೋ (ಪಂಪಭಾ. ೬-೬೪) ; ಅಡ್ಡಣಿಗೆಯುಂ ತಳಿಗೆಯುಂ (ಎಕ. XI, ಚಿತ್ರದು. ೭೫-೧೪; 941): ಕಯ್ಯಲುಂಬುದರಿದೋ ತಳಿಗೆಯಲುಂಬುದರಿದೋ (ಧರ್ಮಾಮೃ. ೭-೮೧) : ನಮ್ಮ ಕುನ್ನಿಗೆ ಕೂಸ ಕೊಡಬೇಡ ನಮ್ಮ ಸೊಣಗಂಗೆ ತಳಿಗೆಯನಿಕ್ಕಬೇಡ (ಬಸವ. ೭೫೨) ; ನೂಕಿದವು ರತುನಾರತಿಯ ತಳಿಗೆಗಳು ಪರಕಾಂತಾಕದಂಬದಲಿ (ಕುವ್ಯಾಕ. ೦೮-೧೨) ; ತಳಿಗೆ ತಂಬಿಗೆ ಗಿಂಡಿ ಹರಿವಾಣ ಪಡಿಗ ಬಟ್ಟಲು ಮೊದಲಾಗಿ ಭೋಜನಕೆ . . . ಅನುಗೊಳಿಸಿದರು (ಭರತ. ೪-೫೮) ; ಕೊಡಲಿ ಗುದ್ದಲಿ ಮಚ್ಚು ತಳಿಗೆಯಿಲ್ಲವೆಯೆಂದು ನುಡಿಯೆ ಶ್ರೀಪೂಜ್ಯಪಾದೇಂದ್ರಾ ತಡಕಿ . . . ಹುಡುಗ ನುಣ್ಣುವ ಬಟ್ಟಲೀಯೆ (ಪೂಜ್ಯಚ. ೧೨-೯೫). 'ತಳಿಗೆದೋರಣ' ಪರಾ. ತಣಿಗೆ : ತೇರಣವ ಬೀಜವಂ ಮೊಸರ ನೀರಿಂದ ತೇದು ತಣಿಗೆಗೆ ಮೆತ್ತಿ (ವಿವ್ಯವಿ. ೩೩) ; ಒಣಗಿದ ಮರ ಚಿಗಿತು ಬಣಲು ಬಡುವದ ಕಂಡೆ ತಣಿಗೆಯ ತಾಣಕೆದು ಬಹುದು (ಸರ್ವಜ್ಞ. ೨೦೬೧) ; ಚಂದ್ರನ ಮರಿಯಂತಿರುವ ಕಂಚಿನ ತಣಿಗೆಯಿಟ್ಟರು (ಹುಟ್ಟಿದ. ೧೧) ; ತಣಿಗೆ ಅನ್ನ ಉಂಡದ್ದು ಸುಳ್ಳೆ (ಚಕರಾ. ೧೬೧).

ತಳಿಗೆ ತುಂಬು = ನೈವೇದ್ಯಕ್ಕೆ ಎಡೆತುಂಬು.

[ ದೇ.॥ ತಮಿ. ತಳಿಕ್ಕೈ; ಮಲ. ತಳಿಕ; ತೆಲು. ತಳಿಗ, ತಲಿಗ ]

ತಳಿಗೆಗಾರ್ತಿ (ನಾ). ಆರತಿಯ ತಟ್ಟೆಯನ್ನು ಹಿಡಿದಿರುವವಳು : ಸೊಲ್ಲಿಸಿದರು ಜಾಗು ಬೊಲ್ಲು ಶಬ್ದವ ಕೆಂಬಲ್ಲ ತಳಿಗೆಗಾರ್ತಿಯರು (ಮೋಹತ. ೦೫-೩೭). [ ತಳಿಗೆ + – ಕಾಱ + – ತಿ$_1$ (< – ಇತ್ತಿ) ]

**ತಳಿಗೆಗುಡು** (ಕ್ರಿ). ತಟ್ಟೆಯನ್ನು ಕೊಡು: ಬೇಗದಿಂದಂ ವಣಿಜರೆಲ್ಲ ತಮ್ಮಂಗಳದ ಬಾಗಿಲುಗಳಿಕ್ಕಿ ಜರಹಾಯ್ದವನ ಸದನಕ್ಕೆ ಯೇಗೆಯ್ಯಲುಂ ತಳಿಗೆಗುಡಲಾಗದುಜದೆ ಪಾತ್ರದ ಬೆಂಬಳಿಯೊಳು ಬಹುದು (ಸಿದ್ಧೇಪು. ೧೪-೧೭). [ ತಳಿಗೆ + ಕುಡು$_1$ (<ಕೊಡು$_1$) ]

**ತಳಿಗೆತಂಬುಲ** 'ತಳಿಗೆದಂಬುಲ' ನೋ.

**ತಳಿಗೆತೋರಣ** 'ತಳಿಗೆದೋರಣ' ನೋ.

**ತಳಿಗೆದಂಬುಲ**, ತಳಿಗೆತಂಬುಲ (ನಾ). (ಇದಿರುಗೊಳ್ಳುವ ಇಲ್ಲವೆ ಬೀಳ್ಕೊಡುವ ಸಂದರ್ಭದಲ್ಲಿ) ತಟ್ಟೆಯಲ್ಲಿಟ್ಟ ವೀಳೆಯ,-ತಾಂಬೂಲ: ತಳಿಗೆದಂಬುಲದಾರತಿಯ ಮಂಗಳತ ರಭಸದೊಳಖಿಳ ರಾಜವಾಳಿಗಳೊಸಗೆಯೊಳಿವರು ಹೊಕ್ಕರು ರಾಜಮಂದಿರವ (ಕುವ್ಯಾಸ. ೧-೪): ನಾಲ್ವರಿಗೆ ಕೊಟ್ಟನು ವೀಳೆಯವ ಹಿರಿಯರಸಿ ತಂದಳು ತಳಿಗೆ ದಂ[ಪಾಠಾಂ. ತಂ]ಬುಲ ಮಂಗಳಾರುತಿಯ (ಕುವ್ಯಾಸ. ೩-೧೩). **ತಳಿಗೆತಂಬುಲ**: ಬಳಿಕ ಸುಮುಹೂರ್ತದಲಿ ಹೊಜಗುಡಿ ಬಳಸಿ ಹೊಯ್ದುವು ರಾಣಿವಾಸದ ನಿಳಯನಿಳಯದ ತಳಿಗೆತಂಬುಲ ಮಂಗಳಾರ್ತಿಗಳ (ಕುವ್ಯಾಅ. ಓರಿಇ. ೩೫-೭). [ ತಳಿಗೆ + ತಂಬುಲ ]

**ತಳಿಗೆದೋರಣ**, ತಳಿಗೆತೋರಣ (ನಾ). ತಟ್ಟೆಯಾಕಾರದ ಬಿಲ್ಲೆಗಳಿಂದ ಮಾಡಿದ ಕಂಚಿನ ತೋರಣ: ತಳಿಗೆದೋ[ಪಾಠಾಂ. ರತೋ]ರಣದಿಂದ ತಳಿತ ಕುಸುಮದಿಂದ ತಳಿರ ಬಾಗಿಲ್ವಾಡದಿಂದ . . . ಪೊಳಲು ಕಂಗೆಸೆದುದು (ಕುರಾಸಾಂ. ೪೦-೬೭); ಚೆಂದಳಿರ್ದೋರಣ ತಳಿಗೆದೋರಣ ಹೇಮದಿಂದಾದ ಅಂದವಡೆದ ರತ್ನದೋರಣದೊಳು ರಾಯ ಬಂದನೊಂದೆರಡು ಪಯಣವ ಪುಷ್ಪದೋರಣದಿ (ಭರತ. ೩೭-೨೭). **ತಳಿಗೆತೋರಣ**: ನಳಿನನಾರಿ ಕೋಟಿ ರೂಪನು ತಾಳಿ ಭೂತಳಕಿಳಿದು ಕಂಠೀರವೇಶ್ವರನ ಹೋಳಿಯುವೋಲಗ ಶಾಲೆಯ ನಿಟ್ಟೆವಂದದೆ ತಳಿಗೆತೋರಣಗಳೊಪ್ಪಿದುವು (ಕಂನವಿ. ೨೦-೨೪); ತಳಿಗೆತೋರಣ ಕಟ್ಟಿ ಪರಮ ಮಂಗಳವಾಗಿ ಸುಳಿದಿದೆ ಬಲು ಕಾಂತಿ ಗಗನವ ಮುಟ್ಟಿ (ತೀರ್ಥಮು. ೨೯). [ ತಳಿಗೆ + ತೋರಣ ]

**ತಳಿಗೆಹಸಾದ** (ನಾ). ತಳಿಗೆಯಿಂದ ತೆಗೆದುಕೊಡುವ ಪ್ರಸಾದ; "ತಾನು ಊಟಮಾಡುವ ಎಡೆಯನ್ನೇ ಪ್ರೀತಿಯಿಂದ ಇನ್ನೊಬ್ಬರಿಗೆ ಕೊಡುವುದಂ" (ಪ್ರಭಲ್ಲ): ತಡೆಯದಂಗವಿಸುತೆ ತಳಿಗೆಹಸಾದಕ್ಕೆ ಪಡೆವುದು ಭಕ್ತಿಭಾವದೊಳು (ಚಕವಿ. ೭-೦೫೭ ಸಾಂಗತ್ಯ). [ ತಳಿಗೆ + ಹಸಾದ ]

**ತಳಿತ$_1$** 'ತಳ್$^1$' ಪರಾ.

**ತಳಿತ$_2$** 'ತಳ್$_3$' ಪರಾ.

**ತಳಿತ$_3$** 'ತಳಿರ್$_1$' ಪರಾ.

**ತಳಿತು** 'ತಳಿರ್$_1$' ಪರಾ.

**ತಳಿನ** 'ತಲಿನ' ನೋ.

**ತಳಿಪ** (ನಾ). ತಳಿಯುವಿಕೆ; ಚಳೆಯ; ಸಿಂಪಡಿಸುವಿಕೆ; ಸೇಚನ: ಗಿಳಿಗಳ ಗೂಡಿಂದುದಿರ್ದ ದಾಳಿಂಬದ ಬಿತ್ತುಗಳಿನೊಸರ್ದ ತನಿರಸದಳಿಪ ದೊಳಂ (ಕಾದಂಪೂ.೯೭): ವಿಷ ನಿಷೇಕ ಇವ=ವಿಷದ ತಳಿಪದಂತೆ (ನೀತಿವಾ. ೯-೭): ಕೀರ ಚಿತ್ರದಂತೆ ಪೂವಿನ ಬಣ್ಣದಂತೆ ತಳಿಪದ ಚೆಲ್ವಿನಂತೆ ಮರುಳ ಮನ್ನಣೆಯಂತೆ . . . ಕಡೆಯೊಳ್ ಪೇಸುಪಥಮುಮಶೋಭೆಯುಮಾಗದೆ ಪೋಗದು (ಧರ್ಮಾಮೃ. ೭-೧೨೨): ಮೃಗಮದದ ಯಕ್ಷಕರ್ದಮದಗರುವ ಕುಂಕುಮದ ಕದಡುನೀರ್ದಳಿಪದಿನೊಲಗಿಸಿದುವು ಸುಬಿವ ತಂಗಾಳಿಗೆ ನೃಪಗೃಹವೀಥಿ ಬೆರಕೆಗಂಪಿನ ಸೊಂಪಂ (ಪುಷ್ಪಪು. ೪-೩೩).

[ ತಳಿ1 + – ಪ್ಪ ]

**ತಳಿಪು** (ನಾ).=ತಳಿಪ: ಕೊಟಿಯುಂ ಬಣ್ಣಂ ಲೋಳೆಯುಮಳವಲ್ಲದ ವಜ್ರಲೇಪದಂತಿರೆ ಧಾತ್ರೀತಳಪತಿಯ ಮೆಯ್ಯೊಳೆಲ್ಲಂ ತಳಿಪಂ ತಳಿದಂತೆ ಕೂಡಿ ಪತ್ರಿತ್ರಾಗಳ್ (ಧರ್ಮಾಮೃ. ೪-೧೬೭). [ ತಳಿ$_1$ + – ಪ್ಪು ]

**ತಳಿಮ** (ನಾ). ಹಾಸಿಗೆ; ಹಾಸು: "ತಳ್ಪಂ, ತಳಿಮಂ–ಈ ೨ ಪಾ(ಹಾ)ಸು" (ಹಲಾಯು. ೫೦-೧೫೨). [ ಸಂ. ತಲಿಮ ]

**ತಳಿಮಳೆ** (ನಾ). ತುಂತುರು ಮಳೆ; ಸೋನೆ: ಪಳವಾನೇ! ಪೊಸ ಎಲರೇ! ತಳಿಮಳೆಯೇ! ಚೆಲ್ವು ಬೆಳೆಯೆ! (ಪೊಂಗಳು. ೪೫-೦೭).

[ ತಳಿ1 + ಮಳೆ (<ಮಬೆ) ]

**ತಳಿಯಲಾರ**, ತಳ್ಳಿಯ (ನಾ). ದೇವಾಲಯದಲ್ಲಿ ನರ್ತನದ ಸೇವೆ ಮಾಡುವವಳು: 'ತಳಿಯಲಾರಕುಲ' ಪರಾ. ತಳ್ಳಿಯ: ಕೆತ್ತುವ ಹತ್ತುವ ದೇವರಡಿಯರಿಂ ಮುತ್ತುವ ಮಣಿಮಾಡುವ ತಳ್ಳಿಯರಿಂ[ಪಾಠಾಂ. ಪಡಿಯರಿಂ] . . . ಪೊನ್ನಾಂಬಲದಧಿಪತಿಯೊಪ್ಪಿರ್ದಂ (ತಿರುನಾ. ದೀ. ೨೨೭-೮). [ ←ತಮಿ. ತಳಿಯಲಾರ್ ]

**ತಳಿಯಲಾರಕುಲ** (ನಾ). ನಟ್ಟುವರ ಕುಲ: ಪೆರುಮಾಳಿಯನೋಲ್ಪೆಪ ತಳಿಯಲಾರ [ಪಾಠಾಂ. ತಳಿಲಾರ, ಕಳಿಲಾರ, ತಳಿಯರಾಲದ]ಕುಲದ ಪರಮಯೌವನೆಯುಪ್ಪ ಪರವೆನಾಚಿಯರೆಂಬ ಕನ್ಯಾಕನಕಲತೆಯಿರ್ದಪುದು (ನಂಬಿರ. ೧೦-೧೩): ಆಕೆಯ ಕುಲಂ . . . ಶಿವನೋಲಗದ ತೊತ್ತುತನಂ ತಳೆರ್ದ ತಳಿಯಲಾರಕುಲಂ (ನಂಬಿರ. ೦೦-೧೩). [ ತಳಿಯಲಾರ + ಕುಲ ]

**ತಳಿಯಿಸು**, ತಳಿಸು$_2$ (ಕ್ರಿ). ೧. ಸಿಂಪಡಿಸು; ಚಿಮುಕಿಸು; ಚಳೆಯ ಕೊಡು; ಸೇಚನಮಾಡು: ಪೊಬಲ ಬೀದಿಗಳೊಳೆಲ್ಲಂ ಗಂಧೋದಕ ಪಂಚಗವ್ಯಂಗಳಂ ತಳಿಯಿಸಿ (ಪಂಪಭಾ. ೪-೫ ವ): ಪೊಬಲ ವೀಥಿಗಳೊಳೆಲ್ಲಂ ನೀರಂ ತಳಿಯಿಸಿ ಫಲಪುಷ್ಪಂಗಳಂ ಕೆದಱಿಸಿದೊಡೆ (ಜಾವುಂಪು. ೩೫-೨೩). **ತಳಿಸು$_2$**: ೨. ತಳಿಯುವಂತೆ ಮಾಡು; ಎರಚಿಸು; ಚೆಲ್ಲಿಸು: ಕಟವೆಯ ಬಿತ್ತಂ ತರಿಸಿ ಮನೆಯ ಮುಂದಣೆಡೆಯೊಳ್ತಳಿಸೆ ಪೊಕ್ಕು ಬಿತ್ತಂ ಪಿಡಿದು ನಿಂದು (ಬಂಹರಿ. ೯-೩೨ ವ). [ ತಳಿ1 + – ಇಸು$_3$ ]

**ತಳಿಯೂರ್** (ನಾ). ಒಂದು ಊರಿನ ಹೆಸರು: ವಿನೋದಿ ಮಣಲಿಯರ ತಳಿಯೂರಾಳ್ವ ತಿ× (ಎಕ. IV. ಗುಂಡ್ಲುಪೇ. ೮೭-೧೧; ಸು. 750).

[ ತಳಿ? + ಊರ್ ]

**ತಳಿರ್$_1$**, ತಳಿರು$_1$, ತಳಂರ್ (ಕ್ರಿ). ತಳಿತ$_3$, ತಳಿರ್ದ (ಭೂತಕೃ); ತಳಿತು, ತಳಿರ್ತು (ಭೂತನ್ಯೂ), ೧. ಚಿಗಿ; ಚಿಗುರು; ಪಲ್ಲವಿಸು: "ತಳಿರ್– ಪಲ್ಲವೋತ್ಪತ್ತೌ" (ಶಮಧಾ); "ತಳಿರ್ತುದೆಂದುಂ ತಳಿರೇಱಿಮುದೆಂದುಂ ತಳಿರಿಡಿದುದು" (ಕಶಸಾ. ೧೦-೧೯೦); ತಳವ ಕಡುಗೆಂಪು ಪುದಿದವ್ವಳಿಸಿರೆ ಸುರಯುವತಿ ಮಧುರ ತಂತ್ರೀನಾದಂ ಕೊಳೆ ಬೀಣೆಯ ದಂಡಿಗೆಯುಂ ತಳಿರ್ತುದೆಂಬೊಂದು ಶಂಕೆಯಂ ಪುಟ್ಟಿಸಿದಳ್ (ಆದಿಪು. ೭-೨೦); ಮಾಮರ ತಳಿತಲ್ಲದೆ ಸ್ವರಗೈವುದೆ ಕೋಗಿಲೆ (ಮಹಾದೇ. ಬ. ೧೩೯-೩೦೫): ನವಚೂತಂ ತಳಿರ್ವಂದದಿಂ ತಳಿರ್ಗುಮೇ ಸ್ಥಾಣೂತ್ಕರಂ ಚೈತ್ರದೊಳ್ (ಜಗವಿ. ೧-೧೩); ಬರ್ದುಂಕಿದೆಂ ಬರ್ದುಂಕಿದೆನೆನ್ನ ಭಾಗ್ಯದ ಬೆಳೆ ತಳಿರ್ತುದು (ಗಿರಿಕ. ೧೦-೨೭ ವ); ತಳಿತ ಚೂತದ ಸಸಿಗಳವನಿಗೆ ಮುಲುಗುವಂತಿರೆ (ಕುವ್ಯಾದ್ರೋ. ೫-೬೯): ದುಡಿಗೆ ತಳಿತುದೋಯೆನಿಸಿದುದು ಕೆಂದಳ ದೊಂದು ಕೆಂಪಿನಲಿ (ಸಾಳ್ವಭಾ. ೩೨-೩೮): ತಳಿತು ಹೂವ ತಳೆದು ಬೇಗ ಫಲಗಳಿತ್ತಿತು (ವಿಸೀಗೀ. ೬೨-೧೨). ೨. ಅರಳು; ವಿಕಸಿಸು: ತಿಳಿವ ತಿಳಿಗೊಳದ ತಳಿತ ತಾವರೆಯರಳ ತಂದುಲದ ರುಚಿಯು ಕಳಹಂಸೆ ಬರುಸು ಮಂತೆ (ಅದವ. ೧೬-೩೭); ಪೊಳೆತು ಪೊಳೆ ದಳವೇಱಿ ನಿರ್ಮಿರ್ದಮರ್ದಳರ್ದು ಹಸ್ತಾಂಭೋರುಹಂಗಳು ತಳಿತು ನಳನಳಿಸಿದವು ಆಮಹಾ ವೀರ ದಸರಯನ (ಬಸವು. ೩೮-೩೯): ಶಿವಲಿಂಗಪ್ರಸಾದದ ತಳಿತ ಹೂವಿನ ದಂಡೆಯನು ಕೋಮಲೆಗೆ ಕೊಟ್ಟನು ಪರಸುತಲಿ (ಪ್ರಭುಲೀ. ೪-೬೨); ಗುರುಸುತನ ತನುವೋ ಪೂತ ಮುತ್ತುಗವೋ ತಳಿತೆಸೆವ ಕೆಂದಾವರೆಯ ಬನವೋ (ಕುವ್ಯಾಕ. ೩-೨೫). ೩. (?): ಎಳನೆಂಬೆನೆ ನೀ ಸವಮಸ್ತ ಕಳಾನಿಪುಣನ ಬಾಲನೆಂಬೆನೆ ಮೇಲೆ ಪಲಿತದ ಬೀಡು ಬಿಟ್ಟಿದೆ ತಳಿತ ತನುವಿನಲಿ (ಕುವ್ಯಾ.ಕ.

೫-೨೧): ನೊರೆ ರಕುತ ಸುಳಿ ಮಸಗಿ . . . ಕರುಳ ಬಂಬಲು ಖಂಡ ದಿಂಡೆಯು ತುಱುಗಿದೆಲುವಿನ ತಳಿತ ಚರ್ಮದ ಶಿರದ ತಡಿಗಳಲಡಸಿ ಹರಿ ದುದು ವೈರಿಸೇನೆಯಲಿ (ಉತ್ತ್ಕದ್ರೋ. ೨-೫೭). ℙ 'ಕಳಿತ' ಇರ ಬಹುದು. **ತಳಿರು$_1$**: ೧. ತಳಿರಿದುದು ಮುಂಬೆಳಗಿಂದ್ರುದಿಕ್ತಟದಿ (ಶ್ರೀರಾಮಪ.೪೫-೪೮೭). **ತಳುರ್**: ೪. (?) ಬಗ್ಗಿಸುವ ಕೋಗಿಲೆ ತಳ್ತಲೆವಳ್ಳಿ ಸುತ್ತಲುಂ ತುಱುಗಿ ತಳುತ್ತರ್ ಮಾಮರನಿಕಾಯಮುಂ (ಇಆ. XII, ೯೭-೧೬; 1197); ತುಱುಗಿ ತಳುತ್ತರ್ ಮಾಮರದ ನಿಂಬೆ ಕದಂಬಕ ದ್ರಾಕ್ಷಪಣ್ಣಳಿಂ (ಕಇ.I,೩೧-೬; 12ನೆಯ ಶತ).

**ತತ್ತಳಿರ್** (ದ್ವಿರುಕ್ತಿ): ಮಧುಋತುವಿನಲ್ಲಿ ಆ ವೃಕ್ಷವಲ್ಲಿ ತತ್ತಳಿತು ಹೂವ ಬಿಟ್ಟು ದಿಗ್ದೇಶವಲ್ಲಿ ಹೊರಚೆಲ್ಲಿ ಬಹವು (ಮುಕ್ತಾಕಂ. ೦೬-೧).

[ ದೇ.॥ ತಮಿ. ಮಲ. ತಳಿರ್, ತುಳಿರ್; ತೆಲು. ತಲರು ]

**ತಳಿರ್$_2$**, ತಣಿರು, ತಳಿರು$_2$ (ನಾ). ೧. ಚಿಗುರು ; ಪಲ್ಲವ : "ಪಲ್ಲವಂ ಕಿಸಲಯಂ–ಈ ೨ ಮರದ ತಳಿರ್" (ಹಲಾಯು. ೩೧-೩೧); ವನರುಹದಂತೆ ಮುಖಂ . . . ತಳಂ ತಳಿರಂತೆ (ಕವಿರಾ. ೩-೬೦) ; ತಳಿರೊಳ್ ನೀನೆ ಬೆಡಂಗನ್ಯೆ ನನೆಗಳೊಳ್ ನೀಂ ನೀಜನ್ಯೆ ಪುಷ್ಪಸಂಕುಳದೊಳ್ ನೀನೆ ವಿಳಾಸಿಯ್ಯೆ . . . ಭೃಂಗಕೋಕಿಳಕೀರಪ್ರಿಯ ಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೇ (ಆದಿಪು. ೧೧-೯೮) ; ತಳಿರ್ಗಳಿಱುಂಬಿನಲ್ಲಿ ತುದಿಗೋಡ ಮೊದಲ್ಗಳ ತಾಣದಲ್ಲಿ . . . ಸುತ್ತಲುಂ ಗಿಳಿಗಳ ಹಿಂಡುಗಳ್ ನೆರೆದು ಕೂಡಿ (ಕಾದಂಪೂ. ೧೨೭) : ಪಬ್ಬಕ್ಕೆ ತಂದ ಹರಕೆಯ ಕುಱು ತೋರಣಕ್ಕೆ ತಂದ ತಳಿರ ಮೇಯಿತ್ತು (ಬಸವ. ೦೨೯, ; ತನುಲತೆಗಂಕುರಂ ತಳಿರಲರ್ ಮಧುಸಂಗದೊಳಾಯ್ತು ಚೋದ್ಯಮೆಂದೆನೆ ಮಧುಪಾನಜಾತಪುಳಕೇಕ್ಷಣ ಶೋಣಿಮಘರ್ಮಬಿಂದುಗಳ್ ತನಗೆಸೆಯಲ್ (ಜಗವಿ. ೦೬-೧೧೭) : ತೋರಣದ ತಳಿರಂ ಪಱಿದು ಶಿವದಿಡುತ್ತಿರಲ್ (ನಂಬಿರ. ೬-೫೮); ಬಿಸಿಲೊಳು ಬಿಸುಟ ತಳಿರಂತೆ (ಹದಬಾ. ೮-೭೨) ; ಬಗ್ಗಿಸೆಲೆ ಕೋಗಿಲೆ . . . ತಳಿರಿಲ್ಲ ಮೆಂಬೆಯು (ರಾಮಾಶ್ವ. ೨-೩). ೨. "ಕಿರಣ, ಮಯೂಖ"(ಪ್ರಭ್ರ): ಬಾಳ ತೃಣಂಗಳೆಂದೆಳಸುಗುಂ ಪಸುರ್ಗಲ್ಗಳ ಕಾಂತಿಯಂ ಮೃಗೀಬಾಳಕನಲ್ಲಿ ಕೆಂಬರಲ ಕೆಂದಳಿರಂ ಬಿಸಿಲೆಂದು ನಟ್ಟಿರುಳ್ ಮೇಳಿಸುಗುಂ ರಥಾಂಗಂ (ಮಲ್ಲಿಪು. ೨-೭೭). **ತಣಿರು**: ೧. ಅಣುಗರ ಕರವಿಡಿದು ನಗುತ ದಣಿದರ್ಭಕ ರಂತೆ ತಣಿರ ಮರದ ನೆಳಲಿಗೈದಿ ಘನಶ್ಯಾಮಲ ಕೃಷ್ಣ (ಪ್ರಸಭಾ ೨೯-೧೨). **ತಳಿರು$_2$**: ೧. ಚಿಗುರು ತಳಿರು ಪತ್ರ ಮೊದಲಾದವಱಲ್ಲಿಯು ಗಂಧವ ನಱಿವುದು (ಆದಪ. ೫-೧೨) ; ತಳಿರುಗಳ್ ಪೂವಣ್ಣು ವಿಪ್ರದ್ವಯಂ ಮುಕುರಂ ಮಾಂಸವು . . . ಆರ್ ಕಂಡೊಡಂ ಶಕುನಂ ಶೋಭನಕಾಸ್ಪದಂ (ಸೋಮೇಶ. ೭೭) : ಓಡಿದೊನಕೆಯಲ್ಲಿ ತಳಿರನಲರಿಸಿ (ಬಸಪು. ೪೨-೨) ; ತಳಿರು ಪೊಂಬಾಳೆ . . . ನಂದನದೊಳೊಪ್ಪಿದುವು (ಕಂನವಿ. ೨೪-೮೦).

[ <ತಳಿರ್$_1$./ತಮಿ. ಮಲ. ತಳಿರ್, ತುಳಿರ್ ; ತುಳು. ತಳಿರ್]

**ತಳಿರಂಬು** (ನಾ). (ಚಿಗುರಿನಂತೆ) ಕೋಮಲವಾದ ಬಾಣ : ಮರಲಂಬು ತಳಿರಂಬುಗಳ್ಗೆ ರನ್ನದಣಸಂ ಬಂಧಿಪಂತಂಗುಲಿಗಳೊಳ್ ರನ್ನದುಂಗುರಂಗಳಂ ಸಂಗಳಿಸಿಯುಂ (ವೃಷವಿ. ೫-೧೪ ವ). [ ತಳಿರ್$_2$ + ಅಂಬು$_2$ ]

**ತಳಿರಡಿ** (ನಾ). ಚಿಗುರಿನಂತೆ ಕೋಮಲವಾದ ಪಾದ: [illegible] ನಡೆತಂದರ್ ಕೆಸಡಿ ತಳಿರಡಿಗಳ ಮೆಲ್ಲಡಿಗಳತನುಶರಸನ್ನಿಭ [illegible] ೪-೧೧೯): ತಳಿರಡಿಯ ಮೆಲ್ಲಡಿಯ ತಾವರೆಗಳಡಿಯ ಥಳಥಳಿಪ ಚೆನ್ನಡಿ ಗಳಸಿಯಡಿಯ ಲಲಿತಾಂಗಿಯರ್ (ಚಬಪು. ೩೭-೪೧). [ತಳಿರ್$_2$ + ಅಡಿ$_1$]

**ತಳಿರಡಿದಳೆ** (ಕ್ರಿ). ಚಿಗುರಿನಂತೆ ಕೋಮಲವಾದ ಪಾದಗಳನ್ನು ಹೊಂದು,– ಪಡೆ : ಓಮರುಚಿಕಾಂತ ತಕ್ಕ್ರೀಡಾಕುಳಿಗೆ ಕುಂಕುಮ ದಲರ್ದಳದೆಡೆಗಲಸಿ [illegible] ರಮಣೀಯವಾಯಿತ್ತು ಕೆಸ್ರೀರು (ಮೋಹತ. ೧೪-೩೭). [illegible]

**ತಳಿರಲರ್ವಿಜ್ಜಳ** (ನಾ). ಚಿಗುರೆಲೆಗಳಿಂದ ಹಾಗು ಹೂವುಗಳಿಂದ ಮಾಡಿದ ಬೀಸಣಿಗೆ: ತಳಿರಲರ್ವಿಜ್ಜಳದಿಂ ಬೀಸಿಕೊಳುತ ವಿರಹ ದೊಳಗಿರಲು (ಪ್ರಭಂಜ. ೪-೧೩).

[ ತಳಿರ್$_2$ + ಅಲರ್$_2$ + ಬಿಜ್ಜಳ (<ಬಿಜ್ಜಣ) ]

**ತಳಿರಿಡಿ** (ಕ್ರಿ). ಚಿಗುರು ; ಪಲ್ಲವಿಸು ; ಚಿಗುರೆಲೆಗಳಿಂದ ತುಂಬಿರು : "ತಳತರ್ಗದೆನೆ ತಳಿರಿಡಿದುದು" (ಶಬ್ದಮಂ. ೨೨) ; "ತಳತರ್ಗದೆನಲ್ಕೆ ತಳಿರಿಡಿವುದಕ್ಕೆ ಪೆಸರಕ್ಕು" (ಶಬ್ದಕೌ. ೦೯); ತಳಿರಿಡಿವ ತೋರಣದ ಚೆಲ್ವನಾಂ ತೋರಣದ . . . ಚಲಿತಲೀಲಾಸ್ಪದ ಪತಾಕೆಗಳ (ಜೈಮಿಭಾ. ೩-೧೭).

[ ತಳಿರ್$_2$ + ಇಡಿ$_2$ ]

**ತಳಿರಿಡು** (ಕ್ರಿ). = ತಳಿರಿಡಿ : ಆ ಸಂಜೆವಳ್ಳಿ ತಳಿರಿಟ್ಟು ಪೂತುದೋ . . . ಎನಲ್ಕಾ ಸಮಯದೊಳ್ತಳಿತ ತಾರಾಳಿ ಕಂಗೆ ಮಂಗಳವಾಗಿ ರಾಜಿಸಿದವು (ಮದೇಪು. ೧೫-೫). [ ತಳಿರ್$_2$ + ಇಡು$_1$ ]

**ತಳಿರಿಸು** (ಕ್ರಿ). ಚಿಗುರಿಸು; ಪಲ್ಲವಿಸುವಂತೆ ಮಾಡು: ಕಳುಹಿದೊಡೊಳ ಹೊಕ್ಕು ವೃಕ್ಷಂಗಳ ನೆಱೆ ತಳಿರಿಸಿದನು ಚೈತ್ರ ಬಿಡದೆ (ಮೋಹತ. ೭-೯) : ಬಿತ್ತಿ ಬೆಳೆಯಿಸಿ ಪಬ್ಬಿಸಿ ತಳಿರಿಸಿ ಅರಲ್ಚಿ ಮಿಡಿಮಾಡಿ (ಮಂತ್ರಶ. ೮೩-೨೪).

[ ತಳಿರ್$_1$ + – ಇಸು$_3$ ]

**ತಳಿರು$_1$** 'ತಳಿರ್$_1$' ನೋ.

**ತಳಿರು$_2$** 'ತಳಿರ್$_2$' ನೋ.

**ತಳಿರುಗಾವಿ** 'ತಳಿರ್ಗಾವಿ' ನೋ.

**ತಳಿರುಗಾಸೆ** 'ತಳಿರ್ಗಾಸೆ' ನೋ.

**ತಳಿರುಗೆಂಪು** 'ತಳಿರ್ಗೆಂಪು' ನೋ.

**ತಳಿರುಡೆ** (ನಾ). ಚಿಗುರುಗಳಿಂದ ಸಿದ್ಧಪಡಿಸಿದ ಉಡುಪು : ಮದನ ಮಂದಿರದ ಬಾಗಿಲಿಗೆ ತೋರಣವ ಕಟ್ಟಿದವೊಲು ತಳಿರುಡೆ ಮೆಱೆಯೆ (ಮೋಹತ. ೦೯-೬೩) ; ಕೆದಱುದಲೆ . . . ಪುದಿದ ತಳಿರುಡೆ ಸುರಗಿ ಪುಲಿ ವಾಲದಲಿ ವಿರಚಿಸಿದ ಹದುರುಗಂಕಣ (ಸಾಳ್ವಭಾ. ೫-೭) ; ತಳಿರುಡೆ ಸಂಜೆ ಗೆಂಪು ಪೊಸಮುತ್ತಿನ ಹಾರಮ ತಾರಕಾಳಿ (ಶಬಶಂ. ೩-೬).

[ ತಳಿರ್$_2$ + ಉಡೆ$_2$ ]

**ತಳಿರುತೊಂಗಲು** 'ತಳಿದೊರ್ಂಗಲ್' ನೋ.

**ತಳಿರುತೋರಣ** 'ತಳಿದೋರ್ರಣ' ನೋ.

**ತಳಿರುದೋಱು** (ಕ್ರಿ). ಚಿಗುರು ಕಾಣಿಸಿಕೊಳ್ಳು; ಪಲ್ಲವಿಸು: ಕಳಿದರಧ್ವ ಶ್ರಮವನಾ ತಿಳಿಗೊಳನ ತೀರದ ತಳಿರುದೋಱಿದ ನಳನಳಿಪ ಮಾಮರನ ನೆಳಲಲಿ (ತೊರರಾ. ೨-೪-೨೨). [ ತಳಿರು$_2$ (<ತಳಿರ್$_2$) + ತೋಱು ]

**ತಳಿರುಯ್ಯಲ್** (ನಾ). ಚಿಗುರಿನಿಂದ ಕೂಡಿದ ಉಯ್ಯಾಲೆ,–ಜೋಕಾಲಿ: ತಳಿರುಯ್ಯಲ್ ಶ್ರುತಿಯಿಂದಮೊಂದೆ ಕೊರಲೊಳ್ ಜೇಯೆಂಬಿನಂ ಪಾಡುವಿಂದೊಳಂ (ಶಾಂತಿಪು. ೮-೭೫) ; ಎಳಮಾವೇ ತಳಿರುಯ್ಯಲೇ ಕೊಳೆ ತಗುಳ್ದಿಂದೋಳಮೋ ಕೋಗಿಲೇ ಗಿಳಿಯೇ . . . ನೀಮೆಲ್ಲರುಮೆನ್ನ ಬರ್ದುಗೆಯನಾನಲ್ಲಂಗೆ ಪೇಱಿಂ ಗಡಿಂ (ಕಾವ್ಯಾಷ ೧೨೯) ; ಮೃಗಲಕ್ಷ್ಮೀ ಮೃಗಕ್ಕೆ ಗೋರಿಯುಂ ಪಾಡುವ ಮಾಟ್ಕೆಯುಂ ಬಳೆಯೆ ಗೀತರವಂ ತಳಿರುಯ್ಯಲಾಡಿದಳ್ (ಚಂದ್ರಪು. ೮-೪೮).

[ ತಳಿರ್$_2$ + ಉಯ್ಯಲ್ ]

**ತಳಿರುವಾಡ** (ನಾ). ತಳಿರಿನ ಮನೆ; ಎಲೆವನೆ: ಶುಕಸಮೂಹವು ಪೆಮ್ಮರ ಗಳ ತಳಿರುವಾಡಗಳಲ್ಲಿ ಕುಳಿತು . . . ಹಾಡುತ್ತಿದ್ದುವು (ಶ್ರೀರಾಪ. ೬೮).

[ ತಳಿರು$_2$ (<ತಳಿರ್$_2$) + ಮಾಡ$_1$ ]

**ತಳಿರುಳಿ** (ನಾ). = ತಳಿರಂಬು : ಇಮ್ಮಾವಿನ ತಳಿರುಳಿ ಮುರಿದಾ ಕಂತು ಕಪ್ಪುದನಪ್ಪ ಬಿಲ್ಗೊಂಡು ಸುಮ್ಮಾನದಿಂದೆಸುವನು ವಿರಹಿಗಳನು (ಶ್ರೀಪಾಲ. ೧೨-೫). [ ತಳಿರ್$_2$ + ಉಳಿ$_5$ ]

**ತಳಿರೆಲೆ** (ನಾ). ಚಿಗುರೆಲೆ; ಎಳೆಯ ಎಲೆ: ಅಲ್ಲಲ್ಲಿಗೆಳವಾಱೆಯ ತಿರುಳೆಲೆಗಳೊಳಂ ತಾವರೆಯ ತಳಿರೆಲೆಗಳೊಳಂ . . . ಸಮೆದ ಬಿಜ್ಜಣಿಗೆಗಳುಮಂ (ಕಾದಂಉ. ೨೧೬): ತಣ್ಣಾಳಿಯಲಪಿನೊಳುಲಿವ ತಳಿರೆಲೆಯುದನಿಗೆ ಬೆರ್ಚುವ ಶಿಶುವಂ (ಮಲ್ಲಿಪು. ೩-೧೦೫): ಕರತಳದ ತಳಿರೆಲೆಯ ಕಡಿದೊಳುಗಳ ಕೊಂಬುಗಳ . . . ರಣವನವೆಸೆದುದೀತನ ಖಡ್ಗಚೈತ್ರವಲಿ (ಕುಮ್ಮಾರಶ್ರೀ. ೬-೪೨). [ ತಳಿರ್$_2$ + ಎಲೆ$_1$ ]

**ತಳಿರೊಡೆ** (ಕ್ರಿ). ಚಿಗುರೊಡೆ; ಅಂಕುರಿಸು; ಕುಡಿಯಿಡು: ಕರಗಿ ಖಂಡನವರುಣವಾರಿಯುಲಿ ಗಿಡು ಲತಾಳಿ ವಸಂತದಲಿ ತಳಿರೊಡೆದ[ಪಾಠಾಂ. ತ್ರೊಡದ, ತೊಡದ, ರೊಡದ]ಶೋಕೆಯ ಧಾತನಗಲಿಕೆ ಪಡೆದವಮರ ವಿಮಾನತತಿ ಕೆಂಪಾದವಭ್ರದಲಿ(ತೊರಜಾ. ೧-೧೦-೧೪). [ತಳಿರ್$_2$ + ಒಡೆ$_1$]

**ತಳಿರೋವರಿ** (ನಾ). ಚಿಗುರೆಲೆಗಳಿಂದ ಮಾಡಿದ ಕೋಣೆ; ಎಲೆಮಂನೆ; ಲತಾಕುಂಜ: ತರಳೆ ಮಿಗೆ ತಲ್ಲಣಿಸಿ ತಳಿರೋವರಿಯ ಹೊಗುತಿರಲು (ಕುಮ್ಮಾಅ. ೨೨-೧೯). [ ತಳಿರ್$_2$ + ಓವರಿ ]

**ತಳಿರೋಳಿ** (ನಾ). ಚಿಗುರೆಲೆಗಳ ಸಮೂಹ: ತಳಿರೋಳಿ ತಗುಳ್ದು ತಳ್ತ ಕೇತನತತಿ ಚಾಮರೋತ್ಕರದೆಲರ್ ಮಲಯಾನಿಲನಾಗೆ ರಾಜರಾಜನ ಪಡೆ ಚೆಲ್ವನೇನೆಱದುಕೊಂಡುದೊ ಬಂದ ಬಸಂತರಾಜನಾ (ಆದಿಪು. ೧೩-೬). [ ತಳಿರ್$_2$ + ಓಳಿ ]

**ತಳಿರ್ಗಯ್**, ತಳಿರ್ಗೈ (ನಾ). ಚಿಗುರಿನಂತೆ ಕೋಮಲವಾದ ಕೈ: ತಳಿರ್ಗಯ್ಯೊಳರರೆ ರಂಜಿಸುವ ಪೂಚೆಂಡಿನಿಂ (ಪದ್ಮರಾ. ೫-೪೨): ತಳಿರ್ಗಯ್ಯ ತೆಳ್ವಸುಱ ಸುಳಿಗುರುಳ ಸೆಳೆನಡುವಿನೆಳಜವ್ವನದ ಮುದ್ದುಮೊಗದ . . . ಮಹಾಪಾತಿವ್ರತಾಜನಂ (ಚಬಪು. ೨೦-೧೫). **ತಳಿರ್ಗೈ**: ತಳಿರ್ಗೈಯೊಳ್ ಪಿಡಿದಪರಂಜಿಯ ಸೆಳೆಯುಲರ್ವಿಲ್ಲನ ಪಡಿಯುಚಿತಿಯ ಕೈಯೊಳಗೊಪ್ಪುವ ಸೆಳೆಯಂತೆ ವಿರಾಜಿಸಿತು (ಜಯಕಾ. ೨-೪೭); ತಳಿರ್ಗೈಯ ತಂಪಿಗ ವಿರಹಮಂ ತವಿಸಿ ನೆರೆಯೊ (ಚಬಪು. ೧೯-೩೭).

[ ತಳಿರ್$_2$ + ಕಯ್$_2$ (<ಕೆಯ್$_2$) ]

**ತಳಿರ್ಗಳಸ**(ನಾ). (ಮಂಗಳಕಾರ್ಯಗಳಲ್ಲಿ ಪೂಜಿಸುವ)ಚಿಗುರೆಲೆಗಳನ್ನು ಇಟ್ಟಿರುವ ಕಳಶ: ತಳಿರ್ಗಳಸಂ ಮುಕುಂದರವಮೌತ್ತಿದ ಮುತ್ತಿನ ಮಂಟಪಂ ಮನಂಗೊಳಿಪ ವಿತಾನಪಙ್ಕ್ತಿ (ಪಂಪಭಾ. ೧-೧೦೭): ನಳನಳಿಪ ಜಾಗದೊಪ್ಪುವ ತಳಿರ್ಗಳಸದ ಬೆಳಪ ರತ್ನದೀಪದ (ಚಂದ್ರಪು. ೦೩-೩೯): ನಿಂದು ತಳಿರ್ಗಳಸ[ಪಾಠಾಂ. ಶ]ದಿಂ ಮೆಱೆವ ವನಿತೆಯರೊಳಗೆ (ನಂದಿರ. ೫-೮೭). [ ತಳಿರ್$_2$ + ಕಳಸ$_1$ (<ಕಲಸ) ]

**ತಳಿರ್ಗಾಲ್** (ನಾ). ಚಿಗುರಿನಂತೆ ಕೋಮಲವಾದ ಪಾದ: ತಳಿರ್ಗಾಲ್ಗಳ ತಾರಾಪಥಮಧ್ಯದ ಹಸುಳೆವೆಱೆಯ ಪಣೆಯ . . . ಲಲನೆಯರ ವಿಲಾಸಂ ನೃಪನಱೆತಮನೆಳಕುಳಿಗೊಳಿಸಿದುದು(ಜಯಕಾ.೨-೩). [ತಳಿರ್$_2$ + ಕಾಲ್$_1$]

**ತಳಿರ್ಗಾಲ** (ನಾ). ಚಿಗುರು ಬಿಡುವ ಕಾಲ; ವಸಂತಋತು: ಮಳೆಗಾಲ ಹಿಮಗಾಲ ಚಳಿಗಾಲ ಪೋಗಿಹವು ತಳಿರ್ಗಾಲ ಬೆಳೆಗಾಲ ಫಲಗಾಲ ಬಹವು (ವಿಸೀಗೀ. ೨೮-೬). [ತಳಿರ್$_1$ + ಕಾಲ ]

**ತಳಿರ್ಗಾವಿ**, ತಳಿರುಗಾವಿ (ನಾ). ೧. ಚಿಗುರಿನಂತಿರುವ ಕಾವಿಬಣ್ಣ; ಎಳಗೆಂಪು: ಅತ್ರಿಕುಮಾರಂ . . . ಪೊಸಗಾವಿಯುಡೆಯುನಟ್ಟಿದುದಱಿಂ ಕಿಱುಗಂಪಾದ ವೇದಪುಷ್ಕರಣಿಯುದಕದಿಂ ರಾಮಾನುಜಾಚಾರ್ಯರ ದುಗುಲಮುಂ ತಳಿರ್ಗಾವಿಗೆಯ್ಯುದೆಂದುಂ (ಚಿಕವಂ. ೧೮೯-೧೨). **ತಳಿರುಗಾವಿ**: ೨. ಚಿಗುರಿನ ಬಣ್ಣದ ಅಂಚಿನ ಬಟ್ಟೆ: ಪಟ್ಟಾವಳಿ ದೋತ್ರ ಬಹಿರ್ವಾಸದಳೆದು ತಳಿರುಗಾವಿಯನುಟ್ಟು ಜಪದ ಮಂಟಪದಲ್ಲಿ ಕುಳಿತರು ಬುಧರು ಸಂದಣಿಸಿ (ಮೋಹತ. ೩-೪೪): ಬಿಳಿಗಾವಿ ಗಾವಿ ಎಳೆಗಾವಿ ಹೆಗಾವಿ ತಳಿರುಗಾವಿಗಳ ಪೊಳೆವ ನಾನಾ ಬಣ್ಣಗಳೊಪ್ಪಿ ಮೆರೆವ (ಹನುಮ. ೮೨). [ ತಳಿರ್$_2$ + ಕಾವಿ ]

**ತಳಿರ್ಗಾಸೆ**, ತಳಿರುಗಾಸೆ (ನಾ).=ತಳಿರ್ಗಾವಿ ೨: ಮುನಿಜನಂಗಳಿಂಗೆದಾಜಲಿಕ್ಕಿದ ತಳಿರ್ಗಾಸೆಗಳ ಸೋರ್ದ ಬಣ್ಣದಿಂ (ಕಾದಂಪೂ. ೧೧೭): ಪೊದೆದ ಧವಳೋತ್ತರೀಯದ ಉಟ್ಟ ತಳಿರ್ಗಾಸೆಯ[ಪಾಠಾಂ. ದೊರ್ತ್ರದ]ಇಕ್ಕಿದ ಯಜ್ಞೋಪವೀತದ (ನಂದಿರ. ೧೬-೧೦೪); ಉಟ್ಟ ತಳಿರ್ಗಾಸೆಗಳನಳವಡಿಸಿ ಕೊಂಡು (ವೀಛ್ಕಪು. ೨-೧೨-೨೨); ಒಡಲ ಭಸಿತೋದ್ಧೂಳನದ ಕಂಜೆದೆಯ ರುದ್ರಾಕ್ಷಾವಿಕಲ್ಪದ ಜಡಿವ ಮಣಿಕುಂಡಲದ ನಿಡುಗಡ್ಡದ ತಳಿರ್ಗಾಸೆ ಉಡಿಗೆ ಬಹಿರ್ವಾಸದ . . . ಗಣೇಶನಂ ಕಂಡ (ಶಂಕದಾ. ೧೦-೭೩). **ತಳಿರುಗಾಸೆ**: ಎಲವೊ ಮಟ್ಟಿಯ ಮದನ ದರ್ಪಣಿಯ ತಿಲದ ಮನ್ಮಥ ವಿಮಲ ಧೋತ್ರದ ತಳಿರುಗಾಸೆಯ ಕಾಮ ಕೃಷ್ಣಾಜಿನದ ಕಂದರ್ಪ (ಕುಮ್ಮಾಅ. ೦೫-೨೦); ಬೆರಲೊಳೊಪ್ಪುವ ಪವಿತ್ರದ ತಿರುಪುತಿರ್ವ ಜಪಸರದ ಸಿಱಿವಿಡಿದುಟ್ಟ ತಳಿರುಗಾಸೆಯ (ಸೌಂದಪು. ೧-೩೩); ತಳಿರುಗಾಸೆಯ ಧೋತ್ರ ಬಹಿರ್ವಾಸ ಮೂಗಿನಿಂದಿಳಿದ ನಾಮಗಳ ವೈಷ್ಣವರು (ಮೋಹತ. ೦೭-೩೦). [ ತಳಿರ್$_2$ + ಕಾಸೆ$_2$ ]

**ತಳಿರ್ಗೆಂಪು**, ತಳಿರುಗೆಂಪು (ನಾ). ಚಿಗುರೆಲೆಯ ಕೆಂಬಣ್ಣ: ಕುರುಳ ಕಾಳಿಕೆ ಮೈಕಾಂತಿ ಕೈ ತಳಿರ್ಗೆಂಪು ಪಿರಿದಾದ ಬಾಯ್ದೆಱೆ ಬೆಳ್ಪು (ಶಂಸವಿ. ೫-೬೫). **ತಳಿರುಗೆಂಪು**: ಸಂಜೆಗೆಂಪ ತಳಿರುಗೆಂಪ ತುಟಿಯ ಕೆಂಪು ಮೀರಲು (ಕವಿಸೂ. ೨೨-೯). [ ತಳಿರ್$_2$ + ಕೆಂಪು$_1$ ]

**ತಳಿರ್ಗೈ** 'ತಳಿರ್ಗಯ್' ನೋ.

**ತಳಿರ್ಗೊಂಚಲ್** (ನಾ). ಚಿಗುರಿನ ಗೊಂಚಲು; ಪಲ್ಲವಗುಚ್ಛ: ತಳಿರ್ಗೊಂಚಲ ತಳ್ತ ಕೆಂಪಿನಿಂ ಪುದಿದಮರಾವನೀರುಹಮೊ ಪೇಱೆನೆ ಬಾಲಕನಾದವೊಪ್ಪಿದಂ (ಕಾದಂಪೂ. ೪೧೪). [ ತಳಿರ್$_2$ + ಗೊಂಚಲ್ ]

**ತಳಿರ್ಗೊಂಬು** (ನಾ). ಚಿಗುರೆಲೆಗಳಿಂದ ಕೂಡಿದ ಕೊಂಬೆ: ಇರ್ತಡಿವಿಡಿದು ನಟ್ಟ ತಮಾಲದ ತಳಿರ್ಗೊಂಬುಗಳಿಂ (ಕಾದಂಉ. ೨೦೪); ಬಂದು ಮಾಮರದ ತಳಿರ್ಗೊಂಬನುಯ್ಯಲಾಡಿ (ಪುಷ್ಪಪು. ೨-೪೪); ಕಮಲಕೆಱಗು ವಳಿಕುಲಮೋ ತಳಿರ್ಗೊಂಬಡರ್ದ ಬರ್ಹಿಯೋ (ಜೈಮಿಭಾ. ೫-೦೫).

[ ತಳಿರ್$_2$ + ಕೊಂಬು$_1$ ]

**ತಳಿರ್ಚು** (ಕ್ರಿ). ಚಿಗುರಿಸು; ಪಲ್ಲವಿಸುವಂತೆ ಮಾಡು: ಮರಗಳೆಡೆಯೆಡೆಯ ನೆಲನಂ ಚರಣಾಂಶುವಿನಿಂ ತಳಿರ್ಚು ಬಯಲಂ ನಿಜಕೇಕರ ರುಚಿಯಿನಲರ್ಚೇಟ್ಟಿಂಪರಸಿ ಬನಕ್ಕಂ ಬೞಿಕ್ಕೆ ಸಿರಿ ಪರಿಪೂರ್ಣಂ (ಚಂದ್ರಪು. ೭-೭೨). [ ತಳಿರ್$_1$ + – ಚು$_1$ ]

**ತಳಿರ್ಜೊಂಪ** (ನಾ). = ತಳಿರ್ಗೊಂಚಲ್: ತಳಿರ್ಜೊಂಪದೋವರಿಯ ತಣ್ಪುಳಿಲೆಡೆಯೊಳ್ಮಿಸುಪ ಚಂದ್ರಕಾಂತದ ಘಟದೊಳ್ಕುಳಿರ್ವಾಲಿನೀರ ನಬಳಾವಳಿ ತಣ್ಗರಗದೊಳೆ ತೀವಿ ಪಥಿಕರ್ಗೆಱೆಗುಂ (ವೃಷವಿ. ೪-೨೬).

[ ತಳಿರ್$_2$ + ಜೊಂಪ$_1$ ]

**ತಳಿರ್ತ** 'ತಳಿರ್$_1$' ಪರಾ.

**ತಳಿರ್ತು** 'ತಳಿರ್$_1$' ಪರಾ.

**ತಳಿದುಟಿ** (ನಾ). ಚಿಗುರಿನಂತೆ ಇರುವ ತುಟಿ; ಪಲ್ಲವಾಧರ: ತಳಿದುಟಿಯೆನಲು ಚುಂಬಿಸಿದಂತೆ ನಲಿವರುಂಟೊಲಿವರಾರಧ್ಯಾತ್ಮರಸಕೆ (ಭರತ. ೨-೫೧); ಅಳಿಚಳಾಳಕಂ ತಳಿದುಟಿ ಕೋಮಳ ತನುಲತೆ . . . ಕಳಹಂಸ ಗಮನಮೆಳೆಯುಳ್ಗಿಸೆಗುಂ (ರಾಜಶೇ. ೭-೧೦೨). [ ತಳಿರ್$_2$ + ತುಟಿ$_2$ ]

**ತಳಿದೊರ್ಂಗಲ್**. ತಳಿರುತೊಂಗಲು (ನಾ).=ತಳಿರ್ಗೊಂಚಲ್: ಸು[illegible] ದಳಿರಾ[illegible] ಪೂಗಣೆಗೆ ಕಂಗಱಿ ಕೈಪೊಡೆಯಾಯ್ತು, ನುಣ[illegible] ದೆ[illegible] ಮಿಕ್ಕ ತಳಿರ್ವಿಡಿಯೋಗಿಯುಂ ಕಳಕುಳಮಾಗೆ ಮಾಱೆಪ್ಪಿದೆಗರೆೋಕೆಯ ಕೆಂಪಿ ರೆ[illegible] (ಮಲ್ಲಿಪು. ೫-೨೦): ನಿಱಿದಳ[ರ್]ದೊಂಗಲುಂ ತಳಿರ[illegible] 11, ದಾವಣ. ೩೫-೩೭: 1160): ಇರೆ ನವಪದ್ಮರಾಗಚಷಕ

ನಿಜಹಸ್ತತಳಾಗ್ರದೊಳ್ ಮನೋಹರಿ ತಳಿರ್ದೊಂಗಲಿಂ ತಳೆದ ಕೋಮಲ ವಲ್ಲರಿಯಂತೆ . . . ಎಸೆದಳ್ (ಜಗವಿ. ೧೬-೧೧೫); ಪಸುರ್ದಳಿರ್ದೊಂಗಲಿಂ ಪುದಿದ ಬಲ್ಲನೆಯಿಂ ಮುಗುಳಿಂದಲರ್ಗಳಿಂ. . .ಎಸೆವುದೊಂದು ಬಿಲ್ವಕುಜಂ (ವಠಕು. ೮-೬) ; ಚೆಂಬೊಳಪಾಂತ ಜಡೆಗಳೆಳದಳಿರ್ದೊಂಗಲಾಗೆ (ನಂದಿಪು. ೨-೨೪). **ತಳಿರುತೊಂಗಲು :** ಮಂಜಕ್ಕ ಮನೆಯನ್ನು ತಳಿರುತೊಂಗಲುಗಳಿಂದ ಅಲಂಕರಿಸಿದಳು (ಹಾಹುತ್ತ. ೮೮). [ ತಳಿರ್$_2$ + ತೊಂಗಲ್ ]

**ತಳಿರ್ದೊಂಬೆ** (ನಾ). = ತಳಿರ್ಗೊಂಚಲ್ : ಸೋಗೆ ಮಾವು ಮೊದಲಾದ ತಳಿರ್ದೊಂಬೆಗಳಿಂ (ಚಿಕವಂ. ೮೫-೪) ; ಗುಂಡುಗೋಗಿಲೆಗಳ್ ಮೆಲ್ದಳಿರ್ದೊಂಬೆಯೊಳ್ ಗಿಳಿಗಳಿವ್ಮಾವಣ್ಗಳೊಳ್ . . . ಎಂದಿಗಂ ತಣಿಯದಂತೆ (ಚಿಕವಿ. ೧-೯೧). [ ತಳಿರ್$_2$ + ತೊಂಬೆ$_1$ ]

**ತಳಿರ್ದೋರಣ,** ತಳಿರುತೋರಣ (ನಾ). ಚಿಗುರೆಲೆಗಳಿಂದ ರಚಿಸಿದ ತೋರಣ : ಸುರಥನು ತಳಿರ್ದೋರಣವಾಲಿ ರಂಗವಲಿ ಬದ್ಧವಣಂ ಜಳದರವಮಾಗೆ ಜಯಮಂಗಳಸೂಚಕಮಾದುದತನುಗಾ ಘನಸವಮಯಂ (ಚಂದ್ರಪು. ೪-೪೨) ; ತಳಿರ್ದೋರಣಂ ಅಲರ್ದೋರಣಂ (ಶಮದ. ೪೩ ಪ್ರಯೋ) : ಮಿಱುಗುವ ತಳಿರ್ದೋರಣಂಗಳಂ ಕಟ್ಟಿಸುತ (ಜ್ಞಮಿಭಾ. ೮-೩). **ತಳಿರುತೋರಣ :** ತಳಿರುತೋರಣ ಮಾವಿನಸೊಪ್ಪು ಮುಂತಾದವುಗಳನ್ನು ಕಟ್ಟುವದಕ್ಕೋಸ್ಕರ ಬಾಗಿಲ ಹೊರಗಡೆ ಕಾಣುವಂತೆ ೨ ಕಂಭಗಳಿಂದ ಕಟ್ಟಲ್ಪಟ್ಟ ದ್ವಾರಬಂಧನದ ಚೌಕಟ್ಟು ಮನೆಯ ಹೊರಬಾಗಿಲು (ಸಿದ್ಧಾಂತಿ. ೯೨) ; ಬಾಗಿಲಿಗೂ ರಂಗಮಂಟಪಕ್ಕೂ ತಳಿರುತೋರಣಗಳನ್ನು ಕಟ್ಟಿದರು (ಕಪಪು. ೩-೪೦). [ ತಳಿರ್$_2$ + ತೋರಣ ]

**ತಳಿರ್ವಟ** (ನಾ). ಚಿಗುರೆಲೆಗಳಿಂದ ಮಾಡಿದ ಕೊಡೆ (?) : "ತಳಿ [ಹಾಂಾಂ. ಳ]ರ್ವಟ ಸತ್ತಿಗೆಯುಕ್ಕುಂ" (ಭಾರನಿ. ೪೦). [ ತಳಿರ್$_2$ + ಪಟ$_3$ ]

**ತಳಿರ್ಮಂಟಪ** (ನಾ). ಚಿಗುರೆಲೆಗಳಿಂದಾದ ಮಂಟಪ; ಬಳ್ಳಿ ಮಂಟಪ: ಕಂಠಗತಪ್ರಾಣದ ಕುವರಿಯ ತಳಿರ್ಮಂಟಪದೆಡೆಗೆ ಸಾರ್ಚಿದರು (ಮೋಹತ. ೨೮-೧೨). [ ತಳಿರ್$_2$ + ಮಂಟಪ ]

**ತಳಿರ್ವಂದರ್** (ನಾ). ಚಿಗುರೆಲೆಗಳ ಚಪ್ಪರ,–ಮಂಟಪ : ಕನಕನಗದ ನಂದನಮಧ್ಯದ ಮಂದಾರತರುಗಳ ತಳದ ತಣ್ಣೆಳಲ ತಳಿರ್ವಂದರ ಮಲ್ಲಿಕಾಕುಸುಮಮಾಲಿಕಾಲಂಕೃತ ಕುಸುಮಮಂಟಪದೊಳ್ (ರಾಜಶೇ. ೧-೧೩೫ ವ). [ ತಳಿರ್$_2$ + ಪಂದರ್ ]

**ತಳಿರ್ವಜ್ಜೆ** (ನಾ) = ತಳಿರಡಿ : ತಳಿರ್ವಜ್ಜೆಯ ತರುಣಲತಾಮಧ್ಯದ . . . ಲಸದ್ಬಿಂಬಾಧರದೆಳಜವ್ವನೆ (ಜಯುಕಾ. ೧೧-೧೮) ; ತಳಿರ್ವಜ್ಜೆಗಳ ತಾವರೆ ಪಜ್ಜೆಗಳ ತಳತಳಿಸುವ ರನ್ನವಜ್ಜೆಗಳ ನಳಿನನೇತ್ರೆಯರು (ಕುರಾಸಾಂ. ೨೧-೪೩). [ ತಳಿರ್$_2$ + ಪಜ್ಜೆ ]

**ತಳಿರ್ವಟ್ಟೆ** (ನಾ). ೧. = ತಳಿರುಡೆ : (೩). ೨. ಚಿಗುರಿನ ಬಣ್ಣದ ಬಟ್ಟೆ ; ಕೆಂಬಣ್ಣದ ಬಟ್ಟೆ : ನನೆಯುಂಬನುಟ್ಟ ತಳಿರ್ವಟ್ಟೆಯನಾಗಳೆ ಮೆಚ್ಚುಗೊಟ್ಟು ಮೆಲ್ಲನೆ ನಡೆತಂದು (ಕಬ್ಬಿಗಾ. ೯೨) : ನೆಲೆಗೊಳಿಸಿ ಕಟ್ಟಿದ ಪೊಂಬಟ್ಟೆಯ ವಿತಾನದ ಪರಿಸರದೊಳ್ನಿಱಿವಿಡಿದೆಳಲೆವಿಟ್ಟ ತಳಿರ್ವಟ್ಟೆಯ ಚಿತ್ರಾವಳಿಯ ಮೇಲ್ಕಟ್ಟು (ರಾಜಶೇ. ೮-೫ ವ). [ ತಳಿರ್$_2$ + ಬಟ್ಟೆ$_2$ ]

**ತಳಿರ್ವಡಿಸು** (ಕ್ರಿ). ಚಿಗುರಿಸು ; ಪಲ್ಲವಿಸುವಂತೆ ಮಾಡು: ಕತಿಪಯ ಪದಗತಿಯಿಂ ಶೀತಕರೋಪಲ ಕುಟ್ಟಿಮತಳಮಂ ತಳಿರ್ವಡಿಸಿ (ಶಾಂತೀಶ್ವ. ೧೫-೭೨ ವ). [ ತಳಿರ್$_2$ + ಪಡು$_1$ + – ಇಸು$_3$ ]

**ತಳಿರ್ವಡೆ** (ಕ್ರಿ). = ತಳಿರಿಡಿ: ಇತ್ತರದಲಿ ತಳಿರ್ವಡೆದಿರ್ದ ಮಾಮರ ಮಂತ್ರೇಭ ಗಿಳಿ ತೇಜಿವಿಂಡು (ಮೋಹತ. ೬-೧೯). [ ತಳಿರ್$_2$ + ಪಡೆ$_1$ ]

**ತಳಿರ್ವಣ್ಣ** (ನಾ). ಚಿಗುರಿನ ಬಣ್ಣ ; ಕೆಂಬಣ್ಣ : ಹಸುರುಗುಪ್ಪಸ ನವಿಲ ಗಱಿವೆರೆದ ಸಿಜಗಿನಿಂದೆಸೆವ ತಳಿರ್ವಣ್ಣದ ಸುರಿಯ ಸೀಲೆ (ರಾಘವ ೧೭-೬೫). [ ತಳಿರ್$_2$ + ಬಣ್ಣ ]

**ತಳಿರ್ವನೆ** (ನಾ). = ತಳಿರೋವರಿ : ತಳಿರ್ವನೆಯೊಳ್ ನಲ್ಲನಂ ನೆಸೆದು ದೂಱಿಸುತಿರ್ಪಿಚ್ಚೆಗಾರ್ತಿಗಾ ತೆಱನೆಲ್ಲಮಂ ಬಿನ್ನಪಂಗೆಯ್ವುದು (ಕಬ್ಬಿಗಾ. ೩೨೧) : ಪಟ್ಟಣದ ಪೂಜಿವಳೆಯಮೊಳ್ ಲತಾಸಂತತಿಗಳಿಂ ಕುಸುಮ ಶೋಭೆಯಿಂ . . . ಫಲಾನೀಕದಿಂ ತಳಿರ್ವನೆಗಳಿಂ (ಚಬಪು. ೧೧-೨೦) : ತಳಿರ್ವನೆ ಪುಷ್ಪಮಂಟಪ ದಿವ್ಯ ಪುಳಿನಸ್ಥಳಗಳಿಗಿನಿಯರನೊಯ್ವುದು (ಕಂಸವಿ. ೫-೧೧೦). [ ತಳಿರ್$_2$ + ಮನೆ ]

**ತಳಿರ್ವಸೆ** (ನಾ). = ತಳಿರ್ವಾಸು : ನಿನ್ನಯ ವಿರಹೋದ್ರೇಕದಿನಿನ್ನುಂ ತಳಿರ್ವಸೆಯ ಮೇಲೆ ಪೊರಳುತ್ತಿರ್ದಾ ಕನ್ನೆಯ ರೂಪಿನ್ನಿದಿರೊಳ್ ಸನ್ನಿದಮಾದಂತೆ ತೋಱುತ್ತಿರ್ದಪುದೀಗಳ್ (ಕಾದಂಉ. ೩೨೫) ; ಸಿರಿಖಂಡದ ಬಂಡಿನೊಳಲಂಬಿ ತಳಿರ್ವಸೆಯ ಪಕ್ಕದೊಳ್ ನೇಱಿದ ನವೀನ ಚಮರಜಂಗಳುಂ (ವರ್ಧಪು. ೫-೬೩ ವ) : ತಳಿರ್ವಸೆಯು ತಾಣದೊಳ್ಮಲಯಜದ ಮಾಡದೊಳ್ . . . ನಿಲಲಱಿಯದುಪ್ಪರಿಗೆದುದಿನೆಲೆಯು ಚಂದ್ರಶಾಲೆಗೆ ಬಂದಳಂಬುಜಾಕ್ಷಿ (ಜ್ಞಮಿಭಾ. ೩೦-೩೬). [ ತಳಿರ್$_2$ + ಪಸೆ$_3$ ]

**ತಳಿರ್ವಾಯ್** (ನಾ). ಚಿಗುರಿನಂತೆ ಕೋಮಲವಾದ ಬಾಯಿ; ಕೆಂಪಾದ ಬಾಯಿ : ಬಂದರ್ ಪವಳವಾಯ ತಳಿರ್ವಾಯ ತೊಂಡೆವಾಯೊಳ್ವೆಂಡಿರ್ (ಜಗವಿ. ೪-೧೨೨) ; ತೀವಿದ ಪಾಲ್ಗೊಲೆಯಂ ತಳಿರ್ವಾಯಿಂ ಡಾವರಿಸುತ ಕರ್ಚುವ ಕಂದನ (ಜಯುಕಾ. ೨-೩೭). [ ತಳಿರ್$_2$ + ಬಾಯ್ ]

**ತಳಿರ್ವಾಸಿಕೆ** (ನಾ). = ತಳಿರ್ವಾಸು : ತಳಿರ್ವಾಸಿಕೆಯೊಳು ಮಲಗಿ ಪನ್ನೀರ್ಗಳ ತಳಿದಲರ್ವಿಜ್ಜಣಿಗೆಯಲಿ . . . ಬೀಸಿಕೊಳುತಲಿ (ಸಾಂದಕಾ. ೪-೬೫). [ ತಳಿರ್$_2$ + ಪಾಸಿಕೆ ]

**ತಳಿರ್ವಾಸಿಗೆ**(ನಾ).=ತಳಿರ್ವಾಸು:ಚಿಗುರ್ದ ಮಾಮರನೆಳಲಿನಿಂ ತಳಿರ್ವಾಸಿಗೆಯ ಗೆಯ್ವುದು ಕುಳ್ಳಿರಿಸುತ್ತ (ನವಮೋ. ೧೬-೩೪). [ ತಳಿರ್$_2$ + ಪಾಸಿಗೆ ]

**ತಳಿರ್ವಾಸು** (ನಾ). ಚಿಗುರೆಲೆಗಳಿಂದ ಮಾಡಿದ ಹಾಸಿಗೆ,–ಹಾಸು : ಇನಿಯನಗಲ್ದು ಪೋಗಿ ಪರದೇಶದೊಳಿರ್ದಪನಾನುಮಿಲ್ಲಿ ಮಾವಿನ ತಳಿರ್ವಾಸಿನೊಳ್ ಪೊರಳುತಿರ್ದಪೆನಾಗಳುಂ (ಆದಿಪು. ೧೨-೪೨) : ತರುಣಿಯ ವಿಯೋಗತಾಪಕ್ಕೆ ರಜನಿಯುಂ ಕೆಳದಿಯಂತೆ ತಳಿರ್ವಾಸಂ ಬಿತ್ತರಿಸುತ್ತಮಿರ್ದಳೆಂಬಂತಿರೆ ಬಿತ್ತರಿಸಿತ್ತು ಸಾಂದ್ರ ಸಂಧ್ಯಾರಾಗಂ (ಕಾದಂಉ. ೩೨೦) : ಅಡೆವೊತ್ತಿನ ತಳಿರ್ವಾಸಿನ ಪಿಡಿದಿರ್ದಂಬುಜದ ನಡುವೆ . . . ಪುಟಪಾಕಂಗುದ ಸುಡುವಂತಿರ್ಪುವಲ್ಲಿ ವಿರಹಿಜನಂಗಳ್ (ಅಜಪು. ೨-೧೧) : ತಳಿರ್ವಾಸಿನಿಂದ ಸೆಜ್ಜೆಗೆ ಕೆಳದಿಯರೆಂತರ್ಕೆ ಕೊಂಡುಪೋದರ್ ವಿರಹಾಕುಲೆಯಂ (ಶಮದ. ೧೧೮ ಪ್ರಯೋ). [ ತಳಿರ್$_2$ + ಪಾಸು$_2$ ]

**ತಳಿರ್ವೇಱಿಸು** (ಕ್ರಿ). ೧. ಚಿಗುರನ್ನು ತಳೆಯುವಂತೆ ಮಾಡು; ಚಿಗುರಿಸು : ಮೃದುಪದಘಾತದಿಂದಸುಕೆಯಂ ತಳಿರ್ವೇಱಿಸಿ (ಮಲ್ಲಿಪು. ೬-೫೩) : ಅರುಣತಲದ್ಯುತಿತತಿಯೆಡೆದೆಱಪುಗಳಿಂದುಣ್ಮುವುದದಿಂ ಕಂಬೆರಲುಂಗುರದಿನೊಗೆವರುಣರುಚಿಮಂಜರಿ ತಳಿರ್ವೇಱಿಸಿದುದ್ದೈದೆ ಕರಶಾಖೆಗಳಂ (ಚಂದ್ರಪು. ೬-೭೧). ೨. ಚಿಗುರಿಟ್ಟಂತೆ ಕೆಂಪಾಗಿಸು : ಪಸರಿಪ ಪಾದರಾಗವಿಳಿಯಂ ತಳಿರ್ವೇಱಿಸೆ . . . ನಡೆತಂದುದು ಸೌಂದರೀಜನಂ (ಚಂದ್ರಪು. ೬-೯೫). [ ತಳಿರ್ವೇಱು + – ಇಸು$_3$ ]

**ತಳಿರ್ವೇಱು** (ಕ್ರಿ). ಚಿಗುರನ್ನು ತಳೆ ; ಚಿಗುರಂ ; ಪಲ್ಲವಿಸು : ರಥಂ ರಥದೊಳಾರ್ದು ಪಳಂಚೆ ನಭಂ ದಿಶಾತಟಂ ಧರೆ ಕಡುಗೆಂಪದಾಯ್ತೊಗೆವ ಶೋಣಿತದಿಂದೆ ಜಗಂ ಮಹಾವನಾಂತರಮೆ ಪೊದಟ್ಟ ರೌದ್ರರಸಸೇಚನದಿಂ ತಳಿರ್ವೇಱಿತೆಂಬಿನಂ (ಜಗವಿ. ೭-೫೨). [ ತಳಿರ್$_2$ + ಪೇಱು$_1$ ]

**ತಳಿರ್ವೊದಱ್**(ನಾ). ಚಿಗುರೆಲೆಗಳಿಂದ ತುಂಬಿದ ಪೊದರು;ಚಿಗುರೆಲೆಗಳ ದಟ್ಟಣೆ : ದಾವಾಗ್ನಿ ನಿಡುವುರಿಯ ಸಾಲಗೆಗಳೆನೆ ಕೆಂಪುದೀವಿದಟ್ಟಯಿಸಿರ್ದ ತಳಿರ್ವೊದರ್ಗಳ ಕೆಳಗನಾವರಿಸುತೆಳಲ್ವ ತಳಿರಿಂದಶೋಕ ದ್ರುಮಂಗಳ್ ಕರಂ ಮೆಱೆದುವಂದು (ಚಬಪು. ೪೫-೧೯). [ ತಳಿರ್$_2$ + ಪೊದಱ್ ]

**ತಳಿರ್ವೊಱೆ** (ನಾ). ಚಿಗುರೆಲೆಗಳ ಹೊರೆ: ತಳಿರ್ವೊಱೆವೊತ್ತುದಲ್ಲದಲರಂ ಸಲೆ ತಾಳ್ದುವ ಸೈಪುವೆತ್ತುದೇ ಮಳಯಜಂ (ಚಂದ್ರಪು. ೭-೯೨).
[ ತಳಿರ್₂ + ಪೊಱೆ ]

**ತಳಿರ್ವೋಗು** (ಕ್ರಿ). ಚಿಗುರಿಡು ; ಪಲ್ಲವಿಸು : ಪೊಸತಲರ್ದ ಕೊಸಗು ತಳಿರ್ವೋದಸುಗೆ ಪಸುರ್ನನೆಯೊಳಿಡಿದ ಮಲ್ಲಿಗೆ (ಆದಿಪು. ೧೧-೮೫). 'ಅಲರ್ವೋಗು' ಪರಾ. [ ತಳಿರ್₂ + ಪೋಗು₁ ]

**ತಳಿಲು₁** 'ತಟಲ್' ನೋ.

**ತಳಿಲು₂** 'ತಾಳಿಲು' ನೋ.

**ತಳಿಲು₃** 'ತಳಲು₃' ನೋ.

**ತಳಿವರ** (ನಾ). ಮರದ ದಿಮ್ಮಿ ; ಸ್ಥೂಲದಾರು : ತಳಿವರ ನೂಲ ಹಂಗಿಗೆ ಕಬ್ಬುನದ ಬಲ್ವಲಗೆ . . . ಮಕರದಿಬ್ಬ ಸಲೆ ಮೆಱೆದವು ದುರ್ಗದೊಳಗೆ (ಕುರಾಸಾಂ. ೩೭-೫೭). [ ತಳಿ₄ (<ತಟ್) + ಮರ₁ ]

**ತಳಿವು** (ನಾ). ತಳಿಯುವಿಕೆ ; ಸೇಚನ : "ಘರತಿ-ಚಿಮುಕಿಸಿದಪುದು . . . ಘರ್ತವ್ಯಂ, ಘರಣೀಯಂ, ಘಾರ್ಯಂ ಈ ೩ ತಳಿವು" (ಕಾಶಕ್ರ. ೭೫).
[ ತಳಿ₁ + -ವು ]

**ತಳಿಶಾಸ್ತ್ರ** (ನಾ). "(ಜನನಕ್ರಿಯೆಗೆ ಸಂಬಂಧಪಟ್ಟ ಶರೀರವಿಜ್ಞಾನವನ್ನೂ, ತಳಿಯೆಬ್ಬಿಸುವ ಕುಶಲವಿದ್ಯೆಯನ್ನೂ ಒಳಕೊಂಡ) ಅನುವಂಶೀಯದ ಮತ್ತು ಜೀವಿವ್ಯಾದರಿಗಳ ರೂಪಸ್ಥಿತಿ ವ್ಯತ್ಯಯದ ವಿಚಾರ : ತಳಿಶಾಸ್ತ್ರ" (Genetics. ಇಂಕಲಿ.). [ ತಳಿ₅ + ಶಾಸ್ತ್ರ ]

**ತಳಿಸಾರಿ** (ನಾ). ಎಸೆದ ಲೆತ್ತದ ಕಾಯಿ : ದುಗನ ಹಾಯಿಕು ತನಗೆ ಹಾಯ್ಕಿತ್ತಿಗನವೆಂಬಬ್ಬರದ ಹಾಸಂಗಿಗಳ ಚೊಬ್ಬೆಯ ಸಾರಿಗಳ ಮಣಿ ಖಟಿಲನಿಸ್ವನವ . . . ಬೀದಿಗಳ ತಳಿಸಾರಿಗಳ ಧಾಳಾಧೂಳಿ ಮಸಗಿತು (ಕುವ್ಯಾಸ. ೦೩-೫೦). [ ತಳಿ₁ + ಸಾರಿ₃ ]

**ತಳಿಸು₁, ಚಳಿಸು₁, ಛಳಿಸು₁, ತೊಳಸು₁, ತೊಳಿಸು, ಥಳಿಸು₁** (ಕ್ರಿ). ೧. (ಬತ್ತ ಮೊದಲಾದುವನ್ನು) ಕುಟ್ಟು: ಕೇಸಕ್ಕಿಯಂತೆ ತಳಿಸಿದಕ್ಕಿಯಂತೆ ಕರ್ಚಿದಕ್ಕಿಯಂತೆ (ಧರ್ಮಾಮೃ. ೧೨-೨೪) : ಘನವ ಕಾಂಬುದಕ್ಕೆ ಮನ ವೆಂತಾಗಬೇಕೆಂದರೆ ಅಕ್ಕಿಯ ತ[ಪಾಠಾಂ. ಥ]ಳಿಸಿದಂತೆ ಹಲ್ಲ ಸುಲಿದಂತೆ ಕನ್ನಡಿಯ ನೋಡಿದಂತೆ ಮನ ನಿರ್ಮಲವಾದಲ್ಲದೆ ಘನವ ಕಾಣಬಾರದು (ಲಿಂಗವ. ೧೨-೪೭) ; ಶಶಿಕಾಂತದಿಂ ಸಮೆದೊರಲ್ಗಳೊಳಂ ಬಿದಿರಕ್ಕಿಯಿಕ್ಕಿ . . . ಸುವ್ವಿ ಸುವ್ವಿಯೆಂದಳವಡೆ ರಾಗದಿಂ ತಳಿಸಿದರ್ ವನದಲ್ಲಿ ಪುಳಿಂದಕಾಂತೆಯರ್ (೧೦ಕ. ೧-೦೨೩) : ತ[ಪಾಠಾಂ. ಚ]ಳಿಸಿ ರಾಜಾನ್ನದಕ್ಕಿಯನ್ನು ನಾಲ್ಕೈದು ಸೂಳ್ ತೊಳೆದು (ಸೂಪಶಾ. ೩-೨) ; ಉಯ್ಯಕ್ಕಿ ಮುನ್ನೊತ್ತಿ ಕೇಸಕ್ಕಿಯ ತಳಿಸುವರುಯ್ಯಿದ್ದು ಬಿಳಿಯಕ್ಕಿ ಬಿಳುಪು (ಭರತೇ. ೫೪-೨೨). ೨. ಹೊಡೆ ; ಚಚ್ಚು : ಸಿಟ್ಟಿಗೆದ್ದು ಕೈಯೊಳಗಣ ಕೋಲಿನಿಂದ ಸಂಗನನ್ನು ಒಳಿತಾಗಿ ತಳಿಸಿದನು (ಮುಂಬಯಿ. ೨-೩೯) ; ಅವರು ಇವನನ್ನು ಒಳಿತಾಗಿ ತಳಿಸಿದರು(ಮಂದಾಕಿ. ೦೫೪). **ಚಳಿಸು₁ :** ೧. ಪುಳಿಂದಿಯರು ಪಾಡಿ ಚಳಿಸಿದರು ಬಿದಿರಕ್ಕಿಗಳನು (ಹದಶಾ. ೫-೩೩): ಬಿದಿರಕ್ಕಿಗಳಂ ಚಳಿಸುತ್ತೆ ಪಾಡಿದರ್ ಮದವತಿಯರ್ ಕಿರಾತಸತಿಯರ್ ಪ್ರಭುಮೇರುವ ಲೀಲೆಯೇಟಿಗ್ಗಿಯಂ (ಪುಷ್ಪಪು. ೫-೯೨) : ಚಿಲ್ವೆತ್ತಕ್ಕಿಗಳ ಶಿವನಿವೇದನಕೆ ಯೋಗ್ಯವೆಂದುಱೆ ಶೋಧಿಸುತ್ತ ಚಳಿಸಿ (ವೀಶೈಪು. ೭-೧೦-೭೭) ; ಯವೆಯನ್ನು ಚಳಿಸಿ ಅಕ್ಕಿ ಮಾಡಿ ಕುದುರೆಗೆ ತಿನ್ನಿಸುವುದು(ಅಶ್ವಚೀ. ೫೨-೧): ಗೋದಿಯ ಚಳಿಸಿ ಅಕ್ಕಿಯ ಪಾಯಸನಡುವ ಹಾಗೆ ಅಡುವುದು (ಭೀಮಸೂ. ೨೫). **ಛಳಿಸು₁ :** ೧. ಚಿತ್ತ ಸಾಳಿವನವೆಂಬ ತಂಡುಲ ತೊಳಿಯದೆ ಛಳಿಸದೆ ಕುಂಭದೊಳಗೆ ಹಾಕಿ (ನಗಮಾ. ೮೭): ಇಂದುಮುಖಿಯರಿಂದುಕಾಂತದೊರಳನಿಕ್ಕಿ ಚಂದನದೊನಕೆಯ ಪಿಡಿದು ಛಂದದದೆ ಬಿದಿರಕ್ಕಿಯ ಛಳಿಸುತ (ಅಂಜಚ. ೨-೬೩) ; ಸುವ್ವಿಯೆಂದಾ ವನವನಿತೆಯರ್ ಬಿದಿರಕ್ಕಿ ಛ[ಪಾಠಾಂ. ಚ, ತ]ಳಿಪರು (ಸೂಬಸೂ. ೧೪-೬೩) : ಅಕ್ಕಿಯನು ಛಳಿಸಲು ಕೈಯ ಬಳೆಯುಲಿಯೆ (ನಿಘಾಗ. ೧೦-೧೭-೧೨) ; ಶಶಿಕಾಂತದೊರಳೊಳ್ಬಿದುರಕ್ಕಿಯಂ ಪೊಯ್ದು . . . ಗಾನರಸ ಬಿಸಿವ ರಾಗಂಗಳಿಂದೆ ಬಿಸಜಗಣ್ಣೇಱೆಯರ್ವಾಡಿ ಛಳಿಸಲ್ (ಜಕೋಪ. ೧೦-೪೪). ೨. ಛಲವೆತ್ತು ಛದ್ಮನೆಯಿಂ ತುಚ್ಛಭೂಪರು ಛಳಿಪ ಕರ್ಗಣೆ ಗಡೆಯಾಗೆ ಛಳಿಗಂಡವೊಲು ಮೂರ್ಛೆಗೈಸಿ (ಕಶಸಾಂ. ೬೯-೪೯). **ತೊಳಸು₁ :** ೧. ವನಿತೆ ಸೌಟನೊಳಕ್ಕಿಯ ತೊಳಸಿ ಒನಕೇಲಿ ಒಗರ ಹದ ನೋಡಿ (ಪುರಂದ. ೧-೧೧೧-೩) : ತೊಳ[ಪಾಠಾಂ. ತಳಿ, ಚಳಿ]ಸಿದಕ್ಕಿಯ ನನೆಹಿ ಕುಟ್ಟಿ ಸೋದಿಸಿಕೊಂಡು (ಸೂಪಶಾ. ೧-೬೩) ; ತೊಳಸದಕ್ಕಿಯ ತಿಂಬ ಕಿಲುಬು ತಳಿಗೆಯಲುಂಬ ಕೊಳಗದಲಿ ಹಣಗಳನು ಅಳೆದುಕೊಂಡು (ವಿದ್ಯಾಕ್ರ. ೪೧-೧). **ತೊಳಿಸು :** ೧. ಕೇರಿಯೆ ಪಸನಾಗಿ ತೊಳಿಸಿದಕ್ಕಿಯನೀಗ ಎಸರೀಗೆ ನಾ ಹೊಯ್ದೆ (ಜಪಾವ. ೭೮-೭). **ಥಳಿಸು₁ :** ೧. ನೀರ ಒರಳ ಮಾಡಿ ನೆಳಲನೊನಕೆಯಮಾಡಿ ಆಕಾರವಿಲ್ಲದಕ್ಕಿಯ ಥ[ಪಾಠಾಂ. ತ]ಳಿಸುತ್ತಿರಲು (ಬಸಹೆ. ೧೧೧-೩೦೨) : ಚಂದನದೊನಕೆಗಳನು ಪಿಡಿದು ವನದೇಱೆಯರ ಪಾಡುತಾ ಬಿದಿರಕ್ಕಿಗಳನು ಥಳಿಪರು (ಜೀವಂಸಾಂ. ೨೦-೧೪) ; ಮುದದೀನ ಎಬ್ಬಿಸಿದರ ಅರನಿದ್ದಿನಾದಾವ ಎರದೊಬ್ಬಿ ಮಾಡಿ ಥಳಿಸವ್ವ (ಮಲ್ಲಿಗೆ. ೯೨). ೨. ನನ್ನನ್ನು ಚೆನ್ನಾಗಿ ಥಳಿಸಿ ರೂಪಾಯಿಗಳನ್ನು ತೆಗೆದುಕೊಂಡು ಹೋದನು (ಕುಂಕುಮ. ೮೮) ; ಅಪ್ಪ ಚೆನ್ನಾಗಿ ಒಂದು ಹುಣಸೆಯ ಟೊಂಗೆಯಿಂದ ಥಳಿಸಿದ್ದರು (ವಾತ್ಸಲ್ಯ. ೩೨). [ ತಳಿ₁ + -ಸು₁ ]

**ತಳಿಸು₂** 'ತಳಿಯಿಸಂ' ನೋ.

**ತಳಿಸು₃, ತೊಳಸು₅, ಥಳಿಸು₂** (ಕ್ರಿ). ೧. ಹೊಳೆ ; ತಳತಳಿಸು ; ಪ್ರಕಾಶಿಸು: ರಾಜಿಸಿತು ಸರಯೂ ನದಿಯ ಪಕ್ಷವೋಕುಳಿಯ ಕಾಂತಿಯಿಂ ತಳಿಸಿ (ಶ್ರೀರಾಮಾ. ೩೦-೦೧೫). ೨. ಹೊಳಪುಕೊಡು ; ಮಸೆ ; ಹರಿತಗೊಳಿಸು : ಎಳಗೊನೆಯ ಚಿವುಟುವೊಡೆ ಕೊಡಲಿಯ ತಳಿ[ಪಾಠಾಂ. ರಿ]ಸುವರೆ ಕೇಳಲವೊ ಕಪಿ ನಿನ್ನೊಳಗೆ ಕಾದುವಡೇಕೆ ಕೈದುಗಳಸ್ತ್ರಹೀನನಲೆ (ತೊರರಾ. ೬-೩೩-೧೦) ; ತಳಿಸಿದ ಕೊಡಲಿಯೊಲ್ ಸಂದು ಸಂದುಗಳಂ ಕರ್ತರಿಪುದುಂ (ಚಕಬ. ೧೮). **ತೊಳಸು₅ :** ೨. ಆಯುಧಗಳನ್ನು ತೊಳಸುವ ವೃತ್ತಿ ನಮ್ಮೂರ ಕಮ್ಮಾರನದು (ರೂಢಿ). **ಥಳಿಸು₂ :** ೨. ಕುಡುಗೋಲು ಥಳಿಸಿ, ಹಲ್ಲು ಹೊಯ್ಸಿ, ಹೊಲಕೊಯ್ಯಲು ಸಿದ್ಧರಾಗುತ್ತಾರೆ (ನನ್ನೂರು. ೪೩). [ <ತಳತಳ + -ಇಸು₃ ]

**ತಳಿಸು₄** (ಕ್ರಿ). ಒಂದಕ್ಕೊಂದು ತಾಗು,-ಸೇರು: ಪರಸ್ಪರ ಕಲಿತ ಕರಜಾನೂರುಪಾದದ್ವಿತಯಬದ್ಧದಲಿ ತಳಿಸಿ ತೊಡರುವ ಬೀಸಿ ಬಿಸುಡುವ ನಿಲುವಿನಿಂದಡಿಯಿಂದ ಚಲಿಸುವ ಹಲವು ಪರಿವಿಡಿಯಿಂದ ಹಳಚಿದರಂದು ಭಯ ಭಟರು (ನಿಘಾಗ. ೧೦-೩೯-೮). [ ತಳ್₁ (<ತಟ್) + -ಇಸು₃ ]

**ತಳಿಹ** (ನಾ). (?) : ತಳಿಹದ ಪಚ್ಚೆಯುಂಗಿ ತಲೆಸುತ್ತಿದ ಕತ್ತರಿವೀಲಿ ಪೊಂಕದೊಳ್ ತಳೆದಸಿಧೇನು . . . ಕರಂಗಿ ಕತ್ತಲಿಸುವ ಮಯ್ಯು ಕಾಡೊಡೆಯರ್ಕೃತರೆ ನೋಟ್ಪವರ್ಗಾಯ್ತು ಕೌತುಕಂ (ಪುಣ್ಯಾಸ್ರ. ೨-೬೨) ; ಹೊಗರಿನ ಪೊಳಹು ಗಗನವನುಗುಳೆ ಧಾರೆಯ ಬಲುಗಿಡಿಗಳುರಿ ಮಸಗೆ ತ[ಪಾಠಾಂ. ಬ, ತೊ]ಳಿಹದ ಬಣ್ಣ ಗಜಗಜಿಸೆ . . . ಕವಲಂಬುಲಗಿ ನಂಬೀಸಾಡಿದವು ಪರಸೈನ್ಯಸಾಗರವ (ಕುವ್ಯಾದ್ರೋ. ೧೦-೪). [ ? ]

**ತಳಿಹೋರಿ** (ನಾ). ತಳಿಮಾಡಲು ಸಾಕಿದ ಹೋರಿ ; ಬೀಜದ ಹೋರಿ: ಹೆಸರಾಂತ ೩೦೦೦ ತಳಿಹೋರಿಗಳನ್ನೂ ಕಳುಹಿಸಿದನು (ಪ್ರವಾಇ. I, ೬೦ ಅಡಿಟಿ). [ ತಳಿ₅ + ಹೋರಿ (<ಪೋರಿ₁) ]

**ತಳು** (ನಾ). ಅಂಗೈ ; ಕರತಳ (?) : ಪಿಡಿದ [illegible] ಕೊಡುತ ಪುಷ್ಕರಣಿಕ್ಕೆ ತಳುವನು ತೊಡರ್ಮ [illegible] ಗಳೆಡೆಯಲೆಲರಂತೇ (ಸಾಳ್ವಭಾ. ೭ ೧೪).
[ Pಇದು 'ತಳ' ಎಂಬುದರ ಅಪಲಿಖಿತವಿರಬಹುದೆ ? ]

**ತಳುಂಕಿಕ್ಕು** 'ತಟ್ಕಿಕ್ಕು' ನೋ.

**ತಳುಂಕು$_1$** 'ತಳ್ಕು$_2$' ನೋ.

**ತಳುಂಕು$_2$** 'ತಳ್ಕು$_3$' ನೋ.

**ತಳುಂಕು$_3$** 'ತಱ್ಕು' ನೋ.

**ತಳುಂಕು$_4$** 'ತಳಕು$_2$' ನೋ.

**ತಳುಗು** 'ತಳ್ವು$_1$' ನೋ.

**ತಳುತು** 'ತಟ್$_1$' ಪರಾ.

**ತಳುಂಪು** (ಕ್ರಿ). (?) : ನಾಲು ತುಬರಲು ಹಾಡಿಯು ಕಟ್ಟಿ ತಳುಪೆವು ನೀಉ ಅಂವೊಂಬಳದಲು (ಸೌಇಎ. ೧೯೩೧. ಮಂಗಳೂರು. ೩೩೭-೯ : 1450). [ ? ]

**ತಳುರ್** 'ತಳಿರ್$_1$' ನೋ.

**ತಳುವಿಕ್ಕು$_1$** (ಕ್ರಿ). ಆಧಾರ ಕೊಡು ; ಅವಲಂಬನ ನೀಡು : ಭೀಮ ಬೇಗದಲಿ ಕರಗಳನು ತಳುವಿಕ್ಕಿ ಭವನವ ಜರಿಯಲೀಯದೆ ಕೆಲಕೆ ತೆಗೆದವನು (ಕುವ್ಯಾಆ. ೬೦೩. ೨೩-೩). [ ತಳುವು$_2$ (<ತಳ್ವು$_2$) + ಇಕ್ಕು ]

**ತಳುವಿಕ್ಕು$_2$** (ಕ್ರಿ). ಹೊಳಪು ಕೊಡು ; ಮಸೆ : ಹರಿತಗೊಳಿಸು : ಪದಮಾಡಿ ತಳುವಿಕ್ಕಿ ಪೊಳೆವ ಬತ್ತೀಸಾಯುಧವಿಡಿದಭ್ಯಾಸಿಗಳ (ಮೋದತ. ೧೭-೮೩). [ ತಳುವು$_0$ (<ತಳವು$_1$) + ಇಕ್ಕು ]

**ತಳುವು$_1$** 'ತಳ್ವು$_1$' ನೋ.

**ತಳುವು$_2$** 'ತಳ್ವು$_2$' ನೋ.

**ತಳುಹು$_1$** 'ತಳ್ವು$_1$' ನೋ.

**ತಳುಹು$_2$** 'ತಳ್ವು$_2$' ನೋ.

**ತಳೆ$_1$** (ಕ್ರಿ). ೧. ಧರಿಸು; ತೊಡು; ತೊಟ್ಟುಕೊಳ್ಳು : " ತಳೆ – ಧಾರಣೇ, ಆತಪತ್ರ ಭೇದೇ ಜಟು (ತಟ$^3$) " (ಶಮಧಾ) : " ತಳೆದುದೆಂದುಂ ಆಂತು ದೆಂದುಂ ತಾಳ್ದುದೆಂದುಂ ಪೊತ್ತುದೆಂದುಂ ಧರಿಸಿದುದರ್ಕೆ ಪೆಸರ್ " (ಶಶಸಾ. ೧೫-೨೮೯) : ಪೊಳೆವಳೆವೆಱ$^3$ಯುಂ ತನ್ನೊಳ್ತಳೆಯದ ಕಾರಿರುಳ ತೆಱದೆ ಕುಸುಮಾವಳಿಯುಂ ತಳೆಯದ ನಿನ್ನ ಬಟಿಲ್ಮುಡಿ (ಕಾದಂಪೂ. ೩೩೮) ; ನಂದನವನಲಕ್ಷ್ಮಿ ಕೀರರವದಿಂ ಪೊಗಟ್ದಿತ್ತ ಪಸಾಯುದಚ್ಚಮುತ್ತಿನ ಪೊಸ ಪಚ್ಚವುಂ ತಳೆದವೊಲದಿರ್ಮುತ್ತೆ ಮುಗುಳ್ತುದೆತ್ತಲುಂ (ಚಂದ್ರಪು. ೭-೪೧) ; ತಳೆವಂತೆ ಮಣಿತ್ರಯಮುಯ ವಿಳಸತ್ಕೇಯೂರವಳಯವುಂ ತದ್ರೂಪಂ ತಳೆದು ತ್ರಿಖಂಡಮುಯ ಭೂವಳಯಮನಾತ್ಮೀಯ ಭೂರಿಭುಜ ಮಂಡಲದೊಳ್ (ವರ್ಧಪು. ೮. ೭೫). ೨. ಪಡೆ; ಹೊಂದು ; ತಾಳು : ವಿರೋಧಿಗಳಂ ಸಾಧಿಸಿ ವೀರಮಂ ತಳೆದರ್ (ಎಇ. XIII, ೩೨೯-೨; 920) : ಉಂತೆ ತೊದಳಿಸುವ ನುಡಿವ ನುಡಿಗಳ್ಗೆ ತೊದಳುಮನೆಕ್ಕೆಯಿಂ ತಳೆಯೆ ನೆಱ$^3$ಯೆ ಕೆಯ್ಗೆಯ್ದು (ಪಂಪಭಾ. ೭-೮೧ ವ) ; ಪರಮಶ್ರೀಯುಂ ತಳೆದೊಗೆದೆರೆಯೊಂ ಪರಮೋಪಕಾರಿ ಧರ್ಮಜ್ಞಂ (ಎಕ. III, ತಿರುಮ. ೬೯-೧ ; 980) : ತಳೆದಳ್ ಪಟ್ಟಮನೆಸೆದಿರೆ ಗಂಗನ ಪಟ್ಟಮಹಾದೇವಿ (ಎಕ. VII, ಶಿವಮೊ. ೯೭-೧೨ ; 1113) ; ಪ್ರಾಣಲಿಂಗವಾದರೆ ಪ್ರಕೃತಿಯ ತಳೆವುದೆ (ಆದವ. ೩೨-೯೨); ಆ ವನಿತೆಯೊಪ್ಪಿದಳಿಂದುಮ ತಳೆದ ರಾತ್ರಿಯಂತೆ (ಸಿದ್ಧರಾ. ೦-೪೮) : ಪೊನ್ನ ಬೆಟ್ಟು ಕೈಯುಂ ಕಾಲಂ ತಳೆದಿರ್ದುದೆಂಬಿನಂ ಕಣ್ಗೊಳಿಸಿದನಂತವರ ಪಕ್ಕದೊಳ್ ಪಲಗಣ್ಣಂ (ಕಬ್ಬಿಕಾ. ೧೬೩) : ತಳೆದನುನ್ನತಿಯು ತೊಳೆದನಘಮಲಪಂಕಮಂ . . . ಬಸವ ಕುಂಜರನು (ಬಸಪು. ೫೯-೫೪) : ಖಾತಿಯು ತಳೆದು ಕೂರಂಬಿನಲಿ ಹೊಳಿದನು (ಕುವ್ಯಾದ್ರೋ. ೩-೫೧) : ಪೆಂಡಿರೊಳೆಣೆಯಿಲ್ಲದ ಕೀರ್ತಿಯು ತಳೆದೆಸೆದಳು ದಮಯಂತಿ (ಹದಿಬ. ೩-೪೬). ೩. ಹಿಡಿ ; ಹಿಡಿದುಕೊಳ್ಳು : ಕಂಡು ಗೆಂಟಱ$^3$ೊಳೆ ಪೊಡೆಪಟ್ಟು ಮೆಲ್ಲನೆ ನೀಡೆ ಲೇಸುಗೆಯ್ದುಯೆಂದೆನ್ನಂ ಕರತಲ ದೊಳ್ ತಳೆದು (ಕಾದಂಉ. ೭೫೦) : ಉಱ$^3$ದ ರಾಯರ ಕೊಡೆಗಳ್ ಗಡಣದೊಳೆ ತಳೆದಣಂಬೆ[ಪಾಠಾಂ. ಮೆಱ$^3$ವಣಂಬೆ]ಯ ಕೊಡೆವೋಲ್ ಬೆಳ್ಗೊಡೆಗಳಾದುವು (ಕಬ್ಬಿಕಾ. ೫೦) ; ಥಳಥಳಿಸುವ ಖಡ್ಗವಿಡಿದೆಡಗೈಯೊಳು ತಳೆದಡ್ಡಣೆಗಳ ಭಟರು (ಜೀವಂಸಾಂ. ೮-೩೫). ೪. ಕೈಕೊಳ್ಳು ; ಅಂಗೀಕರಿಸು ; ಸ್ವೀಕರಿಸು : ನಾಲ್ಕುಮಂ ತಳೆದು ಮಗಳೆ ತೋಱ$^3$ ನೀಂ ಪೆಱಮಂ (ಸುಕುಮಾ. ೭-೩೪); ಆ ನಾಚಿದಣ್ಣಾನಾಥನನೂನಗುಣಂ ಚಕ್ರವರ್ತ್ತಿದಯೆಯಿಂ ಬೆಸಸಲು . . . ನಿಖಿಳ ಮಂತ್ರಿಪದಮಂ ತಳೆದ (ಎಇ. XXVIII, ೫-೨೯ : 1082) ; ಮಗನೆ ಮದೀಯ ರಾಜ್ಯಪದಮಂ ತಳೆದೆನ್ನನಶೇಷಧಾತ್ರಿಯಿಂ ಪೊಗಟಿಪುದು (ನೇಮಿಪು. ೧-೯೨). ೫. ಹೊರು ; ವಹಿಸು ; ತಳೆದೇನಿರ್ದರೋ ತಮ್ಮ ತಮ್ಮ ತಲೆಯೊಳಾೃಜಾಜ್ಞೆಯುಂ (ಕಾದಂಪೂ. ೨೩); ವಿಶ್ವಮ್ಯಗಾವಳಿಯಾಧಿಪತ್ಯಮಂ ತಳೆದು (ಪಂಚತಂ. ೫೦-೧) ; ಶಿವನಾಜ್ಞೆಯುಂ ಚಿತ್ತದೊಳ್ ತಳೆವುತಂ (ತಿರುರ. ದೀ. ೮-೧೯) ; ಎನ್ನ ನೀನಲ್ಲದೆ ತಳೆವರಾರೆನುತ್ತದಂ ಮನ್ನಿಸುತ ವಾಹನಂಗೆಯ್ದಂ (ಪದ್ಮರಾ. ೧೧-೧೭) ; ಇಳೆಯನೆಮ್ಮಯ್ಯ ಶಶಿವೇಗನು ತಳೆದನಜ್ಜನು ಜ್ವಲನವೇಗನು ತಳೆದನಾ ಜನರೂಪನ (ಸಾಳ್ವಭಾ. ೧೬-೨೭). ೬. ಕಟ್ಟು ; ಬಂಧಿಸು : ನುಡಿಗಳೊಳಾಸೆಯುಂಟೆನಲೊಡಂ ತಳೆದಂತಿರೆ ನಿಲ್ವುದೆಂತುಮಾವೆಡೆಯೊಳಮಾಸೆಗಾಣೆನೆನೆ ತೊಟ್ಟನೆ ಪೋಪುವು ನಲ್ಲರಿರ್ವರೀರೊಡಲೊಳಗಿರ್ಪ ಜೀವಂ (ಪಂಪಭಾ. ೪-೧೦೪). 'ತಾಳ್$_1$' ಪರಾ.

**ತಳೆ$_2$** 'ತಳಿ$_1$' ನೋ.

**ತಳೆ$_3$, ದಳೆ$_3$** (ನಾ). ೧. (ಪ್ರಾಣಿಗಳ ಕಾಲುಗಳಿಗೆ ಕಟ್ಟುವ) ಹಗ್ಗ : ಸಂಕೋಲೆ : "ತಟ$^3$ = ಆತಪತ್ರಂ ; ತಳೆಯೆಂಬ ಕ್ರಿಯೆಯೊಳಂ ಪಶುವಿನ ತಳೆಯೊಳಂ ಕುಳಂ" (ಶಮದ. ಪರಿ. ೧) : " ತಳೆಯೆಂದುಂ [ಪಾಠಾಂ. ತಳ್ಳೆಂದುಂ] ದಾಮೆಂದುಂ, ಅಗ್ಗರಣೆಯೆಂದುಂ ರಜ್ಜು " (ಶಶಸಾ. ೩೧-೬೫೧); ತಳೆಯಿಂದ ಬಿಗಿದೊಡನೆ ತಿಳಿಯುಗುಂ ಬೋಳನಂ ಕೆಳನೂಂಕಿ ಕಮ್ಮರಿಗೆ, ಬಡಿವೆ, ಕೊಲಮುಳಿವೆ (ಕಾಲೂರ. ೧೬೩-೩೬೧). 'ತಳೆಯಿಂಕ್ಕು' ಪರಾ. ೨. ಸೆರೆ ; ಬಂಧನ : ಅಳಿವು ಪಳಿವನ್ಯಾಯ ಮಱ$^3$ ಮೋಸ ಮಾಸಿ ತಲ್ಲಳ ತಳೆ ವಿಯೋಗಮುಲಸಿಕೆ ಕರ್ಕಶಂಗಳಿವು ಮೊಳೆದೋಱವು (ಜೈಮಿಭಾ. ೨-೫). ೩. (ಅಡಕೆ, ತೆಂಗು ಮೊದಲಾದ) ಮರಗಳನ್ನು ಹತ್ತುವಾಗ ಕಾಲುಗಳಿಗೆ ಹಾಕಿಕೊಳ್ಳುವ ಗುದಿ : ಒಬ್ಬೊಬ್ಬರು ತಳೆಯಿಲ್ಲದೆ ಬರಿಗಾಲಿ ನಿಂದಲೂ ಮರ ಹತ್ತುತ್ತಾರೆ (ರೂಢಿ). ದಳೆ$_3$: ೧. 'ದಳೆಯಿಕ್ಕು' ಪರಾ.

[ ದೇ.॥ ತಮಿ. ತಳ್ೈ ; ಮಲ. ತಳ; ತುಳು. ತಳೆ, ತಲೆ ; ಕೊಡ. ತಳೆ, ದಳೆ ; ತೆಲು. ತಲಗು ]

**ತಳೆ$_4$** 'ತಱ$^3$' ನೋ.

**ತಳೆಕಾಡು** 'ತಱ$^3$ಕ್ಕಾಡು' ನೋ.

**ತಳೆತ$_1$** (ನಾ). ತಾಳುವಿಕೆ ; ಧರಿಸುವಿಕೆ ; ಧಾರಣೆ : " ಮಲ, ಮಲ್ಲ, ಕಲ, ಕಲ್ಲ–ಧಾರಣೇ, ತಳೆತದೊಳ್ " (ಕಾಶಕ್ಕ. ೪೫) : "ಕಕ್ಷ – ಧಾರಣೇ, ತಳೆತದೊಳ್ . . . ಕಕ್ಷಣಂ, ಕಕ್ಷಣೀಯುಂ, ಈ ೨ ತಳೆತಂ" (ಕಾಶಕ್ಕ. ೧೧೮); " ಭ, ಭು . . . ಭಾವ್ಯಂ ಈ ೮ ತಳೆತಂ " (ಕಾಶಕ್ಕ. ೧೨೮).

[ ತಳೆ$_1$ + – ತ$_2$ ]

**ತಳೆತ$_2$** (ನಾ). ತಳಿಯುವಿಕೆ ; ಸಿಂಪಡಿಸುವಿಕೆ ; ಸೇಚನ : " ವಟ್ಟ– ಸೇಚನೇ, ತಳೆತದೊಳ್ " (ಕಾಶಕ್ಕ. ೨೦) : " ಮುದ್ದ–ಸೇಚನೇ, ತಳೆತ ದೊಳ್ " (ಕಾಶಕ್ಕ. ೨೪). [ ತಳೆ$_2$ (<ತಳಿ$_1$) + – ತ$_2$ ]

**ತಳೆಯಿಕ್ಕು, ದಳೆಯಿಂಕ್ಕು** (ಕ್ರಿ). (ದನಗಳ ಕಾಲುಗಳಿಗೆ) ಹಗ್ಗವನ್ನು ಕಟ್ಟು ; ಗುದಿಕಟ್ಟು : ಎಳಮಿಂಚು ತಳೆ[ಪಾಠಾಂ. ಟಿ$^3$]ಯಿಕ್ಕಿ ಚಾದಗೆಗಳಂ ಬಿಟ್ಟೋಡಿ ಬಳ್ಳೆಚ್ಚಲಿಟ್ಟಳಿ ನೀಳಾಂಬುದದಿಂ ಬಟಿಲ್ವ ಗಗನಶ್ರೀಧೇನುವಂ ಕೋಮಳಾಮಳ ದೀರ್ಘಾಮೃತ ಧಾರೆಗಳ್ಸುರಿಯೆ ಭೋರ್ಭೋರೆಂಬಿನಂ ಶಕ್ರಚಾಪಳತಾದಾಮಕದಿಂದೆ ಕಟ್ಟಿ ಕಱ$^3$ದಂ ಕಾರೆಂಬ ಗೋಪಾಳಕಂ (ಅರ್ಧನೇ. ೮-೩) : ಕಱುವಂ ಬಿಡು . . . ತಗುಳ್ದೊದೆವಾವಂ ತುಱ$^3$ಸು

ತಳಿಯಿಕ್ಕು ತಡೆಯದೆ ಮುಱುಪಂ ಸುರಿಯೆಂಬ ಸರಮೆ ತುಱುಗಾರ್ತಿಯರೊಳ್ (ಲೀಲಾವ. ೫-೧೨೦). **ದಳೆಯಿಕ್ಕು** : ಬಲಿದು ಗೂಂಟಗಳನೆತ್ತಾನೆ ಕುದುರೆಗಳ ನೀಂ ದ[ಪಾಠಾಂ. ನಿ]ಳೆಯಿಕ್ಕು . . . ಎಂದೆಂಬ ದನಿಯುಭಯಕಟಕದೊಳೆಸೆದುದು (ಜಬಪು.೪೮-೩೦). 'ದಳೆಯಿಕ್ಕಿಸು' ಪರಾ.

[ ತಳ್ಕೆ$_3$ + ಇಕ್ಕು ]

**ತಳಿವಿಡಿ** 'ತಟಿವಿಡಿ' ನೋ.

**ತಳೋದಕಪ್ರವಾಹ** (ನಾ). (ಸಮುದ್ರದ) ತಳಭಾಗದಿಂದ ಹೊರಡುವ ನೀರಿನ ಪ್ರವಾಹ : ಮೇರುಗಳಿಂದ ಸಮಭಾಜಕವೃತ್ತದ ಕಡೆಗೆ ತಣ್ಣಗಿರುವ ನೀರು ಒಳಗೆಯೆ ಚಲಿಸಿ ಈ ಉಪ್ಣೋದಕದ ಸ್ಥಾನವನ್ನು ಕ್ರಮಿಸಲು ಹೊರಡುವುದಕ್ಕೆ ತಳೋದಕಪ್ರವಾಹಗಳು ಎಂದೂ ಹೆಸರು. ಅತ್ಯುಷ್ಣಪ್ರದೇಶಗಳಲ್ಲಿ ನೀರು ಆವಿಯಾಗಿ ಹೋಗುವುದು ಹೆಚ್ಚಾದುದರಿಂದ ತಳಭಾಗದಿಂದ ತಣ್ಣೀರಿನ ತಳೋದಕಪ್ರವಾಹಗಳು ಹೊರಟು ನಷ್ಟವಾದ ನೀರನ್ನು ತುಂಬುತ್ತವೆ (ಭೂವಿವ. ೯೧).

[ ತಳ ( = ತಲ) + ಉದಕ$_2$ + ಪ್ರವಾಹ ]

**ತಳೋದರಿ** 'ತಲೋದರಿ' ನೋ.

**ತಳೋಪಲಾತ**(ನಾ). ೧. ಕೆಳಭಾಗದಲ್ಲಿ ಕಲ್ಲುಗಳಿಂದ ಕೂಡಿಕೊಂಡುದು. ೨. [ಸಂಗೀತ] ಒಂದು ತಾಳಭೇದದಿಂದ ಕೂಡಿರುವುದು. ೧, ೨ : ಆ ಮಹಾವನಂ . . . ಸನ್ನದ್ಧಸಪ್ತಿಯುತೆ ಖಲೀನಶಾಖಾಮುಖಮುಂ ಉಪಕಂಠ ಚಳಚ್ಚಾಮರಮುಂ ತಾಳಪಾತವಿಧಿಯಂತ ಶಮ್ಯಾರಮ್ಯಮುಂ ತಳೋಪಲಾತಮುಂ (ಚಂದ್ರಪು. ೫-೫೨ ವ).

[ ಸಂ. (ತಲ + ಉಪಲ + ಆತ ; ತಲ + ಉಪಲಾತ) ]

**ತಳ್ಕಯ್ಸು** 'ತಟ್ಕೈಸು' ನೋ.

**ತಳ್ಕರಿಸು** 'ತಟ್ಕಿಸು' ನೋ.

**ತಳ್ಕವಿಸು** 'ತಟ್ಕೈಸು' ನೋ.

**ತಳ್ಕಿಕ್ಕು** (ಕ್ರಿ). ಒನಪು ಹೊಂದು ; ವಿಲಾಸಗೊಳ್ಳು : ಗುಣವತಿಯ ನಡೆ ತಳುವಿ ತಳ್ಕಿಕ್ಕಿ ಕೂಡೆ ಭಾವಂಗಳಿಂ ನುಡಿ ಬಳಲ್ದೊಪ್ಪುತಿರೆ ಮಲ್ಲಿನ ಗುಣಂಗಳಿಂ (ಬಸರ. ೦-೧೦೩).

[ ತಳ್ಕು$_4$ (<ತಳಕು$_2$) + ಇಕ್ಕು ]

**ತಳ್ಕಿಡಿ** (ಕ್ರಿ). ಆವರಿಸು ; ಕವಿ ; ವ್ಯಾಪಿಸು : ಕಮಳಿನಿಯಿನಿಯನಸ್ತಮಿಸಿ ದಳಲುರಿಯಲೊದವಿ ಮುಂಗುಡಿವರಿದು ಗಗನಮುಂ ತಳ್ಕಿಡಿದು ಬೆಂದ ಕಾಬೋರ್ಗೆಯೋ . . . ಪೇಳೆನೆ ರಾತ್ರಿ ಕಣ್ಗೆಸೆದುದು (ಸೋಮಚ. ೨-೮).

[ ತಳ್ಕು$_5$ (<ತಟ್ಕು) + ಇಡಿ$_2$ ]

**ತಳ್ಕಿಸು** 'ತಟ್ಕಿಸು' ನೋ.

**ತಳ್ಕಿಱ್** (ಕ್ರಿ). (ಪಿಸ್ಕಾರವಾಗಿ) [illegible] ಚಂದನರಸಮನೆರ್ದೆಯೊಳಂ ಮೆಯ್ಯೊಳಂ ತಳ್ಕಿಱಿದು [illegible] ತಾನುಂ ಹಿಡಿಂಬೆಯುಮವನ ಬರಿಯು ನರವಿನಡಗಿನಿಡುವಿನೆಡೆಯು ಕೆನ್ನೆತ್ತರೊಳೊರ್ವರೊರ್ವರಂ ತಳ್ಕಿಱಿದುಂ ಬೊಬ್ಬಿಱಿದುಂ (ಪಂಪಭಾ. ೧೨-೧೫೮ ವ). [ ತಳ್ಕು$_4$ (<ತಳಕು$_2$) + ಇಱ್$_2$ ]

**ತಳ್ಕು$_1$** 'ತಳಕು$_1$' ನೋ.

**ತಳ್ಕು$_2$, ತಳುಕು$_1$** (ಕ್ರಿ). ೧. ತಬ್ಬು ; ಅಪ್ಪು : ಆತಂಗೆ ಸುತರಿಲ್ಲದವನಳಿಯೆ ಭದ್ರೆಯುಂ ಭೂತಳಾಧೀಶನ ಕಳೇವರವ ಕೆಡದಂತೆ ತಾ ತಳ್ಕಿ ಸಹಗಮನವುಂ ಮಾಳ್ಪೆನೆಂಬನಿತರೊಳ್ ಖಚರವಾಣಿಯಾಗೆ (ಲಕ್ಷ್ಮಭಾ. ೨೫-೨೫). ತಳುಕು$_1$: ೨. ಸೇರಿಸು ; ತಳುಕುಹಾಕು : ಸೆಳೆದು ಬಿಗಿಯಪ್ಪಿದನು ಕರದಲಿ ತ[ಪಾಠಾಂ. ಕ, ತು]ಳುಕಿ ಕರವನು ತಂದು ತನ್ನಯ ಕೆಲದೊಳಗೆ ಕುಳ್ಳಿರಿಸಿದನು ಸಿಂಹಾಸನಾರ್ಧದಲಿ (ಕುವ್ಯಾ.ಆ. ೯-೮೩). 'ತಟ್ಕು' ಪರಾ.

[ <ತಟ್$_1$ ]

**ತಳ್ಕು$_3$, ತಳುಕು$_2$** (ಕ್ರಿ). ೧. ಹೆದರು ; ಕುಗ್ಗು ; ಹೊಜರು : ಅಳ್ಕದೆ ಕುಳ್ಕದೆ ಮುಳ್ಕದೆ ಮಾತಿಗೆಟ್ಟು ತಳ್ಕದೆ ತಲ್ಲಣಗೊಂಡೆ (ಶಕಸಾಂ. ೧೫-೮೫). ೨. ಚಲಿಸು ; ಅಲ್ಲಾಡು ; ಒಲೆ : ಕೆಲಕೆಲರ್ ತಜ್ಜಲದಸೀಸುತುಂ ಸೂಸುತುಂ ಕೆಲಕೆಲರ್ ಕುಚಭರದೆ ಬಳ್ಕುತುಂ ತಳ್ಕುತುಂ ಕೆಲಕೆಲರ್ ಬೆಂಬತ್ತಿ ಬಯ್ಯುತುಂ ಪೊಯ್ಯುತುಂ ಪೊನ್ನಂಡೆಗಳನೆ ಒಡೆದು ಕಣ್ಗೆಸೆದರಾ ಕೊಳದೊಳು (ಜಬಪು. ೩೭-೬೮). **ತಳುಕು$_2$** : ೧. ಪುರಿಯೋಳ್ ಜಳುಕದೆ ತಳುಕದೆ ವಳಕಿಸಿ ಬೆದರದೆ ದಳನೇತ್ರ ಹರುಷದಿ ಪೊರಟು (ಹಮಚ. ೭೦). ೨. ಉಭಯ ದಿಟ್ಟಿಗಳ ನಾಸಾಗ್ರದಲಿ ನೆಲೆಗೊಳಿಸಿ ಬಳಿಕ ತೊಳಲುವೀ ಮರುತನುಂ ಸ್ತಂಭಿಸುವನದರಿಂದ ತಳುಕದಲೆ ಮನ ನಿಲುವುದೈಸೆ (ವೇಶಾಲಿ. ೨-೧೧-೨೨). [ ? ]

**ತಳ್ಕು$_4$** 'ತಳಕು$_2$' ನೋ.

**ತಳ್ಕು$_5$** 'ತಟ್ಕು' ನೋ.

**ತಳ್ಕೆ** 'ತಟ್ಕೆ' ನೋ.

**ತಳ್ಕೆಗೆಯ್** 'ತಟ್ಕೆಗೆಯ್' ನೋ.

**ತಳ್ಕೈಸು** 'ತಟ್ಕೈಸು' ನೋ.

**ತಳ್ಗಿಸು** 'ತಟ್ಗಿಸು' ನೋ.

**ತಳ್ಗು** 'ತಟ್ಗು' ನೋ.

**ತಳ್ತ$_1$** 'ತಳ್$_2$' ಪರಾ.

**ತಳ್ತ$_2$** 'ತಳ್$_3$' ಪರಾ.

**ತಳ್ತಳ** 'ತಟತಟ' ನೋ.

**ತಳ್ತಳಗುದಿ** 'ತಟತಟಗುದಿ' ನೋ.

**ತಳ್ತಳನೆ** 'ತಟತಟನೆ' ನೋ.

**ತಳ್ತಳಿಸು** 'ತಟತಟಿಸು' ನೋ.

**ತಳ್ತಱದಱ್** 'ತತ್ತಱಂದಱ್' ನೋ.

**ತಳ್ತಿಱ್$_1$** 'ತಳ್$_2$' ಪರಾ.

**ತಳ್ತಿಱ್$_2$** 'ತಳ್$_3$' ಪರಾ.

**ತಳ್ತು$_1$** 'ತಟ್$_1$' ಪರಾ.

**ತಳ್ತು$_2$** 'ತಳ್$_2$' ಪರಾ.

**ತಳ್ತು$_3$** 'ತಳ್$_3$' ಪರಾ.

**ತಳ್ಪ** 'ತಲ್ಪ' ನೋ.

**ತಳ್ಪಲ್** 'ತಟ್ಪಲ್' ನೋ.

**ತಳ್ಪು$_1$** 'ತಳಪು$_1$' ನೋ.

**ತಳ್ಪು$_2$** (ನಾ). ತಳೆದಿರುವಿಕೆ ; ಹೊಂದಿರುವಿಕೆ : ವಧೂಕಾಂತರ್ ಪಾಣಿ [illegible] ಪ್ರದಾನಾನಂಗೇಭಂ ಬೆದಱಿ ನೆರೆದಿರ್ದಂ ಮದುವೆಯೊಳ್ (ಶಾಂತಿಪು. ೬-೧೩) ; ಕುಳಶೈಲವ್ರಾತದಿಂದಂ ಬಳಸಿದ ಕನಕಾದ್ರೀಂದ್ರಮೆಂಬಂತೆ ಭೂಭೃತ್ಕುಳಮೆತ್ತಂ ಸುತ್ತೆ ರತ್ನಾಭರಣಕಿರಣಜಾಲಗಳಿಂದಿಂದ್ರಚಾಪಂಗಳ ತಳ್ಪಿಂದೊಪ್ಪಮುಂ ತಾಳ್ದಿದ ಘನಸಮಯಂ ತಾನಿದೆಂಬಂದದಿಂ ಕಣ್ಗೊಳಿಸಿರ್ದಂ ಪಾದಪೀಠಾಂಕಿತ ಮಣಿಮಯ ಪರ್ಯಂಕದೊಳ್ ಕೃಷ್ಣಾಂಕಂ (ಶಾದಂಪೂ. ೨೬) ; ಕಟಿದ ಮನಃಪ್ರಿಯವಿರಹದಿನಬಲ್ಲು ಬಸವಱಿದು ಪೋದೆ ತನ್ನುರದೊಳ್ ಬಾಸುಬ ತಳ್ಪು ಪೋಕಶಿಖಿಯಂ ಕಟಲ್ಚಲೆಂದೊಟ್ಟಿದಸುಗೆದಳಿರಂ ಪೋಲ್ಕುಂ (ಶಾವ್ಯಾವ. ೨೦೧) : ತೂರು ನೊರೆ, ಕುದಿವ ನೊರೆ, ಬೆಳ್ಳಿನೊಳ್ ಬೆಳ್ಪು ! ನೀರ್ಬೀಳ ಬೆಳ್ನೊರೆಯ ಬಿಸಿಲ ಬೆಳ್ಪುಗಳಾ ಮಳೆಬಿಲ್ಲ ತಳ್ಪು (ದೋಣಗಿಉ. ೧೬-೮).

ತಳ್ಪಾಗು=ಹೊಂದಿಕೊಳ್ಳು ; ಸಮಾನವಾಗು (?) : ತರುಣಾರ್ಕಂ ನೆಲಸಿರ್ದ ಪೂರ್ವಗಿರಿನಾಥಂ ಪೊಂತಶೀತಪ್ರಭಾಕರನೊಪ್ಪಿರ್ದವೃತಾಬ್ಧಿ ದಾರಕನಮೇರು ಪ್ರೀತಿ ಚೆಲ್ವಾದ ಚೈತ್ರರಥಂ ತಾನೆನೆ ಸೂನು ಮೇಘ ರಥನಿಂ ತಳ್ಪಾದನು [ನ]ಣ್ಪಂಗೆ ಪದ್ಮರಥಂ ತುಂಗಭುಜಂ ಗಭೀರವಿಭವಂ ಸಂಸಾರಸಾರೋದಯಂ (ಅನಂಪು. ೩-೨೭). [ ತಳ್$_3$ + – ಪು$_2$ ]

**ತಳ್ಪೊಯ್$_1$** 'ತಟಿಪ್ಪೊಯ್' ನೋ.

**ತಳ್ಪೊಯ್$_2$** (ಕ್ರಿ). ೧. ತಡೆ ; ಅಡ್ಡಿಪಡಿಸು : " ತಳ್ಪೊಯ್ (ತಳ್ + ಪೊಯ್) ಪ್ರತಿಹತೇ (ತಡೆದು ನೂಕು) " (ಶಮದಾ). ೨. (ಅಲೆಯಾಗಿ) ಅಪ್ಪಳಿಸಂ; ಘಟ್ಟಿಸು; ಬಡಿ : ಪಟುಪಟಹ ಶಂಖರುತಿ ದಿಕ್ತಟವಂ ತಳ್ಪೊಯ್ಯೆ (ಪಂರಾಮಾ. ೨-೧೦) : ಇನಿಯವಳಂ ಮುನ್ನುರ್ಚಿದ ನನೆಗಣೆ ತಳ್ಪೊಯ್ದುದಿರ್ದೆಯನೆಂಬುತ್ಸವದಿಂ ತನಗೆ ಹಿತಕಾರಿಯಾಗಿರೆ ಮನೋಜನಂ ನೃಪತಿ ಬಗೆದನಾರ್ದಿಸುತಿರೆಯುಂ (ವರ್ಧಪು. ೪-೧೪); ಚರು ಚಾರುಗಂಧಮಂ ಕವರ್ವನೆಂಬೊಂದು ಪುರುಡಿಂ . . . ಕಿನಿಸಿಂ ಕಿಚ್ಚಂ ತಳ್ಪೊಯ್ದುಂ ಧೂಮಧ್ವಜಮಂ ಮುಚಿದುಂ . . . ಪಾವನಪವನಂ ತೀಡ (ರಾಮಾಕ್ತ. ೪೩-೩). ೩. ತಿರಸ್ಕರಿಸು; ಮೀರು: ವಾರಾಶಿ ಧೀರಸ್ವರಮಂ ತಳ್ಪೊಯ್ವ[ಪಾಠಾಂ. ಯ್ದ]ಜೇಂದ್ರಾದ್ಯಮರ ಜಯಜಯಧ್ವಾನದಿಂದಾಗಳೆಟ್ಟಾದರದಿಂ ಕುಳ್ಳಿರ್ದನಾಲೋಕನಕೃತವಿಭುಧಾನಂದಕಂದಂ ಮುಕುಂದಂ (ಜಗವಿ. ೧-೫೩). ೪. ಅಪ್ಪಳಿಸಲ್ಪಡು; ಹೊಡೆಯಲ್ಪಡು: ಚಿತ್ರರಥನಂದನೆಯು ಮದನಾನಲಂ ದಿನಕರೋದಯಂ ಪೊದಲ್ದೊಂಡು ಸೂರ್ಯಕಾಂತೋಪಲಾನಲನಂತೆ ಗಾಳಿಯಿಲ್ಲದುರಿಯುತಂ . . . ಧಾರಾ ಗೃಹಂಗಳಿನುಪಶಮಿಸದೆಂತೆಂತು ವಿಚಲಿತ ಜಲಯಂತ್ರ ವಿನಿರ್ಗಳಿತಂಗಳಪ್ಪ ಶಿಶಿರಶೀಕರನಿಕರ ತಾರಕಿತ ವಾರಿಧಾರೆಗಳಿಂ ತಳ್ಪೊಯ್ವುದಂತಂತೆ ಸಿಡಿಲ ಕಿಚ್ಚಿನವೊಲಗ್ಗಳವುರಿವುದು (ಕಾದಂಉ. ೩೨೭). [ ತಳ್$_2$ + ಪೊಯ್$_1$ ]

**ತಳ್ಪೊಯ್$_3$** (ಕ್ರಿ). ೧. ತುಂಬು ; ಕವಿ ; ಹಬ್ಬು ; ವ್ಯಾಪಿಸು : ದಿವಾಪ್ಸರೋವೃಂದಮಿಾ ಕ್ಷಿತಿಗೇನಿಂದ್ರನ ಶಾಪದಿಂದಿಳಿದುದೋ ಪೇಟಿಂಬ ಶಂಕಾಂತರಂ ಮತಿಗಂ ಪುಟ್ಟುವಿನಂ ಕರಂ ಪರಕೆಗಳ್ ತಳ್ಪೊಯ್ಯೆ ಸೇಸಿಕ್ಕಿತಿಂದ್ರುತನೂಜಂಗಿದಿರ್ವಂದು ಪೊಡದಶ ಸಹಸ್ರಾಂತಃಪುರಂ ಕೃಷ್ಣನಾ (ಪಂಪಭಾ. ೪-೩೯) : ಅಲ್ಲಿರ್ದರೆಲ್ಲಮಿದೇನೋ ಕವಿತರ್ಪುದೀಗಳೆನುತಂ ತಳ್ಪೊಯ್ವ ತಣ್ಪಂದಮೆಯ್ದೆ ಮುಬುಂಗುತ್ತಿರಲುಣ್ಮಿತೊಮೋದಲೊಳ್ . . . ಹೈಮಪ್ರಭಾಮಂಡಲಂ(ಕಾದಂಉ.೭೦೨); ತಳ್ಪೊಯ್ದು ತರಳನಯನದ ಬೆಳ್ಪು ತಳತ್ತಳಿಸಿ ಮಿಳಿರ್ದು ಪೊಳೆಯೆ ಗವಾಕ್ಷಂಗಳ್ಪಜ್ಜಳಿಪಿನಂ (ಸುಕುಮಾ. ೧೧-೧೪) : ಬಲವದ್ವೈರಿ [ವ್ರ]ಜಂ ತಂನಡಿಗೆಱಗುವಿನಂ ತಂನ ತೇಜಂ ದಿಶಾಮುಂಡಳದೊಳ್ತಳ್ಪೊಯ್ವಿನಂ (ಸೌಇಇ. IX-1, ೧೬೦-೭: 1091) ; ನತನಾನಾಮರ ಮೌಳಿರತ್ನಕಿರಣಂ ನಾನಾಪ್ಸರಃ ಕೇಕರದ್ಯುತಿ ನಾನಾ ಚಮರೀಜವಾಯು ಸಭೆಯಂ ತಳ್ಪೊಯ್ಯಲಿರ್ದಂ ಜಗತ್ಪತಿಯೊಡ್ಡೋಲಗದೊಳ್ (ಜಗವಿ. ೦-೨೭) ; ದೆಸೆಯಂ ಬಾಲಾತಪಂ ಬಾಸಣಿಮುದನೆ ತಳ್ಪೊಯ್ಯೆ ದೇಹಾಂಶು . . . ಬಂದಂ ಚಾರಣಂ (ಚಂದ್ರಪು. ೫-೨೦) ; ನಾದೇಯವಾಗಿ ದಿವ್ಯಾಮೋದಂ ತಳ್ಪೊಯ್ದು ಪೊಂಗೆ ಕಂಪಾಯ್ತೆಂಬಂತಾದುದು ಸುವರ್ಣಗಿರಿ ಗಂಧೋದಕದಿಂ ತ್ರಿಭುವನೈಕಚೂಡಾಮಣಿಯಾ (ಅನಂಪು. ೫-೭೯). ೨. ಕಾಣಿಸಿಕೊಳ್ಳು ; ಗೋಚರಿಸು : ಬಿಸಿಲಂ ಬೆಳ್ದಿಂಗಳೊಟ್ಟೈಸಿದುದೊ ಪಗಲೊಳಂ ಚೋದ್ಯಮೆಂಬಂತು ಚೆಲ್ವಾಗಸದಿಂ ತಳ್ಪೊಯ್ದುದುಂ ಕಂಡಿದು ಖಚರದುಕೂಲಾಂಬರದ್ಯೋತಮೋ . . . ದಿಗಿಭದಂತಾವಳೀಚ್ಛಾಯೆಯೋ ಭಾವಿಸಲೆಂದಾ ವೇಗದೊಳ್ ವಿಸ್ಮಯರಸವಿಸರಸ್ಯಂದಿಯಾದಂ ಮುಕುಂದಂ (ಜಗವಿ. ೧೦-೪). ೩. ಪ್ರತಿಬಿಂಬಿಸು ; ಪ್ರತಿಫಲಿಸಂ : ಕುರುಳ ನೆಱಲ್ಗಳ್ ತನ್ನೊಳೆ ತಳ್ಪೊಯ್ದು ನೆಗಟ್ದ ಕಱಿಯನೆ ಪೋಲ್ತುಂ ನುಣ್ಣಂ ಸೊಗಯಿಸುತಿರೆ ಸಿರಿಗನ್ನಡಿ ಕನ್ನಡಿಪುದಾದುದಿಂದುಶ್ರೀಯಂ(ಆದಿಪು.೭-೧೧); ಆಗುವುರ್ವರ್ವೆ ಕೆಯ್ಮಿಕ್ಕು ಕಾದಲ್ಕಡೆತರ್ಪಾವೇಗದೊಳ್ಮುಮ್ಮಳಿಸಿದ ಪಲವುಂ ರಾಜಚಿಹ್ನಂಗಳಂ ಬೆಳ್ಗೊಡೆಗಳ್ತಳ್ಪೊಯ್ದುದೇಂ ಕಣ್ಗೊಳಿಸಿದುದೊ ವಿನಕ್ಷತ್ರಕಚ್ಛತ್ರ ಪಿಂಡಂ [ಪಾಠಾಂ. ಕನಚ್ಛತ್ರ ಕಚ್ಛತ್ರ ಸಿಂಧು] (ಪಂಪಭಾ. ೧೩-೩೮). ೪. ತೊಡಗಂ (?) : ಅವರೊಂದೊರ್ವರೊಳಿಕ್ಕೆಯಿಂ ಸೆಣಸಿ ಕೊಳ್ಕೊಳ್ಳೆಂದು ಕೆಯ್ಗಿಯ್ಕೊಳೊಪ್ಪುವ ಹಾರಂ ಮೊಲೆಯೊಳ್ ತೊಡಂಕೆ ವಳಯಂ ಕರ್ಣಾಂತಮಂ ತಾಳ್ದೆ ಸಾರ್ದವತಂಸಂ ಕದಪಂ ಪಳಂಚೆ ಬೆಸದೊಳ್ ತಳ್ಪೊಯ್ದುದರಾ ದೇವಿಯುದ್ಯವಮುಂ ವಿಭ್ರಮಲೀಲೆಯುಂ ನಗುವಿನಂ ಸ್ತ್ರೀರಾಜ್ಯ ಸಾಮ್ರಾಜ್ಯಮಂ (ಶಾಂತಿಪು. ೯-೧೯೯). [ ತಳ್$_3$ + ಪೊಯ್$_1$ ]

**ತಳ್ಪೊಯ್$_4$** (ನಾ). ಅಡ್ಡಿ ; ಪ್ರತಿಹತ : " ತಳ್ಪೊಯ್, ತಡಂಬರಿ . . . ತಡಂಬೊಯ್–ಈ ೨೫ ಪ್ರತಿಹತಕ್ಕೆ ಪೆಸರ್ " (ಕರಸಾ. ೦೫-೨೯೭): " ತೊಡರ್ದುದು ಮಾರ್ಕೊಂಡುದು ಪರಿವಿಡಿಯಿಟ್ಟಿಸಿದುದೆಯ್ದೆ ನೂಂಕಿದುದು. . . ಕಡೆಗಣಿಸಿದುದಕ್ಕು ಪೋರ್ಕುಳಿಯು ತಳ್ಪೊಯ್ಯುಂ " (ಕವಿಕಂ. ೧೩೮). [ ತಳ್$_2$ + ಪೊಯ್$_3$ ]

**ತಳ್ವಿಸು** (ಕ್ರಿ). ತಡವಮಾಡಿಸು ; ವಿಳಂಬಕ್ಕೆ ಕಾರಣವಾಗು : ನಾವೇನು ಲೇಸುಗೈದವು ಸ್ವಾಮಿ ನಿನಗಿದಿರಾವುದುಂಟದಕಲ್ಲ ನಿನ್ನ ಸೇವೆಯ ವ್ಯಂತರರೊಳು ಪೂಜ್ಯರೆಂಬೊಂದು ಭಾವ ತಳ್ವಿಸಿತೆಂದರವರು (ಭರತೇ. ೩೫-೪೦). [ ತಳ್ವು$_1$ + – ಇಸು$_3$ ]

**ತಳ್ವು$_1$**, ತಳಗು$_1$, ತಳಿಗು, ತಳುಗು, ತಳುವು$_1$, ತಳುಹು$_1$ (ಕ್ರಿ). ೧. ತಡಮಾಡು; ನಿಧಾನಮಾಡು; ವಿಳಂಬಮಾಡು: "ತಳ್ವು–ಕಾಲಕ್ಷೇಪೇ (ಕಾಲ ಕಳೆಯು)" (ಶಮದಾ); ತಳ್ವದೆಯ್ದಿ ನಾಂ ತುಱುವನೆ ಕೊಳ್ವಮಂತು ತುಱುಗೊಂಡೊಡೆ ಪಾಂಡವರಿರ್ಪ ಗಂಡರೇ (ಪಂಪಭಾ. ೮-೮೯) ; ಒಂದು ದಿನಂ ನೀಂ ತಳ್ವಿದೊಡಂದಸುವಿಂಗುಪಟಳಂ ಮನಃಪ್ರಿಯ ಕೇಳ್ (ಉದ್ಭಟ. ೧೦-೬೫) : ತಳ್ವಿದಂ ಸಲ್ಲನೆನುತ್ತಮೊರ್ವಳೆಳೆವೆಣ್ ಸುರಿದಳ್ ಮಿಗೆ ಕಣ್ಣನೀರ್ಗಳಂ (ಕಬ್ಬಿಕಾ. ೭೩) ; ಅಱುದಿಂಗಳಂ ತಳ್ವಿದಂ (ಶಮದ. ೦೨೮ ಪ್ರಯೋ) ; ಏತಱಿಂದವನಾ ಒರ್ವಳ್ನೆರೆಯಲ್ಬಾರದೆನುತ ರತಿ ತಳ್ವದೆ ಬಹುರೂಪಂ ತಾಳಿದಳೆನೆ ಸರ್ವರನನುಕರಿಸುವ ವಾರಸ್ತ್ರೀನಿವಹವೆಸೆದುದಲ್ಲಿ (ಜಯುಕಾ.೧-೬೩); ಬರವೇಳಂಬುದುಮುವಂ ಪೋಗಿ ತಳ್ವದಾ ಕ್ರವ್ಯಾದನಾಮ ವ್ಯಾಧನಂ ಪುಗಿಸಿದಾಗಳ್ (ರಾಜಶೇ. ೫-೨೩ ವ). ೨. ನೂಕು ; ತಳ್ಳು : ಆಳ್ವರನೆಂದೊಡಾಳ್ವರನಾಳ್ವಿ ಸಗೆಯ್ಸಿದನಂನ್ಯಭೂಮಿಪರಂ ಬಾಳ್ವರಸೆಯ್ದೆ ಬಾಳ್ವರಸು ಬಾಳ್ದಲೆಗೊಂಡನದಿನ್ನುಮಾನ್ತಡೆ ತಳ್ವೆ ನಿಜಪ್ರತಾಪದಹನಂ ಕಡುತಳ್ವೆ ವಿರೋಧಿಗಳ್ ಚಲಂಗೊಳ್ವರ್ × × ಒಯ್ದುಗೊಳ್ವ ಪೆಱರ್ಪ್ಪಗೆ ಗೊಳ್ವರೆ ಕುನ್ತಳೇಶನೊಳ್ (ಎಕ. XI, ದಾವಣ. ೩-೭ : 1121).

**ತಳಗು$_1$** : ೩. ತಂಗು ; ನಿಲ್ಲು : ಮಳೆ ಬೆಳೆಯಲಿ ಸಂತುಷ್ಟಿವಡೆದು ಜನ ತಳಗಿದುದತಿಹರುಷದಲಿ (ಕಂನವಿ. ೩-೧೦೦) ; ಎಲೆ ಬಾಲೆ ಚಾಮುಂಡಿ ತಾವು ಕೊಟ್ಟರೆ ತಳಗೇವು (ಹಳ್ಳಿಬಾ.೨೫); ರಂಗದೇವರು, ಪ್ರತಿದಿನವೂ ಒಂದೊಂದು ಹಳ್ಳಿಗೆ ಹೋಗಿ, ಆ ರಾತ್ರಿ ಅಲ್ಲಿ ತಳಗಿ, ಭಕ್ತಾದಿಗಳಿಂದ ಪೂಜೆಗೊಳ್ಳುತ್ತಾನೆ (ಹೇಮಾತೀ. ೨೮). **ತಳಿಗು** : ೩. ನೃತ್ಯ ಗೀತವಾದ್ಯಾದಿಗಳು ರಚಿಸುತ ಅಲ್ಲಲ್ಲಿ ತಳಿಗಿರುವ ಕಿನ್ನರ ಕಿಂಪುರುಷಾದಿ ದೇವರ್ಕಳ ಸಮೂಹಂಗಳಿಂದಲೂ (ಪುರುಷ. ೧೨೦) ; ತಮ್ಮನ ದಂಡು ಬೆಂಗ್ಳೂರಿಗೋಗಿ ತಳಿಗ್ಯಾವೆ (ನಾಪದ. ೧೭). **ತಳುಗು** : ೩. ಮೊಳಗಿದ್ದೈ ನಿಜತತ್ತ್ವರವದಲಿ . . . ತಳುಗಿದ್ದೈ ಶ್ರೀ ಸಮವಸರಣದಿ ದೇವ ಸಲಹೆಂದ (ಸನತ್ಕು. ೧-೪೦) : ಮೈಸೂರಿನ ಅಂಗಡಿ ಬೀದಿಯು ಹದಿನೈದು ದಿನ ಇಲ್ಲೆ ತಳುಗುತ್ತಿತ್ತು (ಹುಟ್ಟಿಹ. ೭೫); ಹೂಹೂಗಲೆಯುವ ದುಂಬಿಯ ಜೊದದೆ ಕಂಗಳ ಮುಟ್ಟುತ ಲರೆಚಣ ತಳುಗದೆ (ಗೋಕುನಿ. ೫೯-೪). **ತಳುವು$_1$** : ೧. ಎನಗೆ ಪರಸೇವೆ ಪರಾಙ್ಮುಖವೆಂದು ಒಡೆಯರಿಗೆ ಎಡೆಮಾಡೆಂದು ಎನಗೆ ತಳುವೆಂದಡೆ ಒಪ್ಪುವರೇ ನಿಜ ಶರಣರು (ಮೋಳಿಮಾ. ೨೦-೮೪) : ಬರವನೆಳಸಿರ್ದಯ್ಯ

ದೇವ ತಳುವಿದೆನೆಂದು ಉರವಣಿಸಿ ಬರುತಿರ್ದೆ ತಂದೆ ಮುಳಿಯದಿರೆಂದು (ಬಸರ. ೩-೪೩) : ತನಯನೆಂದುಂ ಬಪ್ಪ ಹೊತ್ತಿಂಗೆ ಬಾರದಿರೆ ಮನ ನೊಂದಿದೇಕೆ ತಳುವಿದನೆನ್ನ ಕಂದನೆಂದೆನುತ (ಹಡಕಾ. ೧೨-೧೧) ; ಅವ್ವೆಯುಂ ತಳುವಿದಡೆ ಭರವಸದಿ ಬಂದೂಡುವನು ತಾನೇ (ಬಸಪು. ೪೭-೪೦) ; ಗಳಿಗೆ ತಳುವಿದೊಡಗ್ನಿಯೊಳಗಪೆನೆಂದ ರಘುನಾಥ (ಜೌಶಿರಾ. ೯-೩೦) : ಬಳಿಕ ನಂಬುಗೆಗೊಂಡು ಜೋದಾವಳಿ ಬೇಗ ತಳುವದೋಡಿತು ದೆಸೆದೆಸೆಗೆ (ಕಂನವಿ. ೧೫-೧೦೦). ೩. ಎಲ್ಲಿ ಪಕ್ಕಿ ಗಿಡಗಿಡದಲಿ ತಳುವಿ, ತಳುವಿ ಎದೆಗಡಲಲಿ ನೆಗೆವ ಭಾವವೀಚಿಗಳನು ಮೊಗೆಯುತಿರುವುದೊ (ನತಬಂ. ೫೦-೧೦). ೪. ಸಾವಕಾಶವಾಗು ; ನಿಧಾನವಾಗಂ : ಗುಣವತಿಯ ನಡೆ ತಳುವಿ ತಳ್ಕಿಕ್ಕೆ ಕೂಡೆ ಭಾವಂಗಳಿಂ ನುಡಿ ಬಳಲ್ದೊಪ್ಪುತಿರೆ ಮೆಲ್ಪಿನ ಗುಣಂಗಳಿಂ (ಬಸರ. ೧-೧೧೦). **ತಳುಹು₁ :** ೧. ಕ್ಷಣಕ್ಕೆ ಕ್ಷಣಕ್ಕೆ ತಿಳಿ ನೀ ಎಂದರೆ ತಳುಹದೆ ತನ್ನ ನಿಜವ ಕೊಡನೆ ಕಪಿಲಸಿದ್ಧಮಲ್ಲೇಂದ್ರ (ಸಿದ್ಧವ. ೧೦-೫೯) ; ಎನ್ನ ಒಯಿದು ಬೀಳಿಸುವರಗ್ನಿಯೊಳಗೀಗ ನೀವು ಕೇಳಿ ತಳುಹದೆ ಬನ್ನಿ ಬೇಗ (ಪಾಂಡಚ. ೪೫-೧೩) ; ಇನ್ನು ಬಾರನೇತಕವನು ? ಫಲ್ಗೆಗಡಲ ನಳಿಯಲೆಂದು ಬರಿದೆ ತಳುಹುತಿರುವನೆ ? (ಕವಿಕಾ. ೩೫-೫). ೨. ನಾಳೆ ತಾನಿರೆನೇಕೆ ತಳುಹುವೆ ಕಾಲವನು ಕರುಣಾಳುವೆಂಬೀ ಘಾಳಿಮಾತಂತಿರಲಿ ತೋಱಿಸೆನುತ್ತ ಹಲುಬಿದಳು (ನಿಭಾಗ. ೪-೫-೩೧). ೩. ಶಾಂತಕೂಲ ತಲ್ಪದಲ್ಲಿ ನಾವೆಯೊಂದು ತಳುಹಿದಾಗ ಗಾಳಿಯಂತೆ ಸುಳಿದು ಸೋಂಕಿ ಹಾಯನೇಕೆ ತೂರಿದೆ ? (ಕವಿಕಾ. ೮೭-೧೪). ೫. ಹಿಂದೇಟು ಹಾಕು ; ಹಿಂಜರಿ ; ಅಳುಕು : ಎನಿತೋ ಕೋಗಿಲೆಗಳ ನುಣ್ದೊರಳನು ಹಿಸುಕಲು ತಳುಹದ ಕಲಿಭಟನಿವನು (ಕವಿಕಾ. ೪೨-೧೪). [ ತಳ್₂ + – ವು ]

**ತಳ್ವು₂, ತಳುವು₂, ತಳುಹು₂** (ನಾ). ೧. ತಡ ; ವಿಳಂಬ ; ನಿಧಾನ : ಬಾಡಿದುದೇಕೆ ನಿನ್ನ ತನುವಲ್ಲರಿ . . . ನಿನ್ನಳಕಸಂತತಿ ನೀಟಿಸ್ದಿರಲೇಕೆ ತಳ್ವುಮಂ ಮಾಡದೆ [ಪಾಠಾಂ. ತಳ್ಮಾಡದೆ] ಪೇಟ್ನೆಗೆ (ಪುಣ್ಯಾಸ್ರ. ೧-೭೩). 'ತಳ್ವುಗೆಯ್' ಪರಾ. ೨. ಆಧಾರ ; ಅವಲಂಬನ : ದಾನಪರನಂ ನಿಜೋನ್ನತಮಾನನನಾರೂಢ ವಿಪುಳ ವಂಶನನಂತೊಂದಾನೆಯನಪಾಯಪಂಕದೊಳೇನುಂ ತಳ್ವಿ[ಪಾಠಾಂ. ಳ್ಪಿ]ಲ್ಲ ದಿರ್ದುದಂ ಕಾಣಿಸಿದಂ (ಕವಿರಾ. ೩-೧೨೯). **ತಳುವು₂ :** ೧. ಎಲ್ಲರ ಮೆಚ್ಚುಗಳೊಳಂ ತಳುವಿಲ್ಲದೆ ಬಾಸುಬ್ಗಳೊಗೆಯೆ . . . ಸೆತ್ತರನೆ ಕಾಱಿ ಕೆಡೆದರ್ (ಧರ್ಮಾಮೃ. ೩-೨೦೩) : ಮುಳಿದು ವಿಯುಕ್ತ ವಲ್ಲಭಜನಂ ತಳುವಿಲ್ಲದೆ ತಟ್ಕೆಗೊಂಡುದು . . . ಏನಳವಿಗಳುಂಬಮೋ ಪುದಿದ ಮಾಗಿಯ ಶೀತವಿಜೃಂಭಪಾತನಂ (ಕುಸುಮಾ. ೭-೨೦) : ಖುಲ್ಲರಿವದಿರ ಬಿಡಿಸಿದೊಡೆ ತಳುವಿಲ್ಲದಪುದಪಘಾತ (ಕುಮ್ಮಾಲ. ೨೦-೨); ತಳುವ ಮಾಡದೆ ಹೇಳೆನುತ ಹನುಮಂತ ಘರ್ಜಿಸಿದ (ತೊರರಾ. ೭-೨೩-೯). ೨. 'ತಳುವಿಕ್ಕು₁' ಪರಾ. ೩. ಅವಕಾಶ (?) : ಅವನೊಳಗಾಗುವಂತೆ ಮಾತುಗಳ ತಿಳಿದು ನುಡಿಯಬೇಕು ತರಬೇಕವನನು ತಳುವುಂಟು ತವಕಿಸಬೇಡ (ಕುರಾಸಾಂ. ೨೪-೧೮). **ತಳುಹು₂ :** ೧. ಅಲ್ಲಿ ತಡೆಹಡೆದು ತಾಂ ತಳುಹಿಲ್ಲದೆ ನಿಜದೇಶಕೆಯ್ದೆವಂದು (ಧರ್ಮಪ. ೨-೩೯); ಇಳೆಯ ಪಾಲನ ನೀನು ತಳುಹ ಮಾಡದೆಯಾಗ ಕಳುಹುಯೆಂದೊರೆಯೆ (ಹಮಚ. ೫೭) : ನಳಿನಮಿತ್ರನ ಸುತನಳಿಯನ ಪೆತ್ತನ ಗೆಳೆಯನ ಬಾಯಿಗಾಹುತಿಯ ತಳುಹ ಮಾಡದೆಯಿತ್ತನ (ಅಬ್ಬಲಾ. ೨-೩).

**ತಳುಮಾಡು, ತಳುವುಮಾಡು** = ೧. ತಡಮಾಡು ; ವಿಳಂಬಮಾಡಂ: ಕಾಳಿಗಮನೆನ್ನೊಳು ತಳುಮಾಡದೆ ಮಾಡಲೆನ್ನ ಭುಜಬಲಮಂ ನಿನಗೆ ತೋರ್ಪೆಂ (ಪುಣ್ಯಾಸ್ರ. ೫-೩೨ ವ) : ಮಾಡಿಂದಿಳಿದು ಮೇಲ್ಮಾಳಿಗೆಯೊಳು ತಳುಮಾಡದಿಳಿದು (ಭರತ. ೧೨-೭) : ಎಲೆಲೆ ವೃಷಭ ಪೊಱಮಡು ತಳುವುಮಾಡದಿರಿನ್ನೆನುತ (ಬಸಪು. ೩೨-೩೪). ೨. ತಂಗು ; ಉಳಿ : ಆತನ ಪೊಳಲೊಳು ನಾಲ್ಕಯ್ದು ಮಾಸ ತಳುಮಾಡಿದನು ಪ್ರಭುಜನ ಪೃಥಿವೀಲಲನಾಧಿಪನು (ಪ್ರಭುಜ. ೨-೨೭). **ತಳುವಾಗು** = ತಪ್ಪಾಗು : ಒಲ್ಲೆ ಎನ್ನೋ ಕಹಳೆಕಾಱಿ ಬಂದವ ಪಱಿದು ನಿಂದು ಪಾಡಿರೊ ಚಿಣತಿಯರಿರಾ ತಾಳವಿಲಿ[ಲ್ಲಿ]ತಳುವಾಯಿತ್ತಲ್ಲಾ (ಸರ್ವವ. ೪೮-೨೫೫). **ತಳ್ವಿಲ್ಲದೆ** = ತಡವಿಲ್ಲದೆ ; ಕೂಡಲೆ ; ಬೇಗನೆ : ಖಾಂಡವಮನಾಂ ತಳ್ವಿಲ್ಲದಿಂದೂಡುವೆಂ (ಪಂಪಭಾ. ೫-೭೪) ; ಪೂಜಿಪ ಭಕ್ತಿ(ಕ್ತ)ಜನಕ್ಕೆ ಮುಕ್ತಿ ತಳ್ವಿಲ್ಲದೆ ಕೂಡುಗೆಂದು ಪೊಗರ್ದ್ದ(ಟ್ದ)ಂ (ಎಇ. XVI, ೩-೯ : 950) ; ನೀನೀಗಳ್ತಳ್ವಿಲ್ಲದೆ ಬೆಸಸೆನ್ನಂ ಭೂವಲ್ಲಭನುಮನಿಂದೆ ತಂದಪೆಂ ಚಂದ್ರಮುಖೀ (ಕಾದಂಉ. ೩೦೩) ; ಪೋಪೆನೀಗಳ್ ತಪಂಬಡಲೆಂದುತ್ತಮ ಸತ್ವನೂರ್ಜಿತಗುಣಾ ಸಿಂಹಾಸನಂ ಘೇರಿ ಬೆಳ್ಗೊಡೆಯಿಂತೆಲ್ಲಮನೊಲ್ಲ[illegible] ನರಸಂ ತಳ್ವಿಲ್ಲದಾಸ್ಥಾನದಿಂ (ಅಜಿಪು. ೧೦-೫೪); ಎಲೆ ತೀಡುವ ತೆಂಗಾಳಿಯ . . . ತಳ್ವಿಲದೆ ಕಾದಲನಂ ತಂದೊಡೆ ನಱುಸುಯ್ಯೆಲರಿಂದಂ ನಿನ್ನನಾಗಳುಂ ನೆಱೆ ಪೊರೆವೆಂ (ಕಬ್ಬಿಕಾ. ೭೦). [ <ತಳ್ವು₁ ]

**ತಳ್ವುಗೆಯ್** (ಕ್ರಿ). ತಡಮಾಡು ; ವಿಳಂಬಮಾಡು: ಪ್ರೌಢಭಕ್ತರಸುವರ್ಣ ಭವಂ ಕುಡದೀಗಳ್ತಳ್ವುಗೆಯ್ದನಾಂ ಸೈರಿಪೆನಲ್ತು (ವೃಷವಿ. ೨೫-೨೯).
[ ತಳ್ವು₂ + ಕೆಯ್₁ ]

**ತಳ್ಳಂಕ, ತಳ್ಳಂಕು** (ನಾ). ೧. ಚಿಂತೆ ; ಕಳವಳ ; ಕಾತರ : "ಸಿಡಿಮಿಡಿಯೆನಲ್ತಳ್ಳಂಕಮುಕ್ಕು" (ಕಬ್ಬಿಕೈ. ೭೭): "ಸಿಡಿಮಿಡಿ ಕಾತಳವೆಂ[illegible] ತಳ್ಳಂಕ" (ಅಬ್ಬಮಂ. ೫೦) ; ತಂದು ಪೂಮಾಲೆಯಂ ಸಾದರದಿಂದಾವಂಗೆ ತಾನಿಕ್ಕುವಳೊ ತಡೆಯದಿಂದಿಂತು ತಳ್ಳಂಕದಿಂದೊಂದಿರುತಿರ್ದಂತೆಯೆ ವೀಕ್ಷಾತುರಮಯ ನಯನಾನೀಕಮಾ ರಾಜಲೋಕಂ (ಶಾಂತೀಶ್ವ. ೪-೨೫೭) : ನೀವೇನೆಂದಿರ್ದೈ ನಿಮ್ಮಣ್ಣ ದೇವನ ಮುಂದೆ ಭಾಷೆಗಳ ತಂದಿರ್ದೈ ತಳ್ಳಂಕವನು ಸಮಗೆಂದು ಕೊಡುವಿರಿ ಕೌರವನ ತಮ್ಮಂದಿರ್ದೈ ನೀವೆನುತ ಸುಳಿದನು ಸಿಂಹನಾದದಲಿ (ಕುಮ್ಮಾಕ. ೧೯-೨೨) : ಪಳ್ಳಿಗರಾ ನೀರೆಱೆವ ನೀಱೆಯರ ಪೊಂಬಳ್ಳಿ ಮೆಯ್ಗಂಡು ವಿರಹದ ತಳ್ಳಂಕದಿಂ ಮೆಯ್ಮಱೆದು ಬಳ್ದು ನೋಳ್ಪರ ಘೊಳ್ಳೆಂದು ನಗಿಸುವರಲ್ಲಿ (ಕುರಾಸಾಂ. ೨-೪೪). ೨. ಹೆದರಿಕೆ ; ಭಯ ; ತಲ್ಲಣ : "ಡಿಳ್ಳಮೆನಲ್ ತಲ್ಲಣಮದು ತಳ್ಳಂಕಮೆ ಭೀತಿಯುಕ್ಕುಂ" (ಧಾರನಿ. ೫೭) : ಕುಳ್ಳಿರ್ದು ಕಂಪಿಸುವ ಭಕ್ತನಂ ಸೈತಿಡುತ ತಳ್ಳಂಕದಿಂದೆ ಬೆಬ್ಬಳಿಪನಂ ಮಾಣಿಸುತ (ಸೀಪರ. ದೀ. ೬೫-೨) : ತವತವಗೆ ತಳ್ಳಂಕದಲಿ ಪಾಂಡವರು ನಡುಗಿತು ಪಾರ್ಥ ಬಲು ಗರವಮಚಿದಂತಿರೆ ಮೂಕನಾದನು ಬೆರಳ ಮೂಗಿನಲಿ (ಕುಮ್ಮಾಭೀ. ೬-೩೭) : ನೀರಾಡುವಾ ಮೊಗ ನಿಡುಸುಯ್ದು ನಾಸಿಕ ತೇರೈಸುವಾ ತಳ್ಳಂಕ (ಶ್ರೀಪಾಲ. ೪-೯೫). ೩. ಅಲುಗಾಟ ; ಹೊಯ್ದಾಟ ; ಚಲನೆ : ತಗ್ಗಿದುದು ಧಾತ್ರೀತಳಂ ಕುಲಾಚಲಚಯಂ ನೆಗ್ಗಿದುದುಸಿರ್ಪೊಯ್ದು ಬಸಿಱ ತಳ್ಳಂಕದಿಂ ಮುಗ್ಗಿದುದು ದಿಕ್ಕರಿಕುಲಂ . . . ಆ ಬಲದ ಭಾರದಗ್ಗಳಿಕೆಯಿಂತೊ (ಚಬಪು. ೪೮-೫). 'ತಳ್ಳಂಕಂಗುಟ್ಟು' ಪರಾ. ೪. ತೊಂದರೆ ; ಕಷ್ಟ : ಅಳ್ಳೆಯುಂ ಕೊಳ್ಳೆಯುಂದಿರಿವಪ್ಪೋಲ್ ಪೇಳದರ್ ತಳ್ಳಂಕಮಂ ತಿಳಿಯದೆ ಪೊಳ್ತಿನಿರವಂ (ಕಾಲೂರ. ೧೫೯-೩೫೦). **ತಳ್ಳಂಕು:** ೩. 'ತಳ್ಳಂಕುಗುಟ್ಟು'. 'ತಳ್ಳಂಕುಗೆಡೆ' ಪರಾ.

**ತಳ್ಳಂಕಂಗುಟ್ಟು, ತಳ್ಳಂಕಗುಟ್ಟು,** [illegible] (ಕ್ರಿ) ೧. [illegible] ಕಾತರ : [illegible] ನಿರ್ಘಾತದಿಂದಮುಳ್ಳಾದಿ ತಳ್ಳಂಕಂಗುಟ್ಟಿ [illegible] ೧೨-೬೫ ವ). **ತಳ್ಳಂಕಗುಟ್ಟು :** ೧. [illegible] ದೋಳದಿಂದಂ ಸುರಮಂದಿಸ್ತೋತ್ರದಿಂದು [illegible] [ಪಾಠಾಂ. ಕು]ಗುಟ್ಟು [illegible]

ತಟ್ಟಪ್ಪು, ತಳ್ತಪ್ಪು = ಗಾಢವಾಗಿ ಆಲಿಂಗಿಸು: ಸರ್ವಾಂಗವನೆನ್ನಂಗಂಗಳೊಳ್ ಮಯ್ಗರೆದುವೆನಿಸಿ ಮೆಯ್ಯಾರೆ ತಟ್ಟಪ್ಪಿ (ಕಾದಂಉ. ೫೨೩): ಶಾಂತಲಾದೇವಿ ಬಮ್ಮಲದೇವಿಯನ್ನು ತನ್ನ ಎರಡೂ ತೋಳುಗಳಿಂದ ತಳ್ತಪ್ಪಿ ಕರೆದುಕೊಂಡಳು (ಸವತಿ. ೧೦೦). ತಟ್ತಿಡಿ = ದಟ್ಟವಾಗಿ ಕವಿ ; ಗಾಢವಾಗಿ ಆವರಿಸು : ತಮಾಲವನಂಗಳ ಮರ್ವು ಪರ್ವಿ ಕರ್ಮುಡುಗಳೊಳೆಯ್ದೆ ಮಾತರ್ಗಳಗೆ ನೀಲಸರೋಜವನಂಗಳಲ್ಲಿ ತಟ್ತಿಡಿದಿರೆ ಕಾಳಗತ್ತಲೆ ತಗುಳ್ದಿರುಳಾದುದೆ ಗೆತ್ತು (ಕಾದಂಪೂ. ೬೩೯). ತಟ್ತಿಡು = ಒಂದಕ್ಕೊಂದು ಹೆಣೆ ; ತಳಕುಹಾಕು : ಎರಡು ಕೆಯ್ಯಂ ತಟ್ತಿಟ್ಟು ಮಾಟ್ಪುದುಂ . . . ಎಂದಿವು ಮೂವತ್ತೆರಡು ದೋಷಂಗಳಪ್ಪುವು (ಪಸಾರ. ೬೮೬-೧೬). ತಟ್ತಿರು = ೧. ಕೂಡಿರು ; ಹೊಂದಿರು : ತಳಿರಿಂ ತಟ್ತಿತ್ತ ಶೋಕದ್ರುಮವೆಳಗೊನರಿಂದೊಂದಿತಿಮ್ಮಾವು (ಕಾದಂಉ. ೭೮೦) : ಪರಮಾಳೋಚನದೊಳ್ . . . ನಿಬಿಡಕಾಯೋತ್ಸರ್ಗದೊಳ್ ಶುದ್ಧಿ ತಟ್ತಿರೆ (ಸುಕುಮಾ. ೪-೧೫). ೨. ತಟ್ಟಿರು ; ತಾಗಿರು ; ತಗುಲು : ಮದನದಾವದಹನಂ ತಟ್ತಿರ್ದಪುದಿಲ್ಲ ನಿನ್ನನದಱಿಂದುಪದೇಶಂಗೆಯ್ಯುತಿರ್ಪುದಿದು ಸುಖಮಲ್ತೆ (ಕಾದಂಪೂ. ೮೪೯): ೩. ಬೆರೆತಿರಂ ; ಲೀನವಾಗಿರು: ಅಕ್ಷಯಸುಖದೊಳ್ ತಟ್ತಿರು ನೀಂ ಸುರುಳ್ದಿರ್ಪ ಮರುಳ್ತನಮಿನ್ನೇಕೆ ದೇವ ಜನ್ಮಾಟವಿಯೊಳ್ (ಅಜಿಪು. ೬-೭೮) : ಜಿನಪಾದಾಂಭೋಜದೊಳ್ತಟ್ತಿರೆ ಮತಿ (ಧರ್ಮಾಮೃ. ೧-೫); ತಟ್ತಿರ್ದನಿಂದ್ರಪ್ರತಿಮಂ ಲೀಲಾವತೀದೇವಿಯ ಹೃದಯದೊಳ್ (ಲೀಲಾವ.೧೪-೯೭). ತಟ್ತಿಮೆ, ತಳಿತವೆ=ದಟ್ಟವಾದ ರೆಪ್ಪೆಗೂದಲು,–ಕಣ್ಣೆವೆ : ಬಳ್ವಳ ನೀಳ್ದ ಕಣ್ಮಲರ ತಟ್ತಿಮೆಯಿಂ ಕರೆಗಣ್ಮೆ . . . ಬಾಷ್ಪಜಳಮಂ ಕಳೆದು (ಪಂಪಭಾ. ೭-೬೮): ತಟ್ತಿಮೆದುಱುಗಲಿ ನಿಱಿದುವು ಮಿಗೆ ಬಾಷ್ಪವಾರಿ ಧಾರಾಪೂರಂ (ಕಾದಂಪೂ. ೮೩೦) ; ಅಳಕನಿಚಯದ ಕುಂಭಿನೊಸಲಿನ ತಳಿತವೆಯ ನಿಡುಹುಬ್ಬುಗಳ (ಕುವ್ಯಾಭೀ. ೩-೭೭). [ದೇ.॥ ತಮಿ. ತಟುವಲ್, ತಟು=ಅಪ್ಪಿಕೊಳ್ಳುವಿಕೆ ]

△ತಟ್ₑ₂ 'ತಳ್₂ ನೋ.

**ತಟತಟ,** ತತ್ತಳ₁, ತತ್ತಟ, ತಳತಳ, ತಳಥಳ, ತಳ್ತಳ, ತಟ್ಟಟ (ನಾ). ೧. ತೀವ್ರವಾಗಿ ಕುದಿಯುವುದನ್ನು ಅನುಕರಿಸುವ ಶಬ್ದ. 'ತಟತಟಗುದಿ' ಪರಾ. ೨. ಹೆಚ್ಚಾಗಿ ಪ್ರಕಾಶಿಸುವುದನ್ನು ಅನುಕರಿಸುವ ಶಬ್ದ : ಗಟಗಟ, ಕವಕವ, ಛಟಿಲ್, ಛಟಲ್, ತಟತಟ . . . ಖಟಿಲನೆ, ದುಢುಮ್ಮನೆ ಇತ್ಯಾದಿ (ಶ್ರಬಿ. ೫೨). 'ತಟತಟನೆ', 'ತಟತಟಿಸು' ಪರಾ. ತತ್ತಳ₁ : ೨. ತತ್ತಳ ಸೀರೆಯನುಟ್ಟು ಮುತ್ತುರತ್ನ ಮಾಣಿಕವ ತೊಟ್ಟು (ಎಬಿಕಾ. ೧೩೭-೭). ೩. ಕಕ್ಕಾಬಿಕ್ಕಿ ; ತಬ್ಬಿಬ್ಬು; ಗಾಬರಿ; ಗೊಂದಲ ; ದಿಗ್ಭ್ರಮೆ: ಬಿತ್ತಿದರು ಕುರುಪತಿಗೆ ಭಯವನು ತತ್ತಳದ ತವಕದಲಿ ರಾಯನ ಮೊತ್ತದಕ್ಷೋಹಿಣಿಯ ಮಾರ್ಬಲ ಸಹಿತ ಹೊಱವಂಟ (ಕುವ್ಯಾಅ. ಓರಿ೩. ೨೫-೫) : ತತ್ತಳದ ಬೇಟದೊಳ್ಪೆಂಡಾಗಿ ವಿಷಯ ನಿಂದಿರ್ದಳಾತನ ಪೊರೆಯೊಳು (ಜೈಮಿಭಾ. ೩೦-೨೩) : ಸುತ್ತದೆ ಪಲಬಗೆಯ ತೀರ್ಥಯಾತ್ರಾದಿಗಳಂ ಗೊತ್ತಿನ ಹಾಲಾಸ್ಯದೊಳಂ ತತ್ತಳಮಂ ಬಿಟ್ಟು ಮುಕ್ತಿಯ ಪಡೆದನವಂ (ಹಾಲಾಸ್ಯ. ೧-೧-೭೧). ತತ್ತಟ: ೧. 'ತತ್ತಟಗುದಿ' ಪರಾ. ತಳತಳ: ೧. 'ತಳತಳನೆ' ಪರಾ. ೨. ರಕ್ತಾಶೋಕಪಲ್ಲವದಂತೆ ತಳತಳ ತೊಳಗುವ [ಪಾಠಾಂ. ತೊಳತೊಳಗುವ]ಕರತಳ ಪಲ್ಲವಂಗಳ್ (ಪಂಪಭಾ. ೨-೩೯ ವ). 'ತಳತಳಿಸು' ಪರಾ. ೪. ತೊಳಲುವುದನ್ನು ಅಥವಾ ಸಂಕಟಪಡುವುದನ್ನು [illegible] ಶಬ್ದ : ಬಡವನನ್ನು ಯಾಕೆ ಸುಮ್ಮನೆ ತಳತಳ [illegible] ? [illegible]. ೫. [illegible]ದಯಂ; "ಉದಯ" (ಚಕುನಿ. [illegible]). ತಳಥಳ: ೨. '[illegible]' ಪರಾ. ತಳ್ತಳ: ೨. 'ತಳ್ತಳ [illegible]' ಪರಾ. ತಟ್ಟಟ: ೧. '[illegible]' ಪರಾ.

ತತ್ತಳಮಾಡು = ಗಾಬರಿಯಿಂದ ಮಾಡು ; ಗಡಿಬಿಡಿಯಿಂದ ಮಾಡು (?) : ನಿತ್ಯಕರ್ಮವ ಮಱೆದರು ದೇವಪೂಜೆಯ ತತ್ತಳ ಮಾಳ್ಪರು ತಪದ ಚಿತ್ತಪನೊಡೆದರು ಸನ್ಮುನಿವರರು ದಂಡೆತ್ತಿ ಮನ್ಮಥ ಬಹ ಭರಕೆ (ಮೋಹತ. ೬-೨೮). ತತ್ತಳವಾಗು = ತಳಮಳಗೊಳ್ಳು; ಕಾತರಗೊಳ್ಳು : ಗಳರವಗಳ ಮಾಳ್ಪ ಬಗೆದರೆ ಪಲುಬುವ ಕೋಳರ್ವಕ್ಕಿ ಕೆಲವು ಲಾವುಗೆಯ ಬಳಸದ ದನಿಗೇಳ್ದ ಮುನಿಗಳ ಚಿತ್ತ ತತ್ತಳವಾದುದೇನ ಹೇಳುವೆನು (ಮೋಹತ. ೭-೧೬).

**ತಟತಟಗುದಿ,** ತತ್ತಟಗುದಿ, ತಳ್ತಳಗುದಿ, ತಟ್ಟಟಗುದಿ (ಕ್ರಿ). ತೀವ್ರವಾಗಿ ಕುದಿ; ಜೋರಾಗಿ ಮರಳು; ಕತಕತನೆ ಕುದಿ: "ತಟತಟಗುದಿ, ತಟ್ಟಟಗುದಿ–ಎಂಬಿವು ಕಾಸುವ ರಸದ್ರವ್ಯಾನುಕರಣಂಗಳ್" (ಶಮದ. ಪರಿ. ೧). **ತತ್ತಟಗುದಿ :** ಮೇಗೆ ಸಿಡಿಲ್ದಗುಳಂತೆ ಕೂಡೆ ತತ್ತಟಗುದಿಯುತ್ತುಮಿರ್ಪ ಕುದಿಯೊಳ್ ಸಿಡಿದಲ್ಲಿಯ ಮುತ್ತುಗಳ್ (ಪಂಪಭಾ. ೧೦-೧೫೩) ; ತತ್ತಟಗುದಿದುವು ಭವನ ದೀರ್ಘಿಕಾಚ್ಛಜಲಂಗಳ್ (ಶಾಂತಿಪು. ೩-೧೦೬) : ತತ್ತಟಗುದಿದು ಕಾಯ್ದು ಕಾಯ್ಗೊಡದೆಣ್ಣೆಯೊಳರ್ದಿ (ಅಜಿಪು.೧೧-೧೦ ವ). **ತಳ್ತಳಗುದಿ :** ತಳ್ತಳಗುದಿದೆಣ್ಣೆಯೊಳ್ ಬಟಿಲೆ ತೆಗೆವುದುಂ (ಸುಕುಮಾ. ೧೧-೪೭ ವ). **ತಟ್ಟಟಗುದಿ :** ಮೇಲಿನ 'ಶಮದ' ಪ್ರಯೋಗವನ್ನು ನೋಡಿ. [ ತಟತಟ + ಕುದಿ₁ ]

**ತಟತಟನೆ,** ತಳತಳನೆ, ತಳ್ತಳನೆ (ಅ). ೧. ಹೆಚ್ಚಾದ ಕಾಂತಿಯಿಂದ ಕೂಡಿ ; ತಳತಳಿಸುತ್ತ ; ಪ್ರಕಾಶಮಾನವಾಗಿ : ಪಂಚಪಾಂಡವರ ತಲೆಗಳಂ ಕೊಂಡು ತಟತಟನೆ ನೇಸರ್ಮೂಡುವಾಗಳ್ ಬಂದು (ಗದಾಯು. ೯-೩೨ ವ) : ತಟತಟನೆ ನೇಸರ್ಮೂಡಿದುದು ಮಿಟ್ಟು ಮೂಡುವ ತೆಱದಿಂ (ಶಮದ. ೧೯೩ ಪ್ರಯೋ). **ತಳತಳನೆ :** ೧. ತಳತಳ[ಪಾಠಾಂ. ಥಳಥಳ]ನೆ ಕಾಹೇಱಿದದಱಿಲಿ ನಲಿದು ಬತ್ತೀಸಾಯುಧಂಗಳಿನಲಘುಮತಿಯಲಿ ವೀರಗೆಲಸವನಾಚರಿಸಿ (ಬಸಪು. ೫೩-೫೩); ತಳತಳನೆ ತೊಳಪ ರದನದ ಬೆಳಗಂತಃಸ್ಥಿತ ಕೃಪಾಸುಧಾಂಭೋನಿಧಿಯಗ್ಗಳಿಸಿ ತೆರೆಮಸಗಿದಂತಿರೆ ಜಳರುಹರಿಪುಮೌಳಿ ತಾಪಸಂಗಿಂತೆಂದಂ (ಶಬಶಂ. ೨-೧೧೪). ೨. ಕೊತಕೊತನೆ ; ಕತಕತನೆ ; ತೀವ್ರವಾಗಿ : (ಕ). **ತಳ್ತಳನೆ :** ೨. ತಳ್ತಳನೆ ಕುದಿವ ಕರ್ಬೊನ್ನ ಕಾಯ್ಗೊಂದೆಣ್ಣೆಯೊಳ್ ಬಟಿಲೆ ತೆಗವುವರುಂ (ಆದಿಪು. ೫-೮೫ ವ). [ ತಟತಟ + – ಅನೆ₁ ]

**ತಟತಟಿಸು,** ತಂಥಳಿಸು, ತತ್ತಳಿಸು, ತತ್ದಳಿಸು, ತಳತಳಿಸು, ತಳತ್ತಳಿಸು, ತಳಥಳಿಸು, ತಳದಳಿಸು, ತಳ್ತಳಿಸು, ತಟತ್ತಟಿಸು (ಕ್ರಿ). ೧. ಹೆಚ್ಚಾಗಿ ಹೊಳೆ,–ಪ್ರಕಾಶಿಸು; ತೇಜೋಮಯವಾಗಿರು: ಉರಿಯುರುಳಿಯಂತಪ್ಪ ಕಣ್ಣಿಂ ಕೃತಾಂತನಂತಾಕಾರಮಾಗಿ ತಟತಟಿಸಿ ಪೊಳೆವ ಕತ್ತಿಗೆಯುಂಬೆರಸು ಪೊಱಮಟ್ಟು ಕೀರ್ತಿಗೆಯೆಂಬುಗ್ರ ದೇವತೆ . . .ಬೆಸನಂ ಬೇಡೆ (ಪಂಪಭಾ. ೮-೪೨ ವ); ಸಿಡಿಲ ಬಳಗಮನೊಳಕೊಂಡಂತೆ ತಟತಟಿಸಿ ಪೊಳೆವ ಕೆಯ್ದುಗಳ್ ತೀವಿದ. . .ಪಸುರ್ಪೊನ್ನ ರಥಮನೇಱಿ (ಪಂಪಭಾ. ೧೨-೫೩ ವ) : ಪೂಜಿಗಣೊಳಗಣೆರಡುಂ ಲೇಶ್ಯಾಶುದ್ಧಿಯಂ ತಾಳ್ದಿ ತಟತಟಿಸಿ . . . ಮಣಿಕುಟ್ಟಿಮಭೂಮಿಭಾಗದೊಳಮಮಿತವಿಕ್ರಮದೇವನ ದಿವ್ಯಚ್ಛಾಯೆ ಪ್ರತಿಬಿಂಬಿಸೆ (ಶಾಂತಿಪು. ೯-೩೩ ವ). **ತಂಥಳಿಸು :** ೧. ಮೊಳಗಿದುದು ರಣಭೇರಿ ಗಾರ್ದಭಕಲಿತ ಘೋರ ವರೂಥವೇರಿದ ಹೊಳೆಹೊಳೆದು ಚಲಿಸುವ ಮಯೂರಧ್ವಜನ ಟೆಕ್ಕೆನಲಿ ಛಲಪಪದ ಚತುರಂಗಬಲ ತಂಥಳಿಸಿ ನಡೆದುದು (ಅನಂರಾ. ೬-೫-೩). **ತತ್ತಳಿಸು :** ೧. ಗಂಧಾದಿ ಪಂಚ ತನ್ಮಾತ್ರೆಗಳು ನಿತ್ಯಮೊಂದೊಂದಕ್ಕೆ ನಾನಾಪ್ರಭೇದದಿಂ ಬೇಱೆ ಬೇಱಿರುತಿಪ್ಪವು ಪ್ರತ್ಯಕ್ಷಮೆನಿಸಿತೋಂದೊಂದಱೊಳವೆಲ್ಲವುಂ ತತ್ತಳಿಸಿದೊಂದೆ ರೂಪಿನೊಳಿರುತಿಪ್ಪವು (ಲಶಿಚಂ.೫೩-೪೬). ೨. ಗಾಬರಿಗೊಳ್ಳು; ಹೆದರು; ನಡುಗು : ಬೆದಱಿದಳು ಮಾಯೆಯುಪ

ಮೃತ್ಯು ತತ್ತಳಿಸಿತ್ತು ಕದಲಿದಂ ಕಾಲಂ (ಲಶಿಚಂ. ೩೦-೧೨). **ತತ್ಥಳಿಸು :** ೧. ಮುತ್ತಿನಾ ತುರಾಯಿ ಅಂಗಿ ಮುಂಡಾಸು ತತ್ಥಳಿಪ ತಾಳಿ ವಜ್ರತಾಳಿ ಚೌಕುಲಿ ಮುತ್ತಿನ ಕುಂಡಲವಿಟ್ಟು (ವಾದಿಕೀ. ४೦-४). **ತಳತಳಿಸು :** ೧. ತಳತಳಿಸಿ ತೊಳಗಿ ಬೆಳಗುವ ಪಳಿಕಿನ ಸಱಿಯೊಂದು ಮಱಿಯೊಳಿರ್ದರಲೆ ಮಹೋಜ್ವಳ ತುಹಿನಕಿರಣಮಂಡಲದೊಳಗಣ ಹರಿಣಂಬೊಲೊಪ್ಪಿ ತೋಱುತ್ತಾಗಳ್ (ಕಾವ್ಯಸಾ. ೧೦೩೦ ಉದ್ಧೃತ); ಬೆಳಗುವ ಮಂಗಳ ದೀಪಾವಳಿಗಳ ಬೆಳಗತ್ತಮಿತ್ತಮುಚ್ಚೊತ್ತಿದಪೋಲ್ ತಳತಳಿಸಿ ಬೆಳಗೆ ಬೆಳಗನೆ ಪೊಳೆತಂತೊಪ್ಪಿದುದು ತೊಳಪ ರನ್ನದ ಕೇಗ೯ಳ್ (ಆದಿಪು. ४-೩४); ನವಯವ್ವನರಾಗರಸಾರ್ಣವದೊಳ್ ತಳತಳಿಸಿ ಪೊಳೆವುತಿರ್ದಪು ಮುತ್ತುಂ ಪವಳಮುಮೆನೆ ಕಣ್ಗೊಳಿಪುವು ಯುವತಿಯ ಸುಲಿಪಲ್ಲುಮ ಸೆವ ಬಿಂಬಾಧರಮುಂ (ಕಾದಂಬ. ೧೫); ತಳತಳಿಪ[ಪಾಠಾಂ. ಕಳಕಳಿಪ]ರನ್ನದೆನೆ ಶತಯೋಜನಂಗಳಿಂಬಳತೆ (ಚಬಪು. ३೯-೯). ೩. ತೀವ್ರವಾಗಿ ಕುದಿ,-ಮರಳು : ಶ್ರವಣವಿವರಕ್ಕೆ ಲೋಹದ್ರವಮಂ ತಳತಳಿಸಿ ಕಾಯ್ದುದಂ ಬಟ್ಟಂತಾ ಯುವತಿ ಕಡುನೊಂದು (ಮಹಾನೀ. ೧೬-೨೨). **ತಳತ್ತಳಿಸು:** ೧. ಪೊಟಲೊಳಗೊಪ್ಪೆ ಕನ್ನಡಿಯ ಕಂಚಿನ ತೋರಣದೋಳಿಗಳ್ ತಳತ್ತಳಿಸೆ ವಿಚಿತ್ರಕೇತುತತಿಗಳ್ ಮಿಳಿರ್ದಾಡೆ (ಪಂಪಭಾ. ೩-೭४); ಪೊಳೆದೆಸೆವ ರತ್ನದ ರ್ಪಣದೊಳಗೆ ತಳತ್ತಳಿಪ ತರಣಿಕಿರಣಾವಳಿವೊಲ್ (ಕಾದಂಪೂ. ४३४); ತಳ್ಪೊಯ್ದು ತರಳನಯನದ ಬೆಳ್ಪು ತಳತ್ತಳಿಸಿ ಮಿಳಿರ್ದು ಪೊಳೆಯೆ (ಸುಕುಮಾ.೧೧-೧४); ಕಲ್ಪಲತೆಗೆ ಪಾಸಟಿಯಾದಳ್ ನಳನಳಿಸುವ ಜನಶಿಶುಪಂ ತಳೆದು ತಳತ್ತಳಿಪ ಹರಿಯ ವರವಧುವಾಗಳ್ (ವರ್ಧಪು. ೧೩-೯೭). **ತಳಥಳಿಸು :** ೧. ತಳಥಳಿಪ ಪದಾರ್ಥಮನೇಂ ಕಾಣ್ಬನೆ ದೋಷದೃಷ್ಟಿ ದುರ್ಮತಿ (ಶಬ್ದಾನು. ೧४೦ ಪ್ರಯೋ). **ತಳದಳಿಸು :** ೧. ಪುರು ಪರಮೇಶ್ವರನ ದೂತನಂ ಕಾಣ್ಬವೊಲಾ ಭರತಂ ಕಂಡಂ ಕನ್ನೆಯ ನರೆಯಂ ತಳದಳಿಸಿ ಪೊಳೆವ ಮಣಿದರ್ಪಣದೊಳ್ (ಆದಿಪು. ೧೭-೭೧); ತಳದಳಿಸಿ ತೊಳಗಿ ಬೆಳಗುವ ವಿಳಸನ್ಮಣಿಕಿರಣಶಿಖಿಯ ಬಳಗದ ಬೆಳಗಂ ತಳೆದೆಸೆವ ತಾಣದೀವಿಗೆಗಳಂ (ಶಾಂತಿಪು. ೭-೧೦೭); ತಳದ[ಪಾಠಾಂ. ತ, ಥ]ಳಿಸಿ ಪೊಳೆಯೆ ಸೀತೆಯ ಚಳನಯನಂ ಖಚರ ಚಕ್ರವರ್ತಿಯ ಚಿತ್ತಂ ಕೊಳದೊಳಗೆಳವಾಟಿ ತೆಱಂಬೊಳೆವಂತೆ ಕಲಂಕಿ ಕದಡಿದತ್ತಾಕ್ಷಣದೊಳ್ (ಪಂರಾಮಾ. ೯-೭೯). **ತಳ್ತಳಿಸು :** ೩. ಎಟಿವರ್ ತಳ್ತಳಿಸಿ ಕುದಿವ ಲೋಹದ್ರವಮಂ (ವರ್ಧಪು. ೧೧-೨೧). **ತಟಿತ್ತಟಿಸು :** ೧. ತಟಿತ್ತಟಿಸಿ ಬೆಳಗೆ ಕೆಯ್ದಾವಿಗೆಗಳ್ (ಪಂಪಭಾ. ४-೫೩); ಬೆಳಗುವ ಸೊರ್ಡಗಳ ಬೆಳಗುಮನಿಳಿಸಿ ತಟಿತ್ತಟಿಸಿ ಪೊಳೆಯೆ ತಮ್ಮಯ ಬೆಳಗಗ್ಗಳಿಸಿ ತಟತ್ತಟಿಸಿ ವಿದ್ಯುದ್ವಿಳಸಿತಮೆನಿಸಿದುವು ನರನ ದಿವ್ಯಾಸ್ತ್ರಂಗಳ್ (ಪಂಪಭಾ. ೧೦-४೭). 'ಥಳಥಳಿಸು' ಪರಾ. [ ತಟತಟ + – ಇಸು$_3$ ]

**ತಟಿತ್ತಟಿಸು** 'ತಟಿತಟಿಸು' ನೋ.

**ತಟಪಟ** (ನಾ). ಒಂದು ಅನುಕರಣ ಶಬ್ದ. 'ತಟಪಟನೆ' ಪರಾ.

**ತಟಪಟನೆ** (ಅ). ತೀವ್ರವಾಗಿ ; ಕತಕತನೆ : ಪಟುಗಟಿದ ಪಾಪಮಂ ಕೈಗಟಿದ ತಪೋನಳನೆ ಸುಡುಗುಮೊಟ್ಟದ ಕಿಚ್ಚಿಂ ತಟಪಟನೆ ಪುಳ್ಳಿಯೊಳಗಣ ಪುಟು ಬೇಗಂ ಬೇಗುಮೆಗ್ಗ ಬೇಗುಮೆ ದುರಿತಂ (ಅರ್ಧನೇ. ४-೧೨೯). [ ತಟಪಟ + – ಅನೆ$_1$ ]

**ತಟಲ್**, ತಳಲು$_3$, ತಳಿಲು$_1$ (ನಾ). ಬಲಿತ ಕಾಯಿ ; ಒಣಗಿದ ಕಾಯಿ : "ತಟಲ್=ಮುತ್ತ ಕಾಯ್" (ಶಮದ. ಪರಿ. ೧) ; "ತಟಲೆಂದು ಮುತ್ತ ಕಾಯ್" (ಕಶಸಾ. ೫-೭೯) : ಪಂಚಾಕ್ಷರೋಚ್ಚಾರಣ ಕಾಲ ಪರ್ಯಂತಂ ತಟಲೊಳಗಣ ಬೀಜದಂತೆ ದ್ರವ್ಯಮನೋವಾಕ್ಕಾಯದೊಳೊಂದದೆ (ಪುಷ್ಪಪು. ೧४-೫೦ ವ). **ತಳಲು$_3$ :** ಪೊಲದವರೆಯ ನೆಟ್ಟು ಸೊಡಗೆಯು ಸುಲಿದಲ್ಲಿ ತಳಲು ಬಲಿದು ಒಡೆದುದಿಲ್ಲ (ಮೋಳಿಮಾ. ३೬೫-೮೦೭) : ಆ ದಾರಿಯಲ್ಲಿ ಉದ್ದಕ್ಕೂ ಹತ್ತುಮಾರು ಇಪ್ಪತ್ತುಮಾರಿಗೊಂದರಂತೆ ಕೊಬ್ಬರಿ ತಳಲುಗಳು ಬಿದ್ದಿರುತ್ತಿದ್ದುವು ([illegible]) ಹೊಲಕ್ಕೆ ಹೋಗಿ ಅವರೆ ತಳಲು ಆಯ್ದುಕೊಂಡು ಬಂದಳು (ಅನಾಮಿ. ೩೧).

**ತಟಿ**, ತಳಿ$_1$ (ನಾ). ೧. ಮರದ ದಿಮ್ಮಿ ; ಕೊರಡು ; ದಪ್ಪನಾದ ಮರದ ತುಂಡು : "ತಟಿ=ಸ್ಥೂಲ ದಾರು ; (ಸತ್ಯಾರ್ಥದೊಳ್ ಕುಳಂ)" (ಶಮದ. ಪರಿ. ೧) ; ಗಿಡುಮಂ ಪಿತ್ತಿಲನೋಣಿಗೇರಿಡುಕುಱಂ ಪ್ರಾಕಾರಮಂ ನುರ್ಗಿದಂಗಡಿಯಂ ಬೇಲಿಯನಿಕ್ಕಿಸಿರ್ದ ತಳಿ[ಟಿ]ಯುಂ ನೀರ್ದಾಣಮಂ . . . ಆಟಿದೇಗುಲಂಗಳೆಡೆಯಂ ಕಾದಿರ್ದ ಪಾಣ್ಬರ್ಕಳುಂ (ಸೂಕ್ತಿಸು. ೮-೧೩೫). 'ನೂಂಕುದಟಿ' ಪರಾ. ೨. ಆನೆಗಳು ಹೋರಾಡುವುದಕ್ಕಾಗಿ ಸುತ್ತಲೂ ಮರದ ದಿಮ್ಮಿಗಳನ್ನು ನೆಟ್ಟು ಹಾಕಿದ ಬೇಲಿ ; "ಆನೆಗಳನ್ನು ಗುದ್ದಾಡಲಿಕ್ಕೆ ಬಿಡುವ ಸ್ಥಳ" (ಪ್ರಥಮ) : ತನ್ನ ಮನೆಯಂಗಣದೊಳ್ ಸೆಂಡಾಡುವ ತಟಿಯುಮಾನೆಯ ನೇಱುವ ವಿನೋದಂ ವೈಹಾಳಿ ಮೊದಲಾಗೊಡೆಯ ವಿನೋದಸ್ಥಾನಂಗಳೆಲ್ಲಮಂ ಮಾಡಿಸಿ (ವಡ್ಡಾರಾ. ४೫-೨೦) : ತೋರದೆರೆ ಮುಱಿಯೆ ಮುಱುವ ವಾರಣಮಂ ಪೋಲ್ತುದಡಸಿ ನಿಡುಗಯ್ಯಂ ಭಂಡಾರಿಸಿ ಮೆಡಱಿದ ತಟಿಯುಂ ಬಾರಿಯುಮಂ ಮುಱಿಯೆ ಪೊಯ್ದು ಪೊಱಮಡು ವಿಭವಮಂ (ಅರ್ಧನೇ. ೫-೧೧೩) ; ಸ್ತಂಬೇರಮನೆಂಟುಮನೊತ್ತಂಬದ ದಿಗಧಿಪರೊಳೀಟ್ಟುಕೊಂಡವನದಟಂ ಕಂಬಕ್ಕಂ ತಟಿಗಂ ತೊಡೆಗಂ ಬೀದಿಗಮುಳವಡಲ್ ಖಳಂ ಶಿಕ್ಷಿಸಿದಂ (ಜಗವಿ. ೧೧-೮३) ; ಜಗಜಟ್ಟಿಗಳಪ್ಪಿಡಂಗಳೊಳ್ ಮರಳದೆ ಪಾರ್ವಶಕ್ತಿ ತಟಿ[ಪಾಠಾಂ. ಳೆ, ಲೆ]ಯೊಳ್ ನಡೆಪೋರ್ವ ಮದದ್ವಿಪಂಗಳೊಳ್ ಪುರುಡಿಸೆ ಸುತ್ತಲುಂ ಪೊಜ ಪೊಟಲ್ಮೆಱೆಗುಂ ವಿಜಯೋತ್ಸವಂಗಳಂ (ಅನಂಪು. ೧-೯೯) ; (ಸೂಕ್ತಿಸು. ४-೮೫ ನೋ) ; ತಟಿಯೊಳ್ ಚೌದಂತನನ್ನಾನೆಗೆ ಮಲೆದೊಡೆ ವೈಹಾಳಿಯೊಳ್ ದಿಗ್ಗಜಂ ಬೆಂಬಟಿಯೊಳ್ ಕಾಲ್ಗೋದೊಡೆ (ಅನಂಪು. ३-३೦). "ಆನೆ ಹೋರಲಿಕ್ಕಿದ ಸ್ಥಳಂ" (ಪದ್ಮಸಾ. II, ೧೫४ ಟಿಪ್ಪಣಿ) ; ಗರುಡಿಯ ಬಳಸಿಂ ಬಿಜ್ಜೋದರಗಳದಿಂದಾನೆ ಹೋರಲಿಕ್ಕಿದ ತಟಿಯಿಂ (ಶಮದ. ೧೦೭ ಪ್ರಯೋ) ; ತ[ಪಾಠಾಂ. ಕ]ಟಿಯೊಳ್ ಪೋರ್ವ ಮದಾಂಧ ಸಿಂಧುರ ಚಯಂ ವಾಹ್ಯಾಳಿಗೈತರ್ಪ ಶಾಕಳ ವಾಹಾವಳಿ . . . ಮನಂಗೊಳಿಕುಂ ತನ್ನಗರೀಬಹಿಃಪುರವನಪ್ರಾಂತಪ್ರದೇಶಂಗಳೊಳ್ (ಧರ್ಮನಾ. ३-४४). ೩. ಶತ್ರುಗಳು ಕೋಟೆಯನ್ನು ಮುತ್ತದಂತೆ ಸುತ್ತಲೂ ಮರದ ದಿಮ್ಮಿಗಳನ್ನು ನೆಟ್ಟು ಹಾಕುವ ಬೇಲಿ: ಪರವೇಲಿ ತಟ್ಟಿ ತಟಿ ಗೋಪುರ ಪಾಳ್ವಱ ಪಡಿ ತವಂಗವಂಕದ ತಳನೋವರಿ ಸೀಯಬಾರವಂತಃಪುರ ಮುಯ್ಯಲ್ ಕೃತಕ ಶಿಬಿರಿಯುದ್ಯಾನವನಂ (ಪುಷ್ಪಪು. ೬-३३). **ತಳಿ$_1$ :** ೧. ಕಳನ ಚೌಕದ ಸುತ್ತಲೊಟ್ಟಿಸಿ ತಳಿಗಳನು ಬಹಳಾಗ್ನಿಯನು ಕೈಕೊಳಿಸಿದರು ದಹಿಸಿದರು ಬಹಳಾಕ್ಷೋಹಿಣೀಭಟರ (ಕುಮ್ಯಾಗ. ೦३-३३) : ತೊಲೆ ತಳಿ ವರನೂಲ ಹರಿಗೆ ಬದ್ದರ ಬಂಡಿ ಬಲೆ ಹೆಗ್ಗ ಮುರುಳ ಕೈ ಕವಣೆ ಹಲಗೆ ಸಬಳ ದಸಿ ಹಾವಿನ ಹೇಳಿಗೆ ಸಲೆ ಮೆಱೆದವು ದುರ್ಗದೊಳಗೆ (ಕುರಾಸಾಂ. ४३-३೭) ; ಪಾಳೆಯಗಳ ಸಂರಕ್ಷಣೆಗಾಗಿ ಅಲ್ಲಲ್ಲಿ ದೊಡ್ಡ ದೊಡ್ಡ ತಳಿ(ಮರದ ದಿಮ್ಮಿ)ಗಳನ್ನು ಸುತ್ತಲೂ ನಿಲ್ಲಿಸಿ ಅವುಗಳಿಗೆ 'ಮುಳುವೇಲಿ'ಗಳನ್ನು ಬಿಗಿಯುತ್ತಿದ್ದರು (ಕರ್ನಾಜ. ೫೮). ೨. ತಳಿಯ ದಾಟುವ ಕರಿಯಂ ಘಳಿಲನೆವಿಡಿದುಗಿಯೆ (ಎಕ. VIII, ನಗರ. ೩೫-४४ : 1077). ೩. ಜಕ್ಕೆಯ ನಾಯಕಂ ಮೊನೆಯೆಟ್ಟಿಗೊಂಡನಾಯಾಣ ಮೇಲೆವಾಯಲು ತಳಿಯ ಮಱಿವಿಡಿದು ಹಡಿಕಟ್ಟಿದಾಳ್ಗಟ್ಟು ಗೂಡಂಬುಗೊಂಡು ಕಡಹಲ್ (ಮ್ಯಾಆರಿ. ೧४४೦, ४೭-೧ : 13ನೆಯ ಶತ) : ಥಗೆಯ ತಳಿ ಮುಱಿದುದು ಮನೋರಥದಗಳು ತುಂಡಿತು ನರನ [illegible] ಬುದ್ಧಿಗಳು ನೆಱೆ ಸಿಲುಕಿತ್ತು ಪರುಷೋತ್ಸವದ ದಾಳಿಯಲಿ (ಕುಮ್ಯಾ.

೬-೧೦೦) ; ತಳಿ ನಡೆಚಪ್ಪರ ಡಗ್ಗೆ ಬದ್ದರಗಳ ಬಳಿಸಂದು ಭಟರು ಸಂದಣಿಸಿ ಬಳಸಿ ಕೋಟೆಯ ಲಗ್ಗೆಯೊಳು ಹತ್ತಿದರು ಕಳಕಳರವ ಮಸಗೆ ಬಲದೊಳು (ಕುರಾಸಾಂ. ೪೫-೨) ; ತಳಿ ಬೇಲಿ ಬದ್ದರಗಳಂ ಮುಱಿದು ಕೊಂಡೊಯ್ಯ ನೊಳಪೊಕ್ಕು (ಚಬಪು. ೫೦-೧೨). ೪. ಬೆಂಕಿ ; ಕೆಂಡ : ತಳಿರ ತಗಡಿನ ಮನೆಗಳಲಿ ತಳಿಗಳ ಶಿಖಾಸೇವೆಯಲಿ ನೆನೆದನು ಬಳಿಕ ಭರತನೃಪಾಲನಾ ಭಾಸ್ಕರಕುಲೋತ್ತಮನ (ತೊರರಾ. ೩-೨-೫). ೫. ಬೇಲಿ: ಕೆಲದೊಳ್ಳೆ ಗಾವುದದೊಳಿಕ್ಕಿದ ತಳಿಯ ಮಧ್ಯದೊಳಖಿಳ ವಸ್ತ್ರಾವಳಿಯನೊಟ್ಟಿದರು (ಕುವ್ಯಾಸ. ೬-೧೪) ; ತಳಿಯ ಮುಱಿದು ಕರಿಪತಿ ಕದಳೀವನದೊಳಗೆ ಪೋಗಲು ಕಲಭಗಳು ಬಳಿಸಲುವಂತಾ ರಾಮನಿಱಿದ ಬಲದೊಳಪೊಕ್ಕುದಾ ಪರಿವಾರ (ಕುರಾಸಾಂ. ೪೦-೩೬).

**ತೞಿಕಿಕ್ಕು** 'ತೞ್ಕಿಕ್ಕು' ನೋ.

**ತೞಿಕು** 'ತೞ್ಕು' ನೋ.

**ತೞಿಗೋಂಟೆ** (ನಾ). ಒಂದಂ ಬಗೆಯ ಕೋಟೆ ; ಮರದ ದಿಮ್ಮಿಗಳಿಂದ ಮಾಡಿದ ಕೋಟೆ (?) : ನಿಶಿತ ಶರಕೋಟಿಯೊಳ್ ತಳಿ[ೞ]ಗೋಂಟೆಯನಿಕ್ಕಿ (ಪಂಪಭಾ. ೧೨-೧೮ ವ) ; ಕೋಂಟೆಗೆ – ತೞಿಗೋಂಟೆ, ಧೂಳಿಕೋಂಟೆ, ಹತ್ತುಗೋಂಟೆ, ಹೆಡಗೆಗೋಂಟೆ (ಶಮದ. ೨೯೮ ಪ್ರಯೋ).

[ ತೞ + ಕೋಂಟೆ ]

**ತೞುಂದಾೞ** (ನಾ). ಒಂದು ಬಗೆಯ ಪೊದೆ; ಅಗ್ನಿಮಂಥ; ನರುವಲು: ನಂದಪ್ಪೊಲಯನೇರಿನಂದಪೊಲೆಯನೇರಿಯಿ[ಂ]ಮೇಲಯೇರಿ ತೞುಂದಾೞ [ತ]ೞುಂದಾೞ ಅಡುಂಬು ಅಡು[ಂ]ಬಿನಿಂದಂ ವಾಯುವ್ಯ[ದ] ಕೋಣ ಪಿರೆಯ ಉೞಿಂದಿ(ಎಇ.X, ೬೬-೬೬; ಸು. 892). [ ←ತಮಿ. ತೞುತಾೞೈ ]

**ತೞ**, **ಚಳೆ₄**, **ಚಳೆಯು₃**, **ತಳೆ₄** (ನಾ). ೧. ಒಂದು ಬಗೆಯ ಕೊಡೆ,–ಛತ್ರಿ,–ಸತ್ತಿಗೆ : "ತಳೆ–ಧಾರಣೇ ; ಆತಪತ್ರ ಭೇದೇ ಱಟಂ (ತೞ)" (ಶಮಧಾ) ; ಕೊಡೆ ತೞ ತಳ್ತ ಸೀಗುರಿ ಕರೀಂದ್ರ ಘಟಾಳಿ ತುರಗಂ ಸೈನ್ಯಮುಕ್ಕುಡುಗದೆ ಬರ್ಪ ನಾಯಕ ಬಲಂ (ಆದಿಪು. ೪-೯೨) ; ಒತ್ತಿದ ತಳ್ಕೆತ್ತಿದ ತೞ ಮುತ್ತಿನ ಪೊಸದುಡುಗೆ ತಳಿರ ಸೋರ್ಮುಡಿ ಮನಮಂ ಪತ್ತಿಸಿ ಜೊತ್ತಿಸೆ . . . ಬಂದರರಸಿಯರರೆಬರ್ (ಪಂಪಭಾ. ೫-೫೯) ; ಸುೞಿಗಳ್ನೀರ್ದಿಗುರಿಯವೋಲ್ಸುಳಿದುವು ತರೆ ತರೆಯನಟ್ಟಿದುವು ಬೆಟ್ಟದ ಬೆಂಬೞಿಯಂ ಬೆಟ್ಟಟ್ಟುವವೋಲ್ತೞ ತಳ್ತಪೊಲಿರ್ದುಪೊಗೆದ ಮಣಿಕಿರಣಂಗಳ್ (ಪಂರಾಮಾ. ೧೨-೯೦); ಕೊಡೆಯ ತೞಿಯ ಸೀಗುರಿಯ ಚೌಕಸತ್ತಿಗೆಯ ಮುತ್ತಿನ ಝಲ್ಲರಿಯ ಮೊತ್ತಮಂ (ಚಂದ್ರಪು. ೧೨-೮೩ ವ) ; ತಳಿತ ತೞಿಯ ನೆೞಲೊಳು ಬಂದು ತನ್ನಯ ನಿಳಯುವನೊಳಪೊಗುತಿರಲು (ಅಂಜಚ. ೧೦-೨೩೫). 'ಪೀಲಿದೞ' ಪರಾ. **ಚಳೆ₄** : ೨. ಮದುವೆ ಮುಂತಾದ ಮಂಗಳಕಾರ್ಯಗಳ ಮೆರವಣಿಗೆಯಲ್ಲಿ ನಾಲ್ಕು ಮೂಲೆಗೂ ನಾಲ್ಕು ಜನ ಹಿಡಿದುಕೊಂಡುಹೋಗುವ ಬಿಳಿಯ ಬಟ್ಟೆಯ ವಿತಾನ; (ಎಸವ್ಯ. I, ೧೦). **ಚಳೆಯು₃** : ೧. ಎತ್ತಿದ ಚಳ[ಳೆ]ಯ ವೃತ್ತತೆಯ ನೋಳ್ಪೊಡೆ ಕಣ್ಣ ಕುತ್ತಿದುವೇನ ಬಣ್ಣಸುವೆ ಲಾಗಿಸಿ ನಭಕುಪ್ಪರಿಸುವ ಬಂದಿದಿರಾಗಿ ನಿಲ್ಲುವ ಭೂತದಂತೆ (ಮೋಹತ. ೧೧-೬೬). ೨. ಧಾರೆಗೆ ಹೊತ್ತಾಯಿತು ಚಳೆಯ ಹಿಡಿದು ವರನನ್ನು ಕರೆತನ್ನಿ (ರೂ೦). **ತಳೆ₄** : ೧. "ಸಿತಚ್ಛತ್ರದೊಳ್ ತಳೆಯಕ್ಕು" (ಕಶರ. ೪೩) : ಮದನಮದಮರ್ದನನ ಬರವಿಂಗೆ ಕೂಡೆ ನೆಗೞದ ತಳೆಗ[ಪಾಠಾಂ. ಳರ್ಗ]ಳೆನಿಸಿರ್ದವಾ ಮೇಘ (ಸಿದ್ಧರಾ. ೩-೩೨): ಕರಿಣಗಳು ತಳೆ ಮಾಡಿ ಪಲ್ಲವವಿಡಿವವಾತಪಜಾಲ ಬಳಸಿದುದೆಂದು ಕೇಸರಿಗೆ (ವರ್ಧಚ. ೯-೨೮): ಮಾರುತ ಪರಿಮಳದಾಲವಟ್ಟವನಿಕ್ಕೆ ಆರವೆ ತಳೆ ಛತ್ರವಿಡಿಯೆ (ಅಮುಸಾಂ. ೫-೫೫).

ತೞಿಯುವರ್=ಛತ್ರಿಹಿಡಿಯುವವರು ; ಸೇವಕರು : ಪ್ರಸಾದಮೆನ್ನು ಇಜ್ಜಣಮುೞಿಯೆ ನರಗನಿಱಿಯೆ ತನ್ನೞಿಯುಮುಂ ತನ್ನ ಮಕ್ಕಳುಂ ತನ್ನೊಕ್ಕಲುಂ ಪ್ರಜೆಯುಂ ತೞಿಯುವರುಂ ಪೆರ್ಮ್ಮಾಡಿಯ ಬೆಸದೊಳಱಿದು ನರಗನೊಳಿಱಿದು ಕಾದಿ ಸತ್ತರ್ (ಎಕ. VI, ಕಡೂರು. ೧೪೬-೭ : 972). [ ದೇ.॥ ತಮಿ. ತೞೈ ; ಮಲ. ತೞ ]

**ತೞಿಕಾಡು** 'ತೞಿಕ್ಕಾಡು' ನೋ.

**ತೞಿಕ್ಕಾಡು**, ತಲಕಾಡು, ತಳಕಾಡು, ತಳೆಕಾಡು, ತಱಿಕಾಡು, ತೞಿಕಾಡು (ನಾ). ಒಂದು ಊರಿನ ಹೆಸರು ; ₽ ಈಗಿನ ಮೈಸೂರು ಜಿಲ್ಲೆಯ ತಲಕಾಡು : ಕಾರ್ತ್ತಿಗೆ ಪುಣ್ಣಮೆ ಅನ್ದು ತೞಿಕ್ಕಾಡು ಇರ್ಪ್ಪತ್ತಯ್ವರ್ಕಂ ಸಿನ್ದರಸರುಂ ದೇವಸತ್ತಿ ಅರಸರುಂ (ಎಕ. III, ತಿರುಮ. ೧-೪: 726). **ತಲಕಾಡು**: ತಲಕಾಡ ಹನ್ನ × × ವರು ಮದ್ದೂರ ಗಣಿಯುರುಂ (ಎಕ III, ನಂಜನ. ೧೨೨-೨೭ : ? ಕ್ರಿಶ) : ಶ್ರೀ ಸಾಕ್ಷಿನಾಂ ತಲಕಾಡು ಹನುವನು (ಇಆ. VIII, ೧-೩ : ? ಕ್ರಿಶ). **ತಳಕಾಡು** : ಮತ್ತಂ ಚಕ್ರಗೊಟ್ಟ ತಳಕಾಡು ನೀಲಗಿರಿ ಕೊಂಗು ನಂಗಲಿ ಕೋಳಾಲಂ ತೆರೆಯೂರು ಕೊಯತೂರು (ಎಕ. II, ೧೬೨-೨೬ : 1123) ; ತಳಕಾಡು ಗಂಗವಾಡಿ ನೊಳಂಬವಾಡಿ ಕೊಂಗು ನಂಗಲಿ ಬನವಸೆ . . . ಇಂತೀ ಸಮಸ್ತ ದುರ್ಗ್ಗಂಗಳಂ (ಎಕ. VII, ಶಿವಮೊ. ೪೦-೫೩ : 1180). **ತಳೆಕಾಡು**: ಹೊಯ್ಸಳದೇವರಾಜ್ಯಂ ತಳೆಕಾಡ ಪಟ್ಟಣಮ್ ಆ ಪುರದಱುಸಾಯಿರಮುಮ್ . . . ನಗರೀಶ್ವರ ದೇವರ್ಗೆ ಕೊಟ್ಟ ಧರ್ಮಮ್ (ಮೈಆರಿ. ೧೯೧೫, ೨೦-೭ : 1147) ;ತಳೆಕಾಡು ನಾಡು ಕೊಂಡ ಭುಜಬಳವೀರ ಗಂಗಂ (ಮೈಆರಿ. ೧೯೨೬, ೪೧-೨೧ ; 1173). **ತಱಿಕಾಡು** : ಶ್ರೀ ಕಾಲಾವಿರ್ಗ್ಗರವಡಿಗಳ ಶಿಷ್ಯರ್ ತಱಿಕಾಡ ಪೆಱ್ಪಡಿಯ ಮೊದೆಯ ಕಲಾಪಕದ ಗುರವಡಿಗಳ್ಪಿರ್ಪ್ಪತ್ತೊನ್ದು ದಿವಸಂ ಸನ್ಯಾಸನಂ ನೋನ್ತು ಮುಡಿಪ್ಪಿದಾರ್ (ಎಕ. II, ೩೩-೨ ; ಸು. 700). **ತೞಿಕಾಡು** : ತೞಿಕಾಡಾ ಮೇಗೆಟ್ಟನ್ದು ಪೆರ್ಮ್ಮಾನಡಿಗಳಾ ಬೆಸದೆ ಮಹಾರಾಜಪ್ಪ್ರಲಿನಾಡಾ ನೆಱಿಯಲ್ವೇೞಿಪ್ಪೊಡೆ (ಸೌಇಇ. IX-I, ೨೦-೪ : 9ನೆಯ ಶತ) ; ತೞಿಕಾಡ ಮಹಾನಗರಮುಂ ಪಟ್ಟಣವಸನ್ತರ ಮಞ್ಚಯ್ಯನು ಇಪ್ಪತ್ತು ಅಯ್ವರು (ಎಕ. XIV, ತಿರುಮ. ೨೦೪-೬ ; ಸು. 933). [ ? ]

**ತೞಿದುಱುಗಲ್** (ನಾ). ಕೊಡೆಗಳ ನೆರವಿ ; ಸತ್ತಿಗೆಗಳ ಸಂದಣಿ : ಸಿವಿಗೆ ತೞದುಱುಗಲೊಡನಿಕ್ಕುವ ಕುಂಚಂ ಲೀಲೆವಡೆಯೆ ಚೆಲ್ವೆಸೆದುದು ಷಣ್ಣವತಿ ಸಹಸ್ರಾಂತಃಪುರಮುಪಯುವದೊಳೆ ಭರತ ಚಕ್ರವರ್ತಿಯ ಕೆಲದೊಳ್ (ಆದಿಪು. ೧೧-೩೯) : ಕಿಕ್ಕಿಱಿಗಿಱಿದ ತೞದುಱುಗಲ ನಡುವೆ ಪೊನ್ನರಥಮನೇಱಿ ನಿಂದಂ ಭೂರಿಶ್ರವಂ (ಪಂಪಭಾ. ೧೦-೫೭ ವ).

[ ತೞ + ತುಱುಗಲ್ (<ತುಱುಂಗಲ್) ]

**ತೞವಿಡಿ**, ತಳೆವಿಡಿ (ಕ್ರಿ). ಬಿಳಿಯ ಕೊಡೆ ಹಿಡಿ ; ಛತ್ರಿಯನ್ನು ಹಿಡಿ : ಗೞಿಯಿಸುವ ತಮಂ ಮೂಡಲ್ ಪೊೞಗಟ್ಟುವ ಸಂಜೆಗೆಂಪು ಪಡುವಲ್ ಕೈಕೊಂಡೆಬಿಲೆ ಧರೆಗರ್ಧನಾರಿಯ ತೞವಿಡಿದಂತಾಯ್ತು ಗಗನಮಂಡಲಮಿನಿಸುಂ (ಅನಂಪು. ೭-೭೨). **ತಳೆವಿಡಿ** : ಮಳೆ ಕೊಡುವ ಬೆಟ್ಟಗಳ ಮೊಲೆಯುಂಡು ಹಸುರೆಲೆಯ ತಳೆವಿಡಿದು ನೆಲದ ದಾರಿಯ ನೋಳ್ಪ ಚೆಲುವೆ (ಕಾಲೂರ. ೨೩-೭). [ ತೞ + ಪಿಡಿ₁ ]

**ತೞ್ಕಯಿಸು** 'ತೞ್ಕೈಸು' ನೋ.

**ತೞ್ಕಯ್ಸು** 'ತೞ್ಕೈಸು' ನೋ.

**ತೞ್ಕಿಕ್ಕು**, ತಳುಕಿಕ್ಕು, ತೞಿಕಿಕ್ಕು (ಕ್ರಿ). ತಳಕುಹಾಕು ; ಜೋಡಿಸು; ಹೊಂದಿಸು ; ಅಳವಡಿಸು : ಆಕೆಯ ರೂಪಾತಿಶಯಮಂ ಪೇೞ್ವಡೆ . . . ನಖನಿಕಾಯಂಗಳ್ಗೆ ತಾರಾವಳಿಗಳ ತೋರವೆಳಗುಗಳಂ ತೞ್ಕಿಕ್ಕಿದಂತೆ (ಪುಣ್ಯಾಸ್ರ. ೨-೩೨ ವ). **ತಳುಕಿಕ್ಕು** : ಬೆಳಗು ಬೆಳಗಂ ಹಳಚಿದಂತಾಯ್ತು ಭಯಜಜ್ಞಾನ ತಳು[ಪಾಠಾಂ. ಳ]ಕಿಕ್ಕಿ ಕಳೆಯಲಳವಟ್ಟುದುಭಯಜಜ್ಞಾನ (ದೀಕ್ಷಾಬೋ. ೧೪೩-೧೮); ಪದಕೆಱಗಲಂದು ಬಿಗಿಯಪ್ಪಿ ಕರದಿಂ ಕರವ

ತಳುಕಿಕ್ಕಿ ಇಂದುಧರ ನಡೆತಂದನರಮನೆಗೆ (ಲಶಿಚಂ. ೯-೨೯): ಮತ್ತೆ ಹೂವಿನ ಮಳೆಗಳಾತನ ನೆತ್ತಿಯಲಿ ಸುರಿದವು ಮುರಾಂತಕನತ್ತ ತಿರುಗಿದನವನಿಪನ ಕರತಳವ ತಳುಕಿಕ್ಕಿ (ಕುವ್ಯಾಗ. ೮-೪೨) : ಮತ್ಕರತಳ ದೊಡನೆಯಂತಕನು ನಿಜ ಕರತಳವ ತಳುಕಿಕ್ಕಿ(ಶಿವ್ಯಾಆ. ೬-೭೦). **ತಟಿಕಿಕ್ಕು:** ಪೊಡರ್ಪ ದಾಡೆಗಳ್ ಪಿರಿದಳವಟ್ಟ ಮಿಾಸೆ ತಟಿಕಿಕ್ಕಿದ ಪುರ್ವುಡಿದಿರ್ದ ಮೆಯ್(ಪುಚ್ಯಾಸ್ರ. ೮-೧೦).

[ ತಟ್ಕು + ಇಕ್ಕು ]

**ತಟ್ಕಿಸು, ಠೆಕ್ಕಿಸು, ತಕ್ಕಿಸು$_2$, ತರ್ಕಿಸು$_1$, ತಳ್ಕರಿಸು, ತಳ್ಕಿಸು, ತೆಕ್ಕಿಸು** (ಕ್ರಿ). ೧. ಅಪ್ಪು ; ಆಲಿಂಗಿಸು : ಪಡಗೊಡೆಯ ಪಲಗೆಯೊಂದು ಪಿಡಿದಬಲೆಯನೆನ್ನ ಕೌಂಕುಟಿೞೊಳ್ ತಟ್ಕಿಸಿಕೊಂಡಡೆವಿಡದೆ ಪುಣ್ಯದಿಂದಂ ತಡಿಗೆಯ್ದಿದಂ (ದಶಕು. ೨-೮೪) : ಎನ್ನಂ ತನ್ನಿರ್ಕೆಯ್ಯಿಂ ಕರಂ ತಟ್ಕಿಸಿ (ದಶಕು. ೧೩-೬೨). **ಠೆಕ್ಕಿಸು:** ೨. ಒಡ್ಡು ; ಅಡ್ಡವಾಗಿ ಹಿಡಿ; ಮುಂದಕ್ಕೆ ಚಾಚು : ತೊಲತೊಲಗೆನುತುಂ ಹರಿಗೆಯ ಠೆಕ್ಕಿಸಿ ಸಲೆ ಕೂರಸಿಯಂ ಚಿಮ್ಮುತ್ತಂ ಬಂದು (ಕುಮುರಾ. ೮-೪೫). **ತಕ್ಕಿಸು$_2$ :** ೧. ಬಿಸುಡದಿರು ಬಿಸುಡದಿರು ಬೇಡಬೇಡಕಟಕಟ ಹಸುಳೆ ನೊಂದಹನೆಂದು ಬೀಳ್ವವನನೆತ್ತಿ ತಕ್ಕಿಸಿಕೊಂಡು (ಹಚಕಾ. ೧೨-೩೭); ನೊಸಲೆಡೆಯನು ಚುಂಬಿಸಿ ತಕ್ಕಿಸುತ ಪರವಶೆಯಾದಳೀನ ಬಣ್ಣಿಸುವೆ (ಕಂನವಿ. ೯-೧೭೭): ತಕ್ಕಿಸಿದನೈವರಂ (ಕುರಂಗ. ೨೬-೧೫). ೩. ನೆಡು ; ನಾಟಿಂ ; ಚುಚ್ಚು : ತರಣಿಜಂ ಕಡು ಮುಳಿದು ಖಾತಿಯಿಂದ ಮಕ್ಕಳ ಶಿರೋಮಣಿಗೆ ತೆಗೆದೆಸಲ್ಕಣೆ ಶಿಶುವ ತಕ್ಕಿಸಿತು (ಕುರಂಗ ೫೦-೩೩). **ತರ್ಕಿಸು$_1$ :** ೪. ತಾಕು ; ತಗುಲು : ಮುಟ್ಟು : ನೆಗೆದುರಿ ಭುಘುಗಿಲ್‌ಭುಗಿಲೆನುತುಮುಗುರ್ವಿಸಿ ಪರ್ವೆ ನೀಳ್ದ ನಾಲಗೆಗಳ ತಕ್ಕೆ ತರ್ಕಿಸೆ ನಭಸ್ಥಲಮಂ (ಮಹಾನೀ. ೦೬-೨೯). ೫. **ಜೋಡಿಸು; ಜೊತೆ ಮಾಡು; ಸೇರಿಸು :** ತನ್ನ ಪುತ್ರಂಗೆ ತಾನೆ ಗುರು ವಾದೆನೆಂಬ ಗುರುದ್ರೋಹಿಯ ಮಾತು ಕೇಳಲಾಗದು ಎನ್ನ ತಂದೆಯೇ ಎನಗೆ ಗುರುವೆನ್ನುವ ಗುರುದ್ರೋಹಿಯು ಮುಖವ ನೋಡಲಾಗದು ಅವರಿಬ್ಬರೊಳಗೆ ಗುರುಶಿಷ್ಯ ಸಂಬಂಧವನಾಚರಿಸಿದೊಡೆ ಅವರಿಬ್ಬರ ತರ್ಕಿಸಿ ಕಟ್ಟಿ ಹೊತ್ತಿಸಿ ನೊಂದಿಸಿ ಸುಡುವ ನಮ್ಮ ಕೂಡಲ ಚನ್ನ ಸಂಗಮದೇವಾ (ಚನ್ನವ. ೨೫-೩). **ತಳ್ಕರಿಸು :** ೧. ಕರುಮ ಬಂದಿದಿರ ಹುದು ಮೋಹನದ ರೂಪಿನಲಿ . . . ಕರೆದು ತಳ್ಕುವ, ತಳ್ಕರಿಸುತೊಳಗೆ ಕಿಚ್ಚಿಡುವ ತರಳತೆಯದೇಂ ತಂತ್ರ ? (ಮಂಕುಕ. ೧೭೯). **ತಳ್ಕಿಸು :** ೧. ನಗುತ ಸಾಕೇಳೆಂದು ರಾಯನ ತೆಗೆದು ತಳ್ಕಿಸಿ ಕೈಯ ತಳುಕಿನೊಳಗಧರನು ನೃಪಸಭೆಗೆ ಬಿಜಯಂಗೈದನೊಲವಿನಲಿ (ಕುವ್ಯಾಸ. ೬-೨೨) ; ತಳ್ಕಿಸುವ ಪ್ರೀತಿಯಿಂ ತವಕಿಸಿ ನಿಗುರ್ವ ತೋಳ್ (ಚಬಪು. ೦೯-೩೨). **ತೆಕ್ಕಿಸು :** ೧. ಕುಡಿಯಲ್ಕಣಮಾಱದೊಡಂ ಕುಡಿಸಿದನೊಡನುಂಡಮಂಗವಂ ತೆಕ್ಕಿಸಿ ಕೊಂಡಡಮವನ ವಿಷಮುದಿಟಿಗುಂ (ಖಮದ. ೫-೫೪) ; ಒಬ್ಬಳನು ಮುದ್ದಿಡುತ ಒಬ್ಬಳನು ತೆಕ್ಕಿಸುತ ಮತ್ತೊಬ್ಬಳನು ಬಳಸುತಾ (ನನಲ್ಲ. ೩೫-೫). [ ತಟ್ಕು + - ಇಸು$_3$ ]

**ತಟ್ಕಿಱ** (ನಾ). ತಾಗಿ ಇರಿಯುವಿಕೆ; ಸಂಘಟ್ಟನ (?): ತಕ್ಕುಂ ತಗುಳ್ದು ಕಾಯ್ದೊಪ್ಪದವೆ ಕೋಟ್ಕಳ ತಳ್ಕಿ [ ಟ್ಕಿ ] ಱಯಿಂದೆ ಕೆಂಡಮುಲ್ಲೊಕ್ಕರೆ ತೇನತೇನಮುವತಂ ಬಿಗುಣಂ ತಿಗುಣಂಗೊಳಲ್ ಮೊಗಂಬೊಕ್ಕ ಗಜಂಗಳಂ ನಿಜ ಭುಜಾರ್ಗಳಮುಗ್ಗಳೆಯಾಗಿ ಸಾರ್ಚೆ ಕೈಯಿಕ್ಕಿಸಿ ಪಿಂಗಿಪಂ ಪಿಡಿದು ಪಿಂಗಿಸುವಂತಿರೆ ಜಂತ್ರದಾನೆಯಂ (ಅನಂಪು. ೬-೧೨).

[ ತಟ್ಕು + ಇಱ$_4$ ]

**ತಟ್ಕು, ತಕ್ಕು$_4$, ತಳಕು$_3$, ತಳುಕು$_3$, ತಳ್ಕು$_6$, ತಟೀಕು** (ನಾ). ೧. ಒಂದಕ್ಕೊಂದು ತಳುಕು ಹಾಕಿಕೊಂಡಿರುವುದು; ಹೆಣೆದುಕೊಂಡಿರುವಿಕೆ ; ಹೆಣಿಕೆ ; ಜೋಡಣೆ : ಎಲೆವಳ್ಳಿಯ ತಟ್ಕಿನಿಂ ಮನಂಗೊಳಿಪ ಕೌಂಗಿನ ಮರಂಗಳೊಳಂ (ಕಾದಂಪೂ. ೯೭). ೨. ಅಪ್ಪುಗೆ ; ಆಲಿಂಗನ : ತೊಳಗುವ [illegible] ವಳಿಯಂ ಕೊರಲೊಳ್ತಳೆವಾಂ ತಳೆ[illegible] ಸುಖಮಂ (ಕಾದಂಪೂ. ೭೭೧): ಕಡಲೊಳ್ ನೆ[illegible] ನುಗ್ಗೊರ್ಮತ್ತಲುಂ ಕೊಂಕಿ ಥೀಳಿಡೆ ತ[illegible] . . . ಬಗೆದನಾಗಳ್ ದಪ್ಪದಿಂ ದಪ್ಪಗಂ (ಕದ್ಯ[illegible]). [illegible] ೩. ಗಜಾರೋಹಣದ ಒಂದು ರೀತಿ (?) : ತಪ್ಪ [illegible] ತಕ್ಕುಗಳುಮನಡರಿಯುಂ ತೊಡರಿಯುಂ ನುಡಿದಂತೆ [illegible] ಮುಮಂ ಬಿನ್ನಣಮುಮಂ ಮೆಱದು (ಶಾಂತಿಪು. ೩-೨೭ ವ): [illegible] ತಗುಳ್ದು ಕಾಯ್ದೊಪ್ಪದವೆ . . . ಮೊಗಂಬೊಕ್ಕ ಗಜಂಗಳಂ ನಿಜಭುಜಾರ್ಗಳ ಮುಗ್ಗಳೆಯಾಗೆ ಸಾರ್ಚೆ (ಅನಂಪು. ೬-೧೨). **ತಳಕು$_3$ :** ೧. ಅದು ಕೇವಲ ಒಂದೆರಡು ದಿನಗಳ ಜೋಡಲ್ಲ; ದೇಹಗಳೆರಡರಲ್ಲಿಯೂ ಜೀವವಿರುವ ತನಕ ಒಂದಾಗಿರುವ ತಳಕನ್ನು ಹಾಕಬೇಕಾಗಿತ್ತು (ಚಂದುಟ. ೪೫). ೪. ಪರಸ್ಪರ ಸಂಬಂಧ : ಕೌಟುಂಬಿಕ ಸಂಬಂಧಗಳಿಗೂ ಕೌಟುಂಬಿಕ ಸುಖದುಃಖಗಳಿಗೂ ತಳಕು ಇರುವುದರಿಂದ (ಕುಟುಂಬ. ೧೫); ಇಂತಹ ಕ್ಷುದ್ರ ಜೀವನಕ್ಕೆ ಮತ್ತೆ ಎಂತೆಂತಹ ಆಶೆಗಳ ತಳಕನ್ನು ಹಾಕಿರುವೆ (ಅಂಕಣ. ೪೦). ೫. ಸ್ಪರ್ಧಿಗಳ ಜೋಡು,-ಜೊತೆ : ಎಂಟು ಹತ್ತು ತಳಕುಗಳ ಕುಸ್ತಿ ಮುಗಿಯಿತು (ಗ್ರಾಮಾಯ. ೨೭೧). ೬. "ಕೂಡಿಸುವುದು ; ಪೋಣಿಸಿ ಕಟ್ಟುವುದು" (ಜಾನಕೋ. ೬೫). **ತಳುಕು$_3$ :** ೧. ನಗುತ ಸಾಕೇಳೆಂದು ರಾಯನ ತೆಗೆದು ತಳ್ಕಿಸಿ ಕೈಯ ತಳುಕಿನೊಳಗಧರನು ನೃಪಸಭೆಗೆ ಬಿಜಯಂಗೈದನೊಲವಿನಲಿ (ಕುವ್ಯಾಸ. ೬-೨೨); ಕಂಡು ಬಿಗಿಯಪ್ಪಿ ಕರದಿಂ ತಳುಕನಿಕ್ಕಿ (ಸೌಂದಪು. ೫-೫೦): ತಳುಕಿನ ಕನಕಲತೆಗಳಂತೆ ತೋಳ್ತೊಡೆ ಬಳಿಕೊಂದಱೊಂದಱೊಳ್ ತಳೆದು ಪುಳಕಿತಮಪ್ಪಂತೆ (ಮೋಹತ. ೨೭-೪೩). ೭. ಸಿಕ್ಕು ; ತೊಡಕು : ನಕಲಿಯಿದು ನಿಜವೆಂದು ಮೋಸ ಹೋದೀರಯ್ಯ ನೀವಿವರ ಬಲೆಯ ತಳುಕಿಗೆ ಬೀಳದಿರಿ (ಕೋಗಿಲ. ೭೧-೩೯). ೮. ಹೆಣಿಕೆಯ ತೋರಣ : ವರಚಿತ್ರಪತ್ರಂಗಳೆಸೆವ ಮಣಿಮಾಲೆಗಳು ತರದಿಂದ ಕ[ತ]ಳುಕು ದಂಡಾವಳಿಗಳಿಂತಿವೇ ಸ್ಫುರಿಸಿಯೊಪ್ಪುತ್ತಿರ್ದವಾ ಮರುಳಕಂಕಣ ಮುಖಿರ್ದಲ್ಲಿ ಮಱು ಸುತ್ತು (ವೀಕೃಪು. ೮-೨೦-೪೭) ; ಸತ್ಕರಿಪ ಸದನಗಳು ಭಿತ್ತಿಯಿಲ್ಲವು ಪರುಪ ಮುತ್ತು ಬಿಗಿದಿಪ ತಳುಕು ಸುತ್ತಲೆಸೆದಿಹವು (ಶರರೀ. ३೦-३). ೯. ಒಂದು ಬಗೆಯ ಸರ,-ಹಾರ : ತಳುಕು ಕಡಗ ಕಂಕಣ ಝಣಝಣಿಸಲು ತುಳುಕಿದರ್ ಗಂಧೋದಕವ (ಮೋಹತ. ೧೪-೫೦). **ತಳ್ಕು$_6$ :** ೧. ಅಲರ್ಗಳ ಗೊಂಚಲೆಱಗಿಸದ ಲತೆಲತೆಗಳಡರದ ತಳ್ಕಿನಿಂ ಚಿಗುರದಿಪ್ಪಾವು (ಚ್ಯಮಿಥಾ. ३-३). ೮. ಸಸಿಗಲ್ಲ ಕೊತ್ತಳಗಳ ಗಣಿತದ ವೈಡೂರ್ಯದೆಸಕಮಾಂತಿರುವ ಕಿಱುವಾಗಿಲುಗಳಡಿಗಡಿಗೆ ವಸುರನ್ನ ತಿಂತಿಣಿಗಳಾಂತಿರುವ ತಳ್ಕುಗಳಲೆಸೆದುವಾ ವಾಲಕಗಳು (ವೆಂಕಾರಾ. ೫-೨-೪). **ತಟೀಕು :** ೧. 'ತಟೀಕಿಕ್ಕು' ಪರಾ.

**ತಳಕುಹಾಕು, ತಳುಕುಹಾಕು** = ೧. ಸೇರಿಸಿ ಕಟ್ಟು: ಉಳಿದ ನಾಲ್ಕೆಂಟು ಕುದುರೆಗಳನ್ನು ತಳಕುಹಾಕಿ ಮುಂದೆ ಬಿಟ್ಟರು (ಮೇದಿಮ. ೧೨೭). ೨. ಒಂದಕ್ಕೊಂದು ಗಂಟುಹಾಕು ; ಸಂಬಂಧ ಕಲ್ಪಿಸು : ಕುಮಾರವ್ಯಾಸನ ಕಾಲದೊಡನೆ ಇವನ ಕಾಲವನ್ನು ತಳಕುಹಾಕಬೇಕಾಗಿಲ್ಲ (ಕಸಾಚ. ೨೩೮); ವಿಶ್ವಾಸಕ್ಕೂ ವ್ಯವಹಾರಕ್ಕೂ ತಳಕುಹಾಕಲು ಮನಸ್ಸಾಗಲಿಲ್ಲ (ಹಂಗೀತ. ೧೫೧) ; ನಿನ್ನ ಲಗ್ನಾನೂ ಅದನ್ನೂ [illegible] ಅವರು (ಸಮಜೀ. ೨೪೭) : ಆ ಗುಣವನ್ನಿಲ್ಲಿ ತಳುಕುಹಾಕಿ ಸಮಾಧಾನ[illegible] ಬರುವುದು (ನನ್ನಜೊ. ३೧). ತಳುಕಾಗಿ ನಿಲ್ಲು=ಒಗ್ಗ[illegible] ಕೊಂಡು ನಿಲ್ಲು ; ಒತ್ತಾಸೆಯಾಗಿ ನಿಲ್ಲು (?) : [illegible] ಜನಂಗಳು ಓರಿಯ ಮಹಾ × × × ಲು ತಂಮೊಳಡಂಬಟ್ಟುಯೊಂದಿಂಗೆವೂ ತಳುಕಾಗಿ ನಿಂದರು (ಎಕ. VI, ಕರೀಕೆ. ೫೫-३೦ · 1291). ತಳುಕಿನ [illegible]

ತಳಕಿನ ಸರ = ಒಂದು ಬಗೆಯ ಸರ : ಅವಳು ಹೊಸದಾಗಿ ಮಾಡಿಸಿದ ತಳುಕಿನ ಸರ ಚೆನ್ನಾಗಿದೆ (ರೂಢಿ); ತಳಕಿನ ಸರ, ಮುತ್ತಿನ ಸರ, ಅಡ್ಡಳಿಸರ ಮೊದಲಾದ ಹಾರಗಳನ್ನು . . . ಆ ವನದಲ್ಲಿರುವ ಬ್ರಾಹ್ಮಣರಿಗೆ ಕೊಟ್ಟು (ಕೃವಾಅ. ೨೧೧). [ ದೇ.॥ ತಮಿ. ತೞುವು = ಅಪ್ಪಿಕೊಳ್ಳು ]

**ತೞ್ಕೈ**, **ತಕ್ಕೈ$_1$**, **ತರ್ಕೆ**, **ತಳಿಕೆ$_1$**, **ತಳ್ಕೈ**, **ತೆಕ್ಕೆ$_1$**, **ತೆರ್ಕೆ** (ನಾ). ೧. ಅಪ್ಪುಗೆ; ಆಲಿಂಗನ : "ತೞ್ಕೈಯೊಂದಾಲಿಂಗನಂ" (ಕಶಸಾ. ೨೧-೪೧೮) : "ಅಪ್ಪುಗೆ ತೞ್ಕೈಗಂ ಪೆಸರು" (ಶಬ್ದಮಂ. ೭೭) ; ಕೂಟದೊಳುಣ್ಮಿದ ಬೆಚ್ಚ ತೞ್ಕೈಯೊಳ್ ಕೂಟ ಸುಖಂಗಳಂ ಪಡೆದನೇಂ ಚದುರಂ ಗಳ ಬದ್ದದಲ್ಲಟಂ (ಪಂಪಭಾ. ೩-೮೨) : ನಾನೊಲ್ದ ತಂಗೆ ಕೆಡೆದೊಲ್ದಣ್ಣನೊಲ್ಮೆಯಾ ತೞ್ಕೈಯೊಳ್ ಪಟ್ಟು (ಅಂತಿಗೂ. ೪-೫೯). 'ತೞ್ಕೈಗೆಯ್', ತೞ್ಕೈಗೊಳ್' ಪರಾ. **ತಕ್ಕೈ$_1$** : ೧. ಚೆನ್ನಮಲ್ಲಿಕಾರ್ಜುನ ಒಂದಿರುಳಗಲಿದಡೆ ತ[ಪಾಠಾಂ. ತೆ]ಕ್ಕೆ ಸಡಿಲಿದ ಜಕ್ಕವಕ್ಕಿಯಂತಾದೆನವ್ವಾ (ಮಹಾದೇ. ಬ. ೧೪೨-೩೨೩): ಜಕ್ಕವಕ್ಕಿಗಳೆಲ್ಲ ತಕ್ಕೆಯನುಳಿದು . . . ಪೋದವು ದಿಕ್ಕುದಿಕ್ಕಿಗೆ ತಮತಮಗಾಗ (ಅಂಜಚ. ೭-೧೪೩) : ಆ ಮಹಾವಜ್ರಾಯುತ ಪ್ರೋದ್ದಾಮದಾಯಸ ಭೀಮತನು ನಿರ್ನಾಮವೆನೆ ನುಗ್ಗಾಗಿ ಬಿದ್ದುದು ನೃಪನ ತ[ಪಾಠಾಂ. ತೆ]ಕ್ಕೆಯಲಿ (ಕುವ್ಯಾಗ. ೧೧-೩೯): ಚುಂಬನಕೇನಿಚ್ಚೆ ತಕ್ಕೆಗಾವುದು ಸವಿದಂಬುಲ ವೇನವಮಾಡುವುದು (ಭರಜ. ೧೦-೨೮) ; ಚೂತಮಾ ಮಲ್ಲಿಗೆಯನಪ್ಪಿದುದು ಬೇಗದೊಳ್ ಕುರುವಕಂ ಮಾಧವಿಯ ತಕ್ಕೆಗೊಳಗಾದುದು (ಜಬಪು. ೧೧-೨೩) : ಸೊಕ್ಕು ಜವ್ವನೆಯ ತಕ್ಕೆಯ ಸವಿಯಂದದೆ ಸಕ್ಕರೆ ಚಿಲುಪಾಲಿನಂತೆ ಅಕ್ಕಱಿಂದಲಿ ಕೇಳುವರಿಗತಿ ಹರುಷವ ಮಿಕ್ಕೆಸಗುವುದೀ ಕಾವ್ಯ (ಕಂನವಿ. ೦-೧೬). ೨. ಎರಡು ತೋಳುಗಳ ಹಿಡಿತ: ಇಕ್ಕಿದ ಹೆಜ್ಜೆಯ ತೆಗೆಯದು ಮೊನೆಗೆ ನಿಲ್ಲದು ತಕ್ಕೆಗೆ ಬಾರದು (ಸರ್ವವ. ೨೦೩-೯೨೪); ತಕ್ಕೆಗೆ ಸಿಕ್ಕಿದ ಚಾವಡಿಗಂಬ . . . ಎಂತಹ ಗರ್ವಿಷ್ಠನಾದರೂ ಬಗ್ಗಿ ಹೋಗಬೇಕಾದ ತಗ್ಗಿನ ಬಾಗಿಲು (ಪಳಮು. ೧). ೩. ಗುಂಪು ; ಸಮೂಹ: ಉನ್ನತ ಮಣಿರಥಪ್ರತತಿಯ ತಕ್ಕೆಗಳ್ಗವಧಿ ಮುನ್ನಿಲ್ಲ (ಜಬಪು. ೨೬-೭). ೪. ಒಂದೆಡೆ ಸೇರುವಿಕೆ ; ಸೇರುವೆ (?) : ಒತ್ತುವ ಕೋಡ ಕಾಳೆ ಕುಣಿಪೋಜೆಗೆ ಬಾಜಿಪ ಱುಂಜೆ . . . ಕಿಱುನಾಯ್ಗಳ ಪಿಂಡ ತಕ್ಕೆ ಮತ್ತೊತ್ತುವ ಗರ್ಜಿತಂ ಮೆಱೆವ ಬೆಟ್ಟದ ಬೇಡರ ಪಳ್ಳಿಪಳ್ಳಿಯೊಳ್ (ಸೂಕ್ತಿಸು. ೩. ೨೦೧). **ತರ್ಕೆ** : ೧. ರಂಭೆಯೂರ್ವಸಿ ತಿಲೋತ್ತಮೆ ಮೇನಕಾಸ್ತ್ರೀಯರುಂ ಬಿಡದೆಯೋಲೈಸೆ ಸಕಲ ವೈಭವಗಳೊಳು ಕುಂಭಕುಚೆಯರ ತರ್ಕೆಯಿಂದ ಕೈಲಾಸದೊಳು ಸ್ಥಿತಿರ್ಪನೆಂದನಾರ್ಯಂ (ಗುರುಚಾ. ೭-೭೧). **ತಳಿಕೆ$_1$** : ೧. 'ತಳಿಕೆಬೀಳು' ಪರಾ. **ತಳ್ಕೈ** : ೧. "ಆಲಿಂಗನಂ ತಳ್ಕೆಯೆನಿಪುದು" (ಕಶರ. ೪೩) : ನೆನೆಪೊಡೆ ನಿಳ್ಕದ ಈಕ್ಷಿಪೊಡೆ ಸಿಲ್ಕದ ಕೀರ್ತಿಪೊಡೊಲ್ದು ಶಕ್ಯಮೆಂದೆನಿಸದ ಕೂಡಲುಜ್ಜುಗಿಸೆ ತಳ್ಕೆಗೆ ಸಲ್ಲದ ದಿವ್ಯಲಿಂಗಮಂ (ವೃಷವಿ. ೨೩-೨೬) ; ಪ್ರಾಣಕಾಂತರ ತಳ್ಕೆ ಸಡಿಲಿ (ವಚಕಾ. ೭೩) ; ನೆಲಬಾನ ತಳ್ಕೆಯಲಿ ನೇಸರನು ಬಿಡುಗಣ್ಣನಾಗುತಿರಲು (ಭಾವಜೀ. ೧-೫) : ಇರುತಿಹುದು ಬರಿ ಮೂರು ದಿನದ ಬಾಳ್ಕೆ . . . ಮತ್ತೆ ಕಾದಿಪುದದೋ ! — ಚಿತೆಯ ತಳ್ಕೆ! (ಕವಿಕಾ. ೫೪-೬). **ತೆಕ್ಕೆ$_1$** : ೧. ಫಲಿತ ಶಾಳೀವನದ ಮುತ್ತಿನ ಗಿಳಿಗಳೋ ತಾವರೆಯ ತೆಕ್ಕೆಯೊಳಿಳಿದ ಮುಱಿದುಂಬಿಗಳೊ ವೃಷಸೇನನ ಶರಾವಳಿಯೊ (ಕುವ್ಯಾಕ. ೨೦-೧೦): ಹರುಷದಲಿ ಮುಂಡಾಡಿ ತೆಕ್ಕೆಯಲಿರಿಸಿ ಮುದ್ದಿಪ ವರ ಜನನಿ ಜನಕರಿಗೆ . . . ಪರಮಾನಂದಗೊಡುತಿಹನು (ಸಾಳ್ವಭಾ. ೩೩-೧೧೪) : ತಮ್ಮಿನಿಯರ ತೊಡರ್ದ ತೆಕ್ಕೆಯನೊದ್ದು . . . ಐತರಲು (ಜಬಪು. ೧೯-೮). ೨. ಕರ್ಮಕಾಂಡ ಯೋಗಂಗಳೆಲ್ಲವೂ ಭವದ ತೆಕ್ಕೆಗೆ ಒಳಗು (ಅವಚಂ. ೨೭೫ ೧೨೦೩) : ಬಿಡದೆ ತೆಕ್ಕೆಯೊಳಲ್ಲಮನ ಬಯಲೊಡಲ ಬಂಧಿಸಲೆಂದು ಬಿಗಿಯಲು ಹಿಡಿಹಿಗಿಲ್ಲದೊಡವರು ಬೆಱಗಾಗಿರ್ದರದ ಕಂಡು(ಪ್ರಭುಲಿ. ೧೩-೦೪) : ಅರರೆ ಸಿಂಹದ ತೋಳ ತೆಕ್ಕೆಯ ಕರಿಯ ಸೆಳೆವಂದದಲಿ . . . ಧರಣೀಪಾಲನ ತೆಗೆದು ಭೀಮನ ಬರಿಯನೆಚ್ಚನು (ಕುವ್ಯಾಕ. ೧೪-೨) ; ಅವನ ತೆಕ್ಕೆಯಲಱಿಯದಕಟಾ ರವಿಕುಲೇಶನು ಸಿಲುಕೆ (ಕಾಶಿರಾ. ೬-೬೨) : ನೆಲದ ಆಧಾರದಲಿ ನಿಂತು ಹರಿಯುವ ನೀರು ನೆಲದೊಡಲ ಕೊರೆದು ಮುಕ್ಕಿತು ಒಂದೆ ತೆಕ್ಕೆಯಲಿ ಇಕ್ಕೆಲದ ಬಾಳು–ಬದುಕು (ನೆಲಮು. ೧೪-೧೪). ೩. ಬರಸಿಡಿಲ ಬಳಗದಂತೆ ಕುಳಿಕಾಹಿಯ ಕಡುಪಿನಂತೆ ನೆಲಮುಕ್ಕನ ತೆಕ್ಕೆಯಂತೆ ಇರ್ದ ಅಸಂಖ್ಯಾತ ದೈತ್ಯನಾಯಕರ (ಜಗವಿ. ೧೫-೧೫ ವ) ; ನಿಪ್ಪಸರ ಕವಿಗಳ ತೆಕ್ಕೆಗಳಿಂ ತಿಱುಪಾಡೋದುತೆ (ತಿರುನಾ. ದೀ. ೧೧೧-೨೧): ವಾರಣಾವಳಿಗಳ ಪದಾತಿಯ ತೇರ ತೆಕ್ಕೆಯನಿಕ್ಕಿದನು ಪ್ರತ್ಯೇಕ ಸಾವಿರವ(ಕುವ್ಯಾಶ. ೩-೫೭): ಮಿಕ್ಕು ಶತಸಾವಿರದ ಕಂಬದ ತೆಕ್ಕೆಗಳ ತನಿವೆಳಗಿನಲಿ ಕಣ್ಣೆಕ್ಕಲಸದಳವೆಂಬವೊಲು (ತೊರರಾ. ೫-೨-೭೧) ; ಎಷ್ಟು ಸಸಿಗಳನ್ನು ಬೆಳಸುತ್ತೀರೋ ಅಷ್ಟೆಲ್ಲಕ್ಕೂ ಒಂದೊಂದು ತೆಕ್ಕೆ ಕೆಲಸ ನಿಮಗೆ ಬೀಳುತ್ತದೆ (ಗಾಳಿಪ. ೧೦೫). ೫. ಸುತ್ತಿಕೊಂಡಿರುವಿಕೆ ; ಸಂರಳಿಯಾಗಿರುವಿಕೆ : ಭೀಮನ ಕಳಕಳಕೆ ಕಿವಿಯೊಡೆದು ತಿಳಿದುದು ನಿದ್ರೆ ಮುಱಿದಿಕ್ಕೆಯ ಮಹೋರಗನ ತೆಕ್ಕೆ ಸಡಲಿತು (ಕುವ್ಯಾಅ. ೧೩-೩೩). ೬. (?) : ತನ್ನನ್ನು ಮಿಕ್ಕು ಬದುಕುವೆನೆಂಬ ಕಾಲನ ತೆಕ್ಕೆ ಕಂಟಕ ತನ್ನ ಧನುವಿಗೆನುತ್ತ ಬೊಬ್ಬಿಱಿವ (ನಿಥಾಗ. ೪-೧೨-೧೩). **ತೆರ್ಕೆ** : ೩. ವಾಜಿರಾಜಿಗಳ್ ತೆರೆಗಳ ತೆರ್ಕೆಯಂತೆ ಕವಿತಂದುವು (ಪಂರಾಮಾ. ೪-೫೫) : "ಪರಂಪರೆ" (ಪಂರಾಮಾ. ಕೋಶ). ೭. (ಒಂದರೊಡನೊಂದು) ಸೇರಿರುವಿಕೆ,–ಕೂಡಿರುವಿಕೆ : ಬಱಿದೆ ಬೆಱಗಾಗಿ ತುಱುಗೆಮೆಯ ತೆರ್ಕೆಯೊಳ್ ಬಂಬಳಿಪ ಕಣ್ಬನಿಗಳೊಸಱೆ ಮಸುಳನಾದ-ದಿಟ್ಟಿಯುಂ ಬಲ್ಪಿನಿಂ ನಿಲಿಸಿ (ವರ್ಧಪು. ೪-೬೨ ವ).

ತೆಕ್ಕೆತೆಕ್ಕೆ (ದ್ವಿರುಕ್ತಿ) : ಇರ್ವರುಮೋರೋರ್ವರೊಳ್ ತೆಕ್ಕೆತೆಕ್ಕೆಯಿಂ ಬಾಹ್ಯಾಭ್ಯಂತರ ಪರಿಗ್ರಹಂಗಳಂ ಪರಿಚ್ಛೇದದಿಂ ತೊಱೆದು (ಶಾಂತಿಪು. ೭-೭೦ ವ) ; ಅವನೀಶನಾಜ್ಞೆಯಿಂದಾ ನಂದನಕೆ ಹೋದ ಯುವತಿಯರ ವಿರಹದಿಂದಾ ತಂತಮ್ಮ ಭವನದಂಗಣದಗ್ರಶಾಲೆಯೊಳ್ತೆಕ್ಕೆತೆಕ್ಕೆ [ಪಾಠಾಂ. ತೆಟ್ಟೆತೆಟ್ಟೆ] ಯೊಳು ನಿಂದು (ಸಮ್ಯಕ್ತಾ. ೩-೨): ದಿಕ್ಕುದಿಕ್ಕಿನೊಳು ನಿಲಿಸಿದಳು ಖಾನರ ತೆಕ್ಕೆತೆಕ್ಕೆಯ ಪೌಜುಗಳನು (ಕುರಾಸಾಂ. ೪೩-೩೭). ತೆಕ್ಕೆಗೊಂದಿಸು = ಅಪ್ಪುಗೆಗೆ ಅಳವಡಿಸು ; ಅಪ್ಪಿಕೊಳ್ಳು : ಗಗನವುಂ ತೆಕ್ಕೆಗೊಂದಿಸಿದರುಂಟೆ (ಜೈಮಿಭಾ. ೨೬-೨೧). ತೆಕ್ಕೆಪಾಕು, ತೆಕ್ಕೆಹಾಕು = ೧. ಆಗಡು ಪ್ರಾಣಿಯನ್ನು, ಪಳಗಿಸಿದ ಅಥವಾ ಸಾಧುವಾದ ಪ್ರಾಣಿಯೊಂದಿಗೆ ಕಟ್ಟು : (ಕ). ೨. (ಪ್ರಾಣಿಗಳ) ಹಗ್ಗಗಳನ್ನು ಸೇರಿಸಿ ಕಟ್ಟು : ಅವೆರಡಕ್ಕೂ ತೆಕ್ಕೆಹಾಕಿ ಕಟ್ಟಿದ್ದಿದ್ದರಿಂದ ಅವು ಒಂಟೆಗೆ ಒಂದೊಂದು ಪಕ್ಕದಲ್ಲಿ . . . ನೇತಾಡುತಿದ್ದವು (ವಚಥಾ. ೩೪೭). ೩. (ಹಾವುಗಳು) ಒಂದಕ್ಕೊಂದು ಕೂಡಿರು ; ಅಪ್ಪಿಕೊಂಡಿರು : ಹಾವುಗಳು ತೆಕ್ಕೆಹಾಕಿಕೊಂಡಿವೆ (ರೂಢಿ). [ <ತೞ್ಕೈ ]

**ತೞ್ಕೈಗೆಯ್**, **ತಳ್ಕೆಗೆಯ್**, **ತೆಕ್ಕೆಗೆಯ್**, **ತೆಕ್ಕೆಗೈ**(ಕ್ರಿ). ೧. ಅಪ್ಪಿಕೊಳ್ಳು; ತಬ್ಬಿಕೊಳ್ಳು ; ಆಲಿಂಗಿಸು : ತನ್ನ ಮನದೆಱಕದಿನಿಯಳಂ ಕಂಡು ನಸುನಕ್ಕು ಮುಟ್ಟೆ ಸಾರ್ದು ತೞ್ಕೈಗೆಯ್ದು ನುಣ್ಗಲ್ಲಮನಲುಗಿ (ರಾಮಾಶ್ವ. ೪೯-೧). **ತಳ್ಕೆಗೆಯ್** : ತವಕದಿಂದಂ ತಳ್ಕೆಗೆಯ್ಯೆ ಬಿಗಿಕೆಯ್ಯೆ ತೋಳ್ಗಳ ನೀಱ (ಜಬಪು. ೧೯-೩೭). ೨. ತೋಳುಗಳಲ್ಲಿ ಬಲವಾಗಿ ಹಿಡಿ; ತಬ್ಬಿಹಿಡಿ : ಪಿಡಿಯೆ ಕರಾಗ್ರಮಂ ಬಿಡಿಸುತೌಂಕೆ ಬಿದಿರ್ಚುವ ತೞ್ಕೈಗೆಯ್ಯೆ ಮೆಯ್ಗೊಡಪಿ ತೆರಳ್ಚುವ . . . ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ಶಬಶಂ. ೪-೭೩). **ತೆಕ್ಕೆಗೆಯ್** : ೧. ಚೆಂದುಟಿವಾಯನೀಂಟಿ ನಳಿತೋಳೆಡೆಯೊಳ್ ಸಲೆ ತೆಕ್ಕೆಗೆಯ್ದು (ಕಾವ್ಯಸಾ. ೫೭೪) : ಕಲೆವಂತರಪಹರಿಸಿದರುಮಾಗಿಯ ಬಟ್ಟಮೊಲೆವೆಣ್ಗಳ ತೆಕ್ಕೆಗೆಯ್ದು (ಮೋಹತ. ೪-೪೭). **ತೆಕ್ಕೆಗೈ** : 'ತೆಕ್ಕೆಗೈಸು' ಪರಾ. [ ತೞ್ಕೈ + ಕೆಯ್$_1$ ]

**ತಟಿಕ್ಕಿಗೊಳ್**, **ತಕ್ಕಿಗೊಳ್**, **ತೆಕ್ಕಿಗೊಳ್**, **ತೆಕ್ಕಿಗೊಳ್ಳು**, **ತೆರ್ಕಿಗೊಳ್** (ಕ್ರಿ). ೧=ತಟಿಕ್ಕಿಗೆಯ್ ೧: ಮುಳಿದು ವಿಮುಕ್ತ ವಲ್ಲಭಜನಂ ತಳುವಿಲ್ಲದ ತಟಿಕ್ಕಿಗೊಂಡುದು . . . ಏನಳವಿಗಳುಂಬಮೋ ಪುದಿದ ಮಾಗೆಯ ಶೀತ ವಿಜೃಂಭಪಾತನಂ (ಕುಸುಮಾ. ೭-೨೦). ೨. ಹಿಡಿ : ಇದಿರ್ವಂದರಸಿಯ ಸರಸಿಜ ಮೃದುಕರಮಂ ತಟಿಕ್ಕಿಗೊಂಡು ಪಕ್ಕಿಗೆ ವಂದು (ಚಕವಿ. ೩-೧೧೭). ೩. ಸೇರಿರಿಂ; ಜೋಡಣೆಯಾಗಿರಿಂ: ಫಣಿಗಣ ವಿವಿಧಾಲಂಕೃತಂ ತಟಿಕ್ಕಿಗೊಂಡಿರ್ದ ಪತತ್ರಂ ತನ್ನೊಳೊಪ್ಪಿರ್ಪಹಿಕುಲರಿಪುವಂ ಸಂತತಂ ಸದ್ವಿಹಂಗಾಧಿಪನಂ ಮಚ್ಚಿತ್ತದೊಳ್ ಭಾವಿಸಿದೆಂ (ದಶಕು. ೯-೮೯). **ತಕ್ಕಿಗೊಳ್**: ೧. ತಕ್ಕಿಗೊಂಡೆನ್ನ ಪೀಡಿಸಬೇಡ ಕಡು ಶೈತ್ಯವಕ್ಕಿಯೊಳಿರಿಸು (ಮೋಹತ. ೨೭-೫೯) ; ಕುವರ ಕಂಗೆಟ್ಟು ಬಿದ್ದವನೆಂದು ತಕ್ಕಿಗೊಂಡವಳ ನುಣ್ದೊಲೆಯ ಬಲ್ಪಿಡಿದ (ಮೋಹತ. ೩೧-೨೭). **ತೆಕ್ಕಿಗೊಳ್** : ೧. ರಾಹು ತೆಕ್ಕಿಗೊಂಡವೊಲಳವಟ್ಟು ರಂಜಿಪುದು ಕೇಳ್ ಮುಡಿ ಪಂಕರುಹಾಕ್ಷಿ ಯೊರ್ವಳಾ (ಧರ್ಮಾಮೃ. ೭-೨೦೨) : ಜಗವ ಮೋಹಿಸುತಿಹ ಕಾಮನ ತೆಕ್ಕಿಗೊಂಡಿರ್ದ ಕೋಮಲತರ ಬಾಹುಗಳಿಂದೆ (ಮೋಹತ. ೧೧-೨೬). **ತೆಕ್ಕಿಗೊಳ್ಳು** : ೧. ಪ್ರೇಮ ಪರವಶರಾಗಿ . . . ಪತಿಗಳನ್ನು ಮೇಲೆ ಮೇಲೆ ತೆಕ್ಕಿಗೊಳ್ಳುತ್ತಿದ್ದಾರೆ (ಶ್ರೀರಾಮ. ೯). ೪. ಇಟ್ಟಣಿಸು ; ಸಂದಣಿಸು:ಗುಜುಗುಜುಗುಟ್ಟುತಂ ಬೀದಿಬೀದಿಯೊಳ್ ಮನೆಮನೆಯೊಳಂ ತೆಕ್ಕತೆಕ್ಕಿಗೊಂಡೆಲ್ಲರುಂ ಘನತರದೆ ವಿಹ್ವಲಾನ್ವಿತರಾಗಿರಲ್ಕೆ (ಪಾಸೋಪು. ೪-೧೬೮) ; ಮುಂಚಣಿಯ ಒಂದೊಂದು ಗಾಡಿಯಲ್ಲಿಯೂ ಆರಾರು ಜನ ರುಗ್ಣ ಕೈದಿಗಳು ಇರುಕಿರುಕಿ ತೆಕ್ಕಿಗೊಂಡಿದ್ದರು (ಪುನರು. ೫೫೫). **ತೆರ್ಕಿಗೊಳ್** : ೪. ಅಗೆ ಮೂಡುವಂದದಿಂ ತೆರ್ಕಿಗೊಂಡು ಕಿಱುಮನೆಯ ಸೆಲೆಗಳಿಡಿಕಿಱಿದಿರೆ (ವರ್ಧಪು. ೧೧-೩). [ ತಟಿಕ್ಕಿ + ಕೊಳ್$_1$ ]

**ತಟಿಕ್ಕಿಯ್ಸು** 'ತಟಿಕ್ಕೈಸು' ನೋ.

**ತಟಿಕ್ಕೈಸು**, **ತಕ್ಕಯಿಂಸು**, **ತಕ್ಕವಿಸು**, **ತಕ್ಕೆಯ್ಸು**, **ತಕ್ಕೈಸು**, **ತರ್ಕಯಿಂಸು**, **ತರ್ಕವಿಸು**, **ತರ್ಕೆಯ್ಸು**, **ತರ್ಕೈಸು**, **ತಳ್ಕಯ್ಸು**, **ತಳ್ಕವಿಸು**, **ತಳ್ಕೈಸು**, **ತಟ್ಕಯಿಸು**, **ತಟ್ಕಯ್ಸು**, **ತಟಿಕ್ಕಿಯ್ಸು**, **ತೆಕ್ಕಯಿಸು**, **ತೆಕ್ಕೆಯ್ಸು**, **ತೆರ್ಕಯ್ಸು** (ಕ್ರಿ). ೧. ಕೂಡಿಕೊಂಡಿರಿಂ ; ಒಳಗೊಳ್ಳು: ಆಯತ ಯದುವಂಶ ಕುಲಶ್ರೀಯುಂ ತಟಿಕ್ಕೈಸಿದದಟರತಿರಥರವರತ್ಯಾಯತ ಭುಜಪರಿಘರ್ನಾರಾಯಣಬಲದೇವರೆಂಬರಂಬುಜವದನೇ (ಪಂಪಭಾ.೩-೫೭): ಬಾಳುಮುತ್ತುಪರಂ ಬೆರಸು ಮಿಂಚಂ ತಟಿಕ್ಕೈಸಿದ ಕಾರ ಕಾರ್ಮುಗಿ ಲಂತೆ ತಿಜ್ಞನೆಯ್ದುರ್ಪ ದವಿತಾರಿಯಂ ನೋಡಿ (ಶಾಂತಿಪು. ೪-೫೩ ವ) ; ಪದೆಪಂ ಕೆಯ್ದುದೊಳುಂಟು ಮಾಡಿ ನಯಮಂ ವಾಗ್ವಲ್ಲಿಪ್ರಿಯೊಳ್ ತೋಱಿ . . . ಎಸಕದೊಳ್ ಮೆಲ್ಪಂ ಪಳಂಚಲ್ವಿ ಕಣ್ಬದಿರೊಳ್ ಕಾಮಿನಿ ಕಾಮ ರಾಗರಸಮಂ ತಟಿಕ್ಕೈಸಿ ತಳ್ಪೊಯ್ದು ಮೇಳದೊಳಂ ಪೊಕ್ಕೆನಸುಂ ಮನಂ ಗೊಳಿಸಿದೊಳ್ ನಾನಾ ಪ್ರಕಾರಂಗಳಿಂ (ಸುಕುಮಾ. ೭-೧೧). ೨. ಅಪ್ಪು ; ಆಲಿಂಗಿಸು : ಎರಡು ಕೊಂಬುಗಳುಮಂ ತಟಿಕ್ಕೈಸಿಯಾದಮಾನುಂ ಬಿಗಿದಪ್ಪಿಕೊಂಡು ಸತ್ತಳ್ (ವಡ್ಡಾರಾ. ೩೫-೧೭) ; ಕೊಂತಿ ಬಂದು ಕರ್ಣನ ಕಳೇವರಮಂ ತಟಿಕ್ಕೈಸಿಕೊಂಡು ಪಾಂಡವರಯ್ವರುಮನಲ್ಲಿಗೆ ಬರಿಸಿ (ಪಂಪಭಾ. ೧೪-೮ ವ) ; ಕಾಲ ಮೇಲೆ ಮುಱಿಗ್ದ ವಿನಯಾಭಿರಾಮನಂ ತೆಗೆದು ತಟಿಕ್ಕೈಸಿ ಪರಸಿ (ಕಾದಂಬು. ೨೭೫): ಜನಾರ್ದನನಾ ಮಂದರಮಂ ತಟಿಕ್ಕೈಸಿದ ಭುಜಪರಿಘಂಗಳಿನೆನ್ನನೊಲ್ದು ತಟಿಕ್ಕೈಸುಗುಮೇ (ಜಗವಿ. ೫-೭೨); ಪಟಿಕ್ಕಿ ತಟಿಕ್ಕೈಸಿದಂ[ಪಾಠಾಂ. ಬಳ್ಕಿ ತಟಿಕ್ಕೈಸಿದಂ, ಪಟಿಕ್ಕೈಸಿದಂ]= ತಡಕೆಯ್ಕಂ ಮಾಡಿದಂ (ಶಮದ. ಪರಿ. ೧) : ಪುಪ್ಪಕದಿಂ ನೆಲಕ್ಕಿಟಿದು ತನ್ನಿಪ್ಪತ್ತು ತೋಳ್ಗಳಿಂದಾ ಗಿರಿಯುಂ ತಟಿಕ್ಕೈಸಿ ಅಳ್ಳಾಡಿಸೆ (ಧರ್ಮಪ. ೯-೩೮ ವ); ಗಟ್ಟಿನಟ್ಟಿಱಿಂ ಬಿಗಿಬಿಗಿದು ತಟಿಕ್ಕೈಸುತುಂ(ಚಕವಿ. ೭-೧೫೭ ವ). ೩. ತಬ್ಬಿ ಹಿಡಿ ; ಇರುಕು : ಕರಿದಂತಂಗಳನಾಂತು ಪೀಲಿವೊಱೆಯಂ ತಟಿಕ್ಕೈಸಿ ಗಂಧೇಭ ಬಂಧುರ ಮುಕ್ತಾಫಳಭಾರಮಂ ತಳೆದು . . . ಬಂದರನೇಕರ್ ಬಱಿಸಂದು ಕಾಡೊಡೆಯನಂ ಕಾಂತಾರದೊಳ್ ಲುಬ್ಧಕರ್ (ಕಾದಂಪೂ. ೧೭೯). ೪. ತಾಕು ; ತಗುಲು ; ಮುಟ್ಟು : ಎರಡುಂ ವಿದ್ಯಾಧರ ಶ್ರೇಣಿಯೊಳೆಡೆಯೆಡೆಯೊಳ್ ಜೈನ ಚೈತ್ಯಾಳಿ ತಳ್ತಂಬರಮಂ ತಟಿಕ್ಕೈಸಿ ನಾನಾಮಣಿಕಿರಣಗಣಜ್ಯೋತಿಗಳ್ . . . ಬೆಳಗೆ (ಶಾಂತಿಪು. ೨-೧೧೭). ೫. ಅರಳಿಸು; ವಿಕಾಸಗೊಳ್ಳುವಂತೆ ಮಾಡು: ತ್ರಿಲೋಕೀ ದೀಪಂ ತಟಿಕ್ಕೈಸುಗಸ್ಮೃತಿ ಕುಮುದಿನಿಯಂ ನೇಮಿಚಂದ್ರಂ [illegible] (ಲೀಲಾವ. ೧-೧). ೬. ಮಡಿಸು ; ಬಾಗಿಸು : ಗೆಂಟಾದುದೆ ಪೋದಪ್ಪುದಿ ನ್ನೆಚ್ಚಪೆನೆನುತೆ ನೃಪಂ ತೀವಿ ತೊಟ್ಟಾರೆ ತಟಿಕ್ಕೈಸಿದ ಮುಂಗಾಲ್ ಪೊಕ್ಕ ಪಿಂಗಾಲ್ ನೆಗೆದುಪುಗಿದೊಡಲ್ ಬಿಟ್ಟ ಕಣ್ ನೆಟ್ಟ ಕರ್ಣಂ ಪದವಿಟ್ಟೆಲ್ಲ ದಾಜಿನೇಱು ಸರಳಿಸಿದುದು ಭೀತಾಂತರಂಗಂ ಕುರಂಗಂ (ಸೂಕ್ತಿಸು. ೩-೧೨೯). ೭.ಸಂತೈಸು; ಶಮನಗೊಳಿಸು; ಸಮಾಧಾನಪಡಿಸು; ತಲೆ ನೇವರಿಸು: ಅಟಿಲನೆರ್ದೆಯೊಳ್ ತಿಣ್ಣಂ ತಟಿಕ್ಕೈಸಿ ಪುತ್ರವಿಮೋಹದಿಂದೆಟುವಿ ತನುವಂ . . . ಅಟುತುಂ (ಕಾವ್ಯಾವ. ೮೧೫). **ತಕ್ಕಯಿಸು** : ೨. ಮುಂದಿರ್ದ ವಾಗೀಶನಂ ತಕ್ಕಯಿಸಿ ನಲಿದು (ವಾಗೀರ. ದೇ. ೨೭೫-೧೪): ನಕ್ಕು ಮಾಸುಗಿ ಭೀಮಸೇನನ ತಕ್ಕಯಿಸಿ ಕೈದಣಿಯೆ . . . ಮನೆಗೆ ನಡೆಯೆಂದು (ಸಂಭಪ. ೧೭-೨೩). **ತಕ್ಕವಿಸು**: ೨. ಪವನಸುತನೇ ಬಾ ಎನುತ ತಕ್ಕವಿಸಿದನು (ಕುಮ್ಯಾಗ. ೧೧-೪೨). **ತಕ್ಕೆಯ್ಸು**: ೨. ಸಕ್ಕರೆಯ ಕೊಡನ ತುಂಬಿ ಹೊಱಗೆ ಸವಿದರೆ ರುಚಿಯುಂಟೆ ತಕ್ಕೆಯ್ಸು[ಪಾಠಾಂ.ಕೈಸಿ]ಭುಜ ತುಂಬಿ ಲಿಂಗಸ್ಪರ್ಶನವ ಮಾಡದೆ ಅಕ್ಕಟಾ ಸಂಸಾರ ವೃಥಾ ಹೋಯಿತ್ತಲ್ಲಾ (ಬಸವ. ೫೦೮) : ಪೊಡಮಡುತ ತಕ್ಕೆಯ್ಸು[ಪಾಠಾಂ. ತಕ್ಕೈಸು, ತರ್ಕೈಸು]ತಂ ಕೈವಿಡಿದು ಕುಣಿವುತ ತಣಿವುತಂ (ಬಸಪು.೫೯-೨೪); ತವಕದಿಂದಿದಿರೆದ್ದು ಜನಕನನವನಿಪತಿ ತಕ್ಕೆಯ್ಸಿ[ಪಾಠಾಂ. ಕ್ಕೈಸಿ] . . . ನಿಲಿಸಿದನು ಸಿಂಹಾಸನಾರ್ಧದಲಿ (ತೊರರಾ. ೧-೧೭-೧೭). **ತಕ್ಕೈಸು** : ೨. ಪರಸಿ ತಕ್ಕೈಸಿಕೊಂಡು ಮಹಾವಿಭೂತಿಯಿಂದರಮನೆಗೊಡಗೊಂಡು ಬಂದು (ಧರ್ಮಾಮೃ. ೦೩-೦೭೦) : ತತ್ಪಿತೃವ್ಯಂ ಧರಾಧೀಶ್ವರನಾಶೀರ್ವಾಕ್ಸಮೇತಂ ತೆಗೆದು ಬಿಗಿದು ತಕ್ಕೈಸಿದಂ ಪ್ರೀತಿಯಿಂದಂ (ವರ್ಧಪು. ೧-೪೧) : ತಕ್ಕೈಸಿ ಮುಂಡಾಡಿ ಸೊಕ್ಕೇಱಿ ನೋಡುತಂ (ಮಟ್ಟರ. ದೇ. ೭೩-೫) ತೆಗೆವಾತನನು ತಕ್ಕೈಸಿದನು ಕಾರುಣ್ಯನಿಧಿ ನಗುತ (ಕುಮ್ಯಾದ್ರೋ. ೧೫-೨). ೭. "ಅದೆಲ್ಲಾ ಅರ್ಧದಿನದಲ್ಲಿ ಸರಿಹೋಗೋದಲ್ಲ ಪುಟ್ರಂಗು–ಕಾಲಬೇಕು–ತಾಳಬೇಕು, ತಾಳ್ಮೆಬೇಕು" ಎಂದು ತಕ್ಕೈಸಿದೆ (ವೃದ್ಧವಿ. ೫೭) ; ಬಾಗಿ ಬಿನ್ನೈಸುತಿಹ ಪಣ್ಗೊನೆಗಳು! ತೂಗಿ ತಕ್ಕೈಸುತಿರಲುಯ್ಯಲೆಗಳು! (ಕವಿಲಾ. ೪೭-೭). ೮. ಅಪ್ಪಿಕೊಳ್ಳುವಂತೆ ಮಾಡು : ಪರನಾರಿಯರ ಸಂಗವಿಲ್ಲಿ ಉಕ್ಕು ಎಱಿದ ಸತಿಯರ ತಕ್ಕೈಸುವರಲ್ಲಿ (ಪುರಂದ. ೨-೫೯-೧): ನಡುಗುವರ್ಜುನದೇವನನು ತೆಗೆದ[illegible] ಗಡಿಗೆ ತಕ್ಕೈಸಿ ಭೀತಿಯ ಬಿಡಿಸಿ . . . ನಡಸಿದನು ಕಾಳೆಗಕೆ (ಕುಮ್ಯಾಭೀ. ೬-೪೮). **ತರ್ಕಯಿಸು** : ೨. ಅರ್ಕೇಂದು ಸಂಪದಂಗಳನಿರ್ಕೊಳ್ವ ಕರಂಗಳಿಂ ನಭೋವಲ್ಲಭೆಯಂ ತರ್ಕಯಿಸಿ ನಾಲ್ಕುದೆಸೆಯೊಳಮಿರ್ಕುಂ ವಿಂಶತಿ ಸಹಸ್ರ ಸೋಪಾನಂಗಳ್ (ಮಲ್ಲಿಪು.೧೪-೧೦೮); ಸೋಲಕಾರ್ತಿಯರ್ ಕಪ್ಪೋಲಮಂ ಕಾಣ್ಕೆಗೊಟ್ಟು . . . ರಾಗರಸದೊಳ್ಮುಟುಗುತ್ತಂ ತೇಪೆಕಾರ್ತಿಯರ್ ತೆಪ್ಪಂಬಿಡಿವಂತೆ ತಾಪದಿಂ ಮೃಣಾಳನಾಳದ ಪೊರಳಿಯುಂ ಪೊರಳ್ದು [illegible] ಯಿಸಿಯುಂ (ಅರ್ಧನೇ. ೫-೨ ವ). **ತರ್ಕವಿಸು**: ೨. ತಲೆವಿಡಿದು ತರ್ಕವಿಸಿ ತಂಬುಲಮಂ ಬಾಯ್ಗುಂಬಲಿಕ್ಕಿಯುಂಜದಿರೆಂದು (ಶಂಕರಾಂ. ೭೧). ೭. ಇತ್ತಲು ರಾಮನಾ ಕುಂತಳಂಗಳಂ ತರ್ಕವಿಸಿ ಸಂತಾಪಮನಪ್ಪುಕೆಯ್ದು ಹಮ್ಮುದುಂಬೋಗೆ (ಪುಣ್ಯಾಸ್ರ. ೭-೭೦ ವ). **ತರ್ಕೆಯ್ಸು** : ೨. ಪೊದೆವಟ್ಟ ನಿಜತನೂಜೆಯಂ ಕಲ್ಯಾಣಭೋಗಭಾಗಿಯಾಗೆಂದು ಪರಸಿ ತರ್ಕೆಯ್ಸಿ [ಪಾಠಾಂ. ಕೈಸಿ]ಕೊಂಡು (ಆದಿಪು. ೩-೪೭ ವ) : ಅರಸ[illegible]

ಪುರಸ್ಸರಂ ದೇವ ಬನ್ನಿಮೆಂದೊಲವಿಂದೊಡ್ಡಿರೆ ಕೈಯನೊಲ್ಲದೆನ್ನಯ ಕೊರಲಂ ತರ್ಕೈಯ್ಸು[ಪಾಠಾಂ. ತಟ್[3]ಕ್ಯವ] ತನಯನೆಂದಾದಪನೋ (ಚಂದ್ರಪು. ೩-೪೭) : ಮೃದುಮಧುರಾಂಚಿತೋಕ್ತಿಗಳಿಂದ ಬೋಧಿಸಿ ತರ್ಕೈಯ್ಸಿ [ಪಾಠಾಂ. ತರ್ಕವಿಸಿ, ತಳ್ಕ್ಯಸಿ] ತಾಂ ಕಂದನಂ ಹೊಡವಡಿಸಿ ಕೊಂಡು (ಬಸಪು. ೪-೭೮). **ತರ್ಕೈಸು :** ೨. ಅಂಭಶ್ಶೀಕರಂಗಳ್ಪ್ರಸರಿಸೆ ವಿಚಲದ್ವೀಚಿಹಸ್ತಂಗಳಿಂ ಮೆಲ್ಲಗೆ ತರ್ಕೈಸಿತ್ತು ಪೂರ್ವಾಬ್ಧಿಯನಖಿಳ ನದೀ ಖ್ಯಾತ ಸೀತಾಪ್ರವಾಹಂ (ಮಲ್ಲಿಪು. ೨-೧೦) ; ಗೆಜ್ಜೆಗಳುಲಿಗೊದವಿದ ಕಂಕಣದುಲಿಗಳೆಸೆಯೆ ಬರ್ಪಾತ್ಮಜನಂ ಮುದಧಿಪನೆನ್ನಂ ತರ್ಕೈಸಿದ ತೋಳಂ ತೆಗೆದದೆಂದು ತಟ್[3]ಕ್ಯಸುಗುಮೋ (ಅರ್ಧನೇ. ೧-೧೦೩); ಚಕ್ರಪಕ್ಷಿಯುಗಂಗಳ್ ತರ್ಕೈಸಲ್ ತಮವಾಗಳ್ ಬರ್ಕಟಬಯಲಾದುದು (ಗಿರಿಕ. ೫-೫) : ಇಲ್ಲೀಗ ಕಂಡೆನಾದಡೆ ಚರಣದಲ್ಲಿ ದೊಪ್ಪನೆ ಬಿದ್ದು ಬಗಿದು ತರ್ಕೈಸಿ ಬಸಿಱಂ ಬಗಿದು ಹೊಕ್ಕು ಬೆರಸಿ ತಲ್ಲೀಯವಪ್ಪೆನು (ಸಿದ್ಧರಾ. ೨-೫೫). ೪. ಪಟುಪಟಹರಟನಮಾಶಾತಟಮಂ ತರ್ಕೈಸೆ . . . ವಿಶಾಲ ಸ್ಫಟಿಕ ಶಿಳಾತಳಕೆ ವಿಜಯಿ ಬಿಜಯಂಗೆಯ್ದಂ (ವರ್ಧಪು. ೧೫-೭). ೯. ಗುಂಪುಗೊಳ್ಳು; ಸಂದಣಿಸಂ: ತರ್ಕೈಸಿ ಸುರಿವ ತೆಱದಿಂದುರ್ಕಂಬುಗಳೆಱಗಿ ರೋಮರೋಮಕ್ಕೆ ... ನಾಂಟಿದುವರಾತಿಭಟರವಯವಂ (ಜಗವಿ.೭-೮೧). **ತಳ್ಕಯ್ಸು :** ೧. ಪರಿಪೂರ್ಣೇಂದು ಪ್ರಭಾ ವಿಭ್ರಮದೊಳಮುರ್ದ್ವ ಗಂಗಾಪಗಾಸ್ಫಾರ ರುಗುವಿಸ್ತರಮಂ ತಳ್ಕಯ್ಸಿ ದುಗ್ಧಾರ್ಣವ ನವರುಚಿಯಂ ತಾಳ್ದಿ ನೀಳ್ದಪ್ಪುದಾದು . . . ವಿಯನ್ಮಂಡಪಾಗ್ರಂಬರೆಗಂ ಶ್ರೀ ವಿಷ್ಣುದಂಡಾಧಿಪ ವಿಪುಳಯಶಃಕಲ್ಪವಲ್ಲೀವಿಳಾಸಂ (ಎಕ. V. ಬೇಲೂರು. ೧೭-೩೦ ; 1136). **ತಳ್ಕವಿಸು :** ೨. ತೆಗೆದು ತಳ್ಕವಿಸಿದ ರಾಗಳಾತನಂ ರಘೂದ್ವಹಂ ಪಸರಿಸಿದಂ ಸ್ವಭಾವಹಂ (ಕುಮುರಾ. ೪-೯೮ ರಗಳೆ). **ತಳ್ಕೈಸು:** ೨. ಬಂಡಿಯೊಳು ಬರ್ದುಕಿ ಕುಳ್ಳಿರ್ದ ಮಗನಂ ಕಂಡೆತ್ತಿ ತಳ್ಕೈಸಿ (ನಂಬಿರ. ೨-೫೭) ; ಅಳ್ಕಿ ಪುಳಿಂದಂ ಕಾಣುತೆ ತಳ್ಕೈಸಿಯೆ ಕೊಂಡು ಶುನಕನೆರಡುಂ ಕಡಿಯಂ ಕಾಳ್ಕಿರ್ಚು ತಗುಳ್ದ ತೆಱದಿಂ . . . ನೊಂದು ಬೆಂದು ಬಳಲುತ್ತಿಂದಂ (ಗಿರಿಕ. ೧-೧೦೭) ; ಅಖಂಡಹರ್ಷದಿನೆತ್ತಿ ತಳ್ಕೈಸಿ ಮೊಲೆಯೂಡೆ (ಪದ್ಮರಾ. ೧-೯). ೬. ಸುಜನನುತ ಚರಿತ್ರಂ ಭವಾಂಬುಧಿ ವಹಿತ್ರನೆಂದೆನಿಪ ಗೌರಾರ್ಯ ಚಿಚ್ಚಂದ್ರಮಂ ತಳ್ಕೈಸುಗೆಮ್ಮ ಮತ್ಕೃತ್ಪಲಿನಿಯಂ (ಪದ್ಮರಾ. ೧-೨೪). **ತಟ್ಕಯಿಸು:** ೨.ಬೀಯಗನನಟ್ಕಱಿಂ ತಟ್ಕಯಿ[ಪಾಠಾಂ. ಟ್[3]ಕ್ಯ]ಸಿ ತತ್ಕರ ಪ್ರಸಭಾಕೃಷ್ಟ ನಿಕಟ ವಿಷ್ಟರೋಪವಿಷ್ಟಂ (ವರ್ಧಪು. ೫-೪೫ ವ). **ತಟ್ಕಯ್ಸು :** ೨. ನಿಜಾವರಜನ ಕಳೇವರಮಂ ತಟ್ಕಯ್ಸಿ[ಪಾಠಾಂ. ಕೈಸಿ]ಕೊಂಡು (ನೇಮಿಪು. ೧೪-೯೮ ವ). **ತಟ್[3]ಕಯ್ಸು :** ೨. ಆಭರಣಕ್ಕಾಭರಣಂ ಜಿತಸ್ಮರನ ರೂಪೆಂದೀಕ್ಷಿಸಲ್ ತನ್ನ ಸಾಸಿರ ಕಣ್ಣೆಯ್ದದೆ ಕೋಟಿ ಕಣ್ಗೆ ಬಯಸುತ್ತಟ್ಕರ್ತು ತಟ್[3]ಕಯ್ಸುತುದ್ಧರಿಸಿರ್ದಂ ಹರಿ ಕಾಂಕ್ಷಿಸುತ್ತೊಲವಿನಿಂ ಶ್ರೀಭವ್ಯರತ್ನಾಕರಂ (ಪುಷ್ಪಪು. ೧೧-೭೫). **ತೆಕ್ಕೆಯಿಸು :** ೯. ಎಕ್ಕೆ ಎಲಚಿಯು ಲಕ್ಕಿಗಿಡಗಳು ಸೊಕ್ಕಿ ಮೆರೆವಾಸೀಗೆ ಮರಗಳು . . . ತೆಕ್ಕೆಯಿಸಿತಾರಣ್ಯದಿ (ಗೋಹಾಡು. ೬). **ತೆಕ್ಕೆಯ್ಸು:** ೪. ಬಳಸುತ್ತುಂ ಕೀರ್ತಿಸುತ್ತುಂ ಸುಳಿದು ಸುಳಿದು ತೆಕ್ಕೆಯ್ಸಿರಲ್ (ಮೈಆರಿ. ೧೯೩೭, ೨೮-೨೭ ; 1148). **ತೆರ್ಕಯ್ಸು :** ೪. ಬಳಸುತ್ತುಂ ಕೀರ್ತಿಸುತ್ತುಂ ಸುಳಿದು ಸುಳಿದು ತೆರ್ಕೈಯ್ಸುತಲ್ ಕಾಣೆ ಲೀಪೋಜ್ಜ್ವಲ ಕಾಯಂ ತೀವಿದಾ ಪೇಳಿಗೆವೊಲಿರೆ ಸರೋಜಾತಜಾಂಡಂ . . . ವಿಷ್ಣು ಪೆತ್ತಂ ಬೆಡಂಗಂ (ಎಕ. V. ಹಾಸನ. ೫೩-೧೫ ; 1170). [ ತಟ್[3]ಕ್ + – ಇಸು$_3$ ]

**ತಟ್ಗಿಯೂರ್** (ನಾ). ಒಂದು ಊರಿನ ಹೆಸರು : ಶ್ರೀ ಪುರುಷ ಪ್ರಿಥಿವೀ ರಾಜ್ಯಗೆಯೆ ಮ್ಯಾಳಕಟ್ಟುನಾಡರ ತಟ್ಗಿಯೂರಾಳ . . . ಪಣುಪುಲ್ಲು ಇದಕೆ ಸಾಕ್ಷಿ (ಎಕ. IV. ಗುಂಡ್ಲುಪೇ. ೮೭-೨ ; ಸು. 750).

[ ತಟ್$_0$ + ಊರ್ ]

**ತಟ್ಗಿಸು, ತಗಿಸು, ತಗ್ಗಿಸು, ತರ್ಗಿಸು, ತಳ್ಗಿಸು. ಸಗ್ಗಿಸಂ** (ಕ್ರಿ). ೧. ತಗ್ಗುವಂತೆ ಮಾಡು ; ಕುಸಿಯಿಸು : ತಾಳಲಾಗದ ತೀವ್ರತರ ಕಷ್ಟಂಗಳಿರದೆ ತಟ್ಗುಪುದು ತಾನವನ ಕೊರಲನ್ (ಬಧ್ರಪ್ರ. ೪೯-೧೦೭೦). ೨. ಕೀಳು ಮಾಡು : ನಿಱಿವಿಡಿದುಟ್ಟ ಪಟ್ಟುಡೆಯಿಂದಿನ ತ್ರಿವಿಕ್ರಮ ಮೂರ್ತಿಯ ತೆಳ್ವಿನ ಪೊಗರ ನಿಗರದೊಳ್ಪುಡೆಯಂ ತಟ್ಗಿಸಿ ಕಟ್ಗಿಸಿ ಮುಟ್ಗಿಸೆ (ರಾಮಾಶ್ವ. ೧೪೯-೧೪). ೩. ದಮನ ಮಾಡು ; ಹತ್ತಿಕ್ಕು ; ಶಮನಗೊಳಿಸು : ತನುಗುಣರಾಜಿಯಂ ಬಿಡದೆ ತಟ್ಗಿಸಿ ಪೆರ್ಚಿಸಿ ಸದ್ವಿವೇಕಮಂ ಘನಮೆನೆ ಪೂರ್ಣಸೌಖ್ಯದಿರವಂ ಪಡೆವಂತೆ . . . ಧರಣೀಶನೊಪ್ಪಿದಂ (ಉದ್ಭಟ. ೧೧-೨೦). **ತಗಿಸು :** ೧. ಈ ಸಮರವನ್ನು ಮುಗಿಸು ಸೊಕ್ಕಿದವರನು ತಗಿಸು (ಗೀವಿಂ. ೨೦-೧೨). **ತಗ್ಗಿಸು :** ೧. ಕವಿತಪ್ಪ ತುರಗದುರವಣೆಯನಂದೀಕ್ಷಿಸುತೆ . . . ತಿರುಗಿ ಛಟಲನೆ ಹೊಡೆದು ತಗ್ಗಿಸುತೆ ನುಗ್ಗಿಸುತೆ (ಇಹರ. ದೇ. ೪೨-೧೮) : ಚರ್ಮರತ್ನದ ಬಲಮಂ ತಗ್ಗಿಸುವೆನೊಂದಿರುಳ್ ನಿದ್ರೆಯ ಪಂಬಲನೊಲ್ಲದಿರ್ದೊಡೆನುತಗ್ಗಲಿಸಿ ದುರುಕ್ತಿಯುನುಸಿರ್ದಂ (ದಶಕು. ೮-೧೮೨) ; ಕೆರಳಿದನು ಕಲಿಭೀಷ್ಮನರ್ಜುನನುರವಣೆಯ ಗೆಲುವರೆ ಮುರಾರಿಯ ಭರವಸವ ತಗ್ಗಿಸಿದಡಲ್ಲದೆ ಕಾದಲರಿದೆನುತ (ಕುವ್ಯಾಭೀ.೬-೨೩); ಮುರಿದೇಳ್ವ ಕೆಂದೂಳ್ಗಳಾಗ ತರಣಿ ಮಂಡಲವ ಮುಂಬಲಿದು ಮುಂಕೊಳುತಂದು ಕಿರಣದೇಳಿಗೆಯ ತಗ್ಗಿಸಿತು (ಕಂಸವಿ. ೧೭-೨೮) ; ಕ್ಷಣಕಾಲ ತಲೆ ತಗ್ಗಿಸಿಕೊಂಡೇ ಇದ್ದನು (ಬೆಂಗಾಳ್ಯ. ೬೮). ೩. ತಕ್ಷಣದೊಳ್ ಮಸಗಿದ ಶೂಲೆಯನವ ತಗ್ಗಿಸುಗುಂ ಮುಟ್ಗಿಸುವ ತೆಱದಿನುದಕಂ ಶಿಖಿಯಂ (ಲೋಕೋಪ. ೯-೮); ರೂಪಿನಲಿ ಸೊಬಗಿನಲಿ ಶೌರ್ಯಾಟೋಪದಲಿ ಕುಂದಿಲ್ಲ ಮನ್ಮಥತಾಪವನು ತಗ್ಗಿಸಲು ತಕ್ಕವನಹನು (ತೊರರಾ. ೩-೪-೧೭) ; ಇನ್ನು ಮೇಲೆ ರೈತರಿಗೆ ಸರಾಗ ಮಾಡಿಕೊಟ್ಟರೆ ಅರಮನೆಯ ಕೆಲಸ ಕೆಟ್ಟು ಹೋಗುವದೆಂದು ಪರ್ಯಾಲೋಚನೆ ಮಾಡಿ ರೈತರನ್ನು ತಗ್ಗಿಸುವ ನಿಮಿತ್ತವಾಗಿಯೂ (ಚಾಮುವಂ. ೦೨೨). ೪. ಕಡಮೆ ಮಾಡು; ಕುಂದಿಸು: ತರತರದೆ ಓಂಛಾತಪತ್ರಂ ಓರಿದು ತಮಮಂ ಮಾಡೆ ಶಸ್ತ್ರೋತ್ಕರ ಕಳಿತ ತೀವ್ರಾಂಶು ತಗ್ಗಿಸೆ ರವಿನಿವಹದಂತೆ . . . ತೋಱಿತ್ತು ಚತುರಂಗಂ (ಕುಮುರಾ. ೩-೨೮). **ತರ್ಗಿಸು :** ೩. ಸಿಡಿಲಂ ಜೇಱೀಳೆ ಹೊಯ್ವಂ ಬಿಡೆ ಬೆದರಿಸುವಂ ಸಿಂಗಮಂ ಕಾಳನಂ ಕಣ್ಗಿಡೆ ಬಾಹಾಗರ್ವದಿಂ ತಗ್ಗಿಸುವಂ . . . ಎಕ್ಕಲ ಕ್ಷೋಣಿಪಾಳಂ (ಎಕ. VIII. ಸೊರಬ. ೧೩೮-೩೦: 1145); ಆ ಕೊರ್ಬಂ ತರ್ಗಿಸುವೆನವರ್ಗಳಂ ಕರೆಯೆಂದಂ (ದಶಕು.೧೦-೧೨೨). **ತಳ್ಗಿಸು :** ೩. ದಿಗಧೀಶರ ಗಂಟಲನೊತ್ತಿ ಮೆಟ್ಟಿ ಭೀಕರ ಫಣಿಲೋಕಮಂ ಓಳಿದು ನಾಕಮನೋಡಿಸಿ ನಿಂದ ವೀರರಂ ಧುರದೊಳೆ ತತ್ತಱಂದಱಿದು ತಳ್ಗಿಸುತಪ್ರತಿಮಪ್ರತಾಪಭಂಗುರಭುವನತ್ರಯಂ . . . ಜಿತಾರಿ ತಾರಕಂ (ಗಿರಿಕ. ೬-೫). **ಸಗ್ಗಿಸು :** ೫. ಸೋಲಿಸು ; ಮಣಿಯುವಂತೆ ಮಾಡು: ರಾಜಕುಮಾರನನ್ನು ಮೂರು ದಿನದಲ್ಲಿ ಹಾಕಿದ್ದನ್ನು ತಿನ್ನುವ ಸ್ಥಿತಿಗೆ ಸಗ್ಗಿಸಿದನು (ಸಣ್ಣಕ. VIII, ೮೭).

ತಟ್ಗಿಸಿಕೊಳ್ = ಹತ್ತಿಕ್ಕಿಕೊಳ್ಳು ; ಉಪಶಮನ ಮಾಡಿಕೊಳ್ಳು : ಅಂತಸ್ತಾಪದಿಂದಾದ ಕೋಪಮಂ ತಟ್ಗಿಸಿಕೊಂಡು (ದಶಕು. ೪-೧೭ ವ).

[ ತಟ್ಗು + – ಇಸು$_3$ ]

**ತಟ್ಗು, ತಗ್ಗು$_1$, ತಗ್ರ್$_1$, ತಳ್ಗು, ತೆಗ್ಗು$_1$, ಸಗ್ಗು** (ಕ್ರಿ). ೧. ಕುಗ್ಗು : ಕುಸಿ ; ಕ್ಷೀಣವಾಗು : "ತಟ್ಗು – ಕ್ಷೀಣತ್ವೇ" (ಶಮಧಾ): "ತಟ್ಗುಬಟ್ಗನೆ ಕುಸಿವುದು" (ಸಂಜೀವ. ೬) ; ಉಡಿದಿರ್ದಚ್ಚಟಿದೀಸು ತಟ್ಗಿದ ನೊಗಂ ಜೀಱಿಟ್ಟ ಚಕ್ರಂ ಸಿಡಿಲ್ ಪೊಡೆದಂತೊರ್ಮೆಯೆ ಸೂಸಿ ಪಾಱಿದ ಮಡಂ ನುಗ್ಗಾದ ಕೀಲ್ . . . ಕಡಲಂ ಮುಟ್ಟೆ ತೆರಳ್ವ ನೆತ್ತರ ಪೊನಲ್ ಕಣ್ಗೊಂಡುದುಗ್ರಾಜಿಯೊಳ್ (ಪಂಪಭಾ. ೧೦-೯೧) : ಅಂತಾ ಸಂಗ್ರಾಮದೊಳ್ ತನ್ನನುಜತನುಜಜಾಮಾತೃವರ್ಗಂ

ಪಡಲ್ಪಟ್ಟಂತಾಗಳ್ ಮೊಟ್ಟಿಗ್ಗ ತಟ್ಟಿಗ್ಗಿರ್ಪುದುಂ (ಶಾಂತಿಪು. ೫-೫೮); ಬಲ್ಲಿತು ಸುರಗುರುವಿಂ ಸುಂದರಂ ಶುಕ್ರನಿಂ ತಟ್ಟಿಗ್ಗಿದುದಕ್ಕುಂ ಮಂದನಿಂ ಮಂದಿರ ಮತಿಬಳರಾದಂದವರ್ (ಜಾತತಿ. ೪-೧೨) : ಜೀವದಯಾಪರಂ ಪರಮದೀಕ್ಷೆಯುದಂ ತಳೆಯಲ್ಕೆ ನೀವಿದಂ ದೇವಿಳೆಯುಂ ಸಮಂತಿಟೆಯವಿಟ್ಟೊಡೆ ಶೇಷ ಫಣೌಘವಾತ್ಮಕಂಠಾವಧಿಯಾಗೆ ತಟ್ಟಿಗ್ಗಿದಪುದಾ ಕಮಠಾಧಿಪ ಖರ್ಪರಂ ಸ್ವರಕ್ಷೇವಧಿಯಾಗೆ ಮಟ್ಟಿಗ್ಗಿದಪುದೇನಿದು ಸಚ್ಚರಿತಾನುರೂಪಮೋ (ಚಂದ್ರಪು. ೨-೫೩). ೨. ಬಾಗಂ; ಬಗ್ಗು : ನೀಡಿ ಕರಾಗ್ರದೊಂದಳವಿಗೊಯ್ಯನೆ ಬಾರದೆ ಪೂದುಱುಂಗಲಿಂ ನಾಡೆ ವಿರಾಜಿಸಿರ್ಪ ಸೆಳೆಗೊಂಬೆಲರಿಂ ತೊನೆದೆಟ್ಟು ತಟ್ಟಿಗ್ಗಿ ತೂಗಾಡಿದೊಡಂತದಂ ಪಿಡಿದುಕೊಂಡಲರಂ ನೆಱೆ ಕೊಯ್ದು ಕಾಂತೆ ಕೈಗೂಡಿಸಿತೆನ್ನ ವಾಂಛಿತಮನೀ ಮಳಯಾನಿಳನೆಂದು ಪೆರ್ಚಿದಳ್ (ಕುಸುಮಾ. ೫-೧೧೧). **ತಗ್ಗು**$_1$ : ೧. ತನ್ನ ನಿಶಿತನಾರಾಚ ಪರಂಪರಾಭಿಘಾತದೊಳ್ ತಗ್ಗಿ ನುಗ್ಗುನುಱಿಯಾಗಿ ಕೆಡೆದ ತೇರ ಪಲಗೆಗಳೊಳ್ ಮೆಯ್ಗರೆದನೆಗೆತ್ತು ಬೆದಂಕಿ ನೋಡಿಯುಂ (ಗದಾಯು. ೬-೨೮ ವ): ಕಡಂಗಿ ಘಟಾವಳಿ ತಾಗಿ ಮತ್ತೆ ನಿತ್ತರಿಸದೆ ಭೀತಿಯಿಂ ಪೆಳಱಿ ಬಾಯಿವಿಡೆ ಕಿಂಕರಯೂಥಮುಗ್ಗಿ ತಗ್ಗಿರೆ . . . ಸಂಗರ ರಂಗಭೂಮಿಯೊಳ್ಪರಿದುದು ಭಾಪ್ಪು ಭಾಪ್ಪು ಮರುಝು ಭಾಪ್ಪೆನಲಂಣನ ಗಂಧವಾರಣಂ (ಎಕ. VIII, ಸಾಗರ. ೧೦೯-೨೬ : 1042) : ಕೋಪಗಿಚ್ಚು ಭುಗಿಲೆಂದು ಜಪ ಜಾಱಿ ತಪ ತಗ್ಗಿ ಮತಿ ಗತವಾಗಿ (ಹಚಕಾ. ೭-೧); ವೀರಸೇನಾಪತಿಯ ಸನ್ನೆಗೆ ಭೂರಿಬಲ ಹಬ್ಬಿದುದು ದಿಕ್ಕುಗಳೊರೆ ಹಿಗ್ಗಿದವಮುಪ ತಗ್ಗಿದರಹಿಪ ಕೂರುಮರು (ಕುವ್ಯಾಭೀ. ೮-೧೧) ; ವಾಮನನೇಱಿಲುದಯಮಹಾದ್ರಿ ತಗ್ಗಿದುದಿಲ್ಲ ಪೂರ್ವದಲಿ (ತೊರರಾ. ೪-೧೨-೨೫) ; ಮಾಯದ ಸಂಸಾರ ಮಮಕಾರ ತಗ್ಗಿತು ಇನ್ನೇನಿನ್ನೇನೂ (ಪುರಂದ. ೨-೬೯-೧) ; ಆತನ ಕಾಂತಿಯು ಥಟಕ್ಕನೆ ತಗ್ಗುತ್ತಿದೆ (ಜ್ಯೋತಿರ್ವಿ. ೭೦). ೨. ತುಱುಗಿದ ಕಾಯ್ಗಳ ಭರದಿಂ ನೆಱೆ ತಗ್ಗಿ ವಿಲಂಬಿಸಿರ್ದ ಮಾದಲಂ (ಪಾಥಪು. ೧-೧೦೮) : ಕವಿಯ್ಯಲೌಕುವರೌಕಿದರೆ ತಗ್ಗುವರು ತಗ್ಗಿದರೊಡನೊಡನೆ ಜಾಱುವರು ಜುಣುಗುವರ್ಬೈದೆ ತಿವಿದಾಡಿದರು ಸಬಳಿಗರು (ಕುವ್ಯಾಭೀ ೪-೪೩). ೩. ನೆಗ್ಗು ; ನಗ್ಗು : ಘನಮಪ್ಪಾಸರೆ ಮೇಲೀ ಮುನಿಯುಂ ಕೊಂಡುಯ್ದು ನೆಟ್ಟನಪ್ಪಳಿಸುವೆನೋ ತನು ನೆಱೆ ತಗ್ಗಿಯುಂ ನುರ್ಗಪ್ಪಿನೆಗಂ ವೇಗಣ್ಗೆ ನೆಗಪಿ ನೆಲಕಿಕ್ಕುವೆನೋ (ಧರ್ಮಾಮೃ. ೮-೧೧೭) ; ಕಮಠನಪರಾಂಗಂ ತಗ್ಗೆ (ರೇವಣ. ೧೦-೫). ೪. ಶಾತಂಪಾಗು ; ಉಪಶಮಂನವಾಗು ; ವಾಸಿಯಾಗು ; ಗುಣವಾಗು : ಮದೀಶ್ವರನ ದೇಹಕ್ಕೆ ಸಂಕಟವಾಯ್ತಲಾ ಈ ಹುಗುಳುಗಳು ನೆಗೆದು ಎಂದು ತಗ್ಗುವವಿವು (ಬಸಪು. ೧೩-೨೪) : ಶಂಕರನ ಹೂಂಕರಣೆಯಲಿ ತಳಿತುರಿ ತಗ್ಗಿತಲ್ಲಲ್ಲಿ (ಕುವ್ಯಾಕ. ೭-೪೬) : ಮಸದ ಮೊಕ್ಕಳವಾದ ಮುನಿಸು ನಸು ತಗ್ಗದೆ . . . ರಣಕ್ಕುಜ್ಜುಗವನೆ ಮಾಡಿಸಿದಂ (ಜಯುಕಾ. ೬-೧೧) : ಬೆಳ್ಳಿಯು ಜ್ವರವು ತಗ್ಗಿ ಎದ್ದು ಓಡಾಡತೊಡಗಿದಳು (ಕಾಲೂರ. ೧೨ ಕಥಾಸಾರ). ೫. ಸೊರಗು; ಖಿನ್ನನಾಗು; ನಿರುತ್ಸಾಹಗೊಳ್ಳು: ಹಿಗ್ಗುವ ತಗ್ಗುವ ಮುಗ್ಗುವ ಕುಗ್ಗುವ ಅಗ್ನಿಯೊಳಗೆ ಬಿದ್ದು ದಗ್ಧವಾಗುವ ದೇಹಕ್ಕೆ (ಪುರಂದ. ೧-೧೨೨ ಅನುಪಲ್ಲವಿ): ಸಿರಿಗುಬ್ಬನೆಡಱಿಗೆ ತಗ್ಗನಾತ್ಮಜಗ್ಲಾನಿ (ಭರಚ. ೭-೨೭) : ಸುರಪತಿಗೆ ಸಕಲಸಿರಿಯಿತ್ತು ಗಿರಿಜೆಯು ತಮ್ಮನಂ ಕಾಯ್ದೆನೆನುತ ಲುಬ್ಬಿ ವರಮುನೀಶಾ ದಾಶರಥಿ ಜಾಮದಗ್ನಿಯರೊಳಿರದೆ ಕಡುನೊಂದು ವಡಬಾಗ್ನಿಯಿಂದಳ್ಕುತಂ ಪಿರಿದು ಭಂಗವನಾಂತೆನೆನುತಬ್ಧಿ ತಗ್ಗಿ ತಾಂ ಹೆಚ್ಚು ಕುಂದಿನೊಳೆಸೆದುದು (ಚಬಪು. ೨-೫). ೬. ದೈನ್ಯವನ್ನು ತಾಳು ; ವಿನಮ್ರನಾಗಂ : ಪಲ್ಗಿರಿದು ತಗ್ಗಿ ತಲೆಗರೆದು ಬೆರಳಂ ಕಚ್ಚಿ ಕಾಲ್ಗೆಱಗಿ ಕುಗ್ಗಿ ಕಿಂಕರತೆಯಿಂ ನೆಱೆ ಪೆಚ್ಚಿ (ಬಸರ. ೭-೨೭). ೭. ಮಣಿ ; ಸೋಲಂ; ವಶವರ್ತಿಯಾಗಂ : ಕಲ್ಲಿನಾಥನ ಭದ್ರಮದಕರಿ ಖುಲ್ಲ ಹುಲುಮಂಡಳಿಕನಾನೆಗದೇಕೆ ತಗ್ಗು[ಪಾಠಾಂ. ಕ್ಕು]ವುದು (ಬಸಪು. ೨೧-೪೦) : ಈ ಬಾಣಗಳಿಂದ ಇವರು ತಗ್ಗುವರಲ್ಲ (ಸೌಗಂಧಿ. ೩೪೯-೨). **ತರ್ಗು**$_1$ : ೧. "ತರ್ಗು[ಪಾಠಾಂ. ಕುಗ್ಗು] ಆಕುಂಚನೇ" (ಶಮದಾ. ಮ.) : ನೆಲಂ ಮೊಱಗೆ ಕಂಪಿಸೆ ಬಾಯ್ವಿಡೆ ಬೆಟ್ಟು ಬೀಱೆ ಮಂದಿರಮುಡಿದಟ್ಟಿಗ್ಗ ತರ್ಗೆ ನದಿಯುಂ ಸ್ರವಣಂ ಪೊಱಪೊಣ್ಮೆ . . . ಘನಾಗಮದೊಳ್ ವಿನಿಂದಿತಂ (ಲೋಕೋಪ ೪-೭೪) : ಕುಸಿದು ಕುಸಿದಡಿ ಮಿಡುಕದೆ ಸುಗಿದಗಿದು ಮುರ್ಗಿ ತರ್ಗುವ ಪದದೊಳ್ (ಸುಕುಮಾ. ೫-೧೪); ಪಾಳಾಸಂ ಪಱೆಯೆ ಪೊಱಮಟ್ಟು ನೆರವಿಯಸುರವಣಿಸಿ ಪಾಯ್ದು ಬೀದಿವರಿದಾಱಿಗೊಂಡು ಸಿಕ್ಕಿದ ರೂಪಿನ ತಲೆಯೊಳ್ ನಿಳಿಲ್ ನಿಕ್ಕಿಂದು ತರ್ಗಿ ನುರ್ಗಿ ಕರ್ಬೆ ಕೂಡಹುವ ನಚ್ಚಿನಗೋವಂ ದನಿದೋಱೆ (ಗಿರಿಕ. ೨-೧೦೫ ವ) : ಧನುವಂ ಕೊಡೆತ್ತಿ ತನ್ಮೌರ್ವಿಯನಟನಿಗೆ ಹಸ್ತಾಗ್ರದಿಂದೆತ್ತಿ ಭೂಭೃತ್ತನಯುಂ ಕಾಯ್ದಾನದಾರ್ದೇಱಿಸುವ ಸರಭಸಕ್ಕುರ್ವಿ ತರ್ಗಿತ್ತು (ಶಾಂತೀಶ್ವ. ೩-೯೫) : ನಡೆವಾಗಳ್ ಧಾತ್ರಿ ತರ್ಗ[ಪಾಠಾಂ.ಗ್ಗ]ಲ್ ಕಡುಮುಳಿದಧಟಿಂ ಕೋಡಿಡಲ್ಬೆಟ್ಟು ಪಿಟ್ಟಾಗೊಡೆಯಲ್ . . . ರೊಂಕಿಡುತಂ ಕಾಡೆಮ್ಮೆವಿಂದೊಳ್ ಮೆಱೆದುದು ಕಡುಪಿಂ ಸ್ಥೂಲಕಾಯಂ ಲುಲಾಯುಂ (ಕೃಪುವಿ. ೨೭-೭೪) : ಕುಲಗಿರಿಗಳೊಲ್ ದಿಶಾಕರಿಗಳೊಲ್ ಬರ್ಪ ಭರಕೆಳೆ ತರ್ಗೆ . . . ನಡೆತಂದತ್ತು ಶುಂಡಾಲಸೈನ್ಯಂ (ಚಬಪು. ೪೭-೩೪). ೨. ಫಲಭರದೆ ತರ್ಗುಗುಂ ತರು (ಶಾಕುಂತ. ೭೪-೧೧೨). ೪. ಕಱ್ಚನೆ ಕಂದಿತ್ತತ್ತವಿತ್ತಂ ಮಿಗೆ ಮಸಗುವ ಕೋಪಂ ಕರಂ ತರ್ಗಿ ಕುರ್ಗಿತ್ತೆನಿಪಂದಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೬೨) : ತವೆ ದುಶ್ಶಾಸನಭೀತಿ ತರ್ಗೆ ಭರದಿಂದಂ ಭೀಷ್ಮಕರ್ಣೋದಯಂ ನವೆದಾಟಂಬುಗೆ . . . ಮಾಧವ ನಿಂದಿರ್ಮಡಿರಾಜನೇಂ ಮೆಱೆದನೋ ತಾಂ ಧರ್ಮರಾಜ ಖ್ಯಾತಿಯಂ (ಚಕವಿ. ೨-೮೬). **ತಳ್ಗು** : ೫. ಇರದಿಱಿಯೆ ಕಣ್ಗೆಟ್ಟು ತಳ್ಗುವರ್ ಮುಳ್ಗುವರ್ ಭರಿಕ್ಕೆಯ ಪೆಟ್ಟನಿಂದಳ್ಕುವರ್ ಬಳ್ಕುವರ್ (ಚಬಪು.೨೮-೨೬). **ತೆಗ್ಗು**$_1$: ೧. ಅವನ ಸೊಕ್ಕು ತೆಗ್ಗಿತು (ಊಧ). **ಸಗ್ಗು** : ೧. ಕಾಲಿಟ್ಟ ಒತ್ತಡಕ್ಕೆ ನೆಲ ಸಗ್ಗಿದ ಅನುಭವದ ಜೊತೆಗೆ ಕೆಳಗಣ ಮಂಜು ಬಿರಿದ ಸದ್ದು ಕೇಳಿ ಬಂದಿತ್ತು (ಬಳಜೀ. ೯೨). ೭. ಸಸಿನೆ ಸಗ್ಗದ ಸೌಧಮುಕ್ತಾಕಲಶವಿದುವೊ . . . ರಸಿಕರಾಮೋದಗೊಳುವಮೃತಕಲಶವೊಯೆನಲ್ಮೆರೆದುದ್ಯೆಂದವ ಬಿಂಬವು (ವೆಂಕಾರಾ. ೫-೬-೧೪) : ಮೆದುಮಾತಿಗೆ ಸಗ್ಗಲಿಲ್ಲ, ಬಿರುಸು ಮಾತನೇ ಆಡೋಣಂತೆ (ಚಕರಾ. ೩೬೮).

**ತಟ್ಟಿಗ್ಗನಡೆ, ತಗ್ಗಿನಡೆ**=ಬಾಗಿ ನಡೆ; ವಿನಯದಿಂದ ವರ್ತಿಸು : ತಟ್ಟಿಗ್ಗ ನಡೆದೊಡೆ ರುದ್ರನ್ ಒಲ್ಲದೆಯೆ ಮಾಣನ್ (ಅಶ್ವಕಾ. ೫೦-೯೯೯) : ತಟ್ಟಿಗ್ಗ ನಡೆವುದನ್ ಕಲ್ತಿಲ್ಲ ನೀನ್ (ಬದ್ವಪ್ರ. ೧೮-೩೭೪) : ಆದರೆ ತಗ್ಗಿ ನಡೆಯಬೇಕು (ಝೂರಾಣಿ. ೩೪).

[ ದೇ.॥ ತಮಿ. ತಾಟ್ ; ಮಲ. ತಾಟು, ತಾಟ್ಕ, ತಾಕ್ಕ, ತಾಕ್ಕು : ತುಳು. ತಗ್ಗು ; ಕೊಡ. ತಾರ್ ; ತೆಲು. ತಗ್ಗು, ಸಗ್ಗು, ಸ್ರಗ್ಗು ]

**ತಟ್ಟಿ** 'ತಟ್$_1$' ಪರಾ.

**ತಟ್ಟಿಟ** 'ತಟಿತಟಿ' ನೋ.

**ತಟ್ಟಿಟಿಗುದಿ** 'ತಟಿತಟಿಗುದಿ' ನೋ.

**ತಟ್ಟು** 'ತಟ್$_1$' ಪರಾ.

**ತಟ್ಟಿಲ್**, **ತಪ್ಪಲ್**$_2$, **ತಪ್ಪಲು**$_1$, **ತರ್ಪಲ್**, **ತಳ್ಪಲ್** (ನಾ). ಬೆಟ್ಟದ ಮಗ್ಗುಲು ; ಪರ್ವತದ ಕಿಬ್ಬಿ ; ಸಾನು ; ಪ್ರಸ್ಥ : " ಆ ನಗಕಟಕಂ ಪ್ರಸ್ಥಂ ಸಾನು ತಟಂ ಭೃಗು ನಿತಂಬಮುಂತದು ತಟ್ಟಿಲ್ " (... ೨೮-೨) : " ತಟ್ಟಿಲೆಂದು ಸಾನು " (ಕಶಸಾ. ೫-೬೮) ; ಸುಲಿಪಲ್ ತಟ್ಟಿಲ ತಾರಕಾವಯುವಮುಂ . . . ಪೋಲ್ತತ್ತು ತಳಪ್ರಹಾರಿಯ ಶಿರ... ದ್ರಿಯಾಕಾರಮುಂ (ಕಾವ್ಯಸಾ. ೫೨೫ ...) ... ಪ್ಪ]ಲೊಳಾದಮಾನುಂ ಗುಂಡಿತಪ್ಪ ರಸ...

ಕಂಡು (ವಡ್ಡಾರಾ. ೧೮೭-೭) : ಕಸವರವಮಂ ಕಯ್ಗೆ ಮಾಡಿ ಮೇರು ಪರ್ವತದ ತೆಂಕಣ ತಪ್ಪಲೊಳ್ . . . ಜಂಬೂವೃಕ್ಷದ ಕೆಲದೊಳಡಸಿ (ಪಂಪಭಾ. ೬-೩೦ ವ) : ತಪ್ಪಲ ಫಲಾರುಣದರ್ಭ ತಟಾಕ ಸಂಕುಳಂ ತಿಂಗಳ ತೋಂಟದಂತೆ ಬಳೆದೊಪ್ಪುವ ನೇರೆಯ ಕೆಯ್ಗಳಚ್ಚವೆಳ್ದಿಂಗಳ ಕೆಯ್ಗಳಂತೆ ನಡೆ ನೋಟ್ಪರ ಕಣ್ಗೆ ಕರಂ ಮನೋಹರಂ (ಅರ್ಧನೇ. ೨-೭೦): ಮಂಜುವೆಟ್ಟ ನೆಯ್ದಿ ತಪ್ಪಲ ಬನದ ಚೆಲ್ವಂ ನೋಡಿ (ಕಬ್ಬಿಗಕಾ. ೧೬೦) : ಸಿಂಧೂರವಿಲಿಪ್ತ ಮದಸಿಂಧುರಗಂಡಮಂಡಲದೊಂದು ಪಾಂಗಿನಿಂ ತೋರ್ಪ ತಪ್ಪಲಿಂ (ರಾಮಾಶ್ವ. ೬೨-೨೨). **ತಪ್ಪಲ್2** : ಆ ಚಂದ್ರಿಕೆಯೊಳ್ ನೃಪರೂಪ ಚೆಂದ್ರಂ ಕೇಳೀಶೈಲದ ತಪ್ಪಲೊಳ್ನಡಪಾಡುತಿರ್ಪುದುಂ (ಕಾದಂಬ. ೦೪೭) : ಉತ್ತುಂಗ ಶಿಖರಿಯ ತಪ್ಪಲೊಳ್ ಬರ್ಪುದನಾ ವ್ಯಾಘ್ರಂ ಕಂಡು (ಪಂಚತಂ. ೧೧೦-೪) : ತೊರೆಗಳ ತೀರದೊಳ್ಗಿರಿಯ ತಪ್ಪಲೊಳಗ್ಗಳಮಪ್ಪ ಕೊಳ್ಳದೊಳ್ . . . ಮಾವಿನ ಫಲಂಗಳನಂದಣಿಸುತ್ತುಂ (ಧರ್ಮಾಮೃ. ೮-೨೦) : ಅಬುಜಬಾಂಧವನಿಳಿದನಸ್ತಾಚಲದ ತಪ್ಪಲ ತಾವರೆಯ ಬನಕೆ (ಕುಮಾವ್ಯಾವಿ. ೩-೭೮) : ಹಿಪ್ಪೆಯಿಂಗುಳ ಮೊದಲಾದ ನಾನಾ ತರು ತಪ್ಪಲೊಳೆಸೆವುವಾ ಗಿರಿಯ (ಕಂಸವಿ. ೨-೩೨). **ತಪ್ಪಲು1** : "ನಿತಂಬಃ, ಸ್ನುಃ, ಪ್ರಸ್ಥಃ, ಸಾನುಃ ಈ ೪ ಬೆಟ್ಟದ ತಪ್ಪಲಿನ ಪೆಸರು" (ನಾಚಿರಾ. ೧೧೪): ಅರಸ ಬಂದನು ಗಂಧಮಾದನ ಗಿರಿಯ ತಪ್ಪಲಿಗಗ್ನಿಹೋತ್ರದ ಪರಮಋಷಿಗಳು ಮಡದಿ ಸಕಲನಿಯೋಗಿಜನ ಸಹಿತ (ಕುಮಾವ್ಯಾಅ. ೯-೨೦) : ಬೆಟ್ಟದ ತುದಿಯಿಂದ ತಪ್ಪಲಿಗೆ ಉರುಳುವ ಹೆಬ್ಬಂಡೆಯಂತೆ (ಬಿಳಿಜೀ. ೨) : ದನಕರುಗಳು ಯಾವಾಗಲೂ ಮೇಯುತ್ತಿದ್ದ ತಪ್ಪಲಿಗೆ ಬಂದುವು (ರಕ್ತರೂ. ೪) : ಹಿಮಾಲಯ ಪರ್ವತದ ತಪ್ಪಲಿನಲ್ಲಿ ನಿಡಿದುಗಾಲ ಕಠಿನ ತಪಸ್ಸು ಮಾಡಿದನು (ವ್ಯಾಸಜಿ. ೧೪೭). **ತರ್ಪಲ್** : ಬೆಟ್ಟದ ತರ್ಪಲ ಕಣಿಯ ಬಟ್ಟೆಯಿಂ ಮೂಡ (ಸೌಇಇ. XI-I, ೬೫-೪೭ ; 1029) : ಬೆಟ್ಟದ ತರ್ಪಲಿಂದುಲಿವ ಕೋಗಿಲೆಯುಂ (ಸೌಇಇ. XI-II, ೦೭೮-೭ ; 1127). **ತಳ್ಪಲ್** : ಪರಿಪೂಸಲಿಂ ಬಿಲಂಗಳನರಣ್ಯದಿನಲ್ಲಿಯ ತಳ್ಪಲೊಪ್ಪುಗುಂ (ಗಿರಿಕ. ೧-೭೦) : ಬೆಟ್ಟದ ತಳ್ಪಲ ಹಿಮದೊಳೆಸೆಯೆ ಮಾಳ್ಪುದು ತಪಮಂ (ಗಿರಿಕ. ೯-೬೫).

ತಪ್ಪತಪ್ಪಲ್ (ದ್ವಿರುಕ್ತಿ): ತಪ್ಪತಪ್ಪಲೊಳಲ್ಲಿಗಲ್ಲಿ ಮಂಜುಗಳೆಸೆವ ಕಪ್ಪ ಕಪ್ಪನೆಯ ಗಿರಿಗಳ ಪರ್ಬುಗೆಗಳಂತೆ (ಜೈಮಿಭಾ. ೨೮-೪೧). ತಪ್ಪಲಸೀಮೆ= ಪ್ರಸ್ಥಭೂಮಿ : (ಕ).

[ ದೇ.॥ ತಮಿ. ತಾಬ್ಬು ; ಮಲ. ತಾಬ್ಬು, ತಾಬ್ಬಾರಮ್ = ಇಳಿಜಾರು ]

ತಬ್ಬು1, ತಬ್ಪು1, ತರ್ಬು1, ತಬ್ಬು1 (ಕ್ರಿ). ೧. ಅಪ್ಪು ; ಆಲಿಂಗಿಸು ; ಅಪ್ಪಿಕೊಳ್ಳು ; ಬಿಗಿಯಾಗಿ ಹಿಡಿ : ತಂದು ಕೂಡಾತನನಾತಂಗೀವ ಮುಯ್ಯಂ ನಿನಗೆ ಕೊಡುವೆನೇಟಕ್ಕ ಪೋಗೆಂಬುದುಂ ಭೋಂಕನೆ ಬಂದಂ ತಬ್ಬಿದಂ [ಪಾಠಾಂ. ದಂತಪ್ಪಿದಂ] ಚುಂಬಿಸಿದನೊಲಿದು ಕೇಳುತ್ತಲಿರ್ದಾತ್ಮನಾಥಂ (ಅನಂಪು. ೮-೧೩) : ಪಾರಿವಮಂಚೆ ಕೊಂಚೆ ಗಿಳಿ ಸೋಗೆ ಕುಕಿಲ್ ತೊಡೆವಕ್ಕಿ ತಮ್ಮತಮ್ಮೋರಗೆ ತಬ್ಬಲುಂಬಿ[ಚ]ದನಿಗೆಯ್ವುವೆಂದೊಡ ನೆಬ್ಬ ಸುತ್ತಲುಂ ಭೋರೆನೆ ಕೂಡಿಕೊಂಡು ವಿಟತಾಡನ ತಾಳಲಯಕ್ಕೆ ಬರ್ಹಿನಂ ಚಾರುಚಕೋರನೇತ್ರ ಗಳನಿಸ್ವನಮಂ ಮೆರೆದೊಲ್ದು ಕೂಡಿದಳ್ (ಸೂಕ್ತಿಸು. ೧೪-೫೦). **ತಬ್ಬು1** : ೧. ಉಬ್ಬಿದನು ನಿನ್ನಾತನಾತನ ತಬ್ಬಿದನು [ಪಾಠಾಂ. ತುಬ್ಬಿನಲಿ] ಕುರುಬಲದ ಹರುಪದ ಜಬ್ಬುರಿಯ ಹುರಿಗೂಡಿ ತೋರಿತು ಚಾರುಚತುರಂಗ (ಕುಮಾವ್ಯಾಕ. ೨೭-೫೦) : ತಬ್ಬಿಬ್ಬುಗೊಂಡು ತಪ್ಪೊಳ್ ತಾವೆ ಸಿಲ್ಕಿದಂ ತಬ್ಬಿಹಿಡಿ ಹೋಯ್ ಹೊಯ್ಕೆನುತ್ತೆ (ಚಬಪು. ೫೦-೧೫) : ಅತನು ಪೂಸರಂಗಳನಿಸಲಾ ಉಬ್ಬೆಗೆ ಕೊಬ್ಬಿದ ಪೆಣ್ಣಂ ತಬ್ಬಿದೊಡದಜಬ್ಬು ಸಿಲ್ಕುಮಿಂತಿದು ಸುಖಮೇ (ಶಬ್ದಾನು. ೫೦ ಪ್ರಯೋ) ; ತಬ್ಬಿ ಅವಳ ಮುಂಗುರುಳನ್ನು ನೇವರಿಸಿದ (ಕರಾಜ್ಯೋ. ೧೦೬). ೨. (ಹುಲ್ಲಿನ ಹೊರೆ ಸೌದೆ ಮೊದಲಾದಂಪುಗಳನ್ನು) ತಕ್ಕೆಯಲ್ಲಿ ಹಿಡಿ : ತಬ್ಬಿ ತಂದಡುಗಬ್ಬುಗಳಿಗುರಿ ಹಬ್ಬಿಸುತ (ಬಸಪು. ೧೭-೨೦). ೩. ಮುತ್ತು ; ಸುತ್ತುಗಟ್ಟು ; ಕವಿ ; ಆವರಿಸು ; ಆಕ್ರಮಣಮಾಡು : ಕಿದಜಿದವು ಕೆಂಗಿಡಿಗಳುರಿಯುಬ್ಬಿದುದು ಘುಳುಘುಳು ರಭಸ ಮಿಗೆ ಹೆಚ್ಚಿದುದು ತಬ್ಬಿದುದೀತನನು ತಡವರಿಸಿ ಗಗನದಲಿ (ಕುಮಾವ್ಯಾಅ. ೨೦-೬೨) : ಬಂದ ಪಗೆ ಪೌಜ ತಬ್ಬುವದೆಂದು ಬಿನ್ನಪವನಿಂದುಶೇಖರಗೆ ಕಳುಹಲು (ನವಮೋ. ೩೦-೫೫). ೪. ಮುಚ್ಚಿ ಹಿಡಿ ; ಬಿಗಿದಿಡು : ಇಬ್ಬರೂ ನಿಂತುಬಿಟ್ಟರು. ಬಾಯಿ ತಬ್ಬಿದಂತಾಗಿತ್ತು (ಕಮನೆ.೩೪). ೫. ಸಂಭೋಗಿಸು ; "ಒರಗು" (ಜಾನಕೋ. ೬೫) ; ಕೆಟ್ಟವಳು ಕೆಟ್ಟೆ ಬಮ್ಮನೆ ತಬ್ಬಕೊ (ಗಾದೆ). **ತರ್ಬು1**: ೧. "ತರ್ಬು–ಆಶ್ಲೇಷೇ (ಆಲಿಂಗಿಸು)" (ಶಮಧಾ). **ತಬ್ಬು1** : ೧. ಆನೆಯೊಂದನ್ ತಬ್ಬಿ ಭೀಮಸೇನಂಗೆತ್ತು . . . ಬಿಟ್ಟ ಚಕ್ರವರ್ತಿಯ ಮುಡಿಯನೊದೆದ ಕಾಲೆಲ್ಲಿ? ಎಲ್ಲಿ ತೋಳಿಂದದಟ ಕಾಲ್ಮುರಿದು (ಅಶ್ವತ್ಥಾ. ೪-೫೦). [ ದೇ.॥ ತಮಿ. ತಟುವು ]

ತಬ್ಬು2, ತಬ್ಪು2, ತರ್ಬು3, ತಳಪ್ಪು2 (ನಾ). ೧. ಒಂದಕ್ಕೊಂದು ಒತ್ತಾಗಿ ಹೆಣೆದುಕೊಂಡಿರುವಿಕೆ,–ಕೂಡಿಕೊಂಡಿರುವಿಕೆ:ಪುದಿದ ತಾವರೆವಳ್ಳಿಯ ತಬ್ಪಿನಿಂ ಪಸುರ್ವಾಗೆ ನಿರಂತರಂ ಸೊಗಯಿಸಿರ್ಪುವು ಪೆರ್ಗೆರೆಗಳ್ನಿರಂತರಂ (ಮಲ್ಲಿಪು.೨-೪೫): ತಳಿರ್ಗಳ ಕಂಪು . . . ಪೂತ ಪೂಗೊಳಗಳ ತೆಳ್ಪು ತೆಂಕಣೆಲರೊಳ್ಪು ಲತಾಳಿಯ ತಬ್ಪು ಕಾಮುಕರ್ಕಳಿಗಭಿಮಂದನಂ ಬಗೆದು ನೋಡಲು ಮಿಂತು ಮನೋನುಬಂಧನಂ (ಬಂಹರಿ. ೨-೫). ೨. ಅಪ್ಪುಗೆ; ತಬ್ಬಿಕೊಳ್ಳುವಿಕೆ; ಆಲಿಂಗನ: "ತಬ್ಪಿ[ಪಾಠಾಂ. ತಾಳ್ಪಿ]ನಲಳ್ಪಿಂಗೆ ನಾಮುಂ" (ಚಕುನಿ. ೫೭): ಭರತ ತ್ರಿಖಂಡದೊಳ್ಪಸರಿಸು ನಿನ್ನ ಗೋಸಣೆಯನಾಣೆಯನೀ ಖಚರೇಂದ್ರವಕ್ಷದೊಳ್ ವಸಿಯಿಸು ಲಕ್ಷ್ಮಿಯೊಲ್ ವಿಜಯಲಕ್ಷ್ಮಿ ಯೊಲೀತನ ತೋಳ ತಬ್ಪಿನೊಳ್ ಪೊಸಯಿಸು ನಲ್ಮೆಯಂ ದಿವಸಲಕ್ಷ್ಮಿಯ ನೇಕೆಯೊ ಬಂಜೆ ಮಾಡುವಯ್ (ಪಂರಾಮಾ. ೯-೧೭೭): ಪದಯಿಸೆ ಸೋಂಕಿ ಸಂಕೆಗಿಡೆ ಮೇಳಿಸಿ ಮೆಯ್ವಿಡೆ ತಳ್ತು ತೋಳ ತಬ್ಪಿದಿರ್ಗೊಳೆ ಮೆಲ್ಲನಪ್ಪಿ . . .ಅಲಂಪಿನುಬ್ಬದಿಗಮನಾ ಲತಾಂಗಿಗೆ ನೃಪಂ ಪಡೆದಂ ನವಸಂಪ್ರಯೋಗದೊಳ್ (ಕಾವ್ಯಾವ.೮೦೦): ನಡು ನಸು ಪೊಂಗಿ ಸುತ್ತಿರಿದು ಪತ್ತಿದೆಸಟಿಬ್ಬೊನೆ ಬಿರ್ಚೆ ತಣ್ಣೆರಲ್ಗೆಡೆದಿಬಾಗೆ ಪೊಕ್ಕು ಸುಟಿಯುತ್ತಿರೆ ತಬ್ಪು ಸಡಿಲ್ದಗಲ್ದರಲ್ವಿಡಿದುಡುಗಿರ್ದ ಕೇಸರದ ನುಣ್ಮೊನೆ ಸೂಸೆ ಮರಲ್ದು ಚೆಲ್ವಿನೊಳ್ ಗಪಣಿಸಿದತ್ತು ಮುಂಬಗಲೊಳಂಬುರುಹಂ ಸರಸೀಸಮೂಹದೊಳ್ (ಚಂದ್ರಪು. ೮-೧೦೩). **ತಬ್ಬು2**: ೩.(ಹುಲ್ಲಿನ ಹೊರೆ, ಸೌದೆ ಮೊದಲಾದುವುಗಳನ್ನು ತೆಕ್ಕೆಯಲ್ಲಿ ಹಿಡಿಯುವ) ಒಂದು ಹಿಡಿತ ; ತಕ್ಕೆ : ಅವಳು ಒಂದು ತಬ್ಬು ಸೌದೆಯನ್ನು ತಂದು ಒಲೆಯ ಮುಂದೆ ಹಾಕಿದಳು (ಮಲೆನಾ. ೯೫). **ತರ್ಬು3**: ೧. "ಪುಟ, ಲುರ – ಸಂಶ್ಲೇಷಣೇ, ತರ್ಬಿನೊಳ್" (ಶಾಶಕ್ರ. ೨೨೭). **ತಳಪ್ಪು2**: ೧. ಒಂದೊಂದು ಭಾವವಳವಡಲು ಸತಿಜನಕಂದು ಕೆಂದಾವರೆಯ ತಳಪುಗಳ ಸಾರರಸ ಸೂಸೆ ಮಂದ ಮಾರುತನು ಸೌಗಂಧಬಂಧುರವಿಡಿದು ಸಿಂಧುರಾಕೃತಿ ಗಮನದಿ (ಮರುಡ. ೪-೭೯).

ತಬ್ಬುಹಾಕು =ಅಪ್ಪಿಕೊಳ್ಳು; ತೆಕ್ಕೆಬೀಳಂ: ಚಿನ್ನಮ್ಮ ನಾಗಕ್ಕನನ್ನು ತೆಕ್ಕನೆ ತಬ್ಬುಹಾಕಿ ತನ್ನ ಮುಖವನ್ನು ಅವಳ ಎದೆಗೆ ಒತ್ತಿ, ಬಿಕ್ಕಿ ಬಿಕ್ಕಿ ಅಳತೊಡಗಿದಳು (ಮಲಿಮ. ೬೩೩). [ <ತಬ್ಬು1 ]

ತಟಿಬ್ಬೊಯ್, ತಳ್ಬೊಯ್1 (ಕ್ರಿ). ೧. ಅಂಟಿಕೊಳ್ಳು ; ಅಂಟು ; ಹತ್ತಿರು : ನೆತ್ತರ ಪೊನಲೊಳ್ ನಾಂದು ನನೆದ ಮೆಯ್ಯುಮಂ ತೊಯ್ದು ತಟಿಬ್ಬೊಯ್ದ ಜಡೆಯುಮಂ ಕಂಡು (ಪಂಪಭಾ. ೧-೧೦೫ ವ) ; ಎಳದಳಿರ ತುಱುಗಲೊಳ್ ನೆಱೆ ದಳದಳಿಪೆಳಮಾವಿನಳ್ಳಿಗೊಂಬಂ ತಟಿಬ್ಬೊಯ್ದೆಳಸಿ [ಬಲಿ]ದ ವಸಂತದೂತಿಯ ಮಿಳಿರ್ಪುಯ್ಯಲನಾಡುವಬಲೆ (ಕಾವ್ಯಾವ. ೨೪೨) ; ಚರಣಾಲಕ್ತಕಲಾಂಛನಂ ನಿಟಿಲದೊಳ್ . . . ಪುಷ್ಪರಜಃಪುಲೇಪ ಮುರದೊಳ್ ತಟಿಬ್ಬೊಯ್ಯೆ(ಕಾವ್ಯಸಾ. ೬೫೫). ೨. ಒಂದರೊಡನೊಂದಂ

ಸೇರು ; ಬೆರೆ: ಭೀಕರ ಶಾರ್ದೂಲ ಕುಲಂ ಕುರಂಗಕುಲದೊಳ್ ತಟ್ಪೊಯ್ದು ಬಂದಾಡೆ (ಆದಿಪು. ೯-೯೬); ಎಳನೀರುಂ ಶಶಿಕಾಂತ ಕಾಂತ ಜಲಮುಂ ತಟ್ಪೊಯ್ದು ಕೇಳೀವನಾವಳಿಗಂ ಶಾಳಿವನಾಳಿಗಂ ಪರಿಯೆ (ಶಾಂತಿಪು. ೨-೯೧); ಗುಣಮುಂ ರೂಪುಂ ವಿದ್ಯಾಗುಣಮುಂ ತಟ್ಪೊಯ್ದು ತನ್ನೊಳೆಸೆಯಲ್ (ಕಾದಂಪೂ. ೪೩೯). ತಳ್ಪೊಯ್$_1$ : ೧. ಪುಳ್ಳನನೆಸೆವ ಜಿನೇಂದ್ರಾಂಘ್ರಿ ಪಂಕೇಜ ಪೂಜೋತ್ಕರದೊಳ್ ತಳ್ಪೊಯ್ದಲಂಪುಳ್ಳನನು ಕರಿಸಲ್ಮರ್ತ್ಯನಾವೊಂ ಸಮರ್ತ್ಥಂ (ಎಕ. II, ೩೪೫-೩೨ ; 1159).

[ ತಟ್$_1$ + ಪೊಯ್$_1$ ]

ತಟ್ಬು 'ತಟ್ಬು$_1$' ನೋ.

ತಾ$_1$ 'ತರ್' ಪರಾ.

ತಾ$_2$ 'ತಾನ್' ನೋ.

ತಾಂ 'ತಾನ್' ನೋ.

ತಾಂಕು$_1$, ತಾಂಗು$_1$, ತಾಕು$_1$, ತಾಗು$_1$ (ಕ್ರಿ). ತಾಪ$_1$ (ಭವಿಕೃ). ೧. ಎದುರಿಸು ; ಮೇಲೆ ಬೀಳು ; ಆಕ್ರಮಣ ಮಾಡು : ನೂಂಕುವರ್ ತಾಂಕುವರ್ ಕುಱಿದಱಿಯ ಮಾಡಿ ಪೊಯ್ದಾಡುವರ್ . . . ಉಭಯ ಭಟರು (ಚಿಬಪು. ೨೪-೬). ೨. ಅಪ್ಪಳಿಸು ; ಹೊಡೆ ; ಬಡಿ ; ಡಿಕ್ಕಿ ಕೊಡು : ರಸೆಯುಂ ತಾಂ ತಾಂಕಿ ಕಲ್ಪಾಂತದ ಬಱಸಿಡಿಲೆಯ್ತಂದು ಪೊಯ್ಕಲ್ ನೆಲಂ ಕಂಪಿಸುವಂತೆ (ಕಾದಂಪೂ. ೭೦೦). ತಾಂಗು$_1$: ೧. ಮತ್ಕರಿ ತಾಂಗಲ್ ತಾನೆ ಸಾಲ್ಗುಂ . . . ಎಂಬೊಂದು ರಣೋತ್ಸಾಹಂ ಮನಕ್ಕುಬ್ಬರಿಸೆ (ಆದಿಪು. ೧೪-೯೧) ; ಬಿಡು ತಂದುಗ್ರದ್ವಿಪಂ ಬಂದು ತಾಂಗುವುದೆಂಬಂದೆಳಮಾವಿನೊಳ್ ದ್ವಿಪಮೆ ಗೆತ್ತೇಂ ಸೊರ್ಕು ಸೈತಿರ್ಕುಮೋ (ಶಾಂತಿಪು. ೯-೧೪೨) ; ಕಟ್ಟಾಳ್ಗಳೆಟ್ಟಂದು ತೊಟ್ಟನೆ ತಾಂಗಲವರಂ ಕಂಡು (ನೇಮಿಪು. ೧೪-೮೪ ವ) : ವಿಭೀಷಣನ ರಕ್ಕಸವಡೆಯದು ಪಗೆವಡೆಯಂ ಮುಂಗಡೆಯೊಳ್ ತಾಂಗೆ (ಅದ್ಭುತ. ೪೫-೬). ೨. " ತಾಂಗು—ಧಾರಣ, ಸಂಘಟ್ಟನಯೋಃ " (ಶಮಧಾ). ೩. ತಡೆದಂ ನಿಲ್ಲಿಸಂ ; ತಡೆಹಾಕಂ ; ತಡೆಹಿಡಿ : ನೀನೆನ್ನೊಡನಿರೆತ್ತಲುಂ ಪೋಗದಿರೆಂದು ತಾಂಗಿ (ವಡ್ಡಾರಾ. ೬೬-೩) ; ಅಂಗಪತಿ ನುಡಿದು ಕೊಲ್ಲದೆ ತಾಂ [ಪಾಠಾಂ. ಪಿಂ] ಗಿದನಂಬಿಕೆಗೆ ನುಡಿದ ನುಡಿ ನಿಲೆ ಮನದೊಳ್ (ಪಂಪಭಾ. ೧೧-೧೪೪): ಎಂದುದನೆಂದು ಕಾಲ್ವಿಡಿದಗಲ್ಕೆಗೆ ಬೆರ್ಚಿ ಲತಾಂಗಿ ತಾಂಗೆ ಮತ್ತೊಂದಿರುಳುಂ (ಮಲ್ಲಿಪು. ೩-೪೫) : ಬಾಷ್ಪಜಲವೊತ್ತರಿಸೆ ಮೊದಲ್ ನಾಂದು ಬಣ್ಬುವೆತ್ತೆಮೆ ದೊಱೆಯುಂ ಭರದಿಂ ತಾಂಗಿ (ವರ್ಧಪು. ೭-೮೫). ೪. ತಗುಲು; ಮುಟ್ಟು; ಸೋಕಂ;ಹಿಡಿ:ಆ ಬಾಳ್ ನಾಗವೇದಿಕೆಯುಂ ತಾಂಗಿ ತೆತ್ತಿಸೆ ಮೇಗಂ ನೋಡಿ (ಪಂಚತಂ. ೧೯೫-೧೦) : ಬಹು ರತ್ನಕಾಂತಿಗಳ್ ಪುದಿಯೆ ಲತಾಂಗಿ ತಾಂಗಿ ಲಲಿತಾಂಗುಳಿಯೊಳ್ ನಡೆ ನೋಡಿ (ಮಲ್ಲಿಪು. ೪-೬೪): ಪೆಗಲೊಳ್ ದಕ್ಷಿಣ ಹಸ್ತವೊಪ್ಪೆ ಸಸಿಸಂ ವಾಮಂ ಕರಂ ತಾಂಗೆ[ಪಾಠಾಂ. ತಾಗೆ]ಗುಂಡಿಗೆಯಂ (ಅರ್ಧನೇ. ೧-೮೧). ೫. ಚುಚ್ಚು ; ನಾಟು ; ತಿವಿ: ಓವದೆ ತಾಂಗಿದ ನನೆಯ ಶರಂಗಳ ಗಱಿಗಳಿವೋ (ಜಯುಕಾ. ೪-೧೫).೬. ಸಹಿಸಂ ; ಸೈರಿಸು; ತಡೆದುಕೊಳ್ಳು; ತಾಳಿಕೊಳ್ಳು: "ತಾಂಗು–ಧಾರಣ, ಸಂಘಟ್ಟನಯೋಃ" (ಶಮಧಾ). ೭. ತಾಳಂ; ಹೊಂದು: ಕಱಂಗದು ಮೇಣ್ಪಾಸೆ ಮೊಲೆಯ ಮೊಗಮೆಳಗರ್ಪಂ ತಾಂಗದು ತೆಳ್ವಸಿಱಿನಿಸಂ ಪೊಂಗದು (ಅನಂಪು. ೪-೧೩೧). ೮. ಗಮನಿಸು; ತಿಳಿದುಕೊಳ್ಳು; ಗ್ರಹಿಸು: ವಿವಿಧಾತೋದ್ಯಲಯಾನುಬಂಧ ವಿಳಸಲ್ಲಾಸ್ಯಂ ತಗುಳ್ದಲ್ಲಿ ನಾಟ್ಯವಿದರ್ ತಾಂಗೆಯುಂ . . . ಇರ್ಮಡಿಸಿದಳ್ ನೃತ್ಯಶ್ರಮಸ್ವೇದಮಂ (ಆದಿಪು. ೧೧-೧೯). ೯. ಆಧಾರ ಕೊಡಂ; ರಕ್ಷಿಸಂ; ಕಾಪಾಡಂ: ಮುನಿದು ಪೊಡವಿ ನುಂಗುವೊಡೆ ಮನೆ ತಾಂಗು[ಪಾಠಾಂ. ತಾಗು]ವುದೆ (ಹಚಕಾ. ೨-೩೧); ಅಂತು ದಾರ್ಶನಿಕರ್ ಮೆಯ್ಯುಂ ತಾಂಗುಗುಂ ಸಾಧನಂಗಳಿಂ ಮಱಿದುಯ್ಲಂ ದಾಂಟಲೆಂದೇ ಸ್ನೇಪದಿಂದಮಲ್ಲಮಂತದು (ಸೌನಂದ. ೧೪-೧೬): ತತ್ತರಿಸಿ ಬಿ ತಾಂಗದಿರೆ ಸೌಮಿತ್ರಿ ಚರಣಘಾತಕೆ ಚಿರಂ ಪೊರ್ದುತಿರ್ದನೋ ಏಸೋ ಪಂಚತ್ವಮಂ (ಶ್ರೀರಾಮಾ. ೭೦೮-೧೮೭). ೧೦. ತಂಗುವಂ ಮಾಡು ; (ಮೇಯಲು) ಬಿಡು : ಪಸುವೃಂದಲ್ಗಳ್ ತಾಂಗಿ ಕಾಳಿಂದಿಯೊಳ್ ತಿಳಿನೀರೂಡಿ ಮುರಾರಿ ವತ್ಸಕುಲಮಂ ಕಾದು (ಜಗಪಿ. ೩-೭೦). ತಾಕು$_1$: ೧. ಕಱತೊಱಿಯು ತಡಿಯುಲಿ ವಿಪರಿಸುವ ಜೈನಮುನಿ ಕುಲವ ನೆಱೆ ತಾಕುತಿರೆ ಹೊಯ್ಲಿನ ಬಿಱುಸಿನಲಿ (ಬಸವು. ೫೨-೧೧) : ಏಕೆ ನಿಮಗೀ ಚಿಂತೆ ವೈರಿಯು ತಾಕುವೆಸು ಕೊಡು ವೀಳೆಯವ (ಕುವ್ಯಾದ್ರೋ. ೭೦೩. ಪರಿ. ೨೭೭) : ಇವನ ಸಮೀಪ ತಾಕುವ ಭಟರ ನಿನ್ನಲಿ ಕಾಣೆ (ತೊರರಾ. ೭-೮-೯). ೪. ಹೊಗರು ಮೊಗಕೆ ಪೆಣ್ಗಳ ದಿಟ್ಟಿ ತಾಕದೊಲ್ತೆಗೆದ ಕತ್ತುರಿರೇಖೆಯಂತೆ (ಕಂಸವಿ. ೯-೧೦೪) ; ಹಾಯುವವಂಗೆ ಆ ಕಿಚ್ಚಿನ ಜಳವು ಸಹ ತಾಕುವುದಿಲ್ಲ (ಕನ್ನಜಾ. ೧೦). ೫. ಎಲವೊ ನಿನ್ನಂಬು ತಾಕಿದ ರಳುಕುವೆನೆ (ಕುವ್ಯಾದ್ರೋ. ೫-೫೭) ; ಕಾಲೊಳು ಮೂಡಿದ ದಸಿಮುಳ್ಳುಗಳು ತಾಕಿ ಸೀಳಿದ ವ್ಯಗಾಯದಿಂದ (ಕಂಸವಿ. ೧೧-೫೦). ೧೧. ಬಾಧಿಸು; ನೋಯಿಸು ; ಹಿಂಸೆಮಾಡು : ಕಾಮನ ಬಲ್ಲಹದ ಬಲುಗಾಯ ತಾಕಿತು [ಪಾಠಾಂ. ತಾಗಿತು]ಬಲ್ಲ ನೀನೌಷಧಿಯ (ಕುವ್ಯಾವಿ. ೨-೧೯). ೧೨. ಸೇರಂ ; ಕೂಡು : ವಸುದೇವನ ರೂಪಿನ ಗಾಡಿಗೆಳಸಿ ತತ್ಕಾಮಿನಿಯರ್ ತಾಂಗಲ್ಕೆ ನೆರೆಯದಿರೆ (ಮಹಾನೇ. ೪-೫೨). ತಾಗು$_1$ : ೧. ಪರಿದೆಯ್ದೆ ತಾಗಿದಂ ಭಾಸುರತರ ರಘುಕುಲಲಲಾಮ ಲಕ್ಷ್ಮೀಧರನೊಳ್(ಕವಿರಾ.೨-೯೧): ಎಮ್ಮೂರ ಮಿನುಕಿ ಎಡೆಯೊಳ್ಪಾಗಿ ತ[ಬ್ಬಿ]ಱಿದು ಸಗ್ಗಮೇಱಿದಂ (ಸೌಇಇ. IX-i, ೪-೮ : 9ನೆಯ ಶತ); ತನ್ನ ಮಕ್ಕಳ ನೆಗಟ್ದಾ ಸಂಗ್ರಾಮದೊಳ್ ಸತ್ತುದುಮೆನೆ ಮನದೊಳ್ ತಾಳ್ದಿ ತಾಪಾಗಳ್ [ಪಾಠಾಂ. ಕಾಯ್ವಾಗಳ್] (ಪಂಪಭಾ.೧೨-೧೮) : ಪೊಯ್ಕಲೋಡಿಪೋಗುವುದಲ್ಲದೆ ತಾಗಿ ತಳ್ತಿಱಿಯಲಱಿಯೆವು (ಪಂಚತಂ. ೨೦೭-೫). ೨. " ತಾ[ಪಾಠಾಂ. ತಾಂ]ಗೆಂದು ಸಂಘಟ್ಟನಾರ್ಥ " (ಶಬ್ದಕೈ. ೫೭): ಕಲಿ ಮಾರ್ಕೊಳ್ಳದೆ ಕೊಟ್ಟು ಮೆಯ್ಯೊಳ್ ಸಿಡಿಲ್ ತಾಪಂತೆವೋಲ್ ತಾಗೆ (ಪಂಪಭಾ. ೧೦-೭೬): ಪೆಣ್ದುಂಬಿಗಳ ಬಳಗಮ ನೊಳಕೊಂಡ ಲತಾಮಂಟಪಂಗಳೊಳಂ ತಳರೆ ತಾಗುವ ತೆರೆದುಱುಗಲೆಪದಿಂ ಸೂಸಿ (ಕಾದಂಉ. ೫೨೭); ಗರ್ವಪರ್ವತಾರೂಢನಾಗಿ ಪರ್ವತಮಂ ತಾಗೆ (ಪಂಚತಂ. ೪೭-೧೦) ;ಕಲ್ಲಂ ತಾಗಿದ ಪುಳ್ಳಿಯಂತೆ ನುಚ್ಚುನುಱಿ ಮಾಡಿ (ಧರ್ಮಾಮೃ. ೭-೯೫) ; ಸಂಗನ ಶರಣರ ಕಂಡು ಉದಾಸೀನವ ಮಾಡಿದಡೆ ಕಲ್ಲ ತಾಗಿದ ಮಿಟ್ಟೆಯಂತಪ್ಪರಯ್ಯಾ (ಬಸವ. ೧೯೪) : ಅಗರದೊಳು ರಸದಾಳಿ ತೆಂಗಾಳಿಯಿಂ ತಾಗಲೊಂದಱೊಳೊಂದು ಹಳಚಿ ಮೇಗೊಲ್ಗಳೊಡೆದಿನಿರಸದ ಪರಿಯೊಳಿಕ್ಷುಸಾಗರ ತುಂಬಿದಂತಾಯ್ತು (ಮೋಹತ. ೨-೪೮). ೩. "ತಾಗಿದಂ ತಡೆದನೆನಲ್ಕೆ" (ಕರ್ಣಾನಿ. ೭೭) : ಅಡವಿಯೊಳ್ ಕಳ್ಳರ್ ಬಟ್ಟೆಗಟ್ಟಿ ಹಾದಿಯನಿರುಳು ತಾಗಿದೊಡೆ (ವಡ್ಡಾರಾ. ೬೬-೦೩) ; ಪುಳಕಪ್ರೋದ್ಭೇದ ಘರ್ಮೋದಕ ವಿಸರಮನೊತ್ತಂಬದಿಂ ತಾಗೆಯುಂ (ಆದಿಪು. ೪-೨೧): ಪೋಗದಿರೆಂದು ತಾಗಿ ರಥಮಂ ಸೆಡೆದುಳ್ಕದೆ ಪತ್ತಿ ಮುತ್ತಿ (ಧರ್ಮಾಮೃ. ೧೩-೧೪೭). ೪. ಪರಸ್ತ್ರೀಯರಂ ಕೊಳಿಪಂ ಕೊಳ್ವನೆನಿಪ್ಪ ಪಾಪಿಯುಮತಿ ಕ್ರೂರಾತ್ಮನುಂ ಸಾಧುಸಂಕುಳಮಂ ಕಂಡೊಡೆ ಕಾಯ್ವನುಂ ಪಱಿವನುಂ . . . ಘುಳುಮ್ಮನಿಱಿಗುಂ ಶ್ವಭ್ರಾಂತಮಂ ತಾಪಿನಂ (ಆದಿಪು. ೫-೮೧); ಕೀರ್ತ್ಯಂಗನೆ . . . ಅನಿಲ ಮಾರ್ಗಾಂಬರಂ ಪರ್ಬಿದಳ್ ದಿಗ್ವನಿತಾ ಸಂದೋಹಮಂ ತಾಪಿನಮಡಿಯಿಡುವಳ್(ಗದಾಯು.೧೦-೧೧);ನಿರ್ದಯದಿಂ ಪೀಡಿಸಿ ಬಳ್ಕುಪೋಪಿನೆಗಮೆಲ್ವಂ ತಾಪಿನಂ ಮೇಗೆ ಮೂಗಿಯ ಮೂಗಂ ತಲೆವಾರ ಕೊಯ್ದು (ಸುಕುಮಾ. ೭-೨೯) : ಅಡಿ ನೆಲನಂ ತಾಗದಂತೋವಿ ನಡೆನಡೆದು (ಸಿದ್ಧರಾ. ೧ ೩೭) : ಪತಿ ಬಿಱಿಸಿನಲಿ ಹೊಯ್ದು ಪೊಡೆಗಳ ಸತಿಯ ಮೇಲಣುಮಾತ್ರದನಿತುಂ ತಾಗವೆಂತೆನಲು (ಬಸವು. ೫೨-೯).

**ತಾಳ್ಕೆವಂತ** (ನಾ). ಸಹನೆಯುಳ್ಳವ ಕೂಡಿರುವಾತ; ತಾಳ್ಕೆಯುಳ್ಳವನು : "ವ್ಯಪ್ಪ:, ವ್ಯಪ್ಪವಾನ್. . . ಮರ್ಷಣಃ, ಈ ೬ ಹುಸಿಗನುಂ, ತಾಳ್ಕೆವಂತನುಂ" (ಕಾಶಕ್ಯ. ೨೦೪). [ತಾಳ್ಕೆ + – ವಂತ]

**ತಾಳ್ಗೆಯ್** (ಕ್ರಿ). ಕಾಪಾಡು ; ಸಲಹು ; ರಕ್ಷಿಸು : ಕಳೆಗೊಳ್ಗಂ ನೆವವಿಲ್ಲದೆಲ್ಲ ಜಗಮುಂ ತಾಳ್ಗೆಯ್ಗುಮಾ ದೈವಮುಂ ತಳರ್ವನ್ನಂ ಚಿಕದೇವರಾಯನ ದಯಾಂಕುರಂ ಕಟಾಕ್ಷಪಂತದೊಳ್ (ಚಿಕವಿ. ೫-೧೦೬).

[ತಾಳ್$_{1}$ + ಕೆಯ್$_{1}$]

**ತಾಳ್ದು**$_{1}$ (ಕ್ರಿ). ೧. ಹೊಂದು; ಪಡೆ : ಸಮಾಧಿಯೊಳ್ ಮುಡಿಪಿ ತಾಳ್ದಿದರ್ಸ್ಸ ತಮರೇನ್ದ್ರಭೋಗಮುಂ (ಎಕ. III, ಮೈಸೂರು. ೬-೫ ; ಸು. 750); ದಾನಾಸುಮೋದ ಪ್ರಭಾವದಿಂದುಪಶಮಭಾವಮುಂ ತಾಳ್ದಿ (ಆದಿಪು. ೫-೨ ವ); ತಾನುಂ ತ್ರಿಖಂಡಮಂಡಲಾಧಿಪತ್ಯಮುಂ ತಾಳ್ದಿ ಪೌದನಪುರಮುಂ ಪೊಕ್ಕು (ಶಾಂತಿಪು. ೫ ೬೪ ವ) : ದಕ್ಷಿಣಬಾಹುದಂಡದೆ ಜಯಶ್ರೀಕಾಂತೆಯುಂ ತಾಳ್ದಿ (ಗದಾಯು. ೯-೩೯) : ಚರಿಯಿಪ ಖಗಮೃಗಕುಳಮಾ ಪರಮಮುನೀಶ್ವರ ತಪಃಪ್ರಭಾವದಿನತ್ಯಾದರಮುಂ ತಾಳ್ದಿ ಪರಸ್ಪರ ವಿರೋಧಮುಂ ಬಿಸುಟವು (ಸುಕುಮಾ. ೮-೬೨); ಶಾಂತರಸಮುಂ ಕಾರುಣ್ಯಮುಂ ತಾಳ್ದಿ (ಪಂರಾಮಾ.೦-೫). ೨. ಧರಿಸು ; ತಳೆ : "ತಾಳ್ದು–ಧಾರಣೇ" (ಶಮದ) ; ತದಾಜ್ಞೆಯುಂ ನಿಜ ಕಿರೀಟದೊಳ್ ತಾಳ್ದಿದಂದದಿಂ ಸೊಗಯಿಸಿದರ್ (ಆದಿಪು. ೧೩-೭೯) : ಇತ್ತ ಸರ್ವದಯಿತೆ ಗರ್ಭಮುಂ ತಾಳ್ದಿ ಸಾಗರದತ್ತಂ ಕಂಡು (ಪಾಪುಂಪು. ೧೦೧-೮೪). ಅಂಗನೋಚಿತ ರಸಾಲಂಕಾರಮುಂ ತಾಳ್ದಿದೊಪ್ಪಿದ ಪಾಕಸುಂದರಿ ಬಂದು ಸ್ಪಾಟಿತೆಯುಕ್ಕಿಸ್ಸೀ ಮುಖಾಂಭೋಜದೊಳ್ (ಗದಾಯು. ೧-೬); ವಿಪಮುಂ ಮುಟ್ಟಿದ ಪೆಂಪು ಭೂಪಲಯಮುಂ ತಾಳ್ದಿರ್ದ ಧೈರ್ಯೋದಯಂ (ಮಲ್ಲಿಪು. ೧-೬೮) ; ವಿಜಯಶ್ರೀಯುಂ ಭುಜದೊಳು ತಾಳ್ದಿದಜೇಯು (ಎಕ. VIII (೩), ಸೊರಬ, ೫೮೬-೩ : 1201). ೩. ಸಹಿಸು ; ತಡೆದುಕೊಳ್ಳು ; ತಾಳಿಕೊಳ್ಳು : ಅರಿಗನಂ ಕಾಣುತ್ತೆ . . . ತಾಳ್ದಲರಿದೆಂದಿರ್ಕಚ್ಚೆಯುಂ ಕಟ್ಟಿದರ್ (ಪಂಪಭಾ. ೪-೩೮); ದೇವಕೃತಂಗಳುಮಂ ಸ್ವಾಭಾವಿಕಮುಮನಜಿತ ಸೇನೆ ತಾಳ್ದದೆ (ಅಜಿಪು. ೮-೧೬) : ಇಂತೀ ಪದಿನಾಲ್ಕುಮನತ್ಯಂತುದೃಢಹೃದಯನಾಗಿ ತಾಳ್ದಿರ್ದಂಗೋರಂತೆ ನಿರಂತರಸೌಖ್ಯಂ ಭ್ರಾಂತಿಲ್ಲದೆ ಕೂಡುಗಲ್ಲಿ ಸಂದೆಯುಮುಂಟೇ (ಧರ್ಮಾಮೃ. ೧-೮೨). ೪. ಕೈಕೊಳ್ಳು ; ತೆಗೆದುಕೊಳ್ಳು: ಮತ್ತಂತತಿಶಯದ ಮಹಾಪುರುಷವ್ರತಮುಂ ತಾಳ್ದುವಳು ದಾರಚರಿತಕ್ರಮದಿಂ (ಕವಿರಾ. ೩-೧೬೨) : ಮುನ್ನಿನ ರಾಜ್ಯಲೀಲೆಯುಂ ನೆನೆಯದೆ ತಾಳ್ದಿದಂ ವಿಮಲವಾಹನಯೋಗಿ ತಪೋನಿಯೋಗಮುಂ (ಅಜಿಪು. ೩-೨) ; ಸುಷೇಣರೆಂಬ ಮುನಿಮುಖ್ಯರಲ್ಲಿ ಜಿನದೀಕ್ಷೆಯುಂ ತಾಳ್ದಿದಂ (ಸುಕುಮಾ ೧೦-೩೧). ೫. ಹಿಡಿದುಕೊಳ್ಳು ; ಹಿಡಿ : ಮುಗುಳ್ನಗೆಯಲ್ಲಿಗೆ ಬರ್ಪುದುಂ ತನುವಿನೊಳ್ ಪ್ರಾಣಂಗಳಂ ದೇಪ ತಾಳ್ದುಗುಮೋ (ಕಾದಂಬ. ೩೭೮). ೬. ಹೊರು ; ಹೊತ್ತುಕೊಳ್ಳು: ಜಲಧಿತರಂಗತಾಟಿತ ಧರಾತಲಭಾರವಿಂದೆತ್ತ ಬಾಲನೆತ್ತಳವಿನಿಟುಂಟೆ ತಾಳ್ದಲಿದನೆಂಟ್ಟಜೆಯಿಂ ಕೊಳಲೆಂದು ವೈರಿಗಳ್ ತಳರ್ದಪರ್ (ಆದಿಪು. ೪-೮೪).

ತಾಳ್ದುಕೊಳ್ = ಸಹಿಸಿಕೊಳ್ಳು ; ಸೈರಿಸು : ತಾಳ್ದುಕೊಳಲರಿದಪ್ಪ ಪತನಕ್ಕೆ ಪಕ್ಕಪ್ಪ ಪಾಡಿಂದೆ ಉಬಿಪಲ್ಯಮಾಡಿವು (ಬದ್ರ‌ಪ್ರ. ೪೮-೧೦೫೫).

**ತಾಳ್ದು**$_{2}$ 'ತಾಳ್$_{1}$' ಪರಾ.

**ತಾಳ್ಮೆ**, ತಾಳಿಮೆ, ತಾಳುಮೆ (ನಾ). ೧. ಸಹನೆ ; ಸೈರಣೆ ; ತಾಳುವಿಕೆ : ತೊನೆಯಲ್ ತಾಳ್ಮೆಯುನಾಂತವಂ ಬೆರೆತೂಡಂ ನಿರ್ಗರ್ವಿ (ಸೋಮೇಶ. ೫೨): ತಾಳ್ಮೆ ಇರಲಿ ಪ್ರಯತ್ನವನ್ನು ಬಿಡಬೇಡ (ಶಾಲಿಮು. ೨೨೨). ಜ್ವರದ ತಾಪದಿಂದ ಜರ್ಜರಿತನಾದ ಆನಂದ ತನ್ನೆಲ್ಲ ತಾಳ್ಮೆಯನ್ನು ಕಳೆದುಕೊಂಡಿದ್ದ (ಶೀಮೋದ. ೧) : ತಾಳ್ಮೆ ಇದ್ದ ಪುರುಷನಲ್ಲಿ ಬೀಳು ಇದ್ದರೆ ಬಾಳ್ಯಾನು (ಗಾದೆ). ತಾಳಿಮೆ : ೧. ತಾಳಿಮೆಗುಂಟೆ ಹಳವೆ (ಗೀವಿಂ. ೩೦-೯೪). ೨. ಸಾವಕಾಶ ; ತಡ : ತಾಳಿಮೆಯು ಮಾಡದಿರೆಂದು ಆ ಕ್ಷಣ ಕಳ್ಳಬಡಿಗೆಯು ತಂದು (ತಾರನಿ. ೩-೧೫). ತಾಳುಮೆ : ೧. ತಾಳುಮೆಯು ಕಮದಮವು ಸಹಜವು (ಜ್ಞಾನಸಿಂ. ೧೬-೫೧); ತವಕದಿಂ ಕೇಡು ತಾಳುಮೆಯುಳುಮೆಯಿದ ನರಿದು ಸವಿನಯದಿಪ್ಪೊಲಿಸಿಕೊಂಬೊದು (ನವಮೋ. ೯-೨೦) ; ಆತುರದಿನ್ ಅಡುಗೆ ಪಕ್ಕಹುದೆ ? ತಾಳುಮೆಯು ಪರಿಪಾಕ (ಮಂಕುಕ. ೭೮೧).

[ತಾಳ್$_{1}$ + – ಮೆ$_{1}$]

**ತಾಳ್ಮೆಗೆಡು** (ಕ್ರಿ). ಸೈರಣೆಯನ್ನು ಕಳೆದುಕೊಳ್ಳು; ತಾಳ್ಮೆ ಇಲ್ಲದಂತಾಗು: ಆಗ ಭೀಮನು ತಾಳ್ಮೆಗೆಟ್ಟು ಕೈ ಕೈ ಹಿಸುಕಿಕೊಳ್ಳುತ್ತ . . . ಎಂದನು (ವಡಭಾ. ೨೯೮) ; ಅದುವರೆಗೂ ಮೌನವಾಗಿದ್ದ ಜೈಗೋಪಾಲ್ ತಾಳ್ಮೆಗೆಟ್ಟು ಗಡಬಡಿಸಿದ (ಅಹ್ಯಾರ್ಪ. ೧೧೮) : ಅವರು ಬಂದು ತಲುಪಿದುದೇ ತಾಳ್ಮೆಗೆಟ್ಟವರ ಹಾಗೆ (ಮೂರುದಾ. ೨೬೦). [ತಾಳ್ಮೆ + ಕೆಡು$_{1}$]

**ತಾಳ್ಮೆತಪ್ಪು** (ಕ್ರಿ). = ತಾಳ್ಮೆಗೆಡು: ತಾಳ್ಮೆತಪ್ಪಿದರೆ ಅಪಯಶಸ್ಸು ಬರುತ್ತದೆ (ಭಾರದ. ೧೧೫). [ತಾಳ್ಮೆ + ತಪ್ಪು$_{1}$]

**ತಾಳ್ಮೆವಂತ** (ನಾ). ತಾಳ್ಮೆಯುಳ್ಳವನು; ಸಹನೆ ಇರುವವನು: "ಕ್ಷಂಪನ್, ಕ್ಷಂಪಃ, ಕ್ಷಂಪಕಃ, ಈ ೩ ತಾಳ್ಮೆವಂತು" (ಕಾಶಕ್ಯ. ೨೫೮).

[ತಾಳ್ಮೆ + – ವಂತ]

**ತಾಳ್ವ** 'ತಾಳ್$_{1}$' ಪರಾ.

**ತಾಳ್ವಾರ**, ತಾವಾರ, ತಾಳವಾರ$_{1}$, ತಾಳುವಾರ (ನಾ). ೧. ಮನೆಯ ಮುಂದಿನ ತಗ್ಗಾದ ಅಂಗಳ; ಇಳುಕಲಾದ ಅಂಗಳ: (೩). ತಾವಾರ: ೨. ಒಪ್ಪಾರು ಮನೆ ; ಒಪ್ಪಾರು ಗುಡಿಸಲು : ಕ್ರೈಸ್ತ ಪೂಜಾಗೃಹದ ಪಶ್ಚಿಮ ಪಾರ್ಶ್ವದಲ್ಲಿಯ ಪೊರಕೋಣೆ, ತಾವಾರ (Ante-chapel. ಇಂಕನಿ): (ದನಕರುಗಳನ್ನು ಕಟ್ಟುವುದು, ಮೊ. ಕ್ಕೆ ಉಪಯೋಗಿಸುವ) ಗುಡಿಸಿಲು ; ಜೋಪಡಿ ; ಕೊಟ್ಟಿಗೆ ; ಗಾಡಿಖಾನೆ ; ಸಾಮಾನನ್ನು ಶೇಖರಿಸಿಡುವ ಕರ್ಮಶಾಲೆಯಾಗಿ ಉಪಯೋಗಿಸುವ ಮನೆ; ಪಟ್ಟಡಿ; ತಾವಾರ" (Shed. ಇಂಕನಿ.). ತಾಳವಾರ$_{1}$ : ೧. "ರಥ್ಯಾ, ಪ್ರತೋಳೀ, ವಿಶಿಖಾ ೩ ಊರೊಳಗಿರುವ ಮುಖ್ಯವಾದ ಚಾವಡಿ ಜಗಲಿ, ಬೀದಿಜಗಲಿ, ತಾಳವಾರ, ಕೈಸಾಲೆ, ಜಗಲಿ" (ಸಿದ್ಧಾಂತಿ. ೮೮). ತಾಳುವಾರ : ೨. ತಗಡು ಬಡಿದ ತಾಳುವಾರಂಗಳಂ (ಸೌಗಂಧಿ. ೧೫೧-೮).

[ದೇ.॥ ತಮಿ. ಮಲ. ತಾಟ್ವಾರ ; ತೆಲು. ತಾಳ್ವಾರ, ತಾಳುವಾರ]

**ತಾಳ್ವೆ** (ನಾ). = ತಾಳ್ಮೆ ೧: "ಕ್ಷಾಮಯಿಕ, ಕ್ಷಾಮಂ, ಕ್ಷಾಮಣೀಯಂ–ಈ ೩ ತಾಳ್ವೆ" (ಕಾಶಕ್ಯ. ೦೦೮). [ತಾಳ್$_{1}$ + – ವೆ]

**ತಾಜಿ್**$_{1}$ 'ತಾಜು$_{1}$' ನೋ.

**ತಾಜಿ್**$_{2}$, ತಾರ್, ತಾಜು$_{4}$ (ನಾ). ಒಳಿತು ಕೆಡಕುಗಳ ಸೂಚನೆ; ಶಕುನ: "ಶಕುನ ಶೋಷಣಗಳೊಳ್ ತಾಜಿಸಿಕ್ಕುಂ" (ಕಬ್ಬಮಂ. ೧೧೬): ಸೇರ್ಗಳ್ ಸೀರ್ಗಳ್ ತಾರ್ಗಳ್ (ಶಮದ. ೪೧). ತಾರ್ : ತುರುವಿಂದು ಬಲವಂದು ತಾರ್ಗಳಂ ಬರೆಯುತಿರೆ (ಕಾಲೂರ. ೫೯-೯೮). ತಾಜು$_{4}$ : "ತಾಜು – ಶೋಷಣೇ, ಶಕುನೇ ಚ" (ಶಮದ) ; ಸರಾಗದಿನೊಲಿದು ದಂಪತಿ ತಾಜಿ [ಪಾಠಾಂ. ತಾವ]ನಿತ್ತವು ಕರಿಯ ಹಕ್ಕಿಗಳು ಸುಳಿದಪೆಡನಲಿ ಹಂಗ ಬಲದಲಿ (ತೊರಠಾ. ೧-೬-೬).

**ತಾಜಿನಾಡು** (ನಾ). ಒಂದು ಸ್ಥಳದ ಹೆಸರಂ: ದಂಡಾಯಕರು ತಾಜಿನಾಡು ಹದಿನಾಡು ಕುನಾಡನು . . . ರಾಜ್ಯಂಗೆಯುತ್ತಮಿರಲು (ಎಕ. III, ತಿರುಮ. ೩೧-೩೦ ; 1196). [ತಾಜಿ ? + ನಾಡು]

**ತಾಜಿಲ್** (ನಾ). ೧. ಒಣಗಿರುವುದು : ಶುಷ್ಕವಾದುದು : ಸೊರಗಿ ಹೋಗಿರುವುದು:ತಾಜಿಲಾದುವು ತನು ಕೂಟ ನೀರ ದೆಸೆಯಿಲ್ಲದೊಡಲ್ಗಳ ನೊಂತು ತಾಳ್ದುವಂ (ಆದಿಪು. ೯-೮೯). ೨. ಕುರುಚಲು ಗಿಡಗಳ ಗುಂಪು ; ಪೊದರಂ : ಪೊಸಗಾರೊಳ್ಪಾಜಿಲೊಳ್ ಕಣ್ಣರೆಮುಗುಟ್ಟಿರೆ . . .

ನಿಂದುದು ವನಮಹಿಷೀವೃಂದಂ (ಮಲ್ಲಿಪು.೮-೯೯): ನಿಂದಿರ್ದುದೋರೊಂದೆಡೆಯೊಳ್ ತಾಱಲ್ಗಳೊತ್ತಂಬಿಡಿದು ಮೃಗವ್ಯಗೀವೃಂದವೋರಂದದಿಂದಂ (ಚಂದ್ರಪ್ರ. ೪-೪೬): ಸಿಂಹಿ ಕಿರೋರಂ ನಡುಸೂಲೊಳ್ಸರ್ಕಿ ಕಣ್ಣಂ ತಱಿದಿಭಪತಿಯಂ ತಾಱಲೊಳ್ಕೊಂಡು ಕಾಯ್ಬಂ ನಡು ಪಾಯ್ದು (ಅನಂಪು. ೧೨-೬೨): ತಾಱಲೊಸರ್ದಾಗಣ ಮಹಾಗ್ರಹಂ ತೊಱೆ ಕೊಳಂ ಪುಲ್ವಟ್ಟೆಗಳ್ ಕಾರ್ಮುಗಿಲ್ (ಸೂಕ್ತಿಸು. ೩-೨). ೩. (ಕುರುಂಚಲುಗಿಡಗಳಿಂದ ಕೂಡಿದ) ಪ್ರದೇಶ; ತಪ್ಪಲು; ಕಿಬ್ಬಿ: ಕರುಣಾಧ್ವನಿ ಪೊಂಪುಱಿಯಾದುದು ಗಿರಿಯ ಪಿರಿಯ ತಾಱಲೊಳಗಳ್ (ಶಾಂತಿಪು. ೯-೮೨): ಪೆಸರ್ವಡೆದುವು ಸೌಗಂಧಿಕಮುಂದದಱ ತಾಱಲೊಳ್ ಕಿಸುಗಲ್ಗಳ್ (ಚಂದ್ರಪ್ರ. ೧೨-೯೯): ಆ ವರಾಹಸಂದೋಹವಿರ್ದ ಶಾಲ[ಲಿ]ಯ ತಾಱಲೊಳ್ (ಶಾಂತೀಶ್ವ. ೩-೮೭ ವ). [ತಾಱು₁ + -ಅಲ್₂]

**ತಾಱಲ್ವಿಡಿ** (ಕ್ರಿ). ಪೊದೆಯನ್ನು ಹಿಡಿ; ಹೊದರನ್ನು ಸೇರು: ತಾಱಲ್ವಿಡಿದು ಗೋರಿವರಿದುಮನೆ ಕುನುಂಗಿ ಕೆಲ್ಲಯಿಸಿ ಸೋಟ್ಟ ತರಳಲೋಚನದ ಸರಳಾಪಾಂಗಂ ಹರಿಣೀಭಾವಮಂ ಮನಂಗೊಳಿಸಿ (ಅನಂಪು. ೬-೧೬ ವ). [ತಾಱಲ್ + ಪಿಡಿ₁]

**ತಾಱವಱು** 'ತಾಱುಮಾಱು' ನೋ.

**ತಾಱಿ, ತಾರಿ₁, ತಾರೆ₁, ತಾಱೆ₁** (ನಾ). ೧. ಒಂದು ಬಗೆಯ ಮರ; ವೈದ್ಯಶಾಸ್ತ್ರದಲ್ಲಿ ಪ್ರಸಿದ್ಧವಾದ ತಾರೆ, ಅಳಲೆ, ನೆಲ್ಲಿ ಎಂಬ ತ್ರಿಫಲಗಳಲ್ಲಿ ಒಂದು; ಕಲಿದ್ರುಮ; P ತಾರೆಮರದಲ್ಲಿ ಕಲಿಪುರುಷನು ವಾಸಿಸುತ್ತಿರುವನೆಂಬ ನಂಬುಗೆಯಿದೆ: "ತಾಱಿಯಲಿ ಭಂಡಿಯಲಿ . . . ಅಕ್ಷಮನಿಸಿಕ್ಕು" (ಮಂಗರಾ. ೧೪೫-೩೦); ತಾಱಿ ಹೊನ್ನೆ ಕುಟಜಂ . . . ವನಸು ನಿಂಬಂ (ಕಾವ್ಯಸಾ. ೧೧೪೦ ಶೂದ್ರಕ): ತಾಱಿಯ ಕಳವಿನ ಮರಂಗಳು ಮೇರೆ (ಸೌಇಇ. IX-1, ೧೧೯-೪೩; 1057); ಪಾದರಿ ತಾಱಿ ತಂಡಸು . . . ಕವುಂಗಿವ್ಮಾವು (ಪಾರ್ಶ್ವಪು. ೦೨-೫೮); ತಾಱಿ ತೇಗು ತಱಿ ತಂಡಸಿ ಬೊಬ್ಬುಲಿ (ಪುಣ್ಯಾಸ್ರ. ೩-೬೪); ಕಡಪೊಡವಕ್ಕೆ ಕಕ್ಕೆ ತಱಿ ತಾಱಿ . . . ತಡಸೀಳೆ ಬಾಱಿ (ಧರ್ಮಪ. ೩-೪೬); ನೆಲ್ಲಿ ನೇಱಿಲು ತಱಿ ತಾಱಿ ಕಡವ ಕನ್ನೆಲ್ಲಿ ಹಲಸು (ಕುರಾಸಾಂ. ೨೭-೫೫). ೨. (?): ಮೂಡಣ ಪಳ್ಳ ಅದಱ ತೆಪ್ಕಣ ದೆಸೆ [ಮಣ್ಣಗೆಱೆ]ಗೊಟ್ಟಂ ತಾಱಿಯುಂ ಕೊ[ತ್ತ್ಯ್ಯೊ]ಗು xxx ವಿಯ ಕೆಱೆಗೊಟ್ಟಂ (ಸೌಇಇ. XI-1, ೯-೨೯; 862); ಬ್ರಹ್ಮದೇವಂಗೆ ಗದ್ದೆ ತಾಱಿಯಿಂದಿಬ್ಬಡಗಲು ನಟ್ಟ ಕಲ್ಲಿಂದ ಮೂಡಣ ನಿವೇಸನ (ಎಕ. XII, ತಿಪಟೂ. ೪೨-೪೦; 1229). **ತಾರಿ₁**: ೧. ತಾರಿ . . . ದೊಡ್ಡ ಮರ (ಕಭಾಗ. ೪೦). **ತಾರೆ₁**: ೧. "ವಿಭೀತಕಃ . . . ಭೂತಾವಾಸಃ, ಕಲಿದ್ರುಮಃ ೬ ತಾರೆಯ ಮರ" (ಸಿದ್ಧಾಂತಿ. ೧೧೧): ತಾರೆಯು ಸೀಗೆ ಬೇಲ ಬಗುನಿಯು (ನವಮೋ. ೮-೯); ಮುತ್ತುಗ ತಾರೆ ಮುಂತಾದ ಹೆಮ್ಮರಗಳು ವತ್ತಾಗಿ ತೋರ್ದವಾ ವನದಿ (ಸೌಗಂಧಿ. ೨-೩೪); ಸ್ವಲ್ಪ ಮುಂದೆ ಹೋಗಲು ಹಣ್ಣುಬಿಟ್ಟಿದ್ದ ಒಂದು ತಾರೆಯ ಮರ ಕಾಣಿಸಿತು (ನವಭಾ. ೧೪೧). **ತಾಱೆ₁**: ೧. "ಕಲಿಃ, ಅಕ್ಷಃ, ವಿಭೀತಃ–ಈ ೩ ತಾಱೆ" (ಹಲಾಯು. ೧೧೦-೪೬೪); ಎರಟ್ಟಿ ಪುಣುಸೆವ ಮೂಡಾಯೋಡಿ ನೀರಿಱಿವ ತಾಱೆವ (ಎಕ. XVI, ಗುಬ್ಬಿ. ೭೫-೫೨; 733); ತಾಱೆಯ ಮಾವಿನ ಮುಳ್ಳರನ ಪಾಲ್ಮರಂಗಳ ಸುರಗೇಹಾವಳಿಯ ಮರಂ ಕರಮಶುಭಾವಹಮಕ್ಕುಂ ಗೃಹಕ್ಕೆ ಗೃಹಶಲ್ಯಂಗಳ್ (ಲೋಕೋಪ. ೩-೯); ಉಜ್ವಲವಾಗಿ ತಾನುರಿವ ತಾಱೆಯ ತೆಂಗಿನೆಕ್ಕೆಯ ಮಾವಿನಿಂಧನಮಂ . . . ತರಿಸಿ (ಧರ್ಮಾಮೃ. ೯-೧೭೧); ಅರನೇಱಿಲ್ವಾಱಿ ತುಂಬುರ್ತದುಕಳಿಲೆಲಮ ನೆಲ್ಲಿ (ಗಿರಿಕ. ೧-೬೨): ತರತರದಿಂ ಶೋಭಿಸುವ ತಾಱೆಯಿಂದ . . . ಕಾನನಂ ಕಣ್ಗೆಸೆದುದು (ರಾಶಿಚ.೦೭-೫೪); ಗಂಧಕದ ತೈಲವನು ಕುಂದದಲೆ ರಸಕಿತ್ತು ಕಿಡಿದ ತಾಱೆಯೊಡಗೂಡೆ ಹೇಮ ತಾ ಮುಂದೆ ಬಂದಕ್ಕು (ಸರ್ವಜ್ಞ.೧೯೬೭).

**ತಾಱೆಯಕಾಯಿ, ತಾರೆಯಕಾಯಿ** = ತಾಱೆಗಾಯ್: ದಿನವೆರಡಕ್ಕೆ ತಾಱೆಯ ಕಾಯ ಪ್ರಮಾಣಾಹಾರವಾಗಿ (ಪುಣ್ಯಾಸ್ರ. ೧೦-೬ ವ): "ಅಕ್ಷಫಲಃ – ತಾರೆಯಕಾಯಿ" (ಬಿಕರಿ. ೩).
[ದೇ.೩ ತಮಿ. ತಾನ್ರಿ, ತಾನಿ; ಮಲ. ತಾನ್ನಿ; ತುಳು. ದಾಂಡಿ; ತೆಲು. ತಾಡಿ, ತಾಂಡ್ರ]

**ತಾಱೆಗಬೀಱೆಗ, ತರಗಬರಗ, ತಱಬಱೆಕ, ತಾರಗಬೀರಗ** (ನಾ). ಅಸ್ತವ್ಯಸ್ತವಾದುದು; ತಾರುಮಾರು: ಎಲ್ಲಂ ಬಱೆ ತಾಱೆಗಬೀಱೆಗ [ಪಾಠಾಂ. ತಾಱೆಗೆಬೀಱೆಗ]ವೆಸ್ತ್ರತತ್ತ್ರಜವೆಕ್ಕಸಕ್ಕಮುಸ್ಸಂಬ್ಯಸ್ತಂ (ಗಿರಿಕ. ೦-೨೩). **ತರಗಬರಗ**: ತರಗುಬರಗ ಎಕ್ಕಸಕ್ಕ ಅಸ್ತವ್ಯಸ್ತವಾಗುವುದು (ಸಾಹಿವಿ. ೮೦). **ತಱಬಱೆಕ**: ಅಱಿಯುದ ಬಾಲಂ ಬೀದಿಯ ಪಱೆಮಣ್ಣಿಂ ಮಾಡಿದೊಂದು ಹಾಪೆಯ ತೆಱದಿಂ ತಱಬಱೆಕಂ ವಿಕಟಾಕೃತಿ ನೆಱೆ ನಿಮ್ನರನಿವೃತಹುಂಡಸಂಸ್ಥಾನಂಗಳ್ (ಶಾಂತೀಶ್ವ. ೯-೧೦೭). **ತಾರಗಬೀರಗ**: ತಮಿಳಿನಲ್ಲಿಯುಂತೂ . . . ತುಂಬಾ ಅಸ್ತವ್ಯಸ್ತ 'ತಾರಗಬೀರಗ'ವಾದದ್ದು ಎಂದು ಅರ್ಥವಂತೆ (ಭಾಪಾಠ. ೮೬). [?]

**ತಾಱೆಗಾಯ್, ತಾರಿಕಾಯಿ, ತಾರೆಕಾಯಿ, ತಾಱೆಕಾಯಿ** (ನಾ). ತಾರೆಯ ಮರದ ಕಾಯಿ: ರುದ್ರಾಕ್ಷಿಯಂ ತಾಱೆಗಾಯಿಂದು ಶುನಕನ ಕೊರಲೊಳು ಧೀರನಿವ ಕಟ್ಟಿದನು (ಪ್ರಭುಪು. ೩-೧೨೦). **ತಾರಿಕಾಯಿ**: ಅಳಲೆಕಾಯಿ, ತಾರಿಕಾಯಿ ಪಾಂಗು ಹತ್ತಿಯ ಕಾಳು, ಇವುಗಳ ಮಜೂರಿ (ಮುಂಬವ್ಯಾ. ೧೬ ಪ್ರಸ್ತಾವನ). **ತಾರೆಕಾಯಿ**: ಕೊತ್ತುಂಬರಿ, ಕೊಡಸಿಗೆಬೇರು . . . ತಾರೆಕಾಯಿ, ನೆಲ್ಲಿಚಟ್ಟು . . . ಸಮದಿಂ ಕಷಾಯ ಕಾಯಿಸಿ ಕೊಡಲು ವಾತಜ್ವರಂ ಮಾಣ್ಗುಂ (ಸಕವೈ. ೬೫); ತಿಗುಡೆ ನೀರಿಬೇರು ಅಳಲೆಕಾಯಿ ತಾರೆಕಾಯಿ ನೆಲ್ಲಿಕಾಯಿ ಯಿಷ್ಟು ಸಮಾಂಶವಾಗಿ ಕೂಡಿ (ವಿಹಚ. ೨೦-೫). **ತಾಱೆಕಾಯಿ**: ಕಲ್ಕದ್ರವ್ಯ . . . ತಾಱೆಕಾಯಿ–ಇವಿಷ್ಟನ್ನೂ ಪ್ರತ್ಯೇಕ ಒಂದು ವರಹ ತೂಕವ ಸಣ್ಣನಾಗಿ ಕತ್ತರಿಸಿ ಚೂರ್ಣಿಸಿ (ವೈದ್ಯಸಾ. II, ೫೫).
[ತಾಱೆ + ಕಾಯ್₄]

**ತಾಱಿಗೆ** (ನಾ). ಒಣಗುವಿಕೆ; ಬಾಡುವಿಕೆ: ಬೇಡಿಗೆ, ಮೂಡಿಗೆ, ತಾಱಿಗೆ, ಮಾಱಿಗೆ, ಪೊಲಿಗೆ (ಶಬ್ದಾನು. ೫೬೫ ಪ್ರಯೋ). [<ತಾಱು₁ + -ಗೆ]

**ತಾಱಿಸು, ತಾರಿಸು₁** (ಕ್ರಿ). ೧. ಒಣಗಿಸು; ಬಾಡಿಸು: ಎಳೆಯ ಬಾಳೆಯ ಸುಳಿಯನನಲಜ್ವಲನದುಬ್ಬಟೆ ತಾಱಿಸಿ[ಪಾಠಾಂ. ಕಾರಿಸಿ]ದವೊಲು ಬಳಲಿದ ಬಲೆಯ ಕಂಡು (ನಳಚ. ೫-೨). **ತಾರಿಸು₁**: ೨. ಶಕ್ತಿಗುಂದುವಂತೆ ಮಾಡು; ಸಾರವಿಲ್ಲದಂತೆ ಮಾಡು: ಶೂರನಹ ವೈರಿಯನು ದೂರದಲೆ ತಾರಿಸುವ ಸಾರವಹ ನಿಮ್ಮ ಮಂತ್ರಗಳ ಕಂಡು (ವಿಲಿಂಚ. ೧-೫೦).
[ತಾಱು₁ + -ಇಸು₃]

**ತಾಱು₁, ತಾರು₁, ತಾಱ್₁** (ಕ್ರಿ). ೧. ಸೊರಗು; ಬಡಕಲಾಗು: ಭೀಮನಾದರ್ಪದೆ ದಿಡಾಡಿ ದೊಡ . . . ತಾಱಿ ತಾಱಿದ ಪೇರಾನೆಯೊಡಲ್ಗಳಭ್ರತಳದೊಳ್ ಸಿಲ್ಕಿರ್ದುವು (ಪಂಪಭಾ. ೦-೬೬); ವ್ರತಮಂ ಪೇಱೆಲ್ಪೊಡೆ ನೋಂತು ತಾಱಿದೊಡಲುಂ ಚಕ್ರೇಶನಾಜ್ಞಾಧಿಪಃ ಸುತನಂ ಪೇಱೆಲ್ಪೊಡೆ ಚಕ್ರವರ್ತಿ ಕಟಕಕ್ಕಾರಾಧ್ಯೆಯಾಗಿರ್ದ (ಆಪು. ೦೨-೮); ಬ್ರಹ್ಮಚಾರಿಯ ತಾಱಿದೊಡಲುಮಂ ಒಳಗದುಂಗಿದ ಕಣ್ಣುಮಂ ವಾಯಾಸಂ . . . ಮನದೊಳ್ ಮೆಚ್ಚಿ (ಧರ್ಮಾಮೃ. ೬-೪೫): ಎನಿತಾನುಂ ಮಱಿಸಿ ಕಾಣದ ತನು ತಾಱಿ (ಅನಂಪು. ೦೦-೬೦): ಕಾಳಿಕೆಯ ಪೋಱಿಯ ತಾಱಿದೊಡಲುಗಳ . . . ದೇವರಿಂದ್ರನಸಱಿಸಿ ಕಂಡರು (ಕುವ್ಯಾಕ. ೬-೦೨). ೨. ಬತ್ತು; ಒಣಗು; ಬಾಡು: "ತಾಱು – ಶೋಷಣೇ, ಶಕ್ತೋ ಚ" (ಶಮದ): ಪಾಸಿ ತಾಱಿದ ಕುರುಳ್ಗಳುಂ (ಗದಾಯು. ೯-೩): ತಾಱುವ ತಾಳ್ಗಳುಮಗುರ್ವಿಸಲ್ ಕಾಡಕೋಣನೆಯ್ದುದುದಱಿಲಂ (ಆಗವಿ. ೦೭-೬೮) ತಾಱಿತಂತಃಕರಣ . . . ಕುರುಗಣೆ ಕಾಲಿಕ್ಕಿದವ್ (ಕುವ್ಯಾವಿ. ೨ ೧೯)

೩. ಕುಗ್ಗು ; ಕುಂದು ; ಮ್ಲಾನವಾಗು: ತಾಱ್ ತಲ್ಲಣಿಸಿ ಬೀಳುತ ಕ್ಷುಧೆ ಬಡತಿ ಬಾಯಾಱ್ (ಅಂಜನ. ೯-೦೬೬) ; ತಾಱಿದಾನನದಿಳಿದ ತುಬ್ಬಿನ . . . ವೃದ್ಧರನು ತೋಱಿದನು (ಕುವ್ಯಾ.ಆ. ೧೩-೧೦) ; ಭೋಗಿಗಳು ಬೀಗಿದರು ತಾಱಿದುದು ವಿಯೋಗಿವ್ರಾತವತಿಭಯದಲಿ (ಸೌಂದ ಪು. ೦೦-೭). ೪. ಕಡಮೆಯಾಗು ; ಕ್ಷೀಣಿಸು: ನೋಱು ಗಾವುದ ಮತ್ತೆ ಕ್ರಮದಿ ತಾಱಿ ತಗ್ಗಿತು ನೋಡೆ ಪಗಡೆಯ ಕಾಯಂತೆ ತೋಱುತಿದ್ದುದು ವೃಷಭಾದ್ರಿ (ಧರಣ. ೩೬-೮೦) ; ಬರ್ದು ಕೆಲಸಾರ್ದುದು ಕೃಮೆ ಕಟಲ್ಗುದುಬ್ಬರಂ ತಾಱಿತು (ಚಕವಿ. ೩-೨೦೯). ೫. ಬೇಯು ; ಬೆಂದುಹೋಗು (?) : ಸರಸ್ಸ್ತಟಾಕದ ಶಫರಾಳಿ ಕುತ್ಸಿತ ವಿಮಾನಪೊಲಿರ್ದುದು ಕಾಱಿ ತಳ್ತು ಪವಿಗದ ಪಟುವಗ್ನಿಯುಂಡುಱ್ದ ಕಾಂಡವದಂತೆಪೊಲಿರ್ದುದಾವಗಂ (ಚಂದ್ರಪು. ೯-೭೯). ೬. (?) : ಸರ್ವ ಸುರರಂದು ನಗಜಾಧಿಪಂಗಗಿದು ಸುಗಿದು ತಾಱುವರುಯೆಂದಱಿಯ ಮೋಕ್ಷಂ(ಸಾನಂಚ.೨-೪೯). ತಾರು₁: ೧. ಪರರ ಕಣ್ಣಂಜಲಿರದಿನಿತು ಮಿಗೆ ತಾಗೆ ತನು ತಾರುಗುಮೆನುತ್ತ (ಕುಮಾಪು. ೪-೧೦೯): ಅವಳು ತುಂಬ ತಾರಿಹೋಗಿದ್ದಾಳೆ (ಪುನರು. ೪೦೦). ೨. ಕೆರೆಯ ಅಂಗಳದಂತೆ ತಾರಿವೆ ಹಸುಳೆಯಂಗಳು (ದ್ರಾಕ್ಷಾ. ೫೮-೩). ೩. ಮಾರಿ ದಳಲಿನೆದೆಯಾರಿದೆ ಸೈಸದೆ ತಾರಿದೆ (ಇಂದ್ರಕೀ. ೯) : ಶೋಕದಿಂದ ಮನಸ್ಸು ತಾರಿದರೂ ಅವನು ಕರ್ತವ್ಯವನ್ನು ಬಿಟ್ಟು ಕದಲಲಿಲ್ಲ (ಛಿಪ್ಪಚ. ೨೪). ೬. ಮೂಡಿದರುಣಾಭ್ರದೋಲ್ ತೋರುತಿಪ ತಾರುತಿಪ ಭೀಕರದೊಳ್ಪೆದೆದಳವು (ಜನಮು. ೨೫-೪). ತಾಱ್₁ : (೬).

ತಾರಪೊಯ್, ತಾರಪೊಯ್=ಸದೆಬಡಿ : ಸಾರಥಿಯ ತಾರಪೊಯ್ದನು (ತುರಂಗ. ೫೭-೬೦) : ತಾರಪೊಯ್ದನು ಕೆಡೆದವಾನೆಗಳು (ತುರಂಗ. ೫೦-೪).

ತಾರಮುರಿ = ಭಂಗಿಸು ; ಭಗ್ನಗೊಳಿಸು : ಜೋನಗ ಬೇನಬೊಂಟರಂ ತಾರಮುರಿದವರನಪ್ಪಳಿಸಿ (ತುರಂಗ. ೧೯-೫೦).

[ ದೇ.ಶ ಮಲ. ತಾಱು; ತೆಲು. ತಾಱು, ತಾರು ]

ತಾಱು₂, ತಾರ್₂ (ನಾ). ಒಣಗಿದಂದು ; ಶುಷ್ಕವಾದಂದು: 'ತಾಱುಗುಂಡೆ' ಪರಾ. ತಾರ್₂: ಒಣಗಿ ತಾರವಾದ ಸಿಬಿರಿನ ಮಂಡಿಯನ್ನು ತೆಗೆದು (ದೀಪಕ. II, ೩).

ತಾರ ಗೋಟಡಿಕೆ = ಒಣಗಿ ಗಟ್ಟಿಯಾದ ಗೋಟಡಕೆ : (೬).

[ <ತಾಱು₁ ]

ತಾಱು₃(ನಾ).೧. ತೆಂಗು, ಅಡಕೆ, ಉತ್ತುತ್ತೆ, ಬಾಳೆ ಮೊದಲಾದುವುಗಳ ಗೊಂಚಲು,-ಗೊನೆ. ೨. ಗುಂಪು ; ಸಮೂಹ : ಚಂಪಕದ ಮಾಲೆಯನು ಮಾಱುವ ನೆವದಿ ಬಿಡಿಯಲರ್ಗಳು ಕಂಡು ತಾಱುಬೀಱಾಗ ಲೋಡಿದವು (ಅನಂತ. ೦-೦೬೩) : ಜಾಱದಂದದಿ ಸೂತ್ರಿಸಿದಂತೆ ನಡಸಿದರ್ತಾಱುಬೀಱಾಗದಂದದಲಿ (ಅನಂತ. ೬-೭೬). 'ತಾರ್ಗೂಡಂ', 'ತಾರ್ಗೊಳ್' ಪರಾ. [ ದೇ.ಶ ತಮಿ. ತಾಱು ]

ತಾಱು₄ 'ತಾಱ್₂' ನೋ.

ತಾಱು₅ (ನಾ). ಅಸ್ತವ್ಯಸ್ತತೆ; ಗೊಂದಲ : 'ತಾಱುಂತಟ್ಟುಂ' ಪರಾ.

[ ? ]

ತಾಱು₆ (ನಾ). ಒಂದು ಬಗೆಯ ಭೂಮಿ : ಮೂಗಣ್ಣುಗ ಭತ್ತಂ ಪೊಕ್ಕುಂ ಮುಕ್ಕೊಡು ಪಲಸಿನ ತಾಱುವಿತ್ತರೆ (ಎಕ. VI, ಚಿಕ್ಕ. ೭೫-೯: 1080 ?): ಕೋಟಿಗರಿತ್ರ್ವರ್ಷಂಪ್ರತಿ ಕಂಡಗೆಯುಂ ಸ್ಥಿರತರ ತಾಱಿಂಗೆ ರಂಗಭೋಗಕ್ಕೆಂದುಂ (ಕಇ. I, ೩೦-೩೬ : 1222) ; ಮೂಡಲರಿಯ ತಾಱುಕಟ್ಟಿರಿ- (ಕಇ. III, ೬-೨೯ : 1848); ತೆಂಗಿನ ತಾಱಿಂದ ಪಡುವ ಬಡಗ (ಸೌಇಎ. ೧೯೩೦, ಕುಂದಾಪುರ. ೫೩೬-೪೪ : 1871) ; ಮೂಲದ ಜವಳಿಯ ತಾಱಗಿನಿಯಿಂದ ಬಡಗಲು (ಸೌಇ. IX ii, ೪೨೪-೪೫ : 1486). 'ತಾಱುವಾರಿ' ಪರಾ. [ ? ]

ತಾಱುಂಗಾಮಲೆ (ನಾ). ಸೊರಗಿಸುವ ಕಾಮಾಲೆ ರೋಗ : ಸಂತಾಪವನಿಸುವುದುಗ್ರತಾಪವೆನಿಸುವುದು ತಾಱುಂಗಾಮಲೆ (ಸಾನಂದ. ೫-೦೩).

[ ತಾಱು₁ + ಕಾಮಲೆ (<ಕಾಮಾಲೆ) ]

ತಾಱುಂಗೊಡು (ಕ್ರಿ). (?) : ಅಳ್ಳೆಗೊಂಬಿನೊಳ್ ತೆಱಂದಿಱಿದು ತಾಱುಂಗೊಟ್ಟು ನಿಡುಸರಮಸಿಟ್ಟು . . . ತುಂಬಿ ಕಿಳಿದು ಬಳೆದ ಬಂಡು ಗುಂಡುದುಂಬಿಯುಂ ತಾನುಮುಂಡು (ಲೀಲಾವ. ೦೦-೫೪ ವ).

[ ತಾಱು? + ಕೊಡು₁ ]

ತಾಱುಂತಟ್ಟು, ತಾರುತಟ್ಟು, ತಾಱುತಟ್ಟು, ತಾಱುಥಟ್ಟು, ಥಾಱುಥಟ್ಟು (ನಾ). ಗುಂಪು ; ಸಮೂಹ : ದಟ್ಟಣೆ : ಸೇನಾಭಟರ್ಭೋಂಕೆನೆ ತಾಱುಂತಟ್ಟುವಿಟರ್ (ಶಾಂತೀಶ್ವ. ೩-೦೩) : ಕೊಂಚವೆಟ್ಟುಂ ತಟ್ಟುರ್ಚಿದುಂತೆ ತಾಱುಂತಟ್ಟಾಗಿ ಕೆಡಪಿ ಮುಟ್ಟಿದುವುದುಂ (ಚಕವಂ. ೪೭-೭). ತಾರುತಟ್ಟು: ಆರಿಗಂ ಗೆಲಲಾರದಮರರ ತಾರುತಟ್ಟನೆ ಬಡಿದು (ರಾಮಾಸಂ. ೬-೯-೪೩) ; ಪಾಳೆಯ ಕಂಡ ಕಂಡ ಕಡೆಗೆ ತಾರುತಟ್ಟಾಗಿ ಚೆದುರಿ ಹೋಗುತ್ತದೆ (ನಂಜುಂಡ. ೯೭) ; ತಲೆಕೆದರಿಕೊಂಡು ತಾರುತಟ್ಟಾಗಿ ಓಡಿಹೋದರಂ (ಕರ್ನಾಟ. ೦೫೦). ತಾಱುತಟ್ಟು : ಪನವ್ಯಗರಾಜಿಗಳ್ . . . ಮರೀಚಿಕಾಜಲಕ್ಕನುನಯದಿಂ ಕರಂ ಪರಿದು ಲಂಘಿಸಿ ತಮ್ಮರ್ದೆಯಾಱಿ ತಾಱುತಟ್ಟಿನಲಸುವಿಂದಗಲ್ದುವು (ಚಕಸು. ೪-೨೩) ; ತಾಱುತ[ಪಾಠಾಂ. ಥ]ಟ್ಟನ ಹೆಣದ ಮೆದೆ ಹೇರಾಳ ರಂಜಿಸಿತು (ಕುವ್ಯಾದ್ರೋ. ೦೦-೬) : ನಳನೃಪಾಲನ ಶರಹತಿಗೆ ನೆಱಿಮುಗ್ಗಿ ಕೆಡೆದುದು ತಾಱುತ[ಪಾಠಾಂ. ಥ]ಟ್ಟನಲಿ (ನಳಚ. ೯-೩೫) ; ಆ ಸೇನೆಯುಂ ತಾಱುತಟ್ಟಾಗಿ ಕೆಡಹಿದರೊಂದು ನಿಮಿಷದೊಳ್ (ಕೃಮಿಥಾ. ೨೦-೪೪) ; ವೈರಣಗಳ ಸೀಳಿ ತಲೆಯ ಕೆದಱಿಕೊಂಡು ತಾಱುತಟ್ಟಾಗಿಯೋಡಿದರು (ಕಂನವಿ. ೦೫-೯೬). ತಾಱುಥಟ್ಟು : ತೋಱಿ ಕಳೆವುದು ತಾವು ಹೇಳದ ತಾಱುಥಟ್ಟನ ಮಾತದೆಲ್ಲವನೆನಲಿಕಿಂತೆಂದ ತಾಱುಥಟ್ಟನು ಹೇಳ್ದ ನೀಜರು ತೋಱಿ ನುಡಿಯುರು (ಸಂಥಪ. ೩-೮); ತಾಱುಥಟ್ಟಗೆ ಕೆಡೆದವಾನೆಗಳು (ಕುವ್ಯಾಭೀ. ೮-೪೮) : ತನಿಜೂಣೆ ಮಸಗಿತು ತಾಱುಥಟ್ಟನಲಿ (ಕುವ್ಯಾಕ. ೨-೦೬) : ವಿಷಾಱಿದನು ಸುರರಾಜ ಜಿತುವಿನ ತಾಱುಥ[ಪಾಠಾಂ. ತ]ಟ್ಟನ ಕದನವನು (ತೊರರಾ. ೬-೪೬-೪೭) : ಕಂಡರು ದೂರದಲಿ . . . ಖಗಕುಲವೇಱಿದೆಳೆಗೊಂಬುಗಳ ತಳಿರ್ಗಳ ತಾಱುಥಟ್ಟನ ಹಸುರೆಲೆಯ ತಂಪಿನ ಮಹಾವಟವ (ನಿಭಾಗ. ೪-೩-೨೫) ; ತುಱುಗಿದ ಹಯುಂ ತಾಱುಥಟ್ಟಾಯ್ತು (ಚಬಪು. ೪೩-೨೭). ಥಾಱುಥಟ್ಟು : ಅಲರ್ಗಣ್ ಚಂಡೇಟಿ ರೋಮಾಂಚನದೊದವಿನಿತುಂ ಥಾಱುಥಟ್ಟಾಗೆ (ರಸರ. ೦-೦೭).

[ ತಾಱು₃ + ತಟ್ಟು₂ ]

ತಾಱುಂತಟ್ಟುಂ, ತಾಱುತಟ್ಟುಂ (ಅ). ಅವ್ಯವಸ್ಥೆಯಾಗಿ ; ಚೆಲ್ಲಾಪಿಲ್ಲಿಯಾಗಿ : ತಾಱುಂತಟ್ಟುಂ ಬರ್ದ ಕಾಮುಕಜನಕ್ಕೆ (ಲೀಲಾವ. ೩-೨೦) ; ಹುಲ್ಲೆಡೆ ಹೆಲ್ಲವಾಗಿ ತಾಱುಂತಟ್ಟುಂ ಬೀಟುತ್ತಿರೆ (ಕುಸುಮಾ. ೦೪-೨೯ ವ). ತಾಱುತಟ್ಟುಂ : ಬಗೆಗೆಟ್ಟು ತಾಱುತಟ್ಟುಂ ಪರಿದು (ಕುರಾಸಾಂ. ೩೮-೦೦೯). 'ತಟ್ಟುಂತಾಱುಂ' ಪರಾ.

[ ತಾಱು₅ + ತಟ್ಟು₂ ]

ತಾಱುಂತಟ್ಟುಗುತ್ತು (ಕ್ರಿ). ಗುಂಪುಗುಂಪಾಗಿ ಹೊಡೆ,-ಇರಿ : ತಾಱುಂತಟ್ಟುಗುತ್ತುತ್ತೆ ಬಲ್ಮೆಯೊಳತ್ತಂ ಬರುತಿರ್ಪ ಕೊಂಡಣಿಗನಂ ಕೀನಾಶಲೋಕಕ್ಕೆ ನಿಶ್ಚಯದಿಂದೆಯ್ದುಸುತುಂ (ಎಕ. VIII, ಸೊರಬ. ೧೫೨-೦೬ : 1380). [ ತಾಱುಂತಟ್ಟು + ಕುತ್ತು₁ ]

ತಾಱುಂತೀರು (ನಾ). ಚೆಲ್ಲಾಪಿಲ್ಲಿ ; ಅಸ್ತವ್ಯಸ್ತತೆ : ಸರ್ವಾಂಗದೊಳೆಡೆದೆಱಪಿಲ್ಲದೆ ಕೊಂಡು ತೋಱುವ ಬಲ್ಲೆಱುಗಳ ನೆಱೆವನೆಯಿಂ ತಾಱುಂತೀಱಾ[ರಾ]ಗಿ ಬೀಳ್ಟು ಸತ್ತ ಕುದುರೆಗಳ ಬಳಗಂ (ಚಾರಪು. ೦೩-೧೦೯ ವ). [ ತಾಱು₅ + ತೀರು₂ ]

**ತಾಱುಂಬರಿ** 'ತಾಱುಂಬೞಿ' ನೋ.

**ತಾಱುಂಬಳೆ** 'ತಾಱುಂಬೞಿ' ನೋ.

**ತಾಱುಂಬೞಿ**, ತಾರುಂಬಳಿ, ತಾಱುಂಬರಿ, ತಾಱುಂಬಳೆ (ನಾ). ೧. ಅಸ್ತವ್ಯಸ್ತವಾದುದಂ : ಪಂತಿದಪ್ಪಿ ತಾಱುಂಬೞಿಯುಂ ತೆರಳ್ದ ಕುರುಳ್ (ಚಂದ್ರಪ್ರ. ೮-೭೨). ೨. ಸುತ್ತುಮುತ್ತು ; ಎಲ್ಲಕಡೆ : ಅಳಿಗಳ ಬಳಗಂ ತಾಱುಂಬೞಿಯಿಂ ಬರುತಿರೆ (ಕುಸುಮಾ. ೫-೭೯). **ತಾರುಂಬಳಿ:** ೧. ಮನೆಯ ಒಡೆಯನು ಅಕಾಲಮರಣ ಹೊಂದಿದ ಕೂಡಲೆ ಉಳಿದವರತಾರುಂಬಳಿಯು ಎಷ್ಟು ಆಗುತ್ತದೆ (ಚರಿಸಂ. ೭೮): ತಾರುಂಬಳಿಯಿಂದ ದೊಪ್ಪಾಳಿ ಸುತ್ತ ಹೋಗಿ, ಕಯ್ದುಗಳ್ಗೆರಗುವರು (ಮಂತ್ರಿಶ. ೧೫೨-೧೪). **ತಾಱುಂಬರಿ:** ೧. ಕೊಳೆ ಸುಡು ತಾಱುಂಬರಿಯೆಂಬಿವು ಪದದ ಮೊದಲೊಳಿರಲಶುಭಕರಂ (ಕವಿಜ. ೩-೩೨). **ತಾಱುಂಬಳೆ:** ೧. ತಾಱುಂಬಳೆ[ಪಾಠಾಂ. ೞಿ] ಬಿಟ್ಟ ಚಂಚು ಬೆಮರಿಂ ಕಡೆಗೆನ್ನೆಗೆ ಬಾನಲಾದ ಬೊಟ್ಟು (ಶಮದ. ನ. ೧೮೩ ಪ್ರಯೋ).

[ ತಾಱು₅ + ಬೞಿ₂ ]

**ತಾಱುಂಬೞಿಗೊಳ್** (ಕ್ರಿ). ಹರಡು ; ವ್ಯಾಪಿಸು : ಹಂಸಮಂಡಳಿ ತಾಱುಂಬೞಿಗೊಳ್ವ ತಾವರೆಗೊಳಂ (ಅನಂಪು. ೧-೯೪).

[ ತಾಱುಂಬೞಿ + ಕೊಳ್₁ ]

**ತಾಱುಂಬೞಿಯಂ** (ಅ). ದಿಕ್ಕಾಪಾಲಾಗಿ ; ಎಲ್ಲಕಡೆಗೆ : ಅಲರ್ಗೆ ಫಲಕೆ ಪರಿದತ್ತಳವೆಂಡಿರ ನೆರವಿ ನಲಿದು ತಾಱುಂಬೞಿಯಂ (ಚಂದ್ರಪ್ರ. ೭-೯೮).

[ <ತಾಱುಂಬೞಿ ]

**ತಾಱುಕುಂಡ** 'ತಾಱುಗುಂಡೆ' ನೋ.

**ತಾಱುಗುಂಡೆ**, ತಾಱುಕುಂಡೆ (ನಾ). ಒಣಗಿದ ಕುಂಡೆ : ದುರುಳಕಾಲನ ಬಾಯನೊದೆದಾಕರಿಸಿ ತಾಟಿಸಿ ಅವಧಿ ವಿಧಿಗಳ ತಾಱು[ಪಾಠಾಂ. ಱ] ಗುಂಡೆಗಳ [ಪಾಠಾಂ. ಕುಂಡೆಗಳನುಱದೆ] (ಬಸಪು. ೪೭-೧). **ತಾಱುಕುಂಡೆ:** ತ್ರೈವಿದ್ಯರಂ ತಂದು ತಾಱುಕುಂಡೆಯ [ಪಾಠಾಂ. ಚಾಟುಗುಂಡಿಯನೆ] ಹಾಯಿಸಿ (ಸೋಮಕ. ೬-೪೩). [ ತಾಱು₃ + ಕುಂಡೆ₁ ]

**ತಾಱುತಟ್ಟು** 'ತಾಱುಂತಟ್ಟು' ನೋ.

**ತಾಱುತಟ್ಟುಂ** 'ತಾಱುಂತಟ್ಟುಂ' ನೋ.

**ತಾಱುಥಟ್ಟು** 'ತಾಱುಂತಟ್ಟು' ನೋ.

**ತಾಱುಮಾಱು**, ತಾರುಮಾರು₁, ತಾಱುವಱು, ತಾಱುವಾಱು (ನಾ). ೧. ಚೆಲ್ಲಾಪಿಲ್ಲಿ ; ಅವ್ಯವಸ್ಥೆ ; ಅಸ್ತವ್ಯಸ್ತತೆ : ವಾರುವಗಳು . . . ಕೇರಿ ಕೇರಿಯೊಳು ತಮ್ಮಿಚ್ಚೆಯೊಳಗೆ ಸಲೆ ತಾಱುಮಾಱಾಗಿಯೋಡಿದವು (ಕಂನವಿ. ೧೫-೯೦). **ತಾರುಮಾರು₁:** ೧. ತಾರುಮಾರಾಗಿ ತೂರುಬೀಳುತಿರುವ ರಾಕ್ಷಸ ಸ್ತ್ರೀ ಪುರುಷರಂ ನೋಡಿ (ಸೌಗಂಧಿ. ೨೯೦-೦೯) : ಮರಾಟೆಯವರಿಗೆ ದಿಕ್ಕು ತೋಚದಂತಾಗಿ ತಾರುಮಾರಾಗಿ ಪಲಾಯನ ಮಾಡಿದರು (ಒಡೆಕ. ೪೮) : ಈಗ ಎಲ್ಲವೂ ತಾರುಮಾರಾಯಿತು (ಭಾರವೀ. ೭೨): ಕಲ್ಪವೃಕ್ಷಗಳ ಚಿಗುರು ಎಲೆಯ ತೂರಾಡು ತಾರುಮಾರು(ಕಮೋಘ. ೦೬-೬೨). ೨. ಅಸಂಬದ್ಧತೆ ; ಅಸಾಂಗತ್ಯ : ಊರು ಹೆಸರು ಮುಂತಾದ್ದನ್ನು ವ್ಯತ್ಯಸ್ತಮಾಡಿ ತಾರುಮಾರಾಗಿ ಬರೆದರು (ಪುರಾವಿ. ೭). ೩. ಗಜಿಬಿಜಿ ; ಗೊಂದಲ: ತಾರುಮಾರು ಮಾಡುವವನನ್ನು ಯಾರು ತಾನೇ ನಂಬ್ಯಾರು? (ಗಾದೆ). **ತಾಱುವಱು :** ೧. "ತಾಱುವಱಾದುದಸವಸಂ" (ವಸ್ತುಕೋ. ೧೧೬-೩೩): ತಾಱುವಱಾಗೆ ಜಯಂ ಜೊಮ್ಮೋಱುವ ಟೆಂಟಣಿಸುವರಸನರಸನೆ ವಿರಸಂ(ಶಾಂತಿಪು. ೨-೪೧): ಭೀಕರ ಗದಾಘಾತದೊಳಂ ಜಾಱಿ ಪಱಿಪಱಿದು ತಾಱುವಱಾದ [ಪಾಠಾಂ. ತೂಱುಪಾಱಾದ] ಕಾಂಭೋಜಾವಳಿಗಳ ತುರುಷ್ಕ ತುರಂಗಮಂಗಳಡಿಯೊಳ್ (ಗದಾಯು. ೬-೨೮ ವ) : ತಾಱು[ಪಾಠಾಂ. ತಾಱು]ವಱಾದ ಕೇಶಮನುಗುರ್ಮೊನೆಯಿಂ ತೆಗೆದೊತ್ತಿ (ಲೀಲಾವ. ೫-೧೩೬) : ತಾಱುವಱಾದ ಸೂಸುಗುರುಳಂ ತವೆ ತಿರ್ದುವ . . .

ತೊಡೆವಾಯ್ಗೆ ನಱುದಂಬುಲಮಂ ಕುಡುಕಿಕ್ಕುವಂದವಂ ಕೋಱೆ (ಧರ್ಮನಾ. ೩-೧೫೨). **ತಾಱುವಾಱು:** ೩. ಜೀವನುವೆಂಬತ್ತುನಾಲ್ಕುಲಕ್ಷ ಯೋನಿಮುಖದೊಳಗೊಂದಾ ಮನುಷ್ಯನದಱೊಳಂತಾನುತಾಱುವಾಱಾಗಿ ಬಂದಲ್ಲಿ (ಜೀವಸಂ. ೯-೯ ವ).

[ ದೇ.॥ ತಮಿ. ಮಲ. ತಾಱುಮಾಱು ; ತುಳು. ತಾರುಮಾರು ; ತೆಲು. ತಾಱುಮಾಱು ]

**ತಾಱುವಾರಿ** (ನಾ). ಒಂದು ಬಗೆಯ ಭೂಮಿ (?): ಅಕ್ಕಿ ಸಪ ಪನ್ನೆರಡು ಮುಡಿ ತಾಱುವಾರಿಯ ಬಗೆಯ ಬೆಟ್ಟಿನ ಒಳಗೆ ಅಱುಮುಡಿ (ಸೌಇಇ. IX-II, ೪೭೪-೨೦ ; 1472). 'ತಾಱು₆' ಪರಾ. [ ? ]

**ತಾಱುವಾಱು** 'ತಾಱುಮಾಱು' ನೋ.

**ತಾಱುಹಂಗ** (ನಾ). ಶಕುನದ ಪಕ್ಷಿ ; ಹಂಗ : ಕರಿಯ ಪಕ್ಷಿಯ ತಾಱುಹಂಗನ ವಾಮದುಡಿಕೆಗಳ ನರಿಗಳೊದಱಿದವಿದಿರಿನಲಿ (ಕುಮ್ಮಾರ. ೧೩-೨). [ ತಾಱು₄ (<ತಾಱ್₂)+ಪಂಗ ]

**ತಾಱಿ₁** 'ತಾಱಿ' ನೋ.

**ತಾಱಿ₂** (ನಾ). (?) : ಕಮ್ಮಳೆಯ ತಾಱಿಯಗೊಡಲ ಮೂಡನ ಮಯ್ಯ ಕಂಬ ನೂಱಱುವತ್ತು (ಎಕ. VI, ಚಿಕ್ಕಮ. ೨೨-೪೫ ; 1178). [ ? ]

**ತಾಱಿಕಾಯಿ** 'ತಾಱಿಗಾಯಿ' ನೋ.

**ತಾಱೆಲೆ** (ನಾ). ಒಣಗಿದ ಎಲೆ ; ತರಗೆಲೆ : ಪಾದಪದಲಕ್ಷ್ಮಿ ಬೆದಱಿ ಸೂಱೆಗೊಟ್ಟಂದದೆ ಪರಳ್ಗಾಯಿ ಮುಂತಾದ ತಾಱೆಲೆ ನೆಲಕುದುಱಿದುವು (ಮೋಡಶ. ೪-೪೩). [ ತಾಱು₁ + ಎಲೆ₁ ]

△ **ತಾೞ್₁** 'ತಾಳ್₂' ನೋ.

△ **ತಾೞ್₂** 'ತಾಳ್₃' ನೋ.

△ **ತಾೞ** 'ತಾಳ್₃' ನೋ.

**ತಾೞಕೆಱೆ** (ನಾ). ಒಂದು ಕೆರೆಯ ಹೆಸರು : ಆ ಕೆಱೆಗೆ ಐಯ್ಗಣ್ಡುಗ ಮಣ್ಣು ಕೊಟ್ಟಯ ತಾೞಕೆಱೆ ಆ ಕೆಱೆಗೆ ಐಯ್ಗಣ್ಡುಗ ಮಣ್ಣು (ಎಕ. XII, ಶಿರಾ. ೨೪-೪೮ ; ೯೦೦). [ ತಾೞ ? + ಕೆಱೆ ]

△ **ತಾೞಪಣ್** 'ತಾಳೆಹಣ್ಣು' ನೋ.

△ **ತಾೞಮರ** 'ತಾಳೆಮರ' ನೋ.

**ತಾೞಲಿಯ** (ನಾ). ಒಬ್ಬಾತನ ಹೆಸರು : ವಾರಬದಿಗದಾಲನುಂ ತೆಳ್ಳನುಂ ತಾೞಲಿಯನುಂ ವೇಬಿಲನುಂ . . . ಇಲ್ಲಿಯ ಪುರದ ಒಕ್ಕಲಿವರು (ಎಕ.III ನಂಜನ. ೦೩೯-೬ ; 915 ?). [ ? ]

△ **ತಾೞವಣ್** 'ತಾಳೆಹಣ್ಣು' ನೋ.

**ತಾೞುವಡುಗುಡ್ಡಿ** (ನಾ). ಒಬ್ಬಾತನ ಹೆಸರು : ಆತ್ರೇಯಗೋತ್ರ ಮೊದೆಯ ತಾೞುವಡುಗುಡ್ಡಿಗಳ ಮಗಂ ಪುಳ್ಳಿಯಯ್ಯ ಮಾಡಿಸಿದ ತೂಮ್ಬು (ಎಕ. X(೩), ಮಾಲೂರು. ೦೭೧-೩ ; ಸು. 10ನೆಯ ಶತ). [ ? ]

△ **ತಾೞು** 'ತಾಳ್₂' ನೋ.

**ತಾೞುಗಿ** (ನಾ). (?) : ಬೇರುಗಿ, ಬೇರುಗಿತಿ ; ತಾೞುಗಿ, ತಾೞುಗಿತಿ (ಶಬ್ದಾನು. ೦೯೩ ಪ್ರಯೋ). [ ತಾೞುಗ₀ + – ಇ₂ ]

**ತಾೞುಗಿತಿ** (ನಾ). (?) : ಬೇರುಗಿ, ಬೇರುಗಿತಿ; ತಾೞುಗಿ, ತಾೞುಗಿತಿ (ಶಬ್ದಾನು ೦೯೩ ಪ್ರಯೋ). [ ತಾೞುಗ₀ + – ಇತಿ₁ (< – ಇತ್ತಿ) ]

**ತಾೞಿ³**, ತಾಳಿ₁ (ನಾ). ಕೇದಗೆ ; ತಾಳೆಗಿಡ : (೩). **ತಾಳಿ₁ :** "ವಿರು-ತಾಳಿ" (ಒಪಧಿ. ೪೩) : ಬಿದೆಕಾರು ಮೂಱಿ ತಿಳಿ ೨ ತಾಳಿ ಆ ಮರ ಬಿದೆಕಾರು (ಸೌಇಇ. ೦೯೩೦, ಮಂಗಳೂರು. ೩೩೮-೮ ; 1226) : ತಾಳಿಯ ಹೂವಿನ ಸಳೆಯೆನೆ ಸುಳಿದಿಂಪುವಾಳಿಯ ಪಣ್ಣಾನಾ ರಾಯನಾ ಲಾಲಿತ ಪ್ರತಿಮೆಯ ಭುಜ ಮುಟ್ಟ ಮೆದೆಗಟ್ಟಿ ಥಾಳಿವಂತಭಿಷೇಕಗೈದಾ (ಭರತ. ೦೬-೬೪).

[ ದೇ.॥ ತಮಿ. ತಾೞೈ ]

**ತಾಟಿ³ಪೂ, ತಾಳೆಹೂ** (ನಾ). ಕೇದಗೆ ಹೂ: (ಕ). **ತಾಳೆಹೂ:** "ಕೇತಕಿ–ತಾಳೆಹೂ" (ಒಷಧಿ. ೪೦) : ಕೇತಕೀಪುಷ್ಪ ಅಂದರೆ ತಾಳೆಹೂವನ್ನು ಧರಿಸಿದಲ್ಲಿ (ಸಕವ್ಯ. ೪೪) : ತಾಳೆಹೂ ಗರುವಲಿಯು ಬೆನ್ನಟ್ಟಿ ಬುಚ್ಚುವುದು (ಕಾಲೂರ. ೧೦೩-೨೩೪) ; ತುರುಬು ಇಲ್ಲದವಳಿಗೆ ತಾಳೆ ಹೂವೇ ? (ಗಾದೆ).

[ ತಾಟಿ³ + ಪೂ₂ (< ಪೂ₂) ]

**ತಾಟಿ³ಜಿ³ಯ** (ನಾ). ಒಬ್ಬಾತನ ಹೆಸರು : ವಿಕ್ರಮಾದಿತ್ಯಕೊರ್ಟ್ಟೊದು [ಪ]ನ್ನೆಸಲುಕ್ಕಾರು ತಾಟಿ³ಜಿ³ಯರ್ಗೆ ಎರೆಕಾಡು ಇಪ್ಪತ್ತೈಮತ್ತರು (ಸೌಇಇ. IX-1, ೪೭-೭ ; ಸು. 9ನೆಯ ಶತ). [ ? ]

**ತಾಟ್ರಿವಾಯ** (ನಾ). ಒಬ್ಬಾತನ ಹೆಸರು : ಬೆಳ್ಗಲ್ಕೊಟಡು ಪಶ್ಚಿಮಾ ಯಾಸ್ವಿಕಿ ಪೊನ್ನೆಮಿ ತಾಟ್ರಿವಾಯರಾ ಕಟಿ³ (ಎಕ. IV, ನಾಗಮಂ. ೮೫-೩೩: 776). [ ? ]

**ತಾಟ್ನೆಲ್ಲ** (ನಾ). ಒಂದು ವಂಶದ ಹೆಸರು (?): ಪೊದಲ್ನಾಡಟುವತ್ತುಮ ನಾಳೆ ತಾಟ್ನೆಲ್ಲರ × × × ತಾಮನ್ದಯರಾ ಶ್ರೀ ಕಣ್ಣಯ್ಯ ತುಟುಗೊಣ್ಡಲ್ಲಿ . . . ಸತ್ತ (ಎಕ. X, ಶ್ರೀನಿವಾ. ೫೦-೭ : 800 ?). [ ? ]

△ **ತಾಟ್ಮರ** 'ತಾಳೆವ ರ' ನೋ.

.ತ್ರಿ ' ನೋ.

**ತ್ರಿ₂** (ನಾ). ಮೂರು ಎಂಬ ಸಂಖ್ಯೆ: "ತಿ–ತ್ರಿ=ಮೂರು" (ತದ್ಭಕೋ. ೧೭): ತಿಗೆ–ತ್ರಿಗುಣಂ–ತಿಗುಣಂ, ತ್ರಿಶರಂ–ತಿಸರಂ, ತ್ರಿಶೂಲಂ–ತಿಸುಳಂ (ಶಮದ. ೨೯೦ ಪ್ರಯೋ). [ < ಸಂ. ತ್ರಿ ]

**ತಿಂಕಚಿರ** (ನಾ). ಒಂದು ಮನೆತನದ ಹೆಸರು (?): ತಟಂಕಮಿದು ತಿಙ್ಕಚಿರ ನೆಟಿ³ದಕಳೆತಿಯಾ ಆಕಳೆ ಸಮುದೊಯ ತಟಾಕ (ಎಕ. XVI, ಪಾವುಗ. ೦೨-೩ : 754). [ ? ]

**ತಿಂಗಣಿ, ತಿಂಗಿಣಿ** (ನಾ). ತೊಟ್ಟಿಲ ಮೇಲಿನ ಅಥವಾ ಹಂದರ ಮೊದಲಾದುವುಗಳ ವಿತಾನದಲ್ಲಿ ಇಳಿಬಿಡುವ ಒಂದು ಅಲಂಕಾರದ ಗೊಂಡ್ಯೆ–ಕುಚ್ಚು: ಇಂಗಡಲೆಂಬ ಸೆಜ್ಜವನೆಯೊಳ್ ತೆರೆದೊಟ್ಟಿಲ ಮೇಲೆ ಕೆಂಬರಲ್ದಿಂಗಣಿಗಟ್ಟಿದಂತುದಯಶೈಲಶಿಖಂಡದೊಳೆಂದುಮಂಡಲಂ (ಮಲ್ಲಿಪು. ೭-೨೯); ಮಾಣಿಕದ ತಿಂಗಣಿಯುಂ ಮಾಣದ ಕಣ್ಬೆಳಗು ಬಳಸೆ ಮುತ್ತಿನ ಸುತ್ತಂ ಮಾಣಿಕದ ಮೇಲೆ ಮಕ್ಕಳ ಮಾಣಿಕಮುಡುಗಡಿಗೆ ತೊಟ್ಟಿಲೊಳ್ ಪುಟ್ಟಿಸುಗುಂ (ಅನಂಪು. ೭-೪); ಶಿಲ್ಪಿಗಳ ಕಲ್ಪಪತಿಯು ಅಭಿಷೇಕಮಂಡಪವನ್ನು ಸಮೆದಿದ್ದನೆಂದಮೇಲೆ ಕೇಳುವದೇನು ? ಮುತ್ತಿನ ಸೂಸಕ, ಮರಕತದ ತಿಂಗಣಿ . . . ರನ್ನದ ರಂಗವಲ್ಲಿ ! (ಸಾಹಿಸಂ. ೩೭). **ತಿಂಗಿಣಿ :** ಕೋದ ಮುತ್ತಿನ ಸೂಸಕದೊಳಂ ಚೆಂಬೊನ್ನ ತಿಂಗಿಣಿಯೊಳಂ ಚೀನದ ದೇವಾಂಗದ ನೇತ್ರದ ಮೇಲ್ಕಟ್ಟಿನೊಳಂ . . . ವಿಚಿತ್ರಾಂಶುಕ ವಿವಿಧ ಧ್ವಜಂಗಳೊಳಂ ಬಹು ವಿಧ ನೂತ್ನ ರತ್ನ ತೋರಣಂಗಳೊಳಂ ನೆಟಿ³ದು (ಪುಷ್ಪಪು. ೮-೫೦ ವ). [ ? ]

**ತಿಂಗಣಿಗೆ** (ನಾ). = ತಿಂಗಣಿ : ಅದಲ್ಲದೆಯುಮಪವರ್ಗಲಕ್ಷ್ಮಿಯ ಲಾಸ್ಯ ಪೂಜಾಕುಸುಮಂಗಳಂತೆ ಮಧ್ಯರಂಗದೊಳೆಸೆವ ಪೊಸಮುತ್ತಿನ ಸೂಸಕದ ಪೊನ್ನ ತಿಂಗಣಿಗೆಯ ನೆಟುಲ ತುಟುಗಲಿಂ ವಿರಾಜಿಸುವ ಪೂಜಾಗೃಹದಿಂ (ಮಲ್ಲಿಪು. ೨-೭೪). [ < ತಿಂಗಣಿ ]

**ತಿಂಗಣಿಮಾರ** (ನಾ). ಒಬ್ಬಾತನ ಹೆಸರು : ಕಕ್ಕರ ಮುದಲೂರೆಟಿ³ದು ತೊಟುಗೊಣ್ಡೊಡೆ ತಿಙ್ಗಣಿಮಾರ ಶ್ರೀಮೇಟಿ³ ತಿಙ್ಗಣಿಯೂರುಳ್ಳಗಿ . . . ಪಲರನೆಟಿ³ದು ಸಗಮೇಟಿ³ದನ್ (ಎಕ. X, ಶಿಡ್ಲಘ. ೩೨-೪ ; ಸು. 870 ?). [?]

**ತಿಂಗಣಿಯೂರ್** (ನಾ). ಒಂದು ಊರಿನ ಹೆಸರು : ಕಕ್ಕರ ಮುದಲೂರೆಟಿ³ದು ತೊಟುಗೊಣ್ಡೊಡೆ ತಿಙ್ಗಣಿಮಾರ ಶ್ರೀಮೇಟಿ³ ತಿಙ್ಗಣಿಯೂರುಳ್ಳಗಿ . . . [illegible] ಸಗಮೇಟಿ³ದನ್ (ಎಕ. X, ಶಿಡ್ಲಘ. ೩೨-೪; ಸು. 870 ?).

[ ತಿಂಗಣಿ₀ + ಊರ್ ]

**ತಿಂಗಳ್, ತಿಂಗಳು** (ನಾ). ೧. ಚಂದ್ರ ; ಪೆರೆ : "ಜೊನ್ನೊಡಲಂ . . . ಕಟ್ರಲೆವಣಿ, ತಿಂಗಳ್–ಈ ೨೦ ಚಂದ್ರನ ಪೆಸರ್" (ಕಶಸಾ. ೩-೨೩) ; "ಮೃಗಾಂಕನೊಳ್ ತಿಂಗಳ್" (ಕರ್ಣಾನಿ. ೨೧) : ನಗೆಯೆಂಬ ನೆವದೆ ಬೆಳಗೀ ಮೊಗಮೆಂಬೀ ನೆವದೆ ತಿಂಗಳೊಳಗೆಸೆದಾದಂ ಸೊಗಯಿಸಿ ತೋರ್ಕುಂ ಲೋಚನಯುಗಮೆಂಬೀ ನೆವದೆ ಲಕ್ಷ್ಮಮೆನೆ ತದ್ವ್ಯಾಜಂ (ಕವಿರಾ. ೩-೨೭); ತಿಂಗಳ ತಣ್ಗದಿರ್ಗಳೊಳ[ಮಿರ್ದಟಿ³ಯದ] ಸಿರಿಕಂಡದಣ್ಪಿನೊಳವೆಡೆವಿಡ ದಾಲಿನೀರ್ದನಿಗಳಂ ಸಿಂಪಿಸುವ ನೀರ್ಜೊಂಪಂಗಳೊಳಂ (ಕಾದಂಬ. ೫೯೮); ತಿಂಗಳ ಬಿಂಬಮಂ ಪಿಳಿದು ಪಿಂಡೆ ಪಳಚ್ಚನೆ ಸೋರ್ದ ಸೋನೆಯಂತೆ . . . ಏಂ ಸೀಯಸುಣ್ಮಿದುದೊ ಗೇಯದ ಮೆಲ್ಲುಲಿ (ವಿರೂಪಾ. ೭೫) ; ಎಳೆಮಿಂಚಿನಂದದ ಬೊಂಬೆಯೊ ತಿಂಗಳ ತಿಳಿವೆಳಗಿನೊಳಾದ ರೂಪೊ (ಭರಟ. ೨-೭೭) : ಅಂಗಜನ ಕಣೆಗಳಂ ಬೀಟಿ³ ನೋಟಂ ಮೊಗಂ ತಿಂಗಳಂ ವಿರಾಟಿ³ (ಚಲಪು. ೫-೧೧). ೨. ಚಂದ್ರನ ಬೆಳಕು ; ಇಂದು ಕಾಂತಿ : ತಂಗಾಳಿಯುಂ ತಿಂಗಳುಂ ಬನಮುಂ ಬೆಂಬಲವಾಗಿ ತೀರ್ಚವೆ ಗಡಂ ಕೊಂಡುಗ್ಗಿಯುಂ ಸುಗ್ಗಿಯೊಳ್ (ಅಜಿಪು. ೬-೨೮) : ತಿಂಗಳ ಸೊಂಪು ಗುಂಪುವಡೆದೆಣ್ದೆಸೆಗಂ ಪರಿಗೊಂಡುದೆಂಬಿನಂ (ಕಬ್ಬಿಕಾ. ೧೭): ತಿಂಗಳ ಸೊಂಪು ಪುಷ್ಪಬಾಣದ ಪೊದೆ ರಾಗದಾಗರಮನಂಗನ ಕೈಪಿಡಿ ನಲ್ಲಳೊಲ್ಮೆಯೆನ್ನದ ಪೆಟಿ³ತೆಂಬುದೇ ಮಧುರ ಮಾಧವ ನಿನ್ನಯ ವಾಗ್ವಿಳಾಸಮಂ (ಧರ್ಮನಾ. ೦-೬೧) : ಲವಲಿಯ ತನಿವಣ್ಣಿಗೆಣೆಯೆನೆ ತೋರ್ಪುದು ತಾನಿಂದು ತಿಂಗಳಾಭರಣ ವನದ ಚಕೋರದ ಸವಿದುತ್ತಿ ದಾವುದು ಹರಿಣವಿಲ್ಲದ ಶೀತಕಿರಣ (ಇಂದಾಪ. ೧೭೯-೩೧). ೩. ಚಂದ್ರನು ಭೂಮಿಂಗೆ ಒಂದು ಸುತ್ತು ಬರುವ ಕಾಲದ ಅವಧಿ; ಸಾಮಾನ್ಯವಾಗಿ ಮೂವತ್ತು ದಿನಗಳು : ಉಗ್ರಸೇನ ಗುರುವಡಿಗಳ್ ಒನ್ದು ತಿಙ್ಗಳ್ ಸನ್ಯಾಸನಂ ನೋನ್ತು ಮುಡಿಪ್ಪಿದಾರ್ (ಎಕ. II, ೨೫-೨ ; ಸು. 700) : ಇಂತು ವರ್ಷಾಕಾಲದ ನಾಲ್ಕು ತಿಂಗಳೊಳಂ ಮಾರ್ದನೂಡಿ (ವಡ್ಡಾರಾ. ೧೭೦-೨೭); ಅವಧಿಯನೊಂದು ತಿಂಗಳೆಡೆಯಿಟ್ಟು (ಆದಿಪು. ೧೨-೪೩); ಒಂದು ತಿಂಗಳ್ವಿಹರಣ ವಿಧಿಯಂ ಮಾಣ್ದು ಬಂದಜಿತನಾಥಂ ಧ್ಯಾನವಿಧಾನದಿ ಕರ್ಮಂಗಳಂ ಕಿಡಿಸಿದಂ (ಅಜಿಪು. ೮-೨೮ ವ) : ಮತ್ತಮೊಂದೆರಡು ತಿಂಗಳ್ ವಿಶೇಷವಾಗಿ ನೋಂತು ಕೊಟ್ಟಪೆಂ (ಧರ್ಮಾಮೃ. ೦-೧೮೨) : ತಿಂಗಳೇಳಟಿ ಗರ್ಭದಲಿ ರಘುಪುಂಗವನನಗಲಿದಳು (ತೊರರಾ. ೦೫೩-೮). **ತಿಂಗಳು :** ೧. ತಿಂಗಳ ಸೂಡಿದ ಅಭವನು ಭವಭಂಗಿತರಿಗಾರಿಗೂ ಗೋಚರಿಸನು ನೋಡಾ (ಸಿದ್ಧೇವ. ೧೨೨-೩೭೭) ; ತಿಂಗಳುವೊಡನುರ್ಕುವ ಬೆಳ್ದಿಂಗಳುಂ (ಚಳವಿ. ೬-೨೫) ; ತೊಳೆದ ಬಾನೊಳಗೊಂಟಿಮೋಡದ ನೆಲೆಗೆ ನುಸುಳಿದ ತಿಂಗಳು (ಇಂಗೀತ. ೧೨-೯) : ಮುಳುಗುವ ನೇಸರೊ ಮೂಡುವ ತಿಂಗಳೊ (ಅನಿಕೇ. ೩೦-೧೩). ೨. ತಿಂಗಳಿಗೆ ತಂಪಿಹುದೆ ಸಾಗರಕೆ ನೆಂಪಿಹುದೆ (ಗೀವಿಂ. ೨೨-೩೪). 'ಬೆಳುದಿಂಗಳು' ಪರಾ. ೩. ಕೇತು ವಿಲಗ್ನದೊಳಿರೆ ಪುಟ್ಟಿದ ಮನುಜ ನೊಂದು ತಿಂಗಳು ಬಾಟ್ಗುಂ (ಜಾತತಿ. ೬-೧೦) ; ಒಂದು ತಿಂಗಳು ಪಲವು ಮನ್ನಣೆಯಿಂದ ಮನ್ನಿಸಿ ತನ್ನ ಸೇನಾಪ್ಯಂದವನು (ಕುಮಾ್ಯಸ. ೩-೨೩) : ನರಪತಿವೊಂದು ತಿಂಗಳು ವನದೊಳಗೆ ವಿಪರಿಸಿ (ಜೀವಂಸಾಂ. ೦೮-೭೨) : ಮೇಲ ತಿಂಗಳು ನಾಲ್ಕುಟಿ³ಂಕೆಯ ಕಾಲ ಸವೆದುದು (ತೊರರಾ. ೪-೭-೫) : ನಿದ್ದೆಯ ಕಾಣದೆ ತಿಂಗಳಾರಾಗಿತ್ತು (ಇಂದಾಪ. ೪೫-೧೩).

**ತಿಂಗತಿಂಗಳು, ತಿಂಗಳ್ತಿಂಗಳು, ತಿಂಗಳ್ದಿಂಗಳ್** (ದ್ವಿರುಕ್ತಿ) : ಅವುಗಳಿಗೆ (ತೆಂಗು) ತಿಂಗತಿಂಗಳಿಗೆ ಹೊಸ ಹೂವು ಬಿಟ್ಟು ಇಪ್ಪತ್ತು ಇಪ್ಪತ್ತೈದು ಕಾಯಿ ಆಗುತ್ತವೆ (ಮುಂಬಯಿ ೨-೫೦) : ಧಾರಾಪೂರ್ವಕಂ ಮಾಡಿ ಗುಡಿಕಲ್ಲ ೨೪ಟಿ ಸ್ಥಳದ ಪೆಜ್ಜುಂಕದಲ್ಲಿ ತಿಂಗಳ್ತಿಂಗಳಿಗೆ ಕೊಟ್ಟ ಗದ್ಯಾಣ ೧ (ಸೌಇಇ. IX-1. ೨೭೯-೨೧ ; 1186) ; ಮುದ್ರಾವಣದ ಸುಂಕದೊಳಗೆ ತಿಂಗಳ್ದಿಂಗಳ್ಗೆ ಹತ್ತು ಹತ್ತು ದ್ರವ್ಯಮಂ ಬಿಟ್ಟಂ (ಎಇ. XXVIII. ೫-೫೬ :

1082). **ತಿಂಗಳಂ ಸೂಡಿದವ** = ಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಚಂದ್ರಶೇಖರ ; ಶಿವ : ತಿಂಗಳಂ ಸೂಡಿದವನ ಸರ್ವೋತ್ತುಂಗವಾಹ ವಿಶ್ವರನ ಗಣಪುಂಗವರ್ಗೇರುವ ಮಹಾಸಿಂಹಾಸನಂ ಬಸವ (ಬಸಪು. ೧-೩೨). **ತಿಂಗಳ ಜೂಟ** = ತಿಂಗಳಂ ಸೂಡಿದವ : ತಿಂಗಳ ಜೂಟಗೆ ಸುರಸತಿಯರು ತಂದ ಮಂಗಳಜಲಕುಂಭದಂತೆ (ಮೋಹತ. ೩೪-೩೧). **ತಿಂಗಳಣುಗ** = ಚಂದ್ರನ ಮಗ ; ಬುಧ : "ತಿಂಗಳಣುಗನೆನೆ ಬುಧನೆನಿಕ್ಕು" (ಶಶರ. ೪೬). **ತಿಂಗಳ ಧರ** = ತಿಂಗಳಂ ಸೂಡಿದವ : ತಿಂಗಳಧರನ ಪೂಜಿಸು ಮನವೆ (ಸಿದ್ಧವ. ಕ. ೯೮-೩೨೮): ತಿಂಗಳಧರ ಧವಳಾಂಗ ಗಂಗಾಧರ (ಸೌಂದಕಾ.೧-೧೦). **ತಿಂಗಳ ಪಕ್ಷ**= ತಿಂಗಳಲ್ಲಿಯ ಹದಿನೈದು ದಿವಸ: ತಿಂಗಳ ಪಕ್ಷಗಳನ್ನು ಹೇಳದೆ ವರ್ಷಋತು ಎಂಟನೆಯ ಪಕ್ಷ ಎಂದು ಮೊದಲಾಗಿ ಋತುಪಕ್ಷಗಳನ್ನು ಹೇಳಿದೆ (ಕರ್ಣಾಅ. ೮). **ತಿಂಗಳ ಬೆಳಕು, ತಿಂಗಳ ಬೆಳಗು** = ಚಂದ್ರನ ಬೆಳಕು; ಬೆಳುದಿಂಗಳು : ಶರಣನೆಂದು ವಚನಂಗಳ ಹಾಡಿದರೆ ತಿಂಗಳ ಬೆಳಕಿನ ಸಿರಿಯಂ ಕಂಡು ನಾಯಿ ಹರುಷಂಗೊಂಡು ಬಳ್ಳಿಟ್ಟು ಬೊಗುಳಿದಂತಾಯಿತು (ಘನವ. ೩೬) ; ತಳತಳಿಸಿ ಬೆಳಪ ತಿಂಗಳಬೆಳಗಂ ಕವರ್ವಂತೆ ಮೆಱೆವ ಮೆಯ್ವೆಳಗಿಂ (ಕಬ್ಬಿಕಾ. ೭೩) ; ತಿಂಗಳ ಬೆಳಗಿನ ದಾರೆಯ ಸಂಗಡಮನೆ ಮೆಱೆಯುತಿರ್ಪ ಗಂಜಿಯನಾಗಳ್ ತೆಂಗಿನ ಶಿಳಿವಟ್ಟಲೊಳಾತಂಗೆಱೆದಳ್ (ದಶಕು. ೧೨-೧೨೫). **ತಿಂಗಳ ಮಾವ** = ಚಂದ್ರನಿಗೆ ಅಕ್ಕರೆಯಿಂದ ಸಂಬೋಧಿಸುವ ಹೆಸರು : ಅಂಗನೆ ರೂಪಿಂದ ತಿಂಗಳಮಾವನ ತಂಗಿ (ಅಂಜಜ. ೪-೯) : ತಿಂಗಳಮಾವನು ಬಾನಿನಂಗಳದೊಳು ಮೂಡಿ ಬಂದಿರುವನು ಹೇಗೆ (ಚಂದ್ರವೀ. ೧೬೬-೬೦). 'ಚಂದಮಾಮ' ಪರಾ. **ತಿಂಗಳ ಲೇಖೆ** = ಚಂದ್ರನ ಕಲೆ : ತಿಂಗಳ ಲೇಖೆಯಂ ಬಿಡದೆ ಗೂಡಿದವಂಗೆ ಮಹೇಶ್ವರಂಗೆ . . . ಸುಧೂಪವಂ ಮಿಗೆ ಸಮರ್ಪಿಸಿದಂ (ಉದ್ಭಟ. ೧೧-೮೫). **ತಿಂಗಳುಗಟ್ಟಳೆ, ತಿಂಗಳುಗಟ್ಟಲೆ, ತಿಂಗಳುಗಟ್ಲೆ** = ೧. ಹಲವು ತಿಂಗಳುಗಳ ವರೆಗೆ: ತಿಂಗಳುಗಟ್ಟಳೆ ಉಪದೇಶ ಮಾಡಿದರೂ ಅವನು ಸಿಗರೇಟಿನ ಚಟವನ್ನು ಬಿಡಲಿಲ್ಲ (ರೂಢಿ) ; ತಿಂಗಳುಗಟ್ಟಲೆಯಾದರೂ ಮಲೇರಿಯಾ ಜ್ವರ ಗುಣವಾಗುವುದಿಲ್ಲ (ರೂಢಿ). ೨. ಪ್ರತಿ ತಿಂಗಳು : ಸಂಬಳದಲ್ಲಿ ಐವತ್ತು ರೂಪಾಯಿ ತಿಂಗಳುಗಟ್ಲೆ ಕೂಡಿಸಿ ಸಾಲಾ ಹರಿಸಬೇಕೆಂದು ಆಲೋಚನೆ ಮಾಡಿದ್ದೇನೆ (ಕಥಾಮಂ. IV, ೫). **ತಿಂಗಳು ತುಂಬು** = (ಗರ್ಭಿಣಿಗೆ) ನವಮಾಸ ತುಂಬು : ಆಕೆಗೆ ತಿಂಗಳು ತುಂಬಿದೆ (ರೂಢಿ). **ತಿಂಗಳುವಾರು** = ತಿಂಗಳುಗಳ ಮೇರೆಗೆ ; ತಿಂಗಳಿಗೆ ಇಂತಿಷ್ಟು ಎಂದು : ಆಯಾ ತರಗತಿಗಳಿಗೆ ಪಠ್ಯವಸ್ತುವನ್ನು ತಿಂಗಳುವಾರು ಹಂಚಿಕೊಂಡು ವರ್ಷಾಂತ್ಯದಲ್ಲಿ ಪೂರೈಸಿದರೆ ಉಪಾಧ್ಯಾಯರ ಕೆಲಸ ಮುಗಿಯಿತು (ಶಿಕ್ಷದ. ೧೨೮). **ತಿಂಗಳೊಪ್ಪತ್ತು** = ಸುಮಾರು ಒಂದು ತಿಂಗಳು ; ಹೆಚ್ಚುಕಡಮೆ ಒಂದು ತಿಂಗಳು : ಮತ್ತೆ ತಿಂಗಳೊಪ್ಪತ್ತು ಕಳೆಯುವುದರೊಳಗಾಗಿ ಫಲಿತಾಂಶ ಹೊರಬಿತ್ತು (ಭೀಮುಕಾ. ೧೮). [ ದೇ.॥ ತಮಿ. ಮಲ. ತಿಙ್ಕಳ್ ; ತುಳು. ತಿಂಗೊಳು; ಕೊಡ. ತಿಂಗ ; ಕುಇ. ತಿಂಗಳ್ ]

**ತಿಂಗಳರೆ** (ನಾ). ಚಂದ್ರನ ಅರ್ಧಭಾಗ ; ಅರ್ಧಚಂದ್ರ : ಹೊನ್ನ ಬಣ್ಣದ ಮೈವೆಳಗು . . . ಚಿನ್ನಮಾಣಿಕದುಟಿ ಬಗಸೆಗ[ಣ್] ತಿಂಗಳರೆ ನೊಸಲು (ಸಾಳ್ವಭಾ. ೪-೬). [ ತಿಂಗಳ್ + ಅರೆ$_3$ ]

**ತಿಂಗಳವರೆ** (ನಾ). ಬಿತ್ತಿದ ಒಂದು ತಿಂಗಳಿಗೆ ಕಾಯಿಬಿಡುವ ಒಂದು ಬಗೆಯ ಅವರೆ : ತಿಂಗಳವರೇ, ಕೋತಂಬರಿ, ಹಸೀಮೆಣಸಿನಕಾಯಿ ತಕ್ಕೊಂಡು ಬಾ (ರಕ್ತಧ್ವ. ೨೦). [ ತಿಂಗಳು (<ತಿಂಗಳ್) + ಅವರೆ, ]

**ತಿಂಗಳಿಗೆ** (ನಾ). ಹಣೆಗೆ ಹಚ್ಚಿಕೊಳ್ಳುವ ಬೊಟ್ಟು; ತಿಲಕ : "ತಿಂಗಳಿಗೆಯೆಂದು ತಿಲಕಂ" (ಕಶಸಾ. ೬೩-೪೧೨); "ಜೂಳಿಯ ತಿಂ[ಪಾಠಾಂ. ದಿಂ]ಗಳಿಗೆಯೆನಲ್ ನೇರಬೊಟ್ಟಿಗೆ ಪೆಸರ್" (ಕಬ್ಬಿಕ್ಕಿ. ೨೬). [ ? ]

**ತಿಂಗಳು** 'ತಿಂಗಳ್' ನೋ.

**ತಿಂಗಳುಬೆಳಕು** (ನಾ). ಚಂದ್ರನ ಪ್ರಕಾಶ ; ಬೆಳುದಿಂಗಳು : ತಿಂಗಳು ಬೆಳಕಿನ ಇರುಳಿನಲಿಂದು ಅಮ್ಮನು ಕೆಲಸದೊಳಿರುತಿರೆ ಕಂಡು (ಕಪಪು. ೩-೧೦) : ತಿಂಗಳುಬೆಳಕೆಂದರೆ, ಪ್ರಾತಃಕಾಲದ ಬ್ರಾಹ್ಮೀಮುಹೂರ್ತದಲ್ಲಿಯೂ ಭೂದೇವಿಗೆ ಕ್ಷೀರಾಭಿಷೇಕವನ್ನೆಸಗುವಂತಿತ್ತು (ನಾದಜೀಜ.೩೮೪). [ ತಿಂಗಳು (<ತಿಂಗಳ್) + ಬೆಳಕು$_2$ (<ಬೆಳಗು$_2$)]

**ತಿಂಗಳೋಡು** (ನಾ). (ಕರಾ)ಸೌರಮಾನ ತಿಂಗಳ ಮೊದಲನೆಯ ದಿನ : ಈವತ್ತು ತಿಂಗಳೋಡು, ಹಣ ಯಾರಿಗೂ ಕೊಡಬೇಡ (ರೂಢಿ). [ ತಿಂಗಳು (<ತಿಂಗಳ್) + ಓಡು ?. / ತುಳು. ತಿಂಗೊಡ]

**ತಿಂಗಳ್ಗಲ್** (ನಾ). ಚಂದ್ರಕಾಂತ ಶಿಲೆ : ಗಲ್ಗಲನೆ [illegible] ಪೋಲ್ ಕರಗಿ ಪರಿವ ಜೊನ್ನದ ತಿಂಗಳ್ಗಲ್ಗಳೊಸರ[illegible] ಕುಳಿರ್ದುದಾ ಜಳಂ ತಿಳಿಗೊಳದಾ (ಅರ್ಧನೇ. ೫-೦೧೯) [ ತಿಂಗಳ್ + ಕಲ್$_3$ ]

**ತಿಂಗಳ್ವಕ್ಕಿ** (ನಾ). ಬೆಳುದಿಂಗಳನ್ನೇ ಆಹಾರವಾಗಿ ಉಪಯೋಗಿಸಿಕೊಳ್ಳುವುದೆಂದು ಭಾವಿಸಲಾದ ಒಂದು ಬಗೆಯ ಪಕ್ಷಿ; ಜೊನ್ನವಕ್ಕಿ; ಚಕೋರಪಕ್ಷಿ : ತಿಂಗಳ್ವಕ್ಕಿ, ತೇನೆ, ತನ್ನೆಣೆವಕ್ಕಿಯಂ ಕರೆದು ಕೂಗುತ್ತೆ (ಶ್ರೀರಾಮಾ. ೨೬೧-೯೦೦). [ ತಿಂಗಳ್ + ಪಕ್ಕಿ$_1$ ]

**ತಿಂಗಿಣಿ** 'ತಿಂಗಣಿ' ನೋ.

**ತಿಂಗುಳಿ** (ನಾ). ೧. ಆಹಾರಕ್ಕಾಗಿ ಸಾಕಿರುವ ಕಂರಿ. ೨. ತಿನಿಸು : ಆಹಾರ : "ಆಮಿಷಂ – ಆಹಾರಂ (ತಿಂಗುಳಿ)" (ನೀತಿವಾ. ೨೮-೫೫) : ತನುವಂ ನಂಬಿರ್ದು ಕಟ್ಟಿಂ ಜವಂಗನ್ನಂ ತಿಂಗುಳಿ ಮಾಡದೀಗಳೆ ಜಿನಶ್ರೀದೀಕ್ಷೆಯುಂ ತಾಳ್ದುವಂ (ಧರ್ಮಾಮೃ. ೧೦-೨೮೬) ; ಸವಿಗಂಡರಸಿ ಬಾಣಸಿನ ಮನೆಯೊಳ್ ಕಟ್ಟಿದ ಪೋಂತಂ ತಿಂಗುಳಿಮಾಡಿದಳದಂ (ಯಶೋಧ. ೩-೬೮). [ ತಿನ್ + ಕುಳಿ$_3$ ]

**ತಿಂಗುಳಿದಿನ್** (ಕ್ರಿ). ಆಹಾರವನ್ನು ತಿನ್ನು,–ಉಣ್ಣು : ದೂಱುಲಱಿಯೆನು ಸುಭಟರಿಗೆ ಮನ ಬೇಱಿ ನುಡಿ ಬೇಱಾಯ್ತು ಸಮರದೊಳೇಱಿ ತಿಂಗುಳಿ ದಿಂದು ದಣಿದುದು ನಮ್ಮ ಬಲವೆಂದ (ಕುಮಾಭೀ. ೭-೮). [ ತಿಂಗುಳಿ + ತಿನ್ ]

**ತಿಂಟೆ** 'ತಿಟ್ಟು$_3$' ನೋ.

**ತಿಂಡಿ** (ನಾ). ೧. ತಿನಿಸು ; ಆಹಾರ ; ಖಾದ್ಯ : ತೆಮ್ಮಲಿನ ತಿಂಡಿಗಳ್ ಹಸುರೆಲೆಯ ತಟ್ಟೆ (ಕಾಲೂರ. ೬೩-೧೦೬) : ತಿಮಾರಿ ತಿಂಡಿಯನ್ನು ಅಣಿ ಮಾಡುವ ಕೆಲಸದಲ್ಲಿ ತೊಡಗಿದ (ಛಾರತಿ. ೬) ; ಹಸುಬೆಯಲ್ಲಿದ್ದ ತಿಂಡಿಯ ಗಂಟು ದಾರಿಯುದ್ದಕ್ಕೂ ಅವನಿಗೆ ಜ್ಞಾಪಕ ಬರುತ್ತಿತ್ತು (ಕಳಮ. ೪) ; ನಿಮಗೋಸುಗವಾಗಿಯೇ ತಿಂಡಿಗಳನ್ನು ತಯಾರಿಸಹೇಳಿದೆ (ಕಾಲಜಾ. ೧೦). ೨. (ಉಕ) ತುರಿಕೆ ; ನವೆ ; ತೀಟೆ : ಕ್ಯಾಪಿಟಲ್ಲು ಏನು ? ಆಟಮ್ಮು ಬಾಂಬು, ತಲೆ ತುಂಬ ತಿಂಡಿ, ಹೇನು! (ಸೂರ್ಯಪಾ. ೫೨-೨); ಸಹನೆ ಸಹಾನುಭೂತಿಗಳನ್ನು ಕಂಡರೆ ಮೈಯೆಲ್ಲ ಕೆರೆಯುವಷ್ಟು ತಿಂಡಿಯೇಳುತ್ತಿತ್ತು (ಕಾಲಚ.೫೦) : ಜನರು ತಮ್ಮ ನಾಲಗೆಯ ತಿಂಡಿಯನ್ನು [illegible] ಕೊಳ್ಳಬೇಕೋ (ಮೂರುದಾ. ೧೩೦). ೩. (ಆಲಂ) [illegible] : ಗರ್ವ : ನಿನಗೆ ತಿಂಡಿ ಜಾಸ್ತಿಯಾಗಿದೆ (ರೂಢಿ).

ತಿಂಡಿತಿನಿಸು = ಆಹಾರ [illegible] ಸಿದ್ಧವಾಗಿವೆ (ಜೀವಾತ್ಮ. ೨೦೨) : ಸಂತೋಷದಿಂದಲೇ ಗೋದಮ್ಮ ತಿಂಡಿತೀರ್ಥ ಬೇಗನೆ ಒದಗಿಸಿಕೊಟ್ಟು ಜೋಯಿಸರಲ್ಲಿಗೆ ಕಳುಹಿಕೊಟ್ಟಳು (ತ್ಯಾಗಮ. ೭). [ ದೇ.॥ ತಮಿ. ತಿಣ್ಟಿ ; ಕೊಡ. ತೆಲು. ತಿಂಡಿ ]

**ತಿಂಡಿಪೋತ, ತಿಂಡಿಹೋತ** (ನಾ). ಆಹಾರವನ್ನು ಹೋತದಂತೆ ತಿನ್ನು ವವನು ; ಅತಿಯಾಗಿ ತಿನ್ನುವವನು; ಹೊಟ್ಟೆಬಾಕ: ಕೆಲಸಕ್ಕೆ ಬಾರದ ತಿಂಡಿಪೋತ ಎನಿಸಿಕೊಂಡನು (ಆಯ್ದಕೀ. ೩೧) ; ಅಧ್ಯಾಪಕರು ನಮ್ಮನ್ನು ತಿಂಡಿಪೋತರು ಎನ್ನಬಹುದು (ಅಲವು. ೧೧೪) ; ತಿಂಡಿಪೋತ ನಂಜೇಲಿಂಗ ಭಟ್ಟನ ಕಥೆಯನ್ನು ಹೇಳಿದೆ (ಇಬದು. ೮). **ತಿಂಡಿಹೋತ :** (೬).
[ ತಿಂಡಿ + ಪೋತ$_1$ (<ಪೋಂತು)./ತಮಿ. ತಿನ್ಪಪೋತ್ತು ; ತೆಲು. ತಿಂಡಿಪೋತು ]

**ತಿಂಡಿಪೋತತನ, ತಿಂಡಿಹೋತತನ** (ನಾ). ಅತಿಯಾಗಿ ತಿನ್ನುವ ಸ್ವಭಾವ; ಹೊಟ್ಟೆಬಾಕತನ: ಅವನ ತಿಂಡಿಪೋತತನವನ್ನು ನೋಡಿದರೆ ಜುಗುಪ್ಸೆಯಾಗುತ್ತದೆ (ರೂಢಿ). **ತಿಂಡಿಹೋತತನ :** (೬).
[ ತಿಂಡಿಪೋತ + – ತನ ]

**ತಿಂಡಿಬಾಕ** (ನಾ). = ತಿಂಡಿಪೋತ : (೬). [ ತಿಂಡಿ + – ಬಾಕ ]

**ತಿಂಡಿಶ** (ನಾ). ಒಂದು ಬಗೆಯ ಶಾಕ,–ಸಸ್ಯ : ಸವತೆ, ತಿಂಡಿಶ . . . ಇವು ಕಫವಾತಕರ (ಅಷ್ಟಾಂಗ. ೧೩೭). [ ? ]

**ತಿಂಡಿಹೋತ** 'ತಿಂಡಿಪೋತ' ನೋ.

**ತಿಂಡಿಹೋತತನ** 'ತಿಂಡಿಪೋತತನ' ನೋ.

**ತಿಂಡುಕ** (ನಾ). ಒಂದು ಬಗೆಯ ಗಿಡ ; ತೂಬರೆ ಗಿಡ : ಕುಪರಥ, ಹಿಗೆ, ತುವುಕಿ, ತಿಂಡುಕ, ಪೊಳೆತುಮ್ಮಿ, ಬಂಧ (ಮುಜಿಗಿ. ೩೦–೬೦೩).
[ <ಸಂ. ತಿಂದುಕ ]

**ತಿಂಡೆ** 'ತಿಟ್ಟು$_3$' ನೋ.

**ತಿಂತಿ** 'ತೀಂಟೆ$_1$' ನೋ.

**ತಿಂತಿಡಿ** (ನಾ). ಹುಣಸೆಮರ. [ ಸಂ. ತಿಂತಿಡೀ ]

**ತಿಂತಿಡಿಕ** (ನಾ). = ತಿಂತಿಡಿ. [ ಸಂ. ತಿಂತಿಡಿಕಾ ]

**ತಿಂತಿಡೀಕ** (ನಾ). ೧. = ತಿಂತಿಡಿ. ೨. ಮುಖ್ಯವಾಗಿ ಹುಣಸೆಹಣ್ಣಿನಿಂದ ತಯಾರಿಸಿದ, ಹುಳಿಯಾದ ಗೊಜ್ಜು ಅಥವಾ ಸಾಂಬಾರು.
[ ಸಂ. ತಿಂತಿಡೀಕಾ ]

**ತಿಂತಿಣಿ$_1$, ತಿಂಥಿಣಿ** (ನಾ). ಗುಂಪು; ಗೊಂದಣ; ಸಮೂಹ: "ಬಂಬಲ್, ತುಱುಗಲ್, ಒಟ್ಟಜೆ, ತಿಂತಿಣಿ . . . ಗೊಂದಣ–ಈ ೪೦ ಸಮೂಹಂ" (ಕಶಸಾ. ೧೧–೨೨೨); "ಗೊಂದಣ ತರಳ್ಕೆ . . . ತಿಂತಿಣಿ . . . ತೊಂಬೆಯೆನೆ ಶ್ರೇಣಿರಾಶ್ಯಂ" (ಶಬ್ದಮಂ. ೫೫) : ರವಿಕಿರಣಾಳಿಗಳ್ ಧ್ವಜಪಟಾಳಿಯ ತಿಂತಿಣಿಯಿಂದಮುರ್ಚಲಾಱವೆ (ಶಂಪಥಾ. ೧೦–೩೦) ; ತಱಗೆಲೆ ಬಳ್ಳಿಯೆಂಬಿವಱ ತಿಂತಿಣಿಯೊಳ್ಸುರಗಾತಿವೇಗದಿಂದಱಿಯಲೆ ಬಂದುದಿಲ್ಲ ಪಥಮುಂ (ಶಾದಂಪೂ. ೬೨೬) ; ಗಣ ತಿಂತಿಣಿಯೊಳಗಿರಿಸೆನ್ನನು ಲಿಂಗವೇ (ಬಸವ. ೩೬೭) ; ಅಂತವರನೊತ್ತಿತ್ತಟ್ಟ ಮನೆಯುನೇವೊಗಳ್ವೆನದು ತಿಂತಿಣಿಯು ಸೂನೆಗಾಱರ ನಿಳಯ ರಕ್ಕಸಿಯ ಮಾಡ ಹಾವಿನ ಹೇಳಿಗೆ (ಹಡಕಾ. ೧೨–೨) ; ಛತ್ರಚಾಮರದ ತಿಂತಿಣಿ (ದಶಕು. ೮–೨) ; ಸಂಪಗೆಯರಳ ಪರಿಮಳ ಪದ್ಮವೇ ತುಂಬಿಗಳ ತಿಂತಿಣಿಗೆ (ಶುಪ್ಪಾದ್ರೂ. ೪–೪೩). **ತಿಂಥಿಣಿ:** ಪುಣ್ಣ ತಿಂಥಿಣಿಗಳಿನಂದಗುರ್ವುವೆರಸಾಡಿದುವೊಂದೆರಡಾನೆಯಟ್ಟೆಗಳ್ (ಶಂಥಥಾ. ೧೦–೫೭) ; ಚೆನ್ನಮಲ್ಲಿಕಾರ್ಜುನ ಜಂಗಮದ ತಿಂಥಿಣಿಯಲ್ಲಿ ಓಲಾಡುವೆ (ಮಹಾದೇ. ಬ. ೬೮–೧೬೯) ; ನರ್ತಕರ ವರ್ತಕರ ಮೊತ್ತದೊತ್ತರದ ತಿಂಥಿಣಿಯನೊತ್ತರಿಸಿ ಇಟ್ಟಣಿಸಿದ ಕಟ್ಟಣಕದಾಸ್ಥಾನದೊಳು (ಬಸರ. ೬–೨೬) ; ಕಂತುಹರನವರೊಡನೆ ಹರಹರ ಮಂತಣದಿ ತಿಂಥಿಣಿಯೊಳತಿ ನಿಶ್ಚಿಂತನು (ಸಾನಂಚ. ೭–೬೭). P ಇದು 'ತಿಣಿ'ಯ ದ್ವಿರುಕ್ತಿಯಿರಬಹುದು. [ <ತಿಣ್ಣ$_2$ ]

**ತಿಂತಿಣಿ$_2$** (ನಾ). = ತಿಂತಿಡಿ : "ತಿಂತಿಣ – ತಿಂತ್ರಿಣ – ಹುಣಸೆಮರ" (ತದ್ಭವೆವಿ. ೫೧). [ <ಪ್ರಾ. ತಿಂತಿಣೀ./ಸಂ. ತಿಂತ್ರಿಣೀ ]

**ತಿಂತಿಣಿಗೊಳ್** (ಕ್ರಿ). ಗುಂಪು ಸೇರು ; ಒಟ್ಟುಗೂಡು ; ದಟ್ಟಯಿಸು : ದಿತಿಸುತನ ಸೇನಾನೀಕವಡಿಗಡಿಗೆ ಉಲಿದು ತಿಂತಿಣಿ[ಪಾಠಾಂ. ಟಿಂಟಣಿ] ಗೊಂಡು ಸಿಂಹದ ಮೆಳೆಯ ನರಿಗಳು ಕೆಣಕುವಂದದಿ ತಲೆಯ ಬರಹವ ತೊಡೆಯ ಹಳಚಿದರಾಗ ಹರಿಯೊಡನೆ (ಸಂಭಪ. ೮–೧೧೯); ತಿಂತಿಣಿಗೊಂಡೆಸೆವೈವತ್ತಾಱು ಜನಾಂತಂ ನೆಲಸಿಹುವು (ಜದುಕಾ. ೦–೩೩).
[ ತಿಂತಿಣಿ$_1$ + ಕೊಳ್$_1$ ]

**ತಿಂತಿಣಿವಡೆ** (ಕ್ರಿ). = ತಿಂತಿಣಿಸು : ಪಲವುಂ ಪರಿಯ ಪಕ್ಕಿಗಳ ಪೆರ್ಚಿದ ಸರಂಗಳಿಂ ಹರಣಂಬಡೆದಂತೆ ಪರಿವಡೆದು ತಿಂತಿಣಿವಡೆದ ಪೇರಡವಿಯೊಳ್ (ಕಬ್ಬಿಗಾ. ೨೦೭). [ ತಿಂತಿಣಿ$_1$ + ಪಡೆ$_1$ ]

**ತಿಂತಿಣಿವಣ್** (ನಾ). ಒತ್ತೊತ್ತಾಗಿ ಸೇರಿರುವ ಹಣ್ಣು ; ಗೊಂಚಲು ಗೊಂಚಲಾದ ಹಣ್ಣು : ತಿಂತಿಣಿವಣ್ಣನಾಂತ ಕದಳಂ ಪದವಣ್ಪುದಿದೀಳೆ (ಜಗವಿ. ೨–೧೫); ನೆಲಕ್ಕೆ ಜೋಲ್ವ ತಿಂತಿಣಿವಣ್ಣನಾಂತ ಸಣ್ಣಗೊಂಬಿಂದಿಂಬುವಡೆದ ದಾಳಿಂಬಂಗಳೊಳಂ (ಕಬ್ಬಿಗಾ. ೩೦) ; ನಾಡೆ ಕೂರ್ವ ತಿಂತಿಣಿವಣ್ಣಳಾಂತ ಕದಳಂ (ಜಲಪು. ೧೧–೨೨). [ ತಿಂತಿಣಿ$_1$ + ಪಣ್$_3$ ]

**ತಿಂತಿಣಿವರಿ** (ಕ್ರಿ). ಗುಂಪಾಗು ; ಕಿಕ್ಕಿರಿ : ಜನಪದಂ ಧಗೆಯ ಹೆಬ್ಬಾವಂತೆ ಹೊರಟು ತಿಂತಿಣಿವರಿದು ಬಂತು (ಗೊರೂ.ಥಾ. ೧೧–೨೭೮).
[ ತಿಂತಿಣಿ$_1$ + ಪರಿ$_2$ ]

**ತಿಂತಿಣಿಸು** (ಕ್ರಿ). ಗುಂಪಾಗು ; ಕಿಕ್ಕಿರಿ ; ಒತ್ತೊತ್ತಾಗಿ ಸೇರು ; ಸಮೂಹವಾಗು : ತಿಂತಿಣಿಪ ನಿಳಯದಿಂ . . . ಒಪ್ಪೆ ಪುದಿಳೆಯೊಳೋಪಧಿಪ್ರಸ್ಥಪುರಂ (ಗಿರಿಳ. ೨–೧೧೧) : ದಿಶಾ ಚತುಷ್ಟಯಂ ಪುಣಿಹಿತಿಹೇತಿ ತಿಂತಿಣಿಸಿದಂತೊಡವಂದುದು ಪಣ್ಣದಾನೆ (ಅನಂಪು. ೧೧–೭೪) : ತಿಂತಿಣಿಸಿ ಗಗನದೊಳ್ಸುಂಬಿಗಳ್ಕಾರಮುಗಿಲಂತೆ ನವಪಾರಿಜಾತದ ಕುಸುಮ ಪರಿಮಳಕೆ ಸಂತತಂ ಮುಸುಕಲ್ (ಜೈಮಿಭಾ. ೩೬–೨೦). [ ತಿಂತಿಣಿ$_1$ + – ಇಸು$_3$ ]

**ತಿಂತೆ** 'ತೀಂಟೆ$_1$' ನೋ.

**ತಿಂತ್ರಿಣಿ** (ನಾ). ಹುಣಸೆಮರ ; ತಿಂತಿಣಿ : ಘನಸಾರ ಖರ್ಜೂರ ಕರ್ಪೂರ ಚೂತ ಪನಸು ತಿಂತ್ರಿಣಿ ಬಿಲ್ವ ಪಾಟಲಾಶೋಕ ಜನನುತ ಮಂದಾರ (ಸಾಗಂಧಿ. ೭–೪೪) ; ತಿಂತ್ರಿಣೀವೃಕ್ಷದ ಪೊಸಫಲದೊಳ್ಸಾರವಂ ಕಂಡ ಕಾಲಕ್ಕೆ (ಶಂಕರ. ೯೩–೫೩). [ ಸಂ. ತಿಂತ್ರಿಣೀ ]

**ತಿಂಥಿಣಿ** 'ತಿಂತಿಣಿ$_1$' ನೋ.

**ತಿಂದುಕ** (ನಾ). ತೂಬರೆಗಿಡ ಮತ್ತು ಅದರ ಕಾಯಿ : "ತಿಂದುಕಃ, ಸ್ಫೂರ್ಜಕಃ, ಕಾಲಸ್ಕಂಧಃ, ಶಿತಸಾರಕಃ–೪ ತುಂಬರಗಿಡ, ತೂಬರೇಗಿಡ. ಇದನ್ನು ಜಗಳದ ಮರವೆಂದು ಕೆಲವರನ್ನುವರು" (ಸಿದ್ಧಾಂತಿ. ೧೦೬) ; ತಿಂದುಕ ಪೀನಫಲಂಗಳೆ . . . ತಿಂದು (ಕಾವ್ಯಾವ. ೫೨೬) ; ನಾನಾ ಬಗೆಯ ನಾರುಬೇರುಗಳೂ . . . ಹಣ್ಣುಹಂಪಲುಗಳೂ, ಬೆಳೆಯುತ್ತವೆ. ಉದಾಹರಣೆಗೆ ಆಮ್ರ . . . ತಿಂದುಕ, ಉದುಂಬರ (ಪ್ರವಾಇ. I, ೨೦೫).
[ ಸಂ. ]

**ತಿಂಪು** 'ತಿಣ್ಪು' ನೋ.

**ತಿಂಪುಗೆಡು** (ಕ್ರಿ). ಗೌರವವನ್ನು ಕಳೆದುಕೊಳ್ಳು ; ಹಗುರವಾಗು ; ಅವಮಾನ ಹೊಂದು : ಖಳನ ದೆಸೆಯಿಂ ತಿಂಪುಗೆಟ್ಟೆವು ಪೇಳಲೇನದನು (ನಿಭಾಗ. ೭–೮–೨೭). [ ತಿಂಪು (<ತಿಣ್ಪು) + ಕೆಡು$_1$ ]

**ತಿಂಬ** 'ತಿನ್' ಪರಾ.

**ತಿಂಬಂಡ, ತಿಂಬಡ** (ನಾ). ತಿನ್ನುವ ಪದಾರ್ಥ; ತಿನಿಸು ; ತಿಂಡಿ : ಅಷ್ಟಕರ್ಳ ಮನೆಯಿಂದಂ ಪೂಸಲುಮುಡಲುಂ ತುಡಲುಂ ಪೂವುಂ ತಂಬುಲಮುಂ ತಿಂಬಂ[ಪಾಠಾಂ. ಬ, ಬಿ]ಡಂಗಳುಂ ಬಂದುವು (ವಡ್ಡಾರಾ. ೦೦೭–೨೦). **ತಿಂಬಡ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ತಿನ್ + ಬಂಡ$_2$./ತಮಿ. ತಿನ್ಪಣ್ಣ ; ತೆಲು. ತಿನುಬಂಡ ]

**ತಿಂಬಡ** 'ತಿಂಬಂಡ' ನೋ.

**ತಿಂಬಿಸು** (ಕ್ರಿ). ತುಂಬಿಸು; ಭರ್ತಿಮಾಡು: ಜಳಬಾತಿಕಾವಳಯಮನಳುಂಬಮಾಗೆ ತಿಂಬಿಸಿಯುಂ (ಪುಷ್ಪಪು. ೭-೬೯ ವ). [ ತಿಂಬು$_1$ + – ಇಸು$_3$ ]

**ತಿಂಬು$_1$** (ಕ್ರಿ). ೧. ತುಂಬು ; ವ್ಯಾಪಿಸು : ಕೆಂಬಣ್ಣದ ಕುದುರೆಗಳೊಳೊಡಂಬಡೆ ನಿಜರಜತರಥಮಗುರ್ವುರ್ವರೆಯುಂ ತಿಂಬೆ[ಪಾಠಾಂ.ತುಂಬೆ]ಕಳಶಧ್ವಜಂ ಮಿಳಿರ್ದಂಬರಮಂ ಬಳಸೆ ನಿಂದನಾತಂ ದ್ರೋಣಂ (ಪಂಪಭಾ. ೧೦-೫೪) : ನಗದ ಮಾರ್ದನಿ ಕಿವಿಗಂ ತಿಂಬಿ (ಶಾಂತಿಪು. ೨-೧೦೨) ; ಸೊಪಡಿಂ ಸೊರ್ಕಿಸುತುಂ ಕರೇಣುಕುಳಮಂ ಸಾರ್ದಾರ್ದು ಸಾಮೋದಪಲ್ಲವಮಂ ಮೇವುತೆ ತಿಂ[ಪಾಠಾಂ. ತೀಂ]ಬ ತುಂಬಿಗಳನುದ್ಯದ್ಗಲ್ಲದಿಂದಗ್ರಪಲ್ಲವದೊಳ್ ಸೋವುತೆ ಸೋರ್ವ ದಾನಜಲದಿಂದಂ ಸಲ್ಲಕೀಕಾನನೋದ್ಭವಮಂ ಮಾಡುತು ಮಾಡುತಿರ್ದುವಗದೊಳ್ ಕೋಡಿಟ್ಟು ಕಾಡಾನೆಗಳ್(ಲೀಲಾವ.೮-೩); ನೀಲದುನ್ಮುಖಮಯೂಖಸಂಕುಳಂ ಕೊಡಂಕೆಯೊಳ್ ತಿಂಬಿತೆಂಬಂತೆ (ಚಂದ್ರಪ್ರ. ೬-೬೩ ವ) ; ತಿಂಬಿ ಗಟಪುವ ಗಿಳಿಗಳೊಡನೆಳಸಿ ಮಾತಾಡಿ (ಪುಷ್ಪಪು. ೨-೪೪) : ಲೊಕ್ಕಿಯ ಕಷಾಯಮುಂ ಕೆ(ಕು)ಡಿಸುಗುವಮುಷ್ಣಾಂಬುವೆ ಮೇಣಾ ಮಧುವಿಂ ತಿಂಬಿದ ವಿಷಮುಂ(ಖಮದ.೨-೧೪೩). ೨. ತುಂಬಿಸು ; ಭರ್ತಿಮಾಡು : "ತಿಂಬು-ಪೂರಣೇ" (ಶಮಧಾ) ; ರುಚಿಪೆತ್ತಿರ್ದ ಪಾನಮಿದು ಮಜ್ಜಿಗೆ ತಾನಿದು ಶಿಖರಿಣಿಯೆನುತುಂ ತಿಂಬಿದಿಂಬಿ ತಂದೆಱೆದರಬಲೆಯರ್ ಸಿರ್ಪುಗಳಿಂ (ಸುಕುಮಾ. ೧೧-೩೧) : ದೆಸೆಯಂ ಪೊಂಬಣ್ಣದಿಂ ತಿಂಬುವ ಕಳಮವನಂ (ಎಕ. XI, ದಾವಣ. ೩೫-೩೫ ; ಸು. 1160) ; ಬಳಸಿದಗಟನೊಗುವಿಂಗೆ ತಿಂಬಿ ತುಂಬುವರಿಯಿಸಿಯುಂ (ಚಂದ್ರಪ್ರ. ೮-೪೩ ವ) ; ಅಂಬರಮೆಯ್ದೆ ತಿಂಬಲಿಕ್ಕಿದ ಕಡೆಮುತ್ತಿನೋಳಿಯೆನೆ ಕಣ್ಗೊಳಿಸಿರ್ದುವು ತಳ್ತ ತಾರೆಗಳ್ (ಕುಸುಮಾ. ೪-೪೦) ; ವರ್ಣಮಾಲಿಕೆಯೆಂಬಳ್ ಬಹು ರತ್ನಪ್ರಾಂಶುಪ್ರಸರದಿಂ ಪಲತೆಱದ ವರ್ಣಪೂರಂಗಳಂ ಪರಿಪೂರ್ಣಮಾಗಿ ಬೆಡಂಗುವಡೆಯೆ ತಿಂಬಿಯುಂ (ಶಾಂತೀಶ. ೧೩-೨೨೯ ವ). 'ತುಂಬು$_1$' ಪರಾ.

△ **ತಿಂಬು$_2$** (ಕ್ರಿ). ತಿನ್ನು ; ಭಕ್ಷಿಸು : ಮಣ್ಣು ತಿಂಬುವದಱಿಂದ ಪಾಂಡುರೋಗ ಹುಟ್ಟುವದು (ವೈದ್ಯಸಾ. I. ೩೩೩) ; ಅಶನವಾದರೆ ತಿಂಬುತಿಹನು ಮೂರು ಪಂಚೇರ (ಜ್ಞಾನಸಿಂ. ೨.೧೦); ಬುತ್ತಿ ತಿಂಬುವಗೆ ಲತ್ತೆಯುಂಬುವಗಾದೆ (ಮಹಾವಿ. ೪-೯೪). [ <ತಿನ್ ]

**ತಿಂಬೊಡೆ** (ನಾ). [ಸಂಗೀತ] ಹಾಡುವ ಒಂದು ಕ್ರಮ (?) : ವಿಕ್ಕ ತಿಂಬೊಡೆ ತ್ರಿವಳಿಗಳೆಂದೆಂಬ ಸೂಳುಕ್ರಮದಿಂದ ಪಾಡಿದರು (ತರ್ಕಶಾ. ೭-೫೭). [ ? ]

**ತಿಕ, ತಿಗ, ತೀಗ** (ನಾ). ೧. ಕುಂಡೆ ; ಗುದ ; ಪೃಷ್ಠಪ್ರದೇಶ ; ಆಸನ ; ಅಂಡು:ಘಟ ದೀಪಾಂತರಮಾರುತಮಾವಿಂದ ಬಂದಿತ್ತೊಂದು ವಿಕಟಾಂಗದ ಕುದುರೆ ಬಾಯಿಗೆ ಪಲ್ಲಣ ತಿಕಕ್ಕೆ ಕಡಿವಾಣ ಪಲ್ಲಿಗೆ ಪಕ್ಕರಿಕೆ (ಸುಂಕಬಂ.೬೪); ಆಸನದ ಪೊಱಗೆ ಪೃಷ್ಠಮದೀಸೆನಿಪಾ ಪೆಸರದಕ್ಕುಮದಱಿಂ ನಡುವಣದೇಶದ ನಿಟ್ಟೆಲುವಿಂಗಂ ಆಸರಿಸುಗು ಮಲಕುಟಂ ತಿಕಂ ತಾಮೆಂದುಂ (ಅಶ್ವಶಾ. ೯-೪೪); ಕುಕುಂದರೌ–ಕುಕುಂದರವೆಂಬ ಪೆಸರ್ವಡೆದಿರುವವು–ಅವು ತಿಕಕ್ಕೆ ಸಮೀಪವರ್ತಿ ಕೂಪಂಗಳು (ಬಾಹಟೀ. ೭-೪-೨೪ ವ) : ಉದ್ಯೋಗವಿಲ್ಲದ ಬಡಗಿ ಮಕ್ಕಳ ತಿಕ ಕೆತ್ತಿದ (ಗಾದೆ): ತೆಂಗಿನಮರ ಏರುವವನ ತಿಕ ಎಲ್ಲಿ ತನಕ ಹಿಡಿದಾನು? (ಗಾದೆ). ೨. ಮೂರರ ಗುಂಪು : "ತಿಗ(ತಿಕ)–ತ್ರಿಕ = ಮುಕ್ಕೂಟ" (ತದ್ಭಕೋ. ೧೭). ತಿಗ: ೧. "ತ್ರಿಕ – ತಿಗ" (ಶಮದ. ೨೯೦ ಪ್ರಯೋ) ; ತಿಗವೆತ್ತಿ ಕರದೆ ತೊಡೆಗಳನಗಲಿಸಿ (ಮನ್ಮವಿ. ೧೪-೪) ; ತುದಿವೆರಳ ಬೊಟ್ಟೆಗಳ ತಿಗ[ಪಾಠಾಂ. ಪರೆ]ಗಳ ತಡಪದಬ್ಬರವಱೆಯುಲೀತನನಿದಿರುಗೊಂಡಪ್ಪಿದರು (ತೊರರಾ.೫-೯-೭). ೨. "ತಿಗ(ತಿಕ)–ತ್ರಿಕ–ಮುಕ್ಕೂಟ" (ತದಕೋ. ೧೭). ೩. ಬೆನ್ನೆಲುಬಿನ ಕೆಳಭಾಗ : ಕಟಿಪ್ರದೇಶ : ಅಂತು ಶಿವಂಗೆ ದೂರವಾದೆನೆಂಬ ಕೋಪದಿಂ ತಿಗದೋಕ್ಕೆರ್ದ ನಂಜನೆಂಜಲಿಪ ಕುಡುಗೋಲಂ ತೆಗೆದುಕೊಂಡು [illegible] ೧೪-೨೫ ವ). ೪. ಪಗಡೆಯಾಟದಲ್ಲಿ ಮೂರರ [illegible] ಗರ,–ಮೂರರ ಗರ : [illegible] ಡಸಿದ ಚಾರಿಯನೆ ಪೊಯ್ದು ಗುಣಿಸು. . . ಎಸಿಪ್ಪ ನುಡಿ ನೆಗಟಲ್ ಲೆತ್ತವಾಡಿದರ್ ದಂಪತಿಗಳ್ (ಉದ್ಭಟ. ೧೧-೦೫); ದುಗನ ಪಾಯಿಕು ತನಗೆ ಪಾಯಿಕು ತಿಗನಮೆಂ[ಪಾಠಾಂ. ಪಾಯ್ಕುತ್ತಿಗನಮೆಂ]ಬಬ್ಬರದ ಪಾಸಂಗಿಗಳ ಬೊಬ್ಬೆಯು (ಕುಮಾ.ವ್ಯಾ.ಸ. ೧೩-೫೦) : ಎಸೆವ ದಾಯವನೆಸೆವ, ದುಗ ಬೀಳ್ಕೆ, ತಿಗ ಬೀಳ್ಕೆ ! (ಹರಿಶ್ಚ. ೪-೫೭). ತೀಗ : ೨. ದುಗಂ, ದೂಗಂ : ತಿಗಂ, ತೀಗಂ (ಶಬ್ದಾನು. ೩೭೮ ಪ್ರಯೋ). 'ಇತ್ರಿಗ' [illegible]
[ <ಸಂ. ತ್ರಿಕ ]

**ತಿಕಟ** 'ತಿಗಟ' ನೋ.

**ತಿಕಟಂ** 'ತಿಗಟಂ' ನೋ.

**ತಿಕಡಿ, ತಿಗಟಿ, ತಿಗಟೆ** (ನಾ). ೧. ತ್ರಿಕೋಣಾಕೃತಿ ; ತ್ರಿಭುಜ : (ಶಿ). ೨. (ಬ್ರಿಟಿಷರ ಆಳಿಕೆಯಲ್ಲಿ) ಜೈಲಿನಲ್ಲಿ ಅಪರಾಧಿಗಳ ಬೆನ್ನ ಮೇಲೆ ಏಟು ಕೊಡುವಾಗ ಉಪಯೋಗಿಸುತ್ತಿದ್ದ ತ್ರಿಭುಜವುಳ್ಳ ಒಂದು ಸಾಧನ : ನಾಲ್ವರು ವಿದ್ಯಾರ್ಥಿಗಳಿಗೆ 'ತಿಕಡಿ'ಯ ಮೇಲೆ ಹನ್ನೆರಡು ಏಟು ಕೊಡಬೇಕೆಂಬ ಕ್ರೂರ ಆಜ್ಞೆ ವಿಧಿಸಿಹೋದರು (ಆಗಸ್ಟ್. ೮೦) : 'ತಿಕಡಿ'ಯನ್ನು ಹೊತ್ತುಕೊಂಡು ಬರಲು ಅತ್ತ ಕೆಲವರು ಹೋಗುತ್ತಲೂ ಇತ್ತ ಹೊಡೆಯುವ ಬಾರಕೋಲು ಸಿದ್ಧವಾಯಿತು (ಆಗಸ್ಟ್. ೮೦). ೩. ಗಾಡಿ ಹೊಡೆಯುವವನು ಕುಳಿತುಕೊಳ್ಳುವುದಕ್ಕಾಗಿ ಗಾಡಿಯ ಮುಂಭಾಗದಲ್ಲಿ ಅಳವಡಿಸಿದ ತ್ರಿಕೋಣಾಕಾರದ ರಚನೆ ; ಕತ್ತರಿ : ಬಂಡಿಗಾರ ಮತ್ತೆ ತಿಕಡಿಯ ಮೇಲೆ ಕುಳಿತುಕೊಂಡು ಜೋರಾಗಿ ಗಾಡಿ ಓಡಿಸಿದನು (ಪುನರು. ೫೬೨). ೪. ಕಲ್ಲುಕೆಲಸದವನು ಸಮತಲರೇಖೆಯನ್ನು ಪರೀಕ್ಷಿಸುವ ಒಂದು ಸಲಕರಣೆ ; ಕಲ್ಲುಕುಟಿಗನ ಮಟ್ಟಕೋಲು; ಮೂಲೆಮಟ್ಟ: (ಶಿ). ೫. ಕ್ರೈಸ್ತಮತದವರಲ್ಲಿ ಕೆಥೋಲಿಕ್ ಪಂಗಡದವರು ತಮ್ಮ ಧರ್ಮದ ಸಂಕೇತವಾಗಿ ಧರಿಸಿಕೊಳ್ಳುವ ಅಡ್ಡಪಟ್ಟಿ ; ಕ್ರಾಸು : ಮಹಾರಷ್ಯದ ರಾಜಾಧಿರಾಜ ಝಾರನು ವಜ್ರಖಚಿತವಾದ ತಿಕಡಿಯನ್ನೂ ಒಂದು ಲಕ್ಷ ಫ್ರಾಂಕುಗಳ ದ್ರವ್ಯನಿಧಿಯನ್ನೂ ಕೊಟ್ಟನು (ವಿಶಾಸ. ೫೮) : ಕ್ರೈಸ್ತರು ಆರಾಧಿಸುವ ವಿಗ್ರಹವನ್ನಾಗಲಿ, ಕ್ರಾಸುಗಳೆಂಬ ತಿಕಡಿಗಳನ್ನಾಗಲಿ, ಮಹಮ್ಮದೀಯರು ನಾಶಪಡಿಸಲಾಗದು (ಪೈಗಂಬ. ೧೯೯). ೬. ದಾರ ಅಥವಾ ಹಗ್ಗವನ್ನು ಹುರಿಮಾಡುವಾಗ ಬಳಸುವ ಒಂದು ಕವೆಗೋಲು : (ಶಿ). ತಿಗಟಿ : ೧. ಅರ್ಜುನನು ಬಾಣದ ತಿಗಟಿ ಕಟ್ಟಿಕೊಟ್ಟು ತಲೆದಿಂಬು ಮಾಡಿದನು (ಸುವರ್ಣ. ೪೭). ೪. ನಾನು ಒಂದು ದಿವಸ ಹೊಸಮನೆಯನ್ನು ಕಟ್ಟುವ ಕೆಲಸ ನೋಡಲಿಕ್ಕೆ ಹೋದಾಗ ನನ್ನ ತಿಗಟಿಯನ್ನು ಮನೆಯಲ್ಲಿ ಮರೆತು ಹೋಗಿದ್ದನು (ಮುಂಬಯಿ. ೪-೧೦೭): ಬಾವಿಯ ಸಮೀಪದಲ್ಲಿ ಎತ್ತರ ಮಾಡಿಹೋಗುತ್ತ ಹೋಗುತ್ತ ತಿಗಟಿಯಿಂದ ತೂಗಿ ಸ್ವಲ್ಪಸ್ವಲ್ಪ [illegible] ಕಾವಲಿಯನ್ನು ಚೆನ್ನಾಗಿ ಮಾಡಿಬಿಟ್ಟರೆ (ಕೃಷಿಪ್ರ. ೧೦೧). ತಿಗಟೆ : ೭. ಪೃಷ್ಠಭಾಗ ; ಗುದ ; ಆಸನ : "ಗುದ ತಿಗಟೆ" (ಬಾಹಟೀ. ೨-೫-೮೨ ವ).

ತಿಕಡಿಹಿಡಿಸು = ಹಿಂಸೆಕೊಡು : ಹೆಣ್ಣಿಗೆ ತಿಕಡಿಹಿಡಿಸಿ ಬಲ್ಲೆ ಅನ್ನು ಬಾವಿಗೆ ಬೀಳುತ್ತೇನೆ ಅನ್ನು ಅಂತ ಹೇಳಿಕೊಟ್ಟು . ಮಾನಸಪ್ಪ ಮಾಡುತ್ತಾರೆ (ಹಂಗಡಿಂ. ೧೭೦).

[ ←ಹಿಂ. ಟಿಕಟೀ. / ಪ್ರಾ. ತಿಕಠ್. / ಸಂ. [illegible] ]

**ತಿಕಾಳಿ** (ನಾ). ಚೀಲದ ಬಂಡಕ್ಕೆ ಹೋಲಿದ ವಸ್ತ್ರದ ತುಂಡು: [illegible]
[ ? ]

ತಿಕೀಟು '[illegible]' ನೋಡಿ.

ತಿಕ್ಕ (ಗು). = [illegible] ೧. "[illegible] – ತಿಕ್ಕ" (ಶಮದ. ೩೬೦ ಪ್ರಯೋ); "ತಿಕ್ಕಂ ತೀಕ್ಷ್ಣ [illegible]" (ಕರ್ಣಾನಿ. ೬೩) : "ತೀಕ್ಷ್ಣ – ತಿಕ್ಕ" (ಶಬ್ದಾನು. ೧೬೦ ಪ್ರಯೋ.), "ತಿಕ್ಕನೆ[ಪಾಠಾಂ. ಮುರ್ಕನೆ] ತೀಕ್ಷ್ಣಂ "(ಕವಿಕಂ. ೫೪). [ <ಪ್ರಾ. ತಿಕ್ಖ./ಸಂ. ತೀಕ್ಷ್ಣ ]

ತಿಕ್ಕಲಾಟ (ನಾ). ತಬ್ಬಿಬ್ಬಾದ ನಡವಳಿಕೆ : ಭ್ರಮೆಗೊಂಡಿರುವಿಕೆ : (ಕ). [ ತಿಕ್ಕಲು$_1$ + ಆಟ ]

ತಿಕ್ಕಲು$_1$ (ನಾ). ಹುಚ್ಚು : ಚಿತ್ತವಿಭ್ರಮ ; ಭ್ರಮೆ : ಇಂತಹ ಕಲ್ಪನೆಯ ಪ್ರಾಬಲ್ಯವೇ ಮಿದುಳಿನಲ್ಲಿ ವಿಕಾರವನ್ನುಂಟುಮಾಡಿ ಮನಬಂದಂತೆ, ತಿಕ್ಕಲು ಮಾತುಗಳನ್ನಾಡಿಸುವುದು ಅಸಂಭವವೇನೂ ಅಲ್ಲ. ಇದೇ ದೆವ್ವ (ಜೀವಾತ್ಮ. ೨೫೦). 'ತಿಕ್ಕಲಾಟ' ಪರಾ.

ತಿಕ್ಕಲುತಿರುಗು = ಹುಚ್ಚು ಕೆರಳು ; ಚಿತ್ತಭ್ರಮೆಯುಂಟಾಗು : ಅವತ್ತು ಅದೇನು ತಿಕ್ಕಲುತಿರುಗಿತ್ತೋ ಏನೋ (ಉಮಾಶಿ. ೮೩).

[ದೇ.॥ ತಮಿ. ತಿಕೈಪ್ಪು, ತಿಯಕ್ಕ ; ತೆಲು. ತಿಕ್ಕ ]

ತಿಕ್ಕಲು$_2$(ನಾ). ಉಗ್ಗುವಿಕೆ; ಬಿಕ್ಕುವಿಕೆ; ಗುಕ್ಕುವಿಕ; ಮಾತನಾಡುವಾಗ ತಡವರಿಸುವಿಕೆ : (ಕ). 'ಬಿಕ್ಕಲು' ಪರಾ.

[ ದೇ.॥ ತಮಿ. ಮಲ. ತಿಕ್ಕು ]

ತಿಕ್ಕಾಟ (ನಾ). ೧. ಉಜ್ಜುವಿಕೆ ; ಅರೆಯುವಿಕೆ; ಘರ್ಷಣೆ; ತಾಕಲಾಟ: ಅದೊಂದು ನನ್ನ ಪ್ರಕೃತಿಯ ಪೇಚಾಟ; ತಿಳುವಳಿಕೆಯ ತಿಕ್ಕಾಟ (ವೃದ್ಧಾ. ೧೦ ಮುನ್ನುಡಿ) : ಉತ್ಪತ್ತಿಯಾಗುವ ಶಕ್ತಿಯಲ್ಲಿ ಕೊಂಚ ಭಾಗವು ಚಲಿಸುವ ಯಂತ್ರಭಾಗಗಳಲ್ಲಿ ತಿಕ್ಕಾಟದಿಂದ ನಷ್ಟವಾಗಿ (ಶಿಲ್ಪನಾ. ೨೨೦) ; ನೆಕ್ಲ ದೋವ್‌ನ ಹೃದಯದಲ್ಲಿ ಎರಡು ಭಾವನೆಗಳು ಮೂಡಿ ಪರಸ್ಪರ ತಿಕ್ಕಾಟ ಪ್ರಾರಂಭವಾಗಿತ್ತು (ಪುನರು. ೮೧) : ಸಕಲಧರ್ಮಗಳ ತವರೂರಾದ ಭಾರತ ವಂತೂ ಭಿನ್ನಭಿನ್ನ ಧರ್ಮಗಳ ತಿಕ್ಕಾಟದ ಒಡಕುಮನೆಯಾಗಿದೆ (ಧರ್ಮಸಾ. ೨). ೨. ವಿವಾದ; ಜಗಳ ; ಕಲಹ ; ಹೋರಾಟ: ಮೇ ತಿಂಗಳಲ್ಲಿ ಮತ್ತೊಂದು ತಿಕ್ಕಾಟ ನಡೆದು ನಾಲ್ಕು ಮಂದಿಯು ಬಲಿದಾನ ವಾಯಿತು (ಅಕ್ಕಾರ್ಶ. ೧೯೩) ; ಜೀವನದ ತಿಕ್ಕಾಟ ಮುಕ್ಕಾಟಗಳಲ್ಲಿ ಮಾನವನಿಗೆ ಶೃಂಗಾರವು ಸಿಂಪಿನಲ್ಲಿದ್ದ ಮುತ್ತಿನಂತೆ (ಕನ್ನಜಾ. ೯೦) ; ಮನೆಯಲ್ಲಿ ಇಷ್ಟು ತಿಕ್ಕಾಟ ನಡೆದೂ ಕೂಡ ಬಾಬಣ್ಣ ದೀಪಾವಳಿಗೆ ಅಕ್ಕನನ್ನು ಕರೆದು ಕೊಂಡೇ ಬಂದ (ಅಕೋಶ. ೧೦೩) [ ತಿಕ್ಕು + ಆಟ ]

ತಿಕ್ಕಾಡು (ಕ್ರಿ). ಉಜ್ಜು ; ಘರ್ಷಿಸು : ಮರಗಳು ಒಂದಕ್ಕೊಂದು ತಿಕ್ಕಾಡುತ್ತಿವೆ (ರೂಢಿ). [ ತಿಕ್ಕು + ಆಡು$_1$ ]

ತಿಕ್ಕಿಸು (ಕ್ರಿ). ಉಜ್ಜಿಸು : ಮುಸುರೆ ಪಾತ್ರೆಯನ್ನು ಚೆನ್ನಾಗಿ ತಿಕ್ಕಿಸು (ರೂಢಿ). [ ತಿಕ್ಕು + – ಇಸು$_3$ ]

ತಿಕ್ಕು (ಕ್ರಿ). ೧. ಒರೆ ; ತೇಯು : ಎಕ್ಕತುಳದ ಭಟತತಿಯ ಚಿಕ್ಕಟು ತಿಗುಣೆಯು ತಿಕ್ಕುವಂದದಿ ನೆಲಕಿಕ್ಕಿದನರೆಗಳಿಗೆಯೊಳು (ನೇಮಿಸಂ. ೨೯-೩೧); ಹಕ್ಕಿಗಳರಸನು ಮೋರನ ನೆಲಕಿಕ್ಕಿ ತಿಕ್ಕಿತು ಕೂಗಿ ಬೊಬ್ಬಿಡಲು (ಮೋಹಕ. ೩೮-೨೯). ೨. ಉಜ್ಜು ; ಒರಸು: ಅಡಿಗಡಿಗೆ ಮೂತ್ರಿಸುಗುಂ ಮೈಮುರಿವುದುಂ ಬೆಚ್ಚುಗುಂ ಮುಖವ ತಿಕ್ಕಿಕೊಂಡಟುಗುಂ (ಬಾಲಚಿ. ೧೨೫-೧೨) : ಗಟ್ಟಿಗೊಂದುವೆಯು ನಾಲ್ಬಳ್ಳದ ನಸೆಹಿ . ಬಿಸಿಲೊಳಗೊಣಗಲಿಟ್ಟೊಂದು ಬಳ್ಳಮುಷ್ಟನ್ನೆವರ ಚೆನ್ನಾಗಿಯೆ ತಿಕ್ಕಿ ಗಟ್ಟಿಗೆಯದ್ದು (ಸೂಪಶಾ. ೧-೯) : ಆಗಳೆ ಕಣ್ಣ ತಿಕ್ಕುತೊಯ್ಯನೆಯೆದೆವೊಂದೆರಳ್ಳುಱಿಯೆ (ಭರತ. [illegible]) [illegible] ೩. [illegible] ೪. [illegible] ; ನಯ [illegible] ಅಂಬಲೀ ಕುಡಿಯುವವನಿಗೆ ವಿವಾಸ

ತಿಕ್ಕುವವನೊಬ್ಬ (ಗಾದೆ). ೫. ಉಜ್ಜಿತೆಗೆ ; ಒರಸಿ ತೆಗೆ ; ಅಳಿಸು : ಕಡುತದಲ್ಲು ಮಧ್ಯ ಮೂರು ಪಂಕ್ತಿ ತಿಕ್ಕಿ ಬರೆದು ಇದ್ದದ್ದನ್ನು ಮಹಾರಾಜರ ಕಡೆಯವರು ತಿಳಿದು (ರಾಜೇಂದ್ರ. ೬೩). ೬. (ಅಲಂ) ನಾಶಮಾಡು : ಇದಿರಾದರೆ ತಿಕ್ಕುವೆನುಯಿಂದ್ರಾದಿ ದಿಕ್ಪಾಲತತಿಗಳಂ (ತುರಂಗ. ೩-೩೮).

ತಿಕ್ಕಿ ತೀಡು = ನಯಮಾಡು : ನಿನ್ನ ಗಾನದ ಬೆಳಕು ನೆಲಬಾನುಗಳ ತಿಕ್ಕಿ ತೀಡುತಿದೆ (ನೆಲಮು. ೪೧-೨೧). ತಿಕ್ಕಿಮುಕ್ಕು=೧. ಬಹಳ ತೊಂದರೆ ಕೊಡು ; ನಿರಂತರವಾಗಿ ಕಾಡು : ಎಡೆಬಿಡದೆ ಕಷ್ಟಕೊಡು : ನನ್ನ ತಂದೆ ಜೀವಿಸಿದಷ್ಟು ಕಾಲವೆಲ್ಲ ಸ್ವಂತಕ್ಕೆ ಪಟ್ಟ ಪಾಡು, ಮನೆ ಮಂದಿಗೆಲ್ಲ ಕೊಟ್ಟ ಕಷ್ಟ ತಿಕ್ಕಿಮುಕ್ಕಿದಂತಾಗಿತ್ತು (ಸ್ಮೃತಿಚಿ. ೩೦೮) : ಸಾವು ಒಮ್ಮೆ ಬಂದು ಮನೆಯಲ್ಲಿ ಕಾಲಿಕ್ಕಿತೆಂದರೆ ತಿರುಗೂಮುರುಗೂ ಆ ಮನೆಯನ್ನೇ ತಿಕ್ಕಿಮುಕ್ಕುತ್ತದೆ (ಮೊಪಾಸಾ. ೧೪). ೨. ಹೇಳ ಹೆಸರಿಲ್ಲದಂತೆ ನಾಶ ಮಾಡು,–ಧ್ವಂಸಮಾಡು ; ನಿರ್ನಾಮಮಾಡು : ಸುರನರೋರಗರೆಂಬ ಬಹಳ ನಿಶಾಟರ ತಿಕ್ಕಿಮುಕ್ಕುವರು (ಮೋಹತ. ೩೩-೧೮) ; ಉಕ್ಕಿದ ಕಡುಗೋಪದಿ ಕೋಲ್ಗಳ ತಿಕ್ಕಿಮುಕ್ಕಿದ ಮುರಹರಾಗ್ರಜನ ಟಕ್ಕಿಸಿ ಹೋದಡೆ ಬಿಡೆನೆಂದು (ಮೋಹತ. ೩೯-೯) ; ಉಳಿದ ಪುಲುದಿವಿಜ ಮುನಿ ಮುನಿಜನರ ತಿಕ್ಕಿಮುಕ್ಕದೆ ಬಿಡುವನೇ (ನವಮೋ. ೨೪-೬೯) ; ರಿಪುವನು ತಿಕ್ಕಿಮುಕ್ಕುವೆನೆನುತ ರಥವನೇರಿದನು (ರಾಮಾಸಂ. ೬-೯-೨೭).

[ ದೇ.॥ ಮಲ. ತಿಕ್ಕು, ತಿರಕ್ಕು ; ತುಳು. ತಿಕ್ಕು, ತಿಕ್ಕ್ ]

ತಿಕ್ಕುಮುಕ್ಕಾಟ (ನಾ). ಘರ್ಷಣೆ ; ತಿಕ್ಕಾಟ : ಒತ್ತಾಯದ ಪ್ರಕಾರ ಜನರ ಭಾಷೆಯು ಬೇರೆ ಭಾಷೆಗಳ ತಿಕ್ಕುಮುಕ್ಕಾಟದಲ್ಲಿ ಸಿಕ್ಕುವುದು (ವಿಚಾಮಂ. ೧೮) ; ಪೌರ್ವಾತ್ಯ ಸಂಸ್ಕೃತಿಗೂ ಪಾಶ್ಚಾತ್ಯ ಸಂಸ್ಕೃತಿಗೂ ತಿಕ್ಕುಮುಕ್ಕಾಟ ಬಂದಿದೆ (ಸಾಹಿಸಂ. ೨೦೦). [ ತಿಕ್ಕು + ಮುಕ್ಕು$_1$ + ಆಟ ]

ತಿಕ್ಕುವರಿ (ಕ್ರಿ). ತಿಕ್ಕುತ್ತ ಮುಂದಕ್ಕೆ ಸಾಗು ; ನಾಶಮಾಡುತ್ತ ಮುಂದೆ ಹೋಗು : ಎಕ್ಕತುಳದಲಿ ರಕ್ಕಸರ ಸಲೆ ಕಕ್ಕುಲತೆಯನೆ ತಿಕ್ಕುವರಿದನು ಜಾಜಿ ನೆಲವರಿತು (ಮೈರಾಚ. ೬-೧೮).

[ ತಿಕ್ಕು + ಪರಿ$_2$ ]

ತಿಕ್ತ (ಗು). ೧. ಕಹಿಯಾದ. ೨. ಹರಿತವಾದ ; ಚೂಪಾದ. ೩.(ಅಲಂ) ಮನಸ್ಸನ್ನು ನೋಯಿಸುವ ; ಅಪ್ರಿಯವಾದ : ನೆನಪಿದೆಯೆ, ಜೀವಿತೇಶ್ವರಿ, ಸ್ವಯಂವರದ ಆ ತಿಕ್ತಕಥೆ ? (ಶ್ರೀರಾಮಾ. ೨೦೩-೬೬). ೪. (ಅಲಂ) ಉಗ್ರವಾದ ; ಕಠಿನವಾದ : "ಕಹಿ, ಕಟು, ತಿಕ್ತ, ಮನಸ್ಸಿಗೆ ಹಿತವಲ್ಲದ; ಮನಸ್ಸು ಕೊರೆಯುವ; ವ್ಯಥೆತುಂಬಿರುವ ; ಕಠೋರ, ಉಗ್ರ; ನಿಷ್ಠುರ; ಮನೋವೇಧಕ" (Bitter. ಇಂಕನಿ.) ; ಎನ್ನ ತಾಯ್ಮಧುರ ವಾತ್ಸಲ್ಯದಾ ತಿಕ್ತಕರ್ತವ್ಯಮಂ ಮಾಣ್ದೆಂತುಟರಲಿ ? (ಶ್ರೀರಾಮಾ. ೧೦೯-೨೪೮). (ನಾ). ೫. ಆರು ವಿಧವಾದ ರಸ (ರುಚಿ)ಗಳಲ್ಲೊಂದಾದ ಕಹಿ : "ತುವರಂ ತಿಕ್ತಂ ಮಧುರಂ ಲವಣಂ ಕಟು ಕಾರಮೆಂದು ರಸಮಾಱು ತೆಱು" (ವಸ್ತುಕೋ. ೯೪-೧೫) : "ತಿಕ್ತಮೆನೆ ಕಹಿಯಕ್ಕು" (ಮಂಗರಾ. ೬೫-೫); ತಿಕ್ತ ಕಟು ಕಷಾಯಾಮ್ಲ ಮಧುರ ಭೇದದಿಂ ರಸ ನಾಮುಂ ಪಂಚವಿಧ ಮಕ್ಕುಂ (ಆಜಿಪು. ೧೧-೨ ವ) : ರಸಪಂಚಕನಾಮಕರ್ಮೋದಯಂ ದೇಹಕ್ಕೆ ತಿಕ್ತಕಟುಕ ಕಷಾಯಾಮ್ಲಮಧುರನಾಮೋಪೇತ ಪಂಚರಸಮಂ ಮಾಳ್ಕುಂ (ತತ್ತ್ವಪ್ರ. ೨೯೭); Pಜೈನರು ರಸಗಳನ್ನು ಐದೆಂದು ಪರಿಗಣಿಸುತ್ತಾರೆ: ಮಧುರವಾಮ್ಲಂ ಕಟುಕ ಲವಣ ತಿಕ್ತಂ ಕಷಾಯೊದವಿದಿಂತಾಱೆನಿಪ ರುಚಿಕರಂಗಳು ಸಹಿತ (ಲಕಿಚಿಂ. ೩೯-೨೯). ೬. ಸುಗಂಧ ; ಒಳ್ಳೆಯ ವಾಸನೆ; ಸೌರಭ್ಯ: "ಕಟು, ತಿಕ್ತ, ಕಷಾಯಮೆಂಬಿವು ಸೌರಭ್ಯದಲ್ಲಿಯುಂ . . . ವರ್ತಿಸುಗುಂ" (ಹಲಾಯು. ೧೩೫-೨೭). [ ಸಂ. ]

ತಿಕ್ತಕ (ಗು). ೧. ಕಹಿಯಾದ. (ನಾ). ೨. "ಕಹಿಪಡವಲ; ಪಡುವಲ ಬಳ್ಳಿ" (ಗಂಗಾಮ. ೧೫೩). ೩. ಕಗ್ಗಲಿಮರ ; ಖದಿರ. ೪. ಇಂಗುದೀ

**ತಿಕ್ತಕೆ** (ನಾ). ಒಂದು ಬಗೆಯ ಗಿಡ: "ತಿಕ್ತಕಿ[ಕೆ]ಯೆನಲ್ ಕಾರೆಯಕ್ಕು" (ಮಂಗರಾ. ೪೨-೩೭). [ಸಂ. ತಿಕ್ತಕ]

**ತಿಕ್ತಪರ್ವ** (ನಾ). ಒಂದು ಬಗೆಯ ಬಳ್ಳಿ: "ತಿಕ್ತಪರ್ವಾ-ಚಕ್ರವರ್ತಿ ಸೊಪ್ಪು, ಅಮೃತಬಳ್ಳಿ, ಯಷ್ಟಿಮಧುಕ" (ರುದ್ರನಿ. ೨೫೯).
[ಸಂ. ತಿಕ್ತಪರ್ವನ್]

**ತಿಕ್ತಶಾಕ** (ನಾ). ೧. ಕಹಿಯಾದ ಕಾಯಿಪಲ್ಯ; ಕಹಿ ಹಸುರುಮಾಣ್ಕೆ-ತರಕಾರಿ; "ಕಹಿಪಲ್ಲೆ" (ಗಂಗಾಮ. ೧೫೨). ೨. ಬಸಲೆಗಿಡ: "ವರುಣಃ, ವರಣಃ, ಸೇತುಃ, ತಿಕ್ತಶಾಕಃ, ಕುಮಾರಕಃ– ೫ ಮಸಲೇಗಿಡ; ಮದಮಸಲೇ ಗಿಡ; ಉಲಿಮಿರಿಮಸಲೆ" (ಸಿದ್ಧಾಂಶಿ. ೧೦೩). [ತಿಕ್ತ + ಶಾಕ$_1$]

**ತಿಕ್ತಾಲಾಬು** (ನಾ). ಒಂದು ಬಗೆಯ ಸಸ್ಯ; ಕಹಿಸೋರೆ: ತಿಕ್ತಾಲಾಬು ಭಾಜನಗತದುಗ್ಧದವೋಲು ಮಿಥ್ಯಾತ್ವಾನಂತಾನುಬಂಧಿ ಉದಯವಶದಿಂ ವಿಪರೀತಾಭಿನಿವೇಶರೂಪಕುಮತಿ ಕುಶ್ರುತವಿಭಂಗಮೆಂಬ ಜ್ಞಾನತ್ರಯಂ (ಪಸಾರ. ೫೭೭). [ತಿಕ್ತ + ಅಲಾಬು]

**ತಿಕ್ತೆ** (ನಾ). ಒಂದು ಬಗೆಯ ಸಸ್ಯ: ಕಟುಕರೋಹಿಣಿ: "ತಿಕ್ತಾ-ಕಟುಕರೋಹಿಣಿ; ಗಂಡಲೀ" (ರುದ್ರನಿ. ೨೫೯). [ಸಂ. ತಿಕ್ತಾ]

**ತಿಗ** 'ತಿಕ' ನೋ.

**ತಿಗಟ**, ತಿಕಟ, ತಿಗಡ$_2$, ತಿಗುಡ, ತಿಡ್ಡ, ತ್ರಿಗುಟ (ನಾ). ಉದ್ದ: ಮುಂದೆ ಮತ್ತು ಹಿಂದೆ: ಅಡ್ಡಮುಂ ತಿಗಟಮುಂ ತಾಱುಂತಟ್ಟುಮಿದಿರುಂ ಬೞಿಯುಂ ಬಿಟ್ಟಿಂ ಬಟಿಲದೆ (ಲೀಲಾವ. ೭-೫೫ ವ); ಹರನ ಮುಂದಡ್ಡಮುಂ ತಿಗಟಮುಂ ಪರಿದಾಡಿ (ಅನಾರ. ದೇ. ೧೮೪-೨೩). 'ತಿಗಟಂ' ಪರಾ. ತಿಕಟ: 'ತಿಕಟಂ' ಪರಾ. ತಿಗಡ$_2$: 'ತಿಗಡಂ' ಪರಾ. ತಿಗುಡ: 'ತಿಗುಡಂ' ಪರಾ. ತಿಡ್ಡ: "ಸೊಟ್ಟ, ಅಂಕು, ಡೊಂಕು, ಒಂಕು, ಕೊಂಕು, ಕುಡು, ಅಡ್ಡ, ತಿಡ್ಡ" (ಕಂನುಹು. ೯೧); ಅಂತಿದಿರುಂ ಬೞಿಯುಂ ಪಾಸುಂ ಪೊಕ್ಕುಂ ದುಗುಣಮುಂ ತಿಗುಣಮುಂ ಅಡ್ಡಮುಂ ತಿಡ್ಡ[ಪಾಠಾಂ. ತಿಗಟ]ಮುಂ ಪರಿದು (ಗದಾಯು. ೭-೨೮ ವ). 'ಅಡ್ಡತಿಡ್ಡ$_1$' ಪರಾ. ತ್ರಿಗುಟ: ಪುಟಮೇಳುತಡ್ಡಮುಂ ತ್ರಿಗುಟಮುಂ ಪರಿದಾಡಿ ನಟನಂ ತಿರುಗ್ಗಡಿಸಿ ಕುಣಿಕುಣಿದು ಕೊಂಡಾಡಿ (ಪುಷ್ಪರ. ಹ. ೫೨೩-೧). [?]

**ತಿಗಟಂ**, ತಿಕಟಂ, ತಿಗಡಂ, ತಿಗುಡಂ, ತ್ರಿಕಟಂ (ಅ). ಉದ್ದವಾಗಿ; ಮುಂದಕ್ಕೆ ಮತ್ತು ಹಿಂದಕ್ಕೆ: ಘೂಳ್ಳನೆ ಸಭೆ ನಗೆ ಪಲ್ಲಂ ಕಿರಿವುತ ಅಡ್ಡಂ ತಿಗಟಂ ವಿಸಟಂಬರುತಂ (ಭ್ರಂಗೀರ. ಹ. ೪೭೩-೮). ತಿಕಟಂ: ಮುಂದಕ್ಕುಬುಬೆಂದೋಡಿ ನಿಲುತ್ತಂ ಹಿಂದಕ್ಕೆಯ್ತಂದರ್ತಿಗೆ ನಿಲುತಂ ನಡುವಡ್ಡಂ ತಿಕಟಂ [ಪಾಠಾಂ. ತಿಗಟ, ತಿಗಟಂ, ತಿಗಡ, ತಿಗಡಂ, ತಿಗುಡಂ] ಪರಿದಾಡುತೆ (ತಿರುನಾ. ಹ. ೧೨೭-೨೧). ತಿಗಡಂ: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. ತಿಗುಡಂ: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. ತ್ರಿಕಟಂ: ತೂಗಾಡುತೆ ಮಡಕೆಗಳಂ ಬಾಜಿಸಿ . . . ಅಡ್ಡಂ ತ್ರಿಕಟಂ ಬಲಿವುತೆ ಬಾಜಿಸಿ (ಸಂಬಚ. ಹ. ೨೫೫-೧೩). [<ತಿಗಟ]

**ತಿಗಟಿ** 'ತಿಕಡಿ' ನೋ.

**ತಿಗಟು** 'ತಿಗುಡು$_1$' ನೋ.

**ತಿಗಟೆ** 'ತಿಕಡಿ' ನೋ.

**ತಿಗಡ$_1$** 'ತಿಗುಳ' ನೋ.

**ತಿಗಡ$_2$** 'ತಿಗಟ' ನೋ.

**ತಿಗಡಂ** 'ತಿಗಟಂ' ನೋ.

**ತಿಗಡಿ** (ನಾ). ವಂಚನೆ; ಮೋಸ: ಕಪಟ: (ಸ). 'ತಾರಾತಿಗಡಿ', 'ತಿಗಡಿಬಿಗಡಿ' ಪರಾ.
[←ಹಿಂ. ತಿಕಡಮ್; ಮರಾ. ತಿಗಡ... ಮಾಲು]

**ತಿಗಡಿಬಿಗಡಿ** (ನಾ). ೧. (ಮಾತಿನಲ್ಲಿ) ಅಸಂಗತತೆ; ಅಸಂಬದ್ಧತೆ: (ಸ್ಕಾಂಡರ್). ೨. ಮೋಸ; ವಂಚನೆ; "ಠಕ್ಕತನ" (ಜಾನಕೋ. ೭೭). ತಿಗಡಿಬಿಗಡಿ ಮಾತಾಡು = ಅಸಂಬದ್ಧವಾಗಿ ನುಡಿ: (ಸ್ಕಾಂಡರ್).
[←ತುಳು. ತಿಗಡಿಬಿಗಡಿ]

**ತಿಗಡು$_1$** (ಕ್ರಿ). ಹೊಡೆ; ಬಡಿ: ತಿಗಡ[ಪಾಠಾಂ. ಗಿದ]ಲೊದಱುವ ಪರಿಗೆಗಳ ಗೌಱಿಗಿವ ಪೆಗ್ಗಹಳೆಗಳ . . . ಮಹಾಧ್ವನಿ ಬಗಿದುದ್ದೈ ತಾವರೆಯ ತನಯನ ಕರ್ಣಕೋಟರವ (ಕುಮಾರಭಿ. ೨-೪). [<ತೀಡು$_2$?]

**ತಿಗಡು$_2$** 'ತಿಗುಡು$_1$' ನೋ.

**ತಿಗಡು$_3$** 'ತಿಗಡೆ$_2$' ನೋ.

**ತಿಗಡೆ$_1$** 'ತಿಗುಡು$_1$' ನೋ.

**ತಿಗಡೆ$_2$**, ತಿಗಡು$_3$, ತಿಗುಡು$_2$, ತಿಗುಡೆ (ನಾ). ೧. ಔಷಧಿಗೆ ಉಪಯೋಗವಾಗುವ ಒಂದು ಬಗೆಯ ಬಳ್ಳಿ ಮತ್ತು ಅದರ ಗಡ್ಡೆ; ರೇಚನಿ: "ಕುಟಕಿ ತಿಗಡೆ" (ಅಕಾನಿ. ೬-೩೫); "ಕುಂಭಧಾತ್ರೀ-ತಿಗಡೆ-ಕುಪ್ಪಸಗಣಿಕೆ, ನೆಲಗಡವು" (ಒಷಧಿ. ೩೭); ತಿಗಡೆ ಕುರಿ ಶಿವೆ ಜೆಲ್ಲಿಮೆಂಬ ಮದ್ದುಗಳ . . . ತಿಂಗೆ ಮಾಡುಗುಮುದಾರ್ಗಮಧಿಕಂ ವಿರೇಕಮುಂ (ಲೋಕೋಪ. ೯-೩೫); ತಿಗಡೆ ಧಾತಕಿಯೊಲೆ ಹಿಂಗು ಬೀರಕಯುಗ (ಸಾಳ್ವಸಾಂ. ೧೨). ೨. ಒಂದು ಬಗೆಯ ಮರ: ತಿಗಡೆ ಪಥ್ಯೋರ್ವೀರುಹಾಶೋಕೆ ಪಾದರಿ ನೇಱಲ್ ಕುಶೆ ಕಾಶೆಯೆಂಬಿವಱೊಳಾದುದುಂತವರ್ತಿತ್ರಲುತ್ತರದೊಳ್ ಹಸ್ತಯುಗಕ್ಕೆ ಪಂಚಪುರುಷಂ ಗುಣ್ಪಾದೊಡಕ್ಕುಂ ಜಳಂ (ಲೋಕೋಪ. ೫-೨೮). ತಿಗಡು$_3$: ೧. "ಐರಾವತೀ-ಕಲ್ಲತಿ, ತಿಗಡು, ಭೇಳ" (ಒಷಧಿ. ೧೮). ತಿಗುಡು$_2$: ೧. ಪಟಗಣಿ, ಸೊಸೆಪಟ್ಟ, ತಿಗುಡು (ಪ್ರಜಿಗಿ. ೫೮-೧೧೬೮). ತಿಗುಡೆ: ೧. ಇಂಗಿನೆಲೆ ಮುಸ್ತೆಯುಳಿಲೆ ಲವಂಗಂ ಬಜೆ . . . ತಿಗುಡೆ ವಿಳಂಗಂ ಪಿಪ್ಪಲಿಯೆ ಮರಿಚ ಸೈಂಧವಲವಣಂ (ಅಶ್ವಶಾ. ೭-೪೪); ತಿಗುಡೆ ನೀಲಿಬೇರು ಅಳಲೆಕಾಯಿ ತಾರೆಕಾಯಿ ನೆಲ್ಲಿಕಾಯಿ ಯಿಷ್ಟು ಸಮಾಂಶವಾಗಿ ಕೂಡಿ ಅಂ[ದು]ದಂ ಕೊಡಲು ವಿರೇಚನವಹುದು (ವಿಪಚಿ. ೨೦-೪). ೨. "ಭೂರಿಫೇನ-ಸಮುಗಾ? ತಿಗುಡು" (ಒಷಧಿ. ೦೧೨).
[ದೇ.॥ ತುಳು. ತಿಗಡಿ; ತೆಲು. ತೆಗಡ./ಸಂ. ತ್ರಿಕಟ]

**ತಿಗಡೆಹಿಪ್ಪಲಿ** (ನಾ). ಒಂದು ಬಗೆಯ ಔಷಧ ದ್ರವ್ಯ: "ಮಹಾಶ್ಯಾಮಾ-ಹೊನ್ನಾವರೆ, ತಿಗಡೇಹಿಪ್ಪಲಿ" (ಒಷಧಿ. ೧೧೪).
[ತಿಗಡೆ$_1$ (<ತಿಗುಡು$_1$) + ಹಿಪ್ಪಲಿ]

**ತಿಗಣೆ** 'ತಗುಣೆ' ನೋ.

**ತಿಗಣೆ** 'ತಗುಣೆ' ನೋ.

**ತಿಗಮರಿ** 'ತಿಗಮಾರಿ' ನೋ.

**ತಿಗಮಾರಿ**, ತಿಗಮರಿ (ನಾ). [ನಾಟ್ಯ]ನೂರೆಂಟು ಕರಣಗಳಲ್ಲಿ ಒಂದು ಬಗೆ; ಸೊಂಟದ ಚಲನವಲನಗಳ ಮೂಲಕ ಮಾಡುವ ಒಂದು ಬಗೆಯ ಅಭಿನಯ: ಮತ್ತಂ ದಿಂಡು ಮುಂಡಾಸಮು . . . ತಿಗಮಾರಿ ಮೊಳೆಯುಂ ಮುರಿವ ನಡುವು ಮೊಸಳೆಮರಿ ಜಲತಯನ ಚ್ಯುತಂ ಮತ್ಸ್ಯ ಪ್ರಟಂ ಲಂಕಾದಹನಮೆಂಬ ಪಲವುಂ ತೆಱದ ಕರಣಂಗಳಿಂ (ಧರ್ಮಾಪ. ೨-೨೭ ವ). ತಿಗಮರಿ: ಹೊಱಮೊಳೆ ಒಳವೆ [illegible] ಮೆಱೆವ ಲಂಕಾದಹನಾದಿ ನೂಱೆಂಟು ಕರಣಗಳನು ಕ್ರಮದಿಂದಲಾ ನಾರೀಮಣಿಗಳು ತೋಱೆ (ಜ್ಞಾನಪ. ೯೧-೦೫೩). [?]

**ತಿಗರಿ** 'ತಿಗುರಿ' ನೋ.

**ತಿಗಲು** (ನಾ). ಕಷ್ಟ; ತೊಂದರೆ: ಈ ಉಂಗುರದಿಂದ ಆಗುವ ಕೇಡನ್ನು ತಪ್ಪಿಸಿಕೊಳ್ಳುವುದಕ್ಕೆ ಹೋಗಿ, ಮತ್ತೊಂದು ತಿಗಲಿಗೆ ಮಾಡಿತಾ ಸಿಕ್ಕಿಕೊಳ್ಳುತ್ತೇನೆ (ಮರಮ. ೭೯೪). [?]

**ತಿಗಳ** 'ತಿಗುಳ' ನೋ.

**ತಿಗಳವಾಣ್ಯ** 'ತಿಗುಳವಾಣ್ಯ' ನೋ.

**ತಿಗಳಾರಿ** (ನಾ). ತಮಿಳು ಲಿಪಿ : ತಿಗಳಾರಿ, ಗ್ರಂಥಲಿಪಿ, ನಾಗರಿ ಲಿಪಿಗಳನ್ನುಳಿದು, ಕನ್ನಡಅಕ್ಷರವಿರುವ ಓಲೆಗಳನ್ನೆಲ್ಲ ತಿರುವಿಹಾಕಿದ (ಮುಕ್ತಬ. V ಮುನ್ನುಡಿ). [ <ತಿಗುಳ ]

**ತಿಗಳಿ** 'ತೇವಳು' ನೋ.

**ತಿಗಳಿತ್ತಿ** 'ತಿಗುಳಿತ್ತಿ' ನೋ.

**ತಿಗಳು** 'ತಿಗುಡು$_1$' ನೋ.

**ತಿಗುಂಡ** (ನಾ). ೧. ಮೂರು ಅಗ್ನಿಕುಂಡ. ೨. ನೀರಿನ ಮೂರು ಹೊಂಡ,–ಜಲಾಶಯ : "ತಿಗುಡು – ತ್ರಿಕುಂಡು" (ಶಬ್ದಾನು. ೩೭೬ ಪ್ರಯೋ). [ <ಸಂ. ತ್ರಿಕುಂಡ ]

**ತಿಗುಡ** 'ತಿಗಟ' ನೋ.

**ತಿಗುಡಂ** 'ತಿಗಟಂ' ನೋ.

**ತಿಗುಡು$_1$, ತಿಗಟು, ತಿಗಡು$_2$, ತಿಗಡೆ$_1$, ತಿಗಳು, ದಿಗುಡು** (ನಾ). ಮರ ಮೊದಲಾದ ವನಸ್ಪತಿಯ ಸಿಪ್ಪೆ ; ತೊಗಟೆ ; ಚಕ್ಕೆ : "ತ್ವಗ್ವಲ್ಕಲಂ ವಲ್ಕಮೆನೆ ಮರದ ತಿಗುಡಕ್ಕು" (ಮಂಗರಾ. ೩೨-೩) : ನೆಗಟ್ದಿರ್ದ ಪಾಲ್ಮರಂಗಳ ತಿಗುಳ್ಗಳಿಕ್ಕಿದ ಕಷಾಯಜಳದಿಂದಿಂದ್ರಂ ವಿಗತಕಷಾಯಂಗೆ . . . ಮಾಡಿದಂ ಮಜ್ಜನಮಂ (ಅಜಿಪು. ೪-೬೯); ಒರ್ಮರದ ತಿಗುಡು ಮತ್ತೊಂದು ಮರನನೇಂ ಪತ್ತುಗುಮೇ (ಪಂಪಾಮಾ. ೧೪-೧೭) : ಮಿಕ್ಕಾದ ಪೊಜಗಣ ಹೊರೆಯ ತಿಗುಡಂ ಕೆತ್ತಿ ಕಂಬವ ಶುದ್ಧೈಸಿ (ಸರ್ವವ. ೧೧೯-೬೧೭) ; ಪರಿವತಿಸಾರು ಪಿರಿದಾಗಿರೆ ಹೂಲಿಯ ಬೇರ ತಿಗುಡನೆಮ್ಮೆಯ ಮೊಸರೊಳ್ ಬೆರಸಿಟ್ಟು ಸೈಂಧವಂ ಕೂಡಿರೆ ಮೆಲುವುದು (ಕಲ್ಯಾಕಾ. ೪-೧೫) ; ಈ ಬೇರಿನ ತಿಗುಡಂ ಮೊಲೆಹಾಲಲ್ಲಿ ತೇದು ಹಚ್ಚಲು ತಿಮಿರಗಣ್ಣು ಮಾಣ್ಗುಂ (ವಿವ್ಯವಿ. ೧). **ತಿಗಟು :** ತೋರ ಹುನಿಗಲ ತಿಗಟು ಬಜೆ ವಿಳಂಗಸಾರ ಭದ್ರಮುಸ್ತೆ ಇವಂ . . . ಪೂಸುವುದು (ಬಾಲಚಿ. ೧೭೯-೧೨). **ತಿಗಡು$_2$ :** ಸಾವೆಪೆಂದು ಕಾಯುಮಂ ತಿಗಡುಮಂ [ಪಾಠಾಂ. ಪಣ್ಣುಮಂ ಕಾಯುಮಂ]ತಿಂದು (ಧರ್ಮಾಮೃ. ೧೨-೨೦೪) ; ಮರ ತಿಗಡು ಹಗಿನ ಮೊದಲಾದವಜಲ್ಲಿಯ ಗಂಧವನಱಿವುದು ಆಚಾರಲಿಂಗದಲ್ಲಿಯ ಗುರುಲಿಂಗ (ಆದಪ. ೫-೧೨) ; ಕಾಚತೊಂಡೆಯ ಬೇರು . . . ಮೊಳಗದ ಬೇರಿನ ತಿಗಡು, ಇವಂ ಸಮಾನಂಗೊಂಡು ಚೂರ್ಣವಂ ಮಾಡಿ . . . ನಸ್ಯಮಾಡಲು ಹದಿನಾಲ್ಕು ಬಗೆ ಮೊಲನಾಗರ ವ್ಯಾಧಿ ಗುಣವಹುದು (ವಿವ್ಯವಿ. ೯೯). **ತಿಗಡೆ$_1$ :** [ಎಲೆಯಡಿಕೆ ಸುಣ್ಣದಿಂ ಪಲ್ ಕಱೆಯಪ್ಪುದು] ಅಣಲೆ ತಿಗಡೆಯಿಂ ಬಸಿಱೊಡೆವುದು (ಧರ್ಮಾಮೃ. ೯-೧೦೮). **ತಿಗಳು :** ಎಲವದ ಹಗಿನು, ಬೆಲ್ಲವತ್ತದ ಹಣ್ಣಿನ ತಿಗಳು . . . ಇವಂ ಸಮಾನಂಗೊಂಡು ನಸುಬಿಸಿಯಂ ಮಾಡಿ (ವಿವ್ಯವಿ. ೩೩). **ದಿಗುಡು :** "ದಿಗುಡು = ತಿಗುಡು, ಮರದ ತೋಟೆ" (ಗಂಗಾಪು. ೧೬೭).

**ತಿಗುಡು$_2$** 'ತಿಗಡೆ$_2$' ನೋ.

**ತಿಗುಡೆ** 'ತಿಗಡೆ$_2$' ನೋ.

**ತಿಗುಣ** (ನಾ). ೧. ಮೂರರಷ್ಟು ; ಮುಮ್ಮಡಿ : "ತಿಗುಣ–ತ್ರಿಗುಣ= ಮುಮ್ಮಡಿ"(ಶಬ್ದಕೋ. ೧೭) : ಪೂರ್ವಪದಂ ತದ್ಭವ ಮಾದುದರ್ಕೆ . . . ತ್ರಿಗುಣ-ತಿಗುಣ (ಶಮಿದ. ೨೪೯ ಪ್ರಯೋ); ಹೊಗಳಲನುಪಮ ಸೈನ್ಯಮಿಂತೀ ದುಗುಣಪಂಥಾಸುರನ ಸೇನೆಗೆ ತಿ[ಪಾಠಾಂ. ತ್ರಿ]ಗುಣವಿದು ರಾವಣನ ಮೋಹರಕೆನುತ (ಕುವ್ಯಾವಿ. ೬-೬೧). ೨. ಮೂರುಸಲ ; ಮೂರು ಬಾರಿ : ಅಂತಿದಿರುಂ ಬಟೆಯುಂ ಪಾಸುಂ ಪೊಕ್ಕುಂ ದುಗುಣಮುಂ ತಿಗುಣಮುಂ ಅಡ್ಡಮುಂ ತಿಗಟ[ಪಾಠಾಂ. ತಿಡ್ಡ]ಮುಂ ಪರಿದು(ಗದಾಯು. ೬-೨೮ ವ) ; ದುಗುಣ ತಿಗುಣಂ ಪ[ಪಾಠಾಂ. ತಿ]ಱಿದು ದೆಸೆವಲಿಗೆಯ್ವ (ಅನಂಪು. ೧೪-೭ ವ). [ <ಪ್ರಾ. ತಿಉಣ./ಸಂ. ತ್ರಿಗುಣ ]

**ತಿಗುಣಂಗೊಳ್** (ಕ್ರಿ). ಮೂರುಪಾಲಷ್ಟು ಆಗು ; ಮುಮ್ಮಡಿಯಾಗು: ತಕ್ಕು ತಗುಳ್ದು ಕಾಯ್ದೊದವೆ ಕೋಟ್ಕಳ ತಳ್ಕಱಿಯಿಂದೆ ಕೆಂಡಮುಲ್ಕೊಕ್ಕಿರೆ ತೇನತೇನಮುವತಂ ಬಿಗುಣಂ ತಿಗುಣಂಗೊಳಲ್ ಮೊಗಂಬೊಕ್ಕ ಗಜಂಗಳಂ . . . ಪಿಂಗಿಪಂ (ಅನಂಪು. ೬-೧೨). [ ತಿಗುಣ + ಕೊಳ್$_1$ ]

**ತಿಗುಣಿಸು** (ಕ್ರಿ). ಮೂರರಷ್ಟು ಮಾಡು ; ತ್ರಿಗುಣಿಸು : ಸಂಗಳಿಸಿದ ಪುಣ್ಯಪ್ರಭಾವವಂ ತಿ[ಪಾಠಾಂ. ತ್ರಿ]ಗುಣಿಪಪೋಲ್ (ಚಂದ್ರಪು. ೯-೫೩).

[ ತಿಗುಣ + – ಇಸು$_3$ ]

**ತಿಗುಣೆ** 'ತಗುಣೆ' ನೋ.

**ತಿಗುರಿ, ತಿಗರಿ, ತಿಹುರಿ** (ನಾ). ಕುಂಬಾರನ ಚಕ್ರ ; ಕುಲಾಲ ಚಕ್ರ : "ಚಕ್ರಮೆನೆ ತಿಗುರಿ" (ಮಂಗರಾ. ೧೧೩-೮) ; "ತಿಗುರಿಯೆಂದು ಕುಲಾಲ ಚಕ್ರಂ" (ಕಶಸಾ. ೩೦-೬೩೩): "ತಿಗುರಿಯೆ ಕುಲಾಲಚಕ್ರಂ" (ಕವಿಕಂ. ೨೪೯): ಅದು ತಿಗುರಿಯಂದದಿಂ ತಿರಿದುದು (ಪಂಪಾಮಾ. ೪-೧೦೭) ; ಕಳಕಳರವದಿಂ ಬಿ[ದಿ]ದಿರುಂ ಬಟೆಯುಂ ಪಾಸುಂ ಪೊಕ್ಕುಂ ತಿಗುರಿಯುಂ ಬುಗುರಿಯುಂ ಜಾತಿಯುಂ ಭೀತಿಯುಂ ಆಗೆ ಪರಿವಾಗಳ್ (ಧರ್ಮಾಮೃ. ೬-೧೦೪): ಉಂತೆ ಜಗಂಗಳಂ ತಿಗುರಿಗಂ ತರುತಿರ್ಪ ಮನೋಜನೀ ವಸಂತಂ ತಲೆದೋಱಿತು (ಚಂದ್ರಪು. ೭-೪೯) : ಕುಂಬಾಱರ ತಿಗುರಿಯೊಳಿಟ್ಟೆಂಬಿನೊಳಂ ತಿರಿಪೆ (ಖಮದ. ೨-೧೯೦) : ಕೋಲಿಂದಾಡುವ ತಿಗುರಿಯಪೋಲಂತಿರೆ (ಕಾವ್ಯಸಾ. ೧೧೧೩) : ಅರ್ಜುನನ ತೇರಿರದೆ ತಿಱ್ಱನೆ ತಿಗುರಿಯಂತೆ ತಿರುಗಿತದನೇ ನೆಂಬೆನದ್ಭುತವನು (ಜೈಮಿಥಾ. ೧೩-೫). **ತಿಗರಿ :** ಕುಲಾಲನು ತಿಗರಿಗೆ ಮಣ್ಣು ಮಾಡಿ ಕೋಲಿನಿಂದ ತಿರುಹೆ ಮನದಲ್ಲಿ ನೆನೆದು ಕೈಯಲ್ಲಿ ಹಿಡಿದಲ್ಲಿ ಹಲವು ರೂಪಿನ ಭಾಂಡಗಳಾಗುವ ಹಾಗೆ (ಮೋಟಮಾ. ೧೨೧-೪೭೪ ಅರ್ಥ) ; ವೇಗದಿಂದ ತಿರುಗುವುದೊಂದು ತಿಗರಿಯ ದಂಡಿಯ ಮೇಲೆ ನಾವು ಏನನ್ನಾದರೂ ಇಟ್ಟರೆ, ಅದು ಹೊರಗೆ ಚಿಮ್ಮಲ್ಪಡುತ್ತದೆ (ಜ್ಯೋತಿಶಾ. ೫೨): ತಿಗರಿ ತಿರುಗಿಸುತ್ತ ಗಡಗಿಯನ್ನು ನಗುನಗುತ್ತ ಮೂಡಿಸುತ್ತಿದ್ದ ಮಲ್ಲಪ್ಪ ಇವನೇ ಏನು? (ರಾಜಾದೇ. ೯೪) ; ಅದನ್ನು ಕುಂಬಾರನು ತಿಗರಿಯ ಮೇಲೆ ಹಾಕಿ, ಪಾತ್ರೆಗಳನ್ನು ಮಾಡಿ ಆವಿಗೆಯೊಳಗೆ ಸುಡುತ್ತಾನೆ (ಮುಂಬಯಿ. ೧-೯). **ತಿಹುರಿ :** ಭರದಿ ತೆಱಂದಿರಿವಾ ತಿಹುರಿಯ ಮೇಲಿರದಿಟ್ಟು ಕುಂಬಱಗೋಲಾ ಪರಿಯೆಸೆ ಗಜವೆಡೆಯಾದಶ್ವನ ಮೇಲೆ ಪಿರಿದೊಪ್ಪಿದನು ವಾಹಕನು (ಶ್ರೀಪಾಲ. ೧-೧೨).

[ದೇ.॥ ತಮಿ. ತಿಕಿರಿ; ತುಳು. ತಗೊರಿ]

**ತಿಗುರಿಕ್ಕು** (ಕ್ರಿ). ಪರಿಮಳದ್ರವ್ಯವನ್ನು ಲೇಪಿಸು ; ಪರಿಮಳವಸ್ತುವನ್ನು ತೀಡು : ಗಂಧಕತ್ತುರಿಯಿಂದೆ ತಿಗುರಿಕ್ಕಿ ಪಾವುಡೆಯಿಂದೊರಸಿದರು ಸೌಖ್ಯದಲಿ (ಮೋಹತ. ೨೭-೩): ತಿಗುರಿಕ್ಕಿ ಭೂಷಣಗೆಯ್ಯಲೆಳಸೆ (ವಂಕಾರಾ. ೧-೨೧-೩೧) : ಮುದದಿ ಕುಂಕುಮರಸವ ಪದಮಾಡಿ ಹಸ್ತದೊಳ್ಪಟ್ಟಲಂ ಪಿಡಿದು ಬೇಗ ಪದ ಮಸ್ತಕಾದಿ ಸಂಹನನದೊಳ್ತಿಗುರಿಕ್ಕಿ ಮದವಳಿಗರಂ ಮಾಡಿ (ಸಿದ್ಧಕಾ. ೧೧-೧೦). [ ತಿಗುರು$_2$ (<ತಿಮಿರ್$_2$) + ಇಕ್ಕು ]

**ತಿಗುರಿಡು** (ಕ್ರಿ). = ತಿಗುರಿಕ್ಕು : ಪರಿಮಳಿಪ ಕುಂಕುಮಂದ ತಿಗುರಿಟ್ಟು ಮಾಂಗಲ್ಯ ವಿರಚನೆ (ರೇವಣ. ೯೫-೩೦).

[ ತಿಗುರು$_2$ (<ತಿಮಿರ್$_2$) + ಇಡು$_1$ ]

**ತಿಗುರಿದಿರುಗಿಸು** (ಕ್ರಿ). ಕುಂಬಾರನ ಚಕ್ರವನ್ನು ತಿರುಗಿಸುವಂತೆ ತಿರುಗಿಸು : ವಿಲಯಾನಿಲನ ಯಿಮ್ಮಡಿಗೆ ಪೆರ್ಚಿ ಮೊರೆದೆದ್ದು ಸುತ್ತಿ ಮಿನುತ್ತಳವ ತಿಗುರಿದಿರುಗಿಸುತೆ ತಾರಾಳಿಯುದುರೆ (ನವಮೋ. ೬-೭).

[ ತಿಗುರಿ + ತಿರುಗಿಸು ]

**ತಿಗುರಿದಿರುಪು** (ಕ್ರಿ). = ತಿಗುರಿದಿರುಗಿಸು : ಅನಂತಾಬ್ಧಿಮೆಂದು ಭೂಮಿಯಂ ತಿಗುರಿದಿರುಪಿಯುಂ (ಜಗವಿ. ೯-೫೩ ವ).

[ ತಿಗುರಿ + ತಿರುಪು$_1$ (<ತಿರಿಪು$_1$) ]

**ತಿಗುರಿಸು** (ಕ್ರಿ). ೧. (ಸುಗಂಧದ್ರವ್ಯವನ್ನು) ಪೂಸು,- ಲೇಪಿಸು, ಹಚ್ಚು : ಗೋರೋಚನಾದಿ ಗಂಧಂಗಳಿನಾ ಪೊಗರೊಗುವರಲ್ದ ಪೊಸಮಲ್ಲಿಗೆ ಸೌಸವಮುಳ್ಳ ತನುಗೆ ಮಿಗೆ ತಿಗುರಿಸಿದರ್ (ವಿಷ್ಣುಪು. ೫-೮-೫೭). ೨. (ಸುಗಂಧದ್ರವ್ಯವನ್ನು) ಪೂಸುವಂತೆ ಮಾಡು,- ಹಚ್ಚುವಂತೆ ಮಾಡು : ಅವನ ಕರಾಬ್ಜದೆ ಪರಿಮಳವನು ನಿನ್ನ ಜವಳಿ ಪೊಲೆಗಳ ಮಧ್ಯದಲ್ಲಿ ತವೆ ತಿಗುರಿಸಿಕೊಂಡು (ಕಂನವಿ. ೬-೧೩೮).
[ ತಿಗುರು₂ (<ತಿಮಿರ್₂) + – ಇಸು₃ ]

**ತಿಗುರು₁** 'ತಿಮಿರ್₁' ನೋ.

**ತಿಗುರು₂** 'ತಿಮಿರ್₂' ನೋ.

**ತಿಗುರೇಜಿಸು** (ಕ್ರಿ). (ಸುಗಂಧದ್ರವ್ಯವನ್ನು) ಪೂಸು,-ಲೇಪಿಸು : ಮಸೆಗಣೆಯ ಬತ್ತಳಿಕೆ ತಿಗು[ಪಾಠಾಂ.ವಿ]ರೇಜಿಸಿದ ಮೈ ಕತ್ತುರಿಯ ತಿಲಕದ ನೊಸಲಿನಾತನ ನೋಡು ಗರುಡಿಯ ಜಾಣ ದ್ರೋಣನನು (ಕುಮಾಭಿ. ೩-೮). [ ತಿಗುರು₂ (<ತಿಮಿರ್₂) + ಏಜಿಸು ]

**ತಿಗುಳ, ತಿಗಡ₁, ತಿಗಳ** (ನಾ). ತಮಿಳು ಮಾತನಾಡುವವನು ; ಅರವ : "ತಿಗುಳ ದ್ರಾವಿಡನಕ್ಕು" (ಮಂಗರಾ. ೧೧೨-೬) ; "ತಿಗುಳನೆನೆ ದ್ರವಿಡ" (ಕಶರ. ೪೬) ; ತಳಕಾಡಂ ಕೊಂಡ ಗಂಡಂ ತಿಗುಳರ ಪಡೆಯಂ ಕೂಡೆ ಬೆಂಕೊಂಡ ಗಂಡಂ (ಎಕ. XII, ಗುಬ್ಬಿ. ೩೪-೧೪ ; 1134) ; ಕಾವೇರಿಯ ಕಾಲನಾ ತಿಗುಳ[ಪಾಠಾಂ. ಟ]ನೇಂ ಕಡಗೊಂಡನೊ ಬಡ್ಡಿಗೊಂಡನೋ (ಕಮುದ. ಮ. ೧೭೮ ಪ್ರಯೋ) ; ಕನಡಿಗಳಿಗೆ ಗ ೧೦ ತಿಗುಳರು ತೆರ್ಉವ ಗ ೬೫ (ಎಕ. XV, ಬೇಲೂರು. ೨೯೮-೭೦; 1278) ; ನಿರುಪಮ ವೀರರೊದಗಿತು ತಿಗುಳ ರಾವುತರು (ಕುಮಾಭಿ. ೪-೬೫) ; ನಗೆಮೊಗದರಸಗೆ ಕೈಮುಗಿದೊಲಿದನು ತಿಗುಳರರಸನೊಂದು ಕಡೆಗೆ (ಭರತ. ೨೨-೧೯) ; ಕತ್ತಲೆಮನೆಯ ಹೊಕ್ಕಡಿಯದ ತಿಗುಳಗೆ ಮತ್ತೆ ಕೊಡಾ ಮೀಳೆಯವನು (ನಾಗಕು. ೧೬-೨೦) ; ಕಾಳಕೂಟದ ವಿಷವು ಚೇಳು ನಂಬಿದ ಹಗೆಯು ಹಾಳೂರ ಚುಚಿಚಿ ನಸುಗುನ್ನಿ ತಿಗುಳರ ಗಾಳಿ ಬೇಡೆಂದ (ಸರ್ವಜ್ಞ. ೧೩೮೫). **ತಿಗಡ₁** : ಎಲೆದೋಟಗಳನ್ನು ಬಹುಶಃ ತಿಗಡರೇ ಮಾಡುತ್ತಾರೆ (ಮುಂಬಯಿ. ೫-೧೯೮). **ತಿಗಳ** : ಬಟಕಳದೊಳಗೆ ಮುಂಡವಳಿಯ ಗ್ರಾಮದ[ತಿಗ]ಳ ನಾಗಮುನೆಯ ವಾಮನ ಉಪಾಧ್ಯಾಯರ ಮಗ (ಕಇ. I, ೫೮-೮ ; 1446) ; ತಿಗಳರುಡುಗೆಯುಟ್ಟು ಸೊಗಸು ಚೆಪ್ಪಗಳಿಟ್ಟು ಅಗಿಲು ಚಂದನ ಗಂಧ ಧರಿಸಿ . . . ಸೊಗಸುದೋರಿ ನಗುತ ಬಂದಳು ರಾಜನಾಸ್ಥಾನಕೆ (ಸೌಂದಕಾ. ೩-೨೫).

**ತಿಗುಳಮಾರಿ**=ತಮಿಳರಿಗೆ ಮೃತ್ಯುದೇವತೆಯಂತಿರುವವನು; ಇಜುವ ಬೆಡಂಗ ಸತ್ಯಾಶ್ರಯನ ಒಂದು ಬಿರುದು : ತಿಗುಬ(ಳ)ಮಾರಿ ಶ್ರೀಮತ್ ಸತ್ಯಾಶ್ರಯದೇವ(ಂ) (ಎಇ. XVI, ೭೪-೪ ; 1007).
[ ದೇ.॥ ತಮಿ. ತಿಕಳ ; ತೆಲು. ತಿಗುಳ ]

**ತಿಗುಳನಾಡು** (ನಾ). ತಮಿಳುದೇಶ : ತಿಗುಳನಾಡ ಸೆಟಿಯಂ ತಾನೊಂದಿದತಿದುಃಖದೊಳೆ ಬೆಂದು ನಿಲಲಿನ್ನರಿದೆಂದು (ಧರ್ಮಾಮೃ. ೧-೧೬೭) ; ತೆಲುಗಾಣೆಯ ತೇರಬೀದಿ ತಿಗುಳನಾಡು ತಿಳಿದೆಡೆಯಾಡುವ ದಾರಿ (ಕುಠಾಸಾಂ. ೫-೪೭). [ ತಿಗುಳ + ನಾಡು ]

**ತಿಗುಳಾಣ್ಯ, ತಿಗಳಾಣ್ಯ** (ನಾ). ತಮಿಳುನಾಡು,—ದೇಶ : ಅಗಲ ದಾರ್ಯಾಖಂಡದೊಳಗುಳ್ಳ ನೃಪರೊಳು ತಿಗುಳಾಣ್ಯದರಸನ ನೋಡು (ಭರತ. ೫೩-೧೦೫) ; ಸಂಭ್ರಮದಿ ತಿಗುಳಾಣ್ಯದಿಂ ಬಂದ ವೀರೇಶನೆಂಬವರಿಗೊಲಿದು ಅಂಬಕವನಿತ್ತಾ ತ್ರಿಯಂಬಕ ಸಿದ್ಧೇಶ ಶರಣಾಗು (ಮಡಿಕ್ಕ. IV. ೧೦೧೫ ಸಿದ್ಧೇಶ್ವರ ತ್ರಿವಿಧಿ). **ತಿಗಳಾಣ್ಯ** : ಚತುರ್ದಿಕ್ಕು ಐವತ್ತಾರು ದೇಶದಲ್ಲೂ ಹೆರೋಗಟಾ ಮಾರೋಪೇಟಿ ತಿಗಳಾಂಣ್ಯಾ ಮುಗಳಾಂಣ್ಯಲ್ಲಿ ನೆಟ್ಟ ಕಲ್ಲು ಬಿಟ್ಟ ಬಸವಿ (ಎಕ. XVI, ಗುಬ್ಬಿ. ೭೩-೬೫ ; ಸು. 1672). 'ತೆಲುಗಾಣೆಯ' ಪರಾ. [ <ತಿಗುಳ ]

**ತಿಗುಳಿ** (ನಾ). ಒಂದು ಬಗೆಯ ಸೀರೆ : ದುಜಾವಳಿಯು ಜಾವಗಂಟಿಯು ಬೊಂಬೆಗಣ್ಣ ಚಿತ್ರಾವಳಿಯು ಸರಹುವ್ವ ಪೊಷ್ಟ್ರೆಯು ತಿಗುಳಿ ರಾಗಾವಳಿಯು . . . ನೇತ್ರಾವಳಿಯು ಮುಖ್ಯ ನಾನಾವಿಧದ ಸೀರೆಗಳ (ನವಮೋ. ೧೭-೬೦). [ ? ]

**ತಿಗುಳಿತ್ತಿ, ತಿಗಳಿತ್ತಿ** (ನಾ). ತಮಿಳರವಳು; ಅರವ ಹೆಂಗಸು: ತಿಗುಳಿತ್ತಿಯರು . . . ಆಲಿಂಗನ ಮೊದಲಾದ ರತಿಯಲ್ಲಿ ಬಂಧಂಗಳಲ್ಲಿಯು ಪ್ರೀತಿ ಉಳ್ಳವರು (ಸೌಗಂಧಿ. ೪೯೫-೧೮). **ತಿಗಳಿತ್ತಿ** : ತಿಗಳಿತ್ತಿ ಬಾಯಿ ಕಣಕಬೇಡ ಬಗುಳೋ ನಾಯಿ ಬಡಿಯಬೇಡ (ಗಾದೆ).
[ ತಿಗುಳ + – ಇತ್ತಿ ]

**ತಿಗುಳು** (ನಾ). ತಮಿಳರ ಮಾತು ; ತಮಿಳು ಭಾಷೆ : ನಾಗರ ಕಂನಡ ತಿಗುಳಾರ್ಯ್ಯವನೋದಿಸುವ ಬಾಲಶಿಕ್ಷೆ ಉಪಾಧ್ಯರ ಜೀವಿತಕ್ಕೆ ೧ಕ್ಕೆ ಗದ್ಯಾಣಂ ಆಜು (ಎಕ. III, ತಿರುಮ. ೨೭-೩೪; 1290) ; ಆದು ತಿಗುಳಿನೊಳು ಪುಳಿಚ್ಚುತ ಬದನೆಗಾಯಿ ದು ಪೆಸರನೊಲವಿಂ ಕರೆವುದು (ಸೂಪಶಾ. ೪-೧೫) ; ಪಾರಸಿಯಾಂಧ್ರ ಮರಹಾಟ ಕರ್ಣಾಟ ಪಳೆಗನ್ನಡ ತಾನಲ್ಲ ತಿಗುಳು ಸಕ್ಕಜ ನಾಗರದ ಲಿಪಿಯು ಈ ಸರರ ಲಿಖಿತದೊಳಗೊಂದಕ್ಕೆ ಸಮನಿಸದು (ಚೆಕೋರಬ. ೩-೨೯). [ ತಿಗುಳ + – ಉ₂ ]

**ತಿಗ್ಮ** (ಗು). ೧. ಉಷ್ಣವಾದ; ಬಿಸಿಯಾದ; ತೀಕ್ಷ್ಣ; ಪ್ರಖರ: 'ತಿಗ್ಮಕರ' ಪರಾ. ೨. ಹರಿತವಾದ; ನಿಶಿತವಾದ; ಚೂಪಾದ: 'ತಿಗ್ಮಾರಿ' ಪರಾ. ೩. ಉಗ್ರವಾದ ; ಕ್ರೂರವಾದ. (ನಾ). ೪. ಉಷ್ಣತೆ : "ತೀವ್ರಂ, ತಿಗ್ಮಂ, ಖರಂ . . . ಪಟು-ಈ ೭ ಉಷ್ಣರಶ್ಮಿ" (ಪಣಾಯು. ೮-೪೦). ೫. ಸೂರ್ಯ. [ ಸಂ. ]

**ತಿಗ್ಮಕರ** (ನಾ). ೧. ಉಷ್ಣವಾದ ಕಿರಣ. ೨. ಉಷ್ಣವಾದ ಕಿರಣಗಳನ್ನುಳ್ಳವನು; ಪ್ರಖರಕಿರಣ ; ಸೂರ್ಯ : ತಿಗ್ಮಕರನುದಯದೊಳ್ ಪುತ್ರನಂ ಪೆತ್ತಳ್ (ಆದಿಪು. ೭-೩೭) ; ಅಶೇಷಮಂ ಬೆಳಗೆ ತಿಗ್ಮಕರಂ ದಸೆಗಾಣದಿರ್ಪ ಕೌಶಿಕನಯನಂಗಳಂ . . . ಏಕೆಯೊ ಮಾಡಿದನಬ ವಿಷ ರಂ (ಪಂರಾಮಾ. ೧-೬೧). [ ತಿಗ್ಮ + ಕರ₃ ]

**ತಿಗ್ಮತೆ** (ನಾ). ೧. ಉಷ್ಣತೆ; ಪ್ರಖರತೆ: ಚಂಡಕರದ್ಯುತಿ ಪುಗದು ಪೊಕ್ಕೊಡಂ ತಿಗ್ಮತೆಯಂ ಬಿಡುವುದದು ಮತ್ಪ್ರತಾಪದಿನಲ್ತೆ (ಚಂದ್ರಪು. ೫-೭೨). ೨. ಹರಿತವಾಗಿರುವಿಕೆ ; ಮೊನಚಾಗಿರುವಿಕೆ. ೩. ಕ್ರೂರತೆ.
[ ಸಂ. ತಿಗ್ಮತಾ ]

**ತಿಗ್ಮಪ್ರಭೆ** (ನಾ). ಪ್ರಖರವಾದ ಕಾಂತಿ ; ತೀಕ್ಷ್ಣವಾದ ಪ್ರಕಾಶ,- ಹೊಳಪು : ಅಭಿಷೇಕವೃಷ್ಟಿಸೂಚಕಮುಭಯಪ್ರತಿಸೂರ್ಯಬಿಂಬಮೆಂಗೆದುವು ತಿಗ್ಮಪ್ರಭೆ ಪಾರ್ಶ್ವದೊಳೆಸೆದಿರ್ದುವು ಶುಭಾಸನಂ ಸಿಂಹಪೀಠದೆರಡುಂ ಕೆಲದೊಳ್ (ಮಲ್ಲಿಪು. ೧೨-೧೦೩). [ ತಿಗ್ಮ + ಪ್ರಭೆ ]

**ತಿಗ್ಮಮರೀಚಿ** (ನಾ). ೧. ತೀಕ್ಷ್ಣವಾದ ಪ್ರಭೆ. ೨. = ತಿಗ್ಮಕರ ೨ : ಕುಮುದಮನಲರ್ಚಿ ಹಿಮರುಚಿಗೆ ಮಹೋತ್ಸವಮಿತ್ತುದಬ್ಜಮಂ ಕೊರಗಿಸಿ ತಿಗ್ಮಮರೀಚಿಯನದು ಮಸುಳಿಸಿತು (ರಾಜಶೇ. ೯-೨೦).
[ ತಿಗ್ಮ + ಮರೀಚಿ ]

**ತಿಗ್ಮರುಕ್ಕಾಂತಿ** (ನಾ). ಸೂರ್ಯನ ಬೆಳಕು,-ಪ್ರಭೆ : ಆ ತಿಗ್ಮರುಕ್ಕಾಂತಿ ತೀವಿದುದೆತ್ತಲ್ ಬಹುತೇಜದಿಂ (ವಿಷ್ಣುಪು. ೮-೮೪).
[ ಸಂ. (ತಿಗ್ಮರುಚ್ + ಕಾಂತಿ) ]

**ತಿಗ್ಮರುಜ್ಜ್ವಾಲಿ** (ನಾ). ಉಷ್ಣವಾದ ಕಿರಣಗಳ ಮಾಲೆಯುಳ್ಳವನು : ಸೂರ್ಯ : ಆನುಂ ಕಾಯೆನೆಂದಾದಮೆ ಕರುಣಿಸಿದಾತೆಯ್ದೆ ಸಂಕೋಚಿತ್ರ್ಯಾಯ್ಯನೆ ಸುತ್ತುಂ ಸೂಸಿದೀಶಾನನ ಜಡೆಗಳಪೊಲ್ಲಾಯ್ದೆ ಪೊನ್ನೀರ್ಗೆ ವಿಲ್ಗೆಂಪಿನ ಪೆಂಪಂ ಸಿಂಪಿಸುತ್ತಿರ್ದ ಹಿಮರುಚಿಗಳಂ ತಿಗ್ಮರುಜ್ಜ್ವಾಲಿಬೀಬಂ (ಶಾರದೆಲು. ೩೭೪). [ ಸಂ. ತಿಗ್ಮರುಜ್ಜ್ವಾಲಿನ್ ]

**ತಿಗ್ಮರುಚಿ** (ನಾ). = ತಿಗ್ಮಕರ ೨: ಉದಯಗಿರಿಶೇಖರನಾದ ತಿಗ್ಮರುಚಿಮರೀಚಿ ನಿಕುರುಂಬಚುಂಬಿತಾಂಭೋಜವನಲಕ್ಷ್ಮಿಯೊಡನೆ ಲಬ್ಧಪ್ರಬೋಧೆಯಾಗೆ (ಸುಕುಮಾ. ೯-೧೧೫ ವ). [ ತಿಗ್ಮ + ರುಚಿ ]

**ತಿಗ್ಮರೋಚಿ** (ನಾ). = ತಿಗ್ಮಕರ ೨: ಇಕ್ಷ್ವಾಕುಲಾಂಬರ ತಿಗ್ಮರೋಚಿಯಂ ತನಯನನಂದೆ ಪೆತ್ತಪೊಲದೇನನುರಾಗವುಮನಪ್ಪುಕೆಯ್ದುಳೊ (ಸುಕುಮಾ. ೧೧-೪). [ ತಿಗ್ಮ + ರೋಚಿ ]

**ತಿಗ್ಮಾಂಶು** (ನಾ). = ತಿಗ್ಮಕರ ೨: "ತರಣಿ . . . ತಿಗ್ಮಾಂಶು ಮಾರ್ತಾಂಡ ನಕ್ಕುಂ" (ಮಂಗರಾ. ೧೧-೧); ಪ್ರತಾಪನಿಲಯಂ ತಿಗ್ಮಾಂಶುವಿಂ ಸತ್ಕಲಾಚತುರಂ ಚಂದ್ರುನಿನಾದಪಂ ನಿನಗೆ ನೇತ್ರಾನಂದನಂ ನಂದನಂ (ಪಂಚಾಮಾ. ೩-೯೧). [ ತಿಗ್ಮ + ಅಂಶು ]

**ತಿಗ್ಮಾರಿ** (ನಾ). ತೀಕ್ಷ್ಣವಾದ ಚಕ್ರವನ್ನುಳ್ಳವನು; ವಿಷ್ಣು: ಪುರುಷೋತ್ತಮಂಗೆ ಜಗದಾತ್ಮಕಂಗೆ ತಿಗ್ಮಾರಿಗೆ ನಮಿಸುವೆಂ (ವಿಷ್ಣುಪು. ೫-೧೭೫). [ ಸಂ. ತಿಗ್ಮಾರಿನ್ ]

**ತಿಚುಕ** (ನಾ). ಒಂದು ಬಗೆಯ ಹಕ್ಕಿ: ಚಿಲಿಮಿಲಿಗ ಕೆಂಬೂತ ತಿಚುಕ ಮರಕುಟಕ ಕಬ್ಬಕ್ಕಿಗಳು ಮುಂತಾದ ಪ್ರಾಣಿಗಳನುರಿದಗ್ನಿ ದಹಿಸಿತು (ತುರಂಗ. ೧೭-೩೭). 'ಕೀಚಕ್ಕಿ' ಪರಾ. [ ? ]

**ತಿಚೆ** (ನಾ). ಮೂರರು ಋಕ್ಕುಗಳು: ಕೊಡೆ ಗುಡಿ ತೋರಣಂ . . . ತಿಚೆ ಮಂಗಳಗೀತನಾದಮಲ್ಲೆಡೆಗಳೊಳಲ್ಲಿಗಲ್ಲಿಗಧಿಕಂ ಪಡೆದತ್ತು ಜನಾನುರಾಗಮಂ (ಕಾವ್ಯಾವ. ೬೩೩). [ < ಸಂ. ತೃಚ ]

**ತಿಜಣೆಯೂರ್** (ನಾ). ಒಂದು ಊರಿನ ಹೆಸರು: ಕನ್ನಳ್ಳಿಯ ರಾಜಿಗದೊಳ್ × × ಟ್ಟನ್ ಕವಿತ್ತೂರನ್ ಪಸುವಳಿ ಧನುಪೆಟ್ಟು ಕೊನ್ದು ಬಿಟ್ಟಾರ್ ಅವರ್ಗ್ಗೆ ಕೊಟ್ಟೊದು ತಿಜಣೆಯೂರ ನೀಡು (ಎಕ. IX(s). ಹೊಸಕೋ. ೧೬೯-೪; ಸು. 800). [ ತಿಜಣ್ಣ + ಊರ್ ]

**ತಿಜೂರಿ** 'ತಿಜೋರಿ' ನೋ.

**ತಿಜೂರಿವರ್ಗ** (ನಾ). ಶ್ರೀಮಂತರ ವರ್ಗ; ಧನಿಕರ ಪಂಗಡ: ತಿಜೂರಿ ವರ್ಗವಿರುವ ತನಕ ಮಜೂರಿಯ ದುಃಖ ತಪ್ಪಿದ್ದಲ್ಲ (ಸಮುಜೀ. ೯೮೫). [ ತಿಜೂರಿ (< ತಿಜೋರಿ) + ವರ್ಗ ]

**ತಿಜೋರಿ, ತಿಜೂರಿ** (ನಾ). ೧. ಬೆಳ್ಳಿ, ಬಂಗಾರ, ಹಣ ಮೊದಲಾದ ಅಮೂಲ್ಯ ವಸ್ತುಗಳನ್ನಿಡುವ ಭದ್ರವಾದ ಕಬ್ಬಿಣದ ಪೆಟ್ಟಿಗೆ,- ಬೀರು: ಎಲ್ಲವನು ಎಣಿಸಿಟ್ಟ ಬೆಳ್ಳಿಯ ತಿಜೋರಿ (ನಲಮು. ೭೫-೪); ಈ ವಾರದೊಳಗಾಗಿ ರಕಮು ಬಡ್ಡಿ ಸಹಿತ ನನ್ನ ತಿಜೋರಿ ಸೇರಬೇಕು (ಹೊಸಬಿ. ೫೧); ಗುಮಾಸ್ತ ಅವರ ಎದುರಲ್ಲೇ ಇದ್ದ ದಪ್ಪಬಾಗಿಲಿನ ಭದ್ರಬೀಗದ ತಿಜೋರಿಯ ಬಾಗಿಲನ್ನು ತೆಗೆದ (ರಕ್ತರೂ. ೧೧೬); ನಾವು ಮುತ್ತು ರತ್ನಗಳನ್ನು ತಿಜೋರಿಯಲ್ಲಿ ಇಡುತ್ತಿದ್ದಂತೆ ಆಗ ಚಹನ ಪುಡಿಕೆಗಳನ್ನು ಭದ್ರವಾಗಿ ಇಡುತ್ತಿದ್ದರಂತೆ ! (ಪತ್ರಿಕಾ. ೧೩). ತಿಜೂರಿ: ೧. ತಿಜೂರಿಯೊಳಗಿನವು ಬೆಳ್ಳಿ, ಬಂಗಾರ ಎಲ್ಲಾ ಒಯ್ದು ನಿಮ್ಮ ರಂಭಾಗೆ ಕೊಡಿರಿ (ಇತಿಶ್ರೀ. ೬೯). ೨. ಭಂಡಾರ; ಬೊಕ್ಕಸ; ಖಜಾನೆ: ಸರಕಾರದ ತಿಜೂರಿಯನ್ನು ತುಂಬಲು ಮತ್ತ ಬೇರೆ ಕಂದಾಯವನ್ನು ಕೊಡಬೇಕೋ (ಸಮುಜೀ. ೨೩೭). [ ← ಹಿಂ. ಮರಾ. ತಿಜೋರೀ. / ಇಂ. Treasury ]

**ತಿಟತಿಟ, ತಿಟಮಿಟ** (ನಾ). (ಉಕ) ಬಹಳ ಬಿಗಿಯಾದುದು; ಹತ್ತೆಯಾದುದು: ಮಟಮಟ ಮಧ್ಯಾಹ್ನ ತಿಟತಿಟ ಕುಪ್ಪಸ (ಗರತಿ. ೭೮) ತಿಟಮಿಟ: ಗುಲಾಬಿಬಣ್ಣದ ಜರದ ಕಡ್ಡಿಯ ರವಕೆ ತಿಟಮಿಟಯಾಗಿ [illegible] (ಮುತ್ತ್ರ. ೧೪); ಹೂವಿನ ಟೊಪ್ಪಿಗೆಯನ್ನು ಹಾಕಿ [illegible] ಧರಿಸಿದ ಹುಸೇನಿಯು . . . ಒಮ್ಮೆ ಗಟ್ಟಿಯಾಗಿ ಚೀರಿಕರಿಸಿದನು (ರಂಗರೂ. ೧೪೦). [ ? ]

**ತಿಟಮಿಟ** 'ತಿಟತಿಟ' ನೋ.

**ತಿಟುವಟ** (ನಾ). ವಹಿವಾಟು (?): ಕೀರಿಲ್ಲ ತಿಟುವಟವಿಲ್ಲ ಜಂಭ ಮಾತ್ರ ತೊಂಬೇ ಅಪ್ಪು (ಗಾದ). [ ? ]

**ತಿಟ್ಟ$_1$** 'ತಿಟ್ಟು$_3$' ನೋ.

**ತಿಟ್ಟ$_2$** (ನಾ). ೧. ಕುಂಚದಿಂದ ಬರೆದ ಚಿತ್ರ,- ನಕ್ಷೆ,- ಭಾವಚಿತ್ರ: "ತಿಟ್ಟಮೆನೆ ತೀಡುವುದು" (ಕವಿಕಂ. ೨೩೧); ತದೀಯ ಸಿತಕೇತು ಪಟಂ ಬರೆದಿಟ್ಟ ತಿಟ್ಟದೊಪ್ಪುವ ಪಟದಂತೆ ನಿಶ್ಚಳಿತವಾದುದು ವೇಗ ಮರುತ್ಪ್ರಯೋಗದಿಂ (ಶಾಂತಿಪು. ೪-೬೧); ತಿಟ್ಟವ ಲಕ್ಷಿಸುವುದು ಲೆಕ್ಕಣಿಕೆಯುಳ್ಳವ ಆ ತಿಟ್ಟ ಲೆಕ್ಕಣಿಕೆಯ ಲಕ್ಷಿಸಬಹುದೇ (ಮೋಕ್ಷಮಾ. ೧೨೭-೪೯೪); ಇದು ನವಯೌವನ ರಸಚಿತ್ರದ ತಿಟ್ಟಂ . . . ಎಂಬಂದದಿನೆಸೆದುದು ನಿಸದಮುವಳ ಕೊಡಗೂಸುತನಂ (ವರ್ಧಪು. ೯-೩೦); ಭಾರತಿ ಮನದಟ್ಟಿಯಿಂ ಬರೆದ ತಿಟ್ಟಮೆನಲ್ ಪಟಚಿತ್ರವೊಂದು ಚಿತ್ರತೆವಡೆದಿರ್ದುದು (ಕುಸುಮಾ. ೧೨-೭೮); ಬಳಿಕಂಗೋದ್ಭವನಾ ತಿಟ್ಟಮನತಿಚತುರಂ ಬಿನ್ನಣಿಸುತೆ ಬರೆದಂ (ಜಯುಕಾ. ೩-೧೩); ಪಟ್ಟಣವಾಸಿಗರೂರುಗರೊಡನೊಂದು ಬಟ್ಟೆಯೊಳಗೆ ಹೋಗುವಾಗ ಸಟ್ಟಾಟವಾಡುತ ಹೋಹಂತೆ ಮೋಹದ ತಿಟ್ಟವಿಹುದು (ಭರತ. ೫-೧೧೧). ೨. ಪಡಿಯಚ್ಚಿನ ಗೊಂಬೆ,- ಪುತ್ತಳಿ,- ಸಾಲಭಂಜಿಕೆ: ಮೃತ್ತಿಕೆಯ ತಿಟ್ಟದಿಂದ ಮಯಣದ ಕರುವಿಟ್ಟು ಆ ಘಟವ ಲಕ್ಷಿಸಲಿಕ್ಕಾಗಿ . . . ಮಧ್ಯದಲ್ಲಿ ನಿಂದ ತಿಟ್ಟದಂತೆ (ಮೋಕ್ಷಮಾ. ೨೮೩-೫೫); ತಳಿರ್ಗಯ್ಯೊಳರರೆ ರಂಜಿಸುವ ಪೂಚೆಂಡಿನಿಂ ಸಿಂಗರಕ್ಕಿಟ್ಟ ತಿಟ್ಟಮೊಯೆದನಿಸಿ (ಪದ್ಮರಾ. ೫-೪೨). [ ದೇ. ॥ ತೆಲು. ತಿಟ್ಟ ]

**ತಿಟ್ಟು$_3$** (ನಾ). ೧. ನಿಯಮ; ಕಟ್ಟಳೆ; ನಿಬಂಧನೆ; ಕಟ್ಟುಪಾಡು: ಈ ಬೀದಿಗೀತನಿಟ್ಟುದೆ ತಿಟ್ಟಂ (ಚೆಳವಿ. ೬-೧೨೫). ೨. ದೃಢನಿಶ್ಚಯ; ದೃಢನಿರ್ಧಾರ: ನಿಮ್ಮ ಸುಭವ ನಿಮ್ಮ ತಿಟ್ಟವೆಂಬುದು ಪರಿಯೊಪ್ಪುವ ಪುಡುಕಿ ತೂಗುತಿದೆ (ಭರತ. ೭೦-೫೮); ಕಟ್ಟದಿರೊಲು ಕಣ್ಗೆಸೆಯಲದನ ನೋಡಿ ತಿಟ್ಟವ ನೆನೆದು ತಾನಿಂತು (ನಾಗಕು. ೩೨-೧೧೧). ೩. ಏರ್ಪಾಡು; ವ್ಯವಸ್ಥೆ; ಅಚ್ಚುಕಟ್ಟು; ಓರಣ: ನಿಷ್ಪಾವಿಧಿಗೆ ತಿಟ್ಟವಾಗಿಟ್ಟ ದಾರಿ (ಪದ್ಮರಾ. ೬-೮೫); ನಿಮ್ಮ ತಂಗಿಯದೇನ ಮಾಡಿದಳೆನಿತೆಲ್ಲ ನಮ್ಮ ಸೋದರನ ತಿಟ್ಟಗಳು ಹಮ್ಮನಾಡಿದಿರಿ ಸಾಕೆಂದು ರಾಣಿಯರಾಡಿ ತವ್ವೊಳಿಪ್ಪತ್ತಿ ಮಾಡಿದರು (ಭರತ. ೩೬-೪೫). ೪. ಹಂಚಿಕೆ; ಉಪಾಯ; ತಂತ್ರ: ಖಳರೆನಿಸುವಾ ಹುಲಿಯ ಭೃತ್ಯರು ಒಳಗೆ ತಾವೊಡಗೂಡಿ ಬಾಡಾಗಳೆ ನರಿಯ ಕೆಡಿಸುವರೆ ತಿಟ್ಟವನೊಡ್ಡಿದರು (ತಿಮ್ಮಶಾಂ. ೪-೨೫). 'ದಿಟ್ಟ$_2$' ಪರಾ. [ ದೇ. ॥ ತಮಿ. ಮಲ. ತಿಟ್ಟ ]

**ತಿಟ್ಟನೆ** (ಅ). ರಭಸವಾಗಿ; ವೇಗವಾಗಿ: "ತಿಟ್ಟನೆ ಬಟ್ಟನೆಯೆಂಬಿವಜಿಯೊಳ್ ಧ್ರುವಾರ್ಥಂ" (ಶಮಂದ. ೩೦೭); ಘೋರಸಂಸಾರಮಹೋಗ್ರಾರಣ್ಯದೊಳ್ ತಿಟ್ಟನೆ ತಿರಿದು ಕರಂ ಸೇದೆಗೆಟ್ಟಿರ್ದುರ್ (ಸುಕುಮಾ. ೧೨-೩); ಅಟ್ಟುಂಬುದಕ್ಕೆ ನೆಲಹೊಲನ ಕಾಣದೆ ತಿಟ್ಟನೆ ತಿರುಗಿ (ಮೋಕ್ಷಮಾ. ೧೮೧-೭೭೯); ಮರುದ್ವಿಮಾನಪ್ರಕರಂ ತಿಟ್ಟನೆ ತಿರಿಯೆ (ಜಗವಿ. ೧೨-೪೫); ದೂರಿಸುತೆ ವ್ಯವಹಾರದಿಂದೆ ತಿಟ್ಟನೆ ತಿರುಗಿ (ಬಿಂಡೂರ. ಹ. ೫೦೪-೦೯); ಸುರಗಿರಿಯ ಬಿಲ್ಲಾಗಿ ಮಾಡಿ ನೆಲನಂ ತಾಳಿದುರಗನಂ ತಿರುವಾಗಿ ಬಲಿದು ಕಮಲಾಕ್ಷನಂ ಶರವಾಗಿ ತೊಟ್ಟು ತಿಟ್ಟನೆ ತಿರುಗುವಾ ಪುರವನಿಸುವಂದು ಸಂಧಾನಿಸಿ (ಸೌಂದಪು. ೬-೩೦). 'ತಿಣ್ಣನೆ' ಪರಾ. [ ? + - ಅನೆ$_2$ ]

**ತಿಟ್ಟವಿಡು** 'ತಿಟ್ಟವಿಡು' ನೋ.

**ತಿಟ್ಟವಡು** (ಕ್ರಿ). ಓರಣವಾಗು; ಅಚ್ಚುಕಟ್ಟಾಗು: ಬಟ್ಟ ಹೊಂಬರಿವಾಣ ವಂಚಿಸೊಳಗೆ ಸಾಲುಬಟ್ಟಲು ಕೆಲವು ಬಟ್ಟಲೊಳು ಇಟ್ಟ ಮಾಣಿಕದ ಸೋಟಿಗೆಗಳಿಸಯೆ ತಿಟ್ಟವಟ್ಟು ತಿಂತಿಣಿಯೊಳೊಪ್ಪಿದನು (ಭರತ. ೪-೬೩). [ ತಿಟ್ಟು$_3$ + ಪಡು$_1$ ]

**ತಿಟ್ಟವಣೆ** (ನಾ). ಹಂಚಿಕೆ ; ಉಪಾಯ (?) : ಧೃಷ್ಟದನುಜರ ಕೊಲುವರೆ ಉದು {ಒಂದು} ತಿಟ್ಟವಣೆಯ ಮನದೊಳಗೆ ಯೋಚಿಸುತ ಕಮಲಭವಾ (ದೇವೀಪು. ೧-೬೫). [ ತಿಟ್ಟು$_3$ + -ಅಣೆ$_4$ ]

**ತಿಟ್ಟವಿಕ್ಕು** (ಕ್ರಿ). ಚಿತ್ರಬರೆ ; ಚಿತ್ರಿಸು : ತಿಟ್ಟವಿಕ್ಕಲು ತಿದ್ದಲರಿದೆನಿಸುವ ವ್ಯಯ ಕಟ್ಟಾಯವೇಱುವ ಪ್ರಾಯ ಕಟ್ಟಾಣಿ ಹೆಂಗಳೆಸೆದರು (ಭರತ. ೧೨-೫೯). [ ತಿಟ್ಟು$_2$ + ಇಕ್ಕು ]

**ತಿಟ್ಟವಿಡು, ತಿಟ್ಟಮಿಡು** (ಕ್ರಿ). ೧. = ತಿಟ್ಟವಿಕ್ಕು : " ತಿಟ್ಟವಿಡು- (ತಿಟ್ಟ + ಇಡು) ಚಿತ್ರಪ್ರಾರಂಭೇ " (ಶಮದ) ; ಅಪಗತ ಪಾಕಸತ್ತ್ವ ಮುಪಸಾರಿತಮಾರುತಮಾಗಿ ತಿಟ್ಟವಿಟ್ಟುಪವನದಂತುಟಾದುದು ಬನಂ ಜಿನಚಂದ್ರ ತಪಃಪ್ರಭಾವದಿಂ (ಶಾಂತಿಪು. ೧೧-೧೦೭) ; ನಗೆಮೊಗವನು ತಿಟ್ಟವಿಡುತಿರಲಾ ಕಾವ ನಗುತ ತನ್ನಿಕ್ಷುಚಾಪವನು ಮಿಗೆ ಜೇವಡೆಗೆಯ್ದು ಬಗೆಗೆ ಲೆಕ್ಕಣಿಕೆಯು ಬೆಗಡುಗೊಂಡೀಡಾಡಿದಳು (ಅಂಜನ. ೬-೧೧) ; ಪಳಿಕಿನ ವಿಶಾಲಪಟ್ಟದ ಮೇಲೆ ನೂಲುವೊಯ್ದು ತಿಟ್ಟವಿಟ್ಟಣ್ಕಿಗೆಯ್ದು (ಪುಷ್ಪಪು. ೧೪-೨೯ ವ) ; ಚಿಟ್ಟೆ ನೀನೆನವೊಳೆನ್ನೆಳವೆಯನಳುಂಬಂ ತಿಟ್ಟವಿಡೆ ಕಣ್ಮಲೆವ್ಪುದೆಮ್ಮಯ ಕುಟುಂಬಂ (ಗಿರಿಜಾ೦. ೧-೮). ೨. ಬೊಂಬೆ ಯನ್ನು ತಯಾರಿಸು ; ಗೊಂಬೆಯನ್ನು ಮಾಡು : ನೆಟ್ಟನೆ ಮೂಜು ಲೋಕದೊಳುಳ್ಳ ರೂಪಿನಿಂ ತಿಟ್ಟವಿಟ್ಟನೊ ಬಿದಿಯೆನಿಸಿ ಕಟ್ಟಾಣಿಮುತ್ತು ವಿಶಾಲಲೋಚನೆಯೆಂಬ ಪಟ್ಟದರಾಣಿಯಾ ನೃಪಗೆ (ನಾಗಕು. ೩-೮೮) ; ತಿಟ್ಟವಿಟ್ಟ ಪಾಪೆಯೆನೆ ಮೂಗುವಟ್ಟಿರ್ದರ್ (ರಾಮಾಶ್ವ. ೧೦-೧೯). ೩. ಚಿತ್ರ ದಂತೆ ಮೂಡು,-ಸ್ಪಷ್ಟವಾಗು : ಬಳಿಕ ಮಾಯಾಂಗನೆಯ ಮನಸಿಗೆ ತಿಳಿವು ತಿಣ್ಣನೆ ತಿಟ್ಟವಿಟ್ಟತು (ಪ್ರಭುಲೀ. ೬-೮). **ತಿಟ್ಟಮಿಡು** : ೧. ಬರೆಯ ಲೆಂದು ಬಟ್ಟಗೆವಲಗೆಯಂ ತರಿಸಿ ತಿಟ್ಟಮಿಟ್ಟು ಬರೆವನ್ನೆಗಂ(ಆದಿಪು. ೪-೬೩ವ): ಇದರಂದಕ್ಕಬ್ಜಜಂ ಕೂಡ ಬಟ್ಟಗೆಯಂ ತಿಟ್ಟಮಿಡಲ್ಕಿದೇನ್ನೆರೆವ (ಎಕ. V. ಅರಕ. ೯೯-೮ ; 1079) ; ಬಟ್ಟಗೆವಲಗೆಯೊಳಾಗಳೆ. ದಿಟ್ಟಿಗೆ ಸೇರ್ವಟ್ಟು ತೋಱೆ ನೆಟ್ಟನೆ ಭೂಪಂ ತಿಟ್ಟಮಿಡಲ್ ಬಗೆವುದು . . . ಅಂತು ಸಂಸಾರವೈಚಿತ್ರ್ಯಂ ತನ್ನ ಚಿತ್ತಭಿತ್ತಿಯೊಳ್ ತಿಟ್ಟಮಿಟ್ಟಂತು ನಿಲೆ (ಪಾರ್ಶ್ವಪು. ೪-೭೦ ವ). [ ತಿಟ್ಟು$_2$ + ಇಡು$_1$ ]

**ತಿಟ್ಟು$_1$** (ಕ್ರಿ). ೧. ತೆಗಳು ; ಬಯ್ಯು ; ನಿಂದಿಸು : " ತಿಟ್ಟು-ಭರ್ತ್ಸನೇ (ಬಯ್ಯು), ಉನ್ನತಭೂಮೌ ಚ " (ಶಮದ) : ಸಂತರ್ ತಮ್ಮಂ ಖಳರ್ ಮನವಂದುಂತು ತಿಟ್ಟೆ ಮೂಗುವಟ್ಟಂತಿರ್ಪರ್ (ನೀತಿಸಂ. I, ೧೮೫) : ಘಟ್ಟಿಗರಾಗಿಪ ತಿಟ್ಟದ ರಿಪುಗಳ ದಟ್ಟಿಸಿ ಕೊಲ್ಲುವ ಪಟ್ಟದ ಕತ್ತಿಯನೊಪ್ಪಿಸಿ ಕೊಳ್ಳೀಗ (ಹಮುದ. ೪೬) : ಆ ಬ್ರಹ್ಮನ ತಿಟ್ಟೆ . . . ಸಿಗ್ಗಿನೊಳೆ ಸಾವತ್ತಲ್ಮನಂ ಮಾಡುವಂ (ಸಂಸಪ. ೦೫-೦೩): ನನ್ನ ತಿಟ್ಟೆ ನುಡಿದ ನುಡಿಯಾಗಳುಂ ನನ್ನ ಯೆರ್ದೆಯೊಳಗೆ ನೆಲೆಗೊಂಡಿರ್ಪುದು (ಸೌನಂದ. ೭-೧೮). ೨. ಕಡೆಗಣಿಸು ; ಕೀಳುಮಾಡು ; ಮೀರು : ಘನತೇಜಂ ತಿಟ್ಟೆ ತಿಗ್ಮಾಂಶುವಂ (ಪುಷ್ಪಪು. ೪-೮೦).

[ದೇ.॥ ತಮಿ. ತೆಲು. ತಿಟ್ಟು ]

**ತಿಟ್ಟು$_2$** (ನಾ). ಬಯ್ಗುಳು ; ತೆಗಳಿಕೆ ; ನಿಂದೆ : " ತಿಟ್ಟು-ಬೈಗುಳ್ " (ಶಮದ. ಪರಿ. ೨) ; " ತಿಟ್ಟನೆ ಬೈಗುಳೊಳ್ " (ಕರ್ಣನಿ. ೨೯) : " ತಿಟ್ಟನ ತಾಂ ಬೈಗುಳಕ್ಕು " (ಕವಿಕಂ. ೧೩೨). [ <ತಿಟ್ಟು$_1$./ತಮಿ. ತಿಟ್ಟು ]

**ತಿಟ್ಟು$_3$, ಚಿಟ್ಟೆ$_3$, ತಿಂಟೆ, ತಿಂಡೆ, ತಿಟ್ಟ$_1$, ತಿಟ್ಟೆ, ತೀಂಟೆ$_2$, ದಿಂಟೆ, ದಿಂಡೆ$_1$, ದಿಡ್ಡೆ$_1$, ದೀಂಟ, ದೀಂಟೆ** (ನಾ). ೧. ಎತ್ತರವಾದ ಪ್ರದೇಶ ; ತೆವರು ; ದಿಬ್ಬ ; ದಿಣ್ಣೆ ; ಉನ್ನತಭೂಮಿ : ಸರಸಿಯ ನಡುವಣ ತಿಟ್ಟನ ಕಳಹಂಸನ ಕೆಲದೊಳ್ ಬೆಳೆದೊಱಗಿದ ಬೆಳರ್ದಾವರೆಯಂತೆ (ಚಯುಶಾ. ೧೧-೩೫) ; ಭರದಿಂದಾ ಕೊಂಡದ ತಿಟ್ಟಗೆ ಬಂದು (ನೇಮಿಸಂ. ೮-೧೦೧); ಅವನ ಕೈಕಾಲು ಬಿಗಿದು ಕಟ್ಟಿ ಪರಿವ ಹೊಳೆಯೊಳ್ ಬಿಡಿಸಲಾ ದೈವವಶದಿನವನುರುಳ್ದುಂದು ಮಳಲ ತಿಟ್ಟಿಗೆ ಸೇರಲು (ಸಮಸ ೫೧-೧೫); ಸೈನ್ಯ ಬರುವ ದಾರಿಯಲ್ಲಿ ಪಳ್ಳ ತಿಟ್ಟುಗಳ ಸರಿಮಾಡಿ (ಸೌಗಂಧಿ. ೫೧-೧೫) ; ತೊಟ್ಟಿಲ ಹೊತ್ಕೊಂಡು ತೌರ ಬಣ್ಣ ಉಟ್ಕೊಂಡು ತೌರೂರ ತಿಟ್ಟತ್ತಿ ನಿಂದು ನೋಡ್ಯಾಳೋ (ಜಗ್ರ್ಯಪ. ೯೨). ೨. ದಡ : ತೀರ ; ಅಂಚು : ನದಿಯೆರಡು ತಿಟ್ಟೊರಸಿರಲ್ (ಧೃರವೇ. ೩-೧೯೩). ೩. ಸಮೂಹ ; ರಾಶಿ : ಮೇಲ್ಕಟ್ಟುಗಳ ತಿಟ್ಟುಗಳ ಬಹು ಚಿತ್ರಪತ್ರದಿಂದ (ಪತಿಲ. ೭-೭). **ಚಿಟ್ಟೆ$_3$** : ೪. (ಎತ್ತರವಾದ) ಜಗಲಿ,-ಕಟ್ಟೆ : ವಾದ ಮೇಲೆ ಒಬ್ಬೊಬ್ಬರಾಗಿ ಅಗ್ರಹಾರದ ಬ್ರಾಹ್ಮಣರು ಚಿಟ್ಟೆಯ ಮೇಲೆ ನೆರೆಯುತ್ತಾರೆ (ಸಂಸ್ಕಾರ. ೩) : ನೀವು ಹಾಳೆಗಳನ್ನೆಲ್ಲಾ ಕಟ್ಟಿ, ಕೊಟ್ಟಿಗೆ ಚಿಟ್ಟೆಯ ಮೇಲೆ ಸೇರಿಸಿಡಿ (ದಾಳಿವೃ. ೧೭೩). **ತಿಂಟೆ** : ೧. ಪರಿವ ಬಜಪೊನಲ್ಗಳುಮು ಮಣಲ ತಿಂಟೆಯ ನುಣ್ಪುಮಂ ದರಿಯ ನೆಟಲ ತಣ್ಪುಮು . . . ಅರ್ತಿಯೊಳ್ ನೋಡುತ್ತಂ ಬರೆ (ಬಂಡರಿ. ೩-೮ ವ) ; ಆ ನೀರ ತಡಿಯೊಳು ಸಣ್ಣಮಪ್ಪ ಮಣಲ ತಿಂಟೆಯೊಳಂದದಿ ವಜ್ಜ್ರಯುಂ ಕಂಡಿದು ವಿಪರೀತಮೆಂದು (ಬಂಡರಿ. ೩-೮ ವ) ; ಮಳಲ ತಿಂಟೆಯೊಳು ನಳಿನಮಂದಿರದೊಳು ಪೊಳೆವ ಲತಾಭವನದೊಳು (ಅಂಜನ. ೧೫-೧೧). ೪. ಜೂದಿನ ತಿಂ[ಪಾಠಾಂ. ತೀಂ] ಟೆಯೆ ನೆಲಸಿರ್ಪ ತಾಣಂ (ಪಾರ್ಶ್ವಪು. ೩-೭೦) : ಜೂಜಿನ ತಿಂಟೆಗೆ ಪೋಗಿ ಪ್ರಧಾನರಪ್ಪ ನಾನಾ ಮಂಡಳಿಕ ಸಾಮಂತರೊಡನೆ ಜೂಜಾಡಿ (ಪುಣ್ಯಾಸ್ರ. ೭-೫೬ ವ). **ತಿಂಡೆ** : ೧. ಸೀಯಮಂಗಲದ ಪೊಲ ಮೇರೆ ಇಸಾನದ ದೆಸ ನಡುಗಲ್ಲೆ ಅಮ್ಮಲ ತಿಣ್ಡೆಯಿನ್ತೆಂಕಾಯ್ ಪೇರೊಟ್ಟಿಯೆ (ಎಕ. X(S), ಚಿಕ್ಕಬ. ೦೨೬-೬೬ ; 850). **ತಿಟ್ಟ$_1$** : ೧. ಬೆಟ್ಟದಿಂದುಬ್ಬಿ ಭೂಮಿಗೆ ಸಿಂಧುನದಿ ಬೀಳ್ವ ತಿಟ್ಟ ದೊಳ್ಕಳಗೆ ಪ್ರತಿಮೆಯ ಬಿಟ್ಟ ಜಡೆಯ ಮೇಲೆ ಬೀಳ್ವ ಗಂಗಾಂಬುವ ನಿಟ್ಟಿಸಿದನು ನರನಾಥ (ಭರತ. ೩೭-೪೮). ೫. ಎತ್ತರವಾದ ಪೀಠ,- ಆಸನ : ನಟ್ಟನಡುವಗಲ ಮಾರ್ತಾಂಡನೇಱಿದ ರಥದ ತಿಟ್ಟವೋ ಭೂಮಂಡಲದ ನಡುವೆ ಪೊಳೆವ ಪೊಂಬೆಟ್ಟವೋ (ಜಬಪು. ೩೭-೩೩). ೬. ಮೇಲುಭಾಗ : ಮುಂಗಾರ ಸಿಡಿಲ ಮೊಟಗಂ ಕೇಳ್ದು ಸುರುಂಟು ವಣಂಬೆಯ ತಿಟ್ಟದಂತೆ (ರಾಮಾಶ್ವ. ೩೫-೫). **ತಿಟ್ಟೆ** : ೧. ಈ ಚತುಸ್ಸೀಮೆಯ ವೊಳಗೆ ಉಳಂಥಾ ಬೆಟ್ಟು ತಿಟ್ಟೆ ಹಕ್ಕಲು ಹಡಲು ಹೊಲನು . . . ನಡದು ಬಹುದು (ಸಾಇಇ. IX-ii, ೪೧೭-೯ ; 1377) : ನುಣ್ಮಳಲ್ದಿಟ್ಟೆ ಪೊಜವಾಜ ಬಟ್ಟ ಪೊಜವಾಜುಗಳ ಲಲನೆಯರ್ . . . ಬರುತಿರ್ದರು (ಜಬಪು. ೩೭-೪೨) : ಹೊನಲೊಳು ಪರಿತಂದು ಮಳಲ ತಿಟ್ಟೆಯೊಳು ನಿಂದಾಗ (ಜ್ಞಾನಪ. ೧೭-೭). ೪. ಜೂದಿನ ತಿಟ್ಟೆಯಲ್ಲಿ ಜಲಪೆಣ್ಗಳ ಕೇರಿ ಗಳಲ್ಲಿ ನಿಚ್ಚಲುಂ . . . ಸಮಾಚರಿಸುತ್ತಮಿರ್ದನತ್ಯಾದರದಿಂದೆನಲ್ ಖಳನವಂ (ಪುಣ್ಯಾಸ್ರ. ೪-೩೭) ; ನಿನಗೆ ದಣುವಾಗುತ್ತಿದೆ. ಇಲ್ಲಿ ತಿಟ್ಟೆಯ ಮೇಲೆ ಕುಳಿತುಕೊ (ನಿಷ್ಪಾಮ. ೮೭). ೭. (?) : ಕೋಗಿಲೆಯ ಬಾ [ಲ್ಗ]ಪಿನರಂತೆ ಪುಗಿಲ್ಪುಗಿಲೆನೆ ಉಯ್ಯಲು ಹೆಬ್ಬಯಾಡುವರಂತೆ ತಿಟ್ಟೆ ಯೊಳಾಡೆ ಹಿಂದೋಳಂ ಮುಹದಾನಿಯ ಕೀರ್ತಿಯುಂತೆಲ್ಲಾ ದೆಸೆಯೊಳ್ ಮೆಸೆಯ ಬಂದ ಸುಗ್ಗಿಯೊಳ್ (ಬಂಡರಿ. ೫-೫ ವ). **ತೀಂಟೆ$_2$** : ೪. ಮೇಲಿನ 'ತಿಂಟೆ' ಉಲ್ಲೇಖದ 'ಪಾರ್ಶ್ವಪು' ಪ್ರಯೋಗದ ಪಾಠಾಂ ತರವನ್ನು ನೋಡಿ. **ದಿಂಟೆ** : ೧. ದಿಂಟೆಗಳೊಳಂ ದೇಗುಲಂಗಳೊಳಂ ವಿಹಾರಂಗಳೊಳಂ ಇರ್ದು (ವಡ್ಡಾರಾ. ೧೨೩-೨೫): ತೊಱೆಯುರದುತಡಿಯ ಬಿಳಿಯ ಮಳಲ ದಿಂಟೆಯಂತೆ (ಧರ್ಮಾಮೃ. ೧೩-೧೮೭) ; ನುಣ್ಮಣಲ ದಿಂಟೆ ಯೊಳು ತಳಿರ ಹಸೆಯಂ ಹಾಸಿ (ದನ್ನರ. ೮೨-೩) : ಇಂತೀರೆರಡು ಗೋಂಟಿಯ ಸನಿಯದ ದಿಂಟೆಯೊಳ್ (ಚಿಕವಿ. ೫-೩೪). **ದಿಂಡೆ$_1$** : ೧. ಪಡುವಯ್ನಡದು . . . ತೆಂಕೆ ದಿಣ್ಡೆಯಿನ್ ಪಡುವಯ್ನೇಡಿ ಪೋದ ಬಿಟ್ಟಿ (ಎಕ. X(S), ಚಿಕ್ಕಬ. ೩೭-೧೮ ; ಸು. 850): ದಿಂಡೆಯ

. . . ತುಂಡಿಸಿ ಬೇತಾಳಶಿರವ ದಿಂಡೆಯು ಮರಕೆ ಕಟ್ಟಲು (ಹಮಚ. ೩-೭೬). ೪. ಬೀದಿವೀದಿಗಳೊಳ್ ಜೂಜಿನ ದಿಂಡೆಯೊಳ್ . . . ಅವಿನೀತರ್ ನೀತಿಗೆಟ್ಟಾಡುವರ್ (ಸುಕುಮಾ. ೨-೭). ದಿಡ್ಡೆ$_1$ : ೧. ಬಂದೊಂದು ದಿಡ್ಡಿಯನೇಱಿ ತಾವೆಲ್ಲರು ನಿಂದು ನೋಡಿದರು ಪಾಳಯವ (ನಾಗಕು. ೧೬-೩೨). ದೀಂಟು : ೧. ದೀಂಟು [ಪಾಠಾಂ. ಟೆ] ಗುಳಿಗಳನಱಿಯು ದೇಳುತ್ತೆ ಬೀಳುತ್ತೆ . . . ಅಂಬಿಕಾಭವನಮಂ ಸಾರ್ದನು (ಜೈಮಿಭಾ. ೩೧-೫೪). ದೀಂಟೆ : ೧. ತೊಱೆಯ ಮಣಲ ದೀಂಟೆಗಳ ನುಣ್ಪುಮಂ (ಬಂಧರಿ. ೨-೪೨ ವ). ೪. ಕೇಸರಿಯ ದಾಡೆಯು ಜೂದಿನ ದೀಂಟೆ [ಪಾಠಾಂ. ದಿಂಟೆ] ಪೀಲಿಯುಂ ಪೊದೆಸಿದ ಪಂದರಾಳಿಯುಲರಾನೆಯ ಮುತ್ತಿನ ರಾಸಿ (ಅರ್ಧನೇ. ೩-೫೦).

[ ದೇ.॥ ತಮಿ. ತಿಟ್ಟು, ತಿಟ್ಟೈ ; ಮಲ. ತಿಟ್ಟು, ತಿಟ್ಟ ; ತುಳು. ತಿಟ್ಟೆ, ಚಿಟ್ಟೆ ; ತೆಲು. ತಿಟ್ಟ ]

**ತಿಟ್ಟುವಾಯ್** (ನಾ). ತೆಗಳುವ ಬಾಯಿ ; ಪರದೂಷಣೆಯಲ್ಲಿ ಆಸಕ್ತಿಯುಳ್ಳ ಬಾಯಿ : ತಿಟ್ಟುವಾಯ ಅಶ್ಲೀಲನೂ, ಕಯ್ಗನಿಸಿನ ಶಸ್ತ್ರಾಡಂಬರನೂ–ಆವುದಕ್ಕೂ ಹೇಸದ ಪಿಶಾಚವತಾರನೇ ಆಗಿರು (ಪಟ್ಟಅ. ೧೭೫-೩). [ ತಿಟ್ಟು$_1$ + ಬಾಯ್ ]

**ತಿಟ್ಟೆ** ‘ತಿಟ್ಟು$_3$’ ನೋ.

**ತಿಡ್ಡ** ‘ತಿಗಟ’ ನೋ.

**ತಿಣ** (ನಾ). ಹುಲ್ಲು ; ತೃಣ : “ ತೃಣ–ತಿಣ ” (ಶಮದ. ೨೬೮ಪ್ರಯೋ) : “ ತಿಣವೊಂದು ತೃಣ ” (ಕಶಸಾ. ೩೧-೬೬೮) : “ ತೃಣ–ತಿಣ ” (ಶಬ್ದಾನು. ೦೫೮ ಪ್ರಯೋ). ‘ತಿಣಂಗಿಱು’ ಪರಾ. [ <ಸಂ. ತೃಣ ]

**ತಿಣಂಗಿಱು** (ಕ್ರಿ). ಹುಲ್ಲಿಗೆ ಸಮವಾಗಿ ಭಾವಿಸು ; ಅತಿ ನಿಕೃಷ್ಟವಾಗಿ ಕಾಣು : ನಿಸದದಿಂದವನು ತಿಣಂಗೆತ್ತು ಬಿಟ್ಟು (ವಾಸೋಪು. ೯-೧೭೯).

[ ತಿಣ + ಗಿಱು ]

**ತಿಣಕು** ‘ತಿಣುಕು$_1$’ ನೋ.

**ತಿಣಾತುರ್ಯ** (ನಾ). ಆಹಾರದಲ್ಲಿ ಆಸಕ್ತಿ (?) : ಹಸಿವು ತೃಷೆವೆಸನಂಗಳಲ್ಲಿ ಅಲಕ್ಷಿತನಾಗಿ ಪಾಶಬದ್ಧವಿರಹಿತನಾಗಿ ಗುಣಾವಗುಣವ ವಿಚಾರಿಸದೆ ತಿಣಾತುರ್ಯ ಮುಕ್ತ್ಯಾತುರ್ಯ ಸ್ವಯಿಶ್ವಾತುರ್ಯಮೆಂಬ ವುಂಬ ಠಾವಿನಲ್ಲಿ ಬದ್ಧನಾಗದೆ ಸ್ತುತಿಗೆ ನಿಲ್ಲದ ನಿಂದೆಗೋಡದ ಉಭಯವನೇನೆಂದು ಅಱಿಯದ (ಪದಗೋ. ೧೦೮-೦೨೫). [ ? ]

**ತಿಣೆ$_1$** (ಕ್ರಿ). ೧. ಒಟ್ಟಿಗೆ ಸೇರು ; ಒಂದುಗೂಡು ; ಬೆರೆ ; ಗುಂಪುಗೂಡು : “ ತಿಣೆ–ಸಂಕೀರ್ಣೇ (ಬೆರಸು) ” (ಶಮಧಾ). ೨. ಚಿಂತೆಗೊಳಗಾಗು ; ಕಳವಳಿಸು (?) : ದಣಂದಣರಸೆ ಪೊಯ್ವ ಮಹಾನಿಸ್ಸಾಣದ ಬಲ್ದನಿಯುಂ ಕೇಳ್ದು ಎಣಿಸಿದರೆರ್ದೆಗೆಟ್ಟರ್ ಭಯಯುಕ್ತರ್ ಪೆಣನಾದರ್ ಪೆಂಪಳಿದರ್ ಜಗುಳ್ದರ್ ತಿಣೆದರ್ ತಕ್ಕಳಿದರ್ ಪರಪೃಥಿವೀಪಾಲಕಬಲದವರು (ಜಯುಕಾ. ೭-೧). ೩. (?) : ತಣಿಪಾಶೆ ಮಾತನಾಡುತ ಮಣಿವರು ಮೊದಲೊಳಗೆ ಬರಲು ವೈದ್ಯನ ಜನರುಂ ತಿಣೆವರು . . . ತಣಿಯಾಗಲು ನೋಡರವನ ಧನಭಯದಿಂದಂ (ನೀತಿಸಾ. ೮೪೨).

[ ದೇ.॥ ತಮಿ. ತಿಣೆ, ತಿಳ್ಳೈ ]

**ತಿಣೆ$_2$** (ನಾ). ಗುಂಪು ; ಸಮೂಹ : ಬಡವ ಬಲ್ಲಿದ ಬುಧ ಯಾಚಕರೆನ್ನದೆ ತಡಗ ತಡಗ ಜವುಳಿಗಳ ತೊಡವು ಪೆಟ್ಟಿಗೆ ಪೆಟ್ಟಿಗೆಗಳ ತಿಣೆಯಿತ್ತು ಒಡನೆ ಶರ್ಕರೆಯ ತಿದ್ದಿಸಿದ (ಜ್ಞಾನಚ. ೩೭-೦೩೮). ‘ತಿಂತಿಣಿ$_1$’ ಪರಾ.

[ <ತಿಣೆ$_1$ ]

**ತಿಣೆಕಿಸು** (ಕ್ರಿ). ಒದ್ದಾಡುವಂತೆ ಮಾಡು ; ಕಷ್ಟಪಡಿಸು ; ಬಳಲಿಸು : ಟಿಪ್ಪುವನು ತಿಣೆಕಿಸುತ ಕಾದಾಡತೊಡಗಿದರು (ವಿಜದ. ೭೩).

[ ತಿಣೆಕು$_1$ (<ತಿಣುಕು$_1$) + – ಇಸು$_3$ ]

**ತಿಣೆಕು$_1$** ‘ತಿಣುಕು$_1$’ ನೋ.

**ತಿಣೆಕು$_2$** ‘ತಿಣುಕು$_2$’ ನೋ.

**ತಿಣೆವು** (ನಾ). (?) : ಕಾಲ್ಗಳ ಕಯ್ಗಳ ತುರಗದ ಕಾಲ್ಗಳ ತಿಣೆವುಗಳೊಳಲ್ಲಿ ಬಂಚಿಸುತೆಱಗುಂ ಗೆಲ್ಗುಮೆನೆ ನೆಗಟ್ದ ಮಾರ್ಗ್ಗದೆ ಗೆಲ್ಗುಮೆ ಪಿಡೆದಲ್ಲಿ ಕೀರ್ತ್ತಿನಾರಾಯಣನಂ (ಎಕ. II, ೧೩೩-೧೪೭ ; 982). [ ? ]

**ತಿಣುಕಾಟ** (ನಾ). ತಿಣುಕುವಿಕೆ ; ಒದ್ದಾಟ ; ಕಷ್ಟಪಡುವುದು : (*).

[ ತಿಣುಕು$_1$ + ಆಟ ]

**ತಿಣುಕಾಡು** (ಕ್ರಿ). ಬಹಳ ಕಷ್ಟಪಡು,–ಒದ್ದಾಡು : ಆಮೇಲೆ ಕರ್ಣನ ಕವಚವನ್ನು ಸೀಳಿ ಪೊಗಳುಗೊಂಡ ಸೂರ್ಯಕುಮಾರನೂ ತಿಣುಕಾಡುವಂತೆ ಬಾಣಪ್ರಯೋಗವನ್ನು ಮಾಡಿದನು (ವ್ಯಾಸಜಿ. ೩೯೨).

[ ತಿಣುಕು$_1$ + ಆಡು$_1$ ]

**ತಿಣುಕು$_1$, ತಿಣಕು, ತಿಣೆಕು$_1$** (ಕ್ರಿ). ೧. ಭಾರವನ್ನಾಗಲಿ, ನೋವನ್ನಾಗಲಿ ತಾಳಲಾರದೆ ಒದ್ದಾಡು,– ಆಯಾಸಪಡು ; ಮುಲುಕು : ಕಣ್ ತುಮುಱೆ ಪೆರ್ಚಿದೆಯುಂ ಮಣಿ ಸೂಸೆ ಬೇಸಱಿಂ ತಿಣುಕಿದನಾನಲುಮ್ಮಳಿಸಿ ಶೇಷನಶೇಷ ಮಹೀವಿಭಾಗಮಂ (ಪಂಪಭಾ. ೯-೯೯) ; ತಿಣು [ಪಾಠಾಂ. ಣಿ] ಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ (ಕುವ್ಯಾಅ. ೧-೧೭) : ಅನಿಲಜ . . . ಬೊಬ್ಬಿಱಿದು ತಿವಿದನು ತಿಣುಕಲು ಸುರೇಂದ್ರ (ತೊರರಾ. ೭-೨೭-೩೯) ; ಧರಣಿಯ ಹೊರೆಯೊಳು ತಿಣುಕುವ ಫಣಿ ಮೇಲೆ ಹಾಯಾಗಿ ಹರಿ ಮಲಗಿಹನು (ಇಂಚಾಪ. ೧೦೪-೭). ೨. ಅಪಾನವಾಯುವನ್ನು ಬಿಡು ; ಹೂಸು ; ಹುರಿಕೆಬಿಡು : “ ತಿಣುಕು (ತಿಣಕು)–ಅಪಾನವಾಯೌ ” (ಶಮಧಾ). ತಿಣಕು : ೧. ಮಲಗಿರುವ ಹಾವನ್ನು ಕೆಣಕಬೇಡ ಕಟ್ಟ ವಿಷ ಕಾರಿದರೆ ತಿಣಕಬೇಡ (ನಾದಲೀ. ೭೫-೧೨) ; ರಾಯರ ಹೆಂಡತಿ ಹೆತ್ತರೆ ಊರೆಲ್ಲ ತಿಣಕಬೇಕೋ ? (ಗಾದೆ). ತಿಣೆಕು$_1$ : ೧. ಎಲ್ಲಿ ಇಣಿಕಿದರೂ, ತಿಣಿಕಿ ನೋಡಿದರು ತನ್ನನಗಲಲೆಡೆಯಿಲ್ಲ ಎಂದರಿದು . . . ನಿಶ್ಚಿಂತ ನಿವಾಸಿಯಾಗಿದ್ದುದೇ ಶರಣನ ಸುಜ್ಞಾನ (ಮೋಳಿಮಾ. ೪ ಪ್ರಸ್ತಾವನೆ).

[ ದೇ.॥ ತುಳು. ತೀಂಕು ; ತೆಲು. ತಿನುಕು ; ಮಲ್ತೊ. ತಿಂಕ್ ]

**ತಿಣುಕು$_2$, ತಿಣೆಕು$_2$** (ನಾ). ಅತಿಕಷ್ಟ ; ತೊಂದರೆ ; ಹೆಣಗಾಟ : ಗೆಡೆವಚ್ಚುಗೊಂಡು ಪಾಂಡವರನಕಾರಣಂ ಕೆಣಕಿದೀ ಪೊಸ ಪೊಟ್ಟುಱಿಶೊಳಾವ ಕಿರ್ಚುಕೌರವರ್ಗಿದು ನಾಡೆಯುಂ ತಿಣುಕನಾಗಿಸದೇಂ ಗಳ ಸಯ್ತು ಪೋಕುಮೇ (ಪಂಪಭಾ. ೨-೮೭) ; ಜೂದಾಡಿ ಸೋಲ್ತು ಸನ್ನಿಗೆ ಮೇದಿನಿಯಂ ಕೊಟ್ಟು ಪಾಂಡುನಂದನರೀಗಳ್ ಪೋದೊಡಮೇನ್ ತಿಣುಕಾಗದೆ ಪೋದುಪುದೇ ನಮ್ಮ ನೃಪತಿಗವು ತವುದಲೆಯೊಳ್ (ಪಂಪಭಾ. ೭-೧೮). ತಿಣೆಕು$_2$ : ಉತ್ತರಭರತದೊಳಾದಾಪತ್ತಂ ನೀನಱಿಯಯಕ್ಕುಮಸಿತುಂ ಬಲಮಂ ಮುತ್ತಿ ಚಿಲಾತಾವರ್ತರ್ ಸುತ್ತಲುಮೇಸಾಡಿ ಪಿರಿದು ತಿಣೆಕಂ ತಂದರ್ (ಆದಿಪು. ೧೪-೭೦). [ <ತಿಣುಕು$_1$ ]

**ತಿಣುಱು** (ಕ್ರಿ). ಕಟ್ಟು ; ನಿಲ್ಲು ; ತಡೆ : ಮೂಱು ಝಾವದ ಶೂಲೆಗೆ ಹೊಟ್ಟೆ ಬಾವುದು ನಿಲಲಾಱದೆ ನಡುಗುವುದು. ವಿಾಱಿದರೆ ಬೀಳುವುದು ಮೂತ್ರ ತಿಣುಱುವುದು (ಅಶ್ವವೈ. ೧೧-೨೫ ಟೀಕು) : ಕೆಡವಡೆ ಮೇಳ್ವಡಂ ಪಡುವಡಂ ಭರಣಂ ತಿಣುಱುತ್ತಮಿಪ್ಪಡಂ ಚರಣವನಾವಗಂ ಬಡಿವಡಂ ಪೆರತೆನಿತು ಶೂಲೆ ತೋಱಿತೆಂದಱಿ (ಅಶ್ವವೈ. ೧೧-೯೭).

[ ದೇ.॥ ತಮಿ. ತಿಣಱು ]

**ತಿಣ್ಣ** (ನಾ). ೧. ಒಜ್ಜೆ ; ಹೊರೆ ; ಭಾರ : “ ಬಿಣ್ಪೆಂದುಂ ತಿಣ್ಣಮೆಂದುಂ ಭಾರಂ ” (ಕಶಸಾ. ೨೭-೫೭೭) : “ ಭಾರಮದು ತಿಣ್ಣ ಬಿಣ್ಪಂ ” (ಕವಿಕಂ. ೨೨೫); ತೊಡೆಯ ಬಿಣ್ಪು ಪದಾಂಬುರುಹಕ್ಕೆ ತಿಣ್ಣಮೇಂ (ಪಂಪಭಾ. ೩-೪೭); ಮೇದಿನಿಯ ತಿಣ್ಣವನಿಳುಹಲೋಸುಗರ ಆಹವದೊಳರ್ಜುನನ ರಥದೊಳ್

ವಾಹಕನು ತಾನಾಗಿ (ಕುಮಾ.ಭೀ. ೩-೯೩) ; ಭೂಮಿಯ ತಿಣ್ಣವನು ತಿದ್ದಲಿಕೆ ಹರಿ ನರನಾಗಿ ರೂಹಿಸಿದ (ತೊರರಾ. ೬-೨-೨೦) : ಸಣ್ಣವನೆನಬೇಡ ಹರಿ ತನ್ನ ಪೆತ್ತವಳಣ್ಣನ ಮಡುಹಿ ಮೇದಿನಿಯ ತಿಣ್ಣವನಿಳುಹಿದ (ಮೋಹತ. ೧೨-೧೬) : ಪೆಣ್ವದಿಂ ಪಾತಕದಿನಿತೊಂದು ತಿಣ್ಣಮಂ ಪೊಱುಪೊಡೆಂದೇಂ ಬಿದಿ ಮಾಡಿದನೇ (ರಾಮಾಶ್ವ. ೧೩-೨೬). ೨. ದೊಡ್ಡದು ; ಸ್ಥೂಲವಾದುದು ; ದಪ್ಪವಾದುದು ; ತೋರವಾದುದು : ಸಣ್ಣಂ ನಡು ತಿಣ್ಣಂ ಪೊಲೆ . . . ಬಣ್ಣಿಸಲರಿದಬ್ಜಜಂಗಮಾಕೆಯ ರೂಪಂ (ಕಾವ್ಯಸಾ. ೨೮೧ ಶೂದ್ರಕ) : ತಿಣ್ಣವಾದಾನೆಸಮ್ಮದ ಹೊದಿಕೆಯಿಂ . . . ವಿಶ್ವನಾಥು ಪ್ರಸನ್ನನಾದಂ (ಪದ್ಮರಾ. ೭-೩೫). ೩. ಅಧಿಕವಾದುದು ; ಹೆಚ್ಚಾದುದು ; ಆಧಿಕ್ಯ : ಬಱುವಿಸಿಲುಂ ಸುಡುತಿರೆ ನೀರಡಿಕೆ ತಿಣ್ಣಮಾದತ್ತಾಗಳ್ (ಶಾದಂಪೂ. ೧೯೭) : ನಿಮಗಂ ಪುಣ್ಣ ಬೇನೆ ತಿಣ್ಣಮದಱಿಂ ಮೇಲೆ ಕ್ಷುಧಾಪೀಡೆಯಾದುದಪ್ಪೊಡೆ ಶರೀರಮಂ ಸಂಹರಿಸಲ್ಬಾರದು (ಪಂಚತಂ. ೧೪೪-೬) ; ನಿನ್ನ ಗುರು ಹೇಳನೇ ತನ್ನ ಸುತರಳಲ ತಿಣ್ಣಮಂ (ಹಚಕಾ. ೮-೯) : ಮುಚ್ಚುಮಱಿಯೇಕಣ್ಣ ತಿಣ್ಣದ ಕಿಚ್ಚುದೋಱಿದೆ ನಮಗೆ (ತೊರರಾ. ೬-೨-೩೨) ; ದುಃಖಿದ ತಿಣ್ಣವೆನಗಾಯಿತು (ನಿಭಾಗ. ೭-೪-೪). ೪. ತುಂಬಿದುದು ; ಪೂರ್ಣವಾದುದು ; ಮುಂದಣ್ಗೊಪ್ಪುವ ಪಳದಿಯ ಬಣ್ಣಂ ಸಂದಿರ್ಪುದು ಕರ್ಣಿಕೆಯದು ತಿಣ್ಣಂ (ಹಾಲಾಸ್ಯ. ೧-೧-೨೧ ರಗಳೆ). ೫. ಶ್ರೇಷ್ಠವಾದುದು ; ಹಿರಿಮೆ ; ದೊಡ್ಡತನ : ತಿಣ್ಣವೆನಿಸುವ ಭಕ್ತಿ ಕಣ್ಬೆಱಿದ ಪರಿಯೊಳಿರೆ (ಶಾರಿರ. ದೇ. ೨೮೯-೨೨) : ನೇರಿಳೆರಸದಿಂದ ತಿಣ್ಣವೆಂದೆನಿಸಿದ ನಿಸ್ನಂಗರಾಗಲೇಪವನು ತಳೆದ ಆ ಗೋದೆಯ ಕೂಲದೊಳು (ಗಾಥಾಸ. ೪೯-೮೯). ೬. ಗಟ್ಟಿ ; ಬಿರುಸಾದುದು ; ದೃಢವಾದುದು : ಕೊಂಬಿಟ್ಟಿಪಿದ ಮರದಿಂದಗ್ಗಳಂ ತಿಣ್ಣಮಾದಂ (ಶಮದ. ೨೪೨ ಪ್ರಯೋ). ೭. ಕಷ್ಟ ; ಕಠಿನವಾದುದು ; ಪ್ರಯಾಸಕರವಾದುದಂ : ಆಣ್ಣನಾಜ್ಞಾಭಂಗಕಿದು ತಾ ತಿಣ್ಣವೀ ದೇವಿಯರ ನುಡಿ (ತೊರರಾ. ೩-೯-೧೩) ; ಸಣ್ಣನಡುವಿನ ಚೆಲ್ವಿನತ್ತಿಗೆಯ ವಂಗಿದಿರ್ನಡೆದು ಮನ್ಮಥಯುದ್ಧಕೆ ತಿಣ್ಣವೆನ್ನದೆ ನಿಂದಳ್ (ಭಾವಚಂ. ೬-೨೪) ; ಲಜ್ಜಿಸುವ ತಿಣ್ಣಮಂ ಬಿಡಿಸಿ . . . ಪ್ರಚ್ಛನ್ನ ಸಂಭೋಗಿಗಳ್ ಕಣ್ಗೆಸೆದರು (ಚಬಪು. ೧೦-೫೯) : ಹೀಗೆ ಮೂರುವಿಧದ ಮುನಿಷಿಗಳನ್ನು ಅವರ ಯೋಗ್ಯತಾನುಸಾರವಾದ ಸಂಬಳವನ್ನು ಕೊಡುವುದು ತಿಣ್ಣವಾಗಿತ್ತು (ಮುಸುಗ. ೩೫). ೮. ಪ್ರಬಲನಾದವನು ; ಬಲಿಷ್ಠ ; ಶಕ್ತಿಸಂಪನ್ನ : ಕಣ್ಣೆತ್ತು ಸುತಿಗ್ಯದು ಕಣ್ಣ ಪಡೆದು ಮತ್ತಾ ಕಣ್ಣೆತ್ತು ಬಳಿಕದ ಪಡೆದು ಕಣ್ಣ ಮೂಗಳವ ಮುಕ್ಕಣ್ಣನಿಂ ಪಡೆದನು ತಿಣ್ಣನೀತನಿಗೆ ತೋಡಹುದೆ (ಭೈರವೇ. ೪-೬೫).

[ ದೇ.॥ ತಮಿ. ತಿಣ್ಣ ; ಮಲ. ತಿಣ್ಣ, ತಿಣ್. / ಪ್ರಾ. ತಿಣ್ಣ. / ಸಂ.ತೀಕ್ಷ್ಣ ]

ತಿಣ್ಣಂ (ಅ). ೧. ಹೆಚ್ಚಾಗಿ ; ಅಧಿಕವಾಗಿ ; ವಿಶೇಷವಾಗಿ : ಮುನ್ನಂ ರಘುಕುಲದಹನೋಗ್ರೇಷುವಿಂ ಕಾಯ್ದು ತಿಣ್ಣಂ ಕುದಿಗೊಂಡಟ್ಟಿಕ್ಕಿತ್ತು (ಎಕ. X, ಮುಳಬಾ. ೩೮-೧೩ ; ಸು. 990) ; ಎಣ್ಣೆಯುಂ ತಿಣ್ಣಮೆಱಿಯದಿರ್ (ವರ್ಧಮಾ. ೭೭-೬) : ನಿಜವಿಜಯಸಿಂಧುರಮುಮಂ ತಿಣ್ಣಂ ನೂಂಕಲುಮಪ್ಪುಂಕಲುಂ ಬೆಸಸಿ (ಆದಿಪು. ೧೪-೯೮ ವ) ; ಪೊಱಮುಯ್ವಂತಾಗೆ ತಿಣ್ಣಂ ತೆಗೆನೆಱಿದಿಸೆ . . . ಖಚರಪತಿ ಭರಂಗೆಯ್ದು ಕೆಯ್ವೋಗದೆಚ್ಚಂ (ಶಾಂತಿಪು. ೪-೪೨) ; ಕಣ್ಣಂ ರಸನೆಯನೆರ್ದೆಯುಂ ತಿಣ್ಣಂ ದಣಿಯಿಸುವ ಪಲವು ಪೂವಿಂ ಕಾಯಿಂ ಪಣ್ಣಿಂದೆಸೆವಿಮ್ಮಾವಿರೆ ಪಣ್ಣುವಿನಂ ಬಾರ್ತೆಯಿಲ್ಲದೀ ನೇಱಲೊಳೇಂ (ಶಬ್ದಾನು. ೪೭೪ ವ್ಯಾಖ್ಯಾ). ೨. ದಟ್ಟವಾಗಿ ; ನಿಬಿಡವಾಗಿ : ಪಡಿಗಳನಮರ್ಚಿ ಬಿಲ್ಲುಂ ಕುದುರೆಯುಂ ಕಾಲಾಳುಂ ನಾಯ್ಗಳುಮಂ ತಿಣ್ಣಮಿರಿಸಿ (ಪಂಪಭಾ. ೫ ೪೭ ವ) ; ಸ್ನೇಹಾಭ್ಯಂಗಮುಮುಳ್ಳ ಮೆಯ್ಯನೆ ರೆಗಂ ತಿಣ್ಣಂ ತಗುಳ್ವಂತೆ (ಜೀವಸಂ. ೧೪೦-೧೮) ; ತಿಣ್ಣಮೊಸಲಂಸಃ ಪೞಯುಲ್ಲಿಗ್ನಸಿದೆಳೆಸಂಜೆಗೆಂಪದಂಟಿರಲೆಸೆವಕ್ಷುಣ್ಣರುಚಿವಡೆದುಡುಗಳಿನೆ ತಿಣ್ಣ[illegible]ಪೆಸೆದುವಾಂತು ಲಾಕ್ಷಾರಸಮಂ (ಉದ್ಭಟ. ೫-೫೩). ೩. ರಭಸವಾಗಿ ; ತೀವ್ರವಾಗಿ ; ವೇಗವಾಗಿ : ಅನಿಬರುಂ ಬಾಳ್ಗ[ಟಿಪ್ಪ] ಮೇಲ್ವಾಯ್ದೊಡರ್ಜಿಸೆ ತಿಣ್ಣಂ ತೆಗೆದರ್ಧಚಂದ್ರಶರದಿಂ ಸೂೞ್ಸೂೞೊಳೆಚ್ಚಾಗಳ್ (ಪಂಪಭಾ. ೦೨-೧೪೫). ೪. ಸ್ಥಿರವಾಗಿ ; ಚಾಂಚಲ್ಯವಿಲ್ಲದೆ : ಚಂಚಲನಾಗದೆ ತಿಣ್ಣಂ ನಡೆವವನೆ ತಾಂ ತಪೋಧನನಕ್ಕುಂ (ಧರ್ಮಾಮೃ. ೭-೪೪) : ಅಣ್ಣನ ಮಾತಂ ಮನದೊಳ್ ತಿಣ್ಣಂ ತಳೆದು (ಜುಕೋಪ. ೧-೫೦). ೫. ಗಟ್ಟಿಯಾಗಿ ; ಬಿಗಿಯಾಗಿ ; ಭದ್ರವಾಗಿ : ಕಣ್ಣಂ ತಿಣ್ಣಂ ಮುಚ್ಚಿಕೊಂಡಿರ್ಪ ಕಾರಣಮಾವುದು (ಪಂಚತಂ. ೧೭೩-೧೭).

ತಿಣ್ಣಮಾಗು = ೧. ಭಾರವಾಗಂ: ನಿನಗೆ ನೀರ್ತಿರ್ಪವಿರ್ದ ಪೊಂಗಳಸಮಿದು ತಿಣ್ಣಮಾಗದು (ಜೈಮಿಭಾ. ೩೪-೨). ೨. ಅತಿಶಯವಾಗು ; ಹೆಚ್ಚಾಗು : ವಿಷಮವಿಷಸದೃಶವಿಷಯಾಮಿಷಕಾಂಕ್ಷೆಯೆ ತಿಣ್ಣಮಾಗೆ ಮತಿಗೆಟ್ಟು (ಸುಕುಮಾ. ೮-೩೭) : ಆಕೆಯ ಮೇಲೆ ಮೋಹಮುಂ ಸ್ನೇಹಮುಂ ತಿಣ್ಣಮಾಗೆ (ಧರ್ಮಾಮೃ. ೨-೧೧೨) ; ಪಸಿವು ನೀರಟ್ಟಿಯುಂ ತಿಣ್ಣಮಾಗಲ್ (ನೇಮಿಪು. ೧೩-೫೫ ವ). ೩. ಸಾಂದ್ರವಾಗು ; ನಿಬಿಡವಾಗು : ತಾಳುಂತಟ್ಟುಂ ಪೊಯ್ಕೆ ಕಡಿಖಂಡಮಾದ ಮೆಯ್ಯುಂ . . . ದೆಸೆದೆಸೆಗೆ ತಿಣ್ಣಮಾಗೆ ಸೂಸುವ ಕಣ್ಣಾಲಿಗಳುಂ (ಪಂರಾಮಾ. ೧೩-೫೪ ವ) ; ಮಂಗಳಪಾಪದ ಮಹಾಶಿವಲಿಂಗ ದಂಷ್ಟ್ರಗಳೊಳಂ . . . ಸುಣ್ಣಸಳ್ಗಳು ತಿಣ್ಣಮಾಗಿ ತೀವಿರೆ (ಬಸರ. ೬-೮೫).

[ <ತಿಣ್ಣ ]

ತಿಣ್ಣಂಬೆಱು (ಕ್ರಿ). ಆಧಿಕ್ಯವನ್ನು ಹೊಂದು ; ಹೆಚ್ಚಾಗು : ಪೆಣ್ಣಂಬೆಯೆಱಿಂಕೆಯ ಪೊಯಿಲಿಂದಂ ತಿಣ್ಣಂಬೆತ್ತಣ್ಮುವ ನೀರ್ವನಿಯಿಂ ಬಣ್ಣಂಬಡೆಯೆ . . . ಸುಳಿಗೆಲರಾ ಬನದೊಳ್ (ಉದ್ಭಟ. ೨-೨೧).

[ ತಿಣ್ಣ + ಪೆಱು₁ ]

ತಿಣ್ಣಗೆಡಿಸು (ಕ್ರಿ). ೧. ಭಾರವನ್ನು ತಗ್ಗಿಸು ; ಹೊರೆಯಿಳಿಸು : ಭೂಮಿಯ ತಿಣ್ಣಗೆಡಿಸಿದನಸುರಮರ್ದನನು (ನಿಭಾಗ. ೧೦-೦-೭). ೨. ದೃಢತೆಯನ್ನು ಕೆಡಿಸು ; ಚಂಚಲಗೊಳಿಸು : ಭರದಿ ತೂಲಗಿಸಿ ಲಜ್ಜೆ ತಿಣ್ಣಗೆಡಿಸುತಮವನನುಱಿ ಕಲೆಯ ತೋಱಿಯಾಲಿಂಗಿಸುವ ಬಾಲೆಯುಂ ತರವಱಿದು ಚದುರನೊಂದುವ ತೆಱಂಗಂಡು ನಡೆಯರ್ ಮುಂದಕಲ್ಲಿಂದವು (ಚತುಪು. ೧-೭-೩೭). [ ತಿಣ್ಣಗೆಡು + - ಇಸು₃ ]

ತಿಣ್ಣಗೆಡು (ಕ್ರಿ). ೧. ಭಾರ ಕುಗ್ಗು ; ಭಾರವಿಲ್ಲದಾಗು ; ತೂಕ ಕಳೆದು ಕೊಳ್ಳು. 'ತಿಣ್ಣಗೆಡಿಸು' ಪರಾ. ೨. (ಆಲಂ) ಶಕ್ತಿಗುಂದು ; ದುರ್ಬಲವಾಗು ; ಕ್ಷೀಣಿಸಂ : ಬಣ್ಣವಳಿದಮರ್ದುಣಿಸನುಳಿದು ಜಾಣ್ನುಡಿಯೆಡಹಿ ತಿಣ್ಣಗೆಟ್ಟು (ಉದ್ಭಟ. ೪-೪೦) : ಕಣ್ಣೀರ್ಗಳಂ ಸುರಿವುತಂ ದಂಪತಿಗಳು ಬೆಳರ್ವಣ್ಣಮಯ್ಯನ ನೆನೆವುತಾಲೋಚಿಸಂಗೈದು ತಿಣ್ಣಗೆಟ್ಟಿರುವ ಸಮಯದೊಳು (ಪ್ರಭುಪು. ೩-೧೧೨). [ತಿಣ್ಣ + ಕೆಡು₁]

ತಿಣ್ಣಗೊಂಬು (ನಾ). ದಟ್ಟವಾದ ಕೊಂಬೆ : ತಿಣ್ಣಗೊಂಬಿನೊಳ್ ಬಣ್ಣವಳಿಯದ ಪಣ್ಣಂ ತಿಂದು ತಣ್ಣನೆ ತಣಿದು (ಗಿರಿಜಾ. ೧-೧೨೮ ವ).

[ ತಿಣ್ಣ + ಕೊಂಬು₁ ]

ತಿಣ್ಣಜವ್ವನ (ನಾ). ೧. ತುಂಬುಜವ್ವನ ; ಪೂರ್ಣಯೌವನ ; ತುಂಬಿದ ಪ್ರಾಯ : ತಿಣ್ಣಜವ್ವನದ ಚಿಂಚಿತಿಯರ ಮೆಯ್ಸ್ ಕಾರ್ಬಣ್ಣದ [illegible] ನೋಳ್ಪರಿಗೆ ಹುಣ್ಣಮೆಯಾಳ್ದ ತನ್ನೆಸಕವನವರೆಸಳ್ಗಣ್ಗಳು ಸಾರ್ಚಿದಂತಿಹುದು (ಮೋಹತ. ೧೯-೬೨). ೨. ತೋರವಾದ ಮೊಲೆ ; ತುಂಬುಸ್ತನ : ಚಿತ್ರ ಪೆಣ್ಣ ಕಂಡಿನಿತು ಭ್ರಾಮಿಸಿದೆ ತಿಣ್ಣಜವ್ವನವೆತ್ತ ಕೇಳಿ ಕೇಳ್ ನಿಮ್ಮನು ಕಣ್ಣಾಱಿ ಕಂಡರಿನ್ನೆಂತೋ (ಮೋಹತ. ೩೧-೨೪).

[ ತಿಣ್ಣ + ಜವ್ವನ ]

ತಿಣ್ಣನೆ (ಅ). ೧. [illegible] [illegible] ಅಧಿಕವಾಗಿ [illegible] [illegible] ತಿಣ್ಣನೆ ತಿಟ್ಟ ಬಿಟ್ಟ [illegible] (ಪ್ರಭುಲಿ. [illegible]). ೨. [illegible] [illegible] ಕೊಡಲಿ : [illegible] [illegible] [illegible] [illegible] [illegible] ಮಾಡಿದ್ದ ದೂತರ್ಿಂದಂ (ಧರ್ಮಾಮೃ. ೯-೧೩೬) : ಉಣ್ಣದರೂರೊಳಗಣ ದೇವಿಯುರಂ ಸುಣ್ಣಿಸಿದಸಿಧಾರಾಪೂರ್ವಕದಿಂ ತಿಣ್ಣನೆ ಕೈಗೂಡಿಸಿ ಭೂತಮುಮಂ ಬಿರ್ದುವೊಲೆಯ್ದುಸುವಂ (ಜಯುಕಾ. ೬-೯). ೩. ಬಿಗಿಯಾಗಿ ; ಗಟ್ಟಿಯಾಗಿ; ದೃಢವಾಗಿ : ನಿನ್ನ ಮೋಹವು ಎಂಬ ಉನ್ನತದ ಪಾಶದಲಿ ತಿಣ್ಣನೇ ಬಿಗಿದಿರ್ಪ ನುಸುಳುವರಾರು (ಸುಸಾರ. ೧೫-೩). [ ತಿಣ್ಣ + – ಅನೆ$_1$ ]

ತಿಣ್ಣಮಾತು (ನಾ). ತೀಕ್ಷ್ಣವಾದ ಮಾತು ; ಕಠೋರವಾದ ನುಡಿ ; ಉಗ್ರವಚನ : ಕಣ್ಣೊಳುರಿಯ ಸೂಸುತಣ್ಣನಾಡಿದ ಕಡುತಿಣ್ಣಮಾತಿಗೆ ನಸುನಗುತ (ತ್ರಿಪುಸಾಂ. ೧೨-೧೩೦). [ ತಿಣ್ಣ + ಮಾತು$_1$ ]

ತಿಣ್ಣಮಿಡು (ಕ್ರಿ). ಬಲವಾಗಿ ಹೊಡೆ : ಅವನ ವರೂಥವನೆ ತಿಣ್ಣ ಮಿಟ್ಟೊಡೆ (ಪಂಪಭಾ. ೧೨-೧೪೯). [ ತಿಣ್ಣಂ + ಇಡು$_1$ ]

ತಿಣ್ಣಮೊಲೆ (ನಾ). ೧. ದೊಡ್ಡ ಮೊಲೆ ; ಪೀನಕುಚ ; ಗುರುಕುಚ : ತಿಣ್ಣಮೊಲೆಗಳ್ಪೊದಳೆ ಬೆನ್ನ ಸೋರ್ಮುಡಿಯಲೆಯೆ (ಚ್ಮಮಿಥಾ. ೮-೧೮). ೨. ಬಿಗಿಯಾದ ಮೊಲೆ ; ಬಿಗಿಯುವ ಕುಚ : ತಿಣ್ಣಮೊಲೆ ಬಣ್ಣಡರ ಕಾಲ್ಮೊದಗತಿಗಲಸೆ (ಚ್ಮಮಿಥಾ. ೧೮–೩೪). [ ತಿಣ್ಣ + ಮೊಲೆ$_1$ ]

ತಿಣ್ಣವಡೆ (ಕ್ರಿ). ಅತಿಶಯವನ್ನು ಹೊಂದು ; ಆಧಿಕ್ಯವನ್ನು ಪಡೆ : ತಿಣ್ಣವಡೆದ ಪವಳದ ಪಸರಗಳಾಗ ಕಣ್ಣ ಕೊಕ್ಕರಿಸುತೊಪ್ಪಿದುವು (ಕಂನವಿ. ೬-೭೭) ; ಕಣ್ಣಿನೊಳಗೆ ಖಾನ ಕನಸಿನೊಳಗೆ ಖಾನ ಬಣ್ಣಿಸೆ ಮನದೊಳು ಖಾನ ತಿಣ್ಣವಡೆದ ಖಾನನ ಸುದ್ದಿ ಜವವಾಗಿ ಬಣ್ಣಗೆಟ್ಟುದು ಲೋಕವೆಲ್ಲ (ಕಂನವಿ. ೧೧-೩೪). [ ತಿಣ್ಣ + ಪಡೆ$_1$ ]

ತಿಣ್ಣವಲೆ (ನಾ). ಮೃಗಗಳನ್ನು ಹಿಡಿಯಲು ಬಳಸುವ ಒಂದು ಬಗೆಯ ಭಾರವಾದ ಬಲೆ: ತಿಣ್ಣವಲೆ ಜೋಡುವಲೆ ಪೊಸೆದಿಕ್ಕಣ್ಣವಲೆ ಪೊಜೆಗಳು ವಿಂಧ್ಯಕನ ಕೂಡೆ (ಸಾಳ್ವಭಾ. ೫-೧೮). [ ತಿಣ್ಣ + ಬಲೆ$_1$ ]

ತಿಣ್ಣವೆಳಗು (ನಾ). ದಟ್ಟವಾದ ಬೆಳಕು ; ಹೆಚ್ಚಾದ ಬೆಳಕು : ಬಿಂದುಗೆಯು ಬಣ್ಣದ ತಿಣ್ಣವೆಳಗುಂ ಕಣ್ಣ ಬೆಳಗುಂ [illegible] (ಗಿರಿಕ. ೭-೧೧ ವ). [ ತಿಣ್ಣ + ಬೆಳಗು$_2$ ]

ತಿಣ್ಣಸಂಕಲೆ (ನಾ). ೧. ಭಾರವಾದ ಸಂಕೋಲೆ ; ಹೊರೆಯಾದ ಬೇಡಿ. ೨. (ಆಲಂ) ಅತಿ ನಿರ್ಬಂಧ ; ಕಟ್ಟೊತ್ತಾಯ : ಕಣ್ಮಲೆವರೆ ಕಪ್ಪ ದೊಳ್ಪೊಡರ್ದು ಶಿಷ್ಯತೆಯಿಂ ಕಲೆಗಲ್ವ ತಿಣ್ಣ ಸಂಕಲೆಗೆ ಬೆಮರ್ತು ಸುಯ್ವರದೆ ! (ಸಂಕಪ. ೫-೭). [ ತಿಣ್ಣ + ಸಂಕಲೆ ]

ತಿಣ್ಣೆ (ನಾ). ಒಂದು ಊರಿನ ಹೆಸರು : ತೆಂಕನೋಡಿ ಕಿಟರ ತಿಂಣೆ ಪೆಣ್ಣೆಗಗಾಲಸಿ ಎರಟಿಟ್ಟಸಣ್ಣಾರಿ ಭೂಮಿನ್ನ ಪೇರೊಟ್ಟಿಯ ಪುಟ್ಟಿಲಿ ಎರಪಡಿಯ (ಎಕ. III, ನಂಜನ. ೧೨೨-೧೮ : ಕ್ರಶಾ). [ ? ]

ತಿಣ್ಣಿತು (ಗು). ೧. ಭಾರವಾದ. ೨. ದೊಡ್ಡದಾದ. (ನಾ). ೩. ದೊಡ್ಡದು : ತಿಣ್ಣಿತಾದುವು ಮೊಲೆ ಮುಡಿ ಪೊಜವಾರ್ಗಳು ನುಣ್ಣಿತಾದುವು ಕದಪುಗಳು (ನಾಗಕು. ೫-೩೬). [ <ತಿಣ್ಣ ]

ತಿಣ್ಣಿಸು, ತಿಣ್ಣ್ಳಿಸು (ಕ್ರಿ). ೧. ಹೆಚ್ಚಾಗು ; ಉಲ್ಬಣಿಸು : ಸಣ್ಣವನು ಸಲೆ ಮಕ್ಕಳಾಟದಿ ಮಣ್ಣನೊಯ್ಯೆ ರಸಾತಲಕೆ ಕಡು ತಿಣ್ಣಿಸಲ್ಕ ಮರರಿಗೆ [illegible] ([illegible] ೧೫-೬೫). ೨. ತುಂಬು ; ವ್ಯಾಪಿಸು : ನಯನದಿ [illegible] [illegible] ೬೭-೩೮) : ಕಣ್ಣು ಮಾನ ಕೊಂಬನಿತು [illegible] (ಜಿಂನಮ. ೨೨೦-೬). ತಿಣ್ಣ್ಳಿಸು : ೩. [illegible] [illegible] [illegible] . ಗುಣಪತಿಯು ತೆಳ್ವಟ್ಟ [ ತೆಳ್ವೊಟ್ಟೆ ] [illegible] [illegible] ತಿಣ್ಣ್ಳಿಸಿರಲ್ (ಮದೇಪು. ೩-೮). [ ತಿಣ್ಣ + – ಇಸು$_3$ ]

ತಿಣ್ಣ್ಳಿಸು 'ತಿಣ್ಣಿಸು' ನೋ.

ತಿಣ್ಪು, ತಿಂಪು (ನಾ). ೧. ಭಾರ ; ಹೊರೆ : ಬಳ್ವಿಲಿಯ ತಿಣ್ಪಿಂಗೆ ಸಡಿಲ್ವ (ರಾಮಾಶ್ವ. ೯-೧೦). ೨. ದೊಡ್ಡದಾಗಿರುವಿಕೆ ; ದೊಡ್ಡದು : ಕಡೆದು ಮಾಡಿದುವೆನಿಪ ಪೊಜವಾಲ ತಿಣ್ಪಿನಿಂ (ಅಜಿಪು ೪-೭) : ಬಟ್ಟ ಎರ್ದೆವೊಲೆಯೇಂ ತಿಣ್ಪೊ ಕಾಯ್ಪವನ ಬಿಸುಪಿಗೇಂ ಬಿದಿರ್ದಾಗಿ ತಂದಿತ್ತ ಕಟ್ಟಳೆಯ ಮೊಗೆಯೇ? (ಕಾಲೂರ. ೧೨೭-೨೭೦). ೩. ಹೆಚ್ಚಳ; ಅತಿಶಯ; ಹಿರಿಮೆ ; ಮಹತ್ವ : ದಿಟ್ಟಿ ತೆಮಳ್ವನ್ನೆಗಂ ನುಣ್ಪಂ ತಿಣ್ಪುಮನೊಳಕೊಂಡು . . . ಮಾಡಿದ ವಾಪಿಕೆಗಳ್ ಮನೋಹರಂ (ಶಾಂತಿಪು ೯-೧೪೩ ವ) : ಸಿಂಪಿಣಿಯ ತಣ್ಪಿನಿಂ ಪೂವಲಿಯ ತಿಣ್ಪಿನಿಂ ಮನಂಗೊಳಿಸುವ ಭವನಾಂಗಣದೊಳ್ (ಕಾದಂಉ. ೪೬೨); ಮೃಗರಾಜನ ಶಕ್ತಿತ್ರಯದ ಗುಣ್ಪುಮಂ ಬಾಹುಬಲದ ತಿಣ್ಪುಮನಱದಂ ಬಗೆಯೊಳ್ (ಪಂಚತಂ. ೯೬-೯) : ಪರವೆ ಕೇಕಿಗಳ ತಾಂಡವಮುಂ ನುಣ್ಚರದ ತಿಣ್ಪು ಘನಘೋಷಗಭೀರಂ (ಕಾವ್ಯಾವ. ೭೪). ೪. ದೃಢತೆ ; ಸ್ಥೈರ್ಯ : ಕುಲಗಿರಿಗಳ ಬಿಣ್ಪುಮಂ ಧರಾತಳದ ತಿಣ್ಪುಮಂ . . . ಅವರವರ ದೆಸೆಗಳಿಂ ತೆಗೆದೊಂದು ಮಾಡಿ (ಪಂಪಭಾ. ೧-೧೪೯ ವ) : ಎಳೆಯೊಳು ಸಾದೃಶ್ಯಮುಪ್ಪಂದೆಱಗವಿಭುಗೆ ಬಿಣ್ಪಿಂಗೆ ಗುಣ್ಪಿಂಗೆ ತಿಣ್ಪಿಂಗೆಳೆ ಪಾರಾವಾರದಿಂದ್ರಾಚಳಂ (ಎಕ. XVI, ೬೦-೧೪ : 1081) : ಕನಕಾದ್ರೀಂದ್ರಕ್ಕಮಂಭೋನಿಧಿಗಮವನಿಗಂ ಪೆಂಪಿನೊಳ್ಗಿಣ್ಪ ನೊಳ್ತಿಣ್ಪನೊಳಿಂತುಂ ತಾನೆ ಪೋ ಪಾಸಟಿ (ಎಕ. VIII, ತೀರ್ಥಹ. ೧೯೨-೭ : 1103). ತಿಂಪು: ೩. 'ತಿಂಪುಗೆಡು' ಪರಾ.

[ <ತಿಣ್ಣ + – ಪು$_2$ ]

ತಿತಯ (ನಾ). ಮೂರರ ಸಮುದಾಯ ; ಮೂರು : ತದ್ಧಿತೇ– ತಿತಯಂ, ತ್ರಿತಯಂ (ಶಬ್ದಾನು. ೩೭೭ ಪ್ರಯೋ). [ <ಸಂ. ತ್ರಿತಯ ]

ತಿತವು (ನಾ). ಒಂದರಿ ; ಜರಡಿ ; ಸಾರಣಿಗೆ. [ <ಸಂ. ತಿತಉ ]

ತಿತಿ$_1$ (ನಾ). ಸ್ಥಿತಿ : ಉತ್ಪತ್ತಿ ತಿತಿ ಲಯರಹಿತನೆನಿಪ . . . ಶ್ರೀ ಗುರುವೆ (ಬಸಪು. ೭-೧೩); ಸ್ಥಾನ–ತಾಣ ; ಸ್ಥಿತಿ–ತಿತಿ (ಶಬ್ದಾನು. ೧೪೯ ಪ್ರಯೋ).

[ <ಸಂ. ಸ್ಥಿತಿ ]

ತಿತಿ$_2$ (ನಾ). = ತಿಥಿ : "ತಿತಿ – ೧. ಸ್ಥಿತಿ, ೨. ತಿಥಿ" (ತದ್ಭಕೋ. ೧೭)

[ <ಸಂ. ತಿಥಿ ]

ತಿತಿಕ್ಷಾನ್ವಿತ (ಗು). ೧. ಸಹನೆಯಿಂದ ಕೂಡಿದ ; ಸೈರಣೆಯುಳ್ಳ. (ನಾ). ೨. ತಾಳ್ಮೆಯುಳ್ಳವನು; ಸಹನೆಯಿಂದ ಕೂಡಿದವನು: ಮುನಿದೂಪನೆ ಕೆಳರ್ದು ನುಡಿದನುಜನಂ . . . ತಿತಿಕ್ಷಾನ್ವಿತನನಾಕುಳಂ ನುಡಿಗುಮೆಸೆಯೆ ದಶನದ್ಯುತಿಗಳ್ (ಶಾಂತಿಪು. ೩-೯೦) : ಗುಣಿ ತಿತಿಕ್ಷಾನ್ವಿತ ನಿರ್ಮಲಚರಿತ ನೆರವನಱಿಯಂ . . . ಎನಿಪನಪ್ಪುದು ಕೆಳೆಯಂ (ಪಂಚತಂ. ೨೧೭-೨). [ ಸಂ. (ತಿತಿಕ್ಷಾ + ಅನ್ವಿತ) ]

ತಿತಿಕ್ಷು (ನಾ) ಸಹನೆಯುಳ್ಳವನು ; ತಾಳ್ಮೆಯುಳ್ಳವನು : ತಿತಿಕ್ಷು ಎಂದರೆ ಸಹನಶೀಲನಾಗಬೇಕು (ಭಾತತ್ತ್ವ. ೫೦೬). [ ಸಂ. ]

ತಿತಿಕ್ಷೆ$_1$ (ನಾ). ತಾಳ್ಮೆ; ಸೈರಣೆ; ಸಹನೆ : "ಕ್ಷಾಂತಿ ತಿತಿಕ್ಷೆ ಸಹಿಷ್ಣುತೆಯು" (ವಸ್ತುಕೋ. ೦೧೨-೮) ; ಪ್ರಾರಬ್ಧಸಿದ್ಧಮಾದ ತಾಪತ್ರಯ ಶೀತೋಷ್ಣಾದಿ ದುಃಖಂಗಳಂ ಸೈರಿಪುದೆ ತಿತಿಕ್ಷೆಯಕ್ಕುಂ (ವಿವೇಕ. ೧೫) ; ಶಾಂತಿಯಿಂ ಸುಖ ದುಃಖವುಭಯವನಿಂತು ಸೈರಿಸುವುದೆ ತಿತಿಕ್ಷೆಯು (ಗಗಕಾ. ೩-೨೫) : ನನಗಿರಲಿ ಆ ಶಿಕ್ಷೆ ! ಶಿಕ್ಷೆಯೆಂದರಿಯದಿರ್ ಶಿಕ್ಷೆಯುಲ್ಲು, ತಿತಿಕ್ಷೆ (ಶ್ರೀರಾಮಾ. ೭೭೮-೨೮೪). [ ಸಂ. ತಿತಿಕ್ಷಾ ]

ತಿತಿಕ್ಷೆ$_2$ (ನಾ). ಕುದುರೆಸವಾರಿಯಲ್ಲಿ ಒಂದು ಬಗೆ (?) : ದಾರೆ ಗತಿಲಯ ಪೊಯ್ಲು ಕಾಯೆಕ್ಷಂ ತಿತಿಕ್ಷೆ ಬಿತನೆರಿತುರ(ಗ?) ಸನಾನಂ . . . ಎಂಬ ಭೇದಂಗಳಿಂದಶ್ವಮನೇಱಲು ರೇಚಿಗನೃಪತಿ ತಾನೆ ಬಲ್ಲಂ (ಮದತಿ. ೧-೨೦). [ ? ]

**ತಿತಿಯ** (ಗು). ಮೂರನೆಯ: ತಿತಿಯಂ, ತೃತೀಯಂ; ಚೌತಂ, ಚತುರ್ಥಮಿತಿ (ಶಬ್ದಾನು. ೩೭೭ ವ್ಯಾಖ್ಯಾ). [ <ಸಂ. ತೃತೀಯ ]

**ತಿತ್ತರಬಿತ್ತರಿ** (ನಾ). "ಗಜಿಬಿಜಿ" (ಜಾನಕೋ. ೬೭). [ ? ]

**ತಿತ್ತಿ** 'ತಿದಿ' ನೋ.

**ತಿತ್ತಿರ** (ನಾ). ಒಂದು ಬಗೆಯ ಪಕ್ಕಿ; ತಿತ್ತಿರಿಹಕ್ಕಿ; ಕವುಜಗ: ಅವನ ಪಂಡಿತಭಾವವನ್ನು ಪ್ರಕಾಶಪಡಿಸುವುದಕ್ಕಾಗಿ ಗೋವು . . . ಜಿಂಕೆ, ತಿತ್ತಿರ, [illegible] ವಿಷಯಗಳನ್ನು ಅವನ ಬಳಿ ತಂದರು (ಬುದ್ಧ.ಪ. ೪೦). [ ಸಂ. ]

**ತಿತ್ತಿರವಕ್ಕಿ** (ನಾ). = ತಿತ್ತಿರ: "ತಿತ್ತಿರಃ–ತಿತ್ತಿರವಕ್ಕಿ" (ನಾಚಿರಾ. ೧೧೫). [ ತಿತ್ತಿರ + ಪಕ್ಕಿ$_1$ ]

**ತಿತ್ತಿರಿ.** ತುತೂರಿ, ತುತ್ತಾರಿ, ತುತ್ತುರಿ, ತುತ್ತೂರಿ (ನಾ). ೧. ಉದ್ದವಾದ ಒಂದು ಬಗೆಯ ಊದುವ ವಾದ್ಯ; ತೂರ್ಯ: ಬರುದಿನ ಕಹಳೆ ತಿತ್ತಿರಿಗಳಲ್ಲಿಲ್ಲಿ (ಇಹರ. ದೇ. ೩೭–೨೨); ಎಡವಿಡದೆ ಚೀಱಿದವು ಕೋಟಿ ಹೆಗ್ಗಾಳೆಗಳು ಚಿನ್ನತಿತ್ತಿರಿ [illegible] ಗೌಱುಗಳ ತಿತ್ತಿರಿಯ ಚಿನ್ನದ ಚೀಱುಗಳ ನಿಡುಗೊಂಬುಗಳ ಚೆಂಬಕನ ನಿರ್ಘೋಷ ಡೋಱುಗಳೆದುವು (ಕುವ್ಯಾ.ಕ. ೨೦–೭); ಹತ್ತು ದಮುಗ ಹತ್ತು ಡೋಳು ಕಹಳೆ ಹತ್ತು ಹತ್ತು ತಿತ್ತಿರಿಯೊಂದು ಭೇರಿ (ಕುಂಡಾಸಾಂ. ೪೧–೬೬); ಬೊಂಬುಳಿ ಪಟಹ ಮೃದಂಗ ತಿತ್ತಿರಿ ಕಾಳೆ ಬೆಂಬಳಿಯೊಳು ಗಳಬಳಿಸೆ (ಭರತ. ೪೦–೩೦). **ತುತೂರಿ:** ೧. ಕಹಳಾ ಭೇರಿ ನಗಾರಿ ತಮ್ಮಟೆ ತುತೂರೀ ಪೌರಿ ನೌಪೂರಿಗಳ್ (ಬೀಳವಂ. ೨–೨೭೧); ಕವಿತೆ ಜೀವನ ಸಮರ ಯೋಧರ ತುತೂರಿ (ಗೀವಿಂ. ೨೧–೯); ತುತೂರಿಯೂದಿದರೆ ತುಬಟ ಬಂದೀತೆ? (ಗಾದೆ); ತುತೂರಿಗೆ ಮುತ್ತು ಕೊಟ್ಟ ಹಾಗೆ (ಗಾದೆ). **ತುತ್ತಾರಿ:** ೧. ಆ ಕಾಲದಲ್ಲಿ ಕೆಲವರು . . . ಹೆಗ್ಗಾಳ ತುತ್ತಾರಿ ಮೊದಲಾದ ವಾದ್ಯಗಳನ್ನು ಮಾಡುತ್ತಲಿರುವವರೂ (ಕೃವಾಸ. ೮೦). **ತುತ್ತುರಿ:** ೧. ಆರೆಚ್ಚರಕೀ ತುತ್ತುರಿ ಬಾನೊಳು ಮೊಳಗುತಿದೆ (ಗದೀಶ. ೨೪–೩); ವಿಪ್ಲವಮೂರ್ತಿಯ ಕಳ್ಳೊಳಸಂಚನು ತುತ್ತುರಿಯೂದುತ ನೀ ಬಾರ! (ಪಾಂಚಜ. ೨೪–೨೩). ೨. ಗಲಾಟೆ; ಗದ್ದಲ: ತುತ್ತುರಿ ಜಂಗುಳಿ ದೈವಗಳನೆಲ್ಲವ ಹಿಂಡುಮಾಡಿ ಕಾವ(ಮ?) ನಮ್ಮ ಶಂಭು ತೆಲುಗೇಶ್ವರನ ಮನೆಯ ಗೋವಾಳನೀತ (ಸರ್ವವ. ೮೭–೪೮೪). **ತುತ್ತೂರಿ:** ೧. ತಂಬಟೆ ಹಱೆ ಚಂಬಕ ಮುವುರಿ ತುತ್ತೂರಿ ಮುಂಬರಿದೆಸೆವ ನಾನಾವಾದ್ಯಗಳಾಡಂಬರ (ಕಂಠವಿ. ೩–೩೮); ತಂಬೂರಿ ತುತ್ತೂರಿಗಳ್ (ವರ್ಧಮ. ೩–೩೦); ದಾಸಯ್ಯನು ಒಂದು ತುತ್ತೂರಿ ಊದಿ ಬವನಾಸಿ ತುಂಬ ಭತ್ತ ತುಂಬಿಕೊಂಡು ಹೋಗುತ್ತಿದ್ದನು (ಹುಬ್ಬಹ. ೬೪).

[ ದೇ.॥ ತಮಿ. ತುತ್ತಾರಿ, ತಾತ್ತಿರಿ; ಮಲ. ತುತ್ತಾರಿ; ತುಳು. ತಿತ್ತಿರಿ, ತುತ್ತಾರಿ, ತುತ್ತೂರಿ; ತೆಲು. ತುತಾರ./ ಮರಾ. ತುತಾರೀ. / ಸಂ. ತೂರೀ, ತೂರ ]

**ತಿತ್ತಿರಿ$_2$** (ನಾ). = ತಿತ್ತಿರ: "ಕ್ರಕರ ಕಪಿಂಜಳ ತಿತ್ತಿರಿ ಚಕೋರ ಹಾರೀತ ಕುರವ . . . ಶಾರಿಕಾದಿಗಳ್ ವಿಹಗಜಾತಿಯುಕ್ಕುಂ" (ವಸ್ತುಕೋ. ೪೩–೨೦); ಕ್ರೌಂಚ ಶಿಖಿ ತಿತ್ತಿರಿ ಕಪೋತಾದಿ ಪಕ್ಷಿಗಳನು ಕೊಲುತೆ ಬಪ ಬೇಡರ್ಗೆ ಸಿಕ್ಕದೋಡಿದುದೊಂದೆರಳೆ (ಜೈಮಿಭಾ. ೨೮–೫೨); ಕುಂಕಂ ತೊಂಡಿಗಂ ಸೋಲೆ ತಿತ್ತಿರಿ ಕೋಕಂ ಪಿಕಳಂ ಬಕಂ ಶಿಖಿ ಶುಕಂ . . . ಚಿಲುಕೂಲಿ ರತ್ನ[illegible] ಮಿರ್ಕುಂ ತದ್ವನಾಗೌಘದೊಳ್ (ರಾಜಶೇ. ೫ ೫೯); ಗೌಜು ತಿತ್ತಿರಿ ಘೂಕಂ ಶಿಖಿ (ಯಾದವ. ೪–೫೩). [ ಸಂ. ]

**ತಿತ್ತಿರಿ$_3$** (ನಾ). ಒಂದು ಬಗೆಯ ಮರ: ಗಿರಿಕರ್ಣಿಕಾ ತಿತ್ತಿರಿಯೆಂಬ ವೃಕ್ಷಗಳು ಫಲವಾಗದೆಯಿರುವ ಮರಗಳು (ಶಾಗಂಧಿ. ೪೨೭–೧೧). [ ? ]

**ತಿತ್ತಿರಿಗಾಳೆ** (ನಾ). ಒಂದು ಬಗೆಯ ಕಹಳೆ: ಕರ್ಣವುಂ ತಱಿದು ತಿತ್ತಿರಿಗಾಳೆಯನಾಲಿಸುತ್ತೆ ಬಿಂಡೊಡೆಯುದ ಕೂಡಿ ಬರ್ಪ ಪಲವಾಕಳನೀಕ್ಷಿಸಿದಂ ನರಾಧಿಪಂ (ರೀಲಾವ ೫–೧೦೩): ಬೊಂಬುಳಿಯಾಟ್ಟುಗಾಳೆಯ ತಿತ್ತಿರಿಗಾಳೆಗಳ ಕೋಳಾಹಳವೊತ್ತಂ ತೀವ್ರತ್ತಿರೆ (ಕುಮುರಾ. ೮–೩೭); [illegible] ಕರ್ಣವನೆತ್ತಿ ತಿತ್ತಿರಿಗಾಳೆಗಳ ನಿಂದಾಲಿಸುತ . . . ಕಱುಗೂಡಿ ಗೋವನ ಗಾಳಗೈತಹ ಗೋವುಗಳ ಸುಕುಮಾರನೀಕ್ಷಿಸಿದ (ಜೀವಂಧ. ೬–೨೬). [ [illegible] ]

**ತಿತ್ತಿರಿವಕ್ಕಿ** (ನಾ). = ತಿತ್ತಿರ: "ತಿತ್ತಿರಃ – ತಿತ್ತಿರಿವಕ್ಕಿ" (ನಾಚಿರಾ. ೧೧೫). [ ತಿತ್ತಿರಿ$_2$ + ಪಕ್ಕಿ$_1$ ]

**ತಿಥಿ** (ನಾ). ೧. ಚಾಂದ್ರಮಾನದ ಒಂದು ದಿವಸ: "ಪಾಡಿವಮಾದಿಯೆನೆ ತಿಥಿ ಪಕ್ಷಕ್ಕೆ ತಿಯೊಳ್ ಪದಿನಯ್ದುಕ್ಕುಂ" (ವಸ್ತುಕೋ. ೧೬–೭); "ನಾಡಿಯಱು ವತ್ತಕ್ಕೆ ಒಂದು ತಿಥಿಯಕ್ಕು" (ಮುಂಗರಾ. ೨೦–೯); ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ . . . ನಿಮ್ಮ ಮಹಾಪದ ನೆನೆವಂಗೆ (ಬಸವ. ೬೦೦); [illegible] ವಿಘ್ನಂಗಳೆಲ್ಲ (ಆಬಂಡೆ.೩೦೨–೧೦೨): ಮಾಸಕೆ ಪಕ್ಷವೆರಡು ತಿಥಿ ಮೂವತ್ತುಂ (ಭಾಸ್ಕರ. ೫೨–೨). ೨. ಪಿತೃಗಳು ಗತಿಸಿದ ದಿನ ಮತ್ತು ಆ ದಿನದಲ್ಲಿ ಪ್ರತಿವರುಷವೂ ಆಚರಿಸುವ ಶ್ರಾದ್ಧ; ಪಿತೃಕಾರ್ಯ; ತದ್ದಿನ: ತಿಥಿ ಮೇಲೆ ತಿಥಿ ಬರಲೊ ಗೋವಿಂದ (ಗಾದೆ).

ತಿಥಿಮಾಡು=೧. ಶ್ರಾದ್ಧಮಾಡು. ೨. ಕಷ್ಟಕೊಡು; ಹಿಂಸೆಪಡಿಸು: ಇವತ್ತು ನಿನ್ನ ತಿಥಿಮಾಡಿಬಿಡುತ್ತೇನೆ (ಆಡು). [ ಸಂ. ]

**ತಿದಂಡಿ** (ನಾ). (ವಾಗ್ದಂಡ, ಮನೋದಂಡ ಮತ್ತು ಕಾಯದಂಡ ಸೂಚಕವಾದ) ತ್ರಿದಂಡವನ್ನು ಹಿಡಿಯುವ ಸಂನ್ಯಾಸಿ.–ಯತಿ: ತಿದಂಡಿ, ತ್ರಿದಂಡಿ; ತಿಗುಂಡಂ, ತ್ರಿಕುಂಡಂ (ಶಬ್ದಾನು. ೩೭೬ ಪ್ರಯೋ). [ <ಸಂ. ತ್ರಿದಂಡಿನ್ ]

**ತಿದಿ.** ತಿತ್ತಿ (ನಾ). ೧. ಕುಲುಮೆಗೆ ಅಥವಾ ಊದುವ ವಾದ್ಯಗಳಿಗೆ ಗಾಳಿಯನ್ನೂದುವ ಚರ್ಮದ ಸಲಕರಣೆ: "ದೃತಿ ಎಂಬುದು ತಿದಿ" (ಹಲಾಯು. ೧೨೭–೭೯); ಉಸಿರೊತ್ತಿಂ ತಿದಿಯಂತಿರೊತ್ತಿದ ಬಸಿಱ್ ಪೋತಂದ ಕಣ್ ಬಿಟ್ಟ ಬಾಯ್ (ಪಂಪಭಾ. ೧೨–೧೫೦); ತನ್ನುಬಿ ಯುಗದಿಂದರುಣಜಳಮುಣ್ಮಿ ತಿದಿಗಳನಿರದೊತ್ತುವ [illegible] ಬೊಲಿರ್ದಂ ಭೀಮಂ (ನೇಮಿಪು. ೧೨–೧೫೮); ವಿಶ್ವಾಸಭಂಗಂ ತಿದಿಗಳೊಳ್ ನಿಂದಿಸುವುದು ಯುದ್ಧದೊಳ್ . . . ಅರ್ಥವಾದಂ ಸ್ತೋತ್ರದೊಳಲ್ಲದ ತನ್ನೊಳಿಲ್ಲೆನಿಸಿರ್ಪುದು (ದಶಕು. ೧–೨೨ ವ); ಆಕೆಯು ತಿದಿ ಉಬ್ಬಿದಂತೆ ಉಬ್ಬಿರುತ್ತಾಳೆ (ಮೋಹಿನೀ. ೨೯). ೨. ಚರ್ಮ; ತೊಗಲು: ತಿದಿಯುಗಿದು ಕೊಟ್ಟೆನೊಡಪುಟ್ಟಿದ ಕಪಟಮನಮುರಪತಿಗೆ (ಪಂಪಭಾ. ೧೨–೧೦೯); ಕಳ್ಳರ ಕೊಲ್ಲು ತಿವಿ ತಿದಿಯನುಗಿಯೆಂಬ ಕಳಕಳರವದ ಘಲ್ಲಣೆಯ ಘಟರ ತಿಂತಿಣಿ ಯೊಳು (ಹರಿಶ್ಚ. ೧೩–೫): ಅಡಿಯಿಂದಂ ತಿದಿಯುಗಿಯುತ್ತಿರೆಯುಂ ನಡೆಯಿಱಿದೆರ್ದೆಯ ಬಗಿಯುತ್ತಿರೆಯುಂ (ಬಂಹರಿ. ೧೧–೯ ರಗಳೆ); ಅಹಿತರ [illegible] ನೀಮುವನು (ಕುವ್ಯಾ.ಉ ೨–೪೩): [illegible] ಯನು ಸುಲಿಯೊ (ನಿಘಾಗ. ೭–೪–೩೬). ೩. ನೀರು [illegible] ತುಂಬುವ ಚರ್ಮದ ಚೀಲ; ಪಖಾಲಿ: [illegible] (ಕಥಾಗ. ೫೭). [illegible] ಸಿಲಿಕ್ಕುವೆ (ಸೋಮೇಶ. ೧೮): ತುತ್ತು ತುತ್ತಿಗೆ ಹೊಟ್ಟೆ ತಿತ್ತಿಯಂತಾಗುವವು ತುತ್ತ ಅರಗಳಿಗೆ ತಡೆದಿಹರೆ ಹೆಡೆಹಾವು ಹುತ್ತಬಿಟ್ಟಂತೆ (ಸರ್ವಜ್ಞ. ೨೦೦೪). ೨. ತಿತ್ತಿಯ ಹಿಡಿವ ಮಾದಿಗನಿಗೆ ಹೊತ್ತಿಹ ಮಾಗಿನ ನಾತ [illegible] ಉಂಟೇ [illegible] (ಮೋಹಮಾ. ೪೭ ೧೯೩). ೩. ತಿತ್ತಿ [illegible]

ತೊಗಲ್ವೇರಿನೊಳಗೆ ಬಂದತ್ತು ಗಂಗಾಸಾಗರವು (ಕುರಾಸಾಂ. ೧೯-೧೧); ನೀರಿನ ತಿತ್ತಿಯನ್ನು ತಂದಳು (ದಾಲತ್. ೫೫೭). ೪. ಚೀಲ ; ಮೂಡೆ: ದಿವಿಜರುಂ ಮೇಲಕಡರದಂತಿಜಿದಿಜಿದು ನೂಂಕುವರ್ ಪಾಯ್ಕುವರುವುರಿವ ಮದ್ದಿನ ತಿತ್ತಿಯುಂ (ಚಬಪು. ೪೨-೪೩). ೫. ಒಂದು ಬಗೆಯ ವಾದ್ಯ : ರಾಗಗಳ ವೇದ್ಯಗಾಣಿಸಿದರು ತಿತ್ತಿ ದಂಡಿಗೆ ಶ್ರುತಿ ಹೃದ್ಯವಾಗಿರೆ ಹೊಸತೆನಿಸಿ (ಭರತ. ೧೨-೪೧). [ <ಸಂ. ದೃತಿ ]

**ತಿದಿಯುಗಿ** (ಕ್ರಿ). ತೊಗಲನ್ನು ಉಚ್ಚು ; ಚರ್ಮವನ್ನು ಸುಲಿ : ಅಂತು ತನ್ನ ಸಹಜ ಕವಚವುಂ ನೆತ್ತರ್ ಪನಪನ ಪರಿಯೆ ತಿದಿಯುಗಿವಂತುಗಿದು ಕೊಟ್ಟೊಡೆ (ಪಂಪಭಾ. ೧-೧೦೨ ವ): ಆಪಾದಮಸ್ತಕಂಬರಂ ಪ್ರ್ಯತ್ತಿಸಿ ಪತ್ತಿ ತಿದಿಯುಗಿಯು[ವಾಠಾಂ. ಗುರೊ]ತ್ತೆ ಕೇಸುರಿಯ ಬಣ್ಣವಾಗೆ ಕರವೆ ಕರಗಿಸಿದ ಕಾಳಾಯಸರಸಮನೊಟ್ಟಯಿಸಿ (ಅಜಿಪು. ೧೧-೧೧ ವ): ಕತ್ತರಿಯಿಂದರಿವ ಕಾವಲೆಯೊಳಿಕ್ಕಿ ಕರಿವ ತಿದಿಯುಗಿವ . . . ತತ್ತಬಿದಬಿವ ಪಲತೆಱದ ದಂಡನೆಗಳುಂ (ವರ್ಧಪು. ೧೧-೪೭ ವ) ; ತಿದಿಯುಗಿದು ಕೆದಱಿ ಕೊಳಗುಂದಿನೆಣ್ಣೆಯೊಳರ್ದಿ ತೆಗೆದು (ಶಾಸ್ತ್ರಟೀ. ೩-೩೭). [ತಿದಿ + ಉಗಿ$_{1}$]

**ತಿದಿಯುಸಿರ್** (ನಾ). ಚರ್ಮದ ಚೀಲದಿಂದ ಹೊರಹೊಮ್ಮುವ ಗಾಳಿ: ಮೆಯ್ಯ್ಸದಿ ನೀಳ್ದ ಸುಯ್ಯ್ಸದಿಯುಸಿರ್ವಿರಹಜ್ವರದೇಟ್ಗೆ ಕಿಚ್ಚು (ಶೃಂಗಾರ. ೪-೫೪): ಉದಯಿಸೆ ಕೋಪವಹ್ನಿಯುರಿಗಣ್ಗಳಗುರ್ವಿಸಿ ನಾಸಿಕಾಗ್ರದಿಂ ತಿದಿಯುಸಿರಂತೆ ತೀಕ್ಷ್ಣಮುಸಿರುಣ್ಮೆ (ಮಹಾನೇ. ೩-೦೪೧).

[ ತಿದಿ + ಉಸಿರ್$_{2}$ ]

**ತಿದಿಯೂದು** (ಕ್ರಿ). ೧. ತಿದಿಯನ್ನು ಒತ್ತಿ ಗಾಳಿ ಬರುವಂತೆ ಮಾಡು; ತಿದಿಯನ್ನು ಒತ್ತು. ೨. (ಆಲಂ) ಪ್ರೋತ್ಸಾಹಿಸು ; ಪುಷ್ಟಿಕೊಡು : ಭಾವ ಕೃಷ್ಣರಾಯ ಈ ಯೋಚನೆಗೆ ಪುಟಕೊಟ್ಟ. ಅರ್ಧಾಂಗಿ ತಿದಿಯೂದಿದಳು (ಕುರುಕಾ. ೧೫೨). ೩. (ಆಲಂ) ಜೋರಾಗಿ ಅಳು; ಸದ್ದುಮಾಡುತ್ತಾ ಅಳು: ನಿನಗೇನಾಯಿತು ತಿದಿಯೂದಲಿಕ್ಕೆ (ರೂಢಿ).

[ ತಿದಿ + ಊದು$_{1}$ ]

**ತಿದಿಯೊತ್ತು** (ಕ್ರಿ).=ತಿದಿಯೂದು ೧: ಅಸ್ಯದಿನುಗುವ ರಕ್ತಮುರಿಯೆನೆ ತಿದಿಯೊತ್ತುವ ಕಮ್ಮಱಂಬೊಲಿರ್ದಂ ಭೀಮಂ (ಭಾಷಾಭೂ. ೧೮೭ ಉದಾ) ; ಸೈನಿಕನೊಬ್ಬ . . . ಸಾಮೋವರ್ (ಬೆಂಕಿಗೂಡಿನ ವ್ಯವಸ್ಥೆಯಿರುವ ರಷ್ಯಾದೇಶದ ಟೀಪಾತ್ರೆ) ನಳಿಕೆಯನ್ನೊಂದು ಕಾಲಿನಲ್ಲಿ ತಿದಿಯೊತ್ತುತ್ತ ನಿಂತಿದ್ದನು (ಪುನರು. ೫೧೦). [ ತಿದಿ + ಒತ್ತು$_{1}$ ]

**ತಿದ್ಗಡಿ** (ನಾ). (ಮನಸ್ಸನ್ನು) ತಿರಂಗಿಸುವಿಕೆ; ತಿದ್ದುವಿಕೆ. 'ತಿದ್ಗಡಿಗೈ' ಪರಾ. [ P ಇದು 'ತಿದ್ದುಗಡೆ' ಎಂಬ ಶಬ್ದವನ್ನು ಛಂದಸ್ಸಿಗಾಗಿ ಬದಲಾಯಿಸಿದ ರೂಪವಿರಬಹುದು ]

**ತಿದ್ಗಡಿಗೈ** (ಕ್ರಿ). (ಮನಸ್ಸನ್ನು) ತಿರುಗಿಸು ; ತಿದ್ದು : ಮೆಲ್ಲನುಪ ಯುಕ್ತಿಯಲಿ ಗುಣವತಿಗೆಲ್ಲ ತಿದ್ಗಡಿಗೈದು ಸುತ ಗಳದಲ್ಲಿ ಲಿಂಗವ ಕಟ್ಟಿಸಿ ದರಿನ್ನಾಯ್ತು ಕಲ್ಯಾಣ (ಬಿಜ್ಜಪು. ೯೩-೯).

[ ತಿದ್ಗಡಿ + ಗೈ (<ಕೆಯ್$_{1}$) ]

**ತಿದ್ದಾಣಿಕೆ** (ನಾ). ತಿದ್ದುವಿಕೆ ; ಸರಿಪಡಿಸುವಿಕೆ : ಆದರೆ ಆ ತಿದ್ದಾಣಿಕೆಯಿಂದ ಮೂಲಕೃತಿ ವಿಕಾರಗೊಳ್ಳಬಾರದು (ಸಾಹಿಪ್ರ. ೧೨). 'ಸಾಕಾಣಿಕೆ', 'ಹೊಂದಾಣಿಕೆ' ಪರಾ. P ಇದು ಬಹುಶಃ 'ತಿದ್ದುವಣಿಕೆ' ಆಗಿರಬಹುದು.

[ ತಿದ್ದು$_{1}$ (<ತಿರ್ದು$_{1}$) + – ಅಣ + – ಇಕೆ ]

**ತಿದ್ದಿಕೆ** (ನಾ). ಒಪ್ಪಗೊಳಿಸುವಿಕೆ ; ಸರಿಪಡಿಸುವಿಕೆ ; ತಿದ್ದುವಿಕೆ : (ಶ).

[ ತಿದ್ದು$_{1}$ (<ತಿರ್ದು$_{1}$) + – ಇಕೆ ]

ತಿದಿಸು 'ತಿರ್ದಿಸು' ನೋ.

ತಿದ[illegible] 'ತಿರ್ದ[illegible]' ನೋ.

ತಿದ್ದು$_{2}$ 'ತಿರ್ದು$_{2}$' ನೋ.

**ತಿದ್ದುಗಡೆ** (ನಾ). (ಮನಸ್ಸನ್ನು) ತಿದ್ದುವಿಕೆ. 'ತಿದ್ಗಡಿ' ಪರಾ.

[ <ತಿರ್ದು$_{1}$ ]

**ತಿದ್ದುಗಾರ** (ನಾ). ಸರಿಪಡಿಸುವವನು; ಪರಿಷ್ಕರಿಸುವವನು; ತಿದ್ದುಪಡಿ ಮಾಡುವವನು : ಮೂಲಕ್ಕೆ ಸರಿಯಾಗಿ ನಕಲನ್ನು ತಿದ್ದುವ ಕೆಲವರು ಸಂನ್ಯಾಸಿಗಳೂ ಇದ್ದರು ; ಅವರನ್ನು ತಿದ್ದುಗಾರರೆಂದು (Correctors) ಕರೆಯುತ್ತಿದ್ದರು (ಕನ್ನಸಂ. ೨೧).

[ ತಿದ್ದು$_{2}$ (<ತಿರ್ದು$_{2}$) + – ಕಾರ$_{1}$ (< – ಕಾಱ) ]

**ತಿದ್ದುಪಡಿ** (ನಾ). ಸುಧಾರಣೆ; ತಿದ್ದುಪಾಟು; ಸರಿಪಡಿಸುವಿಕೆ : ನಿಮ್ಮ ತಿದ್ದುಪಡಿಯು ಮೂಲಕ್ಕೆ ಸಂಪೂರ್ಣವಾಗಿ ವ್ಯತಿರಿಕ್ತವಾಗುವುದಲ್ಲ ! (ನತದಾ. I, ೫೭೫): ಹಲವು ಪ್ರತ್ಯಂತರಗಳು ಕಾಲಕ್ರಮದಲ್ಲಿ ಲಿಖಿತವಾಗುವಾಗ ತಿದ್ದುಪಡಿಗಳೂ ಹೊಸಪಾಠಗಳೂ ಸ್ವೀಕೃತವಾಗಿ ಮೊದಲು ಬರೆದಿದ್ದುವು ತ್ಯಾಜ್ಯವಾಗುತ್ತವೆ (ಕನ್ನಸಂ. ೭೫): ಭಾಷಾಂತರಕಾರ್ಯವು ಪೂರ್ತಿಯಾಗುವಷ್ಟರಲ್ಲಿ ಭಾರತದ ಸಂವಿಧಾನವು ತಿದ್ದುಪಡಿಯಾಯಿತು (ಭಾಧಾನ. ೩೬೦೯). [ ತಿದ್ದು$_{2}$ (<ತಿರ್ದು$_{2}$) + – ಪಡಿ$_{3}$ ]

**ತಿದ್ದುಪಡೆ** (ನಾ). ತಿದ್ದುಪಾಟು ; ಸರಿಪಡಿಸುವಿಕೆ: ಬರೆದ ಮುಖವನ್ನೇ ಮತ್ತೆ ಬರೆಯಲಾಗಿತ್ತು. ಒಂದರಕ್ಕಿಂತ ಒಂದು ತಿದ್ದುಪಡೆಯಾಗಿದ್ದವು (ರಂಗರೂ. ೧೦೭): ಅವನ್ನೆಲ್ಲಾ ನಾಶಮಾಡಬೇಕೆಂಬುದೇ ನನ್ನ ವಿಚಾರದ ತಿದ್ದುಪಡೆ (ಅಮಗಾಂ. ೧೩) ; ತಿದ್ದುಪಡೆಯು ಅವಶ್ಯವೆಂದು ರತ್ನಾಕರ ವರ್ಣಿಯು ಅಭಿಪ್ರಾಯವಾಗಿದೆ (ನವ್ಯಕಾ. ೧೦೫).

[ ತಿದ್ದು$_{2}$ (<ತಿರ್ದು$_{2}$) + – ಪಡೆ$_{5}$ ]

**ತಿದ್ದುಪಾಟು**(ನಾ). ೧.=ತಿದ್ದುಪಡಿ: ಭಕ್ತರಿಗೆ ಧರ್ಮೋಪದೇಶ ಮಾಡುತ್ತ ವೀರಶೈವರ ಆಚಾರ, ವಿಚಾರ, ನಡೆನುಡಿಗಳನ್ನು ತಿದ್ದುಪಾಟು ಮಾಡುತ್ತಿದ್ದರಿ (ಗುರುದ. ೧೯) : ವಿಲಾಯಿತಿ ಮೊದಲಾದ ತಿದ್ದುಪಾಟುಳ ದೇಶಗಳಲ್ಲಿ ತಾಮ್ರದ ತಗಡುಗಳನ್ನು ಮನೆಗಳ ಮೇಲೆಯೂ ಹೊಚ್ಚುತ್ತಾರೆ (ಮುಂಬಯಿ. ೪-೧೩೭) : ಪ್ರಚಲಿತವಿದ್ದ ಲಕ್ಷಣಗಳಲ್ಲಿ ಅಗತ್ಯವಿದ್ದ ತಿದ್ದುಪಾಟುಗಳನ್ನು ಮಾಡಿದನು (ತತ್ಕಪ್ರಾ. ೨೪೩). ೨. ಪಳಗಿಸುವಿಕೆ.

[ ತಿದ್ದು$_{2}$ (<ತಿರ್ದು$_{2}$) + – ಪಾಟು$_{2}$ ]

**ತಿದ್ದೋಲೆ** (ನಾ). ಒಪ್ಪೋಲೆ ; ಶುದ್ಧಿಪತ್ರ : ತಿದ್ದೋಲೆ; ಶುದ್ಧಿಪತ್ರ (Corrigendum. ಇಂಕನಿ.). [ ತಿದ್ದು$_{2}$ (<ತಿರ್ದು$_{2}$) + ಓಲೆ ]

**ತಿನ್**, ತಿನು, ತಿನ್ನು (ಕ್ರಿ). ತಿಂಬ (ವರ್ತಕೃ). ೧. (ಆಹಾರವನ್ನು) ಸೇವಿಸು; ಭುಂಜಿಸು; ಭಕ್ಷಿಸು; ಉಣ್ಣು: "ತಿನ್ – ಖಾದನೇ" (ಶಮುಧಾ): ಗೃಹ ಕೋಕಿಲಂಗಳೊಂದೊಂದುಂ ಒಂದೊಂದು ಕಾದಿ ತಿನೆ (ಡಾವುಂಪು. ೨೦-೧೨) ; ಪಕ್ಕಿಗಳಲ್ಲಿ ತಿಂದುಱಿದ ನೆಲ್ಲಗಳ ನುಚ್ಚುಗಳಂ ಫಲಂಗಳಂ ಪಕ್ಕದೊಳಿರ್ದ ಗೂಡುಗಳಿನಾಯ್ದು ನಗಿಕ್ಕುವನಟ್ಟಱಿಂದೆ (ಕಾದಂಪೂ. ೧೩೭) : ತಿಂಬರನಲ್ಲದೆ ಕುಱಿ ಮಚ್ಚದು (ಅಜಿಪು. ೨-೭೪): ಅದಱಿನೆನಗಂ ಕೊಲ್ವುದುಂ ತಿಂಬುದುಂ ಧರ್ಮಮಲ್ಲದೆ ಪೆಱತು ಧರ್ಮಮಾವುದುಮಿಲ್ಲ (ಪಂಚತಂ. ೭೧-೧೩) : ಪಟ್ಟಿರ್ದ ನಾಯ ನಡುವಂ ಮೆಟ್ಟಿ ಕನಲ್ದೊಡನೆ ಮೇಲೆ ಪಾಯ್ದದು ತಿನೆ (ಧರ್ಮಾಮೃ. ೨-೫೭) ; ಹೊಲಸು ತಿಂಬುವನೇ ಹೊಲೆಯ (ಬಸವ. ೫೯೦) : ತಿರುಳನು ತಿಂಬಾಸೆ ನಿನಗಿಹುದಾದರೆ ಚಿಪ್ಪನು ಒಡೆಯಲೆ ಬೇಕು (ಇಂಚಾವ. ೨೦೭-೩೮). ೨. ಕೊಲ್ಲು ; ನಾಶಮಾಡು: ನಿಮ್ಮ ಮೂವತ್ತಿರ್ವರುಮಂ ರಾಕ್ಷಸಂ ನುಂಗಿ ತಿಂಬುದಂ ಕನಸುಗಂಡು ಪೇಟ್ದುಂ (ವಡ್ಡಾರಾ. ೧೦೦-೦೦) ; ನಿಮ್ಮ ಕುಲಂಗಳಾಂತು ಮಾರ್ಮಲೆವನನಟ್ಟೆ ತಿಂಬುವೆ (ಪಂಪಭಾ.೧೦-೨೧); ತಮ್ಮ ಬುದ್ಧಿ ತಮ್ಮನೆ ತಿಂದಿತ್ತು, ನಿಮ್ಮನೆತ್ತ ಬಲ್ಲರು (ಅವಚಂ. ೭೩-೩೨೪) : ಡೊಂಬಿಗರ ಡಾವರಿಗರಿವದಿರ ತಿಂಬೆನೀಗಳೆ ತರುಣಿ ಕೇಳೆನುತಂಬುಜಾಕ್ಷಿಯು ಸಂತವಿಟ್ಟನು

(ಕುವ್ಯಾಸ. ೧೫-೬೫). ೩. ಕುಟುಂಕು; ಕಚ್ಚು; ಕಡಿ: ತೇಟಿತ್ತಿಂದ ಮಗುವಿನಂತೆ (ಧರ್ಮಾಮೃ. ೧೪-೮೪); ಹಾವು ತಿಂದವರ ನುಡಿಸಬಹುದು . . . ಸಿರಿಗರ ಹೊಡೆದವರ ನುಡಿಸಲುಬಾರದು ನೋಡಯ್ಯಾ (ಬಸವ. ೧೬೨); ಸೊಸೆಗೆ ಪಲ್ಲ ತಿನುತೆ (ಲೀಲಾವ. ೫-೧೩೪); ಮರದ ಕೊಂಬೇಱಿ ಬಿದ್ದನೋ ಫಣಿ ತಿಂದುದೊ (ಹದಶಾ. ೧೨-೧೫); ಅವನಂ ತಿಂಬುದುಮಾ ತಿಂದ ಫಣಿಯುದಾಗಳೆ ಸಾಯ್ದುಂ (ಬಮಡ. ೧೬-೧೬೧). ೪. ದುರುಪಯೋಗ ಮಾಡು; ಅಪವ್ಯಯಮಾಡು; ಪೋಲುಮಾಡು: ಈ ವ ರ್ ಗ ರ್ ಸೂಳೆಯರ್ಗೆ ಧನವೆಲ್ಲಮಂ ತಿಂದು ನಿರ್ಧನನಾಗಿ (ಪುಣ್ಯಾಸ್ರ. ೨-೨೦ ವ); ಬಿರುದ ಹೊಗಳಿಸಿಕೊಂಡು ದಾತಾರರ ಹಣವ ಸಲೆ ತಿಂದು ಪೆಚ್ಚಿದ ಹಿರಿಯ ಡೊಳ್ಳಿನ ರಾವುತರ ಕೆಡಹಿದನು (ಕುವ್ಯಾದ್ರೋ. ೧೧-೧೮). ೫. ಅನುಭವಿಸು: ದುಷ್ಪನೊರ್ವ್ವನದಱ ಫಲವಂ ತವೆ ತಿವ್ವುವಂ (ಎಕ. VIII, ನಗರ. ೬೦-೧೩; 820): ಕೊರ್ಗಣೆಯಿಂದೆಚ್ಚು ಬ ಱ ಗಾ ಯ ಗಾ ಣೆ ಸಿ ದ ರು ತಿನ್ನೆನುತೆ (ವೋಹತ. ೫-೧೨). ೬. ನವೆಯಾಗು; ತಿನಿಸುಂಟಾಗು: ನಸುಗುನ್ನಿ ಮುಟ್ಟಿದಂತಿರೆ ಬಸವಲ್ಲದೆ ತಿಂಬ ಮೆಯ್ಯ ತಿನಿಸಿಂಗಂ ಸೈರಿಸಲಾಱದೆ (ಧರ್ಮಾಮೃ. ೧-೧೬೫): ಅಂಗೈ ತಿಂದುದೆನ್ನ ಕಂಗಳು ಕೆತ್ತುತಿಹುವಯ್ಯಾ ಬಂದಹರಯ್ಯಾ ಪುರಾತರೆನ್ನ ಮನೆಗೆ (ಬಸವ ೩೬೦). ತಿನು: ೧. ಎಡಗೆಯ್ಯೊಳೆ ತೋಡಿ ಬೆಣ್ಣೆಯಂ ತಿನುತಿರೆ ಗೋಪಿ ಕಂಡು (ಜಗವಿ. ೩-೫೦); ಪೊಡವಿಗೆ ಪೊಱಮಟ್ಟು ಕಳಿವಣ್ಗಳ ತಿನತೊಡಗಿದರೇನ ಹೇಳುವೆನು (ವೋಹತ. ೧೯-೫೪). ತಿನ್ನು: ೧. ಅವಱ ತತ್ತಿಗಳನಾ . . . ಪಾವು ಪಲಕಾಲಂ ತಿನ್ನುತ್ತಿರೆ (ಪಂಚತಂ. ೮೨-೫); ಒಂದಿಷ್ಟು ಅನ್ನ ತಿಂದು ಕಾಲೇಜಿನ ಕಡೆಗೆ ಹೊರಟೆ (ಆಲಹೂ. ೫೪): ಹನುಮಂತರಾಯ ಹಗ್ಗ ತಿನ್ನುವಾಗ ಪೂಜಾರಿ ಶಾವಿಗೆ ಬೇಡಿದ (ಗಾದೆ). ೫. ಕೊರ್ಗಣೆಯ ಗಾಯವ ತಿನ್ನು ಹೋಗೆಂದು ಪೊಡೆದನಂಬುಗಳ (ವೋಹತ. ೩೮-೭).'ನೋವುತಿನ್ನು','ಪೆಟ್ಟುತಿನ್ನು' ಪರಾ. ೭. (ಆಲಂ) ಲಂಚ ತೆಗೆದುಕೊಳ್ಳು: ಅವನು ಚೆನ್ನಾಗಿ ತಿಂದೇ ಕೆಲಸ ಮಾಡಿಕೊಡೋದು (ರೂಢಿ). 'ಹಣತಿನ್ನು' ಪರಾ.

**ತಿಂದು ತೇಗು**=೧. ಹೊಟ್ಟೆ ತುಂಬಿ ತೇಗು; ಸಂತೋಷಪಡು: ಅಕ್ಕನ ಮನೆಯೊಳು ನಲಿದೆವು ನಕ್ಕೆವು ನಾವುಂಡು ತಿಂದುತೇಗಿದೆವು (ಇಂಚಾಪ. ೧೩-೫೦). ೨. ನಾಶಮಾಡು; ಹಾಳುಮಾಡು: ತಿಂದು ತೇಗಿದತ್ತಗಿಯದೆನಿಂದ ಪೂಗಣೆಯನಂ ಪಣೆಗಣ್ಣನಿರಿ ಹಂಪೆಯಾಳ್ದನಾ (ಗಿರಿಕ. ೮-೪೭). **ತಿಂದು ಹಾಕು**=೧. ನಾಶಮಾಡು: ಶತ್ರುವನ್ನೂ ವ್ಯಾಧಿಯನ್ನೂ ಎಳೆಯತನದಲ್ಲೇ ನಿಗ್ರಹಿಸದೆ ಹೋದರೆ . . . ನಮ್ಮನ್ನೇ ತಿಂದುಹಾಕುತ್ತವೆ (ಚಿಕ್ಕದೇ. ೮೨). ೨. ಅಪಹರಿಸು; ಸ್ವಾಹಾಮಾಡು: ಇನ್ನೊಬ್ಬರ ಹಣವನ್ನು ತಿಂದುಹಾಕುವುದರಲ್ಲಿ ಅವನು ನಿಸ್ಸೀಮ (ರೂಢಿ). **ತಿಂದೋಡಿ**= ತಿಂದು ತಿರುಗುವವಳು; ಉಂಡಾಡಿ: ತಿಂದೋಡಿ ನಿನ ಗಂಡ ತಿಂದೇನು ಮಾಡೆಂದ ತಿಂದೇಳು ಮನಿಯ ತಿರುಗೆಂದಾ ಉಟಸೀರಿ ಉಂಗುಟಕ ಹಾಕಿ ಹರಿಯೆಂದ (ಗರತಿ. ೬೨). **ತಿಂಬುಂಬ ಸಮಯ** = ಮಾಂಸಾಹಾರವನ್ನು ತಿನ್ನುವ ಜಾತಿ: ತಿಂಬುಂಬ ಸಮಯಯವೆಮ್ಮದು (ಸಮ್ಯಕ್ತ್ವ. ೯-೧೭). [ ದೇ.ಶ ತಮಿ. ತಿನ್; ಮಲ. ತಿನ್ನು; ತುಳು. ತಿನ್; ಕೊಡ. ತಿನ್; ತೆಲು. ತಿನು; ಕೊಲಾ. ನಾಯ್ಕಿ. ಪರ್ಜಿ ತಿನ್. ]

**ತಿನಸಿಗ** 'ತಿನಿಸುಗ' ನೋ.

**ತಿನಸು** 'ತಿನಿಸು$_2$' ನೋ.

**ತಿನಸುಗೂಳಿ** (ನಾ). ಮಿತಿಮೀರಿ ತಿನ್ನುವವಳು: ತಿನಸುಗೂಳಿಯ ಬಾಳು ಕನಸಿನಲಿ ಉಂಡಂತೆ ತೊನಸಿ ಮುದಿಎತ್ತ ಹರಿತಿಂದು ಹುಳಗಳನು ಜನಿಸಿ ಬಿಟ್ಟಂತೆ (ಸರ್ವಜ್ಞ. ೧೮೫೭).

[ ತಿನಸು (<ತಿನಿಸು$_2$) + ಕೂಳ್ (<ಕೂಱ್$_1$) + – ಇ$_2$ ]

**ತಿನಸಾಟಿಕ್ಕೆ** 'ತಿನಸಾಟಿಕ್ಕೆ' [illegible].

**ತಿನಾಳಿ** 'ತಿನ್ನಾಳಿ' ನೋ.

**ತಿನಿ$_1$, ತೀನಿ, ತೀನೆ** (ನಾ). ೧. ಆಹಾರ; ತಿನಿಸು; ಊಟ: ಸದನಾಂತರ [illegible] ಭಕ್ಷಣಾಂ, ಭಕ್ಷಣೀಯುಂ, ಭಕ್ಷ್ಯಂ– ಈ ೪ ತೀನಿ" (ಶಾಶಕ್ಕ. ೨೫೩): ಭೂತದ [illegible] ನಿಗೆ ತವಕಿಸುವ ವೇತಾಳಸಂತತಿಯ (ಕುವ್ಯಾಗ. ೩-೧೨): ತನ್ನ ವಿನೋದಕ್ಕಾಗಿ ಸಾಕುವ ಹುಲಿಗೆ ತನ್ನ ರೈತರ ದನ ತೀನಿ (ಸಚ್ಚ್ರಕ. IV, ೬೫): ಅಂಗಡಿಗೆ ಕೈಹಾಕಿ ತೀನಿಯ ದಿನಸುಗಳನ್ನು ಬೊಗಸೆ ಬೊಗಸೆಯಾಗಿ ಹಂಚುತ್ತಿದ್ದನು (ಕಥವಿ. II, ೩೦೪); ಹೀಗೆಲ್ಲ ತೀನಿ ಕೊಟ್ಟರೆ ತಾನೆ ಹೋರಿಗೆ ಕಸುವು ಬರೋದು (ಜೆಲುಮ. ೧೬೭); ತಿಂದವನ ತೀನಿ ಹೆಚ್ಚು, ಮಿಂದವನ ಕೊಳೆ ಹೆಚ್ಚು (ಗಾದೆ). ೨. ತಿನ್ನುವಿಕೆ; ಭಕ್ಷಣ: "ಭಕ್ಷಣೇ– ತೀನಿಯೊಳ್" (ಶಾಶಕ್ಕ. ೨೭); ಗಂಡನಿಗೆ ಗಳಿಕೆ ತೋರಿಸಬೇಡ, ಮಕ್ಕಳಿಗೆ ತೀನಿ ಕಲಿಸಬೇಡ (ಗಾದೆ). ೩. ನವೆ; ತುರಿಕೆ: ಗುದ ತೀನಿ ತಿಂಬುದು . . . ಇದು ಶ್ಲೇಷ್ಮ ಮೂಲವ್ಯಾಧಿಯ ಲಕ್ಷಣ (ವಿವೈವಿ. ೧೪೦). **ತೀನೆ:** ೧. ತನ್ನ ಮಗನು ತೀನೆ ಹಾಕಿಕೊಂಡು ತಿನ್ನುತ್ತಿದ್ದ ಬೆಳ್ಳೀ ಬಟ್ಟಲನ್ನು ಸುಮತಿಯು ದೃಷ್ಟಿಸಿ ನೋಡಲು (ಸುಮಚ. ೧೧); ಬೇಕಾದ ತೀನೆಯನ್ನು ಕೊಂಡು ಕೊಳ್ಳಲು ಅಂಗಡಿಯೆಲ್ಲಾ ಮುಚ್ಚಿರುತ್ತಾರೆ (ಪೀಟಮಾ. ೪೪). ೩. ಆನೆ ಮದದಿಂದೊಮ್ಮೆ ತೀನೆಯನು ಕಳೆಯಲ್ಕೆ ತಾನೊರಸೆ (ದಿಗೀಚ. ೨-೩೬). [<ತಿನ್./ತಮಿ. ತೀನಿ; ಮಲ. ತೀನ್; ತುಳು. ತೀನಿ, ತೀನು]

**–ತಿನಿ$_2$** (ಪ್ರ). ತಿನ್ನುವ ವ್ಯಕ್ತಿ ಎಂಬರ್ಥದಲ್ಲಿ ಸೇರುವ ತದ್ಧಿತಪ್ರತ್ಯಯ: ಉಣ್ಬ, ಕುಟ್ಟುವ, ಕೊಲ್ವ, ಕೊಳ್ವ, ತಿನ್ಬ ಎಂಬೀ ಉತ್ತರಪದಗಳಿಗೆ ಕ್ರಮವಾಗಿ ಉಣಿ . . . ತಿನಿ ಎಂಬ ಆದೇಶಗಳು ಬರುವುವು ಉದಾ:– ಅಲರುಣಿ . . . ಅಡದಿನಿ (ಕ್ಕಬಿಡಿ. ೨೭). 'ಪಿಱಿತಿನಿ' ಪರಾ.

[ ತಿನ್ + – ಇ$_3$ ]

**ತಿನಿಕ** (ನಾ). ಒಂದು ಬಗೆಯ ವನಸ್ಪತಿ; "ಯವನಾಲ, ತಕ್ಷುಪತ್ರ" (ಪಂಡಿತ. ೨೫೬). [ ? ]

**ತಿನಿಶ** (ನಾ). ಒಂದು ಬಗೆಯ ಸಸ್ಯ; ನೆಮ್ಮಿಗಿಡ; ಹುಲಿಗಿಲಮರ: "ತಿನಿಶಂ ನೇಮಿ ತಾಂ ರಥದ್ರುಮಮುಕ್ಕುಂ" (ವಸ್ತುಕೋ. ೩೫-೧೫): "ತಿನಿಶಃ, ಸ್ಯಂದನಃ . . . ಚಿತ್ರಕೃತ್–೨ ಹುಲಿಗೇ ಮರದ ಹೆಸರುಗಳು: ಹುಲಿಗಲಿ, ನೆಮ್ಮಿ, ಹೊಂಗೆ" (ಸಿದ್ಧಾಂತಿ. ೦೦೩). [ ಸಂ. ]

**ತಿನಿಸು$_1$, ತಿನ್ನಿಸು** (ಕ್ರಿ). ಉಣಿಸು: ತಿನ್ನುವಂತೆ ಮಾಡು: ರಿಪುಗಳ ಕಡಿದು ತಿನಿಸುವೆನಿದಕೆ ಸಂಶಯವೇಕೆ (ಕುವ್ಯಾಆ. ಒರಿಷ. ೨೫-೦೩); ಪಾಂಡವರ ಮನೆಯೊಳಗೆ ಕುದುರೆಗಳ ತಾ ತೊಳೆದು ಪುಂಡರೀಕಾಕ್ಷ ಹುಲ್ಲನು ತಿನಿಸಿದಾ (ಪುರಂದ. ೦-೧೪೭-೩); ತನಿರಸ ತೀವಿದ ಪಣ್ಗಳ ತಿನಿಸಿ ಓವಿದ ಕರ್ತನ ತೋಟು (ವೋಹತ. ೯-೨೪). **ತಿನ್ನಿಸು:** ಒಂದು ಜೋಳದ ಭಕ್ಕರಿಯನ್ನು ಅಭಿಮಂತ್ರಿಸಿ, ಈ ಪದವನ್ನು ಪಾಡಿ ಪರಮಾತ್ಮನಿಗರ್ಪಿಸಿ ಆಚಾರ್ಯರಿಗೆ ತಿನ್ನಿಸಿದರು (ಜಗದಾ. ೧೫೦); ಅವರು ಅವನಿಗೆ ಗೋಮಾಂಸವನ್ನು ತಿನ್ನಿಸಿ . . . ಕರೆದುಕೊಂಡು ಹೋದರಂತೆ (ಡಂಗಾಳ್ಯ. ೨೭).

[ ತಿನ್ + – ಇಸು$_3$ ]

**ತಿನಿಸು$_2$, ತಿನಸು** (ನಾ). ೧. ತಿನ್ನುವ ಆಹಾರಪದಾರ್ಥ; ತಿಂಡಿ; ಉಣಿಸು: ನಿಮ್ಮಡಿ ಬೆಸಸಿಮೆನ್ನ ಭರ್ತಾರಿಯುಂ ಮಾವಿನ ಪಣ್ಣನೇಕೆ ಬಯಸಿದಳೆನಿತಾನುಂ ವಸ್ತುನಿಕರಮಿರ್ದುಂ ತಿನಿಸಂ (ಧರ್ಮಾಮೃ. ೮-೪೫): ಪುರದಲಿ ಸತ್ತ ಹೆಣಗಳ ತುಱುಗಿದರು ತಿನಿಸಿಂಗೆ ಹಸಿವಿಗೆ ನೆಱೆಯದಾದುದು (ತೊರರಾ. ೬-೨೬-೫೬); ಸುತ್ತಲೂ ಸೊಗಸಾದ ನೋಟ ನೋಡುತ್ತ ತಿನಿಸನ್ನು ತಿಂದೆವು (ಕಪಪು. ೨ ೯೦). ೨. ನವೆ: ತುರಿಕೆ ನಸುಗುನ್ನಿ ಮುಟ್ಟಿದಂತಿರೆ ಬಸವಲ್ಲದೆ ತಿಂಬ ಮೆಯ್ಯ ತಿನಿಸಿಂಗಂ ಸೈರಿಸ

..ಜಿದೆ (ಧರ್ಮಾಮೃ. ೧-೧೬೫); ಆಗಳೆ ಕರ್ದಮ(ಮಂ)ದಿಂ ಪೂಸಲ್ ..... ಸಂದೇಹಮೇಕೆ ತುಱುಚಿಯ ತಿನಿಸಂ (ಶಮದ. ೨-೧೦೦). **ತಿನಸು:** "ಕಂಡೂತಿಃ, ಕಂಡೂಯಾ, ಕಂಡೂಃ, ಕಂಡೂಯನಂ, ಖರ್ಜೂಃ–ಈ ಹೆ ತಿನಸು" (ಹಲಾಯು. ೯೯–೪೯೯); "ತಿಂಡಿ, ತಿನಸು, ತೀಟೆ, ತುರುಸು, ನವೆ, ತೀನಿ" (ಕಂನುಹು. ೮೫). [ <ತಿನ್ ]

**ತಿನಿಸುಗ, ತಿನಸಿಗ** (ನಾ). ತಿಂಡಿಪೋತ; ತಿನ್ನುವವನು; ಭಕ್ಷಕ: "ಅದನ್, ಅದಃ, ಅದಕಃ–ಈ ೩ ತಿನಿಸುಗಂ" (ನಾಚಿರಾಜೀ. ೧೮೨). **ತಿನಸಿಗ:** ..ಕ್ಕಿನ ಜಾತಿಯ ತಿನಸಿಗರು ಹಡೆದ ಬದುಕನೀ ತಿನುವವರು (ಮುಕ್ತಕಂ. ೬೬-೪). [ ತಿನಿಸು₂ + – ಇಗ ]

**ತಿನಿಸುಗಾತಿ** (ನಾ). ಮಿತಿಮೀರಿ ತಿನ್ನುವವಳು: ಆ ತಿನಿಸುಗಾತಿ ಹೆಂಗಸನ್ನು ನೋಡಿದರೆ ನಗುಬರುತ್ತದೆ (ರೂಢಿ). [ ತಿನಿಸು₂ + – ಕಾತಿ₅ ]

**ತಿನಿಸುಬಕ್ಕ, ತಿನಸುಬಕ್ಕ** (ನಾ). ೧. ಹೊಟ್ಟೆಬಾಕ; ತಿಂಡಿಪೋತ; ಮಿತಿಮೀರಿ ತಿನ್ನುವವನು: ಅವನೊಬ್ಬ ತಿನಿಸುಬಕ್ಕ (ರೂಢಿ). (ಗು). ೨. ಮಿತಿಮೀರಿ ತಿನ್ನುವ: ಇವು ಬಹಳ ತಿನಿಸುಬಕ್ಕ ಪ್ರಾಣಿಗಳು (ಮುಂಬಯಿ. ೩-೮೪). **ತಿನಸುಬಕ್ಕ:** ೨. ಅದರ ಜಾತಿಯು ಬಹು ತಿನಸುಬಕ್ಕಾಗಿಯೂ ಮೂಢವಾಗಿಯೂ ಇರುವದು (ಮುಂಬಯಿ. ೫-೧೬). [ ತಿನಿಸು₂ + – ಬಕ್ಕ₂ (< – ಬಾಕ) ]

**ತಿನಿಹಿ, ತಿನುಹಿ** (ನಾ). ತಿನ್ನುವ ಸ್ವಭಾವವುಳ್ಳದು: 'ಹೆಣದಿನಿಹಿ' ಪರಾ. **ತಿನುಹಿ:** 'ಹೆಣದಿನುಹಿ' ಪರಾ. [ ತಿನಿಹು + – ಇ₃ ]

**ತಿನಿಹು** (ನಾ). ತಿನ್ನುವಿಕೆ: ಹೆಣನ ತಿನಿಹಿ[ಪಾಠಾಂ. ತೀನಿ]ಗೆ ತವಕಿಸುವ ವೇತಾಳ ಸಂತತಿಯ (ಕುಮಾ.ಗ. ೩-೧೨). [ ತಿನಿ + – ಹು₂ ]

**ತಿನು** 'ತಿನ್' ನೋ.

**ತಿನುಹಿ** 'ತಿನಿಹಿ' ನೋ.

**ತಿನ್ನ** (ನಾ). ತಿನ್ನಲಾಗದುದು; ಉಚ್ಚಿಷ್ಟ; ಎಂಜಲು: "ಎವುಟಿಂದುಂ, ತಿನ್ನಮೆಂದುಂ, ಪತ್ರಳಿಯೆಂದುಂ ಎಂಜಲ್" (ಶಕಸಾ. ೩೫-೫೦೮). [ <ತಿನ್ ]

**ತಿನ್ನಬಾಕ** (ನಾ). = ತಿನಿಸುಬಕ್ಕ: ತೆಲಗರು ಕಸುವುಳ್ಳವರು . . . ಒಳ್ಳೆ ತಿನ್ನಬಾಕರು (ಕಥಾಗ. ೮೩). [ <ತಿನ್ನು + – ಬಾಕ ]

**ತಿನ್ನಾಸಕ** (ನಾ). ತಿನ್ನುವುದರಲ್ಲಿ ಹೆಚ್ಚು ಆಸೆಯುಳ್ಳುವನು; ತಿನ್ನಾಳಿ; ತಿಂಡಿಪೋತ: ಕೈಕಾಲು ಸಣ್ಣ ಹೊಟ್ಟೆ ಡುಮ್ಮ; ಬಹು ತಿನ್ನಾಸಕ (ಮೇದಿಮ. ೪); ನೀವು ತಿನ್ನಲಿಕ್ಕೆ ತರತೀರಿಲ್ಲೊ? ತಿನ್ನಾಸಕ ತರತದೇಳು (ಆಮನಿ. ೨೫); ಪಸುಭೂತಿ ಬ್ರಾಹ್ಮಣವರ್ಯನಲ್ಲ, ತಿನ್ನಾಸಕನೂ ಹಣಲೋಭಿಯೂ ಆದ ಸಾಧಾರಣ ವೈದಿಕ (ತವನಿ. ೮೯). [ <ತಿನ್ ]

**ತಿನ್ನಾಸಕತನ** (ನಾ). ತಿನ್ನುವುದರಲ್ಲೇ ಆಸಕ್ತಿಯಿರುವಿಕೆ; ಅತಿಯಾಗಿ ತಿನ್ನುವ ಸ್ವಭಾವ: ನಾಡಿನಲ್ಲಿ ಬೇರೆ ಬೇರೆ ಭಾಗಗಳಿಗೆ ಹೋಗಿ ನೋಡಿದರೂ ಅಲ್ಲಿಯ ವೈಚಿತ್ರ್ಯಗಳಂತೆ ತಿನ್ನಾಸಕತನದ ಕತೆಗಳೂ ಸಿಕ್ಕುವವು (ಶ್ರೀರಂಗ. ೨೬). [ ತಿನ್ನಾಸಕ + – ತನ ]

**ತಿನ್ನಾಸಕಿ** (ನಾ). ತಿನ್ನುವುದರಲ್ಲಿ ಬಹಳ ಆಸಕ್ತಿಯುಳ್ಳವಳು; ಹೊಟ್ಟೆಬಾಕಿ: ನೀನು ಬಲು ತಿನ್ನಾಸಕಿ (ಬೀರಬ. ೮೬). [ ತಿನ್ನಾಸಕ + – ಇ₂ ]

**ತಿನ್ನಾಳಿ, ತಿನಾಳಿ, ತೀನಾಳಿ** (ನಾ). = ತಿನ್ನಾಸಕ: "ಭಕ್ಷಕಃ, ಘಸ್ಮರಃ, ..... ತಿನ್ನಾಳಿ" (ಹಲಾಯು. ೫೮-೧೯೫). **ತಿನಾಳಿ:** ಕೂಟ್ಬಣಿ ಗನೆಸಲ್ಕೆ ಜಗದಿ ತಿ[ಪಾಠಾಂ. ತೀ]ನಾಳಿವೆಸರ್" (ಕವಿಕಂ. ೧೫೬); ಮಹಾರಾಜರನ್ನು . . . ತಿನಾಳಿಯೆಂದು ಬಯ್ಯುವೇ (ವಿಗದ. ೪೧-೨೪). **ತೀನಾಳಿ:** "ತೀ[ಪಾಠಾಂ. ತಿ]ನಾಳಿಯೊಳಗೇವೇಟ್ವಿ ಕೂಟ್ಬಣಿಗ" (ಶಬ್ದಮಂ. ೪೯); ಕೌಂಟ್ಸ್ಲರವರು ತೀನಾಳಿ ಹುಡುಗರಿಗೆ ಆದರ್ಶ ಉಪಾಧ್ಯಾಯರು (ಹುಮುಖ. ..... ]

**ತಿನ್ನಿಸು** 'ತಿನಿಸು₁' ನೋ.

**ತಿನ್ನು** 'ತಿನ್' ನೋ.

**ತಿಪರ** (ನಾ). ಒಂದು ಬಗೆಯ ಆಭರಣ (?): ಅಪರಂಜಿ ಚಿನ್ನಾಕಿ ತಿಪರಾವ ತಿರುವ್ಯಾರೆ ಸಕಲಸಂಪನ್ನರ ಮಗಳು ನೀಲಮ್ಮಾಗೆ ತಿಪರವ ತಿರುವ್ಯಾರೆ ಬಸವಣ್ಣ (ಗೌರಪ. ೧). [Pಇದು ತಿರುವು ಇರಬಹುದೆ?]

**ತಿಪಲಾಟ** (ನಾ). ಕಷ್ಟ; "ಪೇಚಾಟ; ತೊಂದರೆ" (ಜಾನಕೋ. ೬೬). [ ತಿಪಲು₀ (<ತಿಪ್ಪಲು) + ಆಟ ]

**ತಿಪುರ, ತಿವುರ, ತಿಹುರ** (ನಾ). = ತ್ರಿಪುರ: ಪರನಾಜ್ಞೆಯಿಂದಿಂದ್ರನತುಳ ಸನ್ನಾಹದಿಂದಿರದ ತಿ[ಪಾಠಾಂ. ತ್ರಿ]ಪುರಕೆ ಲಗ್ಗೆಯುಂ ಬಿಡಲ್ (ಚಲಪು. ೪೨ ಸೂಚನ). **ತಿವುರ:** 'ತಿವುರಾಂತಕ' ಪರಾ. **ತಿಹುರ:** ತಿಹುರಮನುರಿಪಲ್ ತ್ರಿವಿಲೋಚನನಾ ದ್ರುಹಿಣ ಚತುರ್ಭುಜರಾದಿಯ ಸುರಬಲಸಹಿತಂ ದಿವ್ಯ ವರೂಥಮನಡರ್ದಯ್ದುವ ತೆಱದಿಂ (ಜಯುಕಾ. ೬-೨೩). [ <ಪ್ರಾ. ತಿಉರ. / ಸಂ. ತ್ರಿಪುರ ]

**ತಿಪುರಾಂತಕ, ತಿವುರಾಂತಕ, ತಿಹುರಾಂತಕ** (ನಾ). ತ್ರಿಪುರಗಳನ್ನು ನಾಶಮಾಡಿದವನು; ಶಿವ: ಪೂರ್ವಪದಂ ತದ್ಭವವಾದುದರ್ಕೆ . . . ತ್ರಿಪುರಾಂತಕ – ತಿಪು [ಪಾಠಾಂ. ವು] ರಾಂತಕ (ಶಮದ. ೨೮೯ ಪ್ರಯೋ). **ತಿವುರಾಂತಕ:** ಪೂರ್ವಪದಂ ತದ್ಭವವಾದುದರ್ಕೆ–ಗ್ರಾಮರಸ – ಗಾವರಸ . . . ತ್ರಿಪುರಾಂತಕ–ತಿವುರಾಂತಕ (ಶಮದ. ೨೮೯ ಪ್ರಯೋ). **ತಿಹುರಾಂತಕ:** ತಿಹುರಾಂತಕಂ (ಶಬ್ದಾನು. ೨೯೬ ಪ್ರಯೋ). [ <ಸಂ. ತ್ರಿಪುರಾಂತಕ ]

**ತಿಪ್ಪ** (ನಾ). ಬೂದಿರಾಶಿಯ ಮೇಲಿರುವವನು; ಶ್ಮಶಾನವಾಸಿ; ಶಿವ: 'ತಿಪ್ಪಯ್ಯ' ಪರಾ. [ ತಿಪ್ಪೆ + – ಅ₇ ]

**ತಿಪ್ಪಗ** (ನಾ). (?): ತಿಪ್ಪಗನು ಸುಂಕವನು ಕಟ್ಟಿಯೆ ತಪ್ಪದಲೆ ಮಾಡುತ್ತಲಿರಲಿಕೆಪೊಪ್ಪುವದೆ ತಿಪ್ಪಗನು ಬೇಱೆ ಸುಂಕದವ ಬೇಱೆ (ಜ್ಞಾನಸಿಂ. ೮-೧೫೦). [Pಇದು 'ತಪ್ಪುಕ = ತಪ್ಪುಮಾಡುವವನು' ಎಂಬುದರ ಅಪಲಿಖಿತವಿರಬಹುದು]

**ತಿಪ್ಪಣ** (ನಾ). ೧. (?): ನೆಟ್ಟಗಳೆ ಮೂಱು ತಿಪ್ಪಣದ ಮಣಿ ಒಂದು ಮಣಿಯಲ್ಲಿ ಕುಳಿತು ಅಣಲ ಸಂಚವ ತಿಂದಿತ್ತು (ಮನುಗುಂ. ೨೬೯-೮೫); ಸಂಚಿತ ಕರ್ಮವನನುಭವಿಸುತ್ತಿಹುದೆಂಬುದೀಗ ತಿಪ್ಪಣದ ಮಣಿ . . . ಎಂಬ ಶಬ್ದಕ್ಕರ್ಥ (ಮನುಗುಂ. ೯೯). ೨. ದ್ರವಪದಾರ್ಥವನ್ನು ತುಂಬುವ ಪಾತ್ರೆ (?): ಅಪ್ಪುವಾಸವ ತುಂಬುವ ತಿಪ್ಪಣದಂತೆ ತುಂಬುವಲ್ಲಿ ಕಟ್ಟಿಲ್ಲ (ಮಱಿಮಿಂ. ೯೪-೭೦). [?]

**ತಿಪ್ಪಣ್ಣ** (ನಾ). ಒಬ್ಬಾತನ ಹೆಸರು: ಬರೆದಂ ದ್ವಿಜಪಾದಪಂಕಜಭ್ರಮರ ಬಲದೇವಯ್ಯನು ಮೂಂಕಿಯಯ್ಯನ ಮಗ ತಿಪ್ಪಣ್ಣ ಬರೆದ ಮಂಗಳಂ (ಎಕ. XI, ದಾವಣ. ೨೦-೩೨: 1046). [ ತಿಪ್ಪ + ಅಣ್ಣ₁ ]

**ತಿಪ್ಪಯ್ಯ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ತಿಪ್ಪಯ್ಯ ಬರೆದಂ (ಎಕ. XI, ದಾವಣ. ೧೭-೨೨; 889); ತಿಪ್ಪಯ್ಯನೆಂಬಾ ಪದಿನೇಟ್ಬಾನಿಸಂ (ಎಕ. V, ಅರಕ. ೭೧-೬; 920). [ ತಿಪ್ಪ + ಅಯ್ಯ₁ ]

**ತಿಪ್ಪರದಂಡ** (ನಾ). ಆಡಿಸುವ ದೊಣ್ಣೆ; ತಿರುಗಿಸುವ ದೊಣ್ಣೆ (?): ಅಪ್ಪಪ್ಪಾ ಈತನೇ ಬಲುದೈವ ತಪ್ಪುಹೊರಿಸಿ ವಾರಿಗೆವರ ತಿಪ್ಪಾ[ಪ್ಪ] ರದಂಡವಾಡಿಸುವ (ವಿಶ್ವೋ.ಸು. ೨೩-೪). [ <ತಿರಿಪ್ಪು₃ ? + ದಂಡ ]

**ತಿಪ್ಪರಲಾಗ** (ನಾ). ೧. ತಿರಂಗಿಕೊಂಡು ಹಾಕುವ ಲಾಗ; ಅಂತರಲಾಗ; ದೊಂಬರ ಲಾಗ. ೨. (ಆಲಂ) ಹೆಣಗಾಟ; ಪ್ರಯತ್ನ: ವಾದದ ಆವೇಶದಲ್ಲಿ ತನ್ನ ಗುರು ವಸಂತರಾಯನ ವಿಚಾರಸರಣಿಯನ್ನು . . . ಬರೀ ಬುದ್ಧಿಶಕ್ತಿಯ ತಿಪ್ಪರಲಾಗವೆಂದೂ ಕರೆದ(ದೂರಸ.೪೪); ವೀರ್ಯವೇ ನಿಷ್ಠೆಯಿಂದ ಸಾಕಾರವಾಗುತ್ತದೆ, ಹಠದ ತಿಪ್ಪರಲಾಗವಲ್ಲ (ನಲಮು. VII, ನಾಲ್ಕುಮಾತು).

ತಿಪ್ಪರಲಾಗ ಹಾಕು = ೧. ಓಲಾಡು: ಮನಸ್ಸು ತಿಪ್ಪರಲಾಗ ಹಾಕಿತು (ಹೊಸಕ್ಕಿ. ೮೯). ೨. ಕಷ್ಟಪಡು ; ಪ್ರಯತ್ನಿಸು : ಹಾಂಗ ಮಾಡಲಿಕ್ಕೆ ಬರೂದುಲ್ಲೋ ಆಚಾರಿ; ನಾನು ಭಾಳ ತಿಪ್ಪರಲಾಗಾ ಹಾಕಿನೆ (ತಿಮಗು. ೭೯). **ತಿಪ್ಪರಲಾಗ ಹೊಡೆ** = ೧.=ತಿಪ್ಪರಲಾಗ ಹಾಕು ೨ : ತಿಪ್ಪರಲಾಗ ಹೊಡೆದರೂ ಅದು ತಪ್ಪುವ ಹಾಗಿರಲಿಲ್ಲ(ಸಮಜೀ. ೧೨೩೯). ೨. ತೇರ್ಗಡೆ ಹೊಂದದಿರು: ರಾಜುವು ಮೂರುರೂಪಾಯಿಯ ಪರೀಕ್ಷೆಯಲ್ಲಿ ಮೂರು ಸಲ ತಿಪ್ಪರಲಾಗ ಹೊಡೆದಿದ್ದ (ಎಡಹ. ೧೬). 'ತಿಪ್ಪು' ಪರಾ.

[ <ತಿರಿಪ್ಪು₂ ? + ಲಾಗ ]

**ತಿಪ್ಪಲ್** (ನಾ). (?) : ಮೂರು ತಿಪ್ಪಲ್ ಬಗೆವರವರೆ ಗೌರಿಯನು ಪುತ್ರಿಯನು ಕುಸುಮಕುಮಾರಿಯನು ಕನಸಿನಲಿ ಕಂಡವ ಜೀವರಲ್ತೇ ಕರಂ (ವಿವೇಥ. ೮-೩೪). [ ? ]

**ತಿಪ್ಪಲಾಟ** (ನಾ). (ಬುಗುರಿಯಂತೆ) ತಿರುಗುವಿಕೆ ; ಸುತ್ತಾಟ (?) : ಇಂತೊಸೆದ ಬೆಳಕಿನಲಿ ಕೆಲವು ಇದ್ದಲ್ಲಿ ತಿಪ್ಪಲಾಟದಲಿ ತೊಡಗಿವೆ (ಸುನೀತ. ೮೦-೪). 'ತಿಪ್ಪರಲಾಗ' ಪರಾ. [ <ತಿಪ್ಪು + ಆಟ ]

**ತಿಪ್ಪಲಿ** 'ಹಿಪ್ಪಲಿ' ನೋ.

**ತಿಪ್ಪಲು** (ನಾ). ಪೀಕಲಾಟ ; ತೊಂದರೆ ; ಕಷ್ಟ : "ತಿಪ್ಪಲು, ತಿಪ್ಪಲು ಪಾಟ-ಕಷ್ಟ" (ಗಂಗಾಮ. ೧೫೨). 'ಚಿಪ್ಪಳು' ಪರಾ. [ ? ]

**ತಿಪ್ಪಲುಗಾರ** (ನಾ). ಅಧಿಕಾರ ನಡೆಸುವವನು; ದಬ್ಬಾಳಿಕೆ ನಡೆಸುವವನು : ಆ ಕಾಲದಲ್ಲಿ ಅರಸರು ತಿಪ್ಪಲುಗಾರರು (ಜುಲುಂ[illegible] ಆಳುವವರು) (ಅಕ್ಕರ. ೧೨೨). [ ತಿಪ್ಪಲು + -ಕಾರ₁ (< -[illegible] ]

**ತಿಪ್ಪು** 'ತಿರಿಪ್ಪು₁' ನೋ.

**ತಿಪ್ಪುಳ್** 'ತುಪ್ಪುಳ್' ನೋ.

**ತಿಪ್ಪುಳ** 'ತುಪ್ಪುಳ್' ನೋ.

**ತಿಪ್ಪುಳು** 'ತುಪ್ಪುಳ್' ನೋ.

**ತಿಪ್ಪುೞ್** 'ತುಪ್ಪುೞ್' ನೋ.

**ತಿಪ್ಪೂರ್** (ನಾ). ಒಂದು ಊರಿನ ಹೆಸರು : ತಿಪ್ಪೂರ ಕಾಡಸ್ವಾಮಿಗಳ್ಗೆ ಬ್ರಹ್ಮದೆಯ ಕ್ರಮದೆನ ಮೆಲೂರ ಕೆಱೆ ಕೀೞೆ ಪಡಿಕಂಡುಗಂ ಭೂಮಿ ದತ್ತಮ್ಮ (ಇಆ. V, ೧೩೬-೧೩ ; 454 ಕ್ರಿಶ). 'ತಿಪ್ಪೆಯೂರ್' ಪರಾ. [ ? + ಊರ್ ]

**ತಿಪ್ಪೆ, ತಿರ್ಪೆ** (ನಾ). ೧. ಕಸದ ಗುಡ್ಡೆ ; ರಾಶಿ : ತಿಪ್ಪೆ ಮೇಲೆ ಮಲಗಿ ಉಪ್ಪರಿಗೆ ಕನಸು ಕಂಡ ಹಾಗೆ (ಗಾದೆ). ೨. ಕಸಕಡ್ಡಿಗಳನ್ನು ಹಾಕುವ ಸ್ಥಳ : ವಾರಿಜಷಂಡಮಂ ಪಡೆದು ಪೊರ್ದುವಪೊಲ್ ಕಳಹಂಸೆ ತಿಪ್ಪೆಯಂ ಪೊರ್ದುಗುಮೆ (ಧರ್ಮಾಮೃ. ೪-೨೦೦) ; ತಿಪ್ಪೆಯ ತಪ್ಪಲಲ್ಲಿ ಬಿದ್ದಿರ್ದ ತಂಡುಲವ ಕಟ್ಟಿಕೊಂಡು (ಬಸವಸಂ. ೨೨೫-೧೩) ; ಹತ್ತು ಸಾವಿರ ಪೊನ್ನು ತಿಪ್ಪೆಯಲಿ ಹೂಳಿಟ್ಟು ಮತ್ತೆ ಉಪ್ಪಿಲ್ಲದೆ ಉಂಡೆಯಲ್ಲೊ ಪ್ರಾಣ (ಪುರಂದ. ೧-೯೭-೨) ; ಏಳುನೆಲೆಯುಪ್ಪರಿಗೆಯೆತ್ತಿ ಕೀಳುದಿಪ್ಪೆಯದೆತ್ತ (ಸಾಳ್ವಭಾ. ೧೭-೩೪); ಶ್ವಾನ ತಿಪ್ಪೆಯ ಮೇಲೆ ಮಲಗಿರಲು . . . ಪನ್ನೀರ ವಾಸನೆ ಬೀಸಲದು ಹಾರಿ ದುಮುಕುವುದು (ಮಂಕುತ. ೯೦೫) ; ಕೋಳಿ ಕಾಲಿಗೆ ಗೆಜ್ಜೆ ಕಟ್ಟಿದರೂ ತಿಪ್ಪೆ ಕೆರೆಯದ ಇದ್ದೀತೇ (ಗಾದೆ)

△ **ತಿರ್ಪೆ** : 'ತಿರ್ಪೆಸುಂಕ' ಪರಾ.

**ತಿಪ್ಪೆಕೆದರು** = ಹಳೆಯ ಸಂಗತಿಗಳನ್ನು ಬಯಲಿಗೆಳೆ : ಅವನನ್ನು ರೇಗಿಸಿ ರೇಗಿಸಿ ತಿಪ್ಪೆಕೆದರಿದರು (ರೂಢಿ). **ತಿಪ್ಪೆಗುಂಡಿ, ತಿಪ್ಪೆಯಗುಂಡಿ**= ಕಸಕಡ್ಡಿಗಳನ್ನು ಹಾಕುವ ಗುಂಡಿ: ವ್ಯವಸಾಯವೇ ಮುಖ್ಯವಾಗಿದ್ದುದರಿಂದ ತಿಪ್ಪೇಗುಂಡಿಗಳು ಊರಿಗೆ ಸಮೀಪವಾಗಿದ್ದುವು (ಹುಟ್ಟಿಹ. ೫) ; ವಿಷಯ ಕೂಪವೆಂಬ ತಿಪ್ಪೆಯ ಗುಂಡಿಯ ನೀರ ಕುಡಿದು (ಸಿದ್ಧೇವ. ೪೩-೧೦೭). **ತಿಪ್ಪೆಸಾರಿಸು** = ೧. ತಿಪ್ಪೆಮುಚ್ಚಿ ಮೇಲೆ ಅಲಂಕಾರಮಾಡು. ೨. [illegible] ಮಾಡಿದೆನೆಂದು [illegible] ಮಾಡು : ಮಂಗಲಿಕೆಗಳ [illegible] ಎಂದು ತಿಪ್ಪೆಸಾರಿಸುವ ದ[illegible]

[ ದೇ.॥ ತಮಿ: [illegible] ]

**ತಿಪ್ಪೆಯೂರ್** (ನಾ). ಒಂದು ಊರಿನ ಹೆಸರು [illegible] ತಿಪ್ಪೆಯೂರೊಳಾದ ಅಟ್ಟದೆಱೆಯುಂ [illegible]

[ ತಿಪ್ಪೆ + ಊರ್ ]

**ತಿಪ್ಪೆವಳ್ಳ** (ನಾ). [illegible] [ ತಿಪ್ಪೆ + [illegible] ]

**ತಿಪ್ಪೆಸುಂಕ, ತಿರ್ಪೆಸುಂಕ** (ನಾ). [illegible] 1097) ; [illegible] ಗಾಣಂ [illegible] ಕೆಱೆಯ ಘಣ್ಡಂಗೆ ಬಿಟ್ಟ ಧರ್ಮ್ಮ (ಎಕ. XI, ದಾವಣ. ೧೩೯-೫೩ ; 1106) ; ಪೇಱೆಸಲು ಎಲೆ ೧೦೦ ನ್ನಾಯದಲು ಮೂವಪ್ಪಣ ತಿಪ್ಪೆಸುಂಕ ರಾಸಿಯ ದೇವಗೊಳಗ ೨ ಗಾಣದಲೆಣ್ಣೆ ಸೊಳಸಿಗೆ (ಸೌಇಇ. IX i. ೨೩೩-೬೩ ; 1138). △ **ತಿರ್ಪೆಸುಂಕ** : ಬೋವಕ್ಕಳ್ ತಂದು ವ[illegible]ಮವ ಬಾಡುಕಾಯಿಗೆ ತಿರ್ಪೆಸುಂಕವ ಕೊಟ್ಟರ್ (ಮುಂಬರಾ. X. ೨೦೦-೭೫ ; 1229). [ ತಿಪ್ಪೆ + ಸುಂಕ ]

**ತಿಪ್ಪೆಹೂಳು** (ನಾ). ತಿಪ್ಪೆಯಲ್ಲಿ ಮುಚ್ಚುವಂತೆ ರಾಶಿ ಹಾಕಿದ ಕಸಕಡ್ಡಿ ಮುಂತಾದುವು : ಬಂದು ವರುಷದ ತಿಪ್ಪೆಹೂಳಿನ್ನೊಂದು ವರುಷಕೆ ವ್ಯತ್ತಿಕೆಯು (ಬಿಜ್ಜಪು. ೯೮-೩೪). [ ತಿಪ್ಪೆ + ಹೂಳು (<ಪೂೞ್₂) ]

**ತಿಪ್ಪೇಱು** (ನಾ). ಒಂದು ಸ್ಥಳದ ಹೆಸರು : ತಿಪ್ಪೇಱುಮ್ ಅಥುರ್ ಲಿಪರ್ ಆತಿಶಯವಾನ್ (ಮ್ಯಆರಿ. ೧೯೨೦, ೧೦-೬೭ ; 967). [ ? ]

**ತಿಬು** 'ತಿಬ್ಬ₂' ನೋ.

**ತಿಬ್ಬ₁, ತಿಬ್ಬರ, ತೀವರ** (ಗು). ೧. ಜೋರಾದ ; ಶೀಘ್ರವಾದ : "ತೀವ್ರಕ್ಕೆ ತಿಬ್ಬಮೆಂಬರು ಕವಿಗಳ್" (ಕವಿಶಂ. ೨೦೦) : ತೀವ್ರ-ತಿಬ್ಬ, ನೇತ್ರ-ನೆತ್ತ (ಶಮತ. ೨೬೦ ಪ್ರಯೋ). ೨. ತೀಕ್ಷ್ಣವಾದ : ಮನದರ್ತ್ತಿ ಪೋಷಿನಂ ಮೇರುನಗದತ್ಯಂ ಜನಾಲಯಂಗಳನಿಂತನವರತಂ ನೋಡುವ ಭಾವನೆ ಪೋಗದು ತಿಬ್ಬಮಿನ್ನುಮದು ಕಾರಣದಿಂ (ಧರ್ಮಾಮೃ. ೫-೧೨೨) ; ತಿಬ್ಬಮೊಗಂ ಬಯಂಬಡಿಪ ತೇಜಮನುಳ್ಳದೃಥಾಂಗಂ(ಪಾಲಾಕ್ಕ.೧-೧೩-೪೭). (ನಾ). ೨. ಅತಿಶಯವಾದದು; ಶ್ರೇಷ್ಠವಾದುದು ; ಅಧಿಕವಾದುದು : ಕುಲಜನೀತನೆ ಪಂಡಿತನೀತನುಜ್ಜ್ವಲಯಶೋಧಿಕನೀತನೆ ತಿಬ್ಬಮೆಂದಲಿಸಿ ಪೇಟ್ವ (ಕವಿಶಾ. ೦-೧೫೯) : ಜನವಚನಮ ತಿಬ್ಬಮೆಂದು ನಂಬಿದ ಫಲ (ಧರ್ಮಾಮೃ. ೨-೧೫೦) ; ಅಧರದ ಸವಿದನು ತಿಬ್ಬದ ಸುಸಿಲೊಳು ಕೃಷ್ಣ (ವರ್ಧಮ. ೫-೯೩). ೪. ವೇಗ ; ಜಾಗ್ರತೆ : ಪಡಿಹಾರಿಗಳ ತಿಬ್ಬದಿಂ ಕರೆದು (ಅರಾದ. ೧೩-೭೭). **ತಿಬ್ಬರ**: ೪. "ತಿಬ್ಬರಂ ತೀವ್ರನಾಮಂ" (ಕರ್ಣಾನಿ.೯೬). **ತೀವರ** : ೪. ದೇವತೆಗಳು ಕಾವಲರಿದು ನಾವು ಕೆಡಲು ಬೇಡ ಇನ್ನು ಮರುಳ ಕೂಡಿ ತೀವರದೊಳು ತಿರುಗೆಂದ (ಹರಿಶಾಂ. ೩-೬೭) ; ಹರಿಯೆ ಗತಿ ಹರಿಗೆ ನಿಜವೆಂದು ತಿಳಿದು ತೀವರದಿಂದ ಬಂದುಬಿಡುವದು ಜನರ (ಶೀರ್ಧಮ. ೨೦೭) ; ತೀವರದಿಂದ ವರವನುಗಿದು ಸ್ನಾನಕೆ ಸಮಮಾಡಿದ (ಶ್ರೀಕೃಪಾ. ೭೦). [ ಪ್ರಾ. ತಿವ್ವ/ಸಂ. ತೀವ್ರ ]

**ತಿಬ್ಬ₂, ತಿಬು** (ನಾ). ಒಂದು ಬಗೆಯ ಹೂವು : "ದಿವ್ಯಂ - ಬರ್ಬರ ಚಂದನ. ತಿಬ್ಬ" (ಶಿವಧಿ. ೭೫). ತಿಬು : "ದಿವ್ಯಪುಷ್ಪ - ಕನಗಿಲು.ತಿಬು ಚಿತ್ರ" (ಶಿವಧಿ. ೭೫). [ <ಸಂ. ದಿವ್ಯ ? ]

ತಿಬ್ಬ$_4$ ...ಬ್ಬಂ' ನೋ.

**ತಿಬ್ಬಂ, ತಿಬ್ಬ$_3$** (ಅ). ಬೇಗನೆ : ಶೀಘ್ರವಾಗಿ : ತಿಬ್ಬಂ ನುಡಿದಂ–ತಿಬ್ಬನುಡಿದಂ (...ಬ್ದಾ.ಸು. ೨೯೩ ಪ್ರಯೋ). ಅದಱಿಂ ಮುಂಚಿ ಪಳಂಚಿ ಪಾಱಿದುದು ತಿಬ್ಬ... ...ಣಮನ್ಯಂ (ಶಬಶಂ. ೪-೪೦). ತಿಬ್ಬ$_3$ : ಮೇಲಿನ 'ಶಬ್ದಾನು' ಪ್ರಯೋಗವನ್ನು ನೋಡಿ. [ <ತಿಬ್ಬ$_1$ ]

**ತಿಬ್ಬಂಮಾಡು** (ಕ್ರಿ). ೧. ವೇಗಗೊಳಿಸು. ೨. ದೃಢಪಡಿಸು ; ನಿಜಗೊಳಿಸು (?) : ಕೆಲರ್ ಮಿಟ್ಟುಗಾಡಿಯುಂ ಬರ್ದುಂಕಲಾಗದೆಂಬ ಮಾತಂ ತಿಬ್ಬಂಮಾಡಿ ಸೌಜನ್ಯಕಂದಾಂಕುರನ ಶರಕ್ಕಳ್ಕೆ ಬೆಳ್ಕತೊರ್ಳೇಡೆಯುಂ . . . ಬಿಟ್ಟರ್ (ಶಾಂತಿಪು. ೪-೩೦ ವ); ಮನಮಂ ತಿಬ್ಬಂ ಮಾಡಿ (ಧರ್ಮಾಮೃ. ೩-೨೧) : ತಿಬ್ಬಂ ಮಾಡಿದಂ = ತಿಬ್ಬವೆಹಗಹುದಹಗೆ ಮಾಡಿದಂ (ಶಮದ. ೧೯೪ ಪ್ರಯೋ). [ ತಿಬ್ಬ$_1$ + ಮಾಡು$_1$ ]

**ತಿಬ್ಬಯಲು** (ನಾ). ಒಂದು ಸ್ಥಳದ ಹೆಸರು (?) : ಹಿರಿಯ ಕೆಱೆಯ ತಿಬ್ಬಯಲಲು ಬಟ್ಟಗ ಗಟ್ಟಪೊಂದುವೂರಿನ್ದ ಹಡುವಣ ಹೊಲದಲ್ಲಿ ಬೆದ್ದಲೆ ೪೨ (ಎಕ. V, ಹಾಸನ. ೫೮-೪೮ ; 1174).

[ ತಿಬ್ಬ? + ಬಯಲು (<ಬಯಲ್) ]

**ತಿಬ್ಬರ** 'ತಿಬ್ಬ$_1$' ನೋ.

**ತಿಬ್ಬಳಿ** (ನಾ). ಬುದ್ಧಿ ; ಎಚ್ಚರ ; ಜ್ಞಾನ : ತಿಬ್ಬಳಿಯಡಂಗಿ ಬಿಳ್ದಾ ವೀರಭಟವಿತತಿ ಸಿಬ್ಬದಿಗೊಳುತ್ತ ಸಿಡಿಮಿಡಿಗೊಂಬ ನೃಪಸಮಿತಿ (ಸಮ್ಯಕ್ತ್ವ. ೮-೬೩) : ಏನೋ ಎಲಾ ತಿಬ್ಬಳಿ ಇಲ್ಲದೆ ಮಾತನಾಡುತ್ತೀರಿ (ಕಥಾಮಂ. IV, ೧೮).

**ತಿಬ್ಬಿ** (ಗು). ಯುನಾನಿ ಚಿಕಿತ್ಸೆಗೆ ಸಂಬಂಧಿಸಿದ : 'ತಿಬ್ಬಿವೈದ್ಯ' ಪರಾ.

[ ←ಅರ. ತಿಬ್ಬೀ ]

**ತಿಬ್ಬಿವೈದ್ಯ** (ನಾ). ಯುನಾನಿ ವೈದ್ಯ ; ಹಕೀಮ : ಆಯುರ್ವೇದ ಪಂಡಿತರನ್ನನುಸರಿಸುವಂತೆ ತಿಬ್ಬಿವೈದ್ಯರನ್ನು ಅಪೇಕ್ಷಿಸುವುದಾಗಲಿ ಹಿಂದುಗಳಿಗೆ ಎಂದೂ ಕಷ್ಟವೆಂದೆನಿಸಿರಲಾರದು (ಭಾರಜ. ೪೦೮).

[ ತಿಬ್ಬಿ + ವೈದ್ಯ ]

**ತಿಬ್ಬು** 'ತಿರುವು$_3$' ನೋ.

**ತಿಮುರು$_1$** 'ತಿವಿರ$_1$' ನೋ.

**ತಿಮುರು$_2$** (ನಾ). (?) : ಬಿತ್ತುವ ಮಾ ೩ ಪಣುಮ ತಿಮುರು ಬಿತ್ತವ ಮ ೩ (ಸೌಇಎ. ೧೯೨೯, ಮಂಗಳೂರು. ೪೬೫-೧೩ ; 1312). [ ? ]

**ತಿಮರೆ** (ನಾ). ಒಂದು ಬಗೆಯ ಸೊಪ್ಪು ; ಒಂದೆಲಗ; ಇಲಿಕಿವಿಸೊಪ್ಪು : ಇಗೋ ತಿಮರೆ. ತಂಬ್ಳಿ ಮಾಡು ನೋಡೋಣ (ಬಾಳಗಿ. ೧೦೬).

[ ? ]

**ತಿಮಿ** (ನಾ). ೧. ಮೀನಂ ; ಮತ್ಸ್ಯ : "ಮೀನಂ ಶಫರಂ ತಿಮಿ ಪಾಠೀನಂ ಝಷಮನಿಮಿಷಂ ವಿಸಾರಂ ಮತ್ಸ್ಯಂ ಮೀನವೆಸರ್" (ವಸ್ತುಕೋ. ೨೨-೫); "ಮೀನಂ ಝಷಂ ತಿಮಿ ವಿಸಾರಮಾ ಶಿಲ್ಕಿ . . . ವೈಸಾರಿಣಂ ಮತ್ಸ್ಯಮೆನೆ ಮೀನ್ಗೆ ನಾಮಂ" (ಮಂಗರಾ. ೧೨೧-೬). ೨. ದೊಡ್ಡ ಗಾತ್ರದ ಮೀನು : "ರೀರಲ್ಲಃ, ತಿಮಿಃ, ತಿಮಿಂಗಿಳಃ (ತಿಮಿಂಗಿಳಗಿಳಃ) –ಈ ೪ ಒಂದೊಂದಕ್ಕೆ ಹಿರಿಯುವಪ್ಪ ಮೀನ್" (ಹಲಾಯು. ೧೦೯-೩೮) : ಜಳಧಿಯೊಳೆ ತಿಮಿ ತಿಮಿಂಗಿಳಗಿಳ ಮಕರ ಪ್ರಕರ ಶಂಕ ಸಂಭವಮುಕ್ಕ್ಯಂ (ಕಾವ್ಯಾವ. ೮೮೩) ; ಕಿರುಮೀನ್ಗೆ ಕೆರೆ ಕೊಳಂ ಪೊಳೆ ಸಾಲ್ಗುಮಾ ತಿಮಿಗೆ ಪೇಳ್ಕ್ಯಂ ಜಲಕ್ರೀಡೆಗಾರುಂದ್ರಸಾಗರಸಲಿಲವಿಸ್ತಾರ (ಶ್ರೀರಾಮಾ. ೪-೯೫) : ತಿಮಿಯುಂ ತಿಮಿಂಗಿಳನಡಂಗುವಿನಂ ತವೆ ನುಂಗೆ ಆ ತಿಮಿಂಗಿಳನುಮುಸೀ ತಿಮಿಂಗಿಳಗಿಳಂ ತವೆ ನುಂಗಿದೆನೊಂದ ತುತ್ತಿನೊಳ್ (ಮಂತ್ರಶ. ೫೬-೧೬) : ಸಮುದ್ರದಡದಲ್ಲಿ ತಿಮಿಜಾತಿಗೆ ಸೇರಿದ ಪ್ರಾಣಿಗಳೂ ಇವೆ (ಪ್ರಪಾಇ. I, ೫೬). [ ಸಂ. ]

**ತಿಮಿಂಗಿಲ, ತಿಮಿಂಗಿಳ** (ನಾ). 'ತಿಮಿ' ಎಂಬ ಮೀನುಗಳನ್ನು ನುಂಗುವ ಬಹಳ ದೊಡ್ಡ ಗಾತ್ರದ ಒಂದು ಬಗೆಯ ಮೀನಂ : ತಿಮಿಂಗಿಲ ಮತ್ಸ್ಯ ಕಚ್ಛಪ ಕರಿ ಮಕರಗಳಡಸಿ ತುಂಬಿದ ಹಗೆಯೆನಿಸಿ . . . ಮೆಱೆದುದರರೆ ಪಶ್ಚಿಮವನನಿಧಿ (ಸೋಮಚ. ೧-೬೦) ; ಮಿಗೆ ತಿಮಿಂಗಿಲನೊಡನೆ ಪುಲುಮೀನುಗಳು ಮಾಡುವುದೇನು (ಕುಮ್ಯದ್ರೋ. ೩-೪೨); ಅಡಿಯ ಮೇಲಾದಪೋಲೋಕರಿಪುದದ್ರಿಸಮ ಊರ್ಮಿಮಾಲಾ ಭಯಂಕರ ಸಮುದ್ರಂ, ತಿಮಿಂಗಿಲಂ ತೃಣದ ಕಣವಾಯಿತೆಂಬಂತೆ (ಶ್ರೀರಾಮಾ. ೧೬೫-೧೬೦): ಇದು ತಿಮಿಂಗಿಲ ಮೊಸಳೆ ಮೀಂಗಳ ಬಾಳ ಕೊಳಗುಳದಾಕರ! (ಮಾನಸ. ೪೧-೩). **ತಿಮಿಂಗಿಳ** : "ರೀರಲ್ಲಃ, ತಿಮಿಃ, ತಿಮಿಂಗಿಳಃ (ತಿಮಿಂಗಿಳಗಿಳಃ)–ಈ ೪ ಒಂದೊದಕ್ಕೆ ಹಿರಿಯುವಪ್ಪ ಮೀನ್" (ಹಲಾಯು. ೧೦೯-೩೮) : ಬಾಳೆಗಳಂ ತಿಮಿ ನುಂಗೆ, ನುಂಗಿದಾಗಳೆ ತಿಮಿಯುಂ ತಿಮಿಂಗಿಳನಡಂಗುವಿನಂ ತವೆ ನುಂಗೆ (ಕಾವ್ಯಾವ. ೮೮೪). [ ಸಂ. ]

**ತಿಮಿಂಗಿಲಗಿಲ, ತಿಮಿಂಗಿಳಗಿಳ** (ನಾ). 'ತಿಮಿಂಗಿಲ' ಎಂಬ ಮೀನಂಗಳನ್ನು ನುಂಗುವ ಅತಿ ದೊಡ್ಡ ಗಾತ್ರದ ಒಂದು ಬಗೆಯ ಮೀನು : ಅದಕ್ಕೆ ಮೊದಲು ನಾನು ತಿಮಿಂಗಿಲಗಿಲವಾಗಿದ್ದೆನು (ಮಂತ್ರಶ. ೫೬-೧೯). **ತಿಮಿಂಗಿಳಗಿಳ** : "ರೀರಲ್ಲಃ, ತಿಮಿಃ, ತಿಮಿಂಗಿಳಃ (ತಿಮಿಂಗಿಳಗಿಳಃ) – ಈ ೪ ಒಂದೊಂದಕ್ಕೆ ಹಿರಿಯುವಪ್ಪ ಮೀನ್" (ಹಲಾಯು. ೧೦೯-೩೮) : ತಿಮಿಯುಂ ತಿಮಿಂಗಿಳನಡಂಗುವಿನಂ ತವೆ ನುಂಗೆ ತತ್ತಿಮಿಂಗಿಳಮುಮನಾ ತಿಮಿಂಗಿಳಗಿಳಂ ತವೆ ನಂಗಿದುದೊಂದು ತಾಣದೊಳ್ (ಕಾವ್ಯಾವ. ೮೮೪). [ ಸಂ. ]

**ತಿಮಿಂಗಿಲನ್ಯಾಯ** (ನಾ). ದೊಡ್ಡದು ಚಿಕ್ಕದನ್ನು ತಿಂದು ಜೀವಿಸುವ ನ್ಯಾಯಂ : ಈ ತಿಮಿಂಗಿಲನ್ಯಾಯದಿಂದ ಸ್ವಾತಂತ್ರ್ಯ ಸಿದ್ಧಿಯಾದೀತೆ (ಹಾಡುಹು. ೬೮). [ ತಿಮಿಂಗಿಲ + ನ್ಯಾಯ ]

**ತಿಮಿಂಗಿಲರಾಶಿ** (ನಾ). ಒಂದು ನಕ್ಷತ್ರ ಪುಂಜದ ಹೆಸರಂ : ಅಗ್ನಿಕುಂಡ ಶಿಲ್ಪಶಾಲೆಗಳ ಮೇಲಕ್ಕೆ ಅಂದರೆ ಉತ್ತರ ವಾಯವ್ಯಗಳಿಗೆ ಹಬ್ಬಿ ತಿಮಿಂಗಿಲರಾಶಿ ವ್ಯಾಪಿಸಿದೆ (ನಕ್ಷತ್ರ. ೨೧). ℙ ಇದು ಇಂಗ್ಲಿಷಿನ 'Cetus' ಎಂಬುದರ ಕನ್ನಡ ಅನುವಾದ. [ ತಿಮಿಂಗಿಲ + ರಾಶಿ ]

**ತಿಮಿಂಗಿಳ** 'ತಿಮಿಂಗಿಲ' ನೋ.

**ತಿಮಿಂಗಿಳಗಿಳ** 'ತಿಮಿಂಗಿಲಗಿಲ' ನೋ.

**ತಿಮಿತ** (ಗು). ಅಲುಗಾಡದ ; ಅಚಲವಾದ ; ಸ್ಥಿರವಾದ : "ಸ್ತಿಮಿತಂ ತಿಮಿತಂ" (ವಸ್ತುಕೋ. ೧೦೬-೫೧) : ತಿಮಿತ ಕಪೋಳಾವಳಗ್ನಾಳಕಂ ಯೌವತಮಾದಂ ಕಣ್ಗೆವಂದಿರ್ದುದು ಕೃತಸಲಿಲಕ್ರೀಡಮುಸ್ರೋಷ್ಣಪೀಡಂ (ಚಂದ್ರಪು. ೬-೧೪೯). [ ಸಂ. ]

**ತಿಮಿತ್ತಿಳಕ** (ನಾ). ಕಾಡಿಗೆಯ ತಿಲಕ (?) : ಅದಲ್ಲದೆಯುಂ ತಿಮಿತ್ತಿಳಕಮೆಂಬುದು ಪಸುಗೂಸಿಂಗೆ ಮಸಿಯೆಂಬುದು ಪುರಿಯೋಡಿಂಗೆ (ಅನಂಪು. ೨-೨೮ ವ).

[ ℙ ಇದು 'ತಿಮಿರ್ತಿಲಕ' ಎಂಬುದರ ಅಪಲಿಖಿತವಿರಬಹುದು ]

**ತಿವಿರ್$_1$, ತಿಗುರು$_1$, ತಿವಿರು$_1$, ತಿವುರು$_1$** (ಕ್ರಿ). ೧. (ಚರ್ಮವನ್ನು) ತಿಕ್ಕಿ ಶುಭ್ರಗೊಳಿಸು ; ಚೊಕ್ಕಟಗೊಳಿಸು : "ತಿವಿರ್–ತ್ವಙ್ಮಲ ವಿಸರ್ಜನೇ" (ಶಮಧಾ). ೨. ಗಂಧ ಮೊದಲಾದುವನ್ನು ಲೇಪಿಸು,-ಉಜ್ಜು,-ಪೂಸು : ಬಟಿಯುಂ ಯಕ್ಷಕರ್ದಮದ ಕೆಯ್ಗಟ್ಟಿಯೊಳ್ ಕೆಯ್ಯಂ ತಿವಿರ್ದು ತಂಬುಲಮಂ ಕೊಂಡು (ಪಂಪಭಾ. ೩-೭೯ ವ) : ಕೈಘಟ್ಟಿಯೊಳಂಗೆಯ್ಯಂ ತಿವಿರ್ದು (ಸುಕುಮಾ. ೧೧-೩೦) ; ಅಗ್ರಪಲ್ಲವದ ಚಪ್ಪರಣೆಗಳಿಂ ಚಪ್ಪಳಿಸಿ ನೆಗೆದು ತಿವಿರ್ದ ಕುಂಕುಮದಿಂ (ಅನಂಪು. ೨-೨೯ ವ) : ಬಾರಯ್ ನೀರೆಱೆವೆಂ ಮೀಯಿಸುವೆಂ ಪೂಸುವೆಂ ಬಾವನ್ನದಿಂ ತಿವಿರ್ವೆಂ ತಿಲಕಮನಿಡುವೆಂ ತನಿವಣ್ಗಳಂ ತಿನಲೀವೆಂ, ನಿನ್ನನಗಲದಾವಗಂ ಸೇವಿಸುವೆಂ (ರಾಮಾಶ್ವ. ೬೧-೧೬).

ಕರ್ನಾಟಕ ಸರ್ಕಾರದ ಉದಾರ ಧನಸಹಾಯದಿಂದ ಕನ್ನಡಿಗರ ಬಹುದಿನಗಳ ಬೇಡಿಕೆಯಾಗಿದ್ದ ಕನ್ನಡ ನಿಘಂಟಿನ ಎಂಟು ಸಂಪುಟಗಳು ಈಗ ಪುನರ್ಮುದ್ರಣಗೊಂಡು ನಿಮ್ಮ ಕೈಸೇರುತ್ತಿವೆ.

ಸಮಸ್ತ ಕನ್ನಡಿಗರಿಗೆ ಈ ಸಂಪುಟಗಳನ್ನು ಒಪ್ಪಿಸಲು ನೆರವು ನೀಡಿದ ಕರ್ನಾಟಕ ಸರ್ಕಾರವನ್ನು ನಾನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ.

ಡಾ. ನಲ್ಲೂರು ಪ್ರಸಾದ್ ಆರ್. ಕೆ.
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು